ಶ್ರೀಲಕ್ಷ್ಮೀ ಹಯವದನ ಪರಬ್ರಹ್ಮಣೇ ನಮಃ
ಅಸ್ಮದ್ಗುರು ಪರಂಪರಾಭ್ಯೋ ನಮಃ

ಶ್ರೀಮನ್ನಿಗಮಾಂತ ಮಹಾದೇಶಿಕರವರು ಅನುಗ್ರಹಿಸಿದ

# ಶ್ರೀಮದ್ರಹಸ್ಯತ್ರಯಸಾರಃ

(ಎರಡನೆಯ ಭಾಗ)

ಸರಗೂರು ಮಾಡಭೂಷಣಂ ಕೃಷ್ಣಮಾಚಾರ್ಯರಿಂದ ರಚಿತವಾದ
**"ಸಾರಚಂದ್ರಿಕಾ" ವ್ಯಾಖ್ಯಾನ ಸಮೇತ**

ಪ್ರಕಾಶಕರು
**ಶ್ರೀವೈಷ್ಣವ ಸಭಾ (ರಿ.)**
ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನ
3ನೇ ಮುಖ್ಯರಸ್ತೆ, ಪ್ರಕಾಶನಗರ
ಬೆಂಗಳೂರು - 560 021

**ಪ್ರಮೋದಸಂ ಧನುರ್ಮಾಸ**
**ರೋಹಿಣಿ 30-12-91**

**ಬೆಲೆ ರೂ. 75-00**
**(ಅಂಚೆ ವೆಚ್ಚ ಬೇರೆ)**

ಶ್ರೀಲಕ್ಷ್ಮೀ ಹಯವದನ ಪರಬ್ರಹ್ಮಣೇ ನಮಃ
ಅಸ್ಮದ್ಗುರು ಪರಂಪರಾಯೈ ನಮಃ

ಶ್ರೀಮನ್ನಿಗಮಾಂತ ಮಹಾದೇಶಿಕರವರು ಅನುಗ್ರಹಿಸಿದ

# ಶ್ರೀಮದ್ರಹಸ್ಯತ್ರಯಸಾರಃ

(ಎರಡನೆಯ ಭಾಗ)

ಸರಗೂರು ಮಾಡಭೂಷಣಂ ಕೃಷ್ಣಮಾಚಾರ್ಯರಿಂದ ರಚಿತವಾದ
"ಸಾರಚಂದ್ರಿಕಾ" ವ್ಯಾಖ್ಯಾನ ಸಮೇತ

ಪ್ರಕಾಶಕರು
**ಶ್ರೀವೈಷ್ಣವ ಸಭಾ (ರಿ.)**
ಲಕ್ಷ್ಮೀನರಸಿಂಹಸ್ವಾಮಿ ದೇವಸ್ಥಾನ
3ನೇ ಮುಖ್ಯರಸ್ತೆ, ಪ್ರಕಾಶನಗರ
ಬೆಂಗಳೂರು - 560 021

ಪ್ರಮೋದಸಂ ಧನುರ್ಮಾಸ
ರೋಹಿಣೀ 30-12-1990

**ಬೆಲೆ ರೂ. 75-00**
**(ಅಂಚೆ ವೆಚ್ಚ ಬೇರೆ)**

ಶ್ರೀಮತೇ ಲಕ್ಷ್ಮೀನೃಸಿಂಹ ಪರಬ್ರಹ್ಮಣೇ ನಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

ಪ್ರಕಾಶನಗರ
3ನೇ ರಸ್ತೆ, ಬೆಂಗಳೂರು
30-12-1990

ಆಸ್ತಿಕ ಮಹಾಶಯರಲ್ಲಿ ವಿನಂತಿ,

ಪ್ರಕಾಶನಗರ, ಶ್ರೀವೈಷ್ಣವ ಸಭೆಯುವರು ಶ್ರೀಮದ್ರಹಸ್ಯತ್ರಯಸಾರದ ಉತ್ತರಾರ್ಧವನ್ನು ಸಾರಚಂದ್ರಿಕಾ ವ್ಯಾಖ್ಯಾನದೊಡನೆ ಆಸ್ತಿಕರ ಮುಂದಿಡಲು ಸಂತೋಷಿಸುತ್ತಾರೆ. ಶ್ರೀಮದ್ವೇದ ಮಾರ್ಗ ಪ್ರತಿಷ್ಠಾಪನಾಚಾರ್ಯ, ಉಭಯ ವೇದಾಂತಾಚಾರ್ಯ, ಪರಮಹಂಸ ಪರಿವ್ರಾಜಕಾಚಾರ್ಯ, ಭಗವದ್ರಾಮಾನುಜ ಸಿದ್ಧಾಂತ ನಿರ್ಧಾರಣ ಸಾರ್ವಭೌಮ, ಶ್ರೀಮತ್ಕವಿಕಥಕ ಕಂಠೀರವ ಚರಣ ನಳಿನ ನ್ಯಸ್ತ ಸಮಸ್ತಾತ್ಮ ಭರರಾದ ಶ್ರೀಮದಭಿನವ ರಾಮಾನುಜ ಬ್ರಹ್ಮತಂತ್ರ ಪರಕಾಲ ಮಹಾದೇಶಿಕನ್‌ರವರು ಶ್ರೀ ಲಕ್ಷ್ಮೀಹಯಗ್ರೀವನೊಡನೆ ದಯಮಾಡಿಸಿ, ಈ ಗ್ರಂಥವನ್ನು ಬಿಡುಗಡೆ ಮಾಡಿ ಸಮಾರಂಭವನ್ನು ಯಶಸ್ವಿಯಾಗಿ ನಡೆಸಿ ಕೊಟ್ಟದ್ದಕ್ಕೂ, ರೂ. 15,000 ದ್ರವ್ಯ ಸಹಾಯ ಮಾಡಿರುವುದಕ್ಕೂ ಅನಂತಾನಂತ ಧನ್ಯವಾದಗಳು. ಆಸ್ತಿಕರೆಲ್ಲರೂ ಮುಂದೆ ಬಂದು ಈ ಗ್ರಂಥವನ್ನು ಪಡೆದು ಸದಾಚಾರ್ಯರಲ್ಲಿ ಕಾಲಕ್ಷೇಪ ಮಾಡಿ ಆತ್ಮೋಜ್ಜೀವನವನ್ನು ಪಡೆಯಬೇಕೆಂದೂ, ಹೀಗೆಯೇ ಶ್ರೀದೇಶಿಕರ ಇತರ ಗ್ರಂಥಗಳನ್ನು ಅಚ್ಚಿಡಲು ದ್ರವ್ಯ ಸಹಾಯ ಮಾಡಬೇಕೆಂದೂ ಪ್ರಾರ್ಥಿಸುತ್ತೇವೆ.

ಪ್ರೀಯತಾಂ ಭಗವಾನ್ ವಾಸುದೇವಃ

ಪ್ರಮೋದಸಂ
ಮಾರ್ಗಶೀ. ನಾಯಕನ್

ಕಾರ್ಯಕಾರಿ ಸಮಿತಿ
ಶ್ರೀವೈಷ್ಣವ ಸಭಾ (ರಿ.)

ಶ್ರೀ ಲಕ್ಷ್ಮೀ ಹಯವದನ ಲಕ್ಷ್ಮೀನಾರಾಯಣಾಭ್ಯಾಂ ನಮಃ

ಶ್ರೀಬ್ರಹ್ಮತಂತ್ರ ಸ್ವತಂತ್ರ ಪರಕಾಲ ಮಠ

Camp.
ಬೆಂಗಳೂರು
6-1-1991

## ಅನುಗ್ರಹ ಶ್ರೀಮುಖ

ಪ್ರಕಾಶನಗರ ಬೆಂಗಳೂರು 21ರಲ್ಲಿರುವ ಶ್ರೀ ವೈಷ್ಣವಸಭೆಯವರು ಶ್ರೀ ವುನ್ನಿಗಮಾಂತ ಮಹಾದೇಶಿಕ ಪ್ರಣೀತವಾದ ಶ್ರೀಮದ್ರಹಸ್ಯತ್ರಯಸಾರದ ದ್ವಿತೀಯ ಭಾಗವನ್ನು ಸವ್ಯಾಖ್ಯಾನ ಅಚ್ಚಿಟ್ಟು ಶ್ರೀ ಹಯಗ್ರೀವನ ಸನ್ನಿಧಾನದಲ್ಲಿ ಸಮರ್ಪಿಸಿ ಶ್ರೀ ಹಯಗ್ರೀವನ ಸಂಪೂರ್ಣ ಅನುಗ್ರಹವನ್ನು ಪಡಿದಿದ್ದಾರೆಂದು ತಿಳಿಸಲು ಬಹಳ ಸಂತೋಷಪಡುತ್ತೇವೆ. ಆಸ್ತಿಕರೆಲ್ಲರೂ ಮುಂದೆ ಬಂದು ಈ ಶ್ರೀ ಕೋಶವನ್ನು ತೆಗೆದುಕೊಂಡು ಸದಾಚಾರ್ಯ ಸಕಾಶದಲ್ಲಿ ಕಾಲಕ್ಷೇಪ ಮಾಡಿ, ನಮ್ಮ ಪೂರ್ವಾಚಾರ್ಯರುಗಳ ಮತ್ತು ಶ್ರೀಮನ್ನಿಗಮಾಂತ ಮಹಾದೇಶಿಕರವರ ಕೃಪೆಗೆ ಪಾತ್ರರಾಗಿ ಆತ್ಮೋಜ್ಜೀವನವನ್ನು ಪಡೆಯಲೆಂದು ಹಾರೈಸುತ್ತೇವೆ.

ಈ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆದು ಗ್ರಂಥವನ್ನು ಅಚ್ಚಿಟ್ಟ ಸ. ಮಾ. ಕೃಷ್ಣಮಾಚಾರ್ಯರವರಿಗೆ ಶ್ರೀ ಲಕ್ಷ್ಮೀ ಹಯಗ್ರೀವನು ಆಯುರಾರೋಗ್ಯೈಶ್ವರ್ಯಾದಿಗಳನ್ನು ಕೊಟ್ಟು ಕಾಪಾಡಲಿ, ಮೇಲೂ ಇದೇ ರೀತಿಯಾಗ ಶ್ರೀ ಮನ್ನಿಗಮಾಂತ ಮಹಾದೇಶಿಕರವರ ಇತರ ಚಿಲ್ಲರೆ ರಹಸ್ಯ ಗ್ರಂಥಗಳನ್ನೂ ಅಚ್ಚಿಟ್ಟು ಶ್ರೀ ವೈಷ್ಣವ ಜನ ಸೇವೆಯನ್ನು ಮಾಡಲಿ, ಎಂದು ಶ್ರೀ ಹಯಗ್ರೀವನನ್ನು ಪ್ರಾರ್ಥಿಸಿ ಅನುಗ್ರಹಿಸಿದ ಶ್ರೀಮುಖ.

ಪ್ರಮೋದಸಂ
ಮಾರ್ಗೞಿ
ಏಟ್ರಕಲಂಗಳ್

ಶ್ರೀ ಲಕ್ಷ್ಮೀಹಯಗ್ರೀವ ಪ್ರಸೀದತು
ಅಭಿನವರಾಮಾನುಜ ಬ್ರಹ್ಮತಂತ್ರ
ಸ್ವಾಮಿಗಳು
ಶ್ರೀ ಬ್ರಹ್ಮತಂತ್ರ ಪರಕಾಲ ಮಠ
ಮೈಸೂರು

ಶ್ರೀಮತೇ ಹಯಗ್ರೀವಾಯನಮ ನಮಃ ।

ಶ್ರೀಮತೇ ಲಕ್ಷ್ಮೀ ನರಸಿಂಹ ಪರಬ್ರಹ್ಮಣೇ ನಮಃ ।

ಶ್ರೀ ಪರಾಂಕುಶ ಪರಕಾಲ ಯತಿವರಾದಿಭ್ಯೋನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

ಶ್ರೀಮತೇ ಸುಂದರ ಸೌಮ್ಯನಾರಾಯಣಾರ್ಯ ಮಹಾದೇಶಿಕಾಯ ನಮಃ

ಶ್ರೀಮತೇ ಶ್ರೀನಿವಾಸ ಗೋಪಾಲಾರ್ಯಾಯ ಮಹಾದೇಶಿಕಾಯ ನಮಃ

## ವಿಜ್ಞಾಪನೆ

ಶ್ರೀ ಲಕ್ಷ್ಮೀ ಹಯಗ್ರೀವನ ಮತ್ತು ಶ್ರೀ ಲಕ್ಷ್ಮೀ ನೃಸಿಂಹನ ದಿವ್ಯ ಕಟಾಕ್ಷಗಳಿಂದಲೂ ನಮ್ಮ ಪೂರ್ವಾಚಾರ್ಯರುಗಳ ದಿವ್ಯ ಅನುಗ್ರಹ ವಿಶೇಷದಿಂದಲೂ ಶ್ರೀಮದ್ರಹಸ್ಯತ್ರಯಸಾರದ ಎರಡು. ಮೂರು ಮತ್ತು ನಾಲ್ಕನೇ ಭಾಗಗಳು, ಸಾರಚಂದ್ರಿಕಾ ವ್ಯಾಖ್ಯಾನದೊಡನೆ ಅಚ್ಚಾಗಿ ಇವನ್ನು ಆಸ್ತಿಕರ ಮುಂದಿಡಲು ಸಂತೋಷಿಸುತ್ತೇನೆ.

ನಮ್ಮ ಸಂಪ್ರದಾಯಾರ್ಥಗಳಲ್ಲಿ ಭೇದಾಭಿಪ್ರಾಯಗಳನ್ನು ಉದ್ಘಾಟನೆ ಮಾಡಿರುವ ಮತಗಳನ್ನು ಸ್ಥಿರೀಕರಣ ಭಾಗದಲ್ಲಿ ಅನುವಾದ ಮಾಡಿ ಆಚಾರ್ಯರು ಸರಿಪಡಿಸಿರುತ್ತಾರೆ. ಮುಖ್ಯವಾಗಿ ಹೇಳುವುದೆಂದರೆ ಲಕ್ಷ್ಮಿಯ ಪರತ್ವ, ವಿಭುತ್ವ, ಉಪಾಯತ್ವಗಳ ವಿಷಯವಾಗಿಯೂ, ಪ್ರಪತ್ತಿಯು ಮೋಕ್ಷ ಸಾಧನವೆಂಬ ವಿಷಯದಲ್ಲಿಯೂ ಭಗವದ್ಭಾಷ್ಯಕಾರ ಸಂಪ್ರದಾಯಸ್ಥರಲ್ಲಿ ಕೆಲವರು ಹೇಳಿರುವ ಸಂಶಯ, ವಿಪರ್ಯಯಗಳನ್ನೆಲ್ಲಾ ಪ್ರಮಾಣ ಪುರಸ್ಸರವಾಗಿ ಆಚಾರ್ಯರು ಹೋಗಲಾಡಿಸಿದ್ದಾರೆ.

ಸಿದ್ಧೋಪಾಯ ಶೋಧನಾಧಿಕಾರದಲ್ಲಿ ಶ್ರಿಯಃ ಪತಿಯಾದ ನಾರಾಯಣನೇ ಮೋಕ್ಷಪ್ರದನೆಂದು ನಿರೂಪಿಸಿರುತ್ತಾರೆ. ಶ್ರುತಿಯು ಜಗತ್ಕಾರಣವಾದ ಬ್ರಹ್ಮವು ಲಕ್ಷ್ಮೀಪತಿಯಾದ ನಾರಾಯಣನೆಂದು ಹೊಗಳುತ್ತದೆ "ಏಕ ಮೇವಾದ್ವಿತೀಯಂ ಬ್ರಹ್ಮ" ಎಂಬಲ್ಲಿ ಏಕಶಬ್ದಕ್ಕೆ ಚೇತನಾ ಚೇತನ ವಿಶಿಷ್ಟ ಬ್ರಹ್ಮವೆಂದು ಅಂಗೀಕರಿಸುವಂತೆ, ವಿಶೇಷ್ಯವಾದ ಆ ಬ್ರಹ್ಮವು "ಆನೀದವಾತಗ್ಂ ಸ್ವಧಯಾ ತ ದೇಕಮ್" ಎಂದು ಲಕ್ಷ್ಮಿಯೊಡಗೂಡಿತ್ತು ಎಂದೂ ಹೇಳಿರುತ್ತಾರೆ. ಉಪಾಯ ದಶೆಯಲ್ಲಿಯೂ 'ಮಾಮೇಕಂ ಶರಣಂವ್ರಜ' ಎಂದು ಏಕ ಶಬ್ದವಾಚ್ಯನು ಲಕ್ಷ್ಮೀವಿಶಿಷ್ಟನಾದ ಕೃಷ್ಣಪರಮಾತ್ಮನು ಎಂದು ಪ್ರಮಾಣ ಶರಣರು ಅಂಗೀಕರಿಸಬೇಕು.

"ದೀಪಸ್ತ್ವಮೇವ ಜಗತಾಂ ದಯಿತಾ ರುಚಿಸ್ತೇ
ದೀರ್ಘಂತಮಃ ಪ್ರತಿನಿವರ್ತ್ಯಮಿದಂ ಯುವಾಭ್ಯಾಮ್ ॥" (ಶರಣಾಗತಿ ದೀಪಿಕೆ-3)

ದೀಪಸ್ಥಾನದಲ್ಲಿ ನಾರಾಯಣನು. ಆದರ ರುಚಿ-ಪ್ರಭೆಯ ಸ್ಥಾನದಲ್ಲಿ ಮಹಾಲಕ್ಷ್ಮಿ. ದೀಪವಿಲ್ಲದೆ ಪ್ರಭೆಯಿರಲಾರದು. ಪ್ರಭೆಯಿಲ್ಲದೆ ದೀಪವಿರಲಾರದು. ದೀಪವೆಂದರೆ ಪ್ರಭೆಯಿಂದ ಕೂಡಿದ ವಸ್ತುವೇ ಗ್ರಾಹ್ಯ. ಪ್ರಭೆಯೂ ಪ್ರಭಾ

ವಾನೂ ಸೇರಿ ಒಂದೇ ವಸ್ತು. ಅಪೃಥಕ್‌ಸಿದ್ಧ ವಿಶೇಷಣ ವಿಶಿಷ್ಟ ವಸ್ತು. ದೀಪವೂ ಪ್ರಭೆಯೂ ಸೇರಿಯೇ ಕತ್ತಲೆಯನ್ನು ಹೋಗಲಾಡಿಸುವಂತೆ ಸಂಸಾರವೆಂಬ ಕಗ್ಗತ್ತಲೆಯನ್ನು ಲಕ್ಷ್ಮೀನಾರಾಯಣರಿಬ್ಬರೂ ಕೂಡಿಯೇ ಹೋಗಲಾಡಿಸುತ್ತಾರೆ. ಲೋಕದಲ್ಲಿಯೂ ಸೂರ್ಯನು ಕತ್ತಲೆಯನ್ನು ಹೋಗಲಾಡಿಸುತ್ತಾನೆ, ಪರಿತಪಿಸುತ್ತಾನೆಂದೂ ಬೆಳಕು (ಪ್ರಭೆ) ಹರಿದು ಕತ್ತಲೆಯು ಹೋಯಿತು, ಬಿಸಿಲು (ಪ್ರಭೆ) ತಪಿಸುತ್ತದೆ, ಎಂದೂ ವ್ಯವಹರಿಸುತ್ತೇವೆ. ವಿಶೇಷಣ ವಿಶೇಷ್ಯಗಳೆರಡಕ್ಕೂ ಸಮಾನವಾದ ತಮೋ ನಿವರ್ತ್ಯಕತ್ವ, ಪರಿತಪತ್ವಗಳನ್ನು ಹೇಳುತ್ತೇವೆ. ಈ ದೃಷ್ಟಾಂತ ವನ್ನು ಅಲ್ಲಲ್ಲೇ ಆಚಾರ್ಯರು ಎತ್ತಿ ಹೇಳಿರುವುದು ಲಕ್ಷ್ಮಿಯೂ ನಾರಾಯಣನೂ ಇಬ್ಬರೂ ಸಂಸಾರದಿಂದ ಚೇತ ನನ್ನು ಬಿಡುಗಡೆ ಮಾಡಿ ಉದ್ಧರಿಸುತ್ತಾರೆಂದು ಹೇಳಿರುವುದಕ್ಕೆ ತಾತ್ಪರ್ಯ. ಇಬ್ಬರೂ ಸೇರಿಯೇ ಉಪಾಯಭೂತರು. ಚರಮಶ್ಲೋಕಾಧಿಕಾರದಲ್ಲಿ "ಮಾಮೇಕಂ ಶರಣಂ ವ್ರಜ" ಎಂಬಲ್ಲಿ ಏಕ ಶಬ್ದಕ್ಕೆ, "ಪ್ರಭಾ ಪ್ರಭಾವ ತೋರ್ಯದ್ವತ್", ಎಂಬ ದೃಷ್ಟಾಂತವನ್ನು ಬಳಸಿ ಆಚಾರ್ಯರು ಮಾಡಿರುವ ನಿರೂಪಣೆಯನ್ನು ನಿರ್ಮತ್ಸರರು ಸರಿಯಾಗಿ ಓದಿ ತಿಳಿಯಬೇಕು. ಪ್ರಭೆ ಮತ್ತು ಪ್ರಭಾವಾನ್ ಎರಡೂ ಅಪೃಥಕ್ ಸಿದ್ಧ ವಿಶೇಷಣ ವಿಶಿಷ್ಟವಾಗಿ ಒಂದೇ ವಸ್ತು ಎಂಬ ದೃಷ್ಟಾಂತವನ್ನು ಮನಸ್ಸಿನಲ್ಲಿಟ್ಟುಕೊಂಡೇ, "ಎಂಬೆರುಮಾನ್ಯೆಚ್ಚೊನ್ನವಿಡಮೆಂಗುಮ್ ಪಿರಾಟ್ಟಿಯೈಯುಮ್ ಶೊಲ್ಲಿಟ್ರಾನ್", ಎಂದು ಭಗವದ್ಭಾಷ್ಯಕಾರರು ಉಪದೇಶಿಸಿರುತ್ತಾರೆ. ಇದನ್ನು "ಆಚ್ಚಾನ್ ಪಕ್ಕಲಿಲೇ ನಂಜೀಯರ್ ಕೇಟ್ಟು ಸಂಗಹಿತ್ತರುಳಿನಾರ್" ಎಂಬುದು ಉಪದೇಶ ಪರಂಪರಾ ಪ್ರಾಪ್ತವಾದ ಮಾತು.

"ಅನನ್ಯಾರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ ||

ಅನನ್ಯಾಹಿ ಮಯಾಸೀತಾ ಭಾಸ್ಕರೇಣ ಪ್ರಭಾಯಥಾ ||"

ಎಂದು ಸೀತೆಯೂ, ರಾಮಚಂದ್ರನೂ ತಮ್ಮನ್ನು ನಿರೂಪಿಸಿಕೊಂಡಿರುವ ರೀತಿಯನ್ನು ವಾಲ್ಮೀಕಿ ಮಹರ್ಷಿಗಳು ಎತ್ತಿ ಹೇಳಿರುವುದೂ, ಈ ತತ್ವಗಳೆರಡೂ ಕೂಡಿಯೇ ನಮಗೆ ಪ್ರಾಪ್ಯ ಪ್ರಾಪಕಗಳು, ಎಂಬುದನ್ನು ತಿಳಿಸುವು ದಕ್ಕಾಗಿಯೇ ಹೊರತೆ ಬೇರೆಯಲ್ಲ.

ಇಂಥಹ ಸಿದ್ಧೋಪಾಯವನ್ನು ವಶೀಕರಿಸಲು ಸಾಧ್ಯೋಪಾಯವಾದ ಭಕ್ತಿ, ಪ್ರಪತ್ತಿಗಳಲ್ಲೊಂದು ಅವಶ್ಯ ಅನುಷ್ಠಿಸಲ್ಪಡಬೇಕೆಂದು, ಸಾಧ್ಯೋಪಾಯ ಶೋಧನಾಧಿಕಾರದಲ್ಲಿ ವ್ಯವಸ್ಥೆಗೊಳಿಸಲ್ಪಟ್ಟಿದೆ. ಭಗವಂತನೇ ಉಪಾಯವೆಂಬ ಜ್ಞಾನವೇ, ಮೋಕ್ಷ ಸಾಧಕವೆಂಬುದು ಅವಿಧೇಯ ಜ್ಞಾನದಿಂದ ಮೋಕ್ಷವೆಂದು ಹೇಳುವ ಅದ್ವೈತ ಮತವನ್ನು ಹಿಂಬಾಲಿಸಿದಂತೆ ಆಗುತ್ತದೆ. ಗ್ರಂಥವನ್ನು ಸದಾಚಾರ್ಯರಲ್ಲಿ ಓದಿದರೆ ಪ್ರಾಮಾಣಿಕರಿಗೆ ಈ ವ್ಯವಸ್ಥೆಯು ತಿಳಿಯುತ್ತದೆ.

ಹಾಗೆಯೇ ವಿಹಿತಗಳಾದ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳನ್ನು ಅಗ್ನೀಂದ್ರಾದಿ ಶಬ್ದ ಘಟಿತಗಳಾದ ವೇದಮಂತ್ರಗಳನ್ನು ಬಳಸಿ ಅನುಷ್ಠಿಸುವುದರಿಂದ ತನ್ನ ಪಾರಮೈಕಾಂತ್ಯಕ್ಕೆ ಯಾವ ಭಂಗವೂ ಬರುವುದಿಲ್ಲ ವೆಂಬುದನ್ನು ಆಚಾರ್ಯರು ಚರಮಶ್ಲೋಕಾಧಿಕಾರದಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬುದರ ವ್ಯಾಖ್ಯಾನ ಸಂದರ್ಭದಲ್ಲಿ ಶಾಸ್ತ್ರೀಯವಾದ ರೀತಿಯಲ್ಲಿ ನಿರೂಪಿಸಿರುತ್ತಾರೆ. ಹಾಗೆಯೇ ವಿಹಿತವಲ್ಲದ ಸ್ಥಳಗಳಲ್ಲಿ ದೇವತಾಂತರ ಸ್ಪರ್ಶವು ಕೂಡದೆಂಬುದನ್ನೂ ನಿರೂಪಿಸಿರುವುದು ಪ್ರಾಮಾಣಿಕರಿಗೆ ಹೃದಯಂಗಮವಾಗಿರುತ್ತದೆ.

ಅರ್ಥಾನುಶಾಸನ ಭಾಗದಲ್ಲಿ ತಾವು ವಿಸ್ತಾರವಾಗಿ ಹೇಳಿದ ತತ್ವ ಹಿತ ಪುರುಷಾರ್ಥಗಳ ವಿಷಯಗಳನ್ನು ಅಷ್ಟಾಕ್ಷರ, ದ್ವಯ, ಚರಮಶ್ಲೋಕಗಳಲ್ಲಿ ಉಪದೇಶ ಪರಂಪರೆಯಾಗಿ ಬಂದಿರುವ ರೀತಿಯಲ್ಲಿ, ಅನಿತರಸಾಧಾರಣ ವೈದುಷ್ಯದಿಂದ ಉಪಪಾದಿಸಿರುತ್ತಾರೆ. ಭಗವದ್ಭಾಷ್ಯಕಾರರು ತಿರುಕ್ಕೋಟ್ಟಿಯೂರ್ ನಂಬಿಗಳ ಹತ್ತಿರ ಬಹಳ

ಪ್ರಯಾಸದಿಂದ ಪಡೆದ ಅರ್ಥವಿಶೇಷಗಳನ್ನೂ, ಮುಖ್ಯವಾಗಿ ಪ್ರಪನ್ನನು ಶರಣಾಗತಿಯಿಂದ ಮೋಕ್ಷವನ್ನು ಪಡೆಯುವುದರಲ್ಲಿ ಯಾವ ಸಂಶಯವೂ ಇಲ್ಲವೆಂಬುದನ್ನೂ, "ಮಾಶುಚಃ" ಎಂಬ ವಾಕ್ಯದ ವ್ಯಾಖ್ಯಾನದಿಂದ ಸ್ಥಿರೀಕರಿಸಿರುತ್ತಾರೆ. ಹಿಂದೆ ಆಚಾರ್ಯರುಗಳು ಈ ಅರ್ಥಗಳನ್ನು ಸಚ್ಛಿಷ್ಯರುಗಳಿಗೆ ತಮ್ಮ ಅಂತಿಮ ದಶೆಯಲ್ಲಿ ಉಪದೇಶಿಸುತ್ತಿದ್ದರೆಂದು ಹೇಳಿ, ದೇಶಕಾಲ ವೈಗುಣ್ಯದಿಂದ ಈ ಅರ್ಥಗಳು ನಷ್ಟವಾಗಿ ಹೋಗದಂತೆ, ಶ್ರೀಮನ್ನಿಗಮಾಂತ ಮಹಾದೇಶಿಕನ್‌ರವರು ಪರಮಕೃಪೆಯಿಂದ ಗ್ರಂಥಸ್ಥವಾಗಿ ಈ ಅರ್ಥ ವಿಶೇಷಗಳನ್ನು ಸಂಗ್ರಹಿಸಿಟ್ಟಿರುವುದು ನಮ್ಮೆಲ್ಲರ ಅದೃಷ್ಟ ವಿಶೇಷವೇ ಸರಿ. ಕೊನೆಯದಾಗಿ ಇಂಥಹ ರಹಸ್ಯಾರ್ಥಗಳನ್ನು ಸದಾಚಾರ್ಯರು ಸಚ್ಛಿಷ್ಯರಿಗೆ ಉಪದೇಶಿಸಬೇಕೆಂದೂ, ಸಚ್ಛಿಷ್ಯರು ಈ ಅರ್ಥಗಳನ್ನು ಪರಮನಿಧಿಯಾಗಿ ಪಡೆದು ಅನುಷ್ಠಾನ ಪರ್ಯಂತವಾಗಿ ಬಳಸಿ, ಆತ್ಮೋಜ್ಜೀವನವನ್ನು ಪಡೆಯಬೇಕೆಂದೂ ಆಚಾರ್ಯರ ವಿಷಯದಲ್ಲಿ ಯಾವ ಪ್ರತ್ಯುಪಕಾರವನ್ನೂ ಮಾಡಲಾಗದೆ, ಕೇವಲ ಕೃತಜ್ಞತೆಯಿಂದ ಅವರನ್ನು ಹೊಗಳುತ್ತಿರಬೇಕೆಂದೂ ಸರ್ವ ಹೃದಯಂಗಮವಾಗಿ ನಿರೂಪಿಸಿರುತ್ತಾರೆ.

ನಿಗಮನಾಧಿಕಾರದಲ್ಲಿ, ಶ್ರೀಮನ್ನಿಗಮಾಂತ ಮಹಾದೇಶಿಕನ್‌ರವರು ಈ ಪರಮರಹಸ್ಯಾರ್ಥಗಳನ್ನು ಸಾತ್ವಿಕರಿಗೋಸ್ಕರ ಗ್ರಂಥಸ್ಥವಾಗಿಟ್ಟಿರುವುದಾಗಿ ತಿಳಿಸಿ, ಅಸೂಯಾವಿಷ್ಟರು ಇದನ್ನು ದೂಷಿಸುವುದರಿಂದ ತಮಗೆ ಯಾವ ಕೊರತೆಯೂ ಇಲ್ಲವೆಂದು ಅನುಸಂಧಾನ ಮಾಡಿರುತ್ತಾರೆ. ಕಾರಣ ಆಚಾರ್ಯರ ವಿಭವ ದಶೆಯಲ್ಲಿ ಅನೇಕರು ಆಚಾರ್ಯವರ್ಯರ ಜ್ಞಾನವೈರಾಗ್ಯಾನುಷ್ಠಾನಗಳಲ್ಲಿ ಅಸೂಯೆಯಿಂದ ಅವರನ್ನು ಪರಿಭವಿಸುತ್ತಿದ್ದರು. ಆದರಿಂದ ಎಳ್ಳಷ್ಟೂ ದುಃಖ ಪಡದೆ ಸಂಪ್ರದಾಯಾರ್ಥವನ್ನು ರಕ್ಷಿಸಿಟ್ಟರು. ಹೀಗೆ ಆಸ್ತಿಕ ಲೋಕಕ್ಕೆ ಆಚಾರ್ಯವರ್ಯರು ಮಾಡಿರುವ ಪರಮೋಪಕಾರವನ್ನು ನಾವೆಂದೂ ಮರೆಯದೆ ಭಕ್ತಿಶ್ರದ್ಧೆಯಿಂದ ಅವರ ಈ ಗ್ರಂಥರತ್ನವನ್ನೂ ಇನ್ನೂ ಇತರ ಗ್ರಂಥಗಳನ್ನೂ ಸದಾಚಾರ್ಯ ಸಕಾಶದಿಂದ ಕಾಲಕ್ಷೇಪ ಮಾಡಿ ತಿಳಿದುಕೊಂಡರೆ, ಆತ್ಮೋಜ್ಜೀವನವನ್ನು ಹೊಂದಿ ಕೃತಕೃತ್ಯರಾಗಬಹುದು.

ಈ ಉದ್ದೇಶ್ಯದಿಂದ ಸರ್ವರೂ ಸುಲಭವಾಗಿ ಕಾಲಕ್ಷೇಪ ಮಾಡಲು, ಕನ್ನಡ ಲಿಪಿಯಲ್ಲಿ ಮೂಲವನ್ನೂ ಕನ್ನಡ ಭಾಷೆಯಲ್ಲಿ ವ್ಯಾಖ್ಯಾನವನ್ನೂ ಶ್ರೀ ಲಕ್ಷ್ಮೀಹಯಗ್ರೀವನು ದಾಸನನ್ನು ಲೇಖನಿಯಾಗಿ ಬಳಸಿ ಬರೆಸಿರುತ್ತಾನೆ. ಇದರಲ್ಲಿ ಹೇಳಿರುವ ಅರ್ಥವಿಶೇಷಗಳೆಲ್ಲಾ ಪೂರ್ವಾಚಾರ್ಯರುಗಳ ವ್ಯಾಖ್ಯಾನವನ್ನೂ ಆಚಾರ್ಯೋಪದೇಶಗಳನ್ನೂ ಆಧಾರವಾಗಿಟ್ಟುಕೊಂಡು ಬರೆದಿರುವುವು. ಸರ್ವರೂ ಇವನ್ನು ಪರಮೋಪಾದೇಯಗಳಾಗಿ ಸ್ವೀಕರಿಸಿ ಧನ್ಯರಾದರೆ, ಭಗವಂತನ ಮತ್ತು ಆಚಾರ್ಯರ ಕೃಷಿಯು ಫಲಿಸಿತೆಂದು ಸಂತುಷ್ಟನಾಗುತ್ತೇನೆ.

ಈ ಗ್ರಂಥ ಭಾಗಕ್ಕೆ ಅನುಗ್ರಹ ಶ್ರೀಮುಖವನ್ನೂ, ಆಶಾಸನ, ಪರಿಶೀಲನೆಗಳನ್ನೂ ಬರೆದುಕೊಟ್ಟು ಅನುಗ್ರಹಿಸಿರುವ ಶ್ರೀಮತ್ಪರ ಮಹಂಸೇತ್ಯಾದಿ ಅಭಿನವ ರಾಮಾನುಜ ಬ್ರಹ್ಮತಂತ್ರ ಪರಕಾಲ ಮಹಾದೇಶಿಕನ್‌ರವರಿಗೂ, ಶ್ರೀ ಉಭ.ಧರ್ಮಾಧಿಕಾರಿ, ಇ. ಎಸ್. ವರದಾಚಾರ್ಯ ಸ್ವಾಮಿಗಳಿಗೂ, ಶ್ರೀ. ಉಭ.ವೇ. ವಿದ್ವನ್ಮಣಿ.ಸ.ಮಾ. ವರದಾಚಾರ್ಯರವರಿಗೂ ದಾಸನು ಕೃತಜ್ಞತಾ ಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇನೆ. ಮೇಲೂ ಶ್ರೀ. ಉಭ. ಪರಮಹಂಸ ಪರಕಾಲ ಸ್ವಾಮಿಗಳವರು ಈ ಎರಡನೆಯ ಭಾಗಕ್ಕೂ ರೂ. 15,000 ಸಹಾಯ ಮಾಡಿ ಅನುಗ್ರಹಿಸಿರುತ್ತಾರೆ ಅದಕ್ಕಾಗಿಯೂ ಅನಂತಾನಂತ ಧನ್ಯವಾದಗಳು ಹಾಗೆಯೇ ಧನಸಹಾಯ ಮಾಡಿರುವ T. T. D. ದೇವಸ್ಥಾನದ ಅಧಿಕಾರಿಗಳಿಗೂ ಅನಂತ ಧನ್ಯವಾದಗಳು. ವಿದ್ವಾನ್ ಡಾ|| ಸ. ಮಾ. ಶ್ರೀನಿವಾಸಾಚಾರ್ಯರು ಎಮ್. ಎ. ಪಿ.ಎಚ್.ಡಿ , (ರಿಟೈರ್ಡ್ ಜಾಯಿಂಟ್ ಎಜುಕೇಷನಲ್ ಅಡ್ವೈಸರ್, ಭಾರತ ಸರ್ಕಾರ),

ಈ ಗ್ರಂಥಕ್ಕೆ ಆಂಗ್ಲಭಾಷೆಯಲ್ಲಿ ಉಪೋದ್ಘಾತವನ್ನು ಬರೆದುಕೊಟ್ಟಿರುವುದಕ್ಕಾಗಿ ಅವರಲ್ಲಿಯೂ ಅನಂತ ಧನ್ಯವಾದಗಳು.

ಈ ಶ್ರೀಕೋಶವನ್ನು ಅಂದವಾಗಿ ಅಚ್ಚುಹಾಕಿಕೊಟ್ಟ "ಅವಿನಾಶ್ ಪ್ರಿಂಟರ್ಸ್" ಮಾಲೀಕರಿಗೂ ಮತ್ತು ಇತರ ಕಾರ್ಮಿಕರಿಗೂ ಅನಂತ ಧನ್ಯವಾದಗಳು.

ದೇಶಿಕೋನಿಗಮಾಂತಾರ್ಯಾತ್ ತದ್ಭಕ್ತಾತ್ ಸಾತ್ವಿಕೋಜನಃ ।
ತತ್ ಪ್ರಬಂಧಾತ್ ಪ್ರಬಂಧೋऽನ್ಯೋ ನಾಸ್ತಿ ನಾಸ್ತಿಮಹೀತಲೇ ॥
ಕವಿತಾರ್ಕಿಕ ಸಿಂಹಾಯ ಕಲ್ಯಾಣ ಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತ ಗುರವೇ ನಮಃ ॥

ಸ. ಮಾ. ಕೃಷ್ಣಮಾಚಾರ್ಯದಾಸಃ
"ಸಾರಚಂದ್ರಿಕಾ" ಗ್ರಂಥಕರ್ತಾ

ಶ್ರೀ ಲಕ್ಷ್ಮೀಹಯವದನ ಪರಬ್ರಹ್ಮಣೇ ನಮಃ

ಜೀವನಂ ಜಗತಾಂ ಜೀಯಾತ್ ಕಿಮಪ್ಯಪಗತ ಸ್ಪೃಹಮ್ ।
ಸ್ವತಂತ್ರಂ ಸರ್ವತಂತ್ರೇಷು ವೆಂಕಟೇಶಾಹ್ವಯಂಮಹಃ ॥

## ಆಶಾಸನಮ್

ಉಲಹಿಲ್ ಮನಿದಪ್ಪಿರವಿ ಮಿಹ ಉಯರ್ನ್ದದಾಹುಮ್. ಅವ್ವುಯರತ್ತುಕ್ಕುಕ್ಕಾರಣಮ್ ಅರಿವು ಜ್ಞಾನಮ್) ಎನ್‌ಬಡು ತೆಳಿವು. ತದ್ಜ್ಞಾನ ಮಜ್ಞಾನ ಮತೋಽನ್ಯತ್, ಎನ್ನುಂಬಡಿ ವೇದಾಂತವಿೞುಪ್ಪೊರುಳಾನ ಎಂಬೆರು ಮಾನೈತ್ತೆಳಿಂದು ಮುಕ್ತಿ ಎನುಂ ವೀಟ್ಟೈಯಡೈವದು ಮಿಹವುಮ್ ಮುಕ್ಕಿಯಮ್. ಆದರ್ಕುಪ್ಪಲ ವೇದಂಗಳ್, ಇತಿಹಾಸ ಪುರಾಣಂಗಳ್ ಆೞ್ವಾರ್‌ಹಳುಡೈಯ ಶ್ರೀ ಸೂಕ್ತಿಹಳ್, ಆಚಾರ್ಯರ್‌ಹಳುಡೈಯ ಗ್ರಂಥೋಪದೇಶಂಗಳ್ ಮಿಹವುಮ್ ಉಪಕರಿಕ್ಕಿನ್ರನ ಅವ್ವಾಚಾರ್ಯರ್‌ಹಳಿಲ್. ಶ್ರೀಮನ್ನಿಗಮಾಂತಮಹಾದೇಶಿಕನ್ ಶೆಯ್ದರುಳಿಯ ಉದವಿ ಕಣಕ್ಕಿಲಡಂಗಾದದಾಮ್. ಗ್ರಂಥಂಗಳ್ ಮೂಲಮಾಹ ಸ್ವಾಮಿ ದೇಶಿಕನ್ ಇನ್ನುಮ್ ನಮ್ಮಿಡೈಯೇ ಎೞುಂದರುಳಿಯುಳ್ಳಾರ್ ಎನ್ರಾಲ್ ಮಿಹೈಯಾಹಾದು.

ಸ್ವಾಮಿ ಶೆಯ್‌ದರುಳಿಯ ಗ್ರಂಥಂಗಳಿಲ್ ಮಿಹವುಮ್ ಪೋಟ್ರತ್ತಕ್ಕದಾಹವುಮ್, ಚೇತನರ್‌ಹಳ್ ಮಿಹ ಮುಖ್ಯಮಾಹ ಅರಿಯವೇಂಡಿಯ ವಿಷಯಂಗಳೈ ತಮ್ಮುಳ್ ಕೊಂಡದಾಯುಮ್ यदिहास्ति तदन्यत्र यन्नेहास्ति न तत्क्वचित् । (ಇದಿಲ್ ಇರುಕ್ಕಿರದು ವೇರಿಡತ್ತಿಲುಮುಂಡು, ಇದಿಲ್ ಇಲ್ಲಾದದು ವೇರೆಂಗುಮ್ ಇಲ್ಲೈ) ಎನ್ನುಪ್ಪಡಿಯಾನ ಪೆರುಮೈವಾಯ್ನ್ದದಾನ ಒರುಗ್ರಂಥಮ್ ಶೆಯ್ಯವೇಣುಮ್ ಎನ ಒರು ಪೇರವಾ (ಪೆರಿಯ ಆಶೈ) ಸ್ವಾಮಿ ತಿರುವುಳ್ಳತ್ತಿಲ್ ಉದಿಕ್ಕ, ಅದಿನ್ ವಿಳೈವಾಹ ಸ್ವಾಮಿಯಿನ್ ಜ್ಞಾನಕಲ್ಪಕ ವೃಕ್ಷತ್ತಿಲಿರುಂದು ಮಿಹವುಮ್ ಇನಿಯ ಶುವೈಯುಳ್ಳ “ಶ್ರೀಮದ್ರಹಸ್ಯತ್ರಯಸಾರಮ್” ಎನ್ನುಮ್ ಇ ಗ್ರಂಥಮ್ ಅವತರಿತ್ತದು. ನಮ್ ಸಂಪ್ರದಾಯತ್ತಿಲ್ ಇಂದ ಶ್ರೀ ಸೂಕ್ತಿಯೇ ಮಿಹಮುಖ್ಯಮಾಹವುಮ್ ಮುದಲಾನದಾಹವುಮ್ ವಿಳಂಗಿ ವರುವದು ಪ್ರಸಿದ್ಧಮ್. ಮಿಹಕ್ಕಡಿನಮಾನ ಸಿದ್ಧಾಂತಾರ್ಥಂಗಳೈ ಸಾರಮಾಹವುಮ್ ಶುರುಕ್ಕಮಾಹವುಮ್ ಅರಿಂದು ಕೊಳ್ಳ ಇಂದಗ್ರಂಥಮ್ ಮಿಹವುಮ್ ಮುಖ್ಯಮಾನದು. ಇದಿಲ್ ತತ್ವಮ್, ಹಿತಮ್ ಪುರುಷಾರ್ಥಮ್ ಆಹಿಯ ಮೂನ್ರಿಲುಮ್ ತೆಳಿವಾನ ಅರಿವೈ ಉಂಡಾಕ್ಕಿ ಅವೈಹಳಿಲ್ ವರಕ್ಕೂಡಿಯ ಶಂಕೈಹಳನೈತ್ತೈಯುಮ್ ಪರಿಹರಿತ್ತು, ಪ್ರಮಾಣಂಗಳೈ ಕೊಂಡುಮ್ ಅವಟ್ರೈತ್ತೞುವಿ ಯುಕ್ತಿಹಳೈಕೊಂಡುಮ್ ಪರಿಹಾರಮ್ ಶೆಯ್‌ದಿರುಪ್ಪದು ಮಿಹವುಮ್ ಪೋಟ್ರತ್ತಕ್ಕದಾಹುಮ್.

ಇ ಗ್ರಂಥತ್ತಿರ್ಕು “ರಹಸ್ಯತ್ರಯ ಸಾರಮ್’ ಎನ್ರುಮ್ ಪೆಯರ್ ವರುವದರ್ಕುಕ್ಕಾರಣಮ್ ತಿರುಮಂತ್ರಮ್ ದ್ವಯಮ್, ಚರಮಶ್ಲೋಕಂಗಳಾಹಿಯ ಇಮ್ಮೂನ್ರು ರಹಸ್ಯಂಗಳೈ ಪಲ ಪಲ ವಿಶೇಷಾರ್ಥಂಗಳುಡನ್, ಇನಿ ಕೂರ ವೇಂಡಿಯದೊನ್ರುಮಿಲ್ಲೈ ಎನುಂಪಡಿ, ಪಲಪಡಿಹಳಿಲ್ ಮಿಹ ವಿರಿವಾಯ್ ಅರುಳಿಚ್ಚೆಯ್‌ದಿರುಪ್ಪದುದಾನ್.

ಮೇಲುಮ್ ಭಕ್ತಿಯೋಗತ್ತಿರ್ಕು ತ್ತಹುದಿಯಿಲ್ಲಾದ ಸಕಲಚೇತನರ್‌ಹಳುಕ್ಕು ಇಕ್ಕಲಿಯುಗತ್ತಿಲ್ ಮಿಹ ಎಳಿದಾನ ಪ್ರಪತ್ತಿಯೆನುಮ್ ಉಪಾಯತ್ತಿರ್ಕು ಇನ್ರಿಯಮೈಯಾದ ಅಧಿಕಾರಮ್, ಪ್ರಪತ್ತಿಯಿನ್ ಅಂಗಂಗಳ್,

ಅದಿನ್‌ಸ್ವರೂಪಮ್, ಅದೈ ಅನುಷ್ಟಿಕ್ಕುಮ್ ವಿಧಮ್, ಅದಿನ ವಿಭಾಗಂಗಳ್, ಪ್ರಪತ್ತಿ ಶೆಯ್‌ದುಕೊಂಡಪಿನ್ ನಡಂದು ಕೊಳ್ಳವೇಂಡಿಯ ವಿಧಮ್, ಇವೈಮುದಲಾನ ಅನೈತ್ತೈಯುಮ್ ವಿಳಕ್ಕಿ ಒವ್ವೊರು ಜೀವನುಮ್ ತಾನ್ ಪ್ರಪತ್ತಿಶೆಯ್‌ದುಕೊಂಡು ಮೋಕ್ಷತ್ತೈ ಪ್ಪೆರವೇಣುಮ್ ಎನುಮ್ ಆಶೈಯೈತ್ತೂಂಡಿ ಜೀವರ್‌ಹಳದು ನಲ್‌ವಾೞ್ವುಕ್ಕು ವೞಿಕಾಟ್ಟಿಯಾಯ್, ಇಂದ ಶ್ರೀಸೂಕ್ತಿ ಅಮೈಂದದು ಪಟ್ರಿ, ಇಂದ ಪ್ರಪತ್ತಿಯೈಯೇ, ಉಯರ್‌ನಿಲೈಯಾಹಕ್ಕೊಂಡದು ಎನ್ರುಕೂರುದಲ್ ಶಾಲಪ್ಪೊರುಂದುಮ್.

ಇಚ್ಚೀರಿಯ ಗ್ರಂಥತ್ತೈ ಕನ್ನಡ ದೇಶತ್ತವರ್‌ಹಳುಮ್ ಎಳಿದಿಲ್ ಅರಿಂದು ಪಯನಡೈವದರ್ಕು ಶ್ರೀ. ಉಭ-ವೇ. ಸರಗೂರು ಮಾಡಪೂಶಿ. ಕೃಷ್ಣಮಾಚಾರ್ಯಸ್ವಾಮಿ ಮಿಹವುಮ್ ಅೞಹಾಹ ಎಳಿಯಮುರೈಯಿಲ್ ಸಾರಚಂದ್ರಿಕಾ ಎನುಮ್‌ವ್ಯಾಖ್ಯಾನತ್ತುಡನ್ ವೆಳಿಯಿಟ್ಟಿರುಕ್ಕಿರಾರ್. ಇದು ಮಿಹವುಮ್ ಪೋಟ್ರತ್ತಕ್ಕದಾಹುಮ್. ಇದುವೇ ನಮ್ ಸಂಪ್ರದಾಯತ್ತಿರ್ಕುಮ್, ಆಚಾರ್ಯರ್‌ಹಳುಕ್ಕುಮ್ ಮಿಹ ಉಯರ್‌ನ್ದ ಕೈಂಕರ್ಯಮ್ ಎನ್‌ಬದಿಲ್ ಐಯ್ಯಮೇ ಇಲ್ಲೈ. ಮೂಲತ್ತಿಲ್ ಉಳ್ಳ ಅರ್ಥಂಗಳೈನನ್ಗು ತೆಳಿವುಪಡುತ್ತುವದುಡನ್, ಅನೇಕ ಇಡಂಗಳಿಲ್ ಆಕ್ಷೇಪ ಪರಿಹಾರಂಗಳೈಯುಮ್ ಶೆಯ್‌ದುಳ್ಳಾರ್— ಇದರ್ಕು ಆಧಾರಮಾಹ ಪಣ್ಡೈಯ ಆಚಾರ್ಯರ್ ಹಳುಡೈಯ ಶ್ರೀ ಸೂಕ್ತಿಹಳೈಯುಮ್, ಕರೂರ್‌ಸ್ವಾಮಿ ಇಂಜಿಮೇಡು ಅೞಗಿಯ ಶಿಂಗರ್ ಸ್ವಾಮಿ, ಇವರ್‌ಹಳಿನ್ ವೞಿಯೈಯುಮ್ ಪಿನ್‌ಪಟ್ರಿ ಶೆನ್ರಿರುಪ್ಪದಾಲ್, ಪ್ರಾಮಾಣಿಕಮಾಹ ಗ್ರಂಥಮ್ ಅಮೈಂದುಳ್ಳದು ಮಿಹವುಮ್ ವಿಶೇಷಮ್. ಇಂದ ಸ್ವಾಮಿ ಲೌಕಿಕತ್ತಿಲ್ ಪೆರಿಯ ಉದ್ಯೋಗತ್ತಿಲ್ ಇರುಂದು ಓಯ್‌ವುಪೆಟ್ರು ಶಾಸ್ತ್ರಮಾರ್ಗತ್ತಿಲ್ ಇವ್ವಳವು ಮುನ್ನೇಟ್ರಮ್ ಪೆಟ್ರಿರುಪ್ಪದು, ಮಿಹವುಮ್ ಶ್ಲಾಘ್ಯಮ್.

ಆರಂಭತ್ತಿಲ್ 'ಕರ್ಮಬ್ರಹ್ಮಾತ್ಮಿಕೇ ಶಾಸ್ತ್ರೇ' ಎನ್‌ಹಿರ ಶ್ಲೋಕತ್ತಿಲ್ 'ವೀಧೀಶೋಧಕ ಕಿಂಕರಾನ್' ಎನ್‌ಹಿರಪದತ್ತಿರ್ಕು, ಮುನ್ನೋರ್‌ಹಳ್‌ವೞಿಯೈ ಕ್ಕಾಣ್ಬಿತ್ತುಳ್ಳದು ಗವನಿಕ್ಕತ್ತಕ್ಕದು.

"ಅಸಾರಮಲ್ಪಸಾರಂಚ", ಎನ್‌ಹಿರಶ್ಲೋಕತ್ತಿರ್ಕು ಸಾಧ್ಯೋಪಾಯ ವಿರೋಧಿಹಳ್ ಶೊಲ್ಲಕ್ಕೂಡಿಯ ಅರ್ಥತ್ತೈ ನಿರಸಿತ್ತಿರುಪ್ಪದು ಗವನಿಕ್ಕತ್ತಕ್ಕದು.

ಶ್ರೀಮಹಾಲಕ್ಷ್ಮಿಕ್ಕುಮ್ ಬ್ರಹ್ಮ ಶಬ್ದವಾಚ್ಯತ್ವಮ್ ಉಂಡು ಎನ್ಬದಾನ ಶ್ರೀದೇಶಿಕ ಸಿದ್ಧಾಂತತ್ತೈ ಕಾಣ್ಬಿತ್ತಿರುಪ್ಪದುಮಿಹವುಮ್ ಅೞಹು. ಶ್ರೀದೇಶಿಕನುಡೈಯ ನ್ಯಾಯ ಸಿದ್ಧಾಂಜನತ್ತಿಲುಮ್ ಇದು ಸ್ಪಷ್ಟಮ್.

ಇನ್ನುಮ್ ಪಲವಿಶೇಷಾರ್ಥಂಗಳ್ ಅಡಂಗಿಯುಳ್ಳ ಪಡಿಯಾಲ್ ಶ್ರೀಕೃಷ್ಣಮಾಚಾರ್ಯರುಡೈಯಶ್ರಮತ್ತಿರ್ಕು ಶ್ರೀ ವೈಷ್ಣವ ಉಲಹಮ್ ಮಿಹವುಮ್ ನನ್ರಿಯೈ ಚ್ಚೆಲುತ್ತವೇಣುಮ್.

ಧರ್ಮಾಧಿಕಾರಿ. ಇ. ಎಸ್. ವರದಾಚಾರ್ಯರ್
ಆಸ್ಥಾನ ವಿದ್ವಾನ್ ಪರಕಾಲ ಮಠಮ್
ಮೈಸೂರು.

ಶ್ರೀಮತೇ ಲಕ್ಷ್ಮೀಹಯವದನ ಪರಬ್ರಹ್ಮಣೇ ನಮಃ ।

ಆ ಭಗವತ್ತಃ ಪ್ರಥಿತಾಮನಘಾಮಾಚಾರ್ಯ ಸಂತತಿಂ ವಂದೇ ।

## ಗ್ರಂಥ ಪರಿಶೀಲನೆ

ಆಚಾರ್ಯವರ್ಯರೂ ವಿದ್ವನ್ಮೂರ್ಧನ್ಯರೂ ಆದ ಶ್ರೀ ಮನ್ನಿಗಮಾಂತ ಮಹಾದೇಶಿಕರವರು ವಿರಚಿಸಿರುವ ರಹಸ್ಯ ತ್ರಯಸಾರದ ದ್ವಿತೀಯಾರ್ಧದ ಎರಡು, ಮೂರು, ನಾಲ್ಕನೆ ಭಾಗಗಳು ವಿದ್ವಾನ್ ಸರಗೂರು ಮಾಡ ಭೂಷಣಂ ಕೃಷ್ಣಮಾಚಾರ್ಯರು ಬರೆದಿರುವ ಸಾರಚಂದ್ರಿಕಾ ವ್ಯಾಖ್ಯಾನದೊಡನೆ ಕನ್ನಡ ಲಿಪಿಯಲ್ಲಿ ಅಚ್ಚಾಗಿ ಶ್ರೀ ಮದು ಭಯ ಪರಮಹಂಸ ಅಭಿನವ ರಾಮಾನುಜ ಬ್ರಹ್ಮ ತಂತ್ರ ಪರಕಾಲ ಮಹಾದೇಶಿಕನ್‌ರವರ ಅಮೃತ ಹಸ್ತದಿಂದ ಪ್ರಕಾಶಪಡಿಸಲ್ಪಟ್ಟಿರುವುದು ಬಹಳ ಸಂತೋಷವಾದ ಸಮಾಚಾರ. ಈ ಗ್ರಂಥವನ್ನು ಸಾತ್ವಿಕರು ಸದಾಚಾರ್ಯರಲ್ಲಿ ಅಧ್ಯಯನ ಮಾಡಿ ಆತ್ಮ ಜ್ಞಾನಪರಿಪೂರ್ಣರಾದರೆ ಇತೋಽಪ್ಯತಿಶಯವಾದ ಸಂತೋಷವುಂಟಾಗುತ್ತದೆ.

ಈ ಸಂಪುಟದಲ್ಲಿ ಸಾಧ್ಯೋಪಾಯ ಶೋಧನಾಧಿಕಾರದಿಂದ ಆರಂಭಿಸಿ ನಿಗಮನಾಧಿಕಾರ ಪರ್ಯಂತ ಗ್ರಂಥವು ಪರಿಸಮಾಪ್ತವಾಗಿದೆ.

ದ್ವಯ ಮಂತ್ರದಲ್ಲಿರುವ "ಶ್ರೀಮನ್ನಾರಾಯಣ ಚರಣೌ" ಎಂಬ ದ್ವಿತೀಯಾಂತ ಪದದಲ್ಲಿಯೂ, ಪ್ರಪದ್ಯೇ ಎಂಬ ಪದದಲ್ಲಿಯೂ ಸಿದ್ಧ ಸಾಧ್ಯೋಪಾಯಗಳು ಕ್ರಮೇಣ ನಿರ್ದೇಶಿಸಲ್ಪಟ್ಟಿವೆ. "ಪ್ರಾಪಕನೂ ಪ್ರಾಪ್ಯನೂ ಅವನೇ" ಎಂಬ ಆಚಾರ್ಯ ಶ್ರೀ ಸೂಕ್ತಿಯಿಂದ ಮೋಕ್ಷಪ್ರಾಪಕನೂ, ಪ್ರಾಪ್ಯನೂ ಶ್ರೀಮನ್ನಾರಾಯಣನೇ ಎಂಬುದು ಪೂರ್ವೋತ್ತರ ಖಂಡಗಳಿಂದ ಸಿದ್ಧಿಸುವುದರಿಂದ ಸಿದ್ಧೋಪಾಯ ನಿಷ್ಠರು ಅನುಷ್ಠಿಸುವ ಉಪಾಯವು ಬೇರೆಯುಂಟೇ, ಎಂಬ ಸಂಶಯವು ಯಥಾಶ್ರುತ ಗ್ರಾಹಿಗಳಿಗೆ ಸಂಭವಿಸಬಹುದು.

ಸೂತ್ರಕಾರರು ಸಿದ್ಧ, ಸಾಧ್ಯಭೇದದಿಂದ ಎರಡು ಉಪಾಯಗಳನ್ನು ಸೂಚಿಸಿರುವುದಾಗಿ ಶ್ರೀಭಾಷ್ಯದಲ್ಲಿ ನಿರೂಪಿಸಿರುವುದನ್ನು ಗಮನಿಸಬೇಕು. ಪ್ರಥಮತಃ ಸೂತ್ರಕಾರರು ಅಧ್ಯಾಯ ದ್ವಯದಲ್ಲಿ ಜಗತ್ಕಾರಣತ್ವ ರೂಪ ಬ್ರಹ್ಮ ಲಕ್ಷಣಕ್ಕೆ ಅಸಂಭವ, ಅತಿವ್ಯಾಪ್ತಿ ರೂಪ ದೋಷಗಳನ್ನು ಪರಿಹರಿಸಿ ಚಿದ ಚಿದ್ವಿಲಕ್ಷಣತ್ವ ವಿಶಿಷ್ಟ ಪರ ಮಾತ್ಮನಲ್ಲಿ ಸಮನ್ವಯವನ್ನು ಪ್ರತಿಪಾದಿಸಿ ಸ್ಮೃತಿ ತರ್ಕ ಮೂಲಗಳಿಂದ ಶಂಕಿತ ವಿರೋಧಗಳನ್ನೆಲ್ಲಾ ಪರಿಹರಿಸಿ, ಸ್ವಮತರಕ್ಷಣಾರ್ಥವಾಗಿ ಶ್ರುತಿವಿರುದ್ಧ ಮತಗಳನ್ನೂ ನಿರಾಕರಿಸಿ ಸಿದ್ಧ ವಿಷಯ ರೂಪವಾದ ಬ್ರಹ್ಮತತ್ವವನ್ನು ಸ್ಥಾಪಿಸಿದ್ದಾರೆ. ನಂತರ ಸಾಧನಾಧ್ಯಾಯವಾದ ಮೂರನೇ ಅಧ್ಯಾಯದಲ್ಲಿ ಆ ಬ್ರಹ್ಮವನ್ನು ಪಡೆಯಲು ಅನುಷ್ಠಿ ಸಬೇಕಾದ ಉಪಾಸನಾತ್ಮಕ ಜ್ಞಾನ ವಿಶೇಷವನ್ನು ನಿರೂಪಿಸಿ, ನಾಲ್ಕನೆಯದಾದ ಫಲಾಧ್ಯಾಯದಲ್ಲಿ ಬ್ರಹ್ಮ ಸಂಪತ್ತಿರೂಪ ಮುಕ್ತೈಶ್ವರ್ಯ ಫಲವನ್ನೂ ಸಹ ಪ್ರತಿಪಾದಿಸಿರುವುದು ಸರ್ವಸಮ್ಮತವಷ್ಟೇ.

ಇಲ್ಲಿ ಉಪಾಸನೆಯು ಪುರುಷವ್ಯಾಪಾರ ಸಾಧ್ಯವಾದ್ದರಿಂದ ಸಾಧ್ಯೋಪಾಯವೆಂದು ವ್ಯವಹರಿಸಲ್ಪಡುತ್ತದೆ. ಹಾಗೆಯೇ ಉಪಸನಾಪ್ರೀತನಾದ ಭಗವಂತನು ತನ್ನನ್ನು ಅನುಭವಿಸಲು ಅನುಗ್ರಹಿಸುತ್ತಾನೆ. ಆ ಬ್ರಹ್ಮಾನು ಭವವೂ ತತ್ಪರೀವಾಹವಾದ ಕೈಂಕರ್ಯವೂ ಸಹ ಸಾಧ್ಯವಾದ ಫಲ. ಈ ರೀತಿ ಸಾಧ್ಯೋಪಾಯ ಸಾಧ್ಯ ಪ್ರಾಪ್ಯ ವೆಂಬ ಅಂಶಗಳೂ ನಿರೂಪಿತಗಳಾಗಿವೆ.

ಶ್ರೀ ಭಾಷ್ಯದ ಮಂಗಳ ಶ್ಲೋಕವಾದ "ಅಖಿಲ ಭುವನಜನ್ಮಸ್ಥೇಮ," ಎಂಬುದಕ್ಕೆ, ಶ್ರುತ ಪ್ರಕಾಶಿಕಾ ವ್ಯಾಖ್ಯಾನದಲ್ಲಿ, "ಸಿದ್ಧೋಪಾಯ ಉಪೇಯಂಚ ಬ್ರಹ್ಮ ಸಾಧ್ಯೋಪಾಯೋ ಭಕ್ತಿಃ ತತ್ರುಸಪ್ತಮ್ಯಂತ್ಯೈಃ ಪದೈಃ ಸಿದ್ಧೋಪಾಯ ರೂಪ ಮುಪೇಯಂಚ ಬ್ರಹ್ಮೋಚ್ಯತೇ" ಎಂದು ಹೇಳಿರುವುದನ್ನು ಗಮನಿಸತಕ್ಕದ್ದು. ಅದಾಗಿ "ಬ್ರಹ್ಮಣಿ ಶ್ರೀನಿವಾಸೇ" ಎಂಬುದು ಸಿದ್ಧೋಪಾಯವನ್ನು ತಿಳಿಸುತ್ತದೆ. ಸಿದ್ಧೋಪಾಯವು ಬ್ರಹ್ಮ ಶಬ್ದವಾಚ್ಯನಾದ ಲಕ್ಷ್ಮೀವಿಶಿಷ್ಟನು. ಭಕ್ತಿಯು ಸಾಧ್ಯೋಪಾಯ. ಪುರುಷನಿಂದ ಸಾಧ್ಯವಾಗಿ, ಅನುಷ್ಠಿಸಲ್ಪಡತಕ್ಕ ಉಪಾಯ. ಅಕಿಂಚನನಿಗೆ ಭಕ್ತಿಸ್ಥಾನದಲ್ಲಿ ಪ್ರಪತ್ತಿಯು ವಿಹಿತವಾದ್ದರಿಂದ ಅದೂ ಸಾಧ್ಯೋಪಾಯ. "ನಾನಾ ಶಬ್ದಾದಿ ಭೇದಾತ್" ಎಂಬ ಸೂತ್ರದಲ್ಲಿ (3–3–56) ಭಕ್ತಿ ಪ್ರಪತ್ತಿಗಳೆರಡೂ ವಿವಕ್ಷಿತಗಳು. ಅಧಿಕಾರಭೇದೇನ ಅನುಷ್ಠೇಯಗಳು. ಪ್ರಪತ್ತಿಯು ಪುರುಷಸಾಧ್ಯವಾದ ಉಪಾಯ. ಅವಿಧೇಯ ಜ್ಞಾನವಲ್ಲ.

ಪುರುಷಾರ್ಥೋಽತಶ್ಶಬ್ದಾದಿತಿ ಬಾದರಾಯಣಃ (ಬ್ರ. ಸೂ 3–9-1) ಎಂದು ಮೋಕ್ಷರೂಪವಾದ ಪುರುಷಾರ್ಥವು ಉಪಾಸನೆಯಿಂದಲೇ ಸಾಧ್ಯವೆಂದು ಹೇಳಿರುವುದರಿಂದ ಭಕ್ತಿ ರೂಪವಾದ ಉಪಾಸನೆಯೇ ಸಾಧನ . ಇದು ಪುರುಷ ಸಾಧ್ಯವಾದ್ದರಿಂದ ಸಾಧ್ಯೋಪಾಯವೆಂದು ವ್ಯವಹರಿಸಲ್ಪಡುತ್ತದೆ. "ಫಲಮತ ಉಪಪತ್ತೇಃ (ಬ್ರ.ಸೂ. 3–2–37)" "ಧರ್ಮಂ ಜೈಮಿನಿರತ ಏವ (ಬ್ರ.ಸೂ. 3–2-39) "ಪೂರ್ವಂತು ಬಾದರಾಯಣೋ ಹೇತುವ್ಯಪದೇಶಾತ್" (ಬ್ರ.ಸೂ. 3–2–40) ಎಂಬ ಸೂತ್ರ ತ್ರಯಾತ್ಮಕವಾದ ಫಲಾಧಿಕರಣದಲ್ಲಿ, ಯಾಗದಾನ ಹೋಮಾದಿಗಳಿಂದ ಅಪೂರ್ವವು ಧರ್ಮ ಉಂಟಾಗಿ, ಆ ಅಪೂರ್ವವೇ (ಧರ್ಮವೇ) ಫಲವನ್ನು ಕೊಡುತ್ತದೆಯೆಂಬ ಮೀಮಾಂಸಕರ ಮತವನ್ನು ನಿರಾಕರಿಸಿ, ಅತಃ-ಪರಮ ಪುರುಷನಿಂದ ಫಲಮ್-ಫಲವು ಉಂಟಾಗುತ್ತದೆಯೆಂದು ಹೇಳಿ, ಉಪಪತ್ತೇಃ-ಯಾಗದಾನ ಹೋಮಾದಿಗಳಿಂದಲೂ ಉಪಾಸನದಿಂದಲೂ ಆರಾಧಿತನಾಗಿ ಪರಮಪುರುಷನೇ, ಐಹಿಕಾಮುಷ್ಮಿಕ ಭೋಗಗಳನ್ನೂ, ಮೋಕ್ಷವನ್ನೂ ಕೊಡುತ್ತಾನೆ, ಕರ್ಮವು ಕೊಡಲಾರದು ಎಂದು ನಿಷ್ಕರ್ಷಿಸಿರುತ್ತಾರೆ. ಈ ಮಹಾ ಪುರುಷನೇ ಸಿದ್ಧೋಪಾಯ, ಉಪಾಸನೆಯು (ಅಕಿಂಚನನಿಗೆ ಪ್ರಪತ್ತಿಯು) ಸಾಧ್ಯವಾಗಿ ಅವನನ್ನು ವಶೀಕರಿಸುವುದರಿಂದ ಸಾಧ್ಯೋಪಾಯ.

ಪರಾಧಿಕಾರಣ (3–2–7) ದಲ್ಲಿ 'ಉಪಪತ್ತೇಶ್ಚ' (ಬ್ರ. ಸೂ. 3–2–34) ಎಂಬ ಸೂತ್ರ ಭಾಷ್ಯದಲ್ಲಿ "ಅನನ್ಯೋಪಾಯತ್ವ ಶ್ರವಣಾತ್" ಎಂಬ ಭಾಷ್ಯಪಂಕ್ತಿಯನ್ನು ಆಧಾರವಾಗಿಟ್ಟುಕೊಂಡು, "ನಾಯಮಾತ್ಮಾ ....ಯಮೇವೈಷ ವೃಣುತೇ ತೇನಲಭ್ಯಃ" ಎಂಬ ಶ್ರುತಿಗೆ ಭಗವಂತನೇ ಉಪಾಯ. ಭಕ್ತಿಪ್ರಪತ್ತಿಗಳು ಉಪಾಯವಿಲ್ಲವೆಂದು ಕೆಲವರು ವಾದಿಸುತ್ತಾರೆ. ಇದು ಅಧಿಕರಣಾರ್ಥವನ್ನು ತಿಳಿಯದೆ ಹೇಳುವವರ ಮಾತು. "ಪರಮತಸ್ಸೇತೂನ್ಮಾನ ಸಂಬಂಧ ಭೇದವ್ಯಪದೇಶೇಭ್ಯಃ" (3–2–32) ಎಂಬ ಸೂತ್ರದಿಂದ ಪರಮಪುರುಷನಾದ ಭಗವಂತನಿಗಿಂತ ಮೇಲಾದ ವಸ್ತುವು ಇದೆಯೇ ? ಎಂದು ಶಂಕಿಸಿ ಇಲ್ಲವೆಂದು ಸಿದ್ಧಾಂತೀಕರಿಸಿರುತ್ತಾರೆ. ಶಂಕೆಗೆ ಕಾರಣವೇನೆಂದರೆ, "ಏತಂಸೇತುಂ ತೀರ್ತ್ವಾ, ಅಮೃತಸ್ಯೈಷಸೇತುಃ" ಎಂಬ ಶ್ರುತಿ ಖಂಡಗಳಿಂದ ಮೋಕ್ಷವನ್ನು ಹೊಂದಲು ಈ ಭಗವಂತನು ಸೇತುವೆಯಂತೆ ಆಚೆ ದಡವನ್ನು ಪ್ರಾಪಿಸುವವನು ಎಂದು ಹೇಳಿರುವುದರಿಂದ, ಸೇತುವೆಯ ಸ್ಥಾನದಲ್ಲಿ ಭಗವಂತನನ್ನು ಪ್ರಾಪಕನನ್ನಾಗಿಟ್ಟು ಇವನಿಗಿಂತ ಪ್ರಾಪ್ಯನಾದ ಪರಮ ಪುರುಷನು ಬೇರೆ ಎಂದು ತೋರುತ್ತದೆ. ಇದನ್ನು ನಿವಾರಿಸಿ 'ಉಪಪತ್ತೇಶ್ಚ' ಎಂಬ ಸೂತ್ರದಲ್ಲಿ ಪ್ರಾಪಕನೇ ಪ್ರಾಪ್ಯನು ಎಂಬದು ಉಪಪನ್ನವು ಎಂಬುದಕ್ಕೆ

"ನಾಯಮಾತ್ಮಾ ಪ್ರವಚನೇನ ಲಭ್ಯಃ ನಮೇಧಯಾ ನ ಬಹುನಾಶ್ರುತೇನ ।

ಯ ಮೇವೈಷವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾವಿವೃಣುತೇ ತನೂಂಸ್ವಾಮ್ ॥"

ಎಂಬ ಶ್ರುತಿಯನ್ನು ಪ್ರಮಾಣೀಕರಿಸಿ, ಅನನ್ಯೋಪಾಯತ್ವ ಶ್ರವಣಾತ್ ಎಂದು ಭಾಷ್ಯಕಾರರು ಸಿದ್ಧಾಂತೀಕರಿಸಿದ್ದಾರೆ. "ಪ್ರಾಪ್ಯಸ್ಯ ಪರಮಪುರುಷಸ್ಯ ಸ್ವಪ್ರಾಪ್ತೌ ಸ್ವಸ್ಯೈವೋಪಾಯತ್ವ ಶ್ರವಣಾತ್" ಎಂದು ಪ್ರಾಪಕನಾದ ತಾನೇ ಪ್ರಾಪ್ಯನು ಎಂದು ಅರ್ಥ ಮಾಡಿದ್ದಾರೆ ಇದರಿಂದ ಭಗವಂತನಿಗೆ ಮೇಲಾದ ಮತ್ತೊಬ್ಬ ಪುರುಷನು ಪ್ರಾಪ್ಯನಲ್ಲವೆಂಬ ಉತ್ತೀರ್ಣ ಬ್ರಹ್ಮವಾದ ರೂಪ ಪೂರ್ವ ಪಕ್ಷವು ನಿರಾಕರಿಸಲ್ಪಟ್ಟಿತೇ ವಿನಹ ಭಕ್ತಿಪ್ರಪತ್ತಿಗಳು ಉಪಾಯವಲ್ಲವೆಂಬ ಸಿದ್ಧಾಂತವು ನಿರಾಕರಿಸಲ್ಪಡಲಿಲ್ಲ. ಹಾಗೆ ಹೇಳಿದರೆ ಫಲಾಧಿಕರಣ ಭಾಷ್ಯಗಳಿಗೆ ಮೇಲೆ ನಿರೂಪಿಸಿದಂತೆ ವಿರೋಧವು ಏರ್ಪಟ್ಟು ಸಾಧನಾಧ್ಯಾಯವು ನಿಷ್ಫಲವಾಗುತ್ತದೆ. "ನಾಯಮಾತ್ಮಾ" ಶ್ರುತಿಯಲ್ಲಿ "ಯಮೇವೈಷವೃಣುತೇ ತೇನಲಭ್ಯಃ" ಎಂಬುದಕ್ಕೆ "ಪ್ರಿಯತಮ ಏವ ವರಣೀಯೋ ಭವತಿ, ಯಸ್ಯಾಯಂ ನಿರತಿಶಯ ಪ್ರಿಯಃ ಸ ಏವಾಸ್ಯಪ್ರಿಯತಮೋ ಭವತಿ" ಎಂದು ಭಾಷ್ಯಕಾರರು ವ್ಯಾಖ್ಯಾನ ಮಾಡಿರುತ್ತಾರೆ. ಅದಾಗಿ ಭಗವಂತನು ತನಗೆ ಯಾರು ಪ್ರಿಯತಮರೋ, ಅಂದರೆ ಯಾರು ತನ್ನಲ್ಲಿ ಪ್ರೀತಿಯನ್ನುಳ್ಳವರೋ ಅವರನ್ನು ವರಿಸುತ್ತಾನೆಂದು ಅರ್ಥ ಮಾಡಿರುತ್ತಾರೆ. ಭಗವಂತನಲ್ಲಿ ನಿರತಿಶಯ ಪ್ರೀತಿಯುಳ್ಳವನು ಭಕ್ತಿಯೋಗ ನಿಷ್ಠನೇ. ಭಕ್ತಿಯೋಗದಲ್ಲಿ ಅಧಿಕಾರವಿಲ್ಲದ ಪ್ರಪತ್ತಿಯೋಗನಿಷ್ಠನೂ ನಿರತಿಶಯ ಪ್ರೀತಿಯುಕ್ತನೇ. ಆದ್ದರಿಂದ ಭಕ್ತಿಪ್ರಪತ್ತಿಗಳನ್ನು ವ್ಯಾಜಗಳನ್ನಾಗಿಟ್ಟುಕೊಂಡು ಭಗವಂತನು ಚೇತನನ್ನು ವರಿಸುತ್ತಾನೆಂಬುದು, ವೈಷಮ್ಯನೈರ್ಘೃಣ್ಯಾದಿ ಸರ್ವಶಾಸ್ತ್ರಾರ್ಥಗಳಿಗೂ ವಿರೋಧವಿಲ್ಲದೆ ಹೇಳುವ ನಿಷ್ಕಂಟಕವಾದ ಘಂಟಾಪಥ. 'ತನೂಂ' ಎಂದು ಪ್ರಾಪ್ಯತ್ವವೂ "ವಿವೃಣತೇ" ಎಂದು ಪ್ರಾಪಕತ್ವವೂ ಹೇಳಲ್ಪಡುತ್ತವೆ. ತಾತ್ಪರ್ಯ ದೀಪಕೆಯಲ್ಲಿ, 'ವಿದ್ವಾನೇವಾಯಂ' ಎಂಬಲ್ಲಿ, ಅವಿದ್ವಾನನ್ನು ಏವಕಾರವು ವ್ಯಾವರ್ತಿಸುತ್ತದೆಯೇವೆ ವಿನಹ, ಅಪ್ರಸ್ತುತವಾದ ಬ್ರಾಹ್ಮಣತ್ವಾದಿಗಳನ್ನು ವ್ಯಾವರ್ತಿಸುವುದಿಲ್ಲವೆಂದು, ಈ ಘಟ್ಟಕ್ಕೆ ದೃಷ್ಟಾಂತವನ್ನು ಹೇಳಿರುವುದು ಗಮನಾರ್ಹ. ಹಾಗೆಯೇ 'ಅನನ್ಯೋಪಾಯತ್ವ' ಎಂಬುದು ಭಗವಂತನೇ ಉಪಾಯ, (ಸಿದ್ಧೋಪಾಯ) ಬ್ರಹ್ಮರುದ್ರಾದಿಗಳಲ್ಲವೆಂಬುದನ್ನು ನಿರಾಕರಿಸುತ್ತದೆಯೇ ವಿನಹ, ಭಗವದ್ವಶೀಕರಣಾರ್ಥವಾಗಿ ಶಾಸ್ತ್ರಗಳಲ್ಲಿ ವಿಹಿತಗಳಾದ ಭಕ್ತಿಪ್ರಪತ್ತಿಗಳನ್ನಲ್ಲ. ಈ ವಿಷಯವನ್ನು ಸಿದ್ಧ-ಸಾಧ್ಯೋಪಾಯ ಶೋಧನಾಧಿಕಾರಗಳಲ್ಲಿ ಆಚಾರ್ಯರು ನಿರೂಪಿಸಿರುವುದು ಪ್ರಾಮಾಣಿಕರಿಗೆ ಹೃದಯಂಗಮವಾಗಿರುತ್ತದೆ.

ಅನಂತರ ಪದವಾಕ್ಯಯೋಜನಾ ಭಾಗದಲ್ಲಿ, ಅಷ್ಟಾಕ್ಷರ, ದ್ವಯ, ಚರಮಶ್ಲೋಕಗಳ ಅರ್ಥವನ್ನು ನಿರೂಪಿಸುವವರಾಗಿ ಸ್ವರೂಪೋಪಾಯ ಪುರುಷಾರ್ಥಗಳನ್ನು ವಿವರಿಸಿದ್ದಾರೆ.

> ಸಮಸ್ತಶಬ್ದಮೂಲತ್ವಾತ್ ಅಕಾರಸ್ಯಸ್ವಭಾವತಃ ।
>
> ಸಮಸ್ತವಾಚ್ಯಮೂಲತ್ವಾತ್ ಬ್ರಹ್ಮಣೋಪಿಸ್ವಭಾವತಃ ॥
>
> ವಾಚ್ಯವಾಚಕ ಸಂಬಂಧಃ ತಯೋರರ್ಥಾತ್ ಪ್ರತೀಯತೇ ॥

ಎಂದು ವೇದಾರ್ಥ ಸಂಗ್ರಹದಲ್ಲಿ ಹೇಳಿರುವಂತೆ ಅಕಾರವು ಸರ್ವಶಬ್ದಗಳಿಗೂ ಮೂಲವಾದ ಜಗತ್ಕಾರಣನಾದ ಬ್ರಹ್ಮವನ್ನು ತಿಳಿಸುವುದರಿಂದಲೂ, ಈ ಅಷ್ಟಾಕ್ಷರದ ಆದಿಯಲ್ಲಿ ಇರುವುದರಿಂದಲೂ, ಇದಕ್ಕೆ ಮೂಲಮಂತ್ರವೆಂದು ಹೆಸರು. ದ್ವಯಮಂತ್ರವು ಉಪಾಯೋಪಾಯಗಳನ್ನು ತಿಳಿಸಿ 'ದ್ವಯ' ಶಬ್ದವನ್ನು ಅನ್ವರ್ಥಗೊಳಿಸಿದೆ. ಚರಮಶ್ಲೋಕವು ಗೀತೆಯ ಚರಮೋಪದೇಶವಾದ್ದರಿಂದ ಹಾಗೆ ಹೆಸರನ್ನು ಪಡೆದಿದೆ. ಇದು ಪ್ರಪತ್ತಿವಿಧಾಯಕ ವಾಕ್ಯ. ದ್ವಯವು ಪ್ರಪತ್ತ್ಯನುಷ್ಠಾನಕ್ಕೆ ಕರಣಮಂತ್ರ. ಅಷ್ಟಾಕ್ಷರವು ತತ್ವಹಿತ ಪುರುಷಾರ್ಥಗಳನ್ನು ನಿರೂಪಿಸುವುದರಿಂದ ಈ ಮೂರು ಮಂತ್ರಗಳೂ ಪರಮೋಪಾದೇಯಗಳು.

ಅನಂತರ ಆಚಾರ್ಯ ಕೃತ್ಯ, ಶಿಷ್ಯಕೃತ್ಯಾಧಿಕಾರಗಳಲ್ಲಿ ಆಚಾರ್ಯನ ಮತ್ತು ಶಿಷ್ಯನ ಕರ್ತವ್ಯಗಳನ್ನು ನಿರೂಪಿಸಿ, ಗ್ರಂಥವು ನಿಗಮಿಸಲ್ಪಟ್ಟಿದೆ. ಹೀಗೆ ಸಕಲ ಶಾಸ್ತ್ರಾರ್ಥಗಳನ್ನೂ ಒಳಗೊಂಡಿರುವ ಶ್ರೀಮದ್ರಹಸ್ಯತ್ರಯಸಾರವನ್ನು ಪ್ರತಿಯೊಬ್ಬ ಆಸ್ತಿಕನೂ ಆಚಾರ್ಯನ ಹತ್ತಿರ ಪ್ರಾಥಮಿಕ ಶ್ರವಣಮಾಡಿ, ನಂತರ ವ್ಯಾಖ್ಯಾನಪೂರ್ವಕ ಸೇವಿಸಿದರೆ ಸಕಲ ವೇದಾಂತಾರ್ಥಗಳೂ ತಿಳಿಯುತ್ತವೆ. ಸರ್ವರೂ ಅವಶ್ಯ ಆ ರೀತಿಯಲ್ಲಿ ಜ್ಞಾನ ಪಡೆಯುವಂತೆ ಶ್ರೀಲಕ್ಷ್ಮೀಹಯಗ್ರೀವನು ಕರುಣಿಸಲಿ ಎಂದು ಪ್ರಾರ್ಥಿಸುತ್ತೇನೆ. ಈಗ ಅಚ್ಚಿಟ್ಟಿರುವ ಗ್ರಂಥವೂ ಈ ರೀತಿಯಲ್ಲಿ ಜ್ಞಾನವನ್ನು ಸಂಪಾದಿಸಲು ಪರಮೋಪಕಾರವಾಗಿದೆ. ಎಲ್ಲರೂ ಈ ಗ್ರಂಥವನ್ನೂ ಆದರಿಸಿ ಕೊಂಡುಕೊಳ್ಳಬೇಕಾಗಿ ವಿನಂತಿ.

ಮೈಸೂರು.
15-1-1991

ವಿದ್ವನ್ಮಣಿ. ಸ. ಮಾ. ವರದಾಚಾರ್ಯಃ
ಆಸ್ಥಾನ ವಿದ್ವಾನ್. ಪರಕಾಲ ಮಠ
ಮೈಸೂರು

# RAHASYATRAYASARM

— *Dr. S. M. Srinivasachari*

**INTRODUCTION**

Rahastrayasaram is an outstanding philosophical and religious treatise of Vedanta Desika. As the title suggests, it contains the quintessence of the three Rahasyas, the three important Vaishnava esoteric mantras known as Mulamantra, Dvaya and Charamasloka. The main objective of the book according to its title, is to show how all the essential teachings of the Vedas. Itihasas, Puranas, the Agamas are contained in the three mantras. Vedanta Desika with his encyclopaedic knowledge of all the sacred texts has carried out this task superbly in this masterly work.

The scope of the book is far wider than the exposition of the rich inner meaning of the mantras. It attempts to present the entire philosophy and religion of Visistadvaita Vedanta in a systematic and perfect way. Vedanta is ensbrined in the Upanishads, the Vedanta Sutras and the Bhagavadgita. Ramanuja, as the chief exponent of the Visistadvaita Darsana, has expounded in detail the teachings of Vedanta in his two monumental commentaries, Sribhasya and Gitabhasya and the Vedarthasangraha. These works written in Sanskrit are not easily understandable by laymen who are not acquainted with the Shastras Nor are they accessible to persons of all castes. In order to make the teachings of Vedanta available to all classes of Vaishnavas. Vedanta Desika has written Rahasyatrayasaram in an understandable popular manipravala language, which is a mixture of Tamil and Sanskrit.

The main topics of Vedanta are **tattva**, or the nature of Reality, **bita** or ways and means of realizing it and **Purusbartba** or the ultimate spiritual goal. Thus, the first two adhyayas of Vedanta Sutras deal with Tattva, the third with Sadhana and the fourth with the Purushartha. The main emphasis of the Upanishadic teaching is that knowledge of Brahman should culminate in the attainment of Brahman. According to the Vedanta, Tattvas or real ontological entities are three, These are **Isvara** or God, Jiva or the individual self and Prakrti or the

cosmic matter. The jivas which are eternal and infinite in number are also called as cit or **cetana** in Vaishnava terminology, because it has consciousness. The cosmic matter is called **acit or acetana,** because it does not have consciousness, like the jiva. The former is spiritual in character, whereas the latter is material. Isvara is the controller **(niyanta)** and supporter **adhara** of both. He is the supreme Lord of the entire universe of cit and acit. The means of attaining God is either Upasana, meditation on Brahman or **Prapatti** the absolute self-surrender to God. The goal to be achieved is the enjoyment of the bliss of Brahman by the individual self in a transcendental realm known as Paramapada.

The Rahasyatrayasaram is devoted to the exposition of these essential teachings of Vedanta. The book is divided into three main parts. The first part comprising twenty two chapters deals with the main topics of Vedanta. The important subjects covered are : the nature of the three tattvas–Isvara, cit and acit, the organic relationship between Isvara and the universe of cit and acit as soul and body, the supremacy of Narayana as para–tatva, the status of Goddess Sri as an integral part of Narayana, the cause of bondage and the obstacles confronted by individual souls to attain God, the nature and types of means (Upaya) for liberation, the nature of prapatti and the pre-requisites for its observance, the duties of a prapanna and the nature of moksa.

It is not possible in a brief introduction to give a detailed account of each of these subject matter nor even a summary of each chapter. However, we should take note of two important doctrines of Vaishnavism which have been very well established in this book. The first one is that **Sriman–Narayana** is the Supreme Being **(para taftva)** and that He as associated with Goddess Sri is both the **Upaya,** means and **Upeya,** the goal to be attained. That Narayana is the Supreme Deity (para-devata) implies that no other deity such as Brahma or Rudra can become the Supreme Being because the latter are caused by Narayana, whereas the former exists for ever eternally. That which has an origin can never be one an ultimate reality. The epithet 'Srimat' added to Narayana implies that Narayana as inseparably associated with Goddess Sri is the ultimate Reality Just as the Lustre is not separated from the Sun, in the same way, Narayana without Lakshmi is in conceivable. Lakshmi is

associated with Narayana in all the functions of the Lord such as creation, protection of Universe, granting moksa to devotees, and in all the states of different avataras of 'Vishnu'

The second important doctrine whieh has been exhaustively discussed in this book is that **Prapatti** is the direct means to moksa and as it is enjoined both by Sruti and Smrti texts, it is to be observed for the purpose of moksa. Prapatti means an ardent prayer to God with the unshakable faith that He is the sole protector, and requesting Him to take care of the burden of protecting the soul which actually belongs to Him.

Both these doctrines constitute the distinguishing features of Sri-Vaishnavism. Vedanta Desika has made a unique contribution to our Sampradaya by re–establishing the truth of these theories in the pesent book by dispelling all possible doubts and criticisms on the subject. But for this kind service of Sri Desika we would have lost the tradi ion of the observance of Prapatti for moksa in the proper prescribed manner.

The second part of the book consisting of four chapters is devoted to the discussion of certain important issues relating to the nature of (a) Isvara, who is the **Siddhopaya** or the one who as an eternal existent is the primary means of liberation (b) the controversial points regarding the nature of Prapatti, which is the **Sadhyopaya** or as the Sadhana to be accomplished by the aspirant for moksa for obtaining the grace of the all-compassionate God and (c) theories which either exaggerate or underestimate the values of Prapatti as a direct means to moksa.

The third part of the book comprising three chapters is primarily intended to bring out comprehensively all the hidden meanings of the three mantras. This is the most important section of the book since the knowledge of the esoteric mantras is very essential for a Vaishnavite to become an aspirant for moksa and adopt the easy path of prapatti for moksa through the guidance of a qualified preceptor. Because of the sacredness and secrecy attached to the mantras, the knowledge of the mantras is required to be obtained from a guru. The mantras are held in such high esteem by the Vaishnava Acharyas because they contain, as

Vedanta Desika has well expounded in this work, all that is taught in the sacred texts. Briefly, the Mula-mantra conveys the knowledge of the Supreme Being, Sriman-Narayana, His glory, His Lordship over the universe, His immanence in all that exists in the universe, the utter deperdance of the jiva on the Paramatman and the need of seeking His grace for moksa. The **Dvavyam**. which is eonsidered the gem of all mantras, brings out fully all the implications of Saranagati and in particular, the basic truth of Srivaishnavism that Lord Narayana as associated with Goddess Sri is both the **Upaya**, means and Upeya, goal moksa. The **charama-sloka,** which is found in the coneluding portion of Bhagavadgita and which constitutes the final teaching (hence it is called (**charama**) of Lord Krishna to Arjuna, enjoins the observance of Prapatti as the only Upaya for moksa, when an individual finds himself utterly incapable of adopting other means such as Bhakti-Yoga for moksa. The book is eoncluded with three minor chapters relating to the duties of a preceptor, the obligations of a disciple and a summary of the entire book.

Thus, Rahasyatrayasaram is a masterly treatise in which all the important doctrines of Vaishnavism have been dealt with in a systematic way drawing extensively material from the smritis, Itihasas, Puranas, Pancharatra hymns of the Alwars and the works of ancient Acharyas. In terms of the extensiveness of the material, depth of knowledge, clarity of thought and method of presentation, there is no other religious treatise in the field of Vaishnavism to match it. No wonder that such a work has been prescribed by our Vaishnava Acharyas as a **Kalakshepa Grantha,** that is, as a religious text to be studied with devotion under the guidance of a quaiified preceptor. It is a book which must be read by every Vaishnava.

Sri S. M. Krishnamacharya has done a great service to the Kannada knowing Vaishnava community by bringing out this precious book with crisp and authentic commentary thereon. He has also squarely dealt with here & there, the arguments raised by other schools of thought, with fitting replies and richly deserves our thanks.

# ವಿಷಯ ಸೂಚಿಕೆ

श्रियै नमः

श्रीमते रामानुजाय नमः

श्रीमते निगमान्त महादेशिकाय नमः

# 23. सिद्धोपाय शोधनाधिकारः

यु‌गपदखिलं प्रत्यक्षेण स्वतस्सततं विदन् ।
निरवधि दयो दिव्योदन्वानशक्य विवर्जितः ।
जलधिसुतया सार्धं देवो जगत्परिपालयन् ।
परम पुरुषस्सिद्धोपायः प्रतीष्ट भरस्सताम् ॥ ३१ ॥

---

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

ಶ್ರೀಮದ್ರಹಸ್ಯತ್ರಯಸಾರದಲ್ಲಿ ಸಿದ್ಧೋಪಾಯ ಶೋಧನಾಧಿಕಾರಕ್ಕೆ "ಸಾರಚಂದ್ರಿಕಾ" ವ್ಯಾಖ್ಯಾ

ಹೀಗೆ ಇಪ್ಪತ್ತೆರಡು ಅಧಿಕಾರಗಳನ್ನೊಳಗೊಂಡ ಅರ್ಥಾನುಶಾಸನ ಭಾಗವು ವ್ಯಾಖ್ಯಾನಿಸಲ್ಪಟ್ಟಿತು. ಅನಂತರ ಅಧಿಕಾರ ಚತುಷ್ಟಯಾತ್ಮಕವಾದ ಸ್ಥಿರೀಕರಣ ಭಾಗವು ವ್ಯಾಖ್ಯಾನಿಸಲ್ಪಡುತ್ತದೆ.

ಯದ್ವ್ಯಾಖ್ಯಾನಚ್ಚ ರಹಸ್ಯಾರ್ಥ ಸಾರತತ್ವಂ ಸತಾಮೃತಮ್ ।
ತತ್ತ್ವಾವದಖಿಲಂಹೃದ್ಯ ಮನುಶಿಷ್ಟಮನಾಕುಲಮ್ ॥
ಮಾಯಯಾಪಹೃತಜ್ಞಾನಾಸ್ತ್ವರೀಯಾದುಷ್ಕೃತಿಷ್ವಥ ।
ಸರ್ವಸ್ವಮೇತತ್ಸಾಧೂನಾಮಪಹರ್ತುಂ ಕೃತೋದ್ಯಮಾಃ ॥
ಮಧುಕೈಟಭವತ್ತಾಂಶ್ಚ ವಿಜಿತ್ಯ ಶ್ರುತಿಪದ್ಧತಿಮ್ ।
ಪರಿತ್ರಾತುಂ ಪ್ರಯತತೇ ನಿಗಮಾಂತ ಮಹಾಗುರುಃ ॥ (ಸಾರಕೌಮುದೀ)

ಇಲ್ಲಿಯವರೆಗೆ ಹೃದ್ಯಗಳಾದ ರಹಸ್ಯಾರ್ಥಗಳಸಾರ ತತ್ವಗಳೆಲ್ಲಾ ಸಾಧುಗಳ ಮನಸ್ಸಂತೋಷಾರ್ಥವಾಗಿ ಸಂದೇಹಗಳಿಲ್ಲದೆ ಆಚಾರ್ಯನಿಂದ ಉಪದೇಶಿಸಲ್ಪಟ್ಟಿದುವು. ಗೀತೆಯಲ್ಲಿ

"ನಮಾಂ ದುಷ್ಕೃತಿನೋಮೂಢಾಃ ಪ್ರಪದ್ಯಂತೇನರಾಧಮಾಃ ।
ಮಾಯಯಾಪಹೃತಜ್ಞಾನಾಃ ಆಸುರಂ ಭಾವಮಾ ಶ್ರಿತಾಃ ॥"

ಎಂದು ದುಷ್ಕೃತಿಗಳನ್ನು 1) ಮೂಢರು–ದೇಹಾತ್ಮ ವಿವೇಕವಿಲ್ಲದೆ ವಿಪರೀತ ಜ್ಞಾನವುಳ್ಳವರು, ಅಂದರೆ ಭಗವ ಚ್ಛೇಷ ಭೂತವಾದವುಗಳನ್ನೆಲ್ಲಾ ತನಗೇ ಸ್ವಂತವೆಂದು ಭಾವಿಸುವವರು, 2) ನರಾಧಮಾಃ – ಸಾಮಾನ್ಯವಾಗಿ

ಭಗವತ್ಸ್ವರೂಪಾದಿಗಳನ್ನು ತಿಳಿದಿದ್ದರೂ ಅವರಲ್ಲಿ ಔನ್ಮುಖ್ಯವಿಲ್ಲದವರು 3) ಮಾಯಯ್ಯಾಪಹೃತ ಜ್ಞಾನಾಃ- "ವೇದಬಾಹ್ಯಮತದಂತೆಯೇ ಕೂಟಯುಕ್ತಿಗಳಿಂದ ಭಗವತ್ಸ್ವರೂಪ ವಿಭೂತಿಗಳನ್ನು ಇಲ್ಲವೆನ್ನುವವರು 4) ಆಸುರಂ **ಭಾವಮಾಶ್ರಿತಾಃ**-ಭಗವತ್ಸ್ವರೂಪ ರೂಪ ವಿಭವೈಶ್ವರ್ಯಗಳ ಜ್ಞಾನವನ್ನು ಪಡೆದು ಅದನ್ನು ದ್ವೇಷಿಸುವವರು-ಅದನ್ನು ದ್ವೇಷಪೂರ್ವಕ ದೂಷಿಸುವುದಕ್ಕೋಸ್ಕರವೆಂದು ಪಡೆದವರು.

ಈ ರೀತಿಯಲ್ಲಿ ದುಷ್ಕೃತಿಗಳು ನಾಲ್ಕುಪಂಗಡ. ಅವರಲ್ಲಿ ಮೇಲೆ ಮೇಲೆ ಹೇಳಲ್ಪಟ್ಟವರು ಪೂರ್ವ ಪೂರ್ವಕ್ಕಿಂತ ಹೆಚ್ಚು ದುಷ್ಕೃತಿಗಳು. ಇವರಲ್ಲಿ ಮೂರು ನಾಲ್ಕನೇ ಪಂಗಡದವರು ಬಹಳ ಬಹಳ ದುಷ್ಕೃತಿಗಳು, ಎಂಬುದು ಗೀತಾಚಾರ್ಯನ ಹೃದಯ. ಇವರುಗಳು ಸತ್ಪುರುಷರ ಸರ್ವಸ್ವವಾದ – ಸತ್ಪುರುಷರಿಗೆ ಸಂಪ್ರದಾಯ ಜ್ಞಾನವೇ ಎಲ್ಲಾ ಸಂಪತ್ತು–ಈ ಸಂಪ್ರದಾಯಾರ್ಥಗಳನ್ನು ಅಪಹರಿಸಲು ಪ್ರಯತ್ನಪಡುತ್ತಾರೆ. ಮಧುಕೈಟಭರನ್ನು ಜಯಿಸಿ ಭಗವಂತನು ವೇದವನ್ನು ಪುನರುಜ್ಜೀವನಗೊಳಿಸಿದಂತೆ, ಇವರುಗಳು ಹೇಳುವ ಅಪಾರ್ಥಗಳನ್ನು ಖಂಡಿಸಿ ಸಂಪ್ರದಾಯಾರ್ಥವನ್ನು ರಕ್ಷಿಸಿಡಲು ನಿಗಮಾಂತಾಚಾರ್ಯವರ್ಯರು **ಸ್ಥಿರೀಕರಣಭಾಗವೆಂಬ ಈ** ಎರಡನೆಯ ಭಾಗದಲ್ಲಿ ಪ್ರಯತ್ನಿಸುತ್ತಾರೆ.

**ಯುಗಪದಖಿಲಂ ಪ್ರತ್ಯಕ್ಷೇಣ** ಇತ್ಯಾದಿ

"ಯೋವೇತ್ತಿಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾಸ್ವಯಮ್ ।
ತಂಪ್ರಣಮ್ಯ ಹೃಷೀಕೇಶಂ ನ್ಯಾಯತತ್ವಂ ಪ್ರಚಕ್ಷ್ಮಹೇ ॥"

ಎಂಬ ಶ್ರೀಮನ್ನಾಥ ಮುನಿಗಳ ನ್ಯಾಯ ತತ್ವಮಂಗಳ ಶ್ಲೋಕವನ್ನು ಅನುಸಂಧಾನ ಮಾಡಿ, ತದ್ರೂಪವಲ್ಲಿ ಆ ಆಚಾರ್ಯೋತ್ತಮರ ಅನುಸ್ಮರಣ ರೂಪ ಮಂಗಳಾಚಾರವು, ಪರಪಕ್ಷ ಪ್ರತಿಕ್ಷೇಪಕ್ಕೆ ವಿಘ್ನಗಳನ್ನು ಹೋಗಲಾಡಿಸಲು ಮಾಡಲ್ಪಟ್ಟಿತು. **ಯುಗಪತ್**–ಏಕ ಕಾಲದಲ್ಲಿ **ಅಖಿಲಂ**–ಉಭಯವಿಭೂತಿಗಳಲ್ಲಿರುವ ಸರ್ವವಸ್ತುಗಳನ್ನೂ ಇದರಿಂದ ಕ್ರಮವಾಗಿ ಸಾಕ್ಷಾತ್ಕರಿಸುವುದು ವ್ಯಾವರ್ತಿಸಲ್ಪಟ್ಟಿತು. **ಸ್ವತಃ**–ಉಪಾಧಿಯಿಲ್ಲದೆ, ಯೋಗಜಸಾಕ್ಷಾತ್ಕಾರವು ಇದರಿಂದ ವ್ಯಾವರ್ತಿಸಲ್ಪಟ್ಟಿತು. **ಸತತಂ**–ಸರ್ವಕಾಲವೂ–ಇದರಿಂದ ಕೆಲವು ಸಮಯಗಳಲ್ಲಿ ಮಾತ್ರ ಎಲ್ಲವನ್ನೂ ಸಾಕ್ಷಾತ್ಕರಿಸುತ್ತಾನೆಂಬುದು ವ್ಯಾವರ್ತಿಸಲ್ಪಟ್ಟಿತು. **ವಿದನ್**–ಸಾಕ್ಷಾತ್ತಾಗಿ ತಿಳಿಯುವವನಾಗಿ–ಏತಾವತಾಸ್ತ್ರನಂಧಯಪ್ರಾಯರಾದ ನಮ್ಮ ಕ್ಲೇಶಗಳನ್ನು ಸರ್ವದಾ ಸಾಕ್ಷಾತ್ಕರಿಸಿಕೊಂಡಿರುವ ಈಶ್ವರನು ವ್ಯಾಜ ನಿರಪೇಕ್ಷವಾಗಿ ರಕ್ಷಿಸಬೇಡವೇ ಎಂಬ ಶಂಕೆಗೆ ಹೇತು–ಕಾರಣವು ಹೇಳಲ್ಪಟ್ಟಿತು. ನಮ್ಮ ಕ್ಲೇಶಗಳನ್ನು ಹೋಗಲಾಡಿಸಲು ಕಾರುಣಿಕನಾಗಿರ ಬೇಡವೇ ಎಂದರೆ,**ನಿರವಧಿದಯಾದಿವ್ಯೋದನ್ವಾನ್**-ಎಲ್ಲೆಯಿಲ್ಲದ ದಯಾರೂಪ ದಿವ್ಯ ಸಾಗರನವನು-ಇದರಿಂದ ವ್ಯಾಜ ನಿರಪೇಕ್ಷವಾಗಿ ರಕ್ಷಣೋಪಯುಕ್ತವಾದ ಪರಮಕಾರುಣಿಕತ್ವವು ಹೇಳಲ್ಪಟ್ಟಿತು. ಇದೂ ಮೇಲೆ ಹೇಳಿದ ಶಂಕಾದಾರ್ಢ್ಯಾರ್ಥ. ಸರ್ವಜ್ಞನೂ ಪರಮ ಕಾರುಣಿಕನೂ ಆದ ಭಗವಂತನು ನಮ್ಮನ್ನು ತಾನೇ ಯಾವ ವ್ಯಾಜವೂ ಬೇಕಿಲ್ಲದೆ ರಕ್ಷಿಸಬೇಡವೇ ಎಂಬ ಶಂಖಾಬೀಜವಿದು.

ಸರ್ವಜ್ಞನೂ ಪರಮಕಾರುಣಿಕನೂ ಆದರೂ ಶಕ್ತನಾಗಿದ್ದರೆಯಲ್ಲವೇ ರಕ್ಷಣೋನ್ಮುಖನಾಗುವುದು, ಎಂದರೆ **ಅಶಕ್ಯವಿವರ್ಜಿತಃ** – ಅಶಕ್ಯೇನ ವಿವರ್ಜಿತಃ–ಅವನಿಗೆ ಅಶಕ್ಯವೆಂಬುದು ಇಲ್ಲ. ಹೀಗೆ ಸಮರ್ಥನೂ, ಸರ್ವಜ್ಞನೂ, ಪರಮಕಾರುಣಿಕನೂ ಆದ ಭಗವಂತನು ಏಕೆ ರಕ್ಷಿಸುತ್ತಿಲ್ಲವೆಂದರೆ, **ದೇವಃ** – ದಿವು ಕ್ರೀಡಾವಿಜಿಗೀಷಾ ಎಂಬ ಧಾತ್ವರ್ಥದ ಪ್ರಕಾರ, ಜಗದ್ವ್ಯಾಪಾರವೆಂಬ ಲೀಲೆಯಿಂದ ಕೂಡಿದವನು, ಆ ಲೀಲೆಯೂ **ಜಲಧಿಸುತಯಾ ಸಾರ್ಧಂ** – ಮಹಾಲಕ್ಷ್ಮಿಯೊಡಗೂಡಿಯೇ. **ಜಗತ್ಪರಿಪಾಲಯನ್** – ಪ್ರಪಂಚವನ್ನು ಪರಿಪಾಲಿಸಲು–ಇದರಿಂದ

"ಲಕ್ಷ್ಮ್ಯಾಸಹಹೃಷೀಕೇಶೋ ದೇವ್ಯಾಕಾರುಣ್ಯ ರೂಪಯಾ ।
ರಕ್ಷಕಸ್ಸರ್ವ ಸಿದ್ಧಾಂತೇ ವೇದಾಂತೇಷುಚ ಗೀಯತೇ ॥

## ಅರ್ಥಾನುಶಾಸನಭಾಗ ಸಾರಾರ್ಥಃ

**ಅನಾದಿಕಾಲಮ್ ಸಂಸರಿತ್ತುಪ್ಪೋನ್ದ ಕ್ಷೇತ್ರಜ್ಞನ್ ಅವಸರ ಪ್ರತೀಕ್ಷೈಯಾನ ಭಗವತ್ಕೃಪೈಯಾಲೇ ಪುರಿನ್ದು ಸಮೀಚೀನ ಶಾಸ್ತ್ರಮುಖತ್ತಾಲೇ ತತ್ವಹಿತ ಪುರುಷಾರ್ಥ ವಿಶೇಷಙ್ಗಳೈತ್ತೆಳಿನ್ದು, ಮುಮುಕ್ಷು ವಾಯ್, ಸ್ವಾಧಿಕಾರಾನುರೂಪಮಾಯಿರುಪ್ಪದೊರು ಉಪಾಯ ವಿಶೇಷತ್ತೈ ಪ್ಪರಿಗ್ರಹಿತ್ತು, ಕೃತ ಕೃತ್ಯನಾಯ್, ತನ್ನಿಷ್ಠೈಯೈತ್ತೆಳಿನ್ದು, ಅದಕ್ಕನುರೂಪಮಾಹ ಇರುನ್ದನಾಳ್ ಯಥಾಶಾಸ್ತ್ರಮ್. ನಿರಪರಾಧಮಾಹಪ್ಪಣ್ಣುಮ್ ಕೈಙ್ಕರ್ಯ ರೂಪ ಪುರುಷಾರ್ಥ ಮಿರುಕ್ಕುಮ್ ಪಡಿಯುಮ್, ಶರೀರ ಪಾತಾನಂತರಮ್ ಅರ್ಚಿರಾದಿಗತಿಯಾಲೇ ಅಪ್ರಾಕೃತ ದೇಶವಿಶೇಷತ್ತಿಲೇ ಶೆನ್ರಾಲ್ ಇವನುಕ್ಕು ಅನವಚ್ಛಿನ್ನ ಭಗವದನುಭವ ಪರೀವಾಹಮಾಹ ವರುಮ್ ಪರಿಪೂರ್ಣ ಕೈಂಕರ್ಯರೂಪ ಪರಮಪುರು ಷಾರ್ಥ ಸಿದ್ಧಿಯಿರುಕ್ಕುಂಪಡಿಯುಮ್ ಶೊನ್ನೋಮ್.**

---

ಎಂಬ ವಚನವು ಸ್ಮಾರಿತ. ಭಗವಂತನು ಜಗತ್ಸೃಷ್ಟಿ, ಪರಿಪಾಲನೆ ಮೊದಲಾದ ವ್ಯಾಪಾರ ರೂಪಲೀಲೆಯನ್ನು ಲಕ್ಷ್ಮಿಯೊಡಗೂಡಿಯೇ ಆಚರಿಸುತ್ತಾನೆಂಬುದು ವೇದಾಂತ ಸಿದ್ಧಾಂತ – ಪರಿಪಾಲಯನ್ ಎಂಬಲ್ಲಿ 'ರಕ್ಷಣಹೇತ್ವೋಃ ಶತೃ' ಎಂದು ಹೇತ್ವರ್ಥೇ ಶತೃಪ್ರತ್ಯಯ – ಆದಾಗಿ ಜಗತ್ತನ್ನು ಪರಿಪಾಲಿಸಲು ಎಂದರ್ಥ, **ಪರಮಪುರುಷಃ** – "ಪುರುಷಾನ್ನ ಪರಂಕಿಂಚಿತ್ ಸಾಕಾಷ್ಠಾಸಾಪರಾಗತಿಃ" ಎಂದು ಹೇಳಲ್ಪಟ್ಟ ಪುರುಷೋತ್ತಮನು, **ಪ್ರತೀಷ್ಟ ಭರಸ್ಸನ್** – ಅಕಿಂಚನರಿಂದ ಸಮರ್ಪಿಸಲ್ಪಟ್ಟ ಭರವನ್ನು ಸ್ವೀಕರಿಸುವವನಾಗಿಯೇ – ಇದರಿಂದ ವ್ಯಾಜ ಸಾಪೇಕ್ಷ ನಾಗಿಯೇ ಸ್ವೀಕರಿಸುತ್ತಾ, ವ್ಯಾಜ ನಿರಪೇಕ್ಷವಾಗಿಲ್ಲವೆಂಬುದು ದೃಢೀಕರಿಸಲ್ಪಟ್ಟಿತು. **ಸತಾಂ** – ಬ್ರಹ್ಮಜ್ಞಾನಿ ಗಳಿಗೆ **ಸಿದ್ಧೋಪಾಯಃ** (ಭವತಿ) – ಸಿದ್ಧವಾದ ಉಪಾಯನಾಗುತ್ತಾನೆ

ಇದರಿಂದ ಪೂರ್ವೋತ್ಥಾಪಿತ ಶಂಕೆಗಳಿಗೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳು ಬಾರದೆ ಇರಲು ಪ್ರತೀಷ್ಟ ಭರಸ್ಸನ್ – ಅಕಿಂಚನ ಕರ್ತೃಕ ಭರಸ್ವೀಕಾರ ಪೂರ್ವಕವಾಗಿಯೇ ಭಗವಂತನು ರಕ್ಷಿಸುತ್ತಾನೆ ಎಂಬುದು ಸಮಾಧಾನ.

## ಪೂರ್ವಾಧಿಕಾರಗಳ ಸಾರಾಂಶ.

ಅನಂತರ ಅರ್ಥಾನುಶಾಸನ ಭಾಗದಲ್ಲಿ ಹೇಳಿದ ಕೆಲವು ಅರ್ಥಗಳನ್ನು ಸ್ಥಿರೀಕರಣ ಮಾಡಲು, ಆ ಭಾಗದಲ್ಲಿ ಹೇಳಿದ ಅರ್ಥಗಳನ್ನು ಸಂಗ್ರಹವಾಗಿ ಅನುವದಿಸುತ್ತಾರೆ. ಆದಾಗಿ **'ಅನಾದಿಕಾಲಮ್ ಸಂಸರಿತ್ತುಪ್ಪೋನ್ದ'** ಇತ್ಯಾದಿ. ಅನಾದಿಕಾಲದಿಂದ ಸಂಸಾರದಲ್ಲಿ ಹುಟ್ಟಿ ಬರುವ ಕ್ಷೇತ್ರಜ್ಞನು–ಜೀವನು ಅವಸರಕಾಲವನ್ನು ಪ್ರತೀಕ್ಷಿ ಸುವ ಭಗವಂತನ ಕೃಪೆಯಿಂದ **ಪುರಿಂದು**–ಸಂಸಾರದಿಂದ ನಿವೃತ್ತನಾಗಿ (ಉಪೋದ್ಘಾತಾಧಿಕಾರ), ಸಮೀಚೀನ ಶಾಸ್ತ್ರಗಳ ಮೂಲಕ ತತ್ವಹಿತ ಪುರುಷಾರ್ಥಗಳನ್ನು **ತೆಳಿಂದು**–ವಿವಿಚ್ಯ ತಿಳಿದುಕೊಂಡು (ಸಾರನಿಷ್ಕರ್ಷಾಧಿಕಾರಾದಿ ಪರದೇವತಾಪಾರಮಾರ್ಥ್ಯಾಧಿಕಾರ) ಮೋಕ್ಷದಲ್ಲಿ ಆಸೆಯುಳ್ಳವನಾಗಿ (ಮುಮುಕ್ಷುತ್ವಾಧಿಕಾರ) **ಸ್ವಾಧಿಕಾರಾನುರೂಪ** ಮಿತ್ಯಾದಿ–ತನ್ನ ಅಧಿಕಾರಕ್ಕೆ ಅನುರೂಪವಾದ ಭಕ್ತಿ ಪ್ರಪತ್ತಿ ರೂಪಗಳಾದ ಉಪಾಯ ವಿಶೇಷಗಳಲ್ಲೊಂದನ್ನು **ಪರಿ ಗ್ರಹಿತ್ತು**–ಅನುಷ್ಠಿಸಿ, (ಅಧಿಕಾರಿ ವಿಭಾಗಾಧಿಕಾರವೇ ಮೊದಲಾದ ಸಾಂಗಪ್ರಪದನಾಧಿಕಾರ ಪರ್ಯಂತ) ಕೃತಕೃತ್ಯ ನಾಗಿ (ಕೃತ ಕೃತ್ಯಾಧಿಕಾರ) ತನ್ನಿಷ್ಠೆಯನ್ನು ತಿಳಿದುಕೊಂಡು (ಸ್ವನಿಷ್ಠಾಭಿಜ್ಞಾನಾಧಿಕಾರ) ಅದಕ್ಕೆ ಅನುರೂಪವಾಗಿ ಈ ಲೋಕದಲ್ಲಿರುವ ಕಾಲ ಪರ್ಯಂತ(ಸ್ಥಾನವಿಶೇಷಾಧಿಕಾರ)ಶಾಸ್ತ್ರವು ನಿಯಮಿಸಿದ ರೀತಿಯಲ್ಲಿ(ಶಾಸ್ತ್ರೀಯ ನಿಯಮನಾಧಿ ಕಾರ) ನಿರಪರಾಧವಾಗಿ ಮಾಡತಕ್ಕ ಕೈಂಕರ್ಯರೂಪ ಪುರುಷಾರ್ಥವು ಯಾವುದು ಎಂಬುದನ್ನೂ (ಅಪರಾಧಪರಿಹಾರಾ ಧಿಕಾರ, ಉತ್ತರ ಕೃತ್ಯಾಧಿಕಾರ) ಶರೀರಪಾತಾನಂತರ ಅರ್ಚಿರಾದಿ ಮಾರ್ಗದಿಂದ, ಅಪ್ರಾಕೃತ ದೇಶ ವಿಶೇಷವನ್ನು ಪಡೆದರೆ (ನಿರ್ಯಾಣ, ಗತಿಚಿಂತನಾಧಿಕಾರಗಳು) ಈ ಮುಕ್ತನಿಗೆ, **ಅನವಚ್ಛಿನ್ನ**–ಪುನರಾವರ್ತಿಯಿಲ್ಲದ, ಭಗವದನುಭವ

### ಭಗವನ್ನಿಗ್ರಹ ನಿವರ್ತಕಾ ಹೇತವಸ್ತ್ರಯಃ

ಇವ್ವರ್ಥಙ್ಗಳಿಲ್ ಜ್ಞಾತವ್ಯತಮಮಾನ ಸಿದ್ಧೋಪಾಯತ್ತೈಪ್ಪತ್ತವುಮ್, ಸಾಧ್ಯೋಪಾಯ ವಿಷಯಮಾಹವುಮ್, ಇವ್ವುಪಾಯ ಪ್ರಭಾವ ವಿಷಯಮಾಹವುಮ್, ಕರ್ಮವಶ್ಯರುಕ್ಕು ಕಡುಹತ್ತೆಳಿವು ಪಿರವಾಮೈಕ್ಕು ಸ್ವತನ್ತ್ರನಾನ ಸರ್ವೇಶ್ವರನ್ ಇವರ್‌ಹಳುಡೈಯ ಪೂರ್ವಾಪರಾಧತ್ತಾಲೇಯಿಟ್ಟ ನಿನೈಪ್ಪೀಡು ಮಾರುಹೈಕ್ಕು ಪ್ರಧಾನ ಕಾರಣಮ್ ಮೂನ್ರುಣ್ಡು ; ಅವೈಯೆವೈಯೆನ್ನಿಲ್ :"ಅಸ್ತುಮೇ" ಎನ್ರಪೇಕ್ಷಿತ್ತಾಲ್ "ಅಸ್ತು ತೇ, ತಯೈವ ಸರ್ವಂ ಸಂಪತ್ಸ್ಯತೇ" ಎನ್ಗಿರ ತಿರುಮುಹಪ್ಪಾಶುರಮುಮ್, ಸದಾಚಾರ್ಯಾನುಗ್ರಹಮುಮ್, ಸತ್ಸಂಪ್ರದಾಯ ಸಿದ್ಧಿಯುಮ್.

### ಸದಾಚಾರ್ಯಾನುಗ್ರಹಸ್ಯ ಹೇತುಫಲಯೋಃ ದೃಷ್ಟಾನ್ತಾಃ

ಇವತ್ತಿಲ್ ಸದಾಚಾರ್ಯಾನುಗ್ರಹತ್ತುಕ್ಕು ವ್ಯಾಜಙ್ಗಳುಮ್ ಇದಿನ್‌ಫಲವಿಶೇಷಙ್ಗಳುಮ್

---

ಪರೀವಾಹವಾಗಿ ಉಂಟಾಗುವ **ಪರಿಪೂರ್ಣ ಕೈಂಕರ್ಯರೂಪ** ವಿತ್ಯಾದಿ-ಪರಿಪೂರ್ಣ ಕೈಂಕರ್ಯ ರೂಪ ಪರಮಪುರುಷಾರ್ಥ ಸಿದ್ಧಿಯು (ಪರಿಪೂರ್ಣ ಬ್ರಹ್ಮಾನುಭವಾಧಿಕಾರಾರ್ಥ) ಇರುವ ಪ್ರಕಾರವನ್ನೂ ಇಲ್ಲಿಯವರೆಗೆ **ಶೊನ್ನೋಮ್**-ಹೇಳಿದುದಾಗಿ ಆಚಾರ್ಯರು ಅನುಗ್ರಹಿಸಿರುತ್ತಾರೆ.

### ಸಿದ್ಧಸಾಧ್ಯೋಪಾಯಗಳ ಮತ್ತು ಉಪಾಯದ ಪ್ರಭಾವಗಳ ವಿಷಯವಾಗಿ ವೈಶದ್ಯ ಉಂಟಾಗಲು ಮೂರು ಕಾರಣಗಳು

ಅನಂತರ **ಈ** ಅರ್ಥಗಳಲ್ಲಿ ಹೈತುಕರ - ಹೇತುವಾದ ಮಾಡುವವರ ಸಂಸರ್ಗದಿಂದ ಉಂಟಾಗಬಹುದಾದ ಬುದ್ಧಿಚಲನಾದಿ ಪೂರ್ವಕ ಸಂದೇಹಗಳಿಗೆ ಸಮಾಧಾನವನ್ನು **ಇವ್ವರ್ಥಂಗಳಿಲ್ ಜ್ಞಾತವ್ಯಮಾನ** ಎಂದಾರಂಭಿಸಿ ಆಚಾರ್ಯರು ಅನುಗ್ರಹಿಸುತ್ತಾರೆ. ಅದಾಗಿ ಈ ಅರ್ಥಗಳಲ್ಲಿ ಜಾತವ್ಯತಮವಾದ ಸಿದ್ಧೋಪಾಯವನ್ನು ಕುರಿತೂ, ಸಾಧ್ಯೋಪಾಯ ವಿಷಯವಾಗಿಯೂ, ಈ ಉಪಾಯ ಪ್ರಭಾನ ವಿಷಯವಾಗಿಯೂ, ಕರ್ಮವಶ್ಯರಿಗೆ **ಕಡುಹತ್ತೆಳಿವು** ಒರವಾಮೈಕ್ಕು – ಶೀಘ್ರವಾಗಿ ಸಮೀಚೀನವಾದ ನಿರ್ಣಯವು ಉಂಟಾಗದೆ ಇರುವುದಕ್ಕೆ, ಸ್ವತಂತ್ರನಾದ ಸರ್ವೇಶ್ವರನು ಇವರುಗಳ ಪೂರ್ವಾಪರಾಧದಿಂದ **ಇಟ್ಟನಿನೈಪ್ಪು** – "ಇವರುಗಳು ಸಿದ್ಧೋಪಾಯ ಸ್ವರೂಪವನ್ನು ಚನ್ನಾಗಿ ತಿಳಿಯದೆ ಇರಲಿ ಎಂಬ ತನ್ನ ಸಂಕಲ್ಪವು," **ಈಡುಮಾರುಹೈಕ್ಕು** – ನಿವೃತ್ತಿ ಹೊಂದಲು – ನಿವೃತ್ತಿ ಪೂರ್ವಕ ಸಮೀಚೀನ ಜ್ಞಾನೋತ್ಪತ್ತಿಗೆ ಎಂದರ್ಥ **ಪ್ರಧಾನ ಕಾರಣಂ ಮೂನ್ರುಂಡು** – ಅನೇಕ ಕಾರಣಗಳಿದ್ದರೂ ಪ್ರಧಾನ ಕಾರಣಗಳು ಮೂರು ಇವೆ. **ಅವೈಯೆವೈ ಎನ್ನಿಲ್** – ಅವುಗಳು ಯಾವುವು ಎಂದರೆ– **"ಅಸ್ತುಮೇ"** ಇತ್ಯಾದಿ–ನನಗೆ ಉಂಟಾಗಲಿ ಎಂದು ಪ್ರಾರ್ಥಿಸಲು, **ಅಸ್ತು ತೇ ತಯೈವ ಸರ್ವಂ ಸಂಪತ್ಸ್ಯತೇ**- ಇತ್ಯಾದಿ – ಶರಣಾಗತಿ ಗದ್ಯದಲ್ಲಿ ಹೇಳಿರುವಂತೆ, ನಿನಗೆ ಸರ್ವವೂ ಕೂಡಲಿ ಎಂಬ ಮಹಾಲಕ್ಷ್ಮಿಯ **ತಿರುಮುಹಪ್ಪಾಶುರಮುಮ್**–ಕೃಪಾಪೂರಿತವಾದ ಅನುಗ್ರಹವೂ **ಸದಾಚಾರ್ಯಾನುಗ್ರಹಮುಮ್**–ಸದಾಚಾರ್ಯನು "ಸ್ಯಾದಸೌ" ಎಂದು ಮಾಡುವ ಅನುಗ್ರಹವೂ, **ಸತ್ಸಂಪ್ರದಾಯ ಸಿದ್ಧಿಯುಮ್**– ಸತ್ಸಂಪ್ರದಾಯರೂಪಗುರುಪರಂಪರೆಯು ಸಿದ್ಧಿಸುವುದೂ, ಇವು ಮೂರೂ ಜ್ಞಾನಕ್ಕೆ ಕಾರಣಗಳು.

ಇದರಲ್ಲಿ ಮೊದಲನೆಯದಾದ ಮಹಾಲಕ್ಷ್ಮೀ ಕಟಾಕ್ಷಕ್ಕೆ ಫಲವನ್ನು "ಅಸ್ತು ತೇ ತಯೈವ ಸರ್ವಂಸಪತ್ಸ್ಯತೇ" ಎಂದು ಮೇಲೆಯೇ ಹೇಳಿಯಾಯ್ತು. ಎರಡನೆಯದಾದ ಸದಾಚಾರ್ಯಾನುಗ್ರಹಕ್ಕೆ ವ್ಯಾಜಗಳನ್ನೂ ಫಲವನ್ನು **ಇವಟ್ರಿಲ್ ಸದಾಚಾರ್ಯಾನುಗ್ರಹತ್ತಿರ್ಕ್ಕು** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಸದಾಚಾರ್ಯಾನು

**ಪರಾಶರ ಮೈತ್ರೇಯ ಸಂಜಯಾಶ್ವಲಾಯನಾದಿ ವೃತ್ತಾಂತಙ್ಗಳಿಲೇ ಕಂಡುಕೊಳ್ವದು.**

## ಸತ್ಸಂಪ್ರದಾಯ ಸಿದ್ಧಿಃ

**ಸತ್ಸಂಪ್ರದಾಯ ಸಿದ್ಧಿ ಯಾವದು ?–ತಾನ್ ಸತ್ವೋತ್ತರನಾಯ್, ಸಮ್ಯಗುಪಸನ್ನನಾಯ್, ಸಾವಧಾನನಾಯಿರುಕ್ಕುಮ್ ಅವಸ್ಥೈಯಿಲೇ, ಖ್ಯಾತಿ ಲಾಭ ಪೂಜಾ ನಿರಪೇಕ್ಷನಾಯ್ ಕಾರುಣ್ಯ ಪರತಂತ್ರನಾನ ಸದಾಚಾರ್ಯ ಸರ್ವರುಕ್ಕುಂ ಪ್ರಥಮಾಚಾರ್ಯನಾನ ಸರ್ವೇಶ್ವರ ಮುದಲಾಹ ಉಪದೇಶ ಪರಂಪರೈಯಾಲೇ ವನ್ದ ತತ್ವಹಿತಙ್ಗಳೈ ಅನಪೇಕ್ಷಿತ ವಿಸ್ತರಮುಮ್ ಅಪೇಕ್ಷಿತ ಸಙ್ಕೋಚಮುಮ್ ಇಲ್ಲಾದ ಪಡಿ**

---

ಗ್ರಹಕ್ಕೆ "ವ್ಯಾಜಂ", – ಕಾರಣ ಇದರ ಫಲ ವಿಶೇಷಗಳು–ಸಮ್ಯಜ್ಞಾನಾದಿಗಳು 1) ಪರಾಶರ, 2) ಮೈತ್ರೇಯ, 3) ಸಂಜಯಾ 4) ಆಶ್ವಲಾಯನಾದಿ ವೃತ್ತಾಂತಗಳಿಂದ ತಿಳಿದುಕೊಳ್ಳುವುದು.

ಮೂರನೆಯದಾಗಿ ನಿರ್ದೇಶಿಸಲ್ಪಟ್ಟ ಸತ್ಸಂಪ್ರದಾಯ ಸಿದ್ಧಿಯ ಸ್ವರೂಪವನ್ನು **ಸತ್ಸಂಪ್ರದಾಯ ಸಿದ್ಧಿ ಯಾವದು** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಸತ್ಸಂಪ್ರದಾಯ ಸಿದ್ಧಿ ಎಂದರೆ, ತಾನು ಉತ್ಕಟವಾದ ಸತ್ವಗುಣದಿಂದ ಕೂಡಿದವನಾಗಿ **ಸಮ್ಯಗುಪಸನ್ನನಾಯ್** – "ಶಿಷ್ಯಸ್ತೇऽಹಂಶಾಧಿಮಾಂ ತ್ವಾಂ ಪ್ರಪನ್ನಂ" ಎಂದು ಭಯಭಕ್ತಿಯಿಂದ ಸದಾಚಾರ್ಯನನ್ನು ಆಶ್ರಯಿಸಿ, ಅವಧಾನದಿಂದ ಕೂಡಿದವನಾಗಿರುವ **ಅವಸ್ಥೈಯಿಲೇ** – ದಶೆಯಲ್ಲಿ **ಖ್ಯಾತಿಲಾಭ ಪೂಜಾನಿರಪೇಕ್ಷನಾಯ್** – ತನಗೆ ಪ್ರಖ್ಯಾತಿಯುಂಟಾಗುತ್ತದೆ, ಗೌರವು ಉಂಟಾಗುತ್ತದೆ, ಹಣಕಾಸು ಲಭಿಸುತ್ತದೆ ಎಂಬ ವಿಷಯಗಳಲ್ಲಿ ಅಪೇಕ್ಷೆಯಿಲ್ಲದವನಾಗಿ, **ಕಾರುಣ್ಯ ಪರತಂತ್ರನಾನ** ಇತ್ಯಾದಿ – ಕೇವಲ ಕಾರುಣ್ಯಾಧೀನನಾದ ಸದಾಚಾರ್ಯನು, ಸರ್ವರಿಗೂ ಪ್ರಥಮಾಚಾರ್ಯನಾದ ಸರ್ವೇಶ್ವರನೇ ಆದಿಯಾಗಿ ಉಪದೇಶ ಪರಂಪರೆಯಿಂದ ಬಂದ ತತ್ವಹಿತ ಪುರುಷಾರ್ಥಗಳನ್ನು, ಅನಪೇಕ್ಷಿತವಾದ ವಿಷಯಗಳನ್ನು ವಿಸ್ತರಿಸದೆ, ಅಪೇಕ್ಷಿತವಾದ ವಿಷಯಗಳನ್ನು ಸಂಗ್ರಹ ಮಾಡದೆ ಉಪದೇಶಿಸಲು, ಆ ಜ್ಞಾನವನ್ನು ಪಡೆಯುವುದು. ಆ ಉಪ

---

1) ಪರಾಶರರಿಗೆ ವಸಿಷ್ಠ ಪುಲಸ್ತ್ಯರ ಅನುಗ್ರಹದಿಂದ ಪರದೇವತಾ ಪಾರಮಾರ್ಥ್ಯ ಜ್ಞಾನವು ಉಂಟಾಗಿ ಶ್ರೀ ವಿಷ್ಣು ಪುರಾಣವೆಂಬ ಪುರಾಣ ರತ್ನವನ್ನು ರಚಿಸಲು ಕಾರಣವಾಯಿತು.

2) ಮೈತ್ರೇಯರಿಗೆ ಪರಾಶರರಲ್ಲಿ ಪರಿಪೂರ್ಣವಾದ ಭಕ್ತಿ ಶ್ರದ್ಧೆಯಿಂದ ತತ್ವಹಿತ ಪುರುಷಾರ್ಥ ಪ್ರತಿಪಾದಕವಾದ ವಿಷ್ಣು ಪುರಾಣವು ಉಪದೇಶವಾಯಿತು.

3) ಸಂಜಯನಿಗೆ ವ್ಯಾಸರಲ್ಲಿ ಪರಿಪೂರ್ಣವಾದ ಆಚಾರ್ಯ ಭಕ್ತಿಯಿದ್ದುದರಿಂದ, ಕುರುಕ್ಷೇತ್ರದಲ್ಲಿ ಯುದ್ಧ ರಂಗದಲ್ಲಿ ನಡೆಯುತ್ತಿದ್ದ ವಿಷಯಗಳೂ ಕೃಷ್ಣಾರ್ಜುನರ ಸಂವಾದವಾದ ಭಗವದ್ಗೀತೆಯೂ ಹಸ್ತಿನಾಪುರದಲ್ಲಿ ಧೃತರಾಷ್ಟ್ರನಿಗೆ ಸಮನಂತರ ಕಾಲದಲ್ಲಿಯೇ ಉಪದೇಶಿಸುವಂತೆ ದಿವ್ಯಜ್ಞಾನದ ಮೂಲಕ ತಿಳಿಯುತ್ತಿತ್ತು.

4) ಆಶ್ವಲಾಯನರು ಶೌನಕ ಮಹರ್ಷಿಯಲ್ಲಿ ಶುಶ್ರೂಷೆ ಮಾಡಿ, ಋಗ್ವೇದ ಪ್ರವರ್ತನಾದಿಗಳಿಗೆ ಕಾರಣವಾದ ಸಮೀಚೀನ ಜ್ಞಾನವನ್ನು ಪಡೆದರು.

**1) "ಸರ್ವೇಷಾಮೇವ ಲೋಕಾನಾಂ ಪಿತಾ ಮಾತಾಚ ಮಾಧವಃ।**
**ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ॥"**
**ಎನ್ಗಿರ ಕಟ್ಟಳೈಯಿಲೇ ಉಪದೇಶಿಕ್ಕಪ್ಪೆರುಹೈ.**

**ಬಹುಕ್ಲೇಶಮಾಯ್ ಬುದ್ಧಿಚಲನ ಸಂಭಾವನೈಯುಂಡಾನ ಶಾಸ್ತ್ರ ಪರಿಶ್ರಮತ್ತಿಲ್ ಅನಧಿಕೃತರುಮಾಯ್ ಪರಮಾಸ್ತಿಕರುಮಾಯಿರುಪ್ಪಾರ್ಕ್ಕು ಇವ್ವುಪದೇಶಮೇ ಪ್ರಧಾನಮ್. ಮತ್ತುಳ್ಳಾರ್ಕ್ಕು ತಾಙ್ಗಳ್ ತೆಳಿಹೈಕ್ಕಾಹವುಮ್. ಕುತರ್ಕಙ್ಗಳಾಲೇ ಕಲಙ್ಗಿನಾರೈ ತ್ತೆಳಿವಿಕ್ಕೈಕ್ಕಾಹವುಮ್, ಸಮೀಚೀನ ಯುಕ್ತಿಹಳೋಡೇ ಕೇಟ್ಕ್ಕ ಪ್ರಾಪ್ತಮ್.**

---

ದೇಶ ಪ್ರಕಾರವನ್ನು 1) **ಸರ್ವೇಷಾಮೇವ ಲೋಕಾನಾಂ** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ, "ಸರ್ವ ಲೋಕದ ಜನಗಳಿಗೆ, ತಂದೆಯೂ ತಾಯಿಯೂ ಲಕ್ಷ್ಮೀಪತಿಯೇ ಆಗಿದ್ದಾನೆ. ಎಲೈ ಪುರುಷ ಶ್ರೇಷ್ಠರಾದ ಧರ್ಮರಾಜಾದಿಗಳೇ, ಶರಣಾಗತರಲ್ಲಿ ಅನುಕೂಲನಾದ ಈ ಕೃಷ್ಣ ಪರಮಾತ್ಮನನ್ನು ಶರಣ ಹೊಂದಿರಿ", ಎಂಬ ರೀತಿಯಲ್ಲಿ ಉಪದೇಶಿಸುತ್ತಾರೆಂದರ್ಥ. ಪಿತಾಮಾತಾ ಇತ್ಯಾದಿಯಾಗಿ ಪರತತ್ವವು ಹೇಳಲ್ಪಟ್ಟಿತು. ಶರಣಂ ಗಚ್ಛಧ್ವಂ, ಎಂದು ಹಿತವು ಹೇಳಲ್ಪಟ್ಟಿತು. 'ಶರಣ್ಯಂ' ಎಂದು ಪ್ರಾಪ್ಯವಸ್ತು ಕಥನ. ಈ ರೀತಿಯಲ್ಲಿ ತತ್ವ, ಹಿತ, ಪುರುಷಾರ್ಥಗಳನ್ನು ಸದಾಚಾರ್ಯರು ಸಂಗ್ರಹವಾಗಿ ಮಾಡುವ ಉಪದೇಶವೇ ಸಾಕು.

ಶಾಸ್ತ್ರ ಪರಿಶ್ರಮವಿಲ್ಲದೆ ಪರಮಾಸ್ತಿಕರಾಗಿರುವವರಿಗೆ ಈ ಉಪದೇಶವೇ ಪ್ರಧಾನವೆಂದು **ಬಹುಕ್ಲೇಶಮಾಯ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಶಾಸ್ತ್ರ ಪರಿಶ್ರಮವು ಬಹುಕ್ಲೇಶಕರ, ಬುದ್ಧಿಯನ್ನು ಚಲಿಸುವ ಸಂಭವವುಂಟು.

"ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಃ ಚಲನಕಾರಣಂ।
ಉಪದೇಶಾತ್ ಹರಿಂ ಬುಧ್ವಾ ವಿರಮೇತ್ ಸರ್ವಕರ್ಮಸು॥"

ಎಂಬ ಶ್ಲೋಕವು ಇಲ್ಲಿ ಜ್ಞಾಪಿಸಲ್ಪಡುತ್ತದೆ. ಶಾಸ್ತ್ರ ಜ್ಞಾನವೆಂದರೆ ಶಾರೀರಕ ಶಾಸ್ತ್ರಾದಿ ಎಂದೂ, ಉಪದೇಶಾತ್ ಎಂದರೆ ರಹಸ್ಯ ಶಾಸ್ತ್ರಗಳೆಂದೂ ಕೆಲವರು ವ್ಯಾಖ್ಯಾನ ಮಾಡುವುದು ಸರಿಯಲ್ಲವೆಂದು ಹೇಳಿ ತಡೆದು ತಾವೇ ವ್ಯಾಖ್ಯಾನ ಮಾಡುತ್ತಾರೆ. ಶಾಸ್ತ್ರಜ್ಞಾನವೆಂದರೆ ಸತ್ತರ್ಕಗಳಿಂದ ತತ್ವಹಿತ ಪುರುಷಾರ್ಥಗಳಲ್ಲಿ ವಿಶದವಾದ ಜ್ಞಾನ. ಉಪದೇಶವೆಂದರೆ ಅದೇ ತತ್ವಹಿತಪುರುಷಾರ್ಥಗಳನ್ನು ಯಥಾರ್ಥವಾಗಿ ಉಪದೇಶಗಳಿಂದ ಪಡೆಯುವುದು. ಎರಡು ವಿಧವಾದ ಜ್ಞಾನವೂ ಬೇರೆ ಬೇರೆಯಲ್ಲ, ಒಂದೇ. ಇದನ್ನು ವಿವರಿಸುತ್ತಾರೆ ಇಂಥಹ ಶಾಸ್ತ್ರಪರಿಶ್ರಮದಲ್ಲಿ ಅಧಿಕಾರಿಗಳಲ್ಲದೆ, ಪರಮಾಸ್ತಿಕರಾಗಿರುವವರಿಗೆ, ಮೇಲೆ ಹೇಳಿದ ರೀತಿಯಾದ ಉಪದೇಶವೇ ಪ್ರಧಾನ. **ಮಟ್ರುಳ್ಳಾರ್ಕ್ಕು** ಇತ್ಯಾದಿ–ಶಾಸ್ತ್ರ ಪರಿಶ್ರಮದಲ್ಲಿ ಅಧಿಕೃತರಾಗಿ ಪರಮಾಸ್ತಿಕರಾಗಿರುವವರಿಗೆ, ತಾವು **ತೆಳಿಹೈಕ್ಕಾಹವುಮ್**–ತತ್ವಹಿತ ಪುರುಷಾರ್ಥಗಳಲ್ಲಿ ಸೂಕ್ಷ್ಮ ಸೂಕ್ಷ್ಮತರ, ಸೂಕ್ಷ್ಮತಮಾಂಶಗಳನ್ನು ತಾವು ವಿಶದವಾಗಿ ತಿಳಿಯುವುದಕ್ಕಾಗಿಯೂ, **ಕುತರ್ಕಂಗಳಾಲೇ** ಇತ್ಯಾದಿ– ಶಾಸ್ತ್ರಪರಿಶ್ರಮವಿಲ್ಲದೆ ಇತರರ ಕುತರ್ಕಗಳಿಂದ ವ್ಯಾಮಿಶ್ರವಾದ ಬುದ್ಧಿಯಿಂದ ಕೂಡಿದ ಮೃದು ಪ್ರಜ್ಞರನ್ನು **ತೆಳಿವಿಕ್ಕೈಕ್ಕಾಹವುಮ್**–ಸಮೀಚೀನಾರ್ಥ ನಿರ್ಣಯ ಪೂರ್ವಕ ವಿಶದ ಜ್ಞಾನವನ್ನು ಹೇಳಿ ಸಂಶಯಗಳನ್ನು ಹೋಗಲಾಡಿಸಲು, ಸಮೀಚೀನವಾದ ಯುಕ್ತಿಗಳೊಡನೆ **ಕೇಟ್ಕಪ್ರಾಪ್ತಮ್**–

---

1) ಭಾರತ ಅರಣ್ಯ ಪರ್ವ 192–56

## ಸತ್ತರ್ಕ ಕುತರ್ಕ ನಿರೂಪಣಮ್

**"ಆರ್ಷಂ ಧರ್ಮೋಪದೇಶಂಚ ವೇದಶಾಸ್ತ್ರಾವಿರೋಧಿನಾ ।**
**ಯಸ್ತರ್ಕೇಣಾನುಸಂಧತ್ತೇ ಸಧರ್ಮಂ ವೇದ ನೇತರಃ ॥"**
**ಎನ್ಗಿರಪಡಿಯೇ ಇವ್ವರ್ಥಂಗಳೈ ಸಮೀಚೀನ ತರ್ಕಙ್ಗಳಾಲೇ ತೆಳಿಯಾದವರ್‌ಹಳ್, "ಕಾಣಾದ ಶಾಕ್ಯ ಪಾಷಂಡೈಸ್ತ್ರಯೀಧರ್ಮೋ ವಿಲೋಪಿತಃ" ಎನ್ಗಿರಪಡಿಯೇ ಹೈತುಕರಾಯ್ ವೇದವಿರೋಧಿತತ್ವಙ್ಗಳೈ ಇಟ್ಟು ಪ್ರಾಮಾಣಿಕಾರ್ಥಙ್ಗಳೈ ಅಪಹರಿಪ್ಪರ್‌ಹಳ್,**

**ಇವ್ವಪಹಾರಮ್ ವಿಭೂತಿಯೈಯುಮ್ ವಿಭೂತಿಮಾನೈಯುಮ್ಪತ್ತ ಇರಣ್ಡುವಹೈಯಾಯಿರುಕ್ಕುಮ್.**

---

ಶಾಸ್ತ್ರಾರ್ಥಗಳನ್ನು ಸತ್ತರ್ಕಗಳಿಂದ ತಿಳಿದುಕೊಳ್ಳಬೇಕು. ಇದಕ್ಕೆ ಪ್ರಮಾಣವನ್ನು **ಆರ್ಷಂ ಧರ್ಮೋಪದೇಶಂಚ** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ **ಆರ್ಷ**:–ಋಷಿಃ–ವೇದಃ, ತದರ್ಥಃ ಆರ್ಷಃ ತಂ– ಆರ್ಷಂ ವೇದಗಳ ಅರ್ಥಗಳನ್ನು ಎಂದರ್ಥ. ತದುಕ್ತಂಋಷಿಣಾ ಎಂಬಲ್ಲಿ ಋಷಿ ಶಬ್ದವನ್ನು ವೇದ ಪರವಾಗಿ ಶಿಷ್ಟರುಗಳು ವ್ಯಾಖ್ಯಾನ ಮಾಡಿರುತ್ತಾರೆ. ಆ ರೀತಿಯಲ್ಲಿ ಇಲ್ಲಿಯೂ ಆರ್ಷಂ ಎಂಬ ಶಬ್ದವು ವೇದವನ್ನು ತಿಳಿಸುತ್ತದೆ. ಧರ್ಮೋಪದೇಶಂಚ ಧರ್ಮಶಾಸ್ತ್ರಾರ್ಥವನ್ನೂ, **ವೇದಶಾಸ್ತ್ರಾವಿರೋಧಿನಾ**–ಪ್ರತ್ಯಕ್ಷ ಶ್ರುತಿವಿರೋಧವಿಲ್ಲದೆ **ತರ್ಕೇಣ**–ಸಮೀಚೀನವಾದ ಪ್ರಮಾಣಾನುಗ್ರಾಹಕ ತರ್ಕದಿಂದ **ಯಃ**–ಯಾವನು, **ಅನುಸಂಧತ್ತೇ**-ಯುಕ್ತವಾದ ರೀತಿಯಲ್ಲಿ ನಿಶ್ಚಯಿಸುತ್ತಾನೋ **ಸ ಧರ್ಮಂವೇದ**–ಅವನೇ ಶ್ರುತಿಸ್ಮೃತ್ಯುಕ್ತ ಧರ್ಮವನ್ನು ಅರಿತಿರುವವನು. **ಇತರಃ** – ಸಮೀಚೀನ ತರ್ಕನಿಷ್ಪಾದ್ಯವಾದ ಶಾಸ್ತ್ರಾರ್ಥ ನಿರ್ಣಯವಿಲ್ಲದವನು **ಧರ್ಮಂ ನ ವೇದ**–ಪೂರ್ವೋಕ್ತವಾದ ಧರ್ಮವನ್ನು ತಿಳಿಯಲಾರನು.

### ಯುಕ್ತಿವಾದಗಳಿಂದ ವಿಭೂತಿಯನ್ನೂ ವಿಭೂತಿಗೆ ಒಡೆಯನನ್ನೂ ಇಲ್ಲವೆನ್ನುವುದು

**ಇಪ್ಪಡಿಯೇ**–ಇತ್ಯಾದಿ-ಮೇಲೆ ಹೇಳಿದಂತೆ, ಈ ತತ್ವಹಿತ ಪುರುಷಾರ್ಥಗಳನ್ನು, ಸಮೀಚೀನ ತರ್ಕಗಳಿಂದ **ತೆಳಿಯಾದವರ್‌ಹಳ್**–ವಿಶದವಾಗಿ ತಿಳಿಯದವರು, **ಕಾಣಾದಶಾಕ್ಯಪಾಷಂಡೈಃ** ಇತ್ಯಾದಿ ಕಾಣಾದ–ವೈಶೇಷಿಕರು ಶಾಕ್ಯ-ಬೌದ್ಧರು, ಪಾಷಂಡ-ಪಾಶುಪತಮತಸ್ಥರು ಇವರುಗಳಿಂದ ವೇದಾರ್ಥಗಳು ಲೋಪಿಸಲ್ಪಟ್ಟದುವು. ಆ ರೀತಿಯಲ್ಲಿ **ಹೇತುಕರಾಯ್** – ಕೇವಲ ಹೇತುವಾದವನ್ನು ಮಾಡಿ ವೇದ ವಿರುದ್ಧವಾದ ಶುಷ್ಕತರ್ಕವಾದಗಳಿಂದ **ಪ್ರಾಮಾಣಿಕಾರ್ಥಂಗಳೈ ಅಪಹರಿಪ್ಪಾರ್‌ಹಳ್** – ಸತ್ತರ್ಕ ಸಹಿತ ಪ್ರತ್ಯಕ್ಷ, ವೇದರೂಪ ಪ್ರಮಾಣಗಳಿಂದ ಸಿದ್ಧವಾದ ಅರ್ಥಗಳನ್ನು ಇಲ್ಲವೆನ್ನುತ್ತಾರೆಂದರ್ಥ. **ಇವ್ವಪಹಾರಮ್** ಈ ಅಪಹಾರವು, **ವಿಭೂತಿಯೈಯುಮ್**–ಅಂದರೆ ಚೇತನಾ ಚೇತನಾತ್ಮಕವಾದ ಪ್ರಪಂಚವನ್ನೂ, **ವಿಭೂತಿಮಾನೈಯುಮ್**–ಆ ಚೇತನಾ ಚೇತನಾತ್ಮಕ ಪ್ರಪಂಚವನ್ನು ತನಗೆ ಶರೀರವಾಗಿ ಉಳ್ಳ ಭಗವಂತನನ್ನೂ **ಪಟ್ರವಿ**ತ್ಯಾದಿ – ಕುರಿತು ಎರಡು ಪ್ರಕಾರವಾಗಿರುತ್ತದೆ. ಇದನ್ನು **ಅದಿಲ್**–ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ, ಆ ಎರಡು ಪ್ರಕಾರ

---

ಕಾಣಾದ ಶಾಕ್ಯಪಾಷಂಡೈಃ ತ್ರಯೀಧರ್ಮೋ ವಿಲೋಪಿತಃ ।
ತ್ರಿದಂಡ ಧಾರಿಣಾ ಪೂರ್ವಂ ವಿಷ್ಣುನಾ ರಕ್ಷಿತಾತ್ರಯೀ ॥

ಅತ್ರಿಸ್ಮೃತಿ–ತಾರ್ಕಿಕರು ಬೌದ್ಧರು ಮತ್ತು ಪಾಷಂಡಿಗಳು ಇವರಿಂದ–ಅಂದರೆ ವೇದ ವಿರುದ್ಧವಾಗಿ ಹೇಳುವ, ಮತಸ್ಥರಿಂದ ವೇದದಲ್ಲಿ ಹೇಳಿರುವ ಧರ್ಮಗಳು ಮರೆಯಾಗುವಂತೆ ಉಪದೇಶ ಮಾಡಲ್ಪಟ್ಟಿತು. ತ್ರಿದಂಡಧಾರಿಯಾದ ದತ್ತಾತ್ರೇಯರ ಅವತಾರವೆನ್ನಿಸಿದ ವಿಷ್ಣುವಿನಿಂದ ಆ ವೇದಗಳು ಸಮೀಚೀನಾರ್ಥೋಪದೇಶಗಳಿಂದ ರಕ್ಷಿಸಲ್ಪಟ್ಟವು.

ಅದಿಲ್ ವಿಭೂತಿ ಮಾನ್ಯೆ ಅಪಹರಿಕ್ಕೈಯಾವದು ? ಶ್ರಿಯಃಪತಿಯಾನ ಸರ್ವೇಶ್ವರನ್ನೈ ಇಲ್ಲೈ ಎನ್ನುದಲ್, ವೇರೊರುತ್ತನ್ನೈ ಈಶ್ವರನಾಹ ಕ್ಕಟ್ಟಿ ಸರ್ವೇಶ್ವರನ್ನೈ ವಿಭೂತಿ ಕೋಟಿಯಿಲೇ ವೈತ್ತಲ್ ಶೈಯ್‌ಹೈ.

ವಿಭೂತಿಯೈ ಅಪಹರಿಕ್ಕೈಯಾವದು ? ವಿಭೂತಿಯೈ ಒರುಮುಖತ್ತಾಲೇ ಯಿಲ್ಲೈ ಎನ್ನುದಲ್, ಉಣ್ಡಾಕ್ಕಿ ಈಶ್ವರನೋಡು ಸಂಬಂಧ ಮರುತ್ತು ಸ್ವತಂತ್ರಮ್ ಎನ್ನುದಲ್, ಪರತಂತ್ರಮಾಕ್ಕಿ ತನ್ನೋಡು ಪಿರರೋಡು ಪಿಣೈಪ್ಪುದಲ್ ಶೆಯ್‌ಹೈ.

### ಹೈತುಕ ಸಂಸರ್ಗಃ ಅವಶ್ಯಪರಿಹರಣೀಯಃ

ಇವ್ವಪಹಾರಙ್ಗಳಿಲ್ ಏದೇನು ಮೊನ್ರು ಸ್ವರೂಪತ್ತಿಲ್ ಮೃದುಪ್ರಜ್ಞನಾಯ್ ಆತ್ಮಸಮರ್ಪಣಂ ಪಣ್ಣಿನ

---

ಗಳಲ್ಲಿ ವಿಭೂತಿಮಾನ್ಯೆ-ಇತ್ಯಾದಿ ಚೇತನಾ ಚೇತನಾತ್ಮಕ ವಿಭೂತಿ (ಐಶ್ವರ್ಯ)ಯಿಂದ ಕೂಡಿದ ಭಗವಂತನನ್ನು ಅಪಹರಿಸುವುದೆಂದರೆ ಶ್ರಿಯಃಪತಿಯಾನ ಇತ್ಯಾದಿ-ಲಕ್ಷ್ಮೀಪತಿಯಾದ ಸರ್ವೇಶ್ವರನೊಬ್ಬನು ಇದ್ದಾನೆ ಎಂಬುದನ್ನು ಅಲ್ಲಗೆಳೆಯುವುದು ಇದು ನಿರೀಶ್ವರ ಮೀಮಾಂಸಕರು ಮತ್ತು ಸಾಂಖ್ಯರುಗಳು ಹೇಳುವ ಮಾತು. ಶ್ರಿಯಃ ಪತಿಯಾನ ಎಂಬ ವಿಶೇಷಣದಿಂದ, ಶ್ರೀವಿಶಿಷ್ಟನು ಪರತತ್ವ ಲಕ್ಷ್ಮಿಯ ಪಾರಮ್ಯವನ್ನು (ವಿಭುತ್ವ, ಉಪಾಯ ತ್ವೋಪೇಯತ್ವಾದಿ) ಅಂಗೀಕರಿಸದೇ ಇರುವುದೂ ವಿಭೂತಿಯಿಂದ ಕೂಡಿದ ಸರ್ವೇಶ್ವರನನ್ನು ಅಲ್ಲಗಳೆದಂತಾಗುತ್ತದೆ ಎಂಬುದು ಸೂಚಿತ. ವೇರೂರುತ್ತನ್ನೈ ಇತ್ಯಾದಿ-ಶೈವಾದಿಮತ. ಶಿವನನ್ನು ಈಶ್ವರನನ್ನಾಗಿ ಹೇಳಿ, ಸರ್ವೇಶ್ವರ ನಾದ ಶ್ರಿಯಃ ಪತಿಯನ್ನು **ವಿಭೂತಿ ಕೋಟಿಯಿಲೇ ವೈತ್ತಲ್** – ಆ ಪರಮಶಿವನಿಗೆ ವಿಭೂತಿಯಾಗಿ – ಅವನಿಗೆ ಅಧೀನವಾಗಿ ಇಟ್ಟುಹೇಳುವುದೂ, ವಿಭೂತಿ ಮದಪಹಾರ. **ವಿಭೂತಿಯೈ ಅಪಹರಿಕ್ಕೈ ಯಾವದು** – ಭಗವಂತನ ವಿಭೂತಿಯಾದ ಪ್ರಪಂಚವನ್ನು ಇಲ್ಲವೆಂದು ಹೇಳುವುದೆಂದರೆ – ವಿಭೂತಿಯಾದ ಪ್ರಪಂಚವನ್ನು **ಒರುಮುಖತ್ತಾಲೇ** – ಶೂನ್ಯವಾದಿಯು ಶೂನ್ಯವೇ ತತ್ವವೆನ್ನುವನು. ಬೌದ್ಧನು ಬಾಹ್ಯ ಪ್ರಪಂಚವು, ಕ್ಷಣಿಕ ಕಲ್ಪನಾಬುದ್ಧಿಗೆ ವಿಷಯವೆನ್ನುವನು. ಕಾಣಾದರು ಪರಮಾಣು ಕಾರಣವೆಂದು ಹೇಳಿ, ಪ್ರಪಂಚವನ್ನು ಪ್ರಕೃತಿಕಾರ್ಯವಲ್ಲವೆನ್ನುವರು. ವ್ಯಾವಹಾರಿಕ ಸತ್ಯವೆಂದೂ ಪಾರಮಾರ್ಥಿಕ ದಶೆಯಲ್ಲಿ ಅಸತ್ಯವೆಂದೂ ಹೇಳುವರು ಶಾಂಕರ ಮತಸ್ಥರು (ಮಾಯಾವಾದಿಗಳು). **ಉಂಡಾಕ್ಕಿ** – ಇತ್ಯಾದಿ ಈಶ್ವರನನ್ನೂ ಅವನ ವಿಭೂತಿಯಾದ ಪ್ರಪಂಚ ವನ್ನೂ ಸತ್ಯವೆಂದು ಹೇಳಿ, ಈಶ್ವರನೊಡನೆ ಪ್ರಪಂಚಕ್ಕೆ ಇರುವ ನಿಯಂತೃ ನಿಯಾಮ್ಯ ಭಾವ ಸಂಬಂಧವನ್ನು **ಅರುತ್ತು** – ಛೇದಿಸಿ, ಸ್ವತಂತ್ರವೆನ್ನುವುದು ಇದು ಸೇಶ್ವರ ಸಾಂಖ್ಯಾದಿಮತ, **ಪರತಂತ್ರಮಾಕ್ಕಿ**–ಭಗವಂತನನ್ನು ಪರಾಧೀನನ್ನಾಗಿ ಮಾಡಿ, **ತನ್ನೊಡು**–ಜೀವಕೋಟಿಯಲ್ಲಿ ಸೇರಿಸುವುದು **ಪಿರರೊಡು**–ದೇವತಾಂತರಗಳೊಡನೆ, **ಪುಣೈಪ್ಪುದಲ್ ಶೆಯ್ದಲ್**–ಶೇಷ ಶೇಷಿ ಭಾವ ಸಂಬಂಧವನ್ನು ಹೇಳಿ ಕಟ್ಟಡುವುದು. ಅಂದರೆ ದೇವತಾಂತರಗಳಿಗೆ ಪ್ರಧಾನವಾಗಿ ರುದ್ರನಿಗೆ ಶೇಷ ಭೂತನನ್ನಾಗಿ ಹೇಳುವುದು. ಇದು ಭಗವತ್ಸಂಬಂಧವಿಲ್ಲದ ಕೇವಲ ಶೈವಮತ.

### ಕೇವಲ ಯುಕ್ತಿವಾದ ಮಾಡುವವರ ಸಹವಾಸವನ್ನು ಅವಶ್ಯ ತ್ಯಜಿಸಬೇಕು.

**ಇವ್ವಪಹಾರಙ್ಗಳಿಲ್** ಇತ್ಯಾದಿ- ಈ ರೀತಿಯಾಗಿ "ಭಗವಂತನಿಲ್ಲ, ಅವನಿಗೆ ವಿಭೂತಿಗಳಿಲ್ಲ" ಇತ್ಯಾದಿ ಅಪಹಾರ ಗಳಲ್ಲಿ ಯಾವುದಾದರೂ ಒಂದು **ಸ್ವರೂಪತ್ತಿಲ್ ಮೃದು ಪ್ರಜ್ಞನಾಯ್** ಇತ್ಯಾದಿ–ತನ್ನಸ್ವರೂಪದಲ್ಲಿ ದೃಢವಾದ ಶೇಷತ್ವ ನಿಶ್ಚಯವಿಲ್ಲದವನಾಗಿ, ಭಗವಚ್ಛೇಷತ್ವಾನು ಸಂಧಾನ ರೂಪವಾದ ಸ್ವರೂಪ ಸಮರ್ಪಣವನ್ನು ಮಾಡಿದವ ನಿಗೆ **ವಿಪರೀತ ಸಂಸರ್ಗಿತ್ತಾಲ್** ಇತ್ಯಾದಿ ಹೇತುವಾದ ಮಾಡುವ ನಾಸ್ತಿಕಾದಿ ಪಾಷಂಡಿಗಳೊಡನೆ **ಸಹವಾಸದಿಂದ**

**ವನುಕ್ಕು ವಿಪರೀತ ಸಂಸರ್ಗತ್ತಾಲೇ ವರುಮಾಹಿಲ್ 1) "ದತ್ತಸ್ಯ ಹರಣೇನಚ" ಎನ್ಗಿರ ಅಪಹಾರೇತ್ತಿಲುಮ್ ಕೊಡಿಯದಾಯ್ ಕಳವು ಕೊಂಡುಕೊಡುತ್ತ ದ್ರವ್ಯತ್ತೈ ಮೀಳಕ್ಕಳವು ಕೊಂಡಾರ್ಪೋಲೆಯಾಮ್.**

**ಆಹೈಯಾಲ್ ಬಹು ವಿಧಙ್ಗಳಾನ ವ್ಯಾಮೋಹ ಕಾರಣಙ್ಗಳಿಲ್ ಹೈತುಕ ಸಂಸರ್ಗಂ ಪೋರಪ್ಪರಿಹರಣೀಯಮ್.**

ಇವ್ವರ್ಥತ್ತೈ 1) **"ಪಾಷಂಡಿನೋವಿಕರ್ಮಸ್ಥಾನ್ ಬೈಡಾಲವ್ರತಿಕಾನ್ ಶಠಾನ್ ।**
**ಹೈತುಕಾನ್ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್"**
2) **"ಡಂಭಿ ಹೈತುಕ ಪಾಷಂಡಿ ಬಕ ವೃತ್ತೀಂಶ್ಚ ವರ್ಜಯೇತ್ ।**

---

ಉಂಟಾದರೆ 1) **ದತ್ತಸ್ಯಹರಣೇನಚ**-ಕೊಟ್ಟದ್ದನ್ನು ಅಪಹರಿಸುವುದೆಂಬ, ವ್ಯವಹಾರಕ್ಕಿಂತಲೂ ಕ್ರೂರವಾಗಿ, **ಕಳವುಕೊಂಡು ಕೊಡುತ್ತ ದ್ರವತ್ತೈ** ಇತ್ಯಾದಿ-ಅಪಹರಿಸಿದ ದ್ರವ್ಯವನ್ನು ವಾಪಸ್‌ಕೊಟ್ಟು ಪುನಃ ಅಪಹರಿಸಿದಂತೆ ಅತ್ಯಂತ ಕ್ರೂರವಾಗುತ್ತದೆ. ಅಪಹಾರವು ಕ್ರೂರವಾದ ಪಾಪ ಜನಕ. ದತ್ತಾಪಹಾರವು ಅದಕ್ಕಿಂತ ಕ್ರೂರವಾದದ್ದು. ಅಪಹೃತದತ್ತಾಪಹಾರವು ಅದಕ್ಕಿಂತಲೂ ಕ್ರೂರವಾದದ್ದು ಎಂದು ಅಭಿಪ್ರಾಯ. ಆದ್ದರಿಂದ **ಬಹುವಿಧಂಗಳಾನ** ಇತ್ಯಾದಿ ಅನೇಕ ವಿಧಗಳಾದ ವ್ಯಾಮೋಹಗಳಿಗೆ ಕಾರಣಗಳಾದ, ಅನ್ನದೋಷ, ಹೈತುಕ ಸಂಸರ್ಗಾದಿಗಳಲ್ಲಿ ಹೈತುಕ - ಕುತಃ ಕುತಃ ಎಂದು ಹೇತುವಾದ ಮಾಡುವವರೊಡನೆ, **ಸಂಸರ್ಗಮ್**-ಸಹವಾಸವು **ಪೋರಪ್ಪರಿಹರಣೀಯಮ್**-ಅತ್ಯಂತ ಪರಿಹರಿಸಲ್ಪಡತಕ್ಕದ್ದು.

ಮೇಲೆ ಹೇಳಿದ ವಿಷಯಗಳಿಗೆ ಪ್ರಮಾಣ ವಚನಗಳನ್ನು ಇವ್ವರ್ಥತ್ತೈ ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಮೇಲೆ ಹೇಳಿದ ಈ ಅರ್ಥಗಳನ್ನು 1) **ಪಾಷಂಡಿನೋ ವಿಕರ್ಮಸ್ಥಾನ್** 2) **ಡಂಭಿ ಹೈತುಕ ಪಾಷಂಡಿ**

---

1) ಅಶ್ರುತಸ್ಯಾಪ್ರದಾನೇನ ದತ್ತಸ್ಯಹರಣೇನಚ ।
ಜನ್ಮಪ್ರಭೃತಿ ಯದ್ದತ್ತಂ ತತ್ಸರ್ವಂ ನಶ್ಯತಿ ಧ್ರುವಮ್ ॥

ಕೊಡುವುದಾಗಿ ವಾಗ್ದಾನ ಮಾಡಿ ಕೊಡದೆ ಇರುವುದು, ಕೊಟ್ಟದ್ದನ್ನು ಅಪಹಾರ ಮಾಡುವುದು, ಇವೆರಡೂ ಜನ್ಮಾರಭ್ಯ ಮಾಡಿದ ದಾನಗಳ ಸುಕೃತವನ್ನೆಲ್ಲಾ ಹಾಳುಮಾಡುತ್ತವೆ, ಇದು ನಿಶ್ಚಯ.

1) ವಿ. ಪು. (3-18-101) ಮನುಸ್ಮೃತಿ (4-30) ಪಾಷಂಡಿನಃ
"ಯೇತುಸಾಮಾನ್ಯಭಾವೇನ ಮನ್ಯಂತೇ ಪುರುಷೋತ್ತಮಮ್ ।
ತೇವೈಪಾಷಂಡಿನೋಜ್ಞೇಯಾಃ ಸರ್ವಧರ್ಮಬಹಿಷ್ಕೃತಾಃ ॥"
ಎಂಬ ವಚನದಂತೆ ದೇವತಾಂತರಗಳನ್ನು ಭಗವಂತನಿಗಿಂತ ಉತ್ಕೃಷ್ಟರನ್ನಾಗಿಯೂ, ಭಗವಂತನಿಗೆ ಸಮವಾಗಿಯೂ ತಿಳಿದವರ ಪಾಷಂಡಿಗಳು. ಧರ್ಮಾನುಷ್ಠಾನವನ್ನು ಮಾಡಲು ಯೋಗ್ಯರಲ್ಲದವರು, ವಿಕರ್ಮಸ್ಥಾನ್ - ಶಿಖಾಯಜ್ಞೋಪವೀತಗಳನ್ನು ತ್ಯಜಿಸಿದವರು, ಬೈಡಾಲ ವ್ರತಿಕಾನ್ - ಬೆಕ್ಕಿನ ಹಾಗೆ ವಂಚಕರು, ಶಠಾನ್ - ಗೂಢವಾಗಿ ವಂಚಿಸುವವರಾಗಿದ್ದುಕೊಂಡು, ನಾಸ್ತಿಕರಾಗಿ ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪದವರು, ಬಕವೃತ್ತೀನ್ - ಬಕಪಕ್ಷಿಯು ಕಣ್ಣನ್ನು ಮುಚ್ಚಿಕೊಂಡಿದ್ದು ಹತ್ತಿರ ಬರುವ ಮೀನನ್ನು ಥಟ್ಟನೆ ಹಿಡಿದು ಕೊಂಡು ನುಂಗುತ್ತದೆ. ಆ ರೀತಿಯಾಗಿ ಸನ್ನಿಹಿತ ಹಿಂಸಕರಾದ ಡಾಂಭಿಕರು, ಇವರುಗಳನ್ನು ವಾಙ್ಮಾತ್ರೇಣಾಪಿನಾರ್ಚಯೇತ್-ಸಲ್ಲಾಪ, ಸಹಭೋಜನ ಮೊದಲಾದ ರೀತಿಯಲ್ಲಿಯೂ ಗೌರವಿಸಬಾರದು.ಇವರುಗಳು ಸಹವಾಸಕ್ಕೆ ಯೋಗ್ಯರಲ್ಲದವರು ಎಂದರ್ಥ

2) ರಾಜಾಂತೇವಾಸಿ ಯಾಜ್ಯೇಭ್ಯಃ ಸೀದನ್ನಿಚ್ಛೇದ್ಧನಂ ಕ್ಷುಧಾ ।
ಡಂಭಿಹೈತುಕ ಪಾಷಂಡಿ ಬಕವೃತ್ತೀಂಶ್ಚ ವರ್ಜಯೇತ್ ॥ ಯಾಜ್ಞ. ಸ್ಮೃತಿ 1-130 ಪ. ತಿ, ಸೋ.

3) ನಾಸದ್ಭಿಃ ಕಿಂಚಿದಾಚರೇತ್"
4) "ತ್ಯಜದುರ್ಜನ ಸಂಸರ್ಗಮ್
5) ವರಂ ಹುತವಹಜ್ವಾಲಾ ಪಂಜರಾಂತರ್ವ್ಯವಸ್ಥಿತಿಃ ।
ನಶೌರಿ ಚಿನ್ತಾವಿಮುಖ ಜನ ಸಂವಾಸ ವೈಶಸಂ ।"

ಇತ್ತ್ಯಾದಿಹಳಿಲೇ ಪ್ರಪಂಚಿತ್ತಾರ್‌ಹಳ್.

ಅಥಹೈತುಕ ಸಂಸರ್ಗ ಪ್ರಾಪ್ತಾऽನರ್ಥಾನಾಹ

ಇನ್ದು ಹೈತುಕರೋಟ್ಟೈ ಸಂಭಾಷಣಮ್ 1) "ಮಾಯಯಾಪಹೃತಜ್ಞಾನಾಃ" ಎನ್ಗಿರಪಡಿಯೇ ಕಂಡು ಮತಿಕೆಟ್ಟಾನಾಕ್ಕಿ 2) "ಚತುರ್ವಿಧಾಮಮಜನಾ ಭಕ್ತಾ ಏವಹಿ ತೇ ಶ್ರುತಾಃ" ಎನ್ಱು ಈಶ್ವರನ್

---

3) ನಾಸದ್ಭಿಃ 4) ತ್ಯಜದುರ್ಜನಸಂಸರ್ಗಂ 5) ವರಂಹುತವಹಜ್ವಾಲಾ. ಇತ್ಯಾದಿ ವಚನಗಳಲ್ಲಿ ತಿಳಿಸುತ್ತಾರೆ.

ಅನಂತರ ಹೈತುಕರೊಡನೆ ಸಂಭಾಷಣವು ಅನರ್ಥಕರವೆಂದು ತೋರಿಸುತ್ತಾರೆ. **ಇಂದ ಹೈತುಕರೋಟ್ಟೈ ಸಂಭಾಷಣಂ** ಇತ್ಯಾದಿ ಈ ಹೇತುವಾದ ಮಾಡುವವರೊಡನೆ ಸಂಭಾಷಣೆಯು, 1) **ಮಾಯಯಾಪಹೃತ ಜ್ಞಾನಾಃ** ಇತ್ಯಾದಿ–ಯುಕ್ತಿವಾದಗಳಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು, ಎಂಬಂತೆ, **ಕಂಡುಮದಿಕೆಟ್ಟಾನಾಕ್ಕಿ** ತಿಳಿದಿದ್ದರೂ ಬುದ್ಧಿಗೆಟ್ಟವನಾಗಿ ಮಾಡಿ 2) **ಚತುರ್ವಿಧಾ ಮಮಜನಾಃ** ಇತ್ಯಾದಿಯಾಗಿ ಭಗವಂತನು ನಮ್ಮವರೆಂದು

---

ರಾಜಾ, ಶಿಷ್ಯ, ತನ್ನಿಂದ ಯಾಗವನ್ನು ಮಾಡಿಸಿದವನು, ಇವರುಗಳಬಳಿ ತಾನು ಹಸಿವಿನಿಂದ ಕಷ್ಟಪಡುವಾಗ ಹಣವನ್ನು ಯಾಚಿಸಬಹುದು. ಡಾಂಭಿಕನು, ಹೇತುವಾದ ಮಾಡುವವನು ಪಾಷಂಡಿ, ಬಕವೃತ್ತಿ ಇವರುಗಳನ್ನು ವರ್ಜಿಸಬೇಕು. ಇವರುಗಳಿಂದ ಹಣವನ್ನು ಯಾಚಿಸಬಾರದು.

3) ಸದ್ಭಿರೇವ ಸಹಾऽಸೀತ ಸದ್ಭಿಃಕುರ್ವೀತ ಸಂಗಮಮ್ ।
ಸದ್ಭಿರ್ವಿವಾದಂ ಮೈತ್ರೀಂಚ ನಾಸದ್ಭಿಃ ಕಿಂಚಿದಾಚರೇತ್ ॥

ಸದ್ಭಿಃ - "ಅಸ್ತಿಬ್ರಹ್ಮೇತಿ ಚೇದ್ವೇದ, ಸಂತಮೇನಂ ತತೋವಿದುಃ" ಎಂದು ಬ್ರಹ್ಮಜ್ಞಾನವಿರುವವರು ಸತ್ ಶಬ್ದವಾಚ್ಯರು. ಅಂಥಹ ಬ್ರಹ್ಮಜ್ಞಾನಿಗಳೊಡನೆ ಸಹವಾಸ, ಸ್ನೇಹ, ವಿವಾದವನ್ನು ಮಾಡಬಹುದು. ಅಸತ್ತುಗಳೊಡನೆ-ಬ್ರಹ್ಮಜ್ಞಾನವಿಲ್ಲದವರೊಡನೆ ಸಹವಾಸಾದಿಗಳನ್ನು ಮಾಡಬಾರದು.

4) ತ್ಯಜದುರ್ಜನ ಸಂಸರ್ಗಂ ಭಜಸಾಧು ಸಮಾಗಮಮ್ ।
ಕುರುಪುಣ್ಯಮಹೋರಾತ್ರಂ ಸ್ಮರ ನಿತ್ಯಮನಿತ್ಯತಾಮ್ ॥ (ಮಹಾಭಾರ. ವನಪರ್ವ 4)

ದುರ್ಜನರ ಸಹವಾಸವನ್ನು ಬಿಡು. ಸಾಧುಗಳೊಡನೆ ಸಹವಾಸವನ್ನು ಪಡೆ. ಹಗಲೂ ರಾತ್ರಿಯೂ ಅಂದರೆ ಸದಾಕಾಲದಲ್ಲಿಯೂ ಪುಣ್ಯಕಾರ್ಯಗಳನ್ನು ಮಾಡು. ಈ ಶರೀರವು ಅನಿತ್ಯವೆಂಬುದನ್ನು ನಿತ್ಯವೂ ನೆನೆಸಿಕೋ.

5) ಹುತವಹಜ್ವಾಲಾಪಂಜರಾಂತರ್ವ್ಯವಸ್ಥಿತಿಃ - ಅಗ್ನಿಜ್ವಾಲೆಯ ಮಧ್ಯದಲ್ಲಿ ಕುಳ್ಳಿರುವುದು, ವರಂ - ಈಷತ್ಪ್ರಿಯವು. ಶೌರಿ - ಶ್ರೀಕೃಷ್ಣಪರಮಾತ್ಮನ ಧ್ಯಾನ ವಿಮುಖರಾದ ಅಂದರೆ ಶ್ರೀಕೃಷ್ಣ ಪರಮಾತ್ಮನನ್ನು ನೆನೆಯದ ಜನರ ಸಹವಾಸವೆಂಬ ವೈಶಸಂ - ವಧವು ಅಥವಾ ದುಃಖವು, ನ ವರಂ - ಸ್ವಲ್ಪವೂ ಪ್ರಿಯವಲ್ಲ. "ವರಂತ್ರಿಷು ಕ್ಲೀಬೇ ಮನಾಕ್ ಪ್ರಿಯೇ" ನಿಘಂಟು,

1) 4) ನಮಾಂದುಷ್ಕೃತಿನೋಮೂಢಾಃ ಪ್ರಪದ್ಯಂತೇ ನರಾಧಮಾಃ ।
ಮಾಯಯಾऽಪಹೃತ ಜ್ಞಾನಾಃ ಅಸುರಂ ಭಾವಮಾಶ್ರಿತಾಃ ॥ ಗೀತೆ 7-15

ಪು. ತಿ. ನೋ.

**ನಮ್ಮುಡೈಯವರ್‌ಹಳೆನ್ನುಂ ನಾಲುವಹೈಯಿಲುಮ್ ಕೂಡಾದೇ 3) "ಅಳಿಯನಮ್‌ಪೈಯಲ್" ಎನ್ನಾದಪಡಿ ಪಣ್ಣಿ 4) "ನ ಮಾಂದುಷ್ಕೃತಿ ನೋ ಮೂಢಾಃ ಪ್ರಪದ್ಯನ್ತೇ" ಎನ್ಗಿರ ಭಗವದಭಿಮಾನ ಬಾಹ್ಯವರ್ಗತ್ತಿಲ್ ಕೊಪ್ಪುಣ್ಣಪ್ಪಣ್ಣುಮ್.**

**ಅಶರಣ್ಯ ಶರಣ್ಯನಾನ ಸರ್ವೇಶ್ವರನೈ ಶರಣಮಾಹ ಪ್ಪತ್ತುಹಿರ ಪರಮಾಸ್ತಿಕನುಕ್ಕು ಚ್ಚಿಲರೋಡು ಶೇರ್ತ್ತಿಯಾಲ್ ಬಾಹ್ಯತ್ತೈ ವಾರಾದಾಹಿಲುಮ್, ಅವನುಕ್ಕುಕ್ಕಲಕ್ಕಙ್ಗಳ್‌ವರವುಮ್, ಅದುಕ್ಕು ಸದಾಚಾರ್ಯರ್‌ಹಳ್ ಪರಿಹಾರಮ್ ಪಣ್ಣುವುಮ್, ಕಾಣಾನಿನ್ರೋಮ್**

---

ಹೇಳತಕ್ಕ ನಾಲ್ಕು ಪಂಗಡಗಳಲ್ಲಿಯೂ ಸೇರದೆ, 3) **ಅಳಿಯನಂಪೈಯಲ್** – ನಮ್ಮವನು ಎಂದು ಹೇಳದ ರೀತಿಯಲ್ಲಿ ಮಾಡಿ, 4) **ನಮಾಂದುಷ್ಕೃತಿನೋ** ಇತ್ಯಾದಿ ಹೇಳುವಂತೆ ಭಗವದಭಿಮಾನ ಬಾಹ್ಯ ವರ್ಗದಲ್ಲಿ **ಕೋಪ್ಪುಣ್ಣಪ್ಪಣ್ಣುಮ್**–ಸೇರಿಸುತ್ತದೆ. ಅಂದರೆ ಭಗವಂತನ ಅಭಿಮಾನಕ್ಕೆ ಪಾತ್ರನಾಗುವುದಿಲ್ಲವೆಂದರ್ಥ

ಭಗವದ್ವಿಮುಖರಿಗೆ ಹೈತುಕ ಸಂಸರ್ಗದಿಂದ ಬಾಹ್ಯತೆಯು ಉಂಟಾದರೂ ವೇದಾಂತ ಶ್ರವಣಾದಿಗಳಿಂದ ಪರಮಾಸ್ತಿಕನಾಗಿರುವವನಿಗೆ ಬಾಹ್ಯತೆಯು ಉಂಟಾಗುತ್ತದೆಯೇ ಎಂದರೆ **ಅಶರಣ್ಯಶರಣ್ಯನಾನ** – ಎಂದಾರಂಭಿಸಿ ಪ್ರತ್ಯುತ್ತರವನ್ನು ಆಚಾರ್ಯರು ಅನುಗ್ರಹಿಸುತ್ತಾರೆ. ಅದಾಗಿ ಅಶರಣ್ಯರಾದವರಿಗೆ ಶರಣ್ಯ–ರಕ್ಷಕನಾದ ಸರ್ವೇಶ್ವರನನ್ನು, ಶರಣ–ರಕ್ಷಕನಾಗಿ ಆಶ್ರಯಿಸುವ ಪರಮಾಸ್ತಿಕನಾದವನಿಗೆ ಕೆಲವರೊಡನೆ ಸಂಬಂಧದಿಂದ **ಬಾಹ್ಯತೆವಾರಾದಾಹಿಲುಮ್**–ಭಗವದಭಿಮಾನ ಬಾಹ್ಯತೆಯು ಉಂಟಾಗುವುದಿಲ್ಲವಾದರೂ, ಅವನಿಗೆ **ಕಲಕ್ಕಂಗಳ್‌ವರವುಮ್** ಭ್ರಮಾದಿಗಳು ಉಂಟಾಗುವುದನ್ನೂ, ಅದಕ್ಕೆ ಸದಾಚಾರ್ಯರು ಪರಿಹಾರವನ್ನೂ ಮಾಡುವುದನ್ನೂ ನೋಡಿರುತ್ತೇವೆ. ಎಂಬಾರಿಗೆ ಯಾದವ ಪ್ರಕಾಶರೇ ಮೊದಲಾದವರ ಸಂಸರ್ಗದಿಂದ ದೇವತಾಂತರ ಸಂಸರ್ಗ ಪರ್ಯಂತವಾದ ಭ್ರಮಾದಿಗಳು ಏರ್ಪಟ್ಟು, ಪೆರಿಯ ತಿರುಮಲೈ ನಂಬಿಯವರ ಉಪನ್ಯಾಸೋಪದೇಶಾದಿಗಳಿಂದ ಆ ಭ್ರಮವು ಹೋಗಿ, ಅನಂತರ ಭಗವದ್ರಾಮಾನುಜರನ್ನು ಆಶ್ರಯಿಸಿ ಭಗವತ್ಸಮಾಶ್ರಯಣವನ್ನು ಮಾಡಿ ಪರಮೈಕಾಂತಿಗಳಾದರು ಎಂಬವೃತ್ತಾಂತವು ಇಲ್ಲಿ ಅನುಸಂಧೇಯ. ಅವರು ಕಾಳಹಸ್ತಿಯಲ್ಲಿ ಶಿವಪೂಜೆ ಮಾಡಲು ಹೂವುಗಳನ್ನು ಕುಯ್ಯುತ್ತಿರುವಾಗ ಅವರ ಸಮೀಪದಲ್ಲಿ ಭಗವದ್ರಾಮಾನುಜರ ಭಕ್ತರೊಬ್ಬರು

---

ಕೆಟ್ಟ ಕೆಲಸಗಳನ್ನು ಮಾಡುವವರು ಆ ಕೆಲಸಗಳಿಗೆ ತಕ್ಕಂತೆ ನಾಲ್ಕು ಪಂಗಡ. ಅವರುಗಳು ನನ್ನನ್ನು ಆಶ್ರಯಿಸುವುದಿಲ್ಲ ಅವರು ಯಾರೆಂದರೆ (i) ಮೂಢರು - ದೇಹಾತ್ಮ ವಿವೇಕವಿಲ್ಲದವರು (ii) ನರಾಧಮರು - ನನ್ನಲ್ಲಿ ಜ್ಞಾನವಿದ್ದರೂ ನನ್ನ ಹತ್ತಿರಬಾರದವರು (iii) ಮಾಯಯಾಽಪಹೃತಜ್ಞಾನಾಃ — ಜ್ಞಾನವು ಉಂಟಾಗಿ ಕುಯುಕ್ತಿಗಳಿಂದ ಆ ಜ್ಞಾನವನ್ನು ಹೋಗಲಾಡಿಸಿ ಕೊಂಡವರು. (iv) ಆಸುರಂಭಾವಮಾಶ್ರಿತಾಃ - ಅಸುರ ಸ್ವಭಾವದಿಂದ ನನ್ನಲ್ಲಿ ದ್ವೇಷವುಳ್ಳವರು, ಉತ್ತರೋತ್ತರ ಪಾಪಿಷ್ಠರು.

2) ಚತುರ್ವಿಧಾ ಮಮ ಜನಾ ಭಕ್ತಾ ಏವಹಿತೇ ಶ್ರುತಾಃ ।
ತೇಷಾಂಮೇಕಾಂತಿನ ಶ್ರೇಷ್ಠಾಃ ತೇ ಚೈವಾನನ್ಯ ದೇವತಾಃ ॥ ಭಾರತ ಶಾಂತಿ ಪರ್ವ

ನನ್ನ ಭಕ್ತರು ನಾಲ್ಕು ಪಂಗಡದವರು–(i) ಹಣಕ್ಕೋಸ್ಕರ ಹೊಸದಾಗಿ ಆಶ್ರಯಿಸುವವನು (ii) ನಷ್ಟೈಶ್ವರ್ಯಕ್ಕೋಸ್ಕರ ಆಶ್ರಯಿಸುವವನು (iii) ಕೈವಲ್ಯ ಪುರುಷಾರ್ಥಕ್ಕಾಗಿ ಆಶ್ರಯಿಸುವವನು (iv) ಮೋಕ್ಷಕ್ಕಾಗಿ ಆಶ್ರಯಿಸುವವನು-ಜ್ಞಾನೀ. ಇವರುಗಳಲ್ಲಿ ನನ್ನಲ್ಲೇ ಆಸೆಯುಳ್ಳ ಏಕಾಂತಿಗಳು ಶ್ರೇಷ್ಠರು. ದೇವತಾಂತರಗಳನ್ನೂ ಫಲಾಂತರಗಳನ್ನೂ ಕೋರದೆ ಇರುವವರಿವರು.

3) ತಿರುಮಾಲೈ –37 ಅಳಿಯ ನಂಪೈಯಲ್ ಎನ್ನಾರ್ ಅಮ್ಮವೋ ಕೊಡಿಯವಾರೇ. - ನಮ್ಮವನೆಂದು ಭಗವಂತನು ಅಭಿಮಾನಿಸದೆ ಇದ್ದರೆ ಅದೇ ಬಹಳ ಕ್ರೂರವಾದದ್ದು.

**ಮಹರ್ಷಿಹಳುಮ್** 1) **ಏಕಂ ಯದಿ ಭವೇಚ್ಛಾಸ್ತ್ರಂ ಜ್ಞಾನಂ ನಿಸ್ಸಂಶಯಂ ಭವೇತ್ ।**
**ಬಹುತ್ವಾದಿಹ ಶಾಸ್ತ್ರಾಣಾಂ ಜ್ಞಾನತತ್ವಂ ಸುದುರ್ಲಭಮ್" ಎನ್ನುಮ್,**

2) **"ನಿಸ್ಸಂಶಯೇಷು ಸರ್ವೇಷು ನಿತ್ಯಂ ವಸತಿ ವೈಹರಿಃ ।**
**ಸಸಂಶಯಾರ್ನ್ ಹೇತುಬಲಾನ್ನಾಧ್ಯಾವಸತಿ ಮಾಧವಃ"**

**ಎನ್ರುಮ್ ಶೊನ್ನಾರ್‌ಹಳಿರೇ.**

**3) "ನಕ್ರೋಧೋ ನಚಮಾತ್ಸರ್ಯಂ ನಲೋಭೋ ನಾಽಶುಭಾಮತಿಃ" ಇತ್ಯಾದಿಹಳುಮ್ ಆತ್ಮ ಗುಣ ಪರಿಪೂರ್ಣಾಧಿಕಾರಿ ವಿಶೇಷ ವಿಷಯತ್ತಿಲೇ ಯಾಹಕ್ಕಡವನ ಆನ ಪಿನ್ಬು, ಆರುರುಕ್ಷುಕ್ಕಳುಕ್ಕು**

---

"ತೇವುಮೆಪ್ಪೊರುಳುಂಪಡೈಕ್ಕ ಪೂವಿಲ್ ನಾನ್ಮುಹನೈಪ್ಪಡೈತ್ತ ।
ತೇವನೆಂಬರುಮಾನುಕ್ಕಲ್ಲಾಲ್ ಪೂವುಂ ಪೂಶನೈಯುಮ್ ತಹುಮೇ ॥"

ದೇವಮನುಷ್ಯಾದಿ ಎಲ್ಲಾ ಜೀವರಾಶಿಗಳನ್ನೂ ಸೃಷ್ಟಿಸಿ, ನಾಭೀ ಕಮಲದಲ್ಲಿ ಬ್ರಹ್ಮದೇವನನ್ನು ಸೃಷ್ಟಿಸಿದ ದೇವನಾದ ನಮ್ಮ ಸ್ವಾಮಿಗಲ್ಲದೆ, ಹೂವೂ ಪೂಜೆಯೂ ದೇವತಾಂತರಕ್ಕೆ ಸಲ್ಲತಕ್ಕದುದೇ" ಎಂದು ಹೇಳಲು, ಅದನ್ನು ಕೇಳಿ ತೆಹಾದು, ತಹಾದು–ಸಲ್ಲತಕ್ಕದ್ದಲ್ಲ ಎಂದು ಹೇಳಿ ಒಡನೇ ಭಗವದ್ರಾಮಾನುಜರಲ್ಲಿಗೆ ಬಂದು ಅವರನ್ನು ಆಶ್ರಯಿಸಿ ಪರಮೈಕಾಂತಿಗಳಾದರೆಂಬ ವೃತ್ತಾಂತವೂ ಇಲ್ಲಿ ಅನುಸಂಧೇಯ.

ಮಹರ್ಷಿಗಳೂ 1) **ಏಕಂ ಯದಿ ಭವೇತ್** ಇತ್ಯಾದಿಯಾಗಿ, ಶಾಸ್ತ್ರಗಳು ಏಕಕಂಠವಾಗಿದ್ದರೆ, ಜ್ಞಾನವು ನಿಸ್ಸಂಶಯವಾಗಿರುತ್ತದೆ. ಶಾಸ್ತ್ರಗಳು **ಬಹುತ್ವಾತ್**- ಭಿನ್ನಾಭಿಪ್ರಾಯಕವಾದ್ಧರಿಂದ, ತತ್ವ ಜ್ಞಾನವು ಸಿಗುವುದು ದುರ್ಲಭ ಎಂದೂ, 2) **ನಿಸ್ಸಂಶಯೇಷು** ಇತ್ಯಾದಿ ತನ್ನ ಅಸ್ತಿತ್ವಾದಿಗಳಲ್ಲಿ ಸಂಶಯವಿಲ್ಲದವರಲ್ಲಿ ಭಗವಂತನು, ನಿತ್ಯ ಸಾನ್ನಿಧ್ಯಮಾಡಿಕೊಂಡಿರುತ್ತಾನೆ.

ಹೇತುವಾದ ಬಲದಿಂದ ಆ ಭಗವಂತನ ಅಸ್ತಿತ್ವಾದಿಗಳಲ್ಲಿ ಸಂಶಯ ವಿಪರ್ಯಯ (ವ್ಯತ್ಯಾಸ) ಗಳಿಂದ ಕೂಡಿದ ಶಾಸ್ತ್ರಜ್ಞಾನವುಳ್ಳವರನ್ನು ಲಕ್ಷ್ಮೀಪತಿಯು ನಾಧ್ಯಾವಸತಿ-ಆಶ್ರಯಿಸುವುದಿಲ್ಲ ಅವರನ್ನು ಬಿಟ್ಟು ಹೋಗುತ್ತಾನೆಂದೂ ಹೇಳಿರುತ್ತಾರೆಯಲ್ಲವೇ. 3) **ನಕ್ರೋಧೋ ನಚಮಾತ್ಸರ್ಯಂ**–ಇತ್ಯಾದಿ ಕ್ರೋಧ, ಅಸೂಯೆ, ಲೋಭ, ಅಶುಭ ಮತಿಗಳು, ಆತ್ಮಗುಣ ಪರಿಪೂರ್ತಿಗೆ ಕಾರಣವಾದ ಸುಕೃತ ವಿಶೇಷವುಳ್ಳ ಪೂರ್ಣಾಧಿಕಾರಿಗಳಿಗೆ ಉಂಟಾಗುವುದಿಲ್ಲ· ಹೈತುಕವಾದದಿಂದಲೂ, ರಾಜಸತಾಮಸ ಶಾಸ್ತ್ರಗಳಿಂದಲೂ ಬುದ್ಧಿ ಭ್ರಮ ವೇರ್ಪಡದ, ಸಾತ್ವಿಕ ಶಾಸ್ತ್ರಜನ್ಯ ಜ್ಞಾನಾದಿ ರೂಪ ಆತ್ಮಗುಣ ಪರಿಪೂರ್ತಿಯುಳ್ಳ ವಿಶೇಷಾಧಿಕಾರಿಗಳಿಗೆ ಕೋಪತಾಪಾದಿಗಳು ಉಂಟಾಗುವುದಿಲ್ಲ ವೆಂದರ್ಥ. ಇವರುಗಳು ಆರೂಢರಾದ ಪೂರ್ಣಾಧಿಕಾರಿಗಳು **ಆನಪಿನ್ಬು** – "ನಕ್ರೋಧೋನಚಮಾತ್ಸರ್ಯಂ" ಎಂಬ ವಚನವು ಪೂರ್ಣಾಧಿಕಾರಿ ವಿಷಯವೆಂದು ಏರ್ಪಟ್ಟ ನಂತರ, **ಆರುರುಕ್ಷುಕ್ಕಳುಕ್ಕು**–ಭಗವದ್ವಿಷಯದಲ್ಲಿ ಆರೋಹಣ ವನ್ನು ಮಾಡಲಿಚ್ಛಿಸಿದವರಿಗೆ, ಭಗವದ್ವಿಷಯ ಧ್ಯಾನಾರ್ಚನಾದಿ ಪೂರ್ವಕ ಭಕ್ತಿಯೋಗವನ್ನು ಆರಂಭಿಸಿದವರಿಗೆ

---

1) ಇತಿಹಾಸ ಸಮುಚ್ಚಯ 33_105 2) ಭಾರತ ಶಾಂತಿಪರ್ವ 859-71

3) ನಕ್ರೋಧೋನಚ ಮಾತ್ಸರ್ಯಂ ನಲೋಭೋನಾಽಶುಭಾಮತಿಃ ।
ಭವಂತಿ ಕೃತ ಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೇ ॥ ಭಾರ, ಅನು 254-135

ಆತ್ಮಗುಣ ಪರಿಪೂರ್ತಿಗೆ ಕಾರಣವಾದ ಸುಕೃತ ವಿಶೇಷವುಳ್ಳ ಭಗವದ್ಭಕ್ತರಿಗೆ ಕೋಪ ಮಾತ್ಸರ್ಯ, ಲೋಭ ಮೋಹಾದಿಗಳು ಉಂಟಾಗುವುದಿಲ್ಲ, ಇವರುಗಳು ಆರೂಢರಾದ ಪೂರ್ಣಾಧಿಕಾರಿಗಳು.

ಕ್ಕಲಕ್ಕಮುಂಡೆನ್ರುವಿಡವ್ 4) "ಶ್ರೂಯತೇಕಿಲಗೋವಿಂದೇ ಭಕ್ತಿಮುದ್ವಹತಾಂನೃಣಾಂ ।
ಸಂಸಾರ ನ್ಯೂನತಾಭೀತಾ ಸ್ತ್ರಿದಶಾಃ ಪರಿಪನ್ಥಿನಃ ॥"
5 "ಸತ್ಯಂ ಶತೇನ ವಿಘ್ನಾನಾಂ ಸಹಸ್ರೇಣ ತಥಾ ತಪಃ ।
ವಿಘ್ನಾಯುತೇನ ಗೋವಿಂದೇ ನೃಣಾಂ ಭಕ್ತಿರ್ನಿವಾರ್ಯತೇ॥" ಇತ್ತ್ಯಾದಿಹಳಿಲೇ ಪ್ರಸಿದ್ಧಮ್.

### ಸಿದ್ಧೋಪಾಯ ವಿಷಯೇ ಶಙ್ಕಾಃ ತಾಸಾಂ ಪರಿಹಾರಾಶ್ಚ

ಅದಿಲ್ ಮುರ್ಪಡ ಸಿದ್ಧೋಪಾಯತ್ತೈಪ್ಪತ್ತ ವರುಮ್ ಕಲಕ್ಕಙ್ಗಳುಮ್, ಅವತ್ತಿನ್ ಪರಿಹಾರಙ್ಗಳುಮ್ ಶೊಲ್ಲುಹಿರೋಮ್.

### ಭಗವತ್ಸ್ವಾತಂತ್ರ್ಯ ಕಾರುಣ್ಯಾಪೇಕ್ಷಯಾ ಪ್ರಪತ್ತ್ಯನನುಷ್ಠೇಯತ್ವ ಮಿತಿ ಶಙ್ಕಾನಿರಾಸಃ

ಅನಾದಿಕಾಲ ಮನಾದರಿತ್ತ ಈಶ್ವರ್ನ್, ಇನ್ರೊರುತ್ತನೈ ಆದರಿಕ್ಕಿರದು ತನ್ ಸ್ವಾತಂತ್ರ್ಯ ಮಾತ್ರತ್ತಾಲೇ ಯನ್ರೋ ? ಇಙ್ಗನನ್ರಾಗಿಲ್. 1) "ಇನ್ರನ್ನೈಪ್ಪೊರುಳಾಕ್ಕಿತ್ತನ್ನೈ ಯೆನ್ನುಳ್

---

ಎಂದರ್ಥ. **ಕಲಕ್ಕಮ್**–ವಿಘ್ನಗಳು ಉಂಟಾಗುತ್ತವೆ ಎಂಬುದು 4) "**ಶ್ರೂಯತೇಕಿಲಗೋವಿಂದೇ** ಇತ್ಯಾದಿಯಾಗಿಯೂ 5) "**ಸತ್ಯಂ ಶತೇನ ವಿಘ್ನಾನಾಂ** ಇತ್ಯಾದಿ ಪ್ರಮಾಣಗಳಿಂದಲೂ ಪ್ರಸಿದ್ಧ.

ಏತಾವತಾ ಮೃದು ಪ್ರಜ್ಞರಿಗೆ–ಅಲ್ಪ ಜ್ಞಾನಿಗಳಿಗೆ ಸಿದ್ಧೋಪಾಯ ವಿಷಯದಲ್ಲಿ ಭ್ರಮಾದಿಗಳು ಉಂಟಾಗುತ್ತವೆಯೆಂದು ಹೇಳಿ, ಆ ಭ್ರಮಾದಿಗಳನ್ನು ಹೋಗಲಾಡಿಸಲು, ಸ್ಥಿರೀಕರಣ ಭಾಗವು ಆವಶ್ಯಕವೆಂದು ಆಚಾರ್ಯರು ಅನುಗ್ರಹಿಸುತ್ತಾರೆ.

### ಸಿದ್ಧೋಪಾಯ ವಿಷಯವಾದ ಸಂದೇಹಗಳು-ಅವಕ್ಕೆ ಪರಿಹಾರಗಳು

**ಅದಿಲ್‌ಮುರ್ಪಡ** ಇತ್ಯಾದಿ–ಅದರಲ್ಲಿ ಮೊದಲು ಸಿದ್ಧೋಪಾಯವನ್ನು ಕುರಿತು ಉಂಟಾಗುವ ಸಂದೇಹಗಳನ್ನು ಅವುಗಳಿಗೆ ಪರಿಹಾರಗಳನ್ನೂ ಹೇಳುತ್ತೇವೆ ಎಂಬುದು ಪ್ರತಿಜ್ಞೆ. ಈ ಸಂದೇಹಗಳು ಈಶ್ವರನ ಸ್ವಾತಂತ್ರ್ಯ ಸಹಜ ಕಾರುಣ್ಯಮೂಲವಾಗಿಯೂ, ಪತ್ನೀ ಸಂಬಂಧ ವಿಷಯವಾಗಿಯೂ, ಗುಣವಿಶೇಷ ಸಂಬಂಧ ವಿಶೇಷ ಮೂಲವಾಗಿಯೂ ಮೂರು ವಿಧವಾಗಿವೆ ಯೆಂದು ಉಪಪಾದಿಸಿ ಪರಿಹರಿಸುತ್ತಾರೆ.

**ಅನಾದಿಕಾಲಮ್** ಇತ್ಯಾದಿ–ಅನಾದಿಕಾಲವೂ ಅನಾದರಿಸಿದ ಈಶ್ವರನು ಈಗ ಒಬ್ಬನನ್ನು ಆದರಿಸುವುದು ತನ್ನ ಸ್ವಾತಂತ್ರ್ಯ ಮಾತ್ರದಿಂದ ಅಲ್ಲವೇ. **ಇಙ್ಗನನ್ರಾಗಿಲ್** ಇತ್ಯಾದಿ–ಹೀಗೆ ಇಲ್ಲವೆಂದರೆ, 1) **ಇನ್ರನ್ನೈ**

---

4) ವಿಷ್ಣುಧರ್ಮ (2-25) ಗೋವಿಂದನಲ್ಲಿ ಭಕ್ತಿಯನ್ನು, ಉದ್ವಹತಾಂ–ಪೋಷಿಸುವಿಚ್ಛತಾಂ-ಮಾಡಲು ಇಚ್ಛಿಸುವ ಆರುರುಕ್ಷುಗಳಿಗೆ, ಸಂಸಾರವು ಎಲ್ಲಿ ನ್ಯೂನವಾಗಿ ಹೋಗುತ್ತದೆಯೋ ಎಂಬ ಭಯದಿಂದ, ದೇವತೆಗಳು ವಿಘ್ನವನ್ನಾಚರಿಸುತ್ತಾರೆ. ಸಂಸಾರವು ನ್ಯೂನವಾದರೆ ತಮಗೆ ಕಪ್ಪ ಕಾಣಿಕೆಗಳನ್ನು ಕೊಡುವವರು ಕಡಿಮೆಯಾಗುತ್ತಾರೆಂಬ ಭಯದಿಂದ ಅವರುಗಳು ವಿಘ್ನವನ್ನಾಚರಿಸುತ್ತಾರೆಂದರ್ಥ.

5) ವಿಷ್ಣುಧರ್ಮ (74-94) ಸತ್ಯವಚನವು ನೂರು ವಿಘ್ನಗಳಿಂದ ಬಾಧಿಸಲ್ಪಡುತ್ತದೆ. ತಪಸ್ಸು ಹಾಗೆಯೇ ಸಾವಿರ ವಿಘ್ನಗಳಿಂದ ತಡೆಯಲ್ಪಡುತ್ತದೆ. ಹತ್ತು ಸಾವಿರ ವಿಘ್ನಗಳಿಂದ ಗೋವಿಂದನಲ್ಲಿ ಭಕ್ತಿಯು ತಡೆಯಲ್ಪಡುತ್ತದೆ.

1) ಇನ್ರೆನ್ನೈಪ್ಪೊರುಳಾಕ್ಕಿತ್ತನ್ನೈ ಎನ್ನುಳ್ ವೈತ್ತಾನ್ ।
ಅನ್ರೆನ್ನೈಪ್ಪುರಂ ಪೋಹಪ್ಪುಣರ್ತದು ಎನ್‌ಶೆಯ್ವಾನ್ । ಪ. ತಿ. ನೋ.

**ನೈತ್ತಾನ್, ಅನ್ರೆನ್ನೈಪ್ಪುರಮ್ಪೋಹಪ್ಪುಣರ್ತ್ತದುಎನ್ ಶೆಯ್‌ವಾರ್" ಎನ್ರು ಆೞ್ವಾರ್ ವಿಣ್ಣಪ್ಪಂ ಶೆಯ್‌ಯ, ಸರ್ವೇಶ್ವರ್ 2) ಶೂೞ್ವಿಶುಮ್‌ಬಣಿಮುಗಿಲ್ ತೂರಿಯಂ ಮುೞಕ್ಕಿನ. ಇದೊೞಿಯ ವೇರೊರು ಉತ್ತರ ಮರುಳಿಚ್ಚೆಯ್‌ದಾನೋ? ಆಹೈಯಾಲ್ ನಾಮೊರು ಉಪಾಯಾನುಷ್ಠಾನಮ್ ಪಣ್ಣುಹೈ ಯೆನ್ನೆನ್ಬದು 3) "ನಡುವೇ ವಂದುಯ್ಯ ಕೊಳ್‌ಹಿನ್ರನಾತ್" ಎನ್ದಿರ ಪಡಿಯೇ ಅರುಳ್ ಪುರಿನ್ದ ಶಿಂದ್ಯೆ ಯಡಿಯಾರ್ ಮೇಲ್ ವೈತ್ತುಅವನ್ತಾನೇ ರಕ್ಷಿತ್ತ ಪೋದು ಕಾಣುಮತ್ತನ್ನೈ ಯನ್ರೋವೆನ್ರು ಶಿಲರ್ ಕಲಙ್ಗುವಾರ್‌ಹಳ್.**

---

ಪ್ಪೊರುಳಾಕ್ಕಿ ಇತ್ಯಾದಿಯಾಗಿ ಆಳ್ವಾರವರು ವಿಜ್ಞಾಪಿಸಲು ಸರ್ವೇಶ್ವರನು 2) **ಶೂೞ್ವಿಶುಂಬಣಿಮುಹಿಲ್** ಇತ್ಯಾದಿ ಮೇಘವೆಂಬ ತೂರ್ಯಘೋಷ ಮಾಡಿದನಲ್ಲದೆ ಬೇರೆ ಪ್ರತ್ಯುತ್ತರವನ್ನು ಕೃಪೆ ಮಾಡಿ ಹೇಳಿದನೇ. ಇದರ ತಾತ್ಪರ್ಯವೇನೆಂದರೆ–ಈಶ್ವರನು (ಲಕ್ಷ್ಮೀ ವಿಶಿಷ್ಟನಾರಾಯಣನು) ಸಿದ್ಧೋಪಾಯನಾಗಿ ಸರ್ವದಾ ಇದ್ದು ಕೊಂಡೂ ಅನಾದಿ ಕಾಲದಿಂದ ಆದರಿಸದೆ ಈಗ ಆದರಿಸಿದರೆ, ಈ ಆದರಕ್ಕೆ ಬೇರೆ ಕಾರಣವು ಯಾವುದೂ ಇಲ್ಲವಾದ್ದರಿಂದ. ಕೇವಲ ಸ್ವಾತಂತ್ರ್ಯವೇ ಕಾರಣವಾಗಿರಬೇಕು. ಸ್ವಾತಂತ್ರ್ಯ ವಿನಹ ಬೇರೆ ಕಾರಣವಿದ್ದರೆ ಅದು ನಮಗೆ ತಿಳಿಯಬೇಕು, ಎಂದು ಆಳ್ವಾರವರು **ಇನ್ರನ್ನೈ** – ಇಷ್ಟು ಕಾಲವೂ ಇಲ್ಲದೆ ಈಗ ನನ್ನನ್ನು ಪೊ**ರುಳ್‌ಆಕ್ಕಿ**–ವಸ್ತುವಾಗಿ ಮಾಡಿ-ಅಂದರೆ ಬ್ರಹ್ಮ ಜ್ಞಾನಿಯನ್ನಾಗಿ ಮಾಡಿ **ತನ್ನೈಎನ್ನುಳ್ ವೈತ್ತಾನ್**–ಸರ್ವೋತ್ಕೃಷ್ಟನಾದ ತನ್ನನ್ನು **ಎನ್ನುಳ್ ವೈತ್ತಾನ್**–ನನ್ನ ಮನಸ್ಸಿನಲ್ಲಿರಿಸಿದನು. **ಅನ್ರೆನ್ನೈಪ್ಪುರಂಪೋಹಪ್ಪುಣರ್ತದು**–ಇಷ್ಟು ಕಾಲ ಪರ್ಯಂತ ನನ್ನನ್ನು ಪ್ರಾಕೃತ ವಿಷಯಗಳಲ್ಲಿ ಮನಸ್ಸಿಡುವಂತೆ ಮಾಡಿದುದು ಏತಕ್ಕೆ. ಈಗ ನಾನು ಒಂದು ವ್ಯಾಜವನ್ನು ಅನುಷ್ಠಿಸುದುದಾಗಿ ತಿಳಿಯಲಿಲ್ಲವಲ್ಲಾ ಎಲೈ ಭಗವಂತನೇ ನಿನಗೆ ತಿಳಿದಿದ್ದರೆ ನೀನೇ ತಿಳಿಸು, ಎಂದು ಕೇಳಲು ಸರ್ವೇಶ್ವರನು ವ್ಯಾಜ ವಿಷಯವಾಗಿ ಪ್ರತ್ಯುತ್ತರವಾವುದನ್ನೂ ಕೊಡದೆ ಆಳ್ವಾರವರನ್ನು ಮೋಕ್ಷಕ್ಕೆ ಬರಮಾಡಿಸಿಕೊಳ್ಳಲು ತೂರ್ಯವಾದ್ಯವನ್ನು ಮಾಡಿಸಿದುದರಿಂದ ಅವನ ಸ್ವಾತಂತ್ರ್ಯವಿನಹ ಬೇರೆ ವ್ಯಾಜವಾವುದೂ ಇಲ್ಲವೆಂದು ಏರ್ಪಡುತ್ತದೆಯಲ್ಲವೇ. **ಆಹೈಯಾಲೇ** – ಸ್ವಾತಂತ್ರ್ಯವಿನಹ ಬೇರೆ ವ್ಯಾಜವು ಯಾವುದೂ ಇಲ್ಲವಾದ್ದರಿಂದ, **ನಾಮೊರು** ಇತ್ಯಾದಿ – ನಾವು ಒಂದು ಉಪಾಯವನ್ನು ಅನುಷ್ಠಿಸುವುದು ಏಕೆ. 3) **ನಡವೇ ವಂದು** ಇತ್ಯಾದಿ ಹೇಳುವಂತೆ, ಇಂಥಹ ವೇಳೆಯಲ್ಲಿ ಬರುತ್ತಾನೆಂಬ ಸಂಭಾವನೆ ಇಲ್ಲದ ಕಾಲದಲ್ಲಿ ಆಕಸ್ಮಿಕವಾಗಿ ಬಂದು ನನ್ನನ್ನು ಉಜ್ಜೀವವಗೊಳಿಸಿದ ಸ್ವಾಮಿ **ಎನ್ದಿರಪಡಿಯೇ** ಎಂದು ಹೇಳುವಂತೆ, **ಅರುಳ್‌ಪುರಿಂದ ಶಿಂದ್ಯೆ** – ಕೃಪೆಯಿಂದ ಕೂಡಿದ ಮನಸ್ಸನ್ನು, **ಅಡಿಯಾರ್‌ಮೇಲ್‌ವೈತ್ತು** – ದಾಸರುಗಳ ಮೇಲೆ, ಸ್ವಾತಂತ್ರ್ಯವೇ ಕಾರಣವಾಗಿಟ್ಟು, **ಅವನ್‌ತಾನ್**

---

ಕುನ್ರೆನ್ನತ್ತಿಹೞಿಮಾಡಂಗಳ್ ಶೂೞ್ ತಿರುಪ್ಪೇರಾನ್
ಒನ್ರೆನಕ್ಕರುಳ್ ಶೆಯ್ಯವುಣರ್ತಲುತ್ತೇನೇ ॥ ತಿರುವಾಯ್‌ಮೊೞಿ 10-8-9

2) ಶೂೞ್ವಿಶುಂಬಣಿ ಮುಹಿಲ್ ತೂರಿಯಂ ಮುೞಕ್ಕಿನ
ಆೞ್ಕಡಲಲೈ ತಿರೈಕೈಯ್ಯೆಡುತ್ತಾಡಿನ ।
ಏೞ್ಪೊೞಿಲುಮ್ ವಳಮೇಂದಿಯ ವೆನ್ನಪ್ಪನ್
ವಾೞ್ಪುಹೞ್ನಾರಣನ್ ತಮರೈಕ್ಕಂಡುಹಂದೇ ॥ ತಿರುವಾಯ್‌ಮೊೞಿ 10-9-1

ಆಕಾಶದಲ್ಲಿ ಅಲಂಕಾರವಾಗಿ ಸುತ್ತಿಕೊಂಡಿರುವ ಮೇಘವೆಂಬ ತೂರ್ಯವಾದ್ಯವು ಘೋಷಿಸಿತು. ಸಪ್ತ ದ್ವೀಪಗಳೂ ಸಂಪತ್ಸಮೃದ್ಧವಾಗಿರುವಂತೆ ಸಂಕಲ್ಪಿಸಿದ, ಮತ್ತು ಸ್ತೋತ್ರ ಮಾಡುವಂತಿರುವ ಕಲ್ಯಾಣ ಗುಣಗಳಿಂದ ಕೂಡಿದ ನಾರಾಯಣನಾದ ನನ್ನ ಸ್ವಾಮಿಯ ದಾಸರನ್ನು ಕಂಡು ಸಂತೋಷದಿಂದ ಆಳವಾದ ಸಮುದ್ರವು ಅಲೆಯೆಂಬ ಕೈಯ್ಯನ್ನು ಎತ್ತಿ ಆಡಿಸಿತು [ಟಾಟಾ ಮಾಡಿತು. ಇದ ಹೊಸ ನಾಗರೀಕವಲ್ಲ ಆಳ್ವಾರ್ ಕಾಲದ್ದು ಎಂದು ಏರ್ಪಡುತ್ತದೆ,]

**ಇವರ್‌ಹಳೈತ್ತೆಳಿವಿಕ್ಕುವ್‌ಪಡಿ: ಈಶ್ವರ್ಱ ಸ್ವತಂತ್ರನೇಯಾಗಿಲುಮ್, ವೈಷಮ್ಯ ನೈರ್ಘೃಣ್ಯ ಜ್ಗಳಾಗಿರ ದೋಷಜ್ಗಳ್ ತನಕ್ಕುತ್ತಟ್ಟಾಮೈಕ್ಕಾಹ, ಇವರ್ಱ ಪಕ್ಕಲಿಲೇಯೊರುವ್ಯಾಜತ್ತೈ ಯುಣ್ಡಾಕ್ಕಿ, ಅತ್ತೈ ಅವಲಂಬಿತ್ತು ತ್ತಾನ್ ರಕ್ಷಿಕ್ಕುಮ್.**

**ಇವ್ವರ್ಥತ್ತೈ 1) "ತಿರುಮಾಲಿರುಮ್ ಶೋಲೈಮಲೈ ಯೆನ್ರೇನೆನ್ನ ತಿರುಮಾಲ್ ವನ್ದೆನ್ನೆಞ್ಜುನಿರೈಯಪ್ಪುಹುನ್ದಾನ್" ಎನ್ರು ಆೞ್ವಾರ್‌ತಾಮೇಅರುಳಿಚ್ಚೆಯ್‌ದಾರ್.**

---

ಇತ್ಯಾದಿ – ಅವನೇ ರಕ್ಷಿಸುವಾಗ **ಕಾಣುಮತ್ತನೈಯನ್ರೋ** – ಫಲವು ಲಭಿಸುತ್ತದೆ ಎಂದು ನೋಡಿ ಕೊಂಡಿರ ಬೇಕಲ್ಲವೇ. ಅಂದರೆ ನಾವಾಗಿ ಮಾಡಬೇಕಾದ ಪ್ರಯತ್ನವು ಯಾವುದು ಇದೆ? ಅವನೇ ರಕ್ಷಿಸುತ್ತಾನೆಂದು ಪ್ರತೀಕ್ಷಿಸಿ ಕೊಂಡಿರಬೇಕೆಂಬ ಸಿದ್ಧೋಪಾಯ ನಿಷ್ಠೆ ಇದು – **ಎನ್ರುಶಿಲರ್‌ಕಲಂಗುವಾರ್ಹಳ್** – ಈ ರೀತಿಯಾಗಿ ಕೆಲವರು ಭ್ರಮಿಸುತ್ತಾರೆ.

ಇದಕ್ಕೆ ಪರಿಹಾರವನ್ನು ಹೇಳಲು **ಇವರ್‌ಹಳೈತ್ತೆಳಿವಿಕ್ಕುಂಪಡಿ** ಎಂದು ಆಚಾರ್ಯರು ಉಪಕ್ರಮಿಸುತ್ತಾರೆ. ಆದಾಗಿ ಇವರುಗಳ ಭ್ರಮನನ್ನು ಹೋಗಲಾಡಿಸಿ ತಿಳಿವು ಜ್ಞಾನವನ್ನು ಉಂಟು ಮಾಡುವ ಪ್ರಕಾರವು ಹೇಳುತ್ತೇವೆಂದು ತಾತ್ಪರ್ಯ. **ಈಶ್ವರನ್ ಸ್ವತಂತ್ರನೇಯಾಹಿಲುಮ್** – ಇತ್ಯಾದಿ ಈಶ್ವರನು ಸ್ವತಂತ್ರನೇ ಯಾದರೂ ವೈಷಮ್ಯ ನೈರ್ಘೃಣ್ಯಗಳೆಂಬ ವೈಷಮ್ಯ – ಪಕ್ಷಪಾತ, ಕಾರಣವಿಲ್ಲದೆ ಒಬ್ಬನನ್ನು ಸಂಸಾರದಲ್ಲಿ ಬಂಧಿಸುವುದು, ಮತ್ತೊಬ್ಬನನ್ನು ಮೋಕ್ಷಕ್ಕೆ ಕರೆದೊಯ್ಯುವುದು, ನೈರ್ಘೃಣ್ಯ – ನಿಷ್ಕಾರಣವಾಗಿ ಒಬ್ಬನನ್ನು ಕ್ಲೇಶ ಪಡಿಸುವುದು–ಎಂಬ ದೋಷಗಳು ತನಗೆ ಸಂಶ್ಲೇಷಿಸದೆ ಇರುವುದಕ್ಕಾಗಿ, **ಇವನ್‌ಪಕ್ಕಲಿಲೇ** ಈ ಬದ್ಧ ಜೀವನಲ್ಲಿ, ಒಂದು ವ್ಯಾಜವನ್ನು ಉಂಟುಮಾಡಿ, ಅದನ್ನು **ಅವಲಂಬಿತ್ತುತ್ತಾನ್** – ಅವಲಂಬಿಸಿಕೊಂಡೇ, ರಕ್ಷಿಸುತ್ತಾನೆ. **ತಾನ್**–ಏವಕಾರಾರ್ಥ. ವ್ಯಾಜಸಾಪೇಕ್ಷನಾಗಿಯೇ ರಕ್ಷಿಸುತ್ತಾನೆ. ವ್ಯಾಜನಿರಪೇಕ್ಷನಾಗಿಲ್ಲ ಎಂಬುದು ಅರ್ಥ. **ಇವ್ವರ್ಥತ್ತೈ** – ಈ ಅರ್ಥವನ್ನು 1) **ತಿರುಮಾಲಿರುಂಜೋಲೈಮಲೈ** ಇತ್ಯಾದಿ–ತಿರುಮಾಲಿರುಂಜೋಲೈ

---

3) ವಿಡುವೇನೋ ಎನ್ ವಿಳಕ್ಕೈ ಎನ್ನಾವಿಯೈ
ನಡುವೇ ವಂದುಯ್ಯಕ್ಕೊಳ್‌ಹಿನ್ರನಾದನೈ ।
ತೊಡುವೇಶೆಯ್ದಿಳವಾಯ್‌ಚಿಯರ್ ಕಣ್ಣಿನುಳ್
ವಿಡವೇಶೆಯ್ದು ವಿೞಿಕ್ಕುಂ ಪಿರಾನೈಯೇ ॥ ತಿರುವಾಯ್ 1–7–5

ಬಾಲೆಯರಾದ ಗೋಪಿಯರ ಕಣ್ಣನಲ್ಲಿ ವಿಟಪುರುಷ ಚೇಷ್ಟಿತವನ್ನು ಮಾಡಿ ಅವರನ್ನು ಕಣ್ಣಿನಿಂದಲೇ ವಶಪಡಿಸಿಕೊಂಡ ಉಪ ಕಾರಕನನ್ನು ನಾನು ಬಿಡುತ್ತೇನೆಯೇ ನನಗೆ ದೀಪವನ್ನು ತೋರಿಸಿದ ಅಂತರಾತ್ಮಾ. ಯಾವಾಗ ಬರುತ್ತಾನೆಂಬುದನ್ನು ತಿಳಿಸದೆ, ಆಕಸ್ಮಿಕವಾಗಿ ಬಂದು ನನ್ನನ್ನು ಉಜ್ಜೀವಿಸಿದ ಸ್ವಾಮಿ.

1) ತಿರುಮಾಲಿರುಂಜೋಲೈ ಮಲೈ ಎನ್ರೇನ್ ಎನ್ನ
ತಿರುಮಾಲ್‌ವಂದು ಎನ್ನೆಂಜು ನಿರೈಯಪ್ಪುಹುಂದಾನ್ ।
ಕುರುಮಾಮಣಿ ಯುಂದುಪುನಲ್ ಪೊನ್ನಿತ್ತೆನ್ಪಾಲ್
ತಿರುಮಾಲ್ ಶೆನ್ರು ಶೇ ರ್ವಿಡಮ್ ತೆನ್ ತಿರುಪ್ಪೇರೇ ॥ ತಿರುವಾಯ್ 10-8-1

"ತಿರುಮಾಲಿರುಂಜೋಲೈಮಲೈ" ಎಂದು ಹೇಳಿದೆ. ಹೇಳಿದೊಡನೆ ಈ ವ್ಯಾಜವನ್ನು ಅವಲಂಬಿಸಿ ಲಕ್ಷ್ಮೀಪತಿಯು ನನ್ನ ಮನಸ್ಸಿನಲ್ಲಿ ತುಂಬಿಕೊಂಡನು. ಶ್ರೇಷ್ಠವಾದ ರತ್ನಗಳಿಂದ ಕೂಡಿದ ತಾಮ್ರಪರ್ಣಿನದಿಯ ದಕ್ಷಿಣ ದಿಕ್ಕಿನಲ್ಲಿರವ "ತೆನ್‌ತಿರುಪ್ಪೇರೈ" ಎಂಬ ದಿವ್ಯ ದೇಶದಲ್ಲಿ ಆ ಲಕ್ಷ್ಮೀಪತಿಯು ಸಾನ್ನಿಧ್ಯ ಮಾಡಿಕೊಂಡಿದ್ದಾನೆ.

**ಇನ್ದ ವ್ಯಾಜನ್ತಾನುಮ್ ಈಶ್ವರ್ಱ ತನ್ನಾಲೇ ಯಾಹಿಲಿತ್ತೈ ಮುನ್ಬೇಯುಂಡಾಕ್ಕಾದೇ ವಿಟ್ಟದೆನ್ನೆನ್ನಿಲ್, ಇವ್ವಾತ್ಮಾಕ್ಕಳುಕ್ಕು ಅನಾದಿಯಾನ ಕರ್ಮಪ್ರವಾಹಙ್ಗಳ್ ವಿಷಮವಿಪಾಕ ಸಮಯಙ್ಗಳಾಯ್‌ಕ್ಕೊಂಡು ಪೋರುಹೈಯಾಲೇ, ಈಶ್ವರ್ಱ ಕರ್ಮಾನುರೂಪ ಫಲಪ್ರದನಲ್ಲಾದ ಪೋದು ವೈಷಮ್ಯದೋಷಮ್ ವರುಹೈಯಾಲೇ ಮುನ್ಬಿದುಕ್ಕು ಅವಸರಮಾಯಿತ್ತಿಲ್ಲೈ ಯೆನ್ನುಮಿಡಮ್ ಕಾರ್ಯ ವಿಶೇಷದರ್ಶನತ್ತಾಲೇ ಕಲ್ಪಿತಮ್.**

**ಇಙ್ಗನಿಶೈಯಾದ ಸರ್ವಸಿದ್ಧಾನ್ತಿಹಳುಕ್ಕುಮ್ ಇದುಕ್ಕು ಮುನ್ಬಿಲ್ಲಾದ ಮೋಕ್ಷಶ್ರದ್ಧಾದಿಹಳಿಪ್ಪೋದು ಪಿರಕ್ಕೈಕ್ಕಡಿಯೆನ್ನೆನ್ರಾಲ್ ಉತ್ತರಮ್ ಶೊಲ್ಲವಿರಹಿಲ್ಲೈ. ಅನಾದಿಕರ್ಮಪ್ರವಾಹ ವೈಚಿತ್ರ್ಯತ್ತಾಲೇ**

---

ಎಂದು ಹೇಳಿದ ವ್ಯಾಜವನ್ನು ಅವಲಂಬಿಸಿ ಭಗವಂತನು ನನ್ನ ಮನಸ್ಸನ್ನು ಪೂರ್ಣವಾಗಿ ಆಶ್ರಯಿಸಿದನು, ಎಂದು ಆಳ್ವಾರ್ ತಾವೇ ಕೃಪೆ ಮಾಡಿ ಹೇಳಿರುತ್ತಾರೆ. [ಈ ಪಾಶುರವು (10–8–1) ಅದೇ ಪದಿಕದ ಮೊದಲನೆಯ ಪಾಶುರ. ಇನ್ರೆನ್ನೈಪ್ಪೊರುಳಾಕ್ಕಿ ಎಂಬುದು (10–8–9) ಅದೇಪದಿಕದಲ್ಲಿ 9ನೆಯ ಪಾಶುರ.

**ಇಂದವ್ಯಾಜಂದಾನುಮ್** ಇತ್ಯಾದಿ–ಹಾಗೆಯೇ ಆಗಲಿ **ಈ** ವ್ಯಾಜವು ಉಂಟಾಗುವುದಕ್ಕೂ **ಈ**ಶ್ವರನೇ ಕಾರಣವಲ್ಲವೇ. ಹಾಗಿಲ್ಲವೆಂದರೆ ಅವನು ಸರ್ವಕಾರಣನೆಂಬುದಕ್ಕೆ ಭಂಗವು ಏರ್ಪಡುತ್ತದೆಯಲ್ಲವೇ. ಅವನೇ ಕಾರಣವೆಂದರೆ ಇಷ್ಟುಕಾಲ **ಈ** ವ್ಯಾಜವನ್ನು ಉಂಟುಮಾಡದೆ ಇರುವುದಕ್ಕೆ ಅವನ ಸ್ವಾತಂತ್ರ್ಯವೇ ವಿನಹ ಬೇರೆ ಏನು ಕಾರಣವಿದೆ ಎಂದರೆ **ಇವ್ವಾತ್ಮಾಕ್ಕಳ್‌ಕ್ಕು**–ಇತ್ಯಾದಿ–ಈ ಬದ್ಧ ಜೀವರಿಗೆ ಅನಾದಿಯಾದ ಕರ್ಮಪ್ರವಾಹಗಳು ವಿಷಮ **ಪಾಕ** ಫಲಗಳನ್ನು **ಕೊಡುವ** (ಸಮಯ–ವ್ಯವಸ್ಥೆ) ವ್ಯವಸ್ಥೆಗಳಿಂದ ಕೂಡಿ **ಪೋರುಹೈಯಾಲೇ**-ಉಂಟಾಗುವುದರಿಂದಲೂ **ಈಶ್ವರನು**–ಇತ್ಯಾದಿ – **ಈ**ಶ್ವರನು ಕರ್ಮಾನುರೂಪ ಫಲಪ್ರದನಾಗಿಲ್ಲದಿದ್ದರೆ ವೈಷಮ್ಯ ದೋಷವು ಅವನಿಗೆ ಉಂಟಾಗುವುದರಿಂದಲೂ **ಪೂರ್ವ**ದಲ್ಲಿ **ಈ** ವ್ಯಾಜವನ್ನು ಅವಲಂಬಿಸಿ ಫಲಪ್ರದನಾಗಲು ಅವಕಾಶವು ಉಂಟಾಗಲಿಲ್ಲವೆಂಬುದು, **ಕಾರ್ಯವಿಶೇಷದರ್ಶನತ್ತಾಲೇ ಕಲ್ಪಿತಮ್**–ವ್ಯಾಜ ರೂಪ ಕಾರ್ಯ ವಿಶೇಷವನ್ನು ತಿಳಿದುಕೊಂಡು ಕಲ್ಪಿಸಬೇಕು. ಇದರಿಂದ ವ್ಯಾಜವು ಸಂತನ್ಯಗಳಾದ ಕರ್ಮ ಪರಂಪರೆಗಳ ನಡುವೆ ಯದೃಚ್ಛೆಯಾಗಿ ಉಂಟಾಗುತ್ತದೆ. ಈ ವ್ಯಾಜಜನಕವಾದ ಕರ್ಮಪರಿಪಾಕವು ಇಷ್ಟುಕಾಲ ಉಂಟಾಗಲಿಲ್ಲವೆಂದು ಹೇಳಬೇಕೇ ವಿನಹ ಬೇರೆ ಮಾರ್ಗವಿಲ್ಲ. **ಇಂಗನಿಶೈಯಾದಪ್ಪೋದು**–ಹೀಗೆ ಒಪ್ಪದೆ ಈಶ್ವರ ಸ್ವಾತಂತ್ರ್ಯವೇ ಮೋಕ್ಷ ಕಾರಣವೆಂದು ಹೇಳಿದರೆ ಆ ಸ್ವಾತಂತ್ರ್ಯವು ಶಕ್ತಿ ವಿಶೇಷವೆಂದರೆ ಸರ್ವದಾಮೋಕ್ಷವು ಲಭಿಸುವ ಪ್ರಸಂಗವು ಉಂಟಾಗುತ್ತದೆ. ಆ ಸ್ವಾತಂತ್ರ್ಯವು, ಈಶ್ವರನ ಇಚ್ಛೆಯೆಂದರೆ ಅದು ನಿರ್ಹೇತುಕವಾಗಿ ಉಂಟಾಗಲಾರದು. ಸುಕೃತ ವಿಶೇಷ ಮೂಲವಾಗಿಯೇ ಎಂದರೆ ಅವನ ಕೃಪೆಯು, ಸಹೇತುಕವಾಗಿಯೇ ಉಂಟಾಗುತ್ತದೆ ಎಂದು ಒಪ್ಪಲೇಬೇಕು. ಹೀಗೆ ಒಪ್ಪದೇ ಹೋದರೆ ಸರ್ವಸಿದ್ಧಾಂತಿಗಳಿಗೂ **ಇದುಕ್ಕುಮುನ್ಬಿಲ್ಲಾದ**–ಇದಕ್ಕೆ ಮುಂಚೆ ಉಂಟಾಗದ ಮೋಕ್ಷ ಶ್ರದ್ಧಾದಿಗಳು ಈಗ ಉಂಟಾಗುವುದಕ್ಕೆ **ಅಡಿಯೆನ್ ಎನ್ರಾಲ್**–ಕಾರಣವೇನೆಂದು ಕೇಳಿದರೆ ಉತ್ತರವನ್ನು ಹೇಳಲಿಕ್ಕೆ **ವಿರಹಿಲ್ಲೈ**–ಮಾರ್ಗವಿಲ್ಲ.

“ಯಮೇವೈಷವೃಣುತೇ ತೇನಲಭ್ಯಃ, ತಸ್ಯೈಷ ಆತ್ಮಾವಿವೃಣುತೇ ತನೂಂಸ್ವಾಮ್” ಎಂಬ ಶ್ರುತಿಯು ಈಶ್ವರನಸ್ವಾತಂತ್ರ್ಯ ಮಾತ್ರವನ್ನು ಅವಲಂಬಿಸಿ, ಸಾಧ್ಯೋಪಾಯವನ್ನು ನಿಷೇಧಿಸುವುದಾಗಿ ಕೆಲವರ ಅಭಿಪ್ರಾಯವೆಂಬುದೂ ಇಲ್ಲಿ ಗರ್ಭಿತ. ಹೀಗೆ ಕುದೃಷ್ಟಿಯಿಂದ ಕಲ್ಪಿಸುವ ಅರ್ಥವನ್ನು ನಿವಾರಿಸಲು. “ಪ್ರಿಯತಮ ಏವಹಿ ವರಣೀಯೋಭವತಿ ಯಸ್ಯಾಯಂ ನಿರತಿಶಯ ಪ್ರಿಯಃ, ಸ ಏವಾಸ್ಯ ಪ್ರಿಯ ತಮೋಭವತಿ”–ಪ್ರಿಯತಮನೇ ವರಣೀಯನು. ಯಾವನು ಭಗವಂತನನ್ನು ನಿರತಿಶಯವಾಗಿ ಪ್ರೀತಿಸುತ್ತಾನೋ, ಅವನನ್ನು ಭಗವಂತನೂ ನಿರತಿಶಯವಾಗಿ

**ಎನ್ನುಮ್ ಉತ್ತರಮ್ ಈಶ್ವರನೈ ಇಚ್ಛೈನ್ದಾರ್ಕ್ಕುಮ್ ನಿಚ್ಛೈಯಾದಾರ್ಕ್ಕುಮ್ ತುಲ್ಯಮ್. ಈಶ್ವರ ಸ್ವಾತಂತ್ರ್ಯ ಮೊರು ವ್ಯಾಜತ್ತೈಕ್ಕೊಂಡು ಅವನ್ ನಿನೈತ್ತ ಪೋದೇ ರಕ್ಷಿಕ್ಕೈಕ್ಕುಮ್ ವಿಲಕ್ಕವಲ್ಲಾರಿಲ್ಲಾಮೈಕ್ಕು ಮುರುಪ್ಪಾಮ್.**

**ಇಪ್ಪಡಿಯಾನಾಲ್ "ಇನ್ರೆನ್ನೈ" ಯೆನ್ಗಿರ ಪಾಟ್ಟುಕ್ಕುಮ್ ಇದುಕ್ಕು ಮೂಲಮಾನ ವಚನಙ್ಗಳುಕ್ಕುಮ್ ನಿರ್ವಾಹಮೆನ್ನೆನ್ನಿಲ್ ? ಅದು ಶೊಲ್ಲುಹಿರೋಮ್.**

**ಈಶ್ವರನುಕ್ಕು ಸಹಜಙ್ಗಳಾನ ಸ್ವಾತಂತ್ರ್ಯ ಕಾರುಣ್ಯಙ್ಗಳಿನುಡೈಯ ಪ್ರಾಧಾನ್ಯತ್ತಾಲೇ ಇವತ್ತುಕ್ಕು ವ್ಯಾಜಭೂತಙ್ಗಳಾನ ವಿಶೇಷ ಕಾರಣಙ್ಗಳೈ ಅನಾದರಿತ್ತು ಪಣ್ಡೆನ್ನೈ ಪರಾಙ್ಮುಖನಾಕ್ಕು ಹೈಕ್ಕುಮ್ ಇನ್ರೆನ್ನೈಯಭಿಮುಖನಾಕ್ಕು ಹೈಕ್ಕುಮ್, ಉನ್ ಸ್ವಾತಂತ್ರ್ಯಮುಮ್ ಕೃಪೈಯುಂ ಒೞಿಯ ವೇರೊರು ಪ್ರಧಾನ ಕಾರಣಂ ಕಣ್ಡಿಲೇನ್, ಎನಕ್ಕುಕ್ಕಾಟ್ಟಾದೇ ಸ್ವತಸ್ಸರ್ವಜ್ಞನಾನ ನೀ ಕಣ್ಡುಣ್ಡಾಹಿಲ್**

---

ಪ್ರೀತಿಸುತ್ತಾನೆಂದು ಹೇಳಿರುವುದರಿಂದ ನಿರ್ಹೇತುಕ ಕೃಪೆಯು ಮೋಕ್ಷಕ್ಕೆ ಕಾರಣವೆಂಬುದು ಶ್ರೀ ಭಾಷ್ಯಕಾರರಿಗೆ ಸಮ್ಮತವಲ್ಲ. ಉಪಾಸನೆಯು ಭಕ್ತಿ ರೂಪಾ ಪನ್ನವಾದದ್ದು ಎಂದು ನಿರೂಪಿಸಲು, ಈ ಶ್ರುತಿಯನ್ನು ಭಗವದ್ಭಾಷ್ಯಕಾರರು ಆಧಾರವಾಗಿಟ್ಟು ಕೊಂಡು ಹೇಳಿರುವುದು ಜೀವಕರ್ತೃಕವಾದ ಭಕ್ತಿರೂಪೋಪಾಸನವೆಂಬ ವ್ಯಾಜವನ್ನು ಅವಲಂಬಿಸಿಯೇ ಹೊರತು, ಅವಲಂಬಿಸದೆ ಇಲ್ಲ. ಆದ್ದರಿಂದ ಕೇವಲ ಭಗವತ್ಸ್ವಾತಂತ್ರ್ಯವೇ ಮೋಕ್ಷಕ್ಕೆ ಕಾರಣವೆಂಬುದು ಅಪಸಿದ್ಧಾಂತ **ಅನಾದಿಕರ್ಮ ಪ್ರವಾಹವೈಚಿತ್ರ್ಯತ್ತಾಲೇ** ಇತ್ಯಾದಿ-ಅನಾದಿ ಕರ್ಮ ಪ್ರವಾಹದ ವೈಚಿತ್ರ್ಯವೇ ಮೋಕ್ಷಕ್ಕೆ ಕಾರಣವೆಂದರೆ, ಇದು ಈಶ್ವರನನ್ನು ಅಂಗೀಕರಿಸಿದ ಆಸ್ತಿಕರಿಗೂ, ಅಂಗೀಕರಿಸದ ನಾಸ್ತಿಕರಿಗೂ ತುಲ್ಯ. ಆಗೆ ನಾವೂ ನಾಸ್ತಿಕ ಗೋಷ್ಠಿಗೆ ಸೇರುತ್ತೇವೆಂಬುದು ಭಾವ

ವ್ಯಾಜಸಾಪೇಕ್ಷನಾಗಿ ಈಶ್ವರನು ರಕ್ಷಿಸುತ್ತಾನೆಂದರೆ, ಅವನ ಸ್ವಾತಂತ್ರ್ಯಕ್ಕೆ ಭಂಗವು ಏರ್ಪಡುವುದಿಲ್ಲವೇ ? ಎಂದರೆ **ಈಶ್ವರ ಸ್ವಾತಂತ್ರ್ಯ ಮೊರು ವ್ಯಾಜತ್ತೈಕ್ಕೊಂಡು** ಇತ್ಯಾದಿ ಉತ್ತರಿಸುತ್ತಾರೆ. ಅದಾಗಿ ಈಶ್ವರ ಸ್ವಾತಂತ್ರ್ಯವು ಒಂದು ವ್ಯಾಜವನ್ನು ಅವಲಂಬಿಸಿ ಅವನು ಸಂಕಲ್ಪಿಸಿದ ಸಮಯದಲ್ಲಿ ರಕ್ಷಿಸುವುದಕ್ಕೂ **ವಿಲಕ್ಕವಲ್ಲಾರಿಲ್ಲಾಮೈಕ್ಕುಮ್** – ತಡೆಯುವವರಿಲ್ಲದೆ ಇರುವುದಕ್ಕೂ **ಉರುಪ್ಪಾಮ್**-ಕಾರಣ. ಆದ್ದರಿಂದ ಆ ಸ್ವಾತಂತ್ರ್ಯಕ್ಕೆ ನಿಷ್ಫಲತ್ವವು ಉಂಟಾಗದು.

## ಇನ್ರೆನ್ನೈಪ್ಪೊರುಳಾಕ್ಕಿ ಪಾಶುರ ನಿರ್ವಾಹ

ಹಾಗಾದರೆ, ಇನ್ರೆನ್ನೈಪ್ಪೊರುಳಾಕ್ಕಿ" ಎಂಬ ಆಳ್ವಾರರ ಪಾಶುರಕ್ಕೆ ಈಶ್ವರನು ಸ್ವಸ್ವಾತಂತ್ರ್ಯವನ್ನು ಕೊಡಲಿಲ್ಲವಾದ್ದರಿಂದ, ಆ ಪಾಶುರದ ಅಭಿಪ್ರಾಯವೇನು ಎಂದರೆ **ಇಪ್ಪಡಿಯಾನಾಲ್**-ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಹೀಗೆ ಹೇಳಿದರೆ, 'ಇನ್ರೆನ್ನೈ' ಎಂಬ ಪಾಶುರಕ್ಕೂ ಇದಕ್ಕೆ ಮೂಲವಾದ ವಚನಗಳಿಗೂ ನಿರ್ವಾಹವೇನೆಂದರೆ, **ಅದುಶೊಲ್ಲುಹಿರೋಮ್**-ಅದನ್ನು ಹೇಳುತ್ತೇವೆ. **ಈಶ್ವರನುಕ್ಕು**ಇತ್ಯಾದಿ–ಈಶ್ವರನಿಗೆ ಸಹಜಗಳಾದ ಸ್ವಾತಂತ್ರ್ಯ ಕಾರುಣ್ಯಗಳ ಪ್ರಾಧಾನ್ಯದಿಂದ, ರಕ್ಷಣೆಗೆ ವ್ಯಾಜಭೂತಗಳಾದ ವಿಶೇಷ ಕಾರಣಗಳನ್ನು ಅನಾದರಿಸಿ, ಅಂದರೆ, ಆಳ್ವಾರರು ಈ ಪದಿಕದ ಆರಂಭದಲ್ಲಿ "ತಿರುಮಾಲಿರುಂಜೋಲೈಮಲೈ ಎನ್ರೇನ್" ಎಂದು ಹೇಳಿದ ವಿಶೇಷ ಕಾರಣವನ್ನು ಅನಾದರಿಸಿ, **ಪಂಡು**-ಪೂರ್ವ ಕಾಲಗಳಲ್ಲಿ, ಇಲ್ಲಿಯವರೆಗೆ ನನ್ನನ್ನು ಭಗವತ್ ಪರಾಙ್ಮುಖನಾಗಿ ಶಬ್ದಾದಿ ವಿಷಯಗಳಲ್ಲಿಯೇ ಪ್ರಾವಣ್ಯವುಳ್ಳವನಾಗಿ ಮಾಡಿಯೂ, **ಇನ್ರೆನ್ನೈ**–ಈಗ ಆ ವ್ಯಾಜವನ್ನು ಆದರಿಸಿ ನನ್ನನ್ನು, ಅಭಿಮುಖನಾಗಿ ಮಾಡುವುದಕ್ಕೂ ನಿನ್ನ ಸ್ವಾತಂತ್ರ್ಯವನ್ನೂ ಕೃಪೆಯನ್ನೂ ವಿನಹ ಬೇರೆಯಾವ ಪ್ರಧಾನ ಕಾರಣವನ್ನೂ ಕಾಣಲಿಲ್ಲ. **ಎನಕ್ಕುಕ್ಕಾಟ್ಟಾದೇ** ಇತ್ಯಾದಿ–ನನಗೆ ತೋರಿಸದೇ ಸ್ವತ

**ಅರುಳಿಚ್ಚೆಯ್ಯ ವೇಣುಮೆನ್ನ; ಇಶ್ವರನ್ ನಿರುತ್ತರನಾಯಿರುಕ್ಕಿರ ನಿರುಪ್ಪಾಲೇ ಸ್ವಾತಂತ್ರ್ಯ ಕೃಪೈಹಳಿನುಡೈಯ ಪ್ರಾಧಾನ್ಯತ್ತೈ ನಾಟ್ಟುಕ್ಕು ವೆಳಿಯಿಡುಹಿರಾರ್.**

**ಇತ್ತಾಲಿಚ್ಚೇತನನ್ನೈ ಲೀಲೋಪಕರಣ ಮಾಕ್ಕುಹೈಕ್ಕು ಪ್ರಧಾನ ಕಾರಣಮ್ ಈಶ್ವರ ಸ್ವಾತಂತ್ರ್ಯಮ್; ಇದುಕ್ಕು ಸಹಕಾರಿ ಕಾರಣಮ್ ಪ್ರವಾಹಾನಾದಿಯಾನ ಸ್ವತಂತ್ರಾಜ್ಞಾತಿಲಂಘನಮ್. ಇವನ್ನೈಭೋಗೋಪಕರಣಮಾಕ್ಕುಹೈಕ್ಕು ಪ್ರಧಾನಕಾರಣಮ್, ಈಶ್ವರನುಡೈಯ ಸ್ವಾಭಾವಿಕ ಕಾರುಣ್ಯಮ್; ಇದುಕ್ಕು ಪ್ರತಿಬಂಧಕಮಾನ ಈಶ್ವರ ನಿಗ್ರಹತ್ತೈ ಶಮಿಪ್ಪಿತ್ತುಕೊಂಡು ಸಹಕಾರಿ ಕಾರಣಮೆನ್ರು ಪೇರ್‌ಪೆತ್ತದು. ಇವನುಡೈಯ ಸುಕೃತ ವಿಶೇಷ ದ್ವಾರಕ ಕೃಪೈಯಡಿಯಾಹ ವನ್ದ ವಶೀಕರಣ ವಿಶೇಷಙ್ಗಳ್; ಎನ್ರು ಈಶ್ವರನುಡೈಯ ಸ್ವಭಾವತ್ತೈಯುಮ್, ವೈಷಮ್ಯ ನೈರ್ಘೃಣ್ಯಙ್ಗಳಿಲ್ಲಾಮೈಯೈಯುಮ್, ಪ್ರಮಾಣ ಪ್ರತಿನಿಯತಮಾನ ಪಡಿಯಿಲೇ ಅನುಸಂಧಿತ್ತು ಸ್ವತಂತ್ರನುಡೈಯ ಕೃಪೈಯಿಲೇ ಯೂನ್ರಿಪ್ಪೋರ ವಡುಕ್ಕು ಮೆನ್ರುಕರುತ್ತು.**

ಸ್ವಾತಂತ್ರ್ಯ ಕಾರುಣ್ಯಯೋರುಭಯೋರಾವಶ್ಯಕತಾಂದರ್ಶಯಿತಿ

**ನಿಷ್ಕೃಪನುಡೈಯ ಸ್ವಾತಂತ್ರ್ಯಮ್ ಬಾಧಕಮ್, ಅಸ್ವತಂತ್ರನುಡೈಯ ಕಾರುಣ್ಯಮ್ ಪಿರರ್ಕ್ಕುಮ್ ಅನುಪಕಾರಕಮಾಯ್. ತನಕ್ಕುಮ್ ಕ್ಲೇಶಾವಹಮಾಯಿರುಕ್ಕುಮ್.**

---

ಸ್ವರ್ವಜ್ಞನಾದ ನೀನು ತಿಳಿದಿರುವುದು ಯಾವುದಾದರೂ ಇದ್ದರೆ, ಕೃಪೆಮಾಡಿ ಅನುಗ್ರಹಿಸಬೇಕೆಂದು ಹೇಳಲು ಪ್ರಧಾನ ಕಾರಣವು ಬೇರೆ ಯಾವುದೂ ಇಲ್ಲವಾದ್ದರಿಂದ ಈಶ್ವರನು ನಿರುತ್ತರನಾಗಿರಲು ಆದರಿಂದ ಅವನ ಸ್ವಾತಂತ್ರ್ಯ ಕೃಪೆಗಳ ಪ್ರಾಧಾನ್ಯವನ್ನು ಲೋಕಕ್ಕೆ **ವೆಳಿಯಿಡುಹಿರಾರ್**–ಪ್ರಕಾಶಪಡಿಸುತ್ತಾರೆ. ಹೀಗೆ ಕೇವಲ ಸ್ವಾತಂತ್ರ್ಯವೂ ಕೇವಲ ಕರುಣೆಯೂ ಪ್ರಧಾನ ಕಾರಣಗಳಾದರೆ ನೈರ್ಘೃಣ್ಯವೂ, ಸರ್ವ ಮುಕ್ತಿ ಪ್ರಸಂಗವೂ ಉಂಟಾಗುವುದಿಲ್ಲವೇ ಎಂದರೆ, ಇಲ್ಲವೆಂದು **ಇತ್ತಾಲ್ ಇಚ್ಚೇತನನ್ನೈ** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ, **ಇತ್ತಾಲ್** ಇತ್ಯಾದಿ–ಈ ಚೇತನನನ್ನು ಲೀಲೋಪಕರಣವನ್ನಾಗಿ ಮಾಡಲು ಪ್ರಧಾನ ಕಾರಣವು ಈಶ್ವರ ಸ್ವಾತಂತ್ರ್ಯ; ಇದಕ್ಕೆ ಸಹಕಾರಿ ಕಾರಣವು ಪ್ರವಾಹಾನಾದಿಯಾದ ಸ್ವತಂತ್ರಾಜ್ಞಾತಿಲಂಘನ. **ಇವನ್ನೈ ಭೋಗೋಪಕರಣ ಮಾಕ್ಕುಹೈಕ್ಕು**–ಇವನನ್ನು ಭೋಗಕ್ಕೆ ಉಪಕರಣವನ್ನಾಗಿ ಮಾಡಲು–ಅಂದರೆ ಮೋಕ್ಷವನ್ನು ಕೊಡಲು, ಈಶ್ವರನ ಸ್ವಾಭಾವಿಕವಾದ ಕಾರುಣ್ಯವು ಪ್ರಧಾನ ಕಾರಣ. ಇದಕ್ಕೆ ಪ್ರತಿಬಂಧಕವಾದ ಈಶ್ವರನ ನಿಗ್ರಹವನ್ನು ಹೋಗಲಾಡಿಸಿಕೊಂಡು ಸಹಕಾರಿ ಕಾರಣವೆಂದು ಹೆಸರನ್ನು ಪಡೆದಿರುವುದು, ಈ ಚೇತನನ **ಸುಕೃತ ವಿಶೇಷದ್ವಾರಕ ಕೃಪೆಯಡಿಯಾಹ** ಯದೃಚ್ಛಾ ಸುಕೃತಗಳು ಪರಂಪರೆಯಾಗಿ ಸುಕೃತ ವಿಶೇಷಗಳನ್ನು ಅನುಷ್ಠಿಸುವಂತೆ ಮಾಡಿ' ಪರಿಪಾಕವನ್ನು ಉಂಟು ಮಾಡಿ, ತನ್ಮೂಲಕವಾದ ಭಗವತ್ಕೃಪೆಯಿಂದ **ವಂದ ವಶೀಕರಣ ವಿಶೇಷಂಗಳೆನ್ರು**–ಉಂಟಾದ, ಭಕ್ತಿ ಪ್ರಪತ್ತಿರೂಪ ಭಗವದ್ವಶೀಕರಣೋಪಾಯಗಳೆಂದು, ತಿಳಿಯಬೇಕು. **ಈಶ್ವರನುಡೈಯ ಸ್ವಭಾವತ್ತೈಯುಮ್** ಇತ್ಯಾದಿ ಇದರಿಂದ ಈಶ್ವರನ ಸ್ವಾತಂತ್ರ್ಯ ಕಾರುಣ್ಯ ರೂಪ ಸ್ವಭಾವ ವಿಶೇಷವನ್ನೂ ಬಂಧ ಮೋಕ್ಷಾದಿ ವ್ಯವಸ್ಥೆಯನ್ನೂ – [ಆಜ್ಞಾತಿ ಲಂಘನ ಮಾಡಿದರೆ ಸಂಸಾರ ಬಂಧ. ಭಕ್ತಿ ಪ್ರಪತಿಗಳಲ್ಲೊಂದನ್ನು ಅನುಷ್ಠಿಸಿದರೆ ಮೋಕ್ಷ ಪ್ರಾಪ್ತಿ ಎಂಬ ವ್ಯವಸ್ಥೆ –] **ಪ್ರಮಾಣ ಪ್ರತಿನಿಯತ ಮಾನಪಡಿಯಿಲೇ** – ಶಾಸ್ತ್ರಗಳು ಯಾವ ರೀತಿಯಲ್ಲಿ ತಿಳಿಸಿರುತ್ತವೆಯೋ, ಆ ರೀತಿಯಲ್ಲಿ ತಿಳಿದುಕೊಂಡು ಸ್ವತಂತ್ರನಾದ ಭಗವಂತನ ಕೃಪೆಯನ್ನೇ **ಊನ್ರಿಪ್ಪೋರವಡುಕ್ಕುಮ್** – ಆಶ್ರಯಿಸಿಕೊಂಡಿರುವುದು ಪ್ರಾಪ್ತವು.

**ನಿಷ್ಕೃಪನುಡೈಯ** – ಇತ್ಯಾದಿ – ಕರುಣೆಯಿಲ್ಲದವನ ಸ್ವಾತಂತ್ರ್ಯವು ಬಾಧಕ. **ಅಸ್ವತಂತ್ರನುಡೈಯ** ವಿತ್ಯಾದಿ – ಸ್ವಾತಂತ್ರ್ಯವಿಲ್ಲದವನ ಕಾರುಣ್ಯವು ಇತರರಿಗೆ ಉಪಕಾರ ಮಾಡಲಾರದು. ಇತರರ ಕಷ್ಟದಲ್ಲಿ ಯಾವ

**ಸ್ವತಂತ್ರನುಡೈಯ ಕಾರುಣ್ಯಮ್ ನಿನೈತ್ತದು ಮುಡಿಕ್ಕೈಯಾಲೇ ತನಕ್ಕುಮ್ ಅತಿರಸಮಾಯ್, ಆಶ್ರಯಿಪ್ಪಾರ್ಕಲ್ಲಾಮ್ ಅನ್ರೇ ಅನಿಷ್ಟ ನಿವೃತ್ತಿಕ್ಕುಮ್ ಇಷ್ಟಪ್ರಾಪ್ತಿಕ್ಕು ಮುಡಲಾಯಿರುಕ್ಕುಮ್**

**ಇಪ್ಪಡಿಯಾಹೈಯಾಲೇ ಅವತಾರ ದಶೈಯಿಲುಮ್ 1) "ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ" ಎನ್ರಿಪ್ಪಡೈಯಿರೊಲ್ಲುಮ್ಪಡಿಯೆಲ್ಲಾಮ್ ಅನುಗ್ರಹ ವಿಷಯಮಾಯಿರುಪ್ಪಾರ್ ಶಿಲರೈ ರಂಜಿಪ್ಪಿಕ್ಕೈಕ್ಕುಮ್. ಆಸುರ ಪ್ರಕೃತಿಹಳೈಮೋಹಿಪ್ಪಿಕ್ಕೈಕ್ಕು ಮಾಹವತ್ತನೈ.**

---

ಸಹಾಯವನ್ನೂ ಮಾಡಲಾಗಲಿಲ್ಲವಲ್ಲವೆಂದು ತನಗೂ ಕ್ಲೇಶಕರವು. ಆದ್ದರಿಂದ **ಸ್ವತಂತ್ರನುಡೈಯ** ಇತ್ಯಾದಿ – ಸ್ವತಂತ್ರನ ಕಾರುಣ್ಯವು ಸಂಕಲ್ಪಿಸಿದ್ದನ್ನು ಮುಗಿಸುವುದರಿಂದ ತನಗೂ **ಅತಿರಸಮಾಯ್** – ರಸಾವಹವಾಗಿ–ಸಂತೋಷವನ್ನುಂಟು ಮಾಡುವುದಾಗಿ, ಆಶ್ರಯಿಸುವವರಿಗೆಲ್ಲಾ ಅನ್ರೇ ಇತ್ಯಾದಿ ಆಗಲೇ ಅನಿಷ್ಟ ನಿವೃತ್ತಿಗೂ ಇಷ್ಟ ಪ್ರಾಪ್ತಿಗೂ **ಉಡಲಾಯಿರುಕ್ಕುಮ್** – ಕಾರಣವಾಗಿರುತ್ತದೆ. ಇದರಿಂದಾಗಿ ಸ್ವಾಭಾವಿಕ ಪರಮ ಕಾರುಣ್ಯದಿಂದ ಕೂಡಿದ ಭಗವಂತನು ಸಿದ್ಧೋಪಾಯನಾಗಿ ಮೋಕ್ಷವನ್ನು ಕೊಡಲು ಸಾಧಕ ತಮವಾದ ಕಾರಣ, ಭೂತನು. ಭಕ್ತಿ ಪ್ರಪತ್ತಿಗಳು ಅವನ ಕಾಲುಷ್ಯವನ್ನು ಹೋಗಲಾಡಿಸಿಕೊಂಡು ಮೋಕ್ಷಕ್ಕೆ ಕಾರಣ ಭೂತಗಳು. ಆದರಿಂದ ಅವೆರಡೂ ಸಿದ್ಧೋಪಾಯನಾದ ಭಗವಂತನಿಗೆ ಆಶ್ರಿತ ಸಂರಕ್ಷಣದಲ್ಲಿ ಸಹಕಾರಿ ಕಾರಣಗಳು. ಅವನ ಹಾಗೆ ಪ್ರಧಾನೋಪಾಯಗಳಲ್ಲವೆಂಬುದು ತಿಳಿಸಲ್ಪಟ್ಟಿತು.

### ಅವತಾರಗಳಲ್ಲಿ ಭಗವಂತನು ದುಃಖಿಸುವುದು ಕೇವಲ ಅಭಿನಯ (ನಾಟಕ)

ಸ್ವತಂತ್ರನ ಕಾರುಣ್ಯವು ತನಗೆ ರಸಾವಹವಾಗಿದೆಯೆಂದು ಹೇಳುವುದಾದರೆ, "ವ್ಯಸನೇಷು ಮನುಷ್ಯಾಣಾಂ ಭೃಶಂಭವತಿ ದುಃಖಿತಃ" ಎಂದು ಜನರು ಕಷ್ಟಪಡುವುದನ್ನು ನೋಡಿ ಭಗವಂತನು ಬಹಳ ದುಃಖಿತನಾಗುತ್ತಾನೆಂದು ಹೇಳಿರುವುದಕ್ಕೆ ಏನು ಸಮಾಧಾನವೆಂಬುದನ್ನು ಇಪ್ಪಡಿಯಾಹೈಯಾಲೇ–ಎಂದಾರಂಭಿಸಿ ತಿಳಿಸುತ್ತಾರೆ. **ಇಪ್ಪಡಿಯಾಹೈಯಾಲೇ** ಇತ್ಯಾದಿ–ಹೀಗೆ ಸ್ವತಂತ್ರನ ಕೃಪೆಯು ಅವನಿಗೆ ರಸಾವಹ (ಸಂತೋಷ) ವಾಗಿರುವುದರಿಂದ ಅವತಾರ ದಶೆಯಲ್ಲಿಯೂ, 1) **ವ್ಯಸನೇಷು ಮನುಷ್ಯಾಣಾಂ** ಇತ್ಯಾದಿ ರೀತಿಗಳಲ್ಲಿ ಹೇಳಿರುವಂತೆ, ಅನುಗ್ರಹಕ್ಕೆ ಪಾತ್ರರಾದ ಕೆಲವರನ್ನು **ರಂಜಿಪ್ಪಿಕ್ಕೈಕ್ಕುಂ** ಸಂತೋಷಪಡಿಸುವುದಕ್ಕೂ, ಆಸುರ ಸ್ವಭಾವದವರನ್ನು ಮೋಹಿಸುವುದಕ್ಕಾಗಿಯೂ ಮಾಡುವ ಅಭಿನಯ. ಆಶ್ರಿತರ ಕಷ್ಟವನ್ನು ನೋಡಿ ದುಃಖಪಟ್ಟರೆ, ಕಷ್ಟಪಡುವವರಿಗೆ ಇವನಲ್ಲಿ ಪ್ರೀತಿಯು ಹೆಚ್ಚುತ್ತದೆಯಲ್ಲವೇ. ಆಸುರ ಸ್ವಭಾವ ವುಳ್ಳವರು, "ಇವನೂ ನಮ್ಮ ಹಾಗೆ ಅಳುತ್ತಾನೆ. ಇವನು ಭಗವಂತನಲ್ಲ. ನಮ್ಮ ಹಾಗೆ ಸಾಧಾರಣ ಮನುಷ್ಯ" ನೆಂದು ಮೋಹಗೊಳ್ಳಲೂ ಇದೇ ನಾಟಕವನ್ನು ಭಗವಂತನು ಆಡುತ್ತಾನೆಂಬುದು ತತ್ವ. ಇದರ ಅರ್ಥವನ್ನು

---

1) "ವ್ಯಸನೇಷು ಮನುಷ್ಯಾಣಾಂ ಭೃಶಂಭವತಿ ದುಃಖಿತಃ ।
ಉತ್ಸವೇಷು ಚ ಸರ್ವೇಷು ಪಿತೇವ ಪರಿತುಷ್ಯತಿ ॥" ರಾಮಾಯಣ (2–2–40)

ಶ್ರೀರಾಮಚಂದ್ರನು ಜನರು ಕಷ್ಟಪಡುವುದನ್ನು ನೋಡಿ ತಡೆಯಲಾರದೆ ತಾನೂ ಬಹಳ ದುಃಖಪಡುತ್ತಾನೆ. ಪರಮ ಕರುಣಾ ಮೂರ್ತಿ ಅಲ್ಲವೇ. ಅವರುಗಳ ಮನೆಗಳಲ್ಲಿ ನಡೆಸುವ ಮದುವೆ, ಮುಂಜಿ ಮೊದಲಾದ ಸಂತೋಷ ಸಮಾರಂಭಗಳಲ್ಲಿ ತಾನೂ ಅಪ್ಪಯ್ಯ. ತಂದೆಯು ಹಾಗೆ ಸಂತೋಷ ಪಡುತ್ತಾನೆ. ಹಾಗೆ ಸಮಾಜದಲ್ಲಿ ಅತ್ಯಂತ ಪ್ರೀತಿಯಿಂದ ಬಾಂಧವ್ಯವನ್ನು ವ್ಯಕ್ತಪಡಿಸುತ್ತಾನೆಂದರ್ಥ.

ಇವ್ವರ್ಥತ್ತೈ 1) "ಕಾಲಸ್ಯ ಹಿ ಚ ಮೃತ್ಯೋಶ್ಚ ಜಙ್ಗಮ ಸ್ಥಾವರಸ್ಯಚ ।
ಈಶತೇ ಭಗವಾನೇಕಸ್ಸತ್ಯ ಮೇತದ್ಬ್ರವೀಮಿತೇ ।
ಈಶನ್ನಪಿ ಮಹಾಯೋಗೀ ಸರ್ವಸ್ಯ ಜಗತಃಪ್ರಭುಃ ।
ಕರ್ಮಾಣ್ಯಾರಭತೇ ಕರ್ತುಂ ಕೀನಾಶ ಇವ ದುರ್ಬಲಃ ।
ತೇನ ವಂಚಯತೇ ಲೋಕಾನ್ಮಾಯಾ ಯೋಗೇನ ಕೇಶವಃ ।
ಯೇ ತಮೇವ ಪ್ರಪದ್ಯಂತೇ ನತೇ ಮುಹ್ಯನ್ತಿ ಮಾನವಾಃ"

2) "ಕೃತ್ವಾ ಭಾರಾವತರಣಂ ಪೃಥಿವ್ಯಾಃ ಪೃಥುಲೋಚನಃ ।
ಮೋಹಯಿತ್ವಾ ಜಗತ್ಸರ್ವಂ ಗತಸ್ಸ್ವಂಸ್ಥಾನಮುತ್ತಮಂ ।"

3) "ಮನುಷ್ಯದೇಹಿನಾಂ ಚೇಷ್ಟಾ ಮಿತ್ಯೇವ ಮನುವರ್ತತೇ ।
ಲೀಲಾ ಜಗತ್ಪತೇ ಸ್ತಸ್ಯಛಂದತಃ ಸಂಪ್ರವರ್ತತೇ ॥"

ಇತ್ಯಾದಿಹಳಿಲ್ ಮಹರ್ಷಿಹಳ್ ಅರುದಿ ಇಟ್ಟಾರ್‌ಹಳ್. ಆಹೈಯಾಲ್ ಅವತಾರ ವೃತ್ತಾಂತಙ್ಗಳಿಲುಮ್ ದುಃಖಾಭಿನಯ ಮಾತ್ರಮೇಯುಳ್ಳದು ಅದು ತಾನುಮ್ ಕೃಪಾಮೂಲಮ್. ಇದು ಸ್ವತಂತ್ರನಾನ ತನಕ್ಕು ಲೀಲೈಯುಮಾಯಿರುಕ್ಕುಮ್. ಕೂನರ್ ಕುರಳರೈಕ್ಕೊಂಡಾಡಿ ರಕ್ಷಿಕ್ಕೈ ನಿರಪೇಕ್ಷರಾನ

---

1) ಕಾಲಸ್ಯ ಹಿಚಮೃತ್ಯೋಶ್ಚ ಇತ್ಯಾದಿಯಾಗಿಯೂ, 2) ಕೃತ್ವಾಭಾರಾವತರಣಂ ಇತ್ಯಾದಿಯಾಗಿಯೂ, 3) ಮನುಷ್ಯದೇಹಿನಾಂ ಇತ್ಯಾದಿಯಾಗಿಯೂ ಮಹರ್ಷಿಗಳು ಅರುದಿಯಿಟ್ಟಾರ್‌ಹಳ್ – ನಿಶ್ಚಯಿಸಿದ್ದಾರೆ. ಆದಾಗಿ ಭಗವಂತನು ಕಾಲ, ಮೃತ್ಯು ಸ್ಥಾವರಜಂಗಮಾತ್ಮಕವಾದ ಪ್ರಪಂಚ ಇವೆಲ್ಲವನ್ನೂ ಏಕಃ – ತಾನೊಬ್ಬನೇ ಸ್ವತಂತ್ರನಾಗಿ ಈಶತೇ – ಆಳುತ್ತಾನೆ. ನಿಯಮಿಸುತ್ತಾನೆಂದರ್ಥ. ಇದು ಸತ್ಯ. ಸುಳ್ಳಲ್ಲ. ಈಶನ್ನಪಿ ಮಹಾಯೋಗೀ – ಹೀಗೆ ಸರ್ವವನ್ನು ನಿಯಮಿಸಿ ಆಳುತ್ತಿದ್ದರೂ, ಕೀನಾಶ ಇವ – ವ್ಯವಸಾಯಗಾರನಂತೆ ದುರ್ಬಲನೆಂದು ನಟಿಸಿ, ಕರ್ಮಗಳನ್ನು ಮಾಡಲು ಉಪಕ್ರಮಿಸಿ ಮಾಯಾಯೋಗೇನ-ಅಶಕ್ತನೆಂದು ತೋರಿಸಿಕೊಂಡು ತೇನವಂಚಯತೇ ಲೋಕೇನ್ – ಜನರನ್ನು ವಂಚಿಸುತ್ತಾನೆ. ಯೇತಮೇವ ಇತ್ಯಾದಿ–ಯಾರು ಭಗವಂತನನ್ನೇ ಆಶ್ರಯಿಸಿತ್ತಾರೆಯೋ ಅವರುಗಳು ಮೋಹವನ್ನು ಹೊಂದುವುದಿಲ್ಲ. ವಂಚಿಸಲ್ಪಡುವುದಿಲ್ಲ. 2) ಕೃತ್ವಾಭಾರಾವ ತರಣಂ ಇತ್ಯಾದಿ–ದೀರ್ಘಾಕ್ಷನಾದ ಆ ಕೃಷ್ಣ ಪರಮಾತ್ಮನು ದುಷ್ಟರನ್ನು ನಾಶಮಾಡಿ ಭೂಮಿಯ ಭಾರವನ್ನು ಕಡಿಮೆ ಮಾಡಿ ಲೋಕದಲ್ಲಿರುವ ಜನರನ್ನೆಲ್ಲಾ ಮೋಹಗೊಳಿಸಿ ಸ್ವಸ್ಥಾನವನ್ನು ಪಡೆದನು. 3) ಮನುಷ್ಯ ದೇಹಿನಾಂ ಇತ್ಯಾದಿ ಮನುಷ್ಯ ಶರೀರವನ್ನು ಪಡೆದವರ ಚೇಷ್ಟಾಂ ನಡತೆಯನ್ನು ಇತ್ಯೇವಂ–ಈ ರೀತಿಯಲ್ಲಿ ಅನು ವರ್ತಿಸುತ್ತಾನೆ. ಲೀಲಾಜಗತ್ಪತೇಃ–ನಾಟಕ ರೂಪವಾದ ಈ ಲೀಲೆಯು, ಜಗತ್ಪತಿಯಾದ ಭಗವಂತನ, ಸ್ವೇಚ್ಛೆ ಯಿಂದ ಪ್ರವರ್ತಿಸಲ್ಪಡುತ್ತದೆ. ಆಹೈಯಾಲ್ ಇತ್ಯಾದಿ–ಅವತಾರ ವೃತ್ತಾಂತಗಳಲ್ಲಿಯೂ ದುಃಖಾಭಿನಯ ಮಾತ್ರವೇ ಇರುತ್ತದೆ. ವಸ್ತು ವೃತ್ತಿಯಲ್ಲಿ ದುಃಖವಲ್ಲ. ಅದುತಾನುಮ್–ಅದೂ ಸಹ ಕೃಪಾಮೂಲ. ಇದು– ಇದೂ ಸಹ, ಸ್ವತಂತ್ರನಾದ ಭಗವಂತನಿಗೆ ಲೀಲೆಯೂ ಆಗಿರುತ್ತದೆ. ಕೂನರ್ ಕುರಳರೈ ಇತ್ಯಾದಿ–ಗೂನು ಬೆನ್ನುಳ್ಳವರನ್ನೂ ಕುಳ್ಳರನ್ನೂ ಸ್ತೋತ್ರ ಮಾಡಿ ರಕ್ಷಿಸುವುದು ನಿರಪೇಕ್ಷರಾದ ರಾಜರುಗಳಿಗೆ ಲೀಲೆ–ವಿನೋದ ವಾಗಿಯೂ, ಕೃಪೆಯ ಕಾರ್ಯವಾಗಿಯೂ ಇರುವುದನ್ನು ಲೋಕದಲ್ಲಿ ನೋಡುತ್ತೇವೆಯಲ್ಲವೇ. ಹಾಗೆಯೇ ಬದ್ಧ ಚೇತನರ ರಕ್ಷಣವೂ ಲೀಲೆಯೂ ಕೃಪಾಕಾರ್ಯವೂ ಆಗಿದೆ. ಸೃಷ್ಟಿ ಸ್ಥಿತಿ ನಿಯಮನಾದಿಗಳು ಚೇತನರಿಗೆ ಹಿತ ವಾದ್ದರಿಂದ ಕೃಪಾಕಾರ್ಯ. ತನಗೆ ಲೀಲೆ. ಈ ಸಂದರ್ಭದಲ್ಲಿ,

"ಕ್ರೀಡಾಶಾಲಿಕಯಾ ಸ್ವಸ್ಮಿನ್ ಕೃಪಾರೂಷಿತಯಾ ಸ್ವಯಮ್ ।
ಏಕೋ ವಿಶ್ವಮಿದಂ ಚಿತ್ರಂ ವಿಭುಃ ಶ್ರೀಮಾನ ಜೀಜನತ್ ॥,

**ರಾಜಾಕ್ಕಳುಕ್ಕು ಲೀಲೈಯುಮಾಯ್ ಕೃಪಾಕಾರ್ಯಮುಮಾಯ್ ಕ್ಕಾಣಾನಿನ್ರೋಮಿರೇ. ಇಪ್ಪಡಿ ಯಾಹೈಯಾಲೇಯಿರೇ 1) "ಉಪಾದತ್ತೇ ಸತ್ತಾಸ್ಥಿತಿ ನಿಯಮನಾದ್ಯೈಶ್ಚಿದಚಿತೌ ಸ್ವಮುದ್ದಿಶ್ಯ ಶ್ರೀಮಾನ್" ಎನ್ರದು.**

**ಇಪ್ಪಡಿ ಪರಹಿತ ವ್ಯಾಪಾರಾಶ್ರಯ ಮಾಹೈಯಾಲೇ ಆಶ್ರಿತರ್ಕ್ಕು ರಕ್ಷಕನುಮಾಯ್, ಉಪಾಯಾಂತರ ಸ್ಥಾನ ನಿವೇಶತ್ತಾಲೇ ಉಪಾಯಮುಮಾಯಿರುಕ್ಕುಮ್. ರಕ್ಷಣವ್ಯಾಪಾರ ಫಲಾಶ್ರಯ ಮಾಹೈಯಾಲೇ ಶೇಷಿಯುಮಾಯ್, ಅದಡಿಯಾಹ ಪ್ರಾಪ್ಯನುಮಾಯಿರುಕ್ಕುಮ್. ಇಪ್ಪಡಿ ಇರುಕ್ಕೈ, ಇವನುಕ್ಕು ಸ್ವರೂಪಪ್ರಯುಕ್ತ ಮೆನ್ರು ಧರ್ಮಿಗ್ರಾಹಿಕ ಪ್ರಮಾಣ ಸಿದ್ಧಮ್.**

---

ವಿನೋದಾರ್ಥವಾಗಿ ಕೃಪೆಯೆಂಬ ಶಾಯಿಯಲ್ಲಿ ಅದ್ದಿದ, ಲೀಲೆ-ಬ್ರಶ್-ಕೂರ್ಚದಿಂದ ವಿಭುವಾದ ಲಕ್ಷ್ಮೀಪತಿಯು ಒಬ್ಬನೇ ತಾನಾಗಿಯೇ ತನ್ನಲ್ಲಿಯೇ ಈ ಪ್ರಪಂಚವೆಂಬ ಚಿತ್ರವನ್ನು ಉಂಟುಮಾಡಿದನು (ಬರೆದನು)-ಎಂಬ ಯಾದ ವ್ಯಾಭ್ಯುದಯ ಶ್ಲೋಕವು ಅನುಸಂಧೇಯ. ಜನ್ಮಾದಿ ಸೂತ್ರ ಭಾಷ್ಯದಲ್ಲಿಯೂ ಸರ್ವಜ್ಞಾತ್, ಪರಮ ಕಾರುಣಿಕಾತ್ ಎಂಬ ವಿಶೇಷಣಗಳು ಬ್ರಹ್ಮ ಶಬ್ದಕ್ಕೆ ಹೇಳಲ್ಪಟ್ಟಿರುವುದೂ ಇಲ್ಲಿ ಅನುಸಂಧೇಯ.

### ಈ ವಿಷಯದಲ್ಲಿ ಸಾಂಪ್ರದಾಯಿಕರ ವಚನ

ಜಗದ್ರಕ್ಷಣಾದಿಗಳು ಲೀಲೆಯಾದರೂ ಕೃಪಾಕಾರ್ಯಗಳೇ ಎಂಬ ವಿಷಯದಲ್ಲಿಯೂ, ಸ್ವಾತಂತ್ರ್ಯ ಕಾರುಣ್ಯ ವ್ಯಾಜಸಾಪೇಕ್ಷ ರಕ್ಷಕತ್ವಾದಿಗಳಲ್ಲಿಯೂ ಅಭಿಯುಕ್ತರ ಶ್ರೀ ಸೂಕ್ತಿಯನ್ನು **ಇಪ್ಪಡಿಯಾಹೈಯಾಲೇಯಿರೇ**-ಇತ್ಯಾದಿ ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ, 1) **ಉಪಾದತ್ತೇ**-ತನ್ನ ಸ್ವಾತಂತ್ರ್ಯ, ಸಹಜಕಾರುಣ್ಯಗಳಿಂದ ಕೂಡಿದವನಾಗಿ, ಇತ್ಯಾದಿ. ಲಕ್ಷ್ಮೀಪತಿಯು ಸತ್ತೆ, ಸ್ಥಿತಿ, ನಿಯಮನಗಳಿಗೋಸ್ಕರ ಚೇತನಾ ಚೇತನಗಳನ್ನು ಸ್ವೀಕರಿಸುತ್ತಾನೆ **ಶ್ರೀಮಾನ್**-ವಿಶಿಷ್ಟ ತತ್ತ್ವವು ಜಗತ್ಕಾರಣವೆಂಬುದು ಸಂಪ್ರದಾಯ. ಉಪಾಯೋಪೇಯತ್ವೇ-ಉಪಾಯತ್ವವೂ, ಪ್ರಾಪ್ಯತ್ವವೂ ಭಗವಂತನ ಸ್ವಭಾವಗಳು ಗುಣಗಳಲ್ಲ. ಆದ್ದರಿಂದ ನಿನ್ನನ್ನು ನಿರ್ವ್ಯಾಜ ರಕ್ಷಕ ನನ್ನಾಗಿ ಆಶ್ರಯಿಸಿದ್ದೇನೆಂದು ತಾತ್ಪರ್ಯ. **ಇಪ್ಪಡಿಪರಹಿತ ವ್ಯಾಪಾರಾಶ್ರಯ ಮಾಹೈಯಾಲೇ** ಇತ್ಯಾದಿ-ಹೀಗೆ ಇತರರಿಗೆ ಹಿತವನ್ನುಂಟು ಮಾಡುವ ವ್ಯಾಪಾರಕ್ಕೆ ಆಶ್ರಯನಾದ್ದರಿಂದ, ಆಶ್ರಿತರಿಗೆ ರಕ್ಷಕನಾಗಿಯೂ, **ಉಪಾಯಾಂತರ ಸ್ಥಾನ ನಿವೇಶತ್ತಾಲೇ**-ಭರಸ್ವೀಕಾರ ಪ್ರಾರ್ಥನೆಯಿಂದ, **ಉಪಾಯಮುಮಾಯ್** ಇತ್ಯಾದಿ ಉಪಾಯಭೂತನಾಗಿಯೂ, ಇರುತ್ತಾನೆ. **ರಕ್ಷಣ ವ್ಯಾಪಾರ ಫಲಾಶ್ರಯಮ್** ಇತ್ಯಾದಿ-ಉಪಾಯಾನುಷ್ಠಾನ ದಿಂದ ಉಂಟಾದ ಕೈಂಕರ್ಯರೂಪ ಫಲಕ್ಕೆ ಪ್ರತಿ ಸಂಬಂಧಿಯಾದ್ದರಿಂದ, ಶೇಷಿಯಾಗಿಯೂ, **ಅದಡಿಯಾಹ ಪ್ರಾಪ್ಯ ನುಮಾಯಿರುಕ್ಕುಮ್**-ತನ್ನಿಮಿತ್ತವಾಗಿ ಪ್ರಾಪ್ಯನಾಗಿದ್ದಾನೆ. **ತದಿಹ ತವತತ್ತ್ವಂ ನತು ಗುಣೌ** ಎಂಬುದರ ಅರ್ಥ

---

ಉಪಾದತ್ತೇ ಸ್ಥಿತಿನಿಯಮನಾದ್ಯೈಶ್ಚಿದಚಿತೌ
ಸ್ವಮುದ್ದಿಶ್ಯ ಶ್ರೀಮಾನಿತಿವದತಿವಾಗೌಪನಿಷದೀ ।
ಉಪಾಯೋಪೇಯತ್ವೇ ತದಿಹತವತತ್ತ್ವಂ ನತುಗುಣೌ
ಅತಸ್ತ್ವಾಂ ಶ್ರೀ ರಂಗೇಶಯ ಶರಣಮವ್ಯಾಜಮಭಜಮ್ ॥ ಶ್ರೀ ರಂಗರಾಜಸ್ತವ ಉತ್ತರ ಶತಕಮ್-87

ಲಕ್ಷ್ಮೀಪತಿಯು ಚೇತನಾ ಚೇತನಗಳನ್ನು ತನ್ನ ಲೀಲಾ ಪ್ರಯೋಜನಕ್ಕಾಗಿ ಧರಿಸಿ ಕಾಪಾಡಿ ನಿಯಮಿಸುತ್ತಾನೆ. ಚೇತನೋದ್ಧಾರ ಣವೂ ಭಗವಂತನ ಕೃತ್ಯ. "ಹಂತಾಹಮಿಮಾಸ್ತಿಸ್ರೋ ದೇವತಾಃ ಅನೇನ ಜೀವೇನಾತ್ಮನಾನು ಪ್ರವಿಶ್ಯ ನಾಮ ರೂಪೇ ವ್ಯಾಕರವಾಣಿ" ಎಂಬುದು ಉಪನಿಷತ್ತು. ಹಂತ ಹರ್ಷೇ ಅನುಕಂಪಾಯಾಂ-ಎಂದು ಚೇತನೋದ್ಧಾರವು ದಯಾಕಾರ್ಯ. ಲೀಲಾರೂಪ ಕಾರ್ಯ "ಅಚಿದವಿಶೇಷಿತಾನ್ ಪ್ರಳಯ ಸೀಮನಿ ಸಂಸರತಃ ಕರಣಕಳೇಬರೈಃ ಘಟಯಿತುಂ ದಯಮಾನಮನಾಃ" ಎಂದು ಚೇತನರಿಗೆ ಸೃಷ್ಟಿಕಾಲದಲ್ಲಿ ಶರೀರೇಂದ್ರಿಯಗಳನ್ನು ದಯಾಮಯನು ಕೊಟ್ಟು ಕರುಣಿಸುತ್ತಾನೆ.

### ಭಗವತಃ ಕಾರುಣ್ಯಸ್ಯ ಮಾಹಾತ್ಮ್ಯಮ್

**ಇಪ್ಪಡಿ ರಕ್ಷಕನಾನ ಈಶ್ವರನುಕ್ಕು ಪ್ರಧಾನಮಾನ ಜ್ಞಾನಶಕ್ತಿ ಕರುಣೈಹಳಿಲ್. ಜ್ಞಾನ ಶಕ್ತಿಹಳ್ ನಿಗ್ರಹಾನುಗ್ರಹ ಸಾಧಾರಣಙ್ಗಳ್ ; ಕಾರುಣ್ಯಮ್ ಅನುಗ್ರಹತ್ತುಕ್ಕು ಅಸಾಧಾರಣಮ್. ಇಙ್ಗು ಕಾರುಣ್ಯ ಮಾವದು, ಪರಹಿತ ಪ್ರವಣತ್ವೈ.**

### ಕಾರುಣ್ಯಸ್ಯ ಕಾರ್ಯವಿಶೇಷ ಪರಂಪರಾಃ

**ಇದು ತ್ರಿವಿಧಚೇತನರ್ ಹಳುಡೈಯ ಸತ್ತಾಸ್ಥಿತಿಹಳುಕ್ಕುಮ್, ಅನುಕೂಲ ಪ್ರವೃತ್ತಿಹಳುಕ್ಕುಮ್. ನಿತರುಡೈಯ ನಿತ್ಯಾನುಭವತ್ತುಕ್ಕುಮ್ ಮುಕ್ತರುಡೈಯ ಅನಾವೃತ್ತಿಕ್ಕುಮ್, ಲೀಲಾವಿಭೂತಿಯಿಲ್**

---

ನನ್ನು ತಿಳಿಸುತ್ತಾರೆ. **ಇಪ್ಪಡಿಯುಳ್ಳ** ಇತ್ಯಾದಿ–ಹೀಗೆ ಇರುವುದು ಇವನಿಗೆ ಸ್ವರೂಪ ಪ್ರಯುಕ್ತವೆಂದು ಧರ್ಮಿಗ್ರಾಹಕ ಪ್ರಮಾಣ ಸಿದ್ಧ.

ಇಪ್ಪಡಿ ರಕ್ಷಕ**ನಾದ** ಇತ್ಯಾದಿ–ಹೀಗೆ ರಕ್ಷಕನಾದ ಈಶ್ವರನಿಗೆ ಪ್ರಧಾನಗಳಾದ ಜ್ಞಾನ ಶಕ್ತಿ ಕರಣೆಗಳಲ್ಲಿ ಜ್ಞಾನ ಶಕ್ತಿಗಳು, ನಿಗ್ರಹ–ಶಿಕ್ಷಿಸುವುದು. ಅನುಗ್ರಹ–ಕೃಪೆ ಮಾಡುವುದು, ಇವಕ್ಕೆ ಸಾಧಾರಣ ಕಾರಣಗಳು. ಕರುಣೆಯು ಅನುಗ್ರಹ–ಕೃಪೆ ಮಾಡುವುದಕ್ಕೆ ಅಸಾಧಾರಣ ಕಾರಣ.

ಅನುಜನ ಶಕ್ತ್ಯಾದಿ ಗುಣಾಮಗ್ರೇಸರ ಬೋಧ ವಿರಚಿತಾಲೋಕಾಮ್ ।

ಸ್ವಾಧೀನ ವೃಷ ಗಿರೀಶಾಂ ಸ್ವಯಂಪ್ರಭೂತಾಂ ಪ್ರಮಾಣಯಾಮಿ ದಯಾಮ್ ॥

ಎಂಬ ದಯಾಶತಕ (ನಂ. ) ಶ್ಲೋಕ ಶ್ರೀ ಸೂಕ್ತಿಯನ್ನು ಇಲ್ಲಿ ಅನುಸಂಧಾನ ಮಾಡುವುದು.

(ದಯಾದೇವಿಗೆ ಭಗವಂತನ ಶಕ್ತ್ಯಾದಿ ಗುಣಗಳು ಅನುಚರರು. ಬೋಧ – ಜ್ಞಾನವೆಂಬ ಗುಣವು ಮುಂದೆ ನಿಂತು ಕತ್ತಲೆಯಲ್ಲಿ ದೀಪವನ್ನು ತೋರಿಸುವಂತೆ ದಯಾ ಪ್ರವಾಹವು ಪ್ರವಹಿಸಲು ದಾರಿಯನ್ನು ತೋರಿಸುತ್ತದೆ. ಆದಯಾ ದೇವಿಯು ವೃಷಾದ್ರಿನಾಥ ನನ್ನು ತನಗೆ ಅಧೀನನನ್ನಾಗಿ ಮಾಡಿ ಕೊಂಡಿರುವಳು ಆಕಾರದಲ್ಲಿ ಬಹಳ ದೊಡ್ಡವಳು. ಅಂಥಹಾ ದಯಾ ದೇವಿಯನ್ನು ನಿರೂಪಿ ಸುತ್ತೇನೆ.)

### ಈಶ್ವರನ ಕರುಣಾ ಕಾರ್ಯಗಳು ಯಾವುವು

**ಇಂಗು ಕಾರುಣ್ಯ ಮಾವದು** – ಇಲ್ಲಿ 'ಕಾರಣ್ಯ' ವೇನೆಂದರೆ ಪರಹಿತ ಪ್ರವಣತೆ. ಪರ ದುಃಖ ದುಃಖಿತ್ವವು ಕಾರಣ್ಯವೆಂದು ಇತರರು ಹೇಳುವ ಅರ್ಥ ಭಗವಂತನ ಹೇಯ ಪ್ರತ್ಯನೀಕ ಸ್ವಭಾವಕ್ಕೆ ವಿರುದ್ಧವಾದದ್ದು. ಪರ ದುಃಖ ನಿರಾಚಿಕೀರ್ಷಾ–ಇತರರ ದುಃಖವನ್ನು ಹೋಗಲಾಡಿಸಲು ಇಚ್ಛೆ, ಎಂಬುದು ಸರಿಯಾದ ನಿರ್ವಾಹ. ಪರ ಹಿತ ಪ್ರವಣತೆಯೆಂದರೆ ಪರರು ಮಾಡುವ ಉಪಕಾರವನ್ನು ಅಪೇಕ್ಷಿಸದೆ, ಅಂದರೆ ನಿರುಪಾಧಿಕವಾಗಿ ಇತರರಿಗೆ ಹಿತವನ್ನುಂಟು ಮಾಡಬೇಕೆಂಬ ಇಚ್ಛೆ.

### ಭಗವತ್ ಕಾರುಣ್ಯದಿಂದ ಉಂಟಾಗುವ ಕಾರ್ಯ ವಿಶೇಷಗಳ ಪರಂಪರೆ

ಇದರ ಕಾರ್ಯವಿಶೇಷ ಪರಂಪರೆಯನ್ನು ತಿಳಿಸುತ್ತಾರೆ. ಅಂದರೆ ಭಗವಂತನು ನಿರುಪಾಧಿಕವಾದ ತನ್ನ ಕರುಣೆಯಿಂದ ಚೇತನರಿಗೆ ಮಾಡುವ ಹಿತಗಳು. ಯಾವುವೆಂದರೆ **ಇದುತ್ರಿವಿಧ ಚೇತನರ್ ಹಳುಡೈಯ** ಎಂದಾರಂಭಿಸಿ ತಿಳಿಸುತ್ತಾರೆ. (1) ಈ ಕಾರುಣ್ಯವು ಬದ್ಧಮುಕ್ತನಿತ್ಯರೆಂಬ ಮೂರು ವಿಧ ಚೇತನರ ಸತ್ತಾ ಇರುವಿಕೆ ಸ್ವರೂಪ ಲಾಭ – ಸ್ಥಿತಿ – ಲಬ್ಧಸ್ವರೂಪನ ಕಾಲಾಂತರಾನು ವೃತ್ತಿ, ಇವುಗಳಿಗೆ ಕಾರಣ (2) **ಅನು**

ಸಾಮಾನ್ಯ ಸೃಷ್ಟ್ಯಾದಿಗಳ್ಕ್ಕುಮ್, ಸ್ವಾವತಾರ ರೂಪೈಯಾನ ಶುದ್ಧ ಸೃಷ್ಟಿಕ್ಕುಮ್, ಶಾಸ್ತ್ರ ಪ್ರವರ್ತನತ್ತುಕ್ಕುಮ್, ಅದಡಿಯಾಗ ತತ್ವಹಿತ ವಿಷಯಮಾನ ಜ್ಞಾನತ್ತೈ ಪಿರಪ್ಪಿಕ್ಕೈಕ್ಕುಮ್ ಮೋಕ್ಷಶ್ರದ್ಧೈಯೈಯುಣ್ಡಾಕ್ಕುಹೈಕ್ಕುಮ್, ಇದು ಕೊಡುಕ್ಕೈಕ್ಕು ವ್ಯಾಜಮಾನ ಸುಕೃತ ವಿಶೇಷತ್ತುಕ್ಕುಮ್ ಅಧಿಕಾರಾನುರೂಪಙ್ಗಳಾನ ನಿಗ್ರಹ ಶಮನೋಪಾಯಙ್ಗಳೈ ಕೊಡುಕ್ಕೈಕ್ಕುಮ್, ಇವತ್ತಿಲ್ ಕರಣ ಪ್ರೇರಣ ದಶೈಯಿಲ್ ಸಹಕಾರಿಯಾಯ್ ನಿರ್ಕೈಕ್ಕುಮ್ ಉಪಾಸಕನುಕ್ಕು ಅನ್ತರಾಯಮ್ ವನ್ದಾಲ್ ಪ್ರತಿಸಮಾಧಾನಮ್ ಪಣ್ಣುವಿಕ್ಕೈಕ್ಕುಮ್, ಅಕಿಂಚನರ್ಕ್ಕು ಉಪಾಯ ಸ್ಥಾನತ್ತಿಲೇ ನಿನ್ರು ನಿರಪಾಯಮಾಗ ರಕ್ಷಿಕ್ಕೈಕ್ಕುಮ್, ಇವ್ವ್ಯಾಜಙ್ಗಳೈಕ್ಕೊಂಡು ಪ್ರಸನ್ನನಾಯ್ ಅನಾದಿ

---

ಕೂಲ ವೃತ್ತಿಗಳುಕ್ಕುಮ್ – ದಾಸನಾದ ಶೇಷಭೂತನ [illegible] ಅನುಕೂಲವಾದ ಕೈಂಕರ್ಯಗಳನ್ನೂ, ಅದಕ್ಕೆ ಉಪಯುಕ್ತವಾದ ವ್ಯಾಪಾರಗಳನ್ನು ಮಾಡುವುದಕ್ಕೂ ಕಾರಣ. (3) ನಿತ್ಯರು ಶ್ರೀವೈಕುಂಠದಲ್ಲಿ ಅನುಭವಿಸುವ ಮಹದಾನಂದ ರೂಪ ನಿತ್ಯಾನುಭವಕ್ಕೂ ಕಾರಣ. (4) ಮುಕ್ತರು ಹಿಂತಿರುಗಿ ಬರದೆ ಶ್ರೀವೈಕುಂಠದಲ್ಲಿಯೇ ಇರುವುದಕ್ಕೂ (5) ಲೀಲಾ ವಿಭೂತಿಯಲ್ಲಿ ಸಾಮಾನ್ಯ ಸೃಷ್ಟ್ಯಾದಿಗಳಿಗೂ ಅಂದರೆ ದೇವ, ಮನುಷ್ಯ, ಪ್ರಾಣಿ ಮರಗಿಡಗಳ ಸೃಷ್ಟಿಗೆ ಭಗವತ್ಕೃಪೆಯೇ ಕಾರಣ. ವೈಷಮ್ಯವು ಅವರವರ ಕರ್ಮಕೃತ ವೆಂದರ್ಥ. 6) ಸ್ವಾವತಾರ ರೂಪೈಯಾನ–ಭಗವಂತನು ತಾನೇ ಅವತಾರ ಮಾಡುವ ಶುದ್ಧ ಸೃಷ್ಟಿಗೂ ಕರುಣೆಯೇ ಕಾರಣ. ಕೇವಲ ಕರುಣೆಯಿಂದಲೇ ಭಗವಂತನು ಅವತಾರವನ್ನೆತ್ತಿಕೊಳ್ಳುತ್ತಾನೆಂದರ್ಥ 7) ಶಾಸ್ತ್ರ ಪ್ರವರ್ತನತ್ತುಕ್ಕುಮ್–ಸಕಲ ಶ್ರೇಯಸ್ಸಿಗೂ ಕಾರಣವಾದ ವೇದೇತಿಹಾಸ ಪುರಾಣಾದಿ ಶಾಸ್ತ್ರಗಳನ್ನು ಲೋಕ ದಲ್ಲಿ ಪ್ರವರ್ತಿಸುವುದಕ್ಕೂ ಭಗವತ್ಕೃಪೆಯೇ ಕಾರಣ. [illegible]) ಅದಡಿಯಾಗ ಇತ್ಯಾದಿ–ಶಾಸ್ತ್ರ ಪ್ರವಚನ ಮೂಲಕ ತತ್ವಹಿತ ಪುರುಷಾರ್ಥಗಳ ವಿಷಯವಾದ ಜ್ಞಾನವನ್ನು ಜನರಲ್ಲಿ ಉಂಟು ಮಾಡುವುದಕ್ಕೂ ಕೃಪೆಯೇ ಕಾರಣ. 9) ಮೋಕ್ಷ ಶ್ರದ್ಧೈಯೈ ಇತ್ಯಾದಿ–ಯಾದೃಚ್ಛಿಕ ಸುಕೃತಾದಿಗಳ ಮೂಲಕವಾಗಿ ಮೋಕ್ಷದಲ್ಲಿ ಶ್ರದ್ಧೆಯನ್ನು ಉಂಟು ಮಾಡುವುದಕ್ಕೂ ಸ್ವಾಭಾವಿಕವಾದ ಭಗವತ್ಕರುಣೆಯೇ ಕಾರಣ. 10) ಇದು ಕೊಡುಕ್ಕೈಕ್ಕು ಇತ್ಯಾದಿ–ಈ ಮೋಕ್ಷವನ್ನು ಕೊಡಲು ವ್ಯಾಜವಾದ ಸುಕೃತ ವಿಶೇಷಗಳಿಗೂ 11) ಅಧಿಕಾರಾನುರೂಪಮಾನ ಇತ್ಯಾದಿ–ಸಕಿಂಚನತ್ವಾಕಿಂಚನತ್ವ ರೂಪ ಅಧಿಕಾರಗಳಿಗೆ ಅನುಗುಣಗಳಾದ, ನಿಗ್ರಹ ಶಮನೋಪಾಯಂಗಳೈ–ಭಗವನ್ನಿಗ್ರಹವನ್ನು ಹೋಗಲಾಡಿಸುವ ಭಕ್ತಿ ಪ್ರಪತ್ತಿರೂಪ ಉಪಾಯಗಳನ್ನು ಕೊಡುಕ್ಕೈಕ್ಕುಮ್–ಅನುಷ್ಠಿಸುವಂತೆ ಉಪದೇಶಾದಿಗಳನ್ನು ಮಾಡಿಸುವುದಕ್ಕೂ 12) ಇವತ್ತಿಲ್ ಇತ್ಯಾದಿ–ಇವುಗಳ ಮಧ್ಯೆ ಧರ್ಮಾನುಷ್ಠಾನವನ್ನು ಮನಸ್ಸೇ ಮೊದಲಾದ ಇಂದ್ರಿಯಗಳನ್ನು ಪ್ರೇರೇಪಿಸಿ ಉಪಾಯಾನುಷ್ಠಾನವನ್ನು ಮಾಡುವ ಸಮಯದಲ್ಲಿ, ಸಹಕಾರಿಯಾಗಿ ಇರುವುದಕ್ಕೂ, 13) ಉಪಾಸಕನುಕ್ಕು ಇತ್ಯಾದಿ–ಉಪಾಸಕನಿಗೆ [illegible] ವಿಘ್ನಗಳು ಬಂದರೆ, ಪ್ರತಿ ಸಮಾಧಾನಂ–"ಅಪ್ರಾಪ್ಯ ಯೋಗಂ [illegible] ಯೋಗೀ ಕುರ್ಯಾತ್ ಪ್ರಯಾ ದತಃ । ಯೋಗಮೇವ ನಿಷೇವೇತ" ಯೋಗಿಯು ಅನವಧಾನದಿಂದ ಕೆಲವು ಪಾಪಗಳನ್ನು ಮಾಡಿದರೆ, ಅವುಗಳಿಗೆ ಪ್ರಾಯಶ್ಚಿತ್ತವಾಗಿ ಯೋಗವನ್ನೇ ಮಾಡಬೇಕು, ಎಂದು ಲಘುವಾದ ಪ್ರಾಯಶ್ಚಿತ್ತವನ್ನು ಮಾಡಿಸುವುದಕ್ಕೂ ಭಗವತ್ಕೃಪೆಯೇ ಕಾರಣ. 14) ಅಕಿಂಚನರುಕ್ಕು ಉಪಾಯಾಂತರ ಸ್ಥಾನತ್ತಿಲೇನಿನ್ರು–ಇತ್ಯಾದಿ ಅಕಿಂಚ ನರಿಗೆ ಭಕ್ತಿರೂಪವಾದ ಉಪಾಯಾಂತರ ಸ್ಥಾನದಲ್ಲಿ ಇದ್ದು ಅಂದರೆ ಭಕ್ತಿರೂಪವಾದ ಉಪಾಯಾಂತರವನ್ನು ಅನುಷ್ಠಿಸದೇನೇ ಅದನ್ನು ಅನುಷ್ಠಿಸಿದರೆ ಉಂಟಾಗುವ ಫಲವನ್ನು ಕೊಟ್ಟು ನಿರಪಾಯಮಾಹ ರಕ್ಷಿಕ್ಕೈಕ್ಕುಂ ಭಕ್ತಿಯೋಗ ನಿಷ್ಠನಿಗೆ ಮಧ್ಯೆ ಅಣಿ [illegible] ಮಾಡಿ, ಯೋಗದಿಂದ ಭ್ರಷ್ಟನಾಗು ವಂತೆ ಮಾಡುವುದೆಂಬ, ಅಪಾಯವಿಲ್ಲದೆ ರಕ್ಷಿಸುವುದಕ್ಕೂ ಈ ಕರುಣೆಯೇ ಕಾರಣ. ಅಂದರೆ ಮೋಕ್ಷಾರ್ಥವಾಗಿ ಶರಣಾಗತಿ ಮಾಡಿದವನಿಗೆ ಯಾವ ವಿಘ್ನಗಳನ್ನೂ ಉಂಟು ಮಾಡದೆ ಅವನು ನಿರ್ದೇಶಿಸಿದ ಕಾಲದಲ್ಲಿ ಮೋಕ್ಷ ವನ್ನು ಪರಮ ಕೃಪೆಯಿಂದ ಭಗವಂತನು ಸಂಕಲ್ಪಿಸುತ್ತಾನೆಂದರ್ಥ. 15) ಇವ್ವ್ಯಾಜಂಗಳೈಕ್ಕೊಂಡು

**ಕಾಲಮ್ ಪಣ್ಣಿನ ಅನಂತ ಮಹಾಪರಾಧಙ್ಗಳೈ ಅನಾದರಿತ್ತು ಅನಂತ ಸುಖತ್ತಿಲೇ ವಿಶ್ರಮಿಕ್ಕುಮ್ಪಡಿ ಸಂಸಾರ ನಿವರ್ತಕ ನಾಹೈಕ್ಕುಮ್, ಆರ್ತ್ತಪ್ರಪನ್ನರ್ಕ್ಕು ಅಪ್ಪೋದೇ ಮೋಕ್ಷಮ್ ಕೊಡುಕ್ಕೈಕ್ಕುಮ್, ಇರುನ್ದನಾಳ್ ನಿರಪರಾಧನಾಯಿರುಕ್ಕ ವೇಣುಮೆನ್ರು ಫಲಮ್ ಕೋಲಮರನ್ದ ದೃಪ್ತಪ್ರಪನ್ನನುಕ್ಕು ಪ್ರಾರಬ್ಧ ಕರ್ಮವಶತ್ತಾಲೇ ಪುಹುನ್ದ ಅಪರಾಧತ್ತುಕ್ಕು ಅನುತಾಪತ್ತೈ ವಿಳೈಪ್ಪಿತ್ತು ಅಧಿಕಾರಾನುರೂಪಮಾನ ಪ್ರಾಯಶ್ಚಿತ್ತ ವಿಶೇಷತ್ತಿಲೇ ಮೂಟ್ಟುಹೈಕ್ಕುಮ್, ಅಙ್ಗನ್ಮೃದುಪ್ರಕೃತಿಹಳಲ್ಲಾದಾರ್ಕ್ಕು ಯಮವಿಷಯ ಗಮನಮುಮ್ ಕೋಲಿನ ಫಲತ್ತುಕ್ಕು ಪ್ರತಿಬಂಧಕಮುಮ್ ವಾರಾದಪಡಿ ಪಣ್ಣಿ ಉಪಕ್ಲೇಶಙ್ಗಳಾಲೇ ಶಿಕ್ಷಿಕ್ಕೈಕ್ಕುಮ್, ಪ್ರಧಾನಮಾನ ಸಾಮಾನ್ಯ ನಿದಾನಮಾಯಿರುಕ್ಕುಮ್.**

ಶ್ರಿಯಃಪತಿ ಸ್ಸಿದ್ಧೋಪಾಯಃ, ಭಕ್ತಿ ಪ್ರಪತ್ತೀಸಾಧ್ಯೋಪಾಯೌ

ಇಪ್ಪಡಿಪ್ಪಟ್ಟ ಕೃಪಾವಿಶಿಷ್ಟನಾನ ಈಶ್ವರನ್ 1) "ಕೃಷ್ಣಂ ಧರ್ಮಂ ಸನಾತನಂ" ಎನ್ಗಿರಪಡಿಯೇ ಸಿದ್ಧೋಪಾಯಮ್. ಇವನುಕ್ಕು ಪ್ರಸಾದನಙ್ಗಳಾನ ಭಕ್ತಿಪ್ರಪತ್ತಿಹಳ್ ಸಾಧ್ಯೋಪಾಯಙ್ಗಳ್.

---

ಇತ್ಯಾದಿ–ಈ ಭಕ್ತಿ ಪ್ರಪತ್ತಿ ರೂಪ ವ್ಯಾಜಗಳನ್ನು ಅವಲಂಬಿಸಿಕೊಂಡು ಪ್ರಸನ್ನನಾಗಿ ಅನಾದಿ ಕಾಲದಿಂದ ಮಾಡಿದ ಅನಂತ ಮಹಾಪರಾಧಗಳನ್ನು ಅನಾದರಿಸಿ ಅನಂತ ಸುಖದಲ್ಲಿ ವಿಶ್ರಾಂತಿಯನ್ನು ಪಡೆಯುವಂತೆ ಸಂಸಾರವನ್ನು ನಿರ್ವರ್ತಿಸುವುದಕ್ಕೂ, 16) **ಆರ್ತಪ್ರಪನ್ನನುಕ್ಕು** ಇತ್ಯಾದಿ–ಆರ್ತಿಯಿಂದ ಪ್ರಪತ್ತಿ ಮಾಡಿದವನಿಗೆ ಅವನು ಅಪೇಕ್ಷಿಸಿದ ಸಮಯದಲ್ಲೇ ಮೋಕ್ಷವನ್ನು ಕೊಡುವುದಕ್ಕೂ. 17) **ಇರುಂದನಾಳ್** ಇತ್ಯಾದಿ–ತಾನು ಜೀವಿಸಿರುವ ಕಾಲದಲ್ಲಿ ಅಪರಾಧಗಳನ್ನು ಮಾಡದೆ ಇರಬೇಕೆಂದು ಫಲವನ್ನು ಕೇಳಲು ಮರೆತ ದೃಪ್ತ ಪ್ರಪನ್ನನಿಗೆ ಪ್ರಾರಬ್ಧ ಕರ್ಮವಶದಿಂದ ಉಂಟಾದ ಅಪರಾಧಗಳಿಗೆ ಪಶ್ಚಾತ್ತಾಪವನ್ನುಂಟು ಮಾಡಿ, ಅಧಿಕಾರಕ್ಕೆ ಅನುಗುಣವಾದ ಪ್ರಾಯಶ್ಚಿತ್ತ ವಿಶೇಷದಲ್ಲಿ, ಮೂಟ್ಟುಹೈಯುಮ್–ಪ್ರವರ್ತಿಸುವಂತೆ ಮಾಡುವುದೂ, ಭಗವಂತನ ಕೃಪಾಕಾರ್ಯ. 18) **ಅಂಗನ್ಮೃದುಪ್ರಕೃತಿಹಳ್** ಇತ್ಯಾದಿ – ಆ ರೀತಿಯಲ್ಲಿ ಪಾಪಗಳಿಗೆ ಭಯಪಟ್ಟು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ಮೃದು ಸ್ವಭಾವರಲ್ಲದವರಿಗೆ, ಯಮಲೋಕ ಪ್ರಾಪ್ತಿಯೂ, ತಾನು ಪ್ರಾರ್ಥಿಸಿದ ಫಲಕ್ಕೆ ಪ್ರತಿಬಂಧಕವೂ ಉಂಟಾಗದಂತೆ ಮಾಡಿ, ಕ್ಲೇಶಗಳನ್ನು ಕೊಟ್ಟು ಶಿಕ್ಷಿಸುವುದಕ್ಕೂ, **ಪ್ರಧಾನಮಾನ ನಿದಾನ ಮಾಯಿರುಕ್ಕುಮ್**–ಪ್ರಧಾನ ಭೂತವಾದ ಸಾಮಾನ್ಯ ಕಾರಣನಾಗಿರುತ್ತಾನೆ. ಅಂದರೆ ಭೂಮಿಯಲ್ಲಿ ಸಸ್ಯವು ಬೆಳೆಯಬೇಕಾದರೆ ಅದಕ್ಕೆ ಅನುಗುಣವಾದ ಬೀಜವು ವಿಶೇಷ ಕಾರಣ. ನೀರು, ಬಿಸಲು, ಮಣ್ಣು ಗಾಳಿ ಇವುಗಳು ಸಾಮಾನ್ಯ ಕಾರಣ. ಆ ರೀತಿಯಲ್ಲಿ ವಿಶೇಷ ಕಾರಣವಿಲ್ಲದೆ ಮೇಲೆ ಹೇಳಿದ ಕಾರ್ಯಗಳಿಗೆ ಭಗವಂತನೇ ಪ್ರಧಾನವಾದ ಸಾಧಾರಣ ಕಾರಣ ಭೂತನು. ವಿಶೇಷ ಕಾರಣಗಳು ಪುಣ್ಯಪಾಪ ರೂಪ ಕರ್ಮಗಳು ಎಂದರ್ಥ.

**ಸಿದ್ಧ ಸಾಧ್ಯೋಪಾಯಗಳ ಭೇದ.**

**ಇಪ್ಪಡಿಪ್ಪಟ್ಟ** ಇತ್ಯಾದಿ–ಈ ರೀತಿಯಾದ ಕೃಪಾ ವಿಶಿಷ್ಟನಾದ **ಈಶ್ವರನು** 1) "ಕೃಷ್ಣಂ ಧರ್ಮಂ ಸನಾತನಂ" ಎಂಬಂತೆ ನಿತ್ಯವಾದ ಧರ್ಮ–ಅಲೌಕಿಕ ಶ್ರೇಯಸ್ಸಾಧನ ರೂಪನಾದ ಕೃಷ್ಣಪರಮಾತ್ಮನು **ಸಿದ್ಧೋಪಾಯನು** **ಇವನಕ್ಕು** ಇತ್ಯಾದಿ–ಇವನ ನಿಗ್ರಹ ನಿವೃತ್ತಿರೂಪ ಪ್ರಸನ್ನತೆಗೆ ಕಾರಣಗಳಾದ ಭಕ್ತಿ ಪ್ರಪತ್ತಿಗಳು **ಸಾಧ್ಯೋಪಾಯಗಳು.**

---

1) ಪು. ತಿ. ನೋ.

## ಪ್ರಪತ್ತೇರಧಿಕಾರಿ ವಿಶೇಷಣತ್ವವಾದ ನಿರಾಸಃ

ಓರಧಿಕಾರಿ ವಿಶೇಷತ್ತುಕ್ಕು ಕರ್ತವ್ಯಮಾಹ 2) "ಮಾಮೇಕಂ ಶರಣಂ ವ್ರಜ" ಎನ್ರು ವಿಧಿಕ್ಕಪ್ಪಡುಹಿರ ಪ್ರಪತ್ತಿಯ್ಯೈ ಅಧಿಕಾರಿ ವಿಶೇಷಣಮೆನ್ರುಶಿಲರ್ ಶೊನ್ನವಿಡಮ್ ಅಧಿಕಾರಿ ವಿಶೇಷಣತ್ತುಕ್ಕು ಚ್ಚೊಲ್ಲುಮ್ ಲಕ್ಷಣತ್ತೋಡು ಶೇರಾಮೈಯಾಲೇ ಅತಿ ವಾದಮ್.

ಇಙ್ಗನಲ್ಲಾದಪೋದು ಈಶ್ವರನುಪಾಯಮಾಯ್ ನಿರ್ಕ್ಕ, ಉಪಾಸನಾದಿ ಶಾಸ್ತ್ರಙ್ಗಳುಮ್

---

### ಪ್ರಪತ್ತಿಯು ಅಧಿಕಾರಿ ವಿಶೇಷಣವೆಂಬ ವಾದದ ಖಂಡನೆ

**ಓರಧಿಕಾರಿ ವಿಶೇಷತ್ತುಕ್ಕು** ಇತ್ಯಾದಿ–ಒಬ್ಬ ವಿಶೇಷಾಧಿಕಾರಿಯನ್ನು ಕುರಿತು ಅಂದರೆ ಅಕಿಂಚನಾಧಿಕಾರಿಯನ್ನು ಕುರಿತು, **ಕರ್ತವ್ಯಮಾಹ**–ಮಾಡಬೇಕಾದುದಾಗಿ 2) **ಮಾಮೇಕಂ ಶರಣಂವ್ರಜ** ಎಂದು ವಿಧಿಸಲ್ಪಡುವ ಪ್ರಪತ್ತಿಯನ್ನು ಅಧಿಕಾರಿ ವಿಶೇಷಣವೆಂದು ಕೆಲವರು ಹೇಳಿರುವುದು, ಅಧಿಕಾರಿ ವಿಶೇಷಣಕ್ಕೆ ಹೇಳುವ ಲಕ್ಷಣದೊಡನೆ ಅನ್ವಯಿಸುವುದಿಲ್ಲವಾದ್ದರಿಂದ ಅತಿವಾದ. ಆದಾಗಿ ಪ್ರಪನ್ನನಿಗೆ ಭಗವಂತನು ಉಪಾಯನಾದ್ದರಿಂದ, ಪ್ರಪನ್ನತ್ವವು ಅಂದರೆ ಪ್ರಪತ್ತಿಯು ಅಧಿಕಾರಿ ವಿಶೇಷಣವೇ ಹೊರತು ಸಾಧ್ಯೋಪಾಯವಾಗುವುದಿಲ್ಲವೆಂಬುದು, ಕೆಲವರ ಮಾತು. ಇದು ಅಧಿಕಾರಿ ವಿಶೇಷಣಕ್ಕೆ ಹೇಳಿದ ಲಕ್ಷಣದೊಡನೆ ಸರಿ ಹೋಗುವುದಿಲ್ಲವಾದ್ದರಿಂದ ಅನಾದರಣೀಯ. ಹೇಗೆಂದರೆ, "ಜ್ಯೋತಿಷ್ಟೋಮೇನ ಸ್ವರ್ಗಕಾಮೋಯಜೇತ"–ಸ್ವರ್ಗದಲ್ಲಿ ಆಸೆಯುಳ್ಳವನು ಜ್ಯೋತಿಷ್ಟೋಮ ಯಾಗವನ್ನು ಮಾಡಬೇಕು ಎಂಬುದು ವಿಧಿವಾಕ್ಯ. ಇಲ್ಲಿ ಯಾಗ ಮಾಡುವವನು ಅಧಿಕಾರಿ. ಇವನಿಗೆ ಸ್ವರ್ಗಕಾಮನೆಯು ವಿಶೇಷಣ (ಅಧಿಕಾರಿಗೆ ವಿಶೇಷಣ) ಇದು ಯಾಗ ಮಾಡುವುದಕ್ಕೆ ಮುಂಚೆಯೇ ಸಿದ್ಧವಾಗಿರುತ್ತದೆ. ಆಸೆ ಇದ್ದರೆ ತಾನೆ ಯಾಗ ಮಾಡುತ್ತಾನೆ. ಆ ರೀತಿಯಲ್ಲಿ ಪ್ರಪತ್ತಿಯು ಅಧಿಕಾರಿಗೆ ವಿಶೇಷಣವಲ್ಲಗಿ 'ಶರಣಂ ವ್ರಜ' ಎಂದು ವಿಧಿಯನ್ನು ತಿಳಿದ ನಂತರವೇ ಅಲ್ಲವೇ ಪ್ರಪತ್ತಿ ಮಾಡುತ್ತಾನೆ. ಸ್ವರ್ಗದಲ್ಲಿ ಆಸೆಯು ಮುಂಚೆಯೇ ಇದ್ದು ಜ್ಯೋತಿಷ್ಟೋಮ ಯಾಗವನ್ನು ಮಾಡುವಂತೆ, ಪ್ರಪನ್ನತ್ವವು ಪ್ರಪತ್ತಿ ಮಾಡುವುದಕ್ಕೆ ಮುಂಚೆಯೇ ಸಿದ್ಧವಲ್ಲ. ಪ್ರಪತ್ತಿ ಮಾಡಿದ ನಂತರ ಸಿದ್ಧಿಸುವ ಧರ್ಮ. ಆದ್ದರಿಂದ ಪ್ರಪತ್ತಿಯು ಅಧಿಕಾರಿ ವಿಶೇಷಣವಾಗುವುದಿಲ್ಲ. 'ಶರಣಂವ್ರಜ' ಎಂಬ ವಿಧಿಗೆ ವಿಷಯವಾದದ್ದು.

**ಇಂಗನಲ್ಲಾದಪೋದು** – ಹೀಗೆ ಇಲ್ಲವೆಂದು ಹೇಳಿದರೆ, ಭಕ್ತಿಯೋಗ ನಿಷ್ಠನಿಗೂ ಭಗವಂತನು ಸಿದ್ಧೋಪಾಯನಾಗಿರುವುದರಿಂದ, ಉಪಾಸನವೂ ಕರ್ಮಯೋಗ ಜ್ಞಾನಯೋಗಗಳೂ ಅಧಿಕಾರಿ ವಿಶೇಷಣಗಳಾಗಿ ಆಗಬೇಕಾಗುತ್ತವೆ. ಇದೂ ಸರಿಯಲ್ಲವಲ್ಲವೇ.

---

1) ಯೇಚ ವೇದ ವಿದೋವಿಪ್ರಾಃ ಯೇಚಾಧ್ಯಾತ್ಮವಿದೋ ಜನಾಃ ।
ತೇವಿದಂತಿ ಮಹಾತ್ಮಾನಂ ಕೃಷ್ಣಧರ್ಮಂ ಸನಾತನಮ್ ॥ ಭಾರ. ವನ (71-123)

ವೇದವನ್ನು ಅರಿತವರು, ಹಾಗೆಯೇ ವೇದಾಂತವನ್ನು ತಿಳಿದವರು ಕೃಷ್ಣ ಪರಮಾತ್ಮನನ್ನು, ಸನಾತನ-ನಿತ್ಯವಾದ, ಧರ್ಮಂ-ಅಲೌಕಿಕ ಶ್ರೇಯಸ್ಸಾಧನ ರೂಪವಾದ ಧರ್ಮವಾಗಿ ತಿಳಿದಿದ್ದಾರೆ.

2) ಭಗವದ್ಗೀತೆ ಅಧ್ಯಾಯ 18-ಶ್ಲೋಕ. 66

ಅಧಿಕಾರಿ ವಿಶೇಷಣಙ್ಗಳಾಮ್. ಆಹೈಯಾಲ್ ಪ್ರಪತ್ತಿಯುಮ್ ಕೂಡ ಉಪಾಯಮನ್ರಸ್ರು ಶಿಲರ್ ಅತಿವಾದಮ್ ಪಣ್ಣಿರುಡುಮ್ಪುಮ್ ಸಿದ್ಧೋಪಾಯತ್ತಿನುಡೈಯ ಪ್ರಾಧಾನ್ಯಮಡಿಯಾಹವಿತ್ತನ್ರೈ. ಅದು ಪ್ರಧಾನಮಾನಪಡಿ :–ಪ್ರಸಾದನಙ್ಗಳಾಲೇ ಪ್ರತಿಬಂಧಕಮಾನ ನಿಗ್ರಹಮ್ ಶಮಿತ್ತಾಲ್ ಸ್ವಾಭಾವಿಕಾನುಭವತ್ತುಕ್ಕುಪ್ಪ್ರಯೋಜಕಮಾಹೈಯಾಲೇ. ಅದೆಙ್ಗನೇಯೆನ್ನಿಲ್ – ರತ್ನತ್ತುಕ್ಕು ಅಳುಕ್ಕು ಗ್ಗಿಲ್ ವರುಮ್ ಸ್ವಾಭಾವಿಕಮಾನ ಪ್ರಭಾವಿಕಾಸಮುಮ್ ಅದುಕ್ಕು ಅನುರೂಪಮಾನ ಭಗವತ್ಸಙ್ಕಲ್ಪ ಮಾತ್ರತ್ತಾಲೇ ಯಾನಾಪ್ಪೋಲೇ ಮುಕ್ತನುಕ್ಕುವರುಮ್ ಜ್ಞಾನವಿಕಾಸಾದಿಹಳುಮ್ ಅದುಕ್ಕನುರೂಪ ಮಾಯ್ಕೊಂಡು ವ್ಯವಸ್ಥಿತಮಾನ ಭಗವತ್ಸಙ್ಕಲ್ಪ ಮಡಿಯಾಹವಾಯಿರುಕ್ಕುಮ್. ಇಪ್ಪಡಿ ನಿತ್ಯರ್ಕ್ಕುಮ್. ಇಷ್ವರ್ಥತ್ತೈ "ಇಚ್ಛಾತ ಏವ ತವ ವಿಶ್ವ ಪದಾರ್ಥಸತ್ತಾ" ಎನ್ರು ಅಭಿಯುಕ್ತರ್ ಸಙ್ಗ್ರಹಿತ್ತಾರ್ಗಳ್. ಆಕೈಯಾಲ್ ಸಿದ್ಧೋಪಾಯಮ್ ಪ್ರಧಾನಮೇಯಾಹಿಲುಮ್, ತದ್ವಶೀ ಕರಣಾರ್ಥಮಾನ ಸಾಧ್ಯೋಪಾಯಾನುಷ್ಠಾನತ್ತುಕ್ಕು "ಇನ್ರನ್ನೈ" ಇತ್ಯಾದಿ ಪೂರ್ವಾಚಾರ್ಯವಾಕ್ಯ ವಿರೋಧಮಿಲ್ಲೈ.

## ಪ್ರಪತ್ತಿಯು ಉಪಾಯವಲ್ಲವೆಂಬವಾದ ನಿರಸನ

ಆಕೈಯಾಲ್–ಹೀಗೆ ಪ್ರಪತ್ತಿಯು ಸಾಧ್ಯವಾದ ಉಪಾಯವಾಗಿರುವಾಗ, ಕೆಲವರು ಪ್ರಪತ್ತಿಯು ಉಪಾಯ ವಲ್ಲವೆಂದು ಅತಿವಾದವಾಗಿ ಹೇಳುವುದು ಸಿದ್ಧೋಪಾಯಕ್ಕೆ ಪ್ರಾಧಾನ್ಯವನ್ನು ಅಡಿಯಾಹ–ಕಾರಣವಾಗಿಟ್ಟು ಹೇಳುವ ಮಾತು. ಅದು ಪ್ರಧಾನಮಾನಪಡಿ – ಆ ಸಿದ್ಧೋಪಾಯವು ಪ್ರಧಾನವಾದ ರೀತಿಯು ಹೇಗೆಂದರೆ– ಪ್ರಸಾದನಂಗಳಾಲೇ–ಭಕ್ತಿ ಪ್ರಪತ್ತಿರೂಪ ಭಗವನ್ನಿಗ್ರಹಶಾಮಕ ಉಪಾಯಗಳಿಂದ, ಮೋಕ್ಷ ಪ್ರತಿಬಂಧಕವಾದ ನಿಗ್ರಹವು – ಕೋಪವು ಶಮನವಾದರೆ ಸ್ವಾಭಾವಿಕವಾದ ಭಗವದನುಭವಕ್ಕೆ ಪ್ರಯೋಜಕಮಾಹೈಯಾಲೇ–ಭಗ ವಂತನು ಕಾರಣನಾದ್ದರಿಂದ, ಸಿದ್ಧೋಪಾಯ ಪ್ರಾಧಾನ್ಯವಾದ. ಅಂದೆಗನೇ ಎನ್ನಿಲ್–ಅದು ಹೇಗೆಂದರೆ ಎಂದಾ ರಂಭಿಸಿ ದೃಷ್ಟಾಂತವನ್ನು ಕೊಡುತ್ತಾರೆ. ರತ್ನತ್ತುಕ್ಕು ಇತ್ಯಾದಿ–ರತ್ನಕ್ಕೆ ಕೊಳೆಯನ್ನು ನೀಗಿಸಿದರೆ, ಅದರ ಸ್ವಾಭಾ ವಿಕವಾದ ಪ್ರಭಾವಿಕಾಸವೂ ಅದಕ್ಕನುರೂಪವಾದ ಭಗವಂತ್ಸಂಕಲ್ಪ ಮಾತ್ರದಿಂದಲೇ ಉಂಟಾಗುವಂತೆ, ಅಂದಾ ರತ್ನಕ್ಕೆ ಸ್ವಾಭಾವಿಕವಾದ ಪ್ರಕಾಶವು ಇರಲಿ ಎಂಬುದು ಭಗವತ್ಸಂಕಲ್ಪ. ಕೊಳೆಯು ನೀಗಿದರೂ ಈ ಸ್ವಾಭಾವಿಕ ವಾದ ಸಂಕಲ್ಪವಿಲ್ಲದಿದ್ದರೆ, ರತ್ನವು ಪ್ರಕಾಶಿಸುವುದಿಲ್ಲವಲ್ಲವೇ. ಆ ರೀತಿಯಲ್ಲಿ ಮುಕ್ತನುಕ್ಕುವರುಮ್ ಇತ್ಯಾದಿ– ಮುಕ್ತನಿಗೆ ಉಂಟಾಗುವ ಜ್ಞಾನ ವಿಕಾಸಾದಿಗಳೂ, ಅದಕ್ಕೆ ಅನುರೂಪವಾಗಿದ್ದು, ವ್ಯವಸ್ಥಿತವಾದ ಸಿದ್ಧೋಪಾಯ ನಾದ ಭಗವಂತನ ಸಂಕಲ್ಪಕ್ಕೆ ಅಧೀನವಾಗಿರುತ್ತದೆ. ಹೀಗೆ ಪ್ರಪತ್ತಿಯೆಂಬ ಸಾಧ್ಯೋಪಾಯವನ್ನು ಅನುಷ್ಠಿಸಿದ ನಂತರ ಭಗವನ್ನಿಗ್ರಹಗಳೆಲ್ಲಾ ಕಳೆದು ಅಂದರೆ ಪುಣ್ಯಪಾಪ ರೂಪವಾದ ಕರ್ಮವು ಹೋಗಿ ಮುಕ್ತನಾದ ನಂತರ ಸ್ವಾಭಾವಿಕವಾದ ಜ್ಞಾನವಿಕಾಸಾದಿಗಳು ಭಗವತ್ಸಂಕಲ್ಪಾಧೀನಗಳಾದ್ದರಿಂದ ಸಿದ್ಧೋಪಾಯ ಪ್ರಾಧಾನ್ಯತೆಯು ಹೇಳಲ್ಪಟ್ಟಿದೆಯೇ ಹೊರತು; ಸಾಧ್ಯೋಪಾಯವು ಬೇಕಿಲ್ಲವೆಂದಲ್ಲ. ಇಪ್ಪಡಿ ನಿತ್ಯರುಕ್ಕುಮ್–ಉಪಾಯಾನುಷ್ಠಾನ ವನ್ನು ಮಾಡಿ ಕರ್ಮವನ್ನು ಕಳೆದುಕೊಳ್ಳಬೇಕೆಂಬ ನಿರ್ಬಂಧವಿಲ್ಲದ ನಿತ್ಯ ಸೂರಿಗಳಿಗೆ ಉಂಟಾಗಿರುವ ಜ್ಞಾನ ವಿಕಾಸಾದಿಗಳೂ ಹೀಗೆಯೇ ಭಗವಂತನ ನಿತ್ಯ ಸಂಕಲ್ಪಾಧೀನಗಳು. ಇಷ್ವರ್ಥತ್ತೈ ಇತ್ಯಾದಿ–ಈ ಅರ್ಥವನು [1] ಇಚ್ಛಾತಏವ ಎಂದಾರಂಭಿಸಿ ಅಭಿಯುಕ್ತರು (ಪರಾಶರಭಟ್ಟರು)ಸಂಗ್ರಹಿಸಿದರು. ಅದಾಗಿ ಪ್ರಪಂಚದಲ್ಲಿ ಸೃಷ್ಟಿ ಸಲ್ಪಟ್ಟ ಸಕಲ ಪದಾರ್ಥಗಳ ಸತ್ತಾಸ್ಥಿತಿ ಪ್ರವೃತ್ತಿಗಳು ಭಗವಂತನ ಸಂಕಲ್ಪಾಧೀನಗಳು. "ನಿತ್ಯಂ ಪ್ರಿಯಾಸ್ತವತು ಕೇಚನ ತೇಹಿನಿತ್ಯಾಃ" ಎಂಬುದು ಉತ್ತರಾರ್ಧ. ಕೆಲವರು ನಿನಗೆ ನಿತ್ಯವೂ ಪ್ರಿಯರು. ಅವರು ನಿತ್ಯರು. ಅಂದರೆ

---

1) ವೈಕುಂಠ ಸ್ತವ-36

1) **"ಯೋಮೇ ಗರ್ಭಗತಸ್ಯಾಪಿ ವೃತ್ತಿಂ ಕಲ್ಪಿತವಾನ್ ಪ್ರಭುಃ।**
**ಶೇಷವೃತ್ತಿ ವಿಧಾನೇಪಿ ಕಿಂ ಸುಪ್ತಸ್ಸೋಥವಾಮೃತಃ ॥"**

**ಇತ್ಯಾದಿಕಳುವಮ್ ರಕ್ಷಕಾಂತರಂ ತೇಡಾವ್ಮೈಕ್ಕು ಚೊಲ್ಲುನ್ನವೈ ಯತ್ತನೈ. ಅಲ್ಲಾದಪ್ಪೋದು ಭೋಜನಾದಿ ವ್ಯಾಪಾರಙ್ಗಳುವಮ್ ತವಿರ ವೇಣುವಮ್.** 2) **"ಸ್ವಯಂ ವೃತ್ತಿಂಡ ಭೂತಸ್ಯ ಪರತಂತ್ರಸ್ಯ ದೇಹಿನಃ"**

3) **"ಅಜ್ಞೋಜಂತು ರನೀಶೋಯ ಮಾತ್ಮನಸ್ಸುಖದುಃಖಯೋಃ।**
**ಈಶ್ವರಪ್ರೇರಿತೋಗಚ್ಛೇತ್ಸ್ವರ್ಗಂ ವಾ ಶ್ವಭ್ರಮೇವವಾ"**

4) **"ಅಪ್ರಮೇಯೋ ನಿಯೋಜ್ಯಶ್ಚ ಯತ್ರಕಾಮಗಮೋವಶೀ ॥**
**ಮೋದತೇ ಭಗವಾನ್ ಭೂತೈರ್ಬಾಲಃ ಕ್ರೀಡನಕೈರಿವ"**

**ಇತ್ಯಾದಿಕಳಿಲ್ ಜೀವನುಡೈಯ ಪಾರತಂತ್ರ್ಯಮುಮ್, ಈಶ್ವರನ್ ಇವನುಡೈಯ ಕರ್ಮಾನುಗುಣಮಾಹ**

---

ನಿತ್ಯವಾದ ಸದಾ ರ್ಥಗಳೆಲ್ಲಾ ಭಗವಂತನ ನಿತ್ಯೇಚ್ಛಾಸಿದ್ಧಗಳಾದ್ದರಿಂದ, ನಿತ್ಯರ ಭಗವದನುಭವವೂ ನಿತ್ಯವಾದ ಭಗವತ್ಸಂಕಲ್ಪಾಧೀನವಾಗಿ ಉಪಪನ್ನಗಳು. **ಆಕೈಯಾಲ್**-ಆದ್ದರಿಂದ ಸಿದ್ಧೋಪಾಯವು ಪ್ರಧಾನವೇ ಅದರೂ ತತ್ಪ್ರೀತಿಕರಣಾರ್ಥಗಳಾದ- ಅವನನ್ನು ವಶಪಡಿಸಿಕೊಳ್ಳಲು ಉಪಯುಕ್ತಗಳಾದ ಸಾಧ್ಯೋಪಾಯಾನುಷ್ಠಾನಕ್ಕೆ "ಇನ್ರೆನ್ನೈ" ಇತ್ಯಾದಿ ಪೂರ್ವಾಚಾರ್ಯ ವಾಕ್ಯ ವಿರೋಧವಿಲ್ಲವೆಂದು ನಿಗಮಿಸುತ್ತಾರೆ.

ಅನಂತರ 1) **ಯೋಮೇಗರ್ಭಗತಸ್ಯಾಪಿ** ಎಂಬ ಶ್ಲೋಕಕ್ಕೆ ತಾತ್ಪರ್ಯವನ್ನು ತಿಳಿಸುತ್ತಾರೆ. ಅದಾಗಿ ತಾಯಿಯ ಗರ್ಭದಲ್ಲಿ ಕೈಕಾಲುಗಳನ್ನು ಚಾಚಲೂ ಸಹ ಅಶಕ್ತನಾಗಿರುವಾಗ, ಜೀವನಕ್ಕೆ ವೃತ್ತಿಯನ್ನು ಭಗವಂತನು ಕಲ್ಪಿಸಿದನಲ್ಲವೇ. ಅಂಥಹ ಅವನು, ಹುಟ್ಟಿದ ನಂತರ ಬಾಲ್ಯ ಕೌಮಾರ, ಯೌವನಾದ್ಯವಸ್ಥೆಗಳಲ್ಲಿ ರಕ್ಷಿಸದೇ ನಿದ್ರಿಸುತ್ತಾನೆಯೇ, ಅಥವಾ ಮೃತನೇ ಎಂಬುದು ಶ್ಲೋಕಾರ್ಥ. ಈ ಶ್ಲೋಕವು ಸಾಮಾನ್ಯ ದೃಷ್ಟಿಯಿಂದ ಜೀವನ ವೃತ್ತಿಗೆ ತಾನು ಏನನ್ನೂ ಮಾಡಬೇಕಿಲ್ಲವೆಂದು ತೋರುವುದರಿಂದ ಮೋಕ್ಷಾರ್ಥವಾಗಿಯೂ ಯಾವ ಉಪಾಯವನ್ನೂ ಮಾಡಬೇಕಿಲ್ಲವೆಂಬುದು ಪೂರ್ವಪಕ್ಷಿಯ ಅಭಿಪ್ರಾಯ. ಇದರ ಭಾವವನ್ನು **ರಕ್ಷಕಾಂತರಂ ತೇಡಾವ್ಮೈಕ್ಕು** ಎಂದು ವಿವರಿಸುತ್ತಾರೆ ಅದಾಗಿ ನಮಗೆ ಅತ್ಯಂತಾಶಕ್ಯವಾದ ಗರ್ಭವಾಸಾದಿ ದಶೆಯಲ್ಲಿ ರಕ್ಷಿಸಿದ ಈಶ್ವರನು ಸರ್ವದಾಜಾಗರೂಕನಾಗಿರುವುದರಿಂದ ದೇಹಯಾತ್ರೆಯನ್ನು ನಡೆಸಲು ಬೇರೊಬ್ಬನನ್ನು ಹುಡುಕಬೇಕಿಲ್ಲ. ಆ ಭಗವಂತನನ್ನೇ ಆಶ್ರಯಿಸಬೇಕೆಂದು ಹೇಳುವ ಮಾತೇ ವಿನಹ, ನಿವ್ಯಾಪಾರನಾಗಿರು ಎಂದಲ್ಲ. **ಅಲ್ಲಾದಪ್ಪೋದು** – ಹಾಗಿಲ್ಲದಿದ್ದರೆ – ಈಶ್ವರನೇ ರಕ್ಷಿಸುತ್ತಾನೆ, ನಾವೇನೂ ಮಾಡ ಬೇಕಿಲ್ಲವೆಂದರೆ, **ಭೋಜನಾದಿ ವ್ಯಾಪಾರಂಗಳುವಮ್** ಇತ್ಯಾದಿ–ಊಟ ವಸತಿಗಳಿಗಾಗಿ ಹಣಕಾಸನ್ನು ಸಂಪಾದಿಸಲು ಮಾಡುವ ಕಾರ್ಯಗಳನ್ನೂ. ಬಿಡಬೇಕಾದ ಪ್ರಸಂಗವು ಉಂಟಾಗುತ್ತದೆ. 2) **ಸ್ವಯಮ್ವೃತ್ತಿಂಡ ಭೂತಸ್ಯ** 3) **ಅಜ್ಞೋಜಂತುರನೀಶೋ ಯಂ** ಇತ್ಯಾದಿ 4) **ಅಪ್ರಮೇಯೋ ನಿಯೋಜ್ಯಶ್ಚ** ಇತ್ಯಾದಿ. ಸ್ವಯಂವೃತ್ತಿಂಡ

---

1) ವಿಷ್ಣುಧರ್ಮ

2) ಭಾರತಶಾಂತಿ 294-19 "ಸ್ವರಕ್ಷಣೇಪ್ಯಶಕ್ತಸ್ಯಕೋ ಹೇತುಃ ಪರರಕ್ಷಣೇ।" ಎಂಬುದು ಉತ್ತರಾರ್ಧ-ಜೀವನು ಅಚೇತನವಾದ ಮಣ್ಣಿನ ಮುದ್ದೆಯಂತೆ ಪರತಂತ್ರನು. ತನ್ನ ರಕ್ಷಣೆಯನ್ನು ಮಾಡಿಕೊಳ್ಳಲೂ ಅಶಕ್ತನು. ಹಾಗಿರುವಾಗ ಇತರರನ್ನು ರಕ್ಷಿಸುತ್ತಾನೆಂಬುದಕ್ಕೆ ಕಾರಣವಾಗಲಾರನು.

3) ಭಾರತ ಅರಣ್ಯಪರ್ವ 12-36-ಅಜ್ಞೋಜಂತುಃ-ಈ ಬದ್ಧಜೀವನು ಅಜ್ಞನು. ಸುಖವನ್ನು ಸಂಪಾದಿಸುವುದಕ್ಕೂ ದುಃಖವನ್ನು ಹೋಗ ಲಾಡಿಸುವುದಕ್ಕೂ ಅಸಮರ್ಥನು. ಈಶ್ವರನಿಂದ ಪ್ರೇರೇಪಿಸಲ್ಪಟ್ಟು ಸ್ವರ್ಗಕ್ಕಾಗಲಿ ನರಕಕ್ಕಾಗಲಿ ಹೋಗಬೇಕಾದವನು.

4) ಅಪ್ರಮೇಯಃ-ಅಳತೆಯಿಲ್ಲದವನು. ಪರಿಪೂರ್ಣನು. ಅನಿಯೋಜ್ಯಃ- ಇತರರಿಂದ ಪ್ರೇರೇಪಿಸಲ್ಪಡುವವನಲ್ಲ-ಸ್ವತಂತ್ರನು.

**ನಡತ್ತುಮ್ ಪಡಿಯೈಯುಮ್ ಶೊನ್ನವಿತ್ತನೈ. ಇಪ್ಪಾಟ್ಟುಕ್ಕುಮ್ ಇವ್ವಚನಙ್ಗಳುಕ್ಕುಮ್ ಇಪ್ಪಡಿ ತಾತ್ಪರ್ಯಮಿಲ್ಲಾದು ಪೋದು ಸರ್ವಶಾಸ್ತ್ರ ವಿರೋಧಮುಮ್ ಪೂರ್ವಾಪರವಿರೋಧಮುಮ್ ವರುಮ್. ಇಪ್ಪಡಿ ಈಶ್ವರ ಸ್ವಾತಂತ್ರ್ಯ ಸಹಜ ಕಾರುಣ್ಯಙ್ಗಳಡಿಯಾಹವರುಮ್ ಕಲಕ್ಕಙ್ಗಳುಕ್ಕು ಪ್ಪರಿಹಾರಮ್ ಶೊನ್ನೋಮ್.**

---

ಭೂತಸ್ಯ; ಅಜ್ಞೋಜಂತುರನೀಶೋಯಂ, ಇತ್ಯಾದಿಗಳಿಗೆ ಜೀವನು ಅತ್ಯಂತ ಪರತಂತ್ರನು ಎಂಬುದನ್ನು ತಿಳಿಸಲು ಮಾತ್ರ ತಾತ್ಪರ್ಯ. ಅಪ್ರಮೇಯಃ ಇತ್ಯಾದಿ ವಾಕ್ಯಗಳಿಗೆ ಈಶ್ವರನು ಅತ್ಯಂತ ಸ್ವತಂತ್ರನು. ಕರ್ಮಾನುಗುಣವಾಗಿಯೇ ಜೀವನನ್ನು ಪ್ರೇರೇಪಿಸುತ್ತಾನೆಂಬುದರಲ್ಲಿ ತಾತ್ಪರ್ಯ. ಯತ್ರಕಾಮಗಮಃ–ಸ್ವೇಚ್ಛಾವಿಹಾರಿ. ಸರ್ವವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವವನು ಬಾಲನು ಆಟದ ಸಾಮಾನುಗಳನ್ನೂ ಇಟ್ಟುಕೊಂಡು ಆಟವಾಡುವಂತೆ, ಭಗವಂತನು ಈ ಬದ್ಧ ಜೀವಿಗಳನ್ನು ಲೀಲಾಕಂತುಕಗಳ ಹಾಗೆ ಇಟ್ಟುಕೊಂಡು ಸಂತೋಷ ಪಡುತ್ತಾನೆ. ಇತ್ಯಾದಿ ವಾಕ್ಯಗಳಿಂದ ಜೀವನು ಅತ್ಯಂತ ಪರತಂತ್ರನು. ತನ್ನ ರಕ್ಷಣೆಯನ್ನು ಮಾಡಿಕೊಳ್ಳಲಶಕ್ತನು. ಆದ್ದರಿಂದ ಉಪಾಯಾನುಷ್ಠಾನವು ಇವನಿಗೆ ಬೇಕಿಲ್ಲವೆಂಬುದು ಪೂರ್ವಪಕ್ಷಿಯ ಅಭಿಪ್ರಾಯ. ಇದಕ್ಕೆ ಪರಿಹಾರ– ಭೂತೈಃ – ಎಂದು ಹೇಳಿರುವುದರಿಂದ ಭೂತ ಶಬ್ದವು ಕರ್ಮಾನುಗುಣ ಪ್ರವೃತ್ತ ಪ್ರಾಣಿಪರ. ಆದ್ದರಿಂದ ಉಪಾಯಾನುಷ್ಠಾನ ರೂಪ ಕರ್ಮವನ್ನು ಮಾಡಿಸಿ ತದನುಗುಣವಾಗಿಯೇ ರಕ್ಷಿಸುತ್ತಾನೆಂಬುದು ತಾತ್ಪರ್ಯ. ಅದನ್ನು **ಇತ್ಯಾದಿಪಲಿಲ್** – ಎಂದಾರಂಭಿಸಿ ವಿವರಿಸುತ್ತಾರೆ, ಆದಾಗಿ ಮೇಲೆ ಹೇಳಿದ ವಾಕ್ಯಗಳಲ್ಲಿ ಜೀವನ ಪಾರತಂತ್ರ್ಯವನ್ನೂ, ಈಶ್ವರನು ಕರ್ಮಾನುಗುಣವಾಗಿ ನಡೆಸುತ್ತಾನೆಂಬುದನ್ನೂ **ಶೊನ್ನವಿತ್ತನೈ** – ಹೇಳಿದುದಾಗಿ ತೀರ್ಮಾನ. ಪ್ರತಿಪಕ್ಷಬಾಧಕವನ್ನು ತಿಳಿಸುತ್ತಾರೆ. **ಇಪ್ಪಾಟ್ಟುಕ್ಕುಂ** ಇತ್ಯಾದಿ – **ಈ** ಪಾಶುರಕ್ಕೂ **ಈ** ಶ್ಲೋಕಗಳಿಗೂ ಹೀಗೆ ತಾತ್ಪರ್ಯವಿಲ್ಲದಿದ್ದರೆ, ಸರ್ವಶಾಸ್ತ್ರ ವಿರೋಧವೂ "ಜ್ಯೋತಿಷ್ಟೋಮೇನ ಸ್ವರ್ಗಕಾಮೋಯಜೇತ", ಎಂದು ಸ್ವರ್ಗಾದಿಪುರುಷಾರ್ಥೋಪಾಯ ವಿಧಾಯಕ ಸರ್ವಶಾಸ್ತ್ರ ವಿರೋಧವೂ, "ತಿರುಮಾಲಿರುಂಜೋಲೈಮಲೈ ಎನ್ರೇನ್ ಎನ್ನ" 'ಇನ್ರೆನ್ನೈಪ್ಪೊರುಳಾಕ್ಕಿ' ಎಂಬ ಪೂರ್ವಾಪರವಾಕ್ಯಗಳಿಗೆ ವಿರೋಧವೂ ಉಂಟಾಗುತ್ತದೆ.

**ಶೇಷ ಶೇಷಿಭಾವ ಸಂಬಂಧ, ಅದರ ಜ್ಞಾನ ಮೂಲಕವಾದ ವ್ಯಾಮೋಹ ಶಮನ**

ಇಪ್ಪಡಿ **ಈಶ್ವರಸ್ವಾತಂತ್ರ್ಯಮ್** ಇತ್ಯಾದಿ – ಹೀಗೆ ಮೇಲೆ ಹೇಳಿದ ರೀತಿಯಲ್ಲಿ **ಈಶ್ವರನ** ಸ್ವಾತಂತ್ರ್ಯವನ್ನೂ ಸಹಜ ಕಾರುಣ್ಯಗಳನ್ನೂ ಆಶ್ರಯಿಸಿ ಉಂಟಾಗುವ **ಕಲಕ್ಕಂಗಳುಕ್ಕು** – ಬುದ್ಧಿಭ್ರಮೆಗಳಿಗೆ, ಪರಿಹಾರವನ್ನು ಹೇಳಿಯಾಯಿತು. ಆದಾಗಿ, "ಈಶ್ವರನು ಸ್ವತಂತ್ರನಾದ್ದರಿಂದ, ವ್ಯಾಜವನ್ನು ಅನುಷ್ಠಿಸಿದರೂ ರಕ್ಷಿಸುವುದಿಲ್ಲ. ಸಹಜ ಕರುಣಾಶಾಲಿಯಾದ್ದರಿಂದ ವ್ಯಾಜವನ್ನು ಅನುಷ್ಠಿಸದೇ ಇದ್ದರೂ ರಕ್ಷಿಸುತ್ತಾನೆ. ವ್ಯಾಜವು ಅವಶ್ಯವೆಂದರೆ ಏತಕ್ಕೆ ಸ್ವತಂತ್ರನಾದ ಈಶ್ವರನು ಇದನ್ನು ಮುಂಚೆಯೇ ಉಂಟುಮಾಡಲಿಲ್ಲ. ಹಾಗೆ ಈ ವ್ಯಾಜವನ್ನು ಮುಂಚೆಯೇ ಉಂಟುಮಾಡದಿದ್ದರಿಂದ ಈಶ್ವರನ ಸ್ವಾತಂತ್ರ್ಯಕ್ಕೆ ದಕ್ಕೆಯುಂಟಾಗಲಿಲ್ಲವೇ ಎಂಬುವು ಆಭ್ರಮೆಗಳು. ಇವುಗಳನ್ನು "**ಈಶ್ವರನು** ಸ್ವತಂತ್ರನಾದರೂ ವೈಷಮ್ಯನೈರ್ಘೃಣ್ಯಾದಿ ದೋಷಗಳು ತನಗೆ ಬಾರದೆ ಇರಲು ಜೀವ ಕರ್ತೃಕವಾದ ವ್ಯಾಜವನ್ನು –ಯದೃಚ್ಛಾಸುಕೃತವನ್ನು ಅವಲಂಬಿಸಿಯೇ ರಕ್ಷಿಸುತ್ತಾನೆ. **ಈ** ವ್ಯಾಜವೂ ಅನಾದಿಯಾದ ಕರ್ಮಪರಂಪರೆಗಳಲ್ಲಿ ಇದು ಪರ್ಯಂತ ಉಂಟಾಗಲಿಲ್ಲವೆಂದೇ ಹೇಳಬೇಕು. ಕಾರ್ಯಾಭಾವಾತ್ ಸಾಮಗ್ರ್ಯಭಾವಃ. ಕಾರ್ಯವು ಉಂಟಾಗದಿದ್ದರಿಂದ ಅದು ಉಂಟಾಗಲುಬೇಕಾದ ಸಾಮಗ್ರಿಗಳು ಒಂದು ಕೂಡಲಿಲ್ಲವೆಂಬ ನ್ಯಾಯವನ್ನು ಅವಲಂಬಿಸಿ ಹೀಗೆ ಕಲ್ಪಿಸಬೇಕು.

## ಅಥ ಸಂಬಂಧಮೂಲಕ ಶಙ್ಕಾಃ ಪರಿಹ್ರಿಯಂತೇ

**ಸಂಬಂಧ ವಿಶೇಷಮಡಿಯಾಹ ವರುಮ್ ಕಲಕ್ಕತ್ತುಕ್ಕು ಪರಿಹಾರಮ್ ಶೊಲ್ಲುಹಿರೋಮ್. ಈಶ್ವರ್ರ ಶೇಷಿಯಾಯಿರುಕ್ಕ. ನಾಮ್ 1) "ಗರ್ಭಭೂತಾಸ್ತಪೋಧನಾಃ" ಎನ್ರುಮ್ ಕಣಕ್ಕಿಲೇ ಸ್ತನಂಧಯ ಪ್ರಾಯರಾಯಿರುಕ್ಕ, ತ್ತಾಯ್‌ಮುಲೈಪ್ಪಾಲುಕ್ಕು ಅರ್ತನಾಯ್ ಅಡಲ್ ಶೆಯ್ಯುಮ್ ಅಳವನ್ರಿಕ್ಕೇ, ಕೂಲಿ ಕೊಡುಪ್ಪಾರೈಪ್ಪೋಲೇ. ನಾಮ್ ಆತ್ಮಸಮರ್ಪಣಮ್ ಪಣ್ಣುಹೈಯುಮ್. ರಕ್ಷಿಕ್ಕವೇಣುಮೆನ್ರು ಅಪೇಕ್ಷಿಕ್ಕೈಯುಮ್, ವಿಶ್ವಸಿಕ್ಕೈಯುಮೆನ್ರಾರ್ಪೋಲೇ. ಶೊಲ್ಲುಹಿರ ಇವೈಯೆಲ್ಲಾಮ್, ಸ್ವರೂಪತ್ತುಕ್ಕು ಪೋರುನ್ದವೋ ವೆನ್ರು ಶಿಲರ್ ಸಿದ್ಧೋಪಾಯ ಶರೀರತ್ತೈಯ[illegible]ಕ್ಕಪ್ಪಾರ್ಪರ್ಹಳ್.**

ಇವರ್‌ಹಳ್ಳೈ ವಿಲಕ್ಕುಮ್ಪಡಿ :-ಪರಮರ್ಷಿಹಳುಮ್ [illegible]ಭಾಷ್ಯಕಾರಾದಿಹಳುಮ್, ವಿಶ್ವಾಸ ಪೂರ್ವಕ ಪ್ರಾರ್ಥನಾತ್ಮನಿಕ್ಷೇಪಾದಿಹಳ್ಳೈತ್ತಾಙ್ಗಳುಮ್ ಅನುಷ್ಠಿತ್ತು ಇದುಕ್ಕು ಶಾಸ್ತ್ರಙ್ಗಳೈಯುಮ್‌ಮೂದಲಿಪ್ಪಿತ್ತುಕ್ಕೊಂಡು ಉಪದೇಶ ಪರಂಪರೈಯುಮ್ ನಡತ್ತಿಪ್ಪೋರುಹೈಯಾಲೇ ಶೇಷಿತ್ವಾದಿ ಸಂಬಂಧಮ್ ನಿತ್ಯಮೋ

---

ಅನಂತರ ಸಂಬಂಧ **ಮಡಿಯಾಹ**–ಇತ್ಯಾದಿ–ಶೇಷಶೇಷಿ ಭಾವ ಸಂಬಂಧ ಮೂಲಕವಾಗಿ ಉಂಟಾಗುವ **ಕಲಕ್ಕಂಗಳುಕ್ಕು**–ಭ್ರಮೆಗಳಿಗೆ ಪರಿಹಾರವನ್ನು ತಿಳಿಸುತ್ತೇವೆ. ಎಂದು ಆಚಾರ್ಯರು ಪ್ರತಿಜ್ಞೆ ಮಾಡುತ್ತಾರೆ. **ಈಶರನ್ ಶೇಷಿಯಾಯಿರುಕ್ಕ** ಇತ್ಯಾದಿ–ಈಶ್ವರನ್–ಲಕ್ಷ್ಮೀವಿಶಿಷ್ಟ ನಾರಾಯಣನು ಶೇಷಿ–ಸ್ವಾಮಿಯಾಗಿರುವಾಗ, ನಾವು 1) **ಗರ್ಭಭೂತಾಸ್ತಪೋಧನಾಃ**,–ತಪಸ್ಸನ್ನೇ ಧನವಾಗಿವುಳ್ಳವರು ತಾಯಿಯ ಗರ್ಭದಲ್ಲಿರುವ ಶಿಶುವಿನ ಹಾಗೆ ನಿನ್ನಿಂದಲೇ ರಕ್ಷ್ಯರು ಇದು ದಂಡ ಕಾರಣ್ಯವಾಸಿಗಳಾದ ಋಷಿಗಳು ಶ್ರೀ ರಾಮಚಂದ್ರನಲ್ಲಿ ವಿಜ್ಞಾಪಿಸುವ ಮಾತು–ಹೀಗೆ ಸ್ತನಂಧಯ ಪ್ರಾಯರಾಗಿರುವಾಗ, **ತಾಯ್‌ಮುಲೈಪ್ಪಾಲುಕ್ಕು**–ತಾಯಿಯ ಎದೆ ಹಾಲನ್ನು ಕುಡಿಯಲು ಆರ್ತಿಯಿಂದ ಅಳುವುದು ವಿನಹ, ಅದಕ್ಕೆ ಕೂಲಿ ಕೊಡುವವರ ಹಾಗೆ ನಾವು ಆತ್ಮ ಸಮರ್ಪಣವನ್ನು ಮಾಡುವುದು, ರಕ್ಷಿಸಬೇಕೆಂದು ಅಪೇಕ್ಷಿಸುವುದು ವಿಶ್ವಾಸದಿಂದ ಕೂಡಿರುವುದು, **ಎನ್ರಾರ್‌ಪೋಲೇ**–ಎಂಬುವ ರೀತಿಯಲ್ಲಿ ಹೇಳುವ ಈ ಮಾತುಗಳೆಲ್ಲಾ ಶೇಷ ಭೂತನದ ಸ್ವರೂಪಕ್ಕೆ ಉಚಿತವಲ್ಲವೆಂದು, ಕೆಲವರು ಸಿದ್ಧೋಪಾಯನಾದ ಭಗವಂತನ ಆಶ್ರಯದಿಂದ, ಸಾಧ್ಯೋಪಾಯಗಳೆಂಬ ಭಕ್ತಿ ಪ್ರಪತ್ತಿಗಳ ಅನುಷ್ಠಾನವು ಬೇಕಿಲ್ಲವೆಂದು, ಅವುಗಳನ್ನು ಅಳಿಸಲು ನೋಡುತ್ತಾರೆ. ಅಂದರೆ ಸ್ವಾಮಿಯಾದ ಭಗವಂತನೇ ಶೇಷಭೂತನಾಗಿ ಶಿಶುವಿನಂತಿರುವ ಜೀವನನ್ನು ರಕ್ಷಿಸಲು ಸಿದ್ಧನಾಗಿರುವಾಗ ನಾವು ರಕ್ಷಿಸಬೇಕೆಂದು ಪ್ರಾರ್ಥಿಸುವುದು ಶೇಷಭೂತನ ಸ್ವರೂಪಕ್ಕೆ ಉಚಿತವಲ್ಲವೆಂಬುದು ಪೂರ್ವಪಕ್ಷಿಯ ಅಭಿಪ್ರಾಯ **ಇವರ್‌ಹಳ್ಳೈ ವಿಲಕ್ಕುಂಪಡಿ** ಎಂದು ಸಮಾಧಾನವನ್ನು ಹೇಳುತ್ತಾರೆ. ಆದಾಗಿ ಸಾಧ್ಯೋಪಾಯವನ್ನು ಅಂಗೀಕರಿಸದೆ **ಹೋದರೆ ಪ್ರಾಚೀನರ** ಅನುಷ್ಠಾನಕ್ಕೆ ವಿರೋಧವು ಏರ್ಪಡುತ್ತದೆ ಎಂದು **ಪರಮರ್ಷಿಹಳುಮ್ ಭಾಷ್ಯಕಾರಾದಿಹಳುಮ್**. ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಮಹಾಜ್ಞಾನಿಗಳಾದ ಋಷಿಗಳೂ, ಭಾಷ್ಯಕಾರ ಪ್ರಭೃತಿಗಳೂ ಮಹಾ ವಿಶ್ವಾಸ **ಪೂರ್ವಕ** ರಕ್ಷಾ ಭರಸ್ವೀಕಾರ ಪ್ರಾರ್ಥನೆಯನ್ನು ಮಾಡಿ ಆತ್ಮ ನಿಕ್ಷೇಪ-ಭರಸಮರ್ಪಣವನ್ನು ತಾವೂ ಅನುಷ್ಠಿಸಿ, ಇದಕ್ಕೆ ಶಾಸ್ತ್ರಗಳನ್ನೂ **ಮೂದಲಿಪ್ಪತ್ತುಕ್ಕೊಂಡು** – ಪ್ರಮಾಣವಾಗಿ ತೋರಿಸಿ, ಉಪದೇಶ ಪರಂಪರೆಯನ್ನು **ನಡತ್ತಿ**

---

1) ನ್ಯಸ್ತ ದಂಡಾವಯಂರಾಜನ್ ಜಿತಕ್ರೋಧಾ ಜಿತೇಂದ್ರಿಯಾಃ ।
ರಕ್ಷಿತ ವ್ಯಾಸ್ತ್ವಯಾ ರಾಜನ್ ಗರ್ಭಭೂತಾಸ್ತಪೋಧನಾಃ ॥ ರಾಮಾಯಣ ಆರಣ್ಯಕಾಂಡ (1-೯1)

ಎಲೈ ಶ್ರೀರಾಮ ಚಂದ್ರನೇ ! ದಂಡ ಕಾರಣ್ಯವಾಸಿಗಳಾದ ನಾವು ದಂಡನೆಯನ್ನು ಕೈ ಬಿಟ್ಟವರು ಜಿತೇಂದ್ರಿಯರು ಕೋಪವಿಲ್ಲದವರು ತಪೋಧನರು ಗರ್ಭದಲ್ಲಿರುವ ಶಿಶುವನ್ನು ತಾಯಿಯು ರಕ್ಷಿಸುವಂತೆ ನಿನ್ನಿಂದ ರಕ್ಷಿಸಲ್ಪಡತಕ್ಕವರು ನಾವಾಗಿ ಏನು ಪ್ರಯತ್ನವನ್ನೂ ಮಾಡದವರು ಎಂಬುದು ಭಾವ.

**ಯಾಹಿಲುಮ್ ಕರ್ಮವಾನ್‌ಗಳಾನ ಜೀವರ್‌ಹಳ್ ವಿಷಯತ್ತಿಲ್. ಈಶ್ವರನೊರು ಸಾಧ್ಯೋಪಾಯ ವಿಶೇಷತ್ತೈ ಮುನ್ನಿಟ್ಟಲ್ಲದು ರಕ್ಷಿಯಾರ್ ಎನ್ರು ಶಾಸ್ತ್ರನಿಷ್ಠರ್‌ಕ್ಕು ಪರಿಗ್ರಹಿಕ್ಕವೇಣುಮ್. ಶಾಸ್ತ್ರತ್ತೈಕ್ಕೈವಿಟ್ಟಾಲ್ ಇಸ್ಸಂಬಂಧಮ್ ಶೊಲ್ಲುಹೈಕ್ಕು ಈಶ್ವರನೈಯುಮ್ ಕಿಡೈಯಾದು.**

**ಅನಪಿನ್ಬು ಸಂಬಂಧಮುಡಿಯಾಹ ಈಶ್ವರನ್ ರಕ್ಷಿಕ್ಕ ಪ್ರಾಪ್ತನೆನ್ರುಮ್, ಶೇಷಭೂತನಾನ ವಿವನ್ ತನ್ನೈ ರಕ್ಷಿತ್ತುಕ್ಕೊಳ್ಳ ಪ್ರಾಪ್ತನನ್ರೆನ್ರುಮ್, ಮುನ್ಬು ಶೊನ್ನದವುಮ್, ರಕ್ಷ್ಯರಕ್ಷಕಭಾವತ್ತುಕ್ಕು ಲೋಕದೃಷ್ಟಪ್ರಕ್ರಿಯೈಯಾಲೇ ಔಚಿತ್ಯಮ್ ಶೊನ್ನಪಡಿಯಿತ್ತನೈ; ಇವ್ವಳವೇ ರಕ್ಷೈಕ್ಕು ನಿರಪೇಕ್ಷ ಕಾರಣ ಮೆನ್ನಪಡಿಯನ್ರು. ಅಪ್ಪಡಿಕ್ಕೊಳ್ಳಿಲ್ ಸರ್ವರುಮ್ ನಿತ್ಯಮುಕ್ತರಾಹ ಪ್ರಸಂಗಿಕ್ಕುಮ್. ಸ್ವಾತಂತ್ರ್ಯತ್ತಾಲೇ ನಿಯಮಮ್ ಶೊಲ್ಲಿಲ್, ಮುನ್‌ಬು ಶೊನ್ನಪಡಿಯೇ ವೈಷಮ್ಯ ನೈರ್ಘೃಣ್ಯಙ್ಗಳ್ ಪ್ರಸಙ್ಗಿಕ್ಕುಮ್.**

---

ಪ್ಪೋರುಹೈಯಾಲೇ–ನಡೆಸಿಕೊಂಡು ಬರುತ್ತಿರುವುದರಿಂದ, **ಶೇಷಿತ್ವಾದಿ ಸಂಬಂಧಂ**–ಭಗವಂತನು ಶೇಷಿ, ನಾವು ಶೇಷಭೂತರು ಎಂಬ ಸಂಬಂಧವು ನಿತ್ಯವಾಗಿದ್ದರೂ, ಪುಣ್ಯಪಾಪ ರೂಪ ಕರ್ಮಪರತಂತ್ರರಾದ ಜೀವಾತ್ಮರ ವಿಷಯದಲ್ಲಿ ಈಶ್ವರನು, **ಸಾಧ್ಯೋಪಾಯ ವಿಶೇಷತ್ತೈ**–ಜೀವ ಕರ್ತೃಕ ಉಪಾಯ ವಿಶೇಷಾನುಷ್ಠಾನವನ್ನು **ಮುನ್ನಿಟ್ಟಲ್ಲದು**–ವ್ಯಾಜವಾಗಿ ಅವಲಂಬಿಸದೆ, ರಕ್ಷಿಸುವುದಿಲ್ಲವೆಂಬುದು **ಶಾಸ್ತ್ರನಿಷ್ಠರುಕ್ಕು**–ಶಾಸ್ತ್ರದಲ್ಲಿ ನಿಷ್ಠೆಯುಳ್ಳವರಿಗೆ ಶಾಸ್ತ್ರವಶ್ಯರಿಗೆ ಎಂದರ್ಥ. **ಪರಿಗ್ರಹಿಕ್ಕವೇಣುಮ್** – ಪರಿಗ್ರಹಿಸಬೇಕಾದದ್ದು. **ಶಾಸ್ತ್ರತ್ತೈಕ್ಕೈವಿಟ್ಟಾಲ್** ಇತ್ಯಾದಿ-ಶಾಸ್ತ್ರವನ್ನು ಕೈ ಬಿಟ್ಟರೆ -– ಅಂದರೆ ಶಾಸ್ತ್ರವನ್ನು ಒಪ್ಪದಿದ್ದರೆ, ಈ ಶೇಷ ಶೇಷಿಭಾವ ಸಂಬಂಧವನ್ನು ಪ್ರತಿಪಾದಿಸಲು, **ಈಶ್ವರನೂ** ಇಲ್ಲ. ಪ್ರತ್ಯಕ್ಷಾನುಮಾನವೆಂಬ ಪ್ರಮಾಣಗಳಿಂದ **ಈಶ್ವರನು** ಇದ್ದಾನೆಂಬುದನ್ನು ನಿರೂಪಿಸಲಾಗುವುದಿಲ್ಲ, ಶಾಸ್ತ್ರದಿಂದಲೇ ಈಶ್ವರನು ಇದ್ದಾನೆಂಬುದನ್ನು ನಿರೂಪಿಸಬೇಕು. **ಈಶ್ವರ** ನಿರೂಪಣಕ್ಕೆ ಶಾಸ್ತ್ರವನ್ನು ಒಪ್ಪಿದರೆ, ಆ ಈಶ್ವರನು ಭಕ್ತಿ ಪ್ರಪತ್ತಿರೂಪ ವ್ಯಾಜಸಾಪೇಕ್ಷನಾಗಿಯೇ ರಕ್ಷಿಸುತ್ತಾನೆಂಬುದನ್ನು ಏಕೆ ಒಪ್ಪುತ್ತಿಲ್ಲ, ಅವಶ್ಯ ಒಪ್ಪಬೇಕು ಎಂಬುದು ಭಾವ.

ಅನಪಿನ್ಬು-ಹೀಗೆ ವ್ಯವಸ್ಥಿತವಾಗಿ **ಈಶ್ವರನು** ಶೇಷಿಯಾದ್ದರಿಂದ ಚೇತನನನ್ನು ರಕ್ಷಿಸಲು ಪ್ರಾಪ್ತನು. ಚೇತನರು ಶೇಷಭೂತರಾದ್ದರಿಂದ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಪ್ರಾಪ್ತರಲ್ಲರು, ಎಂದು **ಮುನ್ಬು**–ಪ್ರಧಾನ ಪ್ರತಿತಂತ್ರಾಧಿಕಾರದಲ್ಲಿ ಹೇಳಿರುವದಕ್ಕೆ ವಿರೋಧವು ಏರ್ಪಡುವುದಿಲ್ಲವೇ ಎಂದರೆ, **ರಕ್ಷ್ಯರಕ್ಷಕಭಾವತ್ತುಕ್ಕು**–ಈಶ್ವರನು ರಕ್ಷಕನು, ಜೀವನು ರಕ್ಷ್ಯನು ಎಂಬ ಭಾವಕ್ಕೆ, ಲೋಕ ದೃಷ್ಟಪ್ರಕ್ರಿಯೆಯಿಂದ, ಶೇಷಿಯು ತನ್ನ ಸ್ವತ್ತನ್ನೂ ತನ್ನ ಮಕ್ಕಳನ್ನೂ ತಾನೇ ರಕ್ಷಿಸುವುದು ಉಚಿತವೆಂದೂ, ಸ್ವತ್ತೂ ಮತ್ತು ಮಕ್ಕಳು ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಅಪ್ರಾಪ್ತರೆಂದೂ ಔಚಿತ್ಯದಿಂದ ಹೇಳಿದ ಮಾತು. **ಇವ್ವಳವೇ** ಇತ್ಯಾದಿ ಇಷ್ಟೇ ರಕ್ಷಣಕ್ಕೆ ನಿರಪೇಕ್ಷ ಕಾರಣವೆಂದಲ್ಲ. ಅದೇ ಅಧಿಕಾರದಲ್ಲಿ ಕರ್ಮವಶ್ಯರನ್ನು ರಕ್ಷಿಸುವಾಗ ಒಂದು ಉಪಾಯದಲ್ಲಿ ಪ್ರವರ್ತಿಸಿ ರಕ್ಷಿಸುವುದು ಈಶ್ವರನಿಗೆ ಸ್ವಸಂಕಲ್ಪ ನಿಯತವೆಂದು ಹೇಳಿರುವುದನ್ನು ಮರೆಯಬಾರದೆಂದರ್ಥ. ವಿಪಕ್ಷದಲ್ಲಿ ಬಾಧಕವನ್ನು **ಅಪ್ಪಡಿಕ್ಕೊಳ್ಳಿಲ್** ಎಂದಾರಂಭಿಸಿ ತಿಳಿಸುತ್ತಾರೆ. ಹಾಗೆ ಶೇಷ ಶೇಷಿ ಭಾವ ಸಂಬಂಧ ಮೂಲಕ ಶೇಷಿಯು ತನಗೆ ಶೇಷಭೂತನಾದ ಜೀವನನ್ನು ತಾನೇ ವ್ಯಾಜನಿರಪೇಕ್ಷನಾಗಿ ರಕ್ಷಿಸುತ್ತಾನೆಂದರೆ, **ಸರ್ವರುಮ್** ಇತ್ಯಾದಿ ಎಲ್ಲರೂ ನಿತ್ಯಮುಕ್ತರಾಗಬೇಕೆಂಬ ಪ್ರಸಂಗವು ಉಂಟಾಗುತ್ತದೆ. **ಸ್ವಾತಂತ್ರ್ಯತ್ತಾಲೇ** ಇತ್ಯಾದಿ. **ಈಶ್ವರನು** ತನ್ನ ಸ್ವಾತಂತ್ರ್ಯದಿಂದ ಕೆಲವರನ್ನು ರಕ್ಷಿಸುತ್ತಾನೆ, ಮತ್ತೆ ಕೆಲವರನ್ನು ರಕ್ಷಿಸುವುದಿಲ್ಲವೆಂದು ಹೇಳಿದರೆ, ಹಿಂದೆ ಹೇಳಿದ ರೀತಿಯಲ್ಲಿ **ವೈಷಮ್ಯ** – ಕೆಲವರಲ್ಲಿ ಪಕ್ಷಪಾತ, **ನೈರ್ಘೃಣ್ಯ** – ಕೆಲವರಲ್ಲಿ ದಯೆ

**ಯುಕ್ತಿಮಾತ್ರತ್ತಾಲ್** ಇವ್ವರ್ಥಙ್ಗಳ್ ಶೊಲ್ಲುವಾರ್ಕ್ಕು ಸಂಬಂಧಜ್ಞಾನಮೇ ಅಪೇಕ್ಷಿತಮ್ ?ರಕ್ಷಾಪೇಕ್ಷಾದಿಗಳ್ ವೇಣ್ಡಾ. ಪೆನ್ರುಶೊಲ್ಲವೊಣ್ಣಾದು; ಅಚಿದ್ದ್ರವ್ಯಙ್ಗಳುಮ್ ಪಶುಮೃಗಪಕ್ಷ್ಯಾದಿಹಳುಮ್ ಸ್ತನಂಧಯರುಮ್, ರಕ್ಷಾಪೇಕ್ಷಾರಹಿತಙ್ಗಳಾನಾರ್ಪೋಲೇ ಸಂಬಂಧ ಜ್ಞಾನರಹಿತಙ್ಗಳು ಮಾಯಿರುಕ್ಕ, ಅವತ್ತೈರಕ್ಷಿಕ್ಕಕ್ಕಾಣಾ ನಿನ್ರೋಮಿರೇ. ಅಪ್ಪಡಿ ಕ್ಕಂಡೋಮಾಹಿಲುಮ್ ಶಾಸ್ತ್ರ ಬಲತ್ತಾಲೇ ಇಙ್ಗು ಸಂಬಂಧಜ್ಞಾನಮ್ ಅಪೇಕ್ಷಿತಮೆನ್ನಿಲ್, ಶಾಸ್ತ್ರಮ್ ಶೊನ್ನಕಟ್ಟಳೈಯಿಲೇ ಜ್ಞಾನವಿಶೇಷಮ್ ಸ್ವೀಕರಿಕ್ಕವೇಣುಮ್. ತನ್ನೈ ಈಶ್ವರರ್ ರಕ್ಷಿಕ್ಕುಮ್ಪೋದು ಸಂಬಂಧತ್ತೋಡೇ ಕೂಡ ವಿಲಕ್ಕಾಮೈಯೇ ವೇಣ್ಡುವದೆನ್ನಿಲ್. ಅದುವುಮ್ ಅಸುಪಪನ್ನಮ್; ಸುಷುಪ್ತ್ಯಾದ್ಯವಸ್ಥೈಹಳಿಲೇ ಎಲ್ಲಾರ್ಕ್ಕುಮ್ ಮೋಕ್ಷಮ್ ಕೊಡುಕ್ಕ ಪ್ರಸಙ್ಗಿಕ್ಕೈಯಾಲ್. ತರ್ಣ ವಿಲಕ್ಕುಹೈಕ್ಕು ಯೋಗ್ಯತೆಯುಳ್ಳ ಅವಸ್ಥೈಯಿಲೇ ವಿಲಕಾದೊ[illegible]ಯೇ ಅಪೇಕ್ಷಿತಮೆನ್ನವು ಮೊಣ್ಣಾದು; ವಿಲಕ್ಕುಹೈಕ್ಕು ಯೋಗ್ಯತೆಯಿಲ್ಲಾದ ಅಚಿತ್ತೈಯುಮ್ ವಿಲಕ್ಕುಹಿರ ಪಶ್ವಾದಿ ಹಳೈಯುಮ್ ಪುತ್ರಾದಿಹಳೈಯುಮ್ ರಕ್ಷಿಕ್ಕ ಕ್ಕಾಣ್ಕೈಯಾಲ್.

ಅನಪಿನ್ಬು 1) "ಯೇನಾಥ ವಂತೋಹಿ ಭವನ್ತಿ ಲೋಕೇ ತೇನಾತ್ಮ ಕರ್ಮಾಣಿ ಸಮಾರಭಂತೇ ।
ತೇಷಾಂ ಹಿ ಕಾರ್ಯೇಷು ಭವಂತಿ ನಾಥಾಶ್ಶೈಬ್ಯಾದಯೋ ರಾಮ ಯಥಾಯಯಾತೇಃ॥

---

ಯಿಲ್ಲದಿರುವುದು ಎಂಬ ದೋಷಗಳು ಈಶ್ವರನಿಗೆ ಉಂಟಾಗುತ್ತವೆ. **ಯುಕ್ತಿಮಾತ್ರತ್ತಾಲ್** ಇತ್ಯಾದಿ ಕೇವಲ ಯುಕ್ತಿಯಿಂದ "ಈಶ್ವರನೇ ರಕ್ಷಿಸುತ್ತಾನೆ ನಾವೇನನ್ನೂ ಮಾಡಬೇಕಿಲ್ಲ" ಇತ್ಯಾದಿ ಅರ್ಥಗಳನ್ನು ಹೇಳುವವರಿಗೆ, ಸಂಬಂಧ ಜ್ಞಾನವೇ ಅಪೇಕ್ಷಿತ, ರಕ್ಷಿಸಬೇಕೆಂಬ ಅಪೇಕ್ಷಾದಿಗಳೂ ಬೇಡವೆಂದು ಹೇಳಲಾಗುವುದಿಲ್ಲ. ಏಕೆಂದರೆ **ಅಚಿದ್ರವ್ಯಂಗಳುಮ್** ಇತ್ಯಾದಿ ಅಚಿತ್ಪದಾರ್ಥಗಳೂ, ಪಶುಮೃಗ ಪಕ್ಷ್ಯಾದಿಗಳೂ, ಸ್ತನಂ ಧಯರೂ – ಶಿಶುಗಳೂ ರಕ್ಷಿಸಬೇಕೆಂದು ಅಪೇಕ್ಷೆ ಪಡೆದೆ ಇರುವಾಗ ಮತ್ತು ಪಶುಮೃಗಪಕ್ಷ್ಯಾದಿಗಳು ಸಂಬಂಧ ಜ್ಞಾನವಿಲ್ಲದೆ ಇರುವಾಗ ರಕ್ಷಿಸುವುದನ್ನೂ ನೋಡುತ್ತಿದ್ದೇವೆ. **ಅಪ್ಪಡಿಕ್ಕಂಡೋಮೋಯಾಹಿಲುಮ್** – ಇತ್ಯಾದಿ ಹಾಗೆ ಲೋಕದಲ್ಲಿ ನೋಡಿದ್ದರೂ, ಶಾಸ್ತ್ರಬಲದಿಂದ ಸಂಬಂಧ ಜ್ಞಾನವು ಅಪೇಕ್ಷಿತವೆಂದು ಹೇಳಿದರೆ, **ಶಾಸ್ತ್ರವು** ಹೇಳಿದ ರೀತಿಯಲ್ಲಿ ಜ್ಞಾನವಿಶೇಷವನ್ನು ಸ್ವೀಕರಿಸಬೇಕು. "ಮಾಮೇಕಂ ಶರಣಂವ್ರಜ" ಎಂದು ಶಾಸ್ತ್ರವು ವಿಧಿಸಿದ ಜ್ಞಾನವೇ ರಕ್ಷಣಕ್ಕೆ ಉಪಾಯವೆಂದು ಅಕಾಮನೂ ಸ್ವೀಕರಿಸಬೇಕೆಂಬುದು ತಾತ್ಪರ್ಯ. ತಾನು ಒಂದು ವ್ಯಾಜವನ್ನು ಅನುಷ್ಠಿಸಿದರೆ, ತಾನೇ ತನ್ನನ್ನು ರಕ್ಷಿಸಿಕೊಳ್ಳುವಂತಾಗುತ್ತದೆ, ರಕ್ಷಕನಾದ **ಈಶ್ವರನ**[illegible] ರಕ್ಷಿಸಬೇಡವೆಂದು ತಡೆದಂತಾಗುತ್ತದೆಯಾದ್ದರಿಂದ ವ್ಯಾಜಾನುಷ್ಠಾನವೇ ಕೂಡದು ಎಂಬ ಮತವನ್ನು, **ತನ್ನೈ ಈಶ್ವರನ್ ಕ್ಷಿಕ್ಕುಂಪೋದು** ಎಂದಾರಂಭಿಸಿ ಪರಿಹರಿಸುತ್ತಾರೆ. ಅದಾಗಿ ತನ್ನನ್ನು ಈಶ್ವರನು ರಕ್ಷಿಸುವಾಗ ಸಂಬಂಧಜ್ಞಾನದ ಜತೆಗೆ ತಡೆಯದೇ, (ಅನಿವಾರಣ ಮಾತ್ರ) ಇರುವುದೇ ಬೇಕಾದದ್ದೆಂದರೆ, ಅದೂ **ಸರಿಯಿಲ್ಲ**. ಅವಿಕೆಂದರೆ **ಸುಷುಪ್ತ್ಯಾದಿ** ಗಾಢನಿದ್ರೆಮಾಡುವಾಗಲೂ ಆದಿಶಬ್ದದಿಂದ ಮೂರ್ಛಾವಸ್ಥೆಯಲ್ಲಿಯೂ ಎಲ್ಲರಿಗ ಮೋಕ್ಷವನ್ನು ಕೊಡಲು ಪ್ರಸಕ್ತವಾಗುತ್ತದೆ. **ತರ್ಣವಿಲಕ್ಕುಹೈಕ್ಕು** ಇತ್ಯಾದಿ – ಅನಿವಾರಣ ಮಾತ್ರವೆಂದು ಹೇಳುವುದರ ತಾತ್ಪರ್ಯವೇನೆಂದರೆ, ನಾವು ತಡೆಯುದೆ ಇರಲು ಯೋಗ್ಯತೆಯುಳ್ಳ ಅವಸ್ಥೆಯಲ್ಲಿ ತಡೆಯದೇ ಇರಬೇಕಾದುದೇ ಅಪೇಕ್ಷಿತವೆಂದು ತಾತ್ಪರ್ಯ, ಎಂದು ಹೇಳಿದರೆ **ವಿಲಕ್ಕುಹೈಕ್ಕು** ಇತ್ಯಾದಿ – ನಿವಾರಣೆ ಮಾಡಲು ಅಂದರೆ ತಡೆಯಲು ಯೋಗ್ಯತೆಯಿಲ್ಲದ ಅಚೇತನ ಪದಾರ್ಥಗಳನ್ನೂ, ತಡೆಯುವ ಜನಕರುಗಳನ್ನೂ, ಪುತ್ರಪೌತ್ರಾದಿಗಳನ್ನೂ ರಕ್ಷಿಸುವುದನ್ನು ನೋಡಿದ್ದೇವಾದ್ದರಿಂದ, ಅಮಾತೂ ಸರಿಯಲ್ಲ.

ಹಾಗಾದರೆ, 1) **ಯೇನಾಥವಂತಃ** ಎಂಬ ಶ್ಲೋಕದಲ್ಲಿ ಜೀವನವ್ಯಾಪಾರವು ಏನೂ ಬೇಕಿಲ್ಲವೆಂಬ ಮತವು

---

1) ಭಾರತ ಅರಣ್ಯಪರ್ವ 161–2

**ಎನ್ಗಿರ ಶ್ಲೋಕತ್ತಿಲುಮ್ ನಾಥಶಬ್ದತ್ತಿಲ್ ವ್ಯುತ್ಪತ್ತಿಯಾಲುಮ್, ನಿರ್ಭರತ್ತೈಕ್ಕು ಉಪಯುಕ್ತಮಾನ ಸಂಬಂಧ ವಿಶೇಷತ್ತೈ ಚೊಲ್ಲುಹಿರ ಮತುಪ್ ಪ್ರತ್ಯಯತ್ತಾಲುಮ್ ಯಾಚನಮುಮ್, ಆತ್ಮನಿಕ್ಷೇಪಮುಮ್, ವ್ಯಂಜಿತಮಾಯಿತ್ತು.**

**ಅಲ್ಲಾದಪೋದು ಅತಿಪ್ರಸಙ್ಗಾದಿ ದೋಷಙ್ಗಳ್ ವರುಮ್. "ನಾಥವಂತಃ" ಎನ್ಗಿರ ವಿಡತ್ತಿಲಿತ್ತನೈ ವಿವಕ್ಷೈಕೊಳ್ಳಾದಪೋದು ಲೋಕ ನೀತಿಯಿಲುಳ್ಳದೆಲ್ಲಾಮ್ ಮೋಕ್ಷಶಾಸ್ತ್ರತ್ತಿಲ್ ಊಹಿಕ್ಕೈ ವಚನ ವಿರುದ್ಧಮ್**

### ಸಾಧ್ಯೋಪಾಯಾಶಕ್ತ್ವೇಪಿ ಸ್ವರಕ್ಷಣೇಪ್ಯಶಕ್ತ ಇತಿ ಅಪ್ತವಾಕ್ಯಸ್ಯ ಭಾವಃ

**ಸರ್ವರಕ್ಷಕನಾನ ಈಶ್ವರನುಂಡಾಯಿರುಕ್ಕ ಸ್ವರಕ್ಷಣ ವ್ಯಾಪಾರತ್ತಿಲ್ ನಮುಕ್ಕು ಅನ್ವಯಮಿಲ್ಲೈ ಎನ್ಗಿರ ಆಪ್ತರ್ ಪಾಶುರತ್ತುಕ್ಕು ತಾತ್ಪರ್ಯಮ್ ಶೊಲ್ಲುಹಿರೋಮ್ :-**

**ಯದರ್ಥಂತು ಕೃತೋನ್ಯಾಸಸ್ತದರ್ಥಂ ನಪುನಃ ಕ್ರಿಯಾ ।**
**ಪೂರ್ವಮಪ್ಯಪರಾಧೀನ ಪ್ರವೃತ್ತಾವಸ್ಯ ನಾನ್ವಯಃ ॥೨೦॥**

---

ಹೇಳಿದೆಯಲ್ಲಾ ಎಂದರೆ ಅದಕ್ಕೆ ಆನಪಿನ್ಬು ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ. **ಆನಪಿನ್ಬು**-ರಕ್ಷಿಸಬೇಕೆಂಬ ಪ್ರಾರ್ಥನಾ ರೂಪ ವ್ಯಾಜ ವಿಶೇಷವು ಅವಶ್ಯಬೇಕೆಂದು ತೀರ್ಮಾನವಾದ ಮೇಲೆ, 1) **ಯೇನಾಥವಂತಃ** ಎಂಬ ಶ್ಲೋಕದಲ್ಲಿ ಲೋಕದಲ್ಲಿ ತಮಗೆ ನಾಥನನ್ನು (ರಕ್ಷಕನನ್ನು)ಉಳ್ಳವರು, ತಮ್ಮ ಆತ್ಮ ರಕ್ಷಣ ವ್ಯಾಪಾರವನ್ನು ತಾವೇ ಮಾಡಿಕೊಳ್ಳುವದಿಲ್ಲ. ಯ ಯಾತಿಗೆ ಶೈಬ್ಯಾದಿಗಳು ರಕ್ಷಕರಾದ ಹಾಗೆ, ಆ ಜನರ ಯೋಗಕ್ಷೇಮಗಳು ಅವರ ನಾಥರ ಅಧೀನವೆಂದು ಹೇಳಿರುವುದು ಹೇಗೆ ಸಮಂಜಸವಾಗುತ್ತದೆ ಎಂದರೆ, ಈ ಶ್ಲೋಕದಲ್ಲಿಯೂ ನಾಥ ಶಬ್ದಕ್ಕೆ ನಾಥೃ-ಯಾಂಚಾಯಾಂ, ಎಂಬ ಧಾತುವಿನಿಂದ ಏರ್ಪಟ್ಟ ಉತ್ಪತ್ತಿಯಿಂದಲೂ ನಾಥನ್-ನಾಥವಂತಃ ಎಂಬಲ್ಲಿ ನಿರ್ಭರತೆಗೆ ಉಪಯುಕ್ತವಾದ ಭರಸ್ವೀಕತೃತ್ವ ರೂಪ ಸಂಬಂಧವನ್ನು ಹೇಳುವ ಮತುಪ್ ಪ್ರತ್ಯಯದಿಂದಲೂ ಯಾಚನೆಯೂ ಆತ್ಮನಿಕ್ಷೇಪವೂ **ವ್ಯಂಜಿತಮಾಯಿಟ್ರು**-ತಿಳಿಸಲ್ಪಟ್ಟಿತು **ಅಲ್ಲಾದಪ್ಪೋದು**-ಹೀಗೆ ಅರ್ಥವನ್ನು ಅಂಗೀಕರಿಸದೆ ಹೋದರೆ ಅತಿಪ್ರಸಂಗಾದಿ ದೋಷಗಳು ಬರುತ್ತವೆ. **ನಾಥವಂತಃ**-ಎಂಬ ಸ್ಥಲದಲ್ಲಿ ಇಷ್ಟು ವಿವಕ್ಷೆಯನ್ನು ಅಂಗೀಕರಿಸದೆ ಹೋದರೆ, ಲೋಕ ರೀತಿಯಲುಳ್ಳದೆಲ್ಲಾ ಮೋಕ್ಷ ಶಾಸ್ತ್ರದಲ್ಲಿ ಊಹಿಸುವುದು "ಮಾಮೇಕಂ ಶರಣಂವ್ರಜ, ಆತ್ಮಾನಂ ಮಯಿ ನಿಕ್ಷಿಪೇತ್, ಇತ್ಯಾದಿ ಉಪಾಯಾನುಷ್ಠಾನ ವಿಧಾಯಕ ಪ್ರಮಾಣ ವಚನಗಳಿಗೆ ವಿರುದ್ಧ.

### ಸ್ವರಕ್ಷಣಾರ್ಥಸ್ವ ವ್ಯಾಪಾರದಲ್ಲಿ ತನಗೆ ಅನ್ವಯವಿಲ್ಲವೆಂಬ ಆಪ್ತರ ವಚನಕ್ಕೆ ತಾತ್ಪರ್ಯ.

ಮುಮುಕ್ಷುವು ಸ್ವರಕ್ಷಣಾರ್ಥವಾಗಿ ನಿಕ್ಷೇಪಾದಿಗಳನ್ನು ಮಾಡಬೇಕೆಂದರೆ, ತನ್ನ ರಕ್ಷಣದಲ್ಲಿ ತನಗೆ ಅನ್ವಯವಿಲ್ಲವೆಂಬ ಆಪ್ತ ವಚನಗಳಿಗೆ ಏನು ತಾತ್ಪರ್ಯವೆಂದರೆ, **ಸರ್ವರಕ್ಷಕನಾನ ಈಶ್ವರನ್** ಎಂದಾರಂಭಿಸಿ ಸಮಾಧಾನವನ್ನು ಅನುಗ್ರಹಿಸುತ್ತಾರೆ. ಅದಾಗಿ ಸರ್ವೇಶ್ವರನು ಸರ್ವರಕ್ಷಕನಾಗಿರುವಾಗ ಸ್ವರಕ್ಷಣ ವ್ಯಾಪಾರದಲ್ಲಿ ನಮಗೆ ಅನ್ವಯವಿಲ್ಲವೆಂಬ ಆಪ್ತರ ವಚನಕ್ಕೆ ತಾತ್ಪರ್ಯವನ್ನು ತಿಳಿಸುತ್ತೇವೆ. **ಯದರ್ಥಂತು ಕೃತೋನ್ಯಾಸಃ** - ಇತ್ಯಾದಿ-ಯಾವ ಫಲಕ್ಕೋಸ್ಕರ ಭರನ್ಯಾಸವು ಮಾಡಲ್ಪಟ್ಟಿತೋ ಆ ಫಲಕ್ಕೋಸ್ಕರ ಪುನಃ ಭರನ್ಯಾಸ ರೂಪ ಕ್ರಿಯೆಯನ್ನು ಮಾಡಕೂಡದು, ಎಂದು ಪ್ರಪನ್ನನ ಉತ್ತರಾವಸ್ಥೆಯನ್ನು ಈ ಆಪ್ತವಾಕ್ಯವು ತಿಳಿಸುತ್ತದೆ ಎಂಬುದು ತಾತ್ಪರ್ಯ. ಪ್ರಪತ್ತಿಗೆ ಪೂರ್ವಾವಸ್ಥೆಯನ್ನು ಈ ವಾಕ್ಯವು ತಿಳಿಸುವುದಾದರೆ

**ಯಥಾಪ್ರಮಾಣಮ್** ಸ್ವರಕ್ಷಣ ಭರಸಮರ್ಪಣಂ ಪಣ್ಣಿನವನುಕ್ಕುಪ್ಪಿನ್ಪು ಸ್ವರಕ್ಷಣಾರ್ಥ ವ್ಯಾಪಾರತ್ತಿಲ್ ಪ್ರಾಪ್ತಿಯಿಲ್ಲೈ. **ಮುನ್ಬುತಾನುಂ** ಸ್ವರಕ್ಷಣಾರ್ಥಮಾಹಪ್ಪಣ್ಣಿನ ಸಮರ್ಪಣಾದಿ ವ್ಯಾಪಾರಮುಮ್ ಸರ್ವಕರ್ತಾವಾನ ಅವನ್ತಾನೇ ಬೀಜಾಙ್ಕುರ ನ್ಯಾಯತ್ತಾಲೇ ಅನಾದಿಯಾಹ ಪ್ರವರ್ತಿಪ್ಪಿತ್ತ ಕರ್ಮ ಪ್ರವಾಹ ವಿಪಾಕ ವಿಶೇಷತ್ತಿಲೇ ವನ್ದದೊರು ಯಾದೃಚ್ಛಿಕ ಸುಕೃತಾದಿ ವಿಶೇಷಕಾರಣತ್ತೈ ಮುನ್ನಿಟ್ಟುಕ್ಕೊಂಡು ಪಣ್ಣುವಿತ್ತಾನಾಹೈಯಾಲ್ ನಾಮೇ ನಮ್ಮೈ ರಕ್ಷಿತುಕ್ಕೊಳ್ಳುಹಿರೋಮೆನ್ರಿರುಕ್ಕ ಪ್ರಾಪ್ತಿಯಿಲ್ಲೈ.

## ನಿಗಮನೇ ಸ್ವಸಿದ್ಧಾನ್ತಮಾಹ

ಸರ್ವ ರಕ್ಷಕನಾಹ ಮೂಲಮನ್ತ್ರಾದಿಹಳಿಲೇ ಶಿಕ್ಷಿತನಾನ ಇವನ್ತಾನೇ ನಮ್ಮೈ ಒರು ಉಪಾಯತ್ತಿಲೇ ವ್ಯಾಪರಿಪ್ಪಿತ್ತು, ಅನ್ದ ವ್ಯಾಪಾರತ್ತಾಲೇ ಪ್ರಸನ್ನನಾಯ್ ರಕ್ಷಿಕ್ಕಿರಾನೆನ್ರಿರುಕ್ಕ ಪ್ರಾಪ್ತಮ್.

ಸ್ವಾಮೀ ಸ್ವಶೇಷಂ ಸ್ವವಶಂ ಸ್ವಭರತ್ವೇನ ನಿರ್ಭರಮ್ ।
ಸ್ವದತ್ತ ಸ್ವಧಿಯಾ ಸ್ವಾರ್ಥಂ ಸ್ವಸ್ಮಿನ್ನ್ಯಸ್ಯತಿ ಮಾಂ ಸ್ವಯಮ್॥ ೨೨ ॥

---

**ಪೂರ್ವಮಪ್ಯಪರಾಧೀನ** ಇತ್ಯಾದಿ ಆರಂಭಿಸಿ ತಿಳಿಸುತ್ತಾರೆ. ಅದಾಗಿ ಪೂರ್ವದಲ್ಲಿ ಮಾಡಿದ ಪ್ರಪತ್ತಿಯಲ್ಲಿಯೂ ಇವನಿಗೆ **ಅಪರಾಧೀನಪ್ರವೃತ್ತೌ**-ಸ್ವಾತಂತ್ರ್ಯದಿಂದ ಪ್ರವೃತ್ತಿಯು ಇಲ್ಲವೆಂದರ್ಥ. ಅಂದರೆ ಪ್ರಪತ್ತ್ಯನುಷ್ಠಾನಕ್ಕೆ ಮುಂಚೆಯೂ ಸ್ವಾಧೀನವಾಗಿಯೂ ಸ್ವಾರ್ಥವಾಗಿಯೂ ಯಾವ ಪ್ರವೃತ್ತಿಯೂ ಜೀವಾತ್ಮನಿಗೆ ಇಲ್ಲವೆಂದು ತಾತ್ಪರ್ಯ. ಇದನ್ನು ತಾವೇ **ಯಥಾಪ್ರಮಾಣಮ್**–ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ, ಪ್ರಮಾಣವು ಹೇಳುವ ರೀತಿಯಲ್ಲಿ ಸ್ವರಕ್ಷಣ ಭರಸಮರ್ಪಣವನ್ನು ಮಾಡಿದವನಿಗೆ ಅನಂತರ ಸ್ವರಕ್ಷಣಾರ್ಥ ವ್ಯಾಪಾರದಲ್ಲಿ ಅನ್ವಯವಿಲ್ಲ. ಇದುಪೂರ್ವಾರ್ಧ. ತಾತ್ಪರ್ಯ. ಉತ್ತರಾರ್ಧ ತಾತ್ಪರ್ಯವನ್ನು **ಮುನ್ಬುತಾನುಂ**–ಎಂದಾರಂಭಿಸಿ ವಿವರಿಸುತ್ತಾರೆ. ಪೂರ್ವದಲ್ಲಿ ತಾನೂ ಸಹ ಸ್ವರಕ್ಷಣಾರ್ಥವಾಗಿ ಮಾಡಿದ ಭರ ಸಮರ್ಪಣಾದಿ ವ್ಯಾಪಾರವೂ ಸರ್ವಕರ್ತಾವಾದ ಭಗವಂತನೇ ಬೀಜಾಂಕುರ ನ್ಯಾಯವನ್ನು ಅನುಸರಿಸಿ ಅನಾದಿಯಾಗಿ ಪ್ರವರ್ತಿಸಲ್ಪಟ್ಟ, ಕರ್ಮ ಪ್ರವಾಹ ವಿಪಾಕ ವಿಶೇಷದಲ್ಲಿ ಬಂದ ಒಂದು ಯಾದೃಚ್ಛಿಕ ಸುಕೃತಾದಿ ವಿಶೇಷ ಕಾರಣವನ್ನು ಮುಂದಿಟ್ಟುಕೊಂಡು ಮಾಡಿಸಿದ್ದಾನಾದ್ದರಿಂದ, ನಾವೇ ನಮ್ಮನ್ನು ರಕ್ಷಿಸಿಕೊಳ್ಳುತ್ತೇವೆಂದು ಸಮಾಧಾನವಾಗಿ ಇರಲು ಪ್ರಾಪ್ತಿಯಿಲ್ಲ. ಇದರಿಂದ ಸ್ವರಕ್ಷಣಾರ್ಥ ವ್ಯಾಪಾರದಲ್ಲಿ ನಮಗೆ ಅನ್ವಯವಿಲ್ಲವೆಂಬ ಆಪ್ತ ವಾಕ್ಯಾರ್ಥವು ಸ್ಪಷ್ಟಪಡಿಸಲ್ಪಟ್ಟಿತು.

## ನಿಗಮನದಲ್ಲಿ ಸ್ವಸಿದ್ಧಾಂತ

ಇದರಿಂದ ಫಲಿಸಿದ ಅರ್ಥವನ್ನು **ಸರ್ವರಕ್ಷಕನಾಹ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಸರ್ವರಕ್ಷಕನಾಗಿ ಮೂಲಮಂತ್ರಾದಿಗಳಲ್ಲಿ **ಶಿಕ್ಷಿತನಾನ**-ಉಪದೇಶಿಸಲ್ಪಟ್ಟ **ಇವನ್ತಾನೇ**–ಈ ಲಕ್ಷ್ಮೀಪತಿಯೇ ನಮ್ಮನ್ನು ಒಂದು ಉಪಾಯದಲ್ಲಿ ಅಂದರೆ ಭಕ್ತಿ ಪ್ರಪತ್ತಿಗಳಲ್ಲೊಂದನ್ನು **ವ್ಯಾಪರಿಪ್ಪಿತ್ತು**–ಅನುಷ್ಠಿಸುವಂತೆ ಪ್ರವರ್ತಿಸಿ ಆ ವ್ಯಾಪಾರದಿಂದ ಪ್ರಸನ್ನನಾಗಿ ರಕ್ಷಿಸುತ್ತಾನೆಂದು ತಿಳಿದಿರುವುದು ಯುಕ್ತವಾದದ್ದು.

1) **ಸ್ವಾಮೀಸ್ವಶೇಷಂ** ಇತ್ಯಾದಿ ಸ್ವಾಮೀ – ಶೇಷಿಯಾದ ನಾರಾಯಣನು, ಸ್ವಶೇಷಂಸ್ವವಶಂ – ತನಗೆ ಶೇಷಭೂತನಾಗಿ, ತನಗೆ ಪರತಂತ್ರನಾದ ನನ್ನನ್ನು – ಇವೆರಡೂ ಪ್ರಣವ ನಮಸ್ಸುಗಳ ಅರ್ಥ. ಸ್ವಭರತ್ವೇನ ನಿರ್ಭರಂ – ತನ್ನಲ್ಲಿ ನ್ಯಸ್ತಭರನಾದ್ದರಿಂದ ಯಾವ ಭಾರವೂ ಇಲ್ಲದವನನ್ನಾಗಿ ಮಾಡಿ, ಸ್ವದತ್ತ – ತಾನೇಕೊಟ್ಟ, ಸ್ವಧಿಯಾ – ಸ್ವವಿಷಯಕವಾದ ಭರಸಮರ್ಪಣ ರೂಪ ಜ್ಞಾನದಿಂದ, ಸ್ವಾರ್ಥಂ – ತನ್ನ ಪ್ರಯೋಜನಕ್ಕೋಸ್ಕರವೇ, ಸ್ವಸ್ಮಿನ್ ನ್ಯಸ್ಯತಿ ಮಾಂಸ್ವಯಂ – ನನ್ನನ್ನು ತಾನೇ ತನ್ನಲ್ಲಿ ಸಮರ್ಪಿಸಿಕೊಳ್ಳುತ್ತಾನೆ. ಈ ಶ್ರೀಸೂಕ್ತಿಯು ಸಾತ್ವಿಕತ್ಯಾಗ ಸ್ವರೂಪವನ್ನು ತಿಳಿಸುವುದಾಗಿ ಇಲ್ಲ. ಮತ್ತೇನೆಂದರೆ ಪ್ರಪತ್ತಿಯು ಸ್ವರೂಪವನ್ನೇ

**ಇದು ಆತ್ಮ ಸಮರ್ಪಣ ದಶೈಯಿಲ್ ಖ್ಯಾತಿ ಲಾಭ ಪೂಜಾಫಲ ಸಂಗ ಕರ್ತೃತ್ವೋಪಾಯತ್ವಙ್ಗಳಾಹಿರತೂ ರಾಲತ್ತ ಭಗವದನು ಸಂಧಾನ ಕ್ಕಟ್ಟಳೈ.**

**ಆಹೈಯಾಲ್ ತಾಯ್ ಮುಲೈಪ್ಪಾಲ್ ಪೋಲೇ ವರುಹಿರ ಈಶ್ವರ ಪ್ರಸಾದತ್ತುಕ್ಕುಮ್ ಸ್ತನಂಧಯನುಡೈಯ ಮುಲೈ ಯುಣ್ಹಿರ ವ್ಯಾಪಾರಮ್ಪೋಲೇ ಇವನುಡೈಯ ಅಪೇಕ್ಷಾದಿಹಳ್. ಇತ್ತಾಲ್ ಸಿದ್ಧೋಪಾಯ ಸ್ವರೂಪತ್ತುಕ್ಕು ಕೊತ್ತೈ ವಾರಾದು.**

---

ವಿಶದೀಕರಿಸುತ್ತದೆ. ಇದನ್ನು "**ಇದು ಆತ್ಮಸಮರ್ಪಣದಶೈಯಿಲ್**" – ಇತ್ಯಾದಿ ವಿಶದೀಕರಿಸುತ್ತಾರೆ. ಸಾತ್ವಿಕ ತ್ಯಾಗವು ಸರ್ವನಿವೃತ್ತಿ ಧರ್ಮಗಳಿಗೆ ಸಾಧಾರಣವಾದ್ದರಿಂದ, **ಆತ್ಮಸಮರ್ಪಣ ದಶೈಯಿಲ್**–ಎಂದಾರಂಭಿಸಿ ಹೇಳುವ ವಿಶೇಷ ಶ್ರೀ ಸೂಕ್ತಿಗೆ ಅದು ತಾತ್ಪರ್ಯವಾಗುವುದಿಲ್ಲ. ಅದರಿಂದ ಈ ಶ್ರೀ ಸೂಕ್ತಿಯಲ್ಲಿ ಹೇಳಿರುವ ವಿಶೇಷಾರ್ಥವೇನೆಂದರೆ–ಭಕ್ತಿ, ಪ್ರಪತ್ತಿ, ಅವುಗಳ ಅಂಗಗಳು, ಅವುಗಳ ಅಧಿಕಾರಗಳಲ್ಲಿ ಕರ್ತೃತ್ವತ್ಯಾಗಾದಿ ನಾಲ್ಕು ವಿಧಗಳಾದ ಸಾತ್ವಿಕತ್ಯಾಗವು ಸಾಧಾರಣವಾದ ಅಂಗ. ಹೀಗಿದ್ದರೂ ಪ್ರಪತ್ತಿ ಸ್ವರೂಪದಲ್ಲಿ ಮೇಲೆ ಹೇಳಿದ ಅನುಸಂಧಾನವು ಅನುಪ್ರವಿಷ್ಟ. ಆದಾಗಿ ತನ್ನದೇ ಆದ ವಸ್ತುವು (ಜೀವನು) ತನ್ನಿಂದಲೇ ನಿಯಮಿಸಲ್ಪಡುವ ಸ್ವಭಾವವುಳ್ಳದ್ದಾಗಿ, ತನ್ನಿಂದಲೇ ಭರಿಸಲ್ಪಡುವುದಾಗಿ ಸ್ವರಕ್ಷಣಾರ್ಥ ಸ್ವ ವ್ಯಾಪಾರದಿಂದ ಜ್ಞಾನಶಕ್ತ್ಯಾದಿ ರಹಿತವಾಗಿರುವ ಜೀವನನ್ನು, ತಾನೇ ತನ್ನೊಡನೆ ಸೇರಿಸಿಕೊಂಡು ಕೃತಾರ್ಥನನ್ನಾಗಿ ಮಾಡಲು ತಾನೇ ಅನನ್ಯ ರಕ್ಷ್ಯನನ್ನಾಗಿ ಅಂಗೀಕರಿಸುತ್ತಾನೆಂಬ ರೂಪವಾದ ಆತ್ಮ ನಿಕ್ಷೇಪವಿದು. ಭಗವಂತನಿಗೆ ಶೇಷ ಭೂತನಾದ, ಭಗವಂತನಿಗೇ ಪರತಂತ್ರನಾದ, ಅವನ ಕೈಂಕರ್ಯವೇ ತನಗೆ ಭೋಗ್ಯವಾದ, ಅವನ ಪ್ರಸನ್ನತೆಗೆ ಕಾರಣವಾದ ಉಪಾಸನ (ಭಕ್ತಿಯೋಗ)ವನ್ನು ಅನುಷ್ಠಿಸಲು ಅಜ್ಞನೂ ಅಸಮರ್ಥನೂ ವಿಳಂಬಾಕ್ಷಮನೂ ಆದ ನನ್ನ ರಕ್ಷಣೆಯಲ್ಲಿ ನನಗೆ ಯಾವ ಅನ್ವಯವೂ ಇಲ್ಲ. ಬೇರೆ ಯಾರಿಗೆ ಇದೆ ಎಂದರೆ ಸರ್ವಸ್ವಾಮಿಯಾದ ನಿರಂಕುಶ ಸ್ವಾತಂತ್ರ್ಯವನ್ನುಳ್ಳ, ಪರಮ ಕಾರುಣಿಕನಾದ ಭಗವಂತನಿಗೇ ನನ್ನ ರಕ್ಷಣದ ಭಾರವೆಲ್ಲಾ ಸೇರಿದುದು, ಎಂಬುದು ಪ್ರಪತ್ತಿ ಸ್ವರೂಪ. ಈ ಪ್ರಪತ್ತಿಯೂ ಸರ್ವಸ್ವಾಮಿಯಾದ ಪರಮಕಾರುಣಿಕನಾದ ಭಗವಂತನಿಂದಲೇ ಮಾಡಿಸಲ್ಪಟ್ಟಿತು, ಎಂಬ ಈ ಅಂಶವು ಅನೇಕ ಸಲ ಹೇಳಲ್ಪಟ್ಟಿದೆ. ಈ ರೀತಿಯ ಅನುಸಂಧಾನವು ಸುದೃಢವಾದರೇನೇ "ಏತಾವತೀಂಗಮಯಿತುಃ ಪದವೀಂ ದಯಾಳೋಃ ಶೇಷಾಧ್ವ ಲೇಶನಯನೇ ಕ ಇವಾತಿಭಾರಃ", ಎಂಬಂತೆ ಈ ಶರಣಾಗತಿಯನ್ನೂ ಅನುಷ್ಠಿಸುವಂತೆ ಇಷ್ಟು ದೂರ ಈ ಮಾರ್ಗದಲ್ಲಿ ನನ್ನನ್ನು ನಡೆಸಿಕೊಂಡು ಬಂದ, ದಯಾಳುವಾದ ಭಗವಂತನಿಗೆ, ಬಾಕಿಸ್ವಲ್ಪ ದೂರ – ಅಂದರೆ ಅಂತಿಮ ಸ್ಮೃತಿಯನ್ನುಂಟು ಮಾಡಿ ಮೋಕ್ಷಕ್ಕೆ ಕರೆದುಕೊಂಡು ಹೋಗುವ ಪರ್ಯಂತ ಇರುವ ಭಾರವು ಹೆಚ್ಚೇನು. ಹೆಚ್ಚಿಲ್ಲ. ಭಗವಂತನೆ ನಡೆಸಿಕೊಳ್ಳುತ್ತಾನೆಂಬ ತನ್ನ ನೈರ್ಭರ್ಯ ಪರ್ಯಂತವಾದ ಭರಸ್ವೀಕಾರವು ಅನುಸಂಧಾನ ಮಾಡಲ್ಪಡಬೇಕು. ಆದ್ದರಿಂದ "ಸ್ವಾಮೀ ಸ್ವಶೇಷಂ ಸ್ವವಶಂ" ಇತ್ಯಾದಿ ಮೇಲೆ ಹೇಳಿರುವ ರೀತಿಯಲ್ಲಿ ಆತ್ಮಸಮರ್ಪಣ **ದಶೆಯಲ್** – ಸಮಯದಲ್ಲಿ, **ಖ್ಯಾತಿ ಲಾಭ ಪೂಜಾಫಲಸಂಗ ಕರ್ತೃತ್ವ** ಉಪಾಯತ್ವಗಳೆಂಬ ಅಂದರೆ ತನಗೆ ಹೆಮ್ಮೆ, ಲಾಭ, ಗೌರವ, ಫಲದಲ್ಲಿಯೂ ಕರ್ತೃತ್ವದಲ್ಲಿಯೂ ಅನ್ವಯವಿದೆ ಎಂಬ, **ತೂರಲಾಟ್ರ** – ( ತೂರಾಲ್ – ದೋಷ ) ದೋಷವಿಲ್ಲದ ಭಗವದನುಸಂಧಾನವನ್ನು ಮಾಡಬೇಕು. ಆದ್ದರಿಂದ ಪೂರ್ವಪಕ್ಷಿಯು ಹೇಳಿದ 'ತಾಯಿಯು ತನ್ನ ಎದೆ ಹಾಲನ್ನು ಕೊಟ್ಟು ಮಗುವನ್ನು ಸಾಕುವಂತೆ' ಎಂಬ ದೃಷ್ಟಾಂತವು ರಕ್ಷಾಪೇಕ್ಷೆಗೆ ಅನುಗುಣವಾದದ್ದು, ಎಂದು **ಆಹೈಯಾಲ್ ತಾಯ್ ಮುಲೈಪ್ಪಾಲ್ ಪೋಲೇ** ಎಂದಾರಂಭಿಸಿ ನಿಗಮಿಸುತ್ತಾರ. ಆದಾಗಿ – ಆದ್ದರಿಂದ ತಾಯಿಯ ಎದೆ ಹಾಲಿನ ಹಾಗೆ ಬರುವ ಈಶ್ವರನ ಅನುಗ್ರಹಕ್ಕೂ ಸ್ತನಂಧಯನ (ಶಿಶುವಿನ) **ಮುಲೈಯುಣ್ಗಿರ** – ಸ್ತನ್ಯಪಾನ ಮಾಡುವ ವ್ಯಾಪಾರದ ಹಾಗೆ, **ಇವನುಡೈಯ ಅಪೇಕ್ಷಾದಿಹಳ್** – ಜೀವ ಕರ್ತೃಕ ರಕ್ಷಾಪೇಕ್ಷಾ ಪೂರ್ವಕ ಭರಸಮರ್ಪಣವು ಆವಶ್ಯಕ. **ಇತ್ತಾಲ್** – ಇದರಿಂದ, ಸಿದ್ಧೋಪಾಯ ಸ್ವರೂಪಕ್ಕೆ **ಕೊತ್ತೈ** – ದೋಷವು, ಉಂಟಾಗುವುದಿಲ್ಲ. ಈ ರಕ್ಷಾ

### ಅಥ ಪತ್ನೀ ಸಂಬಂಧ ಪ್ರಾಪ್ತ ಶಙ್ಕಾ ನಿರಸ್ಯಂತೇ

**ಇಪ್ಪಡಿ ನಾರಾಯಣ ಶಬ್ದತ್ತಿಲ್ ಸಿದ್ಧಮಾನ ಗುಣವಿಶೇಷ ಸಂಬಂಧ ವಿಶೇಷಙ್ಗಳ್ ಅಡಿಯಾಹ ಪ್ಪಿರಕ್ಕುಮ್ ಕಲಕ್ಕಙ್ಗಳುಕ್ಕು ಪ್ಪರಿಹಾರಮ್ ಉದಾಹರಿತ್ತೋಮ್; ಇನಿ,**

**ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾಕಾರುಣ್ಯರೂಪಯಾ ।**
**ರಕ್ಷಕಸ್ಸರ್ವಸಿದ್ಧಾನ್ತೇ ವೇದಾಂತೇಷು ಚ ಗೀಯತೇ ॥"**

**ಎನ್ಗಿರಪಡಿಯೇ, ಸಪತ್ನೀಕನಾಯ್ ಕ್ಕೊಣ್ಡು ಸರ್ವರಕ್ಷಣ ಯಜ್ಞ ದೀಕ್ಷಿತನಾನ ಸರ್ವೇಶ್ವರನುಕ್ಕು ಶ್ರೀ ಮಚ್ಛಬ್ದತ್ತಿಲೇ ಶೊಲ್ಲುಹಿರ ಪತ್ನೀ ಸಂಬಂಧತ್ತಿಲೇ ವರುಮ್ ಕಲಕ್ಕಙ್ಗಳುಕ್ಕು ದಿಙ್ಮಾತ್ರತ್ತಾಲೇ ಪರಿ ಹಾರಮ್ ಕಾಟ್ಟುಹಿರೋಮ್.**

**ಪ್ರಥಮಂ, ಲಕ್ಷ್ಮ್ಯಾಃ ಉಪಾಯತ್ವೇ ನಾನ್ವಯ ಇತಿಪಕ್ಷಂ ನಿರಸ್ಯತಿ.**

**ಶಿಲರ್ ದ್ವಯತ್ತಿಲ್ ಪೂರ್ವಖಂಡತ್ತಿಲ್ ಶ್ರೀಮಚ್ಛಬ್ದಮ್ ಉಪಲಕ್ಷಣ ಪರಮೆನ್ರುಮ್, ಉತ್ತರ ಖಂಡತ್ತಿಲ್ ಶ್ರೀಮಚ್ಛಬ್ದಮ್ ವಿಶೇಷಣ ಪರಮೆನ್ರುಮ್, ಪಿರಿಯು ಚೊನ್ನಾರ್‌ಹಳ್.**

---

ಪೇಕ್ಷೆಯು, ವೈಷಮ್ಯ ನೈರ್ಘೃಣ್ಯ, ಸರ್ವಮುಕ್ತಿ ಪ್ರಸಂಗಗಳ ಪರಿಹಾರಕ್ಕಾಗಿ, ಭಗವತ್ಸಂಕಲ್ಪ ನಿಯತ ಗಳಾದ್ದರಿಂದ, ಭಗವಂತನ ಸ್ವಾತಂತ್ರ್ಯದ ಎಲ್ಲೆಯಾಗಿದೆ ಎಂಬುದು ಘಟ್ಟ ತಾತ್ಪರ್ಯ.

### ಲಕ್ಷ್ಮೀ ಸಂಬಂಧ ವಿಷಯವಾದ ಸಂದೇಹಗಳ ನಿವಾರಣೆ

ಅನಂತರ ಮೇಲೆ ಹೇಳಿದ ವಿಷಯಗಳನ್ನು ಅನುವಾದ ಮಾಡಿ ಮುಂದೆ ಹೇಳುವ ವಿಷಯವನ್ನು **'ಇಪ್ಪಡಿ ನಾರಾಯಣ ಶಬ್ದತ್ತಿಲ್'** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಹೀಗೆ ನಾರಾಯಣ ಶಬ್ದದಲ್ಲಿ ಸಿದ್ಧವಾದ ಗುಣ ವಿಶೇಷ ಸಂಬಂಧ ವಿಶೇಷಗಳನ್ನು ಕಾರಣವಾಗಿಟ್ಟುಕೊಂಡು ಉಂಟಾದ **ಕಲಕ್ಕಂಗಳುಕ್ಕು**– ಬುದ್ಧಿಭ್ರಮೆಗಳಿಗೆ ಪರಿಹಾರವನ್ನು ಹೇಳಿದೆವು. **ಇನಿ, ಲಕ್ಷ್ಮ್ಯಾಸಹ** ಎಂದಾರಂಭಿಸಿ ಪತ್ನೀಸಂಬಂಧದಿಂದ ಉಂಟಾಗುವ ಬುದ್ಧಿಭ್ರಮೆಗಳಿಗೆ ದಿಙ್ಮಾತ್ರವಾಗಿ ಪರಿಹಾರವನ್ನು ಹೇಳುತ್ತಾರೆ. ಇಲ್ಲಿ ಹೇತುವನ್ನು ನಿರ್ದೇಶಿಸದೆ ಇರುವುದರಿಂದ ಈ ವ್ಯಾಮೋಹವು ಬಲ್ಬಜವಾದದ್ದು ಎಂದು ತಿಳಿಸಲು ದಿಙ್ಮಾತ್ರದಿಂದ ಪರಿಹಾರ ಮಾಡುವುದಾಗಿ ಪ್ರತಿಜ್ಞೆ. ಭಗವಂತನು ಸಪತ್ನೀಕನಾಗಿಯೇ, ಸರ್ವ ರಕ್ಷಣಯಜ್ಞದೀಕ್ಷಿತನಾಗಿದ್ದಾನೆ. ಹೀಗಿರುವಾಗ,

**ಶಿಲರ್ ದ್ವಯತ್ತಿಲ್ ಪೂರ್ವಖಂಡತ್ತಿಲ್** ಇತ್ಯಾದಿ – ಕೆಲವರು ದ್ವಯ ಮಂತ್ರದ ಮೊದಲನೆ ಭಾಗದಲ್ಲಿ ಅಂದರೆ "ಶ್ರೀಮನ್ನಾರಾಯಣ ಚರಣೌ" ಎಂಬಲ್ಲಿ ಶ್ರೀಮಚ್ಛಬ್ದವು ಉಪಲಕ್ಷಣ ಪರವೆಂದೂ, ಉತ್ತರ ಖಂಡ ದಲ್ಲಿ ಅಂದರೆ "ಶ್ರೀಮತೇ ನಾರಾಯಣಾಯ" ಎಂಬಲ್ಲಿ, ಶ್ರೀಮತ್ ಶಬ್ದವು ವಿಶೇಷಣ ಪರವೆಂದೂ **ಪಿರಿಯು** ವಿಂಗಡಿಸಿ, ಹೇಳಿದ್ದಾರೆ. "ವಿದ್ಯಮಾನಂ ಸತ್ ವ್ಯಾವರ್ತಕಂ ವಿಶೇಷಣಂ", ಯಥಾಗಂಧವತೀ ಪೃಥಿವೀ. "ಅವಿದ್ಯಮಾನಂ ಸತ್ ವ್ಯಾವರ್ತಕಂ ಉಪಲಕ್ಷಣಮ್", ಯಥಾ ಯತ್ರಾಯಂ ಸಾರಸಃ ಸದೇವದತ್ತಕೇದಾರಃ, ಎಂದು ವಿಶೇಷಣ, ಉಪಲಕ್ಷಣವನ್ನು ನಿರೂಪಿಸಿದ್ದಾರೆ. ಅದಾಗಿ ವಿಶೇಷ್ಯದಲ್ಲಿ ಕೂಡಿದ್ದು, ಇತರ ಪದಾರ್ಥ ಗಳಿಂದ ಬೇರೆಯೆಂದು ನಿರೂಪಿಸುವುದು ವಿಶೇಷಣ. "ಗಂಧವತೀ ಪೃಥಿವೀ" ಎಂಬಲ್ಲಿ ಗಂಧವು – ವಾಸನೆಯು ಪೃಥ್ವಿಯಲ್ಲಿದ್ದುಕೊಂಡು, ಪೃಥ್ವಿಯನ್ನು ಇತರ ಪದಾರ್ಥಗಳಿಗಿಂತ, ಅಂದರೆ, ನೀರು, ಗಾಳಿ, ಅಗ್ನಿ, ಆಕಾಶ ಗಳಿಗಿಂತ ಬೇರೆಯಾದದು ಎಂದು ನಿರೂಪಿಸುತ್ತದೆ. ಇಲ್ಲಿ ಗಂಧವತ್ವವು ವಿಶೇಷಣ. ಹಾಗಿಲ್ಲದೆ, ನಮ್ಮೆದುರಿ ನಲ್ಲಿರುವ ಈ ಸಾರಸ ಪಕ್ಷಿಯು ಮೊದಲು ಯಾವ ಕ್ಷೇತ್ರದಲ್ಲಿ ಕುಳಿತಿತ್ತೋ, ಆ ಕ್ಷೇತ್ರವು ದೇವದತ್ತನದು,

**ಇವ್ವಿಡತ್ತಿಲ್ ಶಬ್ದಮ್ ಏಕರೂಪ ಮಾಯಿರುಕ್ಕ, ಸ್ವಾರಸ್ಯತ್ತುಕ್ಕು ಬಾಧಕಮುಮನ್ರಿಕ್ಕೇ ಇರುಕ್ಕ, "ಸ್ವರೂಪಂ ಸ್ವಾತಂತ್ರಂ ಭಗವತಇದಮ್" ಇತ್ಯಾದಿಹಳಿಲೇ ಪ್ರಸಿದ್ಧಮಾನ ಕೂಟಸ್ಥ ಸಂಪ್ರದಾಯ ವಿರುಧ್ಧಮಾಹಪ್ಪಣ್ಣಿಹಿರ ಇವ್ವಿಭಾಗಮ್ ಅನುಪಪನ್ನಮ್.**

---

ಎಂದು ಇತರರ ಕ್ಷೇತ್ರಗಳಿಂದ, ಬೇರೆಯಾಗಿ ಜ್ಞಾಪಿಸುವುದು ಉಪಲಕ್ಷಣ. ಆ ಕ್ಷೇತ್ರದಲ್ಲಿ ಈಗ ಸಾರಸ ಪಕ್ಷಿಯು ಕುಳಿತಿಲ್ಲವೆಂಬುದು ಇಲ್ಲಿ ವಿವಕ್ಷಿತ.

ಈ ರೀತಿಯಲ್ಲಿ ದ್ವಯಮಂತ್ರದ ಪೂರ್ವಖಂಡದಲ್ಲಿ ಶ್ರೀಮತ್ ಶಬ್ದವು ಉಪಲಕ್ಷಣ-ಅಂದರೆ ಶ್ರೀಯು"ನಾರಾಯಣ" ನೊಡನೆ ಕೂಡಿ ಯಾವಾಗಲೂ ಇರಳು. ಇದರಿಂದ ಕೇವಲ ನಾರಾಯಣನೇ ಶರಣಂ ಪ್ರಪದ್ಯೇ" ಎಂದು ಶರಣಾಗತಿ ಮಾಡುವಾಗ ವಿವಕ್ಷಿತನು - ಉಪಾಯಭೂತನು, ಲಕ್ಷ್ಮಿಯು ಅಲ್ಲ ಎಂದೂ, ದ್ವಯ ಮಂತ್ರದ ಉತ್ತರ ಖಂಡದಲ್ಲಿ "ಶ್ರೀಮತೇ ನಾರಾಯಣಾಯ" ಎಂಬಲ್ಲಿ ಲಕ್ಷ್ಮಿಯು ನಾರಾಯಣನಿಗೆ ವಿಶೇಷಣ ಭೂತಳು. ಇದರಿಂದ ಕೈಂಕರ್ಯ ಪ್ರತಿಸಂಬಂಧಿಯು ಲಕ್ಷ್ಮೀ ವಿಶಿಷ್ಟ ನಾರಾಯಣನು ಅಂದರೆ ಇಬ್ಬರಲ್ಲಿಯೂ ಸೇರಿಸಿ ಕೈಂಕರ್ಯವನ್ನು ಮಾಡಬೇಕೆಂಬುದೂ, ಕೆಲವರ ಅಭಿಪ್ರಾಯ. ಈ ಅರ್ಥವನ್ನು ಆಚಾರ್ಯರು **ಇವ್ವಿಡತ್ತಿಲ್ ಶಬ್ದಮ್ ಏಕರೂಪ ಮಾಯಿರುಕ್ಕ** ಎಂದಾರಂಭಿಸಿ ನಿರಾಕರಿಸುತ್ತಾರೆ. ಅದಾಗಿ ನಿತ್ಯಯೋಗವನ್ನು ತಿಳಿಸುವ 'ಮತುಪ್' ಪ್ರತ್ಯಯಾನ್ವಿತನಾದ ಶ್ರೀಮತ್ ಶಬ್ದವು ಪೂರ್ವೋತ್ತರ ಖಂಡಗಳಲ್ಲಿ ಏಕರೂಪವಾಗಿರುವಾಗ, **ಸ್ವಾರಸ್ಯತ್ತುಕ್ಕು ಬಾಧಕಮುಮನ್ರಿಕ್ಕೇ ಇರುಕ್ಕ**-ಲಕ್ಷ್ಮಿಯು ಭಗವಂತನಿಗೆ ವಿಶೇಷಣ ಭೂತೆಯಾಗಿ ಸದಾ ಕೂಡಿದ್ದಾಳೆಂಬುದು, "ವಿಷ್ಣೋಃಶ್ರೀರನಪಾಯಿನೀ" "ಅಹಲಹಿಲ್ಲೇನ್ ಇರೈಯುಮ್" ಇತ್ಯಾದಿ ಬಹು ಪ್ರಮಾಣಗಳಿಗೆ ಅನುಸಾರವಾಗಿ ಶ್ರೀಮತ್ ಶಬ್ದಕ್ಕೆ ನಾರಾಯಣನು ಲಕ್ಷ್ಮೀ ವಿಶೇಷಣ ವಿಶಿಷ್ಟನೆಂದು ಪೂರ್ವೋತ್ತರ ಖಂಡಗಳಲ್ಲಿ ಅರ್ಥಮಾಡಿ ವಿಶಿಷ್ಟದಲ್ಲಿ ಅನ್ವಯಿಸುವಾಗ ವಿಶೇಷಣದಲ್ಲಿ ಅನ್ವಯವನ್ನು ಹೇಳುವುದು ಸ್ವರಸವಾಗಿ ಬಾಧಕವಿಲ್ಲದೆ ಇರುವಾಗ, "**ಸ್ವರೂಪಂ ಸ್ವಾತಂತ್ರ್ಯಂ** ಇತ್ಯಾದಿಗಳಲ್ಲಿ ಪ್ರಸಿದ್ಧವಾದ ಕೂಟಸ್ಥ ಸಂಪ್ರದಾಯಕ್ಕೆ ವಿರುದ್ಧವಾಗಿ ಮಾಡುವ ಈ ವಿಭಾಗವು ಅನುಪಪನ್ನ. ಆದ್ದರಿಂದ, "ವಿಶೇಷ್ಯಾನ್ವಯಿ ಕ್ರಿಯಾನ್ವಿಯತ್ವೇ ಸತಿ ವಿಶೇಷ್ಯವ್ಯಾವರ್ತಕತ್ವಂ ವಿಶೇಷಣಂ". "ಲಂಬಕರ್ಣಮಾನಯ", ಎಂಬಲ್ಲಿ ಆನಯನ ವ್ಯಾಪಾರದಲ್ಲಿ ಲಂಬ ಕರ್ಣದಿಂದ ಕೂಡಿರುವ ಮನುಷ್ಯನು ವಿವಕ್ಷಿತನು· ಲಂಬಕರ್ಣತ್ವವು ವಿಶೇಷಣ. ಕರೆತರುವ ವ್ಯಾಪಾರದಲ್ಲಿ ಲಂಬ ಕರ್ಣತ್ವವೂ ಅನ್ವಯಿಸುತ್ತದೆ. "ವಿಶೇಷ್ಯಾನ್ವಯಿ ಕ್ರಿಯಾನನ್ವಯಿತ್ವೇ ಸತಿ ವಿಶೇಷ್ಯವ್ಯಾವರ್ತಕತ್ವಮುಪಲಕ್ಷಣಮ್, ಯಥಾಚಿತ್ರಗುಮಾನಯ ಇತ್ಯಾದಿ. ವಿಶೇಷ್ಯದಿಂದ ಸಂಬಂಧಿಸಿದ ಕ್ರಿಯೆಯಲ್ಲಿ ಅನ್ವಯಿಸುವುದು ವಿಶೇಷಣ. ಹಾಗೆ ಅನ್ವಯಿಸದೆ ಇರುವುದು ಉಪಲಕ್ಷಣ. ಚಿತ್ರಗುಮಾನಯ ಎಂಬಲ್ಲಿ ಚಿತ್ರನನ್ನು ಕರೆತರುವ ಕ್ರಿಯೆಯಲ್ಲಿ ಹಸುವು ಅನ್ವಯಿಸುವುದಿಲ್ಲ. ಚಿತ್ರಾಗಾವೌ ಯಸ್ಯ ಸಃ ಎಂದು ಬಹುವ್ರೀಹಿ ಚಿತ್ರಹಸುವನ್ನುಳ್ಳವನು. ಚಿತ್ರ ಹಸುವನ್ನುಳ್ಳವನನ್ನು ಮಾತ್ರ ಕರೆತರಬೇಕು. ಚಿತ್ರ ಹಸುವು, ಯಜಮಾನನನ್ನು ಉಪಲಕ್ಷಿಸುತ್ತದೆ. ಅಷ್ಟೇ. ಆ ನಯನ ಕ್ರಿಯೆಯಲ್ಲಿ ಹಸುವು ಅನ್ವಯಿಸುವುದಿಲ್ಲ. ಹೀಗೆ ವಿಶೇಷಣ, ಉಪಲಕ್ಷಣಗಳಿಗೆ, ಲಕ್ಷಣವನ್ನು ಪರಿಷ್ಕರಿಸಬೇಕು. "ಶ್ರೀಮತ್" ಶಬ್ದದಲ್ಲಿ "ಮತುಪ್" ಪ್ರತ್ಯಯವು ವಿಶೇಷಣತ್ವವನ್ನು ತಿಳಿಸುತ್ತದೆ. ಪೂರ್ವೋತ್ತರ ಖಂಡಗಳಲ್ಲಿ ಈ ಶಬ್ದವು ಏಕ ರೂಪವಾಗಿರುವುದರಿಂದ, ವಿಶೇಷಣ ಭೂತೆಯಾದ ಶ್ರೀ – ಲಕ್ಷ್ಮಿಯೂ, ಮುಮುಕ್ಷುವು ಶರಣಾಗತಿ ಮಾಡುವಾಗ ಭಗವಂತನೊಡನೆ ಕೂಡಿಯೇ ಇದ್ದು 'ಮೋಕ್ಷಯಿಷ್ಯಾಮಿ' ಎಂದು ಸಂಕಲ್ಪಿಸಿತ್ತಾಳೆ. ಆದ್ದರಿಂದ ಭಗವಂತನ ಹಾಗೆ ಸಿದ್ಧೋಪಾಯತ್ವವು ಲಕ್ಷ್ಮಿಗೂ ಉಂಟು. ಹಾಗೆಯೇ ಕೈಂಕರ್ಯ ಪ್ರತಿ ಸಂಬಂಧಿಯಾಗಿ ಭಗವಂತನೊಡನೆ ಇರುವುದರಿಂದ, ಉಪೇಯ ಭೂತೆ – ಪ್ರಾಪ್ಯಳು ಎಂದರ್ಥ. ಹೀಗೆ ಲಕ್ಷ್ಮಿಗೆ ಉಪಾಯತ್ವವೂ, ಉಪೇಯತ್ವವೂ ಸಿದ್ಧ. "ಆದರೂ, ಶರಣಾಗತಿಯನ್ನು ವಿಧಿಸುವ ವಾಕ್ಯದಲ್ಲಿ,ಮಾಮೇಕಂ, **ಅಹಂತ್ವಾ**, ಎಂದು ಅಸ್ಮಚ್ಛಬ್ದವು, ಪರಮ ಪುರುಷ ವಕ್ತೃಕವಾಗಿರುವುದರಿಂದ, ಇದಕ್ಕೆ ಪ್ರಯಾಣಾಂತರಗಳಿಂದ ಪರಾಮರ್ಶೆ ಮಾಡಬೇಕಾದ ನಿರ್ಬಂಧವೇನಿದೆ.

ಕೇವಲ ನಾರಾಯಣನೇ 'ಮೋಕ್ಷಯಿಷ್ಯಾಮಿ' ಎಂದು ಸಂಕಲ್ಪ ಮಾಡುತ್ತಾನೆಯಲ್ಲವೇ. ಆದ್ದರಿಂದ ಪತಿಗೆ ಮಾತ್ರ ಶರಣ್ಯತ್ವವು - ಉಪಾಯತ್ವವು ಹೇಳಬೇಕು. "ಶರಣಂ ವ್ರಜ" ಎಂಬ ವಿಧಿಯಿಂದ ಸಿದ್ಧವಾದ, ಅನುಷ್ಠೇಯಾರ್ಥ ಪ್ರಕಾಶನ ಮಂತ್ರ ಪರವಾದ ದ್ವಯ ಮಂತ್ರದಲ್ಲಿ, ಅದಕ್ಕೆ ವಿರುದ್ಧವಾಗಿ ಲಕ್ಷ್ಮಿಗೂ ಉಪಾಯತ್ವವನ್ನು ಕಲಿಸುವುದು ಸರಿಯಲ್ಲ. ಹೀಗೆಯೇ, ಮೂಲ ಮಂತ್ರದಲ್ಲಿಯೂ "ನಮಃ" ಎಂಬ ಪದದಲ್ಲಿ ಹೇಳಲ್ಪಟ್ಟ ಪ್ರಪದನಕ್ಕೆ ಉದ್ದೇಶ್ಯ ಸಮರ್ಪಕವಾದದ್ದು ಕೇವಲ ನಾರಾಯಣಪದ. ಶ್ರೀಮತ್ಪದ ವಿಶೇಷಣ ವಿಶಿಷ್ಟವಲ್ಲ. ಪ್ರಾಪ್ಯ ಕೋಟಿಯಲ್ಲಿಯೂ ಪತಿಯ ಹಾಗೆ ಕೈಂಕರ್ಯ ಪ್ರತಿಸಂಬಂಧಿತ್ವವು ಲಕ್ಷ್ಮಿಗೆ ಸ್ವಾಭಾವಿಕ ವಲ್ಲ. ಪತಿಸಂಬಂಧ ನಿಬಂಧನ," ಇತ್ಯಾದಿಯಾಗಿ ಕೆಲವರು ಅಭಿಪ್ರಾಯ ಪಡುತ್ತಾರೆ. ಅದಕ್ಕೆ ಪರಿಹಾರವನ್ನು "ಸ್ವರೂಪ ಸ್ವಾತಂತ್ರ್ಯಂ" ಎಂದಾರಂಭಿಸಿ, ಪರಿಹರಿಸುತ್ತಾರೆ.

1) **ಸ್ವರೂಪಂ ಸ್ವಾತಂತ್ರ್ಯಂ ಇತ್ಯಾದಿ**

ಸ್ವರೂಪಂ ಸ್ವಾತಂತ್ರ್ಯಂ ಭಗವತ ಇದಂ ಚಂದ್ರವದನೇ
ತ್ವದಾಶ್ಲೇಷೋತ್ಕರ್ಷಾತ್ ಭವತಿ ಖಲು ನಿಷ್ಕರ್ಷಸಮಯೇ।
ತ್ವಮಾಸೀರ್ಮಾತಶ್ರೀಃ ಕಮಿತುರಿದ ಮಿತ್ಥಂತ್ವವಿಭವಃ
ತ ದಂತರ್ಭಾವಾತ್ತ್ವಾಂ ನಪೃಥಗಭಿಧತ್ತೇ ಶ್ರುತಿರಪಿ ॥

ಹೇ ಚಂದ್ರವದನೇ-ಎಲೈ ಚಂದ್ರಮುಖಿಯಾದ ಲಕ್ಷ್ಮಿಯೇ ಭಗವತಃ-ಭಗವಂತನ, ಇದಂ ಸ್ವರೂಪಂ, ಸತ್ಯತ್ವ, ಜ್ಞಾನತ್ವ ಅನಂತತ್ವ, ಅಮಲತ್ವವೆಂಬ ಸ್ವರೂಪ ನಿರೂಪಕ ಧರ್ಮಗಳಿಂದ, ನಿರೂಪಿತವಾದ ಈ ಧರ್ಮಿ ಸ್ವರೂಪವೂ ಸ್ವಾತಂತ್ರ್ಯಂ - ಸರ್ವನಿಯಂತೃತ್ವವೂ, (ಇದು ಸರ್ವರಕ್ಷಕತ್ವಾದಿಗಳಿಗೆ ಉಪಲಕ್ಷಣ) ತ್ವದಾಶ್ಲೇಷೋತ್ಕರ್ಷಾತ್ ನಿನ್ನ ಸಂಬಂಧದಿಂದ ಉಂಟಾದ ಉತ್ಕರ್ಷದಿಂದ, ನಿಷ್ಕರ್ಷ ಸಮಯೇ - "ಶ್ರದ್ಧಯಾದೇವೋದೇವತ್ವ ಮಶ್ನುತೇ" ಇತ್ಯಾದಿಪ್ರಮಾಣಗಳ ವಿಮರ್ಶ ದಶೆಯಲ್ಲಿ, ಅಂದರೆ ಶ್ರದ್ಧಯಾ - ಶ್ರದ್ಧಾ ಶಬ್ದವಾಚ್ಯೆಯಾದ ಲಕ್ಷ್ಮಿ ಯೊಡಗೂಡಿ, ದೇವಃ - ಜಗದ್ವ್ಯಾಪಾರ ಶೀಲನು ದೇವತ್ವಂ-ಜಗದ್ವ್ಯಾಪಾರಾದಿ ಲೀಲೆಯನ್ನು ಅಶ್ನುತೇ- ಅನುಭವಿಸುತ್ತಾನೆ. ಇತ್ಯಾದಿ ನಿಷ್ಕರ್ಷೆಗಳಿಂದ ಭವತಿ ಖಲು-ತನ್ನ ಸತ್ತೆಯನ್ನು ಪಡೆಯುತ್ತದೆ. ಸತ್ಯ ಜ್ಞಾನಾದಿ ಸ್ವರೂಪ ನಿರೂಪಕ ಧರ್ಮನಿರೂಪಿತವಾದ ಧರ್ಮಿಯು ಲಕ್ಷ್ಮೀಪತಿತ್ವವೆಂಬ ದೇವತಾಂತರ ವ್ಯಾವರ್ತಕ ಧರ್ಮ ದಿಂದ, ಬ್ರಹ್ಮಶಿವಾದಿ ದೇವತಾಂತರಗಳಿಗಿಂತ ಬೇರೆಯೆಂದು ಸ್ಥಾಪಿಸಲ್ಪಡುತ್ತದೆ. ಹಾಗೆಯೇ ನಿನ್ನ ಸಂಬಂಧ ಕೃತವಾದ ಉತ್ಕರ್ಷವಿಲ್ಲದಿದ್ದರೆ ಇತರ ವ್ಯಾವೃತ್ತವಾದ ಭಗವತ್ಸ್ವರೂಪವೂ, ಅದನ್ನು ಆಶ್ರಯಿಸಿರುವ ಸ್ವಾತಂತ್ರ್ಯಾದಿ ಗುಣಗಳೂ ವ್ಯವಹಾರ ಯೋಗ್ಯಗಳಾಗಲಾರವು. ಹೇ ಶ್ರೀಃ-ಎಲೈ ಲಕ್ಷ್ಮಿಯೇ, ತ್ವಂ-ನೀನು, ಕಮಿತುಃ-ನಾಯಕ ನಾದ ಭಗವಂತನಿಗೆ, ಇದಮಿತ್ಥಂ ತ್ವ ವಿಭವಃ-ಇದಮಂಶವಾದ ಭಗವಂತನಿಗೆ, ಸ್ವರೂಪ ನಿರೂಪಕ ಧರ್ಮವಾದ ಇತ್ಥಂತ್ವ ಪ್ರಕಾರಕ ವೈಭವದಿಂದ ಕೂಡಿದವಳಾಗಿ ಆಸೀಃ-ಆಗಿದ್ದೀಯೆ. ತದಂತರ್ಭಾವಾತ್ - ಹೀಗೆ ಭಗವಂತ ನೆಂಬ ಪ್ರಕಾರಿಗೆ ನೀನು ಪ್ರಕಾರ ಭೂತೆಯಾಗಿ ಅಂತರ್ಭೂತೆಯಾಗಿರುವುದರಿಂದ ತ್ವಾಂ - ನಿನ್ನನ್ನು ಶ್ರುತಿರಪಿ- ಸದೇವ ಸೋಮ್ಯೇದಮಗ್ರ ಆಸೀತ್ - ಏಕಮೇವಾದ್ವಿತೀಯಂ ಇತ್ಯಾದಿ ಕಾರಣ ಶ್ರುತಿಯೂ, ಪೃಥಕ್ - ಬೇರೆ ಯಾಗಿ, ನಾಭಿಧತ್ತೇ - ಹೇಳುವುದಿಲ್ಲ. ಭಗವಂತನು ಧರ್ಮಿ. ಲಕ್ಷ್ಮಿಯು ಸ್ವರೂಪ ನಿರೂಪಕ ಧರ್ಮಗಳಲ್ಲಿ ಪ್ರಧಾನ ಭೂತೆಯಾಗಿರುವುದರಿಂದ, "ಆನೀದ ವಾತಗ್ಂ ಸ್ವಧಯಾ ತದೇಕಂ" ಎಂಬ ಶ್ರುತಿಯು, "ಕಾರಣ

1) ಶ್ರೀ ಗುಣರತ್ನಕೋಶ 28

ದಶೆಯಲ್ಲಿ ಭಗವಂತನು ಲಕ್ಷ್ಮೀವಿಶಿಷ್ಟನಾಗಿದ್ದನು", ಎಂದು "ಏಕ" ಶಬ್ದಕ್ಕೆ ಲಕ್ಷ್ಮೀವಿಶಿಷ್ಟತ್ವವನ್ನು ತಿಳಿಸಿದೆ. ಆದ್ದರಿಂದ ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವ ಎಂಬಲ್ಲಿ "ಏಕ" ಶಬ್ದಕ್ಕೆ ಲಕ್ಷ್ಮೀ ವಿಶಿಷ್ಟನೇ ಅರ್ಥ. ಇದನ್ನು ವಿಂಗಡಿಸಿ ಹೇಳದೆ ಶ್ರುತಿಯು ಭಗವಂತನನ್ನು "ಏಕಮೇವಾದ್ವಿತೀಯಮ್"ಎಂದು ಸೇರಿಸಿ ಹೇಳಿದೆ. **ಇತ್ಯಾದಿ ಹಳಿಲ್** – ಎಂಬಲ್ಲಿ ಆದಿ ಶಬ್ದದಿಂದ "ಅಹಲಹಿಲ್ಲೇನ್ ಇರೈಯುಮ್" (ನಮ್ಮಾಳ್ವಾರ್ ಪಾಶುರ)"ಆಶ್ರಯಣ ವೇಳೆಯೋಡು ಭೋಗವೇಳೆಯೋಡು ವಾಶಿಯರ,ಒರು ಮಿಥುನಮೇ ಉದ್ದೇಶ್ಯಂ"(ಈಡು ವ್ಯಾಖ್ಯಾನ ಮುದಲ್ ಶ್ರಿಯಃಪತಿ) ಎಂಬುವು ಸಂಗ್ರಹೀತಗಳು ಅಂತರ್ಭಾವವೆಂದರೆ, ವಿಶಿಷ್ಟವು ಕಾರಣವಾಗಿರುವಾಗ, ವಿಶೇಷಣವೂ ಕಾರಣವಾಗಿದ್ದು ಐಕಬುದ್ಧ್ಯಾರೂಢವಾಗಿರುವುದು ಪ್ರಾಪ್ಯಕೋಟಿಯಲ್ಲಿ ಅನ್ವಯಿಸುವಂತೆ, ಪ್ರಾಪಕ ಕೋಟಿಯಲ್ಲಿ ಅನ್ವಯಿಸುವುದೂ ಸ್ವರಸ. ಲಕ್ಷ್ಮೀಗೆ ಪ್ರಾಪಕತ್ವವು ಸೋಪಾಧಿಕವೆಂದು ಹೇಳಲಿಕ್ಕಿಲ್ಲ. "ಅಗ್ನಯೇ ಪಥಿಕೃತೇ ಪುರೋಡಾಶಮ್"ಇತ್ಯಾದಿ ವಿಶಿಷ್ಟೋದ್ದೇಶ್ಯಕ ಸ್ಥಲಗಳಲ್ಲಿ ಎಲ್ಲಿಯೂ ವಿಶೇಷ್ಯ ಸಂಬಂಧ ಕಾರಣದಿಂದ ವಿಶೇಷಣಕ್ಕೆ ಉದ್ದೇಶ್ಯ ಕೋಟಿ ಪ್ರವೇಶವೆಂದು ಹೇಳುವುದು ನ್ಯಾಯವನ್ನರಿತವರು ಸಂಮತಿಸುವುದಿಲ್ಲ. ಶರಣ್ಯತ್ವವು ಕಾರುಣಿಕತ್ವಾದಿ ಗುಣವತ್ವ ನಿಬಂಧನವೆಂದು ಹೇಳುವಂತೆ, ಲಕ್ಷ್ಮೀ ಸಬಂಧವೂ ಉಪಾಯತ್ವೋಪೇಯತ್ವಗಳಿಗೆ ನಿಬಂಧನ. ಹೀಗೆ ಚೇತನಾಂತರ ಸಾಪೇಕ್ಷತ್ವವನ್ನು ಹೇಳಿದರೆ ಭಗವಂತನ ಶರಣ್ಯತ್ವವು ಅನ್ಯಾಧೀನವಾಗುತ್ತದೆಯಲ್ಲಾ ಎಂದು ಕೇಳಬಹುದು. ಅಚೇತನಗಳಾದ ಗುಣಗಳಂತೆ ಚೇತನಾಂತರವೂ ಉಪಯುಕ್ತ ವಿಶೇಷಣವಾಗಿ ಉಪಕಾರಭೂತವಾಗಿದೆ. ಇದರಿಂದಉಪಾಯದ್ವಿತ್ವ ದೋಷವು ಉಂಟಾಗುತ್ತದೆಯೆಂದೂ ಹೇಳಲಿಕ್ಕಿಲ್ಲ. ಫಲವನ್ನು ಕೊಡಲು ಕಾರುಣ್ಯಾದಿ ಕಲ್ಯಾಣ ಗುಣಗಳು ಉಪಕಾರಕಗಳಾಗುವಂತೆ ಚೇತನಾಂತರ ಭೂತೆಯಾದ ಲಕ್ಷ್ಮಿಯ ಪ್ರಸನ್ನತೆಯೂ ಉಪಕಾರಕವಾಗುತ್ತದೆ. ಉಪಯೋಗವು ವಸ್ತುವಿಗೆ ಅನುರೂಪವಾಗಿರುತ್ತದೆಯೇ ಹೊರತು ಬೇರೆಯಲ್ಲ ಆದ್ದರಿಂದ ಉಪಾಯದ್ವಿತ್ವ ದೋಷವು ಉಂಟಾಗುವುದಿಲ್ಲ. ಹೀಗೆ ಪ್ರಸಿದ್ಧವಾದ **ಕೂಟಸ್ಥ ಸಂಪ್ರದಾಯ ವಿರುದ್ಧಮಾಹ**–ಯಾಮುನ ಭಾಷ್ಯಕಾರ ಪರಾಶರ ಭಟ್ಟಾರಕರುಗಳಿಂದ ಉಪದೇಶಿಸಲ್ಪಟ್ಟ ಸಂಪ್ರದಾಯಾರ್ಥಗಳಿಗೆ ವಿರುದ್ಧವಾಗಿ ಲಕ್ಷ್ಮೀ ನಾರಾಯಣರನ್ನು ವಿಶೇಷಣ ವಿಶಿಷ್ಟರನ್ನಾಗಿ ಒಪ್ಪದೆ, ದ್ವಯಮಂತ್ರದ ಪೂರ್ವಖಂಡದಲ್ಲಿ ಉಪಲಕ್ಷಣ ಪರವೆಂದೂ ಉತ್ತರ ಖಂಡದಲ್ಲಿ ವಿಶೇಷಣಪರವೆಂದೂ ವಿಭಾಗ ಮಾಡಿ ಹೇಳುವುದು **ಅನುಪಪನ್ನಮ್**–ಉಚಿತವಲ್ಲ. ಇದರಿಂದ **ಮಾಮ್ ಅಹಂ**–ಎಂಬ ಪದಗಳಲ್ಲಿಯೂ ಶರಣ್ಯತ್ವಕ್ಕೆ ಉಪಯುಕ್ತವಾದ ಸರ್ವಜ್ಞತ್ವ, ಸರ್ವಶಕ್ತಿತ್ವ, ಪರಮ ಕಾರುಣಿಕತ್ವಾದಿ ಸ್ವಭಾವಗಳ ಹಾಗೆ ಸ್ವರೂಪ ನಿರೂಪಕ ಧರ್ಮಪ್ರಧಾನವಾದ ಶ್ರಿಯಃ ಪತಿತ್ವವು ವಿವಕ್ಷಿತ. ಅಂದರೆ "ಮಾಮ್" ಲಕ್ಷ್ಮೀ ವಿಶಿಷ್ಟನಾದ ನನ್ನನ್ನು (ನಾರಾಯಣನನ್ನು) ಎಂದು ಅರ್ಥಮಾಡಿ, ವಿಶಿಷ್ಟ ತತ್ವವು ಉಪಾಯ, "ಅಹಂ"–ಎಂದು ವಿಶಿಷ್ಟ ತತ್ವವು ಉಪೇಯ, ಎಂಬುದು ಸಂಪ್ರತಿಪನ್ನವಾದ ಅರ್ಥ. ಕೆಲವರು,

"ಲಕ್ಷ್ಮ್ಯಾ ಸಹ ಹೃಷೀಕೇಶೋದೇವ್ಯಾ ಕಾರುಣ್ಯ ರೂಪಯಾ !
ರಕ್ಷಕಸ್ಸರ್ವ ಸಿದ್ಧಾಂತೇ ವೇದಾಂತೇಷು ಚ ಗೀಯತೇ ॥"

ಎಂಬ ಶ್ಲೋಕದಲ್ಲಿ, "ಲಕ್ಷ್ಮ್ಯಾ ಸಹ, ಎಂಬಲ್ಲಿ 'ಸಹಯುಕ್ತೇ ಅಪ್ರಧಾನೇ' ಎಂಬ ವ್ಯಾಕರಣ ಸೂತ್ರದ ಪ್ರಕಾರ ಲಕ್ಷ್ಮೀಗೆ ಪತಿಯ ಹಾಗೆ ಪ್ರಧಾನೋಪಾಯತ್ವವು ಯುಕ್ತವಲ್ಲ. ಮೇಲೂ "ಕಾರುಣ್ಯ ರೂಪಯಾ" ಎಂದು ಹೇಳಿರುವುದರಿಂದ "ಕಾರುಣ್ಯಂ ರೂಪಯತಿ" ಎಂಬವ್ಯುತ್ಪತ್ತಿಯಿಂದ ಪತಿಯಕಾರುಣ್ಯವನ್ನು ಹೆಚ್ಚಿಸುತ್ತಾಳೆಂದು ಪುರುಷ ಕಾರತ್ವವು ಹೇಳಿದೆ. ಆದ್ದರಿಂದ ಪುರುಷಕಾರದ್ವಾರಾ ಲಕ್ಷ್ಮೀಗೆ ಪರಂಪರೋಪಾಯತ್ವವನ್ನು ಮಾತಃ ಹೇಳಬಹುದು, ಪ್ರಧಾನೋ ಪಾಯತ್ವವಿಲ್ಲವೆಂದು, ಕಲ್ಪಿಸುತ್ತಾರೆ. ಇದು ಸರಿಯಲ್ಲ. 'ಪುತ್ರೇಣ ಸಹಾಗತ ಪಿತಾ' ಇತ್ಯಾದಿ ಪ್ರಯೋಗಗಳಲ್ಲಿ ಪಿತ್ರಪೇಕ್ಷಯಾ ಪುತ್ರನಿಗೆ ಅಪ್ರಾಧಾನ್ಯವು ತೋರಿದರೂ ಆಗಮನ ಕ್ರಿಯೆಯಲ್ಲಿ ಇಬ್ಬರಿಗೂ ಸಮಾನವಾಗಿಯೇ ಅನ್ವಯವಿದೆ. ತಂದೆಯ ಆಗಮನದಲ್ಲಿ ಪುತ್ರನು ಪ್ರೇರಕನು ಮಾತ್ರವಾಗಿದ್ದರೆ ಜತೆಯಲ್ಲಿ ಬರುವ ಪ್ರಸಂಗವೇನಿದೆ. ಹಾಗೆ ಲಕ್ಷ್ಮಿಯು ಭಗವಂತನ ಜಗದ್ವ್ಯಾಪಾರದಲ್ಲಿ ಜತೆಯಲ್ಲಿಲ್ಲದೆ, ಕೇವಲ ಪ್ರೇರಕಳಾದರೆ, ಲಕ್ಷ್ಮಿಯೊಡಗೂಡಿ ಜಗದ್ವ್ಯಾಪಾರವನ್ನು ಮಾಡುತ್ತಾನೆಂಬುದು ಅಸಂಗತವಾಗುತ್ತದೆ. ಮೇಲೂ

'ಕಾರುಣ್ಯ ರೂಪಯಾ' ಎಂಬಲ್ಲಿ "ಕಾರುಣ್ಯಂ ರೂಪಂ – ರೂಪಕಂ – ಸ್ವರೂಪ ನಿರೂಪಕಂ ಯಸ್ಯಾಸ್ಸಾ, ತಯಾ – ಕಾರುಣ್ಯ ರೂಪಯಾ, ಎಂದು ಸಮಾಸ. ಇದರಿಂದ ಅಜ್ಞಾತ ನಿಗ್ರಹೆ - ಕೋಪವೆಂಬುದನ್ನು ತಿಳಿಯದವಳು ಎಂದು ಅರ್ಥ. ಆದ್ದರಿಂದ **ಕೇವಲ ಪುರುಷಕಾರಭೂತೆ** ಎಂಬ ಮಾತು ಇಲ್ಲಿ ಸಂಗತವಾಗುವುದಿಲ್ಲ.

ಮೇಲೂ ಭಗವಂತನ ರಕ್ಷಕತ್ವವು ಪ್ರಣವದಲ್ಲಿ ಪ್ರತಿಪಾದಿಸಲ್ಪಡುತ್ತದೆ. "ವೇದಾಂತೇಷು ಚ ಗೀಯತೇ" ಎಂಬ ಪದಗಳಿಂದ ಪ್ರಣವ ಮತ್ತು ಅದರ ವಿವರಣ ರೂಪಗಳಾದ ಶ್ರುತ್ಯಂತರಗಳು ವಿವಕ್ಷಿತಗಳು.

ಪ್ರಣವದಲ್ಲಿಯೂ ಮೋಕ್ಷ ಪ್ರಧಾನ ರೂಪ ರಕ್ಷೆಯು ಮಾತ್ರ ವಿವಕ್ಷಿತವಲ್ಲ. ಬೇರೆ ಏನೆಂದರೆ ಸರ್ವಾಪನ್ನಿವಾರಣ ಐಹಿಕಾ ಮುಷ್ಮಿಕ ಸರ್ವಾಭಿಮತ ಸಂಪತ್ಪ್ರದಾನ, ಅವುಗಳಿಗೆ ಅವಶ್ಯವಾದ ಉಪಾಯಗಳು, ಯಾವ್ಯವೋ ಅವುಗಳೆಲ್ಲವೂ ವಿವಕ್ಷಿತ. ಲೋಕ ವೇದಗಳಲ್ಲಿ ಪ್ರಸಿದ್ಧವಾದ ಸರ್ವವಿಧವಾದ ರಕ್ಷಣವೂ "ಅವ ರಕ್ಷಣೇ" ಎಂಬ ಧಾತುವಿನಿಂದ ನಿಷ್ಪನ್ನವಾದ 'ಅ' ಎಂಬ ಪ್ರಥಮಾಕ್ಷರದಲ್ಲಿ ಸಂಗ್ರಹಿಸಲ್ಪಡುತ್ತದೆ. ಇದು ಎಲ್ಲರೂ ಅಂಗೀಕರಿಸಿದ್ದಾರೆಯಲ್ಲವೇ. ಆದ್ದರಿಂದ ಪ್ರಣವಾರ್ಥ ವಿವರಣವಾದ "ಲಕ್ಷ್ಮ್ಯಾಸಹ" ಎಂಬ ವಚನದಲ್ಲಿ ಪುರುಷಕಾರತ್ವವು ಮಾತ್ರ ತಾತ್ಪರ್ಯವೆಂದು ಹೇಳುವುದಕ್ಕೆ ಅವಕಾಶವಿಲ್ಲ. ಮೋಕ್ಷೇತರ ವಿಷಯಗಳಲ್ಲಿ ಪುರುಷಕಾರತ್ವವು ಅನಪೇಕ್ಷಿತವಾದ್ದರಿಂದ, ಮೋಕ್ಷ ಮಾತ್ರದಲ್ಲಿ 'ಲಕ್ಷ್ಮ್ಯಾಸಹ' ಎಂದಾರಂಭಿಸುವ ವಚನವು ಪ್ರವರ್ತಿಸುತ್ತದೆ ಎಂದು ಕಲ್ಪಿಸುವುದು ನಿಷ್ಫಲ. 'ರಕ್ಷಕಃ' ಎಂದು ಸಾಮಾನ್ಯವಾಗಿ ಹೇಳಿರುವುದಕ್ಕೆ ಅಸ್ವಾರಸ್ಯವನ್ನುಂಟು ಮಾಡಿದಂತಾಗುತ್ತದೆ. ಆದ್ದರಿಂದ ಇಷ್ಟಪ್ರಾಪಣ ಅನಿಷ್ಟ ನಿವಾರಣ ರೂಪ, ಸರ್ವ ವಿಷಯಕವಾದ ರಕ್ಷಣದಲ್ಲಿ ದಿವ್ಯ ದಂಪತಿಗಳಿಬ್ಬರಿಗೂ ಅನ್ವಯವುಂಟು. ಅಂದರೆ ಸಮಾನೋಪಾಯತ್ವವು ಎಂಬುದು ವಚನ ತಾತ್ಪರ್ಯ. 'ಕಾರುಣ್ಯ ರೂಪಯಾ' ಎಂಬ ವಚನಕ್ಕೆ ಪುರುಷಕಾರತ್ವವನ್ನು ಹೇಳಿದರೂ, ದೇವ್ಯಾ, ಲಕ್ಷ್ಮ್ಯಾ ಎಂಬ ಪದಗಳಿಂದ ಉಪಾಯತ್ವವು ಲಭಿಸುತ್ತದೆ. "ಲಕ್ಷ್ಮ್ಯಾಶ್ಚಾಪಿಹರೇರ್ನಿತ್ಯಂ" ಎಂಬ ವಾಕ್ಯದಿಂದ ಪತಿಯೊಡನೆ ಅಪೃಥಕ್ ಸಿದ್ಧ ವಿಶೇಷಣತ್ವವು ವಿವಕ್ಷಿತವಾಗಿ ವಿಶಿಷ್ಟೋಪಾಯತ್ವವು ಲಭಿಸುತ್ತದೆ. "ದೇವ್ಯಾ" ಎಂಬ ಪದದಿಂದ, "ಶ್ರದ್ಧಯಾ ದೇವೋ ದೇವತ್ವಮಶ್ನುತೇ" ಎಂಬ ಶ್ರುತಿವಾಕ್ಯವು ದ್ಯೋತವಾಗಿ ಲಕ್ಷ್ಮಿಯೊಡಗೂಡಿ ದೇವನು – ಜಗದ್ವ್ಯಾಪಾರಲೀಲನು, ದೇವತ್ವಂ – ಜಗದ್ವ್ಯಾಪಾರವನ್ನು ಅಶ್ನುತೇ ಅನುಭವಿಸುತ್ತಾನೆ, ಎಂದು ಏರ್ಪಟ್ಟು ಪತಿಯೊಡನೆ ಐಕರಸ್ಯ ಭಾವದಿಂದ ಲಕ್ಷ್ಮಿಯೂ ಜಗಲ್ಲೀಲೆಯನ್ನು ಅನುಭವಿಸುತ್ತಾಳೆಂಬ ಸಿದ್ಧಾಂತವು ಉಪಪನ್ನವಾಗುತ್ತದೆ. ಜಗಲ್ಲೀಲೆಯು ಸೃಷ್ಟಿ, ಸ್ಥಿತಿ, ಸಂಹಾರ, ಮೋಕ್ಷ ಪ್ರದತ್ವಗಳು. ಇದರಿಂದ ಲಕ್ಷ್ಮಿಗೂ ಉಪಾಯತ್ವವು ಸಿದ್ಧಿಸುತ್ತದೆ. **"ಸಪತ್ನೀಕನಾಯ್ ಕೊಂಡು, ಸರ್ವರಕ್ಷಣ ಯಜ್ಞ ದೀಕ್ಷಿತನಾನ, ಸರ್ವೇಶ್ವರನುಕ್ಕು"** ಎಂಬಲ್ಲಿ "ಪತ್ನೀ" ಶಬ್ದದಿಂದಲೂ, ಯಜ್ಞ ದೀಕ್ಷಿತ ಶಬ್ದಗಳಿಂದಲೂ ವಿವಕ್ಷಿತಾರ್ಥವು ಲಭಿಸುತ್ತದೆ. 'ಪತ್ಯುರ್ನೋಯಜ್ಞಸಂಯೋಗೇ' ಎಂಬ ವ್ಯಾಕರಣ ಸೂತ್ರದ ಪ್ರಕಾರ ಯಾಗದಲ್ಲಿ ಸಂಯೋಗ–ಜತೆಯಲ್ಲಿದ್ದು, ಸರ್ವರಕ್ಷಣ ರೂಪವಾದ ಯಾಗವನ್ನು ಮಾಡುವವಳು, ಎಂಬ ಅರ್ಥವು ಲಭಿಸುತ್ತದೆಯಾದ್ದರಿಂದ ಉಪಾಯತ್ವವು ನಿಶ್ಚಿತವೆಂಬುದು ಭಾವ. ಆದ್ದರಿಂದಲೇ ಶಾಸ್ತ್ರಗಳಲ್ಲಿ "ನಿತ್ಯಂ ತದ್ಧರ್ಮ ಧರ್ಮಿಣೀ" ಎಂದು ಭಗವಂತನ ಎಲ್ಲಾ ಧರ್ಮಗಳೂ, ಅಂದರೆ ಪ್ರಾಪಕತ್ವ, ಪ್ರಾಪ್ಯತ್ವಾದಿ ಧರ್ಮಗಳೆಲ್ಲವೂ ಲಕ್ಷ್ಮಿಗೂ ಉಂಟು ಎಂದು ಹೇಳಿರುತ್ತದೆ. ಆದ್ದರಿಂದಲೇ ಕ್ರಿಯಾ ಅನನ್ವಯಿತ್ವೇಸತಿ ವ್ಯಾವರ್ತಕಮ್ ಉಪಲಕ್ಷಣಮ್" – ಕ್ರಿಯೆಯಲ್ಲಿ ಅನ್ವಯಿಸದೆ ಇತರ ಪದಾರ್ಥಗಳಿಂದ ಬೇರೆಯಾಗಿ ವಿಂಗಡಿಸುವುದು ಉಪಲಕ್ಷಣ. ಕ್ರಿಯಾನ್ವಯಿತ್ವೇಸತಿ ವ್ಯಾವರ್ತಕಮ್ ವಿಶೇಷಣಮ್" ಕ್ರಿಯೆಯಲ್ಲಿ ಅನ್ವಯಿಸಿ ಇತರ ಪದಾರ್ಥಗಳಿಂದ ಬೇರೆಯಾಗಿ ವಿಂಗಡಿಸುವುದು ವಿಶೇಷಣ, ಎಂಬ ಪರಿಷ್ಕೃತ ಲಕ್ಷಣವಿರುವಾಗ ದ್ವಯಮಂತ್ರದ **ಪೂರ್ವ** ಖಂಡದಲ್ಲಿ **ಪ್ರಪದ್ಯೇ**–ಎಂದು ಹೇಳಲ್ಪಟ್ಟ ಪ್ರಪದನದಿಂದ ಉಂಟಾಗುವ ಪ್ರಸನ್ನತೆಯು **ಶ್ರೀಮತ್** ಪದದಲ್ಲಿ ಉಪಲಕ್ಷಣ

## ಲಕ್ಷ್ಮ್ಯಾ ಉಪಾಯತ್ವೇ ಉಪಾಯದ್ವಿತ್ವಮಿತಿ ಪೂರ್ವಪಕ್ಷಸ್ಯ ಖಂಡನಮ್

**ಅನನ್ಯೋಪಾಯತ್ವವಿರುದ್ಧಮಾನ ಉಪಾಯದ್ವಿತ್ವಪ್ರಸಙ್ಗಮ್ ಇವ್ವಿಡತ್ತಿಲ್ ಬಾಧಕಮಾನಾಲೋವೆನ್ನಿಲ್ ? ಅನನ್ಯಪ್ರಯೋಜನತ್ವ ವಿರುದ್ಧಮಾನ ಪ್ರಾಪ್ಯದ್ವಿತ್ವಪ್ರಸಙ್ಗತ್ತಾಲೇ ಉತ್ತರಖಂಡತ್ತಿಲುಮ್ ವಿಶೇಷಣತ್ವಮ್ ತವಿರ ಪ್ರಸಙ್ಗಿಕ್ಕುಮ್.**

**ಆನಾಲ್ ಇರಣ್ಡಿಡತ್ತಿಲುಮ್ ಉಪಲಕ್ಷಣಮಾನಾಲೋ ವೆನ್ನಿಲ್ ? ಗುಣವಿಗ್ರಹ ವ್ಯಾಪಾರ ವಿಶೇಷಙ್ಗಳುಮ್ ಇರಣ್ಡಿಡತ್ತಿಲುಮ್ ಉಪಲಕ್ಷಣಙ್ಗಳಾಹ ಪ್ರಸಙ್ಗಿಕ್ಕುಮ್. ಉಪಯುಕ್ತಙ್ಗಳಾಹೈಯಾಲೇ ಯುವೈ ವಿಶೇಷಣಙ್ಗಳೆನ್ನಿಲ್, ಇದು ಪೂರ್ವೋತ್ತರ ಖಂಡಙ್ಗಳಿಲ್ ಪತ್ನೀ ಸಂಬಂಧತ್ತಿಲುಮ್ ತುಲ್ಯಮ್.**

---

ಭೂತೆಯಾದ ಲಕ್ಷ್ಮೀಗೆ ಇಲ್ಲ, ಉತ್ತರ ಖಂಡದಲ್ಲಿ "ಭವೇಯಂ" ಎಂಬ ಅಧ್ಯಾಹೃತವಾದ ಕ್ರಿಯೆಯಿಂದ ಅಭಿಪ್ರೇತವಾದ ಕೈಂಕರ್ಯೋದ್ದೇಶ್ಯತ್ವವು **'ಶ್ರೀಮತೇ'** ಎಂಬ ಪದದಿಂದ ವಿಶೇಷಣ ಭೂತೆಯಾದ ಲಕ್ಷ್ಮೀಗೂ ಉಂಟು ಎಂದು ಹೇಳುವ ಮಾತು ಕಲ್ಪಿತ. **ಶಬ್ದಮೇಕರೂಪಮಿತಿ**–ನಿತ್ಯಯೋಗವನ್ನು ಸೂಚಿಸುವ "ಮತುಪ್" ಪ್ರತ್ಯಯವು ಶ್ರೀಮತ್, ಶ್ರೀಮತೇ ಎಂಬಲ್ಲಿ ಏಕರೂಪವಾಗಿರುವಾಗ **ಸ್ವಾರಸ್ಯಮ್** ಇತ್ಯಾದಿ "ವಿಶಿಷ್ಟಾನ್ವಯಿನಃ, ವಿಶೇಷಣಾನ್ವಯಿತ್ವಂ ಸ್ವಾರಸಿಕಂ" ಎಂಬ ನ್ಯಾಯವು ಉಭಯತ್ರ ಸಮಾನವಾಗಿರುವುದರಿಂದ, ಲಕ್ಷ್ಮೀಯು ವಿಶೇಷಣ ಭೂತೆಯಾಗಿದ್ದು ಲಕ್ಷ್ಮೀನಾರಾಯಣರಿಬ್ಬರೂ ಉಪಾಯ ಮತ್ತು ಉಪೇಯ ಭೂತರೆಂಬುದು ಸಿದ್ಧಾಂತ.

ಅನಂತರ, ಲಕ್ಷ್ಮೀಗೂ ಉಪಾಯವನ್ನು ಹೇಳಿದರೆ, ಅನನ್ಯೋಪಾಯತ್ವಕ್ಕೆ ಧಕ್ಕೆಯುಂಟಾಗುತ್ತದೆ ಎಂಬ ಚೋದ್ಯವನ್ನು, **ಅನನ್ಯೋಪಾಯತ್ವ ವಿರುದ್ಧಮಾನ** ಎಂದಾರಂಭಿಸಿ ಪರಿಹರಿಸುತ್ತಾರೆ. ಅದಾಗಿ ಲಕ್ಷ್ಮೀನಾರಾಯಣರಿಬ್ಬರಿಗೂ ಉಪಾಯತ್ವವನ್ನು ಹೇಳಿದರೆ, ಉಪಾಯದ್ವಿತ್ವವು ಪ್ರಸಕ್ತವಾಗಿ, 'ಮಾಮೇಕಂ ಶರಣಂ ವ್ರಜ' ಎಂದು ಹೇಳಲ್ಪಟ್ಟ, ಭಗವದನನ್ಯೋಪಾಯತ್ವಕ್ಕೆ ಭಂಗವು, ಏರ್ಪಟ್ಟು ಅನನ್ಯೋಪಾಯತ್ವಕ್ಕೆ ವಿರುದ್ಧವಾದ ಉಪಾಯದ್ವಿತ್ವವು ಪ್ರಸಕ್ತವಾಗಿ ಬಾಧಕವಾಗುವುದಲ್ಲವೇ ಎಂದರೆ, ಇದಕ್ಕೆ ಪ್ರತಿಬಂದಿಯಾಗಿ **ಅನನ್ಯಪ್ರಯೋಜನ ವಿರುದ್ಧಮಾನ** – ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ. ಅದಾಗಿ ಕೈಂಕರ್ಯ ಪ್ರತಿಸಂಬಂಧಿಗಳಾಗಿ ಲಕ್ಷ್ಮೀನಾರಾಯಣರಿಬ್ಬರನ್ನೂ ಅಂಗೀಕರಿಸಿದರೆ, ಅನನ್ಯ ಪ್ರಯೋಜನ ವಿರುದ್ಧವಾದ ಪ್ರಾಪ್ಯದ್ವಿತ್ವವು ಪ್ರಸಕ್ತವಾಗಿ, ದ್ವಯ ಮಂತ್ರದ ಉತ್ತರಖಂಡದಲ್ಲಿ 'ಶ್ರೀಮತೇ' ಎಂಬಲ್ಲಿ ಲಕ್ಷ್ಮೀಗೆ ವಿಶೇಷಣತ್ವವನ್ನು ಬಿಟ್ಟು ಉಪಲಕ್ಷಣತ್ವವನ್ನು ಅಂಗೀಕರಿಸಬೇಕಾಗಿ ಬರುತ್ತದೆ, ಇದು ಇಷ್ಟಾಪತ್ತಿ ಎಂದರೆ, ಉತ್ತರಿಸುತ್ತಾರೆ.

**ಆನಾಲ್** ಇತ್ಯಾದಿ ಆದರೆ **ಇರಂಡಿಡತ್ತಿಲುಂ** – ಪೂರ್ವೋತ್ತರ ಖಂಡಗಳಲ್ಲಿ ಉಪಲಕ್ಷಣವಾದರೇನು, ಎಂದರೆ, ಗುಣವಿಗ್ರಹ ವ್ಯಾಪಾರ ವಿಶೇಷಗಳೂ ಪೂರ್ವ ಮತ್ತು ಉತ್ತರ ಖಂಡಗಳಲ್ಲಿ ಉಪಲಕ್ಷಣಗಳು ಎಂದು ಹೇಳಬೇಕಾದ ಪ್ರಸಂಗವು ಬರುತ್ತದೆ; ಕಾರುಣ್ಯಾದಿ ಗುಣಗಳಿಲ್ಲದೆ ರಕ್ಷಣಾ ವ್ಯಾಪಾರಗಳು ಘಟಿಸುವುದಿಲ್ಲ. ಕೈಂಕರ್ಯವನ್ನು ಸ್ವೀಕರಿಸಲು ವಿಗ್ರಹವಿಲ್ಲದೆ ಆಗಲಾರದು. ವ್ಯಾಪಾರಗಳಿಲ್ಲದೆ ಯಾವ ಪ್ರವೃತ್ತಿಯೂ ಏರ್ಪಡುವುದಿಲ್ಲ. ಆದ್ದರಿಂದ ಇವುಗಳು ಬೇಕಾಗಿ, ಭಗವಂತನಿಗೆ ವಿಶೇಷಣಗಳೆಂದರೆ, ಪೂರ್ವೋತ್ತರ ಖಂಡಗಳಲ್ಲಿ **ಪತ್ನೀ ಸಂಬಂಧತ್ತಿಲುಮ್**– ಲಕ್ಷ್ಮೀ ಸಂಬಂಧದಲ್ಲಿಯೂ ಸಮಾನ. ಲಕ್ಷ್ಮೀಸಂಬಂಧದಿಂದ ಉಂಟಾಗುವ ಉಪಯೋಗವೇನೆಂದರೆ **ಉಪಯೋಗ ವಿಶೇಷಂಗಳ್** ಇತ್ಯಾದಿ–ಉಪಯೋಗ ವಿಶೇಷಗಳು ಆಯಾಯಾ ವಸ್ತುಗಳಿಗೆ ಅನುರೂಪವಾದ ರೀತಿಯಲ್ಲಿ ಪ್ರಮಾಣ ಸಂಪ್ರದಾಯಗಳಿಂದ ತಿಳಿದುಕೊಳ್ಳಬೇಕು.

**ಉಪಯೋಗ ವಿಶೇಷಙ್ಗಳ್ ತತ್ತದ್ವಸ್ತುಕ್ಕಳುಕ್ಕು ಅನುರೂಪಮಾನ ಪಡಿಯಿಲೇ ಪ್ರಮಾಣ ಸಂಪ್ರದಾಯಙ್ಗಳಾಲೇ ಕಂಡುಕೊಳ್ಳದು. ವಸ್ತ್ವನುರೂಪಮಾಯಿರೇ ಉಪಯೋಗ ಮಿರುಪ್ಪದು.**

**ಉಪಾಯೋಪೇಯದಶಾಸು ಲಕ್ಷ್ಮ್ಯಾಃ ಉಪಯೋಗ ವಿಶೇಷಮ್**

**ಉಪಾಯೋಪೇಯ ಪರಮಾನ ವಾಕ್ಯದ್ವಯತ್ತಿಲುಮ್ ಶ್ರುತಮಾನ ಇವ್ವಿಶೇಷತ್ತಿನುಡೈಯ ಉಪಯೋಗ ಪ್ರಕಾರತ್ತೈ 1) ವೇರಿ ಮಾರಾದ ಪೂಮೇಲಿರುಪ್ಪಾಳ್ ವಿನೈತೀರ್ಕ್ಕುಮೇ ಎನ್ರುಮ್ 2) "ನಿನ್ತಿರುವರುಳುಮ್ ಪಙ್ಗಯತ್ತಾಳ್ ತಿರುವರುಳುಮ್ ಕೊಣ್ಡು, ನಿನ್‌ಕೋಯಿಲ್ ಶೀಯ್‌ತ್ತು"**

---

## ಉಪಾಯ ದಶೆಯಲ್ಲಿಯೂ ಫಲದಶೆಯಲ್ಲಿಯೂ ಲಕ್ಷ್ಮಿಯ ಉಪಯೋಗ

ಲಕ್ಷ್ಮಿಯ ಉಪಯೋಗವನ್ನು **ಉಪಾಯೋಪೇಯ ಪರಮಾನ** ವೆಂದಾರಂಭಿಸಿ ತಿಳಿಸುತ್ತಾರೆ. ಉಪಾಯ ಮತ್ತು ಉಪೇಯ ಪರವಾದ ದ್ವಯಮಂತ್ರದ ಪೂರ್ವೋತ್ತರ ವಾಕ್ಯಗಳಲ್ಲಿ, ಹೇಳಲ್ಪಟ್ಟ **ಇವ್ವಿಶೇಷಣತ್ತಿನುಡೈಯ** – ಈ ಶ್ರೀ ಶಬ್ದ ವಿಶೇಷಣದ ಉಪಯೋಗ ಪ್ರಕಾರವನ್ನು **1) ವೇರಿಮಾರಾದ ಪೂಮೇಲಿರುಪ್ಪಾಳ್** ಇತ್ಯಾದಿ – ಪರಿಮಳವು ಹೋಗದೆ ಇರುವ ತಾವುರೆ ಪುಷ್ಪದಲ್ಲಿ ವಾಸವಾಗಿರುವ ಲಕ್ಷ್ಮಿಯು, **ವಿನೈ ತೀರ್ಕ್ಕುಮೇ** – ಬದ್ಧ ಜೀವಿಗಳ ಪುಣ್ಯಪಾಪರೂಪವಾದ ಕರ್ಮವನ್ನು ಹೋಗಲಾಡಿಸುತ್ತಾಳೆ. ಇಲ್ಲಿ ಸಾಮಾನ್ಯ ವಾಗಿ ವಿನೈ – ಕರ್ಮಗಳೆಂದು ಸಂಕೋಚವಿಲ್ಲದೆ ಹೇಳಿರುವುದರಿಂದ ಉಪಾಯ ವಿರೋಧಿ ಪಾಪಗಳು ಮತ್ತು ಪ್ರಾಪ್ತಿ ವಿರೋಧಿ ಪಾಪಗಳು ಎರಡೂ ವಿವಕ್ಷಿತಗಳು. ಇವೆರಡು ವಿಧವಾದ ಪಾಪಗಳನ್ನು ತೀರಿಸುತ್ತಾಳೆ. ಉಪಾಯ ವಿರೋಧಿಪಾಪಗಳನ್ನು ಪುರುಷಕಾರ ರೂಪದಲ್ಲಿದ್ದು ತೀರಿಸುತ್ತಾಳೆ. ಪ್ರಾಪ್ತಿ ವಿರೋಧಿ ಪಾಪಗಳನ್ನು ತೀರಿಸುತ್ತಾಳೆಂದರೆ ಉಪಾಯ ಭೂತೆಯಾಗಿದ್ದಾಳೆಂದರ್ಥ. ಇದರಿಂದ ಪೂರ್ವಖಂಡದಲ್ಲಿ ಶ್ರೀ ಶಬ್ದವು ವಿಶೇಷಣ ಪರವಾಗಿಯೇ ಹೇಳಬೇಕೆಂಬುದು ಸಿದ್ಧವಾಯಿತು. **ಎನ್ರುಂ** – ಎಂದೂ **2) ನಿನ್‌ತಿರುವರುಳುಂ**

---

1. ಮಾರಿಮಾರಾದತಣ್ಣಮ್ಮಲೈ ವೇಂಗಡತ್ತಣ್ಣಲೈ
   ವಾರಿದೂರಾದಪ್ಪೈಮ್ಪಾಮ್ಪೊಳ್ಳಿಲ್ ಶೂಳ್ಕುರುಹೂರ್ ನಗರ್ ।
   ಕಾರಿಮಾರನ್ ಶಠಗೋಪನ್ ಶೊಲ್ಲಾಯಿರತ್ತಿಪ್ಪತ್ತಾಲ್
   ವೇರಿಮಾರಾದ ಪೂಮೇಲಿರುಪ್ಪಾಳ್ ವಿನೈತೀರ್ಕ್ಕುಮೇ ॥ ತಿರುವ್‌ಯ್ 4-5-1

ಮಳೆಯು ಸದಾಸುರಿದು ಶೀತಳವಾದ ಮತ್ತು ಸುಂದರವಾದ ತಿರುವೇಂಗಡ ಬೆಟ್ಟದಲ್ಲಿ ವಾಸವಾಗಿರುವ ಸ್ವಾಮಿಯನ್ನು, ನೀರು ಸದಾ ಕಾಲವಲ್ಲಿರುವುದರಿಂದ ಹಸುರಾಗಿ ಸಂದರವಾದ ಉದ್ಯಾನವನಗಳಿಂದ ಕೂಡಿದ ಕುರುಕಾಪುರಿಯಲ್ಲಿ ಅವತರಿಸಿದ ಕಾರಿಯ ಮಗ ನಾದ ಮಾರನ್ ಶಠಗೋಪನೆಂಬ ತಿರುನಾಮವನ್ನುಳ್ಳ ಆಳ್ವಾರವರ ಸಾವಿರ ಪಾಶುರಗಳಲ್ಲಿ ಈ ಹತ್ತು ಪಾಶುರವನ್ನು ಅನುಸಂಧಾನ ಮಾಡುವವರ ಸರ್ವಪಾಪಗಳನ್ನೂ, ಸುವಾಸನೆಯು ಹೋಗದೆ ಇರುವ ಪುಷ್ಪದಲ್ಲಿ ವಾಸಮಾಡುವ ಲಕ್ಷ್ಮಿಯು ಹೋಗಲಾಡಿಸುತ್ತಾಳೆ. "ಪಂಗಯತ್ತಾಳ್ ತಿರುವರುಳುಂ" ಎಂದು ಪತಿಯಲ್ಲಿ ಪ್ರೀತಿ ಭಾವದಿಂದ ಅನಂತರ ನಿರ್ದೇಶವನ್ನು ಮಾಡಿರುವುದರಿಂದ ಏಕರಸ್ಯಭಾವ ವನ್ನು ಸೂಚಿಸಿ ಶರಣ್ಯದ್ವಿತ್ವನಿಮಿತ್ತವಾದ ದೋಷವನ್ನು ದೂರೀಕರಿಸುತ್ತದೆ, ಇದರಿಂದ ಲಕ್ಷ್ಮೀ ನಾರಾಯಣರಿಬ್ಬರೂ ಸೇರಿ ಮಾಡುವ ಅನುಗ್ರಹವು ಕಾರ್ಯಕರವೆಂಬುದು ಪರಿನಿಷ್ಪನ್ನವಾದ ತತ್ವ ವಿಷಯ.

2) ಪಂಡೈನಾಳಾಲೇ ನಿನ್‌ತಿರುವರುಳುಂ ಪಂಗಯತ್ತಾಳ್ ತಿರುವರುಳುಂಕೊಂಡು
   ನಿನ್ ಕೋಯಿಲ್ ಶೀಯ್ತ್ತುಪ್ಪಲ್ ಪಡಿಕಾಲ್ ಕುಡಿ ಕುಡಿವಳ್ಳಿವಂದಾಳ್ ಶೆಯ್ಯುಂ ।
   ತೊಂಡರೋರ್ಕ್ಕರುಳಿಚ್ಚೋದಿವಾಯ್ ತಿರಂದು ಉನ್ ತಾಮರೈಕ್ಕಣ್ಗಳಾಲ್ ನೋಕ್ಕಾಯ್
   ಎಣ್ಡಿಶೈಯುಂ ಪಿರನ್ ತಪ್ಪೊಣ್ಣೈ ಶೂಳ್ಂದ ತಿರುಪ್ಪುಳಿಂಗುಡಿಕ್ಕಿಡಂದಾನೇ ॥ ಪು. ತಿ. ಮೊ.

**ಎನ್ರುಮ್ ನಮ್ಮಾಳ್ವಾರ್ ಅರುಳಿಚ್ಚೆಯ್‌ದಾರ್. 1) ಅಲಮೇಷಾ ಪರಿತ್ರಾತುಂ ರಾಘವಾದ್ರಾಕ್ಷಸೀಗಣಮ್ ಎನ್ರುಮ್. 2) "ಅಲಮೇಷಾ ಪರಿತ್ರಾತುಂ ರಾಕ್ಷಸ್ಯೋ ಮಹತೋಭಯಾತ್" ಎನ್ರುಮ್, ಶ್ರೀ ವಾಲ್ಮೀಕಿ ಭಗವಾನ್ ಶರಣಾಗತಿ ಸಾರಮಾನ ಆದಿಕಾವ್ಯತ್ತಿಲೇ ನಿಬಂಧಿತ್ತಾರ್.**

---

ಇತ್ಯಾದಿ ನಿನ್ – ಭಗವಂತನ ಮತ್ತು ಪಂಕಜವಾಸಿನಿಯ ಶ್ರೀಮತ್ಕೃಪೆಗಳನ್ನು ಹೇತುವಾಗಿ ಕೊಂಡು, ನಿನ್ ಕೋಯಿಲ್ ಶೀಯ್ದು – ನಿನ್ನ (ಭಗವಂತನ) ದಿವ್ಯಾಲಯದಲ್ಲಿ ಕೈಂಕರ್ಯವನ್ನು ಮಾಡಿ, ಮಹಾಲಕ್ಷ್ಮಿಯ ಕೃಪೆಗೂ ದಿವ್ಯಾಲಯ ಕೈಂಕರ್ಯ ಕರಣ ಪರ್ಯಂತ ಹೇತುವಾದ ಗುಣ ಪರಿಪಾಕವನ್ನು ಉಂಟು ಮಾಡುವ ಉಪಯೋಗವು ಹೇಳಲ್ಪಟ್ಟಿರುವುದರಿಂದ ಉತ್ತರಖಂಡದಲ್ಲಿ ಶ್ರೀಮಚ್ಛಬ್ದದಲ್ಲಿಯೂ ಶ್ರೀ ವಿಶೇಷಣವನ್ನೇ ಅಂಗೀಕರಿಸಬೇಕೆಂಬುದು ಕುಲಪತಿಯಾದ ನಮ್ಮಾಳ್ವಾರ್‌ಸ್ವರ ಶ್ರೀ ಸೂಕ್ತಿ ತಾತ್ಪರ್ಯವೆಂಬುದು ಸಿದ್ಧವಾಯಿತು. "ವೇರಿಮಾರಾದ ಪೂಮೇಲಿರುಪ್ಪಾಳ್‌ವಿನೈ ತೀರ್ಕ್ಕುಮೇ" ಎಂಬ ದ್ರಮಿಡೋಪ ನಿಷದ್ವಾಕ್ಯದಿಂದ ಲಕ್ಷ್ಮೀಯು ಅನುಗ್ರಹವೂ ಸಂಸಾರ ಮತ್ತು ಅದಕ್ಕೆ ಕಾರಣವಾದ ಎಲ್ಲಾ ಕರ್ಮಗಳನ್ನೂ ಹೋಗಲಾಡಿಸುತ್ತದೆ ಎಂದು ತಾತ್ಪರ್ಯ. ಈ ವಾಕ್ಯವು "ಉಪಾಯ ವಿರೋಧಿ ಪಾಪಗಳನ್ನು" ಲಕ್ಷ್ಮೀಯು ಪುರುಷಕಾರ ಭೂತೆಯಾಗಿದ್ದುಕೊಂಡು ಹೋಗಲಾಡಿಸುತ್ತಾಳೆಂಬ ದೃಷ್ಟಿಯಲ್ಲೂ ಉಪಪನ್ನವಾಗುತ್ತದೆ ಎಂದು ಹೇಳಲಿಕ್ಕಿಲ್ಲ. "ನಿನ್ ತಿರುವರುಳುಂಪಂಗಯುತ್ತಾಳ್ ತಿರುವರುಳುಂ ಕೊಂಡು ನಿನ್ ಕೋಯಿಲ್‌ಶೀಯ್ದು ॥ ಎಂಬ ವಾಕ್ಯಾಂತರದಿಂದ ಪರಮ ಪುರುಷಾರ್ಥಭೂತ ಕೈಂಕರ್ಯಕ್ಕೆ ಭಗವಂತನ ಮತ್ತು ಲಕ್ಷ್ಮೀಯ ಕೃಪೆಗಳು ಕಾರಣವೆಂದು ತಿಳಿಸಿರುವುದರಿಂದ, ಆ ಕೈಂಕರ್ಯ ವಿರೋಧಿಯಾದ ಪಾಪ ನಿವಾರಣವೂ ಅವರಿಬ್ಬರ ಕೃತ್ಯವಾಗಿ ಅಂಗೀಕರಿಸುವುದು ಉಪಪನ್ನ. ಅಂದರೆ ಪ್ರಾಪ್ತಿ ವಿರೋಧಿ ಪಾಪ ನಿವಾರಣವನ್ನು ಲಕ್ಷ್ಮೀಯೂ ಭಗವಂತನೊಡನೆ ಕೂಡಿ ಇದ್ದು ಮಾಡುತ್ತಾಳೆಂದರ್ಥ. "ನಿನ್ ತಿರುವರುಳಂ" ಎಂದು ಭಗವಂತನ ಕೃಪೆಯನ್ನು ಮೊದಲು ನಿರ್ದೇಶಿಸಿರುವುದು ಪತಿಪ್ರಾಧಾನ್ಯ ನಿಮಿತ್ತವಾಗಿ "ಅಭ್ಯರ್ಹಿತಂ ಪೂರ್ವಂ" ಎಂಬ ನ್ಯಾಯವನ್ನು ಅವಲಂಬಿಸಿದೆ.

ಅನಂತರ ಸ್ತ್ರೀತ್ವ ಮರ್ಯಾದೆಯನ್ನು ಅವಲಂಬಿಸಿ, ಲಕ್ಷ್ಮೀಗೆ ಅನಿಷ್ಟ ನಿವಾರಣದಲ್ಲಿ ಪ್ರವೃತ್ತಿಯು ಅನಭಿಮತ ವೆಂದು ಶಂಕಿಸಬಾರದು. ಲಕ್ಷ್ಮೀಯ "ಸರ್ವವಿರೋಧಿ ನಿವರ್ತಕತ್ವವನ್ನು 1) **ಅಲಮೇಷಾ ಪರಿತ್ರಾತುಂ ರಾಘವಾದ್ರಾಕ್ಷಸೀಗಣಂ** 2) **ಅಲಮೇಷಾ ಪರಿತ್ರಾತುಂ ರಾಕ್ಷಸ್ಯೋಮಹತೋಭಯಾತ್** ಇತ್ಯಾದಿಯಾಗಿ ವಾಲ್ಮೀಕಿ ಮಹರ್ಷಿಯೂ ತೋರಿಸಿಕೊಡುತ್ತಾರೆ. ಪ್ರಪನ್ನರ ವಿಷಯದಲ್ಲಿ ಅವರ ಸರ್ವಪಾಪಗಳನ್ನೂ ಹೋಗ

---

ಶೀತಳವಾದ ಅಲೆಗಳಿಂದ ಕೂಡಿದ ತಾಮ್ರಪರ್ಣಿಯು ನೀರು ಹಾಯುತ್ತಿರುವ ಗದ್ದೆಗಳಿಂದ ಸುತ್ತುವರಿಯಲ್ಪಟ್ಟ ಶ್ರೀ ಮತ್ತಾದ ಪುಳಿಂಗುಡಿ ಕ್ಷೇತ್ರದಲ್ಲಿ ವಾಸವಾಗಿರುವ ಭಗವಂತನೇ! ಅಜ್ಞಾತ ಯಾದೃಚ್ಛಿಕಾದಿ ಸುಕೃತಗಳ ಕಾರಣವಾಗಿ ಪೂರ್ವಕಾಲದಿಂದ ನಿನ್ನ ಮತ್ತು ಮಹಾಲಕ್ಷ್ಮಿಯ ಶ್ರೀಮತ್ಕೃಪೆಗಳು ಏರ್ಪಟ್ಟು, ಅದರ ನಿಮಿತ್ತ ನಿನ್ನ ದಿವ್ಯಾಲಯದಲ್ಲಿ ಕೈಂಕರ್ಯಗಳನ್ನು ಅನೇಕ ಸಲ ಪಂಶಪಾರಂಪರ್ಯವಾಗಿ ಮಾಡುತ್ತಿದ್ದೇವೆ. ಇಂಥಹ ನೀನು ಭಕ್ತರಿಗೆ ಕೃಪೆಮಾಡಿ, ಜ್ಯೋತಿರೂಪವಾದ ಬಾಯನ್ನು ತೆರೆದು, ನಿನ್ನ ತಾಮರಸ ಪುಷ್ಪದಂತಿರುವ ಕಣ್ಣುಗಳಿಂದ ನೋಡಿ ಅನುಗ್ರಹಿಸು. ಸ್ವಾಮೀ!

1) ರಾಮಾಯಣ ಸುಂದರಕಾಂಡ 58–91 ಈ ಸೀತಾದೇವಿಯು ರಾಮಚಂದ್ರನಿಂದ ರಾಕ್ಷಸಿಗಳ ಸಮೂಹವನ್ನು ರಕ್ಷಿಸಲು ಸಮರ್ಥೆ. ಸೀತೆಗೆ ಕೆಡುಕನ್ನು ಬಯಸಿದವರಿವರು ಎಂದು ಶ್ರೀರಾಮಚಂದ್ರನು, ರಾಕ್ಷಸಿಯರನ್ನು ಕೊಲ್ಲಿಸಲು ಅಥವಾ ಕೊಲ್ಲಲು ಬಂದರೆ, ಸೀತಾದೇವಿಯು ರಕ್ಷಿಸಬಲ್ಲಳು ಎಂದು ತಾತ್ಪರ್ಯ.

2) ರಾ.ಸುಂ.27-44, ಶ್ರೀರಾಮಚಂದ್ರನಿಂದ ಉಂಟಾಗುವ ಮಹದ್ಭಯದಿಂದ ರಾಕ್ಷಸಿಗಳನ್ನು ರಕ್ಷಿಸಲು ಸೀತೆಯು ಸಮರ್ಥಳು. ಈ ಎರಡು ವಾಕ್ಯಗಳಿಂದ ಲಕ್ಷ್ಮೀಗೆ, ಉಪಾಯತ್ವವು ಅಂದರೆ ಪ್ರಾಪ್ತಿ ವಿರೋಧಿ ರೂಪ ಪಾಪ ನಿರಸನ ಶಕ್ತಿಯು ಇದೆ ಎಂದು ನಿರೂಪಿಸಿದಂತಾಯಿತು.

3) "ಸಂಸಾರಾರ್ಣವ ತಾರಿಣೀಂ" ಎನ್ರು ಹಿರಣ್ಯ ಗರ್ಭಕಾಶ್ಯಪಾದಿಗಳುಮ್ ಶೊನ್ನಾರ್‌ಹಳ್ "ವಾಚಃ ಪರಂ ಪ್ರಾರ್ಥಯಿತಾ ಪ್ರಪದ್ಯೇನ್ನಿಯತಶ್ಶ್ರಿಯಮ್" ಎನ್ರು ಶ್ರೀ ಶೌನಕ ಭಗವಾನ್ ವಿಧಿತ್ತಾರ್ 4) ಆತ್ಮವಿದ್ಯಾಚದೇವಿತ್ವಂ ವಿಮುಕ್ತಿ ಫಲದಾಯಿನೀ" ಎನ್ರು ಪುಲಸ್ತ್ಯ ವಸಿಷ್ಠವರ ಪ್ರಸಾದ

---

ಲಾಡಿಸುವ ಶಕ್ತಿಯು ಲಕ್ಷ್ಮಿಗೂ ಇದೆ ಎಂಬುದನ್ನು ತೋರಿಸಿಕೊಡಲು ಈ ವಾಕ್ಯವು ಪ್ರಮಾಣವಾಗುತ್ತದೆ. **ಶರಣಾಗತಿ ಸಾರಮಾನ** ಇತ್ಯಾದಿ-ಶರಣಾಗತಿ ಸಾರವಾದ ರಾಮಾಯಣ ಪ್ರಬಂಧದಲ್ಲಿ ವಾಲ್ಮೀಕಿಯು ತಿಳಿಸಿರುವುದರಿಂದ ದ್ವಯಮಂತ್ರದಲ್ಲಿಯೂ ಇದೇ ಅಭಿಪ್ರಾಯವನ್ನು ಅಂಗೀಕರಿಸಬೇಕೆಂಬುದು ತಾತ್ಪರ್ಯ. "ಶಕ್ತೈಸ್ತು ಸಂಕುಲಾಂ ಕೃತ್ವಾಲಂಕಾಂಪರಬಲಾರ್ದನಃ! ಮಾಂನಯೇತ್"ಎಂದು ತನ್ನನ್ನು ರಕ್ಷಿಸಿಕೊಳ್ಳಲು ತಾನು ಅಸಮರ್ಥೆಯಾಗಿ ಶ್ರೀರಾಮ ಚಂದ್ರನನ್ನು ಎದುರು ನೋಡುತ್ತಿರುವಾಗ, ಇತರರ ರಕ್ಷಣದಲ್ಲಿ ಲಕ್ಷ್ಮಿಗೆ ಸಾಮರ್ಥ್ಯವಿದೆಯೇ ಎಂದು ಶಂಕಿಸ ಬಾರದು. 'ಶಕ್ತೈಸ್ತು ಸಂಕುಲಾಂ ಕೃತ್ವಾ" ಎಂಬ ವಚನದಿಂದ ಲೋಕ ಹಿತಕ್ಕಾಗಿ ಪ್ರಸನ್ನರ ಅನುಷ್ಠಾನವನ್ನು ತೋರಿಸಿಕೊಡಲು ರಸಿಕತೆಯಿಂದ, ಪ್ರಪನ್ನ ಧರ್ಮ ವಿಶೇಷವನ್ನು– ಅಂದರೆ ಶರಣಾಗತಿ ಮಾಡಿದ ನಂತರ, ತನ್ನ ರಕ್ಷಣದಲ್ಲಿ ಯಾವ ಪ್ರವೃತ್ತಿಯೂ ಇಲ್ಲದೆ ಭಗವಂತನನ್ನೇ ಚಾತಕ ಪಕ್ಷಿಯಂತೆ ಎದುರು ನೋಡುತ್ತಿರಬೇಕೆಂಬುದನ್ನು ಮಹಾಲಕ್ಷ್ಮಿಯು ತೋರಿಸಿಕೊಡುತ್ತಾಳೆಂಬುದು ತಾತ್ಪರ್ಯವೇ ಹೊರತು ಮಹಾಲಕ್ಷ್ಮಿಗೆ ಶರಣಾಗತ ಸಂರಕ್ಷಣೆಯಲ್ಲಿ ಶಕ್ತಿಯಿಲ್ಲವೆಂದಲ್ಲ.

ಈ ಅಭಿಪ್ರಾಯದಿಂದಲೇ 3) **ಸಂಸಾರಾಣರ್ವವ ತಾರೀಣೀಂ** ಸಂಸಾರವೆಂಬ ಸಾಗರವನ್ನು ದಾಟಿಸುವವಳ ಎಂದು ಹಿರಣ್ಯಗರ್ಭಕಾಶ್ಯಪಾದಿಗಳೂ ಹೇಳಿರುತ್ತಾರೆ. ("ವಿಮುಕ್ತಿ ಫಲದಾಯಿನೀಂ–ಮೋಕ್ಷವನ್ನು ಕೊಡುವವಳ

"ಯಾಮಾಲಂಬ್ಯ ಸುಖೇನೇಮಂ ದುಸ್ತರಂಹಿ ಗುಣೋದಧಿಮ್

ನಿಸ್ತರಂತ್ಯ ಚಿರೇಣೈವ ವ್ಯಕ್ತ ಧ್ಯಾನಪರಾಯಣಾಃ" )

**ವಾಚಂ ಪರಂಪ್ರಾರ್ಥಯಿತಾ**–ಎಂಬ ವಚನದಿಂದ, "ನತತ್ರಚಕ್ಷುರ್ಗಚ್ಛತಿ, ವಾಕ್‌ಗಚ್ಛತಿ, ನೋಮನಃ" ಎಂದು ವಾಚಾಮ ಗೋಚರನಾದ ಭಗವಂತನನ್ನು ಪಡೆಯಲು ಪ್ರಾರ್ಥಿಸುವವನು ನಿಯಮ ಪುರಸ್ಸರ ಲಕ್ಷ್ಮಿಯನ್ನು ಶರಣ ಹೊಂದಬೇಕು ಅಂದರೆ ಶ್ರೀ ಪ್ರಪತ್ತಿಯನ್ನು ಮಾಡಬೇಕು, ಎಂದು ಶೌನಕ ಭಗವಾನ್ ವಿಧಿಸಿದ್ದಾರೆ **ಸಾಕ್ಷಾನ್ಮೋಕ್ಷ ಸಾಧನವಾಗಿ ಶ್ರೀ ಪ್ರಪತ್ತಿಯು** ಸರ್ವಜ್ಞರಾದ ಶೌನಕರಿಂದ ಹೇಳಲ್ಪಟ್ಟಿರುವುದರಿಂದ ಲಕ್ಷ್ಮಿಯ ಉಪಾಯತ್ವದ ಬಗ್ಗೆ ಅತಿ ಶಂಕೆ ಮಾಡುವುದು ಅನುಚಿತವೆಂಬುದು ತಾತ್ಪರ್ಯ. ಇಲ್ಲಿ ಹೇಳಿರುವುದು ಪುರುಷಕಾರ ಪ್ರಪತ್ತಿಯಲ್ಲ. ಸಾಕ್ಷಾನ್ಮೋಕ್ಷ ಪ್ರಪತ್ತಿ. 4) **ಆತ್ಮವಿದ್ಯಾಚ ದೇವಿತ್ವಂ**–ಎಂದು ಪರಾಶರ ಬ್ರಹ್ಮರ್ಷಿಯು ಅನು

---

3) ಸರ್ವಕಾಮಪ್ರದಾಂ ರಮ್ಯಾಂ ಸಂಸಾರಾರ್ಣವತಾರಿಣೀಮ್ ।
ಕ್ಷಿಪ್ರಪ್ರಸಾದಿನೀಂ ದೇವೀಂ ಶರಣ್ಯಾಮನು ಚಿಂತಯೇತ್ ॥ ಕಾಶ್ಯಪಸ್ಮೃತಿ

ಸರ್ವ ಇಷ್ಟಗಳನ್ನು ಕೊಡುವವಳು, ರಮ್ಯಳು, ಸಂಸಾರವೆಂಬ ಸಮುದ್ರವನ್ನು ದಾಟಿಸುವವಳು, ಬಲು ಬೇಗನೆ ಅನುಗ್ರಹ ಮಾಡತಕ್ಕವಳು, ಇಂಥಹ ಮಹಾಲಕ್ಷ್ಮಿಯನ್ನು ರಕ್ಷಕರು ಧ್ಯಾನಮಾಡಬೇಕು,

4. ಯಜ್ಞವಿದ್ಯಾ ಮಹಾವಿದ್ಯಾ ಗುಹ್ಯವಿದ್ಯಾಚ ಶೋಭನೇ ।
ಆತ್ಮವಿದ್ಯಾಚ ದೇವಿತ್ವಂ ವಿಮುಕ್ತಿ ಫಲದಾಯಿನೀ ॥ ವಿ.ಪು. (1-8-120)

ಎಲೈ ದೇವಿಯೇ, ಯಜ್ಞವಿದ್ಯೆ, ಮಹಾವಿದ್ಯೆ, ಗುಹ್ಯವಿದ್ಯೆ ಮತ್ತು ಆತ್ಮವಿದ್ಯೆ ಎಂಬ ಮೋಕ್ಷವಿದ್ಯೆಯೂ ನಿನ್ನ ಅಧೀನ ಅಂದರೆ ನಿನ್ನನ್ನು ಉಪಾಸನೆ ಮಾಡುವವರಿಗೆ ಈ ವಿದ್ಯೆಗಳೆಲ್ಲಾ ಲಭಿಸುತ್ತವೆ. ನೀನು ವಿಮುಕ್ತಿ ಫಲದಾಯಿನೀ–ಮೋಕ್ಷವನ್ನು ಕೊಡುವವಳು

ಪು.ತಿ.ನೋ.

**ಲಬ್ಧ ಪರದೇವತಾ ಪಾರಮಾರ್ಥ್ಯ ಜ್ಞಾನ ಮುಡೈಯರ್ಶ್ರೀ ಪರಾಶರ ಬ್ರಹ್ಮರ್ಷಿ ಅರುಳಿಚ್ಚೆಯ್‌ದಾನ್. ವಿಮುಕ್ತಿಫಲದಾಯಿನೀ" ಎನ್ಗಿರವಿದು ಆತ್ಮವಿದ್ಯಾ ವಿಶೇಷಣ ಮಾನಾಲುಮ್, ತತ್ಸಾಮಾನಾಧಿಕರಣ್ಯ ತ್ತಾಲೇ ಅದು ಇವಳುಡೈಯ ವಿಭೂತಿಯಾಯಿತ್ತು.**

**ಶ್ರಿಯಃಪತಿ ತಾನುಮ್, 1) "ಯಾಮಾಲಂಬ್ಯ ಸುಖೇನೇಮಂ ದುಸ್ತರಂ ಹಿಗುಣೋದಧಿಮ್ ।**
**ನಿಸ್ತರಂತ್ಯಚಿರೇಣೈವ ವ್ಯಕ್ತಧ್ಯಾನ ಪರಾಯಣಾಃ ॥"**

**ಎನ್ರು ಶ್ರೀ ಸಾತ್ವತ ಸಂಹಿತೈಯಿಲೇ ಶ್ರೀ ಪತಿರೂಪ ಧ್ಯಾನತ್ತಿಲೇ ಯರುಳಿಚ್ಚೆಯ್‌ದಾನ್. ತತ್ಪರಙ್ಗಳಾನ**

---

ಗ್ರಹಿಸಿರುತ್ತಾರೆ. ಇವರು ವಸಿಷ್ಠ ಪುಲಸ್ತ್ಯರುಗಳ ಪ್ರಸಾದ-ಅನುಗ್ರಹದಿಂದ ಪರದೇವತಾ ಜ್ಞಾನವನ್ನು ಪಡೆದ ವರಾದ್ದರಿಂದ ಇವರ ವಚನಗಳಿಗೆ ಬಹಳ ಪ್ರಾಮುಖ್ಯತೆ. ಎಲೈ ದೇವಿಯೇ ನೀನು ಮೋಕ್ಷವನ್ನು ಕೊಡುವವಳು ಎಂಬ ಅರ್ಥದಲ್ಲಿ "ತ್ವಂ ವಿಮುಕ್ತಿ ಫಲದಾಯಿನೀ" ಎಂದು ಹೇಳುವುದು ದೂರಾನ್ವಯ ದೋಷವಿಲ್ಲದೆ ಸ್ವರಸವಾದದ್ದು. ಇದರಿಂದಲೂ ಲಕ್ಷ್ಮಿಗೆ ಮೋಕ್ಷೋಪಾಯತ್ವವು ಹೇಳಲ್ಪಟ್ಟಿತು. **"ವಿಮುಕ್ತಿಫಲದಾಯಿನೀ" ಎನ್ಗಿರವಿದು** ಇತ್ಯಾದಿ- ವಿಮುಕ್ತಿ ಫಲದಾಯಿನೀ ಎಂಬ ಪದವು "ಆತ್ಮ ವಿದ್ಯಾ" ಎಂಬ ಪದಕ್ಕೆ ವಿಶೇಷಣವಾದರೂ "ವಿಮುಕ್ತಿ ಫಲದಾಯಿನೀ ಆತ್ಮ ವಿದ್ಯಾ" ಎಂಬ ಸಾಮಾನಾಧಿಕರಣ್ಯದಿಂದ, ಆ ಆತ್ಮವಿದ್ಯೆಯು ಇವಳ ವಿಭೂತಿಯಾಯಿಟ್ರು- ಅಧೀನವೆಂದರ್ಥ. ಆತ್ಮ ವಿದ್ಯೆಗೆ ವಿಮುಕ್ತಿ ಫಲದಾಯಿನೀತ್ವವಿದ್ದರೆ, ವಿಭೂತಿ ಮತಿಯಾದ ಮಹಾಲಕ್ಷ್ಮಿಗೆ ವಿಮುಕ್ತಿ ಫಲದಾಯಿನೀತ್ವವು ಕೈಮುತಿಕ ನ್ಯಾಯ ಸಿದ್ಧವೆಂಬುದು ತಾತ್ಪರ್ಯ. ಆದ್ದರಿಂದ ಈ ವಚನವೂ ಲಕ್ಷ್ಮಿಯು ಮೋಕ್ಷೋಪಾಯ ಭೂತಳು ಎಂದು ಹೇಳಲು ಅತ್ಯಂತ ಪ್ರಮಾಣ ಭೂತವಾದದ್ದು.

ಅನಂತರ ಸಾಕ್ಷಾತ್ ಭಗವನ್ಮುಖಾರವಿಂದದಿಂದ ಹೇಳಲ್ಪಟ್ಟ ಸಾತ್ವತ ಸಂಹಿತೆಯಲ್ಲಿ ಶ್ರೀಯಃ ಪತಿಯ ರೂಪ ಧ್ಯಾನವನ್ನು ಹೇಳುವ ಸ್ಥಳದಲ್ಲಿ ಶ್ರಿಯಃ ಪತಿಯೇ ಲಕ್ಷ್ಮಿಗೆ ಸಂಸಾರತಾರಣೋಪಾಯತ್ವವನ್ನು ನಿರೂಪಿಸಿ ರುತ್ತಾರೆಂದು 1) **"ಯಾಮಾಲಂಬ್ಯಸುಖೇನೇಮಾಂ"** ಎಂದಾರಂಭಿಸುವ ವಚನವನ್ನು ಉದಾಹರಿಸುತ್ತಾರೆ. ಯಾಮಾಲಂಬ್ಯ-ಯಾಂ ಪ್ರಪದ್ಯ ಗುಣೋದಧಿಂ ನಿಸ್ತರಂತಿ-ತ್ರಿಗುಣ ಪರಿಣಾತ್ಮಕವಾದ ಸಂಸಾರವನ್ನು ಲಕ್ಷ್ಮಿಯಲ್ಲಿ ಶರಣಾಗತಿ ಮಾಡಿ ಶೀಘ್ರದಲ್ಲೇ ದಾಟುತ್ತಾರೆ, ಎಂದು ಹೇಳಿರುವುದರಿಂದ ಶ್ರೀ ಪ್ರಪತ್ತಿಯು ಸರ್ವವಿರೋಧಿ ಪಾಪ ಗಳನ್ನೂ ಹೋಗಲಾಡಿಸಿ ಸಾಕ್ಷಾನ್ಮೋಕ್ಷ ಸಾಧಕವೆಂಬುದು ವಚನ ತಾತ್ಪರ್ಯ. **ಎನ್ರುಸಾತ್ವತ ಸಂಹಿತೆಯಿಲ್** ಹೀಗೆ ಸಾತ್ವತ ಸಂಹಿತೆಯಲ್ಲಿ ಶ್ರೀಪತಿ ರೂಪವನ್ನು ಧ್ಯಾನ ಮಾಡುವ ಸಂದರ್ಭದಲ್ಲಿ ಭಗವಂತನೇ ಕೃಪೆಮಾಡಿ ಹೇಳಿರುತ್ತಾನೆ. **ತತ್ಪರಂಗಳಾನ**- ಇತ್ಯಾದಿ. ಲಕ್ಷ್ಮಿಯ ವೈಭವವನ್ನು ಹೇಳುವ ಲಕ್ಷ್ಮೀತಂತ್ರಾದಿ ಶಾಸ್ತ್ರ ಗಳಿಗೆ ಪೈಭವವಾದ, ಪಕ್ಷ ಪಾತಿತ್ವಗಳನ್ನು ಶಂಕಿಸಲು ಸಾಧ್ಯ. ಭಗವದ್ಧ್ಯಾನ ಪರಗಳಾಗಿ ಅದರಿಂದಲೇ ಮಧ್ಯಸ್ಥ ಶಾಸ್ತ್ರಗಳಾದ-ಸಾತ್ವತ ಸಂಹಿತಾದಿಗಳು ಪ್ರಾಮಾಣ್ಯತೆಯಲ್ಲಿ ಬಹಳ ಪ್ರಬಲವಾದವು. ಆದ್ದರಿಂದ ಲಕ್ಷ್ಮಿಯ ಉಪಾಯ ತ್ವವನ್ನು ಹೇಳುವ ಈ ವಚನಗಳನ್ನು ಎಲ್ಲರೂ ಒಪ್ಪಬೇಕೆಂಬುದು ತಾತ್ಪರ್ಯ.

---

ಸಾಕ್ಷಾದುಪಾಯಭೂತೆ. ಹೇ ದೇವಿ ವಿಮುಕ್ತಿಫಲದಾಯಿನೀ ಆತ್ಮವಿದ್ಯಾಚತ್ವಮಸಿ" ಎಂದು ಅನ್ವಯ ಮಾಡಿದರೂ ಮೋಕ್ಷವನ್ನು ಕೊಡುವ ಆತ್ಮವಿದ್ಯೆ-ಭಕ್ತಿ ಪ್ರಪತ್ತಿ ವಿದ್ಯೆಯೂ ನಿನ್ನ ಅಧೀನವಾದ್ದರಿಂದ ಕೈಮುತಿಕ ನ್ಯಾಯದಿಂದ ನೀನು ಮೋಕ್ಷವನ್ನು ಕೊಡುವ ವಳು ಎಂದು ಏರ್ಪಡುತ್ತದೆಯಲ್ಲವೇ.

1) ಶ್ರಿಯಃಪತಿ ರೂಪ ಧ್ಯಾನದಲ್ಲಿಳಿದವರು, ಮಹಾಲಕ್ಷ್ಮಿಯಲ್ಲಿ ಶರಣಾಗತಿ ಮಾಡಿ ಸುಲಭವಾಗಿ ಈ ತ್ರಿಗುಣ ಪರಿಣಾತ್ಮಕವಾದ ಸಂಸಾರ ಸಾಗರವನ್ನು ಬಲು ಬೇಗನೆ ದಾಟ ಬಲ್ಲರು.

**ಶಾಸ್ತ್ರಙ್ಗಳ್ ನಿರ್ಕ, ಇವ್ಮಧ್ಯಸ್ಥ ಶಾಸ್ತ್ರಙ್ಗಳತಿ ಪ್ರಬಲಙ್ಗಳ್,**

ಶ್ರಿಯಃ ಉಪಾಯತ್ವೇ ಆಚಾರ್ಯದಿವ್ಯ ಸೂಕ್ತಯಃ

**ಆಳವನ್ದಾರುಮ್,** 1) "ಜಗತ್ಸಮಸ್ತಂ ಯದಪಾಙ್ಗಸಂಶ್ರಯಂ" ಎನ್ರುಮ್ 2) **ಶ್ರೇಯೋನ ಹ್ಯರವಿಂದ ಲೋಚನ ಮನಃಕಾಂತಾ ಪ್ರಸಾದಾದೃತೇ ಸಂಸೃತ್ಯಕ್ಷರ ವೈಷ್ಣವಾಧ್ವಸು ನೃಣಾಂ ಸಂಭಾವ್ಯತೇ ಕರ್ಹಿಚಿತ್" ಎನ್ರುಮ್ ಅರುಳಿಚ್ಚೆಯ್‌ದಾರ್.**

---

## ಲಕ್ಷ್ಮಿಯೂ ಉಪಾಯಭೂತೆ ಎಂಬುದಕ್ಕೆ ಪೂರ್ವಾಚಾರ್ಯರ ಶ್ರೀ ಸೂಕ್ತಿಗಳು

ಈ ವಿಷಯದಲ್ಲಿ ಪೂರ್ವಾಚಾರ್ಯರುಗಳಲ್ಲಿಯೂ ವಿಪ್ರತಿಪತ್ತಿಯಿಲ್ಲವೆಂದು ತಿಳಿಸಲು, **ಆಳವಂದಾರುಮ್**– ಎಂದಾರಂಭಿಸಿ ಪೂರ್ವಾಚಾರ್ಯರುಗಳ ಸಮ್ಮತಿಯನ್ನು ತಿಳಿಸುತ್ತಾರೆ. ಅದಾಗಿ ಆಳವಂದಾರವರು 1) **ಜಗತ್ಸಮಸ್ತಂ** ಎಂದಾರಂಭಿಸಿ ಸಕಲ ಪ್ರಪಂಚವೂ ಮಹಾಲಕ್ಷ್ಮಿಯ ಕಟಾಕ್ಷವನ್ನು ಆಶ್ರಯಿಸಿ ಅನಿಷ್ಟ ನಿವೃತ್ತಿ, ಇಷ್ಟಪ್ರಾಪ್ತಿ ರೂಪ ಅಭಿಲಷಿತವನ್ನು ಪಡೆಯುತ್ತದೆ ಎಂದು ಅನುಗ್ರಹಿಸಿರುತ್ತಾರೆ. ಮೇಲೂ 2) **ಶ್ರೇಯೋನಹ್ಯರವಿಂದ ಲೋಚನಮನಃ ಕಾಂತಾಪ್ರಸಾದಾದೃತೇ** ಎಂದಾರಂಭಿಸಿ ಅರವಿಂದ ಲೋಚನನಾದ ಭಗವಂತನ ಮನಃ ಕಾಂತೆಯಾದ ಲಕ್ಷ್ಮಿಯ ಅನುಗ್ರಹವಿಲ್ಲದೆ ಈ ಸಂಸಾರದಲ್ಲಿ ಐಶ್ವರ್ಯರೂಪ ಪುರುಷಾರ್ಥವೂ, ಶ್ರೇಯಸ್ಸೂ, ಕೇವಲ ಆತ್ಮಾನಂದಾನು ಭವರೂಪವಾದ, ಕೈವಲ್ಯ ಶ್ರೇಯಸ್ಸೂ ವೈಷ್ಣವಾಧ್ವ ಮಾರ್ಗದಲ್ಲಿಯೂ ಅಂದರೆ ಅರ್ಚಿರಾದಿ ಮಾರ್ಗವಾಗಿ ಹೋಗಿ ಪಡೆಯುವ ಮೋಕ್ಷಾನಂದವಾದ ಶ್ರೇಯಸ್ಸೂ (ಪುಣ್ಯಃ ಶ್ರೇಯಸೀ ಸುಕೃತಂ ವೃಷಃ ಎಂದು ಅಮರ - ಶ್ರೇಯಸ್ಸೆಂದರೆ, ಸುಕೃತವೆಂದರ್ಥ) ಲಭಿಸುವುದಿಲ್ಲವೆಂದು ವ್ಯತಿರೇಕದಿಂದ ಹೇಳಿರುವುದರಿಂದ, ಅನ್ವಯ ಮುಖೇನ ಅವಳ ಅನುಗ್ರಹವುಉಂಟಾದರೆ ಐಶ್ವರ್ಯ, ಕೈವಲ್ಯ, ಮೋಕ್ಷರೂಪ ಪುರುಷಾರ್ಥ ರೂಪ ಶ್ರೇಯಸ್ಸು ಉಂಟಾಗುತ್ತದೆ ಎಂದು ಅನುಗ್ರಹಿಸಿರುತ್ತಾರೆ.

ಕೆಲವರು ಇಲ್ಲಿ ಲಕ್ಷ್ಮಿಯು ಪುರುಷಾಕಾರ ಭೂತೆಯಾಗಿ ಪರಂಪರೆಯಾಗಿ ಉಪಕರಿಸುವುದರಿಂದ ಶ್ರೇಯಃ ಪ್ರದಾತೃತ್ವವು ಇವಳು ಅಧೀನವೆಂಬುದು ತಾತ್ಪರ್ಯವೆಂದು ಕಲ್ಪಿಸಿ, ಲಕ್ಷ್ಮಿಗೆ ಉಪಾಯತ್ವವನ್ನು ನಿರಾಕರಿಸಲು

---

1) ಆಳವಂದಾರ್ ಸ್ತೋತ್ರ (37)

1) ಚಕರ್ಥಯಸ್ಯಾ ಭವನಂ ಭುಜಾಂತರಂ ತವ ಪ್ರಿಯಂಧಾಮ ಯದೀಯ ಜನ್ಮಭೂಃ ।
ಜಗತ್ಸಮಸ್ತಂ ಯದಪಾಂಗ ಸಂಶ್ರಯಂ ಯದರ್ಥಮಂಭೋಧಿರಮಂಥ್ಯ ಬಂಧಿಚ ॥

ಎಲ್ಲೈ ಭಗವಂತನೇ ನೀನು ಲಕ್ಷ್ಮಿಗೆ ವಾಸಸ್ಥಾನವನ್ನು ನಿನ್ನ ಎದೆಯಲ್ಲಿ ಕಲ್ಪಿಸಿದ್ದೀಯಾ. ಅವಳ ಉತ್ಪತ್ತಿ ಸ್ಥಾನವಾದ ಕ್ಷೀರಸಮುದ್ರವು ನಿನಗೆ ಪ್ರಿಯವಾದ ವಾಸಸ್ಥಾನ. ಸಮಸ್ತ ಜಗತ್ತು ಲಕ್ಷ್ಮಿಯ ಕಡೆಗಣ್ಣಿನ ನೋಟವನ್ನು ಆಶ್ರಯಿಸಿದೆ. ಅವಳ ಅಧೀನವೆಂದರ್ಥ. ಲಕ್ಷ್ಮಿಯನ್ನು ಪಡೆಯಲು ನೀನು ಸಮುದ್ರ ಮಥನ ಮಾಡಿದೆ, ರಾಮಾವತಾರದಲ್ಲಿ ಸೇತು ಬಂಧನವನ್ನು ಮಾಡಿದೆ.

2) ಈಷತ್ತ್ವತ್ಕರುಣಾ ನಿರೀಕ್ಷಣ ಸುಧಾ ಸಂಧುಕ್ಷಣಾದ್ರಕ್ಷ್ಯತೇ
ನಷ್ಟಂಪ್ರಾಕ್ತದಲಾಭತಸ್ತ್ರಿಭುವನಂ ಸಂಪ್ರತ್ಯನಂತೋದಯಮ್ ।
ಶ್ರೇಯೋನಹ್ಯರಂದ ಲೋಚನ ಮನಃ ಕಾಂತಾಪ್ರಸಾದಾದೃತೇ
ಸಂಸೃತ್ಯಕ್ಷರ ವೈಷ್ಣವಾಧ್ವಸುನೃಣಾಂ ಸಂಭಾವ್ಯತೇ ಕರ್ಹಿಚಿತ್ ॥ (ಚತುಃಶ್ಲೋಕೀ 3)

ಎಲ್ಲೈ ಮಹಾಲಕ್ಷ್ಮಿಯೇ ಮೂರಲೋಕವೂ ನಿನ್ನ ಕೃಪಾಕಟಾಕ್ಷವಿಲ್ಲದೆ ನಷ್ಟವಾಗಿದ್ದು ಈಗ ನಿನ್ನ ಕೃಪಾಕಟಾಕ್ಷ ಲೇಶದಿಂದಲೇ ಸಂಪತ್ಸಮೃದ್ಧವಾಗಿದೆ. ಅಂಥಹ ಅರವಿಂದಲೋಚನನ (ಭಗವಂತನ) ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವ ಮಹಾಲಕ್ಷ್ಮಿಯಾದ ನಿನ್ನ ಅನುಗ್ರಹವಿಲ್ಲದಿದ್ದರೆ ಸಂಸಾರ ಮಂಡಲದಲ್ಲಿ ಐಹಿಕ ಪುರುಷಾರ್ಥವೂ ಕೈವಲ್ಯವೂ, ಅರ್ಚಿರಾದಿ ಮಾರ್ಗದಿಂದ ಹೋಗಿ ಪಡೆಯಬಹುದಾದ ಮೋಕ್ಷಾನಂದ ರೂಪವಾದ ಶ್ರೇಯಸ್ಸೂ ಮನುಷ್ಯರಿಗೆ ಯಾವಗಲೂ ಲಭಿಸಲಾರವು. ನಿನ್ನನ್ನು ಆರಾಧಿಸುವವರಿಗೆ ನೀನೇ ಈ ಪುರುಷಾರ್ಥಗಳನ್ನು ಕೊಡಬಲ್ಲೆ ಸಾಕ್ಷಾದುಪಾಯವೆಂದರ್ಥ.

**ಶ್ರೀ ಭಾಷ್ಯಕಾರರುಮ್ ಶ್ರೀ ವೈಕುಂಠ ಗದ್ಯತ್ತಿಲೇ "ಶೇಷಶೇಷಾಶನಾದಿ ಸರ್ವಂ ಪರಿಜನಂ ಭಗವತಸ್ತತ್ತದವಸ್ಥೋಚಿತ ಪರಿಚರ್ಯಾಯಾ ಮಾಜ್ಞಾಪಯಂತ್ಯಾ" ಎನ್ರು ಭಗವತ್ಕೈಂಙ್ಕರ್ಯರೂಪ ಪರಮಪುರುಷಾರ್ಥಮ್ ಇವಳ್ ನಿಯೋಗತ್ತಿ ಪಡಿಯೇ ನಡತ್ತವೇಣು ಮೆನ್ರರುಳಿಚ್ಚೆಯ್‌ದಾರ್.**

---

ಪ್ರಯತ್ನ ಪಡುತ್ತಾರೆ. ಇದು ಸರಿಯಲ್ಲ. ಸಂಸೃತಿ, ಅಕ್ಷರ ಫಲಗಳಿಗೆ ಲಕ್ಷ್ಮಿಯ ಪುರುಷಕಾರತ್ವವು ಬೇಕಿಲ್ಲ. ಅಂದರೆ ಐಶ್ವರ್ಯ ಕೈವಲ್ಯ ರೂಪ ಪುರುಷಾರ್ಥಗಳಿಗೆ ಲಕ್ಷ್ಮಿಯ ಪುರುಷಕಾರತ್ವವು ಬೇಕೆಂದು ಪ್ರಮಾಣ ವಚನಗಳಿಲ್ಲ. ಆದರೆ ಭಗವಂತನು ಮೋಕ್ಷವನ್ನು ಕೊಡುವಾಗ ಲಕ್ಷ್ಮಿಯು ಪುರುಷಾಕಾರವನ್ನು ಅಪೇಕ್ಷಿಸಿಯೇ, ಕೊಡುತ್ತಾನೆಂದೂ,

ಪ್ರಾಯಶ್ಚಿತ್ತ ಪ್ರಸಂಗೇತು ಸರ್ವಪಾಪ ಸಮುದ್ಭವೇ ।
ಮಾಮೇಕಾಂ ದೇವದೇವಸ್ಯ ಮಹಿಷೀಂ ಶ್ರಯಣಂ ಶ್ರಯೇತ್ ॥"

ಎಂಬ ಪ್ರಮಾಣ ವಚನವು ಹೇಳುತ್ತದೆ. ಸರ್ವಪಾಪಗಳು ಯಾವುವೆಂದರೆ ಮೋಕ್ಷ ವಿರೋಧಿಯಾದ ಸಮಸ್ತ ಪಾಪಗಳು. ಅವುಗಳಿಗೆ ಶರಣಾಗತಿಯೇ ಪ್ರಾಯಶ್ಚಿತ್ತ. ಆ ಪ್ರಸಂಗದಲ್ಲಿ ಅಂದರೆ ಮೋಕ್ಷಾರ್ಥ ಶರಣಾಗತಿ ಪ್ರಕರಣದಲ್ಲಿ ಮಾತ್ರಪುರುಷಕಾರ ಪ್ರಪತ್ತಿಯು ಅಪೇಕ್ಷಿತವೆಂಬುದು ಈ ಶ್ಲೋಕದ ತಾತ್ಪರ್ಯ. ಇಲ್ಲಿ ಸಂಸೃತ್ಯಕ್ಷರ ಫಲಗಳನ್ನು ಲಕ್ಷ್ಮಿಯು ತಾನೇ ಕೊಡುವಂತೆ, ತತ್ಸಹಪಠಿತವಾದ ಮೋಕ್ಷ ರೂಪ ಪುರುಷಾರ್ಥವನ್ನೂ ಪತಿಯ ಹಾಗೆ ಪ್ರಸನ್ನಳಾದ ಲಕ್ಷ್ಮಿಯು ತಾನೇ ಕೊಡಬಲ್ಲಳು ಎಂಬುದು ವಿವಕ್ಷಿತ. ಮೋಕ್ಷವನ್ನು ಕೊಡುವಾಗ ಮಾತ್ರ ಭಗವಂತನಲ್ಲಿ ಪುರುಷಕಾರತ್ವ ಮಾಡಿಕೊಡಿಸುತ್ತಾಳೆಂದು ಹೇಳುವುದು ಸಹಪಠಿತ ಶಬ್ದ ಸ್ವಾರಸ್ಯಕೆ ಭಂಗವಾಗುತ್ತದೆ. ಆದ್ಧರಿಂದ, "ಶ್ರೀಯೋನಹ್ಯರವಿಂದ ಲೋಚನ ಮನಃ" ಎಂಬ ಆಳವಂದಾರ್ ಶ್ರೀ ಸೂಕ್ತಿಯಿಂದ ಲಕ್ಷ್ಮಿಗೆ ಭಗವಂತನ ಹಾಗೆ ಸಾಕ್ಷಾದುಪಾಯತ್ವವೇ ಹೇಳಲ್ಪಟ್ಟದೆ.

ಅನಂತರ, ಎಲ್ಲಾ ನಿತ್ಯಸೂರಿ ನಾಯಕರೂ ಲಕ್ಷ್ಮಿಗೇನೆ ಭೋಗೋಪಕರಣ ಭೂತರು ಎಂದು "ಕಾಂತಸ್ತೇ" ಎಂಬ ಶ್ಲೋಕದಲ್ಲಿ ಆಳವಂದಾರವರು ತಿಳಿಸಿರುವುದನ್ನು ಭಗವದ್ಭಾಷ್ಯಕಾರರೂ ಹೇಳಿರುವುದಾಗಿ **ಶ್ರೀಭಾಷ್ಯಕಾರರುಂ** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಶ್ರೀ ಭಾಷ್ಯಕಾರರೂ ಶ್ರೀ ವೈಕುಂಠ ಗದ್ಯದಲ್ಲಿ **ಶೇಷಶೇಷಾಶನಾದಿಸರ್ವಂ ಪರಿಜನಂ** ಇತ್ಯಾದಿಯಾಗಿ ಆರಂಭಿಸಿ ಆದಿಶೇಷ, ಭಗವಂತನ ಶೇಷ ಪ್ರಸಾದವನ್ನು ಭುಜಿಸುವ ವಿಷ್ವಕ್ಸೇನರೇ ಮೊದಲಾದ ಎಲ್ಲಾ ಪರಿವಾರವನ್ನು ಭಗವಂತನ ಆಯಾಯಾ ಅವಸ್ಥೆಗಳಿಗೆ ಉಚಿತವಾದ ಕೈಂಕರ್ಯಗಳಲ್ಲಿ ಮಹಾಲಕ್ಷ್ಮಿಯು ಆಜ್ಞಾಪಿಸುವಳು ಎಂದು, ಭಗವತ್ಕೈಂಕರ್ಯ ರೂಪ ಪರಮ ಪುರುಷಾರ್ಥವೂ ಇವಳ ನಿಯೋಗ – ಅಪ್ಪಣೆಯ ಮೇರೆ ನಡೆಸಬೇಕೆಂದು, ಕೃಪೆಮಾಡಿ ಹೇಳಿದ್ದಾರೆ. ನಿತ್ಯ ಸೂರಿಗಳ ಕೈಂಕರ್ಯ ರೂಪ ಪುರುಷಾರ್ಥವೂ, ಮಹಾಲಕ್ಷ್ಮಿಯ ಅಪ್ಪಣೆಗೆ ಅಧೀನವೆಂದು ಹೇಳಿದರೆ, ಇತರರ ಪುರುಷಾರ್ಥವೂ ಇವಳ ಅಧೀನವೆಂಬುದು ಕೈಮುತಿಕ ನ್ಯಾಯಸಿದ್ಧ. ಪತಿಯ ಪರಿಚರ್ಯೆಯೂ ಪತಿವ್ರತೆಯ ಭೋಗ. "ನಿತ್ಯಮುಕ್ತವಿಷಯಂ ದೇವ್ಯಾ ಆಜ್ಞಾಪನಂ ಪರಿಚರ್ಯಾವಿಶೇಷು ಇಚ್ಛೋತ್ಪಾದನ ಮಾತ್ರಮ್. ತೇಷಾಂ ಸರ್ವಜ್ಞತ್ವೇನ ಜ್ಞಾನೋತ್ಪಾದನ ನೈರಪೇಕ್ಷ್ಯಾತ್"–ನಿತ್ಯಮುಕ್ತರು ಸರ್ವಜ್ಞರಾದ್ದರಿಂದ ಅವರಿಗೆ ಮಾಡುವ ಆಜ್ಞಾಪನೆಯು ವಿಶೇಷವಾದ ಶುಶ್ರೂಷೆಗಳಲ್ಲಿ ಇಚ್ಛೆಯನ್ನುಂಟು ಮಾಡುವುದೇ ವಿನಹ, ಜ್ಞಾನವನ್ನು ಉಂಟು ಮಾಡಬೇಕೆಂಬ ಅಪೇಕ್ಷೆಯಿಲ್ಲವೆಂದು ಗದ್ಯ ಭಾಷ್ಯದಲ್ಲಿ ಶ್ರೀದೇಶಿಕರು ಅನುಗ್ರಹಿಸಿದ್ದಾರೆ. ಶ್ರೀವತ್ಸಾಂಕ ಮಿಶ್ರರು (ಕೂರತ್ತಾಳ್ವಾನ್) ಲಕ್ಷ್ಮಿಗೆ ಸಾಕ್ಷಾತ್ಪರಮಕಾರಣತ್ವವೂ ಅದಕ್ಕೆ ಅನುಗುಣವಾದ ಸ್ವಾಭಾವಿಕ ಅನವಧಿಕಾತಿಶಯ ಸಾರ್ವಜ್ಞ್ಯ ಸರ್ವಶಕ್ತಿತ್ವಾದಿ ಮಹಿಮೆಗಳೆಲ್ಲವೂ ಇವೆಯೆಂಬುದನ್ನೂ ತಿಳಿಸಿರುವುದಾಗಿ **ಕೂರತ್ತಾಳ್ವಾನುಮ್**, ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಭಗವದ್ಭಾಷ್ಯಕಾರರ ಪ್ರಧಾನಶಿಷ್ಯರಾದ

**ಕೂರತ್ತಾೞ್ವಾನುಮ್- 1) "ಸ್ವಸ್ತಿಶ್ರೀರ್ದಿಶತಾ ದಶೇಷ ಜಗತಾಂ ಸರ್ಗೋಪಸರ್ಗಸ್ಥಿತೀಸ್ಸ್ವರ್ಗಂ ದುರ್ಗತಿ ಮಾಪವರ್ಗಿಕ ಪದಂ ಸರ್ವಂಚ ಕುರ್ವನ್ ಹರಿಃ। ಯಸ್ಯಾ ವೀಕ್ಷ್ಯ ಮುಖಂ ತದಿಙ್ಗಿತ ಪರಾಧೀನೋವಿಧತ್ತೇಽಖಿಲಂ ಕ್ರೀಡೇಯಂ ಖಲು ನಾನ್ಯಥಾಸ್ಯ ರಸದಾ ಸ್ಯಾದೈಕರಸ್ಯಾತ್ತಯಾ". ಎನ್ರು ಸಙ್ಗ್ರಹಿತ್ತ ವರ್ಥತ್ತೈ "ದೇವಿತ್ವನ್ಮಹಿಮಾವಧಿ ರ್ನಹರಿಣಾ ನಾಪಿ ತ್ವಯಾ ಜ್ಞಾಯತೇ" ಎನ್ರು ತುಡಙ್ಗಿ ವಿಸ್ತರಿತ್ತಾರ್.**

---

ಕೂರತ್ತಾೞ್ವಾನ್‌ರವರು, ತಾವು ರಚಿಸಿರುವ ಶ್ರೀಸ್ತವದ 1) **ಸ್ವಸ್ತಿಶ್ರೀರ್ದಿಶತಾತ್** ಎಂಬ ಶ್ಲೋಕದಲ್ಲಿ ಭಗವಂತನು ಜಗತ್ಸೃಷ್ಟಿ ಸಂಹಾರಸ್ಥಿತಿ ಸ್ವರ್ಗ ನರಕ ಮೋಕ್ಷ ಪ್ರದಾನ ಕಾರ್ಯಗಳನ್ನು ಲಕ್ಷ್ಮಿಯಮುಖವನ್ನು ನೋಡಿ ಅವಳ ಇಂಗಿತ ಪರಾಧೀನನಾಗಿ ಅಂದರೆಅವಳ ಅನುಮತಿಯನ್ನು ಪಡೆದು ಮಾಡುತ್ತಾನೆ. ಇದು ಅವನಿಗೆ ಲೀಲೆ, ಅವಳ ಅನುಮತಿ ಇಲ್ಲದೆ ಮಾಡಿದರೆ ರಸವತ್ತಾಗುವುದಿಲ್ಲ. ಏಕೆಂದರೆ ದಂಪತಿಗಳು ಏಕಾಭಿಪ್ರಾಯರಾದ್ದರಿಂದ, ಸರ್ವವ್ಯಾಪಾರಗಳನ್ನೂ ಇಬ್ಬರೂ ಸೇರಿಯೇ ಮಾಡುತ್ತಾರೆಂದು ತಾತ್ಪರ್ಯ. "ಲೋಕವತ್ತುಲೀಲಾ ಕೈವಲ್ಯಂ" ಎಂಬ ಬ್ರಹ್ಮ ಸೂತ್ರದಲ್ಲಿ ದಿವ್ಯ ದಂಪತಿಗಳಿಗೆ ಈ ಜಗದ್ವ್ಯಾಪಾರವು ಲೀಲೆ ಎಂಬುದು ಅಭಿಪ್ರೇತವೆಂಬುದು, "ಕ್ರೀಡೇಯಂಖಲು ನ್ಯಾನ್ಯಥಾಸ್ಯರಸದಾಸ್ಯಾದೈಕರಸ್ಯಾತ್ತಯಾ" ಎಂಬ ವಾಕ್ಯದಿಂದ ತೋರಿಸಲ್ಪಡುತ್ತದೆ. ಭಗವಂತನು ಜಗದ್ವ್ಯಾಪಾರಲೀಲೆಯನ್ನು ಮಾಡುವಾಗ. ಅದನ್ನು ಸಾಕ್ಷಾತ್ಕರಿಸಿಕೊಂಡು ಶ್ರೀ ವೈಕುಂಠವಾಸಿಗಳೆಲ್ಲರೂ ನಿತ್ಯ ನಿರತಿಶಯಾನಂದ ಭರಿತರಾಗಿರುತ್ತಾರೆ. ಪರಮ ಸಾಮ್ಯವನ್ನು ಹೇಳುವ ಶ್ರುತಿಬಲದಿಂದ ನಿತ್ಯಮುಕ್ತರಿಗೂ ಭಗವಂತನಿಗೂ ಭಗವನ್ಮಹಿಷಿಗಳಿಗೂ ಈ ಆನಂದವು ಸಮಾನವೆಂಬುದು ಸಿದ್ಧಾಂತ. ಹೀಗಿರುವಾಗ ದಿವ್ಯ ದಂಪತಿಗಳಿಗೆ ವಿಶೇಷವಾಗಿ ಕ್ರೀಡಾರ ಸೋಕ್ತಿಯನ್ನು ಹೇಳಿರುವುದು ಇಬ್ಬರೂ ಜಗದ್ವ್ಯಾಪಾರದಲ್ಲಿ ಅನ್ವಯಿಸುತ್ತಾರೆಂದು ಹೇಳದೆ ಹೋದರೆ, ಉಪಪನ್ನವಾಗುವುದಿಲ್ಲವಲ್ಲವೇ. "ತದಿಂಗಿತಪರಾಧೀನಃ" ಎಂದು ಹೇಳಿರುವುದು ಯಥಾಶ್ರುತಾರ್ಥವಲ್ಲ. ಯಥಾ ಶ್ರುತವೆಂದರೆ ಪತಿಗೆ ಪತ್ನೀ ಪಾರತಂತ್ರ್ಯ ಪ್ರಸಂಗವು ಬರುತ್ತದೆ. ಇದು ಸಂಮತವಲ್ಲ. ಮತ್ತೇನೆಂದರೆ "ಏಕಾಭಿಪ್ರಾಯರೆಂಬುದರಲ್ಲಿ ಪರ್ಯವಸಿತಾರ್ಥ. ಪ್ರೇಮಕೃತವಾದ ಪಾರತಂತ್ರ್ಯವು ದೋಷವಲ್ಲವಾದ್ದರಿಂದಪುನಶ್ಚೋದ್ಯ ಮಾಡಬಾರದು ಪ್ರೇಮಕೃತಪಾರತಂತ್ರ್ಯವು ಭಗವಂತನಿಗೆ ಸರ್ವಾಶ್ರಿತ ಸಾಧರಣವಾದ್ದರಿಂದ ಲಕ್ಷ್ಮೀದೇವಿಯಲ್ಲಿ ವಿಶೇಷವಾಗಿ ಹೇಳಲಿಕ್ಕಿಲ್ಲ. ಆದ್ದರಿಂದ "ಇಂಗಿತ ಪರಾಧೀನವೆಂಬುದು ಏಕಾಭಿಪ್ರಾಯತೆಯಲ್ಲೇ ಪರ್ಯವಸಿತವಾಗಿ ಇಬ್ಬರೂ ಸೇರಿ ಜಗದ್ವ್ಯಾಪಾರವನ್ನು ನಡೆಸುತ್ತಾರೆಂದು ಹೇಳಿ, ಅದರಲ್ಲಿ ಏಕದೇಶವಾದ ಮೋಕ್ಷಪ್ರದಾನವೆಂಬ ಉಪಾಯವು ಭಗವಂತನ ಹಾಗೆ ಲಕ್ಷ್ಮಿಗೂ ಉಂಟೆಂಬುದು ಅಪ್ರಕಂಪ್ಯವಾದ ಸಿದ್ಧಾಂತ. **ಎನ್ರು ಸಂಗ್ರಹಿತ್ತವರ್ಥತ್ತೈ** ಇತ್ಯಾದಿ. ಹೀಗೆ ಸಂಗ್ರಹವಾಗಿ ಹೇಳಿದ ಅರ್ಥವನ್ನು 1) **ದೇವಿತ್ವನ್ಮಹಿಮಾವಧಿರ್ನ ಹರಿಣಾ** ಎಂದಾರಂಭಿಸಿ, "ಎಲೈ ದೇವಿಯೇ ನಿನ್ನ ಮಹಿಮೆಯ ಎಲ್ಲೆಯು ನಿನಗೂ ತಿಳಿಯದು ಭಗವಂತನಿಗೂ ತಿಳಿಯದು, ಅಂದರೆ ನಿರತಿಶಯ ಮಹಿಮೆಯುಳ್ಳವಳು ನೀನು", ಎಂದು ವಿಸ್ತರಿಸಿ ಹೇಳಿದ್ದಾರೆ. "ಸ್ವಸ್ತಿಶ್ರೀರ್ದಿಶತಾತ್", ಎಂಬ ಶ್ಲೋಕದಲ್ಲಿ ಲಕ್ಷ್ಮಿಗೆ ಜಗದ್ವ್ಯಾಪಾರಾನ್ವಯವೂ, ಮೋಕ್ಷ ಪ್ರದಾತೃತ್ವವೂ ಇಲ್ಲವೆಂಬುದು ವಿವಕ್ಷಿತವಾಗಿದ್ದರೆ, ಅಪರಿಚ್ಛಿನ್ನಮಾಹಾತ್ಮ್ಯವುಳ್ಳವಳೆಂದು ಹೇಳುವ ಈ ಶ್ಲೋಕವು ಸಂಗತವಾಗಲಾರದು. ಆದ್ದರಿಂದ ಲಕ್ಷ್ಮಿಗೆ ಜಗದ್ವ್ಯಾಪಾರ ಮೋಕ್ಷ ಪ್ರದಾತೃತ್ವಗಳಲ್ಲಿ ಅನ್ವಯವುಂಟು ಎಂಬುದೇ ಕೂರತ್ತಾೞ್ವಾನ್ ಅವರಿಗೂ ಅಭಿಪ್ರಾಯವೆಂಬುದು ಶ್ರೀಸೂಕ್ತಿ ತಾತ್ಪರ್ಯ. ಅನಂತರ ಪರಾಶರಭಟ್ಟರು ತಮ್ಮ ಶ್ರೀಸೂಕ್ತಿಯಲ್ಲಿ ಶ್ರುತಿಯಲ್ಲಿ ಹೇಳಿರುವ ಉದಾರಶಬ್ದಕ್ಕೆ ಸಾಕ್ಷಾತ್ ಪರಮಪುರುಷಾರ್ಥ ವಿತರಣ ಪರ್ಯಂತ ವ್ಯಾಖ್ಯಾನ ಮಾಡಿರುತ್ತಾರೆಂದು

---

1) ಶ್ರೀಸ್ತವ ಶ್ಲೋಕ 1

**ಭಟ್ಟರುಮ್ 1) "ಐಶ್ವರ್ಯ ಮಕ್ಷರಗತಿಂ ಪರಮಂ ಪದಂವಾ ಕಸ್ಮೈಚಿದಂಜಲಿ ಭರಂ ವಹತೇ ವಿತೀರ್ಯ। ಅಸ್ಮೈನ ಕಿಂಚಿದುಚಿತಂ ಕೃತಮಿತ್ಯಥಾಂಬ ತ್ವಂ ಲಜ್ಜಸೇ ಕಥಯ ಕೋಯ ಮುದಾರ ಭಾವಃ" ಎನ್ರು ಶ್ರುತಿಯಿಲುದಾರ ಶಬ್ದತ್ತುಕ್ಕು ವ್ಯಾಖ್ಯಾನಮ್ ಪಣ್ಣಿನಾರ್.**

---

**ಭಟ್ಟರುಂ** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಪರಾಶರಭಟ್ಟರು, 1) **ಐಶ್ವರ್ಯಮಕ್ಷರಗತಿಂ** ಇತ್ಯಾದಿ ಶ್ಲೋಕದಲ್ಲಿ, "ಚಂದ್ರಾಂಪ್ರಭಾಸಾಂ ಯಶಸಾ ಜ್ವಲಂತೀಗ್ಂ ಶ್ರಿಯಂ ಲೋಕೇ ದೇವ ಜುಷ್ಟಾ ಮುದಾರಾಂ" ಎಂಬ ಶ್ರುತಿಯಲ್ಲಿ ಹೇಳಿರುವ "ಉದಾರ" ಶಬ್ದಕ್ಕೆ ಐಶ್ವರ್ಯ, ಅಕ್ಷರಗತಿ–ಕೈವಲ್ಯ, ಪರಮಪದ ಪರ್ಯಂತ ವಿತರಣ ಮಾಡುವ ಔದಾರ್ಯವೆಂದು ಅರ್ಥಮಾಡಿರುತ್ತಾರೆ. ಪುರುಷಕಾರ ಪ್ರಪತ್ತಿಗೆ ಕರಣ ಮಂತ್ರವಾದ "ಚಂದ್ರಾಂ ಪ್ರಭಾಸಾಂ" ಎಂದಾರಂಭಿಸುವ ಶ್ರುತಿಯಲ್ಲಿ ಹೇಳಿರುವ "ಉದಾರ" ಶಬ್ದಕ್ಕೆ ಪರಂಪರಯಾಗಿ ಪರಮ ಪುರುಷಾರ್ಥ ವನ್ನು ಕೊಡಿಸುತ್ತಾಳೆಂಬುದರಲ್ಲಿ ತಾತ್ಪರ್ಯವೇ ಹೊರತು. ಸಾಕ್ಷಾತ್ತಾಗಿ ಅಲ್ಲವೆಂದು ಶಂಕಿಸಬಾರದು. "ವಿತೀರ್ಯ" ಎಂದು ಹೇಳಿರುವುದಕ್ಕೆ ವಿರೋಧವು ಏರ್ಪಡುತ್ತದೆ. ಪುರುಷಕಾರ ಪ್ರಪತ್ತಿಯು ಮಂತ್ರಸ್ಥವಾಗಿದ್ದರೂ, ಉದಾರ ಶಬ್ದವು, ಸಾಕ್ಷಾನ್ಮೋಕ್ಷ ಪ್ರದಾನ ಪರ್ಯಂತ ಪರಮೋದಾರತ್ವದಲ್ಲಿ ವಿಶ್ರಾಂತವು. ಅಲ್ಲಿ ಸಹಸ್ರೇಶತಮಸ್ತಿ– ಸಾವಿರದೊಳಗೆ ನೂರೂ ಅಡಗಿದೆ, ಎಂಬ ನ್ಯಾಯದಂತೆ, ಉಪಾಯ ವಿರೋಧಿ ಪಾಪ ನಿರಸನವೂ, ಮೋಕ್ಷ ವಿರೋಧಿ ಪಾಪನಿವರ್ತಕ ಬ್ರಹ್ಮವಿದ್ಯಾ ಪೂರ್ತಿಯೂ ಸಹ, ಉದಾರ ಪದದಿಂದ ಪ್ರಕಾಶಿಸುತ್ತದೆ, ಎಂಬುದು ಅನುಷ್ಠೇಯಾರ್ಥ ಪ್ರಕಾಶನ ಮಂತ್ರಕ್ಕೆ ತಾತ್ಪರ್ಯ

ಸರಿ ಹಾಗಾದರೂ "ಅಸ್ತಿಕರ್ಮಾರ್ಹಫಲದೇ ಪತ್ಯೌ ಕೃತ್ಯದ್ವಯಂ ಶ್ರಿಯಃ ।
ನಿಗ್ರಹಾದ್ವಾರಣಂಕಾಲೇ ಸಂಧುಕ್ಷಣ ಮನುಗ್ರಹೇ ॥

ಎಂಬ ಶ್ರೀ ಸೂಕ್ತಿಯಿಂದ ಲಕ್ಷ್ಮಿಯು ಭಗವಂತನ ಕೋಪವನ್ನು ಶಮಿಸಿ ಅನುಗ್ರಹ ಮಾಡುತ್ತಾಳೆಂದು ಮಾತ್ರ ಹೇಳಿರುವುದರಿಂದ ಪುರುಷಕಾರ ಮಾತ್ರ ಲಕ್ಷ್ಮಿಯ ಕೃತ್ಯವೆಂದು ತಿಳಿಯುತ್ತದೆಯಲ್ಲವೇ ಎಂದರೆ, ಇದೂ ಸರಿಯಲ್ಲ. "ನಿಗ್ರಹಾದ್ವಾರಣಂ" ಎಂಬ ಪದಗಳಿಂದ "ಕಿಮೇತನ್ನಿರ್ದೋಷಃ ಕ ಇಹ ಜಗತೀ ತಿ" ಈ ಲೋಕದಲ್ಲಿ ಪಾಪ ಮಾಡ ದವರು ಯಾರಿದ್ದಾರೆ ಇತ್ಯಾದಿ ಉಪಾಯಗಳಿಂದ ಆಶ್ರಿತ ವಿಷಯದಲ್ಲಿ ಭಗವಂತನ ಕೋಪವನ್ನು ಹೋಗಲಾಡಿಸಿ ಭಗ ವಂತನು ಕರುಣಿಸುವಂತೆ ಮಾಡುವ ಪುರುಷಕಾರ ಕೃತ್ಯವು ಹೇಳಲ್ಪಟ್ಟಿದೆ. "ಸಂಧುಕ್ಷಣಮನುಗ್ರಹೇ"ಎಂದುಭಗವಂತನು ಮಾಡುವ ಪ್ರಾಪ್ತಿ ವಿರೋಧಿಪಾಪ ನಿರಸನ ಪೂರ್ವಕ ಮೋಕ್ಷ ಪ್ರದಾನ ರೂಪ ಅನುಗ್ರಹದಲ್ಲಿ ಅಂದರೆ"ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂಬ ಭಗವತ್ಸಂಕಲ್ಪದಲ್ಲಿ ಐಕರಸ್ಯ ಭಾವದಿಂದ ಜತೆಯಲ್ಲಿದ್ದು ಸಾಚಿವ್ಯವನ್ನು ಮಾಡುತ್ತೀಯಾ ನೀನೂ ಸಹ "ಮೋಕ್ಷಯಿಷ್ಯಾಮಿ" ಎಂದು ಸಂಕಲ್ಪಿಸುತ್ತೀಯೂ ಎಂದರ್ಥ. ಸಂಧುಕ್ಷಣಂ–ಸಾಚಿವ್ಯ ಕರಣಮ್

---

1) ಶ್ರೀಗುಣರತ್ನ ಕೋಶ 58

ಎಲೈ ಲಕ್ಷ್ಮಿಯೇ, ನೀನು ನಿನ್ನಲ್ಲಿ ಅಂಜಲಿಯೆಂಬ ಭಾರವನ್ನು ವಹಿಸಿದವನಿಗೆ (ನಿನ್ನಲ್ಲಿ ಶರಣಾಗತಿ ಮಾಡಿದವನಿಗೆ ಎಂದು ತಾತ್ಪರ್ಯ) ಐಶ್ವರ್ಯ, ಅಕ್ಷರಗತಿ–ಕೈವಲ್ಯ ಪುರುಷಾರ್ಥ. ಪರಮ ಪುರುಷಾರ್ಥವನ್ನೂ ಸಹ ಕೊಟ್ಟು ಅಯ್ಯೋ ಇವನಿಗೆ ಉಚಿತವಾದದ್ದೇನ್ನೂ ಮಾಡಲಿಲ್ಲವೆಂದು, ಲಜ್ಜಿಸುತ್ತೀಯೂ, ನಿನ್ನ ಈ ಔದಾರ್ಯವು ಎಂತಹದು ಹೇಳು. ಪ್ರಪನ್ನನು ಮಾಡಿದ ಅಲ್ಪವ್ಯಾಪಾರ ವಾದ ಅಂಜಲಿ ಬಂಧವನ್ನು ಬಹಳ ಭಾರವನ್ನು ಹೊತ್ತಿರುವವನಾಗಿ ತಿಳಿದು ಅವನಿಗೆ ಮೋಕ್ಷಾಂತವಾದ ಐಶ್ವರ್ಯವನ್ನು ಕೊಡುವ ಈ ಔದಾರ್ಯವನ್ನು ಏನೆಂದು ವರ್ಣಿಸಲಿ ಎಂಬುದು ಭಾವ.

**ಶ್ರೀ ಸೂಕ್ತಭಾಷ್ಯತ್ತಿಲೇ ಪೆರಿಯ ಜೀಯರುಮ್ ಅಪೇಕ್ಷಿತಾರ್ಥಙ್ಗಳೆಲ್ಲಾಮುಪಪಾದಿತ್ತಾರ್. ಇಪ್ಪಡಿ ಶ್ರುತಿ ಸ್ಮೃತಿ ಸಂಪ್ರದಾಯಮ್ ನಿರ್ಕಿರ ನಿಲೈಹಳೈಕ್ಕೊಣ್ಡು ಶ್ರೀಮಚ್ಛಬ್ಧತ್ತಿಲ್ ಶೊನ್ನ ವಿಶೇಷಣತ್ತುಕ್ಕು ವಿಗ್ರಹಾದಿಹಳುಕ್ಕುಪ್ಪೋಲೇ ವಸ್ತ್ವನುರೂಪಮಾನ ಉಪಯೋಗ ವಿಶೇಷಙ್ಗಳೈ ಸಹೃದಯರ್ ಅರಿನ್ದುಕೊಳ್ವದು.**

**ಭರಸ್ವೀಕಾರ ರಹಿತಂ ರಕ್ಷಾ ಸಙ್ಕಲ್ಪ ವರ್ಜಿತಂ।**
**ಗುಣಾದಿಕ ವಿಹೇಷ್ಟಂ ಹಿ ಶರಣ್ಯಸ್ಯ ವಿಶೇಷಣಂ ॥ ೨೩ ॥**

---

**ಪೆರಿಯಜೀಯರುಮ್**–ನಾರಾಯಣಮುನಿ ಎಂಬ ನಂಜೀಯರು. ಇವರು ಪರಾಶರಭಟ್ಟರ ಶಿಷ್ಯರು. **ಶ್ರೀ ಸೂಕ್ತ ಬಾಷ್ಯತ್ತಿಲೇ**–ಇವರು ಶ್ರೀ ಸೂಕ್ತಕ್ಕೆ ವ್ಯಾಖ್ಯಾನವನ್ನು ಅನುಗ್ರಹಿಸಿದ್ದಾರೆ. ಆ ಗ್ರಂಥದಲ್ಲಿ **ಅಪೇಕ್ಷಿತಾರ್ಥಂಗಳೆಲ್ಲಾಂಉಪಪಾದಿತ್ತಾರ್** – ಲಕ್ಷ್ಮೀ ಜಗತ್ಕಾರಣತ್ವ ಪರಾಪ್ಯೋಪಾಯತ್ವಾದಿಗಳನ್ನೆಲ್ಲಾ ನಿರೂಪಿಸಿರುತ್ತಾರೆ. ಚರಮ ಶ್ಲೋಕಾಧಿಕಾರದಲ್ಲಿ ಪೆರಿಯ ಜೀಯರುಮ್ "ಶ್ರೀ ಪರಾಶರ ಭಟ್ಟಾರ್ಯ ಚರಣೌ ಸಂಶ್ರಯೇಮಹಿ" ಇತ್ಯಾದಿಯಾಲೇ ಸಂಪ್ರದಾಯ ವಿಶೇಷ ಜ್ಞಾಪಕಾರ್ಥಮಾಹ ಗುರುನಮಸ್ಕಾರಾದಿಹಳೈಪ್ಪಣ್ಣಿ, ಭಗವಚ್ಚರಣಾ. ಭೋಜ ಪರಿಚರ್ಯಾ ರತಾತ್ಮನಾಮ್, ಇತ್ಯಾದಿ....ಅರುಳಿಚ್ಚೆಯ್ದಾರ್", ಎಂದು ಹೇಳಿರುವ ವಾಕ್ಯವನ್ನು ಪರ್ಯಾಲೋಚಿಸಿದರೆ ಪರಾಶರಭಟ್ಟರ ಶಿಷ್ಯರಾದ ನಿತ್ಯಗ್ರಂಥಕರ್ತರಾದ, ನಂಜೀಯರ್ ಎಂಬುವರೇ "ಪೆರಿಯಜೀಯರ್" ಎಂಬ ಶಬ್ದಗಳಿಂದ ವ್ಯಪದೇಶಿಸಲ್ಪಡುತ್ತಾರೆಂಬುದು ಸುಗಮ. "ಆಚ್ಚಾನ್‌ಪಕ್ಕಲಿಲೇ ಕೇಟ್ಟು ನಂಜೀಯರ್ ಸಂಗ್ರಹಿತ್ತಾರ್" ಎಂದು ಸಿದ್ಧೋಪಾಯ ಶೋಧನಾಧಿಕಾರ ವಾಕ್ಯದಿಂದ, "ಕಿಡಾಂಬಿ ಆಚ್ಚಾನ್ ಎಂದು ಸುಪ್ರಸಿದ್ಧರಾದ ಯತಿರಾಜ ಮಹಾನಸಿಕ ಗುರುಗಳ ಸಕಾಶದಿಂದ ಲಕ್ಷ್ಮೀ ಸಂಬಂಧವಾದ ಕೆಲವು ಅರ್ಥಗಳು ಕೇಳಿ ತಿಳಿದುಕೊಳ್ಳಲ್ಪಟ್ಟವು. ಈ ಅಂಶವು,

"ಯತೀಂದ್ರಮಾಹಾನಸಿಕಾತ್ ಪ್ರಣತಾರ್ತಿಹರಾತ್ ಗುರೋಃ।
ಸಂತ್ಸಂಪ್ರದಾಯ ಸಿದ್ಧೋರ್ಥಃ ಶ್ರೀ ಸೂಕ್ತಸ್ಯವಿನಿಶ್ಚಿತಃ ॥"

ಎಂಬ ಶ್ರೀ ಸೂಕ್ತಭಾಷ್ಯದ ಉಪಸಂಹಾರ ಪದ್ಯದಿಂದ ಸ್ಫುಟವಾಗುತ್ತದೆ. ಈ ನಂಜೀಯರಿಗೆ ರಂಗನಾಥ ಮುನಿಗಳೆಂಬುದು ನಾಮಧೇಯ. ಏತಾವತಾ' ಪರಾಶರ ಭಟ್ಟರ ಶಿಷ್ಯರಾಗಿದ್ದು ಅವರಿಂದ ಸಕಲ ಸಂಪ್ರದಾಯಾರ್ಥಗಳನ್ನೂ ತಿಳಿದುಕೊಂಡು, ಶ್ರೀ ಭಾಷ್ಯಕಾರರ ಸಾಕ್ಷಾತ್ ಶಿಷ್ಯರಾದ, ಮುಡೈಪ್ಪಳ್ಳಿ ಆಚ್ಚಾನ್ ಅವರ ಸಕಾಶದಿಂದ ಲಕ್ಷ್ಮೀ ವಿಷಯಕವಾದ ಕೆಲವು ವಿಷಯಗಳನ್ನು ಕೇಳಿ ತಿಳಿದುಕೊಂಡು ಶ್ರೀ ಸೂಕ್ತ ಭಾಷ್ಯದಲ್ಲಿ ನಿರೂಪಿಸಿರುವುದರಿಂದ ಇದು ಪರಮೋಪಾದೇಯವಾದ ಪ್ರಾಮಾಣಿಕ ಗ್ರಂಥವೆಂಬುದು ಸಹೃದಯ ಹೃದಯಂಗಮ.

**ಇಪ್ಪಡಿ ಶ್ರುತಿಸ್ಮೃತಿ ಸಂಪ್ರದಾಯಮ್** ಇತ್ಯಾದಿ – ಹೀಗೆ ಮೇಲೆ ಹೇಳಿದ ರೀತಿಯಲ್ಲಿ, ಶ್ರುತಿಸ್ಮೃತಿ ಸಂಪ್ರದಾಯಗಳು ತಿಳಿಸುವ ರೀತಿಯನ್ನು ಅನುಸರಿಸಿ, ಶ್ರೀಮಚ್ಛಬ್ದದಲ್ಲಿ ಹೇಳಿರುವ ವಿಶೇಷಣಕ್ಕೆ ಗುಣ ವಿಗ್ರಹಾದಿಗಳ ಹಾಗೆ ಭರಸ್ವೀಕಾರೋಪಯೋಗವು ಉಂಟು. ಹೀಗೆ ವಸ್ತುವಿಗೆ ಅನುರೂಪವಾದ ಉಪಯೋಗ ವಿಶೇಷಗಳನ್ನು ಸಹೃದಯರು ತಿಳಿದುಕೊಳ್ಳತಕ್ಕದ್ದು.

ಈ ವಿಷಯಗಳನ್ನು ಆಚಾರ್ಯಸಾರ್ವಭೌಮರು **ಭರಸ್ವೀಕಾರರಹಿತಂ** ಎಂದಾರಂಭಿಸಿ ಕಾರಿಕಾರೂಪದಲ್ಲಿ ಸಂಗ್ರಹಿಸುತ್ತಾರೆ. ಅದಾಗಿ, **ಭರಸ್ವೀಕಾರರಹಿತಂ** ಇತ್ಯಾದಿ. ಭಗವಂತನಿಗೆ ಗುಣವಿಗ್ರಹಾದಿಗಳನ್ನು ವಿಶೇಷಣಗಳನ್ನಾಗಿ ಒಪ್ಪುತ್ತೀರಿ. ಇವು ಅಚೇತನವಾದ್ದರಿಂದ ಪ್ರಪನ್ನನ ಭರವನ್ನು ಸ್ವೀಕರಿಸುವುದಿಲ್ಲ. 'ಮೋಕ್ಷಯಿ

**ಐಕರಸ್ಯ ಜುಷೋಶ್ಶೇಷಿ ದಂಪತ್ಯೋಸ್ಸರ್ವಕರ್ಮಸು ।**
**ವಿಶೇಷಣ ವಿಶೇಷ್ಯತ್ವಂ ಶ್ರುತಂ ಕಸ್ಮಾನ್ನರೋಚತೇ ॥ ೨೪ ॥**
**ಪ್ರತರ್ದನಾದಿ ವಿದ್ಯಾಸು ವೇದ್ಯೇಪಿ ಪರಮಾತ್ಮನಿ ।**
**ಅಚೇತನ ವದಿಚ್ಛಾವಾ ಶ್ಚೇತನಂಚ ವಿಶೇಷಣಮ್ ॥ ೨೫ ॥**
**ಇತ್ಥಂ ಪ್ರಪತ್ತಿ ವಿದ್ಯಾಯಾಂ ತತ್ತನ್ಮಂತ್ರಾನು ಸಾರತಃ ।**
**ವಿಭುಃ ಪತ್ನ್ಯೈ ಗುಣಾದ್ಯೈಶ್ಚ ವಿಶಿಷ್ಟೋ ವಿಷಯೋತ್ರನಃ ॥ ೨೬ ॥**

---

ಷ್ಯಾಮಿ' ಎಂದು ರಕ್ಷಾಸಂಕಲ್ಪವನ್ನು ಮಾಡುವುದಿಲ್ಲ. ಪ್ರಪನ್ನನ ಭರವನ್ನೂ ಸ್ವೀಕರಿಸಿ, ರಕ್ಷಾ ಸಂಕಲ್ಪವನ್ನೂ ಮಾಡುವ ಲಕ್ಷ್ಮಿಯನ್ನು ಏಕೆ ವಿಶೇಷಣವಾಗಿ ಒಪ್ಪುತ್ತಿಲ್ಲ. ಪ್ರಪನ್ನನ ವಿಷಯದಲ್ಲಿ, "ನಿನ್ನಲ್ಲಿ ಭರವನ್ನು ಇಡದೆ ನಾನೇ ನಿನ್ನ ಇಷ್ಟಾರ್ಥವನ್ನು ಸಾಧಿಸುತ್ತೇನೆ ಎಂಬ ಸಂಕಲ್ಪವು ಭರಸ್ವೀಕಾರ ಪೂರ್ವಕ ರಕ್ಷಾಸಂಕಲ್ಪ. ವಿದ್ಯಾಂತರ ನಿಷ್ಠರ ವಿಷಯದಲ್ಲಿ ನಿನ್ನ ಇಷ್ಟಾರ್ಥವನ್ನು ಕೊಡುತ್ತೇನೆಂಬುದು ಮಾತ್ರ ರಕ್ಷಾಸಂಕಲ್ಪ. ಆದ್ದರಿಂದ ಉಪಾಸನೆಯಲ್ಲೂ ವಿಶಿಷ್ಟನೇ ಪ್ರಸಾದ್ಯನು

"ಯಾಮಾಲಂಬ್ಯ ಸುಖನೇಮಂ ದುಸ್ತರಂಹಿ ಗುಣೋದಧಿಮ್ ।
ನಿಸ್ತರಂತ್ಯಚಿರೇಣೈವ ವ್ಯಕ್ತಧ್ಯಾನ ಪರಾಯಣಾಃ ॥"

ಎಂಬ ವಚನವು ಇದಕ್ಕೆ ಪ್ರಮಾಣ. ಲಕ್ಷ್ಮಿಯ ಆಶ್ರಯಣವು ಶೀಘ್ರವಾಗಿ ವಿದ್ಯಾ ನಿಷ್ಪತ್ತಿ ಏರ್ಪಡಲು ಕಾರಣವಷ್ಟೇ ವಿನಹ ಅವಳಿಗೆ ಉಪಾಯತ್ವವನ್ನು ಹೇಳಲಿಕ್ಕಿಲ್ಲ, ಎಂದು ಆಕ್ಷೇಪಿಸಬಾರದು. "ಯಾಮಾಲಂಬ್ಯ ಗುಣೋದಧಿಂ ನಿಸ್ತರಂತಿ" ಎಂದು ಲಕ್ಷ್ಮೀ ಸಮಾಶ್ರಯಣವು ಸಂಸಾರತರಣಕ್ಕೆ ಉಪಾಯವಾಗಿ ಹೇಳಿದೆ. "ಭವಾಮಿನ ಚಿರಾತ್ಪಾರ್ಥ ಮಯ್ಯಾವೇಶಿತ ಚೇತಸಾಮ್" (ಗೀತೆ ) ಎಂಬಲ್ಲಿ ಹೇಳಿರುವಂತೆ, "ನಿಸ್ತರಂತ್ಯ ಚಿರೇಣೈವ" ಎಂದು ಶೀಘ್ರದಲ್ಲೇ ಸಂಸಾರತರಣವು ಹೇಳಲ್ಪಟ್ಟಿರುವುದು ಗಮನಿಸತಕ್ಕದ್ದು. ವಿದ್ಯಾನಿಷ್ಪತ್ತಿ ಯೆಂದರೂ ಸಂಸಾರತರಣ ಪರ್ಯಂತ ಫಲವು ಏರ್ಪಡುತ್ತದೆ ಎಂಬುದರಲ್ಲಿ ತಾತ್ಪರ್ಯ. ಆದ್ದರಿಂದ ಭರಸ್ವೀಕಾರ ರಕ್ಷಾಸಂಕಲ್ಪ ಶೂನ್ಯಗಳಾದ ಗುಣಾದಿಗಳನ್ನು ಶರಣ್ಯನಿಗೆ ವಿಶೇಷಣವಾಗಿ ಒಪ್ಪುವಾಗ, ಭರಸ್ವೀಕಾರ ಸಹಿತ ರಕ್ಷಾ ಸಂಕಲ್ಪವನ್ನು ಮಾಡುವ ಲಕ್ಷ್ಮಿಗೆ ಶರಣ್ಯನೊಡನೆ ವಿಶೇಷಣತ್ವವನ್ನು ಏಕೆ ಒಪ್ಪುತ್ತಿಲ್ಲ. ಒಪ್ಪಲೇಬೇಕು, ಎಂದು ತಾತ್ಪರ್ಯ.

**ಐಕರಸ್ಯಜುಷೋಃ** ಇತ್ಯಾದಿ ಸರ್ವಕರ್ಮಸು–ಆಶ್ರಿತ ರಕ್ಷಣಾದಿ ಸರ್ವಕರ್ಮಗಳಲ್ಲಿಯೂ, ಐಕರಸ್ಯಜುಷೋಃ– ಸಮಾನ ಸಂಕಲ್ಪವನ್ನುಳ್ಳ ಶೇಷಿದಂಪತ್ಯೋಃ – ಶೇಷಿಗಳಾದ ಲಕ್ಷ್ಮೀನಾರಾಯಣರಿಗೆ, ಶ್ರುತಂ – ದ್ವಯಾದಿ ಮಂತ್ರಗಳಲ್ಲಿ ಶ್ರುತವಾಗಿರುವ ವಿಶೇಷಣ ವಿಶೇಷ್ಯತ್ವಂ – ವಿಶೇಷಣ ವಿಶೇಷ್ಯಭಾವವು ಕಸ್ಮಾನ್ನರೋಚತೇ – ಏಕೆರುಚಿಸುತ್ತಿಲ್ಲ. ರಕ್ಷಣಾದಿಗಳಲ್ಲಿ ಐಕರಸ್ಯಭಾವವು ಪೂರ್ವಖಂಡದಲ್ಲಿ ಲಕ್ಷ್ಮಿಗೆ ವಿಶೇಷಣತ್ವವನ್ನು ರೂಢಿಸುತ್ತದೆ. ಶೇಷಿದಂಪತ್ಯೋಃ – ಎಂಬುದು ಉತ್ತರ ಖಂಡದಲ್ಲಿ ವಿಶೇಷಣ ವಿಶೇಷ್ಯಭಾವವನ್ನು ರೂಢಿಸುತ್ತದೆ. **ಪ್ರತರ್ದನಾದಿವಿದ್ಯಾಸು** ಇತ್ಯಾದಿ – ಪ್ರತರ್ದನಾದಿ ವಿದ್ಯೆಗಳಲ್ಲಿ ಪರಮಾತ್ಮನು ಪ್ರಾಧಾನ್ಯವಾಗಿ ವೇದ್ಯನಾಗಿದ್ದರೂ ಅಚೇತನಗಳಾದ ಮುಖ್ಯ ಪ್ರಾಣಾದಿಗಳ ಹಾಗೆ ಚೇತನನಾದ ಇಂದ್ರನನ್ನೂ ಪರಮಾತ್ಮ ವಿಶೇಷಣವಾಗಿ ಒಪ್ಪುವಂತೆ, ಪ್ರಪತ್ತಿ ವಿದ್ಯೆಯಲ್ಲೂ ಆಯಾಯಾ ಮಂತ್ರಾನುಸಾರವಾಗಿ, ವಿಭುವಾದ ಸರ್ವೇಶ್ವರನು ಪತ್ನೀ ಗುಣ ವಿಶಿಷ್ಟನಾಗಿ ನಮಗೆ ವಿಷಯನಾಗುತ್ತಾನೆ. ಹೀಗೆ ಪ್ರತರ್ದನಾದಿ ವಿದ್ಯೆಗಳಲ್ಲಿ ಭಗವಂತನಿಗೆ ಚೇತನಾಂತರನಾದ ಇಂದ್ರನು ವಿಶೇಷಣವಾಗಿದ್ದರೂ ರಕ್ಷಾ ಸಂಕಲ್ಪರೂಪವಾದ ವ್ಯಾಪಾರಗಳನ್ನು ಮಾಡಲಾರ. ಹಾಗೆ ಲಕ್ಷ್ಮಿಯು ವಿದ್ಯೆಯಲ್ಲಿ ವೇದ್ಯಾಕಾರಕೋಟಿಯಲ್ಲಿ ಸೇರಿದ್ದರೂ, ರಕ್ಷಾ ಸಂಕಲ್ಪಾದಿ ರೂಪವ್ಯಾಪಾರವನ್ನು ಮಾಡಲಾರಳು, ಎಂದು ಹೇಳಿದರೇನು, ಎಂದು ಕೇಳುವವರಿಗೆ, **ಇತ್ಥಂಪ್ರಪತ್ತಿವಿದ್ಯಾಯಾಂ** ಎಂದಾರಂಭಿಸಿ ಸಮಾಧಾನವನ್ನು

**ಇಙ್ಗು ಕೇವಲ ಕುತರ್ಕಙ್ಗಳೈಯಿಟ್ಟು ಪ್ರಮಾಣಙ್ಗಳೈ ಬಾಧಿಕ್ಕಲಾಹಾದೆನ್ಱವಿಡಂ ಮುನ್ನೇ ಶೊನ್ನೋಮ್.**

**ಆಹೈಯಾಲ್ ಯಥಾಪ್ರಮಾಣಮ್ ಶರಣ್ಯಾಭಿಪ್ರಾಯಾನುಗುಣಮಾಹ ವಿಶಿಷ್ಟಮ್ ಉಪೇಯಮಾನಾರ್ಪೋಲೇ ವಿಶಿಷ್ಟಮ್ ಉಪಾಯಮಾಹಕ್ಕುಕ್ಕುರೈಯಿಲ್ಲೈ.**

---

ಆಚಾರ್ಯರು ಅನುಗ್ರಹಿಸುತ್ತಾರೆ. ಅದಾಗಿ – ಪ್ರತರ್ದನಾದಿ ವಿದ್ಯೆಗಳ ಹಾಗೆ ಪ್ರಪತ್ತಿವಿದ್ಯೆಯಲ್ಲಿಯೂ, ಆಯಾಯಾ ಮಂತ್ರಾನುಸಾರವಾಗಿ ವಿಭುವಾದ ಸ್ವಾಮಿಯು, ಪತ್ನೀಗುಣ ವಿಶಿಷ್ಟನಾಗಿ ನಮಗೆ ವಿಷಯ ಭೂತನಾಗುತ್ತಾನೆ. ಇದರ ತಾತ್ಪರ್ಯವೇನೆಂದರೆ ಭಗವಂತನೇ ಪ್ರಪತ್ತವ್ಯನು ಎಂದು ಹೇಳುವವರಿಗೆ, 1) ವಿಶೇಷಣ ಸಾಮಾನ್ಯವು ಅನಭಿಮತವೇ, 2) ಚೇತನ ರೂಪ ವಿಶೇಷಣ ಮಾತ್ರ ಅನಭಿಮತವೇ, 3) ನಿರುಪಯೋಗ ವಿಶೇಷಣವು ಅನಭಿಮತವೇ ? ಗುಣ ವಿಗ್ರಹಾದಿಗಳು ಅವಶ್ಯವಾಗಿ ವೇದ್ಯಾಕಾರವಾದ್ದರಿಂದ ಮೊದಲನೆಯ ಕಲ್ಪವು ಸರಿಯಲ್ಲ. ಎರಡನೆಯ ಕಲ್ಪದಲ್ಲಿ ಪ್ರತರ್ದನಾದಿ ವಿದ್ಯೆಗಳಲ್ಲಿ ಚೇತನನು ವಿಶೇಷಣವಾಗಿರುವಂತೆ ಪ್ರಪತ್ತಿಯಲ್ಲಿಯೂಯಥಾ ಪ್ರಮಾಣ ಲಕ್ಷ್ಮಿಯು ವಿಶೇಷಣವಾಗಿರುವುದು ನಿವಾರಿಸಲಾಗದು. ಮೂರನೆಯ ಕಲ್ಪದಲ್ಲಿ ಮಂತ್ರವರ್ಣದಿಂದ ಲಕ್ಷ್ಮಿಯ ವಿಶೇಷಣತ್ವಕ್ಕೆ ಉಪಯೋಗವನ್ನು ತಿಳಿಸುವುದರಿಂದ, ಉಪಯೋಗದಿಂದ ಕೂಡಿದ ವಿಶೇಷಣ ವಿಶಿಷ್ಟತ್ವವು ಪ್ರಪತ್ತಿವಿದ್ಯಾವೇದ್ಯಾಕಾರವಾದ್ದರಿಂದ ಅದನ್ನು ಬಿಡುವುದು ಪ್ರಮಾಣ ಶರಣರಿಗೆ ಅಶೋಭನ. ಸೋಪಯೋಗವಾದ ಈ ಚೇತನಾಂತರವು ವಿಶೇಷಣವೆಂಬುದು **ತತ್ತನ್ಮಂತ್ರಾನುಸಾರತಃ** ಎಂದು ಸಂಗ್ರಹಿಸಲ್ಪಡುತ್ತದೆ. ಲಕ್ಷ್ಮಿಗೆ ಶೃಣಾತಿ, ಶ್ರೀಣಾತಿ ಎಂಬವ್ಯುತ್ಪತ್ತಿಗಳಿಂದ ಪ್ರತಿಪನ್ನವಾದ, ಉಪಾಯತ್ವ ಪ್ರಾಪ್ಯತ್ವಗಳು, "ವೇರಿಮಾರಾದ ಪೂಮೇಲಿರುಪ್ಪಾಳ್ ವಿನೈ ತೀರ್ಕ್ಕುಮೇ" (ಪರಿಮಳದಿಂದ ಕೂಡಿದ ಪುಷ್ಪವಾಸಿನಿಯಾದ ಲಕ್ಷ್ಮಿಯು ಸಕಲ ಪಾಪಗಳನ್ನೂ ಹೋಗಲಾಡಿಸುತ್ತಾಳೆ) ನಿನ್ ತಿರುವರುಳುಂ, ಪಂಗಯತ್ತಾಳ್ ತಿರುವರುಳುಂ ಕೊಂಡು ನಿನ್‌ಕೋಯಿಲ್ ಶೀಯ್ತ್ತು," (ನಿನ್ನ ಮತ್ತು ಪಂಕಜವಾಸಿನಿಯ ಶ್ರೀಮತ್ಕೃಪೆಯನ್ನು ಅವಲಂಬಿಸಿ ನಿನ್ನ ದೇವಸ್ಥಾನದಲ್ಲಿ ಕೈಂಕರ್ಯ ಮಾಡಿ) ಎಂಬ ಆಳ್ವಾರ್ ಶ್ರೀ ಸೂಕ್ತಿಗಳಿಂದ ವ್ಯಕ್ತಪಡಿಸಲ್ಪಟ್ಟಿವೆ. ಆದ್ದರಿಂದ ಉಪಾಯತ್ವ ಪ್ರಾಪ್ಯತ್ವಗಳೇ ಉಪಯೋಗಗಳು. ಈ ಉಪಯೋಗಗಳಿಂದ ಕೂಡಿದ ಲಕ್ಷ್ಮೀ ವಿಶಿಷ್ಟನು ಉಪಾಯೋಪೇಯ ಭೂತನಾಗಿ ಪ್ರಪತ್ತಿವಿದ್ಯಾವೇದ್ಯಾಕಾರನು ಎಂಬುದು ಸಿದ್ಧಾಂತ.

### ಲಕ್ಷ್ಮೀವಿಶಿಷ್ಟನು ಉಪಾಯ

**ಇಂಗು ಕೇವಲ ಕುತರ್ಕಂಗಳೈಯಿಟ್ಟು** ಇತ್ಯಾದಿ ವಿಷಯದಲ್ಲಿ ಕೇವಲ ಕುತರ್ಕಗಳನ್ನು ಇಟ್ಟುಕೊಂಡು ಪ್ರಮಾಣಗಳನ್ನು ಬಾಧಿಸಲಾಗದು ಎಂಬುದನ್ನು ಮುಂಚೆಯೇ ಹೇಳಿದ್ದೇವೆ. **ಆಹೈಯಾಲ್** ಇತ್ಯಾದಿ–ಆದ್ದರಿಂದ ಪ್ರಮಾಣಾನುಸಾರವಾಗಿ ಶರಣ್ಯನ ಅಭಿಪ್ರಾಯ ವಿಶೇಷಾನುಗುಣವಾಗಿ ಅಂದರೆ, "ಅನನ್ಯಾರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ" – ಭಾಸ್ಕರನಿಗೂ ಅವನ ಪ್ರಭೆಗೂ ಅನನ್ಯತ್ವವು ಇರುವಂತೆ, ನಾನು (ಸೀತೆ) ರಾಮನನ್ನು ಬಿಟ್ಟಿರಲಾರೆ. ಪೃಥಕ್ ಸ್ಥಿತ್ಯನರ್ಹಳು "ಅನನ್ಯಾಹಿ ಮಯಾಸೀತಾ ಭಾಸ್ಕರೇಣ ಪ್ರಭಾಯಥಾ" ಸೂರ್ಯನ ಪ್ರಭೆಯಂತೆ ಸೀತೆಯು ನನ್ನನ್ನು (ರಾಮಚಂದ್ರನನ್ನು) ಬಿಟ್ಟಿರಲಾರಳು – ಪೃಥಕ್ ಸ್ಥಿತ್ಯನರ್ಹಳು. "ನಿತ್ಯಂತದ್ಧರ್ಮ ಧರ್ಮಿಣೀ" ಇತ್ಯಾದಿ ಪ್ರಮಾಣ ಸಂಪ್ರತಿಪನ್ನರಾದ, ಶರಣ್ಯರಾದ ಲಕ್ಷ್ಮೀ ನಾರಾಯಣರ ಅಭಿಪ್ರಾಯ ವಿಶೇಷಾನುಗುಣವಾಗಿ **ವಿಶಿಷ್ಟಮ್** – ಲಕ್ಷ್ಮೀ ವಿಶಿಷ್ಟನಾರಾಯಣನು **ಉಪೇಯ**–ಪ್ರಾಪ್ಯನಾದಂತೆ, **ವಿಶಿಷ್ಟಮ್**– ಲಕ್ಷ್ಮೀ ವಿಶಿಷ್ಟ ನಾರಾಯಣನು **ಉಪಾಯಮಾಹ** – ಉಪಾಯವಾಗಿರಲು, ಯಾವ ಬಾಧಕವೂ ಇಲ್ಲ.

### ಉಪಾಯ ದ್ವಿತ್ವವಾದ ನಿರಾಸಃ

ನಾರಾಯಣ ಶಬ್ದತ್ತಿಲುಮ್ ಚರಣ ಶಬ್ದತ್ತಿಲುಮ್ ತೋಟ್ರುಹಿರ ಗುಣ ವಿಶೇಷ ವಿಗ್ರಹ ವಿಶೇಷಾದಿ ವಿಶಿಷ್ಟನಾನ ಏಕನ್ ಉಪಾಯಮಾನಾಪ್ಪೋಲೇ ತುಲ ಯೋಗಕ್ಷೇಮಮಾನ ಶ್ರೀಮಚ್ಛಬ್ದತ್ತಿಲ್ ತೋತ್ತಿನ ನಿತ್ಯಪತ್ನೀ ಸಂಬಂಧ ವಿಶಿಷ್ಟಮಾನಾಲುಮ್ ಉಪಾಯೈಕ್ಯತ್ತುಕ್ಕುಕ್ಕುರೆಯಿಲ್ಲೈ.

ಉಪಾಯ ವಿಶೇಷಣಙ್ಗಳೈ ಎಲ್ಲಾಮ್ ವಿಟ್ಟು ಉಪಾಯತ್ತೈ ಏಕಮಾಕ್ಕವೇಣುಮೆನ್ನಿಲ್ ಉಪಾಯತ್ವಮ್ ವಿಶೇಷಣಮನ್ರಿಕ್ಕೇಪೋಮ್.

### ಶ್ರೀ ಸಂಬಂಧೇನ ವೈಗುಣ್ಯಮಿತಿ ವಾದಸ್ಯ ನಿರಾಸಃ

ವಿಶೇಷಣ ಪ್ರಯುಕ್ತಮಾಯ್ ವಿಶೇಷ್ಯತ್ತುಕ್ಕುವರುಮ್ ಏತ್ತತ್ತಾಲ್ ವಿಶೇಷ್ಯತ್ತುಕ್ಕು ವೈಗುಣ್ಯಾದಿಗಳ್ ವಾರಾದೆನ್ನು

1) ಸ್ವತಶ್ಶ್ರೀಸ್ತ್ವಂ ವಿಷ್ಣೋಸ್ಸ್ವಮಸಿ ತತ ಏವೈಷ ಭಗವಾನ್ ತ್ವದಾಯತ್ತರ್ದ್ಧಿತ್ವೇಪ್ಯಭವದ ಪರಾಧೀನ ವಿಭವಃ ।
ಸ್ವಯಾದೀಪ್ತ್ಯಾ ರತ್ನಂ ಭವದಪಿ ಮಹಾರ್ಘಂ ನವಿಗುಣಂ ನ ಕುಂಠ ಸ್ವಾತಂತ್ರ್ಯಂ ಭವತಿಚ ನ ಚಾನ್ಯಾಹಿತಗುಣಮ್"

ಎನ್ನಿರ ಶ್ಲೋಕತ್ತಿಲೇ ನಿರ್ಣಯಿಕ್ಕಪ್ಪಟ್ಟದು.

---

### ಲಕ್ಷ್ಮಿಯೂ ಉಪಾಯವಾದರೂ ಉಪಾಯವು ಒಂದೇ ಎಂಬ ಸಿದ್ಧಾಂತಕ್ಕೆ ಬಾಧಕವಿಲ್ಲ.

ಹೀಗೆ ಲಕ್ಷ್ಮಿಗೆ ಉಪಾಯತ್ವವನ್ನು ಅಂಗೀಕರಿಸಿದರೆ, "ಮಾಮೇಕಂ ಶರಣಂವ್ರಜ" ಎಂದು ಹೇಳುವ ಉಪಾಯೈಕ್ಯಕ್ಕೆ ಹಾನಿಯುಂಟಾಗಲಾರದೇ ಎಂಬ ಶಂಕೆಗೆ **ನಾರಾಯಣ ಶಬ್ದತ್ತಿಲುಮ್** ಎಂದಾರಂಭಿಸಿ ಪರಿಹರಿಸುತ್ತಾರೆ. ಅದಾಗಿ ನಾರಾಯಣ ಶಬ್ದದಲ್ಲಿರುವ ನಾರವೆಂಬ ಪದವು, "ನರಸಂಬಂಧಿನೋನಾರಾಃ, ಎಂಬ ವ್ಯುತ್ಪತ್ತಿಯಿಂದ' ನರ ಶಬ್ದನಾದ ಪುರುಷೋತ್ತಮನ ಗುಣಗಳನ್ನು ತಿಳಿಸುತ್ತದೆ. ಹಾಗೆಯೇ "ಚರಣ" ಶಬ್ದವು, ಚರಣ ಶಬ್ದೋಪಲಕ್ಷಿತವಾದ ವಿಗ್ರಹವನ್ನು ತಿಳಿಸುತ್ತದೆ. ಹೀಗೆ "ನಾರಾಯಣ" ಮತ್ತು 'ಚರಣ' ಶಬ್ದಗಳಲ್ಲಿ, **ತೋಟ್ರುಹಿರ**–ತಿಳಿಯಲ್ಪಡುವ ಗುಣ ವಿಶೇಷ ವಿಗ್ರಹವಿಶೇಷದಿಂದ ಕೂಡಿದ, **ಏಕನ್**–ಒಂದು ತತ್ವವು (ನಾರಾಯಣನು)ಉಪಾಯವಾದಂತೆ, **ಶ್ರೀಮಚ್ಛಬ್ದತ್ತಿಲ್** – ಇತ್ಯಾದಿ "ಶ್ರೀಮತ್" ಎಂಬ ಶಬ್ದದಲ್ಲಿ ವಿಶೇಷಣವಾಗಿ ತೋರುವ ನಿತ್ಯ ಪತ್ನೀ ಸಂಬಂಧ ವಿಶಿಷ್ಟನಾದರೂ. ಉಪಾಯೈಕ್ಯಕ್ಕೆ ಬಾಧಕವಿಲ್ಲ. ಭಾಸ್ಕರನಿಗೂ ಅವನ ಪ್ರಭೆಗೂ ಇರುವ ಸಂಬಂಧದಂತೆ ಎಂಬ ದೃಷ್ಟಾಂತದಲ್ಲಿಯೂ ಲಕ್ಷ್ಮೀವಿಶಿಷ್ಟನಾರಾಯಣನೆಂಬ ದಾರ್ಷ್ಟಾಂತಿಕದಲ್ಲಿಯೂ, ಉಪಾಯಕ್ಕೆ ವಿಶೇಷಣವಿದ್ದರೆ ಉಪಾಯೈಕ್ಯವು ಘಟಿಸುವುದಿಲ್ಲವೆಂದರೆ, **ಉಪಾಯ ವಿಶೇಷಣಂಗಳೈ** ಇತ್ಯಾದಿ ಉಪಾಯ ಭೂತನಾದ ಶರಣ್ಯನಿಗೆ ವಿಶೇಷಣಗಳಾದ ಗುಣ ವಿಗ್ರಹಾದಿಗಳನ್ನೆಲ್ಲಾ ಬಿಟ್ಟು, ಉಪಾಯವನ್ನು ಏಕವನ್ನಾಗಿ ಹೇಳಬೇಕಾಗಿ ಉಪಾಯತ್ವವು ನಿರ್ವಿಶೇಷವಾಗುವ ಪ್ರಸಂಗವು ಏರ್ಪಡುತ್ತದೆ. **ವಿಶೇಷಣ ಪ್ರಯುಕ್ತಮಾಯ್** ಇತ್ಯಾದಿ. ಹೀಗೆ ಲಕ್ಷ್ಮೀ ವಿಶೇಷಣ ವಿಶಿಷ್ಟತ್ವನ್ನು ಅಂಗೀಕರಿಸಿದರೆ, ತತ್ಪ್ರಯುಕ್ತವಾಗಿ ವಿಶೇಷ್ಯಕ್ಕೆ–ನಾರಾಯಣನಿಗೆ **ವೈಗುಣ್ಯಾದಿಹಳ್**–ಗುಣಹಾನಿಯೂ ಸ್ವಾತಂತ್ರ್ಯಹಾನಿಯೂ ಬರುವುದಿಲ್ಲವೆಂದು, 1) **ಸ್ವತಶ್ಶ್ರೀಸ್ತ್ವಂ ವಿಷ್ಣೋಸ್ಸ್ವಮಸಿ** ಎಂಬ ಶ್ಲೋಕದಲ್ಲಿ ನಿರ್ಣಯಿಸಲ್ಪಟ್ಟಿದೆ. ಅದಾಗಿ ಲಕ್ಷ್ಮಿಯು ಸ್ವೇಚ್ಛೆಯಿಂದ ಭಗವಂತನ ಸ್ವತ್ತಾಗಿದ್ದಾಳೆ–

---

1) ಶ್ರೀಗುಣ ರತ್ನಕೋಶ-31

ಏವಂ ಲೋಕ ಪಿತರೌ ವಿಶೇಷಣ ವಿಶೇಷ್ಯಭಾವೇನ ಪರಸ್ಪರಾತಿಶಯಾವಹೌ.

ವಿಶೇಷಣತ್ತಾಲ್ ವಿಶೇಷ್ಯತ್ತುಕ್ಕು ವರುಮ್ ಅತಿಶಯಮ್ ಪೋಲೇ ವಿಶೇಷ್ಯತ್ತುಕ್ಕು ಸ್ವರೂಪಾನು ಬಂಧಿಯಾನ ಅತಿಶಯಮುಮ್ 2) "ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ" ಎನ್ಗಿರ ದೃಷ್ಟಾನ್ತತ್ತಿಲೇ ಕಾಣಲಾಮ್. ಭಾಸ್ಕರನುಕ್ಕುಮ್ ಪ್ರಭೈಕ್ಕುಮ್ ಸ್ವತಸಿದ್ಧಮಾನ ತೇಜಸ್ಸ್ವಪ್ಪೋಲೇ ಇರುವರುಕ್ಕುಮ್ 1) "ಅನನ್ಯಾಧೀನ ಕಲ್ಯಾಣಂ" ಎನ್ಗಿರ ಪಡಿಯೇ ಸ್ವಭಾವ ಸಿದ್ಧ ಕಲ್ಯಾಣತ್ತೈಯಾಲೇ 2) "ಅಪ್ರಮೇಯಂ ಹಿತತ್ತೇಜೋ ಯಸ್ಯಸಾ ಜನಕಾತ್ಮಜಾ" ಎನ್ರುಮ್, 3) ತವಶ್ರಿಯಾ" ಎನ್ರುಮ್,

4) "ಉನ್ತಿರು" ಎನ್ರುಮ್,

5) "ಶ್ರಿಯಶ್ಶ್ರೀಃ" ಎನ್ರುಮ್.

6) "ತಿರುವುಕ್ಕುಮ್ ತಿರು" ಎನ್ರುಮ್, ಅನ್ಯೋನ್ಯಾತಿಶಯಾವಹಙ್ಗಳಾಹ ವಿಶೇಷಣ ವಿಶೇಷ್ಯಙ್ಗಳೈ ನಿರ್ದೇಶಿಕ್ಕಿರದರ್ಕುಮ್ ಕುರೈಯಿಲ್ಲೈ.

---

ಶೇಷಭೂತೆ. ಅದರಿಂದಲೇ ಭಗವಂತನು ಲಕ್ಷ್ಮ್ಯಧೀನವಾದ ಸಂಪತ್ಸಮೃದ್ಧಿಗಳಿಂದ ಕೂಡಿದ್ದಾಗ್ಯೂ, ಪರಾಧೀನವಾದ ಐಶ್ವರ್ಯವುಳ್ಳವನಾಗನು. ತನ್ನ ದೀಪ್ತಿ ತನಗೆ ಶೇಷಭೂತವಾದ ಕಾಂತಿಯಿಂದ ರತ್ನಕ್ಕೆ ಮಹತ್ತಾದ ಬೆಲೆಯುಂಟಾಗಿ ಅದಕ್ಕೆ ಗುಣಹಾನಿಯಿಲ್ಲ. ಸ್ವಾತಂತ್ರ್ಯಹಾನಿಯೂ ಇಲ್ಲವಲ್ಲವೇ. ತನ್ನಕಾಂತಿಯಿಂದ ತನಗೆ ಅಧಿಕ ಬೆಲೆ ಏರ್ಪಡುವುದು ಅನ್ಯಾಹಿತ–ಇತರರಿಂದ ಉಂಟಾದ ಗುಣವಾಗುವುದಿಲ್ಲವಲ್ಲವೇ. ಹಾಗೆಯೇ ತನಗೆ ಶೇಷ ಭೂತಳಾದ ಲಕ್ಷ್ಮೀ ವಿಶೇಷಣ ವಿಶಿಷ್ಟ ಸಂಬಂಧದಿಂದ ಭಗವಂತನಿಗೆ ಅನ್ಯಾಧೀನ ವೈಭವವು ಉಂಟಾಗುವುದಿಲ್ಲ. **ವಿಶೇಷಣತ್ತಾಲ್**–ಇತ್ಯಾದಿ ವಿಶೇಷಣದಿಂದ ವಿಶೇಷ್ಯಕ್ಕೆ ಉಂಟಾಗುವ ಅತಿಶಯದಂತೆ, ವಿಶೇಷ್ಯಕ್ಕೆ **ಸ್ವರೂಪಾನು ಬಂಧಿಯಾನ**–ಸ್ವರೂಪ ಸಿದ್ಧವಾದ ಅತಿಶಯವೂ, 2) **ಅನನ್ಯಾರಾಘವೇಣಾಹಂ**–ಎಂಬ ಶ್ಲೋಕದಂತೆ, ಪ್ರಭೆಗೂ ಸೂರ್ಯನಿಗೂ ಇರುವ ಅತಿಶಯದಂತೆ ಇದ್ದೇ ಇದೆ. ಇದನ್ನು ಸೂರ್ಯನ ಮತ್ತು ಅವನ ಪ್ರಭೆಯ ದೃಷ್ಟಾಂತದಿಂದ ತಿಳಿಯಬಹುದು, ಸೂರ್ಯನಿಗೆ ಸ್ವರೂಪ ಸಿದ್ಧವಾದ ಪ್ರಕಾಶವು ಇರುವಂತೆ ಶ್ರೀರಾಮ ಚಂದ್ರನಿಗೂ ಸ್ವರೂಪಸಿದ್ಧವಾದ ಅತಿಶಯವು ಇದ್ದೇ ಇದೆ ಎಂದು ತಾತ್ಪರ್ಯ. **ಭಾಸ್ಕರನುಕ್ಕುಂಪ್ರಭೈಕ್ಕುಂ** ಇತ್ಯಾದಿ– ಭಾಸ್ಕರನಿಗೂ ಅವನ ಪ್ರಭೆಗೂ ಸ್ವತಸ್ಸಿದ್ಧವಾದ ತೇಜಸ್ಸು ಇರುವಂತೆ, 1) **ಅನನ್ಯಾಧೀನಕಲ್ಯಾಣಂ** ಎಂಬಂತೆ ಸ್ವಭಾವ ಸಿದ್ಧವಾದ **ಕಲ್ಯಾಣತೆ**–ಮಂಗಳ ಗುಣಗಳಿಂದ 2) **"ಅಪ್ರಮೇಯಂಹಿತತ್ತೇಜಃ"** ಆ ಶ್ರೀರಾಮಚಂದ್ರನೆಂಬ ತೇಜಸ್ಸು ಅಪ್ರಮೇಯವು ಅಳತೆ ಮಾಡಲಾಗುವುದಿಲ್ಲ. ನಿರವಧಿಕವಾದದ್ದು, ಸಾಜನಕಾತ್ಮಜಾಯಸ್ಯ–ಆ ಜನಕನ ಮಗಳಾದ ಸೀತೆಯು ಯಾವ ರಾಮಚಂದ್ರನಿಗೆ ಶೇಷಭೂತೆಯೋ, ಎಂದು ವಿಶೇಷ್ಯಕ್ಕೆ ವಿಶೇಷಣಾಧೀನವಾದ ಅತಿಶಯವು ಹೇಳಲ್ಪಟ್ಟಿತು. 3) **ತವಶ್ರಿಯಾ**–ನಿನ್ನ ಲಕ್ಷ್ಮಿ ಎಂದು ವಿಶೇಷಣಕ್ಕೆ (ಲಕ್ಷ್ಮಿಗೆ) ವಿಶೇಷ್ಯ (ನಾರಾಯಣನ) ಅಧೀನವಾದ ಅತಿಶಯವು ಹೇಳಲ್ಪಟ್ಟಿತು. 4) "**ಉನ್ತಿರು**" 5) ಶ್ರಿಯಃ ಶ್ರೀಃ 6) **ತಿರುವುಕ್ಕುಂತಿರು** ಎಂಬ ಸ್ಥಳಗಳಲ್ಲಿಯೂ ವಿಶೇಷಣಕ್ಕೆ ವಿಶೇಷ್ಯಾಧೀನ ಮಹಿಮೆಯು ಹೇಳಲ್ಪಟ್ಟಿದೆ. ಇದರಿಂದ ಇಬ್ಬರಿಗೂ ಸರ್ವೇಶ್ವರತ್ವಾದಿ ಮಹಿಮೆಗಳು ಸ್ವಾಭಾವಿಕವು ಐಕರಸ್ಯಭಾವದಿಂದ ವಿಶಿಷ್ಟೈಕ್ಯತತ್ತ್ವವಾಗಿದ್ದಾರೆ. **ಅನ್ಯೋನ್ಯಾತಿಶಯಂಗಳಾಹ** ಹೀಗೆ ಪರಸ್ಪರ

---

2) ರಾಮಾಯಣ ಸುಂದರಕಾಂಡ21-15

1) ಅನನ್ಯಾಧೀನ ಕಲ್ಯಾಣಂ ಅನನ್ಯಮಂಗಳ ಕಾರಣಮ್ ।
ಜಗನ್ನಿದಾನ ಮಮ್ನೀವ್ವಂ ದ್ವಂದ್ವಂಪರಾಮಮೇವಯಮ್ ॥ -ಲಕ್ಷ್ಮೀ ಕಲ್ಯಾಣಮ್ ಪ್ರ.1. ಶ್ಲೋ.

ಅನನ್ಯಾಧೀನವಲ್ಲದ- ಇತರರಿಂದ ಉಂಟಾಗದೆ ಸ್ವಾಭಾವಿಕವಾದ ಮಂಗಳ ಗುಣದಿಂದ ಕೂಡಿದವರು. ಇತರರಿಗೆ ಮಂಗಳವನ್ನುಂಟು ಮಾಡುವವರು. ಜಗತ್ತಿಗೆ ಕಾರಣಭೂತರು. ತಮ್ಮಗಳಿಗೆ ಸಮಾನರಿಲ್ಲದವರು ಲಕ್ಷ್ಮೀ ನಾರಾಯಣಾರಾದ ದ್ವಂದ್ವವನ್ನು (ಇಬ್ಬರನ್ನು) ನಾವು ನಮಸ್ಕರಿಸುತ್ತೇವೆ.

2) ಅಪ್ರಮೇಯಂ ಹಿತತ್ತೇಜೋಯಸ್ಯಸಾಜನಕಾತ್ಮಜಾ ।
ನತ್ವಂ ಸಮರ್ಥಸ್ತಾಂ ಹರ್ತುಂ ರಾಮಚಾಪಾಶ್ರಯಾಂವನೇ ॥ ರಾಮಾ 3-37-18

ಜನಕರಾಜನ ಮಗಳಾದ ಸೀತೆಯವಲ್ಲಭನಾದ ಶ್ರೀ ರಾಮ ಚಂದ್ರನೆಂಬ ತೇಜಸ್ಸು ಅಪ್ರಮೇಯವು-ನಿರತಿಶಯವಾದದ್ದು. ರಾಮನ ಬಾಣ ಬಲವನ್ನು ಆಶ್ರಯಿಸಿರುವ ಆ ಸೀತೆಯನ್ನುನೀನು ಅಪಹರಿಸಲು ಸಮರ್ಥನಲ್ಲ. (ಮಾರೀಚನು ರಾವಣನಿಗೆ ಹೇಳುವ ಮಾತು ಇದು)

3) ಸ್ವವೈಶ್ವರೂಪ್ಯೇಣ ಸದಾನುಭೂತಯಾಪ್ಯ ಪೂರ್ವವದ್ವಿಸ್ಮಯ ಮಾದಧಾನಯಾ ।
ಗುಣೇನ ರೂಪೇಣ ವಿಲಾಸ ಚೇಷ್ಟಿತೈಃ ಸದಾತವೈವೋಚಿತಯಾ ತವ ಶ್ರಿಯಾ ॥

ಆಳ ಸ್ತೋತ್ರ (38) ತನ್ನ ವಿಶ್ವ ಪರಿಕತ್ವಾದಿ ರೂಪದಿಂದ, ಅಥವಾ ಸ್ವರೂಪಾದಿ ಸರ್ವಾಕಾರದಿಂದ, "ಶಾಂತಾನಂತ ಮಹಾ ವಿಭೂತಿ ಪರಮಂ" ಎಂಬ ಶ್ಲೋಕದಲ್ಲಿ ಅನುಸಂಧಾನ ಮಾಡಿರುವಂತೆ ಭಗವಂತನ ಸ್ವರೂಪ, ವಿಗ್ರಹ, ವಿಭವಾವತಾರಾದಿಗಳಲ್ಲಿ ತನ್ನ ಸ್ವರೂಪ, ರೂಪ (ವಿಗ್ರಹ) ವಿಭವಾವತಾರಾದಿಗಳಿಂದ ಗಾಢೋಪಗೂಢಳಾಗಿ ಇಂದರೆ ಗಾಢಾಲಿಂಗನದಿಂದ ಕೂಡಿದವಳಾಗಿ ಸದಾನುಭವಿಸಲ್ಪಟ್ಟರೂ, ಹಿಂದೆ ಅನುಭವಿಸದ ರೀತಿಗಿಂತ ನೂತನವಾದ ವಿಸ್ಮಯವನ್ನುಂಟು ಮಾಡುವ ನವನವಾನುಭವದಿಂದ ಅನವಧಿಕ ಪ್ರೀತಿ ವಿಶೇಷವನ್ನುಂಟು ಮಾಡುವವಳಾಗಿ, ಗುಣದಿಂದಲೂ, ಸೌಂದರ್ಯೋಪೇತವಾದ ಅಪ್ರಾಕೃತಾಖಿಲ ಜಗನ್ಮಾತೃತ್ವಾಭಿವ್ಯಂಜಕ ವಿಗ್ರಹದಿಂದಲೂ, ಭಗವದಭಿಮತ ಲೀಲಾವಿಶೇಷಗಳಿಂದಲೂ ಆಶ್ರಿತ ರಕ್ಷಣಾವತಾರಾದಿಗಳಿಂದಲೂ, ನಿನಗೆ ಉಚಿತಳಾದ ನಿನ್ನ ಲಕ್ಷ್ಮಿ-ಅಂಥಹ ಲಕ್ಷ್ಮಿಯಿಂದ ಕೂಡಿದ ಭಗವಂತನೆಂದು ಉತ್ತರ ಶ್ಲೋಕದೊಡನೆ ಅನ್ವಯ.

4) ಮಾಯಂಶೆಯ್ಯೇಲೆನ್ನೈ, ಉನ್ ತಿರು, ಮಾರ್ವತ್ತು ಮಾಲೈನಂಗೈ
ವಾಶಂಶೆಯ್ ಪೂಂಗುೞಲಾಳ್ ತಿರುವಾಣೈ ನಿನ್ನಾಣೈ ಕಂಡಾಯ್ ತಿರುವಾಯ್‌ಮೊೞಿ 10-10-2

ನನಗೆ ಮೋಸ ಮಾಡಬೇಡ, ನಿನ್ನವಳಾದ ಲಕ್ಷ್ಮಿ, ನಿನ್ನೆದೆಗೆ ಮಾಲೆಯಂತಿರುವವಳು, ಪರಿಪೂರ್ಣ, ಪರಿಮಳದಿಂದ ಕೂಡಿದ ಹೂಗಳನ್ನು ಮುಡಿಸಿರುವ ಕೇಶಪಾಶವನ್ನುಳ್ಳ ಮಹಾಲಕ್ಷ್ಮಿಯ ಮೇಲೆ ಆಣೆ, ನಿನ್ನ ಮೇಲೆ ಆಣೆ. ನನ್ನನ್ನು ನಿನ್ನಲ್ಲಿಗೆ ಬರಮಾಡಿಕೋ. ಕೈಬಿಡಬೇಡ,

5) ಶ್ರಿಯಃ ಶ್ರೀಃ ಶ್ರೀರಂಗೇಶಯ ತವಚಹೃದ್ಯಾಂ ಭಗವತೀಂ
ಶ್ರಿಯಂತ್ವತ್ತೋಪ್ಯುಚ್ಚೈರ್ವಯಮಿಹ ಫಣಾಮ ಶ್ರುಣುತರಾಮ್ ।
ದೃಶೌತೇಭೂಯಸ್ತಾಂ ಸುಖತರಳತಾರೇ ಶ್ರವಣತಃ
ಪುನರ್ಹರ್ಷೋತ್ಕರ್ಷಾತ್ ಸ್ಫುಟತು ಭಜಯೋಃ ಕಂಚುಕಶತಮ್ ॥

ಲಕ್ಷ್ಮಿಗೂ ಸಂಪತ್ಕರನಾದ ರಂಗನಾಥನೇ, ನಿನ್ನ ಮನಸ್ಸಿಗೂ ಪ್ರಿಯಳಾದ ಜ್ಞಾನಬಲೈಶ್ವರ್ಯ ವೀರ್ಯ ಶಕ್ತಿ ತೇಜಸ್ಸೆಂಬ ಆರು ಗುಣಗಳಿಂದ ಕೂಡಿದೆ ಲಕ್ಷ್ಮಿಯನ್ನು ನಿನಗಿಂತಲೂ ಮೇಲಾದವಳೆಂದು ಹೇಳುತ್ತೇವೆ. ಚನ್ನಾಗಿ ಕೇಳು. ನಿನ್ನ ಕಣ್ಣುಗಳು ಅಗಲವಾಗಿ ಅರಳಲಿ. ಈ ಮಾತನ್ನು ಕೇಳಿದರಿಂದ ನಿನಗೆ ಮೊದಲಗಿಂತಲೂ ಅಧಿಕ ಹರ್ಷವು ಉಂಟಾಗಿ ಮೈಯ್ಯಲ್ಲಿ ನೀನು ಧರಿಸಿರುವ ಮತ್ತು ಮೇಲೆ ಮೇಲೆ ಧರಿಸುವ ನೂರು ಅಂಗಿಗಳೂ ಹರಿದುಹೋಗಲ್ಲ.

6) ತಿರುವುಕ್ಕುಮ್ ತಿರುವಾಹಿಯ ಶೆಲ್ವಾ ದೈಯ್ವತ್ತುಕ್ಕರಶೇ ಶೆಯ್ಯಕಣ್ಣಾ,
ಉರುವಚ್ಚೆಂಡುರ್ ಆೞಿವಲ್ಲಾನೇ ಉಲಹುಂಡಜರುವಾ ತಿರುವಮಾರ್ಬಾ,
ಒರುವರ್‌ಕಾಟ್ಟಿಯುಯ್ಯುಮ್ ವಹೈಯಿನ್ನಾಲ್ ಉಡನಿನ್ರೈವರ್ ಎನ್ನುಳ್‌ಪುಹುಂದು ಒೞಿಯಾದು
ಅರುವಿತ್ತಿನ್ನಿಡ ಅಂಜಿನಿನ್ನಡೈಂದೇನ್ ಆೞುಂದೂರ್ ಮೇಲ್ ತಿಶೈನಿನ್ರವಮ್ಮಾನೇ (ಪೆರಿಯ ತಿರು. 7-7-1)

ಲಕ್ಷ್ಮಿಗೂ ಲಕ್ಷ್ಮಿಕರನಾದ ಸಂಪತ್ಸಮೃದ್ಧನೇ, ದೇವದೇವನೇ, ಕೃಪಾಪೂರಿತ ಕಟಾಕ್ಷದಿಂದ ಕೂಡಿದವನೇ, ಜ್ಯೋತಿ ಸ್ವರೂಪವಾದ ಚಕ್ರಾಯುಧ ಧರನೇ, ಲೋಕವನ್ನು ಪ್ರಳಯದಲ್ಲಿ ನುಂಗಿದವನೇ, ಲಕ್ಷ್ಮೀವಕ್ಷ ಸ್ಥಲಸ್ಥನೇ ಒಬ್ಬರೇ ತಮ್ಮ ಪರಾಕ್ರಮವನ್ನು ತೋರಿಸಿದರೆ

## ಲಕ್ಷ್ಮ್ಯಾಃ ವಿಶೇಷತ್ವ ಸಮರ್ಥನೇ ಪ್ರಧಾನ ಫಲವಾಹ.

**ಶ್ರುತಿಬಲತ್ತಾಲೇ 1) ದ್ವ್ಯಾಚ ಸದೈಕಶೇಷೀ" ಎನ್ದಿರಪಡಿಯೇ, 2) ಉಭಯಾಧಿಷ್ಠಾನಂ ಚೈಕಂ ಶೇಷಿತ್ವಂ ಎನ್ರುಮ್ ಶೋಮಾಶಿಯಾಂಡಾನ್ ಷಡರ್ಥ ಸಂಕ್ಷೇಪತ್ತಿಲೇ ನಿಷ್ಕರ್ಷಿತ್ತ ಪಡಿಯೇ ಇರುವರುಮ್ ಏಕ ಶೇಷಿತ್ವಾಶ್ರಯ ಮಾನ ಪಡಿಯಾಲೇ, ಹವಿರ್ವಿಶೇಷಙ್ಗಳಿಲೇ ಅಗ್ನಾವಿಷ್ಣು ಪ್ರಭೃತಿಹಳುಕ್ಕುಪ್ಪೋಲೇ ಆತ್ಮಹವಿಸ್ಸಮರ್ಪಣ ಪ್ರತಿಸಂಬಂಧಿಗಳಾಹೈಕ್ಕುಮ್। ಕುರೈಯಿಲ್ಲೈ.**

---

ಅತಿಶಯವನ್ನುಂಟು ಮಾಡುವುದಾಗಿ, ವಿಶೇಷಣ ವಿಶೇಷ್ಯಗಳನ್ನು ನಿರ್ದೇಶಿಸುವುದರಿಂದ ಯಾವ ಲೋಪವೂ ಇಲ್ಲ. ಸ್ವತಸ್ಸಿದ್ಧಾತಿಶಯಗಳಿಂದ ಕೂಡಿದ ವಸ್ತುಗಳಿಗೆ ಧರ್ಮಧರ್ಮಿಭಾವದಿಂದ ಪರಸ್ಪರಾತಿಶಯವನ್ನುಂಟು ಮಾಡುವುದು ಪ್ರಾಮಾಣಿಕವೆಂದು ತಾತ್ಪರ್ಯ.

ಹೇಗಿದ್ದರೂ ವಿಶೇಷ್ಯಕ್ಕೆ ಅನ್ವಯಿಸುವ ಕ್ರಿಯಾನ್ವಯಿತ್ವ ರೂಪ ವಿಶೇಷಣತ್ವವು, ಲಕ್ಷ್ಮಿಗೆ ಉಂಟಾಗುತ್ತದೆಯೇ ಅಂದರೆ ವಿಶೇಷ್ಯಭೂತನಾದ ಭಗವಂತನು ಮಾಡುವ ವ್ಯಾಪಾರದಲ್ಲಿ ವಿಶೇಷಣ ಭೂತೆಯಾದ ಲಕ್ಷ್ಮಿಗೆ ಅನ್ವಯವು ಉಂಟೇ ? ಆತ್ಮಹವಿಸ್ಸಮರ್ಪಣರೂಪ ಕ್ರಿಯೆಗೆ ಶ್ರೀಮಾನಾದ ನಾರಾಯಣನು ಉದ್ದೇಶ್ಯನಾದರೂ, ವಿಶೇಷಣ ಭೂತೆಯಾದ ಲಕ್ಷ್ಮಿಗೆ ತದ್ದುದ್ದೇಶ್ಯತ್ವವನ್ನು ಹೇಳಬಹುದೇ ಎಂದು ಕೇಳಿದರೆ, ಹೇಳಬಹುದು. ಅದಕ್ಕೆ ಬಾಧಕವೇನೂ ಇಲ್ಲವೆಂದು **ಶ್ರುತಿಬಲತ್ತಾಲೇ** ಎಂದಾರಂಭಿಸಿ ಆಚಾರ್ಯರು ಅನುಗ್ರಹಿಸುತ್ತಾರೆ. ಅದಾಗಿ "ಪತಿಂವಿಶ್ವಸ್ಯ", (ವಿಶ್ವಕ್ಕೆ ಸ್ವಾಮಿ) "ಅಸ್ಯೇಶಾನಾಜಗತೋ ವಿಷ್ಣು ಪತ್ನೀ" (ವಿಷ್ಣುಪತ್ನಿಯು ಜಗತ್ತಿಗೆ ಸ್ವಾಮಿನೀ)

"ಅಕಾರೇಣೋಚ್ಯತೇ ವಿಷ್ಣುಃ ಸರ್ವಲೋಕೇಶ್ವರೋಹರಿಃ !
ಉದ್ಧೃತಾ ವಿಷ್ಣುನಾ ಲಕ್ಷ್ಮೀರುಕಾರೇಣೋಚ್ಯತೇತಥಾ ॥
ಮಕಾರಸ್ತು ತಯೋರ್ದಾಸಃ ಇತಿಪ್ರಣವ ಲಕ್ಷಣಮ್ ॥"

ಪ್ರಣವದಲ್ಲಿ ಅಕಾರದಿಂದ ಸರ್ವಲೋಕೇಶ್ವರನೂ ಆಶ್ರಿತರ ಸಮಸ್ತ ಪಾಪಗಳನ್ನು ಹೋಗಲಾಡಿಸುವವನೂ (ಹರಿಃ) ಆದ ವಿಷ್ಣುವು ಹೇಳಲ್ಪಡುತ್ತಾನೆ. ವರಾಹರೂಪಿಯಾಗಿ ಕೆಸರಿನಿಂದ ಎತ್ತಿದ ಭೂಮಿಯ ರೂಪದಲ್ಲಿದ್ದ ಲಕ್ಷ್ಮಿಯು ಉಕಾರದಿಂದ ಹೇಳಲ್ಪಡುತ್ತಾಳೆ. ಮಕಾರ ಶಬ್ದವಾಚ್ಯನಾದ ಜೀವನು ಅವರಿಬ್ಬರಿಗೂ ದಾಸನು– ಇದು ಪ್ರಣವಕ್ಕೆ ಅರ್ಥ. ಈ ರೀತಿಯಾದ ಶ್ರುತಿಬಲದಿಂದ, 1) **ದ್ವ್ಯಾಚಸದೈಕಶೇಷೀ,** ಎಂಬಂತೆಯೂ, 2) ಉಭಯಾಧಿಷ್ಠಾನಂ **ಚೈಕಂ ಶೇಷಿತ್ವಂ,** ಎಂದೂ ಶೋಮಾಶಿಯಾಂಡಾನ್‌ರವರು ಷಡರ್ಥಸಂಕ್ಷೇಪವೆಂಬ

---

ಉಜ್ಜೀವಿಸಲಾಗದಿರುವಾಗ ನನ್ನೊಡನೆಯೇ ಇರುವ ಐದು ಜನರು (ಪಂಚೇಂದ್ರಿಯಗಳು) ನನ್ನಲ್ಲಿ ಹೊಕ್ಕು ನನ್ನನ್ನು ಪೀಡಿಸಿ ತಿನ್ನುತ್ತಿರುವುದಕ್ಕೆ ಹೆದರಿ, ಎಲೈ ತಿರುವಳ್ಳುಂದೂರಿನಲ್ಲ ಪಶ್ಚಿಮ ದಿಕ್ಕಿನಲ್ಲಿ ಅರ್ಚಾ ರೂಪಿಯಾಗಿ ನಿಂತಿರುವ ಭಗವಂತನೇ ನಿನ್ನನ್ನು ಆಶ್ರಯಿಸಿದ್ದೇನೆ. ನನ್ನನ್ನು ಕಾಪಾಡು ಎಂದರ್ಥ.

1) ಲಕ್ಷ್ಮ್ಯಾಃ ಸಮಸ್ತಶ್ಚಿದಚಿತ್ಪ್ರಪಂಚಃ ಶೇಷಸ್ತದೀಶಸ್ಯತುಸ್ವಾಪಿಸರ್ವಮ್ ।
ತಥಾಪಿ ಸಾಧಾರಣಮೀಶಿತೃತ್ವಂ ಶ್ರೀ ಶ್ರೀಶಯೋ ರ್ದ್ವಾಚಸದೈಕಶೇಷೀ ॥
ಪಾಂಚರಾತ್ರ - ಸಾತ್ವತಸಂಹಿತೆ. ಚೇತನಾಚೇತನಾತ್ಮಕವಾದ ಸಮಸ್ತ ಪ್ರಪಂಚವು ಲಕ್ಷ್ಮಿಗೂ ಅವಳ ಸ್ವಾಮಿಯಾದ ಭಗವಂತನಿಗೂ ಶೇಷಭೂತವಾದದ್ದು. ಲಕ್ಷ್ಮಿಗೂ ಅವಳ ಈಶನಾದ ಭಗವಂತನಿಗೂ ಲೋಕೇಶ್ವರತ್ವವು ಸಮಾನ. ಇಬ್ಬರೂ ಪ್ರಪಂಚಕ್ಕೆ ಏಕಶೇಷಿಗಳು. ಇಬ್ಬರೂ ಸೇರಿದ ಮಿಥುನವು ಪ್ರಪಂಚಕ್ಕೆ ಸ್ವಾಮಿ ಎಂದರ್ಥ.

2) ಷಡರ್ಥಸಂಕ್ಷೇಪ ಗ್ರಂಥ. ಇಬ್ಬರೂ ಕೂಡಿದ ಮಿಥುನವು ಪ್ರಪಂಚಕ್ಕೆ ಶೇಷಿಗಳು. ಶೇಷಿತ್ವವು ಒಂದೇ. ಅದು ಲಕ್ಷ್ಮೀ ನಾರಾಯಣಾತ್ಮಕರಿಬ್ಬರೂ ಸೇರಿರುವುದು ಎಂದು ತಾತ್ಪರ್ಯ.

## ಏಕ ಶೇಷಿತ್ವ ಕಥನಂ ಏಕಪ್ರಾಧಾನ್ಯಾತ್

1) "ಯುವತ್ವಾದೌ ತುಲ್ಯೇಪ್ಯ ಪರವಶತಾ ಶತ್ರುಶಮನ ಸ್ಥಿರತ್ವಾದೀನ್ ಕೃತ್ವಾ ಭಗವತಿ ಗುಣಾನ್ ಪುಂಸ್ತ್ವಸುಲಭಾನ್ ।
ತ್ವಯಿ ಸ್ತ್ರೈಣೈಕಾಂತಾನ್ ಮೃದಿಮ ಪತಿಪಾರಾರ್ಥ್ಯ ಕರುಣಾ ಕ್ಷಮಾದೀನ್ ವಾ ಭೋಕ್ತುಂ ಭವತಿ ಯುವಯೋರಾತ್ಮನಿ ಭಿದಾ ॥"

ಎನ್ಗಿರಪಡಿಯೇ, ಪತ್ನಿಕ್ಕು ನಿತ್ಯಪತಿ ಪಾರಾರ್ಥ್ಯಂ ತನ್ನಾಲೇ ಯಾಗಕರ್ತೃತ್ವಮ್ಪೋಲೇ ಪತಿಪ್ರಧಾನಮಾಹ ಶಾಸ್ತ್ರಙ್ಗಳಿಲ್ ಉಪದೇಶಙ್ಗಳುಕ್ಕುಮ್ ಏಕ ಯಜಮಾನ ನಿರ್ದೇಶಮ್ಪೋಲೇ ಏಕವ್ಯಪದೇಶತ್ತುಕ್ಕುಮ್ ಕುರೈಯಿಲ್ಲೈ.

---

ಗ್ರಂಥದಲ್ಲಿ ನಿಷ್ಕರ್ಷಿಸಿದ್ದಾರೆ. ಏಕಶೇಷೀ – ಏಕಂಚ ತತ್ ಶೇಷಿಚ – ಏಕಶೇಷೀ ಎಂದು ವಿಗ್ರಹ. ಉಭಯಾಧಿಷ್ಠಾನಂ ಚೈಕಂ ಶೇಷಿತ್ವಂ, – ಜಗನ್ನಿರೂಪಿತಶೇಷಿತ್ವಂ ಏಕಮೇವ. ದ್ವಿತ್ವಾದಿವತ್, ವ್ಯಾಸಜ್ಯವೃತ್ತಿತಯಾ ಉಭಯಾಶ್ರಿತಮ್ – ಇರುವರುಂ ಇತ್ಯಾದಿ ಲಕ್ಷ್ಮೀನಾರಾಯಣರಿಬ್ಬರೂ ಏಕಶೇಷಿತ್ವಕ್ಕೆ ಆಶ್ರಯವಾಗಿರುವುದರಿಂದ ಹವಿರ್ವಿಶೇಷಗಳಲ್ಲಿ ಅಗ್ನಾವಿಷ್ಣು ಪ್ರಭೃತಿಹಳುಕ್ಕುಪ್ಪೋಲೇ - "ಅಗ್ನಾವೈಷ್ಣವಮೇಕಾದಶ ಕಪಾಲಂ ನಿರ್ವಪೇತ್" ಎಂಬ ಶ್ರುತಿ ವಿಹಿತವಾದ ಯಾಗದಲ್ಲಿ ಅಗ್ನಿ ಮತ್ತು ವಿಷ್ಣು ಇಬ್ಬರಿಗೂ ವ್ಯಾಸಜ್ಯವೃತ್ತಿಕವಾಗಿ ಹವಿಸ್ಸು ಉದ್ದೇಶ್ಯವಾಗಿರುವಂತೆ, ಆತ್ಮಹವಿಸ್ಸಮರ್ಪಣ ಪ್ರತಿಸಂಬಂಧಿಹಳಾಹ – ಜೀವಾತ್ಮವೆಂಬ ಹವಿಸ್ಸಮರ್ಪಣದಲ್ಲಿ ಲಕ್ಷ್ಮೀನಾರಾಯಣರೆಂಬ ಏಕಶೇಷಿಗಳು ಆ ಸಮರ್ಪಣಕ್ಕೆ ಉದ್ದೇಶ್ಯಭೂತರಾಗಿರಲು, ಏನೂ ಬಾಧಕವಿಲ್ಲ. ಜೀವಾತ್ಮ ನಿರೂಪಿತ ಉಭಯ ನಿಷ್ಠ ಶೇಷಿತ್ವವೇ ಉದ್ದೇಶ್ಯತ್ವ ರೂಪವಾದ್ದರಿಂದ, ಇಬ್ಬರಲ್ಲಿಯೂ ಜೀವಾತ್ಮರೂಪ ಆತ್ಮ ಹವಿಸ್ಸಮರ್ಪಣ ಪ್ರತಿಸಂಬಂಧಿತ್ವಕ್ಕೆ ಏನೂ ಬಾಧಕವಿಲ್ಲವೆಂದರ್ಥ. ಅಂದರೆ ಜೀವಾತ್ಮವೆಂಬ ಹವಿಸ್ಸನ್ನು ಇಬ್ಬರೂ ಸ್ವೀಕರಿಸುತ್ತಾರೆಂದರ್ಥ.

ಹೀಗೆ ಇಬ್ಬರೂ ಆತ್ಮಹವಿಸಮರ್ಪಣಕ್ಕೆ ಪ್ರತಿಸಂಬಂಧಿಗಳಾದರೆ, "ಸ್ವಾತ್ಮಾನಂ ಮಯಿನಿಕ್ಷಿಪೇತ್", ಮಾಮೇಕಂ ಶರಣಂ ವ್ರಜ, ಏಕಏವ ಜಗತ್ಸ್ವಾಮೀ", ಇತ್ಯಾದಿಗಳಲ್ಲಿ ಭಗವನ್ಮಾತ್ರನಿರ್ದೇಶವೂ ಏಕತ್ವವ್ಯಪದೇಶವೂ ಹೇಗೆ ಸಂಗತವಾಗುತ್ತದೆಯೆಂದರೆ, 1) ಯುವತ್ವಾದೌ ತುಲ್ಯೇಪಿ ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಪತಿಪತ್ನಿಗಳಿಬ್ಬರಿಗೂ ಯುವತ್ವವೇ – ಯೌವನದಿಂದ ಕೂಡಿರುವುದೇ ಮೊದಲಾದ ಧರ್ಮಗಳು ಸಮಾನಗಳಾಗಿದ್ದರೂ ಲೋಕವ್ಯವಸ್ಥೆಯಲ್ಲಿ, ಅಪರವಶತಾ – ಇತರರಿಗೆ ವಶವಾಗದೆ ಇರುವುದು ಶತ್ರುಶಮನ – ಶತ್ರುನಿರಸನ, ಸ್ಥಿರತ್ವ–ಚಂಚಲ ಸ್ವಭಾವವಿಲ್ಲದಿರುವುದು, ಮೊದಲಾದ ಪುರುಷ ಸ್ವಭಾವಾನುಗುಣವಾದ ಗುಣಗಳನ್ನು ಭಗವಂತನು ತನ್ನ ಭಾಗಕ್ಕೆ ಇಟ್ಟುಕೊಂಡಿರುತ್ತಾನೆ ಲಕ್ಷ್ಮಿಯು ಸ್ತ್ರೀ ಸ್ವಭಾವಕ್ಕನುಗುಣವಾದ ಮೃದು ಸ್ವಭಾವ ಪತಿಪಾರಾರ್ಥ್ಯ, ಕರುಣೆ, ಕ್ಷಮೆ ಮೊದಲಾದ ಗುಣಗಳನ್ನು ತನ್ನ ಭಾಗಕ್ಕೆ ಇಟ್ಟುಕೊಂಡಿದ್ದಾಳೆ. ಪರಸ್ಪರ ಜಗದ್ವ್ಯಾಪಾರ ಲೀಲಾರಸಾನುಭವಕ್ಕೆ ಉಪಯುಕ್ತವಾದ ಗುಣಗಳನ್ನು ಹೀಗೆ ವಿಭಾಗಮಾಡಿಕೊಂಡು ಇಟ್ಟುಕೊಂಡಿ

---

1) ಶ್ರೀಗುಣರತ್ನ ಕೋಶ 34 ಲಕ್ಷ್ಮೀನಾರಾಯಣರಿಬ್ಬರಿಗೂ ಯೌವನ, ಸೌಂದರ್ಯ ಮೊದಲಾದ ಗುಣಗಳು ಸಮಾನವಾಗಿದ್ದರೂ, ಪರವಶವಿಲ್ಲದಿರುವುದು, ಶತ್ರುನಿರಸನ, ಸ್ಥಿರ ಬುದ್ಧಿ ಮೊದಲಾದ ಪುರುಷ ಗುಣಗಳನ್ನು ಭಗವಂತನು ತನ್ನ ಭಾಗಕ್ಕೆ ಇಟ್ಟುಕೊಂಡಿದ್ದಾನೆ. ಎಲೈ ಲಕ್ಷ್ಮಿಯೇ ನೀನು ಸ್ತ್ರೀತ್ವ ಸ್ವಭಾವಕ್ಕೆ ಅನುಗುಣವಾದ, ಪತಿಗೆ ಅಧೀನವಾಗಿರುವುದೂ, ಮೃದುತ್ವ, ಕರುಣೆ, ದಯೆ, ಕ್ಷಮೆ ಮೊದಲಾದ ಗುಣಗಳನ್ನು ನಿನ್ನದಾಗಿ ಇಟ್ಟುಕೊಂಡಿದ್ದೀಯೆ. ಹೀಗೆ ಪರಸ್ಪರ ಅನುಭವಕ್ಕೆ ಉಚಿತವಾಗಿ ಈ ವಿಧವಾದ ಭೇದಗಳನ್ನು ನೀವುಗಳು ಮಾಡಿಕೊಂಡಿದ್ದೀರಿ.

1) **"ತಾಮರೈಯಾಳ್ ಕೇಳ್ವ ನೊರುವನೈಯೇ ನೋಕ್ಕು ಮುಣರ್ವು" ಎನ್ನಿರದರುಮ್ ಇದುವೇ ತಾತ್ಪರ್ಯಮ್.**

**ಶ್ರುತ್ಯಾದೌ ಲಕ್ಷ್ಮ್ಯಾಃ ಪೃಥಗನಭಿಧಾನಸ್ಯ ಕಾರಣಮ್**

1) **"ತದಂತರ್ಭಾವಾತ್ತ್ವಾಂ ನ ಪೃಥಗಭಿಧತ್ತೇ ಶ್ರುತಿರಪಿ" ಎನ್ನಿರವ್ವುಹಳುಮ್ ಕಣ್ಡುಕೊಳ್ವದು.**

---

ಪ್ರಾರಿ. ಎನ್‌ಕಿರಪಡಿಯೇ ಇತ್ಯಾದಿ–ಈ ರೀತಿಯಲ್ಲಿ ಪತ್ನಿಗೆ ನಿತ್ಯ ಪತಿಪಾರಾರ್ಥ್ಯದಿಂದ, ಯಾಗದಲ್ಲಿ, "ಸ್ವರ್ಗಕಾಮೋ ಯಜೇತ", ಸ್ನಾತಿ, "ಅಹತಂವಾಸಃಪರಿಧತ್ತೇ" ಇತ್ಯಾದಿ ಕರ್ಮಗಳಲ್ಲಿ ಯಜಮಾನನ್ನೇ ಪ್ರಧಾನವಾಗಿ ನಿರ್ದೇಶಿಸಿದೆ. ಅಂದರೆ ಪತಿಪತ್ನಿಗಳಿಬ್ಬರೂ ಸೇರಿಯೇ ಯಾಗವನ್ನು ಮಾಡಬೇಕು. ದಂಪತಿಗಳಿಬ್ಬರಿಗೂ ಸೇರಿಯೇ ಅಧಿಕಾರ. ಪತಿಯಿಲ್ಲದ ಪತ್ನಿಗೂ, ಪತ್ನಿಯಿಲ್ಲದ ಪತಿಗೂ ಅಧಿಕಾರವಿಲ್ಲ. ಹಾಗಿರುವಾಗ ಪತಿಪ್ರಾಧಾನ್ಯ ವಿವಕ್ಷೆಯಿಂದ ಸ್ವರ್ಗ ಕಾಮ ಪದಾದಿಗಳಲ್ಲಿ ಪುಲ್ಲಿಂಗ ನಿರ್ದೇಶ. ಕರ್ತೃತ್ವವು ವ್ಯಾಸಜ್ಯ ವೃತ್ತಿಕತ್ವದಿಂದ ಏಕವಚನವೆಂದು ಅಧಿಕಾರ ಲಕ್ಷಣ ವನ್ನು ಹೇಳುವಾಗ ಪೂರ್ವ ಮೀಮಾಂಸೆಯಲ್ಲಿ ನಿರ್ಣೀತವು. ಪ್ರಾಭಾಕರರು ಪತ್ನಿಗೆ ಅಂಗತ್ವ ಮಾತ್ರವೆಂದು ಹೇಳುವುದು ಸೂತ್ರಕಾರರಿಗೆ ಅಭಿಪ್ರಾಯವಿಲ್ಲವೆಂಬುದು ಹೃದಯ. ಇದೇ ಮೀಮಾಂಸಾ ನ್ಯಾಯವನ್ನವಲಂಬಿಸಿ, "ಸ್ವಾತ್ಮಾನಂಮಯಿ ನಿಕ್ಷಿಪೇತ್, ಮಾಂ", "ಏಕಂ" ಇತ್ಯಾದಿ ಏಕತ್ವ ವ್ಯಪದೇಶಕ್ಕೆ ಕುಂದುಕವೇನೂ ಇಲ್ಲ. ಸರ್ವ ರಕ್ಷಣ ಯಜ್ಞದಲ್ಲಿ ದಿವ್ಯ ದಂಪತಿಗಳಿಬ್ಬರೂ ದೀಕ್ಷಿತರು. ಇಬ್ಬರೂ ಉಪಾಯಭೂತರು, ಎಂಬ ಸಿದ್ಧಾಂತಕ್ಕೆ ಯಾವ ಭಂಗವೂ ಇಲ್ಲವೆಂಬುದು ತಾತ್ಪರ್ಯ.

1) **ತಾಮರೈಯಾಳ್ ಕೇಳ್ವನೂರುವನೈಯೇ ನೋಕ್ಕುಮುಣರ್ವು**, ಪಂಕಜವಾಸಿನಿಯಾದ ಲಕ್ಷ್ಮೀವಲ್ಲಭ ನೊಬ್ಬನನ್ನೇ ಪ್ರಪತ್ತಿರೂಪವಾದ ಜ್ಞಾನಕ್ಕೆ ವಿಷಯವೆಂದು ಹೇಳಿರುವುದಕ್ಕೂ ಇದೇ ತಾತ್ಪರ್ಯ. ಇಲ್ಲಿ ನಾರಾಯಣ ನೊಬ್ಬನನ್ನೇ ಎಂದು ಹೇಳದೆ ಲಕ್ಷ್ಮೀವಿಶಿಷ್ಟನಾದ ಎಂದು ವಿಶಿಷ್ಟವಾಚಕ ಶಬ್ದವನ್ನು ಹೇಳಿ ಒರುವನೈಯೇ–ಎಂದು ಏಕತ್ವವಾಚಕ ಶಬ್ದಪ್ರಯೋಗವನ್ನೂ, 'ಏ' ಎಂಬ ಅವಧಾರಣವನ್ನೂ ಹೇಳಿರುವುದರಿಂದ, ಇದಕ್ಕೆ ವಿಶೇಷಣ ವಿಶೇಷ್ಯೋಭಯವ್ಯತಿರಕ್ತ ವ್ಯಾವರ್ತಕತ್ವವನ್ನೇ ಅಂಗೀಕರಿಸಬೇಕಾದ್ದರಿಂದ, ಲಕ್ಷ್ಮೀನಾರಾಯಣರೆಂಬ ವಿಶೇಷಣ ವಿಶೇಷ್ಯಗಳೆರಡೂ ಪ್ರಪತ್ತಿರೂಪ ಜ್ಞಾನಕ್ಕೆ ವಿಷಯವಾಗಲು ಯಾವ ಬಾಧಕವೂ ಇಲ್ಲ.

ಇದರ ಮೇಲೆ 2) **ತದಂತರ್ಭಾವಾತ್ತ್ವಾಂ**–ಎಂದಾರಂಭಿಸಿ ನಿರ್ವಾಹಾಂತರವನ್ನು ಅನುಗ್ರಹಿಸುತ್ತಾರೆ. ಅಂದರೆ ಭಗವಂತನಿಗೆ ಸ್ವರೂಪ ನಿರೂಪಕ ಧರ್ಮಳಾದ ಲಕ್ಷ್ಮಿಯು ಭಗವತ್ಪ್ರತೀತಿ ವ್ಯವಹಾರಗಳಲ್ಲಿ ಅಂತರ್ಗತೆಯಾದ್ದ ರಿಂದ ಪ್ರತ್ಯೇಕವಾಗಿ ಅವಳನ್ನು ಹೇಳದೆ ಶ್ರುತಿಯು ಭಗವಂತನೊಬ್ಬನನ್ನೇ ಹೇಳುತ್ತದೆ. ಆ ಭಗವಂತನು ಸ್ವರೂಪ **ನಿರೂಪಕ ಧರ್ಮವಾದ ಲಕ್ಷ್ಮಿಯಿಂದ ಕೂಡಿದವನೆಂಬುದು ಶ್ರುತಿಯ ಅಭಿಪ್ರಾಯ, ಎನ್ನಿರವ್ವುಹಳುಂ ಕಂಡು**

---

1) ಪೆರುರುಂ ಕರುಂ ಕಡಲೇನೋಕ್ಕುಮಾರು ಒಣ್‌ಪೂಉಯಿರುಮ್ ಕರಿರವನೇ ನೋಕ್ಕುಮ್-ಉಯಿರುಮ್ ತರುಮನ್ನೈಯೇ ನೋಕ್ಕುಮ್ ಒಣ್ ತಾಮರೈಯಾಳ್ ಕೇಳ್ವನ್, ಒರುವನೈಯೇ ನೋಕ್ಕುಮುಣರ್ವು ॥ (ಮುದಲ್ ತಿರುವಂದಾದಿ 67)

ಕಮಲವಾಸಿನಿಯಾದ ಲಕ್ಷ್ಮಿಗೆ ಪತಿಯಾದ ಭಗವಂತನೊಬ್ಬನೇ, ಭಕ್ತಿ ಪ್ರಪತ್ತಿರೂಪವಿಗಳಾದ ಜ್ಞಾನಕ್ಕೆ ವಿಷಯ ಭೂತನು.

2) ಸ್ವರೂಪಂ ಸ್ವಾತಂತ್ರ್ಯಂ ಭಗವತ ಇದಂ ಚಂದ್ರವದನೇ ತ್ವದಾಶ್ಲೇಷೋತ್ಕರ್ಷಾತ್ ಭವತಿ ಖಲುನಿಷ್ಕರ್ಷಸಮಯೇ ।
ತ್ವಮಾಸೀಃ ಮಾತಶ್ರೀಃ ಕಮಿತುರಿದಮಿತ್ಥಂತ್ವವಿಭವಃ ತದಂತರ್ಭಾವಾತ್ತ್ವಾಂ ನಪೃಥಗಭಿಧತ್ತೇ ಶ್ರುತಿರಪಿ ॥

(ಶ್ರೀಗುಣರತ್ನಕೋಶ–28)

ಎಲೈ ಚಂದ್ರಮುಖಿಯಾದ ಲಕ್ಷ್ಮಿಯೇ ಭಗವಂತನ ಸ್ವರೂಪವೂ ಸ್ವಾತಂತ್ರ್ಯವೂ ನಿನ್ನ ಸಂತೋಷದ ಉತ್ಕರ್ಷದಿಂದ ನೀನು ಪ್ರಮೋಕ್ಷತಾಯಿ ಸಂಪತ್ತು ನಿನ್ನ ವಲ್ಲಭನು ಇದಂ ಎಂಬ ವ್ಯಪದೇಶದಲ್ಲಿ ಇತ್ಥಂ ಪ್ರಕಾರಕವಾದ ವೈಭವವುಳ್ಳವಳು. ಸ್ವರೂಪ ನಿರೂ ಪಕ ಧರ್ಮಭೂತಳು. ಪ್ರಕಾರ ಪ್ರಕಾರಿ ರೂಪ ಸಂಬಂಧದಿಂದ ನೀವುಗಳು ಕೂಡಿದ್ದೀರಿ. ಇದರಿಂದ ಅವನಲ್ಲಿ ನೀನು ಅಂತರ್ಭೂತಳು ಆದ ಕಾರಣ ವೇದವೂ ನಿನ್ನನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ. ಅಂದರೆ ಭಗವನ್ನಾಮವನ್ನು ಹೇಳುವಾಗಲೆಲ್ಲಾ ಲಕ್ಷ್ಮೀವಿಶಿಷ್ಟನೆ ಎಂದು ಗ್ರಹಿಸಬೇಕೆಂಬುದು ತಾತ್ಪರ್ಯ.

**ಆಹೈಯಾಲ್ ಕಾಮ್ಯಪ್ರಧಾನಮಾನ ಅಧಿಕಾರಾರ್ಚನ ರೂಪತ್ತಿಲುಮ್ ವಿಷ್ಣುಪತ್ನೀತ್ವಂ ಸುಪ್ರತಿಷ್ಠಿತ ಮಾಹೈಯಾಲೇ ಲಯಭೋಗಾರ್ಚನಙ್ಗಳಿಲೇ ಪ್ರವೃತ್ತರಾಯ್ ಅನನ್ಯಪ್ರಯೋಜನರಾನ ಮುಮುಕ್ಷುಕ್ಕಳುಕ್ಕುಮ್ ಕಾಮ್ಯಪ್ರಧಾನಮಾನ ಭಗವದ್ರೂಪತ್ತಿಲ್ಪೋಲೇ ಮಾತೃತ್ವಾದ್ಯುಪಾಧಿಕಮಾನ ಪ್ರಣಾಮಾದ್ಯಾಚಾರಙ್ಗಳುಕ್ಕು ಕ್ಕುರೈಯಿಲ್ಲೈ.**

**"ಲಕ್ಷ್ಮ್ಯಾ ಸಹ ಏಕಃ", ಇತಿ ಶ್ರೀ ಭಾಷ್ಯಕಾರಾಭಿಪ್ರಾಯಃ**

**"ಎಮ್ಪೆರುಮಾನ್ನೈ ಚ್ಚೊನ್ನವಿಡತ್ತಿಲೇ ಪಿರಾಟ್ಟಿಯೈಯುಮ್ ಶೊಲ್ಲತ್ತಾನೆನ್ರು" ತುಡಙ್ಗಿ ಉಡೈಯವರರುಳಿಚ್ಚೆಯ್ದ ವಾರ್ತ್ತೈಯೈ ಆಚ್ಚಾನ್ ಪಕ್ಕಲಿಲೇ ಕೇಟ್ಟು ನಞ್ಜೀಯರ್ ಸಙ್ಗ್ರಹಿತ್ತಾರ್**

---

**ಕೊಳ್ವದು** ಇತಿ-ಯಾಗದಲ್ಲಿ ಪತಿಪ್ರಾಧಾನ್ಯ ವಿವಕ್ಷೆಯಿಂದ ಏಕನು ಯಜಮಾನನೆಂದು ನಿರ್ದೇಶಿಸಿರುವಂತೆ"ಮಾಮೇಕಂ" ಏಕ ಏವ ಜಗತ್ಸ್ವಾಮೀ, ಇತ್ಯಾದಿಗಳಲ್ಲಿ ಭಗವನ್ನಿರ್ದೇಶವೂ, ಏಕ ಶಬ್ದ ನಿರ್ದೇಶವೂ ಹೇಳಲ್ಪಟ್ಟಿದೆ ಎಂಬುದು ಆ ನಿರ್ವಾಹಾಂತರ. ಈ ನಿರ್ವಾಹದಲ್ಲಿ ಐತಿಹ್ಯವೊಂದನ್ನು **ಎಂಬೆರುಮಾನ್ನೈ – ಚ್ಚೊನ್ನವಿಡತ್ತಿಲೇ** ಎಂದಾರಭಿಂಸಿ ಅನುಗ್ರಹಿಸುತ್ತಾರೆ. ಆದಾಗಿ "ಎಂಬೆರುಮಾನ್ನೈಚ್ಚೊನ್ನವಿರತ್ತಿಲೇ ಪಿರಾಟ್ಟಿಯೈಯುಮ್ ಶೊಲ್ಲಿಟ್ರಾನ್", ಭಗವಂತನನ್ನು ನಿರ್ದೇಶಿಸಿದ ಸ್ಥಳಗಳಲ್ಲೆಲ್ಲಾ ಮಹಾಲಕ್ಷ್ಮಿಯನ್ನೂ ಸೇರಿಸಿ ಹೇಳಿದಂತೆ ಎಂದು, ಭಗವದ್ರಾಮಾನುಜರು ಹೇಳಿದ ಮಾತನ್ನು **ಆಚ್ಚಾನ್‌ಪಕ್ಕಲೀಲೇ** ಮುಡೈಪ್ಪಳ್ಳಿಯಾಚ್ಚಾನ್ ಎಂಬ ಕಿಡಾಂಬಿ ಪ್ರಣತಾರ್ತಿಹರವರದ ಗುರುಗಳ ಸಕಾಶದಿಂದ ಕೇಳಿ ತಿಳಿದುಕೊಂಡು ನಂಜೀಯರು ಸಂಗ್ರಹಿಸಿದ್ದಾರೆ.

**ಆಹೈಯಾಲೇ**–ಆದ್ದರಿಂದ ಭಗವಂತನನ್ನು ಹೇಳಿರುವ ಸ್ಥಳಗಳಲ್ಲೆಲ್ಲಾ ಲಕ್ಷ್ಮಿಯನ್ನೂ ಹೇಳಿವುದುದಾಗಿ ನಿತ್ಯಪತಿ ಸಾನ್ನಿಧ್ಯವಿರುವುದರಿಂದ **ಕಾಮ್ಯಪ್ರಧಾನಮಾನ** ವಿತ್ಯಾದಿ–ಕಾಮ್ಯಪುರುಷಾರ್ಥಗಳನ್ನು ಪ್ರಧಾನವಾಗಿ ಕೊಡುವುದಾಗಿ ಸಂಕಲ್ಪಿಸಿರುವ ಅಧಿಕಾರಾರ್ಚನ ರೂಪದಲ್ಲಿಯೂ ವಿಷ್ಣುಪತ್ನೀತ್ವವು ಪ್ರತಿಷ್ಠಿತವಾಗಿರುವುದರಿಂದ ಲಯಭೋಗಾರ್ಚನೆಗಳಲ್ಲಿ ಪ್ರವೃತ್ತರಾಗಿ ಅನನ್ಯ ಪ್ರಯೋಜನರಾದ ಮುಮುಕ್ಷುಗಳಿಗೆ ಕಾಮ್ಯ ಪ್ರಧಾನವಾದ ಭಗವದ್ರೂಪದಲ್ಲಿ ಪ್ರವೃತ್ತಿಯು ಏರ್ಪಡುವಂತೆ ಮಾತೃತ್ವಾದಿಕಾರಣವಾದ ಪ್ರದಕ್ಷಿಣ ಪ್ರಣಾಮಾದಿ ಆಚಾರಗಳಿಗೆ ಭಾಧಕವಿಲ್ಲ ಈ ವಿಷಯದಲ್ಲಿ ಭಗವಚ್ಛಾಸ್ತ್ರವೆಂಬ ಪಾಂಚರಾತ್ರಗಳಲ್ಲಿ ಹೇಳಿರುವುದೇನೆಂದರೆ:- ಭಗವಂತನ ದಿವ್ಯ ಮಂಗಳ ವಿಗ್ರಹದಲ್ಲಿ ಅವನ ಎದೆಯಲ್ಲಿರುವ ಲಕ್ಷ್ಮಿಯು ಲಯರೂಪವೆಂದು ವ್ಯವಹರಿಸಲ್ಪಡುತ್ತಾಳೆ. ಭಗವಂತನ ತಲೆಯಲ್ಲಿ ಕಿರೀಟ, ಎದೆಯಲ್ಲಿ ಲಕ್ಷ್ಮಿ, ಕೌಸ್ತುಭಗಳು, ತೊಡೆಗಳ ಮಧ್ಯೆ ಗರುಡ ಇತ್ಯಾದಿಯರನ್ನು ಅರ್ಚಿಸುವುದು ಲಯಾರ್ಚನೆ. ಅವನ ಪಾರ್ಶ್ವದಲ್ಲಿರುವ ಶ್ರೀ ಭೂಮಿ ನೀಳೆಗಳ ಅರ್ಚನೆಯು ಭೋಗಾರ್ಚನೆ. ಆಲಯ ಸಮೃದ್ಧ್ಯರ್ಥವಾಗಿಯೂ ಕಾಮ್ಯ ಪುರುಷಾರ್ಥಗಳಿಗಾಗಿಯೂ ಸ್ವತಂತ್ರವಾಗಿ ಪ್ರತಿಷ್ಠಿಸಲ್ಪಟ್ಟಿರುವ "ತನಿಕ್ಕೋವಿಲ್ ನಾಚ್ಚಿಯಾರ್" ಎಂದು ವ್ಯವಹರಿಸಲ್ಪಡುವ ಲಕ್ಷ್ಮಿಯ ಅರ್ಚನಾದಿಗಳು ಅಧಿಕಾರಾರ್ಚನೆಗಳು. ಲಯಭೋಗಾರ್ಚನೆಗಳು ಮೋಕ್ಷಪ್ರದಾನಗಳು. ಉಪಾಯೋಪೇಯತ್ವರೂಪಗಳು. ಅಧಿಕಾರಾರ್ಚನೆಗಳಲ್ಲಿ ಪರಮೈಕಾಂತಿಗಳಿಗೆ ಅಧಿಕಾರವಿಲ್ಲದಿರುವುದು ಶಾಸ್ತ್ರಸಿದ್ಧ. ಅವರುಗಳು ಕಾಮ್ಯ ಪುರುಷಾರ್ಥಗಳನ್ನು ಅಪೇಕ್ಷಿಸ ಕೂಡದಾದ್ದರಿಂದ ಅಧಿಕಾರವಿಲ್ಲವೆಂಬುದು ತಾತ್ಪರ್ಯ. ಸರ್ವಾವಸ್ಥೆಯಲ್ಲಿಯೂ ಸೇವ್ಯತ್ವವು, ಪ್ರಪತ್ತವ್ಯ ತತ್ವಕ್ಕೆ ಶಾಸ್ತ್ರಪ್ರಸಿದ್ಧವಾಗಿರುವಾಗ, ಅಧಿಕಾರಾರ್ಚನೆಯಲ್ಲಿ ಏಕೆ ಇಲ್ಲ. ಇಲ್ಲವೆಂದರೆ ಲಕ್ಷ್ಮಿಗೆ ಉಪಾಯತ್ವವನ್ನು ಹೇಳುವುದು ಹೇಗೆ ಎಂಬುದು ಚೋದ್ಯ.

ಹಾಗಾದರೆ, ಭಗವಂತನ ಕಾಮ್ಯ ಪ್ರಧಾನವಾದ ಮದನ ಗೋಪಾಲ, ಸಂತಾನ ಗೋಪಾಲ ರೂಪಗಳಲ್ಲಿಯೂ ಪರಮೈಕಾಂತಿಗಳಿಗೆ ಅನಾರಾಧ್ಯತ್ವವು ಶಾಸ್ತ್ರಸಿದ್ಧವಾದ್ದರಿಂದ, ಭಗವಂತನಿಗೂ ಉಪಾಯೋಪೇಯತ್ವಗಳಿಲ್ಲವೆಂದು

## ಪ್ರಾಮಾಣಿಕಾರ್ಥಪ್ರತೀತೌ ಗೃಹೀತಗ್ರಾಹಿತ್ವಂ ನಿಂದಾವಹಂ

**ಇಪ್ಪಡಿ ಮಧ್ಯಸ್ಥ ದೃಷ್ಟಿಯಾಲೇ ಪ್ರಾಮಾಣಿಕಾರ್ಥಙ್ಗಳ್ ತೋತ್ತಚ್ಚೆಯ್‌ದೇ ಪತ್ತಿನದು ವಿಡಾದೊೞಿಯಲ್**

**1) "ದೃಢಪೂರ್ವಶ್ರುತೋ ಮೂರ್ಖೋ ಧರ್ಮಾಣಾ ಮವಿಶಾರದಃ।**
**ವೃದ್ಧಾನ ಪೃಚ್ಛ್ಯ ಸಂದೇಹಾನಂಧಶ್ಚ ಭ್ರಮಿವರ್ತತಿ" ॥**

**2) ಅನ್ಯಥಾ ಮಂದ ಬುದ್ಧೀನಾಂ ಪ್ರತಿಭಾತಿ ದುರಾತ್ಮನಾಂ।**
**ಕುತರ್ಕ ವ್ಯಾಳದಷ್ಟಾನಾಂ ವಿಭ್ರಾಂತೇಂದ್ರಿಯ ವಾಜಿನಾಂ॥"**
**ಎನ್ನಿರ ದಶೈಯಾಮ್**

**ಆಹೈಯಾಲ್ ಸಿದ್ಧೋಪಾಯ ಶಬ್ದವಾಚ್ಯ ವಿಮರ್ಶತ್ತಿಲ್ 3) "ನಾನಯೋರ್ವಿದ್ಯತೇ ಪರಂ,"**

---

ಹೇಳಬೇಕಾದ ಪ್ರಸಂಗವು ಒದಗುತ್ತದೆ. ಇದು ಇಷ್ಟವಲ್ಲ. ಆದ್ದರಿಂದ ಯಥಾಶಾಸ್ತ್ರ ಪ್ರವೃತ್ತಿ ನಿವೃತ್ತಿಗಳ ವ್ಯವಸ್ಥಿತಿಯು ಅಂಗೀಕರಿಸಲ್ಪಡಬೇಕೇ ವಿನಹ ಕುಚೋದ್ಯ ಮಾಡಬಾರದೆಂಬುದು ತಾತ್ಪರ್ಯ. ಕಾವ್ಯ ಪ್ರಧಾನವಾದ ರೂಪಗಳಲ್ಲಿ "ವಿಷ್ಣುಪತ್ನೀ" ಎಂಬ ಆಕಾರದಿಂದ ಪ್ರಣಾಮ, ಸ್ವಾಮಿನೀತ್ವಾನುಸಂಧಾನಗಳಿಗೆ ಬಾಧಕವಿಲ್ಲ. ಅವನ್ನು ಮಾಡಬಹುದು ಎಂಬುದು ತಾತ್ಪರ್ಯ. ಹೀಗೆ ಒಪ್ಪದೆ ಇದ್ದರೆ, ಸುದರ್ಶನಯಂತ್ರಾದಿಗಳಲ್ಲಿ ಪರಿವಾರ ಕೋಟಿಯಲ್ಲಿ ಭಗವಂತನನ್ನೂ ನಿವೇಶಿಸಿರುವುದರಿಂದ ಪರಾವರ ತತ್ವಗಳಲ್ಲಿ ವ್ಯತ್ಯಾಸವು ಉಂಟಾಗುತ್ತದೆ ಎಂದು ಹೇಳಬೇಕಾಗುತ್ತದೆ. ಆದ್ದರಿಂದ ಕುಚೋದ್ಯ ಮಾಡದೆ ಶಾಸ್ತ್ರಗಳು ಹೇಳಿರುವ ರೀತಿಯಲ್ಲಿ ನಡೆದುಕೊಳ್ಳುವುದು ಹಿತತಮ.

**ಇಪ್ಪಡಿ ಮಧ್ಯಸ್ಥದೃಷ್ಟಿಯಾಲೇ** ಇತ್ಯಾದಿ – ಹೀಗೆ ಮಧ್ಯಸ್ಥ ದೃಷ್ಟಿಯಿಂದ ಪ್ರಾಮಾಣಿಕಾರ್ಥಗಳು ತೋಚುವಾಗ **ಪಟ್ರಿನದು ವಿಡಾದೊೞಿಯಿಲ್** – ತಾವು ಹಿಡಿದ ಹಠವನ್ನು ಬಿಡದೆ ಇದ್ದರೆ, ಅಂದರೆ ಲಕ್ಷ್ಮಿಗೆ ಉಪಾಯತ್ವ ಉಪೇಯತ್ವಗಳನ್ನು ಅಂಗೀಕರಿಸದೇ ಹೋದರೆ, 1) **ದೃಢಪೂರ್ವಶ್ರುತೋಮೂರ್ಖಃ** 2) **ಅನ್ಯಥಾಮಂದ ಬುದ್ಧೀನಾಂ** ಎಂಬ ದಶೆಯು ಏರ್ಪಡುತ್ತದೆ. ಅಂದರೆ ಮೂರ್ಖನು ಮೊದಲು ಕೇಳಿ ತಿಳಿದಿದ್ದನ್ನೇ ದೃಢವಾಗಿ ನಂಬಿ ಧರ್ಮಗಳನ್ನು ತಿಳಿದುಕೊಳ್ಳದೆ, ಜ್ಞಾನ ವೃದ್ಧರಲ್ಲಿ ಸಂಶಯಗಳನ್ನು ಕೇಳಿ ಸಮಾಧಾನ ಹೊಂದದೆ ಇದ್ದರೆ, ಕುರುಡನು ಕುರುಡಿಲ್ಲದವನ ಸಹಾಯವನ್ನು ಪಡೆಯದೆ ತಾನೇ ಸ್ವತಂತ್ರವಾಗಿ ನಡೆದುಕೊಂಡು ಹೋಗಿ ಹಳ್ಳಕ್ಕೆ ಬೀಳುವಂತೆ, ದುಸ್ಥಿತಿಯು ಏರ್ಪಡುತ್ತದೆ. ಮೇಲೂ ಮಂದ ಬುದ್ಧಿಗಳಾಗಿ, ಹಿರಿಯರನ್ನು ದೂಷಿಸುವ ದುರಾತ್ಮರಿಗೆ, ಕುತರ್ಕವೆಂಬ ಹಾವಿನಿಂದ ಕಡಿಯಲ್ಪಟ್ಟು, ಹುಚ್ಚು ಹಿಡಿದ ಇಂದ್ರಿಯಗಳೆಂಬ ಕುದುರೆಗಳು ಎಳೆದುಕೊಂಡು ಹೋಗುವ ದಾರಿಗೆ ಹೋಗಿ ವಿಪರೀತ ಫಲವು ಉಂಟಾಗುತ್ತದೆ.

**ಆಹೈಯಾಲ್** – ಹೀಗೆ ಕುತರ್ಕಗಳನ್ನು ಮಾಡದೆ, ಸತ್ವಸ್ಥರನ್ನು ಆಶ್ರಯಿಸಿ ಸದುಪದೇಶವನ್ನು ಪಡೆಯುವವರು, **ಸಿದ್ಧೋಪಾಯ ಶಬ್ಧವಾಚ್ಯವಿಮರ್ಶತ್ತಿಲ್** – ಯಥಾಪ್ರಮಾಣ ಸಿದ್ಧೋಪಾಯ ಶಬ್ದದ ಅರ್ಥ ಪರಾಮರ್ಶದಲ್ಲಿ, 1) **ನಾನಯೋರ್ವಿದ್ಯತೇಪರಮ್.**

---

1) ಭಾರತ ಕರ್ಣ ಪರ್ವ 72-54 2) ಇತಿಹಾಸ ಸಮುಚ್ಚಯ 33–108

3) ಪು.ತಿ.ನೋ.

4) "ಯಥಾಸರ್ವಗತೋ ವಿಷ್ಣು ಸ್ತಥೈವೇಯಂ ದ್ವಿಜೋತ್ತಮ"
5) "ಅಸ್ಯಾ ದೇವ್ಯಾ ಮನಸ್ತಸ್ಮಿನ್ ತಸ್ಯ ಚಾಸ್ಯಾಂ ಪ್ರತಿಷ್ಠಿತಮ್ ।
ತೇನೇಯಂ ಸ ಚ ಧರ್ಮಾತ್ಮಾ ಮುಹೂರ್ತಮಪಿ ಜೀವತಿ ॥"
6) "ವ್ಯಾಪಕಾವತಿ ಸಂಶ್ಲೇಷಾದೇಕ ತತ್ವಮಿವೋದಿತೌ"

ಎನ್ನಿರ ಪಡಿಯೇ ಏಕ ಶೇಷಿತ್ವತ್ತಾಲುಮ್, ಏಕಾಭಿಪ್ರಾಯತ್ತೈಯಾಲುಮ್. ಪರಸ್ಪರ ಪ್ರಾವಣ್ಯಾತಿಶಯತ್ತಾಲುಮ್, ಸ್ವರೂಪರೂಪಾದಿಹಳಿಲ್ ಪಿರಿವ[illegible] ಅನ್ವಯ ವಿಶೇಷತ್ತಾಲುಮ್, 7) ಗಾಢೋಪಗೂಢಾನಿತೇ" ಎನ್ನುಮ್ಪಡಿ ಸುಶ್ಲಿಷ್ಟಮಾನ ವಿಶಿಷ್ಟತತ್ವಮ್ ನಿರ್ಕಿರ ನಿಲೈಕುಲೈಯಾದ ಪಡಿ ಸವಿಶೇಷಣಮಾನ ನಾರಾಯಣ ಶಬ್ದಮ್, ಪ್ರತಿಪಾದಿಕ್ಕಿರ ಪಡಿಯೈ ಅನುಸಂಧಿಕ್ಕೈ, ಸತ್ವಸ್ಥರ್ಕು ಪ್ರಾಪ್ತಮ್.

---

4) **ಯಥಾಸರ್ವಗತೋ ವಿಷ್ಣುಃ**, 5) **ಅಸ್ಯಾದೇವ್ಯಾಮನಸ್ತಸ್ಮಿನ್**,
6) **ವ್ಯಾಪಕಾವತಿ ಸಂಶ್ಲೇಷಾತ್** ಎಂಬಂತೆ ಏಕಶೇಷಿತ್ವದಿಂದಲೂ, ಏಕಾಭಿಪ್ರಾಯತೆಯಿಂದಲೂ ಪರಸ್ಪರ ಪ್ರಾವಣ್ಯಾತಿಶಯದಿಂದಲೂ, ಸ್ವರೂಪ ರೂಪ ( ವಿಗ್ರಹ ) ಮೊದಲಾದವುಗಳಲ್ಲಿ **ಪಿರಿವಿಲ್ಲ** – ವಿಶೇಷವಿಲ್ಲದ ಅನ್ವಯ ವಿಶೇಷದಿಂದಲೂ 7) **ಗಾಢೋಪಗೂಢಾನಿತೇ** ಎಂಬಂತೆ **ಸುಶ್ಲಿಷ್ಟಮಾನ** – ಪರಸ್ಪರ ಸಂಶ್ಲೇಷದಿಂದ ಕೂಡಿದ, **ವಿಶಿಷ್ಟ ತತ್ವವು** – ಲಕ್ಷ್ಮೀ ವಿಶಿಷ್ಟನಾರಾಯಣ ತತ್ವವು, **ನಿರ್ಕಿರನಿಲೈ** – ಸ್ವರೂಪ, ವಿಗ್ರಹ, ವಿಭವಾನತಾರಾದಿ ಸರ್ವಾವಸ್ಥೆಗಳಲ್ಲಿಯೂ, ಸರ್ವ ಪ್ರಕಾರವಾಗಿಯೂ, ಸೇರಿಯೇ ಇರುವ ಸ್ಥಿತಿಯು, **ಕುಲೈಯಾದಪಡಿ** – ಭಗ್ನವಾಗದ ರೀತಿಯಲ್ಲಿ, **ಸವಿಶೇಷಣಮಾನ ನಾರಾಯಣ ಶಬ್ದಮ್** – ದ್ವಯಮಂತ್ರದ ಪೂರ್ವೋತ್ತರ ಖಂಡಗಳಲ್ಲಿರುವ ಲಕ್ಷ್ಮೀ ವಿಶೇಷಣದಿಂದ ಕೂಡಿರುವ ನಾರಾಯಣ ಶಬ್ದವು, **ಪ್ರತಿಪಾದಿಕ್ಕಿರಪಡಿಯೈ** – ಶ್ರೀ ವಿಶಿಷ್ಟವಾಗಿಯೇ ಹೇಳುವ ಪ್ರಕಾರವನ್ನು, ಅನುಸಂಧಿಸುವುದು ಸಾತ್ವಿಕರಾದವರಿಗೆ ಪ್ರಾಪ್ತವಾದದ್ದು. ಈ ಮೇಲೆ ಹೇಳಿದ ಅರ್ಥಗಳನ್ನು ಅಂದರೆ, ಶ್ರೀಮಾನಾದ ನಾರಾಯಣನೇ ಸಿದ್ಧೋಪಾಯವೆಂದೂ. ಭಕ್ತಿ ಪ್ರಪತ್ತಿಗಳು ಸಾಧ್ಯೋಪಾಯಗಳೆಂದೂ ಸಿದ್ಧೋಪಾಯದ ಪ್ರಾಧಾನ್ಯತೆ, ಸಾಧ್ಯೋಪಾಯದ ಫಲಗಳೇ ಮೊದಲಾದವುಗಳನ್ನು, ಕಾರಿಕಾರೂಪದಲ್ಲಿ ಆಚಾರ್ಯರು ಸಂಗ್ರಹಿಸುತ್ತಾರೆ.

---

3) ದೇವತಿರ್ಯಙ್ಮನುಷ್ಯೇಷು ಪುನ್ನಾಮಾ ಭಗವಾನ್ ಹರಿಃ ।
ಸ್ತ್ರೀನಾಮ್ನೀ ಲಕ್ಷ್ಮೀರ್ಮೈತ್ರೇಯ ನಾನಯೋರ್ವಿದ್ಯತೇ ಪರಮ್ ॥ ವಿಷ್ಣುಪುರಾಣ (1-8-35)
ದೇವತೆಗಳು, ತಿರ್ಯಕ್‌ಜಂತುಗಳು, ಮನುಷ್ಯರು ಈ ಮೂರು ವರ್ಗಗಳಲ್ಲಿ ಪುರುಷ ವರ್ಗವು ಭಗವದಭಿಮಾನಿತವು. ಸ್ತ್ರೀ ವರ್ಗವು ಲಕ್ಷ್ಮಿಯಿಂದ ಅಭಿಮಾನಿತವು. ಈ ಲಕ್ಷ್ಮೀನಾರಾಯಣರಿಬ್ಬರಿಗಿಂತ ಬೇರೆಯಾದ ಉತ್ಕೃಷ್ಟರು ಯಾರೂ ಇಲ್ಲ. ಇವರುಗಳೇ ಸರ್ವಶೇಷಿಗಳು.

4) ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ ।
ಯಥಾಸರ್ವಗತೋ ವಿಷ್ಣುಃ ತಥೈವೇಯಂ ದ್ವಿಜೋತ್ತಮ ॥ (ವಿಷ್ಣುಪುರಾಣ ) 1-8-17)
ವಿಷ್ಣುವನ್ನು ಯಾವಾಗಲೂ ಬಿಡದೆ ಇರುವ ಈ ಲಕ್ಷ್ಮಿಯು ಜಗತ್ತಿಗೆ ತಾಯಿ. ಅವನಂತೆಯೇ ನಿತ್ಯೆ. ವಿಷ್ಣು ಹೇಗೆ ಸರ್ವಗತನೋ ಸರ್ವವ್ಯಾಪಿಯಾಗಿ ವಿಭು ಸ್ವರೂಪನೋ, ಹಾಗೆಯೇ ಇವಳೂ ಸರ್ವವ್ಯಾಪಿಯಾಗಿ ವಿಭುಸ್ವರೂಪಳು. ಧರ್ಮಭೂತ ಜ್ಞಾನದಿಂದ ಮಾತ್ರ ವಿಭುಸ್ವರೂಪಳು ಎಂದಲ್ಲ. ವಿಷ್ಣುವು ಯಾವ ಯಾವ ಸ್ವಭಾವನೋ, ಲಕ್ಷ್ಮಿಯೂ ತಥಾ–ಅದೇ ಪ್ರಕಾರದಿಂದ ಕೂಡಿದವಳು ಎಂದು ಹೇಳಿರುವುದರಿಂದ, ಸರ್ವಗತತ್ವ, ಅಂತಃ ಪ್ರವಿಶ್ಯನಿಯಮನಾದಿಗಳು ಇಬ್ಬರಿಗೂ ಸಮಾನವೆಂದರ್ಥ.

ಪು. ತಿ. ನೋ.

## ಸಿದ್ಧೋಪಾಯ ಸಾಧ್ಯೋಪಾಯ ಶಬ್ದಯೋರರ್ಥ ನಿರ್ಧಾರಣಮ್

ಸಮಸ್ತ ಪುರುಷಾರ್ಥಾನಾಂ ಸಾಧಕಸ್ಯ ದಯಾನಿಧೇಃ ।
ಶ್ರೀಮತಃ ಪೂರ್ವಸಿದ್ಧತ್ವಾ ತ್ಸಿದ್ಧೋಪಾಯ ಮಿಮಂ ವಿದುಃ ॥೨೭"
ಭಕ್ತಿ ಪ್ರಪತ್ತಿ ಪ್ರಮುಖಂ ತದ್ವಶೀಕಾರ ಕಾರಣಮ್ ।
ತತ್ತತ್ಫಲಾರ್ಥಿ ಸಾಧ್ಯತ್ವಾ ತ್ಸಾಧ್ಯೋಪಾಯಂ ವಿದುರ್ಬುಧಾಃ ॥ ೨೮ ॥
ಸಾಧ್ಯೋಪಾಯೋತ್ತರಂಗೇಣ ಸಿದ್ಧೋಪಾಯಸ್ಯ ಶೇಷಿಣಃ ।
ಲೀಲಾಪ್ರವಾಹಃಕಾರುಣ್ಯ ಪ್ರವಾಹೇಣ ನಿರುಧ್ಯತೇ ॥ ೨೯ ॥
ತೇನೈವ ಸರ್ವೇಲೀಯಂತೇ ಸಿಕತಾ ಸೇತು ಬಂಧವತ್ ।
ಸ್ವತಂತ್ರಸ್ಯಾಪಿ ಸಙ್ಕಲ್ಪಾಸ್ಸ್ವಕೈಙ್ಕರ್ಯ ನಿರೋಧಕಾಃ ॥ ೩೦ ॥

---

**ಸಮಸ್ತ ಪುರುಷಾರ್ಥಾನಾಂ** ಇತ್ಯಾದಿ ಸಮಸ್ತ ಪುರುಷಾರ್ಥಗಳನ್ನೂ ಸಾಧಿಸಿಕೊಡುವ, ಹಾಗೆಯೇ ಸಾಧಿಸಿಕೊಡಲು ಅವಶ್ಯವಾದ ದಯೆಗೆ ನಿಧಿಯಾದ, ಶ್ರೀಮನ್ನಾರಾಯಣನು ಸಾಧ್ಯೋಪಾಯಾನುಷ್ಠಾನಕ್ಕೆ ಮೊದಲೇ ಸಿದ್ಧನಾಗಿರುವುದರಿಂದ, ಅವನನ್ನು ಸಿದ್ಧೋಪಾಯನೆಂದು ಸಂಪ್ರದಾಯಾಭಿಜ್ಞರು ತಿಳಿದಿರುತ್ತಾರೆ. ಭಕ್ತಿ ಪ್ರಪತ್ತಿಗಳು, ಮತ್ತು**ಪ್ರಮುಖಂ**-ಪರಂಪರೆಯಾಗಿ ಉಪಾಯಗಳಾದ ಕರ್ಮಯೋಗ ಜ್ಞಾನಯೋಗಾದಿಗಳು,**ತದ್ವಶೀಕಾರ ಕಾರಣಂ**-ಆ ಶ್ರಿಯಃ ಪತಿಯನ್ನು ವಶಪಡಿಸಿಕೊಳ್ಳಲು ಕಾರಣಗಳು. ಆ ಉಪಾಯಗಳು ಆಯಾಯಾ ಫಲಗಳನ್ನು ಅಪೇಕ್ಷಿಸುವುದರ ಕೃತಿ ಸಾಧ್ಯಗಳು. ಅವುಗಳನ್ನು ಸಾಧ್ಯೋಪಾಯಗಳೆಂದು ಪಂಡಿತರು ತಿಳಿದಿದ್ದಾರೆ. **ಸಾಧ್ಯೋಪಾಯೋತ್ತರಂಗೇಣ ಕಾರುಣ್ಯ ಪ್ರವಾಹೇಣ**-ಸಾಧ್ಯೋಪಾಯಗಳಾದ ಭಕ್ತಿ ಪ್ರಪತ್ತಿಗಳಿಂದ, ಉತ್ತರಂಗವಾದ-ಅಭಿವೃದ್ಧ ಕರುಣಾ ಪ್ರವಾಹದಿಂದ, **ಸಿದ್ಧೋಪಾಯಸ್ಯ ಶೇಷಿಣಃ**-ಸಿದ್ಧೋಪಾಯನಾದ ಶೇಷಿಯ, **ಲೀಲಾ ಪ್ರವಾಹಃ ನಿರುದ್ಧ್ಯತೇ**- ಲೀಲಾ ಪ್ರವಾಹವು ತಡೆಯಲ್ಪಡುತ್ತದೆ. **ತೇನೈವ**-ಅ ಭಕ್ತಿ ಪ್ರಪತ್ತಿಗಳಿಂದ, **ಸಿಕತಾಸೇತು ಬಂಧವತ್**-ಮಹಾ ಪ್ರವಾಹವನ್ನು ತಡೆಯಲು ಕಟ್ಟಿರುವ ಮರಳು ಸೇತುವೆಯು ಪ್ರವಾಹದಿಂದ ಕೊಚ್ಚಿ ಹೋಗದಂತೆ, **ಸರ್ವೇ** – ಲೀಲಾಪ್ರವಾಹ ಕಾರ್ಯಗಳಾದ "ಕ್ಷಿಪಾಮ್ಯಜಸ್ರಂ", ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂಗತಿಂ" ಎಂಬ ಆಸುರಯೋನಿಪ್ರಾಪಣ, ಅಧಮವಾದ ಕ್ರಿಮಿ ಕೀಟಾದಿಗತಿ ಪ್ರಾಪಣ ಕಾರಣಗಳಾದ ಸಂಕಲ್ಪಗಳು **ಲೀಯಂತೇ**–ಕೊಚ್ಚಿಹೋಗಿ ಲಯವನ್ನು ಹೊಂದುತ್ತವೆ. **ಸ್ವತಂತ್ರಸ್ಯಾಪಿ** ಇತ್ಯಾದಿ ಸ್ವತಂತ್ರನಾದ

---

5) ಅಸ್ಯಾದೇವ್ಯಾಮನಸ್ತಸ್ಮಿನ್ ತಸ್ಯ ಚಾಸ್ಯಾಂ ಪ್ರತಿಷ್ಠಿತಮ್ ।
ತೇನೇಯಂ ಸಚಧರ್ಮಾತ್ಮಾ ಮುಹೂರ್ತಮಪಿ ಜೀವತಿ ॥ ರಾಮಾಯಣ (5-15-52)

ಈ ಸೀತಾ ದೇವಿಯ ಮನಸ್ಸು ಅವನಲ್ಲಿ ಲಯಿಸಿದೆ. ಆ ರಾಮಚಂದ್ರನ ಮನಸ್ಸು ಇವಳಲ್ಲಿ ಲಯಿಸಿದೆ. ಇದರಿಂದಾಗಿ ಇವಳೂ ಆ ಧರ್ಮಾತ್ಮನಾದ ರಾಮಚಂದ್ರನೂ ಒಂದು ಮುಹೂರ್ತ ಕಾಲವಾದರೂ ಜೀವಿಸಿದ್ದಾರೆ. ಇದರಿಂದ ಪರಸ್ಪರ ಪ್ರಾವಣ್ಯಾತಿಶಯವು ತಿಳಿಸಲ್ಪಡುತ್ತದೆ,

6) ನಾರಾಯಣ ಪರಂಬ್ರಹ್ಮ ಶಕ್ತಿರ್ನಾರಾಯಣೀಚಸಾ ।
ವ್ಯಾಪಕಾವತಿ ಸಂಶ್ಲೇಷಾತ್ ಏಕತತ್ತ್ವಮಿವೋದಿತೌ ॥ ಅಹಿರ್ಬುಧ್ನ್ಯಸಂಹಿತೆ 4-78

ನಾರಾಯಣನು ಪರಬ್ರಹ್ಮನು. ಲಕ್ಷ್ಮಿಯು ಅವನ ಶಕ್ತಿ. ಇಬ್ಬರೂ ಎಲ್ಲಾ ವಸ್ತುಗಳಲ್ಲಿಯೂ ವ್ಯಾಪಿಸಿರುವವರು. ಪರಸ್ಪರ ಸುಸಂಶ್ಲಿಷ್ಟರಾಗಿರುವುದರಿಂದ, ಒಂದೇ ತತ್ತ್ವವಾಗಿರುವಂತೆ ಹೇಳಲ್ಪಡುತ್ತಾರೆ.

7) ಚತುಶ್ಶ್ಲೋಕಿ 4

**ಪ್ರಸಾದನಸ್ಯೋಽಪಾಯತ್ವೇ ಶಾಸ್ತ್ರೀಯೇಽಪಿ ಫಲಂ ಪ್ರತಿ ।**
**ಕರ್ತೃತ್ವಾ ವ್ಯವಧಾನಾದ್ಯೈಸ್ಸಿದ್ಧೋಪಾಯ ಪ್ರಧಾನತಾ ॥ ೩೧ ॥**

**ಸ್ವತಂತ್ರನ್ಯಾಸ ನಿಷ್ಠಾನಾಂ ಸಿದ್ಧೋಪಾಯೇ ವಿಭೌ ಸ್ಥಿತಿಃ ।**
**ಕ್ಷಣಾತ್ಸ್ವಯತ್ನ ವಿರತಿ ವ್ಯಕ್ತ್ಯೈಪ್ರೋಕ್ತಾ ವಿಶೇಷತಃ ॥ ೩೨ ॥**

---

ಭಗವಂತನ ಆ ಲೀಲಾ ಪ್ರವಾಹ ಸಂಕಲ್ಪಗಳು ಅವನ ಕೈಂಕರ್ಯಕ್ಕೆ ತಡೆಗಳು. ಅವುಭಕ್ತಿ ಪ್ರಪತ್ತಿಗಳಿಂದ ನಿರೋಧಿಸಲ್ಪಡುತ್ತವೆ. ಎಂದು ತಾತ್ಪರ್ಯ. **ಪ್ರಸಾದನಸ್ಯೋಪಾಯತ್ವೇ** ಇತ್ಯಾದಿ–ಪ್ರಸಾದನ–ಭಕ್ತಿ ಪ್ರಪತ್ತಿಗಳು; ಫಲವನ್ನು ಕುರಿತು ಭಕ್ತಿ ಪ್ರಪತ್ತಿಗಳು

"ಬ್ರಹ್ಮವಿದಾಪ್ನೋತಿಪರಂ," "ಮಾಮೇಕಂ ಶರಣಂವ್ರಜ ।"

ಅಹಂತ್ವಾಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ॥"

ಇತ್ಯಾದಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿದ್ದರೂ ಆ ಉಪಾಯಗಳು ಅಚೇತನಗಳು, ಅವಕ್ಕೆ ಮೋಕ್ಷಯಿಷ್ಯಾಮಿ" ಎಂಬ ಸಂಕಲ್ಪವನ್ನು ಮಾಡಲು ಅರ್ಹವಾದ ಕರ್ತೃತ್ವಗಳಿಲ್ಲ. ವ್ಯವಧಾನಗಳುಳ್ಳವು. ಆ ಕರ್ತೃತ್ವಗಳು ಭಗವಂತನಿಂದ ಉತ್ಪಾದ್ಯಗಳು. ಮೇಲೂ ಆ ಉಪಾಯಗಳು ನಶ್ವರಗಳು. ಆದ್ದರಿಂದ ಅಪ್ರಧಾನಗಳು. ಶ್ರೀಮನ್ನಾರಾಯಣನಾದ ಸಿದ್ಧೋಪಾಯವು ಮೋಕ್ಷಯಿಷ್ಯಾಮಿ" ಎಂಬ ಸಂಕಲ್ಪವನ್ನು ತಾನೇ ಮಾಡುವುದರಿಂದ ಕರ್ತೃತ್ವವ್ಯವಧಾನವಿಲ್ಲದವನು. ಕೃರ್ತೃತ್ವವೆಂದರೆ ಕೃತ್ಯಾಶ್ರಯತ್ವ. ಭಗವಂತನೇ ಈ ಕೃತ್ಯಕ್ಕೆ ಆಶ್ರಯ. ಬೇರೊಬ್ಬರು ಮೋಕ್ಷಯಿಷ್ಯಾಮಿ ಸಂಕಲ್ಪರೂಪವಾದ ಕರ್ತೃತ್ವಕ್ಕೆ ಆಶ್ರಯರಾಗಿ ಮಧ್ಯೆ ನಿಂತಿಲ್ಲವೆಂದರ್ಥ. ಈ ಉಪಾಯವು ಪೂರ್ವದಲ್ಲಿಯೇ ಸಿದ್ಧವಾಗಿರುವುದರಿಂದ ಸಿದ್ಧೋಪಾಯ ಪ್ರಧಾನತೆ. ಈಶ್ವರನು ಕರಣ ಕಳೇಬರಗಳನ್ನು ಕೊಟ್ಟು ಜ್ಞಾನೋಪದೇಶ ಮಾಡಿಸಿ, ನ್ಯಯೋಚ್ಚಾರಣ ಪರ್ಯಂತಗಳಾದ ಎಲ್ಲಾ ಸಂಸಾರಿ ಜೀವನ ಉಜ್ಜೀವನ ವ್ಯಾಪಾರಗಳಲ್ಲಿ ಸ್ವಾಭಾವಿಕವಾದ ಪರಮ ಕಾರಣ್ಯದಿಂದ ತಾನೇ ಪ್ರವರ್ತಿಸುತ್ತಾನೆ. ಮೋಕ್ಷೋಪಾಯಗಳಿಂದ ಭಕ್ತಿ ಪ್ರಪತ್ತ್ಯನುಷ್ಠಾನಗಳನ್ನೂ ಅವುಗಳಲ್ಲಿ ಉದ್ಯುಕ್ತರಾದ ಅಧಿಕಾರಿಗಳನ್ನೂ "ಯಥಾಯಂ ಪ್ರಿಯತಮಃ ಆತ್ಮಾನಂ ಪ್ರಾಪ್ನೋತಿ ತಥಾಸ್ವಯಮೇವ ಭಗವಾನ್ ಪ್ರಯತತೇ" ಎಂಬ ಭಾಷ್ಯ ಶ್ರೀ ಸೂಕ್ತಿಯ ಪ್ರಕಾರ, ತಾನೇ ಪ್ರವರ್ತಿಸಿಸುತ್ತಾನೆ. ಆದ್ದರಿಂದ ಮೋಕ್ಷಾನುಕೂಲ ಪ್ರಯತ್ನಾಶ್ರಯತ್ವರೂಪ ಕರ್ತೃತ್ವವು ಗೀತಾದಿಗಳಲ್ಲಿ ಹೇಳಿರುವಂತೆ ಈಶ್ವರನಿಗೆ ಪ್ರಾಮಾಣಿಕವಾದದ್ದು. **ಸ್ವತಂತ್ರನ್ಯಾಸನಿಷ್ಠಾನಾಂ** ಇತ್ಯಾದಿ – ಅಂಗವಾಗಿ ಪ್ರಪತ್ತಿಯನ್ನು ಅನುಷ್ಠಿಸಿ, ಅಂಗಿಯಾಗಿ ಭಕ್ತಿಯನ್ನೂ ಅನುಷ್ಠಿಸಿ ಫಲಪ್ರದನನ್ನಾಗಿ ಸಿದ್ಧೋಪಾಯನನ್ನು ಅಪೇಕ್ಷಿಸುವ ಭಕ್ತಿಯೋಗ ನಿಷ್ಠನಂತಲ್ಲದೆ, ಮೋಕ್ಷಾರ್ಥವಾಗಿ ಸ್ವತಂತ್ರವಾಗಿ ಪ್ರಪತ್ತಿಯನ್ನು ಮಾತ್ರ ಅನುಷ್ಠಿಸಿ, ಭಕ್ತಿ ಸ್ಥಾನದಲ್ಲಿ ಭಗವಂತನನ್ನೇ ನಿವೇಶಿಸುವ ಪ್ರಪನ್ನನಿಗೆ, **ಸಿದ್ಧೋಪಾಯೇವಿಭೌಸ್ಥಿತಿಃ**–ಸಿದ್ಧೋಪಾಯನಾದ ವಿಭುವಾದ ಭಗವಂತನಲ್ಲಿ ಸ್ಥಿತಿಯು ಏರ್ಪಡುತ್ತದೆ. **ಕ್ಷಣಾತ್** ಸಿದ್ಧೋಪಾಯನಾದ ಭಗವಂತನಲ್ಲಿ ಶರಣಾಗತಿಯನ್ನು ಮಾಡಿ, ಉಪಾಯಾಂತರ–ಭಕ್ತಿಸ್ಥಾನದಲ್ಲಿ ಅವನನ್ನು ನಿವೇಶಿಸಿದ ಮರುಕ್ಷಣದಲ್ಲಿ, ಅಂದರೆ ಭಕ್ತಿಯೋಗನಿಷ್ಠನು ಆ ಪ್ರಯಾಣ ಭಕ್ತಿಯೋಗವನ್ನು ಅನುಷ್ಠಿಸುವ ರೀತಿಯಾದ ನಿರ್ಬಂಧವಿಲ್ಲದೆ, **ಸ್ವಯತ್ನವಿರತಿಃ**–ತನ್ನ ಪ್ರಯತ್ನದಲ್ಲಿ ವಿರಾಮವು **ಪ್ರೋಕ್ತಾ ವಿಶೇಷತಃ**–ವಿಶೇಷವಾಗಿ ಹೇಳಲ್ಪಟ್ಟಿದೆ. ಪ್ರಾರ್ಥನಾ ಪುರಸ್ಕೃತವಾದ ಭರನ್ಯಾಸವನ್ನು ಮಾಡಿದ ಮೇಲೆ ಸಾಕ್ಷಾನ್ಮೋಕ್ಷಾನುಕೂಲವಾದ ಭಗವದನುಗ್ರಹವು, ಉಪಾಯಾಂತರ ನಿರಪೇಕ್ಷವಾಗಿ ಉಂಟಾಗುತ್ತದೆ. ಶ್ರಿಯಃಪತಿಯು ಅಕಿಂಚನಾಧಿಕಾರಿ ವಿಷಯದಲ್ಲಿ, ಸ್ವಾಭಾವಿಕವಾದ ಪರಮಕಾರುಣ್ಯಾತಿರೇಕದಿಂದ, ಅಂತಿಮಸ್ಮರಣ, ಮೂರ್ಧನ್ಯನಾಡಿ ಪ್ರವೇಶ, ಅರ್ಚಿರಾದಿ ಮಾರ್ಗಗಮನಾದಿ ಫಲಪರ್ವಗಳನ್ನು ಸಕೃದನುಷ್ಠಿತ ಪ್ರಪತ್ತಿಯಿಂದ ಉಂಟಾದ ಅಖಂಡ ಪ್ರಸಾದದಿಂದ (ಅನುಗ್ರಹದಿಂದ)

**ಅತೋಽಯದರ್ಥಂಸ್ವಭರ ಸ್ಸಿದ್ಧೋಪಾಯೇ ನಿವೇಶಿತಃ ।**
**ತದರ್ಥಂ ಶಾಂತಯತ್ನೋಽಸೌ ಸಿದ್ಧೋಪಾಯಂ ಪ್ರತೀಕ್ಷತೇ ॥೩೩॥**
**ಪ್ರಪತ್ತೇರ್ಲಕ್ಷಣೇ ಮಂತ್ರೇ ವಿಧೌವಾಕ್ಯಾಂತರೇಷು ಚ ।**
**ಭಾಷ್ಯಾದೌ ಸಂಪ್ರದಾಯೇ ಚೋಪಾಯತ್ವಂ ಬ್ರಹ್ಮಣಿ ಸ್ಥಿತಮ್ ॥೩೪॥**
**ಪೂರ್ವಸಿದ್ಧಸ್ಯ ದೇಶಾದೇರ್ಧರ್ಮತ್ವಂ ಯದ್ವಿದಿಷ್ಯತೇ ।**
**ಏವಂ ತತ್ತ್ವವಿದಃ ಪ್ರಾಹುಃ ಕೃಷ್ಣಂ ಧರ್ಮಂ ಸನಾತನಮ್ ॥ ೩೫ ॥**

---

ಅನುಗ್ರಹಿಸುತ್ತಾನೆಂದು ಸಿದ್ಧೋಪಾಯ ನಿಷ್ಠತೆಯು ವಿಶೇಷವಾಗಿ ಹೇಳಲ್ಪಡುತ್ತದೆ. **ಅತೋಽಯದರ್ಥಂ**– ಇತ್ಯಾದಿ ಆದ ಕಾರಣ ಸಿದ್ಧೋಪಾಯನಾದ ಭಗವಂತನಲ್ಲಿ ಯಾವ ಪ್ರಯೋಜನಕ್ಕಾಗಿಭರವು ಸಮರ್ಪಿಸಲ್ಪಟ್ಟಿತೋ ಅದಕ್ಕಾಗಿ ಶಾಂತಯತ್ನೋಽಸೌ–ಬೇರೆ ಯಾವ ಪ್ರಯತ್ನವನ್ನೂ ಮಾಡದೆ ಸಿದ್ಧೋಪಾಯನಾದ ಭಗವಂತನನ್ನು ತನ್ನ ರಕ್ಷಣೆಗೆ ಎದುರು ನೋಡುತ್ತಾನೆ. **ಪ್ರಪತ್ತೇರ್ಲಕ್ಷಣೇ ಮಂತ್ರೇ** ಇತ್ಯಾದಿ– ಪ್ರಪತ್ತಿ ಲಕ್ಷಣವನ್ನು ತಿಳಿಸುವ,

"ಅನನ್ಯಸಾಧ್ಯೇಸ್ವಾಭೀಷ್ಟೇ ಮಹಾವಿಶ್ವಾಸಪೂರ್ವಕಮ್ ।
ತದೇಕೋಪಾಯತಾ ಯಾಂಚಾಪ್ರಪತ್ತಿಶ್ಶರಣಾಗತಿಃ ॥"

ಎಂಬ ಶ್ಲೋಕದಲ್ಲಿ, ತದೇಕೋಪಾಯತಾಯಾಂಚಾ ಎಂದು ಭಗವಂತನಿಗೆ ಮೋಕ್ಷಕ್ಕೆ ಉಪಾಯತ್ವವು ಹೇಳಲ್ಪಟ್ಟಿದೆ. **ಮಂತ್ರೇ** – ದ್ವಯಮಂತ್ರದಲ್ಲಿ, "ಚರಣೌ, ಶರಣಂ" ಎಂದು ಭಗವಂತನಿಗೇ ಉಪಾಯವು ಹೇಳಲ್ಪಟ್ಟಿದೆ.

"ಉಪಾಯೇ, ಗೃಹ, ರಕ್ಷಿತ್ರೇ ಶಬ್ದಶ್ಶರಣಮಿತ್ಯಯಂ ।
ವರ್ತತೇ ಸಾಂಪ್ರತಂತ್ವೇಷ ಉಪಾಯಾರ್ಥೈಕವಾಚಕಃ ॥"

ಎಂದು ಪ್ರಮಾಣ ವಚನಾನುಸಾರ, ಶರಣ ಶಬ್ದಕ್ಕೆ ಉಪಾಯ, ಮನೆ, ರಕ್ಷಕ ಎಂಬ ಅರ್ಥಗಳಿವೆ. ಆದರೆ ಈ ಶರಣಾಗತಿ (ದ್ವಯ) ಮಂತ್ರದಲ್ಲಿ, ಶರಣಶಬ್ದಕ್ಕೆ ಉಪಾಯವೆಂದೇ ಅರ್ಥ. **ವಿಧೌ** – ಚರಮ ಶ್ಲೋಕದಲ್ಲಿ "ಮಾಮೇಕಂ ಶರಣಂವ್ರಜ" ಎಂದು ಭಗವಂತನು ತನ್ನನ್ನೇ ಉಪಾಯವಾಗಿ ವರಿಸುವಂತೆ ಹೇಳಿರುತ್ತಾನೆ. **ವಾಕ್ಯಾಂತರೇಷುಚ**– "ಕಮಲ ನಯನ ವಾಸದೇವ ವಿಷ್ಣೋ ಭವಶರಣಂ, ನಿವಾಸಶ್ಶರಣಂ ಸುಹೃತ್", ಇತ್ಯಾದಿ ವಾಕ್ಯಗಳಲ್ಲಿಯೂ, **ಭಾಷ್ಯಾದೌ** – "ಅನನ್ಯೋಪಾಯತ್ವ ಶ್ರವಣಾತ್" ಎಂಬ ಭಾಷ್ಯ ವಾಕ್ಯದಲ್ಲಿಯೂ ಆದಿ ಪದದಿಂದ "ತ್ವತ್ಪಾದಾರವಿಂದ ಯುಗಳಂ ಶರಣ ಮಹಂ ಪ್ರಪದ್ಯೇ", (ಗದ್ಯ) ಎಂದೂ, **ಸಂಪ್ರದಾಯೇಚ** – "ಶರಣಮಾಹುಂ ತನದಾಳಡೈಂದಾಕ್ಕೆಲ್ಲಾಮ್", "ತ್ವತ್ಪಾದಮೂಲಂ ಶರಣಂ ಪ್ರಪದ್ಯೇ" (ಸ್ತೋತ್ರರತ್ನ) ಇತ್ಯಾದಿ ಸಂಪ್ರದಾಯ ವಚನಗಳಿಂದಲೂ, **ಬ್ರಹ್ಮಣಿ** – ನಿರತಿಶಯೋತ್ಕರ್ಷದಿಂದ ಕೂಡಿದ, ಲಕ್ಷ್ಮೀ ವಿಶಿಷ್ಟ ನಾರಾಯಣನಲ್ಲಿ, **ಉಪಾಯತ್ವಂ** – ಉಪಾಯಾಂತರ ನಿರಪೇಕ್ಷ ರಕ್ಷಕತ್ವವು, **ಸ್ಥಿತಮ್** – ಸುಪ್ರತಿಷ್ಠಿತವು. ನಿರಪೇಕ್ಷೋಪಾಯತ್ವವು ಪ್ರಪತ್ತಿಗೆ ವಿಶೇಷವಾದ ವೇದ್ಯಾಕಾರವು.

**ಪೂರ್ವಸಿದ್ಧಸ್ಯದೇಶಾದೇಃ** ಇತ್ಯಾದಿ, ಕೃತಿಗೆ ಮೊದಲೇ ಸಿದ್ಧವಾದ, "ಸಮೇ ಽಯ ಜೇತ" ಎಂದು ಹೇಳಲ್ಪಟ್ಟ ದೇಶಕ್ಕೂ, ಆದಿಪದದಿಂದ "ಸಾಯಂಜುಹೋತಿ" ಎಂದು ಹೇಳಲ್ಪಟ್ಟ ಕಾಲಕ್ಕೂ, ಹಾಗೆಯೇ ದ್ರವ್ಯ ಕ್ರಿಯಾದಿಗಳಿಗೂ, **ಧರ್ಮತ್ವಂ** – ಅಲೌಕಿಕ ಶ್ರೇಯಸ್ಸಾಧನ ರೂಪವಾದ ಧರ್ಮವು, **ಯದ್ವದಿಷ್ಯತೇ**– ಹೇಗೆ ಅಂಗೀಕರಿಸಲ್ಪಡುತ್ತದೆಯೋ, ಅಂದರೆ "ಚೋದನಾಲಕ್ಷಣೋಽರ್ಥೋ ಧರ್ಮಃ", ಎಂಬ ವಿಧಿ ವಾಕ್ಯದಲ್ಲಿ ಚೇತನಕೃತಿಸಾಧ್ಯವಾಗಿ ಬೋಧಿತವಾದುದಕ್ಕೇ ಧರ್ಮತ್ವವು ಹೇಳಲ್ಪಡುವುದರಿಂದ, ಕೃತ್ಯಸಾಧ್ಯನಾದ ಭಗವಂತನಿಗೆ ಧರ್ಮತ್ವವು ಹೇಳಲಿಕ್ಕಿಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನವಾಗಿ, ಅಲೌಕಿಕ ಶ್ರೇಯಸ್ಸಾಧನವೆಂಬ ಲಕ್ಷಣವನ್ನು

**ಇಸ್ಸಿದ್ಧೋಪಾಯಮ್ ರಹಸ್ಯತ್ರಯತ್ತಿಲ್ ಪ್ರಥಮಾಕ್ಷರಾದಿ ಸ್ಥಾನಙ್ಗಳಿಲೇ ಅನುಸಂಧೇಯಮ್**

**ಮನ್ನುಮನ್ನೈತ್ತುರವಾಯ್ ಮರುಳ್ ಪೊತ್ತರುಳಾರ್ಿಯುಮಾಯ್ ।**
**ತ್ತನ್ನಿನ್ನೈ ವಾಲನ್ನೈತ್ತುಮ್ ತರಿತ್ತೋಙ್ಗುಮ್ ತನಿಯಿರೈಯಾಯ್ ।**
**ಇನ್ನಮುದತ್ತಮುತಾಲಿರಙ್ಗುಮ್ ತಿರುನಾರಣನೇ**
**ಮನ್ನಿಯ ವನ್ಶರಣ್ ಮತ್ತೋರ್ ಪತ್ತಿನ್ರಿವರಿಪ್ಪವರ್ಕ್ಕೇ ॥ ೩೦ ॥**

---

ಅಂಗೀಕರಿಸಿ, ಯಾಗಮಾಡುವ ದೇಶ ಕಾಲಕ್ರಿಯೆಗಳಿಗೆ ಅಲೌಕಿಕ ಶ್ರೇಯಸ್ಸಾಧನತ್ವರೂಪ ಧರ್ಮವು ಅಂಗೀ ಕರಿಸಲ್ಪಟ್ಟಿರುವಂತೆ, **ತತ್ವವಿದಃ** – ತತ್ವವಿತ್ತುಕ್ಕಳು, **ಕೃಷ್ಣಂ ಧರ್ಮಂ ಸನಾತನಂ** – ಕೃಷ್ಣ ಭಗವಂತನನ್ನು ಕೃತಿಸಾಧ್ಯವಿಲ್ಲದೇಯೇ, ಅನಾದಿ ಸಿದ್ಧವಾದ ಅಲೌಕಿಕ ಶ್ರೇಯಸ್ಸಾಧನ (ಮೋಕ್ಷ ಸಾಧನ) ರೂಪ ಧರ್ಮನೆಂದು ಹೇಳಿದ್ದಾರೆ. ಇದರಿಂದ ಚೋದನಾಲಕ್ಷಣತ್ವರೂಪ ಧರ್ಮತ್ವವು. ದೇಶಕಾಲಾದಿಗಳಿಗೆ ಇರುವಂತೆ, ಅಬಾಧಿತವು ಆದ್ದರಿಂದ, ಸಿದ್ಧೋಪಾಯತ್ವವು ಭಗವಂತನಿಗೆ ಮುಖ್ಯವಾಗಿಯೇ ಉಪಪನ್ನವೆಂದು ತಾತ್ಪರ್ಯ.

## ಸಿದ್ಧೋಪಾಯವು ರಹಸ್ಯ ಮಂತ್ರಗಳಲ್ಲಿ ಪ್ರತಿಪಾದಿಸಲ್ಪಡುವ ಸ್ಥಲ

ಅನಂತರ ಈ ಸಿದ್ಧೋಪಾಯವು ರಹಸ್ಯ ಮಂತ್ರಗಳಲ್ಲಿ ಪ್ರತಿಪಾದಿಸಲ್ಪಡುವ ಸ್ಥಲಗಳನ್ನು **ಇಸ್ಸಿದ್ಧೋಪಾಯಂ** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಈ ಸಿದ್ಧೋಪಾಯವು ರಹಸ್ಯತ್ರಯಗಳಲ್ಲಿ ನಿರೂಪಿತವು. ಅದಾಗಿ ಪ್ರಣವದಲ್ಲಿ ಪ್ರಥಮಾಕ್ಷರದಲ್ಲಿಯೂ, ನಾರಾಯಣ ಶಬ್ದಗಳಲ್ಲಿಯೂ "ಮಾಂ" "ಅಹಂ" ಎಂಬ ಪದಗಳಲ್ಲಿಯೂ ಪ್ರತಿಪಾದಿಸಲ್ಪಟ್ಟಿದೆ.

ಅನಂತರ ಈ ಅಧಿಕಾರಾರ್ಥವನ್ನು ಒಂದು ಪಾಶುರದಿಂದ ಆಚಾರ್ಯರು ಸಂಗ್ರಹಿಸುತ್ತಾರೆ. **ಮನ್ನುಮನ್ನೈತ್ತುರ ವಾಯ್** ಇತ್ಯಾದಿ ಮನ್ನುಂ–ನಿತ್ಯವಾದ, **ಅನ್ನೈತ್ತುರವಾಯ್**–"ಮಾತಾಪಿತಾಭ್ರಾತಾ ನಿವಾಸಶ್ಶರಣಂ ಸುಹೃತ್ ಗತಿರ್ನಾರಾಯಣಃ" ಇತ್ಯಾದಿ ಶ್ರುತಿಗಳಲ್ಲಿ ನಾರಾಯಣನು ತಾಯಿ, ತಂದೆ, ಒಡ ಹುಟ್ಟಿದವನು ಆಶ್ರಯ, ರಕ್ಷಕ (ಉಪಾಯ) ಸ್ನೇಹಿತ, ಗತಿಃ– ಪ್ರಾಪ್ಯನು ಎಂದು ಎಲ್ಲಾ ವಿಧವಾದ ಬಂಧುವಾಗಿಯೂ, **ಮರುಳ್ ಪೊತ್ತರುಳಾರ್ಿಯುಮಾಯ್**–ಮರುಳ್–ಅಜ್ಞಾನಕ್ಕೆ ಪೊಟ್ರು–ನಾಶಕವಾದ, ಅರುಳಾರ್ಿಯುಮಾಯ್–ಕೃಪಾ ಸಾಗರನಾಯ್, ತನ್ನಿನ್ನೈವಾಲನ್ನೈತ್ತುಂ ತನ್ನ ಸಂಕಲ್ಪದಿಂದ ಸರ್ವಪದಾರ್ಥಗಳನ್ನೂ, **ತರಿತ್ತೋಂಗುಮ್**–"ಏತ ಸ್ಯವಾ ಅಕ್ಷರಸ್ಯ ಪ್ರಶಾಸನೇಗಾರ್ಗಿ, ಸೂರ್ಯಾಚಂದ್ರಮಸೌ ವಿಧೃತೌತಿಷ್ಠತಃ" ಎಂಬ ಪ್ರಕಾರದಿಂದ ಜಗತ್ತನ್ನು ಧರಿಸಿರುವವನಾಗಿ, ಅದರಿಂದ ಪ್ರಕಾಶಿತವಾದ ಸರ್ವಜ್ಞತ್ವ ಸರ್ವಶಕ್ತಿತ್ವಗಳಿಂದ ಕೂಡಿ, **ತನಿ ಇರೈಯಾಯ್** – ಅದ್ವಿತೀಯ ಸ್ವಾಮಿಯಾಗಿ **ಇನ್ನಮುದತ್ತಮುದಾಲ್**–ಇನ್–ಭೋಗ್ಯವಾದ ಅಮುದತ್ತು ಅಮೃತ ಸಮುದ್ರದಲ್ಲಿ ಅವ ತರಿಸಿದ, ಅಮುದಾಲ್–ಅಮೃತಸ್ವರೂಪೆಯಾದ ಲಕ್ಷ್ಮಿಯ, ಪುರುಷಕಾರದಿಂದ, **ಇರಂಗುಮ್**–ಆಶ್ರಿತರಿಗೆ ಕೃಪೆ ಮಾಡುವ, ತಿರುನಾರಣನೇ ಶ್ರೀ ವಿಶಿಷ್ಟನಾರಾಯಣನೇ **ಮಟ್ರೋರ್ ಪಟ್ರಿನ್ರಿ** – ಬೇರೆ, ಪಟ್ರು–ಅವಲಂಬನ, ಉಪಾಯ ಇನ್ರಿ–ಇಲ್ಲದೆ, **ವರಿಪ್ಪವರ್ಕ್ಕೇ** ಅವನನ್ನೇ ಉಪಾಯಾಂತರ ಸ್ಥಾನದಲ್ಲಿ ಇರಬೇಕೆಂದು ವರಣ ಮಾಡುವವರಿಗೆ, **ಮನ್ನಿಯ**–ಸಿದ್ಧನಾದ **ವನ್ ಶರಣ್**–ದೃಢವಾದ ಉಪಾಯ. ಶರಣಾಗತರಿಗೆ ಭಗವಂತನೇ ಉಪಾಯವೆಂದು ತಾತ್ಪರ್ಯ.

ಹೀಗೆ ಶ್ರಿಯಃಪತಿಯಾದ ನಾರಾಯಣನೇ ಸಿದ್ಧೋಪಾಯವೆಂದು ಶ್ರುತಿಸ್ಮೃತಿ ಸಂಪ್ರದಾಯಗಳು ಹೊಗಳುವಾಗ ಇತರ ಸಂಪ್ರದಾಯಸ್ಥರಿಗೇಕೆ, ಈ ವಿಷಯವು ಸ್ಫುರಿಸಲಿಲ್ಲ, ನಿಮ್ಮ ಸಂಪ್ರದಾಯಸ್ಥರಿಗೆ ಮಾತ್ರ ಈ ವಿಷಯಗಳು ಸ್ಫುರಿಸುದುದೇಕೆ, ಇದು ಸಂಗತವೇ ಎಂದರೆ ನಿಧಿದೃಷ್ಟಾಂತ ಪ್ರದರ್ಶನ ಪೂರ್ವಕ

**ವಿಶ್ರಾಮ್ಯದ್ಭಿರುಪರ್ಯುಪರ್ಯಪಿ ದಿವಾನಕ್ತಂ ಬಹಿರ್ದರ್ಶನೈ**
**ರಸ್ಮದ್ದೇಶಿಕ ಸಂಪ್ರದಾಯ ರಹಿತೈ ರದ್ಯಾಪಿ ನಾಲಕ್ಷಿತಃ ।**
**ಸ್ವಪ್ರಾಪ್ತೇಸ್ಸ್ವಯಮೇವ ಸಾಧನತಯಾ ಜೋಘುಷ್ಯಮಾಣ ಶ್ರುತೌ ।**
**ಸತ್ವಸ್ಥೇಷು ಭಜೇತ ಸನ್ನಿಧಿ ಮಸೌ ಶಾಂತಾವಧಿ ಶ್ಶೇವಧಿಃ ॥ ೫೨ ॥**

**ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ ಶ್ರೀ ಮದ್ವೇಙ್ಕಟನಾಥಸ್ಯ**

**ವೇದಾಂತಾಚಾರ್ಯಸ್ಯ ಕೃತಿಷು, ಶ್ರೀ ಮದ್ರಹಸ್ಯತ್ರಯಸಾರೇ**

**ಸಿದ್ಧೋಪಾಯ ಶೋಧನಾಧಿಕಾರಸ್ತ್ರಯೋವಿಂಶಃ.**

**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ**

---

ವಾಗಿ, ಸಂಗತವೆಂದು ಹೇಳಿ, ಅಧಿಕಾರಾರ್ಥವನ್ನು '**ವಿಶ್ರಾಮ್ಯದ್ಭಿಃ**' ಎಂಬ ಶ್ಲೋಕದಿಂದ ಸಂಗ್ರಹಿಸುತ್ತಾರೆ. ಆದಾಗಿ, **ದಿವಾನಕ್ತಂ** – ಹಗಲೂ ರಾತ್ರಿಯೂ, ಯಾವಾಗಲೂ ಎಂದರ್ಥ, **ಉಪರ್ಯುಪರಿ** – ಮೇಲೆ ಮೇಲೆ **ವಿಶ್ರಾಮ್ಯದ್ಭಿರಪಿ** – ವಿಶ್ರಾಂತಿ ಪಡೆಯುವವರಾಗಿದ್ದರೂ, **ಬಹಿರ್ದರ್ಶನೈಃ** – ಬಹಿರೇವ ದರ್ಶನಂ ಯೇಷಾಂತೈಃ – ಹಿರಣ್ಯನಿಧಿಗೆ ಸದೃಶವಾದ ಸಿದ್ಧೋಪಾಯನು ಹೃದಯಾಕಾಶದಲ್ಲಿದ್ದರೂ ಅವನನ್ನು ನೋಡದೆ, ಹೊರಗಡೆಯೇ ನೋಡುತ್ತಿರುವವರಾಗಿ, **ಅಸ್ಮದ್ದೇಶಿಕ ಸಂಪ್ರದಾಯರಹಿತೈಃ** – ಮಡ್ಡಪ್ಪಳ್ಳಿಯಾಚ್ಚಾನ್ ಮೂಲಕವಾಗಿ ಬಂದ ಸಂಪ್ರದಾಯವೆಂಬ ಸಿದ್ಧಾಂಜನ ರಹಿತರಾದ ಇತರರಿಂದ, **ಅದ್ಯಾಪಿ** – ಆಳ್ವಾರ್ ನಾಥ ಯಾಮುನ ಭಾಷ್ಯಕಾರರುಗಳಿಂದ ಪ್ರವರ್ತಿತವಾಗಿದ್ದರೂ, ಇಲ್ಲಿಯವರೆಗೆ, **ನಾಲಕ್ಷಿತಃ** – ಕಾಣಲ್ಪಟ್ಟಿಲ್ಲ. ಆದರಿಂದ,"ತದ್ಯಥಾ ಹಿರಣ್ಯನಿಧಿಂ ನಿಹಿತಂ ಅಕ್ಷೇತ್ರಜ್ಞಾ ಉಪರ್ಯುಪರಿಸಂಚರಂತೋ ನವಿಂದೇಯುಃ, ಏವಮೇವೇಮಾಃ ಸರ್ವಾಃ ಪ್ರಜಾಃ, ಅಹರಹರ್ಗಚ್ಛಂತ್ಯಃ ಏತಂ ಬ್ರಹ್ಮಲೋಕಂ ನವಿಂದಂತಿ ಅನೃತೇನ ಹಿ ಪ್ರತ್ಯೂಢಾಃ" ಎಂಬ ಶ್ರುತಿ ವಾಕ್ಯವು ಜ್ಞಾಪಿಸಲ್ಪಟ್ಟಿತು. ಇದರ ಅರ್ಥವೇನೆಂದರೆ :– ಭೂಮಿಯೊಳಗೆ ಇಟ್ಟಿರುವ ಹಣದ ಮೂಟೆಯನ್ನು ಕಣ್ಣಿಗೆ ಅಂಜನಾದಿಗಳನ್ನು ಹಾಕಿಕೊಂಡು ಭೂಮಿ ಪರೀಕ್ಷೆ ಮಾಡದವರು, ಆ ಭೂಮಿಯ ಮೇಲೆ ನಿತ್ಯವೂ ಸಂಚಾರ ಮಾಡುತ್ತಿದ್ದರೂ ನೋಡಲಾರರು. ಅದೇ ರೀತಿಯಲ್ಲಿ ಎಲ್ಲಾ ಪ್ರಜೆಗಳೂ ಪ್ರತಿದಿನವೂ ಸುಷುಪ್ತಿ ಕಾಲದಲ್ಲಿ ಭಗವಂತನ ಮಡಿಯಲ್ಲಿ ಮಲಗಿದ್ದು, ಜಾಗರಾದಿ ದಶೆಯಲ್ಲಿ ಎದ್ದು ಬಂದರೂ, ಆ ಭಗವಂತನನ್ನು ತಿಳಿದುಕೊಳ್ಳಲಾರರು. ಕಾರಣ ಪುಣ್ಯಪಾಪ ರೂಪ ಕರ್ಮ (ಅನೃತ) ದಿಂದ ವಿಪರೀತವಾದ ದೃಷ್ಟಿಯುಳ್ಳವರು. ನಮ್ಮ ಸಂಪ್ರದಾಯವೆಂಬ ಅಂಜನವನ್ನು ಕಣ್ಣಿಗೆ ಹಾಕಿಕೊಂಡು ನೋಡುವವರಿಗೆ, ಆ ಭಗವಂತನು ಕಾಣಿಸು ತ್ತಾನೆಂದು ತಾತ್ಪರ್ಯ. ಇದನ್ನು **ಸ್ವಪ್ರಾಪ್ತೇಃ ಸ್ವಯಮೇವಸಾಧನತಯಾ** ಎಂದು ಅನುಗ್ರಹಿಸುತ್ತಾರೆ. ಆದಾಗಿ ತನ್ನನ್ನು ಪಡೆಯಲು ಭಗವಂತನು ತಾನೇ ಉಪಾಯಭೂತನು, ಎಂದು **ಶ್ರುತೌ** – "ಆತ್ಮೈಷ ಶ್ರೇಷ್ಠಃ । ಯಮೇವೈಷ ವೃಣುತೇ ತೇನಲಭ್ಯಃ", ಎಂದು**ಜೋಘುಷ್ಯಮಾಣಃ** – ಉದ್ಘೋಷಿಸಲ್ಪಡುವ, **ಅಸೌ** – ಸಿದ್ಧೋಪಾಯನಾದ **ಶಾಂತಾವಧಿಃ** – ಎಲ್ಲೆ ಇಲ್ಲದ, **ಶೇವಧಿಃ** – ಮಹಾನಿಧಿಯಂತಿರುವ ಶ್ರಿಯಃಪತಿಯು **ಸತ್ವಸ್ಥೇಷು** – ಸತ್ವ ನಿಷ್ಠರಾಗಿ, ನಮ್ಮಾಚಾರ್ಯರುಗಳ ಸಂಪ್ರದಾಯ ನಿಷ್ಠರಾದ, ಮಹಾಪುರುಷರು, ಗಳಲ್ಲಿ **ಸನ್ನಿಧಿಂ** – ಸಾನ್ನಿಧ್ಯವನ್ನು, **ಭಜೇತ** – ಹೊಂದುತ್ತಾನೆ.

ಭೂಮಿಯೊಳಗಿರುವ ಹಿರಣ್ಯನಿಧಿಯು ಸಿದ್ಧಾಂಜನ ಲೇಪವಿಲ್ಲದವರ ಕಣ್ಣಿಗೆ ಕಾಣದಂತೆ, ನಮ್ಮ ಪೂರ್ವಾಚಾರ್ಯರ ಸಂಪ್ರದಾಯವೆಂಬ ಅಂಜನವಿಲ್ಲದವರಿಗೆ ಶ್ರಿಯಃ ಪತಿಯಾದ ನಾರಾಯಣನು ಸಿದ್ಧೋಪಾಯನೆಂಬುದು ತಿಳಿಯದು, ಎಂದು ತಾತ್ಪರ್ಯ.

ಸಿದ್ಧೋಪಾಯ ಶೋಧನಾಧಿಕಾರಕ್ಕೆ "ಸಾರಚಂದ್ರಿಕೆ" ಎಂಬ ವ್ಯಾಖ್ಯಾನವು ಸಮಾಪ್ತ.

**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ**

ಶ್ರಿಯೈ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

# 24. ಸಾಧ್ಯೋಪಾಯ ಶೋಧನಾಧಿಕಾರಃ

**ಯಥಾಧಿಕರಣಂ ಪ್ರಭುರ್ಯಜನ ದಾನ ಹೋಮಾರ್ಚನಾ**
**ಭರನ್ಯಸನ ಭಾವನಾ ಪ್ರಭೃತಿಭಿಸ್ಸಮಾರಾಧಿತಃ ।**
**ಫಲಂದಿಶತಿ ದೇಹಿನಾ ಮಿತಿಹಿ ಸಂಪ್ರದಾಯ ಸ್ಥಿತಿಃ**
**ಶ್ರುತಿ ಸ್ಮೃತಿ ಗುರೂಕ್ತಿಭಿರ್ನಯವತೀಭಿ ರಾಭಾತಿ ನಃ ॥೫೩॥**

---

**ಶ್ರೀಮತೆ ನಿಗಮಾಂತ ಮಹಾದೇಶಿಕಾಯ ನಮಃ**

ಶ್ರೀಮದ್ರಹಸ್ಯತ್ರಯಸಾರದಲ್ಲಿ **ಸಾಧ್ಯೋಪಾಯ ಶೋಧನಾಧಿಕಾರಕ್ಕೆ "ಸಾರಚಂದ್ರಿಕಾ"** ವ್ಯಾಖ್ಯಾ

ಶ್ರೀ ವಿಶಿಷ್ಟನಾದ ನಾರಾಯಣನೇ ಸಿದ್ಧೋಪಾಯವೆಂದು ಪೂರ್ವಾಧಿಕಾರದಲ್ಲಿ ನಿಷ್ಕರ್ಷಿಸಲ್ಪಟ್ಟಿತು. ಈ ಅಧಿಕಾರದಲ್ಲಿ ತತ್ಪ್ರಸಾದ ಜನಕವಾದ ಸಾಧ್ಯೋಪಾಯದ ಸ್ವರೂಪಾಧಿಕಾರಪರಿಕರಗಳಲ್ಲಿ ಉಂಟಾಗುವ ಸಂದೇಹಗಳನ್ನು ಹೋಗಲಾಡಿಸಿ ಸಾಧ್ಯೋಪಾಯ ಶೋಧನವನ್ನು ಮಾಡಿ, ಸಿದ್ಧೋಪಾಯನಾದ ಭಗವಂತನು ಸಾಧ್ಯೋಪಾಯದಿಂದ ಆರಾಧಿಸಲ್ಪಟ್ಟು ಪ್ರಸನ್ನನಾಗಿಯೇ, ಫಲಪ್ರದನೆಂದು ಅಧಿಕಾರಾರ್ಥವನ್ನು **ಯಥಾಧಿಕರಣಂ** ಎಂದಾರಂಭಿಸಿ ಸಂಗ್ರಹಿಸುತ್ತಾರೆ. **ಯಥಾಧಿಕರಣಂ** – ಅಧಿಕಾರವನ್ನು ಅತಿಕ್ರಮಿಸದೆ, ಅಧಿಕಾರವು ಯಥಾವಸ್ಥಿತವಾದ ಸಾಧ್ಯೋಪಾಯಜ್ಞಾನ, ತದನುಷ್ಠಾನ ಶಕ್ತಿ, ಶಾಸ್ತ್ರಾಭಿಮತವಾದ ಜಾತಿಗುಣಾದಿ, ಆಕಿಂಚನ್ಯಾನನ್ಯಗತಿತ್ವ, ತತ್ತತ್ಫಲಾರ್ಥಿತ್ವವೆಂಬುದು. **ಯಜನ** – ಯಾಗ, **ದಾನ** – "ಹಿರಣ್ಯಂದದಾತಿ" ಎಂಬ ಪರಸ್ವತ್ವಾಪಾದನ ರೂಪ ವ್ಯಾಪಾರ, **ಹೋಮ** – "ಜುಹೋತಿ" ಎಂಬ ಚೋದನಾ, ಚೋದಿತವಾದ ಒಂದು ವ್ಯಾಪಾರ, **ಅರ್ಚನ** – ಅರ್ಚನೆ, **ಭರನ್ಯಸನ** – ಭರಸಮರ್ಪಣ, **ಭಾವನಾ** – ನಿಧಿಧ್ಯಾಸನಾ **ಪ್ರಭೃತಿಭಿಃ** – ಕರ್ಮಯೋಗ ಜ್ಞಾನಯೋಗ ಮೊದಲಾದವುಗಳಿಂದ, **ಸಮಾರಾಧಿತಃ** – ಆರಾಧಿಸಲ್ಪಟ್ಟವನಾಗಿ, **ಪ್ರಭುಃ** – "ಅಹಂಹಿ ಸರ್ವಯಜ್ಞಾನಾಂ ಭೋಕ್ತಾಚ ಪ್ರಭು ರೇವಚ" ಎಂದು ಸರ್ವಯಜ್ಞಸಮಾರಾಧ್ಯನೂ, ಫಲಪ್ರದಾನಸಮರ್ಥನೂ (ಪ್ರಭು) ಆದ ಭಗವಂತನು, **ದೇಹಿನಾಂ** – ಆಯಾಯಾ ಅನುಷ್ಠಾನಗಳಿಗೆ ಉಪಯುಕ್ತವಾದ ದೇಹವನ್ನು ಉಳ್ಳವರಿಗೆ, **ಫಲಂದಿಶತಿ** – ಫಲವನ್ನು **ಕೊಡುತ್ತಾನೆ.** **ಇತಿ ಹಿ** – ಹೀಗೆ ಪ್ರಸಿದ್ಧವಾದ, **ಸಂಪ್ರದಾಯಸ್ಥಿತಿಃ** – "ಫಲಮತ ಉಪಪತ್ತೇಃ" ಎಂಬ ಸೂತ್ರದಲ್ಲಿಯೂ, ತದ್ಭಾಷ್ಯಾದಿಗಳಲ್ಲಿಯೂ, ಉಪದೇಶ ಪರಂಪರೆಗಳಲ್ಲಿಯೂ ಬಂದ ಸಂಪ್ರದಾಯದ ವ್ಯವಸ್ಥೆಯು, **ನಯವತೀಭಿಃ** – ಸಮೀಚೀನಗಳಾದ ನ್ಯಾಯಗಳಿಂದ, **ಶ್ರುತಿಸ್ಮೃತಿ ಗುರೂಕ್ತಿಭಿಃ** – "ಸವಾಏಷ ಮಹಾನಜ ಆತ್ಮಾ", "ಅನ್ನಾದೋವಸುದಾನಃ", "ಸಏನಂ

**ಇಪ್ಪಡಿ ಸರ್ವಜ್ಞನಾಯ್, ಸರ್ವಶಕ್ತಿಯಾಯ್, ಪರಮಕಾರುಣಿಕನಾಯ್, ಸರ್ವಶೇಷಿಯಾಯ್ ಸಪತ್ನೀಕನಾಯ್, ಸರ್ವಲೋಕ ಶರಣ್ಯನಾನ ಸಿದ್ಧೋಪಾಯ ವಿಶೇಷನ್ ತೆಳಿನ್ದಾಲುನ್**

**1) "ಆರೋಗ್ಯ ಮಿನ್ದ್ರಿಯೌಲ್ಬಣ್ಯ ಮೈಶ್ವರ್ಯಂ ಶತ್ರು ಶಾಲಿತಾ ।**
**ವಿಯೋಗೋ ಬಾಂಧವೈರಾಯುಃ ಕಿಂತದ್ಯೇನಾತ್ರತುಷ್ಯತಿ ॥**

**ಎನ್ಗಿರಪಡಿಯೇ ವಿವೇಕವಿಲ್ಲಾದಾರ್ಕ್ಕು ಗುಣಮಾಯ್ ತೋತ್ತಿನವೈಯುಮ್ ದೋಷಮಾನಪಡಿ ಕಂಡು**

---

ಪ್ರೀತಃ ಪ್ರಿಣಾತಿ", "ಸಏವೈನಂ ಭೂತಿಂ ಗಮಯತಿ", "ಯಮೇವೈಷ ವೃಣುತೇ ತೇನಲಭ್ಯಃ", ಎಂಬ ಶ್ರುತಿಗಳಿಂದಲೂ, "ಲಭತೇ ಚತತಃ ಕಾಮಾನ್ ಮ ಯ್ಯೈವ ವಿಹಿತಾನ್ ಹಿ ತಾನ್" ಇತ್ಯಾದಿ ಸ್ಮೃತಿಗಳಿಂದಲೂ, "ಸಏವಹಿ ಸರ್ವಜ್ಞಃ ಸರ್ವಶಕ್ತಃ ಮಹೋದಾರಃ ಯಾಗದಾನ ಹೋಮಾದಿಭಿರುಪಾಸನೇನಚಾರಾಧಿತಃ ಐಹಿಕಾಮುಷ್ಮಿಕ ಜಾತಂ ಸ್ವಸ್ವರೂಪಾವಾಪ್ತಿ ರೂಪಂಚ ಫಲಂ ದಾತು ಮೀಷ್ಟೇ", ಎಂಬ ಆಚಾರ್ಯ ಶ್ರೀ ಸೂಕ್ತಿಗಳಿಂದಲೂ **ನಃ** – ಶ್ರೀ ಭಾಷ್ಯಕಾರರ ಮಹಾನಸ ಕೈಂಕರ್ಯವನ್ನು ಮಾಡುತ್ತಿದ್ದ ವೇದಾಂತೋದಯನರಾದ ಕಿಡಾಂಬಿ ಆಚ್ಚಾನ್ ಎಂಬುವರ ಸಂಪ್ರದಾಯ ನಿಷ್ಠರಾದ ನಮಗೆ. **ಆಭಾತಿ** – ಸ್ಪಷ್ಟವಾಗಿ ಪ್ರಕಾಶಿಸುತ್ತದೆ.

### ಸಾಧ್ಯೋಪಾಯವನ್ನು ಕುರಿತು ತಿಳಿಯಬೇಕಾದುದು ಅವಶ್ಯ.

ಅನಂತರ ಪೂರ್ವಾಧಿಕಾರದ ಅರ್ಥವನ್ನು ಸಂಗ್ರಹಿಸಿ, ಸಿದ್ಧೋಪಾಯನಾದ ಭಗವಂತನ ವಶೀಕರಣಾರ್ಥವಾಗಿ ಸಾಧ್ಯೋಪಾಯವನ್ನು ಕೂಲಂಕಷವಾಗಿ ತಿಳಿದುಕೊಳ್ಳದೆ ಹೋದರೆ, ತದ್ವಶೀಕರಣಕ್ಕೆ ಬೇರೆ ಮಾರ್ಗವಿಲ್ಲವೆಂದು **ಇಪ್ಪಡಿ ಸರ್ವಜ್ಞನಾಯ್**–ಎಂದಾರಂಭಿಸಿ ಆಚಾರ್ಯ ಶ್ರೇಷ್ಠರು ಅನುಗ್ರಹಿಸುತ್ತಾರೆ. ಅದಾಗಿ **ಸರ್ವಜ್ಞನಾಯ್ ಸರ್ವಶಕ್ತಿಯಾಯ್** ಇತ್ಯಾದಿ ವಿಶೇಷಣಗಳು ದಂಪತಿ ಸಾಧಾರಣವಾಗಿ ಶರಣ್ಯತ್ವಕ್ಕೆ ಉಪಯುಕ್ತಗಳಾದ ಗುಣಭೂತಗಳು, ಎಂದು ಮೊದಲು ಹೇಳಲ್ಪಟ್ಟವು ಅನಂತರ **ಸಪ್ಯತ್ನೀಕನಾಯ್** ಎಂದು ಪ್ರವೃತ್ತವಾದ ಸರ್ವಲೋಕ ಶರಣ್ಯತ್ವವು 'ಸಪತ್ನಿಕಾನ್ವಯೀ' ಎಂಬುದು ಸ್ವರಸತರ- ಸರ್ವಜ್ಞತ್ವಾದಿ ಗುಣಗಳಿಂದ ಕೂಡಿ ಸಪತ್ನೀಕವಾದ–ಲಕ್ಷ್ಮಿ ವಿಶಿಷ್ಟವಾದ ಸಿದ್ಧೋಪಾಯ ವಿಶೇಷವನ್ನು ತಿಳಿದುಕೊಳ್ಳದೆ ಸಾಂಗೋಪಾಸನ, ಸಾಂಗ ಪ್ರಪದನಗಳಲ್ಲಿ, ಸಪತ್ನಿಕನನ್ನಾಗಿ ಭಗವಂತನನ್ನು ಅನುಸಂಧಾನ ಮಾಡದೆ ಹೋದರೆ, ಬ್ರಹ್ಮ ವಿದ್ಯೆಯು ಯಥಾವಸ್ಥಿತವಾಗಿ ನಿಷ್ಪಾದನವಾಗುವುದಿಲ್ಲವೆಂಬುದು ಸೂಚಿತ.

ಆದ್ದರಿಂದ ಮೇಲೆ ಹೇಳಿದ ವಿಶೇಷಣಗಳಿಂದ ಕೂಡಿದ ಸಿದ್ಧೋಪಾಯವನ್ನು ತಿಳಿದು ಕೊಂಡರೂ' 1) **ಆರೋಗ್ಯಮಿಂದ್ರಿಯೌಲ್ಬಣ್ಯಂ** – ಇತ್ಯಾದಿ–ಆರೋಗ್ಯವು ಇಂದ್ರಿಯಗಳಿಗೆ ಪ್ರಾಬಲ್ಯವನ್ನು ಕೊಡುತ್ತದೆ. ಐಶ್ವರ್ಯವು ಶತ್ರುಗಳನ್ನುಂಟು ಮಾಡುತ್ತದೆ. ಆಯುಸ್ಸು ಅಧಿಕವಾದರೆ ಬಂಧುವಿಯೋಗಾದಿ ದುಃಖವು ಏರ್ಪಡುತ್ತದೆ. ಆದ್ದರಿಂದ ಈ ಲೋಕದಲ್ಲಿ ಸಂತೋಷಜನಕವಾದದು ಯಾವುದು ? ಯಾವುದೂ ಇಲ್ಲವೆಂದರ್ಥ. ಈ ರೀತಿಯಲ್ಲಿ ವಿವೇಕವಿಲ್ಲದವರಿಗೆ ಗುಣವಾಗಿ ತೋರುವುವು ವಿವೇಕಿಗಳಿಗೆ ದೋಷಗಳಿಂದ ಕೂಡಿದುದಾಗಿ ತಿಳಿದು, ಸಂಸಾರದಲ್ಲಿ

---

1) ಆರೋಗ್ಯವು ಇಂದ್ರಿಯಗಳಿಗೆ ಅಧಿಕ ಶಕ್ತಿಯನ್ನು ಕೊಟ್ಟು ಕಾಮ ಪ್ರವಣತೆಯನ್ನುಂಟು ಮಾಡುತ್ತದೆ. ಐಶ್ವರ್ಯವು ಶತ್ರುಗಳನ್ನುಂಟು ಮಾಡುತ್ತದೆ. ಆಯುರಭಿವೃದ್ಧಿಯಿಂದ ಪ್ರಿಯ ಬಂಧು ಜನರ ವಿಯೋಗವು ಏರ್ಪಟ್ಟು ದುಃಖವು ಉಂಟಾಗುತ್ತದೆ. ಆದರಿಂದ ಈ ಲೋಕದಲ್ಲಿ ಸಂತೋಷಪಡಲು ಏನಿದೆ.

**ಸಂಸಾರ ವೈರಾಗ್ಯಮ್ ಪೂರ್ಣಮಾನಾಲುಮ್ 2) "ಪರಮಾತ್ಮನಿಯೋ ರಕ್ತಃ" ಎನ್ಱಿರಪಡಿಯೇ ಪ್ರಾಪ್ಯ ರುಚಿಯುಂಡಾನಾಲುಮ್**

**3) "ಮಹತಾ ಪುಣ್ಯಪಣ್ಯೇನ ಕ್ರೀತೇಯಂ ಕಾಯನೌ ಸ್ತ್ವಯಾ।
ಪ್ರಾಪ್ತುಂ ದುಃಖೋದಧೇಃ ಪಾರಂತ್ವರ ಯಾವನ್ನಭಿದ್ಯತೇ ॥"**

**ಎನ್ಱಿರ ಪಡಿಯೇ ತ್ವರೈ ಪಿಱನ್ದಾಲುಮ್, ಅನಾದಿಯಾಹ ಅನುವೃತ್ತಮಾನ ಅಜ್ಞಾತಿಲಂಘನ ಮಡಿಯಾಹ ಪ್ಪಿಱಿನ್ದು ನಿಱ್ಕಿರ ಬಂಧಕಮಾನ ಭಗವನ್ನಿಗ್ರಹತ್ತುಕ್ಕು ಪ್ರಶಮನಮಾಹ "ಮಾಮೇಕಂ ಶರಣಂ ವ್ರಜ" ಎನ್ಱ ವಿಧಿವಾಕ್ಯ (ತ್ತಿ) ತ್ತಾಲುಮ್, "ಪ್ರಪದ್ಯೇ" ಎನ್ಱ ಅನುಷ್ಠಾನ ವಾಕ್ಯ (ತ್ತಿ) ತ್ತಾಲುಮ್ ಶೊಲ್ಲಪ್ಪಟ್ಟ ಸಾಧ್ಯೋಪಾಯ ವಿಶೇಷಂ ತೆಳಿಯಾದಪೋದು ಸಿದ್ಧೋಪಾಯ ಭೂತನಾದ ಸರ್ವೇಶ್ವರನೈ ವಶೀಕರಿಕ್ಕವಿರಹಿಲ್ಲೈ. ಆಹೈಯಾಲ್ ಅಧಿಕಾರತ್ತಿಲುಮ್ ಸ್ವರೂಪತ್ತಿಲುಮ್, ಪರಿಕರಙ್ಗಳಿಲುಮ್, ವರುಮ್ ಕಲಕ್ಕಙ್ಗಳೈ ಶಮಿಪ್ಪಿಕ್ಕಿರೋಮ್ :–**

## ಪ್ರಪತ್ತೇಃ ಸ್ಸರ್ವಾಧಿಕಾರತ್ವ ಸಮರ್ಥನಮ್

**ಇಪ್ಪ್ರಪತ್ತಿಯುಂ ವೊರು ವೈದಿಕ ಧರ್ಮಮನ್ರೋ? ಇದುವುಮೊರು ಯಾಗ ವಿಶೇಷ ಮಾಹವನ್ರೋ**

---

ವೈರಾಗ್ಯವು ಪೂರ್ಣವಾಗಿ ಉಂಟಾದರೂ 2) **ಪರಮಾತ್ಮನಿಯೋರಕ್ತಃ** ಇತ್ಯಾದಿ ಪರಮಾತ್ಮನಲ್ಲಿ ಪ್ರೀತಿಯುಳ್ಳವನಾಗಿ ಪ್ರಾಪ್ಯರುಚಿ ಉಂಟಾದರೂ 3) **ಮಹತಾಪುಣ್ಯಪಣ್ಯೇನ** ಎಂಬಂತೆ ಸಂಸಾರವನ್ನು ದಾಟಬೇಕೆಂಬ ತ್ವರೆಯುಂಟಾದರೂ, **ಅನಾದಿಯಾಹ** ಇತ್ಯಾದಿ–ಅನಾದಿಯಾಗಿ ಅನುಸರಿಸಿ ಬಂದಿರುವ ಭಗವದಾಜ್ಞಾತಿಲಂಘನ ಕಾರಣವಾಗಿ ಉಂಟಾಗಿರುವ ಬಂಧಕವಾದ ಭಗವನ್ನಿಗ್ರಹವನ್ನು ಹೋಗಲಾಡಿಸಲು 4) **'ಮಾಮೇಕಂ ಶರಣಂವ್ರಜ'** (ಗೀತೆ 18ನೇ ಅಧ್ಯಾಯ) ಎಂಬ ವಿಧಿ ವಾಕ್ಯದಿಂದಲೂ, **ಪ್ರಪದ್ಯೇ** ಎಂಬ ಅನುಷ್ಠಾನಕಾಲಿಕ ವಾಕ್ಯದಿಂದಲೂ ಸ್ಫೋರಿತವಾದ **ಸಾಧ್ಯೋಪಾಯ ವಿಶೇಷಂ**–ಶರಣಾಗತಿಯ ಸ್ವರೂಪವನ್ನು ತಿಳಿಯದೆ ಹೋದರೆ, ಸಿದ್ಧೋಪಾಯಭೂತನಾದ ಸರ್ವೇಶ್ವರನಾದ ಭಗವಂತನನ್ನು **ವಶೀಕರಿಕ್ಕವಿರಹಿಲ್ಲೈ** – ವಶಪಡಿಸಿಕೊಳ್ಳಲು ಬೇರೆ ಉಪಾಯವಿಲ್ಲ. **ಆಹೈಯಾಲ್** ಇತ್ಯಾದಿ – ಆದ್ದರಿಂದ ಅದರ ಅಧಿಕಾರದಲ್ಲಿಯೂ, ಸ್ವರೂಪದಲ್ಲಿಯೂ ಪರಿಕರ – ಅಂಗಗಳಲ್ಲಿಯೂ ಉಂಟಾಗುವ ಸಂದೇಹಗಳನ್ನು **ಶಮಿಪ್ಪಿಕ್ಕಿರೋಮ್** – ಹೋಗಲಾಡಿಸುತ್ತೇವೆ, ಎಂದು ಆಚಾರ್ಯರು ಪ್ರತಿಜ್ಞೆ ಮಾಡುತ್ತಾರೆ.

## ಪ್ರಪತ್ತಿಯು ಸರ್ವಾಧಿಕಾರವೆಂಬುದರಲ್ಲಿ ಆಕ್ಷೇಪ ಸಮಾಧಾನಗಳು

**ಇಪ್ರಪತ್ತಿಯೂ** ಇತ್ಯಾದಿ – ಈ ಪ್ರಪತ್ತಿಯೂ ಒಂದು ವೇದೋಕ್ತವಾದ ಧರ್ಮವಲ್ಲವೇ. ವೇದೋಕ್ತವಾದ ಧರ್ಮಗಳಲ್ಲಿ ತ್ರೈವರ್ಣಿಕರಿಗೆ ಮಾತ್ರ ಅಧಿಕಾರವಲ್ಲವೇ ? ಎಂಬುದು, ಮೊದಲನೆಯ ಶಂಕೆ. "ಸತ್ಯಂ

---

2) ಪರಮಾತ್ಮನಿಯೋರಕ್ತಃ ವಿರಕ್ತೋಽಪರಮಾತ್ಮನಿ।
[illegible]– ಪರಮಾತ್ಮನಲ್ಲಿ ಪ್ರೀತಿಯುಳ್ಳವನು. ತದ್ವ್ಯತಿರಿಕ್ತವಾದ ಐಶ್ವರ್ಯ ಕೈವಲ್ಯಾದಿಗಳಲ್ಲಿ ವೈರಾಗ್ಯವನ್ನುಳ್ಳವನಾಗಿರಬೇಕು.

3) ವರಾಹಪುರಾಣ–ಮಹತ್ತರವಾದ ಪುಣ್ಯವೆಂಬ ಕ್ರಯಸಾಧಕ ದ್ರವ್ಯದಿಂದ ಈ ಶರೀರವೆಂಬ ದೋಣಿಯು ದುಃಖಸಾಗರದ ಎಲ್ಲೆಯನ್ನು ದಾಟಲು ಕ್ರೀತವಾಗಿದೆ. ಅದು ಒಡೆದು ಹೋಗುವುದಕ್ಕೆ ಮುಂಚೆಯೇ, ದುಃಖಸಾಗರದ ಆಚೆ ದಡವಾದ ಮೋಕ್ಷವನ್ನು ಪಡೆಯಲು ತ್ವರಿಸು.

**ನ್ಯಾಸವಿದ್ಯೈಯಿಲೇಯೋದಪ್ಪಡುಹಿರದು. ಅಹೈಯಾಲ್ ಇದು ಸರ್ವಾಧಿಕಾರಮಾಹಕ್ಕೂಡುಮೋವೆನ್ರು ಶಿಲರ್ ವಿಚಾರಿಪ್ಪರ್‌ಹಳ್.**

**ಇದು ಸರ್ವೇಶ್ವರನ್ನೈ ಸರ್ವರುಕ್ಕುಮ್ ಶರಣಮೆನ್ರೋದುಹಿರ ಶ್ವೇತಾಶ್ವತರ ಶ್ರುತಿಬಲತ್ತಾಲೇ ಪರಿಹೃತಮ್. ಇವ್ವರ್ಥಮ್ 1) "ಸರ್ವಲೋಕಶರಣ್ಯಾಯ"**

**2) ಸರ್ವಯೋಗ್ಯಮನಾಯಾಸ ಮಪ್ರಮಾದ ಮನೂಪಮಮ್ ।**
**ಪ್ರಪನ್ನಾರ್ತಿ ಹರಂ ವಿಷ್ಣುಂ ಶರಣಂ ಗಂತು ಮರ್ಹಸಿ"**

**ಇತ್ಯಾದ್ಯುಪಬೃಹ್ಮಣಙ್ಗಳಾಲುಮ್ 3) "ತ್ರಯಾಣಾಂ ಕ್ಷತ್ರಿಯಾದೀನಾಂ" ಎನ್ರು ತುಡಙ್ಗಿ ಶೂದ್ರ**

---

ಪದ" ಎಂಬ ಸತ್ಯವಚನಾದಿ ವೇದೋಕ್ತ ಧರ್ಮಗಳಲ್ಲಿ ಸರ್ವರಿಗೂ ಅಧಿಕಾರವಿರುವಂತೆ ಬಾಧಕವಿಲ್ಲವೆಂದರೆ ಬಾಧಕಾಂತರವನ್ನು **ಇದುವುಮೊರು** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಈ ನ್ಯಾಸ ವಿದ್ಯೆಯನ್ನೂ ತ್ರೈವರ್ಣಿಕಾಧಿಕಾರವಾದ ಬ್ರಹ್ಮ ವಿದ್ಯೆಗಳಲ್ಲಿ ಒಂದಾಗಿ, ಪರಿಗಣಿಸಿ, "ತಸ್ಯೈವಂ ವಿದುಷೋಯಜ್ಞಸ್ಯಾತ್ಮಾ" ಎಂಬ ಅನುವಾಕದಲ್ಲಿ ಈ ಪ್ರಪತ್ತಿಯನ್ನು **ಯಾಗವಿಶೇಷಮಾಹ** – ಯಾಗ ವಿಶೇಷವಾಗಿ ನ್ಯಾಸವಿದ್ಯಾ ನಿರೂಪಣ ಪ್ರಕರಣದಲ್ಲಿ **ಓದಪ್ಪಡುಹಿರದು** – ವೇದದಲ್ಲಿ ಹೇಳಲ್ಪಟ್ಟಿದೆ. "ತಸ್ಮಾಚ್ಛೂದ್ರೋ ಯಜ್ಞೇಽನವಕ್ಲ್‌ಪ್ತಃ" ಎಂದು ಶೂದ್ರನು ಯಾಗ ಸಾಮಾನ್ಯದಲ್ಲಿ ಅಧಿಕಾರವಿಲ್ಲದವನು ಎಂದು ಹೇಳಿರುವಾಗ, ಈ ನ್ಯಾಸವಿದ್ಯೆಗೆ ಸರ್ವಾಧಿಕಾರತ್ವವು ಘಟಿಸುವುದಿಲ್ಲವೆಂಬುದು ಶಂಕಾಬೀಜ. ಇದನ್ನು **ಆಹೈಯಾಲ್** ಇತ್ಯಾದಿ ವಾಕ್ಯದಿಂದ ಪ್ರಶ್ನಿಸುತ್ತಾರೆ. ಆದ್ದರಿಂದ ಇದು ಸರ್ವಾಧಿಕಾರವಾಗಲು ಯೋಗ್ಯವೇ, ಎಂದು ಕೆಲವರು ವಿಚಾರಿಸುತ್ತಾರೆ. ಇದಕ್ಕೆ ಪರಿಹಾರವನ್ನು **"ಇದು ಸರ್ವೇಶ್ವರನ್ನೈ ಸರ್ವರುಕ್ಕುಂ"** ಇತ್ಯಾದಿ ಆರಂಭಿಸಿ ನೀಡುತ್ತಾರೆ. ಅದಾಗಿ ಸರ್ವೇಶ್ವರನು ಸರ್ವರಿಗೂ ಶರಣ್ಯನು – ರಕ್ಷಕನು ಎಂದು **ಓದುಹಿರ** – ಪಠಿಸುವ "ಸರ್ವಸ್ಯ ಶರಣಂ ಸುಹೃತ್" ಎಂಬ ಶ್ವೇತಾಶ್ವರ ಶ್ರುತಿ ಬಲದಿಂದ ಈ ಶಂಕೆಯು ಪರಿಹೃತವು. **ಇವ್ವರ್ಥಮ್** – ಈ ಅರ್ಥವು **1) ಸರ್ವಲೋಕ ಶರಣ್ಯಾಯ, 2) ಸರ್ವಯೋಗ್ಯಮನಾಯಾಸಂ.** ಇತ್ಯಾದ್ಯುಪ ಬೃಂಹಣಗಳಿಂದಲೂ **3) 'ತ್ರಯಾಣಾಂಕ್ಷತ್ರಿಯಾದೀನಾಂ' ಎನ್ರುತೊಡಂಗಿ** ಇತ್ಯಾದಿ, ಕ್ಷತ್ರಿಯರೆಂದು ಆರಂಭಿಸಿ, ವೈಶ್ಯ,

---

1) ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ !
**ನಿವೇದಯ ತ ಮಾಂಕ್ಷಿಪ್ರಂ ವಿಭೀಷಣ ಮುಪಸ್ಥಿತಮ್** ॥
ಸರ್ವಲೋಕಕ್ಕೂ ರಕ್ಷಕನು ನನಗೂ ರಕ್ಷಕನು ಎಂದು ತಾತ್ಪರ್ಯ. ಅಂಥಹ ಮಹೋದಾರ ಸ್ವಭಾವನಾದ ಶರಣಾಗತ ತ್ರಾಣ ದೀಕ್ಷಿತರಾಗಿ ರಘುಕುಲದಲ್ಲಿ ಅವತರಿಸಿರುವವ ಶ್ರೀರಾಮ ಚಂದ್ರನ ಪಾದಗಳಲ್ಲಿ ಉಪಸ್ಥಿತನಾಗಿ ಬಂದಿರುವ ವಿಭೀಷಣನಾದ ಮಾಂ-ನನ್ನನ್ನು ಈಗಲೇ, ನಿವೇದಯತ-ಸಮರ್ಪಿಸಿರಿ. ನನ್ನ ರಕ್ಷಾಭರವನ್ನು ಘಟಕರಾದ ನೀವು ಶ್ರೀರಾಮ ಚಂದ್ರನ ಪಾದಾರವಿಂದಗಳಲ್ಲಿ ಸಮರ್ಪಿಸಿರಿ, ಎಂದು ಪ್ರಾರ್ಥಿಸುತ್ತಾನೆ.

2) ಸರ್ವಲೋಕಗಳಿಗೂ (ಜನರಿಗೂ) ಶರಣ ಹೊಂದಲು ಯೋಗ್ಯನು ಆಯಾಸವನ್ನು ಕೊಡದವನು. ಪ್ರಮಾದ–ಅನವಧಾನತೆ. ಅದು ಇಲ್ಲದೆ ಆಶ್ರಯಿಸತಕ್ಕವನು. ಅನು+ಉಪಮಮ್-ತನಗೆ ಸಮರಿಲ್ಲದವನು. ಪ್ರಪನ್ನರ ದುಃಖಗಳನ್ನು ಹೋಗಲಾಡಿಸತಕ್ಕವನು ಅಂಥಹ ವಿಷ್ಣುವನ್ನು ಶರಣುಹೊಂದಲು–ಉಪಾಯವಾಗಿ ಆಶ್ರಯಿಸಲು ನೀನು ಅರ್ಹನಾಗಿದ್ದೀಯಾ. ಈ ವಿಶೇಷಣಗಳು ಭಗವಂತನಿಗೆ ಅನ್ವಯಿಸಿದರೂ, ಶರಣವರಣದಲ್ಲಿಯೂ ಅನ್ವಯಿಸುತ್ತವೆ. ಅಂದರೆ ಶರಣಾಗತಿಯು ಎಲ್ಲರಿಗೂ ಅರ್ಹವಾದದ್ದು, ಆಯಾಸವಿಲ್ಲದವರು ಅಜಾಗ್ರತೆಯಾಗಿ ಮಾಡತಕ್ಕದ್ದಲ್ಲ. ಸರ್ವೋತ್ಕೃಷ್ಟವಾದದ್ದು. ಪ್ರಪನ್ನರ ಕ್ಲೇಶಗಳನ್ನು ಹೋಗಲಾಡಿಸತಕ್ಕದುದು. ಇಂಥಹ ಶರಣಾಗತಿಯನ್ನು ಭಗವಂತನಲ್ಲಿ ಅನುಷ್ಠಿಸಿರಿ ಎಂದು ತಾತ್ಪರ್ಯ.

3) ಪು.ತಿ.ನೋ.

**ಪರ್ಯಂತಙ್ಗಳಾನ ವರ್ಣಂಗಳೈ ಯೆಡುತ್ತು "ಪ್ರಪನ್ನಾನಾಂಚ ತತ್ವತಃ" ಎನ್ರು ಶೊಲ್ಲುಹಿರ ಶ್ರೀ ಸಾತ್ವತ ವಚನತ್ತಾಲುಮ್,**

**"ಕುಯೋನಿಷ್ವಪಿ ಸಂಜಾತೋ ಯಸ್ಸಕೃಚ್ಛರಣಂಗತಃ ।**
**ತಂ ಮಾತಾ ಪಿತೃಹಂತಾರ ಮಪಿಪಾತಿಭವಾರ್ತಿಹಾ ॥"**
**ಎನ್ರು ಶೊಲ್ಲುಹಿರ ಸನತ್ಕುಮಾರ ಸಂಹಿತಾ ವಚನತ್ತಾಲುಮ್, ದೃಢೀಕೃತಮ್.**

**ಶೂದ್ರಾದೀನಾಂ ಉಪಾಸನೇಽನಧಿಕಾರಃ ನ ತು ಪ್ರಪತ್ತೌ.**

**ಆಹೈಯಾಲ್ ಉಪಾಸನಮ್ ತ್ರೈವರ್ಣಿಕಾಧಿಕಾರಮಾಹ ಅಪಶೂದ್ರಾಧಿ ಕರಣತ್ತಿಲೇ ಸಮರ್ಥಿತ ಮಾನಾಲುಮ್, ವೈದಿಕಙ್ಗಳಾನ ಸತ್ಯವಚನಾದಿಹಳ್ ಪೋಲೇ ಪ್ರಪತ್ತಿಯುಮ್ ಸಾಮಾನ್ಯಧರ್ಮ ಮಾಹೈಯಾಲೇ ಯಥಾಧಿಕಾರಮ್ ವೈದಿಕ ಮಂತ್ರತ್ತಾಲೇಯಾದಲ್, ತಾಂತ್ರಿಕ ಮಂತ್ರಾದಿಹಳಾಲೇಯಾದಲ್ ಸರ್ವರುಕ್ಕುಮ್ ಪ್ರಪತ್ತ್ಯನುಷ್ಠಾನತ್ತುಕ್ಕು ವಿರೋಧಮಿಲ್ಲೈ.**

---

ಶೂದ್ರ ಪರ್ಯಂತಗಳಾದ ವರ್ಣಗಳನ್ನು ಆದಿಶಬ್ದದಿಂದ ಎತ್ತಿ ಹೇಳಿ 3) **ಪ್ರಪನ್ನಾನಾಂಚತತ್ವತಃ** ಎಂದು ತತ್ವತಃ ಪ್ರಪನ್ನಾನಾಂ ಎಂದು ಹೇಳಿರುವುದರಿಂದಲೂ ಈ ಸಾತ್ವತ ವಚನವು ಪ್ರಪತ್ತಿಯ ಸರ್ವಾಧಿಕಾರತ್ವವನ್ನು ತಿಳಿಸುತ್ತದೆ. 4) **"ಕುಯೋನಿಷ್ವಪಿ"** ಇತ್ಯಾದಿ – ಕುಯೋನಿ – ನಿಷಾದ ಶ್ವಪಚಾದಿಗಳು. ಈ ಜಾತಿಗಳಲ್ಲಿ ಹುಟ್ಟಿದವನಾಗಿದ್ದಾಗ್ಯೂ, ಯಾವನೊಬ್ಬನು ಒಂದು ಸಲ ಶರಣಾಗತಿ ಮಾಡುತ್ತಾನೋ, ಅವನು, ಮಾತಾಪಿತೃಗಳನ್ನು ಕೊಂದವನಾಗಿದ್ದರೂ ಅಂದರೆ ಅಷ್ಟು ಮಹತ್ತಮವಾದ ಪಾಪವನ್ನು ಮಾಡಿದವನಾಗಿದ್ದಾಗ್ಯೂ, ಸಂಸಾರ ದುಃಖವನ್ನು ಹೋಗಲಾಡಿಸುವ ಸ್ವಭಾವವನ್ನುಳ್ಳ ಭಗವಂತನು ಅವನನ್ನೂ ಕಾಪಾಡುತ್ತಾನೆ," ಎಂದು ಹೇಳುವ ಸನತ್ಕುಮಾರ ಸಂಹಿತಾವಚನದಿಂದಲೂ, ಪ್ರಪತ್ತಿಯು ಸರ್ವಾಧಿಕಾರವೆಂಬುದು ದೃಢೀಕೃತ. **ಆಹೈಯಾಲ್** ಇತ್ಯಾದಿ – ಹೀಗೆ ಪ್ರಪತ್ತಿ ರೂಪ ಬ್ರಹ್ಮ ವಿದ್ಯೆಯು. "ಸರ್ವಸ್ಯ ಶರಣಂ ಸುಹೃತ್", ಇತ್ಯಾದಿ ಶ್ರುತಿಸ್ಮೃತಿ ಪಾಂಚರಾತ್ರಾಗಮ ವಚನಗಳಿಂದ ಸರ್ವಾಧಿಕಾರವಾಗಿ ನಿರ್ಣೀತವಾಗಿರುವುದರಿಂದ, **ಉಪಾಸನಮ್ ತ್ರೈವರ್ಣಿಕಾಧಿಕಾರಮಾಹ** ಇತ್ಯಾದಿ ಪ್ರಪತ್ತಿವ್ಯತಿರಿಕ್ತ, ಉಪಾಸನಾತ್ಮಕ ಬ್ರಹ್ಮ ವಿದ್ಯೆಯೇ ತ್ರೈವರ್ಣಿಕಾಧಿಕಾರವೆಂದು **ಅಪಶೂದ್ರಾಧಿಕರಣ** ದಲ್ಲಿ ಸಮರ್ಥಿತವಾಗಿರುವುದರಿಂದ, ಪ್ರಪತ್ತಿಯು **ವೈದಿಕಂಗಳಾನ** – ವೇದ ವಿಹಿತಗಳಾದ ಸತ್ಯವಚನಾದಿಗಳ ಹಾಗೆ **ಸಾಮಾನ್ಯಧರ್ಮ**ವಾದ್ದರಿಂದ ಸರ್ವಾಧಿಕಾರವೆಂಬುದಕ್ಕೆ ಬಾಧಕವಿಲ್ಲ. **ಆಹೈಯಾಲೇ** – ಹೀಗೆ ಪ್ರಪತ್ತಿಯು ಸರ್ವಾಧಿಕಾರವಾದ್ದರಿಂದ, **ಯಥಾಧಿಕಾರಮ್** – ಅವರವರ ಅಧಿಕಾರಕ್ಕೆ ತಕ್ಕಂತೆ, **ವೈದಿಕಮಂತ್ರತ್ತಾಲೇಯಾದಲ್** – ವೇದೋಕ್ತವಾದ "ವಸರುಣ್ಯೋಽವಿಭೂರಸಿ", ಎಂಬ ಮಂತ್ರದಿಂದಲಾಗಲಿ, ಓಮಿತ್ಯಾತ್ಮಾನಂ ಯುಂಜೀತ ಎಂಬ ಪ್ರಮಾಣ ವಚನದಂತೆ, ಪ್ರಣವದಿಂದಾಗಲಿ, ಸರ್ವಾಧಿಕಾರವಾದ **ತಾಂತ್ರಿಕ ಮಂತ್ರಾದಿಹಳಾಲೇಯಾದಲ್** – ತಾಂತ್ರಿಕ ಮಂತ್ರವೇ ಮೊದಲಾದವುಗಳಿಂದಲಾಗಲಿ, **ಸರ್ವರುಕ್ಕುಮ್** ಇತ್ಯಾದಿ, ಎಲ್ಲರೂ ಕರಣಮಂತ್ರಗಳನ್ನಾಗಿ ಬಳಸಿ ಪ್ರಪತ್ತ್ಯನುಷ್ಠಾನವನ್ನು ಮಾಡಬಹುದು. ಶ್ರುತಿಸ್ಮೃತ್ಯಾದಿಗಳ ಪ್ರಮಾಣವನ್ನು ಹೇಳಿ, ಪ್ರಪತ್ತಿಯು ಸರ್ವಾಧಿಕಾರವೆಂಬುದಕ್ಕೆ

---

3) ತ್ರಯಾಣಾಂಕ್ಷತ್ರಿಯಾದೀನಾಂ ಪ್ರಪನ್ನಾನಾಂಚತತ್ವತಃ ।
ಅಮಂತ್ರಮಧಿಕಾರಸ್ಸ್ಯಾ ಚತುರ್ವ್ಯೂಹ ಕ್ರಿಯಾಕ್ರಮೇ ॥ ಸಾತ್ವತ ಸಂಹಿತೆ (2-9)

ಸ್ವಾಶ್ರಯಣಂ ಸರ್ವ ಸಾಧಾರಣಮಿತಿ ಭಗವದುಕ್ತಿಃ.

ಕಾಕಾದಿಹಳುಮ್ ಪ್ರಪನ್ನರಾಹ ಶಾಸ್ತ್ರಙ್ಗಳಿಲೇ ಕೇಳಾ ನಿನ್ರೋಮ್.

1) "ಮಾಂಹಿ ಪಾರ್ಥವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂಗತಿಮ್ ॥"

ಎನ್ರು ಭಗವದಾಶ್ರಯಣ ಮಾತ್ರಮ್ ಸರ್ವಸಾಧಾರಣ ಮಾಹ ಶರಣ್ಯನ್ ತಾನುಮ್ ಅರುಳಿಚ್ಚೆಯ್‌ದಾನ್. ಉಪಾಸನತ್ತುಕ್ಕುಮ್ ಪ್ರಾರಂಭಮ್ ತ್ರೈವರ್ಣಿಕ ಶರೀರತ್ತಿಲೇಯಾನಾಲುಮ್ ಅವಸಾನಮ್ ಸರ್ವ ಶರೀರತ್ತಿಲುಮ್ ಕೂಡುಮೆನ್ನುಮಿಡಮ್.

2) ಧರ್ಮವ್ಯಾಧಾದಯೋಽಪ್ಯನ್ಯೇ ಪೂರ್ವಾಭ್ಯಾಸಾಜ್ಜುಗುಪ್ಸಿತೇ ।
ವರ್ಣಾವರತ್ವೇ ಸಂಪ್ರಾಪ್ತಾಃ ಸಂಸಿದ್ಧಿಂ ಶ್ರಮಣೀಯಥಾ ॥"

ಎನ್ರು ಶ್ರೀ ವಿಷ್ಣು ಧರ್ಮತ್ತಿಲೇ ಶೊಲ್ಲಪ್ಪಟ್ಟದು.

ಪ್ರಪತ್ತೇಃ ಸರ್ವಾಧಿಕಾರತ್ವಂ, ಆಕಿಂಚನ್ಯ ಮೇವ ಸರ್ವತ್ರಾಧಿಕಾರಃ

ಇಪ್ಪಡಿ ಉಪಾಸನಮ್ ತ್ರೈವರ್ಣಿಕರ್ಕ್ಕೇ ಆರಂಭಣೀಯಮಾನಾರ್ಪೋಲೇ ಪ್ರಪತ್ತಿಯಿಲೊರು

---

ಆಚಾರವನ್ನೂ ನಿದರ್ಶನವಾಗಿ ತೋರಿಸುತ್ತಾರೆ. ಅದಾಗಿ **ಕಾಕಾದಿಹಳುಮ್** ಇತ್ಯಾದಿ ಕಾಕಾಸುರನೇ ಮೊದಲಾದವರು "ತ್ರೀನ್‌ಲೋಕಾನ್ ಸಂಪರಿಕ್ರಮ್ಯ ತಮೇವ ಶರಣಂಗತಃ", ಎಂದು ಪ್ರಪತ್ತಿಯನ್ನು ಅನುಷ್ಠಿಸಿದುದು ಶ್ರೀಮದ್ರಾಮಾಯಣಾದಿಗಳಲ್ಲಿ ಹೇಳಿರುವುದನ್ನು **ಕೇಳಾನಿನ್ರೋಮ್** – ಕೇಳಿದ್ದೇವೆ. 1) **"ಮಾಂಹಿಪಾರ್ಥವ್ಯಪಾಶ್ರಿತ್ಯ** ಇತ್ಯಾದಿ **ಭಗವದಾಶ್ರಯಣ ಮಾತ್ರಮ್** – ಭಗವದಾಶ್ರಯಣ ಸಾಮಾನ್ಯವು ಸರ್ವಸಾಧಾರಣವಾಗಿ **ಶರಣ್ಯನ್** – ಗೀತಾಚಾರ್ಯನು ತಾನೂ ಕೃಪೆ ಮಾಡಿ ಹೇಳಿದ್ದಾನೆ ವ್ಯಪಾಶ್ರಿತ್ಯ ಎಂಬುದು ಭಗವದಾಶ್ರಯಣ ಸಾಮಾನ್ಯವನ್ನು ಹೇಳಿ ಪ್ರಪತ್ತಿಯನ್ನೂ ಒಳಗೊಂಡಿದೆ. **ಉಪಾಸನತ್ತುಕ್ಕು ಪ್ರಾರಂಭಮ್** – ಇತ್ಯಾದಿ ಉಪಾಸನ ಪ್ರಾರಂಭವು ತ್ರೈವರ್ಣಿಕ ಶರೀರದಲ್ಲಿಯೇ ಎಂದು ಅಪಶೂದ್ರಾಧಿಕರಣದಲ್ಲಿ ಹೇಳಿರುವ ವಿಶೇಷ ನಿಯಾಮಕ ಬಲದಿಂದ ಹೇಳಿದ್ದರೂ, ಉಪಾಸನಾವಸಾನವು ಸರ್ವ ಶರೀರಗಳಲ್ಲಿಯೂ, **ಕೂಡುಂ** – ಆಗಬಹುದು, ಎಂಬುವುದು, 2) **"ಧರ್ಮವ್ಯಾಧಾದಯೋಽಪ್ಯನ್ಯೇ** ಇತ್ಯಾದಿ ವಿಷ್ಣು ಧರ್ಮದಲ್ಲಿ ಹೇಳಲ್ಪಟ್ಟಿದೆ. ಅಂದರೆ ಧರ್ಮವ್ಯಾಧ ಆದಿಶಬ್ದದಿಂದ ವಿದುರಾದಿಗಳು ಜಗುಪ್ಸಿತವಾದ ಅವರ ವರ್ಣವಾದ ಶೂದ್ರ ಜಾತಿಯಲ್ಲಿ ಹುಟ್ಟಿದ್ದರೂ, ಪೂರ್ವಜನ್ಮದಲ್ಲಿ ಆರಂಭಿಸಿದ್ದ ಭಕ್ತಿಯೋಗದ ಅಭ್ಯಾಸದಿಂದ, ಶ್ರಮಣೀ ಎಂಬ ಸಿದ್ಧ ತಾಪಸಿಯಂತೆ, ಸಂಸಿದ್ಧಿಯನ್ನು ಪಡೆದರು, ಎಂದು ವಿಷ್ಣು ಧರ್ಮದಲ್ಲಿ ಹೇಳಲ್ಪಟ್ಟಿದೆ.

**ಪ್ರಪತ್ತಿಯಲ್ಲಿ ಎಲ್ಲರಿಗೂ ಅಧಿಕಾರ.**

**ಇಪ್ಪಡಿ** ಇತ್ಯಾದಿ ಹೀಗೆ ಉಪಾಸನವು ತ್ರೈವರ್ಣಿಕರಿಗೇ ಆರಂಭಣೀಯವೆಂಬಂತೆ ಪ್ರಪತ್ತಿಯಲ್ಲಿ ಈ ರೀತಿಯಾದ

---

1) ಗೀತೆ 9-32 ಎಲೈಅರ್ಜುನನೇ ನನ್ನನ್ನು ಆಶ್ರಯಿಸುವವರು ಪಾಪಯೋನಿಗಳಾದ ಸ್ತ್ರೀ, ವೈಶ್ಯ ಶೂದ್ರರಾಗಿದ್ದರೂ ನನ್ನ ಆಶ್ರಯಣದಿಂದ ಅವರೂ ಮುಕ್ತಿ ಹೊಂದುತ್ತಾರೆ. ಇಲ್ಲಿ. ಆಶ್ರಯಣವು ಭಕ್ತ ಪ್ರಪನ್ನ ಸಾಧಾರಣವಾಗಿ ಹೇಳಿದ್ದರೂ ಭಕ್ತನಿಗೆ ಭಕ್ತಿಯೋಗಾರಂಭವು ತ್ರೈವರ್ಣಿಕ ಶರೀರದಲ್ಲಿಯೇ ಆಗಬೇಕೆಂಬ ನಿರ್ಬಂಧವು ಅಪಶೂದ್ರಾಧಿಕರಣದಲ್ಲಿ ನಿರ್ಣಯಿಸಲ್ಪಟ್ಟಿದೆ. ವೈಶ್ಯರಿಗೆ ವೇದಾಧಿಕಾರವಿದ್ದರೂ ಯಾಗ ಮಾಡಲು ಅಧಿಕಾರವಿಲ್ಲದುದರಿಂದ ಅವರನ್ನೂ "ಪಾಪಯೋನಯಃ" ಎಂದು ಹೇಳಿರುತ್ತಾರೆಂದು ಗೀತಾ ತಾತ್ಪರ್ಯ ಚಂದ್ರಿಕೆಯಲ್ಲಿ ಆಚಾರ್ಯರು ಸ್ಪಷ್ಟೀಕರಿಸಿದ್ದಾರೆ.

2) ವಿಷ್ಣುಧರ್ಮ 10-2-29

**ನಿಯಾಮಕತ್ತಾಲೇ ಸಾಮಾನ್ಯ ವಚನತ್ತುಕ್ಕು ಸಂಕೋಚಮಿಲ್ಲಾಮೈಯಾಲುಮ್, ವಿಶೇಷ ವಚನ ಪ್ರಾಬಲ್ಯತ್ತಾಲುಮಿಪ್ರಪದನಂ ಸರ್ವರ್ಕ್ಕುಮ್ ಯೋಗ್ಯಮ್. ಅನ ಪಿನ್ಪು ಇದು ತನಕ್ಕು ವಿಶೇಷಿತ್ತು ವೇಣ್ಡುಮಧಿಕಾರಾಂತರಮುಮ್ ಮುನ್ಬೇಶೊನ್ನೋಮ್.**

**ಕಾ. ಅತಸ್ತ್ರೈವರ್ಣಿಕ ತ್ವಾದೇ ಭಾರ್ವೋ-ಭಾವೋಽಪಿ ಕಸ್ಯಚಿತ್ ।**
**ನಾಧಿಕಾರಃ ಪ್ರಪತ್ತೇಸ್ಸ್ಯಾದಾಕಿಂಚನ್ಯ ಮನಾಶ್ರಿತಃ ॥ ೩೬ ॥**

**ಇವ್ವರ್ಥತ್ತೈ 1) "ಕುಲಙ್ಗಳಾಯ ವೀರಿರಂಡಿ ಲೊನ್ರಿಲುಮ್ ಪಿರನ್ದಿಲೇ಼ನ್" ಎನ್ಗಿರ ಪಾಟ್ಟಿಲುಮ್, 2) "ಜನಿತ್ವಾಹಂ ವಂಶೇ" ಎನ್ಗಿರ ಶ್ಲೋಕತ್ತಿಲುಮ್, ಕಣ್ಡುಕೊಳ್ವದು.**

**ಆಹೈಯಾಲ್ ಶರಣ್ಯ ಶರಣಾಗತಿ ಜ್ಞಾನಮುಮ್, ಆಕಿಂಚನ್ಯಾದಿಹಳು ಮುಡೈಯ ಸರ್ವಜಾತಿಯರ್ಕ್ಕುಮ್ ಪ್ರಪತ್ತ್ಯಧಿಕಾರಮ್ ಸಿದ್ಧಮ್**

---

ಒಂದು ನಿಯಮವು ಇದ್ದು ಸಾಮಾನ್ಯ ವಚನಕ್ಕೆ ಸಂಕೋಚವಿಲ್ಲದುದರಿಂದಲೂ, ಸರ್ವರಿಗೂ ಅಧಿಕಾರವುಂಟೆಂಬ ವಿಶೇಷ ವಚನ ಬಲದ ಪ್ರಾಬಲ್ಯದಿಂದಲೂ ಈ ಪ್ರಪದನವು ಸರ್ವರಿಗೂ ಅನುಷ್ಠಿಸಲು ಯೋಗ್ಯವಾದದ್ದು. **ಆನಪಿನ್ಪು** – ಇತ್ಯಾದಿ. ಹೀಗೆ ಪ್ರಪತ್ತಿಯು ಸರ್ವಯೋಗ್ಯವು ಎಂಬುದು ಏರ್ಪಟ್ಟನಂತರ, ಇದಕ್ಕೆ ವಿಶೇಷವಾಗಿ ಬೇಕಾದ ಅಧಿಕಾರಾಂಶವನ್ನೂ ಮುಂಚೆಯೇ ಹೇಳಿದ್ದೇವೆ. ಅಂದರೆ ಪ್ರಪತ್ತಿಯೋಗ್ಯಾಧಿಕಾರದಲ್ಲಿ ಆಕಿಂಚನ್ಯ, ಅನನ್ಯಗತಿತ್ವಗಳು ಈ ಪ್ರಪನ್ನನಿಗೆ ಅಧಿಕಾರಗಳೆಂದು ಹೇಳಿದ್ದೇವೆಂದು ಆಚಾರ್ಯರು ನಿಗಮಿಸುತ್ತಾರೆ. **"ಅತಸ್ತ್ರೈವರ್ಣಿಕತ್ವಾದೇಃ** ಇತ್ಯಾದಿ. **ಅತಃ** – ಮೇಲೆ ಹೇಳಿದಂತೆ ಪ್ರಪತ್ತಿಗೆ ಸರ್ವಾಧಿಕಾರತ್ವವು ಸಿದ್ಧವಾದ್ದರಿಂದ, **ತ್ರೈವರ್ಣಿಕತ್ವಾದೇಃ** – ತ್ರೈವರ್ಣಿಕತ್ವವು, ಆದಿ ಶಬ್ದದಿಂದ ಆಶ್ರಮ ಧರ್ಮಾದಿಗಳು, ಭಾವಃ– ಇರುವಿಕೆ, ಅಭಾವ – ಇಲ್ಲದಿರುವಿಕೆ, ಆ ಕಿಂಚನ್ಯ ಅನನ್ಯಗತಿತ್ವಗಳು ಇಲ್ಲದೆ, ಪ್ರಪತ್ತಿಗೆ ಅಧಿಕಾರವಾಗಲಾರವು. ತ್ರೈವರ್ಣಿಕನಾಗಿರಲಿ, ಇಲ್ಲದಿರಲಿ, ಆಕಿಂಚನ್ಯ ಅನನ್ಯಗತಿತ್ವಗಳು ಇಲ್ಲದಿದ್ದರೆ, ಪ್ರಪತ್ತಿಗೆ ಅಧಿಕಾರಿಯಾಗಲಾರನು. ಎಂದು ತಾತ್ಪರ್ಯ. **ಇವ್ವರ್ಥತ್ತೈ** ಈ ಅರ್ಥವನ್ನು (1) **ಕುಲಂಗಳಾಯ** ಇತ್ಯಾದಿ ಪಾಶುರದಲ್ಲೂ, ಇದರಿಂದ ಸತ್ಕುಲ ಪ್ರಸೂತತ್ವವಿಲ್ಲದೆ ಆಯಾಯಾಕುಲಾನುರೂಪವಾದ ಕರ್ಮಾನುಷ್ಠಾನಗಳಿಗೆ ಅರ್ಹತೆಯಿಲ್ಲದ ಆ ಕಿಂಚನ್ಯತೆಯು ವ್ಯಂಜಿತ, 2) **ಜನಿತ್ವಾಽಹಂ ವಂಶೇ** – ಎಂಬ ಶ್ಲೋಕದಲ್ಲಿಯೂ – ಈ ಶ್ಲೋಕದಲ್ಲಿ ಉತ್ತಮ ಕುಲಪ್ರಸೂತತ್ವವು ಹೇಳಲ್ಪಟ್ಟು ಇದೂ ಅಧೋಗತಿಯನ್ನು ನಿವರ್ತಿಸುವುದಿಲ್ಲವೆಂದು ಅಭಿಪ್ರಾಯಪಟ್ಟು, "ಶರಣದ", ಎಂದು ತನಗೆ ಶರಣ ವರಣಾರ್ಹನಾಗಿ ತೋಚುವುದರಿಂದ ತನ್ನ ಆಕಿಂಚನ್ಯಾಧಿಕಾರತ್ವವು ವ್ಯಂಜಿತವೆಂಬುದನ್ನು ತಿಳಿದುಕೊಳ್ಳುವುದು. **ಆಹೈಯಾಲ್** ಇತ್ಯಾದಿ – ಆಕಿಂಚನ್ಯವೇ ಅಧಿಕಾರವಾದ್ದರಿಂದ

---

1) ಕುಲಂಗಳಾಯ ವೀರಿರಂಡಿಲ್ ಒನ್ರಿಲುಂ ಪಿರಂದಿಲೇನ್
ನಲಂಗಳಾಯ ನರ್ಕಲೈಹಳ್ ನಾಲಿಲುಂ ನವಿನ್ರಿಲೇನ್ ।
ಪುಲನ್ಗಳೈಂದುಂವೆನ್ರಿಲೇನ್ ಪೊರಿಯಿಲೇನ್ ಪುನಿದಾ
ನಿನ್ನಲಂಗು ಪಾದಮನ್ರಿ ಮತ್ತೋರ್ ಪತ್ರಿಲೇನ್ ಎಮ್ಮೀಶನೇ — ತಿರುಚ್ಚಂದವಿರುತ್ತಮ್ 90

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ಜಾತಿಗಳಲ್ಲಿ ಹುಟ್ಟಲಿಲ್ಲ ಕ್ಷೇಮವನ್ನುಂಟು ಮಾಡುವ ನಾಲ್ಕು ವೇದಗಳನ್ನು ಅಭ್ಯಸಿಸಲಿಲ್ಲ. ಪಂಚೇಂದ್ರಿಯಗಳನ್ನು ಜಯಸಲಿಲ್ಲ ಶಬ್ದಾದಿ ವಿಷಯಗಳ ಆಸ್ವಾದನದಲ್ಲಿ ಸಿಕ್ಕಿಕೊಂಡಿದ್ದೇನೆ. ಹೀಗೆ ಅಗತಿಕನಾದ ನನ್ನನ್ನು ನಿನ್ನ ಪಾದಸ್ಪರ್ಶದಿಂದ ಪವಿತ್ರನನ್ನಾಗಿ ಮಾಡಬಲ್ಲವನೇ, ನಿನ್ನ ಪ್ರಕಾಶವಾದ ಪಾದಗಳಲ್ಲದೆ ಬೇರೆ ಆಶ್ರಯವಿಲ್ಲ.

2) ಆಳ. ಸ್ತೋ. 61,

## ಅಥ ಪ್ರಪತ್ತಿ ಸ್ವರೂಪ ಶಙ್ಕಾ ಪರಿಹಾರಃ

ಇವ್ವುಪಾಯ ಸ್ವರೂಪತ್ತೈ ಪ್ಪತ್ತ

1) "ನಾರಾಯಣಂ ಸಲಕ್ಷ್ಮೀಕಂ ಪ್ರಾಪ್ತುಂ ತಚ್ಛರಣದ್ವಯಮ್ ।
ಉಪಾಯ ಇತಿ ವಿಶ್ವಾಸೋ ದ್ವಯಾರ್ಥ ಶ್ಶರಣಾಗತಿಃ" ॥

ಎನ್ಗಿರ ವಭಿಯುಕ್ತರ್ ಪಾಶುರಮುಮ್, ಅಧಿಕಾರ ಕೋಟಿಯಿಲುಮ್ ಅಙ್ಗ ಕೋಟಿಯಲುಮ್ ನಿರ್ಕಿರ ವಿಶ್ವಾಸತ್ತಿನುಡೈಯ ಪ್ರಾಧಾನ್ಯಮ್ ಶೊಲ್ಲುಹೈಕ್ಕಾಹವತ್ತನ್ಯೆ.

### ವಿಶ್ವಾಸ ಪ್ರಾರ್ಥನೆಗಳು ಅಙ್ಗಗಳು ಅಂಗಿಯಲ್ಲ

ಅಪ್ಪಡಿಯೇ 2) "ಪ್ರಪತ್ತಿ ರ್ವಿಶ್ವಾಸ ಸ್ಸಕೃತ್ಪ್ರಾರ್ಥನಾ ಮಾತ್ರೇಣಾಪೇಕ್ಷಿತಂ ದಾಸ್ಯತೀತಿ ವಿಶ್ವಾಸಪೂರ್ವಕಂ ಪ್ರಾರ್ಥನ ಮಿತಿಯಾವತ್" ಎನ್ಗಿರವಾಕ್ಯಮುಮ್ ಪ್ರಾಧಾನ್ಯವಿವಕ್ಷೈಯಾಲೇ ಮುದಲ್ ವಿಶ್ವಾಸತ್ತೈ ಚ್ಚೊಲ್ಲಿ, "ಅನನ್ಯ ಸಾಧ್ಯೇ" ಎನ್ಗಿರ ಭರತಮುನಿ ಪ್ರಣೀತ ಲಕ್ಷಣ ವಾಕ್ಯತ್ತಿನ್ಪಡಿಯೇ ವಿಶ್ವಾಸಪೂರ್ವಕಂ ಪ್ರಾರ್ಥನಮೆನ್ರು ನಿಷ್ಕರ್ಷಿತ್ತುದು.

---

ಶರಣ್ಯ ಶರಣಾಗತಿ ಜ್ಞಾನವನ್ನೂ, ಆಕಿಂಚನ್ಯಾದಿಗಳನ್ನೂ ಹೊಂದಿರುವ ಸರ್ವಜಾತೀಯರಿಗೂ ಪ್ರಪತ್ತಿಯಲ್ಲಿ ಅಧಿಕಾರವೆಂಬುದು ಸಿದ್ಧ.

### ಪ್ರಪತ್ತಿ ಸ್ವರೂಪ ವಿಷಯವಾದ ಶಂಕಾ ಪರಿಹಾರ

ಹೀಗೆ ಅಧಿಕಾರ ವಿಷಯವಾದ ಶಂಕೆಗಳನ್ನು ಪರಿಹರಿಸಿ ಪ್ರಪತ್ತಿ ಸ್ವರೂಪ ವಿಷಯವಾದ ಶಂಕೆಗಳನ್ನು ಪರಿಹರಿಸಲು, **ಇವ್ವುಪಾಯ ಸ್ವರೂಪತ್ತೈಪ್ಪಟ್ರ** ಎಂದು ಆಚಾರ್ಯರು ಉಪಕ್ರಮಿಸುತ್ತಾರೆ. ಅದಾಗಿ ಈ ಉಪಾಯ ಸ್ವರೂಪ ವಿಷಯವಾಗಿ, 1) **ನಾರಾಯಣಂ ಸಲಕ್ಷ್ಮೀಕಂ** ಇತ್ಯಾದಿಯಾದ ಅಭಿಯುಕ್ತರ ಶ್ರೀ ಸೂಕ್ತಿಯು – ಅಂದರೆ ಲಕ್ಷ್ಮೀ ವಿಶಿಷ್ಟನಾರಾಯಣನನ್ನು ಹೊಂದಲು ತಚ್ಛರಣದ್ವಯಂ – ಆ ಸಲಕ್ಷ್ಮೀಕನಾದ ನಾರಾಯಣನ ಎರಡು ಪಾದಗಳು ಉಪಾಯವೆಂಬ ವಿಶ್ವಾಸವೇ ದ್ವಯಕ್ಕೆ ಪ್ರಧಾನವಾದ ಅರ್ಥ. ಅದೇ ಶರಣಾಗತಿ – **ಅಧಿಕಾರಕೋಟಿಯಿಲುಮ್**- ವಿಶ್ವಾಸವುಳ್ಳವನೇ ಅಧಿಕಾರಿಯಾದ್ದರಿಂದ ಅಧಿಕಾರ ಕೋಟಿಯಲ್ಲಿಯೂ, **ಅಂಗಕೋಟಿಯಿಲುಮ್** – ಪ್ರಪತ್ತಿಗೆ ಐದು ಅಂಗಗಳಾದ, ಆನುಕೂಲ್ಯ ಸಂಕಲ್ಪ, ಪ್ರಾತಿಕೂಲ್ಯವರ್ಜನ, ಮಹಾವಿಶ್ವಾಸ, ಗೋಪ್ತೃತ್ವವರಣ, ಕಾರ್ಪಣ್ಯಗಳಲ್ಲಿ, ಮಹಾ ವಿಶ್ವಾಸವು ಅಂಗಗಳಲ್ಲಿ ಒಂದಾಗಿ ಹೇಳಲ್ಪಟ್ಟಿದೆ ಯಾದ್ದರಿಂದ, ಅಂಗಕೋಟಿಯಲ್ಲಿಯೂ ಇರುವ ವಿಶ್ವಾಸದ ಪ್ರಾಧಾನ್ಯವನ್ನು ಹೇಳುವುದಕ್ಕೋಸ್ಕರ ವಿಶ್ವಾಸ ವೆಂಬ, ಪ್ರಧಾನಾಂಗವನ್ನು ಅಂಗಿ ಶಬ್ದದಿಂದ ನಿರ್ದೇಶಿಸಿದೆಯಷ್ಟೇ.

ಅಪ್ಪಡಿಯೇ – ಹಾಗೆಯೇ 2) **ಪ್ರಪತ್ತಿರ್ವಿಶ್ವಾಸಃ – ಸಕೃತ್ಪ್ರಾರ್ಥನಾ ಮಾತ್ರೇಣ** ಇತ್ಯಾದಿ ವಾಕ್ಯವೂ ಪ್ರಾಧಾನ್ಯ ವಿವಕ್ಷೆಯಿಂದ ಮೊದಲು ವಿಶ್ವಾಸವನ್ನು ಹೇಳಿ, ಅನಂತರ 3) **ಅನನ್ಯಸಾಧ್ಯೇಸ್ವಾಭೀಷ್ಟೇ** ಇತ್ಯಾದಿ

---

1) ಅಭಿಯುಕ್ತರ ಶ್ಲೋಕ 2) ಶ್ರೀಭಾಷ್ಯಕಾರರ ಮುಕ್ತಕ ವಾಕ್ಯ – ಪ್ರಪತ್ತಿ ಎಂದರೆ ವಿಶ್ವಾಸ ಪೂರ್ವಕವಾದ ಪ್ರಾರ್ಥನೆ.

3) ಅನನ್ಯಸಾಧ್ಯೇಸ್ವಾಭೀಷ್ಟೇ ಮಹಾವಿಶ್ವಾಸ ಪೂರ್ವಕಮ್ ।
ತದೇಕೋಪಾಯತಾ ಯಾಚ್ಞಾ ಪ್ರಪತ್ತಿ ಶ್ಶರಣಾಗತಿಃ ॥ ಭರತಮುನಿ ಪ್ರಣೀತ

ಇವ್ವಾಕ್ಯನ್ತಾನುಮ್, ಆತ್ಮನಿಕ್ಷೇಪ ಮಙ್ಗಿ, ಇತರಙ್ಗಳ್ ಅಙ್ಗಙ್ಗಳೆನ್ರು ಶೊಲ್ಲುಹಿರ 1) ನ್ಯಾಸಃ ಪಂಚಾಂಗ ಸಂಯುತಃ" ಇತ್ಯಾದಿ ವಚನಙ್ಗಳಾಲೇ ಪ್ರಾರ್ಥನೈಯುಮ್ ಅಙ್ಗಮಾಹೈಯಾಲ್ "ರಕ್ಷಾಪೇಕ್ಷಾಂ ಪ್ರತೀಕ್ಷತೇ" ಎನ್ಗಿರಪಡಿಯೇ ಈಶ್ವರ್ರ್ ಅಪೇಕ್ಷಾ ಮಾತ್ರಸಾಪೇಕ್ಷ ನೆನ್ರಿವ್ವಙ್ಗತ್ತಿರ್ ಪ್ರಾಧಾನ್ಯತ್ತೈ ವಿವಕ್ಷಿತ್ತುಚ್ಚೊನ್ನಪಡಿ.

### ಶ್ರೀ ಭಾಷ್ಯಕಾರಾಭಿಪ್ರಾಯೇಪಿ ನಿಕ್ಷೇಪ ಏವಾಙ್ಗೀ

ಶಿರಿಯ ಗದ್ಯತ್ತಿಲುಮ್ ವಿಶ್ವಾಸಪೂರ್ವಕ ಪ್ರಾರ್ಥನೈಯೈಪ್ಪಣ್ಣಿ "ನಮೋಽಸ್ತುತೇ" ಎನ್ರು ಮುಡಿಕ್ಕೈಯಾಲುಮ್, ಉಪಾಯ ವರಣಶಬ್ದ ಸಾಮರ್ಥ್ಯತ್ತಾಲುಮ್ ನಿಕ್ಷೇಪಮುಮ್ ಸಿದ್ಧಮ್.

---

ಭರತ ಮುನಿ ಪ್ರಣೀತವಾದ ಲಕ್ಷಣ ವಾಕ್ಯದ ಪ್ರಕಾರ ಪ್ರಪತ್ತಿಯು, ವಿಶ್ವಾಸ ಪೂರ್ವಕ ಪ್ರಾರ್ಥನೆ ಎಂದು ನಿಷ್ಕರ್ಷಿಸಿತು. **ವಿಶ್ವಾಸಪೂರ್ವಕಂ ಪ್ರಾರ್ಥನಂ,** ಎಂಬಲ್ಲಿ ಪ್ರಾರ್ಥನಾ ಶಬ್ದವು,

"ತ್ವಮೇವೋಪಾಯಭೂತೋಮೇ ಭವೇತಿ ಪ್ರಾರ್ಥನಾಮತಿಃ !"

ಎಂಬ ವಚನದಲ್ಲಿ ಶ್ರೂಯಮಾಣವಾದ ಉಪಾಯತ್ವ ಪ್ರಾರ್ಥನಾ ಪರವಾಗಿಯೂ ಯೋಜಿಸಲು ಶಕ್ಯ. ಆಗ್ಯೆ "ವಿಶ್ವಾಸಪೂರ್ವಕಂ ಪ್ರಾರ್ಥನಂ", ಎಂದು ವಿಶ್ವಾಸ ಪೂರ್ವಕತ್ವ ವಿಶೇಷಣವೂ, "ಅನನ್ಯ ಸಾಧ್ಯೇಸ್ವಾಭೀಷ್ಟೇ", ಎಂಬ ವಚನದಲ್ಲಿ ಹೇಳಿರುವ ವಿಶ್ವಾಸ ಪೂರ್ವಕ ಪದವನ್ನು ಜ್ಞಾಪಿಸಿ, ಪ್ರಾರ್ಥನಾ ಪದವು ಉಪಾಯತ್ವ ಪ್ರಾರ್ಥನಾಪರವೆಂದು ಹೇಳಲು ಶಕ್ಯ. "ಅತಶ್ಚಪ್ರಾರ್ಥನಾಯಾಂ ಶರಣಾಗತಿತ್ವ ವಾದಾಸ್ತು ತಸ್ಯಾಸ್ತದಂತ ರ್ಭಾವ ಮಾತ್ರಾದುಪಪದ್ಯತೇ", ಎಂದು ನಿಕ್ಷೇಪರಕ್ಷೆಯಲ್ಲಿ ಸಿದ್ಧಾಂತವಾಗಿರುವಂತೆ, ಪ್ರಾರ್ಥನಾ ಪೂರ್ವಕ ಶರಣಾಗತಿಯಲ್ಲಿ ಪ್ರಾರ್ಥನೆಯು ಅಡಗಿದೆಯಾದ್ದರಿಂದ, ವಿಶ್ವಾಸಪೂರ್ವಕ ಪ್ರಾರ್ಥನೆಯೇ ಶರಣಾಗತಿ, ಪ್ರಪತ್ತಿ ಎಂದು ಹೇಳಿರುವುದರ ಭಾವ.

**'ವಿಶ್ವಾಸ ಪೂರ್ವಕ ಪ್ರಾರ್ಥನಾ'** ಪದವು ಗೋಪ್ತೃತ್ವವರಣ ಪರವಾಗಿಯೂ, ಯೋಜಿಸಬಹುದು, ಎಂಬ ಪಕ್ಷಾಂತರವನ್ನು ಅವಲಂಬಿಸಿ, **ಇವ್ವಾಕ್ಯಂತಾನುಂ** ಎಂದಾರಂಭಿಸುತ್ತಾರೆ. "ಪ್ರಪತ್ತಿರ್ವಿಶ್ವಾಸಃ –ಸಕೃತ್ ಪಾರ್ಥನಾಮಾತ್ರೇಣ", ಇತ್ಯಾದಿಯಾಗಿ ಹೇಳಿರುವ ವಾಕ್ಯವು ಆತ್ಮನಿಕ್ಷೇಪವು ಅಂಗಿ, ಇತರಗಳು ಅಂಗಗಳೆಂದು ಹೇಳುವ, "ನ್ಯಾಸಃ ಪಂಚಾಂಗ ಸಂಯುತಃ, ಇತ್ಯಾದಿ ವಚನಗಳಿಂದ, "ರಕ್ಷಾಪೇಕ್ಷಾಂ ಪ್ರತೀಕ್ಷತೇ" ಎಂಬಂತೆ, ಈಶ್ವರನು ಅಪೇಕ್ಷಾ ಮಾತ್ರಸಾಪೇಕ್ಷನೆಂದು ಗೋಪ್ತೃತ್ವವರಣವೆಂಬ ಅಂಗದ ಪ್ರಾಧಾನ್ಯತೆಯನ್ನು ವಿವಕ್ಷಿಸಿ ಹೇಳಿದುದಾಗಿಯೂ ಯೋಜಿಸಬಹುದು. ಪೂರ್ವವಾಕ್ಯದಲ್ಲಿ "ಅನನ್ಯಸಾಧ್ಯೇ" ಎಂಬ ವಚನವನ್ನು ಎತ್ತಿ ಹೇಳಿ, ಪ್ರಾರ್ಥನೆಯು ಅಂಗವೆಂದು ಹೇಳದೆ ಇರುವುದರ ಸ್ವಾರಸ್ಯದಿಂದ, "ವಿಶ್ವಾಸ ಪೂರ್ವಕ ಪ್ರಾರ್ಥನೆಯು" ಅಂಗಿ ವಿಶೇಷಣವಾದ ಉಪಾಯತ್ವ ಪ್ರಾರ್ಥನಾ ಪರವಾಗಿ ಯೋಜಿಸಲ್ಪಟ್ಟಿತು.

### ನಿಕ್ಷೇಪವು ಅಂಗಿ ಎಂಬುದು ಶ್ರೀ ಭಾಷ್ಯಕಾರರ ಅಭಿಪ್ರಾಯ

**ಶಿರಿಯ ಗದ್ಯತ್ತಿಲುಮ್** ಇತಿ – ಶ್ರೀರಂಗಗದ್ಯದಲ್ಲಿ ಶ್ರೀ ಭಾಷ್ಯಕಾರರವರು **ವಿಶ್ವಾಸಪೂರ್ವಕ ಪ್ರಾರ್ಥನೈಯೈ** ಇತ್ಯಾದಿ "ವಿಶ್ವಾಸ ಪೂರ್ವಕಂ ಭಗವಂತಂ ನಿತ್ಯಕಿಂಕರತಾಂ ಪ್ರಾರ್ಥಯೇ", ಎಂದು ಮಹಾ ವಿಶ್ವಾಸ ಪೂರ್ವಕವಾಗಿ ನಿತ್ಯಕೈಂಕರ್ಯವನ್ನು ಪ್ರಾರ್ಥಿಸಿರುವುದು ಮೇಲೆ ಹೇಳಿದ ಗೋಪ್ತೃತ್ವವರಣವೆಂಬ ಎರಡನೆಯ ಯೋಜನೆಗೆ ಮೂಲ. ಹೀಗೆ ಗೋಪ್ತೃತ್ವವರಣ ರೂಪ ಪ್ರಾರ್ಥನೆಯನ್ನು ಮಾಡಿ, **"ನಮೋಽಸ್ತುತೇ"** ಎಂದು ಮುಗಿಸಿರುವುದರಿಂದಲೂ, **ಉಪಾಯವರಣ ಶಬ್ದ ಸಾಮರ್ಥ್ಯತ್ತಾಲುಮ್ ನಿಕ್ಷೇಪಮುಮ್ ಸಿದ್ಧಮ್.**

ಶ್ರೀರಂಗ ಗದ್ಯದಲ್ಲಿ, ತವಾನುಭೂತಿ ಸಂಭೂತ ಪ್ರೀತಿಕಾರಿತ ದಾಸತಾಮ್ ।
ದೇಹಿಮೇ ಕೃಪಯಾನಾಥ ನಜಾನೇಗತಿ ಮನ್ಯಥಾ ॥
ಸರ್ವಾವಸ್ಥೋಚಿತಾಽಶೇಷ ಶೇಷತೈಕರತಿಸ್ತವ ।
ಭವೇಯಂ ಪುಂಡರೀಕಾಕ್ಷ ತ್ವಮೇವೈವಂ ಕುರುಷ್ವಮಾಮ್ ॥

ಎಂಬ ಕಾರಿಕೆಗಳಿಂದ ಪ್ರಾರ್ಥನಾದ್ವಯವು ಹೇಳಲ್ಪಡುತ್ತದೆ. ಅದರಲ್ಲಿ ಮೊದಲನೆಯ ಕಾರಿಕೆಯಲ್ಲಿ "ಪ್ರೀತಿಕಾರಿತ ದಾಸತಾಂದೇಹಿ" ಎಂದು ಗೋಪ್ತೃತ್ವವರಣವು ಹೇಳಲ್ಪಡುತ್ತದೆ. ನ ಜಾನೇ ಗತಿಮನ್ಯಥಾ ಎಂದು ಪ್ರಾಪ್ಯಾಂತರ ವೈಮುಖ್ಯವು ಹೇಳಲ್ಪಡುತ್ತದೆ. ಬೇರೆ ಗತಿ–ಪ್ರಾಪ್ಯವು, ಇಲ್ಲ ಎಂದು ಅನನ್ಯಗತಿತ್ವವು ತಿಳಿಸಲ್ಪಡುತ್ತದೆ. ಎರಡನೆಯ ಕಾರಿಕೆಯು "ನಿರಪೇಕ್ಷೋಪಾಯತ್ವ" ಪರ ಎಲೈ ಪುಂಡರೀಕಾಕ್ಷ ನಿನ್ನ ಎಲ್ಲಾ ಅವಸ್ಥೆಗಳಿಗೂ ಉಚಿತವಾದ ಅಶೇಷ ಕೈಂಕರ್ಯದಲ್ಲಿ ಪ್ರೀತಿಯುಳ್ಳವನಾಗಿ ಇರುವಂತೆ ಆಸೆ ಪಡುತ್ತೇನೆ. ನಿನಗೆ ಎಲ್ಲಾ ವಿಧವಾದ ಕೈಂಕರ್ಯಗಳನ್ನು ಮಾಡಲು ಆಸೆಪಡುತ್ತೇನೆ. ಆ ರೀತಿಯಲ್ಲಿ "ತ್ವಮೇವೈವಂ ಕುರುಷ್ವಮಾಮ್" ನೀನೇ ನನ್ನನ್ನು ನಿನ್ನ ಕಿಂಕರನನ್ನಾಗಿ ಮಾಡಿಕೋ ಇದೇ ನಿರಪೇಕ್ಷೋಪಾಯತ್ವ ಪ್ರಾರ್ಥನೆ. ಇದೇ ಉಪಾಯವರಣವನ್ನು ಸೂಚಿಸುವ ಶಬ್ದ. ಈ ಉಪಾಯವರಣಕ್ಕೆ ಭರನ್ಯಾಸವನ್ನು ಆಕರ್ಷಿಸುವುದೇ ಸಾಮರ್ಥ್ಯ "ತ್ವಮೇವ 'ಏವಂಕುರುಷ್ವ ಎಂಬಲ್ಲಿ ಅವಧಾರಣವು ಸ್ವಪ್ರವೃತ್ತಿ ನಿವೃತ್ತಿ ಪರ್ಯಂತವಾದ ಭರನ್ಯಾಸವನ್ನು ಸೂಚಿಸಿತ್ತದೆ. ತಾದೃಶ ಭರನ್ಯಾಸವು ಉಪಾಯವರಣ ಶಬ್ದ ಸಾಮರ್ಥ್ಯದಿಂದಲೂ ಮುಂದೆ "ನಮೋಸ್ತುತೇ" ಎಂದು ಹೇಳಿರುವುದರಿಂದಲೂ ಸಿದ್ಧ. "ತವಚರಣಾರವಿಂದ ಯುಗಳಂ ಶರಣಮಹಂ ಪ್ರಪದ್ಯೇ" ಎಂಬ ವಾಕ್ಯವು ಉಪಾಯವ ಣವನ್ನು ಸೂಚಿಸುವುದಾಗಿಯೂ ಅಭಿಪ್ರಾಯಪಟ್ಟು ಭರಸ್ವೀಕಾರ ಪ್ರಾರ್ಥನಾನ್ವಿತ ಭರಸಮರ್ಪಣವನ್ನು ತಿಳಿಸುವುದಾಗಿಯೂ, ಶ್ರೀದೇಶಿಕರು ಮಿತ ಗದ್ಯ ಭಾಷ್ಯದಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ. ಆಗ್ಯೆ ಮುಂದೆ "ನಮೋಸ್ತುತೇ" ಎಂದು ದ್ವಯಮಂತ್ರದ ಉತ್ತರಾರ್ಧದಲ್ಲಿ ಪ್ರಾರ್ಥನೀಯವಾದ ನಿರ್ಮಮತ್ವ ಸಂಸ್ಕೃತವಾದ ಕೈಂಕರ್ಯ ಪರವಾಗಿ ಯೋಜಿಸಬೇಕು. ಈ ಅಧಿಕಾರದಲ್ಲಿ "ನಮೋಸ್ತುತೇ" ಎಂದು ನಿಕ್ಷೇಪ ಪರವಾಗಿ ಯೋಜಿಸಿರುವುದರಿಂದ ಪ್ರಾರ್ಥನಾಪೂರ್ವಕ ಭರನ್ಯಾಸ ವಿವಕ್ಷೆಯಿಂದ, ಮೇಲೆ ಹೇಳಿದ ಎರಡನೆಯ ಕಾರಿಕೆಯು "ನಿರಪೇಕ್ಷೋಪಾಯತ್ವ ಪ್ರಾರ್ಥನಾ" ಪರವಾಗಿ ಯೋಜಿಸುವುದು ಯುಕ್ತವೆಂದು ಕರೂರು ಸ್ವಾಮಿಗಳ ಅಭಿಪ್ರಾಯ. ಗದ್ಯ ಭಾಷ್ಯದಲ್ಲೂ ಆಚಾರ್ಯರು ಈ ಯೋಜನೆಯನ್ನೂ ತಿಳಿಸಿರುತ್ತಾರೆ.

ಇದರಿಂದಾಗಿ ಕೇವಲ ವಿಶ್ವಾಸವೋ, ಕೇವಲ ಪ್ರಾರ್ಥನೆಯೋ ಶರಣಾಗತಿಯಲ್ಲ, ವಿಶ್ವಾಸವು ಅಂಗ. ಪ್ರಪತ್ತಿರ್ವಿಶ್ವಾಸಃ ಎಂದು ಅದನ್ನು ಅಂಗಿಯಾಗಿ ನಿರ್ದೇಶಿಸಿರುವುದು ಆ ಅಂಗದ ಪ್ರಾಧಾನ್ಯ ವಿವಕ್ಷೆಯಿಂದ ಅಷ್ಟೇ. ಹಾಗೆಯೇ 'ವಿಶ್ವಾಸಪೂರ್ವಕಪ್ರಾರ್ಥನಾಮತಿಃ' ಎಂದು ಅಂಗವಾದ ಗೋಪ್ತೃತ್ವವರಣ ರೂಪವಾದ ಪ್ರಾರ್ಥನೆಯನ್ನು ಅಂಗಿಯಾಗಿ ನಿರ್ದೇಶಿಸಿರುವುದೂ ಆ ಅಂಗದ ಪ್ರಾಧಾನ್ಯತೆಯಿಂದ ಅಷ್ಟೇ. ಎಲ್ಲಿ ಪ್ರಾರ್ಥನೆಯೋ ಅಲ್ಲಿ ಆತ್ಮ ನಿಕ್ಷೇಪವು ಆಕ್ಷಿಪ್ತ. ಇದನ್ನು "ನಮೋಸ್ತುತೇ" ಎಂದು ಮಿತಗದ್ಯದಲ್ಲಿ ನಮಶ್ಶಬ್ದದಿಂದ ವಿವಕ್ಷಿಸಿರುತ್ತಾರೆ. ಪ್ರಾರ್ಥನೆಯು ಗೋಪ್ತೃತ್ವ ವರಣರೂಪವಾದ ಅಂಗವೆಂದು ಒಂದು ಯೋಜನೆ ಮತ್ತೊಂದು ಅಂಗಿ ವಿಶೇಷಣವಾದ ನಿರಪೇಕ್ಷೋಪಾಯತ್ವ ಪ್ರಾರ್ಥನೆಯೆಂಬ ಯೋಜನೆ ಈ ಎರಡು ಯೋಜನೆಗಳಲ್ಲಿಯೂ ಉಪಾಯತ್ವ ಪ್ರಾರ್ಥನೆಯೇ ನಿಕ್ಷೇಪವಲ್ಲ ಉಪಾಯತ್ವ ಪ್ರಾರ್ಥನಾನ್ವಿತ ಭರಸಮರ್ಪಣವು ಅಂಗಿ. ಪ್ರಾಧಾನ್ಯ ವಿವಕ್ಷೆಯಿಂದ ಉಪಾಯತ್ವ ಪ್ರಾರ್ಥನೆಯನ್ನು ಪ್ರಪತ್ತಿ ಎಂದು ಹೇಳಿರುತ್ತದೆಯಷ್ಟೇ.

ನಮಶ್ಶಬ್ದಕ್ಕೆ ಆತ್ಮ ನಿಕ್ಷೇಪವು ಹೇಳಲ್ಪಡುತ್ತದೆಯೇ ಎಂದರೆ, ಅದನ್ನು "ನಮಸ್ಸುಆತ್ಮನಿಕ್ಷೇಪಪರವೆನ್ನುಮಿಡವರ್" ಎಂದು ಆರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ನಮಶ್ಶಬ್ದವು ಆತ್ಮ ನಿಕ್ಷೇಪ (ಅಂಗಿ) ಪರವೆಂಬುದು

### ನಮಶ್ಶಬ್ದಃ ಆತ್ಮನಿವೇದನ ಪರಃ

ನಮಸ್ಸು ಆತ್ಮ ನಿಕ್ಷೇಪ ಪರಮೆನ್ನುಮ್ ಇಡಮ್ 1) "ನಮಸ್ಕಾರಾತ್ಮಕಂ ಯಸ್ಮೈ ವಿಧಾಯಾತ್ಮ ನಿವೇದನಮ್ ।" ಇತ್ಯಾದಿಹಳಿಲೇ ಪ್ರಸಿದ್ಧಮ್.

#### ಆತ್ಮ ನಿಕ್ಷೇಪ ವಿವಾಜ್ಞೀತಿ ಶ್ರೀ ಭಾಷ್ಯಕಾರಾಭಿಪ್ರಾಯೇ ಕಿಂ ಪ್ರಮಾಣಂ ?

ಶ್ರೀ ವೈಕುಂಠ ಗದ್ಯತ್ತಿಲೇ ಪ್ರಾರ್ಥನಾಪೂರ್ವಕಾತ್ಮನಿಕ್ಷೇಪಮ್ ಕಂಠೋಕ್ತಮಾಯ್‌ತ್ತು ಅಹೈಯಾಲ್ 1) "ಅನೇನೈವತು ಮನ್ತ್ರೇಣ ಸ್ವಾತ್ಮಾನಂ ಮಯಿ ನಿಕ್ಷಿಪೇತ್ " 2) "ಆತ್ಮಾತ್ಮೀಯ ಭರನ್ಯಾಸಃ" ಇತ್ಯಾದಿಹಳಿಲೇ ಅಙ್ಗವಿಧಾನಮ್. ಇಪ್ಪಡಿಯಲ್ಲಾದಪೋದು, 3) ಷಡ್ವಿಧಾ ಶರಣಾಗತಿಃ" ಎನ್ಗಿರ ವಾಕ್ಯತ್ತಿಲ್ ಅಪಾತಪ್ರತೀತಿಯೈಕ್ಕೊಂಡು 4) "ಸ್ನಾನಂ ಸಪ್ತವಿಧಂ ಸ್ಮೃತಂ" ಇತ್ಯಾದಿಹಳಿಲ್ ಶೊನ್ನ

---

1) ನಮಸ್ಕಾರಾತ್ಮಕಂಯಸ್ಮೈ"ಇತ್ಯಾದಿ ವಾಕ್ಯಗಳಲ್ಲಿ ಪ್ರಸಿದ್ಧ. ನಮಸ್ಕಾರಾತ್ಮಕ ರೂಪವಾದ ಆತ್ಮನಿವೇದನ ವನ್ನು "ನಮಃ" ಎಂದು ಮಾಡಿ ಎಂದುಮಂತ್ರರಾಜಪದಸ್ತೋತ್ರದಲ್ಲಿ ಹೇಳಿದೆ. ಶ್ರೀ ವೈಕುಂಠಗದ್ಯತ್ತಿಲೇ ಇತ್ಯಾದಿ- ಶ್ರೀ ವೈಕುಂಠ ಗದ್ಯದಲ್ಲಿ ಪ್ರಾರ್ಥನಾ ಪೂರ್ವಕ ಆತ್ಮನಿಕ್ಷೇಪವು "ಮಾಮೈಕಾಂತಿಕಾತ್ಯಂತಿಕ ಪರಿಚರ್ಯಾಕರಣಾಯ ಪರಿಗೃಹ್ಣೀಷ್ವೇತಿ ಯಾಚಮಾನಃ ಪ್ರಣಮ್ಯಾತ್ಮಾನಂ ಭಗವತೇ ನಿವೇದಯೇತ್" ಎಂದು ಕಂಠೋಕ್ತಮಾಯ್- ಸ್ಪಷ್ಟವಾಗಿ ಪ್ರಾರ್ಥನೆಯನ್ನೂ, ಆತ್ಮ ನಿಕ್ಷೇಪವನ್ನೂ ತಿಳಿಸಿದೆ. ಆತ್ಮಾನಂ ಭಗವತೇ ನಿವೇದಯೇತ್–ಆತ್ಮಾನಂ ಭಗವತೇ ಸಮರ್ಪಯೇತ್ ಎಂದು ನಿವೇದನ ಶಬ್ದಕ್ಕೆ ಸಮರ್ಪಣವೆಂದರ್ಥ.

ಅನಂತರ ಅಂಗಿವಿಧಾಯಕ ವಚನಗಳನ್ನು **ಅಹೈಯಾಲ್** ಎಂದಾರಂಭಿಸಿ ತೋರಿಸುತ್ತಾರೆ- ಅಹೈಯಾಲ್– ಶ್ರೀ ವೈಕುಂಠ ಗದ್ಯದಲ್ಲಿ ಯಾಚನೆಯೂ, ಆತ್ಮ ನಿವೇದನವೂ ಅಂಗಾಂಗಿ ಭಾವದಿಂದ ಕಂಠೋಕ್ತವಾದ್ದರಿಂದ, **1) ಅನೇನೈವತುಮಂತ್ರೇಣ 2) ಆತ್ಮಾತ್ಮೀಯ ಭರನ್ಯಾಸಃ** ಇತ್ಯಾದಿ ವಚನಗಳಲ್ಲಿ "ಸ್ವಾತ್ಮಾನಂಮಯಿ ನಿಕ್ಷಿಪೇತ್, ಭರನ್ಯಾಸಃ" ಎಂದು ಅಂಗಿಯಾದ ಭರಸಮರ್ಪಣವು ಸ್ಪಷ್ಟವಾಗಿ ನಿರ್ದೇಶಿಸಲ್ಪಟ್ಟಿದೆ, ಹೀಗೆ ಅಂಗಿ ಯನ್ನು ವಿಧಿಸುವ ಸ್ಪಷ್ಟತರವಾದ ವಚನಗಳು ಇರುವಾಗ,

"ಅನನ್ಯಸಾಧ್ಯೇಸ್ವಾಭೀಷ್ಟೇ ಮಹಾವಿಶ್ವಾಸ ಪೂರ್ವಕಮ್ ।

ತದೇಕೋಪಾಯತಾಯಾಂಚಾ ಪ್ರಪತ್ತಿ ಶ್ಶರಣಾಗತಿಃ "

ಇತ್ಯಾದಿ ವಚನಗಳಲ್ಲಿ ಅಭೇದ ನಿರ್ದೇಶದಿಂದ ಪ್ರಾರ್ಥನೆಯನ್ನು ಅಂಗಿಯಾಗಿ ಅಂದರೆ ಭರಸಮರ್ಪಣವನ್ನಾಗಿ, ಅಂಗೀಕರಿಸಿದರೆ ಬಾಧಕವನ್ನು **"ಇಪ್ಪಡಿಯಲ್ಲಾದ ಪೋದು"**ಎಂದಾರಂಭಿಸಿ ತಿಳಿಸುತ್ತಾರೆ. ಮೇಲೆ ಹೇಳಿದಂತೆ ಪ್ರಾಧಾನ್ಯ ವಿವಕ್ಷೆಯಿಂದ ಅಂಗವನ್ನು ಅಂಗಿಯಾಗಿ ಹೇಳಿರುವುದನ್ನು ಒಪ್ಪದೆ ಇದ್ದರೆ, 3) **ಷಡ್ವಿಧಾ ಶರಣಾಗತಿಃ"** ಶರಣಾಗತಿಯು ಆರು ವಿಧವಾಗಿದೆ, ಎಂಬ ವಾಕ್ಯದಲ್ಲಿ ಆಪಾತ ಪ್ರತೀತಿಯನ್ನು ಸ್ವೀಕರಿಸಿ, **4) "ಸ್ನಾನಂ ಸಪ್ತ ವಿಧಂ ಸ್ಮೃತಂ"** ಸ್ನಾನವು ಸಪ್ತವಿಧ – ಇತ್ಯಾದಿಗಳಲ್ಲಿ ಹೇಳಿದ ಸ್ನಾನ ಭೇದಗಳ

---

1) ನಮಸ್ಕಾರಾತ್ಮಕಂಯಸ್ಮೈ ವಿಧಾಯಾತ್ಮ ನಿವೇದನಂ ।

ತ್ಯಕ್ತದುಃಖೋಽಖಿಲಾನ್ಕಾಮಾನ್ ಅಶ್ನುತೇ ತಂ ನಮಾಮ್ಯಹಮ್ ॥

ನಮಃ ಎಂದು ಭಗವಂತನಲ್ಲಿ ಆತ್ಮ ಸಮರ್ಪಣವನ್ನು ಮಾಡಿ, ಸಕಲ ಸಾಂಸಾರಿಕ ಕ್ಲೇಶವನ್ನು ನೀಗಿಸಿ, ಭಗವದನುಭವರೂಪ ಅಪರಿಮಿತಾ ನಂದವನ್ನು "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾವಿಪಶ್ಚಿತಾ" ಎಂಬಂತೆ ಅನುಭವಿಸುತ್ತಾನೆ. ಅಂತಹ ಭಗವಂತನನ್ನು ನಮಸ್ಕರಿಸುತ್ತೇನೆ, ಪ್ರ. ತಿ. ನೋ,

**ಸ್ನಾನಾದಿ ಭೇದಙ್ಗಳ್ ಪೋಲೇ ತನಿತ್ತನಿಯೇ ಪ್ರಪತ್ತಿ ವಿಶೇಷಙ್ಗಳಾಹ ಪ್ರಸಙ್ಗಿಕ್ಕುಮ್. 1) "ಪ್ರಪತ್ತಿಂ ತಾಂ ಪ್ರಯುಂಜೀತ ಸ್ವಾಙ್ಗೈಃಪಂಚಭಿ ರಾವೃತಾಮ್" ಇತ್ಯಾದಿ ವಚನಾಂತರ ಬಲತ್ತಾಲೇ ನಿಯಮಿಕ್ಕಪ್ಪಾರ್ಕಿಲ್. ಅಪ್ಪಡಿಯೇ ಪ್ರಾರ್ಥನಾ ವಿಶ್ವಾಸಾದಿಹಳೈ ಪ್ರಪತ್ತಿಯೆನ್ರು ಶೊಲ್ಲುಹಿರ ವಚನಙ್ಗಳೈಯುಮ್ ನಿಯಮಿತ್ತು 2) "ನ್ಯಾಸಃ ಪಂಚಾಙ್ಗ ಸಂಯುತಃ" ಇತ್ಯಾದಿಹಳಿರ್ ಪಡಿಯೇ ನಿಕ್ಷೇಪ ಮೊನ್ರುಮೇ ಅಙ್ಗಿ, ಇತರಙ್ಗಳ್ ಅಙ್ಗಗಳೆನ್ಗೈಯುಂಚಿತಮ್.**

**ಭೂಯಸಾಂ ನ್ಯಾಯರೀತ್ಯಾ ನಿಕ್ಷೇಪವು ಅಙ್ಗೀ ಪ್ರಾರ್ಥನೆಯು ಅಂಗಿಯಲ್ಲ ಅಂಗ.**

**ಭೂಯಸಾಂ ನ್ಯಾಯತ್ತೈಪ್ಪಾರ್ತ್ತಾಲುಮ್ ಸಾತ್ಯಕಿತನ್ತ್ರ ಲಕ್ಷ್ಮೀತನ್ತ್ರಾಹಿರ್ಬುಧ್ನ್ಯ ಸಂಹಿತಾದಿಹಳಿಲ್ ಪ್ರಪತ್ತ್ಯಧ್ಯಾಯಙ್ಗಳಿಲೇ ನಿಕ್ಷೇಪ ಮಙ್ಗಿಯೆನ್ರೇ ಪ್ರಸಿದ್ಧಮ್.**

---

ಹಾಗೆ, ಆನುಕೂಲ್ಯ ಸಂಕಲ್ಪ, ಪ್ರಾತಿಕೂಲ್ಯವರ್ಜನ, ಮಹಾವಿಶ್ವಾಸ, ಗೋಪ್ತೃತ್ವವರಣ, ಕಾರ್ಪಣ್ಯ, ಆತ್ಮನಿಕ್ಷೇಪವೆಂಬುವು ಒಂದೊಂದೂ ಪ್ರಪತ್ತಿ ವಿಶೇಷಗಳಾಗುವ ಪ್ರಸಂಗವು ಸಂಭವಿಸುತ್ತದೆ. 1) **ಪ್ರಪತ್ತಿಂತಾಂ ಪ್ರಯುಂಜೀತ** ಎಂಬ ವಚನಬಲದಿಂದ' ಐದು ಅಂಗಗಳೊಡನೆ ಪ್ರಪತ್ತಿಯನ್ನು ಮಾಡಬೇಕು ಎಂಬ ವಚನಾಂತರ ಬಲದಿಂದ, ಷಡ್ವಿಧಾ ಶರಣಾಗತಿಃ ಎಂಬಲ್ಲಿ ಐದು ಅಂಗಗಳು ಒಂದು ಅಂಗಿ, ಒಟ್ಟು ಶರಣಾಗತಿಯು ಆರು ಪ್ರಕಾರವೆಂದು ಅಂಗಾಂಗಿಗಳನ್ನು ಸೇರಿಸಿ ಹೇಳಿರುವುದು ಔಪಚಾರಿಕವೆಂದು ನಿರ್ವಹಿಸುವುದಾದರೆ, ಹಾಗೆಯೇ ಪ್ರಾರ್ಥನಾ ವಿಶ್ವಾಸಾದಿಗಳನ್ನು ಪ್ರಪತ್ತಿಯೆಂದು ಹೇಳುವ ವಚನಗಳನ್ನೂ ಔಪಚಾರಿಕವೆಂದು ನಿರ್ವಹಿಸಿ 2) **ನ್ಯಾಸಃಪಂಚಾಂಗ ಸಂಯುತಃ** ನ್ಯಾಸವು-ಪ್ರಪತ್ತಿಯು ಐದು ಅಂಗಗಳಿಂದ ಕೂಡಿದೆ ಇತ್ಯಾದಿಗಳಲ್ಲಿ ಹೇಳಿರುವಂತೆ ನಿಕ್ಷೇಪವು-ಭರನ್ಯಾಸವು, ಒಂದೇ ಅಂಗಿ. ಇತರಗಳು ಅಂದರೆ ವಿಶ್ವಾಸಗೋಪ್ತೃತ್ವವರಣಗಳು ಅಂಗಗಳೆಂದು ಹೇಳುವುದು ಉಚಿತ. ಸರಿ, ತದೇಕೋಪಾಯತಾಯಾಂಚಾ ಪ್ರಪತ್ತಿಃ,"ತ್ವಮೇವೋಪಾಯ ಭೂತೋಮೇ ಭವೇತಿಪ್ರಾರ್ಥನಾಮತಿಃ ಶರಣಾಗತಿಃ", "ತವಾಸ್ಮೀತಿಚಯಾಚತೇ" ಇತ್ಯಾದಿ ವಚನಗಳು ಪ್ರಾರ್ಥನೆಯೇ ಶರಣಾಗತಿ ಎಂದು ಹೇಳುವಾಗ, ನಿಕ್ಷೇಪವು ಪ್ರಪತ್ತಿ ಎಂದು ನಿರ್ಣಯಿಸುವುದು, ಈ ರೀತಿಯಾದ ವಚನಗಳನೇಕಗಳಿಗೆ ವಿರುದ್ಧವಾಗುವುದರಿಂದ ಭೂಯಸಾಂನ್ಯಾಯ ವಿರುದ್ಧವಲ್ಲವೇ ಎಂದರೆ, **ಭೂಯಸಾಂ ನ್ಯಾಯತ್ತೈಪ್ಪಾರ್ತ್ತಾಲುಮ್** ಎಂದಾರಂಭಿಸಿ ಸಮಾಧಾನವನ್ನು ಆಚಾರ್ಯರು ಹೇಳುತ್ತಾರೆ. ಆದಾಗಿ ಸಾತ್ಯಕಿ ತಂತ್ರ ಲಕ್ಷ್ಮೀ ತಂತ್ರಾದಿ ಸಂಹಿತೆಗಳು ಬಹಳ ಇವೆ. ಅವುಗಳಲ್ಲೆಲ್ಲಾ ಪ್ರಾಯಿಕವಾಗಿ ಪ್ರಪತ್ತ್ಯಧ್ಯಾಯವು ಪಠಿತವಾಗಿದೆ. ಅವುಗಳಲ್ಲಿ ಪ್ರಾರ್ಥನೆಗೆ ಪ್ರಪತ್ತ್ಯ ಭೇದ ವಚನಗಳು ಅನೇಕಗಳಿದ್ದರೂ ಪ್ರಾರ್ಥನೆಯು ಅಂಗಿ ಎಂದು ಕಂಠೋಕ್ತವಾಗಿ ಹೇಳಿಲ್ಲವಾದ್ದರಿಂದಲೂ,ನಿಕ್ಷೇಪಾಪರಪರ್ಯಾಯೋ ನ್ಯಾಸಃ ಪಂಚಾಂಗ ಸಂಯುತಃ, ಅನೇನೈವತು ಮಂತ್ರೇಣ ಸ್ವಾತ್ಮಾನಂ **ಮಯಿನಿಕ್ಷಿಪೇತ್,** ಇತ್ಯಾದಿ ಅನೇಕ ವಚನಗಳಲ್ಲಿ ನಿಕ್ಷೇಪವು

---

1) "ಅನೇನೈವತು ಮಂತ್ರೇಣ ಸ್ವಾತ್ಮಾನಂ ಮಯಿ ನಿಕ್ಷಿಪೇತ್।
ಮಯಿನಿಕ್ಷಿಪ್ತ ಕರ್ತವ್ಯಃ ಕೃತಕೃತ್ಯೋಭವಿಷ್ಯತಿ ॥" — **ಸಾತ್ಯಕಿ ತಂತ್ರ.**

2) ಆತ್ಮಾತ್ಮೀಯ ಭರನ್ಯಾಸೋಹ್ಯಾತ್ಮ ನಿಕ್ಷೇಪಉಚ್ಯತೇ ॥

3) ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯವರ್ಜನಮ್ ।
ರಕ್ಷಿಷ್ಯತೀತಿ ವಿಶ್ವಾಸಃ ಗೋಪ್ತೃತ್ವ ವರಣಂತಥಾ ॥
ಆತ್ಮನಿಕ್ಷೇಪಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ॥ — ಅಹಿರ್ಬುಧ್ನ್ಯ ಸಂಹಿತೆ (38-18-5)

1) ಲಕ್ಷ್ಮೀತಂತ್ರ 28-11-7 2) ಅಹಿ. 17-74

ಅಙ್ಗಸ್ಯ ಪ್ರಾಧಾನ್ಯಾತ್ ಅಙ್ಗಾಙ್ಗಿನೋರಭೇದಃ, ಏವಂ ಲೋಕಸಿದ್ಧಿಃ
"ತ್ವಮೇವೋಪಾಯ ಭೂತೋ ಮೇ ಭವೇತಿ ಪ್ರಾರ್ಥನಾಮತಿಃ । ಶರಣಾಗತಿರಿತ್ಯುಕ್ತಾ" ಎನ್ನಿರದು

---

ಅಂಗಿಯೆಂದು ಮುಕ್ತ ಕಂಠವಾಗಿ ಹೇಳಿರುವುದರಿಂದಲೂ, ಅಂಗಿ ಪ್ರತಿಪಾದಕ ವಚನಗಳೇ ಬಹಳ ಅಧಿಕವಾದ್ದರಿಂದ ಭೂಯಸಾಂನ್ಯಾಯವು ನಿಕ್ಷೇಪವು ಅಂಗಿ ಎಂಬುದಕ್ಕೆ ಸಾಧಕ. ಅ ನ್ಯಾಯವನ್ನು ಅವಲಂಬಿಸಿದರೂ ನಿಕ್ಷೇಪವು ಅಂಗಿ ಎಂದೇ ಪ್ರಸಿದ್ಧಿ.

ಇದರಿಂದ ಈ ಪ್ರಕರಣದಲ್ಲಿ ನಿಕ್ಷೇಪದ ಪ್ರಾಧಾನ್ಯವನ್ನು ಸ್ಥಾಪಿಸಲು ಅಚಾರ್ಯರು ಉದ್ದೇಶಿಸಿದ್ದಾರೆಯೇ ಹೊರತು, ಪ್ರಾರ್ಥನೆಯು, ಅಂಗವೇ, ಅಂಗಿ ಕೋಟಿ ಪ್ರವಿಷ್ಟವೇ ಎಂಬ ವಿಚಾರವನ್ನು ಮಾಡಲಿಲ್ಲ. ಅದರಿಂದಲೇ ಪ್ರಾರ್ಥನಾ ಪದವನ್ನು ಉಪಾಯ ವರಣ ಪರವಾಗಿಯೂ, (ಅಂಗಿವಿಶೇಷಣ), ಗೋಪ್ತೃತ್ವವರಣ (ಅಂಗ) ಪರವಾಗಿಯೂ ನಯನಮಾಡಿರುತ್ತಾರೆಂದು ಪಂಡಿತರು ವಿಭಾವಿಸಬೇಕು.

1) ಅನೇನೈವತು ಮಂತ್ರೇಣ ಸ್ವಾತ್ಮಾನಂ ಮಯಿನಿಕ್ಷಿಪೇತ್ ।
ಮಯಿನಿಕ್ಷಿಪ್ತಕರ್ತವ್ಯಃ ಕೃತಕೃತ್ಯೋಭವಿಷ್ಯತಿ ॥" (ಸಾತ್ಯಕಿ ತಂತ್ರ ವಚನ)

2) ಆತ್ಮಾತ್ಮೀಯಾಚ ಯತ್ಕಿಂಚಿತ್ ದುರ್ಭರಂ ದುಸ್ತ್ಯಜಂಮಮ ।
ತತ್ಸರ್ವಂ ತವ ವಿನ್ಯಸ್ತಂ ಶುಭಯೋಃ ಪಾದ ಪದ್ಮಯೋಃ ॥ (ಲಕ್ಷ್ಮೀತಂತ್ರ)

3) ನ್ಯಾಸಾಖ್ಯಂ ಸಾಧನಂ ಪ್ರೋಕ್ತಂ ತನ್ಮೇ ಬ್ರೂಹಿಮಹೇಶ್ವರ । ಎಂಬ ನಾರದ ಪ್ರಶ್ನೆಗೆ,

4) ಇದಂ ಮಹೋಪನಿಷದಂ ದೇವಾನಾಂ ಗುಹ್ಯಮುತ್ತಮಮ್ ।

ಇತ್ಯಾದಿಗಳಿಂದ ಈ ನ್ಯಾಸಾಧ್ಯಾಯವು ತೈತ್ತರೀಯದಲ್ಲಿ "ಏತದ್ವೈ ಮಹೋಪನಿಷದಂ ದೇವಾನಾಂಗುಹ್ಯಂ ಯಏವಂ ವೇದ ಬ್ರಹ್ಮಣೋಮಹಿಮಾನ ಮಾಪ್ನೋತಿ" ಎಂದು ಶ್ರುತವಾದ ನ್ಯಾಸ ವಿದ್ಯೆಗೆ ಉಪಬೃಂಹಣ ವಾಗಿದೆಯೆಂದು ಪ್ರತ್ಯಭಿಜ್ಞಾಪಿಸಿ, "ಯದ್ಯೇನ ಕಾಮಕಾಮೇನ ನಸಾಧ್ಯಂ ಸಾಧನಾಂತರೈಃ । " "ತೇನತೇ ನಾಪ್ಯತೇ ತತ್ರನ್ಯಾಸೇ ನೈವ ಮಹಾಮುನೇ", ಎಂದು ಪರಮ ಪುರುಷಾರ್ಥ ಪರ್ಯಂತವಾದ ಸರ್ವಾಭಿಮತವನ್ನೂ ನ್ಯಾಸವಿದ್ಯೆಯು ಸಾಧಿಸಿಕೊಡುತ್ತದೆ ಎಂದು ಹೇಳಿ, ಇದು ಭರನ್ಯಾಸ ರೂಪವಾದದ್ದು ಎಂಬುದನ್ನು,

"ಸನಿಮಿತ್ತಾಸ್ಸಧನಕಾದೀನಾಂ ಯಜ್ಞಾನಾಂನ್ಯಾಸ ಮಾತ್ಮನಃ ।
ನಮಸಾಯೋಽಕರೋದ್ದೇವೇ ಸಸ್ವಧ್ವರ ಇತೀರಿತಃ ॥

ಎಂಬ ಶ್ಲೋಕದಿಂದ "ನ್ಯಾಸೇನೈವ" ಎಂದು ಹೇಳಿ, ಅಂಗಿತ್ವವು ಸ್ಪಷ್ಟೀಕೃತವೆಂಬುದು ಪ್ರಕರಣಾರ್ಥ

**ಅಂಗದ ಪ್ರಾಧಾನ್ಯತೆಯಿಂದ ಅಂಗಾಂಗಿಗಳನ್ನು ಒಂದಾಗಿ ಹೇಳಿದೆ. ಇದು ಲೋಕದಲ್ಲಿಯೂ ಉಂಟು**

ಅಹಿರ್ಬುಧ್ನ್ಯ ಸಂಹಿತೆಯಲ್ಲಿ "ತ್ವಮೇವೋಪಾಯ ಭೂತೋಮೇ ಭವೇತಿ ಪ್ರಾರ್ಥನಾಮತಿಃ" । ಶರಣಾಗತಿಃ ಎಂದು ಪ್ರಾರ್ಥನೆಗೆ ಪ್ರಾಧಾನ್ಯವನ್ನು ಹೇಳಿದೆ ಎಂದು ಶಂಕಿಸಬಾರದು. "ತ್ವಮೇವ" ಎಂದು ಅವಧಾರಣ ಸಹಕೃತ ಉಪಾಯತ್ವ ಪ್ರಾರ್ಥನೆಯನ್ನು ಹೇಳಿರುವುದರಿಂದ, ಕೇವಲ ಪ್ರಾರ್ಥನೆಗೆ ಪ್ರಾಧಾನ್ಯವನ್ನು ಕೊಡುವುದು, ಪೂರ್ವಾಪರನ್ಯಾಸ ಪ್ರಾಧಾನ್ಯವಾದಗಳಿಗೆ ವಿರೋಧವಾಗುತ್ತದೆ. ಆದ್ದರಿಂದ ಅರ್ಥಸಾಮರ್ಥ್ಯದಿಂದಲೂ ಶಬ್ದಸಾಮರ್ಥ್ಯದಿಂದಲೂ, ಸ್ವನಿರ್ಭರತ್ವ ಪರ್ಯಂತ ಭರನ್ಯಾಸ ಪ್ರಧಾನವಾದ ಪ್ರಾರ್ಥನೆಯಲ್ಲಿ ಶಾಸ್ತ್ರದ ಅಭಿಪ್ರಾಯವೆಂದು, "ತ್ವಮೇವೇತ್ಯಾದಿನಾವ್ಯಂಜಿತಮ್" ಎಂದು ಅನುಗ್ರಹಿಸುತ್ತಾರೆ. ಅದಾಗಿ ತ್ವಮೇವ ಇತ್ಯಾದಿ – ನೀನೇ ನನಗೆ ಉಪಾಯವಾಗಿರು" ಎಂಬ ಪ್ರಾರ್ಥನಾ ಬುದ್ಧಿಯು ಶರಣಾಗತಿ" ಎಂದು ಹೇಳಿರು

**ವುಮ್ ತತ್ಪ್ರಕರಣತ್ತಿಲೇ ಪ್ರಧಾನಮಾಹಚ್ಚೊನ್ನ ಭರನ್ಯಾಸ ಪರ್ಯಂತ ಮೆನ್ನುಮಿಡಮ್ ಅವಧಾರಣ ಸಹಕೃತೋಪಾಯ ಶಬ್ದತ್ತಾಲೇ ವ್ಯಂಜಿತಮ್. ಓರೋರು ವಿವಕ್ಷೈಹಳಾಲೇ ಅಙ್ಗಙ್ಗಳೈ ಪ್ರಧಾನ ಮಾಹ ಚ್ಚೊಲ್ಲುಹೈ ಲೋಕತ್ತಿಲು ಮುಂಡು.**

**"ಶರಣಂವ್ರಜ" ಇತ್ಯಾದಿ ವಿಶ್ವಾಸಾಙ್ಗಪರವಾಕ್ಯೇಪಿ ಆತ್ಮ ಸಮರ್ಪಣ ಪರ್ಯಂತತ್ವ ಸಿದ್ಧಿಃ**

**ಅಲಂಭ ಶಬ್ದಮ್ ಯಾಗಪರ್ಯಂತ ಮಾನಾರ್ಪ್ಪೋಲೇ, "ಶರಣಂ ವ್ರಜ" ಇತ್ಯಾದಿಹಳಿಲ್ ಧಾತುಕ್ಕಳ್ ನ್ಯಾಸ ನಿಕ್ಷೇಪತ್ಯಾಗಾದಿ ಶಬ್ದಙ್ಗಳಾಲೇ ಶೊಲ್ಲಪ್ಪಟ್ಟ ಆತ್ಮಯಾಗತ್ತೈ ಚ್ಚೊಲ್ಲುಹೈ ವೈದಿಕ ಮರ್ಯಾದೈಕ್ಕುಮ್ ಅನುಗುಣಮ್.**

---

ವುದೂ ಆ ಪ್ರಕರಣದಲ್ಲಿ ಪ್ರಧಾನವಾಗಿ ಹೇಳಿದೆ, "**ಭರನ್ಯಾಸ ಪರ್ಯಂತ ಮೆನ್ನುಮಿಡಮ್**", – ನಮನ ರೂಪ ಭರನ್ಯಾಸ ಶಿರಸ್ಕವೆಂದು ಅಂದರೆ "ಪ್ರಾರ್ಥನಾನ್ವಿತ ಭರನ್ಯಾಸ ರೂಪಮತಿಯು, ಶರಣಾಗತಿ", ಎಂದು ತಾತ್ಪರ್ಯವೆಂಬುದು **ಅವಧಾರಣ ಸಹಕೃತ ಉಪಾಯ ಶಬ್ದತ್ತಾಲೇ,** ತ್ವಮೇವ – ನೀನೇ ಎಂಬ ಅವಧಾರಣ– ನಿರ್ಬಂಧದಿಂದ ಕೂಡಿದ ಉಪಾಯ ಶಬ್ದದಿಂದ, **ವ್ಯಂಜಿತಮ್** – ಪ್ರಕಾಶಿತವು. ಅದಾಗಿ "ತ್ವಮುಪಾಯೋಭವ" "ನೀನು ಉಪಾಯವಾಗಿರು" ಎಂದು ಹೇಳದೆ "ತ್ವಮೇವೋ ಪಾಯೋಭವ"–"ನೀನೇ ಉಪಾಯವಾಗಿರು" ಎಂದು ಸಾವಧಾರಣವಾಗಿ ನಿರ್ಬಂಧವಾಗಿ ಹೇಳಿರುವುದರ ತಾತ್ಪರ್ಯವೇನೆಂದರೆ, ಭಕ್ತಿ ರೂಪವಾದ ಉಪಾಯಾಂತರವನ್ನು ನನ್ನ ತಲೆಯ ಮೇಲೆ ಹೊರಿಸದೆ, ಆ ಸ್ಥಾನದಲ್ಲಿ ನೀನೇ ಆ ಭರವನ್ನು ವಹಿಸಿ ಅಂದರೆ ಭಕ್ತಿಯೋಗವನ್ನು ಅನುಷ್ಠಿಸಿದರೆ ಕೊಡುವ ಫಲವನ್ನು ಶರಣಾಗತಿ ವಶೀಕೃತನಾದ ನೀನೇ ಅಕಿಂಚನನಾದ ನನಗೆ ಕೊಟ್ಟು ಅನುಗ್ರಹಿಸು ಎಂಬ ಪ್ರಾರ್ಥನೆ. ಇಂಥಹ ಪ್ರಾರ್ಥನೆಯು ಭರಸಮರ್ಪಣವಿಲ್ಲದೆ ಫಲಕಾರಿಯಾಗಲಾರದಾದ್ದರಿಂದ, ಅವಧಾರಣ ಶಿರಸ್ಕವಾದ ಉಪಾಯ ಶಬ್ದದಿಂದ ಪ್ರಾರ್ಥನೆಯು ಭರನ್ಯಾಸ ಶಿರಸ್ಕವೆಂಬುದು ತಿಳಿಸಲ್ಪಡುತ್ತದೆ. ಹೀಗೆ ಹೇಳಿದರೂ,

ಅಜ್ಞಾನಾದಥವಾ ಜ್ಞಾನಾದಪರಾಧೇಷು ಸತ್ಸ್ವಪಿ ।
ಪ್ರಾಯಶ್ಚಿತ್ತಂ ಕ್ಷಮಸ್ವೇತಿ ಪ್ರಾರ್ಥನೇಕೈವ ಕೇವಲಮ್ ॥

ಎಂದು ಕ್ಷಮಿಸಿ ಎಂಬ ಪ್ರಾರ್ಥನೆಗೆ ಪ್ರಾಯಶ್ಚಿತ್ತತ್ವವನ್ನು ಅಂದರೆ ಪ್ರಾಯಶ್ಚಿತ್ತ ಪ್ರಪದನಾಭೇದ ರೂಪತ್ವವನ್ನು ಹೇಳಿರುವುದಕ್ಕೆ ತಾತ್ಪರ್ಯವೇನೆಂದು ಕೇಳುವವರಿಗೆ, "**ಓರೋರು ವಿವಕ್ಷೈಹಳಾಲೇ** ಎಂದಾರಂಭಿಸಿ, ಮಂತ್ರಿಯು ರಾಜನಿಗೆ ಭೃತ್ಯನಾಗಿದ್ದರೂ, ಪ್ರಾಧಾನ್ಯ ವಿವಕ್ಷೆಯಿಂದ, "ಅಯಮೇವ ರಾಜಾ – ಇವನೇ ರಾಜನೆಂಬುದು ಲೋಕ ವ್ಯವಹಾರದಲ್ಲಿ ಕಂಡು ಬರುವಂತೆ, ಒಂದೊಂದು ವಿವಕ್ಷೆಯಿಂದ ಅಂಗಗಳನ್ನು ಪ್ರಧಾನವಾಗಿ ಹೇಳುವುದು ಲೋಕದಲ್ಲೂ ಉಂಟು ಎಂದು ಸಮಾಧಾನವನ್ನು ಅನುಗ್ರಹಿಸುತ್ತಾರೆ.

ಮಾಮೇಕಂ ಶರಣಂವ್ರಜ, ತಮೇವ ಶರಣಂಗಚ್ಛ ಇತ್ಯಾದಿಗಳಲ್ಲಿ "ವ್ರಜ". "ಗಚ್ಛ" ಎಂಬ ಶಬ್ದಗಳಲ್ಲಿ, ಗತ್ಯರ್ಥಗಳು ಜ್ಞಾನಾರ್ಥಗಳಾಗಿ, ಅಧ್ಯವಸಾಯ, ಪ್ರಾರ್ಥನಾತ್ಮಕ ಜ್ಞಾನವಾಚಿಗಳಾಗಿ, ನನ್ನೊಬ್ಬನನ್ನೇ ಶರಣವಾಗಿ ಉಪಾಯವಾಗಿ ಅಧ್ಯವಸಿಸು ಅಥವಾ ಪ್ರಾರ್ಥಿಸು, ಎಂದು ಸ್ವರಸವಾಗಿ ಅಂಗಿಪರತ್ವವು ತೋಚುವಾಗ, ಈ ವ್ರಜ, ಗಚ್ಛ ಶಬ್ದಗಳು ಅಂಗಿಯಾದ ಆತ್ಮ ನಿಕ್ಷೇಪವನ್ನು ವಿಧಿಸುವುದಾಗಿ ಹೇಳುವುದು ಕ್ಲಿಷ್ಟವಲ್ಲವೇ ಎಂದರೆ, ಇದು ವೈದಿಕ ಪ್ರಯೋಗಗಳಲ್ಲಿಯೂ ಅಂಗಗಳು ಅಂಗಿ ವಿಧಿ ತಾ ಪ್ರರ್ಯಕಗಳೆಂದು **ಆಲಂಭಶಬ್ದಮ್ ಯಾಗ ಪರ್ಯಂತ ಮಾನಾರ್ಪ್ಪೋಲೇ,** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ, ವೈದಿಕ ಮಂತ್ರಗಳಲ್ಲಿ, "ವಾಯುವ್ಯಗ್ಂ ಶ್ವೇತಮಾಲಭೇತ" ಎಂಬುದಾಗಿ ಅಂಗವಾದ ಪಶು ವಿಶಸನವನ್ನು (ಸಂಹಾರವನ್ನು) ಹೇಳುವ ಆಲಂಬ ಶಬ್ದವು ಅಂಗಿಯಾದ ಯಾಗ

## ಆತ್ಮ ಸಮರ್ಪಣಂ ಆತ್ಮಯಾಗಃ

**ಯಾಗಮಾವದು ? ಇನ್ನ ದೇವತೈಕ್ಕಿನ್ನ ಹವಿಸ್ಸೆನ್ರಿಜ್ಗನೇ ಯೊರು ಬುದ್ಧಿ ವಿಶೇಷಮ್. ಇಪ್ಪಡಿ ಯೆನ್ನಾತ್ಮಾವಾಹಿರ ಸ್ವಾದುತಮಮಾನ ಹವಿಸ್ಸು ಶ್ರೀಮಾನಾನ ನಾರಾಯಣರ್ಕ ಪೊರುಟ್ಟೆನ್ರಿಜ್ಗನೇ ಯಿರುಪ್ಪದೊರು ಬುದ್ಧಿವಿಶೇಷಮ್, ಇವ್ವಿಡತ್ತಿಲ್ ಆತ್ಮಯಾಗಮ್.**

**ಇವ್ವಾತ್ಮ ನಿಕ್ಷೇಪತ್ತಿಲ್ ಸರ್ವಫಲಾರ್ಥಿಹಳುಕ್ಕುಮ್ ಸಾಧಾರಣಮಾನ ಕರ್ತವ್ಯ ಸ್ವರೂಪಮ್ ರಕ್ಷಾಭರನ್ಯಾಸಮೆನ್ನು ಮಿಡಮ್ ಮುನ್ಬೇಶೊನ್ನೋಮ್.**

### ಭರಸಮರ್ಪಣಸ್ಯ ಪ್ರಾಧಾನ್ಯತ್ವಮ್

**ಹವಿಸ್ಸಮರ್ಪಣಾದತ್ರ ಪ್ರಯೋಗ ವಿಧಿ ಶಕ್ತಿತಃ ।**
**ಆತ್ಮರಕ್ಷಾ ಭರನ್ಯಾಸೋಽಕಿಂಚನಸ್ಯಾತಿರಿಚ್ಯತೇ ॥ ೩೭ ॥**

---

ವಿಧಿಗೆ ತಾತ್ಪರ್ಯವಾಗುವಂತೆ ಇಲ್ಲಿಯೂ ಮಾಮೇಕಂ ಶರಣಂ ವ್ರಜ, ತಮೇವ ಶರಣಂಗಚ್ಛ ಇತ್ಯಾದಿಗಳಲ್ಲಿ ಅಧ್ಯವ ಸಾಯ ಪ್ರಾರ್ಥನಾಪರಗಳಾದ ವ್ರಜ, ಗಚ್ಛ ಎಂಬ ಧಾತುಗಳು ನ್ಯಾಸ, ನಿಕ್ಷೇಪ, ತ್ಯಾಗಾದಿಗಳಿಂದ ಹೇಳಲ್ಪಟ್ಟ ಆತ್ಮ ನಿಕ್ಷೇಪರೂಪ ಯಾಗವನ್ನು ತಿಳಿಸುವುದು ವೈದಿಕ ಮರ್ಯಾದೆಗೆ ಅನುಗುಣವಾಗಿದೆ.

**ಯಾಗಮಾವದು** ಇತ್ಯಾದಿ-ಯಾಗವೆಂದರೆ ಈ ದೇವತೆಗೆ ಈ ಹವಿಸ್ಸು (ಸಮರ್ಪ್ಯವು) ಎಂಬ ಒಂದು ಬುದ್ಧಿ ವಿಶೇಷ. ಈ ರೀತಿಯಲ್ಲಿ ನನ್ನ ಆತ್ಮವೆಂಬ ಸ್ವಾದುತಮವಾದ ಹವಿಸ್ಸು ಶ್ರೀಮಾನಾದ ನಾರಾಯಣನಿಗೆ,(ಸಮರ್ಪ್ಯವು) ಎಂದು ಈ ರೀತಿಯಾದ ಒಂದು ಬುದ್ಧಿ ವಿಶೇಷವು ಇಲ್ಲಿ ಆತ್ಮಯಾಗ. ಈ ಆತ್ಮ ನಿಕ್ಷೇಪದಲ್ಲಿ ಸರ್ವ ಫಲಾರ್ಥಿಗಳಿಗೂ ಸಾಧಾರಣವಾದ ಕರ್ತವ್ಯ ಸ್ವರೂಪವು ರಕ್ಷಾ ಭರನ್ಯಾಸವೆಂಬುದನ್ನು ಮುಂಚೆಯೇ ಸಾಂಗ ಪ್ರಪನಾಧಿಕಾರದಲ್ಲಿ "ಆತ್ರರಕ್ಷಾಭರನ್ಯಾಸಃ ಸಮಃ ಸರ್ವ ಫಲಾರ್ಥಿನಾಮ್ ", ಎಂದು ಹೇಳಿದ್ದೇವೆಂದು ಆಚಾರ್ಯರು ನಿಗಮಿಸುತ್ತಾರೆ.

### ಅಂಶತ್ರಯದಲ್ಲಿ ಭರನ್ಯಾಸದ ಪ್ರಾಧಾನ್ಯತೆ

ಸ್ವರೂಪ, ಭರ, ಫಲಸಮರ್ಪಣ ರೂಪ, ಮೂರು ಅಂಶಗಳಿಂದ ಕೂಡಿದ ನ್ಯಾಸದಲ್ಲಿ ಭರಸಮರ್ಪಣಾಂಶವು ಪ್ರಧಾನವಾದದ್ದು, ಎಂದು **"ಹವಿಸ್ಸಮರ್ಪಣಾದತ್ರ"** ಎಂದಾರಂಭಿಸಿ ಆಚಾರ್ಯರು ತಿಳಿಸುತ್ತಾರೆ. ಅದಾಗಿ,"ಓಮಿತ್ಯಾತ್ಮಾನಂ ಯುಂಜೀತ", "ನ್ಯಾಸಮಾತ್ಮನಃ", ಅನೇನೈವತು ಮಂತ್ರೇಣ ಸ್ವಾತ್ಮಾನಂ ಮಯಿನಿಕ್ಷಿಪೇತ್" ಇತ್ಯಾದಿ ವಚನಗಳಲ್ಲಿ ಆತ್ಮಸ್ವರೂಪ ನಿಕ್ಷೇಪವೇ ಕರ್ತವ್ಯವಾಗಿ ತೋಚುವುದರಿಂದ, ಅದಕ್ಕಿಂತ ಮೇಲಾದ ಭರನ್ಯಾಸವನ್ನು ಮಾಡಬೇಕೆಂಬ ನಿರ್ಬಂಧವಿದೆಯೇ ಎಂದರೆ ಇದೆ, ಎಂದು ನಿರೂಪಿಸುತ್ತಾರೆ. **ಹವಿಸ್ಸಮರ್ಪಣಾದತ್ರ** ಇತ್ಯಾದಿ **ಅತ್ರ** ಈ ಮೋಕ್ಷಾರ್ಥ ಪ್ರಪದನದಲ್ಲಿ **ಪ್ರಯೋಗವಿಧಿಶಕ್ತಿತಃ** –

ಆತ್ಮಾತ್ಮೀಯ ಭರಂ ಸರ್ವಂ ನಿಕ್ಷಿಪ್ಯ ಶ್ರೀಪತೇಃ ಪದೇ ।
ಉಪಾಯಂವೃಣು ಲಕ್ಷ್ಮೀಶಂ, ತಮುಪೇಯಂ ವಿಚಿಂತಯ ॥
ಹವಿರ್ಗೃಹೀತ್ವಾತ್ಮರೂಪಂ ವಸುರಣ್ಯೇತಿ ಮಂತ್ರತಃ ।
ಜುಹುಯಾತ್ ಪ್ರಣವೇನಾಗ್ನೌ ಅಚ್ಯುತಾಖ್ಯೇಸನಾತನೇ ॥,

ಇತ್ಯಾದಿ ಪ್ರಯೋಗ ವಿಧಿಯ ಸಾಮರ್ಥ್ಯದಿಂದ, **ಅಕಿಂಚನಸ್ಯ** – ಉಪಾಯಾಂತರ ಶೂನ್ಯನಾದ ಮುಮುಕ್ಷುವಿಗೆ **ಆತ್ಮರಕ್ಷಾ ಭರನ್ಯಾಸಃ** – ಆತ್ಮರಕ್ಷಾ ಭರನ್ಯಾಸವು, **ಹವಿಸ್ಸಮರ್ಪಣಾತ್**– ಆತ್ಮಸ್ವರೂಪವಾದ ಹವಿಸ್ಸಮರ್ಪಣ

## ಸ್ವಪ್ರವೃತ್ತಿ ನಿವೃತ್ತಿರೇವ ಪ್ರಪತ್ತಿರಿತಿ ವಾಕ್ಯಸ್ಯ ತಾತ್ಪರ್ಯಮ್

**ಅತಃ ಶ್ರೀ ರಾಮಮಿಶ್ರಾದ್ಯೈರ್ಭರನ್ಯಾಸ ವಿವಕ್ಷಯಾ ।**
**ಸ್ವಪ್ರವೃತ್ತಿ ನಿವೃತ್ತ್ಯಂಶಃ ಪ್ರಪತ್ತಿರಿತಿ ಲಕ್ಷಿತಃ ॥೩೮॥**

## ಭರನ್ಯಾಸಸ್ಯ ಅವಶ್ಯಕತ್ವಂ

**ಅಕೃತೇತು ಭರನ್ಯಾಸೇ ರಕ್ಷಾಪೇಕ್ಷಣ ಮಾತ್ರತಃ ।**
**ಪಶ್ಚಾತ್ಸ್ವಯತ್ನ ವಿರತಿರ್ನಪ್ರಸಿಧ್ಯತಿ ಲೋಕವತ್ ॥೩೯ ॥**

---

ಕ್ಕಿಂತ, ಅತಿರಿಚ್ಯತೇ – ಮೇಲಾದದು. ಅಂದರೆ ಸ್ವರೂಪ ಭರ ಫಲ ಸಮರ್ಪಣವು ಪ್ರಧಾನವಾದದ್ದು, ಎಂದು ತಾತ್ಪರ್ಯ. ಹೀಗಾದರೆ ಶೋಮಾಶಿಯಾಂಡಾನ್ ಮೊಲಾದವರು "ಸ್ವಪ್ರವೃತಿನಿವೃತ್ತಿಃ", ಎಂಬುದು "ಪ್ರಪತ್ತಿ", ಎಂದು ಹೇಳಿರುದವುಕ್ಕೆ ತಾತ್ಪರ್ಯವೇನೆಂಬುದನ್ನು **ಅತಶ್ಶ್ರೀರಾಮಮಿಶ್ರಾದ್ಯೈಃ** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ **ಅತಃ** – ಭರನ್ಯಾಸವೇ ಅಕಿಂಚನನಿಗೆ ಕರ್ತವ್ಯವಾದ ಅಂಶದಲ್ಲಿ ಪ್ರಧಾನವಾದ್ದರಿಂದ ಶ್ರೀರಾಮ ಮಿಶ್ರಾದಿಗಳು – ಶ್ರೀಭಾಷ್ಯಕಾರರ ಪ್ರಧಾನ ಶಿಷ್ಯರುಗಳಲ್ಲಿ ಒಬ್ಬರಾದ ಶೋಮಾಂಶಿಯಾಂಡಾನ್ ಎಂಬುವರು, **ಭರನ್ಯಾಸ ವಿವಕ್ಷಯಾ** – ಕಾರಣವಾದ ಭರನ್ಯಾಸವನ್ನು ಹೇಳಬೇಕೆಂಬ ಇಚ್ಛೆಯಿಂದ **ಸ್ವಪ್ರವೃತ್ತಿ ನಿವೃತ್ತ್ಯಂಶಃ** – ಅದರ ಕಾರ್ಯವಾದ ಪುರುಷ ಪ್ರವೃತ್ತಿ ನಿವೃತ್ತ್ಯಂಶವೇ, **ಪ್ರಪತ್ತಿರಿತಿಲಕ್ಷಿತಃ**–ಪ್ರಪತ್ತಿಯೆಂದು ಲಕ್ಷಣೆಯಾಗಿ ಹೇಳಿದರು. ಅಂದರೆ ಭರವನ್ನು ಸಮರ್ಪಿಸದ ನಂತರ "ನಿರ್ಭರೋ ನಿರ್ಭಯೋಸ್ಮಿ" ಎಂದು ನೈರ್ಭರ್ಯವು ಏರ್ಪಟ್ಟು, ಇನ್ನು ಮೇಲೆ ಆತ್ಮರಕ್ಷಣೆಗಾಗಿ ತಾನು ಏನನ್ನೂ ಮಾಡಬೇಕಿಲ್ಲವೆಂಬುದು ಸಿದ್ಧಿಸುತ್ತದೆ. ಇದು ಕಾರ್ಯ. ಇದಕ್ಕೆ ಕಾರಣ ಭರನ್ಯಾಸ. ಆ ಸ್ವಪ್ರವೃತ್ತಿ ನಿವೃತ್ತ್ಯಂಶವು ಪ್ರಪತ್ತಿಯಿಂದ ಉಪಲಕ್ಷಿತವು.

ಭರನ್ಯಾಸವು ಏತಕ್ಕೆ? "ರಕ್ಷಿಸು" ಎಂಬ ಅಪೇಕ್ಷೆಯು ಮಾತ್ರ ಸಾಲದೇ ಎಂದರೆ ಸಾಲದು ಎನ್ನುತ್ತಾರೆ. ತಾನು ರಕ್ಷಿಸಿಕೊಡಬೇಕೆಂದು ಆಸೆಪಡುವ ವಸ್ತುವನ್ನು ರಕ್ಷಕನಲ್ಲಿ ಸಮರ್ಪಿಸದೆ, ರಕ್ಷಿಸು ಎಂದು ಅಪೇಕ್ಷಿಸಿದ ಮಾತ್ರದಿಂದ ರಕ್ಷಣೆಯು ಏರ್ಪಡುವುದಿಲ್ಲವಲ್ಲವೇ, ನಂತರ ತನ್ನ ಪ್ರಯತ್ನವಾದ ರಕ್ಷಣಾ ರೂಪವಾದ ವ್ಯಾಪಾರದಲ್ಲಿ ವಿರಾಮವೂ **ನಪ್ರಸಿದ್ಧ್ಯತಿ** – ಸಿದ್ಧಿಸುವುದಿಲ್ಲ. **ಲೋಕವತ್** – ಹೇಗೆಂದರೆ ಲೋಕದಲ್ಲಿ ತಾನು ರಕ್ಷಿಸಿಕೊಳ್ಳಲಾಗದ ದ್ರವ್ಯವನ್ನು ರಕ್ಷಿಸಿಕೊಡುವ ಸಾಮರ್ಥ್ಯವುಳ್ಳವನಲ್ಲಿಗೆ ಹೋಗಿ ಮಹಾವಿಶ್ವಾಸ ಪೂರ್ವಕವಾಗಿ ಅವನನ್ನು ರಕ್ಷಿಸಿಕೊಡು ಎಂದು ಪ್ರಾರ್ಥಿಸಿ, ಅವನಲ್ಲಿ ಆ ದ್ರವ್ಯವನ್ನು ಸಮರ್ಪಿಸಿ, ನಿರ್ಭರನಾಗಿ, ನಿರ್ಭಯನಾಗಿ ನಿದ್ರಿಸುವವನಂತೆ, ಈ ಆತ್ಮರಕ್ಷಾಭರವನ್ನು ಭಗವಂತನಲ್ಲಿ ಸಮರ್ಪಿಸಿದ ನಂತರ, ತಾನು ಮಾಡಬೇಕಾದ ಪ್ರಯತ್ನವು ಯಾವುದೂ ಇಲ್ಲವಾಗಿ ನಿರ್ಭರನಾಗಿ ನಿರ್ಭಯನಾಗಿ ಇರುತ್ತಾನೆ. ಹೀಗೆ ದ್ರವ್ಯವನ್ನು ರಕ್ಷಕನಲ್ಲಿ ಸಮರ್ಪಿಸದೆ ಕೇವಲ ಪ್ರಾರ್ಥನೆಯನ್ನು ಮಾಡಿದ ಮಾತ್ರಕ್ಕೆ ರಕ್ಷೆಯು ಏರ್ಪಡುವುದಿಲ್ಲವಾಗಿ ದ್ರವ್ಯರಕ್ಷಣ ವ್ಯಾಪಾರದಲ್ಲಿ ಸ್ವಪ್ರವೃತ್ತಿ ನಿವೃತ್ತಿಯು ಸಿದ್ಧಿಸುವುದಿಲ್ಲ. ಅದೇ ರೀತಿಯಲ್ಲಿ ಆತ್ಮರಕ್ಷಾಭರನ್ಯಾಸವನ್ನು ಮಾಡದೆ ಕೇವಲ ಪ್ರಾರ್ಥನೆಯಿಂದ ಸ್ವಪ್ರವೃತ್ತಿ ನಿವೃತ್ತಿಯು ಸಿದ್ಧಿಸುವುದಿಲ್ಲವೆಂಬುದು ತಾತ್ಪರ್ಯ. ಆದ್ದರಿಂದ ಸ್ವಪ್ರವೃತ್ತಿ ನಿವೃತ್ತಿಯು ರಕ್ಷಾಪೇಕ್ಷಾ ಕಾರ್ಯವಲ್ಲ. ಮತ್ತೇನೆಂದರೆ ಭರನ್ಯಾಸ ಕಾರ್ಯವೇ ಎಂದು ಹೇಳಲ್ಪಟ್ಟಿತು.

## ಈ ಮೂರು ವಿಧ ಪ್ರಪತ್ತಿ ಲಕ್ಷಣ ವಾಕ್ಯಗಳಿಗೆ ಐಕಕಂಠ್ಯ

ಹಾಗಾದರೆ ಪ್ರಪತ್ತ್ಯುತ್ತರ ಕಾಲದಲ್ಲಿ ಏರ್ಪಡುವ ಸ್ವ ಪ್ರವೃತ್ತಿ ನಿವೃತ್ತಿರೂಪವಾದ ಆ ಕಿಂಚನ್ಯವನ್ನೂ

**ಪ್ರಪತ್ತಿ ಲಕ್ಷಣ ವಾಕ್ಯಾನಾಂ ಐಕಕಂಠ್ಯಂ ಸಿದ್ಧಮ್**

**ಆಕಿಂಚನ್ಯ ಭರನ್ಯಾಸೋಪಾಯತ್ವ ಪ್ರಾರ್ಥನಾತ್ಮನಾಂ ।**
**ತ್ರಯಾಣಾಂ ಸೌಹೃದಂ ಸೂಕ್ಷ್ಮಂಯಃ ಪಶ್ಯತಿ ಸ ಪಶ್ಯತಿ ॥೪೦॥**

**ಅಥ ಪ್ರಪತ್ತಿ ಸ್ವರೂಪಂ ನಿಗಮಯತಿ**

**ಇಪ್ಪಡಿ ಅಙ್ಗಪಞ್ಚಕ ಸಂಪನ್ನಮಾನ ಆತ್ಮರಕ್ಷಾ ಭರನ್ಯಾಸಮೇ ಪ್ರಪತ್ತಿ ಶಾಸ್ತ್ರಙ್ಗಳೆಲ್ಲಾತ್ತಿಲುಮ್ ಪ್ರಧಾನಮಾನ ವಿಧೇಯಮೆನ್ರು ಶ್ರೀ ವಿಷ್ಣುಚಿತ್ತವಾದಿಹಂಸಾಂಬುವಾಹ ವರದಾಚಾರ್ಯಾದಿಹಳ್ ಸಙ್ಗ್ರಹಿತ್ತಾರ್‌ಹಳ್.**

---

ಅಂಗಿಯಾದ ಭರಸಮರ್ಪಣವನ್ನೂ ಅಂಗಿ ವಿಶೇಷಣವಾದ ಉಪಾಯತ್ವ ಪ್ರಾರ್ಥನೆಯನ್ನೂ ಪ್ರಪತ್ತಿ ಎಂದು ವ್ಯವಹರಿಸುವುದಕ್ಕೆ ಕಾರಣವೇನೆಂದರೆ ಅದನ್ನು **ಆಕಿಂಚನ್ಯಭರನ್ಯಾಸ** ಇತ್ಯಾದಿ ಶ್ಲೋಕದಿಂದ ವಿವರಿಸುತ್ತಾರೆ. ಅದಾಗಿ ಆಕಿಂಚನ್ಯ–ಸ್ವಪ್ರಯತ್ನ ನಿವೃತ್ತಿ. ಈ 'ಆಕಿಂಚನ್ಯ' ಶಬ್ದವು ಅಂಗವಾದ ಆಕಿಂಚನ್ಯವನ್ನು ನಿರೂಪಿಸುವುದಿಲ್ಲ, ಅಂದರೆ ದೈವವಶವಾಗಿ ಇವನಿಗೆ ಪ್ರಾಪ್ತವಾದ ಅಧಿಕಾರರೂಪ ಆಕಿಂಚನ್ಯವನ್ನು ನಿರೂಪಿಸುವುದಿಲ್ಲ. ವಿಧಿ ಪ್ರಾಪ್ತವಾದ ನಿರ್ಭರತ್ವವನ್ನು ತಿಳಿಸುತ್ತದೆ. ಹಾಗೆಯೇ ಪ್ರಮಾಣ ಸಂಪ್ರದಾಯಗಳಲ್ಲಿ ಕೆಲವೆಡೆಗಳಲ್ಲಿ ನ್ಯಾಸ ಪ್ರಾಧಾನ್ಯವನ್ನೂ ಮತ್ತೆ ಕೆಲವೆಡೆಗಳಲ್ಲಿ ಸ್ವ ಪ್ರವೃತ್ತಿ ನಿವೃತ್ತಿ ರೂಪ ನೈರ್ಭರ್ಯ ಪ್ರಾಧಾನ್ಯವನ್ನೂ ತಿಳಿಸಿವೆ. ಹೀಗೆ ಮೂರು ವಿಧವಾಗಿ ಹೇಳಿರುವಾಗ ಎಲ್ಲಾ ಪ್ರಮಾಣ ಸಂಪ್ರದಾಯಗಳಿಗೂ ವಿರೋಧವಿಲ್ಲದೆ, ಕರ್ತವ್ಯವಾದ ಉಪಾಯ ಸ್ವರೂಪ ವಿಶೇಷ ನಿಷ್ಕರ್ಷಕ್ಕೋಸ್ಕರ ಈ ಪ್ರಕರಣವು ಪ್ರವೃತ್ತವಾಗಿದೆ. ಅದಾಗಿ ಆಕಿಂಚನ್ಯ – ಸ್ವಪ್ರವೃತ್ತಿ (ಪ್ರಯತ್ನ) ನಿವೃತ್ತಿ. ತನ್ನ ಪ್ರಯತ್ನವಾವುದೂ ಪ್ರಪತ್ತ್ಯುತ್ತರ ಕಾಲದಲ್ಲಿ ಮೋಕ್ಷಾರ್ಥವಾಗಿ ಇಲ್ಲದಿರುವುದು, ಭರನ್ಯಾಸ–ಉಪಾಯಾಂತರ ಸ್ಥಾನ ನಿವೇಶರೂಪ ಭರಸಮರ್ಪಣೆ, ಉಪಾಯತ್ವ ಪ್ರಾರ್ಥನಾ–ಭಗವಂತನನ್ನು ಕುರಿತು ನೀನೇ ಉಪಾಯವಾಗಿದ್ದು ಈ ಭರವನ್ನು ಸ್ವೀಕರಿಸು ಎಂಬ ಭರ ಸ್ವೀಕಾರ ಪ್ರಾರ್ಥನೆ. ಈ ಮೂರು ಅಂಶಗಳಿಗೂ ಪರಸ್ಪರ ಸೂಕ್ಷ್ಮಂ ಸೌಹೃದಂ–ಸೂಕ್ಷ್ಮವಾದ ಹೊಂದಾಣಿಕೆಯು ಇದೆ. ಎಲ್ಲಿ ಪ್ರಾರ್ಥನೆಯೋ, ಅಲ್ಲಿ ತದನಂತರ ಭರನ್ಯಾಸ ತದನಂತರ ಸ್ವ ಪ್ರವೃತ್ತಿ ನಿವೃತ್ತಿ ರೂಪವಾದ ನೈರ್ಭರ್ಯ. ಈ ರೀತಿಯಾದ ಕಾರ್ಯ ಕಾರಣ ರೂಪವಾದ ಸಂಬಂಧ ವಿಶೇಷವನ್ನು ಯಃ ಪಶ್ಯತಿ–ಯಾವನು ತಿಳಿಯುತ್ತಾನೊ, ಸಪಶ್ಯತಿ – ಅವನು ಪ್ರಪತ್ತಿ ಶಾಸ್ತ್ರಾರ್ಥವನ್ನು ತಿಳಿದವನಾಗುತ್ತಾನೆ. ಸ್ವ ನಿರ್ಭರತ್ವ ಪರ್ಯಂತ ಪ್ರಾರ್ಥನಾನ್ವಿತ ಭರನ್ಯಾಸದಲ್ಲಿ ಎಲ್ಲಾ ವಚನಗಳಿಗೂ ತಾತ್ಪರ್ಯವೆಂದು ನ್ಯಾಯಾನುಗೃಹೀತ ಪ್ರಮಾಣ ಸಂಪ್ರದಾಯಗಳಿಂದ ವ್ಯವಸ್ಥಾಪಿತವು. ತಥಾಚ, ಭರಸ್ವೀಕಾರ ಪ್ರಾರ್ಥನಾ ಪೂರ್ವಕ ಉಪಾಯತ್ವ ಪ್ರಾರ್ಥನೆಯನ್ನು ಮಾಡಿ, ಭರವನ್ನು ಸಮರ್ಪಿಸಿ, ಅನಂತರ ನಿರ್ಭರೋ ನಿರ್ಭರೋಽಸ್ಮಿ ಎಂದು ಸ್ವ ಪ್ರವೃತ್ತಿ ನಿವೃತ್ತಿ ಎಂಬುದು, ಮೂರೂ ಅಂಗಿಯ ಸ್ವರೂಪದಲ್ಲಿ ಅನುಪ್ರವಿಷ್ಟಗಳಾಗಿ ಪರಮಸೌಹಾರ್ದವನ್ನು ಹೊಂದಿವೆ. ಇವುಗಳಲ್ಲಿ ಯಾವುದಾದರೂ ಒಂದು ಇಲ್ಲವಾದರೂ ಇತರಾಂಶಗಳಿಗೆ ಕಾರ್ಯಪರತ್ವವು ಸಂಭವಿಸುವುದಿಲ್ಲವೆಂಬ ಈ ರೀತಿಯಾದ ವ್ಯಾಸಜ್ಯ ವೃತ್ತಿ ಸಾಧನತ್ವವನ್ನು ಯಾವನು ತಿಳಿಯುತ್ತಾನೋ ಅವನೇ ಪ್ರಪತ್ತಿ ತತ್ವವನ್ನು ತಿಳಿಯುವವನು ಎಂದು ಉಪಸಂಹಾರ ಮಾಡಲ್ಪಟ್ಟಿದೆ.

**ಇಪ್ಪಡಿ ಅಂಗಪಂಚಕ ಸಂಪನ್ನಮಾನ** ಇತ್ಯಾದಿ–ಹೀಗೆ ಐದು ಅಂಗಗಳಿಂದ ಕೂಡಿದ ಆತ್ಮ ರಕ್ಷಾಭರ ನ್ಯಾಸವೇ ಪ್ರಪತ್ತಿ ಶಾಸ್ತ್ರಗಳೆಲ್ಲೆಲ್ಲಿಯೂ ಪ್ರಧಾನವಾಗಿ ವಿಧಿಸಲ್ಪಟ್ಟಿದೆ, ಎಂದು ಶ್ರೀ ವಿಷ್ಣುಚಿತ್ತ ವಾದಿ ಹಂಸಾಂಬುವಾಹ ವರದಾಚಾರ್ಯಾದಿಗಳು ಸಂಗ್ರಹಿಸಿದ್ದಾರೆ. ಶ್ರೀ ವಿಷ್ಣುಚಿತ್ತರು–ಎಂಗಳಾಳ್ವಾನ್–ವಿಷ್ಣು ಪುರಾಣ ವ್ಯಾಖ್ಯಾತಾ, ವಾದಿಹಂಸಾಂಬುವಾಹರು–ಅಪ್ಪುಳ್ಳಾರ್, ಶ್ರೀ ದೇಶಿಕರ ಆಚಾರ್ಯರು. ವರದಾಚಾರ್ಯರು-ಪೆರಿಯ ಅಮ್ಮಾಳ್ ಎಂದು ಸುಪ್ರಸಿದ್ಧರಾದವರು. ಶ್ರೀ ಅಪ್ಪುಳ್ಳಾರವರಿಗೆ ಆಚಾರ್ಯರು ಇದರಿಂದ ತಾವು ಮೇಲೆ ನಿರೂಪಿಸಿದ ಅರ್ಥಗಳು ಸಂಪ್ರದಾಯ ಸಿದ್ಧಗಳೆಂಬುದು ವ್ಯಕ್ತ.

## ಶೇಷತ್ವಾನುಸಂಧಾನಮೇವ ಉಪಾಯಃ ಇತಿ ಪಕ್ಷಸ್ಯ ಖಂಡನಮ್

ಇವ್ವಿಡತ್ತಿಲ್ ಶಿಲರ್ ಶಾಸ್ತ್ರಾರ್ಥ ತತ್ವಮ್ ತೆಳಿನ್ದಪೋದೇ ಶೇಷತ್ವಾನು ಸಂಧಾನಮ್ ಪಣ್ಣಿನಾನನ್ರೋ ?

1) "ಸ್ವೋಜ್ಜೀವನೇಚ್ಛಾಯದಿ ತೇ ಸ್ವಸತ್ತಾಯಾಂ ಸ್ಪೃಹಾಯದಿ ।
ಆತ್ಮದಾಸ್ಯಂ ಹರೇಃ ಸ್ವಾಮ್ಯಂ ಸ್ವಭಾವಂ ಚ ಸದಾ ಸ್ಮರ॥"

ಎನ್ರದುವುಮ್ ಪರಮ ಪುರುಷಾರ್ಥ ತದುಪಾಯಙ್ಗಳ್ಳೈ ವೇಣ್ಡಿಯಿರುನ್ದಾಯಾಹಿಲ್ ನೀ ದಾಸನಾಯ್ ಈಶ್ವರನ್ ಸ್ವಾಮಿಯಾಯ್ ಇರುಕ್ಕಿರದು ಸ್ವಭಾವ ಸಿದ್ಧಮೆನ್ರು ತತ್ವತ್ತಿಲೇ ತ್ತೆಳಿವುೋಡೇವರ್ತಿಯೆನ್ರ ಪಡಿಯನ್ರೋ ? ಆನಾಲಿಪ್ಪೋದು ಆತ್ಮಸಮರ್ಪಣ ಮೆನ್ರೋರು ವಿಧೇಯ ಮುಂಡೋವೆನ್ರು ಶೊಲ್ಲುವಾರ್ಹಳ್. ಇದುವುಮ್ ವಾಕ್ಯಜನ್ಯಜ್ಞಾನ ಮಾತ್ರತ್ತಾಲೇ ಮೋಕ್ಷಮೆನ್ಗೈಪೋಲೇ ಅನಾದರಣೀಯಮ್,

---

## ಶೇಷತ್ವಾನು ಸಂಧಾನವೇ ಪ್ರಪತ್ತಿಯೆಂಬ ವಾದ ನಿರಾಸ

**ಇವ್ವಿಡತ್ತಿಲ್ ಶಿಲರ್** ಇತ್ಯಾದಿ – ಈ ಪ್ರಕರಣದಲ್ಲಿ ಕೆಲವರು **ಶಾಸ್ತ್ರಾರ್ಥತತ್ವಂತೆಳಿನ್ದಪೋದೇ** – "ಜ್ಞಾನಾನಂದಮಯಸ್ತ್ವಾತ್ಮಾ ಶೇಷೋಹಿ ಪರಮಾತ್ಮನಃ ।" ಎಂದು ಜೀವನು ಜ್ಞಾನಾನಂದ ಸ್ವರೂಪನು. ಪರಮಾತ್ಮನಿಗೆ ಶೇಷಭೂತನು, ಎಂದು ಶೇಷತ್ವಾನು ಸಂಧಾನವನ್ನು ಮಾಡಿದವನಲ್ಲವೇ, 1) **"ಸ್ವೋಜ್ಜೀವನೇಚ್ಛಾಯದಿತೇ"** ಎಂಬ ಶ್ಲೋಕದಲ್ಲಿ ಹೇಳಿರುವುದೂ. **ಪರಮಪುರುಷಾರ್ಥ ತದುಪಾಯಂಗಳೈ** – ಮೋಕ್ಷದಲ್ಲಿ ಆಸೆ ಇದ್ದು, ಅದರ ಉಪಾಯದಲ್ಲೂ ಆಸೆ ಇದ್ದರೆ, ನೀ ದಾಸನಾಗಿ ಈಶ್ವರನು ಸ್ವಾಮಿಯಾಗಿರುವುದು ಸ್ವಭಾವ ಸಿದ್ಧವೆಂದು **ತತ್ವತ್ತಿಲ್** ಇತ್ಯಾದಿ – ತತ್ವದಲ್ಲಿ ತಿಳುವಾದ ಜ್ಞಾನವುಳ್ಳವನಾಗಿರು, ಎಂದಲ್ಲವೇ. "ಸ್ವೋಜ್ಜೀವನೇಚ್ಛಾ"ಎಂಬ ಪದವು ಮೋಕ್ಷದಲ್ಲಿ ಆಸೆಯನ್ನು ತಿಳಿಸುವಂತೆಯೂ"ಸ್ವಸತ್ತಾಯಾಂಸ್ಪೃಹಾ" ಎಂಬುದು ಉಪಾಯ ಪರವೆಂದೂ, ಸ್ವಭಾವಂಚ ಎಂಬಲ್ಲಿ"ಚ"ಕಾರವು ಅವಧಾರಣ ವಾಚಕವೆಂದೂ, ಅದರಿಂದಾಗಿ ಆತ್ಮದಾಸ್ಯವೂ ಹರಿಯ ಸ್ವಾಮ್ಯವೂಸ್ವಭಾವ ಸಿದ್ಧವಾದವುಗಳು. ಆದ್ದರಿಂದ ನಿನಗೆ ಮೋಕ್ಷದಲ್ಲಿ ಇಚ್ಛೆಯುಂಟಾಗಿ,ಅದನ್ನು ಪಡೆಯುವ ಉಪಾಯದಲ್ಲೂ ಆಸೆಯಿದ್ದರೆ, ಭಗವಂತನು ಸ್ವಾಮಿ, ನೀನು ಅವನಿಗೆ ದಾಸಭೂತನು ಎಂಬುದನ್ನು ಸದಾಸ್ಮರಣ ಮಾಡು. ಈ ಶೇಷತ್ವಾನು ಸಂಧಾನವೇ ಮೋಕ್ಷೋಪಾಯ, ಎಂಬುದು, ಪೂರ್ವಪಕ್ಷಿಯ ಅಭಿಪ್ರಾಯ. **ಆನಾಲ್** ಅದು ತತ್ವವಾದರೆ, **ಇಪ್ಪೋದು** – ಶಾಸ್ತ್ರಾರ್ಥ ತತ್ವವನ್ನು ತಿಳಿವಾಗಿ ಅರಿತ ನಂತರ, **ಆತ್ಮಸಮರ್ಪಣಮೆನ್ರೋರು** ಇತ್ಯಾದಿ – ಭಗವಚ್ಛೇಷತ್ವ ಸ್ಮರಣ ವಿನಹ, ಜ್ಞಾತೃತ್ವಾದಿಗಳಿಂದ ದೇಹೇಂದ್ರಿಯ ವಿಲಕ್ಷಣನಾದ ನಾನು ಮತ್ತು ನನ್ನದೆಂದು ಅಭಿಮತವಾದ ಸರ್ವವೂ ನಿನಗೇನೆ ಸಮರ್ಪ್ಯವು, ಎಂಬಂತೆ, ಭರನ್ಯಾಸ ಸಹಿತವಾದ ವಿಧೇಯ ಜ್ಞಾನವು ಬೇರೊಂದುಂಟೇ? ಶೇಷತ್ವ ಜ್ಞಾನವೇ ಅಂದರೆ ಸಂಬಂಧ ಜ್ಞಾನವೇ ಮೋಕ್ಷಕ್ಕೆ ಉಪಾಯವೇ ವಿನಹ ಬೇರೆ ಯಾವುದೂ ಇಲ್ಲವೆಂಬುದು ಪೂರ್ವ ಪಕ್ಷಿಯ ಅಭಿಪ್ರಾಯ. ಇದನ್ನು **ಇದುವುಮ್** ಎಂದಾರಂಭಿಸಿ ಪರಿಹರಿಸುತ್ತಾರೆ. ಅದಾಗಿ ಇದೂ ವಾಕ್ಯಜನ್ಯ ಜ್ಞಾನ ಮಾತ್ರದಿಂದ ಮೋಕ್ಷವೆಂಬಂತೆ ಅನಾದರಣೀಯ. 'ತತ್ವಮಸಿ' "ಆಬ್ರಹ್ಮವು ನೀನೇ" ಎಂಬ ವಾಕ್ಯಜನ್ಯವಾದ ಅವಿಧೇಯ ಜ್ಞಾನದಿಂದ

---

1) ವಿಷ್ಣು ತಂತ್ರ. ನೀನು ಉಜ್ಜೀವಿಸಬೇಕೆಂಬ ಇಚ್ಛೆಯುಳ್ಳವನಾಗಿದ್ದರೆ, ನಿನ್ನ ಆತ್ಮ ಸತ್ತೆಯಲ್ಲಿ ಸ್ಪೃಹೆಯು ಇದ್ದರೆ, ಆತ್ಮಾ ಭಗವಂತನಿಗೆ ದಾಸನು, ಹರಿಯುಸ್ವಾಮಿ ಎಂಬ ಸ್ಮರಣವನ್ನು ಸದಾ ಮಾಡಿಕೊಂಡಿರು ಈ ಶೇಷತ್ವಾನುಸಂಧಾನವೇ ಉಪಾಯ–ಇದುಪೂರ್ವಪಕ್ಷ.

ಪ್ರಪತ್ತಿಃ ಪ್ರಾಯಶ್ಚಿತ್ತರೂಪೇತಿ ವಿಧೇಯಾ

ಜಿತ ಕೌಸ್ತುಭ ಚೌರ್ಯಸ್ಯ ಸಮ್ರಾಜ ಸ್ಸರ್ವಪಾಪ್ಮನಾಂ ।
ಶಿಷ್ಟಂ ಹ್ಯಾತ್ಮಾಪಹಾರಸ್ಯ ನಿಷ್ಕೃತಿಸ್ಸ್ವಭರಾರ್ಪಣಮ್ ॥ ೪೧ ॥

ಶೇಷತ್ವ ಜ್ಞಾನಸ್ಯ ಪ್ರಯೋಜನಮಾಹ

ಪರಶೇಷತ್ವಧೀಮಾತ್ರ ಮಧಿಕಾರ ವಿಶೇಷಕಮ್ ।
ಪಶ್ಚಾದಾತ್ಮಾಪಹಾರಸ್ಯ ನಿರೋಧಾಯ ಚ ಕಲ್ಪತೇ ॥ ೪೨ ॥

ಶೇಷತ್ವಾದಿ ವಿಶಿಷ್ಟಮಾನ ಆತ್ಮತತ್ವತ್ತೈ ಶಾಸ್ತ್ರತ್ತಾಲೇ ತೆಳಿನ್ದವನುಕ್ಕು ಅಧಿಕಾರ ವಿಶೇಷ

---

"ಮಾಧ್ಯಾಯೀತ, ಮಾಮುಪಾಸ್ವ," ಎಂಬ ಉಪಾಸನಾತ್ಮಕ ಜ್ಞಾನವಿಲ್ಲದೆ, ಕೇವಲ ನಾನೇ ನೀನು-ಅಂದರೆ ಅಯಮಾತ್ಮಾ ಬ್ರಹ್ಮ, ತತ್ವಮಸಿ ಇತ್ಯಾದಿ ವಾಕ್ಯಜನ್ಯ ಜ್ಞಾನದಿಂದ ಮೋಕ್ಷವೆಂದು ಹೇಳುವ ಅದ್ವೈತವಾದವು ಉಪಾಸನ ವಿಧಿ ವೈಯ್ಯರ್ಥ್ಯವನ್ನುಂಟು ಮಾಡಿ ಹೇಗೆ ಅನಾದರಣೀಯವೋ, ಹಾಗೆ ಅವಿಧೇಯವಾದ ಶೇಷತ್ವ ಜ್ಞಾನದಿಂದ ಮೋಕ್ಷವೆಂದು ಹೇಳುವವಾದವೂ, "ಆತ್ಮಾನಂಮಯಿನಿಕ್ಷಿಪೇತ್", ಮಾಮೇಕಂ ಶರಣಂವ್ರಜ, ಓಮಿತ್ಯಾತ್ಮಾನಂ ಯುಂಜೀತ, ಇತ್ಯಾದಿ ವಿಧಿವೈಯ್ಯರ್ಥ್ಯ ಪ್ರಸಂಗದಿಂದ ಸತ್ವಸ್ಥರಿಗೆ ಅನಾದರಣೀಯ.

**ಪ್ರಪತ್ತಿಯು ಪ್ರಾಯಶ್ಚಿತ್ತ ರೂಪವಾದದು.**

**ಜಿತಕೌಸ್ತುಭ ಚೌರ್ಯಸ್ಯ** ಇತ್ಯಾದಿ ಆತ್ಮರಕ್ಷಾಭರಸಮರ್ಪಣವೂ, ಆತ್ಮಾಪಹಾರಪಾಪಕ್ಕೆ ಪ್ರಾಯಶ್ಚಿತ್ತವಾಗಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟದೆ. ಇದಕ್ಕೆ ಕಾರಣವಾದ, ಪರಶೇಷತ್ವ ಜ್ಞಾನವೇ ಆತ್ಮಾಪಹಾರ ಚೌರ್ಯಕ್ಕೆ ಪ್ರಾಯಶ್ಚಿತ್ತವಾಗಿ ಹೇಳಲ್ಪಡಲಿಲ್ಲವೆಂದು "ಜಿತಕೌಸ್ತುಭ" ಎಂಬ ಕಾರಿಕೆಯಿಂದ ಅನುಗ್ರಹಿಸುತ್ತಾರೆ. ಜಿತಂ ಕೌಸ್ತುಭ ಚೌರ್ಯಂ ಯೇನ ಸಃ ಜಿತಕೌಸ್ತುಭಚೌರ್ಯಃ,ಜ್ಞಾನಾನಂದಮಯವಾಗಿಯೂ,ಅದರಿಂದಲೇ ನಿರತಿಶಯ ಭೋಗ್ಯವಾಗಿಯೂ ಬ್ರಹ್ಮಾನುಭವಿತೃತ್ವ, ಪ್ರತ್ಯಕ್ತ್ವಗಳಿಂದ ಕೌಸ್ತುಭರತ್ನಕ್ಕಿಂತ ಉತ್ಕೃಷ್ಟವಾದ ಸ್ವಾತ್ಮದ ಅಪಹಾರವು ಕೌಸ್ತುಭಾಪಹಾರಕ್ಕಿಂತ ಕ್ರೂರವಾದದ್ದು. ಸ್ವಾತ್ಮಾಪಹಾರವೆಂದರೆ ಭಗವಚ್ಛೇಷಭೂತನಾದ ಆತ್ಮವನ್ನು 'ಅಹಂ ಮಮ'-ನಾನು ನನಗೇ ಸೇರಿದವನು, ಸ್ವತಂತ್ರನು, ಎಂದು ಹೇಳುವ ರೀತಿಯಾದ ಆತ್ಮಾಪಹಾರ. ಇದರಿಂದಾಗಿ ಇವನು **ಸಮ್ರಾಜಃ ಸರ್ವಪಾಪ್ಮನಾಂ** – ಸರ್ವಪಾಪಗಳಿಗೂ ರಾಜನು, ಇಂಥಹ ಆತ್ಮಾಪಹಾರಕ್ಕೆ **ನಿಷ್ಕೃತಿಃ**– ಪ್ರಾಯಶ್ಚಿತ್ತವು **ಸ್ವಭರಾರ್ಪಣಂ**–ತನ್ನ ಭರಸಮರ್ಪಣವು, ಎಂದು **ಶಿಷ್ಟಂ**–ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟದೆ. ತಥಾಚ ಭರಸಮರ್ಪಣವೇ ಆತ್ಮಾಪಹಾರ ಚೌರ್ಯಕ್ಕೆ ಪ್ರಾಯಶ್ಚಿತ್ತವಾಗಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟದೆಯಾದ್ದರಿಂದ ಅದೇ ಅನುಷ್ಠೇಯವೆಂಬುದು ತಾತ್ಪರ್ಯ.

**ಶೇಷತ್ವ ಜ್ಞಾನದ ಪ್ರಯೋಜನ**

ಆದರೆ ಶೇಷತ್ವ ಸಂಬಂಧ ಜ್ಞಾನಕ್ಕೆ ಏನು ಪ್ರಯೋಜನವೆಂದರೆ ಅದನ್ನು **ಪರಶೇಷತ್ವಧೀ** – ಎಂದು ಆರಂಭಿಸಿ ವಿವರಿಸುತ್ತಾರೆ ಪರಶೇಷತ್ವಧೀಮಾತ್ರಮ್ – ಭಗವಂತನಿಗೆ ಶೇಷಭೂತನೆಂಬ ಜ್ಞಾನವು ಮಾತ್ರ, **ಅಧಿಕಾರಿ ವಿಶೇಷಕಮ್** – ಪ್ರಪತ್ತಿ ಮಾಡುವುದಕ್ಕೆ ಮೊದಲು, ಪ್ರಪತ್ತ್ಯಧಿಕಾರಿಗೆ ವಿಶೇಷಣ ಕೋಟಿ ಪ್ರವಿಷ್ಟವಾಗಿ, ಅಧಿಕಾರಿ ವಿಶೇಷಣ. **ಪಶ್ಚಾತ್**–ಪ್ರಪತ್ತಿ ಮಾಡಿದ ನಂತರ **ಆತ್ಮಾಪಹಾರ ನಿರೋಧಾಯಚ** ಆತ್ಮಾಪಹಾರಕ್ಕೆ ತಡೆಯಾಗಿಯೂ **ಕಲ್ಪತೇ**–ಕಾರಣವಾಗಿರುತ್ತದೆ. ಅದಾಗಿ ಶಾಸ್ತ್ರಜನ್ಯವಾದ ಅವಿಧೇಯ ಶೇಷತ್ವಜ್ಞಾನವು ಅಧಿಕಾರಿ ಕೋಟಿ ಪ್ರವಿಷ್ಟವಾಗಿ ಭರಸಮರ್ಪಣರೂಪವಾದ ಅಂಗಿಗೆ ಪ್ರಯೋಜಕವಾಗಿ, ಭರಸಮರ್ಪಣಾನಂತರ ಆತ್ಮಾಪಹಾರಕ್ಕೆ– ಆತ್ಮಾಸ್ವತಂತ್ರನು ಇತ್ಯಾದಿ ಜ್ಞಾನಕ್ಕೆ ಪ್ರತಿಬಂಧಕವಾಗಿರುತ್ತದೆ. ಅಷ್ಟೇಹೊರತು ಆತ್ಮಾಪಹಾರ ಚೌರ್ಯಕ್ಕೆ ಪ್ರಾಯಶ್ಚಿತ್ತವಾಗುವುದಿಲ್ಲ ಎಂದು ತಾತ್ಪರ್ಯ.

ಇದನ್ನು **ಶೇಷತ್ವಾದಿ ವಿಶಿಷ್ಟಮಾನ** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಶೇಷತ್ವಾದಿ ಗುಣಗಳಿಂದ ಕೂಡಿದ ಆತ್ಮತತ್ವವನ್ನು ಶಾಸ್ತ್ರಗಳಿಂದ **ತೆಳಿಂದವನುಕ್ಕು** – ತಿಳುವಾಗಿ ಅರಿತವನಿಗೇನೆ ವಿಧೇಯಾಂತರವಾದ

**ತ್ತೋಡುಮ್, ಪರಿಕರ ವಿಶೇಷತ್ತೋಡುಮ್,** ಫಲಸಙ್ಕಲ್ಪ ವಿಶೇಷತ್ತೋಡುಮ್ ಕೂಡಿನ ಶೇಷತ್ವ ಪ್ರತಿಸಂಧಾನ ಗರ್ಭಮಾನ ಸ್ವಾತ್ಮರಕ್ಷಾಭರನ್ಯಾಸಮಿರೇ, ಅನಾದ್ಯಪರಾಧ ಮೂಲ ನಿಗ್ರಹ ನಿವೃತ್ತಿಕ್ಕು ಉಪಾಯಮಾಹ ವಿಧಿಕ್ಕಪ್ಪಡುಹಿರ ಆತ್ಮ ಸಮರ್ಪಣಮ್.

"ತತ್ವಜ್ಞಾನಾನ್ಮೋಕ್ಷ" ಇತಿ ವಾಕ್ಯಸ್ಯಾಭಿಪ್ರಾಯಃ

"ತತ್ವಜ್ಞಾನತ್ತಾಲೇಮೋಕ್ಷ" ಮೆನ್ಗಿರ ವಿದುವುಮ್ ಒರು ಉಪಾಯಾನುಷ್ಠಾನತ್ತೈ ಮುನ್ನಿಟ್ಟೆನ್ನು ಮಿಡಮ್ "ಭಜಸ್ವಮಾಂ" "ಮಾಮೇಕಂ ಶರಣಂವ್ರಜ" ಇತ್ಯಾದಿ ವಿಧಿಬಲ ಪ್ರಾಪ್ತಮ್.

ಜ್ಞಾನಾನ್ಮೋಕ್ಷೋಪದೇಶೇಹಿ ತತ್ಪೂರ್ವೋಪಾಸನಾದಿನಾ ।
ಉಪಾಸನಾದಿ ರೂಪಾದ್ವಾ ಜ್ಞಾನಾನ್ಮೋಕ್ಷೋ ವಿವಕ್ಷಿತಃ ॥೪೩॥

---

ಪ್ರಪತ್ತಿಯು ಹೇಳಲ್ಪಡುವುದರಿಂದ, ಶಾಸ್ತ್ರಜನ್ಯ ಸಂಬಂಧ ಜ್ಞಾನ ಮಾತ್ರ ಮೋಕ್ಷಕ್ಕೆ ಉಪಾಯವಾಗಲಾರದು. ಉಪಾಯ ರೂಪವಾದ ಜ್ಞಾನ ವಿಶೇಷವು ಎಂತಹದು ಎಂದರೆ ಅದನ್ನು **ಅಧಿಕಾರವಿಶೇಷತ್ತೋಡುಮ್** ಇತ್ಯಾದಿ ವಿವರಿಸುತ್ತಾರೆ. ಆದಾಗಿ ಆಕಿಂಚನ್ಯಾಧಿಕಾರದೊಡನೆಯೂ, **ಪರಿಕರವಿಶೇಷತ್ತೋಡುಮ್** – ಆನುಕೂಲ್ಯಾದ್ಯಂಗ ಗಳೊಡನೆಯೂ, **ಫಲಸಂಕಲ್ಪವಿಶೇಷತ್ತೋಡುಮ್** – ಮೋಕ್ಷಾರ್ಥವಾಗಿ ಭರಸಮರ್ಪಣವನ್ನು ಮಾಡುತ್ತೇನೆಂಬ ಫಲಸಂಕಲ್ಪ ವಿಶೇಷದೊಡನೆಯೂ, **ಕೂಡಿನ** – ಸೇರಿದ, **ಶೇಷತ್ವಪ್ರತಿ ಸಂಧಾನಗರ್ಭಮಾನ**– ದೇಹೇಂದ್ರಿಯ ವಿಲಕ್ಷಣಃ ಜ್ಞಾನಾನಂದ ಸ್ವರೂಪಃ, ಸ್ವಾಭಾವಿಕ ಅಪರಿಚ್ಛಿನ್ನ ಜ್ಞಾನಾನಂದಗುಣಕಃ ಅಣುರಹಂ, ಮದೀಯಂ ಚೇತನಾಚೇತನಾತ್ಮಕಂ ಸರ್ವಮಪಿ ಶ್ರಿಯಃಪತೇ ತವೈವ ನಿರುಪಾಧಿಕಶೇಷಭೂತಂ ನಮಮ – ದೇಹೇಂದ್ರಿಯಕ್ಕಿಂತೆ ಬೇರುಪಟ್ಟವನು, ಜ್ಞಾನಾನಂದ ಸ್ವರೂಪನು, ಸ್ವಾಭಾವಿಕವಾದ ಎಲ್ಲೆ ಇಲ್ಲದ ಜ್ಞಾನಾನಂದ ಗುಣವನ್ನುಳ್ಳವನು, ಅಣುಸ್ವರೂಪನು, ನನ್ನದಾದ ಚೇತನಾಚೇತನ ವಸ್ತುಗಳೆಲ್ಲಾ ಶ್ರಿಯಃ ಪತಿಯಾದ ನಿನಗೆ ನಿರುಪಾಧಿಕ ಶೇಷಭೂತವಾದವು ನನಗಲ್ಲ, ಎಂಬ ಸ್ವರೂಪ ಸಮರ್ಪಣರೂಪ ಶೇಷತ್ವ ಪ್ರತಿಸಂಧಾನ ಜ್ಞಾನ. ಇದರಿಂದ ಕೂಡಿದ, **ಸ್ವಾತ್ಮ ರಕ್ಷಾಭರನ್ಯಾಸಮಿರೇ** – ಉಪಾಯಾಂತರ ನೈರಪೇಕ್ಷ್ಯೇಣ ಮದ್ರಕ್ಷಣ ಭರಸ್ತ್ವಯೈವ ನಮಮ, ಭಕ್ತಿರೂಪ ಉಪಾಯಾಂತರಾನುಷ್ಠಾನವೆಂಬ ಭಾರವನ್ನು ನನ್ನ ಮೇಲೆ ಹೊರಿಸದೆ, ಭಕ್ತಿ ಅನುಷ್ಠಿಸಿದರೆ ಕೊಡುವ ಫಲವನ್ನು ನಿನ್ನ ಭರವಾಗಿ ಹೊತ್ತುಕೊಂಡು, ನನ್ನನ್ನು ರಕ್ಷಿಸು ಎಂಬ ಭರನ್ಯಾಸವು, **ಅನಾದ್ಯಪರಾಧ** ಇತ್ಯಾದಿ – ಅನಾದಿಕಾಲದಿಂದ ಮಾಡಿದ ಅಪರಾಧ ಮೂಲ ನಿಗ್ರಹ ನಿವೃತ್ತಿಗೆ ಉಪಾಯವಾಗಿ **ವಿಧಿಕ್ಕಪ್ಪಡುಹಿರ ಆತ್ಮಸಮರ್ಪಣಮ್** – ಶಾಸ್ತ್ರದಲ್ಲಿ ವಿಧಿಸಲ್ಪಡುವ ಆತ್ಮರಕ್ಷಾ ಸಮರ್ಪಣ.

**'ಜ್ಞಾನಾನ್ಮೋಕ್ಷಃ' ಎಂಬ ವಾಕ್ಯದ ಅಭಿಪ್ರಾಯ**

**ತತ್ವಜ್ಞಾನತ್ತಾಲೇ** ಇತ್ಯಾದಿ ತತ್ವಜ್ಞಾನದಿಂದ ಮೋಕ್ಷವೆಂಬಲ್ಲಿ, ತತ್ವಜ್ಞಾನ ಪದವು ಕೇವಲ ಶಾಸ್ತ್ರಜನ್ಯ ಶೇಷತ್ವ ಜ್ಞಾನಪರವಾದರೆ, ಅದು ಭಕ್ತಿಪ್ರಪತಿಗಳಲ್ಲೊಂದಾದ ಉಪಾಯಾನುಷ್ಠಾನವನ್ನು ಮುಂದಿಟ್ಟುಕೊಂಡು ಮೋಕ್ಷವನ್ನು ಕೊಡುತ್ತದೆ, ಎಂಬುದು, **ಭಜಸ್ವಮಾಂ, ಮಾಮೇಕಂ ಶರಣಂ ವ್ರಜ** ನನ್ನಲ್ಲಿ ಭಕ್ತಿಯೋಗಮಾಡು, ನನ್ನನ್ನೇ ಶರಣಹೊಂದು, ಇತ್ಯಾದಿ ವಿಧಿಬಲ ಪ್ರಾಪ್ತವಾದದ್ದು.

"ಜ್ಞಾನಾನ್ಮೋಕ್ಷಃ" ಎಂಬ ವಾಕ್ಯಕ್ಕೆ ಎರಡು ಬಗೆಯಾಗಿ ಅರ್ಥವನ್ನು **"ಜ್ಞಾನಾನ್ಮೋಕ್ಷೋಪದೇಶೇಹಿ** ಅಂದಾರಂಭಿಸಿ ಆಚಾರ್ಯರು ವ್ಯಾಖ್ಯಾನವನ್ನು ಮಾಡುತ್ತಾರೆ. ಅದಾಗಿ, ತತ್ವಜ್ಞಾನವೆಂದರೆ ಶೇಷತ್ವ ಜ್ಞಾನ ಎಂದು ಅರ್ಥಮಾಡಿದ್ದಲ್ಲಿ, ಆ ಶೇಷತ್ವಜ್ಞಾನೋಪದೇಶವು **ಉಪಾಸನಾದಿನಾ** – ಭಕ್ತಿ ಎಂಬ ಉಪಾಸನೆ, ಆದಿ ಶಬ್ದದಿಂದ ಪ್ರಪತ್ತಿಯು ಹೇಳಲ್ಪಡುತ್ತದೆ, ಇವುಗಳ ಮೂಲಕ ಮೋಕ್ಷ ಜನಕವು. **ಉಪಾಸನಾದಿರೂಪಾದ್ವಾ**–

**ಶಾಸ್ತ್ರಜನ್ಯಮಾನ ಶೇಷತ್ವಜ್ಞಾನ ಮಾತ್ರಂ ನಿವೃತ್ತಿ ಧರ್ಮಙ್ಗಳಾನ ನ್ಯಾಸೋಪಾಸನಾದಿಹಳೆಲ್ಲಾ ವತ್ತುಕ್ಕುಮ್ ಪೊದವಾಯಿರುಕ್ಕುಮ್; ಶೇಷವೃತ್ತಿರೂಪಮಾನ ಕೈಙ್ಕರ್ಯಮೇ ಮುಮುಕ್ಷುವುಕ್ಕು ಪುರುಷಾರ್ಥಕಾಷ್ಠೈಯಾಹೈಯಾಲೇ ಶೇಷತ್ವಮರಿಯಾದೇ ಮೋಕ್ಷೋಪಾಯಂ ಅನುಷ್ಠಿಕ್ಕೈ ಘಟಿಯಾದಿರೇ.**

**ಅತಃ ಶೇಷತ್ವಜ್ಞಾನಮಾತ್ರಂ ನಾಲಮಿತಿ ನಿಗಮನಮ್**

**ಶೇಷತ್ವಜ್ಞಾನಮಿನ್ರಿಕ್ಕೇ ಮೋಕ್ಷಾರ್ಥಮಾಹ ವಿಧಿತ್ತ ಧರ್ಮಙ್ಗಳೈ ಅನುಷ್ಠಿತ್ತಾನಾಹಿಲುಮ್ ಇದ್ಧರ್ಮಙ್ಗಳ್ ತಾನೇ, ಶೇಷತ್ವ ಜ್ಞಾನತ್ತೈಯುಮ್ ಉಣ್ಡಾಕ್ಕಿ, ಪೂರ್ಣಾನುಷ್ಠಾನ ಮುಖತ್ತಾಲೇ ಯಿರೇ ಮೋಕ್ಷಹೇತುವಾವದು**

**ಆಹೈಯಾಲ್ ಇಙ್ಗು ವಿಧೇಯಮಾನ ಸಮರ್ಪಣಂ ಶೇಷತ್ವಜ್ಞಾನ ಮಾತ್ರಮನ್ರು; ಮಱ್ಱೆನ್ರದೆನ್ನಿಲ್, ಶೇಷತ್ವಜ್ಞಾನಾದಿ ಯುಕ್ತಮಾನ ಸ್ವರಕ್ಷಾ ಭರನ್ಯಾಸಮ್,**

**ಭಗವತ್ಯುಪಾಯತ್ವ ಜ್ಞಾನಮಾತ್ರಮೇವ ಪ್ರಪತ್ತಿರಿತಿಪಕ್ಷಸ್ಯ ನಿರಸನಮ್**

**ವಾಕ್ಯಮಾತ್ರೇಣ ಸಿದ್ಧತ್ವಾತ್ಸಿದ್ಧೋಪಾಯ ಇಹೋಚ್ಯತೇ ।**
**ಪ್ರಪತ್ತಿರಿತಿ ವಾದೋಽಪಿ ವಿಧಿನಾತ್ರ ವಿಹನ್ಯತೇ ॥೪೪॥**

---

ತತ್ವಜ್ಞಾನ ಪದವು ಯಥಾವಸ್ಥಿತವಾದ ಉಪಾಸನ ಪ್ರಪತ್ತಿಗಳಲ್ಲಿ ಒಂದಾದ ಜ್ಞಾನ ರೂಪವಾಗಿ ಇಂಥಹ ಜ್ಞಾನದಿಂದ ಮೋಕ್ಷವೆಂದು ವಿವಕ್ಷಿಸಲ್ಪಡುತ್ತದೆ.

ಮೇಲೂ ಶೇಷತ್ವ ಜ್ಞಾನಮಾತ್ರವು ನಿವೃತ್ತಿ ಧರ್ಮಗಳಿಗೆಲ್ಲಾ ಅನ್ವಯಿಸುವುದರಿಂದ, ಸಾಕ್ಷಾನ್ಮೋಕ್ಷೋಪಾಯವಾಗಲಾರದು. **ಶಾಸ್ತ್ರಜನ್ಯಮಾನ ಶೇಷತ್ವಜ್ಞಾನಮಾತ್ರಂ** – ಶಾಸ್ತ್ರದಿಂದ ತಿಳಿಯಲ್ಪಡುವ ಶೇಷತ್ವ ಜ್ಞಾನಮಾತ್ರವು, **ನಿವೃತ್ತಿಧರ್ಮಂಗಳ್** – ಸಾತ್ವಿಕ ತ್ಯಾಗ ಪುರಸ್ಸರವಾಗಿ ಮಾಡುವ ಧರ್ಮಗಳು, ನಿವೃತ್ತಿ ಧರ್ಮಗಳಾದ ನ್ಯಾಸೋಪಾಸನಾದಿಗಳೆಲ್ಲಕ್ಕೂ ಸಾಮಾನ್ಯ (**ಪೊದು**)– ವಾಗಿರುತ್ತದೆ. **ಶೇಷವೃತ್ತಿರೂಪಮಾನ** ಇತ್ಯಾದಿ – ಶೇಷ ವೃತ್ತಿರೂಪವಾದ ಕೈಂಕರ್ಯವೇ ಮುಮುಕ್ಷುಗಳಿಗೆ ಪುರುಷಾರ್ಥಕಾಷ್ಠೆಯಾದ್ದರಿಂದ, ಶೇಷತ್ವವನ್ನು ತಿಳಿಯದೆ, ಮೋಕ್ಷೋಪಾಯವನ್ನು ಅನುಷ್ಠಿಸುವುದು ಘಟಿಸುವುದಿಲ್ಲ. **ಶೇಷತ್ವಜ್ಞಾನಮಿನ್ರಿಕ್ಕೇ** ಇತ್ಯಾದಿ – ಶೇಷತ್ವ ಜ್ಞಾನವಿಲ್ಲದೇನೆ, ಮೋಕ್ಷಾರ್ಥವಾಗಿ ವಿಧಿಸಿದ ಧರ್ಮಗಳನ್ನು ಅನುಷ್ಠಿಸಿದರೂ, ಈ ಧರ್ಮಾನುಷ್ಠಾನಗಳಿಂದ ಪ್ರೀತನಾದ ಭಗವಂತನು ಇವನಿಗೆ ಶೇಷತ್ವ ಜ್ಞಾನವನ್ನುಂಟು ಮಾಡಿ – ಅಂದರೆ ಸದಾಚಾರ್ಯರಲ್ಲಿ ಸೇರಿಸಿ ಶೇಷತ್ವ ಜ್ಞಾನೋಪದೇಶವನ್ನು ಮಾಡಿಸುತ್ತಾನೆಂದರ್ಥ. ಈ ಜ್ಞಾನವು **ಪೂರ್ಣಾನುಷ್ಠಾನ** ಇತ್ಯಾದಿ ಭಕ್ತಿ ಪ್ರಪತ್ತಿ ರೂಪ ಉಪಾಯಾನುಷ್ಠಾನ ದ್ವಾರಾ, ಮೋಕ್ಷ ಹೇತುವಾಗುತ್ತದೆ.

**ಆಹೈಯಾಲ್** – ಇತ್ಯಾದಿ ಆದ್ದರಿಂದ ಇಲ್ಲಿ ವಿಧೇಯವಾದ **ಸಮರ್ಪಣಮ್** –

"ಅನೇನೈವತು ಮಂತ್ರೇಣ ಸ್ವಾತ್ಮಾನಂಮಯಿನಿಕ್ಷಿಪೇತ್ ।
ಮಯಿನಿಕ್ಷಿಪ್ತಕರ್ತವ್ಯಃ ಕೃತಕೃತ್ಯೋ ಭವಿಷ್ಯತಿ ॥"

ಎಂದು ಹೇಳಿರುವ ಆತ್ಮಸಮರ್ಪಣವು, ಶೇಷತ್ವ ಜ್ಞಾನ ಮಾತ್ರನಲ್ಲ. ಬೇರೆ ಯಾವುದೆಂದರೆ, ಶೇಷತ್ವ ಜ್ಞಾನದಿಂದ ಕೂಡಿದ, **ಸ್ವರಕ್ಷಾಭರನ್ಯಾಸಮ್** – ಆತ್ಮರಕ್ಷಾ ಭರಸಮರ್ಪಣವು.

**ಭಗವಂತನೇ ಉಪಾಯವೆಂಬ ಜ್ಞಾನಮಾತ್ರವು ಪ್ರಪತ್ತಿ ಎಂಬ ಮತ ಖಂಡನೆ**

**ವಾಕ್ಯಮಾತ್ರೇಣ ಸಿದ್ಧತ್ವಾತ್** ಇತ್ಯಾದಿ–ಭಗವಂತನೇ ಉಪಾಯವೆಂಬ ಜ್ಞಾನವು, 'ಭಗವಾನೇವಶರಣಂ'

**ಚರಮ ಶ್ಲೋಕಸ್ಯ ಉಪಾಯವಿಧಿತ್ವಂನ, ಇತಿ ಪಕ್ಷಖಂಡನಮ್**

**"ಶರಣಂ ವ್ರಜ" ಎನ್ಗಿರವಿದು "ಇಮ ಮರ್ಥಂ ಜಾನೀಹಿ" ಎನ್ಗಿರ ಮಾತ್ರಮಾಯ್ ಒರು ಕರ್ತವ್ಯೋಪಾಯ ವಿಧಿ ಪರ ಮನ್ರಿಕ್ಕೇ ಯೊಳ್ಳನ್ದಾಲೋ ವೆನ್ನಿಲ್ ? ಇದು ಶಬ್ದ ಸ್ವಾರಸ್ಯ ವಿರುದ್ಧಮ್. 1) "ಪ್ರಪತ್ತಿಂ ತಾಂ ಪ್ರಯುಂಜೀತ ಸ್ವಾಙ್ಗೈಃ ಪಂಚಭಿರಾವೃತಾಂ" ಇತ್ಯಾದಿಹಳಾನ ಸಪರಿಕರ ಸ್ಫುಟತರ ಪ್ರಪತ್ತಿ ವಿಧಿಹಳೋಡುಮ್ ವಿರೋಧಿಕ್ಕುಮ್. ಈಶ್ವರರ್ ಮೋಕ್ಷೋಪಾಯ ಮೆನ್ಗಿರ ವಿವ್ವಳವೇ ಇಙ್ಗು ವಕ್ತವ್ಯಮಾಯ್, ಮೋಕ್ಷಾಧಿಕಾರಿಕ್ಕು ವಿಧೇಯಾಂತರ ಮನ್ರಿಕ್ಕೇ ಯೊಳ್ಳಂದಾಲ್ ಇವ್ವಿಡಮ್ ಪ್ರಸ್ತುತಮಾನ ಭಕ್ತಿಯೋಗತ್ತುಕ್ಕಪೇಕ್ಷಿತಮಾನ ತತ್ತ್ವೋಪದೇಶ ಮಾತ್ರಮಾಮ್.**

---

ಎಂಬ ವಾಕ್ಯಮಾತ್ರದಿಂದ ಸಿದ್ಧವಾದ್ದರಿಂದ ಕೃತಿ ಸಾಧ್ಯವಾದ ಉಪಾಯವಲ್ಲ, **ಇಹ**–ಪ್ರಪತ್ತಿ ಶಾಸ್ತ್ರದಲ್ಲಿ **ಸಿದ್ಧೋಪಾಯಃ**–ಸಿದ್ಧೋಪಾಯವು **ಪ್ರಪತ್ತಿಃಇತಿ**–ಪ್ರಪತ್ತಿ ಎಂದು **ಉಚ್ಯತೇ**–ಹೇಳಲ್ಪಡುತ್ತದೆ. **ಇತಿವಾದಃ**–ಈ ವಾದವು **ವಿಧಿನಾತ್ರವಿಹನ್ಯತೇ** – 'ಶರಣಂವ್ರಜ' ಎಂಬ ಸ್ವರಸತಃ ತಿಳಿಸಲ್ಪಡುವ ವಿಧಿ ಪ್ರತ್ಯಯದಿಂದ ವಿರೋಧಿಸಲ್ಪಡುತ್ತದೆ. "ತಮೇವಶರಣಂಗಚ್ಛ," "ತಂಗಚ್ಛಶರಣಂಹರಿಂ" ಸ್ವಾತ್ಮಾನಮ್ಮಯಿ ನಿಕ್ಷಿಪೇತ್," ಇತ್ಯಾದ್ಯನೇಕ ವಿಧಿ ವಾಕ್ಯಗಳು ಭರನ್ಯಾಸರೂಪ ಕೃತಿ ಸಾಧ್ಯವಾದ ಉಪಾಯವನ್ನು ತಿಳಿಸುತ್ತವೆಯಾದ್ದರಿಂದ ಪುರುಷನ ಪ್ರಯತ್ನವಲ್ಲದ ಕೇವಲ ಸಿದ್ಧೋಪಾಯವು, ಫಲಕಾರಿಯಾಗಲಾರದು ಎಂಬುದು ತಾತ್ಪರ್ಯ.

**ಚರಮ ಶ್ಲೋಕವು ಉಪಾಯವನ್ನು ವಿಧಿಸುವುದಿಲ್ಲವೆಂಬ ಪಕ್ಷ ಖಂಡನ**

ಅನಂತರ, 'ಶರಣಂವ್ರಜ' ಎಂಬ ವಾಕ್ಯಕ್ಕೆ ವಿಧಿಯಲ್ಲಿ ತಾತ್ಪರ್ಯವಿಲ್ಲವೆಂಬವಾದವನ್ನು **"ಶರಣಂವ್ರಜ, ಎನ್ಗಿರವಿದು"** ಎಂದಾರಂಭಿಸಿ ನಿರಾಕರಿಸುತ್ತಾರೆ. 'ವ್ರಜ' ಎಂಬ ಗತ್ಯರ್ಥ ಧಾತುವಿಗೆ ಬುದ್ಧ್ಯರ್ಥದಲ್ಲಿ ಮಾತ್ರ ತಾತ್ಪರ್ಯ ಎಂಬುದು ಪೂರ್ವ ಪಕ್ಷಿಯ ಅಭಿಪ್ರಾಯ. ಅದಾಗಿ ಶರಣಂವ್ರಜ, ಎಂಬ ಈ ವಾಕ್ಯವು "ಇಮಮರ್ಥಂಜಾನೀಹಿ" ಈ ಅರ್ಥವನ್ನು ತಿಳಿ ಎಂಬಂತೆ ನನ್ನೊಬ್ಬನನ್ನೇ ಉಪಾಯವಾಗಿ ತಿಳಿದುಕೋ **ಎನ್ಗಿರಮಾತ್ರಮಾಯ್**–ಎಂಬುದಲ್ಲಿ ಮಾತ್ರ ದೃಷ್ಟಿಯುಳ್ಳದ್ದಾಗಿದೆಯೇ ಹೊರತು **ಒರುಕರ್ತವ್ಯೋಪಾಯವಿಧಿ** ಇತ್ಯಾದಿ ಒಂದು ಉಪಾಯಾನುಷ್ಠಾನವನ್ನುವಿಧಿಸುವುದಿಲ್ಲವೆಂದರೆ,ಇದು ಶಬ್ದ ಸ್ವಾರಸ್ಯಕ್ಕೆ ವಿರೋಧವಾದದ್ದು. "ಲೋಟ್"ಮಧ್ಯಮಕ್ಕೆ ವಿಧಿಯಲ್ಲಿ ತಾತ್ಪರ್ಯವೆಂಬುದು ಸ್ವರಸವಾದ್ದರಿಂದ ಅದಕ್ಕೆ ವಿರೋಧವಾಗಿ "ಶರಣಂವ್ರಜ" ಎಂದು ಉಪಾಯವಾಗಿ ತಿಳಿದುಕೋ ಎಂಬ ಅರ್ಥವನ್ನು ಹೇಳುವುದು ಯುಕ್ತವಲ್ಲ. 1) **ಪ್ರಪತ್ತಿಂತಾಂಪ್ರಯುಂಜೀತ** ಇತ್ಯಾದಿ–ಐದು ಅಂಗಗಳಿಂದ ಕೂಡಿದ ಪ್ರಪತ್ತಿಯನ್ನು ಮಾಡು, ಇತ್ಯಾದಿಗಳಾದ ಪರಿಕರಗಳಿಂದ ಕೂಡಿದ ಸ್ಫುಟತರ ಪ್ರಪತ್ತಿ ವಿಧಿ ವಾಕ್ಯಗಳಿಗೆ ವಿರೋಧವಾಗುತ್ತದೆ;

ಹೀಗೆ ಚರಮ ಶ್ಲೋಕವು ಭಕ್ತಿಯೋಗವನ್ನು ಮಾಡಲು ಶಕ್ತಿಯಿಲ್ಲದವನಿಗೆ ಉಪಾಯಾಂತರವನ್ನು ವಿಧಿಸುವುದರಲ್ಲಿ ತಾತ್ಪರ್ಯವಿಲ್ಲವೆಂದರೆ, ಬಾಧಕಾಂತರವನ್ನು **ಈಶ್ವರನ್** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಚರಮ ಶ್ಲೋಕದ 'ಮಾಮೇಕಂ ಶರಣಂ ವ್ರಜ' ಎಂಬ ವಾಕ್ಯದಲ್ಲಿ ಈಶ್ವರನು ಮೋಕ್ಷಕ್ಕೆ ಉಪಾಯ ಎಂಬುದು ಮಾತ್ರ ತಿಳಿಸಲ್ಪಡುವುದಾಗಿ, ಮೋಕ್ಷಾಧಿಕಾರಿಗೆ ವಿಧೇಯಾಂತರವು **ಅನ್ರಿಕ್ಕೇಯೊಳ್ಳಂದಾಲ್**– ಇಲ್ಲವೆಂದು ತೀರ್ಮಾನವಾಗಿ ಹೇಳಿದರೆ, **ಇವ್ವಿಡಮ್**– ಈ ವಾಕ್ಯವು, ಪ್ರಸ್ತುತವಾದ ಭಕ್ತಿಯೋಗಕ್ಕೆ ಅಪೇಕ್ಷಿತವಾದ ತತ್ತ್ವೋಪದೇಶ ಮಾತ್ರವಾಗುತ್ತದೆ. ಅಂದರೆ ಗೀತೆಯಲ್ಲಿ ಚರಮಶ್ಲೋಕವು ಪ್ರಪತ್ತಿರೂಪ ಉಪಾಯವಿಧಿ ಪರವೆಂದು ವಿವಕ್ಷೆಯಿಲ್ಲದೆ, ನಾನೊಬ್ಬನೇ(ಭಗವಂತನೇ)ಉಪಾಯವೆಂದು ತಿಳಿದುಕೊಂಡು ಭಕ್ತಿಯೋಗವನ್ನು ಮಾಡು ಎಂದು ಹೇಳಿದಂತಾಗುತ್ತದೆ.

---

1) ಲಕ್ಷ್ಮೀತಂತ್ರ 28-11-7

## ಸ್ವಪ್ರಯತ್ನ ನಿವೃತ್ತಿರೇವ ಪ್ರಪತ್ತಿರಿತಿ ಪಕ್ಷಸ್ಯ ಪ್ರತಿಕ್ಷೇಪಃ

ಇಙ್ಙು ತತ್ವಜ್ಞಾನ ಮುಡೈಯವನುಕ್ಕು ಸ್ವರಕ್ಷಣಾರ್ಥ ಸ್ವವ್ಯಾಪಾರ ನಿವೃತ್ತಿಯೇ ಪ್ರಪತ್ತಿಯಾಯ್ ಸರ್ವಧರ್ಮ ಸ್ವರೂಪತ್ಯಾಗ ಮಾತ್ರಮ್ ಸಾಧ್ಯಮಾಹ ವಿಧಿಕ್ಕ ಪ್ಪಡುಹಿರದೆನ್ಬಾರ್ಕ್ಕು, ನಿವೃತ್ತಿರೂಪಮೇ ಯಾಹಿಲುಮ್; ಸಾಧ್ಯಮಾಹ ವಿಧಿಕ್ಕಪ್ಪಟ್ಟ ಸರ್ವಧರ್ಮತ್ಯಾಗಮ್ತಾ ಸ್ವರಕ್ಷಣಾರ್ಥ ಸ್ವ ವ್ಯಾಪಾರ ಮಾಹೈಯಾಲೇ ಸ್ವವಚನ ವಿರೋಧಮುಮ್ ಸಾಙ್ಗಪ್ರಪತ್ತಿ ವಿಧಾಯಕಮಾನ ವಾಕ್ಯ ವಿರೋಧ ಮುಮ್ ವರುಮ್.

ಪಪ್ರತ್ತೇಃ ಮೋಕ್ಷ ಸಾಧನತ್ವೇ ಸಿದ್ಧೋಪಾಯ ಸ್ವರೂಪ ಬಾಧಃ ಇತಿ ಪಕ್ಷ ಖಂಡನಮ್

ಪ್ರಪತ್ತಿಕ್ಕು ಸಾಧನತ್ವಮಾದಲ್ ಸಿದ್ಧ ಸಾಧನ ಸಹ ಕಾರಿತ್ವ ಮಾದಲ್ ಕೊಳ್ಳಿಲ್, ಸಿದ್ಧೋಪಾಯ

---

### "ಸ್ವರಕ್ಷಣಾರ್ಥ ಸ್ವವ್ಯಾಪಾರ ನಿವೃತ್ತಿಃ ಪ್ರಪತ್ತಿಃ" ಎಂಬ ಮತ ಖಂಡನೆ

**ಇಂಗು, ತತ್ವಜ್ಞಾನಮುಡೈಯವನುಕ್ಕು** ಇತ್ಯಾದಿ–ಈ ಸಂದರ್ಭದಲ್ಲಿ ಮೂಲಮಂತ್ರದಲ್ಲಿ ಶಿಕ್ಷಿತವಾದ ಅತ್ಯಂತ ಪಾರಾರ್ಥ್ಯ ಪಾರತಂತ್ರ ಜ್ಞಾನವುಳ್ಳವನಿಗೆ **'ಸ್ವರಕ್ಷಣಾರ್ಥ ಸ್ವ ವ್ಯಾಪಾರ ನಿವೃತ್ತಿಯೇ'** ಪ್ರಪತ್ತಿ **ಯಾಮ್**–ತನ್ನನ್ನು ರಕ್ಷಿಸಿಕೊಳ್ಳಬೇಕೆಂಬ ತನ್ನ ವ್ಯಾಪಾರ ನಿವೃತ್ತಿಯು ಸ್ವತಃ ಪ್ರಾಪ್ತವಾಗಿ, ವಿಧೇಯವಲ್ಲದೆ ಆ ನಿವೃತ್ತಿಯೇ ಪ್ರಪತ್ತಿ ಶಬ್ದವಾಚ್ಯವಾಗಿ, **ಸರ್ವಧರ್ಮ ಸ್ವರೂಪತ್ಯಾಗಮಾತ್ರಂ**, ಇತ್ಯಾದಿ ಸರ್ವಧರ್ಮಗಳನ್ನೂ ಸ್ವರೂಪತಃ ಬಿಟ್ಟು ಬಿಡು ಎಂಬುದು ಮಾತ್ರ, 'ವ್ರಜ' ಎಂಬಲ್ಲಿ ಸಾಧ್ಯವಾಗಿ ವಿಧಿಸಲ್ಪಡುತ್ತದೆ ಎಂದು ಹೇಳುವ ವರಿಗೆ ಇದು ನಿವೃತ್ತಿರೂಪವಾದರೂ, ಸಾಧ್ಯವಾಗಿ ವಿಧಿಸಲ್ಪಟ್ಟ ಸರ್ವಧರ್ಮತ್ಯಾಗವೇ ಸ್ವರಕ್ಷಣಾರ್ಥ ಸ್ವ ವ್ಯಾಪಾರ ವಾಗಿ ಏರ್ಪಡುವುದರಿಂದ ಸ್ವವಚನ ವಿರೋಧವೂ ಸಾಂಗ ಪ್ರಪತ್ತಿ ವಿಧಾಯಕ ವಾಕ್ಯ ವಿರೋಧವೂ ಉಂಟಾಗುತ್ತದೆ. ಇದರ ತಾತ್ಪರ್ಯವೇನೆಂದರೆ, "ಸ್ನಾತ್ವಾಭುಂಜೀತ" ಎಂಬಲ್ಲಿ ಭುಜಿಧಾತೂತ್ತರ ವಿಧಿ ಪ್ರತ್ಯಯಕ್ಕೆ ಸ್ನಾನ ವಿಧಿಯಲ್ಲಿ ತಾತ್ಪರ್ಯವೆಂಬಂತೆ, "ವ್ರಜ" ಎಂಬ ಧಾತುವಿನ ಉತ್ತರ ವಿಧಿ ಪ್ರತ್ಯಯಕ್ಕೆ ಸರ್ವಧರ್ಮ ಸ್ವರೂಪ ತ್ಯಾಗದಲ್ಲಿ ವಿಧಿ ಎಂದು ಅಂಗೀಕರಿಸಿಬಿಟ್ಟರೆ ವಿಧಿ ಪ್ರತ್ಯಯಕ್ಕೆ ವೈಯ್ಯರ್ಥ್ಯವಿಲ್ಲವಾಗುತ್ತದೆ. ಅತ್ಯಂತ ಪರತಂತ್ರರಾದ ನಾವು ನಮ್ಮನ್ನು ರಕ್ಷಿಸಿಕೊಳ್ಳಲು ಏನನ್ನೂ ಮಾಡಬೇಕಿಲ್ಲವೆಂಬ ಸಿದ್ಧಾಂತವೂ ಸುರಕ್ಷಿತವಾಗುತ್ತದೆ, ಎಂಬುದು ಪೂರ್ವ ಪಕ್ಷಿಯ ಅಭಿಪ್ರಾಯ. ಇದು ಸ್ವಪ್ರಯತ್ನ ನಿವೃತ್ತಿರೂಪವಾದ ವ್ಯಾಪಾರವಾದರೂ, ಸರ್ವಧರ್ಮಸ್ವರೂಪ ತ್ಯಾಗವು ಅಭಾವರೂಪವಾಗಿದ್ದರೂ ಅದು ಕೃತಿ ಸಾಧ್ಯವಾಗಿ ವಿಧಿಸಲ್ಪಟ್ಟರೆ, ಅದೇ ಸ್ವರಕ್ಷಣಾರ್ಥ ಸ್ವ ವ್ಯಾಪಾರವಾಗಿ ಪರಿಣಮಿಸುವುದರಿಂದ ಸ್ವವಚನ ವಿರೋಧವಾಗುತ್ತದೆಯಾದ್ದರಿಂದ ಇದೂ ಸರಿಯಲ್ಲವೆಂಬುದು ಸಿದ್ಧಾಂತ. ಸಾಂಗ ಪ್ರಪತ್ತಿಯನ್ನು ವಿಧಿಸುವ ವಾಕ್ಯಕ್ಕೂ ವಿರೋಧವು ಏರ್ಪಡುತ್ತದೆ ಎಂಬುದನ್ನು ಮೇಲೆಯೇ ತಿಳಿಸಿರುತ್ತೆ.

### ಪ್ರಪತ್ತಿಯನ್ನು ಮೋಕ್ಷ ಸಾಧನವಾಗಿ ಅಂಗೀಕರಿಸಿದರೆ ಈಶ್ವರ ಸ್ವಭಾವಕ್ಕೆ ವಿರೋಧವಾಗುತ್ತದೆಯೆಂಬ ಮತ ಖಂಡನೆ

**ಪ್ರಪತ್ತಿಕ್ಕುಸಾಧನತ್ವಮಾದಲ್** ಇತ್ಯಾದಿ – ಪ್ರಪತ್ತಿಗೆ ಸಾಧನತ್ವವನ್ನಾಗಲಿ, **ಸಿದ್ಧಸಾಧನಸಹಕಾರಿತ್ವ ಮಾದಲ್**, ಸಿದ್ಧೋಪಾಯನಾದ ಭಗವಂತನಿಗೆ ಸಹಕರಿಸುವುದೆಂಬುದನ್ನಾಗಲಿ, **ಕೊಳ್ಳಿಲ್** – ಅಂಗೀಕರಿಸಿದರೆ, ಸಿದ್ಧೋಪಾಯನಾದ ಈಶ್ವರನ "ಮಾಮೇಕಂ" ಎಂಬಲ್ಲಿಯ ಏಕತ್ವ, ಸಿದ್ಧತ್ವ, ಪರಮಚೇತನತ್ವ, ಪರಮ ಕಾರುಣಿಕತ್ವ, ಸರ್ವಶಕ್ತಿತ್ವ, ನಿರಪೇಕ್ಷತ್ವ, ಮೊದಲಾದ ಸ್ವಭಾವ ವಿಶೇಷಗಳಿಗೆ ವಿರುದ್ಧವಾಗುತ್ತದೆ ಎಂಬ ಪ್ರಸಂಗಗಳು, ಶ್ರುತಿಸ್ಮೃತಿ ವಿರೋಧ ವ್ಯಾಪ್ತಿ ಶೂನ್ಯತ್ವ ಮೊದಲಾದ ದೋಷಗಳಿಂದ ಆಭಾಸರೂಪವಾದ ತರ್ಕಗಳು. ಹೇಗೆಂದರೆ : "ಈಶ್ವರನೊಬ್ಬನೇ ಸಿದ್ಧೋಪಾಯನಾದ್ದರಿಂದ, ಎರಡನೆಯ ಉಪಾಯಬೇಕಿಲ್ಲ. ಬೇಕು ಎಂದರೆ, ಏಕತ್ವಕ್ಕೆ ಭಂಗವಾಗುತ್ತದೆ. ಉಪಾಯವು ಸಿದ್ಧವಾಗಿರುವಾಗ, ಸಾಧ್ಯವಾದ ಉಪಾಯವು ಬೇರೆ ಏಕೆ.

**ನಾನ ಈಶ್ವರನುಡೈಯ ಏಕತ್ವಂ, ಸಿದ್ಧತ್ವಂ, ಪರಮಚೇತನತ್ವಂ ಪರಮಕಾರುಣಿಕತ್ವಂ, ಸರ್ವಶಕ್ತಿತ್ವಂ ನಿರಪೇಕ್ಷತ್ವಂ ಮುದಲಾನ ಸ್ವಭಾವ ವಿಶೇಷಙ್ಗಳುಕ್ಕು ವಿರುದ್ಧಮಾಮೆನ್ನುಮ್ ಪ್ರಸಙ್ಗಙ್ಗಳ್, ಶ್ರುತಿ ಸ್ಮೃತಿ ವಿರೋಧ ವ್ಯಾಪ್ತಿಶೂನ್ಯತ್ವಾದಿ ದೋಷಙ್ಗಳಾಲೇ ತರ್ಕಾಭಾಸಙ್ಗಳ್. ಇವತ್ತೈ ಸತ್ತರ್ಕಙ್ಗಳಾಹ ನಿನೈಕ್ಕಿಲ್ ಉಪಾಸನತ್ತುಕ್ಕಿಶೈನ್ದ ಸಾಧನಭಾವಾದಿಹಳಿಲುಮ್ ಇಪ್ರಸಙ್ಗಙ್ಗಳ್ ವರುಮ್,**

---

ಸಿದ್ಧನಾದ ಭಗವಂತನಿಗೆ ಸಹಕಾರಿಯಾಗಿ ಮತ್ತೊಂದು ಉಪಾಯವನ್ನು ಅಂಗೀಕರಿಸಿದರೆ, ಆ ಉಪಾಯಾನುಷ್ಠಾನದಿಂದ ಭಗವಂತನು ಸಿದ್ಧಿಸುವುದಾದರೆ, ಅವನಿಗೆ ಸಾಧ್ಯತ್ವವು ಪ್ರಸಕ್ತವಾಗಿ, ಸಿದ್ಧತ್ವಕ್ಕೆ ಭಂಗವುಂಟಾಗುತ್ತದೆ. ವ್ಯಾಜನಿರಪೇಕ್ಷವಾಗಿ ಪರದುಃಖ ನಿವರ್ತಕ ರೂಪವಾದ **ಪರಮಕಾರುಣಿಕತ್ವವು** ಉಪಾಯಾಂತರಗಳಾದ ಭಕ್ತಿಪ್ರಪತ್ತಿ ಸಾಪೇಕ್ಷವಾದರೆ, ಪರಮಕಾರುಣಿಕತ್ವಕ್ಕೆ ಕುಂದುಕವುಂಟಾಗುತ್ತದೆ. **ಪರಮಚೇತನತ್ವಕ್ಕೆ** ಸಾಧ್ಯವಾದ ಉಪಾಯಾಧೀನವಾದ ಅತಿಶಯಭಾಕ್ತ್ವವು ಉಂಟಾದರೆ ಅನನ್ಯಾಧೀನ ಧರ್ಮಿತ್ವವು ಘಟಿಸುವುದಿಲ್ಲ. ಈಶ್ವರನು ಸಹಕಾರ್ಯಂತರವನ್ನು ಅಪೇಕ್ಷಿಸಿ ರಕ್ಷಿಸುವುದಾದರೆ **ಸರ್ವಶಕ್ತಿತ್ವಕ್ಕೆ** ಕುಂದುಕವು ಏರ್ಪಡುತ್ತದೆ. ಹಾಗೆಯೇ ಶಕ್ತನಾಗಿರುವವನು ಸಹಕಾರಿ ಸಾಪೇಕ್ಷನಾದರೆ, ಅವನ **ನಿರಪೇಕ್ಷತ್ವಕ್ಕೆ** ಭಂಗವು ಏರ್ಪಡುತ್ತದೆ", ಇತ್ಯಾದಿ ವಾದಗಳು ಶ್ರುತಿಸ್ಮೃತಿ ವಿರೋಧ ವ್ಯಾಪ್ತಿ ಶೂನ್ಯತ್ವಗಳಿಂದ ತರ್ಕಾಭಾಸಗಳು ಎಂದರ್ಥ. **ಶ್ರುತಿಯು** ಅಮೃತಸ್ಯೈಷಸೇತುಃ – ಎಂದು ಭಗವಂತನೇ ಮೋಕ್ಷಕ್ಕೆ ಸಿದ್ಧೋಪಾಯನೆಂದು ಹೇಳಿದ್ದರೂ, ಓಮಿತ್ಯಾತ್ಮಾನಂ ಯುಂಜೀತ,

> ಪ್ರಣವೋಧನುಶ್ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯಮುಚ್ಯತೇ ।
>
> ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋಭವೇತ್ ॥

ಎಂಬ ಶ್ರುತಿಗಳು ಸಾಧ್ಯೋಪಾಯವನ್ನು ವಿಧಿಸುವುದರಿಂದ ತದ್ವಿರುದ್ಧವಾಗಿ ಹೇಳುವ ಯುಕ್ತಿಗಳು ತರ್ಕಾಭಾಸಗಳು. ಹಾಗೆಯೇ, ಮಾಮೇಕಂ ಶರಣಂ ವ್ರಜ,

> ಭಕ್ತ್ಯಾಪರಮಯಾವಾಽಪಿ ಪ್ರಪತ್ತ್ಯಾವಾಮಹಾಮತೇ ।
>
> ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ಯಃ ಮಮಕೈಂಕರ್ಯಲಿಪ್ಸುಭಿಃ ॥

ನನ್ನನ್ನೇ ಉಪಾಯವಾಗಿ ವರಿಸು. ಭಕ್ತಿ ಅಥವಾ ಪ್ರಪತ್ತಿಗಳಲ್ಲೊಂದರಿಂದಲೇ ನಾನು ಪ್ರಾಪ್ಯನು. ಬೇರೆ ಯಾವ ಉಪಾಯದಿಂದಲೂ ಪ್ರಾಪ್ಯನಲ್ಲ, ಎಂದು ಹೇಳಿರುವ ವಚನಗಳಿಗೆ ವಿರೋಧವಾಗಿ ಹೇಳುವ ಯುಕ್ತಿಗಳು ತರ್ಕಾಭಾಸಗಳು. ಶ್ರುತಿಸ್ಮೃತಿಗಳಲ್ಲಿ ಭಕ್ತಿಪ್ರಪತ್ತಿಗಳು ಭಗವಂತನ ಪ್ರಸನ್ನತೆಯನ್ನುಂಟು ಮಾಡುತ್ತವೆಯೆಂದು ವಿಹಿತಗಳಾದ್ದರಿಂದ ಏಕತ್ವ, ಪರಮ ಚೇತನತ್ವ, ಸಿದ್ಧತ್ವ, ಪರಮಕಾರುಣಿಕತ್ವ, ನಿರಪೇಕ್ಷತ್ವಗಳಿಗೆ ಭಂಗವಿಲ್ಲವೆಂಬುದು ಸಿದ್ಧಾಂತ. ಭಕ್ತಿ ಪ್ರಪತ್ತಿಗಳು ಸಹಕಾರಿಗಳು ಎಂಬ ಪಕ್ಷದಲ್ಲಿಯೂ, ಯತ್ರ ಅಚೇತನ ಸಹಕಾರಿ ಸಾಪೇಕ್ಷತ್ವಂ ತತ್ರ ಏಕತ್ವ, ಸಿದ್ಧತ್ವ, ಪರಮ ಚೇತನತ್ವಾಭಾವಃ ಎಂಬ ವ್ಯಾಪ್ತ್ಯಾದಿಗಳು ಸಿದ್ಧಿಸುವುದಿಲ್ಲವಾದ್ದರಿಂದ ಪೂರ್ವಪಕ್ಷಿಯ ವಾದಗಳೆಲ್ಲಾ ತರ್ಕಾಭಾಸಗಳು. ಅಚೇತನಗಳಾದ ಭಕ್ತಿರೂಪ ಸಹಕಾರಿಯನ್ನು ಅಪೇಕ್ಷಿಸಿದ ಮಾತ್ರಕ್ಕೆ ಏಕತ್ವ, ಸಿದ್ಧತ್ವ, ಪರಮ ಚೇತನತ್ವಗಳಿಗೆ ಕುಂದುಕವಿಲ್ಲವೆಂಬುದು ಭಾವ. **ಇವೈಹಳೈ ಸತ್ತರ್ಕಂಗಳಾಹ** ಇತ್ಯಾದಿ–ಇವುಗಳನ್ನು ಸತ್ತರ್ಕಗಳೆಂದು ಹೇಳಿದರೆ, ಉಪಾಸನಕ್ಕೆ ಅಂಗೀಕರಿಸಿದ ಸಾಧನ ಭಾವಾದಿಗಳಲ್ಲಿಯೂ ಈ ಪ್ರಸಂಗಗಳು ಬರುತ್ತವೆ.

## ಉಪಾಸನಸ್ಯ ಸಾಧನತ್ವಂ ನಾಸ್ತೀತಿ ಪಕ್ಷ ಖಂಡನಮ್

ಉಪಾಸನಂ ತಾನುಮ್ ಸಾಧನ ಮನ್ರೆನ್ನಿಲ್, "ಸರ್ವಧರ್ಮಾನ್ ಪರಿತ್ಯಜ್ಯ" ಎನ್ಗಿರ ವಿಡತ್ತಿಲ್ ಉಪಾಸನತ್ತೈಯುಮ್ ಧರ್ಮಶಬ್ದಾರ್ಥಮಾಹ ವ್ಯಾಖ್ಯಾನಮ್ ಪಣ್ಣುಹೈಯಾಲೇ ಸ್ವವಚನ ವಿರೋಧ ಮುಣ್ಡಾಮ್.

ಶೆರುಕ್ಕಡಕ್ಕುಹೈಕ್ಕಾಹ ವೇಣ್ಡಾಚ್ಚುನ್ನೈಹಳೈ ಯೆಡುಪ್ಪಿಕ್ಕೈಯಾಲೇ ಅನ್ಯಪರಮಾನ ಉಪದೇಶತ್ತಾಲೇ ಪಿರನ್ದ ಅರ್ಜುನನ್ ಬುದ್ಧಿಯಾಲೇ ಧರ್ಮ ಮೆನ್ರುಪ್ರತೋತ್ತಿನವತ್ತೈ "ಸರ್ವಧರ್ಮಾನ್, ಎನ್ರು ಅನುವದಕ್ಕಿರದೆನ್ನಿಲ್,

1) "ಇಜ್ಯಾಚಾರ ದಮಾಹಿಂಸಾ ದಾನ ಸ್ವಾಧ್ಯಾಯ ಕರ್ಮಣಾಮ್ ।
   ಅಯಂತು ಪರಮೋಧರ್ಮೋ ಯದ್ಯೋಗೇನಾತ್ಮದರ್ಶನಮ್ ॥"
2) ಸರ್ವೇಷಾ ಮೇವ ಧರ್ಮಾಣಾ ಮುತ್ತಮೋ ವೈಷ್ಣವೋ ವಿಧಿಃ ॥"
3 "ನವಿಷ್ಣ್ವಾರಾಧನಾತ್ಪುಣ್ಯಂ ವಿದ್ಯತೇ ಕರ್ಮವೈದಿಕಮ್" ಇತ್ಯಾದಿಹಳಾಲೇ ಪರಮ ಧರ್ಮಙ್ಗ

---

## ಉಪಾಸನವು ಸಾಧನವೆಂಬವಲ್ಲ ಪಕ್ಷ ಖಂಡನೆ

ಉಪಾಸನವನ್ನು ವಾದಿಗಳೂ ಮೋಕ್ಷಸಾಧನವೆಂದು ಅಂಗೀಕರಿಸಿರುವುದರಿಂದ, ಸಿದ್ಧೋಪಾಯಕ್ಕೆ ಇರುವ ಏಕತ್ವ, ಸಿದ್ಧತ್ವ, ಪರಮಚೇತನತ್ವಾದಿಗಳಿಗೆ ಅಭಾವ ಪ್ರಸಂಗವು ಏರ್ಪಡುತ್ತದೆ. ಆಗ ಉಪಾಸನವನ್ನೂ ಸಾಧನವಲ್ಲವೆಂದು ಹೇಳಿಬಿಡುತ್ತೇವೆ ಎಂದರೆ, **ಉಪಾಸನಂ ತಾನುಂ**, ಎಂದಾರಂಭಿಸಿ ಪ್ರತಿಬಂಧಿಯಾಗಿ ಸಮಾಧಾನವನ್ನು ತಿಳಿಸುತ್ತಾರೆ. ಆದಾಗಿ ಉಪಾಸನವನ್ನೂ ಸಾಧನವಲ್ಲವೆಂದರೆ **"ಸರ್ವಧರ್ಮಾನ್ ಪರಿತ್ಯಜ್ಯ"** ಎಂಬಲ್ಲಿ ಸರ್ವಧರ್ಮ ಶಬ್ದಕ್ಕೆ ಅಲೌಕಿಕ ಶ್ರೇಯಸ್ಸಾಧನತ್ವರೂಪ ಇತರ ಧರ್ಮಗಳ ಹಾಗೆ,ಅಲೌಕಿಕ ಶ್ರೇಯಸ್ಸಾಧನವಾದ ಉಪಾಸನರೂಪ ಧರ್ಮಕ್ಕೂ ಸ್ವರೂಪತಃ ತ್ಯಾಗವು ವಿಹಿತವೆಂದು ಹೇಳುವುದಕ್ಕೋಸ್ಕರ ಉಪಾಸನಕ್ಕೆ ಅಲೌಕಿಕ ಶ್ರೇಯಸ್ಸಾಧನರೂಪ ಧರ್ಮತ್ವವನ್ನು ಅಂಗೀಕರಿಸಿ ವ್ಯಾಖ್ಯಾನ ಮಾಡಿರುವ ಸ್ವವಚನಕ್ಕೆ ವಿರೋಧವು ಏರ್ಪಡುತ್ತದೆ. **ಶೆರುಕ್ಕಡಕ್ಕುಹೈಕ್ಕಾಹ**–ಅರ್ಜುನನ ಗರ್ವವನ್ನು ಹೋಗಲಾಡಿಸಲು **ವೇಂಡಾಚ್ಚುನ್ನೈಹಳೈ**–ಇತ್ಯಾದಿ ಮೋಕ್ಷಕ್ಕೆ ಉಪಾಯಗಳಲ್ಲದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನು ಉಪಾಯಗಳಾಗಿ ವಿಧಿಸಿ ಅವುಗಳ ತ್ಯಾಗವನ್ನು ಮಾಡಬೇಕೆಂದು ಹೇಳುವುದು ಅನ್ಯಪರವಾದ ಉಪದೇಶ. ಅದರಿಂದ ಉಂಟಾದ ಅರ್ಜುನನ ಬುದ್ಧಿಯಲ್ಲಿ ಧರ್ಮವೆಂದು ತೋರಿದವುಗಳನ್ನು **'ಸರ್ವಧರ್ಮಾನ್'** ಎಂದು ಅನುವಾದ ಮಾಡಿರುತ್ತದೆ, ಅಷ್ಟೇ, ಎಂದು ಹೇಳಿದರೆ, 1) **ಇಜ್ಯಾಽಽಚಾರ ದಮಾಽಹಿಂಸಾ,** 2) **ಸರ್ವೇಷಾಮೇವ ಧರ್ಮಾಣಾಂ** 3) **ನವಿಷ್ಣ್ವಾರಾಧನಾತ್ಪುಣ್ಯಂ**–ಇತ್ಯಾದಿಗಳಲ್ಲಿ ಪರಮ ಧರ್ಮಗಳಾಗಿ ಪ್ರಸಿದ್ಧಗಳಾದ, ಭಗವದಾರಾಧನೆ, ಆಚಾರ-

---

1) ಯಾಜ್ಞವಲ್ಕ್ಯ ಸ್ಮೃತಿ (1-8) ಭಗವದಾರಾಧನೆ ಸಂಧ್ಯಾವಂದನೆ ಮೊದಲಾದ ಆಚಾರಗಳು ಇಂದ್ರಿಯಗಳನ್ನು ಅಡಗಿಸಿಡುವುದು, ಅಹಿಂಸೆ- ತಾತ್ಕಾಲಿಕ ದುಃಖಜನಕ ವ್ಯಾಪಾರವಾದರೂ ಉತ್ತರ ಕಾಲದಲ್ಲಿ ಅತಿಶಯಿತ ಸುಖ ಸಾಧನವಾದ ವ್ಯಾಪಾರ, ಯಾಗದಲ್ಲಿ ಪಶುಗಳನ್ನು ವಿಶಸನ (ಶ್ವಾಸವನ್ನು ಅಡಗಿಸಿ ಪ್ರಾಣವನ್ನು ನೀಗಿಸುವುದು) ಮಾಡುವುದು ಉತ್ತರಕಾಲದಲ್ಲಿ ಆ ಆತ್ಮಾವಿಗೆ ಸ್ವರ್ಗ ಪ್ರಾಪ್ತಿಯು ಏರ್ಪಟ್ಟು ಕಲ್ಯಾಣತರವಾದ ಶರೀರವು ಉಂಟಾಗಿ ಅತಿಶಯಿತ ಸುಖವು ಏರ್ಪಡುವುದರಿಂದ್ಯ ಯಾಗದಲ್ಲಿ ಮಾಡುವ ಪಶುಹಿಂಸೆಯು ಹಿಂಸೆಯಲ್ಲ. ಹಾಗೆಯೇ ರೋಗಿಷ್ಟನಿಗೆ ಮಾಡುವ ತಾತ್ಕಾಲಿಕ ಶಸ್ತ್ರ ಚಿಕಿತ್ಸಾದಿಗಳೂ, ಉತ್ತರೋತ್ತರ ಆರೋಗ್ಯವನ್ನುಂಟು ಮಾಡುವುದರಿಂದ ಹಿಂಸೆಯಾಗಲಾರವು-ದಾನ, ವೇದಾಧ್ಯಯನ ಇತ್ಯಾದಿ ಧರ್ಮಗಳಿಗಿಂತ ಉತ್ಕೃಷ್ಟವಾದದು ಯೋಗಾಭ್ಯಾಸದಿಂದ, ಆತ್ಮದರ್ಶನಂ-ಜೀವಾತ್ಮ, ಪರಮಾತ್ಮ ಸಾಕ್ಷಾತ್ಕಾರ, ಅಂದರೆ ಜ್ಞಾನಯೋಗ ಭಕ್ತಿಯೋಗಗಳು. 656 ಪು.ತಿ.ನೋ

ೞಾಹ ಪ್ರಸಿದ್ಧಂಗಳಾನ ನಿವೃತ್ತಿ ಧರ್ಮಙ್ಗಳೈ ಧರ್ಮಙ್ಗಳನ್ರೆನ್ರಾಲ್ ಕೈಮುತಿಕ ನ್ಯಾಯತ್ತಾಲೇ ಪ್ರವೃತ್ತಿ ಧರ್ಮಙ್ಗಳುಮ್ ಧರ್ಮಙ್ಗಳನ್ರಿಕ್ಕೇ ಸರ್ವ ಶಾಸ್ತ್ರಙ್ಗಳುಕ್ಕುಮ್ ಪ್ರಾಮಾಣ್ಯ ಮಿಲ್ಲಾದ ಪಡಿಯಾಯ್ ಪರಬಾಹ್ಯ ಕುದೃಷ್ಟಿ ಪಕ್ಷಙ್ಗಳಿಲೇ ಪ್ರವೇಶಮಾಮ್.

## ಪ್ರಪತ್ತೇಸ್ಸಾಧನತ್ವೇ ಸಿದ್ಧಸಾಧನ ಸಹಕಾರಿತ್ವೇವಾ ಚರಮಶ್ಲೋಕ ವಿರೋಧ ಇತಿ ಶಙ್ಕಾ ನಿರಾಸಃ

ಅನಾಲುಮ್ ಉಪಾಸನಾದಿಹಳ್ ಪೋಲೇ "ಶರಣವರಣಮುಮ್, ಧರ್ಮಶಬ್ದ ವಾಚ್ಯಮಾಹೈಯಾಲೇ ಇಙ್ಗ ಸರ್ವಶಬ್ದ ಸಙ್ಕೋಚಮ್ ವಾರಾಮೈಕ್ಕಾಹ ಇದುವುಮ್ ಸಾಧನತ್ವ ವೇಷತ್ತಾಲೇ ತ್ಯಾಜ್ಯ ಮನ್ರೋ? ಆಹೈಯಾಲ್ ಪ್ರಪತ್ತಿಕ್ಕುಮ್, ಸಾಧನತ್ವಮಾದಲ್ ಸಿದ್ಧಸಾಧನ ಸಹಕಾರಿತ್ವಮಾದಲ್ ಕೊಳ್ಳುಹೈ ಇವ್ವಚನಮ್ ತನಕ್ಕುಮ್ ವಿರುದ್ಧಮನ್ರೋ ವೆನ್ನಿಲ್? ಇಙ್ಗ ಸಾಕ್ಷಾತ್ಸಾಧನತ್ವ ಬುದ್ಧಿಯೈ ವಿಡವೇಣು ಮೆನ್ನುಮ್ ಪೋದು, ಭಕ್ತಿಯೋಗಾದಿಹಳಿಲುಮ್ ತುಲ್ಯಮ್.

ಪ್ರಸಾದನತ್ವವೇಷತ್ತಾಲುಮ್ ಧರ್ಮತ್ವಮಿದುಕ್ಕು ವಿಡುವೇಣು ಮೆನ್ನಿಲ್, ಸರ್ವಶಬ್ದ ಸಙ್ಕೋಚಂ

---

ಸಂಧ್ಯಾವಂದನಾದಿ, ದಮಃ-ಇಂದ್ರಿಯನಿಗ್ರಹ, ಅಹಿಂಸೆ, ದಾನ, ವೇದಾಧ್ಯಯನ, ಜ್ಞಾನಯೋಗ, ಭಕ್ತಿಯೋಗಗಳು ಇತ್ಯಾದಿ ಪಾರಲೌಕಿಕ ಶ್ರೇಯಸ್ಸಾಧನಗಳಾದ ನಿವೃತ್ತಿ ಧರ್ಮಗಳನ್ನು ಧರ್ಮಗಳಲ್ಲವೆಂದರೆ, ಕೈಮುತಿಕ ನ್ಯಾಯ ದಿಂದ ಐಹಲೌಕಿಕ ಶ್ರೇಯಸ್ಸಾಧನಗಳಾದ ಪ್ರವೃತ್ತಿ ಧರ್ಮಗಳನ್ನೂ ಧರ್ಮಗಳಲ್ಲವೆಂದು ಹೇಳಿ ಅವುಗಳನ್ನು ಧರ್ಮ ಗಳೆಂದು ಹೇಳುವ ಸರ್ವ ಶಾಸ್ತ್ರಗಳಿಗೂ ಪ್ರಾಮಾಣ್ಯವು ಇಲ್ಲದ ರೀತಿಯಲ್ಲಿ ಬಾಹ್ಯಕುದೃಷ್ಟಿ ಮತಗಳನ್ನು **ಪ್ರವೇಶ ಮಾಮ್**-ಅವಲಂಬಿಸಿದಂತಾಗುತ್ತದೆ.

## ಪ್ರಪತ್ತಿಯು ಸಾಧನವಲ್ಲ ಸಿದ್ಧಸಾಧನ-(ಸಿದ್ಧೋಪಾಯ)ಸಹಕಾರಿತ್ವವಲ್ಲವೆಂಬ ಮತ ಖಂಡನೆ

ಹೀಗೆ ಉಪಾಸನಕ್ಕೂ ಅದರ ಹಾಗೆಯೇ ಪ್ರಪತ್ತಿಗೂ ಶ್ರೇಯಸ್ಸಾಧನತ್ವವನ್ನೂ ಸಿದ್ಧ ಸಾಧನ ಸಹಕಾರಿತ್ವ ವನ್ನೂ ಒಪ್ಪಿದರೂ ಚರಮ ಶ್ಲೋಕದಲ್ಲಿ ಸರ್ವ ಶಬ್ದಕ್ಕೆ ಸಂಕೋಚವು ಬಾರದೆ ಇರಲು ಪ್ರಪತ್ತಿರೂಪ ಧರ್ಮಕ್ಕೂ ತ್ಯಾಗವು ವಿಹಿತವೆಂದು ಅಂಗೀಕರಿಸಬೇಕಾದ್ದರಿಂದ, ಪ್ರಪತ್ತಿಗೆ ಸಾಧನತ್ವವನ್ನು ಇಲ್ಲವೆಂದು ಹೇಳಬೇಕಲ್ಲವೇ ಎಂಬ ಶಂಕೆಯನ್ನು **ಅನಾಲುಂ**-ಎಂದಾರಂಭಿಸಿ ನಿರಾಕರಿಸುತ್ತಾರೆ. ಅದಾಗಿ ಭಕ್ತಿ ಪ್ರಪತ್ತಿಗಳಿಗೆ ಸಾಧನತ್ವವನ್ನು ಒಪ್ಪಿ ದರೂ, ಉಪಾಸನಾದಿಗಳ ಹಾಗೆ ಶರಣವರಣವೂ ಧರ್ಮಶಬ್ದವಾಚ್ಯವಾದ್ದರಿಂದ, ಇಲ್ಲಿ ಸರ್ವಶಬ್ದ ಸಂಕೋಚವು ಬಾರದೆ ಇರಲು, ಪ್ರಪತ್ತಿಯೂ ಸಾಧನತ್ವ ವೇಷದಿಂದ ತ್ಯಾಜ್ಯವಲ್ಲವೇ. **ಆಹೈಯಾಲ್**-ಆದ್ದರಿಂದ ಪ್ರಪತ್ತಿಗೆ **ಸಾಧನತ್ವವನ್ನಾಗಲಿ, ಸಿದ್ಧಸಾಧನ ಸಹಕಾರಿತ್ವ**-ಸಿದ್ಧೋಪಾಯನಾದ ಭಗವಂತನಿಗೆ ಸಹಕಾರಿತ್ವವನ್ನಾಗಲಿ, ಅಂಗೀಕರಿಸುವುದು ಈ ವಚನಕ್ಕೆ ವಿರುದ್ಧವಲ್ಲವೇ- ಅಂದರೆ, ಮೇಲೆ ಹೇಳಿದ ಪ್ರಮಾಣಗಳಿಂದ ಭಕ್ತಿಯ ಹಾಗೆ ಪ್ರಪತ್ತಿಗೂ ಸಾಧನತ್ವವನ್ನು ಒಪ್ಪಿದರೆ, ಅದು ಸಾಧನಗಳೆಲ್ಲಾ ತ್ಯಾಜ್ಯಗಳು ಎಂಬ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬ ವಾಕ್ಯಕ್ಕೆ ವಿರುದ್ಧವಾಗುತ್ತದೆಯಲ್ಲವೇ ಎಂಬುದು ಶಂಕೆ, ಇದಕ್ಕೆ ಸಮಾಧಾನವನ್ನು **ಇಂಗು ಸಾಕ್ಷಾತ್ಸಾ ಧನತ್ವಬುದ್ಧಿಯೈ**-ಎಂದಾರಂಭಿಸಿ ಎರಡು ಬಗೆಯಾಗಿ ತಿಳಿಸುತ್ತಾರೆ. ಅದಾಗಿ 1) ಇಲ್ಲಿ ಸಾಕ್ಷಾತ್ಸಾಧನತ್ವ ಬುದ್ಧಿ ಯನ್ನು ಬಿಡಬೇಕೆಂದು ಹೇಳುವುದು ಭಕ್ತಿಯೋಗಾದಿಗಳಿಗೂ ಸಮಾನ. ಅದಾಗಿ ಭಕ್ತಿಯೋಗಾದಿಗಳಿಗೂ ಸಾಕ್ಷಾತ್ಸಾ ಧನತ್ವವು ಇಲ್ಲವಾದ್ದರಿಂದ ಸಾಕ್ಷಾತ್ಸಾಧನತ್ವ ಬುದ್ಧಿತ್ಯಾಗ ಪೂರ್ವಕಾನುಷ್ಠಾನವು ಭಕ್ತಿಯೋಗಾದಿಗಳಿಗೂ ಸಾಧಾ ರಣವಾದ್ದರಿಂದ ಪ್ರಪತ್ತಿಯೇ ಸರ್ವಧರ್ಮತ್ಯಾಗ ಪೂರ್ವಕವಾಗಿ ಅನುಷ್ಠೇಯವು ಎಂಬ ಭಗವದಭಿಮತವು ಸಿದ್ಧಿಸಲಾರದು.

ದ್ವಿತೀಯ ಪಕ್ಷವನ್ನು **ಪ್ರಸಾದನತ್ವ ವೇಷತ್ತಾಲುಮ್**. ಇತ್ಯಾದಿ ಪ್ರತಿಬಂದಿಯಿಂದ ನಿರಸನ ಮಾಡುತ್ತಾರೆ.

**ವಾರಾನ್ವೈಕ್ಯಾಹವೇ "ಕೃಷ್ಣಂ ಧರ್ಮಂ ಸನಾತನಂ" ಇತ್ಯಾದಿಹಳಿರ್ಪಡಿಯೇ ಧರ್ಮವಾನ ಸಿದ್ಧೋಪಾಯತ್ತಿಲುಮ್ ಸಾಧನತ್ವ ಬುದ್ಧಿಯೈ ವಿಡಪ್ರಸಙ್ಗಿಕ್ಕುಮ್. ಇವ್ವಾಕ್ಯತ್ತಿಲ್ ಪ್ರತಿಪಾದ್ಯಮಾನ ಧರ್ಮತ್ತೈಯೊ಴ಿನ್ದ ಧರ್ಮಙ್ಗಳನ್ರೋ ತ್ಯಾಜ್ಯಙ್ಗಳಾವನ ವೆನ್ನಿಲ್; ಇಙ್ಗು ವಿಹಿತೈಯಾನ ಶರಣಾಗತಿಯಿಲುಮ್ ತುಲ್ಯಮ್.**

---

ಆದಾಗಿ ಭಗವತ್ಪ್ರಸಾದನ ವೇಷದಿಂದಲೂ ಭಗವಂತನ ನಿಗ್ರಹವನ್ನು ಹೋಗಲಾಡಿಸಿ ಅವನ ಅನುಗ್ರಹವನ್ನು ಉಂಟುಮಾಡುತ್ತದೆಯೆಂಬ ಆಕಾರದಿಂದಲೂ ಪ್ರಪತ್ತಿಗೆ ಧರ್ಮತ್ವವನ್ನು ಬಿಡಬೇಕೆಂದರೆ, **ಸರ್ವಶಬ್ದ ಸಂಕೋಚಮ್** ಇತ್ಯಾದಿ ಸರ್ವಶಬ್ದಸಂಕೋಚವು ಬಾರದೆ ಇರಲು, 1) **ಕೃಷ್ಣಂಧರ್ಮಂಸನಾತನಮ್**, ಇತ್ಯಾದಿಗಳಲ್ಲಿ ಹೇಳಿರುವಂತೆಯೇ, **ಧರ್ಮಮಾನ**–ಸನಾತನ ಧರ್ಮವಾದ ಸಿದ್ಧೋಪಾಯದಲ್ಲಿಯೂ, ಅಂದರೆ ಸಿದ್ಧೋಪಾಯನಾದ ಭಗವಂತನಲ್ಲಿಯೂ ಸಾಧನತ್ವ ಬುದ್ಧಿಯನ್ನು ಅಂದರೆ ಮೋಕ್ಷವನ್ನು ಸಾಧಿಸಿಕೊಡುವವನು ಎಂಬ ಬುದ್ಧಿಯನ್ನು ಬಿಡಬೇಕಾದ ಪ್ರಸಂಗವು ಬರುತ್ತದೆ. ಸಾಧನತ್ವ ಸಾಮಾನ್ಯವನ್ನು ಬಿಡಬೇಕೆಂಬುದು "ಸರ್ವಧರ್ಮಾನ್ ಪರಿತ್ಯಜ್ಯ" ಎಂಬುದಕ್ಕೆ ಅರ್ಥವಾದರೆ ಸನಾತನ ಧರ್ಮವಾದ ಭಗವಂತನಲ್ಲಿಡುವ ಸಾಧನತ್ವ ಬುದ್ಧಿಯನ್ನೂ ಬಿಡುವ ಪ್ರಸಂಗವು ಉಂಟಾಗುತ್ತದೆ ಎಂದು ತಾತ್ಪರ್ಯ. ಇದಕ್ಕೆ ಪ್ರತಿವಾದಿಯ ಬಾಯಿಂದಲೇ ಸಮಾಧಾನವನ್ನು **ಇವ್ವಾಕ್ಯತ್ತಿಲ್**, ಎಂದಾರಂಭಿಸಿ ಹೇಳಿಸುತ್ತಾರೆ. ಅದಾಗಿ, ಚರಮಶ್ಲೋಕದ ಪೂರ್ವಾರ್ಧವಾದ, "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ" ಎಂಬ ವಾಕ್ಯದಲ್ಲಿ, **ಪ್ರತಿಪಾದ್ಯಮಾನ** ಇತ್ಯಾದಿ–ಮೋಕ್ಷಕ್ಕೆ ಉಪಾಯವಾಗಿ ಹೇಳಲ್ಪಟ್ಟ ಧರ್ಮವಾದ–ಸಿದ್ಧೋಪಾಯನಾದ ಭಗವಂತನನ್ನು ಬಿಟ್ಟು ಬೇರೆ ಧರ್ಮಗಳಲ್ಲವೋ ಬಿಡಬೇಕಾದವು ಅದಾಗಿ ನೀನು ಸರ್ವಧರ್ಮಗಳನ್ನೂ ಬಿಡು, ಭಗವಂತನೊಬ್ಬನನ್ನೇ ಶರಣವಾಗಿ-ಉಪಾಯವಾಗಿ ಆಶ್ರಯಿಸು, ಎಂದು ಹೇಳುವ ವಾಕ್ಯದಲ್ಲಿ, ಉಪಾಯವಾಗಿ ಆಶ್ರಯಿಸಬೇಕಾದ ಧರ್ಮಕ್ಕಿಂತಲೂ, ಬೇರೆಯಾದ ಧರ್ಮಗಳನ್ನಲ್ಲವೇ ಬಿಡಬೇಕೆಂಬುದು "ಸರ್ವಧರ್ಮ" ಶಬ್ದಕ್ಕೆ ಅರ್ಥ, **ಎನ್ನಿಲ್**–ಎಂದು ಹೇಳಿದರೆ **ಇಂಗು ವಿಹಿತೈಯಾನ ಶರಣಾಗತಿಯಿಲುಮ್ ತುಲ್ಯಮ್**–ಇಂಗು–ಈ ವಾಕ್ಯದಲ್ಲಿ ಅವಶ್ಯ ಕರ್ತವ್ಯವಾಗಿ ವಿಧಿಸಲ್ಪಟ್ಟ ಶರಣಾಗತಿಯಲ್ಲೂ ಈ ನ್ಯಾಯವು ಸಮಾನ. "ಸರ್ವಧರ್ಮಾನ್ ಪರಿತ್ಯಜ್ಯ" ಎಂಬ ವಾಕ್ಯದಲ್ಲಿ ನೀನು ಸರ್ವವನ್ನೂ ಬಿಡು, ಭಗವಂತನನ್ನೇ ಉಪಾಯವಾಗಿ ಶರಣ ಹೊಂದು ಎಂದು ಹೇಳಿರುವುದರಿಂದ, ಸರ್ವಧರ್ಮ ಪರಿತ್ಯಾಗ ಶಬ್ದದಿಂದ ವಿಹಿತವಾದ ಶರಣ ವರಣ ರೂಪ ಪ್ರಪತ್ತಿ ವ್ಯತಿರಿಕ್ತಗಳಾದ ಸರ್ವಧರ್ಮ ಪರಿತ್ಯಾಗವೇ ಹೇಳಲ್ಪಡುತ್ತದೆ ಎಂದು ಪ್ರತಿವಾದಿಯೂ ಅಂಗೀಕರಿಸಬೇಕೆಂಬುದು ತಾತ್ಪರ್ಯ.

---

2) ಸರ್ವೇಷಾಮೇವ ಧರ್ಮಾಣಾಂ ಉತ್ತಮೋ ವೈಷ್ಣವೋ ವಿಧಿಃ । (654 ಪುಟದಿಂದ)
ರಕ್ಷತೇ ಭಗವಾನ್ ವಿಷ್ಣುಃ ಭಕ್ತಮಾತ್ಮ ಶರೀರವತ್ ॥ (ಭಾರ. ಅನು. 36-24)

ಎಲ್ಲಾ ಧರ್ಮಗಳಿಗಿಂತಲೂ ಭಗವದಾರಾಧನವು ಉತ್ತಮವಾದದ್ದು, ಭಗವಾನ್ ವಿಷ್ಣುವು ತನ್ನ ಶರೀರದಂತೆ ಭಕ್ತನನ್ನು ರಕ್ಷಿಸುತ್ತಾನೆ,

3) ನವಿಷ್ಣ್ವಾರಾಧನಾತ್ಪುಣ್ಯಂ ವಿದ್ಯತೇ ಕರ್ಮ ವೈದಿಕಮ್ ।
ತಸ್ಮಾದನಾದಿ ಮಧ್ಯಾಂತಂ ನಿತ್ಯಮಾರಾಧಯೇದ್ಧರಿಮ್॥ ವ್ಯಾಸ ಸ್ಮೃತಿ 7-42)

ವೈದಿಕ ಕರ್ಮಗಳಲ್ಲಿ ವಿಷ್ಣುವಿನ ಪೂಜೆಗಿಂತ ಪುಣ್ಯವಾದ ಕರ್ಮವು ಬೇರಿಲ್ಲ. ಆದ್ದರಿಂದ ಆದಿ ಮಧ್ಯಾಂತರಹಿತನಾದ ಹರಿಯನ್ನು ನಿತ್ಯವೂ ಪೂಜಿಸಬೇಕು,

## ಭಕ್ತೀಃ ಪ್ರಪತ್ಯೋಃ ಸಿದ್ಧೋಪಾಯೋಪಕಾರಕತ್ವಮ್

**ಉಪಾಸನಾದಿಹಳೈಪ್ಪೋಲೇ ತನಕ್ಕು ಉತ್ಪಾದಕ ಮಾಹವಾದಲ್, ವರ್ಧಕಮಾಹವಾದಲ್, ಸಹಕಾರಿಯಾಹವಾದಲ್, ದ್ವಾರಮಾಹವಾದಲ್, ಒನ್ರಾಲಪೇಕ್ಷೈ ಯುರುಮ್ಪಡಿ, ನಿತ್ಯಮಾಯ್, ಉಪಚಯಾಪಚಯ ರಹಿತಮಾಯ್, ಸರ್ವದಾ ಪರಿಪೂರ್ಣಮಾನ ಸಹಜ ಕಾರುಣ್ಯಾದಿಹಳೈ ಯುಡೈತ್ತಾಯ್. ಸಙ್ಕಲ್ಪ ಮುಂಡಾನಪೋದು ದ್ವಾರ ನಿರಪೇಕ್ಷಮಾಹ ಕಾರ್ಯಂ ಪಿರುಕ್ಕುಮ್ಪಡಿ ಸತ್ಯ ಸಙ್ಕಲ್ಪಮಾಯ್ ಇರುಕ್ಕಿರ ಸಿದ್ಧೋಪಾಯತ್ತುಕ್ಕು ಭಕ್ತಿಪ್ರಪತ್ತಿಹಳ್ ಎವ್ವಾಕಾರತ್ತಾಲೇ ಉಪಕಾರ ಕಙ್ಗಳಾಹಿನ್ರನವೆನ್ನಿಲ್, ಇವೈಯನಾದಿಯಾನ ಅಪಚಾರ ಪರಂಪರೈಯಾಲೇ ಉತ್ಪನ್ನಮಾಯ್ ಸಂಸಾರ ಹೇತುವಾಯ್ಕ್ಕಿಡಕ್ಕಿರ ನಿಗ್ರಹತ್ತೈ ಶಮಿಪ್ಪಿತ್ತುಕ್ಕೊಂಡು ಉಪಕರಿಕ್ಕಿನ್ರನ. ಇವೈ ಫಲಾಂತ ರತ್ತುಕ್ಕು ಉಪಾಯಙ್ಗಳಾಂಪೋದು ಜ್ಯೋತಿಷ್ಟೋಮಾದಿಹಳೈ ಪ್ಪೋಲೇ ತತ್ತದನುಗುಣ ಪ್ರೀತಿ ವಿಶೇಷಙ್ಗಳೈ ಉತ್ಪಾದಿತ್ತುಕ್ಕೊಂಡು ಅಮುಖತ್ತಾಲೇ ಉಪಕಾರಕಙ್ಗಳಾಮ್.**

---

## ಭಕ್ತಿ ಪ್ರಪತ್ತಿಗಳು ಸಿದ್ಧೋಪಾಯನಾದ ಭಗವಂತನಿಗೆ ಹೇಗೆ ಉಪಕಾರಕಗಳು

ಅನಂತರ ಸಿದ್ಧೋಪಾಯನಾದ ಭಗವಂತನಿಗೆ ಭಕ್ತಿಪ್ರಪತ್ತಿಗಳು ಹೇಗೆ ಉಪಕಾರಗಳಾಗುತ್ತವೆ ಎಂಬುದನ್ನು **ಉಪಾಸನಾದಿಹಳೈಪ್ಪೋಲೇ** ಎಂಬ ವ್ಯತಿರೇಕ ದೃಷ್ಟಾಂತ ಪೂರ್ವಕ ತಿಳಿಸುತ್ತಾರೆ. ಆದಾಗಿ **ತನಕ್ಕು ಉತ್ಪಾದಕಮಾಹವಾದಲ್** – ಕಾರ್ಯಗಳಾದ ಉಪಾಸನಾದಿಗಳು ಸ್ವೋತ್ಪಾದಕಾಪೇಕ್ಷಗಳು. ಉಪಾಸನಾದಿಗಳು ಉಂಟಾಗಲು ಅನೇಕ ಕಾರಣಗಳನ್ನು ಅಪೇಕ್ಷಿಸುತ್ತವೆ. ಆ ರೀತಿಯಲ್ಲಿ ನಿತ್ಯವಾದ ಸಿದ್ಧೋಪಾಯನಾದ ಭಗವಂತನು ಉಂಟಾಗಬೇಕೆಂಬುದಿಲ್ಲ. ಸ್ವೋತ್ಪಾದಕಾಪೇಕ್ಷಾರಹಿತನು. **ವರ್ಧಕಮಾಹವಾದಲ್** – ಭಕ್ತಿಯು ದಿನ ದಿನಕ್ಕೆ ವೃದ್ಧಿ ಹೊಂದುವುದು. ಭಗವಂತನು ವೃದ್ಧಿಹ್ರಾಸವಿಲ್ಲದವನು. **ಸಹಕಾರಿಯಾಹವಾದಲ್** – ಸರ್ವದಾ ಪರಿಪೂರ್ಣನಾದ್ದರಿಂದ ಸಹಕಾರ್ಯಪೇಕ್ಷೆಯಿಲ್ಲದವನು. ಭಕ್ತಿಯು ಸಹಕಾರ್ಯಪೇಕ್ಷೆಯುಳ್ಳದ್ದು. **ದ್ವಾರಮಾಹವಾದಲ್** – ಭಕ್ತಿಯು ಕರ್ಮ ಜ್ಞಾನಾಂಗಕವಾದ್ದರಿಂದ ತದ್ವಾರಾ ಉತ್ಪನ್ನವಾಗುತ್ತದೆ. ಭಗವಂತನು ತಾನು ಸಂಕಲ್ಪಿಸುವ ಸಮಯದಲ್ಲಿ ದ್ವಾರನಿರಪೇಕ್ಷನಾಗಿ, **ಕಾರ್ಯಂಪಿರಕ್ಕುಂಪಡಿ ಸತ್ಯಸಂಕಲ್ಪಮಾಯಿರುಕ್ಕಿರ**– ಕಾರ್ಯವನ್ನು ನೆರವೇರಿಸಲು ಸತ್ಯಸಂಕಲ್ಪನಾಗಿರುವನು. **ಸಿದ್ಧೋಪಾಯತ್ತಿರ್ಕು** – ಹೀಗಿರುವ ಸಿದ್ಧೋಪಾಯನಾದ ಭಗವಂತನಿಗೆ, **ಭಕ್ತಿಪ್ರಪತ್ತಿಹಳ್** ಇತ್ಯಾದಿ – ಭಕ್ತಿಪ್ರಪತ್ತಿಗಳು ಹೇಗೆ ಉಪಕಾರಕಗಳಾಗುತ್ತವೆ, ಎಂದರೆ, **ಇವೈಅನಾದಿಯಾನ** ಇತ್ಯಾದಿ – ಇವುಗಳು ಅನಾದಿಯಾದ ಅಪಚಾರಗಳ – ಪಾಪಗಳ ಪರಂಪರೆಯಿಂದ ಉಂಟಾದ ಸಂಸಾರಕ್ಕೆ ಕಾರಣಗಳಾದ ಭಗವನ್ನಿಗ್ರಹವನ್ನು ಹೋಗಲಾಡಿಸಿ ಉಪಕರಿಸುತ್ತವೆ. **ಈ** ಸಾಧ್ಯೋಪಾಯಗಳಾದ ಭಕ್ತಿಪ್ರಪತ್ತಿಗಳು ಸಿದ್ಧೋಪಾಯ ಪ್ರಸಾದವನ್ನುಂಟು ಮಾಡಿ ಉಪಕರಿಸುತ್ತವೆ ಎಂದು ತಾತ್ಪರ್ಯ. ಈ ಭಕ್ತಿಪ್ರಪತ್ತಿಗಳು ಫಲಾಂತರಕ್ಕೆ ಸಾಧನಗಳಾಗುವ ಪ್ರಕಾರವನ್ನು **ಇವೈ ಫಲಾಂತರತ್ತುಕ್ಕು** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ **ಈ** ಭಕ್ತಿ ಪ್ರಪತ್ತಿಗಳು ಫಲಾಂತರಕ್ಕೆ ಉಪಾಯಗಳಾಗುತ್ತವೆ. ಆಗ **ಜ್ಯೋತಿಷ್ಟೋಮಾದಿಹಳೈಪ್ಪೋಲೆ** – "ಜ್ಯೋತಿಷ್ಟೋಮೇನ ಸ್ವರ್ಗ ಕಾಮೋಯಜೇತ" ಸ್ವರ್ಗ ಫಲಕ್ಕೋಸ್ಕರ ಜ್ಯೋತಿಷ್ಟೋಮ ಯಾಗವನ್ನು ಮಾಡಬೇಕು, ಎಂದು ಹೇಳಿದೆ. ಆಯಾಗಗಳನ್ನು ಮಾಡಿದರೆ, ಸಿದ್ಧೋಪಾಯನಾದ ಭಗವಂತನು 'ಸ ಏನಂ ಪ್ರೀತಃ ಪ್ರೀಣಾತಿ' ಎಂಬಂತೆ ಪ್ರೀತನಾಗುತ್ತಾನೆ. ಆಯಾಗಗಳು ಭಗವಂತನಿಗೆ ಪ್ರೀತಿ ವಿಶೇಷವನ್ನುಂಟು ಮಾಡಿ ಫಲವನ್ನು ಕೊಡಲು ಉಪಕಾರಗಳಾಗುತ್ತವೆ. ಆ ರೀತಿಯಲ್ಲಿ ಭಕ್ತಿಪ್ರಪತ್ತಿಗಳು **ತತ್ತದನುಗುಣ** ಇತ್ಯಾದಿ ಆ ಜ್ಯೋತಿಷ್ಟೋಮಾದಿ ಯಾಗಾನುಷ್ಠಾನದಿಂದ ಉಂಟಾದ ಪ್ರೀತಿಗೆ ಸದೃಶವಾದ ಪ್ರೀತಿಯನ್ನುಂಟುಮಾಡಿ, ಸಿದ್ಧೋಪಾಯನ ಮೂಲಕ ಸ್ವರ್ಗಾದಿ ಫಲಾಂತರವನ್ನು ಕೊಡಿಸಲು ಉಪಕಾರಕಗಳಾಗುತ್ತವೆ.

**ಮೋಕ್ಷ ಫಲಪ್ರದತ್ವೇ ಸಿದ್ಧೋಪಾಯ ಸಾಧ್ಯೋಪಾಯಯೋಃ ಉಪಕಾರಾಃ**

**ಮುಮುಕ್ಷುವುಕ್ಕು ಸಾಧ್ಯೋಪಾಯಙ್ಗಳಾಹಿರ ವ್ಯಾಜಮಾತ್ರತ್ತಾಲೇ ಶಾಂತ ನಿಗ್ರಹಮಾನ ಸಿದ್ಧೋಪಾಯಮ್ ನಿಗ್ರಹ ಫಲಮಾನ ಜ್ಞಾನ ಸಙ್ಕೋಚಾದಿಹಳೈ ಕ್ಕಳೈತ್ತು ಪರಿಪೂರ್ಣ ಕೈಙ್ಕರ್ಯ ಪರ್ಯಂತ ಫಲತ್ತೈಕ್ಕೊಡುತ್ತು ಯಾವದಾತ್ಮಭಾವಿಯಾಹ ಉಪಕರಿಕ್ಕುಮ್.**

**ಸಿದ್ಧ ಸಾಧ್ಯೋಪಾಯ ಪರೋಭಯ ಪ್ರಮಾಣಾನಿ ಸುಸಙ್ಗತಾನಿ.**

**ಆಹೈಯಾಲ್ ಮುಮುಕ್ಷುವಿನುಡೈಯ ಸರ್ವಾನಿಷ್ಟ ನಿವೃತ್ತಿಪೂರ್ವಕಮಾಯ್ ಪರಿಪೂರ್ಣಕೈಙ್ಕರ್ಯ ಪರ್ಯನ್ತಮಾನ ಫಲಪರಂಪರೈಯೆಲ್ಲಾಮ್ ಸಿದ್ಧೋಪಾಯ ಕಾರ್ಯಮೆನ್ನುಮ್, ಪ್ರಸಾದನಮಾನ ಸಾಧ್ಯೋಪಾಯಮಡಿಯಾಹ ವರುಹಿರದೆನ್ರುಮ್, ಶೊಲ್ಲುಹಿರ ಪ್ರಮಾಣಙ್ಗಳಿರಣ್ಡುಮ್ ಸುಸಙ್ಗತಙ್ಗಳ್.**

---

ಅನಂತರ ಮುಮುಕ್ಷುವಿಗೆ ಸಾಧ್ಯೋಪಾಯಗಳಿಂದ ಉಂಟಾಗುವ ಉಪಕಾರಗಳನ್ನೂ ಸಿದ್ಧೋಪಾಯನಾದ ಭಗವಂತನಿಂದ ಉಂಟಾಗುವ ಉಪಕಾರಗಳನ್ನೂ ಬಿಡಿಸಿ ತೋರಿಸುತ್ತಾರೆ. **ಮುಮುಕ್ಷುವುಕ್ಕು** ಇತ್ಯಾದಿ–ಮೋಕ್ಷ ದಲ್ಲಿ ಆಸೆಯುಳ್ಳವನಿಗೆ ಸಾಧ್ಯವಾದ ಉಪಾಯಗಳಾದ ಭಕ್ತಿ ಪ್ರಪತ್ತಿಗಳೆಂಬ ವ್ಯಾಜ ಮಾತ್ರಗಳಿಂದ ಸಿದ್ಧೋಪಾಯ ನಾದ ಭಗವಂತನು ಅನಾದಿಯಾಗಿ ಮಾಡಿದ ಪಾಪಗಳಿಂದ ಉಂಟಾದ ಕೋಪದಿಂದ ಶಾಂತನಾಗಿ ಮುಮುಕ್ಷುವಿಗೆ– ನಿಗ್ರಹ ಫಲವಾದ ಜ್ಞಾನ ಸಂಕೋಚಾದಿಗಳನ್ನು ಹೋಗಲಾಡಿಸಿ ಪರಿಪೂರ್ಣ ಕೈಂಕರ್ಯ ಪರ್ಯಂತವಾದ ಫಲವನ್ನು ಕೊಟ್ಟು **ಯಾವದಾತ್ಮಭಾವಿಯಾಹ**–ಆತ್ಮಾ ಇರುವವರೆಗೆ ಅಂದರೆ ಮುಂದೆ ಬರುವ ಅನಂತಕಾಲ ಪರ್ಯಂತ **ಉಪ ಕರಿಕ್ಕುಮ್**–ಉಪಕಾರ ಮಾಡುತ್ತಾನೆ. ಇದರಿಂದ ಸಾಧ್ಯೋಪಾಯವು ಭಗವನ್ನಿಗ್ರಹವನ್ನು ಹೋಗಲಾಡಿಸುತ್ತದೆ. (ಅನಿಷ್ಟ ನಿವೃತ್ತಿ). ಅದರಿಂದ ಶಾಂತ ನಿಗ್ರಹನಾದ ಸಿದ್ಧೋಪಾಯನು ಮೋಕ್ಷವನ್ನು ಕೊಡುತ್ತಾನೆಂಬುದು (ಇಷ್ಟ ಪ್ರಾಪ್ತಿ) ಫಲಿತಾರ್ಥ. **ಆಹೈಯಾಲೇ**–ಅನಿಷ್ಟ ನಿವೃತ್ತಿಪೂರ್ವಕ ಇಷ್ಟ ಪ್ರಾಪ್ತಿಯು ಸಾಧ್ಯೋಪಾಯ ವಶೀಕೃತ ನಾದ ಸಿದ್ಧೋಪಾಯಕಾರ್ಯವೆಂದು ನಿಷ್ಕರ್ಷಿಸಲ್ಪಟ್ಟಿದುದರಿಂದ **ಮುಮುಕ್ಷುವಿನುಡೈಯ**–ಮೋಕ್ಷದಲ್ಲಿ ಆಸೆ ಯುಳ್ಳವನ ಸರ್ವಾನಿಷ್ಟ ನಿವೃತ್ತಿ ಪೂರ್ವಕವಾಗಿ ಪರಿಪೂರ್ಣ ಕೈಂಕರ್ಯ ಪರ್ಯಂತವಾದ ಫಲ ಪರಂಪರೆಯೆಲ್ಲಾ ಸಿದ್ಧೋ ಪಾಯ ಕಾರ್ಯವೆಂದೂ **ಪ್ರಸಾದಮಾನ**–ಅವನ ನಿಗ್ರಹವನ್ನು ಹೋಗಲಾಡಿಸಿ ಪ್ರಸನ್ನನನ್ನಾಗಿ ಮಾಡುವ **ಸಾಧ್ಯೋ ಪಾಯಮಡಿಯಾಹ** ಸಾಧ್ಯೋಪಾಯ ಮೂಲಕ ಬರುತ್ತದೆ. ಎಂದೂ, ಹೇಳುವ ಪ್ರಮಾಣಗಳೆರಡೂ **ಸುಸಂಗ ತಂಗಳ್**–ಪರಸ್ಪರ ಸಂಗತಗಳು. ವಿರುದ್ಧಗಳಲ್ಲ. ಇದರ ತಾತ್ಪರ್ಯವೇನೆಂದರೆ, ಅನಿಷ್ಟ ನಿವೃತ್ತಿಯೂ ಇಷ್ಟ ಪ್ರಾಪ್ತಿಯೂ ಸಿದ್ಧೋಪಾಯ ಕಾರ್ಯವೆಂಬ ವಚನವು, ಸಾಕ್ಷಾತ್ಸಿದ್ಧೋಪಾಯ ಕಾರ್ಯತ್ವ ತಾತ್ಪರ್ಯಕವಾದವು. ಇವುಗಳೆರಡೂ (ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿ) ಸಾಧ್ಯೋಪಾಯ ಕಾರ್ಯಗಳೆಂಬ ವಚನವು ಪರಂಪರೆಯಾಗಿ ಅಂದರೆ ಭಗವತ್ಪ್ರಸಾದ ಜನಕ ದ್ವಾರಾ ಸಾಧ್ಯೋಪಾಯ ಕಾರ್ಯಗಳೆಂದು ತಾತ್ಪರ್ಯ.

**ಪ್ರಪತ್ತಿಯನ್ನು ವಿಧಿಸಬೇಕೆಂಬ ಆವಶ್ಯವಿಲ್ಲವೆಂಬ ಪಕ್ಷ ಖಂಡನೆ**

**ಲೋಕದಲ್ಲಿ ಅಸಮರ್ಥನು ಸಮರ್ಥನನ್ನು ಆಶ್ರಯಿಸುವುದು ಅಂದರೆ ಅವನ ಕಾಲಿನಲ್ಲಿ ಬಿದ್ದು ಶರಣಾಗತಿ ಮಾಡಿ ತನ್ನನ್ನು ರಕ್ಷಿಸು ಎಂದು ಕೇಳಿಕೊಳ್ಳುವುದನ್ನು ಕಂಡಿದ್ದೇವೆ. ಇದು ಉಪಪನ್ನವಾದುದ್ದು, ಹೀಗಿರು ವಾಗ ಇದಕ್ಕೆ ಶಾಸ್ತ್ರವಿಧಿ ಬೇಕೇ. ಚರಮಶ್ಲೋಕವು ಅಕಿಂಚನನಾದ ತನ್ನ ಸ್ವರೂಪವನ್ನೂ, ಈಶ್ವರನನ್ನೂ ತಿಳಿದವನಿಗೆ, ಅರ್ಥಸಿದ್ಧವಾದ ಅರ್ಥಾನುವಾದವೇ ಹೊರತು, ಶರಣಾಗತಿಯನ್ನು ವಿಧಿಸುವ ವಾಕ್ಯವಲ್ಲ ಎಂಬ**

### ಚರಮಶ್ಲೋಕೋ ನವಿಧಿಃ ಕಿಂತ್ವನುವಾದ ಇತಿ ವಾದಸ್ಯ ಖಂಡನಮ್

ಅನಾಲುಮ್ ಇಪ್ರಪತ್ತಿಯಾಹಿರ ಉಪಾಯ ವಿಶೇಷತ್ತೈ ಶಾಸ್ತ್ರಂ ವಿಧಿಕ್ಕವೇಣುಮೋ? ಲೋಕತ್ತಿಲ್ ತನ್ನೈ ರಕ್ಷಿತ್ತುಕ್ಕೊಳ್ಳ ವಿರಹಿಲ್ಲಾದೇ ಅಳುನ್ದು ವಾನೊರುವನ್ ಅಪ್ಪೋದು ಸನ್ನಿಹಿತನಾನ ರಕ್ಷಣ ಸಮರ್ಥನ್ನೈ ಪ್ಪತ್ತುಮಾಪ್ಪೋಲೇ, ತನ್ನೈಯುಮ್ ಈಶ್ವರನೈಯುಮ್ ಸಿದ್ಧಪರಮಾನ ಶಾಸ್ತ್ರತ್ತಾಲೇ ತೆಳಿನ್ದಾಲ್, ತಾನೇಯವನ್ನೈ ಶರಣಮಾಹಪ್ಪತ್ತಾನೋ? ಆಹೈಯಾಲ್ ಅಕಿಂಚನನುಕ್ಕು ಭಕ್ತಿಸ್ಥಾನತ್ತಿಲೇ ಪ್ರಪತ್ತಿಯೈ ವಿಧಿಕ್ಕಕ್ಕೂಡಾದೇ, ಎನ್ರುಮ್ ಶಿಲರ್ ಶೊಲ್ಲುವರ್‌ಹಳ್.

### ಪ್ರಪತ್ತೇಃ ಲೋಕಸಿದ್ಧತ್ವಾತ್ ಅವಿಧೇಯತ್ವಮಿತಿ ವಾದಸ್ಯ ಖಂಡನಂ

ಇದುವುಮನೌಚಿತ್ಯ ಮೂಲಮಾನ ಅತಿವಾದಮ್ –ಎಙ್ಗನೇ ಯೆನ್ನಿಲ್ ಲೋಕತ್ತಿಲೇ ಒರುವನ್ನೈ ಒರುವರ್ ಆಶ್ರಯಿಕ್ಕುಮ್‌ಪೋದು ಇನ್ನಪಡಿಯೇ ಆಶ್ರಯಿತ್ತಾಲ್ ಇವನಿರಙ್ಗುಮೆನ್ನು ಮಿಡತ್ತೈ ಒರು ಪ್ರಮಾಣತ್ತಾಲೇ ಅರಿನ್ದಾಶ್ರಯಿಕ್ಕುಮಾಪ್ಪೋಲೇ ಇಙ್ಗ ಮೀಶ್ವರನ್ನೈಇನ್ನ ಪ್ರಕಾರತ್ತಾಲೇ ಇನ್ನವಧಿಕಾರಿ ಪತ್ತಿನಾಲ್, ಇವನ್ನೈ ಈಶ್ವರರ್ರಕ್ಷಿಕ್ಕುಮೆನ್ನುಮಿಡಮ್ ಅರಿಯುಮ್ಪೋದು ಕರ್ತವ್ಯ ಪರಮಾನ ಶಾಸ್ತ್ರಮೊಳ್ಳಿಯ ವೇರು ಪ್ರಮಾಣಮಿಲ್ಲೈ.

ನಾಮ್ ಆಶ್ರಯಿಕ್ಕ ರಕ್ಷಿಕ್ಕುಮ್ ಎನ್ರು ಅನುಮಾನತ್ತಾಲೇ ಯರುದಿಯಿಟ್ಟು ಆಶ್ರಯಿಕ್ಕಿಲ್ ಈಶ್ವರ ತತ್ವಜ್ಞಾನಮುಡೈಯಾರೆಲ್ಲಾರ್ಕುಮ್ ಇಪ್ಪಡಿ ಅನಷ್ಠಿಕ್ಕಲಾಮಾಹೈಯಾಲೇ ಉಪಾಸನ

---

ಪಕ್ಷವನ್ನು **ಅನಾಲುಮ್ ಇಪ್ರಪತ್ತಿಯಾಹಿರ** ಎಂದಾರಂಭಿಸಿ ಅನುವಾದ ಮಾಡಿ ನಿರಸನ ಮಾಡುತ್ತಾರೆ. **ಅನಾಲುಂ** – ಅದಾಗಿ ಪ್ರಪತ್ತಿಯಾದ ಸಾಧ್ಯೋಪಾಯವು ಭಗವತ್ಪ್ರಸನ್ನತೆಯನ್ನುಂಟು ಮಾಡಿ ಅನಿಷ್ಟ ನಿವೃತ್ತಿ ಪೂರ್ವಕ ಇಷ್ಟ ಪ್ರಾಪ್ತಿಯನ್ನು ಕೊಡಿಸುತ್ತದೆ, ಎಂದು ಹೇಳಿದರೂ, ಈ ಉಪಾಯ ವಿಶೇಷವನ್ನು ಶಾಸ್ತ್ರವು ವಿಧಿಸಬೇಕಾದ ಅವಶ್ಯಕತೆ ಇದೆಯೇ? **ಲೋಕತ್ತಿಲ್** ಇತ್ಯಾದಿ – ಲೋಕದಲ್ಲಿ ತನ್ನನ್ನು ರಕ್ಷಿಸಿಕೊಳ್ಳಲು ಉಪಾಯವಿಲ್ಲದೆ **ಅಳುನ್ದುವಾನೊರುವನ್** – ಬಾವಿಯಲ್ಲಿ ಬಿದ್ದು ಮುಳುಗಿ ಹೋಗುತ್ತಿರುವನು, ಆ ಸಮಯದಲ್ಲಿ **ಸನ್ನಿಹಿತನಾನ ಸಮರ್ಥನೊರುವನ್ನೈ** – ಸಮೀಪದಲ್ಲಿ ರಕ್ಷಣ ಸಮರ್ಥನಾಗಿರುವ ಒಬ್ಬನನ್ನು **ಪಟ್ರುಮಾಪ್ಪೋಲೇ** – ಆಶ್ರಯಿಸುವಂತೆ, ತನ್ನನ್ನೂ ಈಶ್ವರನನ್ನೂ ಸಿದ್ಧಪರವಾದ ಶಾಸ್ತ್ರದಿಂದ ತಿಳಿದುಕೊಂಡರೆ, ತಾನೇ ಆ ಭಗವಂತನಲ್ಲಿ ಶರಣಾಗತಿ ಮಾಡಿ ಆಶ್ರಯಿಸುವುದಿಲ್ಲವೇ. **ಆಹೈಯಾಲ್** ಇತ್ಯಾದಿ – ಆದ್ದರಿಂದ ಅಕಿಂಚನನಿಗೆ ಭಕ್ತಿ ಸ್ಥಾನದಲ್ಲಿ ಪ್ರಪತ್ತಿಯನ್ನು ವಿಧಿಸಕೂಡದಲ್ಲವೇ ಎಂದು ಕೆಲವರು ಹೇಳುತ್ತಾರೆ. **ಇದುವುಮ್** ಇತ್ಯಾದಿ ಇದೂ ಔಚಿತ್ಯ ಮೂಲವಾದ ಅತಿವಾದ. **ಎಂಗನೇಎನ್ನಿಲ್** – ಹೇಗೆಂದರೆ, ಲೋಕದಲ್ಲಿ ಒಬ್ಬನು ಮತ್ತೊಬ್ಬನನ್ನು ಆಶ್ರಯಿಸುವಾಗ,- ಈ ರೀತಿಯಲ್ಲಿಯೇ ಆಶ್ರಯಿಸಿದರೆ, ಇವನು ಕರುಣಿಸುತ್ತಾನೆಂಬುದನ್ನು ಒಂದು ಪ್ರಮಾಣದಿಂದ ತಿಳಿದು ಆಶ್ರಯಸುವಂತೆ ಇಲ್ಲಿಯೂ ಈಶ್ವರನನ್ನು **ಇನ್ನಪ್ರಕಾರತ್ತಾಲೇ** ಇತ್ಯಾದಿ – ಆನುಕೂಲ್ಯಾದ್ಯಂಗಪಂಚಕ ವಿಶಿಷ್ಟವೇಷದಿಂದ, ಅಕಿಂಚನನಾದ ಅಧಿಕಾರಿಯು ಆಶ್ರಯಿಸಿದರೆ, ಇವನನ್ನು ಭಗವಂತನು ರಕ್ಷಿಸುತ್ತಾನೆಂದು ತಿಳಿಯುವಾಗ, **ಕರ್ತವ್ಯ ಪರಮಾನ ಶಾಸ್ತ್ರಮೊಳ್ಳಿಯ** "ಪ್ರಪತ್ತಿಂತಾಂ ಪ್ರಯುಂಜೀತ ಸ್ವಾಂಗೈಃ ಪಂಚಭಿರಾವೃತಾಮ್," "ಸರ್ವಧರ್ಮಾನ್ ಪರಿತ್ಯಜ್ಯಮಾಮೇಕಂ ಶರಣಂ ವ್ರಜ", ಇತ್ಯಾದಿ ವಿಧಿಪರವಾದ ಶಾಸ್ತ್ರಗಳಲ್ಲದೆ, ಬೇರೆ ಯಾವ ಪ್ರಮಾಣವೂ ಇಲ್ಲ. **ನಾಮಾಶ್ರಯಿಕ್ಕ** ಇತ್ಯಾದಿ – ನಾವು ಆಶ್ರಯಿಸಿದರೆ ರಕ್ಷಿಸುತ್ತಾನೆಂದು ಊಹಿಸಿ ಆಶ್ರಯಿಸಿದರೆ, ಈಶ್ವರ ತತ್ವ ಜ್ಞಾನವುಳ್ಳವರೆಲ್ಲರೂ ಹಾಗೆ

**ವಿಧಾಯಕ ಶಾಸ್ತ್ರಙ್ಗಳ್ ನಿರರ್ಥಕಙ್ಗಳಾಮ್. ಸಮರ್ಥ ಉಪಾಸನಾದಿಹಳೈ ಪ್ಪಣ್ಣ, ಅವತ್ತಿಲ್ ಸಮರ್ಥನಲ್ಲಾದರ್ವ ಪ್ರಪತ್ತಿಯೈಪ್ಪಣ್ಣವೆನ್ರು ವಿಶೇಷಿತ್ತು ನಿಯಮಿಕ್ಕೈ ಅನುಮಾನತ್ತಾಲ್ ಕಡಪ್ಪಡಾದು. ಮತ್ತುಳ್ಳ ಉಪಾಯಙ್ಗಳಿಲ್ ಸಮರ್ಥನನ್ರಿಕ್ಕೇ ಯೊ[illegible]ನ್ದಾಲ್ ಅವತ್ತಿನುಡೈಯ ಸ್ಥಾನತ್ತಿಲೇ ಪ್ರಪತ್ತಿಯೈ ಪ್ಪಣ್ಣವದೆನ್ರು ಶಾಸ್ತ್ರಮ್ ವಿಧಿಯಾದಪೋದು ಮುನ್ಪು ವಿಧಿತ್ತ ಉಪಾಯತ್ತುಕ್ಕನರ್ಹನಾನ ಪಡಿಯಾಲೇ ಯದಿನ್ ಫಲತ್ತೈಯಿ[illegible]ಕ್ಕುಮ್ ಪಡಿಯಾಮ್.**

**ಎಙ್ಗನೇ ಯೆನ್ನಿಲ್, ಲೋಕತ್ತಿಲ್ ರಾಜಸೇವಾದಿಹಳುಮ್ ತತ್ಫಲಙ್ಗಳುಮ್ ಕಾಣಚ್ಚೆಯ್‌ದೇ, ಮಾಲಾಕರಣ ದೀಪಾರೋಪಣ ಸ್ತುತಿ ನಮಸ್ಕಾರಾದಿಹಳೈ ಶಾಸ್ತ್ರ ನಿರಪೇಕ್ಷಮಾಹ ಅನುಷ್ಠಿತ್ತಾಲ್ ಅಪಚಾರಙ್ಗಳ್ ವರುಮ್ಪಡಿಯಾ ಯಿರುಕ್ಕೈಯಾಲೇ, ಪರಿಕರ ನಿಯಮಙ್ಗಳೋಡು ಕೂಡಿನ ಭಗವತ್ಸೇವಾದಿ ಪ್ರಕಾರಙ್ಗಳುಮ್ ತತ್ಫಲಙ್ಗಳುಮ್ ನಿಯತಙ್ಗಳಾಹ ಶಾಸ್ತ್ರಮ್ ಕೊಂಡರಿಹಿರಾಪ್ಪೋಲೇ,**

---

ಅನುಷ್ಠಿಸ ಬಹುದಾದ್ದರಿಂದ, ಉಪಾಸನವನ್ನು ವಿಧಿಸುವ ಶಾಸ್ತ್ರಗಳು **ನಿರರ್ಥಕಂಗಳಾಮ್** – ವ್ಯರ್ಥಗಳಾಗುತ್ತವೆ. **ಸಮರ್ಥನ್** ಇತ್ಯಾದಿ – ಸಮರ್ಥನಾದವನು ಉಪಾಸನಾದಿಗಳನ್ನು ಮಾಡಲು, ಆ ಉಪಾಸನೆಯನ್ನು ಮಾಡಲು ಸಮರ್ಥನಲ್ಲದವನು ಪ್ರಪತ್ತಿಯನ್ನು ಮಾಡಬೇಕೆಂದು ಪ್ರತ್ಯೇಕವಾಗಿ ನಿರ್ಬಂಧಿಸುವುದು ಅನುಮಾನದಿಂದ ಸಾಧ್ಯವಿಲ್ಲ. ಒಬ್ಬನು ಒಂದು ಫಲಕ್ಕೆ ಆಸೆಪಟ್ಟು ಅದುಸಿದ್ಧಿಸಲು ಕಾರಣವಾಗಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಉಪಾಯವನ್ನು ಅನುಷ್ಠಿಸಲು ಅಸಮರ್ಥನಾಗಿದ್ದರೆ, ಆ ಉಪಾಯ ಸ್ಥಾನದಲ್ಲಿ ಭಗವತ್ಪ್ರಪತ್ತಿಯನ್ನು ಮಾಡಿದರೆ ಅವನಿಗೆ ಆ ಫಲವು ಸಿದ್ಧಿಸುತ್ತದೆ ಎಂಬುದು,

"ಯದ್ಯೇನ ಕಾಮಕಾಮೇನ ನಸಾಧ್ಯಂ ಸಾಧನಾಂತರೈಃ ।
ಮುಮುಕ್ಷುಣಾ ಯತ್ಸಾಂಖ್ಯೇನ ಯೋಗೇ ನಚ ಭಕ್ತಿತಃ ।
ಪ್ರಾಪ್ಯತೇ ಪರಮಂಧಾಮ ಯತೋನಾವರ್ತತೇಯತಿಃ ।
ತೇನತೇನಾಪ್ಯತೇ ತತ್ತನ್ನ್ಯಾಸೇನೈವ ಮಹಾಮುನೇ ।
ಪರಮಾತ್ಮಾಚ ತೇನೈವ ಸಾಧ್ಯತೇ ಪುರುಷೋತ್ತಮಃ ॥

ಎಂದು ಶಾಸ್ತ್ರವು ಹೇಳುತ್ತದೆ. ಈ ಶಾಸ್ತ್ರವಿಲ್ಲದಿದ್ದರೆ ಆ ಫಲವು ಸಿದ್ಧಿಸಲು ದಾರಿ ತಿಳಿಯದೇ ಆ ಫಲವನ್ನು ಹೊಂದದೇ ಇರಬೇಕಾದ ಪ್ರಸಂಗವು ಬರುತ್ತದೆ ಎಂದು **ಮಟ್ರುಳ್ಳ ಉಪಾಯಂಗಳಿಲ್** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಪ್ರಪತ್ತಿ ವಿನಹ ಇತರ ಉಪಾಯಗಳಲ್ಲಿ ಸಮರ್ಥನಲ್ಲದೇ ಇದ್ದರೆ ಆಸ್ಥಾನದಲ್ಲಿ ಪ್ರಪತ್ತಿಯನ್ನು ಮಾಡಬಹುದು ಎಂದು ಶಾಸ್ತ್ರವು ವಿಧಿಸದೆ ಇದ್ದರೆ, ಮೊದಲುವಿಧಿಸಿದ ಉಪಾಯವನ್ನನುಷ್ಠಿಸಲು ಅನರ್ಹನಾದ್ದರಿಂದ, ಅದರ ಫಲವನ್ನು ಕಳೆದುಕೊಳ್ಳುನಂತೆ ಆಗುತ್ತದೆ. ಈಶಾಸ್ತ್ರವಿಲ್ಲದಿದ್ದರೆ ಅನುಮಾನದಿಂದ ಇಂಥಹ ಪ್ರಪತ್ತಿಯನ್ನು ತಿಳಿಯಲುದಾರಿಯಿಲ್ಲವಾದ್ದರಿಂದ ಆ ಫಲದಲ್ಲಿ ಆಸೆಯುಳ್ಳವನು ಅದನ್ನು ಹೊಂದಲು ದಾರಿಯೇ ತಿಳಿಯದವನಾಗಿ ಆ ಫಲವನ್ನು ಕಳೆದುಕೊಳ್ಳುತ್ತಾನೆಂದರ್ಥ. ಇದರಿಂದ ಶಾಸ್ತ್ರವು ವಿಧಿಸದೆ ಇದ್ದರೆ ಈಶ್ವರ ವಿಷಯಕವಾದ ಪ್ರಪತ್ತಿಯೇ ಸಿದ್ಧಿಸುವುದಿಲ್ಲವೆಂದು ತಾತ್ಪರ್ಯ.

ಇದನ್ನು ದೃಷ್ಟಾಂತ ಪೂರ್ವಕವಾಗಿ **'ಎಂಗನೇ ಎನ್ನಿಲ್'** ಎಂದಾರಂಭಿಸಿ ವಿವರಿಸುತ್ತಾರೆ. **ಎಂಗನೆಎನ್ನಿಲ್** ಹೇಗೆಂದರೆ :–**ಲೋಕತ್ತಿಲ್** ಇತ್ಯಾದಿ –ಲೋಕದಲ್ಲಿ ಶಾಸ್ತ್ರನಿಯಮವಲ್ಲದ ರಾಜಾಸೇವಾದಿಗಳನ್ನೂ ಅದರಿಂದ ಲಭಿಸುವ ಫಲಗಳನ್ನೂ ತಿಳಿದಿದ್ದರೂ, ಭಗವಂತನ ಅರ್ಚಾವತಾರದಲ್ಲಿ ಮಾಲಾಕರಣ–ಹೂಮಾಲೆಯನ್ನು ಕಟ್ಟಿ ತೊಡಿಸುವುದು, ದೀಪವನ್ನು ಹಚ್ಚುವುದು, ಸ್ತುತಿನಮಸ್ಕಾರಾದಿಗಳನ್ನು ಮಾಡುವುದು, ಇತ್ಯಾದಿಗಳನ್ನು ಶಾಸ್ತ್ರವು ಹೇಳುವ

**ಇಙ್ಙನ್ ಲೋಕತ್ತಿಲ್ ಪ್ರಪತ್ತಿಯುಮ್ ತತ್ಫಲಂಗಳುಮ್ ಕಣ್ಡು ಪೋನ್ದಾಲುಮ್, ಸದಾಚಾರ್ಯೋಪದೇಶ ಸಾಪೇಕ್ಷ ಮಂತ್ರ ವಿಶೇಷಾದಿಹಳೋಡೇ ಕೂಡಿನ ಪ್ರಪತ್ತಿಕ್ಕುಮ್ ಫಲವಿಶೇಷಙ್ಗಳುಕ್ಕುಮ್ ಸಾಧ್ಯಸಾಧನ ಭಾವಮ್ ಶಾಸ್ತ್ರಮ್ ಕೊಣ್ಡರಿಯವೇಣ್ಡುಹೈಯಾಲ್ ಅವ್ವೋ ಫಲಙ್ಗಳುಕ್ಕಾಹ, ಸೇವಾ ವಿಶೇಷಙ್ಗಳೈ ವಿಧಿಕ್ಕಿರಾಪ್ಪೋಲೇ ಪ್ರಪತ್ತಿಯ್ಯೈಯುಮ್ ವಿಧಿಕ್ಕಿರದು.**

**ಇಙ್ಙನಲ್ಲಾದಪ್ಪೋದು ರಾಜಸೇವೈಪ್ಪೋಲೇ ಭಗವತ್ಸೇವೈಯುಮ್ ವಿಧಿಕ್ಕ ವೇಣ್ಡಾದೊಳ್ಳಿಯುಮ್. ಪ್ರಪತ್ತಿಕ್ಕುಮ್ ಸದಾಚಾರ್ಯೋಪದೇಶ ಪೂರ್ವಕ ಮಂತ್ರ ಗ್ರಹಣಾದಿಹಳ್ ಅನಪೇಕ್ಷಿತಙ್ಗಳಾಹ ಪ್ರಸಙ್ಗಿಕ್ಕುಮ್.**

**ಮಂತ್ರಾದ್ಯನರ್ಹರ್ಕ್ಕುಮ್ ಶರಣ್ಯವಿಶೇಷ ಫಲವಿಶೇಷಾನುಬಂಧಿಯಾನ ಅನ್ಯೂನಾನಧಿಕ ಕರ್ತವ್ಯ ವಿಶೇಷತ್ತಿನುಡೈಯ ಅಧ್ಯವಸಾಯತ್ತುಕ್ಕು ಅನನ್ಯಥಾ ಸಿದ್ಧಮಾನವನುಮಾನಙ್ಕಿಡೈಯಾದು.**

**ಏವಂ ಪ್ರಪತ್ತೇಃ ಕರ್ತವ್ಯತ್ವಂ ವಿಧೇಯತ್ವಂಚ ಸ್ಥಾಪಯಿತ್ವಾ ನಿಗಮಯತಿ**

**ಆಹೈಯಾಲ್ ಸಪರಿಕರ ಸೇವಾ ವಿಶೇಷಙ್ಗಳ್ ಪೋಲೇ ಸಪರಿಕರ ಭರಸಮರ್ಪಣಮುಮ್ ಇಙ್ಙು ವಿಧೇಯಮಾಹಕ್ಕುರೈಯಿಲ್ಲೈ.**

---

ರೀತಿಯಲ್ಲಿ ಮಾಡದೆ, ಶಾಸ್ತ್ರ ನಿರಪೇಕ್ಷವಾಗಿ ಅನುಷ್ಠಿಸಿದರೆ ಫಲವು ಲಭಿಸದೆ ಅಪಚಾರಗಳು ಉಂಟಾಗುವುವಾದ್ದರಿಂದ ಶಾಸ್ತ್ರಗಳನ್ನು ಅನುಸರಿಸಿ ಆಯಾಯಾ ಕೈಂಕರ್ಯ ನಿಯಮಗಳನ್ನು ತಿಳಿದು, ಹೇಗೆ ಭಗವತ್ಸೇವೆಯನ್ನು ಮಾಡಬೇಕು ಎಂಬುದೂ ಆ ಭಗವತ್ಸೇವೆಯ ಕ್ರಮಗಳೂ ಅದರಿಂದ ಉಂಟಾಗುವ ಫಲಗಳೂ ನಿಯತಗಳಾಗಿ ಶಾಸ್ತ್ರದಿಂದ ತಿಳಿಯುತ್ತವೆ. ಆ ರೀತಿಯಲ್ಲಿ ಲೋಕದಲ್ಲಿ ಶಾಸ್ತ್ರನಿಯಮವಲ್ಲದೆ ಅಸಮರ್ಥನು ಸಮರ್ಥನಲ್ಲಿ ಪ್ರಪತ್ತಿಯನ್ನು ಮಾಡುವುದನ್ನೂ ಸಮರ್ಥನು ಅವನನ್ನು ರಕ್ಷಿಸುವುದನ್ನೂ ನೋಡಿದ್ದರೂ, **ಇಂಗುಮ್**–ಪ್ರಪತ್ತಿ ಸ್ಥಲದಲ್ಲಿಯೂ ಮೋಕ್ಷಾದಿ ಫಲ ವಿಶೇಷಗಳನ್ನು ಕುರಿತು ಪ್ರಪತ್ತಿಯನ್ನು ಮಾಡುವಾಗ, **ಸದಾಚಾರ್ಯೋಪದೇಶ ಸಾಪೇಕ್ಷ** ಇತ್ಯಾದಿ – ಸದಾಚಾರ್ಯೋಪದೇಶದಿಂದ ಲಬ್ಧವಾದ ಮಂತ್ರ ವಿಶೇಷಾದಿಗಳಿಂದ ಕೂಡಿ ಅನುಷ್ಠಿಸಲ್ಪಟ್ಟ ಪ್ರಪತ್ತಿಗೂ, ಅದರಿಂದ ಲಬ್ಧಗಳಾದ ಮೋಕ್ಷಾದಿ ಫಲವಿಶೇಷಗಳಿಗೂ ಇರುವ ಸಾಧ್ಯಸಾಧನ ಭಾವವನ್ನು (ಅಂದರೆ ಸಾಧನ–ಪ್ರಪತ್ತಿ ಸಾಧ್ಯ–ಫಲ) ಶಾಸ್ತ್ರದಿಂದಲೇ ತಿಳಿಯಬೇಕು. ಆದ್ದರಿಂದ, ಆಯಾಯಾ ಫಲಗಳಿಗೆ ರಾಜಸೇವಾದಿ ವಿಶೇಷಗಳನ್ನು ವಿಧಿಸುವಂತೆ ಪ್ರಪತ್ತಿಯನ್ನೂ ಶಾಸ್ತ್ರವು ವಿಧಿಸುತ್ತದೆ. ಬಾಧಕವನ್ನು **ಇಂಗನಲ್ಲಾದ ಪೋದು** – ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ-ಹೀಗೆ ಇಲ್ಲವೆಂದರೆ, ಅರ್ಥಾದಿ ರಾಗ ಪ್ರಾಪ್ತವಾದ ರಾಜ ಸೇವೆಯನ್ನು ಹೇಗೆ ವಿಧಿಸಿಬೇಕಿಲ್ಲವೋ, ಹಾಗೆಯೇ ಭಗವತ್ಸೇವೆಯನ್ನೂ ಶಾಸ್ತ್ರವು ವಿಧಿಸಬೇಕಿಲ್ಲವಾಗುತ್ತದೆ. **ಪ್ರಪತ್ತಿಕ್ಕುಂ** ಇತ್ಯಾದಿ–ಪ್ರಪತ್ತಿಗೂ ಸದಾಚಾರ್ಯೋಪದೇಶ ಪೂರ್ವಕ ಮಂತ್ರ ಗ್ರಹಣಾದಿಗಳು ಅನಪೇಕ್ಷಿತಗಳೆಂಬ ಪ್ರಸಂಗವು ಬರುತ್ತದೆ. ಮೇಲೂ **ಮಂತ್ರಾದ್ಯನರ್ಹರುಕ್ಕುಂ** ಇತ್ಯಾದಿ–ವೈದಿಕ ಮಂತ್ರಾದಿಗಳನ್ನು ಉಪದೇಶ ಹೊಂದಲು ಅನರ್ಹರಾದ ಸ್ತ್ರೀಶೂದ್ರಾದಿಗಳಿಗೂ ಕರ್ತವ್ಯವಾದ ಶರಣ್ಯವಿಶೇಷ ಫಲ ವಿಶೇಷಗಳಿಂದ ಕೂಡಿದ **ಅನ್ಯೂನಾನತಿರಿಕ್ತ**–ನ್ಯೂನಾತಿರೇಕಗಳಿಲ್ಲದೆ, **ಕರ್ತವ್ಯ ವಿಶೇಷತ್ತಿನುಡೈಯ**–ಮಾಡಬೇಕಾದ ಪ್ರಪತ್ತಿರೂಪ ಅಧ್ಯವಸಾಯಕ್ಕೆ, **ಅನನ್ಯಥಾಸಿದ್ಧ**–ಶಾಸ್ತ್ರವಲ್ಲದೆ ತಾನಾಗಿಯೇ ಸಿದ್ಧವಾದ ಅನುಮಾನವು, **ಕಿಡೈಯಾದು**–ಇಲ್ಲ. **ಆಹೈಯಾಲ್**–ಇತ್ಯಾದಿ–ಆದ್ದರಿಂದ, ಮಾಲಾಕರಣ, ದೀಪಾರೋಪಣಾದಿ ಪೂರ್ವಕವಾದ ಪರಿಕರಗಳಿಂದ ಕೂಡಿದ ಭಗವತ್ಸೇವೆಯೂ ಶಾಸ್ತ್ರ ವಿಹಿತವಾಗಿರುವಂತೆ ಸಪರಿಕರ–ಅಂಗಗಳಿಂದ ಕೂಡಿದ ಭರನ್ಯಾಸವನ್ನು ಶಾಸ್ತ್ರವು ವಿಧಿಸುತ್ತದೆ. ಇದಕ್ಕೆ ಯಾವ ಬಾಧಕವೂ ಇಲ್ಲವೆಂದು ತಾತ್ಪರ್ಯ.

### ಭಕ್ತ್ಯುಪಾಯಸ್ಯ ಸ್ವರೂಪ ವಿರುದ್ಧ ಇತಿವಾದಸ್ಯ ನಿರಾಸಃ

**ಇಪ್ಪಡಿ ಯಥಾಧಿಕಾರಮ್ ಶಾಸ್ತ್ರಮ್ ವಿಧಿತ್ತವತ್ತಿಲುಮ್ ಉಪಾಸನಾದಿಹಳ್ ಸ್ವರೂಪ ವಿರುದ್ಧಙ್ಗಳೆನ್ರು ಶಿಲರ್ ಶೊಲ್ಲುವರ್‌ಹಳ್.**

**ಇದುವುಮ್ ಪ್ರಪತ್ತಿಯೈ ಸ್ತುತಿಕ್ಕೈಕ್ಕಾಹ, ಅತಿವಾದಮ್ ಪಣ್ಣಿನಾರ್‌ಹಳ್. ಅದು ಎಙ್ಗನೇ ಎನ್ನಿಲ್ --**

### ಭಕ್ತಿಯೋಗಸ್ಯ ಆತ್ಮನಾಶಕತಯಾ ಸ್ವರೂಪ ವಿರುದ್ಧತ್ವ ಮಿತಿವಾದ ನಿರಾಸಃ

**ನಿತ್ಯಮಾನ ಆತ್ಮಸ್ವರೂಪತ್ತುಕ್ಕು ಇವೈ ನಾಶಕಙ್ಗಳಾಯ್‌ಕೊಂಡು ಸ್ವರೂಪ ವಿರುದ್ಧಙ್ಗಳೆನ್ನವೊಣ್ಣಾದು.**

### ಅಸಂಭಾವಿತತ್ವೇನ ಸ್ವರೂಪ ವಿರುದ್ಧಮಿತಿವಾದ ನಿರಾಸಃ

**ಪ್ರಪತ್ತ್ಯನುಷ್ಠಾನತ್ತಿಲುಮ್ ಕೈಙ್ಕರ್ಯತ್ತಿಲುಮ್ ಪೋಲೇ ಭಕ್ತ್ಯಾದಿಹಳಿಲುಮ್ "ಕರ್ತಾ ಶಾಸ್ತ್ರಾರ್ಥವತ್ವಾತ್" "ಪರಾತ್ತುತಚ್ಛ್ರುತೇಃ" ಎನ್ಗಿರಪಡಿಯೇ ಭಗವದಧೀನ ಕರ್ತೃತ್ವ ಮುಂಡಾಹೈಯಾಲುಮ್,**

---

### ಭಕ್ತಿಯೋಗವು ಸ್ವರೂಪ ವಿರುದ್ಧವೆಂಬ ಮತ ಖಂಡನೆ

ಹೀಗೆ ಪ್ರಪತ್ತಿರೂಪ ಸಾಧ್ಯೋಪಾಯ ಸ್ವರೂಪಾದಿಗಳಲ್ಲಿ ಉಂಟಾಗುವ ಸಂದೇಹಗಳನ್ನು ಹೋಗಲಾಡಿಸಿ ಭಕ್ತಿರೂಪ ಸಾಧ್ಯೋಪಾಯದಲ್ಲಿ ಉಂಟಾಗುವ ಸಂದೇಹಗಳನ್ನು ಹೋಗಲಾಡಿಸುವವರಾಗಿ, ಪ್ರಪತ್ತಿಯೇ ಅತ್ಯಂತ ಪರತಂತ್ರನಾದ ತನ್ನ ಸ್ವರೂಪಕ್ಕೆ ಅನುಗುಣವೆಂದೂ, ಉಪಾಸ ನಾದಿಗಳು ಸ್ವರೂಪ ವಿರುದ್ಧಗಳೆಂದೂ ಹೇಳುವ ಪಕ್ಷವನ್ನು **ಇಪ್ಪಡಿಯಥಾಧಿಕಾರಮ್** ಎಂದಾರಂಭಿಸಿ ಅನುವಾದ ಮಾಡಿ ನಿರಾಕರಿಸುತ್ತಾರೆ. ಅದಾಗಿ, ಹೀಗೆ ಅವರವರ ಅಧಿಕಾರಾನುಗುಣವಾಗಿ ಅಂದರೆ 'ಅಸಮರ್ಥನು ಪ್ರಪತ್ತಿಯನ್ನು ಮಾಡಬೇಕು, ಸಮರ್ಥನು ಭಕ್ತಿಯೋಗವನ್ನು ಅನುಷ್ಠಿಸಬೇಕು, ಎಂದು ಶಾಸ್ತ್ರವು ವಿಧಿಸಿರುವಾಗ, ಅಂದರೆ ಶಾಸ್ತ್ರ ವಿಧಿಯು ತುಲ್ಯವಾಗಿರುವಾಗ ಉಪಾಸನಾದಿಗಳು ಸ್ವರೂಪ ವಿರುದ್ಧಗಳು, ಅರ್ಥಾತ್ ಪ್ರಪತ್ತಿಯು ಸ್ವರೂಪಕ್ಕೆ ಅನುಗುಣವಾದದ್ದು ಎಂದು ಕೆಲವರು ಹೇಳುತ್ತಾರೆ. ಇದಕ್ಕೆ ನಿಯಾಮಕವಾದ ಶಾಸ್ತ್ರವಿಲ್ಲವೆಂದು ಅಭಿಪ್ರಾಯಪಟ್ಟು **ಇದುವುಮ್** ಎಂದಾರಂಭಿಸಿ ನಿರಸಿಸುತ್ತಾರೆ. ಅದಾಗಿ ಇದೂ ಪ್ರಪತ್ತಿಯನ್ನು ಸ್ತುತಿಸಲು ಅತಿವಾದ ಮಾಡಿದ್ದಾರೆ ಅಷ್ಟೇ. **ಎಂಗನೇಯೆನ್ನಿಲ್** – ಹೇಗೆಂದರೆ, ನಹಿನಿಂದಾನ್ಯಾಯವನ್ನು ಅವಲಂಬಿಸಿ ಹೇಳಿರುವ ಮಾತು ಅಷ್ಟೇ ಎಂದರ್ಥ. ಹೀಗೆ ಸ್ತುತಿ ಪರತ್ವವನ್ನು ಅವಲಂಬಿಸಿ ಸಾಮರಸ್ಯವನ್ನು ಸ್ಥಾಪಿಸಬೇಕೇ ವಿನಹ, ಉಪಾಸನಾದಿಗಳು ಸ್ವರೂಪ ವಿರುದ್ಧಗಳೆಂದು ಹೇಳ ಕೂಡದು ಎಂದು **ಎಂಗನೇಯೆನ್ನಿಲ್** ಎಂದಾರಂಭಿಸುತ್ತಾರ. ಉಪಾಸನಾದಿಗಳು ಸ್ವರೂಪ ವಿರುದ್ಧವೆಂದರೆ, 1) ಆತ್ಮನಾಶಕತ್ವವೇ 2) ಆತ್ಮ ಸ್ವರೂಪಕ್ಕೆ ಉಪಾಸನೆಯು ಅಸಂಭಾವಿತವೇ 3) ಆತ್ಮಸ್ವರೂಪಕ್ಕೆ ಅನರ್ಥವನ್ನುಂಟು ಮಾಡುತ್ತವೆಯೋ ಎಂದು ವಿಕಲ್ಪಿಸಿ ದೂಷಿಸುತ್ತಾರೆ. ಮೊದಲನೆಯದಾಗಿ, ನಿತ್ಯವಾದ ಆತ್ಮ ವಸ್ತುವಿಗೆ ಇವೈ–ಉಪಾಸನಾದಿಗಳು ನಾಶಕಗಳನ್ನಾಗಿ ಸ್ವೀಕರಿಸಿ, ಸ್ವರೂಪ ವಿರುದ್ಧಗಳೆಂದು ಹೇಳ ಕೂಡದು. ಆತ್ಮವು ನಿತ್ಯವಾದ್ದರಿಂದ ಅದಕ್ಕೆ ಯಾವುದರಿಂದಲೂ ನಾಶವಿಲ್ಲ. ದ್ವಿತೀಯ ವಿಕಲ್ಪದಲ್ಲಿ ದೂಷಣವನ್ನು **ಪ್ರಪತ್ತ್ಯನುಷ್ಠಾನತ್ತಿಲುಮ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಆತ್ಮಾವಿಗೆ ಕರ್ತೃತ್ವವು

**ಆತ್ಮಸ್ವರೂಪಂ ಅತ್ಯಂತ ನಿರ್ವ್ಯಾಪಾರಮೆನ್ನುಮ್ಪೋದು ಸತ್ವಲಕ್ಷಣಮಾನ ಅರ್ಥಕ್ರಿಯಾಕಾರಿತ್ವಮಿಲ್ಲಾಮೈಯಾಲೇ ತುಚ್ಛತ್ವಂ ಪ್ರಸಙ್ಗಿಕ್ಕೈಯಾಲುಮ್,**

**ಜ್ಞಾನಚಿಕೀರ್ಷಾ ಪ್ರಯತ್ನಾಶ್ರಯತ್ವ ರೂಪಮಾನ ಕರ್ತೃತ್ವಮಿಲ್ಲೈಯಾಕ್ಕಿ ಆತ್ಮಾವುಕ್ಕು ಸನ್ನಿಧಿ ಮಾತ್ರಮೇ ವ್ಯಾಪಾರಮೆನ್ನಿಲ್, ಭೋಕ್ತೃತ್ವಾದಿಹಳುಂ ಮನ್ರಿಕ್ಕೇ ಇವನುಕ್ಕು ಸಂಸಾರಮುಮ್ ಮಿಥ್ಯಾವಾಯ್ ಮೋಕ್ಷೋಪಾಯ ನೈರಪೇಕ್ಷ್ಯಾದಿ ಪ್ರಸಙ್ಗಮ್ ವರುಹೈಯಾಲುಮ್,**

**ಸಾಂಖ್ಯಾದಿಗಳ್ ಶೊಲ್ಲುಮಾಪ್ಪೋಲೇ ಸ್ವರೂಪತ್ತಿಲ್ ಕರ್ತೃತ್ವಮಿಲ್ಲಾಮೈಯಾಲೇ ಉಪಾಸನಾದಿಹಳ್ ಸ್ವರೂಪ ವಿರುದ್ಧಙ್ಗಳೆನ್ರು ಶೊಲ್ಲುವುವೊಣ್ಣಾದು.**

1) **“ಅಚೇಷ್ಟಮಾನ ಮಾಸೀನಮ್ ಶ್ರೀಃ ಕಂಚಿದುಪತಿಷ್ಠತಿ ।**
**ಕರ್ಮೀ ಕರ್ಮಾನುಸೃತ್ಯಾನ್ಯೋ ನಪ್ರಾಶ್ಯಮಧಿಗಚ್ಛತಿ ॥”**

---

ಇಲ್ಲದಿರುವುದರಿಂದ ಉಪಾಸನಾದಿ ಕರ್ತೃತ್ವವು ಅಸಂಭಾವಿತವೆಂದರೆ’ “ಏಷಹಿದ್ರಷ್ಟಾ, ಶ್ರೋತಾ, ಮಂತಾ, ಬೋದ್ಧಾ ಕರ್ತಾ” ಕರ್ತಾಶಾಸ್ತ್ರಾರ್ಥವತ್ವಾತ್”, “ಪರಾತ್ತುತಚ್ಛ್ರುತೇಃ” ಇತ್ಯಾದಿ ಶ್ರುತಿ ಸೂತ್ರಾರ್ಥಗಳು ವಿರುದ್ಧಗಳಾಗುತ್ತವೆ. ಪ್ರಸತ್ತ್ಯನುಷ್ಠಾನದಲ್ಲಿಯೂ, ಕೈಂಕರ್ಯದಲ್ಲಿಯೂ, ಇರುವ ಹಾಗೆ ಭಕ್ತ್ಯಾದಿಗಳಲ್ಲಿಯೂ “ಕರ್ತಾಶಾಸ್ತ್ರಾರ್ಥವತ್ವಾತ್, ಪರಾತ್ತು ತಚ್ಛ್ರುತೇಃ, ಎಂಬಂತೆ ಭಗವದಧೀನ ಕರ್ತೃತ್ವವು ಇರುವುದರಿಂದ, ಆತ್ಮಸ್ವರೂಪವು ಅತ್ಯಂತ ನಿರ್ವ್ಯಾಪಾರವೆಂದು ಹೇಳಿದರೆ ಸತ್ವಲಕ್ಷಣವಾದ ಅರ್ಥಕ್ರಿಯಾಕಾರಿತ್ವವು ಇಲ್ಲದೆ ತುಚ್ಛತ್ವವು ಪ್ರಸಕ್ತವಾಗುತ್ತದೆ. ಫಲಜನಕ ಯತ್ಕಿಂಚಿದ್ವ್ಯಾಪಾರವತ್ವವು ಸತ್ವ, ಆ ವ್ಯಾಪರವು ಸತ್ವ ಸ್ವರೂಪನಿಷ್ಠ. **ಸತ್ವಲಕ್ಷಣಮಾನ**–ಸತ್ವಸ್ವರೂಪವಾದ ಆತ್ಮಾವಿಗೆ ಅರ್ಥ ಕ್ರಿಯಾಕಾರಿತ್ವವು ಇದೆ. ಇಲ್ಲವೆಂದರೆ ಆತ್ಮಕ್ಕೆ ತುಚ್ಛತ್ವವು ಏರ್ಪಡುತ್ತದೆ ಎಂದು ತಾತ್ಪರ್ಯ.

ಆತ್ಮಸಾನ್ನಿಧ್ಯ ಮಾತ್ರವೇ ವ್ಯಾಪಾರವಾದ್ದರಿಂದ ತುಚ್ಛತ್ವವಿಲ್ಲ. ಜ್ಞಾನಚಿಕೀರ್ಷಾ ಪ್ರಯತ್ನ ರೂಪವಾದ ತುಚ್ಛತ್ವವಿಲ್ಲ. ಜ್ಞಾನಚಿಕೀರ್ಷಾ ಪ್ರಯತ್ನರೂಪವಾದ ವ್ಯಾಪ್ಯಾರವಿಲ್ಲವಾದ್ದರಿಂದ ಕರ್ತೃತ್ವವು ಅ ಸಂಭಾವಿತವೆಂಬ ಪಕ್ಷವನ್ನು **ಜ್ಞಾನಚಿಕೀರ್ಷಾಪ್ರಯತ್ನಾಶ್ರಯತ್ವ ರೂಪಮಾನ**, ಎಂದಾರಂಭಿಸಿ ನಿರಾಕರಿಸುತ್ತಾರೆ. ಅದಾಗಿ ಜ್ಞಾನ–ತಿಳುವಳಿಕೆ, ಚಿಕೀರ್ಷಾ ಕೆಲಸವನ್ನು ಮಾಡಬೇಕೆಂಬ ಇಚ್ಛೆ, ಪ್ರಯತ್ನ–ಅದಕ್ಕಾಗಿ ತೊಡಗುವುದು, ಇವುಗಳಿಗೆ ಆಶ್ರಯತ್ವರೂಪವಾದದು ಕರ್ತೃತ್ವ. ಈ ಕರ್ತೃತ್ವವು ಇಲ್ಲವೆಂದು ಹೇಳಿ, ಆತ್ಮಾವಿಗೆ **ಸನ್ನಿಧಿ ಮಾತ್ರಮೇ**–ಅಚೇತನದ ಪಕ್ಕದಲ್ಲಿ ಇರುವುದು ಮಾತ್ರವೇ ವ್ಯಾಪಾರವೆಂದರೆ ಇವನಿಗೆ **ಭೋಕ್ತೃತ್ವಾದಿಗಳೂ**ಇಲ್ಲದೆ, ಸಂಸಾರವೂ ಮಿಥ್ಯೆ –ಸುಳ್ಳಾಗಿ ಮೋಕ್ಷೋಪಾಯದಲ್ಲಿ ಅಪೇಕ್ಷೆಯಿಲ್ಲದ ಪ್ರಸಂಗವು ಉಂಟಾಗುತ್ತದೆ. ಆದ್ದರಿಂದ ಸಾಂಖ್ಯಾದಿ ಮತಸ್ಥರು ಹೇಳುವಂತೆ, ಸ್ವರೂಪದಲ್ಲಿ ಕರ್ತೃತ್ವವು ಇಲ್ಲದೆ ಹೋಗುತ್ತದೆ. ಈ ಕಾರಣ ವನ್ನಿಟ್ಟುಕೊಂಡೂ ಉಪಾಸನಾದಿಗಳು ಸ್ವರೂಪ ವಿರುದ್ಧಗಳು ಎಂದು ಹೇಳಲಾಗುವುದಿಲ್ಲ. ಇದಕ್ಕೆ ಪ್ರತ್ಯುತ್ತರವಾಗಿ, ಪೂರ್ವಪಕ್ಷಿಯು ಮೋಕ್ಷಕ್ಕಾಗಿ ಉಪಾಯಾನುಷ್ಠಾನವು ಬೇಕಿಲ್ಲವೆಂಬುದಕ್ಕೆ ಪ್ರಮಾಣವಿದೆ ಎಂದು 1) **ಅಚೇಷ್ಟಮಾನಮ್** ಎಂದಾರಂಭಿಸಿ ಹೇಳುತ್ತಾನೆ. ಅದಾಗಿ **ಅಚೇಷ್ಟಮಾನಮಾಸೀನಂ** ಇತ್ಯಾದಿ ಯಾವ ವ್ಯಾಪಾರವೂ ಇಲ್ಲದೆ ಕುಳಿತಿರುವವನನ್ನು ಲಕ್ಷ್ಮಿಯು ಆಶ್ರಯಿಸುತ್ತಾಳೆ. ಕರ್ಮವನ್ನು ಮಾಡುವವನು ಕರ್ಮಾನುಗುಣವಾಗಿ ಒಂದು ತುತ್ತನ್ನೂ ಪಡೆಯುವುದಿಲ್ಲ, ಎಂದು ಹೇಳಿರುವುದರಿಂದ ವ್ಯಾಪಾರ ಪ್ರವೃತ್ತಿಯಿಲ್ಲದೆ ಸುಮ್ಮನಿರುವುದರಿಂದಲೇ

---

1) ಭಾರತ ಶಾಂತಿ ಪರ್ವ 339-15

ಎನ್ರುದುವುಮ್, ಶಾಸ್ತ್ರಚೋದಿತೋಪಾಯಙ್ಗಳಿನುಡೈಯ ನೈರರ್ಥಕ್ಯಮ್ ಶೊನ್ನಪಡಿಯನ್ರು; ಪೂರ್ವಾನುಷ್ಠಿತ ಕರ್ಮವಿಶೇಷಙ್ಗಳಿನುಡೈಯ ಫಲವಿಶೇಷಮ್ ಶೊನ್ನಪಡಿಯತ್ತನೈ.

ಅನರ್ಥಾವಹತ್ವರೂಪೇನ ಸ್ವರೂಪ ವಿರುದ್ಧಮಿತಿವಾದ ನಿರಾಸಃ

ಮೋಕ್ಷ ಪ್ರತಿಕೂಲಙ್ಗಳಾನ ರಾಗಾದ್ಯುಪಾಧಿಹಳಡಿಯಾಹ ವನ್ದ ಕಾಮ್ಯ ನಿಷಿದ್ಧಙ್ಗಳ್ ಪೋಲೇ ಬಂಧಕಙ್ಗಳಲ್ಲಾ ಮೈಯಾಲುಮ್, ಮೋಕ್ಷಾರ್ಥಿತನಕ್ಕೇ ವಿಧಿಕ್ಕೈಯಾಲುಮ್, ಉಪಾಸನಾದಿಹಳುಕ್ಕು ಶಾಸ್ತ್ರಮುಖತ್ತಾಲೇ ಅನರ್ಥಾವಹತ್ವ ರೂಪಮಾನ ಸ್ವರೂಪ ವಿರೋಧಮ್ ಶೊಲ್ಲವೊಣ್ಣಾದು.

ಅಹೈಯಾಲ್ ಆತ್ಮಸ್ವರೂಪತ್ತುಕ್ಕು ಉಪಾಸನಾದಿಹಳುಕ್ಕು ನಾಶಕತ್ವಾಸಂಭಾವಿತತ್ವಾನರ್ಥಾವಹತ್ವಙ್ಗಳಿಲ್ಲಾಮೈಯಾಲೇ ಯೊರುಪಡಿಯಾಲುಮ್ ಸ್ವರೂಪ ವಿರೋಧ ಪ್ರಸಙ್ಗಮಿಲ್ಲೈ.

ಭಕ್ತ್ಯಾದೇಃ ವರ್ಣಾಶ್ರಮ ನಿಬಂಧನತ್ವಾದಹಂಕಾರ ಮಿಶ್ರತ್ವ ಮಿತಿವಾದ ನಿರಾಸಃ

ಆನಾಲುಮ್ ಆತ್ಮಾ ದೇಹಾದಿ ವಿಲಕ್ಷಣನಾಹೈಯಾಲೇ ಸ್ವರೂಪತ್ತಿಲ್ ವರ್ಣಾಶ್ರಮಾದಿಹಳಿಲ್ಲೈ

---

ಫಲವು ಸಿದ್ಧಿಸುತ್ತದೆಯಲ್ಲವೇ ಎಂದರೆ, ಸಿದ್ಧಾಂತವನ್ನು ತಿಳಿಸುತ್ತಾರೆ, ಈ ವಚನವು ಶಾಸ್ತ್ರಚೋದಿತವಾದ ಉಪಾಯಗಳ ನೈರರ್ಥಕ್ಯವನ್ನು ಹೇಳ ಬಂದದಲ್ಲ. ಪೂರ್ವಜನ್ಮಗಳಲ್ಲಿ ಅನುಷ್ಠಿಸಿದ ಕರ್ಮವಿಶೇಷಗಳಿಗೆ ಫಲವಿಶೇಷವು ಅವಶ್ಯವಾಗಿ ಲಭಿಸುತ್ತದೆ, ಎಂದು ಹೇಳುತ್ತದೆಯಷ್ಟೇ. ನಿರ್ವ್ಯಾಪಾರಸ್ಥನಾದ ಜೀವನ ಸಾನ್ನಿಧ್ಯವೇ ಅಚೇತನವಾದ ಪ್ರಕೃತಿಯಲ್ಲಿ ಕಾರ್ಯವನ್ನುಂಟು ಮಾಡುತ್ತದೆ ಎಂಬುವ ಮತಕ್ಕೆ ಪ್ರಮಾಣವಾಗುವುದಿಲ್ಲ. ಹೀಗೆ ಹೇಳಿ ಉಪಾಸನೆಯು ಸ್ವರೂಪ ವಿರುದ್ಧವೆಂದು ಹೇಳಲಾಗುವುದಿಲ್ಲವೆಂದು ತಾತ್ಪರ್ಯ.

ವಿಕಲ್ಪಿಸಿ ಹೇಳಿದ ಮೂರನೆಯ ಪ್ರಶ್ನೆಗೆ ಅಂದರೆ ಆತ್ಮಸ್ವರೂಪಕ್ಕೆ ಅನರ್ಥವನ್ನುಂಟು ಮಾಡುತ್ತವೆಯೋ ಎಂಬ ಪಕ್ಷವನ್ನು **ಮೋಕ್ಷ ಪ್ರತಿಕೂಲಂಗಳಾನ**–ಎಂದಾರಂಭಿಸಿ ನಿರಾಕರಿಸುತ್ತಾರೆ. ಕಾಮ್ಯಕರ್ಮಗಳು ಮತ್ತು ಶಾಸ್ತ್ರ ನಿಷಿದ್ಧಗಳಾದ ಕರ್ಮಗಳು ಆಯಾಯಾ ಫಲಗಳನ್ನು ಆಸೆಯಿಂದ ಅನುಷ್ಠಿಸಲ್ಪಟ್ಟು, ಬಂಧಕಗಳಾಗಿ ಮೋಕ್ಷಕ್ಕೆ ವಿರೋಧಗಳಾಗುತ್ತವೆ. ಮೋಕ್ಷವನ್ನು ತಡೆಯುತ್ತವೆ ಎಂದರ್ಥ. ಆ ರೀತಿಯಲ್ಲಿ ಉಪಾಸನಾದಿಗಳು ಬಂಧಕಗಳಲ್ಲ. ಮೋಕ್ಷದಲ್ಲಿ ಆಸೆಯುಳ್ಳವನಿಗೇ "ಬ್ರಹ್ಮವಿದಾಪ್ನೋತಿ ಪರಂ", ಎಂದು ಪರಬ್ರಹ್ಮ ವಿಷಯಕವಾದ ಉಪಾಸನೆಯಿಂದ, ಪರಬ್ರಹ್ಮವನ್ನು ಹೊಂದುತ್ತಾನೆಂದು ಶಾಸ್ತ್ರಗಳು ಉಪಾಸನೆಯನ್ನು ವಿಧಿಸಿರುವುದರಿಂದ, ಉಪಾಸನಾದಿಗಳಿಗೆ ಶಾಸ್ತ್ರದ್ವಾರಾ ಅನರ್ಥಾವಹತ್ವ ರೂಪವಾದ ಸ್ವರೂಪ ವಿರೋಧವನ್ನು ಹೇಳಲಾಗುವುದಿಲ್ಲ.

**ಅಹೈಯಾಲೇ**–ಆದ್ದರಿಂದ ಆತ್ಮಸ್ವರೂಪಕ್ಕೆ ಉಪಾಸನಾದಿಗಳು ನಾಶಕವಲ್ಲ. ಅಸಂಭಾವಿತ್ವಗಳಲ್ಲ ಅನರ್ಥಾವಹಗಳೂ ಅಲ್ಲದೇ ಇರುವುದರಿಂದ ಯಾವ ಕಾರಣದಿಂದಲೂ ಉಪಾಸನವು ಸ್ವರೂಪ ವಿರುದ್ಧವೆಂಬ ಪ್ರಸಂಗಕ್ಕೆ ಅವಕಾಶವಿಲ್ಲ.

ಉಪಾಸನಾದಿಗಳಲ್ಲಿ ತ್ರೈವರ್ಣಿಕರಿಗೆ ಅಧಿಕಾರವೆಂದು ಶಾರೀರಕಮೀಮಾಂಸೆಯಲ್ಲಿ ಸ್ಥಾಪಿಸಲ್ಪಟ್ಟಿರುವುದರಿಂದ ಸ್ವರೂಪದಲ್ಲಿ ಬ್ರಾಹ್ಮಣತ್ವಾದ್ಯಭಿಮಾನವುಳ್ಳವನಿಗೇ ಆ ಉಪಾಸನಾದಿಗಳಲ್ಲಿ ಅಧಿಕಾರವನ್ನು ಹೇಳಬೇಕಾದ್ದರಿಂದ ದೇಹಾತ್ಮಾಭಿಮಾನವಿಲ್ಲದವನಿಗೆ ಉಪಾಸನ ಕರ್ತೃತ್ವವು ಅಸಂಭಾವಿತವಲ್ಲವೇ ಎಂದು ಶಂಕಿಸಿ **ಆನಾಲುಮ್** ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ. ಅದಾಗಿ **ಆನಾಲುಮ್**–ಮೇಲೆ ಹೇಳಿದ ರೀತಿಯಲ್ಲಿ ಉಪಾಸನವು ಅಸಂಭಾವಿತವಲ್ಲವೆಂದು ಹೇಳಿದರೂ, ದೇಹಾದಿವಿಲಕ್ಷಣವಾದ – ದೇಹಕ್ಕಿಂತ ಆತ್ಮಾ ಬೇರೆಯಾದ್ದರಿಂದ ಆತ್ಮ

**ಯೆನ್ರು ತೆಳಿನ್ದವನುಕ್ಕು "ಬ್ರಾಹ್ಮಣೋಹಂ, ಕ್ಷತ್ರಿಯೋಹಂ" ಎನ್ರಾರ್ಪೋಲೇ ವರುಮ್ ಅಭಿಮಾನ ಙ್ಗಳಡಿಯಾಹ ವರ್ಣಾಶ್ರಮಾದಿ ಧರ್ಮಙ್ಗಳುಮ್ ಅವತ್ತೋಡೇ ತುವಕ್ಕುಣ್ಡಾನ ಉಪಾಯಾನ್ತರಙ್ಗ ಳುಮ್ ಅನುಷ್ಠೇಯಙ್ಗಳಲ್ಲಾಮೈಯಾಲೇ ಇವ್ವರ್ಣಾಶ್ರಮಾದಿ ನಿಬಂಧನಙ್ಗಳಾನ ಧರ್ಮಙ್ಗಳ್ ಸ್ವರೂಪ ವಿರುದ್ಧಙ್ಗಳೆನ್ಗೈಕ್ಕು ಕುರೈಯೆನ್ನೆನ್ನಿಲ್, ಇದುವುಮ್ ಅನುಪಪನ್ನಮ್. ಎಙ್ಗನೇ ಎನ್ನಿಲ್ ಸ್ವರೂಪತ್ತಿಲ್ ಬ್ರಾಹ್ಮಣತ್ವಾದಿಹಳಿಲ್ಲೈ ಯೆನ್ರು ತೆಳಿನ್ದಾನೇ ಯಾಹಿಲುಮ್ ಕರ್ಮವಿಶೇಷಙ್ಗಳಡಿಯಾಹ ಬ್ರಾಹ್ಮಣತ್ವಾದಿ ವಿಶಿಷ್ಟಮಾನ ಶರೀರತ್ತೋಡೇ ಸಂಬದ್ಧನಾಯಿರುಕ್ಕೈಯಾಲೇ ಅಶ್ಶರೀರ ಸಂಬಂಧ ಮಡಿಯಾಹ ವರುಹಿರ ಕ್ಷುತ್ಪಿಪಾಸಾದಿಹಳುಕ್ಕು ಪ್ಪರಿಹಾರಮ್ ಪಣ್ಣುಹಿರ ಕಣಕ್ಕಿಲೇ, ಅಶ್ಶರೀರಮ್ ವಿಡುಮಳವು ಮುಮ್ಪೋ ವರ್ಣಾಶ್ರಮಾದಿಹಳುಕ್ಕುಮ್ ತನ್ ಶಕ್ತಿಕ್ಕುಮ್ ಅನುರೂಪಮಾಹ ಅನಿಷ್ಟ ನಿವೃತ್ತೀಷ್ಟಪ್ರಾಪ್ತಿಹಳೈಪ್ಪತ್ತ ಶಾಸ್ತ್ರಙ್ಗಳ್ ವಿಧಿತ್ತ ಧರ್ಮಙ್ಗಳೈ ವಿಡವೊಣ್ಣಾದು. ಆಹೈಯಾಲ್ ಇದ್ಧರ್ಮಙ್ಗಳೈ ದೇಹಾತ್ಮ ವಿವೇಕಮಡಿಯಾಹ ಸ್ವರೂಪ ವಿರುದ್ಧಙ್ಗಳಾಕ್ಕಿ ಇವತ್ತುಕ್ಕು ತ್ಯಾಜ್ಯತೈ ಶೊಲ್ಲವೊಣ್ಣಾದು.**

---

ಸ್ವರೂಪದಲ್ಲಿ ವರ್ಣಾಶ್ರಮ ಧರ್ಮಾದಿಗಳಿಲ್ಲವೆಂದು ತಿಳಿದವನಿಗೆ–ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯಾದಿ ಶರೀರ ಗಳಿಂದ ಕೂಡಿದ ಆಯಾಯಾವರ್ಣಗಳಿಗೂ, ಬ್ರಹ್ಮಚಾರಿ, ಗೃಹೀ, ವಾನಪ್ರಸ್ಥ, ಸನ್ಯಾಸಿ ಎಂಬ ಆಯಾಯಾ ಆಶ್ರಮಗಳಿಗೂ ಅನುಗುಣಗಳಾಗಿ ಧರ್ಮಗಳು ಹೇಳಲ್ಪಟ್ಟಿರುವುದರಿಂದ–ಸ್ವರೂಪದಲ್ಲಿ ಬ್ರಾಹ್ಮಣೋ ಹಂ -ನಾನು ಬಾಹ್ಮಣ, ನಾನು ಕ್ಷತ್ರಿಯ, ನಾನು ವೈಶ್ಯ, ಎಂಬಂತೆ ಉಂಟಾಗುವ ಅಭಿಮಾನಗಳ ಮೂಲಕ ಕರ್ತವ್ಯಗಳಾದ, ವರ್ಣಾಶ್ರಮಾದಿ ಧರ್ಮಗಳೂ ಅವುಗಳೊಡನೆ **ತುವಕ್ಕುಂಡಾನ**–ಸಂಬಂಧಪಟ್ಟ ಉಪಾಯಾಂತರಗಳೂ ಅನುಷ್ಠೇಯ ಗಳಲ್ಲವಾದ್ದರಿಂದ, **ಈ ವರ್ಣಾಶ್ರಮಾದಿ ನಿಬಂಧನಂಗಳಾನ**–ಕಾರಣಗಳಾದ, ಧರ್ಮಗಳು ಸ್ವರೂಪ ವಿರುದ್ಧಗಳೆಂದು ಹೇಳುವುದಕ್ಕೆ ಏನು ಬಾಧಕವಿದೆ (ಇದು ಪೂರ್ವಪಕ್ಷಿಯ ಆಶಂಕೆ) ಎಂದು ಕೇಳಿದರೆ, **ಇದುವುಮ್ ಅನುಪ ಪನ್ನಮ್** ಇದು ಯುಕ್ತವಲ್ಲ, ಎಂದು ಉತ್ತರಿಸುತ್ತಾರೆ. **ಎಂಗನೇಯನ್ನಿಲ್**–ಹೇಗೆಂದರೆ, **ಸ್ವರೂಪತ್ತಿಲ್**–ಇತ್ಯಾದಿ ಸ್ವರೂಪದಲ್ಲಿ ಬ್ರಾಹ್ಮಣತ್ವಾದಿಗಳು ಇಲ್ಲವೆಂದು ತಿಳಿದಿದ್ದರೂ ಕರ್ಮ ವಿಶೇಷಗಳ ನಿಮಿತ್ತವಾಗಿ ಬ್ರಾಹ್ಮಣ ತ್ವಾದಿ ವಿಶಿಷ್ಟ ಶರೀರದೊಡನೆ ಸಂಬದ್ಧನಾಗಿರುವುದರಿಂದ ಆ ಶರೀರ ಸಂಬಂಧವೇ ಕಾರಣವಾಗಿ ಉಂಟಾಗುವ ಕ್ಷುತ್ಪಿ ಪಾಸಾದಿ ಹಸಿವು ಬಾಯಾರಿಕೆ ಮೊದಲಾದವುಗಳಿಗೆ ಪರಿಹಾರವನ್ನು ಮಾಡಿಕೊಳ್ಳುವ ರೀತಿಯಲ್ಲಿ, ಆ ಶರೀರವನ್ನು ಬಿಡುವ ಪರ್ಯಂತ ಆಯಾಯಾ ವರ್ಣಾಶ್ರಮಾದಿಗಳಿಗೂ ತನ್ನ ಶಕ್ತಿಗೂ ಅನುರೂಪವಾಗಿ ಅನಿಷ್ಟ ನಿವೃತ್ತಿ ಇಷ್ಟ ಪ್ರಾಪ್ತಿಗಳನ್ನು ಕುರಿತು ಶಾಸ್ತ್ರಗಳು ವಿಧಿಸಿದ ಧರ್ಮಗಳನ್ನು ಬಿಡಕೂಡದು. ಅಂದರೆ ದೇಹವಿಲಕ್ಷಣವಾಗಿ ಆತ್ಮ ಸ್ವರೂಪವನ್ನು "ಜ್ಞಾನಾನಂದಮಯಸ್ತ್ವಾತ್ಮಾ ಶೇಷೋಹಿ ಪರಮಾತ್ಮನಃ" ಇತ್ಯಾದಿ ಶಾಸ್ತ್ರಗಳಿಂದ ತಿಳಿದ ಪ್ರಾಜ್ಞನು ಆತ್ಮಸ್ವರೂಪದಲ್ಲಿ ಬ್ರಾಹ್ಮಣತ್ವಾದಿ ಭ್ರಮದಿಂದ ವರ್ಣಾಶ್ರಮಾದಿ ಧರ್ಮಗಳನ್ನೂ ತದಂಗಗಳಾದ ಉಪಾಸನಾದಿ ಗಳನ್ನೂ ಅನುಷ್ಠಿಸುವುದಿಲ್ಲ. ಮತ್ತೇನೆಂದರೆ ಪುಣ್ಯಕರ್ಮ ವಿಶೇಷದಿಂದ ಸಂಪಾದಿಸಿದ ಬ್ರಾಹ್ಮಣತ್ವಾದಿ ವಿಶಿಷ್ಟ ಶರೀರದೊಡನೆ ಯಥಾರ್ಥವಾಗಿ ಸಂಬದ್ಧನಾಗಿರುವುದರಿಂದ ಆಸಂಬಂಧ ಜ್ಞಾನ ನಿಮಿತ್ತವಾಗಿ ವರ್ಣಾಶ್ರಮಾದಿ ಧರ್ಮಗಳನ್ನೂ ತದಂಗಕ ಉಪಾಸನಾದಿಗಳನ್ನೂ ಅನುಷ್ಠಿಸುತ್ತಾನಾದ್ದರಿಂದ ವರ್ಣಾಶ್ರಮಾದಿ ಧರ್ಮಾನುಷ್ಠಾನಗಳಿ ಗೆಲ್ಲಾ ಭ್ರಾಂತಿ ಮೂಲಕತ್ವ ಕಲ್ಪನವನ್ನೂ ಸ್ವರೂಪತಃ ತ್ಯಾಜ್ಯತ್ವವನ್ನೂ ಹೇಳುವುದೂ ಅಸಂಗತವೆಂಬುದು ಸಿದ್ಧಾಂತ. **ಆಹೈಯಾಲ್**–ಇತ್ಯಾದಿ–ಆದ್ದರಿಂದ ಈ ಧರ್ಮಗಳನ್ನು ದೇಹಾತ್ಮ ವಿವೇಕ ಪೂರ್ವಕವಾಗಿ ಸ್ವರೂಪ ವಿರುದ್ಧಗಳನ್ನಾಗಿ ಮಾಡಿ ಇವಕ್ಕೆ ತ್ಯಾಜ್ಯತೆಯನ್ನು ಹೇಳಲಾಗದು.

**ದೇಹಾತ್ಮ ವಿವೇಕ ಮುಡೈಯವನುಕ್ಕೇ ಪಾರಲೌಕಿಕ ಭೋಗ ಸಾಧನಮಾನ ಧರ್ಮತ್ತಿಲ್ ಅಧಿಕಾರಮಾಹೈಯಾಲ್, ಇದ್ಧರ್ಮಙ್ಗಳುಡೈಯ ಅನುಷ್ಠಾನತ್ತುಕ್ಕು ಸ್ವರೂಪತ್ತಿಲ್ ಬ್ರಾಹ್ಮಣ್ಯಾದಿ ಭ್ರಮುಮ್ ಅಧಿಕಾರಮನ್ರು; ಬ್ರಾಹ್ಮಣ್ಯಾದಿ ವಿಶಿಷ್ಟ ಶರೀರ ಸಂಬಂಧಮೇ ಅಧಿಕಾರಮ್. ಆಹೈಯಾಲ್ ಸರ್ವ ಧರ್ಮಾನುಷ್ಠಾನತ್ತುಕ್ಕುಮ್ ಉಪಯುಕ್ತಮಾನ ಪ್ರಕೃತ್ಯಾತ್ಮ ವಿವೇಕ ಮಡಿಯಾಹ ಉಪಾಸನಾದಿಹಳುಕ್ಕು ವಿರೋಧಮ್ ಕಣ್ಡಿಲೋಮ್.**

**ಭಕ್ತಿಯೋಗೋ.ಹಂಕಾರ ಗರ್ಭತ್ವಾತ್ ಸ್ವರೂಪ ವಿರುದ್ಧ ಇತಿವಾದಸ್ಯ ನಿರಾಸಃ**

**ಉಪಾಸನಾದಿಹಳ್ ಅಹಂಕಾರಾದಿ ಗರ್ಭಙ್ಗಳೆನ್ರು ಮಿಡಂ ಶಾಸ್ತ್ರ ಮಿಶೈಯಾದಿರುಕ್ಕಚ್ಚೆಯ್‌ದೇ ಆರೋಪಿತ್ತಾರ್‌ಹಳತ್ತನೈ.**

**ಭಕ್ತಿಯೋಗಃ ಔಪಾಧಿಕತ್ವೇನ ಸ್ವರೂಪವಿರುದ್ಧ ಇತಿವಾದಸ್ಯ ನಿರಾಸಃ**

**ಕರ್ಮೋಪಾರ್ಜಿತಙ್ಗಳಾನ ಕರಣ ಕಳೇಬರಙ್ಗಳಾಹಿರ ಉಪಾಧಿಹಳೈಕ್ಕೊಂಡು ಅನುಷ್ಠಿಕ್ಕೈಯಾಲೇ ಕರ್ಮಯೋಗಾದಿಹಳ್ ನಿರುಪಾಧಿಕ ಸ್ವರೂಪ ವಿರುದ್ಧಙ್ಗಳೆನ್ಬಾರ್‌ಕ್ಕು ಸ್ವರೂಪಜ್ಞಾನ ದ್ವಯಶ್ರವಣಾದಿ ಹಳುಮ್ ಮನಃ ಪ್ರಭೃತಿ ಸಾಪೇಕ್ಷಙ್ಗಳಾಹೈಯಾಲೇ ತುಲ್ಯದೋಷಙ್ಗಳಾಮ್.**

---

**ದೇವಾತ್ಮ ವಿವೇಕಮುಡೈಯವನುಕ್ಕು**–ಇತ್ಯಾದಿ ದೇಹಕ್ಕಿಂತ ಆತ್ಮಾಬೇರೆ ಎಂಬ ವಿವೇಕವನ್ನುಳ್ಳವನಿಗೇನೆ ಪರಲೋಕಗಳಿಗೆ ಹೋಗಿ ಅನುಭವಿಸಬಹುದಾದ ಭೋಗಕ್ಕೆ ಸಾಧನವಾದ ಧರ್ಮಗಳಲ್ಲಿ ಅಧಿಕಾರವಿರುವುದರಿಂದ, ಈ ಧರ್ಮಗಳನ್ನು ಅನುಷ್ಠಿಸಲು ಸ್ವರೂಪದಲ್ಲಿ ಬ್ರಾಹ್ಮಣತ್ವಾದಿ ಭ್ರಮುವು ಅಧಿಕಾರವಲ್ಲ. ಬ್ರಾಹ್ಮಣ್ಯಾದಿ ವಿಶಿಷ್ಟ ಶರೀರ ಸಂಬಂಧವೇ ಅಧಿಕಾರ. ಸರ್ವಧರ್ಮಾನುಷ್ಠಾನಕ್ಕೆ ಕಾರಣವಾದ ದೇಹಾತ್ಮ ವಿವೇಕವನ್ನು ಉಪಾಸನಾದ ನುಷ್ಠಾನ ವಿರುದ್ಧವೆಂದು ಹೇಳುವುದು ದೃಷ್ಟವಿರೋಧವೆಂದು **ಆಹೈಯಾಲ್**–ಎಂದಾರಂಭಿಸಿ ನಿಗಮಿಸುತ್ತಾರೆ. ಆದಾಗಿ ಬ್ರಾಹ್ಮಣ್ಯಾದಿ ವಿಶಿಷ್ಟ ಶರೀರ ಸಂಬಂಧವೇ ಪಾರ ಲೌಕಿಕ ಶ್ರೇಯಸ್ಸಾಧನ ರೂಪ ಧರ್ಮಾನುಷ್ಠಾನಕ್ಕೆ ಅಧಿಕಾರವನ್ನುಂಟು ಮಾಡುವುದರಿಂದ, ಸರ್ವಧರ್ಮಗಳನ್ನೂ ಅನುಷ್ಠಿಸಲು ಉಪಯುಕ್ತವಾದ ಪ್ರಕೃತ್ಯಾತ್ಮ ವಿವೇಕದ ಕಾರಣದಿಂದ ಉಪಾಸನಾದಿಗಳಿಗೆ ವಿರೋಧವನ್ನು **ಕಂಡಿಲೋಮ್**–ಅರಿಯೆವು,

5) ಅಹಂಕಾರದಿಂದ ಕೂಡಿರುವುದರಿಂದ ಉಪಾಸನಾದಿಗಳು ಸ್ವರೂಪ ವಿರುದ್ಧಗಳೆಂಬ ಪಕ್ಷವನ್ನು **ಉಪಾಸನಾದಿಗಳು** ಎಂದಾರಂಭಿಸಿ ಖಂಡಿಸುತ್ತಾರೆ. ಆದಾಗಿ ಫಲಸಂಗ ಕರ್ತೃತ್ವಾದಿ ತ್ಯಾಗರೂಪವಾದ ಸಾತ್ವಿಕ ತ್ಯಾಗವನ್ನು ಶಾಸ್ತ್ರವು ಹೇಳಿರುವುದರಿಂದ, ಅಹಂಕಾರ ಗರ್ಭತ್ವವನ್ನು ಶಾಸ್ತ್ರವು ಒಪ್ಪಿಲ್ಲ. ಹಾಗಿರುವಾಗ ಉಪಾಸನಾದಿಗಳು ಅಹಂಕಾರ ಗರ್ಭಗಳೆಂದು–ನಾನು ಮಾಡುತ್ತೇನೆಂಬ ಅಹಂಕಾರದಿಂದ ಕೂಡಿವೆಯೆಂದು ಹೇಳುವುದು ಆರೋಪಣ ಮಾತ್ರ. ಶಾಸ್ತ್ರವು ಹಾಗೆ ಹೇಳಿಲ್ಲವೆಂದು ತಾತ್ಪರ್ಯ.

6) ಉಪಾಸನಾದಿಗಳು ಕರಣಕಳೇಬರಾದಿ ಉಪಾಧಿ(ಕಾರಣ)ಗಳಿಂದ ಅನುಷ್ಠಿಸಲ್ಪಡುವುದರಿಂದ ನಿರುಪಾಧಿಕ ಸ್ವರೂಪ ವಿರುದ್ಧಗಳೆಂದು ಹೇಳುವ ಪಕ್ಷವನ್ನು **ಕರ್ಮೋಪಾರ್ಜಿತಂಗಳಾನ** ಎಂದಾರಂಭಿಸಿ ಖಂಡಿಸುತ್ತಾರೆ. ಆದಾಗಿ ಪುಣ್ಯಪಾಪರೂಪ ಕರ್ಮಗಳಿಂದ ಸಂಪಾದಿಸಲ್ಪಟ್ಟ ಇಂದ್ರಿಯ ಮತ್ತು ಶರೀರಗಳೆಂಬ ಉಪಾಧಿಗಳ ಮೂಲಕ ಅನುಷ್ಠಿಸಲ್ಪಡುವುದರಿಂದ ಕರ್ಮಯೋಗಾದಿಗಳು ನಿರುಪಾಧಿಕ ಸ್ವರೂಪ ವಿರುದ್ಧಗಳು ಎಂದು ಹೇಳುವುದಾದರೆ, **ಸ್ವರೂಪಜ್ಞಾನ ದ್ವಯಶ್ರವಣಾದಿ** ಇತ್ಯಾದಿ – ಸ್ವರೂಪ ಜ್ಞಾನವನ್ನು ಪಡೆಯುವುದು ದ್ವಯ ಮಂತ್ರಾದಿಗಳನ್ನು ಕೇಳುವುದು, ಉಚ್ಚರಿಸುವುದು, ಇತ್ಯಾದಿಗಳೂ **ಮನಃಪ್ರಭೃತಿಸಾಪೇಕ್ಷಂಗಳ್** – ಮನಸ್ಸೇ

## ಭಕ್ತಿಯೋಗ ಶ್ಯೇಷತ್ವ ಪಾರತಂತ್ರ್ಯರೂಪ ಸ್ವರೂಪ ವಿರುದ್ಧ ಇತಿವಾದಸ್ಯ ನಿರಾಸಃ

**ಅನಾಲುಮ್ ಶೇಷಭೂತನಾಹೈಯಾಲೇ ತನ್ನೈತ್ತಾ್ ರಕ್ಷಿತ್ತುಕ್ಕೊಳ್ಳ ಪ್ರಾಪ್ತನು ಮನ್ರಿಕ್ಕೇ ಅತ್ಯನ್ತ ಪರತನ್ತ್ರನಾಹೈಯಾಲೇ ತನ್ನೈತ್ತಾ್ ರಕ್ಷಿತ್ತುಕ್ಕೊಳ್ಳ ಶಕ್ತನು ಮನ್ರಿಕ್ಕೇ ಇರುಕ್ಕಿರ ಇವನುಕ್ಕು ಸ್ವರಕ್ಷಣಾರ್ಥಮಾಹ ಕರ್ತ್ತವ್ಯಮೆನ್ನೊರು ಉಪಾಯತ್ತೈ ವಿಧಿಕ್ಕೈಯುಮ್, ಅದಿವನಕ್ಕು ಸಾಧ್ಯಮಾಯ್ ಸಾಧ್ಯೋಪಾಯಮೆನ್ರು ಪೇರ್ ಪೆರುಹಿರದೆನ್ರು ಶೊಲ್ಲುಹೈಯುಮ್ ಉಪಪನ್ನಮೋ? ಅನಹಿನ್ಪು ಭಕ್ತಿಯೋಗಾದಿಹಳ್ ಶೇಷತ್ವಾನುರೂಪಙ್ಗಳಲ್ಲಾಮೈಯಾಲೇ ಸ್ವರೂಪತ್ತುಕ್ಕು ಅನಿಷ್ಟಾವಹಙ್ಗಳೆನ್ನುಮ್, ಅತ್ಯನ್ತ ಪಾರತನ್ತ್ರ್ಯ ವಿರುದ್ಧಙ್ಗಳಾಹೈಯಾಲೇ ಅಸಂಭಾವಿತಙ್ಗಳೆನ್ರುಮ್ ಶೊಲ್ಲಮೊಣ್ಣಾದೋ? ಎನ್ನಿಲ್ :– ಇದು ಸರ್ವಮೋಕ್ಷ ಪ್ರಸಙ್ಗಾದಿಹಳಾಲೇ ಮುನ್ಬೇ ಪರಿಹೃತಮ್. ಇವನ್ ಶೆಯ್‌ದದೊರು ವ್ಯಾಜಮ್ ಕೊಳ್ಳಾದೇ ಮುಕ್ತನಾಕ್ಕಿಲ್, ಅನಾದಿಯಾಹ ಮುಕ್ತನಾಕ್ಕ ಪ್ರಸಙ್ಗಿಕ್ಕುಮ್. ಈಶ್ವರನ್ ಕೇವಲ ಸ್ವಾತಂತ್ರ್ಯತ್ತಾಲೇ ನಿನೈತ್ತಪೋದು ಮುಕ್ತನಾಕ್ಕಿಲ್, ವೈಷಮ್ಯ ನೈರ್ಘೃಣ್ಯಾದಿ ದೋಷಙ್ಗಳುಮ್ ವರುಮ್. ಮೋಕ್ಷೋಪಾಯ ವಿಧಾಯಕಂಗಳಾನ ಶಾಸ್ತ್ರಂಗಳುಮೆಲ್ಲಾಮ್ ನಿರರ್ಥಕಂಗಳುಮಾಮ್.**

---

ಮೊದಲಾದ ಇಂದ್ರಿಯಗಳ ಅಪೇಕ್ಷೆಯಿಂದಲೇ ಮಾಡಬೇಕಾದವುಗಳಾದ್ದರಿಂದ, **ತುಲ್ಯದೋಷಂಗಳಾಮ್** – ನಿರುಪಾಧಿಕ ಸ್ವರೂಪ ವಿರುದ್ಧಗಳೆಂಬ ಸಮಾನ ದೋಷಗಳಿಂದ ಕೂಡಿವೆ ಎಂದು ಏರ್ಪಡುತ್ತದೆ. ಆದ್ದರಿಂದ ಈವಾದವೂ ಸರಿಯಲ್ಲವೆಂಬುದು ತಾತ್ಪರ್ಯ.

7) **ಅನಾಲುಮಿತ್ಯಾದಿ** – ಆದರೂ ಶೇಷಭೂತನಾದ್ದರಿಂದ, ತನ್ನನ್ನು ತಾನೇ ರಕ್ಷಿಸಿಕೊಳ್ಳಲು ಪ್ರಾಪ್ತನಲ್ಲ. **ಅನ್ರಿಕ್ಕೇ** – ಅದೂ ಅಲ್ಲದೆ ಅತ್ಯಂತ ಪರತಂತ್ರನಾದ್ದರಿಂದ ತನ್ನನ್ನು ತಾನೇ ರಕ್ಷಿಸಿಕೊಳ್ಳಲು ಶಕ್ತನಲ್ಲದೆಯೂ ಇರುವ ಇವನಿಗೆ ಸ್ವರಕ್ಷಣಾರ್ಥವಾಗಿ ಕರ್ತವ್ಯವೆಂಬ ಒಂದು ಉಪಾಯವನ್ನು ವಿಧಿಸುವುದೂ, ಅದು ಇವನಿಂದ ಸಾಧಿಸಲ್ಪಟ್ಟ ಸಾಧ್ಯೋಪಾಯವೆಂಬ ಹೆಸರಿನಿಂದ ಕೂಡಿದೆ ಎಂದು ಹೇಳುವುದೂ **ಉಪಪನ್ನಮೋ** – ಸರಿಯೋ? ಸರಿಯಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ. **ಅನಹಿನ್ಪು** – ಭಕ್ತಿಯೋಗಾದಿಗಳು ಶೇಷತ್ವಾನು ಸಂಧಾನಗಳಲ್ಲವಾದ್ದರಿಂದ, ಸ್ವರೂಪಕ್ಕೆ **ಅನಿಷ್ಟಾವಹಂಗಳ್** – ಅನಿಷ್ಟವನ್ನುಂಟು ಮಾಡುತ್ತವೆಯೆಂದೂ, ಅತ್ಯಂತ ಪಾರತಂತ್ರ್ಯಕ್ಕೆ ವಿರೋಧಗಳಾದ್ದರಿಂದ, ಅಸಂಭಾವಿತಗಳೆಂದೂ **ಶೊಲ್ಲಮೊಣ್ಣಾದೋ** – ಹೇಳಕೂಡದೋ, – ಹೇಳಬೇಕೆಂಬುದು ಪೂರ್ವಪಕ್ಷಿಯ ಅಭಿಪ್ರಾಯ, **ಎನ್ನಿಲ್** ಎಂದರೆ, ಪರಿಹರಿಸುತ್ತಾರೆ. ಆದಾಗಿ **ಹೀಗೆ** ಹೇಳಿದರೆ, **ಇದು** – ಈ ವಾದವು ಸರ್ವ ಮೋಕ್ಷ ಪ್ರಸಂಗಾದಿಗಳಿಂದ ಹಿಂದೆಯೇ ಪರಿಹರಿಸಲ್ಪಟ್ಟಿದೆ. ಅದನ್ನು **ಇವನ್ ಶೆಯ್ದದೊರು** ಎಂದಾರಂಭಿಸಿ ಸ್ಪಷ್ಟ ಪಡಿಸುತ್ತಾರೆ. ಆದಾಗಿ ಇವನು ಮಾಡಿದ ಒಂದು ವ್ಯಾಜವನ್ನು ಅವಲಂಬಿಸದೆ ಮೋಕ್ಷವನ್ನು ಕೊಟ್ಟರೆ, ಅನಾದಿ ಕಾಲದಿಂದಲೇ ಮುಕ್ತನಾಗಬಹುದಾದ ಪ್ರಸಂಗವು ಒದಗುತ್ತದೆ. **ಈಶ್ವರನ್**–ಇತ್ಯಾದಿ–ಇಶ್ವರನು ಕೇವಲ ಸ್ವಾತಂತ್ರ್ಯದಿಂದ ತಾನು ಸಂಕಲ್ಪಿಸಿದ ಸಮಯದಲ್ಲಿ ಒಬ್ಬನನ್ನು ಮುಕ್ತನನ್ನಾಗಿ ಮಾಡುತ್ತಾನೆಂದರೆ **ವೈಷಮ್ಯ**–ಒಬ್ಬರಲ್ಲಿ ಪಕ್ಷಪಾತ **ನೈರ್ಘೃಣ್ಯ** ಮತ್ತೊಬ್ಬರಲ್ಲಿ ದಯೆಯಿಲ್ಲದೆ ಇರುವುದು ಎಂಬುದೇ ಮೊದಲಾದ **ದೋಷಗಳು** ಸಂಭವಿಸುತ್ತವೆ. ಹಾಗೆಯೇ **ಮೋಕ್ಷೋಪಾಯವಿಧಾಯಕಂಗಳಾನ** ಇತ್ಯಾದಿ–ಮೋಕ್ಷಕ್ಕೆ ಉಪಾಯವಾಗಿ ಭಕ್ತಿ ಪ್ರಪತ್ತಿಗಳನ್ನು ವಿಧಿಸುವ 'ಮಾಮುಪಾಸ್ವ, ಮಾಂ ಶರಣಂವ್ರಜ' ಎಂಬುದೇ ಮೊದಲಾದ ಭಕ್ತಿ ಪ್ರಪತ್ತಿ ವಿಧಾಯಕ ಶಾಸ್ತ್ರಗಳೆಲ್ಲಾ **ನಿರರ್ಥಕಂಗಳುಮಾಮ್**–ನಿರರ್ಥಕಗಳಾಗಿಯೂ ಹೋಗುತ್ತವೆ.

**ಆಹೈಯಾಲಿ ಶ್ಶೇಷತ್ವತ್ತಾಲ್ ವಹುತ್ತ ವಿಷಯತ್ತೈಪ್ಪತ್ತುಹೈಯಿಲ್ ಔಚಿತ್ಯಮುಮ್ ಉಡ್ಡೈಯರ್ವ ಉಡಮ್ಮೈಯೈ ರಕ್ಷಿಕ್ಕೈಯಿಲೌಚಿತ್ಯಮುಮುಣ್ಡಾಮ್.**

**ಅತ್ಯನ್ತ ಪಾರತನ್ತ್ರ್ಯತ್ತಾಲ್ ಅವನ್ ಕೊಡುತ್ತ ಸ್ವಾತಂತ್ರ್ಯತ್ತೈಚ್ಚುಮನ್ದು ಅವನುಕ್ಕು ಅಭಿಮತಂಗಳಾನ ಉಪಾಯಂಗಳೈ ಅನುಷ್ಠಿಕ್ಕೈಯುಮ್, ಫಲಮ್ ಪೆರುಹೈಕ್ಕವರ್ ಕೈಪಾರ್ತ್ತಿರುಕ್ಕ ವೇಣ್ಡುಹೈಯುಮ್, ಸಿದ್ಧಿಕ್ಕುಮ್. ಇಶ್ಶೇಷತ್ವಪಾರತಂತ್ರ್ಯಂಗಳ್ ಇರಣ್ಡುಮ್ ಫಲದಶೈಯಿಲ್ ಅವನುಹನ್ದ ಕೈಂಕರ್ಯತ್ತೈ ಅವನಿಟ್ಟ ವ್ಯಕ್ಕಾಹ ನಡುತ್ತುಹೈಕ್ಕು ಮುರುಪ್ಪಾಮ್. ಇವ್ವೈಯಡಿಯಾಹ ಸ್ವರಕ್ಷಣಾರ್ಥ ಸ್ವವ್ಯಾಪಾರ ಮಾಹಾದೆನ್ಪಾರ್ಕ್ಕು, ತ್ತಾಂಗಳ್ ಯಥಾಶಾಸ್ತ್ರಮ್ ಭಗವತ್ಪ್ರೀತ್ಯಾದಿ ಫಲತ್ತೈಕ್ಕೋಲಿ ಅನುಷ್ಠಿಕ್ಕಿರ ಕೈಂಕರ್ಯತ್ತಿಲುಮ್, ಸಾಧ್ಯಮಾಹ ವಿಧಿಕ್ಕಪಡುಹಿರ ಪ್ರಪತ್ತಿ ತನ್ನಿಲುಮ್ ಸ್ವರೂಪ ವಿರೋಧಬುದ್ಧಿಯಾಲೇ ಅಧಿಕಾರಮಿಲ್ಲೈಯಾಮ್. ವಾಕ್ಯಜನ್ಯಮಾನ ಸಂಬಂಧಜ್ಞಾನಾದಿ ಮಾತ್ರತ್ತಿರ್ಕ್ಕಟ್ಟಿಲ್ ಅತಿರಿಕ್ತಮಾಹ "ಶರಣಂ ವ್ರಜ" ಎನ್ರು ವಿಧೇಯ ಮಾಹೈಯಾಲೇ ಸಾಧ್ಯಮಾಯಿರುಕ್ಕುಮ್ ಪ್ರಪತ್ತಿಸ್ವರೂಪ ಮೆನ್ನು ಮಿಡಮ್ ಮುನ್ಪೇ ಶೊನ್ನೋಮ್. ಆಹೈಯಾಲ್ ಶೇಷಭೂತನುಮಾಯ್ ಪರತಂತ್ರನುಮಾನ ಇವನುಕ್ಕು ಯಥಾಧಿಕಾರಮ್ ಸ್ವರಕ್ಷಣಾರ್ಥ ವ್ಯಾಪಾರಂ ಪಣ್ಣಕ್ಕುರೈಯಿಲ್ಲೈ.**

---

ಶಂಕಿಸಿ ಹೇಳಿದ ಈ ಅನಿಷ್ಟಾವಹತ್ವ ಅಸಂಭಾವಿತತ್ವಗಳನ್ನು **ಆಹೈಯಾಲ್** ಎಂದಾರಂಭಿಸಿ ಪರಿಹರಿಸುತ್ತಾರೆ. ಆದ್ದರಿಂದ ಈ ಶೇಷತ್ವದ ಕಾರಣವಾಗಿ ಶಾಸ್ತ್ರವು ವಿಧಿಸಿದ ವಿಷಯವನ್ನು ಅಂಗೀಕರಿಸುವುದರಿಂದ, ಔಚಿತ್ಯವೂ, **ಉಡ್ಡೈಯವನ್** – ಸ್ವತ್ತಿಗೆ ಯಜಮಾನನು, ತನ್ನ ಸ್ವತ್ತನ್ನು ರಕ್ಷಿಸುವುದರಲ್ಲಿ ಔಚಿತ್ಯವೂ ಉಂಟು. ಅತ್ಯಂತ ಪಾರತಂತ್ರ್ಯದ ಕಾರ್ಯವನ್ನು **ಅತ್ಯಂತ ಪಾರತಂತ್ರ್ಯತ್ತಾಲ್** ಎಂದಾರಂಭಿಸಿ ನಿರೂಪಿಸುತ್ತಾರೆ. ಆದಾಗಿ ಜೀವನು ಅತ್ಯಂತ ಪಾರತಂತ್ರ್ಯದಿಂದ ಕೂಡಿರುವುದರಿಂದಲೇ, **ಅವನ್ ಕೊಡುತ್ತ** ವಿತ್ಯಾದಿ – ಭಗವಂತನು ಕೊಟ್ಟ ಸ್ವಾತಂತ್ರ್ಯವನ್ನು ವಹಿಸಿ ಅವನಿಗೆ **ಅಭಿಮತಂಗಳಾನ** – ಇಷ್ಟಗಳಾದ ಉಪಾಯಗಳನ್ನು ಅನುಷ್ಠಿಸುವುದೂ, ಫಲವನ್ನು ಪಡೆಯಲು **ಅವನ್ಕೈಪಾರ್ತಿರುಕ್ಕವೇಂಡುಗೈಯುಮ್** – ಅವನನ್ನೇ ಎದುರು ನೋಡುತ್ತಿರಬೇಕೆಂದೂ, ಸಿದ್ಧಿಸುತ್ತದೆ. **ಇಚ್ಛೇಷತ್ವ ಪಾರತಂತ್ರ್ಯಂಗಳ್** ಇತ್ಯಾದಿ – ಈ ಶೇಷತ್ವ ಪಾರತಂತ್ರ್ಯಗಳೆರಡೂ ಫಲದಶೆಯಲ್ಲಿ ಅವನು **ಉಹಂದ ಕೈಂಕರ್ಯತ್ತೈ** – ಇಚ್ಛಿಸಿದ ಕೈಂಕರ್ಯವನ್ನು, ಅವನು **ಇಟ್ಟವ್ಯಕ್ಕಾಹ** – ನಿಯಮಿಸಿದ ಪ್ರಕಾರ, ನಡೆಸಲು ಕಾರಣವಾಗುತ್ತದೆ. **ಇವ್ವೈಯಡಿಯಾಹ** – ಈ ಶೇಷತ್ವ ಪಾರತಂತ್ರ್ಯಗಳು ತನಗೆ ಉಂಟಾಗಿರುವ ಕಾರಣದಿಂದ, ಸ್ವರಕ್ಷಣಾರ್ಥ ಸ್ವವ್ಯಾಪಾರವು ಕೂಡದು ಎಂದು ಹೇಳುವವರಿಗೆ, ತಾವು ಯಥಾಶಾಸ್ತ್ರ ಭಗವಂತನ ಪ್ರೀತ್ಯಾದಿ ಫಲಗಳನ್ನು ಅಪೇಕ್ಷಿಸಿ ಮುಮುಕ್ಷುದಶೆಯಲ್ಲಿ ಅನುಷ್ಠಿಸಿ ಬರುವ ಕೈಂಕರ್ಯದಲ್ಲಿಯೂ, ಸಾಧ್ಯವಾಗಿ ವಿಧಿಸಲ್ಪಡುವ ಪ್ರಪತ್ತಿಯಲ್ಲಿಯೂ, ಸ್ವರೂಪಕ್ಕೆ ವಿರೋಧವಾದದ್ದು ಎಂಬ ಬುದ್ಧಿಯೂ ಏರ್ಪಟ್ಟು, ಅವುಗಳನ್ನು ಮಾಡಲು ಅಧಿಕಾರವಿಲ್ಲದೆ ಹೋಗುತ್ತದೆ.

ವಾಕ್ಯಜನ್ಯವಾದ ಸಂಬಂಧ ಜ್ಞಾನಮಾತ್ರವೇ ಪ್ರಪತ್ತಿ ಅದು ಸಾಧ್ಯವಲ್ಲವೆಂದರೆ, ಅದನ್ನು **ವಾಕ್ಯಜನ್ಯಮಾನ** ಎಂದಾರಂಭಿಸಿ ಖಂಡಿಸುತ್ತಾರೆ. ವಾಕ್ಯಜನ್ಯವಾದ ಸಂಬಂಧ ಜ್ಞಾನ ಮಾತ್ರಕ್ಕಿಂತೆ, **ಅತಿರಿಕ್ತಮಾಹ** – ಅಧಿಕವಾಗಿ "ಶರಣಂ ವ್ರಜ" ಎಂದು ಶಾಸ್ತ್ರವು ವಿಧಿಸಿರುವುದರಿಂದ, ಪ್ರಪತ್ತಿ ಸ್ವರೂಪವು ಸಾಧ್ಯವಾದದ್ದು ಎಂಬುದನ್ನು ಹಿಂದೆಯೇ ಹೇಳಿದ್ದೇವೆ. ಉಕ್ತಾರ್ಥವನ್ನು **ಆಹೈಯಾಲ್** ಎಂದಾರಂಭಿಸಿ ನಿಗಮಿಸುತ್ತಾರೆ. ಆದಾಗೆ, ಮೇಲೆ ಹೇಳಿದ ಪ್ರಕಾರ, ಶೇಷಭೂತನೂ, ಪರತಂತ್ರನೂ ಆದ ಮುಮುಕ್ಷುವಿಗೆ ಯಥಾಧಿಕಾರ ಭಕ್ತಿ, ಪ್ರಪತ್ತಿ ರೂಪಗಳಾದ ಸ್ವರಕ್ಷಣಾರ್ಥ ಸ್ವವ್ಯಾಪಾರವನ್ನು ಮಾಡಲು ಯಾವ ಬಾಧಕವೂ ಇಲ್ಲ.

### ಭಕ್ತಿಯೋಗಃ ಪಾರವೈಕಾಂತ್ಯ ವಿರುದ್ಧತ್ವಾತ್ ಸ್ವರೂಪ ವಿರುದ್ಧ ಇತಿವಾದಸ್ಯ ನಿರಾಸಃ

ಆನಾಲುಮ್, ಅನನ್ಯಾರ್ಹ ಶೇಷಭೂತನಾಹತ್ತನ್ನೈತ್ತೆಳಿನ್ದು ಪರವೈಕಾಂತಿಯಾಯಿರುಕ್ಕಿರ ಇವನುಕ್ಕು ದೇವತಾಂತರದ್ವಾರಕಙ್ಗಳಾನ ವರ್ಣಾಶ್ರಮ ಧರ್ಮಙ್ಗಳುಮ್, ಅವತ್ತೈ ಇತಿ ಕರ್ತವ್ಯತೈಯಾಹ ವುಡೈತ್ತಾನ ಭಕ್ತಿಯೋಗಾದಿಹಳುಮ್ ಐಕಾಂತ್ಯ ವಿರುದ್ಧಙ್ಗಳನ್ರೋ ? ಶುದ್ಧಯಾಜಿಹಳುಕ್ಕನ್ರೋ ಪರವೈಕಾಂತಿತ್ವಮ್ ಕೂಡುವದೆನ್ನಿಲ್ ? ಇದು ಭಾಷ್ಯಾದಿಹಳಿಲ್ ನಿಷ್ಕರ್ಷಂ ತೆಳಿಯಾನ್ಮೈಯುಡಿಯಾಹವನ್ದ ಚೋದ್ಯಮ್. ಎಂಗನೇಎನ್ನಿಲ್ ? ಪ್ರತರ್ದನಾದಿ ವಿದ್ಯೈಹಳಿಲ್ ಪರಮಾತ್ಮಾ ಇಂದ್ರಾದಿ ಶರೀರಕನಾಹ ಮುಮುಕ್ಷುವುಕ್ಕು ಉಪಾಸ್ಯನೆನ್ರುರುದಿಯಿಟ್ಟಾರ್.

ವಿದ್ಯಾಂಗಮಾನ ವರ್ಣಾಶ್ರಮ ಧರ್ಮಂಗಳಿಲುಮ್ ಅವ್ವೋ ದೇವತೈಹಳೈ ಶರೀರಮಾಹಕ್ಕೊಂಡು ನಿರ್ಕಿರ ಪರಮಾತ್ಮಾವೇ ಆರಾಧ್ಯನೆನ್ರು ನಿಷ್ಕರ್ಷಿತ್ತಾರ್.

---

### ಪರವೈಕಾಂತಿಗೆ ಭಕ್ತಿಯು ಸ್ವರೂಪ ವಿರುದ್ಧವೆಂಬವಾದ ಖಂಡನೆ

8) ಭಕ್ತ್ಯಾದಿಗಳು ಪರವೈಕಾಂತಿಯಾದ ತನ್ನ ಸ್ವರೂಪಕ್ಕೆ ವಿರುದ್ಧಗಳು ಎಂಬ ಪಕ್ಷವನ್ನು **ಆನಾಲಮ್** ಎಂದಾರಂಭಿಸಿ ನಿರಾಕರಿಸುತ್ತಾರೆ. **ಆನಾಲುಮ್**-ಮೇಲೆ ಹೇಳಿದ್ದನ್ನು ಒಪ್ಪಿದರೂ, **ಅನನ್ಯಾರ್ಹ ಶೇಷಭೂತನಾಹ** ಇತ್ಯಾದಿ-ತಾನು ಶ್ರೀಮನ್ನಾರಾಯಣನು ವಿನಹ ಬೇರೆಯವರಿಗೆ ಶೇಷಭೂತನಾಗಿರಲು ಅರ್ಹನಲ್ಲವೆಂದು ತಿಳಿದು **ಪರವೈಕಾಂತಿಯಾಯಿರುಕ್ಕಿರ** – ಸರ್ವೋತ್ಕೃಷ್ಟನಾದ ಶ್ರಿಯಃಪತಿಯಲ್ಲಿಯೇ ಪ್ರಾಪಕತ್ವ, ಪ್ರಾಪ್ಯತ್ವ, ಬುದ್ಧಿಯುಳ್ಳವನಾಗಿರುವ, ಇವನಿಗೆ **ದೇವತಾಂತರ ದ್ವಾರಕಂಗಳಾನ ವರ್ಣಾಶ್ರಮ ಧರ್ಮಂಗಳುಂ** ಇತ್ಯಾದಿ ವರ್ಣಾಶ್ರಮ ಧರ್ಮಗಳ ನಿಮಿತ್ತವಾಗಿ ಮಾಡುವ ನಿತ್ಯನೈಮಿತ್ತಿಕ ಕರ್ಮಗಳು ವೇದ ಮಂತ್ರಗಳನ್ನು ಬಳಸಿ, ಮಾಡಬೇಕಾದವು. ಸ್ನಾನ ಸಂಧ್ಯಾವಂದನಾದಿ, ದೇವರ್ಷಿ ಪಿತೃತರ್ಪಣ, ಔಪಾಸನ, ದರ್ಶಪೂರ್ಣಮಾಸ ಸ್ಥಾಲೀ ಪಾಕ, ವೈಶ್ವದೇವ ಪಂಚ ಮಹಾ ಯಜ್ಞಗಳಲ್ಲಿ ಅಗ್ನೀಂದ್ರಾದಿ ದೇವತಾಂತರ ಶಬ್ದ ಘಟಿತವಾದ ಮಂತ್ರಗಳ ಉಚ್ಚಾರಣೆಯೂ ಹೋಮಾದಿಗಳೂ ಏರ್ಪಡುವುದರಿಂದ ದೇವತಾಂತರ ದ್ವಾರಕಗಳಾಗಿರುವ ಆವರ್ಣಾ ಶ್ರಮ ಧರ್ಮಗಳನ್ನು ಅನುಷ್ಠಿಸುವುದು, **ಅವಟ್ರೈ ಇತಿಕರ್ತವ್ಯತೈಯಾಹ ಉಡೈತ್ತಾನ,** ಅವುಗಳನ್ನು ಅಂಗವಾಗಿ ಉಳ್ಳ ಭಕ್ತಿಯೋಗಾದಿಗಳೂ ಐಕಾಂತ್ಯಕ್ಕೆ ಬಾಧಕಗಳಲ್ಲವೇ. **ಶುದ್ಧಯಾಜಿಹಳುಕ್ಕನ್ರೋ ಪರವೈಕಾಂತಿತ್ವಂ ಕೂಡುವದು** ಇತ್ಯಾದಿ–ದೇವತಾಂತರ ಶಬ್ದಘಟಿತ ಮಂತ್ರಗಳನ್ನು ಉಚ್ಚರಿಸಿ ತದ್ದೇವತಾಂತರ ದ್ವಾರಕ ಕರ್ಮಾನುಷ್ಠಾನಗಳನ್ನು ಮಾಡುವುದು ಪರವೈಕಾಂತಿಯಾದ ಶುದ್ಧಯಾಜಿ– ಸಾಕ್ಷಾದ್ಭಗವದಾರಾಧಕರಿಗೆ ಸ್ವರೂಪ ವಿರುದ್ಧವಲ್ಲವೇ ಶುದ್ಧಯಾಜಿಗಳಿಗಲ್ಲವೇ ಪರವೈಕಾಂತಿತ್ವವು ಸಂಗತವಾಗುತ್ತದೆ. ಎಂದು ಕೇಳಿದರೆ, **ಇದುಭಾಷ್ಯಾದಿಹಳಿಲ್** ಇತ್ಯಾದಿ– ಇದು ಭಾಷ್ಯಾದಿಗಳಲ್ಲಿ ನಿಷ್ಕರ್ಷಿಸಿರುವ ಅರ್ಥಗಳನ್ನು ತಿಳಿಯದೆ ಇರುವವರು ಹೇಳುವ ಚೋದ್ಯವು. **ಎಂಗನೇಯೆನ್ನಿಲ್**-ಹೇಗೆಂದರೆ, **ಪ್ರತರ್ದನಾದಿ**–ಇತ್ಯಾದಿ. ಪ್ರತರ್ದನಾದಿ ವಿದ್ಯೆಗಳಲ್ಲಿ ಇಂದ್ರಾದಿ ಶರೀರಕನಾಗಿ ಪರಮಾತ್ಮನ ಮುಮುಕ್ಷುವಿಗೆ ಉಪಾಸ್ಯನೆಂದು ನಿಷ್ಕರ್ಷಿಸಿರುತ್ತಾರೆ. ವಿದ್ಯೆಗಳಿಗೆ ಅಂಗಗಳಾದ ವರ್ಣಾಶ್ರಮ ಧರ್ಮಗಳಲ್ಲಿಯೂ ಆಯಾಯಾ ದೇವತೆಗಳನ್ನು ತನಗೆ ಶರೀರವಾಗಿ ಕೊಂಡಿರುವ ಅಂತರ್ಯಾಮಿಯಾದ ಪರಮಾತ್ಮನು ಆರಾಧ್ಯನೆಂದು ನಿಷ್ಕರ್ಷಿಸಿದ್ದಾರೆ. ಅಂದರೆ ವರ್ಣಾಶ್ರಮ ಧರ್ಮಗಳಲ್ಲಿ ಪರಮಾತ್ಮನಿಗೆ ವಿಶೇಷಣವಾಗಿಯೂ ದೇವತಾಂತರಗಳ ಉದ್ದೇಶ್ಯತ್ವಾಭಿಸಂಧಿಯು, ಭಕ್ತ ಪ್ರಪನ್ನರಿಬ್ಬರಿಗೂ ಇಲ್ಲ. ಇದರಿಂದ ಪಾರವೈಕಾಂತ್ಯಕ್ಕೆ ಭಂಗವಿಲ್ಲವೆಂದು ತಾತ್ಪರ್ಯ. **ಪರಮಾತ್ಮಾವೇ ಆರಾಧ್ಯನ್**–ಎಂದು ಸಾವಧಾರಣವಾಗಿ (ಒತ್ತಿ) ಹೇಳುವುದರಿಂದ ದೇವತಾಂತರಾರಾಧ್ಯತ್ವ ಸಾಮಾನ್ಯವನ್ನು ನಿವರ್ತಿಸುತ್ತಾರೆ.

**ಆಹೈಯಾಲ್ ಸ್ವತಂತ್ರಮಾಹ ಶಿಲದೇವತೈಹಳೈಪ್ಪತ್ತಿನಾಲುಮ್, ಫಲಾಂತರ ಕಾಮನೈಯಾಲೇ ತನ್ನುಡೈಯ ನಿತ್ಯನೈಮಿತ್ತಿಕಙ್ಗಳುಕ್ಕು ಪ್ಪುರಮ್ಬಾನ ದೇವತಾಂತರಾನ್ವಯಮ್ ವರಿಲುಮ್ ಪರಮೈಕಾಂತಿತ್ವಕ್ಕು ವಿರುದ್ಧಮಾಮ್.**

**ಫಲಾಂತರ ಸಙ್ಗಮುಮನ್ರಿಕ್ಕೇ ಪರಮಾತ್ಮಾವುಕ್ಕು ವಿಶೇಷಣಙ್ಗಳಾಹ ದೇವತೆಹಳೈ ವೈತ್ತು ಅಗ್ನ್ಯಾದಿ ಶಬ್ದಂಗಳೈ ವಿಶೇಷ್ಯ ಪರ್ಯಂತಮಾಹ ಅನುಸಂಧಿತ್ತುಮ್, "ಸಾಕ್ಷಾದಪ್ಯವಿರೋಧಮ್ ಜೈಮಿನಿಃ" ಎನ್ಗಿರ ನ್ಯಾಯತ್ತಾಲೇ ಅಗ್ನೀಂದ್ರಾದಿ ಶಬ್ದಙ್ಗಳೈ ಸಾಕ್ಷಾದ್ಭಗವದ್ವಾಚಕಙ್ಗಳಾಹ ಅನುಸಂಧಿತ್ತುಮ್. ಸ್ವಧರ್ಮಾನುಷ್ಠಾನಮ್ ಪಣ್ಣು ಮಿಡತ್ತಿಲ್, ವಿಧಿಬಲತ್ತಾಲೇ ಪರಮೈಕಾಂತಿತ್ವ ವಿರೋಧಮಿಲ್ಲೈ.**

---

**ಆಹೈಯಾಲ್ ಸ್ವತಂತ್ರಮಾಹ** ಇತ್ಯಾದಿ – ಆದ್ದರಿಂದ ಸ್ವತಂತ್ರವಾಗಿ ಕೆಲವು ದೇವತೆಗಳನ್ನು ಆರಾಧಿಸಿದರೂ, **ಫಲಾಂತರ ಕಾಮನೈಯಾಲೇ** – ಭಗವತ್ಪ್ರೀತಿ ವ್ಯತಿರಿಕ್ತವಾದ ಫಲಾಂತರಗಳಲ್ಲಿ ಆಸೆಯಿಂದ **ತನ್ನುಡೈಯ ನಿತ್ಯನೈಮಿತ್ತಕಂಗಳುಕ್ಕು ಪ್ಪುರಮ್ಬಾನ** ಇತ್ಯಾದಿ – ತನ್ನ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳಿಗೆ ಅಂದರೆ ಸ್ನಾನ, ಸಂಧ್ಯಾವಂದನೆ, ದೇವರ್ಷಿಪಿತೃತರ್ಪಣ, ಬ್ರಹ್ಮಯಜ್ಞಗಳು, ದರ್ಶ ಪೂರ್ಣಮಾಸ ಸ್ಥಾಲೀಪಾಕಗಳು, ಶ್ರಾದ್ಧ ಪಿತೃತರ್ಪಣಾದಿಗಳು ವಿನಹ, **ಪುರಂಬಾನ** – ಬೇರೆಯಾದ, ಕಾಮ್ಯಾದಿ ಕರ್ಮಗಳನ್ನು ಅನುಷ್ಠಿಸುವಾಗ ದೇವತಾಂತರ ಸಂಬಂಧವು ಏರ್ಪಟ್ಟರೂ ಪರಮೈಕಾಂತಿತ್ವಕ್ಕೆ ವಿರೋಧವುಂಟು. **ಸ್ವತಂತ್ರಮಾಹ ಶಿಲದೇವತೈಹಳೈಪ್ಪಟ್ರನಾಲುಂ** ಎಂಬ ವಾಕ್ಯದಿಂದ ಪರಮಾತ್ಮ ವಿಶೇಷಣವಾಗಿ ದೇವತಾಂತರಾಶ್ರಯಣವು ಸಂಗತವೆಂದು ಅರ್ಥವು ಏರ್ಪಡುತ್ತದೆಯಲ್ಲವೇ ಎಂದರೆ ಇಲ್ಲ. ಸ್ವತಂತ್ರವಾಗಿ ದೇವತಾಂತರಗಳ ಆಶ್ರಯಣವೆಂದರೆ, ಭಗವದ್ವಿಶೇಷಣ ಭೂತರೆಂಬ ಜ್ಞಾನವಿಲ್ಲದೆ ದೇವತಾಂತರ ವಾಚಕಗಳಾದ ಶಬ್ದಗಳನ್ನು ಉಚ್ಚರಿಸುವುದು ಎಂದರ್ಥ. ಇದು ಕೂಡದು.

**ಫಲಾಂತರಸಂಗಮುಮ್** ಇತ್ಯಾದಿ – ಫಲಾಂತರಗಳಲ್ಲಿ ಆಸೆಯಿಲ್ಲದೆ, ಪರಮಾತ್ಮಾವಿಗೆ ವಿಶೇಷಣಗಳಾಗಿ ಅಂದರೆ ಅಗ್ನಿ, ಇಂದ್ರಾದಿ ಶರೀರಕ ಪರಮಾತ್ಮ ಪರ್ಯಂತವಾಗಿ ಅನುಸಂಧಾನ ಮಾಡಿಯೂ, **ಸಾಕ್ಷಾದಪ್ಯವಿರೋಧಂ ಜೈಮಿನಿಃ** (ಬ್ರಹ್ಮಸೂತ್ರ 1-2-29) ಎಂಬ ನ್ಯಾಯದಂತೆ ಅನ್ಯಥಾಸಿದ್ಧಜೀವಾದಿ ಲಿಂಗಗಳು ಇಲ್ಲದೆ ಇರುವಾಗ, ಅಗ್ನೀಂದ್ರಾದಿ ಶಬ್ದಗಳನ್ನು ಸಾಕ್ಷಾದ್ಭಗವದ್ವಾಚಕಗಳನ್ನಾಗಿ ಅನುಸಂಧಾನ ಮಾಡಿಯೂ ಸ್ವಧರ್ಮಾನುಷ್ಠಾನವನ್ನು ಮಾಡುವುದು **ವಿಧಿಬಲತ್ತಾಲೇ** – ಶಾಸ್ತ್ರವು ವಿಧಿಸಿರುವುದರಿಂದ ಪರಮೈಕಾಂತಿತ್ವಕ್ಕೆ ಭಂಗವನ್ನುಂಟು ಮಾಡುವುದಿಲ್ಲ. ಇದರ ತಾತ್ಪರ್ಯವೇನೆಂದರೆ, ಔಪಾಸನಾದಿ ನಿತ್ಯನೈಮಿತ್ತಿಕ ಕರ್ಮಗಳಲ್ಲಿ 'ಅಗ್ನಯೇಸ್ವಾಹಾ, ಇಂದ್ರಾಯಸ್ವಾಹಾ' ಎಂಬ ಮಂತ್ರಗಳನ್ನು ಹೇಳಿ ಹೋಮಗಳನ್ನು ಮಾಡುವಾಗ ಅಗ್ನೀಂದ್ರಾದಿ ಶಬ್ದಗಳು ಸಾಕ್ಷಾದ್ಭಗವದ್ವಾಚಕಗಳಾಗಿ ಪರಮಾತ್ಮನನ್ನೇ ಉದ್ದೇಶ್ಯವಾಗಿ ಇರುವುದು ವಿನಹ ಹವಿಸ್ಸಮರ್ಪಣೋದ್ದೇಶ್ಯತ್ವವು ಆ ದೇವತೆಗಳಿಗೆ ಇಲ್ಲವಾದ್ದರಿಂದಲೂ, ವಿಶೇಷಣತಯಾ ದೇವತಾಂತರ ಸಂಬಂಧವು ವಿಧಿಬಲ ಪ್ರಾಪ್ತವಾದ್ದರಿಂದ ಪಾರಮೈಕಾಂತ್ಯಕ್ಕೆ ಭಂಗವು ಏರ್ಪಡುವುದಿಲ್ಲ. ಅನ್ಯಥಾ ಸಿದ್ಧವಾದ ಜೀವಾದಿ ಲಿಂಗಗಳು (ಚಿಹ್ನೆಗಳು), ರುದ್ರಾಯಪಶುಪತಯೇ, ಇಂದ್ರಾಯ ಶಚೀಪತಯೇ, ಮೊದಲಾದ ಸ್ಥಳಗಳಲ್ಲಿ ಪಶುಪತಿಯಾದ ರುದ್ರನು, ಶಚೀಪತಿಯಾದ ಇಂದ್ರನು, ಎಂದು ಅಸಾಧಾರಣ ದೇವತಾಂತರಗಳನ್ನು ತಿಳಿಸುತ್ತವೆ. ಅಂಥಹ ಸ್ಥಳಗಳಲ್ಲಿ ತಚ್ಛರೀರಕ ಪರಮಾತ್ಮನನ್ನು ವಿಧಿಬಲದಿಂದ ಅಂಗೀಕರಿಸಬೇಕು. ಹೇಗೆಂದರೆ, ಅತಿಥಿ ಸತ್ಕಾರವು ವಿಧಿವಿಹಿತ. ಮನೆಗೆ ಬಂದ ಅತಿಥಿಯನ್ನು ಪತಿವ್ರತಾಸ್ತ್ರೀಯು ತನ್ನ ಪತಿಯ ನಿಯಮನ ಪ್ರಕಾರ, "ಅತಿಥಿದೇವೋ ಭವ" ಎಂದು ಸತ್ಕರಿಸುತ್ತಾಳೆ. ಆ ಸಮಯದಲ್ಲಿ ಪರಪುರುಷನೆಂಬ ಭಾವನೆಯಿಲ್ಲ.

**ಭಕ್ತಿ ವಿಧಿಃ ಅಭಿಚಾರಾದಿ ವಿಧಿವತ್ ಪ್ರಪತ್ತಿ ಪ್ರರೋಚನಾರ್ಥ ಇತಿ ಪಕ್ಷಂ ದೂಷಯತಿ**

**ಆನಾಲುಮ್ ಅಭಿಚಾರಾದಿಹಳ್ಳೈ ವಿಧಿತ್ತ ಕಟ್ಟಳೈಯಿಲೇ ಶಾಸ್ತ್ರ ಪ್ರರೋಚನಾದಿಹಳಿಲ್ ಅಭಿಸಂಧಿಯಾಲೇ ಅಧಿಕಾರಿ ವಿಶೇಷಣತ್ತಿಲೇ ಉಪಾಸನಾದಿಹಳ್ಳೈ ವಿಧಿತ್ತದತ್ತನೈಯನ್ಱೋ? ಮುಮುಕ್ಷುವುಕ್ಕು ಪ್ರಾಪ್ಯ ಪ್ರಾಪಕಙ್ಗಳ್ ಏಕಮಾಹೈಯಾಲೇ ಪ್ರಾಪ್ಯಾನುರೂಪಮಾಹ ಉಪಾಯಮ್ ಸರ್ವೇಶ್ವರ ಒರುವನುಮೇ; ಆಹೈಯಾಲೇಯನ್ಱೋ.**

---

ಅತಿಥಿಯೊಬ್ಬರಿಂದ ಅಂತರ್ಯಾಮಿಯಾದ ಭಗವಂತನು ಆರಾಧ್ಯನು. ತನ್ನ ಪತಿಯ ಆಜ್ಞೆಯಿಂದು ತಿಳಿದು ಮಾಡುತ್ತಾಳೆ. ಇದರಿಂದ ಅವಳ ಪಾತಿವ್ರತ್ಯಕ್ಕೆ ಭಂಗವಿಲ್ಲ. ಆ ಕಾಲವನ್ನು ಬಿಟ್ಟು ಇತರ ಕಾಲಗಳಲ್ಲಿ ಪರಪುರುಷನಾದ್ದರಿಂದ ಸಂಭಾಷಣಾದಿಗಳೂ ನಿಷೇಧಿಸಲ್ಪಟ್ಟಿವೆ. ಆ ಇತರ ಕಾಲಗಳಲ್ಲಿ ಸಂಭಾಷಣಾದಿಗಳನ್ನು ಮಾಡಿದರೆ ಪಾತಿವ್ರತ್ಯಕ್ಕೆ ಭಂಗವುಂಟಾಗುತ್ತದೆ. ಇದೇ ನ್ಯಾಯವನ್ನು ಅವಲಂಬಿಸಿ ದೇವತಾಂತರ ಲಿಂಗ ಘಟಿತವಾದ ಶಬ್ದಗಳನ್ನು ವಿಧಿಬಲ ಪ್ರಾಪ್ತವಾಗಿ ತಚ್ಛರೀರಕ ಪರಮಾತ್ಮನನ್ನೇ ಉದ್ದೇಶಿಸಿ, ಬಳಸಿ ಹೋಮಾದಿಗಳನ್ನು ಮಾಡುವುದರಿಂದ ಪರಮಾತ್ಮನೇ ಆರಾಧ್ಯನಾದ್ದರಿಂದ, ದೇವತಾಂತರ ಸಂಬಂಧವೂ ಪಾರಮೈಕಾಂತ್ಯ ಭಂಗವೂ ಪ್ರಾಪ್ತವಾಗುವುದಿಲ್ಲ.

ಅಗ್ನೀಂದ್ರಾದಿ ಶಬ್ದಗಳು ಅಗ್ರಂನಯತೀತ್ಯಗ್ನಿಃ, ಇದಿಪರಮೈಶ್ವರ್ಯೇ–ಎಂಬ ಧಾತು ನಿಷನ್ನಗಳಾಗಿ; ಮೋಕ್ಷಕ್ಕೆ ಕರೆದೊಯ್ಯುತ್ತಾನೆ, ಪರಮೈಶ್ವರ್ಯದಿಂದ ಕೂಡಿದವನು, ಎಂಬ ಅರ್ಥಗಳಲ್ಲಿ ಸಾಕ್ಷಾತ್ಪರಮಾತ್ಮ ಬೋಧಕಗಳಾಗುತ್ತವೆ. ಏಕೆಂದರೆ ಅನ್ಯಥಾ ಸಿದ್ಧವಾದ ಜೀವಲಿಂಗಗಳು–ಜೀವನನ್ನು ತಿಳಿಸುವ ಪಶುಪತಿ, ಶಚೀಪತಿ ಇತ್ಯಾದಿ ಚಿಹ್ನೆಗಳು ಇಲ್ಲವಾದ್ದರಿಂದ, ಉದಾಹರಣೆ–ರುದ್ರಃ–ರೋದಯತೀತಿ ರುದ್ರಃ–ಜಗತ್ಸಂಹಾರಕನು ಭಗವಂತ, ಇಂದ್ರಃ ಇದಿಪರಮೈಶ್ವರ್ಯೇ–ಪರಮೈಶ್ವರ್ಯವುಳ್ಳವನು ಭಗವಂತ, ಇತ್ಯಾದಿ ಸಾಕ್ಷಾದ್ಭಗವದ್ವಾಚಕಗಳಾಗುತ್ತವೆಯಾದ್ದರಿಂದ, ಆಯಾಯಾ ಶಬ್ಧಘಟಿತ ಮಂತ್ರೋಚ್ಚಾರಣ ಪೂರ್ವಕ ಮಾಡುವ ನಿತ್ಯನೈಮಿತ್ತಿಕ ವರ್ಣಾಶ್ರಮಗಳಿಂದ ಪಾರಮೈಕಾಂತ್ಯಕ್ಕೆ ಭಂಗವು ಏರ್ಪಡುವುದಿಲ್ಲ ಎಂಬುದು ಸಿದ್ಧಾಂತ. ಆದ್ದರಿಂದ ವರ್ಣಾಶ್ರಮಧರ್ಮಗಳೂ ಅವುಗಳನ್ನು ಅಂಗವಾಗಿ ಉಳ್ಳ ಭಕ್ತಿಯೋಗಾದಿಗಳೂ ಐಕಾಂತ್ಯವನ್ನು ಹಾಳು ಮಾಡುವುದಿಲ್ಲ. ಈ ಕಾರಣದಿಂದಲೂ ಭಕ್ತಿಯೋಗವು ಸ್ವರೂಪ ವಿರುದ್ಧವಲ್ಲ.

9) ಅನಂತರ, ಭಕ್ತಿಯೋಗವು ಪ್ರಪತ್ತಿಯಲ್ಲಿ ಪ್ರರೋಚನೆಯನ್ನುಂಟು ಮಾಡುವುದಕ್ಕೆ ಮಾತ್ರ ಹೇಳಲ್ಪಟ್ಟಿದೆಯಷ್ಟೆ. ಅದು ಸ್ವರೂಪ ವಿರುದ್ಧವೆಂಬ ಪಕ್ಷವನ್ನು ಖಂಡಿಸುತ್ತಾರೆ. **ಆನಾಲುಮ್**–ಇತ್ಯಾದಿನಾ-ಆನಾಲುಮ್ ಮೇಲೆ ನಿರೂಪಿಸಿದುದು ಸರಿ ಎಂದರೂ, **ಅಭಿಚಾರಾದಿಹಳ್ಳೈ** ಇತ್ಯಾದಿ ಅಭಿಚಾರ–ಶತ್ರುವಧ ಹೇತುಭೂತವಾದ ಯಾಗವಿಶೇಷ. ಈ ಯಾಗವೇ ಮೊದಲಾದವುಗಳನ್ನು ವತ್ಸಲತರವಾದ ಶಾಸ್ತ್ರವು ಇತರ ಶಾಸ್ತ್ರಗಳಲ್ಲಿ ನಂಬಿಕೆಯನ್ನುಂಟು ಮಾಡಲು, ವಿಧಿಸಿರುವಂತೆ, ಪ್ರಪತ್ತಿಯಲ್ಲಿ ವಿಶ್ವಾಸವನ್ನುಂಟು ಮಾಡಲು ಅಧಿಕಾರಿ ವಿಶೇಷದಲ್ಲಿ ಉಪಾಸನಾದಿಗಳನ್ನು ವಿಧಿಸಿದೆ ಅಷ್ಟೇ. ಅದು ಸ್ವರೂಪ ವಿರುದ್ಧ. ಮೇಲೂ **ಮುಮುಕ್ಷುವುಕ್ಕು** ಇತ್ಯಾದಿ–ಮೋಕ್ಷದಲ್ಲಿ ಆಸೆಯುಳ್ಳವನಿಗೆ ಪ್ರಾಪ್ಯ (ಪಡೆಯುವುದು) ಪ್ರಾಪಕಗಳು (ಪಡೆಸುವುದು) ಎರಡೂ **ಏಕಮಾಹೈಯಾಲೇ**–ಒಂದೇ ಆಗಿರುವುದರಿಂದ ಅಂದರೆ ಪ್ರಾಪ್ಯನಾದ ಸಿದ್ಧೋಪಾಯನೇ ಪ್ರಾಪಕನಾಗಿರುವುದರಿಂದ (ಭಗವಂತನು ತಾನೇ ತನ್ನನ್ನು ಪಡೆಯುವಂತೆ ಸಂಕಲ್ಪಿಸುವುದರಿಂದ) ಪ್ರಾಪ್ಯಾನು ರೂಪವಾದ ಉಪಾಯವು ಸರ್ವೇಶ್ವರನೊಬ್ಬನೇ. ಸಿದ್ಧೋಪಾಯ ವ್ಯತಿರಿಕ್ತಗಳಾದ ಭಕ್ತ್ಯಾದಿಗಳು ಉಪೇಯನಾದ ಭಗವಂತನಿಗಿಂತ ಬೇರೆಯಾದ್ದರಿಂದ ಅವುಗಳು ಪಾತಕಗಳು. ಇದಕ್ಕೆ

**1) "ಅಥಪಾತಕ ಭೀತಸ್ತ್ವಂ ಸರ್ವಭಾವೇನ ಭಾರತ ।
ವಿಮುಕ್ತಾನ್ಯ ಸಮಾರಂಭೋ ನಾರಾಯಣ ಪರೋಭವ ॥"
ಎನ್ಱು ಧರ್ಮದೇವತೈ ತನ್ ಪುತ್ರನುಕ್ಕು ಉಪಾಸನಾದಿಹಳೈ ಪ್ರಾಪ್ಯ ವಿರೋಧಿಹಳೆನ್ಱು ನಿನ್ೈತ್ತು ನಿನ್ದಿತ್ತದೆನ್ನಿಲ್, ಅದುವುಮ್ ಅತ್ಯನ್ತಾನುಪಪನ್ನಮ್ ;**

**ಎಙ್ಙನೇ ಎನ್ನಿಲ್ :– ಅಭಿಚಾರಾದಿಹಳ್ ಫಲವಿಶೇಷ ಮುಡಿಯಾಹವಿರೇ ಅನರ್ಥ ಹೇತುಕ್ಕಳಾಯಿಱ್ಱು; ಇಂಗು ಫಲಂ ಮೋಕ್ಷಮಾನ ಪಡಿಯಾಲೇ ಅಮ್ಮುಖತ್ತಾಲ್ ಅನರ್ಥ ಪ್ರಸಂಗಮಿಲ್ಲೈ. ಏಕಾಧಿಕಾರಿ ವಿಷಯತ್ತಿಲೇ ಏಕಫಲತ್ತುಕ್ಕು ಗುರುವಾಯಿರುಪ್ಪ ದೊನ್ಱೈ ಉಪಾಯಮಾಹಕ್ಕಾಟ್ಟಿ ಲಘುವಾಯಿರುಪ್ಪದೊನ್ಱಿಲೇ ರುಚಿಯೈಪ್ಪಿರಪ್ಪಿಕ್ಕಿರದೆನ್ಗೈ ವಿವಕ್ಷಿತ ವಿಪರೀತಮ್. ಅಂಗತ್ತಿಲೇ ಅಂಗಿಫಲ ನಿರ್ದೇಶಮಾಯ್ ಸ್ತುತಿಮಾತ್ರ ಮಾಯಿರೇ ಅಪ್ಪೋದು ಫಲಿಪ್ಪದು ?**

---

ಪ್ರಮಾಣವನ್ನು ಆಹ್ವೆಯಾಲೇಯನ್ನೋ 1) **ಅಥಪಾತಕ ಭೀತಸ್ತ್ವಂ** ಎಂದಾರಂಭಿಸಿ ತೋರಿಸುತ್ತಾರೆ. ಪೂರ್ವ ಪಕ್ಷಿಯು ಹೇಳುವುದೇನೆಂದರೆ, "ಅಥಪಾತಕ ಭೀತಸ್ತ್ವಂ ಇತ್ಯಾದಿ–ಎಲೈ ಯುಧಿಷ್ಠಿರನೇ, ಭಕ್ತಿರೂಪ ಪಾಪಗಳಿಗೆ ಭಯಪಟ್ಟ ನೀನು, ಇತರ, ಸಮಾರಂಭಗಳನ್ನೆಲ್ಲಾ ಬಿಟ್ಟು, ಸಿದ್ಧೋಪಾಯನಾದ ನಾರಾಯಣನನ್ನೇ ಪ್ರಾಪ್ಯನನ್ನಾಗಿಯೂ ಪ್ರಾಪಕನನ್ನಾಗಿಯೂ ನೆನೆಸಿಕೋ, ಎಂದು ಧರ್ಮದೇವತೆಯು ತನ್ನ ಮಗನಾದ ಧರ್ಮರಾಜನಿಗೆ, ಉಪಾಸನಾದಿಗಳು ಪ್ರಾಪ್ಯ ವಿರೋಧಿಗಳೆಂದು ನೆನೆಸಿಕೊಂಡು ನಿಂದಿಸಿದೆ ಎಂದರೆ, **ಅದುವುಮ್ ಅತ್ಯಂತಾನುಪಪನ್ನಮ್** -ಅದು ಸ್ವಲ್ಪವೂ ಸರಿಯಲ್ಲವೆಂದು ಈ ಪಕ್ಷವನ್ನು ನಿಂದಿಸುತ್ತಾರೆ. **ಎಂಗನೇಯೆನ್ನಿಲ್**–ಹೇಗೆಂದರೆ ಅಭಿಚಾರಾದಿಗಳು(ಮಾಟ ಶೂನ್ಯ ಮೊದಲಾದವು)ಶತ್ರುವಧವೆಂಬ ಫಲ ವಿಶೇಷಗಳ ಮೂಲಕ ಅನರ್ಥಕ್ಕೆ ಕಾರಣಗಳಾಗುತ್ತವೆ, ಇಲ್ಲಿ ಭಕ್ತಿಯೋಗವು ಅದೃಷ್ಟವಾದ ಮೋಕ್ಷವೆಂಬ ಫಲವನ್ನು ಕೊಡುವುದರಿಂದ ಆ ಮೂಲಕ ಅನರ್ಥವನ್ನುಂಟು ಮಾಡುವ ಪ್ರಸಂಗವಿಲ್ಲ. **ಏಕಾಧಿಕಾರಿವಿಷಯತ್ತಿಲೇ** ಇತ್ಯಾದಿ–ಒಂದೇ ಅಧಿಕಾರಿಗೆ, ಒಂದೇ ಫಲಕ್ಕೆ ಗುರುವಾದ ಭಕ್ತಿಯೋಗವನ್ನು ಉಪಾಯವಾಗಿ ತೋರಿಸಿ, ಲಘುವಾದ ಪ್ರಪತ್ತಿಯಲ್ಲಿ ರುಚಿಯನ್ನುಂಟು ಮಾಡುವುದೆಂಬುದು ತಾನು ಸ್ಥಾಪಿಸಲು ವಿವಕ್ಷಿಸುವ ಅರ್ಥಕ್ಕೆ ವಿಪರೀತ. ಭಕ್ತಿ ಪ್ರಪತ್ತಿಗಳೆರಡೂ ಪರಸ್ಪರ ನಿರಪೇಕ್ಷೋಪಾಯಗಳಾದರೆ ಲಘೂಪಾಯವಾದ ಪ್ರಪತ್ತಿಯಲ್ಲಿ ಸ್ವರಸತಃ ಪ್ರವೃತ್ತಿಯುಂಟಾಗುವುದರಿಂದ, ಗುರೂಪಾಯವಾದ ಭಕ್ತಿ ವಿಧಿಯನ್ನು ಹೇಳಿ ಲಘೂಪಾಯವಾದ ಪ್ರಪತ್ತಿಯಲ್ಲಿ ಪ್ರರೋಚನೆಯನ್ನುಂಟು ಮಾಡಬೇಕಿಲ್ಲ. ಲಘೂಪಾಯಕ್ಕೆ ಅಲ್ಪಫಲ, ಗುರೂಪಾಯಕ್ಕೆ ಅಧಿಕ ಫಲವೆಂದು ಹೇಳಿ ಲಘೂಪಾಯವನ್ನು ಅನುಷ್ಠಿಸಿ ಲಘುವಾದ ಫಲವನ್ನು ಪಡೆದ ನಂತರ ಗುರೂಪಾಯದಲ್ಲಿ ರುಚಿಯುಂಟಾಗುತ್ತದೆ ಎಂದು ಹೇಳುವುದು ಸ್ವಾರಸ್ಯವಾದದ್ದು. ಇಲ್ಲಿ ಒಂದೇ ಅಧಿಕಾರಿಗೆ ಗುರುವಾದ ಭಕ್ತಿಯೋಗವೂ ಲಘುವಾದ ಪ್ರಪತ್ತಿಯೂ ಒಂದೇ ಫಲವನ್ನು ಕೊಡುವುದರಿಂದಲೂ, ಆ ಫಲವು ಪ್ರತ್ಯಕ್ಷವಲ್ಲದೆ ಅದೃಷ್ಟ ರೂಪವಾದ್ದರಿಂದಲೂ, ಭಕ್ತಿಯು ಪ್ರಪತ್ತಿಗೆ ಪ್ರರೋಚಕವೆಂಬ ಮಾತು ತಾನು ಸ್ಥಾಪಿಸಲು ಹೊರಟ ಸಿದ್ಧಾಂತಕ್ಕೆ ವಿರುದ್ಧವೆಂದು ತಾತ್ಪರ್ಯ. **ಅಂಗತ್ತಿಲೇ**–ಇತ್ಯಾದಿ–ಒಬ್ಬ ಅಧಿಕಾರಿ ವಿಷಯದಲ್ಲಿ ಒಂದೇ ಫಲಕ್ಕೋಸ್ಕರ ವಿಧಿಸಲ್ಪಟ್ಟ ಭಕ್ತಿ ಪ್ರಪತ್ತಿಗಳಲ್ಲಿ ಭಕ್ತಿ ವಿಧಿಯು ಪ್ರಪತ್ತಿಗೆ ಪ್ರರೋಚಕವೆಂಬ ಮಾತು, ಕರ್ಮಾಂಗವಾದ ಸ್ತೋತ್ರವು ಕರ್ಮಕ್ಕೆ ಪ್ರಶಂಸೆಯನ್ನುಂಟು ಮಾಡಿ, ಕರ್ಮವನ್ನು ಅನುಷ್ಠಿಸಲು ಆಸೆಯನ್ನುಂಟು ಮಾಡುವಂತೆ ಪ್ರಪತ್ತ್ಯಂಗವಾದ ಭಕ್ತಿಯ ಸ್ತುತಿಯು, ಪ್ರಪತ್ತಿಯ ಪ್ರಶಂಸೆಯಾಗಿ, ಪ್ರಪತ್ತಿಯಲಿ ಪ್ರರೋಚನೆಯನ್ನುಂಟು ಮಾಡುತ್ತದೆ ಎಂದು ಒಪ್ಪಿ ಭಕ್ತಿಯು ಪ್ರಪತ್ತಿಗೆ ಅಂಗವೆಂದು ಸಿದ್ಧಿಸುವುದರಿಂದ ಪೂರ್ವಪಕ್ಷಿಯು ಹೇಳುವ ಭಕ್ತಿಯು ಸ್ವರೂಪ ವಿರುದ್ಧವೆಂಬ ಸಿದ್ಧಾಂತವು ಸ್ಥಾಪಿತವಾಗಲಾರದು.

---

1) ವಿಷ್ಣು ಧರ್ಮಮ್ 66-72

**ಪ್ರಾಪ್ಯತ್ತುಕ್ಕಿನ್ನದು ಅನುರೂಪಮೆನ್ನುಮಿಡಮ್ ಶಾಸ್ತ್ರೈಕ ವೇದ್ಯ ಮಾಹೈಯಾಲೇ ಯುಕ್ತಿ ಮಾತ್ರತ್ತಾಲೇ ಪ್ರಾಪ್ಯವಿರೋಧಮ್ ಶೊಲ್ಲವೊಣ್ಣಾದು. ಆಗಮ ಸಿದ್ಧಂಗಳಿಲೊನ್ರೈ ವಿರುದ್ಧ ತರ್ಕಂಗಳಾಲೇ ಬಾಧಿಕ್ಕಿಲ್ ತುಲ್ಯ ನ್ಯಾಯತ್ತಾಲೇ ಸರ್ವಶಾಸ್ತ್ರಂಗಳುಮ್ ಪ್ರಪತ್ತಿ ಶಾಸ್ತ್ರಮ್ ತಾನುಮ್ ಪ್ರಮಾಣಮನ್ರಿಕ್ಕೇ ಯೊಳಿಯುಮ್.**

**"ಅಥ ಪಾತಕ ಭೀತಸ್ತ್ವಮ್" ಎನ್ಗಿರ ವಿಡತ್ತಿಲುಮ್, "ಪಾತಕ" ಶಬ್ದತ್ತಾಲೇ ಉಪಾಸನಾದಿಹಳೈ ನಿಂದಿಕ್ಕಿರದೆನ್ಗೈಕ್ಕುಮ್ ಪ್ರಮಾಣಮಿಲ್ಲೈ. ಆಹೈಯಾಲ್ ಮುಮುಕ್ಷುವುಕ್ಕು ವಿಹಿತಂಗಳಾಹೈಯಾಲೇ ಭಕ್ತಿಪ್ರಪತ್ತಿಹಳಿರುಣ್ಡುಮ್ ಯಥಾಧಿಕಾರಮ್ ಪರಿಗ್ರಾಹ್ಯಂಗಳ್.**

---

ಅನಂತರ ಮುಮುಕ್ಷುವಿಗೆ ಪ್ರಾಪ್ಯನಾದ ಸಿದ್ಧೋಪಾಯನೇ ಪ್ರಾಪಕನಾಗಿ ಪ್ರಾಪ್ಯ ಪ್ರಾಪಕಕೈಕ್ಯವನ್ನು ಹೇಳುವ ಎರಡನೇ ಪಕ್ಷವನ್ನು **ಪ್ರಾಪ್ಯತ್ತುಕ್ಕು** ಎಂದಾರಂಭಿಸಿ ನಿರಾಕರಿಸುತ್ತಾರೆ. ಅದಾಗಿ ಪ್ರಾಪ್ಯಕ್ಕೆ ಅನುರೂಪವಾದದ್ದು ಇದು ಎಂಬುದನ್ನು ಶಾಸ್ತ್ರದಿಂದಲೇ ತಿಳಿಯಬೇಕೇ ವಿನಹ, ಯುಕ್ತಿ ಮಾತ್ರದಿಂದ ಪ್ರಾಪ್ಯ ವಿರೋಧಗಳನ್ನು ಹೇಳಲಿಕ್ಕಿಲ್ಲ. "ಯಮೇವೈಷ ವೃಣುತೇ ತೇನಲಭ್ಯಃ, ಭಕ್ತ್ಯಾ ತ್ವನನ್ಯಯಾ ಶಕ್ಯಃ ಎಂಬುದೇ ಮೊದಲಾದ ಶಾಸ್ತ್ರಗಳು ಪ್ರಾಪ್ಯನಾದ ಭಗವಂತನಿಗೆ ಅನುರೂಪವಾಗಿಯೇ ತತ್ಪ್ರಸಾದ ದ್ವಾರಾ ಪ್ರಾಪಕವಾದ ಭಕ್ತಿಯನ್ನು ಹೇಳಿರುವುದರಿಂದ ಪ್ರಾಪ್ಯಕ್ಕಿಂತ ಬೇರೆಯಾದದು ಭಕ್ತಿಯೋಗವೆಂಬ ಕಾರಣದಿಂದ ಪ್ರಾಪ್ಯ ವಿರುದ್ಧವೆಂದು ಹೇಳುವುದು ಸಾಹಸವಾದ ಮಾತು. **ಯುಕ್ತಿ ಮಾತ್ರತ್ತಾಲೇ** ಇತ್ಯಾದಿ–ಶಾಸ್ತ್ರಗಳು ಭಕ್ತಿಯೋಗವನ್ನು ಭಗವತ್ಪ್ರಸಾದದ್ವಾರಾ ಭಗವತ್ಪ್ರಾಪ್ತಿಗೆ ಕಾರಣವಾಗಿ ಹೇಳಿರುವುದರಿಂದ ಅದನ್ನು ಯುಕ್ತಿಯಿಂದ ಬಾಧಿಸಿದರೆ ಅನಿಷ್ಟವು ಏರ್ಪಡುತ್ತದೆಯೆಂದು **ಆಗಮ ಸಿದ್ಧಂಗಳಿಲ್ ಒನ್ರೈ** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಶಾಸ್ತ್ರದಿಂದ ಸಿದ್ಧಗಳಾದ ಸಿದ್ಧೋಪಾಯ, ಸಾಧ್ಯೋಪಾಯಗಳಲ್ಲಿ, ಒಂದನ್ನು ವಿರುದ್ಧ ತರ್ಕಗಳಿಂದ ಬಾಧಿಸಿದರೆ **ತುಲ್ಯನ್ಯಾಯತ್ತಾಲೇ**– ಅದಕ್ಕೆ ಸದೃಶವಾದ ನ್ಯಾಯದಿಂದ ಸರ್ವ ಶಾಸ್ತ್ರಗಳೂ ಪ್ರಪತ್ತಿ ಶಾಸ್ತ್ರವೂ ಪ್ರಮಾಣವಿಲ್ಲದೆ ಹೋಗುತ್ತದೆ.

"ಅಥಪಾತಕ ಭೀತಸ್ತ್ವಂ" ಎಂದು ಮೇಲೆ ಹೇಳಿದ ವಚನದಲ್ಲಿಯೇ ಪಾತಕ ಶಬ್ದದಿಂದ ಭಕ್ತಿಯನ್ನು, ವಿವಕ್ಷಿಸಿ ಅದು ಪ್ರಾಪ್ಯವಿರುದ್ಧವೆಂದು ಹೇಳಿದೆಯಲ್ಲವೇ ಎಂದರೆ, ಅದರ ಅರ್ಥವನ್ನು ಸರಿಯಾಗಿ ವಿವರಿಸುತ್ತಾರೆ. ಅದಾಗಿ **ಅಥಪಾತಕಭೀತಸ್ತ್ವಂ ಎನ್ಗಿರವಿಡುತ್ತಿಲುಮ್**-ಈ ಸ್ಥಳದಲ್ಲಿ ಪಾತಕ ಶಬ್ದದಿಂದ ಉಪಾಸನೆ ಮೊದಲಾದವುಗಳನ್ನು ನಿಂದಿಸುತ್ತದೆಯೆಂಬುದಕ್ಕೆ ಪ್ರಮಾಣವಿಲ್ಲ. ಈ ಶ್ಲೋಕವು ಭಕ್ತಿ ಪ್ರಕರಣದಲ್ಲಿ ಹೇಳಲ್ಪಟ್ಟಿದ್ದರೂ, ಪಾತಕ ಶಬ್ದದಿಂದ ಭಕ್ತಿಯು ಏರ್ಪಡಲು ಪ್ರತಿಬಂಧಕಗಳಾದ ಅನಾದಿಕಾಲ ಸಂಚಿತಗಳಾದ ಪಾಪಗಳೇ ಹೇಳಲ್ಪಡುತ್ತವೆ. ಉಪಾಸನಾದಿಗಳಲ್ಲಿ ಪ್ರವರ್ತಿಸಿದವನಿಗೆ ಉಪಾಸನೆಯು ಸಿದ್ಧಿಸಲು ಪ್ರತಿಬಂಧಕಗಳಾದ ಪಾಪಗಳನ್ನು ಕಳೆಯಲು ಕೃಚ್ಛ್ರ, ಚಾಂದ್ರಾಯಣ, ಕೂಶ್ಮಾಂಡ, ವೈಶ್ವಾನರ, ವ್ರಾತಪತಿ, ಪವಿತ್ರೇಷ್ಟಿ ಮೊದಲಾದ ಪ್ರಾಯಶ್ಚಿತ್ತಗಳನ್ನು ಮಾಡುವುದೂ ಅಶಕ್ಯವೆಂದು ತಿಳಿದು ಉಪಾಯ ವಿರೋಧಿ ಪಾಪದಿಂದ ಹೆದರಿದರೆ ಬೇರೆ ಉಪಾಯಗಳನ್ನು ಆಶ್ರಯಿಸುವ ಸಂಭ್ರಮವನ್ನು ಬಿಟ್ಟು ನಾರಾಯಣನನ್ನೇ ಉಪಾಯವಾಗಿ ಆಶ್ರಯಿಸು ಎಂಬುದು ಪ್ರಮಾಣಾನುಗುಣವಾದ ಶ್ಲೋಕಾರ್ಥ. ನಾರಾಯಣನನ್ನು ಉಪಾಯವಾಗಿ ಆಶ್ರಯಿಸು ಎಂದರೆ ನಾರಾಯಣನಲ್ಲಿ ಭಕ್ತಿಯು ನಿರ್ವಿಘ್ನವಾಗಿ ನಡೆಯಲು ಅಂಗ ಪ್ರಪತ್ತಿಯನ್ನು ಮಾಡು ಎಂಬುದು ತಾತ್ಪರ್ಯ.

"ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದ ಮುತ್ತಮಮ್ |
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ||"

ಎಂದು ಭಗವಂತನಿಂದಲೇ ಪವಿತ್ರವಾಗಿ ಕೊಂಡಾಡಲ್ಪಟ್ಟ ಉಪಾಸನೆಯನ್ನು ಧರ್ಮದೇವತೆಯು ಪಾತಕವೆಂದು

## ಭಕ್ತೇಃ ಶಿಷ್ಟಪರಿಗ್ರಹಾಭಾವಾತ್ ಸ್ವರೂಪ ವಿರೋಧ ಇತಿವಾದಸ್ಯ ನಿರಾಸಃ

**ವಿಹಿತಙ್ಗಳೇ ಯಾಹಿಲುಮ್ ಆಚಾರ್ಯರುಚಿ ಪರಿಗೃಹೀತಙ್ಗಳಲ್ಲಾದಪಡಿಯಾಲೇ ಅತಿಥಿ ಸತ್ಕಾರಙ್ಗಳಿಲೇ ವಿಹಿತಙ್ಗಳಾನ ಗವಾಲಂಭನಾದಿಹಳ್ ಪೋಲೇ, ಉಪಾಸನಾದಿಹಳ್ ಶಿಷ್ಟ ಪರಿಗ್ರಹ ವಿರುದ್ಧಙ್ಗಳಾಹೈಯಾಲೇ ಅನಾದರಣೀಯಙ್ಗಳನ್ರೋ? ಎನ್ಗೈಯುಮ್ ನಿರೂಪಕ ವಾಕ್ಯಮನ್ರು. ಸರ್ವಾಚಾರ್ಯ ಪರಿಗ್ರಹ ಮಿಲ್ಲಾದ ಪೋದನ್ರೋ, 1) "ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮ್ಯಮಪ್ಯಾಚರೇನ್ನತು" ಎನ್ರು ಕಳ್ಳಿಕ್ಕಲಾವದು. ಇಂಗು 2) "ತಸ್ಮೈ ನಮೋ ಮುನಿವರಾಯ ಪರಾಶರಾಯ" ಎನ್ಮುಪ್ಪಡಿ ಶ್ಲಾಘ್ಯರಾನ ಶ್ರೀ ಪರಾಶರಾದಿ ಪೂರ್ವಾಚಾರ್ಯರ್‌ಹಳ್ ಅನುಷ್ಠಿಕ್ಕೈಯಾಲ್ ಸರ್ವಶಿಷ್ಟ ಬಹಿಷ್ಕಾರಮ್ ಶೊಲ್ಲವೊಣ್ಣಾದು.**

---

ನಿಂದಿಸಿರುತ್ತಾನೆಂದು ಹೇಳುವುದಕ್ಕೆ ಪ್ರಮಾಣವಿಲ್ಲ. ಇದು ಪಂಡಿತ ಕೃತ್ಯವೂ ಆಗಲಾರದು ಎಂಬುದು ಭಾವ. **ಆಹೈಯಾಲ್ ಮುಮುಕ್ಷುವುಕ್ಕು** ಇತ್ಯಾದಿ – ಆದ್ದರಿಂದ ಮುಮುಕ್ಷುವಿಗೆ ಶಾಸ್ತ್ರವಿಹಿತಗಳಾದ್ದರಿಂದ ಭಕ್ತಿ ಪ್ರಪತ್ತಿಗಳೆರಡೂ ಯಥಾಧಿಕಾರ ಸರಿಗ್ರಾಹ್ಯಗಳು.

### ಭಕ್ತಿಯು ಶಿಷ್ಟ ಪರಿಗೃಹೀತವಲ್ಲವಾದ್ದರಿಂದ ಸ್ವರೂಪ ವಿರುದ್ಧವೆಂಬ ವಾದ ಖಂಡನೆ

10) ಅನಂತರ ಭಕ್ತ್ಯಾದಿಗಳು ಆಚಾರ್ಯ ರುಚಿ ಪರಿಗೃಹೀತಗಳಲ್ಲವಾದ್ದರಿಂದ ಸ್ವರೂಪ ವಿರುದ್ಧಗಳೆಂಬ ಮತ್ತೊಂದು ಚೋದ್ಯವನ್ನು, **ವಿಹಿತಂಗಳೇ ಯಾಹಿಲುಂ** – ಎಂದಾರಂಭಿಸಿ ನಿರಾಕರಿಸುತ್ತಾರೆ. ಆದಾಗಿ ಶಾಸ್ತ್ರವಿಹಿತಗಳಾದರೂ, ಆಚಾರ್ಯರುಗಳು ರುಚಿಸಿ ಪರಿಗ್ರಹಿಸಿಲ್ಲವಾದ್ದರಿಂದ, ಅತಿಥಿ ಸತ್ಕಾರಾದಿಗಳಲ್ಲಿ "ಸಮಾಂಸೋ ಮಧುಪರ್ಕೇತು ಗೋವಧಃ", "ಮಹೋಕ್ಷಂವಾ ಮಹಾಜಂವಾಶ್ರೋತ್ರಿಯಾಯೋಪಕಲ್ಪಯೇತ್" ಇತ್ಯಾದಿ ವಿಹಿತಗಳಾದ ಗೋವಧಗಳನ್ನು ಶಿಷ್ಟಪರಿ ಗೃಹೀತವಲ್ಲದುದರಿಂದ ಮಾಡದಿರುವ ಹಾಗೆ, **ಉಪಾಸನಾದಿಹಳ್ ಶಿಷ್ಟಪರಿಗ್ರಹ ವಿರುದ್ಧಂಗಳಾಹೈಯಾಲೇ**–ಉಪಾಸನಾದಿಗಳು ಶಿಷ್ಟಾಚಾರ ವಿರುದ್ಧಗಳಾದ್ದರಿಂದ ಅನಾದರಣೀಯಗಳು ಅಲ್ಲವೇ ಎಂದು ಹೇಳುವುದು ನಿರೂಪಕರು ಹೇಳುವ ಮಾತಲ್ಲ. **ಸರ್ವಾಚಾರ್ಯ** ಇತ್ಯಾದಿ–ಎಲ್ಲಾ ಆಚಾರ್ಯರುಗಳ ಪರಿಗ್ರಹವಿಲ್ಲದೆ ಇರುವ ಕಾಲದಲ್ಲಿ ಅಲ್ಲವೇ, 1) **ಅಸ್ವರ್ಗ್ಯಂ ಲೋಕವಿದ್ವಿಷ್ಟಂ** ಇತ್ಯಾದಿ ಹೇಳಿರುವಂತೆ ವರ್ಜಿಸಬೇಕು. ಅಂದರೆ ಲೋಕದಲ್ಲಿರುವ ಜನರೆಲ್ಲರೂ ಅಂಗೀಕರಿಸದೆ ಇದ್ದು **ಅಸ್ವರ್ಗ್ಯಂ**–ಅಲೌಕಿಕವಾದ ಶ್ರೇಯಸ್ಸನು, ಸಾಧಿಸದೆ ಇರುವ, ಕರ್ಮವನ್ನು **ಧರ್ಮ್ಯಮಪಿ**–ಶಾಸ್ತ್ರ ಚೋದಿತವಾಗಿದ್ದರೂ, **ನತ್ವಾಚರೇತ್**–ಆಚರಿಸಕೂಡದ್ದು ಎಂಬುದು ಪ್ರಮಾಣವಚನ. **ಇಂಗು** ಇತ್ಯಾದಿ ಇಲ್ಲಿ 2) **ತಸ್ಮೈನಮೋ ಮುನಿವರಾಯ ಪರಾಶರಾಯ**

---

1) ಕರ್ಮಣಾ ಮನಸಾ ವಾಚಾ ಯತ್ನಾದ್ಧರ್ಮಂ ಸಮಾಚರೇತ್ ।
ಅಸ್ವರ್ಗ್ಯಂ ಲೋಕ ವಿದ್ವಿಷ್ಟಂ ಧರ್ಮ್ಯಮಪ್ಯಾಚರೇನ್ನತು ॥
ಯಜುಸ್ಸಂಹಿತೆ (1-156) ಮನೋವಾಕ್ಕಾಯಗಳಿಂದ ಪ್ರಯತ್ನ ಪೂರ್ವಕ ಧರ್ಮಗಳನ್ನು ಅನುಷ್ಠಿಸಬೇಕು. ಆದರೆ ಶಾಸ್ತ್ರಗಳಲ್ಲಿ ಒಂದು ಪ್ರಯೋಜನಕ್ಕೆ ಉಪಾಯವಾಗಿ ಹೇಳಲ್ಪಟ್ಟಿದ್ದರೂ, ಸ್ವರ್ಗಾದಿ ಸುಖಗಳನ್ನು ಪಡೆಯಲು ವಿರೋಧವಾಗಿಯೂ, ಸರ್ವಲೋಕದವರಿಂದಲೂ ದ್ವೇಷಿಸಲ್ಪಟ್ಟು ಇರುವ ಧರ್ಮವನ್ನು ಆಚರಿಸಕೂಡದು.

2) ತತ್ವೇನಯಶ್ಚಿದ ಚಿದೀಶ್ವರ ತತ್ಸ್ವಭಾವ ಭೋಗಾಪವರ್ಗ ತದುಪಾಯ ಗತೀರುದಾರಃ ।
ಸಂದರ್ಶಯನ್ನಿರಮಿಮೀತ ಪುರಾಣ ರತ್ನಂ ತಸ್ಮೈನಮೋ ಮುನಿವರಾಯ ಪರಾಶರಾಯ ॥
ಸ್ತೋತ್ರರತ್ನ (4) ಚೇತನ, ಅಚೇತನ ಈಶ್ವರರೆಂಬ ತತ್ವಗಳನ್ನೂ ಬೇರೆ ಬೇರೆಯಾದ ಸ್ವಭಾವವನ್ನೂ ಐಹಿಕ ಸುಖ ಮೋಕ್ಷ ಸುಖ ಇವುಗಳಿಗೆ ಉಪಾಯ ಅವುಗಳನ್ನು ಪಡೆಯಲು ಧೂಮಾದಿ ಅರ್ಚಿರಾದಿ ಮಾರ್ಗವನ್ನೂ ಯಥಾರ್ಥವಾಗಿ ತಿಳಿಸಿ ಶ್ರೇಷ್ಠವಾದ ವಿಷ್ಣುಪುರಾಣವನ್ನು ರಚಿಸಿದ ಮುನಿ ಶ್ರೇಷ್ಠರಾದ (ಭಕ್ತಿಯೋಗಾನುಷ್ಠಾನವನ್ನು ಮಾಡಿದ)ಪರಾಶರರಿಗೆ ನಮಸ್ಕಾರ.

## ಕಲೌ ಯುಗೇ ಭಕ್ತ್ಯಧಿಕಾರ್ಯಭಾವಾತ್ ಸ್ವರೂಪ ವಿರುದ್ಧತ್ವ ಮಾಕ್ಷಿಪ್ಯ ಪರಿಹರತಿ

ಇಪ್ಪಡಿ ಯುಗಾಂತರಂಗಳಿಲ್ ಇವೈಧರ್ಮಂಗಳಾನಾಲುಮ್ ಕಲಿಯುಗತ್ತಿಲ್ ಯಥೋಕ್ತ ಮಾನ ಪರಮಾತ್ಮೋಪಾಸನಾದಿಹಳುಕ್ಕು ಅಧಿಕಾರಿಹಳ್ ದುರ್ಲಭರಾಹೈಯಾಲೇ ಇವೈಯಿಕ್ಕಾಲ ತ್ತುಕ್ಕು ಪೊರನ್ದುಮವೈ ಯನ್ರು, ಆಹೈಯಾಲೇ ಯನ್ರೋ,

1) "ಕಲೌ ಸಂಕೀರ್ತ್ಯ ಕೇಶವಮ್ ಎನ್ನುಮ್

2) "ಕಲೇ ರ್ದೋಷನಿಧೇ ರಾಜನ್ನಸ್ತಿ ಹ್ಯೇಕೋ ಮಹಾನ್ ಗುಣಃ |
ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂವ್ರಜೇತ್ ||"

ಎನ್ರುಮ್ ಶೊಲ್ಲುಹಿರದು ಎನ್ನುವುಮೊಣ್ಣಾದು.

---

ಭಕ್ತಿಯೋಗಾನುಷ್ಠಾನದಲ್ಲಿ ಅಗ್ರಗಣ್ಯರಾದ ಆ ಪರಾಶರ ಬ್ರಹ್ಮರ್ಷಿಗೆ ನಮಸ್ಕಾರ-ಎಂದ ಶ್ಲಾಘ್ಯರಾದ ಪರಾಶರಾದಿ ಪೂರ್ವಚಾರ್ಯರುಗಳು ಅನುಷ್ಠಿಸಿರುವುದರಿಂದ ಸರ್ವಶಿಷ್ಟ ಬಹಿಷ್ಕಾರವನ್ನು ಹೇಳಲಾಗುವುದಿಲ್ಲ. ಪರಾಶರಾದಿ ಕೆಲವು ಶಿಷ್ಟರು ಪರಿಗ್ರಹಿಸಿಲ್ಲವೆಂಬ ದೋಷವು ಪ್ರಪತ್ತಿಗೂ ಉಂಟು. ಆದ್ದರಿಂದ ಸರ್ವಶಿಷ್ಟರೂ ಪರಿಗ್ರಹಿಸಿಲ್ಲವಾದರೆ ಅದು ಬಾಧಕ. ಭಕ್ತಿಯೋಗವನ್ನು ಪರಾಶರಾದಿ ಕೆಲವು ಶಿಷ್ಟರು ಪರಿಗ್ರಹಿಸಿರುವುದರಿಂದ ಅದು "ಸ್ವರೂಪ ವಿರುದ್ಧ"ವೆಂದು ಹೇಳುವಮಾತು ಸರಿಯಲ್ಲವೆಂದು ತಾತ್ಪರ್ಯ.

### ಕಲಿಯುಗದಲ್ಲಿ ಭಕ್ತಿಯೋಗಕ್ಕೆ ಅಧಿಕಾರಿಗಳಿಲ್ಲವಾದ್ದರಿಂದ ಅದು ಸ್ವರೂಪ ವಿರುದ್ಧವೆಂಬ ವಾದ ಖಂಡನೆ

11) ಯುಗಾಂತರಗಳಲ್ಲಿ ಭಕ್ತಿಯೋಗವನ್ನು ಕೆಲವರು ಅನುಷ್ಠಿಸಿರುವುದರಿಂದ ಅದು ಸ್ವರೂಪ ವಿರುದ್ಧವಲ್ಲವೆಂದು ಹೇಳಿದರೂ, ಕಲಿಯುಗದಲ್ಲಿ ಭಕ್ತಿಯೋಗವನ್ನು ಅನುಷ್ಠಿಸುವ ಅಧಿಕಾರಿಗಳಿಲ್ಲವಾದ್ದರಿಂದ, ಇದು ಈ ಕಾಲಕ್ಕೆ ಸರಿಹೋಗುವುದಿಲ್ಲವೆಂಬ ಪಕ್ಷವನ್ನು **ಇಪ್ಪಡಿಯುಗಾಂತರಂಗಳಿಲೇ** – ಎಂದಾರಂಭಿಸಿ ಖಂಡಿಸುತ್ತಾರೆ. ಆದಾಗಿ ಹೀಗೆ ಯುಗಾಂತರಗಳಲ್ಲಿ ಭಕ್ತಿಯೋಗಾದಿಗಳು ಧರ್ಮಗಳಾಗಿದ್ದರೂ, ಕಲಿಯುಗದಲ್ಲಿ ಯಥೋಕ್ತವಾದ ಪರಮಾತ್ಮೋಪಾಸನಾದಿಗಳಿಗೆ ಅಧಿಕಾರಿಗಳು ದುರ್ಲಭರಾದ್ದರಿಂದ, ಇವೈ–ಈ ಭಕ್ತಿಯೋಗಾದಿಗಳು ಈ ಕಾಲಕ್ಕೆ **ಪೊರುಂದುಮವೈಯನ್ರು**–ಉಪಾಯಗಳಾಗಿ ಆಗಲಾರವು, **ಆಹೈಯಾಲೇಯನ್ರೋ** ಇತ್ಯಾದಿ ಕಲಿಯುಗದಲ್ಲಿ, ಭಕ್ತಿಯೋಗಾದಿಗಳನ್ನು ಅನುಷ್ಠಿಸುವುದು ಅಶಕ್ಯವಾದ್ದರಿಂದಲೇ ಅಲ್ಲವೇ ಲಘುವಾದ ಉಪಾಯಾಂತರಗಳಿಂದ ಮೋಕ್ಷ ಫಲವನ್ನು ಪಡೆಯಲು ಶಾಸ್ತ್ರಗಳು 1) **ಕಲೌಸಂಕೀರ್ತ್ಯ ಕೇಶವಂ**–ಕಲಿಯಲ್ಲಿ ಕೇಶವನನ್ನು ಸ್ತೋತ್ರ ಮಾಡಿಯೂ, 2) **ಕಲೇರ್ದೋಷ ನಿಧೇರಾಜನ್** ಭಕ್ತಿಯೋಗವನ್ನು ಅನುಷ್ಠಿಸದೆ ಕೇವಲ ನಾಮ ಸಂಕೀರ್ತನದಿಂದಲೇ ಭಗವಂತನನ್ನು ಪಡೆಯಬಹುದು ಎಂದು ಪ್ರಮಾಣವಚನವು ಹೇಳುತ್ತದೆ, ಎಂದು ಹೇಳಲಾಗುವುದಿಲ್ಲ.

---

1) ಧ್ಯಾಯನ್ ಕೃತೇ ಯಜನ್ ಯಜ್ಞೈಃ ತ್ರೇತಾಯಾಂ ದ್ವಾಪರೇಽರ್ಚಯನ್ |
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಮ್ ||

ವಿ. ಪುರಾಣ (6-2-17) ಕೃತಯುಗದಲ್ಲಿ ಭಗವಂತನ ಧ್ಯಾನ, ತ್ರೇತಾಯುಗದಲ್ಲಿ ಯಾಗ, ದ್ವಾಪರಯುಗದಲ್ಲಿ ಅರ್ಚನೆ, ಇವುಗಳಿಂದ ಪಡೆಯಬಹುದಾದ ಫಲವನ್ನು ಕಲಿಯುಗದಲ್ಲಿ ಕೇವಲ ಕೇಶವನಾಮ ಸಂಕೀರ್ತನದಿಂದ ಪಡೆಯಬಹುದು.

2) ಭಾರತ (11-3-51) ದೋಷಗಳಿಂದ ತುಂಬಿದ ಕಲಿಯುಗದಲ್ಲಿ ಒಂದು ವಿಶೇಷ ಗುಣವಿದೆ. ಶ್ರೀ ಕೃಷ್ಣನ ನಾಮ ಸಂಕೀರ್ತನದಿಂದಲೇ ಸಂಸಾರ ಬಂಧವನ್ನು ಬಿಟ್ಟು ಮೋಕ್ಷಕ್ಕೆ ಹೋಗಬಹುದು.

**3) ಕಲೌ ಕೃತಯುಗಂ ತಸ್ಯ ಕಲಿಸ್ತಸ್ಯ ಕೃತೇ ಯುಗೇ ।**
**ಯಸ್ಯ ಚೇತಸಿ ಗೋವಿಂದೋ ಹೃದಯೇ ಯಸ್ಯ ನಾಚ್ಯುತಃ ॥**

**ಎನ್ಱಿರಪಡಿಯೇ ಇಕ್ಕಾಲತ್ತಿಲುಮ್ ಉಪಾಸನಾದಿಹಳುಕ್ಕಧಿಕಾರಿಹಳ್ ಸ್ವಯಂ ಪ್ರಯೋಜನ ಯೋಗನಿಷ್ಠರಾನ ಪೂರ್ವಾಚಾರ್ಯರ್ಹಳ್ಪೋಲೇ ಸಂಭಾವಿತರಿರೇ,**

**ಇಙ್ಙನಲ್ಲಾದ ಪೋದು ಸಂಕೀರ್ತನ ವ್ಯತಿರಿಕ್ತೈಯಾನ ಪ್ರಪತ್ತಿಕ್ಕುಮ್,**

**4) "ಕಿಂನು ತಸ್ಯಚ ಮಂತ್ರಸ್ಯ ಕರ್ಮಣಃ ಕಮಲಾಸನ ।**
**ನಲಭ್ಯತೇಽಧಿಕಾರೀವಾ ಶ್ರೋತುಕಾಮೋಽಪಿ ವಾ ನರಃ ॥"**

**ಇತ್ಯಾದಿಹಳಿಲ್ ಪಡಿಯೇ ಮಹಾವಿಶ್ವಾಸಾದಿಯುಕ್ತರಾನವಧಿಕಾರಿಹಳ್ ತೇಟ್ಟಮಾಹೈಯಾಲೇ ಅವ್ವಿಡತ್ತಿಲುಮ್ ಇಪ್ಪ್ರಸಙ್ಗಮ್ ವರುಮ್.**

**ಆನಪಿನ್ಪು ಉಪಾಸನಾದಿಹಳುಕ್ಕು ವೇರೊರುವಿರೋಧಮಿಲ್ಲಾಮೈಯಾಲ್ ಯಥಾಶಾಸ್ತ್ರಂ ಆತುರಾದಿ**

---

3) **ಕಲೌಕೃತಯುಗಂ** ಇತ್ಯಾದಿ-ಯಾವನ ಹೃದಯದಲ್ಲಿ ಗೋವಿಂದನು ಧ್ಯಾತನಾಗಿದ್ದಾನೋ ಅವನಿಗೆ ಕಲಿಯುಗವು ಕೃತಯುಗವೆಂದು ಹೇಳಿರುವಂತೆ ಈ ಕಲಿಯುಗದಲ್ಲಿಯೂ ಉಪಾಸನಕ್ಕೆ ಅಧಿಕಾರಿಗಳು ಸ್ವಯಂ ಪ್ರಯೋಜನ ಯೋಗನಿಷ್ಠರಾದ ನಾಥಮುನಿ, ಕುರುಹೈಕ್ಕಾವಲಪ್ಪನ್ ಮೊದಲಾದ ಪೂರ್ವಾಚಾರ್ಯರುಗಳ ಹಾಗೆ **ಸಂಭಾವಿತರಿರೇ**-ಉಂಟಾಗಿರುವವರಲ್ಲವೇ. ಇದರಿಂದ ಕಲಿಯುಗದಲ್ಲಿ ಅಧಿಕಾರಿ ದೌರ್ಲಭ್ಯದಿಂದ ಭಕ್ತಿಯು ಉಪಾಯವಲ್ಲವೆಂದು ಹೇಳುವುದು ಅಸಂಗತ. **ಇಂಗನಲ್ಲಾದಪೋದು**-ಹೀಗಲ್ಲದೆ ಇರುವುದಾದರೆ, **ಸಂಕೀರ್ತನ ವ್ಯತಿರಿಕ್ತೈಯಾನ ಪ್ರಪತ್ತಿಕ್ಕುಮ್,** ಕೀರ್ತನಾದೇವ ಎಂಬಲ್ಲಿ ಏವಕಾರಕ್ಕೆ ಅನ್ಯಯೋಗ ವ್ಯವಚ್ಛೇದವನ್ನು ಅಂಗೀಕರಿಸಿದರೆ ಸಂಕೀರ್ತನವ್ಯತಿರಿಕ್ತವಾದ ಪ್ರಪತ್ತಿಗೂ ಮೋಕ್ಷೋಪಾಯತ್ವವು ಇಲ್ಲವೆಂದು ಹೇಳಬೇಕಾದ ಪ್ರಸಂಗವು ಬರುತ್ತದೆ. ಇದು ಭಕ್ತಿಯು ಮಾತ್ರ ಸ್ವರೂಪ ವಿರುದ್ಧವೆಂದು ಹೇಳುವ ಪೂರ್ವಪಕ್ಷಿಗೆ ಸಮ್ಮತವಲ್ಲ. ಭಕ್ತಿಯು ಹಾಗೆ ಪ್ರಪತ್ತಿಗೂ ಅಧಿಕಾರಿ ದೌರ್ಲಭ್ಯವು ಇಲ್ಲದಿರುವುದರಿಂದ ಅನುಪಾದೇಯತ್ವವನ್ನು ಹೇಳಲಾಗುತ್ತದೆಯೇ ಎಂದರೆ 4) **ಕಿನ್ನುತಸ್ಯಚಮಂತ್ರಸ್ಯ** ಇತ್ಯಾದಿಗಳಲ್ಲಿ ಹೇಳಿರುವಂತೆ ಮಹಾವಿಶ್ವಾಸಾದಿ ಯುಕ್ತರಾದ ಅಧಿಕಾರಿಗಳು, ದುರ್ಲಭರಾದ್ದರಿಂದ ಪ್ರಪತ್ತಿಗೂ ಈ ಪ್ರಸಂಗವು ಬರುತ್ತದೆ.

**ಭಕ್ತಿಯು ಸ್ವರೂಪ ವಿರುದ್ಧವಲ್ಲ ಅಕಿಂಚನನಿಗೆ ಸ್ವಾಧಿಕಾರ ವಿರುದ್ಧ,**

ಹಾಗಾದರೆ ಭಕ್ತಿಯು ಸ್ವರೂಪವಿರುದ್ಧವೆಂದು ಯಾವ ರೀತಿಯಲ್ಲಿಯೂ ನಿರ್ವಹಿಸಲಾಗುವುದಿಲ್ಲವೇ, ಪ್ರಪನಾದಿಕಾರಿಯು ಭಕ್ತಿಯನ್ನು ಅನುಷ್ಠಿಸಬಹುದೇ ಎಂದರೆ, **ಆನಪಿನ್ಪು** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಮೇಲೆ ಹೇಳಿದಂತೆ ಭಕ್ತಿಯೋಗವು ಸ್ವರೂಪ ವಿರುದ್ಧವೆಂದು ಒಂದು ರೀತಿಯಲ್ಲಿಯೂ ಹೇಳಲಾಗದು **ಉಪಾಸನಾದಿಹಳುಕ್ಕು** ಇತ್ಯಾದಿ ಉಪಾಸನಾದಿಗಳಿಗೆ ಬೇರೆ ಯಾವ ವಿರೋಧವೂ ಇಲ್ಲದಿರುವುದರಿಂದ, ಯಥಾಶಾಸ್ತ್ರ ಆತುರಾ

---

3) ವಿಷ್ಣುಧರ್ಮ

4) ಪೌಷ್ಕರ ಸಂಹಿತೆ ಎಲೈ ಕಮಲಾಸನನೇ ಈ ಮಂತ್ರವನ್ನು ಉಪದೇಶ ಹೊಂದಿ ಪ್ರಪತ್ತಿ ಮಾಡುವ ಅಧಿಕಾರಿಯು ಸಿಗುತ್ತಾನೆಯೇ, ಅದನ್ನು ಕೇಳಿ ತಿಳಿದುಕೊಳ್ಳುವ ಅಧಿಕಾರಿಯಾದರೂ ಸಿಗುತ್ತಾನೆಯೇ. ಮಹಾವಿಶ್ವಾಸ ಪೂರ್ವಕ ಅನುಷ್ಠಿಸುವ ಅಧಿಕಾರಿಯು ದುರ್ಲಭನೆಂದು ತಾತ್ಪರ್ಯ.

**ಹಳುಕ್ಕು ಅವಗಾಹನಾದಿಹಳಿಲ್ ಪೋಲೇ, ಇನ್ನೈ, "ಅಕಿಞ್ಚನೋಽನನ್ಯಗತಿ ಎನ್ರಿರುಕ್ಕು ಮಧಿಕಾರಿಕ್ಕು ಸ್ವಾಧಿಕಾರ ವಿರುದ್ಧಙ್ಗಳಿನ್ನ ಪ್ರಾಪ್ತಮ್.**

**ಅತಃ ಭಕ್ತಿಯೋಗಃ ಸ್ವರೂಪಾನುರೂಪ ಏವ**

**ಇನ್ವಧಿಕಾರ ವಿರೋಧ ಮರಿಯಾದೇ ಉಪಾಸನಾದಿಹಳಿಲೇ ಪ್ರವರ್ತಿಕ್ಕು ಮವನೈಪ್ಪತ್ತ 1) "ನರಸ್ಯ ಬುದ್ಧಿ ದೌರ್ಬಲ್ಯಾದುಪಾಯಾಂತರ ಮಿಷ್ಯತೇ" ಎನ್ರದು. ಆಹೈಯಾಲ್ ಇವ್ವುಪಾಸನಾದಿ ಹಳುವಮ್ ಅಧಿಕಾರ್ಯಂತರತ್ತುಕ್ಕು ಯಥಾಧಿಕಾರಮನುಗುಣಙ್ಗಳ್.**

**ಸ್ವರೂಪಾವಿರುದ್ಧತ್ವೇ ಭಕ್ತಿಪ್ರಪತ್ಯೋಃ ತುಲ್ಯತ್ವೇಽಪಿ ಭಕ್ತ್ಯಪೇಕ್ಷಯಾ ಪ್ರಪತ್ತಿಶ್ಶ್ರೇಯಸೀ**

**ಅವಟ್ರುಕ್ಕು ಸಾಮರ್ಥ್ಯಮಿಲ್ಲಾಮೈಯಾಲಾದಲ್, ವಿಳಂಬಕ್ಷಮನಲ್ಲಾಮೈಯಾಲಾದಲ್, ಇಪ್ಪ್ರಪತ್ತಿಯೈ ಸ್ವತಂತ್ರೋಪಾಯಮಾಹ ಪ್ಪಟ್ರಿನವನೈ 1) "ಶೆಯ್ದ ವೇಳ್ವಿಯನ್" ಎನ್ರುಮ್, 2) "ಕೃತಕೃತ್ಯ" ಎನ್ರುಮ್, 3) "ಅನುಷ್ಠಿತ**

---

ದಿಗಳಿಗೆ–ರೋಗಪೀಡಿತರಿಗೆ, ಅವಗಾಹನಾದಿ–ನೀರಲ್ಲಿ ಮುಳುಗಿ ಸ್ನಾನ ಮಾಡುವುದು ಅಥವಾ ತಣ್ಣೀರಿನಲ್ಲಿ ಸ್ನಾನ ಮಾಡುವುದು ಹೇಗೆ ಸ್ವಾಧಿಕಾರ ವಿರುದ್ಧವೋ ಹಾಗೆ **ಅಕಿಂಚನೋಽನನ್ಯಗತಿಃ** – ಆಕಿಂಚಿನ್ಯಾನನ್ಯಗತಿಗಳಿಂದ ಕೂಡಿದ ಅಧಿಕಾರಿಗೆ, ಸ್ವಾಧಿಕಾರ ವಿರುದ್ಧವೆಂದು ಹೇಳಬಹುದು. ನೀವು ಶೇಷಭೂತನಾಗಿ ಅತ್ಯಂತ ಪರತಂತ್ರನಾದ ಜೀವನಿಗೆ ಅಹಂಕಾರ ಗರ್ಭಿತವಾದ ಭಕ್ತಿಯೋಗವು ಸ್ವರೂಪ ವಿರುದ್ಧವೆಂದು ಹೇಳುತ್ತೀರಿ. ಅದು ಸರಿಯಲ್ಲ. ಆಕಿಂಚನ್ಯಾನನ್ಯಗತಿಕನಿಗೆ ಭಕ್ತಿಯೋಗವು ಸ್ವಾಧಿಕಾರವಿರುದ್ಧವೆಂದು ಹೇಳುವುದು ಸರಿಯಾದ ಮಾತು ಎಂದು ತಾತ್ಪರ್ಯ. **ಇನ್ವಧಿಕಾರಮ್** ಇತ್ಯಾದಿ–ಅಂದರೆ ತನಗೆ ಇರುವ ಆಕಿಂಚನ್ಯಾದಿ ಆಧಿಕಾರ ವಿರೋಧವನ್ನು ತಿಳಿದುಕೊಳ್ಳದೆ ಉಪಾಸನಾದಿಗಳಲ್ಲಿ ಪ್ರವರ್ತಿಸುವವನನ್ನು ಕುರಿತು1) **ನರಸ್ಯಬುದ್ಧಿ ದೌರ್ಬಲ್ಯಾತ್**-ಎಂದು ಆರಂಭಿಸಿ ಹೇಳಿರುತ್ತದೆ. ಅದಾಗಿ ತನ್ನ ಆಕಿಂಚನ್ಯಾದಿಗಳನ್ನು ತಿಳಿದುಕೊಳ್ಳದೆ ಪ್ರಪತ್ತ್ಯೇತರೋಪಾಯವನ್ನು ಅಂದರೆ ಭಕ್ತಿಯೋಗಾದಿಗಳನ್ನು ಅನುಷ್ಠಿಸಲು ಇಚ್ಛಿಸುತ್ತಾನೆ. ಇದು ಅವನ ಬುದ್ಧಿ ದೌರ್ಬಲ್ಯ **ಆಹೈಯಾಲ್**– ಅಕಿಂಚನಾಧಿಕಾರಿಗೇನೇ ಸ್ವಾಧಿಕಾರ ವಿರುದ್ಧವಾದ್ದರಿಂದ ಉಪಾಸನಾದಿಗಳೂ, ಅಕಿಂಚನನಲ್ಲದೆ ಅಥವಾ ಕಾಲ ವಿಳಂಬವನ್ನು ಸಹಿಸುವ ಅಧಿಕಾರಿಗೆ ಸ್ವರೂಪ ವಿರುದ್ಧವಿಲ್ಲದೆ ಅನುಷ್ಠಿಸಲು ಅನುಗುಣವಾದದ್ದು.

**ಭಕ್ತಿಗಿಂತಲೂ ಪ್ರಪತ್ತಿಗೆ ಮಹಿಮೆ ಹೆಚ್ಚು**

**ಅವಟ್ರುಕ್ಕು** ಇತ್ಯಾದಿ. ಭಕ್ತಿಯೋಗವನ್ನು ಅನುಷ್ಠಿಸಲು ಸಾಮರ್ಥ್ಯವಿಲ್ಲದವನಾಗಿ ಅಥವಾ ವಿಳಂಬವನ್ನು ಸಹಿಸಲು ಆಗದವನಾಗಿ ಈ ಪ್ರಪತ್ತಿಯನ್ನು ಸ್ವತಂತ್ರೋಪಾಯವಾಗಿ **ಪಟ್ರಿನವನೈ** – ಅವಲಂಬಿಸಿದವನನ್ನು 1) **ಶೆಯ್ದ ವೇಳ್ವಿಯನ್** ಯಜ್ಞವನ್ನು ಚನ್ನಾಗಿ ಅನುಷ್ಠಿಸಿದವನು. (ಇದು ಆಳ್ವಾರವರು

---

1) ಉಪಾಯಾಪಾಯ ಸಂಯುಕ್ತಸ್ಯ ವರ್ತಮಾನಸ್ಯ ಮಧ್ಯತಃ ।
ನರಸ್ಯ ಬುದ್ಧಿ ದೌರ್ಬಲ್ಯಾತ್ ಉಪಾಯಾಂತರ ಮಿಷ್ಯತೇ ॥ **ಲಕ್ಷ್ಮೀ ತಂತ್ರ.**

1) ಎಯ್ದುಕ್ಕೂವುದಲಾವದೇ ಎನಕ್ಕು ಎವ್ವದೆವ್ವತ್ತುಳಾಯುಮಾಯ್ ನಿನ್ರು,
ಕೈದವಂಗಳ್ಶೆಯ್ಯುಂ ಕರುಮೇನಿಯಮ್ಮಾನೇ ।

**ತಿ.ವಾ.ಮೊ.**

**ಕ್ರತುಶತರ್" ಎನ್ರುಮ್, ಇವನುಕ್ಕು ಮರಣಾನ್ತಮಾಹ ನಡಕ್ಕಿರ ವ್ಯಾಪಾರಙ್ಗಳ್ಳೈ ಅವಭೃಥ ಪರ್ಯನ್ತ ಕರ್ತ್ತವ್ಯ ಕಲಾಪಂಗಳಾಹ ಸ್ತುತಿತ್ತುಮ್, ಕ್ರತ್ವಂತರಾನುಷ್ಠಾನಮ್ ಪಣ್ಣಿನವನುಕ್ಕು ಮೇಲುಳ್ಳ ನಿತ್ಯ ನೈಮಿತ್ತಿಕಂಗಳ್ ಪೋಲೇ ಇವನುಕ್ಕು ಸ್ವತಂತ್ರ ವಿಧಿಯಾಲೇ ವರ್ಣಾಶ್ರಮಾದಿ ಧರ್ಮಂಗಳ್ ನಡವಾನಿರ್ಕಚ್ಚೆಯ್‌ದೇಯುಮ್, ಅನುಷ್ಠಿತಾತ್ಮಯಾಗ ಫಲತ್ತೈಪ್ಪತ್ತ ಕರ್ತ್ತವ್ಯಾಂತರ ನಿರಪೇಕ್ಷನಾಹ ವುಮ್, ಆಳ್ವಾರ್‌ಹಳುಮ್, ಮಹರ್ಷಿಹಳುಮ್. ಭಗವಚ್ಛಾಸ್ತ್ರಂಗಳುಮ್, ವೇದಂಗಳುಮ್. ಘೋಷಿಯಾನಿನ್ರನ.**

---

ಉದ್ಘೋಷಿಸಿರುವುದು.) ಎಂದೂ 2) **ಕೃತಕೃತ್ಯನ್** – ಮಾಡಬೇಕಾದ ಕಾರ್ಯವನ್ನು ಮಾಡಿದವನು (ಮಹರ್ಷಿಗಳು ಹೇಳಿರುವುದು) ಎಂದೂ, 3) **ಅನುಷ್ಠಿತ ಕ್ರತುಶತನ್** – ನೂರು ಅಂದರೆ ಅಸಂಖ್ಯಾತಗಳಾದ ಯಾಗಗಳನ್ನು ಮಾಡಿದವನು (ಭಗವಚ್ಛಾಸ್ತ್ರಗಳು ಹೇಳಿರುವುದು.) ಎಂದೂ ಆಳ್ವಾರುಗಳೂ, ಮಹರ್ಷಿಗಳೂ ಭಗವಚ್ಛಾಸ್ತ್ರಗಳೊ ಘೋಷಿಸಿವೆ, ಹಾಗೆಯೇ **ಇವನುಕ್ಕು ಮರಣಾಂತಮಾಹ** ಇತ್ಯಾದಿ – ಈ ಪ್ರಪನ್ನನಿಗೆ ಮರಣಾಂತವಾಗಿ ನಡೆಯುವ ವ್ಯಾಪಾರಗಳೆಲ್ಲಾ ಯಾಗದ ಕೊನೆಯಲ್ಲಿ ಅವಭೃತಸ್ನಾನ ಮಾಡುವಂತೆ, ಅವಭೃತೆ ಪರ್ಯಂತವಾದ ಕರ್ತವ್ಯಕಲಾಪಗಳು. ಅಂದರೆ "ತಸ್ಯೈವಂ ವಿದುಷಃ" ಎಂದು ಆರಂಭಿಸುವ ತೈತ್ತರೀಯೋಪನಿಷತ್ತು, "ಯನ್ಮರಣಂ ತದವಭೃಥಮ್", ಎಂದು ಸ್ತೋತ್ರಮಾಡಿದೆ. **"ಕ್ರತ್ವಂತರಾನುಷ್ಠಾನಮ್"** ಇತ್ಯಾದಿ ಯಾಗವೊಂದನ್ನು ಅನುಷ್ಠಿಸಿದವನಿಗೆ ಅನಂತರ ಅನುಷ್ಠಿಸಿ ಬರುವ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳು ಹೇಗೆ ಆ ಯಾಗ ಫಲಕ್ಕೆ ಸಹಕಾರಿಗಳಲ್ಲವೋ ಹಾಗೆ ಸ್ವತಂತ್ರ ಪ್ರಪತ್ತಿನಿಷ್ಠನಿಗೆ, "ವಿಹಿತತ್ವಾಚ್ಚ ಆಶ್ರಮ ಕರ್ಮಾಪಿ" ಎಂಬಂತೆ **ಸ್ವತಂತ್ರವಿಧಿಯಾಲೇ** – ಪ್ರಪತ್ತಿಗೆ ಅಂಗವಿಲ್ಲದಿದ್ದರೂ, ಪ್ರಪತ್ತಿ ಫಲಕ್ಕೆ ಅನಪೇಕ್ಷಿತಗಳಾದರೂ ಶಾಸ್ತ್ರವಿಹಿತವಾದ ನಿತ್ಯನೈಮಿತ್ತಿಕ ಧರ್ಮಗಳು ಅನುಷ್ಠಿಸಲ್ಪಡತಕ್ಕವು. ಕೃತಕೃತ್ಯನಾದ್ದರಿಂದ ಮೋಕ್ಷ ಫಲಕ್ಕೆ ನಿತ್ಯನೈಮಿತ್ತಿಕ ವರ್ಣಾಶ್ರಮಧರ್ಮಗಳು ಸಹಕಾರಿಗಳಲ್ಲವಾದರೂ ಸ್ವತಂತಾಜ್ಞಾ ಪರಿಪಾಲನವು ಅವಶ್ಯ ಕರ್ತವ್ಯವಾದ್ದರಿಂದ ಪ್ರಪತ್ತ್ಯುತ್ತರ ಕಾಲದಲ್ಲಿಯೂ, ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳನ್ನು ಅವಶ್ಯಾನುಷ್ಠಿಸಬೇಕೆಂದು ತಾತ್ಪರ್ಯ. **ಅನುಷ್ಠಿತ ಆತ್ಮಯಾಗ ಫಲತ್ತೈಪ್ಪಟ್ರ**–ತಾನು ಅನುಷ್ಠಿಸಿದ ಆತ್ಮಯಾಗವಾದ–ಪ್ರಪತ್ತಿ, ಅದರ ಫಲ–ಮೋಕ್ಷ, ಅದಕ್ಕಾಗಿ **ಕರ್ತವ್ಯಾಂತರ ನಿರಪೇಕ್ಷನಾಹವುಮ್**–ಬೇರೆ ಯಾವುದನ್ನೂ ಮಾಡಬೇಕಿಲ್ಲವೆಂದು, ಆಳ್ವಾರುಗಳೂ, ಮಹರ್ಷಿಗಳೂ, ಭಗವಚ್ಛಾಸ್ತ್ರಗಳೂ, ವೇದಗಳೂ **ಘೋಷಿಯಾನಿನ್ರನ** ಘೋಷಿಸಿದ್ದಾರೆ.

---

ಶೆಯ್ದುವೇಳ್ವಿಯರ್ ವೈಯ್ಯತ್ತೇವರರಾ ಚ್ಚೆರೀವರ ಮಂಗಲನಗರ್
ಕೈದೊಳ್ಳುವಿರುಂದಾಯ್ ಆದುನಾನುಂ ಕಂಡೇನೇ॥ ತಿರುವಾಯ್ (5-7-5)

ಶೆಯ್ದುವೇಳ್ವಿಯರ್ - ಪ್ರಪತ್ತಿಯನ್ನು ಅನುಷ್ಠಿಸಿ ಅದರಿಂದ ಆತ್ಮ ಕ್ಷೇಮಕ್ಕೆ ಮಾಡಬೇಕಾದ ಯಾಗವನ್ನು ಮಾಡಿ ಮುಗಿಸಿದವರು.

2) ಸಾತ್ಯಕಿತಂತ್ರ

3) ಏವಂರೂಪಂ ತಮಭ್ಯರ್ಚ್ಯ ಪ್ರಕ್ಷೀಣಾ ಶೇಷಪಾತಕಃ ।
ಅನುಷ್ಠಿತ ಕ್ರತುಶತಃ ಭವತ್ಯೇವ ನ ಸಂಶಯಃ । ಅಹಿರ್ಬುಧ್ನ್ಯ, ಸಂಹಿತೆ (27-49)

ಇಂಥಹ ಭಗವಂತನನ್ನು ಅರ್ಚಿಸಿ ಎಲ್ಲಾ ಪಾಪಗಳನ್ನೂ ಕಳೆದು ಕೊಂಡವನಾಗಿ, ಆದರಿಂದ ನೂರು ಯಾಗವನ್ನು ಅಂದರೆ ಅನಂತ ಯಾಗಗಳನ್ನು ಮಾಡಿದವನಾಗಿ ಆಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

### ಉಪಾಸನಾತ್ ನ್ಯಾಸಸ್ಯ ಮಾಹಾತ್ಮ್ಯಮ್

**ಆಹೈಯಾಲ್,** 1) **"ತಪಸ್ವಿಭ್ಯೋऽಧಿಕೋಯೋಗೀ ಜ್ಞಾನಿಭ್ಯೋಪಿ ಮತೋಧಿಕಃ।
ಕರ್ಮಿಭ್ಯಶ್ಚಾಧಿಕೋಯೋಗೀ ತಸ್ಮಾದ್ಯೋಗೀ ಭವಾರ್ಜುನ ॥**
**ಇತ್ಯಾದಿಹಳಾಲೇ ಪ್ರವೃತ್ತಿ ಧರ್ಮಙ್ಗಳಿರ್ಕ್ಕಾಟ್ಟಿಲ್ ನಿವೃತ್ತಿ ಧರ್ಮಙ್ಗಳ್ ಶ್ರೇಷ್ಠಙ್ಗಳಾನಾರ್ಪೋಲವುಮ್ ಆತ್ಮವಿಷಯಯೋಗಙ್ಗಳಿರ್ಕ್ಕಾಟ್ಟಿಲ್** 2) **"ಯೋಗಿನಾಮಪಿ ಸರ್ವೇಷಾಂ" ಎನ್ಗಿರ ಪಡಿಯೇ ವಸುದೇವನಂದನ ವಿಷಯಮಾನ ಯೋಗಮ್ ಶ್ರೇಷ್ಠಮಾನಾರ್ಪೋಲುವುಮ್ ಪರಮಾತ್ಮ ವಿಷಯ ವಿದ್ಯಾ ವಿಶೇಷಙ್ಗಳಿಲ್ಲಾತ್ತಿಲುಮ್, ನ್ಯಾಸನಿಕ್ಷೇಪಾದಿ ಶಬ್ದಙ್ಗಳಾಲೇ ಶೊಲ್ಲಪ್ಪಟ್ಟ ವಿದ್ಯಾವಿಶೇಷಮೇ ಸುಕರತ್ವ, ಸಕೃತ್ಕರ್ತವ್ಯತ್ವ, ಶೀಘ್ರಫಲ ಪ್ರದತ್ವಾದಿಹಳಾಲೇ ಶ್ರೇಷ್ಠತಮುಮ್.**

**ನ್ಯಾಸವಿದ್ಯೆಯಿಲೇ ಕಂಠೋಕ್ತಮಾನ ಇವ್ವರ್ಥತ್ತೈ** 1) **"ತೇಷಾಂತು ತಪಸಾಂ ನ್ಯಾಸಮತಿರಿಕ್ತಂ**

---

### ನ್ಯಾಸ ವಿದ್ಯೆಯು ಶ್ರೇಷ್ಠತಮ

**ಆಹೈಯಾಲ್**-ಹೀಗೆ ಭಕ್ತಿಯೋಗನಿಷ್ಠನಿಗಿಂತಲೂ, ಪ್ರಪನ್ನನ್ನು ಉತ್ಕೃಷ್ಟನೆಂದು ಆಳ್ವಾರ್ ಮೊದಲಾದವರು ಘೋಷಿಸಿರುವುದರಿಂದ 1) **ತಪಸ್ವಿಭ್ಯೋऽಧಿಕೋಯೋಗೀ** ಇತ್ಯಾದಿಗಳಲ್ಲಿ ಪ್ರವೃತ್ತಿ ಧರ್ಮಗಳಿಗಿಂತ ನಿವೃತ್ತಿ ಧರ್ಮಗಳು ಶ್ರೇಷ್ಠಗಳಾದಂತೆ, ಅವುಗಳಲ್ಲಿ ಆತ್ಮ ವಿಷಯವಾದ ಯೋಗವು ಶ್ರೇಷ್ಠವಾದಂತೆಯೂ, **ಯೋಗಂಗಳಿರ್ ಕಾಟ್ಟಿಲ್**-ಯೋಗಗಳಿಗಿಂತ, 2) **ಯೋಗಿನಾಮಪಿ ಸರ್ವೇಷಾಂ,** ಎಂಬಂತೆ ವಸುದೇವನಂದನ ವಿಷಯವಾದ ಯೋಗವು ಶ್ರೇಷ್ಠವಾದಂತೆ, ಪರಮಾತ್ಮ ವಿಷಯ ವಿದ್ಯಾವಿಶೇಷಗಳೆಲ್ಲಕ್ಕಿಂತಲೂ, **ನ್ಯಾಸನಿಕ್ಷೇಪಾದಿ** ಶಬ್ದಗಳಿಂದ ಹೇಳಲ್ಪಟ್ಟ, ವಿದ್ಯಾ ವಿಶೇಷವೇ **ಸುಕರತ್ವ**-ಸುಲಭವಾಗಿ ಮಾಡತಕ್ಕದ್ದು, **ಸಕೃತ್ಕರ್ತವ್ಯತ್ವ**-ಒಂದೇ ಸಲ ಮಾಡತಕ್ಕದ್ದು, **ಶೀಘ್ರಫಲ ಪ್ರದತ್ವಾದಿಗಳಿಂದ** ಶೀಘ್ರವಾಗಿ ಇವನು ಅಪೇಕ್ಷಿಸಿದ ಕಾಲದಲ್ಲಿ ಫಲವನ್ನು ಕೊಡುವುದರಿಂದ ಶ್ರೇಷ್ಠತಮವಾದದ್ದು. ಮೇಲೆ ಹೇಳಿದ ಯೋಗಾದಿಗಳಿಗಿಂತ ಜೀವಾತ್ಮ ವಿಷಯ ಯೋಗವು ಅತಿಶಯಿತ ಫಲಕ್ಕೆ ಸಾಧನಗಳಾಗಿ ಮೇಲೆ ಮೇಲೆ ಶ್ರೇಷ್ಠಗಳೆಂದು ಎಣಿಸಲ್ಪಟ್ಟರೂ, ಭಕ್ತಿಗಿಂತ ಪ್ರಪತ್ತಿಗೆ ಶ್ರೈಷ್ಠ್ಯವು ಫಲದಲ್ಲಿ ಸಮಾನತ್ವವೆಂಬುದರಿಂದ ಇಲ್ಲವಾದರೂ, ಸುಕರತ್ವ, ಸಕೃತ್ಕರ್ತವ್ಯತ್ವ, ಶೀಘ್ರ ಫಲ ಪ್ರದತ್ವಾದಿಗಳಿಂದ, ಹೇಳಲ್ಪಡುತ್ತದೆ ಎಂದು ತಾತ್ಪರ್ಯ. **ನ್ಯಾಸವಿದ್ಯೆಯಿಲೇ** -ಇತ್ಯಾದಿ-"ತಸ್ಮಾನ್ನ್ಯಾಸಮೇಷಾಂ ತಪಸಾಮತಿರಿಕ್ತಮಾಹುಃ" (ತೈತ್ತಿರೀಯೋಪನಿಷತ್) ಎಂದು ನ್ಯಾಸ ವಿದ್ಯೆಯು ಎಲ್ಲಾ ತಪಸ್ಸಿಗಳಿಗಿಂತ ಮೇಲಾದದು-ಶ್ರೇಷ್ಠವಾದದ್ದು ಎಂದು ಕಂಠೋಕ್ತವಾಗಿ ಹೇಳಿರುವುದನ್ನು 1) **ತೇಷಾಂತುತಪಸಾನ್ನ್ಯಾಸಂ-**

---

1) ಗೀತೆ (6-46) ಎಲೈ ಅರ್ಜುನನೇ, ಆತ್ಮಸ್ವರೂಪವನ್ನು ಧ್ಯಾನ ಮಾಡುವ ಯೋಗಿಯು ತಪಸ್ಸನ್ನು ಮಾಡುವವನಿಗಿಂತ ಮೇಲಾದವನು, ಆತ್ಮ ಜ್ಞಾನಿ ವಿನಹ ಇತರ ಜ್ಞಾನಿಗಳಿಗಿಂತ ಮೇಲಾದವನು, ಅಶ್ವಮೇಧ ಮೊದಲಾದ ಕರ್ಮಗಳನ್ನು ಮಾಡುವವರಿಗಿಂತ ಮೇಲಾದವನು. ಆದ್ದರಿಂದ ನೀನು ಆತ್ಮಸ್ವರೂಪವನ್ನು ಧ್ಯಾನ ಮಾಡುವ ಯೋಗಿಯಾಗು.

2) ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ।
ಶ್ರದ್ಧಾವಾನ್ ಭಜತೇಯೋಮಾಂ ಸಮೇಯುಕ್ತತಮೋಮತಃ ॥
ಗೀತೆ (6-47) ಯಾವನು ನನ್ನಲ್ಲಿ (ಕೃಷ್ಣಪರಮಾತ್ಮನಲ್ಲಿ) ಮನಸ್ಸನ್ನಿಟ್ಟು ಶ್ರದ್ಧೆಯಿಂದ ನನ್ನನ್ನು (ಕೃಷ್ಣ ಪರಮಾತ್ಮನನ್ನು) ಉಪಾಸನೆ ಮಾಡುತ್ತಾನೋ ಅವನು ಎಲ್ಲಾ ಯೋಗಿಗಳಿಗಿಂತ ಬಹಳ ಮೇಲಾದವನು.

1) ಯಾನಿ ನಿಶ್ಶ್ರೇಯಸಾರ್ಥಾನಿ ಚೋದಿತಾನಿ ತಪಾಂಸಿವೈ।
ತೇಷಾಂತು ತಪಸಾಂ ನ್ಯಾಸಮತಿರಿಕ್ತಂ ತಪಃ ಶ್ರುತಮ್ ॥
ಅಹಿರ್ಬುಧ್ನ್ಯ ಸಂಹಿತೆ. 37-36. ಮೋಕ್ಷಾರ್ಥವಾಗಿ ವಿಧಿಸಲ್ಪಟ್ಟ ಭಕ್ತಿಯೂ ಸೇರಿದ ಎಲ್ಲಾ ತಪಸ್ಸುಗಳಿಗಿಂತ, **ನ್ಯಾಸವು** ಅತಿರಿಕ್ತ-ಶ್ರೇಷ್ಠವಾದ ತಪಸ್ಸು.

**ತಪಶ್ಶ್ರುತಮ್",** 2) **"ಸತ್ಕರ್ಮನಿರತಾಶ್ಶುದ್ಧಾಸ್ಸಾಂಖ್ಯಯೋಗವಿದಸ್ತಥಾ ।**
**ನಾರ್ಹಂತಿ ಶರಣಸ್ಥಸ್ಯ ಕಲಾಮ್ ಕೋಟಿ ತಮೀಮಪಿ ॥" ಎನ್ರು ಭಗವಚ್ಛಾಸ್ತ್ರಮ್ ಉಪಬೃಹ್ಮಿತ್ತದು**

### ಭರನ್ಯಾಸಸ್ಯ ಅಧಿಕ ಪ್ರಭಾವಂ ದೃಷ್ಟಾಂತೇನ ದ್ರಢಯತಿ

**ಅವಗಾಹನಾದಿಹಳಿಲ್ ಸಮರ್ಥನಲ್ಲಾದವನುಕ್ಕು 1) "ಮಾನಸಂ ವಿಷ್ಣು ಚಿಂತನಂ" ಎನ್ರು ಭಗವಚ್ಚಿನ್ತನತ್ತೈ ಸ್ನಾನಮಾಹ ವಿಧಿತ್ತಾಲದು ಸ್ನಾನಾಂತರಙ್ಗಳ್ ಪಣ್ಣುಹಿರ ಶುದ್ಧಿಯೈಯುಮ್ ಪಣ್ಣಿ, ಪಾಪಾಂತರಂಗಳೈಯುಮ್ ಶಮಿಪ್ಪಿತ್ತು, ಅಪ್ಪೋದೇ ಭಗವದನುಭವ ರಸತ್ತೈಯುಂ ಮುಙ್ಗಾಕ್ಕುಮಾಪ್ಪೋಲೇ. ಉಪಾಸನಾದಿಹಳಿಲ್ ಸಮರ್ಧನಲ್ಲಾದವನುಕ್ಕು ಪ್ರಪತ್ತಿಯೈ ವಿಧಿತ್ತಾಲುಮ್ ಇಪ್ಪ್ರಪತ್ತಿತಾನೇ ಅನ್ವೈ ಕೊಡುಕ್ಕುಮ್ ಫಲತ್ತೈಯುಮ್, ಅನ್ವೈ ತನ್ನೈಯುಮ್ ಕೊಡಕ್ಕುವತ್ತಾಯ್**

---

ಇತ್ಯಾದಿಯಾಗಿ ಅಹಿರ್ಬುಧ್ನ್ಯ ಸಂಹಿತೆಯು ಉಪಬೃಂಹಿಸುತ್ತದೆ. ಶ್ರುತಿಯಲ್ಲಿ "ತಸ್ಮಾನ್ನ್ಯಾಸಮ್ ಏಷಾಂತಪಸಾಂ ಅತಿರಿಕ್ತಮಾಹುಃ" ಎಂದು ನ್ಯಾಸವು, ಏಷಾಂ–ಮೇಲೆ ಹೇಳಿದ ಸತ್ಯ, ತಪಸ್ಸು, ದಮ, ಶಮ ಇತ್ಯಾದಿಯಾಗಿ, ಅಧೀತಗಳಾದ ತಪಸ್ಸಿಗಳಿಗಿಂತ ಮೇಲಾದದು. ಈ ಪ್ರಕರಣದಲ್ಲಿ ಭಕ್ತಿಯು ಪಠಿತವಲ್ಲವಾದ್ದರಿಂದ ಭಕ್ತಿಗಿಂತ ನ್ಯಾಸವು ಮೇಲಾದದು ಎಂದು ಏರ್ಪಡಲಿಲ್ಲವೆಂಬ ಶಂಕೆಯನ್ನು ಅಪಹರಿಸಲು 'ತೇಷಾಂತುತಪಸಾಂ ನ್ಯಾಸಂ' ಎಂಬ ಉಪಬೃಂಹಣ ವಾಕ್ಯವನ್ನು ಆಚಾರ್ಯರು ಹೇಳಿರುತ್ತಾರೆ. ಅದಾಗಿ ಎಲ್ಲಾ ತಪಸ್ಸುಗಳಿಗಿಂತಲೂ ನ್ಯಾಸವು ಮೇಲಾದುದು ಎಂದು ಏರ್ಪಡುತ್ತದೆ. 'ಏಷಾಂತಪಸಾಂ' ಎಂಬಲ್ಲಿಯೂ ಉದಾಹರಣೆಗಾಗಿ ಕೆಲವು ತಪಸ್ಸುಗಳನ್ನು ಹೇಳಿವೆ, ನ್ಯಾಸವು ಎಲ್ಲಾ ತಪಸ್ಸುಗಳಿಗಿಂತಲೂ ಮೇಲಾದುದು ಎಂದು ಭಾವ. ಈ ಅರ್ಥವನ್ನು 2) **ಸತ್ಕರ್ಮ ನಿರತಾಃ** ಎಂದು ಭಗವಚ್ಛಾಸ್ತ್ರವು (ಲಕ್ಷ್ಮೀತಂತ್ರ) ಉಪಬೃಂಹಿಸಿದೆ. ಆದಾಗಿ ಕರ್ಮಯೋಗ ನಿರತರು, ಸಾಂಖ್ಯ ಆತ್ಮ ವಿಷಯಕವಾದ ಜ್ಞಾನಯೋಗ ನಿಷ್ಠರು, ಮತ್ತು ಯೋಗವಿದಃ–ಭಕ್ತಿಯೋಗ ನಿಷ್ಠರು, ಶರಣಾಗತಿನಿಷ್ಠನ ಕೋಟಿಯಲ್ಲಿ ಒಂದು ಅಂಶಕ್ಕೆ ಸಮಾನರಾಗುವುದಿಲ್ಲವೆಂದು ನ್ಯಾಸ ನಿಷ್ಠನ ಸರ್ವಾಧಿಕ್ಯವನ್ನು ತಿಳಿಸುತ್ತದೆ.

ನಾರ್ಹಂತಿ ಶರಣಸ್ಥಸ್ಯ ಎಂದು ಹೇಳಿದ ಪ್ರಪತ್ತಿಯ ಪ್ರಭಾವವನ್ನು ದೃಷ್ಟಾಂತ ಪೂರ್ವಕವಾಗಿ **ಅವಗಾಹನಾದಿಹಳಿಲ್** ಎಂದಾರಂಭಿಸಿ ಉಪಪಾದಿಸುತ್ತಾರೆ. ಅದಾಗಿ ಅವಗಾಹನ ಸ್ನಾನಾದಿಗಳಲ್ಲಿ ಸಮರ್ಥ ನಲ್ಲದನಿಗೆ, 1) **"ಮಾನಸಂ ವಿಷ್ಣುಚಿಂತನಮ್"** ಎಂದು ವಿಷ್ಣುವಿನ ಧ್ಯಾನವನ್ನು (ಮಾನಸ) ಸ್ನಾನವಾಗಿ ವಿಧಿಸಿದರೆ, ಅದು ಸ್ನಾನಾಂತರಗಳು ಮಾಡುವ ಶುದ್ಧಿಯನ್ನೂ ಮಾಡಿ, ಪಾಪಾಂತರಗಳನ್ನೂ ಹೋಗಲಾಡಿಸಿ ಆಗಲೇ ಭಗವದನುಭವರಸವನ್ನೂ ಉಂಟು ಮಾಡುವಂತೆ, ಉಪಾಸನಾದಿಗಳಲ್ಲಿ ಸಮರ್ಥನಲ್ಲದವನಿಗೆ ಪ್ರಪತ್ತಿಯನ್ನು ವಿಧಿಸಿದರೂ, ಈ ಪ್ರಪತ್ತಿಯೇ **ಅನ್ವೈಕೊಡುಕ್ಕುಮ್ ಫಲತ್ತೈಯುಮ್** – ಉಪಾಸನಾದಿಗಳು

---

2) ಲಕ್ಷ್ಮೀತಂತ್ರ (17-62) ಕರ್ಮಯೋಗನಿರತರು, ಸಾಂಖ್ಯ ನಿರತರು-ಜ್ಞಾನಯೋಗನಿರತರು,ಯೋಗವಿದಃ– ಭಕ್ತಿಯೋಗ ನಿರತರು ಶರಣಾಗತಿ ನಿಷ್ಠೆಯನ್ನು ಅವಲಂಬಿಸುವವನ ಕೋಟಿಯಲ್ಲಿ ಒಂದು ಭಾಗಕ್ಕೂ ಅರ್ಹರಲ್ಲ.

1) ಯತ್ತು ಸಾತಪವರ್ಷೇಣ ದಿವ್ಯಂ ತತ್ಸ್ನಾನ ಮುಚ್ಯತೇ ।
ವಾರುಣಂತ್ವವಗಾಹಸ್ತು ಮಾನಸಂ ವಿಷ್ಣು ಚಿಂತನಮ್ ॥
ಗಾರ್ಗ್ಯಸ್ಮೃತಿ:- ಬಿಸಿಲಿನಿಂದ ಕೂಡಿದ ಮಳೆಯಲ್ಲಿ ಸ್ನಾನಮಾಡುವುದು. ದಿವ್ಯಸ್ನಾನವೆಂದು ಹೇಳಲ್ಪಟ್ಟದೆ. ಅವಗಾಹನ ಸ್ನಾನವು ವಾರುಣಸ್ನಾನ. ವಿಷ್ಣುಚಿಂತನವು ಮಾನಸಸ್ನಾನವೆಂದು ಹೇಳಲ್ಪಡುತ್ತದೆ.

**ಅಕಿಂಚನನುಕ್ಕು ಉತ್ತಾರಕನಾಯ್ ಅವರ್ ಅಪೇಕ್ಷಿತ್ತ ಕಾಲತ್ತಿಲೇ ಫಲಾವಿನಾ ಭಾವತ್ತೈಯುಮ್ ಉಡೈತ್ತಾಯ್, ಇರುಕ್ಕೈಯಾಲೇ ಅಧಿಕ ಪ್ರಭಾವ ಮಾಯಿರುಕ್ಕುಮ್.**

**ಇಪ್ಪಡಿ ಇವ್ವುಪಾಯತ್ತಿನ್ ಅಧಿಕಾರತ್ತಿಲುಮ್ ಸ್ವರೂಪತ್ತಿಲುಮ್ ವರುಮ್ ಕಲಕ್ಕಙ್ಗಳ್ ಶಮಿಪ್ಪಿತ್ತೋಮ್. ಇನಿಮೇಲ್ ಪರಿಕರಙ್ಗಳಿಲ್ ವರುಮ್ ವ್ಯಾಮೋಹಂ ಶಮಿಪ್ಪಿಕ್ಕಿರೋಮ್-**

**ಪ್ರಪತ್ತೇಃ ಆನುಕೂಲ್ಯಾದಿ ಪರಿಕರಾಣಾ ಮಾವಶ್ಯಕತ್ವಂ ನಾಸ್ತೀತಿ ವಾದ ನಿರಾಸಃ**

**ಇವ್ವುಪಾಯತ್ತುಕ್ಕು ಆನುಕೂಲ್ಯ ಸಙ್ಕಲ್ಪಾದಿಹಳ್ ವೇಣುಮೋ ?** 1) **"ಆರ್ತೋವಾ ಯದಿವಾ ದೃಪ್ತಃ" ಎನ್ರುಮ್,**

2) **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ ।**
**ದೋಷೋ ಯದ್ಯಪಿ ತಸ್ಯಸ್ಯಾತ್ ॥"**

---

ಕೊಡುವ ಫಲವನ್ನೂ ಹಾಗೆಯೇ ಅಂದರೆ ಉಪಾಸನವನ್ನು ಮಾಡುವುದರಿಂದ ಲಭಿಸುವ ಐಶ್ವರ್ಯ, ಕೈವಲ್ಯ, ಮೋಕ್ಷಾಖ್ಯ ಫಲಗಳನ್ನು, **ಅವೈತನ್ನೈಯುಮ್ ಕೊಡುಕ್ಕವಟ್ರಾಯ್**- ಉಪಾಸನ ವಿರೋಧಿ ಪಾಪಗಳನ್ನು ಹೋಗಲಾಡಿಸಿ, ಉಪಾಸನ ನಿಷ್ಪತ್ತಿಯನ್ನೂ ಉಂಟು ಮಾಡಿ, ಅಕಿಂಚನನಿಗೆ ಉತ್ತಾರಕವಾಗಿ ಅವನು ಅಪೇಕ್ಷಿಸಿದ ಕಾಲದಲ್ಲಿ **ಫಲಾವಿನಾಭಾವತ್ತೈಯುಮ್ ಉಡೈತ್ತಾಯಿರುಕ್ಕೈಯಾಲೇ** – ಫಲಾವಿನಾಭಾವ – ಫಲವು ಇಲ್ಲವೆಂಬುದು ಇಲ್ಲದೆ ಅಂದರೆ ಅವಶ್ಯ ಫಲವನ್ನು ಕೊಡುವುದರಿಂದ, **ಅಧಿಕಪ್ರಭಾವಮಾಯಿರುಕ್ಕುಮ್**- ಭಕ್ತಿಗಿಂತ ಹೆಚ್ಚು ಪ್ರಭಾವ – ಉತ್ಕರ್ಷವುಳ್ಳದಾಗಿರುತ್ತದೆ.

**ಪ್ರಪತ್ತಿಗೆ ಅಂಗಗಳುಬೇಕಿಲ್ಲವೆಂಬ ಪಕ್ಷ ಖಂಡನೆ.**

**ಇಪ್ಪಡಿ**-ಮೇಲೆ ಹೇಳಿದ ರೀತಿಯಲ್ಲಿ ಈ ಉಪಾಯದ (ಪ್ರಪತ್ತಿಯ) ಸರ್ವಾಧಿಕಾರತ್ವದಲ್ಲಿಯೂ, ಸ್ವರೂಪ ದಲ್ಲಿಯೂ ಉಂಟಾಗುವ ಸಂದೇಹಗಳನ್ನೂ **ಶಮಿಪ್ಪಿತ್ತೋಮ್**-ಹೋಗಲಾಡಿಸಿದೆವೆಂದು ಆಚಾರ್ಯರು ಕೃಪೆ ಮಾಡು ತ್ತಾರೆ. **ಇನಿಮೇಲ್**-ಇನ್ನು ಮೇಲೆ ಪರಿಕರಂಗಳಿಲ್ ಇತ್ಯಾದಿ – ಪ್ರಪತ್ತಿಯ ಅಂಗಗಳಲ್ಲಿ, ಉಂಟಾಗುವ ವ್ಯಾಮೋಹ ವನ್ನು ಹೋಗಲಾಡಿಸುತ್ತೇವೆಂದು ಪ್ರತಿಜ್ಞೆ ಮಾಡುತ್ತಾರೆ.

**ಇವ್ವುಪಾಯತ್ತುಕ್ಕು** ಇತ್ಯಾದಿ- ಈ ಪ್ರಪತ್ತಿಯೆಂಬ ಉಪಾಯಕ್ಕೆ ಆನುಕೂಲ್ಯ ಸಂಕಲ್ಪಾದಿಗಳು ಬೇಕೇ? 1) **ಆರ್ತೋವಾಯದಿವಾದೃಪ್ತಃ** ಎಂದೂ, 2) **ಮಿತ್ರಭಾವೇನ ಸಂಪ್ರಾಪ್ತಂ**, ಎಂದೂ,

---

1) ಆರ್ತೋವಾಯದಿವಾದೃಪ್ತಃ ಪರೇಷಾಂಶರಣಾಗತಃ ।
ಅರಿಃ ಪ್ರಾಣಾನ್ ಪರಿತ್ಯಜ್ಯ ರಕ್ಷಿತವ್ಯಃ ಕೃತಾತ್ಮನಾ ॥ ರಾಮಾಯಣ (6-18-28)

ಒಬ್ಬನು ಆರ್ತಿಯಿಂದ ಒಡನೇ ಫಲವನ್ನು ಅಪೇಕ್ಷಿಸುವವನಾಗಿಯೋ, ದೃಪ್ತಃ-ನಿಧಾನವಾಗಿ ಫಲವನ್ನು ಅಪೇಕ್ಷಿಸುವವನಾಗಿಯೋ ಇತರರಲ್ಲಿ ಶರಣಾಗತಿ ಮಾಡಿದರೆ, ಅವನು ಶತ್ರುವಾಗಿದ್ದರೂ, ಕೃತಾತ್ಮನಾ–ಶರಣಾಗತಿ ಧರ್ಮವನ್ನು ತಿಳಿದ ಮಹಾನುಭಾವರು ತಮ್ಮ ಪ್ರಾಣವನ್ನು ಬಿಟ್ಟಾದರೂ ಆ ಶರಣಾಗತನನ್ನು ಕಾಪಾಡಬೇಕು. ಇಲ್ಲಿ ಶತ್ರುವೆಂದು ನಿರ್ದೇಶಿಸಿರುವುದರಿಂದ, ಆ ಶರಣಾಗತನು ಅನು ಕೂಲನಾಗಿಲ್ಲದೆ ಪ್ರತಿಕೂಲನಾಗಿದ್ದರೂ ಎಂಬ ಅರ್ಥವು ದ್ಯೋತಿತ. ಇದರಿಂದ ಆನುಕೂಲ್ಯ ಸಂಕಲ್ಪ, ಪ್ರಾತಿಕೂಲ್ಯ ನಿವೃತ್ತಿ ಸಂಕಲ್ಪ ಗಳು ಬೇಕಿಲ್ಲವೆಂಬುದು ಪೂರ್ವ ಪಕ್ಷಿಯಅಭಿಪ್ರಾಯ.

2) ರಾಮಾಯಣ [6-18-3) ಮಿತ್ರನ ಹಾಗೆ (ವಸ್ತು ವೃತ್ತಿಯಲ್ಲಿ ಮಿತ್ರನಲ್ಲ) ಬಂದವನನ್ನು (ಶರಣಾಗತಿ ಮಾಡಿದವನನ್ನು) ಎಂದಿಗೂ ಕೈ ಬಿಡುವುದಿಲ್ಲ. ಅವನಲ್ಲಿ ದೋಷಗಳಿದ್ದರೂ ಬಾಧಕವಿಲ್ಲ. ಸತ್ಪುರುಷರಿಗೆ ಇದು ನಿಂದೆಗೆ ಕಾರಣವಾಗಲಾರದು.

3) "ಯದಿವಾ ರಾವಣಸ್ಸ್ವಯಮ್" ಎನ್ರುಮ್ ಶೊಲ್ಲುಹಿರ "ರಿಪೂಣಾಮಪಿ ವತ್ಸಲನಾನ ಶರಣ್ಯನ್ ಶರಣಾಗತನುಡೈಯ ದೋಷಙ್ಗಳೈಪ್ಪಾರ್ಕುಮೋ ? 4) "ಅನಾಲೋಚಿತ ವಿಶೇಷಾಶೇಷಲೋಕ ಶರಣ್ಯ" ಎನ್ರನ್ರೋ ಪೂರ್ವರ್‌ಹಳ್ ಪಾಶುರಮ್ ? ಆಹೈಯಾಲ್ ಇವೈ ಸಂಭಾವಿತ ಸ್ವಭಾವಙ್ಗಳಾಮಿತ್ತನೈಯನ್ರೋ ? ಎನ್ರುಶಿಲರ್ ಶೊಲ್ಲುವರ್‌ಹಳ್.

ಇದುಕ್ಕು ಪ್ರಪತ್ತ್ಯುತ್ತರಕಾಲತ್ತಿಲ್ ಆನುಕೂಲ್ಯಾದಿಹಳ್ ಅನುವರ್ತಿಯಾದೊಳಿಯಿಲುಮ್ ಪ್ರತಿಸಮಾಧಾನಂ ಪಿರನ್ದು ಪ್ರಪತ್ತಿ ಫಲಮುಮ್ ಕುರೈವತ್ತಿರುಕ್ಕು ಮೆನ್ಗೈಯಿಲೇ ತಾತ್ಪರ್ಯಮ್

---

3) **ಯದಿವಾರಾವಣಸ್ಸ್ವಯಮ್** ಎಂದೂ ಹೇಳುವ, ರಿಪುಗಳಿಗೂ ವತ್ಸಲನಾದ ಶರಣ್ಯನು (ರಕ್ಷಕನು) ಅನುಕೂಲಾನಾಚರಣೆ ಪ್ರತಿಕೂಲಾಚರಣೆ, ರೂಪಗಳಾದ ಶರಣಾಗತನ ದೋಷಗಳನ್ನು ನೋಡುತ್ತಾನೆಯೇ–ನೋಡುವುದಿಲ್ಲವೆಂದುಅಭಿಪ್ರಾಯ. 4) **ಅನಾಲೋಚಿತ ವಿಶೇಷಾಽಶೇಷ ಲೋಕ ಶರಣ್ಯ**, ಅನುಕೂಲ ಪ್ರತಿಕೂಲಾ ಚರಣಗಳನ್ನು ಗಮನಿಸದೆ ಎಲ್ಲಾ ಜನರನ್ನೂ ರಕ್ಷಿಸುವವನು ಎಂದಲ್ಲವೋ ಪೂರ್ವಾಚಾರ್ಯರುಗಳ(ಶ್ರೀಭಾಷ್ಯಕಾರರ್)**ಪಾಶುರಮ್**–ಅನುಸಂಧಾನ. ಆಹೈಯಾಲಿವೈ ಆದ್ದರಿಂದ, ಆನುಕೂಲ್ಯ ಸಂಕಲ್ಪ ಪ್ರಾತಿಕೂಲ್ಯವರ್ಜನಗಳು **ಸಂಭಾವಿತ ಸ್ವಭಾವಂಗಳಾಮ್ ಇತ್ತನೆಯೆನ್ರೂ**–ಪ್ರಪತ್ತಿಗೆ ಪೂರ್ವಕಾಲದಲ್ಲಿ ಇದ್ದೇಇರಬೇಕೆಂಬ ನಿರ್ಬಂಧವಿಲ್ಲ, ಇದ್ದರೂ ಇರಬಹುದು, ಇಲ್ಲದಿದ್ದರೂ ಬಾಧಕವಿಲ್ಲವಷ್ಟೇ, **ಎನ್ರು ಶಿಲರ್ ಶೊಲ್ಲುವರಹಳ್**–ಹೀಗೆಂದು ಕೆಲವರು ಹೇಳುತ್ತಾರೆ. ಅದಾಗಿ ಒಬ್ಬನೇ ಮತ್ತೊಬ್ಬನಲ್ಲಿ ಶರಣಾಗತನಾಗುವಾಗ ಪ್ರಾಯಶಃ ಅನುಕೂಲನಾಗಿಯೇ ಇರುತ್ತಾನೆ, ಪ್ರಾತಿಕೂಲ್ಯಾಚರಣವನ್ನು ಮಾಡುವುದಿಲ್ಲವೆಂಬುದು ಲೋಕದಲ್ಲಿ ಸಂಭಾವಿತ. ಇದರಿಂದ ಆನುಕೂಲ್ಯ ಸಂಕಲ್ಪ, ಪ್ರಾತಿಕೂಲ್ಯಾಚರಣ ನಿಷೇಧವು ಪ್ರಪತ್ತಿಗೆ ಅಂಗವಾಗಲಾರದು ಎಂಬುದು ಕೆಲವರ ಅಭಿಪ್ರಾಯ.

ಇದಕ್ಕೆ ಆಚಾರ್ಯರು **ಇದುಕ್ಕು** ಎಂದಾರಂಭಿಸಿ ಉತ್ತರವನ್ನು ಕೃಪೆ ಮಾಡುತ್ತಾರೆ. ಅದಾಗಿ ಇದುಕ್ಕು–ಹೀಗೆ ಹೇಳುವ ಮಾತು ಪ್ರಪತ್ತ್ಯುತ್ತರ ಕಾಲದಲ್ಲಿ ಆನುಕೂಲ್ಯಾದಿಗಳು ಅನುವರ್ತಿಸದೆ ಹೋದರೂ **ಪ್ರತಿಸಮಾಧಾನಂ ಪಿರಂದು** – ಪ್ರಾಯಶ್ಚಿತ್ತಾದಿಗಳು ಏರ್ಪಟ್ಟು, **ಪ್ರಪತ್ತಿಫಲಮುಮ್** ಇತ್ಯಾದಿ ಪ್ರಪತ್ತಿಯ ಫಲವೂ ಯಾವಕೊರತೆಯೂ ಇಲ್ಲದೆ ಇರುವುದೆಂಬುದರಲ್ಲಿ ತಾತ್ಪರ್ಯವನ್ನು ಅಂಗೀಕರಿಸಬಹುದು. ಅದಾಗಿ,

"ಪ್ರಪತ್ತಿಂತಾಂ ಪ್ರಯುಂಜೀತ ಸ್ವಾಂಗೈಃ ಪಂಚಭಿರಾವೃತಾಮ್ ।
ಏವಮಂಗೈರುಪಾಂಗೈಶ್ಚ ನಮನಂ ತೇ ಪ್ರಕೀರ್ತಿತಮ್ ॥",
"ನ್ಯಾಸಃ ಪಂಚಾಂಗ ಸಂಯುತಃ ।"
ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯವರ್ಜನಮ್ ।
ರಕ್ಷಿಷ್ಯತೀತಿ ವಿಶ್ವಾಸಃ ಗೋಪ್ತೃತ್ವೇ ವರಣಂತಥಾ ॥
ಆತ್ಮನಿಕ್ಷೇಪ ಕಾರ್ಪಣ್ಯೇ ಷಡ್ವಿಧಾಶರಣಾಗತಿಃ ॥

ಎಂಬ ಪ್ರಮಾಣ ವಚನಗಳು ಆನುಕೂಲ್ಯಾದಿ ಸಂಕಲ್ಪಗಳನ್ನು ಪ್ರಪತ್ತಿಗೆ ಅಂಗವಾಗಿ ವಿಧಿಸಿರುವುದರಿಂದ

---

3 — ಆನಯೈನಂ ಹರಿ ಶ್ರೇಷ್ಠ ದತ್ತಮಸ್ಯಾಽಭಯಂ ಮಯಾ ।
ವಿಭೀಷಣೋವಾಸುಗ್ರೀವ ಯದಿವಾರಾವಣ ಸ್ಸ್ವಯಮ್ ॥ ರಾಮಾ. 6-18-35
ಎಲೈ ವಾನರ ಶ್ರೇಷ್ಠನೇ. ಆಕಾಶದಲ್ಲಿ ನಿಂತು ನನ್ನಲ್ಲಿ ಅಭಯವನ್ನು ಯಾಚಿಸಿದ ಈ ವ್ಯಕ್ತಿಗೆ ಅಭಯ ಪ್ರದಾನ ಮಾಡಿಯಾಯ್ತು. ಎಲೈ ಸುಗ್ರೀವ, ಅವನು ವಿಭೀಷಣನೇ ಆಗಿರಲಿ ಅಥವಾ ರಾವಣನೇ ಆಗಿರಲ್ಲಿ ಅವನನ್ನು ನೀನೇ ಹೋಗಿ ಕರೆದುಕೊಂಡು ಬಾ.

**ಕೊಳ್ಳಲಾವ್. ಇಙ್ಙನಲ್ಲಾದ ಪೋದು 1) "ಷಡ್ವಿಧಾ ಶರಣಾಗತಿಃ" ಎನ್ರುಮ್, 2) "ನ್ಯಾಸಃ ಪಂಚಾಂಗ ಸಂಯುತಃ" ಎನ್ರುಮ್, 3) "ಸ್ವಾಙ್ಗೈಃ ಪಂಚಭಿರಾವೃತಾಮ್" ಎನ್ರುಮ್ ಅಙ್ಗಾಙ್ಗಿಹಳೈ ವಿಭಜಿತ್ತು ಚೊಲ್ಲುಹಿರ ಪಲಪ್ರಮಾಣಙ್ಗಳುಕ್ಕುಮ್ ವಿರುದ್ಧಮ್. ಲೋಕತ್ತಿಲ್ ರಕ್ಷ್ಯದ್ರವ್ಯ ಸಮರ್ಪಣ ಮರ್ಯಾದೈಕ್ಕುಮ್ ಪೊರುನ್ದಾದೆನ್ರುಮ್ ಇವ್ವಙ್ಗಙ್ಗಳುಡೈಯ ಸಕೃತ್ಕರಣಾದಿ ಪ್ರಕಾರಂಗಳುಮ್ ಮುನ್ಪೇಶೊನ್ನೋಮ್.**

**ಪ್ರಪತ್ತಿಃ ಬ್ರಹ್ಮಾಸ್ತ್ರತುಲ್ಯಾಯದಿ ಕಥಮ್ ಪರಾಪೇಕ್ಷರೂಪಾಂಗ ಸಾಪೇಕ್ಷಾ ?**

**ಬ್ರಹ್ಮಾಸ್ತ್ರಮುಮ್ ಸ್ವಾಂಗ ಸಾಪೇಕ್ಷಮಾಯಿರೇ ಯಿರುಪ್ಪದು; ಆಹೈಯಾಲ್,**

**1) "ಪ್ರಪತ್ತೇಃ ಕ್ವಚಿದಪ್ಯೇವಂ ಪರಾಪೇಕ್ಷಾ ನ ವಿದ್ಯತೇ ।**
**ಸಾಹಿ ಸರ್ವತ್ರ ಸರ್ವೇಷಾಂ ಸರ್ವಕಾಮಫಲಪ್ರದಾ ॥"**

**ಎನ್ರದುವುಮ್ ಧರ್ಮಾಂತರ ನೈರಪೇಕ್ಷ್ಯಮ್ ಶೊನ್ನಪಡಿ. ಇಪ್ಪಡಿಯಲ್ಲಾದಪೋದು ಇವರ್ಹಳಿಶೈನ್ದ ಮಹಾವಿಶ್ವಾಸತ್ತೈಯುಮ್ ಇಕ್ಕಟ್ಟಳೈಯಿಲೇ ಸಂಭಾವಿತ ಸ್ವಭಾವಮಾಕ್ಕಲ್ಲಾಮ್.**

---

ಶರಣಾಗತಿ ಕಾಲದಲ್ಲಿ ಇವು ಅವಶ್ಯ ಇರಲೇಬೇಕು. ಆದ್ದರಿಂದ ಅಭಿಯುಕ್ತರ ವಾಕ್ಯಕ್ಕೆ ಪ್ರಪತ್ತ್ಯುತ್ತರ ಕಾಲದಲ್ಲಿ ಇವು ಸಂಭಾವಿತಸ್ವಭಾವಗಳು ಎಂದು ಹೇಳುವುದು ಯುಕ್ತವೆಂಬುದು ಆಚಾರ್ಯರ ಹೃದಯ. **ಇಂಗನಲ್ಲಾದ ಪೋದು** – ಹೀಗಿಲ್ಲದಿದ್ದರೆ, 1) **ಷಡ್ವಿಧಾ ಶರಣಾಗತಿಃ** ಎಂದೂ, 2) **ನ್ಯಾಸಃ ಪಂಚಾಂಗ ಸಂಯುತಃ** ಎಂದೂ, 3) **ಸ್ವಾಂಗೈಃ ಪಂಚಭಿರಾವೃತಾಮ್** ಎಂದೂ ಅಂಗಾಂಗಿಗಳನ್ನು ವಿಭಾಗ ಮಾಡಿ ಹೇಳುವ ಅನೇಕ ಪ್ರಮಾಣಗಳಿಗೆ ವಿರೋಧವು ಏರ್ಪಡುತ್ತದೆ. "ನ್ಯಾಸಃ ಪಂಚಾಂಗ ಸಂಯುತಃ" ಎಂಬೀ ಪ್ರಮಾಣಗಳಲ್ಲಿ ನ್ಯಾಸ ಶಬ್ದವು ಅಂಗಿ, ಆನುಕೂಲ್ಯಾದಿ ಸಂಕಲ್ಪಗಳು ಅಂಗಗಳೆಂದೂ ಸ್ಪಷ್ಟವಾಗಿ ಹೇಳಿರುವುದರಿಂದ ಆನುಕೂಲ್ಯಾದಿ ಸಂಕಲ್ಪಗಳು ಸಂಭಾವಿತ ಸ್ವಭಾವಗಳು, ಅಂಗಗಳಲ್ಲವೆಂದು ಹೇಳಿದರೆ ಆ ಪ್ರಮಾಣ ವಿರೋಧವು ದುರುದ್ಧರವೆಂಬುದು ತಾತ್ಪರ್ಯ. **ಲೋಕತ್ತಿಲ್** ಇತ್ಯಾದಿ ಲೋಕದಲ್ಲಿಯೂ ರಕ್ಷಿಸಲ್ಪಡಬೇಕಾದ ದ್ರವ್ಯವನ್ನು ರಕ್ಷಕನಲ್ಲಿ ಸಮರ್ಪಿಸುವ ಕಾಲದಲ್ಲಿ ಈ ಆನುಕೂಲ್ಯ ಸಂಕಲ್ಪಾದ್ಯಂಗಗಳು ಬೇಕೆಂಬುದು ಲೋಕ ಮರ್ಯಾದೆ – ಲೋಕನೀತಿ ಎಂಬುದನ್ನೂ ಈ ಅಂಗಗಳನ್ನು ಪ್ರಪತ್ತಿಕಾಲದಲ್ಲಿ ಒಂದು ಸಲ ಅನುಷ್ಠಿಸುವ ಪ್ರಕಾರಗಳನ್ನೂ **ಮುನ್ಪೇಶೊನ್ನೋಮ್** – ಹಿಂದೆಯೇ ಹೇಳಿದ್ದೇವೆಂದು ಆಚಾರ್ಯರು ನಿಗಮಿಸುತ್ತಾರೆ.

**ಪ್ರಪತ್ತಿಗೆ ಸ್ವಾಂಗ ವ್ಯತಿರಿಕ್ತವಾದವು ಬೇಕಿಲ್ಲ.**

**ಬ್ರಹ್ಮಾಸ್ತ್ರಮುಮ್** ಇತ್ಯಾದಿ – ಬ್ರಹ್ಮಾಸ್ತ್ರವೂ ಸ್ವಾಂಗಸಾಪೇಕ್ಷವಾಗಿಯೇ ಇದೆ. **ಆಹೈಯಾಲ್**– ಆದ್ದರಿಂದ 1) **ಪ್ರಪತ್ತೇಃಕ್ವಚಿದಪ್ಯೇವಂ** ಇತ್ಯಾದಿ ಪ್ರಪತ್ತಿಗೆ ಎಲ್ಲಿಯೂ ಹೀಗೆ ಪರಾಪೇಕ್ಷೆಯಿಲ್ಲ. ಅದು ಸರ್ವತ್ರ ಸರ್ವಫಲಗಳನ್ನೂ ಕೊಡಬಲ್ಲದು, ಎಂದು ಹೇಳಿರುವುದೂ **ಧರ್ಮಾಂತರ ನೈರಪೇಕ್ಷ್ಯಂ** – ಐದು ಅಂಗಗಳು ವಿನಹ ಇತರ ಧರ್ಮಗಳ ಅಪೇಕ್ಷೆಯಿಲ್ಲವೆಂಬುದನ್ನು ಹೇಳಿದೆ ಎಂದು ತಾತ್ಪರ್ಯ. **ಇಪ್ಪಡಿಯಲ್ಲಾದ ಪೋದು** – ಹೀಗೆ ಐದು ಅಂಗಗಳುವಿನಹ ಇತರ ಧರ್ಮಗಳ ಅಪೇಕ್ಷೆಯಿಲ್ಲವೆಂಬುದು ಅರ್ಥವಲ್ಲವೆಂದರೆ, **ಇವರ್ ಹಳಿಶೈನ್ದ ಮಹಾವಿಶ್ವಾಸತ್ತೈಯುಮ್**, ಪೂರ್ವಪಕ್ಷಿಯು ಪ್ರಪತ್ತಿಗೆ ಅಂಗವಾದಿ ಒಪ್ಪಿರುವ ಮಹಾವಿಶ್ವಾಸವನ್ನೂ **ಇಕ್ಕಟ್ಟಳೈಯಿಲೇ** – ಈ ರೀತಿಯಲ್ಲಿ ಸಂಭಾವಿತಸ್ವಭಾವವೆಂದು ಹೇಳಿ ಅಂಗವಲ್ಲವೆಂದು ಹೇಳುವ

---

1) ಅಹಿರ್ಬುಧ್ನ್ಯ ಸಂಹಿತೆ 37-18 2) ಲಕ್ಷ್ಮೀ ತಂತ್ರ 17-74 3) ಲಕ್ಷ್ಮೀತಂತ್ರ 28-11

1) ಸನತ್ಕುಮಾರ ಸಂಹಿತೆ

## ಮಹಾ ವಿಶ್ವಾಸೋಪಿನಾಙ್ಗಮಿತಿವಾದಸ್ಯ ನಿರಾಸಃ

ಇವ್ವವಕಾಶತ್ತಿಲೇ ವೇರೇ ಶಿಲರ್, ಆಸ್ತಿಕನುಕ್ಕು ಶಾಸ್ತ್ರಾರ್ಥ ವಿಶ್ವಾಸಮ್ ಪಿರಕ್ಕುಮದುಕ್ಕು ಮೇರ್ಪಟ್ಟ ಮಹಾವಿಶ್ವಾಸ ಮೆನ್ರೊನ್ರುಣ್ಡೋ ? ಆಹೈಯಾಲ್ ಇದುವುಮ್ ಸರ್ವಶಾಸ್ತ್ರಾರ್ಥ ಸಾಧಾರಣಮಾಮತ್ತನೈಯೊಕ್ಕಿ, ಪ್ರಪತ್ತಿಕ್ಕು ವಿಶೇಷಿತ್ತು ಅಙ್ಗಮಾಹ ಮತ್ತೋವೆನ್ರು ನಿನ್ನೈಪ್ಪಾರ್ ಹಳ್. ಅದುವುಮ್, "ನವಿಶ್ವಸೇದವಿಶ್ವಸ್ತೇ ವಿಶ್ವಸ್ತೇನಾತಿ ವಿಶ್ವಸೇತ್" ಇತ್ಯಾದಿಹಳಿಲೇ ವಿಶ್ವಾಸ ತಾರತಮ್ಯಮ್ ಪ್ರಸಿದ್ಧಮಾಹೈಯಾಲುಮ್, ಇವ್ವಿಡತ್ತಿಲ್ ಅತಿಶಯಿತ ವಿಶ್ವಾಸಮಙ್ಗಮೆನ್ಗಿರ ವಚನತ್ತಾಲುಮ್ ಪರಿಹೃತಮ್.

ಇಪ್ಪಡಿ ಪುರುಷ ವಿಶೇಷಙ್ಗಳಿಲೇ ವಿಶ್ವಾಸ ತಾರತಮ್ಯ ಮುಂಡೆನ್ರು ಮಿಡತ್ತೈ ಶ್ರೀಮದಷ್ಟಾಕ್ಷರ ಬ್ರಹ್ಮವಿದ್ಯೈಯಿಲೇ

---

ಪ್ರಸಂಗವು ಬರುತ್ತದೆ. ಆಗ್ಯೆ ಪರಾಪೇಕ್ಷಾನ ವಿದ್ಯತೇ ಎಂಬಲ್ಲಿ 'ಪರ'ಶಬ್ದವು ವಿಶ್ವಾಸವನ್ನೂ ಒಳಗೊಂಡಿದೆ ಎಂದು ಸಿದ್ಧಾಂತಿಯು ಪ್ರತಿಬಂದಿಯಾಗಿ ಹೇಳುವ ಮಾತು. ಇದು ಪೂರ್ವ ಪಕ್ಷಿಗೆ ಸಂಮತವಲ್ಲ. ಏತಾವತಾ ಆನುಕೂಲ್ಯಾದಿ ಪಂಚ ಅಂಗಗಳೂ ಪ್ರಪತ್ತಿಗೆ ಸನ್ನಿಪತ್ಯೋಪಕಾರಕಗಳು. ಅವಶ್ಯ ಅನುಷ್ಠಾನ ಕಾಲದಲ್ಲಿ ಇರಬೇಕಾದುವು ಎಂಬುದು ಅಪ್ರಕಂಪ್ಯವಾದ ಸಿದ್ಧಾಂತ.

### ಶಾಸ್ತ್ರಾರ್ಥ ವಿಶ್ವಾಸಕ್ಕೆ ಮೇಲ್ಪಟ್ಟ ಮಹಾವಿಶ್ವಾಸವೆಂಬುದು ಪ್ರಪತ್ತಿಗೆ ಅಂಗವಲ್ಲವೆಂಬ ಮತ ಖಂಡನೆ.

**ಇವ್ವವಕಾಶತ್ತಿಲ್**–ಮಹಾವಿಶ್ವಾಸವನ್ನು ಪ್ರಪತ್ತಿಗೆ ಅಂಗವಾಗಿ ಪ್ರಸ್ತಾಪ ಮಾಡಿರುವ ಈ ಸಂದರ್ಭದಲ್ಲಿ, ಮತ್ತೆ ಕೆಲವರು, ಆಸ್ತಿಕನಿಗೆ ಶಾಸ್ತ್ರಾರ್ಥ ವಿಶ್ವಾಸವು ಉಂಟಾಗುವುದಕ್ಕಿಂತ ಮೇಲ್ಪಟ್ಟ ಮಹಾ ವಿಶ್ವಾಸವೆಂದೊಂದುಂಟೋ. ಅದು ಇಲ್ಲವೆಂದು ಭಾವ. ಆದ್ದರಿಂದ ಇದೂ ಸರ್ವಶಾಸ್ತ್ರಾರ್ಥ ಸಾಧಾರಣವಷ್ಟೇ ವಿನಹ ಪ್ರಪತ್ತಿಗೆ ಮಹಾ ವಿಶ್ವಾಸವು ವಿಶೇಷವಾದ ಅಂಗವಾಗಲು ಸಾಧ್ಯವೇ? ವಿಶ್ವಾಸದಲ್ಲಿ ತಾರತಮ್ಯವು ಇಲ್ಲ ಎಂದು ಹೇಳುವರು. **ಅದುವುಮ್**–ಅದೂ "ನವಿಶ್ವಸೇದವಿಶ್ವಸ್ತೇ" ಇತ್ಯಾದಿಗಳಲ್ಲಿ ವಿಶ್ವಾಸ ತಾರತಮ್ಯವು ಪ್ರಸಿದ್ಧವಾಗಿರುವುದರಿಂದಲೂ **ಇವ್ವಿಡತ್ತಿಲ್**–ಪ್ರಪತ್ತಿ ಪ್ರಕರಣದಲ್ಲಿ ಅತಿಶಯಿತವಾದ–ಮಹತ್ತಾದ, ವಿಶ್ವಾಸವು, ಅಂಗವೆಂದು ಹೇಳುವ ವಚನ ದಿಂದಲೂ ಪರಿಹೃತವು "ರಕ್ಷಿಷ್ಯತ್ಯನುಕೂಲಾನ್ನ ಇತಿಯಾ ಸುದೃಢಾಮತಿಃ" (ಅನುಕೂಲರಾದ ನಮ್ಮನ್ನು ರಕ್ಷಿಸುತ್ತಾನೆಂಬ ಸುದೃಢವಾದ ಬುದ್ಧಿಯು ಮಹಾ ವಿಶ್ವಾಸ)ಎಂದು ಹೇಳಿರುವ ವಚನವೂ,

> ಅನನ್ಯ ಸಾಧ್ಯೇಸ್ವಾಭೀಷ್ಟೇ ಮಹಾ ವಿಶ್ವಾಸ ಪೂರ್ವಕಮ್ ।
>
> ತದೇಕೋಪಾಯತಾಯಾಂಚಾ ಪ್ರಪತ್ತಿ ಶ್ಶರಣಾಗತಿಃ ॥

(ನಮ್ಮ ಅಭೀಷ್ಟವು ಅನ್ಯರಿಂದ ಸಾಧಿಸಲ್ಪಡಲಾಗದೆ ಇರುವಾಗ, ಮಹಾ ವಿಶ್ವಾಸ ಪೂರ್ವಕವಾಗಿ, ಅವನನ್ನೇ (ರಕ್ಷಕನನ್ನೇ) ಉಪಾಯವಾಗಿ ಯಾಚಿಸುವುದು ಪ್ರಪತ್ತಿ, ಶರಣಾಗತಿ ಎಂದು ಕರೆಯಲ್ಪಡುತ್ತದೆ) ಎಂಬುದೇ ಮೊದಲಾದ ವಚನಗಳೂ "ಮಹಾ ವಿಶ್ವಾಸವು ಪ್ರಪತ್ತಿಗೆ ಅಂಗವೆಂದು ತಿಳಿಸುತ್ತವೆ.

**ಇಪ್ಪಡಿ ಪುರುಷ ವಿಶೇಷಂಗಳಿಲೇ** ಇತ್ಯಾದಿ–ಹೀಗೆ ಆಶ್ರಯಿಸುವ ಪುರುಷರ ಭೇದದಿಂದ ವಿಶ್ವಾಸ ತಾರ

1) "ಯಸ್ಯ ಯಾವಾಂಶ್ಚ ವಿಶ್ವಾಸ ಸ್ತಸ್ಯ ಸಿದ್ಧಿಶ್ಚ ತಾವತೀ ।
ಏತಾವಾನಿತಿ ನೈತಸ್ಯ ಪ್ರಭಾವಃ ಪರಿಮೀಯತೇ ॥"

ಎನ್ರು ಶ್ರೀ ನಾರದ ಭಗವಾನರುಳಿಚ್ಚೆಯ್‌ದಾರ್.

ಮಂದ ವಿಶ್ವಾಸರಾನ ಪ್ರಪನ್ನಾಭಾಸರ್ಕೈಯುಂ ಮುಡಿವಿಲೇ ಸರ್ವೇಶ್ವರರ್ ರಕ್ಷಿಕ್ಕುಮ್. ಎಂಗನೇ ಎನ್ನಿಲ್ 1) ಸಕೃದುಚ್ಚಾರಿತಂ ಯೇನ ಹರಿರಿತ್ಯಕ್ಷರದ್ವಯಂ ।
ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಮ್ ಪ್ರತಿ ।

ಇತ್ಯಾದಿಹಳಿಲುಮ್, ಇವತ್ತೈಯಡಿಯೊತ್ತಿನ 2) "ತ್ವದಂಘ್ರಿಮುದ್ದಿಶ್ಯ", 3) "ಉದೀರ್ಣ ಸಂಸಾರ" ಎನ್ಗಿರ ಶ್ಲೋಕಙ್ಗಳಿಲುಮ್, 4) "ಮೊಯ್‌ತ್ತ ವಲ್ವಿನೈಯುಳ್ ನಿನ್ರು" ಇತ್ಯಾದಿ

---

ಶಮ್ಯವು ಉಂಟು ಎಂಬುದನ್ನು ಶ್ರೀಮದಷ್ಟಾಕ್ಷರ ಬ್ರಹ್ಮ ವಿದ್ಯೆಯಲ್ಲಿ 1) **"ಯಸ್ಯಯಾವಾಂಶ್ಚ ವಿಶ್ವಾಸಃ ಶಸ್ಯಸಿದ್ಧಿಶ್ಚ ತಾವತೀ"** ಇತ್ಯಾದಿಯಾಗಿ ಅವನವನ ವಿಶಾಸಕ್ಕನು ಗುಣವಾಗಿ ಸಿದ್ಧಿಯು ಎರ್ಪಡುತ್ತದೆ. ಈ ಅಷ್ಟಾಕ್ಷರ ಬ್ರಹ್ಮ ವಿದ್ಯೆಯ ಪ್ರಭಾವವು ಇಷ್ಟೇ, ಎಂದು ಅದರ ಪ್ರಭಾವವನ್ನು ಪರಿಮಿತಿಯಾಗಿ ಹೇಳಲಿಕ್ಕಿಲ್ಲ ಎಂದು ಭಗವಾನ್ ನಾರದ ಬ್ರಹ್ಮರ್ಷಿಯು ಹೇಳುತ್ತಾರೆ.

**ಮಂದ ವಿಶ್ವಾಸರಾನ** ಇತ್ಯಾದಿ ವಿಶ್ವಾಸ ಮಾಂದ್ಯದಿಂದ ಶರಣಾಗತಿ ಮಾಡಿದ ಪ್ರಪನ್ನಾಭಾಸರನ್ನೂ ಅಂತ್ಯದಲ್ಲಿ ಸರ್ವೇಶ್ವರನು ರಕ್ಷಿಸುತ್ತಾನೆ. ಹೇಗೆಂದರೆ 1) **ಸಕೃದುಚ್ಚಾರಿತಂ** ಇತ್ಯಾದಿ ಹರಿಃ ಎಂಬ ನಾಮೋಚ್ಚಾರಣೆ ಮಾಡಿದವನು ಪೂರ್ಣ ಪ್ರಪತ್ತ್ಯನುಷ್ಠಾನದಿಂದ ಮೋಕ್ಷವನ್ನೂ ಪಡೆಯುತ್ತಾನೆ. ಹರಿಃ ಎಂಬ ನಾಮೋಚ್ಚಾರಣೆಯು ಪರಿಕರ – ಮೋಕ್ಷಕ್ಕೆ ಹಂತ. **ಇವಟ್ರೈಯಾಡಿಯೊತ್ತಿನ**–ಇದಕ್ಕೆ ಸಮಾನ ತಾತ್ಪರ್ಯಕವಾದ 2) **ತದ್ದಂಘ್ರಿಮುದ್ದಿಶ್ಯ** 3) ಉದೀರ್ಣಸಂಸಾರ ಎಂಬ ಶ್ಲೋಕಗಳಲ್ಲಿಯೂ 4) **ಮೊಯ್ತ್ತವಲ್ ವಿನೈಯುಳ್ ನಿನ್ರ** ಎಂಬ ಪಾಶುರದಲ್ಲಿಯೂ, ತ್ವದಂಘ್ರಿಮುದ್ದಿಶ್ಯ–ಎಂಬಲ್ಲಿ ಭಗವಂತನಲ್ಲಿ ಮಾಡಿದ ಅಂಜಲಿಗೂ, ಉದೀರ್ಣ

---

1. ನಾರದೀಯ ಕಲ್ಪ 1–14

1) ವಿಷ್ಣುಧರ್ಮ (70–84) ಹರಿಃ ಎಂಬ ಎರಡು ಅಕ್ಷರಗಳನ್ನು ಯಾರು ಉಚ್ಚರಿಸುತ್ತಾರೋ ಅವನು ಮೋಕ್ಷವನ್ನು ಕುರಿತು ಹೊರಡಲು ಸಾಧನಗಳನ್ನು ಸಿದ್ಧಪಡಿಸಿಕೊಳ್ಳುತ್ತಾನೆ.

2) ತ್ವದಂಘ್ರಿಮುದ್ದಿಶ್ಯ ಕದಾಪಿ ಕೇನಚಿದ್ಯಥಾ ತಥಾವಾಪಿ ಸಕೃತ್ಕೃತೋಂಜಲಿಃ ।
ತದೈವ ಮುಷ್ಣಾತ್ಯಶುಭಾನ್ಯಶೇಷತಃ ಶುಭಾನಿ ಪುಷ್ಣಾತಿ ನಜಾತು ಹೀಯತೇ ॥
ಆಳ. ಸ್ತೋತ್ರ (28) ಎಲೈ ಭಗವಂತನೇ, ನಿನ್ನ ಪಾದಗಳನ್ನು ಕುರಿತು. ಯಾವಾಗಲಾದರೂ, ಯಾವನೊಬ್ಬನಿಂದ, ಹೇಗಾದರೂ ಅಂದರೆ ಪೂರ್ಣ ಜ್ಞಾನದಿಂದಲೋ ಜ್ಞಾನವಿಲ್ಲದೆಯೋ ಮಾಡಿದ ಅಂಜಲಿಯು ಅವನ ಪಾಪಗಳನ್ನೆಲ್ಲಾ ಹೋಗಲಾಡಿಸುತ್ತದೆ, ಮಂಗಳವನ್ನು ಅಭಿವೃದ್ಧಿಗೊಳಿಸುತ್ತದೆ,

3) ಉದೀರ್ಣ ಸಂಸಾರ ದವಾಶುಶುಕ್ಷಣಿಂ ಕ್ಷಣೇನ ನಿರ್ವಾಪ್ಯ ಪರಾಂಚ ನಿರ್ವೃತಿಮ್ ।
ಪ್ರಯಚ್ಛತಿತ್ವಚ್ಚರಣಾರುಣಾಂಬುಜ ದ್ವಯಾನುರಾಗಾಮೃತ ಸಿಂಧು ಶೀಕರಃ ॥
ನಿನ್ನ ಪಾದ ಪದ್ಮಗಳಲ್ಲಿರುವ ಅನುರಾಗ–ಪ್ರೀತಿಯ ಶಕಲವು ಅಭಿವೃದ್ಧವಾದ ಸಂಸಾರವೆಂಬ ದಾವಾನಲವನ್ನು ಆಗಲೇ ಅಳಿಸಿ, ಉತ್ಕೃಷ್ಟವಾದ ಕ್ಷೇಮವನ್ನುಂಟು ಮಾಡುತ್ತದೆ.

4) ಮೊಯ್ತ್ತುವಲ್ ವಿನೈಯುಳ್ ನಿನ್ರು ಮೂನ್ರೆಳುತ್ತುಡೈಯ ಪೇರಾಲ್
ಕತ್ತಿರಬಂದು ಮನ್ರೇ ಪರಾಂಗತಿ ಕಂಡು ಕೊಂಡಾನ್ ॥
ಇತ್ತನೈಯಡಿಯರಾನಾರ್ಕ್ಕಿರಂಗು ನಮ್ಮರಂಗನಾಯ
ಪಿತ್ತನೈಪ್ಪೆತ್ತು ಮಂದೋ ಪಿರವಿಯುಳ್ ಪಿಣಂಗುಮಾರೇ ॥ ತಿ.ಕೆ.ಮಾ.

ಹಳಿಲುಮ್ ಅಭಿಪ್ರೇತಮಾನ ಪಡಿಯೇ ಇವರ್ ಫಲಸಿದ್ಧಿಕ್ಕು ಕ್ಕೋಲಿನ ಕಾಲತ್ತುಕ್ಕುಳ್ಳೇ ಉಪಾಯ ಪೂರ್ತಿಯೈ ಯುಣ್ಡಾಕ್ಕಿ ರಕ್ಷಿಕ್ಕು ಮೆನ್ನುಮಿಡತ್ತೈ ನಿನೈತ್ತು

1) "ವೃಥೈವ ಭವತೋ ಯಾತಾ ಭೂಯಸೀ ಜನ್ಮ ಸಂತತಿಃ।
ತಸ್ಯಾಮನ್ಯತಮಂ ಜನ್ಮ ಸಂಚಿಂತ್ಯ ಶರಣಂ ವ್ರಜ॥

ಎನ್ರು ದೇವಲನೈಕ್ಕುರಿತ್ತು ಶ್ರೀ ಶಾಣ್ಡಿಲ್ಯ ಭಗವಾನರುಳಿಚೆಯ್‌ದಾನಿರೇ.

2) "ಶರಣ್ಯಂ ಶರಣಂಚ ತ್ವಾಮಾಹುರ್ದಿವ್ಯಾ ಮಹರ್ಷಯಃ।"

ಎನ್ರದುವುಮ್, ಮಹರ್ಷಿಹಳುಕ್ಕೇ ವಿಶ್ವಾಸಮ್ ಕೂಡುಮದು. ಇವರ್‌ಹಳ್ ವಾಕ್ಯತ್ತೈಯಿಟ್ಟು ಮಂದ ವಿಶ್ವಾಸರ್ಕ್ಕೈ ತ್ತೆಳಿವಿಕ್ಕ ವೇಣು ಮೆನ್ರು ಪಡಿ. ಇಪ್ಪಡಿ ವಿಶ್ವಾಸತಾರತಮ್ಯ ಮುಣ್ಡಾಹೈಯಾಲೇ ಯಥಾಶಾಸ್ತ್ರಮ್ ಮಹಾ ವಿಶ್ವಾಸಮ್ ಪ್ರಪತ್ತ್ಯಙ್ಗಮಾಹಕ್ಕುರೈಯಿಲ್ಲೈ.

---

ಸಂಸಾರ, ಎಂಬಲ್ಲಿ ಭಗವತ್ ಪ್ರೀತಿಗೂ, ನೊಯ್ಯುನಲ್ ನಿನ್ನೈಯುಳ್ ಎಂಬ ಪಾಶುರದಲ್ಲಿ ಭಗವನ್ನಾಮ ಸಂಕೀರ್ತನಕ್ಕೂ, ಸಾಕ್ಷಾನ್ಮೋಕ್ಷ ಜನಕತ್ವವು ಅಭಿಪ್ರೇತವಾದರೂ 'ಜ್ಞಾನಾನ್ಮೋಕ್ಷಃ' ಎಂದು ಭಕ್ತಿ ಪ್ರಪತ್ತಿ ರೂಪ ಜ್ಞಾನದಿಂದ ಮೋಕ್ಷವನ್ನು ಹೇಳಿರುವ ಪ್ರಮಾಣಗಳಿಗೆ ವಿರೋಧವಿಲ್ಲದೆ, **ಇವನ್**–ಮಂದ ವಿಶ್ವಾಸವುಳ್ಳವನು, ಫಲಸಿದ್ಧಿಗೋಸ್ಕರ **ಕೋಲಿನ ಕಾಲತ್ತುಕ್ಕುಳ್ಳೆ**–ಪ್ರಪತ್ತಿ ಮಾಡಿದ ಕಾಲದಲ್ಲಿ ಅಪೇಕ್ಷಿಸಿದ ಕಾಲಾವಕಾಶದೊಳಗೆ **ಉಪಾಯಪೂರ್ತಿಯೈಯುಂಡಾಕ್ಕಿ**–ಮಹಾ ವಿಶ್ವಾಸ ಗರ್ಭವಾದ ಪೂರ್ಣಪ್ರಪತ್ತಿಯನ್ನು ಅನುಷ್ಠಿಸುವಂತೆ ಮಾಡಿ **ರಕ್ಷಿಕ್ಕುಮ್**–ರಕ್ಷಿಸುತ್ತಾನೆ. **ಎನ್ನುಮಿಡತ್ತೈ**–ಎಂಬುದನ್ನು, ನೆನೆಸಿಕೊಂಡು, 1) **ವೃಥೈವಭವತೋ**–ಇತ್ಯಾದಿ ದೇವಲನನ್ನು ಕುರಿತು ಶಾಂಡಿಲ್ಯ ಮಹರ್ಷಿಯು ಎಲೈ ದೇವಲನೇ ನಿನಗೆ ಅನೇಕ ಜನ್ಮ ಪರಂಪರೆಗಳು ಮೋಕ್ಷಕ್ಕಾಗಿ ಯಾವ ಪ್ರಯತ್ನವೂ ಇಲ್ಲದೆ ವ್ಯರ್ಥವಾಗಿ ಕಳೆದು ಹೋಗಿವೆ. ಅಂಥಹ ಜನ್ಮಗಳಲ್ಲಿ ಇದೂ ಒಂದು, ಎಂದು ತಿಳಿದು ವಿಶ್ವಾಸಮಾಂದ್ಯದಿಂದಾದರೂ ಶರಣಾಗತಿಯನ್ನು ಮಾಡು ಎಂದು ನಿಯಮಿಸಿದರು. ವಿಶ್ವಾಸ ಮಾಂದ್ಯದಿಂದ ಶರಣಾಗತಿಯನ್ನು ಮಾಡಿದರೂ ಅದು ಮಹಾ ವಿಶ್ವಾಸ ಪೂರ್ವಕ ಪೂರ್ಣ ಪ್ರಪತ್ತಿಯನ್ನು ಅನುಷ್ಠಿಸುವಂತೆ ಕಾರ್ಯಕಾರಿಯಾಗುತ್ತದೆ ಎಂಬುದು ಮಹರ್ಷಿಯ ಅಭಿಪ್ರಾಯ. 2) **ಶರಣ್ಯಂ ಶರಣಂಚತ್ವಾಂ**–ಇತ್ಯಾದಿಯಾಗಿ, ರಕ್ಷಕನಾದ ಭಗವಂತನನ್ನೇ ಉಪಾಯವನ್ನಾಗಿ ಮಹರ್ಷಿಗಳು ಹೇಳಿರುವುದರಿಂದ, ಮಹರ್ಷಿಗಳಿಗೆ ಮಹಾ ವಿಶ್ವಾಸವು ಉಂಟಾಗುವುದರಿಂದ, ಅವರುಗಳ ವಾಕ್ಯಗಳನ್ನು ಕೊಂಡು ಮಂದ ವಿಶ್ವಾಸರಿಗೂ ತಿಳಿವು ಉಂಟಾಗಿ ಮಹಾ ವಿಶ್ವಾಸವು ಉಂಟಾಗುವಂತೆ ಮಾಡಬೇಕು. **ಇಪ್ಪಡಿ ವಿಶ್ವಾಸ ತಾರತಮ್ಯಂ**–ಇತ್ಯಾದಿ. ಹೀಗೆ ವಿಶ್ವಾಸ ತಾರತಮ್ಯವು ಉಂಟಾಗುವುದರಿಂದ ಯಥಾಶಾಸ್ತ್ರ ಮಹಾವಿಶ್ವಾಸವು ಪ್ರಪತ್ತ್ಯಂಗವಾಗಲು **ಕುರೈಯಿಲ್ಲೈ**–ಬಾಧಕವೇನೂ ಇಲ್ಲ.

---

ಗೋವಿಂದ, ಎಂಬ ಮೂರು ಅಕ್ಷರಗಳಿಂದ ಕೂಡಿದ ಭಗವನ್ನಾಮೋಚ್ಚಾರಣೆಯಿಂದ ಜೇನು ತುಪ್ಪದಲ್ಲಿ ನೊಣಗಳು ಮುತ್ತಿಕೊಳ್ಳುವಂತೆ ಪಾಪಗಳಿಂದ ತುಂಬಿದ ಕ್ಷತ್ರಬಂಧುವು ಬಹಳ ಹಿಂದಿನ ಕಾಲದಲ್ಲೇ ಮೋಕ್ಷವನ್ನು ಪಡೆದನು, (ಅವನು ಮುಂದಿನ ಜನ್ಮದಲ್ಲಿ ತನ್ನ ಪಾಪಗಳಿಗೆ ನಿರ್ವೇದವುಂಟಾಗಿ ಭಕ್ತಿ ಪ್ರಪತ್ತಿಗಳಲ್ಲೊಂದನ್ನು ಅನುಷ್ಠಿಸಿ ಮೋಕ್ಷವನ್ನು ಪಡೆದನು ಎಂಬುದು ವಿಷ್ಣು ಧರ್ಮ.)

1) ಶಾಂಡಿಲ್ಯ ಸ್ಮೃತಿ.

2) ಶರಣ್ಯಂ ಶರಣಂಚತ್ವಾ ಮಾಹುರ್ದಿವ್ಯಾ ಮಹರ್ಷಯಃ।
ರಾಮಾಯಣ ಯುದ್ಧ ಕಾಂಡ. 120-18. ರಕ್ಷಕನು ಮತ್ತು ಉಪಾಯಭೂತನು ಎಂದು ಮಹರ್ಷಿಗಳು ನಿನ್ನನು ಹೇಳಿರುತ್ತಾರೆ.

## ಅಥ ಭಕ್ತಿ ಪ್ರಪತ್ತ್ಯೋಃ ವಿಶ್ವಾಸ ಶೈಥಿಲ್ಯಹೇತೂನ್ ಅನೂದ್ಯ ಪರಿಹರತಿ

**i) ಶಿಲರ್ಕ್ಕಿವತ್ತಿಲ್ ವಿಶ್ವಾಸಙ್ಕುಲೈಯುಮ್ ಪಡಿಯುಮ್. ಅದಕ್ಕು ಪರಿಹಾರಮುಮ್ ಶೊಲ್ಲುಹಿರೋಮ್ – ಭಕ್ತಿ ಪ್ರಪತ್ತಿಹಳ್ ಬುದ್ಧಿ ಭೇದತ್ತಾಲೇ ಐಶ್ವರ್ಯಮೋಕ್ಷಙ್ಗಳಾಹಿರ ವಿರುದ್ಧ ಫಲಙ್ಗಳೈ ಕ್ಕೊಡುಕ್ಕಕ್ಕೂಡುಮೋ? ವಿರೈಕ್ಕಿರವನುಡೈಯ ಅಭಿಸಂಧಿ ಭೇದತ್ತಾಲೇ ಒರುವಿರೈ ವೇರೊರು ಫಲತ್ತೈಕ್ಕೊಡುಕ್ಕಕ್ಕೂಡುಮೋ? ಎನ್ರು ಶಿಲರ್ಪಾರ್ಪ್ಪರ್ಹಳ್. ಇದುಕ್ಕು ಪ್ಪರಿಹಾರಮ್ – ನ್ಯಾಯಙ್ಗಳಾಲ್ ಬಾಧಿಕ್ಕಮೊಣ್ಣಾದಪಡಿ ಪ್ರತ್ಯಕ್ಷಾದಿಹಳೈ ಪ್ಪೋಲೇ ಸ್ವವಿಷಯತ್ತಿಲ್ ಪ್ರಮಾಣಮಾನ ಶಾಸ್ತ್ರಮ್ ಕಾಟ್ಟುಹೈಯಾಲ್ ಇಪ್ಪಡಿ ಕ್ಕೂಡುಮ್. ಲೋಕತ್ತಿಲುಮ್ ಧರ್ಮಶೀಲನಾಯ್ ಉದಾರನಾನ ರಾಜಾವುಕ್ಕು ವಿಲೈಯಾಹ ಏದೇನು ಮೊನ್ರೈ ಉಪಹಾರ ಬುದ್ಧಿಯಾಲ್ ಕೊಡುತ್ತಾಲ್, ವೇಣ್ಡುವಡಲ್ಲಾಮ್ ಕ್ಕಿಡೈಕ್ಕವುಮ್ ಕಾಣಾನಿನ್ರೋಮ್. ಇಭ್ಭಕ್ತಿ ಪ್ರಪತ್ತಿಹಳ್ ಪ್ರಯೋಜನಾಂತರ ಪರನುಕ್ಕು ಪ್ರವೃತ್ತಿಧರ್ಮ ಕೋಟಿಯಿಲೇ ನಿರ್ಕುಮ್; ಭಗವಚ್ಚರಣಾರ್ಥಿಹಳುಕ್ಕು ನಿವೃತ್ತಿ ಧರ್ಮಙ್ಗಳಾಮ್. ಇವ್ವರ್ಥಮ್ ನಿತ್ಯನೈಮಿತ್ತಿಕಾದಿಹಳಿಲುಮೊಕ್ಕುಮ್.**

---

## ಭಕ್ತಿ ಪ್ರಪತ್ತಿಗಳಲ್ಲಿ ವಿಶ್ವಾಸ ಶೈಥಿಲ್ಯಕ್ಕೆ ಕಾರಣಗಳು ಅವುಗಳ ಪರಿಹಾರ

ಅನಂತರ ಭಕ್ತಿ ಪ್ರಪತ್ತಿಗಳಲ್ಲಿ ವಿಶ್ವಾಸ ಶೈಥಿಲ್ಯಕ್ಕೆ ಹೇತುವಾದ ಕೆಲವು ಸಂದೇಹಗಳನ್ನು ಎತ್ತಿ ಹೇಳಿ ಅವುಗಳನ್ನು ಪರಿಹರಿಸುತ್ತಾರೆ. **ಶಿಲರ್ಕ್ಕಿವಟ್ರಿಲ್** ಇತ್ಯಾದಿ–ಕೆಲವರಿಗೆ ಭಕ್ತಿ ಪ್ರಪತ್ತಿಗಳಲ್ಲಿ ವಿಶ್ವಾಸವು ಕಡಿಮೆಯಾಗುವಂತೆಯೂ ಅದಕ್ಕೆ ಪರಿಹಾರವನ್ನೂ ಹೇಳುತ್ತೇವೆಂದು ಆಚಾರ್ಯರು ಪ್ರತಿಜ್ಞೆ ಮಾಡುತ್ತಾರೆ.

(i) ಆದಾಗಿ **ಭಕ್ತಿಪ್ರಪತ್ತಿಹಳ್** ಇತ್ಯಾದಿ–ಭಕ್ತಿ ಪ್ರಪತ್ತಿಗಳು ಬುದ್ಧಿ ಭೇದದಿಂದ ಐಶ್ವರ್ಯ ಮೋಕ್ಷಗಳೆಂಬ ವಿರುದ್ಧ ಫಲಗಳನ್ನು ಕೊಡಲು ಸಾಧ್ಯವೇ. ಆದರೆ ಬದ್ಧ ದಶೆಯಲ್ಲಿ ಐಶ್ವರ್ಯದಲ್ಲಿ ಆಸೆಯುಳ್ಳವನಿಗೆ ಐಶ್ವರ್ಯವನ್ನೂ ಮೋಕ್ಷದಲ್ಲಿ ಆಸೆಯುಳ್ಳವನಿಗೆ ತದ್ವಿರುದ್ಧವಾದ ಮೋಕ್ಷವನ್ನೂ ಕೊಡುತ್ತದೆ ಎಂಬುದು ಸರಿಯೇ. **ವಿರೈಕ್ಕಿರವನುಡೈಯ**–ಬಿತ್ತುವವನ ಅಭಿಸಂಧಿ ಭೇಧದಿಂದ ಒಂದೇ ಬೀಜವು ಬೇರೊಂದು ಫಲವನ್ನು ಕೊಡುವುದನ್ನು ಲೋಕದಲ್ಲಿ ಕಂಡಿದ್ದೇವೆಯೇ. ಅಂದರೆ ಮಾವಿನ ಬೀಜದಿಂದ ಬೇವಿನ ಮರ ಹುಟ್ಟುತ್ತದೆಯೇ, ? ಇಲ್ಲವಲ್ಲ. ಅದೇ ರೀತಿಯಲ್ಲಿ ಭಕ್ತಿ ಪ್ರಪತ್ತಿಗಳು ಒಂದೇ ಫಲವನ್ನು ಕೊಡಬಹುದೇ ವಿನಹ ಪರಸ್ಪರ ವಿರುದ್ಧವಾದ ಎರಡು ಫಲಗಳನ್ನು ಕೊಡಲು ಸಾಧ್ಯವೇ? **ಇದುಕ್ಕು ಪರಿಹಾರಮ್**–ಇದಕ್ಕೆ ಪರಿಹಾರವೇನೆಂದರೆ–**ನ್ಯಾಯಂಗಳಾಲ್**–ಇತ್ಯಾದಿ ನ್ಯಾಯಗಳಿಂದ ಬಾಧಿಸಲಾಗದೆ **ಪ್ರತ್ಯಕ್ಷಾದಿಹಳೈಪ್ಪೋಲೇ** – ಪ್ರತ್ಯಕ್ಷವಾಗಿ ಕಾಣುವ ರೂಪ ರಸ ಗಂಧಾದಿಗಳ ಹಾಗೆ **ಸ್ವವಿಷಯತ್ತಿಲ್ ಪ್ರಮಾಣಮಾನ**–ಇತ್ಯಾದಿ ಅತೀಂದ್ರಿಯವಾದ ವಿಷಯವನ್ನು ತಿಳಿಯಲು ಪ್ರಮಾಣ ಭೂತವಾದ ಶಾಸ್ತ್ರವು ಹಾಗೆ ಹೇಳುವುದರಿಂದ ಭಕ್ತಿ ಪ್ರಪತ್ತಿಗಳು ಪರಸ್ಪರ ವಿರುದ್ಧಗಳಾದ ಐಶ್ವರ್ಯ, ಕೈವಲ್ಯ, ಮೋಕ್ಷಗಳನ್ನು ಕೊಡಲು ಸಾಧ್ಯ. ಇದಕ್ಕೆ **ಲೋಕತ್ತಿಲುಂ** ಎಂದಾರಂಭಿಸಿ ಲೋಕನ್ಯಾಯವನ್ನು ತಿಳಿಸುತ್ತಾರೆ. ಆದಾಗಿ ಲೋಕದಲ್ಲಿಯೂ ಧರ್ಮಶೀಲನಾಗಿ ಉದಾರನಾದ ರಾಜನಿಗೆ ಬೆಲೆಗೋಸ್ಕರ ಯಾವುದಾದರೂ ಒಂದನ್ನು ಕೊಟ್ಟರೆ ಅಧಿಕ ಬೆಲೆಯು ಸಿಗುತ್ತದೆ. ಅದೇ ಪಧಾರ್ಥವನ್ನು ಉಪಹಾರ ಬುದ್ಧಿಯಿಂದ ಕೊಟ್ಟರೆ ಅದರಿಂದ ಪ್ರೀತನಾದ ರಾಜನು ತನ್ನ ಔದಾರ್ಯ ಗುಣದಿಂದ ಇವನಿಗೆ ಬೇಕಾದುದನ್ನೆಲ್ಲಾ ಕೊಡುತ್ತಾನೆಂಬುದನ್ನು ಕಂಡಿದ್ದೇವೆ. **ಇಭ್ಭಕ್ತಿ ಪ್ರಪತ್ತಿಹಳ್**–ಇತ್ಯಾದಿ ಈ ಭಕ್ತಿ ಪ್ರಪತ್ತಿಗಳು ಪ್ರಯೋಜನಾಂತರಗಳಲ್ಲಿ ಆಸೆಯುಳ್ಳವನಿಗೆ ಪ್ರವೃತ್ತಿ ಧರ್ಮ ಕೋಟಿಯಲ್ಲಿ ನಿಂತು ಐಶ್ವರ್ಯ ಕೈವಲ್ಯಾದಿ ಫಲಗಳನ್ನು ಕೊಡುತ್ತದೆ. ಭಗವಂತನ ಪಾದವನ್ನು ಸೇರಬೇಕೆಂದು ಆಸೆಯುಳ್ಳವನಿಗೆ ನಿವೃತ್ತಿ ಧರ್ಮಗಳಾಗುತ್ತವೆ. ಅಂದರೆ ಮೋಕ್ಷಾಂತವಾದ ಐಶ್ವರ್ಯವನ್ನು ಕೊಡುತ್ತವೆ. **ಇವ್ವರ್ಥಮ್** ಇತ್ಯಾದಿ–ನಿತ್ಯ ನೈಮಿತ್ತಿಕ ವರ್ಣಾಶ್ರಮ ಧರ್ಮಗಳಲ್ಲಿಯೂ ಇದೇ ನ್ಯಾಯವು ಪ್ರವರ್ತಿಸುತ್ತದೆ. ಅಂದರೆ

**ಯಥಾಭಿಸಂಧಿ ಭೇದಾತ್ ಏತಯೋಃ ಭಿನ್ನ ಫಲತ್ವಂ, ತಥಾಭಿನ್ನಾಧಿಕಾರಾದಪಿ ಏಕಫಲಸಾಧನತ್ವಮ್**

ii) **ಇಪ್ಪಡಿಯೇ ಆವೃತ್ತ್ಯನಾವೃತ್ತ್ಯಾದಿಹಳಾಲೇ ವಿಷಮಸ್ವಭಾವಙ್ಗಳಾನ ಉಪಾಸನ ಪ್ರಪದನಙ್ಗಳ್ ಏಕಫಲಸಾಧನಮಾಹ ಕ್ಕೂಡುಮೋ ವೆನ್ನಿಲ್ ? ಇದುಕ್ಕುತ್ತರಮ್ ಅಧಿಕಾರಿ ವಿಶೇಷತ್ತಾಲೇ ಲೋಕವೇದಙ್ಗಳಿಲ್ಪಡಿಯೇ ಸಿದ್ಧಮ್.**

**ಆರ್ತದೃಪ್ತಾನಾಂ ಫಲ ನಿಷ್ಪತ್ತೌ ವಿಳಂಬಾವಿಳಂಬ ಶಙ್ಕಾಪರಿಹಾರಃ**

iii) **ಮುಮುಕ್ಷುಕ್ಕಳಾಯ್ ಸ್ವತಂತ್ರ ಪ್ರಪತ್ತಿ ಪಣ್ಣಿನವರ್ಹಳುಕ್ಕು ಉಪಾಯಮುಮ್ ಮೋಕ್ಷ ಮುಮ್ ಏಕರೂಪ ಮಾಯಿರುಕ್ಕ ಚ್ಚೆಯ್ದೇಯುಮ್ ಸಂಸಾರತ್ತಿಲ್ ಅಡಿಚ್ಚೂಟ್ಟಾಲ್ ವರುಮ್ ತ್ವರೈಯಿನ್ ತಾರತಮ್ಯತ್ತುಕ್ಕೀಡಾಹ ತಮ್ ತಾಮಿಚ್ಛೈಯಾಲೇ ಕಾಲಮ್ ಕುರುಕ್ಕಿರದಿಲ್ ಏತ್ತಚ್ಚು**

---

ಭಕ್ತಿ ಪ್ರಪತ್ತಿಗಳಿಗೆ ಕಾಮನಾ ಭೇದದಿಂದ (ಆಸೆಯಲ್ಲಿ ವ್ಯತ್ಯಾಸದಿಂದ) ವಿಭಿನ್ನ ಫಲ ಜನಕತ್ವವು ಇರುವಂತೆ, ನಿತ್ಯ ನೈಮಿತ್ತಿಕ ವರ್ಣಾಶ್ರಮಧರ್ಮಗಳಿಗೂ, ಆದಿ ಶಬ್ದದಿಂದ ಸೂಚಿತವಾದ ಅನುಜ್ಞಾ ಕೈಂಕರ್ಯಗಳಿಗೂ ಕಾಮನಾ ಭೇದದಿಂದ ವಿಭಿನ್ನ ಫಲಗಳು ಲಭಿಸುತ್ತವೆ.

(ii) ಅನಂತರ ಭಕ್ತಿ ಪ್ರಪತ್ತಿಗಳಿಗೆ ಏಕಫಲಸಾಧನತ್ವಾಸಂಭವ ಶಂಕೆಯನ್ನು **ಇಪ್ಪಡಿಯೇ ಆವೃತ್ತ್ಯನಾವೃತ್ತ್ಯಾದಿಹಳಾಲೇ** ಎಂದಾರಂಭಿಸಿ ಪರಿಹರಿಸುತ್ತಾರೆ. ಅದಾಗಿ ಉಪಾಸನವು ನಿತ್ಯವೂ ಯಾವದಾಯುಷ ಮಾಡಬೇಕಾದುದು. ಆವರ್ತಿಸಲ್ಪಡತಕ್ಕದ್ದು ಎಂದರ್ಥ. ಪ್ರಪತ್ತಿಯು ಒಂದೇ ಸಲ ಅನುಷ್ಠಿಸತಕ್ಕದ್ದು. ಆವೃತ್ತಿಯಿಲ್ಲ. ಹೀಗೆ ಭಕ್ತಿ ಪ್ರಪತ್ತಿಗಳು ಪರಸ್ಪರ ವಿಷಮ ಸ್ವಭಾವಗಳಿಂದ ಕೂಡಿದವು. ಹೀಗಿರುವಾಗ ಇವುಗಳು ಒಂದೇ ಫಲವನ್ನು ಸಾಧಿಸಿ ಕೊಡಲು ಸಾಧ್ಯವೇ. ಚಿರಕಾಲಾನುಷ್ಠಿಸಲ್ಪಡುವ ಭಕ್ತಿಯು ಕೊಡುವ ಫಲವನ್ನು ಕ್ಷಣಕಾಲಾನುಷ್ಠಿಸುವ ಪ್ರಪತ್ತಿಯು ಕೊಡಬಲ್ಲದೇ ಎಂಬುದು ಶಂಕಾಬೀಜ. **ಇದುಕ್ಕುತ್ತರಮುಮ್** ಇದಕ್ಕೆ ಉತ್ತರವೂ – ಸಕಿಂಚನಾಕಿಂಚನ **ಅಧಿಕಾರಿ ವಿಶೇಷತ್ತಾಲೇ** – ಅಧಿಕಾರಿ ಭೇದದಿಂದ, ಲೋಕ ವೇದ ಗಳಲ್ಲಿರುವಂತೆ ಸಿದ್ಧ. ಅಂದರೆ ಶಕ್ತಾಶಕ್ತ ಭೇದದಿಂದ, ಲೋಕದಲ್ಲಿ ಕೃಷಿವಾಣಿಜ್ಯಾದಿಗಳು ಏಕ ಫಲವನ್ನು ಸಾಧಿಸಿಕೊಡುವಂತೆ, ವೇದದಲ್ಲಿಯೂ ಶಕ್ತಾಶಕ್ತ ಭೇದದಿಂದ ವಾರುಣ ಮಾನಸಿಕ ಸ್ನಾನಗಳು ಏಕಫಲ ಸಾಧನ ಗಳಾಗಿ ಸಿದ್ಧಿಸುವಂತೆ, ಸಕಿಂಚನನಿಗೆ ಭಕ್ತಿಯು ಮೋಕ್ಷ ಸಾಧಕ, ಅಕಿಂಚನನಿಗೆ ಪ್ರಪತ್ತಿಯು ಮೋಕ್ಷಸಾಧಕ. ವಾಣಿಜ್ಯವೂ ವಾರುಣ ಸ್ನಾನವೂ ಶಕ್ತಾಧಿಕಾರ. ಕೃಷಿಯೂ ಮಾನಸಿಕ ಸ್ನಾನವೂ ಅಶಕ್ತಾಧಿಕಾರ. ಇವೆರಡಕ್ಕೂ ಫಲವು ಏಕ ರೂಪ. ಇದೇ ನ್ಯಾಯವು ಭಕ್ತನಿಗೂ ಪ್ರಪನ್ನನಿಗೂ ಅನ್ವಯಿಸುತ್ತದೆ ಎಂದು ತಾತ್ಪರ್ಯ.

(iii) ಅನಂತರ **ಮುಮುಕ್ಷುಕ್ಕಳಾಯ್** ಇತ್ಯಾದಿ – ಮುಮುಕ್ಷುಗಳಾಗಿ ಸ್ವತಂತ್ರ ಪ್ರಪತ್ತಿಯನ್ನು ಅನುಷ್ಠಿಸುವವರಿಗೆ ಉಪಾಯವೂ ಫಲವೂ ಭಗವಂತನೇ ಆಗಿರುತ್ತಾನೆ. ಹಾಗಿರುವಾಗ ಕೆಲವರಿಗೆ ಶೀಘ್ರದಲ್ಲಿ ಫಲವೂ ಕೆಲವರಿಗೆ ವಿಳಂಬಿಸಿ ಫಲವೂ ದೊರಯುವುದಕ್ಕೆ ಕಾರಣವೇನೆಂದರೆ **ಸಂಸಾರತ್ತಿಲ್ ಅಡಿಚ್ಚೂಟ್ಟಾಲ್** ಅಡಿಚ್ಚೂಡು – ಬಿಸಿಲಿನಲ್ಲಿ ನಡೆಯುವವನಿಗೆ ಕಾದ ಧೂಳುಗಳು ಕಾಲಿಗೆ ಅಂಟಿಕೊಂಡು ಉಂಟಾಗುವ ತಾಪ. ಹಾಗೆ ಸಂಸಾರ ಮಂಡಲದಲ್ಲಿ ಉಂಟಾದ ಸಂಸಾರ ತಾಪ. ಇದರಿಂದ ಉಂಟಾದ ತ್ವರೆಯ **ತಾರತಮ್ಯಕ್ಕೀಡಾಹ** ತಾರತಮ್ಯಕ್ಕನುಗುಣವಾಗಿ ತಮ್ಮ ತಮ್ಮ ಇಚ್ಛೆಯಿಂದ ಮೋಕ್ಷವನ್ನು ಪಡೆಯಲು ಆರ್ತಿಯಿಂದಲೋ ಕಾಲ

**ರುಕ್ಕತ್ತಾಲೇ ಫಲತ್ತಿಲ್ ವಿಳಂಬಾವಿಳಂಬಂಗಳ್ ಕೂಡುಮ್.**

**iv) ಆೞ್ವಾರ್‌ಹಳ್ ನಾಥಮುನಿಹಳುಳ್ಳಿಟ್ಟಾರ್ಕ್ಕು ಭಗವತ್ಸಾಕ್ಷಾತ್ಕಾರಾದಿಹಳುಣ್ಡಾಯಿರುಕ್ಕ, ಶಿಲರ್ಕ್ಕು ಇನ್ನೈಯು ನ್ರಿಕ್ಕೈಯೊೞಿಹೈಕ್ಕು ಕ್ಕಾರಣಮ್, ಪ್ರಪತ್ತಿ ಕಾಲತ್ತಿಲ್ ಫಲಸಙ್ಕಲ್ಪತ್ತಿಲ್ ವೈಷಮ್ಯಮ್ ; ಪ್ರಾರಬ್ಧ ಸುಕೃತ ವಿಶೇಷ ಮಾಹವುಮಾಮ್. ಮುನ್ಪು ಕೋಲಿನ ಫಲಾಂಶಮ್ ಸಕೃತ್ಪ್ರಪತ್ತಿಯಾಲೇ ಸಿದ್ಧಮಾ ನಾಲುಮ್ ಕೊಲಾದ ಅಂಶತ್ತೈಪ್ಪತ್ತ ಪಿನ್ಪು ತೀವ್ರ ಸಂವೇಗಮ್ ಪಿರನ್ದಾರ್ಕ್ಕು ಪುನಃ ಪ್ರಪತ್ತಿ ಪಣ್ಣವು ಮಾಮ್.**

**ಅಥ ದೃಷ್ಟಾರ್ಥ ಪ್ರಪತ್ತಿ ವೈಫಲ್ಯ ದರ್ಶನ ಪ್ರಯುಕ್ತಾಂ ವಿಶ್ವಾಸ ಶಙ್ಕಾಂ ವಾರಯತಿ**

**v) ವೇರೇ ಶಿಲರ್ ದೃಷ್ಟಾರ್ಥ ಪ್ರಪತ್ತಿಹಳಿಲೇ ಶಿಲ ಫಲಿಯಾದೊೞಿಯಕ್ಕಣ್ಡು ಸಕಲ ಫಲಸಾಧನ ಮಾನ ಪ್ರಪತ್ತಿಯಿಲೇ ಅತಿಶಙ್ಕೈ ಪಣ್ಣುವಾರ್‌ಹಳ್, ಅವರ್‌ಹಳೈಯುಂ ಮಲ್ಲಾದ ಶಾಸ್ತ್ರಾರ್ಥಜ್ಞ**

---

ವಿಳಂಬವನ್ನು ಸಹಿಸಿ ದೇಹಾವಸಾನದಲ್ಲಿಯೋ ಬೇರೆ ಯಾವಾಗಲೋ ಕಾಲವನ್ನು ನಿಗದಿಮಾಡಲು ಉಂಟಾದ **ಎಟ್ರೆಚ್ಚುರುಕ್ಕತ್ತಾಲೇ** – ಹೆಚ್ಚು ಕಡಿಮೆಯಿಂದ, ಫಲದಲ್ಲಿ ವಿಳಂಬವೂ ಅವಿಳಂಬವೂ ಉಂಟಾಗುತ್ತದೆ.

(iv) ಕೆಲವು ಪ್ರಪನ್ನರಿಗೆ ಈ ಸಂಸಾರ ಮಂಡಲದಲ್ಲಿಯೇ ಭಗವತ್ಸಾಕ್ಷಾತ್ಕಾರವು ಉಂಟಾಗುವುದಕ್ಕೂ ಕೆಲವರಿಗೆ ಉಂಟಾಗದಿರುವುದಕ್ಕೂ ಏನು ಕಾರಣವೆಂದರೆ **ಆೞ್ವಾರ್‌ಹಳ್** ಇತ್ಯಾದಿಯಾಗಿ ಆರಂಭಿಸಿ ಉತ್ತರಿಸುತ್ತಾರೆ. ಆದಾಗಿ ಆಳ್ವಾರುಗಳು, ನಾಥಮುನಿಗಳೇ ಮೊದಲಾದವರಿಗೆ ಭಗವತ್ಸಾಕ್ಷಾತ್ಕಾರಾದಿಗಳು ಉಂಟಾಗಿರುವಾಗ, ಕೆಲವರಿಗೆ ಇವುಗಳು ಇಲ್ಲದೇ ಇರುವುದಕ್ಕೆ ಕಾರಣವು ಮೋಕ್ಷಾರ್ಥವಾಗಿ ಪ್ರಪತ್ತಿಯನ್ನು ಮಾಡುವಾಗ ಫಲಸಂಕಲ್ಪದಲ್ಲಿ ವ್ಯತ್ಯಾಸವು, ಅಥವಾ ಪ್ರಾರಬ್ಧ ಸುಕೃತ ವಿಶೇಷವು, ಆಗಬಹುದು. ಪ್ರಪತ್ತಿ ಕಾಲದಲ್ಲಿ "ಏತದ್ದೇಹಾವಸಾನ ಪರ್ಯಂತ ವಿಶದತಮ ಭಗವತ್ಸಾಕ್ಷಾತ್ಕಾರ ಪೂರ್ವಕ, ತದವಸಾನೇ ಮೋಕ್ಷಾರ್ಥ ಪ್ರಾಪ್ತ್ಯರ್ಥಂ ಆತ್ಮರಕ್ಷಾ ಭರಸಮರ್ಪಣಂ ಕರಿಷ್ಯೇ' ಎಂದು ಪ್ರಪತ್ತಿ ಮಾಡಿದವನಿಗೆ ಜೀವಾವಧಿ ಭಗವತ್ಸಾಕ್ಷಾತ್ಕಾರವು ಉಂಟಾಗುತ್ತದೆ. ಕೆಲವರಿಗೆ ಪ್ರಾರಬ್ಧ ಸುಕೃತ ವಿಶೇಷದಿಂದಲೂ ದೇಹಾವಸಾನ ಪರ್ಯಂತ ಭಗವತ್ಸಾಕ್ಷಾತ್ಕಾರಗಳು ಉಂಟಾಗುತ್ತವೆಂದು ತಾತ್ಪರ್ಯ. ಕೆಲವರು ಆರ್ತ್ಯತಿಶಯವಿಲ್ಲದೆ ದೇಹಾವಸಾನದಲ್ಲಿ ಮೋಕ್ಷವು ಬೇಕೆಂದು ಪ್ರಪತ್ತಿ ಮಾಡಿರುತ್ತಾರೆ. ಅಂಥಹವರಿಗೆ, ಅನಂತರ ಆರ್ತ್ಯತಿಶಯದಿಂದ ಶೀಘ್ರವಾಗಿ ಮೋಕ್ಷವು ಬೇಕೆಂಬ ತ್ವರೆಯುಂಟಾದರೆ ಅದಕ್ಕಾಗಿ, ಪೂರ್ವ ಪ್ರಪತ್ತಿಯಲ್ಲಿ ದೇಹಾವಸಾನ ಪರ್ಯಂತ ಅಭ್ಯುಪಗತವಾದ ಪ್ರಾರಬ್ಧಾಂಶವೂ ಕಳೆಯಬೇಕೆಂದು ಪುನಃ ಪ್ರಪತ್ತಿಯನ್ನು ಮಾಡಬಹುದು ಎಂದು **ಮುನ್ಪುಕೋಲಿನ ಫಲಾಂಶಮ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ **ಮುನ್ಪು** – **ಪೂರ್ವ**ದಲ್ಲಿ, ದೇಹಾವಸಾನದಲ್ಲಿ ಮೋಕ್ಷವು ಬೇಕೆಂದು ಆಸೆಪಟ್ಟ ಫಲಾಂಶವು ಸಕೃತ್ಪ್ರಪತ್ತಿಯಿಂದ ಸಿದ್ಧವಾದರೂ, **ಕೊಂಲಾದವಂಶತ್ತೈಪ್ಪತ್ತ** – ದೇಹಾವಸಾನ ಪರ್ಯಂತ ಅಭ್ಯುಪಗತವಾದ ಪಾಪವೂ ಕಳೆದು ಶೀಘ್ರದಲ್ಲಿಯೇ ಮೋಕ್ಷವು ಬೇಕೆಂಬ ತೀವ್ರವಾದ ಸಂವೇಗವು ಉಂಟಾದವರು ಪುನಃ ಪ್ರಪತ್ತಿಯನ್ನು ಮಾಡಬಹುದು. ಇದರಿಂದ

"ಯದರ್ಥಂತು ಕೃತೋನ್ಯಾಸಸ್ತದರ್ಥಂ ನಪುನಃ ಕ್ರಿಯಾ ।"

ಯಾವ ಫಲವನ್ನು ಉದ್ದೇಶಿಸಿ ಭರನ್ಯಾಸವು ಮಾಡಲ್ಪಟ್ಟಿತೋ ಅದಕ್ಕಾಗಿ ತಿರುಗಿಯೂ ಭರನ್ಯಾಸವನ್ನು ಮಾಡಬೇಕಿಲ್ಲವೆಂಬ ವಚನಕ್ಕೆ ವಿರೋಧವು ಏರ್ಪಡುವುದಿಲ್ಲ.

v **ವೇರೇ ಶಿಲರ್** ಇತ್ಯಾದಿ ಮತ್ತೆ ಕೆಲವರು ದೃಷ್ಟಾರ್ಥ ಪ್ರಪತ್ತಿಗಳಲ್ಲಿ ಅಂದರೆ ಐಹಿಕವಾದ ಪುತ್ರ, ಪಶು, ಮಳೆ ಅನ್ನಾದಿ ಸಮೃದ್ಧಿಗಳಿಗಾಗಿ ಮಾಡುವ ಪ್ರಪತ್ತಿಗಳಲ್ಲಿ ಕೆಲವು ಫಲಿಸದೆ ಇರುವುದನ್ನು ನೋಡಿ, ಸಕಲ ಫಲ ಸಾಧನವಾದ ಪ್ರಪತ್ತಿ ಶಾಸ್ತ್ರದಲ್ಲಿ **ಅತಿಶಂಕೈ**–ಸಂದೇಹವನ್ನು ಮಾಡುತ್ತಾರೆ. ಅವರುಗಳನ್ನೂ **ಅಲ್ಲಾದ**

ಳಿಲ್ಪಡಿಹಳಿಲೇ ಕರ್ಮ ಕರ್ತೃಸಾಧನವೈಗುಣ್ಯತ್ತೈಯಿಟ್ಟು ತೆಳಿವಿಕ್ಕ ವೇಣ್ಡುವ್, ಇಙ್ಗು ಕರ್ಮವೈಗುಣ್ಯ ಮಾವದು ? ಮಹಾ ವಿಶ್ವಾಸಾದಿಹಳ್ ಕುರೈಹೆ. ಕರ್ತೃವೈ ಗುಣ್ಯಮಾವದು ? ಪ್ರಪತ್ತಿಕ್ಕು ಚೊನ್ನ ಅಧಿಕಾರಮ್ ನ್ಯೂನಮಾಹೈ. ಸಾಧನವೈಗುಣ್ಯಮಾವದು ? ಯಥಾಶಾಸ್ತ್ರಮ್ ಪ್ರಪತ್ತ್ಯನುಷ್ಠಾನತುಕ್ಕು ಮೂಲಮಾನ ಸದುಪದೇಶಾದಿಹಳನ್ರಿಕ್ಕೇ ಯೊೞಿಹೈ. ಇವ್ವೈಗುಣ್ಯಙ್ಗಳನ್ರಿಕ್ಕೇ ಪ್ರಪತ್ತಿಪಣ್ಣಿನಪೋದು ತತ್ಫಲಙ್ಗಳಾಹಕ್ಕೊಳಿನ ದೃಷ್ಟಙ್ಗಳುಮ್ ಸಿದ್ಧಿಕ್ಕಕ್ಕಾಣಾನಿನ್ರೋಮ್.

### ಪ್ರಪತ್ತಿರ್ಭಕ್ತ್ಯಙ್ಗಮೇವ, ನತು ಸ್ವತಂತ್ರಃ ಇತಿಪಕ್ಷಸ್ಯನಿರಾಸಃ

ವೇರೇ ಶಿಲರ್ ಪ್ರಪತ್ತಿಶಾಸ್ತ್ರತ್ತೋಡುಮ್ ಶಾಸ್ತ್ರಾಂತರಙ್ಗಳೋಡುಮ್ ವಾಶಿಯರ ಸರ್ವಶಾಸ್ತ್ರಙ್ಗಳುಕ್ಕುಮ್ ಪ್ರವರ್ತಕರಾನ ವ್ಯಾಸಾದಿಹಳ್ 1) "ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ

---

**ಶಾಸ್ತ್ರಂಗಳ್ ಪಡಿಹಳಿಲೇ**–ಪ್ರಪತ್ತಿಗಿಂತ ಬೇರೆಯಾದ ಶಾಸ್ತ್ರಗಳ ಕ್ರಮದಲ್ಲಿ ಅಂದರೆ ಮಳೆಗೋಸ್ಕರ ಕಾರೀರಿ ಎಂಬ ಯಾಗವನ್ನು ಮಾಡುವುದು, ಪುತ್ರಕಾಮನು ಪುತ್ರೇಷ್ಟಿಯನ್ನು ಮಾಡುವುದು ಇತ್ಯಾದಿ ಕ್ರಮಗಳಲ್ಲಿ ಕೆಲವು ಫಲಿಸದೆ ಇರುವುದನ್ನು ನೋಡಿ, ಕರ್ಮ–ಕರ್ತೃ ಸಾಧನ ವೈಗುಣ್ಯವನ್ನು ವೆಳಿಯಿಟ್ಟು–ತೋರಿಸಿ ಕೊಟ್ಟು, ಸಂಶಯವನ್ನು ಹೋಗಲಾಡಿಸಬೇಕು. ಅಂದರೆ ಫಲವು ಲಭಿಸದೆ ಇರುವುದಕ್ಕೆ ಕಾರಣ ಪ್ರಪತ್ತಿ ಶಾಸ್ತ್ರದಲ್ಲಿ ಸಂದೇಹದಿಂದಲ್ಲ. ಪ್ರಪತ್ತಿಯನ್ನು ಅನುಷ್ಠಿಸುವಾಗ ಏರ್ಪಡುವ ಕರ್ಮ ಕರ್ತೃಸಾಧನ ವೈಗುಣ್ಯಗಳು. **ಇಂಗು ಕರ್ಮವೈಗುಣ್ಯಮಾವದು**–ಮಾಡುವ ಕರ್ಮದಲ್ಲಿ ನ್ಯೂನತೆಯು ಮಹಾ ವಿಶ್ವಾಸಾದಿಗಳು. **ಕರ್ತೃ ವೈಗುಣ್ಯ ಮಾವದು** ಕರ್ತೃತ್ವದಲ್ಲಿ ನ್ಯೂನತೆಯೆಂದರೆ ಪ್ರಪತ್ತಿಗೆ ಹೇಳಿದ ಆಕಿಂಚನ್ಯ, ಅನನ್ಯಗತಿತ್ವವೆಂಬ ಅಧಿಕಾರವು ನ್ಯೂನವಾಗಿರುವುದು. **ಸಾಧನವೈಗುಣ್ಯಮಾವದು**– ಸಾಧನದಲ್ಲಿ ವೈಗುಣ್ಯವೆಂದರೆ ಯಥಾಶಾಸ್ತ್ರ ಪ್ರಪತ್ತ್ಯನುಷ್ಠಾನಕ್ಕೆ ಮೂಲವಾದ **ಸದುಪದೇಶಾದಿಹಳ್**–ಕರಣ ಮಂತ್ರ, ಮಂತ್ರಾರ್ಥಗಳು ಸದಾಚಾರ್ಯ ಪರಂಪರೆಯಾಗಿ ಉಪದೇಶಿಸಲ್ಪಟ್ಟಿರುವುದು ಸದಾಚಾರ್ಯನಿಂದ, ತನಗೋ, ತನ್ನ ಆಚಾರ್ಯನಿಗೋ, ಅಥವಾ ಅವರಿಗೆ ಪೂರ್ವದಲ್ಲಿಯೋ ಆಚಾರ್ಯ ಪರಂಪರೆಯಾಗಿ, ಮಧ್ಯೆಯಾವ ವಿಚ್ಛೇದವೂ ಇಲ್ಲದೆ ಬರುವ ಉಪದೇಶವೇ ಸದುಪದೇಶ. ಆದಿ ಶಬ್ದದಿಂದ ಗುಣವಂತನಾದ ಆಚಾರ್ಯೋಪದೇಶವು ವಿವಕ್ಷಿತ. **ಇವ್ವೈಗುಣ್ಯಂಗಳರ**–ಈ ರೀತಿಯಾದ, ಮಹಾ ವಿಶ್ವಾಸವಿಲ್ಲದಿರುವುದು ಆಕಿಂಚನ್ಯಾನನ್ಯಗತಿತ್ವಗಳು ಇಲ್ಲದಿರುವುದು, ಸದಾಚಾರ್ಯೋಪದೇಶವು ಇಲ್ಲದಿರುವುದು ಎಂಬ ವೈಗುಣ್ಯಗಳು ಇಲ್ಲದೆ, ಪ್ರಪತ್ತಿ ಪಣ್ಣಿನ ಸಮಯದಲ್ಲಿ ಆ ಪ್ರಪತ್ತಿಗೆ ಫಲಗಳಾಗಿ ಆಸೆಪಟ್ಟ, **ದೃಷ್ಟಂಗಳುಮ್** ಇತ್ಯಾದಿ ಪ್ರತ್ಯಕ್ಷವಾದ ಫಲಗಳು, ಸಿದ್ಧಿಸುವುದನ್ನು ನೋಡಿದ್ದೇವೆ, ಎಂದು ಆಚಾರ್ಯರು ಸಮಾಧಾನವನ್ನು ಅನುಗ್ರಹಿಸಿದ್ದಾರೆ.

### ಪ್ರಪತ್ತಿಯು ಸ್ವತಂತ್ರವಾಗಿ ಮೋಕ್ಷವನ್ನು ಕೊಡಲಾರದು. ಭಕ್ತ್ಯಂಗಕವಾಗಿ ಅನುಷ್ಠಿಸಲ್ಪಟ್ಟು ಮೋಕ್ಷ ಸಾಧನವಾಗುತ್ತದೆ, ಎಂಬ ಮತ ಖಂಡನೆ.

**ವೇರೇಶಿಲರ್**–ಇತ್ಯಾದಿ ಮತ್ತೆ, ಕೆಲವರು ಪ್ರಪತ್ತಿ ಶಾಸ್ತ್ರಕ್ಕೂ ಶಾಸ್ತ್ರಾಂತರಗಳಿಗೂ ವ್ಯತ್ಯಾಸವಿಲ್ಲದೆ ಸರ್ವಶಾಸ್ತ್ರಗಳಿಗೂ ಪ್ರವರ್ತಕರಾದ ವ್ಯಾಸಾದಿಗಳು, 1) **"ಆಲೋಡ್ಯ ಸರ್ವಶಾಸ್ತ್ರಾಣಿ"** ಎಂದೂ,

---

1) ಭಾರತ ಆನುಶಾಸನಿಕ ಪರ್ವ. 188-11. ಸರ್ವಶಾಸ್ತ್ರಗಳನ್ನೂ ಪರ್ಯಾಲೋಚನೆ ಮಾಡಿ- ಪುನಃ ಪುನಃ ಯುಕ್ತ್ಯಾದಿಗಳಿಂದ ವಿಚಾರ ಮಾಡಿದ ಮೇಲೆ ನಾರಾಯಣನ ನಿರಂತರ ಧ್ಯಾನವೇ ಮೋಕ್ಷಸಾಧನವೆಂಬುದು ಸುನಿಶ್ಚಿತವಾದ ಅರ್ಥ.

ಪುನಃ ಪುನಃ ಇದಮೇಕಂ ಸುನಿಷ್ಪನ್ನಂ ಧ್ಯೇಯೋನಾರಾಯಣಸ್ಸದಾ" ಎನ್ರುಮ್ 2) "ಹರಿರೇಕ ಸ್ಸದಾ ಧ್ಯೇಯೋ ಭವದ್ಭಿಸ್ಸತ್ವ ಸಂಸ್ಥಿತೈಃ" 3) "ಸ್ಮರ್ತ್ತವ್ಯ ಸ್ಸತತಂ ವಿಷ್ಣುಃ" ಎನ್ರುಮ್, ಇಪ್ಪಡಿ ನಿಷ್ಕರ್ಷಿಯಾ ನಿರ್ಕ ಸಕೃತ್ಪ್ರಪತ್ತಿ ಮಾತ್ರಮೇ ಮೋಕ್ಷಸಾಧನ ಮಾಹಕ್ಕೂಡುಮೋ? 4) "ಮಾಮೇವಯೇ ಪ್ರಪದ್ಯನ್ತೇ" ಇತ್ಯಾದಿಹಳ್ ಅಙ್ಗ ಪ್ರಪತ್ತಿ ವಿಷಯಙ್ಗಳಾನಾರ್ಪ್ಪೋಲೇ ಚರಮ ಶ್ಲೋಕಾದಿಹಳುಮ್ ಸಪರಿಕರ ಪ್ರಪತ್ತಿಯೈ ಭಕ್ತ್ಯಙ್ಗಮಾಹ ವಿಧಿಕ್ಕಿರನ ವಾಹ ವೇಣ್ಣಾವೋ ವೆನ್ರು ಶೊಲ್ಲುವರ್ಹಳ್. ಇದುವುಮನುಪಪನ್ನಮ್ –

5) "ಶರಣಂ ತ್ವಾಂ ಪ್ರಾಪನ್ನಾಯೇ ಧ್ಯಾನ ಯೋಗವಿವರ್ಜಿತಾಃ ।
ತೇಪಿಮೃತ್ಯುಮತಿಕ್ರಮ್ಯ ಯಾಂತಿ ತದ್ವೈಷ್ಣವಂ ಪದಮ್" ॥ಎನ್ರುಮ್,

6) "ಯದ್ಯೇನ ಕಾಮ ಕಾಮೇನ ನಸಾಧ್ಯಂ ಸಾಧನಾಂತರೈಃ ।
ಮುಮುಕ್ಷುಣಾ ಯತ್ಸಾಂಖ್ಯೇನ ಯೋಗೇನ ನಚ ಭಕ್ತಿತಃ ॥

---

2) ಹರಿರೇಕಸ್ಸದಾಧ್ಯೇಯಃ ಎಂದೂ, 3) **ಸ್ಮರ್ತವ್ಯಸ್ಸತತಂ ವಿಷ್ಣುಃ** ಎಂದೂ ನಿರಂತರ ಭಗವದ್ಧ್ಯಾನವೇ, ಅಂದರೆ,ಅಸಕೃದಾವೃತ್ತವಾದ ಭಕ್ತಿ ರೂಪ ಜ್ಞಾನವೇ ಮೋಕ್ಷಸಾಧನವೆಂದು ನಿಷ್ಕರ್ಷಿಸಿರುವಾಗ, **ಸಕೃತ್ ಪ್ರಪತ್ತಿ ಮಾತ್ರತ್ತಾಲೇ**- ಒಂದು ಸಲ ಪ್ರಪತ್ತಿಯನ್ನು ಮಾಡಿದಷ್ಟಕ್ಕೇ, ಮೋಕ್ಷವು ಲಭಿಸುತ್ತದೆಯೇ ? ಲಭಿಸುವುದಿಲ್ಲವೆಂದು ಶಂಕಿಸುತ್ತಾರೆ. ಚರಮ ಶ್ಲೋಕದಲ್ಲಿ ಸರ್ವಪಾಪ ನಿವರ್ತಕವಾಗಿ ಪ್ರಪತ್ತಿಯು ವಿಧಿಸಲ್ಪಟ್ಟಿಲ್ಲವೇ ಎಂದರೆ 4) **"ಮಾಮೇವಯೇ ಪ್ರಪದ್ಯಂತೇ ಮಾಯಮೇತಾಂ ತರಂತಿತೇ"**, ಇತ್ಯಾದಿಗಳಲ್ಲಿ ಹೇಳಿರುವಂತೆ, ಭಕ್ತಿಗೆ ಅಂಗವಾಗಿ ಪರಂಪರೆಯಾಗಿ ಪ್ರಪತ್ತಿಯು ಸರ್ವಪಾಪ ನಿವರ್ತಕವು, ಸಾಕ್ಷಾತ್ತಾಗಿಲ್ಲ ಎಂದು ಹೇಳಿರುವಂತೆ, ಚರಮ ಶ್ಲೋಕಾದಿಗಳೂ ಸಪರಿಕರ (ಅಂಗಗಳೊಡನೆ ಕೂಡಿದ) ಪ್ರಪತ್ತಿಯನ್ನು ಭಕ್ತಿಗೆ ಅಂಗವಾಗಿ ವಿಧಿಸುತ್ತವೆ ಎಂದು ಹೇಳುತ್ತಾರೆ, ಇದು ಪೂರ್ವ ಪಕ್ಷ. **ಇದುವುಮ್ ಅನುಪಪನ್ನಮ್**–ಇದುವೂ ಉಚಿತವಲ್ಲವೆಂದು ಆಚಾರ್ಯರು ಹೇಳಿ 5) **ಶರಣಂತ್ವಾಂಪ್ರಪನ್ನಾಯೇ** ಎಂದಾರಂಭಿಸಿ ಸಿದ್ಧಾಂತವನ್ನು ನಿಷ್ಕರ್ಷಿಸುತ್ತಾರೆ. ಅದಾಗಿ ಭಕ್ತಿಯೋಗಕ್ಕೆ ಅಧಿಕಾರವಿಲ್ಲದವರು ಪ್ರಪತ್ತಿಯನ್ನು ಅನುಷ್ಠಿಸಿದರೆ ಮೃತ್ಯುರೂಪ ಸಂಸಾರವನ್ನು ದಾಟಿ ವೈಷ್ಣವ ಪದವೆಂಬ ಮೋಕ್ಷವನ್ನು ಪಡೆಯುತ್ತಾರೆಂದು ಹೇಳಿರುವ ಈ ಪ್ರಮಾಣದಿಂದ ಸ್ವತಂತ್ರ ಪ್ರಪತ್ತಿಯೂ ಮೋಕ್ಷಕ್ಕೆ ಸಾಧನವೆಂಬುದನ್ನು ಅಕಾಮನೂ ಒಪ್ಪಬೇಕು. **ಎನ್ರುಮ್**–ಹೀಗೆಂದೂ, 6) **ಯದ್ಯೇನ ಕಾಮಕಾಮೇನ** ಇತ್ಯಾದಿ ತನ್ನ ಇಷ್ಟಾರ್ಥವನ್ನು ಹೊಂದಲು "ನಚಭಕ್ತಿತಃ'–ಭಕ್ತಿಯೇ ಮೊದಲಾದ ಸಾಧನಾಂತರಗಳಿಂದ ಪಡೆಯದ ಫಲವು, "ನ್ಯಾಸೇನೈವ", ನ್ಯಾಸ ವಿದ್ಯೆಯಿಂದಲೇ ಪಡೆಯಬಹುದು ಎಂದು ಸ್ಪಷ್ಟತರವಾದ ವಚನಗಳಲ್ಲಿ ಏವಕಾರವನ್ನು ಹೇಳಿ ಇತರ ಉಪಾಯಗಳನ್ನು ವ್ಯಾವರ್ತಿಸುತ್ತದೆಯಾದ್ದರಿಂದ ಸ್ವತಂತ್ರ ಪ್ರಪತ್ತಿಗೇ ಮೋಕ್ಷ ಸಾಧನತ್ವವು ಸಿದ್ಧಿಸುತ್ತದೆ.

---

2) ಹರಿವಂಶ (132–14) ಸತ್ವ ಗುಣದಿಂದ ಕೂಡಿದ ನಿಮ್ಮಿಂದ ಹರಿಯು ಸದಾ ಧ್ಯಾನಿಸ್ಪಡತಕ್ಕವನು.

3) ಹರಿವಂಶ (132-14)

ಸ್ಮರ್ತವ್ಯಸ್ಸತತಂ ವಿಷ್ಣುಃ ವಿಸ್ಮರ್ತವ್ಯೋನ ಜಾತುಚಿತ್ ।
ಸರ್ವಂವಿಧಿ ನಿಷೇಧಾಃಸ್ಯುಃ ಏತಯೋರೇವ ಕಿಂಕರಾಃ ॥

ವಿಷ್ಣುವು ಯಾವಾಗಲೂ ಧ್ಯಾನಿಸಲ್ಪಡತಕ್ಕವನು. ಅವನನ್ನು ಯಾವಾಗಲೂ ಮರೆಯಲಾಗದು. ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಆಜ್ಞಾರಾಪವಾದ ಕಾರ್ಯಗಳು ಮತ್ತು ಮಾಡಕೂಡದೆಂದು ನಿಷೇಧಿಸಲ್ಪಟ್ಟ ಕಾರ್ಯಗಳು, ಎಲ್ಲವೂ ಅವನ ಆಜ್ಞೆ.

ಪು. ತಿ. ನೋ.

ಪ್ರಾಪ್ಯತೇ ಪರಮಮ್ ಧಾಮ ಯತೋ ನಾವರ್ತತೇಯತಿಃ ।
ತೇನ ತೇನಾಪ್ಯತೇ ತತ್ತನ್ನ್ಯಾಸೇನೈವ ಮಹಾಮುನೇ ॥
ಪರಮಾತ್ಮಾ ಚ ತೇನೈವ ಸಾಧ್ಯತೇ ಪುರುಷೋತ್ತಮಃ ॥"
ಎನ್ರುಮ್, ಇತ್ಯಾದಿ ವಚನಙ್ಗಳಾಲೇ ಸ್ವತಂತ್ರ ಪ್ರಪತ್ತಿ ಸಿದ್ಧಿಕ್ಕಾಲ್, ಇನ್ನಿಷ್ಠೈಯುಡೈಯವನುಕ್ಕು ಶ್ರೀ ವೈಕುಂಠಗದ್ಯತ್ತಿಲ್ಪಡಿಯಿಲೇ ಸ್ವಯಂ ಫಲಮಾಹ "ಧ್ಯೇಯೋ ನಾರಾಯಣಸ್ಸದಾ" ಎನ್ಗಿರ ಅರ್ಥತ್ತಿಲ್ ತನ್ ವಿಗ್ರಕ್ಕಾಡನ್ವಯತ್ತುಕ್ಕು ವಿರೋಧಮಿಲ್ಲೈ. ಇದು ಆರೋಗನುಕ್ಕು ಮಾರೋಗ್ಯಾರ್ಥಿಕ್ಕುಮ್ ಕ್ಷೀರಂ ಸೇವ್ಯ ಮೆನ್ನಕ್ಕೊಡೊಕ್ಕುಮ್.

---

ಹೀಗೆ ಸ್ವತಂತ್ರ ಪ್ರಪತ್ತಿಗೆ ಮೋಕ್ಷಸಾಧನತ್ವವು ಸಿದ್ಧಿಸಿದರೆ, 'ಧ್ಯೇಯೋನಾರಾಯಣಸ್ಸದಾ' ಎಂದು ಸರ್ವಾಧಿಕಾರಿ ಸಾಧಾರಣವಾಗಿ ನಿರಂತರ ಭಗವಚ್ಚಿಂತನೆಯನ್ನು ವಿಧಿಸುವ ವಚನಕ್ಕೆ ಏನು ಗತಿ ಎಂದರೆ. **ಇನ್ನಿಷ್ಟೈಯ್ಯೈಯುಡೈಯವನುಕ್ಕು**–ಎಂದಾರಂಭಿಸಿ ಸಮಾಧಾನವನ್ನು ಅನುಗ್ರಹಿಸುತ್ತಾರೆ. ಅದಾಗಿ ಈ ಸ್ವತಂತ್ರ ಪ್ರಪತ್ತಿಯಲ್ಲಿ ನಿಷ್ಠೆಯುಳ್ಳವನಿಗೆ, ಶ್ರೀ ವೈಕುಂಠ ಗದ್ಯದಲ್ಲಿ ಹೇಳಿರುವಂತೆ ಸ್ವಯಂ ಪ್ರಯೋಜನವಾಗಿ "ಧ್ಯೇಯೋನಾರಾಯಣಸ್ಸದಾ" ಎಂಬ ಅರ್ಥದಲ್ಲಿ **ತನ್ ವಿಗ್ರಕ್ಕಾಡನ್ವಯತ್ತುಕ್ಕು**–ಸ್ವತಃ ಪ್ರಾಪ್ತವಾದ ಅನ್ವಯಕ್ಕೆ, ಅಂದರೆ ಉಪಾಯವಾಗಿಯೂ, ಫಲರೂಪವಾಗಿಯೂ ವಿಹಿತವಾದ 'ಧ್ಯೇಯೋನಾರಾಯಣಸ್ಸದಾ' ಎಂಬ ಧ್ಯಾನರೂಪಾರ್ಥದಲ್ಲಿ ವಿರೋಧವಿಲ್ಲ. ಅಂದರೆ ಶಕ್ತನು ಭಕ್ತಿಯೋಗವನ್ನು ಮೋಕ್ಷಕ್ಕೆ ಉಪಾಯವಾಗಿ ಮಾಡತಕ್ಕದ್ದು. ಅಶಕ್ತನು ಮೋಕ್ಷಾರ್ಥಕ್ಕಾಗಿ ಸ್ವತಂತ್ರ ಪ್ರಪತ್ತಿಯನ್ನು ಅನುಷ್ಠಿಸಿ ಅನಂತರ ಕಾಲಗಳಲ್ಲಿ ಸ್ವಯಂ ಪ್ರಯೋಜನವಾಗಿ ಪ್ರೇಮರೂಪ(ಭಕ್ತಿ) ಭಗವದ್ಧ್ಯಾನವನ್ನು ಮಾಡತಕ್ಕದ್ದು ಎಂಬುದು ತಾತ್ಪರ್ಯ.

ಹೀಗೆ ಹೇಳುವುದು ಸರಿಯೇ ? ಅಲ್ಲವೆಂಬುದು ಪೂರ್ವಪಕ್ಷಿಯ ಚೋದ್ಯ. ಹಾಗಾದರೆ ಒಂದು ವಾಕ್ಯದಲ್ಲಿ ವಿಹಿತವಾದ ಒಂದರ್ಥದಲ್ಲಿ ಉಪಾಯವಾಗಿ ಒಬ್ಬನಿಗೂ ಫಲರೂಪವಾಗಿ ಮತ್ತೊಬ್ಬನಿಗೂ ಅನ್ವಯಿಸುವುದು ಉಂಟೇ ಎಂಬುದು ಚೋದ್ಯ. ಇದಕ್ಕೆ **ಇದು ಆರೋಗನುಕ್ಕು**–ಎಂದಾರಂಭಿಸಿ ದೃಷ್ಟಾಂತಪೂರ್ವಕವಾಗಿ ಉತ್ತರಿಸುತ್ತಾರೆ. ಅದಾಗಿ ವೈದ್ಯ ಶಾಸ್ತ್ರದಲ್ಲಿ ಕ್ಷೀರವನ್ನು ಸೇವಿಸುವಂತೆ ಆರೋಗನಿಗೂ ಆರೋಗ್ಯಾರ್ಥಿಗೂ ತಂತ್ರೇಣ ವಿಧಿಸಲ್ಪಟ್ಟಿದೆ.

---

4) ದೈವೀಹ್ಯೇಷಾ ಗುಣಮಯೀ ಮಮಮಾಯಾ ದುರತ್ಯಯಾ ।
ಮಾಮೇವ ಯೇಪ್ರಪದ್ಯಂತೇ ಮಾಯಾಮೇತಾಂತರಂತಿತೇ ॥
ಗೀತೆ (7·14) ಮಾಯಾಶಬ್ದ ವಾಚ್ಯವಾದ ಪ್ರಕೃತಿಯು ಸತ್ವರಜೋಸ್ತಮೋಮಯವಾದ ತ್ರಿಗುಣಾತ್ಮಕವಾದದ್ದು. ದೈವೀ-ಜಗದ್ವ್ಯಾಪಾರ ಲೀಲನಾದ ದೇವನಾದ ನನ್ನಿಂದ ನಿರ್ಮಿತವು-ಪ್ರವರ್ತಿಸಲ್ಪಟ್ಟಿದೆ ಎಂದರ್ಥ. ಯಾರು ನನ್ನನ್ನು ಶರಣ ಹೊಂದುತ್ತಾರೋ, ಅವರು ಈ ಪ್ರಕೃತಿ ಬಂಧನದಿಂದ ಬಿಡುಗಡೆ ಹೊಂದುತ್ತಾರೆ. ಇಲ್ಲಿ 'ಮಾಯೆ' ಎಂಬುದು ಮಿಥ್ಯೆಯಲ್ಲ. ಮಾಯಾ ಶಬ್ದವು ಆಶ್ಚರ್ಯವಾಚಿ. "ಮಾಯಾಂತು ಪ್ರಕೃತಿಂವಿದ್ಯಾತ್" ಎಂಬುದು ಶ್ರುತಿ,

5) ಬ್ರಾಹ್ಮಪುರಾಣ 53–ಧ್ಯಾನಯೋಗ ವಿವರ್ಜಿತಾಃ –ಭಕ್ತಿಯೋಗದಲ್ಲಿ ಶಕ್ತಿಯಿಲ್ಲದವರು ಯಾರು ನಿನ್ನನ್ನು ಮೋಕ್ಷಾರ್ಥವಾಗಿ ಶರಣ ಹೊಂದುತ್ತಾರೋ ಅವರುಗಳೂ ಸಂಸಾರವನ್ನು ದಾಟ ವೈಷ್ಣವ ಪದವೆಂಬ ಮೋಕ್ಷವನ್ನು ಪಡೆಯುತ್ತಾರೆ-

6) ಕಾಮ್ಯಪುರುಷಾರ್ಥಗಳಲ್ಲಿ ಆಸೆಯುಳ್ಳವನು, ಕರ್ಮಯೋಗ, ಜ್ಞಾನಯೋಗ ಭಕ್ತಿಯೋಗಗಳಿಂದ ಅವನ್ನು ಸಾಧಿಸಿಕೊಳ್ಳಲು ಆಗದೆ ಹೋದರೆ, ಹಾಗೆಯೇ ಮೋಕ್ಷದಲ್ಲಿ ಆಸೆಯುಳ್ಳವನು, ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಧಿಂದ ಮೋಕ್ಷವನ್ನು ಸಾಧಿಸಿಕೊಳ್ಳಲು ಅಶಕ್ತನಾದರೆ, ಆ ಕಾಮ್ಯಪುರುಷಾರ್ಥಿಯೂ, ಮೋಕ್ಷಪುರುಷಾರ್ಥಿಯೂ ಆಯಾಯಾ ಫಲಗಳನ್ನು ನ್ಯಾಸವೆಂದು ಹೇಳಲ್ಪಡುವ ಶರಣಾಗತಿಯಿಂದಲೇ ಸಾಧಿಸಿಕೊಳ್ಳಲು ಶಕ್ಯ, ಆ ಪ್ರಪತ್ತಿಯಿಂದಲೇ ಪರಮಾತ್ಮನನ್ನು ಸಾಕ್ಷಾತ್ತಾಗಿಯೇ ಪಡೆಯಲು ಆಗುತ್ತದೆ. ಪುನರಾವರ್ತಿಯಿಲ್ಲದ ಮೋಕ್ಷವು ಸ್ವತಂತ್ರ ಪ್ರಪತ್ತಿಯಿಂದಲೇ ಪಡೆಯಲು ಸಾಧ್ಯವೆಂಬುದು ತಾತ್ಪರ್ಯ ಅಹಿರ್ಬುಧ್ನ್ಯಸಂಹಿತೆ–37,25,26,27

## ಅತಃ ಸದಾ ಭಗವತ್ಸ್ಮರಣೇ ಸರ್ವಾಧಿಕಾರತ್ವಮ್

**ಸಾಙ್ಗಮಾನ ಧ್ಯಾನವಿಶೇಷಮ್ ಸರ್ವಾಧಿಕಾರಮನ್ರೇಯಾಹಿಲುಮ್, ಭಗವದ್ವಿಷಯತ್ತಿಲ್ ಅಧಿಕಾರಾನುರೂಪಮಾಹ ಅರಿಯಲಾಮುಳವುಮ್ 1) "ನಿರನ್ತರಮ್ ನಿನೈಪ್ಪದಾಹ ನೀ ನಿನೈಕ್ಕ ವೇಣ್ಡುಮೇ" ಇತ್ಯಾದಿಹಳಿಲ್ಪಡಿಯೇ ಅನುಸಂಧಿಕ್ಕವುಮ್ ಕುರೈಯಿಲ್ಲೈ.**

## ಶ್ರೀ ಭಾಷ್ಯಕಾರೈರ್ಭರನ್ಯಾಸೋಪಾಯಸ್ಯ ಉಪಾದೇಯತ್ವ ಕಥನಮ್

**ಶ್ರೀ ಭಾಷ್ಯಕಾರರು ಮಿವ್ವುಪಾಯ ನಿಷ್ಠೈಯೈ ಶಿರಿಯಗದ್ಯತ್ತಿಲುಮ್, ಪೆರಿಯ ಗದ್ಯತ್ತಿಲುಮ್ ಅರುಳಿಚ್ಚೆಯ್‌ದು ಶ್ರೀ ವೈಕುಂಠಗದ್ಯತ್ತಿಲು ಮಿನ್ನಿಷ್ಠೈಯೈಚ್ಚುರಙ್ಗಕ್ಕಾಟ್ಟಿ, ಯಿರುನ್ದನಾಳ್ ಪ್ರಾಪ್ಯ**

---

ಆ ರೀತಿಯಲ್ಲಿ ಶಕ್ತ್ಯಶಕ್ತ್ಯನುಗುಣವಾಗಿ ಧ್ಯಾನವು ಒಬ್ಬನಿಗೆ ಉಪಾಸನಾರ್ಥವಾಗಿಯೂ ಮತ್ತೊಬ್ಬನಿಗೆ ಫಲಾರ್ಥವಾಗಿಯೂ ವಿಹಿತವೆಂಬುದರಲ್ಲಿ ದೋಷವೇನೂ ಇಲ್ಲವೆಂಬುದು ಆಚಾರ್ಯರ ಹೃದಯ.

ಅನಂತರ, ಅತ್ರೈವರ್ಣಿಕರಲ್ಲಿಯೂ ಸ್ವತಂತ್ರ ಪ್ರಪತ್ತಿ ನಿಷ್ಠರು ಇರುವುದರಿಂದ ಅವರಿಗೆ ಅಷ್ಟಾಂಗ ಭಕ್ತಿಯೋಗದಲ್ಲಿ ಅಧಿಕಾರವಿಲ್ಲದಿರುವುದರಿಂದ, ಫಲರೂಪವಾಗಿಯೂ ಭಕ್ತಿಯೋಗವನ್ನು ಅನುಷ್ಠಿಸಲಾಗದೆಂದರೆ ಅದಕ್ಕೂ **ಸಾಂಗಮಾನ ಧ್ಯಾನವಿಶೇಷಮ್** ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ. ಅದಾಗಿ, ಅಂಗಗಳಿಂದ ಕೂಡಿದ ಧ್ಯಾನ ವಿಶೇಷವು (ಭಕ್ತಿಯೋಗ) ಸರ್ವಾಧಿಕಾರವಲ್ಲದಿದ್ದರೂ, ಭಗವದ್ವಿಷಯದಲ್ಲಿ ತ್ರೈವರ್ಣಿಕ, ಅತ್ರೈವರ್ಣಿಕತ್ವ ರೂಪಾಧಿಕಾರಾನು ಗುಣವಾಗಿ, **ಅರಿಯಲಾಮುಳವುಮ್** – ತನಗೆ ತಿಳಿದ ಮಟ್ಟಿಗೆ 1) **"ನಿರಂತರಂ ನಿನೈಪ್ಪದಾಹ"** ಇತ್ಯಾದಿ ಎಡೆಬಿಡದೆ ಭಗವಂತನನ್ನು ಧ್ಯಾನ ಮಾಡುವಂತೆ ಅವನು ಸಂಕಲ್ಪಿಸಬೇಕು, ಇತ್ಯಾದಿಗಳಲ್ಲಿ ಹೇಳಿರುವಂತೆ **ಅನುಸಂಧಿಕ್ಕವುಂಕುರೈಯಿಲ್ಲೈ** ತ್ರೈವರ್ಣಿಕರಾದರೆ ಸ್ವಾಧಿಕಾರಾನು ಗುಣವಾಗಿ ಅಷ್ಟಾಂಗ ಯೋಗ ರೂಪವಾದ ಭಕ್ತಿಯೋಗವನ್ನು ಅನುಸಂಧಾನ ಮಾಡುವುದು ಅತ್ರೈವರ್ಣಿಕರಾದರೆ ಸ್ವಾಧಿಕಾರಾನುರೂಪವಾಗಿ ಪ್ರೇಮ ಭಕ್ತಿರೂಪವಾದ ಅನುಸಂಧಾನವನ್ನು ಮಾಡಲು ಯಾವ ದೋಷವೂ ಇಲ್ಲ. ತಿರುಮಳಿಶೈಯಾಳ್ವಾರವರು ಸಂಕರ ಜಾತಿಯಲ್ಲಿ ಹುಟ್ಟಿ, ತಮಗೆ ಈ ಧ್ಯಾನವು ಬೇಕೆಂದು ಪ್ರಾರ್ಥಿಸಿದುದರಿಂದ, ಇದು ವೇದ ವಿಹಿತವಾದ ಭಕ್ತಿಯೋಗವಲ್ಲ. ಪ್ರೇಮರೂಪವಾದ ನಿರಂತರ ಭಗವಚ್ಚಿಂತನೆ.

**ಭಾಷ್ಯಕಾರರುಂ** ಇತ್ಯಾದಿ. ಭಗವದ್ಭಾಷ್ಯಕಾರರೂ ಈ ಸ್ವತಂತ್ರ ಪ್ರಪತ್ತಿರೂಪ ಮೋಕ್ಷೋಪಾಯ ನಿಷ್ಠೆಯನ್ನು, ಶ್ರೀ ರಂಗಗದ್ಯದಲ್ಲೂ, ಶರಣಾಗತಿ ಗದ್ಯದಲ್ಲೂ ಕೃಪೆಮಾಡಿ ಹೇಳಿ, ಶ್ರೀ ವೈಕುಂಠ ಗದ್ಯದಲ್ಲಿ "ಶ್ರೀ ಮಚ್ಚರಣಾರವಿಂದಯುಗಳಂಶರಣಮನುವ್ರಜೇತ್"ಎಂದು ಸಂಗ್ರಹವಾಗಿ ಹೇಳಿ,ಅನಂತರ **ಇರುಂದನಾಳ್ ಪ್ರಾಪ್ಯರುಚಿಕುಲೈಯಾದೇ** ಇತ್ಯಾದಿ ಈ ಲೋಕದಲ್ಲಿ ಇರುವ ಕಾಲ ಪರ್ಯಂತ ಪ್ರಾಪ್ಯವಾದ ಭಗವದನುಭವದಲ್ಲಿ ರುಚಿಯು **ಕುಲೈಯಾದೇ**

---

1) ಇರುಂದುರೈಪ್ಪದುಂಡುವಾಳಿ ಎಮನೀರ್‌ನಿರತ್ತಮಾ
ವರಂತರುಂತಿರುಕ್ಕುರಿಪ್ಪಿಲ್ ವೈತ್ತದಾಹಿಲ್‌ಮನ್ನುಶೀರ್ ।
ಪರಂದ ಶಿಂದೈಯೊನ್ರಿನಿನ್ನ ನಿನ್ನಪಾದ ಪಂಗಯಮ್
ನಿರಂತರಂನಿನೈಪ್ಪದಾಹ ನೀನಿನೈಕ್ಕವೇಂಡುಮೇ ॥ ತಿರುಚ್ಚಂದವಿರುತ್ತಮ್ 101

ಎಲೈ ಭಗವಂತನೇ ನನಗೆ ವರಗಳನ್ನು ಕೊಡಬೇಕೆಂದು ನಿನ್ನ ಮನಸ್ಸಿನಲ್ಲಿ ನೆನೆದಿದ್ದೀಯಾದರೆ, ನಿನ್ನ ಕಲ್ಯಾಣ ಗುಣಗಳಲ್ಲಿ ಮನಸ್ಸು ಲೀನವಾಗಿ, ಅನವರತವೂ, ನಿನ್ನ ಪಾದ ಪಂಕಜವನ್ನು ಧ್ಯಾನ ಮಾಡುವಂತೆ, ನೀನು ಸಂಕಲ್ಪಿಸಬೇಕು.

**ರುಚಿಕುಲ್ಲೈಯಾದೇ ವಳರ್ನ್ದು ಪೋರುಮ್ಪಡಿ ಕ್ಕೀಡಾನ ಅನುಸಂಧಾನ ವಿಶೇಷತ್ತೈ 1) "ತತಶ್ಚ ಪ್ರತ್ಯಹ ಮಾತ್ಮೋಜ್ಜೀವನಾಯೈವ ಮನುಸ್ಮರೇತ್" ಎನ್ರು ತುಡಙ್ಗಿ ಅರುಳಿಚ್ಚೆಯ್‌ದಾರ್.**

**ಇಪ್ರಪನ್ನನುಕ್ಕು 1) "ಪೂಶಿತ್ತುಮ್ ಪೋಕ್ಕಿನೇನ್ ಪೋದು" ಎನ್ಗಿರ ಅನನ್ಯ ಪ್ರಯೋಜನ**

---

**ವಳರ್ನ್ದು ಪೋರುಂಪಡಿಕ್ಕೀಡಾನ** ನಶಿಸದೆ ಅಭಿವೃದ್ಧವಾಗುವುದಕ್ಕೆ ಕಾರಣವಾದ ಅನುಸಂಧಾನ ವಿಶೇಷವನ್ನು 1) **ತತಶ್ಚಪ್ರತ್ಯಹಂ ಆತ್ಮೋಜ್ಜೀವನಾಯ ಏವಮನುಸ್ಮರೇತ್** – ಅನಂತರ ಪ್ರತಿದಿನವೂ ಆತ್ಮೋಜ್ಜೀವನಾರ್ಥವಾಗಿ ಹೀಗೆ ಅನುಸಂಧಾನ ಮಾಡಬೇಕೆಂದು, ಲೀಲಾ ವಿಭೂತಿ ನಿತ್ಯ ವಿಭೂತಿಗಳನ್ನು ವರ್ಣಿಸಿ, ಉಭಯ ವಿಭೂತಿನಾಥನಾದ ಭಗವಂತನು ಶ್ರೀ ಭೂಮಿನೀಳಾ ಸಮೇತನಾಗಿ ಪರಮಪದದಲ್ಲಿ ವಿರಾಜಮಾನನಾಗಿರುವ ಸನ್ನಿವೇಶವನ್ನು ವರ್ಣಿಸಿ, ಅವನನ್ನು ಎಡೆಬಿಡದೆ ಧ್ಯಾನಮಾಡುತ್ತಾ' ಯಾವಾಗ ಆ ಭಗವಂತನ ಪಾದ ಪದ್ಮಗಳಲ್ಲಿ ಕೈಂಕರ್ಯ ಮಾಡುತ್ತೇನೆಂದು ಹಂಬಲಿಸುವ ರೀತಿಯನ್ನು ವರ್ಣಿಸಿರುತ್ತಾರೆ. **ಎನ್ರುತುಡಂಗಿ ಅರುಳಿಚ್ಚೆಯ್ದಾರ್**–ಎಂದಾರಂಭಿಸಿ ಅನುಗ್ರಹಿಸಿದ್ದಾರೆ. ಇದರ ತಾತ್ಪರ್ಯವೇನೆಂದರೆ ಆತ್ಮೋಜ್ಜೀವನಾರ್ಥವಾಗಿ ಪ್ರತಿದಿನವೂ ಅತ್ಯರ್ಥಪ್ರಿಯವಾಗಿ ದರ್ಶನರೂಪವಾದ ಧ್ಯಾನವನ್ನು ಮಾಡಬೇಕೆಂದು ಗದ್ಯದಲ್ಲಿ ಹೇಳಿರುವುದು ಉಪಾಯರೂಪವಾದ ಭಕ್ತಿಯೋಗವಲ್ಲ. ಮತ್ತೇನೆಂದರೆ, ಶರಣಾಗತಿ ಗದ್ಯದಲ್ಲೂ, ಶ್ರೀರಂಗ (ಮಿತ) ಗದ್ಯದಲ್ಲೂ ಸ್ವತಂತ್ರ ಪ್ರಪತ್ತಿಯನ್ನು ಮೋಕ್ಷಾರ್ಥವಾಗಿ ವಿಸ್ತರಿಸಿ ಹೇಳಿ, ವೈಕುಂಠ ಗದ್ಯದಲ್ಲಿ ಶರಣಾಗತಿಯನ್ನು ಮೋಕ್ಷಾರ್ಥವಾಗಿ ವಿಧಿಸಿ, ಅನಂತರ ಹೇಳಿರುವ ಈ ಧ್ಯಾನವಿಶೇಷವು ಫಲರೂಪವಾದದ್ದು ಈ ಲೋಕದಲ್ಲಿ ಇರುವ ಕಾಲ ಪರ್ಯಂತ ಸ್ವಯಂಪ್ರಯೋಜನವಾಗಿ ಮಾಡತಕ್ಕುದುದು. ಆದ್ದರಿಂದ "ಧ್ಯೇಯೋನಾರಾಯಣಸ್ಸದಾ" ಎಂಬುದು ಭಕ್ತಿಯೋಗ ನಿಷ್ಠನಿಗೆ ಉಪಾಯರೂಪವಾಗಿಯೂ, ಸ್ವತಂತ್ರ ಪ್ರಪತ್ತಿ ನಿಷ್ಠನಿಗೆ ಫಲರೂಪವಾಗಿಯೂ ವಿಹಿತವಾದದ್ದು. ಈ ವಾಕ್ಯವನ್ನವಲಂಬಿಸಿ ಸ್ವತಂತ್ರ ಪ್ರಪತ್ತಿ ನಿಷ್ಠೆಯನ್ನು ಅಲ್ಲಗೆಳೆಯಬಾರದು. 'ಆತ್ಮೋಜ್ಜೀವನಾಯ' ಎಂದು ಹೇಳಿರುವ ವಾಕ್ಯಕ್ಕೆ ಮೋಕ್ಷಾರ್ಥವೆಂದಲ್ಲ. ಈ ಲೋಕದಲ್ಲಿರುವ ಪರ್ಯಂತ, ಆತ್ಮಸ್ವರೂಪವು ಭಗವಚ್ಚಿಂತನ ಮತ್ತು ಭಗವತ್ಕೈಂಕರ್ಯಗಳಲ್ಲಿ ನಿರತವಾಗಿರಬೇಕೆಂಬುದು ತಾತ್ಪರ್ಯ.

ಇದೇ, "ಯನ್ಮುಹೂರ್ತಂ ಕ್ಷಣಂವಾಪಿ ವಾಸುದೇವೋ ನ ಚಿಂತ್ಯತೇ ।
ಸಾಹಾನಿಸ್ತನ್ಮಹಚ್ಛಿದ್ರಂ ಸಾಭ್ರಾಂತಿಸ್ಸಾಚ ವಿಕ್ರಿಯಾ ।
ದಸ್ಯುಭಿರ್ಮುಷಿತೇನೈವ ಯುಕ್ತಮಾಕ್ರಂದಿತುಂ ಭೃಶಮ್ ॥

ಎಂದು ಹೇಳಿರುವ ರೀತಿಯಲ್ಲಿ ಭಗವಧ್ಯಾನವೇ ಆತ್ಮ ಕ್ಷೇಮಕರವಾದದ್ದು. ಆ ಧ್ಯಾನವಿಲ್ಲದಿದ್ದರೆ ಅದೇ ಆತ್ಮನಾಶವೆಂಬ ಶ್ರೀ ಸೂಕ್ತಿಯ ತಾತ್ಪರ್ಯವನ್ನೊಳಗೊಂಡಿದೆ.

1) **ಇಪ್ರಪನ್ನನುಕ್ಕು "ಪೂಶಿತ್ತುಂ ಪೋಕ್ಕಿನೇನ್‌ಪೋದು"** ಇತ್ಯಾದಿ–ಈಪ್ರಪನ್ನನಿಗೆ, ಭಗವಂತನನ್ನು

---

1) ವೈಕುಂಠ ಗದ್ಯ-ಅನಂತರ ಪ್ರತಿದಿನವೂ ತನ್ನ ಉಜ್ಜೀವನಕ್ಕೋಸ್ಕರ ಹೀಗೆ ಅನುಸಂಧಾನ ಮಾಡಬೇಕು.

1) ಶರಿತ್ತಿರುಂದೇ ನಾಹವೇ ತಾರಾಕಣಪ್ಪೂಲ್
ಏರಿತ್ತು ರೈತ್ತವೆನ್ನಾಹತ್ತುನ್ನೈ ತೆರಿತ್ತೆಳ್ದಿ
ವಾಶಿತ್ತುಂ ಕೇಟ್ಟುಂ ವಣಂಗಿ, ವಳಿಪಟ್ಟುಂ
ಪೂಶಿತ್ತುಂ ಪೋಕ್ಕಿನೇನ್‌ಪೋದು ॥ ನಾನ್ಮುಹನ್ ತಿರುವಂದಾದಿ 63

ಎಲೈ ಶೇಷಶಾಯಿಯೇ, ನನ್ನ ಆತ್ಮವು ಧರಿಸಿರಲು, ನಿನ್ನ ಗುಣಗಳನ್ನು ಬರೆದು, ಓದಿ, ಇತರರ ಮೂಲಕ ಕೇಳಿ, ನಿನ್ನನ್ನು ನಮಸ್ಕರಿಸಿ, ಅನುಯಾತ್ರೆ ಮಾಡಿ, ಪೂಜಿಸಿ ನನ್ನ ಕಾಲವನ್ನು ಕಳೆದೆನು.

**ಮಾನ ಪೂಜಾವಿಶೇಷತ್ತೈ. "ಅಥ ಪರಮೈಕಾಂತಿನೋ ಭಗವದಾರಾಧನ ಪ್ರಯೋಗಮ್ ವಕ್ಷ್ಯೇ, ಭಗವತ್ಕೈಙ್ಕರ್ಯೈಕರತಿಃ ಪರಮೈಕಾಂತೀ ಭೂತ್ವಾ" ಎನ್ರು ತುಡಙ್ಗಿ ನಿತ್ಯತ್ತಿಲೇ "ಅತ್ಯರ್ಥಪ್ರಿಯಾವಿರತ ವಿಶದತಮ ಪ್ರತ್ಯಕ್ಷರೂಪಾನುಧ್ಯಾನೇನ ಧ್ಯಾಯನ್ನಾಸೀತ" ಎನ್ರು ಮರುಳಿಚ್ಚೆಯ್‌ದಾರ್.**

**ಅಭಿಗಮನಾದೀನಾಂ ಸ್ವಯಂ ಪ್ರಯೋಜನತ್ವೇನ ಕರ್ತವ್ಯತ್ವಂ**

**ಇಪ್ಪಡಿ ಅನನ್ಯ ಪ್ರಯೋಜನ ನಿರಂತರ ಭಗವದನುಸಂಧಾನ ಪರೀವಾಹಮಾನ ಕೈಙ್ಕರ್ಯತ್ತಿಲೇ ಭಗವಚ್ಛಾಸ್ತ್ರೋಕ್ತಮುಮಾಯ್, ವ್ಯಾಸದಕ್ಷಾದಿ ಮತಙ್ಗಳೋಡುಮ್ ಸಂಗತಮಾಯ್, 1) "ಮರನ್ತಿ**

---

ಪೂಜಿಸಿಯೂ ಕಾಲವನ್ನು ಕಳೆದ, **ಎನ್ನಿರ** ಇತ್ಯಾದಿ ಈ ರೀತಿಯಾದ ಅನನ್ಯ ಪ್ರಯೋಜನವಾದ ಪೂಜಾ ವಿಶೇಷವನ್ನು, **ಅಥಪರಮೈಕಾಂತಿನೋ** ಇತ್ಯಾದಿ, ಅನಂತರ ಪರಮೈಕಾಂತಿಗಳಿಗೆ ಭಗವದಾರಾಧನ ಪ್ರಯೋಗ ಹೇಳುತ್ತೇನೆ, ಭಗವಂತನ ಕೈಂಕರ್ಯದಲ್ಲಿಯೇ ಪ್ರೀತಿಯುಳ್ಳವನಾಗಿ, ಪರಮೈಕಾಂತಿಯಾಗಿದ್ದುಕೊಂಡು, **ಎನ್ರು ತುಡಂಗಿ** ಎಂದಾರಂಭಿಸಿ, ನಿತ್ಯಗ್ರಂಥದಲ್ಲಿ **"ಅತ್ಯರ್ಥಪ್ರಿಯಾವಿರತ ವಿಶದತಮ ಪ್ರತ್ಯಕ್ಷರೂಪಾನುಧ್ಯಾನೇನ ಧ್ಯಾಯನ್ನಾಸೀತ"** ಬಹಳ ಪ್ರಿಯವಾದ, ವಿಶ್ರಾಂತಿಯಿಲ್ಲದ, ವಿಶದತಮವಾದ ಮತ್ತು ಪ್ರತ್ಯಕ್ಷ ಸಮಾನಾಕಾರವಾದ ಧ್ಯಾನರೂಪ ಜ್ಞಾನದಿಂದ,ಭಗವಂತನನ್ನು ಧ್ಯಾನಮಾಡುತ್ತಾ ಕುಳಿತಿರಬೇಕು,ಎಂದು ಅನುಗ್ರಹಿಸಿದ್ದಾರೆ. ಇದರ ತಾತ್ಪರ್ಯವೇನೆಂದರೆ, ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ ಯೋಗವೆಂಬುದಾಗಿ ದಿವಸದ ಕಾಲವನ್ನು ಪಾಂಚರಾತ್ರೋಕ್ತ ರೀತಿಯಲ್ಲಿ ವಿಭಾಗ ಮಾಡಿಕೊಂಡು ಆಯಾಯಾ ಕಾಲಗಳಲ್ಲಿ ವಿಹಿತವಾದ ಕೈಂಕರ್ಯಗಳನ್ನು ಸ್ವಯಂ ಪ್ರಯೋಜನವಾದ ಭಗವದ್ಧ್ಯಾನದಿಂದ ಕೂಡಿದುವುಗಳನ್ನಾಗಿ ಮಾಡಬೇಕೆಂಬುದು.

**ಪ್ರಪನ್ನನು ಭಗವದಭಿಗಮನಾದಿಗಳನ್ನು ಮಾಡಬೇಕು**

ಕಾಲ ವಿಭಾಗಾದಿಗಳನ್ನು ಮಾಡಲು ಪ್ರಮಾಣಗಳು ಬೇಡವೇ ಎಂದರೆ, ಅದನ್ನು ನಿರೂಪಿಸುತ್ತಾರೆ. **ಇಪ್ಪಡಿ ಅನನ್ಯ ಪ್ರಯೋಜನ** ಇತ್ಯಾದಿ – ಹೀಗೆ ಅನನ್ಯ ಪ್ರಯೋಜನವಾದ ನಿರಂತರ ಭಗವದನು ಸಂಧಾನ ಪರಿವಾಹವಾದ ಕೈಂಕರ್ಯವು ಪಾಂಚರಾತ್ರ ಸಂಹಿತಾದಿ ಭಗವಚ್ಛಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಹಾಗೆಯೇ ಇದು, **ವ್ಯಾಸದಕ್ಷಾದಿ ಮಹರ್ಷಿಮತಂಗಳೋಡುಮ್ ಸಂಗತಮಾಯ್** – ವ್ಯಾಸ ಸ್ಮೃತಿ, ದಕ್ಷ ಸ್ಮೃತಿಗಳಲ್ಲಿ ಕಾಲವನ್ನು ಎಂಟಾಗಿಯೂ, ಹದಿನೈದಾಗಿಯೂ ವಿಭಾಗ ಮಾಡಿರುವುದರಿಂದ ಹೆಚ್ಚು ಕಡಿಮೆ ಇದ್ದರೂ, ಕೈಂಕರ್ಯಗಳು ಸರಪಣಿಗಳ ಹಾಗೆ ಸೇರಿ ಸೇರಿ ಮಾಡಲ್ಪಡಬೇಕೆಂದು ಹೇಳಿರುವುದರಿಂದಲೂ ಭಗವಚ್ಛಾಸ್ತ್ರಗಳಿಗೂ ಸ್ಮೃತಿ ವಚನಗಳಿಗೂ ಪರಸ್ಪರ ಹೊಂದಾಣಿಕೆ ಇದೆ ಎಂದು ತಾತ್ಪರ್ಯ.

1) **'ಮರಂತಿಹಪ್ರಂ'** ಇತ್ಯಾದಿ ಹೇಳಲ್ಪಟ್ಟ ಆಳ್ವಾರವರ ಪಾಶುರದಲ್ಲಿಯೂ,

---

(1) (2) ಮರಂತಿಹಪ್ರುಮನಮೊಳ್ರಿತ್ತು ವಂಜಮಾತ್ತಿ.
ಐಂಬುಲನ್‌ಗಳಡಕ್ಕಿ ಇಡರ್ ಪಾರತ್ತುನ್ನಮ್
ತುರಂದು, ಇರುಮುಪ್ಪೊಳ್ದುದೇತ್ತಿ ಎಲ್ಲೆಯಿಲ್ಲಾ
ತ್ತೊನ್ನೆರಿಕ್ಕಣ್ ನಿಲೈ ನಿನ್ರತೊಂಡರಾನ,
ಅರಂತಿಹಪ್ರುಂಮನತ್ತವರ್‌ತಮ್ ಕತಿಯೈಪ್ಪೊನ್ನಿ
ಅಣಿಯರಂಗತ್ತರವಣೈಯಿಲ್ ಪಳ್ಳಿಕೊಳ್ಳುಮ್

ಪ.ತಿ.ನೋ.

ಹಲ್ಲುವುಮ್", ಎನ್ಗಿರ ಪಾಟ್ಟಿಲ್, 2) "ಇರುಮುಪ್ಪೊಳ್ದುದೇತ್ತಿ" ಎನ್ಗಿರ ಪಾಶುರತ್ತುಕ್ಕು ವಿವಕ್ಷಿತ ಮಾಹ ಆಚಾರ್ಯರ್ಗಳ್ ಪಣ್ಣಿನ ಕಾಲ ವಿಭಾಗತ್ತೈ

3) "ಅಭಿಗಚ್ಛೇ ಹರಿಂ ಪ್ರಾತಃ ಪಶ್ಚಾದ್ದ್ರವ್ಯಾಣಿಚಾರ್ಜಯೇ ।
ಅರ್ಚಯಿಂಶ್ಚ ತತೋ ದೇವಂ ತತೋ ಮಂತ್ರಾನ್ ಜಪನ್ನಪಿ ।
ಧ್ಯಾಯನ್ನಪಿ ಪರಂದೇವಂ ಕಾಲೇಷೂಕ್ತೇಷು ಪಂಚಸು ।
ವರ್ತಮಾನಸ್ಸದಾಚೈವಂ ಪಾಂಚಕಾಲಿಕವರ್ತ್ಮನಾ ॥
ಸ್ವಾರ್ಜಿತೈರ್ಗಂಧ ಪುಷ್ಪಾದ್ಯೈಶ್ಶುಭೈಶ್ಶಕ್ತ್ಯನು ರೂಪತಃ ।
ಆರಾಧಯೇ ಹರಿಂ ಭಕ್ತ್ಯಾಗಮಯಿಷ್ಯಾಮಿ ವಾಸರಾನ್ ॥"

ಎನ್ರು ಭಾಷ್ಯಕಾರರ್ ಅರುಳಿಚ್ಚೆಯ್ಯಕ್ಕೇಟ್ಟು, ವಂಗಿ ಪುರತ್ತು ನಮ್ಬಿ ನಿತ್ಯತ್ತಿಲೇ ಸಙ್ಗ್ರಹಿತ್ತಾರ್.

ಇಪ್ಪಡಿ ಪೆರಿಯ ಜೀಯರುಳ್ಳಿಟ್ಟಾರ್ ನಿತ್ಯಙ್ಗಳಿಲುಮ್ ಕಣ್ಡುಕೊಳ್ವದು. ಇವ್ವತ್ತಿಲುಳ್ಳ

---

2) **ಇರುಮುಪ್ಪೋಳ್ದೇತ್ತಿ** ಇತ್ಯಾದಿ–ಪಂಚ ಕಾಲ ವಿಭಾಗವಾದ ಕಾಲಗಳಲ್ಲಿ ಭಗವಂತನನ್ನು ಸ್ತೋತ್ರ ಮಾಡಿ, ಎಂದು ಹೇಳಿರುವ ಪಾಶುರಕ್ಕೂ ವಿವಕ್ಷಿತವಾಗಿ ಆಚಾರ್ಯರುಗಳು ವ್ಯಾಖ್ಯಾನ ಮಾಡಿರುವ ಕಾಲ ವಿಭಾಗವನ್ನು, 3) **ಅಭಿಗಚ್ಛೇನ್ ಹರಿಂಪ್ರಾತಃ** ಇತ್ಯಾದಿ ರೀತಿಯಲ್ಲಿ ಭಗವಂತನನ್ನು ಆರಾಧಿಸಿ ಮಂತ್ರ ಜಪ ಪೂರ್ವಕ ಧ್ಯಾನಮಾಡಿಕೊಂಡು ಕಾಲವನ್ನು ಕಳೆಯಬೇಕು, ಎಂದು ಭಾಷ್ಯಕಾರರು ಕೃಪೆಮಾಡಿ ಹೇಳಿದುದನ್ನು ಕೇಳಿ ಕೊಂಡು ವಂಗಿಪುರದ ನಂಬಿಗಳು ತಮ್ಮ ನಿತ್ಯಗ್ರಂಥದಲ್ಲಿ ಸಂಗ್ರಹಿಸಿರುತ್ತಾರೆ. ಈ ಶ್ಲೋಕಗಳು ಭಾಷ್ಯಕಾರರು ಹೇಳಿದುವು. ಇದನ್ನು ವಂಗಿಪುರದ ನಂಬಿಗಳು ಹಾಗೆಯೇ ತಮ್ಮ ನಿತ್ಯಗ್ರಂಥದಲ್ಲಿ ನಿರೂಪಿಸಿರುತ್ತಾರೆಂಬುದು ಸಂಪ್ರದಾಯಜ್ಞರ ಪ್ರಾಮಾಣಿಕವಾದ ಮಾತು.

**ಇಪ್ಪಡಿ ಪೆರಿಯಜೀಯರುಳ್ಳಿಟ್ಟಾರ್** ಇತ್ಯಾದಿ. ಹೀಗೆ ಪೆರಿಯಜೀಯರ್ – ನಂಜೀಯರು ಮೊದಲಾದವರ ನಿತ್ಯಗ್ರಂಥಗಳಲ್ಲಿಯೂ ನೋಡಿಕೊಳ್ಳುವುದು. ಶ್ರೀ ಭಾಷ್ಯಕಾರರ ಸಂಪ್ರದಾಯಸ್ಥರಾದ ಅವರ ಶಿಷ್ಯ ಪ್ರಶಿಷ್ಯರು ಗಳ ನಿತ್ಯಗ್ರಂಥಗಳಲ್ಲಿ ವೈಷಮ್ಯಗಳು ಇರುವುದು ಆಯಾಯಾ ಸಂಹಿತಾ ವಿಶೇಷಗಳಲ್ಲಿ ಹೇಳುವ ವಿಕಲ್ಪಗಳಿಂದ

---

ನಿರಂತಿಹಲ್ಲುಂ ಮಾಯೋನ್ಯ ಕ್ಕಣ್ಡೆನ್ ಕಣ್ಗಳ್
ನೀರ್‌ಮಲ್‌ಹವೆನ್ರುಕಾಲೋ ನಿರ್ಕ್ಕುನಾಳೇ ॥ ಪೆರುಮಾಳ್ ತಿರುಮೊಳಿ 1-7

ಕ್ರೂರ ಸ್ವಭಾವದಿಂದ ತುಂಬಿದ ಮನಸ್ಸನ್ನು ಬಿಟ್ಟು ಕಾಪಟ್ಯ ಸ್ವಭಾವವನ್ನು ಪರಿತ್ಯಜಿಸಿ, ಪಂಚೇಂದ್ರಿಯಗಳನ್ನು ಅಡಗಿಸಿ, ಅದಕ್ಕೆ ವಿರೋಧಿಗಳಾದ ಕಪ್ಪಗಳನ್ನು ಬಿಟ್ಟು, ಪಂಚಕಾಲಗಳಲ್ಲಿಯೂ ಭಗವಂತನನ್ನು ಸ್ತೋತ್ರ ಮಾಡಿ, ಎಲ್ಲೆಯಿಲ್ಲದ ಅನಾದಿಯಾದ ಸನ್ಮಾರ್ಗದಲ್ಲಿಯೇ ಪ್ರತಿಷ್ಠಿತರಾಗಿರುವ ಭಗವದ್ಭಕ್ತರಾಗಿ, ಧರ್ಮವು ಪ್ರಕಾಶಿಸುವ ಮನಸ್ಸಿನಿಂದ ಕೂಡಿದವರ ಸನ್ಮಾರ್ಗ ವನ್ನು ಅನುಸರಿಸಿ, ಅಲಂಕಾರದಿಂದ ಕೂಡಿದ ಶ್ರೀರಂಗದಲ್ಲಿ ಆದಿ ಶೇಷನ ಮಡಿಯಲ್ಲಿ ಮಲಗಿರುವ ಜ್ಯೋತಿರ್ಮಯನಾದ, ಆಶ್ಚರ್ಯ ಗುಣ ಚೇಷ್ಟಿತಗಳಿಂದ ಕೂಡಿದ ಭಗವಂತನನ್ನು ನೋಡಿ ನನ್ನ ಕಣ್ಣುಗಳು ಆನಂದ ಬಾಷ್ಪಗಳನ್ನು ಸುರಿಸುವಂತೆ ಯಾವತ್ತಿಗೆ ಇರುತ್ತೇನೆ.

3) ಅಭಿಗಚ್ಛೇನ್ ಹರಿಂಪ್ರಾತಃ- ಇತ್ಯಾದಿ ಬೆಳಿಗ್ಗೆ ಭಗವಂತನನ್ನು ಅಭಿಗಮನಕಾಲದಲ್ಲಿ ನಮಸ್ಕರಿಸಿ, ಅನಂತರ ಉಪಾದಾನ ಕಾಲದಲ್ಲಿ ಅವನ ಪೂಜೆಗೆ ಬೇಕಾದ ತುಳಸೀ ಪುಷ್ಪಾದಿಗಳನ್ನು ಸಂಗ್ರಹಿಸಿ, ಅನಂತರ ಅವನನ್ನು ಇಜ್ಯೆಯಲ್ಲಿ ಪೂಜಿಸಿ, ಮಂತ್ರ ಜಪಗಳನ್ನು ಮಾಡಿ ಅವನನ್ನು ಯೋಗ ಕಾಲದಲ್ಲಿ ಧ್ಯಾನಯೋಗದಿಂದ ಧ್ಯಾನಮಾಡಿ, ಹೀಗೆ ಐದು ಕಾಲಗಳಲ್ಲಿಯೂ, ತಾನು ಸಂಪಾದಿಸಿದ ಶುಭ್ರವಾದ ಗಂಧ ಪುಷ್ಪಧೂಪ ದೀಪಾದಿಗಳಿಂದ ತನ್ನ ಶಕ್ತ್ಯನುರೂಪವಾಗಿ ಹರಿಯನ್ನು ಆರಾಧಿಸಿ ಕೊಂಡು ಕಾಲಗಳನ್ನು ಕಳೆಯುತ್ತೇನೆ.
(ವಂಗಿ ಕಾರಿಕಾ-34, 35. 36)

**ವೈಷಮ್ಯಙ್ಗಳ್ ಅವ್ವೋ ಸಂಹಿತಾ ವಿಶೇಷಙ್ಗಳಿಲೇ ಶೊಲ್ಲುಮ್ ವಿಕಲ್ಪಙ್ಗಳಾಲೇ ಸಙ್ಗತಙ್ಗಳ್. ಇಪ್ಪಡಿಯಾಹೈಯಾಲೇ 3) "ನ ದೇವಲೋಕಾ ಕ್ರಮಣಂ" 4) "ಭವಾಂಸ್ತು ಸಹ ವೈದೇಹ್ಯಾ"**
**5) "ಯತ್ರ ಕುತ್ರ ಕುಲೇವಾಸೋ ಯೇಷು ಕೇಷು ಭವೋಸ್ತುಮೇ ।**
**ತವದಾಸ್ಯೈಕ ಭೋಗೇಸ್ಯಾತ್ಸದಾ ಸರ್ವತ್ರಮೇ ರತಿಃ ॥**
**ಕರ್ಮಣಾಮನಸಾ ವಾಚಾ ಶಿರಸಾವಾ ಕಥಂಚನ ।**
**ತ್ವಾಂ ವಿನಾ ನಾನ್ಯ ಮುದ್ದಿಶ್ಯ ಕರಿಷ್ಯೇ ಕಿಂಚಿದಪ್ಯಹಮ್ ॥"**
**6) "ತನಕ್ಕೇಯಾಹ ವೆನ್ನೈಕ್ಕೊಳ್ಳು ಮೀದೇ" ಎನ್ಗಿರಪಡಿಯೇ ಭಗವತ್ಪ್ರೀತಿಮಾತ್ರಂ ಪ್ರಯೋಜನಮಾನ ಕೈಙ್ಕರ್ಯತ್ತಿಲೇ ಸ್ವಾಚಾರ್ಯೋಪದಿಷ್ಟಮಾ ಯಿರುಪ್ಪದೊರು ಶಾಸ್ತ್ರೀಯಪ್ರಕ್ರಿಯೈಯೈಕ್ಕೊಂಡು ಯಥಾಕಾಲಮನ್ವಯಿಕ್ಕ ಪ್ರಾಪ್ತಮ್.**

---

**ಸಂಗತಂಗಳ್** – ಹೊಂದಿಕೊಡಿವೆಯಷ್ಟೇ. ಹೀಗೆ ಅಭಿಗಮನವೇ ಮೊದಲಾದ ಧ್ಯಾನಾಂತವಾದ ಭಗವತ್ಕೈಂಕರ್ಯಗಳಿಗೆ ಸಾಂಪ್ರದಾಯಿಕತ್ವನ್ನು ತೋರಿಸಿ, ಅಭಿಗಮನಾದಿಗಳನ್ನು ಸ್ವಯಂ ಪ್ರಯೋಜನವಾಗಿ ಮಾಡಬೇಕೆಂದು **ಇಪ್ಪಡಿಯಾಹೈಯಾಲ್** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಸ್ವಯಂ ಪ್ರಯೋಜನವಾಗಿ ಪ್ರಪತ್ತ್ಯುತ್ತರ ಕಾಲದಲ್ಲಿ ಧ್ಯಾನಾದಿ ಕೈಂಕರ್ಯಗಳು ವಿಹಿತಗಳಾದ್ದರಿಂದ **3) ನ ದೇವಲೋಕಾಕ್ರಮಣಂ, 4) ಭವಾಂಸ್ತು ಸಹವೈದೇಹ್ಯಾ 5) ಯತ್ರಕುತ್ರಕುಲೇವಾಸಃ 6) ತನಕ್ಕೇಯಾಹ** ಇತ್ಯಾದಿಗಳಲ್ಲಿ ಹೇಳಿರುವಂತೆ ಭಗವತ್ಪ್ರೀತಿ ಮಾತ್ರ ಪ್ರಯೋಜನವಾದ ಕೈಂಕರ್ಯದಲ್ಲಿ ಸ್ವಾಚಾರ್ಯೋಪದಿಷ್ಟವಾಗಿರುವದೊಂದು ಶಾಸ್ತ್ರೀಯ ಪ್ರಕ್ರಿಯೆಯನ್ನು ಸ್ವೀಕರಿಸಿ **ಯಥಾಕಾಲ** ಮಿತ್ಯಾದಿ ಪಂಚಕಾಲಾನುಗುಣವಾಗಿ ಅನ್ವಯಿಸುವುದು ಪ್ರಾಪ್ತವು.

---

3) ನದೇವಲೋಕಾಕ್ರಮಣಂ, ನಾಮರತ್ವಮಹಂವೃಣೇ ।
ಐಶ್ವರ್ಯಂವಾಪಿ ಲೋಕಾನಾಂ ಕಾಮಯೇನತ್ವಯಾವಿನಾ ॥
ಸ್ವಾಮೀ, ನಿಮ್ಮನ್ನು ಬಿಟ್ಟು ದೇವಲೋಕವಾಸವೂ ಬೇಡ, ಅಮರತ್ವವಾದ ಸ್ವಾತ್ಮಾನುಭವ ರೂಪವಾದ ಆನಂದವೂ ಬೇಡ, ಲೋಕಗಳನ್ನು ಆಳುವಂತಹ ಐಶ್ವರ್ಯವೂ ಬೇಡ.

4) ಸ್ವಾಮಿ, ತಾವು ವೈದೇಹಿಯೊಡನೆ ಬೆಟ್ಟಗಳ ತಪ್ಪಲು ಪ್ರದೇಶಗಳಲ್ಲಿ ವಿನೋದವಾಗಿ ಕಾಲಕಳೆಯುವಾಗ, ನಿಮ್ಮಿಬ್ಬರಿಗೂ ನಾನು ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತವಾದ ಸರ್ವಶೇಷ ವೃತ್ತಿಯನ್ನು ಹಗಲೂ ರಾತ್ರಿಯೂ ಮಾಡುತ್ತೇನೆ ಎಂದು ಲಕ್ಷ್ಮಣನು ಶ್ರೀರಾಮಚಂದ್ರನಲ್ಲಿ ವಿಜ್ಞಾಪಿಸುವ ಮಾತು.

5) ಜಿತಂತೆ ಸ್ತೋತ್ರ (2-8-9) ನನಗೆ ಎಲ್ಲಿಯಾದರೂ ವಾಸವಿರಲಿ, ಯಾವ ಜಾತಿಯಲ್ಲಿಯಾದರೂ ಜನ್ಮವಿರಲಿ, ನನಗೆ ನಿನ್ನ ದಾಸ ವೃತ್ತಿಯಲ್ಲಿಯೇ ಪ್ರೀತಿಯು ಇದ್ದರೆ ಸಾಕು, ಮನೋವಾಕ್ಕಾಯಗಳಿಂದ, ನಿನ್ನನ್ನು ಬಿಟ್ಟು ಬೇರೆ ಯಾರಿಗೂ ಏನನ್ನೂ ಮಾಡುವುದಿಲ್ಲ.

6) ಎನಕ್ಕೇಯಾಳ್‌ಶೆಯ್ ಎಕ್ಕಾಲುತ್ತುಮ್ ಎನ್ರು, ಎನ್
ಮನಕ್ಕೇ ವಂದು ಇಡೈವೀಡಿನ್ರಿ ಮನ್ನಿ,
ತನಕ್ಕೇ ಯಾಹವೆನ್ನೈಕ್ಕೊಳ್ಳು ಮೀದೇ
ಎನಕ್ಕೇ ಕಣ್ಣನೈ ಯಾನ್‌ಕೊಳ್ ಶಿರಪ್ಪೇ ॥
"ಎಲ್ಲಾ ಕಾಲದಲ್ಲಿಯೂ ನನಗೇ ಕೈಂಕರ್ಯವನ್ನು ಮಾಡು", ನೀನು ಬಿಡುವಿಲ್ಲದೆ ನನ್ನ ಮನಸ್ಸಿನಲ್ಲಿಯೇ ನೆಲೆಸಿ, ನಿನ್ನ ಪ್ರಯೋಜನಕ್ಕೋಸ್ಕರವೇ ನನನ್ನು ಅಂಗೀಕರಿಸಬೇಕು, ನನ್ನ ಪ್ರಯೋಜನಕ್ಕಲ್ಲ ಎಂಬ ಇದೇ ನಾನು ಕೃಷ್ಣಪರಮಾತ್ಮನನ್ನು ಪ್ರಾರ್ಥಿಸಿ ಪಡೆಯುವ ಉತ್ತಮವಾದ ಪುರುಷಾರ್ಥ,

**ಅಭಿಗಮನಾದಿ ನಿತ್ಯ ನೈಮಿತ್ತಿಕಾನಾ ಮನೇಕಾನರ್ಥ ಪರಿಹಾರಕತ್ವಸ್ಯ ಕಥನಮ್**

**ಇಪ್ಪಡಿ ನಿತ್ಯಮಾಹ ವಿಧಿಕ್ಕಿರ ಭಗವದಭಿಗಮನಾದಿಹಳಿಲ್ ಲೋಕಾಯತಿಕರ್ಪ್ಪೋಲೇ ಖ್ಯಾತಿ ಲಾಭ ಪೂಜೈಹಳುಕ್ಕಾಹವಾದಲ್, ಕರ್ಮಜ್ಞಾನ ವೈರಾಗ್ಯಂಗಳಿಲ್ಲಾದಾರ್ಪ್ಪೋಲೇ ಪ್ರಯೋಜನಾಂತರತ್ತುಕ್ಕಾಹ ವಾದಲ್, ಪೂರ್ಣೋಪಾಯರಲ್ಲಾದಾರ್ಪ್ಪೋಲೇ ಮೋಕ್ಷಾರ್ಥಮಾಹವಾದಲ್ ಅನ್ರಿಕ್ಕೇ ಮುಕ್ತರ್ಪ್ಪೋಲೇ ಸ್ವಾಮ್ಯಭಿಮತತ್ತೈ ನಡತ್ತ ವೇಣು ಮನ್ದಿರ ರುಚಿಯಾಲೇ ಯಥಾ ಶಾಸ್ತ್ರಮ್ ಸ್ವಯಂ ಪ್ರಯೋಜನಮಾಹ ವಿಳ್ಳನ್ದಾಲ್ ಇವ್ವಭಿಗಮನಾದಿಹಳ್, ಅನ್ಯಾಭಿಗಮನಮುಂ ಅನ್ಯಾರ್ಥ ಪ್ರವೃತ್ತಿಯುಂ, ಅನ್ಯ ಯಜನಮುಂ, ಅನ್ಯ ಶಬ್ದಙ್ಗಳುಂ, ಅನ್ಯಚಿನ್ತೈಯು ಮಾಹಿರ ಛಿದ್ರಙ್ಗಳ್ ಪುಹಾವ್ಕುಕ್ಕಡಕ ಮಾಯಿರುಕ್ಕುಮ್.**

**ಅನ್ಯಾಭಿಗಮನಾದಿ ಪಂಚಕಾನಾಂ ಪ್ರಪನ್ನ ವಿರುದ್ಧತ್ವೇ ಪ್ರಮಾಣಾನಿ**

**೧. ಅನ್ಯಾಭಿಗಮನ ಮಾಹಾದೆನ್ನು ಮಿಡತ್ತೈ 1) ಇನಿಪ್ಪೋಯ್ ಒರುವರ್ ತನಕ್ಕುಪ್ಪಣಿನ್ದು ಕಡೈತ್ತಲೈ ನಿರ್ಕ್ಕ ನಿನ್ಶಾಯ್ಮೈ ಯಳಿವು ಕಣ್ಡಾಯ್" ಎನ್ರು ಪೆರಿಯಾಳ್ವಾರರುಳಿಚ್ಚೆಯ್ದಾರ್.**

---

**ಭಗವದಭಿಗಮನಾದಿ ಪಂಚಕಾಲ ಪರಾಯಣರಿಗೆ ಅನ್ಯಯಜನಾದಿ ದೋಷಗಳು ಉಂಟಾಗುವುದಿಲ್ಲ.**

**ಇಪ್ಪಡಿನಿತ್ಯಮಾಹ** ವಿತ್ಯಾದಿ–ಹೀಗೆ ನಿತ್ಯವೂ ಮಾಡಬೇಕೆಂದು ವಿಧಿಸಲ್ಪಡುವ ಭಗವದಭಿಗಮನವೇ ಮೊದಲಾದ ಪಂಚಕಾಲ ಕೈಂಕರ್ಯಗಳನ್ನು, **ಲೋಕಾತೀತರ್ಪ್ಪೋಲೇ** – ಇತ್ಯಾದಿ – ನಾಸ್ತಿಕರ ಹಾಗೆ, ಖ್ಯಾತಿಲಾಭ ಪೂಜೆಗಳಿಗಾಗಲಿ, ತತ್ವಜ್ಞಾನ ವೈರಾಗ್ಯಾದಿಗಳಿಲ್ಲದವರ ಹಾಗೆ, ಪ್ರಯೋಜನಾಂತರಕ್ಕಾಗಿಯಾಗಲಿ, **ಪೂರ್ಣೋಪಾಯರಲ್ಲಾದಾರ್ಪ್ಪೋಲೇ**-ಉಪಾಯಾನುಷ್ಠಾನವನ್ನು ಮಾಡದವರ ಹಾಗೆ,ಮೋಕ್ಷಾರ್ಥವಾಗಿಯಾಗಲಿ **ಅನ್ರಿಕ್ಕೇ**–ಇಲ್ಲದೆ, ಮುಕ್ತರ ಹಾಗೆ ಸ್ವಾಮಿಯ **ಅಭಿಮತತ್ತೈ**–ಇಷ್ಟಾರ್ಥವನ್ನು ಅನುಷ್ಠಿಸಬೇಕೆಂಬ **ರುಚಿಯಾಲೇ**–ಪ್ರೀತಿಯಿಂದ. ಶಾಸ್ತ್ರವು ಹೇಳಿದ ರೀತಿಯಲ್ಲಿ ಸ್ವಯಂ ಪ್ರಯೋಜನವಾಗಿ **ಇಳಿಂದಾಲ್** ಇತ್ಯಾದಿ – ಮಾಡಲು ತೊಡಗಬೇಕು. ಹಾಗೆ ಮಾಡುವುದರಿಂದ ಈ ಅಭಿಗಮನಾದಿಗಳು ಅನ್ಯಾಭಿಗಮನವೂ ಅನ್ಯಾರ್ಥ ಪ್ರವೃತ್ತಿಯೂ **ಅನ್ಯಯಜನಮುಮ್** – ಅನ್ಯರ ಪೂಜೆಯೂ, ಅನ್ಯಶಬ್ದಗಳೂ, ಅನ್ಯಚಿಂತೆಯೂ **ಆಹಿರ**–ಆಗುವ ಛಿದ್ರಗಳು ಪ್ರವೇಶಿಸದೆ **ಕಟಕಮಾಯಿರುಕ್ಕುಮ್**–ಕೋಟೆಯಾಗಿರುತ್ತದೆ. ಅದಾಗಿ, ಪ್ರಪನ್ನನು ಪ್ರಪತ್ಯುತ್ತರ ಕಾಲದಲ್ಲಿ ಪಂಚಕಾಲ ಪರಾಯಣನಾಗಿ ಭಗವತ್ಕೈಂಕರ್ಯಗಳನ್ನು ಮಾಡುತ್ತಿದ್ದರೆ, ದೇವತಾಂತರ ಭಜನಾದಿಗಳೂ, ತನ್ನಾಮೋಚ್ಚಾರಣಾದಿಗಳೂ, ಅರ್ಥಕಾಮಾದಿ ಚಿಂತನೆಯೂ, ಇಲ್ಲದೆ ಇರುವಂತೆ ಈ ಕೈಂಕರ್ಯಗಳು ಭದ್ರವಾದ ಕೋಟೆಯನ್ನು ಹಾಕಿದಂತೆ ಅವುಗಳಿಗೆ ಪ್ರತಿಬಂಧಕಗಳಾಗಿರುತ್ತವೆಯೆಂದು ತಾತ್ಪರ್ಯ.

ಇವುಗಳನ್ನು ವಿವರಿಸುತ್ತಾರೆ. ಅದಾಗಿ, **ಅನ್ಯಾಭಿಗಮನಮ್ ಆಹಾದು** ಇತ್ಯಾದಿ- ಅನ್ಯಪುರುಷರ ಮತ್ತು ಅನ್ಯದೇವತೆಗಳ ಬಳಿಗೆ ಹೋಗಬಾರದೆಂಬುದನ್ನು 1) **ಇನಿಪ್ಪೋಯ್ ಒರುವನ್ ತನಕ್ಕು** ಇತ್ಯಾದಿ, ಎಂದು ಪೆರಿಯಾಳ್ವಾರವರು ಕೃಪೆ ಮಾಡಿ ಹೇಳಿರುತ್ತಾರೆ. **ಅನ್ಯಾರ್ಥ ಪ್ರವೃತ್ತಿ** ಇತ್ಯಾದಿ ಭಗವದಾರಾಧನ ವ್ಯತಿರಿಕ್ತಗ

---

1) ಉನಕ್ಕುಪ್ಪಣಿ ಶೆಯ್ದಿರುಕ್ಕುಂ ತವಮುಡೈಯೇನ್ ಇನಿಪ್ಪೋಯ್ ಒರುವನ್
ತನಕ್ಕುಪ್ಪಣಿಂದು ಕಡೈತ್ತಲೈ ನಿರ್ಕ್ಕೈನಿನ್ಶಾಯ್ಮೈ ಅಳಿವುಕಂಡಾಯ್ ।

ಪೆ.ತಿ.ಮೊ.

೨. ಅನ್ಯಾರ್ಥ ಪ್ರವೃತ್ತಿ ಯೂಹಾದೆನ್ನು ವಿಡತ್ತೈಯುಮ್, 2) "ಕೂರ್ೖ ಶೋರಿವ್ವೈ ವೇಣ್ಡು ವದಿಲ್ಲ್ೖ" ಎನ್ರರುಳಿಚ್ಚೆಯ್‌ದಾರ್.

೩. ಅನ್ಯಯಜನ ವೂಹಾದೆನ್ನು ವಿಡತ್ತೈ, 3) "ಉನ್ನಿತ್ತು ಮತ್ತೊರು ತೆಯ್‌ವಮ್ ತೊೞುಳವನ್ನೈ ಯಲ್ಲಾಲ್" ಎನ್ರುವ್, 4) "ಶೇವನೆಮ್ಬೆರುವಾನಕ್ಕಲ್ಲಾಲ್ ಪೂವುಮ್ ಪೂಶನ್ನೈ

---

ಳಾದ ಪ್ರಯೋಜನಕ್ಕಾಗಿ ಪ್ರವೃತ್ತಿಯು ಕೂಡದೆಂಬುದನ್ನೂ 2) ಕೂರ್ೖಶೋರಿವ್ವೈವೇಂಡುವದಿಲ್ಲೈ-ಎಂದೂ ಹೇಳಿದ್ದಾರೆ, ಅನ್ಯಯಜನವ್ ಇತ್ಯಾದಿ – ಇತರರನ್ನು ಪೂಜಿಸುವುದು ಕೂಡದು ಎಂಬುದನ್ನು 3) ಉನ್ನಿತ್ತು ಮತ್ತೊರು-ಇತ್ಯಾದಿಯಾಗಿ ಮನಸ್ಸಿನಿಂದ ಭಗವಂತನನ್ನು ಬಿಟ್ಟು ದೇವತಾಂತರವನ್ನು ನೆನೆದು ಭಜಿಸುವುದಿಲ್ಲ. 4) ಶೇವನೆಂಬೆರುವಾನಕ್ಕಲ್ಲಾಲ್–ಇತ್ಯಾದಿ ಜಗದ್ವ್ಯಾಪಾರಲೀಲನಾದ ಭಗವಂತನಿಗಲ್ಲದೆ, ಬ್ರಹ್ಮರುದ್ರೇದ್ರಾ

---

ಪುನತ್ತಿನ್ನೈಕ್ಕಿೞಿಪ್ಪದುವವಿಕಾಟ್ಟ ಉನ್‌ಪೊನ್ನಡಿವಾೞ್ಹವೆನ್ರು
ಇನಕ್ಕುರವರ್ ಪುದಿಯದುಣ್ಣುಂ ಎೞಿಲ್ ಮಾಲಿರುಂಜೋಲೈಯೆಂದಾಯ್ ‖ ಪೆರಿಯಾೞ್ವಾರ್ ತಿರುಮೊೞಿ 5-3-3

ತಿರುಮಾಲಿರುಂ ಜೋಲೆಯಲ್ಲಿರುವ ಸ್ವಾಮಿ ! ನಿನಗೆ ಕೈಂಕರ್ಯ ಮಾಡುತ್ತಿರಬೇಕೆಂಬ ತಪಸ್ಸನ್ನು ಮಾಡಿರುವೆ. ನಿನ್ನನ್ನು ಬಿಟ್ಟು ಮತ್ತೊಬ್ಬನಿಗೆ ತಲೆ ಬಾಗಿ ಅವನ ಮನೆ ಬಾಗಿಲಲ್ಲಿ ನಿಲ್ಲುವುದೆಂಬುದು ನಿನ್ನ ತೇಜಸ್ಸಿಗೆ ಹಾನಿಕರ. ಹೊಲ ಗದ್ದೆಗಳಲ್ಲಿ ಬೆಳೆದ ಹೊಸದಾದ ಭತ್ತ, ರಾಗಿ, ಜೋಳಗಳ ತೆನೆಯನ್ನು ನಿನಗೆ ಮೊದಲು ಸಮರ್ಪಿಸಿ, ನಿನ್ನ ಬಂಗಾರದಂತಹ ಪಾದಪದ್ಮಗಳಿಗೆ ಜಯವಾಗಲಿ ಎಂದು ಹೇಳಿ ಅನಂತರ ಅಲ್ಲಿಯ ರೈತರು ಹೊಸ ಭತ್ತ ಮೊದಲಾದವನ್ನು ಊಟ ಮಾಡುತ್ತಾರೆ.

2) ನೆಡುಮ್ಮೈಯಾಲ್ ಉಲಗೇೞುಮಳಂದಾಯ್ ನಿನ್ಮಲಾ ನೆಡಿಯಾಯ್ ಅಡಿಯೇನ್ನೈ
ಕುಡಿಮ್ಮೈಕೊಳ್ವದರ್ಕೈಯುರವೇಂಡಾ ಕೂರ್ೖಶೋರಿವ್ವೈ ವೇಂಡುವದಿಲ್ಲೈ ।
ಅಡಿಮ್ಮೈಯೆನ್ನುಮಕ್ಕೋಯಿನ್ಮೈಯಾಲೇ ಅಂಗಂಗೇ ಅವೈಪೋದರುಂ ಕಂಡಾಯ್
ಕೊಡುಮ್ಮೈಕ್ಕಂಜನ್ನೈಕ್ಕೊನ್ರು ನಿನ್‌ತಾದೈ ಕೋತ್ತವನ್ ತಳೈಕೋಳ್ ವಿಡುತ್ತಾನೇ ‖ ಪೆರಿಯಾೞ್ವಾರ್ ತಿರು (5-1-4).

ದೀರ್ಘವಾಗಿ ಬೆಳೆದು ಸಪ್ತಲೋಕಗಳನ್ನು ಅಳೆದುಕೊಂಡು ನಿರ್ಮಲನಾದ ತ್ರಿವಿಕ್ರಮನೇ, ನನ್ನನ್ನು ನಿನಗೆ ದಾಸನನ್ನಾಗಿ ಮಾಡಿಕೊಳ್ಳಲು, ಸಂಶಯಪಡಬೇಡ. ಉಟ್ಟುಕೊಳ್ಳಲು ಬಟ್ಟೆಯನ್ನೂ ಊಟಮಾಡಲು ಅನ್ನವನ್ನೂ ನಿನ್ನಿಂದ ಯಾರೂ ಯಾಚಿಸುವುದಿಲ್ಲ. ಭಗವದಾರಾಧನೆಗೆ ಉಪಯುಕ್ತವಲ್ಲದ ವಸ್ತ್ರಗಳೂ ಊಟಗಳೂ ನನಗೆ ಬೇಡವೆಂದು ತಾತ್ಪರ್ಯ. ನಿನ್ನ ದಾಸ್ಯವೆಂಬ ಸಾಮ್ರಾಜ್ಯವನ್ನು ಪಡೆದಿರುವುದರಿಂದ ಊಟವಸತಿಗಳು ಅಲ್ಲಲ್ಲೇ ಸಿಗುತ್ತವೆ. ಕ್ರೂರನಾದ ಕಂಸನನ್ನು ಕೊಂದು ನಿನ್ನ ತಂದೆಯ ಪಾದನಿಗಳವನ್ನು ಬಿಡಿಸಿದಂತೆ ನಿನ್ನ ಕೈಂಕರ್ಯ ವಿರೋಧಿಯಾದ ಪಾಪದಿಂದ ನನ್ನನ್ನು ಬಿಡಿಸು.

3) ಉನ್ನಿತ್ತುಮಟ್ರೊರು ತೈಯ್‌ವಮ್‌ತೊೞುಳ್ ಅವನ್ನೈಯಲ್ಲಾಲ್,
ನುಮ್ಮಿಚ್ಚೈಶೊಲ್ಲಿನುವ್‌ತೋಳ್ ಕುಲೈಕ್ಕಪ್ಪಡುಮನ್ನೈಯೀರ್ ।
ಮನ್ನಪ್ಪಡು ಮರೈವಾಣನ್ನೈ ವಣ್‌ತುವರಾಪದಿ
ಮನ್ನನ್ನೈ, ಏತ್ತುಮಿನ್ ಏತ್ತುದಲುಮ್ ತೊೞುದಾಡುಮೇ ‖ ತಿರುವಾಯ್ ಮೊೞಿ (4-5-10)

ಭಗವಂತನಲ್ಲದೆ ಮನಃಪೂರ್ವಕವಾಗಿ ಬೇರೇ ದೇವತೆಗಳನ್ನು ಪೂಜಿಸುವುದಿಲ್ಲ. ನಿಮ್ಮ ಆಶೆಯನ್ನು ಹೇಳಿ ನಿಮ್ಮ ತೋಳು ಮೊದಲಾದ ಅಂಗಗಳು ಆಡುವುದರಿಂದ ಅಂವರೆ ದೇವತಾಂತರಗಳ ಪ್ರೀತಿಗೋಸ್ಕರ ನರ್ತನಾದಿಗಳನ್ನು ಮಾಡಿ ಶರೀರ ಶ್ರಮವನ್ನು ಪಡೆಯುವ ತಾಯಂದಿರೇ, ವೇದಪ್ರತಿಪಾದ್ಯನಾದ, ಉಜ್ವಲವಾದ ದ್ವಾರಕೆಗೆ ರಾಜನಾದ ಭಗವಂತನನ್ನು ಸ್ತೋತ್ರ ಮಾಡಿರಿ, ಆವನನ್ನು ನಮಸ್ಕರಿಸಿ ನರ್ತನ ಮಾಡಿರಿ.

4) ತೇವುಮೆಪ್ಪೊರುಳುಂ ಪಡೈಕ್ಕ, ಪೂವಿಲ್ ನಾನ್ಮುಹನ್ನೈಪ್ಪಡೈತ್ತ ।
ತೇವನೆಂಬೆರು ಮಾನುಕ್ಕಲ್ಲಾಲ್, ಪೂವುಂಪೂ ಶನ್ನೈಯುಂತಹುಮೇ ‖

ಪು, ತಿ. ನೋ.

ಯುಂವ್ ತಹುನೋ" ಎನ್ರುವ್. 5) "ಈನ್ರೋಳಿರುಕ್ಕ ಮಣ್ಣೈ ನೀರಾಟ್ಟ" ಎನ್ರುವ್, 6) "ಮುತ್ತಿಙ್ಗೋರ್ ಪುದುದ್ದೆಯ್‌ವವ್ ಕೊಣ್ಡಾಡುನ್ನೊಣ್ಡೀರ್ ಪೆತ್ತತ್ತಾಯಿರುಕ್ಕ ಮಣ್ಣೈ ವೆನ್ನೀರಾಟ್ಟುದಿರೋ ಮಾಟ್ಟಾದ ತಹವತ್ತಿರೀ" ಎನ್ರುವ್, ಇತ್ಯಾದಿಹಳಾಲೇ ಅರುಳಿಚ್ಚೆಯ್‌ದಾರ್ ಹಳ್. ಸಪ್ತರ್ಷಿ ಸಂವಾದತ್ತಿಲುಮ್

---

ದಿಗಳಿಗಿ ಪೂಜೆಯು ಯುಕ್ತವೇ, ಯುಕ್ತವಲ್ಲವೆಂದು ಭಾವ. 5) **ಈನ್ರೋಳಿರುಕ್ಕಮಣ್ಣೈನ್ನೀರಾಟ್ಟ** ಇತ್ಯಾದಿ ಹೆತ್ತತಾಯಿಯು ಇರುವಾಗ ಅವಳನ್ನು ಬಿಟ್ಟು ಮರದ ಗೊಂಬೆಗೆ ನೀರು ಸ್ನಾನ ಮಾಡಿಸುವುದೇ ? 6) **ಮುಟ್ರಂಗೋರ್ ಪುದುದ್ದೈವವ್** ಇತ್ಯಾದಿ ನಾರಾಯಣನನ್ನು ಬಿಟ್ಟು ಶಬ್ದಾದಿ ವಿಷಯಗಳಲ್ಲಿ ಚಾಪಲ್ಯದಿಂದ ಆ ವರಗಳಿಗೋಸ್ಕರ ಹೊಸದಾಗಿ ಒಂದು ದೇವರನ್ನು ಕೊಂಡಾಡುವ ಚಪಲರೇ ಎಂದು ನಿಂದೆ. ನೀವುಗಳು ಮಾಡುವ ಪೂಜೆಯು ಹೆತ್ತ ತಾಯಿಯ ಶುಶ್ರೂಷೆಯನ್ನು ಮಾಡದೆ, ಮರದ ಗೊಂಬೆಗೆ ಬಿಸಿ ನೀರಿನಲ್ಲಿ ಸ್ನಾನ ಮಾಡಿಸಿ ಶುಶ್ರೂಷೆ ಮಾಡುವಂತಿದೆ. ನಿರರ್ಥಕವಾದದ್ದು ಎಂದರ್ಥ. ಆ ರೀತಿಯಲ್ಲಿ ಭಗವಂತನನ್ನು ಬಿಟ್ಟು ದೇವತಾಂತರ ಭಜನವು ನಿಂದ್ಯವಾದದ್ದು ಆದರಿಂದ ಭಗವಂತನ ಕೃಪೆಗೆ ಪಾತ್ರರಲ್ಲದವರಾಗಿದ್ದೀರಿ. ಈ ರೀತಿಯಾಗಿ ದೇವತಾಂತರ ಭಜನವು ಕೂಡದೆಂದು ಆಳ್ವಾರುಗಳು ಕೃಪೆಯಿಂದ ಹೇಳಿರುತ್ತಾರೆ. **ಸಪ್ತರ್ಷಿಸಂವಾದತ್ತಿಲುಮ್**–ಇತ್ಯಾದಿ. ಒಂದಾನೊಂದು ಕಾಲದಲ್ಲಿ ಪುಷ್ಕರ ಕ್ಷೇತ್ರದಲ್ಲಿ ಕ್ಷಾಮವು ತಲೆ ದೋರಿತು. ಆಗ ಅಲ್ಲಿ ತಪಸ್ಸನ್ನು ಮಾಡುತ್ತಿದ್ದ ಋಷಿಗಳು ತಾವರೆ ಪುಷ್ಕರಣಿಯಲ್ಲಿದ್ದ ಬಿಸಗಳನ್ನು-ತಾವರೆಗೆಡ್ಡೆಗಳನ್ನು ಅಗೆದು ತೆಗೆದುಕೊಂಡು ಹೋಗಿ ಆಹಾರವಾಗಿ ಇಟ್ಟುಕೊಂಡಿದ್ದರು. ಒಂದು ದಿವಸ ಇವರುಗಳು ಮಾಧ್ಯಾಹ್ನಿಕಸ್ನಾನಕ್ಕೋಸ್ಕರ ಕೊಳಕ್ಕೆ ಹೋಗಿದ್ದ ಸಮಯ

---

ದೇವ ಜಾತಿಯನ್ನೂ, ಮನುಷ್ಯಾದಿ ಸಕಲ ಪದಾರ್ಥಗಳನ್ನೂ ಸೃಷ್ಟಿಸಲು. ನಾಭೀಕಮಲದಲ್ಲಿ ಬ್ರಹ್ಮದೇವನನ್ನು ಸೃಷ್ಟಿಸಿದ, ಜಗದ್ವ್ಯಾಪಾರ ಲೀಲನಾದ ಭಗವಂತನಿಗೆ ಅಲ್ಲದೆ ಹೂವೂ, ಪೂಜೆಯೂ ಇತರ ದೇವತೆಗಳಿಗೆ ಸಲ್ಲತಕ್ಕದ್ದೇ. ಶಡ್ಮೈಯಾಂಡಿಕ್ಕು(ಬ್ರಹ್ಮದೇವನ್ನು) ತಹಾನು, ಪಿಚ್ಚೈಯಾಂಡಿಕ್ಕು (ಶಿವನಿಗೆ) ಪೂಶನ್ನೈತನಾನು ಎಂಬಂದು ಹಳಬರ ಮಾತು.

5) ಓ! ಓ! ಉಲಹಿನಿಯಲ್ವೇ ! ಈನ್ರೋಳಿರುಕ್ಕಮುಣ್ಣೈ ನೀರಾಟ್ಟಿ*
ಪಡ್ಡೆತ್ತಿಡೇದುಂಡು ಮಿಕ್ಕಿನ್ನಳೆಂದು* ತೇರ್ನ್ನು ದೆವಳಿಕ್ಕುಂ ಮುದಲ್ ಪೆರುಂಕವೃಳ್‌ನಿಲ್ಕ*
ಪುಪ್ಪೈಪ್ಪಲತಾನಿರಿ ದೈಯ್‌ವವ್ ಪೇಣ್ಣಲ್* ದಸಾದು ಪ್ಪಲ್ಲರಿಪಾಳ್ ಪ್ಪೈಪ್ಪೊರುಂವಕ್ಕಟ್ಟ*
ಕೊಲ್ವನ ಮುದಲಾ ಅಲ್ಲನಮಯುಲುಮ್* ಇನ್ನೈಯ ಶೆಯ್‌ಹ್ವೈ ಇನ್ಪುತುನ್ಪಳ*
ಕೊನ್ನಾಮಾಯ ಪ್ಪಿರವಿಯುಳ್ ನೀಂಗಾ* ಪನ್ನಾಮಾಯತ್ತುಱುಂದುಮಾನಳ್‌ನ್ದೇ ॥ ತಿರುವಾಶಿರಿಯುಮ್ (6)-

ಇದೇನು ಲೋಕಸ್ವಭಾವ, ತಾಯಿಯು ಇರುವಾಗ ಅವಳಿಗೆ ಶುಶ್ರೂಷೆ ಮಾಡುವುದನ್ನು ಬಿಟ್ಟು, ಮರದ ಬೊಂಬೆಗೆ ಸ್ನಾನ ಮಾಡಿಸಿ ಶುಶ್ರೂಷೆ ಮಾಡುವುದೇ,

6) ಪೇಯಿರುಕ್ಕುಮ್ ನೆಡುವೆಳ್ಳಮ್ ಪೆರುವಿಶುಂಬಿನ್ ಮೀದೋಡಿ ಪ್ಪೆರುಹು ಕಾಲಮ್
ತಾಯಿರುಕ್ಕುಮ್ ವಣ್ಣಮೇ ಉಮ್ಮೈತ್ತನ್ ವಯಿಟ್ರಿರುತ್ತಿ ಉಯ್ಯಕ್ಕೊಂಡಾನ್ ।
ಪೋಯಿರುಕ್ಕ ಮಟ್ರಿಂಗೋರ್ ಪುದುದ್ದೈಯವವ್ ಕೊಂಡಾಡುಮ್ ತೊಂಡೀರ್
ಪೆಟ್ರತಾಯಿರುಕ್ಕ ಮಣ್ಣೈವೆನ್ನೀರಾಟ್ಟುದಿರೋ ಮಾಟ್ಟಾದ ತಹವತ್ತೀರೇ ॥ ಪೆರಿ. ತರು (11-6-6)

ನಿಮ್ಮನ್ನು ತಾಯಿಯ ಹಾಗೆ ತನ್ನ ಹೊಟ್ಟೆಯಲ್ಲಿಟ್ಟುಕೊಂಡು ಕಾಪಾಡಿ ನೀವು ಉಜ್ಜೀವಿಸುವಂತೆ ಸ್ವೀಕರಿಸಿದ ಭಗವಂತನನ್ನು ಬಿಟ್ಟು ಅರ್ಥಕಾಮಗಳಲ್ಲಿ ಚಾಪಲ್ಯವುಳ್ಳ ನೀವು ದೇವತಾಂತರಗಳನ್ನು ಪೂಜಿಸುವುದು ನ್ಯಾಯವೇ ? ಹಡೆದ ತಾಯಿಯನ್ನು ಬಿಟ್ಟು, ಮರದ ಗೊಂಬೆಗೆ ಬಿಸಿ ನೀರಿನಲ್ಲಿ ಸ್ನಾನ ಮಾಡಿಸುವಂತಿದೆ ಇದು ಅಚೇತನಕ್ಕೆ ಫಲವನ್ನು ಕೊಡಲು ಶಕ್ತಿಯಿಲ್ಲದಂತೆ, ದೇವತಾಂತರಗಳಿಗೆ ಫಲ ಪ್ರಧಾನ ಶಕ್ತಿಯಿದೆಯೇ, ಅಂತರ್ಯಾಮಿಯಾದ ಭಗವಂತನಲ್ಲವೇ ಫಲವನ್ನು ಕೊಡುವವನು.

7) ವಿಷ್ಣುಂ ಬ್ರಹ್ಮಣ್ಯ ದೇವೇಶಂ ಸರ್ವ ದೇವ (ಲೋಕ) ನಮಸ್ಕೃತಮ್ ।
ತ್ರೈಲೋಕ್ಯಸ್ಥಿತಿ ಸಂಹಾರ ಸೃಷ್ಟಿಹೇತುಂ ನಿರೀಶ್ವರಮ್ ।
ಆಧಾತಾರಂ ವಿಧಾತಾರಂ ಸಂಧಾತಾರಂ ಜಗದ್ಗುರುಮ್ ।
ವಿಹಾಯ ಸ ಭಜತ್ವನ್ಯಂ ಬಿಸಸ್ತೈನ್ಯಂ ಕರೋತಿ ಯಃ ॥
ವಿಷ್ಣುಧರ್ಮ ಪರೋ ನಸ್ಯಾತ್ ವಿಷ್ಣುಧರ್ಮ ಪರಾಙ್ಮುಖಃ ।
ಕುಧರ್ಮ ವೃತ್ತ ಶೀಲಸ್ಸ್ಯಾತ್ ಬಿಸಸ್ತೈನ್ಯಂ ಕರೋತಿಯಃ ॥" ಎನ್ರುಮ್ ಶೊಲ್ಲಪ್ಪಟ್ಟದು.
೪. ಅನ್ಯಕೀರ್ತನ ಮಾಹಾದೆನ್ನು ಮಿಡತ್ತೈ, 1) "ವಾಯವನ್ನೈಯಲ್ಲದು ವಾಳ್ತ್ತಾದು"

---

ದಲ್ಲಿ ಇಂದ್ರನು ವೃದ್ಧ ಬ್ರಾಹ್ಮಣವೇಷದಿಂದ ಬಂದು ಇವರುಗಳು ಶೇಖರಿಸಿಟ್ಟಿದ್ದ ತಾವರೆ ಗೆಡ್ಡೆಗಳನ್ನೆಲ್ಲಾ ಎತ್ತಿಕೊಂಡು ಹೋಗಿ ಬಚ್ಚಿಟ್ಟಿದ್ದನು. ಋಷಿಗಳು ಮಾಧ್ಯಾಹ್ನಿಕವನ್ನು ಮುಗಿಸಿಕೊಂಡು ಮನೆಗೆ ಬಂದು ಭಗವಂತನ ಆರಾಧನೆಯನ್ನು ಮಾಡಲುಪಕ್ರಮಿಸಿ ಭಗವನ್ನಿವೇದನಕ್ಕೆಂದಿಟ್ಟಿದ್ದ ತಾವರೆ ಗೆಡ್ಡೆಗಳನ್ನು ಕಾಣದೆ ತಮ್ಮಲ್ಲೇ ಯಾರೋ ಒಬ್ಬರು ಕದ್ದಿರುವುದಾಗಿ ಊಹಿಸಿ ಬಿಸ–ತಾಮರೆ ಗೆಡ್ಡೆಯನ್ನು ಕದ್ದವನನ್ನು ಕುರಿತು ಶಪಿಸಲು ಆರಂಭಿಸಿದರು. ಆ ಶಾಪವು 7) ವಿಷ್ಣುಂ ಬ್ರಹ್ಮಣ್ಯ ದೇವೇಶಂ ಎಂದಾರಂಭಿಸಿ ಹೇಳಲ್ಪಟ್ಟಿದೆ. ತಾವರೆ ಗೆಡ್ಡೆಗಳನ್ನು ಕದ್ದವನು, "ಮೂರುಲೋಕಕ್ಕೂ ಸ್ವಾಮಿಯಾದ ಸೃಷ್ಟಿ ಸ್ಥಿತಿಸಂಹಾರ ಶೀಲನಾದ ಮಹಾ ವಿಷ್ಣುವನ್ನು ಬಿಟ್ಟು ದೇವತಾಂತರಗಳನ್ನು ಭಜಿಸುವವನಾಗಲಿ, ಅಂಥಹವನು ವಿಷ್ಣುಧರ್ಮ ಪರನಲ್ಲದೆ, ವಿಷ್ಣುಧರ್ಮಪರಾಙ್ಮುಖನಾಗಿ ಕುತ್ಸಿತವಾದ ವೃತ್ತಿ ನಡತೆಗಳಿಂದ ಕೂಡಿದವನಾಗಿ ಆಗಲಿ", ಎಂದು ಶಪಿಸಿದರು. ಹೀಗೆ ಶಪಿಸಿರುವುದರಿಂದ ದೇವತಾಂತರ ಭಜನವು ಪಾಪಕಾರ್ಯವೆಂದೇರ್ಪಡುತ್ತದೆ. ಅಂತಹ ಪಾಪ ಕಾರ್ಯಗಳು ಕೂಡದೆಂದು ಈ ಸಪ್ತಋಷಿಗಳ ಸಂವಾದದಿಂದ ಪ್ರಮಾಣವಾಗಿ ಏರ್ಪಡುತ್ತದೆ.

**ಅನ್ಯಕೀರ್ತನ ಮಾಹಾದೆನ್ನು ಮಿಡತ್ತೈ** –ಭಗವದ್ವ್ಯತಿರಿಕ್ತವಾದ ದೇವತಾಂತರಗಳ ಸ್ತೋತ್ರವು ಕೂಡ ದೆಂಬುದನ್ನು 1) **ವಾಯವನ್ನೈಯಲ್ಲದು** ಬಾಯಿಯು ಭಗವಂತನಲ್ಲದೆ ಇತರರನ್ನು ಸ್ತುತಿಸುವುದಿಲ್ಲ,

---

7) ಇತಿಹಾಸ ಸಮುಚ್ಚಯ 12-77 ತಾವರೆ ಗೆಡ್ಡೆಗಳನ್ನು ಕದ್ದವನು ಬ್ರಾಹ್ಮಣ ಸಮೂಹಕ್ಕೂ ದೇವತೆಗಳಿಗೂ ಸ್ವಾಮಿಯೂ ತನಗೆ ಈಶ್ವರಾಂತರ ರಹಿತನೂ, ಸರ್ವಲೋಕಗಳ ಜನರಿಂದ ಪೂಜಿಸಲ್ಪಡುವವನೂ, ಮೂರು ಲೋಕಗಳಿಗೂ ವ್ಯಷ್ಟಿ ಸಮಷ್ಟಿ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವವನೂ ಆದ ಮಹಾವಿಷ್ಣುವನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸುವವನಂತಾಗಲಿ, ಅವನು ವೈಷ್ಣವ ಧರ್ಮಪರಾಯಣನಲ್ಲದೆ, ಅದರಿಂದ ಪರಾಙ್ಮುಖನಾಗಿ, ದೇವತಾಂತರ ಭಜನ ರೂಪವಾದ ನಿಂದ್ಯ ಧರ್ಮಗಳನ್ನು ವೃತ್ತಿಯನ್ನಾಗಿ. ಉಳ್ಳವನಾಗಲಿ. ಇದು ಸಪ್ತರ್ಷಿಗಳ ಸಂವಾದದಲ್ಲಿ ಹೇಳಲ್ಪಟ್ಟ ನಿಂದಾರೂಪವಾದ ಶಾಪ, ಇದರಿಂದ ದೇವತಾಂತರ ಭಜನವು, ನಿಷೇಧ್ಯವೆಂಬುದು ಪ್ರಮಾಣೀಕರಿಸಲ್ಪಡುತ್ತದೆ.

1) ಮುದಲ್ ತಿರುವಂದಾದಿ ।-
ವಾಯ್ ಅವನ್ನೈಯಲ್ಲದು ವಾಳ್ತ್ತಾದು-ಕೈಉಲಹಮ್
ತಾಯವನ್ನೈಯಲ್ಲದು ತಾಮ್ ತೊೞಾ-ಪೇಯ್ ಮುಲೈನಂಜು
ಊಣಾಹವುಂಡಾನ್ ಉರುವೊಡು ಪೇರಲ್ಲಾಲ್ *
ಕಾಣಾ ಕಣ್ ಕೇಳಾ ಶೆವಿ.

ಬಾಯಿಯು ಭಗವಂತನಲ್ಲದೆ ಇತರರನ್ನು ಸ್ತೋತ್ರ ಮಾಡುವುದಿಲ್ಲ, ಕೈ ಲೋಕವನ್ನೆಲ್ಲಾ ಹಡೆದ ಅವನನ್ನು ಬಿಟ್ಟು ಬೇರೆ ಯಾರನ್ನೂ ನಮಸ್ಕರಿಸುವುದಿಲ್ಲ, ಪೂತನೆ ಎಂಬ ರಾಕ್ಷಸಿಯ ವಿಷಸ್ತನ್ಯವನ್ನು ತನಗೆ ಆಹಾರವಾಗಿ ಕುಡಿದ ಭಗವಂತನ ರೂಪವನ್ನೂ ಅವನ ನಾಮಗಳನ್ನೂ ಬಿಟ್ಟು ಇತರರನ್ನು ಕಣ್ಣು ನೋಡದು, ಕಿವಿಯೂ ಕೇಳದು.

೨) "ಶೊನ್ನಾಲ್ ವಿರೋಧಮ್" ಇತ್ಯಾದಿಹಳಿಲೇ ಅರುಳಿಚ್ಚೆಯ್‌ದಾರ್.
೫. ಅನ್ಯ ಚಿನ್ತನ ಮಾಹಾದೆನ್ನು ನಿಡತ್ತೈ 3) "ಶಿನ್ದೈ ಮತ್ತೊನ್ರಿನ್ತಿರತ್ತಲ್ಲಾತ್ತನ್ನೈ ದೇವಪಿರಾ ನರಿಯುಮ್" ಎನ್ರುಮ್, 4) "ವರುದೇವರ್ ಮತ್ತುಳರೆನ್ರು ಎನ್ ಮನತ್ತಿರೈಯುಮ್ ಕರುತೇನ್" ಎನ್ರು ಮರುಳಿಚ್ಚೆಯ್‌ದಾರ್.

ಅಭಿಗಮನಾದಿಷು ಅನಧಿಕೃತಾನಾಮುಕ್ತಾನರ್ಥ ನಿವಾರಣಂ ಕಥಮ್ ?

ಇಜ್ಯಮಾರಾಧನಾದಿ ಕ್ರಮಙ್ಗಳಿಲ್ ಅನಧಿಕೃತರ್ಕ್ಕು ವಿಕ್ಕಾಲಙ್ಗಳಿಲ್ಲಾತ್ತಿಲುಮ್ ತಙ್ಗಳುಕ್ಕು

---

2) **ಶೊನ್ನಾಲ್ ವಿರೋಧಮ್**–ಇತ್ಯಾದಿ ಪ್ರಯೋಜನಾಂತರ ಪರರಾಗಿ. ಭಗವದ್ವ್ಯತಿರಿಕ್ತ ದೇವತೆಗಳನ್ನೂ ಮನುಷ್ಯರನ್ನೂ ಸ್ತೋತ್ರಮಾಡಕೂಡದು ಎಂದು ಆಳ್ವಾರವರು ಕೃಪೆಮಾಡಿ ಹೇಳಿದ್ದಾರೆ. **ಅನ್ಯಚಿಂತನ ಮಾಹಾದೆನ್ನು ನಿಡತ್ತೈ** ಭಗವದ್ವ್ಯತಿರಿಕ್ತ ಚಿಂತನೆ–ಧ್ಯಾನವು ಕೂಡದು ಎಂಬುದನ್ನು 3) **ಶಿಂದೈಮಟ್ರೊ ನಿನ್**–ಇತ್ಯಾದಿ ಮನಸ್ಸು ಭಗವಂತನು ವಿನಹ ಬೇರೆ ವಿಷಯಗಳನ್ನು ನೆನೆಯುವುದಿಲ್ಲ: ಅಂದರೆ ಭಗವದ್ವ್ಯತಿರಿಕ್ತಗಳಾದ ಬೇರೆ ಪುರುಷಾರ್ಥಗಳಲ್ಲಿ ಪ್ರಾಪ್ಯ ಬುದ್ಧಿಯಿಲ್ಲವೆಂಬುದನ್ನು ಭಗವಂತನೇ ತಿಳಿದಿದ್ದಾನೆ. ಎಂದೂ, 4) **ವರುದೇವರ್ ಮಟ್ರುಳರೆನ್ರು** ಇತ್ಯಾದಿ ನನಗೆ ಆಶ್ರಯಣೀಯರೆಂದು ನೀನು ವಿನಹ ಇತರ ದೇವತೆಗಳು ಇದ್ದಾರೆಂದು ನನ್ನ ಮನಸ್ಸಿನಲ್ಲಿ ಸ್ವಲ್ಪವೂ ಚಿಂತಿಸುವುದಿಲ್ಲ, ಎಂದೂ ಕೃಪೆಮಾಡಿ ಹೇಳಿರುತ್ತಾರೆ.

**ಭಗವಧಾರಾಧನಾದಿಗಳಲ್ಲಿ ಅಧಿಕಾರವಿಲ್ಲದವರಿಗೂ ಕೈಂಕರ್ಯವು ಸಿದ್ಧಿಸುವ ಪ್ರಕಾರ**

"ಜಪಸ್ತಪಸ್ತೀರ್ಥಯಾತ್ರಾ ಪ್ರವ್ರಜ್ಯಾಮಂತ್ರ ಸಾಧನಮ್ ।
ದೇವತಾರಾಧನಂ ಚೈವಸ್ತ್ರೀ ಶೂದ್ರಪತನಾದಿಷಟ್ ॥

---

2) ಶೊನ್ನಾಲ್ ವಿರೋಧಮಿದು ಆಹಿಲುಂ ಶೊಲ್ಲುವನ್ ಕೇಣ್ಮಿನೋ
ಎನ್ನಾವಿಲಿನ್ ಕವಿಯಾನೊರುವರ್ಕ್ಕುಂ ಕೊಡುಕ್ಕಿಲೇನ್-
ತೆನ್ನಾತೆನಾವೆನ್ರು ವಂಡು ಮುರಲ್ ತಿರುವೇಂಗಡತ್ತು.
ಎನ್ನಾನೈ ಎನ್ನಪ್ಪನ್ ಎಂಬೆರುಮಾನ್ ಉಳನಾಹವೇ. ತಿರುವಾಯ್ (3-9-1)

ನೀವುಗಳು ಬಂದು ನನ್ನನ್ನು ಆಶ್ರಯಿಸಿ ಕೇಳದೆ ನಾನೇ ನಿಮಗೆ ಉಪದೇಶಿಸುವುದು ತಪ್ಪು, ಆದರೂ ಈ ರಹಸ್ಯವನ್ನು ನಿಮಗೆ ಉಪದೇಶಿಸುತ್ತೇನೆ, ಕೇಳಿ ತಿಳಿದುಕೊಳ್ಳಿ, ದುಂಬಿಗಳು ತೆನ್ನ. ತೆನ್ನ ಎಂದು ಹಾಡುತ್ತಿರುವ ತಿರುವೇಂಗಡ ಪರ್ವತದಲ್ಲಿ ನನ್ನ ಸ್ವಾಮಿಯು ಇರುವಾಗ, ಅವನನ್ನು ಬಿಟ್ಟು ಇತರರನ್ನು ಸ್ತುತಿಸುವುದಿಲ್ಲ.

3) ಶಿಂದೈಮಟ್ರೊನ್ರಿನ್ ತಿರತ್ತದಲ್ಲಾತ್ತನ್ನೈ ತೇವಪಿರಾನರಿಯುಮ್
ಶಿಂದೈಯಿನಾಲ್ ಶೆಯ್‌ವದಾನರಿಯಾದನ ಮಾಯಂಗಳೊನ್ರುಮಿಲ್ಲೈ*
ಶಿಂದೈಯಿನಾಲ್ ಶೊಲ್ಲಿನಾಲ್ ಶೆಯ್‌ಗೈಯಾಲ್ ನಿಲತ್ತೇವರ್ ಕುಳುವಣಂಗುಮ್
ಶಿಂದೈಮಹಿಳ್ ತಿರುವಾರನ್ ವಿಳೈಯದುರೈ ತೀರ್ಥನುಕ್ಕಟ್ರಪಿನ್ನೇ ॥

ತಿರುವಾರನ್ ವಿಳೈಯಲ್ಲಿ ವಾಸ ಮಾಡುತ್ತಿರುವ ಭಗವಂತ ಪ್ರಾಪ್ಯನೆಂದು ತೀರ್ಮಾನಿಸಿದ ನಂತರ ಮನಸ್ಸು ಬೇರೆ ಯಾರನ್ನೂ ನೆನೆಯುವುದಿಲ್ಲವೆಂಬುದು ಭಗವಂತನಿಗೆ ಗೊತ್ತು.

4) ಪೆರುನೀರುಂವಿಣ್ಣುಮ್ ಮಲೈಯುಮ್ ಉಲಗೇಳುಮ್
ಒರುತಾರಾನಿನ್ನುಳೊಡುಕ್ಕಿಯ ನಿನ್ನೈಯಲ್ಲಾಲ್*
ವರುದೇವರ್ ಮಟ್ರುಳರೆನ್ನು ಎನ್‌ಮನತ್ತಿರೈಯುಮ್
ಕರುದೇನ್ ನಾನ್, ಕಣ್ಣಪುರತ್ತುರೈ ಯಮ್ಮಾನೇ ಪೆರಿ. ತಿರು (8-10-2)

(ಎಲೈ, ತಿರುಕ್ಕಣ್ಣ ಪುರವಾಸಿಯಾದ ಸ್ವಾಮಿಯೇ) ಸಪ್ತ ಸಮುದ್ರಗಳನ್ನೂ, ಆಕಾಶ ಬೆಟ್ಟ ಮೊದಲಾದ ಸಪ್ತ ಲೋಕಗಳನ್ನೂ ಒಂದೂ ಬಿಡದೆ ಪ್ರಳಯದಲ್ಲಿ ಅಡಗಿಸಿಕೊಂಡ, ನಿನ್ನನ್ನು ಬಿಟ್ಟು, ಆಶ್ರಯಣೀಯರಾದ ದೇವರು ಬೇರೆ ಇದ್ದಾರೆಂದು ನನ್ನ ಮನಸ್ಸಿನಲ್ಲಿ ಸ್ವಲ್ಪವೂ ಎಣಿಸುವುದಿಲ್ಲ.

**ಯೋಗ್ಯಮಾನ ನಿತ್ಯನೈಮಿತ್ತಿಕಙ್ಗಳಾಲುಮ್, ಸಂಕೀರ್ತನಾದಿಹಳಾಲುಮ್, ಸಮಾರಾಧನಾದಿ ಯೋಗ್ಯ ರಾನ ಪರಮ ಭಾಗವತರ್ಕ್ಕು ಪ್ಪರತಂತ್ರರಾಯ್ ಯಥಾಧಿಕಾರಂ ವಲ್ಲತೇವ್ನೈ ಶೆಯ್‌ದುಮ್ ಇಕ್ಕೈಙ್ಕರ್ಯ ವಿಚ್ಛವಾದೊೞಿಯಲಾಮ್.**

**ಇವ್ವರ್ಥತ್ತೈ 1) "ಆರಾಧನಾನಾಂ ಸರ್ವೇಷಾಂ ವಿಷ್ಣೋರಾರಾಧನಂ ಪರಮ್ ।**
**ತಸ್ಮಾತ್ಪರತರಂ ಪ್ರೋಕ್ತಂ ತದೀಯಾರಾಧನಂ ಪರಮ್ ॥" ಎನ್ರುಮ್,**

**2) "ಕುನ್ರಮೆಡುತ್ತ ಪಿರಾನಡಿಯಾರೋಡು ಮೊನ್ರಿ ನಿನ್ರ ಶಡಗೋಪನುರೈ ಶೆಯಲ್" ಎನ್ರುಂ**

**3) "ಏತ್ತಿಯಿರುಪ್ಪಾರೈ ವೆಲ್ಲುಮೋ, ಮತ್ತವರೈ ಚ್ಚಾತ್ತಿಯಿರುಪ್ಪಾರ್‌ತವಮ್" ಎನ್ರುಮ್, ಅರುಳಿಚ್ಚೆಯ್‌ದಾರ್‌ಹಳ್.**

---

ಎಂದು ಸ್ತ್ರೀ ಶೂದ್ರರುಗಳಿಗೆ ಜಪ, ತಪಸ್ಸು, ತೀರ್ಥಯಾತ್ರೆ, ಸನ್ಯಾಸ, ಮಂತ್ರಗಳ ಪುರಶ್ಚರಣೆ, ಭಗವದಾರಾಧನೆಗಳು ಕೂಡದು. ಅವುಗಳನ್ನು ಮಾಡಿದರೆ ಪತಿತರಾಗುತ್ತಾರೆ ಎಂದು ಹೇಳಿರುವಾಗ, ಪ್ರಪನ್ನರಾದ ಸ್ತ್ರೀ ಶೂದ್ರರುಗಳಿಗೂ ಹಾಗೆಯೇ ವಾರ್ಧಕ್ಯದಿಂದ ಅಶಕ್ತರಾಗಿರುವವರಿಗೂ ಅಚ್ಛಿದ್ರ ಪಾಂಚಕಾಲಿಕ ಕೈಂಕರ್ಯವು ಸಿದ್ಧಿಸುವ ಬಗೆ ಹೇಗೆ ಎಂದರೆ, **ಇಸ್ಸಮಾರಾಧನಾದಿಕ್ರಮಂಗಳಿಲ್ ಅನಧಿಕೃತರ್ಕ್ಕುಮ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ ಆದಾಗಿ ಈ ಪಾಂಚಕಾಲಿಕ ಭಗವದಾರಾಧನಕ್ರಮಗಳಲ್ಲಿ ಅನಧಿಕೃತರಾದ ಸ್ತ್ರೀಶೂದ್ರಾದಿಗಳಿಗೂ, ತನಗೆ ಯೋಗ್ಯವಾದ **ನಿತ್ಯನೈಮಿತ್ತಿಕಂಗಳಾಲುಮ್** ಹಾಸಿಗೆಯಿಂದ ಎದ್ದು ಗುರುಪರಂಪರಾನುಸಂಧಾನ ನಿತ್ಯಸ್ನಾನ,ಪೂರ್ವಕ ದ್ರಮಿಡಾಮ್ನಾಯಗಳಾದ ಆಳ್ವಾರುಗಳ ಶ್ರೀ ಸೂಕ್ತಿಗಳನ್ನು ಅನುಸಂಧಾನ ಮಾಡುವುದು, (ನೈಮಿತ್ತಿಕ ಗ್ರಹಣ ಸ್ನಾನಾದಿಗಳು,) ದ್ವಾದಶೋರ್ಧ್ವಪುಂಡ್ರ ಧರಿಸಿ, ಪುಷ್ಪಗಳನ್ನು ತಂದು ಮಾಲೆಗಳನ್ನು ಕಟ್ಟಿ, ಭಗವನ್ಮಂದಿರವನ್ನು ಗೋಮಯದಿಂದ ಶುದ್ಧಿಮಾಡಿ, ರಂಗವಲ್ಲಿಯನ್ನು ಹಾಕಿ, ದೀಪಗಳನ್ನು ಹಚ್ಚಿ, ನಿವೇದನಕ್ಕೆ ಬೇಕಾದ ಶುಚಿ ರುಚಿಯಾದ ಅಡಿಗೆಗಳನ್ನು ತಮ್ಮ ತಮ್ಮ ಅಧಿಕಾರಾನುರೂಪವಾಗಿ ಮಾಡಿ ಭಗವಂತನಿಗೆ ಸಮರ್ಪಿಸಿ ಅವರವರಿಗೆ ಅಧಿಕಾರವಾದ ರೀತಿಯಲ್ಲಿ ನಾಮಸಂಕೀರ್ತನಾದಿಗಳನ್ನು ಮಾಡಿಯೂ, **ಪರಮ ಭಾಗವತರುಕ್ಕು ಪರತಂತ್ರರಾಯ್**– ಇತ್ಯಾದಿ–ಭಾಗವತೋತ್ತಮರಿಗೆ ಅಧೀನರಾಗಿ ತಮ್ಮ ತಮ್ಮ ಅಧಿಕಾರಾನುಗುಣವಾಗಿ, **ವಲ್ಲತ್ತೇವ್ವೈ ಶೆಯ್ದುಮ್**– ಶುಶ್ರೂಷಾದಿಗಳನ್ನು ಮಾಡಿಯೂ, **ಇಕ್ಕೈಂಕರ್ಯಮ್** ಇತ್ಯಾದಿ ಈ ಪಂಚಕಾಲಿಕ ಕೈಂಕರ್ಯವನ್ನು ಲೋಪವಿಲ್ಲದೆ ಯಥಾಶಕ್ತಿ ಅನುಷ್ಠಿಸಬಹುದು. ಭಾಗವತ ಕೈಂಕರ್ಯವೇ ಸರ್ವೋತ್ಕೃಷ್ಟವಾದ್ದರಿಂದ ಅದನ್ನು ಅನುಷ್ಠಿಸುವುದರಿಂದ ಅಭಿಗಮನಾದಿ ಸಿದ್ಧಿಯುಂಟೆಂದು ಪ್ರಮಾಣ ಪುರಸ್ಸರವಾಗಿ **ಇವ್ವರ್ಥತ್ತೈ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. **ಆದಾಗಿ ಭಗವದಾರಾಧನ ಸಿದ್ಧಿ ಹೇತುಭೂತವಾದ ಉತ್ಕರ್ಷವು ಭಾಗವತಾರಾಧನದಿಂದ** ಉಂಟಾಗುತ್ತದೆ ಎಂಬ **ಅರ್ಥವನ್ನು 1) ಆರಾಧನಾನಾಂ ಸರ್ವೇಷಾಂ** ಇತ್ಯಾದಿಯಾಗಿಯೂ, **2) ಕುನ್ರಮೆಡುತ್ತಪಿರಾನ್ ಅಡಿಯಾರೊಡುಮ್**– ಇತ್ಯಾದಿಯಾಗಿಯೂ **3) ಏತ್ತಿಯಿರುಪ್ಪಾರೈವೆಲ್ಲುಮೋ** ಇತ್ಯಾದಿಯಾಗಿಯೂ ಪ್ರಮಾಣಗಳೂ

---

1) ಪಾದ್ಮೋತ್ತರ 29-81 ವಿಷ್ಣುವಿನ ಆರಾಧನೆಯು, ಇತರ ಆರಾಧನೆಗಿಂತ ಉತ್ಕೃಷ್ಟವು. ಉತ್ಕೃಷ್ಟವಾದ ವಿಷ್ಣುವಿನ ಆರಾಧನೆಗಿಂತ, ಅವನ ಭಕ್ತರನ್ನು ಊಟ, ಉಪಚಾರಾದಿಗಳಿಂದ ಆರಾಧಿಸುವುದು ಮೇಲಾದದು.

2) ಕುನ್ರಮೆಡುತ್ತ ಪಿರಾನಡಿ ಯಾರೊಡುಮ್, ಒನ್ರಿನಿನ್ನ ಶಠಗೋಪನುರೈಶೆಯಲ್,
ನನ್ರಿಪುನೈಂದ ಓರಾಯಿರಿತ್ತುಳ್ಳಿವೈ, ವೆನ್ರಿತರುಂಪತ್ತುಮ್ ಮೇವಿಕ್ಕರ್ಪ್ಪಾರ್ಕ್ಕೇ ॥

ತಿರುವಾಯ್‌ಮೊೞಿ (7-4-11) ಗೋವರ್ಧನ ಬೆಟ್ಟವನ್ನು ಎತ್ತಿ ಗೋ ಗೋಪರನ್ನು ಸಂರಕ್ಷಿಸಿ ಪರಮೋಪಕಾರ ಮಾಡಿದ ಭಗವಂತನ ಸೇವಕರೊಡನೆ ಸೇರಿ ಅವರುಗಳಿಗೆ ಸಹಾಯಕರಾಗಿದ್ದು ಕೈಂಕರ್ಯವನ್ನು ಮಾಡುವ ನಮ್ಮಾಳ್ವಾರ್‌ರವರು ಹೇಳಿದ ಸಾವಿರ ಪಾಶುರಗಳಲ್ಲಿ ಈ ಹತ್ತು ಪಾಶುರಗಳನ್ನು ಆದರ ಪೂರ್ವಕ ತಿಳಿದುಕೊಳ್ಳುವವರಿಗೆ, ಸಂಸಾರ ಜಯವು ಉಂಟಾಗುತ್ತದೆ.

ಪು. ತಿ. ನೋ.

ಇಕ್ಕೈಙ್ಕರ್ಯಙ್ಗಳೈ ಅನುಷ್ಠಿತ್ತು ಉಹಪ್ಪಾರ್‌ಕ್ಕುಮ್, ಇದು ಕಣ್ಡು ಉಕಪ್ಪಾರ್‌ಕ್ಕುಮ್, ಜಗದ್ವ್ಯಾಪಾರಂ ಪಣ್ಣ ವಧಿಕೃತನಾನ ಈಶ್ವರನುಕ್ಕುಮ್ ಮುಕ್ತರುಕ್ಕುಮ್ ಪೋಲೇ, ಭೋಗಮೇಕ ರೂಪಮ್.

1) "ಧರ್ಮಶ್ಶ್ರುತೋವಾ ದೃಷ್ಟೋವಾ ಸ್ಮೃತೋವಾ ಕಥಿತೋಪಿವಾ।
ಅನುಮೋದಿತೋವಾ ರಾಜೇಂದ್ರ ಪುನಾತಿ ಪುರುಷಂಸದಾ॥"

ಎನ್ಗಿರ ಪಾವನತ್ವಮ್ಪೋಲೇ ಭೋಗ್ಯತ್ವಮುಮ್ ಏಕರೂಪಮಾಹ ಕ್ಕುಱೈಯಿಲ್ಲೈ.

---

ಆಳ್ವಾರುಗಳೂ ಅನುಗ್ರಹಿಸಿರುತ್ತಾರೆ. ಅಂದರೆ ಭಗವದಾರಾಧನಕ್ಕಿಂತ ಭಾಗವತಾರಾಧನವು ಮೇಲಾದುದು. ಗೋವರ್ಧನ ಬೆಟ್ಟವನ್ನು ಎತ್ತಿ ಉಪಕಾರ ಮಾಡಿದ ಕೃಷ್ಣ ಪರಮಾತ್ಮನ ಸೇವಕರೊಡನೆ ಒಂದಾಗಿ ಸೇರಿ ಭಗವಂತನ ಕೈಂಕರ್ಯವನ್ನು ಮಾಡುವ ಶಠಗೋಪರು ಭಗವಂತನನ್ನು ಸ್ತೋತ್ರ ಮಾಡುವವರನ್ನು ಶಾತ್ತಿಯಿರುಪ್ಪಾರ್- ಆರಾಧಿಸುವವರ ತಪಸ್ಸು ಹೆಚ್ಚಾದದು ಇತ್ಯಾದಿಯಾಗಿ, ಅನುಗ್ರಹಿಸಿರುತ್ತಾರೆ.

ಈ ಅಭಿಗಮನಾದಿ ಕೈಂಕರ್ಯಗಳನ್ನು ಮಾಡುವವರ ಹಾಗೆ, ಇದಕ್ಕೆ ಉಪಕಾರ ಮಾಡುವವರಿಗೂ ಫಲವು ಏಕರೂಪವೆಂದು ಹೇಳಿ, ನಂತರ ಈ ಕೈಂಕರ್ಯಗಳನ್ನು ನೋಡಿ ಸಂತೋಷ ಪಡುವವರಿಗೂ ಆನಂದವು ಏಕರೂಪವೆಂದು ಇಕ್ಕೈಂಕರ್ಯಂಗಳೈ ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಈ ಕೈಂಕರ್ಯಗಳನ್ನು ಅನುಷ್ಠಿಸಿ ಸಂತೋಷ ಪಡುವವರಿಗೂ, ಇವನ್ನು ನೋಡಿ ಸಂತೋಷಪಡುವವರಿಗೂ, ಜಗದ್ವ್ಯಾಪಾರವನ್ನು ಮಾಡಲು, ಅಧಿಕೃತನಾದ ಈಶ್ವರನುಕ್ಕುಮ್-ಲಕ್ಷ್ಮೀ ವಿಶಿಷ್ಟನಾರಾಯಣನಿಗೂ, ಮುಕ್ತರಿಗೂ ಇರುವಂತೆ ಭೋಗವು ಏಕರೂಪವಾದದ್ದು. ಇದಕ್ಕೆ ಪ್ರಮಾಣವನ್ನು 1) ಧರ್ಮಶ್ಶ್ರುತೋವಾ ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಧರ್ಮಾನುಷ್ಠಾನವನ್ನು ಮಾಡುವವನಿಗೂ, ಅದನ್ನು ಕೇಳುವವನಿಗೂ ನೋಡುವವನಿಗೂ, ತಾನೂ ಅದನ್ನು ಮಾಡಲು ನೆನೆಯುವವನಿಗೂ, ಇತರರಿಗೆ ಉಪದೇಶಿಸುವವನಿಗೂ, ಅದನ್ನು ಅನುಮೋದಿಸುವವನಿಗೂ, ಪಾವನತ್ವವು ಉಂಟಾಗುವಂತೆ ಮೇಲೆ ಹೇಳಿದ ಭಗವತ್ಕೈಂಕರ್ಯಗಳನ್ನು ಅನುಷ್ಠಿಸುವವನಿಗೂ ಅದನ್ನು ನೋಡಿ ಸಂತೋಷ ಪಡುವವನಿಗೂ ಭೋಗ್ಯತ್ವವು ಏಕರೂಪವಾಗಿರಲು ಯಾವ ಬಾಧಕವೂ ಇಲ್ಲ.

---

3) ಮಾರಾಯುತಾನವನ್ನೈ ವಳ್ಳುಹಿರಾಲ್* ಮಾರ್ವಿರಂಡು
ಕೂರಾಹಕ್ಕೀರಿಯಕೋಳರಿಯ್ಯೈ* ಪೇರಾಹ
ಏತ್ತಿಯಿರು ಪ್ಪಾರ್ಕ್ಕೈ ವೆಲ್ಲುಮೇ* ಮತ್ತವರ್ಕ್ಕೈ
ಚ್ಚಾರ್ತ್ತಿಯಿರುಪ್ಪಾರ್‌ತವಮ್. ನಾನ್ಮುಹನ್ ತಿರುವಂದಾದಿ (18)

ಭಗವದ್ವೇಷಿಯಾದ ಹಿರಣ್ಯಕಶಿಪುವಿನ ಎದೆಯನ್ನು ತನ್ನ ನಖಗಳಿಂದ ಎರಡು ಭಾಗವಾಗಿ ಸೀಳಿದ ಪರಾಕ್ರಮಶಾಲಿಯಾದ ನರಸಿಂಹನನ್ನು ಪ್ರಧಾನವಾಗಿ ಸ್ತೋತ್ರ ಮಾಡುವವರ ತಪಸ್ಸಿಗಿಂತ, ಅವರನ್ನು ಪೂಜಿಸುವ ಭಾಗವತರ ತಪಸ್ಸು ಶ್ರೇಷ್ಠವಾದದ್ದು.

1) ಭಾರ. ಅಶ್ವ. 96-31 ಎಲೈ ರಾಜಶ್ರೇಷ್ಠನೇ, ಒಬ್ಬನು ಅನುಷ್ಠಿಸಿದ ಧರ್ಮವನ್ನು ಕೇಳುವುದೋ, ಅದನ್ನು ನೋಡುವುದೋ ಅದನ್ನ ನೆನೆಸಿಕೊಳ್ಳುವುದೋ, ಮತ್ತೊಬ್ಬನಿಗೆ ಅದನ್ನು ಉಪದೇಶಿಸುವುದೋ, ಅವನು ಮಾಡುವ ಧರ್ಮವನ್ನು ಅನುಮೋದಿಸುವುದೋ, ಎಲ್ಲವೂ ಪುರುಷನನ್ನು ಪವಿತ್ರಗೊಳಿಸುತ್ತದೆ.

## ಅನಧಿಕೃತ ಪ್ರಪನ್ನೈಃ ಭಗವದನುಸ್ಮರಣಂ ಕಥಮ್ ಕರ್ತವ್ಯಂ ?

ಅಪ್ಪಡಿಯೇ 1) "ತಸ್ಮಾತ್ಸಪ್ರಣವಂ ಶೂದ್ರೋ ಮನ್ನಾಮಾನಿ ನಕೀರ್ತಯೇತ್" ಎನ್ರು ಮಹಾ ಭಾರತತ್ತಿಲುಮ್ 2) ಅಷ್ಟಾಕ್ಷರ ಜಪಸ್ತ್ರೀಣಾಂ ಪ್ರಕೃತ್ಯೈವ ವಿಧೀಯತೇ ।
ನ ಸ್ವರಃ ಪ್ರಣವೋಽಙ್ಗಾನಿ ನಾಪ್ಯನ್ಯ ವಿಧಯಸ್ತಥಾ ।
ಸ್ತ್ರೀಣಾಂತು ಶೂದ್ರಜಾತೀನಾಂ ಮಂತ್ರ ಮಾತ್ರೋಕ್ತಿ ರಿಷ್ಯತೇ ॥" ಎನ್ರು ನಾರದೀಯಾದಿಹಳಿಲುಮ್, 3) "ನಮೋ ನಾರಾಯಣೇತ್ಯುಕ್ತ್ವಾ ಶ್ವಪಾಕಃ ಪುನರಾಗಮತ್" ಎನ್ರು ಶ್ರೀ ವರಾಹ ಪುರಾಣತ್ತಿಲುಮ್, 4) "ವಾಯಿನಾಲ್ ನಮೋ ನಾರಣಾವೆನ್ರು ಮತ್ತಕತ್ತಿಡೈಕ್ಕೈ ಹಳೈ ಕ್ಕೊಪ್ಪಿ" ಎನ್ರುಮ್, 5) ನಾಮಂ ಶೊಲ್ಲಿಲ್ ನಮೋ ನಾರಾಯಣಮೇ" ಎನ್ರುಮ್,

---

## ಫಲರೂಪವಾದ ಭಗವದ್ಧ್ಯಾನದಲ್ಲಿ ಸರ್ವರಿಗೂ ಅಧಿಕಾರವುಂಟು.

ಹೀಗೆ ಎಲ್ಲರಿಗೂ ಫಲಸಿದ್ಧಿ ಪ್ರಕಾರವನ್ನು ಹೇಳಿ ಸರ್ವೋಪಜೀವ್ಯವಾದ ಪ್ರಣವ ಚತುರ್ಥಿಗಳಿಲ್ಲದ ಮೂಲ ಮಂತ್ರವನ್ನು ಅಂದರೆ "ನಮೋನಾರಾಯಣ" ಎಂಬ ಮಂತ್ರವನ್ನು ಸರ್ವರೂ ಜಪಿಸಿ ಸಿದ್ಧಿ ಪಡೆಯುವಂತೆ, ಎಲ್ಲಾ ಪ್ರಪನ್ನರಿಗೂ ಸರ್ವಕಾಲದಲ್ಲಿಯೂ ಫಲರೂಪವಾದ ಭಗವದನುಸ್ಮರಣರೂಪ ಯೋಗದಲ್ಲಿ ಅಧಿಕಾರವುಂಟೆಂದು **ಅಪ್ಪಡಿಯೇ** ಎಂದಾರಂಭಿಸಿ ನಿರೂಪಿಸುತ್ತಾರೆ- ಅದಾಗಿ ಸರ್ವರಿಗೂ ಭಗವತ್ಪೂಜೆಯಲ್ಲಿ ಅನ್ವಯವು ಇರುವಂತೆ 1) **ತಸ್ಮಾತ್ಸಪ್ರಣವಂ** ಇತ್ಯಾದಿ ಮಹಾಭಾರತದಲ್ಲಿಯೂ, 2) **ಅಷ್ಟಾಕ್ಷರಜಪಸ್ತ್ರೀಣಾಂ** ಇತ್ಯಾದಿ ನಾರದೀಯ ಕಲ್ಪಾದಿಗಳಲ್ಲಿಯೂ, 3) **ನಮೋನಾರಾಯಣೇತ್ಯುಕ್ತ್ವಾ**, ಇತ್ಯಾದಿ ಶ್ರೀವರಾಹ ಪುರಾಣದಲ್ಲಿಯೂ, 4) **ವಾಯಿನಾಲ್ ನಮೋನಾರಾಯಣಾವೆನ್ರು** ಇತ್ಯಾದಿಯಾಗಿಯೂ 5) **ನಾಮಂಶೊಲ್ಲಿಲ್** ಇತ್ಯಾದಿ

---

1) ತಸ್ಮಾತ್ಸಪ್ರಣವಂ ಶೂದ್ರೋ ಮನ್ನಾಮಾನಿ ನ ಕೀರ್ತಯೇತ್ ।
ಪ್ರಣವಂ ಹಿ ಪರಂಲೋಕೇ ಬ್ರಹ್ಮ ಬ್ರಹ್ಮವಿದೋವಿದುಃ ॥ ಭಾರ, ಆಶ್ವ (118-14)
ಆದ್ದರಿಂದ ಶೂದ್ರನು ಭಗವನ್ನಾಮಗಳನ್ನು (ಮಂತ್ರಗಳನ್ನು) ಪ್ರಣವವನ್ನು ಸೇರಿಸಿ ಹೇಳಕೂಡದು. ಬ್ರಹ್ಮ ಜ್ಞಾನಿಗಳು ಪ್ರಣವವು ಉತ್ಕೃಷ್ಟವಾದ ಮಂತ್ರವೆಂದು ಹೇಳಿರುತ್ತಾರೆ.

2) ನಾರದೀಯ ಕಲ್ಪ-ಸ್ತ್ರೀ ಶೂದ್ರಾದಿಗಳಿಗೆ ಅಷ್ಟಾಕ್ಷರ ಜಪವು. ಪ್ರಣವ, ಸ್ವರ, ಅಂಗಗಳು ಇತ್ಯಾದಿಗಳಿಲ್ಲದೆ ಕೇವಲ ಮಂತ್ರೋಕ್ತಿ ಮಾತ್ರ. ಪ್ರಕೃತ್ಯೈವ-ಪ್ರಣವವಿಹೀನವಾದ ಸಪ್ತಾಕ್ಷರದಿಂದ ಕೂಡಿದು ವಿಧೀಯತೇ-ಉಪದೇಶ ಮಾಡಬೇಕು, ಜಪ ಮಾಡಬೇಕು ಎಂದು ವಿಧಿಸಲ್ಪಡುತ್ತದೆ. ನಸ್ವರಃ ಇತ್ಯಾದಿ-ಉದಾತ್ತಾದಿ ಸ್ವರದಿಂದ ಉಪದೇಶ ಮಾಡಕೂಡದು, ಜಪಿಸಲೂ ಕೂಡದು ಅಂಗಾನಿ-ಅಂಗ ನ್ಯಾಸ ಕರನ್ಯಾಸಗಳು ಕೂಡದು, ಅನ್ಯವಿಧಯಃ-ಹೋಮ,ತರ್ಪಣ, ಪುಷ್ಪಾಂಜಲಿ ಪ್ರದಾನ, ಪುರಶ್ಚರಣಾದಿಗಳೂ ಸ್ತ್ರೀ ಶೂದ್ರಾದಿಗಳಿಗೆ ಸಹ ಕೂಡದು.

3) ತತಃ ಪ್ರಭಾತೇವಿಮಲೇ ವಿನಿವೃತ್ತೇಚ ಜಾಗರೇ ।
ನಮೋನಾರಾಯಣೇತ್ಯುಕ್ತ್ವಾ ಶ್ವಪಾಕಃ ಪುನರಾಗಮತ್ ॥ ವರಾಹ ಪುರಾಣ 135-53
ಕೈಶಿಕ ಮಾಹಾತ್ಮ್ಯ-ಅನಂತರ ಕತ್ತಲೆಯು ಹೋಗಿ ಬೆಳಕು ಚನ್ನಾಗಿ ಹರಿಯಲು ಜಾಗರೇ - ಭಗವಂತನನ್ನು ಹಾಡುವುದೆಂಬ ಜಾಗರವ್ರತವು ಮುಗಿದ ಮೇಲೆ, ಶ್ವಪಾಕನು 'ನಮೋನಾರಾಯಣ' ಎಂಬ ಮಂತ್ರೋಚ್ಚಾರಣ ಪೂರ್ವಕ ಭಗವಂತನಲ್ಲಿ ಶರಣಾಗತಿಯನ್ನು ಮಾಡಿ, ಬ್ರಹ್ಮ ರಕ್ಷಸ್ಸಿರುವಲ್ಲಿಗೆ ತಿರುಗಿ ಬಂದು ಸೇರಿದನು.

4) ಶೀಯಿನಾಲ್ ಶೆರಿಂದೇರಿಯ ಪುಣ್ ಮೇಲ್ ಶೆತ್ತಲೇರಿ ಕ್ಕುಳ್ಳಂಬಿರುಂದು, ಎಂಗುಮ್
ಈಯಿನಾಲ್ ಅರಿಪ್ಪುಂಡುಮಯಂಗಿ ಎಲ್ಲೈವಾಯ್ ಚ್ಚೆನ್ರುಶೇರ್ವದನ್ ಮುನ್ನಮ್ ।
ವಾಯಿನಾಲ್ ನಮೋನಾರಣಾವೆನ್ರು ಮತ್ತಕತ್ತಿಡೈಕ್ಕೈಹಳೈಕ್ಕೊಪ್ಪಿ,
ಪೋಯಿನಾಲ್ ಪಿನ್ನೈ ಇತ್ತಿಶೈಕ್ಕೆನ್ರುಂ ಪಿಣೈ ಕೊಡುಕ್ಕಿಲುಮ್ ಪೋಹವೊಟ್ಟಾರೇ ॥
ಪೆರಿಯಾಳ್ವಾರ್ ತಿರುಮೊಳಿ (4-5-2) ಪ್ರ.ತಿ.ಸೋ.

ಶೊಲ್ಲುಹಿರಪಡಿಯೇ ತಿರುಮಂತ್ರಮಾಹಿರ ಎಟ್ಟುಕ್ಕಣ್ಣಾನ ಕರುಮ್ಬಿಲೇ ವೇರ್ ಪ್ಪಟ್ರುಮ್ ತಲೈಯಾಡೈಯುಮ್ ಕಳೈನ್ದಾಲ್ ನಡವುಳ್ಳ ಅಂಶಮ್ ಸರ್ವೋಪಜೀವ್ಯ ಮಾಹಿರಾಪ್ಪೋಲೇ ಪ್ರಪತ್ತಿ ನಿಷ್ಠರೆಲ್ಲಾರ್ಕ್ಕುಮ್ ಸರ್ವಕಾಲತ್ತಿಲುಮ್ ಭಗವದನು ಸ್ಮರಣರಸತ್ತುಕ್ಕು ವಿರೋಧಮಿಲ್ಲೈ. ಸಪರಿಕರಮಾನ ವಿಲಕ್ಷಣ ಭಕ್ತಿಯೋಗಮಾಹಿಲಿರೇ ಶಿಲರ್ಕ್ಕು ವಿರೋಧಮುಳ್ಳದು. ಕ್ಷಣಮಾತ್ರ ಸಾಧ್ಯಮಾನ ಪ್ರಪದನಮ್, ಸಿದ್ಧ ಮಾಸವಳವಿಲುಮ್. "ದ್ವಯಮರ್ಥಾನುಸಂಧಾನೇನ ಸಹ ಸದೈವಮ್ ವಕ್ತಾ" ಎನ್ರು ಶರಣ್ಯನರುಳಿಚೆಯ್‌ದಾನಿರೇ.

ಭಕ್ತಪ್ರಪನ್ನಯೋಸ್ಸಾಧನತ್ವ ಫಲತ್ವರೂಪ ಭಗವದ್ಧ್ಯಾನಮಾವಶ್ಯಕ ಮಿತಿ ಉಪಸಂಹರತಿ

ಆಹೈಯಾಲ್ "ಧ್ಯೇಯೋನಾರಾಯಣಸ್ಸದಾ" ಎನ್ರದುವುಮ್ ಯಥಾಧಿಕಾರಂ, ಶಿಲರ್ಕ್ಕು

---

ಯಾಗಿಯೂ ಹೇಳಿರುವಂತೆ, ಅಷ್ಟಾಕ್ಷರ ಮಂತ್ರವಾದ ಎಂಟು ಗಿಣ್ಣುಗಳಿಂದ ಕೂಡಿದ ಕಬ್ಬಿನ ಜಲ್ಲೆಯಲ್ಲಿ **ವೇರ್ ಪಟ್ರುಮ್** ಮೂಲ ಭಾಗವನ್ನೂ **ತಲೈಯಾಡೈಯುಮ್** – ಅಗ್ರ ಭಾಗವನ್ನೂ, ಕಳೆದು ಹಾಕಿದರೆ, ಮಧ್ಯ ಭಾಗದ ಕಬ್ಬು ಸರ್ವರೂ ಭೋಗ್ಯವಾಗಿ ಆಸ್ವಾದ ಮಾಡಬಹುದಾದ ರೀತಿಯಲ್ಲಿರುವಂತೆ, **ಪ್ರಪತ್ತಿ ನಿಷ್ಠರ್**– ಇತ್ಯಾದಿ ಪ್ರಪತ್ತಿ ನಿಷ್ಠರೆಲ್ಲರಿಗೂ, ಈ 'ನಮೋನಾರಾಯಣ'ವೆಂಬ ಮಂತ್ರಾನು ಸಂಧಾನದಿಂದ **ಅನುಸ್ಮರಣರಸತ್ತುಕ್ಕುಮ್**–'ಧ್ಯೇಯೋನಾರಾಯಣಸ್ಸದಾ' ಎಂಬ ಭಗವದ್ಧ್ಯಾನರೂಪವಾದ ರಸಾನುಭವಕ್ಕೂ ಯಾವ ಅಡ್ಡಿಯೂ ಇಲ್ಲ. ಆದಾಗಿ ಮೇಲೆ ಹೇಳಿದ ಪ್ರಮಾಣವಚನಗಳಿಂದ ಸ್ತ್ರೀ ಶೂದ್ರಾದಿಗಳೂ, ಶ್ವಪಾಕಾದಿಗಳೂ ಪ್ರಣವ, ಸ್ವರ, ವಿವರ್ಜಿತವಾದ ಅಷ್ಟಾಕ್ಷರ ಮಂತ್ರವನ್ನು ಅನುಸಂಧಾನ ಮಾಡಿಕೊಂಡು ಭಗವದ್ಧ್ಯಾನ ಮಾಡಬಹುದು. ಇದರಿಂದ ಭಗವದ್ಧ್ಯಾನರೂಪವಾದ ಭೋಗರಸವು ಎಲ್ಲರಿಗೂ ಸಮಾನವೆಂದು ಹೇಳಲ್ಪಟ್ಟಿದೆ. ಪ್ರಣವ ಸ್ವರ, ಅಂತ್ಯದಲ್ಲಿರುವ ವಿಭಕ್ತಿ ಪ್ರತ್ಯಯ ವಿಹೀನವಾದ ಮಂತ್ರೋಚ್ಚಾರಣೆಯಲ್ಲಿ ಎಲ್ಲರಿಗೂ ಅಧಿಕಾರವುಂಟೆಂದು ಮೇಲೆ ಹೇಳಿದ ಪ್ರಮಾಣಗಳು ತಿಳಿಸುತ್ತವೆ, **ಸಪರಿಕರಮಾನ ಭಕ್ತಿಯೋಗಮ್** – ಇತ್ಯಾದಿ ಕರ್ಮಯೋಗ ಜ್ಞಾನ ಯೋಗದಿಂದ ಕೂಡಿದ ಭಕ್ತಿಯೋಗವು, **ಆಹಿಲಿರ್ಕ್ಕೇ**–ಅನುಷ್ಠಿಸಲ್ಪಡಬೇಕಾದರೆ ತಾನೇ **ಶಿಲರ್ಕ್ಕು**–ಇತ್ಯಾದಿ ಕೆಲವರಿಗೆ ಅದರಲ್ಲಿ ಅಧಿಕಾರವಿಲ್ಲದೆ ವಿರೋಧವಾಗುತ್ತದೆ, **ಕ್ಷಣಮಾತ್ರಸಾಧ್ಯಮಾನ** ಇತ್ಯಾದಿ ಕ್ಷಣ ಕಾಲ ಸಾಧ್ಯವಾದ ಸ್ವತಂತ್ರ ಪ್ರಪತ್ತಿಗೆ ಫಲ ಸಿದ್ಧಿಯು ಏರ್ಪಟ್ಟರೂ, **ದ್ವಯಮರ್ಥಾನು ಸಂಧಾನೇನ**–ಇತ್ಯಾದಿ ಸ್ವತಂತ್ರ ಪ್ರಪತ್ತಿ ನಿಷ್ಠನನ್ನು ಕುರಿತು ದ್ವಯಮಂತ್ರವನ್ನು ಅರ್ಥಾನು ಸಂಧಾನದೊಡನೆ ಯಾವಾಗಲೂ ಹೇಳುತ್ತಾ ಇರು ಎಂದು, ಶರಣ್ಯನು ಕೃಪೆಮಾಡಿ ಹೇಳಿದ್ದಾನಲ್ಲವೇ. ಶರಣಾಗತಿಗದ್ಯದಲ್ಲಿ ಭಗವಂತನು ಪ್ರತ್ಯುಕ್ತಿಯಾಗಿ ಹೇಳಿದ ಮಾತು ಇದು. ಪರಮ ಪ್ರಕೃತಾರ್ಥವನ್ನು **ಆಹೈಯಾಲ್**–ಎಂದಾರಂಭಿಸಿ ಉಪಸಂಹಾರ ಮಾಡುತ್ತಾರೆ. ಅದಾಗಿ ಅಭಿಗಮನಾದಿಗಳ ಹಾಗೆ ಧ್ಯಾನವೂ ಫಲರೂಪವಾದ್ದರಿಂದ, "ಧ್ಯೇಯೋನಾರಾಯಣಸ್ಸದಾ" ಎಂಬುದೂ, ಯಥಾಧಿ

---

ಮೈಯಲ್ಲಿರುವ ಹುಣ್ಣುಗಳಿಗೆ ನೊಣಗಳು ಮುತ್ತಿಕೊಂಡು, ತಿಪೆಯುಂಟಾಗಿ ಮೂರ್ಛೆಹೋಗಿ ಆಯುಸ್ಸಿನ ಅಂತ್ಯವನ್ನು ಹೊಂದುವುದಕ್ಕೆ ಮುಂಚೆ, ಬಾಯಿಯಲ್ಲಿ, 'ನಮೋನಾರಾಯಣ' ವೆಂದು ಹೇಳಿ ತಲೆಯ ಮೇಲೆ ಕೈ ಜೋಡಿಸಿ ಶರಣಾಗತಿ ಮಾಡಿ ಶ್ರೀವೈಕುಂಠವನ್ನು ಪಡೆದವರನ್ನು ನಂತರ ತಿರುಗಿ ಸಂಸಾರಕ್ಕೆ ಜಾಮೀನು ಕೊಟ್ಟರೂ ಭಗವಂತನು ಕಳುಹಿಸುವುದಿಲ್ಲ.

5) ಕಿಡಂದನಂಬಿ ಕುಡೇವ್ವೈಮೇವಿ ಕೇಟ್ರುಲಾಯ್ ಉಲಪ್ಪೈ
ಇಡಂದನಂಬಿ* ಎಂಗಳ್ ನಂಬಿ ಎರಿಶಾರ್ ಅರಣ್ ಅಟ್ರಿಯ ।
ಕಡಂದನಂಬಿ ಕಡಿಮಾರ್ ಇಲಂಗೈ ಉಲಪ್ಪೈ ಈರಡಿಯಾಲ್
ನಡಂದ ನಂಬಿನಾಮಮ್ ಶೊಲ್ಲಿಲ್ ನಮೋ ನಾರಾಯಣಮೇ ॥ ಪೆರಿ ತಿರುಮಾಳ್ರ 10,12,3,4
ಇತ್ಯಾದಿ ನಾಲ್ಕು ಪಾಶುರಗಳು – ಭಗವಂತನ ನಾಮವನ್ನು ಹೇಳುವುದಾದರೆ, 'ನಮೋನಾರಾಯಣ' ಎಂದು ಹೇಳುವುದು.

**ಉಪಾಯಮಾಹವುಮ್, ಶಿಲರ್ಕ್ಕು ಫಲಮಾಹವುಮ್, ಕೊಳ್ಳುಹೈಯಾಲಿದು ಸ್ವತಂತ್ರಪ್ರಪತ್ತಿಕ್ಕು ವಿರುದ್ಧಮನ್ರು.**

**ಪ್ರಪತ್ತೇಃ ರಜ್ಞಾಜ್ಞಿರೂಪಯೋಃ ಶ್ರೀ ಭಾಷ್ಯಕಾರಾಭಿಮತತ್ವ ಕಥನಮ್**

**ಇಪ್ಪ್ರಪತ್ತಿ ಅಜ್ಞಮಾನ ವೇಷತ್ತೈಭಾಷ್ಯಾದಿಹಳಿಲೇ ಉದಾಹರಿತ್ತರುಳಿನಾರ್; ಸ್ವತಂತ್ರಮಾನ ವೇಷತ್ತೈಗದ್ಯತ್ತಿಲೇ ಅರುಳಿಚ್ಚೆಯ್‌ದಾರ್.**

1) **"ಕ್ಲೇಶಾನಾಂ ಚ ಕ್ಷಯಕರಂ ಯೋಗಾದನ್ಯನ್ನ ವಿದ್ಯತೇ"**

2) **"ನ ಕರ್ಮಣಾಂ ಕ್ಷಯೋಭೂಪ ಜನ್ಮನಾ ಮಯುತೈರಪಿ ।**

**ಋತೇ ಯೋಗಾತ್ ಕರ್ಮಕಕ್ಷಂ ಯೋಗಾಗ್ನಿಃ ಕ್ಷಪಯೇನ್ನರಮ್ ॥" ಇತ್ಯಾದಿಹಳುಮ್ ಸ್ವತಂತ್ರ ಪ್ರಪತ್ತಿವಿಧಿ ಬಲತ್ತಾಲೇ ಅಧಿಕಾರ್ಯಂತರ ವಿಷಯಜ್ಞಳಾಹಕ್ಕಡವನ. ಇಪ್ಪಡಿ ಸಾಧ್ಯೋಪಾಯ ವಿಷಯಮಾಹ ಮತ್ತುಮ್ ಪಿರಕ್ಕುಮ್ ಕಲಕ್ಕಜ್ಞಳುಕ್ಕು ಪ್ಪರಿಹಾರಮ್ ನಿಕ್ಷೇಪ ರಕ್ಷೈಯಿಲೇ ಕಣ್ಡು ಕೊಳ್‌ವದು.**

---

ಕಾರ ಕೆಲವರಿಗೆ ಉಪಾಯವಾಗಿಯೂ, ಕೆಲವರಿಗೆ ಫಲವಾಗಿಯೂ ಅಂಗೀಕೃತವಾದ್ದರಿಂದ **ಇದು**--ಈಧ್ಯಾನವು, ಸ್ವತಂತ್ರ ಪ್ರಪತ್ತಿಗೆ ವಿರುದ್ಧವಲ್ಲ.

**ಪ್ರಪತ್ತಿಗೆ ಸ್ವತಂತ್ರತ್ವವೂ, ಭಕ್ತಿಗೆ ಅಂಗತ್ವವೂ ಎಂಬ ಎರಡು ವಿಧಾನಗಳೂ ಉಂಟು.**

**ಇಪ್ಪ್ರಪತ್ತಿ** ಇತ್ಯಾದಿ– ಈ ಪ್ರಪತ್ತಿಯು ಭಕ್ತಿಗೆ ಅಂಗವಾಗಿ ಅನುಷ್ಠಿಸಲ್ಪಡತಕ್ಕದ್ದು ಎಂಬ ಇದರ **ವೇಷತ್ತೈ**-ಸ್ವರೂಪವನ್ನು ಗೀತಾ ಭಾಷ್ಯಾದಿಗಳಲ್ಲಿ ಉದಾಹರಿಸಿ ಕೃಪೆ ಮಾಡಿರುತ್ತಾರೆ. **ಸ್ವತಂತ್ರಮಾನ ವೇಷತ್ತೈ**–ಇತ್ಯಾದಿ– ಈ ಪ್ರಪತ್ತಿಯು ಸ್ವತಂತ್ರವಾಗಿ ಮೋಕ್ಷಸಾಧಕವೆಂಬ ಇದರ ಸ್ವರೂಪವನ್ನು ಶ್ರೀ ಭಾಷ್ಯಕಾರರು **ಗದ್ಯತ್ತಿಲೇ**–ಶರಣಾಗತಿ ಗದ್ಯದಲ್ಲಿಯೂ ಶ್ರೀ ರಂಗ ಗದ್ಯದಲ್ಲಿಯೂ ಕೃಪೆಮಾಡಿ ಹೇಳಿರುತ್ತಾರೆ. ಅದಾಗಿ ಗೀತೆಯ 18ನೇ ಅಧ್ಯಾಯದ ಕೊನೆಯಲ್ಲಿ "ಮನ್ಮನಾಭವಮದ್ಭಕ್ತೋ" ಇತ್ಯಾದಿಯಾಗಿ ಭಕ್ತಿಯೋಗವನ್ನು ಹೇಳಿ ಅದು ಸರಿಯಾಗಿ ಅನುಷ್ಠಿಸಲ್ಪಡಲು ವಿರೋಧಿಯಾದ ಪಾಪಗಳನ್ನು "ಸರ್ವಧರ್ಮಾನ್ ಪರಿತ್ಯಜ್ಯ", ಇತ್ಯಾದಿಯಾದ ಶ್ಲೋಕದಲ್ಲಿ, ಭಕ್ತ್ಯಂಗಕ ಪ್ರಪತ್ತಿಯಿಂದ ಕಳೆಯುವಂತೆ ಅನುಗ್ರಹಿಸಿರುತ್ತಾರೆ. 1) **ಕ್ಲೇಶಾನಾಂಚಕ್ಷಯಕರಂ** ಇತ್ಯಾದಿ 2) **ನಕರ್ಮಣಾಂಕ್ಷಯೋಭೂಪ** ಇತ್ಯಾದಿಗಳೂ ಸ್ವತಂತ್ರ ಪ್ರಪತ್ತಿಯನ್ನು ವಿಧಿಸಿರುವ, "ಶರಣಂತ್ವಾಂ ಪ್ರಪನ್ನಾಯೇ", "ಯದ್ಯೇನ ಕಾಮಕಾಮೇನ" ಎಂಬ ಪ್ರಮಾಣಗಳ ಬಲದಿಂದ **ಅಧಿಕಾರ್ಯಂತರ ವಿಷಯಗಳಾಹಕ್ಕಡವನ**-ಭಕ್ತಿಯೋಗದಲ್ಲಿ ಅಧಿಕಾರಿಯಾದವನವಿಷಯಗಳಾಗಿ ಆಗುತ್ತವೆ. **ಇಪ್ಪಡಿ ಸಾಧ್ಯೋಪಾಯ**

---

1) ತದೇತತ್ ಕಥಿತಂ ಬೀಜಂ ಅವಿದ್ಯಾಯಾಮಯಾತವ ॥
ಕ್ಲೇಶಾನಾಂಚ ಕ್ಷಯಕರಂ ಯೋಗಾದನ್ಯನ್ನ ವಿದ್ಯತೇ ॥ ವಿ.ಪು. (6-8-25)
ಪುಣ್ಯಪಾಪರೂಪ ಕರ್ಮಗಳಿಗೆ ಕಾರಣವು ಹೇಳಲ್ಪಟ್ಟಿತು. ಪುಣ್ಯ ಪಾಪ ರೂಪ ಕರ್ಮಗಳನ್ನು ನಾಶ ಮಾಡಲು ಕರ್ಮಜ್ಞಾನ ಸಹಕೃತ ಭಕ್ತಿಯೋಗಕ್ಕಿಂತ ಬೇರೆ ಉಪಾಯವಿಲ್ಲ.

2) ವಿ.ಪು. (102-4) ಹತ್ತು ಸಾವಿರ ವರ್ಷ (ಅನಂತ ಕೋಟಿ ಎಂಬುದಕ್ಕೆ ದೃಷ್ಟಾಂತ) ಜನ್ಮಗಳನ್ನೆತ್ತಿದರೂ ಭಕ್ತಿಯೋಗವನ್ನು ಅನುಷ್ಠಿಸದೆ ಕರ್ಮಕ್ಷಯವು ಉಂಟಾಗುವುದಿಲ್ಲ. ಪರಂ–ಉತ್ಕೃಷ್ಟವಾದ, ಯೋಗಾಗ್ನಿಃ–ಯೋಗವೆಂಬ ಅಗ್ನಿಯು ಕರ್ಮಕಕ್ಷಂ–ಕರ್ಮವೆಂಬ ಹುಲ್ಲುಮೆದೆಯನ್ನು, ಕ್ಷಪಯೇತ್-ನಾಶ ಮಾಡುತ್ತದೆ.

## ರಹಸ್ಯತ್ರಯೇ ಸಾಧ್ಯೋಪಾಯಸ್ಯಾನುಸಂಧೇಯತ್ವಂ

**ಇಸ್ಸಾಧ್ಯೋಪಾಯಂ ಇಂಗು ಶೋಧಿತಮಾನ ಕಟ್ಟಳೈಯಿಲೇ ರಹಸ್ಯತ್ರಯತ್ತಿಲ್ ಯಥಾಸ್ಥಾನ ಮನುಸಂಧೇಯಮ್.**

**ವರಿಕ್ಕಿನ್ರನನ್ ಪರನ್ ಯಾವರೈ ಯೆನ್ರು ಮರೈಯದನಿಲ್**
**ವಿರಿಕ್ಕಿನ್ರದುಮ್ ಕುರಿಯೊನ್ರಾಲ್ ವಿನೈಯರೈಯಾದಲಿನಾಮ್ ।**
**ಉರೈಕ್ಕಿನ್ರನನ್ನೆರಿಯೋರುಮ್ಪಡಿಹಳಿಲೋರ್ನ್ದು ಉಲಕಮ್**
**ತರಿಕ್ಕಿನ್ರ ತಾರಕನಾರ್ ತಹವಾ[illegible]ರಿಕ್ಕಿನ್ರನಮೇ ॥೩೧॥**

**ಉಕ್ತಪ್ರಕಾರ ಸಾಧ್ಯೋಪಾಯಶೋಧಕತ್ವಂ ಸ್ವಾಚಾರ್ಯ ಕೃಪಾಲಬ್ಧಮಿತ್ಯಾಹ.**
**ತತ್ತದ್ದೈತುಕ ಹೇತುಕೇ ಕೃತಧಿಯಸ್ತರ್ಕೇಂದ್ರಜಾಲಕ್ರಮೇ ।**

---

**ವಿಷಯಮಾಹ** ಇತ್ಯಾದಿ-ಹೀಗೆ ಮೋಕ್ಷವನ್ನು ಸಾಧಿಸಿಕೊಡುವ, ಸಾಧ್ಯೋಪಾಯ ವಿಷಯವಾಗಿ ಇನ್ನೂ ಉಂಟಾಗುವ ಸಂದೇಹಗಳಿಗೆ ಪರಿಹಾರವನ್ನು ನಿಕ್ಷೇಪರಕ್ಷೆಯಲ್ಲಿ ಆಚಾರ್ಯರು ಕೃಪೆ ಮಾಡಿ ಹೇಳಿರುತ್ತಾರೆ. ಅಲ್ಲಿ ನೋಡಿಕೊಳ್ಳುವುದು. **ಇಸ್ಸಾಧ್ಯೋಪಾಯಮ್ ಇಂಗು ಶೋದಿತಮಾನ** ಇತ್ಯಾದಿ- ಈ ಸಾಧ್ಯೋಪಾಯವು ಈ ಅಧಿಕಾರದಲ್ಲಿ ಶೋಧಿಸಿ ನಿರೂಪಿಸಲ್ಪಟ್ಟ ರೀತಿಯಲ್ಲಿ ರಹಸ್ಯತ್ರಯಗಳಲ್ಲಿ **ಯಥಾಸ್ಥಾನಮ್** ನಮಃ, ಅಯನಂ ಚರಣೌಶರಣಂ ಪ್ರಪದ್ಯೇ, ಶರಣಂ ವ್ರಜ ಎಂಬೀ ಪದಗಳಲ್ಲಿ ಅನುಸಂಧೇಯವು.

### ಅಧಿಕಾರದ ಅರ್ಥ ಸಂಗ್ರಹ ಶ್ಲೋಕ.

ಅನಂತರ, "ಯಮೇವೈಷ ವೃಣುತೇ ತೇನಲಭ್ಯಃ"-ಭಗವಂತನು ಯಾರನ್ನು ವರಿಸುತ್ತಾನೋ, ಅವನಿಂದ ಭಗವಂತನು ಪಡೆಯಲ್ಪಡುತ್ತಾನೆಂದು ಶ್ರುತಿಯು ಹೇಳಿರುವುದರಿಂದ ಭಗವತ್ಪ್ರಾಪ್ತಿಗೆ ಭಕ್ತಿ ಪ್ರಪತ್ತಿಗಳೂ ಬೇಕೇ ಎಂಬ ಶಂಕೆಗೆ ಈ ಅಧಿಕಾರದಲ್ಲಿ ಸಮಾಧಾನವನ್ನು ನಿರೂಪಿಸಿರುವುದನ್ನು **ವರಿಕ್ಕಿನ್ರಸ್ ಪರನ್** ಎಂದು ಪಾಶುರ ರೂಪದಲ್ಲಿ ಸಂಗ್ರಹಿಸುತ್ತಾರೆ. ಅದಾಗಿ **ಪರನ್**-ಪರಮಾತ್ಮಾ, **ಯಾವರೈವರಿಕ್ಕಿನ್ರನನ್** ಯಾವ ಪುರುಷನನ್ನು ವರಿಸುತ್ತಾನೆ, **ಎನ್ರು**-ಎಂದು, **ಮರೈಯದನಿಲ್**-"ಯಮೇವೈಷವೃಣುತೇ ತೇನಲಭ್ಯಃ-ಎಂದು ವೇದದಲ್ಲಿ **ವಿರಿಕ್ಕಿನ್ರದುಂ**-ವಿಸ್ತಾರವಾಗಿ, ಹೇಳಲ್ಪಡುವ ವರಣವೂ **ವಿನೈಯರೈ**-ಅಪರಾಧಿಗಳನ್ನು (ಅಪರಾಧಿಗಳಾದ್ದರಿಂದ) **ಕುರಿಯಾನ್ರಾಲ್**-ಒಂದು ವ್ಯಾಜವನ್ನು ಇಟ್ಟುಕೊಂಡೇ ವರಿಸುತ್ತಾನೆ. ಇಲ್ಲದಿದ್ದರೆ ಸರ್ವಮುಕ್ತಿ ಪ್ರಸಂಗಾದಿಗಳು ಬರುತ್ತವೆ. **ಆದಲಿಲ್**-ಆದ್ದರಿಂದ, **ನಾಮ್**-ನಾವು, **ಉರೈಕ್ಕಿನ್ರ**-ಶಾಸ್ತ್ರಗಳಲ್ಲಿ ಹೇಳಲ್ಪಡುವ, **ನನ್ನೆರಿ**-ಭಕ್ತಿ ಪ್ರಪತ್ತಿರೂಪ ಮಾರ್ಗಗಳಲ್ಲಿ, **ಓರುಂಪಡಿಹಳಿಲ್**-ಶಾಸ್ತ್ರೋಕ್ತ ಪ್ರಕಾರವಾಗಿ **ಓರ್ನ್ದು** - ಸಿದ್ಧೋಪಾಯನಾದ ಭಗವಂತನೇ ಪ್ರಧಾನ, ಭಕ್ತಿ ಪ್ರಪತ್ತಿರೂಪ ಸಾಧ್ಯೋಪಾಯಗಳು ಅವನ ವಶೀಕರಣಕ್ಕಾಗಿ, ಎಂದು ತಿಳಿದು **ಉಲಹಮ್ ತರಿಕ್ಕಿನ್ರ** ಪ್ರಪಂಚವನ್ನು ಅಂತರ್ಯಾಮಿಯಾಗಿ ಧರಿಸಿರುವ **ತಾರಕನಾರ್**-ಉತ್ತಾರಕನಾದ ಭಗವಂತನ **ತಹವಾಲ್**-ಮುಖ್ಯೋಪಾಯವಾಗಿ ಹೇಳಲ್ಪಟ್ಟ ಕೃಪೆಯಿಂದ, **ತರಕ್ಕಿನ್ರನಮೇ** – ಆತ್ಮಧಾರಣವನ್ನು ಮಾಡಿಕೊಂಡಿರುತ್ತೇವೆ. ಅದಾಗಿ ಭಗವಂತನೇ ಕೃಪೆಯಿಂದ ಸಂಸಾರಿ ಜೀವನನ್ನು ಮೋಕ್ಷಕ್ಕೆ ಕರೆದೊಯ್ಯುತ್ತಾನೆ. ಅವನೇ ಉಪಾಯ. ಪ್ರಧಾನವಾದ ಅವನ ಕೃಪೆಯು ಅಪರಾಧಿಗಳಾದ ನಮ್ಮ ಮೇಲೆ ಬೀಳಲು ಭಕ್ತಿ ಪ್ರಪತ್ತಿಗಳು ವ್ಯಾಜಗಳು-ಸಾಧ್ಯವಾದ ಉಪಾಯಗಳು, ಎಂದು ತಿಳಿದು ಭಗವಂತನ ಕೃಪೆಯನ್ನು ಉತ್ತಾರಕವಾಗಿ ನಂಬಿಕೊಂಡು ಆತ್ಮಧಾರಣ ಮಾಡುತ್ತಿದ್ದೇವೆಂದು ತಾತ್ಪರ್ಯ.

ಈ ಅರ್ಥಗಳೆಲ್ಲಾ ಹೇತುವಾದ ಮಾಡುವವರ ತರ್ಕಜಾಲದಲ್ಲಿ ತೀಕ್ಷ್ಣ ಬುದ್ಧಿಗಳೂ, ವಾದಮೂಕ ಪ್ರಧಾನರೂ ವೇದಾಂತ ಪರಿಚಯ ಮಾಡಿ ವಿಶುದ್ಧವಾದ ಮನಸ್ಸುಳ್ಳವರೂ ಆದ ನಮ್ಮ ಆಚಾರ್ಯರುಗಳಿಂದ, ಉಪದೇಶ ಮಾಡಲ್ಪಟ್ಟವು ಎಂದು **ತತ್ತದ್ದೈತುಕಹೇತುಕೇ**-ಎಂದಾರಂಭಿಸಿ ನಿಗಮಿಸುತ್ತಾರೆ. ಅದಾಗಿ **ತತ್ತದ್ದೈತುಕಹೇತುಕೇ**

**ಬಿಭ್ರಾಣಾಃ ಕಥಕ ಪ್ರಧಾನ ಗಣನೇ ನಿಷ್ಠಾಂ ಕನಿಷ್ಠಾಶ್ರಯಾಮ್ ।**
**ಅಧ್ಯಾತ್ಮಶ್ರುತಿ ಸಂಪ್ರದಾಯ ಕತಕೈರದ್ಧಾ ವಿಶುದ್ಧಾಶಯಾಃ ।**
**ಸಿದ್ಧೋಪಾಯ ವಶಿಕ್ರಿಯಾಮಿತಹಿ ನ ಸ್ಸಾಧ್ಯಾಂ ಸಮುದ್ಧ್ಯಾಪಯನ್ ॥ ೫೪॥**

ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ ಶ್ರೀ ಮದ್ವೇಙ್ಕಟನಾಥಸ್ಯ
ವೇದಾಂತಾಚಾರ್ಯಸ್ಯ ಕೃತಿಷು ಶ್ರೀ ಮದ್ರಹಸ್ಯತ್ರಯಸಾರೇ
ಸಾಧ್ಯೋಪಾಯ ಶೋಧನಾಧಿಕಾರಶ್ಚತುರ್ವಿಂಶಃ
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

---

ಆಯಾಯಾ ಹೇತು ಮಾತ್ರವಾದವನ್ನೇ ಕಾರಣವಾಗಿ ಕೊಂಡಿರುವ ಅಂದರೆ ಶುಷ್ಕತಾರ್ಕಿಕರಾಗಿ ಹೇತುವಾದಗಳನ್ನು ಮಾಡುವವರಿಂದ ಪ್ರವರ್ತಿಸಲ್ಪಟ್ಟ **ತರ್ಕೇಂದ್ರ ಜಾಲ ಕ್ರಮೇ**–ತರ್ಕವೆಂಬ ಇಂದ್ರ ಜಾಲ ವಿದ್ಯೆಯ ರೀತಿಯಲ್ಲಿ **ಕೃತಧಿಯಃ**–ಶಿಕ್ಷಿಸಲ್ಪಟ್ಟ ಮನಸ್ಸುಳ್ಳವರಲ್ಲಿ **ಕಥಕಪ್ರಧಾನಗಣನೇ**– ಕಥಕಾಃ– ವಾಕ್ಯಾರ್ಥಕುಶಲರು, ಅವರುಗಳಲ್ಲಿ ಪ್ರಧಾನರು ಯಾರು ಎಂಬ ಲೆಖ್ಖದಲ್ಲಿ, **ಕನಿಷ್ಠಾಶ್ರಯಾಂ ನಿಷ್ಠಾಂ ಬಿಭ್ರಾಣಾಃ** – ಎಣಿಸುವಾಗ ಕನಿಷ್ಠ, ವೆಂಬ ಬೆರಳನ್ನು ಆಶ್ರಯಿಸಿದವರಾಗಿ ಅಂದರೆ ಮೊದಲನೆಯವರಾಗಿ ಎಣಿಸಲ್ಪಟ್ಟವರಾದ, **ಅಧ್ಯಾತ್ಮಶ್ರುತಿ ಸಂಪ್ರದಾಯ**–ಉಪನಿಷದ್ರೂಪಗಳಾದ ಶ್ರುತಿಗಳ, ಸಂಪ್ರದಾಯ–ಅವಿಚ್ಛಿನ್ನವಾದ ಉಪದೇಶ ಪರಂಪರೆ ಎಂಬ, **ಕತಕೈಃ** ನೀರನ್ನು ಶುದ್ಧಿ ಮಾಡುವ ಕತಕವೆಂಬ ಬೀಜ, ಅದರ ಹಾಗೆ ಸಂಪ್ರದಾಯೋಪದೇಶವೆಂಬ ಕತಕ ಬೀಜದಿಂದ, **ಅದ್ಧಾಃ**-ಚನ್ನಾಗಿ **ವಿಶುದ್ಧಾಶಯಾಃ**–ಪರಿಶುದ್ಧವಾದ ಮನಸ್ಸನ್ನುಳ್ಳಂಥ, ಅಂದರೆ ಸಂತ್ಸಂಪ್ರದಾಯಾಗತವಾದ, ಸಮೀಚೀನ ಶಾಸ್ತ್ರಾರ್ಥದಿಂದ ಪರಿಶುದ್ಧ ಮನಸ್ಕರಾದ ನಮ್ಮ ಆಚಾರ್ಯರುಗಳು ಎಂದರ್ಥ. **ಸಾಧ್ಯಾಂ**–ಅನುಷ್ಠಿಸಲ್ಪಡತಕ್ಕಂಥ ಉಪಾಯವಾದ, **ಸಿದ್ಧೋಪಾಯ ವಶಿಕ್ರಿಯಾಂ**-ಸಿದ್ಧೋಪಾಯನಾದ ಭಗವಂತನನ್ನು ವಶ ಮಾಡಿಕೊಳ್ಳಲು ಕಾರಣವಾದ ಭಕ್ತಿ ಪ್ರಪತ್ತಿಗಳನ್ನು ಇತಿಹಿ–ಈ ಅಧಿಕಾರದಲ್ಲಿ ಹೇಳಿರುವಂತೆ **ನಃ**–ನಮಗೆ **ಸಮುಧ್ಯಾಪಯನ್**–ಚನ್ನಾಗಿ ಹೇಳಿಕೊಟ್ಟಿರುವರು. ಇದರ ತಾತ್ಪರ್ಯವೇನೆಂದರೆ ಸಿದ್ಧೋಪಾಯನಾದ ಭಗವಂತನ ವಶೀಕರಣಾರ್ಥವಾಗಿ ಸಾಧ್ಯೋಪಾಯಗಳಾದ ಭಕ್ತಿ ಪ್ರಪತ್ತಿಗಳನ್ನು ಸಂತ್ಸಂಪ್ರದಾಯೋಪದೇಶ ಪೂರ್ವಕವಾಗಿ ನಾವು ಅಧಿಕರಿಸಿ ಈ ಅಧಿಕಾರದಲ್ಲಿ ನಿರೂಪಿಸಿದ್ದೇವೆ. ಇದು ಪರಮೋಪಾದೇಯ. ಕೇವಲ ಕುತರ್ಕಗಳನ್ನು ಮಾಡುವವರಿಗೆ ಕುತರ್ಕದಿಂದ ಒದಿಲನ್ನು ಹೇಳಲು ನಮಗೂ ತಿಳಿದಿದೆ. ಆದರೆ ನಾವು ಸತ್ಸಂಪ್ರದಾಯೋಪದೇಶವನ್ನು ಹಿಂಬಾಲಿಸುವವರು. ಆ ರೀತಿಯಲ್ಲಿ ಪ್ರಾಪ್ತವಾದ ಈ ಪರಮೋಪಾದೇಯವಾದ ಶಾಸ್ತ್ರಾರ್ಥಗಳನ್ನು ಅಂಗೀಕರಿಸಿ, ಎಂದು ಆಚಾರ್ಯರು ನಿಗಮಿಸುತ್ತಾರೆ.

ಇತಿ ಶ್ರೀ ಮದ್ರಹಸ್ಯತ್ರಯಸಾರದಲ್ಲಿ **ಸಾಧ್ಯೋಪಾಯ ಶೋಧನಧಿಕಾರಕ್ಕೆ**
**ಸಾರಚಂದ್ರಿಕಾ** ವ್ಯಾಖಾನವು ಸಮಾಪ್ತ,
**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ**

ಶ್ರಿಯೈ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

# 25. ಪ್ರಭಾವವ್ಯವಸ್ಥಾಧಿಕಾರಃ

**ಸ್ವರೂಪಂ ಯದ್ಯಾದೃ ಗ್ಗುಣವಿಭವಲೀಲಾದಿಚ ವಿಭೋಃ**
**ಸ್ತದಾಜ್ಞಾ ಸೇತುಶ್ಚ ಶ್ರುತಿಭಿ ರವಸೇಯಂ ತದಖಿಲಮ್**
**ತಥಾ ತದ್ಭಕ್ತಾನಾಮ್ ತದುಪಸದನಾದೇಶ್ಚ ಮಹಿಮಾ**
**ಯಥಾಧೀತಂ ಸದ್ಭಿರ್ಯತಿಪತಿಮುಖ್ಯೈರಧ್ಯವಸಿತಮ್ ॥ ೫೫ ॥**

---

ಶ್ರೀಮದ್ರಹಸ್ಯತ್ರಯಸಾರದಲ್ಲಿ **ಪ್ರಭಾವವ್ಯವಸ್ಥಾಧಿಕಾರಕ್ಕೆ ಸಾರಚಂದ್ರಿಕಾ ವ್ಯಾಖ್ಯಾ.**

**ಶ್ರೀಮತೆ ನಿಗಮಾಂತ ಮಹಾದೇಶಿಕಾಯ ನಮಃ**

ಅನಂತರ ಉಪಾಯದ ಪ್ರಭಾವವನ್ನು ವ್ಯವಸ್ಥೆಗೊಳಿಸಲು ಆಚಾರ್ಯರು **ಈ** ಅಧಿಕಾರವನ್ನು ಆರಂಭಿಸಿದ್ದಾರೆ. ಉಪಾಯ ಪ್ರಭಾವದ ವ್ಯವಸ್ಥೆಯೆಂದರೆ ಶಾಸ್ತ್ರೀಯವಾದ ಉಪಾಯ ಪ್ರಭಾವವನ್ನು ಅತಿಕ್ರಮಿಸಿ ಕೆಲವರು ಹೇಳುವುದನ್ನು ಶಾಸ್ತ್ರೀಯ ಮರ್ಯಾದೆಯನ್ನು ಮೀರದೆ ವ್ಯವಸ್ಥೆಗೊಳಿಸುವುದು. ಅದಾಗಿ ಶೂದ್ರರಾದ ಪ್ರಪನ್ನರಿಗೆಲ್ಲಾ ಶೂದ್ರತ್ವ ಜಾತಿಯು ಹೋಗಿ ಬಿಡುತ್ತದೆ ಎಂದು ಕೆಲವರು ಹೇಳುತ್ತಾರೆ. ಇದು ಉಪಾಯ ಪ್ರಭಾವದ ಶ್ಲಾಘ್ಯತೆಯನ್ನು ಹೇಳಲು ಬಂದ ಮಾತೇ ವಿನಹ ವರ್ಣ ವ್ಯತ್ಯಾಸವಾಗಲು ಪ್ರಪನ್ನತ್ವವು ಕಾರಣವಾಗಲಾರದು. ಹೀಗೆ ನಿರೂಪಿಸುವ ಈ ಅಧಿಕಾರದ ಅರ್ಥ ವಿಶೇಷಗಳನ್ನು **ಸ್ವರೂಪಂಯದ್ಯಾದೃಕ್** ಎಂದಾರಂಭಿಸಿ ಸಂಗ್ರಹಿಸುತ್ತಾರೆ. ಅದಾಗಿ **ವಿಭೋಃ** – ಸ್ವಾಮಿಯಾದ ಈಶ್ವರನಿಗೆ, **ಸ್ವರೂಪಂ** – ಸ್ವರೂಪವು **ಯತ್** - ಯಾವುದು **ಯಾದೃಕ್** – ಯಾವ ರೀತಿಯಾದ ಸ್ವಭಾವ, ಹಾಗೆಯೇ **ಗುಣವಿಭವಲೀಲಾದಿಚ** – ಸತ್ಯತ್ವ ಜ್ಞಾನತ್ವಾದಿ ಸ್ವರೂಪ ನಿರೂಪಕ ಗುಣಗಳೇನು, ಜ್ಞಾನಬಲೈಶ್ವರ್ಯವೇ ಮೊದಲಾದ ನಿರೂಪಿತ ಸ್ವರೂಪ ವಿಶೇಷ ಗುಣಗಳೇನು ವಿಭೂತಿಗಳೇನು, ಜಗತ್ಸೃಷ್ಟ್ಯಾದಿ ವ್ಯಾಪಾರಗಳೇನು, ಆದಿಪದದಿಂದ ದಿವ್ಯ ಮಂಗಳ ವಿಗ್ರಹಗಳು ಹೇಳಲ್ಪಡುತ್ತವೆ, ಇವುಗಳ **ಯದ್ಯಾದೃಕ್** – ಸ್ವರೂಪವೇನು, ಸ್ವಭಾವಗಳೇನು, **ತದಾಜ್ಞಾ ಸೇತುಶ್ಚ** – ಆ ಭಗವಂತನ ಆಜ್ಞಾರೂಪವಾದ, ಸೇತುವೆಯ ಹಾಗೆ ವ್ಯವಸ್ಥಿತವಾದ ಧರ್ಮವೂ **ಯದ್ಯಾದೃಕ್** – ಯಾವುದು, ಯಾವ ಸ್ವರೂಪವನ್ನುಳ್ಳದ್ದು, **ತದಖಿಲಂ** – ಅವುಗಳೆಲ್ಲವನ್ನೂ, ಹೇಗೆ **ಶ್ರುತಿಭಿರವಸೇಯಂ** – ವೇದರೂಪ ಪ್ರಮಾಣಗಳಿಂದ ನಿಶ್ಚಯಿಸಬೇಕೋ, **ತಥಾ** – ಹಾಗೆಯೇ **ತದ್ಭಕ್ತಾನಾಂ ತದುಪಸದನಾದೇಶ್ಚ** – ಅವರ ಭಕ್ತರುಗಳ ಮತ್ತು ಅವರ ಆಶ್ರಯಣದ **ಮಹಿಮಾ** – ಮಾಹಾತ್ಮ್ಯವು, **ಯತಿಪತಿಮುಖ್ಯೈಃ** – ಶ್ರೀಭಾಷ್ಯಕಾರ ಪ್ರಭೃತಿಗಳಾದ **ಸದ್ಭಿಃ** – ಬ್ರಹ್ಮ ಜ್ಞಾನಿಗಳಿಂದ, **ಅಧ್ಯವಸಿತಃ** – ವ್ಯವಸ್ಥೆಗೊಳಿಸಲ್ಪಟ್ಟಿದೆ.

## ವಕ್ಷ್ಯಮಾಣ ಪ್ರತಿಜ್ಞಾ ವ್ಯಾಜೇನ ಸಙ್ಗತಿಮಾಹ.

ಇಪ್ಪಡಿ ದ್ವಯತ್ತಿಲ್ ದ್ವಿತೀಯಾಂತ ಪದಙ್ಗಳಾಲೇ ಪ್ರಕಾಶಿತಮಾನ ಸಿದ್ಧೋಪಾಯ ವಿಷಯ ಮಾಹವುಮ್, ಆಖ್ಯಾತ ಪದತ್ತಾಲೇ ಶೊಲ್ಲಪ್ಪಟ್ಟ ಸಾಧ್ಯೋಪಾಯ ವಿಷಯ ಮಾಹವುಮ್ ಪಿರಕ್ಕುಮ್ ವ್ಯಾಕುಲಙ್ಗಳ್ ಶಮಿಪ್ಪಿಕ್ಕುಮ್ ವಳಿಕಾಟ್ಟಿನೋಮ್. ಇವ್ವುಪಾಯ ಪ್ರಭಾವ ವಿಷಯಮಾಹ ಪ್ರಮಾಣಙ್ಗಳ್ ಕಾಟ್ಟಿನ ವಳವುಕ್ಕು ಏರ ನಿನ್ಱೈತ್ತುಮ್, ಕುಱೈಯ ನಿನ್ಱೈತ್ತುಮ್ ವರುಮ್ ಕಲಕ್ಕಙ್ಗಳೈ ಶಮಿಪ್ಪಿಕ್ಕಿರೋಮ್.

### ಪ್ರಥಮಂ ಜಾತಿ ವಿಷಯ ವ್ಯಾಮೋಹಂ ನಿವರ್ತಯತಿ.

1) "ಆಸ್ಫೋಟಯಂತಿ ಪಿತರಃ ಪ್ರನೃತ್ಯಂತಿ ಪಿತಾಮಹಾಃ ।
ವೈಷ್ಣವೋ ನಃ ಕುಲೇ ಜಾತ ಸ್ಸನ ಸ್ಸಂತಾರಯಿಷ್ಯತಿ ॥" ಎನ್ರುಮ್,
2) ಕೇಶವಂ ತಮರ್ ಕೀೞ್ಮೇಲೆಮರೇೞೇೞ್ ಪಿರಪ್ಪುಮ್।
ಮಾಶತಿರುದು ಪೆತ್ತು" ಎನ್ರುಮ್, ಶೊಲ್ಲುಹಿರಪಡಿಯೇ, ಅನುಬಂಧಿಹಳುಕ್ಕುಮ್

---

ಇದರಿಂದ ಭಾಷ್ಯಕಾರಾದಿ ಬ್ರಹ್ಮಜ್ಞಾನಿಗಳಿಂದ ನಿರ್ಣಯಿಸಲ್ಪಡದೇ ಇರುವುದೂ ಅಧೀತ ಕ್ರಮವನ್ನು ಅತಿಕ್ರಮಿಸಿಯೂ ಇರುವ ಉಪಾಯ ಪ್ರಭಾವವು ನಮಗೆ ಅಂಗೀಕಾರವಾದದ್ದಲ್ಲವೆಂದು ತಾತ್ಪರ್ಯ.

ಸಂಗತಿಗೋಸ್ಕರ ಪೂರ್ವಾಧಿಕಾರಗಳೆರಡರ ಅರ್ಥವನ್ನು **ಇಪ್ಪಡಿ ದ್ವಯತ್ತಿಲ್** ಎಂದಾರಂಭಿಸಿ ಸಂಗ್ರಹಿಸುತ್ತಾರೆ. ಆದಾಗಿ ಹೀಗೆ ದ್ವಯಮಂತ್ರದಲ್ಲಿ "ಶ್ರೀಮನ್ನಾರಾಯಣ ಚರಣೌ", ಎಂಬ ದ್ವಿತೀಯಾಂತ ಪದದಿಂದಲೂ "ಶರಣಮ್", ಎಂಬ ದ್ವಿತೀಯಾಂತ, ಪದದಿಂದಲೂ ಪ್ರಕಾಶಿತವಾದ ಸಿದ್ಧೋಪಾಯದ ವಿಷಯವಾಗಿಯೂ, **ಆಖ್ಯಾತ ಪದತ್ತಾಲೇ** – "ಪ್ರಪದ್ಯೇ" ಎಂಬ ಕ್ರಿಯಾಪದದಿಂದ ಹೇಳಲ್ಪಟ್ಟ ಸಾಧ್ಯೋಪಾಯ ವಿಷಯವಾಗಿಯೂ ಉಂಟಾಗುವ **ವ್ಯಾಕುಲಂಗಳ್** – ಸಂದೇಹಗಳನ್ನು, **ಶಮಿಪ್ಪಿಕ್ಕುಮ್** – ಹೋಗಲಾಡಿಸುವ ಕ್ರಮವನ್ನು ಕುರಿತು **ವಳಿಕಾಟ್ಟಿನೋಮ್** – ದಾರಿಯನ್ನು ತೋರಿಸಿ ಕೊಟ್ಟೆವು, ಎಂದು ಆಚಾರ್ಯರು ಪ್ರತಿಜ್ಞೆ ಮಾಡುತ್ತಾರೆ. **ಇವ್ವುಪಾಯ ಪ್ರಭಾವ ವಿಷಯಮಾಹ** ಇತ್ಯಾದಿ – ಈ ಉಪಾಯದ ಪ್ರಭಾವ ವಿಷಯವಾಗಿ ಪ್ರಮಾಣಗಳು ತೋರಿಸಿದ ಅಳತೆಗಿಂತ ಹೆಚ್ಚು ತಿಳಿಯುವುದರಿಂದಲೂ ಅಥವಾ ಕಡಿಮೆಯಾಗಿ ತಿಳಿದುಕೊಳ್ಳುವುದರಿಂದಲೂ ಉಂಟಾಗುವ ಸಂದೇಹಗಳನ್ನು ಪರಿಹರಿಸುತ್ತೇವೆ.

### ಉಪಾಯ ನಿಷ್ಠನ ಹಿರಿಮೆ

1) **ಆಸ್ಫೋಟಯಂತಿ ಪಿತರಃ** ಇತ್ಯಾದಿಯಾಗಿಯೂ, 2) **ಕೇಶವನ್ ತಮರ್** ಇತ್ಯಾದಿಯಾಗಿಯೂ

---

1) ವರಾಹ ಪುರಾಣ—ನಮ್ಮ ವಂಶದಲ್ಲಿ ಒಬ್ಬ ವೈಷ್ಣವನು ಹುಟ್ಟಿದನು. ಅವನು ಮಾಡುವ ಪಿತೃಕಾರ್ಯಾದಿಗಳಿಂದ ನಮ್ಮನ್ನೆಲ್ಲಾ ಸದ್ಗತಿ ಹೊಂದಿಸುತ್ತಾನೆಂದು, ಪಿತೃಗಳು ಭುಜವನ್ನು ತಟ್ಟುತ್ತಾರೆ. ಪಿತಾಮಹರು ಕುಣಿದಾಡುತ್ತಾರೆ.

2) ಕೇಶವನ್ ತಮರ್ ಕೀೞ್ಮೇಲ್ ಎಮರೇೞೇೞ್ಪಿರಪ್ಪುಮ್
ಮಾಶದಿರ್ ಇದುಪೆತ್ತು ನಮ್ಮುಡೈವಾೞ್ವುವಾಯ್ಕ್ಕಿನ್ರವಾ ।
ಈಶನೆನ್ ಕರುಮಾಣಿಕ್ಕಮ್ ಎನ್ ಶೆಂಗೋಲಕ್ಕಣ್ಣನ್ ವಿಣ್ಣೋರ್
ನಾಯಕನ್* ಎಂಬಿರಾನ್ ಎಮ್ಮಾನ್ ನಾರಾಯಣನಾಲೇ, ॥ ತಿರುವಾಯ್ 3-7-1
ಕೇಶವನ ದಾಸರ ವಂಶದಲ್ಲಿ ಹುಟ್ಟಿದ ಮೇಲೇಳುತಲೆ, ಹುಟ್ಟುವ ಕೆಳಗಿನ ಏಳು ತಲೆ, ಭಗವಂತನಿಗೆ ದಾಸಭೂತರಾಗುತ್ತಾರೆ. ಇಂಥಹ ಪ್ರಭಾವವು ನನಗೆ ಸ್ವಾಮಿಯೂ ಪರಮೋಪಕಾರಕನೂ ಆದ ನಾರಾಯಣನಿಂದ ಲಭಿಸುತ್ತದೆ.

**ಉತ್ತಾರಕಮಾನ ಪ್ರಭಾವತ್ತೈ ಯುಡೈಯನಾಯಿರೇ ಇವ್ವುಪಾಯ ನಿಷ್ಠನಿರುಪ್ಪದು. 1) "ಯೋಽಸ್ಯೈನಂ ಪುರುಷಂ ವೇದ ದೇವಾಅಪಿ ನತಂ ವಿದುಃ" ಎನ್ರು ಭಗವದ್‌ಜ್ಞಾನಮುಡೈಯವನುಡೈಯ ಪ್ರಭಾವಮ್ ದೇವರ್‌ಹಳಾಲುಮ್ ಪರಿಚ್ಛೇದಿಕ್ಕ ವೊಣ್ಣಾದೆನ್ರಾರ್‌ಹಳಿರೇ. ಆನಾಲುಮ್ ಇದುಕ್ಕು ವಿರುದ್ಧ ಮಲ್ಲಾದ ಪ್ರಮಾಣ ಬಲತ್ತಾಲೇ ಮುರ್ಪಡ ಜಾತಿವ್ಯವಸ್ಥೈ ಶೊಲ್ಲುಹಿರೋಮ್.**

## ಜಾತಿ ವ್ಯವಸ್ಥೆ

**2) "ನ ಶೂದ್ರಾ ಭಗವದ್ಭಕ್ತಾ ವಿಪ್ರಾ ಭಾಗವತಾಸ್ಮೃತಾಃ। ಸರ್ವ ವರ್ಣೇಷು ತೇ ಶೂದ್ರಾಯೇಽಹ್ಯಭಕ್ತಾಜನಾರ್ದನೇ" ಎನ್ರು ಭಗವದ್ಭಕ್ತಿಯಾಹಿರ ಗುಣವಿಶೇಷ ಸದಸದ್ಭಾವಙ್ಗಳಾಲೇ, ಅಪಕೃಷ್ಟಜಾತೀಯರ್ಕೈ ಉತ್ಕೃಷ್ಟ ಜಾತಿವಾಚಕ ಶಬ್ದತ್ತಾಲೇ ಶೊಲ್ಲಿಯುಮ್, ಉತ್ಕೃಷ್ಟ ಜಾತೀಯರ್ಕೈ ಅಪಕೃಷ್ಟ ಜಾತೀಯ ವಾಚಕ ಶಬ್ದತ್ತಾಲೇ ಶೊಲ್ಲಿಯುಮ್ ಇರುಕ್ಕದು. ಇದಡಿಯಾಹ ಭಗವದ್ಭಕ್ತರೆಲ್ಲಾರುಮ್ ಏಕಜಾತೀಯರನ್ರೋ ವೆನ್ರು ಶಿಲ ಮೃದುಪ್ರಜ್ಞರ್ ನಿನೈಪ್ಪಾರ್ ಹಳ್. ಇಙ್ಗನೇಯಾಹಿಲ್, ಭಾಗವತ ಬ್ರಾಹ್ಮಣನಿನ್ನ ಪಡಿಯೇ ವರ್ತಿಪ್ಪಾನ್, ಭಾಗವತ ಶೂದ್ರ ನಿನ್ನಪಡಿಯೇ ವರ್ತಿಪ್ಪಾನ್, ಎನ್ರು ಆಚಾರ ನಿಯಮಙ್ಗಳ್ ಶೊಲ್ಲುಮ್ ಸರ್ವಶಾಸ್ತ್ರಙ್ಗಳುಮ್ ವಿರೋಧಿಕ್ಕುಮ್.**

---

ಹೇಳುವಂತೆ ಒಂದು ವಂಶದಲ್ಲಿ ಒಬ್ಬ ವೈಷ್ಣವನು ಹುಟ್ಟಿದರೆ, ಅವನ ಅನುಬಂಧಿಗಳೆಲ್ಲಾ ಸದ್ಗತಿ ಪಡೆಯುತ್ತಾರಾದ್ದರಿಂದ, ಅನುಬಂಧಿಗಳನ್ನೂ ಉದ್ಧರಿಸುವ ಪ್ರಭಾವವನ್ನುಳ್ಳವನಾಗಿಯಲ್ಲವೇ ಈ ಉಪಾಯನಿಷ್ಠನು ಇರುತ್ತಾನೆ. 1) **ಯೋಽಸ್ಯೈನಂಪುರುಷಂವೇದ** ಇತ್ಯಾದಿಯಾಗಿ ಭಗವಜ್ಞಾನವುಳ್ಳವನ ಪ್ರಭಾವವು ದೇವತೆಗಳಿಂದಲೂ ಅಳತೆ ಇಟ್ಟು ಹೇಳಲಾರದೆಂದು ಹೇಳಿದ್ದಾರೆಯಲ್ಲವೇ. **ಆನಾಲುಮ್** – ಇತ್ಯಾದಿ. ಮೇಲೆ ಹೇಳಿದಂತೆ ಉಪಾಯ ಪ್ರಭಾವವು ಅಪರಿಚ್ಛೇದ್ಯವಾದರೆ ಅದಕ್ಕೆ ವ್ಯವಸ್ಥೆಯುಂಟೇ ಎಂದರೆ ಉಂಟೆಂದು ನಿರೂಪಿಸುತ್ತಾರೆ. ಮೇಲೆ ಹೇಳಿದಂತೆ ಉಪಾಯ ನಿಷ್ಠನ ಪ್ರಭಾವವು ಅಪರಿಚ್ಛೇದ್ಯವಾದರೂ **ಇದುಕ್ಕು ವಿರುದ್ಧಮಲ್ಲಾದ**–ಇತ್ಯಾದಿ, ಇದಕ್ಕೆ ವಿರುದ್ಧವಲ್ಲದ ಪ್ರಮಾಣ ಬಲದಿಂದ ಮೊದಲು ಜಾತಿವ್ಯವಸ್ಥೆಯನ್ನು ಹೇಳುತ್ತೇವೆಂದು ಪ್ರತಿಜ್ಞೆ ಮಾಡುತ್ತಾರೆ.

## ಜಾತಿ ವ್ಯವಸ್ಥೆ

2) **ನ ಶೂದ್ರಾ ಭಗವದ್ಭಕ್ತಾ** – ಇತ್ಯಾದಿಯಾಗಿ ಭಗವದ್ಭಕ್ತಿಯೆಂಬ ಗುಣವಿಶೇಷದ ಸದಸದ್ಭಾವಗಳಿಂದ ಅಪಕೃಷ್ಟ ಜಾತೀಯರನ್ನು ಉತ್ಕೃಷ್ಟ ಜಾತೀಯವಾಚಕ ಶಬ್ದದಿಂದ ಹೇಳಿಯೂ ಉತ್ಕೃಷ್ಟ ಜಾತೀಯರನ್ನು ಅಪಕೃಷ್ಟ ಜಾತೀಯ ವಾಚಕ ಶಬ್ದದಿಂದ ಹೇಳಿಯೂ ಇರುತ್ತದೆ. ಆದಾಗಿ "ಭಗವದ್ಭಕ್ತರು ಶೂದ್ರರಲ್ಲ, ಭಾಗವತರು. ಬ್ರಾಹ್ಮಣರೆಂದೇ ನಿಶ್ಚಯಿಸಲ್ಪಟ್ಟಿರುವರು. ಜನಾರ್ದನನಲ್ಲಿ (ಭಗವಂತನಲ್ಲಿ) ಭಕ್ತಿಯಿಲ್ಲದವರು ಯಾವ ವರ್ಣದವರಾದರೂ ಅವರುಗಳು ಶೂದ್ರರು". **ಇಪ್ಪಡಿಯಾಹ**– ಈ ಪ್ರಮಾಣವಚನದಿಂದ ಭಗವದ್ಭಕ್ತರೆಲ್ಲರೂ ಒಂದೇ ಜಾತಿಗೆ ಸೇರಿದವರಲ್ಲವೇ ಎಂದು **ಮೃದು ಪ್ರಜ್ಞರ್** – ಗುಣದೋಷ ಪರಾಮರ್ಶಮಾಡಲನರ್ಹರಾದ ಮಂದ ಬುದ್ಧಿಯುಳ್ಳವರು ನೆನೆಯುತ್ತಾರೆ. **ಇಂಗನೇಯಾಹಿಲ್**–ಇತ್ಯಾದಿ ಹೀಗೆ ಆಪಾತ ಪ್ರತೀತಿಯಿಂದ ಭಾಗವತರೆಲ್ಲರೂ ಒಂದೇ, ಎಂದರೆ ಭಾಗವತ ಬ್ರಾಹ್ಮಣನು ಈ ರೀತಿಯಲ್ಲಿ ನಡೆದು

---

1) ಯೋಽಸ್ಯೈನಂ ಪುರುಷಂವೇದ ದೇವಾ ಅಪಿ ನ ತಂ ವಿದುಃ ।
ಸರ್ವಮಾಶ್ಚರ್ಯ ಮೇತಸ್ಮಿನ್ ನಿರ್ವೃತ್ತಂ ರಾಜಸತ್ತಮ ॥ ಭಾರ. ವನಪರ್ವ [160-21)
ಯಾರು ಈ ಕೃಷ್ಣ ಪರಮಾತ್ಮನನ್ನು ಯಥಾವಸ್ಥಿತವಾಗಿ, ತಿಳಿಯುತ್ತಾರೋ ಅವರ ಹಿರಿಮೆಯು ದೇವತೆಗಳಗೂ ತಿಳಿಯದು. ಎಲೈ ರಾಜಶ್ರೇಷ್ಠನೇ ಇವನಲ್ಲಿ ಎಲ್ಲಾ ಆಶ್ಚರ್ಯಗಳೂ ತುಂಬಿವೆ.

2) ಭಾರತ. ಆಶ್ವಮೇಧಿಕ ಪರ್ವ 118-32-ಭಗವಂತನಲ್ಲಿ ಭಕ್ತಿಯುಳ್ಳ ಶೂದ್ರರು ಶೂದ್ರರಲ್ಲ, ಭಾಗವತರು-ಬ್ರಾಹ್ಮಣರೆಂದು ಸ್ಮರಿಸಲ್ಪಟ್ಟಿದ್ದಾರೆ. ಜನಾರ್ದನನಲ್ಲಿ ಭಕ್ತಿಯಿಲ್ಲದವರು ಯಾವ ವರ್ಣದಲ್ಲಿ ಹುಟ್ಟಿದ್ದರೂ ಅವರುಗಳು ಶೂದ್ರರು.

**ಕೇವಲ ಬ್ರಾಹ್ಮಣನುಕ್ಕುಮ್ ಕೇವಲ ಶೂದ್ರನುಕ್ಕುಮ್ ಉಳ್ಳವೆಲ್ಲೈ, ಭಾಗವತಬ್ರಾಹ್ಮಣನುಕ್ಕುಮ್ ಭಾಗವತಶೂದ್ರನುಕ್ಕುಮ್ ಕೊಳ್ಳವೇಣುಮೆನ್ರುಮ್, ಇವರ್ಹಳೈ ಸಮರೆನ್ದಿರ ಶಾಸ್ತ್ರಙ್ಗಳುಮ್ ಪರಮ ಪುರುಷಾರ್ಥಸಾಮ್ಯಾದಿಹಳಾಲೇ ಎನ್ರುಮ್, ಕಿಡಾಂಬಿ ಅಪ್ಪುಳ್ಳಾರ್ ಅರುಳಿಚ್ಚೆಯ್ದಾರ್**

**1) "ಕುಲಂತರುಮ್" ಎನ್ದಿರಪಾಟ್ಟುಕ್ಕು ವ್ಯಾಖ್ಯಾನಮ್ ಪಣ್ಣಿನವಭಿಯುಕ್ತರುಮ್ ಜನ್ಮತ್ತಾಲ್ ವೃತ್ತತ್ತಾಲ್ ಕುರೈನ್ದಾನೊರುತ್ತನುಕ್ಕು ಭಗವತ್ಸಂಬಂಧಮುಣ್ಡಾನಾಲ್ ಅವನೈಯಿವೈಯುಡೈಯಾ**

---

ಕೊಳ್ಳಬೇಕು, ಭಾಗವತ ಶೂದ್ರನು ಈ ರೀತಿಯಲ್ಲಿಯೇ ನಡೆದುಕೊಳ್ಳಬೇಕು, ಎಂದು ಆಚಾರ ನಿಯಮಗಳನ್ನು ಹೇಳುವ ಸರ್ವಶಾಸ್ತ್ರಗಳೂ ವಿರೋಧಿಸುತ್ತವೆ. ಅಂದರೆ ಶೇಷ ಸಂಹಿತೆಯಲ್ಲಿ "ಬ್ರಾಹ್ಮೇಮುಹೂರ್ತೇಚೋತ್ಥಾಯ, ಎಂದಾರಂಭಿಸಿ, "ಗಚ್ಛೇಚ್ಛಾಘನದೀಂ ಪ್ರತಿ" ಎಂದು ನದಿಗೆ ಹೋಗಿ ಸ್ನಾನ ಮಾಡಿ, "ಸಚ್ಛಿದ್ರಾಣ್ಯೂರ್ಧ್ವಪುಂಡ್ರಾಣಿ ಪವಿತ್ರಂಚ ದ್ವಿಜೋತ್ತಮ, ಎಂದು ದ್ವಿಜಶ್ರೇಷ್ಠನು" ಊರ್ಧ್ವಪುಂಡ್ರಾದಿಗಳನ್ನು ಧರಿಸಿ ಸಂಧ್ಯಾವಂದನಾದಿ ವೇದ ವಿಹಿತ ಕರ್ಮಗಳನ್ನು ಮಾಡಬೇಕೆಂದು ಆಚಾರ ನಿಯಮಗಳನ್ನು ಹೇಳುವ ಶಾಸ್ತ್ರಗಳೂ, "ಸ್ತ್ರೀಶೂದ್ರಾಣಾಂ ವಿಧಿಂವಕ್ಷ್ಯೇ–ಸ್ತ್ರೀ ಶೂದ್ರರುಗಳು ಮಾಡಬೇಕಾದ ವಿಧಿಯನ್ನು ಹೇಳುತ್ತೇನೆಂದು ಆರಂಭಿಸಿ,

**ಪ್ರಣವಂ ವರ್ಜಯೇ ತ್ಸಮ್ಯಕ್ ವಿಧಿಸ್ಸ್ಯಾತ್ ಸರ್ವಕರ್ಮಸು ।**
ಮೂಲಮಂತ್ರೇಣ ವಿರಜಾಂ ಸ್ಮೃತ್ವಾಸ್ನಾನಂ ವಿಧೀಯತೇ ॥
ಏವಂ ನಿಯಮಯುಕ್ತಾನಾಂ ಸ್ತ್ರೀಶೂದ್ರಾಣಾಂ ತಥೈವಚ ।
**ಭಗವದ್ಭಕ್ತಿಯುಕ್ತಾನಾಂ ಸ್ತ್ರೀಶೂದ್ರಾಣಾಂ ಚತುರ್ಮುಖ ॥**

ಎಂದು ಭಾಗವತರಾದ ಸ್ತ್ರೀ ಶೂದ್ರರುಗಳಿಗೆ ಆಚಾರ ನಿಯಮಗಳನ್ನು ಹೇಳುವ ಶಾಸ್ತ್ರಗಳೂ ಪರಸ್ಪರ ವಿರೋಧಿಸುತ್ತವೆ. ಭಾಗವತ ಬ್ರಾಹ್ಮಣರು ವೈದಿಕ ಮಂತ್ರಗಳನ್ನು ಬಳಸಿ ವೈದಿಕ ಕಾರ್ಯಗಳನ್ನು ಆಚರಿಸಬೇಕು. ಭಾಗವತ ಸ್ತ್ರೀ ಶೂದ್ರರು ಪ್ರಣವವಿಲ್ಲದ ಮೂಲ ಮಂತ್ರವನ್ನು ಬಳಸಿ ಆಚಾರಾನುಷ್ಠಾನ ಮಾಡಬೇಕು, ಎಂದು ಹೇಳಿರುವ ನಿಯಮಗಳಿಗೆ ವಿರೋಧವುಂಟಾಗುತ್ತದೆಯೆಂದು ತಾತ್ಪರ್ಯ.

**ಕೇವಲ ಬ್ರಾಹ್ಮಣನುಕ್ಕುಮ್** ಇತ್ಯಾದಿ – **ಕೇವಲ ಬ್ರಾಹ್ಮಣ** - ಭಗವದ್ಭಕ್ತನಲ್ಲದ ಬ್ರಾಹ್ಮಣನಿಗೂ, **ಕೇವಲ ಶೂದ್ರ**–ಭಗವದ್ಭಕ್ತನಲ್ಲದ ಶೂದ್ರನಿಗೂ ಇರುವ **ಎಲ್ಲೈ**–ಜಾತಿ ವ್ಯವಸ್ಥೆಯನ್ನು **ಭಾಗವತ ಬ್ರಾಹ್ಮಣನುಕ್ಕುಮ್**–ಭಗವದ್ಭಕ್ತನಾದ ಬ್ರಾಹ್ಮಣನಿಗೂ, **ಭಾಗವತ ಶೂದ್ರನುಕ್ಕುಮ್**–ಭಗವದ್ಭಕ್ತನಾದ ಶೂದ್ರನಿಗೂ **ಕೊಳ್ಳವೇಣು ಮಿತ್ಯಾದಿ**–ಅಂಗೀಕರಿಸಬೇಕೆಂದೂ, ಇವರುಗಳು ಸಮರೆಂದು ಹೇಳುವ ಶಾಸ್ತ್ರಗಳು ಪರಮ ಪುರುಷಾರ್ಥ ಸಾಮ್ಯಾದಿಗಳಿಂದ ಹೇಳುತ್ತವೆಯೆಂದೂ, ಕಿಡಾಂಬಿ ಅಪ್ಪುಳ್ಳಾರವರು ಕೃಪೆ ಮಾಡಿ ಹೇಳಿರುತ್ತಾರೆ. ಇದರ ವಿಸ್ತಾರವನ್ನು 9ನೇ ಅಧ್ಯಾಯದ ಗೀತಾ ಭಾಷ್ಯ ತಾತ್ಪರ್ಯ ಚಂದ್ರಿಕೆಯಲ್ಲಿ ನೋಡಿ ತಿಳಿದುಕೊಳ್ಳತಕ್ಕದ್ದು. ಗೀತೆ 32-33.

ಪೆರಿಯ ತಿರುಮೊಳಿಗೆ ವ್ಯಾಖ್ಯಾನ ಮಾಡಿದ ಪೆರಿಯವಾಚ್ಚಾನ್ ಪಿಳ್ಳೈಯವರೂ **ಕುಲಂತರುಂ** ಎಂಬ ಪಾಶುರದ ವ್ಯಾಖ್ಯಾನದಲ್ಲಿ ಜಾತಿವ್ಯವಸ್ಥೆಯು ನಶಿಸದಂತೆ ಭಾಗವತ ಪ್ರಭಾವವನ್ನು ಹೇಳಿದ್ದಾರೆಂದು 1) **ಕುಲಂತರುಂ**

---

1) ಕುಲಂತರುಂ ಶೆಲ್ವಂ ತಂದಿಡುಮ್ ಅಡಿಯಾರ್ ಪಡುತುಯರಾಯಿನವೆಲ್ಲಾಮ್
ನಿಲಂತರುಂ ಶೆಯ್ಯುಂನೀಳ್ ವಿಶುಂಬರುಳುಂ ಅರುಳೊಡು ಪೆರುನಿಲಮಳಿಕ್ಕುಮ್,
ವಲಂತರುಂ ಮತ್ತುಂತಂದಿಡುಮ್ ಪೆಟ್ರದಾಯಿನುಮಾಯಿನ ಶೆಯ್ಯುಂ
ನಲಂತರುಂ ಶೊಲ್ಲೈ ನಾನ್ ಕಂಡುಕೊಂಡೇನ್ ನಾರಾಯಣಾ ವೆನ್ನುಂ ನಾಮಮ್ ॥ ಪೆರಿಯತಿರುಮೊಳಿ 1-1-9 ಪ್ರ. ತಿ. ನೋ.

**ನೊರುತ್ತ್ರ್ ತಾಃ ನಿನೈಕ್ಕಕ್ಕೂಶವೇಣ್ಣುಮ್ಪಡಿಯಾಯಿತ್ತು ಭಗವತ್ಪ್ರಭಾವ ಮಿರುಕ್ಕುಮ್ಪಡಿ ; ಆನಾಲ್ ಅವರ್‌ಹಳೋಡು ಪೆಣ್‌ಕೊಡುತ್ತು ಕ್ಕೊಳ್ಳುಹಿರದಿಲ್ಲೈಯೋ ಎನ್ನಿಲ್ ? ಅದು ಜಾತಿ ನಿಬಂಧನಮ್, ಶ್ಲಾಘ್ಯೈ ಗುಣನಿಬಂಧನೈಯೆನ್ರು ನಿಷ್ಕರ್ಷಿತ್ತಾರ್‌ಹಳ್. (1) "ಕುಲಂತರುಮ್" ಎನ್ರದುವುಮ್, 2) "ಪಣ್ಡೈಕ್ಕುಲತ್ತೈತ್ತವಿರ್‌ನ್ದು" ಎನ್ರದುವುಮ್, ತೊಣ್ಡಕ್ಕುಲತ್ತಿಲ್ ಉತ್ಕರ್ಷಮ್ ಶೊನ್ನಪಡಿ. ದೇವತಾಂತರ ಸಂಕೀರ್ಣಕುಲಮನ್ರೇ ಇವನದು.**

**3) "ಮಾಜನಿಷ್ಟಸ ನೋ ವಂಶೇ ಜಾತೋವಾ ದ್ರಾಗ್ವಿಪದ್ಯತಾಂ ।<br>ಆಜನ್ಮ ಮರಣಂ ಯಸ್ಯ ವಾಸುದೇವೋ ನದೈವತಮ್"**

---

**ಎನ್ಗಿರ ಪಾಟ್ಟುಕ್ಕು**–ಎಂದಾರಂಭಿಸಿ ಆಚಾರ್ಯರು ನಿರೂಪಿಸುತ್ತಾರೆ. ಆದಾಗಿ ಕುಲಂದರುಂ–ವೈಷ್ಣವ ಕುಲವನ್ನು ಉಂಟು ಮಾಡುತ್ತದೆ. ಅಭಿಯುಕ್ತರ್–ಶ್ರೀ ವೈಷ್ಣವಾಗ್ರೇಸರರು, **ಜನ್ಮತ್ತಾಲ್** ಇತ್ಯಾದಿ-ಜನ್ಮ (ಹುಟ್ಟದುದು) ದಿಂದಲೂ, ವೃತ್ತ-ಆಚಾರದಿಂಗಲೂ, **ಕುರ್ಯೆಂದಾನೊರುವನುಕ್ಕು**–ಅಪಕರ್ಷದಿಂದ ಕೂಡಿದ ಒಬ್ಬನಿಗೆ, ಭಗವಂತ್ಸಂಬಂಧವು ಏರ್ಪಟ್ಟರೆ, ಅವನನ್ನು **ಇಪ್ಪೈಯುಡೈಯಾನ್**–ಜನ್ಮವೃತ್ತಗಳಿಂದ ಉತ್ಕೃಷ್ಟನೊಬ್ಬನು, **ತಾ ನಿನೈಕ್ಕ** ಕೀಳು ಮಟ್ಟದಿಂದ ನೆನೆಸಲು **ಕೂಶುಂಬಡಿ**–ಭಯಪಡುವಂತೆ, ಭಗವತ್ ಪ್ರಭಾವವು ಇದೆ. **ಆನಾಲ್** ಇತ್ಯಾದಿ–ಆದರೆ, ಶೂದ್ರಜಾತೀಯರಿಗೂ ಬ್ರಾಹ್ಮಣ ಜಾತೀಯರಿಗೂ ಶ್ರೀ ವೈಷ್ಣವ ಕುಲವು ಏರ್ಪಟ್ಟ ಮೇಲೆ, ಹೆಣ್ಣು ಕೊಟ್ಟು, ಸ್ವೀಕರಿಸಿ ಸಂಬಂಧ ಮಾಡಬಹುದೇ ? ಎಂದರೆ, ಅದು ಕೂಡದು. **ಅದು ಜಾತಿ ನಿಬಂಧನಮ್**–ಕನ್ಯಾ ಪ್ರದಾನ ಸಂಬಂಧ ಮಾಡುವುದು ಜಾತಿಯನ್ನು ಕಾರಣವಾಗಿ ಕೊಂಡಿದೆ. **ಶ್ಲಾಘ್ಯೈ**–ಇತ್ಯಾದಿ-"ನ ಶೂದ್ರಾ ಭಗವದ್ಭಕ್ತಾಃ ವಿಪ್ರಾಃ ಭಾಗವತಾಃ ಸ್ಮೃತಾಃ", ಎಂದು ಸ್ತೋತ್ರ ಮಾಡುವುದು ಗುಣ ನಿಬಂಧನೈ–ಗುಣವನ್ನು ಕಾರಣವಾಗಿ ಕೊಂಡಿದೆ, ಎಂದು ನಿಷ್ಕರ್ಷಿಸಿರುತ್ತಾರೆ. **ಕುಲಂದರುಂ** ಎಂಬುದೂ 2) **ಪಂಡೈಕ್ಕುಲತ್ತೈತ್ತವಿರ್‌ನ್ದು** ದೇವತಾಂತರ ಪರವಾದ ಸಂಕೀರ್ಣ ಕುಲವನ್ನು ನೀಗಿಸಿ ಎಂಬುದೂ **ತೊಣ್ಡಕ್ಕುಲತ್ತಿಲ್**-ಭಗವದೇಕ ದಾಸರವಂಶದ ಅತಿಶಯವನ್ನು ಹೇಳಿರುತ್ತೆ. ಈ ಅತಿಶಯಕ್ಕೆ ಕಾರಣವೇನೆಂದರೆ **ದೇವತಾಂತರ ಸಂಕೀರ್ಣಕುಲಮ್**-ಇತ್ಯಾದಿ – ದೇವತಾಂತರಸಂಬಂಧ ಮಿಶ್ರವಾದ ಕುಲವಲ್ಲವೇ ಇವನಿರುವುದು. ದೇವತಾಂತರ ಸಂಬಂಧವುಳ್ಳವನು ಭಾಗವತಾಭಿಮಾನಕ್ಕೆ ಬಾಹ್ಯನೆಂದು **ಮಾಜನಿಷ್ಟ, ಸನೋವಂಶೇ**, ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಏಕಾಂತಿ **ಕುಲತ್ತಿಲ್** ಭಗವದೇಕ ಭಕ್ತರ ಕುಲ (ಸಮೂಹ) ದವರು 3) "**ಮಾಜನಿಷ್ಟ ಸನೋವಂಶೇ**" ಇತ್ಯಾದಿ–

---

ನಾರಾಯಣನೆಂಬ ಶ್ರೇಷ್ಟವಾದ ನಾಮವು ಉತ್ತಮವಾದ ವೈಷ್ಣವ ಕುಲವನ್ನು ಕೊಡುತ್ತದೆ. ಭಗವದ್ಭಕ್ತಿಯಾದ ಐಶ್ವರ್ಯವನ್ನು ಕೊಡುತ್ತದೆ. ಭಕ್ತರ ಸಂಸಾರ ಕ್ಲೇಶವನ್ನೆಲ್ಲಾ ನೀಗಿಸುತ್ತದೆ. ಪರಮಪದವನ್ನು ಕೊಡುತ್ತದೆ. ಪ್ರೀತಿಯಿಂದ ಉತ್ತಮ ಸ್ಥಾನವನ್ನು ಪ್ರಾಪಿಸುತ್ತದೆ ಮತ್ತೂ ಇತರ ಕ್ಷೇಮಗಳನ್ನೂ ಕೊಡುತ್ತದೆ.

2) ಅಂಡಕುಲತ್ತುಕ್ಕಧಿ ಪತಿಯಾಹಿ ಅಸುರರಿರಕ್ಕದರೈ<br>ಇಂಡೈಕ್ಕುಲತ್ತೈಯೆಡುತ್ತುಕ್ಕಳೈಂದ ಇರುಡೀಕೇಶನ್ ತನಕ್ಕು ।<br>ತೊಂಡಕ್ಕುಲತ್ತಿಲುಳ್ಳೀರ್ ವಂದಡಿತ್ತೊಳ್ದು, ಆಯಿರನಾಮಮ್ ಶೊಲ್ಲಿ<br>ಪಂಡೈಕ್ಕುಲತ್ತೈತ್ತವಿರ್‌ನ್ದು ಪಲ್ಲಾಂಡು ಪಲ್ಲಾಯಿರತ್ತಾಂಡೆನ್ಮಿನೇ ॥ ಪೆರಿಯಾಳ್ವಾ ತಿರು (1-1-5)

ಅಂಡ ಸಮೂಹಗಳಿಗೆಲ್ಲಾ ನಾಯಕನಾದ ಹೃಷೀಕೇಶನು ಅಸುರ ರಾಕ್ಷಸ ಸಮೂಹಗಳನ್ನು ನಿರ್ಮೂಲ ಮಾಡಿದನು. ಅವನಿಗೆ ದಾಸರಾದ ಭಗವದ್ಭಕ್ತರ ಕುಲಕ್ಕೆ ಸೇರಿದವರೆಲ್ಲರೂ ಬಂದು ಭಗವಂತನನ್ನು ನಮಸ್ಕರಿಸಿ, ಸಹಸ್ರ ನಾಮಗಳನ್ನು ಹೇಳಿ, ಪಂಡೈಕ್ಕುಲತ್ತೈತ್ತವಿರ್‌ನ್ದು-ಇದಕ್ಕೆ ಪೂರ್ವಭಾವಿಯಾದ ಭಗವದ್ವೈಮುಖ್ಯದಿಂದ ಕೂಡಿದ ಕುಲವನ್ನು ಹೋಗಲಾಡಿಸಿಕೊಂಡು ಪಲ್ಲಾಂಡೆಂದು ಮಂಗಳಾಶಾಸನ ಮಾಡಿರಿ.

3) ವರಾಹ ಪುರಾಣ. ಯಾವನು ಹುಟ್ಟಿದಂದಿನಿಂದ ಮರಣ ಪರ್ಯಂತ ವಾಸುದೇವನನ್ನು ದೇವರನ್ನಾಗಿ ಅಂಗೀಕರಿಸುವುದಿಲ್ಲವೋ, ಅವನು ನಮ್ಮ ವಂಶದಲ್ಲಿ ಹುಟ್ಟಬೇಡ. ಹುಟ್ಟಿದರೂ ಶೀಘ್ರದಲ್ಲೇ ಮರಣ ಹೊಂದಲಿ.

**ಎನ್ನಿರೇ ಏಕಾಂತಿ ಕುಲತ್ತಿರ್ಸ್ವಾಶುರವ್. ಇಪ್ಪಡಿ ವೇರೊರು ಕುಲಮಾನಾಲುಮ್ ಜಾತಿ ಶಬ್ದಮುಮ್ ಕುಲಶಬ್ದಮುಮ್ ಭಿನ್ನಾರ್ಥಮಾಹವುಮ್ ಪ್ರಯುಕ್ತಮಾಹೈಯಾಲೇ ಜಾತಿಭೇದಿಯಾದು, ಕುಲಂ ಭೇದಿಕ್ಕುಮ್. ತಿರು ಸುರಭಿಯಾನಾಲುಮ್ ಗೋತ್ವಂ ಕಳಿಯಾದಿರೇ.**

**ಮಹರ್ಷಿಹಳುಮ್ 1) "ಸ ಶೂದ್ರ ಇತಿ ಮಂತವ್ಯಃ" ಇತ್ಯಾದಿಹಳಿಲ್ಪಡಿಯೇ ಪ್ರತಿಪತ್ತಿ ವಿಶೇಷಙ್ಗಳೈಪ್ಪತ್ತ ಉತ್ಕೃಷ್ಟರ್ ಪಕ್ಕಲ್ ಅಪಕೃಷ್ಟ ಶಬ್ದಮುಮ್, ಅಪಕೃಷ್ಟರ್ ಪಕ್ಕಲ್ ಉತ್ಕೃಷ್ಟ ಶಬ್ದಮುಮ್, ಪ್ರಯೋಗಿತ್ತಾರ್‌ಹಳಿತ್ತನೈ.**

**ಆಹೈಯಾಲ್ ಭಗವದ್ಭಕ್ತರಲ್ಲಾದ ಬ್ರಾಹ್ಮಣರ್ ಶೂದ್ರರ್‌ಹಳೈ ಪ್ಪೋಲೇ ಅನಾದರಣೀಯರೆನ್ನುಮ್, ಭಗವದ್ಭಕ್ತರಾನ ಶೂದ್ರರ್‌ಹಳ್ ಬ್ರಾಹ್ಮಣರೈ ಪ್ಪೋಲೇ ಶ್ಲಾಘನೀಯರೆನ್ನುಮ್ ಶಾಸ್ತ್ರತಾತ್ಪರ್ಯಮ್.**

---

"ನಮ್ಮ ವಂಶದಲ್ಲಿ, ಜನ್ಮದಿಂದಾರಂಭಿಸಿ ಮರಣಪರ್ಯಂತ ಭಗವಂತನನ್ನು ಆರಾಧಿಸದವನು, ಹುಟ್ಟದಿರಲಿ, ಹಾಗೆ ಹುಟ್ಟಿದರೂ ಶೀಘ್ರದಲ್ಲೇ ಮರಣ ಹೊಂದಲಿ" ಎಂದು ಅನುಸಂಧಾನ ಮಾಡುತ್ತಾರೆಯಲ್ಲವೇ. ಕುಲವೆಂದರೆ ಸಮೂಹ, ಜಾತಿ ಎಂದರೆ ಶರೀರ ಸಂಸ್ಥಾನ ವಿಶೇಷ, ಆದ್ದರಿಂದ ಕುಲವು ಬೇರೆಯಾಗಲು ಸಾಧ್ಯ. ಜಾತಿಯು ಬೇರೆಯಾಗಲು ಸಾಧ್ಯವಿಲ್ಲ. ಅದನ್ನು **ಇಪ್ಪಡಿ ವೇರೊರು ಕುಲಮಾನಾಲುಮ್** – ಎಂದಾರಂಭಿಸಿ ವಿವರಿಸುತ್ತಾರೆ. ಆದಾಗಿ ಹೀಗೆ ಬೇರೆ ಕುಲವಾದರೂ, ಜಾತಿ ಶಬ್ದವೂ, ಕುಲ ಶಬ್ದವೂ **ಭಿನ್ನಾರ್ಥಮಾಹವುಮ್** – ಬ್ರಾಹ್ಮಣ ಜಾತಿ, ಬಾಹ್ಮಣ ಕುಲ, ಶೂದ್ರಜಾತಿ, ಶೂದ್ರಕುಲವೆಂದು ಪರ್ಯಾಯವಾಗಿ ಜಾತಿ ಕುಲ ಶಬ್ದಗಳನ್ನು ಬಳಸಿದರೂ ಭಿನ್ನಾರ್ಥವಾಗಿ ಅಂದರೆ ಹುಟ್ಟಿನಿಂದ ಏರ್ಪಟ್ಟ ಶರೀರ ಸಂಸ್ಥಾನದಿಂದ ಜಾತಿಯು ನಿಷ್ಕರ್ಷಿಸಲ್ಪಡುತ್ತದೆ. ಗುಣದಿಂದ ಮತ್ತು ಭಗವತ್ಸಂಬಂಧದಿಂದ ಭಕ್ತ ಕುಲವು ನಿಷ್ಕರ್ಷಿಸಲ್ಪಡುತ್ತದೆಯಾದ್ದರಿಂದ ಕುಲ ಜಾತಿ ಶಬ್ದಗಳನ್ನು ಹೀಗೆ ಭಿನ್ನಾರ್ಥವಾಗಿ ಪ್ರಯೋಗಿಸಲ್ಪಟ್ಟಿರುವುದರಿಂದ ದೇಹ ಸಂಬಂಧವಿರುವವರಿಗೆ ಜಾತಿಯು ಭೇದಿಸಲ್ಪಡುವುದಿಲ್ಲ. ಇದಕ್ಕೆ ದೃಷ್ಟಾಂತವನ್ನು **ತಿರುಸುರಭಿಯಾನಾಲುಂ**– ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ, **ತಿರು ಸುರಭಿ**–ದೇವಸ್ಥಾನದ ಹಸು, ಸಾಮಾನ್ಯವಿಲ್ಲದೆ, ಭಗವತ್ಸಂಬಂಧವನ್ನು ಪಡೆದ ಹಸುವಾದ ಮಾತ್ರಕ್ಕೆ ಅದಕ್ಕೆ **ಗೋತ್ವಂ**–ಗೋ ಜಾತಿಯು ಹೋಗುವುದಿಲ್ಲವಲ್ಲವೇ.

ಹಾಗಾದರೆ ಭಾಗವತ ಶೂದ್ರರನ್ನು "ವಿಪ್ರಾಃ-ಬ್ರಾಹ್ಮಣರು", ಎಂದು ವಿಪ್ರ ಶಬ್ದದಿಂದ ಏಕೆ ಉತ್ಕೃಷ್ಟವಾಗಿ ಹೇಳಬೇಕು. ಹಾಗೆಯೇ ಭಗವದ್ಭಕ್ತಿಯಿಲ್ಲದವರನ್ನು ಶೂದ್ರಾಃ-ಎಂದು ಅಪಕೃಷ್ಟ ಶಬ್ದದಿಂದ ಏಕೆ ಹೇಳಬೇಕು ಎಂಬ ಚೋದ್ಯಕ್ಕೆ **ಮಹರ್ಷಿಹಳುಮ್** ಎಂದಾರಂಭಿಸಿ ಸಮಾಧಾನವನ್ನು ತಿಳಿಸುತ್ತಾರೆ. ಆದಾಗಿ ಮಹರ್ಷಿಗಳೂ 1) **'ಸ ಶೂದ್ರ ಇತಿಮಂತವ್ಯಃ** ಅವನು ಜಾತಿಯ ಪ್ರಕಾರ ಶೂದ್ರನಲ್ಲದಿದ್ದರೂ, ಅವನನ್ನು ಶೂದ್ರನನ್ನಾಗಿ ತಿಳಿಯಬೇಕು, ಇತ್ಯಾದಿ ಹೇಳಿರುವಂತೆ **ಪ್ರತಿಪತ್ತಿ ವಿಶೇಷಂಗಳೈಪ್ಪಟ್ರಿ** – ಶೂದ್ರನು ಭಾಗವತನಾದರೆ ಅವನನ್ನು ವಿಪ್ರನೆಂದೂ, ಭಗವದ್ಭಕ್ತಿಯಿಲ್ಲದವನನ್ನು ಶೂದ್ರನನ್ನಾಗಿಯೂ ನೆನೆಯಬೇಕೆಂದು, ಅವನಲ್ಲಿಡುವ ಪ್ರತಿಪತ್ತಿ–ಗೌರವ ಅಥವಾ ಅಗೌರವ ರೂಪವಾದ ಭಾವನೆಯನ್ನು **ಪ್ಪಟ್ರಿ**–ಕುರಿತು, **ಉತ್ಕೃಷ್ಟರಲ್ಲಿ ಅಪಕೃಷ್ಟ ಶಬ್ದವನ್ನೂ,** ಅಪಕೃಷ್ಟರಲ್ಲಿ ಉತ್ಕೃಷ್ಟ ಶಬ್ದವನ್ನೂ ಪ್ರಯೋಗಿಸಿದ್ದಾರೆಯಷ್ಟೇ ಹೊರತು ಹುಟ್ಟಿದ ಜಾತಿಯು ಹೋಗಿ ಬೇರೆ ಜಾತಿಯು ಉಂಟಾಗುತ್ತದೆಯೆಂಬ ಭಾವನೆಯಿಂದಲ್ಲ. **ಆಹೈಯಾಲ್**–ಹೀಗೆ ಹುಟ್ಟಿದ ಜಾತಿಯು ಹೋಗುವು

---

1) ಬ್ರಾಹ್ಮಣಸ್ಯ ನ ಕರ್ತವ್ಯಂ ತಿರ್ಯಕ್ ಪುಂಡ್ರಸ್ಯ ಧಾರಣಮ್ ।
ಸಶೂದ್ರ ಇತಿ ಮಂತವ್ಯಃ ತಿರ್ಯಕ್ ಪುಂಡ್ರಸ್ಯ ಧಾರಣಾತ್ ॥
ಪಾರಮೇಶ್ವರ ಸಂಹಿತೆ. ಬ್ರಾಹ್ಮಣನು ಹಣೆಯಲ್ಲಿ ಅಡ್ಡಗಂಧ, ವಿಭೂತಿಗಳನ್ನು ಧರಿಸಬಾರದು. ಹಾಗೆ ಅಡ್ಡವಾಗಿ ಪುಂಡ್ರಗಳನ್ನು ಧರಿಸುವವನು ಶೂದ್ರನೆಂದು ಭಾವಿಸಬೇಕು.

ಪೂರ್ವೋಕ್ತಪ್ರಮಾಣೇ ಗೌಣಾರ್ಥಾನಙ್ಗೀಕಾರೇ ಬಾಧಕಮಾಹ.

ಇಙ್ಗನಲ್ಲಾದಪೋದು 1) "ಚಣ್ಡಾಲಮಪಿ ವೃತ್ತಸ್ಥಂ ತಂ ದೇವಾ ಬ್ರಾಹ್ಮಣಮ್ ವಿದುಃ"
2) "ಚಣ್ಡಾಳಾಃ ಪ್ರತ್ಯವಸಿತಾಃ ಪರಿವ್ರಾಜಕ ತಾಪಸಾಃ",
3) "ನ ತೇನ ಸ್ಥವಿರೋ ಭಾತಿ ಯೇನಾಸ್ಯ ಪಲಿತಮ್ ಶಿರಃ ।
ಬಾಲೋಽಪಿ ಯಃ ಪ್ರಜಾನಾತಿ ತಂ ದೇವಾ ಸ್ಥವಿರಮ್ ವಿದುಃ ॥"
ಎನ್ರಿಪ್ಪುಡೈಹಳಿಲೇ ನಿಂದಾ ಪ್ರಶಂಸೈ ಪಣ್ಣುಹಿರ ವಾಕ್ಯಙ್ಗಳೈಕ್ಕೊಂಡು ಸರ್ವಮರ್ಯಾದೈಹಳುಙ್ಕಲಙ್ಗಮ್ಪಡಿಯಾಮ್. ಅನಪಿನ್ಪು,

---

ದಿಲ್ಲವಾದ್ದರಿಂದ ಭಗವದ್ಭಕ್ತರಲ್ಲದ ಬ್ರಾಹ್ಮಣರು, ಶೂದ್ರರಂತೆ ಅನಾದರಣೀಯರು. ಭಗವದ್ಭಕ್ತರಾದ ಶೂದ್ರರು ಬ್ರಾಹ್ಮಣರ ಹಾಗೆ ಶ್ಲಾಘನೀಯರೆಂಬುದು ಶಾಸ್ತ್ರ ತಾತ್ಪರ್ಯ.

**ವಿಪ್ರಾಃ, ಶೂದ್ರಾಃ ಎಂಬ ಶಬ್ದಗಳಿಗೆ ಗೌಣವಾಗಿ ಅರ್ಥವನ್ನು ಕೊಳ್ಳದಿದ್ದರೆ ಬಾಧಕ.**

**ಇಂಗನಲ್ಲಾದಪೋದು** ಇತ್ಯಾದಿ–ಈ ರೀತಿಯಲ್ಲಿ ವಚನ ತಾತ್ಪರ್ಯವನ್ನು ತಿಳಿದುಕೊಳ್ಳದೆ ಆಪಾತ ಪ್ರತೀತಿಯಿಂದ ಬ್ರಾಹ್ಮಣ, ಶೂದ್ರ ಎಂಬ ಜಾತಿಯು ಹೋಗಿ ಶೂದ್ರ, ಬ್ರಾಹ್ಮಣನೆಂಬ ಜಾತಿಯು ಉಂಟಾಗುವಂತೆ ಒಪ್ಪಿದರೆ 1) **ಚಂಡಾಳಮಪಿ ವೃತ್ತಸ್ಥಂ** 2) **ಚಂಡಾಳಾಃ ಪ್ರತ್ಯವಸಿತಾಃ** 3) **ನತೇನ ವೃದ್ಧೋಭಾತಿ (ಸ್ಥವಿರೋಭಾತಿ)** ಇತ್ಯಾದಿ ಸ್ಥಳಗಳಲ್ಲಿ ನಿಂದಾ ಪ್ರಶಂಸೆಗಳನ್ನು ಮಾಡುವ ವಾಕ್ಯಗಳನ್ನು ಕೊಂಡು, ಸರ್ವಮರ್ಯಾದೆಗಳೂ **ಕಲಂಗುಂಪಡಿಯಾಮ್**–ವ್ಯತ್ಯಾಸವಾಗುವಂತೆಯಾಗುತ್ತದೆ. ಇದರ ತಾತ್ಪರ್ಯವೇನೆಂದರೆ, ತನ್ನ ವರ್ಣಾಶ್ರಮ ಧರ್ಮಕ್ಕನುಗುಣವಾದ ಆಚಾರದಿಂದ ಕೂಡಿದ ಚಂಡಾಳನನ್ನೂ ದೇವತೆಗಳು ಬ್ರಾಹ್ಮಣನನ್ನಾಗಿ ಗೌರವಿಸಿದರು. **ಪ್ರತ್ಯವಸಿತಾಃ** – ತನ್ನ ಧರ್ಮದಿಂದ ಭ್ರಷ್ಟರಾದ, **ಪರಿವ್ರಾಜಕತಾಪಸಾಃ** – ಸನ್ಯಾಸಿಗಳೂ, ವಾನಪ್ರಸ್ಥರೂ ಚಂಡಾಳರಂತೆ ಪರಿಗಣನೀಯರು. ತಲೆಯು ನೆರೆದಿದ್ದ ಮಾತ್ರಕ್ಕೆ ವಯೋಧಿಕ್ಯದಿಂದ ಗೌರವ್ಯನಲ್ಲ. ಜ್ಞಾನಿಯಾದ ಬಾಲನೂ (ಜ್ಞಾನ ವೃದ್ಧನೂ) ವೃದ್ಧನ ಹಾಗೆ ಗೌರವ್ಯನು, ಇತ್ಯಾದಿಯಾಗಿ ಹೇಳಿರುವ ನಿಂದಾ ಪ್ರಶಂಸಾ ವಾಕ್ಯಗಳನ್ನು ಯಥಾಶ್ರುತಾರ್ಥವಾಗಿ ಅಂಗೀಕರಿಸಿದರೆ ಸರ್ವಶಾಸ್ತ್ರಮರ್ಯಾದೆಗಳೂ ವ್ಯಾಕುಲವಾಗುತ್ತವೆ.

---

1) ನಜಾತ್ಯಾ ಪೂಜಿತಾರಾಜನ್ ಗುಣಾಃ ಕಲ್ಯಾಣ ಕಾರಣಾಃ ।
ಚಂಡಾಲಮಪಿ ವೃತ್ತಸ್ಥಂ ತಂದೇವಾಃ ಬ್ರಾಹ್ಮಣಂವಿದುಃ॥ ಭಾರ. ಅಶ್ವಮೇಧಿಕಂ (116-8)
ರಾಜನೇ ಜಾತಿಯಿಂದ ಗೌರವ್ಯನಲ್ಲ. ಅವನಲ್ಲಿರುವ ಒಳ್ಳೆಯ ಗುಣಗಳು ಗೌರವಕ್ಕೆ ಕಾರಣ. ತನ್ನ ವರ್ಣಾಶ್ರಮಕ್ಕನುಗುಣವಾದ, ಆಚಾರದಿಂದ ಕೂಡಿದ ಚಂಡಾಲನನ್ನೂ ದೇವತೆಗಳು ಬ್ರಾಹ್ಮಣನಂತೆ ಗೌರವವಾಗಿ ತಿಳಿದಿರುತ್ತಾರೆ, ಗೌರವ್ಯನು ಎಂದರ್ಥ,

2) ಚಂಡಾಳಾಃ ಪ್ರತ್ಯವಸಿತಾಃ ಪರಿವ್ರಾಜಕ ತಾಪಸಾಃ ।
ತೇಷಾಂ ಜಾತಾನ್ಯಪತ್ಯಾನಿ ಚಂಡಾಲೈಸ್ಸಹ ವಾಸಯೇತ್ ॥ ದಕ್ಷ ಸ್ಮೃತಿ 4-20.
ಸನ್ಯಾಸಿಗಳೂ, ವಾನಪ್ರಸ್ಥರೂ ತಮ್ಮ ತಮ್ಮ ಆಶ್ರಮಗಳನ್ನು ಬಿಟ್ಟು ಭ್ರಷ್ಟರಾಗಿ, ಗೃಹಸ್ಥ ಧರ್ಮವನ್ನು ಪುನಃ ಅವಲಂಬಿಸಿದರೆ. ಅವರು ಚಂಡಾಳರಂತೆ ಅತ್ಯಂತ ನಿಕೃಷ್ಟರು. ಅವರಿಗೆ ಹುಟ್ಟಿದ ಮಕ್ಕಳನ್ನು ಚಂಡಾಲರೊಡನೆ ವಾಸ ಮಾಡುವಂತೆ ಏರ್ಪಾಡು ಮಾಡಬೇಕು.

3) ಮನುಸ್ಮೃತಿ (2-156) ತಲೆ ಕೂದಲು ನೆರೆದಿದ್ದ ಮಾತ್ರಕ್ಕೆ ಅವನು ವಯಸ್ಸಾದವನಲ್ಲ. ಜ್ಞಾನದಿಂದ ಕೂಡಿದವನು ವಯಸ್ಸಿನಲ್ಲಿ ಚಿಕ್ಕವನಾದರೂ, ದೇವತೆಗಳು ಅವನನ್ನು ವೃದ್ಧನನ್ನಾಗಿ ತಿಳಿಯುತ್ತಾರೆ. ವಯೋಮಾತ್ರಕ್ಕೆ ವೃದ್ಧನಲ್ಲ. ಜ್ಞಾನವು ಪೂರ್ಣವಾಗಿದ್ದರೆ, ಅಂದರೆ ಜ್ಞಾನವೃದ್ಧನು ವೃದ್ಧನು.

**ಪ್ರತಿಪತ್ತಿ ವಿಶೇಷಾರ್ಥ ಮನ್ಯತ್ರಾನ್ಯತ್ವಕೀರ್ತನಮ್ ।**
**ವಿಶೇಷವಿಧಿಸಾಕಾಂಕ್ಷಾ ಸ್ತತ್ರ ತತ್ತತ್ಪ್ರವೃತ್ತಯಃ ॥ ೨೫ ॥**
**ಎನ್ಱು ಇಜ್ಜುಗತ್ತೈಕ್ಕುಮ್ ಸಮಾಧಾನಮ್.**

**ಶ್ರೀ ಕೃಷ್ಣೇನ ಭಗವತಾ ಕಥಂ ಶೂದ್ರಾನ್ನಂ ಭುಕ್ತಮಿತಿ ಶಂಕಾಂಪರಿಹರತಿ**
**ಶ್ರೀ ವಿದುರರುಮ್ ಸ್ವಜಾತ್ಯನುರೂಪಮಾಹ ವಿವಾಹಾದಿಹಳ್ ಪಣ್ಣಿನಾರ್. 1) "ಭುಕ್ತವತ್ಸ**

---

ಮೇಲೆ ಹೇಳಿದ ಅರ್ಥವನ್ನು ಶ್ಲೋಕರೂಪದಲ್ಲಿ **ಅನಪಿನ್ಱು** – ಎಂದಾರಂಭಿಸಿ ಸಂಗ್ರಹಿಸುತ್ತಾರೆ. ಆನಪಿನ್ಱು– ಉತ್ಕೃಷ್ಟಾಪಕೃಷ್ಟ ಕೀರ್ತನವು ಗುಣಕೃತವು, ಜಾತಿಯ ಸಂಬಂಧದಿಂದಲ್ಲವೆಂಬುದು ನಿಶ್ಚಿತವಾದ ಮೇಲೆ–**ಅನ್ಯತ್ರಾನ್ಯತ್ವಕೀರ್ತನಂ**–ಉತ್ಕೃಷ್ಟನಲ್ಲಿ ಅಪಕೃಷ್ಟ ಕೀರ್ತನವೂ, ಅಪಕೃಷ್ಟನಲ್ಲಿ ಉತ್ಕೃಷ್ಟ ಕೀರ್ತನವೂ, **ಪ್ರತಿಪತ್ತಿ ವಿಶೇಷಾರ್ಥಮ್**–ಸ್ವಧರ್ಮ ತ್ಯಾಗ ಮಾಡಿದ ಅಭಾಗವತ ಬ್ರಾಹ್ಮಣನನ್ನು ಶೂದ್ರನೆಂದೂ, ಸ್ವಧರ್ಮದಿಂದ ಕೂಡಿದ ಭಾಗವತ ಶೂದ್ರನನ್ನು ಬ್ರಾಹ್ಮಣನೆಂದೂ ಪ್ರತಿಪತ್ತಿ ಮಾಡಲು ಹೇಳಿದೆ. **ತತ್ತತ್ಪ್ರವೃತ್ತಯಃ** – ತನ್ನ ವರ್ಣಾಶ್ರಮಕ್ಕನುಗುಣವಾದ ಸ್ನಾನ ಸಂಧ್ಯಾವಂದನಾದಿಗಳೂ ವೇದಾಧ್ಯಯನವೂ, ತನಗೆ ಇತರರು ನಮಸ್ಕರಿಸುವುದು, ವರ್ಣಾಶ್ರಮಕ್ಕನುಗುಣವಾಗಿ ಹೆಣ್ಣು ಕೊಟ್ಟು ಸಂಬಂಧ ಬೆಳೆಸುವುದು ಮೊದಲಾದವು, **ವಿಶೇಷ ವಿಧಿ ಸಾಕಾಂಕ್ಷಾಃ**–"ಬ್ರಾಹ್ಮಣೇಭ್ಯೋವೇದ ವಿದ್ಭ್ಯೋ ದಿವೇದಿವೇ ನಮಸ್ಕುರ್ಯಾತ್" – ವೇದಾಧ್ಯಯನವನ್ನು ಮಾಡಿದ ಬ್ರಾಹ್ಮಣನಿಗೆ ಪ್ರತಿದಿವಸವೂ ನಮಸ್ಕರಿಸಬೇಕು, "ಅಹರಹಸ್ಸಂಧ್ಯಾ ಮುಪಾಸೀತ", ಪ್ರತಿದಿನವೂ ಸಂಧ್ಯಾವಂದನೆಯನ್ನು ಮಾಡಬೇಕು, "ಅಷ್ಟವರ್ಷಂ ಬ್ರಾಹ್ಮಣಮುಪನಯೀತ, ತಮಧ್ಯಾಪಯೀತ್"– ಗರ್ಭಾಷ್ಟಮ ವರ್ಷದಲ್ಲಿ (ಹುಟ್ಟಿದ ಮೇಲೆ ಏಳನೇ ವರ್ಷ) ಬ್ರಾಹ್ಮಣನಿಗೆ ಉಪನಯನ ಸಂಸ್ಕಾರವನ್ನು ಮಾಡಬೇಕು, "ಶೂದ್ರಃ ಏಕ ಜಾತಿಃ ನಚ ಸಂಸ್ಕಾರ ಮರ್ಹತಿ" ಶೂದ್ರನು ಒಂದೇ ಜಾತಿಗೆ ಸೇರಿದವನು, ದ್ವಿಜತ್ವವು ಇಲ್ಲವೆಂದರ್ಥ, ಇವನಿಗೆ ಉಪನಯನಾದಿ ಸಂಸ್ಕಾರಗಳಿಲ್ಲ–ಇತ್ಯಾದಿ ವಿಶೇಷ ವಿಧಿಗಳನ್ನು ಅವಲಂಬಿಸಿವೆ. ಅಂದರೆ ಉಪನಯನ, ವೇದಾಧ್ಯಯನ ವಿವಾಹಾದಿ ಸಂಸ್ಕಾರಗಳು ಶಾಸ್ತ್ರ ವಿಧಿಗಳನ್ನು ಅವಲಂಬಿಸಿವೆ. ಮಾನಸಿಕವಾದ ಬ್ರಾಹ್ಮಣ್ಯಾದಿ ಪ್ರತಿಪತ್ತಿಗಳನ್ನು ಅವಲಂಬಿಸಿ ಮಾಡತಕ್ಕವುಗಳಲ್ಲ, **ಎನ್ಱು ಇಂಗುಟ್ರೈಕ್ಕುಮ್ ಸಮಾಧಾನಮ್**–ಈ ರೀತಿಯಲ್ಲಿ ಬಾಲನು, ಮೇಲೆ ಹೇಳಿದಂತೆ ಜ್ಞಾನದಿಂದ ದೊಡ್ಡವನು, ಸನ್ಯಾಸಿಯು ಆಶ್ರಮ ಭ್ರಷ್ಟನಾದ್ದರಿಂದ ಚಂಡಾಲನು ಇತ್ಯಾದಿ ಹೇಳಿದ್ದಕ್ಕೆ ಸಮಾಧಾನ.

**ಭಾಗವತತ್ವ ನಿಮಿತ್ತವಾಗಿ ವರ್ಣಾಶ್ರಮ ಧರ್ಮಗಳನ್ನು ಅತಿಕ್ರಮಿಸದ ಅನುಷ್ಠಾನ**
**ಶ್ರೀ ವಿದುರರ ವೃತ್ತಾಂತ**

ಈ ರೀತಿಯಾದ ವ್ಯವಸ್ಥೆಗೆ ಶಿಷ್ಟಾಚಾರವನ್ನು ಪ್ರಮಾಣವಾಗಿ ತಿಳಿಸುತ್ತಾರೆ. ಆದಾಗಿ **ಶ್ರೀ ವಿದುರರುಮ್** ಇತ್ಯಾದಿ–ಮಹಾಭಾಗವತರೂ ಜ್ಞಾನಿಯೂ ಆದ ವಿದುರರೂ ಸಹ ತಮ್ಮ (ಶೂದ್ರ) ಜಾತಿಗೆ ಅನುರೂಪವಾಗಿಯೇ ಆ ಜಾತಿಯ ಹೆಣ್ಣನ್ನೇ ವಿವಾಹ ಮಾಡಿಕೊಂಡು ಆ ಜಾತಿಗನುಗುಣವಾದ ಆಚಾರವನ್ನೇ ಅವಲಂಬಿಸಿದ್ದರು. ಭಾಗವತ ಶೂದ್ರರಿಗೆ ಆ ಜಾತಿಯು ಹೋಗಿ ಬ್ರಾಹ್ಮಣ ಜಾತಿಯು ಬರುವುದಾಗಿದ್ದರೆ ಶ್ರೀ ವಿದುರರು ಬ್ರಾಹ್ಮಣ ಜಾತಿಯಲ್ಲಿ ಮದುವೆ ಮಾಡಿಕೊಂಡಿರಬೇಕಾಗಿತ್ತು. ಹಾಗಿಲ್ಲವಾದ್ದರಿಂದ ಮಹಾಜ್ಞಾನಿಯಾಗಿ ಭಾಗವತನಾಗಿದ್ದರೂ ಶೂದ್ರನಿಗೆ ಜಾತಿಯು ಹೋಗುವುದಿಲ್ಲವೆಂಬುದಕ್ಕೆ ಇದು ದೃಷ್ಟಾಂತ.

ಜಾತಿಯು ಹೋಗುವುದಿಲ್ಲವೆಂಬುದಕ್ಕೆ ಗುರುತುಗಳನ್ನೂ ತಿಳಿಸುತ್ತಾರೆ. ಆದಾಗಿ 1) **ಭುಕ್ತವತ್ಸು ದ್ವಿಜಾಗ್ರ್ಯೇಷು** ಇತ್ಯಾದಿ ಬ್ರಾಹ್ಮಣ ಶ್ರೇಷ್ಠರು ಊಟ ಮಾಡಿದ ಮೇಲೆ, ವಿದುರರು ಶುದ್ಧವಾಗಿಯೂ ರುಚಿ

---

1), 2) ಭಾರ. ಉದ್ಯೋಗ ಪರ್ವ–93-43, 45

ದ್ವಿಜಾಗ್ರ್ಯೇಷು ನಿಷಣ್ಣಃ ಪರಮಾಸನೇ । ವಿದುರಾನ್ನಾನಿ ಬುಭುಜೇ ಶುಚೀನಿ ಗುಣವಂತಿಚ ॥ ಎನ್ರಿದೈಕ್ಕೇಟ್ಟು ದುರ್ಯೋಧನ್.

2) "ಭೀಷ್ಮದ್ರೋಣಾವತಿಕ್ರಮ್ಯ ಮಾಂಚೈವ ಮಧುಸೂಧನ ।
ಕಿಮರ್ಥಂ ಪುಂಡರೀಕಾಕ್ಷ ಭುಕ್ತಂ ವೃಷಲ ಭೋಜನಮ್" ಎನ್ರು ಕೇಟ್ಕ
"ದ್ವಿಷದನ್ನಂ ನ ಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್ ।
ಪಾಂಡವಾನ್ ದ್ವಿಷಸೇ ರಾಜನ್ ಮಮಪ್ರಾಣಾಹಿ ಪಾಂಡವಾಃ ॥" ಎನ್ರು ಉತ್ತರ ಮರುಳಿಚ್ಚೆಯ್‌ಹೈಯಾಲೇ ಶ್ರೀ ವಿದುರರ್ಕ್ಕು ದುರ್ಯೋಧನನ್ ಶೊನ್ನ ಜಾತಿ ವಿಶೇಷತ್ತೈ ಭಗವಾನ್ ನಿಶೈನ್ದಾನಾಯಿತ್ತು.

ಯುಗಾನ್ತರೇ ಬ್ರಾಹ್ಮಣೈರಪಿ ಭಾಗವತಶೂದ್ರಪಕ್ವಾನ್ನ ಸ್ವೀಕಾರೋ ನ ನಿಷಿದ್ಧಃ

ಆನಾಲ್ ಬ್ರಾಹ್ಮಣರ್‌ಕ್ಕುಮ್ ಕ್ಷತ್ರಿಯರ್ಕ್ಕುಮ್ ಶೂದ್ರನುಡೈಯ ಪಕ್ವಾನ್ನತ್ತೈ ಭುಜಿಕ್ಕೈ ನಿಷಿದ್ಧಮನ್ರೋವೆನ್ನಿಲ್ ? 1) "ಆರ್ಯಾಧಿಷ್ಠಿತಾವಾ ಶೂದ್ರಾ ಅನ್ನ ಸಂಸ್ಕರ್ತಾರ ಸ್ಸ್ಯುಃ" ಎನ್ರು

---

ಯಾಗಿಯೂ ಮಾಡಿ ತಂದ ಅನ್ನವನ್ನು ಶ್ರೀ ಕೃಷ್ಣ ಪರಮಾತ್ಮನು ಊಟ ಮಾಡಿದನು, ಎಂಬ ಈ ಮಾತನ್ನು ಕೇಳಿ ಧುರ್ಯೋದನನು, 2) **ಭೀಷ್ಮ ದ್ರೋಣಾವತಿಕ್ರಮ್ಯ** ಇತ್ಯಾದಿಯಾಗಿ ಎಲೈ **ಪುಂಡರೀಕಾಕ್ಷನೇ** ಭೀಷ್ಮ ದ್ರೋಣಾದಿಗಳನ್ನೂ ನನ್ನನ್ನೂ ಬಿಟ್ಟು-ಅಂದರೆ ಬ್ರಾಹ್ಮಣ ಕ್ಷತ್ರಿಯರಾದ ನಮ್ಮ ಮನೆಗಳಲ್ಲಿ ಊಟ ಮಾಡದೆ ವೃಷಳ ಭೋಜನಮ್-ಶೂದ್ರನ ಅನ್ನವನ್ನು. ಕಿಮರ್ಥಂ ಭುಕ್ತಂ? ಏತಕ್ಕೆ ಊಟಮಾಡಿದೆ, ಎಂದು ಕೇಳಿದಾಗ, ಶ್ರೀಕೃಷ್ಣ ಪರಮಾತ್ಮನು, **ದ್ವಿಷದನ್ನಂ ನಭೋಕ್ತವ್ಯಮ್** ಇತ್ಯಾದಿ–ಶತ್ರುಗಳ ಮನೆಯ.ಲ್ಲಿ ಅವರು ಕೊಡುವ ಅನ್ನವನ್ನು ಊಟ ಮಾಡಕೂಡದು, ಹಾಗೆಯೇ ಅವರುಗಳೂ ತಮಗೆ ಶತ್ರುಗಳಾದವರುಗಳಿಗೆ ಊಟ ಹಾಕ ಕೂಡದು- ಎಲೈ ರಾಜನೇ ನೀನು ಪಾಂಡವರುಗಳನ್ನು ದ್ವೇಷಿಸುತ್ತೀಯೆ. ಅವರನ್ನು ನೀನು ದ್ವೇಷಿಸುವುದರಿಂದ, ಅಂತರ್ಯಾಮಿಯಾದ ನನ್ನನ್ನೂ ನೀನು ದ್ವೇಷಿಸುವಂತೆ ಆಯಿತು. ಆದ್ದರಿಂದ ನಾನು ನಿನಗೆ ಶತ್ರು. ನೀನು ನನಗೆ ಅನ್ನ ಹಾಕ ಕೂಡದು, ಎಂದು ಉತ್ತರವನ್ನು **ಅರುಳಿಚ್ಚೈಹೈಯಾಲೇ** ಇತ್ಯಾದಿ ಕೃಪೆಮಾಡಿ ಹೇಳುತ್ತಾರೆಯಾದ್ದರಿಂದ ಶ್ರೀ ವಿದುರರಿಗೆ ದುರ್ಯೋದನನು ಹೇಳಿದ ಶೂದ್ರಜಾತಿ ವಿಶೇಷವನ್ನು ಭಗವಂತನು ಅಂಗೀಕರಿಸಿದನು. ಇದರ ತಾತ್ಪರ್ಯವೇನೆಂದರೆ ವಿದುರರು ಜ್ಞಾನಾಧಿಕರಾಗಿ ಭಾಗವತರಾಗಿದ್ದರಿಂದ ಅವರಿಗೆ ಶೂದ್ರ ಜಾತಿತ್ವವು ಪೂರ್ವ ಪಕ್ಷಿಯು ಹೇಳುವ ಪ್ರಕಾರ ಹೋಗಿ ಬ್ರಾಹ್ಮಣ್ಯವು ಉಂಟಾಗಿದ್ದರೆ, ಧುರ್ಯೋಧನನ ಈ ಪ್ರಶ್ನೆಗೂ ಶ್ರೀ ಕೃಷ್ಣ ಪರಮಾತ್ಮನ ಈ ಉತ್ತರಕ್ಕೂ ಅವಕಾಶವಿರುತ್ತಿರಲಿಲ್ಲ. ಆದರಿಂದ **ಶ್ರೀ ವಿದುರರುಕ್ಕು** ಇತ್ಯಾದಿ–ಶ್ರೀ ವಿದುರರಿಗೆ ಧುರ್ಯೋಧನನು ಹೇಳಿದ ಜಾತಿ ವಿಶೇಷವನ್ನು ಭಗವಂತನು ಅಂಗೀಕರಿಸಿದನು ಎಂದು ಏರ್ಪಡುತ್ತದೆ,

**ಯುಗಾಂತರಗಳಲ್ಲಿ ಆರ್ಯಾಧಿಷ್ಠಿತ ಶೂದ್ರರು ಅಡಿಗೆ ಮಾಡಿದ ಅನ್ನವನ್ನು ಬ್ರಾಹ್ಮಣರು ಊಟ ಮಾಡುವುದು ನಿಷಿದ್ಧವಲ್ಲ.**

**ಆನಾಲ್** ಇತ್ಯಾದಿ–ಹೀಗೆ ಹೇಳಿದರೆ ಬ್ರಾಹ್ಮಣ ಕ್ಷತ್ರಿಯರಿಗೆ ಶೂದ್ರನು ಅಡಿಗೆ ಮಾಡಿದ ಅನ್ನವು ನಿಷಿದ್ಧವಲ್ಲವೇ ಎಂದರೆ 1) **ಆರ್ಯಾಧಿಷ್ಠಿತಾವಾ ಶೂದ್ರಾಃ** ಇತ್ಯಾದಿಯಾಗಿ ಆಪಸ್ತಂಭ ಋಷಿಗಳೇ ಮೊದಲಾದವರು, ಆರ್ಯರಾದ ಬ್ರಾಹ್ಮಣ ಕ್ಷತ್ರಿಯ ಪರತಂತ್ರರಾದ ಶೂದ್ರರು ಅವರಿಗೆ ಅಡಿಗೆ ಮಾಡಲು ಅರ್ಹರು ಎಂದು ಹೇಳಿರುವುದರಿಂದ, ಯುಗಾಂತರಗಳಲ್ಲಿ ಆರ್ಯ ಪರತಂತ್ರರಾದ (ಪರಾಧೀನರಾದ) ಸದ್ಗುಣದಿಂದ ಕೂಡಿದ

---

1) ಆಪಸ್ತಂಭ ಸೂತ್ರ (2-3-4) ಬ್ರಾಹ್ಮಣರಿಂದ ನಿಯಮಿಸಲ್ಪಟ್ಟ ಸಚ್ಛೂದ್ರರು ಬ್ರಾಹ್ಮಣರಿಗೆ ಅಡಿಗೆ ಮಾಡಿ ಹಾಕಬಹುದು. ಇದು ಯುಗಾಂತರಗಳಲ್ಲಿ ಶಾಸ್ತ್ರ ಸಮ್ಮತ. ಕಲಿಯುಗದಲ್ಲಿಲ್ಲ.

**ಆಪಸ್ತಂಬಾದಿಹಳ್ ಶೊಲ್ಲುಹಿರಪಡಿಯೇ ಯುಗಾಂತರಙ್ಗಳಿಲ್ ಅರ್ಯಪರತಂತ್ರರಾನ ಗುಣವಚ್ಛೂದ್ರರ್ ಹಳ್ ಆರ್ಯರ್ಕ್ಕು ಅನ್ನಸಂಸ್ಕಾರಮ್ ಪಣ್ಣವನುಜ್ಞಾತರಾಹೈಯಾಲೇ ಅವ್ವಿಡತ್ತಿಲ್ ನಿಷಿದ್ಧಮಿಲ್ಲೈ. ಇದು 2) "ಶುಚಿಸ್ತು ಪ್ರಯತೋ ಭೂತ್ವಾ ವಿದುರೋನ್ನ ಮುಪಾಹರತ್" ಎನ್ರು ಶ್ರೀ ವಿದುರರು ಡೈಯ ಗುಣ ವಿಶೇಷಙ್ಗಳ್ ಶೊಲ್ಲುಹೈಯಾಲೇ ಸೂಚಿತಮ್. ಬ್ರಹ್ಮವಿತ್ತುಕ್ಕಳಾನ ಇವರ್ ಯೋಗ ಪ್ರಭಾವತ್ತಾಲೇ ದೇಹನ್ಯಾಸಮ್ ಪಣ್ಣಿನ ಪಿನ್ಬು, ಸ್ವಾಪ್ತನಾನ ಧರ್ಮಪುತ್ರನ್ ಶೆಯ್ದ ಸಂಸ್ಕಾರ ವಿಶೇಷಮ್ ತೂಷ್ಣೀಮನುಷ್ಠಿತಮಾದಲ್, ವ್ಯಕ್ತಿವಿಶೇಷನಿಯತಮಾದಲಾ ಮಿತ್ತನ್ನೈ. ಇದುಕೊಂಡು ವ್ಯಕ್ತ್ಯನ್ತರಙ್ಗಳಿಲ್ ನ್ಯಾಯಸಂಚಾರಮ್ ಪಣ್ಣವೊಣ್ಣಾದು. ಇಙ್ಗನಲ್ಲಾದ ಪೋದು, ಧರ್ಮೋತ್ತರ ರಾನ ಪಾಣ್ಡವರ್ಹಳುಕ್ಕೊರು ನಿಯತಿ ವಿಶೇಷತ್ತಾಲೇ ವನ್ದ ದಾರ ಸಾಧಾರಣ್ಯತ್ತೈಕ್ಕೊಂಡು ಸರ್ವ ಲೋಕಮುಮ್ ವ್ಯಾಕುಲಮಾನ್ಪಡಿಯಾಮ್.**

---

ಶೂದ್ರರು, ಆರ್ಯರಿಗೆ ಅನ್ನವನ್ನು ಅಡಿಗೆ ಮಾಡಲು ಅನುಜ್ಞಾತರಾದ್ದರಿಂದ **ಅವ್ವಿಡತ್ತಿಲ್**–ಶ್ರೀ ಕೃಷ್ಣ ಪರ ಮಾತ್ಮನಿಗೆ, ಭಗವತ್ಪರ ತಂತ್ರರಾದ ಶ್ರೀ ವಿದುರರು ಅಡಿಗೆ ಮಾಡಿ ಅನ್ನವನ್ನು ಬಡಿಸಿದುದು ಶಾಸ್ತ್ರ ನಿಷಿದ್ಧ ವಲ್ಲ. ಇದು ಇತ್ಯಾದಿ–ಇದು 2) **ಶುಚಿಸ್ತು ಪ್ರಯತೋಭೂತ್ವಾ** ಇತ್ಯಾದಿ–ಶ್ರೀ ವಿದುರರು ಶುಚಿಯಾಗಿಯೂ ಭಕ್ತಿ ಪೂರ್ವಕವಾಗಿಯೂ ಶ್ರೀ ಕೃಷ್ಣ ಪರಮಾತ್ಮನಿಗೆ ಅನ್ನವನ್ನು ತಂದು ಸಮರ್ಪಿಸಿದರು ಎಂದು ಅವರ ಗುಣ ವಿಶೇಷಗಳನ್ನು ಹೇಳುವುದರಿಂದ ಸೂಚಿತ.

ಶ್ರೀ ವಿದುರರಿಗೆ ವೃಷಲತ್ವವು ಹೋಗಲಿಲ್ಲವೆಂದರೆ ಧರ್ಮಪುತ್ರರು ಅವರಿಗೆ ಬ್ರಹ್ಮಮೇಧ ಸಂಸ್ಕಾರವನ್ನು ಮಾಡಿದುದು ಹೇಗೆ? ಬ್ರಹ್ಮಜ್ಞಾನಿಯಾದ ಬ್ರಾಹ್ಮಣನಿಗಲ್ಲವೋ ಬ್ರಹ್ಮಮೇಧ ಸಂಸ್ಕಾರವೆಂದರೆ ಇದಕ್ಕೆ ಸಮಾ ಧಾನವನ್ನು **ಬ್ರಹ್ಮವಿತ್ತುಕ್ಕಳಾನ** ಎಂದಾರಂಭಿಸಿ ತಿಳಿಸುತ್ತಾರೆ. ಬ್ರಹ್ಮಜ್ಞಾನಿಯಾದ ಇವರು (ಶ್ರೀ ವಿದುರರು) ಯೋಗ ಪ್ರಭಾವದಿಂದ **ದೇಹನ್ಯಾಸ**ವನ್ನು ಮಾಡಿದ ನಂತ , **ಸ್ವಾಪ್ತನಾನ ಧರ್ಮಪುತ್ರನ್**–ಇವರಿಗೆ ಸಂಸ್ಕಾರ ವನ್ನು ಮಾಡುವುದಕ್ಕೋಸ್ಕರ ಅಲ್ಲಿಗೆ ಬಂದ ಧರ್ಮಪುತ್ರನು ಮಾಡಿದ **ಸಂಸ್ಕಾರ ವಿಶೇಷಮ್** ಔರ್ಧ್ವದೈಹಿಕ ಕ್ರಿಯೆಯು, **ತೂಷ್ಣೀಮನುಷ್ಠಿತಮಾದಲ್** ಅಮಂತ್ರಕವಾಗಿ ಅನುಷ್ಠಿಸಲ್ಪಟ್ಟದಾಗಿರಬಹುದು. **ವ್ಯಕ್ತಿವಿಶೇಷ ನಿಯತಮ್** ಇತ್ಯಾದಿ–ವಿಶೇಷ ವ್ಯಕ್ತಿಯ ವಿಷಯದಲ್ಲಿ ಮಾಡಿರಬಹುದಾದ ಮಂತ್ರಪೂರ್ವಕ ಸಂಸ್ಕಾರವಾಗಿರಬಹುದು. ಇದರಿಂದ ಇವರಿಗೆ ಬ್ರಾಹ್ಮಣ್ಯವು ಬಂತೆಂದು ಹೇಳಲಾಗುವುದಿಲ್ಲವೆಂಬ ತಾತ್ಪರ್ಯವನ್ನು **ಇದುಕೊಂಡು**–ಎಂದಾರಂಭಿಸಿ ತಿಳಿಸುತ್ತಾರೆ. ವಿದುರರಿಗೆ ವ್ಯಕ್ತಿ ವಿಶೇಷ ನಿಯತವಾದ ಸಂಸ್ಕಾರವನ್ನು ಪ್ರಮಾಣವಾಗಿಟ್ಟು ಕೊಂಡು ಇತರ ಶೂದ್ರಾದಿಗಳಲ್ಲಿ ಇದೇ ನ್ಯಾಯವನ್ನವಲಂಬಿಸಿ ಬ್ರಾಹ್ಮಣ್ಯಾಪಾದಕ ವಾದಗಳನ್ನು ಮಾಡಕೂಡದು ಎಂದು ತಾತ್ಪರ್ಯ. **ಇಂಗನಲ್ಲಾದಪ್ಪೋದು**–ಹೀಗೆ ವ್ಯವಸ್ಥಿತ ವಿಷಯವೆಂಬುದಿಲ್ಲದಿದ್ದರೆ, **ಧರ್ಮೋತ್ತರರಾನ ಪಾಂಡವರ್ ಹಳುಕ್ಕು** ಇತ್ಯಾದಿ ಧರ್ಮಶ್ರೇಷ್ಠರಾದ ಪಾಂಡವರಿಗೆ ಒಂದು **ನಿಯತಿ ವಿಶೇಷತ್ತಾಲೇ**–ದ್ರೌಪದಿಯು ಪೂರ್ವ ಜನ್ಮದಲ್ಲಿ ನಳಾಯನಿ ಎಂಬ ಹೆಂಗಸು. ಶಿವನನ್ನು ಕುರಿತು ತಪಸ್ಸು ಮಾಡಿದಳು. ವರ ಪ್ರದಾನೋನ್ಮುಖನಾಗಿ ಶಿವನು ಎದುರಿನಲ್ಲಿ ತೋರಲು, ಕಾಮದಿಂದ, ತನಗೆ ಪತಿಯನ್ನು ಕೊಡಬೇಕೆಂದು ಐದು ಸಲ ಕೇಳಿದಳು. ಆಗ ಶಿವನು ಮುಂದಿನ ಜನ್ಮದಲ್ಲಿ ನಿನಗೆ ಐದು ಜನ ಪತಿಯರು ಏರ್ಪಡುತ್ತಾರೆಂದು ಹೇಳಿ ಅಂತರ್ಧಾನನಾದನು.

---

2) ಭುಕ್ತವತ್ಸು ದ್ವಿಜಾಗ್ರ್ಯೇಷು ನಿಷಣ್ಣೇಷು ವರಾಸನೇ ।
ಶುಚಿಸ್ತು ಪ್ರಯತೋ ಭೂತ್ವಾವಿದುರೋಽನ್ನಮು ಪಾಹರತ್ ॥
ಭಾರ. ಉದ್ಯೋಗಪರ್ವ (75-43) ಬ್ರಾಹ್ಮಣ ಶ್ರೇಷ್ಠರು ಊಟ ಮಾಡಿದ ಮೇಲೆ, ಶ್ರೇಷ್ಠವಾದ ಆಸನದಲ್ಲಿ ಕುಳಿತಿದ್ದ ಶ್ರೀ ಕೃಷ್ಣ ಪರಮಾತ್ಮನಿಗೆ ಶುಚಿಯಾಗಿಯೂ ಭಕ್ತಿಯಿಂದಲೂ ವಿದುರರು ಊಟ ಹಾಕಿದರು.

**ತಸ್ಮಾತ್ ಸ್ವೈಸ್ವೈಃ ಕರ್ಮಣ್ಯಭಿರತಸ್ಸರ್ವ, ಭಗವತ್ಕೈಙ್ಕರ್ಯ ನಿರತೋಭವ.**

**ಆಹೈಯಾಲ್ ತನ್ನಾತ್ತಾವ್ ಜಾತಿಹಳೈ ವಿಡಾದೇ ನಿನ್ರವ್ವೋ ಜಾತಿಹಳುಕ್ಕುಚಿತ ಪ್ರಕ್ರಿಯೈಯಾಲೇ ಯಥಾಧಿಕಾರಂ ಭಗವತ್ಕೈಙ್ಕರ್ಯಮ್ ಪಣ್ಣ ಪ್ರಾಪ್ತಮ್. ಮೋಹನ ಶಾಸ್ತ್ರಙ್ಗಳಿಲ್ ಶೊನ್ನ ಜಾತ್ಯುದ್ಧಾರಾದಿಹಳೈ ಪ್ರಾಮಾಣಿಕರ್ ನಿನೈಕ್ಕಲಾಹಾದು.**

**ವಿಶ್ವಾಮಿತ್ರಾದೀನಾಂ ಬ್ರಾಹ್ಮಣ್ಯ ಪ್ರಾಪ್ತಿಸ್ತು ಚರುವ್ಯತ್ಯಾಸಹೇತುನಾ.**

**ಚರುವ್ಯತ್ಯಾಸಾದಿಹಳಾನ ಶಿಲ ವಿಶೇಷ ನಿದಾನಙ್ಗಳಾಲೇ ವರುಹಿರ ವಿಶ್ವಾಮಿತ್ರಾದಿಹಳುಡೈಯ**

---

ಅದರ ಪ್ರಕಾರ ಮುಂದಿನ ಜನ್ಮದಲ್ಲಿ ದ್ರೌಪದಿಗೆ ನಿಯತಿ-ಅದೃಷ್ಟ, ಜನ್ಮಾಂತರದಲ್ಲಿ ಮಾಡಿದ ತಪಸ್ಸಿನ ಫಲವಾಗಿ ಐದು ಜನ ಗಂಡಂದಿರು ಏರ್ಪಟ್ಟರು. ಹೀಗೆ ನಿಯತಿ ವಿಶೇಷತ್ತಾಲೇ-ಅದೃಷ್ಟದ ಫಲವಾಗಿ ಪಾಂಡವರುಗಳಿಗೆ ಏರ್ಪಟ್ಟದಾರಸಾಧಾರಣ್ಯತ್ತೈಕ್ಕೊಂಡು-ಒಬ್ಬಳೇ ಹೆಂಡತಿಯೆಂಬುದನ್ನು ಕೊಂಡು, ಎಲ್ಲರೂ ಹಾಗೆ ಅನುಷ್ಠಿಸಿದರೆ, ಲೋಕದಲ್ಲಿ ಶಾಸ್ತ್ರವ್ಯವಸ್ಥೆಯು ವ್ಯಾಕುಲವಾಗುತ್ತದೆ. **ಆಹೈಯಾಲ್**-ಶಾಸ್ತ್ರದಿಂದಲೂ ನ್ಯಾಯದಿಂದಲೂ, ಜಾತಿಯು ಹೋಗುವುದಿಲ್ಲವಾದ್ದರಿಂದ, ತಮ್ಮ ತಮ್ಮ ಜಾತಿಗಳ ನಿಯಮಗಳನ್ನು ಬಿಡದೆ ಇರುವ ಆಯಾಯಾ ಜಾತಿಯವರಿಗೆ, ಜಾತ್ಯಧಿಕಾರಾನುಗುಣವಾಗಿ ಭಗವತ್ಕೈಂಕರ್ಯವು ಮಾಡಲು ಯೋಗ್ಯವಾದದ್ದು.

ಶೈವಾಗಮಾದಿಗಳಲ್ಲಿ, ದೀಕ್ಷಾ ಪ್ರವೇಶ ಮಾತ್ರೇಣ ಬ್ರಾಹ್ಮಣೋ ಭವತಿ ಧ್ರುವಮ್ ।
ಕಾಪಾಲಂ ವ್ರತಮಾಸ್ಥಾಯ ಯತಿರ್ಭವತಿ ಮಾನವಃ ॥

ಎಂದು ದೀಕ್ಷೆಯನ್ನು ಪಡೆದ ಮಾತ್ರಕ್ಕೆ ಬ್ರಾಹ್ಮಣನಾಗುತ್ತಾನೆ. ಕಪಾಲ ಸಂಬಂಧವಾದ ವ್ರತವನ್ನು ಪಡೆದ ಮಾತ್ರಕ್ಕೆ ಮನುಷ್ಯನು ಸನ್ಯಾಸಿಯಾಗುತ್ತಾನೆಂದು ಹೇಳಿರುವುದಕ್ಕೆ ಏನು ತಾತ್ಪರ್ಯವೆಂದರೆ ಅದನ್ನು **ಮೋಹನ ಶಾಸ್ತ್ರಂಗಳಿಲ್**-ಇತ್ಯಾದಿ ಅನುಗ್ರಹಿಸುತ್ತಾರೆ. ಭಗವಂತನು ರುದ್ರನನ್ನು ಕುರಿತು

ತ್ವಂಹಿ ರುದ್ರಮಹಾಬಾಹೋ ಮೋಹ ಶಾಸ್ತ್ರಾಣಿಕಾರಯ ।
ದರ್ಶಯಿತ್ವಾಲ್ಪ ಮಾಯಾಸಂ ಫಲಂ ಶೀಘ್ರಂ ಪ್ರದರ್ಶಯ ॥

ಎಂದು, "ಎಲೈ ರುದ್ರನೇ ಲೋಕದಲ್ಲಿ ಭಗವದ್ಭಾಗವತ ದ್ವೇಷಿಗಳನ್ನು ಶಿಕ್ಷಿಸಲು ಮೋಹನ ಶಾಸ್ತ್ರಗಳನ್ನು ರಚಿಸು", ಅದರಲ್ಲಿ ಅಲ್ಪಾಯಾಸದಿಂದ ಶೀಘ್ರವಾಗಿ ಫಲವನ್ನು ಪಡೆಯುವಂತೆ ಮಾಡು, ಎಂದು ಹೇಳಿರುವುದರಿಂದ, ಶೈವಾಗಮಾದಿಗಳು ಜನರನ್ನು ಮೋಹಿಸುವುದಕ್ಕೆ ಏರ್ಪಟ್ಟ ಶಾಸ್ತ್ರಗಳು. ಇವುಗಳಲ್ಲಿ ಹೇಳಿರುವ **ಜಾತ್ಯುದ್ಧಾರಾದಿಹಳೈ** – ಜಾತಿಯು ಹೋಗುತ್ತದೆ, ಹೊಸ ಜಾತಿಯುಂಟಾಗುತ್ತದೆ, ಎಂದು ಹೇಳಿರುವುದನ್ನು ಪ್ರಾಮಾಣಿಕರು ನಂಬಲಾಗದು.

### ಚರು ವ್ಯತ್ಯಾಸದಿಂದ ವಿಶ್ವಾಮಿತ್ರಾದಿಗಳಿಗೆ ಬ್ರಾಹ್ಮಣ್ಯ ಪ್ರಾಪ್ತಿ

**ಚರುವ್ಯತ್ಯಾಸಾದಿಹಳಾನ** ಇತ್ಯಾದಿ – ಆನುಶಾಸನಿಕ ಪರ್ವದಲ್ಲಿ ಹೇಳಿರುವ ಕಥಾಭಾಗ:- ವಿಶ್ವಾಮಿತ್ರರ ತಂದೆಯಾದ ಗಾಧಿಗೆ (ಕ್ಷತ್ರಿಯರಿವರು) ಬಹಳ ಕಾಲ ಮಕ್ಕಳಿರಲಿಲ್ಲ. ಪುತ್ರಾರ್ಥಿಯಾಗಿ ಕಾಡಿನಲ್ಲಿ ತಪಸ್ಸನ್ನು ಮಾಡಿದರು. ಆಗ ಅವರ ಪತ್ನಿಗೆ ಅದ್ಭುತೆಯಾದ ಹೆಣ್ಣು ಮಗುವು ಹುಟ್ಟಿತು. ಆ ಮಗುವನ್ನು ಋಚೀಕನೆಂಬ ಮಹರ್ಷಿಗೆ ಮದುವೆಮಾಡಿಕೊಟ್ಟರು. ಅವಳಿಗೂ ಮಗುವಾಗದೆ ಇದ್ದರಿಂದ, ಋಚೀಕರು ಒಂದು ಚರುವನ್ನು (ಅನ್ನವನ್ನು) ಬ್ರಾಹ್ಮಣ ತೇಜಸ್ಸಿನಿಂದ ಕೂಡಿಸಿ ಅಭಿಮಂತ್ರಿಸಿ ತನ್ನ ಹೆಂಡತಿಗೆ ಕೊಟ್ಟರು. ಮತ್ತೊಂದು ಚರುವನ್ನು ಕ್ಷತ್ರಿಯ ವೀರ್ಯದಿಂದ ಕೂಡಿಸಿ ಅಭಿಮಂತ್ರಿಸಿ, ತನ್ನ ಅತ್ತೆ ಗಾಧಿಯ ಪತ್ನಿಗೆ

**ನಿಲೈ ವೇರುಶಿಲರ್ಕ್ಕು ಕೂಡುಮೆನ್ಗೈ ವಚನ ವಿರುದ್ಧಮ್.**

**ಆೞ್ವಾರ್ಗಳ್ ಪ್ರಭಾವಮ್-ಜಾತಿ ನಿಯಮೋಲ್ಲಂಘನಾಭಾವಮ್**

**ವಿದುರಾದಿಹಳಿಲುಮ್ ಉತ್ಕೃಷ್ಟ ಪ್ರಭಾವರಾನ ಆೞ್ವಾರ್ಗಳುಡೈಯವೃತ್ತಾಂತ ವಿಶೇಷಙ್ಗಳ್ ನಮ್ಮನುಷ್ಠಾನತ್ತುಕ್ಕು ದೃಷ್ಟಾಂತ ಮಾಕ್ಕಲಾಹಾದು**

---

(ಕ್ಷತ್ರಿಯ ಸ್ತ್ರೀ) ಕೊಡಹೇಳಿದರು. ಸ್ತ್ರೀ ಚಾಪಲೆಯಾದ ಅವಳು ತನ್ನ ಮಗಳಿಗೆ ಅವಳ ಭರ್ತೃಪಕ್ಷಪಾತದಿಂದ ಒಳ್ಳೆಯ ಚರುವನ್ನು ಕೊಟ್ಟಿರಬೇಕೆಂದು ಊಹಿಸಿ, ಮಗಳಿಗೆ ಕೊಟ್ಟ ಭಾಗವನ್ನು ತಾನೂ, ತನಗೆ ಕೊಟ್ಟ ಭಾಗವನ್ನು ಮಗಳೂ ಬದಲಾಯಿಸಿ ಕೊಂಡು ಸ್ವೀಕರಿಸಿದರು. ಇದರಿಂದಾಗಿ ಕ್ಷತ್ರಿಯಸ್ತ್ರೀಯ ಹೊಟ್ಟೆಯಲ್ಲಿ ಬ್ರಾಹ್ಮಣ ತೇಜಸ್ಸಿನಿಂದ ಕೂಡಿದ ಚರುವಿನಿಂದ ಗರ್ಭೋತ್ಪತ್ತಿಯಾಗಿ ಹುಟ್ಟಿದ ವಿಶ್ವಾಮಿತ್ರ ಋಷಿಯು ತನ್ನನ್ನು ಬಹಳ ಕಾಲ ಕ್ಷತ್ರಿಯನನ್ನಾಗಿಯೇ ಭಾವಿಸಿದ್ದರೂ, ವಾಸ್ತವವಾಗಿ ಬ್ರಹ್ಮ ತೇಜಸ್ಸಿನಿಂದ ಕೂಡಿದ್ದುದು ಮರೆಯಾಗಿದ್ದು ತಪಸ್ಸಿನಿಂದ ಆವಿರ್ಭಾವವನ್ನು ಪಡೆಯಿತು. ಹಾಗೆಯೇ ಸತ್ಯವತಿಯ ಹೊಟ್ಟೆಯಲ್ಲಿ ಬದಲಾಯಿಸಿ ಬಂದ ಕ್ಷತ್ರಿಯ ಚರುವು ಋಚೀಕರಿಗೆ ತಿಳಿದು ಆ ಶಕ್ತಿಯನ್ನು ಅವರು ಅವಳ ಮಗನಾದ ಜಮದಗ್ನಿಯ ಮೂಲಕ ಅವನ ಭಾರ್ಯೆಯಲ್ಲಿ ಇಡಿಸಿ ಆ ಜಮದಗ್ನಿಗೆ ಪರಶುರಾಮನೆಂಬ ಕ್ಷತ್ರಿಯನು ಜನಿಸುವಂತೆ ಅನುಗ್ರಹಿಸಿದರು. ಹೀಗೆ ಚರು ವ್ಯತ್ಯಾಸದಿಂದ ಬ್ರಾಹ್ಮಣ ತೇಜಸ್ಸಿನಿಂದ ಕೂಡಿದ ಚರುವೇ ವಿಶ್ವಾಮಿತ್ರರ ಉತ್ಪತ್ತಿಗೆ ಕಾರಣವಾಗಿ ಅವರಿಗೆ ಜನ್ಮದಿಂದಲೇ ಬ್ರಾಹ್ಮಣ್ಯವು ಏರ್ಪಟ್ಟಿದ್ದಿತೇ ವಿನಹ ತಪಶ್ಯಕ್ತಿಯಿಂದಲ್ಲ. ಈ ರೀತಿಯಾದ ಚರು ವ್ಯತ್ಯಾಸದ **ನಿದಾನಂಗಳಾಲೇ** – ಕಾರಣಗಳಿಂದ, **ವಿಶ್ವಾಮಿತ್ರಾದಿಹಳುಡೈಯ** – ವಿಶ್ವಾಮಿತ್ರಾದಿಗಳಿಗೆ ಏರ್ಪಟ್ಟ, **ನಿಲೈ** – ಸ್ಥಿತಿಯು, **ವೇರೇಶಿಲರ್ಕ್ಕು** ಇತ್ಯಾದಿ ಇತರರಿಗೆ ಉಂಟಾಗಬಹುದು ಎಂಬುದು ವಚನ ವಿರುದ್ಧ. ಆದಿ ಶಬ್ದದಿಂದ ವೀತಿಹವ್ಯನೆಂಬ ಕ್ಷತ್ರಿಯನು ಬ್ರಾಹ್ಮಣನಾದ ಕಥೆಯನ್ನು ಮಹಾಭಾರತದಲ್ಲಿ ಓದಿ ತಿಳಿಯುವುದು.

**ಆಳ್ವಾರುಗಳು ನಿತ್ಯಸೂರಿಗಳು–ಈ ಲೋಕದಲ್ಲಿ ಅವತರಿಸಿ ಜಾತಿ ವ್ಯವಸ್ಥೆಯನ್ನು ಮೀರಲಿಲ್ಲ.**

ಬ್ರಾಹ್ಮಣೋತ್ತಮರಾದ ಮಧುರ ಕವಿ ಆಳ್ವಾರವರು ಚತುರ್ಥವರ್ಣದಲ್ಲಿ ಅವತರಿಸಿದ ನಮ್ಮಾಳ್ವಾರವರನ್ನು ಆಶ್ರಯಿಸಿ, "ಮಿಕ್ಕವೇದಿಯರ್ ವೇದತ್ತಿನುಳ್ ಪೊರುಳ್ ನಿರ್ಕಪ್ಪಾಡಿ, ಎನ್ನೆಂಜುಳ್ ನಿರುತ್ತಿನಾನ್", - ಅದಾಗಿ ವೇದದ ಅರ್ಥಗಳನ್ನು ಚನ್ನಾಗಿ ತಿಳಿದ ನಮ್ಮಾಳ್ವಾರವರು, ಆ ಅರ್ಥವನ್ನು ಒಳಗೊಂಡ ಪಾಶುರಗಳನ್ನು ಅನುಸಂಧಾನ ಮಾಡಿ, ನನ್ನ ಮನಸ್ಸಿನಲ್ಲಿ ನಿಲ್ಲುವಂತೆ ನನಗೆ ಉಪದೇಶಿಸಿದರು–ಎಂದು ಹೇಳಿಲ್ಲವೇ. ಇದರಿಂದ ಬ್ರಾಹ್ಮಣನು ಭಾಗವತ ಶೂದ್ರನನ್ನು ಆಶ್ರಯಿಸಿ ಜ್ಞಾನೋಪದೇಶ ಪಡೆದದ್ದು ವ್ಯಕ್ತವಾಗಿ, ವರ್ಣಾಶ್ರಮ ಧರ್ಮಗಳ ವ್ಯವಸ್ಥೆಯು ಭಾಗವತರಲ್ಲಿ ಇಲ್ಲವೆಂದು ತೋರುವುದಿಲ್ಲವೇ, ಎಂದರೆ ಇದಕ್ಕೆ **ವಿದುರಾದಿಹಳಿಲುಮ್** ಎಂದಾರಂಭಿಸಿ ಸಮಾಧಾನ ಹೇಳುತ್ತಾರೆ. ಅದಾಗಿ ವಿದುರಾದಿಗಳಿಗಿಂತಲೂ ಆಳ್ವಾರುಗಳು ಉತ್ಕೃಷ್ಟ ಪ್ರಭಾವರಾದ್ದರಿಂದ ಆಳ್ವಾರುಗಳ ವೃತ್ತಾಂತ ವಿಶೇಷಗಳನ್ನು ನಮ್ಮ ಅನುಷ್ಠಾನಕ್ಕೆ **ದೃಷ್ಟಾಂತಮಾಕ್ಕಲಾಹಾದು** – ದೃಷ್ಟಾಂತವನ್ನಾಗಿ ಸ್ವೀಕರಿಸಕೂಡದು. ಅವರುಗಳ ವೃತ್ತಾಂತವು ವ್ಯಕ್ತಿ ವಿಶೇಷ ನಿಯತವು.

"ಕಿಮತ್ರ ಬಹುನೋಕ್ತೇನ ಯೋಗಿನಸ್ಸರ್ವಯೋನಿಷು ।

ಪ್ರತ್ಯಕ್ಷಿತಾತ್ಮನಾಥಾನಾಂ ನೈಷಾಂಚಿಂತ್ಯಂ ಕುಲಾದಿಕಮ್ ॥"

ಎಂದು ಯೋಗಿಗಳು ಎಲ್ಲಾ ವರ್ಣಗಳಲ್ಲಿಯೂ ಜನಿಸುತ್ತಾರೆ. ಇವರುಗಳು ಭಗವಂತನನ್ನು ಸಾಕ್ಷಾತ್ಕರಿಸಿದವರು. ಇವರುಗಳ ಜಾತಿ ಮೊದಲಾದವುಗಳನ್ನು ವಿಚಾರಿಸಕೂಡದು.

**ಅವರ್‌ಹಳ್ ವೃತ್ತಾಂತಙ್ಗಳೈಯುಮ್ ಆರಾಯ್‌ನ್ದಾಲ್ ಸ್ವಜಾತಿ ನಿಯಮತ್ತೈಕ್ಕಡನ್ದ ವೈಯಿಲ್ಲೈ.**

---

**ಅವರ್‌ಹಳ್ ವೃತ್ತಾಂತಮ್** ಇತ್ಯಾದಿ ಅವರುಗಳ ವೃತ್ತಾಂತಗಳನ್ನು ಪರಿಶೀಲಿಸಿ ನೋಡಿದರೆ, ಸ್ವಜಾತಿ ನಿಯಮವನ್ನು ಅತಿಕ್ರಮಿಸಿಲ್ಲ. ಅವರುಗಳ ಪ್ರಬಂಧಗಳಲ್ಲಿ ಎಲ್ಲಿಯೂ ಪ್ರಣವೋಚ್ಚಾರಣೆ ಮಾಡಿಲ್ಲ. ತಿರುಮೞಿಶೈಯಾಳ್ವಾರವರು ಒಂದು ಸಂದರ್ಭದಲ್ಲಿ ವೇದಾಧ್ಯಯನವನ್ನು ಮಾಡುತ್ತಿದ್ದ ಬ್ರಾಹ್ಮಣರ ಮನೆಯ ಮಾರ್ಗವಾಗಿ ಹೋಗುತ್ತಿದ್ದರು. ಆಗ ಆ ಬ್ರಾಹ್ಮಣರು ಇವರು ತ್ರೈವರ್ಣಿಕರಲ್ಲವೆಂದು ತಿಳಿದು ಇವರ ಕಿವಿಗೆ ಬೀಳದಂತೆ ವೇದವನ್ನು ಹೇಳುವುದನ್ನು ನಿಲ್ಲಿಸಿದರು. ಇವರು ಹೊರಟು ಬಂದ ಮೇಲೆ ಪುನಃ ವೇದವನ್ನು ಹೇಳಲು ತೊಡಗಿದರು. ಆದರೆ ಎಲ್ಲಿ ನಿಲ್ಲಿಸಿದ್ದೇವೆಂಬುದು ಜ್ಞಾಪಕಕ್ಕೆ ಬರದೆ ಇರಲು, ಇವರಲ್ಲಿಗೆ ಬಂದು ಅಪಚಾರಕ್ಷಾಮ್ರಪಣೆ ಮಾಡಿಕೊಂಡರು. ಇವರು ಆಭಾಗದ ವೇದವನ್ನು ಉಚ್ಚರಿಸದೆ, ಅಲ್ಲಿ ಒಣಗಿಸಿದ್ದ ಕರಿ ಭತ್ತವನ್ನು ನಖದಿಂದ ಸೀಳಿತೋರಿಸಿದರು. ಆಗ ಆ ಬ್ರಾಹ್ಮಣರು 'ಕೃಷ್ಣಾನಾಂ ವ್ರೀಹೀಣಾಂ ನಖನಿರ್ಭಿನ್ನಮ್' ಎಂಬ ವೇದ ವಾಕ್ಯವನ್ನು ಜ್ಞಾಪಕ ಪಡಿಸಿಕೊಂಡು ಮುಂದೆ ಹೇಳತೊಡಗಿದರೆಂಬ ವೃತ್ತಾಂತದಿಂದಲೂ ಆಳ್ವಾರುಗಳು ತಮ್ಮ ಜಾತಿ ನಿಯಮವನ್ನು ಅತಿಕ್ರಮಿಸಲಿಲ್ಲವೆಂಬುದು ವ್ಯಕ್ತವಾಗುತ್ತದೆ.

ಬ್ರಾಹ್ಮಣರಾದ ಮಧುರ ಕವಿಯಾಳ್ವಾರ್ರವರು ಚತುರ್ಥರಾದ ನಮ್ಮಾಳ್ವಾರವರಲ್ಲಿ ಹೇಗೆ ಆಚಾರ್ಯವರಣ ಮಾಡಿ ಜ್ಞಾನೋಪದೇಶ ಪಡೆದರು ? ನಾಥಮುನಿಗಳು ಬ್ರಾಹ್ಮಣ ಶ್ರೇಷ್ಠರೂ ಯೋಗಿ ಶ್ರೇಷ್ಠರೂ ಆಗಿದ್ದು, ಶೂದ್ರ ಯೋನಿಯಲ್ಲಿ ಹುಟ್ಟಿದನಮ್ಮಾಳ್ವಾರವರನ್ನು ಹೇಗೆ ಆಚಾರ್ಯನನ್ನಾಗಿವರಿಸಿ ಜ್ಞಾನೋಪದೇಶವನ್ನು ಪಡೆದರು ? ಎಂಬ ಪ್ರಶ್ನೆಗಳಿಗೆ ವಿದುರಾದಿಗಳಿಂದ ಉತ್ಕೃಷ್ಟ ಪ್ರಭಾವರಾದ ಆಳ್ವಾರವರ ವೃತ್ತಾಂತಗಳನ್ನು ನಮ್ಮಗಳ ಅನುಷ್ಠಾನಕ್ಕೆ ದೃಷ್ಟಾಂತವಾಗಿ ತೆಗೆದುಕೊಳ್ಳಬಾರದು, ಎಂದು ಆಚಾರ್ಯರು ಅನುಗ್ರಹಿಸಿರುವ ಸಮಾಧಾನಕ್ಕೆ ತಾತ್ಪರ್ಯವೇನೆಂದರೆ:—

"ಸಂಕಲ್ಪಾದೇವ ತಚ್ಛ್ರುತೇಃ" ಎಂಬ ಬ್ರಹ್ಮ ಸೂತ್ರದಲ್ಲಿ(4–4–8) ನಿತ್ಯ ಮುಕ್ತರುಗಳೂ ಭಗವದಧೀನವಾದ ತಮ್ಮ ಸಂಕಲ್ಪದಿಂದ ಈ ಲೋಕದಲ್ಲಿ ಅವತರಿಸಿ ಚೇತನೋದ್ಧಾರಣ ಕೃತ್ಯವನ್ನು ನಡೆಸುತ್ತಾರೆಂದು ತಿಳಿಸಿರುವಂತೆ ನಮ್ಮಾಳ್ವಾರ್ ಪ್ರಭೃತಿಗಳು ನಿತ್ಯಸೂರಿಗಳ ಅವತಾರ. ಇದನ್ನು "ಅದಿ ಭಕ್ತಸ್ತು ಅನಂತ ಗರುಡಾದೀನಾಮಿಚ್ಛಾವತಾರ ಭೇದಾ ಇತಿ ಪುರಾಣ ಪ್ರಸಿದ್ಧಮ್" ಎಂದು ಶ್ರೀಮನ್ನಿಗಮಾಂತ ಮಹಾದೇಶಿಕರವರು ಶತದೂಷಣಿಯಲ್ಲಿ ಅಲೇಪಕಮತ ಭಂಗವಾದದಲ್ಲಿ ಅನುಗ್ರಹಿಸಿರುತ್ತಾರೆ. ಅದರಂತೆ ಮಧುರ ಕವಿಗಳು ನಿತ್ಯ ಸೂರಿಗಳಾದ ನಮ್ಮಾಳ್ವಾರ್ ಅವರನ್ನು ಆಚಾರ್ಯರನ್ನಾಗಿ ಆಶ್ರಯಿಸಿ ಜ್ಞಾನೋಪದೇಶವನ್ನು ಪಡೆದು ಆತ್ಮಾರಕ್ಷಾಭರವನ್ನು ಆಚಾರ್ಯ ನಿಷ್ಠೆಯಿಂದ ಅವರ ಮೂಲಕ ಭಗವಂತನಲ್ಲಿ ಸಮರ್ಪಿಸಿ ಆತ್ಮೋಜ್ಜೀವನವನ್ನು ಪಡೆದರು. ನಾಥ ಮುನಿಗಳೂ ಯೋಗ ದಶೆಯಲ್ಲಿ ನಮ್ಮಾಳ್ವಾರವರನ್ನು ಸಾಕ್ಷಾತ್ಕರಿಸಿ ಆಚಾರ್ಯವರಣ ಮಾಡಿದರು. ಆಗ ನಮ್ಮಾಳ್ವಾರವರು ತಮ್ಮ ಅವತಾರ ಸಮಾಪನವಾಗಿ 4000 ವರ್ಷಗಳಾಗಿದ್ದರೂ ಇವರಿಗೋಸ್ಕರ ಯೋಗದಶೆಯಲ್ಲಿ ಪುನಃ ಪ್ರಾದುರ್ಭವಿಸಿ ಆಚಾರ್ಯಕವನ್ನು ವಹಿಸಿದರು. ವಕುಳಧರರಾದ ನಮ್ಮಾಳ್ವಾರವರು ಕಾರಿಯ ಮಗನಾಗಿ ಹುಟ್ಟಿದ್ದರೂ,

"ನ ಭೂತ ಸಂಘಸಂಸ್ಥಾನೋದೇಹೋಸ್ಯ ಪರಮಾತ್ಮನಃ ।

ನತಸ್ಯ ಪ್ರಾಕೃತಾ ಮೂರ್ತಿಃ ಮಾಂಸ ಮೇದೋಽಸ್ಥಿಸಂಭವಾ ॥

ನೈಷಗರ್ಭತ್ವಮಾಪೇದೇ ನಯೋನ್ಯಾಮವಸತ್ ಪ್ರಭುಃ ॥

ಇತ್ಯಾದಿ ಪ್ರಮಾಣಗಳಿಂದ ಶ್ರೀ ಕೃಷ್ಣ ಪರಮಾತ್ಮನಂತೆ ಅಪ್ರಾಕೃತ ಶುದ್ಧ ಸತ್ವಮಯ ವಿಗ್ರಹ ವಿಶೇಷದಿಂದ

**1) ವಿಷ್ಣುರ್ನಿತ್ಯಂ ವಿದ್ಯಯಾತಾತ ಈಡ್ಯಸ್ತಸ್ಮಾದ್ಜ್ಞಾನಂ ನಿತ್ಯರೂಪಂ ವರೇಣ್ಯಮ್ ।**
**"ಪ್ರಾಪ್ಯಂಜ್ಞಾನಂ ಬ್ರಾಹ್ಮಣಾತ್ ಕ್ಷತ್ರಿಯಾದ್ವಾ ವೈಶ್ಯಾಚ್ಛೂದ್ರಾದ್ವಾಪಿ ನೀಚಾದಭೀಕ್ಷ್ಣಂ॥"**
**ಎನ್ಗಿರ ಶ್ಲೋಕತ್ತಿಲ್ ಭಗವದ್ಜ್ಞಾನ ಮವಶ್ಯಂ ಸಂಪಾದನೀಯ ಮಾಹೈಯಾಲೇ ಪೂರ್ವಪೂರ್ವಾzಲಾಭತ್ತಿಲ್ ಮತ್ತುಳ್ಳಾರ್ ಪಕ್ಕಲಿಲುಮ್ ಜ್ಞಾನಮಾತ್ರಂ ವಿಶದಮಾಹ ಸಂಪಾದನೀಯ ಮೆನ್ರಿವ್ವಳವು ಶೊಲ್ಲಿತ್ತು. ಇಪ್ಪಡಿಯಾನಾಲುಮ್, ವಿದ್ಯಾಮನ್ತ್ರಾದಿಹಳುಡೈಯ ಗ್ರಹಣಮ್ ಬ್ರಾಹ್ಮಣಾದಿ ವಿಷಯತ್ತಿಲೇ ಅಹವೇಣುಮೆನ್ನುಮಿಡಮ್ 2) "ಶೂದ್ರಯೋನಾ ವಹಂಜಾತೋ ನಾತೋzನ್ಯದ್ವಕ್ತುಮುತ್ಸಹೇ" ಎನ್ರು ಶ್ರೀ ವಿದುರ ವಾಕ್ಯತ್ತಾಲೇ ಸಿದ್ಧಮ್.**

---

ಕೂಡಿದ್ದರು. ನಿತ್ಯ ಸೂರಿ ಪರಿಬೃಢರು. ಭಗವಂತನ ಇಚ್ಛಾನುಗುಣ ಸ್ವೇಚ್ಛೆಯಿಂದ ಲೋಕಾನುಗ್ರಹಕ್ಕೋಸ್ಕರ ಅವತರಿಸಿದವರಾದ್ದರಿಂದ, ದಿವ್ಯ ಶರೀರ ಪರಿಗ್ರಹವು ಪ್ರಮಾಣ ಸಿದ್ಧವಾದ್ದರಿಂದ ಶೂದ್ರಯೋನಿಯಲ್ಲಿ ಜನಿಸಿದ್ದರೂ ಶೂದ್ರ ಶರೀರವಲ್ಲ. ರಾಮ ಕೃಷ್ಣಾದಿಗಳು ಮನುಷ್ಯತ್ವಾಭಿನಯ ಮಾಡಿದಂತೆ ಶೂದ್ರತ್ವವು ಕೇವಲ ಅಭಿನಯ ಮಾತ್ರ. 'ಸಂಕಲ್ಪಾದೇವ' ಎಂಬ ಸೂತ್ರದ ಪ್ರಕಾರ ಇವರ ಶರೀರವು ಅಪ್ರಾಕೃತ ದಿವ್ಯ ಶುದ್ಧ ಸತ್ವಮಯ ಶರೀರವು. ಆದ್ದರಿಂದ ಪ್ರಾಕೃತ ಜನರ ಕಣ್ಣಿಗೆ ಪ್ರಾಕೃತ ಶರೀರದಿಂದ ಕೂಡಿದವರಾಗಿ ತೋರಿದರೂ, ಮಧುರ ಕವಿಗಳಿಗೆ ಇವರು ದಿವ್ಯ ಪುರುಷರಾಗಿಯೇ ತೋರಿದರು. ಆದರಿಂದಾಗಿ ಮಧುರ ಕವಿಗಳು ಆಳ್ವಾರನ್ನು ಪರಿಪೂರ್ಣ ಆಚಾರ್ಯ ಭಕ್ತಿಯಿಂದ ಆಶ್ರಯಿಸಿ ಸಕಲ ವೇದಾಂತಾರ್ಥಗಳನ್ನು ಉಪದೇಶ ಹೊಂದಿದ ವಿಷಯದಲ್ಲಿ ಯಾವ ಶಾಸ್ತ್ರ ಬಾಧಕವೂ ಇಲ್ಲ. ಅರಣ್ಯವಾಸಿಗಳು ದಿವ್ಯ ಜ್ಞಾನದಿಂದ ಕೂಡಿದವರಾಗಿ, "ದಿವ್ಯ ಜ್ಞಾನೋಪಪನ್ನಾಸ್ತೇ ರಾಮಂದೃಷ್ಟ್ವಾ ಮಹರ್ಷಯಃ" ಇತ್ಯಾದಿಯಾಗಿ, ತತಃ ಪ್ರಾಂಜಲಯೋsಬ್ರುವನ್" ಎಂದು ಶ್ರೀರಾಮಚಂದ್ರನನ್ನು ಸರ್ವೇಶ್ವರನನ್ನಾಗಿಯೇ ತಿಳಿದು ಅಂಜಲಿ ಬದ್ಧರಾಗಿ ವಿಜ್ಞಾಪಿಸಿದರು, ಎಂದು ರಾಮಾಯಣದಲ್ಲಿ ಹೇಳಿರುವಂತೆ ಇದೂ ಸಮಂಜಸವಾಗಿದೆ. ಆದರೆ ಶ್ರೀರಾಮ ಚಂದ್ರನು ವಸಿಷ್ಠ ವಿಶ್ವಾಮಿತ್ರರಿಗೆ ಪ್ರಣಾಮಾದಿಗಳನ್ನು ಮಾಡಿದುದು ಹೇಗೆ ಸಮಂಜಸವಾಗುತ್ತದೆಯೆಂದರೆ ವಸಿಷ್ಠಾದಿಗಳು ಶ್ರೀ ರಾಮಚಂದ್ರನನ್ನು ಸರ್ವೇಶ್ವರನೆಂದು ತಿಳಿದಿದ್ದರೂ, ಲೋಕದಲ್ಲಿ ಶಾಸ್ತ್ರಮರ್ಯಾದೆಯನ್ನು ಸ್ಥಾಪಿಸಲು ಆ ಭಗವಂತನ ಅಭಿಪ್ರಾಯಾನುಸಾರ ಅವನು ಮಾಡಿದ ನಮಸ್ಕಾರಾದಿಗಳನ್ನು ಸ್ವೀಕರಿಸಿದರು. ಇದೂ ಭಗವಂತನಿಗೆ ತಾವು ಮಾಡುವ ಕೈಂಕರ್ಯವೇ ಆಗುತ್ತದೆ. **ವಿದುರಾದಿಹಳಿಲುಂ ವುತ್ಕೃಷ್ಟ ಪ್ರಭಾವರಾನ** ಎಂಬ ವಾಕ್ಯದಿಂದ ಅಕರ್ಮವಶ್ಯರಾಗಿ, ಐಚ್ಛಿಕ ಪ್ರಾದುರ್ಭಾವವನ್ನುಳ್ಳವರು ಎಂಬುದು ವಿವಕ್ಷಿತ. **ನಮ್ಮನುಷ್ಠಾನತ್ತುಕ್ಕು** – ಎಂಬುದರಿಂದ ಕರ್ಮಮೂಲ ತ್ರಿಗುಣ ಪರಿಣಾಮ ದೇಹ ಸಂಬಂಧವುಳ್ಳವರ ಅನುಷ್ಠಾನವು ಶಾಸ್ತ್ರದಿಂದಲೇ ವ್ಯವಸ್ಥಿತವು ಎಂಬುದು ಭಾವ.

1) **ವಿಷ್ಣುರ್ನಿತ್ಯಂ** ಇತ್ಯಾದಿ ಶ್ಲೋಕದಲ್ಲಿ ಭಗವದ್ಜ್ಞಾನವು ಅವಶ್ಯ ಸಂಪಾದನೀಯವಾದ್ದರಿಂದ ಬ್ರಾಹ್ಮಣ ಕ್ಷತ್ರಿಯಾದಿ ಜಾತಿಗಳಲ್ಲಿ ಪೂರ್ವ ಪೂರ್ವಾಲಾಭದಲ್ಲಿ ಇತರರ ಪಕ್ಷದಲ್ಲಿಯೂ ಜ್ಞಾನ ಮಾತ್ರವು ವಿಶದವಾಗಿ ಸಂಪಾದಿಸಬಹುದು ಎಂದು ಹೇಳಿದೆ, ಎಂಬ ಈ ವ್ಯವಸ್ಥಾಪನವು ವಿದುರರ ಹಾಗೆ ಪ್ರಾಕೃತ ದೇಹ ವಿಶಿಷ್ಟ ವಿಷಯ. ಆದ ಕಾರಣ. ಮಧುರ ಕವಿಗಳೂ ನಾಥ ಮುನಿಗಳೂ ನಿತ್ಯಸೂರ್ಯವತಾರರಾದ ಆಳ್ವಾರವರನ್ನು ಆಶ್ರಯಿಸಿ ವಿದ್ಯೋಪದೇಶವನ್ನು ಪಡೆದುದಕ್ಕೆ, ಶಾಸ್ತ್ರ ಬಾಧಕವೇನೂ ಇಲ್ಲ. **ಇಪ್ಪಡಿಯಾನಾಲುಮ್ ವಿದ್ಯಾಮಂತ್ರಾದಿಗ್ರಹಣಂ ಬ್ರಾಹ್ಮಣಾದಿ ವಿಷಯತ್ತಿಲೇ ಆಹವೇಣು ಮೆನ್ನುಮಿಡಮ್**–ಇತ್ಯಾದಿ–ವಿದ್ಯಾ ಮಂತ್ರೋಪದೇಶಗಳು ಬ್ರಾಹ್ಮಣಾದಿಗಳಲ್ಲೇ ಆಗಬೇಕೆಂಬುದು **2) ಶೂದ್ರಯೋನಾ**

---

1) ಭಾರತ ಶಾಂತಿಪರ್ವ323-88 2) ಭಾರತ ಉದ್ಯೋಗ ಪರ್ವ 41-5

## ತುಲಾಧಾರ ಧರ್ಮವ್ಯಾಧವೃತ್ತಾಂತಯೋರಪಿ ಬ್ರಾಹ್ಮಣೇಭ್ಯೋ ಧರ್ಮೋಪದೇಶ ಗ್ರಹಣಂ, ನ ತು ತತ್ತ್ವೋಪದೇಶ ಪ್ರಾಪ್ತಿಃ,

ತುಲಾಧಾರ ಧರ್ಮವ್ಯಾಧಾದಿಹಳುಮ್ ಸಂದೇಹಮ್ ಕೇಳ್ಕವಂದ ಬ್ರಾಹ್ಮಣರ್ಗೈ ತಾಙ್ಗಳ್ ಸಂಭಾವಿತ್ತು ತೀರ್ಥಯಾತ್ರೈಯಿಲೇ ಪ್ರವೃತ್ತಿಹೈತ್ತಾರ್ಗೈ ವಳಿಯಿಲೇ ಶೇರ್ತ್ತಮಾತ್ರಮ್ ಅವರ್ಹಳೈ ತ್ತೆಳಿವಿತ್ತು ವಿಟ್ಟಾರ್ ಹಳಿತ್ತನೈ; ಅಲ್ಲದು ಮುಖ್ಯಮಾನ ಅಚಾರ್ಯಕಮ್ ಪಣ್ಣಿನಾರ್ಹಳನ್ರು. ಇಪ್ಪ್ರಕಾರಙ್ಗಳ್ ಆವ್ವೋ ಇತಿಹಾಸಙ್ಗಳಿಲೇ ಕಣ್ಡುಕೊಳ್ವದು.

---

**ವಹಂಜಾತಃ** ಇತ್ಯಾದಿ ಶೂದ್ರ ಯೋನಿಯಲ್ಲಿ ನಾನು ಹುಟ್ಟಿರುತ್ತೇನೆ. ಆದರಿಂದ ಇದಕ್ಕೆ ಮೇಲೆ ಉಪದೇಶಿಸಲಾರೆ ಎಂದು ಶ್ರೀ ವಿದುರರ ವಾಕ್ಯದಿಂದ ಸಿದ್ಧವು.

### ತುಲಾಧಾರ ಧರ್ಮವ್ಯಾಧರ ವೃತ್ತಾಂತ.

ತುಲಾಧಾರ ಧರ್ಮವ್ಯಾಧಾದಿಗಳ ಹತ್ತಿರ ಬ್ರಾಹ್ಮಣರು ಉಪದೇಶವನ್ನು ಹೊಂದಲಿಲ್ಲವೇ ಎಂದರೆ **ತುಲಾಧಾರಧರ್ಮವ್ಯಾಧಾದಿಹಳುಮ್**–ಎಂದಾರಂಭಿಸಿ (ಆದಿ ಶಬ್ದದಿಂದ ಸೂತ ಪೌರಾಣಿಕರ ಗ್ರಹಣ) ಸಮಾಧಾನವನ್ನು ಹೇಳುತ್ತಾರೆ. ಅದಾಗಿ ತುಲಾಧಾರ ಧರ್ಮವ್ಯಾಧಾದಿಗಳು ಧರ್ಮ ಸಂದೇಹವನ್ನು ಕೇಳಲು ಬಂದ ಬ್ರಾಹ್ಮಣರನ್ನು ತಾವುಗಳು ಗೌರವಿಸಿ, ತೀರ್ಥಯಾತ್ರೆಯಲ್ಲಿ ದಾರಿ ತಪ್ಪಿ ಬೇರೆ ದಾರಿಯಲ್ಲಿ ಹೋಗುವವರನ್ನು ಸರಿಯಾದ ದಾರಿಯನ್ನು ತೋರಿಸಿ ಅದರಲ್ಲಿ ಸೇರಿಸಿ ಬಿಡುವಂತೆ, ಅವರುಗಳಿಗೆ ಧರ್ಮ ಸಂದೇಹಗಳನ್ನು ಹೋಗಲಾಡಿಸಿ ತಿಳುವು ಉಂಟಾಗುವಂತೆ ಮಾಡಿದರೇ ಹೊರತು, ಮುಖ್ಯವಾದ ಆಚಾರ್ಯಕವನ್ನು ಮಾಡಲಿಲ್ಲ. **ಇಪ್ರಕಾರಂಗಳ್** ಇತ್ಯಾದಿ ಈ ಪ್ರಕಾರಗಳನ್ನು ಇತಿಹಾಸಗಳನ್ನು ಓದಿ ತಿಳಿದುಕೊಳ್ಳತಕ್ಕದ್ದು.

ಆದಾಗಿ ಮಹಾ ಭಾರತದಲ್ಲಿ ಶಾಂತಿಪರ್ವ 217ನೇ ಅಧ್ಯಾಯದಿಂದ ಆರಂಭಿಸಿ, "ಜಾಜಲಿ ಎಂಬ ಬ್ರಾಹ್ಮಣನು ತೀರ್ಥಯಾತ್ರಾ ಪರನಾಗಿಯೇ ಸರ್ವತ್ರ ಸಂಚಾರ ಮಾಡಿಕೊಂಡು ನೀರಿನ ಮಧ್ಯದಲ್ಲೇ ನಿಂತುಕೊಂಡು ತಪಸ್ಸನ್ನು ಮಾಡಿದ್ದರಿಂದಲೂ ಕೆಲವು ಕ್ಲೇಶಗಳನ್ನು ಸಹಿಸಿಕೊಳ್ಳುತ್ತಿದ್ದರಿಂದಲೂ ತನಗೆ ಧರ್ಮಸಿದ್ಧಿಯುಂಟಾಯಿತೆಂದು ಉದ್ಘೋಷಿಸಿದನು. ಆಗ ಆಕಾಶದಲ್ಲಿ "ಜಾಜಲಿಯೇ ಧರ್ಮಾನುಷ್ಠಾನದಲ್ಲಿ ನೀನು ತುಲಾಧಾರನಿಗೆ ಸಮನಲ್ಲ" ಎಂಬ ಅಶರೀರಿ ವಾಕ್ಯವು ಹೇಳಿತು. ಅದನ್ನು ಕೇಳಿ ಕೋಪಗೊಂಡು ತುಲಾಧಾರರನ್ನು ನೋಡಲು ಕಾಶಿಗೆ ಹೋದನು. ಪಣ್ಯ ವಿಕ್ರಯಮಾಡಿಕೊಂಡಿದ್ದ ಅವರನ್ನು ನೋಡಿದನು. ಅವರೂ ಈ ಬ್ರಾಹ್ಮಣನನ್ನು (ಜಾಜಲಿಯನ್ನು) ನೋಡಿ, ಎದ್ದುಬಂದು ಸ್ವಾಗತಾದಿಗಳನ್ನು ಹೇಳಿ ನೀವು ಬರುತ್ತಿರುವ ಹಾಗೆಯೇ ನನಗೆ ಅಶರೀರಿಯ ಮಾತು ಕೇಳಿ ನೀವು ಕೋಪದಿಂದ ಕೂಡಿ ಬಂದಿದ್ದೀರೆಂದು ತಿಳಿಯಿತು ಎಂದು ತಿಳಿಸಿದರು. ಅದನ್ನು ಕೇಳಿ ವಿಸ್ಮಯಗೊಂಡು ಜಾಜಲಿಯು ರಸ ಪದಾರ್ಥಗಳನ್ನು ಮಾರುವ ನಿಮಗೆ ಇಂಥಹ ಜ್ಞಾನವು ಹೇಗೆ ಉಂಟಾಯಿತು ಎಂದು ಕೇಳಲು, ಆ ವೈಶ್ಯನು, ತಪಸ್ಸಿನಿಂದ ಕ್ಲೇಶಗೊಂಡೂ ಜ್ಞಾನದಿಂದ ಅಹಂಕಾರಯುಕ್ತನಾಗಿಯೂ ಇರುವ ಜಾಜಲಿಯನ್ನು ನೋಡಿ, ಜಾಜಲೀ ನಾನೂ ರಹಸ್ಯವಾದ ಸನಾತನ ಧರ್ಮವನ್ನು ತಿಳಿದಿದ್ದೇನೆಂದು

ಆರಂಭಿಸಿ ಸರ್ವಭೂತಹಿತ ಪರನಾಗಿಯೂ ಭೂತ ದ್ರೋಹ ವಂಚನೆಯಿಲ್ಲದೆಯೂ ಎಲ್ಲರಲ್ಲಿಯೂ ಸೌಹಾರ್ದ ಭಾವದಿಂದ ಕೂಡಿಯೂ, ಸ್ಪರ್ಧೆಯಿಲ್ಲದೆಯೂ ಇರುವ ಆಯಾ ಧರ್ಮಗಳನ್ನು ಎತ್ತಿ ಹೇಳಿದರು. ಅಷ್ಟೇ ವಿನಹ ತುಲಾಧಾರರು ಜಾಜಲಿಗೆ ಆಚಾರ್ಯರಾಗಿ ವರ್ತಿಸಿ ಮಂತ್ರೋಪದೇಶಾದಿಗಳನ್ನು ಮಾಡಲಿಲ್ಲವೆಂದು ಹೇಳಿದೆ.

ಹಾಗೆಯೇ ಕೌಶಿಕನೆಂಬ ಬ್ರಾಹ್ಮಣನು ತಪಸ್ವಿಯೂ ಧರ್ಮಶೀಲನೂ ಆಗಿದ್ದು ವೇದಾಧ್ಯಯನವನ್ನು ಮಾಡುತ್ತಾ ಮರದ ಕೆಳಗೆ ಕುಳಿತಿದ್ದಾಗ ಒಂದು ಕೊಕ್ಕರೆಯು ಅವನ ಮೇಲೆ ವೃಷ್ಟಿಸಿತು. ಅದನ್ನು ಕೌಶಿಕನು ಕೋಪದಿಂದ ನೋಡಿದ ಮಾತ್ರಕ್ಕೆ ಅದು ಸುಟ್ಟು ಹೋಗಿ ಕೆಳಗೆ ಬಿತ್ತು. ಅದನ್ನು ನೋಡಿ ತಾನು ಕೋಪದಿಂದ ತಪ್ಪು ಕೆಲಸ ಮಾಡಿದುದಾಗಿ ಪರಿತಪಿಸಿದನು. ನಂತರ, ಯಥಾಕಾಲ ಭಿಕ್ಷಾರ್ಥಿಯಾಗಿ ಗ್ರಾಮಕ್ಕೆ ಹೋಗಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ "ಭವತಿ ಭಿಕ್ಷಾಂದೇಹಿ" ಎಂದು ಭಿಕ್ಷೆಯನ್ನು ಯಾಚಿಸಿದನು. ಆ ಗೃಹಿಣಿಯು ಸ್ವಲ್ಪ ಕಾಲ ಇರುವಂತೆ ಹೇಳಿ ಒಳಗೆ ಹೋದಳು. ಅದೇ ಸಮಯದಲ್ಲಿ ಬಹಳ ಹಸಿವಿನಿಂದ ಕೂಡಿದವನಾಗಿ ಅವಳ ಭರ್ತಾ ಮನೆಗೆ ಬಂದನು. ಪ್ರಿಯತಮನಾದ ತನ್ನ ಭರ್ತಾವಿಗೆ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಭೋಜನ ಮಾಡಿಸಿ, ನಂತರ ಬಾಗಿಲಲ್ಲಿದ್ದ ಬ್ರಾಹ್ಮಣನಿಗೆ ಭಿಕ್ಷೆಯನ್ನು ತಂದಳು. ಬ್ರಾಹ್ಮಣನು ಬಹಳ ಕೋಪದಿಂದ ಅವಳನ್ನು "ನಿನಗೆ ಬ್ರಾಹ್ಮಣರು ಶ್ರೇಷ್ಠರಲ್ಲ. ನಿನ್ನ ಪತಿಯೇ ನಿನಗೆ ಶ್ರೇಷ್ಠನೇ? ಗೃಹಸ್ಥ ಧರ್ಮದಲ್ಲಿರುವ ನೀನು ಬ್ರಾಹ್ಮಣರನ್ನು ಅವಮಾನ ಪಡಿಸುತ್ತೀಯಾ ?" ಎಂದು ದುರುದುರನೇ ನೋಡುತ್ತಾ ಹೇಳಿದನು. ಆಗ ಮಹಾಪತಿವ್ರತೆಯಾದ ಅವಳು, ಎಲೈ ಬ್ರಾಹ್ಮಣೋತ್ತಮನೇ ! ನಾನು ಆ ಕೊಕ್ಕರೆಯಲ್ಲ, ಪತಿವ್ರತೆಯಾದ ನನ್ನ ಮುಂದೆ ನಿನ್ನ ಕೋಪವು ಏನನ್ನೂ ಮಾಡಲಾರದು ಈ ಕೋಪ ತಾಪಗಳನ್ನು ಬಿಡು. ನಿನಗೆ ಬ್ರಾಹ್ಮಣನ ಲಕ್ಷಣಗಳು ತಿಳಿಯದಿದ್ದರೆ ಮಿಥಿಲಾನಗರಕ್ಕೆ ಹೋಗಿ ಅಲ್ಲಿ ಧರ್ಮ ವ್ಯಾಧನನ್ನು ಕಂಡು ಅವನಿಂದ ಧರ್ಮವನ್ನು ತಿಳಿ" ಎಂದು ಹೇಳಿದಳು. ತನಗೆ ಮಾತ್ರ ತಿಳಿದಿದ್ದ ಆ ಕೊಕ್ಕರೆಯ ವೃತ್ತಾಂತವು ಇವಳಿಗೆ ಹೇಗೆ ತಿಳಿಯಿತೆಂದು ಆಶ್ಚರ್ಯ ಪಡುತ್ತಾ ಮಿಥಿಲಾನಗರಕ್ಕೆ ಧರ್ಮವ್ಯಾಧನನ್ನು ನೋಡಲು ಹೊರಟು ಬಂದನು.

ಇತ್ತ ಕಡೆ ಧರ್ಮವ್ಯಾಧನು ಒಂದು ಅಂಗಡಿಯಲ್ಲಿ ಮಾಂಸ ವಿಕ್ರಯ ಮಾಡುತ್ತಾ ಕುಳಿತಿದ್ದನು. ಕೌಶಿಕನು ಬಂದೊಡನೆಯೇ ಅವನನ್ನು ನೋಡಿ ಧರ್ಮವ್ಯಾಧನು. ಅವನ ಸಮೀಪಕ್ಕೆ ಬಂದು ನಮಸ್ಕರಿಸಿ ಸ್ವಾಗತವನ್ನು ಬಯಸಿದನು, ಮತ್ತು ಏಕ ಪತ್ನಿಯಾದ ಆ ಹೆಂಗಸು ಹೇಳಿದ ಮಾತಿನ ಪ್ರಕಾರ ನೀನು ಇಲ್ಲಿಗೆ ಬಂದಿರುವ ಕಾರಣ ತಿಳಿಯಿತು ಎಂದು ಹೇಳಿದನು. ಇದನ್ನು ಕೇಳಿ ಕೌಶಿಕನಿಗೆ ಇದು ಎರಡನೇ ಆಶ್ಚರ್ಯವೆಂದು ತೋರಿತು. ಅನಂತರ ಮಾಂಸ ವಿಕ್ರಯಣವನ್ನು ಮುಗಿಸಿ, ತನ್ನ ಅಂಗಡಿಯನ್ನು ಮುಚ್ಚಿ ಧರ್ಮವ್ಯಾಧನು ಕೌಶಿಕನನ್ನು ಮನೆಗೆ ಕರೆತಂದು ಒಂದು ಆಸನದಲ್ಲಿ ಕುಳ್ಳಿರಿಸಿ, ಉಪಚಾರ ಮಾಡಿದನು. ಅನಂತರ ಕೌಶಿಕನು ಧರ್ಮವ್ಯಾಧರೇ ನಿಮಗೆ ಈ ಮಾಂಸ ವಿಕ್ರಯರೂಪವಾದ ಕುತ್ಸಿತ ಕರ್ಮವು ಪ್ರಾಪ್ತವಾಗಿರುವುದನ್ನು ನೋಡಿ ನಾನು ಅನುತಪಿಸುತ್ತೇನೆಂದು ಹೇಳಲು, ಧರ್ಮವ್ಯಾಧರು ಇದು ಕುಲೋಚಿತವಾದ ಧರ್ಮ, ಸ್ವಜಾತ್ಯನುಗುಣವಾದ ಈ ಧರ್ಮವು ಪರಿತ್ಯಾಜ್ಯವಲ್ಲ. ಮಾತಾಪಿತೃಗಳ ಶುಶ್ರೂಷೆಯೂ ಸಹ ಅವಶ್ಯ ಕರ್ತವ್ಯ, ಇತ್ಯಾದಿಯಾಗಿ ಕೆಲವು ಧರ್ಮಗಳನ್ನು ಉಪದೇಶಿಸಿದರು. ಇಷ್ಟೇ ವಿನಹ ಧರ್ಮವ್ಯಾಧರು ಇವರಿಗೆ ಆಚಾರ್ಯಕವನ್ನು ಮಾಡಲಿಲ್ಲ. ಮಂತ್ರೋಪದೇಶಾದಿಗಳನ್ನೂ ಮಾಡಲಿಲ್ಲವಾದ್ದರಿಂದ ವರ್ಣಾಶ್ರಮ ಧರ್ಮಗಳ ವೈಪರೀತ್ಯವಾದ ಯಾವ ಅನುಷ್ಠಾನವೂ ಏರ್ಪಡಲಿಲ್ಲ. ಇದರಿಂದ ಪೂರ್ವಪಕ್ಷಿಯು ಭಾಗವತನಿಗೆ ಜಾತ್ಯಪಗಮಾದಿಗಳು ಏರ್ಪಡುತ್ತವೆ, ಎಂಬ ತಮ್ಮ ಇಷ್ಟಾರ್ಥವನ್ನು ಸಾಧಿಸಲಾಗುವುದಿಲ್ಲ.

## "ಭಕ್ತಿರಷ್ಟವಿಧಾ" ಇತಿ ಗರುಡ ಪುರಾಣವಾಕ್ಯಸ್ಯ ಸಮಂಜಸಾರ್ಥಃ

1) "ಭಕ್ತಿರಷ್ಟವಿಧಾ ಹ್ಯೇಷಾ ಯಸ್ಮಿನ್ ಮ್ಲೇಚ್ಛೇಪಿ ವರ್ತತೇ ।
ತಸ್ಮೈದೇಯಂ ತತೋಗ್ರಾಹ್ಯಂ ಸ ಚ ಪೂಜ್ಯೋಯಥಾಹ್ಯಹಮ್ ।

ಎನ್ರದುವುಮ್ ಕನ್ಯಾಪ್ರದಾನ ಪರಮನ್ರು ; ಜ್ಞಾನ ಪ್ರದಾನ ಪರಮೆನ್ರು ವ್ಯಾಖ್ಯಾನಮ್ ಪಣ್ಣಿನಾರ್ ಹಳ್.

"ಪೂಜ್ಯಃ" ಎನ್ಗಿರ ಶಬ್ದಮುಮ್ ಸಾಧಾರಣ ಮಾಹೈಯಾಲ್ ಭಾಗವತತ್ವ ಮುಂಡಾನಾಲ್, ಸರ್ವರುಮ್ ಶಾಸ್ತ್ರಮ್ ಶೊನ್ನ ಮಟ್ಟುಕ್ಕಳಿಲೇ ಆದರಣೀಯರ್. ಇವರ್‌ಹಳೈ ಸಜಾತಿಯರೋಡೊಕ್ಕ ನಿನೈತ್ತು ಅವಜ್ಞೈ ಪಣ್ಣಿನಪೋದು ನರಕಮಾಮೆನ್ರಿವ್ವಳವಿಲೇ ತಾತ್ಪರ್ಯಮ್. ಇವ್ವರ್ಥತ್ತೈ 2) "ಯಶೂದ್ರಂ ಭಗವದ್ಭಕ್ತಂ" ಎನ್ರು ತುಡಙ್ಗಿ ಮಹರ್ಷಿ ಸಙ್ಗ್ರಹಿತ್ತಾರ್. ಆಹೈಯಾಲ್ ಜಾತಿ ವ್ಯವಸ್ಥೈ ಕುಲೈಯಾದೇ ನಿರ್ಕ ಭಾಗವತ ಪ್ರಭಾವಂ ಕಣ್ಡುಕೊಳ್ವದು

---

## ಭಕ್ತಮ್ಲೇಚ್ಛನನ್ನು ಪೂಜಿಸಬೇಕೆಂಬ ವಚನ ತಾತ್ಪರ್ಯ

ಹೀಗೆಯೇ 1) ಭಕ್ತಿರಷ್ಟವಿಧಾಹ್ಯೇಷಾ ಇತ್ಯಾದಿ ಹೇಳಿರುವುದೂ ಕನ್ಯೆಯನ್ನು ಕೊಟ್ಟು ಸಂಬಂಧ ಬೆಳೆಸುವುದು, ಸಹಪಂಕ್ತಿಭೋಜನ ಮಾಡುವುದು ಎಂದಲ್ಲ. ಜ್ಞಾನಪ್ರದಾನ, ಜ್ಞಾನಸ್ವೀಕರಣ ಪರವೆಂದು ವ್ಯಾಖ್ಯಾನ ಮಾಡಿರುತ್ತಾರೆ. "ಪೂಜ್ಯಃ" ಎಂಬ ಶಬ್ದವೂ ಸಾಧಾರಣಾರ್ಥಪರ. ಭಾಗವತತ್ವವು ಏರ್ಪಟ್ಟರೆ ಸರ್ವರೂ **ಶಾಸ್ತ್ರವು** ಹೇಳಿದ ರೀತಿಯಲ್ಲಿ- **ಮಟ್ಟುಕ್ಕಳಿಲೇ** - ಶಾಸ್ತ್ರ ಮರ್ಯಾದೆಯೊಳಗೆ, **ಆದರಣೀಯರ್** - ಗೌರವ್ಯರು ಎಂದರ್ಥ. **ಇವರ್‌ಹಳೈ** ಇತ್ಯಾದಿ ಇವರುಗಳನ್ನು ಆ ಜಾತಿಯವರೊಡನೆ ಸಮವಾಗಿ ನೆನೆದ ಅವಮಾನ ಮಾಡಿದರೆ, ನರಕವು ಉಂಟಾಗುತ್ತದೆ, ಎಂದು **ಇಷ್ಟೇ** ತಾತ್ಪರ್ಯ.

**ಇವ್ವರ್ಥತ್ತೈ** ಈ ಅರ್ಥವನ್ನು, 1) **ಯಶೂದ್ರಂಭಗವದ್ಭಕ್ತಂ** ಎಂದು ಆರಂಭಿಸಿ ಮಹರ್ಷಿಯು ಸಂಗ್ರಹಿಸಿದ್ದಾರೆ. ಅಂದರೆ ಶೂದ್ರಾದಿ ಜಾತಿ ಸಾಮಾನ್ಯ ದೃಷ್ಟಿಯಿಂದ ಅಗೌರವಿಸದೆ ಭಗವದ್ಭಕ್ತರೆಂಬ

---

1) ಗಾರುಡ ಪುರಾಣ-ಎಂಟು ಪ್ರಕಾರವಾದ ಭಗವದ್ಭಕ್ತಿ - ಅಂದರೆ ಸತ್ಕಥಾ ಭಗವದ್ಧ್ಯಾನ ಅರ್ಚನೆ, ಪ್ರದಕ್ಷಿಣ ಪ್ರಣಾಮ, ಭಕ್ತಿಯಿಂದ ಪೂರಿತವಾದ ಗದ್ಗದ ಸ್ವರನೇತ್ರಾಂಗಗಳ ವಿಕಾರ, ಹಣ ಸಂಪಾದನೆಗೆ ಭಗವಂತನನ್ನು ಪೂಜಿಸಿ ಅದರಿಂದ ತನ್ನ ಜೀವನವನ್ನು ನಡೆಸದೆ ಇರುವುದು ಅಂದರೆ ಕೇವಲ ಭಗವತ್ಪ್ರೀತ್ಯರ್ಥವಾಗಿ ಅವನ ಪೂಜಾದಿಗಳನ್ನು ಮಾಡುವುದು, ಈ ರೀತಿಯಾದ ಭಕ್ತಿಯಾರಲ್ಲಿದೆಯೋ ಅವನು ಮ್ಲೇಚ್ಛನಾದರೂ ಅವನಿಗೆ ಜ್ಞಾನೋಪದೇಶ ಮಾಡಬಹುದು, ಅವನಿಂದ ಧರ್ಮಗಳನ್ನು ತಿಳಿಯಬಹುದು. ಭಗವಂತನಾದ (ನನ್ನನ್ನು) ಪೂಜಿಸುವಂತೆ ಅವನನ್ನೂ ಪೂಜಿಸುವುದು-ಗೌರವಿಸುವುದು ಎಂದರ್ಥ.

2) ಯಶೂದ್ರಂಭಗವದ್ಭಕ್ತಂ ನಿಷಾದಂ ಶ್ವಪಚಂತಥಾ ।
ವೀಕ್ಷತೇ ಜಾತಿ ಸಾಮಾನ್ಯಾತ್ ಸಯಾತಿನರಕಂ ನರಃ ॥ ಇತಿಹಾಸ ಸಮುಚ್ಚಯ 27-26

ಭಗವದ್ಭಕ್ತನಾದ ಶೂದ್ರನನ್ನೂ, ಬೇಡನನ್ನೂ ನಾಯಿ ಮಾಂಸ ತಿನ್ನುವವನನ್ನೂ, ಆಯಾಯಾ ಜಾತಿ ದೃಷ್ಟಿಯಿಂದ ಮಾತ್ರ ನೋಡುವವನು ನರಕಕ್ಕೆ ಹೋಗುತ್ತಾನೆ.

### ಪರಪಕ್ಷಮನೂದ್ಯ ಜಾತಿವ್ಯವಸ್ಥಾಂ ಸ್ಥಾಪಯತಿ ದ್ವಾಭ್ಯಾಂ ಶ್ಲೋಕಾಭ್ಯಾಂ

**ಅತೋ ಜಾತೇ ರ್ನಿಕೃಷ್ಟಾಯಾ ಸ್ಸರ್ವಸ್ಯಾವಾ ವಿನಾಶತಃ ।**
**ಸಾಜಾತ್ಯಂ ವಿಷ್ಣು ಭಕ್ತಾನಾ ಮಿತಿ ಮಂದ ಮಿದಂ ವಚಃ ॥೪೭॥**
**ವೈಷ್ಣವತ್ವೇನ ಮಾನ್ಯತ್ವಂ ಸಮಾಸಂ ಮುನಿಸಮ್ಮತಮ್ ।**
**ಜಾತ್ಯಾದಿ ಧ್ವಂಸತ ಸ್ಸಾಮ್ಯಂ ಮುಕ್ತಿಕಾಲೇ ಭವಿಷ್ಯತಿ ॥೪೮॥**

### ಜಾತಿ ತದನುಗುಣವೃತ್ತ ವ್ಯವಸ್ಥಾಯಾಂ ಪ್ರಮಾಣಾನಿ

**ಭಗವದ್ಗೀತಾದಿಹಳಿಲುಮ್ 1) "ಸ್ತ್ರಿಯೋವೈಶ್ಯಾಸ್ತಥಾ ಶೂದ್ರಾಸ್ತೇಪಿ ಯಾಂತಿ ಪರಾಂಗತಿಮ್"**

---

ಮಾನಸ ಪ್ರತಿಪತ್ತಿಯನ್ನು – ಗೌರವವನ್ನು ತೋರಿಸಬೇಕು, ಎಂದು ತಾತ್ಪರ್ಯ. **ಆಹೈಯಾಲ್** ಇತ್ಯಾದಿ ಆದ್ದರಿಂದ ಜಾತಿ ವ್ಯವಸ್ಥೆಯು **ಕುಲೈಯಾದೇನಿರ್ಕ** – ಹೋಗದೇ ಇರುವಾಗ, ಭಾಗವತ ಪ್ರಭಾವವನ್ನು ತಿಳಿದುಕೊಳ್ಳುವುದು. **ಈ** ವಿಷಯಗಳನ್ನು ಕಾರಿಕಾ ರೂಪದಲ್ಲಿ ಸಂಗ್ರಹಿಸುತ್ತಾರೆ. **ಅತೋಜಾತೇ ರ್ನಿಕೃಷ್ಟಾಯಾಃ** ಇತ್ಯಾದಿ. ಅದಾಗಿ ನಿಕೃಷ್ಟವಾದ ಶೂದ್ರತ್ವಾದಿ ಜಾತಿಯ ಅಥವಾ **ಸರ್ವಸ್ಯಾವಾಜಾತೇಃ**– ನಿಕೃಷ್ಟ ಮತ್ತು ಉತ್ಕೃಷ್ಟವಾದ ಎಲ್ಲಾ ಜಾತಿಯ, **ವಿನಾಶತಃ** – ನಾಶದಿಂದ **ವಿಷ್ಣುಭಕ್ತಾನಾಂ ಸಾಜಾತ್ಯಂ**– ವಿಷ್ಣುಭಕ್ತರಿಗೆ ಸಾಜಾತ್ಯವು – ಸಮಾನ ಜಾತಿತ್ವವು ಉಂಟಾಗುತ್ತದೆ, **ಇತಿ** – ಎಂಬ **ಇದಂವಚಃ** – ಈ ಮಾತು **ಮಂದಂ** ಯುಕ್ತಿಯುಕ್ತವಲ್ಲ. ಅದಾಗಿ ಕೆಲವರು, ನಿಕೃಷ್ಟರಾದ ಶೂದ್ರಾದಿಗಳು ವಿಷ್ಣು ಭಕ್ತರಾಗಿ ಭಾಗವತರಾದರೆ ಅವರಿಗೆ ಭಕ್ತಿಯಮಾಹಾತ್ಮ್ಯದಿಂದ ನಿಕೃಷ್ಟ ಜಾತಿತ್ವವು ಹೋಗಿ ಉತ್ಕೃಷ್ಟ ಜಾತಿತ್ವವು ಉಂಟಾಗಿ ಬ್ರಾಹ್ಮಣತ್ವಾದಿ ಸಾಜಾತ್ಯವು ಉಂಟಾಗುತ್ತದೆ, ಎಂದು ಹೇಳುತ್ತಾರೆ. ಮತ್ತೆ ಕೆಲವರು ಒಬ್ಬನಿಗೆ ಭಕ್ತಿಯುಂಟಾದರೆ ಅವನಲ್ಲಿರುವ ಬ್ರಾಹ್ಮಣತ್ವ, ಶೂದ್ರತ್ವಾದಿ ಸರ್ವಜಾತಿಯೂ ತೊಲಗಿ, ವಿಷ್ಣು ಭಕ್ತನೆಂಬ ಆಕಾರದಲ್ಲಿ, ಸಾಜಾತ್ಯವುಂಟಾಗುತ್ತದೆ, ಎಂದೂ ಹೇಳುತ್ತಾರೆ. ಈ ರೀತಿಯಾಗಿ ಹೇಳುವವರ ಮಾತು ಮೇಲೆ ನಿರೂಪಿಸಿದ ರೀತಿಯಲ್ಲಿ ಯುಕ್ತಿ ಯುಕ್ತವಲ್ಲವೆಂದು ತಾತ್ಪರ್ಯ. ವಸ್ತುಸ್ಥಿತಿ ಏನೆಂದರೆ **ವೈಷ್ಣವ ತ್ವೇನಮಾನ್ಯತ್ವಂ** ಇತ್ಯಾದಿ ಹೇಳಿರುವಂತೆ ವಿಷ್ಣುಭಕ್ತನಾಗಿರುವುದರಿಂದ **ಮಾನ್ಯತ್ವಂ** – ಪೂಜೆಗೆ – ಗೌರವಕ್ಕೆ **ಅರ್ಹತ್ವಂ** – ಯೋಗ್ಯತ್ವವು **ಸಮಾಸಂ ಮುನಿಸಮ್ಮತಮ್** – ಸಮಾನವೆಂಬುದು, "ಸ ಚ ಪೂಜ್ಯೋ ಯಥಾಹ್ಯಹಂ", ಎಂಬ ವಚನವನ್ನು ಎತ್ತಿತೋರಿಸಿದ ಮುನಿಗಳಿಗೆ ಸಮ್ಮತವಾದದ್ದು. **ಜಾತ್ಯಾದಿಧ್ವಂಸತಃ** ಇತ್ಯಾದಿ – ಜಾತ್ಯಾದಿಗಳು ಹೋಗಿ, **ಮುಕ್ತಿಕಾಲೇ ಸಾಮ್ಯಂ ಭವಿಷ್ಯತಿ** – ಮೋಕ್ಷದಲ್ಲಿ ಸಾಮ್ಯವು ಉಂಟಾಗುತ್ತದೆ.

### ಭಾಗವತರಲ್ಲಿಯೇ ಜಾತಿ ವ್ಯತ್ಯಾಸಾದಿಗಳಿಗೆ ಪ್ರಮಾಣಗಳು

**ಭಗವದ್ಗೀತಾದಿಹಳಿಲುಮ್** ಇತ್ಯಾದಿ, ಭಗವದ್ಗೀತಾದಿಗಳಲ್ಲಿಯೂ 1) **ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾ**

---

1) ಗೀತೆ (9-32) ಮಾಂಹಿಪಾರ್ಥವ್ಯ ಪಾಶ್ರಿತ್ಯಯೇಽಪಿಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಽಪಿಯಾಂತಿ ಪರಾಂಗತಿಮ್ ॥

ಸ್ತ್ರೀ ವೈಶ್ಯ ಶೂದ್ರರುಗಳು ಪಾಪ ಯೋನಿಗಳಾಗಿದ್ದರೂ ನನ್ನನ್ನು ಆಶ್ರಯಿಸಿ ಉತ್ತಮ ಗತಿಯನ್ನು ಪಡೆಯುತ್ತಾರೆ. ನನ್ನನ್ನು ಆಶ್ರಯಿಸಿದ ಮಾತ್ರಕ್ಕೆ ಜಾತಿಯು ಹೋಗುವುದಿಲ್ಲವೆಂಬುದು ವ್ಯಕ್ತವಾಗುತ್ತದೆಯಲ್ಲವೇ. "ಕಿಂಪುನಃ ಬ್ರಾಹ್ಮಣಾಃ ಪುಣ್ಯಾಃ"-ಎಂದಾರಂಭಿಸಿ ಅನಂತರ ಭಗವದ್ಭಕ್ತರಾದ ಬ್ರಾಹ್ಮಣರನ್ನು ವ್ಯಪದೇಶಿಸಿರುವುದರಿಂದ ಜಾತಿ ವ್ಯವಸ್ಥೆಯು ಹುಟ್ಟಿನಿಂದ ಏರ್ಪಡುತ್ತದೆ **ಎಂಬುದು ವ್ಯಕ್ತ.**

2) ಸ್ವೇಸ್ವೇ ಕರ್ಮಣ್ಯಭಿರತ ಸ್ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಸ್ಸಿದ್ಧಿಂ ಯಥಾ ವಿಂದತಿ ತಚ್ಛೃಣು ।
3) ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ"
4) ತಸ್ಮಾತ್ಸಪ್ರಣವಂ ಶೂದ್ರೋ ಮನ್ತ್ರಾಣಿ ನಕೀರ್ತಯೇತ್"
5) ವರ್ಣಾಶ್ರಮಾಚಾರ ವತಾಪುರುಷೇಣ ಪರಃಪುಮಾನ್ ।
ವಿಷ್ಣುರಾರಾಧ್ಯತೇ ಪಂಥಾ ನಾನ್ಯಸ್ತತ್ತೋಷಕಾರಕಃ ।"

6) "ನ ಚಲತಿ ನಿಜವರ್ಣಧರ್ಮತೋಯಃ" ಇತ್ಯಾದಿಹಳಾಲೇ ಭಾಗವತನುಕ್ಕೇ ಯಥಾಪೂರ್ವಂ ಜಾತಿ ವ್ಯವಸ್ಥೈಯುಂ, ಅದಕ್ಕನುರೂಪಮಾನ ವೃತ್ತವ್ಯವಸ್ಥೈಯುಂ, ಸುಸ್ಪಷ್ಟಮಾಹಚ್ಚೊಲ್ಲಪಟ್ಟದು,

---

ಎಂಬುದು ಭಗವಂತನನ್ನು ಆಶ್ರಯಿಸಿದವರಿಗೆ ಜಾತಿ ವ್ಯವಸ್ಥೆಯುಂಟೆಂಬುದಕ್ಕೆ ಪ್ರಮಾಣ 2) **ಸ್ವೇಸ್ವೇಕರ್ಮಣ್ಯಭಿರತಃ** 3) **ಸ್ವಕರ್ಮಣಾತಮಭ್ಯರ್ಚ್ಯ** ಇತ್ಯಾದಿ ವಚನಗಳು ಆಯಾಯಾ ಜಾತಿಯವರು, ತಮ್ಮ ತಮ್ಮ ಜಾತ್ಯನುಗುಣವಾದ ಆಚಾರದಲ್ಲಿದ್ದುಕೊಂಡು ತಮ ತಮಗೆ ಶಾಸ್ತ್ರಗಳಲ್ಲಿ ವ್ಯವಸ್ಥಿತಗಳಾದ ಕರ್ಮಗಳಲ್ಲಿ ನಿರತರಾಗಿದ್ದು ಆಕರ್ಮಗಳಿಂದ ಭಗವಂತನನ್ನು ಅರ್ಚಿಸಿ ಸಿದ್ಧಿ ಪಡೆಯುವುದಕ್ಕೆ ಪ್ರಮಾಣಗಳು 4) **ತಸ್ಮಾತ್ಸಪ್ರಣವಂ ಶೂದ್ರೋ** ಇತ್ಯಾದಿಯು ಭಾಗವತರಗಳಲ್ಲಿಯೇ ಶೂದ್ರ ಭಾಗವತರಿಗೆ ಪ್ರಣವ ಸಹಿತ ಮಂತ್ರೋಚ್ಚಾರಣೆಯನ್ನು ನಿಷೇಧಿಸಿರುವುದರಿಂದ, ಜಾತಿಯು ಭಾಗವತರೆಂಬ ಆಕಾರದಿಂದ ಹೋಗುವುದಿಲ್ಲವೆಂಬುದಕ್ಕೆ ಪ್ರಮಾಣ 5) **ವರ್ಣಾಶ್ರಮಾಚಾರವತಾ** ಇತ್ಯಾದಿ ಪ್ರಮಾಣವು ತಮ್ಮ ತಮ್ಮ ವರ್ಣ-ಜಾತಿಗೂ, ಆಚಾರಕ್ಕೂ ಉಚಿತಗಳಾದ ಕರ್ಮಗಳಿಂದಲೇ ಭಗವಂತನು ಆರಾಧ್ಯನೆಂದು ಹೇಳಿ, ಅದಕ್ಕೆ ವಿರುದ್ಧವಾದ ಕರ್ಮಾನುಷ್ಠಾನಗಳು ಅವನನ್ನು ಸಂತೋಷಪಡಿಸುವುದಿಲ್ಲವೆಂದು ಹೇಳಿರುವುದರಿಂದ, ವರ್ಣಾಶ್ರಮ ಧರ್ಮಪರಿಪಾಲನವೇ ಭಗವದಾರಾಧನವೆಂದು ಪ್ರಮಾಣೀಕರಿಸುತ್ತದೆ. 6) **ನಚಲತಿ ನಿಜವರ್ಣ ಧರ್ಮತೋಯಃ**-ಇತ್ಯಾದಿ ವಚನವು ವೈಷ್ಣವನು ತನ್ನ ವರ್ಣ (ಜಾತಿ) ಬಿಡಕೂಡದೆಂದು ಹೇಳುತ್ತದೆ. **ಇತ್ಯಾದಿಹಳಾಲೇ**-ಇತ್ಯಾದಿ ಪ್ರಮಾಣಗಳಿಂದ

---

2) ಗೀತೆ (18-45) ತನ್ನ ತನ್ನ ಕರ್ಮಗಳನ್ನು ಪ್ರೀತಿಯಿಂದ ಆಚರಿಸುವವನು ಸಿದ್ಧಿಯನ್ನು ಪಡೆಯುತ್ತಾನೆ.

3) ಗೀತೆ (18-46) ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥
ಈ ಪ್ರಪಂಚಕ್ಕೆ ಯಾರು ಕಾರಣವೋ ಯಾವನು ಎಲ್ಲವನ್ನೂ ವ್ಯಾಪರಿಸಿದ್ದಾನೋ ಆ ಭಗವಂತನನ್ನು ತನ್ನ ವರ್ಣಾಶ್ರಮ ಧರ್ಮಗಳಿಗೆ ಅನುಗುಣವಾದ ಕರ್ಮಗಳಿಂದ ಪೂಜಿಸಿ ಮನುಷ್ಯನು ಸಿದ್ಧಿ ಪಡೆಯುತ್ತಾನೆ.

4) ಭಾರತ ಆಶ್ವಮೇಧಿಕ ಪರ್ವ (118-14) ಪ್ರಣವದಿಂದ ಕೂಡಿದ ಮಂತ್ರಗಳನ್ನು (ಭಗವನ್ನಾಮಗಳನ್ನು) ಶೂದ್ರನು ಉಚ್ಚರಿಸಬಾರದು.

5) ವಿ ಪು. (3-8-9) ವರ್ಣಾಶ್ರಮ ಧರ್ಮಗಳಿಂದ ಕೂಡಿದ ಪುರುಷನು ಅನುಷ್ಠಿಸುವ ವರ್ಣಾಶ್ರಮ ಧರ್ಮಾನುಷ್ಠಾನಗಳಿಂದ ಪರಮ ಪುರುಷನು ಆರಾಧಿಸಲ್ಪಡುತ್ತಾನೆ. ಅವುಗಳನ್ನು ಬಿಟ್ಟು ಬೇರೆಯವು ಅವನಿಗೆ ಪ್ರೀತಿಯನ್ನುಂಟು ಮಾಡುವುದಿಲ್ಲ.

6) ನಚಲತಿ ನಿಜವರ್ಣ ಧರ್ಮತೋಯಃ ಸಮಮತಿ ರಾತ್ಮ ಸುಹೃದ್ವಿಪಕ್ಷ ಪಕ್ಷೇ ।
ನಹರತಿ ನ ಚಹಂತಿ ಕಿಂಚಿದುಚ್ಚೈಃ ಸಿತಮನಸಂ ತಮವೇಹಿ ವಿಷ್ಣು ಭಕ್ತಮ್ ॥
ವಿ. ಪು (3-7-20) ತನ್ನ ಜಾತಿಗೆ ಅನುಗುಣವಾದ ಧರ್ಮದಿಂದ ಚಲಿಸದವನೂ ತನ್ನ ಸ್ನೇಹಿತರಲ್ಲಿಯೂ ಶತ್ರುಗಳಲ್ಲಿಯೂ ಸಮತ್ವ ಬುದ್ಧಿಯುಳ್ಳವನೂ, ಯಾರನ್ನೂ ಹಿಂಸಿಸದೆ ಯಾರ ಸ್ವತ್ತನ್ನೂ ಅಪಹರಿಸದವನೂ ವಿಷ್ಣು ಭಕ್ತನು.

**ಇಪ್ಪಡಿ ಭಾಗವತತ್ವಮಾಹಿರ ಗುಣಮುಮ್, ಅಡಡಿಯಾಹ ವರುಂ ಪುರುಷಾರ್ಥ ವಿಶೇಷಮುಮ್ ಸಮಾನಮಾಯಿರುಕ್ಕ ಜಾತಿವಿಶೇಷಙ್ಗಳುಮ್, ವೃತ್ತಿವಿಶೇಷಙ್ಗಳುಮ್, ನಿತ್ಯ ವ್ಯವಸ್ಥಿತಙ್ಗಳೆನ್ನು ಮಿಡಮ್, 7) "ಶೂದ್ರಸ್ಸಾಧುಃ ಕಲಿಸ್ಸಾಧುಃ" ಇತ್ಯಾದಿಹಳಿಲುಮ್ ಪ್ರಸಿದ್ಧಮ್.**

**ಶಾರೀರ, ಮಾನಸರೂಪ ಬ್ರಾಹ್ಮಣ್ಯಾಭಿಧಾನೇನ ಸರ್ವಶಾಸ್ತ್ರಾವಿರೋಧಿತ್ವಮ್.**

**"ತಮ ಶ್ಶೂದ್ರೇ ರಜಃಕ್ಷತ್ರೇ ಬ್ರಾಹ್ಮಣೇ ಸತ್ವಮುತ್ಕಟಮ್" ಇತ್ಯಾದಿಹಳಿಲ್ ಶೊಲ್ಲುಹಿರ**

---

ಭಾಗವತನಿಗೇ ಯಥಾಪೂರ್ವಂ ಜಾತಿವ್ಯವಸ್ಥೆಯೂ ಅದಕ್ಕೆ ಅನುರೂಪವಾದ **ವೃತ್ತ ವ್ಯವಸ್ಥೈಯುಮ್**– ಧರ್ಮಾನುಷ್ಠಾನಗಳ ವ್ಯವಸ್ಥೆಯೂ, ಸುಸ್ಪಷ್ಟವಾಗಿ ಹೇಳಲ್ಪಟ್ಟಿದೆ.

**ಇಪ್ಪಡಿ ಭಾಗವತತ್ವಮಾಹಿರ** ಇತ್ಯಾದಿ – ಹೀಗೆ ಭಾಗವತತ್ವವೆಂಬ ಗುಣವೂ, ತನ್ನಿಮಿತ್ತವಾಗಿ ಬರುವ ಪುರುಷಾರ್ಥ ವಿಶೇಷವೂ ಸಮಾನವಾಗಿರುವಾಗ ಜಾತಿವಿಶೇಷಗಳೂ, ವೃತ್ತಿ ವಿಶೇಷಗಳೂ ನಿತ್ಯವ್ಯವಸ್ಥಿತಗಳೆಂಬುದು, 7) **ಶೂದ್ರಸ್ಸಾಧುಃ ಕಲಿಸ್ಸಾಧುಃ** ಇತ್ಯಾದಿಗಳಲ್ಲಿ ಪ್ರಸಿದ್ಧ. ಆದಾಗಿ ಬ್ರಾಹ್ಮಣರು ಅಗ್ನಿಹೋತ್ರಾದಿಗಳನ್ನು ಮಾಡಿ ಬಹುಕ್ಲೇಶದಿಂದ ಸಾಧಿಸುವ ಪುರುಷಾರ್ಥವನ್ನು, ಶೂದ್ರನು ಅಲ್ಪಾಯಸದಿಂದ ತನ್ನ ವರ್ಣಾಶ್ರಮಗಳಿಗನುರೂಪವಾದ ಧರ್ಮದಿಂದ ಸಾಧಿಸುತ್ತಾನೆ. ಅವನಿಗೆ ಅಗ್ನಿಹೋತ್ರಾದಿಗಳು ವಿಧಿಸಲ್ಪಟ್ಟಿಲ್ಲವಾದ್ದರಿಂದ, ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಸೇವೆಯಿಂದಲೇ ಆ ಧರ್ಮಗಳನ್ನು ಪಡೆಯಬಹುದು. ಇದು ಸುಲಭವಾದ ವ್ಯಾಪಾರ. ಇದರಿಂದ ಶೂದ್ರನು ಸಾಧುಃ– ಇತರರು ಗುರುತರವಾದ ಉಪಾಯದಿಂದ ಸಾಧಿಸುವ ಕರ್ಮವನ್ನು ಲಘುತರೋಪಾಯದಿಂದ ಶೂದ್ರನು ಸಾಧಿಸುತ್ತಾನೆಂದರ್ಥ. ಹಾಗೆಯೇ ಕೃತಾದಿ ಯುಗಗಳಲ್ಲಿ ಯಜ್ಞಯಾಗಾದಿಗಳನ್ನು ಬಹಳ ಕಷ್ಟಪಟ್ಟು ಮಾಡಿ ಸಂಪಾದಿಸುವ ಪುರುಷಾರ್ಥವನ್ನು ಕಲಿಯುಗದಲ್ಲಿ ಕೇವಲ ಭಗವನ್ನಾಮೋಚ್ಚಾರಣೆಯಿಂದ ಸಂಪಾದಿಸಬಹುದಾದ್ದರಿಂದ ಕಲಿಸ್ಸಾಧುಃ – ಕಲಿಯುಗವು ಸಾಧುವಾದದ್ದು. ಭಾಗವತರೆಲ್ಲರಿಗೂ ಜಾತಿಯು ನೀಗುವುದಾದರೆ, ಶೂದ್ರ ಭಾಗವತನಿಗೂ ಆ ಜಾತಿಯು ನೀಗಬೇಕು. ಆಗ ಶೂದ್ರತ್ವಜಾತಿಯೂ ತತ್ಪ್ರಯುಕ್ತವಾದ ಲಘೂಪಾಯದಿಂದ ಸಾಧ್ಯವಾದ ಪುರುಷಾರ್ಥತ್ವರೂಪ ಸಾಧುತ್ವವು ಘಟಿಸಲಾರದು.

**ಶರೀರ ಸಂಬಂಧವಾದ ಜಾತಿಯು ಬೇರೆ ಮಾನಸಿಕ ಪ್ರಶಂಸಾ ರೂಪವಾದ ಜಾತಿಯು ಬೇರೆ.**

ಇಲ್ಲಿಯವರೆಗೆ ಜಾತಿ ವ್ಯವಸ್ಥೆಯು ಹುಟ್ಟಿನಿಂದ ಏರ್ಪಟ್ಟಿದೆ. ಪ್ರಶಂಸೆಯಾಗಿ ಶೂದ್ರನನ್ನು ಬ್ರಾಹ್ಮಣನನ್ನಾಗಿ ಸ್ತೋತ್ರ ಮಾಡುವುದೂ ಬ್ರಾಹ್ಮಣನನ್ನು ಶೂದ್ರನನ್ನಾಗಿ ನಿಂದಿಸುವುದೂ ಗುಣ ನಿಮಿತ್ತವಾಗಿ ಮಾನಸಿಕವೆಂದು ಹೇಳಿಯಾಯಿತು. ಶರೀರ ಸಂಬಂಧವಾದ ಬ್ರಾಹ್ಮಣ್ಯಕ್ಕೆ ನಿಮಿತ್ತವನ್ನು **ತಮಶ್ಶೂದ್ರೇ** ಎಂದಾರಂಭಿಸಿ ನಿರೂಪಿಸುತ್ತಾರೆ. ಆದಾಗಿ ಪ್ರತಿಯೊಬ್ಬನ ಶರೀರವೂ ಸತ್ವರಜಸ್ತಮೋ ಗುಣಗಳಿಂದ ಕೂಡಿರುತ್ತದೆ. ಅದರಲ್ಲಿ ಬ್ರಾಹ್ಮಣನ ಶರೀರದಲ್ಲಿ ಸತ್ವ ಗುಣವು ರಜಸ್ತಮೋ ಗುಣಗಳಿಗಿಂತ ಅಧಿಕ. ಕ್ಷತ್ರಿಯನ ಶರೀರದಲ್ಲಿ ರಜೋಗುಣವು ಬಾಕಿ ಎರಡು ಗುಣಗಳಿಗಿಂತ ಅಧಿಕ. ವೈಶ್ಯನ ಶರೀರದಲ್ಲಿ ತಮೋಗುಣವು ಬಾಕಿ ಎರಡು

---

7) ಶೂದ್ರಸ್ಸಾಧುಃ ಕಲಿಸ್ಸಾಧುಃ ಇತ್ಯೇವಂ ಶೃಣ್ವತಾಂವಚಃ ।
ತೇಷಾಂ ಮುನೀನಾಂ ಭೂಯಶ್ಚಮಮಜ್ಜ ಚ ನದೀಜಲೇ ॥ ವಿ, ಪು (6–2–6)

ಶೂದ್ರನು ಒಳ್ಳೆಯವನು (ಅದೃಷ್ಟ ಶಾಲಿ) ಕಲಿಯುಗವು ಒಳ್ಳೆಯದು ಎಂದು ಋಷಿಗಳಿಗೆ ಕೇಳಿಸುವಂತೆ ವ್ಯಾಸರು ಗಂಗಾನದಿಯಲ್ಲಿ ಮುಳುಗಿ ಸ್ನಾನ ಮಾಡುತ್ತಾ ಹೇಳಿದರು.

**ಪಡಿಯೇ ಸತ್ತ್ವಾದಿಗುಣ ತಾರತಮ್ಯವತ್ತಾನ ಶರೀರತ್ತಿಲ್ ಬ್ರಾಹ್ಮಣ್ಯಾದಿಹಳ್ ವೇರೇ; ಮನಸ್ಸಿಲ್ ಸತ್ತ್ವಾದಿಗುಣ ವಿಶೇಷ ಮಡಿಯಾಹ ಸರ್ವಜಾತಿಹಳಿಲುಮ್ ಪ್ರಶಂಸಾ ವಾಕ್ಯಜ್ಗಳಾಲೇ ಶೊಲ್ಲಪ್ಪಟ್ಟ ಬ್ರಾಹ್ಮಣ್ಯಾದಿಹಳುಮ್ ವೇರೇ.**

## ಉಭಯ ವಿಧ ಬ್ರಾಹ್ಮಣ್ಯಯೋಃ ವಿವೇಕಃ

**ಇವತ್ತಿಲ್ ಶಾರೀರಗುಣ ವಿಶೇಷ ಮಡಿಯಾಹ ವ್ಯವಸ್ಥಿತಜ್ಗಳಾನ ಶಾರೀರಜಾತಿ ವಿಶೇಷಜ್ಗಳ್ ಉತ್ಪತ್ತಿ ಸಿದ್ಧಜ್ಗಳಾಯ್ ಮರಣಾನ್ತಮಾಹ ಸ್ಥಿರಜ್ಗಳಾಯಿರುಕ್ಕುಮ್. ಮಾನಸಮಾನ ಸತ್ತ್ವಾದಿ ಗುಣೋನ್ಮೇಷ ಮಡಿಯಾಹ ಚೊಲ್ಲುಹಿರ ಬ್ರಾಹ್ಮಣ್ಯಾದಿಹಳ್ ಸರ್ವಜಾತಿಹಳುಕ್ಕುಮ್ ಸಂಭಾವಿತಜ್ಗಳಾಯ್, ಪ್ರಹ್ಲಾದಿಹಳುಕ್ಕು ಜನ್ಮಸಿದ್ಧಜ್ಗಳಾಯ್ ನೀಕ್ಕಿಯುಳ್ಳಾರ್ಕ್ಕು ಆಚಾರ್ಯಾದಿ ಸಂಬಂಧ ಹೇತುಕ್ಕಳಾಲೇ ಅಗಂತುಕಜ್ಗಳಾಯಿರುಕ್ಕುಮ್.**

**ಇದಿಲ್ ಶಾರೀರಜಾತಿ ವಿಶೇಷಜ್ಗಳೈ ಇಟ್ಟು ಶಿಲಶಾಸ್ತ್ರಜ್ಗಳ್ ನಿಯತಜ್ಗಳಾಮ್. ಮಾನಸಮಾನ ಬ್ರಾಹ್ಮಣ್ಯಾದಿಹಳೈಯಿಟ್ಟು ಅವತ್ತುಕ್ಕನುರೂಪಮಾನ ಪುರುಷಾರ್ಥ ತದುಪಾಯಜ್ಗಳುಮ್ ಪ್ರಶಂಸಾದಿಹಳುಮ್ ಸರ್ವಜಾತಿಯಿಲುಮ್ ಸಂಭಾವಿತಜ್ಗಳಾಮ್.**

---

ಗುಣಗಳಿಗಿಂತ ಸ್ವಲ್ಪ ಅಧಿಕ, ಶೂದ್ರನ ಶರೀರದಲ್ಲಿ ತಮೋಗುಣವು ಬಾಕಿ ಎರಡು ಗುಣಗಳಿಗಿಂತ ಬಹಳ ಅಧಿಕ.ಆದ್ದರಿಂದ ಶರೀರ ಸಂಬಂಧವಾದ ಬ್ರಾಹ್ಮಣ್ಯಾದಿಗಳು ಬೇರೆ. **ಮನಸ್ಸಿಲ್**–ಇತ್ಯಾದಿ ಮನಸ್ಸಿನಲ್ಲಿ ಸತ್ತ್ವಾದಿ ಗುಣ ವಿಶೇಷಗಳ ನಿಮಿತ್ತನಾಗಿ ಸರ್ವಜಾತಿಗಳಲ್ಲಿಯೂ,"ಚಂಡಾಳ ಮಪಿ ವೃತ್ತಸ್ಥಂ ತಂದೇವಾ ಬ್ರಾಹ್ಮಣಂ ವಿದುಃ"ಎಂದು ಪ್ರಶಂಸೆಯಿಂದ ಹೇಳುವ ಬ್ರಾಹ್ಮಣ್ಯಾದಿಗಳು ಬೇರೆ. ಇವು ಗುಣೋತ್ಕರ್ಷದಿಂದ ಮಾಡುವ ಮಾನಸಿಕ ಪ್ರಶಂಸೆಗಳು.

**ಇವಟ್ರಿಲ್** ಇತ್ಯಾದಿ ಶಾರೀರ, ಮಾನಸ ಬ್ರಾಹ್ಮಣಾದಿಗಳಲ್ಲಿ **ಶಾರೀರ ಗುಣವಿಶೇಷ ಮಡಿಯಾಹ** ಇತ್ಯಾದಿ ಶರೀರದಲ್ಲಿ ಕೂಡಿರುವ ಉತ್ಕಟ ಸತ್ತ್ವ, ಉತ್ಕಟ ರಜಸ್ಸು, ಸ್ವಲ್ಪಾಧಿಕ ತಮಸ್ಸು, ಎಂಬ ಗುಣಗಳ ನಿಮಿತ್ತನಾಗಿ ವ್ಯವಸ್ಥಿತಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಜಾತಿಗಳು, **ಉತ್ಪತ್ತಿಸಿದ್ಧಂಗಳಾಯ್** – ಹುಟ್ಟಿನಿಂದ ಏರ್ಪಟ್ಟಿರುವುವುಗಳಾಗಿ ಮರಣಾಂತ, ಶರೀರದೊಡನೆ ವ್ಯಾಪ್ತಗಳಾಗಿ ಸ್ಥಿರಗಳಾಗಿರುತ್ತವೆ. **ಮಾನಸಮಾನ** ಇತ್ಯಾದಿ ಮನಸ್ಸಿನಲ್ಲುಂಟಾದ ಸತ್ತ್ವ ರಜಸ್ತಮೋಗುಣಗಳಲ್ಲಿ ಒಂದೊಂದರ **ಉನ್ಮೇಷ ಮಡಿಯಾಹ** – ಆಧಿಕ್ಯ ನಿಮಿತ್ತವಾಗಿ, ಹೇಳಲ್ಪಡುವ ಪ್ರಶಂಸಾರೂಪ ಬ್ರಾಹ್ಮಣ್ಯಾದಿಗಳು ಸರ್ವ ಜಾತಿಗಳಿಗೂ ಸಂಭಾವಿತಗಳು. ಇವು ಪ್ರಹ್ಲಾದಾದಿಗಳಿಗೆ ಜನ್ಮಸಿದ್ಧಗಳು. ಜನ್ಮದಿಂದ ಬ್ರಾಹ್ಮಣನಾಗಿ ಹುಟ್ಟಿದವನು ಉತ್ಕಟ ಸತ್ತ್ವದಿಂದ ಕೂಡಿ ಪ್ರಶಂಸಾತ್ಮಕ ಮಾನಸಿಕ ಗೌರವಕ್ಕೂ ಪಾತ್ರನು. **ನೀಕ್ಕಿಯುಳ್ಳಾರುಕ್ಕು** – ಇತರರಿಗೆ ಆಚಾರ್ಯನ ಸಂಬಂಧ, ಉಪದೇಶ ಇವುಗಳಿಂದ **ಆಗಂತುಕಂಗಳಾಯಿರುಕ್ಕುಮ್** – ಮಾನಸಿಕ ಪ್ರಶಂಸೆಯಿಂದ ಉದ್ಭವಗಳಾಗಿರುತ್ತವೆ.

**ಇದಿಲ್** ಇತ್ಯಾದಿ – ಇದರಲ್ಲಿ, ಶರೀರ ಸಂಬಂಧವಾದ ಜಾತಿ ವಿಶೇಷಗಳನ್ನು ಕಾರಣವನ್ನಾಗಿಟ್ಟುಕೊಂಡು "ವಸಂತೇ ಬ್ರಾಹ್ಮಣ ಮುಪನಯೀತ", ವಸಂತ ಋತುವಿನಲ್ಲಿ ಬ್ರಾಹ್ಮಣನಿಗೆ ಉಪನಯನ ಮಾಡಬೇಕು.– ರಾಜಾ ರಾಜ ಸೂಯೇನ ಯಜೇತ – ರಾಜನು ರಾಜಸೂಯ ಯಾಗವನ್ನು ಮಾಡಬೇಕು, ಇತ್ಯಾದಿ **ಶಿಲಶಾಸ್ತ್ರಂಗಳ್**– ಕೆಲವು ಶಾಸ್ತ್ರಗಳು, **ನಿಯತಂಗಳಾಮ್** – ಶಾರೀರಕ ಬ್ರಾಹ್ಮಣತ್ವ ಕ್ಷತ್ರಿಯತ್ವ ವಿಶಿಷ್ಟ ಪುರುಷನ ವಿಷಯದಲ್ಲಿಯೇ ಪ್ರವರ್ತಿಸತಕ್ಕವು. **ಮಾನಸಮಾನ** ಇತ್ಯಾದಿ – ಮಾನಸಿಕವಾಗಿ "ನಶೂದ್ರಾ ಭಗವದ್ಭಕ್ತಾ ವಿಪ್ರಾ

## ಮಾನಸ ಬ್ರಾಹ್ಮಣ್ಯಾದೌ ನಿಂದಾ ಪ್ರಶಂಸಯೋಃಕಥನಂ

ಇದಿಲ್ ಬ್ರಾಹ್ಮಣಾದಿಹಳ್ ಪಕ್ಕಲಿಲೇ ಮಾನಸ ವಿಪರೀತಾಕಾರಙ್ಗಳ್‌ವನ್ದಾಲ್, ಶಮದಮಾದಿ ಯೋಗ್ಯಮಾಹ ಶಾಸ್ತ್ರಸಿದ್ಧಮಾನ ಜನ್ಮತ್ತಿಲೇ ಪಿರನ್ದು ತಪ್ಪಿನಾನೆನ್ರು ಮಿಹವುಮ್ ನಿಂದೈ ನಡಕ್ಕುಮ್ ಜಾತ್ಯನ್ತರಙ್ಗಳಿಲೇ ಪಿರನ್ದು ಗುಣೋತ್ತರನಾಯ್ ಪ್ಪೋನಾನಾಹಿಲ್ 1) "ಏತೈಸ್ಸಮೇತಶ್ಶೂದ್ರೋಽಪಿವಾರ್ಧಕೇ ಮಾನಮರ್ಹತಿ" ಇತ್ಯಾದಿಹಳಿರ್ಪಡಿಯೇ ಪ್ರಶಂಸೈ ಮಿಹವುಮ್ ನಡಕ್ಕುಮ್.

ಇವತ್ತಿಲ್ ಶಾರೀರಮಾಯುಮ್ ಮಾನಸಮಾಯುಮ್ ವರುಮುತ್ಕರ್ಷಂ ಗರ್ವಹೇತುವಾ ಮಾಹಿಲ್ ಅನರ್ಥಕರಮಾಮ್. ಇವ್ವಿರಣ್ಡು ವ[illegible]ಯಾಲು ಮುಳ್ಳ ವಪಕರ್ಷಂ 2) "ಕುಲಙ್ಗಳಾಯ

---

ಭಾಗವತಾಃ ಸ್ಮೃತಾಃ" ಇತ್ಯಾದಿ, "ಭಗವದ್ಭಕ್ತರು ಶೂದ್ರರಲ್ಲ, ಬ್ರಾಹ್ಮಣರು ಎಂದು ಸ್ಮರಿಸಲ್ಪಡತಕ್ಕವರು", ಎಂಬ ಪ್ರಶಂಸಾ ರೂಪವಾದ ಬ್ರಾಹ್ಮಣ್ಯಾದಿಗಳನ್ನು ಹೇಳಿ, ಅವುಗಳಿಗೆ ಅನುರೂಪವಾದ ಪುರುಷಾರ್ಥಗಳೂ ಅವುಗಳ ಉಪಾಯಗಳೂ. ಪ್ರಶಂಸಾದಿಗಳೂ ಸರ್ವಜಾತಿಯಲ್ಲಿಯೂ **ಸಂಭಾವಿತಂಗಳಾಮ್**– ಉಂಟಾಗಬಹುದು.

ನಿಂದಾ ಪ್ರಶಂಸಾ ಪ್ರಯೋಜಕಗಳಾದ ಆಕಾರಗಳನ್ನು **ಇದಿಲ್** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಈ ರೀತಿಯಾದ ಶಾರೀರಕ, ಮಾನಸಿಕ ಜಾತಿಗಳಲ್ಲಿ, **ಬ್ರಾಹ್ಮಣಾದಿಹಳ್ ಪಕ್ಕಲಿಲೇ** – ಬ್ರಾಹ್ಮಣ ಶರೀರ ದಿಂದ ಕೂಡಿದವರುಗಳಿಗೆ, ನಾನು ಉತ್ಕೃಷ್ಟ ಜಾತಿಯನೆಂಬ ಮಾನಸಿಕವಾದ ವಿಪರೀತವಾದ ಸ್ವಾಭಿಮಾನಗಳು ಬಂದರೆ, ಶಮದಮಾದಿಗಳಿಗೆ ಯೋಗ್ಯವಾದ ಶಾಸ್ತ್ರ ಸಿದ್ಧವಾದ ಜನ್ಮದಲ್ಲಿ ಹುಟ್ಟಿ, ಅದಕ್ಕನುಗುಣವಾಗಿಲ್ಲದೆ ಜಾರಿಬಿದ್ದನು ಎಂದು ಬಹಳ ನಿಂದಿಸಲ್ಪಡುತ್ತಾನೆ. ಹಾಗೆಯೇ **ಜಾತ್ಯಂತರಂಗಳಿಲೇ** ಇತ್ಯಾದಿ ಇತರ ಜಾತಿ ಗಳಲ್ಲಿ ಹುಟ್ಟಿ, ಸತ್ವೋತ್ತರನಾಗಿ ವರ್ತಿಸಿದರೆ, 1) **ಏತೈಸ್ಸಮೇತಶ್ಶೂದ್ರೋಽಪಿ** – ಸಾತ್ವಿಕ ಶೀಲನಾದ ಶೂದ್ರ ಜಾತಿಯವನೂ ಕೂಡ, ವೃದ್ಧ ದಶೆಯಲ್ಲಿ ಗೌರವ್ಯನು, ಎಂದು ಹೇಳುವಂತೆ ಬಹಳ ಪ್ರಶಂಸೆಯು ಉಂಟಾಗುತ್ತದೆ.

**ಇವಟ್ರಿಲ್**– ಇತ್ಯಾದಿ ಈ ಎರಡು ವಿಧವಾದ ಅಂದರೆ ಬ್ರಾಹ್ಮಣಾದಿ ಶರೀರ ಸಂಬಂಧದಿಂದ ಉಂಟಾದ ಉತ್ಕರ್ಷವೂ, ಗುಣ ವೃತ್ತಗಳಿಂದ ಶೂದ್ರಾದಿಗಳಿಗೆ ಉಂಟಾದ ಪ್ರಶಂಸಾ ರೂಪ ಬ್ರಾಹ್ಮಣ್ಯ ನಿಮಿತ್ತವಾದ ಉತ್ಕರ್ಷವೂ, ಗರ್ವಕ್ಕೆ ಕಾರಣವಾದರೆ ಅನರ್ಥಕರ. **ಇವ್ವಿರಂಡುವ[illegible]ಯಾಲುಮ್**–ಈ ಶಾರೀರಕ ಮಾನ ಸಿಕ ಸಂಬಂಧವಾಗಿ ಉಂಟಾಗುವ ಅಪಕರ್ಷವು. 2) **ಕುಲಂಗಳಾಯುವೀರಿರಂಡಿಲ್** ಎಂಬ ಪಾಶುರದಂತೆ,

---

1) ವಿದ್ಯಾಕರ್ಮ ವಯೋ ಬಂಧು ವಿತ್ತೈರ್ಮಾನ್ಯಾ ಯಥಾಕ್ರಮಮ್ ।
ಏತೈಃ ಸಮೇತಶ್ಶೂದ್ರೋಽಪಿ ವಾರ್ಧಕೇ ಮಾನ ಮರ್ಹತಿ ॥ ಯಾಜ್ಞ. ಸ್ಮೃತಿ. (1-116)
ವಿದ್ಯೆ, ಕರ್ಮ, ವಯಸ್ಸು, ಬಂಧು, ಹಣ ಇವುಗಳಿಂದ ಯಥಾಕ್ರಮ ಪೂಜಿಸಲ್ಪಡತಕ್ಕವರು. ಇವುಗಳಿಂದ ಕೂಡಿದ ಶೂದ್ರನೂ ವೃದ್ಧಾಪ್ಯದಲ್ಲಿ ಪೂಜಿಸಲ್ಪಡತಕ್ಕವನು

2) ಕುಲಂಗಳಾಯ ಈರಿರಂಡಿಲ್ ಒನ್ರಿಲುಂ ಪಿರಂದಿಲೇನ್
ನಲಂಗಳಾಯ ನರ್ಕಲೈಹಳ್ ನಾಲಿಲುಂ ನವಿನ್ರಿಲೇನ್ ।
ಪುಲನ್‌ಗಳೈಂದುಂ ವೆನ್ರಿಲೇನ್ ಪೊರಿಯಿಲೇನ್ ಪುನಿದಾ
ನಿನ್ರಿಲಂಗುಪಾದ ಮನ್ರಿ ಮತ್ತೋರ್ ಪಟ್ರಿಲೇನ್ ಎಮ್ಮೀಶನೇ॥ ತಿರುಚ್ಚಂದ ವಿರುತ್ತಮ್ 90,
ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಗಳಲ್ಲಿಯೂ ಹುಟ್ಟದೆ, ಸಂಕರ ಜಾತಿಯವನು. ಕ್ಷೇಮಗಳನ್ನುಂಟು ಮಾಡುವ ಧರ್ಮಾರ್ಥಕಾಮ ಮೋಕ್ಷ ಸಾಧಕಗಳಾದ ವಿದ್ಯೆಗಳನ್ನು ಅಭ್ಯಸಿಸಿಲ್ಲ, ಇಂದ್ರಿಯಗಳನ್ನು ಜಯಿಸಿಲ್ಲ, ಜ್ಞಾನವಿಲ್ಲದವನು, ಎಲೈ ಪವಿತ್ರನೇ ಹೀಗೆ ಜ್ಞಾನ ಶಕ್ತಿಗಳಿಲ್ಲದ ಆಕಿಂಚನ್ಯಾಽನನ್ಯ ಗತಿಕನು. ಎಲೈ ಸ್ವಾಮಿಯೇ ನಿನ್ನ ಪಾದಗಳು ವಿನಹ ಬೇರೆ ಯಾವುದೂ ಆಶ್ರಯವಿಲ್ಲ.

ವೀರಿರಿಣ್ಡಿಲ್" ಎನ್ಗಿರಪಾಟ್ಟಿಲುಮ್ 2) "ಜನಿತ್ವಾಹಂ ವಂಶೇ" ಎನ್ಗಿರ ಶ್ಲೋಕತ್ತಿಲುಮ್ ಶೊಲ್ಲು ಹಿರಪಡಿಯೇ ತಾೞನಿನ್ರನಿಲೈತೆಳಿನ್ದು ಕಾರ್ಪಣ್ಯತ್ತೈವಿಳೈತ್ತು ಅಕಿಂಚನಾಧಿಕಾರಮಾನ ಉಪಾಯ ವಿಶೇಷತ್ತಿಲೇ ಮೂಟ್ಟುಮಾಹಿಲ್ ಪುರುಷಾರ್ಥಕಾರಣ ಮಾಹೈಯಾಲೇ ಶ್ಲಾಘ್ಯಮಾಮ್.

ಇಪ್ಪಡಿಕ್ಕು ಜಾತಿವ್ಯವಸ್ಥೈಯುಮ್ ಜಾತ್ಯನುರೂಪಮಾನ ವೃತ್ತ ವ್ಯವಸ್ಥೈಯುಮ್ ಉಣ್ಡಾನಾಲುಮ್, ಸರ್ವರುಕ್ಕುಂ ಭಾಗವತ ನಿಬಂಧನಮಾಹ ಮುನ್ಬು ಸಮರ್ಥಿತ್ತ ಉದ್ದೇಶ್ಯತ್ವ ಪ್ರತಿಪತ್ತಿಕ್ಕು ವಿರೋಧಮಿಲ್ಲೈ

ಭಾಗವತೇಷು ಏಕಾನ್ತೀ ಮಾನ್ಯಃ, ಪರಮೈಕಾನ್ತೀತು ಸರ್ವ ಶ್ರೇಷ್ಠಃ

ಇಭ್ಭಗವತ್ಪರರಿಲ್ 3) "ಐಕಾಂತ್ಯಂ ಭಗವತ್ಯೇಷಾಂ ಸಮಾನ ಮಧಿಕಾರಿಣಾಮ್" ಎನ್ಗಿರ ಪಡಿಯೇ, ದೇವತಾಂತರ ಸ್ಪರ್ಶ ಮತ್ತವರ್‌ಹಳ್ ಏಕಾಂತಿಹಳ್ ; ಅವರ್‌ಹಳಿಲ್ ವೈತ್ತುಕ್ಕೊಂಡು

---

ಅಪಕೃಷ್ಟಜಾತಿ ನಿಮಿತ್ತವಾಗಿ ಉಂಟಾಗುವ ಅನುಸಂಧಾನವೂ, 2) **ಜನಿತ್ವಾಹಂ ವಂಶೇ**–ಎಂಬ ಶ್ಲೋಕದಲ್ಲಿ ಹೇಳಿರುವಂತೆ ಉತ್ಕೃಷ್ಟ ಜಾತಿಯಲ್ಲಿ ಹುಟ್ಟಿಯೂ ನೈಚ್ಯಾ (ಅಪಕರ್ಷ)ನು ಸಂಧಾನವೂ, ತಾನು ಇರುವ ಸ್ಥಿತಿಯನ್ನು ತಿಳಿದು, ಕಾರ್ಪಣ್ಯವನ್ನು ಅಧಿಕರಿಸಿ ಅಕಿಂಚನಾಧಿಕಾರವಾದ ಉಪಾಯ **ವಿಶೇಷತ್ತಿಲೇ**–ಶರಣಾಗತ್ಯನುಷ್ಠಾನದಲ್ಲಿ ಪ್ರವರ್ತಿಸಿದರೆ, ಪುರುಷಾರ್ಥಕ್ಕೆ ಕಾರಣವಾದ್ದರಿಂದ, ಶ್ಲಾಘ್ಯವು. **ಇಪ್ಪಡಿಕ್ಕು**–ಈ ರೀತಿಯಾಗಿ, ಜಾತಿ ವ್ಯವಸ್ಥೆಯೂ ಜಾತ್ಯನುರೂಪವಾದ ವೃತ್ತ ವ್ಯವಸ್ಥೆಯೂ ಉಂಟಾದರೂ, ಸರ್ವರಿಗೂ ಮೇಲೆ ಸಮರ್ಥಿಸಿದ ಭಾಗವತತ್ವ ಕಾರಣವಾದ, ಉದ್ದೇಶ್ಯತ್ವ ಪ್ರತಿಪತ್ತಿಗೆ - ಭಾಗವತರೆಂಬ ಗೌರವ ಭಾವನೆಗೆ, ಯಾವ ವಿರೋಧವೂ ಇಲ್ಲ

## ಭಾಗವತರಲ್ಲಿ ಉಂಟಾಗುವ ಉತ್ಕರ್ಷಾಪಕರ್ಷಗಳು

**ಇಭ್ಭಗವತ್ಪರರಿಲ್**– ಈ ಭಾಗವತರಲ್ಲಿ ಭಗವಂತನಲ್ಲಿ ಐಶ್ವರ್ಯ ಕೈವಲ್ಯ ಮೋಕ್ಷಗಳನ್ನು ಅಪೇಕ್ಷಿಸುವ ಅಧಿಕಾರಿಗಳಿಗೆ 3) **ಐಕಾಂತ್ಯಂ ಭಗವತ್ಯೇಷಾಂ** ಇತ್ಯಾದಿ ಹೇಳಿರುವಂತೆ ಐಕಾಂತ್ಯವು ಸಮಾನ. ಐಕಾಂತ್ಯವೆಂದರೆ ಇವರುಗಳಿಗೆ ಭಗವಂತನು ಐಶ್ವರ್ಯಾದಿಗಳಿಗೆ ಉಪಾಯನು ಎಂದರ್ಥ. ಇವರುಗಳು ದೇವತಾಂತರ ಸ್ಪರ್ಶವಿಲ್ಲದವರು

---

2) ಜನಿತ್ವಾಹಂ ವಂಶೇ ಮಹತಿ ಜಗತಿಖ್ಯಾತಯಶಸಾಂ
ಶುಚೀನಾಂ ಯುಕ್ತಾನಾಂ ಗುಣ ಪುರುಷ ತತ್ವ ಸ್ಥಿತಿವಿದಾಮ್ ॥
ನಿಸರ್ಗಾದೇವತ್ವಚ್ಚರಣಕಮಲೈಕಾಂತ ಮನಸಾಂ
ಅಧೋಧಃ ಪಾಪಾತ್ಮಾ ಶರಣ ದನಿಮಜ್ಜಾಮಿ ತಮಸಿ ॥ ಆಳವಂದಾರ್ ಸ್ತೋತ್ರ 61.

ಲೋಕದಲ್ಲಿ ಬಹಳ ಖ್ಯಾತಿ ಪಡದು ಅರ್ಥಶುದ್ಧಿಯುಳ್ಳವರೂ, ಪರದೇವತಾ ಜ್ಞಾನದಿಂದ ವಿಶುದ್ಧ ಮನಸ್ಕರೂ, ಆದ, ಚೇತನಾಚೇತನೇಶ್ವರ ಸ್ವರೂಪ ಸ್ವಭಾವಗಳನ್ನು ಚನ್ನಾಗಿ ತಿಳಿದು ಭಗವಂತನಲ್ಲೇ ನಿತ್ಯಯೋಗವನ್ನು ಆಶಂಸಿಸುವರೂ. ಸ್ವಭಾವತಃ ಭಗವತ್ಪಾದಾರವಿಂದಗಳಲ್ಲೇ ಏಕಾಂತ ಮನಸ್ಕರಾದ ವರ, ವಂಶದಲ್ಲಿ ಹುಟ್ಟಿ, ಪಾಪಾಚರಣೆಯಲ್ಲಿ ಬುದ್ಧಿಯುಳ್ಳವನಾಗಿ, ಅಜ್ಞಾನಾಂಧಕಾರದಲ್ಲಿ ಕೆಳಗಡೆ ಮುಳುಗಿ ಹೋಗಿದ್ದೇನೆ, ನನಗೆ ನೀನು ರಕ್ಷಕನಾಗು. ನಿನ್ನಲ್ಲಿ ನ್ಯಸ್ತಭರನು. ಆ ಕಿಂಚನ್ಯಾನನ್ಯ ಗತಿ ರೂಪ ಅಧಿಕಾರವನ್ನು ಪಡೆದವನು, ನನ್ನನ್ನು ನೀನೇ ಕಾಪಾಡಬೇಕು, ಎಂದು ತಾತ್ಪರ್ಯ.

3) ಐಕಾಂತ್ಯಂ ಭಗವತ್ಯೇಷಾಂ ಸಮಾನ ಮಧಿಕಾರಿಣಾಮ್ ।
ಯಾವತ್ಪ್ರಾಪ್ತಿ ಪರಾರ್ಥೀಚೇತ್ ತದೇವಾಂತ್ಯಂತ ಮುಚ್ಯತೇ ॥ ಗೀತಾ ಸಂಗ್ರ. 28

ಪ್ರ. ತಿ. ನೋ.

**4) “ಜ್ಞಾನೀತುಪರಮೈಕಾಂತೀ” ಎನ್ಗಿರಪಡಿಯೇ ಪ್ರಯೋಜನಾಂತರ ಸ್ಪರ್ಶಮುಂ ಅತ್ತವರ್‌ಹಳ್ ಪರಮೈಕಾಂತಿಹಳ್. ಅವರ್‌ಹಳಿಲ್ ವೈತ್ತುಕ್ಕೊಂಡು ವಿಳಂಬಾಕ್ಷಮರಾಯ್ ಸರ್ವಶಕ್ತಿಯಾನ ಶೇಷಿಪಕ್ಕಲಿಲೇ ಭರನ್ಯಾಸಂ ಪಣ್ಣಿ ಶೆಯ್‌ಹಿರ ಕೈಙ್ಕರ್ಯತ್ತುಕ್ಕು ಪ್ರಯೋಜನಾಂತರಂ ಕೋಲುಹೈ ಪೊಲಿಶೈಕ್ಕಿಡುವಾರ್ ಮಾತ್ರಮೆನ್ಗಿರ ಶ್ರುತ್ಯರ್ಥತ್ತೈತ್ತೆಳಿನ್ದು. ಇಕ್ಕೈಙ್ಕರ್ಯತ್ತುಕ್ಕು ಮೋಕ್ಷಮುಂ ಪ್ರಯೋಜನ ಮನ್ರುಕೋಲಾದೇ, ಕೈಙ್ಕರ್ಯೈಕ ಪ್ರಯೋಜನರಾಯಿರುಕ್ಕುಮವರ್‌ಹಳುಡೈಯ ಪರಮೈಕಾಂತಿತ್ವಮ್ ಷೋಡಶವರ್ಣ ಸುವರ್ಣತ್ತೋಡೊಕ್ಕುಮ್.**

**ಈದೃಶ ಭಾಗವತೋತ್ಕರ್ಷೇ ಮಹರ್ಷಿ ದಿವ್ಯಸೂಕ್ತಯೋಪಿ ಸಂತಿ**

**ಇಮ್ಮಾತ್ತಿರಿಯುಮ್ ಮಹರ್ಷಿಹಳ್ ಮಹಾಭಾರತಾದಿಹಳಿಲೇ ಇಪ್ಪರಮೈಕಾಂತಿಹಳುಡೈಯ ಮಾಹಾತ್ಮ್ಯತ್ತೈ ಪ್ರಪಂಚಿತ್ತಾರ್‌ಹಳ್,**

---

**ಅವರ್‌ಹಳಿಲ್**–ಇತ್ಯಾದಿ – ಇವರುಗಳ ಮಧ್ಯೆ, **4) ಜ್ಞಾನೀತು ಪರಮೈಕಾಂತೀ,** ಎಂಬಂತೆ ಪ್ರಯೋಜನಾಂತರ ಸ್ಪರ್ಶವೂ ಇಲ್ಲದೆ, ಭಗವಂತನನ್ನೇ ಉಪಾಯವೆಂದೂ ಪ್ರಾಪ್ಯವೆಂದೂ ತಿಳಿದವರು ಪರಮೈಕಾಂತಿಗಳು, ಏಕಸ್ಮಿನ್ ಅಂತಃ–ಉಪಾಯತ್ವ, ಪ್ರಾಪ್ಯತ್ವ ನಿಶ್ಚಯವುಳ್ಳವನು, ಏಕಾಂತೀ. ಪರಮಶ್ಚಾಸೌ ಏಕಾಂತೀಚ ಪರಮೈಕಾಂತೀ ಎಂಬುವ ಜ್ಞಾನಿ, ಪರಮೋ ಐಕಾಂತ್ಯಂ ಯಸ್ಯಸಃ, ಪರಮೋ ಏಕಾಂತಃ– ಅನನ್ಯತ್ವಂ ಅಸ್ಯ ಅಸ್ತೀತಿವಾ ಪರಮೈಕಾಂತೀ. **ಅವರ್‌ಹಳಿಲ್‌ವೈತ್ತುಕ್ಕೊಂಡು**–ಇವರುಗಳ ಮಧ್ಯೆ ಅಂದರೆ ಪ್ರಯೋಜನಾಂತರ ಭಾಗವತರಿಗಿಂತ, ಭಗವಂತನನ್ನೇ ಉಪಾಯವನ್ನಾಗಿಯೂ ಫಲವನ್ನಾಗಿಯೂ ಉದ್ದೇಶಿಸುವ ಭಾಗವತರು ಉತ್ಕೃಷ್ಟರು. ಇಂಥಹ ಜ್ಞಾನಿಯಾದ ಭಕ್ತನ ಪಾರಮೈಕಾಂತ್ಯಕ್ಕಿಂತ **ವಿಳಂಬಾಕ್ಷಮರಾಯ್** ಇತ್ಯಾದಿ ವಿಳಂಬವನ್ನು ಸಹಿಸದೆ ಸರ್ವಶಕ್ತನಾದ ಶೇಷಿಯ ಪಾದಗಳಲ್ಲಿ ಭರನ್ಯಾಸವನ್ನು ಮಾಡಿ, ತಾವು ಮಾಡುವ ಕೈಂಕರ್ಯಕ್ಕೆ ಪ್ರಯೋಜನಾಂತರವನ್ನು ಅಪೇಕ್ಷಿಸುವುದು ಬಡ್ಡಿಗೋಸ್ಕರ ಸಾಲವನ್ನು ಕೊಡುವವರಂತೆ ಎಂಬ ಶ್ರುತ್ಯರ್ಥವನ್ನು ತಿಳಿದು ಈ ಕೈಂಕರ್ಯಕ್ಕೆ ಮೋಕ್ಷವು ಫಲವೆಂದು ಆಸೆ ಪಡದೆ ಕೈಂಕರ್ಯವನ್ನೇ ಪ್ರಯೋಜನವನ್ನಾಗಿ ಉಳ್ಳವರ ಪರಮೈಕಾಂತಿತ್ವವು, ಷೋಡಶವರ್ಣ ಸ್ವರ್ಣಕ್ಕೆ ಸಮಾನ.

ಇದರ ತಾತ್ಪರ್ಯವೇನೆಂದರೆ :– ದೇವತಾಂತರ ಸ್ಪರ್ಶ ರಹಿತರಾಗಿ ಪ್ರಯೋಜನಾಂತರ ಪರರಾಗಿ ಭಗವಂತನನ್ನೇ ಆಶ್ರಯಿಸುವವರು ಏಕಾಂತಿಗಳು. ಪ್ರಯೋಜನಾಂತರ ಸ್ಪರ್ಶ ರಹಿತರಾಗಿ ಭಗವಂತನನ್ನೇ ಪ್ರಯೋಜನವಾಗಿ ತಿಳಿದು ಆಶ್ರಯಿಸುವವರು ಪರಮೈಕಾಂತಿಗಳು. ಭಗವಂತನನ್ನೇ ಪ್ರಯೋಜನವಾಗಿಯೂ ಸಿದ್ಧೋಪಾಯವಾಗಿಯೂ ತಿಳಿದು ಸಾಧ್ಯೋಪಾಯವಾದ ಭಕ್ತಿಯೋಗವನ್ನು ಬಿಟ್ಟು, ಅದರ ಸ್ಥಾನದಲ್ಲಿ ಭಗವಂತನನ್ನು ಇರಿಸಿ, ಪ್ರಸನ್ನರಾಗಿ ಸ್ವಯಂ ಪ್ರಯೋಜನವಾದ ಕೈಂಕರ್ಯಗಳನ್ನು ಮಾಡುವವರು ಪರಮೈಕಾಂತಿ ಸಾರ್ವಭೌಮರು ಇವರುಗಳ ಪಾರಮೈಕಾಂತ್ಯವು ತಾಮ್ರಗಳ ಮಿಶ್ರವಿಲ್ಲದೆ ಪರಿಶುದ್ಧವಾದ (ಷೋಡಶ ವರ್ಣ) ಸುವರ್ಣಕ್ಕೆ ಸದೃಶವಾದದ್ದು. **ಇಮ್ಮಾತ್ತಿರಿಯುಮ್** ಇತ್ಯಾದಿ – ಹೀಗೆ ಪರಿಶುದ್ಧ **ಸ್ವರ್ಣಕ್ಕೆ** ಸಮಾನವಾದ ಸ್ವಯಂ

---

ಈ ಐಶ್ವರ್ಯ ಕೈವಲ್ಯ ಮೋಕ್ಷಗಳಿಗೆ ಆಸೆ ಪಡೆದವರಿಗೆ ಭಗವಂತನೇ ಉಪಾಯವೆಂಬ ಐಕಾಂತ್ಯವು ಸಮಾನ, ಭಗವಂತನನ್ನೇ ಆಶ್ರಯಿಸಿ ಆಯಾಯಾ ಫಲಗಳನ್ನು ಪಡೆಯುತ್ತಾರೆ. ಭಗವಂತನನ್ನೇ ಅಪೇಕ್ಷಿಸುವವನು ಅವನನ್ನು ಪ್ರಾಪ್ಯನನ್ನಾಗಿ ಅನುಭವಿಸುತ್ತಾನೆ.

4) ಜ್ಞಾನೀತು ಪರಮೈಕಾಂತೀ ಪರಾಯುತ್ತಾತ್ಮ ಜೀವನಃ ।
ತತ್ಸಂಶ್ಲೇಷ ವಿಯೋಗೈಕ ಸುಖದುಃಖಸ್ತದೇಕಧೀಃ ॥ ಗೀತಾ ಸಂಗ್ರ, 29

ಜ್ಞಾನಿಯು ಭಗವಂತನೇ ಉಪಾಯೋಪೇಯಗಳೆಂದು ತಿಳಿದು, ತನ್ನ ಜೀವನವು ಅವನ ಅಧೀನವೆಂದು ತಿಳಿದವನು. ಆ ಭಗವಂತನ ಸಂಶ್ಲೇಷವೇ ಸುಖ; ವಿಯೋಗವೇ ದುಃಖ; ಅವನಲ್ಲೇ ನೆಟ್ಟ ಮನಸ್ಕನು.

## "ನಾರಾಯಣೈಕನಿಷ್ಠಸ್ಯೇ"ತಿ ಶ್ಲೋಕದ್ವಯಸ್ಯ ನಿಷ್ಕರ್ಷಾರ್ಥಃ

**ಇವನ್ ಪ್ರಭಾವತ್ತೈಪ್ಪತ್ತ 1)** "ನಾರಾಯಣೈಕನಿಷ್ಠಸ್ಯ ಯಾಯಾವೃತ್ತಿಸ್ತದರ್ಚನಂ ।
ಯೋಯೋ ಜಲ್ಪ ಸ್ಸಸಜಪ ಸ್ತಧ್ಯಾನಂ ಯನ್ನಿರೀಕ್ಷಣಂ ॥
ತತ್ಪಾದಾಂ ಬ್ವತುಲುಂ ತೀರ್ಥಂ ತದುಚ್ಛಿಷ್ಟಂ ಸುಪಾವನಂ ।
ತದುಕ್ತಿಮಾತ್ರಂ ಮಂತ್ರಾಗ್ರ್ಯಂ, ತತ್ಸ್ಪೃಷ್ಟಮಖಿಲಂ ಶುಚಿ॥
ಎನ್ಗಿರಶ್ಲೋಕಙ್ಗಳ್ ಪ್ರಮಾಣಮೇಯಾಹಿಲುಮ್, ಇಙ್ಗು, "ಯಾಯಾವೃತ್ತಿ ಸ್ತದರ್ಚನಂ" ಎನ್ರದು, ಶಾಸ್ತ್ರವಿರುದ್ಧವೃತ್ತಿಯೈಚ್ಚೊನ್ನಪಡಿಯನ್ರು; ದೇಶಕಾಲಾದಿ ವೈಗುಣ್ಯತ್ತಾಲೇ, 2) "ಆಪತ್ಸ್ವನಂತರಾ

---

ಪ್ರಯೋಜನ ಕೈಂಕರ್ಯವನ್ನು ತಿಳಿದ ಮಹರ್ಷಿಗಳು ಮಹಾಭಾರತಾದಿಗಳಲ್ಲಿ ಈ ಪರಮೈಕಾಂತಿಗಳ ಮಾಹಾತ್ಮ್ಯವನ್ನು

ಯಾಃಕ್ರಿಯಾಸ್ಸಂಪ್ರಯುಕ್ತಾಸ್ಸ್ಯುಃ ಏಕಾಂತಗತಬುದ್ಧಿಭಿಃ ।
ತಾಸ್ಸರ್ವಾಶ್ಶಿರಸಾದೇವಃ ಪ್ರತಿಗೃಹ್ಣಾತಿವೈ ಸ್ವ್ವಯಮ್ ॥
ಸತ್ಕರ್ಮನಿರತಾಶ್ಶುದ್ಧಾಃ ಸಾಂಖ್ಯಯೋಗ ವಿದಸ್ತಥಾ ।
ನಾರ್ಹಂತಿ ಶರಣಸ್ಥಸ್ಯ ಕಲಾಂ ಕೋಟಿ ತಮೀಮಪಿ ॥

(ಪರಮೈಕಾಂತಿಗಳು ಮಾಡುವ ಕೈಂಕರ್ಯಗಳನ್ನು ಭಗವಂತನು ತನ್ನ ಶಿರಸ್ಸಿನಿಂದ ಅಂಗೀಕರಿಸುತ್ತಾನೆ. ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ನಿಷ್ಠರು, ಶರಣಾಗತನ ಕೋಟಿಯಲ್ಲಿ ಒಂದು ಅಂಶಕ್ಕೆ ಸಮನಾಗಲಾರರು.) ಎಂದು **ಪ್ರಪಂಚಿತ್ತಾರ್‌ಹಳ್** – ವಿವರಿಸುತ್ತಾರೆ.

### ಭಾಗಾವತರ ಪ್ರಭಾವ-ನಾರಾಯಣೈ ಕನಿಷ್ಠಸ್ಯ ಎಂದಾರಂಭಿಸುವ ಶ್ಲೋಕದ ತಾತ್ಪರ್ಯ.

ಅನಂತರ ಭಾಗವತರ ಪ್ರಭಾವವನ್ನು ಯಥಾರ್ಥವಾಗಿ ನಿರೂಪಿಸಲು **ಇವನ್ ಪ್ರಭಾವತ್ತೈ**–ಎಂದಾರಂಭಿಸಿ ಆಚಾರ್ಯರು ಅನುಗ್ರಹಿಸುತ್ತಾರೆ. ಅದಾಗಿ ಈ ಪರಮೈ ಕಾಂತಿಯ ಪ್ರಭಾವವನ್ನು ಕುರಿತು 1) **ನಾರಾಯಣೈ ಕನಿಷ್ಠಸ್ಯ** ಇತ್ಯಾದಿಯಾದ ಶ್ಲೋಕಗಳು ಪ್ರಮಾಣವಾದರೂ, ಇಲ್ಲಿ, **'ಯಾಯಾವೃತ್ತಿಸ್ತದರ್ಚನಂ'** ಎಂಬುದು ಶಾಸ್ತ್ರ ವಿರುದ್ಧ ವೃತ್ತಿಯನ್ನು ಹೇಳಿರುವುದಲ್ಲ. ದೇಶಕಾಲ ವೈಗುಣ್ಯದಿಂದ, 2) **ಆಪತ್ಸ್ವನಂ ತರಾವೃತ್ತಿಃ**– ಆಪತ್ಕಾಲದಲ್ಲಿ ಅಂದರೆ ರಾಜ್ಯಕ್ಷೋಭ, ಕ್ಷಾಮಕಾಲಗಳಲ್ಲಿ, ತಮ್ಮ ತಮ್ಮ ವೃತ್ತಿಯಿಂದ ಶರೀರಧಾರಣಾದಿಗಳಿಗೆ ಬೇಕಾದ ಆಹಾರಾದಿಗಳನ್ನು ಸಂಪಾದಿಸಿಕೊಳ್ಳಲಾಗದಿದ್ದರೆ, ಬ್ರಾಹ್ಮಣನು ಕ್ಷತ್ರಿಯನ ವೃತ್ತಿಯನ್ನೂ, ಕ್ಷತ್ರಿಯನು

---

1) ವಿಹಗೇಂದ್ರ ಸಂಹಿತೆ :– ನಾರಯಣಪರಾಯಣನು ಅವಲಂಬಿಸುವ ಆಪತ್ಕಾಲದಲ್ಲಿ ಹೇಳಿರುವ ಅನಂತರ ವರ್ಣ ವೃತ್ತಿಯು ಭಗವದಾರಾಧನಾತ್ಮಕವು. ಅವನು ಅಶಾಸ್ತ್ರೀಯವಲ್ಲದ, ದೇವತಾಂತರ ಸ್ತೋತ್ರವಲ್ಲದ ಜಲ್ಪಗಳು ಜಪಗಳು. ಅವನು ನೋಡುವುದು ಭಗವದ್ಧ್ಯಾನವು. ಅವನ ಉಕ್ತಿಗಳು ಶ್ರೇಷ್ಠವಾದ ಮಂತ್ರಗಳು. ಅವನು ಊಟ ಮಾಡಿದ ಅನ್ನ ಶೇಷವು ಪವಿತ್ರವಾದದ್ದು. ಅವನ ಪಾದ ತೀರ್ಥವು ಪವಿತ್ರ. ಅವನು ಮುಟ್ಟಿದ್ದೆಲ್ಲಾ ಶುದ್ಧವಾದದ್ದು.

2) ವಿಷ್ಣು ಸ್ಮೃತಿ (2-6) ಅಥೈತೇಷಾಂ ವೃತ್ತಯಃ ಬ್ರಾಹ್ಮಣಸ್ಯಯಾಜನ ಪ್ರತಿಗ್ರಹೌ; ಕ್ಷತ್ರಿಯಸ್ಯ ಕ್ಷಿತಿತ್ರಾಣಮ್: ಕೃಷಿಗೋರಕ್ಷ್ಯ ವಾಣಿಜ್ಯ ಕುಸಿದ ಯೋನಿ ಪೋಷಣಾನಿ ವೈಶ್ಯಸ್ಯ. ಶೂದ್ರಸ್ಯ ಸರ್ವ ಶಿಲ್ಪಾನಿ-ಆಪತ್ಸ್ವನಂತರಾವೃತಿಃ- ಬ್ರಾಹ್ಮಣನಿಗೆ ಯಾಗಗಳನ್ನು ಮಾಡುವುದು, ದಾನವನ್ನು ಸ್ವೀಕರಿಸುವುದು ಶಾಸ್ತ್ರವಿಹಿತ. ಕ್ಷತ್ರಿಯನಿಗೆ ಪ್ರಜಾರಕ್ಷಣೆ, ವೈಶ್ಯನಿಗೆ ವ್ಯವಸಾಯ, ಪಶುಪಾಲನೆ, ವಾಣಿಜ್ಯ. ಸಾಲಕೊಡುವುದು, ಇತ್ಯಾದಿ. ಶೂದ್ರನಿಗೆ ಪರಿಚರ್ಯೆ ಆಪತ್ಕಾಲದಲ್ಲಿ ಬ್ರಾಹ್ಮಣಾದಿಗಳಿಗೆ ಅನಂತರ ವರ್ಣದವರ ವೃತ್ತಿಯು ಹೇಳಲ್ಪಟ್ಟಿದೆ. ಇದು ವಿನಾ "ಸ್ವವೃತ್ತ್ಯಾಕರ್ಷಣ" ಎಂದು ಬ್ರಾಹ್ಮಣ ಕ್ಷತ್ರಿಯರಿಗೆ ಸೇವಾ ವೃತ್ತಿಯು ಕೂಡದು.

**ವತ್ತಿಃ" ಎನ್ಗಿರ ನಿಲೈಯಿಲೇ ನಿನ್ರಾಲುಮ್, ಅದು ಸಮಾರಾಧನೋಪಯುಕ್ತಮಾನ ಸಮ್ಯಗುಪಾದಾನಮಾಮೆನ್ರಪಡಿ;"ಮನ್ನಿಮಿತ್ತಕೃತಂ ಪಾಪಮಪಿ ಧರ್ಮಾಯ ಕಲ್ಪತೇ" ಎನ್ರದುಕ್ಕು ಮಿದುವೇ ತಾತ್ಪರ್ಯಮ್. ಇಙ್ಗನಲ್ಲಾದಪ್ಪೋದು ಅತಿಪ್ರಸಙ್ಗಮ್ ವರಮ್. "ಯಾಯಾಚೇಷ್ಟಾ" ಎನ್ರು ಪಾಠಮಾನಾಲುಮ್ ಅರ್ಥಪ್ರಾಪ್ತ ಶಾಸ್ತ್ರಪ್ರಾಪ್ತಙ್ಗಳ್ ಪೋಲೇ ಸ್ವಭಾವ ಪ್ರಾಪ್ತಙ್ಗಳಾನ ನಿಮೇಷೋನ್ಮೇಷಾದಿಹಳುಮ್ ಸಮರ್ಪಣೀಯಙ್ಗಳಾಹ ರಹಸ್ಯಶಾಸ್ತ್ರ ಸಿದ್ಧಮಾಹೈಯಾಲೇ "ತದರ್ಚನ" ಮೆನ್ನಲಾಮ್. ಇದು ನಿಷಿದ್ಧತ್ತಿಲ್ ಪ್ರಸಙ್ಗಿಯಾದು. ಪ್ರತಿಷಿದ್ಧಮಲ್ಲಾದ ಸ್ವಭಾವಾರ್ಥಶಾಸ್ತ್ರಪ್ರಾಪ್ತಙ್ಗಳಿರೇ ಸಮರ್ಪಣೀ**

---

ವೈಶ್ಯ ವೃತ್ತಿಯನ್ನೂ, ವೈಶ್ಯನು ಶೂದ್ರವೃತ್ತಿಯನ್ನೂ (ಸೇವಾದಿ) ಅವಲಂಬಿಸಿ ಜೀವಿಸಬಹುದು, ಎಂಬ **ನಿಲೈಯಿಲೇ ನಿನ್ರಾಲುಂ**-ಶಾಸ್ತ್ರವು ಹೇಳಿದ ವೃತ್ತಿಯಲ್ಲಿ ಜೀವಿಸಿದರೂ, ಅದು ಭಗವದಾರಾಧನಕ್ಕೆ ಉಪಯುಕ್ತವಾದ **ಸಮ್ಯಗುಪಾದಾನಮಾಮ್** – ದ್ರವ್ಯಾರ್ಜನವಾಗುತ್ತದೆ ಎಂದರ್ಥ. ಇಲ್ಲಿ 'ಅರ್ಚನಂ' ಎಂದು ಹೇಳಿರುವುದು ಭಗವದಾರಾಧನಕ್ಕೆ ಬೇಕಾದ ದ್ರವ್ಯಾರ್ಜನೆಯನ್ನು ಲಕ್ಷಣೆಯಾಗಿ ಹೇಳುತ್ತದೆ, ಎಂಬುದು ತಾತ್ಪರ್ಯ. **"ಮನ್ನಿಮಿತ್ತಕೃತಂ ಪಾಪಂ ಅಪಿಧರ್ಮಾಯ ಕಲ್ಪತೇ"** ಎಂಬ ವಚನಕ್ಕೆ ಸ್ವವೃತ್ತಿಯನ್ನು ಬಿಟ್ಟು ಅನಂತರ ವೃತ್ತಿಯನ್ನು ಅವಲಂಬಿಸಿ ದ್ರವ್ಯವನ್ನು ಸಂಪಾದಿಸುವುದು ಪಾಪಕಾರ್ಯವಾದರೂ, ಭಗವದಾರಾಧನೋಪಯುಕ್ತವಾದ್ದರಿಂದ ಆ ವೃತ್ತಿಯೂ ಧರ್ಮವನ್ನು ಆಚರಿಸಿದಂತೆಯೇ ಆಗುತ್ತದೆ, ಎಂದು ತಾತ್ಪರ್ಯ. **ಇಂಗನಲ್ಲಾದಪ್ಪೋದು**-ಇತ್ಯಾದಿ ಹೀಗಲ್ಲದೆ ಇದ್ದರೆ ಅಶಾಸ್ತ್ರೀಯವಾದ ವ್ಯಾಪಾರವೂ ಶಾಸ್ತ್ರೀಯವಾದದ್ದು ಎಂಬ ಅತಿಪ್ರಸಂಗ ದೋಷವು ಉಂಟಾಗುತ್ತದೆ. **'ಯಾಯಾ ವೃತ್ತಿಃ** ಎಂಬುದಕ್ಕೆ ಬದಲಾಗಿ **'ಯಾಯಾ ಚೇಷ್ಟಾ'** ಎಂದು ಪಾಠವಾದರೂ **ಅರ್ಥಪ್ರಾಪ್ತ**- (ಅಶಾಸ್ತ್ರೀಯವಲ್ಲದ) ಯಾವ ವ್ಯಾಪಾರವನ್ನು ಮಾಡದಿದ್ದರೆ ದೇಹ ಧಾರಣೆಯು ಆಗುವುದಿಲ್ಲವೋ ಅವು. **ಶಾಸ್ತ್ರಪ್ರಾಪ್ತಂಗಳ್ ಪೋಲೇ**- ಶಾಸ್ತ್ರವಿಹಿತಗಳಾದ ಸಂಧ್ಯಾವಂದನಾದಿ ಕರ್ಮಗಳಂತೆ, ಸ್ವಭಾವ ಪ್ರಾಪ್ತಗಳಾದ ರೆಪ್ಪೆ ಹೊಡೆಯುವುದು ಮೊದಲಾದವೂ ಅಂದರೆ

1) "ಕಾಯೇನವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥"

ಎಂದು ಸ್ವಭಾವ ಪ್ರಾಪ್ತಗಳಾದ ವ್ಯಾಪಾರಗಳೂ ಸೇರಿ **ಸಮರ್ಪಣೀಯಂಗಳಾಹ**-ಕೃಷ್ಣಾರ್ಪಣವಾಗಿ, **ರಹಸ್ಯಶಾಸ್ತ್ರ ಸಿದ್ಧಮಾಹೈಯಾಲೇ** – ಪಾಂಚರಾತ್ರಾಗಮದಲ್ಲಿ ಹೇಳಲ್ಪಟ್ಟಿರುವುದರಿಂದ, ಇವುಗಳನ್ನು **ತದರ್ಚನಮೆನ್ನಲಾಮ್**- ಭಗವದರ್ಚನೆ ಎಂದು ಹೇಳಬಹುದು. ಇದು **ನಿಷಿದ್ಧತ್ತಿಲ್**-ಯಾಯಾಚೇಷ್ಟಾ ಎಂಬುದು ಇವನು ಮಾಡುವ ನಿಷಿದ್ಧ ವ್ಯಾಪಾರಗಳು, **ಪ್ರಸಂಗಿಯಾದು**-ಭಗವದರ್ಚನೆ-ಭಗವಂತನ ಪೂಜೆಯಾಗಿ ಆಗುವುದಿಲ್ಲ.

---

1) ಪಾಂಚರಾತ್ರಾಗಮ.

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿಯದ್ಯತ್ ಸಕಲಂ ಪರಸ್ಮೈ ನಾರಾಯಣಾ ಯೇತಿ ಸಮರ್ಪಯಾಮಿ ॥

ಶಾಸ್ತ್ರ ನಿಷಿದ್ಧಗಳಿಲ್ಲದೆ, ಮನೋವಾಕ್ಕಾಯಗಳಿಂದ ಬುದ್ಧಿ ಪೂರ್ವಕವಾಗಿಯೂ ಪ್ರಕೃತಿಯ ಸ್ವಭಾವಗಳಾದ ಕಣ್ಣುರೆಪ್ಪೆ ಹೊಡೆಯುವುದು, ಉಸಿರಾಡುವುದು ಮೊದಲಾದ ಸ್ವಭಾವ ಸಿದ್ಧಗಳಾದ ವ್ಯಾಪಾರಗಳೂ ಯಾವುವೋ ಅವುಗಳನ್ನೆಲ್ಲಾ ಪರಮ ಪುರುಷನಾದ ಶ್ರೀ ಮನ್ನಾರಾಯಣನಿಗೆ ಸಮರ್ಪಿಸುತ್ತೇನೆ. 'ಕೃಷ್ಣಾರ್ಪಣಮಸ್ತು' ಎಂಬುದು ತಾತ್ಪರ್ಯ.

**ಯಜ್ಞಙ್ಗಳಾಹ ಓದಪ್ಪಟ್ಟದ. ಇದರ್ ಉಪಬೃಹ್ಮಣಮಾನ 1) "ಯತ್ಕರೋಷಿಯದಶ್ನಾಸಿ" ಎನ್ಗಿರ ಶ್ಲೋಕತ್ತುಕ್ಕುಮ್ ಇಪ್ಪಡಿ ಶಾಸ್ತ್ರವಿರೋಧಮಿಲ್ಲಾದ ವಿಷಯತ್ತಿಲೇ ತಾತ್ಪರ್ಯಮ್. ಇವತ್ತಿಲ್ ಶಾಸ್ತ್ರವಿರುದ್ಧಙ್ಗಳ್ ವಂದಾಲ್ ಅಧಿಕಾರಾನುರೂಪಮಾನ, ನೈಮಿತ್ತಿಕಮ್ ನಿಗ್ರಹ ಶಮನ ಕಾರ್ಯಮ್. "ಯೋಯೋ ಜಲ್ಪಸ್ಸಸ ಜಪಃ" ಎನ್ಗಿರದುವುಮ್,**

2) **"ಪಾರುಷ್ಯಮತಿವಾದಶ್ಚ ಪೈಶುನಂ ಚೈವ ಸರ್ವಶಃ।**
**ಅನಿಬದ್ಧ ಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಮ್ ॥**

**ಎನ್ರು ಶಾಸ್ತ್ರ ಪ್ರತಿಷಿದ್ಧಮಾನ ವೃಥಾ ಜಲ್ಪತ್ತೈಚ್ಚೊನ್ನ ಪಡಿಯನ್ರು; ತತ್ವಹಿತ ವಿಷಯಮಾಹ ಶಿಷ್ಯಗುರು ಸಬ್ರಹ್ಮಚಾರಿ ಶಿಷ್ಟಶ್ರೇಯೋರ್ಥಿ ಹಳೋಡೇ ಅಜ್ಞಾತ ಜ್ಞಾಪನಾರ್ಥಮಾಹವುಮ್, ಜ್ಞಾತ ಸ್ಥಿರೀಕರಣಾರ್ಥಮಾಹವುಮ್, ಸಂಶಯ ನಿರಾಕರಣಾರ್ಥ ಮಾಹವುಮ್, ಪಣ್ಣುಮ್ ಉಕ್ತಿ ಪ್ರತ್ಯುಕ್ತಿ**

---

ಇದನ್ನು **ಪ್ರತಿಷಿದ್ಧಮಲ್ಲಾದ** ಎಂದಾರಂಭಿಸಿ ಪ್ರಮಾಣೀಕರಿಸುತ್ತಾರೆ. ಅದಾಗಿ ಶಾಸ್ತ್ರ ನಿಷಿದ್ಧವಲ್ಲದ ಸ್ವಭಾವವಾದ ಅರ್ಥ ಸಂಪಾದನೆ ವ್ಯಾಪಾರಗಳು ಶಾಸ್ತ್ರ ಪ್ರಾಪ್ತಗಳಾದ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳು ಭಗವತ ಮರ್ಪಣೀಯಗಳಾಗಿ ಗೀತಾಭಾಷ್ಯ ತಾತ್ಪರ್ಯ ಚಂದ್ರಿಕೆಯಲ್ಲಿ (9–27) **ಓದಪ್ಪಟ್ಟದು–**

ಯತ್ಕರೋಮಿ ಯದಶ್ನಾಮಿ ಯಜ್ಜುಹೋಮಿ ದದಾಮಿಯತ್ ।

ಯತ್ತಪಸ್ಯಾಮಿ ಭಗವನ್ ತತ್ಕರೋಮಿತ್ವದರ್ಪಣಮ್ ॥

ಎಂಬ ಮಂತ್ರವು ಹೇಳಲ್ಪಟ್ಟಿದೆ. ಇದರ ಉಪಬೃಂಹಣವಾದ, 1) **ಯತ್ಕರೋಷಿಯದಶ್ನಾಸಿ**–ಎಂಬ **ಶ್ಲೋಕಕ್ಕೂ** ಹೀಗೆ ಶಾಸ್ತ್ರ ವಿರೋಧವಲ್ಲದ ವಿಷಯದಲ್ಲಿ ತಾತ್ಪರ್ಯ. **ಇವಟ್ರಿಲ್**–ಹೀಗೆ ಭಗವದಾರಾಧನೋಪಯುಕ್ತ ಅರ್ಥಾರ್ಜನೆ, ಶಾಸ್ತ್ರ ಪ್ರಾಪ್ತಗಳಾದ ನಿತ್ಯ ನೈಮಿತ್ತಿಕ ಕರ್ಮಗಳು, ಇವುಗಳಲ್ಲಿ ಶಾಸ್ತ್ರ ವಿರುದ್ಧಗಳು ಏರ್ಪಟ್ಟರೆ, ಅಧಿಕಾರಾನುರೂಪವಾದ **ನೈಮಿತ್ತಿಕಮ್** – ಪ್ರಾಯಶ್ಚಿತ್ತವು, **ನಿಗ್ರಹಶಮನ ಕಾರ್ಯಮ್**–ಭಗವನ್ನಿಗ್ರಹ ಶಮನಕ್ಕಾಗಿ ಮಾಡಬೇಕಾದದ್ದು.

**ಯೋಯೋಜಲ್ಪಸ್ಸಸಜಪಃ**–ಭಾಗವತೋತ್ತಮನು ಹೇಳುವ ಮಾತು ಯಾವುದೋ ಅದನ್ನು ಜಪ ಎಂದು, ಹೇಳಿರುವುದೂ, 2) **ಪಾರುಷ್ಯಮತಿವಾದಶ್ಚ**– ಇತ್ಯಾದಿಯಾಗಿ ಶಾಸ್ತ್ರ ನಿಷಿದ್ಧವಾದ ವ್ಯರ್ಥವಾದ ಜಲ್ಪ–ಹರಟೆಯನ್ನು ಹೇಳಿದಂತಲ್ಲ. ಮತ್ತೇನೆಂದರೆ, **ತತ್ವ–ವಿಷಯಮಾಹ**–ಇತ್ಯಾದಿ–ತತ್ವ ವಿಷಯವಾಗಿ ಶಿಷ್ಯ, ಗುರು, ಸಬ್ರಹ್ಮಚಾರಿ–ಸಹಾಧ್ಯಾಯಿ, ಶಿಷ್ಟರು ಶ್ರೇಯಸ್ಸನ್ನು ಬಯಸುವವರು ಇವರುಗಳೊಡನೆ **ಅಜ್ಞಾತ ಜ್ಞಾಪನಾರ್ಥ**ವಾಗಿಯೂ, ಅಂದರೆ ತಿಳಿಯದೆ ಇರುವ ವಿಷಯವನ್ನು ತಿಳಿದು ಕೊಳ್ಳುವುದಕ್ಕೂ **ಜ್ಞಾತಸ್ಥಿರೀಕರಣಾರ್ಥ**

---

1) ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿದದಾಸಿಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ ಗೀತೆ (9-27)

ದೇಹಪೋಷಣೆಗಾಗಿ ಮಾಡುವ ದ್ರವ್ಯಾರ್ಜನಾರೂಪ ಲೌಕಿಕ ವ್ಯಾಪಾರ, ದೇಹಧಾರಣೆಗೋಸ್ಕರ ಮಾಡುವ ಊಟ, ವೈದಿಕವಾದ ಹೋಮದಾನ ತಪಸ್ಸೇ ಮೊದಲಾದ ನಿತ್ಯ ನೈಮಿತ್ತಿಕ ಕರ್ಮಗಳು, ಯಾವುವೋ ಅವುಗಳನ್ನೆಲ್ಲಾ ನನಗೆ ಅರ್ಪಿಸು-ಅಂದರೆ ಎಲ್ಲಾ ಲೌಕಿಕ ವೈದಿಕ ಕರ್ಮಗಳ ಕರ್ತೃತ್ವ ಭೋಕ್ತೃತ್ವ, ಆರಾಧ್ಯತ್ವಗಳು ನನ್ನಲ್ಲಿ ಸಮರ್ಪಿಸಲ್ಪಡಲಿ. ಭಗವಂತನಿಗೆ ಶೇಷ ಭೂತನಾಗಿ, ಅವನಿಂದ ನಿಯಮಿಸಲ್ಪಟ್ಟು ಅವನ ಪ್ರೀತಿಗೋಸ್ಕರ ಈ ಕರ್ಮಗಳನ್ನು ಮಾಡುತ್ತೇನೆಂದು ಅನುಸಂಧಾನ ಮಾಡು ಎಂದು ತಾತ್ಪರ್ಯ.

2) ಮನು (12-5) ಪಾರುಷ್ಯ-ತೀಕ್ಷ್ಣವಾದ ಮಾತು, ಅತಿವಾದ-ಅಧಿಕ ಪ್ರಸಂಗ. ಸರ್ವಶಃ ಪೈಶುನ-ಎಲ್ಲಾ ವಿಷಯಗಳಲ್ಲೂ ಚಾಡಿ ಹೇಳುವುದು, ಅಸಂಬದ್ಧ ಪ್ರಲಾಪಶ್ಚ-ಸಂಬಂಧವಿಲ್ಲದ ಮಾತು, ಇವು ವಾಗ್ರೂಪವಾದ ನಾಲ್ಕು ವಿಧ ಪಾಪಗಳು.

ಪರಂಗಳೈಹಳೈಚ್ಚೊಲ್ಲುಹಿರದು. 1) "ನವಿಗೃಹ್ಯ ಕಥಾ ಕುರ್ಯಾತ್" ಎನ್ರು ಸಾಮಾನ್ಯೇನ ಚ್ಚೊಲ್ಲ ಚ್ಚೆಯ್‌ದೇಯುಂವ್, 2) "ಯಥಾಶಕ್ತಿ ನಿಗೃಹ್ಣೀಯಾದ್ದೇವತಾಗುರುನಿಂದಕಾ" ಎನ್ರು ವಿಶೇಷಿತ್ತು ಧರ್ಮಶಾಸ್ತ್ರಸಿದ್ಧಮಾಹೈಯಾಲೇ ಬಾಹ್ಯಕುದೃಷ್ಟಿಹಳ್ಳೆ ಪ್ಪತ್ತ ವಿಜಿಗೀಷುವಾಹಚ್ಚೊಲ್ಲುಂವ್ ವಾಕ್ಯ ಪರಂಪರೈಯೈ ಜಲ್ಪಮೆನ್ನದಾಹವುಮಾನ್. "ತದ್ಧ್ಯಾನಂ ಯನ್ನಿರೀಕ್ಷಣಂ" ಎನ್ರದು ನಿಷಿದ್ಧ ನೃತ್ಯಾದಿದರ್ಶನತ್ತೈ ಚ್ಚೊನ್ನಪಡಿಯನ್ರು. ಕೈಙ್ಕರ್ಯಾರ್ಥಮಾಹ ಪ್ರವರ್ತಿಕ್ಕುಮ್ಪೋದು, ಇವರ್ ಕಣ್ಣುಕ್ಕಿಲಕ್ಕಾನ ಪದಾರ್ಥಙ್ಗಳೆಲ್ಲಾಮ್ 3) "ಅಹಂ ಹರಿ ಸ್ಸರ್ವ ಮಿದಂ ಜನಾರ್ದನಃ" ಇತ್ಯಾದಿ ಹಳಿಲ್ಪಡಿಯೇ 4) "ನಿರ್ಕಿನ್ನದೆಲ್ಲಾಮ್ ನೆಡುಮಾಲ್" ಎನ್ರು ಬ್ರಹ್ಮಾತ್ಮಕಮಾಯ್ ತ್ತೋನ್ರುಮ್ ಪ್ರಕಾರತ್ತೈ ಚ್ಚೊನ್ನಪಡಿ.

---

ಮಾಹವುಮ್–ತಿಳಿದ ಅರ್ಥವನ್ನು ಚನ್ನಾಗಿ ತಿಳಿಯುವುದಕ್ಕೋಸ್ಕರವೂ, ಸಂಶಯಗಳನ್ನು ಹೋಗಲಾಡಿಸಿ ಕೊಳ್ಳುವುದಕ್ಕೋಸ್ಕರವೂ ಮಾಡುವ ಮಾತುಗಳು, ಅವುಗಳಿಗೆ ಪ್ರತ್ಯುತ್ತರಗಳು, ಇವುಗಳನ್ನು ಜಲ್ಪ ಶಬ್ದವು ಹೇಳುತ್ತದೆ. 1) ನ ವಿಗೃಹ್ಯ ಕಥಾಂಕುರ್ಯಾತ್–ಜಗಳಕ್ಕೋಸ್ಕರ ವಿವಾದ ಮಾಡಕೂಡದು ಎಂದು ಸಾಮಾನ್ಯ ವಾಗಿ ಹೇಳಿದ್ದರೂ 2) ಯಥಾಶಕ್ತಿ ನಿಗೃಹ್ಣೀಯಾತ್ ಇತ್ಯಾದಿ ದೇವತೆಗಳನ್ನೂ ಆಚಾರ್ಯರುಗಳನ್ನೂ ನಿಂದಿಸುವವರನ್ನು ಯಥಾಶಕ್ತಿ ಖಂಡಿಸಬೇಕು ಎಂದು ವಿಶೇಷ ವಚನವು ಧರ್ಮಶಾಸ್ತ್ರ ಸಿದ್ಧವಾದ್ದರಿಂದ, ಬಾಹ್ಯ ಕುದೃಷ್ಟಿಗಳನ್ನು ಕುರಿತು, ಮಾಡುವ ವಾದದಲ್ಲಿ ವಿಜಿಗೀಷುವಾಹ–ಜಯಿಸಬೇಕೆಂಬ ಆಸೆಯಿಂದ, ಹೇಳುವ ವಾಕ್ಯ ಪರಂಪರೆಗಳನ್ನು ಜಲ್ಪವೆಂದು ಹೇಳಿದಂತೆ ಇಟ್ಟು ಕೊಳ್ಳಬಹುದು. ಶ್ರೀ ವೈಷ್ಣವರು ಗುರುನಿಂದೆ ಮಾಡಿದರೆ ಗುರವೋಯತ್ರಪೂಜ್ಯಾಃ" ಎಂದು ಹೇಳುವಂತೆ ಆ ಜಾಗದಲ್ಲಿ ನಿಲ್ಲದೆ ಹೊರಟು ಹೋಗಬೇಕು. ಅಷ್ಟೇ ವಿನಹ ಅವರನ್ನು ಖಂಡಿಸಲು ಹೋಗಬಾರದು.

ತದ್ಧ್ಯಾನಂಯನ್ನಿರೀಕ್ಷಣಂ– ಎಂದು ಶಾಸ್ತ್ರ ನಿಷಿದ್ಧವಾದ ನರ್ತನಗಳನ್ನು ನೋಡಲು ಹೇಳಿದುದಲ್ಲ. ಕೈಂಕರ್ಯಾರ್ಥವಾಗಿ ಪ್ರವರ್ತಿಸುವಾಗ ಇವನ ಕಣ್ಣಿಗೆ ಬೀಳುವ ಪದಾರ್ಥಗಳೆಲ್ಲಾ 3) ಅಹಂಹರಿಃ ಸರ್ವ ಮಿದಂ ಜನಾರ್ದನಃ ಇತ್ಯಾದಿಗಳಲ್ಲಿ ಹೇಳಿರುವಂತೆ, 4) ನಿರ್ಕಿನ್ರದೆಲ್ಲಾಮ್ ಇತ್ಯಾದಿ ಎದುರಿನಲ್ಲಿ ಕಾಣುವ ಎಲ್ಲಾ ವಸ್ತುಗಳೂ ಭಗವಂತನೇ, ಎಂದು ಬ್ರಹ್ಮಾತ್ಮಕವಾಗಿ ತೋರುವ ಪ್ರಕಾರವನ್ನು ಹೇಳಿದುದಾಗಿ ಅರ್ಥ. ನಾರಾಯಣೈಕ ನಿಷ್ಠನಿಗೆ "ಜ್ಯೋತೀಂಷಿ ವಿಷ್ಣುಃ ಭುವನಾನಿ ವಿಷ್ಣುಃ" ಎಂದು ಎಲ್ಲವೂ ಭಗವದಾತ್ಮಕವಾಗಿ ತೋರುವುದರಿಂದ ಅವುಗಳನ್ನು ನೋಡುವುದೂ ಭಗವದ್ಧ್ಯಾನವಾಗಿ ಪರಿಣಮಿಸುತ್ತದೆ ಎಂದು ತಾತ್ಪರ್ಯ.

---

1) ನ ವಿಗೃಹ್ಯಕಥಾಂಕುರ್ಯಾತ್ ಬಹಿರ್ಮಾಲ್ಯಂ ನಧಾರಯೇತ್ ।
ಗವಾಂಚಯಾನಂ ಪೃಷ್ಠೇನ ಸರ್ವಥೈವ ವಿಗರ್ಹಿತಮ್ ॥ ಮನುಸ್ಮೃತಿ (4-74)

ಯಥಾವದರ್ಥವನ್ನು ತಿಳಿಯಬೇಕೆಂದಲ್ಲದೆ ವ್ಯರ್ಥವಾಗಿ ಜಗಳವಾಡಿ ವಾದ ಮಾಡಬಾರದು. ನಿರ್ಮಾಲ್ಯವನ್ನು ಧರಿಸಬಾರದು. ಹಸುಗಳ ಮೇಲೆ ಸವಾರಿ ಮಾಡಕೂಡದು. ಇವುಗಳು ಬಹಳ ನಿಂದ್ಯವು.

2) ದೇವತೆಗಳನ್ನೂ ಗುರುಗಳನ್ನೂ ನಿಂದಿಸುವವರನ್ನು ತನ್ನ ಶಕ್ತಿ ಮೀರದೆ ನಿಗ್ರಹಿಸಬೇಕು-ಪ್ರತ್ಯುತ್ತರಗಳಿಂದ ತಡೆಯಬೇಕು.

3) ಅಹಂಹರಿಃ ಸರ್ವಮಿದಂ ಜನಾರ್ದನಃ ನಾನ್ಯತ್ತತಃ ಕಾರಣಕಾರ್ಯಜಾತಮ್ ।
ಈ ದೃಙ್ಮನೋ ಯಸ್ಯನ ತಸ್ಯಭೂಯೋ ಭವೋದ್ಭವಾ ದ್ವಂದ್ವಯುತಾಭವಂತಿ ॥ ವಿ. ಪು, (2-22-87)
ಪು, ತಿ. ನೋ.

"ತತ್ಪಾದಾಂಬ್ವತುಲಂ ತೀರ್ಥವ್" ಎನ್ರದುವುವ್ ಪ್ರಾಪ್ತವಿಷಯತ್ತಿಲೇ ಗುಣಾಧಿಕ್ಯವ್ ಶೊಲ್ಲುಹಿರದು. ಪಾದೋದಕಂ ತೀರ್ಥಮಾಹ ಚ್ಚೊನ್ನವಿಷಯತ್ತಿಲ್ ನಾರಾಯಣೈಕನಿಷ್ಠತ್ವಂ ಉಂಡಾಯಿತ್ತಾಹಿಲ್ ಅದು ಸರ್ವಾಧಿಕ ತೀರ್ಥಮೆನ್ರಪಡಿ; ಅಲ್ಲದು ಭಾಗವತನುಡೈಯ ಪಾದತ್ತಿಲೇ ಯಾದೃಚ್ಛಿಕಮಾಹಪ್ಪಟ್ಟ ನಿರ್ಮಾಲ್ಯಜಲಾದಿಹಳುಮ್ "ಅತುಲ"ಮಾನ ತೀರ್ಥಮಾಮೆನ್ರ ಪಡಿಯನ್ರು.

"ತದುಚ್ಛಿಷ್ಟಂ ಸುಪಾವನಮ್" ಎನ್ರದುವುವ್ ಪುನರುಪನಯನಾದಿ ಪ್ರಕರಣಙ್ಗಳಿಲೇ ಪಾವನಮಾಹ ಶಾಸ್ತ್ರಪ್ರಾಪ್ತಮಾನ ಉಚ್ಛಿಷ್ಟವಿಶೇಷತ್ತುಕ್ಕು ಇಗ್ಗುಣ ವಿಶೇಷಮಡಿಯಾಹ ಪಾವನತ್ವಾತಿಶಯಮ್ ಶೊನ್ನಪಡಿ; ಮತ್ತುಮ್, ಶಿಷ್ಯಪುತ್ರಾದಿಹಳುಕ್ಕು ನಾರಾಯಣೈಕನಿಷ್ಠತ್ವಮುಂಡಾನಾಲ್ ಆಚಾರ್ಯಾದಿಹಳುಕ್ಕು ಅವರ್‌ಹಳುಡೈಯ ಉಚ್ಛಿಷ್ಟಂಸುಪಾವನ ಮೆನ್ರ ಪಡಿಯನ್ರು.

---

ತತ್ಪಾದಾಂಬ್ವತುಲಂತೀರ್ಥಂ–ಇತ್ಯಾದಿ, ಆ ಭಾಗವತನ ಪಾದ ತೀರ್ಥವು ಬಹಳ ಪವಿತ್ರವಾದದ್ದು ಎಂದು ಹೇಳಿರುವುದೂ, ಪ್ರಾಪ್ತ ವಿಷಯತ್ತಿಲೇ ಪ್ರಾಯಶ್ಚಿತ್ತ ಕಾಲದಲ್ಲಿ ವಿಹಿತವಾದ ಬ್ರಾಹ್ಮಣ ಶ್ರೀ ಪಾದ ತೀರ್ಥಕ್ಕೆ ಗುಣಾಧಿಕ್ಯಂ–ಅಧಿಕ ಗುಣವು ಹೇಳುತ್ತದೆ. ಪಾದೋದಕ ತೀರ್ಥಮಾಹ ಶೊನ್ನ ವಿಷಯತ್ತಿಲ್ ಇತ್ಯಾದಿ–ಪಾದ್ಯ ತೀರ್ಥವನ್ನು ಹೇಳಿದುದು ನಾರಾಯಣೈಕ ನಿಷ್ಠನದಾದರೆ, "ಬ್ರಾಹ್ಮಣಾಃಪಾದತೋ ಮೇಧ್ಯಾಃ" ಎಂದು ಹೇಳಲ್ಪಟ್ಟ ಬಹಳ ಪರಿಶುದ್ಧವಾದ ತೀರ್ಥವೆಂದರ್ಥ. ಅದನ್ನು ಸ್ವೀಕರಿಸುವುದರಿಂದ ಇವನು ಪರಿಶುದ್ಧನಾಗುತ್ತಾನೆ. ಆಚಾರ್ಯರ ಶ್ರೀ ಪಾದ ತೀರ್ಥವೂ ಪವಿತ್ರವಾದದ್ದು ಎಂಬುದೂ ಇಲ್ಲಿ ವಿವಕ್ಷಿತ. ಅಲ್ಲದು ಇತ್ಯಾದಿ - ಹೀಗಲ್ಲದೆ ಬ್ರಾಹ್ಮಣರ ಪಾದದಲ್ಲಿ ಯಾದೃಚ್ಛಿಕವಾಗಿ ಬಿದ್ದ ನಿರ್ಮಾಲ್ಯಾದಿಜಲಂಗಳುಮ್ ಅಶುದ್ಧಿ ನಿವೃತ್ತಿಗೋಸ್ಕರ ಕಾಲನ್ನು ತೊಳೆದುಕೊಂಡ ನೀರೂ, ದೇವತಾಂತರಗಳ ಅಭಿಷೇಕ ತೀರ್ಥವೂ ಹಾಗೆಯೇ ಪವಿತ್ರವಾದ ತೀರ್ಥವೆಂದಲ್ಲ.

'ತದುಚ್ಛಿಷ್ಟಂಸುಪಾವನಂ' ಎಂದು ಹೇಳಿದುದೂ ಪುನರುಪನಯನ ಪುನರುಪನಯನಾದಿ ಪ್ರಕರಣಗಳಲ್ಲಿ ಪಾವನವಾಗಿ ಶಾಸ್ತ್ರ ಪ್ರಾಪ್ತವಾದ, ಉಚ್ಛಿಷ್ಟ ವಿಶೇಷತ್ತುಕ್ಕು – ಬ್ರಹ್ಮೋಪದೇಶ ಮಾಡಿದ ಆಚಾರ್ಯನ ಉಚ್ಛಿಷ್ಟಕ್ಕೆ ಇಗ್ಗುಣ ವಿಶೇಷ ಮಡಿಯಾಹ - ನಾರಾಯಣೈಕನಿಷ್ಠ ಸಂಬಂಧಿತ್ವ ರೂಪ ಗುಣ ವಿಶೇಷದ ನಿಮಿತ್ತ, ಪಾವನತ್ವಾತಿಶಯವು ಹೇಳಲ್ಪಡುತ್ತದೆ. ಮಟ್ರುಮ್ ಅಲ್ಲದೆ ಶಿಷ್ಯ ಪುತ್ರಾದಿಗಳಿಗೆ ನಾರಾಯಣೈಕನಿಷ್ಠತ್ವವು ಉಂಟಾದರೆ, ಆಚಾರ್ಯಾದಿಗಳಿಗೂ ಅವರುಗಳ ಉಚ್ಛಿಷ್ಟವು ಸುಪಾವನವೆಂದಲ್ಲ. ಇದೇ ನ್ಯಾಯವು ಶಿಷ್ಯ ಪುತ್ರಾದಿಗಳು ನಾರಾಯಣೈಕ ನಿಷ್ಠರಾಗಿದ್ದರೆ ಅವರ ಶ್ರೀ ಪಾದತೀರ್ಥವು ಆಚಾರ್ಯನಿಗೂ ಮಾತಾ ಪಿತೃಗಳಿಗೂ ಉದ್ದೇಶ್ಯವಾಗಿ ಪಾವನವಲ್ಲ.

---

ನಾನೇ ಹರಿಯು, ಇವುಗಳೆಲ್ಲಾ ಜನಾರ್ದನನು. ಅವನಿಲ್ಲದೆ ಈ ಕಾರಣ ವಸ್ತುಗಳೂ ಅವುಗಳಿಂದ ಉಂಟಾದ ಕಾರ್ಯ ವಸ್ತುಗಳೂ, ಬೇರೆಯಿಲ್ಲ. ಎಲ್ಲಾ ವಸ್ತುಗಳಲ್ಲಿಯೂ ಭಗವಂತನು ಅಂತರ್ಯಾಮಿಯಾಗಿರುವುದರಿಂದ ಅವನೇ ಎಲ್ಲಾ ವಸ್ತುಗಳು, ಎಂದು ತಾತ್ಪರ್ಯ. ಇಂಥಹ ಮನೋಭಾವವುಳ್ಳವನಿಗೆ ಸಾಂಸಾರಿಕ ಸುಖ ದುಃಖ ಶೀತೋಷ್ಣಾದಿ ದ್ವಂದ್ವಗಳುಂಟಾಗುವುದಿಲ್ಲ. ಅವನು ಭಗವಂತನನ್ನು ಪಡೆಯುತ್ತಾನೆಂದರ್ಥ.

1) ತೇವರಾಯ್ ನಿರ್ಪುಮತ್ತೇವುಮ್ ಅತ್ತೇವರಿಲ್
ಮೂವರಾಯ್ ನಿರ್ಪುಮ್ ಮುದುಪುಣರ್ಪುಮ್-ಯಾವರಾಯ್
ನಿರ್ಪಿನ್ರದೆಲ್ಲಾ ಮ್ ನೆಡುಮಾಲೆ ನ್ರೋರಾದಾರ್
ಕರ್ಪಿನ್ರದೆಲ್ಲಾಮ್ ಕಡೈ ‖ ನಾನ್ಮುಹನ್ ತಿರುವಂದಾದಿ–54

ಕಣ್ಣೆದುರಿಗೆ ಕಾಣುವ ಎಲ್ಲಾ ಪದಾರ್ಥಗಳೂ ಸರ್ವೇಶ್ವರನೆಂದು ತಿಳಿಯದವರು, ತಿಳಿಯುವುದೆಲ್ಲಾ ವ್ಯರ್ಥ.

"ನಿರ್ಮಾಲ್ಯಂ ಭಕ್ಷಯಿತ್ವೈವ ಮುಚ್ಛಿಷ್ಟ ಮುಗುರೋರಪಿ ।
ಮಾಸಂಪಯೋವ್ರ ತೋಭೂತ್ವಾ ಜಪನ್ನಷ್ಟಾಕ್ಷರಂ ಸದಾ ।
ಬ್ರಹ್ಮಕೂರ್ಚಂ ತತಃಪೀತ್ವಾ ಪೂತೋ ಭವತಿ ಮಾನವಃ॥"

ಎನ್ರು ಭಗವದ್ಧರ್ಮನಿಷ್ಠನುಕ್ಕು ಸಮಾಯಾಚಾರಂ ಶೊಲ್ಲುಹಿರ ಸನತ್ಕುಮಾರ ಸಂಹಿತಾ ವಚಸತ್ತೈ ಆಗಮ ಪ್ರಾಮಾಣ್ಯತ್ತಿಲೇ ಅಳವಂದಾರ್ ಉದಾಹರಿತ್ತರುಳಿನಾರ್. ಆಹೈಯಾಲೇ (1) ಪೋಸಕಮ್ ಶೆಯ್ದ ಶೇಡನ್ತರುವರೇಲ್ ಪುನಿತಮನ್ರೇ" ಎನ್ರದುವುಮ್ ಗುರುವಿಷಯ ಮಾಮಿತ್ತನೈ. ಪೊದು ವಾನಾಲುಮ್, ಭಗವತ್ಸಂಕೀರ್ತನಪರರ್ ದೇಶಕಾಲಾದಿವೈಗುಣ್ಯತ್ತಾಲೇ ಊನವೃತ್ತಿಹಳುಮಾಯ್ ಊನಕಾರಕರ್ಹಳು ಮಾಯಿರುನ್ದಾರ್ಹಳೇ ಯಾಹಿಲುಮ್, ತಾಙ್ಗಳ್ ಅಮುದುಶೆಯ್ದ ಶೇಡ ನ್ತರುವರಾಹಿಲ್ ಪುನಿದುಮಾ ಮೆನ್ರದಿತ್ತನೈ. ಇದಿಲ್ "ಶೇಷ ಶಬ್ದಂ" "ಅನ್ನಶೇಷಃ ಕಿಂ ಕ್ರಿಯತಾಂ, ಇಷ್ಟೈಸ್ಸಹ ಭುಜ್ಯತಾಮ್" ಇತ್ಯಾದಿಹಳಿಲ್ ನ್ಯಾಯತ್ತಾಲೇ ಭಾಂಡಸ್ಥವಿಷಯಮಾನಾಲ್ ವಿರೋಧ ಮಿಲ್ಲೈ. ಉಚ್ಛಿಷ್ಟ ಶಬ್ದಂ ತಾನುಮ್ ಶ್ರುತ್ಯಾದಿಹಳಿಲೇ ಭುಕ್ತಶಿಷ್ಟಮಾಯ್ ಪಾಕ ಪಾತ್ರಸ್ಥಮಾನ ದಿಲುಮ್ ಪ್ರಯುಕ್ತಮ್.

---

**ಮೇಲೂ ನಿರ್ಮಾಲ್ಯಂ ಭಕ್ಷಯಿತ್ಯೈವಂ** ಇತ್ಯಾದಿ ದೇವತಾಂತರಗಳಿಗೆ ನಿವೇದನ ಮಾಡಲ್ಪಟ್ಟ ನಿರ್ಮಾಲ್ಯವನ್ನು ಊಟ ಮಾಡಿಯೂ ಆಚಾರ್ಯನಲ್ಲದವನ ಉಚ್ಛಿಷ್ಟವನ್ನು ಊಟ ಮಾಡಿಯೂ ಉಂಟಾಗುವ ಅ ಶುದ್ಧಿ ನಿವೃತ್ತಿಗೆ ಒಂದು ತಿಂಗಳು ಕಾಲ ಬರಿ ಹಾಲನ್ನು ಕುಡಿದು ಸದಾ ಅಷ್ಟಾಕ್ಷರವನ್ನು ಜಪಿಸಿ ಅನಂತರ ಬ್ರಹ್ಮ ಕೂರ್ಚಪಂಚಗವ್ಯವನ್ನು ಸೇವಿ ಸಿದರೆ, ಮಾನವನು ಪವಿತ್ರನಾಗುತ್ತಾನೆ. ಹೀಗೆ ಭಗವದ್ಧರ್ಮನಿಷ್ಠನಿಗೆ **ಉಚ್ಛಿಷ್ಟಮುಗುರೋರಪಿ**–ಆಚಾರ್ಯ, ಪಿತೃ, ಜ್ಯೇಷ್ಠ ಭ್ರಾತೃ, ಪತಿವ್ಯತಿರಿಕ್ತರ ಉಚ್ಛಿಷ್ಟವು **ಕೂಡದು.** ಹಾಗೆ ಅದನ್ನು ತಿಂದರೆ ಮೇಲೆ ಹೇಳಿದ ಪ್ರಾಯ ಶ್ಚಿತ್ತವು ಏರ್ಪಟ್ಟದೆ. ಹೀಗೆ **ಸಮಯಾಚಾರಂ**–ಪ್ರಾಯಶ್ಚಿತ್ತ ರೂಪವಾದ ಆಚಾರವನ್ನು ಹೇಳುವ ಸನತ್ಕು ಮಾರ ಸಂಹಿತಾವಚನವನ್ನು ಆಳವಂದಾರವರು, ಆಗಮ ಪ್ರಾಮಾಣ್ಯದಲ್ಲಿ ಅನುಗ್ರಹಿಸಿದ್ದಾರೆ. **ಆಹೈಯಾಲ್** ಆದ್ದರಿಂದ (1) **ಪೋಸಹಮ್ ಶೆಯ್ದ ಶೇಡಮ್,** ಇತ್ಯಾದಿ ಹೇಳಿರುವುದೂ **ಗುರುವಿಷಯಮಾಮಿತ್ತನೈ**– ಮೇಲೆ ಹೇಳಿದಂತೆ ಆಚಾರ್ಯಾದಿಗಳ ಉಚ್ಛಿಷ್ಟ ಭೋಜನ ವಿಷಯವಷ್ಟೇ. **ಪೊದುವಾನಾಲುಮ್**–ಶಾಸ್ತ್ರವಿಹಿತ ವಲ್ಲದೆ ನಾಮ ಸಂಕೀರ್ತನ ಪರ ಭಾಗವತ ಸಾಮಾನ್ಯ ವಿಷಯವಾದರೆ ಭಗವತ್ಸಂಕೀರ್ತನ ಪರರು, ದೇಶಕಾಲಾದಿ ವೈಗುಣ್ಯದಿಂದ **ಊನವೃತ್ತಿಹಳುಮಾಯ್**–ಆಪತ್ತಿನಲ್ಲಿ ಕೃಷ್ಯಾದಿ ವ್ಯಾಪಾರಗಳನ್ನು ಮಾಡುವವರಾಗಿಯೂ, **ಊನಕಾರಕರ್ಹಳುಮಾಯ್**–ಇತ್ಯಾದಿ ಇತರರಿಗೆ ಕೃಷ್ಯಾದಿ ವ್ಯಾಪಾರಗಳನ್ನು ಮಾಡುವಂತೆ ಉಪದೇಶ ಮಾಡುವ ವರಾಗಿದ್ದರೂ ತಾವು ಊಟ ಮಾಡಿ ಅಡಿಗೆ ಮಾಡಿದ ಪಾತ್ರೆಯಲ್ಲಿ ಮಿಕ್ಕ ಅನ್ನವನ್ನು ಕೊಟ್ಟರೆ ಪವಿತ್ರವೆಂದಷ್ಟೇ. **ಇದಿಲ್ ಶೇಷ ಶಬ್ದಮ್**ಈ ಪಾಶುರದಲ್ಲಿ ಹೇಳಿರುವ ಶೇಷ ಶಬ್ದವು, **"ಅನ್ನಶೇಷಃ ಕಿಂಕ್ರಿಯತಾಮ್ ಇಷ್ಟೈಸ್ಸಹ**

---

1) ವಾನುಳಾರ್ ಅರಿಯಲಾಹಾ ವಾನವಾ ಎನ್ಬರಾಹಿಲ್
ತೇನುಲಾಮ್ ತುಳಬಮಾಲೈ ಶೆನ್ನಿಯಾರ್ ಎನ್ಬರಾಹಿಲ್ ।
ಊನ ಮಾಯಿನ ಹಳ್ ಶೆಯ್ಯುಮ್ ಊನಕಾರಕರ್ಹಳೇಲುಂ
ಪೋನಹಮ್ ಶೆಯ್ದ ಶೇಡಮ್ ತರುವರೇಲ್ ಪುನಿದಮನ್ರೇ ॥ ತಿರುಮಾಲೈ-41

ಭಗವತ್ ಸಂಕೀರ್ತನಪರರು, ಕೃಷ್ಯಾದಿ ಕೀಳು ವೃತ್ತಿಯಿಂದ ಕೂಡಿಯೂ, ಕೀಳಾದ ವೃತ್ತಿಯನ್ನು ಮಾಡಿಸುವವರಾಗಿಯೂ ಇದ್ದರೂ ತಾವು ಊಟ ಮಾಡಿ, ಅಡಿಗೆ ಪಾತ್ರೆಯಲ್ಲಿ ಮಿಕ್ಕ ಅನ್ನವನ್ನು ಕೊಟ್ಟರೆ ಅದು ಪವಿತ್ರವಾಗುತ್ತದೆ.

1) **"ಪರಿತ್ಯಜೇದರ್ಥಕಾಮೌ ಯೌ ಸ್ಯಾತಾಂ ಧರ್ಮವರ್ಜಿತೌ ।**
**ಧರ್ಮಂಚಾಪ್ಯಸುಖೋದರ್ಕಂ ಲೋಕ ಸಂರುಷ್ಟಮೇವ ಚ ॥**

**ಎನ್ರುಮ್ ಮನ್ವಾದಿಹಳ್ ವ್ಯವಸ್ಥೈ ಪಣ್ಣಿನಾರ್‌ಹಳ್.**

**"ತದುಕ್ತಮಾತ್ರಂ ಮಂತ್ರಾಗ್ರ್ಯಂ" ಎನ್ರದು. ಇವರ್ ತಞ್ಜಮಾಹ ಉಪದೇಶಿತ್ತ ಭಾಷಾ ವಾಕ್ಯಙ್ಗಳುಂ ತಿರುಮಂತ್ರಙ್ಗಳ್ ಪೋಲೇ ಆದರಿತ್ತು ಅನುಸಂಧಿಕ್ಕವೇಣುಮೆನ್ರಪಡಿ; ಅಲ್ಲದು ಇವರ್ ಶೊಲ್ಲುಮ್ ಲೌಕಿಕ ವ್ಯವಹಾರಙ್ಗಳ್ ಜಪಾದಿಯೋಗ್ಯಙ್ಗಳೆನ್ರಪಡಿಯನ್ರು. 2) ಶೊಲ್ಲುಮವಿಡು ಶುರುತಿಯಾಮ್" ಎನ್ರದುಕ್ಕುಮ್ ಇಪ್ಪಡಿ ಹಿತಾರ್ಥಮಾನ ವಾಕ್ಯಮೇ ವಿಷಯಮ್.**

---

**ಭುಜ್ಯತಾಮ್"** ಅನ್ನ ಶೇಷವನ್ನು ಏನು ಮಾಡುವುದು? ಇಷ್ಟರೊಡನೆ ಊಟ ಮಾಡುವುದು ಇತ್ಯಾದಿಗಳಲ್ಲಿ ಹೇಳಿರ ವಂತೆ, **ಭಾಂಢ ಸ್ಥ ವಿಷಯ ಮಾನಾಲ್**–ಅಡಿಗೆ ಮಾಡಿದ ಪಾತ್ರೆಯಲ್ಲಿ ಮಿಕ್ಕ ಅನ್ನದ ವಿಷಯವಾದರೆ ವಿರೋಧವಿಲ್ಲ ಇಲ್ಲಿ ಅಡಿಗೆಪಾತ್ರೆಯಲ್ಲಿ ಮಿಕ್ಕ ಅನ್ನವು ವಿವಕ್ಷಿತವಾದಂತೆ, "ಉಚ್ಛಿಷ್ಟಮಗುರೋರಪಿ" ಎಂಬಲ್ಲಿ ಉಚ್ಛಿಷ್ಟ ಶಬ್ದಕ್ಕೆ ಊಟ. ಮಾಡಿದ ಎಂಜಲು ಎಂದು ವಿವಕ್ಷಿಸಿ ಅದನ್ನು ನಿಷೇಧಿಸಿರುವುದೂ ವಿರೋಧವಲ್ಲವೆಂದರ್ಥ. ಹೀಗೆ ಉಚ್ಛಿಷ್ಟ ಶಬ್ದಕ್ಕೆ ಪಾಕ ಮಾಡಿದ ಪಾತ್ರೆಯಲ್ಲಿ ಮಿಕ್ಕ ಶೇಷದಲ್ಲಿಯೂ ಶ್ರೌತ ಪ್ರಯೋಗವನ್ನು **ಉಚ್ಛಿಷ್ಟ ಶಬ್ದಂತಾನುಮ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಉಚ್ಛಿಷ್ಟ ಶಬ್ದವು "ಅದಿತಿಃ ಪುತ್ರಕಾಮಾ ಸಾಧ್ಯೇಭ್ಯೋ ದೇವೇಭ್ಯಃ ಬಹ್ಮೌದನ ಮಪಚತ್ತಸ್ಯಾ ಉಚ್ಛೇಷಣ ಮದದುಃ ಸಾರೀತೋಧತ್ತೇ" ಇತ್ಯಾದಿ ಶ್ರುತಿಗಳಲ್ಲಿ ಭೋಜನ ಮಾಡಿದ ನಂತರ, ಅಡಿಗೆಮಾಡಿದ ಪಾತ್ರೆಯಲ್ಲಿ ಮಿಕ್ಕ ಅನ್ನಕ್ಕೂ ಪ್ರಯೋಗಿಸಲ್ಪಟ್ಟಿದೆ. ಅದಿತಿಯು ಮಕ್ಕಳನ್ನು ಪಡೆಯಬೇಕೆಂಬ ಆಸೆ ಯಿಂದ ಸಾಧ್ಯದೇವತೆಗಳಿಗೆ ಅನ್ನವನ್ನು ಅಡಿಗೆ ಮಾಡಿ ಹಾಕಿದಳು. ಅವರುಗಳು ಉಚ್ಛೇಷಣಂ-ಊಟಮಾಡಿಮಿಕ್ಕ ಅನ್ನ ವನ್ನು ಅದಿತಿಗೆಕೊಟ್ಟು ಅವಳು ಅದನ್ನು ಸ್ವೀಕರಿಸಿ ಗರ್ಭವತಿಯಾದಳು ಎಂದು ಶ್ರುತ್ಯರ್ಥ. ದಂಪತ್ಯೋಃಶೇಷಭೋಜನಮ್ ಎಂದು ವಿಹಿತವಾದ ಭುಕ್ತಶಿಷ್ಟಭಾಂಡಸ್ಥ ಶೇಷ ಭೋಜನವು, ನಾರಾಯಣೈಕ ನಿಷ್ಠ ವಿಷಯವಾದರೆ ಗುಣಾಧಿಕ್ಯವನ್ನು ಹೇಳಿದಂತೆಯಾಗುತ್ತದೆ ಎಂಬುದು ಆಚಾರ್ಯರ ಹೃದಯ. ಇತ್ಯಾದಿ ಮೇಲೆ ಹೇಳಿದ ಶ್ರುತಿಯಲ್ಲಿ ಉಚ್ಛಿಷ್ಟ ಶಬ್ದವು ಭಾಂಡಸ್ಥಶೇಷ–ಪಾಕ ಪಾತ್ರೆಯಲ್ಲಿ ಮಿಕ್ಕಿರುವ ಅನ್ನವನ್ನು ತಿಳಿಸುವಂತೆ, "ಉಚಿಷ್ಟಂಮೇ ಪೀತಂಸ್ಯಾತ್" ಎಂಬ ಉಷಸ್ತಿ ಪ್ರಕರಣದಲ್ಲಿ ಹೇಳಿದ ಶ್ರುತಿಯಲ್ಲಿ ಉಚ್ಛಿಷ್ಟ ಶಬ್ದವು ಭುಕ್ತ ಶೇಷದಲ್ಲಿಯೂ ಪ್ರಯೋಗಿಸಲ್ಪಟ್ಟಿ ರುವುದರಿಂದ, ತದುಚ್ಛಿಷ್ಟಂಸುಪಾವನಂ ಎಂದು ಭುಕ್ತ ಶೇಷ ಪರವಾಗಿಯೇ ಹೇಳಿದರೇನು ತಪ್ಪು ಎಂಬ ಪ್ರಶ್ನೆಗೆ 1) **ಪರಿತ್ಯಜೇದರ್ಥಕಾಮೌ** ಎಂದು ಆಚಾರ್ಯರು ಸಮಾಧಾನವನ್ನು ಅನುಗ್ರಹಿಸುತ್ತಾರೆ. ಅದಾಗಿ ಧರ್ಮ ವಿರುದ್ಧವಾದ ಅರ್ಥ ಕಾಮಗಳನ್ನು ಬಿಡಬೇಕು: ಲೋಕದವರಿಗೆ ಉದ್ವೇಗ ಜನಕವಾದ ಮತ್ತು ಉತ್ತರ ಕಾಲದಲ್ಲಿ ದುಃಖವನ್ನು ಕೊಡುವಂಥಹ ಧರ್ಮವನ್ನೂ ಬಿಡಬೇಕು ಎಂದು ಮನ್ವಾದಿಗಳು ವ್ಯವಸ್ಥೆ ಮಾಡಿರುವುದರಿಂದ, "ತದುಚ್ಛಿಷ್ಟಂ ಸುಪಾವನಂ" ಎಂಬಲ್ಲಿ ಭಾಂಡಸ್ಥ ಶೇಷಾನ್ನ ಪರವಾಗಿ ಹೇಳುವುದೇ ಯುಕ್ತವೆಂಬುದು ಆಚಾರ್ಯರ ಹೃದಯ.

**'ತದುಕ್ತಮಾತ್ರಂ ಮಂತ್ರಾಗ್ರ್ಯಂ**-ಭಗವದ್ಭಕ್ತರು ಹೇಳುವ ಮಾತೇ ಶ್ರೇಷ್ಠವಾದ ಮಂತ್ರ–ಎಂದು ಹೇಳಿರು ವುದು ಇವನು **ತಂಜಮಾಹ ಉಪದೇಶಿತ್ತ**–ರಕ್ಷಕವಾಗಿ ಉಪದೇಶಿಸಿದ ಭಾಷಾ ವಾಕ್ಯಗಳೂ ಅಷ್ಟಾಕ್ಷರಮಂತ್ರದಂತೆ ಆದರಿಸಿ ಅನುಸಂಧಿಸಲ್ಪಡಬೇಕು ಎಂದು ಅರ್ಥ. **ಅಲ್ಲದಿವನ್**–ಇತ್ಯಾದಿ – ಇದಲ್ಲದೆ ಇವನು ಹೇಳುವ ಲೌಕಿಕ ವ್ಯವಹಾರಗಳೂ ಜಪಾದಿ ಯೋಗ್ಯಗಳೆಂದರ್ಥವಲ್ಲ. 2) **ಶೊಲ್ಲುಮವಿಡು ಶುರುದಿಯಾಮ್"** ಎಂಬ ಮಾತಿಗೂ ಹೀಗೆ ಹಿತಕ್ಕಾಗಿ ಉಪದೇಶಿಸುವ ಆಚಾರ್ಯ ವಾಕ್ಯಗಳೇ ವಿಷಯ.

---

1) ಮನುಸ್ಮೃತಿ 4.176

2) ಅಳ್ಳಮೇಲ್ ಪಾಪ್ಪೈಕ್ಕನ್ಬರ್ ಅಡಿಕ್ಕನ್ಬರ್
ಶೊಲ್ಲುಮವಿಡು ಶುರುದಿಯಾಮ್-ನಲ್ಲ

## ಭಾಗವತ ಸ್ಪರ್ಶಮಾಹಾತ್ಮ್ಯಂ ವಿಹಿತ ವಿಷಯ ಏವ

"ತತ್ಸ್ಪೃಷ್ಟಮಖಿಲಂ ಶುಚಿ" ಎನ್ಗಿರದು, ಆತುರವಿಷಯತ್ತಿಲ್ ಸ್ಪೃಷ್ಟ್ವಾ ಸ್ನಾನಮ್ಪೋಲವುಮ್ ದೀಕ್ಷಾಕಾಲತ್ತಿಲ್ ವಿಷ್ಣು ಹಸ್ತ ಪ್ರದಾನಾಖ್ಯ ಸ್ಪರ್ಶ ಮ್ಪೋಲವುಮ್, ತಿರುಪ್ರತಿಷ್ಠೈಯಿಲ್ ಮಹಾ ಭಾಗವತ ಸ್ಪರ್ಶಮ್ಪೋಲವುಮ್, ಮತ್ತುಮ್ ಸ್ಪರ್ಶಂ ವಿಹಿತಮಾನ ವಿಡಙ್ಗಳಿಲೇ ಇವನುಡೈಯ ಸ್ಪರ್ಶಂ ಪೆತ್ತದಾಹಿಲ್ ಸ್ಪೃಷ್ಟಮಾನವೈ ಯೆಲ್ಲಾಮ್ ಪರಿಶುದ್ಧಮಾ ಮೆನ್ಗಿರಪಡಿ ;

ಸ್ಪರ್ಶಮಾಹಾತ್ಮ್ಯಂ ವಿಹಿತವಿಷಯೇ ನೋಚೇತ್, ಬಾಧಮಾಹ

ಅಲ್ಲದು, 1) "ಉದುಂಬರಂ ನಖಾದೇತ್ತು"

---

ತತ್ಸ್ಪೃಷ್ಟಮಖಿಲಂ ಶುಚಿ–ಅವರು ಮುಟ್ಟಿದ್ದೆಲ್ಲಾ ಶುದ್ಧ ಎಂಬುದು **ಆತುರ ವಿಷಯತ್ತಿಲ್**–ಜ್ವರದಿಂದ ಪೀಡಿತನಾದವನಿಗೆ ಸ್ನಾನ ಮಾಡಬೇಕಾದ ಪ್ರಸಂಗವು ಬಂದರೆ, **ಸ್ಪೃಷ್ಟ್ವಾಸ್ನಾನಂ ಪೋಲವುಮ್**–ಅವನನ್ನು ಮುಟ್ಟಿ ಸಲಸಲಕ್ಕೂ ಮತ್ತೊಬ್ಬನು ಹತ್ತು ಸಲ ಸ್ನಾನ ಮಾಡಿದರೆ, ಆ ಜ್ವರಪೀಡಿತನು ಶುದ್ಧನಾಗುತ್ತಾನೆ ಹಾಗೆಯೇ ರಜಸ್ವಲೆಯೂ ಸೂತಿಕೆಯೂ ಜ್ವರಪೀಡಿತರಾಗಿದ್ದರೆ, ಅವರನ್ನು 32 ಸಲ ಮುಟ್ಟಿ ಸಲಸಲಕ್ಕೂ ಮತ್ತೊಬ್ಬಳು 32 ಸಲ ಸ್ನಾನ ಮಾಡಿದರೆ, ರಜಸ್ವಲೆಗೂ, ಪ್ರಸೂತಿಕಾ ಸ್ತ್ರೀಗೂ ಶುದ್ಧಿ ಹೇಳಿದೆ. ಹಾಗೆಯೇ **ದೀಕ್ಷಾಕಾಲತ್ತಿಲ್ ವಿಷ್ಣುಹಸ್ತ ಪ್ರದಾನ ಸ್ಪರ್ಶಂಪೋಲವುಮ್**–

ಕರೇಣ ಸಂಸ್ಪೃಶನ್ಗಾತ್ರಂ ಮಂತ್ರವಿದ್ಭಾವ ಯೇತ್ತ್ರಯತ್ ।

ಏಷಾಸಾ ಸರ್ವ ಮಂತ್ರಾಣಾಂ ದೀಕ್ಷೈಶ್ಯಾಹ ಮುನಿಸ್ಸ್ವಯಮ್ ॥

ಎಂಬ ವಚನದಲ್ಲಿ ಹೇಳಲ್ಪಟ್ಟಂತೆ, ದೀಕ್ಷೆಯನ್ನು ಕೊಡುವ ದೀಕ್ಷಾಚಾರ್ಯನು ದೀಕ್ಷೆಯನ್ನು ಸ್ವೀಕರಿಸುವ ಶಿಷ್ಯನ ಎದೆಯನ್ನು ಮುಟ್ಟಿದರೆ ಅದು ವಿಷ್ಣು ಹಸ್ತ ಪ್ರದಾನ ಸ್ಪರ್ಶವೆನಿಸುತ್ತದೆ. ಈ ಕರ ಸ್ಪರ್ಶವು ಶುಚಿಕರ. ಅದ ರಂತೆಯೇ **ತಿರುಪ್ರತಿಷ್ಠೆಯಿಲ್ ಮಹಾಭಾಗವತ ಸ್ಪರ್ಶಂ ಪೋಲವುಮ್**–

ಅಧಿವಾಸಾದಿಕಂ ಕರ್ಮಯಥಾವತ್ಕರ್ತುಮಕ್ಷಮಃ ।

ಮಹಾಭಾಗವತ ಸ್ಪರ್ಶಮೇಕಂ ವಾ ಕಾರಯೇತ್ಸುಧೀಃ ॥

ಎಂದು ಹೇಳಲ್ಪಟ್ಟಂತೆ ನೂತನ ವಿಗ್ರಹ ಪ್ರತಿಷ್ಠಾಕಾಲದಲ್ಲಿ ಅಧಿವಾಸಾದಿ ಕರ್ಮಗಳನ್ನು ಯಥಾಶಾಸ್ತ್ರ ಮಾಡ ಲಾಗದೆ ಇದ್ದರೆ, ಭಗವಂತನ ದಿವ್ಯ ಮಂಗಳ ವಿಗ್ರಹಕ್ಕೆ ಮಹಾಭಾಗವತರ ಕರಸ್ಪರ್ಶವನ್ನಾದರೂ ಮಾಡಿಸಬೇಕು. ಎಂದು ಹೇಳಿರುವ ಪ್ರಕಾರದಂತೆಯೂ ಹೀಗೆಯೇ ಶಾಸ್ತ್ರ ವಿಹಿತವಾದ ಸ್ಥಳಗಳಲ್ಲಿ ಈ ಭಾಗವತನ ಕರಸ್ಪರ್ಶವು ಲಭಿಸಿದರೆ ಸ್ಪರ್ಶಿಸಲ್ಪಟ್ಟವುಗಳೆಲ್ಲಾ ಪರಿಶುದ್ಧಗಳಾಗುತ್ತವೆ ಎಂದರ್ಥ.

**ಅಲ್ಲದು**–ಹೀಗಲ್ಲದೆ, **1) ಉದುಂಬರಂ ನಖಾದೇತ್ತು** ಇತ್ಯಾದಿಯಾಗಿ ಹೇಳಲ್ಪಟ್ಟ ರೀತಿಯಲ್ಲಿ ಶಾಸ್ತ್ರ

---

ಪಡಿಯಾಮ್ ಮನುಮಾರ್ಕವರ್ ಶಿಂದೈ

ಶೆಡಿಯಾರ್ ವಿನೈತ್ತೊಹೈಕ್ಕುತ್ತೀ

ಜ್ಞಾನಸಾರ-40

ಪಂಕಜವಾಸಿನಿಯ ಪ್ರಿಯನಿಗೆ ಪ್ರಿಯರಾದ ಭಾಗವತೋತ್ತಮರು ಹೇಳುವ ಮಾತು ಶ್ರುತಿ ವಾಕ್ಯದಂತೆ ಪ್ರಾಮಾಣ್ಯವಾದದ್ದು. ಅವರುಗಳ ಚರಿತ್ರೆಯು ಮನು ಧರ್ಮಶಾಸ್ತ್ರಕ್ಕನು ಗುಣವಾದದ್ದು. ಪಾಪಗಳೆಂಬ ಗುಲ್ಮಗಳಿಗೆ ಅಗ್ನಿ, ಪಾಪಗಳನ್ನು ನಾಶಮಾಡ ತಕ್ಕವು ಎಂದರ್ಥ,

1) ಭಾರತ ಅನು. 155–97

2) "ಕಾಲಿಂಗೋ ದುಂಬರಾಲಾಬು ಬಿಂಬಾನಿ ಪರಿವರ್ಜಯೇತ್ ।
ಕಾನ್ಯಶ್ನತಸ್ತು ಸತತಂ ನಿತ್ಯಂ ದೂರ ತರೋ ಹರಿಃ ॥"

3) "ವೃಂತಾಕಕತಕಾಲಿಂಗ ಬಿಲ್ವೋದುಂಬರ ಭಿಸ್ಸಟಾಃ ।
ಯೋ ಭಕ್ಷಯತಿ ಸಮ್ಮೋಹಾತ್ ತಸ್ಯದೂರತರೋ ಹರಿಃ ॥
ಕಾಲಿಂಗೀಂ ಕ್ಷುದ್ರವಾರ್ತಾಂಚ ದಗ್ಧಾನ್ನಂ ಮೌಸಲೀಂತಥಾ ।
ತುಂಬಿಕಾಫಲಮಶ್ನೀಯಾತ್ತಸ್ಯ ದೂರತರೋಹರಿಃ ।"
"ಯೋತ್ತಿವಾರ್ತಾಕ ಕಾಲಿಂಗ ಮಸೂರ ಬಿಸಕಾನ್ಯಪಿ ।
ಅಂತಕಾಲೇ ಜಗನ್ನಾಥಂ ಗೋವಿಂದಂ ನಸ್ಮರಿಷ್ಯತಿ ॥"

4) "ತುಂಬಂ ಕೋಶಾತಕಂಚೈವ ಪಲಂಡುಮ್ ಗ್ರಂಜನಂ ತಥಾ ।
ಛತ್ರಾಕಂ ವಿಡ್ವರಾಹಂ ಚ ಭುಕ್ತ್ವಾ ಚಾಂದ್ರಾಯಣಂ ಚರೇತ್ ।"

5) "ನಾಳಿಕಾಚಣ ಛತ್ರಾಕ ಕುಸುಂಭಾಲಾಬು ವಿಡ್ಭವಾ ।
ಕುಂಭೀ ಕಂಚುಕ ವೃಂತಾಕ ಕೋವಿದಾರಾಂಶ್ಚ ವರ್ಜಯೇತ್ ।

---

ನಿಷಿದ್ಧವಾದ ಪದಾರ್ಥಗಳೆಲ್ಲಾ ಅವನು ಮುಟ್ಟಿದಾಕ್ಷಣಕ್ಕೆ ಪರಿಶುದ್ಧಿಯನ್ನು ಹೊಂದುತ್ತವೆ ಎಂದಲ್ಲ. ಹೀಗೆ ಶಾಸ್ತ್ರವರ್ಜಿತವಾದ ಆಹಾರಾನುಷ್ಠಾನಗಳು ಯಾವುವು ಎಂಬುದನ್ನು ಆಚಾರ್ಯರು ವಿವರಿಸುತ್ತಾರೆ. ಉದುಂಬರ–ಅತ್ತಿಕಾಯಿ, ಪಿಪ್ಪಲಂಚವಟೇಚೈವ ಶಣಶಾಕಂತಥೈವಚ", ಎಂಬುದು ಪೂರ್ವಾರ್ಧ. ಪಿಪ್ಪಲ–ಅಶ್ವತ್ಥಮರದ ಹಣ್ಣು ವಟ–ಆಲದ ಹಣ್ಣು, ಶಣಶಾಕಂ–ಶಣಬು ಇವುಗಳನ್ನು ತಿನ್ನಬಾರದು. ಇವು ಆಯುಸ್ಸಿಗೆ ಬಾಧಕಗಳು ) **ಕಾಲಿಂಗೋ ದುಂಬುರಾಲಾಬು** ಇತ್ಯಾದಿ ಕಾಲಿಂಗ–ಮೂಲಂಗಿ, ಉದುಂಬರ–ಅತ್ತಿಕಾಯಿ, ಅಲಾಬು–ಸೋರೆಕಾಯಿ, ಬಿಂಬ–ತೊಂಡೇಕಾಯಿ ಮತ್ತು ತೊಂಡೆಹಣ್ಣು ರಾಜಸ ತಾಮಸಾಹಾರಗಳಾದ ಇವುಗಳನ್ನು ವರ್ಜಿಸಬೇಕು. ಇವುಗಳನ್ನು ತಿನ್ನುವವರಿಗೆ ರಾಜಸ, ತಾಮಸ ಗುಣಗಳು ಹೆಚ್ಚಿ, ಭಗವದ್ಭಕ್ತಿಯು ಉಂಟಾಗದೆ ಜ್ಞಾನ ಶೂನ್ಯತೆಯಿಂದ ಭಗವಂತನ ಸ್ಮರಣವೇ ಬರದೆ, ಶ್ರೀ ಹರಿಯು ಬಹು ದೂರದಲ್ಲಿರುತ್ತಾನೆ. **ವೃತ್ತಾಂಕ ಕತಕಾಲಿಂಗ** ಇತ್ಯಾದಿ–ವೃಂತಾಕ–ಬಿಳಿ ಬದನೆಕಾಯಿ, ಕತಕ–ತೇತ್ತಾಂಕೊಟ್ಟೆ ಎಂದು ಹೇಳುವ ಬಿಲ್ವದ ಬೀಜ- ಬಿಲ್ವ–ಬಿಲ್ವದ ಹಣ್ಣು, ಭಿಸ್ಸಟಾ–ಸೀದು ಹೋದ ಅನ್ನ, ಶಾಕಗಳು ಇವುಗಳನ್ನು ಮೋಹದಿಂದ ಊಟ ಮಾಡುವವನಿಗೆ, ಅಜ್ಞಾನವು ಹೆಚ್ಚಿ ಸಾತ್ವಿಕ ಜ್ಞಾನವು ಉಂಟಾಗದೆ, ಹರಿಯು ಬಹಳ ದೂರದಲ್ಲಿರುತ್ತಾನೆ. ಅಂದರೆ ಶ್ರೀ ಹರಿಯ ಸ್ಮರಣವು ಉಂಟಾಗುವುದಿಲ್ಲ. 3) **ಕಾಲಿಂಗೀಂ ಕ್ಷುದ್ರವಾರ್ತಾಂಚ** ಇತ್ಯಾದಿ. ಕಾಲಿಂಗೀ ಕೊಮ್ಮಟ್ಟಿ, ಕ್ಷುದ್ರವಾರ್ತ–ರಾಮುಗುಳ್ಳ, ದಗ್ಧಾನ್ನ–ಸೀದು ಹೋದ ಅನ್ನ, ಮೌಸಲಿ–ನಿಲಪ್ಪನೈ ಎಂದು ತಮಿಳಿನಲ್ಲಿ ಹೇಳುವುದು, ತುಂಬಿಕಾಫಲ–ಸೋರೆಕಾಯಿ ಇವುಗಳನ್ನು ತಿನ್ನುವವರಿಗೆ ಶ್ರೀ ಹರಿಯ ಧ್ಯಾನವು ಉಂಟಾಗುವುದಿಲ್ಲ. **ಯೋತ್ತಿವಾರ್ತಾಕ** ಇತ್ಯಾದಿ–ಮಸೂರ–ಕರು ಹಾಕಿದ ಹತ್ತು ದಿವಸದೊಳಗೆ ಕರೆದ ಹಸುವಿನ ಹಾಲು ಅದನ್ನು ಹೆಪ್ಪು ಹಾಕಿದ ಮೊಸರು, ಬಿಸಕ–ತಾವರೆಗೆಡ್ಡೆ ಇವುಗಳನ್ನು ತಿನ್ನುವವರೂ ಅಂತ್ಯ ಕಾಲದಲ್ಲಿ ಜಗನ್ನಾಥನಾದ ಗೋವಿಂದನನ್ನು ನೆನೆಯುವುದಿಲ್ಲ. 4) **ತುಂಬಂಕೋಶಾತಕಂ** ಇತ್ಯಾದಿ ತುಂಬ–ಪೇಲಂಗಾಯ್ ಎಂದು ತಮಿಳಿನಲ್ಲಿ ವ್ಯವಹಾರ, ಕೋಶಾತಕ–ಹೀರೆಕಾಯಿ, ಪಲಂಡು–ಈರುಳ್ಳಿ, ಗ್ರುಂಜನ ಬೆಳ್ಳುಳ್ಳಿ ಛತ್ರಾಕ–ನಾಯಿಕೊಡೆ, ವಿಡ್ವರಾಹ–ಊರ್‌ಪನ್ನಿ ಎಂಬ ಗೆಡ್ಡೆ, ಇವುಗಳನ್ನು ತಿಂದರೆ, ಪ್ರಾಯಶ್ಚಿತ್ತವಾಗಿ ಚಾಂದ್ರಾಯಣವ್ರತವನ್ನು ಅನುಷ್ಠಿಸಬೇಕು. 5) **ನಾಳಿಕಾಚಣಛತ್ರಾಕ** ಇತ್ಯಾದಿ–ನಾಳಿಕಾ–ತೆಂಗಿನಕಾಯಿಯಲ್ಲಿರುವ ಪೊಳಕೆ, ಚಣ–ಸಣಬು ಸೊಪ್ಪು, ಕುಸಂಭ–ಕುಸುಂಭವು, ಅಲಾಬು–ಸೋರೆಕಾಯಿ, ವಿಡ್ಭವಾನ್–ಮನುಷ್ಯರ ಅಮೇಧ್ಯದಲ್ಲಿ ಬೆಳೆದಿದ್ದುದು, ಕುಂಭೀ–ಹಳಸಿದ ಅನ್ನ, ಕೂಳು ಕಂಚುಕ–ಗುಂಡಾಗಿರುವ ಸೋರೆಕಾಯಿ

---

3) ಭಾರ ಅನು.ಶಾ. 161-9'. 4) ಭಾರತ ಅಶ್ವ. 112-44

ಕ್ಷೀರಂ ಲವಣ ಸಂಮಿಶ್ರ ಮುಚ್ಛಿಷ್ಟೇ ಪಿ ಚ ಯದ್ಘೃತಂ ।
ಪಾನಂ ರಜಕ ತೀರ್ಥೇ ಚ ಸುರಾಪಾನಸಮಂ ವಿದುಃ ॥"

5) "ಆರನಾಳಂ ನಸೇವೇತ ಕದಾಚಿದ್ಭಗವತ್ಪರಃ ।
ಸುರಾಕಲ್ಪಂ ಹಿ ತತ್ ಜ್ಞೇಯಂ ತಸ್ಮಾದ್ಯತ್ನೇನ ವರ್ಜಯೇತ್ ॥

6) ಪ್ರಮಾದಾದಪಿ ಕೀಲಾಲಂ ಯಸ್ಸ್ಪೃಶೇದ್ವೈಷ್ಣವೋ ನರಃ ।
ಉಪಚಾರ ಶತೇನಾಪಿ ನಕ್ಷಮಾಮಿ ವಸುಂಧರೇ ॥"

7) "ಏಕಾದಶ್ಯಾಂ ಸುರಶ್ರೇಷ್ಠ ಯೋ ಭುಂಕ್ತೇ ದ್ವಿಜಜನ್ಮವಾನ್ ।
ಪ್ರತಿಗ್ರಾಸ ಮಯಂ ಭುಂಕ್ತೇ ಕಿಲ್ಬಿಷಂ ಶ್ವಾನವಿಟ್ಸಮಮ್ ॥"
ಏಕಾದಶ್ಯಾಂತು ಯೋ ಭುಂಕ್ತೇ ಶಕ್ತಸ್ಸನ್ನಿರುಪದ್ರವಃ ।
ಸುರಾಪಾನಸಮಂ ಪಾಪಂ ಭವೇತ್ತಸ್ಯ ನ ಸಂಶಯಃ ।
ಮದ್ಯಪಾನಾ ತ್ಸುರಶ್ರೇಷ್ಠ ಪಾತ್ಯೈವ ನರಕಂ ವ್ರಜೇತ್ ।
ಏಕಾದಶ್ಯನ್ನ ಕಾಮಸ್ತು ಪಿತೃ ಭಿ ಸ್ಸಹ ಮಜ್ಜತಿ"

8) "ಅನ್ನ ದೋಷಾ ದಶಮನಾ ನ್ನಾನಾವಿಷಯ ದರ್ಶನಾತ್ ।
ದೇಹಶೌಚಾದಿ ವಿರಹಾತ್ಸಮಲಂ ಜಾಯತೇ ಮನಃ ॥

---

ವೃಂತಾಕ–ಬಿಳೀಬದನೆ, ಕೋವಿದಾರ–ಕೊಸ್ಮೈ ಎಂದು ತಮಿಳಿನಲ್ಲಿ ವ್ಯವಹಾರ, ಇವುಗಳನ್ನು ಊಟ ಮಾಡದೆ ತ್ಯಜಿಸಬೇಕು. **ಲವಣ ಸಮ್ಮಿಶ್ರಂ ಕ್ಷೀರಂ**–ಉಪ್ಪು ಸೇರಿಸಿದ ಹಾಲು, ಉಚ್ಛಿಷ್ಟೇಪಿಚ ಯದ್ಘೃತಂ–ಎಂಜಲನ್ನದ ಮೇಲೆ ಹಾಕಿದ ತುಪ್ಪ ಅಂದರೆ ಊಟದ ಮಧ್ಯೆ ಪುನಃ ತುಪ್ಪವನ್ನು ಬಡಿಸಿಕೊಳ್ಳಬಾರದು. **ಪಾನರಂಜಕ ತೀರ್ಥೇಚ**–ಇತ್ಯಾದಿ ಅಗಸನು ಬಟ್ಟೆ ಒಗೆಯುವ ಸ್ಥಳದಲ್ಲಿನ ನೀರನ್ನು ಕುಡಿಯಬಾರದು. ಆ ನೀರು ಸುರಾ ಪಾನಕ್ಕೆ ಸಮ. 5) **ಆರನಾಳಂ ನಸೇವೇತ**–ಇತ್ಯಾದಿ (ಶಾಂಡಿಲ್ಯ ಸ್ಮೃತಿ 2–50) ಆರನಾಳ–ಅನ್ನವನ್ನು ನೆನೆ ಹಾಕಿ ಇಟ್ಟಿರುವ ಅದರ ಹುಳಿ ನೀರು. ಭಗವತ್ಪರನು ಯಾವಾಗಲೂ ಈ ಹುಳಿ ನೀರನ್ನು ಸೇವನೆ ಮಾಡಬಾರದು. ಅದು ಮದ್ಯಕ್ಕೆ ಸಮಾನ 6) **ಪ್ರಮಾದಾದಪಿ–ಕೀಲಾಲಂ** ಇತ್ಯಾದಿ– ಕೀಲಾಲ ರಕ್ತ. ಅನವಧಾನದಿಂದಲೂ ರಕ್ತವನ್ನು ಮುಟ್ಟುವ ವೈಷ್ಣವನ ಈ ತಪ್ಪಿಗೆ ಆತನು ಮಾಡುವ ನೂರು ಉಪಚಾರಗಳಿಂದಲೂ ಕ್ಷಮಿಸುವುದಿಲ್ಲ. ಇದು ವರಾಹಪುರಾಣದಲ್ಲಿ ಭೂ ದೇವಿಗೆ ಭಗವಂತನು ಹೇಳುವ ವಚನ 7) **ಏಕಾದಶ್ಯಾಂಸುರಶ್ರೇಷ್ಠ** ಇತ್ಯಾದಿ, ಸನತ್ಕುಮಾರ ಸಂಹಿತೆ - ಏಕಾದಶಿ ವ್ರತ ದಿವಸದಲ್ಲಿ ಅನ್ನವನ್ನು ಊಟ ಮಾಡುವದ್ವಿಜನು, ಪ್ರತಿಯೊಂದು ಕಬಳವನ್ನೂ ನಾಯಿನ ಅಮೇಧ್ಯಕ್ಕೆ ಸಮಾನಾಗಿ ತಿನ್ನುವಂತಾಗುತ್ತಾನೆ. **ಏಕಾದಶ್ಯಾಂತು ಯೋಭುಂಕ್ತೇ ಶಕ್ತಸ್ಸನ್ ನಿರುಪದ್ರವಃ**–ಇತ್ಯಾದಿ ಏಕಾದಶಿ ವ್ರತದಲ್ಲಿ ಊಟ ಮಾಡದಿದ್ದರೆ ಶರೀರದಲ್ಲಿ ಹಿಂಸೆಗಳು ಉಂಟಾಗದಂತೆ ಶಕ್ತನಾದವನು ಊಟ ಮಾಡಿದ ಸುರಾಪಾನವನ್ನು ಮಾಡಿದ ಪಾಪವು ಅವನಿಗೆ ಉಂಟಾಗುತ್ತದೆ. ಅಶಕ್ತರಾದವರು ಫಲಾಹಾರವನ್ನು ಮಾಡುವುದು. ಆಚಾರದಲ್ಲಿದೆ. ಫಲಾಹಾರವೆಂದರೆ, ಒಡೆದ ಅಕ್ಕಿ–ಸಜ್ಜಿಗೆ, ರವೆ, ರೊಟ್ಟಿ, ಹಣ್ಣು ಹಂಪಲ, ಹಾಲು ಇತ್ಯಾದಿ. **ಮದ್ಯಪಾನಾತ್**–ಇತ್ಯಾದಿ–ಮದ್ಯಪಾನದಿಂದ ಪತಿತನಾಗಿ ನರಕಕ್ಕೆ ಹೋಗುತ್ತಾನೆ. **ಏಕಾದಶ್ಯನ್ನಕಾಮಸ್ತು** ಇತ್ಯಾದಿ ಏಕಾದಶಿ ವ್ರತದ ದಿವಸ ಊಟ ಮಾಡುವವನು ಪಿತೃಗಳೊಂದಿಗೆ ನರಕದಲ್ಲಿ ಬೀಳುತ್ತಾನೆ. 8) **ಅನ್ನದೋಷಾತ್** – ದುಷ್ಟಾನ್ನ ಭೋಜನದಿಂದ ಉಂಟಾದ ದೋಷದಿಂದಲೂ, **ಅಶಮನಾತ್**–

---

8) ಶ್ರೀ ರಂಗ ಮಾಹಾತ್ಮ್ಯ 47–10

**9) "ಆಲಸ್ಯಾ ದನ್ನದೋಷಾಚ್ಚ ಮೃತ್ಯು ರ್ವಿಪ್ರಾನ್ ಜಿಘಾಂಸತಿ" ಇತ್ಯಾದಿಹಳಾಲೇ ನಿಷಿದ್ಧ ಮಾನವೈಯೆಲ್ಲಾಮ್ ಇವನ್ ತೊಟ್ಟವಾರೇ ಶುದ್ಧಮಾ ಮೆನ್ನಪಡಿ ಯನ್ರು.**

**ಏತತ್ಸಂಹಿತಾ ವಾಕ್ಯಸ್ಯ ವ್ಯವಸ್ಥಾನಙ್ಗೀಕಾರೇ ಬಾಧಕಮಾಹ.**

**ಇಪ್ಪಡಿ ವಿಷಯ ವ್ಯವಸ್ಥೈ ಪಣ್ಣಾದಪೋದು, ಪರಿಗೃಹೀತತಮಙ್ಗಳಾನ ಬಹುಶಾಸ್ತ್ರಙ್ಗಳೋಡುಮ್ ಶಿಷ್ಟಾನುಷ್ಠಾನತ್ತೋಡುಮ್, ವಿರೋಧಿಕ್ಕೈಯಾಲೇ ಅತಿವಾದಮಾಯ್ ವಿಡುಮ್.**

**ಪರಮೈಕಾಂತೇರಪಿ ಶಾಸ್ತ್ರಾನತಿ ಲಂಘನಮ್**

**ಮಹಾಪ್ರಭಾವನಾನ ಪರಮೈಕಾಂತಿ ಪಕ್ಕಲಿಲುಮ್ ಇಶ್ಶಾಸ್ತ್ರೀಯ ನಿಯಮಮುಮ್ ಕುಲೈಯಾದೆನ್ನುಮಿಡಮ್, ನಾಥಮುನಿಹಳ್, ಆಳವನ್ದಾರ್, ಎಂಬೆರುಮಾನಾರ್ ಉಳ್ಳಿಟ್ಟ ಪರಮಾಚಾರ್ಯರ್‌ಹಳುಡೈಯ ಅಂತಿಮ ದಿವಸಾವಧಿಯಾನ ಅನುಷ್ಠಾನಙ್ಗಳೈ ಕ್ಕೇಟ್ಟು ತ್ತೆಳಿನ್ದುಕೊಳ್ವದು.**

---

ಸುಲಭವಾಗಿ ಲಭಿಸದ ವಸ್ತುವಿನಲ್ಲಿ ಆಸೆಯಿಂದಲೂ, **ನಾನಾ ವಿಷಯದರ್ಶನಾತ್** – ಶಾಸ್ತ್ರನಿಷಿದ್ಧಗಳಾದ ವಸ್ತುಗಳನ್ನು ಸೇವಿಸುವುದರಿಂದಲೂ, ಸಿನಿಮಾ, ಟಿ.ವಿ.ಗಳನ್ನು ನೋಡುವುದರಿಂದಲೂ, **ದೇಹಶೌಚಾದಿವಿರಹಾತ್** ದೇಹಶುದ್ಧಿ ನಿಮಿತ್ತವಾದ ಸ್ನಾನಾದಿಗಳನ್ನು ಮಾಡದಿರುವುದರಿಂದಲೂ, **ಸಮುಲಂಜಾಯತೇಮನಃ** – ಮನಸ್ಸಿನಲ್ಲಿ ಕಲ್ಮಷವು ಉಂಟಾಗುತ್ತದೆ. 9) **ಆಲಸ್ಯಾದನ್ನದೋಷಾಚ್ಚ** – ಸೋಮಾರಿತನದಿಂದ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳನ್ನು ಅನುಷ್ಠಿಸದೆ ಇರುವುದರಿಂದಲೂ, ಮೇಲೆ ಹೇಳಿದ ರೀತಿಯಲ್ಲಿ ದುರಾಹಾರ ಸೇವನೆಯಿಂದ ಉಂಟಾದ ದೋಷದಿಂದಲೂ, **ಮೃತ್ಯುರ್ವಿಪ್ರಾನ್ ಜಿಘಾಂಸತಿ** – ಮೃತ್ಯುವು ಬ್ರಾಹ್ಮಣರನ್ನು ಕೊಲ್ಲಲು ಇಚ್ಛಿಸುತ್ತದೆ. **ಇತ್ಯಾದಿಹಳಾಲೇ** – ಈ ರೀತಿಯಲ್ಲಿ, **ನಿಷಿದ್ಧಮಾನವೈಯೆಲ್ಲಾಮ್** ಇತ್ಯಾದಿ – ನಿಷಿದ್ಧವಾದವುಗಳೆಲ್ಲಾ ಇವನು ಮುಟ್ಟಿದಾಕ್ಷಣಕ್ಕೆ ಶುದ್ಧವಾದವುಗಳು ಎಂದು ಹೇಳಲಾಗದು. **ಇಪ್ಪಡಿ ವಿಷಯ ವ್ಯವಸ್ಥೈ ಪಣ್ಣಾದ ಪೋದು–"ನಾರಾಯಣೈಕನಿಷ್ಠಸ್ಯ"** ಎಂದಾರಂಭಿಸಿದ ವಚನಕ್ಕೆ ಈ ರೀತಿಯಲ್ಲಿ ವಿಷಯ ವ್ಯವಸ್ಥೆಯನ್ನು ಮಾಡದಿದ್ದರೆ, **ಪರಿಗೃಹೀತತಮಂಗಳಾನ ಬಹುಶಾಸ್ತ್ರಂಗಳೋಡು** ಇತ್ಯಾದಿ – ಪರಿಗ್ರಹಿಸಲು ಶ್ರೇಷ್ಠಗಳಾದ ಅನೇಕ ಶಾಸ್ತ್ರ ವಚನಗಳಿಗೆ ವಿರೋಧವು ಏರ್ಪಡುವುದರಿಂದ, **ಅತಿವಾದ ಮಾತ್ರಮಾಯ್‌ವಿಡುಮ್** – ಹೀಗೆ ವ್ಯವಸ್ಥೆ ಮಾಡುವುದರಿಂದಾಗಿ ಪ್ರಾಸ್ತವಾದ ವಿಷಯಗಳಲ್ಲಿ ನಾರಾಯಣೈಕನಿಷ್ಠನ ಸಂಬಂಧವು ಏರ್ಪಟ್ಟರೆ ಉತ್ಕರ್ಷವು ಸಿದ್ಧಿಸುವುದರಿಂದ ಈ ವಚನಗಳು ಪ್ರಮಾಣಗಳಾಗುತ್ತವೆ. ಇಲ್ಲದೆ, ಸಾಮಾನ್ಯ ವಿಷಯಗಳನ್ನಾಗಿ ಹೇಳಿದರೆ ಅಂದರೆ ಯಥಾರ್ಥವಾಗಿ ಗ್ರಹಿಸಿದರೆ ಬಹು ಶಾಸ್ತ್ರ ವಿರೋಧವೂ ಬಹು ಶಿಷ್ಟಾಚಾರ ವಿರೋಧವೂ ಉಂಟಾಗುವುದರಿಂದ **"ತತ್ಸ್ಪೃಷ್ಟಮಖಿಲಂ ಶುಚಿ"** ಇತ್ಯಾದಿ ವಚನಗಳು ಕೇವಲ ಪ್ರಶಂಸಾ ರೂಪವಾಗಿ, ಪ್ರಾಸ್ತ ವಿಷಯ ವಿಶೇಷಗಳಲ್ಲಿ ಮೇಲೆ ನಿರೂಪಿಸಿದಂತೆ ವ್ಯವಸ್ಥೆಗೊಳಿಸಿದ ಪ್ರಭಾವವೂ ಇಲ್ಲದೆ ಹೋಗುತ್ತದೆ.

**ಪರಮೈಕಾಂತಿಯೂ ಶಾಸ್ತ್ರವನ್ನು ಅತಿಕ್ರಮಿಸಕೂಡದು**

ಪರಮೈಕಾಂತಿ ಸಾರ್ವಭೌಮನೂ ಈ ಶಾಸ್ತ್ರೀಯ ನಿಯಮವನ್ನು ಅತಿಕ್ರಮಿಸಕೂಡದು ಎಂಬುದಕ್ಕೆ ಪ್ರಾಚೀನ ಶಿಷ್ಟಾಚಾರವನ್ನು, **ಮಹಾ ಪ್ರಭಾವನಾನ ಪರಮೈಕಾಂತಿ ಪಕ್ಕಲಿಲುಮ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಮಹಾಪ್ರಭಾವಶಾಲಿಯಾದ ಪರಮೈಕಾಂತಿಗೂ ಈ ಶಾಸ್ತ್ರೀಯ ನಿಯಮವು ಅತಿಕ್ರಮಿಸಲಾಗದು ಎಂಬುದು ನಾಥ ಮುನಿಗಳು ಆಳವಂದಾರ್, ಎಂಬೆರು ಮಾನಾರ್ ಮೊದಲಾದ ಪರಮಾಚಾರ್ಯರುಗಳ ಅಂತಿಮದಿನಸಾವಧಿಯಾದ ಅನುಷ್ಠಾನಗಳನ್ನು ಕೇಳಿ ತಿಳಿದುಕೊಳ್ಳತಕ್ಕದ್ದು.

---

9) ಮನುಸ್ಮೃತಿ 5.3

## ತಾಮಸ ರಾಜಸತ್ಯಾಗಾನಾಂ ವಿವರಣಮ್

ವೇದವೈದಿಕ ಶಾಸ್ತ್ರಙ್ಗಳಿಲ್ ಶೊಲ್ಲುಹಿರ ನಿಯಮಙ್ಗಳೈ ಬಾಹ್ಯರುಂ ಕುದೃಷ್ಟಿಹಳುಂ ಭ್ರಾನ್ತಿಯಾಲೇ ವಿಡುಹಿರವಿಡಮ್ ತಾಮಸತ್ಯಾಗಮೆನ್ರು,

1) "ನಿಯತಸ್ಯ ತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ ।
ಮೋಹಾತ್ತಸ್ಯ ಪರಿತ್ಯಾಗ ಸ್ತಾಮಸಃ ಪರಿಕೀರ್ತಿತಃ ॥"

ಎನ್ಗಿರಶ್ಲೋಕತ್ತಾಲೇ ಯರುಳಿಚ್ಚೆಯ್‌ದಾನ್. ಕುಟುಂಬಭರಣಾದಿಹಳುಕ್ಕಲ್ಲೈನ್ರು ಸನ್ನ್ಯಾಸಾದಿಹಳೈ ಪ್ಪತ್ತು ವಾರ್ತೈಪ್ಪೋಲೇ, ದುಃಖ ರೂಪಙ್ಗಳಾನ ಪ್ರವೃತ್ತಿಹಳುಕ್ಕು ಚ್ಚೋಮ್ಬಿ ವಿಡುಹಿರ ವಿಡಮ್ ರಾಜಸತ್ಯಾಗಮೆನ್ನುಮಿಡತ್ತೈ

2) "ದುಃಖಮಿತ್ಯೇವ ಯಃ ಕರ್ಮ ಕಾಯಕ್ಲೇಶ ಭಯಾತ್ತ್ಯಜೇತ್ ।
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗ ಫಲಂ ಲಭೇತ್ ॥" ಎನ್ರು ಅರುಳಿಚ್ಚೆಯ್‌ದಾನ್.

---

## ತಾಮಸ ರಾಜಸ ಸಾತ್ವಿಕ ತ್ಯಾಗಗಳ ವಿವರ

ಕೆಲವರು ಸರ್ವಧರ್ಮಗಳೂ ಸ್ವರೂಪದಿಂದಲೇ ತ್ಯಾಜ್ಯಗಳೆಂದೂ, ಇದು ಭಗವದ್ಗೀತೆಯ ಚರಮ ಶ್ಲೋಕದಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬುದರಲ್ಲಿ ವಿವಕ್ಷಿತವೆಂದೂ ಹೇಳುತ್ತಾರೆಯಲ್ಲಾ ಎಂದರೆ ಅದು ಸಮೀಚೀನವಾದುದಲ್ಲವೆಂದೂ ಚರಮ ಶ್ಲೋಕದಲ್ಲಿ ಸಾತ್ವಿಕ ತ್ಯಾಗವು ವಿವಕ್ಷಿತವೆಂದೂ ಹೇಳುವವರಾಗಿ ಮೊದಲು ತಾಮಸ ರಾಜಸ ಸಾತ್ವಿಕ ತ್ಯಾಗಗಳ ಸ್ವರೂಪಗಳನ್ನು **ವೇದ ವೈದಿಕ ಶಾಸ್ತ್ರಂಗಳಿಲ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ, ವೇದಗಳಲ್ಲಿಯೂ ವೇದೋಕ್ತ ಅರ್ಥಗಳನ್ನು ನಿರೂಪಿಸುವ ವೈದಿಕಗಳಾದ ಶಾಸ್ತ್ರಗಳಲ್ಲಿಯೂ ಹೇಳುವ ನಿಯಮಗಳನ್ನು ವೇದ ಬಾಹ್ಯಮತಸ್ಥರಾದ ಸಾಂಖ್ಯ, ಬೌದ್ಧ, ಜೈನ ಚಾರ್ವಾಕ ಮತಸ್ಥರೂ ವೇದವನು ಪ್ರಮಾಣವಾಗಿ ಅಂಗೀಕರಿಸಿದ ಕುದುಷ್ಟಿಗಳೂ ಭ್ರಾಂತಿಯಿಂದ ಬಿಡುವುದು ತಾಮಸ ತ್ಯಾಗವೆಂಬುದನ್ನು "1) **ನಿಯತಸ್ಯತು ಸನ್ಯಾಸಃ**" ಎಂಬ ಶ್ಲೋಕದಿಂದ ಗೀತಾಚಾರ್ಯನು ಹೇಳಿರುತ್ತಾನೆ. ಶಾಸ್ತ್ರವಿಹಿತವಾದ ಕರ್ಮವನ್ನು ಬಿಡಕೂಡದು, ಬಿಟ್ಟರೆ ಅದು ತಾಮಸ ತ್ಯಾಗ. ಮೋಹದಿಂದ ಬಿಟ್ಟದುದಾಗುತ್ತದೆ. **ಕುಟುಂಬ ಭರಣಾದಿಹಳುಕ್ಕು**–ಇತ್ಯಾದಿ, ಗೃಹಸ್ಥನು ಭಾರ್ಯಾಪುತ್ರಾದಿ ಕುಟುಂಬವನ್ನು ಭರಿಸಲು ಶ್ರಮಪಟ್ಟು ಆಲದಾಡಿ ಕೊನೆಯಲ್ಲಿ ಕುಟುಂಬವನ್ನು ಬಿಟ್ಟು ಸನ್ಯಾಸವನ್ನು ಅಂಗೀಕರಿಸುವಂತೆ ದುಃಖರೂಪವಾದ ಶಾಸ್ತ್ರೀಯಗಳಲ್ಲಿ ಪ್ರವೃತ್ತಿ, ಅಶಾಸ್ತ್ರೀಯಗಳಲ್ಲಿ ನಿವೃತ್ತಿಯನ್ನು ಮಾಡದೆ ಅವುಗಳನ್ನು ದುಃಖಕರವೆಂದು ಬಿಡುವುದು, ರಾಜಸತ್ಯಾಗವೆಂಬುದನ್ನು "2) **ದುಃಖಮಿತ್ಯೇವ ಯಃ ಕರ್ಮ**" ಇತ್ಯಾದಿಯಾಗಿ ಗೀತಾಚಾರ್ಯನು ಅನುಗ್ರಹಿಸಿರುತ್ತಾನೆ.

---

1) ನಿಯತಸ್ಯತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ ।
**ಮೋಹಾತ್ತಸ್ಯ ಪರಿತ್ಯಾಗಃ ತಾಮಸಃ ಪರಿಕೀರ್ತಿತಃ** ॥ ಗೀತೆ (18–7)

ನಿತ್ಯನೈಮಿತ್ತಿಕಗಳಾದ ಸಂಧ್ಯಾವಂದನ ಪಂಚ ಮಹಾ ಯಜ್ಞಾದಿ ಕರ್ಮಗಳನ್ನು ಬಿಡುವುದು ಸರಿಯಲ್ಲ. ಭ್ರಾಂತಿಯಿಂದ ಅವುಗಳನ್ನು ಬಿಡುವುದು ತಾಮಸವೆಂದು ಹೇಳಲ್ಪಟ್ಟಿದೆ. ಅದಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನೂ ಭಗವದಾರಾಧನ ವೈಶ್ವದೇವ ಪಂಚ ಮಹಾ ಯಜ್ಞಾದಿಗಳನ್ನೂ ಅನುಷ್ಠಿಸಿ, ಆ ಯಜ್ಞ ಶಿಷ್ಟವಾದ ಅನ್ನವನ್ನು ಭುಜಿಸಿದರೆ, ಸಮೀಚೀನವಾದ ಜ್ಞಾನವು ಅಭಿವೃದ್ಧಿಯಾಗುತ್ತದೆ. ಆ ಜ್ಞಾನವು ಭಕ್ತಿ ಪ್ರಪತ್ತಿಗಳಲ್ಲಿ ಪ್ರವರ್ತಿಸಿ ಮೋಕ್ಷಕ್ಕೆ ಕಾರಣವಾಗುತ್ತದೆ. ಭ್ರಾಂತಿಯಿಂದ ಆ ಕರ್ಮಗಳನ್ನು ಬಿಟ್ಟರೆ "ಅಧೋ ಗಚ್ಛಂತಿ ತಾಮಸಾಃ" ಎಂದು ತಾಮಸ ಪ್ರಕೃತಿಯು ನರಕಾದಿಗಳಿಗೆ ಹೋಗುತ್ತಾನೆಂದು ತಾತ್ಪರ್ಯ.

ಪು, ತಿ. ನೋ.

## ಸಾತ್ವಿಕ ತ್ಯಾಗ ಶಬ್ದಾರ್ಥಃ

ತನ್ನಧಿಕಾರಾನುರೂಪಮಾಹ ತ್ತವಿರವೇಣ್ಡುಮವತ್ತೈತ್ತವಿರ್‌ನ್ದು ಶೆಯ್ಯವೇಣ್ಡುಮವೈಶೆಯ್ಯುಮಿಡತ್ತಿಲ್ ನಾ ಸ್ವತಂತ್ರನಾಯ್ ಶೆಯ್‌ಹಿರ್ರೇ ಎನ್ನುಮ್. ಎನಕ್ಕು ಇಕ್ಕರ್ಮಙ್ಗಳ್ ಶೇಷಭೂತಮೆನ್ನುಮ್, ಎನಕ್ಕು ಇನ್ನ ಫಲತ್ತುಕ್ಕು ಇದು ತಾನೇ ಸಾಧನ ಮೆನ್ನುಂ, ಪಿರಕ್ಕುಂ ನಿನೈವೈ ಮಾತ್ತಿ, ಸರ್ವೇಶ್ವರ ಶೆಯ್‌ವಿಕ್ಕ ಅವನುಕ್ಕು ಶೇಷಮಾನ ಕೈಙ್ಕರ್ಯತ್ತೈ ಅವನುಹಪ್ಪೇ ಪ್ರಯೋಜನಮಾಹ ಅನುಸನ್ಧಿತ್ತು ಅನುಷ್ಠಿಕ್ಕೈ ಸಾತ್ವಿಕತ್ಯಾಗ ಮೆನ್ನು ಮಿಡತ್ತೈ.

3) “ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।

ಸಂಗಂತ್ಯಕ್ತ್ವಾಫಲಂಚೈವ ಸತ್ಯಾಗ ಸ್ಸಾತ್ವಿಕೋ ಮತಃ” ಎನ್ರು ಅರುಳಿಚ್ಚೆಯ್‌ದಾನ್.

---

ಇದರಿಂದಾಗಿ ಜ್ಞಾನೋತ್ಪತ್ತಿರೂಪತ್ಯಾಗಫಲವನ್ನು ಹೊಂದುವುದಿಲ್ಲ ಎಂದೂ ಹೇಳಿರುತ್ತಾನೆ. ಜ್ಞಾನೋತ್ಪತ್ತಿಯು ಭಕ್ತಿ ಪ್ರಪತ್ತಿರೂಪಗಳಾದ ಉಪಾಯಾನುಷ್ಠಾನಕ್ಕೆ ಸಾಧಕಗಳು.

ಅನಂತರ ಸಾತ್ವಿಕ ತ್ಯಾಗ ಸ್ವರೂಪವನ್ನು ತನ್ನಧಿಕಾರಾನು ರೂಪಮಾಹ ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ತನ್ನ ಅಧಿಕಾರಕ್ಕೆ ಅನುರೂಪವಾಗಿ ಮಾಡಬಾರದವನ್ನು ಮಾಡದೆ, ಮಾಡಬೇಕಾದವನ್ನು ಮಾಡುವಾಗ ನಾನು ಸ್ವತಂತ್ರನಾಗಿ ಮಾಡುತ್ತೇನೆಂದೂ, ನನಗೆ ಈ ಕರ್ಮವು ಶೇಷ ಭೂತವೆಂದೂ, ನನಗೆ ಇಂಥಹ ಫಲಕ್ಕೆ ಇದು ತಾನೇ ಸಾಧನವೆಂದೂ ಉಂಟಾಗುವ ಮನೋಭಾವವನ್ನು ಬದಲಾಯಿಸಿ, ಸರ್ವೇಶ್ವರನು ಮಾಡಿಸಲು ಅವನಿಗೆ ಶೇಷವಾದ ಈ ಕೈಂಕರ್ಯವನ್ನು ಅವನ ಪ್ರೀತಿಯೇ ಪ್ರಯೋಜನವಾಗಿ ಅನುಸಂಧಿಸಿ, ಅನುಷ್ಠಿಸುವುದು ಸಾತ್ವಿಕ ತ್ಯಾಗವೆಂಬುದನ್ನು

3) ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।

ಸಂಗಂತ್ಯಕ್ತ್ವಾ ಫಲಂಚೈವ ಸ ತ್ಯಾಗಸ್ಸಾತ್ವಿಕೋ ಮತಃ ॥

ಎಂದು ಕೃಪೆ ಮಾಡಿ ಗೀತಾಚಾರ್ಯನು ಹೇಳಿರುತ್ತಾನೆ. ಆದಾಗಿ ಕರ್ತೃತ್ವತ್ಯಾಗ, ಮಮತಾ ತ್ಯಾಗ, ಫಲತ್ಯಾಗಗಳು ಸಾತ್ವಿಕ ತ್ಯಾಗಗಳೆಂದು ಪರಿಗಣಿಸಲ್ಪಟ್ಟಿವೆ.

---

2) ದುಃಖಮಿತ್ಯೇವಯತ್ಕರ್ಮ ಇತ್ಯಾದಿ ಗೀತೆ (18-8)

ಕರ್ಮವು ಪರಂಪರೆಯಾಗಿ ಪಾಪಕ್ಷಯವನ್ನುಂಟು ಮಾಡಿ, ಮನಃ ಪ್ರಸನ್ನತೆಯನ್ನು ಕೊಟ್ಟು ಮೋಕ್ಷ ಸಾಧಕ. ಕರ್ಮವನ್ನು ಶ್ರಮಪಟ್ಟು ಮಾಡಬೇಕಾದದು ಅವಶ್ಯ. ಕಾಯಕ್ಲೇಶ, ಅರ್ಥವ್ಯಯದಿಂದ ಕೂಡಿದುದು. ಇವನ್ನು ಕಾಯಕ್ಲೇಶಾದಿ ಭೀತಿಯಿಂದ ಬಿಟ್ಟು, ಕೇವಲ ಮಾನಸಿಕ ಜ್ಞಾನಾಭ್ಯಾಸದಲ್ಲಿ ಪ್ರಯತ್ನಪಡುತ್ತೇನೆಂದರೆ, ರಜೋಗುಣ ಮೂಲವಾದ ಈ ತ್ಯಾಗವು ಯಥಾವಸ್ಥಿತವಲ್ಲವಾದ್ದರಿಂದ ರಾಜಸತ್ಯಾಗವಾಗಿ ಇದರಿಂದ ಜ್ಞಾನ ಫಲವೂ ಲಭಿಸುವುದಿಲ್ಲ.

3) ಗೀತೆ 18.9 ನಿತ್ಯನೈಮಿತ್ತಿಕ ಪಂಚಮಹಾಯಜ್ಞಾದಿ ವರ್ಣಾಶ್ರಮವಿಹಿತ ಕರ್ಮಗಳು ಭಗವದಾರಾಧನ ರೂಪವಾಗಿ ಸ್ವಯಂಪ್ರಯೋಜನಗಳೆಂದು ತಿಳಿದು ಆ ಕರ್ಮಗಳಲ್ಲಿ ಮಮತ್ವವನ್ನೂ, ಫಲವನ್ನೂ ತ್ಯಜಿಸಿ ಮಾಡುವುದು ಸಾತ್ವಿಕ ತ್ಯಾಗ ಪುರಸ್ಕೃತವಾದದ್ದು.

### ಸಾತ್ವಿಕ ತ್ಯಾಗಸ್ಯ ಪರಾಕಾಷ್ಠಾದಶಾಮಾಹ

ಇಬ್ಭಗವತ್ಪ್ರೀತಿ ಪ್ರಯೋಜನಮಾಹ ಅನುಷ್ಠಿಕ್ಕಿರ ವಿಡತ್ತಿಲ್, ಇಪ್ಪ್ರೀತಿಕ್ಕು ಮೋಕ್ಷಮುಮ್ ಫಲಮಾಹಕ್ಕೊಲಾದೇ ಪೂರ್ವಪ್ರಪತ್ತಿಯಾಲ್ ಪಿರನ್ದ ಪರಮ ಕಾರುಣಿಕರ್ ಪ್ರಸಾದತ್ತಾಲೇ, ಮೋಕ್ಷಮ್ ಸಿದ್ಧಮೆನ್ರು ನಿನೈತ್ತು, ಮುಕ್ತನುಡೈಯ ಕೈಙ್ಕರ್ಯಮ್ಪೋಲವುಮ್, ಆರೋಗನುಡೈಯ ಪಾಲ್ ವಾರ್ತ್ತುಣ್ಣುಹೈ ಪ್ಪೋಲುವುಮ್, ಅನುಷ್ಠಿಕ್ಕೈ ಸಾತ್ವಿಕತ್ಯಾಗತ್ತಿನ್ ಎಲ್ಲೈ ನಿಲಮಾಹಕ್ಕಡವದು. ಇದು ಪಶಿತ್ತು ಉಣ್ಬಾರ್ ಮಾತ್ರಮ್; ಇಙ್ಗನಲ್ಲಾದಪೋದು, ಒಟ್ಟೆತ್ತುಕ್ಕಪ್ಪಮ್ ತಿಣ್ಬಾರ್ ಮಾತ್ರಮ್.

### ಗೀತಾಚರಮಶ್ಲೋಕೇ ನ ಕರ್ಮಸ್ವರೂಪ ತ್ಯಾಗೋಕ್ತಿಃ, ಅಪಿತು ಸಾತ್ವಿಕ ತ್ಯಾಗೋಕ್ತಿಃ

1) "ಸರ್ವಧರ್ಮಾ ಪರಿತ್ಯಜ್ಯ" ಎನ್ಗಿರ ವಿಡತ್ತಿಲ್ ಪ್ರಥಮ ಯೋಜನೈಯಿಲ್ ಬುದ್ಧಿ ವಿಶೇಷ ರೂಪಮಾನ ಸಾತ್ವಿಕತ್ಯಾಗಂ ಶೊಲ್ಲುಹಿರದೆನ್ರು ಶ್ರೀ ಭಾಷ್ಯಕಾರರರುಳಿಚ್ಚೆಯ್ದಾರ್.

---

**ಇಬ್ಭಗವತ್ಪ್ರೀತಿ ಪ್ರಯೋಜನಮಾಹ** ಇತ್ಯಾದಿ – ಹೀಗೆ ಭಗವತ್ಪ್ರೀತಿಯೇ ಪ್ರಯೋಜನವೆಂದು ಅನುಷ್ಠಿಸುವ ಸಂದರ್ಭದಲ್ಲಿ ಈ ಪ್ರೀತಿಗೆ ಮೋಕ್ಷವನ್ನೂ ಫಲವನ್ನಾಗಿ ಕೇಳದೆ, ಪೂರ್ವ ಕಾಲದಲ್ಲಿ ಅನುಷ್ಠಿಸಿದ ಪ್ರಪತ್ತಿಯಿಂದ ಉಂಟಾದ ಪರಮಕಾರುಣಿಕನ ಪ್ರಸನ್ನತೆಯಿಂದ ಮೋಕ್ಷವು ಸಿದ್ಧವೆಂದು ತಿಳಿದು, ಮುಕ್ತನ ಕೈಂಕರ್ಯದ ಹಾಗೆ ಪ್ರಯೋಜನಾಂತರದಲ್ಲಿ ಅಭಿಸಂಧಿಯಿಲ್ಲದೆಯೂ, ಅರೋಗನು ಹಾಲನ್ನು ಕಾಯಿಸಿ ಸ್ವಯಂ ಪ್ರಯೋಜನತ್ವಾಭಿಸಂಧಿಯಿಂದ ಕುಡಿಯುವಂತೆಯೂ, ಅನುಷ್ಠಿಸುವುದು, ಸಾತ್ವಿಕ ತ್ಯಾಗದ ಎಲ್ಲೆಯಾಗುತ್ತದೆ. **ಇದುಪಶಿತ್ತುಣ್ಬಾರ್ ಮಾತ್ರಮ್** – ಒಬ್ಬನು ಹಸಿವಿನಿಂದ ಮೃಷ್ಟಾನ್ನ ಭೋಜನವನ್ನು ಮಾಡಿದರೆ ಆ ಭೋಜನವೇ ಹೇಗೆ ಸ್ವಯಂ ಪ್ರಯೋಜನವಾಗಿ ಅದರಿಂದುಂಟಾಗುವ ಹಸಿವಿನ ನಿವೃತ್ತಿಯು ಆನುಷಂಗಿಕವಾಗಿ ಆಗುತ್ತದೆಯೋ ಹಾಗೆ ಎಂದರ್ಥ. ಹೀಗೆ ಸ್ವಯಂ ಪ್ರಯೋಜನವಾಗಿ ಅನುಷ್ಠಿಸದೆ ಹೋದರೆ **ಒಟ್ಟೆತ್ತುಕ್ಕಪ್ಪಮ್** – ಚನ್ನಾಗಿ ಊಟ ಮಾಡಿದವನನ್ನು ಕರೆದು ಈಗ ಹತ್ತು ಲಡ್ಡುಗಳನ್ನು ತಿಂದರೆ 10 ರೂಪಾಯಿ ಕೊಡುತ್ತೇನೆಂದು ಹೇಳಿ, ಪೈಪೋಟಿಗೋಸ್ಕರ ಅತನು 10 ಲಡ್ಡುಗಳನ್ನು ತಿನ್ನುವಂತೆ ಆಗುತ್ತದೆ. ಅಂದರೆ ಅವನಿಗೆ ಆ ಲಡ್ಡುಗಳನ್ನು ತಿನ್ನುವಾಗ ಸ್ವಯಂ ಪ್ರಯೋಜನವಾದ ರಸಾಸ್ವಾದವಿರುವುದಿಲ್ಲ. ಕೇವಲ ಪೈಪೋಟಿಯಲ್ಲಿ ಸಿಗುವ ಹಣದಲ್ಲಿ ದೃಷ್ಟಿ. ಆ ರೀತಿಯಲ್ಲಿ ಸ್ವಯಂ ಪ್ರಯೋಜನ ಭಗವತ್ಕೈಂಕರ್ಯಗಳೆಂಬ ದೃಷ್ಟಿಯಿಲ್ಲದೆ, ಕ್ಷುದ್ರ ಫಲಗಳಿಗಾಗಿ ಕರ್ಮಗಳನ್ನು ಮಾಡುವಂತೆ ಆಗುತ್ತದೆ ಎಂಬುದು ತಾತ್ಪರ್ಯ.

### "ಸರ್ವಧರ್ಮಾನ್ ಪರಿತ್ಯಜ್ಯ" ಎಂಬ ಶ್ಲೋಕಕ್ಕೆ ಅರ್ಥ.

ಹೀಗೆ ಮೇಲೆ ಹೇಳಿದ ರೀತಿಯಲ್ಲಿ, "ಸರ್ವಧರ್ಮಾನ್ ಪರಿತ್ಯಜ್ಯ" ಎಂಬುದಕ್ಕೆ ಎಲ್ಲಾ ಧರ್ಮಗಳನ್ನೂ ಬಿಡಬೇಕೆಂಬ ಅರ್ಥವಿಲ್ಲವೆಂಬುದನ್ನು ನಿರೂಪಿಸಿ, ಸಾತ್ವಿಕ ತ್ಯಾಗ ಪರವಾಗಿ ಶ್ರೀ ಭಾಷ್ಯಕಾರರು ಅರ್ಥ ಮಾಡಿದ್ದಾರೆಂದು, 1) **"ಸರ್ವಧರ್ಮಾನ್ ಪರಿತ್ಯಜ್ಯ" ಎನ್ಗಿರ ವಿಡತ್ತಿಲ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬ ಶ್ಲೋಕಕ್ಕೆ ಗೀತಾಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಾ, ಭಾಷ್ಯಕಾರರವರು ಮೊದಲನೆಯ ಯೋಜನೆಯಲ್ಲಿ ಬುದ್ಧಿ ವಿಶೇಷ ರೂಪವಾದ ಸಾತ್ವಿಕ ತ್ಯಾಗವು ಹೇಳಲ್ಪಡುತ್ತದೆ

---

1) ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿಮಾಶುಚಃ ॥ ಗೀತೆ 18-66

ಇಬ್ಬುದ್ಧಿವಿಶೇಷಮ್ ಸ್ವತಂತ್ರ ಪ್ರಪತ್ತಿ ನಿಷ್ಠನುಕ್ಕು ಪ್ರಪತ್ತ್ಯನುಷ್ಠಾನ ಕಾಲತ್ತಿಲುಮ್, ಪಿನ್ಪು ಸ್ವಯಂ ಪ್ರಯೋಜನಮಾಯ್ ಉಪಾಯತ್ತೋಡುತುವಕ್ಕಾತ್ತ ಉತ್ತರ ಕೃತ್ಯತ್ತಿಲು ಮುಪ ಜೀವ್ಯಮ್.

**ಶ್ರೀ ಭಾಷ್ಯಕಾರಾಣಾಂ ಉಪಾಯಾನ್ತರ ನೈರಪೇಕ್ಷ್ಯ ವಿಧೇಯತ್ವ ರೂಪ**
**ದ್ವಿತೀಯ ಯೋಜನಾಚ ಪ್ರಪತ್ತ್ಯುಪಾಯಸ್ಯಾಪಿ ಸಙ್ಗತಾ.**

ದ್ವಿತೀಯ ಯೋಜನೈಯಿಲ್ ಅಲ್ಪಶಕ್ತಿಯಾಯ್ ವಿಳಂಬಾಕ್ಷಮನಾನವನುಕ್ಕು ದುಷ್ಕರಮಾಯ್ ಚಿರಕಾಲ ಸಾಧ್ಯಮಾನ ಉಪಾಯಾಂತರತ್ತೈ ಪ್ಪಾರ್ತ್ತು ಶೋಕಂ ಪಿರಕ್ಕ, ಅವನುಡೈಯ ಶೋಕಾಪ ನೋದನಾರ್ಥಮಾಹ ಸುಕರಮಾಯ್ ಸಕೃತ್ಕರ್ತವ್ಯಮಾನ ಉಪಾಯಾಂತರತ್ತೈ ವಿಧಿತ್ತದಾಕ್ಕಿ ನೀಯು ಪಾಯಾಂತರತ್ತಿಲ್ ಅಲೈಯ ವೇಣ್ಡಾವೆನ್ರಿರದೆನ್ರು ಅರುಳಿಚ್ಚೆಯ್ದಾರ್.

ಇಪ್ಪ್ರಪತ್ತ್ಯನುಷ್ಠಾನತ್ತುಕ್ಕು ಪೂರ್ವಾವಸ್ಥೈಯಿಲ್ ಉಪಾಯಾನ್ತರಾನನ್ವಯಂ ದೈವಾದಾಗತ ಮಾಯ್ ಪ್ರಪತ್ತ್ಯಧಿಕಾರತ್ತಿಲೇ ಶೊರುಹಕ್ಕಡವದು. ಉತ್ತರಾವಸ್ಥೈಯಿಲ್ ಉಪಾಯಾನ್ತರಾನ ನ್ವಯಂ ಶಾಸ್ತ್ರಾದಾಗತಮಾಯ್ ಇಪ್ರಪತ್ತಿಯಿನುಡೈಯ ನೈರಪೇಕ್ಷ್ಯತ್ತಿಲೇ ನಿರ್ಕಕ್ಕಡವದು.

---

ಯೆಂದು ಅನುಗ್ರಹಿಸಿರುತ್ತಾರೆ. ಈ ಬುದ್ಧಿ ವಿಶೇಷವು ಸ್ವತಂತ್ರ ಪ್ರಪತ್ತಿ ನಿಷ್ಠನಿಗೆ ಪ್ರಪತ್ತ್ಯನುಷ್ಠಾನ ಕಾಲದಲ್ಲಿಯೂ, ನಂತರ ಪ್ರಪತ್ತ್ಯುಪಾಯಾನುಷ್ಠಾನದಲ್ಲಿ ಸಂಬಂಧವಿಲ್ಲದ ಸ್ವಯಂ ಪ್ರಯೋಜನವಾಗಿ ಮಾಡುವ ಉತ್ತರ ಕೃತ್ಯದಲ್ಲೂ ಉಪಜೀವ್ಯವು.

ಪ್ರಸಂಗಾತ್ ದ್ವಿತೀಯ ಯೋಜನೆಯನ್ನೂ **ದ್ವಿತೀಯ ಯೋಜನೆಯಿಲ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬ ಶ್ಲೋಕ ವ್ಯಾಖ್ಯಾನದಲ್ಲಿ, ಎರಡನೆಯ ಯೋಜನೆಯಲ್ಲಿ ಅಲ್ಪ ಶಕ್ತಿಯಾಗಿ ವಿಳಂಬಾಕ್ಷಮನಾದ ಅರ್ಜುನನಿಗೆ ದುಷ್ಕರವಾಗಿ ಚಿರಕಾಲ ಸಾಧ್ಯವಾದ ಉಪಾಯಾಂತರ ಭಕ್ತಿಯೋಗವನ್ನು ನೋಡಿ ಶೋಕವು ಉಂಟಾಗಲು, ಅವನ ಶೋಕವನ್ನು ಹೋಗಲಾಡಿಸಲು, ಆ ಭಕ್ತಿಯೋಗಕ್ಕೆ ವಿರೋಧಿಗಳಾದ ಅನಂತ ಪಾಪಗಳನ್ನು ಕೃಚ್ಛ್ರಚಾಂದ್ರಾಯಣ, ಕೂಶ್ಮಾಂಡಾದಿ ಕಠಿಣಗಳಾದ ಪ್ರಾಯಶ್ಚಿತ್ತಗಳನ್ನು ಮಾಡಿ ನಿರ್ವರ್ತಿಸಿ ಕೊಳ್ಳಲು ಅಶಕ್ತನಾದರೆ, ತತ್ಸ್ಥಾನದಲ್ಲಿ **ಸುಕರಮಾಯ್ ಸಕೃತ್ಕರ್ತವ್ಯಮಾಯ್** ಇತ್ಯಾದಿ ಸುಲಭವಾಗಿ ಮಾಡಲಾದ, ಒಂದು ಸಲ ಮಾತ್ರ ಮಾಡಿದರೆ ಸಾಕಾದ, **ಉಪಾಯಾಂತರತ್ತೈ** — ಅಂಗಸಹಿತವಾದ ಪ್ರಪತ್ತಿಯನ್ನು ವಿಧಿಸುವುದಾಗಿ, ಅದನ್ನುಮಾಡಿ ನೀನು ಕೃಚ್ಛ್ರ ಚಾಂದ್ರಾಯಣಾದಿ ಪಾಪನಿವರ್ತಕ ಉಪಾಯಾಂತರಗಳಲ್ಲಿ ಅಲೆದಾಡಬೇಡವೆಂದು, ಅನುಗ್ರಹಿಸಿರುತ್ತಾರೆ.

**ಇಪ್ರಪತ್ತ್ಯನುಷ್ಠಾನತ್ತುಕ್ಕು** ಇತ್ಯಾದಿ—ಈ ಪ್ರಪತ್ತಿಯನ್ನು ಅನುಷ್ಠಿಸುವುದಕ್ಕೆ ಪೂರ್ವದಲ್ಲಿ ಉಪಾಯಾಂತರಗಳಲ್ಲಿ ಅನನ್ವಯವು ದೈವಾತ್ಪ್ರಾಪ್ತವಾಗಿ ಪ್ರಪತ್ತಿಗೆ ಅಧಿಕಾರನಾದ ಆಕಿಂಚನ್ಯದಲ್ಲಿ **ಶೊರುಹಕ್ಕಡವದು**— ಸೇರಿಕೊಳ್ಳುತ್ತದೆ. ಉತ್ತರಾವಸ್ಥೆಯಲ್ಲಿ ಪ್ರಪತ್ತಿಯನ್ನು ಅನುಷ್ಠಿಸಿದ ನಂತರ, ಈ ಉಪಾಯಾಂತರಗಳ ಅನನ್ವಯವು ಶಾಸ್ತ್ರದಿಂದ ಪ್ರಾಪ್ತವಾಗಿ— ಒಂದಸಲ ಪ್ರಪತ್ತಿ ಮಾಡಿದ ನಂತರ ಪುನಃ ಅದರ ಫಲಕ್ಕಾಗಿ ಬೇರೆ ಯಾವುದನ್ನೂ ಮಾಡಬೇಕಿಲ್ಲ ಮಾಡಿದರೆ ಬ್ರಹ್ಮಾಸ್ತ್ರ ನ್ಯಾಯದಂತೆ ಪ್ರಪತ್ತಿಯು ಜಾರಿ ಹೋಗುತ್ತದೆ, ಎಂಬ ಶಾಸ್ತ್ರದಿಂದ ಉಂಟಾಗಿ, ಪ್ರಪತ್ತಿಯ ನೈರಪೇಕ್ಷ್ಯದಲ್ಲಿ ಸೇರಿಕೊಳ್ಳುತ್ತದೆ.

"ಪರಿತ್ಯಜ್ಯ" ಎನ್ಗಿರವಿದು ಅನುವಾದ ಮೆನ್ಬಾರ್ಕ್ಕು ಅಧಿಕಾರಮ್ ಶೊಲ್ಲುಹಿರದೆನ್ರು ತಾತ್ಪರ್ಯಮ್. ವಿಧಿಯೆನ್ಬಾರ್ಕ್ಕು ಪ್ರಪತ್ತಿಯಾಹಿರ ಉಪಾಯತ್ತಿನುಡೈಯ ನೈರಪೇಕ್ಷ್ಯಾದಿಹಳೈ ಶೊಲ್ಲುಹಿರದೆನ್ರು ತಾತ್ಪರ್ಯಮ್. ಇಪ್ಪಡಿ "ಪರಿತ್ಯಜ್ಯ" ಎನ್ಗಿರ ವಿಡತ್ತಿಲ್ ಅಧಿಕಾರಂ ವಿವಕ್ಷಿತ ಮಾನಾಲ್, "ಮಾಮೇಕಂ" ಎನ್ಗಿರವಿಡತ್ತಿಲೇ, ನೈರಪೇಕ್ಷ್ಯಮುಮ್ ಅನುಸಂಧಿಕ್ಕ ಪ್ರಾಪ್ತಮ್. "ಪರಿತ್ಯಜ್ಯ" ವೆನ್ರು ನೈರಪೇಕ್ಷ್ಯಂ ವಿವಕ್ಷಿತಮಾನಾಲ್, "ಮಾಶುಚಃ" ಎನ್ಗಿರ ಶೋಕ ನಿಷೇಧತ್ತಾಲೇ, ಅಕಿಞ್ಚನನಾಯ್ ನಿರ್ಕಿರನಿಲೈ ತೋತ್ತುಹೈಯಾಲೇ ಅಧಿಕಾರಮುಮ್ ಅರ್ಥಸಿದ್ಧಮಾಹಕ್ಕಡವದು. ಅಪ್ಪೋದು

> ಪ್ರಕೃತೋಪಾಸನ ನ್ಯಾಯಾತ್ತದಙ್ಗಾನಾಮುಪಸ್ಥಿತೌ ।
> ಅನ್ಯೇಷಾಂ ಚೈತದಙ್ಗತ್ವತ್ಯಾಗೋಽತ್ರ ಪ್ರತಿಪಾದ್ಯತೇ ॥ ೪೮ ॥

"ಏಕ" ಶಬ್ದಮ್ ಸಾತ್ವಿಕ ತ್ಯಾಗತ್ತಾಲೇ ತನ್ಪಕ್ಕಲಿಲ್ ಪರಾಧೀನ ಕರ್ತೃತ್ವಾದಿಹಳೈ ವಿವಕ್ಷಿತ್ತಲ್, ಫಲೋಪಾಯೈಕ್ಯತ್ತೈ ಚೊಲ್ಲುದಲ್, ಏಕಮೇ ಸರ್ವೋಪಾಯ ಸ್ಥಾನತ್ತಿಲೇ ನಿರ್ಕಿರ ನಿಲೈಯೈ ಕ್ಕಾಟ್ಟುದಲ್, ಶೆಯ್ಯಕ್ಕಡವದು.

---

ಈ ಅಕಿಂಚನಾಧಿಕಾರವೂ ನೈರಪೇಕ್ಷ್ಯವೂ, **'ಪರಿತ್ಯಜ್ಯ"** ಎಂಬ ಪದದಲ್ಲಿ ವಿವಕ್ಷಿತವೆಂದು ತಿಳಿಸುತ್ತಾರೆ, ಅದಾಗಿ ಚರಮ ಶ್ಲೋಕದಲ್ಲಿ ಹೇಳಿರುವ **'ಪರಿತ್ಯಜ್ಯ'** ಎಂಬ ಈ ಪದವು "ಸರ್ವಧರ್ಮಾನ್ ಪರಿತ್ಯಜ್ಯ ವರ್ತ ಮಾನ ಸ್ತ್ವಂ" ಎಂದು ವರ್ತಮಾನವೆಂಬ ಪದವನ್ನು ಅಧ್ಯಾಹರಿಸಿ, ಅನುವಾದವೆಂದು ಹೇಳುವವರಿಗೆ, ಆಕಿಂಚನ್ಯವೆಂಬ ಅಧಿಕಾರವನ್ನು ಹೇಳುವುದಾಗಿ ತಾತ್ಪರ್ಯ. 'ಪರಿತ್ಯಜ್ಯ' ಎಂಬ ಇದು ವಿಧಿಯಾಗಿ, "ಉಪಾಯಾಂತರಗಳನ್ನು ಬಿಟ್ಟು" ಎಂದು ಅರ್ಥವಾದರೆ ಪ್ರಪತ್ತಿಯೆಂಬ ಉಪಾಯದ ನೈರಪೇಕ್ಷ್ಯಾದಿಗಳನ್ನು ಹೇಳುವುದೆಂದು ತಾತ್ಪರ್ಯ. ಹೀಗೆ ಎರಡು ಪ್ರಕಾರದಲ್ಲಿಯೂ ಸರ್ವಧರ್ಮ ಸ್ವರೂಪತ್ಯಾಗ ವಿಧಿ ಪ್ರಸಂಗವಿಲ್ಲವೆಂಬುದು ಸಿದ್ಧ. **'ಇಪ್ಪಡಿ ಪರಿತ್ಯಜ್ಯ"** ಇತ್ಯಾದಿ–ಹೀಗೆ ಪರಿತ್ಯಜ್ಯವೆಂಬಲ್ಲಿ ಆಕಿಂಚನ್ಯಾಧಿಕಾರವು ವಿವಕ್ಷಿತವಾದರೆ "ಮಾಮೇಕಂ" ಎಂಬಲ್ಲಿ ನೈರಪೇಕ್ಷ್ಯವು ಅನುಸಂಧಿಸಲ್ಪಡತಕ್ಕದು. **'ಪರಿತ್ಯಜ್ಯ'** ಎಂದು ನೈರಪೇಕ್ಷ್ಯವು ವಿವಕ್ಷಿತವಾದರೆ 'ಮಾಶುಚಃ' ಎಂಬ ಶೋಕ ನಿಷೇಧದಿಂದ, ಅಕಿಂಚನನಾಗಿ ನಿಲ್ಲುವ ನಿಲೈ–ಸ್ಥಿತಿಯು ತೋರುವುದರಿಂದ, ಅಕಿಂಚನಾಧಿಕಾರವೂ ಅರ್ಥಸಿದ್ಧವಾಗುತ್ತದೆ.

ನೈರಪೇಕ್ಷವನ್ನು ಪ್ರತಿಪಾದಿಸುವುದರ ಫಲವನ್ನು ಅಪ್ಪೋದು ಎಂದಾರಂಭಿಸಿ ತಿಳಿಸುತ್ತಾರೆ. **ಪ್ರಕೃತೋ ಪಾಸನನ್ಯಾಯತ್**–ಇತ್ಯಾದಿ–ಅದಾಗಿ ಗೀತೆಯಲ್ಲಿ ಪ್ರಸ್ತುತವಾಗಿ ಉಪದೇಶಿಸಲ್ಪಡುವ ಭಕ್ತಿ ಯೋಗದ ನ್ಯಾಯ ದಿಂದ **ತದಂಗಾನಾಂ**–ಭಕ್ತ್ಯಂಗಗಳಾದ ವರ್ಣಾಶ್ರಮ ಧರ್ಮಗಳು **ಉಪಸ್ಥಿತೌ**–ನ್ಯಾಸ ವಿದ್ಯೆಯಲ್ಲಿಯೂ ಅಂಗ ವಾಗಿ ಪ್ರಾಪ್ತಗಳಾದರೆ, **ಅನ್ಯೇಷಾಂಚ** ಆನುಕೂಲ್ಯ ಸಂಕಲ್ಪಾದ್ಯತಿರಿಕ್ತಗಳಾದ ವರ್ಣಾಶ್ರಮ ಧರ್ಮಗಳ ಏತ **ದಂಗತ್ವ ತ್ಯಾಗಃ**–ಪ್ರಪತ್ತಿಗೆ ಅಂಗಗಳಲ್ಲವಾಗಿ ಅವುಗಳ ತ್ಯಾಗವು, **ಅತ್ರ** "ಪರಿತ್ಯಜ್ಯ" ಎಂಬಲ್ಲಿ **ಪ್ರತಿಪಾದ್ಯತೇ** ವಿಧಿಸಲ್ಪಡುತ್ತದೆ. ಇದರ ತಾತ್ಪರ್ಯವೇನೆಂದರೆ ಭಕ್ತಿಯೋಗಕ್ಕೆ ವರ್ಣಾಶ್ರಮ ಧರ್ಮಗಳು "ಸಹಕಾರಿತ್ವೇನಚ" (ಬ್ರಹ್ಮ ಸೂತ್ರ 3-9-33)ಎಂಬ ಬ್ರಹ್ಮಸೂತ್ರದ ಪ್ರಕಾರ, ಅಂಗವಾಗಿ ಅನುಷ್ಠೇಯಗಳು. ಪ್ರಪನ್ನನಿಗೆ "ವಿಹಿತ ತ್ವಾಚ್ಚ ಆಶ್ರಮಕರ್ಮಾಪಿ (ಬ್ರಹ್ಮಸೂತ್ರ 3-4-32) ಎಂಬ ಸೂತ್ರದ ಪ್ರಕಾರ ವರ್ಣಾಶ್ರಮ ಧರ್ಮಗಳು ವಿಹಿತ ಗಳಾಗಿ ಮಾಡಬೇಕಾದರೂ ಪ್ರಪತ್ತಿಗೆ ಅಂಗವಿಲ್ಲ. ಪ್ರಪತ್ತಿಗೆ ಆನುಕೂಲ್ಯ ಸಂಕಲ್ಪಾದಿ ಐದು ಅಂಗಗಳು ವಿನಹ ಬೇರೆ ಯಾವುವೂ ಅಂಗವಿಲ್ಲ ಹೀಗೆ 'ಪರಿತ್ಯಜ್ಯ ಎಂಬಲ್ಲಿ ನೈರಪೇಕ್ಷ್ಯವು ವಿವಕ್ಷಿತವಾದರೆ ಏಕಶಬ್ದಕ್ಕೆ ಏನು ಅರ್ಥ ವೆಂದರೆ, **ಏಕ ಶಬ್ದಮ್ ಸಾತ್ವಿಕ ತ್ಯಾಗತ್ತಾಲೇ** ಇತ್ಯಾದಿ ವಿವರಿಸುತ್ತಾರೆ. ಅದಾಗಿ, ಏಕಶಬ್ದವು, ನನ್ನನ್ನು ಶರಣವಾಗಿ ಅಂದರೆ ಮೋಕ್ಷೋಪಾಯವಾಗಿ ಆಶ್ರಯಿಸು, ಎಂದು ಭಗವಂತನು ಹೇಳಲು ಶರಣಾಗತಿಯನ್ನು ತಾನು

### ನಿತ್ಯನೈಮಿತ್ತಿಕ ಕರ್ಮಾನನುಷ್ಠಾನೇ ಪ್ರತ್ಯವಾಯೋ ದುರ್ಲಂಘ್ಯಃ

**ಪ್ರಪತ್ತಿಕ್ಕಾಹವೊನ್ರುಮ್ ಅನುಷ್ಠಿಕ್ಕ ವೇಣ್ಡಾವಾಹಿಲುಮ್, ಸ್ವತಂತ್ರಾಧಿಕಾರತ್ತಾಲೇ ನಾನ ವಿನಹಕ್ಕು ಸ್ವಾಮಿಯಿನುಡೈಯ ವಾಜ್ಞಾತಿ ಲಂಘನ ಮಾಹಾದೆನ್ರು ಸಮರ್ಥಿತ್ತಾರ್ಹಳ್**

ಆಜ್ಞಾವಿರೋಧಿಭಿಃ ಸ್ವಾರ್ಹಪ್ರಾಯಶ್ಚಿತ್ತಪರಾಙ್ಮುಖೈಃ ।
ಸ್ವಾಧಿಕಾರೋಚಿತಸ್ಸ್ಪೃಷ್ಟಃ ಪ್ರತ್ಯವಾಯೋ ದುರತ್ಯಯಃ ॥ ೪೯ ॥

### ನಿತ್ಯನೈಮಿತ್ತಿಕ ಕರ್ಮಾನುಷ್ಠಾನೇ ಲಾಭದ್ವಯಮಪ್ಯಸ್ತಿ

ಆಜ್ಞಾನುಪಾಲನೇ ತತ್ತತ್ಪ್ರತ್ಯವಾಯ ನಿವಾರಣಮ್ ।
ಸ್ವಾಮಿಸಂತೋಷತಃ ಪ್ರೀತಿ ರಿತಿ ಲಾಭದ್ವಯಂ ಸ್ಥಿರಮ್ ॥ ೫೦ ॥

---

ಅನುಷ್ಠಿಸುವುದರಿಂದ ತನಗೂ ಮೋಕ್ಷೋಪಾಯತ್ವವು ಉಂಟೋ ಎಂಬ ಸಂದೇಹವು ಬರಲು, ಸಾತ್ವಿಕ ತ್ಯಾಗದಲ್ಲಿ ಅನುಸಂಧಾನ ಮಾಡುವಂತೆ ಶರಣಾಗತಿ ಕರ್ತೃತ್ವವೂ ನಿನಗೆ ಪರಾಧೀನವಾದ್ದರಿಂದ, ಮಾಮೇಕಂ ಶರಣಂ ವ್ರಜ–ನನ್ನೊಬ್ಬನನ್ನೇ ಉಪಾಯವನ್ನಾಗಿ ಆಶ್ರಯಿಸು ಎಂದು ಹೇಳಿರುತ್ತದೆಯಾದ್ದರಿಂದ 'ಏಕ' ಶಬ್ದದಲ್ಲಿ ಜೀವನಿಗೆ ಪರಾಧೀನ (ಈಶ್ವರಾಧೀನ) ಕರ್ತೃತ್ವವು ಹೇಳಲ್ಪಡುತ್ತದೆ ಎಂದು ವಿವಕ್ಷಿಸಬಹುದು ಹಾಗೆಯೇ "ಏಕ' ಶಬ್ದದಿಂದ ಫಲೋಪಾಯೈಕ್ಯತ್ತೈಚ್ಚೊಲ್ಲುದಲ್–ಫಲವೂ ಉಪಾಯವೂ ಒಂದೇ ಎಂದು ಹೇಳಬಹುದು. ಹಾಗೆಯೇ ಸರ್ವೋಪಾಯಗಳನ್ನು ಬಿಟ್ಟರೆ ಅವುಗಳ ಫಲವು ಸಿದ್ಧಿಸುತ್ತದೆಯೋ ಎಂದರೆ, ಏಕ ಶಬ್ದದಿಂದ ಆ ಅರ್ಥವೂ ಲಭಿಸುತ್ತದೆ ಯೆಂದು ಏಕನೇ ಸರ್ವೋಪಾಯಸ್ಥಾನತ್ತಿಲೇ ಎಂದಾರಂಭಿಸಿ ಹೇಳಿ ನಿಗಮಿಸುತ್ತಾರೆ. ಆದಾಗಿ ಸರ್ವಧರ್ಮಗಳ ಸ್ಥಾನದಲ್ಲಿ ನನ್ನೊಬ್ಬನನ್ನೇ ಶರಣವಾಗಿ ಹೊಂದು ಎಂದರೆ ಸರ್ವೋಪಾಯಗಳೂ ಕೊಡುವ ಫಲವನ್ನು ತತ್ಸ್ಥಾನದಲ್ಲಿ ಭಗವಂತನೊಬ್ಬನೇ ನಿಂತು ಕೊಡುತ್ತಾನೆಂದು 'ಏಕ' ಶಬ್ದವು ತಿಳಿಸುತ್ತದೆ ಎಂದೂ ಅರ್ಥ.

### ನಿತ್ಯನೈಮಿತ್ತಿಕ ಕರ್ಮಗಳನ್ನು ಅನುಷ್ಠಿಸದೇ ಹೋದರೆ ದೋಷವುಂಟು.

**ಪ್ರಪತ್ತಿಕ್ಕಾಹವೊನ್ರುಮ್** ಇತ್ಯಾದಿ – ಹೀಗೆ ಪ್ರಪತ್ತಿಗೋಸ್ಕರ ಬೇರೆ ಯಾವ ಕರ್ಮವನ್ನೂ ಮಾಡಬೇಕಿಲ್ಲವಾದರೂ, "ವಿಹಿತತ್ವಾಚ್ಚ ಆಶ್ರಮ ಕರ್ಮಾಪಿ" ಎಂಬ ಸೂತ್ರದ ಪ್ರಕಾರ **ಸ್ವತಂತ್ರಾಧಿಕಾರತ್ತಾಲೇ**–ಸ್ವತಂತ್ರಾಜ್ಞಾ ಸಿದ್ಧ ನಿತ್ಯ ನೈಮಿತ್ತಿಕ ಕರ್ಮಗಳನ್ನು, ವಿಧಿಸುವ "ಯಾವಜ್ಜೀವಮಗ್ನಿಹೋತ್ರಂಜುಹೋತಿ" ಇತ್ಯಾದಿ ಶ್ರುತಿಗಳ ಬಲದಿಂದ, ಸ್ವಾಮಿಗೆ ಕಿಂಕರನಾದ ಇವನಿಗೆ ಸ್ವಾಮಿಯ ಆಜ್ಞಾತಿಲಂಘನವು ಕೂಡದು ಎಂದು ಸಮರ್ಥಿಸಿದರು. ಈ ಅರ್ಥವನ್ನು ಕಾರಿಕೆಯ ಮೂಲಕ ಸಂಗ್ರಹಿಸುತ್ತಾರೆ. ಆದಾಗಿ **ಆಜ್ಞಾವಿರೋಧಿಭಿ ಸ್ವಾರ್ಹ** ಇತ್ಯಾದಿ **ಆಜ್ಞಾವಿರೋಧಿಭಿಃ** – ಆಜ್ಞೆಯನ್ನು ಮೀರಿದುದರಿಂದ ಆಜ್ಞಾವಿರೋಧಿಗಳಾಗಿ **ಸ್ವಾರ್ಹಪ್ರಾಯಶ್ಚಿತ್ತಪರಾಙ್ಮುಖೈಃ** – ತನ್ನ ಅಧಿಕಾರಾನು ಗುಣವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಅಭಿಪ್ರಾಯವಿಲ್ಲದವರಿಗೆ, **ಸ್ವಾಧಿಕಾರೋಚಿತಃ ಪ್ರತ್ಯವಾಯಃ** – ತನ್ನ ಅಧಿಕಾರಕ್ಕೆ ಅನುಗುಣವಾದ ಕುಂಟತನ, ಅಂಧತ್ವ, ಮೊದಲಾದ ಕ್ಲೇಶಗಳು ದುರತ್ಯಯಃ – ಅತಿಲಂಘನಾಶಕ್ಯಗಳು. ಆ ಕ್ಲೇಶಗಳನ್ನು ಅನುಭವಿಸಬೇಕಾಗುತ್ತದೆ ಎಂದರ್ಥ.

### ನಿತ್ಯನೈಮಿತ್ತಿಕ ಕರ್ಮಾನುಷ್ಠಾನದಿಂದ ಲಾಭದ್ವಯಗಳು

**ಆಜ್ಞಾನುಪಾಲನೇ** – ಭಗವಂತನ ಆಜ್ಞೆಯನ್ನು ಪರಿಪಾಲನ ಮಾಡಿದರೆ, **ತತ್ತತ್ ಪ್ರತ್ಯವಾಯ ನಿವಾರಣಮ್** – ಆಯಾಯಾ ಪ್ರತ್ಯವಾಯಗಳ (ಶಿಕ್ಷೆಗಳ) ನಿವಾರಣೆಯೂ, **ಸ್ವಾಮಿಸಂತೋಷತಃ ಪ್ರೀತಿಃ** – ಸ್ವಾಮಿಯ ಸಂತೋಷದಿಂದ ಪ್ರೀತಿ, **ಇತಿ ಲಾಭದ್ವಯಂ ಸ್ಥಿರಮ್** – ಹೀಗೆ ಎರಡು ಲಾಭಗಳು ಸ್ಥಿರವು.

**ಅನಿಚ್ಛಾತೋ ನಿವರ್ತೇತ ಸ್ವರ್ಗಾದ್ಯಂ ಕರ್ಮಣಾಂ ಫಲಮ್ ।**
**ಅಮರ್ಯಾದಸ್ಯ ದುರ್ವಾರಃ ಪ್ರತ್ಯವಾಯೋಽನ್ಯಹೇತುಕಃ ॥ ೫೧ ॥**

**ಶ್ರೀ ಗೀತಾ ಚರಮಶ್ಲೋಕಸ್ಯ ಶ್ರೀ ಭಾಷ್ಯಕಾರ ಯೋಜನಾದ್ವಯೇ ಸ್ವತಂತ್ರ ಪ್ರಪತ್ತ್ಯನುವಾದೋಪ್ಯಸ್ತ್ಯೇವ**

**ಇಪ್ಪ್ರಪತ್ತಿಯೈ ಭಕ್ತಿಯೋಗಾಙ್ಗಮಾಹ ಅರುಳಿಚ್ಚೆಯ್‌ದದು, ಪ್ರಪತ್ತಿ ಸಕಲ ಫಲಸಾಧನಮಾನ ಪಡಿಯೈ ಪ್ರಕೃತಮಾನ ಭಕ್ತಿಯೋಗ ಮಾಹಿರ ಫಲತ್ತಿಲೇ ಉದಾಹರಿತ್ತಪಡಿ-ಇಙ್ಗು ದ್ವಿತೀಯ**

---

ಅನುಜ್ಞಾಪಾಲನದಲ್ಲಿ ಸ್ವಾಮಿ ಸಂತೋಷದಿಂದ ಪ್ರೀತಿ ಎಂಬ ಒಂದೇ ಲಾಭವು ಅರ್ಥಾತ್ ಸಿದ್ಧ. **ಕರ್ಮಣಾಂ**– ಕರ್ಮಗಳಿಗೆ, **ಸ್ವರ್ಗಾದ್ಯಂ ಫಲಂ** – ಸ್ವರ್ಗವೇ ಮೊದಲಾದ ಫಲವು, **ಅನಿಚ್ಛಾತಃ** – ಆಯಾಯಾ ಕರ್ಮಾನುಷ್ಠಾನ ಕಾಲದಲ್ಲಿ ಇಚ್ಛೆಯಿಲ್ಲದಿದ್ದರೆ, **ನಿವರ್ತೇತ** – ಉಂಟಾಗುವುದಿಲ್ಲ. ಅದಾಗಿ ವಿನಿಯೋಗ ಪೃಥಕ್ತ್ವ ನ್ಯಾಯದಿಂದ ಒಂದು ಕರ್ಮಕ್ಕೆ ನಾನಾ ಫಲಗಳ ವಿನಿಯೋಗವುಂಟು. ಆದ್ದರಿಂದ ಯಾವ ಫಲವನ್ನು ಉದ್ದೇಶಿಸಿ ಕರ್ಮಾನುಷ್ಠಾನವು ಮಾಡಲ್ಪಡುತ್ತದೆಯೋ ಆ ಫಲವೇ ಬರುತ್ತದೆ. ಪ್ರಕೃತದಲ್ಲಿ ಪ್ರಪನ್ನನು ಕರ್ಮಗಳನ್ನು ಭಗವತ್ಪ್ರೀತಿ ರೂಪ ಫಲಕ್ಕೋಸ್ಕರ ಮಾಡುವುದರಿಂದ, ಆ ಪ್ರೀತಿ ರೂಪ ಫಲವೇ ಉಂಟಾಗುತ್ತದೆ. ಸ್ವರ್ಗಾದಿ ಫಲಗಳನ್ನು ಉದ್ದೇಶಿಸಿ ಕರ್ಮಗಳನ್ನು ಮಾಡದಿರುವುದರಿಂದ ಆ ಫಲಗಳು ಸಿದ್ಧಿಸುವುದಿಲ್ಲ. ಇದೇ ನ್ಯಾಯವು ಪಾಪಾಚರಣೆಯಲ್ಲೂ ಉಂಟೇ ಎಂದರೆ, **ಅಮರ್ಯಾದಸ್ಯ** ಎಂದಾರಂಭಿಸಿ ಉತ್ತರಿಸುತ್ತಾರೆ. ಅದಾಗಿ **ಅಮರ್ಯಾದಸ್ಯ** – ಶಾಸ್ತ್ರದ ಎಲ್ಲೆಯನ್ನು ಮೀರಿ ಪಾಪಕೃತ್ಯಗಳನ್ನು ಅನುಷ್ಠಿಸುವವನಿಗೆ, **ಅನ್ಯಹೇತುಕಃ**– ಪಾಪವನ್ನು ಕಾರಣವಾಗಿ ಕೊಂಡಿರುವ **ಪ್ರತ್ಯವಾಯಃ** – ನರಕಾದಿ ಪ್ರಾಪ್ತಿ ರೂಪಶಿಕ್ಷೆಯು, **ದುರ್ವಾರಃ** – ಪ್ರಾಯಶ್ಚಿತ್ತವನ್ನು ಮಾಡದಿದ್ದರೆ ತಡೆಯಲಾಗುವುದಿಲ್ಲ. ಅಂದರೆ ಆಯಾಯಾ ಶಿಕ್ಷೆಗಳು ಅವಶ್ಯ ಉಂಟಾಗುತ್ತವೆ. ಪುಣ್ಯ ಕರ್ಮಗಳಿಂದ ಫಲವು ಬರಬೇಕಾದರೆ, ಅದರ ಅನುಷ್ಠಾನದಲ್ಲಿ ಫಲೇಚ್ಛೆಯೇ ಅಧಿಕಾರ – ಪಾಪಕರ್ಮಗಳ ಫಲೇಚ್ಛೆಯು ಯಾರಿಗೂ ಉಂಟಾಗುವುದಿಲ್ಲವಾದ್ದರಿಂದ ಆ ಪಾಪ ಕರ್ಮಗಳನ್ನು ಮಾಡುವುದಕ್ಕೆ ಆ ಇಚ್ಛೆಯು ಅಧಿಕಾರವಾಗಲಾರದು. ಆದ್ದರಿಂದ ಆ ಇಚ್ಛೆಯ ಅಭಾವದಿಂದ ನರಕಾದ್ಯಭಾವ ರೂಪ ಫಲವು ಸಿದ್ಧಿಸುವುದಿಲ್ಲ. ಆದರೆ ನರಕಾದಿಗಳು ಪಾಪಗಳನ್ನು ಮಾಡುವುದರಿಂದ ಅವಶ್ಯ ಸಿದ್ಧಿಸುತ್ತವೆ ಎಂದು ತಾತ್ಪರ್ಯ.

**ಗೀತಾಚರಮ ಶ್ಲೋಕಕ್ಕೆ ಸ್ವತಂತ್ರ ಪ್ರಪತ್ತಿ ಪರವಾಗಿಯೂ ಅರ್ಥವುಂಟು.**

ಶ್ರೀ ಭಾಷ್ಯಕಾರರು ಗೀತಾಭಾಷ್ಯದಲ್ಲಿ "ಸರ್ವಧರ್ಮಾನ್" ಎಂಬ ಶ್ಲೋಕಕ್ಕೆ ಭಕ್ತಿಯೋಗಕ್ಕೆ ಅಂಗವಾದ ಪ್ರಪತ್ತಿ ಪರವಾಗಿ ಅರ್ಥ ಮಾಡಿರುವುದರಿಂದ ಸ್ವತಂತ್ರ ಪ್ರಪತ್ತಿ ಎಂಬುದೊಂದುಂಟೇ ಎಂಬ ಪ್ರಶ್ನೆಗೆ **ಇಪ್ಪ್ರಪತ್ತಿಯೈ** ಎಂದಾರಂಭಿಸಿ ಉತ್ತರಿಸುತ್ತಾರೆ. ಅದಾಗಿ ಈ ಪ್ರಪತ್ತಿಯನ್ನು ಭಕ್ತಿಯೋಗಕ್ಕೆ ಅಂಗವಾಗಿ ಹೇಳಿರುವುದು, ಪ್ರಪತ್ತಿಯು ಸಕಲ ಫಲ ಸಾಧನವೆಂಬ ಅಭಿಪ್ರಾಯದಿಂದ ಹೇಳಿದೆ. ಇದನ್ನು ಪ್ರಕೃತವಾದ ಭಕ್ತಿಯೋಗವೆಂಬ ಫಲಸಾಧನಕ್ಕೆ ಉದಾಹರಣೆಯಾಗಿ ತೋರಿಸಿ ಕೊಟ್ಟಿರುವರು. ಇದರಿಂದ ಸ್ವತಂತ್ರ ಪ್ರಪತ್ತಿಯೂ ಉಪಲಕ್ಷಿತವೆಂದು ಸೂಚಿಸಲ್ಪಡುತ್ತದೆ. ಪ್ರಪತ್ತಿಗೆ ಭಕ್ತ್ಯಂಗತ್ವವನ್ನು ಹೇಳುವ ದ್ವಿತೀಯ ಯೋಜನೆಯಲ್ಲಿ ಉಪಾಯವಿರೋಧಿ ಪಾಪಗಳ ನಿವರ್ತಕವಾದ ಪ್ರಾಯಶ್ಚಿತ್ತ ರೂಪ ಉಪಾಯಾಂತರ ಸ್ಥಾನದಲ್ಲಿ ನಿಲ್ಲುವ ಸ್ಥಿತಿಯು ಹೇಳಲ್ಪಟ್ಟಿದೆ. ಅದು ಉದಾಹರಣೆಯಾದ್ದರಿಂದ ಪ್ರಾಪ್ತಿ ವಿರೋಧಿ ಪಾಪ ನಿವರ್ತಕ ಭಕ್ತಿರೂಪ ಉಪಾಯಾಂತರ ಸ್ಥಾನದಲ್ಲಿ ನಿಲ್ಲುವ ಸ್ಥಿತಿಯೂ ಸ್ವತಂತ್ರವಾದ ಪ್ರಪತ್ತಿಗೆ ವಿವಕ್ಷಿತವೆಂದು ತಾತ್ಪರ್ಯ. ಪ್ರಥಮ ಯೋಜನೆಯಲ್ಲಿ, ಭಕ್ತ್ಯಂಗವಾದ ಕರ್ಮಗಳಿಗೆ ಸಾತ್ವಿಕ ತ್ಯಾಗ ಸ್ವರೂಪವನ್ನು ಕೃಪೆ ಮಾಡಿ ಹೇಳಿದರು- ಅದು ಸ್ವತಂತ್ರ ಪ್ರಪತ್ತಿಯಲ್ಲೂ ಸ್ವತಂತ್ರ ಪ್ರಪತ್ತಿ ನಿಷ್ಠನ ಉತ್ತರ ಕೃತ್ಯದಲ್ಲೂ ವಿವಕ್ಷಿತವೆಂದು ತಾತ್ಪರ್ಯ. **ಇಂಗು ದ್ವಿತೀಯ ಯೋಜನ್ಯ**

**ಯೋಜನೈಯಿಲ್ ದುಷ್ಕರಙ್ಗಳಾನ ಭಕ್ತಿಯೋಗ ಪರ್ಯಂತೋಪಾಯಙ್ಗಳುಡೈಯ ಸ್ಥಾನತ್ತಿಲೇ ನಿರ್ಭರ ಉಪಾಯ ವಿಶೇಷಮುಮ್, ಪ್ರಥಮ ಯೋಜನೈಯಿಲ್ ಬುದ್ಧಿವಿಶೇಷ ಪೂರ್ವಕಮಾನ ಪ್ರಪತ್ತ್ಯನು ಷ್ಠಾನಮುಮ್, ಕೃತೋಪಾಯನುಡೈಯ ಸ್ವಯಂ ಪ್ರಯೋಜನಮಾನ ಕೈಙ್ಕರ್ಯಮುಮ್, ಅನುಸಂಧೇಯಮ್. ಕಿಂಚ,**

> **ಸುದುಷ್ಕರೇಣ ಶೋಚೇದ್ಯೋ ಯೇನ ಯೇನೇಷ್ಟ ಹೇತುನಾ ।**
> **ಸ ಸ ತಸ್ಯಾಹ ಮೇವೇತಿ ಚರಮಶ್ಲೋಕ ಸಙ್ಗ್ರಹಃ ॥ ೫೨ ॥**
> **ಭಾವಾಭಾವೌ ನಧರ್ಮಾಣಾಂ ಪ್ರಪತ್ತೇ ರಙ್ಗಮಿಷ್ಯತೇ ।**
> **ಸ್ವತಂತ್ರಶಿಷ್ಟ್ಯಾ ಶಕ್ಯೇಹಾ ಶೇಷಾ ಭಾವೋಧಿಕಾರಗಃ ॥ ೫೩ ॥**

---

**ಯಿಲ್** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ **ಇಂಗು**–ಈ ಮೇಲೆ ಹೇಳಿದ ಉಪಲಕ್ಷ್ಯಾಕಾರಗಳನ್ನು "ಸರ್ವ ಧರ್ಮಾನ್ ಪರಿತ್ಯಜ್ಯ", ಎಂದಾರಂಭಿಸುವ ಶ್ಲೋಕ ವ್ಯಾಖ್ಯಾನದಲ್ಲಿ ಎರಡನೇ ಯೋಜನೆಯಲ್ಲಿ **ದುಷ್ಕರಂಗಳಾನ** ಇತ್ಯಾದಿ–ಮಾಡಲಸಾಧ್ಯವಾದ, ಭಕ್ತಿಯೋಗ ಪರ್ಯಂತಗಳಾದ ಉಪಾಯಗಳ ಸ್ಥಾನದಲ್ಲಿ, ನಿಲ್ಲುವ ಸ್ವತಂತ್ರ ಪ್ರಪತ್ತಿ ರೂಪ ಉಪಾಯವೂ, ಪ್ರಥಮ ಯೋಜನೆಯಲ್ಲಿ ಹೇಳಿದ **ಬುದ್ಧಿವಿಶೇಷ ಪೂರ್ವಕಮಾನ**–ಸಾತ್ವಿಕ ತ್ಯಾಗ ಪೂರ್ವಕವಾಗ, **ಪ್ರಪತ್ಯನುಷ್ಠಾನಮುಮ್** ಪ್ರಪತ್ತ್ಯನುಷ್ಠಾನವೂ, ಉಪಾಯವನ್ನು ಅನುಷ್ಠಿಸಿದವನ ಸ್ವಯಂ ಪ್ರಯೋಜನವಾದ ಕೈಂಕರ್ಯವೂ ಅನುಸಂಧೇಯ.

ದ್ವಿತೀಯ ಯೋಜನೆಯಲ್ಲಿ ವಿವಕ್ಷಿತವಾದ ಸಾರಾರ್ಥವನ್ನು **ಕಿಂಚ** ಎಂದಾರಂಭಿಸಿ**ಸುದುಷ್ಕರೇಣಶೋಚೇದ್ಯ** ಎಂಬ ಕಾರಿಕೆಗಳಿಂದ ಸಂಗ್ರಹಿಸುತ್ತಾರೆ ಅದಾಗಿ **ಯಃ**–ಯಾವನು **ಸುದುಷ್ಕರೇಣ,** ಮಾಡಲಸಾಧ್ಯವಾದ, **ಯೇನ ಯೇನ**–ಯಾವ ಯಾವ **ಇಷ್ಟಹೇತುನಾ**–ಫಲವನ್ನುಸಾಧಿಸುಕೊಡುವ ಉಪಾಯದಿಂದ **ಶೋಚೇತ್**–ಆ ಉಪಾಯ ವನ್ನು ಮಾಡಲಾಗದೆ, ದುಃಖಿಸುತ್ತಾನೋ **ತಸ್ಯ**–ಅವನಿಗೆ, **ಸ, ಸಃ**–ಆಯಾಯಾ ಫಲ ಸಾಧನವಾದ ಉಪಾಯವು **ಅಹಮೇವ**–ನಾನೇ, ಅಂದರೆ ಆಯಾಯಾ ಫಲಗಳನ್ನು ಸಾಧಿಸಿಕೊಡಲು, ಆಯಾಯಾ ಉಪಾಯಾಂತರ ಸ್ಥಾನದಲ್ಲಿ ನನ್ನನ್ನು ಇರಿಸಿ ಶರಣಾಗತಿ ಮಾಡಿದರೆ ನಾನೇ ಆ ಫಲಗಳನ್ನು ಸಾಧಿಸಿಕೊಡುತ್ತೇನೆಂಬುದು **ಚರಮಶ್ಲೋಕ ಸಂಗ್ರಹ** ಚರಮ ಶ್ಲೋಕದಲ್ಲಿ ವಿವಕ್ಷಿತವಾದ ಸಾರಾರ್ಥ ಸಂಗ್ರಹ.

**ಭಾವಾಭಾವೌ ನ ಧರ್ಮಾಣಾಂ** ಇತ್ಯಾದಿ – ಪ್ರಪತ್ತಿಗೆ ನೈರಪೇಕ್ಷ್ಯ ವಿಧಿ ಪಕ್ಷದಲ್ಲಿ ವರ್ಣಾಶ್ರಮ ಧರ್ಮಗಳ **ಅನುಷ್ಠಾನವು** ಹೇಗೆ ಅವಶ್ಯಕವೆಂದರೆ, **ಧರ್ಮಾಣಾಂ ಭಾವಾಭಾವೌ** – ವರ್ಣಾಶ್ರಮ ಧರ್ಮಗಳ ಅವಶ್ಯಕತ್ವ, ಅನವಶ್ಯಕತ್ವವು, **ಪ್ರಪತ್ತೇರಂಗಂ ನೇಷ್ಯತೇ** – ಪ್ರಪತ್ತಿಗೆ ಅಂಗವಾಗಿ ಒಪ್ಪಿಕೊಳ್ಳಲ್ಪಡುವುದಿಲ್ಲ. ಆದರೆ, **ಸ್ವತಂತ್ರ ಶಿಷ್ಟ್ಯಾ** – ಸ್ವತಂತ್ರನಾದ ಭಗವಂತನ ಶಾಸ್ತ್ರರೂಪ ಆಜ್ಞೆಯಿಂದ, **ಶಕ್ಯೇಹಾ** – **ಈಹ ಚೇಷ್ಟಾಯಾಂ** ಎಂಬುದು ಧಾತು. ಶಕ್ಯಗಳಾದ ಕರ್ಮಗಳ ಅನುಷ್ಠಾನಗಳು ಮಾಡಬೇಕಾದವು. ಪ್ರಪತ್ತಿಗೆ ಅಂಗವಿಲ್ಲದಿದ್ದರೂ,ವರ್ಣಾಶ್ರಮ ಧರ್ಮಗಳು ಭಗವಂತನ ಆಜ್ಞೆಗಳಾದ್ದರಿಂದ ತನ್ನ ಶಕ್ತ್ಯನುಸಾರ ಅವಶ್ಯಾನುಷ್ಠೇಯ ಗಳು ಎಂದರ್ಥ. **ಶೇಷಾಭಾವೋ** – ಅಶಕ್ಯವಾದ ಕರ್ಮಗಳ ಅನನುಷ್ಠಾನವು, **ಅಧಿಕಾರಗಃ** – ಆಕಿಂಚನ್ಯ ರೂಪ ಅಧಿಕಾರದಲ್ಲಿ ಸೇರಿಕೊಳ್ಳುತ್ತದೆ. ಆಕಿಂಚನನಾದ ಇವನು ಅಶಕ್ಯಗಳಾದ ಇತರ ಕರ್ಮಗಳನ್ನು ಮಾಡ ಬೇಕಿಲ್ಲ. ಅದು ಇವನ ಆಕಿಂಚನ್ಯ ಸ್ವರೂಪದಲ್ಲಿ ಅಡಗುತ್ತದೆಯೆಂದು ತಾತ್ಪರ್ಯ.

**ಕ್ರತ್ವನಙ್ಗತಯಾ ಯೇತು ತದಾನೀ ಮನನುಷ್ಠಿತಾಃ ।**

**ಸ್ವಕಾಲೇ ಸ್ವವಿಧೇರೇವ ಕಾರ್ಯಾಸ್ತೇ ತದ್ವದತ್ರ ನಃ ॥ ೫೪ ॥**

**ಸರ್ವಧರ್ಮಸ್ವರೂಪತ್ಯಾಗ ನಿರಸನಮ್**

1) "ತ್ಯಜಧರ್ಮ ಮಧರ್ಮಂಚ ಎನ್ಡ್ರಿರದುವುಮ್ ಕಾಮ್ಯಙ್ಗಳೈಯುಮ್ ನಿಷಿದ್ಧಙ್ಗಳೈಯುಮ್ ವಿಡಚ್ಚೊನ್ನಪಡಿ; "ತ್ಯಜಸತ್ಯಾನೃತೇ" ಎನ್ಡ್ರಿರುದುವುಮ್ ಆತ್ಮಾನುಭವತ್ತೈಯುಮ್, ಐಶ್ವರ್ಯತ್ತೈಯುಮ್ ಪ್ರಯೋಜನ ಮಾಹಕ್ಕೊಳಾದೇ ಕೊಳ್ಳೈನ್ರಪಡಿ ; ವಾಚಿಕಙ್ಗಳೈ ವಿಶೇಷಿತ್ತುಚ್ಚೊಲ್ಲಿತ್ತಾಹ

---

ಪ್ರಪತ್ತ್ಯನುಷ್ಠಾನ ಕಾಲದಲ್ಲಿ ಮಾಡಲಾಗದ ಸಂಧ್ಯಾವಂದನಾದಿ ನಿತ್ಯನೈಮಿತ್ತಿಕ ಕರ್ಮಗಳನ್ನು ಅನಂತರ ಮಾಡಬೇಕೆಂದು **ಕ್ರತ್ವನಂಗತಯಾ** – ಎಂದಾರಂಭಿಸಿ ವಿಧಿಸುತ್ತಾರೆ. ಅದಾಗಿ **ಕ್ರತ್ವನಂಗತಯಾ**–ಜ್ಯೋತಿಷ್ಟೋಮಾದಿ ಯಾಗಗಳಿಗೆ ಅಂಗವಿಲ್ಲದಿರುವುದರಿಂದ **ಯೇತು ತದಾನೀಮನನುಷ್ಠಿತಾಃ** – ಆ ಯಾಗ ಸಮಯದಲ್ಲಿ ಮಾಡಲಾಗಲಿಲ್ಲವೋ, **ತೇ** – ಅವು – ಸಂಧ್ಯಾವಂದನಾದಿಗಳು, **ಸ್ವಕಾಲೇ** – ತನ್ನ ಕಾಲದಲ್ಲಿ, **ಸ್ವವಿಧೇರೇವ** ಸ್ವತಂತ್ರಾಜ್ಞಾ ವಿಧಿಯಿಂದ, **ಕಾರ್ಯಾಃ** – ಹೇಗೆ ಮಾಡಲ್ಪಡಬೇಕೋ, **ತದ್ವತ್** – ಹಾಗೆಯೇ, **ಅತ್ರ** – ಪ್ರಪತ್ತ್ಯನುಷ್ಠಾನ ಕಾಲದಲ್ಲಿ ಮಾಡಲಾಗದೆ ಬಿಡೆಯಲ್ಪಟ್ಟ, ವರ್ಣಾಶ್ರಮ ಧರ್ಮಗಳು, **ನಃ** – ಪ್ರಪನ್ನರಾದ ನಮಗೆ, **ಕಾರ್ಯಾಃ** – ಅನಂತರ ಮಾಡಲ್ಪಡಬೇಕಾದವು.

**ಸರ್ವಧರ್ಮ ಸ್ವರೂಪ ತ್ಯಾಗವು ಚರಮ ಶ್ಲೋಕದಲ್ಲಿ ಹೇಳಿರುವ "ಸರ್ವಧರ್ಮಾನ್ ಪರಿತ್ಯಜ್ಯ" ವಿಗೆ ಅರ್ಥವೆಂಬವಾದ ನಿರಸನ.**

1) **"ತ್ಯಜಧರ್ಮಮಧರ್ಮಂಚ"** ಎಂಬ ವಚನಕ್ಕೆ ಕಾಮ್ಯ ಕರ್ಮಗಳನ್ನೂ ನಿಷಿದ್ಧ ಕರ್ಮಗಳನ್ನೂ ಬಿಡಬೇಕೆಂದು ಅರ್ಥವೇ ಹೊರತು ನಿತ್ಯನೈಮಿತ್ತಿಕವರ್ಣಾಶ್ರಮ ಧರ್ಮಗಳನ್ನು ಬಿಡಬೇಕೆಂದು ಅರ್ಥವಲ್ಲ. **'ತ್ಯಜ ಸತ್ಯಾನೃತೇ ಅಪಿ'** ಸತ್ಯ ಶಬ್ದವು ಸ್ಥಿರಲಾಕ್ಷಣಿಕವಾಗಿ ಆತ್ಮಾನುಭವವನ್ನು ತಿಳಿಸುತ್ತದೆ. ಅನೃತ ಶಬ್ದವು ಅಸ್ಥಿರವಾದ ಐಶ್ವರ್ಯವನ್ನು ಲಕ್ಷಣೆಯಾಗಿತಿಳಿಸುತ್ತದೆ. ಆದ್ದರಿಂದ **"ತ್ಯಜಸತ್ಯಾನೃತೇ"** ಆತ್ಮಾನುಭವವನ್ನೂ ಐಶ್ವರ್ಯವನ್ನೂ ಫಲವಾಗಿ ಅಪೇಕ್ಷಿಸದೆ ಇರು ಎಂದರ್ಥ. **ವಾಚಿಕಂಗಳೈ** ಇತ್ಯಾದಿ– ಸತ್ಯಶಬ್ದವು **ವಾಚಿಕ** ಸತ್ಯದ **ವಿಷಯವಾಗಿಯೂ**, ಅಸತ್ಯ ಶಬ್ದವು ಅನೃತ ವಿಷಯವಾಗಿಯೂ ಹೇಳಬಹುದು. ಆಗ ಸತ್ಯಶಬ್ದವು ಭೂತಹಿತವಲ್ಲದ ಯಥಾರ್ಥವಚನ. ಅಸತ್ಯ ಶಬ್ದವು ಅನೃತ ಸಾಮಾನ್ಯ. "ಭೂತ ಹಿತಂ ಸತ್ಯಮ್"

ವಿವಾಹಕಾಲೇ ರತಿ ಸಂಪ್ರಯೋಗೇ ಪ್ರಾಣಾತ್ಯಯೇ ಸರ್ವಧನಾಪಹಾರೇ ।

ಮಿತ್ರಸ್ಯಚಾರ್ಥೇಪ್ಯನೃತಂ ವದೇಯುಃ ಪಂಚಾನ್ಯತಾನ್ಯಾಹು ರಪಾತಕಾನಿ ॥

ವಿವಾಹ ಕಾಲದಲ್ಲಿಯೂ, ರತಿ ಕ್ರೀಡೆಯಲ್ಲಿಯೂ, ಪ್ರಾಣಾಪದ್ದಶೆಯಲ್ಲಿಯೂ, ಸರ್ವಧನವೂ ನಷ್ಟವಾಗಿ ಹೋಗುವ

---

1) ತ್ಯಜಧರ್ಮಮಧರ್ಮಂಚತ್ಯಜಸತ್ಯಾನೃತೇ ಅಪಿ ।
ಉಭೇಸತ್ಯಾನೃತೇತ್ಯಕ್ತ್ವಾ ಯೇನತ್ಯಜಸಿ ತತ್ತ್ಯಜ ॥ ಪು.ತಿ.ನೋ.

ವುಮಾಮ್. ಇದಿನ್ ಅರುಮ್ಯೆ ತೋತ್ತುಹೈಕ್ಕಾಹ "ಉಭೇ ಸತ್ಯಾನೃತೇತ್ಯಕ್ತ್ವಾ" ಎನ್ರು ಅನುವದಕ್ಕಿರದು. ತ್ಯಾಗತ್ತಿಲ್ ಕರ್ತೃತ್ವಮುಮ್. ಪರಾಧೀನಮೆನ್ರು ಅನುಸಂಧಿಕ್ಕೈಕ್ಕಾಹ "ಯೇನ ತ್ಯಜಸಿ ತತ್ತ್ಯಜ" ಎನ್ಗಿರದು.

ಚರಮಶ್ಲೋಕೇ ಬುದ್ಧಿಪೂರ್ವೋತ್ತರಾಘಾಶ್ಲೇಷೋಪ್ಯುಕ್ತ ಇತಿವಾದಃ

ಇಪ್ಪಡಿಯಾನಾಲ್, ಆಜ್ಞಾತಿಲಂಘನುತ್ತುಕ್ಕು ಒರುವಿರಹನ್ರಿಕ್ಕೇ ಯಿರುಕ್ಕ, ಶಿಲರ್,

2) "ತಸ್ಮಾತ್ತ್ವಮುದ್ಧವೋತ್ಸೃಜ್ಯಚೋದನಾಂಪ್ರತಿಚೋದನಾಮ್ ।
ಪ್ರವೃತ್ತಿಂಚ ನಿವೃತ್ತಿಂಚ ಶ್ರೋತವ್ಯಂ ಶ್ರುತಮೇವ ಚ ।
ಮಾಮೇಕ ಮೇವ ಶರಣ ಮಾತ್ಮಾನಂ ಸರ್ವದೇಹಿನಾಂ ।
ಯಾಹಿ ಸರ್ವಾತ್ಮಭಾವೇನ ಯಾಸ್ಯಸಿ ಹ್ಯಕುತೋಭಯಮ್ ॥"

---

ಸಮಯದಲ್ಲಿಯೂ ಸ್ನೇಹಿತನಿಗೋಸ್ಕರವೂ, ಸುಳ್ಳು ಹೇಳಬಹುದು. ಈ ಐದು ವಿಧವಾದ ಸುಳ್ಳು ಹೇಳುವುದ ರಿಂದ ಪಾಪವು ಸಂಭವಿಸುವುದಿಲ್ಲ. ಇದಿನರುಮ್ಯೆತೋಟ್ರುಹೈಕ್ಕಾಹ– ಸತ್ಯಾನೃತಗಳನ್ನು ಬಿಡಬೇಕೆಂದು ಹೇಳಿ ಪುನಃ ಉಭೇಸತಾನೃತೇತ್ಯಕ್ತ್ವಾ ಎಂದು ಹೇಳಿರುವುದು ಇದನ್ನು ಬಿಡುವವರು ಬಹಳ ಅಪುರೂಪವೆಂದು ತಿಳಿಸುವುದಕ್ಕೋಸ್ಕರ ಹೇಳಿದೆ. ತ್ಯಾಗತ್ತಿಲ್ ಕರ್ತೃತ್ವಮುಮ್–ಇತ್ಯಾದಿ ಈ ತ್ಯಾಗದಲ್ಲಿ ಕರ್ತೃತ್ವವೂ ಪರಾ ಧೀನವೆಂದು ಅನುಸಂಧಾನ ಮಾಡುವುದಕ್ಕೋಸ್ಕರ 'ಯೇನತ್ಯಜಸಿತತ್ಯಜ' ಯಾವ ಸ್ವಾತಂತ್ರ್ಯಾಭಿಮಾನದಿಂದ ಮೇಲೆ ಹೇಳಿದ ಧರ್ಮಾದಿಗಳನ್ನು ಬಿಡುತ್ತೀಯೋ ಆ ಸ್ವಾತಂತ್ರ್ಯಾಭಿಮಾನವನ್ನೂ ಬಿಡು, ಎಂದು ಹೇಳಿದೆ.

ಹೀಗೆ ಮೇಲೆ ಹೇಳಿದ ವಚನಕ್ಕೆ ತಾತ್ಪರ್ಯವಿರುವಾಗ ಕೆಲವರು ಆ ಪಾತ ಪ್ರತೀತಿಯಿಂದ ಎಲ್ಲಾ ಧರ್ಮಗಳನ್ನೂ ಬಿಡು ಎಂದು ಈ ವಚನಕ್ಕೆ ಅರ್ಥಮಾಡಿ, ಅದಕ್ಕೆ ಉದ್ಧವ ಗೀತಾ ವಚನವನ್ನು ಉಪೋದ್ಬಲಕವಾಗಿ ಹೇಳುತ್ತಾರೆಂದು ಹೇಳಿ ಅದೂ ಸರಿಯಲ್ಲವೆಂದು ಆಚಾರ್ಯರು, ಇಪ್ಪಡಿಯಾನಾಲ್ ಆಜ್ಞಾತಿ ಲಂಘನತ್ತುಕ್ಕು ಎಂದಾರಂಭಿಸಿ ಅನುಗ್ರಹಿಸುತ್ತಾರೆ, ಆದಾಗಿ ಮೇಲೆ ನಿರೂಪಿಸಿದಂತೆ, ಆಜ್ಞಾತಿಲಂಘನಕ್ಕೆ ಒಂದು ವಿರಹು – ಉಪಾಯ, ದಾರಿ ಇಲ್ಲದಿರುವಾಗ, ಕೆಲವರು (1) "ತಸ್ಮಾತ್ವಮುದ್ಧವೋತ್ಸೃಜ್ಯ" ಇತ್ಯಾದಿ ಚೋದನಾ – ವಿಧಿರೂಪವಾದ ಶಾಸ್ತ್ರ, "ಅಹರಹಃ ಸಂಧ್ಯಾಮುಪಾಸೀತ", ಪ್ರತಿದಿನವೂ ಸಂಧ್ಯಾವಂದನಾದಿಗಳನ್ನು ಮಾಡು ಇತ್ಯಾದಿ, ಪ್ರತಿಚೋದನಾ–ಎಂದು ನಿಷೇಧ ಶಾಸ್ತ್ರ–ನಕಳಂಜಂ ಭಕ್ಷಯೇತ್ – ಮದ್ಯಪಾನ ಮಾಡಬಾರದು ಇತ್ಯಾದಿ, ಪ್ರವೃತ್ತಿ–ಸತ್ಕರ್ಮದಲ್ಲಿ ಪ್ರವೃತ್ತಿ, ನಿವೃತ್ತಿ –ನಿಷಿದ್ಧ ಕರ್ಮಗಳಿಂದ ನಿವೃತ್ತಿ. ಶ್ರೋತವ್ಯ – ತಿಳಿದುಕೊಳ್ಳ ಬೇಕಾದ ಅರ್ಥ, ಶ್ರುತಂ – ಮೊದಲು ತಿಳಿದುಕೊಂಡ ಅರ್ಥ, 'ಚ' ಕಾರದಿಂದ ಸರ್ವ ಧರ್ಮಸಂಗ್ರಹ.

---

ಭಾರತ ಶಾಂತಿ. 338-44 ಕಾಮ್ಯ ಕರ್ಮಗಳನ್ನೂ ನಿಷಿದ್ಧ ಕರ್ಮಗಳನ್ನೂ ಬಿಡು. ಕೈವಲ್ಯ, ಐಶ್ವರ್ಯಗಳಲ್ಲಿ ಆಸೆಯನ್ನು ಬಿಡು. ಭೂತ ಹಿತವಲ್ಲದ ಸತ್ಯವಚನವನ್ನೂ ಸುಳ್ಳನ್ನೂ ಹೇಳಬೇಡ. ಯಾವ ಸ್ವಾತಂತ್ರ್ಯಾಭಿಮಾನದಿಂದ ಧರ್ಮಾಧರ್ಮಗಳನ್ನು ಮೇಲೆ ಹೇಳಿದಂತೆ ಬಿಡುತ್ತೀಯೋ ಆ ಸ್ವಾತಂತ್ರ್ಯಾಭಿಮಾನವನ್ನು ಬಿಡು.

2) ಭಾಗವತ 11-12-14, 15

**ಎನ್ರು ನಿವೃತ್ತಿಯುಮ್ ಕೂಡ ವಿಡಚ್ಚೊನ್ನಪಡಿಯಾಲುಮ್, "ಸರ್ವಧರ್ಮಾನ್ ಪರಿತ್ಯಜ್ಯ" ಎನ್ಗಿರ ವಿಡತ್ತಿಲ್ "ಸರ್ವ" ಶಬ್ದತ್ತೈ ಸಙ್ಕೋಚಿಯಾಮೈಕ್ಕಾಹವುಮ್, ನಿವೃತ್ತಿರೂಪ ಧರ್ಮಙ್ಗಳೈಯುಮ್ ಕೂಡ ವಿಡವೇಣ್ಡುಹೈಯಾಲ್, ಅವತ್ತೈ ವಿಡುಹೈಯಾವದು-ನಿಷೇಧಿತ್ತವೈ ಯೆಲ್ಲಾತ್ತಿಲುಮ್ ಯಥಾಶಕ್ತ್ಯನುಷ್ಠಾನ ಮಾಹೈಯಾಲೇ, ಇಂದ ನಿಷಿದ್ಧಾನುಷ್ಠಾನಮ್ ವಿಧಿಬಲಪ್ರಾಪ್ತ ಮಾಹೈಯಾಲೇ ಬುದ್ಧಿಪೂರ್ವೋತ್ತರಾಘಮುಮ್ ಪ್ರಪನ್ನನುಕ್ಕು ಲೇಪಿಯಾದೆನ್ರು ಭ್ರಮಿಪ್ಪಾರ್ಹಳ್.**

**ಪ್ರಪನ್ನಾನಾಂ ಬುದ್ಧಿಪೂರ್ವೋತ್ತರಾಘಾಽಶ್ಲೇಷ ಇತಿ ವಾದಂ ನಿರಸ್ಯತಿ**

**ಇದು ಮಿಹವುಮ್ ಪರಿಹಸನೀಯುಮ್ ; ಎಙ್ಗನೇಯೆನ್ನಿಲ್ - ಅಲೇಪಕರ್ ಪಾಪಂ ಪಣ್ಣಿನಾಲ್ ಲೇಪಿಯಾದೆನ್ಬಾರ್ಹಳ್; ಇವರ್ಹಳ್ ಪಾಪಮವಶ್ಯಮ್ ಅನುಷ್ಠಿಕ್ಕವೇಣು ಮೆನ್ನಾರ್ಹಳಾಯಿಱ್ಱು. ಇದು**

**"ಭಕ್ಷ್ಯೋತ್ತಮ ಪ್ರತಿಚ್ಛನ್ನಂ ಮತ್ಸ್ಯೋಬಡಿಶಮಾಯಸಂ ।**
**ಅನ್ನಾಭಿಲಾಷೀಗ್ರಸತೇ ನಾನುಬಂಧ ಮಪೇಕ್ಷತೇ" ॥**

**ಎನ್ಗಿರ ಕಣಕ್ಕಾಮ್.**

---

ಆದಾಗಿ ಎಲ್ಲೈ ಉದ್ಧವನೇ ವಿಧಿ ನಿಷೇಧ ಶಾಸ್ತ್ರಗಳನ್ನೂ, ಸತ್ಕರ್ಮ ದುಷ್ಕರ್ಮಗಳನ್ನೂ ಅನುಕ್ತಗಳಾದ ಇತರ ಧರ್ಮಗಳನ್ನೂ ಪ್ರಪತ್ತಿಗೆ ಅಂಗವಾಗಿ ಮಾಡದೆ, **ಸರ್ವದೇಹಿನಾಮಾತ್ಮಾನಂ** – ಎಲ್ಲಾ ಪ್ರಾಣಿಗಳಿಗೂ ಅಂತರಾತ್ಮನಾದ, **ಮಾಮೇಕಮೇವ** – ನನ್ನೊಬ್ಬನನ್ನೇ **ಶರಣಂಯಾಹಿ** – ಉಪಾಯವಾಗಿ ಸ್ವೀಕರಿಸು, ನನ್ನಲ್ಲಿ ಶರಣಾಗತಿಯನ್ನು ಅನುಷ್ಠಿಸು ಎಂದರ್ಥ. ಇದರಿಂದಾಗಿ **ಅಕುತೋಭಯಂ ಯಾಸ್ಯಸಿ,** ಕುತೋಽಪಿಭಯಂ ನಾಸ್ತೀತಿ, ಅಕುತೋಭಯಂ – ಪರಮಪದ. ಪರಮಪದವನ್ನು ಹೊಂದುತ್ತೀಯಾ ಇದು ವಾಸ್ತವಾರ್ಥ. ಇದನ್ನು ಬಿಟ್ಟು, ಕೆಲವರು, ನಿವೃತ್ತಿ–ದುಷ್ಕರ್ಮಗಳು, ಇವುಗಳನ್ನೂ ಬಿಡಬೇಕೆಂದು ಹೇಳಿರುವುದರಿಂದ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ ಸರ್ವಶಬ್ದಕ್ಕೆ ಸಂಕೋಚವನ್ನು ಹೇಳದೆ ಇರಲು ಎಲ್ಲಾ ನಿತ್ಯನೈಮಿತ್ತಿಕ ರೂಪ ಧರ್ಮಗಳನ್ನೂ ಶಾಸ್ತ್ರನಿಷಿದ್ಧಗಳನ್ನೂ ಬಿಡಬೇಕೆಂದು ಅರ್ಥ ಮಾಡುತ್ತಾರೆ. ಆಗ್ಯೆ ನಿವೃತ್ತಿರೂಪ ಧರ್ಮಗಳನ್ನೂ ಬಿಡಬೇಕಾಗುವುದರಿಂದ ಅವುಗಳನ್ನು ಬಿಡಬೇಕೆಂದರೆ ನಿಷೇಧಿಸಲ್ಪಟ್ಟ ಎಲ್ಲಾ ಅಧರ್ಮಗಳನ್ನು ಯಥಾಶಕ್ತಿ ಅನುಷ್ಠಿಸಬೇಕೆಂದು ಏರ್ಪಡುತ್ತದೆ **ಇಂದ ನಿಷಿದ್ಧಾನುಷ್ಠಾನಮ್** ಇತ್ಯಾದಿ – ಈ ನಿಷೇಧ್ಯಗಳಾದ ಕರ್ಮಗಳನ್ನು ಮಾಡಬೇಕೆಂದು ವಿಧಿಬಲ ಪ್ರಾಪ್ತವಾದುದರಿಂದ ಪ್ರಪನ್ನನಿಗೆ ಬುದ್ಧಿ ಪೂರ್ವೋತ್ತರಾಘವು ಲೇಪಿಸುವುದಿಲ್ಲವೆಂದು ಭ್ರಮಿಸುತ್ತಾರೆ.

**ಬುದ್ಧಿಪೂರ್ವೋತ್ತರಾಘವು ಲೇಪಿಸುವುದಿಲ್ಲವೆಂಬವಾದ ನಿರಾಸಃ**

**ಇದು ಮಿಹವುಮ್ ಪರಿಹಸನೀಯುಮ್** – ಇದು ಸಂಸಾರ ವರ್ಧಕವಾದ್ದರಿಂದ ಪರಿಹಾಸ್ಯಕ್ಕೆ ಆಸ್ಪದವಾಗುತ್ತದೆ. **ಎಂಗನೇ ಎನ್ನಿಲ್** – ಹೇಗೆಂದರೆ, **ಅಲೇಪಕರ್** – ಆಲೇಪಕಮತಾವಲಂಬಿಗಳು, ಪಾಪವನ್ನು ಮಾಡಿದರೆ ಲೇಪಿಸುವುದಿಲ್ಲವೆನ್ನುತ್ತಾರೆ. ಇವರುಗಳು ಪಾಪವನ್ನು ಅವಶ್ಯ ಅನುಷ್ಠಿಸಬೇಕು ಎಂದು ಹೇಳಿದಂತಾಗುತ್ತದೆ. **ಇದು ಭಕ್ಷ್ಯೋತ್ತಮಪ್ರತಿಚ್ಛನ್ನಂ** ಇತ್ಯಾದಿ-ಇದು ಶ್ಲಾಘ್ಯವಾದ ಮಾಂಸಾದಿ ಚೂರುಗಳಿಂದ ಮರೆಸಲ್ಪಟ್ಟ, ಕಬ್ಬಿಣದ ಕೊಕ್ಕೆ(ಬಡಿಶ)ಯನ್ನು ಆಹಾರದಲ್ಲಿ ಅಭಿಲಾಷೆಯಿಂದ ಮೀನು ನುಂಗುತ್ತದೆ. ಮಾಂಸದೊಡನೆ ಸೇರಿಕೊಂಡಿರುವ ಕಬ್ಬಿಣದ ಕೊಕ್ಕೆಯನ್ನು ನೋಡುವುದಿಲ್ಲ. ಆಗ್ಯೆ ಆ ಕೊಕ್ಕೆಗೆ ಸಿಕ್ಕಿಕೊಂಡು ಮೀನುಗಾರನ ವಶಕ್ಕೆ ಸಿಕ್ಕಿ ಪ್ರಾಣವನ್ನು ಬಿಡುತ್ತದೆ, **ಎನ್ಗಿರಕಣಕ್ಕಾಮ್** – ಎಂಬ ರೀತಿಯಾಗುತ್ತದೆ. ಬುದ್ಧಿ ಪೂರ್ವೋತ್ತರಾಘವನ್ನುಮಾಡುವುದರಿಂದ, ನರಕಾದಿಗಳು ಪ್ರಾಪ್ತಗಳಾಗುತ್ತವೆ ಎಂಬುದನ್ನು ತಿಳಿಯುವುದಿಲ್ಲವೆಂದು ಭಾವ.

**ಇನ್ನೈ ಎಲ್ಲಾತ್ತೈಯುಮ್ ನಿನ್ನೈತ್ತು "ಅಹೋಬತ ಮಹತ್ಕಷ್ಟಂ ವಿಪರೀತ ಮಿದಂ ಜಗತ್ ॥**
**ಯೇನಾಪತ್ರಪತೇ ಸಾಧು ರಸಾಧುಸ್ತೇನ ತುಷ್ಯತಿ ।"**
**ಎನ್ರು ಮಹರ್ಷಿ ನಿರ್ವಿಣ್ಣನಾನಾರ್,**

**ಇವರ್ಹಳ್ ಶೊಲ್ಲುಹಿರಪಡಿ ಅರ್ಥಮಾನಾಲ್, ಯಾವಜ್ಜೀವ ಮಿರುನ್ದು ಅನುಷ್ಠಿಕ್ಕುಮ್ ನಿಷಿದ್ಧಾನುಷ್ಠಾನ ಮೆಲ್ಲಾಮ್ ಪ್ರಪತ್ತಿಕ್ಕು ಅಙ್ಗಮಾಹೈಯಾಲ್ ಸಾಙ್ಗಪ್ರಪದನಂ ಸಕೃತ್ಕರ್ತವ್ಯ ಮೆನ್ರು ವಿಡಮುಮ್ ಕೞಿಯುಮ್. ಪ್ರಪತ್ತಿಕ್ಷಣತ್ತಿಲ್ ಎಲ್ಲಾ ನಿಷಿದ್ಧಙ್ಗಳುಮ್ ಅನುಷ್ಠಿಕ್ಕೈ ಅಶಕ್ಯಮ್. ಅಪ್ಪೋದು ಯಥಾಶಕ್ತಿ ನಿಷಿದ್ಧಾನುಷ್ಠಾನಂ ಪಣ್ಣಿಕ್ಕೊಂಡು ಪ್ರಪತ್ತಿ ಪಣ್ಣವುಮ್ ಕಂಡರಿಯೋಮ್. ಇಪ್ಪಕ್ಷತ್ತಿಲ್ ಪಾಪಙ್ಗಳ್ ಅಗ್ನಿ ಷೋಮೀಯ ಹಿಂಸೈಪೋಲೇ ಪಾಪಶಬ್ದ ಮಲ್ಲಾಮೈಯಾಲೇ, ಬುದ್ಧಿ ಪೂರ್ವೋತ್ತರಾಘತ್ತೈಯುಮ್ ಕೂಟ್ಟಿ "ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎನ್ಹಿರ ವಿಡತ್ತುಕ್ಕು ತಾಙ್ಗಳ್ ವ್ಯಾಖ್ಯಾನಂ ಪಣ್ಣಿನ ಪ್ರಕಾರಮುಂ ವಿರುದ್ಧಮಾಮ್. ಯಥಾಶಕ್ತಿ ತ್ರಿವಿಧಾಪಚಾರಙ್ಗಳ್ ಕರ್ತವ್ಯಙ್ಗಳಾಹವುಮ್ ಪ್ರಸಙ್ಗಿಕ್ಕುಮ್.**

---

ಇನ್ನೈ ಎಲ್ಲಾತ್ತೈಯುಮ್ ನಿನ್ನೈತ್ತು – ಹೀಗೆ ಸ್ವೇಚ್ಛೆಯಾಗಿ ಆಹಾರ ವಿಹಾರಗಳನ್ನು ಮಾಡಿಕೊಂಡು ಇದು ಪಾಪವಲ್ಲವೆಂದು ಹೇಳುವ ಈ ಮತಸ್ಥರನ್ನು ಕುರಿತು, **"ಅಹೋಬತ ಮಹತ್ಕಷ್ಟಂ"** ಇತ್ಯಾದಿ ವ್ಯಾಸ ಋಷಿಯು, "ಅಯ್ಯೋ, ಈ ಪ್ರಪಂಚದ ಜನರು ವಿಪರೀತವಾಗಿ ವರ್ತಿಸುತ್ತಿದ್ದಾರೆ, ಇದು ಹೇಳದಂತಹ ಕಷ್ಟ. ಸತ್ಪುರುಷನು ಯಾವ ವ್ಯಾಪಾರವನ್ನು ಮಾಡಲು ಲಜ್ಜಿಸುತ್ತಾನೆಯೊ ಅದನ್ನು ಅಯೋಗ್ಯನು ಸಂತೋಷದಿಂದ ಮಾಡಿ, ತೃಪ್ತಿಹೊಂದುತ್ತಾನೆ," ಎಂದು **ನಿರ್ವಿಣ್ಣನಾನಾನ್** – ನಿರ್ವೇದವನ್ನು ಹೊಂದಿದರು. ಮಹಾಭಾರತಾದಿಗಳಲ್ಲಿ ಅನೇಕ ಧರ್ಮಗಳನ್ನು ಮಾಡುವಂತೆ ಎತ್ತಿಹೇಳಿಯೂ, ಅನೇಕ ಅಧರ್ಮಗಳನ್ನು ಮಾಡದಿರುವಂತೆ ಹೇಳಿಯೂ, ಈ ಲೋಕದ ಜನರು ಅಧರ್ಮಾಚರಣೆಯನ್ನೇ ಮಾಡುತ್ತಾರಲ್ಲಾ ಎಂಬುದು ಅವರ ನಿರ್ವೇದ.

**ಇವರ್ಹಳ್ ಶೊಲ್ಲುಹಿರಪಡಿ** ಎಂದಾರಂಭಿಸಿ ಬಾಧಕವನ್ನು ತಿಳಿಸುತ್ತಾರೆ. ಅದಾಗಿ ಬುದ್ಧಿ ಪೂರ್ವೋತ್ತರಾಘವು ಲೇಪಿಸುವುದಿಲ್ಲವೆಂದು ಹೇಳುವ ಈ ಮತಸ್ಥರು ಹೇಳುವಂತೆ ಅರ್ಥವಾದರೆ, ಜೀವಾವಧಿ ಮಾಡುವ ನಿಷಿದ್ಧಾನುಷ್ಠಾನಗಳು ಪ್ರಪತ್ತಿಗೆ ಅಂಗವಾದ್ದರಿಂದ, ಅಂಗಗಳೊಡನೆ ಕೂಡಿದ ಪ್ರಪದನವನ್ನು ಸಕೃತ್ – ಒಂದೇ ಸಲ, ಮಾಡಬೇಕು ಎಂಬ ಶಾಸ್ತ್ರವನ್ನು ಕೞಿಯುಮ್ – ಬಿಟ್ಟಂತೆಯಾಗುತ್ತದೆ. ಯಥಾಶಕ್ತಿ ತತ್ಕಾಲ ಸಂಭಾವಿತ ನಿಷಿದ್ಧಾನುಷ್ಠಾನವು ಮಾತ್ರ ಪ್ರಪತ್ತಿಗೆ ಅಂಗವೆಂದೂ ಹೇಳಲಿಕ್ಕಿಲ್ಲ. ಏಕೆಂದರೆ **ಪ್ರಪತ್ತಿಕ್ಷಣತ್ತಿಲ್** ಇತ್ಯಾದಿ – ಪ್ರಪತ್ತಿಯನ್ನು ಅನುಷ್ಠಿಸುವ ಕಾಲದಲ್ಲಿ ಎಲ್ಲಾ ನಿಷಿದ್ಧ ಕಾರ್ಯಗಳನ್ನೂ ಮಾಡಿಕೊಂಡು ಅನುಷ್ಠಿಸುವುದು ಅಶಕ್ಯ. ಆದ್ದರಿಂದ ಆ ಸಮಯದಲ್ಲಿ ಯಥಾಶಕ್ತಿ ನಿಷಿದ್ಧಾನುಷ್ಠಾನವನ್ನೂ ಮಾಡಿ ಪ್ರಪತ್ತಿಯನ್ನು ಮಾಡಬಹುದು ಎಂದರೆ, ಈ ಅನುಷ್ಠಾನವನ್ನು ನಾವು ಎಲ್ಲಿಯೂ ನೋಡಿಲ್ಲವೆಂದು ಆಚಾರ್ಯರು ಅನುಗ್ರಹಿಸುತ್ತಾರೆ. ಹಾಗೆ ನಿಷಿದ್ಧಗಳನ್ನು ಅನುಷ್ಠಿಸಿಕೊಂಡು ಪ್ರಪತ್ತಿಯನ್ನು ಮಾಡುವುದು ಲೋಕ ವಿರುದ್ಧವೆಂದು ತಾತ್ಪರ್ಯ. **ಇಪ್ಪಕ್ಷತ್ತಿಲ್** ಇತ್ಯಾದಿ – ಈ ಪಕ್ಷದಲ್ಲಿ, ಪಾಪಗಳೂ, ಅಗ್ನಿಷೋಮೀಯ ಹಿಂಸೆಯಂತೆ, ಪಾಪಶಬ್ದವಾಚ್ಯವಲ್ಲದೆ ಇರುವುದರಿಂದ ಬುದ್ಧಿ ಪೂರ್ವೋತ್ತರಾಘವನ್ನೂ ಸೇರಿಸಿ, **"ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ"** ಎಂಬಲ್ಲಿ ತಾವೇ ವ್ಯಾಖ್ಯಾನ ಮಾಡಿರುವ ಪ್ರಕಾರಕ್ಕೂ ವಿರುದ್ಧ. ಇಲ್ಲಿ ನಿಷಿದ್ಧಗಳ ಅನುಷ್ಠಾನವು ಅಶಕ್ಯವಾದರೂ ನಿಷಿದ್ಧ ಸಾಮಾನ್ಯವು ವಿಹಿತವಾದ್ದರಿಂದ, ಪಾಪ ಶಬ್ದವಾಚ್ಯತ್ವವು ಇಲ್ಲ ವೆಂಬುದು ಅವರ ಭಾವ. ಇವರು ಹೇಳುವ ಪ್ರಕಾರ, ಮೂರು ವಿಧವಾದ ಅಪಚಾರಗಳೂ–ಭಗವದಪಚಾರ, ಭಾಗವತಾಪಚಾರ ಅಸಹ್ಯಾಪಚಾರಗಳೂ ಕರ್ತವ್ಯಗಳಾ, ಪ್ರಸಕ್ತವಾಗುತ್ತವೆ.

**ಇದು ಪೂರ್ವಾನುಷ್ಠಾನತ್ತುಕ್ಕುಮ್, ಪೂರ್ವಸಂಪ್ರದಾಯತ್ತುಕ್ಕುಮ್, ಸ್ವಾನುಷ್ಠಾನತ್ತುಕ್ಕುಮ್, ಮತ್ತುಮ್ ಮಿಪ್ಪೋದು ಕಾಣ್ಗಿರ ಮುಮುಕ್ಷುಕ್ಕಳ್ ಅನುಷ್ಠಾನತ್ತುಕ್ಕುಮ್ ವಿರುದ್ದಮ್, ಇಪ್ಪಡಿ ಶೊಲ್ಲು ಮವರ್ಹಳ್ ತಮ್ಮೈಯೊರು ಪ್ರಪನ್ನರ್ ಅರ್ಥಕಾಮಙ್ಗಳಡಿಯಾಹ ನಲಿಯುಪ್ಪುಕ್ಕಾಲ್ ಇದು ಪ್ರಪನ್ನ ಧರ್ಮಮೆನ್ರವರ್ಱೈ ಉಹನ್ದಿರುಕ್ಕ ಪ್ರಾಪ್ತಮ್. ಇದು ಅನಂತ ಪ್ರಮಾಣಙ್ಗಳುಕ್ಕು ವಿರುದ್ಧಮಾನ ವಳವೇ ಯನ್ರಿಕ್ಕೇ ಇಙ್ಗಡುತ್ತ ವಚನಙ್ಗಳುಕ್ಕುಮ್ ವಿವಕ್ಷಿತಮನ್ರು.**

**ನಿಷಿದ್ಧ ನಿವೃತ್ತಿ ರೂಪಙ್ಗಳೆಲ್ಲಾಮ್ ಸರ್ವಧರ್ಮ ಶಬ್ದತ್ತಾಲೇ ಸಙ್ಗೃಹೀತಙ್ಗಳೆನ್ನುಮಿಡಮ್ ಧರ್ಮಶಬ್ದಾರ್ಥ ಮಱಿಯಾಮಲ್ ಶೊನ್ನಪಡಿಯೆನ್ರು ಶಿಲ ಆಚಾರ್ಯರ್ಹಳ್ ನಿರ್ವಹಿಪ್ಪಾರ್ಹಳ್. ಎಙ್ಗನೇ ಯೆನ್ನಿಲ್ ? ನಿವೃತ್ತಿಹಳಿಲೇಯೊರು ಫಲತ್ತುಕ್ಕು ಸಾಧನಮಾಹ ನಿಯಮ ವಿಶೇಷಙ್ಗಳುಡನೇ ಶೆಯ್ದನ್ವೈ ಧರ್ಮ ಶಬ್ದಾರ್ಥಮಾಮ್. ಸಾಮಾನ್ಯಮಾನ ಅಹಿಂಸಾದಿಮಾತ್ರಂ ಪಾಪಾಭಾವಮಾಮಿತ್ತನ್ವೈ ಪ್ಪೋಕ್ಕಿ ಧರ್ಮ ಶಬ್ದತ್ತುಕ್ಕು ಮುಖ್ಯಾರ್ಥಮನ್ರು. ಆಹೈಯಾಲ್ ಫಲವಿಶೇಷಙ್ಗಳೋಡೇ ಕೂಡಿನ ಅಹಿಂಸಾದಿಹಳೈ ವಿಡುಹೈಯಾವದು ? ಫಲಙ್ಗಳೈಯುಮ್ ನಿಯಮಙ್ಗಳೈಯುಮ್ ವಿಡುಹೈ ; ಮತ್ತುಮ್**

---

**ಇದುಪೂರ್ವಾನುಷ್ಠಾನತ್ತುಕ್ಕುಮ್** ಇತ್ಯಾದಿ – ಇದು ಇಷ್ಟೇಂದರೆ, ಪೂರ್ವರುಗಳು ಹೀಗೆ ಅನುಷ್ಠಿಸಿಯೂ ಇಲ್ಲ. ಸಂಪ್ರದಾಯವೂ ಹೀಗೆ ಇಲ್ಲ. ತಾವುಗಳೂ (ಪೂರ್ವ ಪಕ್ಷಿಗಳೂ) ಇತರ ಮುಮುಕ್ಷುಗಳೂ ಅನುಷ್ಠಿಸಿಲ್ಲ. ಈ ಪ್ರಕಾರ ಎಲ್ಲರ ಅನುಷ್ಠಾನಕ್ಕೂ ವಿರುದ್ಧ. ಸಮಾಧಾನ ಹೇಳಲಾಗದ ಬಾಧಕಾಂತರವನ್ನು **ಇಪ್ಪಡಿ ಶೊಲ್ಲುಮವರ್ಹಳ್** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಹೀಗೆ ಹೇಳುವವರು ತಮ್ಮನ್ನು ಒಬ್ಬ ಪ್ರಪನ್ನನು **ಅರ್ಥಕಾಮಂಗಳಡಿಯಾಹ** ಇತ್ಯಾದಿ – ಹಣವನ್ನು ಸಾಲವಾಗಿ ಪಡೆದೋ ನಿರ್ಬಂಧವಾಗಿ ಕಿತ್ತುಕೊಂಡೋ ಕೊಡದೆ ಇದ್ದರೂ, ಹಾಗೆಯೇ ಕಾಮ ಪೀಡಿತನಾಗಿ ಇವನ ಭಾರ್ಯಾದಿಗಳಲ್ಲಿ ಅತಿಕ್ರಮಿಸಿಯೂ **ನಲಿಯುಪ್ಪುಕ್ಕಾಲ್** – ಹಿಂಸಿಸಿದರೆ, ಇದು ಪ್ರಪನ್ನ ಧರ್ಮವಲ್ಲವೇ ಎಂದು, ಹೀಗೆ ಹಿಂಸಿಸುವರನ್ನು ಕಂಡು ಪ್ರೀತಿಯಿಂದ ಕೂಡಿ ಇರಬೇಕಾದ ಪ್ರಸಂಗವು ಉಂಟಾಗುತ್ತದೆ. **ಇದು ಅನಂತ ಪ್ರಮಾಣಂಗಳುಕ್ಕುಮ್** ಇದು ಬಹು ಪ್ರಮಾಣಗಳಿಗೆ ವಿರುದ್ಧವೆಂಬುದು ಮಾತ್ರವಲ್ಲದೆ, ಇಲ್ಲಿ ಎತ್ತಿ ಹೇಳಿದ ವಚನಗಳಿಗೂ ವಿರುದ್ಧ.

**ನಿಷಿದ್ಧ ನಿವೃತ್ತಿ ರೂಪಂಗಳೆಲ್ಲಾಮ್** ಇತ್ಯಾದಿ – ನಿಷಿದ್ಧ ಕಾರ್ಯಗಳ ನಿವೃತ್ತಿ ರೂಪಗಳು ಸರ್ವಧರ್ಮ ಶಬ್ದದಿಂದ ಸಂಗೃಹೀತಗಳು ಎಂಬುದು, ಧರ್ಮಶಬ್ದಾರ್ಥವನ್ನು ತಿಳಿಯದೆ ಹೇಳಿದಂತೆಯೆಂದು ಕೆಲವು ಆಚಾರ್ಯರು ನಿರ್ವಹಿಸುತ್ತಾರೆ. **ಎಂಗನೇಯೆನ್ನಿಲ್**–ಹೇಗೆಂದರೆ, ನಿವೃತ್ತಿ–ಮಾಡಕೂಡದು ಎಂದು ಹೇಳುವ ವ್ಯಾಪಾರಗಳಲ್ಲಿ ಒಂದು ಫಲಕ್ಕೆ ಸಾಧನವಾಗಿ ನಿಯಮ ವಿಶೇಷಗಳೊಡನೆ ಅನುಷ್ಠಿಸತಕ್ಕವು ಧರ್ಮ ಶಬ್ದಾರ್ಥಗಳು **ಸಾಮಾನ್ಯಮಾನ** ಇತ್ಯಾದಿ–ಸಾಮಾನ್ಯವಾದ ಅಹಿಂಸಾದಿ ಮಾತ್ರವು ಪಾಪದ ಅಭಾವ ಮಾತ್ರ. ಇಷ್ಟಲ್ಲದೆ, ಧರ್ಮ ಶಬ್ದಾರ್ಥಕ್ಕೆ ಮುಖ್ಯಾರ್ಥವಲ್ಲ. **ಆಹೈಯಾಲ್** ಇತ್ಯಾದಿ ಆದ್ದರಿಂದ ಫಲ ವಿಶೇಷ ನಿಯಮ ವಿಶೇಷಗಳೊಡನೆ ಕೂಡಿದ ಅಹಿಂಸಾದಿಗಳನ್ನು ಬಿಡುವುದೆಂದರೆ, ಫಲಗಳನ್ನೂ, ನಿಯಮಗಳನ್ನೂ ಬಿಡುವುದು ಅಲ್ಲದೆ ನಿವೃತ್ತಿ ಶಾಸ್ತ್ರದಲ್ಲಿ ಹೇಳಿದ ನಿವೃತ್ತಿಗಳನ್ನು ಬಿಡಲು ದಾರಿಯಿಲ್ಲ.

ಇದರ ತಾತ್ಪರ್ಯವೇನೆಂದರೆ–ಅಲೌಕಿಕವಾದ ಶ್ರೇಯಸ್ಸಾಧನತ್ವವು ಧರ್ಮಶಬ್ದಾರ್ಥ. ನಿಯಮ ವಿಶೇಷದಿಂದಲೂ, ಸಂಕಲ್ಪ ವಿಶೇಷದಿಂದಲೂ ಮಾಡುವ ಶಾಸ್ತ್ರ ನಿಷಿದ್ಧ ನಿವೃತ್ತಿರೂಪವಾದ ವ್ಯಾಪಾರವು ಧರ್ಮವಾಗುತ್ತದೆ ಹೇಗೆಂದರೆ,

"ಐಶ್ವರ್ಯಂ, ಸಂತತಿಂ ಸ್ವರ್ಗಂ ಮುಕ್ತಿಂವಾಯದ್ಯದಿಚ್ಛತಿ !
ಏಕಾದಶ್ಯುಪವಾಸೇನ ತತ್ಸರ್ವಂ ಲಭತೇನರಃ ॥

**ನಿವೃತ್ತಿ ಶಾಸ್ತ್ರತ್ತಿಲ್ ಶೊನ್ನ ನಿವೃತ್ತಿಹಳೈ ವಿಡುಹೈಕ್ಕು ವಿರಹಿಲ್ಲೈ ನಿಯಮ ವಿಶೇಷಾದಿಹಳೋಡೆ ಕೂಡಾದ ಅಹಿಂಸಾದಿ ಮಾತ್ರಮುಮ್ ಧರ್ಮ ಶಬ್ದಾರ್ಥಮೆನ್ರುಮ್ ಪಕ್ಷತ್ತಿಲುಮ್ ಶೊಲ್ಲುಹಿರೋಮ್.**

**ಅಧರ್ಮ ಪರಿಹಾರೇಪಿ ಧರ್ಮತ್ವೇನ ವಿವಕ್ಷಿತೇ ।**
**ಸ್ಯಾತ್ಸ್ವತಂತ್ರ ವಿಧೇರೇವ ನಿತ್ಯಂ ತಸ್ಯ ಪರಿಗ್ರಹಃ ॥೫೫॥**

---

ಎಂದು ಐಶ್ವರ್ಯಕ್ಕಾಗಿಯೂ, ಕುಟುಂಬ ವೃದ್ಧಿಗಾಗಿಯೂ ಸ್ವರ್ಗಕ್ಕಾಗಿಯೂ, ಮೋಕ್ಷಕ್ಕಾಗಿಯೂ, ಆಸೆಪಟ್ಟು ಆ ರೀತಿಯಲ್ಲಿ ಸಂಕಲ್ಪವನ್ನು ಮಾಡಿಕೊಂಡು ಏಕಾದಶಿಯಲ್ಲಿ ಭೋಜನ ನಿವೃತ್ತಿರೂಪ ವ್ಯಾಪಾರವನ್ನು ಮಾಡುವುದರಿಂದ, ಆಯಾಯಾ ಫಲಗಳು ಲಭಿಸಿ, ಈ ನಿವೃತ್ತಿ ರೂಪ ವ್ಯಾಪಾರವು ಧರ್ಮ ಶಬ್ದ ವಾಚ್ಯವಾಗುತ್ತದೆ. ಇದು

"ಸಾಯಮಾದ್ಯಂತ ಯೋರಹ್ನೋಃ ಸಾಯಂಪ್ರಾತಶ್ಚಮಧ್ಯಮೇ ।
ಉಪವಾಸ ಫಲಪ್ರೇಪ್ಸುಃ ಜಹ್ಯಾತ್ ಭುಕ್ತ ಚತುಷ್ಟಯಮ್ ॥

ಎಂಬಂತೆ ದಶಮಿದಿನ ಸಾಯಂಕಾಲ(ರಾತ್ರಿ)ಉಪವಾಸವಿದ್ದು, ಏಕಾದಶಿ ಉಪವಾಸವಿದ್ದು ದ್ವಾದಶಿ ಬೆಳಿಗ್ಗೆ ಪಾರಣೆ ಮಾಡಿ ಪುನಃ ಆದಿವ್ಯ ರಾತ್ರಿ ಉಪವಾಸವಿರುವುದು ಒಂದು ಕಾಮ್ಯ ವ್ರತ. ಇದು ಭೋಜನ ನಿವೃತ್ತಿರೂಪವಾದರೂ ದಶಮಿದ್ವಾದಶಿ ರಾತ್ರಿಗಳಲ್ಲಿ ಊಟವಿಲ್ಲದ ನಿಯಮ ವಿಶೇಷಗಳೊಡನೆಯೂ, ಫಲದಲ್ಲಿ ಆಸೆಯಿಂದಲೂಮಾಡುವುದರಿಂದ ಧರ್ಮವಿಶಿಷ್ಟಾಕಾರದಿಂದ ವಿಧಿಸಲ್ಪಟ್ಟು ಧರ್ಮವಾಗುತ್ತದೆ. ಹೀಗೆಯೇ ಅಹಿಂಸೆ, ಬ್ರಹ್ಮಚರ್ಯ, ಅಸ್ತೇಯ(ಕಳ್ಳತನ ಮಾಡದಿರುವುದು) ಮೊದಲಾದ ಹಿಂಸಾ ನಿವೃತ್ತಿ, ಸ್ತ್ರೀ ಸಂಗಮ ನಿವೃತ್ತಿ, ಕಳ್ಳತನ ನಿವೃತ್ತಿಗಳು ಕಾಮ್ಯವಾಗಿ ಶಾಸ್ತ್ರೋಕ್ತಗಳಾದ ಕೆಲವು ನಿಯಮಗಳಿಂದ ಕೂಡಿ ಧರ್ಮಗಳೆನಿಸುತ್ತವೆ. ಪ್ರತ್ಯೇಕವಾಗಿ ಶಾಸ್ತ್ರ ವಿಹಿತವಲ್ಲದ ಕೇವಲ ಕ್ರಿಯಾ ನಿವೃತ್ತಿಯು ಧರ್ಮವಾಗಲಾರದು. ಮೇಲೆ ಹೇಳಿದ ರೀತಿಯಲ್ಲಿ ಈ ಧರ್ಮಗಳಿಗೆ ತ್ಯಾಗವು "ಸರ್ವ ಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ ವಿವಕ್ಷಿತವಾದರೆ, ಆ ವಿಶಿಷ್ಟ ತ್ಯಾಗವು ಫಲ ಸಂಕಲ್ಪವೂ ನಿಯಮವೂ ಆದ ವಿಶೇಷಣ ಮಾತ್ರ ತ್ಯಾಗವಾಗುತ್ತದೆಯೇ ವಿನಹ, ವಿಶೇಷ್ಯವಾದ ಉಪವಾಸ, ಅಹಿಂಸಾ ಬ್ರಹ್ಮ ಚರ್ಯ ಅಸ್ತೇಯಗಳು "ಸರ್ವಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ ವಿಧಿಸಿದ ತ್ಯಾಗಕ್ಕೆ ವಿಷಯವಾಗಲಾರದು. ಏಕೆಂದರೆ "ಏಕಾದಶ್ಯಾಂನ ಭುಂಜೀತ' ಏಕಾದಶಿಯಲ್ಲಿ ಊಟ ಮಾಡಬಾರದು, "ನಹಿಂಸ್ಯಾತ್ ಸರ್ವಾಭೂತಾನಿ" – ಸರ್ವ ಪ್ರಾಣಿಗಳನ್ನೂ ಹಿಂಸೆ ಮಾಡಬಾರದು ಇತ್ಯಾದಿಯಾಗಿ ಪ್ರತ್ಯೇಕವಾಗಿ ನಿಷೇಧಿಸಿರುವುದರಿಂದ ಈ ನಿವೃತ್ತಿಯನು ಬಿಟ್ಟರೆ, ಅಂದರೆ ಏಕಾದಶಿಯಲ್ಲಿ ಊಟ, ಪ್ರಾಣಿಹಿಂಸೆ ಇತ್ಯಾದಿಗಳನ್ನು ಮಾಡಿದರೆ ಇವನಿಗೆ ದೋಷಗಳು ಏರ್ಪಟ್ಟು ನರಕಾದಿ ಶಿಕ್ಷೆಗಳು ಉಂಟಾಗುತ್ತವೆ. ಆದ್ದರಿಂದ ಏಕಾದಶಿಯಲ್ಲಿ ಭೋಜನ ನಿವೃತ್ತಿ, ಹಿಂಸಾ ನಿವೃತ್ತಿಗಳನ್ನು ಅಂದರೆ ಧರ್ಮ ಶಬ್ದಾರ್ಥವನ್ನು ಸ್ವೀಕರಿಸಿ, ಅವುಗಳನ್ನು ಬಿಡುವುದು ಎಂದರೆ ಏಕಾದಶಿಯಲ್ಲಿ ಊಟ ಮಾಡುವುದು ಪ್ರಾಣಿಹಿಂಸೆ ಮಾಡುವುದು, ಎಂದು ಏರ್ಪಡುವುದರಿಂದ ಇದು ಸರಿಯಲ್ಲ. ತ್ಯಾಗವಾಕ್ಯವು ನಿಯಮ ವಿಶೇಷ ಫಲವಿಶೇಷಗಳೆಂಬ ವಿಶೇಷಣ ತ್ಯಾಗ ಮಾತ್ರದಿಂದ ಚರಿತಾರ್ಥವು. ವಿಶೇಷಣ ತ್ಯಾಗದಿಂದ ವಿಶಿಷ್ಟ ತ್ಯಾಗವು ಸಿದ್ಧಿಸುತ್ತದೆ ಎಂಬುದು ಘಟ್ಟಾರ್ಥ ಆದ್ದರಿಂದ ನಿವೃತ್ತಿ ಶಾಸ್ತ್ರಗಳಲ್ಲಿ ಹೇಳಿರುವ ನಿವೃತ್ತಿಗಳನ್ನು ಬಿಡುವುದಕ್ಕೆ ದಾರಿಯಿಲ್ಲ **ನಿಯಮ ವಿಶೇಷಾದಿಹಳೋಡೇ ಕೂಡಾದ** ಇತ್ಯಾದಿ–ಫಲದಲ್ಲಿ ಆಸೆಯಿಲ್ಲದ ಮತ್ತು ನಿಯಮ ವಿಶೇಷಗಳಿಂದ ಕೂಡಿಲ್ಲದ ಅಹಿಂಸಾದಿ ಮಾತ್ರವೂ ಧರ್ಮ ಶಬ್ದಾರ್ಥವೆಂಬ ಪಕ್ಷಕ್ಕೆ ಪ್ರಕಾರಾಂತರದಿಂದ ಪರಿಹಾರವನ್ನು ಆಚಾರ್ಯರು ತಿಳಿಸುತ್ತಾರೆ.

ಅದಾಗಿ **ಅಧರ್ಮ ಪರಿಹಾರೇ ಪಿ** ಕೇವಲ ನಿಷಿದ್ಧ ನಿವೃತ್ತಿಯೂ **ಧರ್ಮತ್ವೇನ** ವಿವಕ್ಷಿತೇ–"ಸರ್ವಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ ಧರ್ಮ ಶಬ್ದಾರ್ಥವಾಗಿ ವಿವಕ್ಷಿಸಲ್ಪಟ್ಟರೂ, **ಸ್ವತಂತ್ರ ವಿಧೇರೇವ**–ಸ್ವತಂತ್ರನಾದ ಭಗವಂತನ

**ಏವಂ ಸರ್ವಧರ್ಮತ್ಯಾಗಾಸರ್ಥೇ ನಿಶ್ಚಿತೇ ಸತಿ "ಚೋದನಾಂ ಪ್ರತಿಚೋದನಾಂ" ಇತಿ ವಾಕ್ಯಸ್ಯ ತಾತ್ಪರ್ಯಮಾಹ.**

ಇಪ್ಪಡಿ ಯತ್ತ ಪಿನ್ಬು "ಚೋದನಾಂ ಪ್ರತಿಚೋದನಾಂ" ಎನ್ಱಿರವಿಡತ್ತಿಲ್.

"ಅನುಕೂಲ್ಯ ಪರಿತ್ಯಾಗಂ ಪ್ರಾತಿಕೂಲ್ಯ ಪರಿಗ್ರಹಮ್ ।
ಪ್ರಪತ್ತ್ಯಙ್ಗಂ ಪ್ರತಿಜ್ಞಾತುಂ ನಶಕ್ಯಂ ಸಾಧು ಸಂಸದಿ ।
ಪ್ರಪನ್ನ ಮಧಿಕೃತ್ಯೈವ ಸದಾಚಾರಾನತಿಕ್ರಮಃ ।
ಪ್ರಪತ್ತ್ಯಧ್ಯಾಯ ಪಠಿತಃ ಪ್ರತಿ ಸಂಧೀಯತಾ ಮಿಹ

"ಪ್ರವೃತ್ತಿಂಚ" ನಿವೃತ್ತಿಂಚ" ಎನ್ಱಿರವಿಡತ್ತಿಲುಮ್ ಪ್ರಪತ್ತಿಕ್ಕಙ್ಗ ಮಾಹ ವೊನ್ಱುಮ್ ಸ್ವೀಕರಿಕ್ಕ ವೇಣ್ಡಾ ವೆನ್ಱಿರದಾಮಿತ್ತನ್ನೈ.

---

"ಮನೀಷೀ ವೈದಿಕಾಚಾರಂ ಮನಸಾಪಿ ನಲಂಘಯೇತ್' ಎಂದು ಪ್ರಪನ್ನನನ್ನು ಉದ್ದೇಶಿಸಿಯೇ ಹೇಳಿರುವ ವಿಧಿಯಿಂದ ನಿತ್ಯಂ–ನಿತ್ಯವಾಗಿ, ತಸ್ಯ–ಅಧರ್ಮ ಪರಿಹಾರಕ್ಕೆ ಪರಿಗ್ರಹಸ್ಯಾತ್–ಪರಿಗ್ರಹವೇ ಉಂಟಾಗುತ್ತದೆ. ಅಧರ್ಮವನ್ನು ಪರಿಹರಿಸಬೇಕು ಎಂದು ತಾತ್ಪರ್ಯ. ಅಂದರೆ ನಿಷಿದ್ಧ ನಿವೃತ್ತಿ ಸಾಮಾನ್ಯವು ಧರ್ಮಶಬ್ದಾರ್ಥ ವಾದರೂ "ನಹಿಂಸ್ಯಾತ್ ಸರ್ವಾಭೂತಾನಿ" ಎಂಬಲ್ಲಿ ಸರ್ವಭೂತ ಶಬ್ದವು ಅಗ್ನೀಷೋಮೀಯ ಪಶು ವ್ಯತಿರಿಕ್ತ ಪರವಾಗಿರುವಂತೆ, ಸರ್ವಧರ್ಮಾನ್ ಪರಿತ್ಯಜ್ಯವೆಂಬಲ್ಲಿಯೂ, ಸರ್ವಧರ್ಮ ಶಬ್ದವನ್ನು ವಿಹಿತವಾದ ನಿಷಿದ್ಧ ನಿವೃತ್ತಿ ರೂಪ ಧರ್ಮವ್ಯತಿರಿಕ್ತ ಧರ್ಮಪರವಾಗಿಯೇ ಅಂಗೀಕರಿಸ ಬೇಕಾದ್ದರಿಂದ ನಿಷಿದ್ಧ ನಿವೃತ್ತಿ ರೂಪವಾದ ಧರ್ಮವು "ಪರಿತ್ಯಜ್ಯ" ಎಂಬುದಕ್ಕೆ ವಿಷಯವಾಗಲಾರದು.

ಇಪ್ಪಡಿಯಟ್ರ ಪಿನ್ಬು – ನಿಷಿದ್ಧ ನಿವೃತ್ತಿ ರೂಪ ಧರ್ಮವು "ಪರಿತ್ಯಜ್ಯ" ಎಂಬುದಕ್ಕೆ ವಿಷಯವಾಗದೇ ಇರುವಾಗ, "ತಸ್ಮಾತ್ತ್ವ ಮುದ್ಧವೋತ್ಸೃಜ್ಯ ಚೋದನಾಂ ಪ್ರತಿ ಚೋದನಾಂ" ಎಂಬಲ್ಲಿ "ಚೋದನಾ ಮುತ್ಸೃಜ್ಯ" ಎಂಬ ವಾಕ್ಯದಿಂದ ಹೇಳಿದ ಆನುಕೂಲ್ಯ ಪರಿತ್ಯಾಗವನ್ನೂ, "ಪ್ರತಿಚೋದನಾಮುತ್ಸೃಜ್ಯ" ಎಂಬ ವಾಕ್ಯದಿಂದ ಹೇಳಿದ ಪ್ರಾತಿಕೂಲ್ಯ ಪರಿಗ್ರಹವನ್ನೂ, "ಮಾಮೇಕಂ ಶರಣಂವ್ರಜ" ಎಂದು ವಿಹಿತವಾದ ಪ್ರಪತ್ತಿಗೆ ಅಂಗ ವೆಂದು ಸಾಧುಗಳ ಗೋಷ್ಠಿಯಲ್ಲಿ ಪ್ರತಿಜ್ಞೆ ಮಾಡಲಾಗುವುದಿಲ್ಲವೆಂದು "ಅನುಕೂಲ್ಯಪರಿತ್ಯಾಗಂ" ಎಂದಾ ರಂಭಿಸುವ ಕಾರಿಕೆಯಿಂದ ಆಚಾರ್ಯರು ಅನುಗ್ರಹಿಸುತ್ತಾರೆ. ವಿಧಿ ನಿಷೇಧ ಶಾಸ್ತ್ರಗಳು ಪ್ರಪನ್ನೇತರ ವಿಷಯ ಗಳಾಗ ಕೂಡದೇ ಎಂದರೆ, ಪ್ರಪನ್ನಮಧಿಕೃತ್ಯೈವ ಎಂದಾರಂಭಿಸಿ, ಆನುಗ್ರಹಿಸುತ್ತಾರೆ. ಅದಾಗಿ ಪ್ರಪನ್ನ ನನ್ನು ಕುರಿತೇ 'ಸದಾಚಾರಗಳನ್ನು ಅತಿಕ್ರಮಿಸಬಾರದು' ಎಂದು ಪ್ರಪತ್ತ್ಯಧ್ಯಾಯದಲ್ಲಿ ಪಠಿತವಾಗಿದೆ. ಅದನ್ನು ಇಲ್ಲಿ ಅನುಸಂಧಾನಮಾಡಬೇಕು. ಅದಾಗಿ ಲಕ್ಷ್ಮೀತಂತ್ರದಲ್ಲಿ ಸಾಂಗ ಪ್ರಪತ್ತಿಯನ್ನು ವಿವರಿಸುವ ಪ್ರಪತ್ತ್ಯಧ್ಯಾಯದಲ್ಲಿ, ಪ್ರಪನ್ನನನ್ನು ಕುರಿತೇ, "ಮನೀಷೀ ವೈದಿಕಾಚಾರಂ ಮನಸಾಪಿ ನಲಂಘಯೇತ್" ಎಂದು ಸದಾಚಾರವನ್ನು ಅತಿಕ್ರಮಿಸಕೂಡದೆಂದೇ ವಿಹಿತವಾಗಿದೆಯಾದ್ದರಿಂದ, ವಿಧಿನಿಷೇಧ ಶಾಸ್ತ್ರಗಳನ್ನು ಪ್ರಪನ್ನೇತರ ವಿಷಯಗಳೆಂದು ಹೇಳುವುದು ಅಪ್ರಾಮಾಣಿಕವಾದದ್ದು. ಅನಂತರ, "ಪ್ರವೃತ್ತಿಂಚ ನಿವೃತ್ತಿಂಚ ಉತ್ಸೃಜ್ಯ" ಎಂಬುದಕ್ಕೆ ತಾತ್ಪರ್ಯವನ್ನು ಪ್ರವೃತ್ತಿಂಚ ಇತ್ಯಾದಿ ಆರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ "ಪ್ರವೃತ್ತಿಂಚ ನಿವೃತ್ತಿಂಚ" ಎಂಬಲ್ಲಿ ಶಾಸ್ತ್ರವಿಹಿತವಾದ ಸತ್ಕರ್ಮ ಪ್ರವೃತ್ತಿಯನ್ನೂ, ಇತರ ನಿವೃತ್ತಿಯನ್ನೂ ಬೇರೆ ಯಾವುದನ್ನೂ ಪ್ರಪತ್ತಿಗೆ ಅಂಗವಾಗಿ ಸ್ವೀಕರಿಸಬೇಡವೆಂದು ಹೇಳಿರುತ್ತದೆಯಷ್ಟೇ.

**ಚೋದನಾ ಪ್ರತಿಚೋದನಯೋಃ ಪ್ರವೃತ್ತಿ ನಿವೃತ್ತ್ಯೋಃ ಪರಿತ್ಯಾಗಸ್ಯ ನಿರ್ವಾಹಾನ್ತರಂ ಪ್ರದರ್ಶಯತಿ.**

ಮುಮುಕ್ಷು ಮಾತ್ರತ್ತೈಪ್ಪತ್ತ 1) "ತ್ರೈವರ್ಗಿಕಾಂ ಸ್ತ್ಯಜೇದ್ಧರ್ಮಾ" ಎನ್ಗಿರ ಕಟ್ಟಳೈಯಿಲೇ ಫಲಾನ್ತರ ಸಾಧನಮಾಹಚೋದಿತ್ತೈಹಳಾನ ಪ್ರವೃತ್ತಿ ನಿವೃತ್ತಿಹಳೈಯುಮ್, ಅವತ್ತುಕ್ಕುರುಪ್ಪಾನ ಶಾಸ್ತ್ರಙ್ಗಳೈಯುಮ್ ವಿಡಚ್ಚೊನ್ನದಾಹವುಮಾಮ್.

ಅನ್ಯಥಾ ಬಾಧಕಮಾಹ

ಇಙ್ಗನನ್ರಿಕ್ಕೇ ನಿತ್ಯನೈಮಿತ್ತಿಕಾದಿಹಳುಡೈಯ ಸ್ವರೂಪತ್ಯಾಗಮ್ ವಿವಕ್ಷಿತಮೆನ್ನಿಲ್, ಮುಂ ಶೊನ್ನ ಸರ್ವವಿರೋಧಮುಮ್ ಪ್ರಸಂಗಿಕ್ಕುಮ್,

ಏವಂ ಸ್ವಾಭಿಪ್ರಾಯೇ ದಿವ್ಯಸೂರಿ ಸೂಕ್ತಯೋಪಿ ಸಂತಿ.

ಇನ್ದ ನಿಷ್ಕರ್ಷಮ್ ಸತ್ವನಿಷ್ಠರಾಯ್ ವಿವೇಕಿಹಳಾಯಿರುಪ್ಪಾರ್ ತೆಳಿನ್ದು ಅಂಗೀಕರಿಪ್ಪಾರ್‌ಹಳ್ ಇವ್ವರ್ಥತ್ತೈ 1) ಶೆಯ್ಯಾದನ ಶೆಯ್ಯೋಮ್ ತೀಕ್ಕುರುಳೈ ಚ್ಚೆನ್ರೋದೋಮ್" ಎನ್ರುಮ್, 2) "ಶೆಯ್ಯೇಲ್ ತೀವಿನೈ ಎನ್ರರುಳ್ ಶೆಯ್ಯುಮ್" ಎನ್ರುಮ್ ಅರುಳಿಚ್ಚೆಯ್‌ದಾರ್‌ಹಳ್.

---

ಅರ್ಥಾಂತರವನ್ನು **ಮುಮುಕ್ಷುಮಾತ್ರತ್ತೈಪ್ಪಟ್ರ** ಎಂದಾರಂಭಿಸಿ, ಅನುಗ್ರಹಿಸುತ್ತಾರೆ. ಮುಮುಕ್ಷು-ಮೋಕ್ಷದಲ್ಲಿ ಆಸೆಯುಳ್ಳವನನ್ನು ಕುರಿತು 1) **"ತ್ರೈವರ್ಗಿಕಾನ್‌ಸ್ತ್ಯಜೇ ಧ್ಧರ್ಮಾನ್"** ಎಂಬ ರೀತಿಯಲ್ಲಿ ಫಲಾಂತರಗಳನ್ನು ಕೊಡುವ ಅಂದರೆ ಅವುಗಳಿಗೆ ಸಾಧನವಾಗಿ ಶಾಸ್ತ್ರಗಳಲ್ಲಿ ವಿಹಿತವಾದ ಪ್ರವೃತ್ತಿ ನಿವೃತ್ತಿ ರೂಪ ಧರ್ಮಗಳನ್ನೂ, ಅವಕ್ಕೆ ಕಾರಣವಾದ ಶಾಸ್ತ್ರಗಳನ್ನೂ, "ಚೋದನಾಂ ಪ್ರತಿ ಚೋದನಾಂ" ಎಂದು ಹೇಳಿರುವಂತೆ ಬಿಡುವಂತೆ ತಿಳಿಸಿರುವುದಾಗಿಯೂ, ಹೇಳಬಹುದು. ಫಲಾಂತರಗಳಲ್ಲಿ ಆಸೆಯನ್ನಿಟ್ಟರೆ ಪ್ರಪನ್ನನ ಅನನ್ಯಗತಿತ್ವರೂಪ ಅಧಿಕಾರಕ್ಕೆ ಕುಂದುಕವು ಏರ್ಪಡುತ್ತದೆಯಲ್ಲವೇ.

**ಇಂಗನನ್ರಿಕ್ಕೇ** ಇತ್ಯಾದಿ – ಮೇಲೆ ಹೇಳಿದ ರೀತಿಯಲ್ಲಿ ಹೇಳದೆ, "ತಸ್ಮಾತ್ವಮುದ್ಧವೋತ್ಸೃಜ್ಯ" ಇತ್ಯಾದಿ ವಾಕ್ಯಗಳಲ್ಲಿ, ನಿತ್ಯನೈಮಿತ್ತಿಕಾದಿ ಸರ್ವಧರ್ಮ ಸ್ವರೂಪ ತ್ಯಾಗವು ವಿವಕ್ಷಿತವೆಂದರೆ, ಮೇಲೆ ಹೇಳಿದ ರೀತಿಯಲ್ಲಿ ಎಲ್ಲಾ ವಿರೋಧಗಳೂ ಪ್ರಸಕ್ತಗಳಾಗುತ್ತವೆ. **ಇಂದನಿಷ್ಕರ್ಷಮ್** ಇತ್ಯಾದಿ ಈ ರೀತಿಯಲ್ಲಿ ಆಚಾರ್ಯರು ನಿಷ್ಕರ್ಷೆಮಾಡಿರುವುದನ್ನು, ಸತ್ವ ನಿಷ್ಠರಾಗಿ ವಿವೇಕಿಗಳಾಗಿರುವವರು **ತೆಳಿಂದು** – ಸಾರಾಸಾರ ವಿವೇಕ ಕುಶಲರಾಗಿ ತಿಳಿದು ಅಂಗೀಕರಿಸುತ್ತಾರೆ. ಸತ್ವಗುಣ ಪ್ರಾಚುರ್ಯವಿಲ್ಲದೇ ಇರುವುದರಿಂದ ಸಾರಾಸಾರ ವಿವೇಕವಿಲ್ಲದವರು ಅಂಗೀಕರಿಸದೇ ಇದ್ದರೂ ದೋಷವಿಲ್ಲವೆಂಗು ತಾತ್ಪರ್ಯ. **ಇವ್ವರ್ಥತ್ತೈ** ಇತ್ಯಾದಿ ಮೇಲೆ ಹೇಳಿದ ಅರ್ಥ ನಿರ್ಣಯವನ್ನು 1) **"ಶೆಯ್ಯಾದನ ಶೆಯ್ಯೋಮ್"** ಇತ್ಯಾದಿಯಾಗಿಯೂ, 2) **ಶೆಯ್ಯೇಲ್ ತೀವಿನೈ** ಇತ್ಯಾದಿಯಾಗಿಯೂ ಆಂಡಾಳ್ ಮತ್ತು ನಮ್ಮಾಳ್ವಾರವರುಗಳು ಕ್ರಮವಾಗಿ ಅನುಗ್ರಹಿಸಿರುತ್ತಾರೆ.

---

1) ತ್ರೈವರ್ಗಿಕಾನ್ ತ್ಯಜೇದ್ಧರ್ಮಾನ್ ಆರಂಭಾನಪಸೀಪತೇ ।
ಮಿತ್ರಾದಿಷು ಸಮೋ ಮೈತ್ರಃ ಸಮಸ್ತೇಷ್ವೇವ ಜಂತುಷು ॥ (ವಿಷ್ಣು ಪುರಾಣ)

) ವೈಯ್ಯತ್ತುವಾಳ್ವೀರ್‌ಹಾಳ್ ನಾಮುಮ್ ನಂಪಾವೈಕ್ಕು
ಶೈಯ್ಯುಮ್ ಕಿರಿಶೈಹಳ್ ಕೇಳೀರೋ, ಪಾರ್ಕಡಲುಳ್ ತಿ. ತಿ. ಪೋ

2) **ನಾಯಿನೇ಼ ಶೆಯ್ದ ಕುತ್ತಮ್ ನತ್ತಮಾಹವೇ ಕೊಳ್ ಞಾಲನಾದನೇ" ಎನ್ರದುಕ್ಕುಮ್ ತಾತ್ಪರ್ಯತ್ತೈಪ್ಪಾರ್ತ್ತಾಲ್ ಕ್ಷಮಿಕ್ಕವೇಣುಮೆನ್ರು ಪೇಕ್ಷಿತ್ತ ಪಡಿಯಾಲೇ, ಪ್ರಪನ್ನನುಕ್ಕು ಮಪರಾಧಂ ಪುಹುನ್ದಾಲ್,**

1) **"ಅಜ್ಞಾನಾದಥವಾ ಜ್ಞಾನಾದಪರಾಧೇಷು ಸತ್ಸ್ವಪಿ ।**

**ಪ್ರಾಯಶ್ಚಿತ್ತಂ ಕ್ಷಮಸ್ವೇತಿ ಪ್ರಾರ್ಥನೈಕೈವ ಕೇವಲಮ್ ॥"**

**ಎನ್ಗಿರಪಡಿಯೇ ಕ್ಷಮೈಕೊಳ್ಳ ಪ್ರಾಪ್ತಮ್,**

---

ಆದಾಗಿ ಶಾಸ್ತ್ರನಿಷಿದ್ಧಗಳಾದ ಅಕೃತ್ಯಗಳನ್ನು, ಮಾಡುವುದಿಲ್ಲ. ಓದಿ ಇತರರಿಗೂ ಹೇಳುವುದಿಲ್ಲ. **ತೀಕ್ಕುರಳೈ**– ಕ್ರೂರವಾದ ಚಾಡಿ ಮಾತುಗಳನ್ನು, **ಶೆನ್ರು** – ಅವಶ್ಯ ಕರ್ತವ್ಯವಾಗಿ ನೆನೆದು **ಓದೋಮ್** – ಒಬ್ಬನ ಕಿವಿಯಲ್ಲಿ ಹೇಳುವುದಿಲ್ಲ. ಶೆಯ್ಯಾದನ **ಶೆಯ್ಯೋಮ್** – ಎಂದು ಮಾನಸಿಕ ಕಾಯಿಕ ಪಾಪಗಳನ್ನು ಮಾಡುವುದಿಲ್ಲ, ತೀಕ್ಕುರಳೈ ಎಂದು ವಾಚಿಕ ಪಾಪಗಳನ್ನು ಮಾಡುವುದಿಲ್ಲವೆಂದು, ಹೇಳಿ, ಮನೋವಾಕ್ಕಾಯಗಳಿಂದ ಯಾವ ವಿಧವಾದ ಪಾಪಗಳನ್ನೂ ಮಾಡುವುದಿಲ್ಲವೆಂದರ್ಥ. **ಶೆಯ್ಯೇಲ್** ಇತ್ಯಾದಿ ಕ್ರೂರಗಳಾದ ಪಾಪಗಳನ್ನು ಮಾಡದೇ ಇರು, ಎಂದು ನಮ್ಮಾಳ್ವಾರವರೂ ಅನುಗ್ರಹಿಸಿರುತಾರೆ.

ಹಾಗಾದರೆ 2) **ನಾಯಿನೇನ್ ಶೆಯ್ದ ಕುತ್ತಮ್ ನಟ್ರಮಾಹವೇಕೊಳ್ ಞಾಲನಾದನೇ–ಎಲೈ ಲೋಕ** ನಾಥನೇ ನೀಚನಾದ ನಾನು ಮಾಡಿದ ಪಾಪಗಳನ್ನು ಗುಣವಾಗಿ ಅಂಗೀಕರಿಸು, ಎಂದು ಹೇಳಿರುವುದಕ್ಕೆ ತಾತ್ಪರ್ಯ ನೋಡಿದರೆ, ಕ್ಷಮಿಸು ಎಂದಪೇಕ್ಷಿಸಿರುವುದರಿಂದ, ಪ್ರಪನ್ನನಿಗೂ ಅಪರಾಧಗಳು ಉಂಟಾದರೆ, 1) **ಅಜ್ಞಾನಾದ ಥವಾಜ್ಞಾನಾತ್** ಇತ್ಯಾದಿಯಾಗಿ ಪಾಪವೆಂದು ತಿಳಿದೋ ತಿಳಿಯದೆಯೋ ಮಾಡಿದ ಅಪರಾಧಗಳಿಗೆ ಕ್ಷಮಿಸು ಎಂಬ

---

ವೈಯ್ಯತ್ತುಯಿನ್ರ ಪರಮನಡಿಪಾಡಿ,
ನೆಯ್ಯುಣ್ಣೋಮ್ ಪಾಲುಣ್ಣೋಮ್ ನಾಟ್ಕಾಲೇ ನೀರಾಡಿ ।
ಮೆಯ್ಯಿಟ್ಟೆಳುದೋಮ್ ಮಲರಿಟ್ಟುನಾಮುಡಿಯೋಮ್
ಶೆಯ್ಯಾದನಶೆಯ್ಯೋಮ್ ತೀಕ್ಕುರಳೈಚ್ಚೆನ್ರೋದೋಮ್
ಐಯಮುಮ್‌ಪಿಚ್ಚೈಯುಮ್ ಆಂದನೈಯುಮ್ ಕೈಕಾಟ್ಟಿ
ಉಯ್ಯುಮಾರೆಣ್ಣಿ ಯುಹಂದೇಲೋರೆಂಬಾವಾಯ್ ॥ ತಿರುಪ್ಪಾವೈ–2

ಭೂಮಿಯಲ್ಲಿ ವಾಸ ಮಾಡುವ ಭಾಗ್ಯಶಾಲಿಗಳೇ, ನಾವು ಮಾಡುವ ವ್ರತಕ್ಕಾಗಿ ಮಾಡಬೇಕಾದ ಕೃತ್ಯಗಳನ್ನು ಕೇಳಿ ತಿಳಿದು ಕೊಳ್ಳಿ, ಕ್ಷೀರ ಸಮುದ್ರಶಾಯಿಯ ಗುಣಗಾನಮಾಡಿ ದೇಹಧಾರಣ ಮಾತ್ರಕ್ಕೆ ಬೇಕಾದ ಆಹಾರಗಳನ್ನು ಸ್ವೀಕರಿಸಿ ಭೋಗಗಳಲ್ಲಿ ನಿರಭಿ ರಾಗಿಲ್ಲದೆ, ಶಾಸ್ತ್ರಗಳಲ್ಲಿ ನಿಷೇಧಿಸಿರುವುದನ್ನು ಮಾಡದೆ, ಇತರರಲ್ಲಿ ಚಾಡಿಗಳನ್ನು ಹೇಳದೆ, ಯಥಾಶಕ್ತಿ ದಾನಗಳನ್ನು ಮಾಡಿ, ಆತ್ಮೋಜ್ಜೀವನವನ್ನು ಹೊಂದಲು ಪ್ರಯತ್ನಿಸೋಣ.

2) ಶೆಯ್ಯೇಲ್ ತೀವಿನೈಯೆನ್ರರುಳ್ ಶೆಯ್ಯುಮ್, ಎನ್ ಕೈಯ್ಯಾರ್ ಶೆಕ್ಕರಕ್ಕಣ್ಣ ಪಿರಾನೇ ।
ಐಯಾಲ್ ಕಂಡಮೆ ಡೈಕ್ಕಿಲಿಮಾ ನಿನ್‌ಕ್ಕಳಲ್ ಎಯ್ಯಾದೇತ್ತ ಅರುಳ್ ಶೆಯ್ ಎನಕ್ಕೇ ॥ ತಿರುವಾಯ್ ಮೊಳಿ 2-9-3

3) **ವೈದು ನಿನ್ನೈವಲ್ಲವಾ ಪಳಿತ್ತವರ್ಕ್ಕುಮ್, ಮಾರಿಲ್‌ಪೋರ್**
**ಶೆಯ್ದುನಿನ್ನ ಶೆತ್ತತ್ತೀಯಿಲ್ ವೆಂದವರ್ಕ್ಕುಮ್ ವಂದುನ್ನೈ ।**
**ಎಯ್‌ದಲಾಹುಮೆನ್ಬರ್ ಆದಲಾಲ್ ಎಮ್ಮಾಯ! ನಾಯಿನೇನ್**
**ಶೆಯ್‌ದಕುತ್ತಮ್ ನತ್ತಮಾಹವೇ ಕೊಳ್ ಞಾಲನಾದನೇ ॥** ತಿರುಚ್ಚಂದವಿರುತ್ತಮ್ನ111

**ಎಲೈ ಲೋಕ ಸ್ವಾಮಿಯೇ**, ನಿನ್ನನ್ನು ಬೈದು ದೂಷಿಸಿ, ನಿನ್ನೊಡನೆ ಯುದ್ಧಮಾಡಿ, ಬೆಂಕಿಯಲ್ಲಿ ಸುಟ್ಟು ಹೋದವರೂ ನಿನ್ನನ್ನು ಪಡೆಯಬಹುದು, ಎಂದು ಹೇಳುತ್ತಾರೆ. ಆದ್ದರಿಂದ ನಾನು ಮಾಡಿದ ಪಾಪಗಳನ್ನು ಗುಣವಾಗಿಯೇ ಸ್ವೀಕರಿಸಿ ಅನುಗ್ರಹಿಸು ನೀಚನಾದ ನನ್ನ ಪಾಪಗಳನ್ನು ಕ್ಷಮಿಸಿ, ನಿನ್ನ ಕ್ಷಮಾಗುಣಕ್ಕೆ ನನ್ನನ್ನು ಸತ್ಪಾತ್ರನಾಗಿ ಸ್ವೀಕರಿಸು ಎಂದು ತಾತ್ಪರ್ಯ.

1) ಜಿತನ್ತಾ **ಸ್ತೋತ್ರಮ್**

**ಪ್ರಪನ್ನಸ್ಯ ಬುದ್ಧಿ ಪೂರ್ವೋತ್ತರಾಘಾಶ್ಲೇಷವಾದಸ್ಯ ಖಂಡನಮ್.**

**ಪ್ರಾಯಶ್ಚಿತ್ತಾನ್ತರಾಶಕ್ತಃ ಕಾಲಕ್ಷೇಪಾಕ್ಷಮೋಽಪಿವಾ ।**
**ಪುನಃ ಪ್ರಪದ್ಯತೇ ನಾಥ ಮಭಿಂದ್ರ್ ಲೋಕಸಙ್ಗ್ರಹಮ್ ॥೩೮॥**
**ಮುಮುಕ್ಷುತ್ವಮೇ ಅಡಿಯಾಹ ಬುದ್ಧಿಪೂರ್ವ ನಿಷಿದ್ಧಙ್ಗಳ್ ಪುಹುರಾವೆನ್ರುಮ್ ವಾರ್ತ್ತೈಯುಮ್**
1) **ವಿದ್ಯತೇ ಬ್ರಾಹ್ಮಣೇದಮಃ" ಎನ್ರು ಮಾಪ್ಪೋಲೇ ಔಚಿತ್ಯತ್ತಾಲೇ ಶೊನ್ನಪಡಿಯತ್ತನ್ನೈ.**

**ಮುಮುಕ್ಷುವುಕ್ಕೇ ಬುದ್ಧಿ ಪೂರ್ವ ನಿಷಿದ್ಧಙ್ಗಳ್ ಪುಹುನ್ದು ಪರಿಹಾರಙ್ಗಳ್ ಪಣ್ಣುಹೈ ಮಹರ್ಷಿಹಳ್ ಪಕ್ಕಲಿಲುಮ್ ಋಷಿಪ್ರಾಯರ್ ಪಕ್ಕಲಿಲು ಮುಳ್ಪಡಕ್ಕಣ್ಡು ಪೋರಾನಿನ್ರದಿರೇ**

---

ಪ್ರಾರ್ಥನೆಯೊಂದೇ ಪ್ರಾಯಶ್ಚಿತ್ತವೆಂದು ಹೇಳಿರುವಂತೆ, ಕ್ಷಮಾಪಣೆಯನ್ನು ಯಾಚಿಸತಕ್ಕದ್ದು. **ಈ** ರೀತಿಯಾಗಿ ಕ್ಷಮಾಪಣೆ ರೂಪವಾದ ಪ್ರಾಯಶ್ಚಿತ್ತವೂ ಪ್ರತಿಪದೋಕ್ತಪ್ರಾಯಶ್ಚಿತ್ತಗಳನ್ನು ಮಾಡಲು ಅಶಕ್ತನ ವಿಷಯವೆಂದು **ಪ್ರಾಯಶ್ಚಿತ್ತಾಂ ತರಾಶಕ್ತಃ** ಎಂದಾರಂಭಿಸಿ ಕಾರಿಕೆಯ ರೂಪದಲ್ಲಿ ಆಚಾರ್ಯರು ನಿಗಮಿಸುತ್ತಾರೆ. ಆದಾಗಿ ಪ್ರತಿಪದೋಕ್ತ ಪ್ರಾಯಶ್ಚಿತ್ತವನ್ನು ಮಾಡಲಶಕ್ತನೂ, ಶಕ್ತನಾದವನು ಕಾಲವಿಳಂಬವನ್ನು ಸಹಿಸಲಾರದೆಯೂ ಲೋಕದ ನೀತಿಯನ್ನು ಭೇದಿಸದೆ ಪುನಃ ಪ್ರಪತ್ತಿಯನ್ನು ಅಂದರೆ ಪ್ರಾಯಶ್ಚಿತ್ತ ರೂಪವಾದ ಪ್ರಪತ್ತಿಯನ್ನು ಮಾಡಿಕೊಳ್ಳಬೇಕು. ಪ್ರತಿಪದೋಕ್ತ ಪ್ರಾಯಶ್ಚಿತ್ತಗಳೆಂದರೆ ಪ್ರಜಾಪತ್ಯ ಚಾಂದ್ರಾಯಣಾದಿ ವ್ರತಾನುಷ್ಠಾನ. ಅದಕ್ಕೆ ಶಕ್ತನಾಗಿದ್ದರೂ ದೀರ್ಘಕಾಲ ವಿಳಂಬವನ್ನು ಸಹಿಸದೆ ಇದ್ದರೆ ಅವನೂ ಪ್ರಾಯಶ್ಚಿತ್ತ ಪ್ರಪದನಕ್ಕೆ ಅಧಿಕಾರಿ. ಶಿಷ್ಟತಯಾ ವ್ಯಪದೇಶ್ಯನು ಲೋಕ ಸಂಗ್ರಹಕ್ಕಾಗಿ ಪ್ರತಿಪದೋಕ್ತ ಪ್ರಾಯಶ್ಚಿತ್ತಗಳನ್ನು ಮಾಡಲು ಶಕ್ತನಾಗಿದ್ದರೆ ಅದನ್ನೇ ಮಾಡಬೇಕು.

**ಬುದ್ಧಿ ಪೂರ್ವೋತ್ತರ ಪಾಪಗಳು ಪ್ರಪನ್ನನಿಗೆ ಸಂಭವಿಸುವುದಿಲ್ಲವೆಂಬ ಪಕ್ಷ ಖಂಡನೆ.**

**ಮುಮುಕ್ಷುತ್ವಮೇ ಯಡಿಯಾಹ** ಇತ್ಯಾದಿ–ಮುಮುಕ್ಷುತ್ವ ನಿಮಿತ್ತವಾಗಿ ಪ್ರಪನ್ನನಿಗೆ ಬುದ್ಧಿ ಪೂರ್ವೋತ್ತರ ಪಾಪಗಳು ಉಂಟಾಗುವುದಿಲ್ಲವೆಂಬುದು "ವಿದ್ಯತೇ ಬ್ರಾಹ್ಮಣೇದಮಃ"–ಬ್ರಾಹ್ಮಣನಲ್ಲಿ ಇಂದ್ರಿಯ ನಿಗ್ರಹವಿದೆ, ಎನ್ನುವಂತೆ ಔಚಿತ್ಯದಿಂದ ಹೇಳಿದ ಮಾತು. ಅಂದರೆ "ಶಮೋದಮಸ್ತಪಶ್ಶೌಚಂ"ಬಾಹ್ಯಾಂತರೇಂದ್ರಿಯಗಳ ವಶ್ಯತೆ, ಶುಚಿತ್ವವು ಮೊದಲಾದುವು "ಬ್ರಾಹ್ಮಂಕರ್ಮಸ್ವಭಾವಜಮ್'–ಎಂದು ಸತ್ವೋತ್ತರನಾದ ಬ್ರಾಹ್ಮಣನಲ್ಲಿ ಸಂಭಾವಿತಗಳು. ಅಂಥಹ ಸತ್ವೋತ್ತರನು ಬುದ್ಧಿ ಪೂರ್ವ ಪಾಪಗಳನ್ನು ಮಾಡುವುದಿಲ್ಲವೆಂದು ಭಾವ. ತಾಪತ್ರಯಗಳಿಂದ ಪೀಡಿತನಾಗಿ ದೋಷ ಸಪ್ತಕದಿಂದ ಕೂಡಿದ ಸಾಂಸಾರಿಕ ಸುಖದಿಂದ ವಿರಕ್ತನಾದ ಮುಮುಕ್ಷುವಿಗೆ ಪ್ರಾಯಶಃ ಅಂಥಹ ಅಪರಾಧಗಳು ಉಂಟಾಗುವುದಿಲ್ಲವೆಂಬುದು ಔಚಿತ್ಯವಾದ ಹೀಗೆ ಪೂರ್ವರು ಹೇಳಿರುವ ಮಾತಿಗೆ ನಿರ್ವಾಹ ಮಾಡದಿದ್ದರೆ, ಬಾಧಕವನ್ನು **ಮುಮುಕ್ಷುವಿಕ್ಕೇ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಮುಮುಕ್ಷುವಿಗೇನೆ ಬುದ್ಧಿ ಪೂರ್ವಕ ಪಾಪಗಳು ಏರ್ಪಟ್ಟು ಪರಿಹಾರಗಳನ್ನು ಮಾಡಿಕೊಳ್ಳುವುದು ಮಹರ್ಷಿಗಳಲ್ಲಿಯೂ ಋಷಿಪ್ರಾಯರಲ್ಲಿಯೂ ನೋಡಿರುತ್ತೇವೆಯಲ್ಲವೇ. ಉದಾಹರಣೆಯಾಗಿ ವಸಿಷ್ಠರಿಗೆ ಚಂಡಾಳ ಗೃಹದಲ್ಲಿ ಭೋಜನವೂ, ಅದಕ್ಕೆ ಪ್ರಾಯಶ್ಚಿತ್ತವೂ, ದುರ್ವಾಸರಿಗೆ ಅಂಬರೀಷರಲ್ಲಿ ಅಪಚಾರವೂ ಅದಕ್ಕೆ ಪರಿಹಾರವಾಗಿ ಅವರಲ್ಲಿ ಕ್ಷಮಾಪಣೆಯೂ, ಲೋಕ ಸಾರಂಗಮುನಿಗಳು ತಿರುಪ್ಪಾಣಾಳ್ವಾರ್ ಅವರ ಮೇಲೆ ಕಲ್ಲೆಸೆದು ಹೊಡೆದು ಅಪಚಾರ ಪಟ್ಟು ಅದಕ್ಕೆ ಪ್ರಾಯಶ್ಚಿತ್ತವಾಗಿ ಅಪಚಾರ ಕ್ಷಮಾಪಣೆ ಮಾಡಿ ಉತ್ತಮ ಜಾತಿಯಲ್ಲಿ ತಾವು ಹುಟ್ಟಿದ್ದರೂ, ಭಗವದಾಜ್ಞೆಯ ಪ್ರಕಾರ ಆ ಆಳ್ವಾರವರನ್ನು ತಮ್ಮ ಭುಜದಲ್ಲಿ ಕುಳ್ಳಿರಿಸಿಕೊಂಡು ಭಗವಂತನ ಸಮೀಪಕ್ಕೆ ಕರೆದೊಯ್ದ ವೃತ್ತಾಂತವನ್ನೂ ಸಹ ಇಲ್ಲಿ ಅನುಸಂಧಾನ ಮಾಡುವುದು.

**ಇಜ್ಗನನ್ರಾಹಿಲ್ ಉಪಾಸಕರ್ಹಳುಮ್ ಮುಮುಕ್ಷುಕ್ಕಳಾಹೈಯಾಲೇ ಅವರ್ಹಳುಕ್ಕುಂ ಬುದ್ಧಿ ಪೂರ್ವೋತ್ತರಾಘಂ ಘಟಿಯಾಮೈಯಾಲೇ ಉತ್ತರಾಘಾಶ್ಲೇಷಮ್ ಪ್ರಾಮಾದಿಕ ವಿಷಯಮ್ ಬುದ್ಧಿ ಪೂರ್ವೋತ್ತರಾಘತ್ತುಕ್ಕು ಕ್ಷಂತವ್ಯತ್ವಮಿಲ್ಲೈ ಯೆನ್ರು ವ್ಯವಸ್ಥೈ ಪಣ್ಣವೊಣ್ಣಾದೊ(ಯುಮ್.**

**ಉಪಾಸಕನುಕ್ಕುಮ್ ಪ್ರಪನ್ನನುಕ್ಕುಮ್ ವರ್ಣಾಶ್ರಮ ಜಾತಿಗೋತ್ರ ಪ್ರವರ ಚರಣ ಕುಲ ದೇಶ**

---

**ಇಂಗನನ್ರಾಹಿಲ್**-ಹೀಗಿಲ್ಲದಿದ್ದರೆ, **ಉಪಾಸಕರ್ಹಳುಮ್**-ಇತ್ಯಾದಿ ಉಪಾಸಕರೂ ಮೋಕ್ಷದಲ್ಲಿ ಆಸೆಯುಳ್ಳವರಾದ್ದರಿಂದ ಅವರುಗಳಿಗೂ ಬುದ್ಧಿ ಪೂರ್ವಕವಾಗಿ ಮಾಡಿದ ಪಾಪಕ್ಕೆ ಪ್ರಸಕ್ತಿಯಿರಬಾರದು. ಅದು ಇರುವುದಾಗಿ ಅಂಗೀಕರಿಸಿ ಪ್ರಾಮಾದಿಕ, ಅಪ್ರಾಮಾದಿಕವೆಂದು ಅದನ್ನು ವಿಂಗಡಿಸಿ ಪ್ರಾಮಾದಿಕದಿಂದ-ಅನವಧಾನದಿಂದ, ಮಾಡಿದ ಪಾಪವು ಅಂಟುವುದಿಲ್ಲವೆಂದು ಹೇಳಿ, ಅಪ್ರಾಮಾದಿಕ-ತಿಳಿದು ಮಾಡುವ ಪಾಪಕ್ಕೆ ಅಂದರೆ ಬುದ್ಧಿಪೂರ್ವಕ ಪಾಪಕ್ಕೆ ಪ್ರಾಯಶ್ಚಿತ ರೂಪ ಪರಿಹಾರವನ್ನು ಮಾಡದಿದ್ದರೆ ಶಿಕ್ಷೆಯುಂಟೆಂದು ಶ್ರೀ ಭಾಷ್ಯಕಾರರು ಶ್ರೀ ಭಾಷ್ಯ ತದಧಿಗಮಾಧಿಕರಣದಲ್ಲಿ ಹೇಳಿರುವುದು ವಿರೋಧಿಸುತ್ತದೆ. ಅಲ್ಲಿ "ತದಿದಮ್ ಅಶ್ಲೇಷ ವಚನಂ ಪ್ರಾಮಾದಿಕ ವಿಷಯಂಮಂತವ್ಯಮ್-ನಾವಿರತೋ ದುಶ್ಚರಿತಾ ದಿಭಿಶ್ಯಾಸ್ತ್ರೈಃ ಆ ಪ್ರಯಾಣಾ ದಹರಹ ರುತ್ಪದ್ಯಮಾನಾಯಾಃ ಉತ್ತರೋತ್ತರಾತಿಶಯ ಭ್ಯಾಗಿನ್ಯಾಃ ವಿದ್ಯಾಯಾಃ ದುಶ್ಚರಿತ ವಿರತಿ ನಿಷ್ಪಾದ್ಯತ್ವಾವಗಮಾತ್" ಎಂದು ಉಪಾಸಕನಿಗೆ ಶ್ಲೇಷಿಸುವುದಿಲ್ಲವೆಂದು ಹೇಳಿರುವುದು ಪ್ರಾಮಾದಿಕ ಪಾಪ ಮಾತ್ರ. 'ನಾವಿರತೋದುಶ್ಚರಿತಾತ್' ಎಂದಾರಂಭಿಸುವ ಶ್ರುತಿಯು ದುಷ್ಕಾರ್ಯದಿಂದ ವಿರಾಮ ಹೊಂದದವನು ಅಶಾಂತ ಮನಸ್ಕನಾಗಿ, ಸಮಾಧಿಯಲ್ಲಿ ನೆಟ್ಟ ಮನಸ್ಕನಾಗಿಲ್ಲದೆ ಇರುವುದರಿಂದ, ಪ್ರತಿಬಂಧಕ ಪಾಪಗಳು ಏರ್ಪಟ್ಟು, ಉಪಾಸನ ನಿಷ್ಪತ್ತಿಯೇರ್ಪಡುವುದಿಲ್ಲ. ಅಂದರೆ ಮೋಕ್ಷಕ್ಕೆ ಹೋಗುವ ಪರ್ಯಂತ, ದಿನದಿನಕ್ಕೂ ಅಭಿವೃದ್ಧಿ ಹೊಂದಿ ಉತ್ತರೋತ್ತರಾತಿಶಯದಿಂದ ಕೂಡಿದ ಉಪಾಸನವು ಬುದ್ಧಿಪೂರ್ವ ಪಾಪಗಳನ್ನು ಮಾಡದೆ ಇರುವುದರಿಂದ ಸಿದ್ಧಿಸುತ್ತದೆ, ಎಂದ ಮೇಲೆ ಹೇಳಿದ ಶ್ರುತಿ ವಾಕ್ಯದಿಂದ ತಿಳಿಯಲ್ಪಡುತ್ತದೆ. **ಬುದ್ಧಿಪೂರ್ವೋತ್ತರಾಘತ್ತುಕ್ಕು** ಇತ್ಯಾದಿ ಬುದ್ಧಿಪೂರ್ವೋತ್ತರಾಘವು ಉಪಾಸನಕ್ಕೆ ಪ್ರತಿಬಂಧಕವಾದ್ದರಿಂದ, ಅದು ಅಶ್ಲೇಷ ವಿಷಯವಾಗುವುದಿಲ್ಲವೆಂದು ವ್ಯವಸ್ಥೆ ಮಾಡಿರುವುದು ಸಂಗತವಾಗದೆ ಹೋಗುತ್ತದೆ.

**ಉಪಾಸಕನುಕ್ಕುಮ್** ಇತ್ಯಾದಿ-ಉಪಾಸಕನಿಗೂ ಪ್ರಪನ್ನನಿಗೂ ವರ್ಣ, ಆಶ್ರಮ, ಜಾತಿ, ಗೋತ್ರ, ಪ್ರವರ, ಚರಣ, ಕುಲ, ದೇಶ ಕಾಲಾವಸ್ಥಾಗುಣ ಸಮಯಾದಿಗಳನ್ನು ಕಾರಣವಾಗಿಕೊಂಡು ಹೇಳಿದ ನಿಷಿದ್ಧಗಳನ್ನು ಅನುಷ್ಠಿಸುವ ವಿಷಯದಲ್ಲಿ ಲೇಪಾರೂಪ ವ್ಯತ್ಯಾಸವಿಲ್ಲ. ಪ್ರಾಮಾದಿಕವಾಗಿ ಅನುಷ್ಠಿಸಿದ ಪಾಪವು ಲೇಪಿಸುವುದಿಲ್ಲ. ಬುದ್ಧಿ ಪೂರ್ವಕವಾಗಿ ಅನುಷ್ಠಿಸುವ ಪಾಪವು ಲೇಪಿಸುತ್ತದೆ ಎಂದರ್ಥ. ಇದು ಇಬ್ಬರಿಗೂ ಸಮಾನ. ಈ ನಿಷಿದ್ಧಗಳು ಯಾವುವು ಎಂದರೆ ಅದನ್ನು ವಿವರಿಸುತ್ತೇವೆ. "ಬ್ರಾಹ್ಮಣೋನಸುರಾಂಪಿಬೇತ್" ಬ್ರಾಹ್ಮಣನು ಮದ್ಯಪಾನ ಮಾಡಕೂಡದು ಎಂಬುದು ವರ್ಣಪ್ರಯುಕ್ತವಾದ ನಿಷಿದ್ಧವು "ಯತಿರ್ದ್ವಯೇನ ಪತತಿ" ಸನ್ಯಾಸಿಯು ಪುನಃ ವಿವಾಹವನ್ನು ಮಾಡಿಕೊಂಡರೆ ಪತಿತನಾಗುತ್ತಾನೆ.

"ಬ್ರಹ್ಮಸೂತ್ರಪರಿತ್ಯಾಗಾತ್ ಬ್ರಹ್ಮಚಾರೀ ಗೃಹೀವನೀ । ಪರಿವ್ರಾಟ್ ಚಾಪಿ ಪತತಿ"-

ಯಜ್ಞೋಪವೀತವನ್ನು ತ್ಯಾಗ ಮಾಡುವುದರಿಂದ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಇವರುಗಳು ಪತಿತರಾಗುತ್ತಾರೆ, ಎಂಬುದು ಆಶ್ರಮ ಪ್ರಯುಕ್ತವಾದ ನಿಷೇಧ ಶಾಸ್ತ್ರ.

"ನಸ್ವರಃ ಪ್ರಣವೋಽಂಗಾನಿ ನಾಪ್ಯನ್ಯವಿಧಯಸ್ತಥಾ ।
ಸ್ತ್ರೀಣಾಂತು ಶೂದ್ರಜಾತೀನಾಂ ಮಂತ್ರಮಾತ್ರೋಕ್ತಿ ರಿಷ್ಯತೇ ॥"

**ಕಾಲಾವಸ್ಥಾ ಗುಣಸಮಯಾದಿಹಳೈ ಉಪಾಧಿಯಾಹಕ್ಕೊಣ್ಡು ಶೊನ್ನ ನಿಷಿದ್ಧಙ್ಗಳ್ ತವಿರು ಮಿಡತ್ತಿಲ್ ವಿಶೇಷಮಿಲ್ಲೈ.**

---

ಸ್ವರ, ಪ್ರಣವ, ಅಂಗಗಳು ಸ್ತ್ರೀ ಶೂದ್ರರುಗಳಿಗೆ ನಿಷೇಧಿಸಿದೆ. ಸ್ವರ, ಪ್ರಣವ, ಮತ್ತು ಅಂಗವಿಹೀನವಾದ ಮಂತ್ರ ಮಾತ್ರವನ್ನು ಅವರು ಹೇಳಬಹುದು. ಇದು ಜಾತಿಯನ್ನು ಕಾರಣವಾಗಿಟ್ಟುಕೊಂಡು ಹೇಳಿರುವ ನಿಷೇಧ. "ದಾನಂ ದದ್ಯಾತ್ಸಗೋತ್ರಾಯ ಕನ್ಯಾದಾನಂ ತು ವರ್ಜಯೇತ್". ಸಗೋತ್ರನಿಗೆ ದಾನವನ್ನು ಕೊಡ ಬಹುದು. ಕನ್ಯಾದಾನವನ್ನು ಮಾತ್ರಕೊಡಕೂಡದು, ಎಂಬುದು ಗೋತ್ರ ಸಂಬಂಧವಾದ ನಿಷೇಧ.

"ಸಮಪ್ರವರ ಗೋತ್ರಂಚ ವಿಧುರಂ ಬ್ರಹ್ಮಚಾರಿಣಮ್ ।

ದೇವಾರ್ಥೇ ವರಂಯೇ ದ್ವಿದ್ವಾನ್ ಪಿತ್ರರ್ಥೇವರಣಂ ತ್ಯಜೇತ್ ॥"

**ದೇವತೆಗಳ ಸ್ಥಾನದಲ್ಲಿ ಪ್ರವರೈಕ್ಯರನ್ನು ಸಮಗೋತ್ರರನ್ನೂ, ವಿಧುರ, ಬ್ರಹ್ಮಚಾರಿಣಗಳನ್ನೂ ವರಣ ಮಾಡ ಬಹುದು. ಪಿತೃಸ್ಥಾನದಲ್ಲಿ ಅವರನ್ನುವರಿಸಬಾರದು, ಎಂಬುದು ಪ್ರವರ ನಿಮಿತ್ತವಾದ ನಿಷೇಧ. ಶಾಸ್ತ್ರ· "ಬಹ್ವೃಚಾಃ ಶ್ರವಣೇ ಕುರ್ಯುಃ ಶ್ರಾವಣಂನತು ಪರ್ವಣಿ। ಋಗ್ವೇದಿಗಳು ಶ್ರವಣ ನಕ್ಷತ್ರದಲ್ಲಿ ಉಪಾಕರ್ಮ ವನ್ನು ಮಾಡಬೇಕು ಪರ್ವಕಾಲದಲ್ಲಿ ಕೂಡದು ಎಂಬುದು ಚರಣ ನಿಮಿತ್ತವಾದ ನಿಷೇಧ "ಮೃತಬಂಧೋ ರ್ದಶಾಹಾನಿ ಕುಲಸ್ಯಾನ್ನಂ ನಿಷಿಧ್ಯತೇ", ಜ್ಞಾತಿ ಮರಣದಲ್ಲಿ, ಆಕುಲದವರ ಅನ್ನವು ಮೃತ ದಿನದಿಂದ ಹತ್ತು ದಿವಸಗಳ ಪರ್ಯಂತ ನಿಷೇಧಿಸಲ್ಪಟ್ಟಿದೆ – ಎಂಬುದು ಕುಲ ನಿಮಿತ್ತವಾದ ನಿಷೇಧ.**

"ನಾಪ್ಸು ಸ್ನೈವಾಂಭಸಸ್ತೀರೇ ನಶ್ಮಶಾನೇ ಸಮಾಚರೇತ್ ।

ಉತ್ಸರ್ಗಂ ವೈ ಪುರೀಷಸ್ಯ ಮೂತ್ರಸ್ಯ ಚ ವಿಸರ್ಜನಮ್ ॥"

**ನೀರಿನಲ್ಲಿಯೂ ನದೀಕೊಳಗಳ ತೀರದಲ್ಲಿಯೂ, ಶ್ಮಶಾನದಲ್ಲಿಯೂ ಜಲಮಲ ವಿಸರ್ಗಮಾಡಬಾರದು – ಇತ್ಯಾದಿಯು ದೇಶ** ನಿಮಿತ್ತವಾದ ನಿಷೇಧ "ನಭೋಕ್ತವ್ಯಂ ನಭೋಕ್ತವ್ಯಂ ಸಂಪ್ರಾಪ್ತೇ ಹರಿವಾಸರೇ", ಎಂದು ಏಕಾದಶಿ ವ್ರತ ದಿವಸ ಊಟ ಮಾಡಬಾರದು ಎಂಬುದು ಕಾಲನಿಮಿತ್ತವಾದ ನಿಷೇಧ. "ಏಕಾದಶ್ಯಾಂ ನಭುಂಜೀತ ಶಕ್ತಸ್ಸನ್ನಿ ರುಪದ್ರವಃ" ಎಂಬುದು ಅವಸ್ಥಾ ನಿಮಿತ್ತವಾದ ನಿಷೇಧ.

"ನಾತಿಕೇಶಾಮಕೇಶಾಂವಾ ನಾತಿ ಕೃಷ್ಣಾಂ ಕಪಿಂಗಳಾಮ್ ।

ನಿಸರ್ಗತೋಽಧಿಕಾಂಗಾಂವಾ ನ್ಯೂನಾಂಗಾಂ ವಾಪಿನೋದ್ವಹೇತ್ ॥"

ಎಂಬುದು ಗುಣ ನಿಮಿತ್ತವಾದ ನಿಷೇಧ. "ಅಸ್ವರ್ಗ್ಯಂ ಲೋಕ ವಿದ್ವಿಷ್ಟಂ ಧರ್ಮ್ಯಮಪ್ಯಾಚರೇನ್ನತು" ಎಂಬುದು ಸಮಯ ನಿಮಿತ್ತವಾದ ನಿಷೇಧ· "ನಭ್ರಾತರೌಸಿಯುಂಜೀತ ಶ್ರಾದ್ಧೇ ಪಿತೃಸುತಾವಪಿ" ಅದಿ ಶಬ್ದ ಗ್ರಾಹ್ಯ ಸಂಬಂಧ ನಿಮಿತ್ತವಾದ ನಿಷೇಧ.

**ನಿಷಿದ್ಧಂಗಳೈ ತವಿರುಮಿಡತ್ತಿಲ್ ವಿಶೇಷಮಿಲ್ಲೈ** – ಏತಾದೃಶ ನಿಷಿದ್ಧಗಳನ್ನು ಅನುಷ್ಠಿಸುವ ವಿಷಯ ದಲ್ಲಿ ಭಕ್ತನಿಗೂ ಪ್ರಪನ್ನನಿಗೂ ದೋಷವು ಲೇಪಿಸುತ್ತದೆ, ಲೇಪಿಸುವುದಿಲ್ಲ ಎಂಬ ಅಂಶದಲ್ಲಿ ವ್ಯತ್ಯಾಸವಿಲ್ಲ. ಬುದ್ಧಿಪೂರ್ವಕವಾಗಿ ಅನುಷ್ಠಿಸುವ ಮೇಲೆ ಹೇಳಿದ ನಿಷೇಧ ಕೃತ್ಯಗಳು ಇಬ್ಬರಿಗೂ ದೋಷಾವಹ. ಅದನು ಹೋಗಲಾಡಿಸಲು ಪ್ರಾಯಶ್ಚಿತ್ತವು ಆವಶ್ಯ ಕರ್ತವ್ಯವೆಂದು ತಾತ್ಪರ್ಯ. ಹಾಗಾದರೆ

"ಸತ್ಕರ್ಮನಿರತಾಶ್ಶುದ್ಧಾಃ ಸಾಂಖ್ಯ ಯೋಗ ವಿದಸ್ತಥಾ ।

ನಾರ್ಹಂತಿಶರಣಸ್ಥಸ್ಯ ಕಲಾಂಕೋಟಿತಮೀಮಪಿ ॥"

**ನಿಷಿದ್ಧಙ್ಗಳ್ ಪುಹುನ್ದಾಲ್ ಪ್ರಾಯಶ್ಚಿತ್ತಮ್ ಯಥಾಧಿಕಾರಮಾಹೈಯಾಲೇ ವೈಷಮ್ಯಮುಣ್ಡು 1) "ಎನ್ನಡಿಯಾರದು ಶೆಯ್ಯಾರ್, ಶೆಯ್‌ದಾರೇಲ್ ನನ್ರು ಶೆಯ್‌ದಾರ್" ಎನ್ಗಿರದುವುಮ್ ಅಪರಾಧಮ್ ಪುಹಿರುಮೆನ್ಬದೈಕ್ಕು ಲಿಙ್ಗಮ್; ಇಙ್ಗು "ಶೆಯ್‌ದಾರೇಲ್ ನನ್ರುಶೆಯ್‌ದಾರ್" ಎನ್ರದುಕ್ಕು ಪ್ರಾಮಾದಿಕಮಾಹ ಪುಹುನ್ದಾಲ್ ನಾಮೇ ಕ್ಷಮಿಪ್ಪುದೋಮ್ : ಬುದ್ಧಿ ಪೂರ್ವಕಮಾಹಪ್ಪುಹುನ್ದಾಲ್ ಅವರ್‌ಹಳ್ ಕ್ಷಮೈಕೊಳ್ಳಾದ ವಳವಿಲುಮ್ ಶಿಕ್ಷಾ ವಿಶೇಷಙ್ಗಳಾಲೇ ನಾಮ್ ಶಮಿಪ್ಪುದೋಮ್ ಒರು ಪಡಿಕ್ಕುಮ್ ನಾಮ್ ಕೈವಿಡೋಮೆನ್ರು ತಾತ್ಪರ್ಯಮ್. ನನ್ರು ಶೆಯ್‌ದಾರೆನ್ಬರ್ ಪೋಲುಮ್ ಎನ್ರು ಶೊಲ್ಲುಹೈಯಾಲೇ ಇದು ವಸ್ತು ವೃತ್ತಿಯಿಲ್ ನನ್ರನ್ರೆನ್ನುಮಿಡಮ್ ಸೂಚಿತಮ್.**

---

ಎಂದು ಭಕ್ತಿಯೋಗ ನಿಷ್ಠನು ಪ್ರಪನ್ನನ, ಕೋಟಿಯಲ್ಲಿ ಒಂದು ಭಾಗಕ್ಕೆ ಸಮನಲ್ಲವೆಂದು ಪ್ರಪನ್ನನನ್ನು ಕೊಂಡಾಡಿರುವುದಕ್ಕೆ ಏನು ವಿಶೇಷವೆಂದರೆ. **ನಿಷಿದ್ಧಂಗಳ್ ಪುಹುಂದಾಲ್** ಎಂದಾರಂಭಿಸಿ ಉತ್ತರಿಸುತ್ತಾರೆ. ಆದಾಗಿ ನಿಷೇಧಿಸಲ್ಪಟ್ಟ ಬುದ್ಧಿ ಪೂರ್ವಾಪರಾಧಗಳು ಭಕ್ತ ಪ್ರಪನ್ನರಿಗೆ ಏರ್ಪಟ್ಟರೆ ಅವರವರ ಅಧಿಕಾರಾನುಗುಣವಾಗಿ ಪ್ರಾಯಶ್ಚಿತ್ತದಲ್ಲಿ ವ್ಯತ್ಯಾಸವುಂಟು.

"ನಾಪ್ರಾಗ್ವತ್ ಬುದ್ಧಿ ಪೂರ್ವಾಘೇ ನಚಾತ್ಯಂತಮನುಗ್ರಹಃ ।
ಲಘುರ್ದಂಡ ಪ್ರಪನ್ನಸ್ಯ ರಾಜಪುತ್ರಾಪರಾಧವತ್ ॥"

ಬುದ್ಧಿ ಪೂರ್ವಕ ಪಾಪಗಳನ್ನು ಮಾಡಿದರೆ ಪ್ರಪನ್ನನಿಗೆ ಹಿಂದಿನಂತೆ ಭಗವಂತನು ಕರುಣಿಸುವುದಿಲ್ಲ. ರಾಜಪುತ್ರಾಪರಾಧ ನ್ಯಾಯದಂತೆ ಲಘು ಶಿಕ್ಷೆಯನ್ನು ಕೊಡುತ್ತಾನೆ.

ಪ್ರತಿಬುದ್ಧನಿಗೂ ಅಪರಾಧವು ಸಂಭವಿಸಬಹುದು ಎಂಬುದನ್ನು 1) **ಎನ್ನಡಿಯಾರ್ ಅದು ಶೆಯ್ಯಾರ್** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ನನ್ನ ಭಕ್ತರು ಪಾಪವನ್ನು ಮಾಡುವುದಿಲ್ಲ, ಇತ್ಯಾದಿ (ಇದರಿಂದ ಮಾಡುವ ಸಂಭವವುಂಟು ಎಂದು ಏರ್ಪಡುತ್ತದೆ) ಹೇಳಿರುವುದೂ ಅಪರಾಧವು ಸಂಭವಿಸುತ್ತದೆ ಎಂಬುದಕ್ಕೆ ಗುರುತು. ಇಂಗು ಇಲ್ಲಿ, **ಶೆಯ್ದಾರೇಲ್‌ನನ್ರುಶೆಯ್‌ದಾರ್ ಎನ್ರದುಕ್ಕು** ಇತ್ಯಾದಿ, (ಮಾಡಿದರೆ ನಮ್ಮ ಕ್ಷಮೆಗೆ ವಿಷಯವಾಗುತ್ತದೆ. ಅದೂ, ಒಳ್ಳೆಯದೇ), ಎಂದು ಹೇಳಿರುವುದಕ್ಕೆ ಪ್ರಾಮಾದಿಕವಾಗಿ ಕೆಲವು ಅಪರಾಧಗಳು ಉಂಟಾದರೆ ನಾವೇ ಕ್ಷಮಿಸುತ್ತೇವೆ. **ಬುದ್ಧಿ ಪೂರ್ವಕಮಾಹ** ಇತ್ಯಾದಿ – ಬುದ್ಧಿ ಪೂರ್ವಕವಾಗಿ ಮಾಡಿದರೆ, ಅವರುಗಳು ಕ್ಷಮಾಪಣೆ ಮಾಡಿಕೊಳ್ಳದಿದ್ದರೆ, ಶಿಕ್ಷಾ ವಿಶೇಷಗಳನ್ನು ಕೊಟ್ಟು ನಾವೇ ಆ ಪಾಪಗಳನ್ನು **ಶಮಿಪ್ಪುದೋಮ್** – ಹೋಗಲಾಡಿಸುತ್ತೇವೆ. **ಒರುಪಡಿಕ್ಕುಮ್ ಕೈವಿಡೋಮ್** ಇತ್ಯಾದಿ-ಯಾವ ವಿಧದಲ್ಲಿಯೂ ಕೈ ಬಿಡುವುದಿಲ್ಲವೆಂದು ತಾತ್ಪರ್ಯ. **ನನ್ರುಶೆಯ್‌ದಾರೆನ್ಬರ್ ಪೋಲುಮ್** ಇತ್ಯಾದಿ ಅವರು ಮಾಡುವ ತಪ್ಪುಕಾರ್ಯವು ನನ್ನ ಕ್ಷಮೆಗೆ ವಿಷಯವಾಗುವುದರಿಂದ ಒಳ್ಳೆಯದೆಂದು ವಿವಕ್ಷಿತವೇ ಹೊರತು ವಸ್ತುವಾಗಿಯೇ ತಪ್ಪು ಕಾರ್ಯವು ಒಳ್ಳೆಯದೆಂದು ವಿವಕ್ಷಿತವಲ್ಲವೆಂಬುದು, "ಪೋಲುಮ್" ಎಂಬ ಪದಕ್ಕೆ ತಾತ್ಪರ್ಯ. ಇದನ್ನು **ಇದುವಸ್ತು ವೃತ್ತಿಯಿಲ್** ಇತ್ಯಾದಿ ವಿವರಿಸುತ್ತಾರೆ. ಇದು ವಸ್ತು ಸ್ವಭಾವದಿಂದ ಒಳ್ಳೆಯದಲ್ಲವೆಂಬುದು ಸೂಚಿತ.

---

1) ತನ್ನಡಿಯಾರ್ ತಿರತ್ತಪತ್ತು ತ್ತಾಮರೈಯಾಳಾಹಿಲುಮ್ ಶಿದಗುರೈಕ್ಕುಮೇಲ್
ಎನ್ನಡಿಯಾರ್ ಅದುಶೆಯ್ಯಾರ್ ಶೆಯ್‌ದಾರೇಲ್ ನನ್ರು ಶೆಯ್‌ದಾರೆನ್ಬರ್ ಪೋಲುಮ್ ।

ಪೆರಿಯಾಳ್ವಾರ್ ತಿರುಮೊಳಿ 4-9-2 ತನ್ನ ಭಕ್ತರ ವಿಷಯದಲ್ಲಿ ಮಹಾಲಕ್ಷ್ಮಿಯೂ ದೂಷಣ ಹೇಳಿ ಭಗವಂತನಿಗೆ ಪುರುಷಕಾರತ್ವವನ್ನೂ ಮಾಡದಿರಬಹುದು. ಭಗವಂತನು ನನ್ನ ಭಕ್ತರು ತಪ್ಪುಮಾಡಲಾರರು. ಮಾಡಿದರೂ ಅಬುದ್ಧಿ ಪೂರ್ವಕವಾಗಿ ಮಾಡುವ ಪಾಪಗಳನ್ನು ನಾನು ಕ್ಷಮಿಸುತ್ತೇನೆ. ಬುದ್ಧಿಪೂರ್ವಕವಾಗಿ ಮಾಡುವ ಪಾಪಗಳನ್ನು ಪ್ರಾಯಶ್ಚಿತ್ತದಲ್ಲಿ ತೊಡಗಿಸಿ ಕ್ಷಮಿಸುತ್ತೇನೆ. ಇಲ್ಲವೇ ಲಘುಶಿಕ್ಷೆಯಿಂದ ಕ್ಷಮಿಸುತ್ತೇನೆ. ಹೇಗೂ ಕೈ ಬಿಡುವುದಿಲ್ಲ. ನನ್ನ ಕ್ಷಮೆಗೆ ಅವರು ಒಂದು ಅವಕಾಶವನ್ನು ಕೊಟ್ಟಿರುವುದೂ ಒಳ್ಳೆಯದೇ.

## ಬುದ್ಧಿ ಪೂರ್ವೋತ್ತರಾಘಾಣಾಂ ಪ್ರಾಯಶ್ಚಿತ್ತಮವಶ್ಯ ಕರ್ತವ್ಯಮ್

1) "ಅಪಾಯಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್ ||
ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನ ಶ್ಶರಣಂ ವ್ರಜೇತ್ ||"

ಎನ್ರು ಶೊಲ್ಲುಹೈಯಾಲೇ ಬುದ್ಧಿಪೂರ್ವೋತ್ತರಾಘತ್ತಿಲ್ ಈಶ್ವರನುಕ್ಕು ನಿಗ್ರಹೇಚ್ಛೈ ಯುದಿಯಾದೆನ್ನ ವೊಣ್ಣಾದು. ಸರ್ವಶಕ್ತಿಯಾನವನಕ್ಕು ನಿಗ್ರಹೇಚ್ಛೈ ಪಿರನ್ದಾಲ್ ಕ್ಷಮೈಕೊಳ್ಳಾದ ಪೋದು ಫಲ ಸಿದ್ಧಿ ಯಿಲ್ಲೈ ಯೆನ್ನವು ವೊಣ್ಣಾದು. ಈಶ್ವರನುಕ್ಕು ಪ್ರೀತ್ಯಭಾವ ಮಾತ್ರಂ ಪಿರಕ್ಕುಮಿತ್ತನೈ ಯೆನ್ನಾಲ್

---

### ಬುದ್ಧಿಪೂರ್ವೋತ್ತರಾಘಗಳಿಗೆ ಪ್ರಪನ್ನರೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

ಪ್ರಪನ್ನರಿಗೆ ಬುದ್ಧಿ ಪೂರ್ವೋತ್ತರ ಪಾಪಗಳು ಲೇಪಿಸುವುದಿಲ್ಲವೆಂಬುದಕ್ಕೆ ಏನು ಗಮಕ ?

1) ಪ್ರಪನ್ನನು ಬುದ್ಧಿ ಪೂರ್ವಕವಾಗಿ ಮಾಡಿದ ಪಾಪಕ್ಕೆ ಪ್ರಪನ್ನನ ವಿಷಯದಲ್ಲಿ ಭಗವಂತನಿಗೆ ನಿಗ್ರಹೇಚ್ಛೆಯು ಉಂಟಾಗುವುದಿಲ್ಲವೆಂದು ಅರ್ಥವೇ ?

2) ನಿಗ್ರಹೇಚ್ಛೆಯು ಉಂಟಾದರೂ ನಿಗ್ರಹ ಫಲವಿಲ್ಲವೆಂದು ಅರ್ಥವೇ ?

3) ಈಶ್ವರನಿಗೆ ಪ್ರೀತ್ಯಭಾವವು ಉಂಟಾಗುತ್ತದೆ. ಆದರೆ ಪಾಪವನ್ನು ಮಾಡಿದ ಕರ್ತಾವಿಗೆ ದೋಷವಾವುದೂ ಇಲ್ಲವೆಂದರ್ಥವೇ ?

4) ಈಶ್ವರ ಪ್ರೀತ್ಯಭಾವದಿಂದ ತನಗೂ ಪ್ರೀತ್ಯಭಾವವು ಉಂಟಾಗುತ್ತದೆ. ಬೇರೆ ಯಾವ ಪ್ರತ್ಯವಾಯವೂ (ದೋಷ) ಇಲ್ಲವೆಂದು ಭಾವವೇ ?

ಎಂದು ನಾಲ್ಕು ವಿಧವಾಗಿ ವಿಕಲ್ಪಿಸಿ ಮೊದಲನೆಯ ವಿಕಲ್ಪಕ್ಕೆ !) **ಅಪಾಯಸಂಪ್ಲವೇಸದ್ಯಃ** ಎಂದಾರಂಭಿಸಿ ದೂಷಣವನ್ನು ತಿಳಿಸುತ್ತಾರೆ. ಅದಾಗಿ ಅಪಾಯಗಳು ( ಪಾಪಗಳು ) ಸಂಭವಿಸಿದರೆ ಒಡನೇ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಈ ಪ್ರಕರಣದಲ್ಲಿ ಪ್ರಾಯಶ್ಚಿತ್ತವಾವುದೆಂದರೆ ಪುನಶ್ಶರಣಾಗತಿ, ಎಂದು ಹೇಳಿರುವುದರಿಂದ ಬುದ್ಧಿ ಪೂರ್ವೋತ್ತರಾಘದಲ್ಲಿ **ಈಶ್ವರನುಕ್ಕು** – ನಿಯಾಮಕನಾದ ಶ್ರಿಯಃ ಪತಿಗೆ ನಿಗ್ರಹೇಚ್ಛೆಯು – ಶಿಕ್ಷಿಸಬೇಕೆಂಬ ಇಚ್ಛೆಯು ಉಂಟಾಗುವುದಿಲ್ಲವೆಂದು ಹೇಳಲಿಕ್ಕಿಲ್ಲ. ಏಕೆಂದರೆ ಶ್ರುತಿಸ್ಮೃತಿಗಳು ಈಶ್ವರನ ಆಜ್ಞಾರೂಪಗಳಾದ್ದರಿಂದ ಅವುಗಳಲ್ಲಿ ಪ್ರಪನ್ನನ ಬುದ್ಧಿ ಪೂರ್ವೋತ್ತರಾಘಕ್ಕೆ ಪ್ರಾಯಶ್ಚಿತ್ತವನ್ನು ಹೇಳುವುದರಿಂದಲೂ, ಪ್ರಾಯಶ್ಚಿತ್ತವು ನಿಗ್ರಹ ನಿವೃತ್ತ್ಯರ್ಥವಾದ್ದರಿಂದಲೂ ನಿಗ್ರಹ ಸಂಕಲ್ಪವು ಉಂಟಾಗುವುದಿಲ್ಲವೆಂಬುದು ಪ್ರಮಾಣ ವಿರುದ್ಧ. ದ್ವಿತೀಯ ವಿಕಲ್ಪವನ್ನು **ಸರ್ವಶಕ್ತಿಯಾನವನುಕ್ಕು** ಎಂದಾರಂಭಿಸಿ ದೂಷಿಸುತ್ತಾರೆ. ಅದಾಗಿ ಸರ್ವಶಕ್ತನಾದ ಭಗವಂತನಿಗೆ ತಪ್ಪು ಮಾಡಿದವನನ್ನು ಶಿಕ್ಷಿಸಬೇಕೆಂಬ ಇಚ್ಛೆಯು ಉಂಟಾದರೆ ಕ್ಷಮಾಪಣೆ ಮಾಡಿಕೊಳ್ಳದಿದ್ದರೆ ಫಲಸಿದ್ಧಿ (ನಿಗ್ರಹ ಕಾರ್ಯ) ಯಿಲ್ಲವೆಂದು ಹೇಳಲಿಕ್ಕಿಲ್ಲ. ಸರ್ವಶಕ್ತನ ನಿಗ್ರಹಕ್ಕೆ ಫಲವಿಲ್ಲವೆಂದರೆ ಸರ್ವಶಕ್ತಿತ್ವವೇ ಹೋಗಿ ಬಿಡುತ್ತದೆ. ಮೂರನೆಯ ವಿಕಲ್ಪವನ್ನು **ಈಶ್ವರನುಕ್ಕುಪ್ರೀತ್ಯಭಾವಮಾತ್ರಮ್**, ಎಂದಾರಂಭಿಸಿ ದೂಷಿಸುತ್ತಾರೆ. ಅದಾಗಿ ಈಶ್ವರನಿಗೆ **ಪ್ರೀತ್ಯಭಾವ**ಮಾತ್ರ ಉಂಟಾಗುತ್ತದೆಯೋ ವಿನಹ ಬೇರೆಯಿಲ್ಲವೆಂದರೆ, ತನಗೆ ಅದರಿಂದ ಬೇರೆ ಯಾವ

---

ಲಕ್ಷ್ಮೀತಂತ್ರ 17-91 ಅಪಾಯಗಳು ಸಂಭವಿಸಿದರೆ ಒಡನೇ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಪ್ರಾಯಶ್ಚಿತ್ತವು ಅಕಿಂಚನನ ವಿಷಯದಲ್ಲಿ ಪುನಶ್ಶರಣಾಗತಿ. ಅಪಾಯ-ಬುದ್ಧಿ ಪೂರ್ವಾಪರಾಧ.

**ತನಕ್ಕು ಆತ್ಮಾಲ್ ಮೇಲೊರು ಪ್ರತ್ಯವಾಯಮಿಲ್ಲೈಯಾಹಿಲ್ ಪುನಃ ಪ್ರಾಯಶ್ಚಿತ್ತಂ ಪಣ್ಣವೇಣ್ಡಾ, ತನಕ್ಕುಮ್ ಪ್ರೀತ್ಯಭಾವಮ್ ಪಿರಕ್ಕು ಮತ್ತನ್ನೈಯೆನ್ರಾಲುಮ್ ಪ್ರತ್ಯವಾಯಮ್ ಸಿದ್ಧಮಾಯಿತ್ತು.**

### ಪ್ರಪನ್ನಸ್ಯ ನಿಷಿದ್ಧಾಚರಣೇ ಭಗವದಪ್ರೀತಿ ಶಮನಾರ್ಥಂ ಪುನಃ ಪ್ರಪದನಂ ಕರ್ತವ್ಯಮ್

**ಅದಿಲುಮ್ ಕಳಿನ್ದದುಕ್ಕು ಪ್ರಾಯಶ್ಚಿತ್ತಮ್ ವೇಣ್ಡಾ. ಮೇಲುಮ್ ಅನುವೃತ್ತಮಾಯ್ ವರುಪ್ಪುಹುಹಿರ ಪ್ರೀತ್ಯಭಾವತ್ತೈ ಪ್ಪತ್ತ ಪ್ರಾಯಶ್ಚಿತ್ತಮೆನ್ರಾಲ್ ಇತ್ತೋಡು ತುಲ್ಯಯೋಗ ಕ್ಷೇಮತ್ತೈಯಾಲೇ ಯಥಾಸಂಭವಮ್ ಶ್ರುತ್ಯಾದಿ ಸಿದ್ಧಙ್ಗಳಾನ ಉಪಕ್ಲೇಶಙ್ಗಳುಮ್ ವರುಮೆನ್ರು ಭೀತನಾಯ್ ಪ್ರಾಯಶ್ಚಿತ್ತಮ್ ಪಣ್ಣ ಪ್ರಾಪ್ತಮ್.**

**ಅಹೈಯಾಲ್ ಉಪಕ್ಲೇಶಙ್ಗಳುಮ್ ಇಙ್ಗತ್ತ ಭಗವದನುಭವತ್ತುಕ್ಕುಕ್ಕರಣಾಶಕ್ತಿ ಜ್ಞಾನಸಙ್ಕೋಚ ದುಃಖಾದಿಹಳಡಿಯಾಹ ವರುಮ್ ವಿಚ್ಛೇದ ಸಙ್ಕೋಚಂಗಳುಂ ನಿಯತಾಯುಸ್ಸುಕ್ಕಳಲ್ಲಾದಾರ್ಕ್ಕಾಯುರ್ವೃದ್ಧಿಯಾಲೇ ಪರಮಫಲತ್ತುಕ್ಕು ವಿಳಂಬಮುಮ್ ಪ್ರಸಙ್ಗಿಯಾಮೈಕ್ಕು ಪುನಃ ಪ್ರಪದನಮ್ ಪಣ್ಣುಹಿರದು.**

---

ಪ್ರತ್ಯವಾಯವೂ (ದೋಷವೂ) ಇಲ್ಲವೆಂದರೆ ಪುನಃ ಪ್ರಾಯಶ್ಚಿತ್ತವನ್ನು ಮಾಡುವುದು ವ್ಯರ್ಥ. ಅಂದರೆ ತನಗೆ ಉಂಟಾಗುವ ಪ್ರತ್ಯವಾಯ ನಿವೃತ್ತ್ಯರ್ಥ ಪುನಃ ಪ್ರಪತ್ತಿ ವಿಹಿತವಾದ್ದರಿಂದ, ಅದಕ್ಕೆ ಮೇಲೆ ತನಗೆ ಯಾವ ಪ್ರತ್ಯವಾಯವೂ ಇಲ್ಲವೆಂದರೆ ಪುನಃ ಪ್ರಪತ್ತಿಯನ್ನು ಮಾಡಬೇಕಾದ ಅವಶ್ಯವೇನಿಲ್ಲವೆಂದು ತಾತ್ಪರ್ಯ. ನಾಲ್ಕನೆಯ ವಿಕಲ್ಪಕ್ಕೆ ಸಮಾಧಾನವನ್ನು **ತನ್ನಕ್ಕುಪ್ರೀತ್ಯಭಾವಮ್** ಇತ್ಯಾದಿ ಅನುಗ್ರಹಿಸುತ್ತಾರೆ. **ಆದಾಗಿ** ಸ್ವಾಮಿಯ ಪ್ರೀತ್ಯಭಾವ ನಿಮಿತ್ತವಾಗಿ ತನಗೂ ಪ್ರೀತ್ಯಭಾವವುಂಟಾದರೆ ಅದೇ ದೊಡ್ಡ ಶಿಕ್ಷೆ.

**ಅದಿಲುಮ್** ಇತ್ಯಾದಿ – ಅದರಲ್ಲಿಯೂ ಕಳೆದುಹೋದ ಪಾಪಕ್ಕೆ ಪ್ರಾಯಶ್ಚಿತ್ತವು ಬೇಡ. **ಮೇಲುಮ್** ಇತ್ಯಾದಿ–ಮುಂದೆಯೂ ಅನುವರ್ತಿಸಿ ಬರುವ ಪ್ರೀತ್ಯಭಾವಕ್ಕೆ ಪ್ರಾಯಶ್ಚಿತ್ತವೆಂದರೆ ಇದರೊಡನೆ ಸಮಾನಯೋಗ ಕ್ಷೇಮದಿಂದ ಯಥಾಸಂಭವ ಶ್ರುತ್ಯಾದಿ ಸಿದ್ಧಗಳಾದ ಕುಂಟುತನ, ಕುರುಡತನ, ಭಾರ್ಯಾಪುತ್ರಾದಿಗಳು ಅವಿಧೇಯರಾಗಿ ವರ್ತಿಸುವುದು ಮೊದಲಾದ ಉಪಕ್ಲೇಶಗಳು ಬರುವುವೆಂದು ಭೀತನಾಗಿ ಪ್ರಾಯಶ್ಚಿತ್ತವನ್ನು ಮಾಡುವುದು ಪ್ರಾಪ್ತವಾದದ್ದು. ಆದಾಗಿ ತನ್ನ ಬುದ್ಧಿಪೂರ್ವೋತ್ತರಾಘದಿಂದ ಭಗವಂತನಿಗೆ ತನ್ನಲ್ಲಿ ಅಪ್ರೀತಿಯುಂಟಾಗಿ ತನ್ಮೂಲಕ ತನಗೂ ಅಪ್ರೀತಿಯುಂಟಾಗುತ್ತದೆಯೆಂದರೆ, ಅದನ್ನು ಹೋಗಲಾಡಿಸಿ ಕೊಳ್ಳಲು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದರೆ, ಉಪಕ್ಲೇಶ ಶಾಸ್ತ್ರದಲ್ಲಿ ಹೇಳಿದ ಉಪಕ್ಲೇಶಕ್ಕೆ ಭಯಪಟ್ಟು, ಪುನಃ ಪ್ರಪತ್ತಿಯನ್ನು ಮಾಡುವುದು ಉಚಿತವಾದದ್ದು.

**ಅಹೈಯಾಲ್**–ಇತ್ಯಾದಿ–ಅದ್ದರಿಂದ ಉಪಕ್ಲೇಶಗಳೂ, ಇಲ್ಲಿ ಉಂಟಾಗುವ ಭಗವದನುಭವಕ್ಕೆ **ಕರಣಾ ಶಕ್ತಿ ಜ್ಞಾನ ಸಂಕೋಚದುಃಖಾದಿಹಳಡಿಯಾಹ** ಇತ್ಯಾದಿ – ಇಂದ್ರಿಯಗಳ ಅಶಕ್ತಿ, ಜ್ಞಾನ ಸಂಕೋಚ, ತಾಪತ್ರಯಾದಿ ದುಃಖಗಳ ಮೂಲಕ ಉಂಟಾಗುವ ವಿಚ್ಛೇದ, ಸಂಕೋಚಗಳೂ ನಿಯತವಾದ ಆಯುಸ್ಸನ್ನು ಪಡೆಯದವರಿಗೆ ಆಯುರ್ವೃದ್ಧಿಯಿಂದ ಪರಮ ಫಲಕ್ಕೆ ವಿಳಂಬವೂ ಉಂಟಾಗದಿರಲು ಪ್ರಾಯಶ್ಚಿತ್ತ ರೂಪವಾದ

**ಇದು ವೇಣ್ಡಾ ವೆನ್ಬಾರ್ಕ್ಕುಮ್ ನಿಷಿದ್ಧಙ್ಗಳೈ ಕ್ಷಮಿಕ್ಕಿರನ್ಯಾಯತ್ತಾಲೇ ಇದುವುಮ್ ಕ್ಷಮಾವಿಷಯ ಮಾಹೈಯಾಲೇ ಇದುವೇ ಉಚಿತಮ್.**

**ಬುದ್ಧಿಪೂರ್ವೋತ್ತರಾಘತ್ತುಕ್ಕುಮ್, ಏರ್ಕನವೇ ಪ್ರಪತ್ತಿ ಪಣ್ಣ ವೇಣ್ಡಾದೆನ್ನು ಮಿಡಮುಮ್, ಮುನ್ಬು ಕೋಲಿನ ಫಲಮೊ[಴ಿ]ಯ ಫಲಾಂತರಾರ್ಥಮಾಹ ಪ್ರಪತ್ತ್ಯಂತರಂ ಪಣ್ಣುಹೈಯಿಲ್ ವಿರೋಧ ಮಿಲ್ಲೈ ಎನ್ನುಮಿಡಮುಮ್, ಮುನ್ಬೇ ಸಮರ್ಥಿತ್ತೋಮ್.**

**ಇಪ್ಪಡಿ ಭಗವದಾಜ್ಞಾ ಸಿದ್ಧಮಾನ ಸದಾಚಾರಾನುಪಾಲತ್ತಿಲುಮ್ ವಿರೋಧಮಿಲ್ಲಾನ್ಮೈ ಕಣ್ಡು ಕೊಳ್ವದು.**

**ಪ್ರಪನ್ನಸ್ಯ ನಿಷಿದ್ಧೈರಪ್ಯ ಲೇಪ ಮುಪಪಾದಯನ್ ।**
**ಯಥಾಭಿಮತ ಸದ್ವೃತ್ತಿ (ತ್ತ) ನಿಷ್ಠೇಭ್ಯಃ ಕಿಮಸೂಯತಿ ? ॥**

**ಆಜ್ಞಾತಿಲಂಘನೇ ಯಸ್ಯ ರಕ್ಷಕತ್ವಂ ನಭಜ್ಯತೇ ।**
**ಆಜ್ಞಾನುಪಾಲನೇ ತಸ್ಯ ಕಥಂ ತದುಪರುಧ್ಯತೇ ? ॥೬॥**

**ನಚಾಚಾರಂ ವಿನಾ ಕಿಂಚಿತ್ಕೈಂಕರ್ಯ ಮುಪ ಪದ್ಯತೇ ।**
**ನ ಹಿ ಶೌಚ ಮುಕ್ಕತ್ವೈವ ಸಮಾರಾಧನ ಮರ್ಹತಿ ॥**

---

ಪುನಃ ಪ್ರಪತ್ತಿಯನ್ನು ಮಾಡಬೇಕು. **ಇದುವೇಂಡಾವೆನ್ಬಾರ್ಕ್ಕು ಇತ್ಯಾದಿ.** ಇದು ಬೇಕಿಲ್ಲವೆನ್ನುವವರಿಗೂ ನಿಷಿದ್ಧಗಳನ್ನು ಕ್ಷಮಿಸುವ ನ್ಯಾಯದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದೂ ಕ್ಷಮಾವಿಷಯವಾದ್ದರಿಂದ, ಇದೇ ಉಚಿತವಾದದ್ದು. ಅನಭ್ಯುಪಗತ ಪ್ರಾರಬ್ಧ ಕರ್ಮ ನಿವೃತ್ತಿಗೆ ಪ್ರಪತ್ತಿ ಮಾಡುವಂತೆ ಬುದ್ಧಿ **ಪೂರ್ವೋತ್ತರಾಘಕ್ಕೂ** ಸೇರಿ ಪ್ರಪತ್ತಿಯನ್ನು ಮಾಡಲಾಗದೇ ಎಂದರೆ, ಬುದ್ಧಿಪೂರ್ವೋತ್ತರಾಘಕ್ಕೆ (ಅಘ-ಪಾಪ) ಮುಂಚಿತವಾಗಿಯೇ ಪ್ರಪತ್ತಿಯನ್ನು ಮಾಡಲಿಕ್ಕಿಲ್ಲವೆಂದು, ಮೊದಲು ಆಸೆಪಟ್ಟ ಫಲವಲ್ಲದೆ ಬೇರೆ ಫಲಕ್ಕೆ ಮತ್ತೊಂದು ಪ್ರಪತ್ತಿಯನ್ನು ಮಾಡುವುದರಲ್ಲಿ ವಿರೋಧವಿಲ್ಲವೆಂಬುದನ್ನೂ ಹಿಂದೆಯೇ ಆಚಾರ್ಯರು ಅಪರಾಧ ಪರಿಹಾರಾಧಿಕಾರದಲ್ಲಿ ಸಮರ್ಥಿಸಿದ್ದಾರೆ. **ಇಪ್ಪಡಿ**–ಇತ್ಯಾದಿ ಹೀಗೆ ಭಗವದಾಜ್ಞಾ ಸಿದ್ಧವಾದ ಸದಾಚಾರಾನು ಪಾಲನದಲ್ಲಿಯೂ ವಿರೋಧವಿಲ್ಲದಿರುವುದನ್ನು ತಿಳಿಯುವುದು. ವಾದಿಯ ಅಭಿಪ್ರಾಯದಂತೆ ಸದಾಚಾರವು "ಪರಿತ್ಯಜ್ಯ" ಎಂಬಲ್ಲಿ ವಿವಕ್ಷಿತವಾದರೆ, ಅನುಷ್ಠಿಸಲ್ಪಟ್ಟೂ ಕ್ಷಮಾ ವಿಷಯವಾಗಬಹುದಾದ್ದರಿಂದ, ಅದರ ಅನುಷ್ಠಾನವೇ ಮೇಲು ಎಂದು ತಾತ್ಪರ್ಯ.

ಮೇಲೆ ಹೇಳಿದ ಅರ್ಥಗಳನ್ನು ಕಾರಿಕಾರೂಪವಾಗಿ ಆಚಾರ್ಯರು ಸಂಗ್ರಹಿಸುತ್ತಾರೆ. ಅದಾಗಿ

**ಪ್ರಪನ್ನಸ್ಯ** ಇತ್ಯಾದಿ – ಪ್ರಪನ್ನನಿಗೆ ನಿಷಿದ್ಧಕಾರ್ಯಗಳನ್ನು ಮಾಡುವುದರಿಂದ ಪಾಪವು ಲೇಪಿಸುವುದಿಲ್ಲ ವೆಂದು ಉಪಪಾದಿಸುವವರು, ಭಗವದಭಿಮತಕ್ಕೆ ಅನುಗುಣವಾದ ಸದಾಚಾರ ನಿಷ್ಠರನ್ನು ಕಂಡರೆ ಏತಕ್ಕೆ ಅಸೂಯೆಪಡಬೇಕು. ಅವರ ಅಭಿಪ್ರಾಯದಂತೆ ಸದಾಚಾರವು ಪಾಪವಾದರೆ ಅದರ ಅನುಷ್ಠಾನದಿಂದ ಪ್ರಪನ್ನನಿಗೆ ಪಾಪವು ಲೇಪಿಸುವುದಿಲ್ಲವಾದ್ದರಿಂದಲೂ ಆಜ್ಞಾಕೈಂಕರ್ಯವು ಸಿದ್ಧಿಸುವುದರಿಂದಲೂ, ಪ್ರಪನ್ನನನ್ನು ಕುರಿತು ಅಸೂಯೆ ಪಡುವುದು ಬಹಳ ಅನುಚಿತ. **ಆಜ್ಞಾತಿಲಂಘನೇಯಸ್ಯ** ಇತ್ಯಾದಿ ಭಗವಂತನ ಆಜ್ಞೆಯನ್ನು ಅತಿಲಂಘನ ಮಾಡುವವರ ವಿಷಯದಲ್ಲಿ ಭಗವಂತನ ರಕ್ಷಕತ್ವಕ್ಕೆ ಭಂಗವು ಏರ್ಪಡದೇ ಇದ್ದರೆ, ಅವನ ಆಜ್ಞೆಯನ್ನು ಪರಿಪಾಲನ ಮಾಡುವವರ ವಿಷಯದಲ್ಲಿ ಅವನ ರಕ್ಷಕತ್ವವು ತಡೆಯಲ್ಪಡುತ್ತದೆಯೇ ? ಖಂಡಿತ ಇಲ್ಲವೆಂದು ತಾತ್ಪರ್ಯ **ನಚಾಚಾರಂವಿನಾ** ಇತ್ಯಾದಿ – ಸದಾಚಾರವಿಲ್ಲದೆ ಯಾವ ಕೈಂಕರ್ಯವೂ ಸಿದ್ಧಿಸುವುದಿಲ್ಲ. **ನಹಿಶೌಚಮುಕ್ಕತ್ವೈವ**–

**"ಆಚಾರಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ ।"**
**ಇತಿ ಪಂಚಮವೇದೇಪಿ ಸರ್ವಶಾಸ್ತ್ರಾರ್ಥ ಈರಿತಃ ॥**

**ಪ್ರಪತ್ತಿ ಪ್ರತಿಸಂಧಾನ ಮಾಪ್ತೈರ್ಯದು ಪದಿಶ್ಯತೇ ।**
**ತತ್ಸ್ವಾಧಿಕಾರನಿಯತ ಹಾನೋಪಾದಾನ ಸಿದ್ಧಯೇ ॥**

**ಪ್ರತಿಸನ್ಧಾನತೋಹಿ ಸ್ಯಾದ ಧೀಪೂರ್ವೇಷ್ವಲೇಪಧೀಃ ।**
**ಬುದ್ಧಿ ಪೂರ್ವೇಷ್ವಪಿ ಪುನಃ ಪ್ರಪತ್ತೇರೇವ ಸಙ್ಗ್ರಹಃ ॥**

**ಅತೋ ನಿರಪರಾಧೇನ ವರ್ತಿತವ್ಯಂ ಕೃತಾತ್ಮನಾ ।**
**ಅಪರಾಧ ಪ್ರಸಙ್ಗೇಚ ಪುನಃ ಪ್ರಪದನಂ ಕ್ಷಮಮ್ ॥**

ನಿರಪರಾಧೋತ್ತರ ಕೃತ್ಯಸಿದ್ಧಯೇ ಉಪಾಯದ್ವಯ ಮಾಹ.

**ಅಡಿಯಿಲೇ ನಿರಪರಾಧನಾಹವೇಣುಮೆನ್ರು ಕೋಲಿ ಪ್ರಪತ್ತಿ ಪಣ್ಣಿನವನುಕ್ಕುಮ್, ಪಿನ್ಬು ಇದು ಕ್ಕಾಹ ಪ್ರಪತ್ತ್ಯನ್ತರಮ್ ಪಣ್ಣಿನವನುಕ್ಕುಮ್, ಉತ್ತರ ಕೃತ್ಯಂ ನಿರಪರಾಧಮಾಹವೇ ನಡಕ್ಕುಮ್.**

---

**ಶೌಚವನ್ನು** – ಶರೀರ ಶುದ್ಧಿಯನ್ನು ಮಾಡಿ ಕೊಳ್ಳದೆ ಭಗವದಾರಾಧನಾದಿಗಳಿಗೆ ಯೋಗ್ಯನಾಗುವುದಿಲ್ಲ. **ಆಚಾರವೇ** ಸರ್ವಧರ್ಮ ಮೂಲವೆಂಬುದು ಮಹಾಭಾರತಾದಿಗಳಲ್ಲಿ ಹೇಳಿದೆಯೆಂದು **ಅಚಾರಪ್ರಭವೋಧರ್ಮಃ ಇತ್ಯಾದಿ** ಅನುಗ್ರಹಿಸುತ್ತಾರೆ. ಆದಾಗಿ ಧರ್ಮಾನುಷ್ಠಾನವು ಆಚಾರ ಮೂಲ- ಧರ್ಮಕ್ಕೆ ಫಲವನ್ನು ಕೊಡು ವವನು ಅಚ್ಯುತನು. ಹೀಗೆ ಪಂಚಮವೇದ (ಮಹಾಭಾರತ) ದಲ್ಲಿಯೂ ಸರ್ವಶಾಸ್ತ್ರಾರ್ಥವು ಹೇಳಲ್ಪಟ್ಟಿದೆ ಪ್ರಪನ್ನನಿಗೆ ಬುದ್ಧಿಪೂರ್ವಾಪರಾಧಗಳು ಸಂಭವಿಸಿದರೆ ಪೂರ್ವ ಪ್ರಪತ್ತಿಯನ್ನು ಸ್ಮರಿಸಬೇಕೆಂದು ಆಪ್ತರು ಹೇಳಿದಕ್ಕೆ ಭಾವವೇನೆಂದರೆ ಅದನ್ನು **ಪ್ರಪತ್ತಿ ಪ್ರತಿಸಂಧಾನವೆಂದು** ಆರಂಭಿಸಿ ತಿಳಿಸುತ್ತಾರೆ. ಆದಾಗಿ ಆಪ್ತರು ಪ್ರಪತ್ತಿಯನ್ನು ಸ್ಮರಿಸಬೇಕೆಂದು ಹೇಳಿರುವುದು, ಪ್ರಪನ್ನನಾದ ತನ್ನ ಅಧಿಕಾರಕ್ಕೆ ನಿಯತವಾದ ಕೆಲವನ್ನು ಬಿಡಲೂ, ಮತ್ತೆ ಕೆಲವನ್ನು ಸ್ವೀಕರಿಸುವುದಕ್ಕೋಸ್ಕರವೇ ಹೊರತು, ಬುದ್ಧಿ ಪೂರ್ವೋತ್ತರಾಘಕ್ಕೆ ಪ್ರಾಯಶ್ಚಿತ್ತವಾಗಿಯಲ್ಲ. **ಪ್ರತಿಸಂಧಾನತೋಹಿಸ್ಯಾತ್** ಇತ್ಯಾದಿ. ಪೂರ್ವ ಮಾಡಿದ ಪ್ರಪತ್ತಿಯನ್ನು ಪ್ರತಿ ಸಂಧಾನ ಮಾಡುವುದರಿಂದ ಅಬುದ್ಧಿ ಪೂರ್ವಕ ಮಾಡಿದ ಪಾಪಗಳು ಲೇಪಿಸುವುದಿಲ್ಲವೆಂಬ ಜ್ಞಾನವು ಉಂಟಾಗು ತ್ತದೆಯಲ್ಲವೆ ಮೇಲೂ ಬುದ್ಧಿ ಪೂರ್ವಕವಾಗಿ ಮಾಡಿದ ಪಾಪಗಳಿಗೆ ಪ್ರತಿಪದೋಕ್ತ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಶಕ್ತನು ಪ್ರಾಯಶ್ಚಿತ್ತ ರೂಪ ಪುನಃ ಪ್ರಪದನವನ್ನು ಮಾಡಿಕೊಳ್ಳುತ್ತಾನೆ. ಇದಕ್ಕಾಗಿಯೇ ಪ್ರಪತ್ಯನುಸಂಧಾನವೆಂದು ತಾತ್ಪರ್ಯ. **ಅತೋನಿರಪರಾಧೇನ** ಇತ್ಯಾದಿ. ಆದ್ದರಿಂದ ಬುದ್ಧಿವಂತನು ಅಪರಾಧ ಗಳನ್ನು ಮಾಡದೆ ಇರಬೇಕು. ಅಪರಾಧಗಳು ಉಂಟಾದರೆ ಪ್ರಾಯಶ್ಚಿತ್ತ ರೂಪವಾದ ಪುನಃ ಪ್ರಪತ್ತಿಯು ಮಾಡಬೇಕಾದದ್ದು.

**ಪ್ರಪನ್ನನಿಗೆ ಉತ್ತರಕೃತ್ಯವು ನಿರಪರಾಧನಾಗಿ ನಡೆಯಲು ಎರಡು ಉಪಾಯಗಳು**

**ಅಡಿಯಿಲೇ** ಇತ್ಯಾದಿ – ಆರಂಭದಲ್ಲಿ ನಿರಪರಾಧನಾಗಿರಬೇಕೆಂದು ಆಸೆಪಟ್ಟು ಪ್ರಪತ್ತಿಯನ್ನು ಮಾಡಿದ ವನಿಗೂ, ಪ್ರಪತ್ಯನಂತರ ನಿರಪರಾಧ ಕೈಂಕರ್ಯಕ್ಕೋಸ್ಕರ ಮತ್ತೊಂದು ಪ್ರಪತ್ತಿಯನ್ನು ಮಾಡಿದವನಿಗೂ, ಉತ್ತರ ಕೃತ್ಯವು ನಿರಪರಾಧವಾಗಿಯೇ ನಡೆಯುತ್ತದೆ.

## ಅಪರಾಧ ಕ್ಷಾಮಣಸ್ಯಾವಶ್ಯ ಕರ್ತವ್ಯತ್ವೇ ಇತಿಹಾಸ ಪ್ರದರ್ಶನಮ್

ಇತಿಹಾಸ ಪುರಾಣಙ್ಗಳಿಲ್ ಶಿಲವೃತ್ತಾಂತ ದರ್ಶನ ಮಾತ್ರತ್ತೈಕ್ಕೊಂಡು ವಚನ ವಿರೋಧತ್ತೈ ಅನಾದರಿತ್ತು, ಭಾಗವತನುಡೈಯ ಬುದ್ಧಿ ಪೂರ್ವೋತ್ತರಾಘಮ್ ಕ್ಷನ್ತವ್ಯಮೆನ್ರು ಶಿಲರ್ ಶೊಲ್ಲುವರ್ಹಳ್ ; ಇದುವುಮ್ ಅವ್ವೋ ಪ್ರಕರಣಙ್ಗಳಿಲ್ ಅಭಿಪ್ರಾಯ ಮರಿಯಾಮಲ್ ವನ್ದದು.

ಮಹಾರಾಜರ್ಕ್ಕು ಮುಳ್‌ಪಡ ಸಮಯಾತಿಲಂಘನ ಮಾತ್ರಮಾನ ಅಪರಾಧಮ್ ಪೆರುಮಾಳ್ ತಿರುವುಳ್ಳತ್ತಿಲೇ ಶೋಕಾಭಿಭವತ್ತಾಲೇ ಪ್ರತಿ ಭಾಸಿತ್ತು

1) ನ ಚ ಸಙ್ಕುಚಿತಃ ಪನ್ಥಾ ಯೇನ ವಾಲೀ ಹತೋಗತಃ ।
ಸಮಯೇ ತಿಷ್ಠ ಸುಗ್ರೀವ ಮಾವಾಲಿ ಪಥ ಮನ್ವಗಾಃ॥"
ಎನ್ರರುಳಿಚ್ಚೆಯ್ಯಕ್ಕೇಟ್ಟು ಇಳೈಯ ಪೆರುಮಾಳ್ ಪೆರುಮಾಳ್ ತಾಮೇ ತಣಿಯ ವಿಡ ವೇಣ್ಣುಮ್ಪಡಿ ಶೀರಿಯರುಳಿ ಕಿಷ್ಕಿಂಧೈಯಿಲೇ ಶೆಲ್ಲ,

2) "ಕೃತಾಪರಾಧಸ್ಯ ಹಿತೇ ನಾಸ್ಯತ್ಪಶ್ಯಾಮ್ಯಹಂ ಕ್ಷಮಂ ।
ಅಂತರೇಣಾಂಜಲಿಂ ಬಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್ ॥"

---

## ಬುದ್ಧಿಪೂರ್ವೋತ್ತರಾಘಗಳು ಪ್ರಾಯಶ್ಚಿತ್ತವನ್ನು ಮಾಡದೆಯೇ ಕಳೆದು ಹೋಗುತ್ತವೆ ಎಂಬ ಮತ ಖಂಡನೆ. ರಾಮಾಯಣ ವೃತ್ತಾಂತ ದೃಷ್ಟಾಂತ

**ಇತಿಹಾಸ ಪುರಾಣಂಗಳಿಲ್** ಇತ್ಯಾದಿ – ಇತಿಹಾಸ ಪುರಾಣಗಳಲ್ಲಿ ಕೆಲವು ವೃತ್ತಾಂತಗಳನ್ನು ಆಪಾತತಃ ನೋಡಿ, "ಮನೀಷೀ ವೈದಿಕಾಚಾರಂ ಮನಸಾಪಿ ನಲಂಘಯೇತ್" ಎಂಬ ಪ್ರಮಾಣ ವಚನಗಳನ್ನು ಅನಾದರಿಸಿ, ಭಾಗವತನ ಬುದ್ಧಿ ಪೂರ್ವೋತ್ತರಾಘವು ಪೂರ್ವಕೃತ ಪ್ರಪತ್ತಿಯಿಂದಲೇ ಕ್ಷಂತವ್ಯವು ಎಂದು ಕೆಲವರು ಹೇಳುತ್ತಾರೆ. **ಇದುವುಮ್** ಇತ್ಯಾದಿ ಇದೂ ಆಯಾಯಾ ಪ್ರಕರಣಗಳಲ್ಲಿ ಅಭಿಪ್ರಾಯವನ್ನು ತಿಳಿಯದೆ ಆಪಾತ ದರ್ಶನದಿಂದ ಉಂಟಾದದು. **ಮಹಾರಾಜರುಕ್ಕುಮುಳ್ಪಡ** ಇತ್ಯಾದಿ ಸುಗ್ರೀವ ಮಹಾರಾಜರಿಗೂ ಕೂಡ, ತಾವು ಪ್ರತಿಜ್ಞೆ ಮಾಡಿದ ಶರತ್ಕಾಲವು ಬಂದರೂ ಅದನ್ನು ಅತಿಲಂಘಿಸಿ ಭೋಗ ಪ್ರಸಕ್ತರಾಗಿ ಸೀತಾನ್ವೇಷಣಕ್ಕೆ ಸಹಾಯ ಮಾಡಲು ಬಾರದೆ ಇದ್ದರೆಂಬ ಅಪರಾಧವು, ಶ್ರೀರಾಮಚಂದ್ರನ ಮನಸ್ಸಿನಲ್ಲಿ ಶೋಕೋದ್ರೇಕದಿಂದ **ಪ್ರತಿಭಾಸಿತ್ತು** – ಉದಯಿಸಿ(ತು.) 1) **ನಚಸಂಕುಚಿತಃಪಂಥಾಃ** ಇತ್ಯಾದಿ ಶ್ರೀರಾಮ ಚಂದ್ರನೂ ಕೋಪಗೊಂಡು ಎಲೈ ಸುಗ್ರೀವನೇ ವಾಲಿಯು ಹೋದ ಮಾರ್ಗವು ಇನ್ನೂ ಸವೆಯದೇ ಇದೆ, ಮುಚ್ಚಿಹೋಗಿಲ್ಲ. **ಸಮಯೇತಿಷ್ಠ** – ಮಾಡಿದ ಪ್ರತಿಜ್ಞೆಯನ್ನು ಪರಿಪಾಲಿಸು (ಸಮಯ – ಶಪಥ - ಪ್ರತಿಜ್ಞೆ) **ಮಾವಾಲಿಪಥಮನ್ವಗಾಃ** – ವಾಲಿಯ ಮಾರ್ಗವನ್ನು ಹಿಂಬಾಲಿಸಬೇಡ. ಪ್ರತಿಜ್ಞೆಯನ್ನು ಮೀರಿದರೆ ನಿನ್ನನ್ನೂ ವಾಲಿಯು ಹೋದ ದಾರಿಗೇನೆ ಕಳುಹಿಸಿಬಿಡುತ್ತೇನೆಂದರ್ಥ, **ಎನ್ರರುಳಿಚ್ಚೆಯ್ಯಕ್ಕೇಟ್ಟು** – ಎಂದು ಕೃಪೆ ಮಾಡಿ ಹೇಳಿದ ಮಾತನ್ನು ಲಕ್ಷ್ಮಣನು ಕೇಳಿ(ದನು). ಆಗ **ಇಳೈಯಪೆರುಮಾಳ್** ಇತ್ಯಾದಿ ಲಕ್ಷ್ಮಣ ಸ್ವಾಮಿಯು, ಶ್ರೀರಾಮಚಂದ್ರನು **ತಾಮೇತಣಿಯವೇಂಡುಂಪಡಿಶೀರಿಯರುಳಿ** ಇತ್ಯಾದಿ ತಾನೇ ಕೋಪದಿಂದ ಶಾಂತನಾಗುವಂತೆ, ಅವನ ಕೋಪಕ್ಕಿಂತ ಹೆಚ್ಚು ಕೋಪವನ್ನು ತೋರಿಸಿ, ಕಿಷ್ಕಿಂಧೆಗೆ ಹೋದನು. ಆಗ 2) **ಕೃತಾಪರಾಧಸ್ಯ** ಇತ್ಯಾದಿ ಐಂದ್ರ ವ್ಯಾಕರಣ ಪಂಡಿತನಾದ ಹನುಮಂತ ಸ್ವಾಮಿಯು ಮಹಾರಾಜನಾದ ಸುಗ್ರೀವ

---

1) ರಾಮಾಯಣ ಕಿಷ್ಕಿಂಧಾ ಕಾಂಡ 30-8 । 2) ರಾಮಾಯಣ ಕಿಷ್ಕಿಂಧಾಕಾಂಡ 32-11

ಎನ್ರು ಐಂದ್ರ ವ್ಯಾಕರಣ ಪಂಡಿರ್ತ ಮಹಾರಾಜರ್ಕ್ಕು ಉಪದೇಶಿತ್ತಾನಿರೇ ಅವ್ವಳವಿಲ್ ಮಹಾರಾಜರು ಮಿಳೈನ್ದು;

3) "ಯದಿಕಿಞ್ಚಿ ದತಿಕ್ರಾನ್ತಂ ವಿಶ್ವಾಸಾತ್ಪ್ರಣಯೇನವಾ ।
ಪ್ರೇಷ್ಯಸ್ಯ ಕ್ಷಮಿತವ್ಯಂ ಮೇನ ಕಶ್ಚಿನ್ನಾ ಪರಾಧ್ಯತಿ ॥"

ಎನ್ರು ವಿಣಪ್ಪಂ ಶೆಯ್ಯವೇಣ್ಡಿತ್ತು ; ಅಪ್ಪೋದು ಇಳೈಯ ಪೆರುಮಾಳುಕ್ಕುಮ್ ತಾಮ್ ಮಿಹುದಿಯಾಹ ಚೊನ್ನ ವಾರ್ತ್ತೈಹಳುಕ್ಕು

4) ಯಚ್ಚ ಶೋಕಾಭಿ ಭೂತಸ್ಯ ಶ್ರುತ್ವಾ ರಾಮಸ್ಯ ಭಾಷಿತಮ್ ।
ಮಯಾತ್ವಂ ಪರುಷಾಣ್ಯುಕ್ತಸ್ತಚ್ಚತ್ವಂ ಕ್ಷನ್ತುಮರ್ಹಸಿ ॥"

ಎನ್ರುಕ್ಷಮೈ ಕೊಳ್ಳವೇಣ್ಡಿತ್ತು.

ಇಪ್ಪಡಿ ಪ್ರಪನ್ನನುಕ್ಕುಮ್ ಪ್ರಾರಬ್ಧ ಕರ್ಮ ವಿಶೇಷಙ್ಗಳಾಲೇ ಬುದ್ಧಿ ಪೂರ್ವೋತ್ತರಾಘಂ ಪುಹಿರವು ಉಣ್ಡಾಮ್ ; ಅವೈ ಪುಹುನ್ದಾಲ್ ಅನುತಪ್ತನಾಯ್ ಕ್ಷಮೈ ಕೊಳ್ಳುವುಮ್ ವೇಣುಮ್.

---

ನನ್ನು ನೋಡಿ, "ನೀನು ಅಪರಾಧ ಮಾಡಿದ್ದೀಯೆ ಅಂಗರೆ ಪ್ರತಿಜ್ಞೆ ಮಾಡಿದ ಶರತ್ಕಾಲವು ಬಂದರೂ ಸೀತೆಯನ್ನು ಹುಡುಕಿ ಕೊಡಲು ರಾಮಚಂದ್ರನಲ್ಲಿಗೆ ಹೋಗದೆ ಅಂತಃಪುರದಲ್ಲಿಯೇ ಭೋಗ ಪ್ರಸಕ್ತನಾಗಿದ್ದೀಯೆ. ಈ ಅಪರಾಧಕ್ಕೋಸ್ಕರ ಶ್ರೀ ಲಕ್ಷ್ಮಣಸ್ವಾಮಿಯಲ್ಲಿ ಕ್ಷಮಾಪಣೆಯನ್ನು ಯಾಚಿಸು. ಇದಕ್ಕಿಂತ ಬೇರೆ ದಾರಿಯಿಲ್ಲ" ಎಂದು ಉಪದೇಶಿಸಿದನು. **ಅವ್ವಳವಿಲ್** ಇತ್ಯಾದಿ ಅಷ್ಟರಲ್ಲಿಯೇ ಮಹಾರಾಜರೂ ಆ ಮಾತನ್ನು ಲಾಲಿಸಿ, **3) ಯದಿಕಿಂಚಿದತಿಕ್ರಾಂತಂ** ಇತ್ಯಾದಿ ನಿಮ್ಮಲ್ಲಿರುವ ಪ್ರೀತಿ ವಿಶ್ವಾಸಗಳಿಂದ ಆಶ್ರಿತರಲ್ಲಿ ಏರ್ಪಡುವ ಸ್ವಲ್ಪ ಸ್ಖಾಲಿತ್ಯವನ್ನು ನೀವು ಸಹಿಸಿಕೊಳ್ಳುತ್ತೀರಿ ಎಂಬ ನಂಬಿಕೆಯಿಂದ ಸ್ವಲ್ಪ ಅತಿಕ್ರಮವಾಗಿ ನಡೆದುಕೊಂಡೆ. ದಾಸನ ಈ ಅಪರಾಧವನ್ನು ಕ್ಷಮಿಸಿ. ಲೋಕದಲ್ಲಿ ಯಾರು ತಾನೇ ತಪ್ಪು ಮಾಡುವುದಿಲ್ಲ" ಎಂದು ವಿಜ್ಞಾಪಿಸಿದನು. **ಅಪ್ಪೋದಿಳೈಯ ಪೆರುಮಾಳುಕ್ಕುಮ್** ಇತ್ಯಾದಿ ಆಗ ಶ್ರೀ ಲಕ್ಷ್ಮಣಸ್ವಾಮಿಯವರು (ಚಿಕ್ಕಸ್ವಾಮಿ) ತಾವು ಅಧಿಕವಾಗಿ ಹೇಳಿದ ಮಾತುಗಳಿಗೆ ಅನುತಪಿಸಿ, 4) ಯಚ್ಚ ಶೋಕಾಭಿಭೂತಸ್ಯ – ಇತ್ಯಾದಿ ಶೋಕದಿಂದ ಅಭಿಭೂತರಾದ ಶ್ರೀ ರಾಮಚಂದ್ರನ ಮಾತನ್ನು ಕೇಳಿ, ನಾನು (ಪರಿತಪ್ತನಾಗಿ) ನಿಮ್ಮನ್ನು ಪಾರಷ್ಯದಿಂದ ಅಧಿಕವಾಗಿ ಮಾತುಗಳನ್ನು ಹೇಳಿಬಿಟ್ಟೆ. ಅದನ್ನು ನೀವು ಕ್ಷಮಿಸಿ, ಎಂದು ಕ್ಷಮಾಪಣೆ ಯಾಚಿಸಿದನು. **ಇಪ್ಪಡಿ ಪ್ರಪನ್ನನುಕ್ಕು** ಇತ್ಯಾದಿ ಹೀಗೆ ಪ್ರಪನ್ನನಿಗೆ ಪ್ರಾರಬ್ಧ ಕರ್ಮ ವಿಶೇಷಗಳಿಂದ ಬುದ್ಧಿಪೂರ್ವೋತ್ತರಾಘವು ಉಂಟಾಗುವುದು ಸಂಭಾವಿತ. **ಅವೈಪುಹುಂದಾಲ್ ಅನುತಪ್ತನಾಯ್** ಇತ್ಯಾದಿ ಅವುಗಳು ಉಂಟಾದರೆ ಅನುತಾಪದಿಂದ ಕೂಡಿ ಕ್ಷಮಾಪಣೆಯನ್ನು ಯಾಚಿಸಲೂ ಬೇಕು.

---

3) ರಾ. ಕಿಷ್ಕಿಂ. 36-11

4) ರಾ. ಕಿಷ್ಕಿಂ. 36-20

## ಶ್ರೀ ಯಾಮುನೇಯ ಭಕ್ತಾಂಘ್ರಿರೇಣು ದಿವ್ಯ ಸೂಕ್ತಿನಾಂ ಹಾರ್ದಾಭಿ ಪ್ರಾಯಃ

5) "ನಧರ್ಮ ನಿಷ್ಠೋಽಸ್ಮಿ" 6) "ಕುಳಿತ್ತು ಮೂನ್ರುನಲ್ಯೆ ಯೋಮ್ಬುಪ್ಪಕ್ಕರಿಕೊಳನ್ದಣ್ಣನ್ಯೈ ತನ್ನೈ ಯೊಳಿತ್ತಿಟ್ಟೇನ್" ಇತ್ಯಾದಿಹಳುಮ್ ಕರ್ಮ ಯೋಗಾದಿಹಳುಕ್ಕು ಶಕ್ತಿಯಿಲ್ಲಾಮೈ ಶೊಲ್ಲುಹಿರನ ವತ್ತನ್ನೈ; ಯಥಾಶಕ್ತಿ ಭಗವದಾಜ್ಞಾನುಪಾಲನತ್ತೈ ತವಿರಚ್ಚೊಲ್ಲುಹಿನ್ರನವನ್ರು.

ಅತಃ ಭಗವದಾಜ್ಞಾನುಪಾಲನ ಮೇವ ಕರ್ತವ್ಯ ಮಿತಿ ನಿಗಮಯತಿ.

ಆಹೈಯಾಲ್ ಪ್ರಪನ್ನನುಕ್ಕುಮ್ ಬ್ರಾಹ್ಮಣ್ಯಾದಿ ವಿಶಿಷ್ಟ ಶರೀರಮ್ ವಿಡುಮಳವುಮ್ ಅವ್ವೋ ಜಾತ್ಯಾದಿಹಳುಕ್ಕೇಽಶಾನ ಭಗವದಾಜ್ಞಾನುಪಾಲನಮ್ ಕರ್ತವ್ಯಮ್.

ತ್ಯಾಜ್ಯೋಪಾದೇಯಾನ್ ದ್ವಾಭ್ಯಾಂ ಕಾರಿಕಾಭ್ಯಾಂಸಂಗೃಹ್ಣಾತಿ

ಆಹಾರ ಗ್ರಹ ಮಂತ್ರಾರ್ಥ ಜಾತ್ಯಾದಿ ನಿಯಮೈರ್ಯುತಃ ।
ಕುರ್ಯಾಲ್ಲಕ್ಷ್ಮೀಶ ಕೈಂಕರ್ಯಂ ಶಕ್ತ್ಯಾಽನನ್ಯ ಪ್ರಯೋಜನಃ"॥

---

### ಆಳವಂದಾರ್ ಆಳ್ವಾರ್ರುಗಳ ಶ್ರೀ ಸೂಕ್ತಿ ತಾತ್ಪರ್ಯ.

ಆಳವಂದಾರವರು 5) ನ ಧರ್ಮನಿಷ್ಠೋಽಸ್ಮಿ ಎಂದಾರಂಭಿಸಿ ಹೇಳಿರುವುದೂ, ಆಳ್ವಾರವರು 6) ಕುಳಿತ್ತು ಮೂನ್ರುನಲ್ಯೆಯೊಂಬುಮ್ ಇತ್ಯಾದಿ ಅನುಸಂಧಾನ ಮಾಡಿರುವುದೂ ಕರ್ಮಯೋಗಾದಿಗಳಿಗೆ ಶಕ್ತಿಯಿಲ್ಲದಿರುವುದನ್ನು ಹೇಳುತ್ತಾರೆಯಷ್ಟೆ. ಯಥಾಶಕ್ತಿ ಭಗವದಾಜ್ಞಾನುಪಾಲನವನ್ನು ಬಿಡಲು ಹೇಳಿರುವುದಲ್ಲ. ಆದಾಗಿ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನು ಅನುಷ್ಠಿಸಲು ಅರ್ಹತೆಯಿಲ್ಲವಾಗಿ, ಆದರಿಂದ ತಮ್ಮ ಆಕಿಂಚನ್ಯಾನನ್ಯಗತಿತ್ವಗಳನ್ನು ಪುರಸ್ಕರಿಸಿಕೊಂಡು ಶರಣಾಗತಿ ಮಾಡುತ್ತಾರಾದ್ದರಿಂದ, ಕರ್ಮಯೋಗಾದಿಗಳನ್ನು ಬಿಡಬೇಕೆಂದು ಹೇಳಲು ಬಂದ ವಚನಗಳಲ್ಲ. **ಅಹೈಯಾಲ್** – ಆದ್ದರಿಂದ ಪ್ರಪನ್ನನಿಗೂ ಬ್ರಾಹ್ಮಣ್ಯಾದಿ ಶರೀರವನ್ನು ಬಿಡುವ ಪರ್ಯಂತ ಆಯಾಯಾ ಜಾತಿಗಳಿಗೆ ಅನುಗುಣವಾದ ಭಗವದಾಜ್ಞಾನುಪಾಲನವು ಕರ್ತವ್ಯ.

### ಪ್ರಪನ್ನನಿಗೂ ವರ್ಣಾಶ್ರಮ ಧರ್ಮ ಪರಿಪಾಲನ ಪೂರ್ವಕ ಭಗವತ್ಕೈಂಕರ್ಯಗಳನ್ನು ಮಾಡಬೇಕಾದದ್ದು ಅವಶ್ಯ.

ಭಗವತ್ ಕೈಂಕರ್ಯಗಳನ್ನು ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮ ನಿಯಮಗಳೊಡನೆ ಮಾಡಬೇಕಾದದು ಅವಶ್ಯವೆಂದು **ಆಹಾರಗ್ರಹಮಂತ್ರಾರ್ಥ** ಎಂದಾರಂಭಿಸಿ ಕಾರಿಕೆಗಳ ಮೂಲಕ ಶಾಸ್ತ್ರಾರ್ಥವನ್ನು ಸಂಗ್ರಹಿಸಿ

---

5) ನಧರ್ಮನಿಷ್ಠೋಽಸ್ಮಿ ನಚಾತ್ಮವೇದೀ ನಭಕ್ತಿಮಾನ್ ತ್ವಚ್ಚರಣಾರವಿಂದೇ ।
ಅಕಿಂಚನೋಽನನ್ಯಗತಿ ಶ್ಶರಣ್ಯ ತ್ವತ್ಪಾದಮೂಲಂ ಶರಣಂ ಪ್ರಪದ್ಯೇ ॥ ಸ್ತೋತ್ರರತ್ನ 22
ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನು ಅನುಷ್ಠಿಸಲು ಅಶಕ್ತನು. ಆಕಿಂಚನನು –ಬೇರೆ ಗತಿಯಿಲ್ಲದವನು. ಶರಣ್ಯ ನಿನ್ನ ಪಾದಗಳನ್ನು ರಕ್ಷಣೆಗಾಗಿ ಮರೆಹೊಕ್ಕಿದ್ದೇನೆ

6) "ಕುಳಿತ್ತು ಮೂನ್ರುನಲ್ಯೆಯೊಂಬುಮ್ ಕುರಿಕೊಳ್ ಅಂದಣಮ್ಯೆ ತನ್ನೈ
ಒಳಿತ್ತಿಟ್ಟೇನ್ ಎನ್‌ಕಣಿಲ್ಲೈ ನಿನ್‌ಕಣುಮ್ ಪತ್ತಿಲ್ಲೇನ್ ।

ಪು. ತಿ. ನೋ.

**ಆಚಾರಾತ್ಮಗುಣೋಪಾಯ ಪುರುಷಾರ್ಥ ವಿಶೇಷತಃ ।**
**ಅಧಿಕಾರಿಣಿ ವೈಶಿಷ್ಟ್ಯಂ ಪ್ರಕೃಷ್ಯೇತೋತ್ತರೋತ್ತರಮ್**

**ಉಕ್ತ ಪ್ರಭಾವ ನಿಯಮಸ್ಯ ರಹಸ್ಯತ್ರಯ ಪ್ರತಿಪಾದ್ಯತ್ವಮಾಹ.**

**ಇಪ್ಪ್ರಭಾವ ನಿಯಮಮ್ ರಹಸ್ಯತ್ರಯತ್ತಿಲ್ ಈಶ್ವರನುಡೈಯ ಪ್ರಶಾಸಿತೃತ್ವಾದಿ ಗುಣಾನುಬಂಧ ಮಾಹ ಅನುಸನ್ಧೇಯಮ್.**

---

ಅನುಗ್ರಹಿಸುತ್ತಾರೆ. ಆದಾಗಿ ಆಹಾರ ನಿಯಮ – ಜಾತ್ಯಾಶ್ರಯ ನಿಮಿತ್ತಗಳಿಂದ ಅದುಷ್ಟಗಳಾಗಿ ಶಾಸ್ತ್ರೋಕ್ತ ವಾದ ಭಗವನ್ನಿವೇದಿತವಾದ ಪಂಚಮಹಾಯಜ್ಞ ಶಿಷ್ಟವಾದ ಅನ್ನವನ್ನು ಭುಜಿಸಬೇಕು. ಗ್ರಹನಿಯಮ – ಆಚಾರ್ಯನಿಂದ ಉಪದೇಶಿಸಲ್ಪಟ್ಟ ಜ್ಞಾನದಿಂದಲೇ ಕರ್ಮಗಳನ್ನು ಅನುಷ್ಠಿಸಬೇಕೆಂಬ ನಿಯಮ. ಮಂತ್ರಾರ್ಥ ನಿಯಮ ಆಚಾರ್ಯೋಪದಿಷ್ಟಗಳಾದ ಭಗವನ್ಮಂತ್ರಗಳನ್ನೂ, ಭಗವದಾಪ್ತ ವರ್ಗಗಳಾದ, ಗರುಡ ಸುದರ್ಶನಾದಿ ಮಂತ್ರಗಳನ್ನೂ ಜಪಿಸುವುದು ಅರ್ಥನಿಯಮ – ಕುಲಟಾ, ಪತಿತ, ಶತ್ರು ಮೊದಲಾದವರ ನಿಷಿದ್ಧ ದ್ರವ್ಯ ಗಳನ್ನು ಸ್ವೀಕರಿಸದೆ ನ್ಯಾಯಾರ್ಜಿತವಾದ ಧನದಿಂದ ಕರ್ಮಗಳನ್ನು ಮಾಡಬೇಕೆಂಬ ನಿಯಮ. ಜಾತಿನಿಯಮ– ಬ್ರಾಹ್ಮಣ್ಯಾದಿ ಜಾತಿಗಳಿಗೆ ಅನುಗುಣವಾದ ವಿಹಿತ ಕರ್ಮಗಳನ್ನು ಮಾಡಬೇಕೆಂಬ ನಿಯಮ. ಆದಿ ಶಬ್ದದಿಂದ ಆಶ್ರಮ ಕುಲಗೋತ್ರ ಚರಣಾದಿಸಂಗ್ರಹ. ಏತಾದೃಶ ನಿಯಮಗಳೊಡನೆ ಶ್ರಿಯಃಪತಿಯ ಕೈಂಕರ್ಯವನ್ನು ತನ್ನ ಶಕ್ತ್ಯನುಸಾರವಾಗಿಯೂ ಪ್ರಯೋಜನಾಂತರ ರಹಿತನಾಗಿಯೂ ಮಾಡಬೇಕು. ಕೈಂಕರ್ಯವು ಲಕ್ಷ್ಮೀ ವಿಶಿಷ್ಟ ನಾರಾಯಣನನ್ನು ಉದ್ದೇಶಿಸಿ ಮಾಡಬೇಕು. ದೇವತಾಂತರೋದ್ದೇಶ್ಯಕ ವ್ಯಾಪಾರಗಳನ್ನು ಮಾಡ ಕೂಡದು ಎಂಬುದು ಫಲಿತ.

ಈ ನಿಯಮಗಳೊಡನೆ ಕೈಂಕರ್ಯಗಳನ್ನು ಮಾಡುವವರ ಮಧ್ಯೆ ಮುಮುಕ್ಷುವಾಗಿ ಅನನ್ಯ ಪ್ರಯೋಜನನಾದ ಪ್ರಪನ್ನನು ಪ್ರಕೃಷ್ಟನೆಂದು **ಆಚಾರಾತ್ಮ ಗುಣೋಪಾಯ** ವೆಂದಾರಂಭಿಸಿ ಅನುಗ್ರಹಿಸುತ್ತಾರೆ. ಆಚಾರ, ಆತ್ಮಗುಣಗಳು, ಉಪಾಯ (ಭಕ್ತಿಪ್ರಪತ್ತಿ) ಪುರುಷಾರ್ಥ ವಿಶೇಷಗಳಿಂದ ಕೂಡಿದ ಅಧಿಕಾರಿಯಲ್ಲಿ ಉತ್ತರೋ ತ್ತರವೈಶಿಷ್ಟ್ಯವು ಹೆಚ್ಚು. ಆಚಾರ – ಸಾಮಾನ್ಯಾಚಾರಗಳಿಗಿಂತ ಕರ್ಮಾಂತರಾರ್ಹತೆಯನ್ನುಂಟು ಮಾಡುವ ಚತ್ವಾರಿಂಶತ್ (24) ಸಂಸ್ಕಾರ ರೂಪ ಆಚಾರವಂತನು ಶ್ರೇಷ್ಠ. ಆತ್ಮಗುಣ – ದಯಾ ಸರ್ವಭೂತೇಷು ಕ್ಷಾಂತಿಃ ಅನಸೂಯಾ - ಅಸೂಯೆಯಿಲ್ಲದಿರುವುದು, ಶೌಚ, ಅನಾಯಾಸ, ಅಮಂಗಳಮ್, ಅಕಾರ್ಪಣ್ಯಮ್, ಅಸ್ಪೃಹಾ– ಆಸೆಯಿಲ್ಲದಿರುವುದು ಎಂಬ ಗೌತಮೋಕ್ತ ಆತ್ಮ ಗುಣಗಳುಳ್ಳವನು ಉತ್ಕೃಷ್ಟನು. ಇವನಿಗಿಂತಲೂ ಮೋಕ್ಷೋ ಪಾಯ, ಮತ್ತು ಮೋಕ್ಷ ಪುರುಷಾರ್ಥದಲ್ಲಿ ನಿಷ್ಠೆಯುಳ್ಳವನು ಬಹಳ ಉತ್ಕೃಷ್ಟನು.

**ಇಪ್ರಭಾವನಿಯಮಮ್** ಇತ್ಯಾದಿ – ಈ ರೀತಿಯಾದ ಭಾಗವತ ಪ್ರಭಾವದ ನಿಯಮವು ರಹಸ್ಯತ್ರಯ ಗಳಲ್ಲಿ, ಪ್ರಶಾಸಿತೃತ್ವಾದಿ ಗುಣಗಳನ್ನು ತಿಳಿಸುವ ನಾರಾಯಣಾದಿ ಪದಗಳಲ್ಲಿ ಅನುಸಂಧೇಯ.

---

ಕಳಿಪ್ಪದೆನ್‌ಕೊಂಡು ನಂಬೀ ಕಡಲ್ ವಣ್ಣಾಕದರುಹಿನ್ರೇನ್
ಅಳಿತ್ತೆನಕ್ಕರುಳ್ ಶೆಯ್‌ಕಂಡಾಯ್ ಅರಂಗಮಾನಗರುಳಾನೇ ॥ ತಿರುಮಾಲೈ 25

ಸ್ನಾನಮಾಡಿ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯವೆಂಬ ಮೂರು ಅಗ್ನಿಗಳನ್ನು ಸಾವಧಾನದಿಂದ ಓಂಬುಮ್-ಪರಿಚರ್ಯೆ ಮಾಡತಕ್ಕ ಬ್ರಾಹ್ಮಣ ಕೃತ್ಯವನ್ನು ಒಳಿತ್ತಿಟ್ಟೇನ್-ಶಕ್ತಿಯಿಲ್ಲದೆ ಇರುವುದರಿಂದ ಪರಿಹರಿಸಿದೆನು. ಜ್ಞಾನಯೋಗಕ್ಕೆ ಅಶಕ್ತನ್ನು ನಿನ್ನಲ್ಲಿ ಭಕ್ತಿಯೋಗವನ್ನನುಷ್ಠಿಸಲೂ ಅಶಕ್ತನು. ಆದ್ದರಿಂದ ಏನನ್ನು ಆಶ್ರಯಿಸಿ ಸಂತೋಷಪಡಲಿ. ಸಮುದ್ರ ವರ್ಣನೇ ಅಗತಿಗನಾಗಿ ಘಟ್ಟಿಯಾಗಿ ಕೂಗಿ ಕೊಳ್ಳುತ್ತಿದ್ದೇನೆ. ಎಲೈ ರಂಗನಾಥನೇ ನನ್ನನ್ನು ರಕ್ಷಿಸಿ ಕೃಪೆಮಾಡು.

**ತಹವಾಲ್‌ತರಿಕ್ಕಿನ್ರ ತನ್ನಡಿಯಾರ್ ಹಳ್ಳೈ ತನ್ ತಿರತ್ತಿಲ್**
**ಮಿಹವಾದರಂ ಶೆಯ್ಯುಮ್ ಮೆಯ್ಯರುಳ್ ವಿತ್ತಹನ್ ಮೆಯ್ಯುರೈಯಿನ್ ।**
**ಅಹವಾಯರ್ದಿನರಾರಣ ನೀತಿನೆರಿ ಕುಲೈದಲ್ ।**
**ಉಹವಾರೆನ ವೆಙ್ಗಳ್‌ದೇಶಿಕರುಣರ್ತ್ತಿಯುರೈತ್ತನರೇ ॥೩೨॥**

ಚಾತುರ್ವರ್ಣ್ಯ ಚತುರ್ವಿಧಾಶ್ರಮ ಮುಖೇ ಭೇದೇ ಯಥಾವಸ್ಥಿತೇ ।
ವೃತ್ತಂ ತನ್ನಿಯತಂ ಗುಣಾನುಗುಣಯಾ ವೃತ್ತ್ಯಾ ವಿಶಿಷ್ಟಂ ಶ್ರಿತಾಃ ॥
ತ್ಯಾಗೋಪಪ್ಲವ ನಿತ್ಯದೂರ ಶರಣವ್ರಜ್ಯಾವಿಧೌ ಕೋವಿದಾಃ
ಚಿಂತಾ ಮಭ್ಯುಪಗನ್ತು ಮನ್ತಿಮಯುಗೇ ಪ್ಯೇಕಾನ್ತಿನ ಸ್ಸಂತಿ ನಃ ॥೫೬॥

ಇತಿ ಶ್ರೀ ಕವಿತಾರ್ಕಿಕ ಸಿಂಹಸ್ಯ ಸರ್ವತನ್ತ್ರ ಸ್ವತಂತ್ರಸ್ಯ ಶ್ರೀ ಮದ್ವೇಙ್ಕಟನಾಥಸ್ಯ
ವೇದಾನ್ತಾಚಾರ್ಯಸ್ಯ ಕೃತಿಷು ಶ್ರೀ ಮದ್ರಹಸ್ಯತ್ರಯಸಾರೇ
ಪ್ರಭಾವ ವ್ಯವಸ್ಥಾಧಿಕಾರಃ ಪಂಚವಿಂಶಃ।
ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

---

ಈ ಅಧಿಕಾರದ ಅರ್ಥವನ್ನು **ತಹವಾಲ್ ತರಿಕಿನ್ರ** ಎಂಬ ಪಾಶುರದಿಂದ ಸಂಗ್ರಹಿಸುತ್ತಾರೆ. ಅದಾಗಿ **ತಹವಾಲ್ ತರಿಕ್ಕಿನ್ರ** – ಭಗವತ್ಕೃಪೆಯನ್ನು ಅವಲಂಬಿಸಿ ಆತ್ಮಧಾರಣ ಮಾಡುವ, **ತನ್ನಡಿಯಾರ್‌ಹಳ್ಳೈ** – ತನಗೆ ಶೇಷ ಭೂತರಾದ ಪ್ರಪನ್ನರನ್ನು **ತನ್‌ತಿರತ್ತಿಲ್** – ತನ್ನ (ತಿರಮ್ – ಸ್ವಭಾವಮ್) ಸ್ವಭಾವದಲ್ಲಿ ಸ್ವಸಮಾನ ಭೋಗ ಪ್ರದತ್ವದಿಂದ, **ಮಿಹವಾದರಂ ಶೆಯ್ಯುಮ್** – ಬಹಳ ಆದರವನ್ನು ಮಾಡುವ, **ಮೆಯ್ಯರುಳ್‌ವಿತ್ತಹನ್** – ಅಮೋಘವಾದ ಕೃಪೆಯಿಂದ ವಿಸ್ಮಯನೀಯನಾದ ಕೃಷ್ಣನ, **ಮೆಯ್ಯುರೈಯಿನ್**– ಯಥಾರ್ಥ ವಚನವಾದ ಚರಮ ಶ್ಲೋಕದ, **ಅಹವಾಯರಿಂದನರ್** – ಹೃದಯವನ್ನು ತಿಳಿದವರು, ಚರಮ ಶ್ಲೋಕದ, **ತಾತ್ಪರ್ಯವನ್ನು ತಿಳಿದ ವ್ಯಾಸಾದಿಗಳು** ಎಂದರ್ಥ, **ಅರಣನೀತಿನೆರಿ** – ವೇದಾಂತೋದಿತವಾದ ನೀತಿ ಮಾರ್ಗದ, **ಕುಲೈದಲ್** – ಭಂಗವನ್ನು **ಉಹವಾರ್** – ಅಂಗೀಕರಿಸುವುದಿಲ್ಲ. ಅದಾಗಿ ಅರ್ವಾಚೀನರು ಹೇಳುವ ಸರ್ವಧರ್ಮ ಸ್ವರೂಪ ತ್ಯಾಗವನ್ನು ಚರಮಶ್ಲೋಕೋಪದೇಷ್ಟಾವಾದ ಕೃಷ್ಣ ಪರಮಾತ್ಮನೂ, ತತ್ಪಾತ್ಪರ್ಯವನ್ನು ತಿಳಿದ ವ್ಯಾಸರೇ ಮೊದಲಾದವರುಗಳೂ ಅಂಗೀಕರಿಸುವದಿಲ್ಲ, ಎಂಬುದು ಸೂಚಿತ. **ಎಂಗಳ್‌ದೇಶಿಕರುಣರ್ತ್ತಿಯುರೈತ್ತನರೇ** – ನಮ್ಮ ಆಚಾರ್ಯರುಗಳಾದ ವಾದಿಹಂಸಾಂಬುವಾಹಾದಿಗಳು, ನಿಜವಾದ ಅರ್ಥವನ್ನು ಉಪದೇಶಿಸಿದರೆಂದು ಶ್ರೀಮನ್ನಿಗಮಾಂತ ಮಹಾದೇಶಿಕರು ಅನುಗ್ರಹಿಸುತ್ತಾರೆ. ಅದಾಗಿ ಮೇಲೆ ಹೇಳಿರುವ ಅರ್ಥಗಳು ಸದಾಚಾರ್ಯೋಪದಿಷ್ಟಗಳು ಸ್ವಕಪೋಲ ಕಲ್ಪಿತಗಳಲ್ಲವೆಂದು ತಾತ್ಪರ್ಯ. ಆದ್ದರಿಂದ ಸಹೃದಯರಿಗೆ ಉಪಾದೇಯತಮಗಳು ಎಂದು ಭಾವ.

ಹೀಗೆ ಪ್ರಭಾವ ವ್ಯವಸ್ಥೆಯನ್ನು ಮಾಡಿ ಆಜ್ಞಾನುಜ್ಞಾ ಕೈಂಕರ್ಯಗಳು ಅವಶ್ಯ ಕರ್ತವ್ಯಗಳೆಂದು ಸ್ಥಾಪಿಸಿರುವುದಕ್ಕೆ ಏನು ಪ್ರಯೋಜನ? ಕಲಿಯುಗದಲ್ಲಿ ಸರ್ವ ಧರ್ಮ ಸ್ವರೂಪ ತ್ಯಾಗವನ್ನು ಮಾಡಿಯೂ ಸನ್ಯಾಸಾಶ್ರಮವನ್ನು ಸ್ವೀಕರಿಸಿಯೂ ಯಥೇಚ್ಛೆಯಂತೆ ಸಂಚರಿಸುವುದರಲ್ಲಿಯೇ ರುಚಿಯುಳ್ಳ ಜನರ ಸಂಖ್ಯೆ ಅಧಿಕವಾಗಿರುವಾಗ, ನಿಮ್ಮ ಈ ಉಪದೇಶಗಳನ್ನು ಪಡೆದು ಧರ್ಮಾನುಷ್ಠಾನ ಮಾಡುವವರಿದ್ದಾರೆಯೇ ಎಂದು ಕೇಳುವವರಿಗೆ, ಈ ಕಾಲದಲ್ಲಿಯೂ ಯಥಾವಸ್ಥಿತವಾದ ನಮ್ಮ ಉಪದೇಶಗಳನ್ನು ಅಂಗೀಕರಿಸಿ ಸನ್ಮಾರ್ಗ ಪ್ರವರ್ತಕರು ಇದ್ದಾರೆಂದು **ಚಾತುರ್ವರ್ಣ್ಯ ಚತುರ್ವಿಧಾಶ್ರಮ ಮುಖೇ** ಎಂದಾರಂಭಿಸಿ ಅನುಗ್ರಹಿಸುತ್ತಾರೆ.

ಆದಾಗಿ ಚತುರ್ಣಾಂವರ್ಣಾನಾಂ ಭಾವಃ ಚಾತುರ್ವರ್ಣ್ಯಂ – ಬ್ರಾಹ್ಮಣ್ಯಾದಿ ಜಾತಿಗಳು ಚತಸ್ರಃ ವಿಧಾಃ ಯೇಷಾಂ ಚತುರ್ವಿಧಾಃ ಚತುರ್ವಿಧಾಶ್ಚತೇ ಆಶ್ರಮಾಶ್ಚ ಚತುರ್ವಿಧಾಶ್ರಮಾಃ **ತೇಮುಖಾನಿಯಸ್ಯ.** ಯಾವ ಕುಲಚರಣ ದೇಶಾದಿ ಭೇದಗಳಿಗೆ ಚಾತುರ್ವರ್ಣ್ಯ ಚತುರ್ವಿಧಾಶ್ರಮಗಳು (ಮುಖ) ದ್ವಾರಗಳೋ ಆಚಾತುರ್ವರ್ಣ್ಯ ಚತುರ್ವಿಧಾಶ್ರಮ (ಮುಖ) ದ್ವಾರವಾದ ಭೇದಗಳು **ಯಥಾವಸ್ಥಿತೇಸತಿ** – ಶಾಸ್ತ್ರೋಕ್ತ ಪ್ರಕಾರವಾಗಿ ವ್ಯವಸ್ಥಿತವಾಗಿರಲು, **ತನ್ನಿಯತಂವೃತ್ತಂ** – ಆಯಾಯಾ ಜಾತ್ಯಾದಿಗಳಿಗೆ ನಿಯತವಾದ ಆಚಾರವನ್ನು **ಗುಣಾನುಗುಣಯಾವೃತ್ತ್ಯಾ** – ಪ್ರಪನ್ನತ್ವ, ಪರಮೈಕಾಂತಿತ್ವ, ವೈಷ್ಣವತ್ವಾದಿ ರೂಪ ಗುಣಗಳಿಗೆ ಅನುರೂಪ ವಾದ ಆಜ್ಞಾನುಜ್ಞಾ ಕೈಂಕರ್ಯಾನುಷ್ಠಾನ ರೂಪವಾದ ವ್ಯಾಪಾರಗಳೊಡನೆ **ವಿಶಿಷ್ಟಂ** – ಕೂಡಿರುವುದಾಗಿ, **ಶ್ರಿತಾಃ–** ಆಶ್ರಯಿಸಿರುವವರುಗಳಾಗಿ, **ತ್ಯಾಗೋಪಪ್ಲವ** – ತ್ಯಾಗ – ಸರ್ವಧರ್ಮಗಳನ್ನು ಸ್ವರೂಪತಃ ಬಿಟ್ಟಿರುವ, ಉಪ ಪ್ಲವ – ಉಪದ್ರವಕ್ಕೆ **ನಿತ್ಯದೂರ** – ಸರ್ವದಾದೂರದಲ್ಲಿರುವ, ಸರ್ವಾತ್ಮನಾ ಸರ್ವಧರ್ಮ ಸ್ವರೂಪ ತ್ಯಾಗ ಸಂಬಂಧವನ್ನು ಬಿಟ್ಟಿರುವವರಾಗಿ, **ಶರಣವ್ರಜ್ಯಾವಿಧೌ** – ಯಥಾ ಶಾಸ್ತ್ರವಾಗಿ ಶರಣಾಗತಿಯ ಅನುಷ್ಠಾನದಲ್ಲಿ, **ಕೋವಿದಾಃ** - ಸಮರ್ಥರುಗಳಾದ, **ಏಕಾಂತಿನಃ** – ಪರಮೈಕಾಂತಿಗಳಾದ ಕೆಲವು ಮಹಾಪುರುಷರುಗಳು, **ಅಂತಿಮ ಯುಗೇಽಪಿ** – ಯಥೇಚ್ಛೆಯಾಗಿ ನಡೆದು ಕೊಳ್ಳುವವರಿಗೆ ಆಸ್ಪದವಾದ ಈ ಕಲಿಯುಗದಲ್ಲಿಯೂ, **ನಶ್ಚಿಂತಾ ಮಭ್ಯುಪಗಂತುಂ** – ನಮ್ಮ ಈ ಪ್ರಭಾವ ವ್ಯವಸ್ಥಾರೂಪವಾದ ಚಿಂತೆಯನ್ನು ಅಂಗೀಕರಿಸಲು, **ಸಂತಿ** – ನಮಗೆ ಸಹಾಯಕರಾಗಿದ್ದಾರೆ. ಆದ್ದರಿಂದ ನಮ್ಮ ಈ ಪ್ರಭಾವ ವ್ಯವಸ್ಥಾರೂಪವಾದ ವಿಚಾರವು ಸಫಲವೆಂದು ಆಚಾರ್ಯರ ಅಭಿಪ್ರಾಯ.

**ಇತಿ ಶ್ರೀಮದ್ರಹಸ್ಯತ್ರಯಸಾರದ ಇಪ್ಪತ್ತೈದನೆಯ ಪ್ರಭಾವ ವ್ಯವಸ್ಥಾಧಿಕಾರಕ್ಕೆ "ಸಾರಚಂದ್ರಿಕಾ" ವ್ಯಾಖ್ಯಾನವು ಸಮಾಪ್ತ.**

**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ**

श्रियै नमः

श्रीमते रामानुजाय नमः

श्रीमते निगमान्त महादेशिकाय नमः

# 26. ಅಥ ಪ್ರಭಾವರಕ್ಷಾಧಿಕಾರಃ

ಶಿಲಾದೇ ಸ್ಸ್ತ್ರೀತ್ವಾದಿ ರ್ವಿಪರಿಣತಿ ರಸ್ತ್ವದ್ಭುತ ಮಿದಂ ।
ತತೋಽಪ್ಯೇತಚ್ಚಿತ್ರಂ ಯದುತ ದಹನಸ್ಯೈವ ಹಿಮತಾ ॥
ತೃಣಸ್ಯೈ ವಾಸ್ತ್ರತ್ವಂ ರಿಪುಷು ನಿಹತೇ ರೇವ ಹಿತತಾ ।
ಪದತ್ರೇಣೈವೇಹ ತ್ರಿಭುವನಪರಿತ್ರಾಣಮಿತಿಚ ॥೫೭॥

---

ಶ್ರೀಮತೇ ನಿಗಮಾಂತ ಮಹಾದೇಶಿಕಾಯನಮಃ

ಶ್ರೀ ಮದ್ರಹಸ್ಯತ್ರಯಸಾರದ **ಪ್ರಭಾವರಕ್ಷಾಧಿಕಾರಕ್ಕೆ ಸಾರಚಂದ್ರಿಕಾ** ವ್ಯಾಖ್ಯಾನ

ಹಿಂದಿನ ಅಧಿಕಾರದಲ್ಲಿ ಉಪಾಯ ಪ್ರಭಾವಕ್ಕೆ ಜಾತಿನಾಶಕತ್ವಾದಿಗಳಿಲ್ಲವೆಂದು ಹೇಳಿ ವರ್ಣಾಶ್ರಮ ಧರ್ಮ ವ್ಯವಸ್ಥೆಯನ್ನು ಆಚಾರ್ಯರು ಮಾಡಿದರು. ಈ ಅಧಿಕಾರದಲ್ಲಿ ಪ್ರಪತ್ತಿಗೆ ಪ್ರಾರಬ್ಧ ಕರ್ಮವನ್ನು ಹೋಗಲಾಡಿಸುವ ಶಕ್ತಿಯಿಲ್ಲವೆಂಬ ಪಕ್ಷವನ್ನು ನಿರಾಕರಿಸಿ ಉಪಾಯ ಪ್ರಭಾವವನ್ನು ರಕ್ಷಿಸಲು, ಅಧಿಕಾರಾರ್ಥವನ್ನು **ಶಿಲಾದೇ ಸ್ತ್ರೀತ್ವಾದಿಃ** ಎಂದಾರಂಭಿಸಿ ಸಂಗ್ರಹಿಸುತ್ತಾರೆ. ಅದಾಗಿ **ಶೀಲಾದೇಃ**–ಶಿಲೆ ಆದಿಶಬ್ದದಿಂದ ಬೆಂದ ಕಟ್ಟಿಗೆ ಅಹಲ್ಯೆಯು ಶಾಪದಿಂದ ಕಲ್ಲಾಗಿದ್ದಳು. ಭಗವಂತನಾದ ಶ್ರೀ ರಾಮಚಂದ್ರನ ಪಾದಧೂಳಿ ಸ್ಪರ್ಶದಿಂದ ಸ್ತ್ರೀ ಯಾದಳು. "**ಆದಿ ಶಬ್ದದಿಂದ** ಉತ್ತರೆಯ ಗರ್ಭದಲ್ಲಿದ್ದ ಶಿಶುವು ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಬೆಂದು ಹೋದ ಕಟ್ಟಿಗೆ ಯಂತೆ ಹೊರಗೆ ಬಿದ್ದಿತು. ಶ್ರೀ ಕೃಷ್ಣನ ಪರಮಾತ್ಮನ ಪಾದ ಸ್ಪರ್ಶದಿಂದ, ಸುಂದರವಾದ ಮಗುವಾಯಿತು. **ವಿಪರಿಣತಿರಸ್ತ್ವದ್ಭುತಮಿದಂ**–ಹೀಗೆ ಪರಿಣಾಮವನ್ನು ಹೊಂದಿದ ಅದ್ಭುತವಿರಲಿ. ಇಂಥಹ ಆಶ್ಚರ್ಯಕರಗಳಾದ ವೃತ್ತಾಂತಗಳಿಂದ, ಸಂಸಾರಿ ಚೇತನನ್ನು ಭಗವಂತನು ಸಂಕಲ್ಪಿಸಿದ ಸಮಯದಲ್ಲಿ ತತ್ಕ್ಷಣವೇ ನಿತ್ಯಸೂರಿಗಳ ಗೋಷ್ಠಿಯಲ್ಲಿ ಸೇರಿಸುವ ಅಘಟಿತ ಘಟನಾ ಸಾಮರ್ಥ್ಯವು ಸುದೃಢೀಕರಿಸಲ್ಪಡುತ್ತದೆ. **ತತೋಽಪ್ಯೇತಚ್ಚಿತ್ರಂ** ಇದಕ್ಕಿಂತಲೂ ಮುಂದೆ ಹೇಳುವ ಈ ವಿಷಯವು ಆಶ್ಚರ್ಯವಾದದ್ದು ಯಾವುದೆಂದರೆ **ದಹನಸ್ಯೈವ**–ದಾಹಕ ಸ್ವಭಾವನೇ ಆಗಿರುವ ಅಗ್ನಿಯು, ಪ್ರಹ್ಲಾದನ ವಿಷಯದಲ್ಲಿ **ಹಿಮತೇತಿಯತ್**– ಶೀತಳವಾಯಿತೆಂಬ ವೃತ್ತಾಂತವು ಆಶ್ಚರ್ಯವೆಂದರ್ಥ. ಭಗವಂತನ ಹಾಗೆಯೇ ಮಹಾಲಕ್ಷ್ಮಿಗೂ ಈ ಪ್ರಭಾವವುಂಟು. ಲಂಕೆಯಲ್ಲಿದ್ದ ರಾಕ್ಷಸರು ಆಂಜನೇಯ ಸ್ವಾಮಿಯ ಬಾಲಕ್ಕೆ ಬೆಂಕಿ ಹಚ್ಚಲು ಅದು ಧಗಧಗನೆ ಉರಿಯ ಆರಂಭಿಸಿತು. ಈ ವೃತ್ತಾಂತವು ಅಶೋಕವನದಲ್ಲಿದ್ದ ಸೀತೆಗೆ ತಿಳಿಯಲು, ಅವಳು ಒಡನೇ "ಶೀತೋ ಭವ ಹನೂಮತಃ" ಎಂದು ಹೇಳಲು ಅಗ್ನಿಯು ತನ್ನ ಪ್ರಭಾವವನ್ನಡಗಿಸಿಕೊಂಡು ಶೀತಳವಾಯಿತೆಂಬ ವೃತ್ತಾಂತವೂ ಇಲ್ಲಿ ಅನುಸಂಧೇಯ. ಈ ರೀತಿಯಾದ ದಿವ್ಯದಂಪತಿಗಳಿಬ್ಬರಿಗೂ ಅಸ್ಖಲಿತವಾದ ಶಕ್ತಿ ಪ್ರದರ್ಶನದಿಂದ ಸಂಸಾರಿ ಚೇತನನ್ನು ಅವನ ಸಮಸ್ತ ಪಾಪಗಳಿಂದಲೂ ಬಿಡಿಸಿ ಮೋಕ್ಷಕ್ಕೆಕರೆದೊಯ್ಯುವ ಉಪಾಯತ್ವವುಂಟೆಂಬುದು ಸೂಚಿತ. **ತೃಣಸ್ಯೈವಾಸ್ತ್ರತ್ವಂ**

**ಅಧಿಕಾರಾರ್ಥಂ ಪ್ರತಿಜಾನೀತೇ.**

**ಉಪಾಯ ಪ್ರಭಾವ ವ್ಯವಸ್ಥೈ ಶೊನ್ನೋಮ್. ಇನಿಮೇಲ್ ಉಪಾಯ ಪ್ರಭಾವತ್ತೈ ಸಙ್ಕುಚಿತ ಮಾಹಪ್ಪಾರ್ತ್ತು ವರುಮ್ ತಪ್ಪುಹಳ್ ಪರಿಹರಿಕ್ಕಿರೋಮ್.**

**ಪ್ರಪತ್ತೇಃ ಪ್ರಾರಬ್ಧ ನಾಶಕತ್ವಂ ಸಂಭವತೀತ್ಯತಸ್ಯ ಆಕ್ಷೇಪಃ**

(೧) "ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ" ಎನ್ಗಿರ ಕಣಕ್ಕಿಲೇ,

೨) "ಉಪಾಯ ಭಕ್ತಿಃ ಪ್ರಾರಬ್ಧ ವ್ಯತಿರಿಕ್ತಾಘನಾಶಿನೀ।

ಸಾಧ್ಯಭಕ್ತಿಸ್ತು ಸಾಹಂತ್ರೀ ಪ್ರಾರಬ್ಧಸ್ಯಾಪಿ ಭೂಯಸೀ ॥"

---

ಕಾಕಾಸುರನ ವಿಷಯದಲ್ಲಿ ಶ್ರೀ ರಾಮಚಂದ್ರನು "ಸದರ್ಭಂ ಸಂಸ್ತರಾದ್ಗೃಹ್ಯ ಬ್ರಾಹ್ಮೇಣಾಸ್ತ್ರೇಣ ಯೋಜಯತ್, ಎಂದು ತಾನು ಹಾಸಿಕೊಂಡಿದ್ದ ದರ್ಭೆಗಳಲ್ಲೊಂದನ್ನು ತೆಗೆದುಕೊಂಡು ಬ್ರಹ್ಮಾಸ್ತ್ರವಾಗಿ ಪ್ರಯೋಗಿಸಿದನು. ರಿಪುಷುನಿಹತೇರೇವಹಿತತಾ-ಶತ್ರುಗಳನ್ನು ಕೊಲ್ಲುವುದರಿಂದಲೇ ಅವರಿಗೆ ಹಿತವನ್ನುಂಟು ಮಾಡುತ್ತದೆ ಎಂಬುದು ಜಯವಿಜಯರು ಬ್ರಾಹ್ಮಣಶಾಪದಿಂದ ಮೂರು ಜನ್ಮಗಳಲ್ಲಿ ರಾಕ್ಷಸರಾಗಿ ಹುಟ್ಟಿ, ಮೂರು ಜನ್ಮಗಳಲ್ಲಿಯೂ ಭಗವಂತನಿಂದಲೇ ಕೊಲ್ಲಲ್ಪಟ್ಟು, ಪಾಪಗಳನ್ನು ಕಳೆದುಕೊಂಡು ಪುನಃ ತಮ್ಮ ಪದವಿಗಳನ್ನು ಪಡೆದರೆಂಬ ವೃತ್ತಾಂತವು ಇಲ್ಲಿ ಅನುಸಂಧೇಯ. **ಪದತ್ರೇಣೈವ**- ಶ್ರೀರಾಮಾವತಾರದಲ್ಲಿ ತನ್ನ ಪದತ್ರಾಣವಾದ – ಪಾದುಕೆಯಿಂದಲೇ **ತ್ರಿಭುವನ ಪರಿತ್ರಾಣಮಿತಿಚ**-ಮೂರು ಲೋಕಗಳನ್ನೂ ಕಾಪಾಡಿದನೆಂಬ ವೃತ್ತಾಂತವು, **ಇತೋಪಿಚಿತ್ರಂ**-ಮೇಲೆ ಹೇಳಿದುದಕ್ಕಿಂತ ಅತ್ಯಾಶ್ಚರ್ಯವಾದದ್ದು. ಹೀಗೆ ಭಗವತ್ಪ್ರಭಾವದಿಂದ ಅತಿವಿಚಿತ್ರವಾದ ಕಾರ್ಯಗಳು ಉಂಟಾದ್ದರಿಂದ ಭಗವದ್ವಿಷಯ ಪ್ರಪತ್ತಿಗೆ ಭಗವತ್ಸಂಬಂಧದಿಂದ ಪ್ರಾರಬ್ಧನಾಶಕತ್ವಾದಿಗಳು ಕೈಮುತಿಕ ನ್ಯಾಯ ಸಿದ್ಧವೆಂಬುದು ಭಾವ.

ಸಂಗತಿ ಪ್ರದರ್ಶನಾರ್ಥವಾಗಿ ಪೂರ್ವಾಧಿಕಾರದಲ್ಲಿ ಹೇಳಿದ ವಿಷಯವನ್ನು ಉಪಾಯ ಪ್ರಭಾವತ್ತೈ ಎಂದಾರಂಭಿಸಿ ಹೇಳುತ್ತಾರೆ. ಆದಾಗಿ ಪೂರ್ವಾಧಿಕಾರದಲ್ಲಿ ಭಕ್ತಿ ಪ್ರಪತ್ತಿ ರೂಪ ಉಪಾಯಗಳ ಪ್ರಭಾವವನ್ನು ಆಚಾರ್ಯರು ಅನುಗ್ರಹಿಸಿದುದಾಗಿ ತಿಳಿಸುತ್ತಾರೆ. **ಇನಿಮೇಲ್**-ಈ ಅಧಿಕಾರದಲ್ಲಿ ಉಪಾಯ ಪ್ರಭಾವವನ್ನು ಸಂಕೋಚವಾಗಿ ನೋಡುವುದರಿಂದ ಉಂಟಾಗುವ ತಪ್ಪುಗಳನ್ನು ಆಚಾರ್ಯರು ಪರಿಹರಿಸುತ್ತಾರೆ.

**ಪ್ರಪತ್ತಿಯು ಪ್ರಾರಬ್ಧ ಕರ್ಮಗಳನ್ನೂ ಹೋಗಲಾಡಿಸುತ್ತದೆ ಎಂಬುದಕ್ಕೆ ಆಕ್ಷೇಪ"**

ಆದಾಗಿ 1) **ಅತ್ಯುತ್ಕಟೈಃ ಪುಣ್ಯಪಾಪೈಃ** – ಇತ್ಯಾದಿಯಾಗಿ ಬಹಳ ಉತ್ಕಟವಾದ ಪುಣ್ಯ ಪಾಪಗಳಿಗೆ ಈ ಜನ್ಮದಲ್ಲಿಯೇ ಫಲವನ್ನು ಅನುಭವಿಸುತ್ತಾನೆ ಎಂಬಂತೆ 2) **ಉಪಾಯಭಕ್ತಿಃ ಇತ್ಯಾದಿ** ಉಪಾಯ ರೂಪವಾದ ಭಕ್ತಿ ಯೋಗವು ಅಂದರೆ ಮೋಕ್ಷಸಾಧನವಾದ ಭಕ್ತಿಯೋಗವು, ಫಲವನ್ನು ಕೊಡಲು ಆರಂಭಿಸಿರುವ ಕರ್ಮ ವಿನಹ ಬಾಕಿ ಸಂಚಿತ ಪಾಪಗಳನ್ನು ಹೋಗಲಾಡಿಸುತ್ತದೆ. ಸಾಧ್ಯಭಕ್ತಿಯು ಅಂದರೆ ಸ್ವತಂತ್ರ ಪ್ರಪತ್ತಿಯು (ಸಾಧ್ಯಾಚಸಾ ಭಕ್ತಿಶ್ಚ ಸಾಧ್ಯವಾದ ಭಕ್ತಿರೂಪವಾದದ್ದು) ಭೂಯಸೀ-ಅನೇಕಗಳಾದ, ಪ್ರಾರಬ್ಧ ಪಾಪಗಳನ್ನೂ

---

1) ವಿಹಗೇಂದ್ರ ಸಂಹಿತೆ 2)

ಎನ್ಗೈಯಾಲೇ ಪ್ರಾರಬ್ಧಙ್ಗಳೈಯುಮ್ ಕೂಡ ಅಮುಕ್ಕಿ, ತನ್ಫಲತ್ತೈ ಕೊಡುಕ್ಕವಲ್ಲ ಪ್ರಪತ್ತಿಯೈ ಪಣ್ಣಿನವನುಕ್ಕು, ವಿದ್ಯಾನ್ತರ ನ್ಯಾಯತ್ತಾಲೇ, ಉತ್ತರಪೂರ್ವಾಘಙ್ಗಳುಮ್ ಇವ್ವಿದ್ಯೈಕ್ಕು ತನ್ನೇಱ್ಱಮಾನ ಸಾಮರ್ಥ್ಯತ್ತಾಲೇ ಪ್ರಾರಬ್ಧ ಕರ್ಮಫಲತ್ತೈ ಪ್ಪತ್ತವೇಣ್ಡಿನ ಅರ್ತ್ತಿಯಿನೆಲ್ಲೈಕ್ಕೀಡಾಹ ಕ್ಷಣಾನ್ತರ, ದಿವಸಾನ್ತರ, ಜನ್ಮಾನ್ತರಾದ್ಯನುವೃತ್ತಿಯುಮ್ ಕೞಿಯಕ್ಕಡವದೆನ್ಱು "ಮಾಶುಚಃ" ಎನ್ಱ ವಾಕ್ಯತ್ತುಕ್ಕು ಅಭಿಪ್ರಾಯಮ್.

ಪೂರ್ವಪಕ್ಷಾನುವಾದಃ

ಇವ್ವರ್ಥಮ್ ತತ್ವಮಾಹಿಲ್ ಪ್ರಾರಬ್ಧಕರ್ಮ ವಿಶೇಷ ಫಲಮಾಯ್ ಕೊಣ್ಡು ವರುಹಿರ ದುಃಖಙ್ಗಳುಮ್, ದುಃಖ ಕಾರಣಙ್ಗಳಾನ ಕರ್ಮಙ್ಗಳಿನುಡೈಯ ಆರ್ಜನಮುಮ್, ಕೞಿಯವೇಣ್ಡಾವೋ? ಆರ್ತನಾಯ್ ಪುರುಷನ್ ಅರ್ಥಿಕ್ಕ ಕೊಡುಕ್ಕ ವೇಣುಮೆನ್ನಿಲ್, ಆನುಷಙ್ಗಿಕಮಾನ ಪಙ್ಕ್ತಿ ಪಾವನತ್ವಾದಿಹಳ್ಪೋಲೇ, ಅನಭಿಸಂಹಿತಙ್ಗಳೈಯುಮ್ ಕೂಡ ಹಿತೈಷಿಯಾನ ಈಶ್ವರನ್ ತಾನೇ ಕೊಡುಕ್ಕತ್ತಟ್ಟೆನ್? ಇಪ್ಪಡಿ ಶೆಯ್ಯಕ್ಕಾಣಾಮೈಯಾಲ್, ಶೋಕವಿಷಯಮಾನ ಅಂಶಮೆಲ್ಲಾಮ್ ನಿಶ್ಶೇಷಮಾಹ ಪ್ರಪತ್ತಿಯಾಲೇ ಕೞಿಯುಮೆನ್ಱುವಿಡಮ್ ಪ್ರಪತ್ತಿ ಪ್ರಭಾವಾತಿಶಯತ್ತೈ ಪ್ಪಱ್ಱಸ್ತುತಿ ಪಣ್ಣಿನ ಪಡಿಯೆನ್ಱು ಶಿಲರ್ ಇದಿನ್ ಪ್ರಭಾವತ್ತೈ ವರೈಯಿಟ್ಟುಪ್ಪಾರ್ಪರ್ಗಳ್.

---

ಹೋಗಲಾಡಿಸುತ್ತದೆ. ಎನ್ಗೈಯಾಲೇ ಎಂದು ಹೇಳುವುದರಿಂದ ಫಲವನ್ನು ಕೊಡಲು ಆರಂಭಿಸಿರುವ ಕರ್ಮವನ್ನೂ ಅಮುಕ್ಕಿ-ಹೋಗಲಾಡಿಸಿ, ತನ್ನ ಫಲವನ್ನು ಕೊಡಲು ಸಾಮರ್ಥ್ಯವುಳ್ಳ ಸ್ವತಂತ್ರ ಪ್ರಪತ್ತಿಯನ್ನು ಅನುಷ್ಠಿಸಿದವನಿಗೆ ವಿದ್ಯಾಂತರ ನ್ಯಾಯತ್ತಾಲೇ-ಇತರ ವಿದ್ಯೆಗಳ ನ್ಯಾಯದಂತೆ, ತನ್ನೇಱ್ಱಮಾನ-ತನಗೇ ಅಸಾಧಾರಣವಾದ ಆರ್ತಿಯಿಲೇ ಎಲ್ಲೈಕ್ಕೀಡಾಹ-ತನ್ನ ಆರ್ತಿಯ ಎಲ್ಲೆಗನುಗುಣವಾಗಿ, ಕ್ಷಣಾಂತರ ದಿವಸಾಂತರ ಇತ್ಯಾದಿ ಮುಂದಿನ ಕ್ಷಣ, ಮುಂದಿನ ದಿನ, ಮುಂದಿನ ಜನ್ಮ ಮೊದಲಾದವುಗಳ ಅನುವೃತ್ತಿಯು ಕೞಿಯಕ್ಕಡವದೆನ್ಱು-ಅನುವರ್ತಿಯೂ ಕಳೆದು ಹೋಗುತ್ತದೆಯೆಂದು "ಮಾಶುಚಃ" ಎಂಬ ವಾಕ್ಯಕ್ಕೆ ಅಭಿಪ್ರಾಯ.

ಇನ್ನು ಸಿದ್ಧಾಂತಿಯು ಮತದ ಅನುವಾದ ಇದರಲ್ಲಿ ಪೂರ್ವಪಕ್ಷಿಯ ಶಂಕೆಯನ್ನು ಇವ್ವರ್ಥಮ್ ತತ್ವಮಾಹಿಲ್ ಎಂದಾರಂಭಿಸಿ ತೋರಿಸುತ್ತಾರೆ. ಆದಾಗಿ ಪ್ರಾರಬ್ಧಕರ್ಮ ವಿಶೇಷಕಾರಣವಾಗಿ ಬರುವ ದುಃಖಗಳೂ ದುಃಖಕಾರಣಗಳಾದ ಕರ್ಮಗಳ ಆರ್ಜನಮುಮ್-ಸಂಪಾದನೆಯೂ ಅಂದರೆ ಕರ್ಮಗಳು ಉಂಟಾಗುವುದೂ, ಕಳೆದು ಹೋಗಬೇಕಿಲ್ಲವೇ. ಆರ್ತನಾಯ್ - ಇಷ್ಟ್ಯಾದ ಆರ್ತನಾಗಿ ಪುರುಷನು ಯಾಚಿಸದರೇನೆ ಕೊಡಬೇಕೆಂದು ಉತ್ತರವನ್ನು ಹೇಳುವುದಾದರೆ ಆನುಷಂಗಿಕವಾಗಿ ಬರುವ ಪಂಕ್ತಿಪಾವನತ್ವಾದಿಗಳ ಹಾಗೆ, ಅನಭಿಸಂಹಿತಂಗಳೈಯುಮ್ ಕೂಡ-ನಾವು ಕೇಳದೆ ಇರುವುದನ್ನೂ, ಹಿತೈಷಿಯಾದ ಈಶ್ವರನು ತಾನೇ ಕೊಡಲು ಏನು ಅಡ್ಡಿ? ಇಪ್ಪಡಿ ಶೆಯ್ಯಕ್ಕಾಣಾಮೈಯಾಲ್ ಹೀಗೆ ಮಾಡುವುದನ್ನು ನೋಡಿಲ್ಲವಾದ್ದರಿಂದ, ಪ್ರಪತ್ತಿಯಿಂದ ಶೋಕ ವಿಷಯವಾದ ಅಂಶವೆಲ್ಲಾ ನಿಶ್ಶೇಷವಾಗಿ ಕಳೆದು ಹೋಗುತ್ತದೆ ಎಂಬುದು ಪ್ರಪತ್ತಿಯ ಪ್ರಭಾವಾತಿಶಯವನ್ನು ಕುರಿತು ಸ್ತುತಿ ಮಾಡಿದ ಹಾಗೆ ಎಂದು ಕೆಲವರು ಈ ಪ್ರಪತ್ತಿಯ ಪ್ರಭಾವವನ್ನು ವರೈಯಿಟ್ಟುಪ್ಪಾರ್ಪರ್ಗಳ್ - ಪರಿಚ್ಛೇದಿಸಿ ಅಂದರೆ ಒಂದು ಅಳತೆಯೊಳಗೇ ಇರುವುದೆಂದು ನೋಡುತ್ತಾರೆ. ಅಂದರೆ ಪ್ರಪತ್ತಿಯ ಪ್ರಭಾವವು ಪರಿಮಿತಿಯುಳ್ಳದ್ದು ಎಂದು ಹೇಳುವರು.

**ಶಙ್ಕಾ ಪರಿಹಾರ**

ಇದುಕ್ಕುತ್ತರವ್ – ಅನುಗ್ರಹಶೀಲನಾಯ್ ಆಶ್ರಯಿಪ್ಪಾರ್ಕ್ಕು ಪ್ರಪತ್ತಿ ವಾಕ್ಯೋಚ್ಚಾರಣ ಪ್ರಾರಂಭತ್ತಿಲೇ ಕಡುಹ ಮೋಕ್ಷಮ್ ಕೊಡಕ್ಕ ತ್ವರಿಕ್ಕಿರ ಈಶ್ವರನ್, ಇವನುಡೈಯ ನಶೈಯಾಲೇ ಶಿಲದು ಕಾಲ ಮಿಙ್ಗೇ ವೈಕ್ಕ ನಿಶೈನ್ದ ವಳವಿಲೇ ಇವ್ವಿಡತ್ತಿಲುಳ್ಳ ಶಿತ್ತಿನ್ಬಙ್ಗಳೈ ದುಃಖಪ್ರಸಂಗ ರಹಿತಮಾಹ ಅನುಭವಿಕ್ಕ ಮಾಹಿಲಿವನುಕ್ಕಿ ನ್ನಶೈಯೊರುಕ್ಕಾಲುಮ್ ಮಾಳಾದು, ಭಗವದನುಭವತ್ತಿಲ್ ಭೋಗ್ಯತಾಬುದ್ಧಿಯುಮ್ ಕೂಳನ್ದು ವಿಟ್ಟು ವಾರಾದು. ಆಹೈಯಾಲ್

೧) "ಯಸ್ಯಾನುಗ್ರಹ ಮಿಚ್ಛಾಮಿ ತಸ್ಯವಿತ್ತಂ ಹರಾಮ್ಯಹಮ್ ।
ಬಾಂಧವೈಶ್ಚವಿಯೋಗೇನ ಸದಾ ಭವತಿ ದುಃಖಿತಃ।
ತೇನ ದುಃಖೇನ ಸಂತಪ್ತೋ ಯದಿಮಾಂ ನ ಪರಿತ್ಯಜೇತ್ ।
ತಂ ಪ್ರಸಾದಂ ಕರಿಷ್ಯಾಮಿ ಯ ಸ್ಸುರೈರಪಿ ದುರ್ಲಭಃ ॥

ಎನ್ಱಿರಪಡಿಹಳಿಲೇ ದುಃಖಾದಿಹಳುಕ್ಕು ಕ್ಕಾರಣಮಾನ ಪ್ರಾರಬ್ಧಕರ್ಮ ವಿಶೇಷತ್ತೈ ಸನ್ನಿಹಿತಙ್ಗಳಾನ ಕಶಾದಿಹಳೈಪ್ಪೋಲೇ ತುಣೈಯಾಹಕ್ಕೊಂಡು ಪಿತ್ರಾದಿಹಳೈಪ್ಪೋಲೇ ಶಿಕ್ಷಕನಾನ ಈಶ್ವರನ್.

---

ಮೇಲೆ ಹೇಳಿದ ಅಕ್ಷೇಪಕ್ಕೆ ಸಮಾಧಾನ ಈಶ್ವರನು ಪ್ರಪನ್ನನಿಗೆ ದುಃಖವನ್ನು ಕೊಡುವುದೂ ಸಂಸಾರದಲ್ಲಿ ವೈರಾಗ್ಯವನ್ನು ಹುಟ್ಟಿಸಿ ಮೋಕ್ಷವನ್ನು ಪಡೆಯಲು ತ್ವರೆಯುನ್ನುಂಟು ಮಾಡಲು.

ಇದುಕ್ಕುತ್ತರವ್–ಇದಕ್ಕೆ ಸಮಾಧಾನವೇನೆಂದರೆ **ಅನುಗ್ರಹಶೀಲನಾಯ್** ಭಗವಂತನು ಅನುಗ್ರಹವನ್ನು ಮಾಡುವುದರಲ್ಲೇ ಸ್ವಭಾವವುಳ್ಳವನು : **ಆಶ್ರಯಿಪ್ಪಾರ್ಕ್ಕು** ಇತ್ಯಾದಿ- ತನ್ನನ್ನು ಆಶ್ರಯಿಸುವವರಿಗೆ ಪ್ರಪತ್ತಿ ವಾಕ್ಯವನ್ನು ಮುಮುಕ್ಷುವು ಉಚ್ಚಾರಣೆ ಮಾಡಿದ ಆರಂಭದಲ್ಲೇ **ಕಡುಹ**–ಶೀಘ್ರವಾಗಿ, ಮೋಕ್ಷವನ್ನು ಕೊಡಲು ಈಶ್ವರನು ತ್ವರಿಸುತ್ತಾನೆ; **ಇವನುಡೈಯ ನಶೈಯಾಲೇ**–ಇತ್ಯಾದಿ ಪ್ರಪತ್ತಿ ಮಾಡುವವನಿಗೆ ಸಂಸಾರದಲ್ಲಿರುವ **ನಶೆ**–ಸಂಗದಿಂದ, ಕೆಲವು ಕಾಲ ಈ ಸಂಸಾರದಲ್ಲೇ ಇರಿಸಲು ಅಂಗೀಕರಿಸಲು, **ಇವ್ವಿಡತ್ತಿಲುಳ್ಳ** ಇತ್ಯಾದಿ-ಈ ಸಂಸಾರದಲ್ಲಿರುವ ಅಲ್ಪ ಸುಖಗಳನ್ನು ದುಃಖ ಸಂಬಂಧವಿಲ್ಲದೆ ಅನುಭವಿಸುವಂತೆ ಮಾಡಿದರೆ, ಈ ಪ್ರಪನ್ನನಿಗೆ ಸಂಸಾರದಲ್ಲಿ ಸಂಗವು ಎಂದಿಗೂ ಹೋಗಲಾರದು. **ಭಗವದನುಭವತ್ತಿಲ್** ಇತ್ಯಾದಿ–ಭಗವಂತನ ಅನುಭವದಲ್ಲಿ **ಭೋಗ್ಯತಾ** ಬುದ್ಧಿಯೂ **ಕೊ ಂಡು ವಿಟ್ಟುವಾರಾದು** – ಅಭಿವೃದ್ಧವಾಗುವುದಿಲ್ಲ. **ಆಹೈಯಾಲ್**–ದುಃಖ ಸಂಬಂಧವಿಲ್ಲದೆ ಭೋಗವನ್ನು ಕೊಡುವುದು ಹಿತೈಷಿಯಾದ ಭಗವಂತನಿಗೆ ಉಚಿತವಲ್ಲದೆ ಇರುವುದರಿಂದ, 1) **ಯಸ್ಯಾನುಗ್ರಹ ಮಿಚ್ಛಾಮಿ** ಇತ್ಯಾದಿ–ಯಾರಿಗೆ ಅನುಗ್ರಹವನ್ನು ಮಾಡಲು ಇಚ್ಛೈಸುತ್ತೇನೋ ಅವನ ಹಣವನ್ನು ಅಪಹರಿಸುತ್ತೇನೆ. ಆಪ್ತ ಬಂಧುಗಳ ವಿನಾಶವನ್ನುಂಟು ಮಾಡುತ್ತೇನೆ, ಆದರಿಂದ ಸದಾ ದುಃಖಿತನಾಗಿರುತ್ತಾನೆ. ಆ ದುಃಖದಿಂದ ಪೀಡಿತನಾಗಿ ನನ್ನನ್ನು ಬಿಡದೆ ನನ್ನನ್ನೇ ಆಶ್ರಯಿಸಿದವನಿಗೆ, ದೇವತೆಗಳಿಗೂ ದುರ್ಲಭವಾದ ಅನುಗ್ರಹವನ್ನು ಮಾಡುತ್ತೇನೆ; ಎಂದು ಹೇಳುವ ರೀತಿಯಲ್ಲಿ ದುಃಖಾದಿಗಳಿಗೆ ಕಾರಣವಾದ ಪ್ರಾರಬ್ದ ಕರ್ಮ ವಿಶೇಷವನ್ನು **ಸನ್ನಿಹಿತಮಾನ ಕಶಾದಿಹಳೈಪ್ಪೋಲೇ** – ಸಮೀಪದಲ್ಲಿರುವ ಚಾವಟಿಗಳನ್ನು **ತುಣೈಯಾಹಕ್ಕೊಂಡು**– ತಮಗೆ ಸಹಾಯವಾಗಿ ಸ್ವೀಕರಸಿ ಮಕ್ಕಳನ್ನು ಹೆದರಿಸುವ **ಪಿತ್ರಾದಿಹಳೈಪ್ಪೋಲೇ**– ತಂದೆ ತಾಯಿ ಮೊದಲಾದವರ ಹಾಗೆ **ಶಿಕ್ಷಕನಾದ ಈಶ್ವರನ್** ಇವನ ಪಾಪಗಳಿಗೆ ಶಿಕ್ಷೆಯನ್ನು ಕೊಡುವ ಈಶ್ವರನು, ಇವನ ಪ್ರಾರಬ್ಧ ಕರ್ಮವಿಶೇಷ

---

1) ಭಾಗವತ

**ಶಿಲಕಱಿನ ಪ್ರಕೃತಿಹಳುಕ್ಕು ಪಣ್ಣುಹಿರವನುಗ್ರಹವಿಶೇಷಮಿದೆನ್ರು ಅನುಸಂಧಿಕ್ಕೈಯುಚಿತಮ್.**

ಸ್ವಾಭಿಪ್ರಾಯಂ ಅಭಿಯುಕ್ತಸೂಕ್ತಿನಾ ದೃಢಯತಿ.

ಒರುವ್ಯಾಧಿ ವಿಶೇಷತ್ತೈಯುಣ್ಡೋವೆನ್ರು ರಾಜಾಕೇೞ್ಕ್ಕ ಅವರುಮೊರು ಉಪಾಧ್ಯಾಯರುಣ್ಡೆನ್ರು ಭಟ್ಟರರುಳಿಚ್ಚೆಯ್‌ದಾರ್. ಆಯುಸ್ಸು ವಳರ್ಕ್ಕವೊಣ್ಣಾದಪಡಿ ನಿಯತಾಯುಸ್ಸಾನವನುಕ್ಕು ಉಳ್ಳತ್ತಿಲುದ್ವೇಗಂ ಪಿರಕ್ಕೈ ಕ್ಕಾಹವುಮ್, ಅನಿಯತಾಯುಸ್ಸುಕ್ಕಳುಕ್ಕು ಆಯುಷ್ಕಾಮೀಯಯಜ್ಞಙ್ಗಳೈಚ್ಚೆಯ್ದು ವಳರ್ಕ್ಕ ನಿನೈಯಾಮೈಕ್ಕಾಹವುಮ್ ದುಃಖಾದಿಹಳಿವನುಕ್ಕು ಉಪಾಧ್ಯಾಯರ್‌ಹಳ್. ಇದು ಆೞ್ವಾನುಳ್ಳಿಟ್ಟಾರ್ ಪಕ್ಕಲಿಲೇ ಪ್ರಸಿದ್ಧಮ್.

---

ಗಳನ್ನು ಸಹಾಯವಾಗಿ ಕೊಂಡು, **ಶಿಲಕಱಿಣಪ್ರಕೃತಿಹಳುಕ್ಕು** ಇತ್ಯಾದಿ ಪಾಪಗಳನ್ನು ಮಾಡಿ ಅದಕ್ಕೆ ಅನುತಪಿಸಿ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಳ್ಳದ ಕೆಲವು ಕಠಿಣಸ್ವಭಾವದವರಿಗೆ ಮಾಡುವ ಅನುಗ್ರಹ ವಿಶೇಷವು ಇದು-ಅಭ್ಯುಪಗತ ಪ್ರಾರಬ್ಧ ಕರ್ಮಗಳೆಲ್ಲಿ ಅಂತರ್ಗತವಾದ ಕೆಲವು ಅಂಶಗಳನ್ನು ಹೋಗಲಾಡಿಸದೆ ಅವುಗಳಿಗೆ ಶಿಕ್ಷೆಯನ್ನು ಕೊಡುವುದೂ **ಅನುಗ್ರಹ ವಿಶೇಷಮೆನ್ರು** ಇತ್ಯಾದಿ ಅನುಗ್ರಹ ವಿಶೇಷವೆಂದು ಅನುಸಂಧಾನ ಮಾಡುವುದು ಉಚಿತ

ದುಃಖಗಳು ಶಿಕ್ಷಾ ವಿಶೇಷಗಳಾದ್ದರಿಂದ ಹಿತರೂಪವಾದವು ಎಂಬುದಕ್ಕೆ **ಒರು ವ್ಯಾಧಿ ವಿಶೇಷತ್ತೈ** ಎಂದಾರಂಭಿಸಿ ಐತಿಹ್ಯವೊಂದನ್ನು ಅನುಗ್ರಹಿಸುತ್ತಾರೆ. ಅದಾಗಿ ಒಬ್ಬ ರಾಜನು ಪರಾಶರಭಟ್ಟರನ್ನು ಕುರಿತು, ಒಂದು ವ್ಯಾಧಿ ವಿಶೇಷವನ್ನು ನಿರ್ದೇಶಿಸಿ, ಇದು ನಿಮಗೆ ಉಂಟೇ ಎಂದು ಕೇಳಲು, ಪರಾಶರ ಭಟ್ಟರು, ಅವರೂ (ವ್ಯಾಧಿ ವಿಶೇಷವೂ) ಒಬ್ಬ ಆಚಾರ್ಯರಾಗಿ ನನಗೆ ಏರ್ಪಟ್ಟಿದ್ದಾರೆಂದು ಬದಿಲನ್ನು ಅನುಗ್ರಹಿಸಿದರು. ಇದರ ತಾತ್ಪರ್ಯವೇನೆಂದರೆ, ವ್ಯಾಧಿಯು ತನ್ನ ತಪ್ಪನ್ನು ಜ್ಞಾಪಕಪಡಿಸಿ, ಸಂಸಾರದಲ್ಲಿರುವ ಅಲ್ಪ ಸುಖಗಳಲ್ಲಿ ಆಸೆ ಪಡೆದೆಯಿರುವಂತೆ ಶಿಕ್ಷಕವಾಗಿರುವುದರಿಂದ ಉಪಾಧ್ಯಾಯರೆಂದು ಅದನ್ನು ರೂಪಿಸುತ್ತಾರೆಯಷ್ಟೆ. ಇದನ್ನು **ಆಯುಸ್ಸು ವಳರ್ಕ್ಕವೊಣ್ಣಾದಪಡಿ** ಇತ್ಯಾದಿ ವಿವರಿಸುತ್ತಾರೆ. ಅದಾಗಿ ಮನುಷ್ಯರಲ್ಲಿ ಕೆಲವರು ನಿಯತವಾದ (ಇಷ್ಟೇ ಎಂದು ಹೇಳುವಂತೆ) ಆಯುಸ್ಸುಳ್ಳವರು ಆಯುಷ್ಕಾಮೀಯಗಳಾದ ಆಯುಷ್ಯ ಹೋಮಗಳಿಂದ ಆಯುರಭಿವೃದ್ಧಿಯನ್ನು ಮಾಡಿಕೊಳ್ಳಲಾಗದ ನಿಯತಾಯುಷ್ಕರು ಅವರ ಆಯುಸ್ಸಿನೊಳಗೆ, **ಉದ್ವೇಗಮ್ ಪಿರಕ್ಕೈಕ್ಕಾಹವುಮ್**-ಸಂಸಾರದಲ್ಲಿ ಭೀತಿಯೂ ವೈರಾಗ್ಯವೂ ಉಂಟಾಗುವುದಕ್ಕೂ, ಅನಿಯತವಾದ ಆಯುಸ್ಸುಳ್ಳವರು ಆಯುಷ್ಕಾಮೀಯ ಹೋಮಗಳನ್ನು ಮಾಡಿ ಆಯುಸ್ಸನ್ನು ಬೆಳೆಸಿಕೊಳ್ಳಲು ಯೋಚಿಸದೆ ಇರುವುದಕ್ಕೂ ದುಃಖಾದಿಗಳು ಇವನಿಗೆ **ಉಪಾಧ್ಯಾಯರ್‌ಹಳ್** -- ಆಚಾರ್ಯರು. – ಆಚಾರ್ಯರು ಹಿತವನ್ನು ಉಪದೇಶಿಸುವಂತೆ, ದುಃಖಗಳು ಇವನಿಗೆ ಸಂಸಾರದಲ್ಲಿ ವೈರಾಗ್ಯವನ್ನುಂಟು ಮಾಡಿ ಬೇಗನೆ ಭಗವಂತನ ಪಾದಾರವಿಂದಗಳನ್ನು ಸೇರಿಕೊಳ್ಳಲು ಬುದ್ಧಿಯನ್ನು ಕೊಡುತ್ತದೆ ಎಂದು ತಾತ್ಪರ್ಯ. **ಇದು ಆೞ್ವಾನುಳ್ಳಿಟ್ಟಾರ್ ಪಕ್ಕಲಿಲೇ ಪ್ರಸಿದ್ಧಮ್** – ಇಂಥಹ ಅನುಸಂಧಾನವು ಕೂರತ್ತಾೞ್ವಾನ್ ಪ್ರಭೃತಿ ಮಹಾಪುರುಷರಲ್ಲಿ ಪ್ರಸಿದ್ಧ. ಅದಾಗಿ ಕೂರತ್ತಾೞ್ವಾನ್ ಅವರು ಚೋಳರಾಜನ ಸಭೆಯಲ್ಲಿ ವಿಷ್ಣುವೇ ಸರ್ವಸ್ಮಾತ್ ಪರನು ಎಂದು ಹೇಳಿ "ಶಿವಾತ್ಪರತರಂ ನಾಸ್ತಿ" ಎಂಬ ವಾಕ್ಯಕ್ಕೆ ರಾಜನ ಅಭಿಪ್ರಾಯದಂತೆ ಋಜು ಮಾಡದೆ "ದ್ರೋಣ ಮಸ್ತಿ ತತಃಪರಮ್"-"ಶಿವ" ಎಂದರೆ ಅಳತೆ ಸೇರು "ದ್ರೋಣ"ವೆಂದರೆ ಕೊಳಗ ಎಂಬ ಅರ್ಥದಲ್ಲಿ ಪರಿಹಾಸ್ಯ ಮಾಡಿ ಬರೆಯಲು ಕೋಪಗೊಂಡ ರಾಜನು ಇವರ ಕಣ್ಣನ್ನು ಕೀಳುವಂತೆ ಆಜ್ಞೆ ಮಾಡಲು, "ಪಾಪಿಯಾದ ನಿನ್ನನ್ನು ನೋಡಿದ ಈ ಕಣ್ಣುಗಳು ನನಗೆ ಬೇಡವೆಂದು ತಾವೇ ತಮ್ಮ ಕಣ್ಣುಗಳನ್ನು ಕಿತ್ತೆಸೆದರು ಅನಂತರ ನೇತ್ರ ಹೀನರಾಗಿ ವ್ಯಸನಪಟ್ಟು ಆ ವ್ಯಸನವನ್ನೇ ತಮಗೆ ಉಪಾಧ್ಯಾಯರನ್ನಾಗಿ ಭಾವಿಸಿ ಶೀಘ್ರದಲ್ಲೇ ಭಗವಂತನ ಸಾಯುಜ್ಯವನ್ನು ಪಡೆಯಬೇಕೆಂದು,

**ಮಹಾಭಾಗವತಾನಾಮಪಿ ದುಃಖಾನುಭವಜನನಸ್ಯ ಕಿಂ ಪ್ರಯೋಜನ ಮಿತ್ಯತ್ರಾಹ,**

**ಅಪಚಾರಙ್ಗಳೈಯುಂ ತತ್ಫಲಙ್ಗಳೈಯುಂ ಶಿಲರ್ಕ್ಕುಕ್ಕಾಟ್ಟಿ ಮರೈಕ್ಕಿರ ವಿಡುವುಮ್ 1) "ಪಾಂಬೋಡೊರು ಕೂರೈಯಿಲೇ ಪಯಿನ್ರಾರ್ಪೋಲೇ ತಾಙ್ಗಾದುಳ್ಳಮ್ ತಳ್ಳುಮೆನ್ ತಾಮರೈಕ್ಕಣ್ಣಾ"ಎನ್ರ ನಿರ್ವೇದಪೂರ್ತ್ತಿಯೈಕ್ಕಡುಹ ಪ್ಪಿರಪ್ಪಿತ್ತು ತಾನಿಶೈನ್ದ ಸಂಸಾರನಿವರ್ತನತ್ತೈಕ್ಕಡುಹಇವನೈಯುಂ ವಿಶೈವಿಕ್ಕೈಕ್ಕಾಹವತ್ತನ್ರೈ.**

---

"ನೀಲಮೇಘ ನಿಭಮಂಜನ ಪುಂಜ ಶ್ಯಾಮಕುಂತಳ ಮನಂತಶಯಂತ್ವಾಮ್ ।
ಅಬ್ಜಪಾಣಿ ಪದ ಮಂಬುಜನೇತ್ರಂ ನೇತ್ರಸಾತ್ಕುರು ಕರೀಶಸದಾಮೇ ॥ (ವರದರಾಜಸ್ತವ-23)

ಎಲೈ ಕರಿಗಿರಿಯಲ್ಲಿರುವ ಸ್ವಾಮಿಯೇ, ದೇವಾಧಿರಾಜ! ನೀಲಮೇಘದ ಕಾಂತಿಯಂತೆ ಇರುವ ಶರೀರನಾಗಿಯೂ ಅಂಜನದ ಸಮೂಹದಂತೆ ಇರುವ ಕಪ್ಪು ತಲೆ ಕೂದಲುಗಳಿಂದ ಕೂಡಿಯೂ, ತಾವುರೆ ಪುಷ್ಪದಂತೆ ಕೈ ಕಾಲುಗಳನ್ನೂ ತಾವುರೆ ದಳದಂತೆ ನೀಳವಾದ ಸೊಗಸಾದ ಕಣ್ಣುಗಳನ್ನೂ ಉಳ್ಳ ಅನಂತಶಯನನಾದ ನಿನ್ನನ್ನು ನಾನು ಸಂದರ್ಶನ ಮಾಡುವಂತೆ ಅನುಗ್ರಹಿಸು ಅಂದರೆ ಶ್ರೀವೈಕುಂಠಕ್ಕೆ ಕರೆದೊಯ್ದು ನಿನ್ನ ಸೊಗಸಾದ ಸೇವೆಯನ್ನು ನಿರಂತರವಾಗಿ ಕೊಡು ಎಂದು ಪ್ರಾರ್ಥಿಸಿದರು.

ತಾವು ಮಾಡಿದ ತಪ್ಪುಗಳನ್ನೂ ಅದಕ್ಕೆ ಶಿಕ್ಷೆಯನ್ನೂ ಕೆಲವರು ತಿಳಿದುಕೊಳ್ಳುವಂತೆ, ಹಿತೈಷಿಯಾದ ಈಶ್ವರನು ಸಂಕಲ್ಪಿಸುವುದು ಸರಿಯೇ ಎಂದರೆ **ಅಪಚಾರಂಗಳೈಯುಂ** ಇತ್ಯಾದಿ ಅನುಗ್ರಹಿಸುತ್ತಾರೆ. ಆದಾಗಿ ಪ್ರಪನ್ನನು ಮಾಡುವ ತಪ್ಪುಗಳನ್ನೂ ಅದರ ಫಲವಾದ ಕ್ಲೇಶಗಳನ್ನೂ ಭಗವದನುಭವ ಸಂಕೋಚ ವಿಚ್ಛೇದಗಳನ್ನೂ **ಶಿಲರ್ಕ್ಕುಕ್ಕಾಟ್ಟಿ ಮರೈಕ್ಕಿರವಿಡುವುಮ್**-ಕೆಲವರಿಗೆ ಉಂಟು ಮಾಡಿ ಅದನ್ನು ಹೋಗಲಾಡಿಸುವುದೂ 1) **ಪಾಂಬೋಡೊರು ಕೂರೈಯಿಲೇ** ಇತ್ಯಾದಿ-ಹಾವಿನ ಜತೆಯಲ್ಲಿ ಒಂದೇ ಗುಡಿಸಿಲಿನಲ್ಲಿ ವಾಸ ಮಾಡುವವರಂತೆ ನನ್ನ ಮನಸ್ಸು ಸಮಾಧಾನವಾಗಿಲ್ಲದೆ **ತಳ್ಳುಮ್**-ತತ್ತಳಿಸುತ್ತದೆ;ಎಲೈ ಪುಂಡರೀಕಾಕ್ಷ! ನನಗೆ ಕರುಣಿಸು, ಎಂಬಂತೆ ನಿರ್ವೇದ ಪೂರ್ತಿಯನ್ನು ಜಾಗ್ರತೆಯಾಗಿ ಉಂಟು ಮಾಡಿ, **ತಾನಿಶೈಂದ ಸಂಸಾರ ನಿವರ್ತನತ್ತೈ** ಇತ್ಯಾದಿ-ತಾನು ಸಮ್ಮತಿಸಿದ ಸಂಸಾರ ನಿವೃತ್ತಿಯನ್ನು ಇವನೂ ಶೀಘ್ರದಲ್ಲಿಯೇ ಸಮ್ಮತಿಸುವಂತೆ ಮಾಡುವುದ ಕ್ಕೋಸ್ಕರ ವಷ್ಟೇ. ಈ ಸಂದರ್ಭದಲ್ಲಿ,

**ಶೋಕಾಸ್ಪದಾಂಶ ಮಥನಃ ಶ್ರಯತಾಂ ಭವಾಬ್ಧೌ**
**ರಾಗಾಸ್ಪದಾಂಶ ಸಹಜಂ ನರುಣತ್ಸಿ ದುಃಖಮ್ ।**
**ನೋಚೇದಮೀ ಜಗತಿ ರಂಗ ಧುರೀಣ ಭೂಯಃ**
**ಕ್ಷೋದಿಷ್ಠ ಭೋಗರಸಿಕಾಃ ತವನ ಸ್ಮರೇಯುಃ ॥**

ಎಂಬ ನ್ಯಾಸ ತಿಲಕ ಶ್ಲೋಕವನ್ನು (14) ಅನು ಸಂಧಾನ ಮಾಡುವುದು. ಆದಾಗಿ "ಎಲೈ ರಂಗನಾಥನೇ

---

1) ತೂಂಗಾರ್ ಪಿರವಿಕ್ಕಳ್ ಇನ್ನಮ್‌ಪುಹಪ್ಪೆಯ್‌ದು
ವಾಂಗಾಯೆನ್ರಿಂದಿತ್ತು ನಾನ್ ಅದನ್ಕಂಜಿ ।
ಪಾಂಬೋಡೊರು ಕೂರೈಯಿಲೇ ಪಯಿನ್ರಾರ್‌ಪೋಲ್
ತಾಂಗಾದುಳ್ಳಮ್‌ತಳ್ಳುಮ್ ಎನ್ ತಾಮರೈಕ್ಕಣ್ಣಾ ॥ ಪೆರಿಯತಿರುಮೊೞಿ (11-8-3)
ಇನ್ನುಮೇಲೂ ತಮಃ ಪ್ರಚುರವಾದ ಜನ್ಮಗಳಲ್ಲಿ ಪ್ರವೇಶಿಸುವಂತೆ ಮಾಡಿದ್ದೀಯಾ ನೀನು ನನ್ನನ್ನು ಉದ್ಧರಿಸುವುದಿಲ್ಲವೆಂದು
ಪ, ತಿ. ಸೋ.

**ಇವ್ವಿಡತ್ತಿಲ್ ಪ್ರತಿಕೂಲಾನುಭವಾಂಶಮ್ ದುಷ್ಕರ್ಮಫಲಮ್ ; ಇದು ಶಿಕ್ಷಣಮಾಹಿರುದುವುಮ್ ಪ್ರಾಯಶ್ಚಿತ್ತತ್ತಿಲೇ ಮೂಟ್ಟಿಕ್ಕಿರದುವುಮ್ ಉಪಾಯಫಲಮ್. ಇವತ್ತಿಲ್ ಶಿಕ್ಷಣಾದಿಹಳ್ ಪಾರಬ್ಧ ಸುಕೃತ ವಿಶೇಷ ಫಲಮಾಯುಮ್ ವರುಮ್**

## ಪ್ರಪನ್ನಜನಸ್ಯ ಭಗವನ್ನಿಗ್ರಹಃ ಅನುಗ್ರಹ ಏವ

ಪ್ರಾಣಾರ್ಥಿಯಾಯ್ ವಿನ್ನ ಕಾಕತ್ತುಕ್ಕು ಪ್ರಾಣಸ್ಸೈಕ್ಕೊಡುಕ್ಕೈಯಾಲೇ, ಅಙ್ಗು ಪ್ರಪತ್ತಿಫಲಮ್ ಪೂರ್ಣಮ್. ದುಷ್ಪ್ರಕೃತಿಯಾನ ವಿಕ್ಕಾಕತ್ತುಕ್ಕು ಶಿಕ್ಷೈಯಾಹ ಒರುಕಣ್ಣೈ ವಾಙ್ಗಿವಿಟ್ಟದುವುಮ್ ನಿಗ್ರಹಮನ್ರು ಅನುಗ್ರಹ ವಿಶೇಷಮ್.

---

ಪ್ರಪನ್ನರ ಸಂಸಾರ ಕ್ಲೇಶಗಳನ್ನೆಲ್ಲಾ ಹೋಗಲಾಡಿಸುವ ಸರ್ವೇಶ್ವರನಾದ ನೀನು ಅಭ್ಯುಪಗತ ಪ್ರಾರಬ್ಧಾಂಶವಾದ ದುಃಖವನ್ನು ಮಾತ್ರ ಹೋಗಲಾಡಿಸದೆ ಇರುವುದಕ್ಕೆ ಕಾರಣವೇನೆಂದರೆ, ಅವರುಗಳು ಬಹಳ ಸುಖದಲ್ಲಿಯೇ ರಸಿಕರಾಗಿ ಬಿಟ್ಟರೆ ಭಗವಂತನಾದ ನಿನ್ನನ್ನು ಸ್ಮರಿಸುವುದೇ ಇಲ್ಲ. ಆದ್ದರಿಂದ ಹಿತದೃಷ್ಟಿಯಿಂದ ಈ ಕ್ಲೇಶಗಳನ್ನು ಕೊಡುತ್ತೀಯಾ" ಎಂದು ತಾತ್ಪರ್ಯ.

**ಇವ್ವಿಡತ್ತಿಲ್**–ಇತ್ಯಾದಿ ಈ ಸಂದರ್ಭದಲ್ಲಿ ಪ್ರತಿಕೂಲಾನುಭವಾಂಶವು ದುಷ್ಕರ್ಮದ ಫಲ. **ಇದುಶಿಕ್ಷಣಮಾಹಿರುದುಮ್**–ಇತ್ಯಾದಿ–ಈ ದುಷ್ಕರ್ಮಫಲವು ಶಿಕ್ಷಾರೂಪವಾಗುವುದೂ, ಪ್ರಾಯಶ್ಚಿತ್ತದಲ್ಲಿ ಇವನನ್ನು ಪ್ರೇರೇಪಿಸುವುದೂ ಉಪಾಯದ ಫಲ. **ಇವಟ್ರಿಲ್**–ಇತ್ಯಾದಿ ಇವುಗಳಲ್ಲಿ ಕೆಲವು ಶಿಕ್ಷೆಗಳು ಭೀತ್ಯಾದಿಗಳನ್ನುಂಟು ಮಾಡಿ ಪ್ರಾಯಶ್ಚಿತ್ತದಲ್ಲಿ ತೊಡಗಿಸುವುದೂ ಪ್ರಾರಬ್ಧ ಸುಕೃತ ಫಲವಾಗಿಯೂ ಉಂಟಾಗುತ್ತದೆ.

## ಪ್ರಪನ್ನನಿಗೆ ಶಿಕ್ಷೆಯೂ ಕೃಪಾ ಫಲ

**ಹೀಗೂ** ಉಂಟೆ ? ಪ್ರಪನ್ನನಾದ **ಕಾಕಾಸುರನಿಗೆ ಕಣ್ಣನ್ನು ಕಿತ್ತು** ಹಾಕಿದುದು ಅನುಗ್ರಹವೇ ಎಂದರೆ "ಹೌದು" ಎಂದು "**ಪ್ರಾಣಾರ್ಥಿಯಾನ**" ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಕಾಕಾಸುರನು ತನ್ನ ಪ್ರಾಣವನ್ನುಳಿಸಿ **ಕೊಳ್ಳಲು** ಭಗವಂತನ ಪಾದಗಳಲ್ಲಿ ಶರಣ ಹೊಂದಲು ಅದರ ಪ್ರಾಣವನ್ನುಳಿಸಿ ಕೊಟ್ಟದ್ದರಿಂದ ಪ್ರಪತ್ತಿ ಫಲವು ಪೂರ್ಣ. ಯಾವ ಫಲವನ್ನು ಉದ್ದೇಶಿಸಿ ಶರಣಾಗತಿಮಾಡಿತೋ ಆ ಫಲವು ಪೂರ್ಣವಾಗಿ ಲಭಿಸಿತು. ಆದ್ದರಿಂದ ಉಪಾಯ ಪ್ರಭಾವಕ್ಕೆ ಯಾವ ಕುಂದುಕವೂ ಇಲ್ಲ. ಹಾಗಾದರೂ ಕಣ್ಣನ್ನು ಕಿತ್ತು ಹಾಕಿದುದು ಸರಿಯೇ ಎಂದರೆ **ದುಷ್ಪ್ರಕೃತಿಯಾನ**–ಇತ್ಯಾದಿ ಸಮಾಧಾನವನ್ನು ಅನುಗ್ರಹಿಸುತ್ತಾರೆ. ಆದಾಗಿ ದುಷ್ಟ ಸ್ವಭಾವದಿಂದ ಕೂಡಿದ ಈ ಕಾಕಾಸುರನಿಗೆ ಶಿಕ್ಷಾರೂಪವಾಗಿ ಒಂದು ಕಣ್ಣನ್ನು ಕೀಳಿ ಹಾಕಿದುದೂ ನಿಗ್ರಹವಲ್ಲ–ಕೋಪದಿಂದಲ್ಲ. ಅನುಗ್ರಹದ ಫಲವೇ. "ಕೃಪೇಕಾಕಸ್ಯೈಕಂ ಹಿತಮಿತಿ ಹಿನಸ್ತಿಸ್ಮನಯನಮ್" ಇನ್ನು ಮೇಲೆ ಇಂತಹ ಅದ್ರಾಪರಾಧಗಳನ್ನು ಮಾಡದಿರಲಿ, ಎಂಬ ಹಿತದೃಷ್ಟಿಯಿಂದಲೇ ಕಣ್ಣನ್ನು ತೆಗೆದು ಹಾಕಿದನು.

---

ತಿಳಿದು, ಆ ಸಂಸಾರಕ್ಕೆ ಹೆದರಿ, ಸರ್ಪದೊಡನೆ ಒಂದೇ ಗುಡಿಸಿಲಿನಲ್ಲಿ ವಾಸಮಾಡುವವರಹಾಗೆ ನನ್ನ ಆತ್ಮಾ ಥರಥರನೆ ತತ್ತರಿಸುತ್ತದೆ ಎಲೈ ಪುಂಡರೀಕಾಕ್ಷ ನನ್ನ ಈದುರವಸ್ಥೆಯನ್ನು, ನೋಡಿಯೂ ನನ್ನನ್ನು ಜಾಗ್ರತೆ ಸಂಸಾರದಿಂದ ಬಿಡಿಸುವುದಿಲ್ಲವೇ ,ಎಂದು ಹೇಳುವ ಮಾತು .

**ಕ್ಷಣಕಾಲಸಾಧ್ಯಪ್ರಪತ್ತೇಃ ಕಥಂ ಮೋಕ್ಷಪರ್ಯನ್ತಫಲ ಜನಕತ್ವರೂಪ ಪ್ರಭಾವಃ?**

**ಆಹೈಯಾಲ್ ಆಭೂತಸಂಪ್ಲವಂ ನರಕತ್ತಿಲೇ ಕಿಡಕ್ಕುಮ್ಪಡಿ ಕ್ಷಣಕೃತ ಪಾಪಕರ್ಮಙ್ಗಳುಡೈಯ ಪ್ರಭಾವಮಾನ ಭಗವನ್ನಿಗ್ರಹ (ವಿಶೇಷತ್ತೈ ಇಶೈನ್ದಾರ್ಪೋಲವುಮ್,**

**1) "ದುರ್ಗ ಸಂಸಾರಕಾನ್ತಾರ ಮಪಾರ ಮಭಿಧಾವತಾಮ್।**

**ಏಕಃ ಕೃಷ್ಣನಮಸ್ಕಾರೋ ಮುಕ್ತಿತೀರಸ್ಯ ದೇಶಿಕಃ"ಎನ್ರುಮ್**

**2) "ಏಕೋಽಪಿ ಕೃಷ್ಣೇಸುಕೃತ ಪ್ರಣಾಮೋ ದಶಾಶ್ವಮೇಧಾವಭೃಥೇನ ತುಲ್ಯಃ।**

**ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀನ ಪುನರ್ಭವಾಯ॥"**

**ಎನ್ರುಮ್, ಸುಕೃತ ಪ್ರಣಾಮ ವಿಶೇಷತ್ತಿನುಡೈಯ ಪ್ರಭಾವತ್ತೈ ಯಿಶೈನ್ದಾರ್ ಪೋಲವುಮ್,**

**3) "ಸಕೃದೇವ ಪ್ರಪನ್ನಾಯ" 4) "ಅಥಪಾತಕ ಭೀತಸ್ತ್ವಂ"**

---

ಪ್ರಪತ್ತಿ ಪ್ರಭಾವವನ್ನು ಸ್ವಲ್ಪವೂ ಕಡಿಮೆ ಮಾಡದೆ ಅನುಸಂಧಿಸಬೇಕಾದದು ಅವಶ್ಯ

ಹೀಗೆ ಪ್ರಪತ್ತಿಯ ಪ್ರಭಾವದಲ್ಲಿ ಬಾಧಕಾಂಶವನ್ನು ಹೋಗಲಾಡಿಸಿ, ಸಾಧಕಾಂಶವನ್ನು **ಆಹೈಯಾಲ್–** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ, ಪ್ರಪತ್ತಿ ಪ್ರಭಾವಕ್ಕೆ ಧಕ್ಕೆ ಹೇಳುವುದು ಸರಿಯಲ್ಲ ವಾದ್ದರಿಂದ **ಆಭೂತ ಸಂಪ್ಲವಮ್** – ಮಹಾ ಪ್ರಳಯ ಪರ್ಯಂತ, ನರಕ**ತ್ತಿಲೇ ಕಿಡಕ್ಕುಂಪಡಿ** ಇತ್ಯಾದಿ ನರಕದಲ್ಲಿ ಬಿದ್ದು ಕಷ್ಟವನ್ನನು ಭವಿಸುವಂತೆ, ಕ್ಷಣಕಾಲದಲ್ಲಿ ಮಾಡುವ ಪಾಪ ಕರ್ಮಗಳ ಪ್ರಭಾವದಿಂದ ಉಂಟಾದ ಭಗವನ್ನಿಗ್ರಹ ವನ್ನು ಅಂಗೀಕರಿಸುವಂತೆ, ಅಂದರೆ,

ಯದ್ಬ್ರಹ್ಮ ಕಲ್ಪನಿಯುತಾನುಭವೇಪ್ಯನಾಶ್ಯಂ

ತತ್ಕಿಲ್ಬಿಷಂಸೃಜತಿ ಜಂತುರಿಹಕ್ಷಣಾರ್ಧೇ।

ಎಂಬಂತೆ ಒಬ್ಬ ಜೀವನು ಕೋಟಿ ಬ್ರಹ್ಮ ಕಲ್ಪಗಳಲ್ಲಿ ಶಿಕ್ಷೆಯನ್ನು ಅನುಭವಿಸಿದರೂ ನಾಶವಾಗದಂತಹ ಪಾಪ ವನ್ನು ಅರ್ಧಕ್ಷಣದಲ್ಲಿ ಮಾಡಿ ಬಿಡುತ್ತಾನೆಂದು ಕ್ಷಣ ಕೃತಪಾಪ ವಿಶೇಷಕ್ಕೆ ಅಂತಹ ನರಕಪಾತನ ಶಕ್ತಿಯು ಭಗವಂತನ ನಿಗ್ರಹ ಸಂಕಲ್ಪದಿಂದ ಉಂಟಾಗುವುದೆಂದು ಅಂಗೀಕರಿಸುವಂತೆಯೂ **1) ದುರ್ಗಸಂಸಾರಕಾಂತಾ ರಮ್** ಇತ್ಯಾದಿ 2) **ಏಕೋ ಪಿ ಕೃಷ್ಣೇ ಸುಕೃತ**ಪ್ರಣಾಮಃ ಎಂದೂ, ಅಪಾರವಾದ ಸಂಸಾರ ಕಾಂತಾರವನ್ನು ದಾಟಲು ಕೃಷ್ಣ ನಮಸ್ಕಾರವೊಂದೇ ಸಾಕು. ಕೃಷ್ಣನಲ್ಲಿ ಮಾಡಿದ ಸುಕೃತ ಪ್ರಣಾಮವು ಹತ್ತು ಅಶ್ವಮೇಧ ಯಾಗಗಳಿಗಿಂತ ಹೆಚ್ಚು ಫಲವಾದ ಸಂಸಾರದ ವಿಮೋಚನವನ್ನುಂಟು ಮಾಡುತ್ತದೆ, ಎಂಬಂತೆ ಸುಕೃತ ಪ್ರಣಾಮದ ಫಲವನ್ನು ಅಂಗೀಕರಿಸುವಂತೆಯೂ, 3) **ಸಕೃದೇವ ಪ್ರಪನ್ನಾಯ 4) ಅಥಪಾತಕಭೀತಸ್ತ್ವಂ**

---

1) ವಿಷ್ಣು ಧರ್ಮ 1-1 8

2) ಭಾರತ ಶಾಂತಿ ಪರ್ವ 4 6-1 6 3,

3) ಸಕೃದೇವ ಪ್ರಪನ್ನಾಯ ತವಾಸ್ಮೀತಿಚ ಯಾಚತೇ।

ಅಭಯಂಸರ್ವ ಭೂತೇಭ್ಯೋದದಾಮ್ಯೇತದ್ವ್ರತಂಮಮ ॥

ರಾಮ ಯುದ್ಧ 1 8-3 3 ; ಒಂದು ಸಲ ಶರಣಾಗತಿಮಾಡಿ "ನಿನ್ನದಾಸನಾಗಿದ್ದೇನೆ. ನನ್ನನ್ನು ರಕ್ಷಿಸು," ಎಂದು ಪ್ರಾರ್ಥಿಸಿದ ಸರ್ವ ಪ್ರಾಣಿಗಳಿಗೂ ಅಭಯದಾನಮಾಡುತ್ತೇನೆ. ಶರಣಾಗತ ರಕ್ಷಣವೇ ನನ್ನ ವ್ರತ,

4) ಅಥಪಾತಕ ಭೀತಸ್ತ್ವಂ ಸರ್ವಭಾವೇನ ಭಾರತ।

ವಿಮುಕ್ತಾನ್ಯ ಸಮಾರಂಭೋ ನಾರಾಯಣ ಪರೋಭವ ॥ ವಿಷ್ಣುಧರ್ಮ.

ನೀನು ಮಾಡಿರುವ ಪಾಪಗಳಿಂದ ಭಯಹೊಂದಿ, ಎಲೈ ಭರತವಂಶನೇ ಅವರ ನಿವೃತ್ತಿಗೋಸ್ಕರ ಇತರ ಸಮಾರಂಭಗಳನ್ನು ಬಿಟ್ಟು ಸರ್ವ ಪರಿಪೂರ್ಣ ವಿಶ್ವಾಸರೂಪಮನೋಭಾವದಿಂದ ಶ್ರೀಮನ್ನಾರಾಯಣನನ್ನು ಆಶ್ರಯಿಸು, ಅವನನ್ನು ಶರಣ ಹೊಂದು, ಎಂದು ತಾತ್ಪರ್ಯ

5) "ಕುಯೋನಿಷ್ವಪಿ ಸಂಜಾತೋಯಸ್ಸಕೃಚ್ಚರಣಂಗತಃ" ಇತ್ಯಾದಿಹಳಿಲ್ ಶೊಲ್ಲುಹಿರಪಡಿಯೇ ಇಪ್ರಪತ್ತಿ ಪ್ರಭಾವತ್ತೈಯುಮ್ ಶಾಸ್ತ್ರಾರ್ಥೋಪಪ್ಲವ ಪ್ರಸಙ್ಗಮಿಲ್ಲಾದ ವಿಷಯತ್ತಿಲ್ ಶುರುಙ್ಗಾದೇಯನುಸಂಧಿಕ್ಕ ಪ್ರಾಪ್ತಮ್.

6) "ತಂ ಮಾತಾಪಿತೃಹನ್ತಾರ ಮಪಿಪಾತಿ ಭವಾರ್ತಿಹಾ" ಎನ್ರದವುಮ್ ಉತ್ತರಾಘ ಮಲ್ಲಾದಪೋದು ಉಪಪ್ಲವಮಿಲ್ಲೈ.

---

) **ಕುಯೋನಿಷ್ವಪಿ ಸಂಜಾತಃ** ಇತ್ಯಾದಿಗಳಲ್ಲಿ ಹೇಳುವಂತೆ ಶರಣಾಗತಿಯು ಸಕಲಪಾಪಗಳನ್ನು ಹೋಗಲಾಡಿಸುತ್ತದೆ. ಶರಣಾಗತಿವಶೀಕೃತನಾದ ಸರ್ವೇಶ್ವರನು ಸರ್ವಪಾಪಗಳನ್ನು ಹೋಗಲಾಡಿಸಿ ಮೋಕ್ಷವನ್ನು ಕೊಡುತ್ತಾನೆಂದು ಈ ಪ್ರಪತ್ತಿಯ ಪ್ರಭಾವವನ್ನು ಶಾಸ್ತ್ರಾರ್ಥೋಪಪ್ಲವ ಪ್ರಸಙ್ಗಮಿಲ್ಲಾದ ವಿಷಯತ್ತಿಲ್ ಶೂದ್ರಭಾಗವತನಿಗೂ ಬ್ರಾಹ್ಮಣನಿಗೂ ಸಮಯಾಚಾರ ವಿಶೇಷ ವಿಧಾಯಕಗಳಾದ ಶಾಸ್ತ್ರಗಳಿಗೆ ವಿರೋಧ ಪ್ರಸಂಗವಿಲ್ಲದ ವಿಷಯದಲ್ಲಿ **ಶುರುಂಗಾದೇ** ಇತ್ಯಾದಿ-ಕಡಿಮೆ ಮಾಡದೆಅನುಸಂಧಿಸುವುದು ಪ್ರಾಪ್ತವಾದದ್ದು ಇದರ ತಾತ್ಪರ್ಯವೇನೆಂದರೆ - ಪ್ರಮಾಣಾನುಸಾರ ಕ್ಷಣಾರ್ಧದಲ್ಲಿಮಾಡುವ ಉತ್ಕಟ ಪಾಪಕ್ಕೇ ಮಹಾಪ್ರಳಯ ಪರ್ಯಂತ ಶಿಕ್ಷೆಯನ್ನನುಭವಿಸಬೇಕೆಂದೂ ಕೃಷ್ಣನಮಸ್ಕಾರವೊಂದೇ ವಿಶೇಷಸುಕೃತವಾಗಿ ಪರಿಣಮಿಸಿ ಅಕ್ಷಯ್ಯಫಲಗಳನ್ನು ಕೊಟ್ಟು ಪುನಃ ಸಂಸಾರವಿಲ್ಲದಂತೆ ಮಾಡುತ್ತದೆಂದೆಂದು ಒಪುವಂತೆ, ತತ್ತುಲ್ಯಪ್ರಮಾಣಾನುಸಾರವಾಗಿ ಶರಣಾಗತಿ ಸರ್ವಪಾಪಗಳನ್ನೂ ಹೊಗಲಾಡಿಸಿ ಮೋಕ್ಷವನ್ನು ಕೊಡುತ್ತದೆ, ಎಂಬ ಪ್ರಪತ್ತಿಪ್ರಭಾವವನ್ನು ಶಾಸ್ತ್ರವಿರುದ್ಧ ವಿಷಯದಲ್ಲಿ ಕಡಿಮೆ ಮಾಡದೆ ಅನುಸಂಧಾನಮಾಡಬೇಕೆಂದು ತಾತ್ಪರ್ಯ. ಹಾಗಾದರೆ 1) **ತಂಮಾತಾಪಿತಹಂತಾರಮಪಿಪಾತಿ** ಎಂದು ತಂದೆ ತಾಯಿಗಳನ್ನು ಕೊಂದ ಮಹಾ ಪಾಪಿಯನ್ನೂ ಶರಣಾಗತಿಯು ಕಾಪಾಡುತ್ತದೆಯೋ ಎಂದರೆ, ಇದು **ಉತ್ತರಾಘ ವಿಷಯ ಮಲ್ಲಾದ ಪೋದು** ಇತ್ಯಾದಿ, ಮಾತಾ ಪಿತೃಹನನವು ಪ್ರಪತ್ತ್ಯನುಷ್ಠಾನಕ್ಕೆ ಪೂರ್ವದಲ್ಲಿ ಮಾಡಲ್ಪಟ್ಟು, **ಉತ್ತರಾಘ ವಿಷಯ ಮಲ್ಲಾದಪೋದು** ಪ್ರಪತ್ತ್ಯನಂತರ ಮಾಡಿದ ಪಾಪವಲ್ಲದಿದ್ದರೆ, **ಉಪಪ್ಲವಮಿಲ್ಲೈ** "ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ"ಎಂಬವಚನಕ್ಕೆ ವಿಷಯವಾಗುವುದರಿಂದ ಯಾವ ಬಾಧಕವೂ ಇಲ್ಲ. ಭಗವಂತನು ಶರಣಾಗತಿ ವಶೀಕೃತನಾಗಿ ಆ ಪಾಪವನ್ನು ಕ್ಷಮಿಸಿ ಇವನು ಅಪೇಕ್ಷಿಸಿದ ಕಾಲದಲ್ಲಿ ಮೋಕ್ಷವನ್ನು ಕೊಡುತ್ತಾನೆಂದರ್ಥ. "ತಂ ಮಾತಾ ಪಿತೃಹಂತಾರಮ್" ಇತ್ಯಾದಿಗಳು **ಪೂರ್ವಾಘವಿಷಯವಾದರೆ** ಉಪಪ್ಲವವಿಲ್ಲವೆಂದು ಹೇಗೆ ಹೇಳಬಹುದು ಎಂಬುದು ಚೋದ್ಯ "ಬಹಿಸ್ತೂಭಯ ಥಾಪಿ ಸ್ಮೃತೇರಾಚಾರಾಚ್ಚ" (ಬ್ರಹ್ಮ ಸೂತ್ರ3-4-43 )"ಎಂದು ವ್ಯವಸ್ಥಾಪಿತವಾದ ರೀತಿಯಲ್ಲಿ ಆಶ್ರಮ ಭ್ರಷ್ಟಾದಿ ಮಹಾಪಾತಕಿಗಳಿಗೆ ಬ್ರಹ್ಮ ವಿದ್ಯೋಪದೇಶವು ಕೂಡದೆಂದು ಹೇಳಿರುವಾಗ ಮಾತಾ ಪಿತೃಹನನರೂಪ ಮಹಾಪಾತಕಿಗೆ ಬ್ರಹ್ಮವಿದ್ಯೋಪದೇಶವು ಕೂಡದೆ ಅವರುಗಳಿಗೆ ಸಂಸಾರ ನಿಸ್ತಾರಕ್ರಮವಿಲ್ಲದೆ

---

5) ಸನತ್ಕುಮಾರಸಂಹಿತೆ - ಕುಯೋನಿಷ್ವಪಿಸಂಜಾತಃ, ಯಸ್ಸಕೃತ್ ಶರಣಂಗತಃ ।
ತಂಮಾತಾಪಿತೃಹಂತಾರ ಮಪಿಪಾತಿ ಭವಾರ್ತಿಹಾ ॥
ನೀಚಜನ್ಮದಲ್ಲಿ ಹುಟ್ಟಿದವನಾದರೂ ಮಾತಾ ಪಿತೃಗಳನ್ನು ಕೊಂದ ಪಾಪಿಯಾದರೂ ಭಗವಂತನಲ್ಲಿ ಒಂದುಸಲ ಶರಣಾಗತಿಯನ್ನು ಮಾಡಿದರೆ ಸಾಕು ಅದರಿಂದ ವಶಿಕೃತನಾದ ಭಗವಂತನು ಸಂಸಾರತಾಪಗಳನ್ನೆಲ್ಲಾ ಹೋಗಲಾಡಿಸಿ ರಕ್ಷಿಸುತ್ತಾನೆ.

6) ಕುಯೋನಿಷ್ವಪಿ ಸಂಜಾತಃ ಯಸ್ಸಕೃತ್ ಶರಣಂಗತಃ।
ತಂ ಮಾತಾ ಪಿತೃಹಂತಾರ ಮಪಿಪಾತಿ ಭವಾರ್ತಿಹಾ ॥ ಸನತ್ಕುಮಾರ ಸಂಹಿತೆ,
ನೀಚಜನ್ಮದಲ್ಲಿ ಹುಟ್ಟಿದ್ದರೂ, ತಂದೆ ತಾಯಿಗಳನ್ನು ಕೊಂದಪಾಪಿಯಾದರೂ, ಭಗವಂತನಲ್ಲಿ ಶರಣಾಗತಿ ಮಾಡಿದವನನ್ನು ಭೇದನವೂಡಿ, ಭಗವಂತನು ಕಾಪಾಡುತ್ತಾನೆ.

**ಉತ್ತರಾಘವಿಷಯತ್ತಿಲ್ ನಿಸ್ತಾರಕ್ರಮಙ್ಗಳ್ ಮುನ್ಬೇ ಶೊನ್ನೋಮ್.**

1) **"ಶರಣಂ ಚ ಪ್ರಪನ್ನಾನಾಂ ತವಾಸ್ಮೀತಿ ಚ ಯಾಚತಾಮ್ ।**
**ಪ್ರಸಾದಂ ಪಿತೃಹಂತ್ಯಾಣಾಮಪಿ ಕುರ್ವನ್ತಿ ಸಾಧವಃ ॥"**

**ಇತ್ಯಾದಿಹಳುಮ್ ಇಪ್ಪಡಿಕ್ಕು ಸುಘಟಿತಙ್ಗಳಾಮ್.**

**ಪ್ರಪನ್ನ ಭಾಗವತಾನಾಮ್ ಅರ್ಥಕಾಮ ಪ್ರಾವಣ್ಯೇಪಿ ನಿಂದಾ ನ ಕಾರ್ಯಾ**

**ನಮ್ ದರ್ಶನತ್ತಿಲೇ ನಿಲೈಯುಡೈಯರಾಯ್ ಮುಮುಕ್ಷುಕ್ಕಳಾಯ್, ಕರ್ಮಜ್ಞಾನ**

---

ಇರುವಾಗ ಅವರುಗಳಿಗೆ ವಿದ್ಯೋಪದೇಶಮಾಡಿದರೆ ಶಾಸ್ತ್ರವ್ಯವಸ್ಥಾಪಿತವಾದ ಎಲ್ಲೆಗೆ ಉಪಪ್ಲವ ಪ್ರಸಂಗವು ಏರ್ಪಡುವುದಿಲ್ಲವೇ. ಆ ಉಪಪ್ಲವವು ಇಲ್ಲವೆಂದು ಹೇಗೆ ಹೇಳಬಹುದು ಎಂದರೆ, ಪ್ರಾಕ್ತನ ದುಷ್ಕರ್ಮದಿಂದ ಮಾತಾ ಪಿತೃಹನನಮಾಡಿದ ಮಹಾಪಾಪಿಯೂ ಪ್ರಾಕ್ತನವಾದ ಪ್ರಕೃಷ್ಟತರ ಸುಕೃತ ಪರಿಪಾಕದಿಂದ, ತನ್ನದುಷ್ಕೃತ ವನ್ನು ನೆನೆಸಿಕೊಂಡು ನಿರತಿಶಯವಾದ ಶೋಕಸಂತಪ್ತನಾಗಿ ನಿರ್ವೇದವನ್ನು ಹೊಂದಿ ಕಾರುಣಿಕೋತ್ತಮರಾದ ಆಚಾರ್ಯರ ಪಾದಗಳಲ್ಲಿ ತನ್ನನ್ನು ಕಾಪಾಡುವಂತೆ ಶರಣ ಹೊಂದಿದರೆ, ಆ ಆಚಾರ್ಯರು ವಿದ್ಯೋಪದೇಶಕ್ಕೆ ಈತನು ಅನರ್ಹನಾದರೂ, "ಅನಾಲೋಚಿತ ವಿಶೇಷಾಶೇಷ ಲೋಕಶರಣ್ಯನಾದ ಶ್ರೀಮನ್ನಾರಾಯನ ಚರಣಾರವಿಂದಗಳಲ್ಲಿ ಆತ್ಮೀಯವಸ್ತುವಾಗಿ ಸ್ವೀಕರಿಸಿ, ಸಪರಿಕರ ಭರಸಮರ್ಪಣವನ್ನು ಮಾಡಲು ಶಕ್ಯವು. ಈ ಅಂಶವು ಶಾಸ್ತ್ರಾನುಮತವಾದರಿಂದ, **ಆಚಾರ್ಯನಿಷ್ಠಾ ರೂಪ ಪ್ರಪತ್ತಿಯಿಂದ ಮಹಾಪಾಪಿಗಳಿಗೂ ಉಜ್ಜೀವನವು ಇದೆ** ಯಾದ್ದರಿಂದ ಉಪಪ್ಲವವಿಲ್ಲವೆಂಬ ಮಾತು ಸುಸಂಗತವೆಂದು ತಾತ್ಪರ್ಯ. ಉತ್ತರಾಘ **ವಿಷಯತ್ತಿಲ್** ಇತ್ಯಾದಿ ಮಾತಾ ಪಿತೃಹನನವು ಪ್ರಪತ್ತ್ಯನಂತರ ಏರ್ಪಟ್ಟರೆ, ಅದಕ್ಕಾಗಿ ಪ್ರಾಯಶ್ಚಿತ್ತ, ಪುನಃ ಪ್ರಪತ್ತಿಗಳನ್ನು ಯಥಾಧಿಕಾರಮಾಡಿಕೊಳ್ಳಬೇಕು. ಹೀಗೆ ಉತ್ತರಾಘಗಳು ಕಳೆದುಹೋಗುವ ಕ್ರಮಗಳನ್ನು **ಮುನ್ಬೇಶೋನ್ನೋಮ್** ಅಪರಾಧಪರಿಹಾರಾಧಿಕಾರದಲ್ಲಿ ಹೇಳಿದ್ದೇವೆ. 2) **ಶರಣಂ ಚಪ್ರಪನ್ನಾನಾಮ್** ಇತ್ಯಾದಿ ವಾಕ್ಯಗಳಿಗೂ ಇದೇ ರೀತಿಯ ನಿರ್ವಾಹವಾದ್ದರಿಂದ, ಸುಘಟಿತಗಳು.

**ಭಾಗವತ ಪ್ರಭಾವದ ಹಿರಿಮೆ–ಪ್ರಪನ್ನರಾದ ಭಾಗವತರು ವೈರಾಗ್ಯವಿಲ್ಲದೆ ಅರ್ಥಕಾಮ ಪ್ರವಣರಾದ ಮಾತ್ರಕ್ಕೆ ಅವರನ್ನು ನಿಂದಿಸಬಾರದು.**

ಇಲ್ಲಿಯವರೆಗೆ ಭಗವತ್ಪ್ರಭಾವವನ್ನೂ ಪ್ರಪತ್ತಿ ಪ್ರಭಾವವನ್ನೂ ಯಾವ ಕೊರತೆಯೂ ಬಾರದಂತೆ ಸಮರ್ಥಿಸಿ ಯಾಯಿತು. ಅನಂತರ ಭಾಗವತ ಪ್ರಭಾವವನ್ನು ಹೇಳಲು ಉಪಕ್ರಮಿಸಿ, **ನಮ್‌ದರ್ಶನತ್ತಿಲ್**–ಇತ್ಯಾದಿ ಪೂರ್ವ ಪಕ್ಷವನ್ನು ಅನುವಾದ ಮಾಡುತ್ತಾರೆ. ಅದಾಗಿ **ನಮ್ ದರ್ಶನತ್ತಿಲ್** – "ನಾಥೋಪಜ್ಞಂ ಪ್ರವೃತ್ತಂ ಬಹುಭಿರುಪಚಿತಂ ಯಾಮುನೇಯ ಪ್ರಬಂಧೈಃ ತ್ರಾತಂಸಮ್ಯಗ್ಯತೀಂದ್ರೈರಿದಮಖಿಲತಮಃ ಕರ್ಶನಂ ದರ್ಶನಂ ನಃ"–ನಾಥಮುನಿಗಳಿಂದ ಪ್ರವೃತ್ತವಾಗಿ, ಆಳವಂದಾರವರ ಪ್ರಬಂಧಗಳಿಂದ ಅಭಿವೃದ್ಧವಾಗಿ, ಶ್ರೀ ಭಾಷ್ಯಕಾರರಿಂದ ಚನ್ನಾಗಿ ರಕ್ಷಿಸಲ್ಪಟ್ಟು, ಶ್ರೀಮನ್ನಿಗಮಾಂತ ಮಹಾದೇಶಿಕರಿಂದ ಅಜ್ಞಾನಗಳೆಲ್ಲವೂ ನಿಶ್ಶೇಷವಾಗಿ ಕಳೆದು ಹೋಗುವಂತೆ ಸುಸ್ಥಿರವಾಗಿ ಸ್ಥಾಪಿಸಲ್ಪಟ್ಟ ಈ ವಿಶಿಷ್ಟಾದ್ವೈತ ಸಿದ್ಧಾಂತ (ದರ್ಶನ)ದಲ್ಲಿ **ನಿಲೈಯುಡೈಯ**

---

1) ವಿಷ್ಣುಧರ್ಮಮ್-105-53 ಭಗವಂತನಲ್ಲಿ ಸ್ವನಿಷ್ಠೆಯಾಗಿ ಶರಣಾಗತಿ ಮಾಡಿದವರಿಗೂ, ಸಮುದಾಯಜ್ಞಾನ ಪೂರ್ವಕ ಪ್ರಪತ್ತಿನಿಷ್ಠೆಮಾಡಿದವರಿಗೂ ಸಹ ಭಗವಂತನು ಅನುಗ್ರಹಿಸುವಂತೆ, ಸತ್ಪುರುಷರೂ ತಮ್ಮಲ್ಲಿ ಶರಣಾಗತಿ ಮಾಡಿದವನು ಪಿತೃಹನನವನ್ನುಮಾಡಿದ್ದರೂ ಅವನ ಪಾಪ ಪರಿಹಾರಕ್ಕೆ ದಾರಿತೋರಿಸಿ ಅನುಗ್ರಹಿಸುತ್ತಾರೆ.

**ಭಕ್ತಿ ಪ್ರಪತ್ತಿಹಳಿಲ್ ಏದೇನುಮೊರು ಶಾಸ್ತ್ರೀಯ ಮರ್ಯಾದೈಯಾಲೇ ಭಗವತ್ಪ್ರವಣ ರಾನಾರ್‌ಕ್ಕು [1] ಯತಮಾನ ಸಂಜ್ಞಾದ್ಯವಸ್ಥೈಹಳಿಲೇ ಅರ್ಥಸಙ್ಗಾದಿಹಳಾಹಿರ ಶಿಲವ್ಯಾಧಿಹಳ್ ನಿಶ್ಶೇಷಮಾಹ ಶಮಿಯೊದ ಮಟ್ಟೈಕ್ಕೊಂಡು ಇವರ್‌ಹಳ್ ಪ್ರಾಕೃತರ್ಪೋಲೇ ಅಸಂಭಾಷ್ಯರೆನ್ರು ಶಿಲ ವೈರಾಗ್ಯ ಮಾತ್ರ ಪ್ರಧಾನರ್‌ಹಳ್ ಶೊಲ್ಲುವರ್‌ಹಳ್.**

**ಇದುವುಮ್ ಭಗವಚ್ಛಾಸ್ತ್ರಾದಿಹಳಿಲ್ ಖಿನ್ನವೃತ್ತ್ಯಾದಿ ಪ್ರಕರಣಙ್ಗಳಾಲೇಪರಿಹಾರ್ಯಮ್.**

---

**ರಾಯ್**–ಸ್ಥಿರಾಧ್ಯವಸಾಯವನ್ನುಳ್ಳವರಾಗಿ **ಭಕ್ತಿ ಪ್ರಪತ್ತಿಹಳಿಲ್** ಇತ್ಯಾದಿ ಪರಂಪರೆಯಾಗಿ ಮೋಕ್ಷ ಸಾಧನಗಳಾದ ಕರ್ಮಯೋಗ ಜ್ಞಾನಯೋಗಗಳೇನು, ಸಾಕ್ಷಾನ್ಮೋಕ್ಷ ಸಾಧನಗಳಾದ ಭಕ್ತಿ ಪ್ರಪತ್ತಿಗಳೇನು, ಹೀಗೆ ಶಾಸ್ತ್ರ ಚೋದಿತಗಳಾಗಿ ವ್ಯವಸ್ಥಿತಗಳಾದ ಉಪಾಯಗಳಲ್ಲಿ ಯಾವುದಾದರೂ ಒಂದನ್ನು ಅನುಷ್ಠಿಸಿ ಭಗವತ್ಪ್ರವಣರಾದವರಿಗೆ 1) **ಯತಮಾನ ಸಂಜ್ಞಾದ್ಯವಸ್ಥೈಹಳಿಲ್**–ಆರಂಭದ ಶೈಯಲ್ಲಿ–ಅದಾಗಿ ಗೀತೆಯಲ್ಲಿ ಹೇಳಿರುವಂತೆ ಬಾಹ್ಯೇಂದ್ರಿಯಗಳನ್ನು ವಿಷಯ ಸುಖಗಳಲ್ಲಿ ಹೋಗದೆ ತಡೆದು ಜೀವಾತ್ಮಧ್ಯಾನದಲ್ಲಿ ನಿರತನಾಗುವ ದಶೆಯಲ್ಲಿ **ಅರ್ಥಸಂಗಾದಿಹಳಾಹಿರ** ಇತ್ಯಾದಿ–ಹಣ ಸಂಪಾದನೆಯಲ್ಲಿ ಆಸೆ ಮೊದಲಾದ ಕೆಲವು ವ್ಯಾಧಿಗಳು ನಿಶ್ಶೇಷವಾಗಿ **ಶಮಿಯಾದ ಮಟ್ಟೈಕ್ಕೊಂಡು**–ಹೋಗದೆ ಇರುವುದನ್ನು ನೋಡಿ, ಇವರುಗಳು ಪ್ರಾಕೃತ ಜನರಂತೆ ಸಂಭಾಷಣೆಗೆ ಅನರ್ಹರೆಂದು, ಕೆಲವು ವೈರಾಗ್ಯ ಮಾತ್ರ ಪ್ರಧಾನರು ಹೇಳುತ್ತಾರೆ. ಇದರ ತಾತ್ಪರ್ಯವೇನೆಂದರೆ ಭಗವದ್ಭಕ್ತಿ ನಿರತರಾಗಿ ಭಕ್ತಿ ಪ್ರಪತ್ತಿಗಳಲ್ಲೊಂದನ್ನು ಅನುಷ್ಠಿಸಿದ ಭಗವತ್ಪ್ರವಣರು ಅರ್ಥಸಂಗಾದಿಗಳಲ್ಲಿ ಆಸೆಯನ್ನು ಬಿಡದೆ, ವೈರಾಗ್ಯವಿಲ್ಲದೆ ಇರುವಾಗ ಅರ್ಥಕಾಮಗಳಲ್ಲಿಯೇ ಆಸೆಯುಳ್ಳ ಜನರಂತೆ ಇವರನ್ನು ಮಾತನಾಡಿಸಲೂ ಕೂಡದು ಎಂದು ಕೆಲವು ವೈರಾಗ್ಯ ಪ್ರಧಾನರು ಹೇಳುತ್ತಾರೆ.

**ಇದುವುಮ್** ಇತ್ಯಾದಿ–ಇದೂ ಭಗವಚ್ಛಾಸ್ತ್ರಗಳಲ್ಲಿ ಖಿನ್ನ ವೃತ್ತ್ಯಾದಿ ಪ್ರಕರಣಗಳಲ್ಲಿ ಹೇಳಿರುವಂತೆ ಪರಿಹಾರ್ಯವು. **ಖಿನ್ನ ವೃತ್ತಿಗಳು**–ದೇಹ ಯಾತ್ರೆಗೋಸ್ಕರ ಶ್ರಮ ಪಡುವ ಬಡವರು. ಖಿನ್ನ ವೃತ್ತಿ ಪ್ರಕರಣದಲ್ಲಿ,

"ನಿರ್ಧನಾಂಸ್ತ್ಕರ ತೋಲೋಕಾನ್ ವೃತ್ತ್ಯರ್ಥಂ ಭೃಶಕರ್ಶಿತಾನ್ ।
ನಾಪಮನ್ಯೇತ ತ್ರೈಲೋಕ್ಯಂ ಪವಿತ್ರೀಕುರುತೇ ಹರಿಃ ॥

ಹಣಕಾಸಿಲ್ಲದ ಬಡವರು ಕ್ಲೇಶದಿಂದ ತಮ್ಮ ಹಸಿವು ಬಾಯಾರಿಕೆಗಳನ್ನು ತೀರಿಸಿಕೊಳ್ಳಲು ಲೋಕದಲ್ಲಿ ಅಲ್ಲಲ್ಲೇ ಯಾಚಕರಾಗಿ ಸಂಚರಿಸುತ್ತಾರೆ. ಅವರುಗಳನ್ನು ಪರಿಹಾಸ್ಯ ಮಾಡಿ ಅಪಮಾನ ಮಾಡಕೂಡದು. ಆ ದರಿದ್ರ ನಾರಾಯಣರಿಗೆ ಭಿಕ್ಷೆ, ದಾನ ಕೊಡುವವರೂ ಪವಿತ್ರರಾಗುತ್ತಾರೆ. ಭಗವಂತನು ದರಿದ್ರರಿಗೆ ದಾನ, ಧರ್ಮಗಳನ್ನು ಮಾಡುವವರ ಪಾಪಗಳನ್ನು ಹೋಗಲಾಡಿಸಿ ಅವರಿಗೆ ಸದ್ಗತಿಯನ್ನು ಕೊಡುತ್ತಾನೆಂದರ್ಥ. ಆ ರೀತಿಯಲ್ಲಿ ಭಗವದ್ಭಕ್ತರೂ ಖಿನ್ನ ವೃತ್ತಿಗಳಾಗಿದ್ದು ಅರ್ಥಸಂಗದಿಂದ ಅಲ್ಲಲ್ಲೇ ಸಂಚರಿಸಿ ದಾನಗಳನ್ನು ಸ್ವೀಕರಿಸಿ ಕುಟುಂಬ ಯಾತ್ರೆಯನ್ನು ಮಾಡುವುದನ್ನು ನೋಡಿ, ಅವರುಗಳನ್ನು ನಿಂದಿಸಬಾರದೆಂದು ತಾತ್ಪರ್ಯ. ಭಗವದ್ಭಕ್ತರಿಗೆ ಕುಟುಂಬ ಪೋಷಣೆಗಾಗಿ ಅರ್ಥಸಂಗಾದಿಗಳು ಅತ್ಯಂತ ಬಾಧಕಗಳಾಗವು.

---

1) ಯತಮಾನ ಸಂಜ್ಞೆ

ಯದಾ ಸಂಹರತೇ ಚಾಯಂ ಕೂರ್ಮೋಽಙ್ಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ಗೀತೆ 0-58

ಆತ್ಮಯೋಗ ನಿಷ್ಠನು ಆರಂಭದ ದಶೆಯಲ್ಲಿ ಆಮೆಯು ತನ್ನ ಅಂಗಗಳನ್ನು ಒಳಗೆ ಸೆಳೆದು ಕೊಳ್ಳುವಂತೆ ಬಾಹ್ಯೇಂದ್ರಿಯಗಳನ್ನು ವಿಷಯ ಸುಖಗಳಲ್ಲಿ ಹೋಗದ ಹಾಗೆ ತಡೆದು ಮನಸ್ಸನ್ನು ಜೀವಾತ್ಮ ಧ್ಯಾನದಲ್ಲಿ ನಿರತವಾಗುವಂತೆ ಪ್ರವರ್ತಿಸಬೇಕು. ಇದು ಸ್ಥಿತ ಪ್ರಜ್ಞತೆಯ ಮೊದಲನೇ ಹಂತ, ಯತಮಾನ ಸಂಜ್ಞೆ ಎಂದು ಕರೆಯಲ್ಪಡುತ್ತದೆ.

**ಕುಮಾರ್ಗ ಪ್ರವೃತ್ತಿವಿಷಯೇ ವಿಹಿತನಿಂದಾ ಕಿಂಚಿತ್ ಸ್ಖಲನ ವಿಷಯೇ, ನಕಾರ್ಯಾ.**

**1) "ಡಂಭಿಹೈತುಕ ಪಾಷಂಡಿ ಬಕವೃತ್ತೀಂಶ್ಚ ವರ್ಜಯೇತ್"**

**2) "ಯೇತು ಸಾಮಾನ್ಯಭಾವೇನ ಮನ್ಯನ್ತೇ ಪುರುಷೋತ್ತಮಮ್।**
**ತೇವೈ ಪಾಷಣ್ಡಿನೋ ಜ್ಞೇಯಾ ಸ್ಸರ್ವಕರ್ಮ ಬಹಿಷ್ಕೃತಾಃ ॥"**

**3) "ಪುಂಸಾಂ ಜಟಾಭರಣ ಮೌಂಡ್ಯವತಾಂ ವೃಥೈವ" ಇತ್ಯಾದಿಹಳಿರ್ ಪಡಿಯೇ ವೃತ್ತಪ್ಪಿನಾರ್ ಪಕ್ಕಲ್ ಶೊಲ್ಲುಮ್ ವಾತ್ತೈಯೈ ನಲ್ವಳಿಯಿಲಡಿ ತಡುಮಾರಿನಾರ್ ಪಕ್ಕಲ್ ಶೊಲ್ಲಲಾಹಾದಿರೇ**

**ಪ್ರಪನ್ನಾಪಚಾರಃ ತ್ಯಾಜ್ಯ ಏವ.**

**ಭಾಗವತರಿಲ್ "ಊನಹೀನ ಪರಿಸ್ರಸ್ತನಷ್ಟ" ವಿಷಯಙ್ಗಳಿಲುಮ್ ಪರಿಮಾತ್ತಙ್ಗಳಿಲ್ ತಾರತಮ್ಯಮ್ ವಿಧಿತ್ತದೇಯಾಹಿಲುಮ್ ಐಕಾನ್ತ್ಯಮ್ ಕುಲೈಯಾದೇ ಇರುಕ್ಕಿಲ್ ಮುಡುವಿಲೊರ ವಿರುಹಾಲೇ**

---

## ಸನ್ಮಾರ್ಗದಲ್ಲಿ ಹೆಜ್ಜೆ ತಪ್ಪಿದ ಮಾತ್ರಕ್ಕೆ ಭಾಗವತರನ್ನು ದೂಷಿಸಬಾರದು

ಕೆಟ್ಟ ಮಾರ್ಗದಲ್ಲಿ ಪ್ರವಣರಾದವರನ್ನು ನೋಡಿ ಹೇಳುವ ನಿಂದನೆಯನ್ನು ಸನ್ಮಾರ್ಗದಿಂದ ಸ್ವಲ್ಪ ಜಾರಿದವರಲ್ಲಿ ಹೇಳಲಾಗದೆಂದು 1) **ಡಂಭಿಹೈತುಕ ಪಾಷಂಡಿ** ಎಂದಾರಂಭಿಸಿ ಶಿಕ್ಷಿಸುತ್ತಾರೆ. ಆದಾಗಿ ಡಾಂಭಿಕರು–ಇತರರು ತಮ್ಮನ್ನು ಶ್ಲಾಘಿಸಬೇಕೆಂದು ಕರ್ಮಾನುಷ್ಠಾನ ಮಾಡುವವರು, ಹೈತುಕರು–ಯುಕ್ತಿ ಮಾತ್ರವಾದಿಗಳು ಬಕ ವೃತ್ತಿಗಳು–ವಂಚನೆಯಿಂದ ನಂಬಿದವರಿಗೆ ದ್ರೋಹ ಮಾಡುವವರು. ಪಾಷಂಡಿಗಳು–ಭಗವಂತನನ್ನು ಇತರ ದೇವತೆಗಳಿಗೆ ಸಮಾನವಾಗಿ ನೋಡುವವರು, ಇವರುಗಳ ಸಹವಾಸ ಮಾಡಬಾರದು. 2) **ಯೇತು ಸಾಮಾನ್ಯ ಭಾವೇನ** ಇತ್ಯಾದಿ–ಪುರುಷೋತ್ತಮನನ್ನು ಮನುಷ್ಯ ಸಾಮಾನ್ಯ ಭಾವದಿಂದ ತಿಳಿಯುವವರು ಪಾಷಂಡಿಗಳು ಇವರುಗಳು ಸರ್ವ ವೈದಿಕ ಕರ್ಮಗಳನ್ನು ಮಾಡಲನರ್ಹರು 3) **ಪುಂಸಾಂ ಜಟಾಭರಣ** ಇತ್ಯಾದಿ ನಿಷ್ಕಾರಣವಾಗಿ, ಜಟೆಯನ್ನು ಧರಿಸುವವರು, ತಲೆ ಬೋಳಿಸುವವರು, ಭಗವನ್ನಿವೇದಿತವಲ್ಲದ ಅನ್ನವನ್ನು ತಿನ್ನುವವರು, ಸ್ನಾನ, ಸಂಧ್ಯಾವಂದನಾದಿ ಶರೀರ ಶುದ್ಧೀಕರಣ ವಿಲ್ಲದಿರುವವರು, ಪಿತೃ ತರ್ಪಣ ಮಾಡದವರು, ಮಾತಾಪಿತೃಶ್ರಾದ್ಧಗಳನ್ನೂ ಪಿಂಡ ಪ್ರದಾನಗಳನ್ನೂ ಮಾಡದವರು ; ಇವರುಗಳು ಮೇಲೆ ಮೇಲೆ ಪಾಪಿಗಳು. ಇವರುಗಳೊಡನೆ ಸಂಭಾಷಣೆ ಮಾಡುವವರೂ ನರಕಕ್ಕೆ ಹೋಗುತ್ತಾರೆ. **ಇತ್ಯಾದಿಹಳಿರ್ಪಡಿಯೇ ವೃತ್ತಪ್ಪಿನಾರ್**–ಈ ರೀತಿಯಲ್ಲಿ ಸನ್ಮಾರ್ಗ ಭ್ರಷ್ಟರಾದವರ ವಿಷಯದಲ್ಲಿ, ಹೇಳತಕ್ಕಂಥ ಪ್ರಮಾಣ ವಚನಗಳನ್ನು. ಸನ್ಮಾರ್ಗದಲ್ಲಿ ಹೆಜ್ಜೆ ವ್ಯತ್ಯಾಸವಾದವರ ವಿಷಯದಲ್ಲಿ ಹೇಳಕೂಡದು. ಅಂದರೆ ಡಾಂಭಿಕರು, ನಾಸ್ತಿಕವಾದ ಮಾಡುವವರು, ಬಕ ವೃತ್ತಿಗಳು, ಪಾಷಂಡಿಗಳು ಸನ್ಮಾರ್ಗವನ್ನು ಬಿಟ್ಟವರು, ಇವರುಗಳಂತೆ ಭಗವದ್ಭಕ್ತರು ವೃತ್ತಿಕರ್ಶಿತರಾಗಿ ಆಚಾರ ವ್ಯವಹಾರಗಳಲ್ಲಿ ನ್ಯೂನತೆಯಿಂದ ಸದ್ವೃತ್ತಿಯಲ್ಲಿ ಸ್ವಲ್ಪ ಹೆಜ್ಜೆ ತಪ್ಪಿದ ಮಾತ್ರಕ್ಕೆ ಅವರನ್ನು ಅಭಾಗವತರಂತೆ ತಿರಸ್ಕಾರವಾಗಿ ಕಾಣಬಾರದು, ಎಂದು ತಾತ್ಪರ್ಯ.

**ಭಾಗವತರಿಲ್** ಇತ್ಯಾದಿ ಭಗವದ್ಭಕ್ತರಲ್ಲಿ ಪಂಚ ಸಂಸ್ಕಾರಗಳಲ್ಲಿ ಕೆಲವು ಇಲ್ಲದಿರುವುದು, ಆದಾಗಿ **ಊನರ್**–ತಾಪ ಸಂಸ್ಕಾರ ಮಾತ್ರ ರಹಿತರು, **ಹೀನರ್**–ಪುಂಡ್ರ ಸಂಸ್ಕಾರ ರಹಿತರು, **ಪರಿಸ್ರಸ್ತರ್**–ನಾಮ ಸಂಸ್ಕಾರವಿಲ್ಲದವರು **ನಷ್ಟರ್**–ಮಂತ್ರ ಸಂಸ್ಕಾರವಿಲ್ಲದವರು. ಇವರುಗಳ ವಿಷಯಗಳಲ್ಲಿಯೂ, **ಪರಿಮಾಟ್ರಮ್**–ಆದರವಾಗಿ ನೋಡುವುದರಲ್ಲಿ ತಾರತಮ್ಯವು ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿದ್ದರೂ, **ಐಕಾಂತ್ಯವು** ಅಂದರೆ ಭಗವಂತನೇ ಉಪಾಯವೆಂಬ ಬುದ್ಧಿಯು **ಕುಲೈಯಾದೇ ಇರುಕ್ಕಿಲ್**–ನಷ್ಟವಾಗದೆ ಇದ್ದರೆ ಅಂತ್ಯ ಕಾಲದಲ್ಲಿ ಒಂದು **ವಿರಹಾಲೇ**–ಉಪಾಯ

---

1) ಯಾಜ್ಞವಲ್ಕ್ಯಸ್ಮೃತಿ 1-130 2) 3) ವಿಷ್ಣು ಪುರಾಣ 3-18 105
ಪುಂಸಾಂ ಜಟಾಭರಣ ಮೌಂಡ್ಯವತಾಂ ವೃಥೈವ ಮೋಘಾಶಿನಾಮಖಿಲ ಶೌಚ ಬಹಿಷ್ಕೃತಾನಾಮ್ ।
ತೋಯ ಪ್ರದಾನ ಪಿತೃಪಿಂಡ ನಿವರ್ಜಿತಾನಾಂ ಸಂಭಾಷಣಾದಪಿ ನರಾನರಕಂ ಪ್ರಯಾಂತಿ ॥

**ಇವರ್‌ಹಳೀಡೇರಿ ವಿಡುವರ್‌ಹಳ್. ಇವರುಹಳ್ ತಿರತ್ತಿಲುಮ್ ಅಪಚಾರ ಮಾಹಾದೆನ್ರಿರೇ ಶಾಸ್ತ್ರಂ ವಿಧಿತ್ತದು.**

**ಭಕ್ತ ಪ್ರಪನ್ನಯೋ ರ್ಭ್ರಂಶೇಽಪಿ ಮೋಕ್ಷಸಿದ್ಧಿರಸ್ತ್ಯೇವ.**

1) "ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನವಿದ್ಯತೇ।
ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್"ಎನ್ರುಮ್,

2) "ಪಾರ್ಥ ನೈವೇಹ ನಾಮುತ್ರ ವಿನಾಶ ಸ್ತಸ್ಯವಿದ್ಯತೇ।
ನಹಿ ಕಲ್ಯಾಣ ಕೃತ್ಕಶ್ಚಿದ್ದುರ್ಗತಿಂ ತಾತಗಚ್ಛತಿ ಎನ್ರುಮ್, ಕರ್ಮಯೋಗತ್ತಿಲ್ ಶೊನ್ನ ಪ್ರಭಾವಮ್. ಭಕ್ತಿಪ್ರಪತ್ತಿಹಳಿಲ್ ಕೈಮುತಿಕನ್ಯಾಯತ್ತಾಲೇ ಸಿದ್ಧಮಿರೇ.

3) "ಅಪಿಚೇತ್ಸುದುರಾಚಾರೋ ಭಜತೇ ಮಾ ಮನನ್ಯಭಾಕ್।
ಸಾಧುರೇವ ಸಮನ್ತವ್ಯ ಸ್ಸಮ್ಯಗ್ವ್ಯವಸಿತೋ ಹಿ ಸಃ॥ ಎನ್ರುಮ್.

---

ದಿಂದ ಇವರುಗಳು ಉತ್ತೀರ್ಣರಾಗುತ್ತಾರೆ, ಇವರುಗಳ ವಿಷಯದಲ್ಲಿ ಪ್ರತಿಪತ್ತಿ ತಾರತಮ್ಯವನ್ನು ಶಾಸ್ತ್ರವು ಹೇಳಿದರೂ ಭಾಗವತರೆಂಬ ಸಾಮ್ಯದಿಂದ ಇವರುಗಳ ವಿಷಯದಲ್ಲಿಯೂ ಅಪಚಾರವು ಕೂಡದೆಂದು "ವೈಷ್ಣವೇ ಪರಿವಾದಾಚ್ಚ ಪತತ್ಯೇವ ನ ಸಂಶಯಃ ಇತ್ಯಾದಿ ಶಾಸ್ತ್ರವು ವಿಧಿಸಿದೆ

### ಭಕ್ತಿ ಪ್ರಪತ್ತಿಗಳು ಸ್ವಲ್ಪ ವೈಕಲ್ಯವಿದ್ದರೂ ಕ್ರಮೇಣ ಉತ್ತಾರಕಗಳು

1) **ನೇಹಾಭಿಕ್ರಮನಾಶೋಽಸ್ತಿ** ಇತ್ಯಾದಿ 2) **ಪಾರ್ಥನೈವೇಹ ನಾಮುತ್ರ** ಇತ್ಯಾದಿ ಕರ್ಮಯೋಗವನ್ನು ಮಾಡಲು ಉಪಕ್ರಮಿಸಿ ಮಾಡಿಬಿಟ್ಟಿದ್ದರೂ, ಮಾಡಿದ ಕರ್ಮಯೋಗವು ಅದಾಗಿ ದಾನ ಧರ್ಮ ಯಜ್ಞ ಯಾಗ ತಪಸ್ತೀರ್ಥಾದಿ ಸೇವನೆಗಳಿಂದ ಉಂಟಾದ ಭಗವತ್ಪ್ರೀತಿಯು ಮನೆ ಕಟ್ಟಲು ಹಾಕಿದ ಕಲ್ಲಿನ ತಳ ಹದಿಯಂತೆ ಭದ್ರವಾಗಿದ್ದು ತಕ್ಕ ಸಮಯದಲ್ಲಿ ಇವನನ್ನು ಕರ್ಮಯೋ ವನ್ನು ಮುಂದುವರಿಸುವಂತೆ ಸಂಸಾರ ಭಯದಿಂದ ಕಾಪಾಡುತ್ತದೆ. (2) ಕರ್ಮಯೋಗವನ್ನು ಆರಂಭಿಸಿ ಮಧ್ಯೆ ಬಿಟ್ಟವನಿಗೆ ಇಹಪರಗಳಲ್ಲಿ ಕೆಡುಕು ಯಾವುದೂ ಇಲ್ಲ. ಮಂಗಳಕರವಾದ ಕರ್ಮಯೋಗವನ್ನು ಸ್ವಲ್ಪ ಮಾಡಿದರೂ, ಅವನು ದುರ್ಗತಿಯನ್ನು ಹೊಂದುವುದಿಲ್ಲ. ಈ ರೀತಿಯಲ್ಲಿ **ಕರ್ಮಯೋಗತ್ತಿಲ್ ಶೊನ್ನ**- ಕರ್ಮಯೋಗ ಪ್ರಕರಣದಲ್ಲಿ ಹೇಳಿದ ಯೋಗ ಪ್ರಭಾವವು **ಭಕ್ತಿ ಪ್ರಪತ್ತಿಹಳಿಲ್**-ಮಹಾ ಪ್ರಭಾವದಿಂದ ಕೂಡಿದ ಭಕ್ತಿ, ಪ್ರಪತ್ತಿಗಳ ವಿಷಯದಲ್ಲಿ ಕೈಮುತಿಕ ನ್ಯಾಯದಿಂದ ಅಧಿಕವಾಗಿರುತ್ತದೆ. ಆದ್ದರಿಂದ ಭಕ್ತಿ ಪ್ರಪತ್ತಿಗಳಲ್ಲಿ ಅಭಿಮುಖ್ಯದಿಂದ ಕೂಡಿದವರಲ್ಲಿ ಸ್ವಲ್ಪ ವೈಕಲ್ಯ ವನ್ನು ನೋಡಿ, ಅವರನ್ನು ಕೀಳಾಗಿ ಭಾವಿಸುವುದು ಮಹಾಪಚಾರವೆಂದು ತಾತ್ಪರ್ಯ.

ಭಗವಂತನೇ ಊನ, ಹೀನ, ನಷ್ಟ, ಪತಿತ್ರಸ್ತರೇ ಮೊದಲಾದವರ ವಿಷಯದಲ್ಲಿ ಅಪಚಾರಗಳು ಕೂಡದೆಂದು 1) **ಅಪಿಚೇತ್ಸುದುರಾಚಾರೋ** ಎಂದಾರಂಭಿಸಿ ಅನುಗ್ರಹಿಸಿರುತ್ತಾನೆಂದು ಸೂಚಿಸುತ್ತಾರೆ. ಆದಾಗಿ ಬಹಳ

---

1) ಗೀತೆ 2-40. ಇಹ ಈ ಕರ್ಮಯೋಗವನ್ನು, ಅಭಿಕ್ರಮನಾಶೋ ನಾಸ್ತಿ-ಆರಂಭಿಸಿ ಮಧ್ಯೆ ಬಿಟ್ಟದ್ದರಿಂದ, ಆರಂಭಿಸಿದ ಭಾಗವು ನಷ್ಟವಾಗುವುದಿಲ್ಲ. ಮಾಡಿ ಬಿಟ್ಟಿದ್ದರೂ, ಆ ಆರಂಭಿಸಿ ಮಾಡಿದ ಧರ್ಮವು ಕಾಲ ಕ್ರಮದಲ್ಲಿ ಪೂರ್ಣವಾಗಿ ಧರ್ಮಾಚರಣೆ ಮಾಡಿಸಿ, ಸಂಸಾರ ಭಯದಿಂದ ಕಾಪಾಡುತ್ತದೆ.

2) ಗೀತೆ 6-40. ಸ್ವಲ್ಪ ಧರ್ಮವನ್ನು ಆಚರಿಸಿ ಬಿಟ್ಟವನಿಗೂ ಇಹ ಪರಗಳಲ್ಲಿ ನಾಶವಿಲ್ಲ. (ಮಂಗಳಕರವಾದ ಕರ್ಮಯೋಗ ವನ್ನು ಆರಂಭಿಸಿ ಬಿಟ್ಟಿದ್ದರೂ ಆ ಮಂಗಳಕಾರ್ಯವನ್ನು ಮಾಡಿದವನು ದುರ್ಗತಿಯನ್ನು ಹೊಂದದೆ ಆ ಕರ್ಮ ಫಲವಾಗಿ ಮುಂದಿನ ಜನ್ಮದಲ್ಲಿ ಆ ಕಾರ್ಯವನ್ನು ಆರಂಭಿಸುವಂತೆ ಸದ್ವಂಶದಲ್ಲಿ ಹುಟ್ಟುತ್ತಾನೆ.)

1) ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ॥ ಎಂಬುದು ಅನಂತರ ವಾಕ್ಯ. ಅಪಿ ಸು ಎಂಬ ಉಪಪದಗಳಿಂದ ಬಹಳ ಬಹಳ ದುರಾಚಾರಿಯಾಗಿದ್ದರೂ ಭಗವಂತನನ್ನು ಆಶ್ರಯಿಸಿದವನು ಭಗವತ್ಪ್ರಭಾವದಿಂದ ಶೀಘ್ರದಲ್ಲೇ ಸದ್ವೃತ್ತಿಯಿಂದ ಕೂಡಿದವನಾಗಿ, ಪೂರ್ವಕೃತ ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ಗೀತೆ 6-30

2) "ಅಪಿ ಪಾಪೇಷ್ವಭಿರತಾ ಮದ್ಭಕ್ತಾಃ ಪಾಂಡುನಂದನ ।
ಮುಚ್ಯನ್ತೇ ಪಾತಕೈ ಸ್ಸರ್ವೈಃ ಪದ್ಮಪತ್ರ ಮಿವಾಂಭಸಾ॥"
ಎನ್ರುಮ್, ಸರ್ವೇಶ್ವರನ್ ತಾನೇ ಅರ್ಜುನನ್ನೈಯುಮ್ ಧರ್ಮಪುತ್ರನ್ನೈಯುಮ್ ಪತ್ತ ವರುಳಿಚ್ಚೆಯ್‌ದಾನ್.

ಉಪಾಯನಿಷ್ಠಾ ಪ್ರಭಾವಸ್ಯ ದೃಢೀಕರಣಮ್.

ಅಪ್ಪಡಿಯೇ ಶ್ರೀ ಪುಂಡರೀಕ ನಾರದ ಸಂವಾದತ್ತಿಲುಮ್
1) "ಚೀರವಾಸಾ ಜಟೀವಾಸ್ಯಾತ್ ತ್ರಿದಂಡೀ ಮುಂಡ ಏವ ವಾ
ಭೂಷಿತೋವಾ ದ್ವಿಜಶ್ರೇಷ್ಠ ನಲಿಙ್ಗಂ ಧರ್ಮಕಾರಣಮ್।
2) ಯೇನೃಶಂಸಾ ದುರಾತ್ಮಾನಃ ಪಾಪಾಚಾರ ರತಾಸ್ಸದಾ।
ತೇಪಿ ಯಾನ್ತಿ ಪರಂಸ್ಥಾನಂ ನರಾ ನಾರಾಯಣಾಶ್ರಿತಾಃ।

---

ದುರಾಚಾರಿಯಾಗಿದ್ದರೂ, ನನ್ನನ್ನು ಅನನ್ಯಗತಿಕನಾಗಿ ಆಶ್ರಯಿಸುವವನು, ಸಾಧು – ಒಳ್ಳೆಯ ತೀರ್ಮಾನದಿಂದ ಕೂಡಿದವನು. ಅವನನ್ನು ಬಹಳವಾಗಿಯೇ ಗೌರವಿಸಬೇಕು. ಶೀಘ್ರದಲ್ಲೇ ದುರಾಚಾರಗಳನ್ನೆಲ್ಲಾ ಬಿಟ್ಟು ಧರ್ಮದಲ್ಲಿ ನಿರತನಾಗುತ್ತಾನೆ. ಎಂದೂ, 2) **ಅಪಿಪಾಪೇಷ್ವಭಿರತಾಃ** ಇತ್ಯಾದಿ ಎಲೈ ಪಾಂಡು ಪುತ್ರನಾದ ಧರ್ಮರಾಜನೇ ನನ್ನ ಭಕ್ತರು ಪಾಪಕಾರ್ಯದಲ್ಲೇ ನಿರತರಾಗಿದ್ದರೂ ತಾಮರೆ ಎಲೆಯಲ್ಲಿ ನೀರು ಅಂಟದೇ ಇರುವಂತೆ ಅವರ ಸರ್ವಪಾಪಗಳೂ ಅಂಟದೆ ಅವರನ್ನು ಬಿಟ್ಟು ಹೋಗುತ್ತವೆ, ಎಂದೂ ಸರ್ವೇಶ್ವ ನು ತಾನೇ ಅರ್ಜುನನಿಗೂ, ಧರ್ಮಪುತ್ರನಿಗೂ ಕೃಪೆಯಿಂದ ಹೇಳಿರುತ್ತಾನೆ. ಭಕ್ತಿ ಪ್ರಪತ್ತಿಗಳಲ್ಲೊಂದು ಉಪಾಯವನ್ನು ಪರಿಗ್ರಹಿಸುವುದಕ್ಕೆ ಪೂರ್ವ ಭಾವಿಯಾಗಿ ಪಾಪ ಮಾಡಿದವನು ತನ್ನನ್ನು ಆಶ್ರಯಿಸಿದರೆ,

ದುರಾಚಾರೋಽಪಿ ಸರ್ವಾಶೀ ಕೃತಘ್ನೋ ನಾಸ್ತಿಕಃ ಪುರಾ ।
ಸಮಾಶ್ರಯೇದಾದಿದೇವಂ ಶ್ರದ್ಧಯಾ ಶರಣಂ ಯದಿ ॥
ನಿರ್ದೋಷಂ ವಿದ್ಧಿ ತಂ ಜಂತುಂ ಪ್ರಭಾವಾತ್ಪರಮಾತ್ಮನಃ ॥

ಎಂಬ ವಚನದ ಪ್ರಕಾರ ಭಗವಂತನು ರಕ್ಷಿಸುತ್ತಾನೆಂಬುದು ಸಹಜ. ಮೇಲೆ ಹೇಳಿದ "ಅಪಿಚೇತ್ಸುದುರಾಚಾರೋ" "ಅಪಿಪಾಪೇಷ್ವಭಿರತಾಃ" ಎಂಬ ವಚನಗಳಲ್ಲಿ ಪೂರ್ವದಲ್ಲಿ ಎಂದು ಹೇಳದೆ ಇರುವುದರಿಂದ, ಭಗವಂತನನ್ನು ಆಶ್ರಯಿಸಿದ ನಂತರವೂ ದುರಾಚಾರಾದಿ ಪಾಪ ಕಾರ್ಯಗಳಲ್ಲಿ ನಿರತರಾಗಿರುವವರನ್ನೂ ಯಾವುದಾದರೂ ಒಂದು ರೀತಿಯಲ್ಲಿ ಸರಿಪಡಿಸಿ ಧರ್ಮಾತ್ಮರನ್ನಾಗಿ ಮಾಡಿ ಭಗವಂತನು ರಕ್ಷಿಸುತ್ತಾನೆಂದು ಹೇಳಿರುವುದರಿಂದ, ವರ್ತಮಾನ, ಕಾಲದಲ್ಲಿ ಮಾಡುವದುರಾಚಾರಗಳೂ ಭಗವತ್ಸಮಾಶ್ರಯಣಕ್ಕೆ ಬಾಧಕವಾಗಲಾರವು ಎಂದೂ ಪೂರ್ವ ಕೃತಪಾಪಗಳು ಕೈಮುತಿಕ ನ್ಯಾಯದಿಂದ ಕಳೆದು ಹೋಗುತ್ತವೆ ಎಂದೂ, ತಾತ್ಪರ್ಯ.

ಪುಂಡರೀಕ ನಾರದಸಂವಾದವನ್ನು **ಅಪ್ಪಡಿಯೇ** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಹಾಗೇಯೇ ಶ್ರೀ ಪುಂಡರೀಕ ನಾರದ ಸಂವಾದದಲ್ಲಿಯೂ, 1) **ಚೀರವಾಸಾ ಜಟೀವಾಸ್ಯಾತ್** ಇತ್ಯಾದಿಯಾಗಿ. ಚೀರವಸ್ತ್ರ ಧಾರಿಯಾಗಿರಲಿ ಜಟಾಧಾರಿಯಾಗಿರಲಿ ತ್ರಿದಂಡಿಯಾಗಿರಲ್ಲಿ ಮುಂಡನಾಗಿ ಏಕದಂಡಿಯಾಗಿರಲಿ, ಹೀಗೆಯೇ ಇತರ ಲಿಂಗಗಳಿಂದ ಭೂಷಿತನಾಗಿರಲಿ (ಲಿಂಗ - ಆಶ್ರಮ ಚಿಹ್ನ) ಇವು ಧರ್ಮ ಹೇತುವಲ್ಲ. ಅಂದರೆ ಮೋಕ್ಷಕ್ಕೆ ಕಾರಣವಾದ ಭಗವತ್ಪ್ರಸಾದ ಜನಕವಾಗಲಾರವು. ಮತ್ತೇನೆಂದರೆ ಭಕ್ತಿಪ್ರಪತ್ತಿರೂಪ ಉಪಾಯಗಳೇ ಭಗವತ್ಪ್ರಸಾದಜನಕಗಳು, ಎಂದು ತಾತ್ಪರ್ಯ 2) **ಯೇನೃಶಂಸಾ ದುರಾತ್ಮಾನಃ** ಇತ್ಯಾದಿ ನಾರಾಯಣನನ್ನು ಆಶ್ರಯಿ

---

2) ಭಾರತ ಅಶ್ವಮೇಧಿಕ ಪರ್ವ 96-46.
1) 2) ಇತಿ ಸಮು 31-188. 119

3) **ಲಿಪ್ಯನ್ತೇ ನಚ ಪಾಪೇನ ವೈಷ್ಣವಾ ವೀತಕಲ್ಮಷಾಃ ।**
**ಪುನನ್ತಿ ಸಕಲಂ ಲೋಕಂ ಸಹಸ್ರಾಂಶು ರಿವೋ ದಿತಃ ॥"**

4) **ಜನ್ಮಾಂತರ ಸಹಸ್ರೇಷು ಯಸ್ಯ ಸ್ಯಾದ್ಬುದ್ಧಿ ರೀದೃಶೀ ।**
**ದಾಸೋಹಂ ವಾಸುದೇವಸ್ಯ ಸರ್ವಲೋಕ ಮಹಾತ್ಮನಃ ।**
**ಸ ಯಾತಿ ವಿಷ್ಣು ಸಾಲೋಕ್ಯಂ ಪುರುಷೋ ನಾತ್ರ ಸಂಶಯಃ ।**
**ಕಿಂ ಪುನ ಸ್ತದ್ಗತ ಪ್ರಾಣಾಃ ಪುರುಷಾಸ್ಸಂಯತೇಂದ್ರಿಯಾಃ ।'**

**ಎನ್ರು ಭಗವತ್ಪ್ರವಣರ್ ಅನುವೃತ್ತ ದೋಷರಾನಾಲುಮ್, ಯಥಾರ್ಹ ಪ್ರಾಯಶ್ಚಿತ್ತಾದಿ ಮುಖತ್ತಾಲೇ ಮೋಕ್ಷ ಸಿದ್ಧಿಯಿಲ್ ಸಂಶಯಮಿಲ್ಲೈಯೆನ್ರು ಮಿಡತ್ತೈಯುಮ್, ನಿರ್ದೋಷರುಕ್ಕು ಕೈಮುತಿಕ ನ್ಯಾಯತ್ತಾಲೇ ಕಡುಹ ಮೋಕ್ಷ ಸಿದ್ಧಿಯೈಯುಮ್ ಶೊಲ್ಲಿ,**

1) ಅಶ್ವಮೇಧ ಶತೈರಿಷ್ಟ್ವಾ ವಾಜಪೇಯ ಶತೈರಪಿ ।
ನಪ್ರಾಪ್ನುವಂತಿ ಸುಗತಿಂ ನಾರಾಯಣ ಪರಾಙ್ಮುಖಾಃ॥"

**ಎನ್ರು ಭಗವದ್ವಿಮುಖರುಕ್ಕು ಅನನ್ತಙ್ಗಳಾನ ಉತ್ಕೃಷ್ಟ ಸುಕೃತಙ್ಗಳಾಲುಮ್ ಸುಗತಿ ಯಿಲ್ಲೈ ಯೆನ್ರುಮ್ ಮಹರ್ಷಿ ಇವ್ವರ್ಥಙ್ಗಳೈ ಪ್ರಪಂಚಿತ್ತಾರ್.**

---

ಸಿದವರು ಆಶ್ರಯಾನಂತರ ನೃಶಂಸರಾಗಿದ್ದರೂ, ಕೆಟ್ಟ ಸ್ವಭಾವದಿಂದ ಕೂಡಿದ್ದರೂ, ಸದಾ ಪಾಪಗಳನ್ನೇ ಆಚರಿಸುತ್ತಿದ್ದರೂ ತಮ್ಮ ಅಧಿಕಾರಾನುಗುಣವಾದ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡು ಸದ್ಗತಿಯನ್ನು ಪಡೆಯುತ್ತಾರೆ. 3 **ಲಿಪ್ಯಂತೇ ನಚಪಾಪೇನ** ಇತ್ಯಾದಿ ವಿಷ್ಣು ಭಕ್ತರು ಪ್ರಾಮಾದಿಕ ಪಾಪಗಳಿಂದ, ನಲಿಪ್ಯಂತೇ ಲೇಪಹೊಂದುವುದಿಲ್ಲ ಪ್ರಾಮಾದಿಕ ಪಾಪಗಳು ಅವರಿಗೆ ಅಂಟುವುದಿಲ್ಲವೆಂದರ್ಥ. ಅವರು ಕಲ್ಮಷಗಳಿಲ್ಲದವರಾಗಿ ಉದಯಿಸಿದ ಸೂರ್ಯನಹಾಗೆ ಸಕಲ ಲೊಕಗಳನ್ನೂ ಪವಿತ್ರಗೊಳಿಸುತ್ತಾರೆ. 4)**ಜನ್ಮಾಂತರಸಹಸ್ರೇಷು** ಇತ್ಯಾದಿ – ಸರ್ವಲೋಕ ಸ್ವಾಮಿಯಾದ ವಾಸುದೇವನಿಗೆ ದಾಸನೆಂಬ ಜ್ಞಾನವು ಯಾರಿಗೆ ಅನೇಕ ಸಾವಿರ ಪುಣ್ಯ ಜನ್ಮಗಳ ನಂತರ ಉಂಟಾಗುತ್ತದೆಯೊ, ಅವನು ವಿಷ್ಣು ಸಾಲೋಕ್ಯವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. ಹೀಗಿರುವಾಗ ಇಂದ್ರಿಯಗಳನ್ನು ಅಡಗಿಸಿಕೊಂಡು ಭಗವಂತನೇ ತನಗೆ ಪ್ರಾಣಾಧಾರನೆಂದು ಧ್ಯಾನಮಾಡುವವರು ಭಗವಂತನನ್ನೇ ಪಡೆಯುವುದರಲ್ಲಿ ಸಂಶಯವಿಲ್ಲ, **ಎಂದು ಭಗವತ್ಪ್ರವಣರ್** ಇತ್ಯಾದಿ-ಈರೀತಿಯಾಗಿ ಭಗವತ್ಪ್ರವಣರು–ಭಗವಂತನಲ್ಲೇ ಪ್ರಾವಣ್ಯಾತಿಶಯವುಳ್ಳವರು, **ಅನುವೃತ್ತ ದೋಷರಾನಾಲುಮ್** ಬುದ್ಧಿಪೂರ್ವಕವಾದ ಪಾಪಗಳನ್ನು ಮಾಡಿದರೂ ಯಥಾರ್ಹವಾದ ಪ್ರಾಯಶ್ಚಿತ್ತಾದಿಗಳಿಂದ, ನಿವೃತ್ತ ಪಾಪರಾಗಿ ಮೋಕ್ಷವನ್ನು ಪಡೆಯುವುದರಲ್ಲಿ ಸಂಶಯವಿಲ್ಲವೆಂದೂ **ನಿರ್ದೋಷರುಕ್ಕು** ಬುದ್ಧಿ ಪೂರ್ವಕ ಪಾಪಗಳನ್ನು ಮಾಡದೇ ನಿರ್ದೋಷರಿಗೆ ಕೈಮುತಿಕ ನ್ಯಾಯದ ಪ್ರಕಾರ, ಶೀಘ್ರವಾಗಿಯೇ ಮೋಕ್ಷಸಿದ್ಧಿ ಉಂಟಾಗುತ್ತದೆಯೆಂದೂ ಹೇಳಿರುತ್ತದೆ. **ಅಶ್ವಮೇಧ ಶತೈರಿಷ್ಟ್ವಾ** ಇತ್ಯಾದಿ ನಾರಾಯಣನಲ್ಲಿ ಪರಾಙ್ಮುಖರಾಗಿರುವವರು ನೂರು ಅಶ್ವಮೇಧ ಯಾಗಗಳನ್ನು ಮಾಡಿದರೂ, ಹಾಗೆಯೇ ನೂರು ವಾಜಪೇಯ ಯಾಗಗಳನ್ನು ಮಾಡಿದರೂ, ಸದ್ಗತಿಯನ್ನು ಪಡೆಯಲಾರರು, ಎಂದು ವ್ಯತಿರೇಕ ಮುಖದಿಂದ, ಭಗವದ್ವಿಮುಖರಿಗೆ ಅನಂತ ಉತ್ಕೃಷ್ಟ ಸುಕೃತಗಳಿಂದಲೂ ಸುಗತಿಯಿಲ್ಲ ವೆಂದು ಮಹರ್ಷಿಯು ಈ ಅರ್ಥಗಳನ್ನು **ಪ್ರಪಂಚಿತ್ತಾನ್** ವಿಸ್ತಾರವಾಗಿ ಹೇಳಿರುತ್ತಾರೆ.

---

3) ಇತಿ. ಸಮು (31-120) 4) ಇತಿ. ಸಮು 31,121, 122)
1) ಇತಿ. ಸಮು. 33-180.

2) **"ಯೋಹ್ಯೇನಂ ಪುರುಷಂವೇದ ದೇವಾ ಅಪಿ ನತಂ ವಿದುಃ"**
**ಎನ್ಗೈಯಾಲೇ ಭಗವದ್ಜ್ಞಾನ ಮುಡೈಯವನುಡೈಯ ಪ್ರಭಾವಂ ನಿತ್ಯ ಸೂರಿಹಳುಕ್ಕುಮ್ ಪರಿಚ್ಛೇದ್ಯ ಮನ್ರಿರೇ. ಅಹೈಯಾಲ್ ಅನುವೃತ್ತ ಬುದ್ಧಿ ಪೂರ್ವದೋಷರಾನ ಭಾಗವತರ್ಕ್ಕುಉಪಕ್ಲೇಶಾದಿಹಳುಣ್ಡಾನಾಲುಮ್, ಅವಜ್ಞಾದಿಹಳ್ ಪಣ್ಣಲಾಹಾದು.**

3) "ಅವೈಷ್ಣವ ನಮಸ್ಕಾರಾದವಮಾನಾಚ್ಚ ಕೇಶವೇ ।
ವೈಷ್ಣವೇ ಪರಿವಾದಾಚ್ಚ ಪತತ್ಯೇವ ನಸಂಶಯಃ ॥"

4) "ಯತಿನಿನ್ದಾ ಪರೋ ನಿತ್ಯಂ ವೈಷ್ಣವಾ ನವಮನ್ಯತು ।
ಅಧ್ಯಾತ್ಮ ವಿಮುಖಸ್ಸೋಸ್ತು ಬಿಸಸ್ತೈನ್ಯಂ ಕರೋತಿಯಃ ॥
ಅನ್ತರ್ದುಷ್ಟೋ ಬಹಿಶ್ಶಾನ್ತೋ ಬ್ರಹ್ಮವಿದ್ವೇಷತತ್ಪರಃ ।
ಕರ್ಮ ನಿನ್ದಾಪರಸ್ಸೋಸ್ತು ಬಿಸಸ್ತೈನ್ಯಂ ಕರೋತಿ ಯಃ ॥
ನಿತ್ಯಾನುಷ್ಠಾನ ಸಂಯುಕ್ತಾನಧ್ಯಾತ್ಮ ಜ್ಞಾನ ದುರ್ಬಲಾನ್ ।
ವ್ಯಾಮೋಹಯತು ದುರ್ಬುದ್ಧಿರ್ಬಿಸಸ್ತೈನ್ಯಂ ಕರೋತಿಯಃ॥" ಎನ್ರು ಶೊಲ್ಲಪಟ್ಟದಿರೇ.

---

2) ಯೋಹ್ಯೇನಂಪುರುಷಂವೇದ ಇತ್ಯಾದಿ, ಈ ಮಹಾಪುರುಷನಾದ ನಾರಾಯಣನನ್ನು ವೇದ - ಸಾಕ್ಷಾತ್ಕರಿಸಿದವನ ಪ್ರಭಾವವನ್ನು–ದೇವಾಃ, ನಿತ್ಯಸೂರಿಗಳೂ ತಿಳಿಯರು, ಎಂದು ಭಗವದ್ಜ್ಞಾನವುಳ್ಳವರಪ್ರಭಾವವು ನಿತ್ಯಸೂರಿಗಳಿಗೂ ಪರಿಚ್ಛೇದಿಸಿ ಹೇಳಲಾಗುವುದಿಲ್ಲವಲ್ಲವೇ. ಏತಾವತಾಫಲಿಸಿದುದೇನೆಂಬುದನ್ನು **ಅಹೈಯಾಲ್ ಅನುವೃತ್ತ ಬುದ್ಧಿ ಪೂರ್ವದೋಷರಾನ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಮೇಲೇ ಹೇಳಿದ ವಚನಗಳ ಪ್ರಕಾರ ಬುದ್ಧಿ ಪೂರ್ವಕವಾದ ಪಾಪಗಳನ್ನು ಮಾಡುವ, ಭಾಗವತರಿಗೆ ಉಪಕ್ಲೇಶಗಳು ಉಂಟಾದರೂ, ಅವರನ್ನು ಕುರಿತು ಅವಜ್ಞಾದಿಗಳನ್ನು ಮಾಡಲಾಗದು. ಇದಕ್ಕೆ ಪ್ರಮಾಣವನ್ನು 3) **ಅವೈಷ್ಣವ ನಮಸ್ಕಾರತ್** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಅವೈಷ್ಣವರನ್ನು ನಮಸ್ಕರಿಸಬಾರದು. ಕೇಶವನನ್ನು ಅವಮಾನಗೊಳಿಸಬಾರದು ವೈಷ್ಣವರನ್ನು ದೂಷಿಸಬಾರದು. ಇವುಗಳೆಲ್ಲಾ ಸಮಾನವಾದ ಪಾಪಗಳು. ಈಪಾಪಗಳಿಂದ ಪತಿತನಾಗುತ್ತಾನೆ. **4) ಯತಿನಿಂದಾ ಪರೋನಿತ್ಯಂ** ಇತ್ಯಾದಿ ತಾವರೆಗೆಡ್ಡೆಯನ್ನು ಕದ್ದವನು ನಿತ್ಯವೂ ಯತಿನಿಂದಾಪರನಾಗಿಯಾ ವೈಷ್ಣವರನ್ನು ಅಪಮಾನಿಸುವವನಾಗಿಯಾ, ಅಧ್ಯಾತ್ಮ ವೇದಾಂತ ಶಾಸ್ತ್ರಾಭ್ಯಾಸ ವಿಮುಖನಾಗಿಯೂ ಇರಲಿ ಎಂದು ಋಷಿಗಳ ಮಧ್ಯೆ ಪರಸ್ಪರ ವಿವಾದ ವೇರ್ಪಟ್ಟಾಗ ಮಾಡಿದ ಶಪಥ. ಇದರಿಂದ ಈ ಪಾಪಗಳು ಬಹಳ ಕ್ರೂರಗಳು ಎಂದು ಏರ್ಪಡುತ್ತವೆ. ಹಾಗೆಯೇ (5) **ಅಂತರ್ದುಷ್ಟೋ** ಇತ್ಯಾದಿ ತಾವರೆಗೆಡ್ಡೆಗಳನ್ನು ಕದ್ದವನು ಮನಸ್ಸಿನೊಳಗೆ ದುಷ್ಟ ಸ್ವಭಾವನಾಗಿಯೂ, ಹೊರಗಡೆ ಶಾಂತನಾಗಿ ವೇಷವನ್ನು ಹಾಕುವವನಾಗಿಯಾ, ಬ್ರಹ್ಮವಿತ್ತುಗಳನ್ನು ದ್ವೇಷಿಸುವುದೇ ಸ್ವಭಾವವುಳ್ಳವನಾಗಿಯಾ, ಕರ್ಮನಿಂದಾಪರ - ವೈದಿಕಕರ್ಮಗಳನ್ನು ದೂಷಿಸುವವನಾಗಿಯಾ ಆಗಲಿ. ಈರೀತಿಯಾದ ಮಹಾಪಾಪಗಳಿಗೆ ಒಳಗ್ಗಾಗಲಿ ಎಂದು ಋಷಿಗಳು ಶಪಥಮಾಡುತ್ತಾರೆ. ಹಾಗೆಯೇ ವೇದಾಂತ ಜ್ಞಾನವು ದುರ್ಬಲವಾಗಿದ್ದು **ನಿತ್ಯಾನುಸ್ಠಾನ** ತತ್ಪರರನ್ನು ವ್ಯಾಮೋಹಗೊಳಿಸುವ ದುರ್ಬುದ್ಧಿಯು, ತಾವರೆ ಗೆಡ್ಡೆಯನ್ನು ಕದ್ದವನಿಗೆ ಉಂಟಾಗಲಿ, ಎಂಬುದು ಮತ್ತೊಂದು ಶಪಥ. ಈ ರೀತಿಯಾದಪ್ರಮಾಣ

---

2) ಭಾರತ. ಅರಣ್ಯಪರ್ವ. 191-29

3) ನಾರದೀಯ

4) 5) ಇತಿಹಾಸ ಸಮುಚ್ಚಯ 12-71,72

## ಭಗವದ್ಭಾಗವತಾಪಚಾರಾಣಾಂ ತೀವ್ರತಮತ್ವ ಕಥನಮ್,

**ಶ್ರೀ ಭಾಷ್ಯಕಾರರ್ ಅಕೃತ್ಯಕರಣ ಕೃತ್ಯಾಕರಣಙ್ಗಳೋಡೇ ಭಗವದಪಚಾರಾದಿಹಳೈ ಚ್ಚೇರವೆಡುತ್ತದು ಗೋಬಲೀವರ್ದ ನ್ಯಾಯತ್ತಾಲೇ ಭಗವದಪ ಚಾರಾದಿಹಳೈ ತೀವ್ರಙ್ಗಳೆನ್ಗೈಕ್ಕಾಹ.**

**ಎಲ್ಲಾಮ್ ಭಗವದಪಚಾರಙ್ಗಳಾಯಿರುಕ್ಕ ಮುಖಭೇಧಙ್ಗಳಾಲೇ ವಿವಕ್ಷಿತ್ತು ಚಿಲವತ್ತೈ ಇಙ್ಙು ಭಾಗವತಾಪಚಾರಙ್ಗಳೆನ್ಗಿರದು. ಯಾವೈಶಿಲ ಅಪಚಾರಙ್ಗಳೈಪ್ಪರನ್ಪೋಲೇಶೆಯ್‌ಹಿರಾನ್ ಅಪ್ಪಡಿಪ್ಪಟ್ಟವೈತನ್ನೈಯೇ ಭಗವದ್ಭಾಗವತ ವಿಷಯಙ್ಗಳಿಲೇ ಶೆಯ್‌ದಾಲ್, ವಿಷಯಸ್ವಭಾವತ್ತಾಲೇ ರಾಜದ್ರೋಹಾದಿಹಳ್‌ಪೋಲೇ,ಮಿಹವುಂ ದಂಡ ಹೇತುಕ್ಕಳಾಮೆನ್ರು ವಿಶೇಷೋಪಾದಾನತ್ತುಕ್ಕಭಿಪ್ರಾಯಮ್**

---

ವಚನಗಳಿಂದ ಭಾಗವತರನ್ನು ದ್ವೇಷಿಸುವುದೂ ಅವರ ಆಚಾರಾನುಷ್ಠಾನಗಳನ್ನು ದೂಷಿಸುವುದೂ ಕೂಡದು. ಎಂದು ಹೇಳಲ್ಪಟ್ಟದೆಯಲ್ಲವೇ. ಆದ್ದರಿಂದ ಭಾಗವತಪ್ರಭಾವವು ಬಹಳ ಉತ್ಕೃಷ್ಟವಾದದ್ದು. ಭಾಗವತಾಪಚಾರ ಬಹಳ ಕ್ರೂರವಾದದ್ದು ಎಂದು ತಿಳಿಸಲ್ಪಟ್ಟಿತು. ಸಪ್ತರ್ಷಿ ಸಂವಾದದಲ್ಲಿ ತಾವರೆ ಗೆಡ್ಡೆಯನ್ನು ಕದ್ದು. ತಿಂದವನಿಗೆ ಇಂತಹ ಕ್ರೂರಗಳಾದ ಪಾಪಗಳು ಸಂಭವಿಸಲಿ ಎಂದು ಮಾಡಿದ ಶಪಥಗಳು ಇದಕ್ಕೆ ಪ್ರಮಾಣಗಳು

### ಭಾಗವತಾಪಚಾರವು ಕ್ರೂರವೆಂಬುದಕ್ಕೆ ಶ್ರೀ ಭಾಷ್ಯಕಾರರ ಸಮ್ಮತಿ

ಅಕೃತಕರಣಾದಿಗಳಲ್ಲಿ ಭಾಗವತಾಪಚಾರವು ಪ್ರಧಾನತಮ ವೆಂಬುದನ್ನು **ಶ್ರೀ ಭಾಷ್ಯಕಾರರ್**-ಇತ್ಯಾದಿ ಆರಂಭಿಸಿ ನಿರೂಪಿಸುತ್ತಾರೆ. ಅದಾಗಿ ಶ್ರೀ ಭಾಷ್ಯಕಾರರು ಅಕೃತ್ಯಕರಣಗಳೊಡನೆ ಭಗವದಪಚಾರ ಭಾಗವತಾಪಚಾರಗಳನ್ನು ಸೇರಿಸಿ ಹೇಳಿರುವುದು ಗೋಬಲಿವರ್ದನ್ಯಾಯದಪ್ರಕಾರ ಭಗವದಪಚಾರ ಭಾಗವತಾಪಚಾರಗಳು ತೀವ್ರವಾದ ಪಾಪಗಳು ಎಂದು ತೋರಿಸುವುದಕ್ಕಾಗಿ ಎಂದರ್ಥ. ಅದಾಗಿ ''ಗಾಮಾನಯ ಬಲೀವರ್ದಮಾನಯ'' ಎಂಬಲ್ಲಿ "ಗಾಮ್" ಎಂಬ ಶಬ್ದದಿಂದ ಬಲೀವರ್ದವೂ (ಎತ್ತೂ) ಸಿದ್ಧವಾಗಿದ್ದರೂ, ಪುನಃ "ಬಲೀವರ್ದಮಾನಯ" ಎಂದು ಹೇಳಿರುವುದು ಗೋಶಬ್ದವು ಬಲೀವರ್ದಾನಯನಕ್ಕೆ (ಎತ್ತನ್ನು ತೆಗೆದುಕೊಂಡು ಬರುವುದಕ್ಕೆ)ಅವಶ್ಯಕತೆಯನು" ತಿಳಿಸುತ್ತದೆ. ಅಕೃತ್ಯಕರಣ ಕೃತ್ಯಾಕರಣ ಪಾಪಗಳಲ್ಲಿ ಭಗವದ್ಭಾಗವತಾಪಚಾರಗಳು, ಅಡಗಿದ್ದರೂ ಪುನಃ ಪ್ರತ್ಯೇಕವಾಗಿ ಅವುಗಳನ್ನು ಹೇಳಿರುವುದು ಭಗವದ್ಭಾಗವತಾಪಚಾರಗಳು ತೀಕ್ಷ್ಣಗಳು ಎಂದು ತಿಳಿಸುವುದರಲ್ಲಿ ತಾತ್ಪರ್ಯ. **ಎಲ್ಲಾಂಭಗವದಪಚಾರಂಗಳಾಯಿರುಕ್ಕ** ಇತ್ಯಾದಿ - ಎಲ್ಲವೂ ಭಗವದಪಚಾರಗಳಾಗಿರುವಾಗ ಮುಖಬೇಧವನ್ನು ವಿವಕ್ಷಿಸಿ, ಅಂದರೆ ದೇವಾಲಯಕ್ಕೆ ಪಾದುಕೆಯೊಡನೆ ಪ್ರವೇಶಿಸುವುದು, ದೇವರಿಗೆ ನಮಸ್ಕಾರಮಾಡದೆ ಇರುವುದು ಭಗವದಪಚಾರಗಳು ಹಾಗೆಯೇ ಭಗವದಪ್ರೀತಿಗೂ ಹೇತುವಾದ ತದೀಯರ ಅಪ್ರೀತಿಯ ತೀವ್ರತಮವನ್ನು ಕುರಿತು ಅದಕ್ಕೆ ಹೇತುಗಳಾದ ಕೆಲವು ಅಪಚಾರಗಳನ್ನು ಭಾಗವತಾಪಚಾರಗಳೆಂದು ಹೇಳುತ್ತದೆ. **ಯಾವೈ ಶಿಲವಪಚಾರಂಗಳೈ** ಇತ್ಯಾದಿ-ಯಾವ ಅಪಚಾರಗಳನ್ನು ಇತರರ ವಿಷಯದಲ್ಲಿ ಮಾಡುತ್ತಾನೆಯೋ, ಅಂತಹವನ್ನು ಭಗವದ್ಭಾಗವತ ವಿಷಯಗಳಲ್ಲಿ ಮಾಡಿದರೆ ವಿಷಯ ಸ್ವಭಾವದಿಂದ ರಾಜದ್ರೋಹಾದಿಗಳಂತೆ ತೀಕ್ಷ್ಣವಾದ ಶಿಕ್ಷೆಗೆ ಕಾರಣಗಳಾಗುತ್ತವೆ, ಯೆಂಬುದನ್ನೂ ವಿವಕ್ಷಿಸಿ, **ವಿಶೇಷೋಪದಾನತ್ತುಕ್ಕು** ಪ್ರತ್ಯೇಕವಾಗಿ ಎತ್ತಿ ಹೇಳಿರುವುದಕ್ಕೆ ಅಭಿಪ್ರಾಯ.

## ಉಪಾಯಪೂರ್ತ್ಯಭಾವಾನಾಮಪ್ಯಪಚಾರೋ ಭಾಗವತಾಪಚಾರ ಏವ.

ನರಕತ್ತುಕ್ಕು ನಾಱ್ಱಙ್ಗಾಲಾನ ಸಂಸಾರ ಮಂಡಲತ್ತಿಲೇ ನಲ್ವೞಿ ನಡಪ್ಪಾರ್ ದುರ್ಲಭರಾಯಿರುಕ್ಕ ಭಗವದ್ವಿಷಯತ್ತೈಪ್ಪತ್ತಿ ಅಧಿಕಾರಾನು ರೂಪಮಾಹ ಮುಕ್ತಿಮಾರ್ಗತ್ತುಕ್ಕು ಮುನ್ನಡಿಯಾನ ಕರ್ಮಯೋಗಾದಿ ಪರ್ವಭೇದಙ್ಗಳಿಲೇ ನಿನ್ಱಾರೈಯುಮ್ ನೆಗಿೞ ನಿನೈಕ್ಕೈ ಭಾಗವತಾಪಚಾರಮ್.

ಕೇವಲ ಅರ್ಥಕಾಮ ಪ್ರವಣಾನಾಂ ನಮೋಕ್ಷಃ

1) "ನ ಶಬ್ದಶಾಸ್ತ್ರಾಭಿರತಸ್ಯ ಮೋಕ್ಷೋ ನ ಭೋಜನಾಚ್ಛಾದನ ತತ್ಪರಸ್ಯ ।
ನಚೈವ ರಮ್ಯಾ ವಸಥ ಪ್ರಿಯಸ್ಯ ನ ಲೋಕ ಚಿತ್ತ ಗ್ರಹಣೇ ರತಸ್ಯ॥"
ಇತ್ಯಾದಿಹಳಿಲುಮ್ ಭಗವತ್ಪ್ರಾವಣ್ಯಮಿನ್ಱಿಕ್ಕೇ,

2) "ಶಿಶ್ನೋದರೇ ಯೇ ಭಿರತಾಸ್ಸದೈವ ಸ್ತೇಯಾನೃತಾ ವಾಕ್ಪರುಷಾಶ್ಚ ನಿತ್ಯಮ್ ।
ವ್ಯಪೇತ ಧರ್ಮಾ ಇತಿತಾನ್ ವಿದಿತ್ವಾ ದೂರಾದ್ದೇವಾ ಸ್ಸಂಪರಿವರ್ಜಯನ್ತಿ ॥"

ಎನ್ಱಿರಪಡಿಯೇ, ಬಾಹ್ಯ ವಿಷಯ ಪ್ರಾವಣ್ಯಮೇ ಯುಡೈಯಾರ್ಕ್ಕು ಮೋಕ್ಷಮಿಲ್ಲೈ ಎನ್ಱಪಡಿ.

---

ನರಕ್ಕತ್ತುಕ್ಕುನಾಟ್ರಂಗಾಲಾನ–ನಾಟ್ರುಂಗಾಲ್ ಒಟ್ಟು ಹಾಕುವ ಭೂಮಿ – ಭತ್ತವನ್ನು ಬೆಳೆಯುವವರು ಮೊದಲು ಭತ್ತವನ್ನು ಒಟ್ಟು ಹಾಕಿ ಬಿತ್ತಿ ಪಯಿರುಬೆಳೆದ ನಲವತ್ತು ದಿವಸಗಳ ನಂತರ ಆ ಪಯಿರುಗಳನ್ನು ಬೇರೆ ಬೇರೆ ಪಾತಿಗಳಲ್ಲಿ ವಿರಳವಾಗಿ ನಡುವಂತೆ, ನರಕಕ್ಕೆ ಹೋಗುವವರನ್ನು ಮೊದಲು ಸಂಸಾರದಲ್ಲಿ ಒಟ್ಟು ಹಾಕಿ ಅನಂತರ ಭಗವಂತನು ಅವರನ್ನು ನರಕದಲ್ಲಿ ನಡುತ್ತಾನೆಂದು ತಾತ್ಪರ್ಯ. ಈ ರೀತಿಯಾಗಿ ನರಕಕ್ಕೆ ನಾಟ್ರಂಗಲಾನ (ಒಟ್ಟು ಭೂಮಿಯಾದ) ಸಂಸಾರ ಮಂಡಲದಲ್ಲಿ ನಲ್ವೞಿನಡಪ್ಪಾರ್ – ಇತ್ಯಾದಿ ಒಳ್ಳೆಯ ಮಾರ್ಗದಲ್ಲಿ ನಡೆಯುವವರು ದುರ್ಲಭರಾಗಿರುವಾಗ ಭಗವದ್ವಿಷಯವನ್ನು ಕುರಿತು ಅಧಿಕಾರಾನುರೂಪವಾಗಿ ಮುಕ್ತಿ ಮಾರ್ಗಕ್ಕೆ **ಮುನ್ನಡಿಯಾನ** ಮೊದಲನೆ ಹಂತವಾದ, ಕರ್ಮಯೋಗಾದಿ ಪರ್ವಭೇದಗಳಲ್ಲಿ **ನಿನ್ಱಾರೈಯುಮ್** ಇರುವವರನ್ನೂ, **ನೆಗಿೞ ನಿನೈಕ್ಕೆ** ನಿಕೃಷ್ಟವಾಗಿ ನೆನೆಸುವುದೂ, ಭಾಗವತಾಪಚಾರ.

### ಭಗವದ್ಧ್ಯಾನವಿಲ್ಲದೆ ಕೇವಲ ವಿಷಯ ಸುಖಗಳಲ್ಲಿರುವವರಿಗೆ ಮೋಕ್ಷವಿಲ್ಲ.

ಹಾಗಾದರೆ ಶಬ್ದ ಶಾಸ್ತ್ರವನ್ನು ಅಧ್ಯಯನ ಮಾಡುವ ಮತ್ತು ಭೋಜನಾಚ್ಛಾದನಗಳಿಗೋಸ್ಕರ ದುಡಿಯುವವರಿಗೆ ಮೋಕ್ಷವಿಲ್ಲವೆಂದು ಹೇಳಿದೆಯಲ್ಲಾ. ಶಬ್ದಶಾಸ್ತ್ರಾಭ್ಯಾಸವೂ, ಭೋಜನಾಚ್ಛಾದನಕ್ಕಾಗಿ ದುಡಿಯುವುದೂ ಭಾಗವತರಿಗೂ ಸಮಾನವಲ್ಲವೇ. ಅವರನ್ನು ನಿಕೃಷ್ಟವಾಗಿ ಕಾಣಬಹುದೇ ಎಂದರೆ ಕೂಡದೆಂದು (1) **"ನಶಬ್ದ ಶಾಸ್ತ್ರಾಭಿರತಸ್ಯ"** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಶಬ್ದ ಶಾಸ್ತ್ರಗಳನ್ನು ಅಭ್ಯಾಸಮಾಡುವವರನ್ನೂ ಭೋಜನಕ್ಕಾಗಿಯೂ,ವಸ್ತ್ರಾದಿಗಳನ್ನು ಸಂಪಾದಿಸಲೂ ತತ್ಪರರಾದವರನ್ನೂ ರಮ್ಯವಾದ ಮನೆಯನ್ನು ಕಟ್ಟಿಕೊಳ್ಳಬೇಕೆಂದು ಆಸೆಪಡುವವರನ್ನೂ **ಲೋಕಚಿತ್ರಗ್ರಹಣೇರತಸ್ಯ** ಜನರಮನಸ್ಸನ್ನು ಆಕರ್ಷಿಸಲು ಜನರಂಜಕವಾದ ಉಪನ್ಯಾಸ, ನರ್ತನಾದಿಗಳನ್ನು ಮಾಡುವವರನ್ನೂ ಹಾಗೆಯೇ (2) **ಶಿಶ್ನೋದರೇ ಯೇಭಿರತಾಸ್ಸದೈವ** ಇತ್ಯಾದಿ ಶಿಶ್ನೋದರ ಪರಾಯಣರನ್ನೂ ನಿತ್ಯವೂ ಸ್ತೇಯ – ಕಳ್ಳತನ' ಅನೃತ–ಸುಳ್ಳು ಹೇಳುವುದು, ಸ್ತೇಯಸಹಿತವಾದ ಸುಳ್ಳು ಹೇಳುವವರನ್ನೂ, ವಾಕ್ಪರುಷಾಃ–ವಾಕ್ಪಾರುಷ್ಯಗಳಿಂದ ಕೂಡಿದವರನ್ನೂ ವ್ಯಪೇತಧರ್ಮಾ–ಧರ್ಮಗಳನ್ನು ತ್ಯಜಿಸವರೆಂದುತಿಳಿದು, ದೇವತೆಗಳು ದೂರದಿಂದಲೇ ಸಂಪರಿವರ್ಜಯಂತಿ–ಅವರ ಸಹವಾಸವನ್ನು ಮಾಡುವುದಿಲ್ಲ. ಹಾಗಿರುವಾಗ ಭಗವಂತನು ಹೇಗೆ ಅವರೊಡನೆ ಸೇರುತ್ತಾನೆಂದು ತಾತ್ಪರ್ಯ. ಅವರಿಗೆ ಅನುಗ್ರಹಿಸುವುದಿಲ್ಲವೆಂದರ್ಥ. **ಎನ್ಱಿರಪಡಿಯೇ**–ಎಂದು ಹೇಳುವ ರೀತಿಯಲ್ಲಿ ಬಾಹ್ಯವಿಷಯಪ್ರಾವಣ್ಯ

---

1) ಇತಿಹಾಸ ಸಮುಚ್ಚಯ 2-10. 2) ಭಾರ. ಶಾಂತಿ (303-36)

3) ಪರಾಙ್ಮುಖಾನಾಂ ಗೋವಿನ್ದೇ ವಿಷಯಾಸಕ್ತ ಚೇತಸಾಮ್ ।
ತೇಷಾಂ ತತ್ಪರಮಂ ಬ್ರಹ್ಮದೂರಾದ್ದೂರತರೇ ಸ್ಥಿತಮ್" ಇತ್ಯಾದಿಹಳಿಲುಂ ಇವ್ವರ್ಥಂ ಸಿದ್ಧಮ್.
4) "ತನ್ಮಯತ್ವೇನ ಗೋವಿನ್ದೇ ಯೇ ನರಾ ನ್ಯಸ್ತಚೇತಸಃ ।
ವಿಷಯತ್ಯಾಗಿನ ಸ್ತೇಷಾಂ ವಿಜ್ಞೇಯಂಚ ತದನ್ತಿಕೇ ॥"
ಇತ್ಯಾದಿಹಳ್ ಭಗವತ್ಪರರುಮಾಯ್ ವಿಷಯತ್ಯಾಗಿಹಳು ಮಾನಾರ್ಕ್ಕು ವಿಳಂಬಮಿಲ್ಲೈ ಎನ್ಗಿರನ.

**ಭಾಗವತ ವೇಷಮುಪಿ ಆದರಣೀಯಮ್**

ಉಳ್ಳೊರು ಪಶ್ಯೆಯಟ್ರಿಇಪಶುತ್ತೋಲ್ ಪೋರ್ತ್ತುಪ್ಪುಲಿಪ್ಪಾಯ್ಚಲ್ ಪಾಯುಂ ಕಣ ಕ್ಕಿಲೇ ಭಾಗವತ ಭಾವನೈ ಪಣ್ಣಿತ್ತಿರುವಾರೈಯುಂಮ್ ಉಳ್ಳರಿಯುಂಮಳವುಮ್ ಉಪರಿಚರಾದಿಹಳ್ ಅಸುರಾದಿಹಳೈ ಆದರಿತ್ತಾರ್ಪ್ಪೋಲೇ ರೂಪನಾಮಙ್ಗಳೈಯಿಟ್ಟು ಆದರಿಕ್ಕ ಪ್ರಾಪ್ತಮ್.

ಇಪ್ಪಡಿ ಕೊತ್ತ ಶೈಲೂಷವೃತ್ತಿಹಳೈಪ್ಪತ್ತ 1) "ನಲಿಙ್ಗಂಧರ್ಮಕಾರಣಮ್"

---

ವನ್ನೇ ಹಳವರಿಗೆ ಮೋಕ್ಷವಿಲ್ಲವೆಂದರ್ಥ. (3) **ಪರಾಙ್ಮುಖಾನಾಂಗೋವಿಂದೇ** ಇತ್ಯಾದಿ. ಭಗವಂತನಲ್ಲಿ ಪರಾಙ್ಮುಖತೆಯಿಂದ ಕೂಡಿದವರಿಗೂ ವಿಷಯಸುಖಗಳ ಅನುಭವದಲ್ಲಿಯೇ ಆಸಕ್ತ ಮನಸ್ಕರಿಗೂ ಆ ಪರಬ್ರಹ್ಮವು ಬಹು ದೂರದಲ್ಲಿದೆ. ಅಂದರೆ ಭಗವದ್ವಿಷಯವಾದ ಚಿಂತೆಯು ಅವರಿಗೆ ಉಂಟಾಗುವುದು ದುರ್ಲಭ ಎಂಬುದೇ ಮೊದಲಾದ ವಾಕ್ಯಗಳಲ್ಲಿಯೂ ಈ ಅರ್ಥವುಸಿದ್ಧ. ಅಂತಹವರನ್ನು ಪರಿತ್ಯಜಿಸ ಬೇಕೆಂದು ತಾತ್ಪರ್ಯ. (4) **ತನ್ಮಯತ್ವೇನ ಗೋವಿಂದೇ** ಇತ್ಯಾದಿ. ತನ್ಮಯರಾಗಿ ಭಗವದ್ವಿಷಯ ಜ್ಞಾನಯುಕ್ತರಾಗಿ ಗೋವಿಂದನಲ್ಲೇ ನೆಟ್ಟಮನಸ್ಕರಾಗಿ ವಿಷಯ ಸುಖಗಳನ್ನು ಬಿಟ್ಟವರುಗಳಿಗೆ ಅವಿಳಂಬವಾಗಿ ಭಗವತ್ಪ್ರಾಪ್ತಿಯು ಉಂಟಾಗುತ್ತದೆ. ಈ ರೀತಿಯಾದ ವಾಕ್ಯಗಳಿಂದ ಭಗವತ್ಪರರಾಗಿ ವಿಷಯಸುಖಗಳನ್ನು ಬಿಟ್ಟವರಿಗೆ ಮೋಕ್ಷ ವಿಳಂಬವಿಲ್ಲ. ಭಗವಂತನಲ್ಲಿ ನ್ಯಸ್ತಭರರಾಗಿ ವಿಷಯ ಸುಖಗಳಲ್ಲಿ ಆಸೆಯನ್ನು ಬಿಡದೆ ಅನುಭವಿಸುವವರಿಗೆ ಕಾಲ ನಿಷ್ಕರ್ಷ ಮಾಡದೆ ಇರುವಾಗ ಮೋಕ್ಷವು ವಿಳಂಬಿಸಿ ಯಾದರೂ ಸಿಗುತ್ತದೆಯಾದ್ದರಿಂದ ಅವರಲ್ಲಿಯೂ ಅಪಚಾರಗಳು ಕೂಡದೆಂದು ಭಾವ. ಹೆಚ್ಚು ಹೇಳಿಯೇನ್ನು **ಉಳ್ಳೊರುಪ ಶೈಯಟ್ರು** ಇತ್ಯಾದಿ ಮನಸ್ಸಿನಲ್ಲಿ (ಪಶ್ಯೆ–ಸಾರ) ಸಾರವಾದ ಧರ್ಮ ಬುದ್ಧಿಯಿಲ್ಲದೆ, ಪಶುತ್ತೋಲ್ ಪೋರ್ತ್ತು–ಹಸು ವಿನಚರ್ಮವನ್ನು ಹೊದ್ದುಕೊಂಡು ಸಾಧುಗಳ ಹಾಗೆ ವೇಷವನ್ನು ಧರಿಸಿ, ಎಂದರ್ಥ. **ಪುಲಿಪ್ಪಾಯ್ ಚಲ್ ಪಾಯುಂ ಕಣಕ್ಕಿಲೇ**-ಹುಲಿಯಹಾಗೆ ಮೇಲೆ ಬೀಳುವವರನ್ನು-ಅಂದರೆ ಕ್ರೂರವಾದ ವ್ಯಾಪಾರವನ್ನು ಮಾಡುವವರನ್ನು (5) ಉಪರಿಚರಋಷಿಗಳೇ ಮೊದಲಾದವರು ಅಸುರಾದಿಗಳನ್ನು ಆದರಿಸಿದಂತೆ (ಇಲ್ಲಿ ಆದಿ ಶಬ್ದದಿಂದ ರಾವಣನು ಸನ್ಯಾಸಿಯಾಗಿ ಬಂದಾಗ ಸೀತೆಯು ಉಪಚಾರ ಮಾಡಿದುದೂ ವಿವಕ್ಷಿತ) **ರೂಪನಾಮುಂಗಳೈಯಿಟ್ಟು**–ರೂಪ–ಚಕ್ರಾಂಕನಾದಿ ವೈಷ್ಣವ ಚಿಹ್ನ, ನಾಮ–ದಾಸ್ಯನಾಮ, ಇವುಗಳನ್ನು ಕಾರಣವಾಗಿಟ್ಟುಕೊಂಡು ಆದರಿಸ ಬೇಕಾದದು ಅವಶ್ಯ. ಅವರ ನಿಜವಾದ ದುಷ್ಟ ಸ್ವರೂಪವನ್ನು ತಿಳಿದನಂತರ ಅವರನ್ನು ಆದರಿಸದೆ ಇರಬಹುದು,ಎಂದು ತಾತ್ಪರ್ಯ. ಕೇವಲ ಬಾಹ್ಯವೇಷದಿಂದ ಕೂಡಿದವರ ಹೃದಯವನ್ನು ತಿಳಿಯುವವರೆಗೂ ಉಪಚರಿಸಬೇಕೆಂದು ಹೇಳುವುದು ಸರಿಯೇ. ಬಾಹ್ಯ ವೇಷವೂ ಭಗವಂತನ ಅನುಗ್ರಹವನ್ನು ಉಂಟುಮಾಡುವುದರಿಂದ, ಅದೂ ಆದರಣೀಯವಲ್ಲವೇ ಎಂದರೆ,**ಇಪ್ಪಡಿಕ್ಕೊತ್ತ** ಇತ್ಯಾದಿ ಅನುಗ್ರಹಿಸುತ್ತಾರೆ. ಆದಾಗಿ ಈ ರೀತಿಯಾದ **ಶೈಲೂಷವೃತ್ತಿಹಳೈಪ್ಪತ್ತ**–ವೇಷಧಾರಿಗಳಾಗಿ ನಟರಂತೆ, ನಟಿಸುವವರನ್ನು ಕುರಿತು (1) **ನಲಿಗಂಧರ್ಮ ಕಾರಣಮ್**– ಅಂತಃ ಸಾರವಿಲ್ಲದ ಕೇವಲ ಬಾಹ್ಯ ಚಿಹ್ನವು ಭಗವತ್ಪ್ರೀತಿ ರೂಪಧರ್ಮಕ್ಕೆ ಕಾರಣವಾಗಲಾರದು.

---

3) ವಿಷ್ಣು ಧರ್ಮ 99-13 4) ವಿಷ್ಣು ಧರ್ಮ 99-15 5) ಉಪರಿಚರವಸು ಎಂಬ ಋಷಿಗಳು ಬ್ರಾಹ್ಮಣವೇಷಧಾರಿಗಳಾದ ಅಸುರರನ್ನು ಆತಿಥ್ಯದಿಂದಆದರಿಸಿದರು ಅವರ ನಿಜ ಸ್ವರೂಪವನ್ನು ತಿಳಿದ ನಂತರ ಅವರನ್ನು ನಿಗ್ರಹಿಸಿದರು.

1) ಇತಿಹಾಸ ಸಮುಚ್ಚಯ 33–123

2) ಫಲಂಕತಕ ವೃಕ್ಷಸ್ಯಯದ್ಯಪ್ಯಂಬು ಪ್ರಸಾದಕಮ್ ।
ನ ನಾಮಗ್ರಹಣೇನೈವ ತಸ್ಯವಾರಿ ಪ್ರಸೀದತಿ" ಎನ್ನಿರದು.

### ಭಗವನ್ನಾಮ ಸಂಕೀರ್ತನಾದೇಃ ಭಗವದ್ವೈಮುಖ್ಯಾಭಾವೇ ಪಾವನತ್ವಂ

1) ಆರ್ತಾ ವಿಷಣ್ಣಾ ಶ್ಶಿಥಿಲಾಶ್ಚಭೀತಾಃ ಘೋರೇಷು ಚ ವ್ಯಾಧಿಷು ವರ್ತಮಾನಾಃ ।
ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ ವಿಮುಕ್ತದುಃಖಾ ಸ್ಸುಖಿನೋ ಭವನ್ತಿ ॥" ಎನ್ನುಮ್.

2) "ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ।
ಪುಮಾ ನ್ವಿಮುಚ್ಯತೇ ಸದ್ಯ ಸ್ಸಿಂಹ ತ್ರಸ್ತೈರ್ಮೃಗೈರಿವ ॥" ಎನ್ನುಮ್

3) "ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಳನಮೇವವಾ ।
ವೈಕುಂಠನಾಮ ಗ್ರಹಣಮ ಶೇಷಾಘವಿನಾಶನಮ್ ॥" ಎನ್ನುಮ್,

---

ಇದಕ್ಕೆ 2) ಫಲಂಕತಕವೃಕ್ಷಸ್ಯಎಂದಾರಂಭಿಸಿ ನಿರೂಪಿಸಿರುತ್ತಾರೆ. ಆದಾಗಿ ಕತಕ ವೃಕ್ಷದಫಲವು ನೀರನ್ನು ಶುದ್ಧೀಕರಿಸುತ್ತದೆ ಎಂಬುದು ವ್ಯವಸ್ಥಿತವಾದರೂ, ಇತ್ಯಾದಿ) ನನಾಮಗ್ರಹಣೇನೈವ–ಆ ಕತಕಫಲದ ಹೆಸರನ್ನು ಹೇಳಿದ ಮಾತ್ರಕ್ಕೆ ನೀರು ಶುದ್ಧವಾಗುವುದಿಲ್ಲವಲ್ಲವೇ. ಆ ರೀತಿಯಲ್ಲಿ ವೇಷಧಾರಿಗಳ ಹೃದಯದಲ್ಲಿ ಭಕ್ತಿಯಿಲ್ಲದೆ ಕೇವಲ ಬಾಹ್ಯ ವೇಷದಿಂದ ಭಗವಂತನು ಒಲಿಯಲಾರ,"ಎಂದು ಹೇಳಿದೆ.

ಹಾಗಾದರೆ, ವೇಷಧಾರಿಗಳಿಗೂ, ಭಗವನ್ನಾಮೋಚ್ಚಾರಣವು ಸಂಭಾವಿತವಲ್ಲವೇ. ಸಂಭಾವಿತವಾದರೆ ಅವರುಗಳೂ "ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ" ಎಂಬವಚನದಂತೆ, ದುಃಖದಿಂದ ಪಾರಾಗಿ ಸುಖಿಗಳಾಗುತ್ತಾರೆಯಲ್ಲವೆ ಎಂದರ ಈ ವಚನದ ತಾತ್ಪರ್ಯವನ್ನು (1) **ಆರ್ತಾ ವಿಷಣ್ಣಾ** : ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ, **ಆರ್ತಾಃ**:– ಐಹಿಕಫಲವುಲಭಿಸಲಿಲ್ಲವೆಂದು ದುಃಖಿಸುವವರು. **ವಿಷಣ್ಣಾ**.– ಅಮುಷ್ಮಿಕಫಲವು ಲಭಿಸದೆ ದುಃಖಿಸುವವರು, **ಶಿಥಿಲಾಃ**:– ಮನಸ್ಥೈರ್ಯವಿಲ್ಲದವರು, **ಭೀತಾಃ**– ಸಂಸಾರತಾಪದಿಂದ ಭಯಪಟ್ಟವರು, **ಘೋರೇಷು ಚವ್ಯಾಧಿಷುವರ್ತಮಾನಾಃ** - ಘೋರವಾದ ವ್ಯಾಧಿಗಳಿಂದ ಪೀಡಿತರಾದವರು, **ನಾರಾಯಣ.ಶಬ್ದ ಮಾತ್ರಂ ಸಂಕೀರ್ತ್ಯ** – ಅರ್ಥಜ್ಞಾನವಿಲ್ಲದೆ ಕೇವಲ ನಾರಾಯಣ ಶಬ್ದವನ್ನು ಮಾತ್ರ ಹೇಳಿಯೂ, **ವಿಮುಕ್ತ ದುಃಖಾಃ ಸುಖಿನೋಭವಂತಿ**– ದುಃಖಗಳಿಂದಪಾರಾಗಿ ಸುಖಿಗಳಾಗುತ್ತಾರೆ, ಎಂದು ಹೇಳಿರುವುದೂ, (2, **ಅವಶೇನಾಪಿ ಯನ್ನಾಮ್ನಿ** ಇತ್ಯಾದಿ– ಮನೋಭಿಸಂಧಿಯಿಲ್ಲದೆ ಬಾಯಿಬಡಿಯುವವನಂತೆ, ವಾಕ್ಪರವಶನಾಗಿ ಭಗವಂತನ ನಾಮೋಚ್ಚಾರಣೆ ಮಾಡುವುದರಿಂದಲೂ ಸಿಂಹದಗರ್ಜನೆಯನ್ನು ಕೇಳಿಭಯಗೊಂಡ,ಜಿಂಕೆಗಳು ಹೇಗೆ ಸಿಂಹಗಳುವಾಸ ಮಾಡುವ ಕಾಡನ್ನು ಬಿಟ್ಟು ಹೋಗುತ್ತವೆಂಬೋ. ಹಾಗೆ ಪುರುಷನ ಸಕಲಪಾಪಗಳೂ, ಅವನನ್ನು ಬಿಟ್ಟುಹೋಗುತ್ತವೆ ಎಂದೂ 3) **ಸಾಂಕೇತ್ಯಂ ಪಾರಿಹಾಸ್ಯಂವಾ** ಇತ್ಯಾದಿ– **ಸಾಂಕೇತ್ಯಂ**– ತನ್ನ ಮಗನಿಗೆ ನಾರಾಯಣನೆಂದು ಹೆಸರಿಡುವುದು, **ಪಾರಿಹಾಸ್ಯಂ**– ನಿನಗೆ ನಾರಾಯಣನೆಂಬ ಹೆಸರಿಟ್ಟಿರುವುದು ಬಹಳ ಚೆನ್ನಾಗಿದೆ ಎಂದು ಪರಿಹಾಸ್ಯವಾಗಿ ಹೇಳುವಾಗ ನಾರಾಯಣ ಶಬ್ದೋಚ್ಚಾರಣೆಯೂ. **ಸ್ತೋಭಂ**– ಅಕ್ಷರವ್ಯತ್ಯಾಸ – ನಾರಾಯಣ ಎಂಬ ಶಬ್ದವನ್ನು "ನಾಣು" ಎಂದೂ, ಶ್ರೀನಿವಾಸ ಎಂಬ ಶಬ್ದವನ್ನು "ಶೀನು" ಎಂದು ಹೇಳುವುದು, **ಹೇಳನ ಮೇವವಾ**– ಹೇಡ್ಯಅನಾದರೇ

---

2) ಮನುಸ್ಮೃತಿ (6-67)

1) ವ್ಯಾಸ ಸಂಜಯ ಸಂವಾದ 2) ವಿಷ್ಣುಪುರಾಣ 6-8-19 3) ಭಾಗವತ 6-2-14

4) **"ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ ।**
**ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ॥" ಎನ್ರುಮ್.**

5) **"ಏತಾವತಾಲಮಘನಿರ್ಹರಣಾಯ ಪುಂಸಾಂ ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಮ್ ಅಕ್ರುಶ್ಯ ಪುತ್ರಮಘವಾನ್ ಯದಜಾಮಿಳೋಽಪಿ ನಾರಾಯಣೇತಿ ಮ್ರಿಯಮಾಣ ಉಪೈತಿ ಮುಕ್ತಿಮ್ ॥ ಎನ್ರುಮ್;**

6) ಮೊಯ್ತ್ತವಲ್ ವಿನ್ಯೈಯುಳ್ ನಿನ್ರು ಮೂನ್ರೆೞುತ್ತುಡೈಯ ಪೇರಾಲ್‌ಕತ್ತಿರಬಂಧು ಮನ್ರೇ ಪರಾಗತಿ ಕಂಡುಕೊಂಡಾರ್ ।
ಇತ್ತನೈಯಡಿಯರಾನಾರ್‌ಕ್ಕಿರಙ್ಗು ನಮ್ಮರಙ್ಗನಾಯಪಿತ್ತನೈಪ್ಪೆಱ್ಱುಮ್ ॥"

ಎನ್ರುಮ್ ಶೊಲ್ಲುಹಿರವೈಯಿಯೆಲ್ಲಾಮ್ ಭಗವತ್ಪ್ರದ್ವೇಷ ಮಿಲ್ಲಾದವನುಕ್ಕು ಆಸ್ತಿಕ್ಯಮ್ ಮಂದ ಮಾಹಿಲುಮ್ ಬಾಲಾದಿಹಳೈಪ್ಪೋಲೇ ಅರ್ಥ ಜ್ಞಾನಮಿಲ್ಲೈಯೇ ಯಾಹಿಲುಮ್, ವಾಯ್‌ವೆರುವುಮಾಪ್ಪೋಲೇ ಅಭಿಸಂಧಿಯಿಲ್ಲೈಯೇ ಯಾಹಿಲುಮ್ ಸಂಙ್ಕೇತ ಪರಿಹಾಸಾದಿಹಳಿಲೇ ತುವಕ್ಕುಂಡು ಅಭಿಸಂಧ್ಯನ್ತರ

---

ಅನಾದರಾಗಿ ಹೇಳುವುದೂ, ಅದಾಗಿ ಸದಾ "ನಾರಾಯಣ" ಎಂದು ಹೇಳುವರರನ್ನು, "ಎಲ್ಲೈ ನಾರಾಯಣ" ಎಂದು ಅನಾದರದಿಂದ ಕರೆಯುವುದೂ, ಈ ರೀತಿಗಳಲ್ಲಿಯೂ **ವೈಕುಂಠನಾಮಗ್ರಹಣಂ**– ಭಗವಂತನ ನಾಮೋಚ್ಚಾರಣೆಯು, ಸಕಲಪಾಪಗಳನ್ನೂ ಹೋಗಲಾಡಿಸುತ್ತದೆ, ಎಂದೂ, (4) **ಹರಿರ್ಹರತಿಪಾಪಾನಿ** ಇತ್ಯಾದಿ–ಪಾಪಗಳಿಂದ ಕಲುಷಿತವಾದ ಮನಸುಳ್ಳವರಿಂದಲೂ ಸ್ಮರಿಸಲ್ಪಟ್ಟವನಾಗಿ ಹರಿಯುಸಕಲಪಾಪಗಳೆನ್ನೂ ಹೋಗಲಾಡಿಸುತ್ತಾನೆ. ಹೇಗೆಂದರೆ ತಿಳಿಯದೆ ಬೆಂಕಿಯನ್ನು ಮುಟ್ಟಿದರೂ ಅದು ಸುಡುತ್ತದೆಯಲ್ಲವೆ. ಆ ರೀತಿಯಲ್ಲಿ ಹರಿಸ್ಮರಣವು ಸಕಲ ಪಾಪನಾಶಕರ ಎಂದೂ, (5) **ಏತಾವತಾಲಮಘನಿರ್ಹರಣಾಯ** ಇತ್ಯಾದಿ ಭಗವಂತನ ಗುಣ, ಚೇಷ್ಟಿತಗಳು, ಹೆಸರು ಇವುಗಳನ್ನು ಸಂಕೀರ್ತನೆ ಮಾಡುವುದು ಪಾಪಗಳನ್ನು ಹೋಗಲಾಡಿಸಲು ಪರ್ಯಾಪ್ತವಾದದ್ದು. ಹೆಚ್ಚು ಎಂದು ಭಾವ. ಅಥವಾ "ಅಲಂಭೂಷಣ, ಪರ್ಯಾಪ್ತಿ, ಶಕ್ತಿ. ವಾರಣ ವಾಚಕಃ" ಎಂಬ ಅಮರಕೋಶದ ಪ್ರಕಾರ, ಅಲಂ ಎಂಬ ಶಬ್ದಕ್ಕೆ ವಾರಣ–ತಡೆಯುವುದು ಎಂಬ ಅರ್ಥವಿದೆ. ಅದರಪ್ರಕಾರ ಭಗವಂತನ ಗುಣಚೇಷ್ಟಿತ ನಾಮ ಸಂಕೀರ್ತನಗಳೇ ಬೇಡ ಏಕೆಂದರೆ, **ಆಕುಶ್ಯಪುತ್ರಮಘವಾನ್** ಇತ್ಯಾದಿ-ಅಘವಾನ್ ಅತಿಶಯಿತ ಪಾಪವನ್ನು ಮಾಡಿದ, ಅಜಾಮಿಳನು, **ಮ್ರಿಯಮಾಣ** :– ಮರಣ ಹೊಂದುವಾಗ ತನ್ನ ಮಗನನ್ನು, ಅಕ್ರುಶ್ಯ–ಕೋಪದಿಂದ ನಾರಾಯಣ ಎಂದು ಕೂಗಿದ್ದರಿಂದಲೇ ಮೋಕ್ಷವನ್ನು ಪಡೆದ ನಾದ್ದರಿಂದ, ಬಹು ವ್ಯಾಪಾರಗಳಾದ ಗುಣಕರ್ಮನಾಮ ಸಂಕೀರ್ತನಾದಿಗಳು ಬೇಡವೆಂದು ತಾತ್ಪರ್ಯ. ಕೇವಲ ನಾಮೋಚ್ಚಾರಣೆಯೊಂದೇ ಸಾಕು ಎಂದೂ, (6) **ಮೊಯ್ತ್ತವಲ್ ವಿನ್ಯೈಯುಳ್ ನಿನ್ರು** ಇತ್ಯಾದಿ ಬಹಳ ಪಾಪಗಳಿಂದ ಮುಚ್ಚಲ್ಪಟ್ಟ ಕ್ಷತ್ರಬಂಧವೂ ಗೋವಿಂದ ನಾಮ ಸಂಕೀರ್ತನಿಂದ ಮೋಕ್ಷವನ್ನು ಪಡೆದನು, ಎಂದೂ ಭಗವನ್ನಾಮ ಪ್ರಭಾವವನ್ನು ಹೇಳುವ ಈ ಮಾತುಗಳೆಲ್ಲಾ, **ಭಗವತ್ಪ್ರದ್ವೇಷಮಿಲ್ಲಾದವನುಕ್ಕು**–ಇತ್ಯಾದಿ ಭಗವಂತನಲ್ಲಿ ಪ್ರದ್ವೇಷ – ಉತ್ಕಟವಾದ ದ್ವೇಷವಿಲ್ಲದವನಿಗೆ, ಆಸ್ತಿಕ್ಯವು ಕಡಿಮೆಯಾಗಿದ್ದರೂ, ಇದು ಆರ್ತಾವಿಷಣ್ಣಾ, ಎಂಬುದರ ಭಾವ; ಬಾಲಾದಿಗಳ ಹಾಗೆ ಅರ್ಥಜ್ಞಾನವಿಲ್ಲದಿದ್ದರೂ, "ಸಂಕೀರ್ತ್ಯ ನಾರಾಯಣ ಶಬ್ದ ಮಾತ್ರಂ"–ಎಂಬುದರ ಭಾವ, **ವಾಯ್‌ವೆರುವುಮಾಪ್ಪೋಲೇ**–ಬಾಯಿಯು ಆಡುವಂತೆ ಅವಶೇನಾಪಿಯನ್ನಾಮ್ನಿ ಎಂಬುದರ ಭಾವ. **ಅಭಿಸಂಧಿಯಿಲ್ಲೈಯೇಯಾಹಿಲುಮ್**– ಭಗವತ್ಸಂಕೀರ್ತನ ಮಾಡಬೇಕೆಂಬ ಅಭಿಲಾಷೆ ಇಲ್ಲದೇ, **ಸಂಕೇತಪರಿಹಾಸಾದಿಹಳಿಲೇ** ಇತ್ಯಾದಿ

---

4) ಹರ್ಯಷ್ಟಕ 5) ಭಾಗವತ 6-3-24 6) ತಿರುಮಾಲೈ-4

**ಮುುಂಡಾಹಿಲುವ್, ಪ್ರಯೋಜನಾನ್ತರ ಸಜ್ಗಮುುಂಡಾಹಿಲುವ್, ದೋಷಾನ್ತರಙ್ಗಳುಂಡಾಹಿಲುವ್ ಸಂಕೀರ್ತ್ತನಮ್ ಪಾವನತಮುಮೆನ್ರಪಡಿ : ಅಲ್ಲದು ಭಗವತ್ಪರಿವಾದಾದಿಹಳುಕ್ಕಾಹ ಭಗವನ್ನಾಮ ಸಂಕೀರ್ತ್ತನಮ್ ಪಣ್ಣಿನಾಲುಂ ಪಾಪಮ್ ಪೋಮೆನ್ರಪಡಿಯುನ್ರು.**

**ಭಗವತ್ಪರಿವಾದಾದೀನಾಂ ಪಾತಕತ್ವೇ ಪ್ರಮಾಣಾನಿ**

**ಭಗವತ್ಪರಿವಾದಾದಿಹಳ್ ಪಾತಕಙ್ಗಳಾಹ ವಿರೇ ಪರಿಗಣಿತ್ತುಕ್ಕಿಡಪ್ಪದು ;**

1) **"ಯೋ ದ್ವಿಷನ್ತಿ ಮಹಾತ್ಮಾನಂ ನ ಸ್ಮರನ್ತಿ ಚ ಕೇಶವಮ್ !**
**ನತೇಷಾಂ ಪುಣ್ಯತೀರ್ಥೇಷು ಗತಿಸ್ಸಂಸರ್ಗಿಣಾ ಮಪಿ" ಎನ್ರುಮ್,**

2) **"ಯಃ ಪುತ್ರಃ ಪಿತರಂ ದ್ವೇಷ್ಟಿತಂ ವಿದ್ಯಾದನ್ಯರೇತಸಂ !**
**ಯೋ ವಿಷ್ಣುಂ ಸತತಂ ದ್ವೇಷ್ಟಿತಂ ವಿದ್ಯಾ ದನ್ತ್ಯರೇತಸಮ್ ||**
**ಎನ್ರುಮ್ ಶೊನ್ನಾರ್‌ಹಳಿರೇ.**

---

ಇದು "ಸಾಕೇತ್ಯಂ ಪಾರಿಹಾಸ್ಯಂವಾ", ಎಂಬ ಶ್ಲೋಕದಲ್ಲಿ ಅಭಿಪ್ರೇತವಾದ ಅರ್ಥ, ಸಂಕೇತ ಪರಿಹಾಸ್ಯಗಳಿಂದ ಕೂಡಿ, **ಅಭಿಸ್ಯಂತರಂ** – ಬೇರೆ ಅಭಿಸಂಧಿಯು ಇದ್ದರೂ, **ಪ್ರಯೋಜನಾಂತರಮುುಂಡಾಹಿಲುವ್** – ಇದು ದುಷ್ಟಚಿತ್ತೈರಪಿಸ್ಮೃತಃ :– ಎಂಬುದರ ಭಾವ – ಪ್ರಯೋಜನಾಂತರ ಪ್ರಸಂಗವೇ **ಚಿತ್ತಕ್ಕೆ** ದೋಷ, ಅದು ಇದ್ದರೂ **ದೋಷಾಂತರಂಗಳ್ ಉಂಡಾಹಿಲುವ್**– ಶಾರೀರ ದೋಷಾದಿಗಳು ಉಂಟಾದರೂ, ಇದು ಅಘವಾನ್ ಅಜಾಮಿಳೋಪಿ–ಪಾಪಿಯಾದ **ಅಜಾಮಿಳನೂ** ಎಂಬುದರ ಭಾವ., **ಸಂಕೀರ್ತನಂ ಪಾವನತಮುಂ ಎನ್ರಪಡಿ**–ಭಗವನ್ನಾಮ ಸಂಕೀರ್ತ್ತನವು ಪರಮ ಪವಿತ್ರವಾದದು ಎಂದುಭಾವ. **ಅಲ್ಲದು** ಇತ್ಯಾದಿ–ಇಷ್ಟಲ್ಲದೆ. ಭಗವಂತನನ್ನು ದ್ವೇಷಿವುದಕ್ಕೂ ಆದಿ ಶಬ್ದದಿಂದ, ಭಗವದ್ರೋಹ ಮಾಡುವುದಕ್ಕೂ ಭಗವನ್ನಾಮವನ್ನು ಹೇಳುವುದರಿಂದ **ಪಾಪಮ್ ಪೋಮ್‌ಎನ್ರಪಡಿಯುನ್ರು** ಪಾಪವು ಹೋಗುತ್ತದೆ ಎಂದರ್ಥವಿಲ್ಲ.

**ಭಗವತ್ಪರಿವಾದಾದಿಹಳ್** – ಇತ್ಯಾದಿ – ಭಗವಂತನನಿಂದೆ, ಆದಿಶಬ್ದದಿಂದ ಭಗವದ್ರೋಹಗಳು ಪಾತಕಗಳಾಗಿ ಅಲ್ಲವೇ ಪರಿಗಣಿಸಲ್ಪಟ್ಟಿವೆ. (1) **ಯೋದ್ವಿಷಂತಿ**ಇತ್ಯಾದಿ. ಮಹಾತ್ಮನಾದ ಭಗವಂತನನ್ನು ಯಾರು ದ್ವೇಷಿಸುತ್ತಾರೋ, ಕೇಶವನನ್ನು ಯಾರು ಸ್ಮರಿಸುವುದಿಲ್ಲವೋ, ಅವರುಗಳಿಗೆ ಪುಣ್ಯತೀರ್ಥ ಸ್ನಾನಗಳಿಂದ ಪುಣ್ಯವುಉಂಟಾಗುವುದಿಲ್ಲ, ಶುದ್ಧ್ಯಾದಿಗಳೂ ಏರ್ಪಡುವುದಿಲ್ಲ. **ಸಂಸರ್ಗಿಣಾಮಪಿ** –ಅವರೊಡನೆ ಸಂಬಂಧವನ್ನು ಬೆಳೆಸುವವರಿಗೂ ಇದೇಗತಿ, ಎಂದೂ. 2) **ಯಃಪುತ್ರಃಪಿತರಂದ್ವೇಷ್ಟಿ**, ಇತ್ಯಾದಿ ತಂದೆಯನ್ನು ದ್ವೇಷಿಸುವ ಪುತ್ರನು ಅನ್ಯರೇತಸ್ಸಿಗೆ ಹುಟ್ಟಿದವನು **ಯೋವಿಷ್ಣುಂಸತತಂದ್ವೇಷ್ಟಿ** ಇತ್ಯಾದಿ, ಮಹಾವಿಷ್ಣುವನ್ನು ಯಾವಾಗಲೂ ದ್ವೇಷಿಸುವವನು **ತಂವಿದ್ಯಾದಂತ್ಯರೇತಸಮ್** – ಅವನನ್ನು **ಚಂಡಾಳನಿಗೆ** ಹುಟ್ಟಿದವನಾಗಿ ತಿಳಿಯಬೇಕು, ಎಂದೂ ಮಹರ್ಷಿಗಳು ಹೇಳಿರುತ್ತಾರೆಯಲ್ಲವೇ. ಆದ್ದರಿಂದ ದೂಷಿಸಲೂ ದ್ರೋಹಬುದ್ಧಿಯಿಂದಲೂ ಮಾಡುವ ಭಗವನ್ನಾಮ ಸಂಕೀರ್ತನವು ಪುಣ್ಯವನ್ನುಂಟು ಮಾಡುವುದಿಲ್ಲ. ಮೇಲೂ ಬಹಳ ಕ್ರೂರ ಫಲವನ್ನು ಕೊಡುತ್ತದೆ.

---

1) ಭಾರತ ಶಾಂತಿ ಪರ್ವ 336–36 2) ಬ್ರಹ್ಮಾಂಡ ಪುರಾಣ.

3) ಪು ತಿ. ನೋ. ಅವಾಗಿ ರಾಮಾವತಾರದಲ್ಲಿ ಋಷಿಗಳು ಶ್ರೀರಾಮಚಂದ್ರನ ಸೌಂದರ್ಯವನ್ನು ನೋಡಿ ಅವನನ್ನು ಆಲಿಂಗನ ಮಾಡಿಕೊಂಡು ಅನುಭವಿಸಬೇಕೆಂದು ಆಸೆಪಟ್ಟಾಗ, ಏಕದಾರವ್ರತನಾಗಿದ್ದರಿಂದ ಆಗ ಅವಕಾಶ ಕೊಡದೆ ಕೃಷ್ಣಾವತಾರದಲ್ಲಿ ಆ ಋಷಿಗಳನ್ನು ಗೋಪಿಗಳಾಗಿ ಜನ್ಮತಾಳುವಂತೆ ಸಂಕಲ್ಪಿಸಿ ಪರಿಪೂರ್ಣವಾಗಿ ನೀರಂಧ್ರ ಸಂಶ್ಲೇಷವನ್ನು ಕೊಟ್ಟು ನಂತರ ಮೋಕ್ಷಕ್ಕೆ ಕರೆದೊಯ್ದನು, ಆ ಋಷಿಗಳೆಲ್ಲ ಭಕ್ತಿಯೋಗ ನಿಷ್ಠರು ತತ್ಫಲವಾಗಿ ಕೃಷ್ಣ ಸಂಶ್ಲೇಷವೂ ನಂತರ ಮೋಕ್ಷವೂ ಪ್ರಾಪ್ತವಾಯಿತು.

**3) "ಗೋಪ್ಯ ಕಾಮಾದ್ಭಯಾತ್ಕಂಸೋ ದ್ವೇಷಾಚ್ಚೈದ್ಯಾದಯೋನೃಪಾಃ ।**
**ಸಂಬಂಧಾದ್ವೃಷ್ಣಯೋ ಯೂಯಂ ಸ್ನೇಹಾದ್ಭಕ್ತ್ಯಾವಯಂ ಪ್ರಭೋ ॥ "**
**ಎನ್ಗಿರಪಡಿಯೇ ಏದೇನು ಮೊರುವಹೈಯಾಲೇ ತುವಕ್ಕುಂಡಾರುಮ್ ಪಿಣ್ಯಪ್ಪಾರೆನ್ರದುವುಮ್**
**4) "ಯಾಯಾಕಯಾಚ ವಿಧಯಾ ಸಂಬಂಧಸ್ಸತು ಪಾವನಃ" ಎನ್ರದುವುಮ್ ಪೂರ್ವಸುಕೃತ ವಿಶೇಷಙ್ಗಳಾಲೇ ನಿಯತರಾನವಧಿಕಾರಿ ವಿಶೇಷಙ್ಗಳ್ಳೈಪ್ಪತ್ತವೆನ್ನುಮಿಡಮ್ ಇವರ್‌ಹಳುಡೈಯ ಪೂರ್ವಾಪರ ವೃತ್ತಾಂತಙ್ಗಳ್ ಶೊಲ್ಲುಹಿರ ಪುರಾಣಾದಿಹಳಿಲೇ ಪ್ರಸಿದ್ಧಮ್.**

### ಕ್ಷೇತ್ರವಾಸಸ್ಯ ಮೋಕ್ಷೋಪಕಾರಕತ್ವಂ ಭಗವದ್ದ್ವೇಷಿಣಾಂ ನಾಸ್ತಿ

**ಇಪ್ಪಡಿ ಭಗವತ್ ಕ್ಷೇತ್ರತ್ತಿಲ್ ಶರೀರ ವಿಶ್ಲೇಷಾದಿಹಳ್ ಮೋಕ್ಷೋಪಕಾರಕಮಾಮೆನ್ರದುವುಮ್ ಪಶ್ವಾದಿಹಳ್ಳೈ ಪ್ಪೋಲೇಯಾಹಿಲುಮ್ ಪ್ರಾತಿಕೂಲ್ಯಮಿಲ್ಲಾದಾರ್ಕ್ಕು ಉಪಕಾರಕಮಾಮೆನ್ರಪಡಿ**

---

ಕಾಮದಿಂದ ಗೋಪಿಯರು ದ್ವೇಷದಿಂದ ಶಿಶುಪಾಲನೂ ಭಗವಂತನನ್ನು ಪಡೆಯಲಿಲ್ಲವೇ ಎಂದರೆ ಇದಕ್ಕೆ ತಾತ್ಪರ್ಯವನ್ನು (3) **ಗೋಪ್ಯಃ ಕಾಮಾತ್** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಗೋಪಿಗಳು ಕಾಮಪೀಡಿತರಾಗಿಯೂ. ಕಂಸನು ಭಯದಿಂದಲೂ, ಚೇದಿರಾಜನಾದ ಶಿಶುಪಾಲನೇ ಮೊದಲಾದವರು ದ್ವೇಷದಿಂದಲೂ, ವೃಷ್ಣಿ ವಂಶದವರು ವಂಶದ ಸಂಭಂದದಿಂದಲೂ, ನಾವುಗಳು ಭಕ್ತಿರೂಪವಾದ ಸ್ನೇಹದಿಂದಲೂ, ಎಲೈಪ್ರಭುವೇ ನಿನ್ನನ್ನು ಪಡೆದಿದ್ದೇವೆ, ಎಂಬಂತೆ **ಏದೇನುಮೊರುವಹೈಯಾಲೇ**– ಇತ್ಯಾದಿ ಯಾವುದಾದರೂ ಒಂದು ರೀತಿಯಲ್ಲಿ ಭಗವಂತ್ಸಂಬಂಧವುಳ್ಳವರೂ ಉತ್ತೀರ್ಣರಾಗುತ್ತಾರೆಂದು ಹೇಳುವುದೂ (ಅಂದರೆ ಕಾಮಿನೀ ಕಾಮುಕರಭಾವದಿಂದಲೋ, ದ್ವೇಷಿ ದ್ವೇಷಭಾವಂದಿದಲೋ) (4) **ಯಯಾಕಯಾಚ ವಿಧಯಾ** ಇತ್ಯಾದಿ – ಯಾವುದಾದರೊ ಒಂದು ರೀತಿಯಲ್ಲಿ ಅಂದರೆ ಅನುಕೂಲವಾಗಿಯೋ ಪ್ರತಿಕೂಲವಾಗಿಯೋ ಭಗವತ್ಸಂಬಂಧವು ಪಾಪವಿಮೋಚಕವೆಂದು ಹೇಳಿರುವುದು, **ಪೂರ್ವಸುಕೃತ ವಿಶೇಷಂಗಳಾಲೇ** – ಇತ್ಯಾದಿ ಪೂರ್ವಜನ್ಮದಲ್ಲಿ ಮಾಡಿರುವ ಸುಕೃತ ವಿಶೇಷಗಳಿಂದ ನಿಯತರಾದ ವಿಶೇಷಾಧಿಕಾರಿಗಳೆನ್ನು ಕುರಿತು, ಎಂಬುದು ಇವರುಗಳ ಪೂರ್ವಾಪರವೃತ್ತಾಂತಗಳನ್ನು ಹೇಳುವ ಪುರಾಣಗಳಿಂದ ಪ್ರಸಿದ್ಧ.

### ಭಗವದ್ವೇಷಿಗಳಿಗೆ ಕ್ಷೇತ್ರವಾಸವು ಮೋಕ್ಷೋಪಕಾರವಾಗುವುದಿಲ್ಲ.

**ಇಪ್ಪಡಿ ಭಗವತ್‌ಕ್ಷೇತ್ರತ್ತಿಲ್** ಇತ್ಯಾದಿ. – ನಾಮಸಂಕೀರ್ತನವು ಭಗವತ್ಪ್ರದ್ವೇಷಾದಿ ಗಳಿಲ್ಲದವರಿಗೆ ಹೇಗೆ ಉಪಕಾರಗಳಾಗುತ್ತವೆಯೋ ಹಾಗೆಯೇ, ಭಗವತ್ಪುಣ್ಯ ಕ್ಷೇತ್ರದಲ್ಲಿ ಶರೀರವಿಶ್ಲೇಷಾದಿಗಳು ಮೋಕ್ಷೋಪಕಾರಕಗಳಾಗುತ್ತವೆ, ಎಂದು ಹೇಳಿರುವುದೂ **ಪಶ್ವಾದಿಹಳ್ಳೈಪ್ಪೋಲೇ ಯಾಹಿಲುಮ್** – ಪಶುಗಳ ಹಾಗೆಯಾದರೂ, ಭಗವತ್ಪ್ರಾತಿಕೂಲ್ಯವಿಲ್ಲದವರಗೇನೆ ಉಪಕಾರಗಳಾಗುತ್ತವೆ, **ಎನ್ರಪಡಿ** – ಎಂದು ತಾತ್ಪರ್ಯ.

---

3) ಭಾಗವತ (7-1-30) ನಾರದರು ಧರ್ಮಪುತ್ರರಿಗೆ ಹೇಳುವ ವಚನವಿದು. ಹಾಗೆಯೇ ಶ್ರೀವೈಕುಂಠದಲ್ಲಿ ಭಗವದ್ಭಕ್ತರಾಗಿದ್ದ ಜಯವಿಜಯರು ಸನಕಾದಿಗಳ ಶಾಪದಿಂದ, ಮೂರು ಜನ್ಮಗಳಲ್ಲಿ ಭಗವದ್ವೇಷಿಗಳಾಗಿ ಹುಟ್ಟಿ, ಮೂರನೆಯ ಜನ್ಮದಲ್ಲಿ ಶಿಶುಪಾಲ ದಂತವಕ್ತ್ರರಾಗಿ ಹುಟ್ಟಿ ಭಗವಂತನ ಚಕ್ರಾಯುಧದಿಂದ ಸಂಹರಿಸಲ್ಪಟ್ಟು, ಪಾಪವಿಮುಕ್ತರಾಗಿ ಅವನ ಸಾಯುಜ್ಯವನ್ನು ಪಡೆದರು. ಸಾಯುಜ್ಯ ಪ್ರಾಪ್ತಿಗೆ ಪೂರ್ವ ಜನ್ಮದ ಭಕ್ತಿಯೋಗವೇ ಕಾರಣ.

4) ಸ್ಮೃತಿಮಾತ್ರಾಘನಾಶೇನ ಪವಿತ್ರೇಣ ಚ ಶಾರ್ಙ್ಗಿಣಾ ।
ಯಯಾ ಕಯಾಚ ವಿಧಯಾ ಸಂಭಂಧಸ್ಸತು ಪಾವನಃ ॥ ಶ್ರೀರಂಗ ಮಹಾತ್ಮ್ಯ (8-12)
ನೆನೆಸಿದ ಮಾತ್ರಕ್ಕೇ ಪಾಪಗಳನ್ನು ಹೋಗಲಾಡಿಸುವವನಾಗಿ, ಪವಿತ್ರನಾದ ಶ್ರೀ ಶಾರ್ಙ್ಗಪಾಣಿಯೊಡನೆ ಯಾವುದಾದರೂ ಒಂದು ವಿಧದಲ್ಲಿ ಸಂಬಂಧವು ಏರ್ಪಟ್ಟರೆ ಅದು ಪವಿತ್ರವಾದದ್ದು.

**ವಿಪಕ್ಷೇ ಬಾಧಕಮಾಹ.**

**ಇಙ್ಙನಲ್ಲಾದುಪೋದು ಅಙ್ಗೇ ಭಗವತ್ಪ್ರಾತಿಕೂಲ್ಯಮ್ ಪಣ್ಣಿ ಪ್ಪುಹುನ್ದು ಪಟ್ಟವರ್ ಹಳುಕ್ಕುಮ್ ಮೋಕ್ಷಮುಂಡಾಹ ಪ್ರಸಙ್ಗಕ್ಕುಮ್.**

1) **ದುಷ್ಟೇನ್ದ್ರಿಯವಶಾಚ್ಚಿತ್ತಂ ನೃಣಾಂ ಯತ್ಕಲ್ಮಷೈರ್ವೃತಮ್ ।**
**ತದಂತಕಾಲೇ ಸಂಶುದ್ಧಿಂ ಯಾತಿ ನಾರಾಯಣಾಲಯೇ ॥"**
**ಎನ್ಗಿರ ಶ್ರೀ ಸಾತ್ವತ ವಚನಮುಮ್ ಕ್ಷೇತ್ರವಾಸಾದಿ ತತ್ಪರರಾನಾರ್ಕ್ಕು ಶಾಸ್ತ್ರವಿರೋಧ ಮಿಲ್ಲಾದ ಶಬ್ದಾದಿ ಪ್ರಾವಣ್ಯತ್ತಾಲೇ ಮುನ್ಬು ಭಗವತ್ಸಾಕ್ಷಾತ್ಕಾರಾದಿಹಳಿಲ್ಲೈಯೇ ಯಾಹಿಲುಮ್ ಅನ್ತಿಮ ಕಾಲತ್ತಿಲೇ ತೆಳಿವುಣ್ಡಾ ಮೆನ್ರು ಮಿವ್ವಳವಿಲೇ ತತ್ಪರಮೆನ್ರು ಮಿಡಮ್ ಪ್ರಕರಣಾದಿ ಸಿದ್ಧಮ್.**

**ಭರನ್ಯಾಸನಿಷ್ಠಾನಾಂ ಕ್ಷೇತ್ರವಾಸಮಹಿಮ್ನಾ ಅಯತ್ನೇನೈವ ಅನ್ತಿಮಸ್ಮೃತಿರ್ಭವತಿ**

**2) "ಯಂ ಯೋಗಿನಃ ಪ್ರಾಣವಿಯೋಗಕಾಲೇ ಯತ್ನೇನ ಚಿತ್ತೇವಿನಿವೇಶಯನ್ತಿ" ಎನ್ರುಶೊಲ್ಲಪ್ಪಡುಹಿರ ಸ್ವಯತ್ನಾಪೇಕ್ಷೈಯರ, ಅನ್ತಿಮ ಕಾಲತ್ತಿಲೇ ಇವರ್‌ಹಳುಕ್ಕು ತೆಳಿವು ವರುಹಿರ ವಿದುಮೇ ಗ್ರ[illegible]ಮ್. ಇದು 3) "ಕೇವಲಂ ಮದೀಯಯೈವ ದಯಯಾ[illegible]ತಿ ಪ್ರಬುದ್ಧಃ" ಎನ್ರು ಪ್ರಪನ್ನರ್ ವಿಷಯತ್ತಿಲುಮ್ ಪ್ರದರ್ಶಿತಮ್.**

---

ಹೀಗೆ ಅಂಗೀಕರಿಸದೆ ಇದ್ದರೆ **ಇಂಗನಲ್ಲಾದಪೋದು** – ಎಂದಾರಂಭಿಸಿ ಬಾಧಕವನ್ನು ನಿರೂಪಿಸುತ್ತಾರೆ. ಆದಾಗಿ ಹೀಗಿಲ್ಲದಿದ್ದರೆ, ಪುಣ್ಯಕ್ಷೇತ್ರದಲ್ಲಿ **ಭಗವತ್ಪ್ರಾತಿಕೂಲ್ಯಮ್** - ಭಗವಂತನಿಗೆ ಪ್ರತಿಕೂಲಾಚರಣೆ ಮಾಡಲು ಬಂದು ಆ ವ್ಯಾಪಾರದ ನಡುವೆ ಪ್ರಾಣವನ್ನು ಬಿಟ್ಟವರಿಗೂ ಮೋಕ್ಷವು ಸಿಗಬೇಕಾದ ಪ್ರಸಂಗವು ಉಂಟಾಗುತ್ತದೆ. ಹೀಗೆ ಭಗವದ್ವಿರೋಧಿಗಳಿಗೂ ಪುಣ್ಯಕ್ಷೇತ್ರದಲ್ಲಿ ಮರಣದಿಂದ ಮುಕ್ತಿ ಎಂದು ಹೇಳುವುದು, ಶಾಸ್ತ್ರ ಸಮ್ಮತವಾಗಲಾರದು ಎಂದು ತಾತ್ಪರ್ಯ.

ಹಾಗಾದರೆ ( ) **ದುಷ್ಟೇಂದ್ರಿಯವಶಾಚ್ಚಿತ್ತಂ** ಎಂಬ ಸಾತ್ವತಸಂಹಿತಾ ವಚನಕ್ಕೆ ಏನು ತಾತ್ಪರ್ಯವೆಂದರೆ ಅದನ್ನು ಅನುಗ್ರಹಿಸುತ್ತಾರೆ, ಅದಾಗಿ ಭಗವತ್ ಕ್ಷೇತ್ರವಾಸ ತತ್ಪರನಿಗೆ ಅಶಾಸ್ತ್ರೀಯವಲ್ಲದ ಇಂದ್ರಿಯ ಜನ್ಯ ಶಬ್ದಾದಿ ವಿಷಯ ಪ್ರಾವಣ್ಯವೆಂಬ ಕಲ್ಮಷವೇಹೊರತು ಭಗವತ್ಪ್ರದ್ವೇಷಾದಿಗಳಲ್ಲ ಅಂತಿಮಕಾಲದಲ್ಲಿ ಕ್ಷೇತ್ರ ಮಹಾತ್ಮ್ಯದಿಂದ ಆ ವಿಷಯ ಪ್ರಾವಣ್ಯರೂಪ ಕಲ್ಮಷವು ನಿವೃತ್ತವಾಗಿ ಪೂರ್ವದಲ್ಲಿ ಭಗವದ್ಧ್ಯಾನಪೂರ್ವಕ ಭಗವತ್ಸಾಕ್ಷಾತ್ಕಾರಾದಿಗಳು ಇಲ್ಲದೆ ಇದ್ದರೂ ಅಂತಿಮ ಕಾಲದಲ್ಲಿ **ತೆಳಿವು** – ಶುದ್ಧಿಯುಂಟಾಗಿ ಭಗವತ್ಸ್ಮರಣಾದಿಗಳು ಬರುತ್ತದೆ, ಎಂದು **ಇವ್ವಳವಿಲೇ** – ಇಷ್ಟರಮಟ್ಟಿಗೇನೇ ಈ ವಾಕ್ಯಕ್ಕೆ ತಾತ್ಪರ್ಯವೆಂಬುದು ಪ್ರಕರಣಾದಿ ಸಿದ್ಧ. 2) **ಯಂಯೋಗಿನ** : ಇತ್ಯಾದಿ ಯೋಗಿಗಳಿಗೆ ಮಹತಾಪ್ರಯತ್ನೇನ ಸ್ವಯತ್ನ ಸಾಧ್ಯವಾದ ಅಂತಿಮ ಸ್ಮೃತಿಯು ಉಂಟಾಗುವಂತೆ. ಕ್ಷೇತ್ರವಾಸದಿಂದ ಪ್ರಾತಿಕೂಲ್ಯ ವಿಲ್ಲದ ಇತರರಿಗೂ ಪ್ರಯತ್ನವಿಲ್ಲದೆ ಅಂತಿಮ ಸ್ಮೃತಿಯು ಸಿದ್ಧಿಸುತ್ತದೆ ಎಂಬುದು ಕ್ಷೇತ್ರವಾಸದ ಉತ್ಕರ್ಷ, ಎಂಬುದು ಹೆಚ್ಚು ಇದು 3) **ಕೇವಲಂಮದೀಯಯೈವ ದಯಯಾ** ಇತ್ಯಾದಿಯಾಗಿ ಪ್ರಪನ್ನನಿಗೆ ಕೇವಲ ಭಗವತ್ಕೃಪೆಯಿಂದಲೇ ಅಂತಿಮಸ್ಮೃತಿಯು ಉಂಟಾಗುತ್ತದೆ ಎಂದು ಪ್ರದರ್ಶಿತವು.ಕ್ಷೇತ್ರವಾಸವೂ ಅನಪೇಕ್ಷಿತ. ಇದು ಸ್ವತಂತ್ರ ಪ್ರಪತ್ತಿಯ ಪ್ರಭಾವ.

---

1) ಸಾತ್ವತ ಸಂಹಿತೆ 7-120 2) ಭಾರತ ಶಾಂತಿ ಪರ್ವ 46-143 3) ಶರಣಾಗತಿ ಗದ್ಯ.

## ಪುಣ್ಯಕ್ಷೇತ್ರೇ ಪ್ರಾತಿಕೂಲ್ಯಾಚರಣೇ ಅಧಿಕಾನಿಷ್ಟಜನಕತ್ವ ರೂಪಂ ಸಿದ್ಧೋಪಾಯ ಪ್ರಭಾವಮಾಹ

ಆಹೈಯಾಲ್ ಭಗವತ್ಪ್ರತಿಕೂಲರ್ಕ್ಕು ಪ್ರಾತಿಕೂಲ್ಯ ಶೇಷಮಾನ ರೂಪ, ನಾಮ, ಕ್ಷೇತ್ರವಾಸ, ಸಂಕೀರ್ತನಾದಿಹಳ್ ತಞ್ಜಮಾಹಾದು ; ಪುಣ್ಯಕ್ಷೇತ್ರಙ್ಗಳಿಲ್ ಪಣ್ಣುಂ ಪ್ರತಿಕೂಲಾಚರಣಙ್ಗಳ್ ಮಿಹ ವುಮ್ ಬಾಧಕಙ್ಗಳಾಮೆನ್ಗು ಮಿಡಮ್ ಬಹುಶಾಸ್ತ್ರ ಸಿದ್ಧಮ್.

ಇದುವುಮ್ ಭಗವತ್ಪ್ರಭಾವಮ್. ಭಗವತ್ಪ್ರವಣರ್ಕ್ಕು ವೃತ್ರನ್‌ಕ್ಷತ್ರ ಬಂಧು ಉಳ್ಳಿಟ್ಟಾರ್‌ಕ್ಕು ಪ್ಪೋಲೇಯುಳ್ಳ ಆನುಕೂಲ್ಯಙ್ಗಳ್ ತಾನೇ ಎಲ್ಲಾ ದೋಷಙ್ಗಳೈಯುಮ್ ಒರುವಿರಹಾಲೇಪ್ಪೋಕ್ಕಿ ಉತ್ತಾರಕಙ್ಗಳಾಮ್.

ಭಾಗವತ ದೋಷಾನಾಂ ಶಾಸ್ತಾ ವಿಷ್ಣುರಿತಿಮತ್ವಾ, ಪರಮಭಾಗವತಾನಾಂ ನಿಕಟೇ ಯಾವಚ್ಛರೀರ ಪಾತಂ, ಮೋಕ್ಷೇ ನಿಸ್ಸಂಶಯಃ ಕೃತಾರ್ಥ ಸ್ತಿಷ್ಠೇದಿತಿ ನಿಗಮಯತಿ.

ಆನಪಿನ್ನು, ಸ್ವಸಙ್ಕಲ್ಪ ನಿಯತಮಾಯಿರುಪ್ಪದೇದೇನು ಮೊರು ವ್ಯಾಜತ್ತಾಲೇ ಸರ್ವೇಶ್ವರ್ ಸ್ವರೂಪಪ್ರಾಪ್ತಮಾನ ಮುಕ್ತ್ಯೈಶ್ವರ್ಯಂ ಕೊಡುಕ್ಕ ನಿನೈಪ್ಪಿಟ್ಟ ಅಧಿಕಾರಿಹಳ್‌ಪಕ್ಕಲುಳ್ಳ ದೋಷಙ್ಗಳುಕ್ಕುಚ್ಚಿಲವು ಶೆಯ್‌ವಾರ್ (1) "ಏಕಶ್ಯಾಸ್ತಾ ನದ್ವಿತೀಯೋಸ್ತಿಶಾಸ್ತಾ" ಎನ್ಗುಮ್

---

**ಅಹೈಯಾಲ್ ಭಗವತ್ಪ್ರತಿಕೂಲರುಕ್ಕು** ಇತ್ಯಾದಿ – ಆದ್ದರಿಂದ ಭಗವತ್ಪ್ರತಿ ಕೂಲರಿಗೆ ಪ್ರಾತಿಕೂಲ್ಯ ಶೇಷವಾದ ರೂಪನಾಮಕ್ಷೇತ್ರವಾಸ ಸಂಕೀರ್ತನಾದಿಗಳು ತಂಜಮಾಹಾದು – ರಕ್ಷಕವಾಗಲಾರದು. **ಪುಣ್ಯಕ್ಷೇತ್ರಂಗಳಿಲ್** ಇತ್ಯಾದಿ – ಪುಣ್ಯಕ್ಷೇತ್ರಗಳಲ್ಲಿ ಮಾಡುವ ಪ್ರತಿಕೂಲಾಚರಣೆಗಳು ಬಹಳ ಬಾಧಕಗಳಾಗುತ್ತವೆ ಎಂಬುದು ಬಹುಶಾಸ್ತ್ರ ಸಿದ್ಧ. **ಇದುವುಮ್ ಭಗವತ್ಪ್ರಭಾವಮ್** – ಆದಾಗಿ ಭಗವತ್‌ಕ್ಷೇತ್ರಗಳಲ್ಲದೆ ಇರುವ ಸ್ಥಳಗಳಲ್ಲಿ ಮಾಡುವ ಪ್ರಾತಿಕೂಲ್ಯಾಚರಣಕ್ಕಿಂತಲೂ ಭಗವತ್‌ಕ್ಷೇತ್ರದಲ್ಲಿ ಮಾಡುವ ಪ್ರಾತಿಕೂಲ್ಯಾಚರಣವು ಬಹಳ ಬಾಧಕವನ್ನುಂಟು ಮಾಡುತ್ತದೆ. ಇದು ಭಗವತ್ಪ್ರಭಾವಕೃತ. ಹೀಗೆಯೇ ಇತರ ಸ್ಥಳದಲ್ಲಿ ಮಾಡುವ ಆನುಕೂಲಾಚರಣಕ್ಕಿಂತ ಭಗವಕ್ಷೇತ್ರದಲ್ಲಿ ಮಾಡುವ ಅನುಕೂಲಾಚರಣವು ಅಧಿಕಪುಣ್ಯವನ್ನುಂಟು ಮಾಡುತ್ತದೆ, ಎಂಬುದೂ ಭಗವತ್ಪ್ರಭಾವದಿಂದ ಏರ್ಪಟ್ಟದೆ ಹೀಗಾದರೆ ಭಗವತ್‌ಕ್ಷೇತ್ರ ವಾಸಿಗಳಿಗೆ ಪುಣ್ಯಪಾಪಗಳು ಎರಡೂ ಸಮನಾದರೆ ಅಥವಾ ಪಾಪವೇ ಹೆಚ್ಚಿದರೆ, ಏನುಗತಿಯೆಂದರೆ**ಭಗವತ್ಪ್ರವಣರುಕ್ಕು**ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಭಗವತ್ಪ್ರವಣರಿಗೆ ವೃತ್ರಾಸುರ, ಕ್ಷತ್ರಬಂಧುಗಳೇ ಮೊದಲಾದವರ ಹಾಗೆ **ಉಳ್ಳ ಆನುಕೂಲ್ಯಂಗಳ್‌ತಾನೇ** ಏರ್ಪಟ್ಟಿರುವ ಅನುಕೂಲಾಚರಣಗಳೇ ಬಲಿಷ್ಠಗಳಾಗಿ ಎಲ್ಲಾದೋಷಗಳನ್ನೂ ಒಂದು ರೀತಿಯಲ್ಲಿ ಹೋಗಲಾಡಿಸಿ **ಉತ್ತಾರಕಂಗಳಾಮ್** – ಸಂಸಾರದಿಂದ ಉದ್ಧರಿಸುತ್ತವೆ,

**ಆನಪಿನ್ನು** – ಹೀಗೆ ಏರ್ಪಟ್ಟನಂತರ, **ಸ್ವಕಂಕಲ್ಪನಿಯತಮಾಯಿರಪ್ಪದೇದೇನುಮ್** ಇತ್ಯಾದಿ – ತನ್ನ ಸಂಕಲ್ಪದಿಂದ ನಿಶ್ಚಯಿಸಲ್ಪಟ್ಟ ಯಾವುದಾದರೊಂದು ವ್ಯಾಜದಿಂದ ಸರ್ವೇಶ್ವರನು ಸ್ವರೂಪ ಪ್ರಾಪ್ತವಾದ ಮುಕ್ತೈಶ್ವರ್ಯವನ್ನು ಕೊಡಲು ಸಂಕಲ್ಪಿಸಿದ, ಭಕ್ತಿಪ್ರಪತ್ತಿರೂಪ ಅಧಿಕಾರಿಗಳ ಹತ್ತಿರವಿರುವ ದೋಷಗಳನ್ನು **ಕಿಲವು ಶೆಯ್‌ವಾನ್** ನಿವಾರಿಸಲು (1) **ಏಕಶ್ಯಾಸ್ತಾ,** ಇತ್ಯಾದಿಯಾಗಿಯೂ,

---

1) ಏಕಶ್ಯಾಸ್ತಾನ ದ್ವಿತೀಯೋಽಸ್ತಿ ಶಾಸ್ತಾ ಯೋಹೃಚ್ಛಯ ಸ್ತಮಹಮನುಬ್ರವೀಮಿ ।
ತೇನೈವಯುಕ್ತಃ ಪ್ರವಣಾದಿವೋದಕಂ ಯಥಾನಿಯುಕ್ತೋಽಸಿ ತಥಾವಹಾಮಿ ॥
ಭಾರ. ಆಶ್ವ 27-1 ಭಗವಂತನು ಒಬ್ಬನೇ ನಿಯಾಮಕನು ಬೇರೆ ಯಾರೂ ಇಲ್ಲ.

2) ಪ್ರಶಾಸಿತಾರಂ ಸರ್ವೇಷಾಂ" ಎನ್ರುಮ್ 3) ಶಾಸ್ತಾ ವಿಷ್ಣುರಶೇಷಸ್ಯ" ಎನ್ರುಮ್ ಶೊಲ್ಲಪ್ಪಡುಹಿರ ಅವನ್ ತಾನೇ ಎನ್ರು ತೆಳಿನ್ದು.

4) ರಾಗಾದಿದೂಷಿತೇ ಚಿತ್ತೇ ನಾಸ್ಪದೀ ಮಧೂಸೂದನಃ ।
ನ ಬಧ್ನಾತಿ ರತಿಂ ಹಂಸಃ ಕದಾಚಿದ್ಕರ್ದಮಾಂಭಸಿ ॥"

ಇತ್ಯಾದಿಹಳೈಪ್ಪಾರ್ತ್ತು ನೆಹಿೞಾದೇ ಇವ್ವಧಿಕಾರಿಹಳ್ ಪಕ್ಕಲುಳ್ಳ ಗುಣಾಂಶತ್ತೈ ಮರುಭೂಮಿಯಿಲ್ ತಣ್ಣೀರ್ ಪೆತ್ತಾರ್ಪೋಲೇ ಯುಹನ್ದು,

5) "ಕರ್ಮಣಾ ಮನಸಾ ವಾಚಾ ಯದಭೀಕ್ಷ್ಣಂ ನಿಷೇವತೇ ।
ತದೇವಾಪಹರತ್ಯೇನಂ ತಸ್ಮಾತ್ಕಲ್ಯಾಣ ಮಾಚರೇತ್ ॥"

ಎನ್ಗಿರಪಡಿಯೇ ಕರಣತ್ರಯತ್ತಾಲುಮ್ ತಾ ನಲ್ವೞಿ ಕೈವಿಡಾದೇ

6) "ಸಂಸಾರ ವಿಷವೃಕ್ಷಸ್ಯ ದ್ವೇಫಲೇಹ್ಯಮೃತೋಪಮೇ ।
ಕದಾಚಿತ್ಕೇಶವೇ ಭಕ್ತಿ ಸ್ತದ್ಭಕ್ತೈರ್ವಾ ಸಮಾಗಮಃ ॥"

ಎನ್ರು ಇಙ್ಗಿರುನ್ದಕಾಲತ್ತುಕ್ಕು ಪ್ರಯೋಜನಮಾಹವೆಡುತ್ತ

---

2) **ಪ್ರಶಾಸಿತಾರಂ ಸರ್ವೇಷಾಂ** ಇತ್ಯಾದಿಯಾಗಿಯೂ 3) **ಶಾಸ್ತಾವಿಷ್ಣುರಶೇಷಸ್ಯ** ಇತ್ಯಾದಿಯಾಗಿಯೂ ಹೇಳಲ್ಪಡುವ ಶಾಸಿತಾ ಭಗವಂತನೇ ಎಂದು ತಿಳಿದು (4) **ರಾಗಾದಿದೂಷಿತೇ ಚಿತ್ತೇ** ಇತ್ಯಾದಿ ಕಾಮಕ್ರೋಧಗಳಿಂದ ಕೂಡಿದಮನಸ್ಸು ಮಧುಸೂದನನಿಗೆ ಇರಲು ಆಶ್ರಯವಾಗುವುದಿಲ್ಲ. ಆದರೆ ಅಂತಹವರ ಮನಸ್ಸಿನಲ್ಲಿ ಭಗವಂತನು ವಾಸ ಮಾಡುವುದಿಲ್ಲವೆಂದರ್ಥ. ಹಂಸವು ಕೆಸರು ನೀರಿನಲ್ಲಿ ವಾಸಮಾಡುವುದಿಲ್ಲವಲ್ಲವೇ, ಇತ್ಯಾದಿ ಪ್ರಮಾಣಗಳನ್ನು ತಿಳಿದು **ನೆಹಿೞಾದೇ** – ಅಂತಹ ಭಾಗವತರಲ್ಲಿ ಅನಾದವರನ್ನು ತೋರಿಸದೆ, **ಇವ್ವಧಿಕಾರಿಹಳ್‌ಪಕ್ಕಲ್** ಇತ್ಯಾದಿ–ಈ ಅಧಿಕಾರಿಗಳ ಹತ್ತಿರವಿರುವ ಗುಣಾಂಶಕ್ಕೆ ಮರಳು ಭೂಮಿಯಲ್ಲಿ ಶೀತಳವಾದ ನೀರನ್ನು ಪಡೆದಂತೆ, ಸಂತೋಷಪಟ್ಟು **ಕರ್ಮಣಾಮನಸಾವಾಚಾ** ಕರಣತ್ರಯಗಳಿಂದ ಯಾವುದನ್ನು ಆಚರಿಸುತ್ತಾನೆಯೋ, ಅದೇ ಇವನನ್ನು ಸ್ವಾಧೀನಪಡಿಸಿಕೊಳ್ಳುತ್ತದೆಯಾದ್ದರಿಂದ, ಯಾವಾಗಲೂ ಮಂಗಳವಾದ ಕಾರ್ಯಗಳನ್ನು ಮಾಡಬೇಕು ಎಂದು ಹೇಳುವಂತೆ ಕರಣತ್ರಯದಿಂದಲೂ ತಾನು ಒಳ್ಳೆಯ ಮಾರ್ಗವನ್ನು ಕೈಬಿಡದೇ ಇರಬೇಕು (6) **ಸಂಸಾರ ವಿಷವೃಕ್ಷಸ್ಯ** ಇತ್ಯಾದಿ ಸಂಸಾರವೆಂಬ ವಿಷ ವೃಕ್ಷದಲ್ಲಿ ಅಮೃತತುಲ್ಯವಾದ ಎರಡು ಹಣ್ಣುಗಳಿವೆ. ಒಂದು ಕೇಶವನಲ್ಲಿ ಯಾವಾಗಲಾದರೂ ಉಂಟಾಗುವ ಭಕ್ತಿ, ಎರಡನೆಯದು ಆವನ ಭಕ್ತರೊಡನೆ ಕೂಡಿ ಇರುವುದು, ಎಂದು ಹೇಳಿರುವಂತೆ **ಇಂಗಿರುಂದಕಾಲತ್ತುಕ್ಕು** ಇತ್ಯಾದಿ ಈ ಲೋಕದಲ್ಲಿ ವಾಸಮಾಡಿಕೊಂಡಿರುವ ಕಾಲಕ್ಕೆ ಪ್ರಯೋಜನವಾಗಿ

---

2) ಪ್ರಶಾಸಿತಾರಂ ಸರ್ವೇಷಾಂ ಅಣೀಯಾಂಸಮಣೀಯಸಾಂ ।
ರುಕ್ಮಾಭಂ ಸ್ವಪ್ನಧೀಗಮ್ಯಂ ವಿದ್ಯಾತ್ತು ಪುರುಷೋತ್ತಮಮ್ ॥ ಮನುಸ್ಮೃತಿ (12-122)
ಎಲ್ಲರನ್ನೂ ಅಂತಃಪ್ರವಿಷ್ಟನಾಗಿ ನಿಯಮಿಸುವವನು ಸೂಕ್ಷ್ಮವಸ್ತುಗಳಲ್ಲಿಯೂ ಸೂಕ್ಷ್ಮತರನಾಗಿ ಅಂತಃಪ್ರವಿಷ್ಟನು. ಅವನು ಚಿನ್ನದಂತೆ ಶರೀರ ಕಾಂತಿಯುಳ್ಳವನು ಸ್ವಪ್ನ ತುಲ್ಯವಾದ ಧ್ಯಾನಗೋಚರನು. ಅವನು ಪುರುಷೋತ್ತಮನು.

3) ಶಾಸ್ತಾ ವಿಷ್ಣುರಶೇಷಸ್ಯ ಜಗತೋಯೋಹೃದಿಸ್ಥಿತಃ ।
ತಮೃತೇ ಪರಮಾತ್ಮಾನಂ ತಾತಃ ಕಃ ಕೇನ ಶಾಸ್ಯತೇ ॥
ವಿ. ಪು. (1-17-70) ಎಲ್ಲರ ಹೃದಯದಲ್ಲಿರುವ ಭಗವಂತನೇ ಪ್ರಪಂಚವನ್ನೆಲ್ಲಾ ನಿಯಮಿಸಿ ಆಳುವವನು. ಆ ಪರಮಾತ್ಮನನ್ನು ಬಿಟ್ಟರೆ, ಬೇರೆ ಯಾರು ಯಾರಿಂದ ನಿಯಮಿಸಲ್ಪಡುತ್ತಾರೆ. ಬೇರೆಯಾರಿಂದಲೂ ಇಲ್ಲವೆಂದರ್ಥ.

4) ವಿಷ್ಣು ಧರ್ಮ 9-11 5) ಭಾರತ ಉದ್ಯೋಗ ಪರ್ವ 39-56 6).

**"ಪರಮನ್ನೈಪ್ಪೆಯಿಲುಮ್ ತಿರುವುಡೈಯ" "ಶಿರುಮಾ ಮನಿಶರುಡರ್ ಶೇರ್ತ್ತಿಯಾಹಿರ ಶೀರಿಯಪೇರಾಪ್ಪೇತ್ತಿ ತಿರುವರುಳಾಲೇ ಪೆತ್ತೋೕಮ್" ಎನ್ರು ಕೃತಾರ್ಥರಾಯ್, 1) "ತಿರುಮಾಲ್ ತಲೈಕ್ಕೊಂಡ ನಙ್ಗಟ್ಕೆಙ್ಗೀ ವರುಂ ತೀವಿನೈ ಎನ್ರು ವ್ಯವಸಿತನಾಯ್, 2) "ಆಳ್‌ಹಿನ್ರಾ ನಾ(ಳ್)ಿಯಾನಾರಾಲ್ ಕುರೈವುಡೈಯಮ್" ಎನ್ಹಿರ ಪಡಿಯೇ ಪರಮಪದತ್ತಿಲ್ ಪೆರಪ್ಪುಹುಹಿರ ಪರಿಪೂರ್ಣಕೈಙ್ಕರ್ಯ ಸಾಮ್ರಾಜ್ಯತ್ತುಕ್ಕು ಇಙ್ಗೇಯೇ ಮುಡಿಶೂಡಿ ಇರುಕ್ಕ ಪ್ರಾಪ್ತಮ್.**

---

ಹೇಳಿರುವ, **ಪರಮನ್ನೈಪ್ಪೆಯಿಲುಂತಿರುವುಡೈಯ**–ಭಗವಂತನನ್ನು ಆಶ್ರಯಿಸುವುದೆಂಬ ಸಂಪತ್ತಿನಿಂದ ಕೂಡಿದ **ಶಿರುಮಾಮನಿಶರುಡನ್**-ದೇಹಯಾತ್ರೆಯು ಅನುವರ್ತಿಸುವುದರಿಂದ ಚಿಕ್ಕವರಾಗಿ ಕಾಣಲ್ಪಟ್ಟರೂ ಅಂದರೆ ನಮ್ಮ ಹಾಗೆ ಆಹಾರ ನಿದ್ರೆ ಮೊದಲಾದವುಗಳು ಇರುವುದರಿಂದ ಸಾಧಾರಣರಾದ ಮನುಷ್ಯರಂತೆ ಕಾಣಲ್ಪಟ್ಟರೂ, ಜ್ಞಾನ ವೈರಾಗ್ಯ ಭಕ್ತಿಗಳಿಂದ ಮಹಾ ಪ್ರಭಾವಶಾಲಿಗಳಾಗಿರುವ ಭಾಗವತರೊಡನೆ, **ಶೇರ್ತ್ತಿಯಾಹರ** – ಸಂಸರ್ಗವೆಂಬ **ಶೀರಿಯ** – ಶ್ಲಾಘ್ಯವಾದ, **ಪೆರಾಪ್ಪೇಟ್ರೈ** ಹೊಂದಲ ಶಕ್ಯವಾದ ಪುರುಷಾರ್ಥವನ್ನು, **ತಿರುವರುಳಾಲೇಪೆಟ್ರೋೕಮೆನ್ರು** – ಭಗವಂತನ ದಿವ್ಯಕೃಪೆಯಿಂದ ಹೊಂದಿದೆವೆಂದು, ಕೃತಾರ್ಥನಾಗಿರಬೇಕು. ಹೀಗೆ (1) **ತಿರುಮಾಲ್ ತಲೈಕ್ಕೊಂಡ್ಯ ನಂಗಟ್ಕು** ಇತ್ಯಾದಿ ಶ್ರೀಮನ್ನಾರಾಯಣನಿಂದ ಪರಿಗ್ರಹಿಸಲ್ಪಟ್ಟ ನಮಗೆ ಪಾಪಗಳೇ ಸಂಭವಿಸುವುದಿಲ್ಲವೆಂದು **ವ್ಯವಸಿತನಾಯ್** – ನಿಶ್ಚಯವುಳ್ಳವನಾಗಿ, (2) **ಆಳ್‌ಹಿನ್ರಾನ್ ಆ(ಳ್)ಿಯಾನ್ ಆರಾಲ್ ಕುರೈಯುಡ್ಡೈಯಮ್**–ಚಕ್ರಪಾಣಿಯು ನಮ್ಮನ್ನು ರಕ್ಷಿಸುವಾಗ,ಬೇರೆಯಾರಿಂದ ಎನು ಕೊರತೆ ಏರ್ಪಡುತ್ತದೆಎಂಬಂತೆ ಪರಮ ಪದದಲ್ಲಿ ಹೊಂದುವ ಪರಿಪೂರ್ಣ ಕೈಂಕರ್ಯಸಾಮ್ರಾಜ್ಯಕ್ಕೆ ಈಸಂಸಾರಮಂಡಲದಲ್ಲಿಯೇ ಅಭಿಷಿಕ್ತನಾಗಿರುವುದು ಪ್ರಾಪ್ತವು.

ಏತಾವತಾ ಹೇಳಿದ ವಿಷಯಗಳ ತಾತ್ಪರ್ಯವೇನೆಂದರೆ :– ಭಾಗವತರು ಅನುವೃತ್ತ ದೋಷರಾದರೂ ಭಕ್ತಿಪ್ರಪತ್ತಿ ರೂಪ ಉಪಾಯ ಪ್ರಭಾವದಿಂದ ಉತ್ತೀರ್ಣರಾಗುತ್ತಾರೆಯಾದ್ದರಿಂದ ಭಾಗವತರ ಹತ್ತಿರವಿರುವ ದೋಷಗಳಿಗೆ ಸರ್ವ ಶಾಸ್ತೃವಾದ ಭಗವಂತನೇ ಶಿಕ್ಷಕನೆಂದು ನಿಶ್ಚಯಿಸಿ, ಅವರುಗಳನ್ನು ಅನಾದರಿಸದೆ ಅವರುಗಳಗುಣವನ್ನೇ

---

1) ತಿರುಮಾಲುರುವೊಕ್ಕುಮ್ ಮೇರು, ಅಮ್ಮೇರುವಿಲ್ ಶೆಂಜುಡರೋನ್
ತಿರುಮಾಲ್ ತಿರುಕ್ಕೈತ್ತಿರುಚ್ಚಕ್ಕರಮೊಕ್ಕುಮ್ ।
ಅನ್ನಕಂಡುಂ ತಿರುಮಾಲುರುವೋಡು ಅವನ್ ಶಿನ್ನಮೇಪಿದಟ್ರಾಸಿರ್ಪ್ಪದುಪೆರ್
ತಿರುಮಾಲ್ ತಲೈಕ್ಕೊಂಡನಂಗಟ್ಕು, ಎಂಗೇವರುಂತೀವಿನೈಯೇ ॥ ತಿರುವಿರುತ್ತಮ್ 88

ಮೇರುಪರ್ವತವು ಲಕ್ಷ್ಮೀಪತಿಯ ಶರೀರದಂತಿದೆ. ಆ ಮೇರು ಪರ್ವತದಲ್ಲಿರುವ ತೀಕ್ಷ್ಣಕಾಂತಿಯುಕ್ತನಾದ ಸೂರ್ಯನು, ಲಕ್ಷ್ಮೀಪತಿಯ ಕೈಯ್ಯಲ್ಲಿರುವ ಚಕ್ರಾಯುಧಕ್ಕೆ ಸಮನು, ಲಕ್ಷ್ಮೀಪತಿಯ ರೂಪ ಸದೃಶವಾದ ವಸ್ತುಗಳನ್ನು ನೋಡಿ ಅವನ ಚಿಹ್ನೆಗಳನ್ನೇ ಬಾಯಲ್ಲಿ ಹೇಳುತ್ತಿರುವಂತೆ ಲಕ್ಷ್ಮೀಪತಿಯು ನಮ್ಮನ್ನು ತನ್ನವನನ್ನಾಗಿ ಅಂಗೀಕರಿಸಿದ್ದಾನೆ. ಹಾಗಿರುವ ನಮಗೆ ಪಾಪಗಳು ಹೇಗೆ ಸಂಭವಿಸುತ್ತವೆ.

2) ಆಳ್‌ಹಿನ್ರಾನ್ ಆಳ್ಯಿಯಾನ್ ಆರಾಲ್ ಕುರೈಯುಡ್ಡೈಯಮ್
ಮೀಳ್‌ಹಿನ್ರದಿಲ್ಲೈ ಪಿರವಿತ್ತುಯರ್ ಕಡಿಂದೋಮ್ ।
ವಾಳ್‌ಕೆಂಡೈಯೊಣ್‌ಕಣ್ ಮಡಪ್ಪಿನ್ನೈತನ್ ಕೇಳ್ವನ್
ತಾಳ್‌ಕಂಡುಕೊಂಡು ಎನ್ ತಲೈಮೇಲ್ ಪುನೈಂದೇನೇ ॥ ತಿರುವಾಯ್‌ಮೊಳಿ (10-4-3)

ಚಕ್ರಪಾಣಿಯು ನಮ್ಮನ್ನು ರಕ್ಷಿಸುತ್ತಿರುವಾಗ ನಾವು ಹೊಂದುವ ಪುರುಷಾರ್ಥಕ್ಕೆ ಬೇರೆ ಯಾರಿಂದ ಏನು ಕೊರತೆ ಇದೆ. ಪುನರಾವೃತ್ತಿಯಿಲ್ಲದ ಪುರುಷಾರ್ಥವು ಲಭಿಸಿಸಂಸಾರವೆಂಬ ದುಃಖವನ್ನು ಹೋಗಲಾಡಿಸಿದೆವು. ಮತ್ಸ್ಯಲೋಚನೆಯಾದ ನಪ್ಪಿನ್ನೈಗೆ ಪತಿಯಾದ ಭಗವಂತನ ಪಾದಗಳು ಎಂದು ತಿಳಿದು ಕೊಂಡು ನನ್ನ ತಲೆಯ ಮೇಲೆ ಅಲಂಕಾರವಾಗಿ ಧರಿಸಿರುತ್ತೇನೆ.

**ರಹಸ್ಯತ್ರಯೇ ಸಾಧ್ಯೋಪಾಯ ಪ್ರಭಾವಾನುಸಂಧಾನ ಸ್ಥಲವ್.**

**ಇಪ್ಪಡಿ ವ್ಯವಸ್ಥಿತಮಾನ ಪ್ರಭಾವಮ್ ರಹಸ್ಯತ್ರಯತ್ತಿಲ್ ಫಲ ನಿರ್ದೇಶ ಪ್ರದೇಶಙ್ಗಳಿಲೇ, ಅನುಷಂಗ ಸಿದ್ಧಮಾಹಮನು ಸಂಧೇಯಮ್.**

**ಪ್ರಪನ್ನಾನಾಂ ಮಾಹಾತ್ಮ್ಯಮಪರಿಚ್ಛೇದ್ಯಮಿತಿ ಅಸ್ಮದಾಚಾರ್ಯಾ ಉಪದಿದಿಶುರಿತ್ಯಾಹ**
**ಉಣ್ಮೈಯುರೈಕ್ಕುಮರೈ ಹಳಿಲೋಙ್ಗಿಯ ಉತ್ತಮನಾರ್ ।**
**ವಣ್ಮೈಯಳಪ್ಪರಿದಾದಲಿಲ್ ವನ್ದು ಕಳಲ್ ಪಣಿವಾರ್ ।**
**ತಣ್ಮೈ ಕಿಡನ್ದಿಡತ್ತರ ಮಳವೆನ್ನ ಮಿಯಮ್ಪಿಲದಾಮ್ ।**
**ಉಣ್ಮೈ ಯುರತ್ತನರೋರನ್ತಮಿರ ವುಯರ್ನ್ದನರೇ ॥**

---

ಗ್ರಹಿಸಿ ಅವರುಗಳೊಡನೆ ಸಂಸರ್ಗವೆಂಬ ಅಲಭ್ಯಲಾಭವು ಭಗವದನುಗ್ರಹದಿಂದ ಲಭಿಸಿತೆಂದು ಕೃತಾರ್ಥನನಾಗಿ ತನ್ನನ್ನು ತಿಳಿದು, ಮುಕ್ತೈಶ್ವರ್ಯಲಾಭಕ್ಕೆ ಇಲ್ಲಿಯೇ ಮೂರ್ಧಾಭಿಷಿಕ್ತನಾಗಿ ನಿರ್ಭರನಾಗಿರಬೇಕು.

ರಹಸ್ಯತ್ರಯದಲ್ಲಿ ಸಾಧ್ಯೋಪಾಯ ಪ್ರಭಾವಾನುಸಂಧಾನ ಸ್ಥಲ

ಇಪ್ಪಡಿ ವ್ಯವಸ್ಥಿತಮಾನ ಇತ್ಯಾದಿ, ಹೀಗೆ ತೀರ್ಮಾನವಾದ ಪ್ರಭಾವವು ರಹಸ್ಯತ್ರಯದಲ್ಲಿ ಫಲನಿರ್ದೇಶ **ಪ್ರದೇಶಂಗಳಿಲೇ** – ನಾರಾಯಣ ಪದದ ಮೇಲೆ ಬರುವ ಚತುರ್ಥ್ಯಾದಿಗಳಲ್ಲಿ, **ಅನುಷಂಗಸಿದ್ಧಮಾಹ** – ಆರ್ಥಿಕವಾಗಿ ಅನುಸಂಧೇಯವು.

ಪ್ರಪನ್ನರ ಮಾಹಾತ್ಮ್ಯವು ಅಪರಿಚ್ಛೇದ್ಯವೆಂದು ನಮ್ಮ ಆಚಾರ್ಯರು ಉಪದೇಶಿಸುತ್ತಾರೆ.

ಅನಂತರ ಅಧಿಕಾರಾರ್ಥವನ್ನು **ಉಣ್ಮೈಯುರೈಕ್ಕುಮ್ ಮರೈಹಳಿಲ್** -ಯಥಾರ್ಥವನ್ನು ತಿಳಿಸುವ ವೇದಾಂತಗಳಾದ ಉಪನಿಷದ್ಭಾಗಗಳಲ್ಲಿ **ಓಂಗಿಯ ಉತ್ತಮನಾರ್** "ನತತ್ಸಮಶ್ಚಾಭ್ಯಧಿಕಶ್ಚದೃಶ್ಯತೇ" ಎಂಬಂತೆ ಮಹಾಪ್ರಭಾವಶಾಲಿಯಾಗಿ ಪ್ರಕಾಶಿಸುವ, ಪುರುಷೋತ್ತಮನಾದ ಭಗವಂತನ **ವಣ್ಮೈ** – ಪ್ರಭಾವವು **ಅಳಪ್ಪರಿದು** – ಯತೋವಾಚೋ ನಿವರ್ತಂತೇ – ಎಂಬಂತೆ ವಾಙ್ಮನಸಾಗೋಚರವಾದದು. ಸಿದ್ಧೋಪಾಯನಾದ ಭಗವಂತನ ಪ್ರಭಾವವು ಅಪರಿಚ್ಛೇದ್ಯ **ಆದಲಿಲ್** – ಆದ್ದರಿಂದ, **ವಂದು ಕಳಲ್ ಪಣಿವಾರ್** – ಆಕಿಂಚನ್ಯಾನನ್ಯಗತಿ ತ್ವರೂಪದಿಂದ ಕೂಡಿದ ಅಧಿಕಾರದೊಡನೆ, ಬಂದು ಅವನ ಪಾದಗಳನ್ನು ಆಶ್ರಯಿಸುವ ಪ್ರಪನ್ನರ, **ತಣ್ಮೈ**– ಕೀಳು ಸ್ವಭಾವವು, **ಕಿಡಂದಿಡ** – ಒಂದುಕಡೆ ಇದ್ದರೂ, ಜಾತ್ಯಾದಿಗಳಿಂದ ಅವರುಗಳಿಗೆ ಪುರುಷಾರ್ಥಹಾನಿಯೂ, ಭಗವದಭಿಮಾನ ನ್ಯೂನತೆಯೂ ಇಲ್ಲದೆ ಇರುವುದರಿಂದ ನೈಚ್ಯಸ್ವಭಾವವು ಬಾಧಕವಾಗಲಾರದು ಎಂದು ಭಾವ. ಅವರುಗಳಿಗೆ **ತರಮ್** –ಪ್ರಭಾವವು **ಅಳವೆನ್ನ**–ಪರಿಚ್ಛಿನ್ನವಾದದ್ದು ಎಂಬ **ಮಿಯಮ್ಪಿಲಾದಾಮ್**–ಮಾತುಇಲ್ಲದ್ದು. "ಯೋಹ್ಯೇನಂ ಪುರುಷಂ ವೇದ ದೇವಾ ಅಪಿ ನತಂ ವಿದುಃ" ಎಂದು ಹೇಳಿದೆ; ಅಂದರೆ ಭಗವಂತನನ್ನು ಭಕ್ತಿ ಪ್ರಪತ್ತಿಗಳಿಂದ ವಶಪಡಿಸಿ ಕೊಂಡವನ ಪ್ರಭಾವವನ್ನು ದೇವತೆಗಳೂ ತಿಳಿಯರು. **ಉಣ್ಮೈ**- ಭಾಗವತ ಪ್ರಭಾವವು ಅಪರಿಚ್ಛಿನ್ನವೆಂಬ ಸತ್ಯವಾಕ್ಯವನ್ನು, ಓರಂತಮಿರ–ಪಕ್ಷಪಾತವಿಲ್ಲದೆ **ಉಯರ್ನ್ದನರ್** –ಹಿರಿಯರು, **ಉರೈತ್ತನರ್**-ಯಥಾಶಾಸ್ತ್ರ ಹೇಳಿರುತ್ತಾರೆ. ಪ್ರಪನ್ನರಾದ ಭಾಗವತ ಪ್ರಭಾವವು ಅಪರಿಚ್ಛೇದ್ಯವಾದದ್ದು. ಇದಕ್ಕೆ ಜಾತ್ಯಾದಿಗಳಿಂದ ನಿಚೋಚ್ಚಭಾವವು ಉಂಟಾಗುವುದಿಲ್ಲವೆಂದು ತಾತ್ಪರ್ಯ.

**ರಾಗದ್ವೇಷ ಮದಾದಿಕೈರಿಹ ಮಹಾ ರಕ್ಷೋಭಿ ರಕ್ಷೋಭಿತೇ।**
**ನಿತ್ಯೇ ರಕ್ಷಿತರಿ ಸ್ಥಿತೇ ನಿಜಭರನ್ಯಾಸಾಭಿಧಾನಂ ತಪಃ॥**
**ಯತ್ಕಕ್ಷೀಕೃತ ಮತ್ಯಶೇತ ವಿವಿಧಾನ್ ಧರ್ಮಾನಧರ್ಮದ್ರುಹ।**
**ಸ್ತದ್ಭೂಮಾರ್ಣವ ಲೇಶವರ್ಣನಮಪಿ ಪ್ರಾಚಾಂ ನವಾಚಾಂ ಪದಮ್ ॥58॥**

**ಇತಿ ಶ್ರೀ ಕವಿತಾರ್ಕಿಕ ಸಿಂಹಸ್ಯ ಸರ್ವತನ್ತ್ರ ಸ್ವತಂತ್ರಸ್ಯ ಶ್ರೀ ಮದ್ವೇಙ್ಕಟನಾಥಸ್ಯ**
**ವೇದಾನ್ತಾಚಾರ್ಯಸ್ಯ ಕೃತಿಷು ಶ್ರೀ ಮದ್ರಹಸ್ಯತ್ರಯಸಾರೇ**
**ಪ್ರಭಾವ ರಕ್ಷಾಧಿಕಾರಃ ಪಂಚವಿಂಶಃ।**
**ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ॥**

---

ಪ್ರಪನ್ನರ ಪ್ರಭಾವವು ಅಪರಿಚ್ಛೇದ್ಯವೆಂದು ಹೇಳಿ ಇದಕ್ಕೆ ಕಾರಣವಾದ ಪ್ರಪತ್ತಿಯ ಪ್ರಭಾವವನ್ನು ಅಪರಿಚ್ಛೇದ್ಯವೆಂದುಅಧಿಕಾರದ ಕೊನೆಯದಾದ **ರಾಗದ್ವೇಷ**–ಎಂಬ ಶ್ಲೋಕದಿಂದ ಆಚಾರ್ಯರು ಅನುಗ್ರಹಿಸುತ್ತಾರೆ. ಅದಾಗಿ **ರಾಗದ್ವೇಷಮದಾದಿಕೈ** :– **ರಾಗಃ**– ಫಲದಲ್ಲಿ ಆಸೆ, **ದ್ವೇಷ** – ಆಫಲಕ್ಕೆ ವಿಘ್ನವನ್ನುಂಟು ಮಾಡುವವರಲ್ಲಿ ಉಂಟಾಗುವದ್ವೇಷ, ಇದೇ ಮೊದಲಾದ, **ಮಹಾರಕ್ಷೋಭಿರಕ್ಷೋಭಿತೇ**–ಮಹಾರಾಕ್ಷಸರಿಂದ, ರಾಗದ್ವೇಷಗಳಿಂದ ಕೂಡಿದವರು ರಾಕ್ಷಸರಾಗಿರುವುದರಿಂದ ರಾಗದ್ವೇಷಗಳನ್ನು ರಾಕ್ಷಸರೆಂದು ಆರೋಪಮಾಡಿ ಹೇಳುವ ಮಾತು. **ಅಕ್ಷೋಭಿತೇ** – ಕ್ಷೋಭೆಯನ್ನು ಹೊಂದದೆ **ನಿತ್ಯೇರಕ್ಷಿತರಿ** – ನಿತ್ಯರಕ್ಷಕನಾಗಿ, ಭಗವಂತನು, ಸ್ಥಿತೇ – ಇರುವಾಗ **ನಿಜಭರನ್ಯಾಸಾಭಿಧಾನಂತಪಃ**–ತನ್ನಭರನ್ಯಾಸವೆಂಬ ತಪಸ್ಸು, **ಕಕ್ಷೀಕೃತಂತತ್** – ಅನುಷ್ಠಿಸಲ್ಪಟ್ಟದ್ದಾಗಿ, **ಅಧರ್ಮದ್ರುಹ** :– ಅಧರ್ಮಗಳನ್ನು ಹೋಗಲಾಡಿಸುವ ವಿವಿಧಾನ್‌ಧರ್ಮಾನ್ – "ಧರ್ಮೇಣಪಾಪ ಮಪನುದತಿ" ಎಂಬ **ನಾನಾ** ವಿಧಗಳಾದ ಸತ್ಯ, ತಪಃ ಪ್ರಭೃತಿ ಧರ್ಮಗಳನ್ನು **ಅತ್ಯಶೇತ** – ಅತಿಶಯಿಸುವುದೋ, ನ್ಯಾಸರೂಪ ಧರ್ಮವು ಆ ಧರ್ಮಗಳಿಗಿಂತ ಮೇಲಾದದು ಎಂದರ್ಥ, **ತದ್ಭೂಮಾರ್ಣವ ಲೇಶವರ್ಣನಮಪಿ**–ಆ ಭರನ್ಯಾಸವೆಂಬ ತಪಸ್ಸಿನ ಮಾಹಾತ್ಮ್ಯವೆಂಬ ಮಹಾರ್ಣವದ ಲೇಶವನ್ನು ವರ್ಣಿಸುವುದೂ, **ಪ್ರಾಚಾಂ** – ಪ್ರಾಚೀನರಾದ ಮಹಾಪುರುಷರ, **ವಾಚಾಂ ಪದಂ ನ** –– ಮಾತುಗಳಿಗೆ ಆಶ್ರಯವಾಗುವುದಿಲ್ಲ. ಅದರ ಹಿರಿಮೆಯನ್ನು ಹೇಳಲಾಗುವುದಿಲ್ಲವೆಂದು ತಾತ್ಪರ್ಯ.

ಇತಿ ಶ್ರೀಮದ್ರಹಸ್ಯತ್ರಯಸಾರದ ಇಪ್ಪತ್ತೈದನೆಯ ಪ್ರಭಾವ ರಕ್ಷಾಧಿಕಾರಕ್ಕೆ "ಸಾರಚಂದ್ರಿಕಾ" ವ್ಯಾಖ್ಯಾನವು ಸಮಾಪ್ತ.
ಸ್ಥಿರೀಕರಣ ಭಾಗವು ಸಮಾಪ್ತ.
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

ಶ್ರಿಯೈ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ
**ಪದವಾಕ್ಯಯೋಜನಾ ಭಾಗಃ**

# 27. ಮೂಲಮನ್ತ್ರಾಧಿಕಾರಸ್ಸಪ್ತವಿಂಶಃ

ತಾರಂ ಪೂರ್ವಂ ತದನುಹೃದಯಂ ತಚ್ಚ ನಾರಾಯಣಾಯೇ
ತ್ಯಾಮ್ನಾಯೋಕ್ತಂ ಪದಮವಯತಾಂ ಸಾರ್ಥಮಾಚಾರ್ಯದತ್ತಮ್ ।

---

ಶ್ರೀಮತೇ ನಿಗಮಾಂತ ಮಹಾದೇಶಿಕಾಯನಮಃ

ಶ್ರೀಮದ್ರಹಸ್ಯತ್ರಯ ಸಾರದಲ್ಲಿ **ಮೂಲಮಂತ್ರಾಧಿಕಾರಕ್ಕೆ ಸಾರಚಂದ್ರಿಕಾ** ವ್ಯಾಖ್ಯಾನ;

ಇತ್ಥಂತೈತ್ಸ್ಕು ಮತಿಭಿಸ್ಸಾರಾರ್ಥಾನಾಮುಪಪ್ಲವಮ್ ।
ಪ್ರಾಪ್ತಂ ನಿವಾರ್ಯತದ್ರಾಕ್ಷಾಮಂತ್ರಕೋಶೋ ವಿತನ್ಯತೇ ॥
ರಹಸ್ಯಪದವಾಕ್ಯಾನಾಂ ಯೋಜನೈವ ಯಥಾಕ್ಷರಮ್ ।
ಪ್ರಾರೀಪ್ಸಿತಾ ಪ್ರಬಂಧೇಽಸ್ಮಿನ್ನನ್ಯತ್ಸರ್ವಂ ತದರ್ಥತಃ ॥
ಭಾಷ್ಯಾದಿ ಶಿಕ್ಷಿತಾರ್ಥೇಷು ಸಾರನಿಷ್ಕರ್ಷ ಪೂರ್ವಕಮ್ ।
ರಹಸ್ಯಮಂತ್ರ ತಾತ್ಪರ್ಯ ಮಪಿ ತತ್ರ ಪ್ರಕಾಶ್ಯತೇ ॥ (ಸಾರಕೌಮುದೀ)

ಹೀಗೆ ಸ್ಥಿರೀಕರಣ ಭಾಗದಲ್ಲಿ ಅರ್ಥಾನು ಶಾಸನ ಭಾಗೋಕ್ತವಾದ ಅರ್ಥವನ್ನು ಸ್ಥಾಪಿಸಲು, ಕುಮತಿಗಳಿಂದ ಏರ್ಪಟ್ಟ ಸಾರಾರ್ಥಗಳ ಉಪಪ್ಲವವು ಹೋಗಲಾಡಿಸಲ್ಪಟ್ಟಿತು. ಈ ತೃತೀಯ ಭಾಗದಲ್ಲಿ ರಹಸ್ಯತ್ರಯಗಳ ಪದವಾಕ್ಯ ಯೋಜನೆಗಳನ್ನು ತೋರಿಸುವವರಾಗಿ ಮೊದಲು ತಿರುಮಂತ್ರವಾದ ಅಷ್ಟಾಕ್ಷರದಲ್ಲಿ ಪದವಾಕ್ಯ ಯೋಜ–ನೆಯು ಇರುವ ರೀತಿಯನ್ನು ತಿಳಿಸುತ್ತಾರೆ.

ಮಂತ್ರೇತದ್ದೇವತಾಯಾಂಚ ತಥಾಮಂತ್ರಪ್ರದೇಗುರೌ ।
ತ್ರಿಷುಭಕ್ತಿ ಸ್ಸದಾಕಾರ್ಯಾ ಸಾಹಿ ಪ್ರಥಮ ಸಾಧನಮ್ ॥

ಎಂದು ಹೇಳಿರುವಂತೆ ಮಂತ್ರ ಪ್ರತಿಪಾದ್ಯ ದೇವತೆ, ಮಂತ್ರ ಪ್ರದನಾದ ಆಚಾರ್ಯ, ಮತ್ತು ಮಂತ್ರ, ಎಂಬೀ ಮೂರು ವಿಷಯಗಳನ್ನು ಮೂರು ಶ್ಲೋಕಗಳಿಂದ ಆಚಾರ್ಯರು ಅನುಸಂಧಿಸುತ್ತಾರೆ. ಭಾಷ್ಯಾದಿಗಳಲ್ಲಿ ಶಿಕ್ಷಿತವಾದ ಅರ್ಥಗಳಲ್ಲಿ ಸಾರ ನಿಷ್ಕರ್ಷ ಪೂರ್ವಕವಾಗಿ ರಹಸ್ಯ ಮಂತ್ರಗಳ ತಾತ್ಪರ್ಯವು, ಈ ಭಾಗದಲ್ಲಿ ಪ್ರಕಾಶಿಸಲ್ಪಡುತ್ತದೆ.

**ತಾರಂಪೂರ್ವಮ್**ಇತ್ಯಾದಿ- ಈ ಶ್ಲೋಕವು ಪದವಾಕ್ಯ ಯೋಜನಾ ಭಾಗದ ವಿಷಯ ಪ್ರಯೋಜನ ಸಂಗ್ರಾಹಕವು ಮತ್ತು ಮಂಗಲಾಚಾರವೂ ಆಗುತ್ತದೆ. 'ಪದ' ಶಬ್ದವು ಪದ್ಯತೇಽನೇನೇತಿ ವ್ಯುತ್ಪತ್ತಿಯಿಂದ ವಾಕ್ಯಪರವೂ ಆಗುತ್ತದೆ.

"ಏತದ್ವೈ ನಾರಾಯಣಸ್ಯಾಷ್ಟಾಕ್ಷರಂ ಪದಂ ।
ಯೋಹವೈ ನಾರಾಯಣಸ್ಯಾಷ್ಟಾಕ್ಷರಂ ಪರದಮಧ್ಯೇತಿ । ಇತ್ಯಾದಿ ಶ್ರುತಿಪ್ರಸಿದ್ಧ. ಈ ಮೊದಲನೇ ಶ್ಲೋಕವು ತಿರುಮಂತ್ರದಲ್ಲಿ ಉಪನಿಷತ್ಪ್ರತಿಪಾದ್ಯವಾದ ಕ್ರಮವನ್ನು ತೋರಿಸುವುದಾಗಿ ತಿರುಮಂತ್ರ ಪ್ರತಿ

**ಅಙ್ಗೀಕುರ್ವನ್ನಲಸಮನಸಾ ಮಾತ್ಮರಕ್ಷಾಭರಂ ನಃ ।**
**ಕ್ಷಿಪ್ರಂ ದೇವಃ ಕ್ಷಿಪತು ನಿಖಿಲಾನ್ ಕಿಙ್ಕರೈಶ್ವರ್ಯವಿಘ್ನಾನ್ ॥59॥**
**ಕಲ್ಯಾಣಮಾವಹತು ಕಾರ್ತಯುಗಂ ಸ್ವಧರ್ಮಂ ಪ್ರಖ್ಯಾಪಯನ್ ಪ್ರಣಿಹಿತೇಷು ನರಾದಿಕೇಷು ।**
**ಆದ್ಯಂ ಕಮಪ್ಯಧಿಗತೋ ರಥಮಷ್ಟಚಕ್ರಂ ಬಂಧುಸ್ಸತಾಂ ಬದರಿಕಾಶ್ರಮತಾಪಸೋನಃ ॥60॥**

---

ಪಾದ್ಯನಾದ ನಾರಾಯಣನು, ಅರ್ಥದೊಡನೆ ಆಚಾರ್ಯೋಪದಿಷ್ಟವಾದ ತಿರುಮಂತ್ರವನ್ನು ಅನುಸಂಧಾನ ಮಾಡಿ ಶರಣ ವರಣ ಮಾಡಿದ ನಮ್ಮ ಕೈಂಕರ್ಯ ಸಾಮ್ರಾಜ್ಯ ವಿರೋಧಿಸಕಲಪಾಪಗಳನ್ನೂ ಹೋಗಲಾಡಿಸುವವನುಎಂದು "**ತಾರಂ ಪೂರ್ವಂ**"ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ **ಪೂರ್ವಂ**–ಮೊದಲು **ತಾರಂ**-ಆಮ್ನಾಯೋಕ್ತ ಪ್ರಣವವನ್ನು **ತದನು**ಎಂದು ತದನಂತರ ಹೃದಯಂವೇದದಲ್ಲಿ ಹೇಳಿರುವ ನಮಶ್ಶಬ್ದವನ್ನೂ ತದನು ಎಂದುಅನುಷಂಗಿಸಿ **ನಾರಾಯಣ ಯೇತಿ**, ನಾರಾಯಣಾಯ'ಎಂದು,**ಆಮ್ನಾಯೋಕ್ತಂ**– ಓಮಿತ್ಯಗ್ರೇವ್ಯಾಹರೇತ್। ನಮ ಇತಿಪಶ್ಚಾತ್ ।ನಾರಾಯಣಾಯೇತ್ಯುಪರಿಷ್ಟಾತ್ । ಎಂದು ಶ್ರುತ್ಯುಕ್ತವಾದ, **ಸಾರ್ಥಂ**–ಅರ್ಥದೊಡನೆ **ಆಚಾರ್ಯದತ್ತಂ**–ಆಚಾರ್ಯನಿಂದ ಉಪದೇಶಿಸಲ್ಪಟ್ಟ, **ಪದಂಚ** ಪದವನ್ನೂ, **ಅವಯತಾಂ** – ಅನುಸಂಧಾನ ಮಾಡುವವರ, **ಅಲಸಮನಸಾಂ** – ಕರ್ಮಯೋಗಾದಿಗಳನ್ನು ಅನುಷ್ಠಿಸಲು ಶಕ್ಯರಲ್ಲದ ಅಕಿಂಚನರಾದ. **ನಃ**– ನಮ್ಮ **ಆತ್ಮರಕ್ಷಾಭರಂ** – ಸಮರ್ಪಿಸಲ್ಪಟ್ಟ ಆತ್ಮರಕ್ಷಣಾಭರವನ್ನು, **ದೇವಃ**– ಜಗದ್ವ್ಯಾಪಾರ ಲೀಲನಾದ ಲಕ್ಷ್ಮೀಪತಿಯು, **ಅಂಗೀಕುರ್ವನ್‌ಸನ್** ಅಂಗೀಕರಿಸುವವನಾಗಿ, **ನಿಖಿಲಾನ್** – ಎಲ್ಲಾ **ಕಿಂಕರೈಶ್ವರ್ಯವಿಘ್ನಾನ್** – ಕೈಂಕರ್ಯ ಸಾಮ್ರಾಜ್ಯ ವಿಘ್ನಗಳನ್ನು ಪ್ರಾಪ್ತಿ ವಿರೋಧಿಗಳಾದ ಸರ್ವಪಾಪಗಳನ್ನೂ **ಕ್ಷಿಪ್ರಂ** –ಕ್ಷಿಪ್ರದಲ್ಲಿಯೇ (ನಾವು ಅಪೇಕ್ಷಿಸಿದ ಕಾಲದಲ್ಲಿಯೇ) **ಕ್ಷಿಪತು** – ಹೋಗಲಾಡಿಸಲಿ. ಈ ಮಂತ್ರದಲ್ಲಿ ಪ್ರಣವವು ಸ್ವರೂಪವನ್ನು ತಿಳಿಸಿ, "ನಮಶ್ಶಬ್ದವು" ಶರಣಾಗತಿಯನ್ನು ತಿಳಿಸಿ ನಾರಾಯಣಾಯ ಎಂಬ ಪದವು ಪುರುಷಾರ್ಥವನ್ನು ತಿಳಿಸುತ್ತದೆ ಎಂಬುದೂ ಕ್ರಮವಾಗಿ ಸೂಚಿತ. "ಅಂಗೀಕುರ್ವನ್ನಲಸಮನಸಾಮಾತ್ಮ ರಕ್ಷಾಭರಂ"ಎಂದು ದ್ವಯಾರ್ಥವು ಸೂಚಿತ. "ಕ್ಷಿಪ್ರಂದೇವಃ ಕ್ಷಿಪತು ನಿಖಿಲಾನ್ ಕಿಂಕರೈಶ್ವರ್ಯ ವಿಘ್ನಾನ್" ಎಂದು ಸರ್ವಪಾಪ ವಿಮೋಚನವನ್ನು ಹೇಳುವುದರಿಂದ ಚರಮ ಶ್ಲೋಕಾಧಿಕಾರಾರ್ಥವೂ ಸೂಚಿತ. ಮೇಲೂ "ಕಿಂಕರೈಶ್ವರ್ಯ ವಿಘ್ನಾನ್‌ಕ್ಷಿಪತು" ಎಂದು ಸ್ವತಂತ್ರ ಪ್ರಪತ್ತಿಪರತ್ವವನ್ನು ಚರಮ ಶ್ಲೋಕಕ್ಕೆ ಗದ್ಯದಲ್ಲಿ ನಿರೂಪಿಸಿರುವುದೂ ಸೂಚಿತ.

ಈ ಪ್ರಥಮ ಶ್ಲೋಕದಿಂದ ಸಂಗ್ರಹವಾಗಿ, ಶ್ರೀಮನ್ಮೂಲಮಂತ್ರದ ಅರ್ಥಜ್ಞಾನದಿಂದ ಸಂಪನ್ನರಾದ ಅಕಿಂಚನಾಧಿಕಾರಿಗಳಿಗೆ ದ್ವಯಮಂತ್ರೋಕ್ತ ಸಪರಿಕರ ಭರಸಮರ್ಪಣದಿಂದ ಕೃತಕೃತ್ಯತೆಯುಂಟಾಗಿ ಚರಮ ಶ್ಲೋಕದಲ್ಲಿ ಸರ್ವಾನಿಷ್ಟನಿವೃತ್ತಿ ಪೂರ್ವಕ ಸ್ವಸಂಕಲ್ಪ ಕಾಲದಲ್ಲಿಯೇ ಸ್ವರೂಪೋಚಿತ ಪರಮಶೇಷಿ ವಿಷಯಕವಾದ ಪರಿಪೂರ್ಣ ನಿತ್ಯಕೈಂಕರ್ಯರೂಪವಾದ ಮುಕ್ತೈಶ್ವರ್ಯವು ಶರಣ್ಯಪ್ರಸಾದ ವಿಶೇಷದಿಂದ ಉಂಟಾಗುತ್ತದೆಯೆಂಬುದು ಹೇಳಲ್ಪಟ್ಟಂತಾಯಿತು.

**ಕಲ್ಯಾಣಮಾವಹತು** ಇತ್ಯಾದಿ. ಹೀಗೆ ಮಂತ್ರಪ್ರತಿಪಾದ್ಯನಾದ ಬದರಿಕಾಶ್ರಮ ವಾಸಿಯಾದ ನಾರಾಯಣನನ್ನು ಅನುಸಂಧಾನ ಮಾಡಿ ಅನಿಷ್ಟ ನಿವೃತ್ತಿಯನ್ನು ಪ್ರಾರ್ಥಿಸಿ ಅವನನ್ನೇ ಇಷ್ಟ ಪ್ರಾಪ್ತಿಯನ್ನೂ ಪ್ರಾರ್ಥಿಸುತ್ತಾರೆ, **ಅಷ್ಟಚಕ್ರಂ** – ಎಂಟು ಚಕ್ರಗಳನ್ನುಳ್ಳ ಆದ್ಯ-ಮೊದಲನೆಯದಾದ,**ಕಮಪಿ** –ಅನಿರ್ವಾಚ್ಯವಾದ, **ರಥಂ** ಮಹಾಭಾರತದಲ್ಲಿ ನಾರಾಯಣೀಯದಲ್ಲಿ"ಅಷ್ಟಚಕ್ರಂ ಹಿ ತದ್ಯಾನಂ ಭೂತಯುಕ್ತಂ ಮನೋಜವಮ್"ಎಂದು ಹೇಳಲ್ಪಟ್ಟ ರಥವನ್ನು **ಅಧಿಗತಃ**– ಪಡೆದವನಾಗಿ, ಅಂದರೆ ತಿರುಮಂತ್ರವು ರಥವೆಂದು ಅದರ ಎಂಟು ಅಕ್ಷರಗಳು ಎಂಟು ಚಕ್ರಗಳೆಂದು, ನಾರಾಯಣನು ಆ ಮಂತ್ರಪ್ರತಿಪಾದ್ಯವಾದ ಅರ್ಥವಾಗಿದ್ದಾನೆಂಬುದೂ ಸೂಚಿತ. **ನರಾದಿಕೇಷು**– ತನ್ನ ದ್ವಿತೀಯಾವತಾರದ ನರನೇ ಮೊದಲಾದ (ಆದಿ ಶಬ್ದದಿಂದ ನಾರದರೂ ವಿವಕ್ಷಿತ) **ಪ್ರಣಿಹಿತೇಷು** – ಬಹಳ **ಸಾವಧಾನವಾಗಿ** ಪ್ರಶಾಂತಚಿತ್ತರಾಗಿ **ಶಿಷ್ಯಲಕ್ಷಣ** ಪರಿಪೂರ್ತಿಯುಳ್ಳವರಿಗೆ **ಕಾರ್ತಯುಗಂ** – ಕೃತಯುಗ ಸಂಬಂಧ

**ಯದಂತಸ್ಥಮಶೇಷೇಣ ವಾಙ್ಮಯಂ ವೇದವೈದಿಕಮ್ ।**
**ತಸ್ಮೈ ವ್ಯಾಪಕ ಮುಖ್ಯಾಯ ಮನ್ತ್ರಾಯ ಮಹತೇ ನಮಃ ॥61॥**
**ಇಹಮೂಲಮನ್ತ್ರ ಸಂವೃತ ಮರ್ಥ ಮಶೇಷೇಣ ಕಶ್ಚಿದನುಭವತಿ ।**
**ಸ್ಫಟಿಕ ತಲನಿಹಿತ ನಿಧಿಮಿವ ದೇಶಿಕದತ್ತೇನ ಚಕ್ಷುಷಾ ಜನ್ತುಃ ॥62॥**

---

ವಾದ, **ಸ್ವಧರ್ಮಂ** - "ನಿವೃತ್ತಿಲಕ್ಷಣಂ ಧರ್ಮಂ ಋಷಿರ್ನಾರಾಯಣೋಽಬ್ರವೀತ್" ಎಂದು ಹೇಳಲ್ಪಟ್ಟ ಸ್ವೋಪ ದಿಷ್ಟನಿವೃತ್ತಿ ಧರ್ಮವನ್ನು **ಪ್ರಖ್ಯಾಪಯನ್** – ವಿಶೇಷವಾಗಿ ಉಪದೇಶಿಸುವನಾಗಿ, **ಬಂಧುಃ**-- "ಮಾತಾ ಪಿತಾ ಭ್ರಾತಾ" ಇತ್ಯಾದಿ ಸಕಲವಿಧ ಬಂಧುವಾದ, **ಬದರಿಕಾಶ್ರಮತಾಪಸಃ**– ಬದರಿಕಾಶ್ರಮದಲ್ಲಿ ತಪಸ್ಸನ್ನು ಮಾಡುತ್ತಿರುವ ನಾರಾಯಣನು, **ಸಃ**– ನಮಗೆ **ಕಲ್ಯಾಣಂ** – ಮಂಗಳವನ್ನು ನಿವೃತ್ತಿಧರ್ಮದಲ್ಲಿ ನಿಷ್ಠೆಯನ್ನು **ಆವಹತು**– ಉಂಟುಮಾಡಲಿ.

ಮಂಗಳ ಭೂಯಸ್ತ್ವವನ್ನು ಈ ಶ್ಲೋಕದಲ್ಲಿ ಅನುಸಂಧಾನ ಮಾಡಿದ್ದರೂ, ಶ್ರೀಮನ್ಮೂಲಮಂತ್ರವು ಬ್ರಹ್ಮ ವಿದ್ಯೆಗಳಾದ ನ್ಯಾಸೋಪಾಸನಗಳಿಗೆ ಅಧಿಕಾರಪೂರಕವೆಂದು ಮುಮುಕ್ಷುತ್ವಾಧಿಕಾರದಲ್ಲಿ ತಿಳಿಸಲ್ಪಟ್ಟ ರೀತಿಯಲ್ಲಿ ಬ್ರಹ್ಮವಿದ್ಯಾವಿರೋಧಿ ಭಗವನ್ನಿಗ್ರಹವು ನಿವೃತ್ತಿಧರ್ಮಾನುಷ್ಠಾನದಿಂದಲೇ ಹೋಗಲಾಡಿಸಲ್ಪಡುತ್ತದೆ, ಎಂಬುದು ಸೂಚಿತ. ಪರಮೈಕಾಂತಿ ಧರ್ಮಗಳು ಕೃತಯುಗ ಧರ್ಮಗಳೆಂದು ಮಹಾಭಾರತಾದ್ಯನೇಕ ಪ್ರದೇಶಗಳಲ್ಲಿ ಪ್ರಸಿದ್ಧಗಳು ಎಂಬುದು ಆಚಾರ್ಯರ ಆಶಯ. **ಬದರಿಕಾಶ್ರಮತಾಪಸಃ** ಎಂದು ಮಂತ್ರ ಋಷಿಯ ಅನುಸ್ಮರಣವೂ ಸಿದ್ಧಿಸುತ್ತದೆ. ಈ ರಹಸ್ಯತ್ರಯಗಳಲ್ಲಿ ಮೂಲಮಂತ್ರ ಚರಮ ಶ್ಲೋಕಗಳು ನ್ಯಾಸೋಪಾಸನ ವಿದ್ಯೆಗಳಿಗೆ ಸಾಧಾರಣ. ಎರಡು ವಿದ್ಯೆಗಳಿಗೂ ನಿರೂಪಕಗಳು. ಮೂಲಮಂತ್ರಾರ್ಥವೈಶ್ಯದ ಪೂರ್ವಕವಾಗಿ ಭಗವದೇಕಾಂತ ನಿವೃತ್ತಿ ಧರ್ಮಾನುಷ್ಠಾನವು ಎರಡು ವಿದ್ಯೆಗಳಿಗೂ ಅಧಿಕಾರಪೂರಕ. ನಿವೃತ್ತಿಧರ್ಮಾನುಷ್ಠಾನದಿಂದ ವಿದ್ಯಾ ವಿರೋಧಿ ಪಾಪಗಳು ತೊಲಗಿ ವಿದ್ಯೆಗಳನ್ನು ಅನುಷ್ಠಿಸಲು ಶಕ್ಯ. ಚರಮ ಶ್ಲೋಕವು,

"ಸುದುಷ್ಕರೇಣ ಶೋಚೇದ್ಯಃ ಯೇನಯೇನೇಷ್ಟಹೇತುನಾ !
ಸ ಸ ತಸ್ಯಾಹಮೇವೇತಿ ಚರಮ ಶ್ಲೋಕ ಸಂಗ್ರಹಃ॥

ಎಂದು ಅನುಗ್ರಹಿಸಿರುವ ರೀತಿಯಲ್ಲಿ, ಅಂಗವಾಗಿಯೂ, ಸ್ವತಂತ್ರವಾಗಿಯೂ ಅವರವರ ಅಪೇಕ್ಷಾನುಸಾರ ಶರಣಾಗತಿಯನ್ನು ವಿಧಿಸಿ, ಎರಡು ಅಧಿಕಾರಿಗಳನ್ನೂ ಸಂಗ್ರಹಿಸಿ ಹೇಳುತ್ತದೆ. ದ್ವಯಮಂತ್ರವು ಒಂದೇ, ಅಕಿಂಚನಾಧಿಕಾರಿಗೆ ಅಸಾಧಾರಣ.

ಅನಂತರ ಅಷ್ಟಾಕ್ಷರಾತ್ಮಕವಾದ ಮಂತ್ರರಾಜನನ್ನು **ಯದಂತಸ್ಥಮ್** ಎಂದಾರಂಭಿಸಿ ಸ್ತೋತ್ರ ಮಾಡುತ್ತಾರೆ. ಅದಾಗಿ **ವೇದವೈದಿಕಮ್** – ವೇದ ರೂಪವಾಗಿಯೂ ವೇದ ಮೂಲಕಗಳಾದ ಉಪಬೃಹ್ಮಣ ರೂಪವಾಗಿಯೂ ಇರುವ, **ವಾಙ್ಮಯಂ** – ವಾಗ್ವಿಕಾರಗಳಾದ ಶಬ್ದಗಳೆಲ್ಲಾ, **ಅಶೇಷೇಣ** – ಶೇಷವಿಲ್ಲದೆ **ಯದಂತಸ್ಥಮ್**–ಯಾವ ಅಷ್ಟಾಕ್ಷರದಲ್ಲಿವೆಯೋ ಅಂದರೆ ತತ್ವಹಿತ ಪುರುಷಾರ್ಥರೂಪ ಸಕಲವೇದಾಂತಾರ್ಥಗಳೂ ಅಷ್ಟಾಕ್ಷರದಲ್ಲಿ ಅಡಗಿವೆ ಎಂದರ್ಥ. **ತಸ್ಮೈ** ತಾದೃಶಾರ್ಥ ಪ್ರಕಾಶಕವಾದ, **ವ್ಯಾಪಕಮುಖ್ಯಾಯ**–ಅಷ್ಟಾಕ್ಷರ, ವಾಸದೇವ ದ್ವಾದಶಾಕ್ಷರ, ವಿಷ್ಣು ಷಡಕ್ಷರ ರೂಪಗಳಾದ ವ್ಯಾಪಕ ಮಂತ್ರಗಳಲ್ಲಿ ಮುಖ್ಯವಾದ **ಮಹತೇ** – ಮಹಾಪ್ರಭಾವದಿಂದ ಕೂಡಿದ **ಮಂತ್ರಾಯ**–"ಮಂತಾರಂತ್ರಾಯತೇಯಸ್ಮಾತ್ ಮಂತ್ರಮಿತ್ಯಭಿಧೀಯತೇ" ಎಂದು ಹೇಳಿರುವಂತೆ ತನ್ನನ್ನು ಜಪಿಸುವವರನ್ನು ರಕ್ಷಿಸುವ ಸ್ವಭಾವವುಳ್ಳ ಅಷ್ಟಾಕ್ಷರ ಮಂತ್ರಕ್ಕೆ, **ನಮಃ**–ನಮಸ್ಕಾರವು.

ಅನಂತರ ಮೂಲಮಂತ್ರದ ರಹಸ್ಯಾರ್ಥಗ್ರಹಣವು ಸತ್ಸಂಪ್ರದಾಯ ಸಿದ್ಧ ಸದಾಚಾರ್ಯ ಕಟಾಕ್ಷ ವಿಶೇಷದಿಂದ ಸಾವಿರದಲ್ಲಿ ಒಬ್ಬನಿಗೆ ಲಭಿಸುತ್ತದೆ, ಎಂದು ಹೇಳಿ ತಾದೃಶ ಸದಾಚಾರ್ಯ ಕಟಾಕ್ಷ ವಿಶೇಷವು ತಮಗೆ ಲಭಿಸಿದೆಯೆಂಬುದನ್ನು **ಇಹಮೂಲ ಮಂತ್ರ ಸಂವೃತಮ್**– ಎಂದು ಆರಂಭಿಸಿ ಅನುಗ್ರಹಿಸುತ್ತಾರೆ. **ಕಶ್ಚಿತ್**

**ವೃತ್ತಾನುವಾದ ಪುರಸ್ಸರಂ ರಹಸ್ಯತ್ರಯಾಣಾಂ ಪದವಾಕ್ಯಯೋಜನಾನಿ ಕ್ರಮೇಣ ಪ್ರತಿಜಾನೀತೇ.**

**ಸತ್ವಸ್ಥರ್ಕ್ಕು ಅನುಸನ್ಧೇಯಙ್ಗಳಾನ ಸಾರತಮಾರ್ಥಂಗಳೈಯುಮ್, ಅವತ್ತಿನುಡೈಯ ಸ್ಥಿರೀಕರಣ ಪ್ರಕಾರಙ್ಗಳೈಯುಮ್ ಪ್ರತಿಪಾದಿತ್ತೋಮ್. ಇವತ್ತೈಯೆಲ್ಲಾಮ್ ಪ್ರಕಾಶಿಪ್ಪಿಕ್ಕಿರ ರಹಸ್ಯತ್ರಯತ್ತಿಲ್ ಪದವಾಕ್ಯ ಯೋಜನೈಹಳಿರುಕ್ಕುಮ್ಪಡಿ ಶೊಲ್ಲುಹಿರೋಮ್.**

**ರಹಸ್ಯತ್ರಯೋಪಪಾದನೇ ಪೌರ್ವಾಪರ್ಯಸ್ಯ ಕಾರಣಮಾಹ.**

**ಅವತ್ತಿಲ್ ಮುರ್ಪಡ ತಿರುಮನ್ತ್ರಂ ಪರಶೇಷತೈಕರಸ ಸ್ವರೂಪಾದಿಹಳೈ ತೆಳಿವಿತ್ತು ಅಮ್ಮುಖತ್ತಾಲೇ ಸಮಸ್ತ ಪ್ರತಿಬಂಧಕ ನಿವೃತ್ತಿ ಪೂರ್ವಕ ಪರಮ ಪುರುಷಾರ್ಥ ಪ್ರಾಪ್ತಿಯಿಲೇ ರುಚಿಯುಮ್ ತ್ವರೈಯುಮ್, ವಿಳೈಪ್ಪಿತ್ತು ಉಪಾಯಾಧಿಕಾರ ಪೂರ್ತ್ತಿಯೈ ಯುಣ್ಡಾಕ್ಕುಮ್. ಇಪ್ಪಡಿ ಅಧಿಕಾರಿಯಾನವನುಡೈಯ ಫಲಾಪೇಕ್ಷಾ ಪೂರ್ವಕೋಪಾಯ ವಿಶೇಷಾನುಷ್ಠಾನ ಪ್ರಕಾರತ್ತೈ ದ್ವಯಮ್ ವಿಶದಮಾಹ**

---

**ಜಂತುಃ**–ಸಾವಿರದಲ್ಲಿ ಒಬ್ಬ ಅದೃಷ್ಟ ಶಾಲಿ ಪುರುಷನು **ದೇಶಿಕದತ್ತೇನ ಚಕ್ಷುಷಾ**–ಸದಾಚಾರ್ಯೋಪದಿಷ್ಟವಾದ ಜ್ಞಾನರೂಪ ಕಣ್ಣಿನಿಂದ, **ಇಹ**– ಈ ಲೋಕದಲ್ಲಿ **ಮೂಲಮಂತ್ರ ಸಂವೃತಮ್**–ಅಷ್ಟಾಕ್ಷರವಾದ ಮೂಲ ಮಂತ್ರದಿಂದ ಮುಚ್ಚಿಡಲ್ಪಟ್ಟ, **ಅರ್ಥಂ** – ಶ್ರೇಯಸ್ಕರ ಪುರುಷಾರ್ಥರೂಪವಾದ ಅರ್ಥವನ್ನು **ಅಶೇಷಣ** – ಶೇಷವಿಲ್ಲದೆ ಎಲ್ಲಾವನ್ನೂ **ಸ್ಫಟಿಕತಲನಿಹಿತ ನಿಧಿಮಿವ** – ಸ್ವಚ್ಛವಾದ ಸ್ಫಟಿಕ ಕಲ್ಲುಗಳನ್ನು ಹಾಕಿರುವ ಸ್ಥಳದಲ್ಲಿ, ಇಡಲ್ಪಟ್ಟ, ನಿಧಿಯ ಹಾಗೆ, **ಅನುಭವತಿ**–ಸಾಕ್ಷಾತ್ಕರಿಸುತ್ತಾನೆ. “ಮನಸಿಮಮಯತ್ಪ್ರಸಾದಾತ್ ವಸತಿ ರಹಸ್ಯತ್ರಯಸ್ಯ ಸಾರೋಽಯಮ್” ಎಂದು ತಮಗೆ ಸದಾಚಾರ್ಯ ಕಟಾಕ್ಷದಿಂದ ಲಭಿಸಿದ ರಹಸ್ಯತ್ರಯಗಳ ಸಾರಗಳಲ್ಲಿ ಒಂದಾದ ಮೂಲ ಮಂತ್ರದ (ಅಷ್ಟಾಕ್ಷರದ) ಅರ್ಥಗಳನ್ನು ಇಲ್ಲಿ ಉಪಪಾದಿಸುವುದಾಗಿ ತಿಳಿಸುತ್ತಾರೆ.

**ರಹಸ್ಯತ್ರಯಗಳ ಮುಖ್ಯ ದೃಷ್ಟಿ.**

ಸಂಗತಿಗೋಸ್ಕರ ಮೇಲೆ ಹೇಳಿದುದನ್ನೂ ಮುಂದೆ ಹೇಳುವುದನ್ನೂ, **ಸತ್ವಸ್ಥರುಕ್ಕು ಅನುಸಂಧೇಯಂಗಳಾನ**–ಇತ್ಯಾದಿ ಅನುಗ್ರಹಿಸುತ್ತಾರೆ. ಅದಾಗಿ ಸ್ವಾತ್ವಿಕರಿಗೆ ಅನುಸಂಧೇಯಗಳಾದ ಸಾರತಮಾರ್ಥಗಳನ್ನು ಅರ್ಥಾನುಶಾಸನ ಭಾಗದಲ್ಲಿ ತಿಳಿಸಿ, ಅವುಗಳ ಸ್ಥಿರೀಕರಣ ಪ್ರಕಾರಗಳನ್ನು ಸ್ಥಿರೀಕರಣ ಭಾಗದಲ್ಲಿ ಆಚಾರ್ಯರು ಪ್ರತಿಪಾದಿಸುವುದಾಗಿ ಅನುಗ್ರಹಿಸುತ್ತಾರೆ. ಅನಂತರ **ಇವಟ್ರೈಯೆಲ್ಲಾಮ್** ಇತ್ಯಾದಿ- ಇವುಗಳನ್ನೆಲ್ಲಾ ಪ್ರಕಾಶಪಡಿಸುವ, ರಹಸ್ಯತ್ರಯದಲ್ಲಿ, ಪದಗಳ ಪರಸ್ಪರ ಅನ್ವಯವೂ, ವಾಕ್ಯಗಳ ಪರಸ್ಪರ ಅನ್ವಯವೂ, ಇರುವ ರೀತಿಯನ್ನು ತಿಳಿಸುತ್ತಾರೆ. ಅವುಗಳಲ್ಲಿ ಮೊಟ್ಟಮೊದಲು, **ತಿರುಮಂತ್ರಮ್**–ಅಷ್ಟಾಕ್ಷರವು, **ಪರಶೇಷತೈಕರಸ ಸ್ವರೂಪಾದಿಹಳೈ** ಇತ್ಯಾದಿ ಪರನಾದ ಸರ್ವೇಶ್ವರನಿಗೆ ಶೇಷನಾಗಿರುವುದೇ ಮುಖ್ಯ ರಸ್ಯವಾದ–ಸ್ವರೂಪ ನಿರೂಪಕ ಧರ್ಮವಾದ ಜೀವಾತ್ಮ ಸ್ವರೂಪ, ಆದಿ ಶಬ್ದದಿಂದ ಸೂಚಿತವಾದ ಉಪಾಯ ಸ್ವರೂಪ, ಫಲ ಸ್ವರೂಪಗಳನ್ನು ತಿಳುವಾಗಿ ನಿರೂಪಿಸಿ, ತನ್ಮೂಲಕ ಸಮಸ್ತ ಪ್ರತಿಬಂಧಕಗಳ ನಿವೃತ್ತಿ ಪೂರ್ವಕ ಪರಮ ಪುರುಷಾರ್ಥ ಪ್ರಾಪ್ತಿಯಲ್ಲಿ ರುಚಿ ಮತ್ತು ತ್ವರೆಯನ್ನು ಉಂಟು ಮಾಡಿ, ಉಪಾಯಾಧಿಕಾರ ಪೂರ್ತಿಯನ್ನು ಉಂಟುಮಾಡುತ್ತದೆ. ಉಪಾಯಾಧಿಕಾರವೆಂದರೆ ಉಪಾಯ ಸಾಧ್ಯವಾದ ಫಲದಲ್ಲಿ ಆಸೆ ಮತ್ತು ಉಪಾಯಾನುಷ್ಠಾನ ಜ್ಞಾನ **ಇಪ್ಪಡಿ ಅಧಿಕಾರಿಯಿನುಡೈಯ** ಇತ್ಯಾದಿ – ಹೀಗೆ ಮೂಲಮಂತ್ರದಿಂದ ಸಿದ್ಧವಾದ ಉಪಾಯಾಧಿಕಾರಿಯಾದವನಿಗೆ – “ಶ್ರೀಮತೇನಾರಾಯಣಾಯ” ಎಂಬಲ್ಲಿ ಶ್ರೀ ವಿಶಿಷ್ಟನಾರಾಯಣನಲ್ಲಿ ಕೈಂಕರ್ಯವನ್ನು ಮಾಡುವುದಕ್ಕೋಸ್ಕರ ಎಂಬ ಫಲಾಪೇಕ್ಷಾಪೂರ್ವಕವಾಗಿ “ಶ್ರೀಮನ್ನಾರಾಯಣಚರಣೌ ಶರಣಂ ಪ್ರಪದ್ಯೇ” – ಎಂದು ಲಕ್ಷ್ಮೀವಿಶಿಷ್ಟನಾರಾಯಣನ ಎರಡು ಪಾದಗಳನ್ನು ಉಪಾಯವಾಗಿ ಆಶ್ರಯಿಸುತ್ತೇನೆ, ಎಂದು ಉಪಾಯ ವಿಶೇಷದ ಅನ

ಪ್ರಕಾಶಿಪ್ಪಿಕ್ಕುಮ್. ಇವ್ವುಪಾಯ ವಿಶೇಷತ್ತೈವಿಧಿಕ್ಕಿರದು ಚರಮಶ್ಲೋಕಮ್. ಇವೈ ಮೂನ್ರಿಲುಮ್ ತನಿತ್ತನಿಯೇ ಎಲ್ಲಾ ಅರ್ಥಙ್ಗಳುಮ್ ಶಾಬ್ದಮಾಹವುಮ್, ಆರ್ಥಮಾಹವುಮ್ ಕಾಣಲಾಮಾಹಿಲುಮ್ ಓರೊನ್ರಿಲೇ ಓರೊನ್ರುಕ್ಕು ನೋಕ್ಕಾಯಿರುಕ್ಕುಮ್.

### ರಹಸ್ಯತ್ರಯೀ ಅನ್ಯೋನ್ಯ ವಿವರಣ ವಿವರಣೀಯ ಭಾವೋಕ್ತಿ.

ತಿರುಮನ್ತ್ರತ್ತಿಲ್ ಪ್ರಥಮ ಪದತ್ತಿಲ್ ಪ್ರಥಮಾಕ್ಷರತ್ತಿಲೇ ಸಂಕ್ಷಿಪ್ತಮಾನ ಶರಣ್ಯ ಪರ(ತ)ತ್ವತ್ತೈಯುಮ್ ಇದಿಲ್ ಮಧ್ಯಮ ತೃತೀಯಪದಙ್ಗಳಿಲೇ ಪತಿಪನ್ನಮಾನ ಉಪಾಯೋಪೇಯಙ್ಗಳೈಯುಮ್ ಅಡೈವೇ ವಿಶದಮಾಕ್ಕುಹಿರದು ದ್ವಯಮ್.

ಇದಿಲ್ "ಪ್ರಪದ್ಯೇ" ಎನ್ಗಿರ ಪದತ್ತಿಲ್ ಉತ್ತಮನಾಲೇ ವಿವಕ್ಷಿತಮಾನ ಅಧಿಕಾರಿ ವಿಶೇಷತ್ತೈಯುಮ್, ಅರ್ಥಸಿದ್ಧಮಾನ ಉಪಾಯಾನ್ತರ ನೈರಪೇಕ್ಷ್ಯತ್ತೈಯುಮ್, ಉಪೇಯತ್ತಿಲ್ ನಮಶ್ಶಬ್ದ ಸಂಕ್ಷಿಪ್ತಮಾನ ವಿರೋಧಿ ನಿವೃತ್ತ್ಯಂಶತ್ತೈಯುಮ್ ವೆಳಿಯಿಡುಹಿರದು ಚರಮಶ್ಲೋಕಮ್.

---

ಷ್ಠಾನ ಪ್ರಕಾರವನ್ನು ದ್ವಯಮಂತ್ರವು ವಿಶದವಾಗಿ ಪ್ರಕಾಶ ಪಡಿಸುತ್ತದೆ. **ಇವ್ವುಪಾಯ ವಿಶೇಷತ್ತೈ** ಇತ್ಯಾದಿ– ಈ ಉಪಾಯ ವಿಶೇಷವನ್ನು ಚರಮ ಶ್ಲೋಕವು ವಿಧಿಸುತ್ತದೆ. **ಇವೈಮೂನ್ರಿಲುಮ್** ಇತ್ಯಾದಿ –ಈ ಮೂರು ಮಂತ್ರಗಳಲ್ಲಿಯೂ ಪ್ರತ್ಯೇಕವಾಗಿ ಎಲ್ಲಾ ಅರ್ಥಗಳನ್ನು ಶಾಬ್ದವಾಗಿಯೂ ಆರ್ಥವಾಗಿಯೂ ತಿಳಿಯಬಹುದಾದರೂ ಒಂದೊಂದು ಮಂತ್ರದಲ್ಲಿ ಒಂದೊಂದು ವಿಷಯಕ್ಕೆ ದೃಷ್ಟಿ. ಅಂದರೆ ಮೂಲಮಂತ್ರವು ಅಧಿಕಾರವನ್ನು ಸಂಪಾದಿಸಿ ಕೊಡುತ್ತದೆ. ದ್ವಯಮಂತ್ರವು ಅನುಷ್ಠಾನ ಪ್ರಕಾರವನ್ನು ಪ್ರಕಾಶಪಡಿಸುತ್ತದೆ. ಚರಮಶ್ಲೋಕವು ಪ್ರಪತ್ತಿ ವಿಧಾಯಕ **ತಿರುಮಂತ್ರತ್ತಿಲ್** ಇತ್ಯಾದಿ – ತಿರುಮಂತ್ರದಲ್ಲಿ ಪ್ರಥಮ ಪದದಲ್ಲಿರುವ "ಅ" ಎಂಬ ಪ್ರಥಮಾಕ್ಷರದಲ್ಲಿ ಶರಣ್ಯ ಪರತತ್ವವು ಸಂಕ್ಷಿಪ್ತವಾಗಿದೆ **"ಶರಣ್ಯ ಪರತ್ವತ್ತೈ"** ಎಂಬ ಪಾಠವಾದರೆ ಶರಣ್ಯನ ಜಗತ್ಕಾರಣತ್ವ ರಕ್ಷಕತ್ವಾದ್ಯುತ್ಕರ್ಷವನ್ನು ಎಂದು ಅರ್ಥ. **ಇದಿಲ್ ಮಧ್ಯಮ ತೃತೀಯ ಪದಂಗಳಿಲ್** ಇತ್ಯಾದಿ ಮಧ್ಯಮಪದವಾದ ನಮಶ್ಶಬ್ದದಲ್ಲಿಯೂ, 'ನಾರಾಯಣ' ಎಂಬ ತೃತೀಯ ಪದದಲ್ಲಿಯೂ **ಪ್ರತಿಪನ್ನಮಾನ** – ಸಂಕ್ಷಿಪ್ತವಾಗಿ ಹೇಳಲ್ಪಟ್ಟ ಉಪಾಯ–ಪ್ರಪತ್ತಿ, ಉಪೇಯ-ಪ್ರಾಪ್ಯನಾದ ನಾರಾಯಣನು ಇವುಗಳನ್ನು **ಅಡೈವೇ**-ಕ್ರಮವಾಗಿ ದ್ವಯಮಂತ್ರವು ವಿಶದವಾಗಿ ತಿಳಿಸುತ್ತದೆ.

**ಇದಿಲ್** – ಈ ದ್ವಯಮಂತ್ರದಲ್ಲಿ ಘಟಕವಾದ, **ಪ್ರಪದ್ಯೇ** ಎಂಬ ಪದದಲ್ಲಿ **ಉತ್ತಮನಾಲೇ** – ಉತ್ತಮ ಪುರುಷದಿಂದ, ವಿವಕ್ಷಿತವಾದ, **ಅಧಿಕಾರಿ ವಿಶೇಷತ್ತೈಯುಮ್** – ಅನನ್ಯ ಶರಣನಾದ ಅಕಿಂಚನಾಧಿಕಾರಿಯನ್ನೂ, **ಅರ್ಥಸಿದ್ಧಮಾನ** ಇತ್ಯಾದಿ. ನಾರಾಯಣನ ಚರಣಗಳನ್ನು ಉಪಾಯವಾಗಿ ಆಶ್ರಯಿಸುತ್ತೇನೆಂದರೆ, ಚರಣವ್ಯತಿರಿಕ್ತಗಳಾದ ಉಪಾಯಗಳಲ್ಲಿ ಅಪೇಕ್ಷೆಯಿಲ್ಲವೆಂಬುದು, "ಸರ್ವಂವಾಕ್ಯಂಸಾವಧಾರಣಂ" ಎಂಬ ನ್ಯಾಯದಿಂದ ಅರ್ಥಾತ್ ಸಿದ್ಧವಲ್ಲವೇ. ಆ ರೀತಿಯಲ್ಲಿ ಉಪಾಯಾಂತರದಲ್ಲಿ ನೈರಪೇಕ್ಷೆಯೂ, **ಉಪೇಯತ್ತಿಲ್** ವಿರೋಧಿ ನಿವೃತ್ತಿಪೂರ್ವಕ ಇಷ್ಟಪ್ರಾಪ್ತಿ ರೂಪವಾದ ಉಪೇಯದಲ್ಲಿ, **ನಮಶ್ಶಬ್ದಸಂಕ್ಷಿಪ್ತಮಾನ** – ಇತ್ಯಾದಿ ದ್ವಯಮಂತ್ರದಲ್ಲಿ ಉತ್ತರಖಂಡದಲ್ಲಿ ನಮಶ್ಶಬ್ದ ಸಂಕ್ಷಿಪ್ತವಾದ, **ವಿರೋಧಿ ನಿವೃತ್ತ್ಯಂಶವನ್ನೂ ವೆಳಿಯಿಡರಹದು ಚರಮಶ್ಲೋಕಮ್** – ಅದಾಗಿ ಚರಮ ಶ್ಲೋಕದಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬ ಪದಗಳಲ್ಲಿ ದ್ವಯಮಂತ್ರದಲ್ಲಿ ಉತ್ತಮಪುರುಷದಿಂದ ಹೇಳಲ್ಪಟ್ಟ ಅಧಿಕಾರಿಯು ಸರ್ವಧರ್ಮಗಳನ್ನು ಮಾಡಲನರ್ಹನೆಂಬ ಆಕಿಂಚನ್ಯಾಂಶವನ್ನು ತಿಳಿಸುತ್ತದೆ. "ಮಾಮೇಕಂ ಶರಣಂವ್ರಜ" ಎಂಬ ಪದಗಳು ಅರ್ಥಸಿದ್ಧವಾದ ಉಪಾಯಾಂತರ ನೈರಪೇಕ್ಷ್ಯವನ್ನು ತಿಳಿಸುತ್ತವೆ. ಉಪೇಯದಲ್ಲಿ ನಮಶ್ಶಬ್ದಸಂಕ್ಷಿಪ್ತವಾದ ವಿರೋಧಿನಿವೃತ್ತ್ಯಂಶವನ್ನು "ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂಬ ಪದಗಳು ಪ್ರಕಾಶಪಡಿಸುತ್ತವೆ.

ರಹಸ್ಯತ್ರಯಸ್ಯ ಉಪಜೀವ್ಯತ್ವೋಪಪಾದನಮ್

**ಇವೈ ಮೂನ್ರುಮ್ ನಮಕ್ಕು ಜ್ಞಾನಾನುಷ್ಠಾನ ಫಲನಿದಾನಙ್ಗಳಾಯ್ ಕ್ಕೊಂಡು ಧಾರಕ ಪೋಷಕ ಭೋಗ್ಯಙ್ಗಳ್.**

**1) "ವ್ಯಕ್ತಂ ಹಿ ಭಗವಾನ್ ದೇವ ಸ್ಸಾಕ್ಷಾನ್ನಾರಾಯಣ ಸ್ಸ್ವಯಮ್ ।**
**ಅಷ್ಟಾಕ್ಷರ ಸ್ವರೂಪೇಣ ಮುಖೇಷು ಪರಿವರ್ತತೇ ॥"**

**ಎನ್ಗಿರಪಡಿಯೇ ದೇಶಿಕಜಿಹ್ವೈಯಿಲೇ ಇರುನ್ದು. ಶಿಷ್ಯ ಹೃದಯ ಗುಹಾಂಧಕಾರತ್ತೈ ಕ್ಕಳೈತ್ತು ಪರ ಶೇಷತ್ವೈಕರಸಮಾನ ಪರಿಶುದ್ಧ ಸ್ವರೂಪತ್ತೈ ವೆಳಿಯಿಟ್ಟು ಸತ್ತಾಲಾಭತ್ತೈ ಪ್ಪಣ್ಣುಹೈಯಾಲೇ ತಿರುಮನ್ತ್ರಮ್ ಧಾರಕಮ್. ಚರಮೋಪಾಯತ್ತಿಲೇ ಪ್ರವರ್ತಿಕ್ಕುಮ್ಪಡಿಯಾನ ಜ್ಞಾನವಿಶೇಷೋಪಚಯ ಹೇತುವಾಹೈಯಾಲೇ ಶ್ರೋತವ್ಯಶೇಷಮಿಲ್ಲಾದಪಡಿ ಉಪಾಯೋಪದೇಶ ಪರ್ಯವಸಾನಮಾನ ಚರಮ**

---

## ಅಷ್ಟಾಕ್ಷರ ಚರಮಶ್ಲೋಕ ಮತ್ತು ದ್ವಯಮಂತ್ರಗಳು ಧಾರಕಪೋಷಕ ಭೋಗ್ಯಗಳು.

ಇವೈಮೂನ್ರುಮ್ ಇತ್ಯಾದಿ ಈ ರಹಸ್ಯಗಳು ಮೂರೂ ಮುಮುಕ್ಷುಗಳಾದ ನಮಗೆ ಜ್ಞಾನಾನುಷ್ಠಾನ ಫಲನಿದಾನಂಗಳಾಯ್‌ಕೊಂಡು ತಿರುಮಂತ್ರವು ಸ್ವಸ್ವರೂಪ ಜ್ಞಾನಕ್ಕೆಕಾರಣವಾಗಿಯೂ ಚರಮಶ್ಲೋಕವು ಪ್ರಪತ್ತಿಯನ್ನು ವಿಧಿಸುವುದರಿಂದ ಅನುಷ್ಠಾನಕ್ಕೆ ಕಾರಣವಾಗಿಯೂ ದ್ವಯಮಂತ್ರವು ಪ್ರಥಮೋಚ್ಚಾರಣದಿಂದ ಫಲಕ್ಕೆ ಉಪಾಯವಾಗಿ ದ್ವಿತೀಯಾದ್ಯುಚ್ಚಾರಣದಿಂದ ಸರ್ವದಾಭೋಗ್ಯವಾಗಿರುವುದಕ್ಕೆ ಕಾರಣವಾಗಿಯೂ, (ನಿದಾನ – ಕಾರಣ) ಧಾರಕ ಪೋಷಕ ಭೋಗ್ಯಗಳು.

ತಿರುಮಂತ್ರವು ಹೇಗೆ ಧಾರಕವೆಂಬುದನ್ನು 1) "**ವ್ಯಕ್ತಂಹಿ**" ಎಂದಾರಂಭಿಸಿ ಉಪಪಾದಿಸುತ್ತಾರೆ. ಭಗವಂತನಾದ ನಾರಾಯಣನು ಅಷ್ಟಾಕ್ಷರಪ್ರತಿಪಾದ್ಯನಾಗಿ ಆ ಮಂತ್ರವನ್ನು ಜಪಿಸುವವರ ಬಾಯಲ್ಲಿ ಪರಿವರ್ತಿಸುತ್ತಿರುತ್ತಾನೆ. ಎಂಬಂತೆ, **ದೇಶಿಕಜಿಹ್ವೈಯಿಲೇ ಇರುಂದು** – ಆಚಾರ್ಯನ ನಾಲಿಗೆಯಲ್ಲಿದ್ದು, ಉಪದೇಶಿಸಲ್ಪಟ್ಟು **ಶಿಷ್ಯಹೃದಯಗುಹಾಂಧಕಾರತ್ತೈಕ್ಕಳೈತ್ತು** – ಶಿಷ್ಯನ ಹೃದಯ ಗುಹೆಯಲ್ಲಿರುವ ಅಂಧಕಾರವನ್ನು ಹೋಗಲಾಡಿಸಿ **ಪರಶೇಷತ್ವೈಕರಸಮಾನ** – ಭಗವಂತನಿಗೆ ಶೇಷಭೂತನಾಗಿರುವುದೇ ರಸಮಯವಾಗಿದೆ ಎಂಬಜ್ಞಾನವು ಉಂಟಾಗಿ **ಪರಿಶುದ್ಧತ್ಮಸ್ವರೂಪತ್ತೈ** ಇತ್ಯಾದಿ, ಪ್ರಕೃತಿವಿಯುಕ್ತವಾದ ಆತ್ಮ ಸ್ವರೂಪವನ್ನು ತಿಳಿಸಿ, **ಸತ್ತಾಲಾಭತ್ತೈ** ಅಸತ್ಕಲ್ಪನಾದ ಇವನಿಗೆ ಶೇಷತ್ವ ಜ್ಞಾನವನ್ನುಂಟು ಮಾಡುವುದರಿಂದ ಸ್ವಸತ್ತಾಲಾಭವನ್ನು–ಜೀವನ ಇರುವಿಕೆಯ ಪ್ರಯೋಜನವನ್ನು **ಪಣ್ಣುಹೈಯಾಲೇ**–ಉಂಟು ಮಾಡುವುದರಿಂದ,ತಿರುಮಂತ್ರವು ಧಾರಕವು. **ಚರಮೋಪಾಯತ್ತಿಲೇ** -ಚರಮೋಪಾಯಪ್ರಪತ್ತಿ. ಕರ್ಮಯೋಗ,ಜ್ಞಾನಯೋಗ, ಭಕ್ತಿಯೋಗಪ್ರಪತ್ತಿಯೋಗಗಳಲ್ಲಿ ಪ್ರಪತ್ತಿಯೋಗವು ಚರಮೋಪಾಯ. ಕರ್ಮಯೋಗ ಜ್ಞಾನಯೋಗಗಳು ಭಕ್ತಿಯೋಗಕ್ಕೆ ಅಂಗವಾಗಿದ್ದರೂ, ಸಾಕ್ಷಾದುಪಾಯಗಳಾದ ಭಕ್ತಿಪ್ರಪತ್ತಿಗಳೊಡನೆ ಅವುಗಳನ್ನು ಪರಗಣಿಸುವುದು, ಅವುಗಳ ಪ್ರಾಶಸ್ತ್ಯವನ್ನು ಸೂಚಿಸುವುದಕ್ಕೋಸ್ಕರವಷ್ಟೇ ಚರಮೋಪಾಯವಾದ ಪ್ರಪತ್ತಿಯೋಗದಲ್ಲಿ ಪ್ರವರ್ತಿಸುವಂತಹ ಜ್ಞಾನವಿಶೇಷಕ್ಕೆ - ಭಗವಂತನೊಬ್ಬನೇ ಉಪಾಯವೆಂಬ ಜ್ಞಾನ. ಅದರ **ಉಪಚಯ ಹೇತುವಾದ**–ಅಸ್ಮಾದಿಗಳಿಂದ ಧರಿಸಲ್ಪಟ್ಟ ಶರೀರವುಳ್ಳವನಿಗೆ ಹಾಲು,ತುಪ್ಪ ಮೊದಲಾದವು **ಪೋಷಕವಾಗುವಂತೆ** ಸ್ವರೂಪ ಜ್ಞಾನದಿಂದ ಆತ್ಮಸತ್ತೆಯನ್ನು ಪಡೆದವನಿಗೆ ಉಪಾಯಾನುಷ್ಠಾನ ಮಾಡುವಂತೆ ಪ್ರೇರೇಪಿಸಿ ಆ ಜ್ಞಾನವನ್ನುಂಟು ಮಾಡುವುದರಿಂದ **ಉಪಾಯೋಪದೇಶಪರ್ಯವಸಾನಮಾನ** ಇತಿ-ಕರ್ಮ

**ಶ್ಲೋಕವ್ ಪೋಷಕವ್. ಸಕೃದುಚ್ಚಾರಣತ್ತಾಲೇ ಪರಮ ಪುರುಷಾರ್ಥ ಹೇತುವಾಯ್ ಕ್ಕೊಂಡು ಸದಾನುಸಂಧಾನತ್ತಾಲೇ ಕೃತಾರ್ಥನಾಕ್ಕುಹೈಯಾಲೇ ದ್ವಯಂಭೋಗ್ಯವ್.**

**ಅಷ್ಟಾಕ್ಷರ ಮಹಾಮನ್ತ್ರಸ್ಯ ಋಷಿಚ್ಛಂದೋ ದೇವತಾದಿ ವಿಷಯಾಃ.**

**ಇವತ್ತಿಲ್ ತಿರುಮನ್ತ್ರತ್ತಿನುಡೈಯ ಋಷಿಚ್ಛಂದೋ ದೇವತಾಬೀಜ ಶಕ್ತಿವರ್ಣ ವಿನಿಯೋಗಸ್ಥಾನ ನ್ಯಾಸಾದಿಹಳ್ ಅನ್ವೋಕಲ್ಪ ಸಂಪ್ರದಾಯಙ್ಗಳುಕ್ಕೇಡಾಹ ಕ್ಕಣ್ಡುಕೊಳ್ವದು.**

**ಮೂಲ ಮನ್ತ್ರಸ್ಯ ಮಾಹಾತ್ಮ್ಯಂ ಉಪನಿಷದಾದ್ಯನೇಕ ಶಾಸ್ತ್ರೇಷು ಪ್ರಸಿದ್ಧಮ್.**

**ಇತ್ತಿರುಮನ್ತ್ರಮಾಥರ್ವಣ ಕಠಾದ್ಯುಪನಿಷತ್ತುಕ್ಕಳಿಲುಮ್, ಮತ್ತುಮ್ ಮನ್ವಾದಿ (ಸರ್ವ) ಶಾಸ್ತ್ರಙ್ಗಳಿಲುಮ್, ನಾರಾಯಣಾತ್ಮಕ ಹೈರಣ್ಯಗರ್ಭಾದಿ ನಾರದೀಯ ಬೋಧಾಯನಾದಿ ಬಹುವಿಧ ಕಲ್ಪಙ್ಗಳಿಲುಮ್, ಪ್ರಸಿದ್ಧ ವೈಭವಮಾಯಿರುಕ್ಕುಮ್.**

---

ಜ್ಞಾನ ಭಕ್ತಿಯೋಗಗಳನ್ನು ಉಪದೇಶಿಸಿ ಕೊನೆಯಲ್ಲಿ ಪ್ರಪತ್ತಿಯೋಗಗಳನ್ನು ಉಪದೇಶಿಸಿ ರುವುದರಿಂದ ಚರಮ ಶ್ಲೋಕವು ಉಪಾಯೋಪದೇಶದ ಎಲ್ಲೆ. ಅಂಥಹ ಚರಮ ಶ್ಲೋಕವು ಪೋಷಕ. **ಸಕೃದುಚ್ಚಾರಣತ್ತಾಲೇ**– ಇತ್ಯಾದಿ ಮೋಕ್ಷಾರ್ಥವಾಗಿ ಸಂಕಲ್ಪವನ್ನು ಮಾಡಿಕೊಂಡು ಒಂದು ಸಲ ಉಚ್ಚಾರಣೆ ಮಾಡುವುದರಿಂದ ಮೋಕ್ಷ ರೂಪ ಪರಮ ಪುರುಷಾರ್ಥಕ್ಕೆ ಕಾರಣವಾಗಿ ಅನಂತರ ಭೋಗ ರೂಪವಾಗಿ ಸದಾನುಸಂಧಾನದಿಂದ **ಕೃತಾರ್ಥನ್** ಕೃತಕೃತ್ಯನನ್ನಾಗಿ ಮಾಡುವುದರಿಂದ ದ್ವಯಮಂತ್ರವು ಭೋಗ್ಯ. ಶರೀರಕ್ಕೆ ಅನ್ನವು ಧಾರಣ ಹೇತುವಾಗಿ ದಧಿ ಕ್ಷೀರ ಮೊದಲಾದವು ಪೋಷಕಗಳಾಗಿ, ಹೂಮಾಲೆ, ಚಂದನಾದಿಗಳು ಭೋಗ್ಯವಾಗುವಂತೆ, ಅಷ್ಟಾಕ್ಷರವು ಶೇಷ ಶೇಷಿ ಜ್ಞಾನೋಪದೇಶದಿಂದ ಧಾರಕ. ಚರಮ ಶ್ಲೋಕವು ಉಪಾಯ ಜ್ಞಾನವನ್ನುಂಟು ಮಾಡುವುದರಿಂದ **ಪೋಷಕ.** ದ್ವಯಮಂತ್ರ ಪ್ರಥಮೋಚ್ಚಾರಣದಲ್ಲಿ ಮೋಕ್ಷ ಹೇತುವಾಗಿ ನಂತರ ಉಚ್ಚಾರಣೆ ಮಾಡುವುದರಿಂದ ಭೋಗ್ಯವಾಗುತ್ತದೆ ಎಂದು ತಾತ್ಪರ್ಯ.

**ಇವಟ್ರಿಲ್ ತಿರುಮಂತ್ರತ್ತಿನುಡೈಯ** ಇತ್ಯಾದಿ–

ಅವಿದಿತ್ವಾ ಋಷಿಚ್ಛಂದೋ ದೈವತಂ ಯೋಗಮೇವಚ ।
ಯೋ ಯಾಜಯೇಜ್ಜಪೇದ್ವಾಪಿ ಪಾಪೀಯಾನ್ ಜಾಯತೇತು ಸಃ ॥

ಎಂದು ಹೇಳಿರುವುದರಿಂದ ಮಂತ್ರಗಳ ಋಷಿ ಛಂದಸ್ಸು ದೇವತೆಗಳೇ ಮೊದಲಾದವನ್ನು ಅವಶ್ಯ ತಿಳಿಯಬೇಕು ಆ ರೀತಿಯಲ್ಲಿ ತಿರುವಷ್ಟಾಕ್ಷರದ ಋಷಿ, ಛಂದಸ್ಸು, ದೇವತೆ, ಬೀಜ, ಶಕ್ತಿವರ್ಣ ವಿನಿಯೋಗಗಳನ್ನೂ ಸ್ಥಾನ, ನ್ಯಾಸಾದಿಗಳನ್ನೂ ಆಯಾಯಾ ಕಲ್ಪ ಸಂಪ್ರದಾಯಗಳಿಗೆ ಅನುಗುಣವಾಗಿ ತಿಳಿದುಕೊಳ್ಳಬೇಕು. ಆ ರೀತಿಯಲ್ಲಿ ಶ್ರೀ ಮದಷ್ಟಾಕ್ಷರ ಮಂತ್ರಕ್ಕೆ ಬದರಿಕಾಶ್ರಮ ವಾಸಿಯಾದ ಶ್ರೀಮನ್ನಾರಾಯಣನು ಋಷಿ, ಗಾಯತ್ರೀ ಛಂದಸ್ಸು, ಪರಮಾತ್ಮನಾದ ಶ್ರೀಮನ್ನಾರಾಯಣನೇ ಮಂತ್ರ ಪ್ರತಿಪಾದ್ಯ ದೇವತೆ. ಅಂ–ಬೀಜಾಕ್ಷರ, ಆಯ ಎಂಬುದು ಶಕ್ತಿ, ಶುಕ್ಲವರ್ಣ. ಭೋಗಾರ್ಥವಾಗಿಯೂ ಅಂದರೆ ಐಹಿಕ ಫಲಗಳಿಗೂ ಮೋಕ್ಷಾರ್ಥವಾಗಿಯೂ ವಿನಿಯೋಗ. ವೈಕುಂಠವು ಕ್ಷೇತ್ರವೆಂಬ ಸ್ಥಾನ. ಆದಿ ಶಬ್ದದಿಂದ ಅಂಗನ್ಯಾಸ ಕರನ್ಯಾಸಗಳು, ಕೀಲಕ, ಕವಚ, ಅಸ್ತ್ರ, ಮುದ್ರಾದಿಗಳು ಗ್ರಾಹ್ಯ.

**ಅಷ್ಟಾಕ್ಷರದ ಹಿರಿಮೆ**

ಈ ಅಷ್ಟಾಕ್ಷರ ಮಂತ್ರಕ್ಕೆ ಇತರ ಮಂತ್ರಗಳಿಗಿಂತ, "ಮಂತ್ರಾಯ ಮಹತೇನಮಃ", ಎಂದು ಹೇಳಲ್ಪಡುವ ಮಹಿಮೆಗೆ ಕಾರಣವೇನೆಂದರೆ, ಅದನ್ನು **ಇತ್ತಿರುಮಂತ್ರವು**–ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ **ಈ ಅಷ್ಟಾ**

**ವ್ಯಾಪಕ ಮನ್ತ್ರಾಣಾಂ ಮಧ್ಯೇಮೂಲಮನ್ತ್ರೋ ಪರಮೋ ಮನ್ತ್ರಃ**

**ಮನ್ತ್ರಾನ್ತರಙ್ಗಳಿಲ್ಕಾಟ್ಟಿಲ್ ಭಗವನ್ಮನ್ತ್ರಙ್ಗಳ್ ಅಧಿಕಮಾನಾಪ್ಪೋಲವುಮ್, ಅನಂತಙ್ಗಳಾನ ಭಗವನ್ಮಂತ್ರಙ್ಗಳ್ ತನ್ನಿಲ್ ವ್ಯಾಪಕತ್ರಯ ಮಧಿಕಮಾನಾಪ್ಪೋಲವುಮ್,**

1) ಮನ್ತ್ರಾಣಾಂ ಪರಮೋ ಮನ್ತ್ರೋ ಗುಹ್ಯಾನಾಂ ಗುಹ್ಯಮುತ್ತಮಮ್ ।

ಪವಿತ್ರಂಚ ಪವಿತ್ರಾಣಾಂ ಮೂಲಮನ್ತ್ರ ಸ್ಸನಾತನಃ" ಎನ್ಗೈಯಾಲೇ ವ್ಯಾಪಕ ಮನ್ತ್ರಙ್ಗಳೆಲ್ಲಾತ್ತಿಲುಮ್ ಅ...ಕಮಾಯ್ ಸರ್ವವೇದಙ್ಗಳುಕ್ಕುಮ್ ಸಾರಮಾಯ್ ಸರ್ವಾನಿಷ್ಟನಿವರ್ತನ ಕ್ಷಮಮಾಯ್ ಸರ್ವಪುರುಷಾರ್ಥಙ್ಗಳುಕ್ಕುಮ್ ಸಾಧಕಮಾಯ್, ಸರ್ವೋಪಾಯಙ್ಗಳುಕ್ಕುಮ್ ಉಪಕಾರಕಮಾಯ್, ಸರ್ವವರ್ಣಂಗಳುಕ್ಕುಮ್ ತನ್ತಮ್ಮಧಿಕಾರಾನು ಗುಣಮಾಹ ವೈದಿಕರೂಪತ್ತಾಲುಮ್ ತಾನ್ತ್ರಿಕ ರೂಪತ್ತಾಲುಮ್ ಉಪಜೀವ್ಯಮಾಯ್, ವ್ಯಾಪ್ಯವ್ಯಾಪಕ ಸರ್ವತತ್ವ ಕಂಠೋಕ್ತಿಮತ್ತಾಯ್ ಸರ್ವಮನ್ತ್ರ ನೈರ

---

ಕ್ಷರ ಮಂತ್ರವು, ಅಥರ್ವಣ ವೇದದಲ್ಲಿಯೂ, ಕಠೋಪನಿಷತ್ತಿನಲ್ಲಿಯೂ, ಆದಿ ಶಬ್ದದಿಂದ ಸುಬಾಲೋಪ ನಿಷತ್ತು ಗ್ರಾಹ್ಯ. ಆ ಉಪನಿಷತ್ತಿನಲ್ಲಿಯೂ ಮತ್ತು ಮನುಧರ್ಮಶಾಸ್ತ್ರವೇ ಮೊದಲಾದ ಸ್ಮೃತಿಗಳಲ್ಲಿಯೂ ನಾರಾಯಣಾತ್ಮಕ ಹೈರಣ್ಯಗರ್ಭನಾರದೀಯ ಬೋಧಾಯನಾದಿ ಬಹು ವಿಧ ಕಲ್ಪಗಳಲ್ಲಿಯೂ, ಸುಪ್ರಸಿದ್ಧ ವೈಭವದಿಂದ ಕೂಡಿದುದಾಗಿದೆ

**ಮಂತ್ರಾಂತರಗಳಿಲ್ ಕಾಟ್ಟಿಲ್**–ಇತ್ಯಾದಿ - ಇತರ ಮಂತ್ರಗಳಿಗಿಂತ ಭಗವನ್ಮಂತ್ರಗಳು ಉತ್ಕೃಷ್ಟಗಳಾದಂತೆ, •ಅನಂತಗಳಾದ ಭಗವನ್ಮಂತ್ರಗಳಲ್ಲಿ, ಮೂರು ವ್ಯಾಪಕ ಮಂತ್ರಗಳು ಅಧಿಕವಾದಂತೆ, 1) **ಮಂತ್ರಾಣಾಂಪರಮೋಮಂತ್ರಃ**–ಇತ್ಯಾದಿಯಾಗಿ ಸನಾತನವಾದ ಮೂಲಮಂತ್ರವು ಪರಮ ಉತ್ಕೃಷ್ಟವಾದ ಮಂತ್ರವೆಂದೂ ಗೋಪನೀಯಗಳಾದ ಮಂತ್ರಗಳಲ್ಲಿ ಬಹಳ ಗೋಪನೀಯವಾದ ಮಂತ್ರವೆಂದೂ ಪವಿತ್ರವಾದ ಮಂತ್ರಗಳಲ್ಲಿ ಪವಿತ್ರವಾದದ್ದೆಂದೂ ಹೇಳಿರುವುದರಿಂದ, **ವ್ಯಾಪಕಮಂತ್ರಗಳೆಲ್ಲಾತ್ತಿಲುಮ್** ಅಷ್ಟಾಕ್ಷರ, ವಿಷ್ಣು ಷಡಕ್ಷರ ಮತ್ತು ವಾಸುದೇವ ದ್ವಾದಶಾಕ್ಷರ, ವೆಂಬ ವ್ಯಾಪಕ ಮಂತ್ರಗಳೆಲ್ಲಾದವುಗಳಿಗಿಂತ, ಮೇಲಾಗಿ, ಸರ್ವವೇದಸಾರವಾಗಿ. ಸರ್ವಾನಿಷ್ಟಗಳನ್ನೂ ಹೋಗಲಾಡಿಸತಕ್ಕದುದಾಗಿ, ಜಪ ಮಾಡುವುದರಿಂದ ಸರ್ವ ಪುರುಷಾರ್ಥಗಳನ್ನೂ ಸಾಧಿಸಿ ಕೊಡತಕ್ಕದುದಾಗಿ, **ಸರ್ವೋಪಾಯಂಗಳುಕ್ಕು ಉಪಕಾರಕಮಾಯ್**–ಸ್ವರೂಪ ಜ್ಞಾನವನ್ನು ಉಂಟುಮಾಡಿ ಕರ್ಮಯೋಗ, ಜ್ಞಾನಯೋಗವೇ ಮೊದಲಾದ ಎಲ್ಲಾ ಉಪಾಯಗಳಿಗೂ ಉಪಕಾರಕವಾಗಿ. **ಸರ್ವವರ್ಣಂಗಳುಕ್ಕುಮ್**–ಇತ್ಯಾದಿ ಎಲ್ಲಾ ಜಾತೀಯರಿಗೂ ಅವರವರ ಅಧಿಕಾರಾನುಗುಣವಾಗಿ **ವೈದಿಕ ರೂಪತ್ತಾಲುಮ್** – ಪ್ರಣವ ಸಹಿತವಾದ ರೂಪದಿಂದಲೂ **ತಾಂತ್ರಿಕರೂಪತ್ತಾಲುಂ**–ಪ್ರಣವ ವಿಹೀನವಾಗಿಯೂ, ಉಪಜೀವ್ಯವಾಗಿದೆ. **ವ್ಯಾಪ್ಯ ವ್ಯಾಪಕ ಸರ್ವತತ್ವ** ಇತ್ಯಾದಿ ವ್ಯಾಪ್ಯ-ವ್ಯಾಪರಿಸಲ್ಪಡುವ ಚೇತನಾಚೇತನರೂಪ ತತ್ವಗಳು "ನಾರ ... ದಿಂದ ಹೇಳಲ್ಪಡುತ್ತವೆ. "ಅಯನ ಶಬ್ದದಿಂದ ವ್ಯಾಪಕ- ಅಂತಃ ಬಹಿಶ್ಚ ವ್ಯಾಪರಿಸುವವನಾಗಿ ಪರಮಾತ್ಮನಿಗೆ ಕಂಠೋಕ್ತಿಯುಂಟು. ಇತರ ವ್ಯಾಪಕ ಮಂತ್ರಗಳು ಹೀಗೆ ಸ್ಪಷ್ಟವಾಗಿ ವ್ಯಾಪ್ಯ ವ್ಯಾಪಕ ತತ್ವಗಳನ್ನು ತಿಳಿಸುವುದಿಲ್ಲ. **ಸರ್ವ ಮಂತ್ರನೈರಪೇಕ್ಷ್ಯಕರಮಾಮ್**–ಆ ಇತರ ಮಂತ್ರಗಳು ಕೊಡುವ ಸಕಲವಿಧ ಫಲಗಳನ್ನೂ ತಾನೇ ಕೊಡುವುದರಿಂದ ತನ್ನನ್ನು ಜಪಿಸುವವನಿಗೆ ಮಂತ್ರಾಂತರ ಜಪದ ಅಪೇಕ್ಷೆಯಿಲ್ಲದಂತೆ ಅಷ್ಟಾಕ್ಷರವು ಮಾಡುತ್ತದೆ ಎಂದು

---

1) ನಾರಾಯಣೀಯಮ್ I-11 ...

ಪೇಕ್ಷ್ಯಕರಮಾಯ್, ಸರ್ವ ಭಗವನ್ಮೂರ್ತಿಹಳುಕ್ಕುಮ್ ಸಾಧಾರಣಮಾಯ್; ಇರುಕ್ಕೈಯಾಲೇ ಸರ್ವಾಚಾರ್ಯರ್ಹಳು ಮಿತ್ತೈವಿರುಮ್ಬಿ ಪ್ಪೋರುವರ್ಹಳ್,

ಆಳ್ವಾರ್ ಪ್ರಭೃತಿಭಿರಪ್ಯತ್ಯಾದರೇಣ ಉಪಾದೇಯೋಽಯಂ ಮನ್ತ್ರಃ

ಆೞ್ವಾರ್ಹಳುಮ್ 1) "ನಿನ್ ತಿರುವೆಟ್ಟೆೞುತ್ತುಮ್ ಕತ್ತು"ಎನ್ರುಮ್, 2) "ಎಟ್ಟೆೞುತ್ತುಮ್ ಓದುವಾರ್ಹಳ್ ವಲ್ಲರ್ ವಾನಮಾಳವೇ" ಎನ್ರುಮ್ 3) "ಎಟ್ಟೆೞುತ್ತುಮ್ ವಾರಮಾಹವೋದು

---

ತಾತ್ಪರ್ಯ. ಸರ್ವಭಗವನ್ಮೂರ್ತಿಹಳುಕ್ಕುಮ್ ಇತ್ಯಾದಿ – ರಾಮಕೃಷ್ಣಾದಿ ಮೂರ್ತಿಗಳಿಗೆ ಆಯಾಯಾ ಮೂರ್ತಿ ಮಂತ್ರಗಳು ಆರಾಧನಕ್ಕೆ ಉಪಯುಕ್ತಗಳು. ಅಷ್ಟಾಕ್ಷರವು ಎಲ್ಲಾ ಭಗವನ್ಮೂರ್ತಿ ಮಂತ್ರಗಳಿಗೂ ಉಪಯುಕ್ತವಾದದ್ದು. ಆದ್ದರಿಂದ ಸರ್ವಾಚಾರ್ಯರಗಳೂ ಈ ಅಷ್ಟಾಕ್ಷರ ಮಂತ್ರವನ್ನೇ ಆಸೆಪಟ್ಟು ಅಧಿಕರಿಸುತ್ತಾರೆ.

ಆೞ್ವಾರ್ಹಳುಮ್ ಇತ್ಯಾದಿ ಮಯರ್ವರಮದಿನಲಮ್–ಅಜ್ಞಾನಗಂಧವಿಲ್ಲದೆ ಪೂರ್ಣ ಜ್ಞಾನದಿಂದ ಕೂಡಿದ ಆಳ್ವಾರುಗಳೂ 1 ನಿನ್ ತಿರುವೆಟ್ಟೆೞುತ್ತುಮ್ ಕಟ್ರು ನಿನ್ನ ಅಷ್ಟಾಕ್ಷರ ಮಂತ್ರವನ್ನು ಅಧಿಕರಿಸಿ ಎಂದೂ, 2) ಎಟ್ಟೆೞುತ್ತುಮೋದುವಾರ್ಹಳ್ ವಲ್ಲರ್ ವಾನಮಾಳವೇ–ಅಷ್ಟಾಕ್ಷರವನ್ನು ಗುರುಸಕಾಶದಿಂದ ಉಪದೇಶ ಹೊಂದಿ ಜಪಿಸುವವರು ಪರಮಪದವನ್ನು ಆಳಲು ಸಮರ್ಥರಾಗುತ್ತಾರೆ ಎಂದೂ, ) ಎಟ್ಟೆೞುತ್ತುಮ್ವಾರ

---

1) ಮಟ್ರುಮೋರ್ ದೈವ್ಮ ಉಳದೆನ್ರು ಇರುಪ್ಪಾರೋಡು
ಉಟ್ರಿಲೇನ್ ಉಟ್ರದುಮ್ ಉನ್ನಡಿಯಾರ್ಕಡಿಮೈ
ಮಟ್ರೆಲ್ಲಾಮ್ ಪೇಶಿಲುಮ್, ನಿನ್ ತಿರುವೆಟ್ಟೆೞುತ್ತುಮ್
ಕಟ್ರುನಾನ್ ಕಣ್ಣಪುರತ್ತುರೈಯಮ್ಮಾನೇ ॥ ಪೆರಿ. ತಿರು 8 10-3

ನೀನು ವಿನಹ ಬೇರೆಯೊಂದು ದೇವರೂ ಇದಾನೆಯೆಂದು ಇರುವವರೊಡನೆ ಸಂಬಂಧವನ್ನು ಬೆಳೆಸುವುದಿಲ್ಲ. ನಿನ್ನ ಅಷ್ಟಾಕ್ಷರ ಮಂತ್ರದ ಅರ್ಥವನ್ನು ತಿಳಿದುಕೊಂಡು ಅದರಲ್ಲಿ ಅನೇಕಾರ್ಥಗಳು ಹೇಳಿದ್ದರೂ, ನಾನು ಸಾರವಾಗಿತಿಳಿದಿರುವುದು ನಿನ್ನ ದಾಸರಿಗೆ ದಾಸಭೂತನಾಗಿರಬೇಕೆಂಬುದು ಎಂಬುದೇ.

2) ಎಟ್ಟುಮೆಟ್ಟುಮೆಟ್ಟುಮಾಯ್, ಓರೇೞುಮೇೞುಮೇೞುಮಾಯ್,
ಎಟ್ಟುಮೂನ್ರು ಮೊನ್ರುಮಾಹಿ ನಿನ್ನ ಆದಿದೇವನೇ।
ಎಟ್ಟಿನಾಯ ಪೇದಮೋಡು ಇರೈಂಜಿ ನಿನ್ರವನ್ ಪೆಯರ್,
ಎಟ್ಟೆೞುತ್ತು ಮೋದುವಾರ್ಹಳ್ ವಲ್ಲರ್ವಾನ ಮಾಳವೇ ॥ ತಿರುಚ್ಚಂದವಿರುತ್ತಮ್-77

ಮೂರು ಎಟ್ಟುಗಳು ಅಂದರೆ ಇಪ್ಪತ್ತು ನಾಲ್ಕು ತತ್ವಗಳಿಗೆ ಅಂತರಾತ್ಮನಾಗಿಯೂ ಏಳು-ಸಪ್ತ ದ್ವೀಪಗಳು, ಏೞು-ಸಪ್ತಕುಲ ಪರ್ವತಗಳು: ಏೞು-ಸಪ್ತಸಮುದ್ರಗಳು, ಇವುಗಳಿಗೆ ಅಂತರಾತ್ಮನಾಗಿಯೂ, ದ್ವಾದಶಾದಿತ್ಯರಿಗೂ ಅಂತರಾತ್ಮನಾಗಿಯೂ, ಇರುವ ಆದಿ ದೇವನೆ, ಅಷ್ಟಾಂಗ ಭೇದ ರೂಪವಾದ ಪ್ರಣಾಮವನ್ನು ಮಾಡಿ, ಆ ಮಾರ್ಗದಿಂದ ಆಶ್ರಯಿಸಿ ಆವನ ಹೆಸರಾದ ಅಷ್ಟಾಕ್ಷರವನ್ನು ಗುರುಸಕಾಶದಿಂದ ಉಪದೇಶಹೊಂದಿ ಉಚ್ಚರಿಸುವವರು, ಪರಮಪದವನ್ನು ನಿರ್ವಹಿಸಲು ಸಮರ್ಥರಾಗುತ್ತಾರೆ. ಆದಾಗಿ ಅಷ್ಟಾಕ್ಷರ ಮಂತ್ರವನ್ನು ಕರಣಮಂತ್ರವನ್ನಾಗಿ ಬಳಸಿ ಅಷ್ಟಾಂಗ ಭಕ್ತಿಯೋಗವನ್ನು ಅನುಷ್ಠಿಸಿ, ಪರಮಪದವನ್ನು ಪಡೆಯಲು ಸಮರ್ಥರಾಗುತ್ತಾರೆ.

3) ಶೋರ್ವಿಲಾದ ಕಾದಲಾಲ್ ತುಡಕ್ಕರಾಮನತ್ತರಾಯ್, ನೀರರಾವಣೈಕ್ಕಿಡಂದ ನಿನ್ಮಲನ್ ನಲಂಗೞಲ್,
ಆರ್ವಮೋಡಿರೈಂಜಿ ನಿನ್ರು ಅವನ್ ಪೆಯರೆಟ್ಟೆೞುತ್ತುಮ್. ವಾರಮಾಹ ಓದುವಾರ್ಹಳ್ವಲ್ಲರ್ ವಾನಮಾಳವೇ ॥
ತಿರುಚ್ಚಂದವಿರುತ್ತಮ್ 78

ವಿಷಯಾಂತರ ಸ್ಪೃಹೆಯಿಲ್ಲದ ಭಕ್ತಿಯಿಂದ ವಿಚ್ಛೇದವಿಲ್ಲದ ಮನಸ್ಸನ್ನುಳ್ಳವರಾಗಿ, ಕ್ಷೀರಾಬ್ಧಿಯಲ್ಲಿ ಆದಿಶೇಷನ ಮುಡಿಯಲ್ಲಿ ಯೋಗ ನಿದ್ರೆ ಮಾಡುವ ಹೇಯ ಪ್ರತ್ಯನೀಕನಾದ ಭಗವಂತನ ರುಚಿಜನಕವಾದ ಪಾದಗಳನ್ನು ಪ್ರೇಮದಿಂದ ಕೂಡಿ ಆಶ್ರಯಿಸಿ,

ವಾರ್‌ಹಳ್ ವಲ್ಲರ್ ವಾನವನಾಳವೇ" ಎನ್ರುಮ್, 4) ನಾಡುನಗರಮುಮ್ ನನ್ಗರಿಯ ನಮೋ ನಾರಾಯಣಾಯ ಎನ್ರುಮ್ 5) "ನಲ್‌ವಹೈಯಾಲ್ ನಮೋನಾರಾಯಣಾ" ಎನ್ರುಮ್ ಇತ್ತಿರ್ರುಮನ್ತ್ರತ್ತೈಯೇ ವಿರುಮ್ಬಿಪ್ಪೋನ್ದಾರ್‌ಹಳ್ ಋಷಿಹಳುಮ್,

1) "ಬಹವೋ ಹಿ ಮಹಾತ್ಮಾನೋ ಮುನಯಸ್ಸನಕಾದಯಃ ।
ಅಷ್ಟಾಕ್ಷರಂ ಸಮಾಶ್ರಿತ್ಯ ತೇ ಜಗ್ಮುರ್ವೈಷ್ಣವಂ ಪದಮ್"

2) ಯಥಾ ಸರ್ವೇಷು ದೇವೇಷು ನಾಸ್ತಿ ನಾರಾಯಣಾತ್ಪರಃ ।
ತಥಾ ಸರ್ವೇಷು ಮನ್ತ್ರೇಷು ನಾಸ್ತಿ ಚಾಷ್ಟಾಕ್ಷರಾತ್ಪರಃ ॥"

---

ಮಾಹವೋದುವಾರ್‌ಹಳ್ ವಲ್ಲರ್ ವಾನವನಾಳವೇ, ಅಷ್ಟಾಕ್ಷರವನ್ನು ನಿಷ್ಠೆಯಿಂದ ಅಷ್ಟಸಹಸ್ರ ಸಲ ಹೇಳುವವರು ಪರಮಪದಕ್ಕೆ ನಿರ್ವಾಹಕರು, ಎಂದೂ 4) **ನಾಡುಮ್‌ನಹರುಮುಮ್‌ನನ್ಗರಿಯ ನಮೋನಾರಾಯಣಾಯ**, ಪಾಮರರೂ, ಪಂಡಿತರೂ ಅರ್ಥದೊಡನೆ ತಿಳಿದುಕೊಂಡು ನಮೋನಾರಾಯಣಾಯ ಎಂದು ಹೇಳುವವರೂ, ಎಂದೂ 5) **ನಲ್‌ವಹೈಯಾಲ್ ನಮೋನಾರಾಯಣಾ** – ಪ್ರಯೋಜನಾಂತರ ಪ್ರಸಕ್ತಿ ಇಲ್ಲದೆ. "ನಮೋನಾರಾಯಣ" ಎಂದು ಭಗವನ್ನಾಮವನ್ನು ಅನೇಕಾವರ್ತಿ ಹೇಳಿ, ಎಂದೂ, **ಇತ್ತಿರುಮಂತ್ರತ್ತೈಯೆ** ಇತ್ಯಾದಿ- ಈ ಅಷ್ಟಾಕ್ಷರ ಮಂತ್ರವನ್ನೇ **ವಿರುಂಬಿಪ್ಪೋಂದಾರ್‌ಹಳ್** – ಆಸೆಪಟ್ಟು ಅಧಿಕರಿಸಿದರು. ಹೀಗೆಯೇ ಈ ಅಷ್ಟಾಕ್ಷರ ಮಂತ್ರವನ್ನೇ ಅನೇಕ ಋಷಿಗಳು ಆದರಿಸಿದರು ಎಂದು, **ಋಷಿಹಳುಮ್ ಬಹವೋಹಿ ಮಹಾತ್ಮಾನಃ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಸನಕಾದಿ ಮಹರ್ಷಿಗಳು ಅಷ್ಟಾಕ್ಷರವನ್ನು ಜಪಿಸಿ ವೈಷ್ಣವ ಪದವನ್ನು ಹೊಂದಿದರು 2) **ಯಥಾಸರ್ವೇಷು**– ಹೇಗೆ ಎಲ್ಲಾ ದೇವತೆಗಳಿಗಿಂತಲೂ ನಾರಾಯಣನೇ ಮೇಲೋ ಹಾಗೆ ಎಲ್ಲಾ ಮಂತ್ರಗಳಿಗಿಂತಲೂ ಮೇಲಾದ ಅಷ್ಟಾಕ್ಷರಕ್ಕಿಂತ ಮೇಲಾದ ಮಂತ್ರವಿಲ್ಲ

---

ಅವನ ತಿರುನಾಮವಾದ ಅಷ್ಟಾಕ್ಷರವನ್ನು ನಿಷ್ಠೆಯಿಂದ ಪ್ರೀತಿ ಪೂರ್ವಕವಾಗಿ ಅನುಸಂಧಾನ ಮಾಡುವವರು, ಪರಮ ಪದಕ್ಕೆ ನಿರ್ವಾಹಕರಾಗಲು ಸಮರ್ಥರಾಗುತ್ತಾರೆ.

4) ಏಡುನಿಲತ್ತಿಲಿಡುವದನ್ ಮುನ್ನಂವಂದು ಎಂಗಳ್ ಕುೞಾಂ ಪುಹುಂದು,
ಕೂಡುಮನಮುಡೈಯೀರ್‌ಹಳ್ ವರಂ ಪೊೞಿವಂದೊಲ್ಲೈಕ್ಕೂಡುಮಿನೋ
ನಾಡುನಹರಮುಮ್ ನನ್ಗರಿಯ ನಮೋ ನಾರಾಯಣಾಯವೆನ್ರು
ಪಾಡುಮನಮುಡೈಪ್ಪತ್ತರುಳ್ಳೀರ್ ವಂದು ಪಲ್ಲಾಂಡು ಕೂರುಮಿನೇ ॥ ಪೆರಿಯಾೞ್ವಾ ತಿರು (1-1-4)

ಮಹಾಪ್ರಳಯದಲ್ಲಿ ಪುನಃ ಮೂಲ ಪ್ರಕೃತಿಯೊಡನೆ ಸೇರಿಕೊಂಡು ಲಯವನ್ನು ಹೊಂದುವುದಕ್ಕೆ ಮುಂಚಿತವಾಗಿ, ನಮ್ಮ ಗೋಷ್ಠಿಯನ್ನು ಸೇರಿಕೊಳ್ಳಲು ಮನಸ್ಸುಳ್ಳವರೇ ಸ್ವಾತ್ಮಾನುಭವವೆಂಬ ಎಲ್ಲೆಯನ್ನು ಬಿಟ್ಟು ಜಾಗ್ರತೆಯಾಗಿ ನಮ್ಮೊಡನೆ ಸೇರಿಕೊಳ್ಳಿ ಪಂಡಿತ ಪಾಮರರು ತಿಳಿಯುವಂತೆ ಅಷ್ಟಾಕ್ಷರವನ್ನು ಹೇಳಲು ಭಕ್ತಿಯುಳ್ಳವರಾಗಿ ಬಂದು ಸೇರಿಕೊಳ್ಳಿ.

5) ಅಲ್‌ವೞಕ್ಕೊನ್ರುಮಿಲ್ಲಾ ಅಣಿಕೋಟ್ಟಿಯುಳ್ ಕೋನ್ ಅಭಿಮಾನತುಂಗನ್
ಶೆಲ್‌ವನೈಪ್ಪೋಲತ್ತಿರುಮಾಲೇ ನಾನುಮುನಕ್ಕುಪ್ಪೞವಡಿಯೇನ್ ।
ನಲ್‌ವಹೈಯಾಲ್ ನಮೋನಾರಾಯಣಾವೆನ್ರು ನಾಮಮ್ ಪಲಪರವಿ
ಪಲ್‌ವಹೈಯಾಲುಮ್ ಪವಿತ್ತಿರನೇ ಉನ್ನೈಪ್ಪಲ್ಲಾಂಡು ಕೂರುವನೇ ॥ ಪೆರಿ, ತಿರು (1-1-11)

ಕೆಟ್ಟ ಅಭ್ಯಾಸವಾವುದೂ ಇಲ್ಲದ ಭೂಮಿಗೆ ಅಲಂಕಾರ ಭೂತವಾದ ಗೋಷ್ಠೀಪುರಕ್ಕೆ ಸ್ವಾಮಿಯಾದ ಭಗವದಭಿಮಾನಕ್ಕೆ ಪಾತ್ರನಾದ ಶೆಲ್ವನಂಬಿಯ ಹಾಗೆ ನಾನೂ ನಿನಗೆ ಬಹಳ ಕಾಲದಿಂದ ದಾಸನು ಒಳ್ಳೆಯ ರೀತಿಯಲ್ಲಿ ನಮೋನಾರಾಯಣಾಯೆಂದು ನಾಮವನ್ನು ಅನೇಕಸಾರಿ ಉಚ್ಚರಿಸಿ ಎಲ್ಲಾ ವಿಧಗಳಲ್ಲಿಯೂ ಪವಿತ್ರನಾಗಿ ನಿನ್ನನ್ನು ಮಂಗಳಾಶಾಸನ ಮಾಡುತ್ತೇನೆ.

1) ನಾರದೀಯ 1-16
2) ನಾರದೀಯ 1-42

"ಭೂತ್ವೋರ್ಧ್ವಬಾಹುರದ್ಯಾತ್ರ ಸತ್ಯಪೂರ್ವಂ ಬ್ರವೀಮಿ ವಃ ।
ಹೇ ಪುತ್ರಶಿಷ್ಯಾಃ ಶೃಣುತ ನಮನ್ತ್ರೋಽಷ್ಟಾಕ್ಷರಾತ್ಪರಃ ।
ತದರ್ಚನ ಪರೋನಿತ್ಯಂ ತದ್ಭಕ್ತಸ್ತನ್ನಮಸ್ಕುರು ।
ತದ್ಭಕ್ತಾನ ವಿನಶ್ಯನ್ತಿ ಹ್ಯಷ್ಟಾಕ್ಷರ ಪರಾಯಣಾಃ ॥"

4) "ಆಸೀನಾವಾ ಶಯಾನಾವಾ ತಿಷ್ಠನ್ತೋ ಯತ್ರಕುತ್ರವಾ !
ನಮೋನಾರಾಯಣಾಯೇತಿ ಮನ್ತ್ರೈಕ ಶರಣಾವಯಮ್ ॥" ಎನ್ರಾರ್ಹಳ್. ಇತ್ತಿರುಮಂತ್ರತ್ತೈ ಸರ್ವೇಶ್ವರನ್ ಶ್ರೀ ನಾರದ ಭಗವಾನೈ ಇಟ್ಟು ಶ್ರೀ ಪುಂಡರೀಕನುಕ್ಕು ಉಪದೇಶಿಕ್ಕ ಅವನುಮ್ ಇತ್ತೈಯೇ ಪರಮ ಹಿತಮಾಹಕ್ಕೊಟ್ಟಪಡಿಯಾಲೇ

5) "ಪುಂಡರೀಕೋಽಪಿ ಧರ್ಮಾತ್ಮಾ ನಾರಾಯಣಪರಾಯಣಃ ।
ನಮೋನಾರಾಯಣಾಯೇತಿ ಮನ್ತ್ರ ಮಷ್ಟಾಕ್ಷರಂ ಜಪನ್ ॥"

ಇತ್ಯಾದಿಹಳಿಲ್ ಶೊಲ್ಲುಹಿರಪಡಿಯೇ ಇಮನ್ತ್ರ ನಿಷ್ಠನಾಯ್ ಮುಕ್ತನಾನಾನ್ ಇಮ್ಮನ್ತ್ರತ್ತೈ (ಇತ್ತಿರು ಮನ್ತ್ರತ್ತೈ) ತ್ತಿರುಮಙ್ಗೈಯಾಳ್ವಾರುಕ್ಕು ಸರ್ವೇಶ್ವರನ್ ತಾನೇ ಉಪದೇಶಿತ್ತಾನ್.

---

3) **ಭೂತ್ವೋರ್ಧ್ವಬಾಹುಃ** ಇತ್ಯಾದಿ ಕೈಯನ್ನು ಮೇಲೆತ್ತಿ ಹೇಳುತ್ತೇನೆ. ಶಿಷ್ಯರೇ ಪುತ್ರರೇ ಕೇಳಿ ಅಷ್ಟಾಕ್ಷರಕ್ಕಿಂತ ಮೇಲಾದ ಮಂತ್ರವಿಲ್ಲ. ಆಮಂತ್ರ ಪ್ರತಿಪಾದ್ಯನಾದ ನಾರಾಯಣನನ್ನು ಅರ್ಚಿಸಿ ನಮಸ್ಕರಿಸಿ, ಅಷ್ಟಾಕ್ಷರ ಪರಾಯಣರಾದ ಅವನ ಭಕ್ತರು ನಾಶವನ್ನು ಹೊಂದುವುದಿಲ್ಲ. 4) **ಆಸೀನಾವಾಶಯಾನಾವಾ** ಇತ್ಯಾದಿ, ಕುಳಿತಿರುವಾಗಲೂ, ಮಲಗಿರುವಾಗಲೂ, ನಿಂತಿರುವಾಗಲೂ, ಎಲ್ಲಾದರೂ ಅಲ್ಲಿ ನಮೋ ನಾರಾಯಣಾಯ ಎಂಬ ಮಂತ್ರವನ್ನೇ ಅವಲಂಬಿಸುವವರು ನಾವು ಎಂದು ಋಷಿಗಳು ಹೇಳಿದ್ದಾರೆ ಇತ್ತಿರುಮಂತ್ರತ್ತೈ ಇತ್ಯಾದಿ ಈ ಅಷ್ಟಾಕ್ಷರ ಮಂತ್ರವನ್ನು ಸರ್ವೇಶ್ವರನು ಶ್ರೀ ನಾರದಮಹರ್ಷಿಯ ಮೂಲಕ ಶ್ರೀಪುಂಡರೀಕನಿಗೆ ಉಪದೇಶಿಸಿದನು. ಆಪುಂಡರೀಕನೂ, ಇದನ್ನೇ ಪರಮಹಿತವಾಗಿ ಉಪದೇಶಹೊಂದಿ 5) **ಪುಂಡರೀಕೋಽಪಿ ಧರ್ಮಾತ್ಮಾ** ಇತ್ಯಾದಿ ಹೇಳಿರುವಂತೆ ನಾರಾಯಣನಲ್ಲಿ ಭಕ್ತಿಯೋಗವನ್ನು ಮಾಡಿ, ನಾರಾಯಣ ಪರಾಯಣನಾಗಿ ಸದಾ ಅಷ್ಟಾಕ್ಷರವನ್ನು ಜಪಿಸುತ್ತಾ ಈ ಮಂತ್ರನಿಷ್ಠನಾಗಿ ಮುಕ್ತಿಯನು ಹೊಂದಿದನು. ಶ್ರೀಪುಂಡರೀಕನು ಶ್ರೀಮದಷ್ಟಾಕರವನ್ನು ಕರಣಮಂತ್ರವನ್ನಾಗಿ ಬಳಸಿ ಉಪಾಸನೆ (ಭಕ್ತಿಯೋಗ) ವನ್ನು ಮಾಡಿ ಮೋಕ್ಷವನ್ನು ಹೊಂದಿದನೆಂದು ಶ್ರೀಮತ್ಸಂಕಲ್ಪ ಸೂರ್ಯೋದಯದಲ್ಲಿ ಸುವ್ಯಕ್ತ. ಅಲ್ಲಿ ಒಂಭತ್ತನೆಯ ಅಂಕದಲ್ಲಿ "ಪುಂಡರೀಕಮಿವಪಾಹಿ ಮಂತ್ರತಃ" ಎಂದು ಮುಮುಕ್ಷುವಾದ ಪುರುಷನಿಂದ ಪ್ರಾರ್ಥಿಸಲ್ಪಡಲು, ನಾರದರು ಹಾಗೆಯೇ ಅನುಗ್ರಹಿಸಿದರು, ಅಲ್ಲಿ

ಸ್ವಫಲೇನ ತುಲಾರೂಢಸ್ಸಮಾಧಿ ರ್ಮುಕ್ತಿಸಾಧಕಃ ।
ನ್ಯೂನಾಧಿಕ ಸಮತ್ವೇಷು ವಿಕಲ್ಪಾಯ್ಯೈವಕಲ್ಪತೇ ॥

ಎಂದು ಸಮಾಧಿ ಸಂಪತ್ತಿಯು ವರ್ಣಿಸಲ್ಪಟ್ಟಿದೆ ಹೀಗೆ ಉಪಾಸನದಲ್ಲಿ ಸತ್ಸಂಪ್ರದಾಯಸಿದ್ಧವಾದಕರಣ ಮಂತ್ರವನ್ನಾಗಿ ಅಷ್ಟಾಕ್ಷರವನ್ನು ಬಳಸುವಂತೆ, ಸ್ವತಂತ್ರ ಪ್ರಪತ್ತಿಯಲ್ಲಿಯೂ ಕರಣಮಂತ್ರವಾಗಿ ಬಳಸಲ್ಪಟ್ಟು, ಸಾಕ್ಷಾನ್ಮೋಕ್ಷ ಸಾಧನವೆಂಬುದನ್ನು **ಇತ್ತಿರುಮಂತ್ರತ್ತೈ ತಿರುಮಂಗೈ ಯಾಳ್ವಾರುಕ್ಕು** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಈ ಅಷ್ಟಾಕ್ಷರ ಮಂತ್ರವನ್ನು ಸರ್ವೇಶ್ವರನು ತಾನೇ ತಿರುಮಂಗೈ ಯಾಳ್ವಾರ್‌ರವರಿಗೆ ಉಪದೇಶಿಸಿದನು. ಶ್ರೀ ಪರಕಾಲರಾದ ತಿರುಮಂಗೈಯಾಳ್ವಾರವರ ಪ್ರಬಂಧಗಳಲ್ಲಿ ಸ್ವತಂತ್ರಪ್ರಪತ್ತಿ ವಿಷಯದಲ್ಲಿ ವಿಶೇಷ ದೃಷ್ಟಿಯು ಇರುವುದರಿಂದ, ಇಮ್ಮಂತ್ರತ್ತೈ ಎಂದಾರಂಭಿಸುವ ವಾಕ್ಯದಿಂದ ಸ್ವತಂತ್ರ ಪ್ರಪತ್ತಿ ಕರಣ

---

3) ನರಸಿಂಹ ಪುರಾಣ 18-32 4) ನಾರದೀಯ 5) ಇತಿಹಾಸ ಸಮುಚ್ಚಯ.

**ಅಷ್ಟಾಕ್ಷರ ಮನ್ತ್ರಸ್ಯ ಪ್ರಣವ ಚತುರ್ಥೀ ರಾಹಿತ್ಯೇ ಸರ್ವಾಧಿಕಾರತ್ವಮ್**

**ಇದು ಪ್ರಣವಚತುರ್ಥಿಗಳ್ ಯೊೞಿನ್ದ ಪೋದು ಸರ್ವಾಧಿಕಾರಮೆನ್ನುಮಿಡಮ್ ಶ್ರೀವರಾಹ ಪುರಾಣತ್ತಿಲ್ ಕೈಶಿಕದ್ವಾದಶಿ ಮಾಹಾತ್ಮ್ಯತ್ತಿಲೇ 1) "ನಮೋ ನಾರಾಯಣೇತ್ಯುಕ್ತ್ವಾ ಶ್ವಪಾಕಃ ಪುನರಾಗಮತ್**

---

ಮಂತ್ರವಾಗಿ ಶ್ರೀಮದಷ್ಟಾಕ್ಷರವು ಸಾಕ್ಷಾತ್ ಸರ್ವೇಶ್ವರನಿಂದ ಉಪದೇಶಿಸಲ್ಪಟ್ಟದಾಗಿ ಆಚಾರ್ಯರ ಹೃದಯ ಇದರಿಂದ ಶ್ರೀಮದಷ್ಟಾಕ್ಷರವು ಉಪಾಸನದ ಹಾಗೆ ಪ್ರಪತ್ತಿಗೂ ಕರಣಮಂತ್ರವಾಗಿ ಅನುಸಂಧಿಸಲ್ಪಡುತ್ತದೆ ಯೆಂಬುದು ಅಭಿಪ್ರಾಯ "ವಾಯಿನಾಲ್ ನಾಮೋನಾರಣಾವೆನ್ರುಮತ್ತಕತ್ತಿಡೈಕ್ಕೈಹಳೈಕ್ಕೂಪ್ಪಿ, ಪೋಯಿನಾಲ್ ಪಿನ್ನೈ ಇತ್ತಿಶೈಕ್ಕೆನ್ರುಂ ಪಿಣೈಕೊಡುಕ್ಕಿಲುಂ ಪೋಹವೊಟ್ಟಾರೇ" ಎಂದು ಪೆರಿಯಾಳ್ವಾರವರು ಈ ಮಂತ್ರವನ್ನು ಕರಣಮಂತ್ರವನ್ನಾಗಿ ಉಪಯೋಗಿಸಿ ಭಗವಂತನಲ್ಲಿ ಅಂಜಲಿಯನ್ನು (ಶರಣಾಗತಿ) ಮಾಡಿದವರು, ಶರೀರ ವಿಯೋಗಾನಂತರ, ಪುನರಾವೃತ್ತಿಯಿಲ್ಲದೆ ಪರಮ ಪದವನ್ನು ಹೊಂದುವರೆಂದು ಅನುಗ್ರಹಿಸಿರುವುದೂ ಇಲ್ಲಿ ಭಾವಿಸತಕ್ಕದ್ದು. ಹೀಗೆ ಈ ಅಷ್ಟಾಕ್ಷರ ಮಂತ್ರಕ್ಕೆ ಇಲ್ಲಿ ವ್ಯಾಖ್ಯಾನ ಮಾಡಲ್ಪಡುವ ಸಾರಾರ್ಥಗಳೆಲ್ಲಾ ಸಾಕ್ಷಾತ್ಸರ್ವೇಶ್ವರನಿಂದ ಉಪದೇಶಿಸಲ್ಪಟ್ಟು ಸತ್ಸಂಪ್ರದಾಯಾಗತಗಳೆಂದು ಸೂಚಿಸಲ್ಪಡುತ್ತವೆ.

ಶ್ರೀಪರಕಾಲಮುನಿಗಳೇ ಆದಿಯಾದ ಆಳ್ವಾರುಗಳು, ಶ್ರೀ ಪರಾಶರ ಬ್ರಹ್ಮರ್ಷಿಯಂತೆ, ಪ್ರಬಂಧ ಪೂರ್ವಕವಾಗಿ ರಹಸಾರ್ಥ ವೈಶದ್ಯಾಂಶದಲ್ಲಿ ಉಪಕಾರವನ್ನು ಮಾಡಿರುತ್ತಾರೆಯಷ್ಟೇ. ಸಾಕ್ಷಾತ್ತಾಗಿ ಸಾರವಾದ ಅರ್ಥಗಳು ಅವರುಗಳ ಮೂಲಕ ಉಪದೇಶ ಪರಂಪರೆಯಲ್ಲಿ ಬಂದಿಲ್ಲವೆಂದು ಕೆಲವು ಆ ಪಾತ ಪ್ರತೀತಿ ರಸಿಕರು ಹೇಳುತ್ತಾರೆ ಇದು ವಿಷಯವಿಮರ್ಶನ ಮಾಡದವರ ಮಾತು ಆಳ್ವಾರುಗಳೂ ಪರಾಶರರೂ ಉಪದೇಶಿಸಿದ ಸತ್ಸಂಪ್ರದಾಯಾರ್ಥಗಳು ಕಲಿಕ್ಷೋಭದ ದೆಶೆಯಿಂದ ಕ್ರಮೇಣ ನಷ್ಟವಾಗಿ ಹೋದರೂ, ಭಗವದ್ವಕುಳಧರರು(ನಮ್ಮಾಳ್ವಾರವರು) ಶ್ರೀ ಮನ್ನಾಥಮುನಿಗಳಿಗೆ ಯೋಗ ದಶೆಯಲ್ಲಿ ಸಾಕ್ಷಾತ್ತಾಗಿ ತೋರಿ ಶಾರೀರಕ ಶಾಸ್ತ್ರಾರ್ಥಗಳನ್ನೂ, ತಾವು ಮತ್ತು ಇತರರು ಅನುಗ್ರಹಿಸಿದ ದಿವ್ಯಪ್ರಬಂಧಗಳನ್ನೂ, ಇವುಗಳನ್ನು ಉಪಜೀವಿಸಿ ಬಂದ ರಹಸ್ಯಾರ್ಥಗಳನ್ನೂ,ಪರಮ ಕೃಪೆಯಿಂದ ಲೋಕೋಜ್ಜೀವನಕ್ಕಾಗಿ ಉಪದೇಶಿಸಿದರೆಂಬುದು ಸಂಪ್ರದಾಯವನ್ನು ತಿಳಿದ ತ್ರೈಯ್ಯಂತ ವೃದ್ಧರ ಮಾತು. ಇದನ್ನು ಅಲ್ಲಗಳೆಯುವುದು ಕುಮತಿ ಮತವನ್ನು ಅವಲಂಬಿಸದಂತೆ ಆಗುತ್ತದೆ. ತಥಾಚ ಪರಕಾಲರಾದ ತಿರುಮಂಗೈಯಾಳ್ವಾರ್ರವರಿಗೆ ಸರ್ವೇಶ್ವರನು ಉಪದೇಶಿಸಿದ ಸತ್ಸಂಪ್ರದಾಯಾರ್ಥಗಳನ್ನೊಳಗೊಂಡ ಪ್ರಬಂಧವು ಮೇಲೆ ಹೇಳಿದಂತೆ ನಮ್ಮಾಳ್ವಾರವರ ಮೂಲಕ ಉಪದೇಶಿಸಲ್ಪಟ್ಟು ಸತ್ಸಂಪ್ರದಾಯ ಸಮಾಗತವಾಗಿದೆ, ಎಂಬುದನ್ನು ತೋರಿಸಿ ತಾವು ಮುಂದೆ ವಿವರಿಸುವ ರಹಸ್ಯತ್ರಯಗಳ ಅರ್ಥಗಲ್ಲಿ ಶ್ರದ್ಧಾತಿಶಯವು ಉಂಟಾಗಲೆಂಬುದು ಭಾವ.

**ಅಷ್ಟಾಕ್ಷರವು ಅಧಿಕಾರಿ ಭೇದದಿಂದ ಪ್ರಣವ ಸಹಿತವಾಗಿಯೂ ಪ್ರಣವ ರಹಿತವಾಗಿಯೂ ಎಲ್ಲಾ ಜಾತೀಯರಿಗೂ ಉಪಜೀವ್ಯ.**

ಹೀಗೆ ಮೂಲಮಂತ್ರದ ಪ್ರಾಶಸ್ತ್ಯದಿಂದ ಅದನ್ನು ವ್ಯಾಖ್ಯಾನ ಮಾಡಬೇಕಾದದು ಅವಶ್ಯವೆಂದು ಅನುಗ್ರಹಿಸಿ, ಶ್ರುತಿಯಲ್ಲಿ ಹೇಳಿದ ಕ್ರಮದಲ್ಲಿ ಪ್ರಣವ ಸಹಿತವಾಗಿ ಎಲ್ಲರಿಗೂ ಅಧ್ಯಯನ ಮಾಡಲು ಅಧಿಕಾರವಿಲ್ಲದಿದ್ದರೂ, ಪ್ರಣವಸ್ಥಾನದಲ್ಲಿ ಬೇರೆಯೊಂದು ಅಕ್ಷರವನ್ನು ಸೇರಿಸಿಕೊಂಡು ಪ್ರಣವೋಚ್ಚಾರಣಾನಧಿಕಾರಿಗಳು ಹೇಳಬಹುದೆಂದು ಹೇಳಿ, ಮತ್ತೆ ಕೆಲವರು ಪ್ರಣವ ಚತುರ್ಥಿಗಳಿಲ್ಲದೇನೆ ಅನುಸಂಧಿಸಬಹುದು ಎಂದು ಪ್ರಮಾಣಗಳೊಡನೆ ನಿರೂಪಿಸಿ, ಎಲ್ಲರಿಗೂ ಅರ್ಥಾನುಸಂಧಾನವು ಒಂದೇ ರೀತಿಯಾದದ್ದೆಂಬುದನ್ನು ನಿರೂಪಿಸಿ, ಅಷ್ಟಾಕ್ಷರವು ಎಲ್ಲಾ ಮುಮುಕ್ಷುಗಳಿಗೂ ಉಪಕಾರಕವೆಂದು,

**ಇದು ಪ್ರಣವ ಚತುರ್ಥಿಹಳೈಯೊೞಿಂದಪೋದು** – ಇತ್ಯಾದಿಯಾಗಿ ದೃಢೀಕರಿಸುತ್ತಾರೆ. ಪ್ರಣವವೂ

ಎನ್ನಿಹ್ರವಚನತ್ತಾಲೇ ಕಾಟ್ಟಪಟ್ಟದು. ಇವ್ವರ್ಥಂ 2 ನಾಮಂ ಶೊಲ್ಲಿಲ್ ನಮೋ ನಾರಾಯಣಮೇ" ಎನ್ನುಮ್, 3) "ನ‌ನ್ ಮಾಲೈಕೊಣ್ಡು ನಮೋ ನಾರಣಾ" ಎನ್ನುಮ್ 4 "ನಾವಾಯಿಲುಣ್ಡೇ ನಮೋ ನಾರಣಾವೆನ್ನೋವಾದುರೈಕ್ಕು ಮುಕ್ಕೈಯುಣ್ಡೇ ಎನ್ನುಮ್, ಶೊಲ್ಲುಹಿರಪಾಶುರಙ್ಗಳಾಲುಮ್ ಸಿದ್ಧಮ್.

ಮೂಲಮನ್ತ್ರಸ್ಯ ಸರ್ವಾಧಿಕರತ್ವ ಮುಪಪಾದಯತಿ.

ಇದು ಬ್ರಾಹ್ಮಣಾದಿಹಳಕ್ಕು ಅಧೀತಮಾನ ಕ್ರಮತ್ತಿಲೇ ಪ್ರಣವಕ್ಕೊಡೇ ಕೂಡ ಅಷ್ಟಾಕ್ಷರ ಮಾಯಿರುಕ್ಕುಮ್.

5) "ವೈದಿಕಂ ತಾಂತ್ರಿಕಂ ಚೈವ ತಥಾವೈದಿಕ ತಾಂತ್ರಿಕಮ್ ।
ತ್ರಿವಿಧಂ ಕರ್ಮಸಂಪ್ರೋಕ್ತಂಪಾಂಚ ರಾತ್ರಾಮೃತಾರ್ಣವೇ ।
ವೈದಿಕಂ ಬ್ರಾಹ್ಮಣಾನಾಂತು ರಾಜ್ಞಾಂ ವೈದಿಕ ತಾಂತ್ರಿಕಮ್ ।
ತಾಂತ್ರಿಕಂ ವೈಶ್ಯಶೂದ್ರಾಣಾಂ ಸರ್ವೇಷಾಂ ತಾಂತ್ರಿಕಂತು ವಾ ।

---

ಚತುರ್ಥಿ ಪ್ರತ್ಯಯವೂ ಇಲ್ಲದೆ ಇರುವಾಗ "ನಮೋನಾರಾಯಣ' ಎಂಬ ರೂಪದಿಂದ ಈ ಅಷ್ಟಾಕ್ಷರದಲ್ಲಿ ಸರ್ವರಿಗೂ ಅಧಿಕಾರವುಂಟು ಎಂಬುದು, ಶ್ರೀ ವರಾಹ ಪುರಾಣದಲ್ಲಿ ಕೈಶಿಕದ್ವಾದಶೀ ಮಾಹಾತ್ಮ್ಯವನ್ನು ಹೇಳುವ ಸಂದರ್ಭದಲ್ಲಿ 1) ನಮೋನಾರಾಯಣೇತ್ಯುಕ್ತ್ವಾ-ಇತ್ಯಾದಿ ವಚನದಿಂದ ತಿಳಿಸಲ್ಪಟ್ಟಿದೆ. ಇವ್ವರ್ಥಮ್ ಇತ್ಯಾದಿ ಈ ಅರ್ಥವು 2) ನಾಮಮ್ ಶೊಲ್ಲಿಲ್ ನಮೋನಾರಾಯಣಮೇ–ಎಂದು 3) ನನ್ಮಾಲೈಕೊಂಡು ನಮೋನಾರಣಾ" ಎಂದೂ, 4 ನಾವಾಯಿಲುಂಡೇ ನಮೋನಾರಣಾವೆನ್ನು – ಇತ್ಯಾದಿಯಾಗಿಯೂ, ಹೇಳುವ ಆಳ್ವಾರರ ಪಾಶುರಗಳಿಂದಲೂ ಸಿದ್ಧ. ಈ ಪಾಶುರಗಳಲ್ಲಿ ಪ್ರಣವ ಚತುರ್ಥಿರಹಿತವಾಗಿ ಅಷ್ಟಾಕ್ಷರ ವನ್ನು ಹೇಳಿರುವುದರಿಂದ ಇದು ಸರ್ವಾಧಿಕಾರವೆಂಬುದು ಸೂಚಿತ.

ಹಾಗಾದರೆ ಪ್ರಣವ ಚತುರ್ಥಿಗಳಿಲ್ಲದೆ ಈ ಮಂತ್ರವು ಅಷ್ಟಾಕ್ಷರವಾಗುವುದು ಹೇಗೆ ಎಂದರೆ ಇದು ಬ್ರಾಹ್ಮಣಾದಿಹಳುಕ್ಕು ಅಧೀತ ಮಾನ ಕ್ರಮತ್ತಿಲೇ ಎಂದು ವಿವರಿಸುತ್ತಾರೆ. ಅದಾಗಿ, ಈ ಮಂತ್ರವು ಬ್ರಾಹ್ಮಣಕ್ಷತ್ರಿಯ ವೈಶ್ಯರೂ ಓಂ ನಮೋ ನಾರಾಯಣಾಯೇತಿ ಮಂತ್ರೋಪಾಸಕಃ ಎಂದುಅಧ್ಯಯನ ಮಾಡಬಹುದಾದ ರೀತಿಯಲ್ಲಿ ಪ್ರಣವವೂ, ಚತುರ್ಥಿಯೂ ಸೇರಿ ಎಂಟಕ್ಷರವಾಗಿರುತ್ತದೆ. 5) ವೈದಿಕಂತಾಂತ್ರಿಕಂಚೈವ ಇತ್ಯಾದಿ

---

1 ವರಾಹ ಪುರಾಣ 139-63

2) ಕಿಡಂದನಂಬಿ ಕುಡಂದೈಮೇವಿ ಕೇಳ್ಲಾಲಾಯ್ ಉಲಗೈ
ಇಡಂದ ನಂಬಿ ಎಂಗಳ್‌ನಂಬಿ ಎರಿಞರರಣ್ಣುಯ
ಕಡಂದನಂಬಿ ಕಡಿಯಾರಿಲಂಗೈ ಉಲಗೈ ಈರಡಿಯಾಲ್
ನಡಂದನಂಬಿ ನಾಮಮ್ ಶೊಲ್ಲಿಲ್ ನಮೋನಾರಾಯಣಮೇ॥ ಪೆರಿಯ ತಿರುಮೊೞಿ (6-10-1)

ತಿರುಕ್ಕುಡಂದೆಯಲ್ಲಿ ಶಯನಿಸಿರುವ ಪರಿಪೂರ್ಣನು ವರಾಹ ರೂಪವನ್ನು ತಾಳಿ ಭೂಮಿಯನ್ನು ತನ್ನ ಕೋರೆಹಲ್ಲುಗಳಿಂದ ಮೀಟಿ ಮೇಲಕ್ಕೆತ್ತಿದವನು ನಮ್ಮ ಪರಿಪೂರ್ಣನು, ಶತ್ರುಗಳ ಕೋಟೆಯನ್ನು ನಾಶಮಾಡಿ ಲಂಕೆಯನ್ನು ಪ್ರವೇಶಿಸಿದವನು ಲೋಕವನ್ನೆಲ್ಲಾ ಎರಡು ಕಾಲುಗಳಿಂದ ಅಳೆದವನು ಅವನ ತಿರುನಾಮವು "ನಮೋನಾರಾಯಣ" ಎಂಬುದು

3) ಆಯಲ್ ನಿನ್ನವಲ್ ವಿನ್ನೈಯ್ಯೆ ಅಂಜನೇನ್ ಅಂಜ ಉಯನಿನ್ ತಿರುವಡಿಯೇ ಶೇರ್ವಾನ್ ।
ನಯಮ್ ನಿನ್ನನನ್ಮಾಲೈಕೊಂಡು ನಮೋನಾರಣಾವೆನ್ನುಮ್ ಶೊಲ್‌ಮಾಲೈಕಟ್ರೇನ್ ತೊೞುದು ॥ ಮುದಲ್ ತಿರುವಂದಾದಿ 57
ನಮೋನಾರಾಯಣಾಯೆಂಬ ಈ ಸೂಕ್ತಿ ಮಾಲೆಯನ್ನು ತಿಳಿದುಕೊಂಡೆ

4) ನಾವಾಯಿಲುಂಡೇ ನಮೋನಾರಣವೆನ್ನುಮ್ ಓವಾದುರೈಕ್ಕ ಉರೈಯುಂಡೇ
ಮೂಪಾದ ಮಾಕ್ಕದಿಕ್ಕಣ್ ಶೆಲ್ಲುವಹೈಯುಂಡೇ, ಎನ್ನೊರುವರ್ ತೀಕ್ಕದಿಕ್ಕಣ್ ಶೆಲ್ಲುಂ ತಿರಮ್ ॥ ಮುದಲ್ ತಿರು 95

5) ಪಾಂಚರಾತ್ರಾಗಮ

ಅಷ್ಟಾಕ್ಷರಶ್ಚ ಯೋ ಮನ್ತ್ರಃ ದ್ವಾದಶಾಕ್ಷರ ಏವಚ ।
ಷಡಕ್ಷರಶ್ಚ ಯೋ ಮನ್ತ್ರೋ ವಿಷ್ಣೋರಮಿತತೇಜಸಃ ।
ಏತೇ ಮನ್ತ್ರಾಃ ಪ್ರಧಾನಾಸ್ತು ವೈದಿಕಾಃ ಪ್ರಣವೈರ್ಯುತಾಃ ।
ಪ್ರಣವೇನ ವಿಹೀನಾಸ್ತು ತಾಂತ್ರಿಕಾ ಏವ ಕೀರ್ತಿತಾಃ ।
6) ನಸ್ವರಃ ಪ್ರಣವೋಙ್ಗಾನಿ ನಾಪ್ಯನ್ಯ ವಿಧಯಸ್ತಥಾ ।
ಸ್ತ್ರೀಣಾಂತು ಶೂದ್ರಜಾತೀನಾಂ ಮಂತ್ರ ಮಾತ್ರೋಕ್ತಿ ರಿಷ್ಯತೇ ।"
ಎನ್ಗಿರಪಡಿಯೇ ಪ್ರಣವ ಮೊ[illegible]ನ್ದಪೋದು,
1) "ತತ್ರೋತ್ತರಾಯಣಸ್ಯಾದಿ ರ್ಬಿಂದುಮಾ ನ್ವಿಷ್ಣು ರಂತತಃ ।
ಬೀಜ ಮಷ್ಟಾಕ್ಷರಸ್ಯ ಸ್ಯಾತ್ತೇನಾಷ್ಟಾಕ್ಷರತಾ ಭವೇತ್ ॥"
ಎನ್ಗಿರ ಪ್ರಕ್ರಿಯೈಯಾಲೇ ಎಟ್ಟೆ[illegible]ತ್ತುಮ್ ಅನುಸಂಧೇಯ ಮಾಹ ವಿಧಿಕ್ಕಪ್ಪಟ್ಟದು. ಪ್ರಣವ ಮೊ[illegible]ನ್ದಾಲುಮ್, ಅದು ಕೂಡಿನಾಲುಳ್ಳ ಫಲಮ್ ಇವ್ವಧಿಕಾರಿಹಳುಕ್ಕುಣ್ಡೆನ್ರು ನಿಂಡಮ್

---

ಈ ಮಂತ್ರವು ವೈದಿಕ, ತಾಂತ್ರಿಕ, ವೈದಿಕ ತಾಂತ್ರಿಕ ಎಂದು ಮೂರು ವಿಧವಾಗಿ ಪಂಚರಾತ್ರವೆಂಬಕ್ಷೀರ ಸಮುದ್ರದಲ್ಲಿ ಹೇಳಲ್ಪಟ್ಟಿದೆ. ಬ್ರಾಹ್ಮಣರಿಗೆ ಪ್ರಣವ ಸಹಿತವಾದ ವೈದಿಕವಾದ ಕರ್ಮಗಲ್ಲಿ ಅಧಿಕಾರ ರಾಜರುಗಳಿಗೆ ಪ್ರಣವ ಸಹಿತವಾಗಿಯೂ, ಪ್ರಣವರಹಿತವಾಗಿ ತ್ರಾಂತ್ರಿಕವಾಗಿಯೂ ಅನುಷ್ಠಿಸಲ್ಪಡತಕ್ಕದ್ದು. ವೈಶ್ಯ ಶೂದ್ರರಿಗೆ ತಾಂತ್ರಿಕವಾಗಿ ಕರ್ಮವು ಮಾಡತಕ್ಕದ್ದು. ಎಲ್ಲರೂ ಕರ್ಮವನ್ನು ತಾಂತ್ರಿಕವಾಗಿಯೂ ಮಾಡಬಹುದು. ಅಷ್ಟಾಕ್ಷರ, ದ್ವಾದಶಾಕ್ಷರ, ವಿಷ್ಣುಷಡಕ್ಷರವೆಂಬ ಈ ಮೂರು ಮಂತ್ರಗಳೂ ಮಹಾವಿಷ್ಣುವನ್ನು ಕುರಿತು ಹೇಳುವ ಮಂತ್ರಗಳಲ್ಲಿ ಪ್ರಧಾನ ಮಂತ್ರಗಳು. ವೈದಿಕ ಮಂತ್ರವೆಂದರೆ ಪ್ರಣವದಿಂದ ಕೂಡಿದುದು- ಪ್ರಣವವಿಲ್ಲದೆ ಹೇಳುವ ಮಂತ್ರಗಳು ತಾಂತ್ರಿಕ ಮಂತ್ರಗಳು ಸ್ತ್ರೀಶೂದ್ರರುಗಳಿಗೆ ಪ್ರಣವ, ಅಂಗಗಳು, ಸ್ವರ ಇತ್ಯಾದಿಗಳನ್ನು ಹೇಳಲು ಅಧಿಕಾರವಿಲ್ಲವೆಂದು 6) **ನಸ್ವರಃ ಪ್ರಣವೋಂಗಾನಿ** ಇತ್ಯಾದಿ ವಚನವು ಹೇಳುತ್ತದೆ- ಅವರುಗಳಿಗೆ ಪ್ರಣವವಿಹೀನವಾದ ಮಂತ್ರವನ್ನು ಉಚ್ಚರಿಸಬಹುದೆಂದು ವಿಧಿಸಿದೆ. ಹಾಗಾದರೆ ಪ್ರಣವವಿಲ್ಲದೆ ಅಷ್ಟಾಕ್ಷರತ್ವವು ಹೇಗೆ ಸಿದ್ಧಿಸುತ್ತದೆ, ಯೆಂದರೆ, "ಅ" ಎಂಬ ಬೀಜಾಕ್ಷರವನ್ನು ಸೇರಿಸಿಕೊಂಡು ಎಂಟಕ್ಷರವಾಗುತ್ತದೆ ಎಂದು 1) **ತತ್ರೋತ್ತರಾಯಣಸ್ಯಾದಿಃ** ಇತ್ಯಾದಿ ಅನುಗ್ರಹಿಸುತ್ತಾರೆ, ಅದಾಗಿ, ತತ್ರ– ಆ ಮಂತ್ರದಲ್ಲಿ ಉತ್ತರಾಯಣಸ್ಯ–, ನಾರಾಯಣಾಯೇತ್ಯು ಪರಿಷ್ಟಾತ್ ಎಂದು ಅನಂತರ ಹೇಳಿದ ನಾರಾಯಣ ಶಬ್ದದಲ್ಲಿರುವ "ಅಯನ" ಶಬ್ದದ ಆದಿಯಾದ ಅಕಾರವು, ಅಂತತಃ-ಕೊನೆಯಲ್ಲಿ ಬಿಂದು ಮಾನ್=ಅನುಸ್ವಾರದಿಂದ ಕೂಡಿದುದಾಗಿ "ಅಂ" ಎಂದಾಗುತ್ತದೆ. ವಿಷ್ಣುಃ-ವಿಷ್ಣುವಾಚಕವಾದ ಅಕಾರವು ಅಷ್ಟಾಕ್ಷರಸ್ಯ ಬೀಜಂಸ್ಯಾತ್–ಅಷ್ಟಾಕ್ಷರಕ್ಕೆ ಬೀಜಾಕ್ಷರ. ತೇನ–ಅದರಿಂದ ಕೂಡಿ, "ಅಂ ನಮೋನಾರಾಯಣಾಯ" ಎಂದು ಅಷ್ಟಾಕ್ಷರತಾ ಭವೇತ್–ಅಷ್ಟಾಕ್ಷರತ್ವವು ಸಿದ್ಧಿಸುತ್ತದೆ. **ಎನ್ಗಿರ ಪ್ರಕ್ರಿಯೈಯಾಲೇ** ಇತ್ಯಾದಿ– ಈ ರೀತಿಯಾದ ಕ್ರಮದಲ್ಲಿ ಎಂಟಿ[illegible]ಕ್ಷರಗ[illegible] ಅನುಸಂಧೇಯಗಳಾಗಿ ವಿಧಿಸಲ್ಪಟ್ಟವೆ. ಇದರಿಂದಾಗಿ ಪ್ರಣವ ಸಹಿತವಾದ ಅಷ್ಟಾಕ್ಷರದ ಅರ್ಥವು, ಪ್ರಣವವಿಲ್ಲದೆ ಬೀಜಾಕ್ಷರದಿಂದ ಕೂಡಿದ ಅಷ್ಟಾಕ್ಷರದಲ್ಲಿಯೂ ಶಾಬ್ದವಾಗಿಯೂ ಆರ್ಥವಾಗಿಯೂ ಅನುಸಂಧೇಯವು.

**ಪ್ರಣವಮೊ[illegible]ಂದಾಲುಮ್** ಇತ್ಯಾದಿ–ಪ್ರಣವರಹಿತವಾಗಿ ಅಷ್ಟಾಕ್ಷರವನ್ನು ಹೇಳಲು ವಿಧಿಸಿರುವ ಅಧಿಕಾರಿಗಳಿಗೆ, ಪ್ರಣವ ಸಹಿತವಾಗಿ ಅಷ್ಟಾಕ್ಷರವನ್ನು ಹೇಳುವ ಅಧಿಕಾರಿಗಳಿಗೆ ಉಂಟಾಗುವ ಫಲವು ಸಮಾನವೆಂಬುದು

---

6) ನಾರದೀಯ ಕಲ್ಪ.
1) ನಾರದೀಯ 1-57

2) "ಕಿಂ ತತ್ರ ಬಹುಭಿರ್ಮನ್ತ್ರೈಃ ಕಿಂ ತತ್ರ ಬಹುಭಿರ್ವ್ರತೈಃ ।
ನಮೋ ನಾರಾಯಣಾಯೇತಿ ಮನ್ತ್ರಸ್ಸರ್ವಾರ್ಥಸಾಧಕಃ" ಇತ್ಯಾದಿಹಳಾಲೇ ಸಿದ್ಧಮ್.

ಪ್ರಣವರಾಹಿತ್ಯೇ ಕಥಂ ತದರ್ಥಫಲ ಸಿದ್ಧಿರಿತ್ಯತ್ರಾಹ ;-

ಇಪ್ಪಡಿ ಪ್ರಣವ ಮೊ(ಱಿ)ಯ ಅಷ್ಟಾಕ್ಷರಮಾನಪೋದು ಪ್ರಣವತ್ತಿಲ್ ಅರ್ಥಮೆಲ್ಲಾಮ್ ಇಪ್ರಣವ ಪ್ರತಿಚ್ಛನ್ಧಮಾಹ ಶಾಸ್ತ್ರಮ್ ವಹುತ್ತ ಅಕ್ಷರತ್ತಿಲೇ, ಪ್ರಥಮಾಕ್ಷರಮ್ ಸರ್ವಸಙ್ಗ್ರಾಹಕಮಾನ ಕಣಕ್ಕಿಲೇ ಶುರಙ್ಗಮನುಸನ್ಧೇಯಮ್ ಮಧ್ಯಮಾಕ್ಷರತ್ತಿಲ್ ಪೊರುಳುಮ್ ಅರ್ಥಸಿದ್ಧಮಾಮ್.
ಇದಿಲ್ ತೃತೀಯಾಕ್ಷರತ್ತಿಲ್ ಶೊಲ್ಲುಹಿರ ಜ್ಞಾತೃತ್ವಾದಿಹಳುಮ್ ನಮಸ್ಸಿಲ್ ದ್ವಿತೀಯಾಕ್ಷರತ್ತಿಲ್ ಪ್ರಕೃತಿಯಾಲೇ ಅನುಸಂಧೇಯಮ್.

---

2) ಕಿಂತತ್ರಬಹುಭಿರ್ಮಂತ್ರೈಃ ಇತ್ಯಾದಿಗಳಿಂದ ಸಿದ್ಧ. ಅದಾಗಿ ಅನೇಕ ಮಂತ್ರಗಳಿಂದ ಏನು ಫಲವೋ ಅನೇಕ ವ್ರತಗಳಿಂದ ಏನುಫಲವೋಅವೆಲ್ಲ "ನಮೋನಾರಾಯಣಾಯ"ಎಂಬ ಮಂತ್ರ ಜಪದಿಂದ ಸಾಧಿಸಲ್ಪಡುತ್ತವೆ. ಪ್ರಣವ ವಿಹೀನವಾದ ಈ ಮಂತ್ರವು ಆಯಾಯಾ ಅಧಿಕಾರಿಗಳಿಗೆ ಪ್ರಣವ ಸಹಿತವಾದ ಮಂತ್ರವನ್ನು ಜಪಿಸುವವರಿಗೆ ಉಂಟಾಗುವ ಸರ್ವ ಫಲವನ್ನೂ ಸಾಧಿಸಿಕೊಡತಕ್ಕದ್ದುಎಂದು ತಾತ್ಪರ್ಯ.

ಪ್ರಣವದಲ್ಲಿ ಅಕಾರ, ಉಕಾರ ಮಕಾರಗಳು ಸೇರಿವೆ. "ಅಂ" ಎಂಬ ಬೀಜಾಕ್ಷರದಲ್ಲಿ ಉಕಾರವಿಲ್ಲ. ಮೇಲೂ ಪ್ರಣವದಲ್ಲಿ ಶೇಷತ್ವ ಬೋಧಕವಾದ ಲುಪ್ತ ಚತುರ್ಥ್ಯವು ಬೀಜಾಕ್ಷರದಲ್ಲಿ ಹೇಗೆ ಅನುಸಂಧಾನ ಮಾಡುವುದು ಎಂಬ ಆಕ್ಷೇಪಗಳಿಗೆ ಸಮಾಧಾನವನ್ನು ಇಪ್ಪಡಿ ಪ್ರಣವಮೊ(ಱಿ)ಯ ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಹೀಗೆ ಪ್ರಣವವಿಲ್ಲದೆ. "ಅಂ"ಎಂಬ ಬೀಜಾಕ್ಷರವನ್ನು ಸೇರಿಸಿಕೊಂಡು ಅಷ್ಟಾಕ್ಷರವಾದಾಗ, ಪ್ರಣವದಲ್ಲಿ ಹೇಳುವ ಅರ್ಥವೆಲ್ಲಾ, ಪ್ರಣವಕ್ಕೆ ಬದಿಲಾಗಿ ಶಾಸ್ತ್ರವು ವಿಧಿಸಿರುವ 'ಅಂ' ಎಂಬ ಅಕ್ಷರದಲ್ಲಿ ಸರ್ವಾರ್ಥಗಳೂ **ಪ್ರಥಮಾಕ್ಷರಂ ಸರ್ವ ಸಂಗ್ರಾಹಕ ಮಾನ ಕಣಕ್ಕಿಲೇ** – ಪ್ರಥಮಾಕ್ಷರವಾದ ಪ್ರಣವವು . ಮೇಲುಳ್ಳ 'ನಮೋನಾರಾಯಣಾಯ" ಎಂಬ ಪದಗಳ ಅರ್ಥಗಳನ್ನೆಲ್ಲಾ ಸಂಗ್ರಹಿಸಿ ಹೇಳುವ ರೀತಿಯಲ್ಲಿ, ಸಂಗ್ರಹವಾಗಿ, ಅನುಸಂಧೇಯಗಳು ಇದರ ತಾತ್ಪರ್ಯವೇನೆಂದರೆ, "ನಸ್ವರಃ ಪ್ರಣವೋಂಗಾನಿ" ಎಂಬ ವಚನದಲ್ಲಿ ಅಕಾರ, ಉಕಾರ ಮಕಾರಗಳಿಂದ ಸಮಸ್ತವಾದ ಪ್ರಣವವೇ ಸ್ತ್ರೀ ಶೂದ್ರಾದಿಗಳಿಗೆ ನಿಷಿದ್ಧವಾದದ್ದು–ಬಿಡಿಸಿ ಅಕ್ಷರಗಳನ್ನು ಹೇಳುವುದು ನಿಷಿದ್ಧವಲ್ಲ ಆದ್ದರಿಂದ ಉಕಾರವನ್ನು ಬಿಟ್ಟು ಅ ಕಾರ ಮ ಕಾರಗಳನ್ನು ಅನುಸಂಧಾನ ಮಾಡುವುದರಿಂದ ಬಾಧಕವೇನೂ ಇಲ್ಲ. 'ಅಂ' ಎಂಬಲ್ಲಿ "ಮಾ ಪದಾಂತಸ್ಯ" ಎಂಬ ವ್ಯಾಕರಣ ಸೂತ್ರದ ಪ್ರಕಾರ ಪದಾಂತ್ಯದ ಮಕಾರವು ಅನುಸ್ವಾರವಾಗುತ್ತದೆ ಎಂದು ಹೇಳಿರುವಂತೆ, ಮ ಕಾರವು ಅನುಸ್ವಾರವಾಗಿದೆ. ಆಗ ಲುಪ್ತಚತುರ್ಥ್ಯಂತವಾದ ಅ ಕಾರದಲ್ಲಿ ಸರ್ವರಕ್ಷಕತ್ವ, ಸರ್ವಕಾರಣತ್ವಗಳೊಡನೆ ಚತುರ್ಥ್ಯರ್ಥವಾದ ಶೇಷಿತ್ವವೂ ಮತ್ತು ಇತರ ಲಕ್ಷಣಗಳೂ ಅನುಸಂಧಿಸಲ್ಪಡಬಹುದು. "ಮ"ಕಾರಸ್ಥಾನೀಯುವಾದ ಅನುಸ್ವಾರದಲ್ಲಿ ಜ್ಞಾತೃತ್ವ ಜ್ಞಾನತ್ವಾದಿಗಳನ್ನು ಅನುಸಂಧಾನ ಮಾಡಬಹುದು. **"ಮಧ್ಯಮಾಕ್ಷರತ್ತಿನ್ ಪೊರುಳುಂ"** ಇತ್ಯಾದಿ – "ಸರ್ವಂ ವಾಕ್ಯಂ ಸಾವಧಾರಣಮ್" ಎಂಬ ನ್ಯಾಯದಂತೆ 'ಉ' ಕಾರದ ಏವಕಾರಾರ್ಥವೂ ಅರ್ಥಾತ್ ಸಿದ್ಧವಾಗುತ್ತದೆ. ಮ ಕಾರಸ್ಥಾನದಲ್ಲಿ ಅನುಸ್ವಾರವನ್ನು ಅಂಗೀಕರಿಸದೆ ಇದ್ದ ಪಕ್ಷದಲ್ಲಿ, "ನಮಃ" ಎಂಬ ಪದದಲ್ಲಿಯ ದ್ವಿತೀಯಾ

---

2) ನಾರದೀಯ 1-41

**ಅಥ ಪ್ರಣವಸ್ಯ ಸ್ವತನ್ತ್ರಸ್ಥಿತೌ ಮಂತ್ರಾನ್ತರ ಶೇಷಸ್ಥಿತೌಚ ಅರ್ಥಾ ಆಹ.**

**ಪ್ರಣವಮ್ ಸ್ವತನ್ತ್ರಮಾನಪೋದು ಏಕಮಾತ್ರಮ್, ದ್ವಿಮಾತ್ರಮ್. ತ್ರಿಮಾತ್ರಮ್, ಸಾರ್ಧತ್ರಿ ಮಾತ್ರಮ್ ಎನ್ರಾರ್ಪೋಲೇ ಪಲಪ್ರಕಾರಙ್ಗಳಾಯ್ ಅರ್ಥಙ್ಗಳು ಮುಪ್ಪಡಿಯೇ ಕಾರ್ಯಕಾರಣಾವಸ್ಥ ಪರಮಾತ್ಮ ವಾಚಕತ್ವಾದಿ ಪ್ರಕ್ರಿಯೈಯಾಲೇ ಪಲವಹೈಪ್ಪಟ್ಟಿರುಕ್ಕುಮ್. ವ್ಯಾಪಕ ಮನ್ತ್ರಙ್ಗಳಿಲುಮ್ ಪ್ರಣವತ್ತೈ ಪರಮಾತ್ಮ ಪ್ರಾಧ್ಯಾನಮಾಹವುಮ್ ಶಿಲಶಾಸ್ತ್ರಙ್ಗಳ್ ಶೊಲ್ಲುಮ್.**

**ಪ್ರಣವಮಾಹಾತ್ಮ್ಯಮಾಹ**

**ಇದಿನ್ ಪ್ರಭಾವಮ್ 1) "ಆದ್ಯಂತು ತ್ರ್ಯಕ್ಷರಂ ಬ್ರಹ್ಮ ತ್ರಯೀ ಯತ್ರ ಪ್ರತಿಷ್ಠಿತಾ ।**
**ಸ ಗುಹ್ಯೋನ್ಯ ಸ್ತ್ರಿವೃದ್ವೇದೋ ಯಸ್ತಂ ವೇದ ಸ ವೇದವಿತ ॥"ಇತ್ಯಾದಿಹಳಿಲೇ ಪ್ರಸಿದ್ಧಮ್.**

---

ಕ್ಷರವಾದ "ಮ' ಎಂಬ ಪ್ರಕೃತಿಯಲ್ಲಿ ಜ್ಞಾತೃತ್ವಾದಿಗಳು ಅನುಸಂಧೇಯ. ಈ ರೀತಿಯಲ್ಲಿ ಪ್ರಣವದಲ್ಲಿಯ, ಅಕಾರ, ಉಕಾರ, ಮಕಾರಗಳ ಅರ್ಥಗಳು, "ಅಂ" ಎಂಬ ಬೀಜಾಕ್ಷರದಲ್ಲಿಯ ಅಕಾರ. ಅನುಸ್ವಾರ ರೂಪವಾದ ಮಕಾರದಲ್ಲಿಯೂ ಯಥಾಕ್ರಮ ಅನುಸಂಧಿಸಲ್ಪಟ್ಟು, ಉಕಾರದ ಅರ್ಥವು, ಅರ್ಥಾತ್‌ಸಿದ್ಧವಾಗಿಯೂ ಅನುಸಂಧಿಸಲ್ಪಡಬಹುದು ಎಂದು ತಾತ್ಪರ್ಯ.

**ಪ್ರಣವಾರ್ಥ ವಿವರಣೆ**

**ಪ್ರ ವದ ಹಿರಿಮೆ :** ಮಂತ್ರಘಟಕವಲ್ಲದ ಕೇವಲ ಪ್ರಣವದ ಪ್ರಾಶಸ್ತ್ಯವನ್ನು **ಪ್ರಣವಮ್ ಸ್ವತಂತ್ರ ಮಾನ ಪೋದು** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಪ್ರಣವವು ಸ್ವತಂತ್ರವಾಗಿರುವಾಗ ಏಕಮಾತ್ರೆ, ದ್ವಿಮಾತ್ರೆ, ತ್ರಿಮಾತ್ರೆ ಸಾರ್ಧತ್ರಿಮಾತ್ರೆ ಎಂಬಂತೆ ಅನೇಕ ಪ್ರಕಾರವಾಗಿ, ಅರ್ಥಗಳೂ ಹಾಗೆಯೇ ಕಾರ್ಯಾವಸ್ಥ ಪರಮಾತ್ಮವಾಚಕ ಪ್ರಕ್ರಿಯೆಯಿಂದ ಅನೇಕ ವಿಧಗಳಾಗಿರುತ್ತವೆ. ಇದರ ವಿವರಣವೇನೆಂದರೆ ಪ್ರಶ್ನೋಪನಿಷತ್ತಿನಲ್ಲಿ ಸತ್ಯಕಾಮಪ್ರಶ್ನದಲ್ಲಿ, ಏಕಮಾತ್ರ ಪ್ರಣವವನ್ನು ಉಪಾಸನೆ ಮಾಡುವವರಿಗೆ ಮನುಷ್ಯಲೋಕ ಪ್ರಾಪ್ತಿಯೂ ದ್ವಿಮಾತ್ರ ಪ್ರಣವೋಪಾಸಕರಿಗೆ ಅಂತರಿಕ್ಷ ಪ್ರಾಪ್ತಿಯೂ, ತ್ರಿಮಾತ್ರ ಪ್ರಣವೋಪಾಸಕರಿಗೆ ಪರಮಾತ್ಮ ಪ್ರಾಪ್ತಿಯೂ ಹೇಳಲ್ಪಟ್ಟಿದೆ. ಅಥರ್ವ ಶಿಖೋಪನಿಷತ್ತಿನಲ್ಲಿ ಓ ಮಿತ್ಯೇತದಕ್ಷರಮ್ । ಅಸ್ಯಪಾದಾಶ್ಚತ್ವಾರಃ । ಎಂದಾರಂಭಿಸಿ ಸಾರ್ಧತ್ರಿಮಾತ್ರ ಪ್ರಣವೋಪಾಸನವೂ ಹೇಳಲ್ಪಟ್ಟಿದೆ. ಇದನ್ನನುಸರಿಸಿ

ಏಕಮಾತ್ರೋ ಭವೇತ್ ಹ್ರಸ್ವಃ ದ್ವಿಮಾತ್ರೋ ದೀರ್ಘ ಉಚ್ಯತೇ ।
ತ್ರಿಮಾತ್ರಸ್ತು ಪ್ಲುತೋ ಜ್ಞೇಯಃ ವ್ಯಂಜನಂತ್ವರ್ಧ ಮಾತ್ರಕಮ್ ॥

ಎಂದು ಸ್ಮೃತಿವಚನವೂ ಏರ್ಪಟ್ಟಿದೆ. ಈ ರೀತಿಯಲ್ಲಿ ಪ್ರಣವವು **ಪಲಪ್ರಕಾರಮಾಯ್**–ಅನೇಕ ಪ್ರಕಾರವಾಗಿದೆ. ಅದಕ್ಕನುಗುಣವಾಗಿ **ಅರ್ಥಂಗಳು ಮುಪ್ಪಡಿಯೇ** ಇತ್ಯಾದಿ–ಅರ್ಥಗಳೂ ಅನೇಕ ವಿಧಗಳಾಗಿವೆ ಏಕಮಾತ್ರ ಪ್ರಣವವು ಕಾರ್ಯರೂಪ ಭೂಲೋಕ ಶರೀರಕ ಪರಮಾತ್ಮನನ್ನು ತಿಳಿಸುತ್ತದೆ ದ್ವಿಮಾತ್ರ ಪ್ರಣವವು ಕಾರ್ಯರೂಪವಾದ ಅಂತರಿಕ್ಷ ಲೋಕ ಶರೀರಕ ಪರಮಾತ್ಮನನ್ನು ತಿಳಿಸುತ್ತದೆ. ತ್ರಿಮಾತ್ರ ಪ್ರಣವವು ಕಾರ್ಯರೂಪ ಸ್ವರ್ಗಲೋಕ ಶರೀರಕ ಪರಮಾತ್ಮನನ್ನು ತಿಳಿಸುತ್ತದೆ ಎಂದು ತಾತ್ಪರ್ಯ. **ವ್ಯಾಪಕ ಮಂತ್ರಂಗಳಿಲುಮ್**–ಇತ್ಯಾದಿ ವ್ಯಾಪಕ ಮಂತ್ರಘಟಕವಾದ ಪ್ರಣವವೂ ಅಖಂಡವಾಗಿದ್ದು ಪರಮಾತ್ಮವಾಚಕವೆಂದು ಕೆಲವು ಶಾಸ್ತ್ರಗಳು ಹೇಳುತ್ತವೆ.

ಅನಂತರ ಮೂರು ಅಕ್ಷರಗಳಿಂದ ಕೂಡಿದ ಪ್ರಣವದ ಪ್ರಭಾವವನ್ನು **ಇದಿನ್ ಪ್ರಭಾವಮ್** ಎಂದಾರಂಭಿಸಿ ತಿಳಿಸುತ್ತಾರೆ. 1 **ಆದ್ಯಂತು ತ್ರ್ಯಕ್ಷರಂಬ್ರಹ್ಮ ಇತ್ಯಾದಿ, ಮೂರು ವರ್ಣಗಳಿಂದ ಕೂಡಿದ, ಬ್ರಹ್ಮಶಬ್ದ**

---

1) ಮನುಸ್ಮೃತಿ 11-65)

## ಪ್ರಣವಸ್ಯ ಅಧಿಕ ಪ್ರಶಂಸಾ, ಆತ್ಮ ಸಮರ್ಪಣ ಪರತ್ವಾತ್.

**ಇದು 1) "ಹವಿರ್ಗೃಹೀತ್ವಾತ್ಮರೂಪಂ ವಸುರಣ್ಯೇತಿ ಮನ್ತ್ರತಃ ।**
**ಜುಹುಯಾ ತ್ಪ್ರಣವೇನಾಗ್ನಾ ವಚ್ಯುತಾಖ್ಯೇ ಸನಾತನೇ ॥**
**ಎನ್ಱು ಇರಪಡಿಯೇ ನ್ಯಾಸವಿದ್ಯೈಯಿಲ್ ಸ್ವತಂತ್ರಮಾಯ್ ಆತ್ಮ ಸಮರ್ಪಣಪರಮಾಯಿರುಕ್ಕುಮ್. ಅಕ್ಕಟ್ಟಳೈಯಿಲೇ ಇಜ್ಙುನ್ ಸಮರ್ಪಣ ಪರಮಾಹವುಮ್ ಯೋಜಿಪ್ಪರ್‌ಹಳ್. ಇವ್ವಿಡತ್ತಿಲ್ ಸ್ವರೂಪ**

---

ವಾಚ್ಯವಾದ ಪ್ರಣವವು **ಆದ್ಯಂ** – ಸರ್ವವೇದಗಳಿಗೂ ಆದಿಯೆಂದು ಹೇಳಲ್ಪಡುತ್ತದೆ. "ಯದ್ವೇದಾದೌಸ್ವರ ಪ್ರೋಕ್ತಃ"ಎಂಬುದು ಶ್ರುತಿ. **ಯತ್ರ**–ಪ್ರಣವದಲ್ಲಿ **ತ್ರಯೀ**–ವೇದವು,**ಪ್ರತಿಷ್ಠಿತಾ**–ಅಡಗಿದೆಯೋ,**ಸಗುಹ್ಯಃ**–ಇದು ಸ್ತ್ರೀಶೂದ್ರಾದಿಗಳಿಗೆ ಉಪದೇಶಿಸದೆ ರಹಸ್ಯವಾಗಿರಬೇಕಾದದ್ದು. **ಅನ್ಯಃ**–ಋಗ್ಯಜುಸ್ಸಾಮ ವೇದಗಳಿಗಿಂತ ಬೇರೆಯಾದದ್ದು; **ತ್ರಿವೃತ್** –ಮೂರು ಅಕ್ಷರಗಳಿಂದ ಕೂಡಿದ **ವೇದಃ**–ವೇದವಿದು. **ಯಸ್ತಂವೇದ ಸವೇದವಿತ್**–ಇದನ್ನು ಸಾರ್ಥವಾಗಿ ಅಧ್ಯಯನ ಮಾಡಿದವನು ಸಕಲ ವೇದಗಳನ್ನೂ ಅಧ್ಯಯನ ಮಾಡಿದಂತಾಗುತ್ತದೆ.

"ಓಂಕಾರ ಪ್ರಭವಾವೇದಾಃ,–ಅಕಾರಾತ್ಮಾಸ್ತಿ ಋಗ್ವೇದಃ, ಉಕಾರಾತ್ಮಾಯಜುಶ್ರುತಿಃ ।
ಸಾಮವೇದೋ ಮಕಾರಾತ್ಮಾ ಅನುಸ್ವಾರೋಹ್ಯಥರ್ವಣಃ ॥"

ಎಂದು ಹೇಳಿರುವುದರಿಂದ ಪ್ರಣವವನ್ನು ಹೇಳಿದರೆ ಸಕಲವೇದಗಳನ್ನೂ ಹೇಳಿದಂತಾಗುತ್ತದೆ ಎಂಬುದ ಭಾವ.

ಅಖಂಡ ಪ್ರಣವವು ಆತ್ಮಸಮರ್ಪಣ ಕರಣ ಮಂತ್ರವಾಗಿಯೂ ಬಳಸಲ್ಪಡುತ್ತದೆ ಎಂದು 1) **ಇದ ಹವಿರ್ಗೃಹೀತ್ವಾತ್ಮರೂಪಂ** ಎಂದಾರಂಭಿಸಿ ನಿರೂಪಿಸುತ್ತಾರೆ. ಇದು ಈ ಪ್ರಣವವು ಆತ್ಮರೂಪ ಹವಿಸ್ಸನ್ನು ಮನಸ್ಸಿನಿಂದ ಎತ್ತಿಕೊಂಡು, "ವಸುರಣ್ಯೋ ವಿಭೂರಸಿ" ಎಂದಾರಂಭಿಸುವ ಮಂತ್ರದಿಂದ ಸನಾತನನಾದ ಅಚ್ಯುತನೆಂಬ ಅಗ್ನಿಯಲ್ಲಿ "ಬ್ರಹ್ಮಣೇತ್ವಾಮಹಸ ಓಮ್" ಎಂದು ಪ್ರಣವ ಪೂರ್ವಕ ಹೋಮ ಮಾಡಬೇಕು, ಎಂದು ಹೇಳಿರುವ ರೀತಿಯಲ್ಲಿ **ನ್ಯಾಸವಿದ್ಯೈಯಿಲ್** – ತೈತ್ತಿರೀಯ ಶ್ರುತಿಯಲ್ಲಿ ಹೇಳಿರುವ ನ್ಯಾಸವಿದ್ಯೆಯಲ್ಲಿ **ಸ್ವತಂತ್ರಮಾಯ್** – ಸ್ವತಂತ್ರವಾಗಿ (ಇತರ ಮಂತ್ರಗಳೊಡನೆ ಸೇರದೆ) **ಆತ್ಮಸಮರ್ಪಣ ಪರಮಾಯಿರುಕ್ಕುಮ್**–'ಓಮಿತ್ಯಾತ್ಮಾನಂ ಯುಂಜೀತ' ಎಂದು ಆತ್ಮಸಮರ್ಪಣ ಪರವಾಗಿ ವಿನಿಯುಕ್ತವಾಗಿದೆ. "ಓಮ್ ಇತ್ಯಾತ್ಮಾನಂ ಯುಂಜೀತ" ಎಂಬಲ್ಲಿ "ಬ್ರಹ್ಮಣೇ ಮಹಸೇ" ಎಂದು ಚತುರ್ಥ್ಯಂತ ಪದಾಂತರವನ್ನು ಹೇಳಿರುವುದರಿಂದ ಈ ಪದವನ್ನು ಪ್ರತಿಪಾದಿಸುವ ಪ್ರಣವ ಪ್ರಥಮಾಕ್ಷರದಲ್ಲಿಯೂ ಚತುರ್ಥ್ಯಂತವು ಹೇಳಲ್ಪಟ್ಟು ಲುಪ್ತವಾಗಿದೆ ಎಂಬುದು ಯುಕ್ತವೆಂದು ಭಾವ.

1) "ಈ ದೃಶಃ ಪರಮಾತ್ಮಾಯಂ ಪ್ರತ್ಯಗಾತ್ಮಾ ತಥೇ ದೃಶಃ !
ತತ್ಸಂಬಂಧಾನು ಸಂಧಾನಮ್ ಇತಿಯೋಗಃ ಪ್ರಕೀರ್ತಿತಃ ॥

ಎಂಬ ಶಾಂಡಿಲ್ಯವಚನವೂ, "ಕಣ್ಣಪುರ ಮೊನ್ಱುಡೈಯಾನುಕ್ಕಡಿಯೇನ್ ಒರುವರ್ಕ್ಕುರಿಯೇನೋ" (ಪೆರಿಯ ತಿರುಮೊೞಿ 8–9–3) ಎಂಬ ಪರಕಾಲಮುನಿಯ ಶ್ರೀ ಸೂಕ್ತಿಯೂ, ಕೇವಲ ಸ್ವರೂಪ ಸಮರ್ಪಣ ಪರವಾಗಿಯೋ ಅಂದರೆ "ಈ ಜೀವವು ಭಗವಂತನಿಗೇ ಸಮರ್ಪ್ಯನು, ಅವನಿಗೇ ಶೇಷಭೂತನು ಇತರರಿಗಲ್ಲ, ಎಂಬ ಶೇಷ ಶೇಷಿಭಾವಸಂಬಂಧ ಪರವಾಗಿಯೋ, ಭರಸಮರ್ಪಣ ಪರ್ಯಂತವಾದ ಆತ್ಮಸಮರ್ಪಣ ಪರವಾಗಿಯೋ, ಯೋಜಿಸಲು ಶಕ್ಯ. ಉಭಯ ವಿಧದಲ್ಲಿಯೂ ಪ್ರಕೃತ ವಿಷಯಕ್ಕೆ ಆನುಗುಣ್ಯವಿದೆ. **ಅಕ್ಕಟ್ಟಳೈಯಿಲ್** – ನ್ಯಾಸವಿದ್ಯೆಯಲ್ಲಿ ಆತ್ಮ ಸಮರ್ಪಣ ಕರಣಮಂತ್ರವಾಗಿ ಪ್ರಣವವು ಲಘುತಚ್ಛೃರ್ಪಾಂಃತವಾಗಿ ಇರುವ ರೀತಿಯಲ್ಲಿ **ಇಂಗುಂ**–ಅಷ್ಟಾಕ್ಷರ ಮಂತ್ರದಲ್ಲೂ, ಪ್ರಣವವನ್ನು **ಸಮರ್ಪಣಪರಮಾಹವುಮ್**-

**ಜ್ಞಾನಪ್ರಾಧಾನ್ಯತ್ತಾಲೇ ಶೇಷತ್ವಾನುಸಂಧಾನ ಮಾತ್ರಮ್ ಉಪಜೀವ್ಯಮೆನ್ರುಮ್ ಯೋಜಿಪ್ಪರ್‌ಹಳ್. ಅಪ್ಪೋದು ಇಶ್ಶೇಷತ್ವಜ್ಞಾನಾನುಸಂಧಾನಮ್ ಅಧಿಕಾರತ್ತಿಲೇ ಶೇರುಮ್.** 2) **ಕ್ಷೇತ್ರಜ್ಞಸ್ಯೇಶ್ವರ ಜ್ಞಾನಾದ್ವಿ ಶುದ್ಧಿಃ ಪರಮಾಮತಾ" ಎನ್ರದು ಶೇಷಿತತ್ವಜ್ಞಾನಮಾತ್ರ ಪರಮಾನಪೋದು ಉಪಾಯಾ ನರ್ಹತಾನಿವೃತ್ತಿಪರಮ್. ಉಪಾಯರೂಪಜ್ಞಾನಾನ್ತರತ್ತೈ ವಿವಕ್ಷಿಕ್ಕುಮ್ಪೋದು ಮೋಕ್ಷಪರಮ್.**

**ಇಪ್ಪ್ರಣವಾರ್ಥಾನು ಸಂಧಾನಕ್ರಮತ್ತೈ,**

---

ಇತ್ಯಾದಿ–ಸಮರ್ಪಣ ಪರವಾಗಿಯೂ, ಯೋಜಿಸುತ್ತಾರೆ. ಹಾಗಾದರೆ ಪ್ರಣವಕ್ಕೆ ಸ್ವರೂಪ ಜ್ಞಾನ ಜನಕತ್ವವು ಕೂಡುವುದು ಹೇಗೆ ಎಂದರೆ **ಇವ್ವಿಡತ್ತಿಲ್** ಎಂದಾರಂಭಿಸಿ ಅದನ್ನೂ ಆಚಾರ್ಯರು ನಿರ್ವಹಿಸುತ್ತಾರೆ. ಸಖಂಡ ಪ್ರಣವದಲ್ಲಿ ಆತ್ಮ ಸಮರ್ಪಣಕ್ಕೆ ಪೂರ್ವಭಾವಿಯಾಗಿ ಭಗವಂತನಿಗೆ ಶೇಷತ್ವಾನು ಸಂಧಾನಜ್ಞಾನವು ಮಾತ್ರ ಉಪಜೀವ್ಯವೆಂದು ಯೋಜಿಸುತ್ತಾರೆ. **ಅಪ್ಪೋದು** ಇತ್ಯಾದಿ–ಆಗ ಈ ಶೇಷತ್ವಾನು ಸಂಧಾನವು–ಅಂದರೆ ಜೀವನು ಭಗವಂತನಿಗೆ ಶೇಷಭೂತನೆಂಬ ಜ್ಞಾನವು **ಅಧಿಕಾರತ್ತಿಲೇಶೇರುಮ್**– ಉಪಾಯಾನುಷ್ಠಾನ ಸಂಪಾದಕ ವಾದ್ದರಿಂದ ಅಧಿಕಾರ ಕೋಟಿ ಪ್ರವಿಷ್ಟವು. ಪ್ರಣವವು ಅಧಿಕಾರ ಪರವೆಂದೂ, ಉಪಾಯಪರವೆಂದೂ ಹೇಳುವು ದಕ್ಕೆ ಪ್ರಮಾಣ 2) **ಕ್ಷೇತ್ರಜ್ಞಸ್ಯೇಶ್ವರಜ್ಞಾನಾತ್** ಇತ್ಯಾದಿ-ಈ ವಚನಕ್ಕೆ ಎರಡುವಿಧವಾಗಿ ತಾತ್ಪರ್ಯವನ್ನು ಅನುಗ್ರಹಿಸುತ್ತಾರೆ. ಸ್ವರೂಪ ಜ್ಞಾನದಿಂದಶೇಷಿತ್ವ ಜ್ಞಾನ-ಜೀವನಿಗೆ ಈಶ್ವರ ಅಥವಾ ಶೇಷಿತತ್ವ ಜ್ಞಾನವುಂಟಾಗಿ **ಉಪಾಯಾನರ್ಹತಾ ನಿವೃತ್ತಿಪರಮ್** – ಉಪಾಯಕ್ಕೆ ತಾನು ಅನರ್ಹನೆಂಬ ಅಶುದ್ಧಿರೂಪ ಅಜ್ಞಾನ ನಿವೃತ್ತಿಪರ. ಭಗವಂತನಿಗೆ ತಾನು ಶೇಷನೆಂದೂ ಭಗವಂತನು ಶೇಷಿ–ಸ್ವಾಮಿ ಎಂದೂ ಜ್ಞಾನವು ಉಂಟಾದರೆ, ಶೇಷವಸ್ತು ಶೇಷಿ. ಗೇನೆ ಸೇರಿದ್ದುದು, ತನಗಲ್ಲ ಎಂದು ಸ್ವಸ್ವಾತಂತ್ರ್ಯ ನಿವೃತ್ತಿರೂಪ ಅಜ್ಞಾನವು ಹೋಗುತ್ತದೆ ಎಂದು ಭಾವ ಆಗ ಶೇಷ ವಸ್ತುವನ್ನು ಶೇಷಿಗೇನೇ ಸಮರ್ಪಿಸಬೇಕೆಂಬ ಜ್ಞಾನವು ಉಂಟಾಗುತ್ತದೆ. ಈ ಜ್ಞಾನವು ಉಪಾಯಾನು ಷ್ಠಾನಕ್ಕೆ ಅನರ್ಹತ್ವವನ್ನು ಹೋಗಲಾಡಿಸುತ್ತದೆ ಎರಡನೆಯದಾಗಿ **ಉಪಾಯರೂಪ ಜ್ಞಾನಾಂತರತ್ತೈ** ಇತ್ಯಾದಿ–ಈಶ್ವರ ಜ್ಞಾನಾತ್ ಎಂಬಲ್ಲಿ ಈಶ್ವರ ವಿಷಯಕ ಭಕ್ತಿ ಪ್ರಪತ್ತಿರೂಪ ಉಪಾಯಜ್ಞಾನವನ್ನು ವಿವಕ್ಷಿಸಿ ದರೆ, **ಮೋಕ್ಷಪರಮ್**–"ವಿಶುದ್ಧಿಃಪರಮಾಮತಾ" ಎಂಬಲ್ಲಿ ವಿಶುದ್ಧಿಯು ಪ್ರಕೃತಿ ಸಂಬಂಧ ರೂಪವಾದ ಅಶುದ್ಧಿ ಯನ್ನು ನಿಶ್ಶೇಷವಾಗಿ ಹೋಗಲಾಡಿಸಿ ಮೋಕ್ಷವನ್ನು ಕೊಡುತ್ತದೆ ಎಂದು ತಾತ್ಪರ್ಯ, ೧

## ಪ್ರಣವವನ್ನು ವಿಭಜಿಸಿ ಪೂರ್ವಾಚಾರ್ಯರುಗಳು ಹೇಳಿರುವ ಅರ್ಥ.

ಅನಂತರ ಪ್ರಣವಾರ್ಥಾನು ಸಂಧಾನ ಕ್ರಮವನ್ನು ಪ್ರಮಾಣವಚನ ಪೂರ್ವಕ ಆಚಾರ್ಯರು ತಿಳಿಸಿರುತ್ತಾರೆ ಆದಾಗಿ **ಇಪ್ರಣವಾರ್ಥಾನು ಸಂಧಾನ ಕ್ರಮತ್ತೈ**–ಈ ಪ್ರಣವದ ಅರ್ಥಾನು ಸಂಧಾನ ಕ್ರಮವನ್ನು

---

2) ಯಾಜ್ಞವಲ್ಕ್ಯಸ್ಮೃತಿ (3–34) ಈಶ್ವರ ವಿಷಯಕವಾದ ಅವನು ಶೇಷಿ ತಾನು ಶೇಷಭೂತನೆಂಬ, ಸ್ವರೂಪ ಜ್ಞಾನದಿಂದ ಅಹಂ ಮಮಕಾರಗಳೆಂಬ ಅಜ್ಞಾನಗಳು ಹೋಗಿ, ತಾನು ಉಪಾಯಾನುಷ್ಠಾನಕ್ಕೆ ಅನರ್ಹನೆಂಬುದು ನಿವೃತ್ತಿಯಾಗುತ್ತದೆ. ಇದರಿಂದಾಗಿ ಭಕ್ತಿ ಪ್ರಪತ್ತಿರೂಪ ಜ್ಞಾನದಿಂದ ಮೋಕ್ಷವು ಲಭಿಸಿ ಸಂಸಾರವೆಂಬ ಅಶುದ್ಧಿಯ ಆತ್ಯಂತಿಕ ನಿವೃತ್ತಿಯು ಏರ್ಪಡುತ್ತದೆ.

1) ಈದೃಶಃ ಪರಮಾತ್ಮಾಯಂ ಪ್ರತ್ಯಗಾತ್ಮಾ ತಥೇದೃಶಃ ।
ತತ್ಸಂಬಂಧಾನುಸಂಧಾನ ಮಿತಿಯೋಗಃ ಪ್ರಕೀರ್ತಿತಃ ॥"
ಎನ್ರು ಶ್ರೀ ಶಾಣ್ಡಿಲ್ಯಭಗವಾನ್ ಅರುಳಿಚ್ಚೆಯ್‌ದಾನ್. ಇತ್ತೈ

2) "ಅಕಾರಾರ್ಥೋ ವಿಷ್ಣುಃ ಜಗದುದಯ ರಕ್ಷಾಪ್ರಳಯ ಕೃನ್ಮಕಾರಾರ್ಥೋ ಜೀವಸ್ತದುಪಕರಣಂ ವೈಷ್ಣವ ಮಿದಂ ।
ಉಕಾರೋಽನನ್ಯಾರ್ಹಂ ನಿಯಮಯತಿ ಸಂಬಂಧಮನಯೋ ಸ್ತ್ರಯೀಸಾರಸ್ತ್ರ್ಯಾತ್ಮಾ ಪ್ರಣವ ಇಮಮರ್ಥಂ ಸಮದಿಶತ್" ಎನ್ರು ವಿವರಿತ್ತಾರ್‌ಹಳ್.

3) "ಕಣ್ಣಪುರ ಮೊನ್ರುಡೈಯಾನುಕ್ಕಡಿಯೇ ನೊರವರ್‌ಕ್ಕುರಿಯೇನೋ" ಎನ್ಗಿರದುಮ್ ಪ್ರಣವಾರ್ಥ ವಿವರಣಮ್.

---

ಈ ದೃಶಃ ಪರಮಾತ್ಮಾಯಂ ಇತ್ಯಾದಿ-ಜೀವಪರಮಾತ್ಮರುಗಳ ಶೇಷಶೇಷಿ ಭಾವರೂಪ ಸಂಬಂಧವೇ "ಯೋಗ" ಶಬ್ದಾರ್ಥ. ಯುಜ್‌ಧಾತುವಿನಿಂದ ಉಂಟಾದ ಯೋಗಶಬ್ದಕ್ಕೆ ಐಕ್ಯವು ಅರ್ಥವಲ್ಲವೆಂದು ತಾತ್ಪರ್ಯ, ಎಂದು ಶ್ರೀ ಶಾಂಡಿಲ್ಯ ಭಗವಾನ್ ಕೃಪೆಮಾಡಿ ಹೇಳಿರುತ್ತಾರೆ. ಇದನ್ನು 2) ಅಕಾರಾರ್ಥೋ ವಿಷ್ಣುಃ ಎಂದಾರಂಭಿಸಿ ಪರಾಶರ ಭಟ್ಟರು ವಿವರಿಸಿರುತ್ತಾರೆ. ಇದರ ಅರ್ಥವೇನೆಂದರೆ ಪ್ರಣವವು ಅಕಾರ ಉಕಾರ, ಮಕಾರಾತ್ಮವಾಗಿ ಓಂ ಎಂದು ರೂಪವನ್ನು ಹೊಂದಿದೆ- ಅದರಲ್ಲಿ ಅಕಾರಾರ್ಥಃ-ಪ್ರಣವದಲ್ಲಿರುವ 'ಅ' ಕಾರಕ್ಕೆ ವಿಷ್ಣುಃ ಎಂದು ಅರ್ಥ,-ವಿಶಲ್ ವ್ಯಾಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾದ ವಿಷ್ಣು ಶಬ್ದ ವಾಚ್ಯನು ಸರ್ವವ್ಯಾಪೀ–ವಿಭುಸ್ವರೂಪನು – ವಿಭು ಸ್ವರೂಪದಿಂದ ಕೂಡಿದ ಲಕ್ಷ್ಮೀ ವಿಶಿಷ್ಟನು. ವಿಶೇಷಣ ವಿಶಿಷ್ಟವಾದ ಈ ತತ್ತ್ವವು ಸರ್ವವ್ಯಾಪಿಯಾದ್ದರಿಂದ ವಿಷ್ಣು ಶಬ್ದವು ಲಕ್ಷ್ಮೀಪತಿಯನ್ನು ತಿಳಿಸುತ್ತದೆ ಎಂದು ತಾತ್ಪರ್ಯ. ಜಗದುದಯ ರಕ್ಷಾಪ್ರಳಯಕೃತ್–ಈ ದಿವ್ಯ ದಂಪತಿಗಳು ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರ, ಮೋಕ್ಷಪ್ರದರು. ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರ ಮೋಕ್ಷ ಪ್ರದತ್ವರೂಪ ವ್ಯಾಪಾರಕರ್ತನಾದ ವಿಷ್ಣುವು-ಲಕ್ಷ್ಮೀಪತಿಯು ಅಕಾರ ಶಬ್ದವಾಚ್ಯನು ಎಂದು ಅನ್ವಯ. ಜೀವಃ–ಚೇತನನು ಮಕಾರಾರ್ಥಃ ಮಕಾರಶಬ್ದವಾಚ್ಯನು. ತದಿದಂ-ಈ ಚೇತನ ತತ್ತ್ವವು ವೈಷ್ಣವ ಮುಪಕರಣಮ್-ಭಗವಂತನಿಗೆ ಉಪಕರಣವು ವಿಧೇಯ ಪ್ರಾಧಾನ್ಯ ವಿವಕ್ಷೆಯಿಂದ ತದಿದಂ ಎಂದು ನಪುಂಸಕ ನಿರ್ದೇಶ. ಇದು ಅಚೇತನಕ್ಕೂ ಉಪಲಕ್ಷಣ. ಉಕಾರಃ–ಉಕಾರವು, ಅನಯೋಃ–ವಿಷ್ಣು ಜೀವರುಗಳ ಸಂಬಂಧಂ–ಆಯ ಎಂಬಲ್ಲಿರುವ ಚತುರ್ಥಿ ಲುಪ್ತವಾಗಿದೆ. ಅಲುಪ್ತ ಚತುರ್ಥಿಯು ತೋರಿಸಿಕೊಡುವ ಶೇಷ ಶೇಷಿ ಭಾವರೂಪ ಸಂಬಂಧವನ್ನು ಅನನ್ಯಾರ್ಹಂ–ಈಶ್ವರೇತರರಿಗೆ ಅರ್ಹವಿಲ್ಲದಂತೆ, ನಿಯಮಯತಿ–ವ್ಯವಸ್ಥೆಗೊಳಿಸುತ್ತದೆ. ಇಮಮರ್ಥಂ-ಈ ಅರ್ಥವನ್ನು ತ್ರಯೀಸಾರಃ–ವೇದ ಸಾರವಾದ, ತ್ರ್ಯಾತ್ಮಾ–ತ್ರಿಃ ಆತ್ಮಾ ಎಂದು ವಿಭಾಗ. ಮೂರು ಅಕ್ಷರಗಳಿಂದ ಕೂಡಿದ ಪ್ರಣವಃ–ಪ್ರಣವವು, ಸಮದಿಶತ್–ಪ್ರಕಾಶಪಡಿಸಿದೆ. ಎನ್ರುವಿವರಿತ್ತಾರ್‌ಹಳ್ – ಈ ರೀತಿಯಾಗಿ ಪ್ರಣವಾರ್ಥವನ್ನು ವಿವರಿಸಿದ್ದಾರೆ.
3) ಕಣ್ಣಪುರಮೊನ್ರುಡೈಯಾನುಕ್ಕಡಿಯೇನ್ ಇತ್ಯಾದಿ ತಿರುಕ್ಕಣ್ಣಪುರದಲ್ಲಿರುವ ಸ್ವಾಮಿಗೆ ದಾಸಭೂತನು, ಬೇರೆ ಯಾರಿಗೂ ದಾಸನಲ್ಲ. ಕಣ್ಣಪುರಮೊನ್ರುಡೈಯಾನುಕ್ಕು ಎಂಬುದು ಅಕಾರಾರ್ಥ ವಿವರಣ ಅಡಿಯೇನ್ ಎಂಬುದು

---

1) ಶಾಂಡಿಲ್ಯ ಸ್ಮೃತಿ (5–17) ಅಯಂ-ಅಕಾರವಾಚ್ಯನಾದ ಪರಮಾತ್ಮಾ ಶೇಷಿತ್ವಾದಿ ಧರ್ಮವಿಶಿಷ್ಟನು, ಮಕಾರ ಶಬ್ದ ವಾಚ್ಯನಾದ ಜೀವನು ಶೇಷತ್ವಾದಿ ಧರ್ಮವಿಶಿಷ್ಟನು ಜೀವಪರಮಾತ್ಮರುಗಳ ಶೇಷ ಶೇಷಿ ಭಾವ ಸಂಬಂಧಾನು ಸಂಧಾನವೇ ಯೋಗವೆಂದು ಹೇಳಲ್ಪಟ್ಟಿದೆ. ಯೋಗವೆಂಬ ಶಬ್ದಕ್ಕೆ ಶೇಷ ಶೇಷಿಭಾವ ರೂಪ ಸಂಬಂಧವೇ ಅರ್ಥ. ಅಲ್ಲದೆ ಐಕ್ಯವಲ್ಲ.

2) ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರ ಮೋಕ್ಷಪ್ರದತ್ವವನ್ನು ಮಾಡುವ ವಿಷ್ಣುವು ಅಕಾರಶಬ್ದವಾಚ್ಯನು. ಮಕಾರ ಶಬ್ದವಾಚ್ಯನು ಜೀವನು ಇವನು ಭಗವಂತನಿಗೆ ಉಪಕರಣವು. ಉ ಕಾರವು ಜೀವೇಶ್ವರರ ಅನನ್ಯಾರ್ಹ ಸಂಬಂಧವನ್ನು ತಿಳಿಸುತ್ತದೆ. ಅಕಾರೋಕಾರಮಕಾರಾತ್ಮಕವಾದ ಪ್ರಣವವು ವೇದದ ಸಾರವಾದ ಈ ಅರ್ಥವನ್ನು ತಿಳಿಸುತ್ತದೆ, (3)..........ಪು.ತಿ.ನೊ

### ಪ್ರಣವಸ್ತ್ರಯೀಸಾರಸ್ತ್ಯಾತ್ಮಾ

**ಪ್ರಣವತ್ತಿಲ ಕ್ಷರತ್ರಯತ್ತೈಯುಂವ್ ವೇದತ್ರಯಸಾರಮಾಹ ಶ್ರುತಿ ಸ್ಮೃತಿಹಳ್ ಪ್ರಪಞ್ಜಿತ್ತನ.**

### ಪ್ರಣವಸ್ಯ ಆಕಾರಸ್ಯ ಅರ್ಥಃ

**ಇವ್ವಕ್ಷರಙ್ಗಳ್ ಇವ್ವರ್ಥಙ್ಗಳೈ ಶೊಲ್ಲುಹಿರಪಡಿ ಯೆಙ್ಗನೇ ಎನ್ನಿಲ್ ?**

1) **ಅಷ್ಟಾಕ್ಷರ ಶರೀರಾಙ್ಗ ಪ್ರಣವಾದ್ಯಕ್ಷರೇಣ ತು ।**
**ಅಕಾರೇಣಾಖಿಲಾಧಾರಃ ಪರಮಾತ್ಮಾಭಿಧೀಯತೇ ।**

2) **ಸಮಸ್ತಶಬ್ದ ಮೂಲತ್ವಾದಕಾರಸ್ಯ ಸ್ವಭಾವತಃ ।**
**ಸಮಸ್ತ ವಾಚ್ಯಮೂಲತ್ವಾದ್ಬ್ರಹ್ಮಣೋಪಿ ಸ್ವಭಾವತಃ ।**
**ವಾಚ್ಯವಾಚಕ ಸಂಬಂಧಸ್ತಯೋ ರರ್ಥಾತ್ ಪ್ರತೀಯತೇ॥"**

---

ಲುಪ್ತಚತುರ್ಥೀ ಸಹಿತವಾದ ಮಕಾರಾರ್ಥ ವಿವರಣ. ಒರುವರ್ಕ್ಕುರಿಯೇನ್ನೋ, ಎಂಬುದು ಉಕಾರಾರ್ಥ ವಿವರಣ. ಹೀಗೆ ಇದೂ ಪ್ರಣವಾರ್ಥ ವಿವರಣ. **ಪ್ರಣವತ್ತಿಲ್**-ಇತ್ಯಾದಿ ಪ್ರಣವದಲ್ಲಿ ಮೂರು ಅಕ್ಷರಗಳನ್ನೂ ವೇದದ ಸಾರವಾಗಿ ಶ್ರುತಿ ಸ್ಮೃತಿಗಳು ಪ್ರಕಾಶಪಡಿಸಿವೆ. ಆದಾಗಿ ಭೂರಿತಿ ಋಗ್ವೇದಾದಜಾಯತ, ಭುವ ಇತಿಯಜುರ್ವೇದಾತ್, ಸುವರಿತಿಸಾಮ ವೇದಾತ್,ತಾನಿ ಶುಕ್ರಾಣ್ಯಭ್ಯತಪನ್ ತೇಭ್ಯೋಽಭಿ ತಪ್ತೇಭ್ಯ ಸ್ತ್ರಯೋವರ್ಣಾ ಅಜಾಯಂತ,ಅಕಾರೋಕಾಮಕಾರ ಇತಿತಾನೇಕಧಾ ಸಮಭರತ್ತ್ತದೇತತ್ ಓಮಿತಿ, ಎಂದು ವೇದವುಹೇಳುತ್ತದೆ. ಸ್ಮೃತಿಯೂ

"ಅಕಾರಂಚಾಪ್ಯುಕಾರಂಚ ಮಕಾರಂಚ ಪ್ರಜಾಪತಿಃ ।
ವೇದತ್ರಯಾನ್ನಿರಬೃಹತ್ ಭೂರ್ಭುವಸ್ಸುವರಿತೀಚ ॥"

ಎಂದು ಹೇಳುತ್ತದೆ. ನಿರಬೃಹತ್-ಸಾರವನ್ನು ಎತ್ತಿ ತೋರಿಸಿತು. ಬೃಹಿ-ಉದ್ಯಮನೇ ಎಂದು ಧಾತು.

### ಅಕಾರಾದ್ಯಕ್ಷರಗಳು ವಿಷ್ಣು ಮೊದಲಾದ ಅರ್ಥಗಳನ್ನು ತಿಳಿಸುವ ಕ್ರಮ

**ಇವ್ವಕ್ಷರಂಗಳ್**- ಇತ್ಯಾದಿ, ಈ ಅಕಾರ, ಉಕಾರ, ಮಕಾರಗಳು ಈ ಅರ್ಥಗಳನ್ನು ತಿಳಿಸುವುದು ಹೇಗೆಂದರೆ 1) **ಅಷ್ಟಾಕ್ಷರ ಶರೀರಾಂಗ** ಇತ್ಯಾದಿ ನಿರೂಪಿಸುತ್ತಾರೆ. ಅದಾಗಿ ಅಷ್ಟಾಕ್ಷರ ಮಂತ್ರಘಟಿತವಾದ ಪ್ರಣವದಲ್ಲಿ "ಅ" ಎಂಬ ಮೊದಲನೆಯ ಅಕ್ಷರವು, **ಅಕಾರೇಣಾಖಿಲಾಧಾರಃ** ಇತ್ಯಾದಿ ಅಕಾರದಿಂದ ಅಖಿಲಾಧಾರಃ-ಒಂದು ಚೂರೂ ಬಿಡದೆ, ಎಲ್ಲಾ ಜಗತ್ತಿಗೂ ಆಧಾರಭೂತನಾದ **ಪರಮಾತ್ಮಾಭಿಧಿಯತೇ**-ಪರಮಾತ್ಮಾ ತಿಳಿಸಲ್ಪಡುತ್ತಾನೆ. ಇದು ಹೇಗೆಂದರೆ 2) **ಸಮಸ್ತಶಬ್ದಮೂಲತ್ವಾತ್**-ಇತ್ಯಾದಿ ಅಕಾರವು ಸಮಸ್ತ ಶಬ್ದಗಳಿಗೂ ಮೂಲ-ಸ್ವತಃ ಕಾರಣವಾದದ್ದು. ಹಾಗೆಯೇ ಬ್ರಹ್ಮವು ವಾಚ್ಯವಾದ ಸರ್ವ ಜಗತ್ತಿಗೂ ಕಾರಣವಾದದ್ದು. ಆದ್ದರಿಂದ ವಾಚ್ಯವಾಚಕ ಸಂಬಂಧವು, ಅರ್ಥಸಾಮರ್ಥ್ಯ ನಿಬಂಧನವಾಗಿ ಅಕಾರಕ್ಕೆ ವಿಷ್ಣುವು ಅರ್ಥವೆಂದು ತಿಳಿಸುತ್ತದೆ. ಶಬ್ದ ಶಕ್ತಿಯಿಂದಲ್ಲ. ಸಮಸ್ತ ಶಬ್ದಮೂಲ ವಾಚ್ಯತ್ವವು ಸಮಸ್ತಾರ್ಥ ಮೂಲವಾದ ಬ್ರಹ್ಮಕ್ಕೇ ಯುಕ್ತವೆಂದು ತಾತ್ಪರ್ಯ. ಇತರರಿಗಲ್ಲ. "ತಸ್ಯಪ್ರಕೃತಿಲೀನಸ್ಯಯಃಪರಃ ಸಮಹೇಶ್ವರಃ", ಎಂದು ಪ್ರಣವದ ಮೊದಲನೆಯ ಅಕ್ಷರವಾದ ಅಕಾರದಲ್ಲಿ ಯಃಪರಃ-ತತ್ಪರನಾದವನು, ಮಹೇಶ್ವರಃ-ಮಹಾವಿಷ್ಣುವು, ಎಂದು ಶ್ರುತಿಯು ಘೋಷಿಸುತ್ತದೆ

---

3) ವಿಡ್ವೈಯೇಳ್ನಡದ್ದು, ವೆಹುಂಡು ವಿಲಂಗಲುರ
**ಪಡ್ವೈಯಾಲ್ಯಾಳಿತಟ್ಟ**, ಪರಮನ್ ಪರಂಜೋದಿ ।
ಮಡ್ವೈಯಾರ್ ನೀಲಂಮುಳ್ಹುಮ್ ವಯಲ್‌ಶೂಳ್ ಕಣ್ಣಪುರಮೊನ್ರು
ಉಡ್ವೈಯಾನುಕ್ಕು ಅಡಿಯೇನ್, ಒರುವರ್ಕ್ಕುರಿಯೇನೋ॥ (ಪೆರಿಯತಿರುಮೊಳಿ 8-9.3)
ಕಣ್ಣಪುರಕ್ಕೆ ಸ್ವಾಮಿಯಾದ ಭಗವಂತನಿಗೆ ನಾನು ದಾಸನು ಬೇರೆಯವರಿಗಿಲ್ಲ.

1) 2) ವಾಮನ ಪುರಾಣ.

**ಎನ್ರು ಶ್ರೀ ವಾಮನ ಪುರಾಣವಚನತ್ತಾಲೇ ಸರ್ವವಾಚಕ ಜಾತ ಪ್ರಕೃತಿಯಾನ ಪ್ರಥಮಾಕ್ಷರತ್ತುಕ್ಕು ಸರ್ವವಾಚ್ಯಜಾತ ಪ್ರಕೃತಿಯಾನ ನಾರಾಯಣ್ ವಾಚ್ಯ ನೆನ್ರು ಪ್ರಸಿದ್ಧಮಾನ ಅರ್ಥತ್ತೈ ವೇದಾರ್ಥ ಸಙ್ಗ್ರಹತ್ತಿಲೇ ಯರುಳಿಚ್ಚೆಯ್‌ದಾರ್.**

**ಇತ್ತಾಲೇ ಕಾರಣವಾಕ್ಯ ಸಿದ್ಧಮಾನ ಸಕಲ ಜಗನ್ನಿಮಿತ್ತೋಪಾದಾನ ಕಾರಣತ್ವಮುಮ್, ಅತ್ತಾಲೇ ಆಕ್ಷಿಪ್ತಮಾನ ಸರ್ವಜ್ಞತ್ವ ಸರ್ವಶಕ್ತಿತ್ವಾದಿ ಗುಣವರ್ಗಮುಮಿಙ್ಗೇ ಸಿದ್ಧಮಾಯಿತ್ತು.**

**ಏವಮೌಚಿತ್ಯಾದಕಾರಸ್ಯ ವಿಷ್ಣು ವಾಚಕತ್ವ ಮುಕ್ತ್ವಾ ರೂಢ್ಯಾಪೀತಿ ತದಾಹ**

**ಇವ್ವಕ್ಷರಮ್ ಭಗವದ್ವಾಚಕಮೆನ್ರು ಮಿಡಮ್ 1) ಅನಿಷೇಧೇ ಪುಮಾನ್ ವಿಷ್ಣೌ ಎನ್ರುಮ್, 2) ಅಕಾರೋ ವಿಷ್ಣು ವಾಚಕಃ" ಎನ್ರುಮ್ 3) ಅ ಇತಿ ಭಗವತೋನಾರಾಯಣಸ್ಯ ಪ್ರಥಮಾಭಿಧಾನಮಭಿದಧತಾ ಕಿನ್ನಾಮ ಮಙ್ಗಳಂ ನಕೃತಮ್, ಎನ್ರುಮ್, ನಿಘಂಟುಹಳಿಲುಮ್ ಪ್ರಯೋಗಙ್ಗಳಿಲುಮ್ ಪ್ರಸಿದ್ಧಮ್**

---

ಈಶ್ವರ ಶಬ್ದವು ನಿಯಮನ ಮಾಡುವವನನ್ನು ತಿಳಿಸಿ, "ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಗ್ಂ ಸರ್ವಾತ್ಮಾ" ಎಂಬ ಶ್ರುತ್ಯುಕ್ತ ಪ್ರಕಾರ ಅಂತಃ ಪ್ರವಿಶ್ಯ ನಿಯಮನವನ್ನು ಮಾಡುವ ವಿಶಲ್ ವ್ಯಾಪ್ತೌ ಎಂಬ ಧಾತುವಿನಿಂದ ತಿಳಿಸಲ್ಪಟ್ಟಂತೆ ಅಂತಃ ಬಹಿಃ ವ್ಯಾಪ್ತನಾದ ಮಹಾ ವಿಷ್ಣುವನ್ನು ತಿಳಿಸುತ್ತದೆ. **ಎನ್ರು ಶ್ರೀವಾಮನ ಪುರಾಣ ವಚನತ್ತಾಲೇ** ಇತ್ಯಾದಿ ಈ ರೀತಿಯಾದ ವಾಮನ ಪುರಾಣ ವಚನದಿಂದ ಸರ್ವವಾಚಕ ಜಾತಿ ಪ್ರಕೃತಿಯಾದ ಪ್ರಥಮಾಕ್ಷರಕ್ಕೆ ಸರ್ವವಾಚ್ಯಜಾತಿ ಪ್ರಕೃತಿಯಾದ ನಾರಾಯಣನು ವಾಚ್ಯನೆಂದು ಪ್ರಸಿದ್ಧವಾದ ಅರ್ಥವನ್ನು ವೇದಾರ್ಥ ಸಂಗ್ರಹದಲ್ಲಿ ಭಗವದ್ಭಾಷ್ಯಕಾರರು ಕೃಪೆ ಮಾಡಿ ಹೇಳಿರುತ್ತಾರೆ.

**ಇತ್ತಾಲೇ** ಇತ್ಯಾದಿ–ಸಕಲ ಶಬ್ದ ಮೂಲವಾದ ಅಕಾರ ವಾಚ್ಯತ್ವದಿಂದ ಕಾರಣ ವಾಕ್ಯ ಸಿದ್ಧವಾದ ಸಕಲ ಜಗನ್ನಿಮಿತ್ತೋಪಾದಾನ ಕಾರಣತ್ವವೂ ಅದರಿಂದ ಆಕ್ಷಿಪ್ತವಾದ ಸರ್ವಜ್ಞತ್ವ ಸರ್ವಶಕ್ತಿತ್ವಾದಿ ಗುಣವರ್ಗವೂ ಇಲ್ಲಿ ಸಿದ್ಧವಾಯಿತು. ಇದರ ತಾತ್ಪರ್ಯವೇನೆಂದರೆ–ಸಮಸ್ತ ಶಬ್ದಮೂಲ ಭೂತವಾದ ಅಕಾರ ವಾಚ್ಯತ್ವವು ಸಕಲ ಜಗನ್ನಿಮಿತ್ತೋಪಾದಾನ ಕಾರಣ ಭೂತನಾದ ನಾರಾಯಣನಿಗೆ ಸಮುಚಿತವಾದದ್ದು, ಬೇರೆ ದೇವತೆಗಲ್ಲ, ಎಂಬುದು ಔಚಿತ್ಯದಿಂದ ಹೇಗೆ ನಿಶ್ಚಯಿಸಲ್ಪಡುತ್ತದೆಯೋ, ಹಾಗೆಯೇ ಸಕಲಜಗನ್ನಿಮಿತ್ತೋಪಾದಾನ ಭೂತನಿಗೆ ಸರ್ವಜ್ಞತ್ವಾದಿ ಗುಣವರ್ಗವೂ ಉಚಿತ ತರವೆಂಬುದು ನಿಶ್ಚಯಿಸಲ್ಪಡಲು ಶಕ್ಯವೆಂದು ಭಾವ.

**ಇವ್ವಕ್ಷರಮ್** ಇತ್ಯಾದಿ–ಈ 'ಅ' ಎಂಬ ಅಕ್ಷರವು **ಭಗವದ್ವಾಚಕಮ್**–ಭಗವಂತನನ್ನು ತಿಳಿಸುವ ಅಸಾಧಾರಣವಾದ ಶಬ್ದವೆಂಬುದು 1) **ಅನಿಷೇಧೇ ಪುಮಾನ್ ವಿಷ್ಣೌ** ಎಂದು 'ಅ' ಕಾರವು ಅಸಂಭವ ಇತ್ಯಾದಿ ಸಂಬಧ ನಿಷೇಧಾರ್ಥದಲ್ಲಿ ಪ್ರಯುಕ್ತ. ಆಗ ಅದು ಅವ್ಯಯ. ವಿಷ್ಣುವಾಚಕವಾದಾಗ ಅಕಾರವು ಪುಲ್ಲಿಂಗ. ಇದು ನಿಘಂಟುಗಳಲ್ಲಿ ಹೇಳಿರುವ ಅರ್ಥ 2) **ಅಕಾರೋವಿಷ್ಣು ವಾಚಕಃ** "ಅ" ಕಾರವು ವಿಷ್ಣುವಾಚಕ. (ನಿಘಂಟು) 3) **"ಅ" ಇತಿ ಭಗವತೋ ನಾರಾಯಣಸ್ಯ** ಇತ್ಯಾದಿ ಅಕಾರವು ಭಗವಂತನಾದ ನಾರಾಯಣನ ಪ್ರಥಮಾಭಿಧಾನಮ್ ಮುಖ್ಯವಾದ ಅಂದರೆ ಅಶಂಕಿತವಾದ ಅರ್ಥವನ್ನು ತಿಳಿಸುತ್ತದೆ ಎಂದು ಅಭಿಯುಕ್ತರ ವಚನ. ಇದರಿಂದ ಶ್ರೀ ಸಹಸ್ರನಾಮಾಧ್ಯಾಯಗಳಲ್ಲಿ ಪಠಿತವಾದ ವಿಶ್ವ ವಷಟ್ಕಾರ ಮೊದಲಾದ ನಾಮಾಂತರ ವ್ಯಾವೃತ್ತಿ. ಹಾಗೆಯೇ ಗವಾದಿ ಸಂಜ್ಞೆಯ ಹಾಗೆ ಸ್ವರೂಪ ನಿರೂಪಕ ಧರ್ಮ ಪ್ರಧಾನ ದೇವತಾಂತರ ವ್ಯಾವರ್ತಕವಿಶೇಷಣ ಪ್ರವೃತ್ತಿ ನಿಮಿತ್ತಕತ್ವವು ನಾರಾಯಣನೆಂಬಲ್ಲಿ ರೂಢಿ ಶಕ್ತಿಯಿಂದ ಲಬ್ಧವು, **ಎನ್ರುಮ್ ನಿಘಂಟುಹಳುಮ್ ಇತ್ಯಾದಿ** ಎಂದು **ನಿಘಂಟುಗಳಲ್ಲಿಯೂ ಪ್ರಯೋಗಗಳಲ್ಲಿಯೂ ಪ್ರಸಿದ್ಧವು.**

---

1) 2) 3) ಪರಿಗ್ರಂಥ ಅ ಎಂಬ ಭಗವನ್ನಾರಾಯಣನ ಮುಖ್ಯವಾದ ಹೆಸರನ್ನು ಹೇಳುವುದರಿಂದ ಮಂಗಳವು ಮಾಡಲ್ಪಡಲಿಲ್ಲವೇ.

**ಯೋಗೇನಾಪಿ ಅಕಾರಸ್ಯ ಭಗವದ್ವಾಚಕತ್ವಮಾಹ.**

**ಇದು ವ್ಯಾಕರಣವ್ಯುತ್ಪತ್ತಿಯಾಲೇ ಸರ್ವೇಶ್ವರನೈಚ್ಚೊಲ್ಲುಮ್ಪೋದು ರಕ್ಷಣ ಪ್ರೀಣನಾದಿ ವಿಷಯಮಾನ ಧಾತುವಿಲೇ ಕರ್ತೃವಾಚಿಯಾನ ಪ್ರತ್ಯಯತ್ತಾಲೇ ನಿಷ್ಪನ್ನಮಾನ ಪದಮಾಯ್ ಸರ್ವರಕ್ಷಕತ್ವಾದಿ ವಿಶಿಷ್ಟನಾಹಕ್ಕಾಟ್ಟುಮ್.**

**ಅಸ್ಯಧಾತೋ ರನೇಕಾರ್ಥತ್ವಾತ್ಕಥಮಸ್ಯ ಪ್ರಾಧಾನ್ಯೇನ ರಕ್ಷಕತ್ವ ಬೋಧಕತ್ವ ಮಿತ್ಯತ್ರಾಹ**

**ಇದ್ಧಾತು ಅನೇಕಾರ್ಥಮೇಯಾಹಿಲುಮ್, ರಕ್ಷಣಾರ್ಥತ್ತಿಲ್ ಪ್ರಸಿದ್ಧಿ ಪ್ರಕರ್ಷತ್ತಾಲುಮ್ ಇವ್ವರ್ಥಮಿಙ್ಗೇ ಅಪೇಕ್ಷಿತಮಾಹೈಯಾಲುಮ್, ಇಙ್ಗೇ ನಾನಾರ್ಥಙ್ಗಳ್ ಅನುಸಂಧೇಯಙ್ಗಳಾಹ ಒರು ನಿರುಕ್ತಿಯಿಲ್ಲಾಮೈಯಾಲುಮ್, ಪ್ರಥಮಪಠಿತಮಾನ ರಕ್ಷಣಮ್ ಶಾಬ್ದಮಾಯ್, ಮತ್ತ ಅಪೇಕ್ಷಿತಾರ್ಥಙ್ಗಳ್ ಇತ್ತಾಲೇ ಆಕ್ಷಿಪ್ತಙ್ಗಳಾಹ ಅನುಸಂಧಿಕ್ಕೈ ಉಚಿತಮೆನ್ರು ಇವ್ವಳವೇಯಾಚಾರ್ಯರ್ಹಳ್ ವ್ಯಾಖ್ಯಾನಮ್ ಪಣ್ಣಿನಾರ್ಹಳ್. ಇನ್ದ ರಕ್ಷಕತ್ವಂ ಅವಚ್ಛೇದಕಮಿಲ್ಲಾಮೈಯಾಲೇ ಸರ್ವವಿಷಯಮ್. ರಕ್ಷಾ ಪ್ರಕಾರಙ್ಗಳ್ ವಿಷಯಙ್ಗಳ್ ತೋರುಮ್ ಪ್ರಮಾಣಙ್ಗಳ್ ಕಾಟ್ಟಿನ ಪಡಿಯಿಲೇ ವಿಚಿತ್ರಙ್ಗಳಾಯಿರುಕ್ಕುಮ್.**

---

**ಇದು ವ್ಯಾಕರಣ ವ್ಯುತ್ಪತ್ತಿಯಾಲೇ** ಇತ್ಯಾದಿ–ಇದು, ಅವರಕ್ಷಣೇ, ಅವತಿ ಎಂಬ ವ್ಯಾಕರಣ ಪ್ರಕ್ರಿಯೆಯಿಂದ ಸರ್ವೇಶ್ವರನನ್ನು ತಿಳಿಸುವಾಗ, ಅವರಕ್ಷಣ ಪ್ರೀಣನಾದಿಷು ಎಂಬ ಧಾತುವಿನಿಂದ ಕರ್ತೃವಾಚಿಯಾದ ಕ್ವಿಪ್‌ಪ್ರತ್ಯಯವೂ "ಲೋಪೋವ್ಯೋರ್ವಲೀ" ಎಂದು ವಕಾರಲೋಪವೂ ಏರ್ಪಟ್ಟು, ನಿಷ್ಪನ್ನವಾದ "ಅ"ಎಂಬ ಪದವಾಗಿ ಸರ್ವರಕ್ಷಕತ್ವಾದಿ ತೋರಿಸುತ್ತದೆ. **ಇದ್ಧಾತು** ಇತ್ಯಾದಿ–ಈಧಾತುವು "ಅವತೀರಕ್ಷಣೇ ಕಾಂತೌ ಪ್ರೀತೌ ತೃಪ್ತೌ ಗ್ಯತೌ ಶ್ರುತೌ। ಪ್ರಾಪ್ತೌ ಶ್ಲೇಷೇಥ ಸಂದೇಶೇ" ಎಂಬಂತೆ ಅನೇಕಾರ್ಥಗಳಿಂದ ಕೂಡಿದ್ದಾಗ್ಯೂ ರಕ್ಷಣಾರ್ಥದಲ್ಲಿ ಪ್ರಸಿದ್ಧಿ ಪ್ರಕರ್ಷದಿಂದಲೂ ಈ ಅರ್ಥವು ಇಲ್ಲಿ ಅಪೇಕ್ಷಿತವಾದ್ದರಿಂದಲೂ, ಇಲ್ಲಿ ನಾನಾರ್ಥಗಳನ್ನು ಅನುಸಂಧಿಸಲು ಒಂದು ನಿರುಕ್ತಿ ಇಲ್ಲದಿರುವುದರಿಂದಲೂ ಪ್ರಥಮಪಠಿತವಾದ ರಕ್ಷಣವು ಶಾಬ್ದವಾಗಿ ಬಾಕಿ ಅಪೇಕ್ಷಿತಾರ್ಥಗಳು ಇದರಿಂದ ಆಕ್ಷಿಪ್ತಗಳಾಗಿ ಅನುಸಂಧಿಸುವುದು ಉಚಿತವೆಂದು ಇಷ್ಟೇ ಆಚಾರ್ಯರುಗಳೂ ವ್ಯಾಖ್ಯಾನ ಮಾಡಿದರು.

**ಇಂದರಕ್ಷಕತ್ವಮ್**-ಈರಕ್ಷಕತ್ವವು **ಅವಚ್ಛೇದಕಮ್ ಇಲ್ಲಾಮೈಯಾಲೇ**–ರಕ್ಷ್ಯಕ ವಿಶೇಷಕರನ್ನು ಅಂದರೆ ಇಂಥಹವರೇ ರಕ್ಷ್ಯರು ಎಂದು ನಿಗದಿ ಮಾಡದೆ ಇರುವುದರಿಂದ"ಅನುಪಾಧಿಕ ನಿರ್ದೇಶೇ ಹ್ಯಸಂಕೋಚೋ ಮನೀಷಿಭಿಃ। ಕಥ್ಯತೇ।" ಉಪಾಧಿ–ಅವಧಿ ಎಲ್ಲೆಯನ್ನು ಹೇಳದೇ ಇರುವ ಸ್ಥಳಗಳಲ್ಲಿ ಸಂಕೋಚವಿಲ್ಲವೆಂದು ವಿದ್ವಾಂಸರು ತಿಳಿಸುತ್ತಾರೆ. ಆರೀತಿಯಲ್ಲಿ ರಕ್ಷ್ಯವರ್ಗಕ್ಕೆ ಎಲ್ಲೆಯಿಲ್ಲ. **ಸರ್ವವಿಷಯಮ್** ಎಲ್ಲರೂ ರಕ್ಷ್ಯರು **ರಕ್ಷಾಪ್ರಕಾರಂಗಳ್** ಇತ್ಯಾದಿ ರಕ್ಷಣ ಪ್ರಕಾರವು **ವಿಷಯಂಗಳ್ ತೋರುಮ್** ಸಂಸಾರಿ, ಮುಮುಕ್ಷು, ಮುಕ್ತರೂಪ ವಿಷಯ ಭೇದದಿಂದ **ವಿಚಿತ್ರಂಗಳಾಯಿರುಕ್ಕುಮ್**-ಸಂಸಾರಿಗಳಿಗೆ ಅನ್ನಪಾನ, ಸ್ವರ್ಗಾದಿಗಳನ್ನು ಕೊಟ್ಟು ರಕ್ಷಿಸುವುದು, ಮುಮುಕ್ಷುಗಳಿಗೆ–ಮೋಕ್ಷದಲ್ಲಿ ಆಸೆಯುಳ್ಳವರಿಗೆ ಮೋಕ್ಷವನ್ನು ಕೊಡುವುದು, ಮುಕ್ತಾತ್ಮರಿಗೆ ನವನವ ಭಗವದನುಭವಾನಂದವನ್ನು ಕೊಡುವುದು ಎಂಬ ರೀತಿಯಲ್ಲಿ ವಿಚಿತ್ರಗಳಾಗಿರುತ್ತವೆ.

**ಇದು ಹೇತುನಿರ್ದೇಶವ್ ಪಣ್ಣಾನ್ಮೈಯಾಲೇ ನಿರುಪಾಧಿಕವಾಯ್ ತೋನ್ರಿನಾಲುಮ್ ಸಾಪರಾಧರಾನ ಸಂಸಾರಿಹಳುಕ್ಕು ಮೋಕ್ಷಾದಿ ಪ್ರದಾನತ್ತಿಲ್ ಸ್ವತಂತ್ರನಾನ ವೀಶ್ವರ್ನ ಶರ್ಾ ಸಙ್ಕಲ್ಪಿತ್ತು ವೈತ್ತದೊರು ವ್ಯಾಜತ್ತೈ ಅಪೇಕ್ಷಿತ್ತಿರುಕ್ಕುಮ್.**

**ನಿತ್ಯರ್ ಪಕ್ಕಲಿಲುಮ್, ಮುಕ್ತರ್ ಪಕ್ಕಲಿಲುಮ್, ನಿರುಪಾಧಿಕ ಸಹಜಕಾರುಣ್ಯಮಾತ್ರತ್ತಾಲೇ ಸ್ಥಿತಸ್ಥಾಪನರೂಪೇಣ ರಕ್ಷೈಮುಟ್ಟಾಕ್ಕ ನಡಕ್ಕುಮ್,**

**ಇಪ್ಪಡಿ ಸ್ವಾಭಾವಿಕಮಾನ ರಕ್ಷಕತ್ವಂ ಪ್ರಾತಿಕೂಲ್ಯಂ ನಡಕ್ಕುಂ ಕಾಲತ್ತಿಲ್ ಅನಾದ್ಯಪರಾಧತ್ತಾಲೇಪಿರನ್ದ ನಿಗ್ರಹ ರೂಪೋಪಾಧಿಯಾಲೇ ಪ್ರತಿಬದ್ಧಮಾಮ್. ಪ್ರತಿಬಂಧಕಮಾನ ವಿವ್ವುಪಾಧಿಯೈಕ್ಕಳೈಕ್ಕೈಕ್ಕಾಹವೇ ಪ್ರಪತ್ತಿ ಮುದಲಾನ ವ್ಯಾಜಙ್ಗಳ್ ಶಾಸ್ತ್ರಸಿದ್ಧಙ್ಗಳ್.**

> **ರಕ್ಷಣೇ ದಯಾಯಾಃ ಪ್ರಧಾನ ಕಾರಣತ್ವಮ್ ; ನ್ಯಾಸಾದೀನಾಂತು ವ್ಯಾಜಮಾತ್ರಮ್**
> **ತ್ರಾಣೇ ಸ್ವಾಮಿತ್ವಮೌಚಿತ್ಯಂ ನ್ಯಾಸಾದ್ಯಾ ಸ್ಸಹಕಾರಿಣಃ ।**
> **ಪ್ರಧಾನ ಹೇತು ಸ್ಸ್ವಾತಂತ್ರ್ಯ ವಿಶಿಷ್ಟಾಕರುಣಾ ವಿಭೋಃ॥68॥**

---

**ಇದು ಹೇತುನಿರ್ದೇಶವ್ ಪಣ್ಣಾನ್ಮೈಯಾಲೇ** –ಇತ್ಯಾದಿ–ಹೇತು-ಕಾರಣವನ್ನು ಹೇಳದೇ ಇರುವುದರಿಂದ ಈ ರಕ್ಷಣವು **ನಿರುಪಾಧಿಕಮಾಯ್**–ನಿಷ್ಕಾರಣವಾಗಿ ಸರ್ವ ವಿಷಯವಾಗಿತೋರಿದರೂ **ಮೋಕ್ಷಾದಿಪ್ರದಾನತ್ತಿಲ್** ಮೋಕ್ಷಾದಿಗಳನ್ನು ಸಾಪರಾಧರಾದ ಸಂಸಾರಿಗಳಿಗೆ ಕೊಡುವ ವಿಷಯದಲ್ಲಿ ಸ್ವತಂತ್ರನಾದ ಈಶ್ವರನು ಸಂಕಲ್ಪಿಸಿಟ್ಟಿರುವ ಬಂದು ವ್ಯಾಜ್ಯವನ್ನು ಅಪೇಕ್ಷಿಸುತ್ತದೆ. ಆದಿಶಬ್ದದಿಂದ ವೈಷಮ್ಯ ದೋಷ ಪರಿಹಾರಾರ್ಥವಾಗಿ ಫಲಾಂತರಗಳಿಗೊಸ್ಕರ ಭಕ್ತಿಂಹೋಗವನ್ನು ಮಾಡುವಂತೆ ಮೋಕ್ಷಕ್ಕಾಗಿ ನ್ಯಾಸಾದಿಗಳು ಅವಶ್ಯಕವೆಂದು ಈಶ್ವರನ ಅಭಿಪ್ರಾಯ. **ನಿತ್ಯರ್ ಪಕ್ಕಲಿಲುಮ್ ಮುಕ್ತರ್ಪಕ್ಕಲಿಲುಮ್** ಇತ್ಯಾದಿ ನಿತ್ಯಮುಕ್ತರುಗಳ ವಿಷಯದಲ್ಲಿ ನಿರುಪಾಧಿಕ ಸಹಜ ಕಾರುಣ್ಯ ಮಾತ್ರದಿಂದ **ಸ್ಥಿತಸ್ಥಾಪನರೂಪೇಣ** ಅನುಭವಿಸಿ ಬರುತ್ತಿರುವ ಆನಂದಕ್ಕೆ ಯಾವವಿಧವಾದ ಧಕ್ಕೆಯೂಬಾರದೆ ಅದನ್ನು ಮುಂದುವರಿಸುತ್ತಾ, ರಕ್ಷಣವು **ಮುಟ್ಟಾಕ್ಕ** ಮುಂದೆ ಬರುವ ಅನಂತ ಕಾಲದಲ್ಲಿಯೂ ಎಲ್ಲಾ ವ್ಯಕ್ತಿಗಳಿಗೂ **ನಡಕ್ಕುಮ್**– ನಡೆದುಬರುತ್ತದೆ. **ಇಪ್ಪಡಿ** ಇತ್ಯಾದಿ ಹೀಗೆ ಸ್ವಾಭಾವಿಕವಾದ ರಕ್ಷಕತ್ವವು **ಪ್ರತಿಕೂಲ್ಯಮ್**ಇತ್ಯಾದಿ ಬದ್ಧನಾಗಿದ್ದು ಪ್ರತಿಕೂಲಾ ಚರಣವನ್ನುಮಾಡುವಾಗ **ಅನಾದ್ಯ ಪರಾಧತ್ತಾಲೇ ಪಿರಂದ** ಇತ್ಯಾದಿ–ಅನಾದಿಯಾದ ಅಪರಾಧದಿಂದ ಉಂಟಾದ ಭಗವನ್ನಿಗ್ರಹರೂಪವಾದ **ಉಪಾಧಿಯಾಲೇ** ಕಾರಣದಿಂದ **ಪ್ರತಿಬದ್ಧಮಾಮ್** – ತಡೆಯಲ್ಪಟ್ಟಿದೆ. **ಪ್ರತಿಬಂಧಕಮಾನ** ಇತ್ಯಾದಿ– ಪ್ರತಿಬಂಧಕವಾದ ಈ ಉಪಾಧಿಯನ್ನು ಹೊಗಲಾಡಿಸುವುದಕ್ಕಾಗಿಯೇ ಪ್ರಪತ್ತಿ ಮೊದಲಾದ ವಾಜ್ಯಗಳು ಶಾಸ್ತ್ರಸಿದ್ಧಗಳು. ಹಾಗಾದರೆ ಭಗವಂತನ ಸ್ವಾಭಾವಿಕ ಕರುಣೆ ಮೊದಲಾದವುಗಳಿಗೆ ಏನು ಪ್ರಯೋಜನವೆಂದರೆ **ತ್ರಾಣೇಸ್ವಾಮಿತ್ವ ಮೌಚಿತ್ಯಂ** ಎಂದು ಕಾರಿಕೆಯನ್ನು ಅನುಗ್ರಹಿಸುತ್ತಾರೆ. ಅದಾಗಿ ಭಗವಂತನು ಬದ್ಧ ಜೀವನಿಗೆ ಮೋಕ್ಷ ರೂಪ ಫಲವನ್ನು ಕೊಟ್ಟು ರಕ್ಷಿಸುವುದಕ್ಕೆ ಸ್ವಾಮಿತ್ವವು ಉಚಿತವಾದದ್ದು. ಆ ರಕ್ಷಣಕ್ಕೆ ನ್ಯಾಸಾದಿಗಳು ಸಹಕಾರಿ ಕಾರಣಗಳು. ಪ್ರಧಾನ ಕಾರಣವು ಭಗವಂತನ ಸ್ವಾತಂತ್ರ್ಯದಿಂದ ಕೂಡಿದ ಕರುಣೆ. ಆದಿ ಶಬ್ದದಿಂದಲೂ, ಬಹುವಚನದಿಂದಲೂ ದಹರಾದ್ಯುಪಾಸನ ಭೇಧಗಳಂತೆ ಉಕ್ತ್ಯಾಚಾರ್ಯನಿಷ್ಠಾಭೇದಗಳೂ ಸಂಗ್ರಹಿಸಲ್ಪಡುತ್ತವೆ. ಆದಿ ಶಬ್ದದಿಂದ ಕರ್ಮಯೋಗ, ಜ್ಞಾನಯೋಗಗಳು ಸೂಚಿಸಲ್ಪಡುತ್ತವೆ ಎಂದು ಹೇಳಲಿಕ್ಕಿಲ್ಲ. ಅವು ಸಾಕ್ಷಾದುಪಾಯುಗಳಲ್ಲ ಭಕ್ತಿಯೋಗಕ್ಕೆ ಅಂಗಗಳು. **ಪ್ರಧಾನಹೇತುಃ** ಇತ್ಯಾದಿ. ನ್ಯಾಸೋಪಾಸನಗಳು ಮೋಕ್ಷಕ್ಕೆ ಅಪ್ರಧಾನ ಕಾರಣಗಳು. ಭಗವಂತನ ಸ್ವಾತಂತ್ರ್ಯದಿಂದ ಕೂಡಿದ ಕರುಣೆಯೇ ಪ್ರಧಾನ ಹೇತು. ನ್ಯಾಸೋಪಾಸನಗಳು ಭಗವನ್ನಿಗ್ರಹ ನಿವರ್ತಕಗಳು.

## ಅಕಾರಸ್ಯ ಶ್ರಿಯಃಪತಿತ್ವ ಬೋಧಕತ್ವಮ್.

ಸರ್ವರಕ್ಷಣ ದೀಕ್ಷಿತನಾನರ್ವ 1) ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾಕಾರುಣ್ಯರೂಪಯಾ ।
ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಷು ಚ ಗೀಯತೇ॥"
ಇತ್ಯಾದಿಹಳಿರ್‌ಪಡಿಯೇ ಸಪತ್ನೀಕನಾಹ ಸಿದ್ಧನಾಯಿರುಕ್ಕೈಯಾಲೇ ಇಜ್ಗೇ ಪ್ರಮಾಣ ಸಿದ್ಧೋಪಯೋಗ ವಿಶೇಷಮಾನ ಪತ್ನೀ ಸಂಬಂಧಮಾರ್ಥಮ್.
ಇಪ್ಪಡಿ ಸನ್ನಿಯೋಗ ಶಿಷ್ಟ ನ್ಯಾಯತ್ತಾಲೇ ಎನ್ಬೆರುಮಾನ್ನೈ ಚೊಲ್ಲುಂ ಮಿಡಮೆಙ್ಗುಂ ಪಿರಾಟ್ಟಿಯೈಯುಂ ಶೊಲ್ಲಿತ್ತಾಮೆನ್ರುಮಿಡತ್ತೈ 1) "ತದಂತ ರ್ಭಾವಾತ್ತ್ವಂ ನ ಪೃಥಗಭಿಧತ್ತೇ ಶ್ರುತಿರಪಿ" ಎನ್ರು ಸಮರ್ಥಿತ್ತಾರ್‌ಹಳ್.

---

## ಆಕಾರವು ಲಕ್ಷ್ಮೀ ವಿಶಿಷ್ಟ ನಾರಯಣ ವಾಚಕ.

ಆಕಾರವು ರಕ್ಷಕನಾದ ಈಶ್ವರನನ್ನು ಹೇಳುವಾಗ ಪತ್ನೀ ಸಂಬಂಧವನ್ನು ಅರ್ಥವಾಗಿ ತಿಳಿಸುತ್ತದೆಯೆಂದು **ಸರ್ವ ರಕ್ಷಣ ದೀಕ್ಷಿತನಾನ** ಎಂದಾರಂಭಿಸಿ, ಅನುಗ್ರಹಿಸುತ್ತಾರೆ. ಆದಾಗಿ ಸರ್ವರಕ್ಷಣವೆಂಬ ಯಾಗದಲ್ಲಿ ಪತಿಪತ್ನಿಗಳಿಬ್ಬರೂ ದೀಕ್ಷಿತರು.ಆ ಯಜ್ಞದೀಕ್ಷಿತನಾದ ಭಗವಂತನು1)**ಲಕ್ಷ್ಮ್ಯಾಸಹ ಹೃಷೀಕೇಶಃ**ಇತ್ಯಾದಿಗಳಲ್ಲಿ ಹೇಳಿರುವಂತೆ ಸಪತ್ನೀಕನಾಗಿ ಸಿದ್ಧನಾಗಿರುವುದರಿಂದ ಇಲ್ಲಿ ಪ್ರಮಾಣ ಸಿದ್ಧವಾದ ಉಪಯೋಗ ವಿಶೇಷವಾದ ಪತ್ನೀ ಸಂಬಂಧವು **ಆರ್ಥಮ್**-ರಕ್ಷಕತ್ವರೂಪ ಅರ್ಥ ವಿಶೇಷದಿಂದ ಸಿದ್ಧ. **ಉಪಯೋಗ ವಿಶೇಷವು**– ಪುರುಷಕಾರತ್ವ ಉಪಾಯತ್ವಗಳು, ಲಕ್ಷ್ಮೀ ಸಂಭಂಧವಿಲ್ಲದೆ ಘಟಿಸುವುದಿಲ್ಲವಾದ್ದರಿಂದ ರಕ್ಷಕತ್ವವು ಅರ್ಥಸಿದ್ಧ. **ಇಪ್ಪಡಿ ಸನ್ನಿಯೋಗಶಿಷ್ಟನ್ಯಾಯತ್ತಾಲೇ**ಹೀಗೆ ಸಹವಾಪ್ರವೃತ್ತಿ-ಅಂದರೆ ಜತೆಯಲ್ಲಿಯೇ ಪ್ರವೃತ್ತಿರೂಪವಾದವ್ಯಾಪಾರ ಸಹವಾನಿವೃತ್ತಿ-ಜತೆಯಲ್ಲಿಯೇನಿವೃತ್ತಿರೂಪ ವ್ಯಾಪಾರ,ಎಂಬ ನ್ಯಾಯದಂತೆ **ಎಂಬೆರುಮಾನ್ನೈ ಚೊಲ್ಲುಮಿಡಮೆಂಗುಮ್** ಇತ್ಯಾದಿ ಭಗವಂತನನ್ನು ತಿಳಿಸುವ ಎಲ್ಲಾ ಸ್ಥಳಗಳಲ್ಲಿಯೂ, ಲಕ್ಷ್ಮಿಯನ್ನು ಹೇಳಿದೆ ಎಂಬುದನ್ನು 2) **ತದಂತರ್ಭಾವಾತ್ತ್ವಂನ ಪೃಥಗಭಿಧತ್ತೇ ಶ್ರುತಿ ರಪಿ** – ಭಗವಂತನಲ್ಲಿ ವಿಶೇಷಣ ವಿಶಿಷ್ಟಳಾಗಿ ಕೂಡಿರುವುದರಿಂದ "ಸದೇವಸೋಮ್ಯೇದಮಗ್ರ ಆಸೀತ್" ಇತ್ಯಾದಿ ಕಾರಣ ಶ್ರುತಿಗಳು ಪ್ರತ್ಯೇಕವಾಗಿ **ಲಕ್ಷ್ಮಿಯನ್ನು** ಹೇಳುವುದಿಲ್ಲ ಎಂದು ಪರಶರಭಟ್ಟರು ಸಮರ್ಥಿಸಿದರು. ಆದಾಗಿ ಇದಮಿತ್ಥಂತ್ವವು–ಪ್ರವೃತ್ತಿ ನಿಮಿತ್ತ ಹೀಗೆ ಭಗವತ್ಸ್ವರೂಪಕ್ಕೆ ಲಕ್ಷ್ಮಿಯು ಪ್ರವೃತ್ತಿ ನಿಮಿತ್ತ. ಅಪೃಥಕ್ ಸಿದ್ಧ ವಿಶೇಷಣ ಭೂತಳು. ಆದ್ದರಿಂದ ಎಲ್ಲಾ ಭಗವದ್ದಿವ್ಯ ನಾಮಗಳಿಂದಲೂ ಲಕ್ಷ್ಮಿಯೂ ಹೇಳಲ್ಪಡುತ್ತಾಳೆಂದು ತಾತ್ಪರ್ಯ. ಶ್ರೀಮದ್ವಿರೋಧಿ ಪರಿಹಾರದಲ್ಲಿ ಭಾಸ್ಕರನೊರುವನುಮೇ ರಾತ್ರಿ ನಿವರ್ತಕನ್ ಎಂಬ ವಾಕ್ಯದಲ್ಲಿ ಭಾಸ್ಕರನ ಹಾಗೆ ಅವನ ಪ್ರಭೆಯೂ ರಾತ್ರಿ ನಿವರ್ತಕವೆಂಬುದು ಹೇಳಲ್ಪಡುವಂತೆ ಭಾಸ್ಕರನೂ ಅವನಪ್ರಭೆಯೂ ವಿಶೇಷ್ಯ ವಿಶೇಷಣಗಳಾಗಿ ಶಾಬ್ದಗಳು. ಅಲ್ಲಿ ಪ್ರಭಾವಾನಿಗೆ ಪ್ರಭೆಗಿಂತ ಪ್ರಾಧಾನ್ಯವು ಭಾಸ್ವಾನ್ ಎಂಬ ಪದದಿಂದ ತಿಳಿಯುವಂತೆ ಭಗವಂತನ ಎಲ್ಲಾ ನಾಮಗಳೂ ಶ್ರೀ ವಿಶಿಷ್ಟವಾಚಕಗಳು. ವಿಶೇಷಣ ವಿಶೇಷ್ಯಗಳಿಗೆ ಆಯಾಯಾ ನಾಮಗಳಲ್ಲಿ ಹೇಳಲ್ಪಡುವ ರಕ್ಷಕತ್ವ, ಉಪಾಯತ್ವಾದಿ ಸರ್ವಗುಣಗಳೂ ಅನ್ವಯಿಸುತ್ತವೆ. ಹೀಗೆ ಇದ್ದರೂ ಅವರವರ ವಾಸ್ತವವಾದ ಗುಣಗಳ ಪ್ರಾಧಾನ್ಯವೂ ಹೋಗುವುದಿಲ್ಲವೆಂದು ವಿವರಿಸಲ್ಪಟ್ಟಿದೆ.

---

1) ಲಕ್ಷ್ಮೀತಂತ್ರ 27-14-ಹೃಷೀಕೇಶನು ದೇವಿಯಾದ ಕಾರುಣ್ಯ ಸ್ವರೂಪಳಾದ ಲಕ್ಷ್ಮಿಯೊಡಗೂಡಿಯೇ ಜಗದ್ರಕ್ಷಕನು, ಇದು ಸರ್ವಸಿದ್ಧಾಂತ ಸಿದ್ಧ. ವೇದಾಂತದಲ್ಲಿಯೂ ಹೇಳಲ್ಪಡುತ್ತದೆ.

2) ಶ್ರೀ ಗುಣರತ್ನ ಕೋಶ 28

**ಆಹೈಯಾಲ್ ಸ್ವರೂಪ ನಿರೂಪಕ ಧರ್ಮಙ್ಗಳ್ ಸರ್ವ ವಿದ್ಯೈಕಳಿಲುಮ್ (ವರು)ಶೊಲ್ಲುಹಿರ ಕಣಕ್ಕಿಲೇ ಅವತ್ತಿಲ್ ಪ್ರಧಾನಮಾನ ಇವ್ವಿಶೇಷಣಮುಮ್ ಸರ್ವ ವಿದ್ಯೈಕಳಿಲು ಮನುಸಂಧೇಯಮ್. ಇದು ತಾನ್ ದೇವತಾನ್ತರ ವ್ಯಾವೃತ್ತಿಯೈಯುಮ್ ಪಣ್ಣಿಕ್ಕೊಂಡು ಸರ್ವಾತಿಶಾಯಿಯಾನ ಸ್ವತಂತ್ರನುಡೈಯ ಸ್ವರೂಪತ್ತುಕ್ಕು ನಿರೂಪಕಮಾಮ್.**

---

ಭಗವಂತನು ಧರ್ಮಿಯಾಗಿಯೂ ಲಕ್ಷ್ಮಿಯು ಸ್ವರೂಪ ನಿರೂಪಕ ಧರ್ಮಗಳಲ್ಲಿ ಪ್ರಧಾನೆಯಾಗಿಯೂ ಇರುವುದರಿಂದ ಲೋಕದಲ್ಲಿ ಘಟವೆಂಬ ಧರ್ಮಿಯು ಬೇರೆಯಾಗಿಯೂ ಘಟತ್ವರೂಪ ಧರ್ಮವು ಬೇರಾಗಿ ಇದ್ದರೂ ಅಯಮೇಕೋಘಟಃ, ಎಂದು ಧರ್ಮವನ್ನು ಬೇರೆಯಾಗಿ ಹೇಳದೇ ಘಟರೂಪ ಧರ್ಮಿಯನ್ನು ಮಾತ್ರ ವ್ಯವಹರಿಸುವಂತೆ ಶ್ರುತಿಯು"ಆನೀದವಾ॒ತಗ್ಂ ಸ್ವಧಯಾ ತದೇಕಮ್" ಎಂದು ಕಾರಣ ದಶೆಯಲ್ಲಿ ಆಬ್ರಹ್ಮವು ಸ್ವಧಯಾ-ಲಕ್ಷ್ಮಿಯೊಡಗೂಡಿತ್ತು ಎಂದು ಲಕ್ಷ್ಮೀವಿಶಿಷ್ಟನಾಗಿ ಹೇಳಲ್ಪಟ್ಟ ಭಗವಂತನನ್ನು. ಮತ್ತೊಂದು ಶ್ರುತಿಯು "ಏಕ ಮೇವಾದ್ವಿತೀಯಮ್" ಎಂದು ಏಕನನ್ನಾಗಿ ಹೇಳಿತು. ಪೃಥಕ್ಕಾಗಿ ಲಕ್ಷ್ಮಿಯನ್ನು ಹೇಳದೆ ಇದ್ದುದಕ್ಕೆ ಇದೇ ಭಾವ

ಹೀಗೆ ಲಕ್ಷ್ಮಿಯು ಸ್ವರೂಪ ನಿರೂಪಕ ಧರ್ಮಳಾಗಿ ಅಂತರ್ಭೂತೆ ಯಾದ್ದರಿಂದ ಇತರ ಸ್ವರೂಪ ನಿರೂಪಕ ಧರ್ಮಗಳಂತೆ ಶ್ರಿಯಃಪತಿತ್ವರೂಪ ಪ್ರಧಾನ ಧರ್ಮವೂ ಸರ್ವ ವಿದ್ಯೆಗಳಲ್ಲಿಯೂ ಅನುಸಂಧೇಯವೆಂದು, **ಆಹೈಯಾಲ್ ಸ್ವರೂಪ ನಿರೂಪಕ ಧರ್ಮಂಗಳ್** ಎಂದಾರಂಭಿಸಿ ನಿರೂಪಿಸುತ್ತಾರೆ. ಆದಾಗಿ ಶಾರೀರಿಕ ಶಾಸ್ತ್ರಹೃದಯವು ವಿಶಿಷ್ಟ ತತ್ವ ಗೋಚರವು ವಿಶೇಷ್ಯ ತತ್ವ ಮಾತ್ರ ಪರವಲ್ಲ ವೆಂಬುದು ಭಾವ. ಇದಮಿತ್ಥಂತ್ವದ ಹಾಗೆ ಶ್ರೀಪತಿಯ ಮತ್ತು ಶ್ರಿಯ ಪರಸ್ಪರ ನಿರೂಪ್ಯನಿರೂಪಕ ಭಾವದಿಂದ ವಿಶಿಷ್ಟೈಕ ತತ್ವ ವಾಚಿತ್ವವು ಭಗವದ್ದಿವ್ಯ ನಾಮಗಳಲ್ಲಿ ಸಮರ್ಥಿತವು "ಆನಂದಾದಯಃ ಪ್ರಧಾನಸ್ಯ""ಬ್ರಹ್ಮ (ಸೂ 3-3-11) ಇತ್ಯಾದಿ ಸರ್ವೇತರ ವ್ಯಾವೃತ್ತವಾದ ಸ್ವರೂಪವು ಯಾವವಿಶೇಷಣಗಳಿಲ್ಲದೆಪ್ರತೀತಿ ವಿಷಯ ವಾಗಲಾರದೋ ಆ ಎಲ್ಲಾ ಸ್ವರೂಪ ನಿರೂಪಕ ವಿಶೇಷಣ ಭೂತ ಧರ್ಮಗಳು ಸರ್ವ ವಿದ್ಯೆ ಗಳಲ್ಲಿಯೂ ಅನು ಸಂಧಿಸಲ್ಪಡ ಬೇಕೆಂದು ಸಿದ್ಧಾಂತಿತವಾದ್ದರಿಂದ ಆ ಸ್ವರೂಪ ನಿರೂಪಕಗಳಾದ ಸತ್ಯತ್ವ, ಜ್ಞಾನತ್ವ, ಅನಂತತ್ವ, ಆನಂದತ್ವ, ಅಮಲತ್ವ, ಗುಣಗಳ ಹಾಗೆ ಲಕ್ಷ್ಮಿಗೂ ಧರ್ಮಿ ಗ್ರಾಹಕ ಪ್ರಮಾಣಗಳಾದ ಭಗವದ್ದಿವ್ಯ ನಾಮಗಳಲ್ಲಿ ಅವಿನಾಭೂತ ಪ್ರತೀತಕತ್ವವು "ಇತರೇ ತ್ವರ್ಥಸಾಮಾನ್ಯಾತ್" (ಬ್ರಹ್ಮ ಸೂತ್ರ-3-3-13) ಎಂಬ ಸೂತ್ರದಿಂದ ಅಭಿಪ್ರೇತವಾಗಿ ನಿರ್ಣೀತವಾದ್ದರಿಂದ, ಬ್ರಹ್ಮ ಸ್ವರೂಪ ವಿಷಯಗಳಾದ ಎಲ್ಲಾ ಬ್ರಹ್ಮ ವಿದ್ಯೆಗಳಲ್ಲಿಯೂ ಲಕ್ಷ್ಮೀವಿಶಿಷ್ಟ ವಿಷಯತ್ವವೇ ಅಂಗಿಕಾರ್ಯ ವೆಂಬುದು ಹೃದಯ. ಸತ್ಯತ್ವ ಜ್ಞಾನತ್ವ ಆನಂದತ್ವ ಅಮಲತ್ವಗಳು ಚೇತನಾ ಚೇತನಗಳನ್ನು ವ್ಯಾವರ್ತಿಸಿಕೊಂಡು ವಿಲಕ್ಷಣವಾದ ಸರ್ವೇಶ್ವರನ ಸ್ವರೂಪವನ್ನು ನಿರೂಪಿಸುವಾಗ ಸ್ವರೂಪ ನಿರೂಪಕ ಧರ್ಮವು ಬೇರೆ ಏಕೆ ಎಂದರೆ **ಇದು ತಾನ್ ದೇವತಾಂತರ ವ್ಯಾವೃತ್ತಿಯೈಯುಮ್ ಪಣ್ಣಿಕ್ಕೊಂಡು**–ಎಂದಾರಂಭಿಸಿ ವಿವರಿಸುತ್ತಾರೆ. ಆದಾಗಿ ಸತ್ಯತ್ವ ಜ್ಞಾನತ್ವಾದಿ ಸ್ವರೂಪ ನಿರೂಪಕ ಧರ್ಮಗಳಿಂದ ವ್ಯಾವರ್ತಿಸಲ್ಪಟ್ಟ ಬ್ರಹ್ಮ ತತ್ವವು, ಚತುರ್ಮುಖ ಬ್ರಹ್ಮ ಶಿವ ನಾರಾಯಣಾದಿಗಳಲ್ಲಿ ಒಬ್ಬನಾಗಿರಬಹುವೇ ಎಂಬ ಶಂಕೆಯನ್ನು ಹೋಗಲಾಡಿಸಲು, ಚತುರ್ಮುಖ ಬ್ರಹ್ಮ ಶಿವ ಮೊದಲಾದ ದೇವತೆಗಳಿಗಿಂತ ಬೇರೆಯಾದ ಲಕ್ಷ್ಮೀಪತಿಯೆಂದು ತಿಳಿಸುತ್ತದೆ. ಹೀಗೆ ಲಕ್ಷ್ಮಿಯು ಸರ್ವಾತಿಶಾಯಿಯಾದ ಸ್ವತಂತ್ರನಾದ ನಾರಾಯಣನ ಸ್ವರೂಪಕ್ಕೆ ನಿರೂಪಕಳು.

ಆದಾಗಿ ಲಕ್ಷ್ಮೀಪತಿತ್ವವು ನಾರಾಯಣನನ್ನು ದೇವತಾಂತರ ವ್ಯಾವೃತ್ತಿ ಪೂರ್ವಕ ಪರದೇವತೆಯೆಂದು ನಿರೂಪಿಸುತ್ತದೆ. ಸತ್ಯತ್ವಾದಿ ಸ್ವರೂಪ ನಿರೂಪಕ ಧರ್ಮಪಂಚಕಕ್ಕಿಂತಲೂ ಶ್ರೀ ರೂಪವಿಶೇಷಣವು ಪ್ರಧಾನವಾದದ್ದು. ಆದ್ದರಿಂದ ಶ್ರಿಯಃ ಪತಿತ್ವವು ಸರ್ವವಿದ್ಯಾನುಯಾಯಿಯಾಗಿರುವುದು ಆವಶ್ಯಕವಾದದ್ದು. ಆದರಿಂದಲೇ

**ಇವನುಡೈಯ ಸ್ವತಸ್ಸಿದ್ಧಾತಿಶಯಙ್ಗಳಾನ ಸ್ವರೂಪಗುಣವಿಗ್ರಹ ವಿಭೂತಿಹಳ್ 1) "ಭಾಸ್ಕರೇಣ ಪ್ರಭಾಯಥಾ" ಎನ್ನುಂಪಡಿ ವಿಶೇಷಣಮಾಯ್ ನಿರ್ಕ್ಕಿರ ಇವಳುಡೈಯ ಸ್ವರೂಪ ವಿಗ್ರಹ ವಿಭೂತಿಹಳಾಲುಮ್ ಲಬ್ಧಾತಿಶಯಙ್ಗಳಾಯ್ಕ್ಕೊಂಡು ವಿಳಙ್ಗಿಯಿರುಕ್ಕು ಮೆನ್ನುಮಿಡುಮ್ ದೇವತಾಪಾರಮಾರ್ಥ್ಯವೇದಿಹಳಾನ ಮಹರ್ಷಿಹಳಾಲೇ ಪ್ರಪಂಚಿತಮ್.**

---

ಶ್ರೀ ಮತ್ತತ್ತ್ವ ಟೀಕೆಯಲ್ಲಿ "ಸತ್ಯತ್ವಾದಿ ಸ್ವರೂಪ ನಿರೂಪಕ ಧರ್ಮಪಂಚಕ ನಿರೂಪಿತಮಪಿ ಪರಂಬ್ರಹ್ಮ ಶ್ರೀನಿವಾಸತ್ವೇನ ವಿಶೇಷಿತಮೇವ ಬ್ರಹ್ಮವಿದ್ಯಾವೇದ್ಯ ಮಿತ್ಯುಕ್ತಂ ಭವತಿ"-ಅಂದರೆ ಸತ್ಯತ್ವಾದಿ ಸ್ವರೂಪನಿರೂಪಕ ಧರ್ಮಗಳಿಂದ ನಿರೂಪಿತವಾದರೂ ಪರಂಬ್ರಹ್ಮವು ಶ್ರೀನಿವಾಸ–ಲಕ್ಷ್ಮೀಪತಿ ಎಂದು ಶ್ರೀ ವಿಶೇಷಣ ವಿಶಿಷ್ಟವಾಗಿಯೇ ಬ್ರಹ್ಮವಿದ್ಯಾವೇದ್ಯವಾಗುತ್ತದೆ ಎಂದು ಹೇಳಿದೆ.

ಇಲ್ಲಿ ತಿಳಿಯಬೇಕಾದ ವಿಷಯವೇನೆಂದರೆ–ಕುರುಡನೂ ಹಾಲು, ಕಬ್ಬಿನ ರಸ ಮೊದಲಾದವನ್ನು ಕುಡಿಯುವಾಗ ಪರಸ್ಪರ ಮಾಧುರ್ಯ ವ್ಯತ್ಯಾಸದಿಂದ ವಿಲಕ್ಷಣವಾದ ವಸ್ತುಗಳ ಆಸ್ವಾದವನ್ನು ಅನುಭವಿಸುತ್ತಾನೆ ಆ ರಸಗಳ ಆಸ್ವಾದದಿಂದ ಆ ವಸ್ತುಗಳು ಬೇರೆ ಬೇರೆಯೆಂದು ತಿಳಿದರೂ, ಅವು ಯಾವುವು ಎಂದು ಹೇಳಲಾಗುವುದಿಲ್ಲವಷ್ಟೇ. ಕಣ್ಣುಳ್ಳವರಿಗೆ ಆ ವಸ್ತುಗಳು ಯಾವುವು ? ಅವುಗಳಿಗೆ ಪರಸ್ಪರ ವ್ಯತ್ಯಾಸವೇನೆಂಬುದು ರಸಾಸ್ವಾದದಿಂದ ತಿಳಿಯುತ್ತದೆ. ಹೀಗೆಯೇ ನಾರಾಯಣಾದಿ ಶಬ್ದಗಳಿಂದ ಭಗವತ್ಸ್ವರೂಪವು ತಿಳಿಯಲ್ಪಟ್ಟರೂ ದೇವತಾಂತರ ವ್ಯಾವೃತ್ತವಾದ ಸ್ವರೂಪವೂ ವ್ಯಾವರ್ತಕವಾದ ಲಕ್ಷ್ಮೀ ಪತಿತ್ವವೆಂಬ ವಿಶೇಷಣವೂ, ಕ್ಷೀರಾದಿಗಳಲ್ಲಿರುವ ಮಾಧುರ್ಯದ ಹಾಗೆ ತಿಳಿಯಲ್ಪಡುತ್ತದೆ. ಅಲ್ಲಿ ವಿಶೇಷಣಾಂಶದಲ್ಲಿ ವ್ಯಾವರ್ತಕಾಂತರವು ನಾರಾಯಣಾದಿ ಶಬ್ದಗಳಿಂದ ಅವನೂ ತಿಳಿಯಲಾರ ಆದರೂ ಆ ವಿಶೇಷಣದ ಸ್ವರೂಪವು ದುರಪಹ್ನವ. ಪ್ರಮಾಣಾಂತರಗಳಿಂದ,

"ತಾವಿಮಾವೇಕಥೈವೋಕ್ತೌ ಭೇದ್ಯ ಭೇದಕ ಭಾವತಃ ।
ಅಹಂತಯಾ ವಿನಾಹಂತು ನಿರುಪಾಖ್ಯೋ ನ ಸಿಧ್ಯತಿ ॥

ಇತ್ಯಾದಿಗಳಿಂದ ಲಕ್ಷ್ಮೀಸ್ವರೂಪವೇ ಪತಿಯ ಸ್ವರೂಪಕ್ಕೆ ವ್ಯಾವರ್ತಕವಾದ ವಿಶೇಷಣ. ಆದರಿಂದಾಗಿ, ಶ್ರೀರೂಪ ವಿಶೇಷಣವು ಸ್ವರೂಪ ಮಾತ್ರದಿಂದ ಪ್ರಕಾಶಿಸಿದರೂ, ಭಗವತ್ಸ್ವರೂಪ ನಿರೂಪಕವಾಗಿಯೇ ಆಗುತ್ತದೆ. ಭಗವದ್ಭಾಷ್ಯಕಾರರೂ "ಶ್ರಿಯಃಪತಿಃ ನಿಖಿಲ ಹೇಯಪ್ರತ್ಯನೀಕ ಕಲ್ಯಾಣೈಕತಾನ ಅನಂತ ಜ್ಞಾನಾನಂದ ಸ್ವರೂಪಃ, ಬ್ರಹ್ಮಣಿ ಶ್ರೀನಿವಾಸೇ, ಶ್ರೀಮತೇ ನಿರ್ಮಲಾನಂದೋದನ್ವತೇ ವಿಷ್ಣವೇ ನಮಃ" ಇತ್ಯಾದಿಯಾಗಿ ಶ್ರಿಯಃ ಪತಿತ್ವವನ್ನು ಸತ್ಯ ಜ್ಞಾನಾನಂದತ್ವಾದಿ ಸ್ವರೂಪ ನಿರೂಪಕ ಧರ್ಮಗಳಲ್ಲಿ ಪ್ರಧಾನವಾಗಿ "ಅಭ್ಯರ್ಹಿತಂಪೂರ್ವಂ" ಎಂಬ ನ್ಯಾಯವನ್ನವಲಂಬಿಸಿ ಅನುಗ್ರಹಿಸಿರುತ್ತಾರೆ.

**ಇವನುಡೈಯ ಸ್ವತಃ ಸಿದ್ಧಾತಿಶಯಂಗಳಾನ** ಇತ್ಯಾದಿ–ಭಗವಂತನ ಸ್ವತಸ್ಸಿದ್ಧಾತಿಶಯಗಳಾದ ಸ್ವರೂಪ ವಿಗ್ರಹ ವಿಭೂತಿಗಳು 1) **"ಭಾಸ್ಕರೇಣ ಪ್ರಭಾ ಯಥಾ"** ಎಂಬಂತೆ ವಿಶೇಷಣವಾಗಿರುವ ಮಹಾಲಕ್ಷ್ಮಿಯ ಸ್ವರೂಪ ವಿಗ್ರಹ ವಿಭೂತಿಗಳಿಂದಲೂ **ಲಬ್ಧಾತಿಶಯಂಗಳಾಯ್ ಕೊಂಡು** – ಅತಿಶಯವನ್ನು ಪಡೆದುವಗಳಾಗಿ' ಪ್ರಕಾಶದಿಂದ ಕೂಡಿರುತ್ತವೆ, ಎಂಬುದು ದೇವತಾಪಾರಮಾರ್ಥ್ಯ ವೇದಿಗಳಾದ ಪರಾಶರರೇ ಮೊದಲಾದ ಮಹರ್ಷಿಗಳಿಂದ ಪ್ರಪಂಚಿತವ. ಭಗವಂತನ ಸ್ವರೂಪವು ಮಹಾಲಕ್ಷ್ಮಿಯ ಸ್ವರೂಪವೆಂಬ ವಿಶೇಷಣ ವಿಶಿಷ್ಟವಾಗಿದೆ ಅವನ ದಿವ್ಯಮಂಗಳ ವಿಗ್ರಹವೂ ಮಹಾಲಕ್ಷ್ಮಿಯ ದಿವ್ಯಮಂಗಳ ವಿಗ್ರಹದಿಂದ ಎಡೆಯಲ್ಲಿ ವಿಶಿಷ್ಟವಾಗಿದೆ, ಎಂದು ತಾತ್ಪರ್ಯ

---

ರಾಮಾಯಣ ಸುಂದರ ಕಾಂಡ 21-15

**ಏವಂ ಪತ್ನೀ ವೈಶಿಷ್ಟ್ಯಂ ಸನ್ನಿಯೋಗ ಶಿಷ್ಟನ್ಯಾಯೇನ ನಾರಾಯಣ ಶಬ್ದೇ ಪ್ರಾಪ್ಯ ಪ್ರಾಪಕತ್ವಾವಸ್ಥಾಯಾಮಪಿ ಅನುಸಂಧೇಯಮ್.**

**ಇಪ್ಪಡಿ ನಾರಾಯಣ ಶಬ್ದತ್ತಿಲುಮ್ ಪತ್ನೀಸಂಬಂಧಮನುಸಂಧೇಯಮ್. ಇ ಪ್ಪತ್ನೀಸಂಬಂಧಂ ದ್ವಯತ್ತಿಲೇ ಕಂಠೋಕ್ತಮ್. ದ್ವಯ ವಿವರಣಮಾನ ಗದ್ಯತ್ತಿಲ್ ಪ್ರಥಮತ್ತಿಲೇ "ಭಗವನ್ನಾರಾಯಣ ಎನ್ರು ತುಡಙ್ಗಿ, ಶೊಲ್ಲಚ್ಚೆಯ್‌ದೇ ನಾರವರ್ಗತ್ತಿನ್ ನಡುವೇ ಇವಳೈಚ್ಚೊಲ್ಲಿತ್ತುಮ್ ಪತ್ನೀತ್ವ ನಿಬಂಧನಮಾನ ಪತಿಪಾರಾರ್ಥ್ಯತ್ತಾಲುಮ್ "ನರಸಂಬಂಧಿನೋನಾರಾಃ" ಎನ್ಡಿರ ವ್ಯುತ್ಪತ್ತಿಯಾಲುಮ್ ಆಹಕ್ಕಡವದು.**

---

ಪತಿ ಪತ್ನೀ ಭಾವಕ್ಕೆ ವಿಗ್ರಹ ವಿಶೇಷ ಸಂಬಂಧವು ಕಾರಣವಾಗಿರುವಾಗ ಪತಿಯೆಂಬ ಸಂಬಂಧದಿಂದ ಲಕ್ಷ್ಮಿಗೆ ಭಗವಂತನ ದಿವ್ಯನಾಮಗಳಲ್ಲಿ ಪ್ರವೃತ್ತಿ ನಿಮಿತ್ತವು–ಸಾಕ್ಷಾದ್ವಿಶೇಷಣತ್ವವು ವಿಗ್ರಹದ ಮೂಲಕವಲ್ಲದೆ ಹೇಗೆ ಉಪಪನ್ನವಾಗುತ್ತದೆ ಎಂದರೆ, ಅದನ್ನು ನಿರೂಪಿಸೋಣ. ಅದಾಗಿ ಶೇಷಿತ್ವ ವಿಶೇಷ ರೂಪವಾದ ಪತಿತ್ವವು ಸಾಕ್ಷಾದಾತ್ಮ ಸ್ವರೂಪ ನಿಷ್ಠವು. "ಪತಿಂ ವಿಶ್ವಸ್ಯ" ಇತ್ಯಾದಿ ಪ್ರಮಾಣಗಳಿಂದ ಇದು ವ್ಯಕ್ತ. ಇಲ್ಲಿ ಜಗತ್ಪತಿತ್ವಕ್ಕೆ ಪತಿ ಪತ್ನೀ ಸಂಬಂಧಕತ್ವವನ್ನು ಹೇಳಲಾಗದು. ಆದ್ದರಿಂದ "ಶ್ರಿಯಃ ಪತಿಃ" ಇತ್ಯಾದಿ ದಿವ್ಯ ಸೂಕ್ತಿಗಳಲ್ಲಿ ಪ್ರಕಾರಾನುಗುಣವಾಗಿ ವಿಗ್ರಹದ ಅಪೇಕ್ಷೆಯಿಲ್ಲದೆ ಸ್ವರೂಪ ನಿಷ್ಠ ಶೇಷಿತ್ವವು ಸಂಗ್ರಾಹ್ಯ. ವಿಗ್ರಹ ನಿಷ್ಠ ಪತಿತ್ವವು (ಶೇಷಿತ್ವವು) ಪತ್ನಿಯೊದ ಮಹಾಲಕ್ಷ್ಮಿಯ ವಿಗ್ರಹ ವಿಶೇಷಣ ನಿಬಂಧನ.

ಅನಂತರ ಅಕಾರದ ವಿವರಣವಾದ ನಾರಾಯಣ ಶಬ್ದವು ಬುದ್ಧಿಸ್ಥವಾಗಿ,**ಇಪ್ಪಡಿ ನಾರಾಯಣ ಶಬ್ದತ್ತಿಲುಮ್** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಹೀಗೆ ನಾರಾಯಣ ಶಬ್ದದಲ್ಲಿಯೂ, ಪತ್ನೀ ಸಂಬಂಧವು ಅನುಸಂಧೇಯ. ಈ ಪತ್ನೀ ಸಂಬಂಧವು ಯಜಮಾನ ಪತ್ನೀ ನ್ಯಾಯ ನಿಂಬಧನವಾದದ್ದು **ಇಪ್ಪತ್ನೀ ಸಂಬಂಧಮ್** ಇತ್ಯಾದಿ ಅಷ್ಟಾಕ್ಷರ ವಿವರಣವಾದ ದ್ವಯ ಮಂತ್ರದಲ್ಲಿ ಈ ಪತ್ನೀ ಸಂಬಂಧವು ಶ್ರೀಮನ್ನಾರಯಣ ಎಂಬ ಪದದಲ್ಲಿ ಕಂಠೋಕ್ತವು. **ದ್ವಯವಿವರಣಮಾನ** ಇತ್ಯಾದಿ–ದ್ವಯಮಂತ್ರದ ವಿವರಣ ರೂಪವಾದ ಶರಣಾಗತಿ ಗದ್ಯದಲ್ಲಿ **ಭಗವನ್ನಾರಾಯಣ** ಎಂದು ಆರಂಭಿಸಿ ಹೇಳಿದ್ದರೂ **ನಾರವರ್ಗತ್ತಿನ್ ನಡುವೇ** ಇತ್ಯಾದಿ ನರಸಂಬಂಧಿಯಾದ ಭೂಷಣಾಯುಧ ನಿತ್ಯ ಸೂರಿವರ್ಗದ ಮಧ್ಯೆ **ಇವಳೈ ಚ್ಚೊಲ್ಲಿಟ್ರುಮ್** "ಸ್ವಾಭಿಮತ ನಿತ್ಯ ನಿರವದ್ಯ ಅ ಸಂಖ್ಯೇಯ ಕಲ್ಯಾಣ ಗುಣ ಗಣ ಶ್ರೀ ವಲ್ಲಭ, ಎಂದು ಇವಳನ್ನು ಹೇಳಿರುವುದೂ **ಪತ್ನೀತ್ವನಿಂಬಧನಮಾನ** ಇತ್ಯಾದಿ ಪತ್ನಿಯೆಂಬ ಕಾರಣದಿಂದ ಉಂಟಾದ ಪತಿ ಪಾರಾರ್ಥ್ಯದಿಂದಲೂ, ನರ ಸಂಬಂಧಿಗಳಾದ ನಾರಗಳು ಅಂದರೆ ನರಶಬ್ದ ವಾಚ್ಯನಾನ ನಾರಾಯಣನ ಸಂಬಂಧಿಗಳಾದ ನಾರ ವರ್ಗಗಳು ಎಂದು ನಾರ ಶಬ್ದವ್ಯುತ್ಪತ್ತಿಯಿಂದಲೂ, **ಆಹಕ್ಕಡವುದು**–ನಾರ ವರ್ಗಗಳ ನಡುವೆ ಲಕ್ಷ್ಮಿಯನ್ನು ಹೇಳಬೇಕಾಗಿದೆ.

ಈ ಸಂದರ್ಭದಲ್ಲಿ ಪೂರ್ವ ಪಕ್ಷಿಗಳ ಅಭಿಪ್ರಾಯವೇನೆಂದರೆ :- ಲಕ್ಷ್ಮಿಗೆ ಪತಿಗೆ ಸಮಾನವಾದ ಉಪಾಯತ್ವವು ಇಲ್ಲ. ಹೇಳಿದರೆ ಗದ್ಯ ಗ್ರಂಥದೊಡನೆ ವಿರೋಧವು ಏರ್ಪಡುತ್ತದೆ. ಹೇಗೆಂದರೆ"ಅಖಿಲ ಹೇಯ ಪ್ರತ್ಯನೀಕ" ಎಂದಾರಂಭಿಸಿ ದ್ವಯ ಮಂತ್ರದಲ್ಲಿರುವ ನಾರಾಯಣ ಶಬ್ದಾರ್ಥವು ವ್ಯಾಖ್ಯಾನ ಮಾಡಲ್ಪಡುತ್ತದೆ, ಎಂಬುದು ಸಂಪ್ರತಿ ಪನ್ನವಾದದ್ದು; "ನಾರೋ ನರಾಣಂ ಸಂಘಾತಃ–ನಾರಸ್ತ್ವಿತಿ ಸರ್ವ ಪುಂಸಾಂ ಸಮೂಹಃ ಪರಿಕೀರ್ತಿತಃ" ಎಂಬ ಪ್ರಮಾಣವನ್ನು ಅಂಗೀಕರಿಸಿ, ನಾರ ಶಬ್ದವು ಜೀವ ಸಮುದಾಯ ಪರವಾಗಿ ಆ ಗದ್ಯ ಗ್ರಂಥದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿದೆ. ಅದರ ನಡುವೆಲಕ್ಷ್ಮಿಯನ್ನೂ "ಕಲ್ಯಾಣ ಗುಣ ಗಣ ಶ್ರೀವಲ್ಲಭ",ಎಂದು ಹೇಳುತ್ತಾರೆ. ಅನಂತರ "ಏವಂ ಭೂತ ಭೂಮಿ ನೀಳಾ ನಾಯಕ" ಎಂದು ಅತಿದೇಶ ಮಾಡಿರುತ್ತಾರೆ. ಅದರಿಂದ ಭೂಮಿ ನೀಳೆ

ಗಳೊಡನೆ ಸಾಮ್ಯವೇ ಹೇಳಿದಂತಾಗುತ್ತದೆ. ಮೇಲೂ ಲಕ್ಷ್ಮಿಯು ಪುರುಷಕಾರ ಭೂತೆಯಾಗಿದ್ದಾಳೆಂಬುದರಿಂದ ಮಾತ್ರ ಮೋಕ್ಷೋಪಾಯ ಕೋಟಿಯಲ್ಲಿ ಸೇರಿಸಿದ್ದಾಳೆಯೇ ಹೊರತು ಪತಿಯ ಹಾಗೆ ಸಾಕ್ಷಾತ್ಸಿದ್ಧೋಪಾಯಳಲ್ಲ. ಇದೂ, ಭಗವನ್ನಾರಾಯಣ", ಎಂದಾರಂಭಿಸಿ ಶ್ರೀ ಶಬ್ದಾರ್ಥ ವ್ಯಾಖ್ಯಾನದಿಂದಲೂ ತಿಳಿಯಲ್ಪಡುತ್ತದೆ. ಇಲ್ಲಿ ಪುರುಷಕಾರ ಪರವಾಗಿ ಮಾತ್ರ ಹೇಳಿರುತ್ತದೆ, ಎಂಬುದು ಗಮನಿಸ ತಕ್ಕದ್ದು. ಆದ್ದರಿಂದ ಶ್ರೀ ಭಾಷ್ಯಕಾರರ ದಿವ್ಯ ಸೂಕ್ತ್ಯನುಸಾರವಾಗಿ ಸರ್ವ ಪ್ರಮಾಣ ವಚನವು ನೇತವ್ಯವೆಂದು ಶಂಕೆ.

ಇದಕ್ಕೆ ಸಮಾಧಾನವನ್ನು "ದ್ವಯ ವಿವರಣಮಾನ" ಎಂದಾರಂಭಿಸಿ, "ವ್ಯುತ್ಪತ್ತಿ ಯಾಲುಮ್ ಆಹಕ್ಕಡವದು" ಎಂದು ಆಚಾರ್ಯರು ಹೇಳಿರುತ್ತಾರೆ. ಅದಾಗಿ ಶ್ರೀ ಮತ್ಪದವು ನಾರಾಯಣ ಪದಕ್ಕೆ ವಿಶೇಷಣವಾಗಿ ಶ್ರುತಿಯಲ್ಲಿ ಹೇಳಿರುವುದರಿಂದ ಲಕ್ಷ್ಮಿಗೆ ಪತಿಯ ಹಾಗೆ ಉಪಾಯತ್ವವವನ್ನು ಗದ್ಯದಿಂದಲೂ ಭಗವದ್ಭಾಷ್ಯಕಾರರು ತೋರಿಸಿರುತ್ತಾರೆ. ಎಲ್ಲಿ ಎಂದರೆ, "ಅರ್ಥಿಕಲ್ಪಕ ಆಪತ್ಸಖ, ಶ್ರೀಮನ್ನಾರಾಯಣ, ಅ ಶರಣ್ಯ ಶರಣ್ಯ", ಎಂಬ ವಚನದಿಂದ, "ಶ್ರೀ ಮನ್ನಾರಾಯಣ" ಎಂಬುದು ಉಪಾಯತ್ವ ಪರವಾದ ಪೂರ್ವ ಖಂಡದಲ್ಲಿರುವ ಸವಿಶೇಷಣ ನಾರಾಯಣ ಪದಾನುವಾದವು. ಮಹಾವಿಭೂತೇ, ಶ್ರೀ ಮನ್ನಾರಾಯಣ, ಶ್ರೀ ವೈಕುಂಠನಾಥ" ಎಂದು ಪ್ರಾಪ್ಯತ್ವಕ್ಕೆ ಅನುಗುಣವಾದ ವಿಶೇಷಣೀಯ ವರ್ಗದಲ್ಲಿ ಹೇಳಲಡ್ಡುವ ಶ್ರೀ ಮನ್ನಾರಾಯಣ, ಎಂಬ ಪದವು ಉತ್ತರ ಖಂಡದಲ್ಲಿರುವ ಸವಿಶೇಷಣ ನಾರಾಯಣ ಪದಾನುವಾದವೆಂದು ಹೇಗೆ ನಿಶ್ಚಯಿಸಲ್ಪಡುತ್ತದೆಯೋ ಹಾಗೆ ಅರ್ಥಿಕಲ್ಪಕ, ಆಪತ್ಸಖ, ಅಶರಣ್ಯ ಶರಣ್ಯ ಎಂಬ ಪ್ರಾಪಕತ್ವಾನುಗುಣ ವಿಶೇಷಣ ವರ್ಗದಲ್ಲಿ ಶ್ರೀ ಮನ್ನಾರಾಯಣ ಎಂದು ಉಪಾದೀಯಮಾನವಾದ ಪದವು, ಶ್ರೀ ಮಾನಾದ ನಾರಾಯಣನಿಗೆ ಶರಣ್ಯತ್ವವನ್ನು ತಿಳಿಸುತ್ತದೆ. ಅಂದರೆ ಲಕ್ಷ್ಮೀನಾರಾಯಣರಿಬ್ಬರಿಗೂ ಉಪಾಸ್ಯತ್ವವು ಕಂಠೋಕ್ತ. ಕೇವಲ ನಾರಾಯಣನಿಗಲ್ಲ, ಎಂಬುದು ದ್ವಯಮಂತ್ರದ ಪೂರ್ವ ಖಂಡಸ್ಥವಾದ ಶ್ರೀ ಮನ್ನಾರಾಯಣವೆಂಬ ಪದದ ತಾತ್ಪರ್ಯವೆಂದು ನಿರ್ಭಾಧವಾಗಿ ನಿಶ್ಚಯಿಸಲ್ಪಡುತ್ತದೆ. ಆದ್ದರಿಂದ ಸಿದ್ಧೋಪಾಯತ್ವವು ಪತಿಯ ಹಾಗೆ ಲಕ್ಷ್ಮಿಗೂ ಉಂಟು, ಎಂಬುದು ಗದ್ಯಾಭಿಪ್ರಾಯ. ಪುರುಷಕಾರತ್ವವು ಮಾತೃತ್ವ ಪ್ರಯುಕ್ತ ಆಕಾರದಿಂದ ಲಕ್ಷ್ಮಿಗೆ ಅಧಿಕ. ಉಪಾಯ ಪರವಾದ ಶ್ರೀ ಮತ್ಪದದಿಂದ, ಶೃಣೋತಿ ಶ್ರಾವಯತಿ ಆರ್ತನಾದವನ್ನು ತಾನು ಕೇಳಿ, ತನ್ನ ಪತಿಯು ಕಿವಿಕೊಟ್ಟು ಕೇಳುವಂತೆ ಅವನಿಗೆ ತಿಳಿಸುತ್ತಾಳೆಂಬ ವ್ಯುತ್ಪತ್ತಿ ಸಿದ್ಧವಾದ ಪುರುಷ ಕಾರತ್ವವು ಮೊದಲು ಹೇಳಲ್ಪಟ್ಟಿತು. ಪತಿಯ ಹಾಗೆ ಉಪಾಯ ಭೂತೆಯಾದ ಲಕ್ಷ್ಮಿಗೆ ಪುರುಷ ಕಾರತ್ವವು ಹೇಗೆ ಸರಿಹೋಗುತ್ತದೆ ಪುರುಷ ಕಾರತ್ವವು ಸ್ವತಂತ್ರರಲ್ಲದವರ ಕೆಲಸವಲ್ಲವೇ ಎಂದು ಶಂಕಿಸಬಾರದು. ಸ್ವೇಚ್ಛೆಯಾಗಿ ನಿತ್ಯ ಸಿದ್ಧವಾದ ಪತ್ನೀತ್ವವನ್ನು ಪರಿಪಾಲನೆ ಮಾಡುವ ಲಕ್ಷ್ಮಿಯು ಅವನಿಗೆ ಪರಾಧೀನಳಾಗಿ ಪುರುಷಕಾರತ್ವವನ್ನೂ ವಹಿಸುವುದು ಅವಳ ಸ್ವಾತಂತ್ರ್ಯಕ್ಕೆ ಬಾಧಕವಾಗಲಾರದು. ನಾರಪದಾರ್ಥದಲ್ಲಿ ಲಕ್ಷ್ಮಿಯನ್ನು ಸೇರಿಸಿರುವುದರಿಂದ ಮೇಲೆ ಹೇಳಿರುವುದೆಲ್ಲಾ ಸರಿಯಲ್ಲವೆಂದು ಭ್ರಮಿಸಬಾರದು. ನಾರ ಶಬ್ದಕ್ಕೆ 'ನರಸಂಬಂಧಿ' ಎಂದು ವ್ಯುತ್ಪತ್ತಿ. ನರಶಬ್ದವು "ಜಹ್ನುಃ ನಾರಾಯಣೋನರಃ" ಎಂದು ಭಗವನ್ನಾಮಪರ. ನರೇಣ ಸಂಬಂಧವು ನಿಯಾಮ್ಯತ್ವಾದಿಗಳಿಗಿಂತ, ವಿಲಕ್ಷಣವಾದ ಉಭಯ ಸಿದ್ಧವಾದ ಶೇಷ ಶೇಷಿ ಭಾವವು. ತಾದೃಶವಾದ ಪ್ರಕಾರಪ್ರಕಾರಿಭಾವವು ಸಮಾನಾಭಿಪ್ರಾಯಿಕತ್ವರೂಪವಾದದ್ದು ಉಪಪನ್ನ. ಆದ್ದರಿಂದ ಜೀವಕೋಟಿ ಪ್ರವೇಶ ಶಂಕೆಗೆ ಅವಕಾಶವಿಲ್ಲ. "ಏವಂಭೂತಭೂಮಿ ನೀಳಾನಾಯಕ ಎಂಬ ವಾಕ್ಯದಿಂದ ಭೂಮಿ ನೀಳೆಗಳಿಗಿಂತ ಲಕ್ಷ್ಮಿಗೆ ಅತಿಶಯವು ದ್ಯೋತ್ಯವಾಗುತ್ತದೆ ಸಾಮ್ಯವಲ್ಲ. "ಏವಂ ಭೂತ" ಎಂಬ ಶಬ್ದದಿಂದ ಪತ್ನೀತ್ವನಿಬಂಧನ ಪಾರಾರ್ಥ್ಯ ಮಾತ್ರವನ್ನು ಹೇಳುವುದು ಯುಕ್ತ. ಪಾರಾರ್ಥ್ಯವು ಲಕ್ಷ್ಮಿಗೆ ಐಚ್ಛಿಕ. ಭೂಮಿನೀಳೆಗಳಿಗೆ ಸ್ವಾಭಾವಿಕ. ಇದು ಪ್ರಮಾಣಾಂತರಗಳಿಂದ ತಿಳಿಯಲ್ಪಡುತ್ತದೆ. "ಶಕ್ತಿ ಚಕ್ರಸ್ಯನಾಯಿಕಾ" ಎಂಬ ಪ್ರಮಾಣದಿಂದ ಲಕ್ಷ್ಮಿಯು ಭಗವಂತನ ಶಕ್ತಿ ಶಬ್ದವಾಚ್ಯಗಳಾದ ಪತ್ನಿಗಳಿಗೆ, ನಾಯಿಕೆ-ಯಜಮಾನಿ. ಆದ್ದರಿಂದ ಲಕ್ಷ್ಮಿಗೆ ಹೇಳಲ್ಪಟ್ಟ ಉಪಾಯತ್ವ ರೂಪ ಪಾರಮ್ಯಕ್ಕೆ ಏನೂ ಧಕ್ಕೆಯಿಲ್ಲ.

## ಅಥ ಆಕಾರಸ್ಯ ಲುಪ್ತ ಚತುರ್ಥ್ಯರ್ಥಮುಪದಿಶತಿ.

ಇಙ್ಙು ಪ್ರಥಮಾಕ್ಷರಮ್ ಚತುರ್ಥ್ಯೇಕ ವಚನಾನ್ತಮಾಯ್ ವಿಭಕ್ತಿ ಲೋಪಮ್ ಪಿರನ್ದು ಕಿಡಕ್ಕಿರದು. ಅದೆಙ್ಙನೇ ಎನ್ನಿಲ್ ?-ಪರಮಾತ್ಮಾವುಕ್ಕು ಸ್ವಾತ್ಮಾವೈ ಸಮರ್ಪಿಕ್ಕ ವಿಧಿಕ್ಕಿರ ವಿಡತ್ತಿಲೇ ಪ್ರಣವತ್ತೈ ಮನ್ತ್ರಮಾಹ ವಿಧಿಕ್ಕೈಯಾಲುಮ್, ಇದುಕ್ಕು ಅನುಷ್ಠೇಯಾರ್ಥ ಪ್ರಕಾಶನಂ ಪ್ರಾಪ್ತಮಾಹೈಯಾಲುಮ್, ಇದಿಲ್ ಸಮರ್ಪಣೀಯನಾನ ಆತ್ಮಾ ತೃತೀಯಾಕ್ಷರತ್ತಿಲೇ ಪ್ರಕಾಶಿಕ್ಕೈಯಾಲುಮ್ ಇದುಕ್ಕು ಉದ್ದೇಶ್ಯಮಾನ ಪರಬ್ರಹ್ಮಮ್ ಪ್ರಥಮಾಕ್ಷರತ್ತಿಲ್ ಪ್ರಕೃತಿಯಾಲೇ ತೋತ್ತುಹೈಯಾಲುಮ್ ಉದ್ದೇಶ್ಯಕಾರಕತ್ತೈಯುಮ್ ಸಮರ್ಪಣೀಯ ವಸ್ತುವೈಯುಮ್ ಸಮಾನಾಧಿಕರಿತ್ತು ಪ್ರಯೋಗಿಕ್ಕ ಉಚಿತಮಲ್ಲಾಮೈಯಾಲುಮ್ ಉದ್ದೇಶ್ಯಕಾರಕತ್ತುಕ್ಕು ಅನುರೂಪಮಾನ ಚತುರ್ಥೀ ವಿಭಕ್ತಿಯೈ ಇವ್ವಿಡತ್ತಿಲೇ ಕೊಳ್ಳಪ್ರಾಪ್ತಮ್.

ಪ್ರಥಮ ತೃತೀಯಾಕ್ಷರಙ್ಗಳೈ ಸಮಾನಾಧಿಕರಣಙ್ಗಳಾಹಕ್ಕೊಂಡು ಜೀವ ಪರಮಾತ್ಮಾಕ್ಕಳುಡೈಯ

---

## ಅಕಾರಾರ್ಥದಲ್ಲಿ ಸೇರಿ ಲುಪ್ತವಾಗಿರುವ "ಆಯ" ಎಂಬ ಚತುರ್ಥೀ ವಿಭಕ್ತಿಯ ಅರ್ಥ

ಅನಂತರ ಅಕಾರಾರ್ಥದ ಮೇಲೆ ಬಂದು ಲೋಪವಾಗಿರುವ ಚತುರ್ಥೀ ವಿಭಕ್ತಿಯ ಅರ್ಥವನ್ನು ತಿಳಿಸುವವರಾಗಿ ಇಂಗು ಪ್ರಥಮಾಕ್ಷರಮ್ ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗ ಇಲ್ಲಿ 'ಅ' ಎಂಬ ಪ್ರಥಮಾಕ್ಷರವು "ಆಯ" ಎಂದು ಚತುರ್ಥ್ಯೇಕವಚನಾಂತವಾಗಿದ್ದು ವಿಭಕ್ತಿ ಲೋಪವು ಏರ್ಪಟ್ಟು 'ಅ' ಎಂದಾಗಿದೆ. ಅದೆಂಗನೇ ಎನ್ನಿಲ್ ಇತ್ಯಾದಿ-ಇದು ಹೇಗೆಂದರೆ ಪರಮಾತ್ಮನಿಗೆ ಜೀವನು ತನ್ನನ್ನು ಸಮರ್ಪಿಸಬೇಕೆಂದು, ತೈತ್ತಿರೀಯದಲ್ಲಿ ಹೇಳಿರುವ ನ್ಯಾಸವಿದ್ಯೆಯಲ್ಲಿ "ಓಮಿತ್ಯಾತ್ಮಾನಂ ಯುಂಜೀತ" ಎಂದು ಪ್ರಣವವನ್ನು ಕರಣಮಂತ್ರವಾಗಿ ವಿಧಿಸಿದೆ. ಈ ಮಂತ್ರಕ್ಕೆ ಅನುಷ್ಠೇಯಾರ್ಥಪ್ರಕಾಶತ್ವವು-ಅನುಷ್ಠಿಸಲ್ಪಡುವ ಅರ್ಥವನ್ನು ತಿಳಿಸುವುದು ಪ್ರಾಪ್ತವಾದದ್ದು. ಈ ಪ್ರಣವದಲ್ಲಿ ಸಮರ್ಪಣೀಯನಾದ ಜೀವಾತ್ಮಾ "ಮ್" ಎಂಬ ಮೂರನೇ ಅಕ್ಷರದಲ್ಲಿ ಪ್ರಕಾಶಿಸುತ್ತಾನೆ-ಹೇಳಲ್ಪಟ್ಟಿದ್ದಾನೆಂದರ್ಥ, ಈ ಸಮರ್ಪಣಕ್ಕೆ ಉದ್ದೇಶ್ಯ ಭೂತವಾದ ಪರಬ್ರಹ್ಮವು ಪ್ರಥಮಾಕ್ಷರವಾದ 'ಆಯ' ಎಂಬಲ್ಲಿ 'ಅ' ಎಂಬ ಪ್ರಕೃತಿಯಿಂದ ತೋರುತ್ತದೆ. ಉದ್ದೇಶ್ಯಕಾರಕವನ್ನು, ಸಮರ್ಪಣೀಯ ವಸ್ತುವನ್ನು ಅ, ಮ್, ಎಂದು ಸಮಾನ ವಿಭಕ್ತಿವಾಗಿ ಪ್ರಯೋಗಿಸುವುದು ಉಚಿತವಲ್ಲವಾದ್ದರಿಂದಲೂ, ಉದ್ದೇಶ್ಯಕಾರಕಕ್ಕೆ ಅನುರೂಪವಾದ ಚತುರ್ಥೀ ವಿಭಕ್ತಿಯನ್ನು ಇಲ್ಲಿ ಅಂಗೀಕರಿಸುವುದು ಯೋಗ್ಯವಾದದ್ದು. ಆಯ, ಮ್ ಅಕಾರ ವಾಚ್ಯವಾದ ಪರ ಬ್ರಹ್ಮಕ್ಕೆ ಮಕಾರ ವಾಚ್ಯನಾದ ಜೀವನು ಸಮರ್ಪಣೀಯನು, ಎಂದು ಅಂಗೀಕರಿಸುವುದು ಯುಕ್ತವೆಂದು ತಾತ್ಪರ್ಯ.

"ಓಮಿತ್ಯಾತ್ಮಾನಂಯುಂಜೀತ' ಎಂಬಲ್ಲಿ ಸಮರ್ಪಣೀಯವು ಹೇಳಲ್ಪಟ್ಟಿಲ್ಲ. ಬೇರೆ ಏನೆಂದರೆ,ಜೀವಪರಮಾತ್ಮರುಗಳಿಗೆ ಐಕ್ಯಭಾವವು ವಿಧಿಸಲ್ಪಟ್ಟಿದೆ. 'ಯುಜಿ ಯೋಗೇ ಎಂಬ ಧಾತು ಆದರ ಪ್ರಕಾರ ಅ, ಮ್ ಎಂಬ ಪರಮಾತ್ಮ ಜೀವರ ಐಕ್ಯವು ವಿಧಿಸಲ್ಪಡುತ್ತದೆಯಾದ್ದರಿಂದ "ಅ, ಮ್" ಎಂದು ಸಮಾನ ವಿಭಕ್ತಿಕವೇ ಅಂಗೀಕರಿಸತಕ್ಕದ್ದು ಆಗ ಅಕಾರಾರ್ಥ ಭಿನ್ನವಲ್ಲದ ಮಕಾರಾರ್ಥವೆಂದು ಫಲಿಸುತ್ತದೆ ಪರಮಾತ್ಮನೂ ಜೀವನೂ, ಒಂದೇ, ಎರಡಲ್ಲ, ಎಂಬ ಅದ್ವೈತ ಮತವು ಸಿದ್ಧಿಸುತ್ತದೆ" ಎಂಬ ಮತವನ್ನು ಪ್ರಥಮ ತೃತೀಯಾಕ್ಷರಂಗಳೈ ಇತ್ಯಾದಿ ಅನುವಾದ ಮಾಡಿ ನಿರಸನ ಮಾಡುತ್ತಾರೆ. ಆದಾಗಿ ಪ್ರಥಮ ತೃತೀಯಾಕ್ಷರಗಳಾದ ಅ, ಮ್, ಎಂಬುವನ್ನು ಸಮಾನಾಧಿಕರಣಗಳಾಗಿ -ಸಮಾನವಾದ ಪ್ರಥಮಾ ವಿಭಕ್ತಿಯಿಂದ ಕೂಡಿದುವಗಳಾಗಿ - ಅಂಗೀಕರಿಸಿ, ಜೀವ ಪರಮಾತ್ಮರ ಸ್ವರೂಪೈಕ್ಯವು ಅಂದರೆ ಪರಮಾತ್ಮನೇ ಜೀವನೆಂಬ ಐಕ್ಯವು, ಇಲ್ಲಿ ಹೇಳಲ್ಪಡುತ್ತದೆ ಎಂಬ ಕುದೃಷ್ಟಿ

**ಸ್ವರೂಪೈಕ್ಯಮ್ ಇಜ್ಞು ಶೊಲ್ಲಪ್ಪಡಹಿರದೆನ್ರುಮ್ ಕುದೃಷ್ಟಿ ಪಕ್ಷತ್ತುಕ್ಕು ಬಹು ಪ್ರಮಾಣ ವಿರೋಧಮುಮ್ ಸಮಭಿವ್ಯಾಹೃತ ನಮಶ್ಶಬ್ದ ಚತುರ್ಥಿಹಳುಡೈಯ ಸ್ವರ ಸಾರ್ಥವಿರೋಧಮುಮ್‌ವರುಮ್.**

**ಇದು ಪ್ರಣವತ್ತೈಧನುಸ್ಸಾಹವುಮ್ ಆತ್ಮಾವೈ ಶರಮಾಹವುಮ್ ಬ್ರಹ್ಮತ್ತೈ ಇಲಕ್ಕಾಹವುಮ್ ಆತ್ಮಸಮರ್ಪಣತ್ತೈಲಕ್ಷ್ಯ ವೇಧಮಾಹವುಮ್ ವಹುತ್ತು ಶೊಲ್ಲುಹಿರ ವಾಕ್ಯತ್ತಾಲುಮ್ ಸಿದ್ಧಮ್.**

**ಪ್ರಣವೇ ಶೇಷಶೇಷಿಭಾವಮನುಸಂಧೇಯಮ್**

**ಇಜ್ಞು ಭರ ಸಮರ್ಪಣಮ್ ಪೊರುಳಾಮ್‌ಪೋದು ಸ್ವತಂತ್ರ ಪ್ರಣವತ್ತಿರ್‌ಕಂಡ ಚತುರ್ಥಿಯಿರ್ಪ್ಪಡಿಯೇ**

---

ಗಳಾದ ಅದ್ವೈತಮು ಕ್ಕೆ, ಬಹು ಪ್ರಮಾಣ ವಿರೋಧಗಳೂ ಮುಂದೆ ಸೇರಿದ ಹಾಗೆ ಹೇಳಿರುವ ನಮಶ್ಶಬ್ದ, ನಾರಾಯಣ ಶಬ್ದ, ಚತುರ್ಥಿಗಳ ಸ್ವರಸವಾದ ಅರ್ಥಕ್ಕೆ ವಿರೋಧವೂ ಉಂಟಾಗುತ್ತದೆ. **ಬಹು ಪ್ರಮಾಣ-ವಿರೋಧಗಳು** ಹೇಗೆ ಎಂದರೆ, "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ"-ಅವರಿಬ್ಬರಲ್ಲಿ ಒಬ್ಬನು ಆ ಮರದ ಪಿಪ್ಪಲ ಹಣ್ಣನ್ನು ರುಚಿಯಾಗಿ ತಿನ್ನುತ್ತಾನೆಂದು, ಜೀವನು ಬೇರೆ, ಈಶ್ವರನು ಬೇರೆ ಎಂದು ಹೇಳಿರುವ ವಚನ ವಿರೋಧವು ಐಕ್ಯವನ್ನು ಹೇಳಿದರೆ ಏರ್ಪಡುತ್ತದೆ. ಹಾಗೆಯೇ, "ಪೃಥಗಾತ್ಮಾನಂ ಪ್ರೇರಿತಾರಂ ಚಮತ್ವಾ," ಜೀವನೂ, ಪ್ರೇರಕನಾದ ಈಶ್ವರನೂ ಬೇರೆ ಎಂದು ಧ್ಯಾನ ಮಾಡಬೇಕು, "ಉತ್ತಮಃ ಪುರುಷ ಸ್ತ್ವನ್ಯಃ"-ಕ್ಷರ ಶಬ್ದವಾಚ್ಯನಾದ ಬದ್ಧ ಜೀವನಿಗಿಂತಲೂ, ಅಕ್ಷರ ಶಬ್ದ ವಾಚ್ಯನಾದ-ಶುದ್ಧ ಜೀವನಿಗಿಂತಲೂ, ಪುರುಷೋತ್ತಮನು ಬೇರೆಯಾದವನು, "ಮಿಥ್ಯೈತದನ್ಯ ದ್ರವ್ಯಂಹಿ ನೈತಿತ್ತ ದ್ರವ್ಯತಾಂಯತಃ"- ಜೀವನೂ ಈಶ್ವರನೂ ಬೇರೆ ಬೇರೆಯಾದ ತತ್ವಗಳು. ಜೀವತತ್ವವು ಈಶ್ವರ ತತ್ವವಾಗಿ ಬಿಡುತ್ತದೆ ಎಂಬುದು ಸುಳ್ಳು, ಇತ್ಯಾದಿ "**ಸಮಭಿವ್ಯಾಹೃತ ನಮಶ್ಶಬ್ದ ನಾರಾಯಣ ಶಬ್ದ ಚತುರ್ಥಿಹಳುಡೈಯ ಸ್ವರಸಾರ್ಥವಿರೋಧಮುಮ್ ವರುಮ್**-ನಮಶ್ಶಬ್ದಶ್ಚ ನಾರಾಯಣ ಶಬ್ದಶ್ಚ ಚತುರ್ಥೀಚ ಎಂದು ದ್ವಂದ್ವ ಸಮಾಸ. ನಮಶ್ಶಬ್ದದ ಸ್ವರಸಾರ್ಥವು ಪ್ರಹ್ವೀಭಾವ. ಜೀವನಿಗೂ ಈಶ್ವರನಿಗೂ ಸ್ವರೂಪೈಕ್ಯವನ್ನು ಹೇಳಿದರೆ ಪ್ರಹ್ವೀಭಾವವು ಉಂಟಾಗುವುದಿಲ್ಲ. ನಾರಾಯಣ ಶಬ್ದದ ಸ್ವರಸಾರ್ಥವು ನಾರಗಳಿಗೆ (ಚೇತನಾ ಚೇತನಗಳಿಗೆ) ಅಯನ ವಾಸಸ್ಥಾನವೆಂದೂ ನಾರಗಳನ್ನು ಅಯನ ವಾಸಸ್ಥಾನವಾಗಿ ಉಳ್ಳವನು ಎಂಬುದೂ, ಐಕ್ಯ ಪಕ್ಷದಲ್ಲಿ ವಿರೋಧಿಸುತ್ತದೆ. ಚತುರ್ಥಿಗೆ ಶೇಷತ್ವವು, ಅದರ ಕಾರ್ಯವಾದ ಕೈಂಕರ್ಯವು, ಸ್ವರಸಾರ್ಥ. ಅದೂ ಐಕ್ಯ ಪಕ್ಷದಲ್ಲಿ ವಿರೋಧಿಸುತ್ತದೆ.

ಪ್ರಣವದಲ್ಲಿ ಸೇರಿರುವ ಅಕಾರವು ಚತುರ್ಥ್ಯೇಕ ವಚನಾಂತವೆಂಬುದು ಶ್ರುತಿಯಿಂದಲೂ ಸಿದ್ಧವೆಂದು **ಇದು ಪ್ರಣವತ್ತೈ ಧನುಸ್ಸಾಹವುಮ್** ಇತ್ಯಾದಿ ಅನುಗ್ರಹಿಸುತ್ತಾರೆ ಅದಾಗಿ "ಪ್ರಣವೋ ಧನುಶ್ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯ ಮುಚ್ಯತೇ ಅಪ್ರಮತ್ತೇನವೇದ್ಧವ್ಯಂ ಶರವತ್ತನ್ಮಯೋ ಭವೇತ್, ಎಂಬ ಶ್ರುತಿಯ ಪ್ರಕಾರ ಕರಣ ಮಂತ್ರವಾದ ಪ್ರಣವವನ್ನು ಧನುಸ್ಸಾಗಿಯೂ, ಮಕಾರ ವಾಚ್ಯನಾದ ಆತ್ಮಾವನ್ನು ಬಾಣವನ್ನಾಗಿಯೂ ಅಕಾರ ವಾಚ್ಯನಾದ ಬ್ರಹ್ಮವನ್ನು ಲಕ್ಷ್ಯ-ಗುರಿಯಾಗಿಯೂ, ಆತ್ಮ ಸಮರ್ಪಣವನ್ನು ಗುರಿಗೆ ಹೊಡೆಯುವಂತೆ ಹೇಳಿರುವ ಪ್ರಕಾರ, ಜೀವನನ್ನು ಬಾಣವನ್ನಾಗಿಯೂ ಬ್ರಹ್ಮವನ್ನು ಲಕ್ಷ್ಯ ಗುರಿಯಾಗಿಯೂ ವಿಂಗಡಿಸಿ ಹೇಳಿರುವ ವಾಕ್ಯದಿಂದಲೂ ಭೇದವು ಸಿದ್ಧ. ಇದರಿಂದ ಜೀವ ಬ್ರಹ್ಮರಿಗೆ ಐಕ್ಯವನ್ನು ಹೇಳಲಾಗುವುದಿಲ್ಲ. "ಶರವತ್ತನ್ಮಯೋ ಭವೇತ್ ಎಂಬ ವಾಕ್ಯವು ಬಾಣವು ಲಕ್ಷ್ಯಕ್ಕೆ ಹೊಡೆಯಲ್ಪಟ್ಟಂತೆ, ಜೀವನು ಬ್ರಹ್ಮ ಸಂಬಂಧವನ್ನು ಪಡೆಯುತ್ತಾನೆಂಧರ್ಥ. ಐಕ್ಯವಲ್ಲ ಈ ಆತ್ಮ ಸಮರ್ಪಣ ಶ್ರುತಿಯಿಂದ, ಅಕಾರದ ಮೇಲೆ ಚತುರ್ಥಿ ವಿಭಕ್ತಿಯು ಏರಿ ಲೋಪವಾಗಿದೆ ಎಂಬುದು (ಮುಂಡಕ ಶ್ರುತಿ) ಸಿದ್ಧ.

ಅಷ್ಟಾಕ್ಷರದಲ್ಲಿ ಸಮರ್ಪಣ ಪರಯೋಜನೆಯೆಂದೂ ಸ್ವರೂಪ ಪರ ಯೋಜನೆಯೆಂದೂ ಎರಡು ಉಂಟು ಅದರಲ್ಲಿ ಸಮರ್ಪಣ ಪರ ಯೋಜನೆಯಲ್ಲಿ ಚತುರ್ಥಿಗೆ ಸಂಪ್ರದಾನವು ಅರ್ಥವೆಂದು **ಇಂಗು ಭರಸಮರ್ಪಣಮ್**

**ಇಚ್ಚತುರ್ಥಿಕ್ಕು ಮರ್ಥಮಾಹಕ್ಕಡವದು. ಇಙ್ಗು ಪ್ರಣವಮ್ ಪರಶೇಷತೈಕರಸ ಸ್ವರೂಪ ಪ್ರತಿಪಾದನ ಪರಮಾನ ಪೊರಳಿಲ್ ಇಚ್ಚತುರ್ಥೀ ತಾದರ್ಥ್ಯತ್ತೈ ವಿವಕ್ಷಿಕ್ಕೈಯಾಲೇ ಆತ್ಮ ಪರಮಾತ್ಮಾಕ್ಕಳುಡೈಯ ಶೇಷಶೇಷಿ ಭಾವಮ್ ಪ್ರಕಾಶ್ಯ ಮಾಹೈಯಾಲ್ ನಿರುಪಾಧಿಕ ಸರ್ವಶೇಷಿಯಾನ ವೀಶ್ವರನ್ನೈಪ್ಪತ್ತತಾನ್ ನಿರುಪಾಧಿಕ ಶೇಷಮಾನಪಡಿ ಅನುಸಂಧೇಯಮ್.**

**ಪ್ರಣವೇ ಶೇಷಿ ಶೇಷಯೋರ್ಮಧ್ಯೇ ಸಂಬಂಧಾಭಿಧಾನಂ ಕಥಮಿತ್ಯತ ಅಹ**

**1) ತ್ವಂ ಮೇ ಎನ್ಱು ಸ್ವಾಮಿಯಾನಸರ್ವೇಶ್ವರನ್ ತುಡರ್ನ್ದು ಪಿಡಿತ್ತಾಲುಮ "ಅಹಂ ಮೇ" ಎನ್ಱು ತಿಮಿರಪ್ಪ**

---

ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಅಷ್ಟಾಕ್ಷರ ಘಟಿತವಾದ ಈ ಪ್ರಣವದಲ್ಲಿ ಭರಸಮರ್ಪಣವು ಅರ್ಥವಾದರೆ, **ಸ್ವತಂತ್ರ ಪ್ರಣವತ್ತಿಲ್ ಚತುರ್ಥಿಯಿರ್ಪ್ಪಡಿಯೇ** - "ಓಮಿತ್ಯಾತ್ಮಾನಂ ಯುಂಜೀತ," ಎಂಬ ಆತ್ಮ ಸಮರ್ಪಣದಲ್ಲಿ ವಿನಿಯುಕ್ತವಾದ ಚತುರ್ಥಿಯ ಹಾಗೆ ಈ ಚತುರ್ಥಿಗೂ ಸಂಪ್ರದಾನಾರ್ಥವು **ಆಹಕ್ಕಡವದು**-ಆಗುತ್ತದೆ **ಇಂಗುಪ್ರಣವಮ್** – ಈ ಅಷ್ಟಾಕ್ಷರ ಮಂತ್ರದಲ್ಲಿ ಕೂಡಿದ ಪ್ರಣವವು **ಪರಶೇಷತೈಕ ರಸಸ್ವರೂಪ ಪ್ರತಿಪಾದನ ಪರಮಾನ ಪೊರುಳಿಲ್**-ಪರನಾದ ಭಗವಂತನಿಗೆ ಶೇಷನಾಗಿರುವುದೇ ತನಗೆ ಪ್ರೀತಿಕರವೆಂಬ ಜೀವ ಸ್ವರೂಪ ಪ್ರತಿ ಪಾದನ ಪರವಾದ ಅರ್ಥದಲ್ಲಿ ಆಯ ಎಂಬಲ್ಲಿ ಚತುರ್ಥಿಗೆ ಸಂಪ್ರದಾನವು ಅರ್ಥವಲ್ಲ. ಮತ್ತೇನೆಂದರೆ ತಾದರ್ಥ್ಯವೇ ಅರ್ಥ. ಆಗ ಭಗವಂತನ ಪ್ರಯೋಜನಕ್ಕಾಗಿಯೇ ಜೀವನು ಇದ್ದಾನೆ ಅಂದರೆ ಅವನಿಗೆ ಶೇಷಭೂತನಾಗಿರುವುದೇ ಜೀವನ ಸ್ವರೂಪ. ಈ ಅರ್ಥದಲ್ಲಿ ತಾದರ್ಥ್ಯವನ್ನು ವಿವಕ್ಷಿಸುವುದರಿಂದ ಆತ್ಮ ಪರಮಾತ್ಮರ ಶೇಷ ಶೇಷಿ ಭಾವವು ಪ್ರಕಾಶ್ಯವಾದ್ದರಿಂದ **ನಿರುಪಾಧಿಕ ಸರ್ವ ಶೇಷಿಯಾನ** ಇತ್ಯಾದಿ ನಿರುಪಾಧಿಕ ಕಾರಣವಿಲ್ಲದೆ ಸ್ವರೂಪತಃ ಸರ್ವರಿಗೂ **ಶೇಷಿಯಾದ ಈಶ್ವರನೆಪ್ಪತ್ತ** ಈಶ್ವರನನ್ನು ಕುರಿತು ಅಂದರೆ ಈಶ್ವರನಿಗೆ ತಾನು **ನಿರುಪಾಧಿಕಶೇಷ** ಕಾರಣವಿಲ್ಲದೆ ಸ್ವರೂಪತಃ ಶೇಷವಾಗಿರುವುದು ಅನುಸಂಧೇಯ

ಶೇಷತ್ವಕ್ಕೆ ವಿಷಯವಾದ ಜೀವನನ್ನು "ಮ" ಕಾರದಿಂದ ನಿರ್ದೇಶಿಸಿರುವುದಕ್ಕೆ ಮೊದಲೇ ಶೇಷತ್ವರೂಪ ಧರ್ಮವನ್ನು "ಆಯ" ಎಂಬ ತಾದರ್ಥ್ಯ ವಾಚಕ ಚತುರ್ಥಿಯಿಂದ ನಿರ್ದೇಶನಮಾಡಿರುವುದಕ್ಕೆ ಕಾರಣವೇನೆಂದರೆ

1) "**ತ್ವಂಮೇ**" **ಎನ್ಱು** ಇತ್ಯಾದಿ–ಎಂದು. **ಸ್ವಾಮಿ** ಯಾದ ಸರ್ವೇಶ್ವರನು ಜೀವನನ್ನು ನೋಡಿ, ನೀನು ನನಗೆ ದಾಸಭೂತನು ಎಂದು ತನ್ನ ಸ್ವಾಮಿತ್ವವನ್ನು ತೋರಿಸಿ ಹೋಗಿ ಹಿಡಿದುಕೊಂಡರೂ, ಜೀವನು "**ಅಹಂಮೇ**"

---

1 ತ್ವಂಮೇಽಹಂಮೇ ಕುತಸ್ತತ್ ತದಪಿಕುತಯತೋ ವೇದಮೂಲ ಪ್ರಮಾಣಾತ್
ಏತಚ್ಚಾನಾದಿ ಸಿದ್ಧಾತ್ ಅನುಭವ ವಿಷಯಾತ್ ತರ್ಹಿ ಸಾಕ್ರೋಶ ಏವ ।
ಕ್ವಾಕ್ರೋಶಃ ಕಸ್ಯ ಗೀತಾದಿಷು ಮಮವಿದಿತಃ ಕೋಽತ್ರ ಸಾಕ್ಷೀ ಸುಧೀಸ್ಯಾತ್
ಹಂತತ್ವತ್ಪಕ್ಷಪಾತೀ ಸ ಇತಿ ನೃಕಲಹೇ ಮೃಗ್ಯ ಮಧ್ಯಸ್ಥವತ್ತ್ವಮ್ ॥

ಪರಾಶರಭಟ್ಟರ ಮುಕ್ತಕ ಶ್ಲೋಕ, ಶ್ರೀರಂಗನಾಥನು ಅಭಿಷೇಕ ಸಮಯದಲ್ಲಿ ತುಳಸೀ ಮಾಲೆಯನ್ನು ಧರಿಸಿ ಅಭಿಷೇಕ ಮಾಡಿಕೊಳ್ಳುತ್ತಿರುವುದನ್ನು ನೋಡಿ ಒಂದು ಶಪಥವನ್ನು ಮಾಡುವವನಂತೆ ಕಾಣುತ್ತೀಯಾ ಎಂದು ಪರಾಶರ ಭಟ್ಟರು ಅನುಸಂಧಾನ ಮಾಡಿದರು ಆದಾಗಿ ಭಗವಂತನು ಜೀವನನ್ನು ನೋಡಿ ನೀನು ನನಗೆ ದಾಸನು ಎನ್ನಲು ಜೀವನು "ನಾನು ನನಗೇ ಸೇರಿದವನು" ಎನ್ನಲು ಅದು ಹೇಗೆ ? ಎಂದು ಭಗವಂತನು ಕೇಳಲು, ನಿಮಗೆ ಹೇಗೇ ನಾನು ಸೇವಕನು ಎಂದು ಪ್ರತಿಯಾಗಿ ಜೀವನು ಕೇಳಲು, ವೇದ ಪ್ರಾಮಾಣವನ್ನು ಭಗವಂತನು ಎತ್ತಿ ತೋರಿಸಲು, ಜೀವನು ನಾನೂ ಅನಾದಿಯಾಗಿ ಸ್ವತಂತ್ರನೆಂಬುದು ಅನುಭವದಿಂದ ಸಿದ್ಧವೆಂದು ಹೇಳಲು ಭಗವಂತನು ಆಗಾಗ್ಯೆ ನಾನು ಅದನ್ನು ಆಕ್ಷೇಪಿಸುತ್ತಿದ್ದೇನೆ, ಎನ್ನಲು, ಎಲ್ಲಿ ಎಂದು ಜೀವನು ಕೇಳಲು."ಗೀತಾದಿಗಳಲ್ಲಿ" ಎಂದು ಪ್ರತ್ಯುತ್ತರವನ್ನು ಭಗವಂತನು ಹೇಳಲು, ನನಗೂ ಅದು ಗೊತ್ತು ಆದರೆ ಸಾಕ್ಷಿಗಳನ್ನು ತಿಳಿಸಿ ಎನ್ನಲು, ಸುಧೀಮಂದಿರೇ ಸಾಕ್ಷಿಗಳು" ಎಂದು ಭಗವಂತನು ಹೇಳಲು ಅವರು ನಿನ್ನ ಪಕ್ಷಪಾತಿಗಳು ಎಂದು ಜೀವನು ಹೇಳಿದನು ಅನಂತರ ಈ ಕಲಹದಲ್ಲಿ **ಭಗವಂತನು ಮೃಗ್ಯಮಧ್ಯಸ್ಥತ್ವ ಅಂದರೆ ಶಪಥವನ್ನು ಮಾಡುತ್ತಿದೆ ಶಪಥಮಾಡಿ ತನ್ನ ಸ್ವಾಮಿತ್ವವನ್ನೂ ಜೀವನ ದಾಸತ್ವವನ್ನೂ ಸ್ಥಾಪಿಸುವಂತಿದೆ ಎಂದು ತಾತ್ಪರ್ಯ.**

ಞ್ಞು ಮಹಾಜ್ಞಾರ ವಿಶೇಷತ್ತಾಲೇ ಅಸತ್ಕಲ್ಪನಾನ ವಿಜ್ಜೀವಾತ್ಮಾವೈ ಶೇಷತ್ವಾನುಸಂಧಾನಮ್ ಉಜ್ಜೀವಿಪ್ಪಿಕ್ಕಿರದಾಹೈಯಾಲೇ, ಇದಿನ್ ಪ್ರಾಧಾನ್ಯಮ್ ತೋತ್ತುಹೈಕ್ಕಾಹ ಧರ್ಮಿಕ್ಕು ಮುನ್ನೇ ಶೇಷಿಯೋಡೇ ಸಂಬಂಧತ್ತೈ ಚೊಲ್ಲಿತ್ತು.

ತದೇವ ಪ್ರಾಧಾನ್ಯಂ ಕಾರಿಕೆಯಾ ಸಂಗೃಹ್ಣಾತಿ.

ನಿಶ್ಚಿತೇ ಪರಶೇಷತ್ವೇ ಶೇಷಂ ಸಂಪರಿ ಪೂರ್ಯತೇ ।
ಅನಿಶ್ಚಿತೇ ಪುನ ಸ್ತಸ್ಮಿನ್ನನ್ಯತ್ಸರ್ವ ಮಸತ್ಸಮಮ್ ॥೧೨॥

ಭಗವತಃ ಸರ್ವಶೇಷಿತ್ವವಿಂವಲ್ಲಕ್ಷ್ಮ್ಯಾ ಅಪಿ ಸರ್ವ ಶೇಷಿತ್ವ ಮಸ್ತ್ಯೇವ.

ಇಪ್ಪಡಿ ಯೀಶ್ವರ್ರ ಸರ್ವಶೇಷಿಯಾವ್ವೋದು
1) "ಅಸ್ಯಾ ಮಮಚ ಶೇಷಂ ಹಿ ವಿಭೂತಿ ರುಭಯಾತ್ಮಿಕಾ ।
ಇತಿ ಶ್ರುತಿ ಶಿರಸಿದ್ಧಂ ಮಚ್ಛಾಸ್ತ್ರೇಷ್ವಪಿಮಾನದ॥ ಎನ್ರುಮ್
2) "ಉಭಯಾಧಿಷ್ಠಾನಂ ಚೈಕಂಶೇಷಿತ್ವಂ"ಎನ್ರುಮ್ ಶೊಲ್ಲುಹಿರಪಡಿಯೇಸಪತ್ನೀಕನಾಯಿರುಕ್ಕುಮ್

---

ನಾನು ನನಗೆ ದಾಸಭೂತನು, ಎಂದು ತಿಮಿರಪ್ಪಣ್ಣುಮ್ ಇತ್ಯಾದಿ ಕೊಬ್ಬಿನಿಂದ ಹೇಳಿಕೊಂಡು ಅಹಂಕಾರ ಯುಕ್ತನಾಗಿ ದೂರ ಸರಿಯುವ ಅಸತ್ಕಲ್ಪನಾದ ಈ ಜೀವನನ್ನು ಭಗವಚ್ಛೇಷತ್ವಾನು ಸಂಧಾನವು ಉಜ್ಜೀವಿಸುವದರಿಂದ ಇದರ ಪ್ರಾಧಾನ್ಯವನ್ನು ತಿಳಿಸುವುದಕೋಸ್ಕರ ಧರ್ಮಿಕ್ಕು ಮುನ್ನೇ-ಶೇಷತ್ವ ಸಂಬಂಧಕ್ಕೆ ಧರ್ಮಿಯಾದ ಅಂದರೆ ವಿಷಯಭೂತನಾದ ಜೀವನಿಗಿಂತ ಮುಂಚೆ ಶೇಷಿ ಯೋಡೇ ಇತ್ಯಾದಿ-ಸ್ವಾಮಿಯಾದ ಈಶ್ವರನೊಡನೆ ಸಂಭಂಧವನ್ನು "ಆಯಿ" ಎಂದು ಹೇಳಿದೆ.

ನಿಶ್ಚಿತೇ ಪರಶೇಷತ್ವೇ-ಎಂದು ಈ ಶೇಷತ್ವಾನು ಸಂಧಾನವೇ ಪುರುಷಾರ್ಥಸಾಧಕಗಳಲ್ಲಿ ಪ್ರಧಾನನಾದದ್ದು, ಎಂದಾರಂಭಿಸುವ ಕಾರಿಕೆಯಿಂದ ತಿಳಿಸುತ್ತಾರೆ. ಅದಾಗಿ ಪರಶೇಷತ್ವೇ ತನಗೆ ಮೇಲಾದವನಾದ ಭಗವಂತನಿಗೆ ಶೇಷಭೂತನೆಂಬುದು ನಿಶ್ಚಯವಾದರೆ ಪುರುಷಾರ್ಥೋಪಯೋಗಿಯಾದ ಇತರ ಗುಣ ಜಾತಗಳು ಪೂರ್ತಿಯನ್ನು ಹೊಂದುತ್ತವೆ. ಅನಿಶ್ಚಿತೇ ಪುನಸ್ತಸ್ಮಿನ್-ಆ ಪರ ಶೇಷತ್ವವು ನಿಶ್ಚಯವಿಲ್ಲದೆ ಹೋದರೆ ಅನ್ಯತ್ಸರ್ವಂ ಇತ್ಯಾದಿ ಪುರುಷಾರ್ಥ ಸಾಧಕಗಳಾದ ಇತರ ಗುಣಜಾತಗಳೆಲ್ಲ ಅಸತ್ಕಲ್ಪಗಳಾಗುತ್ತವೆ. ಅದಾಗಿ ಪುರುಷಾರ್ಥ ಸಾಧನವು ಉಂಟಾಗುವುದಿಲ್ಲ.

ದಿವ್ಯ ದಂಪತಿಗಳಿಬ್ಬರೂ ಸೇರಿ ಸರ್ವ ಶೇಷಿಗಳು.

ಶೇಷಿತ್ವವು ವ್ಯಾಸಜ್ಯವೃತ್ತಿಯಿಂದ ದಿವ್ಯ ದಂಪತಿಗಳಿಬ್ಬರಲ್ಲಿಯೂ ಅನಯಿಸುತ್ತದೆ ಎಂದು ಇಪ್ಪಡಿ ಈಶ್ವರನ್ ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಈಶ್ವರನು ಸರ್ವಶೇಷಿ ಯಾಗಿರುವಾಗ 1) ಅಸ್ಯಾಮಮಚ ಇತ್ಯಾದಿ ಇವಳಿಗೂ ನನಗೂ ಉಭಯ ವಿಭೂತಿಗಳು-ಲೀಲಾ ವಿಭೂತಿಯೂ ನಿತ್ಯ ವಿಭೂತಿಯೂ-ಚೇತನಾ ಚೇತನಗಳೂ ಶೇಷಗಳು ಅಧೀನಗಳು. ಇತಿ ಶ್ರುತಿ ಶಿರಸ್ಸಿದ್ಧಂ ಇದು ವೇದಾಂತಗಳಲ್ಲಿ ಸಿದ್ಧವಾದದ್ದು. ಮಚ್ಛಾಸ್ತ್ರೇಷು ಪಂಚರಾತ್ರ ಸಂಹಿತೆಗಳಲ್ಲಿಯೂ "ನಿಯಂತ್ರೀಚ ತಥೇಶ್ವರೀ" ಇತ್ಯಾದಿಗಳಲ್ಲಿ ಸಿದ್ಧಗಳು. 2) ಉಭಯಾಧಿಷ್ಠಾನಂ ಚೈಕಂ ಶೇಷಿತ್ವಮ್ ಉಭಯಂ, ಅಧಿಷ್ಠಾನಂ ಆಶ್ರಯಂ ಯಸ್ಯತತ್, ಶೇಷಿತ್ವವು ಲಕ್ಷ್ಮೀ ನಾರಾಯಣರಿಬ್ಬರನ್ನು ಆಶ್ರಯಿಸಿದೆ. ದ್ವಿತ್ವಾದಿಗಳಹಾಗೆ ಜಗನ್ನಿರೂಪಿತ ಏಕಶೇಷಿತ್ವವು ವ್ಯಾಸಜ್ಯ ವೃತ್ತಿಯಿಂದ ಲಕ್ಷ್ಮೀನಾರಾಯಣರಿಬ್ಬರಲ್ಲಿಯೂ ಇದೆ, ಎಂದು ತಾತ್ಪರ್ಯ. ಎನ್ರುಂ ಶೊಲ್ಲ ಹಿರಪಡಿಯೇ ಇತ್ಯಾದಿ ಎಂದು ಹೇಳುವಂತೆ

---

1) ವಿಷ್ವಕ್ಸೇನ ಸಂಹಿತೆ [illegible] 2) ಪದಾರ್ಥಸಂಕ್ಷೇಪ,

**ಆಗ್ನೀಷೋಮೀಯಾದಿಹಳಿರ್ ಪೋಲೇ ಆತ್ಮಹವಿರುದ್ದೇಶ್ಯ ದೇವತಾತ್ವ ಮಿರು ವರುಕ್ಕುಮ್ ಕೂಡ ವೆನ್ರು ತೋನ್ಱುಹೈಕ್ಕಾಹ ಶೇಷಿಹಳಿರುವರಾಯಿರುಕ್ಕ ಶೇಷಿತ್ವಮೇಕ ಮೆನ್ನಿರದು. ಮಧ್ಯಮಾಕ್ಷರತ್ತಿ ಲಕ್ಷ್ಮೀ ವಾಚಕಮಾಹ ಚ್ಚೊಲ್ಲುಹಿರ ಕಠಶ್ರುತಿ ವಾಕ್ಯತ್ತೈ ಪರಾಮರ್ಶಿತ್ತಾಲ್ ಇರುವರ್ಕ್ಕೈಯುಮ್ ಪಱ್ಱ ಮಿವ್ವಾತ್ಮಾಶೇಷಮೆನ್ರು ಮಿಡಮ್ ಶಾಬ್ದಮ್.**

---

ಸಪತ್ನೀಕನಾಗಿದ್ದಾನೆ. **ಅಗ್ನಿ ಷೋಮೀಯಾದಿಹಳಿರ್ ಪೋಲೇ** ಇತ್ಯಾದಿ–ಅಗ್ನೀ ಷೋಮೀಯ ಯಾಗದಲ್ಲಿಯೂ ಆದಿ ಶಬ್ದಾಗ್ರಹ್ಯವಾದ ಐಂದ್ರಾಗ್ನಿಯಾಗದಲ್ಲಿಯೂ ದೇವತೆಗಳು ಇಬ್ಬರಾಗಿರುವಾಗ ಹವಿರುದ್ದೇಶ್ಯ ದೇವತಾತ್ವವು ಇಬ್ಬರೂ ಸೇರಿದ ಒಂದಾಗಿರುವಂತೆ, ಆತ್ಮ ಯಾಗದಲ್ಲಿ ಆತ್ಮಹವಿರುದ್ದೇಶ್ಯ ದೇವತೆಗಳು ಲಕ್ಷ್ಮೀನಾರಾಯಣರಿಬ್ಬರೂ ಆಗಿರುವಾಗ ಶೇಷಿತ್ವವು ವ್ಯಾಸಜ್ಯವೃತ್ತಿಯಿಂದ, ಏಕವೆಂದು ಹೇಳಲ್ಪಡುತ್ತದೆ. ವಿರೋಧ ಪರಿಹಾರದಲ್ಲಿ ಲಕ್ಷ್ಮೀ ನಾರಾಯಣರಿಬ್ಬರಿಗೂ ಏಕ ಶೇಷಿತ್ವ ಯೋಗವು ಹೇಗೆ ಸರಿ ಹೊಗುತ್ತದೆ ಎಂದು ಕೇಳಿಕೊಂಡು, ಒಬ್ಬನಿಗೇನೆ ನಿರುಪಾಧಿಕ ಸರ್ವ ಶೇಷಿತ್ವ, ಇತರರಿಗೆ ತತ್ಸಂಬಂಧದಿಂದ ಶೇಷಿತ್ವವು ತದಧೀನವಾಗಿ ಔಪಾಧಿಕವೆಂದು ಶಂಕಿಸಿ "ಅಸ್ಯಾಮಮಚ ಶೇಷಂಹಿ ವಿಭೂತಿರುಭಯಾತ್ಮಿಕಾ" ಇತ್ಯಾದಿ ಪ್ರಮಾಣಗಳಲ್ಲಿ ಉಪಾಧಿಯನ್ನು ಹೇಳದೆ ಇರುವುದರಿಂದ ಶೇಷಿತ್ವವು ಉಭಯರಿಗೂ ಸಮಾನವಾದದ್ದು ಎಂದು ತಿಳಿಸಿರುತ್ತಾರೆ. "ಪತಿಂ ವಿಶ್ವಸ್ಯ" ಎಂಬಲ್ಲಿಯೂ ಏಕವಚನವು ಪ್ರಣವ ಪ್ರಥಮಾಕ್ಷರದ ಮೇಲಿರುವ ಚತುರ್ಥಿ ವಿಭಕ್ತಿಯ ಏಕ ವಚನವೂ, ಯಾಗ ಕರ್ತೃತ್ವವು ಯಜಮಾನ ಮತ್ತು ಅವನ ಪತ್ನಿ ಇಬ್ಬರಲ್ಲಿಯೂ ವ್ಯಾಸಕ್ತವಾಗಿರುವಾಗ "ಸ್ವರ್ಗಕಾಮೋಯಜೇತ" ಎಂದು ಏಕ ವಚನ ಪ್ರಯೋಗವಿರುವಂತೆ, ಉಪಪನ್ನವು. "ತದಂತ ರ್ಭಾವಾತ್ವಾಂ ನಪೃಥ ಗಭಿಧತ್ತೇ" ಶ್ರುತಿ ರಪಿ, ಎಂದು ಭಗವಂತನಿಗೆ ವಿಶೇಷಣ ವಿಶಿಷ್ಟಳಾಗಿರುವುದರಿಂದ ಶ್ರುತಿಯೂ ಲಕ್ಷ್ಮಿಯನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ ವೆಂದು ವಿಶಿಷ್ಟೈಕತ್ವಾಭಿಪ್ರಾಯದಿಂದಲೂ, ಇದು ಉಪಪನ್ನ ಆದ್ದರಿಂದ ಲಕ್ಷ್ಮೀ ·ನಾರಾಯಣ ರಿಬ್ಬರಿಗೂ ನಿರುಪಾಧಿಕ ಸರ್ವ ಶೇಷಿತ್ವವು ಉಪ ಪನ್ನವೆಂಬುದು ಸಿದ್ಧಾಂತವೆಂದು ಅನುಗ್ರಹಿಸಲ್ಪಟ್ಟಿದೆ. ಇದರಿಂದ ಪತಿ ಶೇಷತ್ವವು ಪತ್ನಿಗೆ ಅಬಾಧಿತವಾಗಿ ಮಕಾರದಲ್ಲಿ ಪತಿ ನಿರೂಪಿತ ಶೇಷತ್ವವನ್ನು ಆಶ್ರಯಿಸಿ ಜೀವ ವರ್ಗದಲ್ಲಿ ಲಕ್ಷ್ಮಿಯನ್ನು ಸೇರಿಸ ಬೇಕೆಂದು ಹೇಳುವವರ ಮಾತು ಸರಿಯಲ್ಲವೆಂದು ತಿಳಿಸಲ್ಪಟ್ಟಿತು. ದಿವ್ಯ ದಂಪತಿಗಳಿಬ್ಬರಲ್ಲಿ ಲಕ್ಷ್ಮಿಯ ಸ್ವೇಚ್ಛೆಯಿಂದ ಭಗವಂತನಿಗೆ ಶೇಷ ವಾಗಿರುವುದು ಪ್ರತ್ಯೇಕವಾದದ್ದು. ಅವರಿಬ್ಬರ ಸಮಾನಾಕಾರವಾದ ಇಚ್ಛಾಂ ತರ ದಿಂದ ಸರ್ವ ಜೀವ ವರ್ಗಗಳು ಅವರಿಬ್ಬರಿಗೂ ಶೇಷವಾಗಿರುವುದು ಅದಕ್ಕಿಂತ ಬೇರೆ. ಈ ಶೇಷತ್ವವು ಶ್ರೀ ವಿಶಿಷ್ಟನಿಗೆ ಪ್ರತಿ ಸಂಬಂಧಿಯಾಗಿರುವುದರಿಂದ ಲಕ್ಷ್ಮಿಗೂ, ಪತಿಯ ಹಾಗೆ ನಿರೂಪಕತ್ವವೇ ಹೊರತು ಆಶ್ರಯ ತ್ವವಲ್ಲ, ಆದ್ದರಿಂದ ಮಕಾರಾರ್ಥ ವರ್ಗದಲ್ಲಿ ಅವಳಿಗೆ ಪ್ರವೇಶವಿಲ್ಲ. ಪ್ರಥಮಾಕ್ಷರದಲ್ಲಿ ಪರಮ ಶೇಷಿತತ್ವದಲ್ಲಿ ಜೀವರಿಗೆ ಪ್ರವೇಶವಿಲ್ಲ. ಪ್ರಥಮಾಕ್ಷರದಲ್ಲಿ ಪರಮ ಶೇಷಿ ತತ್ವವು ವಿಶಿಷ್ಟವಾಗಿ ಸಂಗ್ರಹೀತವು.

'ಮಧ್ಯಮಾಕ್ಷರತ್ತಿ' ಇತ್ಯಾದಿ ಮಧ್ಯಮಾಕ್ಷರವಾದ "ಉ" ಎಂಬುದು

"ಅಕಾರೇಣೋಚ್ಯತೇ ವಿಷ್ಣುಃ ಸರ್ವ ಲೋಕೇಶ್ವರೋ ಹರಿಃ।

ಉದ್ಧೃತಾ ವಿಷ್ಣುನಾ ಲಕ್ಷ್ಮೀಃ ಉಕಾರೇಣೋಚ್ಯತೇ ತಥಾ ॥

ಮಕಾರಸ್ತು ತಯೋರ್ದಾಸಃ ಇತಿ ಪ್ರಣವ ಲಕ್ಷಣಮ್॥"

ಎಂಬ ಕಠಶ್ರುತಿ ವಾಕ್ಯವನ್ನು ಪರಾಮರ್ಶಿಸಿದರೆ ಲಕ್ಷ್ಮೀ ನಾರಾಯಣರಿಬ್ಬರಿಗೂ ಮಕಾರ ವಾಚ್ಯನಾದ ಈ ಜೀವನು ಶೇಷ ಭೂತನೆಂಬುದು ಶಾಬ್ದ.

ಆದಾಗಿ ಬಾಧಕವಿಲ್ಲದಿರುವುದರಿಂದ, "ಅಸ್ಯಾಮಮಚಶೇಷಂಹಿ" ಎಂದು ಸಾಧಕಾಂತರ ಬಲದಿಂದ ಪರಮ ಶೇಷಿತತ್ವ ವಾಚಕವಾದ "ಅ" ಎಂಬ ಅಕ್ಷರದಲ್ಲಿ ಶ್ರೀ ವಿಶಿಷ್ಟನಾದ ತತ್ವವು ವಾಚ್ಯವಾಗಿದೆ. "ವಿಶಿಷ್ಟಾನ್ವಯಿ

**ಶೇಷತ್ವಾರ್ಥ ವಿವರಣಮ್, ಪ್ರಣವಸ್ಯ ಉಕಾರಾರ್ಥಃ.**

**ಶೇಷತ್ವಮಾವದು ತನಕ್ಕೊರು ಉಪಕಾರತ್ತೈ ಪ್ರಧಾನಮಾಹ ಪ್ಪತ್ತವನ್ರಿಕ್ಕೇ ಪರೋಪಕಾರಾರ್ಹ ಮಾಹೈ ಇತ್ತೈ**

**¹) ಪರಗತಾತಿಶಯಾಧಾನೇಚ್ಛಯೋಪಾದೇಯತ್ವಮೇವ ಯಸ್ಯ ಸ್ವರೂಪಂ ಸಶೇಷಃ ಪರಶ್ಶೇಷಿ ಎನ್ರು ಶ್ರೀ ಭಾಷ್ಯಕಾರರರುಳಿಚ್ಚೆಯ್‌ದಾರ್.**

**ಇಪ್ಪಿಡತ್ತಿಲ್ ಶ್ರುತಿಯಿಲ್ ತಯೋರಿತ್ತಿ ಷಷ್ಠೀದ್ವಿವಚನಮ್ ಲುಪ್ತಮ್. ಇಙ್ಗು ಸಂಬಂಧ ಸಾಮಾನ್ಯತ್ತಿಲೇ ಪ್ರವೃತ್ತೈಯಾನ ಷಷ್ಠಿಯಾನದು ಪ್ರಮಾಣ ಸಿದ್ಧಮಾಯ್ ಅಪೇಕ್ಷಿತಮಾನ ವಿಶೇಷತ್ತಿಲೇ ವಿಶ್ರಮಿಕ್ಕಕ್ಕಡವದು ತಾದರ್ಥ್ಯಮಾಹಿರ ಉಪಯುಕ್ತಮಾನ ಸಂಬಂಧ ವಿಶೇಷಮ್, ವ್ಯಕ್ತಮಾಹೈಕ್ಕಾಹ ಚತುರ್ಥೀ ದ್ವಿವಚನ ಮೇರಿ ಲೋಪಿತ್ತು ಕ್ಕಿಡಕ್ಕಿರದಾಹವುಮಾಮ್-ಅಪ್ಪೋದು ಲುಪ್ತಮಾನ ಚತುರ್ಥೀದ್ವಿವಚನ ತ್ತಿನುಡೈಯ ವಿವರಣಮಾಹಿರುದು, ಇರುವರುಕ್ಕುಮ್ ದಾಸನೆನ್ಗಿರ ಶ್ರುತಿ.**

---

ನಸ್ಯ ವಿಶೇಷಣೇಪ್ಯಸ್ವಯೋ ನ್ಯಾಯಃ" ಎಂದು ದಿವ್ಯ ದಂಪತಿಗಳಿಗೆ ಆತ್ಮಹವಿರುದ್ದೇಶ್ಯ ದೇವತಾತ್ವವು ಸಮಾನವೆಂದು ಹೇಳಿರುವುದರಲ್ಲಿ ವಿಪ್ರತಿಪತ್ತಿಯು ಕೂಡದು. ಶ್ರುತ್ಯಂತರಗಳಲ್ಲಿ ದಿವ್ಯ ದಂಪತಿಗಳಿಗೆ ಸ್ವಾಮಿತ್ವವು ಸಮಾನವಾಗಿ ಹೇಳಿರುತ್ತದೆ. "ಮಕಾರಸ್ತು ತಯೋರ್ದಾಸಃ" ಎಂಬುದು ಆಶ್ರುತಿ. ಇದರಿಂದ ಪೂರ್ವ ಯೋಜನೆಯಲ್ಲಿ ಲಕ್ಷ್ಮಿಗೆ ಶೇಷಿತ್ವವು ಆರ್ಥ. ಈ ಯೋಜನೆಯಲ್ಲಿ ಶಾಬ್ದವೆಂದು ಹೇಳುವುದು, ಸರಿಯಲ್ಲ ಪೂರ್ವ ತ್ರವೂ "ತದಂತ ರ್ಭಾವಾಂತ್ವಾಂ ನಪೃಥಗಭಿಧತ್ತೇ ಶ್ರುತಿರಪಿ" ಎಂದು ಏಕಾಭಿಧಾನದಿಂದಲೇ-ಪ್ರಕಾರ ಪ್ರಕಾರಿ ಭಾವ ದಿಂದ ಇಬ್ಬರೂ ಉಪಸ್ಥಿತರೆಂಬುದು ಆರಂಭದಿಂದಲೇ ಶಾಬ್ದವಾಗಿ ಸಮರ್ಥಿತ. ನೀವು ಹೇಳುವಂತೆ ಪೂರ್ವದಲ್ಲಿ ಆರ್ಥ, ಈಗ ಶಾಬ್ದವೆಂದು ಹೇಳಿದರೆ ಪತ್ನೀ ಸಂಬಂಧಮ್ ಶಾಬ್ದಮ್, ಎಂಬ ರೀತಿಯಲ್ಲಿ ಶ್ರೀ ಸೂಕ್ತಿಯು ಇರಬೇಕಾಗಿತ್ತು "ಇರು ವರ್ೖಯುಮ್ ಪತ್ತ, ಇವ್ವಾತ್ಮಾ ಶೇಷಮೆನ್ರುಮಿಡಮ್ ಶಾಬ್ದಮ್" ಎಂಬ ಶ್ರೀ ಸೂಕ್ತಿಯಿಂದ ವಿಶೇಷಣ ವಿಶೇಷ್ಯಗಳಿಂದ ಶೇಷಿಶೇಷಗಳೆರಡೂ ಶಾಬ್ದ ಆದ್ದರಿಂದ ವಿಶೇಷಣ ನಿಬಂಧನವಾದ ಶೇಷಿತ್ವವು ಔಪಾಧಿಕವು ಎಂದು ಶ್ರುತಿ ವಿರೋಧವಾದ ಅರ್ಥವನ್ನು ಕಲ್ಪಿಸಕೂಡದೆಂದು ಮೇಲೆ ಹೇಳಿದ ವಿಷಯವನ್ನೇ ಧೃಡೀಕರಿಸುತ್ತಾರೆ.

**ಶೇಷತ್ವ ಮಾವದು** ಇತ್ಯಾದಿ ಶೇಷತ್ವ ವೆಂದರೆ ತನಗೆ ಒಂದು ಉಪಕಾರವನ್ನು ಪ್ರಧಾನವಾಗಿ ಪಡೆಯುವುದೆಂದಲ್ಲದೇನೆ ಪರೋಪಕಾರಾರ್ಹವಾಗಿರುವುದು. **ಇತ್ತೈ** ಇತ್ಯಾದಿ-ಇದನ್ನು ಪರಗತಾತಿಶಯಾಧಾನೇಚ್ಛಯಾ ಉಪಾದೇಯತ್ವಮೇವ ಯಸ್ಯಸ್ವರೂಪಂ ಸ ಶೇಷಃ ಪರಶ್ಶೇಷೀ,ಎಂದು ಭಗವದ್ಭಾಷ್ಯಕಾರರು ಅನುಗ್ರಹಿಸಿರುತ್ತಾರೆ. ಈ ಲಕ್ಷಣದಲ್ಲಿ ತನಗೆ ಪ್ರಧಾನವಾದ ಪ್ರಯೋಜನವು ನಿವರ್ತಿಸಲ್ಪಡುತ್ತದೆ. ಅಪ್ರಧಾನವಾದ ಪ್ರಯೋಜನವು ತದಾಯತ್ತವಾಗಿ ಲಭಿಸುವುದು ಬಾಧಕವಿಲ್ಲವೆಂದರ್ಥ.

**ಇಪ್ಪಿಡತ್ತಿಲ್** ಇತ್ಯಾದಿ ಈ 'ಉ'ಕಾರವು ಲಕ್ಷ್ಮೀವಾಚಕವಾಗಿ ಹೇಳಲ್ಪಟ್ಟ ಈ ಯೋಜನೆಯಲ್ಲಿ, ಶ್ರುತಿಯಲ್ಲಿ ಹೇಳಿದ "ಯೋರ್ದಾಸಃ" ಎಂಬ ಷಷ್ಠೀ ವಚನವು ಲುಪ್ತ. ಇಲ್ಲಿ ಸಂಭವ ಸಾಮಾನ್ಯದಲ್ಲಿ ಪ್ರವೃತ್ತವಾದ ಪದವು ಪ್ರಮಾಣ ಸಿದ್ಧವಾಗಿ ಅಪೇಕ್ಷಿತವಾದ ವಿಶೇಷದಲ್ಲಿ ವಿಶ್ರಮಿಸುತ್ತದೆ. **ತಾಧರ್ಥ್ಯಮಾಹಿರ** ಇತ್ಯಾದಿ ತಾದರ್ಥ್ಯವೆಂಬ ಉಪಯುಕ್ತವಾದ ಸಂಬಂಧ ವಿಶೇಷವು ವ್ಯಕ್ತವಾಗುವುದಕ್ಕೋಸ್ಕರ ಚತುರ್ಥೀ ದ್ವಿ ವಚನವು ಏರ್ಪಟ್ಟು ಲೋಪವನ್ನು ಹೊಂದಿರುವುದಾಗಿ ಸ್ವೀಕರಿಸಬಹುದು. **ಅಪ್ಪೋದು** ಇತ್ಯಾದಿ, ಆಗ ಲುಪ್ತವಾದ ಚತುರ್ಥಿ ದ್ವಿವಚನದ ವಿವರಣವಾಗಿ ಇಬ್ಬರಿಗೂ ದಾಸನೆಂಬ ಶ್ರುತಿಯು ಏರ್ಪಡುತ್ತದೆ.

ಇಪ್ಪಡಿ ಹವಿರುದ್ದೇಶ್ಯದೇವತಾ ದ್ವಂದ್ವತ್ತಿಲ್ ಹವಿಸ್ಸುಪೋಲೇ ಇರುವರ್ಕ್ಕೈಯುಮ್. ಪತ್ತಿ ಇವ್ವಾತ್ಮಾ ಶೇಷಮೆನ್ನುಮಿಡತ್ತಿಲ್ ಇಙ್ಗು ಅವಧಾರಣಮ್ ಅರ್ಥಮ್. ಇವರ್‌ಹಳಿರುವರುಕ್ಕುಮ್ ಇವಾತ್ಮಾ ಅನನ್ಯಾರ್ಹ ನಿರುಪಾಧಿಕ ಶೇಷಮೆನ್ರು ದಾಯಿತ್ತು.

### ಉಕಾರಸ್ಯ ಅರ್ಥಾನ್ತರ ಮುಪದಿಶತಿ

ಇಮ್ಮಧ್ಯಮಾಕ್ಷರಮ್ ಶ್ರೌತಪ್ರಯೋಗತ್ತಾಲೇ ಅವಧಾರಣಪರ ಮಾನಪೋದು ಇದ್ದಂಪತಿಹಳೈ ಯೊಳಿನ್ದಾರ್ಕ್ಕು ನಿರುಪಾಧಿಕ ಶೇಷಮೆನ್ರು ಶಙ್ಕೈಯಾಮೈಕ್ಕಾಹ ಅನ್ಯಯೋಗ ವ್ಯವಚ್ಛೇದ ಮಿಙ್ಗೇ ಶಾಬ್ದಮ್. ಇತ್ತಾಲೇ ಅನ್ಯರ್ಕ್ಕುಪ್ಪತ್ತಶೇಷತ್ವಮ್‌ಸ್ವರೂಪಪ್ರಾಪ್ತಮನ್ರೆನ್ನುಮಿಡತ್ತೈಚ್ಚೊಲ್ಲುಹೈಯಾಲೇ ಯಥಾವಸ್ಥಿತಾತ್ಮಜ್ಞಾನ ಮುಡೈಯವನಕ್ಕು ತದೀಯ ಪರ್ಯನ್ತಮಾಹ ದೇವತಾನ್ತರ ಸ್ಪರ್ಶಂ ನಿವೃತ್ತ ಮಾಯಿತ್ತು.

ಭಗವದಭಿಮತಮಾನ ಭಾಗವತಶೇಷತ್ವತ್ತಾಲೇ ಅನ್ಯಶೇಷತ್ವ ದೋಷಂ ವಾರಾದೆನ್ರುಮಿಡಂ ಪುರುಷಾರ್ಥಕಾಷ್ಠೈಯಿಲೇ ಶೊನ್ನೋಮ್ ಇಪ್ಪಡಿ ಅನ್ಯಯೋಗವ್ಯವಚ್ಛೇದಮ್ ಶಾಬ್ದಮಾಹಪ್ಪೆತ್ತಾಲ್

---

ಇಪ್ಪಡಿ ಹವಿರುದ್ದೇಶ್ಯ ದೇವತಾ ದ್ವಂದ್ವಂತ್ತಿಲ್ ಇತ್ಯಾದಿ–ಹೀಗೆ ಹವಿಸ್ಸಿಗೆ ಉದ್ದೇಶ್ಯರಾದ ಅಗ್ನಿ ಸೋಮರೆಂಬ ಇಬ್ಬರಿಗೂ ಹವಿಸ್ಸು ಶೇಷವಾಗುವಂತೆ ಇರುವರ್ಕ್ಕೈಯುಮ್ ಪತ್ತಿ ಲಕ್ಷ್ಮೀ ನಾರಾಯಣರಿಬ್ಬರನ್ನೂ ಉದ್ದೇಶಿಸಿ ಈ ಆತ್ಮ ಶೇಷ ಭೂತನೆಂದು ಹೇಳಿರುವಾಗ ಇಲ್ಲಿ ಅವಧಾರಣವು ಅರ್ಥಾತ್‌ಸಿದ್ಧ. ಇವರ್‌ಹಳಿರು ವರುಕ್ಕುಮ್ ಇತ್ಯಾದಿ- ಇವರುಗಳಿಬ್ಬರಿಗೂ ಈ ಆತ್ಮಾ ಅನನ್ಯಾರ್ಹ ನಿರುಪಾಧಿಕ ಶೇಷನು ಇತರರಿಗಲ್ಲದೆ ಸ್ವಾಭಾವಿಕವಾಗಿ ಶೇಷ- ಭೂತನು ಎಂದು ಸಿದ್ಧಿಸುತ್ತದೆ

### 'ಉ' ಕಾರವು ಅವಧಾರಣ ವಾಚಕವೆಂಬ ಯೋಜನೆ.

ಇಮ್ಮಧ್ಯಮಾಕ್ಷರಂ ಇತ್ಯಾದಿ–ಈ ಮಧ್ಯಮಾಕ್ಷರವು, "ತದೇವರ್ತಂ ತದುಸತ್ಯಮಾಹುಃ" ಎಂಬ ಶ್ರೌತ ಪ್ರಯೋಗದಲ್ಲಿ ತದು ಎಂಬಲ್ಲಿಯ "ಉ"ಕಾರವು ಏವಕಾರಾರ್ಥವನ್ನು ಹೇಳುವಂತೆ **ಅವಧಾರಣಪರಮಾನಪೋದು** ಇತ್ಯಾದಿ–ಏವಕಾರವನ್ನು ತಿಳಿಸುವುದಾಗಿ ಈ ಲಕ್ಷ್ಮೀನಾರಾಯಣರೆಂಬ ದಂಪತಿಗಳನ್ನು ಬಿಟ್ಟು ಇತರರಿಗೆ ಜೀವನು ನಿರುಪಾಧಿಕ ಶೇಷನಲ್ಲವೆಂದು ಶಂಕಿಸದೆ ಇರಲು ಇಲ್ಲಿ **ಅನ್ಯಯೋಗ ವ್ಯವಚ್ಛೇದಮ್**–ಇತರರಿಗೆ ನಿರುಪಾಧಿಕ ಶೇಷ ನಲ್ಲವೆಂಬುದು ಶಾಬ್ದ. 'ಉ" ಕಾರದಿಂದ ಸ್ಪಷ್ಟವಾಗಿ ಹೇಳಲ್ಪಡುತ್ತದೆಯೆಂದರ್ಥ. **ಇತ್ತಾಲೇ**–ಇತ್ಯಾದಿ–ಈ ಅವ ಧಾರಣವಾಚಕ "ಉ' ಕಾರದಿಂದ ಇತರರನ್ನು ಕುರಿತು ಶೇಷತ್ವವು ಜೀವನಿಗೆ ಸ್ವರೂಪ ಪ್ರಾಪ್ತವಲ್ಲವೆಂದು ಹೇಳುವು ದರಿಂದ ಯಥಾವಸ್ಥಿತವಾದ ಆತ್ಮಜ್ಞಾನವುಳ್ಳವನಿಗೆ ತದೀಯ–ದೇವತಾಂತರ ಭಕ್ತರ ಪರ್ಯಂತ ದೇವತಾಂತರ ಸ್ಪರ್ಶವು ನಿವರ್ತ್ಯವೆಂದು ಸಿದ್ಧಿಸುತ್ತದೆ.

**ಭಗವದಭಿಮತಮಾನ** ಇತ್ಯಾದಿ ಭಗವಂತನಿಗೆ ಇಷ್ಟವಾದ ಭಾಗವತ ಶೇಷತ್ವದಿಂದ ಅನ್ಯಶೇಷತ್ವವು ಉಂಟಾ ಗುವುದಿಲ್ಲವೆಂಬುದು ಪುರುಷಾರ್ಥಕಾಷ್ಠಾಧಿಕಾರದಲ್ಲಿ ನಿರೂಪಿಸಲ್ಪಟ್ಟಿತು. **ಇಪ್ಪಡಿ ಅನ್ಯಯೋಗ ವ್ಯವಚ್ಛೇದಮ್** ಇತ್ಯಾದಿ-ಹೀಗೆ ಜೀವನು ಅನ್ಯರಿಗೆ ನಿರುಪಾಧಿಕ ಸಂಬಂಧವಿಲ್ಲದಿರುವುದೆಂಬುದು ಶಾಬ್ದವಾಗಿ(ಸ್ಪಷ್ಟವಾಗಿ) ಏರ್ಪಟ್ಟ ಮೇಲೆ, ಅಯೋಗ ವ್ಯವಚ್ಛೇದವು–ಭಗವಂತನಿಗೆ ಶೇಷನಲ್ಲವೆಂಬುದನ್ನು ವ್ಯವಚ್ಛೇದಿಸುವುದು (ನಿರಾಕರಿಸುವುದು) ಅಂದರೆ ಭಗವಂತನಿಗೆ ಶೇಷನೆಂದು ಹೇಳುವುದು ಕಾಲಸಂಕೋಚವನ್ನು ಮಾಡದೆ ಇರುವುದರಿಂದ ಸಿದ್ಧ. ಅಂದರೆ

**ಅಯೋಗವ್ಯವಚ್ಛೇದಮುಮ್ ಕಾಲಸಂಕೋಚಮಿಲ್ಲಾಮೈಯಾಲೇ ಸಿದ್ಧಮ್. ಇಚ್ಛೇಷತ್ವಾಯೋಗ ವ್ಯವಚ್ಛೇದತ್ತಾಲೇ ಈಶ್ವರನುಕ್ಕು ಪೃಥಕ್ಸಿದ್ಧ್ಯನರ್ಹ ವಿಶೇಷಣಮಾಯ್ ಕೋತ್ತಿನ ಚೇತನ ದ್ರವ್ಯತ್ತುಕ್ಕುಮ್ ಅಚಿತ್ತುಕ್ಕುಪ್ಪೋಲೇ ಶರೀರತ್ವಂ ಪ್ರಕಾಶಿತಮ್.**

**ಮಕಾರಾರ್ಥಮಾಹ.**

**ತೃತೀಯಾಕ್ಷರ ಮಿಜ್ಜ ಅವಶ್ಯಾನುಸಂಧೇಯಮಾನ ಜೀವನೈ ಮುನ್ನಾಹಕ್ಕೊಂಡು ಉಕ್ತಮಾನ ಶೇಷತ್ವತ್ತುಕ್ಕು ಆಶ್ರಯಮಾನ ಸರ್ವತ್ತೈಯುಮುಪಲಕ್ಷಿಕ್ಕಿರದು**

**ಮಕಾರಸ್ಯ ಜೀವವಾಚಕತ್ವೇ ಪ್ರಮಾಣಾನಿ.**

**ಇದು ಜೀವಾತ್ಮವಾಚಕಮೆನ್ನುಮಿಡಮ್ 1) "ಮಕಾರಂ ಜೀವಭೂತಂತು ಶರೀರೇವ್ಯಾಪಕಂ ನ್ಯಸೇತ್" ಎನ್ರುಮ್,**

**2) "ಪಂಚಾರ್ಣಾನಾಂತು ಪಂಚಾನಾಂ ವರ್ಗಾಣಾಂ ಪರಮೇಶ್ವರಃ।**
**ಸಂಸ್ಥಿತಃ ಕಾದಿಮಾಂತಾನಾಂ ತತ್ವಾತ್ಮತ್ವೇನ ಸರ್ವದಾ, ಎನ್ರುಮ್,**

---

ಅಯೋಗ ವ್ಯವಚ್ಛೇದವೆಂಬುದು ಶೇಷತ್ವಕ್ಕೆ ಯಾವಾಗಲಾದರೂ ಸಂಬಂಧ ವಿಲ್ಲದಿರುವುದು. ಒಂದು ಸಮಯದಲ್ಲಿ ಶೇಷಭೂತನು, ಮತ್ತೊಂದು ಸಮಯದಲ್ಲಿ ಶೇಷಭೂತನಲ್ಲವೆಂದು ಕಾಲಸಂಕೋಚವನ್ನು ಮಾಡದೆ ಇರುವುದರಿಂದ ಜೀವನು ಪರಮಾತ್ಮನಿಗೆ ನಿರುಪಾಧಿಕವಾಗಿ ಯಾವದಾತ್ಮಭಾವಿ ಶೇಷಭೂತನು; **ಇಚ್ಛೇಷತ್ವಾಯೋಗವ್ಯವಚ್ಛೇದತ್ತಾಲೇ** ಇತ್ಯಾದಿ–ಈ ಶೇಷತ್ವ ಅಯೋಗ ವ್ಯವಚ್ಛೇದದಿಂದ–ಶೇಷತ್ವ ಸಂಬಂಧವಿಲ್ಲವೆಂಬುದನ್ನು ನಿವಾರಿಸುವುದರಿಂದ ಈಶ್ವರನಿಗೆ ಪೃಥಕ್ ಸಿದ್ಧ್ಯನರ್ಹ ವಿಶೇಷಣವಾಗಿ–ಈಶ್ವರನನ್ನು ಬಿಟ್ಟು ಪ್ರತ್ಯೇಕವಾಗಿರಲು ಅನರ್ಹನಾಗಿ ಅವನಿಗೆ ವಿಶೇಷಣ ಭೂತನಾಗಿ ತೋರಿದ ಚೇತನ ದ್ರವ್ಯಕ್ಕೆ ಅಚಿತ್ ದ್ರವ್ಯದ ಹಾಗೆ ಈಶ್ವರ ಶರೀರತ್ವವು ಪ್ರಕಾಶಿತವು. "ಯಸ್ಯಚೇತನಸ್ಯ ಯದ್ರವ್ಯಂ ಸರ್ವಾತ್ಮನಾಸ್ವಾರ್ಥೇ ನಿಯಂತುಂ ಧಾರಯಿತುಂಚ ಶಕ್ಯಂ ತಚ್ಛೇಷತೈಕಸ್ವರೂಪಂ, ತತ್ತಸ್ಯ ಶರೀರಂ" ಎಂದು ಶ್ರೀ ಭಾಷ್ಯಕಾರರು ವೇದಾರ್ಥ ಸಂಗ್ರಹದಲ್ಲಿ ಅನುಗ್ರಹಿಸಿರುವ ರೀತಿಯಲ್ಲಿ ಜೀವೇಶ್ವರರಿಗೆ ಶರೀರಾತ್ಮ ಭಾವ ಸಂಬಂಧವು ಈ ಅಯೋಗಾನ್ಯಯೋಗ ವ್ಯವಚ್ಛೇದಗಳಿಂದ ಸಿದ್ಧವು ಎಂದು ತಾತ್ಪರ್ಯ. **ಶರೀರತ್ವಂ ಪ್ರಕಾಶಿತಮ್**–ಅಕಾರವು ಲಕ್ಷ್ಮೀವಿಶಿಷ್ಟ ನಾರಾಯಣನನ್ನು ತಿಳಿಸುವುದಾಗಿ ಮೇಲೆ ನಿರೂಪಿಸಿರುವುದರಿಂದ ಈ ಜೀವ ಶರೀರತ್ವವು ಲಕ್ಷ್ಮೀನಾರಾಯಣರಿಬ್ಬರಿಗೂ ಸಿದ್ಧವು. ಭಗವಂತನ ಹಾಗೆ ಲಕ್ಷ್ಮಿಯೂ ಸರ್ವ ಚೇತನಾ ಚೇತನಗಳಿಗೆ ಅಂತಃ ಪ್ರವಿಷ್ಟೆಯಾಗಿ ನಿಯಮಿಸುತ್ತಾಳೆಂದು ಭಾವ.

**"ಮ"ಕಾರವು ಜೀವಾತ್ಮವಾಚಕನೆಂಬುದರ ವಿವರಣೆ.**

ಅನಂತರ ಪ್ರಧಾನನಾದ ಚೇತನನನ್ನು ಹೇಳುವ "ಮ"ಕಾರವು ಶೇಷತ್ವಕ್ಕೆ ಆಶ್ರಯನಾದ ಸರ್ವವನ್ನೂ ಉಪಲಕ್ಷಿಸುತ್ತದೆ. ಈ "ಮ"ಕಾರವು ಜೀವಾತ್ಮವಾಚಕವೆಂಬುದು, 1) ಮಕಾರಂ ಜೀವಭೂತಂತು ಶರೀರೇವ್ಯಾಪಕಂ ನ್ಯಸೇತ್", ಎಂದೂ

2) ಪಂಚಾರ್ಣಾನಾಂತು ಪಂಚಾನಾಂ ವರ್ಗಾಣಾಂ ಪರಮೇಶ್ವರಃ ।
ಸಂಸ್ಥಿತಃ ಕಾದಿಮಾಂತಾನಾಂ ತತ್ವಾತ್ಮತ್ವೇನ ಸರ್ವದಾ ॥

ಎಂದೂ (ಐದು ಅಕ್ಷರಗಳಿಂದ ಕೂಡಿದ ವರ್ಗಗಳು ಐದು, ಅವು "ಕ" ಕಾರದಿಂದ ಆರಂಭಿಸಿ "ಮ"ಕಾರ ಪರ್ಯಂತ. ಅವು ಪರಮೇಶ್ವರನಿಗೆ ಸದಾ ತತ್ವರೂಪವಾಗಿ ಇಪ್ಪತ್ತೈದು ಸಂಖ್ಯೆಗಳಾಗಿವೆ.]

3) ಭೂತಾನಿಚ ಕವರ್ಗೇಣ ಚವರ್ಗೇಣೇನ್ದ್ರಿಯಾಣಿಚ।
ಟವರ್ಗೇಣ ತವರ್ಗೇಣ ಜ್ಞಾನಗಂಧಾದಯಸ್ತಥಾ ॥
ಮನಃಪಕಾರೇಣೈವೋಕ್ತಂಫಕಾರೇಣ ತ್ವಹಂಕೃತಿಃ ।
ಬಕಾರೇಣ ಭಕಾರೇಣ ಮಹಾನ್ ಪ್ರಕೃತಿ ರುಚ್ಯತೇ ॥
ಆತ್ಮಾತು ಸ ಮಕಾರೋಽಯಂ ಪಂಚವಿಂಶಃ ಪ್ರಕೀರ್ತಿತಃ ॥" ಎನ್ರುಮ್ ತತ್ವಸಾಗರ ಸಂಹಿತಾದಿಹಳಿಲೇ ಪಂಚವಿಂಶತಿ ತತ್ವಙ್ಗಳುಕ್ಕುಮ್ ಕಕಾರಂ ಮುದಲಾನ ವಿರುಪತ್ತೈನ್ದು ಅಕ್ಷರಂಗಳುಮ್ ವಾಚಕಙ್ಗಳಾಹ ವಹುತ್ತು ಚೊಲ್ಲುಹೈಯಾಲೇ ಸಿದ್ಧಮ್.

ಇತ್ತಾಲ್ ಜಡತ್ವಾಚೇತನತ್ವಾದಿ ದೋಷಾಶ್ರಯಙ್ಗಳಾನ ಇರಪತ್ತುನಾಲು ತತ್ವಙ್ಗಳೈಕ್ಕಾಟ್ಟಿಲುಮ್ ಸರ್ವಕಾರಣಮಾಹವುಮ್ ಸರ್ವರಕ್ಷಕನಾಹವುಮ್ ಸರ್ವಶೇಷಿಯಾಹವುಮ್ ಪ್ರಥಮಾಕ್ಷರತ್ತಿಲ್ ತೋತ್ತಿನ ಷಡ್ವಿಂಶಕ ನಿರ್ಕ್ಕಾಟ್ಟಿಲುಮ್ ಜೀವಾತ್ಮಾವುಕ್ಕು ವೇರುಪಾಡು ಸಿದ್ಧಿತ್ತದು:

---

3) ಭೂತಾನಿಚಕವರ್ಗೇಣ ಚವರ್ಗೇಣೇಂದ್ರಿಯಾಣಿಚ ।
ಟವರ್ಗೇಣ ತವರ್ಗೇಣ ಜ್ಞಾನಗಂಧಾದಯಸ್ತಥಾ ॥
ಮನಃಪಕಾರೇಣೈವೋಕ್ತಂ ಫಕಾರೇಣತ್ವಹಂಕೃತಿಃ ।

**ಪಂಚಾರ್ಣಾನಾಂತು ಪಂಚಾನಾಂ** ಇತ್ಯಾದಿ–ಎಂದೂ ತತ್ವಸಾಗರ ಸಂಹಿತಾದಿಗಳಲ್ಲಿ ಪಂಚವಿಂಶತಿ–ಇಪ್ಪತ್ತೈದು ತತ್ವಗಳಿಗೂ ಕಕಾರದಿಂದ ಆರಂಭಿಸಿ ಮಕಾರದವರೆಗೆ ಇರುವ ಇಪ್ಪತ್ತೈದು ಅಕ್ಷರಗಳು ವಾಚಕಗಳಾಗಿ ಬಿಡಿಸಿ ಹೇಳಿರುವುದರಿಂದ ಸಿದ್ಧ. ಆದಾಗಿ ಐದು ಅಕ್ಷರಗಳಿಂದ ಕೂಡಿದ ಕವರ್ಗ,ಚವರ್ಗ, ಟವರ್ಗ, ತವರ್ಗ, ಪವರ್ಗಗಳೆಂಬ ಐದು ವರ್ಗಗಳಲ್ಲಿಯ ಇಪ್ಪತ್ತೈದು ಅಕ್ಷರಗಳಿಗೆ ಪರಮೇಶ್ವರನು, ಇಪ್ಪತ್ತೈದು ತತ್ವ ಶರೀರಕನಾಗಿದ್ದಾನೆ. ಅವು ಯಾವುವೆಂದರೆ ಕವರ್ಗದ ಕಖಗಘಙ, ಎಂಬ ಅಕ್ಷರಗಳಿಂದ ಕ್ರಮೇಣ, ಪೃಥಿವೀ, ಅಪ್ಪು, ತೇಜಸ್ಸು, ವಾಯು. ಆಕಾಶಗಳು (ಪಂಚಭೂತಗಳು) ಹೇಳಲ್ಪಡುತ್ತವೆ. ಚ ವರ್ಗದ ಐದು ಅಕ್ಷರಗಳಿಂದ ಐದು ಕರ್ಮೇಂದ್ರಿಯಗಳು ಅಂದರೆ ಪಾಯು, ಉಪಸ್ಥ, ಪಾದ, ಪಾಣಿ, ವಾಕ್ ಎಂಬವು ಹೇಳಲ್ಪಡುತ್ತವೆ. ಟವರ್ಗದ ಐದು ಅಕ್ಷರಗಳಿಂದ–ಕಣ್ಣು, ಕಿವಿ, ನಾಲಿಗೆ, ಮೂಗು, ತ್ವಕ್, ಎಂಬ ಪಂಚಜ್ಞಾನೇಂದ್ರಿಯಗಳು ಹೇಳಲ್ಪಡುತ್ತವೆ. ತ ವರ್ಗದ ಐದು ಅಕ್ಷರಗಳಿಂದ ಪಂಚಭೂತಗಳ ತನ್ಮಾತ್ರೆಗಳು ಅಂದರೆ, ಗಂಧತನ್ಮಾತ್ರೆ, ರಸತನ್ಮಾತ್ರೆ. ತೇಜಸ್ತನ್ಮಾತ್ರೆ, ವಾಯುತನ್ಮಾತ್ರೆ, ಆಕಾಶತನ್ಮಾತ್ರೆಗಳೆಂಬ ಸೂಕ್ಷ್ಮ ದ್ರವ್ಯಗಳು ಹೇಳಲ್ಪಡುತ್ತವೆ. "ಪ"ಕಾರದಿಂದ ಮನಸ್ತತ್ವವೂ "ಫ" ಕಾರದಿಂದ ಅಹಂಕಾರ ತತ್ವವೂ, "ಬ"ಕಾರದಿಂದ ಮಹತ್ತತ್ವವೂ, "ಭ"ಕಾರದಿಂದ ಪ್ರಕೃತಿ ತತ್ವವೂ, "ಮ"ಕಾರದಿಂದ ಇಪ್ಪತ್ತೈದನೆಯ ತತ್ವವಾದ ಜೀವನೂ ಹೇಳಲ್ಪಟ್ಟಿದ್ದಾನೆ

ಇತ್ತಾಲೇಇತ್ಯಾದಿ–ಜಡತ್ವಾಚೇತನತ್ವಾದಿ ದೋಷಗಳಿಗೆ ಆಶ್ರಯಗಳಾದ ಇಪ್ಪತ್ತು ನಾಲ್ಕು ತತ್ವಗಳಿಗಿಂತಲೂ ಸರ್ವಕಾರಣವಾಗಿಯೂ (ಅಕಾರಾರ್ಥ), ಸರ್ವರಕ್ಷಕನಾಗಿಯೂ (ಧಾತ್ವರ್ಥ), ಸರ್ವಶೇಷಿಯಾಗಿಯೂ (ವಿಭಕ್ತ್ಯರ್ಥ) ಪ್ರಥಮಾಕ್ಷರದಲ್ಲಿ ತೋರಿರುವ ಷಡ್ವಿಂಶಕನಾದ ಇಪ್ಪತ್ತಾರನೇ ತತ್ವವಾದ ಪರಮಾತ್ಮನಿಗಿಂತಲೂ ಜೀವಾತ್ಮನು ಬೇರೆ ಎಂಬುದು ಸಿದ್ಧಿಸುತ್ತದೆ "ತಂಷಡ್ವಿಂಶಕ ಮಿತ್ಯಾಹುಃ ಸಪ್ತವಿಂಶಮಥಾಪರೇ", ಎಂಬುದು ಶ್ರುತಿ. ಜ್ಞಾನತ್ವ ಜ್ಞಾತೃತ್ವಗಳು ಮಕಾರಾರ್ಥಗಳಾದ್ದರಿಂದ, ಜೀವನು ಜಡತ್ವ, ಅಚೇತನತ್ವಗಳಿಂದ ಕೂಡಿದ ಇಪ್ಪತ್ತು ನಾಲ್ಕು ತತ್ವಗಳಿಗಿಂತ ಬೇರೆ ಎಂಬುದು ಸಿದ್ಧಿಸುತ್ತದೆ. ಅಕಾರಾರ್ಥ ನಿರೂಪಿತ ಶೇಷತ್ವ ರಕ್ಷ್ಯತ್ವಗಳು ಮಕಾರಾರ್ಥ ನಿರೂಪಿತ ಜೀವನಿಗೆ ತೋರುವುದರಿಂದ ಈಶ್ವರ ವ್ಯಾವೃತ್ತಿ.

ಇತ್ತಿರುಮನ್ತ್ರತ್ತಿಲ್ ಮಕಾರಙ್ಗಳುಮ್, ನಾರಶಬ್ದಮುಮ್, ನಿಷ್ಕರ್ಷ ವಿವಕ್ಷೈಯಾಲೇ ವಿಶೇಷಣ ಮಾತ್ರಪರಙ್ಗಳ್,

ಮಕಾರವಾಚ್ಯ ಜೀವಸ್ಯ ಜ್ಞಾನತ್ವಾನಂದತ್ವಾಮಲತ್ವ ಸಮರ್ಥನಮ್.

ಇವ್ವಕ್ಷರಮ್ ವ್ಯಾಕರಣ ಪ್ರಕ್ರಿಯೆಯೈ ಪ್ಪಾರ್ತಾಲ್ "ಮನಜ್ಞಾನೇ" ಇತ್ಯಾದಿ ಧಾತುಕ್ಕಳಿಲೇ ನಿಷ್ಪನ್ನಮಾನ ಪದಮಾಹೈಯಾಲೇ ।) "ಜ್ಞೋಽತಏವ" ಎನ್ಗಿರ ಅಧಿಕರಣತ್ತಿಲ್ಪಡಿಯೇ ಜ್ಞಾನಸ್ವ ರೂಪನುಮಾಯ್ ಜ್ಞಾನಗುಣಕನ ಮಾಯ್ ಅಣುವಾನ ಜೀವಾತ್ಮಾವೈ ಶೊಲ್ಲುಹಿರದು.

ಜ್ಞಾನಸ್ವರೂಪನಾಹಪ್ಪೊದುವಿಲೇ ಶೊನ್ನಾಲುಮ್ ಇವನ್ ಸ್ವರೂಪಮ್ ಅನುಕೂಲಮಾಹ ಪ್ರಮಾಣಸಿದ್ಧಮಾಹೈಯಾಲೇ ಆನಂದರೂಪಮಾನ ವಿಶೇಷಮುಮ್ ಸಿದ್ಧಿಕ್ಕುಮ್. ಜ್ಞಾನಗುಣಕನೆನ್ನು ವಿಡಮ್ ಶೊನ್ನಾಲ್ ಪ್ರಮಾಣಾನುಸಾರತ್ತಾಲೇ ಮುಕ್ತದಶೈಯಿಲ್ ನಿರುಪಾಧಿಕ ಪ್ರಸರಣಮಾಯ್ ಸಂಕೋಚ ರಹಿತಮಾನ ಜ್ಞಾನಂ ಗುಣಮಾನಮೈ ತೋತ್ತುಮ್.

---

"ತತ್ವಾತ್ಮತ್ವೇನಸರ್ವದಾ" ಎಂದು ಭಗವಂತನನ್ನು ಚೇತನಾ ಚೇತನಗಳಿಗೆ ಅಂತರ್ಯಾಮಿಯಾಗಿ ನಿರೂಪಿಸಿರುವುದರಿಂದ "ಮ" ಕಾರವೂ "ನಾರ" ಶಬ್ದವೂ ಭಗವಂತನನ್ನು ತಿಳಿಸುತ್ತವೆಯೋ ಎಂದರೆ, **ಇತ್ತಿರುಮಂತ್ರತ್ತಿಲ್.... ನಿಷ್ಕರ್ಷ–ವಿವಕ್ಷೈಯಾಲೇ"** ಎಂದು ಪ್ರಣವ ನಮಸ್ಸುಗಳಲ್ಲಿ "ಮ"ಕಾರವೂ, ನಾರಶಬ್ದವೂ ವಿಶೇಷಣ ಮಾತ್ರ ನಿಷ್ಠವೆಂಬ ನಿಷ್ಕರ್ಷ ವಿವಕ್ಷೆಯಿಂದ,ವಿಶೇಷಣ ಮಾತ್ರವನ್ನು ನಿರ್ದೇಶಿಸುತ್ತವೆ. ಸರ್ವಶಬ್ದಗಳೂ ವಿಶೇಷಣ ವಿಶಿಷ್ಟನಾದ ಅಂತರ್ಯಾಮಿಯನ್ನು ತಿಳಿಸುತ್ತವೆ. ಆದಾಗಿ ಗೋ ಶಬ್ದವು ಗೋತ್ವ ವಿಶಿಷ್ಟ "ಗೋ" ಶರೀರಕ ಜೀವ ಶರೀರಕ ಪರಮಾತ್ಮವಾಚಿ. ನಿಷ್ಕರ್ಷ ವಿವಕ್ಷೆಯಿಂದ "ಗೋ" ಶರೀರವನ್ನೂ ಗೋಶರೀರಕ ಜೀವನನ್ನೂ ತಿಳಿಸುತ್ತದೆ. ಆ ರೀತಿಯಲ್ಲಿ ಮಕಾರವು ನಿಷ್ಕರ್ಷವಿವಕ್ಷೆಯಿಂದ ಜೀವನನ್ನೂ ನಾರಶಬ್ದವು ಅಚೇತನವಾದ ಶರೀರವನ್ನೂ, ಶರೀರಾಂತರ್ಯಾಮಿಯಾದ ಜೀವನನ್ನೂ ತಿಳಿಸಬಲ್ಲವು, ಎಂದು ತಾತ್ಪರ್ಯ.

**ಇವ್ವಕ್ಷರಮ್** ಇತ್ಯಾದಿ–ಈ ಅಕ್ಷರವು ವ್ಯಾಕರಣ ಪ್ರಕ್ರಿಯೆಯಿಂದ, ಮನಜ್ಞಾನೇ, ಮನ ಅವಬೋಧನೇ. ಮನಪರಿಮಾಣೇ ಎಂಬ ಧಾತುಗಳಿಂದ ನಿಷ್ಪನ್ನವಾದ ಪದವಾಗಿ ಕ್ರಮವಾಗಿ **"ಜ್ಞೋಽತ ಏವ"** (2–3–19) ಎಂಬ ಸೂತ್ರದ ಪ್ರಕಾರ ಜ್ಞಾನಕ್ಕೆ ಆಶ್ರಯನನ್ನಾಗಿಯೂ, ಜ್ಞಾನ ಸ್ವರೂಪನನ್ನಾಗಿಯೂ, ಅಣು ಪರಿಣಾಮನನ್ನಾಗಿಯೂ ಜೀವಾತ್ಮನನ್ನು ತಿಳಿಸುತ್ತದೆ.

**ಜ್ಞಾನ ಸ್ವರೂಪನಾಹ ಪೊದುವಿಲೇ** ಇತ್ಯಾದಿ - ಜೀವಾತ್ಮನನ್ನು ಜ್ಞಾನಸ್ವರೂಪನನ್ನಾಗಿ ಸಾಮಾನ್ಯತಃ ಹೇಳಿದರೂ ಅವನವನ ಆತ್ಮಾ ಅವನಿಗೆ ಅನುಕೂಲವಾಗಿಯೇ ತೋರುವುದರಿಂದ ಜ್ಞಾನಾನಂದಮಯಸ್ತ್ವಾತ್ಮಾ"ಎಂದು ಸ್ಮೃತ್ಯಾದಿಗಳಲ್ಲಿ ಹೇಳುವುದರಿಂದಲೂ ಆನಂದ ರೂಪವಾದ ವಿಶೇಷವೂ ಸಿದ್ಧಿಸುತ್ತದೆ. ಅಂದರೆ ಜೀವನು ಆನಂದ ಸ್ವರೂಪನೂ ಅಹುದು. **ಜ್ಞಾನಗುಣಕನ್** ಇತ್ಯಾದಿ ಜೀವಾತ್ಮನು ಜ್ಞಾನಗುಣಕನು–ಜ್ಞಾತೃತ್ವಯುಕ್ತನು ಎಂದು ಹೇಳಿದರೆ ಪ್ರಮಾಣಾನುಸಾರವಾಗಿ, ಬದ್ಧ ದಶೆಯಲ್ಲಿ ಆ ಧರ್ಮಭೂತ ಜ್ಞಾನವು ಕರ್ಮಾನುಗುಣವಾಗಿ ಸಂಕೋಚ ವಿಕಾಸಗಳಿಂದ ಕೂಡಿದುದಾಗಿ, ಭ್ರಮರೂಪವಾಗಿಯೂ ದುಃಖರೂಪವಾಗಿಯೂ ಇರುತ್ತದೆ ಮುಕ್ತ ದಶೆಯಲ್ಲಿ **ನಿರುಪಾಧಿಕ ಪ್ರಸರಣಮಾಯ್**–ಇಂದ್ರಿಯ ಸಂಬಂಧವಾದ ಪ್ರಸರಣವಿಲ್ಲದೆ, ಸ್ವಭಾವತ ಪ್ರಸರಣ ಶೀಲವಾಗಿ, **ಸಂಕೋಚರಹಿತಮಾನ** ಇತ್ಯಾದಿ–ಸರ್ವವಿಷಯಕವಾದ, ಜ್ಞಾನವು ಗುಣವಾಗಿರುವುದು ಪ್ರಕಾಶಿಸುತ್ತದೆ

ಇಪ್ಪಡಿ ಪರಿಶುದ್ಧಮಾನ ಸ್ವಾಭಾವಿಕ ಸ್ವರೂಪತ್ತೈಪ್ಪಾರ್ತ್ತಾಲ್ ಅಚೇತನಙ್ಗಳಿಲುಳ್ಳ ಜಡತ್ವಾದಿ ಹಳುಮ್ ಕಳನ್ದು ಸಂಸಾರದಶೈಯಿಲುಳ್ಳ ಕ್ಲೇಶಾದಿಹಳುಮ್ ಕಳನ್ದು ನಿರ್ಕ್ಕೈಯಾಲೇ ಸ್ವರೂಪ ಧರ್ಮಙ್ಗಳಿರಂಡಿಲುಮುಳ್ಳ ನಿರ್ಮಲತ್ವಮ್ ಅನುಸಂಹಿತಮಾಯಿತ್ತು.

ಪ್ರಣವೋಪದಿಷ್ಟಾತ್ಮಸ್ವರೂಪಮೇವಾನುಸಂಧೇಯಮಿತಿ ಸೂತ್ರೇಪಿ ಪ್ರೋಕ್ತಮ್.

ಇನ್ದ ಪರಶೇಷತ್ವೈಕರಸ ಪರಿಶುದ್ಧ ಸ್ವರೂಪಮೇ ಮುಮುಕ್ಷುದಶೈಯಿಲೇ ಯನುಸಂಧೇಯ ಮೆನ್ರುಮಿಡಮ್ "ವ್ಯತಿರೇಕ ಸ್ತದ್ಭಾವ ಭಾವಿತ್ವಾನ್ನತೂಪಲಬ್ಧಿವತ್" ಎನ್ರಿರ ಸೂತ್ರತ್ತಿಲೇ ಸಿದ್ಧಮ್.

ಇವನುಕ್ಕು ಮುಮುಕ್ಷು ದಶೈಯಿಲ್ ಫಲದಶಾನುಸಂಧಾನಮ್ ಫಲಾಪೇಕ್ಷೈಕ್ಕುರುಪ್ಪಾಮ್. ಪುರುಷಾರ್ಥ ಭೇದಙ್ಗಳುಕ್ಕೀಡಾಹ ವನುಸನ್ಧೇಯಾಕಾರಙ್ಗಳ್ ವೇರುಪಟ್ಟಿರುಕ್ಕು ಮೆನ್ನುಮಿಡಮ್ ಶ್ರೀ ಗೀತೈಯಿಲ್ ಅಷ್ಟಮಾಧ್ಯಾಯತ್ತಿಲುಮ್ ಭಾಷ್ಯಾದಿಹಳಿಲುಮ್ ಸುವ್ಯಕ್ತಮ್.

ಶೇಷತ್ವಜ್ಞಾನತ್ವಾನಂದತ್ವಾಮಲತ್ವಾದಿಕಂ ಸರ್ವಾತ್ಮ ಸಾಧಾರಣಮಿತ್ಯಾಹ.

ಜೀವಭೇಧಮ್ ಪ್ರಾಮಾಣಿಕಮಾಹೈಯಾಲ್ ಇತ್ತೃತೀಯಾಕ್ಷರಂ "ನಾತ್ಮಾಶ್ರುತೇಃ" ಇತ್ಯಾದಿ ಹಳಿರ್ ಪೋಲೇ ಜಾತ್ಯೈಕತ್ವಪರಮ್.

---

**ಇಪ್ಪಡಿ ಪರಿಶುದ್ಧಮಾನ** ಇತ್ಯಾದಿ-ಹೀಗೆ ಪರಿಶುದ್ಧವಾದ ಸ್ವಾಭಾವಿಕ ರೂಪವನ್ನು ನೋಡಿದರೆ, ಅಚೇತನ ಗಳಿಗೆ ಇರುವ ಜಡತ್ವಾದಿಗಳು ಹೋಗಿ ಸಂಸಾರದಶೆಯಲ್ಲಿರುವ ಕ್ಲೇಶಾದಿಗಳೂ ಹೋಗಿ ಇರುವುದರಿಂದ ಆತ್ಮ ಸ್ವರೂಪಜ್ಞಾನದಲ್ಲಿಯೂ, ಅದರ ಧರ್ಮಭೂತಜ್ಞಾನದಲ್ಲಿಯೂ, ಇರುವ ನಿರ್ಮಲತ್ವವು ತೋರುತ್ತದೆ. ಅಂದರೆ ಆತ್ಮ ಅಮಲಸ್ವರೂಪನು ಎಂದು ತಾತ್ಪರ್ಯ.

**ಇಂದಪರಶೇಷತ್ವೈಕರಸ ಪರಿಶುದ್ಧ ಸ್ವರೂಪಮೇ** ಇತ್ಯಾದಿ – ಈ ಪರನಾದ ಭಗವಂತನಿಗೇನೆ ಶೇಷಭೂತ ನಾಗಿರುವುದೇ ರಸವಾಗಿರುವ ಪರಿಶುದ್ಧಾತ್ಮ ಸ್ವರೂಪವೇ ಮುಮುಕ್ಷುದಶೆಯಲ್ಲಿ ಅನುಸಂಧೇಯವು. ಇದನ್ನು "ವ್ಯತಿ ರೇಕಸ್ತದ್ಭಾವ ಭಾವಿತ್ವಾತ್ ನ ತೂಪಲಬ್ಧಿವತ್" – ಜೀವಾತ್ಮನು ಸಂಸಾರ ದಶೆಯಲ್ಲಿ ಸಂಕುಚಿತ ಜ್ಞಾನಾನಂದ ಸ್ವರೂಪಾನಾಗಿದ್ದಾನೆ. ಮೋಕ್ಷದಶೆಯಲ್ಲಿ ಸಮಸ್ತ ಪಾಪಗಳಿಂದ ಬಿಡಲ್ಪಟ್ಟವನಾಗಿ ಅಂದರೆ ಅಪಹತ ಪಾಪ್ಮನಾಗಿ ಜರಾಮರಣ ಶೋಕಾದಿಗಳಿಲ್ಲದವನಾಗಿ ಹಸಿವು ದಾಹ ಮೊದಲಾದವುಗಳೂ ಇಲ್ಲದೆ ಸತ್ಯಕಾಮ ಸತ್ಯ ಸಂಕಲ್ಪನಾಗಿ ರುತ್ತಾನೆ. ಆ ರೀತಿಯಾಗಿ ತನ್ನನ್ನು ಅನುಸಂಧಾನ ಮಾಡಬೇಕು ಎಂಬುದು ಸೂತ್ರಸಿದ್ಧ

**ಇವನುಕ್ಕು** ಇತ್ಯಾದಿ–ಯಥಾಕ್ರತುನ್ಯಾಯದ ರೀತಿಯಲ್ಲಿ ಜೀವಾತ್ಮನಿಗೆ ಮುಮುಕ್ಷು ದಶೆಯಲ್ಲಿ ಫಲದ ಶಾನು ಸಂಧಾನವು ಮೋಕ್ಷದಲ್ಲಿ ತನಗೆ ಆವಿರ್ಭವಿಸುವ ಅಪಹತಪಾಪ್ಮತ್ವಾದಿ ದಶೆಯ ಅಪೇಕ್ಷೆಗೆ ಕಾರಣವಾಗುತ್ತದೆ. **ಪುರುಷಾರ್ಥ ಭೇದಂಗಳುಕ್ಕೀಡಾಹ** ಇತ್ಯಾದಿ – ಐಶ್ವರ್ಯ, ಕೈವಲ್ಯ, ಮೋಕ್ಷವೆಂಬ ಪುರುಷಾರ್ಥಗಳಿಗೆ ಅನುಗುಣ ವಾಗಿ ಅನುಸಂಧೇಯವಾದ ಆಕಾರಗಳು ಬೇರೆ ಬೇರೆಯಾಗಿವೆ, ಎಂಬುದು ಭಗವದ್ಗೀತೆಯಲ್ಲಿ ಅಷ್ಟಮಾಧ್ಯಾಯ ದಲ್ಲಿಯೂ, ಭಾಷ್ಯಾದಿಗಳಲ್ಲಿಯೂ ಸುವ್ಯಕ್ತ. ಆದಿಶಬ್ದದಿಂದ ಉಪನಿಷತ್ತು ಗ್ರಾಹ್ಯ.

**ಜೀವಭೇದಮ್** ಇತ್ಯಾದಿ-ಜೀವಭೇದವು "ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್"–ಏಕಃ ನಿತ್ಯಃ ಚೇತನಃ ಬಹೂನಾಂ ನಿತ್ಯಾನಾಂ ಚೇತನಾನಾಂ ಕಾಮಾನ್ ವಿದಧಾತಿ–

**ಮಕಾರಸ್ಯ ಜೀವಪರತ್ವೇ ಸ್ವಶೇಷತ್ವಾನುಸಂಧಾನಂ ದ್ವಿತೀಯೇನ ಸಿದ್ಧ್ಯತೀತ್ಯಾಹ.**

**ಇಪ್ಪಡಿ ಜೀವತತ್ವತ್ತೈಯೆಲ್ಲಾಮ್ ಇಙ್ಗು"ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ"ಎನ್ರಿರಪಡಿಯೇ ಸಾಮಾನ್ಯೇನ ಭಗವಚ್ಛೇಷಮಾಹಚ್ಚೊನ್ನಾಲುಮ್ ಅದಿಲೇ ತಾನುಮ್ ಅಂತರ್ಗತನ ಹೈಯಾಲೇ"ಅತೋಹ ಮಪಿತೇದಾಸ"ಎನ್ನುಮ್ ಅನುಸಂಧಾನಮ್ ಸಿದ್ಧಿಕ್ಕಿರದು**

**ಇಙ್ಗು ಶೇಷತ್ವಜ್ಞಾನಮುಮ್, ಸ್ವಸ್ವಾತಂತ್ರ್ಯಾಭಿಮಾನ ನಿವೃತ್ತ್ಯಾದಿಹಳುಮ್ ಉಪಾಯವಿಶೇಷಪರಿಗ್ರಹಮುಮ್ ಫಲಭೂತಶೇಷವೃತ್ತಿ ಪ್ರಾರ್ಥನೈಯುಮ್, ತನಕ್ಕುಪ್ಪಿರಕ್ಕಿರದಾಹೈಯಾಲೇ ತನ್ನೈಪ್ರಧಾನ ಮಾಹ ಕ್ಕಾಟ್ಟವೇಣ್ಡುಹೈಯಾಲ್ ತೃತೀಯಾಕ್ಷರತ್ತುಕ್ಕು ವಿಶೇಷ್ಯಪದಮಾಹ "ಅಹಂ" ಶಬ್ದತ್ತೈ ಅಧ್ಯಾಹರಿತ್ತನ್ವಯಮಾಹಿರದೆನ್ರುಮ್ ಶಿಲ ಆಚಾರ್ಯರ್‌ಹಳ್ ಶೊಲ್ಲುವರ್‌ಹಳ್.**
**ಅಪ್ಪೋದುಮ್ ಪ್ರಣವ ವಿವರಣಮಾನ 1) "ಮಮನಾಥಯದಸ್ತಿಯೋಸ್ಮ್ಯಹಂ ಸಕಲಂ ತದ್ಧಿತವೈವ ಮಾಧವ।"ಇತ್ಯಾದಿಹಳಿಲ್ ಪಡಿಯೇ ಗುಣಙ್ಗಳ್ ಪ್ರಧಾನಾನುವರ್ತಿಹಳ್ ಎನ್ರಿರನ್ಯಾಯತ್ತಾಲೇ, ತನಕ್ಕು ಶೇಷಮಾನಗುಣಾದಿಹಳುಮ್ ಉಪಲಕ್ಷಿತಙ್ಗಳ್.**

---

ಎಂದು ಅನ್ವಯ. ಒಬ್ಬ ನಿತ್ಯನಾದ ಚೇತನನು (ಪರಮಾತ್ಮಾ)ಅನೇಕ ನಿತ್ಯ ಚೇತನರಿಗೆ ಅವರವರ ಇಷ್ಟಾರ್ಥಗಳನ್ನು ಕೊಡುತ್ತಾನೆ, ಎಂಬ ಉಪನಿಷದ್ವಾಕ್ಯದ ಪ್ರಕಾರ ಜೀವಬಹುತ್ವವು ಪ್ರಾಮಾಣಿಕವಾದ್ದರಿಂದ "ಮ' ಎಂಬ ಈ ತೃತೀಯಾಕ್ಷರವು "ನಾತ್ಮಾಶ್ರುತೇಃ", ಇತ್ಯಾದಿಗಳ ಪ್ರಕಾರ ಜಾತ್ಯೇಕತ್ವಪರ.

**ಇಪ್ಪಡಿ ಜೀವತತ್ವತ್ತೈಯೆಲ್ಲಾಮ್** ಇತ್ಯಾದಿ- ಹೀಗೆ ಜೀವತತ್ವವನ್ನೆಲ್ಲಾ ಇಲ್ಲಿ'**ದಾಸಭೂತಾಸ್ಸ್ವತಸ್ಸರ್ವೇ** ಇತ್ಯಾದಿ–ಎಲ್ಲಾ ಆತ್ಮ ತತ್ವಗಳೂ ಪರಮಾತ್ಮನಿಗೆ ದಾಸಭೂತರು, ಎಂದು ಹೇಳಿರುವ ಪ್ರಕಾರ, ಸಾಮಾನ್ಯವಾಗಿ ಭಗವಂತನಿಗೆ ಶೇಷಭೂತರೆಂದು ಹೇಳಿದ್ದರೂ ಅದರಲ್ಲಿ ತಾನೂ ಅಂತರ್ಗತನಾಗಿರುವುದರಿಂದ "**ಅತೋಽಹಮಪಿ ತೇದಾಸಃ,** ಆದ್ದರಿಂದ ನಾನೂ ನಿನಗೆ ದಾಸನೆಂಬ ಅನುಸಂಧಾನವು ಸಿದ್ಧಿಸುತ್ತದೆ. ಇದು ಮಂತ್ರರಾಜಪದ ಸ್ತೋತ್ರದಲ್ಲಿ ಸರ್ವಜ್ಞನಾದ ರುದ್ರನು ತಾನೇ ಹೇಳಿರುವ ವಚನ ಇದರಿಂದ ಅಹಂತತ್ವವು ಅಕಾರಾರ್ಥ ಪರಮಾತ್ಮ ಶೇಷಭೂತವು ಎಂಬುದು ಸಿದ್ಧಿಸುತ್ತದೆ.

**ಇಂಗು ಶೇಷತ್ವಜ್ಞಾನಮುಮ್** ಇತ್ಯಾದಿ ಇಲ್ಲಿ ಶೇಷತ್ವಜ್ಞಾನವೂ ಚತುರ್ಥಿಗೆ ಅರ್ಥ) ಸ್ವಸ್ವಾತಂತ್ರ್ಯಾಭಿಮಾನ ನಿವೃತ್ತ್ಯಾದಿಗಳೂ (ನಮ ಶ್ಶಬ್ದಾರ್ಥ) ಉಪಾಯ ಪರಿಗ್ರಹವೂ (ಇದೂ ನಮಶ್ಶಬ್ದಾರ್ಥ) ಫಲಭೂತ ಶೇಷವೃತ್ತಿ ಪ್ರಾರ್ಥನೆಯೂ (ನಾರಾಯಣ ಪದದಮೇಲಿರುವ ಆಯ ಶಬ್ದಾರ್ಥ), ತನಗೆ ಉಂಟಾಗಿರುವುದರಿಂದ, ತನ್ನನ್ನು ಪ್ರಧಾನನಾಗಿ ತೋರಿಸಬೇಕಾಗಿರುವುದರಿಂದ ತೃತೀಯಾಕ್ಷರದಿಂದ ವಿಶೇಷ್ಯಪದವಾಗಿ ಅಹಂ ಶಬ್ದವನ್ನು ಅಧ್ಯಾಹರಿಸಿ ಅನ್ವಯವಾಗುತ್ತದೆಂದು ಕೆಲವು ಆಚಾರ್ಯರುಗಳು ಹೇಳುತ್ತಾರೆ. **ಅಪ್ಪೋದುಮ್**– ಅವಾಗಲೂ, ಪ್ರಣವವಿವರಣವಾದ 1) "ಮಮನಾಥಯದಸ್ತಿ **ಯೋಽಸ್ಮ್ಯಹಂ**" ಇತ್ಯಾದಿಗಳಲ್ಲಿ "ಮಮಯದಸ್ತಿ" ಎಂದು ಹೇಳುವ ಗುಣಗಳೂ, ಯೋಸ್ಮಿ ಎಂದೂ ತಾನೂ ಹೇಳಿರುವಂತೆ ಗುಣಗಳು ಪ್ರಧಾನಾನುವರ್ತಿಗಳೆಂಬ ನ್ಯಾಯದಿಂದ ತನಗೆ ಶೇಷವಾದಗುಣಗಳು ಉಪಲಕ್ಷಿಸಲ್ಪಡುತ್ತವೆ. ಜೀವಶೇಷಭೂತಗಳೂ ಜೀವನಿಗೆ ಶೇಷಿಯಾದ ಭಗವಂತನಿಗೆ ಶೇಷವಾಗಿ ಅನುಸಂಧೇಯಗಳೆಂದು ತಾತ್ಪರ್ಯ.

---

1) ದಾಸಭೂತಾಸ್ಸ್ವತಃ ಸರ್ವೇಹ್ಯಾತ್ಮಾನಃ ಪರಮಾತ್ಮನಃ।
ಅತೋಽಹಮಪಿ ತೇದಾಸಃ ಇತಿಮತ್ವಾನಮಾಮ್ಯಹಮ್॥ ... ಮಂತ್ರರಾಜಪದಸ್ತೋತ್ರ

1) ಆಳವಂದಾರ್ ಸ್ತೋತ್ರ

ವೇರೇ ಶೀಲವಾಚಾರ್ಯರ್ಹಳ್ ಅಸ್ಮಚ್ಛಬ್ದತ್ತಿಲ್ ವ್ಯಂಜನಮಾತ್ರಮಾನ ಮಕಾರತ್ತೈ ಎಡುತ್ತು ಛಾಂದಸಪ್ರಕ್ರಿಯೈಯಾಲೇ ಪೂರ್ವೋತ್ತರಭಾಗಙ್ಗಳ್ ಲೋಪಿತ್ತು ನಿರ್ಕಿರದಾಯ್ ತೃತೀಯಾಕ್ಷರಂ ತಾನೇ ಅಹಮರ್ಥತ್ತೈ ಕ್ಕಾಟ್ಟು ಹಿರದೆನ್ರುಮ್ ಯೋಜಿಪ್ಪರ್ಹಳ್. ಪರಮಾತ್ಮಾವುಕ್ಕು ಆತ್ಮಹವಿಸ್ಸೈ ಸಮರ್ಪಿಕ್ಕ ವಿಧಿಕ್ಕಿರ ನ್ಯಾಸವಿದ್ಯೈಯಿಲೇ ಪ್ರಣವತ್ತೈ ಮನ್ತ್ರಮಾಹ ವೋದುಹೈಯಾಲೇ ಇದು ಅನುಷ್ಠೇಯಾರ್ಥ ಪ್ರಕಾಶಕಮಾಹೈಕ್ಕಾಹ ವಿದಿಲೇ ಪರಾವರಾತ್ಮ ವಿಷಯಮಾನವಾಚಕಾಂಶಮಪೇಕ್ಷಿತಮಾನಾಲ್ ಪ್ರಮಾಣಾನುಸಾರತ್ತಾಲೇ ಪ್ರಥಮಾಕ್ಷರ ಮುದ್ದೇಶ್ಯಕಾರಕತ್ತೈ ಚೊಲ್ಲುಹೈಯಾಲುಮ್, ಮಧ್ಯಮಾಕ್ಷರಂ ಅನ್ಯಾರ್ಥಮಾಹೈಯಾಲುಮ್, ಪಾರಿಶೇಷ್ಯತ್ತಾಲೇ ತೃತೀಯಾಕ್ಷರಂ ಸಮರ್ಪಣೀಯಮಾನ ಪ್ರತ್ಯಗಾತ್ಮ ಹವಿಸ್ಸೈಕ್ಕಾಟ್ಟವೇಣ್ಡಿಯದಾಲ್ ಇವ್ವಕ್ಷರತ್ತುಕ್ಕು "ಅಹಂ" ಎನ್ರು ಪೊರುಳಾಹೈಯಿಹವುಮುಚಿತಮ್. ಆಹೈಯಾಲೇಯಿರೇ ಭಟ್ಟರ್ ಇಜ್ಜಗ್ಗತ್ತ ಪ್ರಣವತ್ತುಕ್ಕು 1) "ಅಕಾರಾರ್ಥಾಯೈವ ಸ್ವಮಹಮ್" ಎನ್ರು ವ್ಯಾಖ್ಯಾನಮ್ ಪಣ್ಣಿತ್ತು.

**ಅಥ ನಮಶ್ಶಬ್ದಾರ್ಥಃ ; ನಮಸಾ ಸ್ವಶೇಷತ್ವನಿಷೇಧಃ.**

ಇಪ್ಪಡಿಯೇ ನಮಸ್ಸಿಲ್ ಮಕಾರಂ ಮೂನ್ರತ್ತೊರು ಪ್ರಕಾರತ್ತಾಲೇ ಪ್ರತ್ಯಗಾತ್ಮಾವೈ ಚೊಲ್ಲು

---

**ವೇರೇಶಿಲವಾಚಾರ್ಯರ್ಹಳ್** ಇತ್ಯಾದಿ–ಮತ್ತೆ ಕೆಲವು ಆಚಾರ್ಯರುಗಳು ಅಸ್ಮತ್‌ಶಬ್ದದಲ್ಲಿ "ಅಸ್" ಅತ್" ಎಂಬ ಪೂರ್ವೋತ್ತರ ಭಾಗಗಳನ್ನು ಛಾಂದಸ ಪ್ರಕ್ರಿಯೆಯಿಂದ ಲೋಪಿಸಿ ವ್ಯಂಜನವಾದ "ಮ" ಕಾರವನ್ನು ಮಾತ್ರ ಉಳಿಸಿಕೊಂಡು ಪ್ರಣವದ ತೃತೀಯಾಕ್ಷರವೇ ಅಹಮರ್ಥವನ್ನು ತಿಳಿಸುವುದಾಗಿ ಯೋಜಿಸುತ್ತಾರೆ. ಈ ಪಕ್ಷವೇ ಉಚಿತವೆಂದು **ಪರಮಾತ್ಮಾವುಕ್ಕು** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ "ಓಮಿತ್ಯಾತ್ಮಾನಂ ಯುಂಜೀತ"-ಪರಮಾತ್ಮಾವಿಗೆ ಆತ್ಮಹವಿಸ್ಸನ್ನು ಸಮರ್ಪಿಸುವಂತೆ ವಿಧಿಸುವ ನ್ಯಾಸವಿದ್ಯೆಯಲ್ಲಿ ಪ್ರಣವವನ್ನು ಕರಣಮಂತ್ರವನ್ನಾಗಿ ಹೇಳಿರುವುದರಿಂದ ಇದು **ಅನುಷ್ಠೇಯಾರ್ಥ ಪ್ರಕಾಶಕವು. ಆಹೈಕ್ಕಾಹ** – ಅದಕ್ಕೋಸ್ಕರ ಪರಮಾತ್ಮನನ್ನು ಉದ್ದೇಶಿಸಿ ಸ್ವಾತ್ಮವೆಂಬ ಹವಿಸ್ಸನ್ನು ಸಮರ್ಪಿಸುವುದೆಂಬ ಅರ್ಥವನ್ನು ಪ್ರಕಾಶಪಡಿಸಬೇಕಾದುದರಿಂದ ಇದರಲ್ಲಿ "ಪರ" – ಅಕಾರವಾಚ್ಯನಾದ ಭಗವಂತ, **ಅವರ**, ಮಕಾರವಾಚ್ಯನಾದ ಜೀವ, ಇವರುಗಳ ವಿಷಯಕವಾದ ವಾಚಕಾಂಶವು ಅಪೇಕ್ಷಿತವಾದರೆ ಪ್ರಮಾಣಾನುಸಾರವಾಗಿ ಅಕಾರವು ಉದ್ದೇಶ್ಯಕಾರಕವನ್ನು ಹೇಳುತ್ತದೆ. ಮಧ್ಯಮವಾದ 'ಉ' ಕಾರವು ಅವಧಾರಣವಾಚಕ. ಅಥವಾ ಲಕ್ಷ್ಮೀವಾಚಕವಾಗಿ ಹೇಳಲ್ಪಟ್ಟಿರುವುದರಿಂದ, ಉಳಿದ ಮಕಾರವೆಂಬ ಮೂರನೆಯ ಅಕ್ಷರವು ಸಮರ್ಪಣೀಯವಾದ **ಪ್ರತ್ಯಗಾತ್ಮಹವಿಸ್ಸೈ** ಜೀವಾತ್ಮನೆಂಬ ಹವಿಸ್ಸನ್ನು ತೋರಿಸಬೇಕಾದುದರಿಂದ ಈ "ಮ್" ಎಂಬ ಅಕ್ಷರಕ್ಕೆ "ಅಹಂ" "ನಾನು" ಎಂಬ ಅರ್ಥವನ್ನು ಹೇಳುವುದು ಬಹಳ ಉಚಿತ **ಆಹೈಯಾಲೇಯಿರೇ** ಈ ಔಚಿತ್ಯವನ್ನು ತಿಳಿದೇ ಪರಾಶರಭಟ್ಟರೂ ಸಹ ಈ ಅಷ್ಟಾಕ್ಷರದಲ್ಲಿ ಹೇಳಿರುವ ಪ್ರಣವಕ್ಕೆ 1) **ಅಕಾರಾರ್ಥಾಯೈವ ಸ್ವಮಹಂ"** ಅಕಾರಾರ್ಥಭೂತನಾದ ಭಗವಂತನಿಗೇ ಅಹಂ– ನಾನು "ಸ್ವಂ" ಶೇಷಭೂತನು ಎಂದು ವ್ಯಾಖ್ಯಾನಮಾಡಿ ಮಕಾರಕ್ಕೆ ಅಹಂ ಶಬ್ದ ವಾಚ್ಯನಾದ ಜೀವನು ಎಂದು ನಿರೂಪಿಸಿರುತ್ತಾರೆ.

**ನಮಶ್ಶಬ್ದಾರ್ಥ**

**ಇಪ್ಪಡಿಯೇ ನಮಸ್ಸಿಲ್** ಇತ್ಯಾದಿಯಾಗಿ ಆರಂಭಿಸಿ ವ್ಯಾಖ್ಯಾನ ಮಾಡುತ್ತಾರೆ. ಅದಾಗಿ ಹೀಗೆಯೇ

---

1) ಅಷ್ಟ ಶ್ಲೋಕೀ

ಹಿರದು, ಇದು ಷಷ್ಠೀವಿಭಕ್ತ್ಯಂತ ಮಾಹೈಯಾಲುಮ್ 'ನಕಾರಮ್ ನಿಷೇಧತ್ತೈ ಚೊಲ್ಲು ಹೈಯಾಲುಮ್, "ನಮಮ" ಎನ್ರದಾಯಿತ್ತು. ನಿಷೇಧತ್ತಿಲ್ ಆದರಾತಿಶಯಂ ತೋತ್ತುಹೈಕ್ಕಾಹ "ನಞ್" ಮುನ್ನೇ ಕಿಡಕ್ಕಿರದು ;ಇದು "ದೃಷ್ಟ್ವಾ ಸೀತಾ" ಎನ್ನುಮಾಪ್ಪೋಲೇಇರುಕ್ಕಿರದು. ಇಮ್ಮಕಾರತ್ತಿಲ್ ಷಷ್ಠಿಯಾನದು ಸಂಬಂಧಸಾಮಾನ್ಯಮುಖತ್ತಾಲೇ ಉಚಿತ ಸಂಬಂಧ ವಿಶೇಷತ್ತೈ ವಿವಕ್ಷಿಕ್ಕಿರದು. ಇವ್ವಭಿಪ್ರಾಯತ್ತಾಲೇಯಿರೇ ಭಟ್ಟರುಮ್, 1) "ಅಥಮಹ್ಯಂನ" ಎನ್ರದು.

ವಾಕ್ಯಙ್ಗಳುಕ್ಕವಧಾರಣತ್ತಿಲೇ ತಾತ್ಪರ್ಯಂ ಕೊಳ್ಹೈ ಉಚಿತಮಾಹೈಯಾಲೇ ಇಪ್ರಣವತ್ತಿಲೇ ಮಧ್ಯಮಾಕ್ಷರ ಸಿದ್ಧಮಾನ ತಾತ್ಪರ್ಯಾರ್ಥತ್ತೋಡೇ ಪುರವಾಯಿರುಕ್ಕಿರ ವಿನ್ನಮಸ್ಸಿಲ್ ಪೋರುಳೇ ಸರ್ವತ್ತಿಲುಮ್ ಸಾರಮೆನ್ನುಮಿಡಮ್

---

"ನಮ" ಶಬ್ದಾರ್ಥವನ್ನು ನಮಶ್ಶಬ್ದದಲ್ಲಿ 'ಮ' ಕಾರವು ಮೇಲೆ ಹೇಳಿದ ಮೂರು ರೀತಿಗಳಲ್ಲಿ ಒಂದರಲ್ಲಿ ಪ್ರತ್ಯಗಾತ್ಮ-ಜೀವನನ್ನು ತಿಳಿಸುತ್ತದೆ. ಅಂದರೆ ಮಕಾರವು ಜೀವಸಾಮಾನ್ಯ ಪರತ್ವವಾಗಿ ಆದರಲ್ಲಿ, "ಅತೋऽಹಮಪಿ ತೇದಾಸಃ" ಎಂಬಂತೆ ತನ್ನನ್ನು ಒಬ್ಬನನ್ನಾಗಿ ಅನುಸಂಧಾನಮಾಡುವುದು ಒಂದು ಪ್ರಕಾರ. "ಮನ ಜ್ಞಾನೇ", ಎಂಬಧಾತು ನಿಷ್ಪನ್ನವಾದ ಮಕಾರಕ್ಕೆ ವಿಶೇಷ್ಯವಾಗಿ "ಅಹಂ" ಶಬ್ದವು ಅಧ್ಯಾಹರಿಸಲ್ಪಡಬೇಕೆಂಬ ಪ್ರಕಾರ ಎರಡನೆಯದು. ಅಸ್ಮಚ್ಛಬ್ಧವು ಛಾಂದಸ ಪ್ರಕ್ರಿಯೆಯಿಂದ 'ಮ್, ಎಂಬ ಅಕ್ಷರಮಾತ್ರ ಶೇಷವಾಗುಳಿದು ಅಹಮರ್ಥಕ್ಕೆ ಜೀವನನ್ನು ತಿಳಿಸುವುದು ಮೂರನೆಯ ಪ್ರಕಾರ. ಈ ಮೂರು ಪ್ರಕಾರಗಳಿಂದಲೂ ಮಕಾರವು ಜೀವಾತ್ಮನನ್ನು ತಿಳಿಸುತ್ತದೆ.

ಈ "ನಮ ಶಬ್ದವನ್ನು 'ನ' ಎಂದೂ 'ಮ' ಎಂದೂ ವಿಂಗಡಿಸಿ ಆದರಿಂದ ಫಲಿಸುವ ಅರ್ಥವನ್ನು "**ಇದು ಷಷ್ಠೀ ವಿಭಕ್ತ್ಯಂತ ಮಾಹೈಯಾಲುಮ್** ಎಂದು ವಿವರಿಸುತ್ತಾರೆ. ಆದಾಗಿ "ಮಃ" ಎಂಬುದು ಷಷ್ಠೀ ವಿಭಕ್ತ್ಯಂತ ವಾದರಿಂದಲೂ 'ನ' ಕಾರವು ನಿಷೇಧವನ್ನು ತಿಳಿಸುವುದರಿಂದಲೂ "ನಮಮ" ಎಂದು ರೂಪವಾಗುತ್ತದೆ. ಘಟೋನಾಸ್ತಿ ಎಂಬಂತೆ ನಿಷೇಧ್ಯವಸ್ತುವನ್ನು ಮೊದಲು ಹೇಳದೆ ನಿಷೇಧವನ್ನು 'ನ' ಎಂದು ಮೊದಲು ತಿಳಿಸಿರುವುದಕ್ಕೆ ತಾತ್ಪರ್ಯವೇನೆಂದರೆ, **ನಿಷೇಧತ್ತಿಲ್ ಆದರಾತಿಶಯಮ್**-ಅಹಂ ನಮಮ- ನಾನು ನನಗಲ್ಲ ಎಂಬ ನಿಷೇಧಾಂಶವು ಮುಖ್ಯವಾಗಿ ತಿಳಿಯಬೇಕಾದ್ದರಿಂದ "ನಞ್" ನಕಾರವು ಮೊದಲು ಹೇಳಲ್ಪಟ್ಟಿದೆ ಇದು "ದೃಷ್ಟ್ವಾಸೀತಾ" ಎಂಬಂತೆ ಪ್ರಧಾನಾರ್ಥವನ್ನು ಮೊದಲು ತಿಳಿಸುತ್ತದೆ. **ಇಮ್ಮಕಾರತ್ತಿಲ್ ಷಷ್ಠಿಯಾನದು** ಈ ಮಕಾರದಲ್ಲಿ ಷಷ್ಠೀವಿಭಕ್ತಿಯು ಸಂಬಂಧ ಸಾಮಾನ್ಯವನ್ನು ತಿಳಿಸುವ ಕ್ರಮದಲ್ಲಿ "ಆಯ್ಯೈವ ಮ್" ಎಂಬಲ್ಲಿ ಹೇಳಿದ ಶೇಷಶೇಷಿಭಾವರೂಪ ಉಚಿತ ಸಂಬಂಧ ವಿಶೇಷವನ್ನೇ ವಿವಕ್ಷಿಸುತ್ತದೆ. ಅಂದರೆ ಆಕಾರವಾಚ್ಯನಾದ ಭಗವಂತನಿಗೆ ಮಕಾರ ವಾಚ್ಯನಾದ ಜೀವನು ಶೇಷಭೂತನು, ನಾನು ನನಗೆ ಸೇರಿದವನಲ್ಲ -ಸ್ವತಂತ್ರನಲ್ಲ ಎಂದು ತಾತ್ಪರ್ಯ. **ಇವ್ವಭಿಪ್ರಾಯತ್ತಾಲೇಯಿರೇ** ಈ ಅಭಿಪ್ರಾಯದಿಂದಲೇ ಪರಾಶರಭಟ್ಟರು 1) **ಅಥಮಹ್ಯಂನ**-ನಾನು ನನಗೆ ಶೇಷನಲ್ಲ ಎಂದು ತಿಳಿಸಿರುತ್ತಾರೆ.

**ವಾಕ್ಯಂಗಳುಕ್ಕು ಅವಧಾರಣತ್ತಿಲೇ** ಇತ್ಯಾದಿ-"ಸರ್ವಂವಾಕ್ಯಂ ಸಾವಧಾರಣಂ" ಎಂಬ ನ್ಯಾಯದಂತೆ ಪ್ರಣವದಲ್ಲಿ ಮಧ್ಯಮಾಕ್ಷರವು ಉಕ್ತಿ ಮಾತ್ರವಾಚಕವೆಂಬ ಪಕ್ಷದಲ್ಲಿಯೂ, ಅನ್ಯಶೇಷತ್ವ ನಿವೃತ್ತಿಯು ವಿವಕ್ಷಿತ. **ಇಪ್ರಣವತ್ತಿಲ್**-ಇತ್ಯಾದಿ ಈ ಪ್ರಣವದಲ್ಲಿ ಮಧ್ಯಮಾಕ್ಷರವಾದ "ಉ" ಎಂಬಲ್ಲಿ ಸಿದ್ಧವಾದ ತಾತ್ಪರ್ಯದೊಡನೆ-ಅಂದರೆ ಅನ್ಯಯೋಗ ವ್ಯವಚ್ಛೇದದಲ್ಲಿ ಅನ್ಯಶಬ್ದಾಂತರ್ಗತವಾದ ತನ್ನ ಶೇಷಿತ್ವವನ್ನೂ ಕಳೆಯುವುದು ಉಚಿತವಾಗಿ ಅದೂ ಈ 'ನಮಃ' ಎಂಬ ಪದದಿಂದ ವಿವಕ್ಷಿತವಾಗಿ, ಈ ಅರ್ಥವೇ ಸರ್ವಾರ್ಥಸಾರವಾದದ್ದು. **ಇಂದ ನಮಸ್ಸಿಲ್ ಪೊರುಳ್**-ತನಗೆ ನಿರುಪಾಧಿಕ ಶೇಷತ್ವ ನಿವೃತ್ತಿಯೂ, ತನ್ನ ವಸ್ತುವಿಗೆ ಸ್ವಶೇಷತ್ವ ನಿವೃತ್ತಿಯೂ ನಮಸ್ಸಿಗೆ

---

1) ಅಷ್ಟಶ್ಲೋಕೀ

1) ದ್ವ್ಯಕ್ಷರಸ್ತು ಭವೇನ್ಮೃತ್ಯುಸ್ತ್ರ್ಯಕ್ಷರಂ ಬ್ರಹ್ಮಶಾಶ್ವತಮ್ |
ಮಮೇತಿ ದ್ವ್ಯಕ್ಷರೋ ಮೃತ್ಯುರ್ನ ಮಮೇತಿ ಚ ಶಾಶ್ವತಮ್ ||" ಇತ್ಯಾದಿಹಳಿಲೇ ಶೊಲ್ಲಪ್ಪಟ್ಟದು.

2) "ಸರ್ವಂ ಜಿಹ್ಮಂ ಮೃತ್ಯುಪದಮಾರ್ಜವಂ ಬ್ರಹ್ಮಣಃ ಪದಮ್ |

3) ಏತಾವಾನ್ ಜ್ಞಾನವಿಷಯಃ ಕಿಂಪ್ರಲಾಪಃ ಕರಿಷ್ಯತಿ |"
ಎನ್ಗಿರ ಶ್ಲೋಕತ್ತುಕ್ಕುಮ್ ಇನ್ನಮಸ್ಸಿನ್ ಪೊರುಳಿಲೇ ಪ್ರಾಧಾನ್ಯೇನ ತಾತ್ಪರ್ಯಮ್

---

ಸಾರವಾದ ಅರ್ಥ... ಅಂದರೆ ಯಾವಕಾರಣದಿಂದಲೂ ತಾನು ತನಗೆ ಸೇರಿದವನಲ್ಲ. ತನ್ನದಾದ ವಸ್ತುವೂ ಯಾವುದೂ ಇಲ್ಲ ಎಲ್ಲಾ ಭಗವಂತನದೇ. ಕರ್ಮಾನುಗುಣವಾಗಿ ಸ್ವಲ್ಪಕಾಲ ತನ್ನ ಅನುಭವದಲ್ಲಿ ಗೃಹಪುತ್ರ ದಾರ ಕ್ಷೇತ್ರಗಳನ್ನು ಭಗವಂತನು ಕರುಣಿಸಿದ್ದಾನೆ ಅಷ್ಟೇ, ಎಂದು ತಾತ್ಪರ್ಯ. ತಾತ್ಪರ್ಯಾರ್ಥತ್ತೋಡೇಕೂಡ ವಾಯಿರುಕ್ಕಿರ-ದಕ್ಕೆ ಕಗೂರು ಸ್ವಾಮಿಗಳ ವ್ಯಾಖ್ಯಾನವು, "ಅತ್ರವ್ಯಾಖ್ಯಾತಂ ವರದಗುರುಭಿಃ-ದಿವ್ಯದಂಪತ್ಯೋಃ ಶೇಷಾಹಂ ತದೀಯತ್ವ ವ್ಯವಸಾಯ ರಸಿಕ ಭಾಗವತಶೇಷತ್ವ ವೃತ್ತಿಪರ್ಯಂತ ನಿರುಪಾಧಿಕ ಶೇಷಭೂತಃ, ನಾನ್ಯಸ್ಯ ಕಸ್ಯಚಿದಪೀತಿ ಪ್ರಣವೇನ ಶೋಧಿತ ಸ್ವರೂಪಸ್ಯ ಔಪಾಧಿಕ ಮನ್ಯಶೇಷತ್ವಂ ಸ್ವಾಭಾವಿಕ ಪರಮ ಪುರುಷಾರ್ಥ ವಿರೋಧೀತಿ ವಿವೇಕ ಸಂಪತ್ತ್ಯಾ ನಾನಾವಿಧಾನಂತ ದುಸ್ತರಾನರ್ಥಕ ರಾನ್ಯಶೇಷತ್ವ ನಿವರ್ತನೋಪಾಯಾಕಾಂಕ್ಷಾಯಾಂ ಸಪರಿಕರಂ ತದುಪಾಯಂ ಸಮರ್ಪಯದಿದನ್ನಮಃ ಪದಮುದೇತಿ, ಅದಾಗಿ ದಿವ್ಯದಂಪತಿಗಳಿಗೆ ನಾನು ಶೇಷಭೂತನು. ಅವರಿಗೆ ದಾಸನೆಂಬ ತೀರ್ಮಾನದಲ್ಲಿ ರಸಿಕರಾದ ಭಾಗವತರಿಗೆ ಕೈಂಕರ್ಯ ಮಾಡುವ ಪರ್ಯಂತ ನಿರುಪಾಧಿಕ ಶೇಷಭೂತನು ಬೇರೆಯವರಿಗಲ್ಲ ಎಂದು ಪ್ರಣವದಿಂದ ತನ್ನ ಸ್ವರೂಪ ಶೋಧನೆಯನ್ನು ಮಾಡಿಕೊಂಡು ಅನ್ಯಶೇಷತ್ವವು ಔಪಾಧಿಕ, ಇದು ಸ್ವಾಭಾವಿಕವಾದ ಪರಮ ಪುರುಷಾರ್ಥಕ್ಕೆ ವಿರೋಧಿ, ಎಂಬ ವಿವೇಕದಿಂದ ಕೂಡಿ ನಾನಾವಿಧವಾದ ಅನರ್ಥವನ್ನುಂಟುಮಾಡುವ ಅನ್ಯ ಶೇಷತ್ವ ನಿವರ್ತನವನ್ನು "ನಮಃ" ಪದವು ತಿಳಿಸುತ್ತದೆ

ಇದು ದ್ವ್ಯಕ್ಷರಸ್ತು ಭವೇನ್ಮೃತ್ಯುಃ ಇತ್ಯಾದಿಗಳಿಂದ ಹೇಳಲ್ಪಟ್ಟಿತು. ಅದಾಗಿ "ಮಮ" ಎಂಬ ಎರಡು ಅಕ್ಷರಗಳು, ಮೃತ್ಯುಃ- ಸಂಸಾರಕ್ಕೆ ಹೇತು ಭೂತವಾಗಿವೆ. "ಮಮ" ಎಂದರೆ ನಾನು ನನ್ನದು ಎಂಬ ಅಹಂಕಾರ ಮಮಕಾರಗಳು. ಇವು ಸಂಸಾರಹೇತು. "ನಮಮ" ಎಂಬ ಮೂರು ಅಕ್ಷರಗಳು ಅಹಂಕಾರ ಮಮಕಾರಗಳನ್ನು ನಿವೃತ್ತಿಸಿ ಶಾಶ್ವತವಾದ ಪರಬ್ರಹ್ಮನನ್ನು ಪ್ರಾಪಿಸಲು ಸಾಧಕಗಳಾಗುತ್ತವೆ. 2 "ಸರ್ವಂ ಜಿಹ್ಮಂ ಮೃತ್ಯುಪದಂ" ಇತ್ಯಾದಿ. ಅಹಂಕಾರಾದಿರೂಪವಾದ ಕುಟಿಲತ್ವವೆಲ್ಲಾ, ಮೃತ್ಯುವಾದ ಸಂಸಾರದಲ್ಲಿರುವುದಕ್ಕೆ ಕಾರಣ ಆರ್ಜವವು- ಸರ್ವವೂ ಭಗವಂತನ ಸ್ವತ್ತು, ನನ್ನದಲ್ಲವೆಂಬ, ಋಜುಬುದ್ಧಿಯು ಬ್ರಹ್ಮಕ್ಕೆ ಸ್ಥಾನ ಬ್ರಹ್ಮಪ್ರಾಪಕವು 3) ಏತಾವಾನ್ ಜ್ಞಾನ ವಿಷಯ :- ಇಷ್ಟೇ ತಿಳಿಯಬೇಕಾದದ್ದು. ಕಿಂಪ್ರಲಾಪಃಕರಿಷ್ಯತಿ- ಇದಕ್ಕೆ ಮೇಲಾದ ವೃಥಾಜಲ್ಪವು ಏನು ಪ್ರಯೋಜನ. ಅದಾಗಿ ನಾನು ಎಂಬ ಭಾವನೆಯನ್ನು ಬಿಟ್ಟು, ನಾನೂ ನನ್ನನ್ನು ಸೇರಿದ ವಸ್ತುಗಳೂ ಎಲ್ಲವೂ ಭಗವಂತನಿಗೆ ಶೇಷಭೂತಗಳು ಎಂಬುದು ನಮಶ್ಶಬ್ದಾರ್ಥ. ಮೇಲೆ ಉದಾಹರಿಸಿದ ಶ್ಲೋಕಗಳಿಗೆಲ್ಲಾ ಈ "ನಮಃ" ಎಂಬ ಪದದ ಅರ್ಥದಲ್ಲೇ ಪ್ರಾಧಾನ್ಯವಾಗಿ ತಾತ್ಪರ್ಯ

---

(1) ಭಾರತ ಶಾಂತಿಪರ್ವ 13-4, 2-3) ಭಾರತ ಶಾಂತಿಪರ್ವ 79-22

ಇಙ್ಙು ನಮಮ ಎನ್ಗಿರದು ಎದ್ದೈ ಎನ್ನಿಲ್ ? ಪ್ರಣವತ್ತಿಲ್ ತೃತೀಯಾಕ್ಷರತ್ತೈ ಅನುಷಂಗಿತ್ತು ನಾನ ನಕ್ಕುರಿಯೇನಲ್ಲೇನೆನ್ರದಾಯಿತ್ತು. ಅಧ್ಯಾಹಾರತ್ತಿರ್ಕಾಟ್ಟಿಲ್ ಅನುಷಂಗ ಮುಚಿತ ಮೆನ್ರುವಿಡಮ ಅನುಷಂಗಾಧಿಕರಣ ಸಿದ್ಧಮ್.

ಇಙ್ಙು "ನಮಮಾಹಂ" ಎನ್ರುವಿಶೇಷಿಕ್ಕೈಯಾಲೇ ಕೀಙ್ ಅನ್ಯಶೇಷತ್ವತ್ತೈಕ್ಕಳಿಕ್ಕಿರ ಮಧ್ಯಮಾಕ್ಷರಂ ಗೋಬಲೀವರ್ದನ್ಯಾಯತ್ತಾಲೇ ಸ್ವವ್ಯತಿರಿಕ್ತ ವಿಷಯಮ್.

ನಮಸಃ ಸ್ವಶೇಷತ್ವ ನಿಷೇಧಾತ್ ಸ್ವಶೇಷಿತ್ವ ನಿಷೇಧೋಪಿ ಸಿದ್ಧ್ಯತೇ.

"ಅಹಂ ನಮಮ" ಎನ್ಗಿರ ವಾಕ್ಯತ್ತಾಲೇ ತನ್ ಸ್ವರೂಪಮುಮ್ ತನಕ್ಕುರಿತ್ತಲ್ಲಾಮೈಯಾಲೇ, ಗುಣಂಗಳ್ ಪ್ರಧಾನಾನುವರ್ತಿಹಳೆನ್ಗಿರಪಡಿಯೇ ಪೇರೊನ್ರೈಯುಮ್ ಪತ್ತತ್ತನುಕ್ಕು ನಿರುಪಾಧಿಕ ಸ್ವಾಮಿತ್ವಮಿಲ್ಲೈಯೆನ್ರು ವಿಶೇಷಿತ್ತನು ಸಂಧಾನಮ್ ಫಲಿತ್ತದು. ಇದು ವಿಶೇಷ ನಿರ್ದೇಶತ್ತುಕ್ಕು ಪ್ರಯೋಜನಮ್. ಇಪ್ಪಡಿಯನುಷಂಗಿಯಾದ ಪಕ್ಷತ್ತಿಲ್ ಪೋದುಮಿಲೇ ತನ್ನೋಡು ತುಮಕ್ಕುಂಡಾಯ್ ತೋತ್ತು ಹಿರವತ್ತೈಯೆಲ್ಲಾಮ್ ಎನ್ನದನ್ರೆನ್ರುತನ್ ತುಮಕ್ಕರುಕ್ಕಿಹಿರಮು.

---

ನಮ್ಮಶಬ್ದವು 1) ಜೀವನು ತನಗೆ ತಾನೇ ಶೇಷನಲ್ಲ 2) ಯಾವುದೂ ಜೀವನಿಗೆ ಶೇಷವಲ್ಲ 3) ಜೀವನು ಯಾವುದಕ್ಕೂ ಶೇಷಿಯಲ್ಲ 4 ಜೀವನಿಗೆ ಸ್ವಾತಂತ್ರ್ಯವೂ ಇಲ್ಲ- ಎಂಬ ಅರ್ಥಗಳನ್ನು ತಿಳಿಸುತ್ತದೆ.

ಇಂಗು "ನಮಮ" ಎನ್ಗಿರದು ಇತ್ಯಾದಿ-"ನಮಮ" ಎಂದು ಯಾವುದನ್ನು ನಿಷೇಧಿಸುತ್ತದೆ ಎಂದರೆ ಪ್ರಣವತ್ತಿಲ್ ಇತ್ಯಾದಿ-ಪ್ರಣವದಲ್ಲಿ "ಮಮ" ಎಂಬ ತೃತೀಯಾಕ್ಷರವನ್ನು ಅನುಷಂಗಿಸ್ತು - ಸೇರಿಸಿಕೊಂಡು "ಅಹಂನಮಮ" ಎಂಬ ವಾಕ್ಯವಾಗಿ, ನಾನು ನನಗೆ ಉರಿಯೇನಲ್ಲೇನ್-ಶೇಷಭೂತನಲ್ಲ, ಎಂದು ಏರ್ಪಡುತ್ತದೆ ಅಧ್ಯಾಹಾರ ಮಾಡಿಕೊಂಡರೇನು, ಎಂದರೆ ಅನುಷಂಗ, ಅಧ್ಯಾಹಾರ ಇವುಗಳ ತಾತ್ಪರ್ಯವನ್ನು ತಿಳಿಸುತ್ತಾರೆ. ಅದಾಗಿ ಅನುಷಂಗವೆಂದರೆ ಪೂರ್ವಾಪರ ವಾಕ್ಯಗಳಲ್ಲಿರುವ ಪದವನ್ನು ಸೇರಿಸಿಕೊಳ್ಳುವುದು. ಅಧ್ಯಾಹಾರವೆಂದರೆ ಪೂರ್ವಾಪರ ವಾಕ್ಯಗಳಲ್ಲಿಲ್ಲದೆ ಹೊರಗಡೆಯಿಂದ ಒಂದು ಪದವನ್ನು ತಂದು ಸೇರಿಸಿಕೊಳ್ಳುವುದು. ಇವುಗಳಲ್ಲಿ ಹೊರಗಡೆಯಿಂದ ಪದವನ್ನು ಸೇರಿಸಿಕೊಳ್ಳುವುದಕ್ಕಿಂತ, ಸಮೀಪಸ್ಥಿತವಾದ ಪದವನ್ನು ಸೇರಿಸಿಕೊಳ್ಳುವುದು ಲಾಘವವಾದ್ದರಿಂದ ಉಚಿತವೆಂಬುದು, ಅನುಷಂಗಾಧಿಕರಣಸಿದ್ಧ. ಪ್ರಣವದಲ್ಲಿ "ಉ"ಕಾರವು ಅಯೋಗಾನ್ಯಯೋಗ ವ್ಯವಚ್ಛೇದಗಳಿಂದ ಅನ್ಯಯೋಗವನ್ನು ಅಂದರೆ ಭಗವಂತನಲ್ಲದ ಅನ್ಯರಿಗೆ ಶೇಷಭೂತನಲ್ಲವೆಂಬುದನ್ನು ಹೇಳಿರುವಾಗ ಪುನಃ "ನಮಮಾಹಂ" ನಾನು ನನಗೆ ಶೇಷನಲ್ಲವೆಂದು ಹೇಳುವುದು ಪುನರುಕ್ತವಲ್ಲವೇ ಎಂದರೆ, ಇಂಗು "ನಮಮಾಹಂ" ಇಲ್ಲಿ ನಾನು ನನಗೆ ಶೇಷನಲ್ಲವೆಂದು ವಿಶೇಷವಾಗಿ ಹೇಳುವುದರಿಂದ, ಪೂರ್ವದಲ್ಲಿ ಅನ್ಯಶೇಷತ್ವವನ್ನು ನಿಷೇಧಿಸುವ ಮಧ್ಯಮಾಕ್ಷರವು ಗೋಬಲೀವರ್ದನ್ಯಾಯದಿಂದ ಸ್ವವ್ಯತಿರಿಕ್ತ ವಿಷಯ-

"ಅಹಂನಮಮ" ಎನ್ಗಿರವಾಕ್ಯತ್ತಾಲೇ ಇತ್ಯಾದಿ "ಅಹಂನಮಮ" ಎಂಬ ವಾಕ್ಯದಿಂದ ತನ್ನಲ್ಲಿ ತನಗೆ ಸ್ವಶೇಷತ್ವ ನಿವೃತ್ತಿಯ ಅನುಸಂಧಾನವು ಫಲಿಸುವುದರಿಂದ ಬೇರೆ ಯಾವುದರಲ್ಲಿಯೂ ತನಗೆ ನಿರುಪಾಧಿಕ ಸ್ವಾಮಿತ್ವವಿಲ್ಲವೆಂಬುದು ಫಲಿಸುತ್ತದೆ. ಅಂದರೆ ತನ್ನ ಸ್ವರೂಪವೂ ತನಗೆ ಸೇರಿದ್ದದಲ್ಲ (ಶೇಷವಲ್ಲ)ವಾದ್ದರಿಂದ ಗುಣಗಳು ಪ್ರಧಾನ (ವಿಶೇಷ್ಯ)ವನ್ನು ಅನುವರ್ತಿಸುತ್ತವೆ ಎಂಬಂತೆ, ನಿರುಪಾಧಿಕಸ್ವಾಮಿತ್ವವೆಂಬ ಗುಣವು ತನ್ನಲ್ಲಿಲ್ಲದೆ ಬೇರೊಂದು ಪದಾರ್ಥಗಳಿಗೂ ನಿರುಪಾಧಿಕಸ್ವಾಮಿತ್ವವು ತನಗಿಲ್ಲವೆಂಬ ವಿಶೇಷವಾದ ಅನುಸಂಧಾನವು ಫಲಿಸುತ್ತದೆ, ಇದು ವಿಶೇಷ ನಿರ್ದೇಶತ್ತುಕ್ಕು ಪ್ರಯೋಜನಮ್-ಪ್ರಣವದಲ್ಲಿ ಅನ್ಯಯೋಗವ್ಯವಚ್ಛೇದದಿಂದ ಸಾಮಾನ್ಯವಾಗಿ ಈ ಅರ್ಥವು ಫಲಿಸಿದ್ದರೂ, 'ಅಹಂನಮಮ' ಎಂಬಲ್ಲಿ ವಿಶೇಷ ನಿರ್ದೇಶಕ್ಕೆ ತನಗೆ ನಿರುಪಾಧಿಕ ಸ್ವಾಮಿತ್ವ ನಿಷೇಧಕ್ಕೆ ಪ್ರಯೋಜನ. ಬೇರೆ ಯಾವ ಪದಾರ್ಥಕ್ಕೂ ತಾನು ನಿರುಪಾಧಿಕಸ್ವಾಮಿಯಲ್ಲವೆಂಬುದರಿಂದ

**ನಮಶ್ಶಬ್ದಾರ್ಥಾನುಸಂಧಾನೇನ ಅಹಂಕಾರಮಮಕಾರ ನಿವೃತ್ತಿಃ.**

**ಇತ್ತಾಲ್ ತನ್ನೈಯುಮ್ ತನ್ನುಡೈಯ ಗುಣವಿಗ್ರಹಾದಿಹಳೈಯುಂಪತ್ತ, ತನ್ ಅಭಿಮಾನ ವಿಶೇಷಙ್ಗಳೈ ಕಳೈಕೈಯಾಲೇ ವಿಪರೀತಾಹಂಕಾರ ಮಮಕಾರಙ್ಗಳಾಹಿರ ಸಂಸಾರಮೂಲಙ್ಗಳ್ ಛೇದಿಕ್ಕಪ್ಪಟ್ಟನ.**

**ಇಙ್ಗು ಕಳೈಕ್ಕಿರವಹಂಕಾರಮ್ ಭ್ರಮರೂಪಮಾನ ಬುದ್ಧಿ ವಿಶೇಷಮ್ ; ಮತ್ತುಮ್ ತತ್ವಙ್ಗಳಿಲ್ ಎಣ್ಣಿನ ಅಹಂಕಾರಮ್ ವಿವೇಕ ಮಾತ್ರತ್ತಾಲ್ ಕಳೈವದೊನ್ರನ್ರು. ಸೂಕ್ಷ್ಮಶರೀರಮ್ ವಿಡುಮಳವುಮ್ ಇವನೈ ತೊತ್ತಿಕ್ಕಿಡಕ್ಕುಮ್.**

**ಇವ್ವಚಿತ್ಸಂಬಂಧಮ್ ಇವನುಕ್ಕುಕ್ಕಳೈಯಾದಿರುಕ್ಕ ಇದಿನ್ ಕಾರ್ಯಙ್ಗಳಾಯ್ ಭ್ರಮರೂಪಙ್ಗಳಾನ ವಹಂಕಾರಾದಿ ವ್ಯಾಧಿಹಳ್ ಮೂಲಮನ್ತ್ರಾದಿಹಳಾಲೇ ಸಿದ್ಧಮಾನ ವಿವೇಕಮಾಹಿರ ಭೇಷಜ ವಿಶೇಷತ್ತಾಲೇ ಕಳೈಹಿನ್ರನ.**

---

ನಿರುಪಾಧಿಕಸ್ವಾಮಿತ್ವವು ಅಂದರೆ ಪತ್ನೀಗೃಹಕ್ಷೇತ್ರಾದಿಗಳಲ್ಲಿ ಕರ್ಮ ಸಂಬಂಧವಾದ ಸ್ವಾಮಿತ್ವವು, ಕರ್ಮ ನಿವೃತ್ತಿ ಪರ್ಯಂತವುಂಟು ಎಂದು ಏರ್ಪಡುತ್ತದೆ.

**ಇಪ್ಪಡಿ ಅನುಷಂಗಿಯಾದ ಪಕ್ಷತ್ತಿಲ್** – ಇತ್ಯಾದಿ. ಹೀಗೆ ಪ್ರಣವ ಘಟಕವಾದ "ಮ" ಎಂಬ ತೃತೀಯಾಕ್ಷರವನ್ನು ಅನುಷಂಗವಾಗಿ ಸೇರಿಸಿಕೊಳ್ಳದೆ "ಕಿಂಚಿತ್" ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು, ಸಾಮಾನ್ಯವಾಗಿ ತನಗೆ ಸಂಬಂಧಪಟ್ಟದಾಗಿ ತೋರುವವುಗಳನ್ನೆಲ್ಲಾ ತನ್ನದಲ್ಲವೆಂದು "ನಮಮ ಕಿಂಚಿತ್ಸ್ಯಾತ್" ಎಂದು ತನ್ನ ಸಂಬಂಧವನ್ನು ನಿವರ್ತಿಸುತ್ತದೆ. **ಇತ್ತಾಲ್** ಇತ್ಯಾದಿ–ಇದರಿಂದ ತನ್ನನ್ನೂ ತನಗೆ ಸೇರಿದ ಗುಣ ವಿಗ್ರಹ ವ್ಯಾಪಾರ (ಆದಿಶಬ್ದಾರ್ಥ)ಗಳನ್ನು ಕುರಿತು ತನ್ನದೆಂಬ ಅಭಿಮಾನ ವಿಶೇಷಗಳನ್ನು ನಿವರ್ತಿಸುವು–ದರಿಂದ, ವಿಪರೀತಾಹಂಕಾರ ಮಮಕಾರಗಳೆಂಬ ಸಂಸಾರದ ಬೇರುಗಳು **ಛೇದಿಕ್ಕಪ್ಪಟ್ಟನ** – ಕೀಳಲ್ಪಡುತ್ತವೆ. ತಾನು ತನ್ನದು ಎಂಬ ದುರಭಿಮಾನಗಳು ನಿವರ್ತಿಸುತ್ತವೆ, ಎಂದು ತಾತ್ಪರ್ಯ.

**ಇಙ್ಗು ಕಳೈಕ್ಕಿರ**ಇತ್ಯಾದಿ- ಇಲ್ಲಿ ನಿವರ್ತಿಸುವ ಅಹಂಕಾರವು ಭ್ರಮರೂಪವಾದ ಬುದ್ಧಿ ವಿಶೇಷ- ನಾನುಎಲ್ಲಕ್ಕೂ ನಿರುಪಾಧಿಕಸ್ವಾಮಿ.ಎಲ್ಲವೂ ನನಗೆ ನಿರುಪಾಧಿಕವಾಗಿ ಶೇಷ ಭೂತಗಳೆಂಬ ವಿಪರೀತಾಹಂಕಾರ ಮಮಕಾರಗಳಿಂದ ಉಂಟಾದ ಬುದ್ಧಿ ಎಂದರ್ಥ. ಪರಮಾತ್ಮ ಶೇಷ ಭೂತನು ನಾನು, ದೇಹೇಂದ್ರಿಯಾದಿ ವಿಲಕ್ಷಣನು ನಾನು, ಪರಮಾತ್ಮನು ನನಗೆ ಶೇಷೀ ಎಂಬ ಅವಿರುದ್ಧಗಳಾದ ಸಾತ್ವಿಕಾಹಂಕಾರ ಮಮಕಾರಗಳು ಉಪಾದೇಯಗಳೆಂದು ತಾತ್ಪರ್ಯ.
**ಮತ್ತುಮ್ ತತ್ವಂಗಳಿಲೆಣ್ಣಿನ** ಇತ್ಯಾದಿ– ಪ್ರಕೃತಿ. ಮಹತ್, ಅಹಂಕಾರಗಳೆಂದು ತತ್ವಗಳಲ್ಲಿ ಸಂಖ್ಯಾತವಾದ ಅಹಂಕಾರ ತತ್ವವು, ವಿವೇಕದಿಂದ ಮಾತ್ರ ನಿವರ್ತಿಸಲ್ಪಡತಕ್ಕದಲ್ಲ ಈ ಅಹಂಕಾರ ತತ್ವವು **ಸೂಕ್ಷ್ಮಶರೀರಂ** ಇತ್ಯಾದಿ–ಸೂಕ್ಷ್ಮಶರೀರವು ಬಿಟ್ಟು ಹೋಗುವಪರ್ಯಂತ ಇವನನ್ನು ಆಶ್ರಯಿಸಿರುತ್ತದೆ.

**ಇವ್ವಚಿತ್ಸಂಬಂಧಮ್** ಇತ್ಯಾದಿ- ಈ ಅಚೇತನವಾದ ಅಹಂಕಾರ ತತ್ವದ ಸಂಬಂಧವು ಕಳೆಯದೆ ಇರುವಾಗ, ಇದಕೆ ಕಾರ್ಯಗಳಾದ ಭ್ರಮರೂಪಗಳಾದ ಅಹಂಕಾರಾದಿವ್ಯಾಧಿಗಳು ಮೂಲ ಮಂತ್ರ(ಅಷ್ಟಾಕ್ಷರ)ಮೊದಲಾದ ಮಂತ್ರಗಳಿಂದ ಉಂಟಾದ ವಿವೇಕವೆಂಬ ಔಷಧ ವಿಶೇಷದಿಂದ ನಿವೃತ್ತವಾಗುತ್ತವೆ. ಶರೀರ ಸಂಬಂಧದಿಂದ ಏರ್ಪಟ್ಟ ರೋಗವು ಶರೀರವು ಅನುವರ್ತಿಸಿದರೂ ಮಣಿ ಮಂತ್ರೌಷಧಗಳಿಂದ ನಿವೃತ್ತವಾಗುವಂತೆ, ಅಷ್ಟಾಕ್ಷರದಲ್ಲಿ ನಮಮ (ಕಿಂಚಿತ್ಸ್ಯಾತ್) ಎಂಬ ವಾಕ್ಯದಿಂದ ಏರ್ಪಟ್ಟ ವಿವೇಕಜ್ಞಾನವೆಂಬ ಸಿದ್ಧೌಷಧಗಳಿಂದ, ಅಹಂಕಾರ ತತ್ವವು ಕಳೆಯದೇ ಇದ್ದರೂ, ಭ್ರಮರೂಪಗಳಾದ ಅಹಂಕಾರ ಮಮಕಾರಗಳು ಕಳೆಯುತ್ತವೆ.

### ನಮಸಾ ಸ್ವಶೇಷಿತ್ವ ನಿವೃತ್ತಿ ಃ.

**ತನಕ್ಕು ಅನ್ಯಶೇಷತ್ವಮ್ ಪ್ರಣವತ್ತಿಲ್ ಮಧ್ಯಮಾಕ್ಷರತ್ತಿಲೇ ಕಳಿಕೈಯಾಲೇ ಅನ್ಯನಾನ ತನ್ನೈಪ್ಪತ್ತ ತನಕ್ಕು ಶೇಷತ್ವಮಿಲ್ಲೈಯೆನ್ರು ಪಿರಿತ್ತುಚ್ಚೊಲ್ಲವೇಣ್ಡಾಮೈಯಾಲ್, ಅನ್ಯಶೇಷಿಯಾಯ್ ತೋತ್ತಿನ ತನಕ್ಕಿಙ್ಗೇದೇನುಮೊನ್ರೈಯುಮ್ ಪತ್ತ ನಿರುಪಾಧಿಕ ಸ್ವಾಮಿತ್ವಂ ಕಳೈಕ್ಕೈಯಿಲೇ ತಾತ್ಪರ್ಯಮಾಹವುಮಾಮ್. ಜೀವನುಕ್ಕು ಶೇಷಮಾನವೈಯೆಲ್ಲಾಮ್ ನಿರುಪಾಧಿಕ ಸರ್ವಶೇಷಿಯಾನ ಸರ್ವೇಶ್ವರರ್ ಸ್ವಾರ್ಥಮಾಹಕ್ಕೊಡುತ್ತವೈಯಿರೇ**

**ಜೀವರ್‌ಹಳುಡೈಯ ನಿತ್ಯಙ್ಗಳಾನ ಗುಣಾದಿಹಳ್ ಈಶ್ವರನುಡೈಯ ನಿತ್ಯೇಚ್ಛಾ ಸಿದ್ಧಙ್ಗಳ್. ಅಶುದ್ಧ ದಶೈಯಿಲುಮ್ ಶುದ್ಧ ದಶೈಯಿಲುಮ್ ಉಂಡಾನ ಅನಿತ್ಯ ವಿಗ್ರಹಾದಿಹಳ್ ಇವರ್‌ಹಳುಡೈಯ ಕರ್ಮಜನ್ಯಮಾಯುಮ್; ಕರ್ಮನಿರಪೇಕ್ಷಮಾಯುಮುಳ್ಳ ಅನಿತ್ಯೇಚ್ಛಾ ಸಿದ್ಧಙ್ಗಳ್.**

### (೨) ನಮಸಾ ಸ್ವಸ್ವಾತಂತ್ರ್ಯ ನಿವೃತ್ತಿ ಃ

**ಪ್ರಣವತ್ತಿಲೇ ಅನ್ಯಶೇಷತ್ವಂ ಕಳಿಕೈಯಾಲೇ, ಪರಮಾತ್ಮಾವಿರ್ಕ್ಕಾಟ್ಟಿಲ್ ಅನ್ಯನಾನ ತನುಕ್ಕು ತಾನ್ ಶೇಷನಲ್ಲನೆನ್ನುಮಿಡಮ್ ಸಿದ್ಧಿಕ್ಕೈಯಾಲುಮ್, ತಾನ್ ವೇರೊರುತ್ತರುಕ್ಕುಮ್ ಶೇಷಮಲ್ಲಾದಾಪ್ಪೋಲೇ**

---

**ತನಕ್ಕನ್ಯ ಶೇಷತ್ವಮ್** ಇತ್ಯಾದಿ– ತನಗೆ ಭಗವದನ್ಯಶೇಷತ್ವವು ಪ್ರಣವದಲ್ಲಿ 'ಉ' ಎಂಬ ಮಧ್ಯಮಾಕ್ಷರದಿಂದ ಕಳೆದು ಹೋಗುವುದರಿಂದ ಅನ್ಯನಾದ ತನ್ನನ್ನು ಕುರಿತು, ತನಗೆ ಶೇಷತ್ವವಿಲ್ಲವೆಂದು ಬಿಡಿಸಿಹೇಳಬೇಕಿಲ್ಲವಾದ್ದರಿಂದ, ಇತರ ವಸ್ತುಗಳಿಗೆ ಶೇಷಿ–ಸ್ವಾಮಿ, ಎಂದು ತೋಚುವ ತನಗೆ ಇಲ್ಲಿ ಯಾವುದಾದರೂ ಒಂದನ್ನು ಕುರಿತು ನಿರುಪಾಧಿಕಸ್ವಾಮಿತ್ವವನ್ನು ನಿವರ್ತಿಸುವುದರಲ್ಲಿಯೂ ತಾತ್ಪರ್ಯವಾಗಬಹುದು. ಆಗ "ನಮಮ ಅನ್ಯಸ್ವಾಮಿತ್ವಮ್" ಎಂದು 'ಅನ್ಯಸ್ವಾಮಿತ್ವ''ವೆಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಹೇಳುವ ಅರ್ಥವಿದು. ಪಿತೃ ಪುತ್ರ ಗೃಹಕ್ಷೇತ್ರ ಮೊದಲಾದ ಕರ್ಮ ಸಂಬಂಧ ಪ್ರಯುಕ್ತವಾದ ಸ್ವಾಮಿತ್ವವು ಇರುವುದರಿಂದ ನಿರುಪಾಧಿಕಸಾಮಿತ್ವವನ್ನು ನಿವರ್ತಿಸುವುದರಲ್ಲಿ ತಾತ್ಪರ್ಯ. ಇದನ್ನು ಸಹೇತುಕವಾಗಿ **"ಜೀವನುಕ್ಕು ಶೇಷಮಾನವೈಯೆಲ್ಲಾಮ್"** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಜೀವನಿಗೆ ಶೇಷಭೂತಗಳಾದ ಗೃಹಕ್ಷೇತ್ರಾರಾಮಾದಿಗಳೆಲ್ಲಾ ನಿರುಪಾಧಿಕ ಸರ್ವಶೇಷಿಯಾದ ಸರ್ವೇಶ್ವರನು **ಸ್ವಾರ್ಥಮಾಹ** ತನ್ನ ಲೀಲಾ ಭೋಗರಸಾರ್ಥವಾಗಿ ಕೊಟ್ಟಿರುವುವುಗಳು.

**ಜೀವರ್‌ಹಳುಡೈಯ** ಇತ್ಯಾದಿ ಜೀವಾತ್ಮರುಗಳ ಅಣುತ್ವ, ಶೇಷತ್ವರೂಪ ಸ್ವರೂಪ ನಿರೂಪಕ ಧರ್ಮವೂ, ಬದ್ಧ ದಶೆಯಲ್ಲಿ ಮರೆಯಾಗಿರುವ ಅಪಹತ ಪಾಪ್ಮತ್ವಾದಿಗಳೂ, ಆದಿಶಬ್ದದಿಂದ ನಿತ್ಯರ ವಿಗ್ರಹಾದಿಗಳೂ, ಸರ್ವಜೀವರ ಧರ್ಮಭೂತ ಜ್ಞಾನಾದಿಗಳೂ ಈಶ್ವರನ ನಿತ್ಯೇಚ್ಛಾಸಿದ್ಧಗಳು. ಅಶುದ್ಧ ದಶೆಯಲ್ಲೂ (ಬದ್ಧದಶೆ, ಶುದ್ಧದಶೆಯಲ್ಲೂ (ಮುಕ್ತಾವಸ್ಥೆ) ಉಂಟಾದ ಅನಿತ್ಯ ವಿಗ್ರಹ ಆದಿ ಶಬ್ದದಿಂದ ಉಭಯದಶೆಯಲ್ಲೂ ಮಾಡುವ ಕೈಂಕರ್ಯಾದಿಗಳು ಬದ್ಧದಶೆಯಲ್ಲಿ ಇವರುಗಳ ಕರ್ಮ ಜನ್ಯವಾಗಿಯೂ ಮುಕ್ತ ದಶೆಯಲ್ಲಿ ಕರ್ಮ ನಿರಪೇಕ್ಷವಾಗಿಯೂ ಈಶ್ವರನ ಅನಿತ್ಯೇಚ್ಛೆಯಿಂದ ಸಿದ್ಧವಾದವು–ಉತ್ಪನ್ನವಾದವು ಎಂದರ್ಥ.

### ನಮಸ್ಸಿನಿಂದ ಸ್ವ ಸ್ವಾತಂತ್ರ್ಯ ನಿವೃತ್ತಿ.

ಅನಂತರ ನಮಶ್ಶಬ್ದಕ್ಕೆ ಪ್ರಣವದಲ್ಲಿ ಹೇಳದೆ ಇರುವ ಸ್ವಸ್ವಾತಂತ್ರ್ಯ ನಿವೃತ್ತಿರೂಪ ಯೋಜನಾಂತರವನ್ನು **ಪ್ರಣವತ್ತಿಲೇ ಅನ್ಯಶೇಷತ್ವಮ್** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಪ್ರಣವದಲ್ಲಿ ಅನ್ಯಶೇಷತ್ವವು ನಿವರ್ತಿಸಲ್ಪಡುವುದರಿಂದ, ಪರಮಾತ್ಮನಿಗಿಂತ ಬೇರೆಯಾದ ತನಗೆ ತಾನು ಶೇಷನಲ್ಲವೆಂಬುದು ಸಿದ್ಧಿಸುವುದರಿಂದಲೂ

ವೇರೊನ್ರುಮ್ ತನ್ನೈಪ್ಪತ್ತ ನಿರುಪಾಧಿಕ ಶೇಷಮನ್ರೆನ್ನುಮಿಡಮುಮ್ ಇಙ್ಗೇವರುಹೈಯಾಲುಮ್, ಪ್ರಣವತ್ತಿಲ್ ತೋತ್ತಾದ ಸ್ವಸ್ವಾತಂತ್ರ್ಯನಿವೃತ್ತಿಯಿಲೇ ನಮಸ್ಸುಕ್ಕು ತಾತ್ಪರ್ಯಮಾಹವುಮಾಮ್. ಅಪ್ಪೋದು ಪೂರ್ವ ಪ್ರಯುಕ್ತ ಮಕಾರತ್ತೈ ಅನುಷಙ್ಗತ್ತು "ನಾನೆನಕ್ಕು ನಿರ್ವಾಹಕನಲ್ಲೇನೆನ್ರು" ಶೊಲ್ಲಿತ್ತಾಯತ್ತು ಸ್ವಾತಂತ್ರ್ಯಪದ ಮಾತ್ರತ್ತೈ ಅಧ್ಯಾಹರಿತ್ತು ನಮಮ ಸ್ವಾತಂತ್ರ್ಯಮ್ ಎನ್ರದಾಹವುಮಾಮ್.

## ಸ್ವಸ್ವಾತಂತ್ರ್ಯ ನಿವೃತ್ತೇಃ ತಾತ್ಪರ್ಯ ನಿರೂಪಣಮ್.

ಇಚ್ಚೇತನನುಕ್ಕು ಸ್ವಸ್ವಾತಂತ್ರ್ಯ ನಿವೃತ್ತಿಯಾವುದು ? ನಿರಪೇಕ್ಷಕರ್ತೃತ್ವಾನರ್ಹತೈ ಇದುಕ್ಕಡಿ, ಬದ್ಧಾವಸ್ಥೈಯಿಲುಮ್, ಮುಕ್ತಾವಸ್ಥೈಯಿಲುಮ್, ಬುದ್ಧಿ ಪೂರ್ವ ಪ್ರವೃತ್ತಿಪಣ್ಣಾ ನಿನ್ರಾಲುಮ್ ಈಶ್ವರನ್ ಕೊಡುತ್ತಕರಣಾದಿಹಳೈಕ್ಕೊಂಡು ಅವನ್ ಪ್ರೇರಕನುಮಾಯ್ ಸಹಕಾರಿಯುಮಾಹ ಪ್ರವರ್ತ್ತಿಕ್ಕವೇಣ್ಡುಹೈ.

---

ಬೇರೆ ಯಾವುದೂ ತನಗೆ ನಿರುಪಾಧಿಕ ಶೇಷವಲ್ಲವೆಂಬುದೂ ಇಲ್ಲಿ ಏರ್ಪಡುವುದರಿಂದಲೂ ಪ್ರಣವದಲ್ಲಿ ತಿಳಿಯದ ಸ್ವಸ್ವಾತಂತ್ರ್ಯ ನಿವೃತ್ತಿಯಲ್ಲಿ ನಮಸ್ಸಿಗೆ ತಾತ್ಪರ್ಯವಾಗಬಹುದು. ಅಪ್ಪೋದು ಇತ್ಯಾದಿ– ಆಗ ಪೂರ್ವ ಪ್ರಯುಕ್ತ ಮಕಾರವನ್ನು ಅನುಷಂಗಿಸಿ ನಾನು ನನಗೆ ನಿರ್ವಾಹಕನಲ್ಲವೆಂದು ಹೇಳಿದಂತಾಯಿತು. "ಸ್ವಾತಂತ್ರ್ಯಪದಮಾತ್ರತ್ತೈ ಇತ್ಯಾದಿ "ಸ್ವಾತಂತ್ರ್ಯ" ಪದವನ್ನು ಅಧ್ಯಾಹಾರ ಮಾಡಿ "ನಮಮ ಸ್ವಾತಂತ್ರ್ಯಮ್" ಎಂದು ಹೇಳಿದಂತಾಗಬಹುದು

ಇಚ್ಚೇತನನುಕ್ಕು ಇತ್ಯಾದಿ– ಈ ಚೇತನನಿಗೆ ಸ್ವಸ್ವಾತಂತ್ರ್ಯ ನಿವೃತ್ತಿ ಎಂಬುದು ತಾನು ಮಾಡುವ ಲೌಕಿಕ ವೈದಿಕ ವ್ಯಾಪಾರಗಳಲ್ಲಿ ಸ್ವಾಧೀನವಾದ ಕರ್ತೃತ್ವವಿಲ್ಲದಿರುವುದು. ಇದುಕ್ಕಡಿ ಇದಕ್ಕೆ ಕಾರಣ ಬದ್ಧಾವಸ್ಥೆಯಲ್ಲಿಯೂ, ಮುಕ್ತಾವಸ್ಥೆಯಲ್ಲಿಯೂ, ಸ್ವಬುದ್ಧಿ ಪೂರ್ವಕವಾದ ಪ್ರವೃತ್ತಿಯನ್ನು ಮಾಡಿದರೂ ಈಶ್ವರನು ಕೊಟ್ಟ ಕರಣಾದಿಹಳ್ - ಶರೀರೇಂದ್ರಿಯಗಳನ್ನು ಕೊಂಡು, ಅವನು ಪ್ರೇರಕನಾಗಿದ್ದೂ ಸಹಕಾರಿಯಾಗಿಯೂ ಇದ್ದು ಪ್ರವರ್ತಿಸಬೇಕಾಗಿರುವುದು.

ಇಲ್ಲಿಯ ಭಾವವೇನೆಂದರೆ :– ಕೇವಲ ಸ್ವಸ್ವಾತಂತ್ರ್ಯ ನಿವೃತ್ತಿಯೆಂಬುದು ಸ್ವರಕ್ಷಣಾರ್ಥ ಸ್ವವ್ಯಾಪಾರಾನರ್ಹತೆ ಎಂದು ಅರ್ಥ ಮಾಡುತ್ತಾರೆ ಹಾಗಾದರೆ ಭೋಜನಾದಿ ವ್ಯಾಪಾರಗಳನ್ನು ಮಾಡಲು ಜೀವನಿಗೆ ಅನರ್ಹತೆಯೇ ಎಂದರೆ, ದೃಷ್ಟಾರ್ಥವಲ್ಲದೇ ಅದೃಷ್ಟಾರ್ಥವಾಗಿ ವ್ಯಾಪಾರವನ್ನು ಮಾಡಲು ಅನರ್ಹತೆಯೆಂಬುದು ಇಲ್ಲಿ ವಿವಕ್ಷಿತವೆಂದು ಹೇಳಿ, ಸ್ವರ್ಗಾದಿಗಳನ್ನು ಸಾಧಿಸುವಂತೆ, ಮೋಕ್ಷಸಾಧನವೂ ಸ್ವವ್ಯಾಪಾರ ಸಾಧ್ಯವಾಗುವುದಿಲ್ಲವೆಂಬುದೇ ಸ್ವರೂಪ ಜ್ಞಾನಫಲವೆಂದು ಹೇಳುತ್ತಾರೆ. ಇದು ಅಲೇಖಕ ಮತಸ್ಥರು ಹೇಳುವಂತೆ ಆಗಿ ಲೋಕಾಯುತರ ಪಕ್ಷಕ್ಕೆ ಇಳಿಯುವಂತೆ ಆಗುತ್ತದೆ. ಮೇಲೂ ಅದೃಷ್ಟವಾದ ಪುರುಷಾರ್ಥಕ್ಕೆ ಕಾರಣವಾದ ಸ್ವರಕ್ಷಣ ವ್ಯಾಪಾರ ಸಾಮಾನ್ಯವನ್ನು ಬಿಟ್ಟುಬಿಟ್ಟರೆ ಪರಮಶೇಷಿಯಾದ ಭಗವಂತನಲ್ಲಿ ನಿತ್ಯ ಕೈಂಕರ್ಯ ಸ್ವರೂಪ ಪರಮ ಪುರುಷಾರ್ಥ ಲಾಭವು ಹೇಗೆ ಉಂಟಾಗುತ್ತದೆ ಎಂದರೆ, ಭಗವಂತನು ದಾಸಭೂತರ ಹಿತವನ್ನು ಕೋರಿ ತಾನು ನಿರುಪಾಧಿಕಸ್ವಾಮಿಯಾಗಿರುವುದರಿಂದ, ಕೈಂಕರ್ಯವನ್ನು ಮಾಡುವಂತೆ ಸಂಕಲ್ಪಿಸುತ್ತಾನೆ ಅವನು ಸರ್ವಜ್ಞನು, ಪರಮಕಾರುಣಿಕನು, ಸ್ವರ್ಗಾದಿ ಫಲಾಭಾಸಗಳನ್ನು ಪರಿಹರಿಸಿ ನಿರತಿಶಯ ಸ್ವರೂಪೋಚಿತ ಪರಮ ಪುರುಷಾರ್ಥವನ್ನು ತಾನೇ ಕೊಡುತ್ತಾನೆಂದು ಹೇಳುತ್ತಾರೆ. ಇದರಿಂದ ಜೀವನು ಅಪೇಕ್ಷಿಸದದೆ ಕೊಟ್ಟ ಪುರುಷಾರ್ಥವು, ಅಪುರುಷಾರ್ಥವಾಗುವುದಿಲ್ಲವೇ ಎಂದರೆ, "ಸಂಸಾರ ತಂತ್ರವಾಹಿತ್ವಾತ್ ರಕ್ಷಾಪೇಕ್ಷಾಂ ಪ್ರತೀಕ್ಷತೇ" ಎಂಬ ವಚನದಂತೆ

**ಈಶ್ವರನುಕ್ಕು ಪ್ರಥಮಾಕ್ಷರತ್ತಿಲ್ ಪ್ರಕೃತಿಯಿಲೇ ಶೊನ್ನ ರಕ್ಷಕತ್ತ್ವಮ್ ಉಪಾಯಾಧಿಕಾರಿಹಳ್ ಪಕ್ಕಲ್ ಏದೇನುಮೊರು ಉಪಾಯತ್ತಿಲೇ ಪ್ರೇರಿಪ್ಪಿತ್ತುಕ್ಕೊಂಡೇ ವರಕ್ಕಡವದು.**

**ಜೀವರ್ ಸ್ವರಕ್ಷಣಾರ್ಥಮಾನ ಉಪಾಯಾನುಷ್ಠಾನತ್ತಿಲುಮ್ ಪರಾಧೀನ ಕರ್ತ್ತಾವಾಹೈಯಾಲುಮ್ ಇವ್ವುಪಾಯ ಮನುಷ್ಠಿತ್ತಾಲುಮ್ ಫಲ ಪ್ರಧಾನರೂಪ ರಕ್ಷೈಪಣ್ಣುವಾನ್ ಪ್ರಸನ್ನನಾನ ಸರ್ವೇಶ್ವರನಾಹೈಯಾಲುಮ್, ಪ್ರಥಮಾಕ್ಷರತ್ತಿಲ್ ಪ್ರಕೃತಿಯಾಲೇ ಶೊಲ್ಲಪ್ಪಟ್ಟ ಅವನುಡೈಯ ಸರ್ವರಕ್ಷಕತ್ವಮೇ ಇನ್ನ ನುಶ್ಶಬ್ದತ್ತಾಲುಮ್ ದೃಢೀಕೃತಮ್.**

---

ಅವನಾಗಿಯೇ ರಕ್ಷಿಸಲು ಮುಂದೆ ಬರುವಾಗ ಅದನ್ನು ತಿರಸ್ಕರಿಸದೆ ಅಂಗೀಕರಿಸುವುದು ಸ್ವರೂಪೋಚಿತವೆಂದೂ ಹೇಳುತ್ತಾರೆ. ರಕ್ಷಾಪೇಕ್ಷೆಯೂ ಕೂಡ ಸ್ವರಕ್ಷಣಾರ್ಥ ವ್ಯಾಪಾರವಲ್ಲವೇ ಎಂದು ಕೇಳಿದರೆ ಶ್ರುತ್ಯರ್ಥಾಪತ್ತಿಯಿಂದ ಇಷ್ಟು ಮಾತ್ರ ಅಂಗೀಕರಿಸುತ್ತೇವೆ ಎನ್ನುತ್ತಾರೆ. ಅದೇ ರೀತಿಯಲ್ಲಿ ಸಿದ್ಧೋಪಾಯನಾದ ಭಗವಂತನ ವಶೀಕರಣಾರ್ಥವಾಗಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಭಕ್ತಿ ಪ್ರಪತ್ತಿರೂಪ ಉಪಾಯಗಳನ್ನು ಅಂಗೀಕರಿಸುವುದರಿಂದ ಏನು ಬಾಧಕವೆಂದರೆ ಬದಿಲು ಹೇಳಲು ದಾರಿಯಿಲ್ಲ. ಪುನಃ "ಮಮ ಯಾಃಕ್ರಿಯಾಃ ,ತಾಸ್ಸರ್ವಾಭಗವತ ಏವ" ಎಂಬ ನಮಃ ಪದ ನಿರುಕ್ತಿ, ಶ್ರುತಿಯು ನಾವು ಮಾಡುವ ಕ್ರಿಯೆಗಳೆಲ್ಲಾ ಭಗವಂತನೇ ಮಾಡುತ್ತಾನೆ ಎಂದು ಹೇಳಿಲ್ಲವೇ ಎಂದು ಚೋದ್ಯ. ಇದಕ್ಕೆ ಬದಿಲು–ಸ್ವಬುದ್ಧಿಪೂರ್ವಕವಾಗಿ ಮಾಡುವ ಸ್ವರಕ್ಷಣಾರ್ಥ ವ್ಯಾಪಾರಗಳೆಲ್ಲಾ, ಪ್ರಧಾನಫಲಿಯಾದ ಭಗವಂತನಿಗೆ ಶೇಷವಾದ್ದರಿಂದ, ಅವನ ಸಂಕಲ್ಪದಿಂದ ನೆರವೇರುವುದರಿಂದ ಆ ಕ್ರಿಯಗಳ ನಿರುಪಾಧಿಕ ಸ್ವರೂಪವು ಅವನಿಗೆ ಸೇರಿದ್ದುದು ಎಂದು ತಾತ್ಪರ್ಯವಷ್ಟೆ. ಇಲ್ಲದಿದ್ದರೆ "ಮಮ ಯಾಃ ಕ್ರಿಯಾಃ" "ನಾನು ಮಾಡುವ ಕ್ರಿಯೆಗಳು" ಎಂದು ಶ್ರುತಿಯು ಜೀವಾತ್ಮ ಕರ್ತೃಕವಾಗಿ ಹೇಳಿರುವುದೇ ವಿರೋಧವಾಗುತ್ತದೆ. ಆದ್ದರಿಂದ ಸರ್ವೇಶ್ವರನ ಸಂಕಲ್ಪ ನಿರಪೇಕ್ಷವಾದ ಕರ್ತತ್ವಾನರ್ಹತೆಯು, ನಮಃ ಪದದಿಂದ ಏರ್ಪಟ್ಟು ಜೀವನು, ನಿರುಪಾಧಿಕ ಸ್ವತಂತ್ರನಲ್ಲವೆಂಬುದನ್ನು ತಿಳಿಸುತ್ತದೆ.

ಹೀಗೆ ಜೀವನಿಗೆ ಸ್ವತಂತ್ರವಾಗಿ ಒಂದು ವ್ಯಾಪಾರವನ್ನು ಮಾಡಲು ಅರ್ಹತೆಯಿಲ್ಲವೆಂದರೆ ಸಾಪರಾಧಿಗಳಾದ ಇವರುಗಳ ವಿಷಯದಲ್ಲಿ ಈಶ್ವರನು ಮಾಡತಕ್ಕಂಥ ಪ್ರಣವ ಪ್ರಥಮಾಕ್ಷರ ನಿರೂಪಿತವಾದ ರಕ್ಷಕತ್ವವು ಜೀವಕರ್ತೃಕ ಉಪಾಯನಿರಪೇಕ್ಷವಾಗಿ ಪ್ರಸಂಗಿಸುವುದಿಲ್ಲವೇ ಎಂದರೆ ಇಲ್ಲವೆಂದು, **ಈಶ್ವರುನಕ್ಕು** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಶ್ರಿಯಃಪತಿಯಾದ ಈಶ್ವರನಿಗೆ ಪ್ರಥಮಾಕ್ಷರದಲ್ಲಿ ಪ್ರಕೃತಿಯಲ್ಲಿ ಹೇಳಲ್ಪಟ್ಟ ಸರ್ವರಕ್ಷಕತ್ವವು '**ಉಪಾಯಾಧಿಕಾರಿಹಳ್ ಪಕ್ಕಲ್**– ಐಹಿಕ ಪುರುಷಾರ್ಥಾಪೇಕ್ಷೆಯಿರುವ ಹಾಗೆಯೇ ಅಮುಷ್ಮಿಕ ಸ್ವರ್ಗಮೋಕ್ಷಾರ್ಥಾಪೇಕ್ಷೆಯಿರುವ ಅಧಿಕಾರಿಗಳ ವಿಷಯದಲ್ಲಿ ಅದಕ್ಕೆ ತಕ್ಕಂತಹ ಯಾವುದಾದರೊಂದು ಉಪಾಯದಲ್ಲಿ ಪ್ರೇರೇಪಿಸಿಕೊಂಡೇ, **ವರಕ್ಕಡವದು**– ಉಂಟಾಗುತ್ತದೆ. ಜೀವನು ಪರತಂತ್ರನಾದರೂ ಭಗವಂತನೇ ಕರ್ಮ ಜ್ಞಾನಾಂಗಕ ಭಕ್ತಿ ಅಥವಾ ಪ್ರಪತ್ತಿ ರೂಪ ಉಪಾಯಗಳಲ್ಲಿ ಅವನವನ ಯೋಗ್ಯತೆಗೆ ತಕ್ಕಂತೆ ಪ್ರವರ್ತಿಸಿ ರಕ್ಷಿಸುತ್ತಾನಾದ್ದರಿಂದ ನಿರಪೇಕ್ಷ ರಕ್ಷಕತ್ವವು ಪ್ರಸಂಗಿಸುವುದಿಲ್ಲ.

**ಜೀವನ್** ಇತ್ಯಾದಿ–ಜೀವನು ಸ್ವರಕ್ಷಣಾರ್ಥವಾಗಿ ಮಾಡುವ ಉಪಾಯದಲ್ಲಿಯೂ, ಪರಾಧೀನಕರ್ತಾವಾದ್ದರಿಂದಲೂ, ಈ ಉಪಾಯವನ್ನು ಅನುಷ್ಠಿಸಿದರೂ ಫಲಪ್ರದಾನರೂಪ ರಕ್ಷಣವನ್ನು ಮಾಡುವವನು ಪ್ರಸನ್ನನಾದ ಸರ್ವೇಶ್ವರನೇಯಾದ್ದರಿಂದಲೂ ಪ್ರಥಮಾಕ್ಷರದಲ್ಲಿ ಪ್ರಕೃತಿಯಿಂದ ಹೇಳಲ್ಪಟ್ಟ ಅವನ ಸರ್ವರಕ್ಷಕತ್ವವೇ, ಸ್ವಾತಂತ್ರ್ಯ ನಿವೃತ್ತಿ ಬೋಧಕ ನಮಶ್ಶಬ್ದದಿಂದಲೂ ದೃಢೀಕೃತವು. ಜೀವನಿಗೆ ಯಾವುದನ್ನು ಕುರಿತೂ ನಿರುಪಾಧಿಕ ಶೇಷಿತ್ವವಿಲ್ಲವೆಂದು ಹೇಳಿದ ಪೂರ್ವ ಯೋಜನೆಯಿಂದ ಪ್ರಥಮಾಕ್ಷರದಲ್ಲಿ ಲುಪ್ತ, ಚತುರ್ಥಿಯಲ್ಲಿ ಹೇಳಿದ ಈಶ್ವರನ **ನಿರುಪಾಧಿಕ ಸರ್ವಶೇಷಿತ್ವವೂ,**

ಈಶ್ವರಸ್ಯ ನಿರುಪಾಧಿಕ ಶೇಷಿತ್ವಮಪಿ ಸಮುಚ್ಚಯೇನ ದೃಢೀಕೃತ ಮಿತ್ಯಾಹ.

ಇಪ್ಪಡಿ ಪ್ರಥಮ ಚತುರ್ಥಿಯಾಲೇ ಪ್ರತಿಪನ್ನಮಾನ ವೀಶ್ವರನುಡೈಯ ನಿರುಪಾಧಿಕ ಸರ್ವಶೇಷಿತ್ವಮುಮ್, ಜೀವನುಕ್ಕು ಏದೇನು ಮೊನ್ರೈಯುಮ್ ಪತ್ತ ನಿರುಪಾಧಿಕ ಶೇಷಿತ್ವಮುಮ್ ಕರ್ತೃತ್ವಮುನ್‌ಬು ಯೋಜನೈಯಾಲೇ ದೃಢೀಕೃತಮಾಯಿತ್ತು.

ಇಜ್ಜೀವನುಕ್ಕುಳ್ಳ ಸ್ವಾತಂತ್ರ್ಯಮುಮ್ "ಪರಾತ್ತು ತಚ್ಛ್ರುತೇಃ" ಎನ್ಗಿರನ್ಯಾಯತ್ತಾಲೇ ನಿರುಪಾಧಿಕ ಸ್ವತಂತ್ರನಾಯ್ ಸ್ವಾರ್ಥ ಪ್ರವೃತ್ತನಾನ ಪರಮಾತ್ಮಾ ವಡಿಯಾಹ ವಂದದು.

ಅಪ್ಪಡಿಯೇ ವಸ್ತ್ವನ್ತರಙ್ಗಳೈಪ್ಪತ್ತ ಯಿಜ್ಜೀವನುಕ್ಕು ಶೇಷಿತ್ವಮುಮ್ ನಿರುಪಾಧಿಕ ಶೇಷಿಯಾನ ಅವನ್ ಕೊಡುಕ್ಕವನ್ದದು.

ಅಥ ಪ್ರಣವ ನಮಸೋಃ ಸಾರಭೂತಾರ್ಥೌ ಕಾರಿಕಾಭ್ಯಾಂ ಸಂಗೃಹ್ಣಾತಿ.

ಶ್ರೀಮಾನ್ ಸ್ವತಂತ್ರ ಸ್ವಾಮೀಶಃ ಸರ್ವತ್ರಾನ್ಯಾನಪೇಕ್ಷಯಾ ।
ನಿರಪೇಕ್ಷ ಸ್ವತಂತ್ರತ್ವಂ ಸ್ವಾಮ್ಯಂಚಾನ್ಯಸ್ಯ ನ ಕ್ವಚಿತ್ ॥70॥

---

ಇಪ್ಪಡಿ ಪ್ರಥಮ ಚತುರ್ಥಿಯಾಲೇ ಎಂದಾರಂಭಿಸಿ ಧೃಢೀಕೃತವೆಂದು ಹೇಳುತ್ತಾರೆ. ಆದಾಗಿ ಹೀಗೆ "ಆಯ' ಎಂಬಲ್ಲಿಯ ಚತುರ್ಥಿ ವಿಭಕ್ತಿಯಿಂದ ಪ್ರತಿಪನ್ನವಾದ ಈಶ್ವರನ ನಿರುಪಾಧಿಕ ಸರ್ವಶೇಷಿತ್ವವೂ ಜೀವನಿಗೆ ಯಾವ ವಸ್ತುವನ್ನು ಕುರಿತೂ ನಿರುಪಾಧಿಕ ಶೇಷಿತ್ವವನ್ನು ನಿವರ್ತಿಸಿದ ಪೂರ್ವಯೋಜನೆಯಿಂದ ದೃಢೀಕೃತವು.

ಇಜ್ಜೀವನಕ್ಕುಳ್ಳ ಇತ್ಯಾದಿ- ಈ ಜೀವನಿಗೆ ಏರ್ಪಟ್ಟ "ಕರ್ತಾಶಾಸ್ತ್ರಾರ್ಥವತ್ವಾತ್" - ಎಂಬ ಸೂತ್ರದಲ್ಲಿ ನಿರೂಪಿಸಿದ ಸ್ವತಂತ್ರ ಕರ್ತೃತ್ವವು ಶ್ರುತಿಯು ಹೇಳಿರುವುದರಿಂದ "ಪರಾತ್ತುತಚ್ಛ್ರುತೇಃ" ಬ್ರಹ್ಮಸೂತ್ರ 2-3-6 ಪರಾತ್-ಪರಮಾತ್ಮಾಧೀನವಾದದ್ದು, ಎಂಬ ನ್ಯಾಯದಿಂದ ನಿರುಪಾಧಿಕ ಸ್ವತಂತ್ರನಾಗಿ ಸ್ವಾರ್ಥಪ್ರವೃತ್ತನಾದ ಪರಮಾತ್ಮಾಧೀನವಾಗಿ ಬಂದಿದೆ.

ಅಪ್ಪಡಿಯೇ ವಸ್ತ್ವಂತರಂಗಳೈಪ್ಪಟ್ರ - ಹಾಗೆಯೇ ಇತರ ಪದಾರ್ಥಗಳನ್ನು ಕುರಿತು ಈ ಜೀವನಿಗೆ ಶೇಷಿತ್ವವೂ, ನಿರುಪಾಧಿಕಸ್ವಾಮಿಯೂ-ಕಾರಣವಿಲ್ಲದೆ ಸರ್ವಶೇಷಿಯಾದ ಭಗವಂತನು ಸ್ವಾರ್ಥಮಾಹ-ತನ್ನ ಪ್ರಯೋಜನಕ್ಕಾಗಿ ಕೊಡಲು ಉಂಟಾಗಿದೆ. ಅಂದರೆ ಜೀವನಿಗೆ ಕರ್ತೃತ್ವ ರೂಪ ಸ್ವಾತಂತ್ರವೂ, ಇತರ ವಸ್ತುಗಳನ್ನು ಕುರಿತು ಉಂಟಾದ ಶೇಷಿತ್ವವೂ ಈಶ್ವರದತ್ತಗಳು, ಎಂದು ತಾತ್ಪರ್ಯ. ಇದಕ್ಕೆ ಲೋಕ ರೀತಿಯಾಗಿ ದೃಷ್ಟಾಂತವನ್ನು ಹೇಳಬಹುದಾದರೆ, ಒಬ್ಬ ಗುಮಾಸ್ತೆಯು ಆಫೀಸಿನಲ್ಲಿ ಮೇಲ್ಪಟ್ಟ ಅಧಿಕಾರಿಗೆ ಅಧೀನವಾಗಿ ಕೆಲಸ ಮಾಡುವಾಗ, ಆ ಅಧಿಕಾರಿಯು ಏರ್ಪಡಿಸಿದ ಕೊಠಡಿಯಲ್ಲಿ ಅವನು ಏರ್ಪಡಿಸಿದ ಆಸನದಲ್ಲಿ ಕುಳಿತುಕೊಂಡು, ಅವನು ಒದಗಿಸಿದ ಪೇಪರ್, ಪೆನ್ನುಗಳನ್ನು ಬಳಸಿ, ತನ್ನ ಬುದ್ಧಿಶಕ್ತಿಯನ್ನು ಉಪಯೋಗಿಸಿ, ಅವನು ಹೇಳುವ ರೀತಿಯಲ್ಲಿ ಕೆಲಸಮಾಡಿ, ಮಾಸಾಶನವನ್ನು ಪಡೆಯುತ್ತಾನೆ. ಈ ಕೆಲಸದಿಂದ ಏರ್ಪಟ್ಟ ಪ್ರಧಾನ ಫಲವು ಯಜಮಾನನಿಗೆ ಸೇರಿದುದು. ಅವಾಂತರ ಫಲವಾದ ಮಾಸಾಶನವು ಇವನದು. ನಿರುಪಾಧಿಕ ಶೇಷಿತ್ವ-ಕರ್ತೃತ್ವಗಳು ಯಜಮಾನನದು. ಇವನದು ಸೋಪಾಧಿಕ-ಅವನಿಗೆ ಅಧೀನವಾದ ಶೇಷಿತ್ವ-ಕರ್ತೃತ್ವ, ಎಂದು ತಾತ್ಪರ್ಯ.

ಮೇಲೆ ಹೇಳಿದ ಅರ್ಥಗಳನ್ನು ಆಚಾರ್ಯರು ಎರಡು ಕಾರಿಕೆಗಳಿಂದ ಸಂಗ್ರಹಿಸುತ್ತಾರೆ. ಶ್ರೀಮಾನ್ ಸ್ವತಂತ್ರಸ್ವಾಮೀಶ ಇತ್ಯಾದಿ-ಇಲ್ಲಿ ಪೂರ್ವಾರ್ಧವು ಪ್ರಣವ ವಿವರಣ. ಉತ್ತರಾರ್ಧವು ನಮಃ ಪದ ವಿವರಣವು.

**ಕಾರಸ್ಯ ನಮಸಶ್ಚೀವಮೌ ಸಾರೌ ದೇಶಿಕದರ್ಶಿತೌ ।**
**ಅನನ್ಯ ಶರಣತ್ವಾದೇ ರಧಿಕಾರಸ್ಯ ಸಿದ್ಧಯೇ ॥71॥**

**ಲೋಕತ್ತಿಲ್ ಸ್ವಾಮಿತ್ವ ಸ್ವಾತಂತ್ರ್ಯಙ್ಗಳ್ ಅಭಿಮತಙ್ಗಳಾಯುಮ್, ದಾಸತ್ವ ಪಾರತಂತ್ರ್ಯಙ್ಗಳ್ ಅನಭಿಮತಙ್ಗಳಾಯುಮ್, ತೋತ್ತುಹಿರದು ಕರ್ಮೋಪಾಧಿಕಮಾಹವತ್ತನ್ನೈ. ಇಙ್ಗು ಪ್ರಣವ ನಮಸ್ಸುಕ್ಕಳಿಲೇ ಶೊನ್ನ ದಾಸತ್ವಮುಮ್, ಪಾರತನ್ತ್ರ್ಯಮುಮ್ (1) ದಾಸಭೂತಾ ಸ್ಸ್ವತಸ್ಸರ್ವೇ ಇತ್ಯಾದಿ ಹಳಿರ್‌ಪಡಿಯೇ ಸ್ವರೂಪ ಪ್ರಾಪ್ತಙ್ಗಳಾಹೈಯಾಲೇ ತತ್ವವಿತ್ತುಕ್ಕಳುಕ್ಕು ಅನುಕೂಲಙ್ಗಳ್.**

---

"ಶ್ರೀಮಾನ್ ಸ್ವತಂತ್ರ" ಎಂಬುದು ಪ್ರಥಮಾಕ್ಷರ ಪ್ರಕೃತಿಯ ವಿವರಣ. "ಸ್ವಾಮಿ" ಎಂಬುದು ಲುಪ್ತಚತುರ್ಥೀ ವಿವರಣ. ಶ್ರೀಮತ್ತ್ವವು ಅಕಾರಕ್ಕೆ ರೂಢಿಯಿಂದ ಅರ್ಥವು. ಆದಾಗಿ ಶ್ರೀಮಾನಾದ–ಲಕ್ಷ್ಮೀ ವಿಶಿಷ್ಟನಾದ ನಾರಾಯಣನೇ ಸರ್ವ ವ್ಯಾಪಾರಗಳಲ್ಲಿಯೂ ಅನ್ಯಾಪೇಕ್ಷೆಯಿಲ್ಲದೆ (ಸ್ವತಃ) ಸ್ವತಂತ್ರನೂ ಸ್ವಾಮಿಯೂ ಆಗಿದ್ದಾನೆ. ಅನ್ಯವಾದ ಜೀವವರ್ಗದಲ್ಲಿ ಯಾರಿಗೂ ನಿರಪೇಕ್ಷವಾದ ಸ್ವಾತಂತ್ರ್ಯವೂ ಸ್ವಾಮಿತ್ವವೂ ಯಾವುದೊಂದು ವ್ಯಾಪಾರದಲ್ಲಿಯೂ, ಯಾವ ವಸ್ತುವನ್ನು ಕುರಿತೂ ಇಲ್ಲ. **ಕಾರಸ್ಯನಮಸಶ್ಚೀವಮೌ** ಇತ್ಯಾದಿ ಪ್ರಣವದ ಮತ್ತು ನಮಶ್ಶಬ್ದಾರ್ಥದ ಸಾರವಾದ ಅರ್ಥಗಳು ಈ ರೀತಿಯಾಗಿ ಆಚಾರ್ಯರುಗಳಿಂದ ಉಪದೇಶಿಸಲ್ಪಟ್ಟವೆ. – ಜೀವನು ಅನನ್ಯ ಶರಣನು. ಆದಿಶಬ್ದದಿಂದ, ಅನನ್ಯ ಪ್ರಯೋಜನನು. ಈ ರೀತಿಯಾದ ಅಧಿಕಾರವು ಜೀವನಿಗೆ ಸಿದ್ಧವೆಂಬುದು ಉಪದೇಶಿಸಲ್ಪಟ್ಟವು ಎಂಬ ಪೂರ್ವವಾಕ್ಯದೊಡನೆ ಅನ್ವಯ.

ಲೋಕದಲ್ಲಿ ಸ್ವಾಮಿತ್ವ ಸ್ವಾತಂತ್ರ್ಯಗಳು ತನಗೆ ಅಭಿಮತಗಳಾಗಿದ್ದು ಇತರ ದಾಸತ್ವ ಪಾರತಂತ್ರ್ಯಗಳು ಅಭಿಮತವಿಲ್ಲದೆಯೂ ತೋರುವಾಗ, ಭಗವಚ್ಛೇಷತ್ವ ಪಾರತಂತ್ರ್ಯಗಳು ಹೇಗೆ ಅಭಿಮತಗಳಾಗುತ್ತವೆ, ಎಂಬುದನ್ನು **ಲೋಕತ್ತಿಲ್** ಎಂದಾರಂಭಿಸಿ ನಿರೂಪಿಸುತ್ತಾರೆ. ಲೋಕದಲ್ಲಿ ಸ್ವಾಮಿತ್ವ, ಸ್ವಾತಂತ್ರ್ಯಗಳು ಅಭಿಪ್ರೇತವಾಗಿಯೂ, ದಾಸತ್ವ ಪಾರತಂತ್ರ್ಯಗಳು ಅನಭಿಮತಗಳಾಗಿಯೂ ತೋರುವುದು ಕರ್ಮ ನಿಬಂಧನವಾಗಿರುವುದು (ಉಪಾಧಿ–ಕಾರಣ-ನಿಬಂಧನ) **ಇಂಗುಪ್ರಣವನಮಸ್ಸುಕ್ಕಳಿಲ್‌ಶೊನ್ನ** ಇತ್ಯಾದಿ– ಇಲ್ಲಿ ಪ್ರಣವದಲ್ಲಿಯೂ ನಮಶ್ಶಬ್ದದಲ್ಲಿಯೂ ಹೇಳಿರುವ ದಾಸತ್ವ ಪಾರತಂತ್ರ್ಯಗಳು (1) "**ದಾಸಭೂತಾಸ್ಸ್ವತಸ್ಸರ್ವೇ**" ಇತ್ಯಾದಿಗಳಲ್ಲಿ ಹೇಳಿರುವಂತೆ ಸ್ವರೂಪ ಪ್ರಾಪ್ತಗಳು. ಕರ್ಮೋಪಾಧಿಕಗಳಲ್ಲವಾದ್ದರಿಂದ,ತತ್ತ್ವವಿತ್ತುಗಳಿಗೆ ಅನುಕೂಲಗಳು; ಅನುಕೂಲವಾಗಿಯೇ ತೋರುತ್ತವೆ ಎಂದು ತಾತ್ಪರ್ಯ.

---

(1) ದಾಸ ಭೂತಾಸ್ಸ್ವತಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ ।
ಅತೋಽಹಮಪಿ ತೇ ದಾಸಃ ಇತಿಮತ್ವಾ ನಮಾಮ್ಯಹಮ್॥ ಮಂತ್ರರಾಜಪದ ಸ್ತೋತ್ರ

ಎಲ್ಲಾ ಜೀವರುಗಳೂ ಸ್ವತಃ– ಕಾರಣವಿಲ್ಲದೆ ಪರಮಾತ್ಮನಿಗೆ ದಾಸಭೂತರು. ಆದ್ದರಿಂದ ಆ ಜೀವ ವರ್ಗದಲ್ಲಿ ನಾನೂ ಸೇರಿರುವುದರಿಂದ, ಎಲೈ ಭಗವಂತನೇ, ನಿನಗೆ ದಾಸಭೂತನು. ಹೀಗೆ ತಿಳಿದುಕೊಂಡು ನಾನು ನಿನಗೆ ನಮಸ್ಕರಿಸುತ್ತೇನೆ. ಇದು ಪರಮಶಿವನು ಭಗವಂತನಾದ ನೃಸಿಂಹಮೂರ್ತಿಯನ್ನು ಕುರಿತು ಹೇಳಿದ ಮಾತು.

**ಏತೇನ ಭಗವಚ್ಛೇಷತ್ವೇ ಸಿದ್ಧೇ ತದೀಯ ಶೇಷತ್ವಮಪಿ ಸಿದ್ಧಮ್.**

**ಇಪ್ಪಡಿ ಅತ್ಯಂತ ಪಾರಾರ್ಥ್ಯ ಪಾರತಂತ್ರ್ಯಙ್ಗಳ್ ಸಿದ್ಧಿಕ್ಕೈಯಾಲೇ 2) ಅಡಿಯಾರ್ಕ್ಕೆನ್ನೈ ಯಾಳ್ಪಡುತ್ತ ವಿಮಲರ್" ಎನ್ಗಿರಪಡಿಯೇ ಸ್ವತಂತ್ರನಾನ ಶೇಷಿಕ್ಕು ಇಷ್ಟವಿನಿಯೋಗಾರ್ಹನಾನ ಪಡಿಯಾಲೇ ತದೀಯ ಶೇಷತ್ವಮುಮ್ ಇಙ್ಗೇಸಿದ್ಧಮ್. ಶೇಷಿಯುಮಾಯ್ ಸ್ವತಂತ್ರನು ಮಾಹೈಯಾಲೇ ಈಶ್ವರರ್ ಇವ್ವಾತ್ಮಾವೈತ್ತನಕ್ಕು ನಲ್ಲಾರಾನ ಅಡಿಯಾರ್ಕ್ಕುತ್ತನ್ನುಹಪ್ಪಾಲೇ ಶೇಷಮಾಕ್ಕಿನಾಲ್ ಇದು ಪ್ರಾಪ್ತಮನ್ರೆನ್ರ ವೊಣ್ಣಾದು ; ವಿಲಕ್ಕವುಮ್ ಒಣ್ಣಾದು. ಶೇಷಿಯಾಹೈಯಾಲೇ ಇಷ್ಟ ವಿನಿಯೋಗತ್ತುಕ್ಕು ಪ್ರಾಪ್ತರ್. ಸ್ವತನ್ತ್ರನಾಹೈಯಾಲೇ ಇದುಕ್ಕು ಸಮರ್ಥನ್. 1) "ಮಟ್ರುಮೋರ್ ದೈಯ ವ ಮುಳದೆನ್ರಿರುಪ್ಪಾರೋಡುತ್ತಿಲೇನುತ್ತದು ಮುನ್ನಡಿಯಾರ್ಕಡಿಮೈ" ಎನ್ಗಿರಪಾಟ್ಟಿಲುಮ್ ಇವ್ವರ್ಥಮ್ ಕಂಡುಕೊಳ್ವದು.**

---

### ಭಾಗವತ ಶೇಷತ್ವ ಸಿದ್ಧಿ

**ಇಪ್ಪಡಿ** ಇತ್ಯಾದಿ–ಈ ರೀತಿಯಾಗಿ, ಅತ್ಯಂತಪಾರಾರ್ಥ್ಯ ಪಾರತಂತ್ರ್ಯಗಳು ಸಿದ್ಧಿಸುವುದರಂದ (2) **ಅಡಿಯಾರ್ಕೆನ್ನೈ ಆಳ್ಪಡುತ್ತವಿಮಲನ್**–ತನ್ನ ದಾಸರಿಗೆ ನನ್ನನ್ನು ಆಳಾಗಿರುವಂತೆ ಹೇಳಿದ ವಿಮಲನು, ಅವನ ಅಮಲನ್ ಹೇಯ ಪ್ರತಿಭಟನು ಆದಿಪಿರಾನ್– ಜಗತ್ತಿಗೆಲ್ಲಾ ಮೂಲಕಾರಣನು ಎಂದು ಹೇಳಿರುವಂತೆ ಸ್ವತಂತ್ರನಾದ ಶೇಷಿಯು(ಸ್ವಾಮಿ) ಇಷ್ಟ ವಿನಿಯೋಗ ಮಾಡಲು–ಅಂದರೆ ತಾನು ಸ್ವತಂತ್ರನಾದ್ದರಿಂದಲೂ, ತನಗೆ ಸೇರಿದ ಜೀವನನ್ನು ತನಗೆ ಇಷ್ಟವಾದವರಿಗೆ ವಿನಿಯೋಗ ಮಾಡಿ– ಶೇಷವಾಗಿರುವಂತೆ ಮಾಡಲು ಅರ್ಹನು. ಆದ್ದರಿಂದ ತದೀಯ ಶೇಷತ್ವವೂ ಇಲ್ಲಿ ಸಿದ್ಧ. ಭಗವಂತನು ಹೀಗೆ ಮಾಡುವುದು ಉಚಿತವೇ ಎಂದರೆ, **ಶೇಷಿಯುಮಾಯ್ಸ್ವತಂತ್ರನು ಮಾಹೈಯಾಲೇ**–ತಾನು ಶೇಷಿ–ಸ್ವಾಮಿಯೂ ಸ್ವತಂತ್ರನೂ ಆಗಿರುವುದರಿಂದ **ಈಶ್ವರನು**–ನಿಯಮನಶೀಲನಾದ ಶ್ರಿಯಃಪತಿಯು, **ಈ** ಜೀವಾತ್ಮನನ್ನು ತನಗೆ **ನಲ್ಲರಾನ**–ಅನುಕೂಲರಾದ, "ಜ್ಞಾನೀತ್ವಾತ್ಮೈವ ಮೇಮತಮ್ " ಎಂದೂ "ಪ್ರಿಯೋಹಿ ಜ್ಞಾನಿನೋತ್ಯರ್ಥಂ ಅಹಂ ಸ ಚ ಮಮಪ್ರಿಯಃ– ಎಂಬಂತೆ ತನಗೆ ಅತ್ಯಂತ ಪ್ರೀತಿ ವಿಷಯರಾದ, **ಅಡಿಯಾರ್ಕ್ಕು** – ಭಾಗವತರಿಗೆ, ತನ್ನ ಸಂತೋಷಕ್ಕಾಗಿ **ಶೇಷಭೂತರನ್ನಾಗಿ ಮಾಡಿದರೆ,** ಇದು **ಪ್ರಾಪ್ತಮನ್ರೆನ್ನವೊಣ್ಣಾದು**–ಪ್ರಾಪ್ತವಲ್ಲವೆಂದು ಹೇಳಲಾಗುವುದಿಲ್ಲ. **ವಿಲಕ್ಕವುಮೊಣ್ಣಾದು**– ಇದನ್ನು ಪರಿಹರಿಸಲೂ ಆಗುವುದಿಲ್ಲ. **ಶೇಷಿಯಾಹೈಯಾಲೇ**– ಸ್ವಾಮಿಯಾದ್ದರಿಂದ ತನ್ನಿಷ್ಟದಂತೆ ವಿನಿಯೋಗಿಸಲು ಪ್ರಾಪ್ತನು. **ಸ್ವತಂತ್ರನಾಹೈಯಾಲೇ**ಇತಿ–ಸ್ವತಂತ್ರನಾದ್ದರಿಂದ ಇದಕ್ಕೆ ಸಮರ್ಥನು; ಈ ಅರ್ಥವನ್ನು 1) "**ಮಟ್ರುಮೋರ್ ದೈಯವಮುಳದೆನ್ರು** ಇತ್ಯಾದಿಯಾದ ಪಾಶುರದಲ್ಲೂ ತಿಳಿಯಬಹುದು.

---

(2) ಅಮಲನಾದಿಪಿರಾನ್ ಅಡಿಯಾರ್ಕೆನ್ನೈ ಆಳ್ಪಡುತ್ತ
ವಿಮಲನ್, ವಿಣ್ಣವರ್ಕೋನ್ ವಿರೈಯಾರ್ ಪೊಳಿಲ್ ವೇಙಗಡವನ್ ।
ನಿಮಲನ್ ನಿನ್ಮಲನ್ ನೀದಿವಾನವನ್ ನೀಳ್ಮದಿಳರಂಗತ್ತಮ್ಮಾನ್
ತಿರುಕ್ಕಮಲ ಪಾದಂವಂದು ಎನ್ಕಣ್ಣಿನುಳ್ಳನ ಒಕ್ಕಿನ್ರದೇ॥ — ಅಮಲನಾದಿಪಿರಾನ್-1

(1) ಮಟ್ರುಮೋರ್ದೈಯ್ವ ಮುಳದೆನ್ರಿರುಪ್ಪಾರೋಡುಟ್ರಿಲೇನ್,
ಉಟ್ರದು ಮುನ್ನಡಿಯಾರ್ಕ್ಕಡಿಮೈ ।
ಮಟ್ರೆಲ್ಲಾಮ್ ಪೇಶಿಲುಮ್‌ನಿನ್ ತಿರುವೆಟ್ಟೆಳುತ್ತುಮ್
ಕಟ್ರು । ನಾನ್‌ಕಣ್ಣ ಪುರುತ್ತುರೈಯಮ್ಮಾನೇ ॥ — ಪೆರಿ ತಿರು ಮೊಳಿ 8-10

ಎಲೈ ಕಣ್ಣಪುರದಲ್ಲಿ ಬಿಜಯ ಮಾಡಿಸಿರುವ ಸ್ವಾಮಿಯೇ।
ಬೇರೆಯೊಂದು ಪರದೇವತೆ ಇದೆ ಎಂದು ಹೇಳುವರೊಡನೆ ಸಹವಾಸ ಮಾಡುವುದಿಲ್ಲ. ನಾನು ಅಂಗೀಕರಿಸಿರುವುದು ನಿನ್ನ ದಾಸರಿಗೆ ದಾಸ್ಯನಾಗಿರುವುದು. ನಿನ್ನ ಅಷ್ಟಾಕ್ಷರ ಮಂತ್ರವನ್ನು ಉಪದೇಶ ಹೊಂದಿ ನಾನು ತಿಳಿದಿರುವುದು ಭಾಗವತದಾಸ್ಯ.

**ಸ್ವೇಚ್ಛಯೈವ ಪರೇಶಸ್ಯ ತಾದಧೀನ್ಯ ಬಲಾತ್ತು ನಃ ।**
**ಭಗವದ್ಭಕ್ತ ಶೇಷತ್ವಂ ಸ್ವೇಚ್ಛಯಾಪಿ ಕ್ವಚಿ ದ್ಭವೇತ್ ॥72॥**
**ಗುಣಾಧಿಕೇ ಹಿ ವಿಷಯೇ ಗುಣಸಾರಸ್ಯ ವೇದಿನಃ ।**
**ರಾಮೇ ರಾಮಾನುಜಸ್ಯೇವ ದಾಸ್ಯಂ ಗುಣಕೃತಂ ಭವೇತ್ ॥73॥**
**ದಾಸ್ಯ ಮೈಶ್ವರ್ಯ ಯೋಗೇನ ಜ್ಞಾತೀನಾಂಚ ಕರೋಮ್ಯಹಮ್ ।**
**ಅರ್ಧಭೋಕ್ತಾಚ ಭೋಕ್ತ್ರಾನಾಂ ವಾಗ್ದುರುಕ್ತಾನಿ ಚ ಕ್ಷಮೇ ॥74॥**
**ಇತಿ ಸ್ವೋಕ್ತಿ ನಯಾದೇವ ಸ್ವಭಕ್ತ ವಿಷಯೇ ವಿಭುಃ ।**
**ಆತ್ಮಾತ್ಮೀಯಸ್ಯ ಸರ್ವಸ್ಯ ಸಙ್ಕಲ್ಪಯತಿ ಶೇಷತಾಮ್ ॥75॥**
**ಅನ್ಯೋನ್ಯಶೇಷಭಾವೋಽಪಿ ಪರಸ್ವಾತಂತ್ರ್ಯಸಂಭವಃ ।**
**ತತ್ತದಾಕಾರಭೇದೇನ ಯುಕ್ತ ಇತ್ಯುಪಪಾದಿತಮ್ ॥ ॥**

**ಅಥ ಅಖಂಡ ನಮಸಃ ಸಾಧ್ಯೋಪಾಯಪರತ್ವಂ ವಕ್ತು ಮಾರಭತೇ.**

**ಇಪ್ಪಡಿ ಸ್ವತಂತ್ರನಾನ ಶೇಷಿಯಿಟ್ಟವನುಕ್ಕಾಯ್ ಅಕಿಂಚನನಾಯಿರುಕ್ಕಿರ ವಿವಸುಕ್ಕು ಅವನಾಲೇ**

---

**ಸ್ವೇಚ್ಛಯೈವಪರೇಶಸ್ಯ** ಇತ್ಯಾದಿ ಕಾರಿಕೆಗಳಿಂದ ಭಗವಂತನು ತನ್ನ ಭಕ್ತರಿಗೆ ಸ್ವೇಚ್ಛೆಯಿಂದ ದಾಸನಾಗಿರುವುದನ್ನು ಉಪಪಾದಿಸುತ್ತಾರೆ ಆದಾಗಿ ಭಗವಂತನು ಗುಣಾಧಿಕರಾದ ಭಾಗವತರಲ್ಲಿ ದಾಸನಾಗಿರುತ್ತಾನೆ. ಇದು ಸ್ವೇಚ್ಛಾಕೃತ ನಃ–ನಮಗೆ **ತಾದಧೀನ್ಯಬಲಾತ್ತು** – ಭಗವತ್ಪರಾಧೀನ ಬಲದಿಂದ **ಭಗವದ್ಭಕ್ತಶೇಷತ್ವಂ** ಭಾಗವತ ಶೇಷತ್ವವು ಕೆಲವಡೆಗಳಲ್ಲಿ ಉಂಟಾಗುತ್ತದೆ. **ಗುಣಾಧಿಕೇ ಹಿ ವಿಷಯೇ** ಇತ್ಯಾದಿ – ಗುಣಾಢ್ಯರಾದ ಭಾಗವತರ ವಿಷಯದಲ್ಲಿ, ಅವರ ಗುಣದ ರುಚಿಯನ್ನು ತಿಳಿದವನಿಗೆ, ದಾಸ್ಯವು ಗುಣಕೃತವೂ ಆಗಬಹುದು. ಇದಕ್ಕೆ ದೃಷ್ಟಾಂತವನ್ನು **ರಾಮೇರಾಮಾನುಜಸ್ಯೇವ** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಶ್ರೀರಾಮಚಂದ್ರನಲ್ಲಿ ಅವನ ತಮ್ಮನಾದ ಲಕ್ಷ್ಮಣನು, ಅವನ ಗುಣಗಳಿಗೆ ಮನಸೋತು ದಾಸನಾದನು. "ಅಸ್ಯಾ ಹಮುಪರೋಭ್ರಾತಾ ಗುಣೈರ್ದಾಸ್ಯಮುಪಾಗತಃ' ಎಂದು ಲಕ್ಷ್ಮಣನು ತಾನೇ ಹೇಳಿಕೊಳ್ಳುವ ಮಾತು ಇದು. ಆದಾಗಿ ನಾನ ಶ್ರೀರಾಮನಿಗೆ ತಮ್ಮನೆಂದು ಜನರು ಹೇಳುತ್ತಾರೆ. ನನ್ನ ಅಭಿಪ್ರಾಯದಂತೆ, ಹೇಳುವುದಾದರೆ, ಅವನ ಗುಣಗಳಿಗೆ ಮನಸೋತು ದಾಸ್ಯವೃತ್ತಿಯನ್ನು ಹೊಂದಿದ್ದೇನೆ. ನನ್ನದು **ಸ್ವರೂಪಕೃತ** ದಾಸತ್ವ ಅಹುದು. ಗುಣಕೃತ ದಾಸತ್ವವು ನನಗೆ ಬಹಳ ಸಮ್ಮತ ಎಂದು ತಾತ್ಪರ್ಯ.

**ದಾಸ್ಯಮೈಶ್ವರ್ಯಯೋಗೇನ** ಇತ್ಯಾದಿ–ಭಗವಂತನಾದ ನಾನು ಈಶ್ವರನಾಗಿ ಸ್ವಾತಂತ್ರದಿಂದ, ಜ್ಞಾತಿಗಳಿಗೆ (ಬಂಧುಗಳಿಗೆ – ಕೃಷ್ಣಾವತಾರದಲ್ಲಿ ಧರ್ಮರಾಜಾದಿ ಬಂಧುಗಳಿಗೆ) ದಾಸನಾಗಿರುತ್ತೇನೆ. ಅವರು ಅನುಭವಿಸುವ ಸ್ರಕ್‌ಚಂದನಾದಿ ಭೋಗಗಳಲ್ಲಿ, ಅರ್ಧವನ್ನು ಭುಜಿಸುತ್ತೇನೆ. ಅವರುಗಳು ಹೇಳುವ, ಹೇ ಕೃಷ್ಣ, ಹೇ ಯಾದವ ಹೇ ಸಖೇ, ಎಂಬ ಮಾತುಗಳನ್ನೂ, ಬೈಗಳನ್ನೂ ಕ್ಷಮಿಸುತ್ತೇನೆ ಹೀಗೆ ಭಗವಂತನು ತಾನೇ ಹೇಳಿದಂತೆ ತನ್ನ ಭಕ್ತರ ವಿಷಯದಲ್ಲಿ, ತನ್ನ ಆತ್ಮಾತ್ಮೀಯಗಳನ್ನೆಲ್ಲಾ ಅಂದರೆ ಸರ್ವವಸ್ತುಗಳನ್ನೂ, ಅವರುಗಳಿಗೆ ಶೇಷವಾಗಿ ಸಂಕಲ್ಪಿಸುತ್ತಾನೆ. **ಅನ್ಯೋನ್ಯ**–ಭಾಗವತರಲ್ಲಿ ಪರಸ್ಪರ, ಶೇಷಭಾವವೂ ಭಗವಂತನ ಸ್ವಾತಂತ್ರ್ಯದಿಂದ ಉಂಟಾದದ್ದು. **ತತ್ತದಾಕಾರಭೇದೇನ**–ಆಯಾಯಾ ಭಿನ್ನ ಭಿನ್ನ ಆಕಾರದಿಂದ ಉಪಕಾರ್ಯೋಪಕಾರ ಭಾವದಂತೆ ಯುಕ್ತವೆಂದು, ಪುರುಷಾರ್ಥಕಾಷ್ಠಾಧಿಕಾರದಲ್ಲಿ ಉಪಪಾದಿಸಲ್ಪಟ್ಟಿತು.

### "ನಮುಕ್ಕಬ್ದಕ್ಕೆ" ಉಪಾಯತ್ವವೂ ಭರಸಮರ್ಪಣವೂ ಅರ್ಥ

ಅನಂತರ ನಮಸ್ಸು ಶರಣವರಣವನ್ನು ಸೂಚಿಸುವುದಾಗಿ **ಇಪ್ಪಡಿ ಸ್ವತಂತ್ರನಾನ**, ಎಂದಾರಂಭಿಸಿ ಉಪ

**ಪುರುಷಾರ್ಥಮ್ ಪೆರವೇಣ್ಡುಹೈಯಾಲೇ ಅವನುಡೈಯ ವಶೀಕರಣಾರ್ಥಮಾಹ ದ್ವಯತ್ತಿಲುಮ್ ಚರಮ ಶ್ಲೋಕತ್ತಿಲುಮ್ ವಿಶದಮಾಹ ಚ್ಚೊಲ್ಲುಹಿರ ಶರಣವರಣ ಮಿಂಗೇ ಸೂಚಿತಮ್. ಆತ್ಮಸಮರ್ಪಣ ಮುಮ್ ಶರಣವರಣಮುಮ್ ಅನ್ಯೋನ್ಯಂ ಪಿರಿಯಾಮೈಯಾಲೇ ಓರೊನ್ನೈಚ್ಚೊಲ್ಲುಮ್ ಶಬ್ದಙ್ಗಳಿಲಿರ ಣ್ಡುಮ್ ವಿವಕ್ಷಿತಮ್.**

**ಅತ್ರ ನಮಶ್ಶಬ್ದಃ ಸಾಙ್ಗಭರಸಮರ್ಪಣ ಪರಃ**

1) "ಯಸ್ಸದೇವೋ ಮಯಾದೃಷ್ಟಃ ಪುರಾ ಪದ್ಮಾಯತೇಕ್ಷಣಃ ।
ಸ ಏಷ ಪುರುಷವ್ಯಾಘ್ರ ಸ್ಸಂಬಂಧೀ ತೇ ಜನಾರ್ದನಃ ॥"

2) "ಸರ್ವೇಷಾಮೇವ ಲೋಕಾನಾಂ ಪಿತಾ ಮಾತಾಚ ಮಾಧವಃ ।
ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ॥" ಎನ್ರುಪದೇಶಿಕ್ಕ,
"ಏವ ಮುಕ್ತಾಸ್ತ್ರಯಃ ಪಾರ್ಥಾ ಯಮೌ ಚ ಭರತರ್ಷಭಾಃ ।
ದ್ರೌಪದ್ಯಾ ಸಹಿತಾಸ್ಸರ್ವೇ ನಮಶ್ಚಕ್ರು ರ್ಜನಾರ್ದನಮ್ ॥" ಎನ್ರು ಶೊಲ್ಲುಹೈಯಾಲುಮ್,

ದಮಯಂತೀ ವೃತ್ತಾಂತತ್ತಿಲೇ

1) ಶರಣಂ ಪ್ರತಿದೇವಾನಾಂ ಪ್ರಾಪ್ತಕಾಲ ಮಮನ್ಯತ" ಎನ್ರುಪಕ್ರಮಿತ್ತು,
"ವಾಚಾ ಚ ಮನಸಾ ಚೈವ ನಮಸ್ಕಾರಂ ಪ್ರಯುಜ್ಯಸಾ" ಎನ್ಗೈಯಾಲುಮ್ ನಮಶ್ಶಬ್ದಂ ತಾನ್

---

ಪಾದಿಸುತ್ತಾರೆ ಅದಾಗಿ, ಹೀಗೆ ಸ್ವತಂತ್ರನಾದ ಶೇಷಿಯು ಏರ್ಪಡಿಸಿದ ಉಪಾಯವಾಗಿ ಆಕಿಂಚನನಾದ ಜೀವನಿಗೆ (ಮುಮುಕ್ಷುವಿಗೆ) ಅವನಿಂದಲೇ ಪುರುಷಾರ್ಥವನ್ನು ಹೊಂದಬೇಕಾಗಿರುವುದರಿಂದ, ಅವನ ವಶೀಕರಣಾರ್ಥವಾಗಿ, ದ್ವಯ ಮಂತ್ರದಲ್ಲಿಯೂ, ಚರಮಶ್ಲೋಕದಲ್ಲಿಯೂ, ವಿಶದವಾಗಿ ಹೇಳುವ 'ಶರಣವರಣವು ಇಲ್ಲಿ ಸೂಚಿತ. **ಶರಣವರಣಮ್** ತ್ವಮೇವೋಪಾಯಭೂತೋಮೇಭವ" ಎಂದು ಭಗವಂತನನ್ನೇ ಉಪಾಯವನ್ನಾಗಿ ವರಿಸುವುದು, ನಮಶ್ಶಬ್ದದಲ್ಲಿ, **ಆತ್ಮಸಮರ್ಪಣಮುಮ್** ಇತ್ಯಾದಿ- ಶೇಷತ್ವಾದಿಸ್ವರೂಪಾನು ಸಂಧಾನವೂ, **ಶರಣವರಣ ಮುಮ್** ಇತ್ಯಾದಿ-ಮೋಕ್ಷೋಪಾಯತ್ವ ಪ್ರಾರ್ಥನೆಯೂ, ಎರಡೂ ವಿವಕ್ಷಿತ. **ಅನ್ಯೋನ್ಯಂಪಿರಿಯಾಮೈಯಾಲೇ** ಇತ್ಯಾದಿ-ಇವೆರಡೂ ಬೇರೆ ಬೇರೆಯಾಗಿರುವುದಿಲ್ಲವಾದ್ದರಿಂದ ಒಂದೊಂದನ್ನು ಹೇಳುವ ಶಬ್ದಗಳಲ್ಲಿ, ಎರಡೂ ವಿವಕ್ಷಿತಗಳು. ಭಗವಂತನಿಗೆ ಸ್ವರೂಪಸಮರ್ಪಣ ಮಾಡಿದ ಮೇಲೆ ಆತ್ಮರಕ್ಷಾಭರಸಮರ್ಪಣವನ್ನು ಮಾಡಬೇಕೆಂದರ್ಥ.

) **ಯಸ್ಸದೇವೋ ಮಯಾದೃಷ್ಟಃ** ಇತ್ಯಾದಿ- ) **ಸರ್ವೇಷಾಮೇವಲೋಕಾನಾಂ** ಇತ್ಯಾದಿ- ಇವು ಮಾರ್ಕಂಡೇಯರ ವಚನ. ಪ್ರಳಯ ಕಾಲದಲ್ಲಿ ಯಾವ ತಾವರೆ ಹೂವಿನಂತೆ ಅಗಲವಾದ ಕಣ್ಣುಗಳುಳ್ಳ ದೇವನನ್ನು - ಜಗದ್ವ್ಯಾಪಾರಲೀಲನನ್ನು ನೋಡಿದೆನೋ, ಆ ಪುರುಷಶ್ರೇಷ್ಠನೇ ನಿನಗೆ ಸಂಬಂಧಿಯಾಗಿ ಅಂದರೆ ಸೋದರತ್ತೆಯ ಮಗನಾಗಿ ಅವತರಿಸಿದ್ದಾನೆ. ಸರ್ವಲೋಕಗಳಿಗೂ ತಂದೆಯೂ ತಾಯಿಯೂ ಲಕ್ಷ್ಮೀಪತಿಯೇ. ಅವನನ್ನು ನಿಮ್ಮ ಸರ್ವಾಭೀಷ್ಟ ಸಿದ್ಧಿಗಾಗಿ ಶರಣ ಹೊಂದಿರಿ, ಎಂದು ಮಾರ್ಕಂಡೇಯರು ಪಾಂಡವರಿಗೆ ಉಪದೇಶಿಸಿದರು ಹೀಗೆ ಉಪದೇಶವನ್ನು ಪಡೆದ ಪಂಚ ಪಾಂಡವರು ದ್ರೌಪದಿಯೊಡನೆ ಕೃಷ್ಣ ಪರಮಾತ್ಮನನ್ನು ನಮಸ್ಕರಿಸಿದರು- ಶರಣಹೊಂದಿದರು. ಇಲ್ಲಿ 'ಶರಣ' ಶಬ್ದ ಸ್ಥಾನದಲ್ಲಿ ನಮಸ್ಕರಿಸಿದರು, ಎಂದು ಪ್ರಯೋಗವಿರುವುದರಿಂದ ನಮಶ್ಶಬ್ದಕ್ಕೆ ಸಾಂಗಭರಸಮರ್ಪಣವೆಂದರ್ಥ. ಹಾಗೆಯೇ

**ದಮಯಂತೀವೃತ್ತಾಂತತ್ತಿಲುಮ್** ಇತ್ಯಾದಿ ದಮಯಾಂತೀ ವೃತ್ತಾಂತದಲ್ಲಿಯೂ 1) **ಶರಣಂ ಪ್ರತಿದೇವಾನಾಂ ಪ್ರಾಪ್ತಕಾಲಮಮನ್ಯತ** ಎಂದು ಆರಂಭಿಸಿ **ವಾಚಾಚ ಮನ ಸಾಚೈವ ನಮಸ್ಕಾರಂ ಪ್ರಯುಜ್ಯಸಾ**

---

1) ಮಹಾಭಾರತ ಅರಣ್ಯಪರ್ವ-192-51, 2) 192-56.

1) ಭಾರತ ಅರಣ್ಯ ಪರ್ವ-54-16

**ಶರಣಾಗತಿ ಶಬ್ದ ಸ್ಥಾನತ್ತಿಲೇ ಪಠಿತಮಾಹೈಯಾಲೇ ಇದು ತನ್ನೋಡು (ತನ್) ತುವಕ್ಕರುತ್ತು ಕ್ಕೊಣ್ಡು ಸಪರಿಕರಮಾನ ಸ್ವರಕ್ಷಾ ಭರಸಮರ್ಪಣತ್ತಿಲೇ ತತ್ಪರಮಾಹವುಮಾವ್.**

**ನಮಸಃ ಆತ್ಮಸಮರ್ಪಣ ಪರತ್ವೇಪಿ ಪ್ರಮಾಣಮಾಹ**

**ನಮಸ್ಸು ಆತ್ಮ ಸಮರ್ಪಣ ಪರಮಾಯಿರುಕ್ಕು ಮೆನ್ನುಮಿಡಮ್,**

**2) ಸಮಿತ್ಸಾಧನಕಾದೀನಾಂ ಯಜ್ಞಾನಾಂ ನ್ಯಾಸ ಮಾತ್ಮನಃ ।**
**ನಮಸಾ ಯೋ ಕರೋದ್ದೇವೇ ಸ ಸ್ವಧ್ವರ ಇತೀರಿತಃ ॥"**

**3) "ನಮಸ್ಕಾರಾತ್ಮಕಂ ಯಸ್ಮೈವಿಧಾಯಾತ್ಮ ನಿವೇದನಮ್" ಇತ್ಯಾದಿಹಳಾಲುಮ್ ಪ್ರಸಿದ್ಧಮ್.**

---

ಎಂದು ದೇವತೆಗಳನ್ನು ಕುರಿತು ಮನಸ್ಸಿನಿಂದಲೂ ವಾಕ್ಕಿನಿಂದಲೂ ಶರಣಾಗತಿ ಮಾಡಿದಳು. ಅವಳ ಸ್ವಯಂವರ ಕಾಲದಲ್ಲಿ ನಾಲ್ಕು ದೇವತೆಗಳು ನಳನ ಹಾಗೆ ವೇಷವನ್ನು ಧರಿಸಿ ನಳನ ಜೊತೆ ಕುಳಿತಿದ್ದರು. ನಿಜವಾದ ನಳನು ಯಾರೆಂದು ತಿಳಿಯದೆ, ನಿಜವಾದ ನಳನನ್ನು ತೋರಿಸಿ ಕೊಡುವಂತೆ ಆ ದೇವತೆಗಳಲ್ಲಿ ಶರಣವರಣ ಮಾಡಿದಳು, ಎಂದು ಹೇಳುವಾಗ ಶರಣವರಣ ಶಬ್ದ ಸ್ಥಾನದಲ್ಲಿ ನಮ ಶ್ಶಬ್ದವು ಪಠಿತವಾಗಿದೆ. **ಇದು ತನ್ನೋಡು ತನ್ ತುವಕ್ಕರುತ್ತುಕ್ಕೊಂಡು** ಇತ್ಯಾದಿ- ಈ ನಮ ಶ್ಶಬ್ದವು ಸಪರಿಕರವಾದ ಸ್ವರಕ್ಷಾಭರ ಸಮರ್ಪಣವನ್ನು ತಿಳಿಸುತ್ತದೆ. ನಮಸ್ಸು ಹೀಗೆ ಸಪರಿಕರವಾದ **ಆತ್ಮರಕ್ಷಾಭರ** ಸಮರ್ಪಣವನ್ನು ತಿಳಿಸುತ್ತದೆಯೇ ಎಂದರೆ, **ನಮಸ್ಸು** ಇತ್ಯಾದಿ ಆರಂಭಿಸಿ ಪ್ರಮಾಣಗಳನ್ನು ನಿರೂಪಿಸುತ್ತಾರೆ. ಆದಾಗಿ ನಮಶ್ಶಬ್ದವು ಆತ್ಮರಕ್ಷಾಭರ ಸಮರ್ಪಣಪರವಾಗಿರುತ್ತದೆ ಎಂಬುದು 2) **ಸಮಿತ್ಸಾಧನಕಾದೀನಾಂ** ಇತ್ಯಾದಿ ನಿರೂಪಿಸುತ್ತಾರೆ. ಆದಾಗಿ ಸಮಿತ್ತು, ಆಜ್ಯ, ಪುರೋಡಾಶಗಳನ್ನು ಸಾಧನವಾಗಿವುಳ್ಳ,ಯಜ್ಞಗಳೇ ಮೊದಲಾದ-ಯಜ್ಞಾನಾಂ ಎಂಬಲ್ಲಿ ನಿರ್ಧಾರಣೇಷಷ್ಠೀ ಯಜ್ಞಗಳ ನಡುವೆ ಯಾವುದು ಶ್ರೇಷ್ಟವಾದ ಯಜ್ಞವೆಂದರೆ **ನಮಸಾ ಯೋಕರೋದ್ದೇವೇ**-ಸ್ವರೂಪ ನ್ಯಾಸಘಟಿತ ಸ್ವರಕ್ಷಾಭರ ಸಮರ್ಪಣ ರೂಪವಾದ ನ್ಯಾಸವೆಂಬ ಯಜ್ಞವನ್ನು ಭಗವಂತನಲ್ಲಿ ಯಾವನು ಮಾಡುತ್ತಾನೋ ಅವನು, ಸ್ವಧ್ವರಃ- (ಸುಷ್ಠು ಅನುಷ್ಠಿತಃ ಅಧ್ವರಃ ಯೇನಸಃ- ಬಹುವ್ರೀಹಿಸಮಾಸ) ಶ್ರೇಷ್ಠವಾದ ಯಾಗವನ್ನು ಮಾಡಿದವನು ಎಂದು ಹೇಳಲ್ಪಡುತ್ತದೆ. 3) **ನಮಸ್ಕಾರಾತ್ಮಕಂಯಸ್ಮೈ** ಇತ್ಯಾದಿ- ನಮಸ್ಕಾರ ಶಬ್ದವಾಚ್ಯವಾದ ಆತ್ಮ ನಿವೇದನವನ್ನು ಮಾಡಿ, ಇತ್ಯಾದಿ ಪ್ರಯೋಗಗಳಲ್ಲಿಯೂ ನಮಶ್ಶಬ್ದಕ್ಕೆ ಸ್ವರಕ್ಷಾಭರಸಮರ್ಪಣ - ಶರಣಾಗತಿ ಎಂಬ ಅರ್ಥವು ತಿಳಿಸಲ್ಪಟ್ಟಿತು.

ಪ್ರಣವವು ಒಂದೇ ಅಕ್ಷರವಾಗಿರುವ ಒಂದು ಪದವಾಗಿರುವಾಗ, ಇದನ್ನು ಮೂರು ಅಕ್ಷರಗಳಾಗಿ ವಿಭಾಗ ಮಾಡಿ, ಅಕ್ಷರಗಳನ್ನು ಪ್ರತ್ಯೇಕವಾಗಿ ಪದಗಳಾಗಿ ಅಂಗೀಕರಿಸಿ ಒಂದು ವಾಕ್ಯಾರ್ಥವನ್ನು ಅನುಸಂಧಾನಮಾಡುವುದೂ, ನಮಸ್ಸೆಂಬುದು ಪ್ರಣಾಮವಾಚಿಯಾದ ಅವ್ಯಯವಾಗಿರುವಾಗ, ಇದನ್ನು ವಿಭಾಗ ಮಾಡಿ ವಾಕ್ಯಾರ್ಥವನ್ನು ಹೇಳುವುದೂ, ನಿರುಕ್ತ ಬಲದಿಂದ ಏರ್ಪಟ್ಟಿದೆ. ಆ ನಿರುಕ್ತವು ಯಾವುದೆಂದರೆ

"ಅಕಾರೇಣೋಚ್ಯತೇ ವಿಷ್ಣುಃ ಸರ್ವಲೋಕೇಶ್ವರೋ ಹರಿಃ।
ಉದ್ಧೃತಾ ವಿಷ್ಣುನಾ ಲಕ್ಷ್ಮೀರುಕಾರೇಣೋಚ್ಯತೇತಥಾ॥
ಮಕಾರಸ್ತು ತಯೋರ್ದಾಸಃ ಇತಿ ಪ್ರಣವಲಕ್ಷಣಮ್ ॥

---

2) ಅಹಿರ್ಬುಧ್ನ್ಯ, ಸಂಹಿತೆ 37-37 3. ಮಂತ್ರರಾಜಪದಸ್ತೋತ್ರ

### ನಮಶ್ಶಬ್ದಾರ್ಥಾ: ನಿರುಕ್ತೇ ಸ್ಪಷ್ಟಮಿತ್ಯಾಹ.

"ನಾನುಮೆನಕ್ಕುರಿಯೇನಲ್ಲೇನ್, ಎನ್ನುಡೈಯದಾನ ವ್ಯಾಪಾರಾದಿಹಳುಮ್ ಎನಕ್ಕು ಶೇಷಮನ್ರು, ಇವೈಯೆಲ್ಲಾಮ್ ಸರ್ವೇಶ್ವರನುಕ್ಕೇ ಶೇಷಮ್ ಎನ್ರಿವೈ ಮುದಲಾನ ಪರ್ಥಙ್ಗಳೆಲ್ಲಾಮ್ ನಮಶ್ಶಬ್ದತ್ತಿಲೇ ವಿವಕ್ಷಿತಮೆನ್ನು ಮಿಡಮ್ ನಿರುಕ್ತತ್ತಿಲ್ ನಮಸ್ಕಾರ ಪ್ರಕರಣತ್ತಿಲೇ ಒದಪ್ಪಟ್ಟದು.

### ನಮಸಃ ನಿರುಕ್ತಬಲಾತ್ ಅಹಿರ್ಬುಧ್ನ್ಯೋಕ್ತಸ್ಥೂಲಸೂಕ್ಷ್ಮಾದಿ ಯೋಜನಾತ್ರಯಮಾಹ

ಇನ್ನಮಶ್ಶಬ್ದತ್ತುಕ್ಕು ಸ್ಥೂಲಸೂಕ್ಷ್ಮ ಪರಙ್ಗಳಿನ್ರು ಮೂನ್ರರ್ಥಙ್ಗಳೈವಹುತ್ತು ಅಹಿರ್ಬುಧ್ನ್ಯನ್ ವ್ಯಾಖ್ಯಾನಂ ಪ್ಣಿನಾನ್.

---

ಎಂಬುದು, ಕಠಶ್ರುತಿಯಲ್ಲಿ ಹೇಳಿದ ಅರ್ಥಭೇದನಿರುಕ್ತಿ. ತೇಭ್ಯೋಽಭಿತಪ್ತೇಭ್ಯ ಸ್ತ್ರಯೋವರ್ಣಾ ಅಜಾಯನ್ತ," ಎಂದು ಛಾಂದೋಗ್ಯದಲ್ಲಿ ಹೇಳಿದ ವರ್ಣವಿಭಾಗ ನಿರುಕ್ತಿ.

"ಪ್ರತ್ಯಗಾನಂದಂ ಬ್ರಹ್ಮ ಪುರುಷಮ್ ಪ್ರಣವ ಸ್ವರೂಪಮ್ ।
ಅಕಾರ, ಉಕಾರ, ಮಕಾರ, ಇತಿ !
ತಾನೇಕಧಾ ಸಮಭರತ್ತದೇತದೋಮಿತಿ ॥ ಎಂದು ಅಥರ್ವಣ ವೇದೋಕ್ತ ನಿರುಕ್ತಿ. ಹಾಗೆಯೇ

"ಅಹಮಪಿ ನಮಮ ಭಗವತ ಏವಾಹಮಸ್ಮಿ ।
ಯಾಶ್ಚಕಾಶ್ಚನ ಕೃತಯಃ ಮಮ ಭಗವತಿ,
ಮಮ ಮಮತಾನಾಸ್ತಿ ತಾಸು, ಭಗವತ ಏವ ತಾಃ ।,

ಎಂಬುದು ನಮಸ್ಸಿನ ಅಕ್ಷರಗಳನ್ನು ವಿಭಾಗಮಾಡಿ ಪದ ವಾಕ್ಯಗಳಾಗಿ ಅರ್ಥಮಾಡಲು ಏರ್ಪಟ್ಟ ನಿರುಕ್ತಿ. ಇದರಿಂದ ಪ್ರಣವ ನಮಸ್ಸಗಳು, ಸ್ವರಾದಿಗಣಗಳಲ್ಲಿ ಪಠಿತಗಳಾಗಿ ಅವ್ಯಯಗಳಾಗಿ, ಕ್ರಮವಾಗಿ ಅನುಜ್ಞಾ, ನಮಸ್ಕಾರ ಬೋಧಕಗಳಾಗಿ ವೈಯ್ಯಾಕರಣ ಸಿದ್ಧಾಂತ ಸಿದ್ಧಗಳಾಗಿದ್ದರೂ, ಮೇಲೆ ಹೇಳಿದ ನಿರುಕ್ತಿಗಳ ಬಲದಿಂದ, ಅವುಗಳಿಗೆ ಪದ, ವಾಕ್ಯ ವಿಭಾಗಗಳು ಪ್ರಮಾಣಸಿದ್ಧಗಳು ಎಂದು ತಾತ್ಪರ್ಯ.

**ನಾನು ಮೆನಕ್ಕುರಿಯೇನಲ್ಲೇನ್** ಇತ್ಯಾದಿ- ನಾನೂ ನನಗೆ ಸೇರಿದವನಲ್ಲ. **ಎನ್ನುಡೈಯದಾನ** ಇತ್ಯಾದಿ- ನನ್ನದಾದ ವ್ಯಾಪಾರಾದಿಗಳೆಲ್ಲಾ ನನಗೆ ಶೇಷವಲ್ಲ. **ಇವೈಯೆಲ್ಲಾಮ್** ಇತ್ಯಾದಿ– ಇವೆಲ್ಲವೂ ಸರ್ವೇಶ್ವರನಿಗೆ ಶೇಷಭೂತಗಳು ಇತ್ಯಾದಿಯಾದ ಅರ್ಥಗಳೆಲ್ಲಾ ನಮಶ್ಶಬ್ದದಲ್ಲಿ ವಿವಕ್ಷಿತಗಳೆಂದು " ಅಹಂನಮಮ, ನಮಮ ಕಿಂಚಿತ್ಸ್ಯಾತ್, ಭಗವತ ಏವಾಹಮಸ್ಮಿ, ಎಂಬ ನಿರುಕ್ತಿಗಳಿಂದ ನಮಸ್ಕಾರ ಪ್ರಕರಣದಲ್ಲಿ **ಓದಪ್ಪಟ್ಟದು**- ವೇದಗಳು ಹೇಳಿವೆ.

### ನಮಃ ಶಬ್ದಕ್ಕೆ ಅಹಿರ್ಬುಧ್ನ್ಯರವ್ಯಾಖ್ಯಾನ

ಹೀಗೆ ಸ್ವತಂತ್ರವಾದ ನಮಶ್ಶಬ್ದಕ್ಕೆ ಅನೇಕಾರ್ಥಗಳಿದ್ದರೂ ಅಷ್ಟಾಕ್ಷರ ಮಂತ್ರ ಘಟಿತವಾದ ನಮಶ್ಶಬ್ದಕ್ಕೆ ಮೇಲೆ ಹೇಳಿದಂತೆ ಅನೇಕಾರ್ಥಗಳು ಪ್ರಮಾಣ ಸಿದ್ಧವೇ, ಎಂದರೆ ಅದನ್ನು ಅಹಿರ್ಬುಧ್ನ್ಯ ಸಂಹಿತಾವಚನಗಳನ್ನು ಎತ್ತಿ ಹೇಳಿ, ಪ್ರಮಾಣೀಕರಿಸುತ್ತಾರೆ. **ಇನ್ನಮಶ್ಶಬ್ದತ್ತುಕ್ಕು** ಇತ್ಯಾದಿ- ಈ ನಮ ಶ್ಶಬ್ದಕ್ಕೆ ಸ್ಥೂಲ ಸೂಕ್ಷ್ಮ ಪರಗಳೆಂದು ಮೂರು ಅರ್ಥಗಳನ್ನು ಅಹಿರ್ಬುಧ್ನ್ಯನು ವ್ಯಾಖ್ಯಾನ ಮಾಡಿರುತ್ತಾನೆ.

1 i) ಪ್ರೇಕ್ಷಾವತಃ ಪ್ರವೃತ್ತಿರ್ಯಾ ಪ್ರಹ್ವೀಭಾವಾತ್ಮಿಕಾ ಸ್ವತಃ ।
ಉತ್ಕೃಷ್ಟಂ ಪರಮುದ್ದಿಶ್ಯ ತನ್ನಮಃಪರಿಗೀಯತೇ ॥
2) ಲೋಕೇ ಚೇತನವರ್ಗಸ್ತು ದ್ವಿಧೈವ ಪರಿಕೀರ್ತ್ಯತೇ ।
ಜ್ಯಾಯಾಂಶ್ಚೈವ ತಥಾಜ್ಯಾಯಾನ್ನೈವಾಭ್ಯಾಂ ವಿದ್ಯತೇ ಪರಃ ॥
3) ಕಾಲತೋಗುಣತಶ್ಚೈವ ಪ್ರಕರ್ಷೋ ಯತ್ರ ತಿಷ್ಠತಿ ।
ಶಬ್ದಸ್ತಂ ಮುಖ್ಯಯಾ ವೃತ್ತ್ಯಾ ಜ್ಯಾಯಾ ನಿತ್ಯವಲಂಬತೇ ॥
4 ಅತ ಶ್ಚೇತನವರ್ಗೋನ್ಯಃಸ್ಮೃತಃ ಪ್ರತ್ಯವರೋ ಬುಧೈಃ ।
ಅಜ್ಯಾಯಾಂಶ್ಚಾನಯೋ ರ್ಯೋಗ ಶ್ಶೇಷ ಶೇಷಿ ತಯೇಷ್ಯತೇ ॥
5) ಅಜ್ಯಾಯಾಂ ಸೋಽಪರೇ ಸರ್ವೇ ಜ್ಯಾಯಾ ನೇಕೋ ಮತಃ ಪರಃ ।
ನಂತೃ ನಂತವ್ಯ ಭಾವೇನ ತೇಷಾಂ ತೇನ ಸಮನ್ವಯಃ ॥
6) ನಂತವ್ಯಃ ಪರಮ ಶ್ಶೇಷೀ ಶೇಷಾ ನಂತಾರ ಈರಿತಾಃ ।
ನಂತೃ ನಂತವ್ಯ ಭಾವೋಽಯಂ ನ ಪ್ರಯೋಜನ ಪೂರ್ವಕಃ ॥

---

### i) ನಮಶ್ಶಬ್ದಕ್ಕೆ ಸ್ಥೂಲಾರ್ಥ

ಮೊದಲು ಸ್ಥೂಲಾರ್ಥಪರಗಳಾದ ವಚನಗಳನ್ನು ಪ್ರೇಕ್ಷಾವತಃಪ್ರವೃತ್ತಿರ್ಯಾ ಎಂದಾರಂಭಿಸಿ ಸ್ಥೂಲೋಯಂ ನಮಸಸ್ತ್ವರ್ಥಃ ಎಂಬುದರ ಪರ್ಯಂತ, ಉದಾಹರಿಸುತ್ತಾರೆ. ಆದಾಗಿ

1. ಪ್ರೇಕ್ಷಾವತಃ ಇತ್ಯಾದಿ – ಸಮೀಚೀನವಾದ ಬುದ್ಧಿವಂತನಿಗೆ, ತನಗಿಂತಲೂ ಉತ್ಕೃಷ್ಟನಾದ ಬೇರೊಬ್ಬನನ್ನು ಕುರಿತು, ಸ್ವತಃ – ಪ್ರಯೋಜನಾಂತರಕ್ಕಲ್ಲದೆ ಸ್ವಾಭಾವಿಕವಾದ ಪ್ರಹ್ವೀಭಾವಾತ್ಮಿಕಾಪ್ರವೃತ್ತಿ-ತಲೆ ಬಾಗಿ ನಡೆಯುವುದೆಂಬ ಪ್ರವೃತ್ತಿಯು "ನಮ" ಶ್ಶಬ್ದಾರ್ಥವೆಂದು ಹೇಳಲ್ಪಡುತ್ತದೆ.

2. ಲೋಕೇ ಚೇತನ ವರ್ಗಸ್ತು ಇತ್ಯಾದಿ–ಲೋಕದಲ್ಲಿ ಅಥವಾ ಶಾಸ್ತ್ರದಲ್ಲಿ (ಲೋಕ್ಯತೇ ಅನೇನ ಎಂಬ ವ್ಯುತ್ಪತ್ತಿಯಿಂದ ಶಾಸ್ತ್ರವೆಂದರ್ಥ) ಜ್ಯಾಯಾನ್ (ದೊಡ್ಡವನು), ಅಜ್ಯಾಯಾನ್ (ಚಿಕ್ಕವನು) ಎಂದು ಚೇತನ ವರ್ಗವು ಎರಡು ಪಂಗಡವಾಗಿ ಹೇಳಲ್ಪಟ್ಟಿದೆ. ಇವುಗಳಿಗಿಂತ ಬೇರೆಯಾದ ಮೂರನೇ ಪಂಗಡವಿಲ್ಲ.

3. ಕಾಲತೋಗುಣತಶ್ಚೈವ ಇತ್ಯಾದಿ – ಯಾವನಲ್ಲಿ ಕಾಲದಿಂದಲೂ ಜ್ಞಾನಾದಿ ಗುಣಗಳಿಂದಲೂ ಉತ್ಕರ್ಷವು ಇದೆಯೋ, ಅವನನ್ನು "ಜ್ಯಾಯಾನ್" ಎಂಬ ಶಬ್ದವು ದೊಡ್ಡವನೆಂದು ಮುಖ್ಯ ವೃತ್ತಿಯಾಗಿ ಹೇಳುತ್ತದೆ. ಇದಕ್ಕಿಂತ ಬೇರೆಯಾದ ಚೇತನವರ್ಗವು ಸ್ಮೃತಃಪ್ರತ್ಯವರೋಬುಧೈಃ–ಚಿಕ್ಕದುದೆಂದು-ಅಜ್ಯಾಯಾನ್ ಎಂದು ಸ್ಮರಿಸಲ್ಪಡುತ್ತದೆ.

4. ಅನಯೋರ್ಯೋಗಃ ಇತ್ಯಾದಿ– ಇವೆರಡು ಪಂಗಡಗಳ ಸಂಬಂಧವು "ಶೇಷ ಶೇಷಿಭಾವ ಸಂಬಂಧ" ವೆಂದು ಇಷ್ಯತೇ-ಬುಧೈಃ ಎಂದು ಆಕರ್ಷಿಸಿ - ಪಂಡಿತರಿಂದ ಸಮ್ಮತಿಸಲ್ಪಡುತ್ತದೆ.

5. ಅಜ್ಯಾಯಾಂಸೋ ಪರೇ ಸರ್ವೇ ಇತ್ಯಾದಿ– ಭಗವಂತನಿಗಿಂತ ಬೇರೆಯಾದ ಜೀವ ವರ್ಗಗಳೆಲ್ಲಾ ಅಜ್ಯಾಯಾಂಸಃ-ಚಿಕ್ಕವರು, ಪರಃ – ಉತ್ಕೃಷ್ಟನಾದ ಭಗವಂತನು ಒಬ್ಬನೇ, ಜ್ಯಾಯಾನ್ – ದೊಡ್ಡವನು, ಜೀವರುಗಳಿಗೂ ಆ ಪರಮಪುರುಷನಿಗೂ, ನಂತೃನಂತವ್ಯಭಾವ ಸಂಬಂಧದಿಂದ ಪರಸ್ಪರಾನ್ವಯು.

6 ನಂತವ್ಯಃಪರಮಶ್ಶೇಷೀ ಇತ್ಯಾದಿ–ಪರಮ ಶೇಷಿಯಾದ ಭಗವಂತನು ನಂತವ್ಯನು-ನಮಸ್ಕರಿಸಲ್ಪಡತಕ್ಕವನು. ಇತರರು ನಂತಾರರು– ನಮಸ್ಕಾರ ಮಾಡುವವರು. ಹಿ[illegible] ನಮಸ್ಕಾರ ಮಾಡುವುದೂ, ನಮಸ್ಕಾರವನ್ನು ಪಡೆಯುವುದೂ ಪ್ರಯೋಜನವನ್ನು ಉದ್ದೇಶಿಸಿಯಲ್ಲ.

7) **ನೀಚೋಚ್ಚಯೋಃ ಸ್ವಭಾವೋ ಯಂ ನಂತ್ಯನಂತನ್ಯತಾತ್ಮಕಃ ।**
**ಉಪಾಧಿರಹಿತೇನಾಯಂ ಯೇನ ಭಾವೇನ ಚೇತನಃ ॥**

8) **ನಮತಿ ಜ್ಯಾಯಸೇ ತಸ್ಮೈತದ್ವಾನಮನ ಮುಚ್ಯತೇ ।**
**ಭಗವಾನ್ಮೇ ಪರೋನಿತ್ಯಮಹಂ ಪತ್ಯವರಸ್ಸದಾ ।**

9) **ಇತಿ ಭಾವೋ ನಮಃ ಪ್ರೋಕ್ತೋ ನಮಸಃ ಕಾರಣಂ ಹಿ ಸಃ ।**
**ನಾಮಯತ್ಯಪಿ ವಾ ದೇವಂ ಪ್ರಹ್ವೀಭಾವಯತಿ ಧ್ರುವಮ್ ।**

10) **ಪ್ರಹ್ವೀಭವತಿ ನೀಚೇ ಹಿ ಪರೋ ನೈಚ್ಯಂ ವಿಲೋಕಯನ್ ।**
**ಅತೋವಾ ನಮ ಉದ್ದಿಷ್ಟಂ ಯತ್ತನ್ನಾಮಯತಿ ಸ್ವಯಮ್ ॥**

11) **ವಾಚಾ ನಮ ಇತಿ ಪ್ರೋಚ್ಯ ಮನಸಾ ವಪುಷಾ ಚ ಯತ್ ।**
**ತನ್ನಮಃ ಪೂರ್ಣ ಮುದ್ದಿಷ್ಟ ಮತೋಽನ್ಯನ್ನ್ಯೂನ ಮುಚ್ಯತೇ ॥**

---

7. **ನೀಚೋಚ್ಚಯಸ್ವಭಾವೋಽಯಂ** ಇತ್ಯಾದಿ- ಇದು ನೀಚೋಚ್ಚರ ಸ್ವಭಾವವು. ಅಂದರೆ ಚಿಕ್ಕವನು ದೊಡ್ಡವನಿಗೆ ನಮಸ್ಕಾರ ಮಾಡಬೇಕೆಂದು ಸ್ವಭಾವಸಿದ್ಧವಾದದ್ದು. ಅಂದರೆ ಪ್ರಯೋಜನಾಂತರದಲ್ಲಿ ಆಸೆಯಿಲ್ಲದೆ, ಶೇಷಶೇಷಿ ಭಾವ ಸಂಬಂಧದಿಂದ, ದೊಡ್ಡವನನ್ನು ಕುರಿತು, ಚಿಕ್ಕವನು, ಇವನು ದೊಡ್ಡವನು, ನಾನು ಇವನಿಗೆ ಶೇಷಭೂತನು ಎಂದು, ಮಾಡುವ ಜ್ಞಾನಾನುಸಂಧಾನವೇ ನಮಶ್ಶಬ್ದಾರ್ಥ. **ಉಪಾಧಿರಹಿತೇನಾಯಂ** ಇತ್ಯಾದಿ ಕಾರಣವಿಲ್ಲದೆ, ಯಾವ ಭಾವದಿಂದ ಚೇತನನು ದೊಡ್ಡವನಿಗೆ ನಮಸ್ಕರಿಸುತ್ತಾನೋ ಅದು 'ನಮನ'ವೆನಿಸುತ್ತದೆ ನಮಶ್ಶಬ್ದಾರ್ಥವೆಂಬುದು ಅರ್ಥ.

8. **ಭಗವಾನ್ಮೇಪರೋನಿತ್ಯಂ** ಇತ್ಯಾದಿ–ಭಗವಂತನು ನನಗೆ ನಿತ್ಯವೂ ಶೇಷಿ. ನಾನು ಸರ್ವಕಾಲದಲ್ಲಿಯೂ ಅವನಿಗೆ ಪ್ರತ್ಯವರಃ–ಶೇಷಭೂತನು, ಎಂಬ ಭಾವನೆಯು, ಅಂದರೆ ಜ್ಞಾನವು ಕರಣವ್ಯುತ್ಪತ್ತಿಯಿಂದ ನಮಸ್ಸೆಂದು ಹೇಳಲ್ಪಡುತ್ತದೆ. **ನಮಸಃ ಕಾರಣಂ ಹಿ ಸಃ**–ಆ ಶೇಷ ಶೇಷಿ ಭಾವಜ್ಞಾನವು "ನಮ" ಎಂಬ ವಾಚಿಕನಮಸ್ಕಾರಕ್ಕೂ ಕಾರಣವಾಗಿ ಆಗುವುದರಿಂದ ಕರಣವ್ಯುತ್ಪತ್ತಿಯಿಂದ ನಮಶ್ಶಬ್ದವನ್ನು ಹೇಳುತ್ತದೆಯೆಂದು ಆಚಾರ್ಯರ ಅಭಿಪ್ರಾಯ.

9. **ನಾಮಯತ್ಯಪಿ ವಾ ದೇವಂ** ಇತ್ಯಾದಿ- ಅನಂತರ ವ್ಯುತ್ಪತ್ತ್ಯಂತರದಿಂದ ನಮ ಶ್ಶಬ್ದಕ್ಕೆ ಶರಣಾಗತಿ ಪರವಾಗಿ ಅರ್ಥವನ್ನು ತೋರಿಸುತ್ತಾರೆ. ಅದಾಗಿ, **ಅಪಿವಾ**–ಶರಣಾಗತಿ ರೂಪವಾದ ಈ ನಮನವು **ದೇವಂ ನಾಮಯತಿ**- ಭಗವಂತನನ್ನು ಶರಣಾಗತಿ ಮಾಡಿದವನ ವಿಷಯದಲ್ಲಿ ತಲೆಬಾಗುವಂತೆ ಮಾಡುತ್ತದೆ- ಅಂದರೆ ಭಗವಂತನು ಕೋಪತಾಪಗಳನ್ನು ಬಿಟ್ಟು ಶರಣಾಗತನ ಇಷ್ಟಾರ್ಥವನ್ನು ಕೊಡುವಂತೆ ಮಾಡುತ್ತದೆ.

10. **ಪ್ರಹ್ವೀಭವತಿ ನೀಚೇಹಿ** ಇತ್ಯಾದಿ- ತನಗೆ ತಲೆ ಬಾಗಿದವನಿಗೆ, ಅವನ ನೈಚ್ಯವನ್ನು ನೋಡಿ ಭಗವಂತನೂ ಪ್ರಹ್ವೀ ಭವತಿ–ಅವನಿಗೆ ಪರವಶನಾಗಿ ಭಗವಂತನೂ ಅನುಗ್ರಹೈಕ ಪ್ರವಣನಾಗುತ್ತಾನೆ. ಇದರಿಂದ ಫಲಿತಾರ್ಥವನ್ನು **ಅತೋವಾ ನಮ** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಯಾವ ಕಾರಣದಿಂದ ಶರಣಾಗತಿರೂಪ ವಾದ ಈ ನಮನವು ಭಗವಂತನನ್ನೂ ತಾನಾಗಿಯೇ ಶರಣಾಗತನ ಪರವಶನಾಗುವಂತೆ ಮಾಡುತ್ತದೆಯೋ, ಆ ಕಾರಣದಿಂದಲೇ ಶರಣಾಗತರೂಪ ನಮನವೇ ನಮಶ್ಶಬ್ದಾರ್ಥ.

11. **ವಾಚಾ ನಮ ಇತಿ ಪ್ರೋಚ್ಯ** ಇತಿ– ಈ ನಮಸ್ಕಾರದ ಪೂರ್ಣತ್ವವನ್ನು ತಿಳಿಸುತ್ತಾರೆ. ಅದಾಗಿ ಬಾಯಿಯಿಂದ ನಮಃ ಎಂದು ಹೇಳಿ ಮನಸ್ಸಿನಿಂದಲೂ, ಶರೀರದಿಂದಲೂ, ಮಾಡುವ ನಮಸ್ಕಾರವು ಪೂರ್ಣ ನಮಸ್ಕಾರವು. ಹೀಗೆ ತ್ರಿಕರಣ ನಮಸ್ಕಾರಕ್ಕಿಂತೆ, ಏಕ ಕರಣಕ, ದ್ವಿಕರಣಕ ನಮಸ್ಕಾರವು ನ್ಯೂನವು. ಅಂದರೆ ಮಾನಸಿಕವಾದ ಶರಣಾಗತಿರೂಪ ಸಾಧನಕ್ಕೆ ವಾಚಾನಮಃ ಎಂದು ಹೇಳಿ, ಕಾಯಿಕವಾಗಿ ಪ್ರಣಾಮವನ್ನು ಮಾಡುವುದು, ಆ ಶರಣಾಗತಿಯ ಪರೀವಾಹ ಪೂರ್ತಿ ಎಂದರ್ಥ.

12) ಇಯಂ ಕರಣಪೂರ್ತಿಸ್ಸ್ಯಾ ದಂಗಪೂರ್ತಿ ಮಿಮಾಂ ಶೃಣು ||
ಶಾಶ್ವತೀ ಮಮ ಸಂಸಿದ್ಧಿರಿಯಂ ಪ್ರಹ್ವೀಭವಾಮಿ ಯತ್ ||
13) ಪುರುಷಂ ಪರ ಮುದ್ದಿಶ್ಯ ನ ಮೇ ಸಿದ್ಧಿರಿತೋಽನ್ಯಥಾ |
ಇತ್ಯಂಗ ಮುದಿತಂ ಶ್ರೇಷ್ಠಂ ಫಲೇಪ್ಸಾ ತದ್ವಿರೋಧಿನೀ ||
14) ಅನಾದಿವಾಸನಾರೋಹಾ ದನೈಶ್ವರ್ಯಾತ್ಸ್ವಭಾವಜಾತ್ |
ಮಲಾವಕುಂಠಿತತ್ವಾಚ್ಚ ದೃಕ್ಕ್ರಿಯಾ ವಿಹತಿ ರ್ಹಿಯಾ ||
15) ತತ್ಕಾರ್ಪಣ್ಯಂ ತದುದ್ಬೋಧೋ ದ್ವಿತೀಯಂ ಹ್ಯಂಗ ಮೀದೃಶಂ |
ಸ್ವಸ್ವಾತಂತ್ರ್ಯಾವಬೋಧಸ್ತು ತದ್ವಿರೋಧ ಉದೀರ್ಯತೇ ||
16) ಪರತ್ವೇ ಸತಿ ದೇವೋಽಯಂ ಭೂತಾನಾ ಮನುಕಂಪನಃ |
ಅನುಗ್ರಹೈಕಧೀ ರ್ನಿತ್ಯಮಿತ್ಯೇತತ್ತು ತೃತೀಯಕಮ್ ||
17) ಉಪೇಕ್ಷಕೋ ಯಥಾಕರ್ಮ ಫಲದಾಯೀತಿ ಯಾ ಮತಿಃ |
ವಿಶ್ವಾಸಾತ್ಮಕ ಮೇತತ್ತು ತೃತೀಯಂ ಹನ್ತಿ ನೈಸದಾ ||

---

12. ಇಯಂಕರಣಪೂರ್ತಿಸ್ಯಾತ್ ಇತ್ಯಾದಿ ಇಯಂ–ಹೀಗೆ ವಾಚಿಕ ಕಾಯಿಕಗಳು ಕೂಡಿ ಮಾಡುವ ವ್ಯಾಪಾರವು ಕರಣಪೂರ್ತಿಃ–ಅಂಗಿಯಾಗಿಯೂ, ಮೋಕ್ಷ ಸಾಧನವಾಗಿಯೂ ಇರುವ ಮಾನಸಿಕ ರೂಪವಾದ ಶರಣಾಗತಿಗೆ ಪೂರ್ಣತ್ವವನ್ನುಂಟುಮಾಡುತ್ತದೆ. ಅಂಗಪೂರ್ತಿಮಿಮಾಂಶೃಣು ಎಂದು,– ಈ ಶರಣಾಗತಿಯ ಅಂಗಗಳನ್ನು ಕೇಳಿ ತಿಳಿದುಕೋ ಎಂದು ಹೇಳತೊಡಗುತ್ತಾರೆ.

13. ಶಾಶ್ವತೀಮಮ ಸಂಸಿದ್ಧಿಃ ಇತ್ಯಾದಿ– ಪರಮ ಪುರುಷನನ್ನು ಕುರಿತು ಮಾಡುವ ಈ ಪ್ರಹ್ವೀಭಾವಾತ್ಮಕವಾದ ಶರಣಾಗತಿಯೇ ನನಗೆ ಶಾಶ್ವತವಾದ ಸಂಸಿದ್ಧಿಃ– ಪರಮ ಪ್ರಯೋಜನವೆಂದರ್ಥ. ಈ ಶರಣಾಗತಿಗಳಿಗಿಂತ ಬೇರೆ ಫಲವು ನನಗೆ ಬೇಕಿಲ್ಲ, ಎಂಬ ಫಲತ್ಯಾಗರೂಪ ಬುದ್ಧಿಯು ಶ್ರೇಷ್ಠವಾದ ಅಂಗವು. ಫಲದಲ್ಲಿ ಆಸೆಯು ಅದಕ್ಕೆ ವಿರೋಧಿ.

14. ಅನಾದಿವಾಸನಾರೋಹಾತ್ ಇತ್ಯಾದಿ– ಕಾರ್ಪಣ್ಯವನ್ನು ಎರಡನೇ ಅಂಗವನ್ನಾಗಿ ತೋರಿಸುತ್ತಾರೆ. ಅದಾಗಿ ಅನಾದಿಯಾದ ದುರ್ವಾಸನೆಯಿಂದಲೂ, ಸ್ವಾಭಾವಿಕವಾದ ಪಾರತಂತ್ರ್ಯದಿಂದಲೂ, ಅಸಾಮರ್ಥ್ಯದಿಂದ ಎಂದರ್ಥ, ಅವಿದ್ಯಾದಿಗಳಿಂದ ಮುಚ್ಚಲ್ಪಟ್ಟು ಇರುವ ಜ್ಞಾನ ಶಕ್ತಿಗಳ ಸಂಕೋಚವು,ಆಕಿಂಚನ್ಯರೂಪವಾದಅಧಿಕಾರ.

15. ತದುದ್ಬೋಧೋ–ಆ ಆಕಿಂಚನ್ಯದ ಅನುಸಂಧಾನವು, ಅಜ್ಞಃ ಉಪಾಯಾಂತರಾ ಶಕ್ತಃ, ಎಂದು ಭಗವತ್ಸನ್ನಿಧಿಯಲ್ಲಿ ಮಾಡಬೇಕಾದ ವಿಜ್ಞಾಪನೆ. ದ್ವಿತೀಯಮಂಗಂ–ಎರಡನೆಯಅಂಗ. ಇದಕ್ಕೆ ವಿರೋಧಿಯನ್ನು ಸ್ವಸ್ವಾತಂತ್ರ್ಯಾವಬೋಧಸ್ತು ಎಂದು ತಿಳಿಸುತ್ತಾರೆ. ಅದಾಗಿ ನಾನು ಸ್ವತಂತ್ರನು ಎಂದು ತಿಳಿದರೆ ಆಕಿಂಚನ್ಯವು ಘಟಿಸುವುದಿಲ್ಲ.

16. ಪರತ್ವೇ ಸತಿ ದೇವೋಽಯಂ, ಎಂದಾರಂಭಿಸಿ ಮಹಾವಿಶ್ವಾಸವನ್ನು ನಿರೂಪಿಸುತ್ತಾರೆ. ಅದಾಗಿ ಭಗವಂತನು ಸರ್ವಸ್ಮಾತ್ಪರನಾಗಿದ್ದರೂ ಸರ್ವಭೂತಗಳ ವಿಷಯದಲ್ಲಿಯೂ ದಯೆಯಿಂದ ಕೂಡಿದವನಾದ್ದರಿಂದ, ನನ್ನ ವಿಷಯದಲ್ಲಿಯೂ ಅನುಗ್ರಹಿಸಬೇಕೆಂದೇ ಸದಾ ಇರುವುದರಿಂದಲೂ, ನನ್ನ ಅನಂತ ಪಾಪಗಳನ್ನು ಶರಣಾಗತನೆಂಬ ಕಾರಣ ಮಾತ್ರದಿಂದ ಕ್ಷಮಿಸಿ, ನನ್ನನ್ನು ರಕ್ಷಿಸುತ್ತಾನೆಂಬ ಮಹಾ ವಿಶ್ವಾಸವು ಮೂರನೆಯ ಅಂಗ.

17. ಇದಕ್ಕೆ ವಿರೋಧವಾದದ್ದು ಉಪೇಕ್ಷಕಃ ಇತ್ಯಾದಿ ತಿಳಿಸುತ್ತಾರೆ. ಅದಾಗಿ ಭಗವಂತನು "ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ,ಎಂದು ಹೇಳುವಂತೆ ನನಗೆ ದ್ವೇಷಿಯೂ ಇಲ್ಲ, ಪ್ರಿಯನೂ ಇಲ್ಲ ಎಂದು ಉಪೇಕ್ಷೆಯಿಂದ ಕೂಡಿ, ಯಥಾಕರ್ಮಫಲದಾಯೀ–ಕರ್ಮಾನುಗುಣವಾಗಿ ಫಲವನ್ನು ಕೊಡುತ್ತಾನೆ, ಅನಾದಿಯಾದ ಅನಂತ

18) ಏವಂ ಭೂತೋಽಪ್ಯ ಶಕ್ತಸ್ಸನ್ ನ ತ್ರಾಣಂ ಭವಿತುಂ ಕ್ಷಮಃ ।
ಇತಿ ಬುದ್ಧ್ಯಾಸ್ಯ ದೇವಸ್ಯ ಗೋಪ್ತೃಶಕ್ತಿನಿರೂಪಣಮ್ ॥
19) ಚತುರ್ಥ ಮಙ್ಗ ಮುದ್ದಿಷ್ಟ ಮಮುಷ್ಯ ವ್ಯಾಹತಿಃ ಪುನಃ ।
ಉದಾಸೀನೋ ಗುಣಾಭಾವಾ ದಿತ್ಯುತ್ಪ್ರೇಕ್ಷಾ ನಿಮಿತ್ತಜಾ ॥

20) ಸ್ವಸ್ಯಸ್ವಾಮಿನಿ ವೃತ್ತಿ ರ್ಯಾ ಪ್ರಾತಿಕೂಲ್ಯಸ್ಯ ವರ್ಜನಮ್ ।
ತದಙ್ಗಂ ಪಂಚಮಂ ಪ್ರೋಕ್ತ ಮಾಜ್ಞಾವ್ಯಾಘಾತ ವರ್ಜನಮ್ ॥
ಅಶಾಸ್ತ್ರೀಯೋಪಸೇವಾ ತು ತದ್ವಿಘಾತ ಉದೀರ್ಯತೇ ॥

21) ಚರಾಚರಾಣಿ ಭೂತಾನಿ ಸರ್ವಾಣಿ ಭಗವದ್ವಪುಃ ।
ಅತಸ್ತದಾನುಕೂಲ್ಯಂ ಮೇ ಕಾರ್ಯ ಮಿತ್ಯೇವ ನಿಶ್ಚಯಃ ।
ಷಷ್ಠಮಙ್ಗಂ ಸಮುದ್ದಿಷ್ಟಂ ತದ್ವ್ಯಾಘಾತೋ ನಿರಾಕೃತಿಃ ॥

---

ಕೋಟಿ ಪಾಪಗಳಿಗೆ ಶಿಕ್ಷೆಯನ್ನು ಕೊಡುತ್ತಾನೆಯೇ ಹೊರತು, ಅಲ್ಪವಾದ ಶರಣಾಗತಿಯೆಂಬ ವ್ಯಾಪಾರಕ್ಕೆ ವಶಪಟ್ಟು ನಮ್ಮ ಪಾಪಗಳನ್ನು ಕ್ಷಮಿಸಿ ರಕ್ಷಿಸುವುದಿಲ್ಲವೆಂಬ ಬುದ್ಧಿಯು, ಮಹಾ ವಿಶ್ವಾಸವನ್ನು ಸದಾ ತಡೆಯುತ್ತದೆ.

18-19. **ಏವಂಭೂತೋಽಪ್ಯಶಕ್ತಸ್ಸನ್** ಇತ್ಯಾದಿಯಾಗಿ, ಗೋಪ್ತೃತ್ವವರಣವೆಂಬ ನಾಲ್ಕನೆಯ ಅಂಗವನ್ನು ನಿರೂಪಿಸುತ್ತಾರೆ. ಆದಾಗಿ ಭಗವಂತನು ಅನುಗ್ರಹೈಕ ಶೀಲನಾಗಿ ರಕ್ಷಣೋನ್ಮುಖನಾಗಿದ್ದರೂ, ಅಶಕ್ತನಾಗಿ ರಕ್ಷಿಸಲು ಸಮರ್ಥನಲ್ಲವೆಂಬ ಸಾಮಾನ್ಯ ಬುದ್ಧಿಯಿಂದ ಕೂಡಿದವನು, ಭಗವಂತನು ಶಕ್ತನು, ಆದ್ದರಿಂದ ಅವಶ್ಯ ರಕ್ಷಿಸ್ಸುತ್ತಾನೆಂದು ನಿಶ್ಚಯಿಸಿ "ತ್ವಂಮೇ ಗೋಪಾಯಿತಾ ಭವ", ನೀನು ನನ್ನನ್ನು ರಕ್ಷಿಸು ಎಂದು ಮಾಡುವ ಭಗವತ್ಪ್ರಾರ್ಥನೆಯು ಗೋಪ್ತೃತ್ವ ವರಣವೆಂಬ ನಾಲ್ಕನೆಯ ಅಂಗ. **ಉದಾಸೀನೋ ಗುಣಾಭಾವಾತ್** ಇತ್ಯಾದಿ–ಭಗವಂತನಿಗೆ ಪಾಪಿಗಳನ್ನು ರಕ್ಷಿಸಲು ಶಕ್ತಿಯಿಲ್ಲವಾದ್ದರಿಂದ ಉದಾಸೀನನಾಗಿಯೇ ಇರುತ್ತಾನೆ, ರಕ್ಷಿಸುವುದಿಲ್ಲ, ಎಂಬ ಉತ್ಪ್ರೇಕ್ಷೆಯು, ಇದಕ್ಕೆ ವಿರೋಧಿ. **ಗೋಪ್ತೃಶಕ್ತಿನಿರೂಪಣಮ್**, ಭಗವಂತನ ರಕ್ಷಕತ್ವ ಶಕ್ತಿನಿರೂಪಣ ಪ್ರಯೋಜನವು ಗೋಪ್ತೃತ್ವ ವರಣವಾದ್ದರಿಂದ, ಅದನ್ನು ಇಲ್ಲಿ ತಿಳಿಸಿದಂತಾಯಿತು.

20. **ಸ್ವಸ್ಯಸ್ವಾಮಿನಿವೃತ್ತಿರ್ಯಾ** – ಅನಂತರ ಪ್ರಾತಿಕೂಲ್ಯವರ್ಜನವನ್ನು ನಿರೂಪಿಸುತ್ತಾರೆ- ಸ್ವಸ್ಯ ಸ್ವಾಮಿನಿ ಇತ್ಯಾದಿ– ತನಗೆ ಸ್ವಾಮಿಯ ಆಜ್ಞಾನುಪಾಲನವನ್ನು ಮಾಡದೆ ಇರುವುದೆಂಬ ಪ್ರಾತಿಕೂಲ್ಯವನ್ನು ವರ್ಜನೆ ಮಾಡುವುದು, (ಐದನೆಯ ಅಂಗ) **ಅಶಾಸ್ತ್ರೀಯೋಪಸೇವಾತು** ಇತ್ಯಾದಿ– ಅಶಾಸ್ತ್ರೀಯವಾದ ಕೆಲಸಗಳನ್ನು ಮಾಡುವುದು, ಅಂದರೆ ಶಾಸ್ತ್ರಗಳು ನಿಷೇಧಿಸಿರುವ "ನಕಲಂಜಂಭಕ್ಷಯೇತ್" ಇತ್ಯಾದಿ ಕಾರ್ಯಗಳನ್ನು ಮಾಡುವುದೂ, ವಿಧಿಸಿರುವ ಕಾರ್ಯಗಳನ್ನು ಮಾಡದಿರುವುದೂ ಈ ಅಂಗಕ್ಕೆ ವಿರೋಧವಾದವು.

21. **ಚರಾಚರಾಣಿ ಭೂತಾನಿ** ಇತ್ಯಾದಿ– ಜಂಗಮ ಸ್ಥಾವರಾತ್ಮಕವಾದ ಸಕಲಭೂತಗಳೂ ಭಗವಂತನಿಗೆ ಶರೀರ. ಎಲ್ಲವೂ ಅವನಿಂದ ಧರಿಸಲ್ಪಟ್ಟು ಅಂತಃ ಪ್ರವೇಶಿಸಲ್ಪಟ್ಟು, ನಿಯಮಿಸಲ್ಪಟ್ಟಿರತಕ್ಕವು. ಅವುಗಳಿಗೆ ಅನುಕೂಲ್ಯವನ್ನು ಮಾಡಬೇಕೆಂದು ನಿಶ್ಚಯಿಸುವುದೇ ಅನುಕೂಲ್ಯ ಸಂಕಲ್ಪ. ಯಾವ ಪ್ರಾಣಿಯನ್ನು ಹಿಂಸಿಸಿದರೂ ತದಂತರ್ಯಾಮಿಯಾದ ಪರಮಾತ್ಮನನ್ನು ಹಿಂಸಿಸಿದಂತೆಯಾಗುತ್ತದೆ. ಅದನ್ನು ಮಾಡದಿರಬೇಕೆಂಬ ಸಂಕಲ್ಪವು ಇಲ್ಲಿ ವಿವಕ್ಷಿತ ಇದು ಆರನೆಯ ಅಂಗ. **ತದ್ವ್ಯಾಘಾತೋ ನಿರಾಕೃತಿಃ** - ಈ ಸಂಕಲ್ಪಕ್ಕೆ ವಿರೋಧಿ ಭೂತದ್ರೋಹ.

22) ಪೂರ್ಣಮಙ್ಗೈ ರುಪಾಙ್ಗೈಶ್ಚ ನಮನಂ ತೇ ಪ್ರಕೀರ್ತಿತಮ್ ।
ಸ್ಥೂಲೋಽಯಂ ನಮಸ ಸ್ತ್ವರ್ಥ ಸ್ಸೂಕ್ಷ್ಮ ಮನ್ಯನ್ನಿಶಾಮಯ ॥

2) ಅಥ ನಮಸಃ ಸೂಕ್ಷ್ಮಾರ್ಥಃ

23) ಚೇತನಸ್ಯ ಯದಾಮಮ್ಯಂ ಸ್ವಸ್ಮಿನ್ ಸ್ವೀಯೇಷು ಚ ವಸ್ತುನಿ ।
ಮಮ ಇತ್ಯಕ್ಷರದ್ವಂದ್ವಂ ತದಾ ಮಮ್ಯಸ್ಯ ವಾಚಕಮ್ ॥

24. ಅನಾದಿವಾಸನಾರೂಢ ಮಿಥ್ಯಾಜ್ಞಾನ ನಿಬಂಧನಾ ।
ಆತ್ಮಾತ್ಮೀಯ ಪದಾರ್ಥಸ್ಥಾ ಯಾ ಸ್ವಾತಂತ್ರ್ಯ ಸ್ವತಾಮತಿಃ ॥

25. ಮೇ ನೇ ತ್ಯೇವಂ ಸಮೀಚೀನ ಬುದ್ಧ್ಯಾ ಸಾ ತ್ರ ನಿವಾರ್ಯತೇ ।
ನಾಹಂ ಮಮ ಸ್ವತಂತ್ರೋಽಹಂ ನಾಸ್ಮೀ ತ್ಯಸ್ಯಾರ್ಥ ಉಚ್ಯತೇ ॥

26. ನ ಮೇ ದೇಹಾದಿಕಂ ವಸ್ತು ಸ ಶೇಷಃ ಪರಮಾತ್ಮನಃ ।
ಇತಿ ಬುದ್ಧ್ಯಾ ನಿವರ್ತನ್ತೇ ತಾಸ್ತಾ ಸ್ಸ್ವೀಯಾ ಮನೀಷಿಕಾಃ ॥

---

22. ಸ್ಥೂಲಾರ್ಥವನ್ನು ಪೂರ್ಣಮಂಗೈರುಪಾಂಗೈಶ್ಚ ಎಂದಾರಂಭಿಸಿ ನಿಗಮಿಸುತ್ತಾರೆ. ಆದಾಗಿ, ಫಲತ್ಯಾಗ' ಕಾರ್ಪಣ್ಯಾದಿರೂಪಗಳಾದ ಅಂಗಗಳಿಂದಲೂ ತದ್ವಿರೋಧಿತ್ಯಾಗರೂಪಗಳಾದ ಉಪಾಂಗಗಳೊಡನೆಯೂ, ಪೂರ್ಣವಾದ ಶರಣಾಗತಿ ರೂಪವಾದ ನಮನವು ಹೇಳಲ್ಪಟ್ಟಿತು. ಸ್ಥೂಲೋಽಯಂ ನಮಸಸ್ತ್ವರ್ಥಃ – ಹೀಗೆ ನಮಶ್ಶಬ್ದಕ್ಕೆ ಸ್ಥೂಲಾರ್ಥ ಯೋಜನೆಯಲ್ಲಿ "ಶರಣಾಗತಿ"ಯು ನಿರೂಪಿಸಲ್ಪಟ್ಟಿತು. ಸೂಕ್ಷ್ಮಮನ್ಯನ್ನಿಶಾಮಯ– ಅನಂತರ ಸೂಕ್ಷ್ಮಾರ್ಥವನ್ನು ತಿಳಿಸುವುದಾಗಿ ಹೇಳುತ್ತಾರೆ.

2) ನಮಶ್ಶಬ್ದಕ್ಕೆ ಸೂಕ್ಷ್ಮಾರ್ಥ

23) ಚೇತನಸ್ಯ ಇತ್ಯಾದಿ–ಚೇತನನಿಗೆ ಸ್ವಸ್ಮಿನ್ ತನ್ನಲ್ಲಿಯೂ ಸ್ವೀಯೇಷು ಚ ವಸ್ತುನಿ ತನ್ನ ವಸ್ತುವಿನಲ್ಲಿಯೂ, ಯದಾಮಮ್ಯಂ ನಾನು ನನಗೆ ಸ್ವತಂತ್ರನು, ಇವೆಲ್ಲಾ ನನಗೆ ಸೇರಿದವು, ಎಂಬ ಮಮತ್ವ ಬುದ್ಧಿಯು ಯಾವಾಗ ಉಂಟಾಗುತ್ತದೆಯೋ, ಆಗ ಮಮ ಇತ್ಯಕ್ಷರ ದ್ವಂದ್ವಂ ಇತ್ಯಾದಿ ಮಮ ಎಂಬ ಎರಡು ಅಕ್ಷರಗಳು, 'ಅಹಂ ಮಮ' ಎಂಬ ಅಹಂಕಾರಕ್ಕೆ, 'ಇಮೇ ಮದೀಯಾಃ' ಎಂಬ ಮಮಕಾರಕ್ಕೆ ವಾಚಕಗಳು.

24) ಅನಾದಿವಾಸನಾರೂಢ ಎಂದಾರಂಭಿಸಿ ಇದನ್ನು ವಿಸ್ತರಿಸುತ್ತಾರೆ. ಆದಾಗಿ ಮಿಥ್ಯಾಜ್ಞಾನಂ– ದೇಹಾತ್ಮಭ್ರಮಾದಿರೂಪವಾದ, ಅಯಥಾವಸ್ಥಿತವಾದ ಜ್ಞಾನಕ್ಕೆ ಯಾ-ಯಾವ ಆತ್ಮಸ್ಥಾ ಸ್ವಾತಂತ್ರ್ಯಮತಿಃ– ಆತ್ಮೀಯಪದಾರ್ಥಸ್ಥಾ ಸ್ವತಾಮತಿಃ ಎಂದು ಅನ್ವಯಿಸಿ, ನಾನು ಸ್ವತಂತ್ರನು, ಆತ್ಮೀಯ ಪದಾರ್ಥಗಳೆಲ್ಲಾ ನನಗೇ ಸೇರಿದ್ದವೆಂಬ ಬುದ್ಧಿಯು. ನಿಬಂಧನಾ–ಕಾರಣವಾದದ್ದು.

25) ಮೇನೇ ತ್ಯೇವಂ ಸಮೀಚೀನ ಇತ್ಯಾದಿ- ಮೇ– ನನಗೆ– ನ– ಇಲ್ಲ– ನಾನು ಸ್ವತಂತ್ರನಲ್ಲ, ಇವುಗಳು ನನಗೆ ಶೇಷಭೂತಗಳಲ್ಲ, ಎಂಬ ಸಮೀಚೀನ ಬುದ್ಧಿಯಿಂದ ಈ ಅಹಂಕಾರ ಮಮಕಾರಗಳು ತಡೆಯಲ್ಪಡುತ್ತವೆ. ಇದನ್ನು ವಿವರಿಸುತ್ತಾರೆ - ನಾಹಂ ಮಮ ಸ್ವತಂತ್ರೋಽಹಂ ಇತ್ಯಾದಿ. ನಾನು ನನಗೆ ಸೇರಿದವನಲ್ಲ. ಸ್ವತಂತ್ರನೂ ಅಲ್ಲ.

26) ನಮೇ ದೇಹಾದಿಕಂ ವಸ್ತು ಇತ್ಯಾದಿ – ದೇಹಾದಿಗಳಾದ ವಸ್ತುಗಳು ನನ್ನವಲ್ಲ. ಅವೆಲ್ಲಾ ಪರಮಾತ್ಮನಿಗೇ ಶೇಷಭೂತಗಳು ಎಂಬುದು ನಮ ಶ್ಶಬ್ದದ ಸಮುದಾಯಾರ್ಥ. ಇತಿಬುಧ್ಯಾ– ಇತ್ಯಾದಿಯಾದ ಬುದ್ಧಿಯಿಂದ, ತನ್ನ ಸ್ವಾತಂತ್ರ್ಯಬುದ್ಧಿಯೂ ಇತರ ವಸ್ತುಗಳಲ್ಲಿ ಸ್ವೀಯತ್ವಬುದ್ಧಿಯೂ ನಿವರ್ತಗಳಾಗುತ್ತವೆ.

27. ಅನಾದಿವಾಸನಾಜಾತೈರ್ಬೋಧೈ ಸ್ತೈಸ್ತೈರ್ವಿಕಲ್ಪಿತೈಃ ।
ರೂಷಿತಂಯದ್ಧೃಢಂ ತತ್ರಸ್ವಾತಂತ್ರ್ಯಸ್ವತ್ವಧೀಮಯಂ ॥
28. ತತ್ತ್ವದ್ವೈಷ್ಣವ ಸಾರ್ವಾ (ರ್ಥ್ಯ) ತ್ಮ್ಯ ಪ್ರತಿಬೋಧ ಸಮುತ್ಥಯಾ ।
ನಮ ಇತ್ಯೇತಯಾ ವಾಚಾ ನನ್ತ್ರಾಸ್ವಸ್ಮಾದ ಪೋಹ್ಯತೇ ॥
29. ಇತಿ ತೇ ಸೂಕ್ಷ್ಮ ಉದ್ದಿಷ್ಟಃ ಪರ ಮನ್ಯನ್ನಿಶಾಮಯ ।
ಪನ್ಥಾ ನಕಾರ ಉದ್ದಿಷ್ಟೋ ಮಃ ಪ್ರಧಾನೋ ನಿರೂಪ್ಯತೇ ॥
30 ವಿಸರ್ಗಃ ಪರಮೇಶಸ್ತು ತತ್ರಾರ್ಥೋಽಯಂ ನಿರುಚ್ಯತೇ ।
ಅನಾದಿಃಪರಮೇಶೋಽಯಃ ಶಕ್ತಿಮಾನ್ ಪುರುಷೋತ್ತಮಃ ॥
ತತ್ಪ್ರಾಪ್ತಯೇ ಪ್ರಧಾನೋಽಯಂ ಪಂಥಾ ನಮನ ನಾಮವಾನ್ ।

---

27) **ಅನಾದಿವಾಸನಾಜಾತೈಃ** ಇತ್ಯಾದಿ–ಮೇಲೆ ಹೇಳಿದ ಅರ್ಥವನ್ನೇ ಪ್ರಕಾರಾಂತರೇಣ ಉಪಪಾದಿಸುತ್ತಾರೆ. ಅದಾಗಿ **ಅನಾದಿವಾಸನಾಜಾತೈಃ** ಇತ್ಯಾದಿ-ಅನಾದಿಯಾದ ವಾಸನೆಯಿಂದ ಉಂಟಾದ-**ತೈಸ್ತೈರ್ವಿಕಲ್ಪಿತೈಃ**-ಸ್ವ ಸ್ವಕೀಯ ವಿಷಯಗಳಾಗಿಯೂ, ಅನ್ಯಶೇಷ ವಿಷಯಗಳಾಗಿಯೂ, **ಧೃಢಂ ರೂಪಿತಂ**–ದೃಢವಾಗಿ ಅನುಲಿಪ್ತವಾದ, **ಸ್ವಾತಂತ್ರ್ಯಸ್ವತ್ವಧೀಮಯಂ**– ತಾನು, ತನ್ನದೆಂಬ ಬುದ್ಧಿರೂಪವಾದ ಆಯಾಯಾ ವಸ್ತುಗಳು,

28) **ತತ್ತದ್ವೈಷ್ಣವ ಸಾರ್ವಾತ್ಮ್ಯ ಪ್ರತಿಬೋಧ** ಇತ್ಯಾದಿ, ಆಯಾಯಾ ಪದಾರ್ಥಗಳಲ್ಲಿ ವಿಷ್ಣುವು ಅಂತರ್ಯಾಮಿಯಾಗಿರುವುದರಿಂದ, ಅವನಿಗೆ ಸೇರಿದವು ಎಂಬ ಜ್ಞಾನದಿಂದ, (ವಿಷ್ಣು ಸಂಬಂಧೀ ವೈಷ್ಣವಮ್, ಸರ್ವೇಷಾಂ ಆತ್ಮಾಸರ್ವಾತ್ಮಾ, ತಸ್ಯ ಪ್ರತಿಬೋಧ–, ಸಾರ್ವಾತ್ಮ್ಯ ಪ್ರತಿಬೋಧಃ ವೈಷ್ಣವ ಸಂಬಂಧಿ ಸಾರ್ವಾತ್ಮ್ಯ ಪ್ರತಿಬೋಧಃ– ವೈಷ್ಣವ ಸಾರ್ವಾತ್ಮ್ಯ ಪ್ರತಿಬೋದಃ ಪ್ರತಿಬೋಧಃ ಸಮುತ್ಥಃ ಯಸ್ಯಾ ಇತಿ ವಿಗ್ರಹ–ಪ್ರತಿಬೋಧ ಸಮುತ್ಥಯಾ– ವಾಚಾ ಇತ್ಯಸ್ಯ ವಿಶೇಷಣಮ್.)

**ನಮಇತ್ಯೇತಿಯಾವಾಚಾ**– ಎಲ್ಲವೂ ವಿಷ್ಣುವಿಗೆ ಸೇರಿದವು ನನಗಲ್ಲವೆಂಬ ಅರ್ಥವನ್ನು ತಿಳಿಸುವ ನಮಃ ಎಂಬ ಶಬ್ದದಿಂದ, **ನಂತ್ರಾಸ್ವಸ್ಮಾದಪೋಹ್ಯತೇ**- ನಮನ ಕರ್ತಾವಾದ ತನ್ನಿಂದ ನಿವರ್ತಿಸಲ್ಪಡುತ್ತವೆ, ಎಂದು ಅನ್ವಯ. ಅಂದರೆ ಅಹಂಕಾರ ಮಮಕಾರ ಗರ್ಭಿತವಾದ ಜ್ಞಾನದಿಂದ ನಾನು ಮತ್ತು ಸರ್ವ ವಸ್ತುಗಳೂ ನನ್ನದೆಂದು ತಿಳಿಯಲ್ಪಟ್ಟವೆ. ಆ ಅಹಂಕಾರ ಮಮಕಾರಗಳ ನಿವೃತ್ತಿಯಿಂದ ಎಲ್ಲವೂ ಭಗವಂತನಿಗೆ ಸೇರಿದವು ಎಂಬ ಜ್ಞಾನವು ಉಂಟಾಗುತ್ತದೆ. ಇದರಿಂದ ನಮಶ್ಶಬ್ದವು ವಿಪರೀತಾಹಂಕಾರ ಮಮಕಾರಗಳ ನಿವರ್ತನಕ್ಕೆ ನ, ಮಃ, ಎಂದು ವಿಭಾಗ ಮಾಡಲ್ಪಟ್ಟು ಸ್ವಾರ್ಥ ಬೋಧನಾದ್ವಾರಾ ಕಾರಣವಾಗುತ್ತದೆ.

### 3 ನಮಶ್ಶಬ್ದಕ್ಕೆ ಪರ ಯೋಜನೆ

29) **ಇತಿತೇಸೂಕ್ಷ್ಮಮುದ್ದಿಷ್ಟಂ ಪರಮನ್ಯನ್ನಿಶಾಮಯ**–ಹೀಗೆ ಸೂಕ್ಷ್ಮಾರ್ಥವು ಹೇಳಲ್ಪಟ್ಟಿತು. ಮೂರನೆಯದ. ಪರಮನ್ಯತ್- ಉತ್ಕೃಷ್ಟವಾದ ಮತ್ತೊಂದು ಅರ್ಥವನ್ನು ನಿಶಾಮಯ – ಸಾವಧಾನವಾಗಿ ಕೇಳಿ ತಿಳಿದುಕೋ ಎಂದು ಶಿಷ್ಯನನ್ನು ಅಭಿಮುಖೀಕರಿಸಿ ತಿಳಿಸುತ್ತಾರೆ. **ಪಂಥಾ ನಕಾರ ಉದ್ದಿಷ್ಟಃ** ಇತ್ಯಾದಿ–ನಃ ಎಂಬ ಅಕ್ಷರವು ಪಂಥಾ– ಉಪಾಯವಾಗಿ, ಹೇಳಲ್ಪಡುತ್ತದೆ. **ಮಃ**- ಮಕಾರವು **ಪ್ರಧಾನಃ**- ಮುಖ್ಯವು ಎಂದು, ಉದೀರ್ಯತೇ- ಹೇಳಲ್ಪಡುತ್ತದೆ. **ವಿಸರ್ಗಃ**-ವಿಸರ್ಗವು, **ಪರಮೇಶಸ್ತು**–ವಿಲಕ್ಷಣನಾದ ಪರಮ ಪುರುಷನು, ಇದರಿಂದಾಗಿ ಈ ಕೆಳಗೆ ನಿರೂಪಿಸುವ **ವಾಕ್ಯಾರ್ಥವು ನಿರುಚ್ಯತೇ**– ವರ್ಣಭಾಗದಿಂದ ಬಿಡಿಸಿ ಹೇಳಲ್ಪಡುತ್ತದೆ. ಆ ವಾಕ್ಯಾರ್ಥವು ಯಾವುದೆಂದರೆ, **ಅನಾದಿಃ ಪರಮೇಶೋ ಯಃ** ಇತ್ಯಾದಿ– ಆ ಪರಮೇಶನು ಅನಾದಿ. ಶ್ರಿಯಃ ಪತಿತ್ವ ಸರ್ವಜ್ಞತ್ವ ಸರ್ವಶಕ್ತಿತ್ವ ಪರಮಕಾರುಣಿ ಕತ್ವಾದಿ ಗುಣಗಳಿಂದ ಕೂಡಿದವನು, ಅವನು ಪುರುಷೋತ್ತಮನು. **ಶಕ್ತಿಮತ್ವ** ಶಬ್ದವು ಲಕ್ಷ್ಮೀವಾಚಕವಾಗಿ ಮುಂದೆ ಆಚಾರ್ಯರೇ"ಕಮಲಾಪತಿ"ಎಂದುವ್ಯಾಖ್ಯಾನಿಸುತ್ತಾರೆ. **ತತ್ಪ್ರಾಪ್ತಯೇ ಪ್ರಧಾನಃ**-ಅವನನ್ನು ಪಡೆಯಲು ಪ್ರಧಾನವಾದದ್ದು, **ಅಯಂಪಂಥಾ ನಮನ ನಾಮವಾನ್**–ನಮನ-ಶರಣಾಗ

ಇತಿಶೇ ತ್ರಿವಿಧಃ ಪ್ರೋಕ್ತೋ ನಮಶ್ಶಬ್ದಾರ್ಥ ಈದೃಶಃ ॥ ಇತಿ,

ಇವ್ವಿಡತ್ತಿಲ್ "ನಂತವ್ಯಃ ಪರಮಶ್ಶೇಷಿ" ಎನ್ಗೈಯಾಲೇ ನಮಸ್ಸುಕ್ಕು ಪರಮಶೇಷಿಯೇ ಪ್ರತಿಸಂಬಂಧಿ ಯೆನ್ನುಮಿಡಮ್ ಸ್ವತಃ ಪ್ರಾಪ್ತಮ್. ಪರಮಶೇಷಿ ಇನ್ನಾನೆನ್ರು ತೆಳಿವಿಕ್ಕೈಕ್ಕಾಹ ವಿಶೇಷ ನಾಮಧೇಯಮುಮ್.

ಇಙ್ಗು "ಅಶಾಸ್ತ್ರೀಯೋಪಸೇವಾ ತು ತದ್ವಿಘಾತ ಉದೀರ್ಯತೇ" ಎನ್ರುಮ್ "ತದ್ವಿಘಾತೋ ನಿರಾಕೃತಿಃ" ಎನ್ರುಮ್ ಶೊನ್ನ ವಚನಙ್ಗಳುಕ್ಕು ಪ್ರಪತ್ತಿಕಾಲತ್ತಿಲ್ ಬುದ್ಧಿ ಪೂರ್ವ ಪ್ರಾತಿಕೂಲ್ಯಮ್ ನಡಕ್ಕುಮಾಹಿಲ್ ಆನುಕೂಲ್ಯ ಸಙ್ಕಲ್ಪಮುಮ್ ಪ್ರಾತಿಕೂಲ್ಯತ್ತಿಲಭಿಸಂಧಿ ವಿರಾಮಾದಿಹಳುಮ್ ಇಲ್ಲೈಯಾಯಿಡುಮೆನ್ರು ತಾತ್ಪರ್ಯಮ್. ಪ್ರಪತ್ತ್ಯುತ್ತರ ಕಾಲತ್ತಿಲ್ ಬುದ್ಧಿಪೂರ್ವ ಪ್ರಾತಿಕೂಲ್ಯಂ ನಡನ್ದಾಹಿಲ್, ಇವ್ವ ರುಚಿಯೋಡು ಪೋರುಂದಿನ ಸ್ವತಂತ್ರ ಭಗವದಾಜ್ಞೈಕ್ಕು ವಿರುದ್ಧಮಾಮ್.

ಅಥ ಸ್ಥೂಲ ಸೂಕ್ಷ್ಮ ಪರಶಬ್ದಾನಾಂ ಕ್ರಮೇಣ ಅರ್ಥಾನಾಹ.

ಇಙ್ಗು ಸ್ಥೂಲಮಾನ ವರ್ಥಮಾವದು ? ವ್ಯಾಕರಣತ್ತೈತ್ತುವಕ್ಕಿವರುಹಿರ ಸ್ಫುಟವ್ಯುತ್ಪತ್ತಿಯಾಲೇ ತೋತ್ತುಮದು. ಸೂಕ್ಷ್ಮಮಾವದು ? ವರ್ಣ ಸಾಮ್ಯಾದಿಹಳೈಕ್ಕೊಂಡು ಹಿರ ನಿರುಕ್ತ ಬಲತ್ತಾಲೇ

---

ಯೆಂಬ ನಾಮವಾನ್ ಹೆಸರುಳ್ಳ ಅಯಂ ಪಂಥಾ ಈ ಮಾರ್ಗವು. ಭಗವಂತನನ್ನು ಪಡೆಯಲು, ಭಕ್ತ್ಯಾದ್ಯುಪಾಯಗಳಿಗಿಂತಲೂ, ಶರಣಾಗತಿ ಎಂಬ ಉಪಾಯವು ಪ್ರಧಾನವಾದದ್ದು.

**ಇತಿಶೇತ್ರಿವಿಧಃಪ್ರೋಕ್ತೋ** ಇತ್ಯಾದಿ- ಮೇಲೇ ಹೇಳಿದಂತೆ ಮೂರುವಿಧವಾದ ಅರ್ಥಗಳು ನಮಶ್ಶಬ್ದಕ್ಕೆ ಹೇಳಲ್ಪಟ್ಟವು. ಎಂದು ಸ್ಥೂಲ, ಸೂಕ್ಷ್ಮ ಪರ ಯೋಜನಾರೂಪವಾದ ಅರ್ಥಗಳನ್ನು ನಿರೂಪಿಸಿದ್ದಾರೆ.

ಈ ಶ್ಲೋಕಗಳಲ್ಲಿ ಮಧ್ಯೇ ಮಧ್ಯೇ ಹೇಳಲ್ಪಟ್ಟು ವಾಕ್ಯಗಳಿಂದ ಲಬ್ಧವಾದ ಅರ್ಥ ವಿಶೇಷವನ್ನು **ಇವ್ವಿಡತ್ತಿಲ್** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಈ ನಮಶ್ಶಬ್ದಾರ್ಥ ನಿರೂಪಣ ಪ್ರಕರಣದಲ್ಲಿ "**ನಂತವ್ಯಃ ಪರಮಶ್ಶೇಷೀ**" -ಪರಮಶೇಷಿಯು ನಂತವ್ಯನು ಎಂದು ಹೇಳುವುದರಿಂದ ನಮಸ್ಕಾರಕ್ಕೆ ಪರಮಶೇಷಿಯೆ ಪ್ರತಿಸಂಬಂಧಿ, ಎಂಬುದು ಸ್ವತಃ ಪ್ರಾಪ್ತ. ಪರಮಶೇಷಿಯು ಇಂಥಹವನು, ಎಂದು ತಿಳಿಸುವುದಕೋಸ್ಕರ ವಿಶೇಷ ನಾಮಧೇಯ. ಇಂಗು ಇತ್ಯಾದಿ ಈ ಸ್ಥೂಲ ಯೋಜನಾ ಪ್ರಕರಣದಲ್ಲಿ ಅಶಾಸ್ತ್ರೀಯೋಪಸೇವಾತು, ಇತ್ಯಾದಿಯಾಗಿಯೂ ತದ್ವ್ಯಾಘಾತೋ ನಿರಾಕೃತಿಃ ಎಂದೂ ಹೇಳಿದ ವಚನಗಳಿಗೆ ಪ್ರಪತ್ತಿಕಾಲದಲ್ಲಿ ಬುದ್ಧಿಪೂರ್ವಪ್ರಾತಿಕೂಲ್ಯವು ಏರ್ಪಟ್ಟರೆ, ಅನುಕೂಲ್ಯ ಸಂಕಲ್ಪವು, ಪ್ರಾತಿಕೂಲ್ಯದಲ್ಲಿ ಅಭಿಸಂಧಿ ವಿರಮಾದಿಗಳೂ ಇಲ್ಲವಾಗುತ್ತವೆ, ಎಂಬುದು ತಾತ್ಪರ್ಯ.

**ಪ್ರಪತ್ತ್ಯುತ್ತರಕಾಲತ್ತಿಲ್** ಇತ್ಯಾದಿ-ಪ್ರಪತ್ತಿಮಾಡಿದನಂತರ, ಬುದ್ಧಿಪೂರ್ವವಾದ ಪ್ರಾತಿಕೂಲ್ಯವು ಉಂಟಾದರೆ ಶೇಷಭೂತನಾದ ಇವನು ಪ್ರೀತಿ ಪೂರ್ವಕವಾಗಿ ಮಾಡಬೇಕಾದ, ಸ್ವತಂತ್ರಭಗವದಾಜ್ಞೆಯನ್ನು ಮೀರಿದಂತೆ ಆಗುತ್ತದೆ. ಅಷ್ಟಲ್ಲದೆ ಇವನು ಅನುಷ್ಠಿಸಿದ ಶರಣಾಗತಿಗೆ ವೈಕಲ್ಯವಾವುದೂ ಉಂಟಾಗಲಾರದು.

ಅನಂತರಸ್ಥೂಲ, ಸೂಕ್ಷ್ಮ, ಪರಶಬ್ದಗಳ ಅರ್ಥವನ್ನು ತಿಳಿಸುತ್ತಾರೆ. ಇಂಗು **ಸ್ಥೂಲಮಾನ** ಇತ್ಯಾದಿ- ಇಲ್ಲಿ ಸ್ಥೂಲವಾದ ಅರ್ಥವೇನೆಂದರೆ, ವ್ಯಾಕರಣವ್ಯುತ್ಪತ್ತಿಯನ್ನು ಅನುಸರಿಸಿ, ಉಂಟಾಗುವ ಸ್ಫುಟ ವ್ಯುತ್ಪತ್ತಿಯಿಂದ ತೋರುವುದು ಎಂದರ್ಥ. **ಸೂಕ್ಷ್ಮಮಾವದು** ಇತ್ಯಾದಿ- ಅಕ್ಷರಗಳ ಸಾಮ್ಯವನ್ನುಕೊಂಡು ನಿರುಕ್ತಿ

ಶೋತ್ತುಮದು. ಪರಮಾವದು ? ರಹಸ್ಯ ಶಾಸ್ತ್ರಙ್ಗಳಿಲ್ ಶೊಲ್ಲುಹಿರ ಅಕ್ಷರ ನಿಘಂಟು ಪ್ರಕ್ರಿಯೈ ಯಾಲೇ ಶೋತ್ತುಮದು.

ಅಥ ಯೋಜನಾ ತ್ರಯ ಲಬ್ಧಸಾರಭೂತಾರ್ಥಮಾಹ

ಇದಿಲ್ ಮುರ್ಪಡ ಶೇಷಭೂತನುಕ್ಕು ಸ್ವತಃ ಪ್ರಾಪ್ತ ವೃತ್ತಿಯುಮುಮ್, ಸಾಙ್ಗನ್ಯಾಸರೂಪಮಾನ ಸಾಧ್ಯೋಪಾಯ ಶರೀರಮುಮ್ ಶಹು್ದು. ಅನಂತರಂ ಮೋಕ್ಷೋಪಾಯಾಧಿಕಾರಿಕ್ಕು ಅವಶ್ಯಾ ಪೇಕ್ಷಿತಮಾನ ನಿರಪೇಕ್ಷ ಸ್ವಾತಂತ್ರ್ಯಾದಿ ನಿವೃತ್ತಿಪೂರ್ವಕ ಶೋಧನಂ ಪಣ್ಣಿತ್ತು. ಪಿನ್ಬು ಸಾಧ್ಯೋಪಾಯ ವಿಶೇಷತ್ತಾಲೇ ವಶೀಕಾರ್ಯಮುಮಾಯ್ ಪ್ರಾಪ್ಯಮುಮಾಯ್ ಇರುಕ್ಕಿರ ಸಿದ್ಧೋಪಾಯಮಿರುಕ್ಕುಂ ಪಡಿಯೈ ಚ್ಚೊಲ್ಲಿತ್ತು. ಉಪಾಯಾನ್ತರಙ್ಗಳಿಲ್ಕಾಟ್ಟಿಲ್ ಸಮರ್ಪಣತ್ತಿನುಡೈಯ ಪ್ರಧಾನೋಪಾಯ ತ್ವಮ್ ಶೊನ್ನದಾಹವುಮಾಮ್. ಇವೈ ಯೆಲ್ಲಾಮ್ ಮೇಲ್ಚೊಲ್ಲಪ್ಪಡುಹಿರ ವಾಕ್ಯಾರ್ಥಙ್ಗಳಿಲೇ ಯಥಾ ಸಂಭವ ಮನುಸಂಧಿತ್ತುಕ್ಕೊಳ್ವದು.

ನಮಶ್ಶಬ್ದಾನ್ವಿತಾಃ ಸರ್ವೇಮನ್ತ್ರಾಃ ಮೂಲಮನ್ತ್ರವತ್ ಕರಣಮನ್ತ್ರಾ ಭವಂತಿ.

ಏವಂ ಶಿಕ್ಷಿತ ನಾನಾರ್ಥ ನಮಶ್ಶಬ್ದಸಮನ್ವಿತಾಃ ।
ಸರ್ವೇ ಕರಣತಾಂ ಯಾನ್ತಿಮನ್ತ್ರಾ ಸ್ಸ್ವಾತ್ಮಸಮರ್ಪಣೇ ॥77॥

ಏವ ಮಾತ್ಮಸಮರ್ಪಣೇ ಪೂರ್ವೋಕ್ತಾರ್ಥಾನುಸಂಧಾನಂ ಕಾರಿಕಾಭಿ ಸ್ಸಂಗೃಹ್ಣಾತಿ.

ಜೀವಸಾಮಾನ್ಯ ಮುಖತ ಶ್ಶೃಂಗಗ್ರಾಹಿಕಯಾಪಿ ವಾ ।
ಮಕಾರೌ ತಾರನಮಸೋಸ್ಸ್ವಾನುಸಸಂಧಾನದಾ ವಿಹ. ।7೪।

---

ಬಲದಿಂದ ತೋರುವುದು ಸೂಕ್ಷ್ಮವಾದ ಅರ್ಥವು ಪರಮಾವದು ಇತ್ಯಾದಿ– ರಹಸ್ಯ ಶಾಸ್ತ್ರಗಳಲ್ಲಿ ಹೇಳಲ್ಪಡುವ ಅಕ್ಷರ ನಿಘಂಟುಗಳ ಪ್ರಕ್ರಿಯೆಯಿಂದ ತೋರುವ ಅರ್ಥವು "ಪರ" ವೆಂದು ತಾತ್ಪರ್ಯ.

ಇದಿಲ್‌ಮುರ್ಪಡ ಇತ್ಯಾದಿ–ಇಲ್ಲಿ ಮೊದಲು ಶೇಷಭೂತನಿಗೆ ನಮಸ್ಕಾರರೂಪ ಸ್ವತಃ ಪ್ರಾಪ್ತ ವೃತ್ತಿಯೂ ಸಾಂಗಭರನ್ಯಾಸರೂಪವಾದ ಸಾಧ್ಯೋಪಾಯ ಶರೀರವೂ, "ನಾಮಯತ್ನಪಿವಾದೇವಂ", ಶಾಶ್ವತೀಮಮ ಸಂಸಿದ್ಧಿಃ ಇತ್ಯಾದಿಯಾಗಿ ಹೇಳಲ್ಪಟ್ಟಿತು. ಅನಂತರಂ ಇತ್ಯಾದಿ ಅನಂತರ ಸೂಕ್ಷ್ಮಯೋಜನೆಯಲ್ಲಿ ಮೋಕ್ಷೋಪಾಯಾಧಿ ಕಾರಿಗೆ ಅವಶ್ಯಾಪೇಕ್ಷಿತವಾದ ನಿರಪೇಕ್ಷ ಸ್ವಾತಂತ್ರ್ಯಾದಿ ನಿವೃತ್ತಿ ಪೂರ್ವಕ ಸ್ವರೂಪಶೋಧನವು ಮಾಡಲ್ಪಟ್ಟಿತು. ಅದಾಗಿ "ಅಹಂ ಭಗವತ ಏವ", ನಮಮ", "ಮಮ ಯಾಃ ಕೃತಯಃ ನ ತಾ ಮಮ, ಭಗವತ ಏವ" ಎಂದು ನಿರುಕ್ತಿಯಲ್ಲಿ ಹೇಳಿರುವ ಸ್ವಸ್ವಾತಂತ್ರ್ಯಾದಿ ನಿಷೇಧವೂ, ಸ್ವರೂಪವೂ ವರ್ಣ ಸಾಮ್ಯದಿಂದ ನಮಸ್ಸಿನಲ್ಲಿ ಹೇಳಲ್ಪಟ್ಟವು. ಎಂದು ತಾತ್ಪರ್ಯ. ಪಿನ್ಬು ಕೊನೆಯದಾಗಿ ಪರಯೋಜನೆಯಲ್ಲಿ, ಸಾಧ್ಯೋಪಾಯವಿಶೇಷತ್ತಾಲೇ ಇತ್ಯಾದಿ- ಸಾಧ್ಯೋಪಾಯವಾದ ಶರಣಾಗತಿಯಿಂದ ವಶೀಕರಿಸಲ್ಪಟ್ಟು, ಪ್ರಾಪ್ಯವಾಗಿರುವ ಸಿದ್ಧೋಪಾಯವು, "ತತ್ಪ್ರಾಪ್ತಯೇ ಪ್ರಧಾನೋ.ಯಂ ಪಂಥಾ ನಮನ ನಾಮವಾನ್", ಎಂದು ಹೇಳಲ್ಪಟ್ಟಿತು, ಉಪಾಯಾಂತರಗಳಿಗಿಂತ, ಸಮರ್ಪಣದ ಪ್ರಧಾನೋಪಾಯತ್ವವು ಹೇಳಲ್ಪಟ್ಟದಾಗಿಯೂ, ಆಗಬಹುದು. ಇವೈಯೆಲ್ಲಾಮ್ ಇತ್ಯಾದಿ– ಇವೆಲ್ಲಾ ಮುಂದೆ ಹೇಳಲ್ಪಡುವ ವಾಕ್ಯಾರ್ಥಗಳಲ್ಲಿ ಯಥಾ ಸಂಭವ ಅನುಸಂಧಾನಮಾಡಿಕೊಳ್ಳತಕ್ಕದ್ದು.

ಮೇಲೆ ಹೇಳಿದ ಅರ್ಥವನ್ನು ಕಾರಿಕೆಯಿಂದ ಸಂಗ್ರಹಿಸುತ್ತಾರೆ.

ಏವಂ ಶಿಕ್ಷಿತ ನಾನಾರ್ಥ ಇತ್ಯಾದಿ– ಹೀಗೆ ಶಿಕ್ಷಿಸಲ್ಪಟ್ಟ ನಾನಾರ್ಥಗಳಿಂದ ಕೂಡಿದ "ನಮಃ" ಎಂಬ ಪದದಿಂದ ಕೂಡಿದ ಎಲ್ಲಾ ಮಂತ್ರಗಳೂ ಸ್ವಾತ್ಮ ಸಮರ್ಪಣಕ್ಕೆ ಕರಣ ಮಂತ್ರಗಳಾಗುತ್ತವೆ. ಜೀವಸಾಮಾನ್ಯಮುಖತಃ

**ಇಹಯಾ ಸ್ವಾನು ಸಂಧಾನ ಪ್ರಕ್ರಿಯೈಕಸ್ಯ ದರ್ಶಿತಾ।**
**ಅನ್ಯೇಷಾಮಪಿ ತತ್ಸಾಮ್ಯಾನ್ನಾನ್ಯೋನ್ಯ ಶರಣಾ ಇಮೇ।79।**
**ಅತ ಸ್ಸ ಪರ ರಕ್ಷಾಯಾಂ ಪರಾಧೀನೇಷು ಜನ್ತುಷು।**
**ನಿರಪೇಕ್ಷ ಶರಣ್ಯತ್ವಂ ನಿಯತಂ ಕಮಲಾಪತೌ॥80॥**

**ಅಥ ನಾರಾಯಣ ಶಬ್ದಾರ್ಥಂ ವಕ್ತುಂ ತಸ್ಯ ನಮಶ್ಶಬ್ದಾರ್ಥೇನ ಸಙ್ಗತಿಂ ಪ್ರದರ್ಶಯತಿ.**

**ಇಙ್ಗು ಶಾಬ್ದಮಾಹವಾದಲ್, ಆರ್ಥಮಾಹವಾದಲ್, ನಮಸ್ಸಿಲೇ ತೋತ್ತಿನ ಶರಣಾಗತಿಯಾಹಿರ ಸಾಧ್ಯೋಪಾಯತ್ತಾಲೇ ಪ್ರಸಾದನೀಯನಾಯ್, ಮೇಲಿಲ್ ಚತುರ್ಥಿಯಿಲ್ ವಿವಕ್ಷಿತಮಾನ ಕೈಙ್ಕರ್ಯತ್ತುಕ್ಕು ಪ್ರತಿಸಂಬಂಧಿಯುಮಾಯ್. ಸರ್ವರಕ್ಷಕನಾಹವುಮ್, ಸರ್ವಶೇಷಿಯಾಹವುಮ್, ಪ್ರಥಮಾಕ್ಷರತ್ತಿಲ್ ಪ್ರತಿಪನ್ನನಾನ ನಿರಪೇಕ್ಷ ಶರಣ್ಯನುಡೈಯ ಪಡಿಯೈ ವೆಳಿಯಿಡುಹಿರದು ಯೋಗರೂಢಮಾನ ನಾರಾಯಣ ಶಬ್ದಮ್.**

---

ಇತ್ಯಾದಿ– ಈ ಅಧಿಕಾರಿ ವಿಷಯದಲ್ಲಿ, ತಾರ–ಪ್ರಣವ, ನಮಸ್ಸುಗಳಲ್ಲಿ ಹೇಳಿರುವ "ಮ"ಕಾರವು, ಜೀವಸಾಮಾನ್ಯವನ್ನು ಹೇಳುವುದರಿಂದ, ಅದರಲ್ಲಿ ತಾನೂ ಅಂತರ್ಭೂತನಾದ್ದರಿಂದ ಸ್ವಾನು ಸಂಧಾನವನ್ನು ಹೇಳಿದಂತೆ ಆಗುತ್ತದೆ. **ಶೃಂಗಗ್ರಾಹಿಕಯಾಪಿವಾ**- 'ಅಸ್ಮತ್' ಶಬ್ದದಲ್ಲಿ ಆದ್ಯಂತ ಅಕ್ಷರಗಳನ್ನು ಲೋಪ ಮಾಡಿ. "ಮ" ಕಾರವು ಸ್ವಾನುಸಂಧಾನಪ್ರದವಾಗಬಹುದು.

**ಇಹಯಾಸ್ವಾನುಸಂಧಾನಇತ್ಯಾದಿ–ಈ** ಅಷ್ಟಾಕ್ಷರ ಮಂತ್ರದಲ್ಲಿ ಒಬ್ಬ ಜೀವನಿಗೆ **ಸ್ವಾನುಸಂಧಾನಪ್ರಕ್ರಿಯಾ** ತಾನು ಭಗವಂತನಿಗೆ ಶೇಷಭೂತನು ಎಂಬ ಪ್ರಕ್ರಿಯೆಯು, **ಯಾ ದರ್ಶಿತಾ**–ಯಾವುದು ತೋರಿಸಲ್ಪಟ್ಟಿತೋ, **ಅನ್ಯೇಷಾಂ** ಇತ್ಯಾದಿ–ಮೂಲಮಂತ್ರವನ್ನು ಅನು ಸಂಧಾನ ಮಾಡುವ ಇತರ **ಜೀವರುಗಳಿಗೂ, ತತ್ಸಾಮ್ಯಾತ್**–ಭಗವಚ್ಛೇಷತ್ವ, ಪಾರತಂತ್ರ್ಯಗಳು ಸಮಾನವಾದ್ದರಿಂದ, ಇಮೇ–ಈ ಜೀವರುಗಳು, **ನಾನ್ಯೋನ್ಯಶರಣಾಃ**-ಪರಸ್ಪರ ರಕ್ಷಕರುಗಳಾಗಿ ಆಗುವುದಿಲ್ಲ. **ಅತಷ್ಷ ಪರರಕ್ಷಾಯಾಂ** ಇತ್ಯಾದಿ ಆದ್ದರಿಂದ ತನ್ನ ಮತ್ತು ಇತರರ ರಕ್ಷಣದಲ್ಲಿ **ಪರಾಧೀನೇಷು**–ಪರಾಧೀನರಾದ **ಪ್ರಾಣಿಷು**–ಪ್ರಾಣಿಗಳ ವಿಷಯದಲ್ಲಿ,**ನಿರಪೇಕ್ಷ ಶರಣ್ಯತ್ವಂ**–ನಿರಪೇಕ್ಷವಾದ ಮೋಕ್ಷೋಪಾಯತ್ವವು, **ಕಮಲಾಪತೌ**–ಲಕ್ಷ್ಮೀಪತಿಯಲ್ಲಿಯೇ, **ನಿಯತಮ್**–ಸರ್ವದಾ ಸಿದ್ಧವಾಗಿರುತ್ತದೆ.

ಇದು ನಮಶ್ಶಬ್ದಾರ್ಥ ವಿವರಣದ ಉಪಸಂಹಾರವು "ಅನಾದಿಃ ಪರಮೇಶೋಯಃ ಶಕ್ತಿಮಾನ್ ಪುರುಷೋತ್ತಮಃ ಎಂದು ಮೇಲೆ ಹೇಳಿದ ಕಾರಿಕೆಯಲ್ಲಿ 'ಶಕ್ತಿಮಾನ್, ಎಂಬ ಶಬ್ದವು ಕಮಲಾಪತಿಯನ್ನು ತಿಳಿಸುತ್ತದೆ ಎಂಬುದು ಆಚಾರ್ಯರ ಅಭಿಪ್ರಾಯ, "ಶಕ್ತಿ" ಶಬ್ದವು ಲಕ್ಷ್ಮಿಯನ್ನು ಸೂಚಿಸುತ್ತದೆ.

### ನಾರಾಯಣ ಶಬ್ದಾರ್ಥ ವಿವರಣ

ಹೀಗೆ "ನಮ" ಶಬ್ದಕ್ಕೆ ವ್ಯಾಖ್ಯಾನವನ್ನು ಮಾಡಿ, ಅನಂತರ "ನಾರಾಯಣ" ಶಬ್ದಕ್ಕೆ ವ್ಯಾಖ್ಯಾನವನ್ನು ಸಂಗತಿ ಪೂರ್ವಕ ಆರಂಭಿಸುತ್ತಾರೆ. **ಇಂಗು ಶಾಬ್ದಮಾಹವಾದಲ್** ಇತ್ಯಾದಿ– ಇಂಗು– ಈ ಮೂಲ ಮಂತ್ರದಲ್ಲಿ, ಶಾಬ್ದವಾಗಿಯೋ, ಆರ್ಥವಾಗಿಯೋ, ನಮ ಶಬ್ದದಲ್ಲಿ ಪ್ರಕಾಶಪಡಿಸಲ್ಪಟ್ಟ, ಶರಣಾಗತಿ ಎಂಬ ಸಾಧ್ಯೋಪಾಯದಿಂದ ಪ್ರಸನ್ನನಾಗಿ ಮಾಡಲ್ಪಟ್ಟವನೂ,ಮುಂದೆ"ಆಯ" ಎಂಬ ಚತುರ್ಥಿಯಲ್ಲಿ ವಿವಕ್ಷಿತವಾದ ಕೈಂಕರ್ಯಕ್ಕೆ ಪ್ರತಿಸಂಬಂಧಿಯಾಗಿಯೂ,ಸರ್ವರಕ್ಷಕನಾಗಿಯೂ ಸರ್ವಶೇಷಿಯಾಗಿಯೂ ಪ್ರಥಮಾಕ್ಷರದಲ್ಲಿ ಪ್ರತಿಪನ್ನನಾದ–ತಿಳಿಸಲ್ಪಟ್ಟ ನಿರಪೇಕ್ಷ ಶರಣ್ಯನ **ಪಡಿಯೈ**– ಪ್ರಕಾರವನ್ನು, ಯೋಗರೂಢ

ಶುರಙ್ಗಳ್ಚೊನ್ನವರ್ಥಂ ತನ್ನೈಯೇ ಅಜ್ಞಾನ ಸಂಶಯ ವಿಪರ್ಯಯಙ್ಗಳ್ ಕಳಿಯುಮ್ಪಡಿ ಮುಖಾನ್ತರತ್ತಾಲೇ ತೆಳಿವಿಕ್ಕೈ ವಿವರಣಮ್. ಇಸ್ಸಙ್ಗ್ರಹ ವಿವರಣ ಭಾವಮ್ ಪ್ರಥಮಾಕ್ಷರಂ ಮುದ ಲಾಹ ಯಥಾಸಂಭವಮ್ ಕಣ್ಡುಕೊಳ್ವದು

ನಾರಾಯಣ ಶಬ್ದಸ್ಯ ಸರ್ವೋತ್ಕೃಷ್ಟ ಮಾಹಾತ್ಮ್ಯಮಾಹ.

ಇನ್ನಾರಾಯಣ ಶಬ್ದಮ್ ಶೇಷಶೇಷಿತತ್ವಙ್ಗಳಿರಣ್ಡೈಯುಮ್ ವೆಳಿಯಾಹ ಕ್ಕಾಟ್ಟುಹಿರ ಉಪಕಾ ರಾತಿಶಯತ್ತಾಲೇ, ವಿಷ್ಣುಗಾಯತ್ರಿಯಿಲುಮ್ ತಿರುನಾರಾಯಣೀಯತ್ತಿಲೇ ನಾಮ ನಿರ್ವಚನಂ ಪಣ್ಣು ಹಿರ ಇಡತ್ತಿಲುಮ್, ಮತ್ತುಮುಳ್ಳ ವ್ಯಾಪಕನಾಮಙ್ಗಳುಕ್ಕುಮ್ ಮುನ್ನೇ ಪಡಿಕ್ಕಪ್ಪಟ್ಟದು.

ಸರ್ವ ಪರವಿದ್ಯೋಪಾಸ್ಯ ವಿಶೇಷನಿರ್ಣಯಂ ಪಣ್ಣುಹಿರ ನಾರಾಯಣಾನುವಾಕಂ ಪರತತ್ವಮಾಹ ಶಙ್ಕಿತರಾನ ಬ್ರಹ್ಮಶಿವಾದಿಹಳೆಲ್ಲಾಮ್ ಸಾಮಾನಾಧಿಕರಣ್ಯ ನಿರ್ದೇಶತ್ತಾಲೇ ಯಙ್ಗಶೊನ್ನ ವಿಶ್ವನ್ನೋ

---

ವಾಗ ನಾರಾಯಣಶಬ್ದವು ತಿಳಿಸುತ್ತದೆ ಯೋಗ- "ನಾರಾಃ ಅಯನಂಯಸ್ಯ" "ನಾರಾಣಾಂ ಅಯನಂ" ಎಂಬ ಅವಯವಾರ್ಥ ಸಮಾಸಗಳು. ರೂಢ–ರೂಢಿಯಿಂದ'ನಾರಾಯಣ' ಎಂದು ಏರ್ಪಟ್ಟಶಬ್ದವು. ಸಮಾಸದಿಂದ 'ನಾರಾ ಯಣ' ಎಂದು ಏರ್ಪಡುತ್ತದೆ. ರೂಢಿಯಿಂದ "ನಾರಾಯಣ" ಎಂದು ನಿರುಕ್ತ ಬಲದಿಂದ ಏರ್ಪಡುತ್ತದೆಯಾ ದ್ದರಿಂದ, "ನಾರಾಯಣ" ಎಂಬುದು ಯೋಗರೂಢವಾದ ಶಬ್ದ. ಶಬ್ದನಿಗೆ ರೂಢಿಯಾಗಿ ಇಟ್ಟ ಹೆಸರು ಎಲ್ಲಾ ವಿಷ್ಣುನಾಮಗಳನ್ನೂ ವ್ಯಾಕರಣ ಪ್ರಕ್ರಿಯೆಯಿಂದ ದೇವತಾಂತರ ಪರವಾಗಿ ಅರ್ಥಮಾಡಲು ಹೋದ ಅಪ್ಪಯ್ಯ ದೀಕ್ಷಿತರು 'ನಾರಾಯಣ" ಎಂಬಲ್ಲಿ ಸೋತು ಹೋಗಿ "ಣತ್ವಂ ಬಾಧತೇ" ಎಂದು ಹೇಳಿ ನಿಲ್ಲಿಸಿಬಿಟ್ಟರು. . ಈ ನಾರಾಯಣ ಶಬ್ದವು ರೂಢಿಯಿಂದ ಲಕ್ಷ್ಮೀಪತಿಯನ್ನೇ ತಿಳಿಸುತ್ತದೆ, ಎಂಬುದು ಇದರ ವೈಶಿಷ್ಟ್ಯ. "ಅ" ಕಾರದಲ್ಲಿ **ಶುರುಂಗಚೊನ್ನವರ್ಥಂತನ್ನೈಯೇ**- ಸಂಗ್ರಹವಾಗಿ ಹೇಳಿದ ಅರ್ಥವನ್ನೇ, **ಅಜ್ಞಾನ ಸಂಶಯ, ವಿಪರ್ಯಯಂಗಳ್**–ತಿಳಿಯದೆ ಇರುವುದು, ಸಂದೇಹಗಳು, ವಿಪರೀತಾರ್ಥಗಳು **ಕಳಿಯುಂಪಡಿ** –ಅಳಿದು ಹೋಗು ವಂತೆ, **ಮುಖಾಂತರತ್ತಾಲೇ** ಇತ್ಯಾದಿ ಬೇರೆ ರೀತಿಯಲ್ಲಿ, ನಾರಾಯಣ ಶಬ್ದ ವ್ಯಾಖ್ಯಾನ ರೂಪವಾಗಿ ತಿಳಿಸುವುದು ವಿವರಣ. **ಇಸ್ಸಂಗ್ರಹ ವಿವರಣಭಾವಮ್** ಇತ್ಯಾದಿ-ಈ ಸಂಗ್ರಹ ವಿವರಣಭಾವವು, ಪ್ರಥಮಾಕ್ಷರವೇ ಮೊದಲಾದ ಪದಗಳಲ್ಲಿ ಯಥಾ ಸಂಭವ ತಿಳಿದುಕೊಳ್ಳತಕ್ಕದ್ದು. 'ಅ'ಕಾರಕ್ಕೆ ನಾರಾಯಣ ಶಬ್ದವು ವಿವರಣ. 'ಮ' ಕಾರಕ್ಕೆ ನಾರಶಬ್ದವು ವಿವರಣ ಎಂಬುದು ಭಾವ. **ಇನ್ನಾರಾಯಣ ಶಬ್ದಮ್** ಇತ್ಯಾದಿ–ಈ ನಾರಾಯಣ ಶಬ್ದವು ಶೇಷ ಶೇಷಿತ್ವಗಳೆರಡನ್ನೂ ಶೇಷತತ್ವ–ಚೇತನಾ ಚೇತನಗಳು, ಶೇಷಿತತ್ವ–ಈಶ್ವರತತ್ವ) **ವೆಳಿಯಾಹ**–ಪ್ರಕಾಶವಾಗಿ, ತೋರಿಸುವ ಉಪಕಾರಾತಿಶಯದಿಂದ. **ವಿಷ್ಣುಗಾಯತ್ರಿಯಿಲುಮ್**–"ಓಂ ನಾರಾಯಣಾಯ, ವಿದ್ಮಹೇ ವಾಸುದೇ ಯ ಧೀಮಹಿ, ತನ್ನೋ ವಿಷ್ಣುಃ ಪ್ರಚೋದಯಾತ್ । ಎಂಬ ವಿಷ್ಣು ಗಾಯತ್ರಿ ಮಂತ್ರದಲ್ಲಿಯೂ, **ತಿರುನಾರಾಯಣೀಯತ್ತಿಲ್** ಇತ್ಯಾದಿ – ತಿರುನಾರಾಯಣೀಯವೆಂಬುದು ಮಹಾಭಾರತದಲ್ಲಿ ಶಾಂತಿ ಪರ್ವದ ಮೋಕ್ಷಧರ್ಮ ಘಟ್ಟದಲ್ಲಿ, ತತ್ವೋಪದೇಶ ಪರಾಕಾಷ್ಠೆಯಾದ ಭಾಗ ಅಲ್ಲಿ "ನಾರಾಣಾಮಯನಂ ಖ್ಯಾತೋ ಎಂದಾರಂಭಿಸಿ ಪೊಟ್ಟ ಮೊದಲು ನಾರಾಯಣ ನಾಮದ ನಿರ್ವಚನವು ಹೇಳಲ್ಪಟ್ಟದೆ. ಅಲ್ಲಿಯೂ, **ಮಟ್ರು ಮುಳ್ಳ** ಇತ್ಯಾದಿ ಇನ್ನೂ ಇತರ ವ್ಯಾಪಕನಾಮಗಳಿಗೂ ಮುಂಚಿತವಾಗಿ, **ಪಡಿಕ್ಕಪ್ಪಟ್ಟದು**–ಪಠಿಸಲ್ಪಟ್ಟದೆ.

**ಸರ್ವಪರ ವಿದ್ಯೋಪಾಸ್ಯ ವಿಶೇಷ ನಿರ್ಣಯಮ್** ಇತ್ಯಾದಿ–ಎಲ್ಲಾ ಪರ ವಿದ್ಯೆಗಳಲ್ಲಿಯೂ ಉಪಾಸ್ಯವಾದ ತತ್ವ ವಿಶೇಷವನ್ನು ನಿರ್ಣಯಿಸಿರುವ "ಸಹಸ್ರಶೀರ್ಷಂದೇವಂ" ಎಂದಾರಂಭಿಸುವ ನಾರಾಯಣಾನುವಾಕವು ಪರತತ್ವವಾಗಿ ಶಂಕಿತರಾದ ಬ್ರಹ್ಮ, ಶಿವ, ಇಂದ್ರ ಮೊದಲಾದವರೆಲ್ಲಾ, "ವಿಶ್ವಂನಾರಾಯಣಂದೇವಂ" ಎಂದು ಸಾಮಾನಾಧಿಕ

ಲೇ ವಿಭೂತಿಯಾನಾರ್‌ಹಳೆನ್ರುಮ್, ಇವರ್‌ಹಳುಮ್ ನಾರಶಬ್ದಾರ್ಥ ಮೆನ್ರುಮ್ ತೆಳಿವಿಕ್ಕೈಕ್ಕಾಹ, ಇನ್ನಾರಾಯಣ ಶಬ್ದತ್ತೈಪ್ಪಲಕಾಲುಮ್ ಆದರಂ ತೋತ್ತ ಆವರ್ತ್ತಿತ್ತದು.

**ಅಥ ನಾರಾಯಣ ಶಬ್ದಪ್ರಭಾವೇ ಪ್ರಮಾಣಾನ್ಯಾಹ.**

ಇಶ್ಶಬ್ದತ್ತಿನ್ ಪ್ರಭಾವಮ್, 1) "ಸಙ್ಕೀರ್ತ್ಯ ನಾರಾಯಣ ಶಬ್ದಮಾತ್ರಂ" 2) "ನಾರಾಯಣೇತಿ ಯಸ್ಯಾಸ್ಯೇ" 3) "ನಾರಾಯಣೇತಿ ಶಬ್ದೋಽಸ್ತಿ" ಇತ್ಯಾದಿಹಳಿಲುಮ್, ಆೞ್ವಾರ್‌ಹಳುಡೈಯ

---

ರಣ್ಯವಾಗಿ (ಸಮಾನವಿಭಕ್ತಿಕವಾಗಿ) ನಿರ್ದೇಶಮಾಡಿರುವ ವಿಶ್ವ ಶಬ್ದದಂತೆ, ಭಗವಂತನಿಗೆ ವಿಭೂತಿಯಾದರೆಂದೂ, ಇವರುಗಳೂ ನಾರಶಬ್ದಾರ್ಥವೆಂದೂ ತಿಳಿಸಲು ಈ ನಾರಾಯಣ ಶಬ್ದವನ್ನು ಅನೇಕ ಸಲ ಆದರವು ಉಂಟಾಗುವಂತೆ ಆವರ್ತಿತ್ತದು—ಪುನಃ ಪುನಃ ಹೇಳಿತು.

ಇದರ ತಾತ್ಪರ್ಯವೇನೆಂದರೆ:– ಸದ್ವಿದ್ಯೆ, ಅಕ್ಷರವಿದ್ಯೆ, ಜ್ಯೋತಿರ್ವಿದ್ಯೆ ಮೊದಲಾದ ವಿದ್ಯೆಗಳಲ್ಲಿ, ಉಪಾಸ್ಯಗಳಾಗಿ ಹೇಳಲ್ಪಟ್ಟ, ಪದಾರ್ಥಗಳನ್ನು ಹೇಳುವ ಅಕ್ಷರ, ಶಿವ, ಶಂಭು, ಪರಬ್ರಹ್ಮ ಪರಜ್ಯೋತಿ ಪದಗಳೊಡನೆ ನಾರಾಯಣ ಶಬ್ದವನ್ನು ಸಮಾನಾಧಿಕರಣವಾಗಿ ಅಡಿಗಡಿಗೆ, ನಾರಾಯಣ ಪರಬ್ರಹ್ಮ ತತ್ವಂ ನಾರಾಯಣಪರಃ, ನಾರಾಯಣ ಪರಜ್ಯೋತಿಃ ಎಂದಾಗಿ ಹೇಳಿರುವುದಕ್ಕೆ ಕಾರಣ—ಬ್ರಹ್ಮಶಿವಾದಿಗಳೂ ಪರತತ್ವವೇ ಎಂಬ ಶಂಕೆಯು ಬರಲು, ಅದನ್ನು ನಿವಾರಿಸಲು ಹೇಳಿದೆ. ವಿಶ್ವವು ಹೇಗೆ ಸಾಮಾನಾಧಿಕರಣ್ಯ ಪ್ರಯೋಗದಿಂದ ಹೇಳಲ್ಪಟ್ಟು ವಿಶ್ವ ಶಬ್ದ ವಾಚ್ಯವಾದ ಚೇತನಾ ಚೇತನಗಳಿಗೂ ನಾರಾಯಣನಿಗೂ ಐಕ್ಯವನ್ನು ಹೇಳಲಿಕ್ಕಿಲ್ಲದೆ, ಶರೀರಾತ್ಮ ಭಾವ ಸಂಬಂಧದಿಂದ, ಅವುಗಳಿಗೆ ನಾರಾಯಣ ವಿಭೂತಿತ್ವವುಸಿದ್ಧಿಸುತ್ತದೆಯೋ ಹಾಗೆ, ಬ್ರಹ್ಮ ಶಿವ, ಇಂದ್ರಾದಿಗಳಿಗೂ ವಸ್ತುತಃ ಐಕ್ಯವು ಬಾಧಿತವಾದ್ದರಿಂದ, "ಸಬ್ರಹ್ಮಾ, ಸಶಿವಃ, ಸೇಂದ್ರಃ" ಇತ್ಯಾದಿ ಸಾಮಾನಾಧಿಕರಣ್ಯ ನಿರ್ದೇಶದಿಂದ ವಿಭೂತಿತ್ವವೇ ಸಿದ್ಧಿಸುತ್ತದೆ, ಎಂದು ತಾತ್ಪರ್ಯ.

ಇಶ್ಶಬ್ದತ್ತಿನ್‌ಪ್ರಭಾವಮ್ ಇತ್ಯಾದಿ- ಈ ನಾರಾಯಣ ಶಬ್ದದ ಪ್ರಭಾವವನ್ನು ತಿಳಿಸುವ ಪ್ರಮಾಣವಚನಗಳನ್ನು ಆಚಾರ್ಯರು ಎತ್ತಿ ತೋರಿಸುತ್ತಾರೆ. ಅದಾಗಿ 1. ಸಂಕೀರ್ತ್ಯನಾರಾಯಣ ಶಬ್ದಮಾತ್ರಂ 2. ನಾರಾಯಣೇತಿಯಸ್ಯಾಸ್ಯೇ 3. ನಾರಾಯಣೇತಿ ಶಬ್ದೋಽಸ್ತಿ ಇತ್ಯಾದಿಗಳಲ್ಲಿಯೂ ಆಳ್ವಾರುಗಳ

---

(1) ಆರ್ತಾವಿಷಣ್ಣಾಶ್ಶಿಥಿಲಾಶ್ಚಭೀತಾಃ ಘೋರೇಷುಚ ವ್ಯಾಧಿಷು ವರ್ತಮಾನಾಃ ॥
ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ ವಿಮುಕ್ತದುಃಖಾಸ್ಸುಖಿನೋ ಭವಂತಿ ॥
ಆರ್ತರು, ದುಃಖದಿಂದ ಕೂಡಿದವರು, ಮನೋಶೈಥಿಲ್ಯದಿಂದ ಭೀತರು, ಘೋರವಾದವ್ಯಾಧಿಗ್ರಸ್ತರು ನಾರಾಯಣಶಬ್ದ ಮಾತ್ರವನ್ನು ಸಂಕೀರ್ತನ ಮಾಡಿದರೆ ದುಃಖಗಳಿಂದ ಪಾರಾಗಿ ಸುಖಿಗಳಾಗುತ್ತಾರೆ. (ಮಹಾಭಾರತ)

(2) ನಾರಾಯಣೇತಿ ಯಸ್ಯಾಸ್ಯೇವರ್ತತೇ ನಾಮ ಮಂಗಳಂ ।
ನಾರಾಯಣಸ್ತಮನ್ವೇತಿ ವತ್ಸಂ ಗೌರಿವವತ್ಸಲಾ ॥
"ನಾರಾಯಣ"ವೆಂಬ ಮಂಗಳಕರವಾದ ನಾಮವು ಯಾರ ಬಾಯಲ್ಲಿದೆಯೋ. ಕರುವನ್ನು ವಾತ್ಸಲ್ಯದಿಂದ ಹಸುವು ಹಿಂಬಾಲಿಸುವಂತೆ ನಾರಾಯಣನು, ಆ ನಾರಾಯಣ ನಾಮ ಹೇಳುವವನ್ನು ಅನುವರ್ತಿಸುತ್ತಾನೆ.

(3) ನಾರಾಯಣೇತಿ ಶಬ್ದೋಽಸ್ತಿ ವಾಗಸ್ತಿ ವಶವರ್ತಿನೀ ॥
ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥
"ನಾರಾಯಣ"ವೆಂಬ ಶಬ್ದವಿದೆ. ವಾಕ್ ನಮ್ಮ ಅಧೀನವಲ್ಲದೆ. ಹಾಗಿದ್ದರೂ ಆ ನಾಮವನ್ನು ಉಚ್ಚರಿಸದೆ ಘೋರವಾದ ನರಕಕ್ಕೆ ಜನರು ಬೀಳುತ್ತಿರುವುದು ಆಶ್ಚರ್ಯ.

4) "ಕುಲಂತರುಮ್ ಶೆಲ್ವಮ್ ತನ್ದಿಡುಮ್" 5) "ನಾರಣನ್‌ತಮ್ ಅನ್ನೈ ನರಕಂಪುಹಾಳ್" ಇತ್ಯಾದಿಹಳಾನ ಪಾಶುರಙ್ಗಳಿಲುಮ್ ಪ್ರಸಿದ್ಧಮ್. ನಾರದೀಯ ಕಲ್ಪತ್ತಿಲುಮ್,

"ರೋಗಾಪದ್ಭಯದುಃಖೇಭ್ಯೋ ಮುಚ್ಯಂತೇ ನಾತ್ರಸಂಶಯಃ ।
ಅಪಿನಾರಾಯಣೇತ್ಯೇತಚ್ಛಬ್ದ ಮಾತ್ರ ಪ್ರಲಾಪಿನಃ ॥"

ಎನ್ರುಮ್ ಶೊಲ್ಲಪಟ್ಟದು. ಇದು ತನ್ನೈಯೇ ಸ್ವರವ್ಯಂಜನ ಭೇದತ್ತಾಲೇ ಎಟ್ಟು ತಿರುವಕ್ಷರಮಾಹ ಭಾವಿಕ್ಕ ತ್ತಿರುಮನ್ತ್ರತ್ತೋಡೊಕ್ಕುಮೆನ್ರು ಪುರಾಣಾನ್ತ ರೋಕ್ತಮ್.

### ನಾರಾಯಣ ಶಬ್ದಸ್ಯ ಸಮಾಸದ್ವಯ ನಿರೂಪಣಮ್.

ಈಶ್ವರನೋಡು ಪೃಥಕ್ಸಿದ್ಧಙ್ಗಳಲ್ಲಾದ ನಾರಙ್ಗಳುಕ್ಕು "ನಾರಾಃ ಅಯನಂ ಯಸ್ಯ" ಎನ್ರುಮ್' "ನಾರಾಣಾಂ ಅಯನಂ" ಎನ್ರುಮ್, ನಿಷ್ಕರ್ಷ ವಿವಕ್ಷೈಯಾಲೇ ವೈಯಧಿಕರಣ್ಯಮುಂಡಾಯಿತ್ತು.

---

4. ಕುಲಂದರುಂಶೆಲ್ವಂತಂದಿಡುಮ್ 5 ನಾರಾಣನ್‌ತಮ್ ಅನ್ನೈನರಕಂಪುಹಾಳ್–ಇತ್ಯಾದಿಗಳಾದ ಪಾಶುರಗಳಿಂದಲೂ ಪ್ರಸಿದ್ಧ. ನಾರದೀಯಕಲ್ಪತ್ತಿಲುಮ್ ಇತ್ಯಾದಿ-ನಾರಾಯಣ ಎಂದು ಭಗವನ್ನಾಮವನ್ನು ಸಂಕೀರ್ತನ ಮಾಡಿದರೆ, ರೋಗ, ಆಪತ್ತು, ನರಕ, ಭಯ ಮೊದಲಾದವುಗಳೆಲ್ಲಾ ಪರಿಹಾರವಾಗುತ್ತವೆ ನಾರಾಯಣ ಪರಾಯಣರು ಪರಮ ವೈಷ್ಣವರೆಂಬ ಉತ್ಕೃಷ್ಟ ಕುಲ ಪ್ರಾಪ್ತಿಯೂ ಉಂಟಾಗುತ್ತದೆ. ಮಗನಿಗೆ ನಾರಾಯಣ ನೆಂಬ ಹೆಸರಿಟ್ಟು ಅವನನ್ನು ಸದಾ ಕರೆಯುತ್ತಿರುವ ತಾಯಿಯು ನರಕವನ್ನು ಪ್ರವೇಶಿಸುವುದಿಲ್ಲ,ಎಂದು ಹೇಳಲ್ಪಟ್ಟಿದೆ.

ಇದುತನ್ನೈಯೇ ಇತ್ಯಾದಿ– ಈ 'ನಾರಾಯಣ' ಎಂಬ ಪದವನ್ನು "ನ್, ಆ, ರ್ ಆ, ಯ್, ಅ, ಣ್, ಅ" ಎಂದು ಸ್ವರ ವ್ಯಂಜನಗಳನ್ನು ಬಿಡಿಸಿದರೆ ಎಂಟು ಶ್ರೇಷ್ಠವಾದ ಅಕ್ಷರವಾಗುವಂತೆ ಭಾವಿಸಿದರೆ, ಅಷ್ಟಾಕ್ಷರ ಮಂತ್ರ ಸಮಾನವೆಂದು ಪುರಾಣಾಂತರಗಳಲ್ಲಿ ಹೇಳಿದೆ.

### ನಾರಾಯಣಶಬ್ದಕ್ಕೆ ತತ್ಪುರುಷ ಬಹುವ್ರೀಹಿ ಸಮಾಸಗಳಿಂದ ಉಂಟಾಗುವ ಅರ್ಥಗಳು.

**ನಾರಶಬ್ದಾರ್ಥ:–** **ಈಶ್ವರನೋಡು** ಇತ್ಯಾದಿ– ಈಶ್ವರನೊಂದಿಗೆ ಪೃಥಕ್ ಸಿದ್ಧಗಳಲ್ಲದ ನಾರಗಳಿಗೆ ನಾರಾಃ ಅಯನಂ ಯಸ್ಯ ಎಂದೂ ನಾರಾಣಾಂ ಅಯನಂ ಎಂದೂ ಬಹು ವ್ರೀಹಿ, ತತ್ಪುರುಷ ಸಮಾಸಗಳಲ್ಲಿ ವಿಶೇಷಣ ಮಾತ್ರ ಪರಗಳೆಂದು ಮೇಲೆ ಹೇಳಿದ ನಿಷ್ಕರ್ಷ ವಿವಕ್ಷೆಯಿಂದ ನಾರ ಶಬ್ದಕ್ಕೂ ಅಯನ ಶಬ್ದಕ್ಕೂ ವೈಯ್ಯಧಿಕರಣ್ಯವು (ವಿಭಕ್ತಿ ವ್ಯತ್ಯಾಸವು) ಉಂಟಾಗಿದೆ. ಅಂದರೆ ಅಪೃಥಕ್ ಸಿದ್ಧನಾರವಾಚಿಯಾದ ನಾರಶಬ್ದಕ್ಕೆ ಸಮಾನಾಧಿಕರಣ ನಿರ್ದೇಶಕವೇ ಉಚಿತವಾಗಿರುವಾಗ ನಿಷ್ಕರ್ಷ ವಿವಕ್ಷೆಯಿಂದ ವ್ಯಧಿಕರಣ ನಿರ್ದೇಶವು ಪ್ರಾಪ್ತ ವೆಂದು ತಾತ್ಪರ್ಯ.

---

(4) ಕುಲಂದರುಂ ಶೆಲ್ವಂತಂದಿಡುಮ್–ಇತ್ಯಾದಿ ಪೆರಿಯತಿರುಮೊೞಿ 1-1-8

(5) ಕಾಶುಂಕರೈಯುಡೈಕ್ಕೂರೈಕ್ಕುಮ್, ಅಂಗೋರ್‌ಕತ್ತೈಕ್ಕುಮ್
ಆಶೈಯಿನಾಲ್, ಅಂಗವತ್ತಪ್ಪೇರಿಡುಮ್ ಆದರ್‌ಹಾಳ್ ।
ಕೇಶವನ್‌ಪೇರಿಟ್ಟು ನೀಂಗಳ್‌ತೇನಿತ್ತಿರುಮಿನೋ
ನಾಯಕನ್ ನಾರಾಣನ್ ತಮ್ಮನ್ನೈನರಕಂ ಪುಹಾಳ್ ॥ ಪೆರಿಯಾೞ್ವಾರ್, ತಿರುಮೊೞಿ (4–6-1 to 9)

## ಅಸ್ಯ ಸಮಾಸ ದ್ವಯಾರ್ಥಸ್ಯ ಸಾಂಪ್ರದಾಯಿಕತ್ವಮಾಹ

ಇಶ್ಶಬ್ದತ್ತುಕ್ಕು ನಮ್ಮಾೞ್ವಾರ್
1) "ಎಣ್ ಪೆರುಕ್ಕನ್ನಲತ್ತೊಣ್ ಪೊರುಳ್ಳೀರಿಲ ॥
ವಣ್ ಪುಹೞ್ ನಾರಣ್ಣ ।"
2) "ನಾರಣ್ಣ ಮುೞ್ಳನೇೞುಲಹುಕ್ಕುಮ್ ನಾತನ್ ॥"
ಎನ್ರುಮ್, ಪೂರ್ವಾಪರಂಗಳಿಲೇ ಸಮಾಸದ್ವಯತ್ತಿಲ್ ಅರ್ಥತ್ತೈ ಪ್ರದರ್ಶಿಪ್ಪಿತ್ತಾರ್.

ನಾರಾಯಣಶಬ್ದಸ್ಥ ನಾರಶಬ್ದಾರ್ಥಃ.

ಇದಿಲೇ ಹೇಯಪ್ರತ್ಯನೀಕತ್ವ ಕಲ್ಯಾಣೈಕತಾನತ್ವ ರೂಪಮಾನ ಉಭಯಲಿಙ್ಗತ್ವಮುಮ್, ಉಭಯ ವಿಭೂತಿ ಯೋಗಮುಮ್ ಗರ್ಭಿತಮ್.

---

ಇಶ್ಶಬ್ದತ್ತುಕ್ಕು ನಮ್ಮಾೞ್ವಾರ್ ಇತ್ಯಾದಿ ಈ ನಾರಾಯಣ ಶಬ್ದಕ್ಕೆ ನಮ್ಮಾೞ್ವಾರವರು 1) **ಎಣ್ ಪೆರುಕ್ಕನ್ನಲತ್ತು** ಇತ್ಯಾದಿಯಾಗಿ ಬಹುವ್ರೀಹಿ ಸಮಾಸಾರ್ಥವನ್ನೂ 2. **ನಾರಣನ್ ಮುೞ್ಳನೇೞುಲಗುಕ್ಕುನಾದನ್** ಇತ್ಯಾದಿಯಾಗಿ ತತ್ಪುರುಷ ಸಮಾಸಾರ್ಥವನ್ನೂ **ಪೂರ್ವಾಪರಂಗಳಿಲೇ** ಇತ್ಯಾದಿ– ಮೊದಲನೆಯ ಮತ್ತು ಎರಡನೆಯ ಶತಕದಲ್ಲಿ ಪ್ರದರ್ಶಿಸಿರುತ್ತಾರೆ. ಅದಾಗಿ **ಎಣ್ ಪೆರುಕ್ಕನ್ನಲತ್ತು** – ಸಂಖ್ಯಾತೀತನಾದ ಅಸಂಖ್ಯಾತರಾದ, ಜ್ಞಾನಾನಂದಾಶ್ರಯರಾದ, **ಒಣ್ ಪೊರುಳ್**-ಸ್ವಯಂ ಪ್ರಕಾಶರಾದ ಜೀವರನ್ನು ವ್ಯಾಪ್ಯರನ್ನಾಗಿ ಉಳ್ಳ, ಇದು ಅಚೇತನಕ್ಕೂ ಉಪಲಕ್ಷಣ, ಚೇತನಾ ಚೇತನರನ್ನು ವ್ಯಾಪಿಸಿರುವ ಎಂದರ್ಥ, **ಈರಿಲ ವಣ್ ಪುಹೞ್**ಎಲ್ಲೆಯಿಲ್ಲದ ಕಲ್ಯಾಣಗುಣಗಳಿಂದ ಕೂಡಿದ **ನಾರಣನ್**–ನಾರಾಯಣನು, ನಾರಣನ್ **ಮುೞ್ಳನೇೞುಲಕ್ಕುಮ್ ನಾದನ್**–ಕೃತ್ಸ್ನವಾದ ಸಪ್ತಲೋಕಗಳಿಗೂ – ಇದು ನಾರ ಶಬ್ದಾರ್ಥವಾದ ಉಭಯವಿಭೂತಿಗೂ ಉಪಲಕ್ಷಣ– ನಾದನ್–ಸ್ವಾಮಿ. ಇದು ತತ್ಪುರುಷ ಸಮಾಸಾರ್ಥ. ಇದಿಲೇ ಇತ್ಯಾದಿ ಈ ನಾರಾಯಣ ಶಬ್ದದಲ್ಲಿ ಹೇಯಪ್ರತ್ಯನೀಕತ್ವವು, ಎಲ್ಲಾ ವಸ್ತುಗಳಲ್ಲಿಯೂ ಅಂತಃ ಪ್ರವಿಷ್ಟನಾಗಿದ್ದರೂ ಆ ವಸ್ತುಗಳ ಹೇಯ್ಯ ಗುಣಗಳು ಇವನಿಗೆ ಅಂಟುವುದಿಲ್ಲವಾದ್ದರಿಂದ, ಬಹುವ್ರೀಹಿಸಮಾಸದಿಂದ ತಿಳಿಯಲ್ಪಡುತ್ತದೆ. ಸಮಸ್ತ ಕಲ್ಯಾಣಗುಣಗಳಿಂದ ಕೂಡಿದವನೆಂಬ ಕಲ್ಯಾಣೈಕತಾನತ್ವವೂ, ಇದರಿಂದ ಉಭಯ ಲಿಂಗತ್ವವೂ, ನಾರಾಃ ಅಯನಂ ಯಸ್ಯ ಎಂದು ಉಭಯ ವಿಭೂತಿ ಯೋಗವೂ ಶಾಬ್ದವು. ಉಭಯ ಲಿಂಗತ್ವವು ಆರ್ಥ. ತತ್ಪುರುಷ ಸಮಾಸದಲ್ಲಿ ಎರಡೂ ಶಾಬ್ದ. ನಾರಾಣಾಂ ಎಂಬುದು ಚೇತನಾ ಚೇತನಗಳನ್ನೂ ನರಶಬ್ದ ವಾಚ್ಯನಾದ ಭಗವಂತನ ಕಲ್ಯಾಣಗುಣಗಳನ್ನೂ ತಿಳಿಸುತ್ತದೆ.

---

(1) ಎಣ್ ಪೆರುಕ್ಕನ್ನಲತ್ತೊಣ್ ಪೊರುಳೀರಿಲ ।
ವಣ್ ಪುಹೞ್ ನಾರಣನ್ ತಿಣ್ ಕೞಲ್ ಶೇರೇ ॥ ತಿರುವಾಯ್ ಮೊೞಿ (1-2-10)
ಸಂಖ್ಯಾತೀತರಾದ, ಅಂದರೆ ಅಸಂಖ್ಯಾತರಾದ, ಮತ್ತು ಜ್ಞಾನಾನಂದಾಶ್ರಯ ಸ್ವಯಂಪ್ರಕಾಶರಾದ ಜೀವರನ್ನೂ ಅಚೇತನ ತತ್ವವನ್ನೂ ಅಂತಃ ವ್ಯಾಪಿಸಿರುವ ಅನಂತ ಕಲ್ಯಾಣಗುಣಗಳಿಂದ ಕೂಡಿದ ನಾರಾಯಣನ ದೃಢವಾದ ಪಾದಗಳನ್ನು ಆಶ್ರಯಿಸು' ಎಂದು ಸಂಸಾರಿ ಚೇತನರಿಗೆ ನಮ್ಮಾೞ್ವಾರವರು ಮಾಡುವ ಉಪದೇಶ.

(2) ನಾರಣನ್ ಮುೞ್ಳವೇೞುಲಹುಕ್ಕುಮ್ ನಾದನ್ ವೇದಮಯನ್
ಕಾರಣಂ ಕಿರಿಶೈಕರುಮಮಿವ್ವೈಮುದಲ್ ವನ್ ಎಂದೈ ।
ಶೀರಣಂಗಮರರ್ ಪಿರರ್ ಪಲರುಮ್ ತೊೞುದೇತ್ತನಿನ್ರು
ವಾರಣತ್ತೈ ಮರುಪ್ಪೊಶಿತ್ತಪಿರಾನ್ ಎನ್ ಮಾದವನೇ ॥ ತಿರುವಾೞುಮೊೞಿ (2-7-3)
ನಾರಾಯಣನೇ ಸರ್ವಜಗತ್ಸ್ವಾಮಿ. ವೇದಪ್ರತಿಪಾದ್ಯನು, ಜಗತ್ಕಾರಣನು, ಕರ್ಮಾರಾಧ್ಯನು, ಆದಿ, ನನಗೆ ಸ್ವಾಮಿ. ನಿತ್ಯಮುಕ್ತರುಗಳಿಂದಲೂ ಸಕಲ ದೇವತೆಗಳಿಂದಲೂ ಪೂಜ್ಯನು. ಕುವಲಯಾಪೀಡದ ಕೊಂಬನ್ನು ಮುರಿದವನು. ನನ್ನವನು. ಲಕ್ಷ್ಮೀಪತಿ

**ದೇವೀ ಭೂಷಣಾಯುಧ ಪರಿಜನ ಪರಿಚ್ಛದ ದ್ವಾರಪಾಲ ಪಾರ್ಷದಾದಿ ಭೇದಙ್ಗಳುಮ್, ಇಙ್ಗೇಯನು ಸಂಧೇಯಙ್ಗಳ್.**

---

**ದೇವೀಭೂಷಣಾಯುಧ** ಇತ್ಯಾದಿ–ನಾರಾಣಾಂ ಎಂಬ ಬಹುವಚನ ಶಬ್ದದಲ್ಲಿ ದೇವೀ–ಶ್ರೀಭೂಮಿನೀಳ ಗಳು, ಭೂಷಣ– ಕಿರೀಟ ಮಕುಟ ಹಾರಕೇಯೂರಾದಿಗಳು, ಆಯುಧ–ಶಂಖ ಚಕ್ರಾದಿಗಳು, ಪರಿಜನದ್ವಾರಪಾಲ ಚಂಡಾದಿಗಳು, ಪಾರ್ಷದ ಕುಮುದಾದಿಗಳು, ಆದಿ ಪದದಿಂದ ಭೋಗೋಪಕರಣಗಳು ವಿವಕ್ಷಿತ. ಈ ಭೇದಗಳೆಲ್ಲಾ ಈ ನಾರ ಪದದಲ್ಲಿ ಅನುಸಂಧೇಯಗಳು.

ಇದಮತ್ರಾನುಸಂಧೇಯಮ್ – ಯೋಗರೂಢವಾದ ನಾರಾಯಣ ಶಬ್ದದಲ್ಲಿ ರೂಡಿಯಿಂದ ಶ್ರಿಯಃ ಪತಿಯು ಹೇಳಲ್ಪಡುತ್ತಾನೆ. ಸಮಾಸದ್ವಯ ಯೋಗದಿಂದ ಉಭಯಲಿಂಗತ್ವ, ಉಭಯ ವಿಭೂತಿ ಯೋಗತ್ವಗಳು ಹೇಳಲ್ಪಡುತ್ತವೆ. ಇವೆರಡೂ ರೂಢ್ಯರ್ಥಭೂತನಾದ ಶ್ರಿಯಃ ಪತಿಗೆ ಅನ್ವಯಿಸುತ್ತವೆ, ಎಂಬುದು ವೇದಾಂತ ರಹಸ್ಯವಿತ್ತುಗಳ ಸಿದ್ಧಾಂತ. ಪತಿಯು ಹಾಗೆ, ಲಕ್ಷ್ಮಿಗೂ ಉಭಯಲಿಂಗತ್ವ, ಉಭಯವಿಭೂತತ್ವಿಯೋಗವು ಅನ್ವಯಿಸುತ್ತದೆ ಎಂದು ತಾತ್ಪರ್ಯ. ಇದನ್ನು ನ್ಯಾಸ ತಿಲಕದಲ್ಲಿ ಆಚಾರ್ಯರು ವ್ಯಕ್ತವಾಗಿ ಅನುಗ್ರಹಿಸುತ್ತಾರೆ. ಅದಾಗಿ

ಓಮಿತ್ಯಭ್ಯುಪಗಮ್ಯ ರಂಗನೃಪತೇಽನನ್ಯೋಚಿತಾಂಶೇಷತಾಂ ।
ಸ್ವಾತಂತ್ರ್ಯಾದಿಮಯೀಂ ಮಪೋಹ್ಯ ಮಹತೀಮಾದ್ಯಾಮವಿದ್ಯಾಸ್ಥಿತಿಮ್ ।
ನಿತ್ಯಾಸಂಖ್ಯ ಪಸೀಮಭೂತಿ ಗುಣಯೋಃ ಯೋರ್ಯಯಾ ಮನಾಯಾಸತಃ
ಸೇವಾಸಂಪದಮಿಂದಿರೇಶ ಯುವಯೋಃ ರೇಕಾಂತಿಕಾತ್ಯಂತಿಕೀಮ್ ॥

ಎಲೈ (ಇಂದಿರೇಶ) ರಂಗನಾಥನೇ ಅನ್ಯರಲ್ಲಿ ಶೇಷತ್ವ ಬುದ್ಧಿಯಿಲ್ಲದೇ ನಿಮ್ಮಲ್ಲೇ ಶೇಷತ್ವ ಬುದ್ಧಿಯನ್ನು ಅಂಗೀಕರಿಸಿ (ಇದು ಪ್ರಣವಾರ್ಥ), ಅವಿದ್ಯಾಶ್ರಯವಾದ ಸ್ವಸಾತಂತ್ರ್ಯ ಬುದ್ಧಿಯನ್ನು ನಿವರ್ತಿಸಿ (ನಮಶ್ಶಬ್ದಾರ್ಥ) ಎಲೈ ಇಂದಿರೇಶ ನಿತ್ಯವೂ ಅಸಂಖ್ಯೇಯವೂ ಆದ ಸೀಮಾ ತೀತವಾದ ವಿಭೂತಿ ಮತ್ತು ಗುಣಗಳನ್ನುಳ್ಳ ನಿಮ್ಮಿಬ್ಬರಲ್ಲಿ (ನಾರಾಯಣ ಶಬ್ದಾರ್ಥ) ಏಕಾಂತಿಕಾತ್ಯಂತಿಕವಾದ ಸೇವಾ ಸಂಪತ್ತನ್ನು ಅನಾಯಾಸವಾಗಿ ಪಡೆಯಲು ಇಚ್ಛಿಸುತ್ತೇನೆ. (ಆಯ ಶಬ್ದಾರ್ಥ) ಈ ಶ್ಲೋಕದಲ್ಲಿ, ಎಣ್‌ಪೆರುಕ್ಕನ್ನಲತ್ತು ಇತ್ಯಾದಿಯಾದ ಪಾಶುರದಿಂದ ವಿವರಿಸಲ್ಪಟ್ಟ ಯೋಗಾರ್ಥವು, ಇಂದಿರಾ ಮತ್ತು ಅವಳ ಈಶನಾದ ನಾರಾಯಣರಿಬ್ಬರಲ್ಲಿಯೂ ಸಮಾನವೆಂಬುದು ನಾರಾಯಣ ಶಬ್ದದಿಂದ ತಿಳಿಸಲ್ಪಡುತ್ತದೆ ಎಂದು ಜ್ಞಾಪಿಸಿ, 'ಆಯ' ಎಂಬ ಚತುರ್ಥಿಯಿಂದ ಅವರಿಬ್ಬರಿಗೇ ಕೈಂಕರ್ಯ ಮಾಡುವುದೆಂಬುದು ಪ್ರಾರ್ಥನೀಯವೆಂದು ತಿಳಿಸಲ್ಪಡುತ್ತದೆಯಾದ್ದರಿಂದ ಯಾವ ವಿರೋಧವೂ ಇಲ್ಲವೆಂದು ಭಾವ.

ಸರಿ. ಇಲ್ಲಿಯೂ ನರಸಂಬಂಧಿನೋ ನಾರಾಃ ಎಂಬ ವ್ಯುತ್ಪತ್ತಿಯನ್ನು ಆಶ್ರಯಿಸಿ, ದೇವೀಭೂಷಣಾಯುಧಾದಿಗಳು ಅನುಸಂಧೇಯಗಳೆಂದು ಹೇಳಿರುವಂತೆ, ಲಕ್ಷ್ಮಿಯೂ ನಾರ ವರ್ಗದಲ್ಲಿ ಸೇರಿದ್ದಾಳೆಂದು ಭಾಷ್ಯಕಾರರಿಂದ ಗದ್ಯದಲ್ಲಿ ನಿಗಮಿಸಲ್ಪಟ್ಟಿದೆಯಲ್ಲವೇ. ಆದ್ದರಿಂದ ಲಕ್ಷ್ಮಿಯನ್ನು ಹೇಗೆ ಈಶ್ವರ ಕೋಟಿಯಲ್ಲಿ ಸೇರಿಸುವಿರಿ. ಇದು ವಿರೋಧವಾಗುವುದಿಲ್ಲವೇ ಎಂದರೆ, ಅದಕ್ಕೆ ಸಮಾಧಾನವೇನೆಂದರೆ "ಬ್ರಹ್ಮಾದಕ್ಷಾದಯಃ ಕಾಲಃ", "ರುದ್ರಃಕಾಲಾಂತಕಶ್ಚ" ಎಂಬಂತೆ "ವಿಷ್ಣುರ್ಮನ್ವಾದಯಃಕಾಲಃ, ಎಂದೂ ಗೀತೆಯಲ್ಲಿ ಭಗವಂತನ ವಿಭೂತಿವರ್ಗವು ಉಪಸಂಗ್ರಹಿಸಲ್ಪಟ್ಟಿದೆ. ಅಲ್ಲಿ ಪರನಾದ ಭಗವಂತನ,ಅವತಾರಗಳನ್ನು ವಿಭೂತಿವರ್ಗದಲ್ಲಿ ಸೇರಿಸಿರುವುದು ಗಮನಾರ್ಹ. 'ರಾಮಶ್ಶಸ್ತ್ರಭೃತಾಮಹಂ' ಎಂಬಲ್ಲಿ 'ಶಸ್ತ್ರಭೃತ್ತ್ವವು' ಭಗವಂತನ ವಿಭೂತಿ. "ವೃಷ್ಣೀನಾಂ ವಾಸುದೇವೋಽಹಮ್" ಎಂಬಲ್ಲಿ ವಸುದೇವಸೂನುತ್ವವು ವಿಭೂತಿ. ಈ ಎರಡು ಸ್ಥಳಗಳಲ್ಲಿಯೂ ವಿಭೂತಿ, ವಿಭೂತಿಮದ್ಭಾವವು ಪ್ರಾಪ್ತಾಪ್ರಾಪ್ತವಿವೇಕದಿಂದ, ಅವತಾರ ದಿವ್ಯ ವಿಗ್ರಹ, ತದ್ವಿಶಿಷ್ಟ ದಿವ್ಯಾತ್ಮ ಸ್ವರೂಪ ಪರವಾಗಿಯೋ, ಪರರೂಪ

ಕಾರಣತ್ವ ಮಬಾಧ್ಯತ್ವ ಮುಪಾಯತ್ವ ಮುಪೇಯತಾ ।
ಇತಿ ಶಾರೀರಕಸ್ಥಾಪ್ಯ ಮಿಹ ಚಾಪಿ ವ್ಯವಸ್ಥಿತಮ್ ॥೩॥
ಇದೆಲ್ಲಾಮ್ "ಜ್ಞಾನಾನಂದಾಮಲತ್ವಾದಿ" ಎನ್ರುತುಡಙ್ಗ ಭಟ್ಟರ್ ನಿತ್ಯತ್ತಿಲೇ ಪ್ರತಿಪಾದಿತಮ್
ಇವ್ವಿಡತ್ತಿಲ್ 1) "ಸೃಷ್ಟ್ವಾನಾರಂ ತೋಯಮಂತಸ್ಸ್ಥಿತೋಹಂ ಯೇನಸ್ಯಾನ್ಮೇನಾಮ ನಾರಾಯಣೇತಿ।
2) ಅಪೋನಾರಾ ಇತಿ ಪ್ರೋಕ್ತಾ ಆಪೋವೈ ನರಸೂನವಃ ।
ತಾಯದಸ್ಯಾಯನಂ ಪೂರ್ವಂ ತೇನ ನಾರಾಯಣಃ ಸ್ಮೃತ: ॥
ಇತ್ಯಾದಿಹಳಿಲೇ ಅಪ್ಪುಕ್ಕಳೈ ಎಡುತ್ತದು ತತ್ವಾಂತರಙ್ಗಳುಕ್ಕುಮ್ ಉಪಲಕ್ಷಣಮೆನ್ನುಮಿಡಮ್

---

ವಿಶಿಷ್ಟದಿವ್ಯಾತ್ಮಸ್ವರೂಪ ಪರವಾಗಿಯೋ ನಯನ ಮಾಡಬೇಕೆಂದು ಸಮ್ಮತಿಸಲ್ಪಡಬೇಕು. ಹಾಗೆಯೇ ಲಕ್ಷ್ಮಿಯ ಪರರೂಪಕ್ಕೆ ಅನುಸಾರವಾಗಿ, ಅವಳ ಅವತಾರ ದಿವ್ಯ ರೂಪಾಂತರಗಳು ವಿಭೂತಿ ಕೋಟಿಯಲ್ಲಿ ಸೇರುವುದು ಯುಕ್ತವಾದದ್ದು. ಆದ್ದರಿಂದ ಲಕ್ಷ್ಮಿಯು ಈಶ್ವರ ಕೋಟಿ ಪ್ರವಿಷ್ಟಳಾಗಿರುವುದಕ್ಕೆ ಏನೂ ಬಾಧಕವಿಲ್ಲ.

**ನಾರಾಯಣ ಶಬ್ಧದಲ್ಲಿ ಶಾರೀರಕಾರ್ಥಾನುಸಂಧಾನ**

ಕಾರಣತ್ವಮಬಾಧ್ಯತ್ವಂ ಇತ್ಯಾದಿ–ಶಾರೀರಕ ಮೀಮಾಂಸೆಯಲ್ಲಿ ಕ್ರಮವಾಗಿ ನಾಲ್ಕು ಅಧ್ಯಾಯಗಳಿಂದ ಭಗವಂತನ 1) ಜಗತ್ಕಾರಣತ್ವ 2) ಅಬಾಧ್ಯತ್ವ–ಜಗತ್ಕಾರಣತ್ವಕ್ಕೆ ಯಾವ ಬಾಧಕವೂ ಇಲ್ಲದಿರುವುದು, 3) ಭಗವಂತನೇ ಮೋಕ್ಷಕ್ಕೆ ಉಪಾಯಭೂತನು 4) ಅವನೇ ಉಪೇಯನು–ಪ್ರಾಪ್ಯನು, ಎಂದು ಹೇಳಲ್ಪಟ್ಟ ಈ ಅರ್ಥಗಳು, ನಾರಾಯಣ ಶಬ್ದದಲ್ಲಿಯೂ ವ್ಯವಸ್ಥಿತಗಳು. ಹೇಗೆಂದರೆ ನರಾಜ್ಜಾತಾನಿತತ್ವಾನಿ ಎಂಬುದರಿಂದ ನಾರಶಬ್ದವಾಚ್ಯ ಜಗತ್ಕಾರಣತ್ವವೂ, ನರಿಷ್ಯತೀತಿನರಃ, ಎಂದು ಕ್ಷಯ ನಿಷೇಧ ವಾಚಕತ್ವದಿಂದ ಅಬಾಧ್ಯತ್ವವೂ. ಈಯತೇ ಅನೇನ ಇತಿ ಅಯನಂ, ಎಂಬ ಕರಣ ವ್ಯುತ್ಪತ್ತಿಯಿಂದ ಉಪಾಯತ್ವವೂ, ಈಯತೇ ಅಸೌ ಎಂಬ ಕರ್ಮ ವ್ಯುತ್ಪತ್ತಿಯಿಂದ ಉಪಯೇತ್ವವೂ ಏರ್ಪಡುತ್ತದೆ. **ಇದೆಲ್ಲಾಮ್** ಇತ್ಯಾದಿ– ಈ ಅರ್ಥಗಳೆಲ್ಲಾ 1) ಜ್ಞಾನಾನಂದಾಮಲತ್ವಾದಿ ಎಂದಾರಂಭಿಸುವ ಭಟ್ಟರ ನಿತ್ಯ ಗ್ರಂಥಗಳಲ್ಲಿ ಪ್ರತಿಪಾದಿತವು.

**ನಾರಾಯಣ ಶಬ್ದಕ್ಕೆ ಸ್ಮೃತ್ಯುಕ್ತವಾದ ಅರ್ಥ.**

ಇವ್ವಿಡತ್ತಿಲ್, ಈ ಸ್ಥಳದಲ್ಲಿ ನಾರಾಯಣ ಶಬ್ದಾರ್ಥ ವಿವರಣರೂಪವಾಗಿ ಪ್ರವೃತ್ತಗಳಾದ ವಚನಗಳಲ್ಲಿ ಸೃಷ್ಟ್ವಾನಾರಂ ಇತ್ಯಾದಿ–ನಾರಂ–ನರಸಂಬಂಧಿಯಾದ, ತೋಯಂ–ನೀರನ್ನು, ಸೃಷ್ಟಿಸಿ, ಅದರೊಳಗೆ ನಾನು ಇದ್ದೇನು ಆದರಿಂದಾಗಿ ನನಗೆ ನಾರಾಯಣನೆಂಬ ಹೆಸರು 2) ಅಪೋನಾರಾಇತಿಪ್ರೋಕ್ತಾ, ಇತ್ಯಾದಿ– ನಾರಾಃ ಎಂದು ಜಲತತ್ವವು ಹೇಳಲ್ಪಟ್ಟಿತು. ಆ ಅಪ್ಪುಗಳು ನರನ ಮಕ್ಕಳು. ಅವುಗಳು ಇವನಿಗೆ ವಾಸಸ್ಥಾನ. ಆದ ದಿಂದ ನಾರಾಯಣ (ನಾರಾಃ ಅಯನಂ ಯಸ್ಯ ನೆಂದು ಸ್ಮರಿಸಲ್ಪಟ್ಟಿದ್ದಾನೆ,–ಇತ್ಯಾದಿಹಳಿಲೇ ಇತ್ಯಾದಿ ವಚನ ಗಳಲ್ಲಿ, ಅಪ್ಪುಕ್ಕಳೈಯೆಡುತ್ತದು–ಇತ್ಯಾದಿ-ಜಲತತ್ವವನ್ನು ಹೇಳಿರುವುದು, ಅಂಡಸೃಷ್ಟಿಗೆ ಕಾರಣಗಳಾದ ಇತರ ತತ್ವಗಳಿಗೂ ಉಪಲಕ್ಷಣ. ಇದರಿಂದಾಗಿ ಅಪಃ ಎಂಬ ಶಬ್ದಕ್ಕೆ ಲಕ್ಷಣೆಯಿಂದ ಅಂಡ ಸೃಷ್ಟಿಗೆ ಕಾರಣಗಳಾದ ಪಂಚಭೂತಗಳೂ ಅವುಗಳಿಗೆ ಕಾರಣಗಳಾದ ಪ್ರಕೃತಿ, ಮಹದಹಂಕಾರಗಳೂ ಉಪಲಕ್ಷಣಗಳು, ಎಂಬುದು

---

(1) ವರಾಹಪುರಾಣ (2)ಮನುಸ್ಮೃತಿ 1 ।9

(1) ಸೃಷ್ಟ್ವಾನಾರಂತೋಯಮಂತಃ ಸ್ಥಿತೋಽಹಂ ಯೇನಸ್ಯಾನ್ಮೇ ನಾಮ ನಾರಾಯಣೇತಿ ।
ಕಲ್ಪೇಕಲ್ಪೇತತ್ರ ಶಯೋಮಿ ಭೂಯಃ ಸುಪ್ತಸ್ಯಮೇನಾಭಿಜಃಸ್ಯಾದ್ಯಥಾದ್ಯ ॥
ಪಾಂಚಭೌತಿಕವಾದ ಅಂಡವನ್ನು ಸೃಷ್ಟಿಸಿ ಅದರೊಳಗೆ ನಾನಿರುವುದರಿಂದ ನಾರಾಯಣನೆಂದು ನನಗೆ ಹೆಸರು. ಪ್ರತಿಕಲ್ಪದಲ್ಲಿಯೂ ಆ ನೀರಿನಲ್ಲಿ ಮಲಗಿರುತ್ತೇನೆ. ನನ್ನ ನಾಭಿ ಕಮಲದಿಂದ ನೀನು (ಬ್ರಹ್ಮ) ಈಗ ಹುಟ್ಟಿರುವಂತೆ ಹುಟ್ಟುತ್ತೀಯೆ.

3) "ನರಾಜ್ಜಾತಾನಿ ತತ್ವಾನಿ ನಾರಾಣೀತಿ ತತೋವಿದುಃ ।
ತಾನ್ಯೇವ ಚಾಯನಂ ತಸ್ಯ ತೇನ ನಾರಾಯಣಃ ಸ್ಮೃತಃ ॥" ಇತ್ಯಾದಿಹಳಿಲೇ ಸಿದ್ಧಮ್,

## ನಾರಾಯಣ ಪದಸ್ಥ ಅಯನಶಬ್ದಾರ್ಥಃ

ಇನ್ದ ಬಹುವ್ರೀಹಿ ಸಮಾಸ (ಮಾನ) ನಿರ್ವಚನತ್ತಿಲ್ "ನರಾಜ್ಜಾತಾನಿ ತತ್ವಾನಿ" ಎನ್ರು ನಾರ ಶಬ್ದಾರ್ಥಂ ಶೊಲ್ಲುಹೈಯಾಲೇ ಮಹೋಪನಿಷತ್ಪ್ರಭೃತಿಹಳಿಲ್ ಚ್ಚೊಲುಹಿರಪಡಿಯೇ ಬ್ರಹ್ಮೇಶಾನಾದಿ ಸರ್ವತ್ತೈಯುಮ್ಪತ್ತ ನಾರಾಯಣನುಡೈಯ ಸರ್ವವಿಧ ಕಾರಣತ್ವಮುಮ್ "ಅಯನ ಶಬ್ದತ್ತಿಲ್" "ಈಯತ ಇತ್ಯಯನಂ" ಎನ್ಗಿರ ಕರ್ಮ ವ್ಯುತ್ಪತ್ತಿಯಾಲೇ ಇವತ್ತೈವ್ಯಾಪ್ಯಮಾಹವುಡೈಯವನುಡೈಯ ಸರ್ವವ್ಯಾಪಕತ್ವಮುಮ್, ಅದಕ್ಕುಪಯುಕ್ತಮಾನ ನಿರತಿಶಯ ಸೂಕ್ಷ್ಮತ್ತ್ವಮುಮ್, ಶೊಲ್ಲಿತ್ತಾಯಿತ್ತು. ಇಪ್ಪೊರುಳ್‌ಹಳ್ "ಈಯತೇ ಅಸ್ಮಿನ್ ಎನ್ಗಿರ ಅಧಿಕರಣ ವ್ಯುತ್ಪತ್ತಿಯಿಲುಮ್ ವರುಮ್.(೧)"ನಾರಾಣಾ ಮಯನತ್ವಾಚ್ಚ ನಾರಾಯಣ ಇತಿಸ್ಮೃತಃ" (೨) ನಾರಸ್ತ್ವಿತಿ ಸರ್ವಪುಂಸಾಂ ಸಮೂಹಃ ಪರಿಕೀರ್ತಿತಃ

---

3) **ನರಾಜ್ಜಾತಾನಿತತ್ವಾನಿ**- ನರನಿಂದ ಉಂಟಾದ ತತ್ವಗಳು ನಾರಗಳು ಎಂದು ತಿಳಿಯಲ್ಪಟ್ಟವು. **ತಾನ್ಯೇವ ಚಾಯನಂ** ಇತ್ಯಾದಿ– ಆ ನಾರಗಳೇ, ಅವನಿಗೆ ಅಯನಂ ವಾಸಸ್ಥಾನವು. ಅದರಿಂದಾಗಿ ನಾರಾಯಣನೆಂದು ಸ್ಮರಿಸಲ್ಪಟ್ಟನು, ಇತ್ಯಾದಿ ವಚನಗಳಿಂದ ಸಿದ್ಧ. **ಇಂದ ಬಹುವ್ರೀಹಿ ಸಮಾಸಮಾನ** ಇತ್ಯಾದಿ–ನಾರಾಃ ಅಯನಂ ಯಸ್ಯ ಈ ಬಹುವ್ರೀಹಿಸಮಾಸಕ್ಕೆ ನಿರ್ವಚನದಲ್ಲಿ, ನರಾಜ್ಜಾತಾನಿ ತತ್ವಾನಿ–ನರನಿಂದ ತತ್ವಗಳು ಉಂಟಾಗಿವೆ, ಎಂದು ನಾರ ಶಬ್ದಾರ್ಥವು ಹೇಳಲ್ಪಡುವುದರಿಂದ, **ಮಹೋಪನಿಷತ್** ಪ್ರಭೃತಿಗಳಲ್ಲಿ "ಏಕೋಹವೈನಾರಾಯಣ ಆಸೀತ್ ನಬ್ರಹ್ಮಾನೇಶಾನಃ ಇತ್ಯಾದಿ ಹೇಳಿರುವಂತೆ ಬ್ರಹ್ಮೇಶಾನಾದಿಸರ್ವವನ್ನೂ ಕುರಿತು ನಾರಾಯಣನು ಸರ್ವವಿಧ ಕಾರಣವೆಂಬುದೂ, ಅಯನ ಶಬ್ದದಲ್ಲಿ ಈಯತೇ ಇತ್ಯಯನಂ ಎಂಬ ಕರ್ಮ ವ್ಯುತ್ಪತ್ತಿಯಿಂದ ಇವುಗಳೆನ್ನು ವ್ಯಾಪ್ಯವಾಗಿ ಉಳ್ಳವನು ಎಂಬ ಅರ್ಥದಿಂದ ಅಂದರೆ ಇವುಗಳನ್ನು ವ್ಯಾಪಿಸಿರುವವನು, ಎಂದು ಇವನ ಸರ್ವವ್ಯಾಪಕತ್ವವೂ, ಅದಕ್ಕೆ ಉಪಯುಕ್ತವಾದ ನಿರತಿಶಯ ಸೂಕ್ಷ್ಮತ್ವವೂ ಹೇಳಲ್ಪಟ್ಟದಾಯಿತು. **ಇಪ್ಪೊರುಳ್‌ಹಳ್** ಇತ್ಯಾದಿ– 'ಈಯತೇ ಅನೇನ' ಎಂಬ ಕರ್ಮ ವ್ಯುತ್ಪತ್ತಿಯಲ್ಲಿ ಹೇಳಿದ ಅರ್ಥಗಳೆಲ್ಲಾ "**ಈಯತೇ** ಅಸ್ಮಿನ್" ಎಂಬ ಅಧಿಕರಣವ್ಯುತ್ಪತ್ತಿಯಲ್ಲಿ ಇವನಲ್ಲಿ ಸರ್ವಪದಾರ್ಥಗಳಿಗೂ ಲಯವನ್ನು ಹೇಳುವುದರಿಂದಲೂ, **ವರುಮ್**–ಏರ್ಪಡುತ್ತದೆ. ಅಂದರೆ ಜಗತ್ಕಾರಣತ್ವವೂ ತದಾಕ್ಷಿಪ್ತವಾದ ಸರ್ವವ್ಯಾಪಕತ್ವ, ನಿರತಿಶಯ ಸೂಕ್ಷ್ಮತ್ವಾದಿಗಳೂ ನಾರಾಯಣ ಶಬ್ದದಿಂದ ತಿಳಿಸಲ್ಪಡುತ್ತವೆ, ಎಂದರ್ಥ.

ನಾರಾಣಾಂ ಅಯನಂ ಎಂದು ತತ್ಪುರುಷ ಸಮಾಸದಲ್ಲಿ 'ಪರವಲ್ಲಿಂಗಂ ದ್ವಂದ್ವಂ ತತ್ಪುರುಷಂಯೋಃ,' ಎಂದು ನಪುಂಸಕಲಿಂಗ ವಾದ "ಅಯನಂ" ಎಂಬ ಪದದ ಆಧಾರದ ಮೇಲೆ 'ನಾರಾಯಣಂ' ಎಂಬ ರೂಪವು ಏರ್ಪಡುತ್ತದೆಯಲ್ಲವೇ ಎಂದರೆ, ನಿರ್ವಚನ ಬಲದಿಂದ ಅಯನ ಶಬ್ದವು ಪುಲ್ಲಿಂಗವೆಂದು ನಿರೂಪಿಸಲು **1) ನಾರಾಣಾಮಯನತ್ವಾಚ್ಚ** ಇತ್ಯಾದಿ ಪ್ರಮಾಣಗಳನ್ನು ತಿಳಿಸುತ್ತಾರೆ. ಅದಾಗಿ ನಾರಾಣಾಮಯನತ್ವಾಚ್ಚ ನಾರಗಳಿಗೆ ವಾಸಸ್ಥಾನವಾದರಿಂದ ನಾರಾಯಣಃ ಎಂದು ನಿರ್ವಚನ **2)ನಾರಾಸ್ತ್ವಿತಿ ಸರ್ವಂಪುಂಸಾಂ** ಇತ್ಯಾದಿ ನಾರವೆಂದು ಸಕಲಚೇತನವರ್ಗಗಳು ಹೇಳಲ್ಪಡುತ್ತವೆ. ಅವುಗಳಿಗೆ ಅಯನ–ಗತಿ ಆಲಂಬನ ಎಂಬ ಅರ್ಥದಲ್ಲಿ

---

(1) ಭಾರತ ಉದ್ಯೋಗಪರ್ವ

3) ನಾರೋನರಾಣಾಂ ಸಂಘಾತಸ್ತಸ್ಯಾಹಮಯನಂ ಗತಿಃ ।
ತೇನಾಸ್ಮಿ ಮುನಿಭಿರ್ನಿತ್ಯಂ ನಾರಾಯಣ ಇತೀರಿತಃ ।
ನಾರ ಶಬ್ದೇನ ಜೀವಾನಾಂ ಸಮೂಹಃ ಪ್ರೋಚ್ಯತೇ ಬುಧೈಃ ।
ತೇಷಾ ಮಯನ ಭೂತತ್ವಾನ್ನಾರಾಯಣ ಇಹೋಚ್ಯತೇ ।
ತಸ್ಮಾನ್ನಾರಾಯಣಂ ಬಂಧುಂಮಾತರಂ ಪಿತರಂ ಗುರುಮ್ ।
ನಿವಾಸಂ ಶರಣಂ ಚಾಹು ರ್ವೇದವೇದಾಂತ ಪಾರಗಾಃ ॥"

ಇತ್ಯಾದಿಹಳಿರ್‌ಪಡಿಯೇ ತತ್ಪುರುಷ ಸಮಾಸಮಾನಾಲುಮ್ ನಿರುಕ್ತಿ ಬಲತ್ತಾಲೇ ಅಯನಶಬ್ದಮ್ ಪುಲ್ಲಿಙ್ಗಮ್.

ಇಙ್ಗು "ರೀಙ್‌ಕ್ಷಯೇ" ಎನ್ಗಿರ ಧಾತುವಿಲೇ ರ ಎನ್ರು ಸ್ವರೂಪವಿಕಾರತ್ತಾಲೇ ಕ್ಷಯಿಷ್ಣುವಾನ ಅಚಿತ್ಪದಾರ್ಥತ್ತೈಚ್ಚೊಲ್ಲಿ ಅದಿಲ್ ವೇರುಪಟ್ಟು ಸ್ವರೂಪವಿಕಾರ ರಹಿತಮಾನ ಚೇತನವರ್ಗತ್ತೈ ನಗ ನೈಕಾದಿ ಶಬ್ದಙ್ಗಳ್ಪೋಲೇ ನ ಸಮಾಸಮಾನ ನರಶಬ್ದತ್ತಾಲೇ ಶೊಲ್ಲಿ,ಅದಿನ್ ಸಮೂಹಙ್ಗಳುಕ್ಕು ಅಯನಂ ಎನ್ಗಿರವಿತ್ತಾಲ್ "ಸ್ವಾಧೀನ ತ್ರಿವಿಧ ಚೇತನಾ ಚೇತನಸ್ವರೂಪ ಸ್ಥಿತಿ ಪ್ರವೃತ್ತಿಭೇದ" ನಾನರ್ವ ನರಶಬ್ದ ವಾಚ್ಯರಾನ ತ್ರಿವಿಧಾತ್ಮಾಕ್ಕಳುಡೈಯ ಸಮೂಹಙ್ಗಳುಕ್ಕುಮ್ ಅಪೇಕ್ಷಿತ ಹೇತುವುಮಾಯ್, ಸ್ವಯಂ

---

ನಾರಾಯಣಃ ಎಂದು ಸ್ಮೃತಿಗಳು ಹೇಳುತ್ತವೆ. **3) ನಾರೋ ನರಾಣಾಂ ಸಂಘಾತಃ** ಇತ್ಯಾದಿ–ನಾರ ಎಂದರೆ, ನರಗಳ ಸಮೂಹ, ಆ ಸಮೂಹಕ್ಕೆ ಅಯನಂ–ಗತಿಃ, ಆಶ್ರಯವೆಂದರ್ಥ. ಆದ್ದರಿಂದ ಋಷಿಗಳು ನಾರಾಯಣನೆಂದು ಕರೆಯುತ್ತಾರೆ. ಇದು ಪಾದ್ಮೋತ್ತರದಲ್ಲಿ ಭಗವಂತನ ವಚನ. **ನಾರಶಬ್ದೇನ ಜೀವಾನಾಂ** ಇತ್ಯಾದಿ– ನಾರ ಶಬ್ದದಿಂದ ಜೀವರುಗಳ ಸಮೂಹವು ಪಂಡಿತರಿಂದ ಹೇಳಲ್ಪಡುತ್ತವೆ. ಅವರುಗಳಿಗೆ ಅಯನ– ವಾಸಸ್ಥಾನ– ಆಶ್ರಯಭೂತನಾದವನೆಂದು ನಾರಾಯಣಃ ಎಂದು ಹೇಳಲ್ಪಡುತ್ತದೆ **ತಸ್ಮಾನ್ನಾರಾಯಣಂ ಬಂಧುಂ** ಇತ್ಯಾದಿ ಆದಕಾರಣ ನಾರಾಯಣನನ್ನು ಬಂಧು,ಮಾತಾ, ಪಿತಾ,ಗುರು, ನಿವಾಸಃ, ಶರಣಂ,ರಕ್ಷಕ, ಎಂದು ವೇದ ವೇದಾಂತ ಪಾರಗರು ಹೇಳುತ್ತಾರೆ. **ಇತ್ಯಾದಿಹಳಿರ್ಪಡಿಯೇ** - ಇತ್ಯಾದಿ ವಚನಗಳ ಪ್ರಕಾರ ತತ್ಪುರುಷ ಸಮಾಸವಾದರೂ ನಿರುಕ್ತಬಲದಿಂದ ಅಯನ ಶಬ್ದವು ಪುಲ್ಲಿಂಗ.

### ಅಯನ ಶಬ್ದಾರ್ಥ.

**ಇಂಗು "ರಿಂಗ್‌ಕ್ಷಯೇ"** ಇತ್ಯಾದಿ- ಇಲ್ಲಿ ರಿಂಗ್‌ಕ್ಷಯೇ ಎಂಬ ಧಾತುವಿನಲ್ಲಿ ರೀಯತೇ ಎಂಬ ವ್ಯುತ್ಪತ್ತಿಸಿದ್ಧವಾದ ರೇಫದಿಂದ, ಸ್ವರೂಪವಿಕಾರವುಳ್ಳ ಅಚಿತ್ಪದಾರ್ಥವು ಹೇಳಲ್ಪಟ್ಟಿತು. ಗಚ್ಛತೀತಿ ಗಃ ನ–ಗಃ ನಗಃ ನ ಏಕಃ ನೈಕಃ ಎಂಬಂತೆ, **ಅದಿಲ್ ವೇರುಪಟ್ಟು**– ಅಚೇತನ ಪದಾರ್ಥಕ್ಕಿಂತ ಬೇರೆಯಾಗಿ, ಸ್ವರೂಪ ವಿಕಾರವಿಲ್ಲದ ಚೇತನ ವರ್ಗವು ನಗ ನೈಕಾದಿ ಶಬ್ದದಹಾಗೆ ನ-ಸಮಾಸವಾದ ನ-ರಃ, ನರಃ ಎಂಬ ಶಬ್ದದಿಂದ ಹೇಳಲ್ಪಟ್ಟಿತು. **ಅದಿನ್‌ಸಮೂಹಂಗಳ್ಳೈ** ಇತ್ಯಾದಿ - ನರಾಣಾಂ ಸಮೂಹಃ ನಾರಃ ಎಂದು ಸಮೂಹಾರ್ಥಕಾಣ್ ಪ್ರತ್ಯಯಾಂತವಾದ ನಾರ ಶಬ್ದದಿಂದ **ಜೀವ ಸಮೂಹವು ಹೇಳಲ್ಪಟ್ಟಿತು. ಇಂದ ಸಮೂಹಂಗಳುಕ್ಕು** ಇತ್ಯಾದಿ-ನಾರಾಣಂ ಅಯನಂ,ಎಂಬುದರಿಂದ ಚೇತನ ಸಮೂಹಗಳಿಗೆ –ಅಯನಂ,ವಾಸಸ್ಥಾನ ಉಪಾಯೋಪೇಯ ಭೂತನು ಎಂದು ಏರ್ಪಟ್ಟ ನಾರಾಯಣನು, **ಸ್ವಾಧೀನತ್ರಿವಿಧಚೇತನಾಚೇತನ** ಇತ್ಯಾದಿ_ ತನಗೆ ಅಧೀನವಾದ ಮೂರು ವಿಧಗಳಾದ ಚೇತನರು (ಬದ್ಧ ಮುಕ್ತ ನಿತ್ಯರು) ತ್ರಿಗುಣ, ಶುದ್ಧಸತ್ವವೆಂಬ ಮೂರು ವಿಧ ಅಚೇತನಗಳು ಇವುಗಳ ಸ್ವರೂಪ, ಸ್ಥಿತಿ ಪ್ರವೃತ್ತಿ ಭೇದಗಳನ್ನು ತನಗೆ ಅಧೀನವಾಗಿ ಉಳ್ಳ

**ಭೋಗ್ಯತ್ತೈಯಾಲೇ ಉಪೇಯಮುಮಾಯ್, (1) ವಿಷ್ಣ್ವಾಧಾರಂ ಯಥಾ ಚೈತತ್ತ್ರೈಲೋಕ್ಯಂ ಸಮವಸ್ಥಿತಮ್" "ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ।" ಇತ್ಯಾದಿಹಳಿಲ್ ಪಡಿಯೇ ಆಧಾರಮುಮಾ ಯಿರುಕ್ಕಿರಪಡಿ ಶೊಲ್ಲಪ್ಪಟ್ಟದು. ಎಙ್ಙನೇ ಎನ್ನಿಲ್ ? "ಇಣ್ ಗತೌ" ಎನ್ನಿರ ಧಾತುವಿಲೇ "ಈಯತೇ ಅನೇನ" ಎನ್ರು ಅಯನ ಶಬ್ದತ್ತಿಲ್ ಕರಣವ್ಯುತ್ಪತ್ತಿಯಾಲೇ ಈಶ್ವರನುಪಾಯಮಾಯುಮ್ "ಈಯತೇ ಅಸೌ" ಎನ್ರು ಕರ್ಮವ್ಯುತ್ಪತ್ತಿಯಾಲ್ ಉಪೇಯಮಾಯುಮ್, "ಈಯತೇ ಅಸ್ಮಿನ್" ಎನ್ನಿರ ಅಧಿಕರಣ ವ್ಯುತ್ಪತ್ತಿಯಾಲೇ ಆಧಾರಮಾಯುಮ್, ತೋತ್ತುಹಿರದು. ಅಯಪಯಗತೌ" ಎನ್ನಿರ ಧಾತುವಿಲುಮ್ ಇವ್ವಯನಪದಮ್ ನಿಷ್ಪನ್ನಮಾಮ್**

**ಸಮಾಸದ್ವಯೇನ ಉಪಾಯೋಪೇಯೋಪಯುಕ್ತ ಕಲ್ಯಾಣಗುಣಾಕರತ್ವ ಪರತ್ವ ವ್ಯಾಪ್ತ್ಯಾದೀನಾಂ ಉಪಪಾದನಮ್.**

**ಇವ್ವುಪಾಯತ್ವೋಪೇಯತ್ವಾದಿಹಳುಕ್ಕುಪಯುಕ್ತಮಾನ ಸೌಲಭ್ಯಮುಮ್ ಪರತ್ವಮುಮ್ ಇಙ್ಗೇ ಸಿದ್ಧಮ್. ಅಯನಮೆನ್ರು ವಾಸಸ್ಥಾನ ಮಾಯ್, ಅಪ್ಪೋದು ಬಹುವ್ರೀಹಿ ಸಮಾಸತ್ತಾಲೇ**

---

ವನು ಎಂದು ಏರ್ಪಡುತ್ತದೆ **ನರಶಬ್ದವ ಚ್ಯರಾನ ಇತ್ಯಾದಿ**- ನರಶಬ್ದದಿಂದ ಹೇಳಲ್ಪಟ್ಟ ತ್ರಿವಿಧರಾದ ಆತ್ಮರುಗಳ ಸಮೂಹಗಳಿಗೂ **ಅಪೇಕ್ಷಿತಹೇತುವಾಯ್**-ಅಭೀಷ್ಟಫಲಪ್ರಧಾನ ಕಾರಣನಾಗಿಯೂ, ಉಪಾಯಭೂತನಾಗಿಯೂ **ಸ್ವಯಂ**-ತಾನೇ ಭೋಗ್ಯನಾಗಿರುವುದರಿಂದ,**ಉಪೇಯಮುಮಾಯ್**-ಪ್ರಾಪ್ಯನಾಗಿಯೂ 1) **ವಿಷ್ಣ್ವಾಧಾರಂ ಯಥಾಚೈತತ್ ಇತ್ಯಾದಿ**- ಮೂರು ಲೋಕವೂ ಭಗವಂತನಿಂದ ಧರಿಸಲ್ಪಟ್ಟಿವೆ. 2) **ಯೋಲೋಕತ್ರಯ ಮಾವಿಶ್ಯ ಇತ್ಯಾದಿ**- ಮೂರು ಲೋಕಗಳನ್ನು ವ್ಯಾಪಿಸಿ, ಭರಿಸಿ, ಸ್ವಾಮಿಯಾಗಿದ್ದಾನೆ, ಇತ್ಯಾದಿ ಹೇಳಿರುವಂತೆ ಸರ್ವಾಧಾರಭೂತನಾಗಿರುವುದೂ ಹೇಳಲ್ಪಟ್ಟಿತು.

**ಎಂಗನೇಯೆನ್ನಿಲ್**- ಹೇಗೆಂದರೆ **'ಇಣ್ ಗತೌ' ಎನ್ನಿರ ಇತ್ಯಾದಿ**-"ಇಣ್ ಗತೌ" ಎಂಬ ಧಾತುವಿನಲ್ಲಿ **'ಈಯತೇ ಅನೇನ'** ಎಂದು ಇವನಿಂದ ಹೊಂದಲ್ಪಡುತ್ತದೆ, ಎಂಬ ಅರ್ಥದಲ್ಲಿ ಅಯನ ಶಬ್ದಕ್ಕೆ ಕರಣ ವ್ಯುತ್ಪತ್ತಿ ಮಾಡಿ ಈಶ್ವರನು ಉಪಾಯ ಭೂತನಾಗಿಯೂ, **ಈಯತೇ ಅಸೌ**- ಎಂಬ ಕರ್ಮ ವ್ಯುತ್ಪತ್ತಿಯಿಂದ ಉಪಾಯಭೂತನಾಗಿಯೂ, **ಈಯತೇ ಅಸ್ಮಿನ್**- ಎಂಬ ಅಧಿಕರಣ ವ್ಯುತ್ಪತ್ತಿಯಿಂದ ಆಧಾರನಾಗಿಯೂ, **ತೋಟ್ರುಹಿರಾನ್** ತೋರುತ್ತಾನೆ **'ಅಯಪಯ ಗತೌ'** ಎಂಬ ಅಯತಿ ಧಾತುವಿನಲ್ಲಿಯೂ ಈ ಅಯನ ಪದವು ನಿಷ್ಪನ್ನವಾಗಬಹುದು. ಹೀಗೆ ಅಯನಶಬ್ದದಿಂದ ಏರ್ಪಟ್ಟ ಈಶ್ವರನ ಉಪಾಯತ್ವ, ಉಪೇಯತ್ವಾದಿಗಳಿಗೆ ಉಪಯುಕ್ತವಾದ ಸೌಲಭ್ಯವೂ ಪರತ್ವವೂ ಇಲ್ಲಿ ಸಿದ್ಧ.

**ಅಂತರ್ವ್ಯಾಪ್ತಿ-ಬಹಿರ್ವ್ಯಾಪ್ತಿ**

**ಅಯನಮೆನ್ರು ಇತ್ಯಾದಿ**-ಅಯನವೆಂದು ವಾಸಸ್ಥಾನವೆಂಬ ಅರ್ಥದಲ್ಲಿ,ಬಹುವ್ರೀಹಿ ಸಮಾಸದಿಂದ ಅಂತರ್ವ್ಯಾಪ್ತಿಯೂ

---

(1) ವಿಷ್ಣ್ವಾಧಾರಂಯಥಾಚೈತತ್ ತ್ರೈಲೋಕ್ಯಂ ಸಮವಸ್ಥಿತಮ್।
ಪರಮಾರ್ಥಸ್ತ್ವಮೇ ವ್ಯೇಕ್ಕೋ ಯಥಾಜ್ಞಾನಂ ಪ್ರಧಾನತಃ ॥
ವಿ. ಪು. (2-13-2) ಮೂರು ಲೋಕವೂ ವಿಷ್ಣುವಿನಿಂದ ಧರಿಸಲ್ಪಟ್ಟಿದೆ, ಎಂಬುದು ಸತ್ಯ.

(2) ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥

ಗೀತೆ (15-17) ಮೂರು ಲೋಕಗಳನ್ನು (ಬದ್ಧ ಮುಕ್ತ ಅಚೇತನ ತತ್ವಗಳು) ಅಂತರಾತ್ಮವಾಗಿ ವ್ಯಾಪಿಸಿ, ಧರಿಸಿ, ಅವುಗಳನ್ನು ನಿಯಮಿಸುವುದರಿಂದ, ಸ್ವಾಮಿಯಾಗಿ ಇರುವ ಉತ್ತಮ ಪುರುಷನು ಚೇತನಾ ಚೇತನಗಳಿಂದ ಬೇರೆಯಾದವನು, ಅವನು ಪರಮಾತ್ಮಾ.

ಅಂತರ್ವ್ಯಾಪ್ತಿಯುಮ್ ತತ್ಪುರುಷನಾಲೇ ಬಹಿರ್ವ್ಯಾಪ್ತಿಯುಮ್ ತೋತ್ತುಹಿರದೆನ್ರು ಮನುಸಂಧಿಪ್ಪಾರ್ಹಳ್. ಇನ್ನೈ ಇರಣ್ಡುಮ್ ಸ್ರುತಿ ಸಿದ್ಧಮ್.

**ಅಂತರ್ವ್ಯಾಪ್ತಿ ಯಾವದು ?** ಇನ್ವೈಯುಳ್ಳ ವಿಡತ್ತಿಲ್ ತನ್ನೈ ಇಲ್ಲೈ ಎನ್ನ ವೊಣ್ಣಾದಪಡಿಕಲನ್ದು ನಿರ್ಕೈ. **ಬಹಿರ್ವ್ಯಾಪ್ತಿಯಾವದು ?** ಇವೈ ಇಲ್ಲಾದ ವಿಡತ್ತಿಲುಮ್ ಎಜ್ಜುಮ್ ತಾನುಳನಾಹೈ. ವಿಭುಕ್ಕಳಾನ ಕಾಲಾದಿಹಳುಕ್ಕು ಬಹಿರ್ವ್ಯಾಪ್ತಿ ಶೊಲ್ಲವೇಣ್ಡಾ.

1) "ನಾರಾಯಣ ಮಣೀಯಾಂಸ ಮಶೇಷಾಣಾ ಮಣೀಯಸಾಮ್" ಎನ್ರದು ಅಂತರ್ವ್ಯಾಪ್ತಿಕ್ಕು ಅನುಗುಣಮಾಯ್ ನಿರ್ಸ್ಕರಪ್ರತಿಘಾತಾನರ್ಹತ್ವಮ್. ಅಲ್ಲದು ಅಣುಪರಿಮಾಣತ್ವಮನ್ರು. ಇದು ಶೊಲ್ಲುಮಿಡಮ್ ಉಪಾಧ್ಯವಚ್ಛೇದತ್ತಾಲೇ ಎನ್ರು ಸೂತ್ರಭಾಷ್ಯಾದಿ ಸಿದ್ಧಮ್.

---

ತತ್ಪುರುಷ ಸಮಾಸದಿಂದ ಬಹಿರ್ವ್ಯಾಪ್ತಿಯೂ ತಿಳಿಸಲ್ಪಡುತ್ತದೆಯೆಂದೂ ಅನುಸಂಧಾನ ಮಾಡುತ್ತಾರೆ. **ಇನ್ವೈಯಿರಂಡುಮ್** ಇತ್ಯಾದಿ– ಈ ಎರಡು ಅರ್ಥಗಳೂ "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ", ಎಂಬ ಶ್ರುತಿ ಸಿದ್ಧಗಳು. ಅಣುರೂಪವಾದ ಜೀವನೊಳಗೆ ಭಗವಂತನು ಪ್ರವೇಶಿಸಿದ್ದಾನೆಂದು ಹೇಗೆ ಹೇಳಬಹುದು ಎಂದರೆ ಅದನ್ನು ಅಂತರ್ವ್ಯಾಪ್ತಿಯಾವುದು ಎಂದಾರಂಭಿಸಿ ವ್ಯವಸ್ಥೆಗೊಳಿಸುತ್ತಾರೆ.

**ಅಂತರ್ವ್ಯಾಪ್ತಿಯಾವದು** ಇತ್ಯಾದಿ – ಅಂತರ್ವ್ಯಾಪ್ತಿಯೆಂದರೆ, ಜೀವನಿರುವ ಪ್ರದೇಶದಲ್ಲಿ ತಾನಿಲ್ಲವೆಂದು ಹೇಳಲಾಗದಂತೆ ಸಂಬಂಧಿಸಿರುವುದು. ಜೀವನಿಗೆ ಅಂತಃ ಪ್ರದೇಶವಿಲದಿದ್ದರೂ ಅಂತರ್ವ್ಯಾಪ್ತಿಗೆ ಬಾಧವಿಲ್ಲವೆಂದು ಭಾವ. **ಬಹಿರ್ವ್ಯಾಪ್ತಿಯಾವದು** ಇತ್ಯಾದಿ– ಇವುಗಳು ಇಲ್ಲದಿರುವ ಪ್ರದೇಶಗಳಲ್ಲೂ ತಾನಿರುವುದು **ಇಡತ್ತಿಲುಮ್** ಎಂಬಲ್ಲಿ 'ಉಮ್' ಎಂಬುದರಿಂದ, ಇವುಗಳು ಇರುವ ಪ್ರದೇಶದಲ್ಲೂ ತಾನಿರುವುದು ಎಂದೇ ಅರ್ಥ. **ವಿಭುಕ್ಕಳಾನಕಾಲಾದಿಹಳುಕ್ಕು** ಇತ್ಯಾದಿ– ವಿಭುಸ್ವರೂಪಗಳಾದ ಕಾಲಾದಿಗಳಿಗೆ (ಆದಿಶಬ್ದದಿಂದ ಧರ್ಮಭೂತಜ್ಞಾನವು ತಿಳಿಸಲ್ಪಡುತ್ತದೆ) ಬಹಿರ್ವ್ಯಾಪ್ತಿ ಹೇಳಕೂಡದು.

'ಅಣೋರಣೀಯಾನ್' ಎಂದೂ 'ನಾರಾಯಣಮಣೀಯಾಂಸಂ' ಇತ್ಯಾದಿಯಾಗಿ ಅತ್ಯಂತ ಅಣು ಸ್ವರೂಪನಾಗಿ ನಾರಾಯಣನನ್ನು ನಿರ್ದೇಶಿಸಿರುವಾಗ, ಅವನು ಸಮಸ್ತ ಚೇತನಾಚೇತನಗಳನ್ನು ಅಂತಃ ಮತ್ತು ಬಹಿಃ ವ್ಯಾಪರಿಸಿದ್ದಾನೆಂಬುದು ಹೇಗೆ ಸಂಗತವಾಗುತ್ತದೆ ಎಂಬ ಚೋದ್ಯಕ್ಕೆ ಸಮಾಧಾನವನ್ನು ಆಚಾರ್ಯರು ತಿಳಿಸುತ್ತಾರೆ. ಅದಾಗಿ 1) **ನಾರಾಯಣಮಣೀಯಾಂಸಂ** ಇತ್ಯಾದಿ ನಾರಾಯಣನು ಸೂಕ್ಷ್ಮಗಳಾದ ಎಲಾ ವಸ್ತುಗಳಿಗಿಂತಲೂ, ಬಹಳ ಸೂಕ್ಷ್ಮನು ಎಂದು ಹೇಳಿರುವುದು, ಅಂತರ್ವ್ಯಾಪ್ತಿಗೆ ಅನುಗುಣವಾದ ಪ್ರತಿಘಾತಾನರ್ಹತ್ವವೆಂಬುದು ತಾತ್ಪರ್ಯ. ಅಲ್ಲದೆ ಅಣುಪರಿಮಾಣತ್ವವಲ್ಲ. ಅಣುಪರಿಮಾಣತ್ವವನ್ನು ಹೇಳಿದರೆ, 'ಮಹತೋಮಹೀಯಾನ್' ಎಂದು ವಿಭುಸ್ವರೂಪವನ್ನು ಹೇಳಿರುವುದು ಬಾಧಿಸುತ್ತದೆ. **ಇದುಶೊಲ್ಲುಮಿಡಮ್** ಇತ್ಯಾದಿ "ಅಣೀಯಾನ್ವ್ರೀಹೇರ್ವಾ ಯವಾದ್ವಾ" ಇತ್ಯಾದಿ ಹೇಳಿರುವುದು, **ಉಪಾಧ್ಯವಚ್ಛೇದತ್ತಾಲೇ**– ಹೃದಯ ರೂಪ ಉಪಾಧ್ಯವಚ್ಛೇದದಿಂದ ಎಂದು, "ಅರ್ಭಕೌಕಸ್ತ್ವಾತ್" ಇತ್ಯಾದಿ (1-2-7] ಸೂತ್ರಭಾಷ್ಯಾದಿಸಿದ್ಧ. ಅವಾಗಿ ಚಿಕ್ಕದಾದ ಹೃದಯಾಯತನದಲ್ಲಿ ಭಗವಂತನಿರುವುದಾಗಿ ಹೇಳಿರುವುದು ಉಪಾಸನಾರ್ಥವಾಗಿ ಅಷ್ಟೇ ಹೊರತು ಭಗವಂತನು ಅಣುವಲ್ಲವೆಂದು ನಿರ್ಣೀತವು.

---

(1 ನಾರಾಯಣ ಮಣೀಯಾಂಸಂ ಅಶೇಷಾಣಾಮಣೀಯಸಾಮ್ ।
ಸಮಸ್ತಾನಾಂ ಗರಿಷ್ಠಂಚ ಭೂರಾದೀನಾಂ ಗರೀಯಸಾಮ್ ॥ ವಿಷ್ಣು ಪುರಾಣ(1-9-41)

ನಾರಾಯಣನು ಅಣುವಾದ ಎಲ್ಲಾ ವಸ್ತುಗಳಿಗಿಂತಲೂ ಸೂಕ್ಷ್ಮನಾಗಿದ್ದಾನೆ, ದೊಡ್ಡದಾದ ಭೂಮಿ ಮೊದಲಾದವಸ್ತುಗಳಿಗಿಂತಲೂ ವಿಭುಸ್ವರೂಪನು.

ವ್ಯಾಪ್ತನುಕ್ಕು ಪ್ರತಿವಸ್ತು ಪೂರ್ಣತ್ವಮಾವದು ? ಓರೋರು ಉಪಾಧ್ಯವಚ್ಛಿನ್ನ ಪ್ರದೇಶಮೇ ಸರ್ವತ್ರೈಯುಮ್ ನಿರ್ವಹಿಕ್ಕವಲ್ಲ ಶಕ್ತಿಯುಡೈತ್ತಾಯಿರುಕ್ಕೈ. ಅಲ್ಲದು ವಸ್ತುತೋರುಮ್ ಸ್ವರೂಪಸಮಾಪ್ತಿಯನ್ರು. ಇದು ಕೊಳ್ಳಿಲ್ ಬಹಿರ್ವ್ಯಾಪ್ತಿಕ್ಕು ವಿರುದ್ಧಮಾಮ್. ಇತ್ತೈ ಅಘಟಿತ ಘಟನಾ ಶಕ್ತಿಯಾಲೇ ನಿರ್ವಹಿಕ್ಕಿಲ್ ವಿರುದ್ಧ ಸಮುಚ್ಚಯಮ್ ಕೊಳ್ಳುಮ್ ಪರಮತಙ್ಗಳಿರ್ಪಡಿಯಾಮ್.

### ಅಕಾರ ನಾರಾಯಣ ಶಬ್ದನಾಂ ಭಗವತ್ಪ್ರತಿಪಾದನೇ ಪ್ರಯೋಜನಮಾಹ.

ಇಙ್ಗು ಪ್ರಥಮಾಕ್ಷರತ್ತಾಲುಮ್, ನಾರಶಬ್ದತ್ತಿಲ್ ಪ್ರಕೃತಿಯಾನ ನರ ಶಬ್ದತ್ತಾಲುಮ್, ಅಯನ ಶಬ್ದತ್ತಾಲುಮ್. ಸರ್ವೇಶ್ವರನೈ ಶೊಲ್ಲುಹಿರ ಪೋದು. ರಕ್ಷಕತ್ವ, ಕಾರಣತ್ವ ನಿತ್ಯತ್ವ ಆಧಾರತ್ವಾಂತರ್ಯಾಮಿತ್ವಾದಿ. ಆಕಾರ ಭೇದಙ್ಗಳಾಲೇ ಮೂನ್ರುಮ್ ಸಪ್ರಯೋಜನಙ್ಗಳ್.

### ತಥಾ ಮಕಾರ ನಾರಪದಯೋಃ ಜೀವಪ್ರತಿಪಾದನೇ ಪ್ರಯೋಜನಮಾಹ

ಪ್ರಣವತ್ತಿಲ್ ತೃತೀಯಾಕ್ಷರತ್ತಾಲೇ ಚೇತನನೈಪ್ರಕಾಶಿಪ್ಪಿಕ್ಕಚ್ಚೆಯ್‌ದೇ ಇಙ್ಗು ನಾರಶಬ್ದತ್ತಾಲೇ

---

ಹಾಗೆಯೇ ಭಗವಂತನು ಪ್ರತಿವಸ್ತುವಿನಲ್ಲಿಯೂ ಪೂರ್ಣನಾಗಿದ್ದಾನೆಂದು ಹೇಳುವುದರಿಂದ, ಸರ್ವವಸ್ತು ವ್ಯಾಪಿಸ್ವರೂಪವಾದ ವಿಭುತ್ವಕ್ಕೆ ಭಂಗವು ಏರ್ಪಡುವುದಿಲ್ಲವೇ ಎಂದರೆ **ಪ್ರತಿವಸ್ತು** ಪೂರ್ಣತ್ವವೆಂಬ ಶಬ್ದಕ್ಕೆ ಅರ್ಥವನ್ನು ವಿವರಿಸುತ್ತಾರೆ. 'ತೇನೇದಂಪೂರ್ಣಂ ಪುರುಷೇಣ ಸರ್ವಮ್' ಎಂಬ ಶ್ರುತಿಯು ಪ್ರತಿ ವಸ್ತುವಿನಲ್ಲಿಯೂ ಭಗವಂತನು ಪೂರ್ಣನಾಗಿದ್ದಾನೆಂದು ಹೇಳುತ್ತದೆ- ಇದಕ್ಕೆ ತಾತ್ಪರ್ಯವೇನೆಂದರೆ **ವ್ಯಾಪ್ತನಕ್ಕು** ಇತ್ಯಾದಿ ವ್ಯಾಪ್ತನಿಗೆ ಪ್ರತಿ ವಸ್ತು ಪೂರ್ಣತ್ವವು **ಓರೊರು ಉಪಾಧ್ಯವಚ್ಛಿನ್ನಪ್ರದೇಶಮೇ** ಇತ್ಯಾದಿ– ಘಟದಲ್ಲಿ ವ್ಯಾಪಿಸಿರುವ ಆಕಾಶದ ಹಾಗೆ, ಆಯಾಯಾ ವಸ್ತುಗಳಲ್ಲಿ ಪರಿಮಿತವಾಗಿರುವ ಬ್ರಹ್ಮ ಪ್ರದೇಶವೇ ಸರ್ವ ಜಗತ್ಕಾರ್ಯಗಳನ್ನು ನಿರ್ವಹಿಸುವ ಶಕ್ತಿಯುಳ್ಳದ್ದಾಗಿರುವುದು. **ಅಲ್ಲದು** ಇತ್ಯಾದಿ–ಹೀಗಿಲ್ಲದೆ ಪ್ರತಿ ವಸ್ತುವಿನಲ್ಲಿಯೂ ಭಗವತ್ಸ್ವರೂಪವು ಪೂರ್ಣವಾಗಿ ಅಡಗಿದೆ ಎಂದರ್ಥವಲ್ಲ. **ಇದು ಕೊಳ್ಳಿಲ್** ಇತ್ಯಾದಿ ಹೀಗೆ ಹೇಳಿದರೆ ಬಹಿರ್ವ್ಯಾಪ್ತಿಗೆ ವಿರೋಧವು ಏರ್ಪಡುತ್ತದೆ. ಪ್ರತಿ ವಸ್ತು ಪರಿಸಮಾಪ್ತತ್ವರೂಪ ಪೂರ್ಣತ್ವವೂ, ಸರ್ವವಸ್ತುಬಹಿರ್ವ್ಯಾಪ್ತಿಯೂ ಅಘಟಿತ ಘಟನಾ ಸಾಮರ್ಥ್ಯದಿಂದ ನಿರ್ವಹಿಸುವುದು, ವಿರುದ್ಧವಾದ ಭೇದಾಭೇದಗಳಿಗೆ ಒಂದು ವಸ್ತುವಿನಲ್ಲಿ ಸಮುಚ್ಚಯವನ್ನು ಹೇಳುವ ಭಾಸ್ಕರಾದಿ ಮತಗಳ ಹಾಗೆ ಆಗುತ್ತದೆ.

### ಅಕಾರ, ನರಶಬ್ದ, ಅಯನಶಬ್ದಗಳು ಭಗವಂತನ ಒಂದೊಂದು ಆಕಾರವನ್ನು ತಿಳಿಸುವುದರಿಂದ ಪುನರುಕ್ತಿ ದೋಷವಿಲ್ಲ

ಇಂಗು ಪ್ರಥಮಾಕ್ಷರತ್ತಾಲುಮ್ ಇತ್ಯಾದಿ- ಅಷ್ಟಾಕ್ಷರ ಮಂತ್ರದಲ್ಲಿ 'ಅ' ಎಂಬ ಪ್ರಥಮಾಕ್ಷರದಲ್ಲಿ ರಕ್ಷಕತ್ವಕಾರಣತ್ವಗಳೂ, ನರ ಶಬ್ದದಿಂದ ನಿತ್ಯತ್ವ ನೇತೃತ್ವಗಳೂ, ಅಯನ ಶಬ್ದದಲ್ಲಿ ಆಧಾರತ್ವ ಅಂತರ್ಯಾಮಿತ್ವಗಳೂ ಹೇಳಲ್ಪಡುವುದರಿಂದ, ಆಕಾರಭೇದಗಳೂ ಹೇಳಲ್ಪಟ್ಟು ಮೂರೂ ಸಪ್ರಯೋಜನಗಳು. ಪುನರುಕ್ತಿಯಿಲ್ಲ

### 'ಮ' ಕಾರ 'ನಾರ' ಶಬ್ದಗಳು ಜೀವನನ್ನು ಹೇಳುವುದಕ್ಕೆ ತಾತ್ಪರ್ಯ

ಹಾಗೆಯೇ **ಪ್ರಣವತ್ತಿಲ್ ತೃತ್ತಿಯಾಕ್ಷರತ್ತಾಲೇ** ಇತ್ಯಾದಿ- ಪ್ರಣವದಲ್ಲಿ ತೃತೀಯಾಕ್ಷರವಾದ ಮಕಾರದಲ್ಲಿ ಜೀವನನ್ನು ಪ್ರಕಾಶಪಡಿಸಿರುವಾಗ ಪುನಃ **ನಾರಶಬ್ದ**ದಿಂದ ಜೀವನನ್ನು ಏಕೆ ಹೇಳಬೇಕೆಂದರೆ,

ಮೀಣ್ಡುಮ್ ಚೊಲ್ಲುವಾನೇ ನೆನ್ನಿಲ್ 1) "ನಾನುನ್ನೈಯನ್ರಿಯಿಲೇನ್ ಕಣ್ಡಾಯ್ ನಾರಣನೇ ನೀಯೆನ್ನೈಯನ್ರಿಯಿಲ್ಲೈ" ಎನ್ರುಮ್, 2) ರಾಮಾನುಜಂ ಲಕ್ಷ್ಮಣ ಪೂರ್ವಜಂಚ"ಎನ್ರುಮ್, ಶೊಲ್ಲ ಹಿರಪಡಿಯೇ ಒನ್ರೈಯಿಟ್ಟೊನ್ರೈನಿರೂಪಿಯಾ ನಿನ್ರಾಲ್ ಅರ್ಜುನರಥನ್ಪೋಲೇ, ಪ್ರಣವಂ ಶೇಷ ಪ್ರಧಾನ ಮಾಹೈಯಾಲುಮ್, ರಾಸ ಮಂಡಲಂ ಪೋಲೇ ನಾರಾಯಣ ಶಬ್ದಮ್ ಶೇಷಿಪ್ರಧಾನ ಮಾಹೈ

---

1) **ನಾನುನ್ನೈ ಅನ್ರಿಯಿಲೇನ್** ಇತ್ಯಾದಿಯಾಗಿಯೂ 2) **ರಾಮಾನುಜಂ ಲಕ್ಷ್ಮಣ ಪೂರ್ವಜಂ ಚ** ಎಂದೂ ಹೇಳಿರುವಂತೆ, ಒಂದನ್ನು ಹೇಳಿ ಮತ್ತೊಂದನ್ನು ನಿರೂಪಿಸುವುದು ಅರ್ಜುನರಥದಹಾಗೆ ಪ್ರಣವವು ಶೇಷ ಪ್ರಧಾನವಾಗಿಯೂ ರಾಸಮಂಡಲದಹಾಗೆ ನಾರಾಯಣಶಬ್ದವು ಶೇಷಿಪ್ರಧಾನವಾಗಿಯೂ ಇರುವುದರಿಂದ ಪುನರುಕ್ತಿ ದೋಷವಿಲ್ಲ. ಅದಾಗಿ, ನಾನುನ್ನೈ ಅನ್ರಿಯಿಲೇನ್– ತ್ವದೇಕಧಾರ್ಯನಾದ ನಾನು ಧಾರಕನಾದ ನಿನ್ನನ್ನುಬಿಟ್ಟು ಸತ್ತೆಯುಳ್ಳವನಾಗಿರಲಾರೆ. ನೀ ಎನ್ನೈಯನ್ರಿ ಇಲ್ಲೈ ನಾರಾಯಣನೇ ನಾರಶಬ್ದವಾಚ್ಯನಾದ ನನ್ನನ್ನು ನಿರೂಪಕನಾಗಿ ಉಳ್ಳ ನೀನು ನಿರೂಪಕ ಭೂತನಾದ ನನ್ನನ್ನು ಬಿಟ್ಟು ಸಿದ್ಧಿಸಲಾರೆ. 'ನಾರಣನೇ' ಎಂಬ ಸಂಬೋಧನೆಯಿಂದ ಪೂರ್ವಾಪರಗಳಲ್ಲಿ ಹೇಳಿದ ಅಂಶಗಳು ನಾರಾಯಣ ಶಬ್ದಾರ್ಥವೆಂಬುದು ತಿಳಿಸಲ್ಪಡುತ್ತದೆ. 'ರಾಮಾನುಜಂ ಲಕ್ಷ್ಮಣ ಪೂರ್ವಜಂ ಚ' ಎಂಬಲ್ಲಿಯೂ, ರಾಮಾನುಜ ಪದದಿಂದ ಶೇಷಿಯಾದ ರಾಮನಿಂದ ಶೇಷನಾದ ಲಕ್ಷ್ಮಣನು ನಿರೂಪಿಸಲ್ಪಟ್ಟನು. "ಲಕ್ಷ್ಮಣ ಪೂರ್ವ ಜಂಚ" ಎಂಬ ಪದದಲ್ಲಿ ಶೇಷನಾದ ಲಕ್ಷ್ಮಣನಿಂದ ಶೇಷಿಯಾದ ರಾಮನು ನಿರೂಪಿಸಲ್ಪಟ್ಟಿದ್ದಾನೆ ಎಂದರ್ಥ. ಅರ್ಜುನನ ರಥದಲ್ಲಿ ಶೇಷಭೂತನಾದ ಅರ್ಜುನನು ರಥಿಯಾಗಿರುವುದರಿಂದ ಪ್ರಧಾನನು, ಭಗವಂತನು ಸಾರಥಿಯಾದ್ದರಿಂದ ಅಪ್ರಧಾನನಾಗಿ ತೋರಿಸಲ್ಪಟ್ಟಿದ್ದಾನೆ. ಹಾಗೆಯೇ ಪ್ರಣವದ ಅಕಾರದಲ್ಲಿ ಭಗವಂತನು ಚತುರ್ಥ್ಯರ್ಥ ಶೇಷತ್ವಕ್ಕೆ ನಿರೂಪಕನಾದ್ದರಿಂದ ಅಪ್ರಧಾನನಾಗಿಯೂ, ಮಕಾರಾರ್ಥವಾದ ಜೀವನು ಚತುರ್ಥ್ಯರ್ಥ ಶೇಷತ್ವಕ್ಕೆ ಆಶ್ರಯನಾಗಿರುವುದರಿಂದ ಪ್ರಧಾನನಾಗಿಯೂ ತೋರಿಸಲ್ಪಟ್ಟಿದ್ದಾನೆಂದು ತಾತ್ಪರ್ಯ. ಹಾಗೆಯೇ ರಾಸ ಮಂಡಲದಲ್ಲಿ ಯಮುನಾ ನದೀ ತೀರದಲ್ಲಿ ಕೃಷ್ಣಪರಮಾತ್ಮನು ಅನೇಕ ಗೋಪಿಗಳ ನಡುವೆ ಪ್ರತಿಯೊಂದು ಗೋಪಿಗೂ ಒಬ್ಬ ಕೃಷ್ಣನಂತೆ ಅನೇಕ ರೂಪಗಳನ್ನು ತಾಳಿ ಮಂಡಲಾಕಾರವಾಗಿ ನಿಂತು ಅವರುಗಳಿಗೆ ರಸಾನುಭವವನ್ನುಂಟು ಮಾಡಿದನು. ಇದರಿಂದ ರಾಸ ಮಂಡಲವು ಶೇಷಿ ಪ್ರಧಾನವಾದಂತೆ, ನಾರಾಯಣ ಶಬ್ದದಲ್ಲಿ ನಾರಗಳು ಶೇಷಗಳಾಗಿಯೂ ಅಯನ ಶಬ್ದ ವಾಚ್ಯನಾದ ಭಗವಂತನು ಶೇಷಿಯಾಗಿ ತೋರುವುದರಿಂದ, ನಾರಾಯಣ ಶಬ್ದವು

---

1) ಇನ್ರಾಹನಾಳೈಯೇಯಾಹ ಇನಿಚ್ಚಿರಿದುಮ್
ನಿನ್ರಾಹ ನಿನ್ನರುಳ್ ಎನ್ಪಾಲದೇ, ನನ್ರಾಹ I
ನಾನುನ್ನೈಅನ್ರಿಯಿಲೇನ್ ಕಂಡಾಯ್ ನಾರಣನೇ
ನೀ ಎನ್ನೈ ಅನ್ರಿಇಲ್ಲೈ॥ ಮುಮ್ಮುಹನ್ ತಿರುವಂದಾದಿ

ಭಗವಂತನೇ ನಿನ್ನ ದಯೆಯು ಸದಾ ನನಗಿದೆ. ನಾನು ನೀನಿಲ್ಲದೆ ಇಲ್ಲ. ನಾರಾಯಣನೇ ನೀನು ನಾನಿಲ್ಲದೆ ಇಲ್ಲ.

2) ನೂನಂಸಕಾಲೋ ಮೃಗ ರೂಪ ಧಾರೀ ಮಾಮಲ್ಪಭಾಗ್ಯಾಂ ಲುಲುಭೇ ತದಾನೀಮ್ I
ಯತ್ರಾರ್ಯಪುತ್ರಂ ವಿಸಸರ್ಜಮೂಢಾ ರಾಮಾನುಜಂ ಲಕ್ಷ್ಮಣ ಪೂರ್ವಜಂಚ ॥
ರಾಮಾ (5-23-1?) ಆ ಕಾಲವು ಮೃಗರೂಪವನ್ನುಧರಿಸಿ ಅಲ್ಪಭಾಗ್ಯಳಾದ ನನ್ನನ್ನು ವಂಚಿಸಿತು. ಅವನ್ನು ಹಿಡಿದು ತರುವ ನಿಮಿತ್ತ ಆ ಶ್ರೀರಾಮಚಂದ್ರನನ್ನು ರಾಮನಿಗೆ ಸಹಾಯವಾ, ಲಕ್ಷ್ಮಣನನ್ನೂ ಕಳುಹಿಸಿಬಿಟ್ಟೆ. ಏನು ನನ್ನ ಮೌಢ್ಯವು ?

ಯಾಲುಮ್, ಪುನರುಕ್ತಿಯಿಲ್ಲೈ. ಪ್ರಣವತ್ತಿಲುಮ್ ಶಬ್ದ ಪ್ರಾಧಾನ್ಯಂ ಜೀವನುಕ್ಕಾನಾಲುಮ್ ರಕ್ಷಕನಾನ ಶೇಷಿಕ್ಕೇ ಅರ್ಥ ಪ್ರಾಧಾನ್ಯಮ್.

ಪ್ರಣವತ್ತಿಲೇ ಸ್ವರೂಪತ್ತಾಲುಮ್ ಗುಣತ್ತಾಲುಮ್ ಜ್ಞಾನಾಕಾರನಾಯ್ ಪ್ರತ್ಯಕ್ಕಾಯ್ ಅಣುವಾಯ್ ತೋತ್ರಿನ ಜೀವನುಕ್ಕು, ನಾರಶಬ್ದಮ್ ಕ್ಷಯಮಿಲ್ಲಾದವನೆನ್ರು ನಿತ್ಯತ್ವಂ ಚೊಲ್ಲುಹೈಯಾಲುಮ್, ನರರುಡೈಯ ಸಮೂಹತ್ತೈ ಶೊಲ್ಲುಹೈಯಾಲೇ ಜೀವರ್‌ಹಳುಡೈಯ ಅನ್ಯೋನ್ಯ ಭೇದತ್ತೈ ವ್ಯಕ್ತಮಾಕ್ಕುಹೈಯಾಲುಮ್, ನರಾಜ್ಜಾತಂಗಳ್ ನಾರಙ್ಗಳೆನ್ರುಪೋದು, ವಿಶಿಷ್ಟ ವೇಷತ್ತಾಲೇ ಬ್ರಹ್ಮಕಾರ್ಯತ್ವಮ್ ತೋತ್ತುಹೈಯಾಲುಮ್ ಪದದ್ವಯತ್ತುಕ್ಕುಮ್ ಪ್ರಯೋಜನ ಭೇದಮುಣ್ಣು. ನಾರಶಬ್ದ ಸಮಾನಾಧಿಕರಣಮಾನ ಅಯನ ಶಬ್ದತ್ತಾಲೇ ಇವತ್ತುಕ್ಕು ವ್ಯಾಪ್ಯತ್ವಾದಿಹಳುಮ್ ಕಣ್ಡುಕೊಳ್ವದು.

ನಿತ್ಯರಾನ ಪಲಚೇತನರ್ಕ್ಕು ಒರುನಿತ್ಯನಾನ ಚೇತನನ್ ಅಭಿಮತ ಹೇತು ವೆನ್ಗಿರ ಶ್ರುತ್ಯರ್ಥಮಿಂಜ್ಗೇ

---

ಶೇಷಿ ಪ್ರಧಾನ. ಇದರಿಂದಾಗಿ, ಅಕಾರ, ನಾರ ಅಯನ ಶಬ್ದಗಳಲ್ಲಿ ಪೌನರುಕ್ತ್ಯದೋಷವಿಲ್ಲ. **ಪ್ರಣವಂತ್ತಿಲುಮ್** ಇತ್ಯಾದಿ–ಪ್ರಣವದಲ್ಲಿಯೂ ಶಬ್ದ ಪ್ರಾಧಾನ್ಯವು ಜೀವನಿಗೆ ಏರ್ಪಟ್ಟರೂ ಅರ್ಥ ಪ್ರಾಧಾನ್ಯವು ರಕ್ಷಕನಾದ ಶೇಷಿಗೇನೆ ಇದೆ. ರಕ್ಷ್ಯರಕ್ಷಕರಲ್ಲಿ ರಕ್ಷಕನಿಗೇ ಪ್ರಾಧಾನ್ಯವು ಎಂದು ತಾತ್ಪರ್ಯ.

**ಪ್ರಣವತ್ತಿಲೇ ಸ್ವರೂಪತ್ತಾಲುಮ್** ಜೀವನಿಗೆ ಮಕಾರ "ನಾರ"ಶಬ್ದಗಳಲ್ಲಿ ಕ್ರಮವಾಗಿ ಪ್ರಾಧಾನಾಪ್ರಾಧಾನ್ಯಗಳು ತೋರುವುದರಿಂದ ಪೌನರುಕ್ತ್ಯ ಪರಿಹಾರಮಾಡಿ, ಮಕಾರ ಶಬ್ದದಲ್ಲಿ ಜೀವನಿಗೆ ಜ್ಞಾನಸ್ವರೂಪತ್ವ, ಜ್ಞಾನಗುಣತ್ವವೂ, ನಾರಶಬ್ದದಲ್ಲಿ ಜೀವನಿತ್ಯತ್ವವು ಎಂಬ ಆಕಾರ ಭೇದಗಳು ತೋರುವುದರಿಂದ ಉಂಟಾದ ಪ್ರಯೋಜನ ಭೇದದಿಂದ ಪೌನರುಕ್ತ್ಯವಿಲ್ಲವೆಂದು **ಪ್ರಣವತ್ತಿಲೇ ಸ್ವರೂಪತ್ತಾಲುಮ್** ಇತ್ಯಾದಿ ಅನುಗ್ರಹಿಸುತ್ತಾರೆ. ಆದಾಗಿ ಪ್ರಣವದಲ್ಲಿ ಸ್ವರೂಪದಿಂದಲೂ ಗುಣದಿಂದಲೂ ಜ್ಞಾನಾಕಾರನಾಗಿ ಪ್ರತ್ಯಕ್ಕಾಗಿ–ಸ್ವಸ್ಮೈ ಭಾಸಮಾನನಾಗಿ, ಅಣುವಾಗಿ ತೋರಿದ ಜೀವನನ್ನು ನಾರಶಬ್ದವು ಕ್ಷಯರಹಿತನು ಎಂದು ಹೇಳಿ ನಿತ್ಯತ್ವವನ್ನು ಹೇಳುವುದರಿಂದಲೂ ನರಸಮೂಹವನ್ನು ಹೇಳುವುದರಿಂದ ಜೀವರುಗಳ ಅನ್ಯೋನ್ಯ ಭೇದವನ್ನು ವ್ಯಕ್ತಪಡಿಸುವುದರಿಂದಲೂ **ನರಾಜ್ಜಾತಂಗಳ್ ನಾರಂಗಳ್**– ನರನಿಂದ ಉಂಟಾದವು ನಾರಗಳು ಎಂದ ಪ್ರಕೃತಿರೂಪ ಶರೀರ ವಿಶಿಷ್ಟವೇಷದಿಂದಲೂ ಬ್ರಹ್ಮಕಾರ್ಯತ್ವವು– ಬ್ರಹ್ಮಸೃಷ್ಟಗಳು ಎಂದು ತೋರುವುದರಿಂದಲೂ ಮಕಾರ ನಾರಶಬ್ದಗಳಿಗೆ ಪ್ರಯೋಜನವುಂಟು. ಹೀಗೆಯೇ ನಾರಶಬ್ದ ಅಯನಶಬ್ದಗಳಿಗೂ ಪುನರುಕ್ತಿ ಪರಿಹಾರವನ್ನು ತಿಳಿಸುತ್ತಾರೆ. ಆದಾಗಿ ನಾರಶಬ್ದ ಸಮಾನಾಧಿಕಾರವಾನ ಇತ್ಯಾದಿ– ಬಹುವ್ರೀಹಿ ಸಮಾಸದಲ್ಲಿ ನಾರ ಅಯನಂ ಯಸ್ಯ, ಎಂದು ನಾರಶಬ್ದಕ್ಕೂ ಅಯನ ಶಬ್ದಕ್ಕೂ ಸಮಾನ ವಿಭಕ್ತಿಕತ್ವವು ಹೇಳಲ್ಪಟ್ಟಿದೆ. ಅಯನ ಶಬ್ದದಿಂದ ನಾರಗಳಿಗೆ ವ್ಯಾಪ್ಯತ್ವವು ಹೇಳಲ್ಪಟ್ಟಿರುವುದರಿಂದ ಪುನರುಕ್ತ್ಯವಿಲ್ಲ.

ನಿತ್ಯರಾನ ಪಲಚೇತನರುಕ್ಕು ಇತ್ಯಾದಿ "ನಿತ್ಯೋ ನಿತ್ಯಾನಾಂ ಚೇತನ ಶ್ಚೇತನಾನಾಂ ಏಕೋ ಬಹೂನಾಂ ಯೋವಿದಧಾತಿ ಕಾಮಾನ್" ಎಂಬ ಶ್ರುತ್ಯರ್ಥವೂ ಇಲ್ಲಿ ಸಿದ್ಧ. ಹೇಗೆಂದರೆ "ರಿಂಗ್ ಕ್ಷಯೇ" ಎಂಬ ಧಾತ್ವರ್ಥದಿಂದ ನರಿಷ್ಯತಿ ಎಂದು ನಾರಶಬ್ದ ಪ್ರಕೃತಿಯಾದ ನರಶಬ್ದವು ಉತ್ಪನ್ನವಾಗಿ ಜೀವನಿತ್ಯತ್ವವನ್ನು ತಿಳಿಸುತ್ತದೆ. ಸಮೂಹಾರ್ಥಕ ಅಣ್ ಪ್ರತ್ಯಯದಿಂದ ಜೀವ ಬಹುತ್ವವು ನಾರೋ ನರಾಣಾಂ ಸಂಘಾತಃ, ಎಂದು ತಿಳಿಸಲ್ಪಡುತ್ತದೆ. ನರಾಜ್ಜಾತಾನಿ ತತ್ವಾನಿ. ಎಂದು ನಾರಶಬ್ದದಿಂದ ನಿತ್ಯನಾದ ಭಗವಂತನು ತಿಳಿಸಲ್ಪಡುತ್ತಾನೆ. ಹಾಗೆಯೇ ನರಃ ಎಂಬ ಏಕವಚನವು 'ಏಕೋ ಬಹೂನಾಂ' ಎಂಬಲ್ಲಿ ಭಗವಂತನು ಒಬ್ಬನೇ ಎಂಬ ಅರ್ಥವನ್ನು ತಿಳಿಸುತ್ತದೆ 'ಅಯನ' ಶಬ್ದವು ಈಯತೇ ಅನೇನ ಎಂಬ ಕರಣ ವ್ಯುತ್ಪತ್ತಿಯಿಂದ ಜೀವರುಗಳ ಕಾಮ

ಕಂಡುಕೊಳ್ವದು. ನಿತ್ಯನಾಹ ಪ್ರಮಾಣಸಿದ್ಧನಾನ ಜೀವನುಕ್ಕು ಬ್ರಹ್ಮಕಾರ್ಯತ್ವಮ್ ವಿಶೇಷಣ ದ್ವಾರಕಮ್. ಇಪ್ಪಡಿ ನಾರಾಯಣಾತ್ಮಕಾದಿ ಕಲ್ಪಙ್ಗಳಿಲೇ ಶೊನ್ನ ವ್ಯುತ್ಪತ್ತ್ಯಂತರಙ್ಗಳುಮೆಲ್ಲಾಮಿವತ್ತೋಡು ತುಲ್ಯಮ್.

1. "ಚೇತನಾ ಚೇತನಮ್ ಸರ್ವಂ ವಿಷ್ಣೋರ್ಯದ್ವ್ಯತಿರಿಚ್ಯತೇ ।
ನಾರಂ ತದಯನಂ ಚೇದಂ ಯಸ್ಯ ನಾರಾಯಣಸ್ತು ಸಃ ॥" ಎನ್ಗೈಯಾಲೇ,
ಸರ್ವಪುಂಸಾಂ ಸಮೂಹಃ" ಎನ್ರದುವುಮ್ ಉಪಲಕ್ಷಣಮಾಹೈಯಾಲ್ ಕ್ಷಯಿಷ್ಣುಕ್ಕಳಲ್ಲಾಮೈಯಾಲೇ ಸ್ವರೂಪತ್ತಾಲೇ ಯಾದಲ್, ಪ್ರವಾಹತ್ತಾಲೇಯಾದಲ್, ನಿತ್ಯಙ್ಗಳಾಯ್ ನರಶಬ್ದವಾಚ್ಯಙ್ಗಳಾನ ಸರ್ವತತ್ವಙ್ಗಳುಡೈಯ ಸಮೂಹಙ್ಗಳುಮ್ ನಾರಙ್ಗಳ್.

ಭಗವದ್ವಾಚಿ ನರಶಬ್ದೇನ ನಾರಾಯಣ ಶಬ್ದ ಬೋಧಿತ ಭಗವದ್ಗುಣಾನ್ಯಾಹ

ಸರ್ವವ್ಯಾಪಕತ್ವಾದಿ ವಿಶಿಷ್ಟನಾಯಿರುಕ್ಕೈಯ್‌ದೇ ತದ್ಗತದೋಷಙ್ಗಳೈಯುಮ್, ತತ್ಪ್ರಯುಕ್ತ

---

ಗಳನ್ನು- ಇಷ್ಟಾರ್ಥಗಳನ್ನು ಕೊಡುತ್ತಾನೆಂದು ತಿಳಿಸುತ್ತದೆ. ಹೀಗೆ ನಾರಾಯಣ ಶಬ್ದದಿಂದ ಮೇಲೆ ಹೇಳಿದ ಶ್ರುತ್ಯರ್ಥವು ತಿಳಿಸಲ್ಪಡುತ್ತದೆ.

'ನರಾಜ್ಜಾತಾನಿ ತತ್ವಾನಿ' ಎಂದು ಈಶ್ವರ ಸೃಷ್ಟನಾದ ಜೀವನಿಗೆ ನಿತ್ಯತ್ವವು ಹೇಗೆ ಸಿದ್ಧಿಸುತ್ತದೆ ಎಂಬ ಆಕ್ಷೇಪಣೆಯನ್ನು **ನಿತ್ಯನಾಹ ಪ್ರಮಾಣಸಿದ್ಧನಾನ** ಎಂದಾರಂಭಿಸಿ ಪರಿಹರಿಸುತ್ತಾರೆ ಅದಾಗಿ ನಿತ್ಯೋನಿತ್ಯಾನಾಂ ಎಂಬ ಶ್ರುತಿಯು ಜೀವನು ನಿತ್ಯನೆಂದು ತಿಳಿಸುತ್ತದೆ. ಹೀಗೆ ನಿತ್ಯನೆಂದು ಪ್ರಮಾಣಸಿದ್ಧನಾದ ಜೀವನಿಗೆ ಬ್ರಹ್ಮಕಾರ್ಯತ್ವವು **ವಿಶೇಷಣದ್ವಾರಕಮ್**- ಶರೀರ ದ್ವಾರಕವು. ನರನಿಂದ ಸೃಷ್ಟಿಸಲ್ಪಡುತ್ತಾನೆಂಬುದಕ್ಕೆ ಶರೀರೇಂದ್ರಿಯಗಳು ಜೀವನಿಗೆ ಕೊಡಲ್ಪಡುತ್ತವೆ ಎಂದರ್ಥ **ಇಪ್ಪಡಿ ನಾರಾಯಣಾತ್ಮಕಾದಿ** ಇತ್ಯಾದಿ-ಹೀಗೆ ನಾರಾಯಣಾತ್ಮಕಾದಿ ಕಲ್ಪಗಳಲ್ಲಿ ಹೇಳಿದ ವ್ಯುತ್ಪತ್ತ್ಯಂತರಗಳೆಲ್ಲಾ ಇವುಗಳೊಡನೆ ತುಲ್ಯವಾದವು.

**ನಾರಶಬ್ದವು ಚೇತನಾ ಚೇತನಗಳನ್ನು ತಿಳಿಸುತ್ತದೆ.**

**ಚೇತನಾ ಚೇತನಂ ಸರ್ವಂ** ಇತ್ಯಾದಿ- ಚೇತನ ಮತ್ತು ಅಚೇತನ ಇವುಗಳೆಲ್ಲವೂ ವಿಷ್ಣುವಿನ ಸ್ವರೂಪಕ್ಕಿಂತಲೂ ಬೇರೆಯಾದವು. ಇವು ನಾರಶಬ್ದ ವಾಚ್ಯಗಳು. ಇವುಗಳಿಗೆ ಅಯನಂ ವಾಸಸ್ಥಾನ ವಾದವನು ನಾರಾಯಣನು, ಎಂದು ಹೇಳಿರುವುದರಿಂದ ನಾರಸ್ತ್ವಿತಿ ಸರ್ವಪುಂಸಾಂ ಸಮೂಹಃ, ನಾರವು ಸರ್ವ ಜೀವರುಗಳ ಸಮೂಹವೆಂದು ಹೇಳಿರುವುದು **ಉಪಲಕ್ಷಣ ಮಾಹೈಯಾಲ್**- ಉಪಲಕ್ಷಣವಾಗಿ ಅಂಗೀಕರಿಸಬೇಕು. ಕಾಕೇಭ್ಯೋದಧಿ ರಕ್ಷತಾಮ್ ಎಂಬಲ್ಲಿ ದಧಿಗೆ ಉಪಘಾತವು ಏರ್ಪಡುವ ಸರ್ವವಸ್ತುಗಳಿಂದಲೂ ದಧಿಯನ್ನು ರಕ್ಷಿಸಬೇಕೆಂದು ಕಾಕ ಶಬ್ದಕ್ಕೆ ಮಾರ್ಜಾರಾದಿಗಳೂ ಉಪಲಕ್ಷಣವಾಗಿ ಹೇಳಲ್ಪಡುತ್ತವೆ. ಇದರಿಂದ ದಧ್ಯುಪಘಾತತ್ವವು ಉಪಲಕ್ಷ್ಯಾಕಾರ ಆ ರೀತಿಯಲ್ಲಿ **ಕ್ಷಯಿಷ್ಣುಕ್ಕಳಲ್ಲಾಮೈಯಾಲೇ**-ಸ್ವರೂಪತಃ ನಾಶರಹಿತಗಳಾದ, ಚೇತನಾಚೇತನಗಳ ನರ'ಶಬ್ದದಿಂದ (ರಃ-ಸ್ವರೂಪತಃ ನಾಶವಾದವು. ನರಃ-ಸ್ವರೂಪತಃ-ನಾಶರಹಿತಗಳು ಎಂದರ್ಥ.) ಹೇಳಲ್ಪಡುತ್ತವೆ. ಇಲ್ಲಿ ನಾಶ ರಹಿತತ್ವವೇ ಉಪಲಕ್ಷ್ಯಾಕಾರ ಎಂದು ತಾತ್ಪರ್ಯ. ಚೇತನತತ್ವವು ಸ್ವರೂಪತಃ ನಾಶರಹಿತವು ಅಚೇತನ ತತ್ವವು ರೂಪಾಂತರವನ್ನು ಪಡೆದರೂ ಪ್ರವಾಹತಃ ನಾಶರಹಿತವು. ಆದ್ದರಿಂದ ಎರಡೂ ನಿತ್ಯಗಳು. ನರಶಬ್ದವಾಚ್ಯಗಳಾದ ಸರ್ವತತ್ವಗಳ ಸಮೂಹಗಳೂ ನಾರಗಳು ನಾರಶಬ್ದವಾಚ್ಯಗಳು ಎಂದರ್ಥ.

**ನಾರಶಬ್ದವು ಭಗವಂತನನ್ನೂ ತಿಳಿಸುತ್ತದೆ ಎಂಬ ನಿರೂಪಣೆ. ನಾರಾಯಣ ಶಬ್ದಾರ್ಥ**

**ಸರ್ವವ್ಯಾಪಕಾದಿ ವಿಶಿಷ್ಟನ್** ಇತ್ಯಾದಿ-ಭಗವಂತನು ಚೇತನಾ ಚೇತನಾದಿ ಸರ್ವವನ್ನೂ ವ್ಯಾಪಿಸಿ,

**ದೋಷಜ್ಞಳೈಯುಂ‌ವರ್, ಕರ್ಮಕ್ಕಿರ ಕ್ಷಯರಹಿತನೆನ್ಗಿರ ವ್ಯುತ್ಪತ್ತಿಯಾಲುಂ‌ವರ್. "ನೃನಯೇ" ಇತ್ಯಾದಿಹಳಾಲುಂವರ್ 1) ಜಹ್ನುರ್ನಾರಾಯಣೋನರಃ" ಎನ್ರು ನಾಮಧೇಯಮಾಹ ಶೊಲ್ಲುಹೈಯಾಲುಂವರ್, 2) "ಆಪೋ ನಾರಾಯಣೋದ್ಭೂತಾ ಸ್ತಾ ಏವಾಸ್ಯಾಯನಂ ಪುನಃ" ಎನ್ಗಿರ ವ್ಯಾಸಸ್ಮೃತಿ ವಾಕ್ಯತ್ತಾಲೇ, ಆಪೋವೈ ನರಸೂನವಃ" ಇತ್ಯಾದಿಹಳಿಲ್ ನರಶಬ್ದಮುಂವರ್ ನಾರಾಯಣನೈ ಶೊಲ್ಲುಹಿರದೆನ್ನು ಮಿಡಮ್ ಸುವ್ಯಕ್ತ ಮಾಹೈಯಾಲುಂವರ್, ನರನೆನ್ರು ನಿತ್ಯನಾಯ್, ಸರ್ವನೇತಾವಾನ, ಸರ್ವೇಶ್ವರನುಕ್ಕು ತಿರುನಾಮಮಾಹೈಯಾಲೇ**

1) ನರಸಂಬಂಧಿನೋ ನಾರಾ ನರ ಸ್ಸ ಪುರುಷೋತ್ತಮಃ ।
ನಯತ್ಯಖಿಲವಿಜ್ಞಾನಂ ನಾಶಯತ್ಯಖಿಲಂ ತಮಃ ॥
ನರಿಷ್ಯತಿ ಚ ಸರ್ವತ್ರ ನರ ಸ್ತಸ್ಮಾತ್ಸನಾತನಃ ।
ನರಸಂಬಂಧಿನ ಸ್ಸರ್ವೇ ಚೇತನಾಚೇತನಾತ್ಮಕಾಃ ॥

---

ಅವುಗಳಿಂದ ವಿಶಿಷ್ಟನಾಗಿದ್ದುಕೊಂಡು ಸ್ವರೂಪಾನ್ಯಥಾಭಾವ, ಸ್ವಭಾವಾನ್ಯಥಾ ಭಾವ ರೂಪಗಳಾದ ತದ್ಗತ ದೋಷಗಳೂ, ಜೀವನ ಹಾಗೆ ಶರೀರ ಪ್ರಯುಕ್ತವಾದ ದೋಷಗಳೂ ಇಲ್ಲದವನು ರಕಾರವು ರಿಜ್ ಕ್ಷಯೇ ಎಂಬ ಅರ್ಥವನ್ನು ಸೂಚಿಸಿ ನ್ರಃ ಎಂಬ ಪದಗಳು ಕ್ಷಯರಹಿತನು ಎಂಬ ಅರ್ಥವನ್ನು ತಿಳಿಸುವುದರಿಂದ, ನರಶಬ್ದವು ಮೇಲೆ ಹೇಳಿದ ದೋಷಗಳನ್ನು ಕರ್ಮಕ್ಕಿರ–ನಿವರ್ತಿಸುತ್ತದೆ. ಇದರಿಂದ ಉಭಯಲಿಂಗಾಧಿಕರಣಾರ್ಥವೂ, ಸಂಭೋಗಪ್ರಾಪ್ತಿರಿತಿಚೇನ್ನ ವೈಶೇಷ್ಯಾತ್, ಎಂಬ ಸೂತ್ರಾರ್ಥವೂ ತಿಳಿಸಲ್ಪಡುತ್ತದೆ.

**ನೃನಯೇ ಇತ್ಯಾದಿಹಳಾಲುಂವರ್** ಇತ್ಯಾದಿ-ನೃನಯೇ ಎಂಬ ಧಾತುವಿನಿಂದ 'ನಯತ್ಯಖಿಲ ವಿಜ್ಞಾನಂ ಎಂಬ ವ್ಯುತ್ಪತ್ತಿಯು ಏರ್ಪಟ್ಟು ಆಶ್ರಿತರಿಗೆ ಜ್ಞಾನವನ್ನುಂಟು ಮಾಡುತ್ತಾನೆ, ಆದಿ ಶಬ್ದದಿಂದ, ನಶ್ ಅದರ್ಶನೇ ಎಂಬ ಧಾತುವಿನಿಂದ ನಾಶಯತ್ಯಖಿಲಂತಮಃ-ಎಲ್ಲಾ ಅಜ್ಞಾನಗಳನ್ನೂ ಹೋಗಲಾಡಿಸುತ್ತಾನೆಂಬ ಅರ್ಥವೂ ಏರ್ಪಡುತ್ತದೆ. ಇದರಿಂದ ನರಶಬ್ದವು ಭಗವಂತನನ್ನು ತಿಳಿಸುತ್ತದೆ. ಹಾಗೆಯೇ 1) ಜಹ್ನುರ್ನಾರಾಯಣೋನರಃ ಎಂದು 'ನರ' ಶಬ್ದವು ಭಗವನ್ನಾಮಧೇಯವಾಗಿದೆ. 2) **ಆಪೋ ನಾರಾಯಣೋದ್ಭೂತಾಃ** ಅಪ್ಪು–ನೀರು ಮೊದಲಾದವು ನಾರಾಯಣನಿಂದ ಉಂಟಾದವು ಇತ್ಯಾದಿ ವ್ಯಾಸಸ್ಮೃತಿ ವಾಕ್ಯದಿಂದಲೂ **ಆಪೋವೈನರಸೂನವಃ** ಅಪ್ಪು–ನೀರು ಮೊದಲಾದವು ನರನಮಕ್ಕಳು, ಎಂಬ ಮನುಸ್ಮೃತಿ ವಾಕ್ಯದಿಂದಲೂ ನರಶಬ್ದವು ನಾರಾಯಣನನ್ನೇ ತಿಳಿಸುತ್ತದೆ ಎಂಬುದು ಸುವ್ಯಕ್ತ.

ನರನೆನ್ರು ಇತ್ಯಾದಿ ನರನೆಂಬುದು ನಿತ್ಯನಾಗಿ ಸರ್ವನೇತಾವಾದ ಸರ್ವೇಶ್ವರನ ದಿವ್ಯನಾಮ. 1) **ನರಸಂಬಂಧಿನೋನಾರಾಃ** ಇತ್ಯಾದಿ–ನಾರಗಳು ಎಂದರೆ ನರಸಂಬಂಧಿಯಾದ ಸ್ವರೂಪ ನಿರೂಪಕ ಧರ್ಮಗಳೂ, ನಿರೂಪಿತ ಸ್ವರೂಪ ವಿಶೇಷ ಧರ್ಮಗಳೂ, ವಿಗ್ರಹಾದಿಗಳೂ ವಿವಕ್ಷಿತಗಳು. **ನರಸ್ಸಪುರುಷೊತ್ತಮಃ** ಪುರುಷೋತ್ತಮನು ನರ ಶಬ್ದವಾಚ್ಯನು. **ನಯತ್ಯಖಿಲವಿಜ್ಞಾನಂ** ಇತ್ಯಾದಿ–ಆಶ್ರಿತರಿಗೆ ಜ್ಞಾನಪ್ರದನು. ಅವರ ಅಜ್ಞಾನವನ್ನು ಹೋಗಲಾಡಿಸುವವನು. **ನ ಷ್ಯತಿ ಚಸರ್ವತ್ರ**–ಚೇತನಾಚೇತನಾತ್ಮಕ ಸರ್ವ ವಸ್ತುಗಳನ್ನು ವ್ಯಾಪರಿಸಿದ್ದರೂ, ತತ್ಪ್ರಯುಕ್ತ ದೋಷಗಳನ್ನು ಹೊಂದುವುದಿಲ್ಲ. **ನರಸ್ತಸ್ಮಾತ್ ಸನಾತನಃ**- ಆದ್ದರಿಂದ ನರನು ಸನಾತನನು. ಈ ಅರ್ಥಗಳನ್ನೇ, ನರಸಂಬಂಧಿನಸ್ಸರ್ವೇ ಎಂದಾರಂಭಿಸಿ ವಿಶದೀಕರಿಸುತ್ತಾರೆ. ಆದಾಗಿ ಚೇತನಾಚೇತನಗಳೆಲ್ಲಾ ನರನಿಗೆ ಸಂಬಂಧ

---

1) ವಿಷ್ಣು ಸಹಸ್ರನಾಮ 2) ವ್ಯಾಸಸ್ಮೃತಿ (2-10
1 ಅಹಿರ್ಬುಧ್ನ್ಯ ಸಂಹಿತೆ

**ಈಶಿತವ್ಯತಯಾ ನಾರಾ ಧಾರ್ಯ ಪೋಷತಯಾ ತಥಾ ।**
**ನಿಯಾಮ್ಯತ್ವೇನ ಸೃಜ್ಯತ್ವ ಪ್ರವೇಶ ಭರಣೈಸ್ತಥಾ ॥**
**ಅಯತೇ ನಿಖಿಲಾನ್ನಾರಾನ್ ವ್ಯಾಪ್ನೋತಿ ಕ್ರಿಯಯಾ ತಥಾ ।**
**ನಾರಾಶ್ಚಾಪ್ಯಯನಂ ತಸ್ಯ ತೈಸ್ತದ್ಭಾವ ನಿರೂಪಣಾತ್ ॥**
**ನಾರಾಣಾಮಯನಂ ವಾಸಸ್ತೇ ಚ ತಸ್ಯಾಯನಂ ಸದಾ ।**
**ಪರಮಾಚಗತಿಸ್ತೇಷಾಂ ನಾರಾಣಾಮಾತ್ಮನಾಂ ಸದಾ ॥"**

**ಎನ್ರು ಅಹಿರ್ಬುಧ್ನ್ಯಾದಿಹಳ್ ನಿರ್ವಚನಂ ಪಣ್ಣಿನ ಪಡಿಯೇ "ನರಸಂಬಂಧಿ ನಾರಮ್" ಎನ್ಗಿರ ವ್ಯುತ್ಪತ್ತಿಯಾಲೇ ಸರ್ವೇಶ್ವರನುಡೈಯ ಸ್ವರೂಪ ನಿರೂಪಕ ಧರ್ಮಙ್ಗಳುಮ್ ನಿರೂಪಿತ ಸ್ವರೂಪ ವಿಶೇಷಣ ಧರ್ಮಂಗಳುಮ್, ವ್ಯಾಪಾರಙ್ಗಳುಮ್, ವಿಗ್ರಹವಿಶೇಷಙ್ಗಳುಮ್ ಮತ್ತುಮುಳ್ಳ ತ್ರಿವಿಧಚೇತನಾ ಚೇತನಙ್ಗಳುಮೆಲ್ಲಾಮ್, ನಾರಶಬ್ದಾರ್ಥಮಾನ ಪೋದು, ಸ್ವವ್ಯತಿರಿಕ್ತ ಸರ್ವತ್ತುಕ್ಕುಮ್ ಆಶ್ರಯತ್ವಾದಿ ರೂಪೇಣ ನಿರ್ಕುಮ್ ಪ್ರಕಾರಮ್ ವಿವಕ್ಷಿತಮಾಹೈಯಾಲೇ ಸ್ವನಿಷ್ಠತ್ವಾದಿಹಳೈ ಚೊಲ್ಲುಹಿರದು.**

**ನಾರಾಯಣ ಶಬ್ದ ವೈಭವೇನ ಸ್ವರೂಪೈಕ್ಯಾದಿ ಭ್ರಮ ನಿವೃತ್ತಿಃ.**

**ಇಪ್ಪಡಿ ವ್ಯಾಪನ ಭರಣ ನಿಯಮನ ಸ್ವಾಮ್ಯಾದಿಹಳಾಲೇ ವೇರುಪಟ್ಟಿರುಕ್ಕಿರ ಪುರುಷೋತ್ತಮನುಕ್ಕುಮ್, ತತ್ಸಂಬಂಧಿಹಳುಕ್ಕುಮ್, ಕುದೃಷ್ಟಿಹಳ್ ಶೊನ್ನ ಸ್ವರೂಪೈಕ್ಯಾದಿ ಭ್ರಮಮ್ ಕಳಿಯುಮ್ಪಡಿ ಸರ್ವಶರೀರಿತ್ವ ಸರ್ವ ಶಬ್ದ ವಾಚ್ಯತ್ವಾದಿ ವೈಭವಮುಂ ವಿಙ್ಗೇ ಫಲಿತಮ್.**

---

ಪಟ್ಟವರು ಹೇಗೆಂದರೆ ಅವನಿಂದ ರಕ್ಷಿಸಲ್ಪಟ್ಟು, ಧರಿಸಲ್ಪಟ್ಟು ಪೋಷಿಸಲ್ಪಟ್ಟಿದ್ದಾರೆ. ಆವನಿಗೆ ನಿಯಾಮ್ಯರು. ಅವನಿಂದ ಸೃಷ್ಟಿಸಲ್ಪಟ್ಟವರು. ಅವನು ಅಂತಃಪ್ರವಿಷ್ಟನಾಗಿಯೂ, ಬಹಿರ್ವ್ಯಾಪ್ತನಾಗಿ ಧರಿಸಿಯೂ ಭರಿಸಿಯೂ, ಇದ್ದಾನೆ. **ಅಯತೇನಿಖಿಲಾನ್ನಾರಾನ್**–ಎಂದಾರಂಭಿಸಿ ಅಯನ ಶಬ್ದಾರ್ಥವನ್ನು ತಿಳಿಸುತ್ತಾರೆ. ಎಲ್ಲಾ ಜೀವರನ್ನೂ ಅಯತೇ–ನಿಯಮಿಸುತ್ತಾನೆ **ವ್ಯಾಪನಪೋಷಣಭರಣ** ಕ್ರಿಯೆಗಳಿಂದ ವ್ಯಾಪರಿಸಿ ನಿಯಮಿಸುತ್ತಾನೆ ಈ ಪಕ್ಷದಲ್ಲಿ "ಅಯನ" ಶಬ್ದವು ಕರ್ತರಿವ್ಯುತ್ಪನ್ನವು. ನಾರಾಣಾಂ ಅಯನಂ ಎಂಬ ತತ್ಪುರುಷ ಸಮಾಸಾರ್ಥವಿದು. ಅನಂತರ ಬಹುವ್ರೀಹಿ ಸಮಾಸಾರ್ಥವನ್ನು "**ನಾರಾಶ್ಚಾಪ್ಯಯನಂ ತಸ್ಯ**" ಎಂದಾರಂಭಿಸಿ ತಿಳಿಸುತ್ತಾರೆ. **ತೈಸ್ತದ್ಭಾವ ನಿರೂಪಣಾತ್**–ತೈಃ ಚೇತನಾಚೇತನಗಳಾದ ನಾರಗಳು ತದ್ಭಾವನಿರೂಪಣಾತ್–ಬ್ರಹ್ಮದಸದ್ಭಾವವನ್ನು ನಿರೂಪಿಸುವುದರಿಂದ, ಅಂದರೆ ವಿಭೂತಿಗಳು ವಿಭೂತಿಗಳಿಗೆ ಒಡೆಯನ ಇರುವಿಕೆಯನ್ನು ನಿರೂಪಿಸುತ್ತವೆಯಾದ್ದರಿಂದ, ನಾರಗಳಿಗೆ ಅವನು ವಾಸಸ್ಥಾನವು. ಅವುಗಳೂ ಅವನಿಗೆ ವಾಸಸ್ಥಾನವು **ಪರಮಾಚಗತಿಃ** ಇತ್ಯಾದಿ ಆ ಚೇತನವರ್ಗಗಳಿಗೆ ಪರಮ ಪ್ರಾಪ್ಯನೂ, ಪ್ರಾಪಕನೂ ಅವನೇ. **ಎನ್ರು ಅಹಿರ್ಬುಧ್ನ್ಯಾದಿಹಳ್** ಇತ್ಯಾದಿ–ಈರೀತಿಯಾಗಿ ಅಹಿರ್ಬುಧ್ನ್ಯಾದಿಗಳು ನಿರ್ವಚನ ಮಾಡಿರುತ್ತಾರೆ. ಪಡಿಯೇ–ಆ ರೀತಿಯಲ್ಲಿ "ನರಸಂಬಂಧಿ ನಾರಂ" ಎಂಬ ವ್ಯುತ್ಪತ್ತಿಯಿಂದ ಸರ್ವೇಶ್ವರನ ಸ್ವರೂಪ ನಿರೂಪಕ ಧರ್ಮಗಳೂ, ನಿರೂಪಿತ ಸ್ವರೂಪ ವಿಶೇಷಣ ಧರ್ಮಗಳೂ, ವ್ಯಾಪಾರಗಳೂ, ವಿಗ್ರಹ ವಿಶೇಷಗಳೂ, **ಮುಟ್ಟುಮುಳ್ಳ** – ಇತರ ತ್ರಿವಿಧ ಚೇತನಾಚೇತನಗಳೆಲ್ಲವೂ ನಾರಶಬ್ದಾರ್ಥವಾದಾಗ ಸ್ವವ್ಯತಿರಿಕ್ತ ಸರ್ವ ವಸ್ತುಗಳಿಗೂ ಆಶ್ರಯತ್ವಾದಿ ರೂಪದಿಂದ ಇರುವ ಪ್ರಕಾರವು ವಿವಕ್ಷಿತವಾದ್ದರಿಂದ, ನಾರಾಯಣ ಶಬ್ದವು ಸ್ವನಿಷ್ಠತಾದಿಗಳನ್ನು ಹೇಳುತ್ತದೆ.

**ಇಪ್ಪಡಿ ವ್ಯಾಪನ ಭರಣ ನಿಯಮನ ಸ್ವಾಮ್ಯಾದಿ ಹಳಾಲೇ** ಇತ್ಯಾದಿ– ಹೀಗೆ ಸರ್ವ ವಸ್ತುಗಳನ್ನು ವ್ಯಾಪಿಸಿ, ಭರಿಸಿ, ನಿಯಮಿಸಿ ಸ್ವಾಮಿಯಾಗಿರುವುದರಿಂದ ಅವುಗಳಿಗಿಂತ ಬೇರೆಯಾದ ಪುರುಷೋತ್ತಮನಿಗೂ

**ಅಥ ಶೋಧಕ ಕಾರಣೋ ಪಾಸನ ಫಲ ಬೋಧಕಾರ್ಥಾ ಅಪಿನಾರಾಯಣ ಪದೇ ಸಂತಿ.**

**ನರಶಬ್ದತ್ತಾಲೇ ಶೋಧಕವಾಕ್ಯಾರ್ಥವುಮ್, ನಾರಶಬ್ದತ್ತಾಲೇ "ನರಾಜ್ಜಾತಾನಿ ತತ್ವಾನಿ ನಾರಾಣಿ, ಎನ್‌ಗೈಯಾಲೇ ಕಾರಣ ವಾಕ್ಯಾರ್ಥಙ್ಗಳು ಮೆಲ್ಲಾಮ್ ಇಙ್ಗೇ ಪ್ರಕಾಶಿತಙ್ಗಳಾಹಿರನ**

**ನಾರಾಯಣ ಶಬ್ದೇನ ಅನ್ಯದೇವತಾ ವ್ಯವಚ್ಛೇದೇನ ಸ ಏವ ಪರತತ್ವಮ್.**

**ಸುಬಾಲೋಪನಿಷತ್ಪ್ರಭೃತಿಹಳಿಲೇ ಸರ್ವಾನ್ತರ್ಯಾಮಿಯುಮಾಯ್ ಸರ್ವವಿಧ ಬಂಧುವುಮಾಯಿರುಕ್ಕಿರ ಸರ್ವೇಶ್ವರ್ ನಾರಾಯಣಶಬ್ದತ್ತಾಲೇ ದೇವತಾನ್ತರ ವ್ಯಾವೃತ್ತನಾಹ ಪ್ರತಿಪಾದಿತನಾರ್. ಲೋಕತ್ತಿಲುಳ್ಳ ಸರ್ವಬಂಧುಕ್ಕಳುಮ್ ಭಗವತ್ಸಙ್ಕಲ್ಪತ್ತಾಲೇ ಬಂಧುಕ್ಕಳಾನಾರ್‌ಹಳ್.**

---

ತತ್ಸಂಬಂಧಿಗಳಾದ ಚೇತನಾ ಚೇತನಗಳಿಗೂ ಕುದೃಷ್ಟಿಗಳು ಹೇಳಿದ ಸ್ವರೂಪೈಕ್ಯಾದಿಭ್ರಮಗಳು ನಿವೃತ್ತವಾಗುವಂತೆ, ಸರ್ವ ಶರೀರಿತ್ವ ಸರ್ವಶಬ್ದವಾಚತ್ವವೇ ಮೊದಲಾದ ವೈಭವವು ಇಲ್ಲಿ ಫಲಿತ. ಆದಾಗಿ ಈ ನಾರಾಯಣ ಶಬ್ದದಲ್ಲಿ ನಾರಾಣಾಂ ಅಯನಂ ಎಂಬ ವ್ಯುತ್ಪತ್ತಿಯಲ್ಲಿ ಸರ್ವಾಧಾರತ್ವರೂಪ ಸರ್ವಶರೀರಿತ್ವವು ತೋರುವುದರಿಂದಲೂ ತತ್ವಮಸಿ, ಅಯಮಾತ್ಮಾಬ್ರಹ್ಮ ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಸಾಮಾನಾಧಿಕರಣ್ಯವು ಶರೀರಾತ್ಮ ಭಾವ ಸಂಬಂಧ ನಿಬಂಧನವೆಂದು ಏರ್ಪಡುವುದರಿಂದ, ಸ್ವರೂಪೈಕ್ಯಭ್ರಮವು ನಿವೃತ್ತವಾಗುತ್ತದೆ ಎಂದು ತಾತ್ಪರ್ಯ,

**ನರಶಬ್ದತ್ತಾಲೇ** ಇತ್ಯಾದಿ – ನರಶಬ್ದದಿಂದ ಕ್ಷಯರೂಪದೋಷಾಭಾವವು ಹೇಳಲ್ಪಡುವುದರಿಂದ "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಎಂಬ ಶೋಧಕವಾಕ್ಯಾರ್ಥವೂ "ನರಾಜ್ಜಾತಾನಿತತ್ವಾನಿ ನಾರಾಣಿ" ಎಂಬ ವ್ಯುತ್ಪತ್ತಿಯಿಂದ **ನಾರಶಬ್ದತ್ತಾಲೇ** ಅಂದರೆ ನಾರ ಶಬ್ದದಿಂದ ನರನಿಂದ ತತ್ವಗಳು ಉಂಟಾದವು ಅವುಗಳು ನಾರಗಳು ಎಂಬ ಅರ್ಥವು ಏರ್ಪಡುವುದರಿಂದ ಕಾರಣವಾಕ್ಯಾರ್ಥವೂ ಅಯನ ಶಬ್ದತ್ತಾಲೇ– "ಈಯತೇ ಇತ್ಯಯನಂ" ಎಂಬ ಕರ್ಮವ್ಯುತ್ಪತ್ತಿಯುಳ್ಳ "ಅಯನ" ಶಬ್ದದಿಂದ ಗತಿ ಕರ್ಮತ್ವವು ಸಿದ್ಧಿಸಿ, ಗತ್ಯರ್ಥಾನಾಂ ಬುದ್ಧ್ಯರ್ಥತ್ವಾತ್ ಎಂಬ ನ್ಯಾಯದಿಂದ ಉಪಾಸನ ರೂಪ ಬುದ್ಧಿ ಕರ್ಮತ್ವವು ಸಿದ್ಧಿಸುವುದರಿಂದ ಉಪಾಸನ ವಾಕ್ಯಾರ್ಥಗಳೆಲ್ಲವೂ ಇಲ್ಲಿ ಪ್ರಕಾಶಿತಗಳು

### ನಾರಾಯಣ ಶಬ್ದವು ಪರದೇವತಾ ನಿರ್ಣಾಯಕ

ನಾರಾಯಣ ಶಬ್ದದಲ್ಲಿ ಯೋಗ ವ್ಯುತ್ಪತ್ತಿಯಿಂದ ಏರ್ಪಡುವ ಆಧಾರತ್ವ, ಶರೀರಿತ್ವಾದಿಗಳು ದೇವತಾಂತರ ಸಾಧಾರಣವಾಗಿ ಹೇಳ ಬಹುದಾದ್ದರಿಂದ, ದೇವತಾ ವಿಶೇಷ ನಿಶ್ಚಯವು ಹೇಗೆ ಏರ್ಪಡುತ್ತದೆ ಎಂದರೆ **ಸುಬಾಲೋಪನಿಷತ್ಪ್ರಭೃತಿಹಳಿಲೇ** ಇತ್ಯಾದಿ ಸಮಾಧಾನವನ್ನು ತಿಳಿಸುತ್ತಾರೆ. ಆದಾಗಿ ಸುಬಾಲೋಪನಿಷತ್ಪ್ರಭೃತಿಗಳಲ್ಲಿ "ಏಷ ಸರ್ವ ಭೂತಾಂತರಾತ್ಮಾಽಪಹತ ಪಾಪ್ಮಾದಿವ್ಯೋ ದೇವ ಏಕೋ ನಾರಾಯಣಃ ಮಾತಾ ಪಿತಾ ಭ್ರಾತಾ ನಿವಾಸ ಶ್ಶರಣಂ ಸುಹೃತ್, ಗತಿ ರ್ನಾರಾಯಣಃ" ಎಂದು ಸರ್ವಾಂತರ್ಯಾಮಿಯಾಗಿಯೂ ಸರ್ವ ವಿಧ ಬಂಧುವಾಗಿಯೂ ಇರುವ ಸರ್ವೇಶ್ವರನು "ದೇವ ಏಕೋ ನಾರಾಯಣಃ" ಎಂಬ ಶಬ್ದದಿಂದ ಶ್ರಿಯಃಪತಿ ಯೆಂಬ ಆಕಾರದಿಂದ ದೇವತಾಂತರ ವ್ಯಾವೃತ್ತನಾಗಿ ಪ್ರತಿಪಾದಿಸಲ್ಪಟ್ಟಿರುತ್ತಾನೆ.

ದೇವ ಶಬ್ದವು "ಶ್ರದ್ಧಯಾದೇವೋ ದೇವತ್ವಮಶ್ನುತೇ" ಎಂಬ ಶ್ರುತಿ ವಾಕ್ಯದಿಂದ ಲಕ್ಷ್ಮೀ ವಿಶಿಷ್ಟನಾಗಿ ಜಗದ್ವ್ಯಾಪಾರ ಲೀಲೆಯನ್ನು ಅನುಭವಿಸುತ್ತಾನೆಂದು ತಿಳಿಸುತ್ತದೆ. ಏಕೋ ನಾರಾಯಣಃ ಎಂದು ಹೇಳಿರುವುದರಿಂದ ನಾರಾಯಣ ಶಬ್ದವು ರೂಢ್ಯರ್ಥದಲ್ಲಿ ಶ್ರಿಯಃ ಪತಿಯನ್ನೇ ತಿಳಿಸುತ್ತದೆ ಯಾದ್ದರಿಂದ ದೇವತಾಂತರ ವ್ಯಾವೃತ್ತಿಯು ಏರ್ಪಡುತ್ತದೆ ಎಂದು ಭಾವ. **ಲೋಕತ್ತಿಲುಳ್ಳ ಸರ್ವ ಬಂಧುಕ್ಕಳುಮ್** ಇತ್ಯಾದಿ – ಲೋಕ

1) "ತ್ವಮೇವ ಮಾತಾಚ ಪಿತಾತ್ವಮೇವ" 2) "ಎಮ್ಬಿರಾನೆನ್ದೈ" 3 "ಪಿತಾತ್ವಂ ಮಾತಾತ್ವಂ" ಇತ್ಯಾದಿ ಹಳಿರ್ಪಡಿಯೇ ನಿರುಪಾಧಿಕ ಸರ್ವವಿಧ ಬಂಧು ಸರ್ವೇಶ್ವರನೊರುವನುಮೇ. 4) "ಯಸ್ಯಪ್ರಸಾದೇ ಸಕಲಾಃ ಪ್ರಸೀದೇಯುರಿಮಾಃ ಪ್ರಜಾಃ" ಎನ್ರುಮ್ 5) ಪ್ರಸನ್ನಮುಭವತ್ತಸ್ಮೈಪ್ರಸನ್ನಾಯ ಚರಾ

---

ಚರದಲ್ಲಿರುವ ಸರ್ವ ಬಂಧುಗಳೂ ಭಗವತ್ಸಂಕಲ್ಪದಿಂದ ಬಂಧುಗಳಾಗಿದ್ದಾರೆ. ಇದು ಸೋಪಾಧಿಕ "ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ" ಎಂಬ ಶ್ರುತಿಯಿಂದ ಈ ಅರ್ಥವು ಏರ್ಪಡುತ್ತದೆ. ಭಗವಂತನು ನಿರುಪಾಧಿಕ ಬಂಧು. 1) ತ್ವಮೇವ ಮಾತಾಚ ಪಿತಾತ್ವಮೇವ 2) ಎಂಬಿರಾನೆಂದೈ 3) ಪಿತಾತ್ವಂ ಮಾತಾತ್ವಂ ಇತ್ಯಾದಿಗಳಲ್ಲಿ ಹೇಳಿರುವಂತೆ ನಿರುಪಾಧಿಕ ಸರ್ವವಿಧ ಬಂಧುವು ಸರ್ವೇಶ್ವರನೊಬ್ಬನೇ 4) ಯಸ್ಯ ಪ್ರಸಾದೇ ಸಕಲಾಃ ಇತ್ಯಾದಿಯಾಗಿಯೂ 5) ಪ್ರಸನ್ನ

---

1) ತ್ವಮೇವ ಮಾತಾಚ ಪಿತಾತ್ವಮೇವ, ತ್ವಮೇವ ಬಂಧುಶ್ಚಗುರುಸ್ತ್ವಮೇವ ।
ತ್ವಮೇವ ವಿದ್ಯಾದ್ರವಿಣಂತ್ವಮೇವ. ತ್ವಮೇವ ಸರ್ವಂ ಮಮ ದೇವ ದೇವ ॥ (2 ಅಧ್ಯಾಯ)

ಎಲೈ ಕೃಷ್ಣಪರಮಾತ್ಮನೇ ನೀನೇ ತಾಯಿ. ನೀನೇ ತಂದೆ, ನೀನೇ ಬಂಧು, ನೀನೇ ಗುರು, ವಿದ್ಯೆ, ಹಣ ಎಲ್ಲಾ ನಿನ್ನ ಅಧೀನವೆಂದರ್ಥ. ನನಗೆ ನೀನೇ ಸರ್ವವೂ ಆಗಿದ್ದೀಯ. ಆದಾಗಿ ಮಾತಾ, ಪಿತಾ. ಬಂಧು ಗುರು, ವಿದ್ಯೆ, ಹಣ ಇವುಗಳಿಂದ ಉಂಟಾಗುವ ಪ್ರಯೋಜನವೆಲ್ಲಾ ನಿನ್ನಿಂದಲೇ ಲಭಿಸುತ್ತದೆ, ಎಂದರ್ಥ.

2) ಎಂಬಿರಾನೆಂದೈ ಎನ್ನುಡೈಚ್ಚುತ್ತಂ ಎನಕ್ಕರಶೆನ್ನುಡೈವಾಣಾಳ್ ಅನ್ಬಿನಾಲ್ ಅರಕ್ಕರ್ವೇರುಕ್ಕೊಳನೆರುಕ್ಕಿ ಅವರುಯಿರ್ಶೆಹುತ್ತ ಎಮ್ ಅಣ್ಣಲ್ ।
ವಂಬುಲಾಮ್ ಶೋಲೈಮಾಮದಿಳ್ ತಂಜೈಮಾಮಣಿಕ್ಕೋಯಿಲೇ ವಣಂಗಿ ನಂಬಿಹಾಳ್ ಉಯ್ಯನಾನ್ ಕಂಡುಕೊಂಡೇನ್ ನಾರಾಯಣಾ ವೆನ್ನುಮ್ ನಾಮಮ್ ॥ ಪೆರಿ ತಿರುಮೊಳಿ (1-1-6)

ನನಗೆ ಪರಮೋಪಕಾರನು, ತಂದೆ ಮತ್ತು ಇತರ ಸಕಲ ವಿಧವಾದ ಬಂಧು, ನನ್ನ ಜೀವಿತ ಕಾಲವನ್ನು ತನಗೆ ಅಧೀನವಾಗಿ ಕೊಂಡವನು. ದುಷ್ಟ ರಾಕ್ಷಸರನ್ನು ಸಂಹಾರಮಾಡಿ ಸಾಧು ಪರಿತ್ರಾಣ ಮಾಡಿದ ಉಪಕಾರಕನು. ಮಧುಕರಗಳಿಂದ ಕೂಡಿದ ಉಪವನಗಳಿಂದ ಸುತ್ತುವರಿಯಲ್ಪಟ್ಟ ತಂಜೈಮಾಮಣಿ ದೇವಸ್ಥಾನವನ್ನು ನಮಸ್ಕರಿಸಿ, ನಾನು ಉಜ್ಜೀವಿಸಲು ನಾರಾಯಣಾ ಎಂಬ ದಿವ್ಯನಾಮದ ಅರ್ಥವನ್ನು ತಿಳಿದುಕೊಂಡೆ.

3) ಪಿತಾತ್ವಂಮಾತಾತ್ವಂದಯಿತ ತನಯಸ್ತ್ವಂ ಪ್ರಿಯಸುಹೃತ್
ತ್ವಮೇವತ್ವಂ ಮಿತ್ರಂ ಗುರುರಸಿ ಗತಿಶ್ಚಾಸಿ ಜಗತಾಮ್ ।
ತ್ವದೀಯ ಸ್ತ್ವದ್ಭೃತ್ಯಸ್ತವ ಪರಿಜನಸ್ತ್ವದ್ಗತಿರಹಂ
ಪ್ರಪನ್ನಶ್ಚೈವಂ ಸತ್ಯಹಮಪಿ ತವೈವಾಸ್ಮಿಹಿ ಭರಃ ॥ ಆಳವಂದಾರ್ ಸ್ತೋತ್ರ (60)

ಎಲೈ ಭಗವಂತನೇ ನೀನು ನನಗೆ ತಂದೆ ತಾಯಿ ಮೊದಲಾದ ಸಕಲ ವಿಧವಾದ ಬಂಧುವು, ಲೋಕದ ಜನರಿಗೆ ಗುರು. ನಾನು ನಿನ್ನವನು, ನಿನ್ನ ಸೇವಕನು, ಪ್ರಪನ್ನನು. ನೀನೇ ಗತಿ. ನನ್ನನ್ನು ಕಾಪಾಡುವುದೂ ನಿನ್ನ ಭಾರ.

4) ಯಸ್ಯಪ್ರಸಾದೇಸಕಲಾಃ ಪ್ರಸೀದೇಯುರಿಮಾಃ ಪ್ರಜಾಃ ।
ಸರಾಮೋ ವಾನರೇಂದ್ರಸ್ಯ ಪ್ರಸಾದಮಭಿಕಾಂಕ್ಷತೇ ॥ ರಾಮಾ (4-1-21)

ಯಾವನ ಅನುಗ್ರಹವಿದ್ದರೆ ಈ ಸಕಲ ಪ್ರಜೆಗಳೂ ಪ್ರಸನ್ನರಾಗಿ ನಮಗೆ ಅನುಕೂಲವನ್ನು ಮಾಡುತ್ತಾರೋ, ಆ ರಾಮನು ವಾನರೇಂದ್ರನಾದ ಸುಗ್ರೀವನ ಅನುಗ್ರಹವನ್ನು ಎದುರು ನೋಡುತ್ತಾನೆ. (ಇದು ಲಕ್ಷ್ಮಣನ ವಾಕ್ಯ)

5) ಪ್ರಸನ್ನಮಭವತ್ತಸ್ಮೈ ಪ್ರಸನ್ನಾಯ ಚರಾಚರಮ್ ।

ಚರಮ್" 6) ಪ್ರಸನ್ನೇದೇವದೇವೇಶೇ" ಎನ್ರುಮ್ ಶೊಲ್ಲುಹೈಯಾಲೇ ಅವನ್ ಪ್ರಸನ್ನನಾನಾಲ್ ಪ್ರತಿಕೂಲರಾವಾ ರೊರುವರುಮಿಲ್ಲೈ. ಇವ್ವೀಶ್ವರನುಕ್ಕು · 7) "ಸುಹೃದಂ ಸರ್ವಭೂತಾನಾಂ" ಎನ್ಗಿರ ವಾಕಾರಮ್ ಸ್ವಭಾವ ಸಿದ್ಧಮ್

ಆಕಾರಾಂತರಮ್ ಚೇತನರುಡೈಯ ವಾಜ್ಞಾತಿಲಂಘನಮಾಹಿರ ಉಪಾಧಿಯಡಿಯಾಹವನ್ದದು ಅದುವುಮ್ ಅಲ್ಪವ್ಯಾಜತ್ತಾಲೇ ಮಾರುಮ್. । "ಇತ್ತನೈಯಡಿಯರಾನಾರ್ಕ್ಕಿರಙ್ಗನಮ್ಅರಙನಾಯ ಪಿತ್ತನೈ" ಎನ್ರಾರ್ಹಳಿರೇ.

---

ಮಭವತ್ತಸ್ಮೈ 6) **ಪ್ರಸನ್ನೇ ದೇವ ದೇವೇಶೇ** ಇತ್ಯಾದಿಯಾಗಿಯೂ ಹೇಳಿರುವುದರಿಂದ ಭಗವಂತನು ಪ್ರಸನ್ನನಾದರೆ ಎಲ್ಲರೂ ಪ್ರಸನ್ನರಾಗುತ್ತಾರೆ. ಪ್ರತಿಕೂಲರು ಯಾರೂ ಇರುವುದಿಲ್ಲ. ಇವ್ವೀಶ್ವರು ನುಕು 7) **ಸುಹೃದಂ ಸರ್ವಭೂತಾನಾಂ** ಇತ್ಯಾದಿ – ಈ ಭಗವಂತನಿಗೆ ಸರ್ವಭೂತ ಸುಹೃತ್ವವೆಂಬ ಆಕಾರವು ಸ್ವಭಾವ ಸಿದ್ಧ.

**ಆಕಾರಾಂತರಮ್** ಇತ್ಯಾದಿ ಆಕಾರಾಂತರವು ಚೇತನರ ಆಜ್ಞಾತಿಲಂಘನವೆಂಬ ಉಪಾಧಿನಿಮಿತ್ತವಾಗಿ ಬಂದ ನಿಗ್ರಹ ಸಂಕಲ್ಪರೂಪ. **ಅದುವುಮ್** ಇತ್ಯಾದಿ ಅದೂ ಪ್ರಣಿಪತನಾದಿ ಅಲ್ಪವ್ಯಾಜ್ಯದಿಂದ ಕಳೆಯುತ್ತದೆ 1) **ಇತ್ತನೈ ಅಡಿಯರಾನಾರ್ಕ್ಕು ಇರಂಗು ನಮ್ ಅರಂಗ ನಾಯಪಿತ್ತನೈ**–ಕ್ಷತ್ರ ಬಂಧುವಿಗೆ "ಗೋವಿಂದ ಎಂಬ ಮೂರು ಅಕ್ಷರಗಳಿಂದ ಕೂಡಿದ ನಾಮೋಚ್ಚಾರಣಗಳಿಂದಲೇ ಸಕಲ ಪಾಪಗಳು ತೊಲಗಿ ಪರಗತಿಯನು ಹೊಂದುವಂತೆ ಕೃಪೆ ಮಾಡಿದ ಆಶ್ರಿತ ವತ್ಸಲನಾದ ರಂಗನಾಥ ಎಂದು, **ಶೊನ್ನಾರ್ಹಳಿರೇ** – ಆಳ್ವಾರುಗಳ ಹೇಳಿದ್ದಾರಲ್ಲವೇ.

---

6) ಪ್ರಸನ್ನೇದೇವ ದೇವೇಶೇ ಕೇಶವೇ ಭಕ್ತವತ್ಸಲೇ ॥ ... ಇತಿ ಸಮು (33-141)
ಭಕ್ತವತ್ಸಲನಾದ ದೇವ ದೇವನಾದ ಕೇಶವನು ಪ್ರಸನ್ನನಾದರಿಂದ, ಚರಾಚರಗಳೆಲ್ಲವೂ ಅವನಿಗೆ ಪ್ರಸನ್ನಗಳಾದವು. ಎಲ್ಲವೂ ಅನುಕೂಲವಾದವು ಎಂದು ತಾತ್ಪರ್ಯ.

7) ಭೋಕ್ತಾರಂ ಯಜ್ಞ ತಪಸಾಂ ಸರ್ವಲೋಕ ಮಹೇಶ್ವರಮ್ ।
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥
ಯಜ್ಞ ತಪಸ್ಸುಗಳಿಂದ ಆರಾಧ್ಯನು, ಸರ್ವಲೋಕಸ್ವಾಮಿ ಸರ್ವಭೂತಗಳಿಗೂ ಸ್ನೇಹಿತನು, ಕರ್ಮಯೋಗವು ನನ್ನ ಪೂಜಾ ರೂಪವಾದದ್ದು ಎಂದು ತಿಳಿದು ಅದನ್ನು ಅನುಷ್ಠಿಸುವವನು ಸುಖವನ್ನು ಪಡೆಯುತ್ತಾನೆ, ಎಂದು ಕೃಷ್ಣಪರಮಾತ್ಮನು ಹೇಳುತ್ತಾನೆ

1) ತಿರುಮಾಲೈ (3)– ಮೊಯ್ತ್ತವಲ್ ವಿನೈಯುಳ್ ನಿನ್ರುಮೂನ್ರೆಳುತ್ತುಡೈಯಪೇರಾಲ್,
ಕತ್ತಿರಬಂಧುಮನ್ರೇ ಪರಾಂಗತಿ ಕಂಡುಕೊಂಡಾನ್ ।
ಇತ್ತನೈಯಡಿಯರಾನಾರ್ಕ್ಕು ಇರಂಗುನಮ್ ಅರಂಗನಾಯ
ಪಿತ್ತನೈಪ್ಪೆತ್ತುಂ ಮಂದೋ ಪಿರವಿಯುಳ್ ಪಿಣಂಗು ಮಾರೇ ॥
ಬಹಳ ಪಾಪಗಳಿಂದ ಕೂಡಿದ ಕ್ಷತ್ರ ಬಂಧುವು "ಗೋವಿಂದ" ಎಂಬ ಭಗವನ್ನಾಮೋಚ್ಚಾರಣೆಯಿಂದ ಮೋಕ್ಷವನ್ನು ಪಡೆದನು. ಇಷ್ಟು ಮಾತ್ರ ಬಗವದ್ದಾಸ್ಯವನ್ನುವಹಿಸುವವರಿಗೆ ಅವರ ಅಪರಾಧಗಳನ್ನೆಲ್ಲಾ ಮರೆತು ಕೃಪೆ ಮಾಡುವ ನಮ್ಮ ರಂಗನಾಥನಾದ ಭಕ್ತವತ್ಸಲನನ್ನು ಪಡೆದು ಕೊಂಡ ಜನರು ಸಂಸಾರದಲ್ಲೇ ಇರುತ್ತಾರೆಯಲ್ಲಾ.

## ಅಥ ನಾರಾಯಣ ಪದಸ್ಥ ಚತುರ್ಥ್ಯರ್ಥಾನಾಹ

ಇನ್ನಾರಾಯಣ ಶಬ್ದತ್ತಿಲ್ ಚತುರ್ಥಿಯಾಲೇ ಸೋಲ್ ಶೊಲ್ಲಪ್ಪುಹುಹಿರ ವಾಕ್ಯಾರ್ಥಙ್ಗಳುಕ್ಕೇಡಾಹ ತಾದರ್ಥ್ಯಾದಿಹಳ್ ಕಾಟ್ಟಪ್ಪಡುಹಿನ್ರನ. ಸ್ಥೂಲಾನು ಸಂಧಾನತ್ತಿಲ್ ಚತುರ್ಥೀ ನಮಶ್ಶಬ್ದಯೋಗತ್ತಾಲುಮ್ ಕೊಳ್ಳಲಾಮ್ ; ಅಪ್ಪೋದಿಚ್ಚತುರ್ಥಿಕ್ಕು ಪ್ರಯೋಜನಾತಿಶಯ ಮಿಲ್ಲೈ.

1) ಷಷ್ಠ ಪಂಚದಶಾದ್ವರ್ಣಾ ತ್ಕೇವಲ ವ್ಯಂಜನೀಕೃತಾತ್ ।

ಉತ್ತರೋ ಮನ್ತ್ರಶೇಷಸ್ತು ಶಕ್ತಿರಿತ್ಯಸ್ಯ ಕಥ್ಯತೇ ॥" ಎನ್ಗೈಯಾಲೇ ಇದು ತಿರುಮನ್ತ್ರತ್ತಿಲ್ ಫಲಸಿದ್ಧಿ ಹೇತುವಾನ ಪ್ರದೇಶಮ್. ಯೋಜನಾ ವಿಶೇಷಙ್ಗಳಿಲ್ ಫಲಪ್ರಾರ್ಥನೈಯುಮ್ ಇವ್ವಿಡತ್ತಿಲೇಯಾಹಿರದು.

"ಅರ್ಥಾತ್ಪ್ರಕರಣಾಲ್ಲಿಂಗಾ ದೌಚಿತ್ಯಾದ್ದೇಶಕಾಲತಃ ।
ಶಬ್ದಾರ್ಥಾಃ ಪ್ರವಿಭಜ್ಯಂತೇ ನ ಶಬ್ದಾದೇವ ಕೇವಲಾತ್ ॥"

---

### "ನಾರಾಯಣಾಯ" ಎಂಬಲ್ಲಿ "ಆಯ" ಎಂಬ ಚತುರ್ಥಿ ವಿಭಕ್ತಿಗೆ ಅರ್ಥ,

ಅನಂತರ ನಾರಾಯಣಾಯ ಎಂಬಲ್ಲಿ ಚತುರ್ಥೀ ವಿಭಕ್ತಿಗೆ ಅರ್ಥವನ್ನು **ಇನ್ನಾರಾಯಣ ಶಬ್ದತ್ತಿಲ್** ಎಂದಾರಂಭಿಸಿ ತಿಳಿಸುತ್ತಾರೆ. ಈ ನಾರಾಯಣ ಶಬ್ದದಲ್ಲಿರುವ ಆಯ ಎಂಬ **ಚತುರ್ಥಿ** ವಿಭಕ್ತಿಯಿಂದ ಮುಂದೆ ಹೇಳಲ್ಪಡುವ ವಾಕ್ಯಾರ್ಥಗಳಿಗೆ ಅನುಸಾರವಾಗಿ ತಾದ್ಯರ್ಥ್ಯಾದಿಗಳು ತಿಳಿಸಲ್ಪಡುತ್ತವೆ. ಆದಿ ಶಬ್ದದಿಂದ ಸಂಪ್ರದಾನ ಚತುರ್ಥಿಯು ವಿವಕ್ಷಿತ. **ಸ್ಥೂಲಾನು ಸಂಧಾನತ್ತಿಲ್** ಇತ್ಯಾದಿ - ಸ್ಥೂಲಾನು ಸಂಧಾನದಲ್ಲಿ, ನಮಸ್ಸ್ವಸ್ತಿಸ್ವಾಹಾಸ್ವಧಾಲಂ ವಷಡ್ಯೋಗಾಚ್ಚ, ಎಂಬ ವ್ಯಾಕರಣ ಸೂತ್ರದ ಪ್ರಕಾರ ನಮ ಶ್ಶಬ್ದ ಯೋಗದಿಂದಲೂ **ಚತುರ್ಥಿ** ವಿಭಕ್ತಿಯು ಬರುತ್ತದೆ. ಈ ಸ್ಥೂಲಾನು ಸಂಧಾನದಲ್ಲಿ ಈ ಚತುರ್ಥಿಗೆ ಪ್ರಯೋಜನ ವಿಶೇಷ ವಿಲ್ಲ ಆದ್ದರಿಂದ ಪ್ರಯೋಜನಾತಿಶಯವುಳ್ಳ ಅರ್ಥವನ್ನೇ ಅಂಗಿಕರಿಸಬೇಕೆಂದು ಭಾವ. 1) **ಷಷ್ಠಪಂಚ ದಶಾದ್ವರ್ಣಾತ್** ಇತ್ಯಾದಿ–ಪ್ರಣವವನ್ನು ಬಿಟ್ಟು ನಕಾರದಿಂದ ಆರಂಭಿಸಿ ಣ" ಎಂಬ ಆರನೇ ವರ್ಣದ ಅನಂತರ ಬರುವುದು ಯ" ಆಯ " ಎಂಬಂದು. ಹಾಗೆಯೇ ನ್, ಅ, ಮ್, ಅ, ಇತ್ಯಾದಿ ವರ್ಣ ಗಣನೆಲ್ಲಿ ಹದಿನೈದನೇ ವರ್ಣವಾದ **ಕೇವಲ ವ್ಯಂಜನೀಕೃತಾತ್** ಸ್ವರವನ್ನು ಬಿಟ್ಟು ಕೇವಲ ವ್ಯಂಜನವಾದ ಣ್ ಎಂಬ ಅಕ್ಷರದ ನಂತರ ಬಂದಿರುವ "ಆಯ" ಎಂಬ ಮಂತ್ರ ಶೇಷವು, ಅಸ್ಯ ಈ ಅಷ್ಟಾಕ್ಷರ ಮಂತ್ರಕ್ಕೆ **ಶಕ್ತಿರಿತಿಕಥ್ಯತೇ**– ಫಲಸಿದ್ಧಿ ಹೇತು ಭೂತ ಸಾರಾಂಶವೆಂದು ಹೇಳಲ್ಪಡುತ್ತದೆ, ಎಂದು ಹೇಳಿರುವುದರಿಂದ ಇದು ತಿರುಮಂತ್ರದಲ್ಲಿ ಫಲ ಸಿದ್ಧಿ ಹೇತುವಾದ ಪ್ರದೇಶ. **ಯೋಜನಾ ವಿಶೇಷಂಗಳಿಲ್** ಇತ್ಯಾದಿ ಸರ್ವ ಯೋಜನೆಗಳಲ್ಲಿಯೂ ಫಲ ಪ್ರಾರ್ಥನೆಯು **ಇವ್ವಿಡತ್ತಿಲ್** ಈ ಶಬ್ದಾಂಶದಲ್ಲಿಯೇ ಉಂಟಾಗತಕ್ಕದ್ದು.

ಒಂದು ಚತುರ್ಥಿಗೆ ಯೋಜನಾ ಭೇದದಿಂದ, ತಾದರ್ಥ್ಯ ಸಂಪ್ರದಾನಾದ್ಯರ್ಥ ಭೇದಗಳನ್ನು ಹೇಳಲಾಗುವದೇ ಎಂದರೆ "**ಅರ್ಥಾತ್ ಪ್ರಕರಣಾಲ್ಲಿಂಗಾತ್**" ಎಂದಾರಂಭಿಸಿ ಸಮರ್ಥಿಸುತ್ತಾರೆ. ಅದಾಗಿ **ಅರ್ಥಾತ್**– ಪ್ರಯೋಜನ ವಿಶೇಷದಿಂದಲೂ, **ಪ್ರಕರಣಾತ್**–ಸಾಕಾಂಕ್ಷಪದ ಸಮಭಿವ್ಯಾಹಾರದಿಂದಲೂ, **ಲಿಂಗಾತ್**–ಅರ್ಥ ಸಾಮರ್ಥ್ಯದಿಂದಲೂ **ಔಚಿತ್ಯಾತ್**–ಯೋಗ್ಯತಾದಿಗಳಿಂದಲೂ, **ದೇಶಕಾಲತಃ**–ದೇಶಕಾಲಗಳಿಂದಲೂ, **ಶಬ್ದಾರ್ಥಾಃ ಪ್ರವಿಭಜ್ಯಂತೇ**–ಶಬ್ದಾರ್ಥಗಳು ಭಿನ್ನಗಳಾಗಿ ವಿಭಾಗ ಮಾಡಲ್ಪಡುತ್ತವೆ. **ಕೇವಲಾತ್ ಶಬ್ದಾದೇವ ನ**–ಕೇವಲ

---

2) ನಾರದೀಯ 1-59

ಎನ್ನಿರಪಡಿಯೇ ಒರು ಶಬ್ದತ್ತುಕ್ಕೇ ಪ್ರಕರಣಾದಿಹಳುಕ್ಕೀಡಾಹ ಅರ್ಥ ಭೇದಮ್ ಕೊಳ್ಳುಹೈ ಸರ್ವ ಸಮ್ಮತಮ್.

ಆಹೈಯಾಲೇ "ದೀಯಮಾನಾರ್ಥ ಶೇಷಿತ್ವಂ ಸಂಪ್ರದಾನಾರ್ಥ ಮಿಷ್ಯತೇ" ಇತ್ಯಾದಿಹಳಿರ್ಪ್ಪಡಿಯೇ ಪರಸ್ವತ್ವಾಪಾದನ ಮಿಲ್ಲಿಡತ್ತಿಲ್ ಕೂಡಾದಾಹಿಲುಮ್ ಈಶ್ವರನ್ ತನಕ್ಕು ಶೇಷಮಾನ ವಸ್ತುವೈತ್ತಾನೇ ರಕ್ಷಿತ್ತುಕ್ಕೊಳ್ಳುಂಪಡಿ ಸಮರ್ಪಿಕ್ಕಿರ ವಳ ವ್ಯಾಪ್ತ ವ್ಯಾಪಕ ಮನ್ತ್ರಙ್ಗಳಿಲ್ ಚತುರ್ಥಿಯೈ ಸಂಪ್ರದಾನಾರ್ಥೈಯಾಹ ಮಹಿರ್ಬುಧ್ನ್ಯನ್ ವ್ಯಾಖ್ಯಾನಂ ಪಣ್ಣಿನಾನ್.

1) "ನೀಚೀ ಭಾವೇನ ಸಂದ್ರೋಽತ್ಯಮಾತ್ಮನೋ ಯತ್ಸಮರ್ಪಣಮ್ ।
ವಿಷ್ಣ್ವಾದಿಷು ಚತುರ್ಥೀ ತತ್ ಸಂಪ್ರದಾನ ಪ್ರದರ್ಶಿನೀ ।

---

ಶಬ್ದ ಮಾತ್ರದಿಂದ ಅಲ್ಲ, ಎನ್ನಿರಪಡಿಯೇ ಇತ್ಯಾದಿ–ಎಂಬಂತೆ, ಒಂದು ಶಬ್ದಕ್ಕೇ ಪ್ರಕರಣಾದಿಗಳಿಗೆ ಅನುಗುಣವಾಗಿ ಅರ್ಥಭೇದವನ್ನು ಹೇಳುವುದು ಸರ್ವಸಮ್ಮತ.

ಆಹೈಯಾಲೇ ಇತ್ಯಾದಿ–ಆದ್ದರಿಂದ "ದೀಯಮಾನಾರ್ಥ ಶೇಷಿತ್ವಂ ಸಂಪ್ರದಾನತ್ವ ಮಿಷ್ಯತೇ"–ದಾನಮಾಡಲ್ಪಡುವ ವಸ್ತುವಿಗೆ ಶೇಷಿತ್ವವು (ದಾನವನ್ನು ಸ್ವೀಕರಿಸುವುದು)ಸಂಪ್ರದಾನತ್ವ, ಇತ್ಯಾದಿ ಹೇಳುವಂತೆ, ಪರಸ್ವತ್ವಾಪಾದನಂ ಇತ್ಯಾದಿ–ಭಗವಂತನಿಗೇ ಸೇರಿದ ವಸ್ತುವನ್ನು ಅವನಿಗೆ ಸಮರ್ಪಿಸುವುದೆಂಬದು ಸರಿಯಲ್ಲವಾದರೂ, ಈಶ್ವರನ್ ತನಕ್ಕು ಇತ್ಯಾದಿ–ಭಗವಂತನಿಗೆ ಶೇಷವಾದ ವಸ್ತುವನ್ನು ಅವನೇ ರಕ್ಷಿಸಿಕೊಳ್ಳುವಂತೆ ಸಮರ್ಪಿಸುವ ಆಕಾರವನ್ನು ಕುರಿತು ಈ ವ್ಯಾಪಕ ಮಂತ್ರಗಳಲ್ಲಿ ಚತುರ್ಥಿಯನ್ನು ಸಂಪ್ರದಾನ ಪರವಾಗಿ ಅಹಿರ್ಬುಧ್ನ್ಯನು ವ್ಯಾಖ್ಯಾನ ಮಾಡಿದನು. ಇದಾಗಿ ಸ್ವೀಯ ವಸ್ತುವನ್ನು ಸ್ವ ಸ್ವತ್ವ ನಿವೃತ್ತಿ ಪೂರ್ವಕ ಪರಸ್ವತ್ವಾಪಾದನವು ದಾನ ಶಬ್ದಾರ್ಥ. ಇಲ್ಲಿ ಸಮರ್ಪಣೀಯವಾದ ಸ್ವಾತ್ಮಾ ತನ್ನದಲ್ಲ. ಭಗವಂತನದು. ಆದ್ದರಿಂದ ದೀಯ ಮಾನತ್ವವು ಕೂಡದು ಹಾಗಿರುವಾಗ ನಾರಾಯಣಾಯ ಎಂಬಲ್ಲಿಯ ಚತುರ್ಥಿ ವಿಭಕ್ತಿಗೆ ಸಂಪ್ರದಾನಾರ್ಥ ಹೇಗೆ ಸರಿ ಹೋಗುತ್ತದೆ ಎಂಬುದು ಚೋದ್ಯ. ಇದಕ್ಕೆ ಸಮಾಧಾನವೇನೆಂದರೆ, ಆತ್ಮಾವಿಗೆ ಸ್ವೀಯತ್ವವು ಇಲ್ಲವಾದ್ದರಿಂದ ಮುಖ್ಯವಾದ ದೀಯಮಾನಾರ್ಥತ್ವವು ಸರಿಯಿಲ್ಲವಾದರೂ ರಕ್ಷಣೀಯವಾಗಿ ಸಮರ್ಪಣೀಯವು ಯುಕ್ತವಾದ್ದರಿಂದ ಸಂರಕ್ಷಣೀಯವಾಗಿ ಸಮರ್ಪಣೀಯ ವಸ್ತು ಶೇಷಿತ್ವ ರೂಪ ಗೌಣಾರ್ಥಾಭಿಪ್ರಾಯದಿಂದ ಅಹಿರ್ಬುಧ್ನ್ಯನು ವ್ಯಾಖ್ಯಾನ ಮಾಡಿರುತ್ತಾನಷ್ಟೇ.

ಅಹಿರ್ಬುಧ್ನ್ಯ ಸಂಹಿತೆಯಲ್ಲಿ ವಿಷ್ಣು ಶಬ್ದದಮೇಲೆ ಬಂದಿರುವ ಚತುರ್ಥಿಗೆ ಸಂಪ್ರದಾನ ಪರತ್ವವು ನೀಚೀ ಭಾವೇನ ಸಂದ್ರೋಽತ್ಯಮ್, ವಿಷ್ಣ್ವಾದಿಷು ಚತುರ್ಥಿ, ಇತ್ಯಾದಿಯಾಗಿ ಹೇಳಿರುವಾಗ ನಾರಾಯಣ ಪದದ ಮೇಲೆ ಬಂದಿರುವ ಚತುರ್ಥಿ ವಿಭಕ್ತಿಗೆ ಹೇಗೆ ಸಂಪ್ರದಾನಾರ್ಥವನ್ನು ಹೇಳಲು ಸಾಧ್ಯವೆಂದರೆ ಅದನ್ನು ವಿವರಿಸುತ್ತಾರೆ.

1) ನೀಚೀಭಾವೇನ ಸಂದ್ರೋಽತ್ಯಂ–ನೈಚ್ಯದಿಂದ ಪ್ರಕಾಶ್ಯಮಾನವಾದ ಆತ್ಮನೋಯತ್ಸಮರ್ಪಣಂ–ಆತ್ಮ ವಸ್ತುವನ್ನುಸಂರಕ್ಷಿಸಬೇಕಾಗಿಸಮರ್ಪಿಸಲ್ಪಡುವುದನ್ನು ವಿಷ್ಣ್ವಾದಿಷುಚತುರ್ಥಿ-ವಿಷ್ಣು ಮೊದಲಾದ ಶಬ್ದಗಳ ಮೇಲೆ ಬಂದಿರುವ ಚತುರ್ಥಿಯು ತತ್ಸಂಪ್ರದಾನ ಪ್ರದರ್ಶಿನೀ–ಆ ಸಂಪ್ರದಾನಕಾರಕವನ್ನು ತೋರಿಸಿಕೊಡುತ್ತದೆ. ಈ ವಚನದಲ್ಲಿ ವಿಷ್ಣ್ವಾದಿಷು– ಎಂದು ಹೇಳಿರುವ ಆದಿ ಶಬ್ದದಿಂದ ನಾರಾಯಣ, ವಾಸುದೇವಾದಿ ಶಬ್ದಗಳಮೇಲೆ ಬಂದಿರುವ ಚತುರ್ಥಿಯು ವ್ಯಾಖ್ಯಾನ ಮಾಡಲ್ಪಟ್ಟಿತು. ಅಂದರೆ ನಾರಾಯಣಾಯ ಎಂಬಲ್ಲಿ, ಆಯ ಎಂಬ ಚತುರ್ಥಿಗೂ ಸಂಪ್ರದಾನತ್ವವು ಅರ್ಥ.

---

1) ಅಹಿರ್ಬುಧ್ನ್ಯಸಂಹಿತೆ 52–35, 36,

ನೀಚೀ ಭೂತೋಽಹ್ಯಸಾವಾತ್ಮಾ ಯತ್ಸಂರಕ್ಷ್ಯತಯಾರ್ಪ್ಯತೇ ।
ತತ್ಸ್ವಾತ್ಮ ಇತ್ಯಪೇಕ್ಷಾಯಾಂ ವಿಷ್ಣವೇ ಸ ಕೀರ್ತ್ಯತೇ ॥"

ಎನ್ಗಿರ ವಚನತ್ತಿಲ್. "ವಿಷ್ಣ್ವಾದಿಷು" ಎನ್ಗೈಯಾಲೇ ನಾರಾಯಣಾದಿ ಶಬ್ದಙ್ಗಳಿಲ್ ಚತುರ್ಥಿ ಯುಮ್ ವ್ಯಾಖ್ಯಾನಂ ಪಣ್ಣಪ್ಪಟ್ಟದು.

ಮೂಲಮನ್ತ್ರೇ ನಕಾರಾದಿ ಸಪ್ತ ವರ್ಣಾರ್ಥಾನ್ ಪೂರ್ವಾಚಾರ್ಯೋಪದಿಷ್ಟಾನ್ ಸಂಗೃಹ್ಣಾತಿ.

ಇತ್ತಿರುಮನ್ತ್ರತ್ತಿಲ್ ನಕಾರಮ್ ಮುದಲಾನ ಏೞು ತಿರುವಕ್ಷರಙ್ಗಳುಕ್ಕುಮ್ ಪ್ರತ್ಯೇಕಂ ಮನ್ತ್ರ ಸ್ಮೃತಿಗಳಿಲ್ಸೊನ್ನ ವರ್ಥಙ್ಗಳೈ,

ನಾಯಕತ್ವಂ ಚ ಸರ್ವೇಷಾಂ ನಾಮನತ್ವಂ ಪರೇಪದೇ ।
ನಾಶಕತ್ವಂ ವಿರುದ್ಧಾನಾಂ ನಕಾರಾರ್ಥಃ ಪ್ರಕೀರ್ತಿತಃ ॥
ಮಙ್ಗಳತ್ವಂ ಮಹತ್ವಂಚ ಮಹನಂಚ ಕರೋತಿಯತ್ ।
ಆಶ್ರಿತಾನಾಂ ತತೋಜ್ಞೇಯೋ ಮಕಾರಾರ್ಥ ಸ್ತತೋ ಬುಧೈಃ ॥
ನಾಸ್ತಿಕ್ಯಹಾನಿ ರ್ನಿತ್ಯತ್ವಂ ಸೇತೃತ್ವಂಚ ಹರೇಃ ಪದೇ ।
ನಾಕಾರ ಸೇವಿನಾಂನೃಣಾಂ ಮನ್ತ್ರವಿದ್ಭಿಃ ಪ್ರಕೀರ್ತಿತಃ ॥

---

1) ನೀಚಿ ಭಾವೇನ ಸಂದ್ಯೋತ್ಯ ಮಾತ್ಮನೋ ಯತ್ಸಮರ್ಪಣಮ್।
ನೀಚೀ ಭೂತೋಽಹ್ಯಸಾವಾತ್ಮಾ ಯತ್ಸಂರಕ್ಷ್ಯತಯಾರ್ಪ್ಯತೇ॥
ಎಂಬಲ್ಲಿ ಸ್ವರೂಪ ಸಮರ್ಪಣ ವಿಶಿಷ್ಟವಾಗಿಯೇ ಭರ ಸಮರ್ಪಣವೂ ಮಾಡಲ್ಪಡತಕ್ಕದ್ದು ಎಂಬುದು ವಿವಕ್ಷಿತವು. ಅಭೂತ ತದ್ಭಾವೇಚ್ವಿ ಪ್ರತ್ಯಯವು 'ನೀಚೀ' ಎಂಬಲ್ಲಿ ಬಂದಿದೆ. ಸರ್ವಾತ್ಮರಿಗೂ ಭಗವಚ್ಛೇಷತ್ವವು ಸ್ವಾಭಾವಿಕವು. ಆದ್ದರಿಂದ ಆತ್ಮ ವಸ್ತುವಿಗೆ ಸ್ವರೂಪತಃ ಅಭೂತ ತದ್ಭಾವಾರ್ಥದಲ್ಲಿ ನೀಚೀ ಭಾವ ವಲ್ಲ. ಆದ್ದರಿಂದ ಅತತ್ವವಾಗಿ ತನ್ನನ್ನು ಸ್ವತಂತ್ರನೆಂದು ತಿಳಿದವನಿಗೆ ತತ್ತ್ವಾರ್ಥವಾಗಿ ಭಗವಚ್ಛೇಷತ್ವ ಜ್ಞಾನವು ಅಭೂತ ತದ್ಭಾವಾರ್ಥದಲ್ಲಿ ವಿವಕ್ಷಿತ. ತಾನು ಸ್ವತಂತ್ರನಲ್ಲದೆ ಭಗವಂತನಿಗೆ ಶೇಷಭೂತನು ಎಂಬ ಅರ್ಥವನ್ನು ಪ್ರಕಾಶ ಪಡಿಸುವ ಸಮರ್ಪಣವು, ಅವನಿಂದಲೇ ಜೀವಾತ್ಮಾ ಸಂರಕ್ಷ್ಯನು. ಅದಕ್ಕೋಸ್ಕರ ರಕ್ಷಣಾರ್ಥವಾದ ಸಮರ್ಪಣವು ಎಂಬುದನ್ನು ವಿವರಿಸುತ್ತದೆ ಎಂದು ತಾತ್ಪರ್ಯ

### ಅಷ್ಟಾಕ್ಷರದ ಅಕ್ಷರಗಳ ಅರ್ಥ ನಿರೂಪಣೆ.

**ಇತ್ತಿರು ಮಂತ್ರತ್ತಿಲ್** ಎಂದಾರಂಭಿಸಿ ಈದಿವ್ಯ ಮಂತ್ರದಲ್ಲಿ ನಕಾರದಿಂದ ಆರಂಭಿಸಿ ಏಳು ದಿವ್ಯಅಕ್ಷರಗಳಿಗೂ ಪ್ರತ್ಯೇಕವಾಗಿ ಮಂತ್ರಸ್ಮೃತಿಗಳಲ್ಲಿ ಹೇಳಿದ ಅರ್ಥಗಳನ್ನು **ನಾಯಕತ್ವಂಚ ಸರ್ವೇಷಾಂ** ಎಂದಾರಂಭಿಸಿ ಪೂರ್ವಾ ಚಾರ್ಯರುಗಳು ನಿರೂಪಿಸಿರುತ್ತಾರೆ, ನಕಾರಾರ್ಥಃ–ನಕಾರಕ್ಕೆ ಅರ್ಥವು, 1) ಸರ್ವೇಷಾಂ–ಎಲ್ಲಾ ಶ್ರೇಯಸ್ಸುಗಳಿಗೂ, ನಾಯಕತ್ವಂಚ– ಪ್ರಾಪಕತ್ವವೂ, ಪರೇ ಪದೇ– ಪರಮ ಪದದಲ್ಲಿ, ನಾಮನಂ- ಭಗವತ್ಪ್ರಾವಣ್ಯ ಜನಕತ್ವವೂ, ವಿರುದ್ಧಾನಾಂ ವಿರುದ್ಧವಾದ ಅನಾತ್ಮ ಗುಣಗಳಿಗೆ **ನಾಶಕತ್ವಂ**- ನಿವರ್ತಕತ್ವವು, **ಪ್ರಕೀರ್ತಿತಃ**– ಹೇಳಲ್ಪಟ್ಟಿದೆ. ಮಕಾರಾರ್ಥಃ– ಮಕಾರಾರ್ಥವು, ಮಂಗಳತ್ವಂ– ಮಂಗಳ ಕರತ್ವವನ್ನೂ, ಮಹತ್ವಂಚ- ಧರ್ಮಭೂತ ಜ್ಞಾನ ವಿಕಾಸವನ್ನೂ, ಮಹನಂ– ಪೂಜನವನ್ನೂ. ಉಂಟು ಮಾಡುವುದಾಗಿ ಪಂಡಿತರಿಂದ ಹೇಳಲ್ಪಡುತ್ತದೆ. **ನಾಕಾರ ಸೇವಿನಾಂ ನೃಣಾಂ**– ನಾರಾಯಣ ಪದದಲ್ಲಿಯ, ನಾಕಾರವನ್ನು ಜಪಿಸುವವರಿಗೆ, **ನಾಸ್ತಿಕ್ಯಹಾನಿ** ನಾಸ್ತಿಕ್ಯವನ್ನು ಹೋಗಲಾಡಿಸುವುದು, ನಿತ್ಯತ್ವಂ- ಭಗವತ್ಸೇವಾ ನಿರತತ್ವವ, ಹರೇಃ ಪದೇ ಸೇತೃತ್ವಂಚ– ಪರಮ ಪದವನ್ನು ಪ್ರಾಪಿಸುವುದೂ, ಮಂತ್ರವಿದ್ಭಿಃ ಪ್ರಕೀರ್ತಿತಃ- ಮಂತ್ರವನ್ನು ಅರಿತವರಿಂದ ಹೇಳಲ್ಪಟ್ಟಿದೆ.

---

1) ಅಹಿರ್ಬುಧ್ನ್ಯಸಂಹಿತೆ 52-35-36

ರಂಜನಂ ಭಗವತ್ಯಾಶು ರಾಗಹಾನಿ ಸ್ತತೋ ನ್ಯತಃ ।
ರಾಷ್ಟ್ರತ್ರಾಣಾದಿಕಂ ಚಾಪಿ ಪ್ರಾಪ್ಯತೇ ರೇಫ ಸೇವಯಾ॥
ಯೋಗೋದ್ಯೋಗಃ ಫಲಂಚಾಶು ಯಕಾರಾತ್ಪ್ರಾಪ್ಯತೇ ಬುಧೈಃ ।
ವರ್ಣನಂಚ ತಥಾ ವಿಷ್ಣೋರ್ವಾಣೀ ಸಿದ್ಧಿರ್ಣಕಾರತಃ ॥
ಯಕ್ಷರಾಕ್ಷಸ ವೇತಾಳ ಭೂತಾದೀನಾಂ ಭಯಾಯ ಯಃ ।
ಏವ ಮಕ್ಷರ ನಿರ್ವಾಹೋ ಮನ್ತ್ರವಿದ್ಭಿಃ ಪ್ರಕೀರ್ತಿತಃ ॥" ಇತ್ಯಾದಿಹಳಾಲೇ ಶಿಲ ವಾಚಾರ್ಯರ್ಹಳ್ ಸಂಗ್ರಹಿತ್ತಾರ್ಹಳ್.

ಇಪ್ಪಡಿ ಇಪ್ಪದಙ್ಗಳಿನುಡೈಯ ವ್ಯಾಕರಣ ನಿರುಕ್ತ್ಯಾದಿ ಸಿದ್ಧವ್ಯುತ್ಪತ್ತಿ ಪರಾಮರ್ಶತ್ತಾಲೇ ಪರವಾದಿ ಮೂಲಮಾಹವರುಮ್ ಮಾಶರವಿಳಕ್ಕಪ್ಪಟ್ಟ ತಿರುಮನ್ತ್ರಮಾಹಿರ ಕಣ್ಣಾಡಿ ಪರಸ್ವರೂಪಾದಿಹಳೈಯುಮ್, ಸ್ವಸ್ವರೂಪತ್ತಿಲ್ ಕಾಣವರಿಯ ನಿಲಙ್ಗಳೈಯುಮೆಲ್ಲಾಮ್ ಸುವ್ಯಕ್ತಮಾಹಕ್ಕಾಟ್ಟುಮ್.

ಮೂಲಮನ್ತ್ರೇ ಅನುಸನ್ಧೇಯ ಭಗವತ್ಸ್ವರೂಪಸ್ವಭಾವಕಥನಮ್,

ಇದುಕ್ಕು ಪ್ರತಿಪಾದ್ಯ ದೇವತೈಯಾಯ್ ಪ್ರಾಪ್ಯಮುಮಾನ ಪರಸ್ವರೂಪತ್ತೈ ಇತ್ತಿರುಮನ್ತ್ರ

---

**ರೇಫ ಸೇವಯಾ**– ರ' ಎಂಬ ಅಕ್ಷರವನ್ನು ಜಪಿಸುವವರಿಗೆ, **ರಂಜನಂ ಭಗವತ್ಯಾಶು** – ಭಗವಂತನಲ್ಲಿ ಶೀಘ್ರವಾಗಿ ಪ್ರೀತಿಯೂ- **ರಾಗಹಾ ನಿಸ್ತತೋನ್ಯತಃ**– ಇತರ ವಿಷಯಗಳಲ್ಲಿ ಆಸೆ ಇಲ್ಲದಿರುವುದೂ, **ರಾಷ್ಟ್ರತ್ರಾಣಾದಿಕಂ ಚಾಪಿ**– ರಾಷ್ಟ್ರ ಪರಿಪಾಲನವೂ, ರಾಷ್ಟ್ರವಾಸಿ ಜನಗಳಿಂದ ಸಮ್ಮಾನವೂ, **ಪ್ರಾಪ್ಯತೇ** ಹೊಂದಲ್ಪಡುತ್ತದೆ. **ಯಕಾರಾತ್** ಯಕಾರದಿಂದ **ಯೋಗೋದ್ಯೋಗಃ**–ಭಕ್ತಿಯೋಗದಲ್ಲಿ ತ್ವರೆಯೂ, **ಫಲಂಚಾಶು** ಅದರ ಫಲವಾದ ಭಗವತ್ಪ್ರಾಪ್ತಿಯೂ, ಶೀಘ್ರವಾಗಿ, **ಪ್ರಾಪ್ಯತೇ ಬುಧೈಃ**- ಪಂಡಿತರಿಂದ ಹೊಂದಲ್ಪಡುತ್ತದೆ. **ವರ್ಣನಂಚ ವಿಷ್ಣೋಃ**– ವಿಷ್ಣು ಸ್ತುತಿಯೂ, **ತಥಾ ವಾಣೀಸಿದ್ಧಿಃ**–ಸ್ತೋತ್ರಕ್ಕೆ ಉಚಿತವಾದ ವಾಕ್ಸಿದ್ಧಿಯೂ **ಣಕಾರತಃ**– ಣ ಕಾರಸೇವೆಯಿಂದ ಉಂಟಾಗುತ್ತದೆ. **ಯಃ**– ಯಕಾರವು **ಯಕ್ಷ ರಾಕ್ಷಸ ವೇತಾಳ ಭೂತಾದೀನಾಂ** ಯಕ್ಷರು, ರಾಕ್ಷಸರು, ಪಿಶಾಚಗಳು ಭೂತಗಳೇ ಮೊದಲಾದವರಿಗೆ **ಭಯಾಯ**– ಭಯವನ್ನುಂಟುಮಾಡುತ್ತದೆ. ಅಂದರೆ ಯಕಾರವನ್ನು ಜಪಮಾಡುವುದರಿಂದ ಯಕ್ಷಾದಿಗಳಿಗೆ ಭಯವನ್ನುಂಟುಮಾಡುತ್ತದೆ. **ಏವಮಕ್ಷರನಿರ್ವಾಹಃ** ಇತ್ಯಾದಿ– ಹೀಗೆ ಅಕ್ಷರದ ನಿರ್ವಾಹಾರ್ಥವು ಮಂತ್ರವನ್ನು ತಿಳಿದವರಿಂದ ಹೇಳಲ್ಪಟ್ಟಿದೆ; **ಇತ್ಯಾದಿ ಹಳಿಲೇ** ಇತ್ಯಾದಿ ಶ್ಲೋಕಗಳಿಂದ ಕೆಲವು ಆಚಾರ್ಯರುಗಳು ಅಷ್ಟಾಕ್ಷರದ ಪ್ರತಿಯೊಂದು ಅಕ್ಷರಕ್ಕೂ ಅರ್ಥವನ್ನು ಸಂಗ್ರಹಿಸಿ ಹೇಳಿರುತ್ತಾರೆ –

**ಅಷ್ಟಾಕ್ಷರವು ಭಗವತ್ಸರೂಪವನ್ನೂ ಜೀವ ಸ್ವರೂಪವನ್ನೂ ತಿಳಿಸುತ್ತದೆ**

ಇಪ್ಪಡಿ ಇಪ್ಪದಂಗಳಿನುಡೈಯ ಇತ್ಯಾದಿ–ಹೀಗೆ ಈ ಪದಗಳಿಗೆ ವ್ಯಾಕರಣ, ನಿರುಕ್ತಿ ಮೊದಲಾದ ವ್ಯುತ್ಪತ್ತಿ ಸಿದ್ಧವಾದ ಅರ್ಥಗಳ ಪರಾಮರ್ಶದಿಂದ ಪರವಾದಿಗಳ ಮೂಲಕ ಉಂಟಾಗುವ ನಾಶು– ಜೀವ ಪರೈಕ್ಯಾದಿಗಳು ಅರ– ನಿವೃತ್ತವಾಗುವಂತೆ ವಿಳಕ್ಕಪ್ಪಟ್ಟ ವಿವರವಾಗಿ ತಿಳಿಸಲ್ಪಟ್ಟ, ಚೊಕ್ಕಟವಾಗಿ ಒರೆಸಲ್ಪಟ್ಟ, ತಿರು ಮಂತ್ರವೆಂಬ ಕನ್ನಡಿಯು ಪರ ಸ್ವರೂಪ ಗುಣ ವಿಗ್ರಹಗಳನ್ನೂ ಸ್ವ ಸ್ವರೂಪತ್ತಿಲ್- ಜೀವ ಸ್ವರೂಪದಲ್ಲಿ ಕಾಣವರಿಯ ನಿಲಂ ಗಳೈಯೆಲ್ಲಾಮ್ ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯಲ್ಪಡದೆ, ಇರುವ ಭಾಗಗಳನ್ನೆಲ್ಲಾ ಸುವ್ಯಕ್ತವಾಗಿ ತೋರಿಸುತ್ತದೆ. ಈ ಮಂತ್ರವು ಪರಸ್ವರೂಪವನ್ನೂ ಗುಣ ವಿಗ್ರಹಾದಿಗಳನ್ನೂ ತೋರಿಸುವ ಪ್ರಕಾರವನ್ನು ಪ್ರಥಮಾಕ್ಷರ ದಿಂದ ಹಿಡಿದು ಕ್ರಮವಾಗಿ ಆಚಾರ್ಯರು ತೋರಿಸುತ್ತಾರೆ. ಅದಾಗಿ–

ಇದುಕ್ಕು ಪ್ರತಿಪಾದ್ಯ ದೇವತೈಯಾಯ್ ಇತ್ಯಾದಿ– ಈ ಮಂತ್ರಕ್ಕೆ ಪ್ರತಿ ಪಾದ್ಯ ದೇವತೆಯಾಗಿ

**ತ್ತಿಲ್ ಶಾಬ್ದಙ್ಗಳಾಯುಮ್. ಅರ್ಥಙ್ಗಳಾಯುಮುಳ್ಳ ಪ್ರಕಾರಙ್ಗಳೊಡೇ ಕೂಡ ಯಥಾಪ್ರಮಾಣಂ ಅನುಸಂಧಿಕ್ಕುಂ ಪೋದು, ರಕ್ಷಕತ್ವಮ್, ಅದಿನುಡೈಯ ಸ್ವಭಾವಸಿದ್ಧತ್ವಮ್, ಅದಿನ್ ಸರ್ವವಿಷಯತ್ವಮ್, ರಕ್ಷ್ಯವಸ್ತು ವಿಶೇಷಾನುರೂಪಮಾಹ ರಕ್ಷೈಯಿನುಡೈಯ ಸರ್ವದಾ ರಕ್ಷಕತ್ವಮ್, ಸರ್ವತ್ರ ರಕ್ಷಕತಮ್ ಸರ್ವಪ್ರಕಾರ ರಕ್ಷಕತ್ವಮ್, ಸ್ವಾರ್ಥ ರಕ್ಷಕತ್ವಮ್, ಸರ್ವರಕ್ಷಕತ್ವಾಪೇಕ್ಷಿತಮಾನ ಸರ್ವಜ್ಞತ್ವಮ್. ಸರ್ವಶಕ್ತಿತ್ವಮ್, ಸ್ವೇಚ್ಛಾವ್ಯತಿರಿಕ್ತಾನಿವಾರ್ಯತ್ವಮ್, ಅನತಿಕ್ರಮಣೀಯ ರಕ್ಷಣ ಸಂರಂಭತ್ವಮ್, ಪರಮಕಾರುಣಿಕತ್ವಮ್, ಅವಸರ ಪ್ರತೀಕ್ಷತ್ವಮ್, ವ್ಯಾಜಮಾತ್ರ ಸಾಪೇಕ್ಷತ್ವಮ್. ಆಶ್ರಿತ ಸುಲಭತ್ವಮ್, ವಿಶ್ವಸನೀಯತ್ವಮ್, ಸಾಪರಾಧ ಘಟನಾದ್ಯನುಗುಣ ವಿಶೇಷಣವತ್ವಮ್, ಶೇಷಿತ್ವಮ್, ಅದಿನುಡೈಯ ನಿರು**

---

ಪಾಧ್ಯ ವಾಗಿಯೂ ಇರುವ ಪರ ಸ್ವರೂಪವನ್ನು ಈ ಮಂತ್ರದಲ್ಲಿ ಶಬ್ದ ಮೂಲವಾಗಿಯೂ ಅರ್ಥ ಮೂಲವಾಗಿಯೂ ಇರುವ ಪ್ರಕಾರಗಳೊಡನೆ ಯಥಾ ಪ್ರಮಾಣವಾಗಿ ಅನು ಸಂಧಾನಮಾಡುವಾಗ "ಅಕಾರದಿಂದ" ಲಬ್ಧವಾದ ಹದಿನೆಂಟು ಗುಣಗಳನ್ನು ತಿಳಿಯಪಡಿಸುತ್ತಾರೆ. ಆದಾಗಿ–**ರಕ್ಷಕತ್ವಮ್** ಅವ ರಕ್ಷಣೆ ಎಂಬ ಧಾತುವಿನಿಂದ ಏರ್ಪಟ್ಟ ಅರ್ಥ· ಮುಂದೆ ಜೀವ ಸ್ವರೂಪವನ್ನು ಹೇಳುವಾಗ ಶ್ರೀ ಮದ್ರಕ್ಷ್ಯತ್ವಮ್ ಎಂದು ಹೇಳಿರುವಂತೆ, ಇಲ್ಲಿಯೂ ರಕ್ಷಕತ್ವವು ಶ್ರೀ ವಿಶಿಷ್ಟನಾದ ಭಗವಂತನ ವ್ಯಾಪಾರವೆಂಬುದು ಭಾವ. ಸಾಪರಾಧರಾದ ಜೀವರಿಗೆ ಘಟಕಳಾಗಿ ಪುರುಷಾಕಾರ ಭೂತೆಯಾದ್ದರಿಂದ ಶ್ರೀ ವಿಶೇಷಣವು ಎಂಬುದು ಇಲ್ಲಿ ದ್ಯೋತಿತವಾದರೂ ಪ್ರಪತ್ತಿಗೆ ದಿವ್ಯ ಮಿಥುನೋದ್ದೇಶ್ಯತ್ವವು ವಿಶಿಷ್ಟ ತತ್ವಾಪೇಕ್ಷೆಯಿಂದ ಸುವಚವು. **ಅದಿನುಡೈಯ ಸ್ವಭಾವಸಿದ್ಧತ್ವಮ್**– ಉಪಾಧಿಯಿಲ್ಲದ ಆ ರಕ್ಷಕತ್ವವು ಸ್ವಾಭಾವಿಕವು. **ಅದಿನ್ ಸರ್ವವಿಷಯಕತ್ವಮ್**– ಸಂಕೋಚವಿಲ್ಲದೇ ಇರುವುದರಿಂದ ಸರ್ವರನ್ನು ರಕ್ಷಿಸುತ್ತಾನೆಂದರ್ಥ. **ರಕ್ಷ್ಯವಸ್ತು** ಇತ್ಯಾದಿ- ಬದ್ಧ ಮುಕ್ತ ನಿತ್ಯರುಗಳ ವೈಲಕ್ಷಣ್ಯಕ್ಕೆ ಅನುಗುಣವಾಗಿ ರಕ್ಷೆಯು ನಾನಾ ಪ್ರಕಾರವಾಗಿರುತ್ತದೆ. **ಸರ್ವದಾ ರಕ್ಷಕತ್ವಮ್**- ಕಾಲವನ್ನು ಕುರಿತು ಹೇಳಿಲ್ಲ ವಾದ್ದರಿಂದ ಸರ್ವ ಕಾಲದಲ್ಲಿಯೂ ರಕ್ಷಿಸುತ್ತಾನೆಂದರ್ಥ. **ಸರ್ವತ್ರರಕ್ಷಕತ್ವಮ್**– ದೇಶವನ್ನು ಕುರಿತು ಹೇಳದಿರುವುದರಿಂದ ಸರ್ವ ದೇಶಗಳಲ್ಲಿಯೂ ರಕ್ಷಿಸುತ್ತಾನೆ. **ಸರ್ವ ಪ್ರಕಾರ ರಕ್ಷಕತ್ವಮ್** ಪ್ರಕಾರ ವಿಶೇಷವನ್ನು ನಿಗದಿ ಮಾಡಿ ಹೇಳದಿರುವುದರಿಂದ ಸರ್ವ ಪ್ರಕಾರಗಳಲ್ಲಿಯೂ ರಕ್ಷಿಸುವವನು, **ಸ್ವಾರ್ಥ ರಕ್ಷಕತ್ವಮ್** – ಆಶ್ರಿ ರಕ್ಷಣವು ಪ್ರಧಾನ ಫಲಿಯಾದ ತನ್ನ ಪ್ರಯೋಜನಕ್ಕಾಗಿ ಏರ್ಪಟ್ಟಿರುವುದು. ಹೀಗೆ ಸರ್ವರನ್ನೂ ರಕ್ಷಿಸಲು ಅಪೇಕ್ಷಿತನಾದ ಗುಣಗಳನ್ನು ಅನಂತರ **ಸರ್ವಜ್ಞತ್ವಮ್,** ಎಂದಾರಂಭಿಸಿ ತಿಳಿಸುತ್ತಾರೆ **ಸರ್ವಜ್ಞತ್ವಮ್** ಇತ್ಯಾದಿ–ಸರ್ವಜ್ಞತ್ವವು ಸರ್ವ ಶಕ್ತಿತ್ವವು ಸ್ವೇಚ್ಛೆಯು ವಿನಹ ಬೇರೆ ಯಾವ ಕಾರಣದಿಂದಲೂ ರಕ್ಷಣೆಯನ್ನು ನಿವಾರಿಸಲಾಗದಿರುವುದು, ರಕ್ಷಿಸ ಬೇಕೆಂದು ಮಾಡಿದ ಸಂರಂಭ– ಪ್ರತಿಜ್ಞೆಯನ್ನು ತಾನು ಮೀರದಿರುವುದು, **ಪರಮ** ಕಾರುಣಿಕತ್ವಮ್–ರಕ್ಷಣಕ್ಕೆ ಅವಶ್ಯವಾಗಿ ಬೇಕಾದ ಗುಣವು ಪರದುಃಕಾಸಹಿಷ್ಣು ಶೀಲನಾಗಿರುವುದು. ಇದರ ಕಾರ್ಯವು **ಅವಸರ ಪ್ರತೀಕ್ಷತ್ವವು** –ಸಕಾಲವನ್ನು ಎದುರು ನೋಡುತ್ತಿರುವುದು **ಸಾಪರಾಧ ಘಟನಾದ್ಯನುಗುಣ ವಿಶೇಷಣವತ್ವಮ್** – ಸಾಪರಾಧರಾದ ಜೀವರನ್ನು ಕರೆತಂದು ಭಗವಂತನು ಅನುಗ್ರಹಿಸುವಂತೆ ಶಿಫಾರಸ್ ಮಾಡತಕ್ಕಂಥಹ ಲಕ್ಷ್ಮೀ ವಿಶೇಷಣವತ್ವವು, **ಘಟನಾದ್ಯನುಗುಣ** ಎಂಬಲ್ಲಿಯ ಆದಿಶಬ್ದದಿಂದ ಉಪಾಯ ವಿರೋಧಿನಿವರ್ತಕತ್ವವೂ ಪ್ರಾಪ್ತಿವಿರೋಧಿ ಪಾಪ ನಿವರ್ತಕತ್ವವೂ ವಿವಕ್ಷಿತ.

ಅನಂತರ ಲುಪ್ತ ಚತುರ್ಥಿಯಲ್ಲಿ ಅನು ಸಂಧಾನ ಮಾಡತಕ್ಕ ಹನ್ನೊಂದು ಗುಣಗಳನ್ನು **ಶೇಷಿತ್ವಮ್,** ಎಂದಾರಂಭಿಸಿ ತೋರಿಸಿಕೊಡುತ್ತಾರೆ. ಶೇಷಿತ್ವಮ್–ಸ್ವಾಮಿತ್ವವು ಇದು ಚತುರ್ಥ್ಯರ್ಥವಾದ ಶೇಷತ್ವ ಪ್ರತಿ ಸಂಬಂಧದಿಂದ ಏರ್ಪಟ್ಟ ಅರ್ಥ. **ಅದಿನುಡೈಯ ನಿರುಪಾಧಿಕತ್ವ**–ನಿತ್ಯತ್ವ ಸರ್ವ ವಿಷಯತ್ವಂಗಳ್ ಈ ಶೇಷಿತ್ವಕ್ಕೆ ಉಪಾಧಿಯು–ಕಾರಣವು, ಇಲ್ಲ. ಕಾಲ ವ್ಯವಸ್ಥೆಯಿಲ್ಲದೆ ನಿತ್ಯವು. ವಿಷಯ ಪರಿಚ್ಛಿತ್ತಿಯಿಲ್ಲದೆ ಚೇತನಾ ಚೇತನಾ

ಜಾಧಿಕತ್ವ ನಿತ್ಯತ್ವ ಸರ್ವವಿಷಯತ್ವಙ್ಗಳ್, ಅನನ್ಯ ಶೇಷಿತ್ವಮ್, ಗುಣಕೃತ ಶೇಷಿತ್ವಮ್, ಸಪತ್ನೀಕ ಶೇಷಿತ್ವಮ್, ಸಮಾಭ್ಯಧಿಕರಾಹಿತ್ಯಮ್, ಆತ್ಮಹವಿರುದ್ದೇಶಾರ್ಹತ್ವಮ್, ಅಚಿದ್ಬದ್ಧಮುಕ್ತ ನಿತ್ಯವಿಲಕ್ಷಣ ತ್ವಮ್, ಪರಶೇಷಿತ್ವಹೇತುತ್ವಮ್,

ಅಥ ಮಕಾರೇ ನಮಸಿಚ ಜೀವಸ್ವರೂಪ ಕಥನೇನ ವಿಂಶತಿಗುಣಾನಾಹ.

ಸ್ವತಃ ಕರ್ತೃತ್ವಮ್, ಶಕ್ತ್ಯಾಧಾಯಕತ್ವಂ, ಪ್ರೇರಕತ್ವಮ್, ಅನನ್ಯ ಪ್ರೇರ್ಯತ್ವಮ್, ಅನುಮನ್ತೃತ್ವಂ. ಕರ್ಮಸಾಕ್ಷಿತ್ವಂ, ಸಹಕಾರಿತ್ವಮ್, ಪ್ರಿಯಪ್ರವರ್ತಕತ್ವಮ್, ಹಿತಪ್ರವರ್ತಕತ್ವಮ್,

---

ತ್ಮಕ ಸಮಸ್ತ ವಸ್ತುಗಳಿಗೂ ಶೇಷಿ ಭಗವಂತ. ಅನನ್ಯ ಶೇಷಿತ್ವಮ್ – ಅನ್ಯ ನಿರೂಪಿತ ಶೇಷತ್ವ ಶೂನ್ಯನಾಗಿ ಅನನ್ಯನಾದ ಭಗವಂತನ ಸರ್ವ ಶೇಷಿತ್ವವು ಎಂದರ್ಥ. **ಗುಣಕೃತ ಶೇಷಿತ್ವಮ್**–ಈ ಶೇಷಿತ್ವವು ಸ್ವರೂಪ ಶೇಷಿತ್ವದ ಹಾಗೆ ಗುಣ ಕೃತವೂ ಆಹುದು. ಅನನ್ಯ ಶೇಷತ್ವಮ್ ಎಂಬ ಪಾಠದಲ್ಲಿ "ನತಸ್ಯೇಶೇಕಶ್ಚನ' ಎಂಬ ಶ್ರುತಿಯಪ್ರಕಾರ ಬೇರೆ ಯಾರಿಗೂ ಶೇಷನಲ್ಲದೆ ಸರ್ವೋತ್ಕೃಷ್ಟನು ಎಂದರ್ಥ. ಹಾಗೆಯೇ "ಗುಣಕೃತಶೇಷತ್ವಮ್" ಎಂಬ ಪಾಠವಾದರೆ ಸ್ವಾತಂತ್ರ್ಯದಿಂದಲೂ ಕಾರುಣ್ಯದಿಂದಲೂ ದಶರಥ ವಸುದೇವ ಪಾಂಡವಾದಿಗಳಿಗೆ ಅಧೀನನಾಗಿರುವುದು ಸೂಚಿತ. **ಸಪತ್ನೀಕ ಶೇಷಿತ್ವಮ್**–ಇದು ಸಪತ್ನೀಕನಿಗೆ ಏರ್ಪಟ್ಟ ಜಗನ್ನಿರೂಪಿತ ಉಭಯಾಧಿಷ್ಠಾನ ಶೇಷಿತ್ವ. ಇಲ್ಲಿ ಸಪತ್ನೀಕ ಎಂಬ ವಿಶೇಷ ಸೂಕ್ತಿಯಿಂದ ಇತರ ಗುಣಗಳಲ್ಲಿ ಪತ್ನಿಗೆ ಅನ್ವಯವಿಲ್ಲವೆಂದು ತಿಳಿಯಲ್ಪಡುತ್ತದೆಯೆಂದು ಭ್ರಮಿಸಬಾರದು. ನಿರುಪಾಧಿಕ ಶೇಷ ಶೇಷಿ ಭಾವವು ಇತರ ಎಲ್ಲಾ ಗುಣಗಳಿಗಿಂತ ಬ್ರಹ್ಮವಿದ್ಯಾಧಿಕಾರ, ತದನುಷ್ಠಾನ, ತತ್ಫಲ ಕೋಟಿಯಲ್ಲಿ ವಿಶೇಷತಃ ಉಪಯೋಗವಾದ್ದರಿಂದ ಆದರಿಂದಲೇ ರಕ್ಷಕತ್ವಾದಿಗಳು ನಿರುಪಾಧಿಕಗಳೆಂದು ಸಿದ್ಧಿಸುವುದರಿಂದ ಸರ್ವಶೇಷಿತ್ವವು ಸಪತ್ನೀಕನಿಷ್ಠವೆಂದು ವಿಶೇಷೋಕ್ತಿಗೆ ತಾತ್ಪರ್ಯ **ಸಮಾಭ್ಯಧಿಕ ರಾಹಿತ್ಯಮ್**–ಸರ್ವ ಶೇಷಿಯಾದ್ದರಿಂದ ತನಗೆ ಸಮನೋ ಅಧಿಕನೋ ಇಲ್ಲದಿರುವವನು. **ಆತ್ಮಹವಿರುದ್ದೇಶಾರ್ಹತ್ವಮ್** ಆತ್ಮಾವೆಂಬ ಹವಿಸ್ಸಮರ್ಪಣಕ್ಕೆ ಉದ್ದೇಶ್ಯ ನಾಗಿರುವವನು. **ಅಚಿತ್ಬದ್ಧ ಮುಕ್ತ ನಿತ್ಯ ವಿಲಕ್ಷಣತ್ವಂ**- ಅಚೇತನವಾದ ಪ್ರಕೃತಿ ತ್ರಿವಿಧ ಜೀವರುಗಳು ಇವರುಗಳಿಗಿಂತ ಬೇರೆ ಪಟ್ಟವನು. **ಪರ ಶೇಷಿತ್ವ ಹೇತುತ್ವಮ್** ಇತರರುಗಳ ಸೋಪಾಧಿಕವಾದ ಶೇಷಿತ್ವಕ್ಕೆ ಕಾರಣ ಭೂತನು. ಈ ಮೂರು ಗುಣಗಳಿಗೂ ಸರ್ವ ಶೇಷಿತ್ವವು ಹೇತು.

ಅನಂತರ ಪ್ರಣವ ನಮಸ್ಸು ಗಳಲ್ಲಿರುವ 'ಮ' ಕಾರದಿಂದ ಜೀವನಿಗೆ ಕರ್ತೃತ್ವ ಭೋಕ್ತೃತ್ವಗಳು ಸಿದ್ಧಿಸುವುದರಿಂದ ಭಗವಂತನಲ್ಲಿ ಫಲಿಸಿದ ಗುಣಗಳನ್ನು **ಸ್ವತಃ ಕರ್ತೃತ್ವಮ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ ಜೀವನಲ್ಲಿರುವ ಪರಾಧೀನ ಕರ್ತೃತ್ವಕ್ಕೆ ಎದುರಾಗಿ ಭಗವಂತನಿಗೆ ಫಲಿಸಿದುದು ಸ್ವತಃ ಕರ್ತೃತ್ವವು ಶಕ್ತ್ಯಾಧಾಯಕತ್ವಮ್ – ಜೀವರಿಗೆ ಜ್ಞಾತೃತ್ವ ಕರ್ತೃತ್ವ ಶಕ್ತಿಗಳನ್ನು ಉಂಟುಮಾಡುವುದು. **ಪ್ರೇರಕತ್ವಮ್** – ಕರ್ಮಾನುಗುಣವಾಗಿ ಜೀವನನ್ನು ಕಾರ್ಯ ವಿಶೇಷಗಳಲ್ಲಿ ಪ್ರೇರೇಪಿಸುವುದು. **ಅನನ್ಯಪ್ರೇರ್ಯತ್ವಮ್** – ಅನ್ಯರಿಂದ ಪ್ರೇರೇಪಿಸಲ್ಪಡದೆ ಇರುವಿಕೆ, **ಅನುಮಂತೃತ್ವಮ್**–ಜೀವನು ಕಾರ್ಯಗಳಲ್ಲಿ ತೊಡಗುವಾಗ, ಅನುಮತಿಸುವಿಕೆ ಕರ್ಮ ಸಾಕ್ಷಿತ್ವಮ್- ಜೀವನು ಮಾಡುವ ಕರ್ಮಗಳನ್ನು ಸಾಕ್ಷಾತ್ಕರಿಸುವಿಕೆ. ಸಹಕಾರಿತ್ವಮ್ ನಡೆಯುವಾಗ ಕುರುಡನಿಗೆ ಕುರುಡಿಲ್ಲದವನು ಸಹಕರಿಸುವಂತೆಯೂ ದೊಡ್ಡ ಮರವನ್ನು ಒಬ್ಬನು ಹೊರುವಾಗ ಮತ್ತೊಂದು ಕಡೆ ಹಿಡಿದು ಕೊಂಡು ಹೊತ್ತು ಸಹಕರಿಸುವಂತೆಯೂ ಸಹಕರಿಸುವಿಕೆ ಪ್ರಿಯ ಪ್ರವರ್ತಕತ್ವಮ್– ತಾಯಿಯಂತೆ ಪ್ರಿಯವಾದ ಕಾರ್ಯಗಳಲ್ಲಿ ಪ್ರವರ್ತಿಸುವಿಕೆ. **ಹಿತ ಪ್ರವೃರ್ತಕತ್ವಮ್**–ಪ್ರಿಯತ್ವವಿಲ್ಲದಿದ್ದರೂ ಹಿತವಾಗಿ ಪ್ರವರ್ತಿಸುವಿಕೆ.

**ನಿರುಪಾಧಿಕ ಸಂತವ್ಯತ್ವಮ್ ವಶೀಕಾರ್ಯತ್ವಮ್, ಸಿದ್ಧೋಪಾಯತ್ವಮ್, ಸಾಧ್ಯೋಪಾಯ ಹೇತುತ್ವಮ್ ಶ್ರುತಿಸ್ಮೃತಿರೂಪಾಜ್ಞಾವತ್ವಮ್, ದಂಡಧರತ್ವಮ್, ಸರ್ವಸಮತ್ವಮ್, ಆಶ್ರಿತ ಪಕ್ಷಪಾತಿತ್ವಮ್, ಅವಿದ್ಯಾದಿ ಹೇತುತ್ವಮ್, ಅವಿದ್ಯಾದ್ಯನರ್ಹತ್ವಮ್, ಆಶ್ರಿತಾವಿದ್ಯಾದಿ ನಿವರ್ತಕತ್ವಮ್. ಸ್ವರೂಪಾನ್ಯಥಾಭಾವ ರಾಹಿತ್ಯಮ್, ಸ್ವಭಾವಾನ್ಯಥಾಭಾವರಾಹಿತ್ಯಮ್ ಸರ್ವನೇತೃತ್ವಮ್, ಸರ್ವ ಜಗದ್ವ್ಯಾಪಾರ ಲೀಲತ್ವಮ್,**

**ಅಥ ಅಖಂಡ ನಾರಾಯಣಶಬ್ದಾರ್ಥಾನ್ ಏಕೋನತ್ರಿಂಶದ್ಗುಣಾನಾಹ.**

**ಸರ್ವವೇದಾಂತಪ್ರಧಾನ ಪ್ರತಿಪಾದ್ಯತ್ವಮ್, ಸರ್ವೋಪಾದಾನತ್ವಮ್, ಸರ್ವನಿಮಿತ್ತತ್ವಮ್, ಸತ್ಯ**

---

ಅನಂತರ ನಮಸ್ಸಿನಲ್ಲಿ ಅನುಸಂಧಾನ ಮಾಡುವ ಎಂಟು ಗುಣಗಳನ್ನು ಎತ್ತಿ ತೋರಿಸುತ್ತಾರೆ. ಅದಾಗಿ **ನಿರುಪಾಧಿಕ ಸಂತವ್ಯತ್ವಂ** ಪ್ರಯೋಜನ ರೂಪ ಉಪಾಧಿ ರಹಿತವಾದ "ಸಂತವ್ಯಃ ಪರಮಶ್ಶೇಷೀ, ಸಂತ್ಯ ಸಂತವ್ಯ ಭಾವೋಽಯಂ ನ ಪ್ರಯೋಜನ ಪೂರ್ವಕಂ", ಎಂದು ಹೇಳಿದ ಸಂತವ್ಯತ್ವ. **ವಶೀಕಾರ್ಯತ್ವಮ್**– ಶರಣಾಗತಿ ರೂಪ ನಮನದಿಂದ ವಶೀಕಾರ್ಯನಾಗುವಿಕೆ. **ಸಿದ್ಧೋಪಾಯತ್ವಮ್** ಭಗವಂತನು ಜೀವನನ್ನು ಕಾಪಾಡಲು ಸಿದ್ಧನಾಗಿರುವ ಉಪಾಯತ್ವವು. **ಸಾಧ್ಯೋಪಾಯ ಹೇತುತ್ವಮ್**–ಸಿದ್ಧೋಪಾಯನಾದ ತನ್ನನ್ನು ವಶೀಕರಿಸಲು ಜೀವ ಕರ್ತೃಕವಾದ ಭಕ್ತಿ, ಪ್ರಪತ್ತಿ– ರೂಪ ವ್ಯಾಜಗಳಲ್ಲಿ ಪ್ರವರ್ತಿಸಲು ಕಾರಣನಾಗಿರುವುದು. ಭಕ್ತಿ ಪ್ರಪತ್ತಿಗಳಲ್ಲೊಂದರಲ್ಲಿ ಪ್ರವರ್ತಕತ್ವವೆಂದರ್ಥ **ಶ್ರುತಿ ಸ್ಮೃತಿರೂಪ ಜ್ಞಾನವತ್ವಮ್**–ವಶೀಕೃತರಾದ ಭಕ್ತ ಪ್ರಪನ್ನರಿಗೆ ಶ್ರುತಿ ಸ್ಮೃತಿರೂಪ ಆಜ್ಞೆಗಳಲ್ಲಿ ಉತ್ತರ ಕೃತ್ಯವನ್ನು ನಡೆಸುವುದು. **ದಂಡ ಧರತ್ವಮ್** ಆಜ್ಞಾತಿ ಕ್ರಮದಲ್ಲಿ ದಂಡ ಧರನಾಗಿರುವುದು, **ಸರ್ವ ಸಮತ್ವಮ್** ಕರ್ಮಾನುಗುಣವಾಗಿ ದಂಡ ಧರನಾಗಿದ್ದರೂ ಸರ್ವರಲ್ಲಿಯೂ ಸಮನಾಗಿರುವುದು, **ಆಶ್ರಿತ ಪಕ್ಷ ಪಾತಿತ್ವಮ್** –ಸರ್ವ ಸಮತ್ವವಿದ್ದರೂ ಆಶ್ರಿತರಲ್ಲಿ ಪಕ್ಷಪಾತಿಯಾಗಿರುವಿಕೆ.

ಅನಂತರ ನಮಶ್ಶಬ್ದದಲ್ಲಿರುವ 'ಮ' ಕಾರದಿಂದ ಫಲಿಸುವ ಮೂರು ಗುಣಗಳನ್ನು ಎತ್ತಿ ತೋರಿಸುತ್ತಾರೆ. **ಅವಿದ್ಯಾದಿ ಹೇತುತ್ವಮ್** ದೇಹಾತ್ಮ ಭ್ರಮಾದಿ ರೂಪಾವಿದ್ಯೆಗೂ ಆದಿ ಶಬ್ದದಿಂದ ತನ್ಮೂಲವಾದ ಕರ್ಮಕ್ಕೂ ಕಾರಣನಾಗಿರುವುದು. **ಅವಿದ್ಯಾದ್ಯನರ್ಹತ್ವಮ್**– ತಾನು ಅವಿದ್ಯೆಗೂ ಅದಕ್ಕೆ ಮೂಲ ಭೂತವಾದ ಕರ್ಮಕ್ಕೂ ಅರ್ಹನಾಗಿಲ್ಲದಿರುವಿಕೆ. **ಆಶ್ರಿತಾವಿದ್ಯಾ ನಿವರ್ತಕತ್ವಮ್** ನಾಶಯಾಮ್ಯಾತ್ಮ ಭಾವಸ್ಥೋ ಅಹಮ ಜ್ಞಾನಜಂತಮಃ, ಎಂಬಂತೆ ಆಶ್ರಿತರ ಅಜ್ಞಾನಕ್ಕೂ ಕರ್ಮಕ್ಕೂ ನಾಶಕನಾಗಿರುವಿಕೆ-

ಅನಂತರ ನರ ಶಬ್ದಾರ್ಥಗಳಾದ ನಾಲ್ಕು ಗುಣಗಳನ್ನು ಹೇಳುತ್ತಾರೆ. ಅದಾಗಿ **ಸ್ವರೂಪಾನ್ಯಥಾಭಾವ ರಾಹಿತ್ಯಮ್**– ಸ್ವರೂಪದಲ್ಲಿ ಯಾವ ವ್ಯತ್ಯಾಸವೂ ಇಲ್ಲದಿರುವಿಕೆ, **ಸ್ವಭಾವಾನ್ಯಥಾಭಾವ ರಾಹಿತ್ಯಮ್**– ತನ್ನ ತನ್ನ ಸ್ವಭಾವಗಳಾದ ಜ್ಞಾನಾದಿಗಳಲ್ಲಿ ಸಂಕೋಚ ವಿಕಾಸ ರಾಹಿತ್ಯ, **ಸರ್ವ ನೇತೃತ್ವಮ್**-ನೃನಯೇ ಎಂಬ ಧಾತುವಿನಲ್ಲಿ ನಿಷ್ಪನ್ನವಾದ ನರ ಶಬ್ದಾರ್ಥವಾದ ಸರ್ವನಿರ್ವಾಹಕತ್ವ, **ಸರ್ವ ಜಗದ್ವ್ಯಾಪಾರ ಲೀಲತ್ವಮ್** ಕರ್ತೃತ್ವ ಮೂಲವಾದ ಸರ್ವ ಜಗತ್ಸೃಷ್ಟ್ಯಾದಿ ವ್ಯಾಪಾರವನ್ನು ಲೀಲೆಯಾಗಿ ಹೊಂದಿರುವುದು.

ಅನಂತರ ಅಖಂಡ ನಾರಾಯಣ ಶಬ್ದಕ್ಕೆ ಅರ್ಥಗಳಾದ, ಇಪ್ಪತ್ತೊಂಬತ್ತು ಗುಣಗಳನ್ನು ತಿಳಿಸುತ್ತಾರೆ ಅದಾಗಿ **ಸರ್ವ ವೇದಾಂತ ಪ್ರಧಾನ ಪ್ರತಿ ಪಾದ್ಯತ್ವಮ್** –ಸರ್ವಶಬ್ದ ವಾಚ್ಯನಾದ್ದರಿಂದ ಸರ್ವವೇದಾಂತಗಳಲ್ಲಿಯೂ ಮುಖ್ಯ ವಿಶೇಷ್ಯ ಭೂತನಾಗಿ ಪ್ರತಿ ಪಾದ್ಯನಾಗಿರುವುದು. **ಸರ್ವೋಪಾದಾನತ್ವಮ್** ಸರ್ವಜಗತ್ತಿಗೂ ಉಪಾದಾನ ಕಾರಣನಾಗಿರುವುದು, **ಸತ್ಯಸಂಕಲ್ಪತ್ವಮ್**– ತಾನು ಸಂಕಲ್ಪಿಸಿದುದನ್ನು ಅಮೋಘವಿಲ್ಲದಂತೆ

**ಸಙ್ಕಲ್ಪತ್ವಮ್, ಸರ್ವಶರೀರಿತ್ವಮ್, ಸರ್ವ ಶಬ್ದವಾಚ್ಯತ್ವಮ್, ಸರ್ವಕರ್ಮಸಮಾರಾಧ್ಯತ್ವಮ್, ಸರ್ವ ಫಲಪ್ರದತ್ವಮ್, ಸರ್ವವಿಧಬಂಧುತ್ವಮ್, ಸರ್ವವ್ಯಾಪಕತ್ವಮ್, ನಿರತಿಶಯಸೂಕ್ಷ್ಮತ್ವಮ್, ಸರ್ವಾ ಧಾರತ್ವಮ್, ಸ್ವನಿಷ್ಟತ್ವಮ್. ಸತ್ಯತ್ವಮ್, ಜ್ಞಾನತ್ವಮ್, ಅನಂತತ್ವಮ್, ಆನಂದತ್ವಮ್. ಅಮಲತ್ವಂ, ನಿರೂಪಿತ ಸ್ವರೂಪವಿಶೇಷಣಾನುಕ್ತಾನಂತಗುಣವತ್ವಂ ನಿತ್ಯ ದಿವ್ಯ ಮಂಗಳ ವಿಗ್ರಹವತ್ವಮ್, ಪರವ್ಯೂಹಾದ್ಯವಸ್ಥಾವತ್ವಂ, ಸತ್ಯಾವತಾರತ್ವಂ, ಅಜಹತ್ಸ್ವಸ್ವಭಾವತ್ವಂ, ಅಪ್ರಾಕೃತಾವತಾರತ್ವಂ. ಅಕರ್ಮವಶ್ಯಾವತಾರತ್ವಮ್, ಅಕಾಲನಿಯಮಾವತಾರತ್ವಮ್, ಆಶ್ರಿತಾರ್ಥ ಗುಣಪರಿವಾಹಾವತಾರತ್ವಮ್,**

---

ನಡೆಸುವಿಕೆ. **ಸರ್ವ ಶರೀರಿತ್ವಮ್**–ಚೇತನಾ ಚೇತನಾತ್ಮಕ ಸರ್ವವಸ್ತುಗಳನ್ನು ವ್ಯಾಪಿಸಿ, ಧರಿಸಿ, ನಿಯಮಿಸು ವುದು. **ಸರ್ವಶಬ್ದ** ವಾಚ್ಯತ್ವಮ್–ಸರ್ವಶರೀರತ್ವ ಪ್ರಯುಕ್ತವಾಗಿ ಏರ್ಪಟ್ಟರು ಸರ್ವ ಶಬ್ದಗಳಿಂದಲೂ ಸರ್ವವಸ್ತು ಗಳಿಗೂ ಅಂತರ್ಯಾಮಿಯಾದ ತಾನೇ ಹೇಳಲ್ಪಡುವುದು, **ಸರ್ವಕರ್ಮಸಮಾರಾಧ್ಯತ್ವಮ್**–ಸರ್ವವೇದಾಂತ ಳಿಂದಲೂ ಪ್ರಧಾನವಾಗಿ ಪ್ರತಿಪಾದ್ಯನಾಗಿರುವುದರಿಂದ ಸರ್ವ ಕರ್ಮಗಳಿಂದಲೂ ಆರಾಧ್ಯನಾಗಿರುವಿಕೆ. **ಸರ್ವ ಫಲ ಪ್ರದ ತ್ವಮ್**.–ಸರ್ವ ಕರ್ಮ ಸಮಾರಾಧ್ಯತ್ವದಿಂದ ಸರ್ವ ಫಲ ಪ್ರದತ್ವನು. **ಸರ್ವ ವಿಧ** ಬಂಧುತ್ವಮ್–ಸರ್ವ ಫಲಗಳನ್ನು ಕೊಡುವುದರಿಂದ ಬಂಧುವಾಗಿರುವುದು. ಅನಂತರ ಬ್ರಹುವ್ರೀಹಿ ಸಮಾಸ ಲಬ್ಧಾರ್ಥಗಳನ್ನು ತಿಳಿಸು ತ್ತಾರೆ. ಅದಾಗಿ ಸರ್ವ ವ್ಯಾಪಕತ್ವಂ–ಎಲ್ಲವನ್ನೂ ಒಳಗೆ ಪ್ರವೇಶಿಸಿವ್ಯಾಪರಿಸುವುದು, **ನಿರತಿಶಯ ಸೂಕ್ಷ್ಮ ತ್ವಮ್**–ವ್ಯಾಪಕತ್ವಕ್ಕೆ ಉಪಯುಕ್ತವಾದ ಅತ್ಯಂತ ಸೂಕ್ಷ್ಮತ್ವ, **ಸರ್ವಾ ಧಾರತ್ವಮ್**, ಇದು ತತ್ಪುರುಷ ಸಮಾಸ ಲಬ್ಧಾರ್ಥ ಎಲ್ಲಾ ವಸ್ತುಗಳಿಗೂ ಆಧಾರಭೂತನಾಗಿರುವುದು. **ಸ್ವನಿಷ್ಟತ್ವಮ್**- ಸರ್ವಕ್ಕೂ ಇವನು ಆಧಾರನೆಂಬುದರಿಂದ ತನಗೆ ಆಧಾರಾಂತರವಿಲ್ಲದೆ ಧರಿಸಿರುವುದು. ನರ ಸಂಬಂಧಿನೋ ನಾರಾಃ ಎಂಬ ವ್ಯುತ್ಪತ್ತಿ ಯಿಂದ ನಾರ ಶಬ್ದದಿಂದ ಸ್ವರೂಪ ನಿರೂಪಕ ಧರ್ಮಗಳಾದ ಸತ್ಯತ್ವಾದಿಗಳು ವಿವಕ್ಷಿತಗಳಾಗಿರುವುದು. **ಸತ್ಯ ತ್ವಮ್, ಜ್ಞಾನತ್ವಮ್, ಅನಂತತ್ವಮ್, ಆನಂದತ್ವಮ್, ಅಮಲತ್ವಮ್**, ಸತ್ಯತ್ವ– ಸ್ವರೂಪಾನ್ಯಥಾ ಭಾ ಸ್ವಭಾವಾನ್ಯಥ್ಯಾಭಾವವಿಲ್ಲದಿರುವುದು, ಜ್ಞಾನತ್ವ – ಜ್ಞಾನ ಸ್ವರೂಪನೂ ಜ್ಞಾನ ಗುಣಕನೂ ಆಗಿರುವುದು. ಅನಂತತ್ವ– ದೇಶಕಾಲವಸ್ತು ಪರಿಚ್ಛೇದ ರಹಿತನಾಗಿ ವಿಭು ಸ್ವರೂಪನಾಗಿರುವುದು, ಆನಂದತ್ವ –ಆನಂದ ಸ್ವರೂಪ ನಾಗಿರುವುದು, ಅಮಲತ್ವ ಸರ್ವವಸ್ತು ವ್ಯಾಪಿತ್ವದಿಂದ ತದ್ಗತದೋಷಗಳು ಲೇಪಿಸದೆ ಹೇಯಪ್ರತಿಭಟನಾಗಿರುವುದು. ಈ ಗುಣಗಳು ಲಕ್ಷ್ಮೀ ನಾರಾಯಣರಿಬ್ಬರಲ್ಲಿಯೂ ಇರುವುದರಿಂದ ಉಭಯ ಸಾಧಾರಣವಾಗಿ ಹೇಳಿರುತ್ತಾರೆ. **ನಿರೂಪಿತ ಸ್ವರೂಪ ವಿಶೇಷಣಾನುಕ್ತಾನಂತ ಗುಣವತ್ವಮ್**-ಮೇಲೆ ಹೇಳಿದ ಸ್ವರೂಪ ನಿರೂಪಕ ಧರ್ಮವ್ಯತಿರಿಕ್ತವಾದ ಅನಂತ ಗುಣಗಳಿಂದ ನಿರೂಪಿತ ಸ್ವರೂಪ ವಿಶೇಷನಾಗಿರು ವುದು, **ನಿತ್ಯ ದಿವ್ಯ ಮಂಗಳ ವಿಗ್ರಹ ವತ್ವಮ್**– ಶ್ರೀ ವೈಕುಂಠದಲ್ಲಿ ನಿತ್ಯವಾದ ದಿವ್ಯ ಮಂಗಳ ವಿಗ್ರಹ ದಿಂದ ಕೂಡಿರುವುದು, ನಿತ್ಯವಾದ ದಿವ್ಯ ಮಂಗಳ ವಿಗ್ರಹವು ನಾರಾಯಣ ಶಬ್ದ ಪ್ರವೃತ್ತಿ ನಿಮಿತ್ತವೆಂಬುದು ಸರಿಯಲ್ಲವೆಂಬುದು, ನಿರೂಪಿತ.ಸ್ವರೂಪ ವಿಶೇಷಗಳಲ್ಲಿ ಒಂದಾಗಿ ಹೇಳಿರುವುದರಿಂದ ಪ್ರತ್ಯಕ್ಷ. **ಪರವ್ಯೂಹಾ ದ್ಯವಸ್ಥಾವತ್ವಮ್**–ಪರ, ವ್ಯೂಹ, ವಿಭವ, ಅರ್ಚಾ, ಅಂತರ್ಯಾಮಿ ರೂಪಗಳಿಂದ ಕೂಡಿರುವಿಕೆ. **ಸತ್ಯಾವತಾ ರತ್ವಮ್**– ಭಗವಂತನ ಅವತಾರಗಳೆಲ್ಲಾ ಸತ್ಯಗಳು, ಮಿಥ್ಯೆಯಲ್ಲ, **ಅಜಹತ್ಸ್ವ ಸ್ವಭಾವತ್ವಮ್**–ಅವತಾರ ದಶೆಯಲ್ಲೂ ಅಪಹತ ಪಾಪ್ಮತ್ವಾದಿ ಸಮಸ್ತ ಕಲ್ಯಾಣ ಗುಣಗಳಿಂದ ಕೂಡಿದ ತನ್ನ ಈಶ್ವರ ಸ್ವಭಾವವನ್ನು ಬಿಡದೆ ಇರುವುದು, **ಅಪ್ರಾಕೃತಾವತಾರತ್ವಮ್** – ಕರ್ಮ ಪರ ವಶವಲ್ಲದ ಅವತಾರತ್ವ, ಅಕರ್ಮವಶ್ಯಾವ **ತಾರ** ತ್ವಮ್–ಜೀವರ ಹಾಗೆ ಪುಣ್ಯ ಪಾಪ ನಿಮಿತ್ತವಲ್ಲದೆ ಅಕರ್ಮವಶ್ಯನಾಗಿ ಸ್ವೇಚ್ಛೆಯಿಂದ ಅವತರಿಸು ವುದು. ಅಕಾಲ ನಿಯಮಾವತಾರವತ್ವಮ್ - ತನ್ನ ಅವತಾರಕ್ಕೆ ಕಾಲ ನಿಯಮವಿಲ್ಲ, ಧರ್ಮಗ್ಲಾನಿಯೇ ಕಾಲ. ಆಶ್ರಿತಾರ್ಥ ಗುಣ **ಪರೀವಾಹಾವತಾರತ್ವಮ್** – ಲೋಕದಲ್ಲಿ ಧರ್ಮ ಸಂಸ್ಥಾಪನೆ ಮಾಡಬೇಕೆಂಬ

ಸರ್ವಾವಸ್ಥ ಶುಭಾಶ್ರಯತ್ವಮ್, ಸರ್ವಾವಸ್ಥ ಲಕ್ಷ್ಮೀ ಸಹಚರತ್ವಮ್, ದಿವ್ಯಭೂಷಣಾಯುಧಮಹಿಷೀ ಸ್ಥಾನಪರಿಜನ ಪರಿಚ್ಛದ ದ್ವಾರಪಾಲ ಪಾರ್ಷದಾದಿಮತ್ವಮ್.

ಅಥ ನಾರಾಯಣ ಪದಸ್ಥ ಚತುರ್ಥ್ಯರ್ಥ-ನುಸಂಧೇಯಾನ್ ಸಪ್ತವಿಂಶತಿ ಗುಣಾನಾಹ

ಸ್ಥೂಲ ಶರೀರ ವಿಶ್ಲೇಷಕತ್ವಮ್, ವಿಶ್ರಮಸ್ಥಾನತ್ವಂ, ಅನುಗ್ರಹ ವಿಶೇಷವತ್ವಮ್, ಬ್ರಹ್ಮನಾಡೀ ದ್ವಾರ ಪ್ರಕಾಶಕತ್ವಮ್, ತತ್ಪ್ರವೇಶಕತ್ವಂ, ಬ್ರಹ್ಮರಂಧ್ರಾದ್ಯುತ್ಕ್ರಾಂತಿ ಹೇತುತ್ವಂ, ಅರ್ಚಿರಾದ್ಯಾತಿವಾಹಿಕ ನಿಯೋಕ್ತೃತ್ವಮ್, ಸೂರ್ಯದ್ವಾರ್ಯಾದಿ ನೇತೃತ್ವಂ, ಅಣ್ಡಾವರಣ ಪ್ರಕೃತಿ ಮಂಡಲಾತಿಕ್ರಮಹೇತುತ್ವಮ್, ವಿರಜಾತೀರ ಪ್ರಾಪಕತ್ವಂ, ಸೂಕ್ಷ್ಮ ಶರೀರ ವಿಶ್ಲೇಷಕತ್ವಮ್, ಅಪ್ರಾಕೃತ ದೇಹಪ್ರದತ್ವಂ, ದಿವ್ಯಾಪ್ಸರಸ್ಸತ್ಕಾರಾದಿ ಪ್ರಯೋಜಕತ್ವಮ್, ಬ್ರಹ್ಮ ಗಂಧಾದಿ ಪ್ರವೇಶಕತ್ವಮ್, ನಿತ್ಯಮುಕ್ತಸತ್ಕಾರ ವಿಶೇಷಣ

---

ಅಭಿಲಾಷೆಯಿಂದ ಸೌಲಭ್ಯ ಸೌಶೀಲ್ಯಾದಿ ಗುಣಗಳು ಉಕ್ಕಿ ಬಂದು ಮನುಷ್ಯ ಸಜಾತೀಯನಾಗಿ ಅವರುಗಳ ಪರಿಭವ ಮಾತುಗಳನ್ನು ಸಹಿಸಿಕೊಂಡು ಆಶ್ರಿತ ರಕ್ಷಣ ತತ್ಪರನಾಗಿ ಅವತರಿಸುವುದು. **ಸರ್ವಾವಸ್ಥ ಶುಭಾಶ್ರಯ ವತ್ವಮ್**–ಪರವ್ಯೂಹಾದಿ ಸರ್ವಾವಸ್ಥೆಗಳಲ್ಲಿಯೂ ಶುಭಾಶ್ರಯ ದಿವ್ಯ ಮಂಗಳ ವಿಗ್ರಹದಿಂದ ಕೂಡಿ ಯೋಗಿಗಳಿಗೆ ಗೋಚರನಾಗುವುದು, **ಸರ್ವಾವಸ್ಥ ಲಕ್ಷ್ಮೀ ಸಹ ಚರತ್ವಮ್**– ಸರ್ವಾವಸ್ಥೆಗಳಲ್ಲಿಯೂ ಲಕ್ಷ್ಮಿಯೊಡನೆ ಕೂಡಿರುವುದು, **ದಿವ್ಯ ಭೂಷಣಾಯುಧ ಮಹಿಷೀ ಸ್ಥಾನಪರಿಜನ ಪರಿಚ್ಛದ ದ್ವಾರಪಾಲ ಪಾರ್ಷದಾದಿಮತ್ವಮ್** - ದಿವ್ಯಗಳಾದ ಭೂಷಣ ಅಯುಧ, ಮಹಿಷಿಗಳು, ಶ್ರೀ ವೈಕುಂಠವೆಂಬ ಸ್ಥಾನ ವಿಶೇಷ, ಪರಿಜನರು, ಛತ್ರ ಚಾಮರಾದಿಗಳು, ದ್ವಾರಪಾಲರು ಸಭಾ ಜನರು, ಇತ್ಯಾದಿ ವಿಶಿಷ್ಟನಾಗಿರುವುದು.

ಅನಂತರ ನಾರಾಯಣ ಪದದ ಮೇಲಿರುವ ಚತುರ್ಥೀ ವಿಭಕ್ತಿಯಲ್ಲಿ ಅನುಸಂಧೇಯಗಳಾದ ಗುಣಗಳನ್ನು ವಿವರಿಸುತ್ತಾರೆ. ಆಯ ಶಬ್ದವು ಕೈಂಕರ್ಯವನ್ನು ತಿಳಿಸುತ್ತದೆ, ಆದಕ್ಕಾಗಿ ಸ್ಥೂಲಶರೀರದಿಂದ ಉತ್ಕ್ರಾಂತಿಯು ಏರ್ಪಟ್ಟು ಅರ್ಚಿರಾದಿ ಮಾರ್ಗಗಮನಾದಿಗಳು ಪರಮಪದನಾಥ ಪ್ರಾಪ್ತಿ ನಿಮಿತ್ತಗಳಾದ ಗುಣಗಳು ಕ್ರಮೇಣ ಸಂಗ್ರಹಿಸಲ್ಪಡುತ್ತವೆ. ಆದಾಗಿ :–**ಸ್ಥೂಲಶರೀರ ವಿಶ್ಲೇಷಕತ್ವಮ್** – ಸ್ಥೂಲಶರೀರದಿಂದ ಜೀವನನ್ನು ಬಿಡಿಸಿ ಕರೆದೊಯ್ಯುವುದು. **ವಿಶ್ರಮಸ್ಥಾನತ್ವಮ್**– ಸ್ಥೂಲ ಶರೀರ ವಿಶ್ಲೇಷಾನಂತರ ಹಾರ್ದರೂಪನಾಗಿ ತಾನು ವಿಶ್ರಾಂತಿಸ್ಥಾನವಾಗಿರುವುದು, **ಅನುಗ್ರಹವಿಶೇಷವತ್ವಮ್**-ಹಾರ್ದನಾದ ರೂಪದಲ್ಲಿ, ಜೀವನನ್ನು ಬ್ರಹ್ಮನಾಡೀ ಪ್ರವೇಶ ಮಾಡಿಸಲು ವಿಶೇಷಾನುಗ್ರಹವನ್ನು ಮಾಡುವುದು, **ಬ್ರಹ್ಮನಾಡೀದ್ವಾರಪ್ರಕಾಶಕತ್ವಮ್**-ಬ್ರಹ್ಮನಾಡಿಯ ದ್ವಾರವು ಪ್ರಕಾಶಿಸುವುದು, **ತತ್ಪ್ರವೇಶಕತ್ವಮ್**–ಬ್ರಹ್ಮನಾಡಿಯಲ್ಲಿ ಪ್ರವೇಶಪಡಿಸುವುದು. **ಬ್ರಹ್ಮರಂಧ್ರೋತ್ಕ್ರಾಂತಿ ಹೇತುತ್ವಮ್**–ಬ್ರಹ್ಮರಂಧ್ರದ ಮಾರ್ಗವಾಗಿ ಹೊರಬೀಳಲು ಕಾರಣನಾಗಿರುವಿಕೆ. **ಅರ್ಚಿರಾದ್ಯಾತಿವಾಹಿಕ ನಿಯೋಕ್ತೃತ್ವಮ್**-ಅರ್ಚಿರಾದಿ ಮಾರ್ಗದಲ್ಲಿ ಇವನನ್ನು ಮೋಕ್ಷಕ್ಕೆ ಕರೆತರಲು ಆತಿವಾಹಕರನ್ನು ಏರ್ಪಡಿಸಿ ಅವರನ್ನು ನಿಯಮಿಸುವಿಕೆ. **ಸೂರ್ಯದ್ವಾರಾದಿ ನೇತೃತ್ವಮ್**-ಸೂರ್ಯರಶ್ಮಿಗಳನ್ನು ಅವಲಂಬಿಸಿ ಕೊಂಡು ನಡೆಸುವುದು. **ಅಂಡಾವರಣ ಪ್ರಕೃತಿಮಂಡಲಾತಿಕ್ರಮ ಹೇತುತ್ವಮ್**–ಅಂಡಕ್ಕೆ ಮೇಲೆ ಆವರಣ ಭೂತವಾದ ಪ್ರಕೃತಿಮಂಡಲವನ್ನು ದಾಟಿಸಲು ಕಾರಣಭೂತನಾಗಿರುವುದು. **ವಿರಜಾತೀರಪ್ರಾಪಕತ್ವಮ್**-ವಿರಜಾನದೀ ತೀರಕ್ಕೆ ಕರೆದೊಯ್ಯುವುದು. **ಸೂಕ್ಷ್ಮ ಶರೀರ ವಿಶ್ಲೇಷಕತ್ವಮ್**–ಸೂಕ್ಷ್ಮ ಶರೀರವನ್ನು ವಿರಜಾನದಿಯ ಈಚೆ ದಡದಲ್ಲಿ ಬಿಡುವಂತೆ ಮಾಡುವುದು. **ಅಪ್ರಾಕೃತ ದೇಹ ಪ್ರದತ್ವಮ್**–ಅಪ್ರಾಕೃತವಾದ ದೇಹವನ್ನು ಕೊಡುವುದು. **ದಿವ್ಯಾಪ್ಸರಸ್ಸತ್ಕಾರಾದಿ ಪ್ರಯೋಜಕತ್ವಮ್**–ಐನೂರು ದಿವ್ಯಾಪ್ಸರಸ್ಸುಗಳು ಈ ಮುಕ್ತಾತ್ಮನಿಗೆ ಬ್ರಹ್ಮಾಲಂಕಾರಾದಿ ಸತ್ಕಾರಗಳನ್ನು ಮಾಡಲು, ತಾನು ನಿಯಾಮಕನಾಗಿರುವುದು. **ಬ್ರಹ್ಮಗಂಧಾದಿಪ್ರವೇಶಕತ್ವಮ್**-ಬ್ರಹ್ಮ ಗಂಧವನ್ನು ಇವನ ಶರೀರದಲ್ಲಿ ಪ್ರವೇಶ ಪಡಿಸುವುದು, **ನಿತ್ಯಮುಕ್ತಸತ್ಕಾರ ವಿಶೇಷ**

**ಹೇತುತ್ವಂ, ಪರ್ಯಂಕಾಧಿರೋಹಣ ಪರ್ಯಂತಪ್ರಾಪ್ಯತ್ವಮ್ ಪರಿಪೂರ್ಣಾನುಭವ ಹೇತುತ್ವಮ್, ಪ್ರಧಾನಪ್ರಾಪ್ಯತ್ವಮ್, ಸದೇಹ ವಿದೇಹ ಬಹುದೇಹ ಕೃತ ಸರ್ವವಿಧ ಕೈಙ್ಕರ್ಯ ಪ್ರತಿಸಂಬಂಧಿತ್ವಮ್, ಅವಾಪ್ತ ಸಮಸ್ತ ಕಾಮತ್ವಮ್ ನಿರತಿಶಯಾನಂದವತ್ವಂ, ನಿರತಿಶಯ ಭೋಗ್ಯತ್ವಂ, ಸರ್ವ ಪ್ರಕಾರ ಭೋಗ್ಯತ್ವಂ, ಸರ್ವದಾನುಕೂಲ ಸ್ವಭಾವತ್ವಮ್, ಅತ್ಯನ್ತತುಲ್ಯ ಭೋಗಪ್ರದತ್ವಮ್. ಆಶ್ರಿತ ವಿಶ್ಲೇಷಾ ಸಹತ್ವಮ್, ಅಪುನರಾವೃತ್ತಿ ಹೇತುತ್ವಮ್,**

**ಎನ್ರು ಇನ್ನೈ ಪ್ರಧಾನಮಾಹ ಮತ್ತುಮ್ ಇವತ್ತೈ ಉಪಕ್ಕಿವರುಮೋ ತ್ತಙ್ಗಳುಮೆಲ್ಲಾಮ್ ಅಙ್ಗೈವೇ ಅನುಸಂಧೇಯಙ್ಗಳ್.**

**ತೇಷು ಅತ್ಯಂತ ಪ್ರಧಾನ ಗುಣಾನ್ ಕಾರಿಕಯಾ ಸಂಗೃಹ್ಣಾತಿ.**

**ಇಹ ಸಙ್ಗ್ರಹತಶ್ಶ್ರೀಮಾನ್ ಗೋಪ್ತಾ ಶೇಷೀ ಸಮಾಧಿಕ ದರಿದ್ರಃ।**
**ಶರಣಂ ಸರ್ವಶರೀರೀ ಪ್ರಾಪ್ಯಸ್ಸೇವ್ಯಶ್ಚ ಸಾಧುಭಿರ್ಭಾವ್ಯಃ॥**

---

ಹೇತುತ್ವಮ್-ನಿತ್ಯಮುಕ್ತರು ಈ ಮುಕ್ತನನ್ನು ವಿಶೇಷ ಸತ್ಕಾರದಿಂದ ಆದರಿಸಲು ಕಾರಣ ಭೂತನಾಗಿರುವುದು. **ಪರ್ಯಂಕಾಧಿರೋಹಣ ಪರ್ಯಂತಾದರವತ್ವಮ್**-ಆದಿಶೇಷನೆಂಬ ತನ್ನ ಹಾಸಿಗೆಯನ್ನು ಹತ್ತಿಸಿ ತನ್ನ ಬಳಿಗೆ ಕರೆಸಿಕೊಳ್ಳುವ ಪರ್ಯಂತ ಪ್ರೀತಿಯಿಂದ ಕೂಡಿರುವಿಕೆ, **ಪರಿಪೂರ್ಣಾನುಭವ ಹೇತುತ್ವಮ್**-ಪರಿಪೂರ್ಣ ಭಗವದನುಭವಕ್ಕೆ ಕಾರಣನಾಗಿರುವಿಕೆ, **ಪ್ರಧಾನಪ್ರಾಪ್ಯತ್ವಮ್**-ಪ್ರಧಾನನಾದ ತನ್ನನ್ನು ಪ್ರಾಪಿಸುವುದು. **ಸದೇಹ ವಿದೇಹ- ಇತ್ಯಾದಿ.** ಸದೇಹನಾಗಿ ಮಾಡುವ ಕೈಂಕರ್ಯ, ಪಾದ ಸಂವಾಹನ ಛತ್ರ ಚಾಮರಾದಿಗಳನ್ನು ಸಮರ್ಪಿಸುವುದು, ವಿದೇಹನಾಗಿ ವಿಲಕ್ಷಣ ಭಕ್ತಿಪೂರ್ವಕವಾಗಿ ಗುಣಾನುಸಂಧಾನ ಮಾಡಿ ಧ್ಯಾನಿಸುತ್ತಿರುವುದು. ಅನೇಕ ಶರೀರಗಳನ್ನೆತ್ತಿಕೊಂಡು ಕುಟುಂಬ ದಾಸ್ಯಾದಿಗಳನ್ನು ಮಾಡುವುದು. ಈ ರೀತಿಯಾದ ಜೀವ ಕತೃಕ ಸರ್ವವಿಧ ಕೈಂಕರ್ಯಗಳನ್ನು ಸ್ವೀಕರಿಸುವವನಾಗಿರುವುದು **ಅವಾಪ್ತಸಮಸ್ತಕಾಮತ್ವಮ್**-ನಿತ್ಯ ಮುಕ್ತರಿಗೆ ಅವರವರ ಇಷ್ಟಾನುಸಾರ ಕೈಂಕರ್ಯಗಳನ್ನು ಮಾಡುವಂತೆ ಇಷ್ಟಾಪೂರ್ತಿಯಿಂದ ಕೂಡಿರುವಿಕೆ **ನಿರತಿಶಯಾನಂದವತ್ವಮ್** ಇದರಿಂದಾಗಿ ಅತ್ಯಂತಾತಿಶಯವಾದ ಆನಂದದಿಂದ ಕೂಡಿರುವಿಕೆ, **ನಿರತಿಶಯಭೋಗ್ಯತ್ವಮ್**- ಇದರಿಂದಾಗಿ ನಿರತಿಶಯವಾದ ಭೋಗ್ಯ ಭೂತನಾಗಿರುವಿಕೆ. **ಸರ್ವಪ್ರಕಾರಭೋಗ್ಯತ್ವಮ್**-ಸರ್ವ ಪ್ರಕಾರಗಳಿಂದಲೂ ಭೋಗ್ಯ ಭೂತನಾಗಿರುವಿಕೆ, **ಸರ್ವದಾ ಅನುಕೂಲ ಸ್ವಭಾವತ್ವಮ್** - ಯಾವಾಗಲೂ ಅನುಕೂಲವಾದ ಸ್ವಭಾವದಿಂದ ಕೂಡಿರುವನಾಗಿರುವಿಕೆ, **ಅತ್ಯಂತತುಲ್ಯಭೋಗಪ್ರದತ್ವಮ್**- "ಭೋಗ ಮಾತ್ರ ಸಾಮ್ಯ ಲಿಂಗಾಚ್ಚ" ಎಂಬ ಸೂತ್ರದ ಪ್ರಕಾರ, ವಿವಕ್ಷಿತವಾದ ಸಮಾನಾನಂದ ಪ್ರದನಾಗಿರುವುದು. **ಆಶ್ರಿತ ವಿಶ್ಲೇಷಾಸಹತ್ವಮ್**- ಆಶ್ರಿತರ ವಿಶ್ಲೇಷವನ್ನು ಸಹಿಸದಿರುವುದು. ಇದು, "ನಚ ಪರಮಪುರುಷಃ ಅತ್ಯರ್ಥ ಪ್ರಿಯಂ ಜ್ಞಾನಿನಂ ಲಬ್ಧ್ವಾ ಕದಾಚಿದಾವರ್ತಯಿಷ್ಯತಿ" ಎಂಬ ಭಾಷ್ಯಕಾರರ ಶ್ರೀ ಸೂಕ್ತಿ ಸಿದ್ಧವಾದ ಅರ್ಥ. **ಅಪುನರಾವರ್ತಿಹೇತುತ್ವಮ್**- ಇದು "ಅನಾವೃತ್ತಿಶ್ಶಬ್ದಾತ್" ಎಂಬ ಸೂತ್ರಾರ್ಥ. ಮುಕ್ತನನ್ನು ಪುನಃ ಕರ್ಮರೂಪ ಸಂಸಾರದಲ್ಲಿ ಹುಟ್ಟುವಂತೆ ಮಾಡದೆ ಇರುವುದಕ್ಕೆ ಕಾರಣ ಭೂತನಾಗಿರುವುದು.

**ಎನ್ರಿವೈಪ್ರಧಾನಮಾನ ಇತ್ಯಾದಿ**- ಈ ರೀತಿಯಾದ ನೂರೆಂಟು ಗುಣಗಳು ಪ್ರಧಾನವಾಗಿ ಇವುಗಳಿಂದ ಲಕ್ಷಿತವಾದ ಇತರ ಕಲ್ಯಾಣ ಗುಣಗಳೂ ಈ ಅಷ್ಟಾಕ್ಷರ ಮಂತ್ರದಲ್ಲಿ ಅನುಸಂಧೇಯಗಳು. ಈ ಗುಣಗಳನ್ನು ಸಂಕ್ಷೇಪವಾಗಿ ಅನುಸಂಧಾನ ಮಾಡಲು ಒಂದು ಕಾರಿಕೆಯನ್ನು ಅನುಗ್ರಹಿಸುತ್ತಾರೆ.

**ಇಹ ಸಂಗ್ರಹತಶ್ಶ್ರೀಮಾನ್ ಇತ್ಯಾದಿ-ಇಹ ಸಂಗ್ರಹತಃ**-ಈ ಮಂತ್ರದಲ್ಲಿ ಸಂಗ್ರಹವಾಗಿ, **ಶ್ರೀಮಾನ್**- ಲಕ್ಷ್ಮೀವಿಶಿಷ್ಟನು, **ಗೋಪ್ತಾ**- ರಕ್ಷಕನು ಇವೆರಡೂ 'ಅ'ಕಾರದಲ್ಲಿ ರೂಢಿಯಿಂದಲೂ ಯೋಗದಿಂದಲೂ ಏರ್ಪಟ್ಟ ಅರ್ಥಗಳು. **ಶೇಷೀ**-ಸ್ವಾಮಿ, **ಸಮಾಧಿಕ ದರಿದ್ರಃ**- ತನಗೆ ಸಮನೂ ಮೇಲಾದವನೂ ಇಲ್ಲದವನು. ಇವೆರಡೂ

## ಅಥ ಮೂಲಮನ್ತ್ರೇ ಅನುಸಂಧೇಯ ಜೀವ ಗುಣಾನಾಹ

ಇಪ್ಪಡಿ ಪ್ರಾಪ್ಯನಾನ ಪರಮಾತ್ಮಾವೈ ಪ್ರಾಪಿಕ್ಕುಮ್ ಜೀವಾತ್ಮಾ ಇತ್ತಿರುಮನ್ತ್ರತ್ತಾಲೇ ಅನುಸಂಧೇಯನಾವದೊಂದು, ಶ್ರೀಮದ್ರಕ್ಷ್ಯತ್ವಂ, ಅನನ್ಯರಕ್ಷ್ಯತ್ವಂ, ಸರ್ವತ್ರ ಸರ್ವದಾ ಸರ್ವಪ್ರಕಾರ ರಕ್ಷ್ಯತ್ವಂ, ಸುಶೀಲ ರಕ್ಷಕವತ್ವಮ್, ಪುರುಷಕಾರವತ್ವಂ, ಮಹಾವಿಶ್ವಾಸ ಯೋಗಿತ್ವಂ, ಸಲಕ್ಷ್ಮೀಕದಾಸತ್ವಮ್, ನಿತ್ಯ ದಾಸತ್ವಂ, ನಿರುಪಾಧಿಕ ದಾಸತ್ವಂ, ಅನನ್ಯಾರ್ಹ ದಾಸತ್ವಂ, ಜ್ಞಾನತ್ವಮ್, ಆನಂದತ್ವಂ, ಸ್ವಯಂ ಪ್ರಕಾಶತ್ವಮ್ ಸ್ವಸ್ಮೈ ಭಾಸಮಾನತ್ವಂ, ಅಹಂ ಶಬ್ದವಾಚ್ಯತ್ವಂ, ಅಣುಪರಿಮಾಣತ್ವಂ,

---

ಲುಪ್ತ ಚತುರ್ಥ್ಯರ್ಥಗಳು. **ಶರಣಮ್**–ಉಪಾಯಭೂತನು (ನಮಶ್ಶಬ್ದಾರ್ಥ) **ಸರ್ವಶರೀರೀ**–ಸರ್ವಚೇತನಾ ಚೇತನಗಳನ್ನೂ ಶರೀರವಾಗಿ ಉಳ್ಳವನು (ನಾರಾಯಣಶಬ್ದಾರ್ಥ) **ಪ್ರಾಪ್ಯಸ್ಸೇವ್ಯಶ್ಚ**– ಪ್ರಾಪ್ಯನೂ ಅನುಭಾವ್ಯನೂ, ಸೇವ್ಯನೂ–ಕೈಂಕರ್ಯ ಪ್ರತಿಸಂಬಂಧೀ. ("ಆಯ"ಶಬ್ದಾರ್ಥ) **ಸಾಧುಭಿರ್ಭಾವ್ಯಃ**–ಸತ್ಪುರುಷರುಗಳಿಂದ ಈ ರೀತಿಯಲ್ಲಿ ಅನುಸಂಧಾನ ಮಾಡಲ್ಪಡಬೇಕೆಂದು ತಾತ್ಪರ್ಯ.

ಅನಂತರ ಜೀವನಲ್ಲಿ ಅನುಸಂಧೇಯಗಳಾದ ಗುಣಗಳನ್ನು ಕ್ರೋಡೀಕರಿಸುತ್ತಾರೆ. ಅದಾಗಿ ಇಪ್ಪಡಿಪ್ರಾಪ್ಯನಾನ ಇತ್ಯಾದಿ– ಹೀಗೆ ಪ್ರಾಪ್ಯನಾದ ಪರಮಾತ್ಮನನ್ನು ಪ್ರಾಪಿಸುವ ಜೀವಾತ್ಮ ಈ ಅಷ್ಟಾಕ್ಷರ ಮಂತ್ರದಿಂದ ಅನುಸಂಧೇಯನಾಗುವಾಗ **ಶ್ರೀಮದ್ರಕ್ಷ್ಯತ್ವಮ್**–ಲಕ್ಷ್ಮೀವಿಶಿಷ್ಟ ನಾರಾಯಣನಿಂದರಕ್ಷಿಸಲ್ಪಡುವವನಾಗಿರುವುದು. ಇದರಿಂದ ಯೋಗಾರ್ಥವಾಗ ರಕ್ಷಕತ್ವವು ರೂಢ್ಯರ್ಥದಲ್ಲಿ ಶ್ರೀ ವಿಶಿಷ್ಟನಲ್ಲಿ ಸಮನ್ವಿತವಾಗಿ ವಿಶೇಷ್ಯದ ಹಾಗೆ, ವಿಶೇಷಣದಲ್ಲಿಯೂ ಸಮಾನವಾಗಿರುತ್ತದೆ, ಎಂಬುದು ತಿಳಿಸಲ್ಪಟ್ಟಿತು. ಇದು 'ಅ'ಕಾರಸ್ಥಪ್ರತಿ ಸಂಬಂಧದಿಂದ ಲಬ್ಧವಾದ ಅರ್ಥ. **ಅನನ್ಯರಕ್ಷ್ಯತ್ವಮ್**– ಇದು ಸಾವಧಾರಣವಾದ ಅಕಾರ ಪ್ರತಿ ಸಂಬಂಧದಿಂದ ಫಲಿತವಾದ ಅರ್ಥ. ಅದಾಗಿ ಶ್ರೀಃಪತಿ ವಿನಹ ಬೇರೆ ಯಾರಿಂದಲೂ ರಕ್ಷಿಸಲ್ಪಡದಿರುವಿಕೆ. **ಸರ್ವತ್ರಸರ್ವದಾ ಸರ್ವಪ್ರಕಾರ ರಕ್ಷ್ಯತ್ವಮ್** –ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲಿಯೂ ರಕ್ಷಿಸಲ್ಪಡುವಿಕೆ **ಸುಶೀಲ ರಕ್ಷಕತ್ವಮ್**-ಸೌಶಿಲ್ಯ ಗುಣದಿಂದ ಕೂಡಿದ ಭಗವಂತನನ್ನು ರಕ್ಷಕನನ್ನಾಗಿ ಪಡೆದಿರುವಿಕೆ. **ಪುರುಷಕಾರವತ್ವಮ್**– ಇದು ಉಕಾರಾರ್ಥ ಪ್ರತಿಸಂಬಂಧದಿಂದ ಲಬ್ಧವು. ಲಕ್ಷ್ಮಿಯ ಪುರುಷ ಕಾರವನ್ನು ಪಡೆದಿರುವಿಕೆ. **ಮಹಾವಿಶ್ವಾಸಯೋಗಿತ್ವಮ್**-ಪುರುಷಕಾರಾನು ಸಂಧಾನದಿಂದ ಉಂಟಾಗುವ ಮಹಾ ವಿಶ್ವಾಸದಿಂದ ಕೂಡಿಯಿರುವಿಕೆ.

ಅನಂತರ ಲುಪ್ತ ಚತುರ್ಥಿಯಲ್ಲಿ ಅನುಸಂಧೇಯವಾದ ಗುಣಗಳನ್ನು ತೋರಿಸುತ್ತಾರೆ. **ಸಲಕ್ಷ್ಮೀಕ ದಾಸತ್ವಮ್**. ಲಕ್ಷ್ಮೀ ವಿಶಿಷ್ಟನಾದ ಭಗವಂತನಿಗೆ ದಾಸನಾಗಿರುವುದು. **ನಿತ್ಯದಾಸತ್ವಮ್**–ಕಾಲವನ್ನು ನಿರ್ದೇಶಿಸದೆ ಇರುವುದರಿಂದ ಈ ದಾಸತ್ವವು ಯಾವದಾತ್ಮಭಾವಿ, **ನಿರುಪಾಧಿಕ ದಾಸತ್ವಮ್** – ಉಪಾಧಿ – ಕಾರಣವಿಲ್ಲದೆ ಸ್ವರೂಪತಃ ದಾಸತ್ವ, **ಅನನ್ಯಾರ್ಹದಾಸತ್ವಮ್**- 'ಉ' ಎಂಬುದು ಏವಕಾರಾರ್ಥವಾಗಿ, ಭಗವದಿತರರಿಗೆ ದಾಸನಲ್ಲದಿರುವುದು.

ಅನಂತರ "ಮ"ಕಾರದಲ್ಲಿ ಅನುಸಂಧೇಯವಾದ ಗುಣಗಳನ್ನು ತಿಳಿಸುತ್ತಾರೆ. ಅದಾಗಿ **ಜ್ಞಾನತ್ವಮ್**–ಮನ ಜ್ಞಾನೇ ಎಂಬ ಧಾತುವಿನಿಂದ ಏರ್ಪಟ್ಟ ಅರ್ಥ. ಜ್ಞಾನಸ್ವರೂಪನೂ ಜ್ಞಾನಗುಣಕನೂ ಆಗಿರುವಿಕೆ. **ಆನಂದತ್ವಮ್**– ಆ ಜ್ಞಾನವು ಅನುಕೂಲವಾಗಿರುವುದರಿಂದ ಆನಂದವಾಗಿರುವುದು, **ಸ್ವಯಂಪ್ರಕಾಶತ್ವಮ್**–ಅನ್ಯನಿರಪೇಕ್ಷ ಪ್ರಕಾಶತ್ವವು. **ಸ್ವಸ್ಮೈಭಾಸಮಾನತ್ವಮ್**–ತನಗೆ ತಾನೇ ಭಾಸಮಾನವಾಗುವುದು. **ಅಹಂಶಬ್ದವಾಚ್ಯತ್ವಮ್**–ಸ್ವಸ್ಮೈಭಾಸಮಾನನಾದ್ದರಿಂದ ನಾನು ಎಂಬ ಶಬ್ದದಿಂದ ವ್ಯವಹರಿಸಲ್ಪಡುವುದು. **ಅಣುಪರಿ**

**ಸೂಕ್ಷ್ಮತ್ವಂ, ಛೇದನಾದ್ಯನರ್ಹತ್ವಂ, ಚತುರ್ವಿಂಶತಿ ತತ್ವ ವಿಲಕ್ಷಣತ್ವಂ, ಅಮಲತ್ವಮ್. ಈಶ್ವರಾದನ್ಯ ತ್ವಂ, ಜ್ಞಾತೃತ್ವಮ್, ಅನುಕೂಲ್ಯಾದಿ ಯೋಗತ್ವಂ, ಪರಮಪುರುಷಾರ್ಥಾಪೇಕ್ಷತ್ವಮ್, ನಿಯೋಗ ಯೋಗ್ಯತ್ವಮ್, ಕೈಂಕರ್ಯಯೋಗ್ಯತ್ವಂ, ಸರ್ವಸಾಕ್ಷಾತ್ಕಾರಯೋಗ್ಯತ್ವಮ್, ನಿರತಿಶಯಾನಂದಯೋಗ್ಯ ತ್ವಮ್, ಪರಾಪೇಕ್ಷಕರ್ತೃತ್ವಮ್, ಸೋಪಾಧಿಕಸ್ವಾಮಿತ್ವಮ್, ಭಾಗವತ ಶೇಷತ್ವಂ, ಭಾಗವತ ಕಿಂಕರತ್ವಮ್, ಅನನ್ಯೋಪಾಯತ್ವಮ್, ಅವಿದ್ಯಾದಿಮತ್ವಂ, ಕರಣಾದಿ ಸಾಪೇಕ್ಷ ಜ್ಞಾನವಿಕಾಸತ್ವಮ್ ಸಂಸಾರ ಭಯಾಕ್ರಾಂತತ್ವಂ, ಅವಿದ್ಯಾನಿವೃತ್ತಿಸಾಪೇಕ್ಷತ್ವಮ್, ಅಕಿಂಚನತ್ವಮ್, ಈಶ್ವರ ಸೌಹಾರ್ದಾ**

---

ಮಾಣತ್ವಮ್–ಮಸ ಪರಿಮಾಣೇ ಎಂಬ ಧಾತುಲಬ್ಧವಾಗಿ, 'ಅಣು'ವಾಗಿರುವಿಕೆ; **ಸೂಕ್ಷ್ಮತ್ವಮ್**-ಪ್ರತಿಘಾತಾ ನರ್ಹ ಪ್ರವೇಶವತ್ವ, **ಛೇದನಾದ್ಯನರ್ಹತ್ವಮ್**–ಅಣುವಾದ್ದರಿಂದ ಛೇದಿಸಲು, ಸುಡಲು, ನೀರಿನಿಂದ ನೆನೆಸಲು ಆಗದಿರುವಿಕೆ. ಛೇದನ, ದಹನ ಕ್ಲೇದನಗಳು ಒಂದು ವಸ್ತುವಿನೊಳಗೆ ಪ್ರವೇಶಿಸಿ ಅವುಗಳ ಅವಯವ ಸಂಘಾತವನ್ನು ಬೇರೆ ಬೇರೆ ಮಾಡಿ ನಾಶ ಮಾಡುತ್ತವೆ- ಜೀವಾತ್ಮನು ಅತಿ ಸೂಕ್ಷ್ಮನಾಗಿರುವುದರಿಂದಲೂ ಅಣು ವಾಗಿರುವುದರಿಂದಲೂ ಅವನನ್ನು ಛೇದಿಸಲೂ, ಸುಡಲೂ, ನೀರಿನಿಂದ ನೆನೆಸಲು ಆಗುವುದಿಲ್ಲ. **ಚತುರ್ವಿಂಶತಿತತ್ವ ವಿಲಕ್ಷಣತ್ವಮ್**–ಪ್ರಕೃತಿಯ ವಿಕಾರಗಳಾದ ಅಚೇತನಗಳಾದ ಇಪ್ಪತ್ತು ನಾಲ್ಕು ತತ್ವಗಳಿಗಿಂತ ವಿಲಕ್ಷಣವಾದವನು. **ಅಮಲತ್ವಮ್**– ಹೀಗೆ ವಿಲಕ್ಷಣನಾಗಿರುವುದರಿಂದ ಸ್ವರೂಪ ವಿಕಾರ ರೂಪವಾದ ಮಲವಿಲ್ಲದಿರುವುದು, **ಈಶ್ವರಾ ದನ್ಯತ್ವಮ್**– ಅಣು ಸ್ವರೂಪನಾದ್ದರಿಂದ ಜೀವನು, ವಿಭುಸ್ವರೂಪನಾದ ಈಶ್ವರನಿಗಿಂತ ಬೇರೆಯಾದವನು, **ಜ್ಞಾತೃತ್ವಮ್**– ಮನ ಅವಬೋಧನೇ ಎಂಬ ಧಾತ್ವರ್ಥ. ಜ್ಞಾನಗುಣಕನು. **ಅನುಕೂಲ್ಯಾದಿ ಯೋಗ್ಯತ್ವಮ್**– ಜ್ಞಾತೃತ್ವದಿಂದ ಫಲಿಸಿದುದು. ತನ್ನ ಜ್ಞಾನವು ತನಗೆ ಅನುಕೂಲವಾಗಿರುವುದು. **ಪರಮಪುರುಷಾರ್ಥಾಪೇಕ್ಷಾ ರ್ಹತ್ವಮ್**-ಪರಮ ಪುರುಷಾರ್ಥವನ್ನು ಅಪೇಕ್ಷಿಸಲು ಯೋಗ್ಯತೆಯುಳ್ಳವನು. **ನಿಯೋಗಯೋಗ್ಯತ್ವಮ್** -ಆಜ್ಞೆ ಮಾಡಲ್ಪಡಲು ಅರ್ಹನು. ಇದೂ ಜ್ಞಾತೃತ್ವ ನಿಮಿತ್ತನಾದುದು. **ಕೈಂಕರ್ಯ ಯೋಗ್ಯತ್ವಮ್**–ಇದಂಕುರ್ವಿತಿ ನಿಯಮಿ ಸಲು ಅರ್ಹನಾದ್ದರಿಂದ, ಕೈಂಕರ್ಯ ಮಾಡಲು ಯೋಗ್ಯನು. **ಸರ್ವಸಾಕ್ಷಾತ್ಕಾರ ಯೋಗ್ಯತ್ವಮ್**–ಸಚಾನಂತ್ಯಾ ಯಕಲ್ಪತೇ "ಎಂಬ ಶ್ರುತಿಯ ಪ್ರಕಾರ ಮುಕ್ತ ದೆಸೆಯಲ್ಲಿ ಜೀವನ ಧರ್ಮ ಭೂತಜ್ಞಾನಕ್ಕೆ ಪರಿಪೂರ್ಣ ವಿಕಾಸವು ಏರ್ಪಟ್ಟು ಸರ್ವವನ್ನೂ ಸಾಕ್ಷಾತ್ಕರಿಸಲು ಯೋಗ್ಯವಾಗುವುದು, **ನಿರತಿಶಯಾನಂದ ಯೋಗ್ಯತ್ವಮ್**- ಅತ್ಯಂತ ಅತಿಶಯವಾದ ಆನಂದವನ್ನು ಪಡೆಯಲು ಯೋಗ್ಯನಾಗಿರುವಿಕೆ. "ಸ ಏಕೋ ಬ್ರಹ್ಮಣ ಆನಂದಃ– ಶ್ರೋತ್ರಿಯಸ್ಯ ಚಾಕಾಮಹತಸ್ಯ" ಎಂಬ ಶ್ರುತಿ ಲಬ್ಧ.

ಅನಂತರ "ನಮ"ಶ್ಶಬ್ದದಲ್ಲಿ ಅನುಸಂಧೇಯಗಳಾದ ಗುಣಗಳನ್ನು ತಿಳಿಸುತ್ತಾರೆ. **ಪರಾಪೇಕ್ಷಕರ್ತೃತ್ವಮ್**- ಜೀವನ ಕರ್ತೃತ್ವವು ಪರಮಾತ್ಮಾಧೀನವಾದದ್ದು. **ಸೋಪಾಧಿಕಸ್ವಾಮಿತ್ವಮ್**– ತಾನು ಪಿತಾವೆಂಬ ಕಾರಣದಿಂದ ಪುತ್ರಾದಿಗಳಿಗೆ ಸ್ವಾಮಿಯಾಗಿರುವಿಕೆ. **ಭಾಗವತ ಶೇಷತ್ವಮ್**– ಭಾಗವತರಿಗೆ ಶೇಷಭೂತನು. **ಭಾಗವತ ಕಿಂಕ ರತ್ವಮ್**–ಭಾಗವತರಿಗೆ ಶೇಷನಾದ್ದರಿಂದ, ಅವರಿಗೆ ಕಿಂಕರನಾಗಿರುವಿಕೆ. **ಅನನ್ಯೋಪಾಯತ್ವಮ್**– ಶರಣಾಗತಿ ವ್ಯತಿರಿಕ್ತವಾದ ಉಪಾಯಗಳಿಲ್ಲದವನು. ಅನಂತರ ನಮಸ್ಸಿನಲ್ಲಿ ಷಷ್ಠ್ಯಂತವಾದ ಮಕಾರದಿಂದ ಅನುಸಂಧೇಯ ವಾದ ಗುಣಗಳನ್ನು ತಿಳಿಸುತ್ತಾರೆ. ಅದಾಗಿ **ಅವಿದ್ಯಾದಿಮತ್ವಮ್**– ಅವಿದ್ಯೆ, ಆದಿಶಬ್ದದಿಂದ ಕರ್ಮವಾಸನಾ ರುಚಿಪ್ರಕೃತಿ ಸಂಬಂಧ ಯೋಗತ್ವ. **ಕರಣಾದಿಸಾಪೇಕ್ಷಜ್ಞಾನ ವಿಕಾಸವತ್ವಮ್**–ಅವಿದ್ಯಾದಿ ಸಂಬಂಧದಿಂದಾಗಿ ಇಂದ್ರಿಯಾಧೀನ ಜ್ಞಾನ ವಿಕಾಸವತ್ವವು. **ಸಂಸಾರ ಭಯಾಕ್ರಾಂತತ್ವಮ್**- ಅವಿದ್ಯಾದಿಗಳಿಂದ ಕೂಡಿರುವುದರಿಂದ ತನ್ಮೂಲವಾದ ಸಂಸಾರ ಭಯದಿಂದ ಕೂಡಿರುವುದು. **ಅವಿದ್ಯಾದಿನಿವೃತ್ತಿ ಸಾಪೇಕ್ಷತ್ವಮ್**– ಆದ್ದರಿಂದಲೇ ಅವಿದ್ಯಾದಿಗಳನ್ನು ನಿವರ್ತಿಸಿಕೊಳ್ಳಬೇಕೆಂಬ ಅಪೇಕ್ಷೆ. **ಅಕಿಂಚನತ್ವಮ್**– ಉಪಾಯಾಂತರಾನರ್ಹತ್ವ – ಇದು ನಞಸಹಿತ ಷಷ್ಠ್ಯಂತ ಮಕಾರದಿಂದ ಕೂಡಿದ ನ, ಮಃ ಎಂಬ ಶಬ್ದಗಳ ಅರ್ಥ. **ಈಶ್ವರಸೌಹಾರ್ದಾದಿಮತ್ವಮ್**

**ಧಿಮತ್ವಮ್, ಸದಾಚ್ಯಾರ್ಯ ಪ್ರಾಪ್ತಿಮತ್ವಮ್, ಸಾಧ್ಯೋಪಾಯಾನುಷ್ಠಾನಾರ್ಹತ್ವಮ್, ಉಪಾಯ ನಿಷ್ಠತ್ವಮ್, ಮಹಾ ಪ್ರಭಾವತ್ವಮ್, ವಿಶಿಷ್ಟ ವೇಷತ್ತಾಲೇ ಸೃಷ್ಟಿ ಸಂಹಾರ ವಿಷಯತ್ವಮ್, ಅಕ್ಷಯ ತ್ವಮ್, ಸ್ವತೋ ಬಹುತ್ವಮ್, ಅಸಂಖ್ಯಾತತ್ವಮ್, ಈಶ್ವರವ್ಯಾಪ್ಯತ್ವಮ್, ಈಶ್ವರ ನಿಯಾಮ್ಯತ್ವಮ್, ಈಶ್ವರ ಧಾರ್ಯತ್ವಮ್, ಇವತ್ತಿನ್ ನಿಯಮಮಡಿಯಾಹಿವನ್ದ ಈಶ್ವರ ಶರೀರತ್ವಮ್, ಈಶ್ವರಲೀಲಾರಸ ಹೇತುತ್ವಮ್, ಈಶ್ವರ ಭೋಗೋಪಕರಣಾರ್ಹತ್ವಮ್, ತದಧೀನಗತಿತ್ವಮ್, ತದಧೀನ ತತ್ಪ್ರಾಪ್ತಿತ್ವಮ್, ಐಶ್ವರ್ಯ ಕೈವಲ್ಯ ನಿರಪೇಕ್ಷತ್ವಂ, ಭಗವತ್ಪ್ರಾಪ್ತ್ಯರ್ಥಿತ್ವಮ್, ಸರ್ವಾವಿದ್ಯೋನ್ಮುಕ್ತತ್ವಮ್, ಆವಿರ್ಭೂತ ಸ್ವರೂಪತ್ವಮ್, ಸರ್ವದ್ರಷ್ಟೃತ್ವಮ್, ಸರ್ವಪ್ರಕಾರ ಭಗವದನುಭವೈಕ ಭೋಗತ್ವಮ್, ನಿರತಿಶಯಾ ನಂದತ್ವಮ್, ಭಗವದ್ಭೋಗಾರ್ಥ ಭೋಕ್ತೃತ್ವಮ್, ಐಚ್ಛಿಕವಿಗ್ರಹಾದಿ ಮತ್ವಮ್, ಇಚ್ಛಾವಿಘಾತ ರಹಿ**

---

ಉಪಾಯಕ್ಕೆ ಕಾರಣ ಭೂತವಾಗಿ, ನಮಃ ಎಂಬಲ್ಲಿ ಆಕ್ಷಿಪ್ತವಾದ ಗುಣ. **ಸದಾಚಾರ್ಯಪ್ರಾಪ್ತಿಮತ್ವಮ್** – ಉಪಾಯಾನುಷ್ಠಾನಕ್ಕೆ ಬೇಕಾದ ಸದಾಚಾರ್ಯ ಸಮಾಶ್ರಯಣ ವತ್ವ. **ಸಾಧ್ಯೋಪಾಯಾನುಷ್ಠಾನಾರ್ಹತ್ವಮ್**- ಸಾಧ್ಯವಾದ ಉಪಾಯ – ಭಕ್ತಿ, ಪ್ರಪತ್ತಿ ಇವುಗಳನ್ನು ಅನುಷ್ಠಿಸಲು ಯೋಗ್ಯನಾಗಿರುವಿಕೆ, **ಉಪಾಯ ನಿಷ್ಠತ್ವಮ್**– ಅನಂತರ ಉಪಾಯಾನುಷ್ಠಾನ ಮಾಡುವುದು. **ಮಹಾಪ್ರಭಾವತ್ವಮ್** - ಉಪಾಯಾನುಷ್ಠಾನ ಮಾಡಿದವನು ಮಹಾ ಪ್ರಭಾವಶಾಲಿ ಎಂದು ತಾತ್ಪರ್ಯ. ಅಂಥಹ ಮಹಾ ಪ್ರಭಾವದಿಂದ ಕೂಡಿರುವಿಕೆ.

ಅನಂತರ 'ನಾರ' ಶಬ್ದದಿಂದ ಜೀವನಲ್ಲಿ ಅನುಸಂಧೇಯಗಳಾದ ಗುಣಗಳನ್ನು ತಿಳಿಸುತ್ತಾರೆ. **ವಿಶಿಷ್ಟ ವೇಷತ್ತಾಲೇ ಸೃಷ್ಟಿ ಸಂಹಾರ ವಿಷಯತ್ವಮ್**–ವಿಶಿಷ್ಟವೇಷವೆಂಬುದು ಶರೀರ ಸಂಬಂಧ. ಶರೀರವನ್ನು ಪಡೆಯುವುದು ಸೃಷ್ಟಿ. ಶರೀರ ವಿಶ್ಲೇಷವು ಸಂಹಾರ, ಇವುಗಳಿಗೆ ಯೋಗ್ಯನಾಗಿರುವಿಕೆ. **ಅಕ್ಷಯತ್ವಮ್**- ನರಶಬ್ದದಿಂದ ಏರ್ಪಟ್ಟ ಅರ್ಥ- ಕ್ಷಯವಿಲ್ಲದಿರುವಿಕೆ. **ಸ್ವತೋಬಹುತ್ವಮ್** – ಜೀವರುಗಳು ಅನೇಕರಾಗಿರುವಿಕೆ. "ನಾರಸ್ತ್ವಿತಿ ಸರ್ವಪುಂಸಾಂಸಮೂಹಃ" ಎಂಬಂತೆ ಜೀವರುಗಳು ಅನೇಕರು. **ಅಸಂಖ್ಯಾತತ್ವಮ್**–ಲೆಖ್ಖ ಮಾಡಲು ಆಗದಂತೆ ಅನೇಕರು. **ಈಶ್ವರವ್ಯಾಪ್ಯತ್ವಮ್** -ಈಶ್ವರನಿಂದ ವ್ಯಾಪರಿಸಲ್ಪಡತಕ್ಕವನು. **ಈಶ್ವರನಿಯಾಮ್ಯತ್ವಮ್**– **ಈಶ್ವರಧಾರ್ಯತ್ವಮ್**–ಈಶ್ವರನಿಂದ ನಿಯಮಿಸಲ್ಪಡತಕ್ಕವನು. ಅವನಿಂದ ಧರಿಸಲ್ಪಡುವವನು. **ಇವಟ್ರಿನ್ ನಿಯಮಮಡಿಯಾಹವಂದ ಈಶ್ವರ ಶರೀರಕತ್ವಮ್**–ವ್ಯಾಪನ, ಧಾರಣ, ನಿಯಮನಗಳಿಂದ ಏರ್ಪಟ್ಟ ಈಶ್ವರ ಶರೀರತ್ವ. **ಈಶ್ವರ ಲೀಲಾರಸ ಹೇತುತ್ವಮ್**- ನಿಯಾಮ್ಯತ್ವ ಮೂಲವಾದ ಈಶ್ವರ ಲೀಲೆ ಎಂಬರಸಕ್ಕೆ ಕಾರಣವಾಗಿ ರುವಿಕೆ. **ಈಶ್ವರಭೋಗೋಪಕರಣಾರ್ಹತ್ವಮ್**- ಅದರಿಂದ ಅವನ ಭೋಗಕ್ಕೆ ಉಪಕರಣವಾಗಿರುವುದು. **ತದಧೀನಗತಿತ್ವಮ್**– ಈಶ್ವರಾಧೀನವಾದ ಗಮನಾದಿಮತ್ವ. **ತದಧೀನ ತತ್ಪ್ರಾಪ್ತಿತ್ವಮ್** - ಈಶ್ವರನ ಸಂಕಲ್ಪ ದಿಂದ ಅವನನ್ನು ಹೊಂದುವಿಕೆ. **ಐಶ್ವರ್ಯಕೈವಲ್ಯ ನಿರಪೇಕ್ಷತ್ವಮ್** – ಅದರಿಂದಾಗಿ ಐಶ್ವರ್ಯ ಕೈವಲ್ಯಗಳಲ್ಲಿ ಅಪೇಕ್ಷೆಯಿಲ್ಲದಿರುವಿಕೆ. ಭಗವತ್ಪ್ರಾಪ್ತ್ಯರ್ಥಿತ್ವಮ್- ಭಗವತ್ಪ್ರಾಪ್ತಿಯ ಯಾಚನೆ. ಅನಂತರ ನಾರಾಯಣ ಪದದ ಮೇಲಿರುವ ಚತುರ್ಥೀ ವಿಭಕ್ತಿಯಲ್ಲಿ ಅನುಸಂಧೇಯವಾದ ಗುಣಗಳು, ಸರ್ವಾವಿದ್ಯಾನ್ಮುಕ್ತತ್ವಮ್ – ಎಂದಾರಂಭಿಸಿ ಹೇಳಲ್ಪಡುತ್ತವೆ. ಅದಾಗಿ ಸರ್ವ ಪ್ರಕಾರದಿಂದಲೂ ಅವಿದ್ಯೆಯಿಂದ ಬಿಡಲ್ಪಟ್ಟವನಾಗುವಿಕೆ. ಆದ್ದರಿಂದಲೇ **ಆವಿರ್ಭೂತ ಸ್ವರೂಪತ್ವಮ್**– ಸ್ವಸ್ವರೂಪಾವಿರ್ಭಾವದಿಂದ ಕೂಡಿರುವಿಕೆ. ಸರ್ವದ್ರಷ್ಟೃತ್ವಮ್- ಅದರಿಂದ ಸರ್ವಸಾಕ್ಷಾತ್ಕಾರಾರ್ಹತೆ. ಸರ್ವಪ್ರಕಾರ ಭಗವದನುಭವೈಕಭೋಗತ್ವಮ್ - ಅದರಿಂದಾಗಿ ಸರ್ವ ಪ್ರಕಾರದಲ್ಲಿಯೂ ಭಗವದನು ಭವವೇ ಮುಖ್ಯವಾದ ಭೋಗವಾಗಿರುವಿಕೆ. **ನಿರತಿಶಯಾನಂದತ್ವಮ್** – ಆ ಭಗವದನುಭವದಿಂದ ನಿರತಿಶಯವಾದ ಆನಂದದಿಂದ ಕೂಡಿರುವಿಕೆ. **ಭಗವದ್ಭೋಗಾರ್ಥಭೋಕ್ತೃತ್ವಮ್**-ಜೀವನಿಗೆ ಪರಮ ಪದದಲ್ಲಿ ಉಂಟಾಗುವ ಭೋಕ್ತೃತ್ವವು ಭಗವದ್ಭೋಗಾರ್ಥವಾಗಿರುವುದು. **ಐಚ್ಛಿಕವಿಗ್ರಹಾದಿಮತ್ವಮ್**– ಸ್ವೇಚ್ಛೆಯಿಂದ

ತತ್ವಮ್, ಈಶ್ವರ ಲಕ್ಷಣ ವ್ಯತಿರಿಕ್ತ ಪರಮಸಾಮ್ಯಮ್, ಅಶೇಷ ಕೈಂಕರ್ಯೈಕರತಿತ್ವಮ್, ಅಪುನರಾವೃತ್ತಿಮತ್ವಮ್, ಎನ್ರು ಇವೈ ಪ್ರಧಾನಙ್ಗಳಾಹಕ್ಕೊಂಡು ಇವತ್ತೈತ್ತುಪಕ್ಕಿವರುಮ್ ಮತ್ತುಳ್ಳ ಪ್ರಾಮಾಣಿಕಾರ್ಥಙ್ಗಳುಮೆಲ್ಲಾಮ್ ಇಪ್ಪದಙ್ಗಳಿಲ್ ಅಡೈವೇ ಶಬ್ದ ಸಾಮರ್ಥ್ಯತ್ತಾಲುಮ್, ಅರ್ಥಸ್ವಭಾವತ್ತಾಲುಮ್, ಅನುಸಂಧೇಯಙ್ಗಳ್.

ಅತ್ಯನ್ತಾವಶ್ಯಾನುಸಂಧೇಯ ಸಾರತಮ ಗುಣಾರ್ಥ ಸಂಗೃಹ್ಯಾಹ.

ಪದತ್ರಯೇಽತ್ರ ಸಂಕ್ಷೇಪಾದ್ಭಾವ್ಯಾನನ್ಯಾರ್ಹ ಶೇಷತಾ ।
ಅನನ್ಯೋಪಾಯತಾ ಸ್ವಸ್ಯ ತಥಾನನ್ಯ ಪುಮರ್ಥತಾ ॥೩೬॥

---

"ಸ ಏಕಧಾ ಭವತಿ" ಇತ್ಯಾದಿ ಶ್ರುತಿ ಸಿದ್ಧವಾದ ಅನೇಕ ಶರೀರಗಳನ್ನು ಎತ್ತಿಕೊಳ್ಳುವುದು. **ಇಚ್ಛಾವಿಘಾತ ರಹಿತತ್ವಮ್**– ತನ್ನ ಇಷ್ಟಕ್ಕೆ ಯಾವ ಅಡ್ಡಿಯೂ ಇಲ್ಲದಿರುವುದು. **ಈಶ್ವರಲಕ್ಷಣವ್ಯತಿರಿಕ್ತಪರಮಸಾಮ್ಯಮ್**- ಈಶ್ವರ ಲಕ್ಷಣಗಳಾದ ಜಗತ್ಸೃಷ್ಟಿ ಸ್ಥಿತಿ ಸಂಹಾರ ಮೋಕ್ಷಪ್ರದಾದಿಗಳು ತನಗೆ ಇಲ್ಲದೆ ಅವಕ್ಕಿಂತ ಬೇರೆಯಾದ ಪರಮಸಾಮ್ಯ. "ಜಗದ್ವ್ಯಾಪಾರವರ್ಜಮ್" "ಭೋಗಮಾತ್ರಸಾಮ್ಯಲಿಂಗಾಚ್ಚ" ಎಂಬ ಸೂತ್ರಗಳಲ್ಲಿ ನಿರೂಪಿಸಿರುವಂತೆ ಭೋಗಾನುಭವದಲ್ಲಿ ಪರಮಸಾಮ್ಯ. **ಅಶೇಷ ಕೈಂಕರ್ಯೈಕರತಿತ್ವಮ್**-ಭಗವದನುಭವ ಪರಿವಾಹವಾಗಿ ಎಲ್ಲಾ ಕೈಂಕರ್ಯಗಳನ್ನು ಮಾಡಲು ಆಸೆ. **ಅಪುನರಾವೃತ್ತಿಮತ್ವಮ್**– ಸಂಸಾರಕ್ಕೆ ಪುನರಾವೃತ್ತಿ ಇಲ್ಲದಿರುವುದು. ಎನ್ರಿವೈಪ್ರಧಾನಂಗಳಾನ ಇತ್ಯಾದಿ- ಹೀಗೆ ಇವುಗಳು ಪ್ರಧಾನಗಳಾಗಿದ್ದು ಇವನ್ನು ಸಂಬಂಧಿಸಿ ಉಂಟಾಗುವ ಇತರ ಪ್ರಾಮಾಣಿಕವಾದ ಅರ್ಥಗಳೆಲ್ಲಾ ಅಷ್ಟಾಕ್ಷರದ ಪದಗಳಲ್ಲಿ ಕ್ರಮವಾಗಿ ಶಬ್ದ ಸಾಮರ್ಥ್ಯದಿಂದಲೂ, ಅರ್ಥ ಸ್ವಭಾವದಿಂದಲೂ ಅನುಸಂಧೇಯಗಳು. ಪದತ್ರಯೇಽತ್ರ ಎಂದು ಆರಂಭಿಸಿ ಕಾರಿಕೆಯಿಂದ ಮೇಲೆ ಹೇಳಿದ ಪ್ರಧಾನಾರ್ಥವನ್ನು ನಿರೂಪಿಸುತ್ತಾರೆ. ಅದಾಗಿ ಅಷ್ಟಾಕ್ಷರದ ಮೂರು ಪದಗಳಿಂದ ಕ್ರಮವಾಗಿ, ಪ್ರಣವದಲ್ಲಿ ಅನನ್ಯಾರ್ಹ ಶೇಷತ್ವವೂ, ನಮಶ್ಶಬ್ದದಲ್ಲಿ ಅನನ್ಯೋಪಾಯತ್ವವೂ, ಚತುರ್ಥ್ಯಂತ ನಾರಾಯಣ ಶಬ್ದದಲ್ಲಿ ಅನನ್ಯ ಪುರುಷಾರ್ಥವೂ ಅನುಸಂಧೇಯಗಳು. ಪ್ರಣವದಲ್ಲಿ ಅನನ್ಯಾರ್ಹ ಶೇಷತ್ವವೂ, ನಾರಾಯಣ ಶಬ್ದದಲ್ಲಿ ಅನನ್ಯ ಪುರುಷಾರ್ಥವೂ, ಮೂಲ ಮಂತ್ರದಿಂದ ಶೋಧಿತವಾದ ಸ್ವರೂಪವುಳ್ಳ ಸರ್ವಾತ್ಮರಿಗೂ ಸಾಧಾರಣವಲ್ಲವೇ. ಹಾಗೆಯೇ ನಮಃ ಪದದಿಂದ ಫಲಿಸಿದ ಅನನ್ಯೋಪಾಯತ್ವವೂ ಸರ್ವಾತ್ಮಸಾಧಾರಣವಾಗಿಯೇ ಅಂಗೀಕರಿಸಬೇಕಲ್ಲವೆ. ಹಾಗಿರುವಾಗ ಉಪಾಯಾಂತರ ಪರಿಗ್ರಹವು ಬದ್ಧ ಜೀವಾತ್ಮರಿಗೆ ಏಕೆ ಎಂಬುದು ಕೆಲವರ ಚೋದ್ಯ. ಇದಕ್ಕೆ ಸಮಾಧಾನ– ಶ್ರೀ ಪ್ರತಿಯೊಬ್ಬನೇ ಸಿದ್ಧೋಪಾಯನು. ಬೇರೆ ಯಾರೂ ಇಲ್ಲ. ಸಂಸಾರಿ ಜೀವನು ಅವನನ್ನು ಪಡೆಯಲು ಅವನ ನಿಗ್ರಹನಿವೃತ್ತಿಗೋಸ್ಕರ ಭಕ್ತಿ ಪ್ರಪತ್ತಿರೂಪ ಉಪಾಯಾನುಷ್ಠಾನವನ್ನು ಮಾಡಿ ಅವನ ಅನುಗ್ರಹವನ್ನು ಪಡೆಯಬೇಕೆಂಬುದು ಶಾಸ್ತ್ರ ವ್ಯವಸ್ಥೆಯಾದ್ದರಿಂದ ಮೇಲೆ ಹೇಳಿದ ಚೋದ್ಯಕ್ಕೆ ಅವಕಾಶವಿಲ್ಲ. ಈ ಅರ್ಥವನ್ನೊಳಗೊಂಡಂತೆ "ಉಪಾಯಸ್ಸ್ವ ಪ್ರಾಪ್ತೇರುಪನಿಷದಧೀತಸ್ಸ ಭಗವಾನ್ ಪ್ರಸತ್ತ್ಯೈ ತಸ್ಯೋಕ್ತೇ ಪ್ರಸದನ ನಿದಿಧ್ಯಾಸನಗತೀ ॥" ಎಂದು ಆಚಾರ್ಯರು ಅನುಗ್ರಹಿಸಾತ್ತಾರೆ. ಅನನ್ಯಶಬ್ದಕ್ಕೆ ನೈರಪೇಕ್ಷ್ಯವೆಂದು ಅರ್ಥಮಾಡಿ, "ಅನನ್ಯೋಪಾಯತಾ" ಎಂಬ ಶಬ್ದಕ್ಕೆ ನಿರಪೇಕ್ಷೋಪಾಯತ್ವವೆಂದು ಚೋದ್ಯವು ಹೊರಟಿದೆ. ಇದು ಸರಿಯಲ್ಲ. ಅನನ್ಯ ಶೇಷತ್ವ, ಅನನ್ಯಪುಮರ್ಥತಾ ಎಂಬಲ್ಲಿ ಅನನ್ಯಶಬ್ದಕ್ಕೆ ಭಗವದನ್ಯಪರತ್ವವಾಗಿ ಅರ್ಥ ಮಾಡುವಂತೆ, ಅನನ್ಯೋಪಾಯತಾ ಎಂಬಲ್ಲಿಯೂ ಭಗವದನ್ಯನು ಮೋಕ್ಷಕ್ಕೆ ಉಪಾಯವಿಲ್ಲ. ಭಗವಂತನು ಉಪಾಯ ಅಂದರೆ ಸಿದ್ಧೋಪಾಯನು. ಅವನ ವಶೀಕರಣಾರ್ಥವಾಗಿ ಸಾಧ್ಯೋಪಾಯವು ಆವಶ್ಯಕವೆಂದು ಸಿದ್ಧಾಂತ.

ಏವಂ ಮನ್ತ್ರಾರ್ಥಾನು ಸಂಧಾಯಿ ಸಹವಾಸಿನಾಮಪಿ ಬಾಹ್ಯಕುದೃಷ್ಟಿ ವಾದ್ಯೈರ್ಮತಿಕಾಲುಷ್ಯಂ ನಜಾಯತ ಇತ್ಯಾಹ.

ಇಪ್ಪಡಿ 1) "ಸರ್ವಮಷ್ಟಾಕ್ಷರಾಂತಸ್ಥಮ್" ಎನ್ನುಮ್ಪಡಿ ಇಮ್ಮಕ್ಕಿಯ ತಿರುಮನ್ತ್ರತ್ತಿಲೇ ಚಿದ ಚಿದೀಶ್ವರ ಸ್ವರೂಪಙ್ಗಳುಮ್, ಜೀವರ್ ಹಳುಡೈಯ ಅನ್ಯೋನ್ಯ ಭೇದಙ್ಗಳುಮ್, ಶೇಷಶೇಷಿಭಾವಾದಿಹ ಳಾಲೇ ನಿರುಪಾಧಿಕ ಜೀವೇಶ್ವರ ಭೇದಙ್ಗಳುಮ್, ನಿಖಿಲ ಜಗನ್ನಿಮಿತ್ತೋಪಾದಾನ ಭೂತ ಪರದೇವತಾ ವಿಶೇಷ ನಿರ್ಧಾರಣಾದಿಹಳುಮ್, ಸಿದ್ಧಿಕ್ಕೈಯಾಲ್ ಇಪ್ಪಡಿ ಅನುಸಂಧಿಪ್ಪಾರಿರುನ್ದವೂರಿಲಿರುಕ್ಕುಮವರ್ ಹಳುಕ್ಕುಮ್ 1) ಈಶ್ವರನ್ ಇಲ್ಲೈಯೆನ್ನುಮ್, 2) ನಿರ್ವಿಶೇಷನೆನ್ನುಮ್, 3) ಅತ್ಯನ್ತೋದಾಸೀನನೆನ್ನುಮ್, 4) ಪ್ರತಿಫಲನ ತುಲ್ಯೈಶ್ವರ್ಯನೆನ್ನುಮ್, 5) ಕರ್ಮವಿಶೇಷ ಸಿದ್ಧೈಶ್ವರ್ಯನೆನ್ನುಮ್, 6) ಕದಾಚಿತ್ಕರ್ಮಾದಿ ಪರವಶನೆನ್ನುಮ್ 7) ತ್ರಿಮೂರ್ತಿಹಳುಮ್ ಸಮರೆನ್ನುಮ್, 8) ಏಕರೆನ್ನುಮ್, 9) ತ್ರಿಮೂರ್ತ್ಯುತ್ತೀರ್ಣನ್ ಪರತತ್ವಮೆನ್ನುಮ್, 10) ಬ್ರಹ್ಮಾದಿಹಳಿಲೇ ಒರುವನ್ ಈಶ್ವರನೆನ್ನುಮ್ 11) ಸ್ವರೂಪ ಪರಿಣಾಮ ವಾನೆನ್ನುಮ್, 12) ನಿಮಿತ್ತೋಪಾದಾನೈಕ್ಯಂ ಕೊಳ್ಳವೊಣ್ಣಾದೆನ್ನುಮ್, 13) ಜೀವೇಶ್ವರರ್‌ಹಳ್ ಏಕಾತ್ಮಾವೆನ್ನುಮ್. 14) ಉಪಾಧಿಸಿದ್ಧ ಭೇದರೆನ್ನುಮ್, 15) ನಿತ್ಯಭಿನ್ನಾಭಿನ್ನರೆನ್ನುಮ್, 16) ಜೀವನ್ ಕರ್ಮಮಾತ್ರಾಧೀನ ಶೇಷಭಾವನೆನ್ನುಮ್, 17) ಅತಿಶಯಿತ ಶೇಷಭಾವನೆ

---

## ಅಷ್ಟಾಕ್ಷರ ಮಂತ್ರಾರ್ಥಾನು ಸಂಧಾನದಿಂದ ಬಾಹ್ಯ ಕುದೃಷ್ಟಿ ಮತಗಳಲ್ಲಿ ಮನಸ್ಸು ಹೋಗಲಾರದು.

ಹೀಗೆ ಮೇಲೆ ಹೇಳಿದ ಅಷ್ಟಾಕ್ಷರ ಮಂತ್ರದ ಅರ್ಥ ವಿಶೇಷಗಳನ್ನು ಅನುಸಂಧಾನ ಮಾಡುವವರಿಗೆ ಬಾಹ್ಯ ಕುದೃಷ್ಟಿಮತಗಳಿಂದ ಬುದ್ಧಿಯು ಕಲಗುವುದಿಲ್ಲವೆಂದು ಇಪ್ಪಡಿ 1) "ಸರ್ವಮಷ್ಟಾಕ್ಷರಾಂತಸ್ಥಂ" ಎಂದಾರಂಭಿಸಿ ಅನುಗ್ರಹಿಸುತ್ತಾರೆ- ಆದಾಗಿ ಹೀಗೆ ಅಷ್ಟಾಕ್ಷರ ಮಂತ್ರದಲ್ಲಿ ಸರ್ವಾರ್ಥಗಳೂ ಅಡಗಿವೆ, ಎಂದು ಹೇಳುವಂತೆ ಇರುವ ಈ ದಿವ್ಯ ಮಂತ್ರದಲ್ಲಿ 1) ಚಿತ್ತು, ಅಚಿತ್ತು, ಈಶ್ವರರ ಸ್ವರೂಪಗಳೂ 2) ಜೀವರುಗಳ ಅನ್ಯೋನ್ಯಭೇದವೂ 3) ಶೇಷ ಶೇಷಿ ಭಾವಾದಿಗಳಿಂದ ನಿರುಪಾಧಿಕ ಜೀವೇಶ್ವರ ಭೇದವೂ 4) ನಿಖಿಲ ಜಗತ್ತಿಗೂ ಉಪಾದಾನಕಾರಣನಾದ ನಾರಾಯಣನೇ ಪರದೇವತೆ ಎಂಬ ನಿರ್ಧಾರಣವೂ, ಆದಿ ಪದದಿಂದ ಜ್ಞಾತೃತ್ವ, ಶೇಷತ್ವಾದಿ ನಿಶ್ಚಯಗಳೂ ಸಿದ್ಧಿಸುತ್ತವೆ. ತನ್ನಿಮಿತ್ತವಾಗಿ ಹೀಗೆ ಅನುಸಂಧಾನ ಮಾಡುವವರು ಇರುವ ಊರಲ್ಲಿರುವರಿಗೂ ಈ ಕೆಳಗೆ ಹೇಳುವ ಬುದ್ಧಿ ವ್ಯತ್ಯಾಸಗಳು ಉಂಟಾಗುವುದಿಲ್ಲ. ಆ ಬುದ್ಧಿ ವ್ಯತ್ಯಾಸಗಳು ಯಾವುವೆಂದರೆ ಈಶ್ವರನು 1) ಇಲ್ಲವೆಂಬುದು (ನಿರೀಶ್ವರಸಾಂಖ್ಯ, ನಿರೀಶ್ವರ ಮೀಮಾಂಸಕ, ಮಾಧ್ಯಮಿಕ ಬೌದ್ಧ ಲೋಕಾಯತಿಕ, (ನಾಸ್ತಿಕರ ಮತ) ಈಶ್ವರನು (2) ನಿರ್ವಿಶೇಷನು (ಮಾಯಾವಾದಿಗಳ ಮತ) ಅತ್ಯಂತೋದಾಸೀನನು (ಸೇಶ್ವರ ಸಾಂಖ್ಯಮತ) 4) ಪ್ರತಿಫಲನತುಲ್ಯೈಶ್ವರ್ಯನು 5) ಕರ್ಮ ವಿಶೇಷ ಸಿದ್ಧೈಶ್ವರ್ಯನು 6) ಕದಾಚಿತ್ ಕರ್ಮಪರವಶನು (ಇವು ಮೂರೂ ಯೋಗ ಪಾತಂಜಲಮತ) 7) ತ್ರಿಮೂರ್ತಿಗಳೂ ಸಮರು, 8) ಏಕರು 9) ತ್ರಿಮೂರ್ತಿಗಳಿಂದ ಮೇಲಾದವನು ಪರತತ್ವ, 10) ಬ್ರಹ್ಮಾ ಈಶ್ವರನೆಂದೂ (ಹಿರಣ್ಯಗರ್ಭಮತ) 11) ರುದ್ರನು ಈಶ್ವರನೆಂದೂ (ಪಾಶುಪತಮತ) 12) ಸ್ವರೂಪ ಪರಿಣಾಮವುಳ್ಳವನು (ಯಾದವ ಮತ) 13) ನಿಮಿತ್ತ ಉಪಾದಾನ ಕಾರಣಗಳಿಗೆ ಐಕ್ಯವನ್ನು ಹೇಳಲಾಗದು (ಕಣಾದ ಮತ) 14) ಒಂದೇ ಆತ್ಮಾವೆಂಬುದು (ಮಾಯಾವಾದಿ ಮತ) 15) ಉಪಾಧಿ ಸಿದ್ಧ ಭೇದವೆಂಬುದು (ಭಾಸ್ಕರಮತ) 16) ನಿತ್ಯಭಿನ್ನಾಭಿನ್ನವೆಂಬುದು (ಯಾದವ ಪ್ರಕಾಶ ಮತ) ಜೀವನು 17) ಕರ್ಮ ಮಾತ್ರಾಧೀನ ಶೇಷ ಭಾವನೆಂಬುದು

ನ್ರುವ್, 18) ಜಡನೆನ್ರುವ್, 19) ಜ್ಞಾನಮಾತ್ರ ಸ್ವರೂಪನೆನ್ರುವ್, 20) ನಿತ್ಯ ಮುಕ್ತನೆನ್ರುವ್, 21) ಆರೋಪಿತಭೋಗನೆನ್ರುವ್ 22) ಕರ್ತಾವಲ್ಲನೆನ್ರುವ್, 23) ಈಶ್ವರನಿರಪೇಕ್ಷ ಕರ್ತಾವೆನ್ರುವ್ 24) ಆ ಪ್ರಳಯಸ್ಥಾಯಿ ಎನ್ರುವ್, 25) ಆಮೋಕ್ಷಸ್ಥಾಯಿ ಎನ್ರುವ್ 26) ಏಕನೆನ್ರುವ್. 27) ಸ್ವನಿಷ್ಠನೆನ್ರುವ್, 28) ಸ್ವರೂಪತಃ ಕಾರ್ಯಭೂತನೆನ್ರುವ್, 29) ಕಾರ್ಯತ್ವ ಪ್ರಸಙ್ಗರಹಿತನೆನ್ರುವ್, 30) ಕರ್ಮಮಾತ್ರೋಪಾಯನೆನ್ರುವ್, 31) ಮುಕ್ತದಶೈಯಿಲ್ ಪಾಷಾಣ ಕಲ್ಪನೆನ್ರುವ್, 32) ಸ್ವಾತ್ಮಾನಂದಮಾತ್ರ ತೃಪ್ತನೆನ್ರುವ್ 33) ಅತ್ಯನ್ತ ಸ್ವತನ್ತ್ರನಾಮೆನ್ರುವ್ 34) ಈಶ್ವರನೋಡೇ ಏಕೀ ಭೂತನಾಮೆನ್ರುವ್, 35) ವ್ಯಾಪಾರಾದಿ ರಹಿತನಾಮೆನ್ರುವ್, 36) ವಿಭಾಗಾ ವಿಭಾಗಾದಿ ಶಕ್ತಿಮಾನೆನ್ರುವ್, 37) ಆನಂದತಾರತಮ್ಯ ವಾನೆನ್ರುವ್, 38) ವ್ಯವಸ್ಥಿತ ಸಾಲೋಕ್ಯಾದಿ ಭೇದವಾನೆನ್ರುವ್. ಮತ್ತು ಮಿಪ್ಪುಡೈಹಳಿಲುಳ್ಳ ಬಾಹ್ಯಕುದೃಷ್ಟಿ ಮತಙ್ಗಳೊನ್ರಾಲುಮ್ ಕಲಕ್ಕಮಾ ವಾರಾದು.

ಮನ್ತ್ರಾರ್ಥಾಭಿಜ್ಞಸ್ಯ ಸ್ವನಿಷ್ಠಾ ವಿರೋಧಿನೋ ವಿನಿವರ್ತಂತ ಇತ್ಯಾಹ.

ಇಪ್ಪಡಿಯೇ ರಕ್ಷಕನಾನ ಶ್ರಿಯಃಪತಿಯೈಪ್ಪತ್ತ ವಿಶ್ವಾಸಮಾಂದ್ಯಮುಮ್, ರಕ್ಷಕಾನ್ತರಾನ್ವೇಷಣಮುಮ್, 'ತ್ವಂ ಮೇ ಹಂ ಮೇ" ಎನ್ರ ಪಿಣಕ್ಕುಮ್, ನಿರುಪಾಧಿಕಾನ್ಯ ಶೇಷತ್ವ ಭ್ರಮಮುಮ್, ದೇವತಾ

---

18) ಅನಿಯತ ಶೇಷ ಭಾವನೆಂಬುದು 19) ಜಡನೆಂಬುದು (ನೈಯಾಯಿಕ ಮತ) 20) ಜ್ಞಾನಮಾತ್ರಸ್ವರೂಪನೆಂಬುದು 21) ನಿತ್ಯ ಮುಕ್ತನೆಂಬುದು, 22) ಆರೋಪಿತ ಭೋಗನೆಂಬುದು 23) ಕರ್ತೃವಲ್ಲನೆಂಬುದು ಇವು ನಾಲ್ಕೂ ಸಾಂಖ್ಯಮತ 24) ಈಶ್ವರ ನಿರಪೇಕ್ಷಕರ್ತೃವೆಂಬುದು (ಕದಂಬ ಮೀಮಾಂಸಕ ಮತ) 25) ಆ ಪ್ರಳಯ ಸ್ಥಾಯಿ. 26) ಆಮೋಕ್ಷಸ್ಥಾಯಿ, ಪ್ರಳಯ ಮೋಕ್ಷಗಳ ಪರ್ಯಂತ ಇರುವವನು ಎಂದರ್ಥ (ಅದ್ವೈತ್ಯೇಕದೇಶಿಮತ) 27) ಏಕನೆಂಬುದು (ಇದೂ ಅದೇ ಮತ) 28) ಸ್ವನಿಷ್ಠನೆಂಬುದು-ಸ್ವತಂತ್ರನೆಂದರ್ಥ (ಮೀಮಾಂಸಕ ಮತ) 29) ಸ್ವರೂಪತಃ ಕಾರ್ಯಭೂತನೆಂಬುದು, ಯಾದವ ಪ್ರಕಾಶ ಮತ 30) ಕಾರ್ಯತ್ವ ಪ್ರಸಂಗ ರಹಿತನು 31) ಕರ್ಮ ಮಾತ್ರೋಪಾಯನು- ಕರ್ಮಾನುಷ್ಠಾನವೇ ಮುಕ್ತ್ಯುಪಾಯ. (ಇವೆರಡು ಮೀಮಾಂಸಕ ಮತ) 32) ಮುಕ್ತಾವಸ್ಥೆಯಲ್ಲಿ ಪಾಷಾಣ ಕಲ್ಪನೆಂಬುದು (ನೈಯಾಯಿಕ ಮತ), 33) ಸ್ವಾತ್ಮಾನಂದ ಮಾತ್ರತೃಪ್ತನೆಂಬುದು (ಮೀಮಾಂಸಕ ಮತ) 34) ಅತ್ಯಂತ ಸ್ವತಂತ್ರನು ಎಂಬುದು (ಪಾಶುಪತಮತ) 35) ಈಶ್ವರನೊಡನೆ ಒಂದುಗೂಡಿದವನು ಎಂಬುದು (ಔಡುಲೋಮಿಮತ) 36) ವ್ಯಾಪಾರ ರಹಿತನೆಂಬುದು (ವಿಭುವಾದ ಸ್ವರೂಪದಲ್ಲಿ ವ್ಯಾಪಾರವಿಲ್ಲವೆಂಬ (ನೈಯಾಯಿಕ ಮತ) 37) ವಿಭಾಗ, ಅವಿಭಾಗ ಮೊದಲಾದ ಶಕ್ತಿಯುಳ್ಳವನು (ಇದು ಯಾದವ ಪ್ರಕಾಶ ಮತ) ಜೀವನು, 38) ಆನಂದ ತಾರತಮ್ಯವುಳ್ಳವನು (ಮಧ್ವಮತ) 39) ವ್ಯವಸ್ಥಿತವಾದ ಸಾಲೋಕ್ಯ. ಸಾಮೀಪ್ಯ, ಸಾಯುಜ್ಯಭೇದವುಳ್ಳವನು (ಮಧ್ವಮತ) ಇನ್ನೂ ಈ ರೀತಿಯಾಗಿರುವ ವೇದ ಬಾಹ್ಯಮತಗಳಿಂದಲೂ ವೇದವನ್ನು ಪ್ರಮಾಣವಾಗಿ ಅಂಗೀಕರಿಸಿ ಕುತ್ಸಿತ ದೃಷ್ಟಿಯಿಂದ ಅರ್ಥ ಮಾಡುವ ಮತಗಳಿಂದಲೂ ಬುದ್ಧಿ ಭ್ರಮವು ಅಷ್ಟಾಕ್ಷರ ಮಂತ್ರಾರ್ಥಗಳನ್ನು ತಿಳಿದವನಿಗೆ ಉಂಟಾಗುವುದಿಲ್ಲವೆಂಬುದು ತಾತ್ಪರ್ಯ.

ಇಪ್ಪಡಿಯೇ ಇತ್ಯಾದಿ-ಹೀಗೆ ರಕ್ಷಕನಾದ ಶ್ರಿಯಃ ಪತಿಯನ್ನು ಕುರಿತು, ವಿಶ್ವಾಸ ಮಾಂದ್ಯವೂ, ರಕ್ಷಕಾಂತರಾನ್ವೇಷಣವೂ, "ತ್ವಂಮೇ-ನೀನು ನನಗೆ ದಾಸನು", ಎಂದು ಹೇಳುವ ಭಗವಂತನೊಡನೆ, "ಅಹಂಮೇ - ನಾನು ಸ್ವತಂತ್ರನು, ನಿನಗೆ ದಾಸನಲ್ಲ"ವೆಂಬ, ಪಿಣುಕ್ಕುಮ್-ವಾದವೂ, ನಿರುಪಾಧಿಕವಾದ ಅನ್ಯಶೇಷತ್ವ ಭ್ರಮವೂ, (ಭಗವಂತನನ್ನು ಬಿಟ್ಟು ಇತರರಲ್ಲಿರುವ ಶೇಷತ್ವವು ಸೋಪಾಧಿಕ - ನಿರುಪಾಧಿಕವಲ್ಲ. ಆ ಶೇಷತ್ವವನ್ನು ನಿರುಪಾಧಿಕವೆಂದು ತಿಳಿಯುವುದು. ಭ್ರಮಜ್ಞಾನವೆಂದರ್ಥ), ದೇವತಾಂತರಗಳಲ್ಲಿ ಪ್ರವಣತೆಯೂ, ದೇವತಾಂತರ

ನ್ತರ ಪ್ರಾವಣ್ಯಮುಮ್,ತದ್ಭಕ್ತ ಸಂಸರ್ಗಮುಮ್,ಮತ್ತುಮುಳ್ಳ ಅಸೇವ್ಯ ಸೇವಾರುಚಿಯುಮ್,ದೇಹಾತ್ಮ ಭ್ರಮಾದಿಹಳುಮ್, ಸ್ವತಂತ್ರಾತ್ಮ ಭ್ರಮಾದಿಹಳುಮ್, ಸ್ವಾರ್ಥ ಪರಿಗ್ರಹಮುಮ್, ಭಾಗವತಾಪಚಾರ ಮುಮ್, ಆಕಿಂಚನ್ಯ ವಿಸ್ಮೃತಿಯುಮ್, ಸಂಸಾರಾನು ವೃತ್ತಿರುಚಿಯುಮ್,ಆತ್ಮನಾಶಾದಿ ಭಯಮುಮ್ ಅಸದಾಚಾರ ರುಚಿಯುಮ್, ಶತ್ರುಮಿತ್ರಾದಿ ವಿಭಾಗ ನಿರೂಪಣಮುಮ್, ಬಾಂಧವಾಂತರಪರಿಗ್ರಹ ಮುಮ್. ಪ್ರಯೋಜನಾಂತರ ರುಚಿಯುಮ್, ಪರಮಪ್ರಯೋಜನ ವೈಮುಖ್ಯಮುಮ್ ಮತ್ತುಮ್, ಸ್ವನಿಷ್ಠಾ ವಿರೋಧಿಹಳೊನ್ರುಮ್ ಪಿನ್ನಾಡಾದು.

ಇಹ ನಿಜಪಕ್ಷವಿರುದ್ಧೈ ರೀದೃಶ ನಿಷ್ಠಾ ವಿರೋಧಿಭಿಶ್ಚಾನ್ಯೈಃ ।
ದ್ವಿಚತುಷ್ಕ ಸಾರವೇದೀ ಗಂಗಾಹ್ರದ ಇವ ನ ಗಚ್ಛತಿ ಕ್ಷೋಭಮ್ ॥84॥

### ಅಥ ಮೂಲಮನ್ತ್ರೇದಶವಿಧವಾಕ್ಯ ವಾಕ್ಯಾರ್ಥಾ ನಾಹ

ಇತ್ತಿರುಮನ್ತ್ರತ್ತಿಲ್ ವಾಕ್ಯಮುಮ್ ವಾಕ್ಯಾರ್ಥಮುಮ್ ಇರುಕ್ಕಪ್ಪಡಿ ಎಜ್ಗನೇ ಎನ್ನಿಲ್–ಇತ್ತೈ ಏಕವಾಕ್ಯ ಮೆನ್ರುಮ್ ವಾಕ್ಯದ್ವಯ ಮೆನ್ರುಮ್ ವಾಕ್ಯತ್ರಯಮೆನ್ರುಮ್ ಅವ್ವೋ ಸಂಪ್ರದಾಯ ಜ್ಗಳಾಲೇ ಅನುಸಂಧಿಪ್ಪಾರ್‌ಹಳ್.

---

ಭಕ್ತರಲ್ಲಿ ಸಂಬಂಧವೂ, ಇನ್ನೂ ಇತರ ಅಸೇವ್ಯರ ಸೇವಾ ರುಚಿಯೂ, ದೇಹಾತ್ಮ ಭ್ರಮಾದಿಗಳೂ, ಸ್ವಪ್ರಯೋಜನಕ್ಕಾಗಿ ವಸ್ತ್ವಂತರಗಳನ್ನು ಪರಿಗ್ರಹಿಸಿ, ಭಗವತ್ಕೈಂಕರ್ಯಕ್ಕೆ ಎಂಬ ದೃಷ್ಟಿಯಿಲ್ಲದಿರುವುದು, ಭಾಗವತಾಪಚಾರವೂ ತನ್ನ ಆಕಿಂಚನ್ಯವನ್ನು ಮರೆತು ಬಿಡುವುದೂ, ಸಂಸಾರವು ಅನುವರ್ತಿಸುವುದರಲ್ಲಿ ರುಚಿಯೂ, ಆತ್ಮನಾಶಾದಿ ಭಯವೂ, ಅಸದಾಚಾರ–ದುರಾಚಾರ ರುಚಿಯೂ, ಭಗವದ್ಭಕ್ತನಿಗೆ ಎಲ್ಲರೂ ಮಿತ್ರರಾಗಿರುವಾಗ ಶತ್ರುಮಿತ್ರಾದಿ ವಿಭಾಗವನ್ನು ನಿರೂಪಿಸುವುದೂ, ಭಗವಂತನನ್ನು ಬಿಟ್ಟು ಇತರರನ್ನು ಬಂಧುಗಳಾಗಿ ಪರಿಗ್ರಹಿಸುವುದೂ. ಪ್ರಯೋಜನಾಂತರ ರುಚಿಯೂ, ಪರಮ ಪ್ರಯೋಜನವಾದ ಮೋಕ್ಷದಲ್ಲಿ ವಿಮುಖತೆಯೂ ಇತರ ಸ್ವಾರ್ಥಕರ್ತೃತ್ವ ಭ್ರಮಾದಿ ಸ್ವಾಧಿಕಾರ ವಿರೋಧಿಗಳಾದ ಬುದ್ಧಿ ಭ್ರಮಗಳು ಉಂಟಾಗುವುದಿಲ್ಲ.

**ಇಹನಿಜಪಕ್ಷವಿರುದ್ಧೈ**: ಎಂದಾರಂಭಿಸಿ ಮೇಲೆ ಹೇಳಿದ ಅರ್ಥಗಳನ್ನು ಶ್ಲೋಕ ರೂಪವಾಗಿ ಸಂಗ್ರಹಿಸುತ್ತಾರೆ. ಆದಾಗಿ **ಇಹ**– ಈ ಪ್ರಪಂಚದಲ್ಲಿ, **ನಿಜಪಕ್ಷವಿರುದ್ಧೈಃ**- ಸ್ವಪಕ್ಷ ವಿರುದ್ಧಗಳಾದ ಬಾಹ್ಯ ಕುದೃಷ್ಟಿ ಪಕ್ಷಗಳಿಂದಲೂ, **ಈದೃಶನಿಷ್ಠಾವಿರೋಧಿಭಿಃ**– ಪ್ರಪತ್ತಿ ನಿಷ್ಠಾ ವಿರೋಧಿಗಳಾದ ಅನ್ಯೈಶ್ಚ–ವಿಶ್ವಾಸ ಮಾಂದ್ಯಾದಿಗಳಿಂದ ದ್ವಿಚತುಷ್ಕಸಾರವೇದೀ–ಅಷ್ಟಾಕ್ಷರಸಾರವನ್ನು ತಿಳಿದವನು, **ಗಂಗಾಹ್ರದ ಇವ**–ಗಂಗಾ ನದಿಯಮಡುವಿನ ಹಾಗೆ, **ಕ್ಷೋಭಂನಗಚ್ಛತಿ**– ಇತರ ನದಿಗಳ ಸಂಘರ್ಷದಿಂದ ಗಂಗೆಯ ಮಡುವು ಹೇಗೆ ಕ್ಷೋಭವನ್ನು ಹೊಂದುವುದಿಲ್ಲವೋ, ಹಾಗೆ ಕ್ಷೋಭವನ್ನು ಹೊಂದುವುದಿಲ್ಲ.

### ಅಷ್ಟಾಕ್ಷರ ದಿವ್ಯ ಮಂತ್ರದಲ್ಲಿ ವಾಕ್ಯ, ವಾಕ್ಯಾರ್ಥಗಳನ್ನು ತಿಳಿಸುವ ದಶವಿಧ ಯೋಜನೆಗಳು

ಹೀಗೆ ತಿರುಮಂತ್ರದಲ್ಲಿ ಪದ ಪದಾರ್ಥಗಳನ್ನು ಕೃಪೆ ಮಾಡಿ ಹೇಳಿದ ನಂತರ, ವಾಕ್ಯ ವಾಕ್ಯಾರ್ಥಗಳಿರುವ ಪ್ರಕಾರವನ್ನು **ಇತ್ತಿರುಮಂತ್ರತ್ತಿಲ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಇದನ್ನು ಏಕ ವಾಕ್ಯವೆಂದೂ, ವಾಕ್ಯದ್ವಯವೆಂದೂ, ವಾಕ್ಯತ್ರಯವೆಂದೂ, ಆಯಾಯಾ ಸಂಪ್ರದಾಯಗಳಲ್ಲಿ ಅನುಸಂಧಾನ ಮಾಡುತ್ತಾರೆ ಈ ಅಷ್ಟಾಕ್ಷರ ಮಂತ್ರದಲ್ಲಿ ವಾಕ್ಯವೂ, ವಾಕ್ಯಾರ್ಥವೂ ಇರುವ ರೀತಿಯನ್ನು ಹೀಗೆ ಬಹು ಪ್ರಕಾರವಾಗಿ ವಿಭಾಗಿಸಿ ಅನುಸಂಧಾನ ಮಾಡುತ್ತಾರೆ. ಈ ಅಷ್ಟಾಕ್ಷರವು, ಒಂದು ವಾಕ್ಯವೆಂದೂ ಎರಡು ವಾಕ್ಯಗಳೆಂದೂ, ಮೂರು ವಾಕ್ಯಗಳೆಂದೂ ಮೂರು ಪಕ್ಷಗಳುಂಟು. ಒಂದು ವಾಕ್ಯವೆಂಬ ಪಕ್ಷದಲ್ಲಿ 1) ಉಪಾಯ

## ಏವಂ ದಶವಿಧಯೋಜನಾ ಉಚ್ಯನ್ತೇ

**ಇಪ್ಪಡಿ ವಾಕ್ಯಾರ್ಥತ್ತೈಯುಂಪ್** ಬಹು **ಪ್ರಕಾರಮಾಹ ಮಹುತ್ತನುಸಂಧಾನಮ್ ಪಣ್ಣುವಾರ್ಹಳ್. ಏಕವಾಕ್ಯಮಾನ ಪೋದು** 1) **"ತಸ್ಯವಾಚಕಃ ಪ್ರಣವಃ" ಇತ್ಯಾದಿಹಳಿರ್ ಪಡಿಯೇ ಪ್ರಣವ ಪ್ರತಿಪಾದ್ಯ ಸ್ವಭಾವ ವಿಶಿಷ್ಟಾಯ ನಾರಾಯಣಾಯ ನಮಃ". ಎನ್ರು ಅನ್ವಯಮಾಮ್. ಇಪ್ಪ್ರಣವನ್ತಾನೇ ನಾಮಮಾಹವತ್ತಾಯ್ ನಿರ್ಕ** 2) **ಅವ್ಯಕ್ತಾರ್ಥ ತಯೋಙ್ಕಾರಃ ಕೇವಲಂ ನೈವ ಸಾಧಕಃ" ಎನ್ರು ಶಾಣ್ಡಿಲ್ಯೋಕ್ತ ಪ್ರಕ್ರಿಯೈಯಾಲೇ ವ್ಯಾಪಕಮನ್ತ್ರಙ್ಗಳಿಲ್ ನಾಮಾನ್ತರಮ್ ವ್ಯಕ್ತೈರ್ಥಮ್. ಇನ್ದ ಯೋಜನಾ ವಿಶೇಷಮ್ ಅಹಿರ್ಬುಧ್ನ್ಯೋಕ್ತಮಾನ ಸ್ಥೂಲಾನು ಸಂಧಾನ ಪ್ರಕಾರತ್ತೈ**

---

ಪರವಾಗಿಯೂ 2) ಉಪೇಯ ಪರವಾಗಿಯೂ ಎರಡು ವಿಧ ಯೋಜನೆಗಳು. ಎರಡು ವಾಕ್ಯಗಳೆಂಬ ಪಕ್ಷದಲ್ಲಿ 1) ಸ್ವರೂಪ ಪರವಾಗಿಯೂ 2) ಸಪರಿಕರ ಆತ್ಮ ಸಮರ್ಪಣರೂಪ ಉಪಾಯಪರವಾಗಿಯೂ 3) ಇಷ್ಟಪ್ರಾಪ್ತಿ ಅನಿಷ್ಟನಿವರ್ತನ ರೂಪ ಪುರುಷಾರ್ಥ ಪ್ರಾರ್ಥನಾ ಪರವಾಗಿಯೂ ಮೂರು ಯೋಜನೆಗಳು. ಮೂರು ವಾಕ್ಯಗಳೆಂಬ ಪಕ್ಷದಲ್ಲಿ 1) ಪ್ರಣವ ನಮಸ್ಸುಗಳು ಸ್ವರೂಪ ಪರಗಳಾಗಿಯೂ, ನಾರಾಯಣ ಎಂಬ ಪದವು ಪುರುಷಾರ್ಥ ಪ್ರಾರ್ಥನಾ ಪರವಾಗಿಯೂ, 2) ಪ್ರಣವವು ಸ್ವರೂಪ ಪರವಾಗಿಯೂ. ನಮೋ ನಾರಾಯಣಾಯ ಎಂಬ ಪದಗಳು ಕ್ರಮೇಣ ಅನಿಷ್ಟ ನಿವೃತ್ತಿ ಇಷ್ಟ ಪ್ರಾರ್ಥನಾ ಪರವಾಗಿಯೂ, 3) ಪ್ರಣವವು ಸ್ವರೂಪ ಪರವಾಗಿಯೂ ದ್ವಿತೀಯ ತೃತೀಯ ಪದಗಳು ಉಪಾಯ ಪರವಾಗಿಯೂ 4) ಪ್ರಣವವು ಭರನ್ಯಾಸ ಪರವಾಗಿ, ಬಾಕಿ ಎರಡು ಪದಗಳು ಅನಿಷ್ಟ ನಿವೃತ್ತಿ ಇಷ್ಟ ಪ್ರಾಪ್ತಿಪ್ರಾರ್ಥನಾ ಪರವಾಗಿಯೂ, 5) ಪ್ರಣವವು ಸ್ವರೂಪ ಪರವಾಗಿಯೂ, ನಮಸ್ಸು ಉಪಾಯ ಪರವಾಗಿಯೂ, ತೃತೀಯ ಪದವು ಪುರುಷಾರ್ಥ ಪ್ರಾರ್ಥನಾ ಪರವಾಗಿಯೂ, ಐದು ಯೋಜನೆಗಳು ಹೀಗೆ ಒಟ್ಟು ಹತ್ತು ಯೋಜನೆಗಳು.

### ಏಕವಾಕ್ಯವಾಗಿ ಎರಡು ಯೋಜನೆಗಳು

ಇವನ್ನು ಆಚಾರ್ಯರು **ಏಕವಾಕ್ಯಮಾನಪೋದು** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಒಂದು ವಾಕ್ಯವಾದಾಗ, 1) ತಸ್ಯವಾಚಕಃ ಪ್ರಣವಃ– ಎಂದು ಅಖಂಡ ಪ್ರಣವವು ಭಗವದ್ವಾಚಕವು, ಇತ್ಯಾದಿ ಹೇಳಿರುವಂತೆ, 1) ಓಂ ನಾರಾಯಣಾಯ ನಮಃ–ಪ್ರಣವ ಪ್ರತಿಪಾದ್ಯ ಜಗತ್ಕಾರಣತ್ವ ರಕ್ಷಕತ್ವ, ಶೇಷಿತ್ವಾದಿ ಸ್ವಭಾವ ವಿಶಿಷ್ಟನಾದ ನಾರಾಯಣನಿಗೆ ನನ್ನನ್ನು ಸಮರ್ಪಿಸುತ್ತೇನೆ ಎಂದರ್ಥ. ನಮಶ್ಶಬ್ದವು ಇಲ್ಲಿ ಸಮರ್ಪಣಪರ. ಇದು ಉಪಾಯಪರಯೋಜನೆ ಈ ಯೋಜನೆಯಲ್ಲಿ ಪ್ರಣವವೂ, ನಾರಾಯಣಾಯ ಎಂಬುದೂ ಭಗವನ್ನಾಮವಾಗಿರುವಾಗ ಪುನರುಕ್ತಿ ದೋಷವು ಉಂಟಾಗುವುದಿಲ್ಲವೇ ಎಂದರೆ, **ಇಪ್ಪ್ರಣವಂತಾನೇ** ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ. ಅದಾಗಿ ಈ ಪ್ರಣವವು ಭಗವನ್ನಾಮವಾಗಿ ಇರುವಾಗ, 2) **ಅವ್ಯಕ್ತಾರ್ಥತಯೋಂಕಾರಃ ಕೇವಲಂನೈವಸಾಧಕಃ** - ಅವ್ಯಕ್ತಾರ್ಥವಾದ ಓಂಕಾರವು ಸ್ಪಷ್ಟವಾದ ಭಗವನ್ನಾಮಗಳ ಸಹಕಾರವಿಲ್ಲದೆ ತಾನೇ ದೇವತಾ ವಿಶೇಷವನ್ನು ನಿರ್ಧಾರಣೆ ಮಾಡಲಾರದು, ಎಂಬ ಶಾಂಡಿಲ್ಯ ಸ್ಮೃತಿಯಲ್ಲಿ ಹೇಳಿದ ಪ್ರಕ್ರಿಯೆಯ ಪ್ರಕಾರ, ವ್ಯಾಪಕ ಮಂತ್ರಗಳಲ್ಲಿ ನಾರಾಯಣ, ವಿಷ್ಣು, ವಾಸುದೇವ ಶಬ್ದಗಳು ದೇವತಾ ವಿಶೇಷವನ್ನು ಸ್ಫುಟವಾಗಿ ತಿಳಿಸಲು ಕಾರಣವಾಗುತ್ತವೆಯಾದ್ದರಿಂದ ಆ ಶಬ್ದಗಳೊಡನೆ ಸೇರಿಸಿಹೇಳುವುದು ಯುಕ್ತವಾದದ್ದು. **ಇಂದ ಯೋಜನಾ ವಿಶೇಷಮ್**-ಈ ಯೋಜನಾ ವಿಶೇಷವು ಅಹಿರ್ಬುಧ್ನ್ಯರಿಂದ ಹೇಳಲ್ಪಟ್ಟ ಸ್ಥೂಲಾನು

---

ಪಾತಂಜಲಯೋಗ ಸೂತ್ರ 1-1-27

ಪ್ಪಾರ್‌ತ್ತಾಲ್ ಉಪಾಯಪರಮ್. ಇಪ್ಪಡಿಯಾನಾಲುಮ್ ಸ್ವರೂಪಪುರುಷಾರ್ಥಙ್ಗಳ್ ಇದಿಲೇ ಅಂತರ್ಗತಙ್ಗಳ್. 3) "ಬದ್ಧಾಂಜಲಿ ಪುಟಾಹೃಷ್ಟಾ ನಮ ಇತ್ಯೇವ ವಾದಿನಃ" ಇತ್ಯಾದಿಹಳೈಪ್ಪಾರ್‌ತ್ತು ಪ್ರಾಪ್ತ್ಯಂತರ್ಗತ ಶೇಷವೃತ್ತಿ ಪರಮಾಹವು ಮನುಸಂಧಿಪ್ಪಾರ್‌ಹಳ್. ಇವ್ವೃತ್ತಿ ವಿಶೇಷಮುಮ್ ಸ್ವರೂಪಾನುಸಂಧಾನ ಪೂರ್ವಕಮ್. ಇದುವುಮ್ ಕೃತೋಪಾಯರ್‌ಕ್ಕಿಪ್ಪೊಳವು ರಸಿಕ್ಕುಮವಸ್ಥೈಯಿಲುಮುಪಜೀವ್ಯಮ್.

### ವಾಕ್ಯದ್ವಯಪಕ್ಷೇ ಸ್ವರೂಪಪರಃ ಇತಿ ಪ್ರಥಮ ಯೋಜನಾ

ಇವ್ವಿರಣ್ಡು ಅನುಸಂಧಾನಮುಮ್ ಪ್ರತಿಷ್ಠಿತಮಾವ್ಪೋದು ಸ್ವರೂಪ ವಿವೇಕಮ್ ವೇಣುಮ್. ಅದರ್ಕ್ಕಾಹ ವಾಕ್ಯದ್ವಯಮಾಹ ಅನುಸಂಧಿಕ್ಕುಮ್‌ಪೋದು, ಅಕಾರ ನಾರಾಯಣ ಶಬ್ದ ವಾಚ್ಯ ಸರ್ವ

---

ಸಂಧಾನದ ಪ್ರಕಾರ, ಉಪಾಯಪರ. ಹೀಗೆ ಹೇಳಿದರೂ ಶೇಷತ್ವ ಸ್ವರೂಪ ಜ್ಞಾನವೂ, ಪುರುಷಾರ್ಥ ಜ್ಞಾನವೂ ಇಲ್ಲದೇ ಭರ ಸಮರ್ಪಣ ರೂಪ ಉಪಾಯವು ಸಿದ್ಧಿಸುವುದಿಲ್ಲವಾದ್ದರಿಂದ, ಸ್ವರೂಪ ಪುರುಷಾರ್ಥಗಳು ಆಕ್ಷಿಪ್ತಗಳಾಗಿ ಈ ಯೋಜನೆಯಲ್ಲಿ ಅಂತರ್ಗತಗಳೆಂದು ಭಾವ. 4) ಏಕ ವಾಕ್ಯತ್ವ ಪಕ್ಷದಲ್ಲಿ ಓಂ ನಾರಾಯಣಾಯ ನಮಃ ಎಂಬ ಎರಡನೆಯ ಯೋಜನೆಯನ್ನು 3) ಬದ್ಧಾಂಜಲಿಪುಟಾಹೃಷ್ಟಾಃ ಇತ್ಯಾದಿ ವಿವರಿಸುತ್ತಾರೆ. ಅದಾಗಿ ಅಂಜಲಿಯನ್ನು ಮಾಡಿಕೊಂಡು ಸಂತೋಷದಿಂದ ಭಗವಂತನನ್ನು ಕುರಿತು, ನಮಃ, ನಮಃ ಎಂದು ಹೇಳುತ್ತಾರೆಂಬ ವಚನದ ಪ್ರಕಾರ, ಪ್ರಹ್ವೀಭಾವಾತ್ಮಕವಾದ ಅಂಜಲಿಬಂಧ ಪೂರ್ವಕ ನಮಶ್ಶಬ್ದೋಚ್ಚಾರಣವು ಶೇಷ ವೃತ್ತಿರೂಪಪುರುಷಾರ್ಥಪರ. ಈ ಪುರುಷಾರ್ಥಪರ (ಉಪೇಯಪರ) ಯೋಜನೆಯಲ್ಲಿ ಸ್ವರೂಪೋಪಾಯಗಳು ಸಿದ್ಧಿಸುವುದಿಲ್ಲವೇ ಎಂದರೆ, ಇವೃತ್ತಿವಿಶೇಷಮ್– ಈ ರೀತಿಯಾದ ವೃತ್ತಿ ವಿಶೇಷವು ಸ್ವರೂಪಾನುಸಂಧಾನ ಪೂರ್ವಕವಾದದ್ದು. ಸ್ವರೂಪ ಜ್ಞಾನವಿಲ್ಲದೆ ಈ ದಶೆಯು ಏರ್ಪಡುದಿಲ್ಲವೆಂದು ಭಾವ. ಹಾಗೆಯೇ ಇದುವುಮ್ ಇತ್ಯಾದಿ– ತಿರುಮಂತ್ರ ಪ್ರತಿಪಾದ್ಯವಾದ ಶೇಷ ವೃತ್ತಿಯೂ, ಉಪಾಯಾನುಷ್ಠಾನ ಮಾಡಿದವನಿಗೆ ರಸ್ಯವಾಗಿರುತ್ತದೆಯಾದ್ದರಿಂದ, ಉಪಾಯವೂ ಇಲ್ಲಿ ಆಕ್ಷಿಪ್ತ. ಇದುವುಮ್ ಇತ್ಯಾದಿ ಇದೂ ಕೃತೋಪಾಯನಿಗೆ ಇಷ್ಟರಮಟ್ಟಿಗೆ ಕೈಂಕರ್ಯವನ್ನು ರುಚಿಸುವ ಅವಸ್ಥೆಯಲ್ಲಿ ಉಪಜೀವ್ಯವು. ಅಂದರೆ ಬದ್ಧದಶೆಯಲ್ಲಿ ಕೈಂಕರ್ಯರಸಾನುಭವವು ಕರ್ಮಾನುಗುಣವಾಗಿ ಸ್ವಲ್ಪವಾಗಿರುತ್ತದೆ. ಇಷ್ಟರ ಮಟ್ಟಿಗೆ ರಸಾನುಭವವನ್ನು ಅಂಗೀಕರಿಸಿ ಇಲ್ಲಿಯ ಶೇಷ ವೃತ್ತಿಯನ್ನು ಪ್ರಾಪ್ಯತಯಾ ಅನುಸಂಧಾನ ಮಾಡಬಹುದು ಎಂದು ತಾತ್ಪರ್ಯ.

### ಅಷ್ಟಾಕ್ಷರವನ್ನು ಎರಡು ವಾಕ್ಯಗಳನ್ನಾಗಿ ಅಂಗೀಕರಿಸಿ ಮೂರು ಯೋಜನೆಗಳು

ಅನಂತರ ವಾಕ್ಯದ್ವಯ ಪಕ್ಷದಲ್ಲಿ ಮೂರು ಯೋಜನೆಗಳನ್ನು ಇವ್ವಿರಂಡನುಸಂಧಾನಮುಮ್ ಇತ್ಯಾದಿಯಾಗಿ ತಿಳಿಸುತ್ತಾರೆ. ಶೇಷ ಭೂತನಿಂದಲೇ ಅನುಷ್ಠಿಸಲ್ಪಡಬೇಕಾದ ಉಪಾಯಾನುಸಂಧಾನವೂ ಶೇಷಭೂತನಿಗೆ ಉಂಟಾಗುವ ಶೇಷ ವೃತ್ತಿ ರೂಪ ಪುರುಷಾರ್ಥಾನುಸಂಧಾನವೂ, ಪ್ರತಿಷ್ಠಿತಮಾಮ್‌ಪೋದು ಸ್ಥಿರವಾಗಬೇಕಾದರೆ, ಸ್ವರೂಪ ವಿವೇಕಂ ವೇಣುಮ್– ಶೇಷತ್ವ ಸ್ವರೂಪ ಜ್ಞಾನವು ಅವಶ್ಯಕ. ಅದರ್ಕ್ಕಾಹ– ಅದಕ್ಕೋಸ್ಕರ ವಾಕ್ಯದ್ವಯಮಾಹ ವನುಸಂಧಿಕ್ಕುಮ್ ಪೋದು, ಎರಡು ವಾಕ್ಯಗಳಾಗಿ ಅನುಸಂಧಾನ ಮಾಡುವಾಗ, ಅಕಾರನಾರಾಯಣ ಶಬ್ದ ವಾಚ್ಯ ಇತ್ಯಾದಿ-ಪ್ರಣವದಲ್ಲಿ ಲುಪ್ತ ಚತುರ್ಥ್ಯಂತವಾದ ಅಕಾರವನ್ನು ಬಿಡಿಸಿ ನಾರಾಯಣ ಎಂಬ ಶಬ್ದದೊಡನೆ ಅನ್ವಯಿಸಿ "ಆಯ" ಎಂಬ ಚತುರ್ಥಿಗೆ ತಾದರ್ಥ್ಯವನ್ನು ವಿವಕ್ಷಿಸಿ "ಉ"ಕಾರಕ್ಕೆ ಏವ ಎಂದು ಅರ್ಥಮಾಡಿ ಅದರೊಡನೆ "ಮ"ಕಾರವನ್ನು ಅನ್ವಯ ಮಾಡಿ, ನಮಃ ಎಂದು ಬೇರೆ ವಾಕ್ಯಮಾಡಿ ಹೇಳುವುದು ಅಂದರೆ ಅಕಾರ ನಾರಾಯಣಾಯೈವ (ಉ–ಏವಕಾರಾರ್ಥ) ಮ್. ನಮಃ ಎಂದು

ರಕ್ಷಕತ್ವ ಸರ್ವಾಧಾರತ್ವಾದಿ ವಿಶಿಷ್ಟನಾನವನುಕ್ಕೇ ನಾನ್ ನಿರುಪಾಧಿಕಾನನ್ಯಾರ್ಹಶೇಷಭೂತನ್, ಎನಕ್ಕುರಿಯೇನಲ್ಲೇನ್, ಒನ್ರೈಪ್ಪಟ್ರ ನಿರುಪಾಧಿಕಸ್ವಾಮಿಯುಮ್ ಅಲ್ಲೇನ್: ನಿರಪೇಕ್ಷ ಸ್ವತಂತ್ರನುಮಲ್ಲೇನ್, ಎನ್ರದಾಮ್. ಅಕಾರ ನಾರಾಯಣ ಶಬ್ದಙ್ಗಳಿರಣ್ಡುಮ್ ಭಗವನ್ನಾಮಮಾಗೈಯಾಲೇ ಪುನರುಕ್ತಿಯಾರಾದೋವೆನ್ನಿಲ್? ಒನ್ರು ವಿಶೇಷಣ ಮಾಹಕ್ಕಡವದು.

ಅಕಾರವಾಚ್ಯನಾನ ನಾರಾಯಣನುಕ್ಕೆನ್ರುಮ್ ಪುನರುಕ್ತಿ ಪರಿಹರಿಕ್ಕಲಾಮ್. ಭಗವಚ್ಛಬ್ದಮುಮ್ ನಾಮಧೇಯಮಾಯಿರುಕ್ಕ ವಾಸುದೇವಾದಿ ಶಬ್ದತ್ತೋಡೇ ಸಮಾನಾಧಿಕರಣಮಾಹಾನಿನ್ರದಿರೇ.

ವಾಕ್ಯದ್ವಯಾನುಸಂಧಾನೇನ ಪ್ರಾಪ್ತಪ್ರಯೋಜನಾನ್ಯಾಹ.

ಸರ್ವಬೀಜಾಕ್ಷರವಾಚ್ಯನಾನ ಸರ್ವಕಾರಣಮ್ ದೇವತಾನ್ತರವೋವೆನ್ರು ಶಙ್ಕಿಯಾದಪಡಿ ನಾರಾಯಣನೆನ್ರು, ವಿಶೇಷಿಕ್ಕೈಯಾಲುಮ್ ಸ ಪ್ರಯೋಜನಮ್.

---

ಅನ್ವಯ. ಇದು ಸ್ವರೂಪಪರ. ಅದಾಗಿ ಅಕಾರ ನಾರಾಯಣ ಶಬ್ದವಾಚ್ಯ ಸರ್ವರಕ್ಷಕತ್ವ ಸರ್ವಾಧಾರತ್ವಾದಿ ವಿಶಿಷ್ಟನಾದವನಿಗೇ ನಾನು ನಿರುಪಾಧಿಕ ಅನನ್ಯಾರ್ಹ ಶೇಷ ಭೂತನು, ನಮಃ—ಎನಕ್ಕುರಿಯೇನಲ್ಲೇನ್- ನಾನು ನನಗಲ್ಲ, ಅಹಂಕಾರ ನಿವೃತ್ತಿ. ಒನ್ರೈಪ್ಪಟ್ರ ಇತ್ಯಾದಿ— ನಮಮ ಕಿಂಚಿತ್‌ಸ್ಯಾತ್— ಯಾವುದನ್ನು ಕುರಿತೂ ನಿರುಪಾಧಿಕಸ್ವಾಮಿಯೂ ಅಲ್ಲ. ಇದು ಮಮಕಾರ ನಿವೃತ್ತಿ, ನಿರಪೇಕ್ಷ ಸ್ವತಂತ್ರನೂ ಅಲ್ಲ. ನ ಮಮಸ್ವಾತಂತ್ರ್ಯಮ್, ಇದು ಸ್ವಸ್ವಾತಂತ್ರ್ಯ ನಿವೃತ್ತಿ, ಎಂದು ಹೇಳಿದಂತಾಗುತ್ತದೆ.

ಅಕಾರನಾರಾಯಣ ಶಬ್ದಂಗಳ್ ಇತ್ಯಾದಿ— ಅಕಾರ, ನಾರಾಯಣ ಶಬ್ದಗಳೆರಡೂ ಭಗವನ್ನಾಮವಾದ್ದರಿಂದ ಪುನರುಕ್ತಿ ದೋಷವು ಉಂಟಾಗುವುದಿಲ್ಲವೇ ಎಂದರೆ, ಅದ ವ್ಯುತ್ಪತ್ತಿ ವಿಶೇಷ ಸಿದ್ಧವಾದ ಅರ್ಥ ವಿಶೇಷವನ್ನು ವಿವಕ್ಷಿಸಿ ಒಂದು ವಿಶೇಷಣವಾಗಿರಬೇಕು. ಮತ್ತೊಂದು ವಿಶೇಷ್ಯವಾಗಿರಬೇಕು. ಹೇಗೆಂದರೆ – ನಾರಾಯಣ ಶಬ್ದವನ್ನು ರೂಢಿಯಾಗಿ ಅಂಗೀಕರಿಸಿ, ಅವ ರಕ್ಷಣೆ ಎಂಬ ಧಾತುವಿನಲ್ಲಿ ನಿಷ್ಪನ್ನವಾದ ಅಕಾರವನ್ನು ಯೌಗಿಕವಾಗಿ ಸ್ವೀಕರಿಸಿ, ರಕ್ಷಕನಾದ ನಾರಾಯಣನನ್ನು ಕುರಿತು ಜೀವನು ಶೇಷಭೂತನು ಎಂದು ಹೇಳುವುದರಿಂದ ಪುನರುಕ್ತಿ ದೋಷವು ಬರುವುದಿಲ್ಲ ಅಥವಾ "ಅನಿಷೇಧೇ ಪುಮಾನ್ ವಿಷ್ಣೌ" ಎಂಬ ನಿಘಂಟು ಪ್ರಕಾರ, ಅಕಾರವನ್ನು ವಿಷ್ಣುವಿನಲ್ಲಿ ರೂಢಿಯಾಗಿಕೊಂಡು "ನಾರಾಣಾಮಯನಂ" ಎಂಬ ವ್ಯುತ್ಪತ್ತಿಯಿಂದ ನಾರಾಯಣಶಬ್ದವನ್ನು ಯೌಗಿಕವಾಗಿ ಅಂಗೀಕರಿಸಿ, ಸರ್ವಾಧಾರನಾದ ವಿಷ್ಣುವಿಗೆ ಜೀವನು ಶೇಷಭೂತನು ಎಂದು ಹೇಳುವುದರಿಂದಲೂ ಪುನರುಕ್ತಿ ದೋಷವು ಬರುವುದಿಲ್ಲ. ಅಕಾರ ವಾಚ್ಯನಾದ ನಾರಾಯಣನುಕ್ಕು ಎನ್ರುಮ್— ಇತ್ಯಾದಿ ಅಕಾರ ವಾಚ್ಯನಾದ ನಾರಾಯಣನಿಗೆ ಜೀವನು ಶೇಷಭೂತನು ಎಂದು ಪುನರುಕ್ತಿ ದೋಷವನ್ನು ಪರಿಹರಿಸಬಹುದು. ಇದಕ್ಕೆ ದೃಷ್ಟಾಂತವನ್ನು ಭಗವಚ್ಛಬ್ದಮುಮ್, ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಭಗವಚ್ಛಬ್ದವೂ ನಾಮಧೇಯವಾಗಿರುವಾಗ, "ಓಂ ನಮೋ ಭಗವತೇ ವಾಸುದೇವಾಯ" ಎಂಬ ಮಂತ್ರದಲ್ಲಿ, ವಾಸುದೇವ ಶಬ್ದ ದೊಡನೆ ಸಮಾನ ವಿಭಕ್ತಿಕವಾಗಿ ಪ್ರಯೋಗಿಸಲ್ಪಟ್ಟಿರುವಂತೆ, ಅಷ್ಟಾಕ್ಷರದಲ್ಲೂ ಅಕಾರ ನಾರಾಯಣಶಬ್ದಗಳನ್ನು ಸಮಾನ ವಿಭಕ್ತಿಕವಾಗಿ ಅಂಗೀಕರಿಸಿ ಮೇಲೆ ಹೇಳಿದಂತೆ ಅರ್ಥವನ್ನು ಹೇಳುವುದು ಯುಕ್ತವಾದದ್ದು. ಸರ್ವಬೀಜಾಕ್ಷರವಾನ ಇತ್ಯಾದಿ— ನಾರಾಯಣ ಶಬ್ದವನ್ನು, ಸರ್ವ ಬೀಜಾಕ್ಷರ ವಾಚ್ಯವಾದ ಅಕಾರಕ್ಕೆ ವಿಶೇಷವಾಗಿ ಅಂಗೀಕರಿಸಿ, ಆ ಸರ್ವ ಬೀಜಾಕ್ಷರ ವಾಚ್ಯವಾದ ಸರ್ವಕಾರಣವು ದೇವತಾಂತರವೋ ಎಂದು ಶಂಕಿಸದೆ ಇರಲು, ನಾರಾಯಣನೆಂದು ವಿಶೇಷಿಸಿ ಹೇಳುವುದರಿಂದಲೂ ಸಪ್ರಯೋಜನ. ಮಂತ್ರಂಗಳುಕ್ಕು ಇತ್ಯಾದಿ –"ಪಾಠ ಕ್ರಮಾತ್ ಅರ್ಥ ಕ್ರಮೋ ಬಲಿಯಾನ್" ಎಂಬ ನ್ಯಾಯದಂತೆ, ಮಂತ್ರಗಳಿಗೆ ಪದ ಕ್ರಮವು ಅಧ್ಯಯನ ನಿಯತ. ಅನ್ವಯವು ಅರ್ಥಾನು ಗುಣವಾಗಿರಬೇಕು.

ಮನ್ತ್ರಙ್ಗಳುಕ್ಕು ಪದಕ್ರಮುಮ್ ಅಧ್ಯಯನ ನಿಯತಮುಮ್, ಅನ್ವಯಮರ್ಥಾನು ಗುಣಮಾಹಕ್ಕಡವದು
1. ವಾಕ್ಯದ್ವಯೇನ ಸ್ವರೂಪಪರಯೋಜನಾಮಾಹ.

ಇಪ್ಪಡಿ ವಾಕ್ಯದ್ವಯಮಾನಾಲ್ ತಿರುಮನ್ತ್ರಮ್ ಮುಮುಕ್ಷುಕ್ಕು ಸ್ವರೂಪಪರಮ್. ಇನ್ದ ಸ್ವರೂಪ ಪರ ಯೋಜನೈಯೈಪ್ಪತ್ತ ತಿರುಮನ್ತ್ರತ್ತಿಲೇ ಪಿರನ್ದು, ದ್ವಯತ್ತಿಲೇವಳರ್ನ್ದು ದ್ವಯೈಕ ನಿಷ್ಠನಾವಾಯ್ ಎನ್ರು ಪೂರ್ವರ್ಕಳ್ ಅರುಳಿಚ್ಚೆಯ್ದಾರ್ಕಳ್. ಪಿರಕ್ಕೈಯಾವುದು ? ಸ್ವರೂಪಜ್ಞಾನಂಪಿರಕ್ಕೈ ಯಾಲೇ 1) "ಅನ್ರುನಾನ್ ಪಿರನ್ದಿಲೇನ್, ಪಿರನ್ದಪಿನ್ ಮರನ್ದಿಲೇನ್ ಎನ್ಗಿರ ಮುನ್ಪತ್ತ ನಿಲೈ ಕುಲೈಗೈ.

ಅದಾವದು ? ತನ್ನಿಚ್ಚೈವಾಲುಮ್ ಅನನ್ಯಶೇಷನಾಯ್, ಅನನ್ಯಾಧೀನನಾಯ್,ಅದಡಿಯಾಹ ಅನನ್ಯ ಪ್ರಯೋಜನನಾಯ್ ಅನನ್ಯಶರಣನಾಹೈ.

ವಳರುಹೈಯಾವದು ? ಅಧಿಕಾರವಿಶೇಷಾನುರೂಪ ಕರ್ತವ್ಯ ವಿಶೇಷ ಜ್ಞಾನ ವಿಶೇಷತ್ತಾಲೇ ಉಪಾಯಪರಿಗ್ರಹಮ್ ಪಣ್ಣುಹೈ. ದ್ವಯೈಕನಿಷ್ಠನಾಹೈಯಾವದು ? ದ್ವಯಾನುಸಂಧಾನತ್ತಾಲೇ ಉಪಾಯಾನ್ತರತ್ತಿಲುಮ್, ಪ್ರಯೋಜನಾನ್ತರತ್ತಿಲುಮ್, ತುವಕ್ಕರ ಇದಿರೊಳ್ಳಿನ್ನ ಉಪಾಯತ್ತಿಲುಮ್. ಪ್ರಯೋಜನತ್ತಿಲುಮ್ ಪ್ರತಿಷ್ಠಿತನಾಹೈ. ಇಪ್ಪಡಿ ತಿರುಮನ್ತ್ರಮುಮ್ ದ್ವಯಮುಙ್ಗೂಡ, ಸ್ವರೂಪೋಪಾಯ ಪುರುಷಾರ್ಥಙ್ಗಳೈಕ್ಕಾಟ್ಟುಹಿನ್ರನ.

---

ಅಷ್ಟಾಕ್ಷರದಲ್ಲಿ ಜನಿಸಿ, ದ್ವಯಮಂತ್ರದಲ್ಲಿ ಬೆಳೆದು, ದ್ವಯೈಕನಿಷ್ಠನಾಗಿರುವುದು ಇದರ ವಿವರ.

ಇಪ್ಪಡಿ ವಾಕ್ಯದ್ವಯಮಾನಾಲ್ ಇತ್ಯಾದಿ– ಹೀಗೆ ಎರಡು ವಾಕ್ಯವಾದರೆ ಅಷ್ಟಾಕ್ಷರವು ಪ್ರಾರ್ಥಸ್ವರೂಪ ಪರ. ಇಂದಸ್ವರೂಪಯೋಜನೈಯೈಪ್ಪಟ್ರ–ಈ ಸ್ವರೂಪ ಯೋಜನೆಯನ್ನು ತಿರುಮಂತ್ರತ್ತಿಲೇ ಇತ್ಯಾದಿ– ಅಷ್ಟಾಕ್ಷರದಲ್ಲಿ ಹುಟ್ಟಿ, ದ್ವಯ ಮಂತ್ರದಲ್ಲಿ ಬೆಳೆದು, ದ್ವಯ ಮಂತ್ರಾನು ಸಂಧಾನ ನಿಷ್ಠನಾಗು, ಎಂದು ಪೂರ್ವಾಚಾರ್ಯರುಗಳು ಅನುಗ್ರಹಿಸಿರುತ್ತಾರೆ. ಪಿರಕ್ಕೈಯಾವದು ಇತ್ಯಾದಿ– ಹುಟ್ಟುವುದು ಎಂಬದು ಏನೆಂದರೆ - ಸ್ವರೂಪಜ್ಞಾನಂ ಪಿರಕ್ಕೈಯಾಲೇ ಇತ್ಯಾದಿ– ಸ್ವರೂಪ ಜ್ಞಾನವು ಉಂಟಾಗುವುದರಿಂದ, 1) ಅನ್ರುನಾನ್ ಪಿರಂದಿಲೇನ್– ಇತ್ಯಾದಿಯಾಗಿ, ಸ್ವರೂಪ ಜ್ಞಾನವು ಉಂಟಾಗುವುದಕ್ಕೆ ಮುಂಚೆ, ಶರೀರವನ್ನು ಪಡೆದು ಜನಿಸಿದ್ದರೂ, ಜನಿಸಿದವನಲ್ಲ ಪಿರಂದಪಿನ್ ಇತ್ಯಾದಿ– ಸ್ವರೂಪ ಜ್ಞಾನವೆಂಬ ಜನ್ಮವನ್ನು ತಾಳಿದ ನಂತರ ಮರಂದಿಲೇನ್– ಶೇಷತ್ವವನ್ನು ಮರೆತಿಲ್ಲ ಎಂಬ ಮುನ್ಪುಟ್ರನಿಲೈಕುಲೈಕೈ – ಪೂರ್ವ ಭಾವಿಯಾದ ದಶೆಯು ಕಳೆದು ಹೋಗುತ್ತದೆ. ಅದಾವದು ಇತ್ಯಾದಿ– ಅದಾಗಿ ತನ್ನ (ಇಚ್ಚೈವು–ಇಚ್ಛೆ) ಇಚ್ಛೆಯಿಂದಲೂ ಅನನ್ಯ ಶೇಷನಾಗಿ ಅನನ್ಯಾಧೀನನಾಗಿ, ಅದರ ನಿಮಿತ್ತ ಅನನ್ಯ ಪ್ರಯೋಜನನಾಗಿ, ಅನನ್ಯಶರಣ–ಅನನ್ಯರಕ್ಷಕನಾಗಿರುವುದು. ವಳರುಹೈಯಾವುದು ಇತ್ಯಾದಿ– ಬೆಳೆಯುವುದೆಂದರೆ ಆಕಿಂಚನ್ಯಾನನ್ಯಗತಿ ರೂಪವಾದ ಅಧಿಕಾರ ವಿಶೇಷಕ್ಕೆ ಅನುಗುಣವಾಗಿ, ಕರ್ತವ್ಯವಾದ ಸಾಂಗ ಭರಸಮರ್ಪಣ ವಿಷಯಕ ಜ್ಞಾನ ವಿಶೇಷದಿಂದ, ಉಪಾಯಪರಿಗ್ರಹಮ್ ಪಣ್ಣುಹೈ–ಭರ ಸಮರ್ಪಣವನ್ನು ಮಾಡುವುದು. ದ್ವಯೈಕನಿಷ್ಠನಾಹೈಯಾವದು ಇತ್ಯಾದಿ–ದ್ವಯಮಂತ್ರದಲ್ಲಿ ನಿಷ್ಠೆಯುಳ್ಳವನಾಗಿರುವುದೆಂದರೆ ದ್ವಯಮಂತ್ರಾರ್ಥಾನುಸಂಧಾನದಿಂದ, ಶ್ರೀಮನ್ನಾರಾಯಣ ಚರಣಗಳನ್ನೇ, ಎಂಬ ಸಾವಧಾರಣ ಚರಣ ಶಬ್ದದಿಂದ ಉಪಾಯಾಂತರದಲ್ಲಿಯೂ. ಶ್ರೀಮತೇ ನಾರಾಯಣಾಯೈವ, ಎಂಬ ಸಾವಧಾರಣ ಚತುರ್ಥ್ಯಂತ ನಾರಾಯಣ ಶಬ್ದದಿಂದ ಪ್ರಯೋಜನಾಂತರದಲ್ಲಿಯೂ ತುವಕ್ಕರ– ಸಂಬಂಧ ನಿವೃತ್ತಿಪೂರ್ವಕ, ದ್ವಯೋಕ್ತ ಉಪಾಯ ಪ್ರಯೋಜನ ನಿಷ್ಠೆಯು ಸಿದ್ಧಿಸುತ್ತದೆ, ಎಂದು ತಾತ್ಪರ್ಯ. ಇಪ್ಪಡಿ–ಹೀಗೆ ಸ್ವರೂಪ ಪರ ಯೋಜನೆಯಲ್ಲಿ, ತಿರುಮಂತ್ರವೂ, ದ್ವಯವೂ ಸ್ವರೂಪೋಪಾಯ ಪುರುಷಾರ್ಥ ಗಳನ್ನು ತೋರಿಸುತ್ತವೆ.

### 3. ಅಥ ವಾಕ್ಯದ್ವಯೇನ ಉಪಾಯಪರಯೋಜನಾಮಾಹ

ಇವ್ವಿರಣ್ಡು ವಾಕ್ಯಮಾನ ಯೋಜನೈ ತನ್ನಿಲೇ ತಿರುಮನ್ತ್ರಮ್ ಮುಮ್ಮುಕ್ಕ ಸಪರಿಕರಾತ್ಮ ಸಮರ್ಪಣ ಪರಮೆನ್ನುಮ್ ಅನುಸಂಧಿಪ್ಪಾರ್‌ಹಳ್ ಅಪ್ಪೋದು ಪ್ರಣವತ್ತಿಲ್ ಮಕಾರಮ್ ಪ್ರಥಮಾನ್ತಮೇಯಾಹವೇಣ್ಡಿಯುಮ್. ಹವಿಸ್ಸಮರ್ಪಣ ನ್ಯಾಯತ್ತಾಲೇ ನಿರುಪಾಧಿಕಮಾನ ಆತ್ಮ ಹವಿಸ್ಸು ನಿರುಪಾಧಿಕ ದೇವತೈಯಾಯ್ ಅಕಾರವಾಚ್ಯನಾನ ನಾರಾಯಣನುಕ್ಕೇ ಭರಮಾಹ ಸಮರ್ಪಿತ ಮೆನ್ನದಾಯಿತ್ತು. ಇಪ್ಪಡಿ ನಿರುಪಾಧಿಕಮಾನ ವಾತ್ಮಯಾಗತ್ತಿಲ್ "ನಮಃ" ಎನ್ರು ತನ್ನೋಡು ತನ್ ತುವಕ್ಕರತ್ತು ಎನಕ್ಕು ಭರಮಲ್ಲೇ ನೆನ್ರದಾಯಿತ್ತು, "ಇದಮಿಂದ್ರಾಯ, ನಮಮ" ಎನ್ನುಮಾಪ್ಪೋಲೇ ಇಙ್ಗುಮ್ ಪರಸಂಬಂಧವಿಧಿಯಿಲುಮ್ ಸ್ವಸಂಬಂಧ ನಿಷೇಧತ್ತಿಲುಮ್ ಪ್ರವೃತ್ತಮಾಹೈಯಾಲೇ ವಾಕ್ಯದ್ವಯಮುಮ್ ಸಪ್ರಯೋಜನಮ್.

ಇನ್ನಮುಸ್ಸು ಸಮರ್ಪಣಮ್ ತನ್ನಿಲುಮ್ ಪರನಿರಪೇಕ್ಷ ಕರ್ತೃತ್ವಾದಿಹಳೈ ನಿಷೇಧಿಕ್ಕೈಯಿಲೇ ತತ್ಪರಮಾಹವುಮಾಮ್. ವೇರೊರುತ್ತರುಕ್ಕುಮ್ ಭರಮನ್ರು, ಎನಕ್ಕುಮ್ ಭರಮನ್ರು ಎನ್ರು ವಾಕ್ಯದ್ವಯಾಭಿಪ್ರಾಯಮಾಹವುಮಾಮ್.

---

ಅನಂತರ ವಾಕ್ಯದ್ವಯ ಪಕ್ಷದಲ್ಲಿ ಉಪಾಯ ಪರಯೋಜನೆಯನ್ನು **ಇವ್ವಿರಂಡುವಾಕ್ಯಮಾನಯೋಜನೆ ತನ್ನಿಲೇ** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ- ಈ ಎರಡು ವಾಕ್ಯಗಳಾದ ಯೋಜನೆಯಲ್ಲಿ, ಮಕಾರ ವಾಚ್ಯಃ ಅಹಂ, ಅಕಾರವಾಚ್ಯ ನಾರಾಯಣಾಯೈವ, ನಮಃ ಎಂದು ಅನ್ವಯವಾಗಿ, ಅಷ್ಟಾಕ್ಷರ ಮಂತ್ರವು ಪೂರ್ತಿ ಸಪರಿಕರ ಆತ್ಮ ಸಮರ್ಪಣ ಪರವೆಂದು ಅನುಸಂಧಾನ ಮಾಡುತ್ತಾರೆ. **ಅಪ್ಪೋದು** ಇತ್ಯಾದಿ –ಸಮರ್ಪಣಪರವಾದ ಯೋಜನೆಯಲ್ಲಿ, ಪ್ರಣವದಲ್ಲಿಯ ಮಕಾರವು ಪ್ರಥಮಾಂತವೇ ಯಾಗುತ್ತದೆ. ಸಮರ್ಪಣೀಯ ವಸ್ತುವನ್ನು ದ್ವಿತೀಯಾಂತವಾಗಿ ಹೇಳಬೇಕಲ್ಲವೇ ಎಂದರೆ **ಹವಿಸ್ಸಮರ್ಪಣನ್ಯಾಯತ್ತಾಲೇ**"ಎಂದು ವಿವರಿಸುತ್ತಾರೆ. ಅದಾಗಿ ಹವಿಸ್ಸನ್ನು ಸಮರ್ಪಿಸುವಾಗ, "ಇಂದ್ರಾಯ ಇದಂ ಹವಿಃ" ಎಂದು ಸಮರ್ಪಣಕರ್ಮೀಭೂತವಾದ ಹವಿ ರ್ವಾಚಕ ಶಬ್ದವು ಪ್ರಥಮಾಂತವಾಗಿ ಕಾಣಲ್ಪಡುತ್ತದೆ ಯಾದ್ದರಿಂದ, ಆ ನ್ಯಾಯವನ್ನು ಅವಲಂಬಿಸಿ, ಇಲ್ಲಿಯೂ **ನಿರುಪಾಧಿಕಮಾನ ಆತ್ಮಹವಿಸ್ಸು** ಇತ್ಯಾದಿ- ನಿರುಪಾಧಿಕವಾಗಿ ಅವನಿಗೇ ಶೇಷಭೂತವಾದ ಆತ್ಮ ಹವಿಸ್ಸು ನಿರುಪಾಧಿಕ ದೇವತೆಯಾಗಿ ಅಂದರೆ ಸ್ವತ ಶ್ಶೇಷಿಯಾದ ಅಕಾರ ವಾಚ್ಯನಾದ ನಾರಾಯಣನಿಗೇ ಭರವಾಗಿ ಸಮರ್ಪಿತವು ಎಂದಾಗುತ್ತದೆ. ಅನಂತರ ನಮಃ ಎಂಬ ದ್ವಿತೀಯ ವಾಕ್ಯಾರ್ಥವನ್ನು '**ಇಪ್ಪಡಿ**' ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಇಪ್ಪಡಿ- ಹೀಗೆ, ನಿರುಪಾಧಿಕವಾದ ಆತ್ಮ ಯಾಗದಲ್ಲಿ "ನಮಃ" ಎಂಬುದು "ನಮಮ" ಎಂಬ ಅರ್ಥದಲ್ಲಿ ತನ್ನೊಡನೆ ತನ್ನ ಸಂಬಂಧವನ್ನು **ಅರುತ್ತು**–ಛೇದಿಸಿ, ನನಗೆ ಭರವಲ್ಲವೆಂದಾಗುತ್ತದೆ. "**ಇದ ಮಿಂದ್ರಾಯ,ನಮಮ**", ಎಂಬಂತೆ ಇಲ್ಲಿಯೂ ಪರಸಂಬಂಧ ವಿಧಿಯಲ್ಲಿಯೂ ಸ್ವಸಂಬಂಧ ನಿಷೇಧದಲ್ಲಿಯೂ ಪ್ರವೃತ್ತವಾದ್ದರಿಂದ, ವಾಕ್ಯದ್ವಯವೂ ಸಪ್ರಯೋಜನ

ಅಕಾರ ವಾಚ್ಯಾಯ ನಾರಾಯಣಾಯೈವ, ಮ್ (ಅಹಂ), ಎಂಬ ಪ್ರಥಮ ವಾಕ್ಯದಲ್ಲಿ ಏವಕಾರಾರ್ಥವಾದ ಉಕಾರದಿಂದಲೇ ಸ್ವಸಂಬಂಧ ನಿವೃತ್ತಿಯು ಸಿದ್ಧಿಸುವುದರಿಂದ, "ನಮಃ" ಎಂಬ ದ್ವಿತೀಯ ವಾಕ್ಯಕ್ಕೆ ಸ್ವಸಂಬಂಧ ನಿಷೇಧವು ಪ್ರಯೋಜನವಾಗುತ್ತದೆಯೇ ಎಂದರೆ ಪ್ರಯೋಜನಾಂತರವನ್ನು **ಇನ್ನಮುಸ್ಸು** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಈ ನಮಸ್ಸು ಸಮರ್ಪಣದಲ್ಲಿ ಪರನಿರಪೇಕ್ಷ ಕರ್ತೃತ್ವಾದಿಗಳನ್ನು ನಿಷೇಧಿಸುವುದರಲ್ಲಿ ಅಂದರೆ "ಸ್ವಾತಂತ್ರ್ಯಮ್", ಎಂಬ ಪದವನ್ನು ಅಧ್ಯಾಹರಿಸಿ, "ನಮಮ ಸ್ವಾತಂತ್ರ್ಯಮ್" ಎಂದು ಸಮರ್ಪಣದಲ್ಲಿ ಸ್ವಸ್ವಾತಂತ್ರ್ಯವನ್ನು ನಿಷೇಧಿಸುವುದರಲ್ಲಿ ತತ್ಪರವಾಗುವುದರಿಂದ **ಸಪ್ರಯೋಜನ. ವೇರೊರುತ್ತರುಕ್ಕುಮ್** ಇತ್ಯಾದಿ- ಬೇರೆ ಯಾರಿಗೂ ಭರವಲ್ಲ, ನನಗೂ ಭರವಲ್ಲ ಎಂದು ವಾಕ್ಯದ್ವಯಕ್ಕೆ ಅಭಿಪ್ರಾಯ

**ಅಸ್ಮಿನ್ ಉಪಾಯರೂಪಾತ್ಮಸಮರ್ಪಣಪಕ್ಷೇ ಸಾಂಪ್ರದಾಯಿಕ ಮಪ್ಯಸ್ತೀತ್ಯಾಹ,**

**ತಿರುಮನ್ತ್ರಮ್ ಆತ್ಮನಿವೇದನಪರಮೆನ್ರು ನಿಡತ್ತೈ ನಿತ್ಯತ್ತಿಲೇ "ಮೂಲಮನ್ತ್ರೇಣ ಸ್ವಾತ್ಮಾನಂ ದೇವಾಯ ನಿವೇದ್ಯ" ಎನ್ರರುಳಿಚ್ಚೆಯ್‌ದಾರ್. ಇಪ್ಪಡಿ ಶ್ರೀ ವೈಕುಂಠ ಗದ್ಯತ್ತಿಲುಮ್, "ಶ್ರೀಮತಾ ಮೂಲಮನ್ತ್ರೇಣ ಮಾಮೈಕಾನ್ತಿಕಾತ್ಯನ್ತಿಕ ಪರಿಚರ್ಯಾಕರಣಾಯ, ಪರಿಗೃಹ್ಣೀಷ್ವೇತಿ ಯಾಚಮಾನಃ ಪ್ರಣಮ್ಯಾತ್ಮಾನಂ ಭಗವತೇ ನಿವೇದಯೇತ್" ಎನ್ರಿನ್ವರ್ಥಮ್ ದರ್ಶಿತಮ್.**

### 4. ವಾಕ್ಯದ್ವಯಪಕ್ಷೇ ಪುರುಷಾರ್ಥಪರ ತೃತೀಯಾ ಯೋಜನಾ.

**ವಾಕ್ಯಂತೋರುಮ್ ಒರುಪ್ರಾರ್ಥನಾ ಪದತ್ತೈ ಅಧ್ಯಾಹರಿತ್ತು ತಿರುಮನ್ತ್ರಮ್ ಮುಗ್ರಾಕ್ಕ ದ್ವಯತ್ತಿಲ್ ಉತ್ತರಖಂಡಮ್ಪೋಲೇ ಇಷ್ಟಪ್ರಾಪ್ತ್ಯನಿಷ್ಟನಿವೃತ್ತಿರೂಪ ಪುರುಷಾರ್ಥ ಪ್ರಾರ್ಥನಾ ಪರಮಾಹವು ಮನುಸಂಧಿಪ್ಪಾರ್‌ಹಳ್. ಅಪ್ಪೋದುಮ್ ಸ್ವರೂಪಾನು ಸಂಧಾನಮ್ ಇದಿಲೇಯಂತರ್ಗತಮ್. ಸ್ವರೂಪಮಾತ್ರ ಪರಮಾನಪ್ಪೋದುಮ್ ಪುರುಷಾರ್ಥ ವಿಶೇಷಮ್ ಸೂಚಿತಮ್. ಅದಿನುಪಾಯಮುಮ್**

---

ವಾಗಬಹುದು. ಅಂದರೆ ಪ್ರಥಮ ವಾಕ್ಯದಲ್ಲಿ "ಉ" ಕಾರದಿಂದ ಅಕಾರಾರ್ಥೇತರನಿಗೆ ನಾನು ಭರವಲ್ಲವೆಂದು ಸಾಮಾನ್ಯವಾಗಿ ತೋರಿದರೂ, ಈ ನಮಶ್ಶಬ್ದದಿಂದ ನನಗೂ ಭರವಲ್ಲವೆಂಬ ವಿಶೇಷಾರ್ಥವು ತೋರುವುದರಿಂದ ಗೋಬಲೀವರ್ದನ್ಯಾಯದಿಂದ ನಮಶ್ಶಬ್ದಕ್ಕೆ ಪ್ರಯೋಜನ.

**ತಿರುಮಂತ್ರಮ್ ಆತ್ಮನಿವೇದನ ಪರಮೆನ್ರುನಿಡತ್ತೈ** ಇತ್ಯಾದಿ. ಹೀಗೆ ಅಷ್ಟಾಕ್ಷರ ಮಂತ್ರವು, ಸಮರ್ಪಣಪರ ವೆಂಬುದನ್ನು, ನಿತ್ಯಗ್ರಂಥದಲ್ಲಿ, ಶ್ರೀಭಾಷ್ಯಕಾರರು "**ಮೂಲಮಂತ್ರೇಣಸ್ವಾತ್ಮಾನಂದೇವಾಯ ನಿವೇದ್ಯ**" ಅಷ್ಟಾಕ್ಷರ ಮಂತ್ರದಿಂದ ತನ್ನನ್ನು ಭಗವಂತನಿಗೆ **ಸ**ಮರ್ಪಿಸಿ, ಎಂದು ಅನುಗ್ರಹಿಸಿರುತ್ತಾರೆ- **ಇಪ್ಪಡಿ ಶ್ರೀ ವೈಕುಂಠಗದ್ಯತ್ತಿಲುಮ್** ಇತ್ಯಾದಿ–ಹೀಗೆ ಶ್ರೀ ವೈಕುಂಠ ಗದ್ಯದಲ್ಲಿಯೂ **ಶ್ರೀಮತಾಮೂಲ ಮಂತ್ರೇಣ** ಇತ್ಯಾದಿ- ಶ್ರೀಮತ್ತಾದ ಅಷ್ಟಾಕ್ಷರ ಮಂತ್ರದಿಂದ, ನನ್ನನ್ನು **ಏಕಾಂತಿಕಾತ್ಯಂತಿಕಪರಿಚರ್ಯಾ ಕರಣಾಯ**–ನಿರಂತರವಾದ ನಿನ್ನ ಪರಿಚರ್ಯೆಯನ್ನು ಮಾಡಲು, **ಪರಿಗೃಹ್ಣೀಷ್ವ**- ಅಂಗೀಕರಿಸು, ಎಂದು ಯಾಚಿಸುವವನಾಗಿ ನಮಸ್ಕರಿಸಿ ತನ್ನನ್ನು ಭಗವಂತನಿಗೆ **ನಿವೇದಯೇತ್**–ಸಮರ್ಪಿಸಬೇಕು, ಎಂದು ಈ **ಸಮರ್ಪಣಾರ್ಥವು ತೋರಿಸಲ್ಪಟ್ಟಿತು.**

ಅನಂತರ, ವಾಕ್ಯದ್ವಯ ಪಕ್ಷದಲ್ಲಿ ಪುರುಷಾರ್ಥ ಪರವಾದ ಮೂರನೆಯ ಯೋಜನೆಯನ್ನು ವಾಕ್ಯಂ ತೋರುಮ್ ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ 1) ಪ್ರಣವಾನ್ವಿತ ನಾರಾಯಣಾಯ ಸ್ಯಾಮ್, ನಮ.ನ ಸ್ಯಾಮ್, ಎಂದು ಪ್ರತಿ ವಾಕ್ಯದಲ್ಲಿಯೂ "ಸ್ಯಾಮ್" ಎಂಬ ಪ್ರಾರ್ಥನಾ ಪದವನ್ನು ಅಧ್ಯಾಹಾರಮಾಡಿ ಕೊಂಡು, ಅಷ್ಟಾಕ್ಷರವು ಪೂರ್ತ ದ್ವಯ ಮಂತ್ರದಲ್ಲಿ ಉತ್ತರಖಂಡವಾದ "ಶ್ರೀಮತೇ ನಾರಾಯಣಾಯ" ಎಂಬಲ್ಲಿಯ ಹಾಗೆ ಇಷ್ಟಪ್ರಾಪ್ತಿ, "ನಮಃ" ಎಂಬಲ್ಲಿಯ ಹಾಗೆ ಅನಿಷ್ಟ ನಿವೃತ್ತಿರೂಪ ಪುರುಷಾರ್ಥ ಪ್ರಾರ್ಥನೆಯ ಪರವಾಗಿಯೂ ಅನುಸಂಧಾನ ಮಾಡುತ್ತಾರೆ- ಈ ಪುರುಷಾರ್ಥ ಪ್ರಾರ್ಥನೆಯನ್ನು ಮಾಡುವವನು ಶೇಷನೇ ಆದ್ದರಿಂದ, ಆರ್ಥಿಕವಾಗಿ **ಅಪ್ಪೋದುಮ್** ಇತ್ಯಾದಿ– ಆಗಲೂ ಸ್ವರೂಪಾನು ಸಂಧಾನವು ಇದರಲ್ಲಿ ಅಂತರ್ಗತವು. "ಓಂನಾರಾಯಣಾಯ ಕಿಂಕರಸ್ಸ್ಯಾಮ್" ಎಂಬ ಪ್ರಾರ್ಥನೆಯಲ್ಲಿ ಕಿಂಕರತ್ವರೂಪ ಸ್ವರೂಪಾನುಸಂಧಾನವು ಶಾಬ್ದವೆಂದು ಕೆಲವರು **ಹೇಳುತ್ತಾರೆಂ**ದು ತಾತ್ಪರ್ಯ. **ಸ್ವರೂಪಮಾತ್ರಪರಮಾನ** ಇತ್ಯಾದಿ–ಸ್ವರೂಪ ಮಾತ್ರ ಪರವಾದಾಗಲೂ, ಪುರುಷಾರ್ಥ ವಿಶೇಷವು ಅನುಸಂಧೇಯವಾಗಿ "ನಾರಾಯಣಸ್ಯಾಮ್", ಎಂಬ ಚತುರ್ಥಿಯಲ್ಲಿ ಸೂಚಿತವು. **ಅದಿನ್‌ಉಪಾಯಮುಮ್** ಇತ್ಯಾದಿ- ಹೀಗೆ ಸ್ವರೂಪ ಪರ ಯೋಜನೆಯಲ್ಲಿ ಪುರುಷಾರ್ಥವೂ

ತತ್ತತ್ಪ್ರಮಾಣ ಪಶತ್ತಾಲೇ ವರುಮ್.

ವಾಕ್ಯದ್ವಯಪಕ್ಷೇ ಕೇಚಿತ್, ಮನ್ತ್ರಃ ಪ್ರಾಪ್ಯಪರ ಇತಿ ಕಥನ ತಾತ್ಪರ್ಯಮಾಹ.

ಇಮ್ಮನ್ತ್ರೋತ್ಪಾದ್ಯಙ್ಗಳಾನ ಶೇಷತ್ವಜ್ಞಾನಾದಿಹಳ್ ಮುನ್ಬು ಪ್ರಾಪ್ತಙ್ಗಳಲ್ಲಾಮೈಯಾಲೇ, ಇಮ್ಮನ್ತ್ರಮ್ ಮುಖ್ಯ ಪ್ರಾಪ್ಯ ಪರಮೆನ್ರದು ಅನ್ಯಪರಮ್. ಎಙ್ಗನೇ ಎನ್ನಿಲ್ ? ಪ್ರಾಪ್ಯಪರಮೆನ್ರದು ಪ್ರಾಪ್ಯ ಪ್ರತಿಪಾದಕಮೆನ್ನುಪಡಿಯನ್ರು ;ಶಬ್ದತ್ತಾಲ್ ಉತ್ಪಾದ್ಯಮಾನಜ್ಞಾನಮ್ ಶಬ್ದತ್ತುಕ್ಕುಪ್ರತಿಪಾದ್ಯಮನ್ರಿರೇ.

ವಾಕ್ಯತ್ರಯಪಕ್ಷೇ ಪಂಚ ಪ್ರಕಾರಯೋಜನಾಃ

ತಿರುಮನ್ತ್ರಮ್ ಮೂನ್ರು ವಾಕ್ಯಮಾನಪೋದು 1 "ಸ್ವರೂಪಮುಮ್ ಪುರುಷಾರ್ಥಮುಮ್ ಶೊಲ್ಲ

---

ಸೂಚಿತವಾದರೆ, ಆ ಪುರುಷಾರ್ಥವನ್ನು ಪಡೆಯಲು "ಮಾಮೇಕಂಶರಣವ್ರಜ", ಎಂಬ ಪ್ರಮಾಣದಿಂದ ಉಪಾಯವೂ. ತ್ವಮೇವೋಪಾಯ ಭೂತೋಮೇ", ಎಂಬ ಪ್ರಮಾಣದಿಂದ ನಿರಪೇಕ್ಷ ರಕ್ಷಕತ್ವ ಪ್ರಾರ್ಥನಾರೂಪವಾದ ಉಪಾಯತ್ವ ಪ್ರಾರ್ಥನೆಯೂ ವರುಮ್-ಆಕ್ಷಿಪ್ತವಾಗಿ ಬರುತ್ತದೆ. ಹೀಗೆ ಎರಡು ವಾಕ್ಯವಾದ ಪಕ್ಷದಲ್ಲಿ ಮಂತ್ರವು ಪೂರ್ತ ಸ್ವರೂಪ ಮಾತ್ರ ಪರವೆನ್ರುಮ್, ಉಪಾಯಮಾತ್ರಪರವೆನ್ರುಮ್, ಪ್ರಾಪ್ಯಮಾತ್ರಪರ ಮೆನ್ರುಮ್, ಯೋಜನಾತ್ರಯವನ್ನು ಮಾತ್ರ ಹೇಳಿರುದು ಸಂಗತವೇ. ಪ್ರಾಪ್ಯ ಪರವಾದ ಯೋಜನೆಯಂತೆ, ಸ್ವರೂಪೋಪಾಯ ಪರಯೋಜನೆಯೂ, ಮುಂಚೆ ಇಲ್ಲದೆ, ಇನ್ನು ಮೇಲೆ ಪ್ರಾಪ್ಯವಾದ ಸ್ವರೂಪ ಜ್ಞಾನವನ್ನೂ ಉಪಾಯಜ್ಞಾನವನ್ನೂ ಉಂಟು ಮಾಡುವುದರಿಂದ ಅವೂ ಪ್ರಾಪ್ಯಪರವಾದ್ದರಿಂದ ಮೂರೂ ಪ್ರಾಪ್ಯಕರವೆಂದು ಹೇಳುವ ಸಂಪ್ರದಾಯವು ಯುಕ್ತಿ ಯುಕ್ತವಾಗಿ ತೋರುವಾಗ, ಅದನ್ನು ಉಪೇಕ್ಷಿಸಬಹುದೇ ಎಂದರೆ ಅದಕ್ಕೆ ಸಮಾಧಾನವನ್ನು ಇಮ್ಮಂತ್ರೋತ್ಪಾದ್ಯಂಗಳಾನ ಇತ್ಯಾದಿಯಾಗಿ ಹೇಳುತ್ತಾರೆ. ಅದಾಗಿ ಈ ಮಂತ್ರದಿಂದ ಉತ್ಪನ್ನಗಳಾದ ಶೇಷತ್ವ ಜ್ಞಾನಾದಿಗಳು ಮೊದಲು ಪ್ರಾಪ್ತಗಳಲ್ಲವಾದ್ದರಿಂದ ಈ ಮಂತ್ರವು ಪೂರ್ತ ಪ್ರಾಪ್ಯಪರವೆಂದು ಹೇಳಿದುದು ಅನ್ಯಪರಮ್-ಮಂತ್ರಜನ್ಯವಾದ ಜ್ಞಾನವನ್ನು ಮಂತ್ರ ಪ್ರತಿಪಾದ್ಯ ವೆಂದು ಭ್ರಮಿಸಿ ಹೇಳಿದುದು. ಎಂಗನೇ ಎನ್ನಿಲ್- ಏಕೆಂದರೆ, ಪ್ರಾಪ್ಯಪರವೆಂದು ಹೇಳಿದುದು ಪ್ರಾಪ್ಯಪ್ರತಿ ಪಾದಕವೆಂದಲ್ಲ ಶಬ್ದದಿಂದ ಉತ್ಪಾದ್ಯವಾದ ಜ್ಞಾನವು ಶಬ್ದಪ್ರತಿಪಾದ್ಯವಲ್ಲ, ಅಲ್ಲವೇ

ಅನಂತರ ಅಷ್ಟಾಕ್ಷರವನ್ನು ಮೂರು ವಾಕ್ಯಗಳನ್ನಾಗಿ ವಿಂಗಡಿಸಿ ಐದು ಯೋಜನೆಗಳನ್ನು ತಿಳಿಸುತ್ತಾರೆ. ಸಂಗ್ರಹವಾಗಿ ಹೇಳುವುದಾದರೆ 1) ಪ್ರಣವ ನಮಸ್ಸುಗಳು "ಆಸ್ಮೈವ ಮ್, ನಮಃ" ಎಂದು ಸ್ವರೂಪಪರ. "ನಾರಾಯಣಾಯ ಸ್ಯಾಮ್" ಎಂಬುದು ಪುರುಷಾರ್ಥಪರ. ಉಪಾಯವು ಆರ್ಥ. ಇದು ಮೊದಲನೆಯ ಯೋಜನೆ 2) "ಆಸ್ಮೈವ ಮ್" ಎಂದು ಪ್ರಣವವು ಸ್ವರೂಪಪರ, ದ್ವಿತೀಯ ತೃತೀಯ ಪದಗಳು "ನಾರಾಯಣಾಯ ನಮಃ" ಎಂದು ಪುರುಷಾರ್ಥ ಪ್ರಾರ್ಥನಾಪರ, ಉಪಾಯವು ಆರ್ಥ, ಎಂಬುದು ಎರಡನೆಯ ಯೋಜನೆ 3) 'ಆಸ್ಮೈವ ಮ್' ಎಂದು ಪ್ರಣವವು ಸ್ವರೂಪಪರ, "ನಾರಾಯಣಾಯ ನಮಃ" ಎಂಬುದು ಉಪಾಯಪರ, ಪುರುಷಾರ್ಥ ಪ್ರಾರ್ಥನೆಯು, ಆರ್ಥ. ಇದು ಮೂರನೆ ಯೋಜನೆ 4) ಪ್ರಣವವು "ಆಸ್ಮೈವ ಮ್" ಎಂದು ಉಪಾಯಪರ. ನಮಃ, ನಾರಾಯಣಾಯಸ್ಯಾಮ್, ಎಂದು ಪುರುಷಾರ್ಥ ಪ್ರಾರ್ಥನಾಪರ. ಸ್ವರೂಪವು ಆರ್ಥ. ಇದು ನಾಲ್ಕನೆಯ ಯೋಜನೆ. 2) ಕ್ರಮವಾಗಿ ಪ್ರಣವವು ಸ್ವರೂಪಪರ, ನಮಸ್ಸು ಉಪಾಯಪರ, ನಾರಾಯಣಾಯ ಸ್ಯಾಮ್, ಎಂಬುದು ಪುರುಷಾರ್ಥ ಪ್ರಾರ್ಥನಾಪರ. ಇದು ಐದನೆಯ ಯೋಜನೆ.

ತಿರು ಮಂತ್ರಮ್ ಮೂನ್ರು ವಾಕ್ಯಮಾನ ಪೋದು ಇತ್ಯಾದಿ ಅಷ್ಟಾಕ್ಷರ ಮಂತ್ರವು ಮೂರು ವಾಕ್ಯವಾದ ಸಮಯದಲ್ಲಿ 1) ಪ್ರಣವ ನಮಸ್ಸುಗಳಲ್ಲಿ ಸ್ವರೂಪವೂ, ತೃತೀಯ ಪದದಲ್ಲಿ ಪುರುಷಾರ್ಥವೂ,

ಉಪಾಯಮುಮ್ ಅರ್ಥಮಾದಲ್, 2) ಸ್ವರೂಪಮುಮ್ ಉಪಾಯಮುಮುಮ್ ಶೊಲ್ಲ,ಪುರುಷಾರ್ಥಮ ಅರ್ಥಮಾದಲ್ 3) ಉಪಾಯಮುಮುಮ್ ಪುರುಷಾರ್ಥಮುಮುಮ್ ಶೊಲ್ಲ,ಸ್ವರೂಪಮ್ ಅರ್ಥಮಾದಲ್, 4) ಸ್ವರೂಪೋಪಾಯ ಪುರುಷಾರ್ಥಙ್ಗಳಡೈವೇ ಶಾಬ್ದಙ್ಗಳಾಹಕ್ಕಡವದು.

ತತ್ರ ಪ್ರಥಮ ಯೋಜನಾ

ಎಙ್ಙನೇ ಯೆನ್ನಿಲ್–2) "ಅಕಾರಾರ್ಥಾಯೈವಸ್ವಮಹ ಮಥಮಹ್ಯಂ ನ, ನಿವಹಾನರಾಣಾಂ ನಿತ್ಯಾ ನಾಮಯನ ಮಿತಿ ನಾರಾಯಣ ಪದಮ್ । ಯಮಾಹಾಸ್ಮೈಕಾಲಂ ಸಕಲ ಮಪಿ ಸರ್ವತ್ರ ಸಕಲಾಸ್ವವಸ್ಥಾ ಸ್ವಾವಿಸ್ಯುರ್ಮಮ ಸಹಜ ಕೈಙ್ಕರ್ಯವಿಧಯಃ" ಎನ್ಗಿರಪಡಿಯೇ ಪ್ರಣವಮುಮ್ ನಮಸ್ಸುಮ್ ಸ್ವರೂಪತ್ತೈ ಶೋಧಿಕ್ಕಿರದು. ಮೂನ್ರಾಮ್ಪದಮ್ ಪ್ರಣವತ್ತಿಲ್ಸೊನ್ನ ತಾದರ್ಥ್ಯತ್ತೈ ಪುರಸ್ಕರಿತ್ತುಕೊಂಡು ಅಧ್ಯಾಹೃತಮಾನ ಕ್ರಿಯಾಪದತ್ತೋಡೇ ಕೂಡಿ ಪುರುಷಾರ್ಥ ಪ್ರಾರ್ಥನಾರ್ಥಮ್.

ಅಪ್ಪೋದು ಅನಿಷ್ಟ ನಿವೃತ್ತಿ ಪ್ರಾರ್ಥನೈ ಅರ್ಥಸ್ವಭಾವತ್ತಾಲೇ ವರಕ್ಕಡವದು. ದ್ವಯತ್ತಿಲುಮ್

---

ಹೇಳಲ್ಪಟ್ಟು, ಉಪಾಯವು ಅರ್ಥವಾಗಿರುವುದು 2) ಪ್ರಣವವು ಸ್ವರೂಪ ಪರ, ದ್ವಿತೀಯ ತೃತೀಯ ಪದಗಳು ಪುರುಷಾರ್ಥ ಪ್ರಾರ್ಥನಾಪರವಾಗಿರುವುದು, ಸ್ವರೂಪವು ಅರ್ಥವಾಗಿರುವುದು 3) ಸ್ವರೂಪ, ಉಪಾಯ, ಪುರುಷಾರ್ಥಗಳು ಕ್ರಮವಾಗಿ ಶಾಬ್ದಗಳಾಗಿರುವುದು ಎಂಬ ಯೋಜನೆಗಳು ಏರ್ಪಡುತ್ತವೆ.

ಎಂಗನೇಎನ್ನಿಲ್ ಹೇಗೆಂದರೆ )ಅಕಾರಾರ್ಥಾಯೈವ ಸ್ವಮಹಮ್-ಅಕಾರ ವಾಚ್ಯನಾದ ಭಗವಂತನಿಗೆನಾನುಶೇಷಭೂತನು ಇದು ಪ್ರಣವಾರ್ಥ. ಅಥಮಹ್ಯಂನ–ಮ್ ಎಂದು ಅನಷಂಗಿಸಿ ಅಹಂ ನಮಮ, ಎಂದು ಅನ್ವಯಿಸಿ ನನಗೆ ನಾನು ಶೇಷಭೂತನಲ್ಲ ಇದು ನಮಸ್ಸಿಗೆ ಅರ್ಥ. ನಿತ್ಯಾನಾಂ ನರಾಣಾಂ ನಿವಹಾ ಅಯನಂ ಯಸ್ಯೇತಿ ನಾರಾಯಣ ಪದಂ ಯಮಾಹ– ನಿತ್ಯರಾದ ನರರ ಸಮೂಹಕ್ಕೆ ವಾಸಸ್ಥಾನವೆಂದು ನಾರಾಯಣ ಪದವು ಯಾರನ್ನು ಹೇಳುತ್ತದೆಯೋ ಇದು ಬಹು ವ್ರೀಹಿ ಗರ್ಭವಾದ ನಾರಾಯಣಪದದ ಅರ್ಥ. ಅಸ್ಮೈ ಸಕಲಮಪಿಕಾಲಂ ಸಕಲಾಸ್ವವಸ್ಥಾಸು– ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ, ಮಮ ಸಹಜ ಕೈಂಕರ್ಯವಿಧಯ. ಆವಿಸ್ಯುಃ ನನಗೆ ಸಹಜವಾದ ಕೈಂಕರ್ಯಗಳು ಆವಿರ್ಭವಿಸಲಿ. (ಇದು ನಾರಾಯಣ ಪದದ ಮೇಲೆ ಬಂದಿರುವ ಆಯ" ಎಂಬ ಚತುರ್ಥೀವಿಭಕ್ತ್ಯರ್ಥ). ಎನ್ಗಿರಪಡಿಯೇ ಎಂಬಂತೆ ಪ್ರಣವವೂ ನಮಸ್ಸೂ ಸ್ವರೂಪವನ್ನು ಶೋಧಿಸಿ ಕೊಡುತ್ತವೆ. ಮೂನ್ರಾಮ್ ಪದಮ್-ನಾರಾಯಣಾಯ ಎಂಬ ಮೂರನೆಯ ಪದವು ಪ್ರಣವದಲ್ಲಿ ಹೇಳಿದ ತಾದರ್ಥ್ಯವನ್ನು ಪುರಸ್ಕರಿಸಿಕೊಂಡು ಅಧ್ಯಾಹೃತ ಮಾನಕ್ರಿ ಯಾಪದತ್ತೋಡೇ– "ಭವೇಯಮ್" ಎಂದು ಅಧ್ಯಾಹಾರ ಮಾಡಲ್ಪಟ್ಟ ಕ್ರಿಯಾ ಪದದೊಡನೆ ಸೇರಿಕೊಂಡುಪುರುಷಾರ್ಥ ಪ್ರಾರ್ಥನಾಪರ

ಈ ಯೋಜನೆಯಲ್ಲಿ ನಮಸ್ಸು ಸ್ವರೂಪಪರವೆಂದು ಹೇಳಿರುವುದರಿಂದ, ಅನಿಷ್ಟ ನಿವೃತ್ತಿರೂಪ ಪುರುಷಾರ್ಥಕ್ಕೆ ವಾಚಕ ಪದವಿಲ್ಲವಲ್ಲ ಎಂದರೆ ಅದನ್ನು ಅಪ್ಪೋದುಅನಿಷ್ಟ ನಿವೃತ್ತಿ ಪ್ರಾರ್ಥನೆ ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಅಗ್ಯೆ ಅನಿಷ್ಟ ನಿವೃತ್ತಿ ಪ್ರಾರ್ಥನೆಯು ಅರ್ಥಸ್ವಭಾವತ್ತಾಲೇ– ಅನಿಷ್ಟವನ್ನು ಹೋಗಲಾಡಿಸಿಕೊಂಡೇ ಇಷ್ಟಪ್ರಾಪ್ತಿಯು ಬರುವುದರಿಂದ, ಅರ್ಥವಾಗಿ ವರಕ್ಕಡವದು– ಏರ್ಪಡುತ್ತದೆ. ದ್ವಯತ್ತಿ

---

1. ಅಷ್ಟಶ್ಲೋಕೀ 3

**1) "ಭವಾಂಸ್ತು ಸಹವೈದೇಹ್ಯಾ" ಇತ್ಯಾದಿಹಳಿಲುಮ್ ಶೊಲ್ಲುಹಿರಪಡಿಯೇ ಕೈಂಕರ್ಯ ಪ್ರತಿಸಂಬಂಧಿಯುಮ್ ಸಪತ್ನೀಕನಾನ ಪಡಿಯಾಲೇ ಇಙ್ಗುಮ್ ಸಲಕ್ಷ್ಮೀಕನಾನ ನಾರಾಯಣ್ ಪೊರುಟ್ಟಾವೇನೆನ್ರಪಡಿ. "ನಾರಾಯಣಾಯ" ಎನ್ಗಿರವಿದುಕ್ಕು ಕ್ರಿಯಾಪೇಕ್ಷೈಯುಂಡಾಹೈಯಾಲ್ ಔಚಿತ್ಯತ್ತಾಲೇ "ಭವೇಯಮ್" ಎನ್ರೊರು ಪದಂ ಅಧ್ಯಾಹಾರ್ಯಮ್. 2) "ವ[illegible]ವಿಲಾ ವಡಿಮೈ ಶೆಯ್ಯ ವೇಣ್ಡುಮ್" ಎನ್ರುಮ್. 3) "ಅಡಿಯೇನೈಯಾಳ್ ಕೊಂಡರುಳೇ" ಎನ್ರುಮ್, 4) "ನಿತ್ಯ ಕಿಂಕರತಾಂ ಪ್ರಾರ್ಥಯೇ" ಎನ್ರುಮ್, 5) "ನಿತ್ಯ ಕಿಂಕರೋ ಭವಾನಿ" ಎನ್ರುಮ್, ಇಪ್ಪ್ರಾರ್ಥನೈಯೈ ಪ್ರಯೋಗಿತ್ತಾರ್‌ಹಳಿರೇ.**

---

**ಲುಮ್** 1) **ಭವಾಸ್ತು ಸಹವೈದಾಹ್ಯಾ** ಇತ್ಯಾದಿ **ಹಳಿಲುಮ್** ಇತ್ಯಾದಿ - **ಶ್ರೀಮತೇ** "ನಾರಾಯಣಾಯ" ಎಂಬ ದ್ವಯಮಂತ್ರದ ಉತ್ತರ ಖಂಡದಲ್ಲಿಯೂ, ನೀನು (ಶ್ರೀ ರಾಮನು) ವೈದೇಹಿಯೊಡನೆ ಗಿರಿ ಪ್ರದೇಶಗಳಲ್ಲಿ ರಮಿಸುವಾಗ, ನಾನು (ಶ್ರೀ ಲಕ್ಷ್ಮಣನು) ಸರ್ವವಿಧ ಕೈಂಕರ್ಯಗಳನ್ನು ಮಾಡುತ್ತೇನೆಂಬ ವಾಕ್ಯದಲ್ಲಿಯೂ, ಹೇಳುವಂತೆ, ಕೈಂಕರ್ಯಕ್ಕೆ ಪ್ರತಿ ಸಂಬಂಧಿಯು ಲಕ್ಷ್ಮೀವಿಶಿಷ್ಟನಾದ್ದರಿಂದ, ಅಷ್ಟಾಕ್ಷರ ಮಂತ್ರದಲ್ಲಿಯ, ಕೇವಲ "ನಾರಾಯಣ" ಶಬ್ದವೂ, ಲಕ್ಷ್ಮೀ ವಿಶಿಷ್ಟನಾದ ನಾರಾಯಣನನ್ನು ತಿಳಿಸಿ, ಸಲಕ್ಷ್ಮೀಕನಾದ ನಾರಾಯಣನಿಗೆ ಕೈಂಕರ್ಯವನ್ನು ಮಾಡುವವನಾಗುತ್ತೇನೆಂದು ಅರ್ಥ. **"ನಾರಾಯಣಾಯ"** ಎಂಬುದಕ್ಕೆ ಕ್ರಿಯಾಪೇಕ್ಷೆಯು ಇರುವುದರಿಂದ, ಔಚಿತ್ಯದಿಂದ "ಭವೇಯಂ" ಎಂಬುದೊಂದು ಪದವು ಅಧ್ಯಾಹಾರ ಮಾಡಲ್ಪಡತಕ್ಕದ್ದು. ಈ ರೀತಿಯಾದ ಸ್ಥಲಗಳಲ್ಲಿ ಪ್ರಾರ್ಥನಾವಾಚಿ ಕ್ರಿಯಾ ಪದವನ್ನು ಪ್ರಯೋಗಿಸ ಬೇಕೆಂಬುದಕ್ಕೆ **ಪೂರ್ವಾಚಾರ್ಯರ ಮತ್ತು ಆಳ್ವಾರುಗಳ** ಶ್ರೀ ಸೂಕ್ತಿಗಳನ್ನು ಪ್ರಮಾಣೀಕರಿಸುತ್ತಾರೆ. ಅದಾಗಿ 2) **ವಳುವಿಲಾವಡಿಮೈ** ಇತ್ಯಾದಿಯಾಗಿಯೂ 3) **ಅಡಿಯೇನೈ ಆಟ್ಕೊಂಡರುಳೇ**– ನನ್ನನ್ನು ದಾಸನನ್ನಾಗಿ ಸ್ವೀಕರಿಸು ಎಂದೂ 4) **ನಿತ್ಯಕಿಂಕರತಾಂಪ್ರಾರ್ಥಯೇ**, ನಿತ್ಯ ಕೈಂಕರ್ಯವನ್ನು ಪ್ರಾರ್ಥಿಸುತ್ತೇನೆ, ಎಂದೂ 5) **ನಿತ್ಯ ಕಿಂಕರೋ ಭವಾನಿ**– ನಿತ್ಯ ಕಿಂಕರನಾಗುತ್ತೇನೆ ಎಂದೂ ಈ ಪ್ರಾರ್ಥನಾ ಪದವನ್ನು ಪ್ರಯೋಗಿಸಿದ್ದಾರೆ. ಆ ರೀತಿಯಲ್ಲಿ "ನಾರಾಯಣಾಯ ಭವೇಯಮ್" ಎಂದು ಕ್ರಿಯಾ ಪದವನ್ನು ಇಲ್ಲಿ ಅಧ್ಯಾಹಾರ ಮಾಡಿಕೊಳ್ಳುವುದೆಂದು ತಾತ್ಪರ್ಯ. **ತಾದರ್ಥ್ಯಮ್** ಇತ್ಯಾದಿ–ಪ್ರಣವದಲ್ಲಿ ಲುಪ್ತ ಚತುರ್ಥಿಯಲ್ಲಿ ಅವನಿಗಾಗಿಯೇ ಎಂಬ ತಾದರ್ಥ್ಯವು ನಿತ್ಯ ಸಿದ್ಧವಾದ್ದರಿಂದಲೂ ಅದನ್ನು ಪ್ರಾರ್ಥಿಸಬೇಕಿಲ್ಲ ವಾದ್ದರಿಂದಲೂ, ಶೇಷತ್ವರೂಪ ಸಂಬಂಧ ಸ್ವರೂಪವು ಪ್ರಣವದಲ್ಲಿ ಹೇಳಲ್ಪಡುವುದರಿಂದಲೂ, ಇದರ ಫಲವಾಗಿ "ಸಮುದ್ರೇಗೋಷ್ಪದಮುಪ್ತಿ"– (ವಿಸ್ತಾರವಾದ ಸಮುದ್ರ ಪ್ರದೇಶದಲ್ಲಿ ಗೋಷ್ಪದ–ಹಸುವಿನ ಕಾಲಷ್ಟು ಸ್ಥಳವೂ ಅಡಗಿದೆ) ಎಂದು ಹೇಳುವಂತೆ,

---

(1) ಭವಾಂಸ್ತು ಸಹವೈದೇಹ್ಯಾ ಗಿರಿಸಾನುಷು ರಂಸ್ಯತೇ।
ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಃ ಸ್ವಪತಶ್ಚ ತೇ ॥ ರಾಮ. (2-31-27)

ಶ್ರೀ ಲಕ್ಷ್ಮಣ ಸ್ವಾಮಿಯು ರಾಮಚಂದ್ರನಲ್ಲಿ ಪ್ರಾರ್ಥಿಸುವ ಶ್ಲೋಕ. ಎಲೈ ರಾಮಚಂದ್ರ ಸ್ವಾಮಿಯೇ। ತಾವು ವೈದೇಹಿಯೊಡನೆ ಬೆಟ್ಟದ ತಪ್ಪಲು ಪ್ರದೇಶಗಳಲ್ಲಿ ಜಾಗರರಾಗಿಯೂ ನಿದ್ರಿಸಿಯೂ ವಿಹರಿಸುವಾಗ. ನಾನು ನಿಮ್ಮಿಬ್ಬರಿಗೂ ಸರ್ವವಿಧ ಕೈಂಕರ್ಯಗಳನು ಮಾಡುತ್ತೇನೆ,

(2) ಒಳಿವಿಲ್ ಕಾಲಮೆಲ್ಲಾಮ್. ಉಡನಾಯ್ ಮನ್ನಿ,
ವಳುವಿಲಾವಡಿಮೈ ಶೆಯ್ಯವೇಂಡುಮ್ ನಾಮ್ ।
ತೆಳಿಕುರಲರುವಿತ್ತಿರುವೇಂಗಡತ್ತು
ಎಳಿಲ್‌ಕೋಳ್‌ಜೋದಿ ಎಂದೈ ತಂದೈ ತಂದೈಕ್ಕೇ ॥ ತಿರುವಾಯ್ಮೊಳಿ (3-3-1)

ತಿರುವೇಂಗಡವೆಂಬ ಬೆಟ್ಟದಲ್ಲಿರುವ ನನ್ನ ಸರ್ವವಿಧ ಬಂಧುವಿಗೆ, ಎಲ್ಲಾ ಕಾಲದಲ್ಲಿಯೂ ಜತೆಯಲ್ಲಿಯೇ ಇದ್ದು ನಿರ್ದೋಷವಾದ ಕೈಂಕರ್ಯವನ್ನು ನಾವು ಮಾಡಬೇಕು.

ತಾದರ್ಥ್ಯಮ್ ನಿತ್ಯಸಿದ್ಧ ಮಾಕ್ಕೈಯಾಲೇ ಆಶಾಸಿಕ್ಕವೇಣ್ಡಾವೈಯಾಲುಮ್, ಇಸ್ಸಂಬಂಧ ಸ್ವರೂಪಮ್ ಪ್ರಣವತ್ತಿಲೇ ಶೊಲ್ಲುಹೈಯಾಲುಮ್, ಇದಿಃಫಲಮಾಯ್ "ಸಮುದ್ರೇಗೋಷ್ಪದಮಸ್ತಿ" ಎನ್ನುಮಾ ಪ್ಪೋಲೇ ಪುರುಷಾರ್ಥಾಂತರಙ್ಗಳೈಯೆಲ್ಲಾಮ್ ವಿಳಾಕ್ಕುಲೈ ಕ್ಕೊಣ್ಡಿರುಕ್ಕಿರ ಪರಿಪೂರ್ಣಬ್ರಹ್ಮಾನುಭವ ಪರೀವಾಹರೂಪಮಾನ ಕೈಙ್ಕರ್ಯಮ್, ಒಳ್ರಿವಿಲ್ ಕಾಲತ್ತಿಲ್" ಪಡಿಯೇ ಇಙ್ಗ ಅಪೇಕ್ಷಿಕ್ಕಪ್ಪಡಹಿರದು.

ಅತ್ರ ಸ್ವಲಾಭಾಪೇಕ್ಷಾಪಿ ಸ್ವಾಮಿಲಾಭಾವಸಾಯಿನೀ ।
ಸ್ವಾಮಿಪ್ರಯೋಜನಾ ಪೇಕ್ಷಾಪ್ಯ ತಸ್ಸ್ವಾನಂದ ಹೇತುಕಾ ॥85॥

ಉನ್ನೈಯುಹಪ್ಪಿಕ್ಕುಮ್ ಕೈಙ್ಕರ್ಯತ್ತೈ ನಾನ್‌ಪೆರವೇಣು ಮೆನ್ರಾಲುಮ್, ಎನ್ನೈಯಡಿಮೈ ಕೊಂಡು ನೀಯುಹಕ್ಕವೇಣು ಮೆನ್ರಾಲುಮ್, ಇರವರುಕ್ಕುಮ್ ಪ್ರಯೋಜನಮ್ ಸಿದ್ಧಮ್.

(1) ತ್ರೈಗುಣ್ಯಂ ಷಡ್ಗುಣಾಢ್ಯಂಚ ದ್ವಿಧಾನ್ನಮ್ ಪರಿಕೀರ್ತಿತಮ್ ।
ತ್ರೈಗುಣ್ಯಮನ್ನಂ ಬದ್ಧಾನಾಮಿತ ರೇಷಾ ಮಥೇತರತ್"

ಎನ್ಗಿರ ಷಡ್ಗುಣಾಢ್ಯಮಾನ ಅನ್ನಮಾವದು ? ಭಗವದ್ಗುಣಾನುಭವಮ್ - ಅದಡಿಯಾಹ ವರುಹಿರ

---

ಪುರುಷಾರ್ಥಾಂತರಗಳನ್ನೆಲ್ಲ ವಿಳಾಕ್ಕುಲೈಕ್ಕೊಂಡಿರುಕ್ಕಿರ– ವ್ಯಾಪಿಸಿಕೊಂಡಿರುವ ಅಂದರೆ ತನ್ನಲ್ಲಿ ಅಡಗಿಸಿ ಕೊಂಡಿರುವ, ಪರಿಪೂರ್ಣಬ್ರಹ್ಮಾನುಭವ ಪರೀವಾಹವಾದ ಕೈಂಕರ್ಯವು "ಒಳ್ರಿವಿಲ್‌ಕಾಲವೆಂಬ ಪದಿಕದಲ್ಲಿ ಹೇಳಿರುವಂತೆ ಇಲ್ಲಿ ಅಪೇಕ್ಷಿಸಲ್ಪಡುತ್ತದೆ.

ಹೀಗೆ ಸ್ವಲಾಭಾಪೇಕ್ಷೆಯೂ, ಸ್ವಾಮಿಯ ಪ್ರಯೋಜನಾಪೇಕ್ಷೆಯೂ ಒಂದಾಗಿರುವುದರಿಂದ ಪರಪ್ರಯೋಜನಕ್ಕೆ ಭಂಗವಿಲ್ಲ. ಸ್ವಾನಂದಕ್ಕೂ ಕೊರತೆಯಿಲ್ಲವೆಂದು, **ಅತ್ರಸ್ವಲಾಭಾಪೇಕ್ಷಾಪಿ** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ **ಅತ್ರ**– ಈ ಕೈಂಕರ್ಯ ಪುರುಷಾರ್ಥದಲ್ಲಿ **ಸ್ವಲಾಭಾಪೇಕ್ಷಾಪಿ**– ತನಗೆ ಲಾಭದಲ್ಲಿ ಅಪೇಕ್ಷೆಯೂ, **ಸ್ವಾಮಿಲಾಭಾವಸಾಯಿನೀ**- ಸ್ವಾಮಿಯಾದ ಭಗವಂತನಿಗೆ ಲಾಭವಾಗಿ ಪರ್ಯವಸಾನ ಹೊಂದುತ್ತದೆ. **ಸ್ವಾಮಿಪ್ರಯೋಜನಾಪೇಕ್ಷಾ**– ಸ್ವಾಮಿಗೆ ಪ್ರಯೋಜನದಲ್ಲಿ ಅಪೇಕ್ಷೆಯೂ **ಅತಃ** - ಅದರಿಂದಲೇ, **ಸ್ವಾನಂದಹೇತುಕಾ**– ತನಗೆ ಭಗವದನುಭವರೂಪ ಆನಂದವನ್ನು ಕಾರಣವಾಗಿ ಹೊಂದಿದೆ

ಇದನ್ನು **ಉನ್ನೈಯುಹಪ್ಪಿಕ್ಕುಮ್** ಇತ್ಯಾದಿ ಆರಂಭಿಸಿ ತಾವೇ ವ್ಯಾಖ್ಯಾನ ಮಾಡುತ್ತಾರೆ. ಆದಾಗಿ ನಿನ್ನನ್ನು ಸಂತೋಷಪಡಿಸಬೇಕೆಂಬ ಕೈಂಕರ್ಯವನ್ನು ನಾನು ಹೊಂದಬೇಕೆಂಬ ಪ್ರಾರ್ಥನೆಯೂ, ನನ್ನನ್ನು ದಾಸನನ್ನಾಗಿ ಅಂಗೀಕರಿಸಿ ನೀನು ಸಂತೋಷ ಪಡಬೇಕೆಂದು ಹೇಳಿದರೂ ಇಬ್ಬರಿಗೂ ಪ್ರಯೋಜನವು ಸಿದ್ಧ.

### ಕೈಂಕರ್ಯವು, ಭಗವದನುಭವಪರೀವಾಹವಾದದ್ದು. ಆಕ್ಷೇಪ ಸಮಾಧಾನಗಳು

**ತ್ರೈಗುಣ್ಯಂಷಡ್ಗುಣಾಢ್ಯಂಚ** ಇತ್ಯಾದಿ– **ತ್ರೈಗುಣ್ಯಂ**– ಸತ್ವರಜಸ್ತಮೋಮಯವಾದ ಪ್ರಕೃತಿ ಮಯ ವಾದದ್ದು. **ಷಡ್ಗುಣಾಢ್ಯಂ**– ಜ್ಞಾನಬಲೈಶ್ವರ್ಯ ವೀರ್ಯ ಶಕ್ತಿ ತೇಜಸ್ಸೆಂಬ ಷಾಡ್ಗುಣ್ಯ ಪರಿಪೂರ್ಣನಾದ ಭಗವದನುಭವ. ಎಂದು, **ದ್ವಿಧಾನ್ನಂಪರಿಕೀರ್ತಿತಮ್**– ಅನ್ನವು ಎರಡು ಪ್ರಕಾರವಾಗಿ ಹೇಳಲ್ಪಟ್ಟಿದೆ **ತ್ರೈಗುಣ್ಯಮನ್ನಂ ಬದ್ಧಾನಾಂ**–ತ್ರಿಗುಣಾತ್ಮಕವಾದ ಪ್ರಕೃತಿ ವಿಕಾರವಾದ ಅನ್ನವು ಬದ್ಧ ಜೀವರಿಗೆ ಭೋಗ್ಯವು. **ಇತರೇಷಾಮಥೇತರತ್** – ಮುಕ್ತರಿಗೆ ಷಡ್ಗುಣಾಢ್ಯವಾದ ಭಗವದನುಭವರೂಪವಾದ ಅನ್ನವು ಭೋಗ್ಯ; ಎಂದು ಹೇಳುವ **ಷಡ್ಗುಣಾಢ್ಯಮಾನ ಅನ್ನಮಾವದು ಭಗವದ್ಗುಣಾನುಭವಮ್**– ಆರುಗುಣಗಳಿಂದ ಕೂಡಿದ ಅನ್ನವು

---

(1) ಲಕ್ಷ್ಮೀತಂತ್ರ

**ಭೋಗ್ಯತಮಕೈಙ್ಕರ್ಯವಿಶೇಷಙ್ಗಳಾಹವುಮಾಮ್. 2)"ಭೋಗಮಾತ್ರ ಸಾಮ್ಯಲಿಙ್ಗಾಚ್ಚ", ಎನ್ಱಿರಪಡಿಯೇ ಮುಕ್ತದಶೈಯಿಲ್ ಪರಮಸಾಮ್ಯಂ ಭೋಗತ್ತಿಲುಮ್ ಜ್ಞಾನತ್ತಿಲುಮ್ ಆಹೈಯಾಲ್. ಅಪ್ಪೋದುಮ್ ಸ್ವರೂಪಾನು ಬಂಧಿಯಾನ ಶೇಷತ್ವತ್ತುಕ್ಕುಮ್, ಇದಿನ್ ಫಲಮಾನ ಕೈಙ್ಕರ್ಯತ್ತುಕ್ಕುಮ್ ವಿರೋಧ ಮಿಲ್ಲೈ.**

**ಮುಮುಕ್ಷು ದಶೈಯಿಲುಮ್, ಮುಕ್ತದಶೈಯಿಲುಮ್ ಉಣ್ಡಾನ ಅಹಂಗ್ರಹಮ್ ಶರೀರಾತ್ಮ ಭಾವ ತ್ತಾಲೇ ಎನ್ಱು ಭಾಷ್ಯಾದಿಹಳಿಲೇ ಸಮರ್ಥಿತಮಾಹೈಯಾಲೇ, ಇವ್ವಹಂ ಗ್ರಹಮ್ ಪಾರಾರ್ಥ್ಯಕಾಷ್ಠೈ ಅಡಿಯಾಹ ವನ್ದದಿರೇ**

**ಇಪ್ಪಡಿ ಮುಕ್ತದಶೈಯಿಲ್ ವರುಮ್ ಕೈಙ್ಕರ್ಯಮ್, ಸ್ವತಃ ಪ್ರಾಪ್ತಮಾಯ್, ದ್ವಂದ್ವದುಃಖ ರಹಿತಮಾಯ್ ನಿರನ್ತರಮಾಯ್ ಅವಿಚ್ಛಿನ್ನ ರಸಮಾಯಿರುಕ್ಕುಮ್. ಮುಮುಕ್ಷುದಶೈಯಿಲ್ ಸ್ವಯಂ**

---

ಭಗವಂತನನ್ನೂ ಅವನ ಗುಣಗಳನ್ನೂ ಅನುಭವಿಸುವುದು. **ಅಡಿಯಾಹ**– ಇತ್ಯಾದಿ – ಆ ಭಗವದನು ಭವವು ಪರಿವಹಿಸಿ ತನ್ಮೂಲಕ ಉಂಟಾಗುವ ಭೋಗ್ಯತಮಗಳಾದ ಕೈಂಕರ್ಯ ವಿಶೇಷಗಳೂ ಷಡ್ಗುಣಾಢ್ಯವಾದ ಆನ್ನವಾಗಬಹುದು.

ಮುಕ್ತನಿಗೆ ಭಗವಂತನೊಡನೆ ಪರಮ ಸಾಮ್ಯವು ಉಂಟಾಗುವುದರಿಂದ ಶೇಷತ್ವವೂ ತನ್ಮೂಲಕ ಕೈಂಕರ್ಯ ವೂ ಹೇಗೆ ಸಮಂಜಸವಾಗುತ್ತದೆ. ಎಂದರೆ, 2) "**ಭೋಗಮಾತ್ರಸಾಮ್ಯಲಿಂಗಾಚ್ಚ**", ಎಂದಾರಂಭಿಸಿ, ಸಮಾ ಧಾನವನ್ನು ಹೇಳುತ್ತಾರೆ ಆದಾಗಿ ಮುಕ್ತನಿಗೆ ಉಂಟಾಗುವ ಪರಮಸಾಮ್ಯವು ಭೋಗದಲ್ಲಿಯೂ ತನ್ಮೂಲಕ ಆನಂದದಲ್ಲಿಯೂ, ಏರ್ಪಡುವುದರಿಂದ, ಸ್ವರೂಪಾನುಬಂಧಿಯಾದ ಶೇಷತ್ವಕ್ಕೂ ಇದರ ಫಲವಾದ ಕೈಂಕರ್ಯಕ್ಕೂ ವಿರೋಧವಿಲ್ಲ.

ಮುಮುಕ್ಷುವಿಗೆ "ಅಹಂ ನಾರಾಯಣಾಯ ಕಿಂಕರೋ ಭವೇಯಂ" ಎಂಬ ಕೈಂಕರ್ಯ ಪ್ರಾರ್ಥನಾದಶೆಯಲ್ಲಿ ಏರ್ಪಡುವ "ಅಹಂ" ಎಂಬ ಅನುಸಂಧಾನವೂ, ಮುಕ್ತನಿಗೆ "ಅಹಮನ್ನಂ", "ಅಹಂಬ್ರಹ್ಮಾಸ್ಮಿ" ಎಂದು ಅನುಭವ ದಶೆಯಲ್ಲಿ ಬರುವ "ಅಹಂ" ಎಂಬ ಅನುಸಂಧಾನವೂ, ಅಹಂಕಾರ ಮೂಲಕವಾದದ್ದೇ ? ಎಂಬ ಸಂದೇಹವನ್ನು '**ಮುಮುಕ್ಷುದಶೈಯಿಲುಮ್**' ಎಂದಾರಂಭಿಸಿ ಪರಿಹರಿಸುತ್ತಾರೆ. ಆದಾಗಿ ಮುಮುಕ್ಷುದಶೆ ಯಲ್ಲೂ, ಮುಕ್ತದಶೆಯಲ್ಲೂ ಉಂಟಾದ ಅಹಂಗ್ರಹವು ಶರೀರಾತ್ಮಭಾವ ನಿಬಂಧನವೆಂದು ಭಾಷ್ಯಾದಿಗಳಲ್ಲಿ ಸಮ ರ್ಥಿತವಾದ್ದರಿಂದ, **ಇವ್ವಹಂಗ್ರಹಮ್**–ಅಹಂ ಎಂಬ ಅನುಸಂಧಾನವು **ಪಾರಾರ್ಥ್ಯಕಾಷ್ಠೈಯಡಿಯಾಹ**– ಭಗವದ ಧೀನವೆಂಬ ಶೇಷತ್ವದ ಎಲ್ಲೆಯನ್ನು ಕಾರಣವಾಗಿ ಕೊಂಡು ಉಂಟಾದದ್ದು. **ಇಪ್ಪಡಿ ಮುಕ್ತದಶೈಯಿಲ್**– ಇತ್ಯಾದಿ ಹೀಗೆ ಮುಕ್ತ ದಶೆಯಲ್ಲಿ ಲಬ್ಧವಾಗುವ ಕೈಂಕರ್ಯವು ಸ್ವತಃ ಪ್ರಾಪ್ತವಾಗಿ ಅಂದರೆ ಸುಕೃತ ವಿಶೇಷ ರೂಪ ಉಪಾಧಿ ಪ್ರಯುಕ್ತವಲ್ಲದೆ, **ದ್ವಂದ್ವರಹಿತಮಾಯ್**–ಶೀತೋಷ್ಣ ಸುಖ ದುಃಖಾದಿ ದ್ವಂದ್ವಗಳಿಲ್ಲದೆ, **ನಿರಂತರಮಾಯ್**– ನಿದ್ರಾದಿಗಳಿಂದ ವಿಚ್ಛೇದವಿಲ್ಲದೆ, **ಅನವಚ್ಛಿನ್ನರಸಮಾಯ್**- ಅಪರಿಮಿತ ಪ್ರೀತಿರಸಯುಕ್ತ ವಾಗಿ, ಇರುಕ್ಕುಮ್–ಇರುತ್ತದೆ.

**ಮುಮುಕ್ಷುದಶೈಯಿಲ್**– ಇತ್ಯಾದಿ ಮುಮುಕ್ಷುದಶೆಯಲ್ಲಿ ಸ್ವಯಂ ಪ್ರಯೋಜನವಾಗಿ ಮಾಡುವ ಕೈಂಕರ್ಯವು ಸುಕೃತ ವಿಶೇಷ, ಉಪಾಧಿಕಮಾಯ್– ಕಾರಣವಾಗಿ, **ದ್ವಂದ್ವತಿತಿಕ್ಷಾಯುಕ್ತಮಾಮ್**–ಶೀತೋ ಷ್ಣ, ಸುಖ ದುಃಖಾದಿ ದ್ವಂದ್ವಗಳಿಂದ ಕೂಡಿದುದಾಗಿಯೂ, ಅದನ್ನು ಸಹಿಸಿಕೊಂಡಿರುವುದಾಗಿಯೂ ನಿದ್ರಾದಿಗಳಿಂದ **ಅಂತರಿತಮಾಮ್**– ವಿಚ್ಛೇದಿಸಲ್ಪಟ್ಟವುಗಳಾಗಿಯೂ, **ಅವಚ್ಛಿನ್ನರಸಮಾಯಿರುಕ್ಕುಮ್**–ಪರಿ

---

2) ಬ್ರಹ್ಮಸೂತ್ರ 4-4-21

ಪ್ರಯೋಜನ ಮಾಹಪ್ಪಣ್ಣುಮ್ ಕೈಙ್ಕರ್ಯಮ್, ಸುಕೃತ ವಿಶೇಷೋಪಾಧಿಕಮಾಯ್, ದ್ವಂದ್ವತಿತಿಕ್ಷಾ ಯುಕ್ತಮಾಯ್, ನಿದ್ರಾದಿಹಳಾಲೇ ಅನ್ತರಿತಮಾಯ್, ಅವಚ್ಛಿನ್ನ ರಸಮಾಯಿರುಕ್ಕುಮ್.

ಕೈಙ್ಕರ್ಯಾತಿರಿಕ್ತ ವ್ಯಾಪಾರೇಷು ಕರ್ತವ್ಯ ವಿಭಾಗಮಾಹ.

ಇಙ್ಗು ಇವರ್ ಕೈಙ್ಕರ್ಯನೊ‌ಱಿಯಪ್ಪಣ್ಣುಮ್ ವ್ಯಾಪಾರಙ್ಗಳಿಲ್ ಭಗವದಾಜ್ಞೈಕ್ಕು ಪ್ಪುರುನ್ಬಾದವೈಯೆಲ್ಲಾಮೇದೇನುಮೊರುಪ್ರತಿಕೂಲ ಫಲತ್ತೈಕ್ಕೊಡುಕ್ಕುಮ್. ಭಗವದನುಜ್ಞಾತಙ್ಗಳಾನ ಕಾಮ್ಯಙ್ಗಳಿಲ್ ಸ್ವರ್ಗ ಪಶ್ವಾದ್ಯರ್ಥಙ್ಗಳಾನವೈಯೆಲ್ಲಾಮನೇಕದೋಷ ದುಷ್ಟಙ್ಗಳಾನ ಅನುಕೂಲಾಭಾಸಙ್ಗಳೈಕ್ಕೊಡುತ್ತು ಅಮುಷ್ಮಿತ್ತಾಲೇ ಬಾಧಕಙ್ಗಳಾಮ್. ಆಹೈಯಾಲೇ ಮುಮುಕ್ಷುವುಕ್ಕು,ತ್ರೈವರ್ಗಿಕಾಂ ಸ್ತ್ಯಜೇದ್ಧರ್ಮಾನ್" ಎನ್ಗಿರಪಡಿಯೇ ಪ್ರಯೋಜನಾಂತರ ಹೇತುಕ್ಕಳೈ ವಿಟ್ಟು, ಭಕ್ತಿತತ್ವಜ್ಞಾನಙ್ಗಳೈಯುಮ್ ಭಗವದ್ಭಾಗವತ ಸಮೃದ್ಧಿಯೈಯುಮುಪ್ಪತ್ತಚ್ಚೆಯುಙ್ಕಾಮ್ಯಙ್ಗಳಾನ ಭಗವದ್ಧರ್ಮಙ್ಗಳ್ ಸಾಧನಮಾಹ ವನುಷ್ಠಿಕ್ಕಚೆಯ್‌ದೇಯುಮ್ ಬಂಧಕಙ್ಗಳಲ್ಲಾಮೈಯಾಲೇ ಉಚಿತಮಾನ ಕೈಙ್ಕರ್ಯ ಕೋಟಿಯಿಲೇ ಶೇರ್‌ನ್ದು ಕಿಡಕ್ಕುಮ್.

ಭಗವತ್ಕೈಂಕರ್ಯಸ್ಯ ಭಾಗವತ ಪರ್ಯಂತತ್ವ ಮಿತ್ಯುಪಪಾದಯತಿ.

ಪ್ರಣವತ್ತಿರ್ರೊನ್ನ ಭಗವಚ್ಛೇಷತ್ವಮ್,ನಮಸ್ಸಿಲೇ ಔಚಿತ್ಯರೂಪಮಾನವತ್ಯನ್ತಪಾರಾರ್ಥ್ಯಪಾರತಂತ್ರ್ಯಙ್ಗಳ್

---

ಮಿತ ಸಂತೋಷ ಜನಕಗಳಾಗಿ ಪರಿಮಿತ ಪ್ರೀತಿಯಿಂದ ಕೂಡಿದುದಾಗಿರುತ್ತದೆ.

ಇಂಗಿವನ್ ಇತ್ಯಾದಿ-ಈ ಬದ್ಧದೆಶೆಯಲ್ಲಿ ಇವನು ಕೈಂಕರ್ಯವಲ್ಲದೆ ಮಾಡುವ ನಿತ್ಯನೈಮಿತ್ತಿಕ ಭಿನ್ನವಾದ ಶಾಸ್ತ್ರದೊಡನೆ ಹೊಂದಿಕೊಳ್ಳದೆ ಇರುವುವೆಲ್ಲಾ ಅಂದರೆ ಶಾಸ್ತ್ರನಿಷಿದ್ಧವಾದ ವ್ಯಾಪಾರಗಳೆಲ್ಲಾ, ಯಾವುದಾದರೊಂದು ಪ್ರತಿಕೂಲ ಫಲವನ್ನು ಕೊಡುತ್ತವೆ.ಭಗವದುನುಜ್ಞಾತಂಗಳಾನ ಇತ್ಯಾದಿ-ನಿಷಿದ್ಧಗಳಲ್ಲದೆ ಭಗವದನುಜ್ಞಾತಗಳಾಗಿ,ಸ್ವರ್ಗ ಪಶು ಐಶ್ವರ್ಯಾದಿಗಳನ್ನು ಕೊಡುವ ಕಾಮ್ಯಕರ್ಮಗಳೂ ಅನೇಕ ದೋಷ ದುಷ್ಟಗಳಾದ ಅನುಕೂಲಾಭಾಸಗಳನ್ನು ಕೊಟ್ಟು ಆರೂಪದಲ್ಲಿ ಬಾಧಕಗಳಾಗಿರುತ್ತವೆ. **ಆಹೈಯಾಲ್** ಇತ್ಯಾದಿ-ಆದ್ದರಿಂದ ಮುಮುಕ್ಷುವು **ತ್ರೈವರ್ಗಿಕಾನ್** ಇತ್ಯಾದಿ- ತ್ರಿವರ್ಗಗಳಾದ ಧರ್ಮಾರ್ಥಕಾಮರೂಪ ಪುರುಷಾರ್ಥಗಳನ್ನು ಅಂದರೆ ಪ್ರಯೋಜನಾಂತರಗಳನ್ನು ಕೊಡುವ ಕರ್ಮಗಳನ್ನು ಬಿಟ್ಟು, "ತತ್ಪಾದ ಭಕ್ತಿಜ್ಞಾನಾಭ್ಯಾಂಫಲಮನ್ಯತ್ ಕದಾಚನ।ನಯಾಚೇತ್ ಪುರುಷೋವಿಷ್ಣುಂ ಯಾಚನಾನ್ನಶ್ಯತಿ ಧ್ರುವಮ್ " ಎಂಬ ವಚನದ ಪ್ರಕಾರ, ಭಗವದ್ಭಕ್ತಿ ತತ್ವಜ್ಞಾನಗಳನ್ನು ಬಿಟ್ಟು ಬೇರೆ ಯಾವ ಫಲಗಳನ್ನೂ ವಿಷ್ಣುವಿನಲ್ಲಿ ಯಾಚಿಸಬಾರದು. ಯಾಚಿಸಿದರೆ ನಿಶ್ಚಯವಾಗಿ ನಷ್ಟನಾಗಿ ಹೋಗುತ್ತಾನೆ- ಅಂದರೆ ಭಗವದನುಭವ ಪರಿವಾಹ ಕೈಂಕರ್ಯವನ್ನು ಪಡೆಯದೆ ಅರ್ಥಕಾಮ ಪ್ರವಣನಾಗಿ ಅದರಲ್ಲಿಯೇ ಮಗ್ನನಾಗಿ, ಭಗವಂತನನ್ನು ಪಡೆದು ಶಾಶ್ವತವಾದ ಆನಂದವನ್ನು ಅನುಭವಿಸದವನಾಗಿ ಆಗುತ್ತಾನೆ. ಆದ್ದರಿಂದ ಭಕ್ತಿ ತತ್ವಜ್ಞಾನಗಳನ್ನೂ ಭಗವದ್ಭಾಗವತ ಸಮೃದ್ಧಿಯನ್ನೂ ಉದ್ದೇಶಿಸಿ ಮಾಡುವ ಕಾಮ್ಯವಾದ ಭಗವದ್ಧರ್ಮಗಳು ಅಂದರೆ ಭಗವತ್ಸನ್ನಿಧಿಯಲ್ಲಿ ಮಾಡುವ ಅರ್ಚನೆ, ಪ್ರದಕ್ಷಿಣ, ಪ್ರಣಾಮ, ಮಾಲಾಕರಣ, ದೀಪಾರೋಪಣ, ವಂದನ, ಸ್ತುತಿ ಕೀರ್ತನಾದಿಗಳು, ಸಾಧನವಾಗಿ ಅನುಷ್ಠಿಸಲ್ಪಟ್ಟಾಗ್ಯೂ ಬಂಧಕಗಳಲ್ಲದೇ ಇರುವುದರಿಂದ ಉಚಿತವಾದ ಕೈಂಕರ್ಯಕೋಟಿಯಲ್ಲಿ ಸೇರಿಕೊಳ್ಳುತ್ತವೆ.

**ಭಗವತ್ಕೈಂಕರ್ಯವು ಭಾಗವತ ಕೈಂಕರ್ಯ ಪರ್ಯಂತವಾದದ್ದು.**

**ಪ್ರಣವತ್ತಿಚೊರ್ನ್ನ** ಇತ್ಯಾದಿ-ಪ್ರಣವದಲ್ಲಿ ಹೇಳಿದ ಭಗವಚ್ಛೇಷತ್ವವು ನಮಸ್ಸಿನಲ್ಲಿ ಔಚಿತ್ಯರೂಪವಾದ ಅತ್ಯಂತಪಾರತಂತ್ರ್ಯಪಾರಾರ್ಥ್ಯಗಳು ಕಾರಣವಾಗಿ ಯಥಾಪ್ರಮಾಣ ತದೀಯ ಪರ್ಯಂತವಾಗಿ ನಿಲ್ಲುವುದರಿಂದ "ನಾರಾಯಣಾಯ"

ಆಡಿಯಾಹ ಯಥಾಪ್ರಮಾಣಮ್ ತದೀಯ ಪರ್ಯನ್ತಮಾಯ್ ನಿರ್ಕೈಯಾಲೇ "ನಾರಾಯಣಾಯ" ಎನ್ಗಿರವಿಡತ್ತಿಲ್ ಅಪೇಕ್ಷಿಕ್ಕಿರ ಭಗವತ್ಕೈಙ್ಕರ್ಯಮುಮ್ ತದೀಯ ಪರ್ಯನ್ತಮ್.

1) ಮಮ ಮದ್ಭಕ್ತ ಭಕ್ತೇಷು ಪ್ರೀತಿ ರಭ್ಯಧಿಕಾಭವೇತ್ ।
ತಸ್ಮಾನ್ಮದ್ಭಕ್ತ ಭಕ್ತಾಶ್ಚ ಪೂಜನೀಯಾ ವಿಶೇಷತಃ ॥"

2) "ತಸ್ಮಾದ್ವಿಷ್ಣು ಪ್ರಸಾದಾಯ ವೈಷ್ಣವಾನ್ ಪರಿತೋಷಯೇತ್ ।
ಪ್ರಸಾದ ಸುಮುಖೋ ವಿಷ್ಣುಸ್ತೇನೈವ ಸ್ಯಾನ್ನ ಸಂಶಯಃ ।"

ಇತ್ಯಾದಿಹಳಿಲುಂ ಇವ್ವರ್ಥಂ ಸಿದ್ಧಮ್. 3) "ಸರ್ವಂ ಪರವಶಂ ದುಃಖಮ್" ಇತ್ಯಾದಿಹಳ್ ತನಕ್ಕು, ಪ್ರಾಪ್ತಮಲ್ಲಾದ ಕ್ಷುದ್ರವಿಷಯತ್ತಿಲೇ ಕರ್ಮಮೂಲಮಾಹ ವರುಹಿರ ಪಾರವಶ್ಯಂ ದುಃಖಕಾರಣ ಮೆನ್ಗಿರನ. ಭಗವದ್ಭಾಗವತ ವಿಷಯತ್ತಿಲ್ ಪಾರತನ್ತ್ರ್ಯಮ್ ಆತ್ಮಾಭಿಮಾನಾನುಗುಣ ಪುರುಷಾರ್ಥ ವ್ಯವಸ್ಥೈಯಾಲೇ ನಿರತಿಶಯ ಪ್ರೀತಿ ಕಾರಣಮ್

### ತದೀಯಪದ ವಿವಕ್ಷಿತಮಾಹ.

ಇಙ್ಗು "ತದೀಯರೆನ್ಗಿರದು ತದೀಯತ್ವ ವ್ಯವಸಾಯ ರಸ ಮುಡೈಯವರ್ ಹಳ್ಳೈ.

---

ಎಂಬಲ್ಲಿ ಅಪೇಕ್ಷಿಸುವ ಭಗವತ್ಕೈಂಕರ್ಯವೂ ತದೀಯ ಪರ್ಯಂತವಾದದ್ದು. 2) ಮಮಮದ್ಭಕ್ತಭಕ್ತೇಷು ಇತ್ಯಾದಿ 3) ತಸ್ಮಾದ್ವಿಷ್ಣುಪ್ರಸಾದಾಯ ಇತ್ಯಾದಿಗಳಲ್ಲಿಯೂ ಭಗವಂತನಿಗೆ ಭಗವದ್ಭಕ್ತ ಭಕ್ತರಲ್ಲಿ ಅಧಿಕವಾದ ಪ್ರೀತಿಯಿರುವುದರಿಂದ ಭಗವಂತನ ಪ್ರೀತಿಯನ್ನು ಸಂಪಾದಿಸಿ ಕೊಳ್ಳಬೇಕಾದರೆ, ವಿಷ್ಣು ಭಕ್ತರನ್ನು ತೃಪ್ತಿಪಡಿಸಬೇಕು, ಎಂದು ಮೇಲೆ ಹೇಳಿದ ಅರ್ಥವು ಸಿದ್ಧ. 4) **ಸರ್ವಂ ಪರವಶಂ ದುಃಖಂ** ಪರವಶವಾದವುಗಳೆಲ್ಲವೂ ದುಃಖಕರ, ಎಂದು ಹೇಳುವುದು ತನಗೆ ಪ್ರಾಪ್ತವಲ್ಲದ ಕ್ಷುದ್ರವಿಷಯಗಳಲ್ಲಿ ಕರ್ಮ ಮೂಲವಾಗಿ ಬರುವ ಪಾರವಶ್ಯವು ದುಃಖಕ್ಕೆ ಕಾರಣ ಭೂತಗಳು ಎಂದು ಅರ್ಥ. **ಭಗವದ್ಭಾಗವತವಿಷಯತ್ತಿಲ್** ಇತ್ಯಾದಿ- ಭಗವದ್ಭಾಗವತ ವಿಷಯದಲ್ಲಿ ಪಾರತಂತ್ರ್ಯರೂಪ ಆತ್ಮಾಭಿಮಾನಾನುಗುಣ ಪುರುಷಾರ್ಥ ವ್ಯವಸ್ಥೆಯು,

ಅನ್ನಂಭೋಜ್ಯಂ ಮನುಷ್ಯಾಣಾಂ ಅಮೃತಂತು ದಿವೌಕಸಾಮ್ ।
ಶ್ವಪಶೂ ವಿಟ್‌ತೃಣಾಹಾರೌ ಸಂತೋ ದಾಸ್ಯೈಕ ಜೀವನಾಃ॥

ಅನ್ನವು ಮನುಷ್ಯರಿಗೆ ಭೋಗ್ಯವು. ದೇವತೆಗಳಿಗೆ ಅಮೃತವು ಭೋಗ್ಯ. ನಾಯಿಗೆ ಅಮೇಧ್ಯವು ಭೋಗ್ಯವು. ಪಶುಗಳಿಗೆ ಹುಲ್ಲು ಭೋಗ್ಯ. ಸತ್ಪುರುಷರಿಗೆ ಭಗವದ್ಭಾಗವತ ದಾಸ್ಯವೇ ಭೋಗ್ಯ. ಅದೇ ಜೀವನ) ಎಂಬ ಪ್ರಮಾಣಾನುಸಾರ, ನಿರತಿಶಯವಾದ ಪ್ರೀತಿಗೆ ಕಾರಣವು.

### ತದೀಯರ್ ಎಂಬುದರ ಅರ್ಥ

**ಇಂಗುತದೀಯರೆನ್ಗಿರದು** ಇತ್ಯಾದಿ– ಇಲ್ಲಿ ತದೀಯರು ಎಂದು ಹೇಳುವುದು **ತದೀಯತ್ವ**-ಭಗವದ್ಭಾಗವತ ದ್ಯಾಸ್ಯದಲ್ಲಿ, **ವ್ಯವಸಾಯರಸಮುಡೈಯವರ್‌ಹಳ್ಳೈ**– ತೀರ್ಮಾನವಾದ ಬುದ್ಧಿಯಿಂದ ರುಚಿಯುಳ್ಳವರನ್ನು ತಿಳಿಸುತ್ತದೆ. ಆದಾಗಿ ಜೀವಾತ್ಮರೆಲ್ಲರೂ ಭಗವಂತನಿಗೆ ಶೇಷ ಭೂತರಾದ್ದರಿಂದ, ಭಗವಚ್ಛೇಷಭೂತ ದೇವತಾಂತರ ಪರರ ಕೈಂಕರ್ಯವು ಪ್ರಾರ್ಥನೀಯವಲ್ಲವೆಂದು ತಿಳಿಸಲು, ತದೀಯತ್ವ ವ್ಯವಸಾಯ ರಸವುಳ್ಳವರೆಂದು– ತದೀಯರು ಭಗವದ್ಭಾಗವತಶೇಷರು, ಆ ಶೇಷತ್ವ ವ್ಯವಸಾಯದಲ್ಲಿ ರುಚಿಯುಳ್ಳವರು ಎಂದು ವಿಶೇಷವಾಗಿ ನಿರೂಪಿಸಿರುವುದಕ್ಕೆ ಭಾವ

ಅನಂತರ ನಾರಾಯಣನ ಕೈಂಕರ್ಯವು ಅಪೇಕ್ಷಿತವಾದರೆ, ವಿಶೇಷಣೀಭೂತರಾಗಿ ನಾರಶಬ್ದಕ್ಕೆ ವಿಷಯ ಭೂತರಾದ ಭಾಗವತ ಕೈಂಕರ್ಯವೂ "ವಿಶಿಷ್ಟಾನ್ವಯಿನಃ ವಿಶೇಷಣೇಷ್ವನ್ವಯ." ಎಂಬ ನ್ಯಾಯದಿಂದ ಅಪೇಕ್ಷಿತವಾಗಿ

ನಾರಙ್ಗಳಾಲೇ ವಿಶಿಷ್ಟನಾನ ನಾರಾಯಣನೈಪ್ಪತ್ತ ಕೈಂಕರ್ಯತ್ತೈ ಅಪೇಕ್ಷಿಕ್ಕುಮ್ಪೋದು ವಿಶೇಷಣಮಾನ ನಾರಙ್ಗಳೈಪ್ಪತ್ತ ಕೈಙ್ಕರ್ಯಮ್ ಅಪೇಕ್ಷಿಪ್ಪದಾಮೆನ್ನುಮ್ ವಿಡಮ್, ನ್ಯಾಯಸಿದ್ಧಮಾಹೈಯಾಲೆ. ಇಙ್ಗೇ ತದೀಯ ಕೈಙ್ಕರ್ಯಮ್ ಸಿದ್ಧಿಕ್ಕಿರದೆನ್ರು ಶಿಲರ್ ಶೊಲ್ಲುವರ್ಹಳ್. ಇಪ್ಪಡಿ ವಿಶೇಷತ್ವಮೇ ಪ್ರಯೋಜಕಮಾನಾಲ್, ನಾರ ಶಬ್ದಾರ್ಥಙ್ಗಳೈಯುಮ್, ಭಗವದ್ವೇಷಿಹಳೈಯುಮ್ ಪಶ್ವಾದಿಹಳೈಯುಮ್ ಪತ್ತ ಕೈಙ್ಕರ್ಯಾಪೇಕ್ಷೈ ಪಣ್ಣತ್ತಾಮ್. ಸರಪತಿಯೈಪ್ಪತ್ತ ಕೈಂಕರ್ಯತ್ತೈ ಅಪೇಕ್ಷಿತ್ತಾನೆನ್ರಾಲ್ ನರರೈಪ್ಪತ್ತ ಕೈಂಕರ್ಯಮ್ ಅಪೇಕ್ಷಿತಮ್ ಆಹಾದಾಪ್ಪೋಲೇ, ಇಂಗುಮ್ ನ್ಯಾಯಮಾತ್ರತ್ತಾಲ್ ನಾರಂಗಳೈಪ್ಪತ್ತ ಕೈಂಕರ್ಯಾಪೇಕ್ಷೈ ಸಿದ್ಧಿಯಾದು. ಆನಪಿನ್ಪು ಪ್ರಮಾಣ ಮುಖತ್ತಾಲೇ ಸ್ವಾಮಿಯಿನುಡೈಯ ಅಭಿಮತಮ್ ಶೆಯ್ಯ ಅಪೇಕ್ಷಿಕ್ಕಿರಾ ನಾಹೈಯಾಲೇ ಅವನುಕ್ಕು ಪ್ರಿಯತಮರಾಯಿರುಕ್ಕಿರ ಶೇಷತ್ವಜ್ಞಾನಮುಡೈಯ ಅನನ್ಯ ಪ್ರಯೋಜನರೈಪ್ಪತ್ತ ಕೈಂಕರ್ಯಮ್ ಅಪೇಕ್ಷಿತಮಾಯಿತ್ತನ್ರೈ. ಅನುಭಾವ್ಯತ್ತೈಯಿಲುಮ್ ನಾರಶಬ್ದಾರ್ಥಮಾನ ಸರ್ವಮುಮ್ ಪ್ರವಿಷ್ಟಮಾಮೆನ್ರುವಿಡಮುಮ್

---

ಸಿದ್ಧಿಸುವುದಿಲ್ಲವೇ ಎಂದು ಕೆಲವರು ಹೇಳುವುದನ್ನು ಅನುವದಿಸಿ, ಇದೇ ನ್ಯಾಯವನ್ನವಲಂಬಿಸಿ ದೇವತಾಂತರ ಕೈಂಕರ್ಯವೂ ಸಿದ್ಧಿಸುತ್ತದೆ ಎಂಬ ಚೋದ್ಯಕ್ಕೆ ಪ್ರಮಾಣ ಬಲದಿಂದ ಬಾಧಕವನ್ನು **ನಾರಂಗಳಾಲೇವಿಶಿಷ್ಟನಾನ** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ನಾರಗಳೊಡನೆ ಕೂಡಿದ ನಾರಾಯಣನಿಗೆ ಕೈಂಕರ್ಯವನ್ನು ಮಾಡಲು ಅಪೇಕ್ಷಿಸುವಾಗ, ವಿಶೇಷಣ ಭೂತರಾದ ನಾರಗಳನ್ನು ಕುರಿತೂ ಕೈಂಕರ್ಯವು ಅಪೇಕ್ಷಿಸಲ್ಪಟ್ಟದಾಗುತ್ತದೆ ಎಂದು ಕೆಲವರು ಹೇಳುತ್ತಾರೆ. **ಇಪ್ಪಡಿ ವಿಶೇಷಣತ್ವಮೇ** ಇತ್ಯಾದಿ ಹೀಗೆ ಭಗವದ್ಭಾಗವತ ಶೇಷತ್ವ ಜ್ಞಾನದಲ್ಲಿ ರುಚಿ ಉಂಟಾಗದೆ ಕೇವಲ ವಿಶೇಷಣತ್ವವೇ ಪ್ರಯೋಜಕವಾದರೆ, ನಾರಶಬ್ದಾರ್ಥಗಳಾಗಿ ಇಲ್ಲಿ ವಿವಕ್ಷಿತರಾದ ಬ್ರಹ್ಮಾದಿ ದೇವತೆಗಳನ್ನೂ ಭಗವದ್ವೇಷಿಗಳನ್ನೂ, ಪಶ್ವಾದಿಗಳನ್ನೂ ಕುರಿತು ಕೈಂಕರ್ಯಾಪೇಕ್ಷೆಯನ್ನು ಮಾಡಿದಂತಾಗುತ್ತದೆ. **ಸರಪತಿಯೈಪ್ಪಟ್ರ** ಇತ್ಯಾದಿ ಸರಪತಿಯನ್ನು ಉದ್ದೇಶಿಸಿ ಕೈಂಕರ್ಯವನ್ನು ಅಂದರೆ ಸೇವೆಯನ್ನು ಅಪೇಕ್ಷಿಸುತ್ತಾನೆಂದರೆ, ವಿಶೇಷಣ ಭೂತರಾದ ನರರನ್ನು ಕುರಿತು ಕೈಂಕರ್ಯವು ಅಪೇಕ್ಷಿತವಾಗದಿರುವಂತೆ, ಇಲ್ಲಿಯೂ "ವಿಶಿಷ್ಟಾನ್ವಯಿನಃ", ಎಂದಾರಂಭಿಸುವ ನ್ಯಾಯವು ವ್ಯಾಪ್ತಿ ಶೂನ್ಯವಾದ್ದರಿಂದ, ನ್ಯಾಯಮಾತ್ರದಿಂದ ಪ್ರಮಾಣಗಳಿಗೆ ವಿರೋಧವಾಗಿ ನರರನ್ನು ಕುರಿತು ಕೈಂಕರ್ಯಾಪೇಕ್ಷೆಯು ಸಿದ್ಧಿಸುವುದಿಲ್ಲ. **ಆನಪಿನ್ಪು**– ಹೀಗೆ ವ್ಯವಸ್ಥೆಯು ಏರ್ಪಟ್ಟಿರುವುದರಿಂದ ಪ್ರಮಾಣ ಬಲದಿಂದ ಸ್ವಾಮಿಯ ಅಭಿಮತವನ್ನು ಮಾಡಲು ಅಪೇಕ್ಷಿಸುತ್ತಾನಾದ್ದರಿಂದ, ಅವನಿಗೆ ಪ್ರಿಯತಮರಾಗಿ ಶೇಷತ್ವಜ್ಞಾನವುಳ್ಳ ಅನನ್ಯಪ್ರಯೋಜನರನ್ನು ಕುರಿತು ಕೈಂಕರ್ಯವು ಅಪೇಕ್ಷಿತವಾಗುತ್ತದೆಯಷ್ಟೇ. ಹಾಗಾದರೆ ಶ್ರೀಪತಿಯ ಕೈಂಕರ್ಯವು ಅಪೇಕ್ಷಿತವಾಗಿ, ವಿಶೇಷಣಭೂತಳಾದ ಲಕ್ಷ್ಮಿಯ ಕೈಂಕರ್ಯವು ಅಪೇಕ್ಷಿತವಲ್ಲವೆಂದು, ಹೇಳಲು ಅವಕಾಶವಾಗುತ್ತದೆ ಎಂಬುದು ಪುನಶ್ಚೋದ್ಯ. ಇದಕ್ಕೆ ಸಮಾಧಾನವೇನೆಂದರೆ, ಎಲ್ಲಿ ವಿಶೇಷಣಾನ್ವಯದಲ್ಲಿ ಬಾಧಕವಿದೆಯೋ, ಸಾಧಕವು ಇಲ್ಲವೋ ಅಲ್ಲಿ ವಿಶಿಷ್ಟಾನ್ವಯಿಗೆ ವಿಶೇಷಣಾನ್ವಯ ನಿಯಮವು ತ್ಯಾಜ್ಯ. ಆದ್ದರಿಂದಲೇ ಬಾಧಕಗಳಿರುವಾಗ **ನ್ಯಾಯಮಾತ್ರತ್ತಾಲ್**" ಎಂದು ಕೇವಲ ನ್ಯಾಯದಿಂದ ಪ್ರಮಾಣ ವಿರೋಧಾರ್ಥಗಳನ್ನು ಸಾಧಿಸಕೂಡದು, ಎಂಬುದು ವಾಕ್ಯ ತಾತ್ಪರ್ಯ. ಲಕ್ಷ್ಮೀ ವಿಶಿಷ್ಟ ನಾರಾಯಣನಿಗೆ ಕೈಂಕರ್ಯವು ಉದ್ದೇಶ್ಯವೆಂಬುದು ದ್ವಯಮಂತ್ರದ ಉತ್ತರ ಖಂಡದಲ್ಲಿಯೂ "ಭವಾಂಸ್ತು ಸಹವೈದೇಹ್ಯಾ" ಇತ್ಯಾದಿ ಪ್ರಮಾಣಗಳಿಂದಲೂ ಸಿದ್ಧವು. ಇಲ್ಲಿ ಪ್ರಮಾಣ ವಿರೋಧವಿಲ್ಲದಿರುವುದರಿಂದ, ಮೇಲೆ ಹೇಳಿದ ನ್ಯಾಯಕ್ಕೂ ಏನೂ ಬಾಧಕವಿಲ್ಲ.

ಉಭಯ ವಿಭೂತಿ ವಿಶಿಷ್ಟನಾದ ಭಗವಂತನನ್ನು ಅನುಭವಿಸುವಾಗ ವಿಶೇಷಣೀ ಭೂತ ವಿಭೂತಿಗೂ, ಅನುಭಾವ್ಯತೆಯು ಸಿದ್ಧವಲ್ಲವೇ ಎಂದರೆ **ಅನುಭಾವ್ಯತ್ತೈಯಿಲುಮ್** ಎಂದಾರಂಭಿಸಿ ಸ್ಥಾಪಿಸುತ್ತಾರೆ. ಆದಾಗಿ ನಾರಶಬ್ದಾರ್ಥಗಳಾದ ಚೇತನಾ ಚೇತನಗಳೆಲ್ಲವೂ ಅನುಭಾವ್ಯತೆಯಲ್ಲಿ ಪ್ರವಿಷ್ಟಗಳು, ಅಂದರೆ ಉಭಯವಿಭೂತಿ

ಪ್ರಮಾಣಬಲತ್ತಾಲೇ ವನ್ದದತ್ತನ್ನೈ ಇಪ್ಪಡಿ ತಿರುಮನ್ತ್ರತ್ತಿಲ್ ವಾಕ್ಯತ್ರಯತ್ತಿಲೇ ಇರಣ್ಡುವಾಕ್ಯಮ್ ಸ್ವರೂಪ ಪರಮಾಯ್, ಒರುವಾಕ್ಯಮ್ ಪುರುಷಾರ್ಥ ಪರಮಾಹಯೋಜಿತ್ತದು.

## ವಾಕ್ಯತ್ರಯಪಕ್ಷೇ ದ್ವಿತೀಯಯೋಜನಾ

**7.** ಇಙ್ಗನನ್ರಿಕ್ಕೇ ಪ್ರಣವಮ್ ಸ್ವರೂಪಪರಮಾಯ್, ನಮಸ್ಸಿಲೇ ಅನಿಷ್ಟ ನಿವೃತ್ತಿ ಪ್ರಾರ್ಥನೈಯಾಯ್, ಅನಿಷ್ಟಮ್ ನಿವರ್ತಿತ್ತಾಲ್ ವರುಮ್ ಪುರುಷಾರ್ಥತ್ತೈ "ನಾರಾಯಣಾಯಸ್ಯಾಮ್" ಎನ್ರು ಕಣಿಶಿಕ್ಕಿರದಾಹವುಮಾಮ್. ಇನ್ನಮುಮ್ನಕ್ಕುಮ್ ಇಪ್ಪಡಿ ದ್ವಯತ್ತಿಲ್ ನಮಸ್ಸುಕ್ಕು ಪ್ಪೋಲೇ ವಿರೋಧಿ ನಿವೃತ್ತಿ ಪ್ರಾರ್ಥನೈಯಿಲೇ ತಾತ್ಪರ್ಯಮಾನ ಯೋಜನಾ ವಿಶೇಷಮುಮ್,

1) "ಪ್ರಣವೋದಿತ ತಚ್ಛೇಷ ಭಾವೋಹಂ ನಿಜಕರ್ಮಭಿಃ ।
ಅಹಙ್ಕಾರಮಮತ್ವಾಭ್ಯಾ ಮಭಿಭೂತೋಽಪ್ಯತಃ ಪರಮ್ ।
ತಚ್ಛೇಷತ್ವಾನು ಸಂಧಾನ ಪೂರ್ವತಚ್ಛೇಷ ವೃತ್ತಿಕಃ ।
ಭೂಯಾಸ ಮಿತ್ಯಮುಂ ಭಾವಂ ವ್ಯನಕ್ತಿ ನಮ ಇತ್ಯದಃ॥" ಎನ್ರು ಭಟ್ಟರ್ ನಿತ್ಯತ್ತಿಲೇ ಪ್ರದರ್ಶಿತಮ್.

---

ವಿಶಿಷ್ಟವಾದ ಪರಬ್ರಹ್ಮನನ್ನು ಅನುಭವಿಸುತ್ತಾನೆಂಬುದು, **ಪ್ರಮಾಣಬಲತ್ತಾಲೇ–** "ಸರ್ವಂಹ ಪಶ್ಯಃ ಪಶ್ಯತಿ" ಎಂಬ ಪ್ರಮಾಣ ಬಲದಿಂದ, ಏರ್ಪಡುತ್ತದೆ. ಇಪ್ಪಡಿ ತಿರುಮಂತ್ರತ್ತಿಲ್ ಇತ್ಯಾದಿ–ಹೀಗೆ ಅಷ್ಟಾಕ್ಷರಮಂತ್ರದಲ್ಲಿ ಮೂರು ವಾಕ್ಯಗಳಲ್ಲಿ ಎರಡು ವಾಕ್ಯಗಳು ಸ್ವರೂಪ ಪರವಾಗಿ, ಒಂದು ವಾಕ್ಯವು ಪುರುಷಾರ್ಥ ಪ್ರಾರ್ಥನಾ ಪರವಾಗಿ ಯೋಜಿಸಲ್ಪಟ್ಟಿವೆ.

ಇಂಗನನ್ರಿಕ್ಕೇ ಇತ್ಯಾದಿ– ಹೀಗಲ್ಲದೆ ಪ್ರಣವವು ಸ್ವರೂಪ ಪರವಾಗಿ, ನಮಸ್ಸು ಅನಿಷ್ಟ ನಿವೃತ್ತಿ ಪ್ರಾರ್ಥನೆಯಾಗಿ, ಅನಿಷ್ಟ ನಿವೃತ್ತಿಯು ಉಂಟಾದರೆ ಬರುವ ಪುರುಷಾರ್ಥವನ್ನು "ನಾರಾಯಣಾಯ ಸ್ಯಾಂ" ಎಂದು ಇಷ್ಟಪ್ರಾಪ್ತಿ ಪ್ರಾರ್ಥನಾಪರವಾಗಿ ಗಣಿಸುತ್ತದೆ, ಎಂದೂ ಹೇಳಬಹುದು. **ಇನ್ನಮುಮುಕ್ಕುಮ್** ಇತ್ಯಾದಿ– ಈ ನಮಸ್ಸಿಗೂ ಹೀಗೆ ದ್ವಯ ಮಂತ್ರದಲ್ಲಿ ಹೇಳಿರುವ ನಮ ಶಬ್ದದ ಹಾಗೆ ವಿರೋಧಿನಿವೃತ್ತಿ ಪ್ರಾರ್ಥನೆಯಲ್ಲಿ ತಾತ್ಪರ್ಯವಾದ ಯೋಜನಾ ವಿಶೇಷವೂ 1) **ಪ್ರಣವೋದಿ ತಚ್ಛೇಷ–** ಇತ್ಯಾದಿಯಾಗಿ ಪರಾಶರಭಟ್ಟರ ನಿತ್ಯ ಗ್ರಂಥದಲ್ಲಿ ಪ್ರದರ್ಶಿತವು. ಅದಾಗಿ ಪ್ರಣವದಲ್ಲಿ ಹೇಳಲ್ಪಟ್ಟ, (ಭಗವಂತನಿಗೆ) ಶೇಷ ಭಾವವುಳ್ಳವನು ನಾನು ಎಂದು ಪ್ರಣವ ಸ್ವರೂಪ ಪರವಾಗಿ ವ್ಯಾಖ್ಯಾನಿಸಲ್ಪಟ್ಟಿತು.

**ನಿಜಕರ್ಮಭಿಃ ಅಹಂಕಾರ** ಇತ್ಯಾದಿ-ಇದಕ್ಕೆ ಮೊದಲು ನನ್ನ ಪಾಪದ ನಿಮಿತ್ತವಾಗಿ ನಾನು, ನನ್ನದು, ಎಂಬ ಅಹಂಕಾರ ಮಮಕಾರಗಳಿಂದ ಕೂಡಿದವನಾಗಿದ್ದಾಗ್ಯೂ **ಅತಃಪರಮ್–** ಇನ್ನು ಮೇಲೆ, ಅದರ ನಿವೃತ್ತಿಯು ಏರ್ಪಟ್ಟ ನಂತರ– ಇದು ಅನಿಷ್ಟ ನಿವೃತ್ತಿ ಪ್ರಾರ್ಥನೆ. **ತಚ್ಛೇಷತ್ವಾನುಸಂಧಾನ** ಇತ್ಯಾದಿ – ಭಗವಂತನಿಗೆ ಶೇಷಭೂತನು ಎಂಬ ಅನುಸಂಧಾನ ಪೂರ್ವಕ ಅವನಿಗೆ ಶೇಷ ವೃತ್ತಿಯನ್ನು ಮಾಡುವವನಾಗಿ, ಆಗುತ್ತೇನೆ. ತೃತೀಯ ಪದವು ಇಷ್ಟ ಪ್ರಾರ್ಥನಾ ಪರವೆಂಬುದು ಇಲ್ಲಿ ಸೂಚಿತ. ಈ ಶ್ಲೋಕಗಳು ಮೇಲೆ ಹೇಳಿದ ಎರಡನೆಯೋಜನೆಯನ್ನು ತಿಳಿ

---

1) ಭಟ್ಟರ ನಿತ್ಯಮ್–ಪ್ರಣವದಲ್ಲಿ ಹೇಳಿರುವಂತೆ,– ದಾಸನಾದ ನಾನು ಭಗವಂತನಿಗೆ ಶೇಷಭೂತನು. ನಾನು ಇಲ್ಲಿಯ ತನಕ ನನ್ನ ಕರ್ಮಗಳ ಫಲವಾದ ಅಹಂಕಾರ ಮಮಕಾರಗಳಿಗೆ ಅಧೀನನಾಗಿದ್ದೆ, ಇನ್ನು ಮೇಲೆ ಭಗವಂತನಿಗೆ ಶೇಷಭೂತನೆಂದ ಅನುಸಂಧಾನ ಮಾಡಿಕೊಂಡು, ಅವನಿಗೆ ಕೈಂಕರ್ಯವನ್ನು ಮಾಡುವವನಾಗುತ್ತೇನೆ, ಎಂಬ ಅರ್ಥವನ್ನು ನಮಃ ಪದವು ಪ್ರಕಾಶಪಡಿಸುತ್ತದೆ,

ಆಹೈಯಾಲೇ "ಅಹಂ ನ ಮಮ ಸ್ಯಾಮ್" ಎನ್ರಾದಲ್, "ನ ಮಮ ಕಿಂಚಿತ್ಸ್ಯಾತ್ " ಎನ್ರಾದಲ್, ವಾಕ್ಯಾನ್ವಯಮಾಯ್, ಇತ್ತಾಲೇ (೨ "ಅಸ್ಯ ಜೀವಾತ್ಮನೋಽನಾದ್ಯವಿದ್ಯಾಸಂಚಿತ ಪುಣ್ಯಪಾಪರೂಪಕರ್ಮ ಪ್ರವಾಹ ಹೇತುಕ ಬ್ರಹ್ಮಾದಿ ಸುರನರತಿರ್ಯಕ್ಸ್ಥಾವರಾತ್ಮಕ ಚತುರ್ವಿಧ ದೇಹ ಪ್ರವೇಶಕೃತ ತತ್ತದಾತ್ಮಾಭಿಮಾನ ಜನಿತ-ಅವರ್ಜನೀಯ ಭವ ಭಯ ವಿಧ್ವಂಸನಾಯ" ಎನ್ರುಮ್,(೨) ಪೊಯ್ ನಿನ್ರ ಜ್ಞಾನಮುಮ್ ಪೊಲ್ಲಾವೊಳುಕ್ಕು ಮುಳುಕ್ಕುಡಂಬುಮ್" ಎನ್ರುಮ್ ಶೊಲ್ಲುಹಿರ ಅವಿದ್ಯಾಕರ್ಮ ತದುಭಯ ವಾಸನಾರುಚಿ

---

ಸುತ್ತವೆ. ಎಂಬುದು ಆಚಾರ್ಯರ ಅಭಿಪ್ರಾಯ. ಆಹೈಯಾಲೇ ಇತ್ಯಾದಿ- ಆದ್ದರಿಂದ "ಅಹಂ ನಮಮ ಸ್ಯಾಂ"- ನಾನು ಸ್ವತಂತ್ರನಲ್ಲ (ಇದು ಅಹಂಕಾರ ನಿವೃತ್ತಿ ಪ್ರಾರ್ಥನಾ ವಾಕ್ಯ) ಎಂದೂ, ನಮಮ ಕಿಂಚಿತ್ ಸ್ಯಾತ್" ಯಾವುದೂ ನನಗೆ ಅಧೀನವಲ್ಲ, (ಇದು ಮಮಕಾರ ನಿವೃತ್ತಿ ಪ್ರಾರ್ಥನಾ ವಾಕ್ಯ) ಎಂದೂ, ಎರಡು ಪದ ಗಳನ್ನು ಅಧ್ಯಾಹಾರ ಮಾಡಿ ವಾಕ್ಯಗಳಿಗೆ ಅನ್ವಯವು ಉಂಟಾಗಿ "ಅಸ್ಯಜೀವಾತ್ಮನಃ ಇತ್ಯಾದಿ- ಈ ಜೀವನಿಗೆ ಅನಾದಿಯಾದ ಅವಿದ್ಯೆಯಿಂದ ಸಂಪಾದಿಸಲ್ಪಟ್ಟ ಪುಣ್ಯ ಪಾಪ ರೂಪಕರ್ಮಪ್ರವಾಹದ ನಿಮಿತ್ತವಾಗಿ ಬ್ರಹ್ಮಾದಿ ದೇವ, ಮನುಷ್ಯ ತಿರ್ಯಕ್ (ಪ್ರಾಣಿ ವರ್ಗ) ಸ್ಥಾವರಾತ್ಮಕವಾದ ನಾಲ್ಕು ವಿಧ ದೇಹಗಳಲ್ಲಿ ಪ್ರವೇಶದಿಂದ್ ಉಂಟಾದ ಆಯಾಯಾ ದೇಹವೇ ಆತ್ಮಾ ಎಂಬ ಅಭಿಮಾನದಿಂದ ಉಂಟಾದ, ಬಿಡಲಾಗದ ಸಂಸಾರವೆಂಬ ಭಯವನ್ನು ಹೋಗಲಾಡಿಸಲು, ಎಂದೂ, (ಇದರಿಂದ ಸಹೇತುಕವಾಗಿಯೂ ಸಕಾರ್ಯವಾಗಿಯೂ ಉಂಟಾದ ಅಹಂಕಾರ ನಿವೃತ್ತಿ ಪ್ರಾರ್ಥನಾ ಪ್ರಕಾರವು ಹೇಳಲ್ಪಟ್ಟಿತು.) 3) ಪೊಯ್‌ನಿನ್ರಜ್ಞಾನಮುಮ್ ಇತ್ಯಾದಿ

---

2) ಅಸ್ಯಜೀವಾತ್ಮನ: ಅನಾದ್ಯ ವಿದ್ಯಾ ಸಂಚಿತ ಪುಣ್ಯ ಪಾಪರೂಪ ಕರ್ಮಪ್ರವಾಹ ಹೇತುಕ, ಬ್ರಹ್ಮಾದಿಸುರನರತಿರ ಸ್ಥಾವರಾತ್ಮಕ ಚತುರ್ವಿಧ ದೇಹ ಪ್ರವೇಶ ಕೃತ ತತ್ತದಾತ್ಮಾಭಿಮಾನ ಜನಿತ, ಅವರ್ಜನೀಯ ಭವಭಯ ಪ್ರಧ್ವಂಸನಾಯ, ದೇಹ್ಯಾ ಶಿರಿಕ್ತಾತ್ಮಸ್ವರೂಪ ತತ್ಸಭಾವ ತದಂತ್ಯರ್ಯಾಮಿ ಪರಮಾತ್ಮ ಸ್ವರೂಪ ತತ್ಸ್ವಭಾವ ತದುಪಾಸನ ತತ್ಫಲಭೂತ ಆತ್ಮ ಸ್ವರೂಪಾವಿರ್ಭಾವ ಪೂರ್ವಕಾನವಧಿಕಾತಿಶಯಾನಂದ ಬ್ರಹ್ಮಾನು ಭವ ಜ್ಞಾಪನೇ ಪ್ರವೃತ್ತಂಹಿ ವೇದಾಂತವಾಕ್ಯಜಾತಮ್, "ತತ್ವಮಸಿ" ಇತ್ಯಾದಿಕಮ್. ವೇದಾರ್ಥ ಸಂಗ್ರಹಃ-ಅನಾದಿಯಾದ ಅವಿದ್ಯೆಯಿಂದ ಜೀವನಿಗೆ ಪುಣ್ಯಪಾಪರೂಪ ಕರ್ಮಗಳು ಜನಿಸುತ್ತವೆ. ಈ ಕರ್ಮ ಪ್ರವಾಹದಿಂದ ದೇವ ಮನುಷ್ಯ, ಪ್ರಾಣಿವರ್ಗ, ಮರ ಬೆಟ್ಟ ಮೊದಲಾದ ನಾಲ್ಕು ವಿಧವಾದ ಶರೀರಗಳಲ್ಲಿ ಜೀವನು ಪ್ರವೇಶಿಸುತ್ತಾನೆ. ಅದರಿಂದಾಗಿ ಅವನು ದೇಹಾತ್ಮಾಭಿಮಾನಿಯಾಗುತ್ತಾನೆ. ಆ ದೇಹವೇ ತಾನು ಎಂದು ತಿಳಿಯುತ್ತಾನೆಂದರ್ಥ. ಅದರ ನಿಮಿತ್ತವಾಗಿ ಬಿಡಿಸಿಕೊಳ್ಳಲಾಗದ ಸಂಸಾರ ಭಯವನ್ನುಳ್ಳವನಾಗುತ್ತಾನೆ. ಈ ಸಂಸಾರ ಭಯವನ್ನು ನಾಶಮಾಡಲು ದೇಹಕ್ಕಿಂತಲೂ ಆತ್ಮ ಸ್ವರೂಪ ಸ್ವಭಾವಗಳು ಬೇರೆ ಅವನ ಉಪಾಸನೆ, ಅವರ ಫಲರೂಪವಾದ ಆತ್ಮ ಸ್ವರೂಪಾವಿರ್ಭಾವ ಪೂರ್ವಕವಾಗಿ ನಿರತಿಶಯಾನಂದ ರೂಪವಾದ ಬ್ರಹ್ಮಾನುಭವ, ಇವುಗಳನ್ನು ತಿಳಿಸಲು ತತ್ವಮಸಿ ಇತ್ಯಾದಿ ವೇದಾಂತ ವಾಕ್ಯಗಳು ಹೊರಟಿವೆ.

3) ಪೊಯ್‌ನಿನ್ರ ಞಾನಮುಮ್ ಪೊಲ್ಲಾವೊಳುಕ್ಕುಮ್ಮಳುಕ್ಕುಡಂಬುಮ್,
ಇನ್ನಿನ್ರನೀರ್ಮೈ ಇನಿಯಾಮುರಾಮೈ. ಉಯಿರಳಿಪ್ಪಾನ್ ।
ಎನ್ನಿನ್ನ ಯೋನಿಯುಮಾಯ್ ಪಿರಂದಾಯ್ ಇಮೈಯೋರ್‌ತಲೈವಾ
ಮೆಯ್‌ನಿನ್ರು ಕೇಟ್ಟರುಳಾಯ್, ಅಡಿಯೇನ್‌ಶೆಯ್ಯುಂ ವಿಣಪ್ಪಮೇ ॥

ಅಸ್ಥಿರವಾದ ಶರೀರದಲ್ಲಿ. ಸ್ಥಿರವಾದ ನಿರುಪಾಧಿಕ ಮಮತ್ವ ಜ್ಞಾನವೂ, (ಆತ್ಮಾಭಿಮಾನಭ್ರಮ) ದೇಹಾತ್ಮಾಭಿಮಾನದಿಂದ ಉಂಟಾದ ದುರಾಚಾರವೂ, ತನ್ನಿಮಿತ್ತವಾದ ರಜಸ್ತಮೋಗುಣಗಳಿಂದ ಕೂಡಿದ ಶರೀರವೂ, ಇಂತಹ ಸ್ವಭಾವವನ್ನು ಇನ್ನು ಮೇಲೆ ಪಡೆಯದೆ ಇರುವಂತೆ, ಜೀವರನ್ನು ಕಾಪಾಡಲು ಎಷ್ಟು ವಿಧವಾದ ಅವತಾರಗಳನ್ನೆತ್ತಿದ್ದೀಯಾ, ನಿತ್ಯ ಸೂರಿಗಳ ನಿರ್ವಾಹಕನೇ ನನ್ನ ಪ್ರಾರ್ಥನೆಯನ್ನು. ಸ್ಥಿರವಾಗಿ ನಿಂತುಕೊಂಡು ಕೇಳಿ ಅನುಗ್ರಹಿಸು. ತಿರುವಿರುತ್ತ-1

**ಪ್ರಕೃತಿ ಸಂಬಂಧಾದಿರೂಪಮಾನ ಸರ್ವಾನಿಷ್ಟಮುಂ ಮುತ್ಕನ್ತಮ್ ನಿವೃತ್ತಮಾಹ ವೇಣುಮೆನ್ರಪೇಕ್ಷಿತ್ತ ದಾಯಿಟ್ರು. ಇಪ್ಪಡಿ ಅನಿಷ್ಟ ನಿವೃತ್ತಿಯೈ ಪ್ರಾರ್ಥಿತ್ತಾಲ್ ಇಷ್ಟಪ್ರಾಪ್ತಿಯೈಯಪೇಕ್ಷಿಕ್ಕವೇಣುಮೋ ?**
**4) "ಸಂಪದ್ಯಾವಿರ್ಭಾವ ಸ್ವೇನಶಬ್ದಾತ್" ಎನ್ರುಮ್,**

**(5) "ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಳನಾ ನ್ಮಣೇಃ।**
**ದೋಷಪ್ರಹಾಣಾನ್ನ ಜ್ಞಾನ ಮಾತ್ಮನಃ ಕ್ರಿಯತೇ ತಥಾ।**
**ಯಥೋದಪಾನ ಕರಣಾತ್ ಕ್ರಿಯತೇ ನ ಜಲಾಂಬರಮ್।**
**ಸದೇವ ನೀಯತೇ ವ್ಯಕ್ತಿಂ ಅಸತಸ್ಸಂಭವಃ ಕುತಃ।**
**ತಥಾ ಹೇಯಗುಣಧ್ವಂಸಾತ್ ಅವಬೋಧಾದಯೋ ಗುಣಾಃ।**
**ಪ್ರಕಾಶ್ಯನ್ತೇ ನಜನ್ಯನ್ತೇ ನಿತ್ಯಾ ಏವಾತ್ಮನೋ ಹಿತೇ॥**
**ಎನ್ರುಮ್ ಶೊಲ್ಲುಹಿರ ಪಡಿಯೇ ಇಷ್ಟಪ್ರಾಪ್ತಿತಾನೇ ವಾರಾದೋ ? ವೆನ್ನಿಲ್,**

---

ಅಸ್ಥಿರವಾದ ಶರೀರದಲ್ಲಿ ಸ್ಥಿರವಾದ ಆತ್ಮಾಭಿಮಾನ ಭ್ರಮ ಜ್ಞಾನವೂ, ದೇಹಾತ್ಮಾಭಿಮಾನ ಕೃತ ದುರಾಚಾರವೂ, ತನ್ನಿಮಿತ್ತವಾದ ರಜಸ್ತಮೋ ರೂಪ ಪ್ರಾಕೃತ ಶರೀರವೂ ನಿವೃತ್ತವಾಗಲು–ಇದರಿಂದ ಸಹಾರ್ಯವಾದ ಮಮಕಾರ ನಿವೃತ್ತಿ ಪ್ರಾರ್ಥನಾ ಪ್ರಕಾರವು ಹೇಳಲ್ಪಟ್ಟಿತು. ಹೀಗೆ ಅನಾದ್ಯ ವಿದ್ಯೆ, ಅದರಿಂದ ಪುಣ್ಯಪಾಪ ರೂಪ ಕರ್ಮ ಸಂಬಂಧ, ಇವೆರಡುಗಳ ವಾಸನಾ, ವಾಸನೆಯಿಂದ ಪ್ರಾಕೃತ ವಿಷಯಗಳಲ್ಲಿ ರುಚಿ, ಅದರಿಂದಾಗಿ ಪ್ರಕೃತಿ ಸಂಬಂಧ, ಆದಿ ಶಬ್ದದಿಂದ ದೇಹ ಪ್ರಾಪ್ತಿ, ಕರ್ಮ ಪರಂಪರೆಗಳು, ಹೇಳಲ್ಪಡುತ್ತವೆ ಏತದ್ರೂಪವಾದ ಸರ್ವಾನಿಷ್ಟಗಳೂ ನಿಶ್ಶೇಷವಾಗಿ ನಿವೃತ್ತವಾಗಬೇಕೆಂದು ಅಪೇಕ್ಷಿಸಿದಂತೆ ಆಯಿತು.

### ಅನಿಷ್ಟ ನಿವೃತ್ತಿ ಪ್ರಾರ್ಥನೆಯು ಇಷ್ಟ ಪ್ರಾಪ್ತಿಯನ್ನು ತಾನೇ ಕೊಡುತ್ತದೆಯಾದರೂ ಪ್ರತ್ಯೇಕವಾಗಿ ಅದನ್ನು ಅಪೇಕ್ಷಿಸುವುದಕ್ಕೆ ಕಾರಣ.

ಹೀಗೆ ನಮ ಶ್ಶಬ್ದದಿಂದ ಅನಿಷ್ಟ ನಿವೃತ್ತಿಯನ್ನು ಪ್ರಾರ್ಥಿಸಿದರೆ ತೃತೀಯ ಪದದಿಂದ ಇಷ್ಟ ಪ್ರಾಪ್ತಿಯನ್ನು ಪ್ರತ್ಯೇಕವಾಗಿ ಅಪೇಕ್ಷಿಸಬೇಕೇ. ಅನಿಷ್ಟವು ನಿವೃತ್ತವಾದರೆ ಇಷ್ಟವು ಸ್ವತಃ ಪ್ರಾಪ್ತವಾಗುತ್ತದೆ ಎಂದಲ್ಲವೇ ಪ್ರಮಾಣಗಳು ಹೇಳುತ್ತವೆ, ಎಂದು ಶಂಕಿಸಿ ಇಷ್ಟ ಪ್ರಾಪ್ತಿಯು ಸ್ವತಃ ಪ್ರಾಪ್ತವಾದರೂ ಆದರ ಪ್ರಾರ್ಥನೆಯೂ ಆವಶ್ಯಕವೆಂಬುದನ್ನು ದೃಷ್ಟಾಂತ ಪೂರ್ವಕವಾಗಿ, **ಇಪ್ಪಡಿ ಅನಿಷ್ಟ ನಿವೃತ್ತಿಯೈ** ಎಂದಾರಂಭಿಸಿ ಉಪಪಾದಿಸುತ್ತಾರೆ; ಆದಾಗಿ ಹೀಗೆ ಅನಿಷ್ಟ ನಿವೃತ್ತಿಯನ್ನು ಪ್ರಾರ್ಥಿಸಿದರೆ ಇಷ್ಟ ಪ್ರಾಪ್ತಿಯನ್ನು ಅಪೇಕ್ಷಿಸಬೇಕೇ ? ಸಂಪದ್ಯಾವಿರ್ಭಾವಸ್ಸ್ವೇನ **ಶಬ್ದಾತ್**– ಜೀವಾತ್ಮನು ಪರಂಜ್ಯೋತಿಸ್ಸನ್ನು ಹೊಂದಿ ಸ್ವಸ್ವರೂಪದ ಆವಿರ್ಭಾವವನ್ನು ಪಡೆಯುತ್ತಾನೆ – ಎಂದೂ 5) **ಯಥಾನಕ್ರಿಯತೇಜ್ಯೋತ್ಸ್ನಾ** ಇತ್ಯಾದಿ–ರತ್ನದ ಕೊಳೆಯು ಹೋಗುವಂತೆ ತೊಳೆದರೆ, ರತ್ನದ ಸ್ವಾಭಾವಿಕವಾದ ಪ್ರಕಾಶವು ಆವಿರ್ಭವಿಸುವಂತೆಯೂ, ಭಾವಿಯನ್ನು ತೋಡಿದರೆ ಒಳಗಿರುವ ನೀರೂ, ಅವಕಾಶವೂ ತಾನೇ ಆವಿರ್ಭವಿಸುವಂತೆಯೂ ಜೀವನಿಗೆ ಹೇಯ ಗುಣದ ಸಂಬಂಧಗಳು ತೊಲಗಿದರೆ, ಜ್ಞಾನಾದಿಗುಣಗಳು ಸ್ವತಃ ಪ್ರಕಾಶಿಸುತ್ತವೆ, ಹೊಸದಾಗಿ ಉಂಟು ಮಾಡಲ್ಪಡುವುದಿಲ್ಲ– ಎಂದು ಹೇಳುವಂತೆಯೂ, ಇಷ್ಟ ಪ್ರಾಪ್ತಿಯು ತಾನಾಗಿಯೇ ಉಂಟಾಗುವುದಿಲ್ಲವೇ ಎಂದು ಕೇಳಿದರೆ–

---

(4) ಬ್ರಹ್ಮಸೂತ್ರ 4-4-1 5) ವಿಷ್ಣುಧರ್ಮ (104-55-56-57)

ಸ್ವತಸ್ಸ್ವಾರ್ಹಂ ಯಥಾಭಾಗಂ, ಪುತ್ರಃ ಪಿತುರಪೇಕ್ಷತೇ ।
ಸಾಪರಾಧ ಸ್ತಥಾ ದಾಸಃ ಕೈಙ್ಕರ್ಯಂ ಪರಮಾತ್ಮನಃ ॥

ತನ್ ಅಪರಾಧತ್ತಾಲೇ ಸ್ವತಃ ಪ್ರಾಪ್ತತ್ತೈ ಇಳನ್ದು ಕಿಡಕ್ಕಿರ ಇವನ್ ಎನ್ ಕೂರು ನಾನ್ ಪೆರುವೇ ಣುಮ್, ಅದರ್ಕ್ಕಾಗ ಎನ್ ಅಪರಾಧತ್ತೈ ಪ್ಪೊರುತ್ತರುಳ ವೇಣುಮೆನ್ರು ಅಪೇಕ್ಷಿಕ್ಕೈಯಿಲ್ ವಿರೋಧಮಿಲ್ಲೈ.

ಇತ್ತಾಲ್ ಪ್ರತಿಬಂಧಕ ನಿವೃತ್ತಿಯಿಲ್ ಮಾಣಿಕ್ಕತ್ತಿಲೊಳಿಯುಮ್ 6) ಇಚ್ಛಾತ ಏವ ತವ ವಿಶ್ವಪದಾರ್ಥ ಸತ್ತಾ" ಎನ್ಗಿರಪಡಿಯೇ ನಿಯತ್ತೈಯಾನ ಈಶ್ವರೇಚ್ಛೈಯಾಲೇ ಪರಮ್ಬುಮಾಪ್ಪೋಲೆ ಇಜ್ಜ್ನಮ್ ಸ್ವಾಭಾವಿಕಮಾನ ಜ್ಞಾನ ವಿಕಾಸಾದಿಹಳ್ ಸಹಜಕಾರುಣ್ಯ ರೂಪೈಯಾನ ಈಶ್ವರೇಚ್ಛೈಯಾಲೇ ವರುಹಿರನ ವೆನ್ರುಮಿಡಮ್ ತೋತ್ತುಹಿರದು.

---

**ಸ್ವತಃಸ್ವಾರ್ಹಂ** ಇತ್ಯಾದಿ ಪುತ್ರನು ತನಗೆ ಜನ್ಮಸಿದ್ಧವಾಗಿ ಸೇರಬೇಕಾದ ದಾಯಭಾಗವನ್ನು ಹೇಗೆ ತಂದೆಯ ಸಕಾಶದಿಂದ ಅಪೇಕ್ಷಿಸುತ್ತಾನೋ, ಹಾಗೆಯೇ ದಾಸ್ಯವೃತ್ತ್ಯರ್ಹನಾದ ಜೀವನು ಅಪರಾಧದಿಂದ ಕೂಡಿದ್ದವ ನಾಗಿದ್ದರಿಂದ, ಪರಮಾತ್ಮ ಕೈಂಕರ್ಯವನ್ನು ಅಪೇಕ್ಷಿಸುತ್ತಾನೆ– ಎಂದು ಹೇಳುವಂತೆ, ತನ್ನ ಅನಾದ್ಯಪರಾಧ ದಿಂದ ಸ್ವತಃ ಪ್ರಾಪ್ತವಾದ ಕೈಂಕರ್ಯ ಪರ್ಯಂತವಾದ ಭಗವದನುಭವರೂಪ ಪುರುಷಾರ್ಥವನ್ನು ಕಳೆದುಕೊಂಡಿ ರುವ ಜೀವನು, ಎನ್ ಕೂರು– ನನ್ನ ಭಾಗವನ್ನು, ನಾನು ಪಡೆಯಬೇಕು ಆದಕ್ಕಾಗಿ ನನ್ನ ಅಪರಾಧಗಳನ್ನು ಕ್ಷಮಿಸಿ ಅನುಗ್ರಹಿಸೆಂದು ಭಗವಂತನಲ್ಲಿ ಅಪೇಕ್ಷಿಸುವುದು ವಿರೋಧವಾಗಲಾರದು. ದಾಸ ಭೂತನಾದ ಈ ಆತ್ಮನಿಗೆ ಅನಿಷ್ಟವು ನಿವೃತ್ತವಾದರೂ, ಇವನು ಅಪರಾಧಿಯಾಗಿರುವುದರಿಂದ ಕೈಂಕರ್ಯ ಪರ್ಯಂತ ಭಗವದನು ಭವರೂಪವಾದ ಇಷ್ಟವನ್ನು ಭಗವಂತನು ಕೊಡಲು, ತಾನು ಪಡೆಯ ಬೇಕಾದ್ದರಿಂದ " ನಾರಾಯಣಾಯ ಭವೇಯಂ" ಎಂದು ಇಷ್ಟ ಪ್ರಾರ್ಥನೆಯೂ ಪ್ರತ್ಯೇಕವಾಗಿ ಮಾಡಲ್ಪಡಬೇಕೆಂದು ತಾತ್ಪರ್ಯ.

ಇತ್ತಾಲ್ ಇತ್ಯಾದಿ - ಸ್ವತಸ್ಸಿದ್ಧವಾದ ಭಗವತ್ಕೈಂಕರ್ಯವು ಭಗವಂತನ ಇಚ್ಛೆಯಿಂದ ಉಂಟಾಗುತ್ತದೆ. ಎಂಬುದ ರಿಂದ **ಪ್ರತಿಬಂಧಕ ನಿವೃತ್ತಿಯಿಲ್** ಇತ್ಯಾದಿ– ಪ್ರತಿಬಂಧಕದ ನಿವೃತ್ತಿಯಿಂದ ಮಾಣಿಕ್ಯದ ಪ್ರಕಾಶವೂ, 6) **ಇಚ್ಛಾತ ಏವ ತವ ವಿಶ್ವಪದಾರ್ಥ ಸತ್ತಾ**–ಭಗವಂತನ ಸಂಕಲ್ಪದಿಂದಲೇ ಸಮಸ್ತ ಪದಾರ್ಥಗಳ ಇರುವಿಕೆಯು ಏರ್ಪಟ್ಟಿದೆ. ಎಂದು ಹೇಳಿರುವಂತೆ ಆತ್ಮ ವಿಷಯದ ಸ್ವಾಭಾವಿಕವಾದ ಜ್ಞಾನವಿಕಾಸಾದಿಗಳು ಸಹಜ ಕಾರುಣ್ಯ ರೂಪನಾದ ಈಶ್ವರನ ಇಚ್ಛೆಯಿಂದ ಬರುತ್ತವೆ ಎಂಬುದು ತಿಳಿಯಲ್ಪಡುತ್ತದೆ. ಅದಾಗಿ ಸ್ವಾಭಾವಿಕ ಜ್ಞಾನ ವಿಕಾಸ ಕಾರ್ಯವಾದ ಭಗವತ್ಕೈಂಕ ರ್ಯವು ಸಾಪರಾಧಿಯಾದ ಜೀವನಿಗೆ ಸ್ವಾಪೇಕ್ಷೆಯಿಂದ ಉಂಟಾದ ಭಗವದಿಚ್ಛೆಯಿಂದ ಬರಬೇಕೆಂದು ಕಾರಿಕೆಯಿಂದ ಉಪಪಾದಿಸಲ್ಪಟ್ಟ ರೀತಿಯಲ್ಲೂ, ದೃಷ್ಟಾಂತವಾಗಿ ಹೇಳಿದ ಮಾಣಿಕ್ಯದ ಸ್ವಾಭಾವಿಕವಾದ ಪ್ರಭೆಯ ಪ್ರಸರ ಣವೂ ಭಗವಂತನ ಸಹಜ ಕಾರುಣ್ಯ ರೂಪ ಇಚ್ಛಾಧೀನವೆಂದು ಪ್ರಮಾಣಗಳು ಹೇಳುವುದರಿಂದಲೂ ಜೀವನಿಗೆ ಕೈಂಕರ್ಯ ಹೇತು ಭೂತವಾದ ಜ್ಞಾನ ಪ್ರಸರಣವು ಈಶ್ವರನ ಸಹಜ ಕಾರುಣ್ಯ ರೂಪವಾದ ಇಚ್ಛೆಯಿಂದ ಬರುತ್ತದೆ ಎಂದು ತೋರುವುದರಿಂದ, ತಾದೃಶ ಇಚ್ಛಾ ಸಿದ್ಧಿಗೋಸ್ಕರ ಇಷ್ಟ ಪ್ರಾರ್ಥನೆಯು ಅವಶ್ಯವೆಂದು ಆಚಾರ್ಯರ ಅಭಿಪ್ರಾಯ.

---

(5) ವಿಷ್ಣುಧರ್ಮ 104-55-57 6) ವೈಕುಂಠಸ್ತವ 36

ಅನಿಷ್ಟ ನಿವೃತ್ತೀಷ್ಟ ಪ್ರಾಪ್ತ್ಯೋಃ ಪುನರುಕ್ತಿ ಮಾಶಂಕ್ಯ ಪರಿಹರತಿ.

ಆನಾಲುಮ್ ಭಾವಾನ್ತರಾಭಾವ ಪಕ್ಷತ್ತಿಲ್ ಸರ್ವಾನಿಷ್ಟ ನಿವೃತ್ತಿ ತಾನೇ ಇಷ್ಟಪ್ರಾಪ್ತಿಯಾಯಿರುಕ್ಕ ತನಿತ್ತು ಚೊಲ್ಲುನ್ನಾಲ್ ಪುನರುಕ್ತಿಯಾರೋದೋ ? 1) ಅವಿದ್ಯಾ ನಿವೃತ್ತಿರೇವ ಹಿ ಮೋಕ್ಷಃ ಎನ್ರು ಶ್ರೀ ಭಾಷ್ಯಕಾರರ್ ಅರುಳಿಚ್ಚೆಯ್‌ದಿಲರೋ ಎನ್ನಿಲ್.

ಏಕಮೇವ ಸ್ವರೂಪೇಣ ಪರೇಣಚ ನಿರೂಪಿತಮ್ ।

ಇಷ್ಟಪ್ರಾಪ್ತಿ ರನಿಷ್ಟಸ್ಯ ನಿವೃತ್ತಿಶ್ಚೇತಿ ಕೀರ್ತ್ಯತೇ ॥37॥

ಒನ್ರು ತನ್ನೈಯೇ ಸ್ವರೂಪತ್ತಾಲುಮ್ ಪ್ರತಿಯೋಗಿಯಾಲುಮ್ ನಿರೂಪಿತ್ತು ಪ್ರಯೋಜನ ವಿಶೇಷಾಭಿ ಸಂಧಿಯಾಲೇ ಪಿರಿಯಚ್ಚೊಲ್ಲಕ್ಕಡವದಾಯಿರುಕ್ಕುಮ್. ಸಂಸಾರ ದಶೈಯಿಲ್ ಒರು ಪ್ರತಿಕೂಲ ನಿವೃತ್ತಿ ಪ್ರತಿಕೂಲಾನ್ತರಮಾಯುಮ್ ಅನುಕೂಲ ಪ್ರತಿಕೂಲೋಭಯ ನಿವೃತ್ತಿಯಾಯುಮಿರುಕ್ಕುಮ್; ಇಙ್ಗು ಸರ್ವ ಪ್ರತಿಕೂಲ ನಿವೃತ್ತಿಯಾಹೈಯಾಲೇ ಮೇಲ್ ಮುಕ್ಕ ಅನುಕೂಲಮೇ ಯಾಯಿರು

---

**ಆನಾಲುಮ್** ಇತ್ಯಾದಿ- ಹೀಗೆ ಅನಿಷ್ಟ ನಿವೃತ್ತಿಯೂ ಇಷ್ಟ ಪ್ರಾಪ್ತಿಯೂ ಪ್ರಾರ್ಥಿಸಲ್ಪಡಬೇಕೆಂದು ಹೇಳಿ **ಭಾವಾಂತರಾಭಾವ ಪಕ್ಷತ್ತಿಲ್**- ಭೂತಲದಲ್ಲಿರುವ ಘಟಾಭಾವವು ಭೂತಲವೇ ಅಲ್ಲದೆ ಬೇರೆಯಲ್ಲ, ಶುಕ್ಲ ಘಟದಲ್ಲಿರುವ ಕಾರ್ಷ್ಣ್ಯಾಭಾವ-ಕಪ್ಪಿಲ್ಲದಿರುವುದು ಶೌಕ್ಲ್ಯಸ್ವರೂಪವೇ ವಿನಹ ಬೇರೆಯಲ್ಲವೆಂಬುದು ಪೂರ್ವೋತ್ತರ ಮೀಮಾಂಸಕರ ಪಕ್ಷ. ನೈಯಾಯಿಕರು ಅಭಾವವನ್ನು ಪ್ರತ್ಯೇಕವಾದ ಪದಾರ್ಥವೆಂದು ಹೇಳುತ್ತಾರೆ. ಇದನ್ನು ಒಪ್ಪದೆ ಒಂದು ವಸ್ತುವಿನ ಅಭಾವವೇ **ಮತ್ತೊಂದು** ವಸ್ತುವಿನ ಭಾವವೆಂಬುದು ಭಾವಾಂತರಾಭಾವಿಗಳ ಮತ. ಈ ಪಕ್ಷದಲ್ಲಿ ಸರ್ವಾನಿಷ್ಟನಿವೃತ್ತಿಯೇ ಇಷ್ಟ ಪ್ರಾಪ್ತಿಯಾಗಿರುವಾಗ, ಅಂದರೆ ಜ್ಞಾನ ಸಂಕೋಚವನ್ನುಂಟು ಮಾಡುವ ಅವಿದ್ಯಾರುಚಿ ವಾಸನಾ ಪ್ರಕೃತಿ ಸಂಬಂಧಾದಿರೂಪ ಸರ್ವಾನಿಷ್ಟ ನಿವೃತ್ತಿಯೇ ಪರಿಪೂರ್ಣ ಬ್ರಹ್ಮಾನು ಭವಾತ್ಮಕ ಜ್ಞಾನ ವಿಕಾಸರೂಪ ಇಷ್ಟ ಪ್ರಾಪ್ತಿಯಾಗಿರುವಾಗ, **ತನಿತ್ತುಚ್ಚೊನ್ನಾಲ್**- ಇಷ್ಟಪ್ರಾಪ್ತ್ಯನಿಷ್ಟ ನಿವೃತ್ತಿಗಳನ್ನು ಬೇರೆ ಬೇರೆಯಾಗಿ ಹೇಳಿದರೆ ಪುನರುಕ್ತಿ ದೋಷವು ಉಂಟಾಗುವುದಿಲ್ಲವೇ 1) **"ಅವಿದ್ಯಾನಿವೃತ್ತಿರೇವಹಿಮೋಕ್ಷಃ"** ಅವಿದ್ಯಾನಿವೃತ್ತಿಯೇ ಪರಿಪೂರ್ಣ ಬ್ರಹ್ಮಾನುಭವರೂಪ ಮೋಕ್ಷವೆಂದು ಭಾಷ್ಯಕಾರರೂ ಕೃಪೆ ಮಾಡಿ ಹೇಳಿಲ್ಲವೇ ಎಂದರೆ, ಇದಕ್ಕೆ ಸಮಾಧಾನವನ್ನು **ಏಕಮೇವ ಸ್ವರೂಪೇಣ** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ **ಏಕಮೇವಸ್ವರೂಪೇಣ** ಒಂದು ವಸ್ತುವೇ ಸ್ವಸ್ವರೂಪದಿಂದ ನಿರೂಪಿತವಾಗಿ ಇಷ್ಟ ಪ್ರಾಪ್ತಿಯೆಂದೂ, **ಪರೇಣಚ**- ಪ್ರತಿಯೋಗಿಯಿಂದಲೂ (ಎಲ್ಲಾ ವಸ್ತುವೂ ಸ್ವೇತರ ಭಿನ್ನವಾದ್ದರಿಂದ, ಆ ಇತರ ವಸ್ತುವು ಪ್ರತಿಯೋಗಿ), **ನಿರೂಪಿತಮ್** ನಿರೂಪಿತವಾಗಿ **ಅನಿಷ್ಟಸ್ಯನಿವೃತ್ತಿಶ್ಚೇತಿ**-ಅನಿಷ್ಟ ನಿವೃತ್ತಿ ಎಂದೂ **ಕೀರ್ತ್ಯತೇ** ಹೇಳಲ್ಪಡುತ್ತದೆ. ಇದನ್ನು ತಾವೇ ವಿವರಿಸುತ್ತಾರೆ. ಅದಾಗಿ **ಒನ್ರುತನ್ನೈಯೇ** ಇತ್ಯಾದಿ- ಒಂದು ಪದಾರ್ಥವನ್ನೇ ಸ್ವರೂಪದಿಂದಲೂ, ಪ್ರತಿಯೋಗಿಯಿಂದಲೂ ನಿರೂಪಿಸಿ, ಪ್ರಯೋಜನ ವಿಶೇಷಾಭಿ ಸಂಧಿಯಿಂದ ಬಿಡಿಸಿ ಹೇಳಲಾಗುತ್ತದೆ. **ಸಂಸಾರದಶೈಯಿಲ್** ಇತ್ಯಾದಿ- ಸಂಸಾರದಶೆಯಲ್ಲಿ ಒಂದು ಪ್ರತಿಕೂಲ ನಿವೃತ್ತಿಯು ಪ್ರತಿಕೂಲಾಂತರವಾಗಿಯೂ, ಅನುಕೂಲ ಪ್ರತಿಕೂಲ ಉಭಯ ನಿವೃತ್ತಿಯಾಗಿಯೂ ಇರುತ್ತದೆ. ಇದಕ್ಕೆ ದೃಷ್ಟಾಂತ ವಾಗಿ, ಪಾಪಿಷ್ಠನಾದ ಒಬ್ಬ ರೋಗಿಗೆ ಮರಣದಿಂದ ಒಂದು ಪ್ರತಿಕೂಲವು ನಿವೃತ್ತವಾದರೂ, ನರಕ ಪ್ರಾಪ್ತಿಯಿಂದ ಮತ್ತೊಂದು ಪ್ರತಿಕೂಲವು ಏರ್ಪಡುತ್ತದೆ. ಒಬ್ಬನಿಗೆ ಕುಟುಂಬ ಪೋಷಕಿಯಾಗಿ ಭಾರ್ಯೆಯು ಅನುಕೂಲವಾಗಿದ್ದರೂ, **ದುಷ್ಟ** ಸ್ವಭಾವದಿಂದ ಕೂಡಿದ್ದರೆ ಅವಳ ನಿವೃತ್ತಿಯು ಅನುಕೂಲ ಪ್ರತಿಕೂಲ ಉಭಯ ನಿವೃತ್ತಿಯಾಗಿ ಪರ್ಯವಸಿಸುತ್ತದೆ. **ಇಂಗು**- **ಮೋಕ್ಷ**ದಶೆಯಲ್ಲಿ, **ಸರ್ವಪ್ರತಿಕೂಲ**

---

(1) ಶ್ರೀಭಾಷ್ಯಲಘು ಪೂರ್ವಪಕ್ಷ.

ರುಕ್ಕುಮ್ ; ಆಹೈಯಾಲ್ ಪೂರ್ವಾವಸ್ಥೈಯಿಸುಡೈಯ ಅನಿಷ್ಟ ತಮತ್ವತ್ತೈಯುಮ್, ಕೇವಲಾನುಕೂಲ ರೂಪೈಯಾನ ಉತ್ತರಾವಸ್ಥೈಯಿಸುಡೈಯ ಇಷ್ಟ ತಮತ್ವತ್ತೈಯುಮ್ ತೋತ್ತುವಿಕ್ಕೈಕ್ಕಾಹ, ಆದರಾತಿಶಯತ್ತಾಲೇ ಪಿರಿಯ ಅಪೇಕ್ಷಿಕ್ಕಿರದು. ಭಗವನ್ನಿಗ್ರಹಾದಿ ನಿವೃತ್ತಿಯುಮ್, ಜೀವನುಡೈಯ ಜ್ಞಾನವಿಕಾಸಾದಿ ಹಳುಮ್, ವೇರಾಹೈಯಾಲೇ ಪಿರಿಯ ವಪೇಕ್ಷಿಕ್ಕಿರದಾಹವುಮಾಮ್. ಜ್ಞಾನ ಸಙ್ಕೋಚಾದಿಹಳುಕ್ಕು ಹೇತುವಾನ ಭಗವನ್ನಿಗ್ರಹಾದಿಹಳುಡೈಯ ನಿವೃತ್ತಿಯುಮ್ ನಿಗ್ರಹ ಫಲಮಾನ ಜ್ಞಾನ ಸಂಕೋಚಾದಿಹಳುಡೈಯ ನಿವೃತ್ತಿಯಾನ ಜ್ಞಾನವಿಕಾಸ ಕೈಙ್ಕರ್ಯಾದಿಹಳುಮ್ ವೇರು ಪಟ್ಟವೈಯಾಹೈಯಾಲೇ ಪಿರಿಯ ಅಪೇಕ್ಷಿಕ್ಕಕ್ಕುರೈಯಿಲ್ಲೈಯಿರೇ.

ಸರ್ವಾನಿಷ್ಟ ನಿವೃತ್ತಿ ಪಿರನ್ದಾಲ್ ಪಾಷಾಣ ಕಲ್ಪತ್ವಾದಿ ಮತಾನ್ತರ ಶಂಕೈ ವಾರಾನ್ಯೈಕ್ಕಾಹವುಮ್ ಭಗವತ್ಪ್ರಾಪ್ತಿಯಿಲ್ ಇನ್ದ್ರಾದಿ ಪ್ರಾಪ್ತಿಯಿರ್ಪ್ಪೋಲೇ ದುಃಖಸಂಬಂಧಮ್ ಇಲ್ಲೈ ಎನ್ರು ತೋತ್ತುವಿಕ್ಕೈಯಿಲ್ ತಾತ್ಪರ್ಯತ್ತಾಲುಮ್ ಪಿರಿತ್ತು ಚೊಲ್ಲುಹಿಗದಾಹವುಮಾಮ್.

---

**ನಿವೃತ್ತಿ** ಇತ್ಯಾದಿ– ಸರ್ವ ಪ್ರತಿಕೂಲಗಳ ನಿವೃತ್ತಿಯಾದ್ದರಿಂದ, ಅನಂತರ ಎಲ್ಲಾ ಕಾಲಗಳಲ್ಲಿಯೂ, ಅನುಕೂಲವೇ ಆಗಿರುತ್ತದೆ. **ಆಹೈಯಾಲ್** ಇತ್ಯಾದಿ–ಆದ್ದರಿಂದ **ಪೂರ್ವಾವಸ್ಥೈಯಿನುಡೈಯ** ಇತ್ಯಾದಿ–ಸಂಸಾರದ ದಶೆಯಲ್ಲೆಲ್ಲಾ ಅತ್ಯಂತ ಪ್ರತಿಕೂಲವಾಗಿರುವುದರಿಂದ, ಅದು ಅನಿಷ್ಟತಮ. **ಕೇವಲಾನುಕೂಲ ರೂಪೈಯಾನ** ಇತ್ಯಾದಿ ಕೇವಲ ಅನುಕೂಲ ರೂಪವಾದ ಉತ್ತರಾವಸ್ಥೆಯ ಇಷ್ಟ ತಮತ್ವವನ್ನು ತಿಳಿಯ ಪಡಿಸುವುದಕ್ಕೋಸ್ಕರ ಆದರಾತಿಶಯದಿಂದ ಅನಿಷ್ಟ ನಿವೃತ್ತಿಯನ್ನೂ ಇಷ್ಟ ಪ್ರಾಪ್ತಿಯನ್ನೂ ಬೇರೆ ಬೇರೆಯಾಗಿ ಅಪೇಕ್ಷಿಸುವುದು. ಭಾವಾಂತರಾಭಾವವಾದಿಯ ಪಕ್ಷದಲ್ಲೂ ಭಗವನ್ನಿಗ್ರಹರೂಪವಾದ ಅನಿಷ್ಟ ನಿವೃತ್ತಿಯೂ ಭಗವತ್ಪ್ರಸಾದರೂಪ (ಭಾವ) ವಾಗಿಯೇ ಪರ್ಯವಸಿಸುತ್ತದೆ. **ಭಗವನ್ನಿಗ್ರಹಾದಿ ನಿವೃತ್ತಿಯುಮ್** ಇತ್ಯಾದಿ– ಭಗವಂತನ ನಿಗ್ರಹರೂಪವೇ ಮೊದಲಾದ ಅನಿಷ್ಟಗಳ ನಿವೃತ್ತಿಯೂ, ಜೀವನ ಜ್ಞಾನವಿಕಾಸಾದಿ ರೂಪ ಇಷ್ಟ ಪ್ರಾಪ್ತಿಯೂ ಬೇರೆ ಬೇರೆಯಾದ್ದರಿಂದ, **ಪಿರಿಯುವಪೇಕ್ಷಿಕ್ಕಿರದಾಹವುಮಾಮ್**– ಬಿಂಗಡಿಸಿ ಅಪೇಕ್ಷಿಸುವುದಾಗಿ ಭಾವಿಸಬಹುದು, ಆಗ **ಪೌನರುಕ್ತ್ಯವು** ಬರುವುದಿಲ್ಲ. **ಭಾವಾಂತರಾಭಾವ** ಪಕ್ಷದಲ್ಲಿ ಭಗವನ್ನಿಗ್ರಹದ ನಿವೃತ್ತಿ ರೂಪವಾದ **ಭಾವವೂ** ಜೀವನ ಜ್ಞಾನ ವಿಕಾಸ ಕೈಂಕರ್ಯಾದಿ ರೂಪ ಭಾವಾಂತರವಾಗಿಯೇ ಆಗುವುದಿಲ್ಲವೇ ಎಂದರೆ, ಜೀವನ ಜ್ಞಾನ ವಿಕಾಸವು ಭಗವನ್ನಿಗ್ರಹ ಕಾರ್ಯವಾದ, ಜ್ಞಾನ ಸಂಕೋಚದ ನಿವೃತ್ತಿರೂಪವಾದ್ದರಿಂದ ಕಾರಣವಾದ ನಿಗ್ರಹದ ನಿವೃತ್ತಿರೂಪವಾಗದು ಎಂದು **ಜ್ಞಾನಸಂಕೋಚಾದಿಹಳುಕ್ಕು** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಜ್ಞಾನಸಂಕೋಚಾದಿಗಳಿಗೆ ಹೇತುವಾದ ಭಗವನ್ನಿಗ್ರಹಾದಿಗಳ ನಿವೃತ್ತಿಯೂ ನಿಗ್ರಹ ಫಲವಾದ ಜ್ಞಾನ ಸಂಕೋಚಾದಿಗಳ ನಿವೃತ್ತಿಯಾದ ಜ್ಞಾನ ವಿಕಾಸ ಕೈಂಕರ್ಯಾದಿಗಳೂ ಬೇರೆಯಾದ್ದರಿಂದ **ಪಿರಿಯವಪೇಕ್ಷಿಕ್ಕ**–ಬಿಂಗಡಿಸಿ ಅಪೇಕ್ಷಿಸುವುದು, **ಕುರೈಯಿಲ್ಲೈಯಿರೇ**– ಬಾಧಕವಿಲ್ಲವಲ್ಲವೇ. ಹೀಗೆ ನಿಗ್ರಹ ನಿವೃತ್ತಿ ಪ್ರಾರ್ಥನೆಯು ಜ್ಞಾನವಿಕಾಸರೂಪ ಇಷ್ಟ ಪ್ರಾರ್ಥನಾ ರೂಪವಾಗದಿದ್ದರೂ ಸರ್ವಾನಿಷ್ಟ ನಿವೃತ್ತಿ ಪ್ರಾರ್ಥನೆಯನ್ನು ಮಾಡಿದರೆ ಅದು ನಿಗ್ರಹ ನಿವೃತ್ತಿರೂಪ ಭಗವತ್ಪ್ರಸಾದರೂಪವಾಗಿ, ನಿಗ್ರಹಕಾರ್ಯವಾದ ಜ್ಞಾನ ಸಂಕೋಚ ರೂಪವಾದ ಅನಿಷ್ಟದ ನಿವೃತ್ತಿರೂಪವಾದ ಜ್ಞಾನವಿಕಾಸವಾಗಿಯೂ ಆಗಿರುವುದರಿಂದ ಜ್ಞಾನವಿಕಾಸ ರೂಪವಾದ ಇಷ್ಟ ಪ್ರಾರ್ಥನೆಯು ಅಧಿಕವಲ್ಲವೇ ಎಂದರೆ, ಮೊದಲು ಹೇಳಿದ ಅನಿಷ್ಟ ನಿವೃತ್ತಿಯೂ, ಇಷ್ಟ ಪ್ರಾಪ್ತಿಯೂ ಒಂದೇ ಎಂಬ ಪಕ್ಷವನ್ನವಲಂಬಿಸಿ ಪ್ರಾರ್ಥನಾ ದ್ವಯಕ್ಕೆ ಪ್ರಯೋಜನವನ್ನು **ಸರ್ವಾನಿಷ್ಟನಿವೃತ್ತಿಪಿರಂದಾಲ್**– ಎಂದಾರಂಭಿಸಿ ನಿರೂಪಿಸುತ್ತಾರೆ. ಆದಾಗಿ ಸರ್ವಾನಿಷ್ಟಗಳ ನಿವೃತ್ತಿಯು ಉಂಟಾದರೆ ಪಾಷಾಣಕಲ್ಪತ್ವಾದಿ ಮತಾಂತರ ಶಂಕೆಯು ಬಾರದೇ ಇರಲೂ, ಭಗವತ್ಪ್ರಾಪ್ತಿಯು ಇಂದ್ರಾದಿಪದ ಪ್ರಾಪ್ತಿಯ ಹಾಗೆ ದುಃಖ ಸಂಬಂಧವಿಲ್ಲದುದೆಂಬುದನ್ನು ತಿಳಿಯಪಡಿಸುವುದರಲ್ಲಿ ತಾತ್ಪರ್ಯದಿಂದಲೂ

**ಇಪ್ಪಡಿ ಸ್ವರೂಪಮುಮ್ ಪುರುಷಾರ್ಥ ಪ್ರಾರ್ಥನಮುಮ್ ಶಾಬ್ದಮಾನಾಲ್, ಇಪ್ಪುರುಷಾರ್ಥತ್ತುಕ್ಕು ಸಾಧನಮಾಹ ಶಾಸ್ತ್ರವಿಹಿತಮಾನ ಸಾಧ್ಯೋಪಾಯಮುಮ್ ಭರನ್ಯಾಸ ಪರ್ಯನ್ತಮಾಹವಕಿಂಚನನುಕ್ಕು ಅನಿಷ್ಟ ನಿವೃತ್ತಿಯೈ ಚೊಲ್ಲುಹಿರ ನಮಸ್ಸಿಲೇ ಆರ್ಥಮಾಹ ಅನುಸಂಧೇಯಮ್.**

**ವಾಕ್ಯತ್ರಯಪಕ್ಷೇ ತೃತೀಯ ಯೋಜನಾ**

**8. ಇಪ್ಪುರುಷಾರ್ಥ ಪ್ರಾರ್ಥನೈ ಇಚ್ಛಾಮಾತ್ರಮಾಯಿರುಕ್ಕೈಯನ್ರಿಕ್ಕೇ ಗೋಪ್ತೃತ್ವವರಣರೂಪೈಯಾಹೈಯಾಲೇ ಶೇಷ ಮುಪಲಕ್ಷಿತ ಮಾಹವುಮಾಮ್. ಅಪ್ಪೋದು ತಿರುಮನ್ತ್ರಮ್ ಸ್ವರೂಪೋಪಾಯ ಪ್ರಧಾನ ಮಾಯಿರುಕ್ಕುಮ್. ಅಯನ ಶಬ್ದತ್ತಿಲ್ ಕರಣವ್ಯುತ್ಪತ್ತಿಯಾಲೇ ಈಶ್ವರನುಡೈಯ ಉಪಾಯತ್ವಮುಮ್ ಸಿದ್ಧಿಕ್ಕುಮ್.**

---

ವಿಂಗಡಿಸಿ ಹೇಳುವುದಾಗಿ ಸ್ವೀಕರಿಸಬಹುದು- ಅದಾಗಿ ಆತ್ಮಾವಿಗೆ ಸರ್ವಾ ನಿಷ್ಟ ನಿವೃತ್ತಿಯು ಏರ್ಪಟ್ಟರೆ ಅವನು ಪಾಷಾಣಕ್ಕೆ ಸದೃಶನಾಗಿ ಸುಖ ದುಃಖವಿಲ್ಲದೆ ಇರುತ್ತಾನೆಂಬುದು ನೈಯಾಯಿಕ ಮತ. ಹಾಗೆಯೇ ಸರ್ವಾನಿಷ್ಟ ನಿವೃತ್ತಿಯನ್ನು ಮಾತ್ರ ಪ್ರಾರ್ಥಿಸಿದರೆ ಪ್ರಪನ್ನನಿಗೆ ಬ್ರಹ್ಮಾನುಭವ ಕೈಂಕರ್ಯಾದಿಗಳು ಇಲ್ಲದೆ ಪಾಷಾಣ ಕಲ್ಪತ್ವವು ಪ್ರಾರ್ಥಿತವಾಗಬಾರದೆಂದು, ಇಷ್ಟ ಪ್ರಾರ್ಥನೆಯು ಸುಸಂಗತವೆಂದು ತಾತ್ಪರ್ಯ. ಅನಿಷ್ಟ ನಿವೃತ್ತಿ ಪ್ರಾರ್ಥನೆಯಿಲ್ಲದೇ ಇಷ್ಟವಾದ ಭಗವತ್ಪ್ರಾಪ್ತ್ಯಾದಿ ಮಾತ್ರವು **ಪ್ರಾರ್ಥಿಸಲ್ಪಟ್ಟರೆ** ಅದು ಇಂದ್ರಾದಿ ಪದ ಪ್ರಾಪ್ತಿಯ ಹಾಗೆ ಅನಿಷ್ಟ ಮಿಶ್ರವಾಗಿ ದುಃಖ ಶಬಲಿತವಾಗಿ ಇಲ್ಲದೆ ಇರಲು, ಅನಿಷ್ಟ ನಿವೃತ್ತಿಯೂ ಬೇರೆಯಾಗಿ ಪ್ರಾರ್ಥಿಸಲ್ಪಡುತ್ತದೆ ಎಂದು ಭಾವ.

ಪ್ರಣವವು ಸ್ವರೂಪಪರವಾಗಿಯೂ, ನಮಃಎಂಬುದುಅನಿಷ್ಟನಿವೃತ್ತಿರೂಪವಾಗಿಯೂ "ನಾರಾಯಣಾಯಸ್ಯಾಮ್ ಎಂಬುದು ಇಷ್ಟ ಪ್ರಾಪ್ತಿಯ ಪ್ರಾರ್ಥನಾರೂಪವಾಗಿಯೂ ಹೇಳಲ್ಪಡುವ ಈ ಯೋಜನೆಯಲ್ಲಿ ಇಷ್ಟ ಪ್ರಾಪ್ತಿಗೆ ಸಾಧನವಾದ ಉಪಾಯವು ಲಬ್ಧವಾಗಲುದಾರಿ ಏನು ಎಂದರೆ **ಇಪ್ಪಡಿಸ್ವರೂಪಮುಮ್**ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಹೀಗೆ ಸ್ವರೂಪವೂ ಪುರುಷಾರ್ಥ ಪ್ರಾರ್ಥನೆಯೂ ಶಾಬ್ದವಾದರೆ, ಈ ಪುರುಷಾರ್ಥಕ್ಕೆ ಸಾಧನವಾಗಿ ಶಾಸ್ತ್ರ ವಿಹಿತವಾದ ಸಾಧ್ಯೋಪಾಯವೂ, ಭರನ್ಯಾಸ ಪರ್ಯಂತವಾಗಿ, **ಅಕಿಂಚನನುಕ್ಕು ಅನಿಷ್ಟ ನಿವೃತ್ತಿಯೈ ಚೊಲ್ಲುಹಿರ ನಮಸ್ಸಿಲೇ**- ನಮಸ್ಸಿನ "ಮ"ಕಾರದಲ್ಲಿ ಅಕಿಂಚನತ್ವಾಧಿಕಾರವು ವಿವಕ್ಷಿತವಾದ್ದರಿಂದ ಅನಿಷ್ಟ ನಿವೃತ್ತಿಯನ್ನು ಹೇಳುವ ನಮಸ್ಸಿನಲ್ಲಿಯೇ ಅಕಿಂಚನ ಸಾಧ್ಯವಾದ ಭರನ್ಯಾಸ ರೂಪೋಪಾಯವೂ **ಆರ್ಥಮಾಹವನು ಸಂಧೇಯಮ್**- ಆರ್ಥಿಕವಾಗಿ ಅನುಸಂಧಿಸಲ್ಪಡುತ್ತದೆ ಎಂದು ತಾತ್ಪರ್ಯ.

8) ಅನಂತರ ಮೂರು ವಾಕ್ಯವೆಂಬ ಪಕ್ಷದಲ್ಲಿ ಸ್ವರೂಪೋಪಾಯ ಪರವಾದ ಯೋಜನಾಂತರವನ್ನು **ಇಪ್ಪುರುಷಾರ್ಥ ಪ್ರಾರ್ಥನೈ** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ನನಗೆ ಅನಿಷ್ಟ ನಿವೃತ್ತಿಯು ಏರ್ಪಡಬೇಕು, ಇಷ್ಟ ಪ್ರಾಪ್ತಿಯು ಬೇಕು ಎಂಬಅಭಿಪ್ರಾಯ ಮಾತ್ರವಲ್ಲದೆ"ನಾರಾಯಣಾಯಕಿಂಕಿರಸ್ಸ್ಯಾಮ್"ಎಂದು ಕೈಂಕರ್ಯ ರೂಪರಕ್ಷಾ ಪ್ರಾರ್ಥನೆಯು ಅಂತತಃ ರಕ್ಷಕತ್ವ ಪ್ರಾರ್ಥನೆಯಾಗಿ ಗೋಪ್ತೃತ್ವ ವರಣ ರೂಪವಾಗಿ ಪರ್ಯವಸಾನ ಹೊಂದುವುದರಿಂದ, **ಶೇಷಮ್** ಆತ್ಮ ನಿಕ್ಷೇಪ ರೂಪವಾದ ಅಂಗಿಯೂ ಅದರ ಅಂಗಗಳೂ, ಉಪಲಕ್ಷಿತ **ಮಾಹವುಮಾಮ್**-ಉಪಲಕ್ಷಿತಗಳಾಗಬಹುದು. ಗೋಪ್ತೃತ್ವ ವರಣವನ್ನು ಹೇಳಿದ ಮಾತ್ರದಿಂದ ಅಜಹತ್ **ಸ್ವಾರ್ಥ** ಲಕ್ಷಣೆಯಿಂದ ಅಂಗಾಂಗಿ ಸಮುದಾಯರೂಪ ಸಾಧ್ಯೋಪಾಯವು ಹೇಳಲ್ಪಟ್ಟಿತೆಂದರ್ಥ. **ಅಪ್ಪೋದು ಇತ್ಯಾದಿ**- ಆಗ ಅಜಹತ್ಸ್ವಾರ್ಥ ಲಕ್ಷಣೆಯಿಂದ ಉಪಾಯವು ಶಾಬ್ದವಾದರೆ, ತಿರುಮಂತ್ರವು ಸ್ವರೂಪೋಪಾಯ ಪ್ರಧಾನವಾಗಿರುತ್ತದೆ. **ಅಯನ ಶಬ್ದತ್ತಿಲ್** ಇತ್ಯಾದಿ - ಅಯನ ಶಬ್ದದಲ್ಲಿ ಕರಣ ವ್ಯುತ್ಪತ್ತಿಯಿಂದ **ಈಶ್ವರನ ಉಪಾಯವು** ಸಿದ್ಧಿಸುತ್ತದೆ.

### ವಾಕ್ಯತ್ರಯಪಕ್ಷೇ ತುರೀಯ ಯೋಜನಾ.

**ಕೇಚಿತ್ತು ಚರಮಶ್ಲೋಕೇ ದ್ವಯೇ ಚೋಕ್ತಕ್ರಮಾದಿಹ ।**
**ಭರನ್ಯಾಸಪರಂ ತಾರಂ ಶೇಷಂ ಫಲಪರಂ ವಿದುಃ ॥88॥**

### ಅಥ ವಾಕ್ಯತ್ರಯ ಪಕ್ಷೇ ಪಂಚಮ ಯೋಜನಾಮಾಹ,

**10. ಇತ್ತಿರುಮನ್ತ್ರತ್ತಿಲ್ ಸ್ವರೂಪೋಪಾಯ ಪುರುಷಾರ್ಥಙ್ಗಳ್ ಮೂನ್ರುಮ್ ಅಡೈವೇ ಶಾಬ್ದಮಾಪ್ಪೋದು, ಪ್ರಣವಮ್ ಸ್ವರೂಪಪರಮ್, ನಮಸ್ಸು ಉಪಾಯ ಪರಮ್, ಶೇಷಮ್ ಪುರುಷಾರ್ಥ ಪ್ರಾರ್ಥನಾಪರಮ್. ಇಮ್ಮೂನ್ರಿನ್ ವಿರಿವೆಲ್ಲಾಮ್ ಅಧ್ಯಾತ್ಮ ಶಾಸ್ತ್ರಙ್ಗಳೈ ಕ್ಕೊಣ್ಡು ತೆಳಿನ್ದು ಇಙ್ಗೇ ಅನುಸಂಧೇಯಮ್.**

---

ಅನಂತರ ವಾಕ್ಯತ್ರಯ ಪಕ್ಷದಲ್ಲಿ, ಪ್ರಣವವು ಉಪಾಯ ಪರವೆಂದೂ, ನಮಶ್ಶಬ್ದವು ಅನಿಷ್ಟ ನಿವೃತ್ತಿ ಪರವೆಂದೂ ನಾರಾಯಣಾಯ ಸ್ಯಾಮ್ ಎಂದು ಇಷ್ಟ ಪ್ರಾಪ್ತಿ ಪರವೆಂದೂ ಕಾರಿಕೆಯಿಂದ ಸಂಗ್ರಹಿಸುತ್ತಾರೆ. ಆದಾಗಿ **ಕೇಚಿತ್ತು** ಇತ್ಯಾದಿ ಕೆಲವು ಆಚಾರ್ಯರುಗಳು ಚರಮಶ್ಲೋಕದಲ್ಲಿ ಪೂರ್ವಾರ್ಧವು ಉಪಾಯಪರವಾಗಿಯೂ ಉತ್ತರಾರ್ಧವು ಫಲಪರವಾಗಿಯೂ, ದ್ವಯ ಮಂತ್ರದಲ್ಲಿ ಪೂರ್ವ ಖಂಡವು ಉಪಾಯಪರವಾಗಿಯೂ ಉತ್ತರಖಂಡವು ಫಲಪರವಾಗಿಯೂ ಹೇಳಲ್ಪಟ್ಟ ರೀತಿಯಲ್ಲಿ, **ತಾರಂ**–ಪ್ರಣವವು, **ಭರನ್ಯಾಸಪರಂ**–ಭರನ್ಯಾಸ ಪರವಾಗಿಯೂ, **ಶೇಷಂಫಲ ಪರಂ ವಿದುಃ** "ನಮಃ"ಶ್ಶಬ್ದವೂ "ನಾರಾಯಣಾಯ" ಎಂಬ ಶಬ್ದವೂ, **ಫಲಪರಂವಿದುಃ**–ಫಲವನ್ನು ತಿಳಿಸುವುದಾಗಿಯೂ ನಿಶ್ಚಯಿಸಿರುತ್ತಾರೆ.

### ವಾಕ್ಯತ್ರಯ ಪಕ್ಷದಲ್ಲಿ ಐದನೆಯ ಯೋಜನೆ.

ಅನಂತರ ವಾಕ್ಯತ್ರಯ ಪಕ್ಷದಲ್ಲಿ ಮೂರು ಪದಗಳೂ ಕ್ರಮವಾಗಿ ಸ್ವರೂಪ, ಉಪಾಯ, ಪುರುಷಾರ್ಥ ಪರವೆಂಬ ಯೋಜನೆಯನ್ನು **ಇತ್ತಿರು ಮಂತ್ರತ್ತಿಲ್** ಎಂದಾರಂಭಿಸಿ ತಿಳಿಸುತ್ತಾರೆ- ಆದಾಗಿ ಈ ಅಷ್ಟಾಕ್ಷರ ಮಂತ್ರದಲ್ಲಿ ಸ್ವರೂಪ, ಉಪಾಯ, ಪುರುಷಾರ್ಥಗಳು ಮೂರೂ ಕ್ರಮವಾಗಿ ಹೇಳಲ್ಪಡುತ್ತವೆ. **ಅಪ್ಪೋದು** ಇತ್ಯಾದಿ– ಆಗ ಪ್ರಣವವು ಸ್ವರೂಪಪರ, ನಮಸ್ಸು ಉಪಾಯಪರ, ನಾರಾಯಣಾಯ ಎಂಬ ಶೇಷವು ಪುರುಷಾರ್ಥ ಪ್ರಾರ್ಥನಾಪರ. ಈ ಯೋಜನೆಯೇ ಪ್ರಧಾನವಾದದ್ದು. ಆಚಾರ್ಯ ಸಾರ್ವ ಭೌಮರಿಗೆ ಹಯಗ್ರೀವ ನಿಂದ ಸಾಕ್ಷಾತ್ತಾಗಿ ಉಪದೇಶವಾದುದೆಂದು ಅವರ ಕುಮಾರರಿಂದ ಅನುಗ್ರಹಿಸಲ್ಪಟ್ಟಿದೆ. ಲೋಕಾಚಾರ್ಯರುಗಳು ಶ್ರೀಮನ್ನಿಗಮಾಂತ ಮಹಾದೇಶಿಕರವರ ಸಕಾಶದಿಂದ ಶ್ರೀ ಭಾಷ್ಯವನ್ನು ಕಾಲಕ್ಷೇಪ ಮಾಡಿದರೆಂದೂ ಆ ಅವಸರದಲ್ಲಿ ಉಪದೇಶಿಸಲ್ಪಟ್ಟ ಈ ಯೋಜನೆಯನ್ನೇ ತಮ್ಮ ಗ್ರಂಥದಲ್ಲಿಯೂ ಆದರಿಸಿದ್ದಾರೆಂದೂ ಸಂಪ್ರದಾಯಜ್ಞರ ಮಾತು. ಮೇಲೂ ಅಷ್ಟಾಕ್ಷರದ ಧ್ಯಾನ ಶ್ಲೋಕವಾದ "ಸವ್ಯಂ ಪಾದಂ ಪ್ರಸಾರ್ಯ" ಎಂಬುದೂ ಆಚಾರ್ಯ ಸಾರ್ವಭೌಮರು ಪ್ರಣೀತವೆಂಬುದು ಸಂಕಲ್ಪ ಸೂರ್ಯೋದಯದಿಂದ ವ್ಯಕ್ತ. ಹಾಗೆಯೇ ಅವರ ಕುಮಾರರಾದ ವರದ ಗುರುಗಳಿಂದ ಹೇಳಲ್ಪಟ್ಟದೆ, ಹೀಗೆ ಹಯಗ್ರೀವೋಪದಿಷ್ಟವಾದ ಈ ಅರ್ಥವನ್ನು "ಇಹ ಮೂಲ ಮಂತ್ರ ಸಂಪ್ರಕಮ್", ಎಂದಾರಂಭಿಸುವ ಈ ಅಧಿಕಾರಾರಂಭ ಶ್ಲೋಕದಲ್ಲಿ ಆಚಾರ್ಯರು "ಕಶ್ಚಿತ್ ಎಂಬ ಪದದಿಂದ ತಮ್ಮನ್ನೇ ನಿರೂಪಿಸಿಕೊಂಡು,ಎಲ್ಲಾ ಯೋಜನೆಗಳಿಗಿಂತಲೂ ಮೇಲಾದದು ಎಂದುನಿರೂಪಿಸುತ್ತಾರೆ. **ಇಮ್ಮೂನ್ರಿನ್ ವಿರಿವೆಲ್ಲಾಮ್** ಇತ್ಯಾದಿ- ಈ ಸ್ವರೂಪೋಪಾಯ ಪುರುಷಾರ್ಥಗಳ ವಿಸ್ತಾರಗಳನ್ನು **ಅಧ್ಯಾತ್ಮಶಾಸ್ತ್ರಂಗಳೈಕ್ಕೊಂಡು**– ಶ್ರೀ ಭಾಷ್ಯಾದಿ ವೇದಾಂತ ಶಾಸ್ತ್ರಗಳನ್ನು ಅಧ್ಯಯನ ಮಾಡಿ ತಿಳುವಾಗಿ ಅರಿತು ಇಲ್ಲಿ ಅನುಸಂಧೇಯವು.

**ಇನ್ದಯೋಜನೈಕ್ಕು ವೇದಾನ್ತ ಶಾಸ್ತ್ರತ್ತಿಲ್ ತತ್ತ್ವೋಪಾಯ ಪುರುಷಾರ್ಥಙ್ಗಳೈ ನಿರೂಪಿತ್ತ ಕ್ರಮತ್ತೋಡು ಶೇರ್ತ್ತಿಯುಂಡು. ಎಙ್ಗನೇ ಎನ್ನಿಲ್ ? ಮುದಲ್ ಇರಣ್ಡು ಅಧ್ಯಾಯತ್ತಾಲೇ ಪರಾವರ ತತ್ತ್ವಙ್ಗಳೈತ್ತೆಳಿವಿತ್ತು, ತೃತೀಯತ್ತಾಲೇ ಅಧಿಕಾರ ಪರಿಕರಙ್ಗಳೋಡೇ ಕೂಡಿನ ಉಪಾಯಮ್ ಶೊಲ್ಲಿ, ಚತುರ್ಥತ್ತಾಲೇ ಫಲಮ್ ಶೊಲ್ಲಿಯಿರೇ ಶಾರೀರಕ ಶಾಸ್ತ್ರಮ್ ತಲೈಕ್ಕಟ್ಟಿತ್ತು. ಅಙ್ಗು ಮುದಲ್ ಇರಣ್ಡು ಅಧ್ಯಾಯತ್ತಿಲ್ ಶೊನ್ನ ಪರಾವರತತ್ತ್ವ ಸ್ವರೂಪಮುಮ್ ನಾನ್ಗಾಮಧ್ಯಾಯತ್ತಿಲ್ ಶೊನ್ನ ಫಲಮುಮ್ ಸ್ವತಂತ್ರ ಪ್ರಪತ್ತಿ ನಿಷ್ಠನುಕ್ಕುಮ್ ತುಲ್ಯಮ್.**

**ಮೂನ್ರಾಮಧ್ಯಾಯತ್ತಿಲ್ ವೈರಾಗ್ಯ ಪಾದತ್ತಿಲುಮ್,ಉಭಯಲಿಙ್ಗಪಾದತ್ತಿಲುಮ್ ಶೊನ್ನ ಸಂಸಾರ ದೋಷಮುಮ್ ಶರಣ್ಯನುಡೈಯ ಹೇಯ ಪ್ರತ್ಯನೀಕ ಕಲ್ಯಾಣೈಕ ತಾನತ್ವಮುಮ್ ಮುಮುಕ್ಷುವಾನ ಇವನುಕ್ಕು ಅವಶ್ಯಮ್ ಜ್ಞಾತವ್ಯಮ್. ಮೂನ್ರಾಮ್ ಪಾದತ್ತಿಲ್ ಉಪಾಯಮಾಹಚ್ಚೊನ್ನ ಉಪಾಸನಾ ಭೇದಙ್ಗಳೈ ಅವತ್ತುಕ್ಕು ಅಧಿಕಾರಿಹಳಾನವರ್ಹಳ್ ಅನುಷ್ಠಿಕ್ಕಕ್ಕಡವರ್ಹಳ್. ಅಕಿಂಚನಾನ ಅಧಿಕಾರಿ ತನಕ್ಕು ಅವತ್ತಿನ್ ಅರುಮೈಯ್ಕಣ್ಡು 1) "ನಾನಾಶಬ್ದಾದಿ ಭೇದಾತ್" 2) "ವಿಕಲ್ಪೋऽವಿಶಿಷ್ಟ ಫಲತ್ವಾತ್" ಎನ್ಗಿರ ಅಧಿಕರಣಙ್ಗಳಿಲ್ ಶೊನ್ನಕಟ್ಟಳೈಯಿಲೇ ವಿದ್ಯಾನ್ತರ ವ್ಯಾವೃತ್ತಮಾಯ್, ಅವೈ ಕೊಡುಕ್ಕುಮ್ ಮೋಕ್ಷತ್ತೈಕ್ಕೊಡುಕ್ಕುಮಿಡತ್ತಿಲ್ ನಿರಪೇಕ್ಷಮುಮಾನ ನ್ಯಾಸತ್ತೈಯೇ ಪತ್ತಕ್ಕಡವನ್.**

---

ಇಂದ **ಯೋಜನೈಕ್ಕು** ಇತ್ಯಾದಿ– ಈ ಯೋಜನಿಗೆ ವೇದಾಂತ ಶಾಸ್ತ್ರಗಳಲ್ಲಿ ತತ್ವಹಿತ ಪುರುಷಾರ್ಥಗಳನ್ನು ನಿರೂಪಿಸಿದ ಕ್ರಮದೊಡನೆ **ಶೇರ್ತ್ತಿಯುಂಡು** – ಸಂಗತಿಯುಂಟು. **ಎಂಗನೇಯೆನ್ನಿಲ್**– ಹೇಗೆಂದರೆ ಶ್ರೀ ಭಾಷ್ಯದಲ್ಲಿ **ಮುದಲಿರಂಡ ಧ್ಯಾಯತ್ತಾಲೇ**–ಇತ್ಯಾದಿ ಮೊದಲನೆಯ ಅಧ್ಯಾಯದಲ್ಲಿ ಪರತತ್ವವಾದ ಬ್ರಹ್ಮ ಸ್ವರೂಪವೂ ಎರಡನೇ ಅಧ್ಯಾಯದಲ್ಲಿ ಮೂರನೇ ಪಾದದಲ್ಲಿ ಅವರ ತತ್ವವಾದ ಜೀವ ಸ್ವರೂಪವೂ ನಿರೂಪಿತ. **ತೃತೀಯತ್ತಾಲೇ** ಇತ್ಯಾದಿ–ಮೂರನೇ ಅಧ್ಯಾಯದಲ್ಲಿ ಅಧಿಕಾರ, ಅಂಗಗಳಿಂದ ಕೂಡಿದ ಉಪಾಯವನ್ನು ಹೇಳಿ **ಚತುರ್ಥತ್ತಾಲೇ** ಇತ್ಯಾದಿ– ನಾಲ್ಕನೇ ಅಧ್ಯಾಯದಲ್ಲಿ ಫಲವನ್ನು ಹೇಳಿ **ಶಾರೀರಕಶಾಸ್ತ್ರಂ ತಲೈಕಟ್ಟಿಟ್ರು**– ಶ್ರೀ ಭಾಷ್ಯವು ನಿಗಮಿಸಲ್ಪಟ್ಟಿದೆ. **ಅಂಗುಮುದಲಿರಂಡು** ಇತ್ಯಾದಿ– ಅಲ್ಲಿ ಮೊದಲೆರಡು ಅಧ್ಯಾಯಗಳಲ್ಲಿ ಹೇಳಿದ ಪರಾವರತತ್ವ ಸ್ವರೂಪವೂ ನಾಲ್ಕನೇ ಅಧ್ಯಾಯದಲ್ಲಿ ಹೇಳಿದ ಫಲವೂ, ಸ್ವತಂತ್ರ ಪ್ರಪತ್ತಿ ನಿಷ್ಠನಿಗೂ ಸಮ. **ಮೂನ್ರಾಮ್ ಅಧ್ಯಾಯತ್ತಿಲ್** ಇತ್ಯಾದಿ–ಮೂರನೆ ಅಧ್ಯಾಯದಲ್ಲಿ ವೈರಾಗ್ಯ ಪಾದದಲ್ಲಿಯೂ ಉಭಯ ಲಿಂಗ ಪಾದದಲ್ಲಿಯೂ ಹೇಳಿದ ಸಂಸಾರ ದೋಷವೂ, ಶರಣ್ಯನ ಹೇಯಪ್ರತ್ಯನೀಕ ಕಲ್ಯಾಣಗುಣೈಕ ತಾನತ್ವವೂ ಮುಮುಕ್ಷುವಾದ ಇವನು ಅವಶ್ಯವಾಗಿ ತಿಳಿಯಬೇಕಾದವು. **ಮೂನ್ರಾಮ್ ಪಾದತ್ತಿಲು ಪಾಯಮಾಹಚ್ಚೊನ್ನ** ಇತ್ಯಾದಿ–ಮೂರನೇ ಪಾದದಲ್ಲಿ ಉಪಾಯವಾಗಿ ಹೇಳಿದ ಉಪಾಸನಾ ಭೇದಗಳನ್ನು ಅವಕ್ಕೆ ಅಧಿಕಾರಿಗಳಾದವರು ಅನುಷ್ಠಿಸತಕ್ಕದ್ದು. **ಅಕಿಂಚನನಾದ ಅಧಿಕಾರಿತನಕ್ಕು** ಇತ್ಯಾದಿ-ಅಕಿಂಚನಾಧಿಕಾರಿಯಾದ ತನಗೆ ಆ ಭಕ್ತಿಯೋಗಾದಿಗಳನ್ನು ಅನುಷ್ಠಿಸಲು ಶ್ರಮವೆಂಬುದನ್ನು ತಿಳಿದು 1) **ನಾನಾ ಶಬ್ದಾದಿ ಭೇದಾತ್** 2) **ವಿಕಲ್ಪೋऽವಿಶಿಷ್ಟ ಫಲತ್ವಾತ್**, ಎಂಬ ಅಧಿಕರಣಗಳಲ್ಲಿ ಹೇಳಿದ ರೀತಿಯಲ್ಲಿ ವಿದ್ಯಾಂತರಗಳಿಂದ ಬೇರೆಯಾಗಿ ಅವುಗಳು ಕೊಡುವ ಮೋಕ್ಷವನ್ನು ಕೊಡುವ ವಿಷಯದಲ್ಲಿ ನಿರಪೇಕ್ಷೋಪಾಯವಾದ ನ್ಯಾಸವಿದ್ಯೆಯನ್ನು ಅವಲಂಬಿಸತಕ್ಕದು. ಆದಾಗಿ "ನಾನಾ ಶಬ್ದಾದಿ ಭೇದಾತ್" ಎಂಬ ಸೂತ್ರದಲ್ಲಿ ನ್ಯಾಸವಿದ್ಯೆಯೂ ಅಂತರ್ಗತ. "ಧ್ಯಾಯೀತ" "ಪ್ರಪದ್ಯೇತ ಎಂಬ ಶಬ್ದಭೇದವು ಇರುತ್ತದೆ ಯಾದ್ದರಿಂದ,

---

1) ಬ್ರಹ್ಮಸೂತ್ರ 3-3-56 2) ಬ್ರಹ್ಮ ಸೂತ್ರ 3-3-57

ನಾನ್ಗಾಮ್ ಪಾದತ್ತಿಲ್ ಚೊನ್ನ ವರ್ಣಾಶ್ರಮ ಧರ್ಮಙ್ಗಳೈ ಉಪಾಸನನಿಷ್ಠ 3) "ಸಹಕಾರಿತ್ವೇನಚ, ಎನ್ಗಿರಪಡಿಯೇ ವಿದ್ಯಾಪರಿಕರ ಮಾಹ ಅನುಷ್ಠಿಕ್ಕುಮ್. ಸ್ವತಂತ್ರ ಪ್ರಪತ್ತಿ ನಿಷ್ಠ 4) ವಿಹಿತತ್ವಾಚ್ಚಾಶ್ರಮ ಕರ್ಮಾಪಿ" ಎನ್ಗಿರಪಡಿಯೇ ಭಗವದಾಜ್ಞಾ ಸಿದ್ಧಮೆನ್ರು ಸ್ವಯಂಪ್ರಯೋಜನಮಾಹ ಅನುಸಂಧಿಕ್ಕುಮ್. ಇಪ್ಪಡಿಯಾಹೈಯಿನಾಲ್ ಶಾರೀರಕತ್ತಿಲ್ ಚೊನ್ನ ಸ್ವರೂಪೋಪಾಯ ಪುರುಷಾರ್ಥಙ್ಗಳ್ ಎಲ್ಲಾಮ್ ಶ್ರೀ ಮದಷ್ಟಾಕ್ಷರಾಂತಸ್ಥಙ್ಗಳ್. ಇದಿಲರ್ಥ ಪಂಚಕಾದಿಹಳ್ ಕಿಡಕ್ಕಿರ ವಹುಪ್ಪೆಲ್ಲಾಮ್ ಕೀೞೇ ಶೊನ್ನೋಮ್.

ಏಕವಾಕ್ಯತ್ವಾದಿ ಪಕ್ಷೋಕ್ತ ದಶಪ್ರಕಾರಾ ಬುದ್ಧಿ ಸೌಕರ್ಯಾಯಾನುವರ್ಣ್ಯ ನಿಗಮಯತಿ.

ಇಪ್ಪಡಿ ತಿರುಮನ್ತ್ರಮ್ ಏಕವಾಕ್ಯಮಾನಪೋದು ಉಪಾಯಪರಮೆನ್ರುಮ್, ವೃತ್ತಿಪರಮೆನ್ರುಮ್. ವಾಕ್ಯದ್ವಯಮಾನಪೋದು, ಸ್ವರೂಪಪರಮೆನ್ರುಮ್, ಅನ್ವಯ ವ್ಯತಿರೇಕ ಮುಖೇನ ಸಮರ್ಪಣ ಪರಮೆನ್ರುಮ್, ಪುರುಷಾರ್ಥ ಪ್ರಾರ್ಥನಾ ಪರಮೆನ್ರುಮ್, ವಾಕ್ಯತ್ರಯಮಾನಪೋದು, ಮುದಲಿರಣ್ಡು ಪದಙ್ಗಳುಮ್ ಸ್ವರೂಪಪರಮಾಯ್ ಮೇಲ್ಪದಮ್ ಪುರುಷಾರ್ಥ ಪ್ರಾರ್ಥನಾಪರಮೆನ್ರುಮ್, ಪ್ರಣವಮ್ ಸ್ವರೂಪಪರಮಾಯ್ ಮೇಲಿರಣ್ಡು ಪದಙ್ಗಳುಮ್ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿ ಪ್ರಾರ್ಥನಾ ಪರಮೆನ್ರುಮ್ ಇಕ್ಕಟ್ಟಳೈಯಿಲೇ ಪ್ರಥಮ ಪದಮ್ ಸ್ವರೂಪಪರಮಾಯ್ ಮೇಲಿರಣ್ಡು ಪದಙ್ಗಳುಮ್

---

ವಿದ್ಯಾಂಗವನ್ನು ಅಂಗೀಕರಿಸಬೇಕು. ಅದನ್ನು ಅಲ್ಲಗಳೆದು ಸರ್ವವೂ ಉಪಾಸನಾತ್ಮಕ ಭಕ್ತಿವಿದ್ಯೆಯೆಂದು ಹೇಳಲಾಗುವುದಿಲ್ಲವೆಂದು ತಾತ್ಪರ್ಯ. ಎಲ್ಲಾ ವಿದ್ಯೆಗಳೂ ಒಂದೇ ಫಲವನ್ನು ಕೊಡುತ್ತವೆಯಾದ್ದರಿಂದ, ಅಧಿಕಾರಾನುಗುಣವಾಗಿ ಯಾವುದಾದರೂ ಒಂದು ವಿದ್ಯೆಯನ್ನು ಅನುಷ್ಠಿಸಿದರೆ ಸಾಕು. **ನಾನ್ಗಾಮ್ ಪಾದತ್ತಿಲ್ ಚೊನ್ನ** ಇತ್ಯಾದಿ– ಮೂರನೇ ಅಧ್ಯಾಯದ ನಾಲ್ಕನೇ ಪಾದದಲ್ಲಿ ಹೇಳಿರುವ ವರ್ಣಾಶ್ರಮ ಧರ್ಮಗಳನ್ನು ಉಪಾಸನನಿಷ್ಠನು 3) "**ಸಹಕಾರಿತ್ವೇನಚ**" ಎಂದು ಹೇಳಿರುವಂತೆ ವಿದ್ಯೆಗೆ **ಪರಿಕರ**–ಅಂಗವಾಗಿ ಅನುಷ್ಠಿಸಬೇಕು. **ಸ್ವತಂತ್ರಪ್ರಪತ್ತಿನಿಷ್ಠನ್** ಇತ್ಯಾದಿ –ಸ್ವತಂತ್ರ ಪ್ರಪತ್ತಿನಿಷ್ಠನು 4) "ವಿಹಿತ**ತ್ವಾಚ್ಚ** ಆಶ್ರಮ **ಕರ್ಮಾಪಿ**" ಎಂಬ ಸೂತ್ರದ ಪ್ರಕಾರ ಭಗವಂತನ **ಆಜ್ಞಾ**ಸಿದ್ಧವೆಂದು ಸ್ವಯಂ ಪ್ರಯೋಜನವಾಗಿ ಅನುಷ್ಠಿಸಬೇಕು. **ಇಪ್ಪಡಿಯಾನಾಲ್**-ಇತ್ಯಾದಿ– ಈ ರೀತಿಯಾಗಿ ಶಾರೀರಕ ಶಾಸ್ತ್ರದಲ್ಲಿ ಹೇಳಿದ ಸ್ವರೂಪೋಪಾಯ ಪುರುಷಾರ್ಥಗಳೆಲ್ಲಾ ಶ್ರೀಮದಷ್ಟಾಕ್ಷರದಲ್ಲಿ ಅಡಗಿವೆ. **ಇದಿಲ್ಅರ್ಥಪಂಚಕಾದಿಹಳ್** ಇತ್ಯಾದಿ– ಈ ಅಷ್ಟಾಕ್ಷರ ಮಂತ್ರದಲ್ಲಿ ಅರ್ಥ ಪಂಚಕಾದಿಗಳು **ಲಭಿಸುವ** ಪ್ರಕಾರವನ್ನು ಮುಂಚೆಯೇ ಹೇಳಿರುವುದಾಗಿ ಆಚಾರ್ಯರು ಅನುಗ್ರಹಿಸುತ್ತಾರೆ.

**ಹತ್ತು ಯೋಜನೆಗಳ ಸಂಗ್ರಹ**

ಅನಂತರ ಮೇಲೆ ಹೇಳಿದ ದಶ ವಿಧ ಯೋಜನೆಗಳನ್ನು ಶಿಷ್ಯಾವಧಾನಾರ್ಥವಾಗಿ ಸಂಗ್ರಹಿಸುತ್ತಾರೆ. ಅದಾಗಿ ಇಪ್ಪಡಿ **ತಿರುಮಂತ್ರಮ್** ಇತ್ಯಾದಿ– ಹೀಗೆ ಅಷ್ಟಾಕ್ಷರ ಮಂತ್ರವು ಏಕ ವಾಕ್ಯವಾದಾಗ, ಉಪಾಯ ಪರವೆಂದೂ, ವೃತ್ತಿ ಪರವೆಂದೂ, ವಾಕ್ಯದ್ವಯವಾದಾಗ ಸ್ವರೂಪ ಪರವೆಂದೂ ಅನ್ವಯ ವ್ಯತಿರೇಕ ಮುಖದಿಂದ ಸಮರ್ಪಣ ಪರವೆಂದೂ, ಪುರುಷಾರ್ಥ ಪ್ರಾರ್ಥನಾ ಪರವೆಂದೂ, ಮೂರು ವಾಕ್ಯಗಳಾದಾಗ ಮೊದಲೆರಡು ಪದಗಳೂ ಸ್ವರೂಪ ಪರವಾಗಿ, ಮೂರನೇ ಪದವು ಪುರುಷಾರ್ಥ ಪ್ರಾರ್ಥನಾಪರವೆಂದೂ, ಪ್ರಣವವು ಸ್ವರೂಪ ಪರವಾಗಿ, ಅನಂತರ ಬರುವ ಎರಡು ಪದಗಳು ಅನಿಷ್ಟ ನಿವೃತ್ತಿ, ಇಷ್ಟ ಪ್ರಾರ್ಥನಾ ಪರವೆಂದೂ, **ಇಕ್ಕಟ್ಟಳೈಯಿಲೇ**–ಇದೇ ರೀತಿಯಲ್ಲಿ ಪ್ರಥಮ ಪದವು ಸ್ವರೂಪ ಪರವಾಗಿಯೂ, ಅನಂತರ ಬರುವ ನಮಃ, ನಾರ್

---

3) ಬ್ರಹ್ಮಸೂತ್ರ 3-4-33 4) ಬ್ರಹ್ಮಸೂತ್ರ 3-4-32

**ಉಪಾಯಪರಮೆನ್ಸ್ರುಮ್ ಪ್ರಥಮಪದಮ್ ಸಮರ್ಪಣಪರಮಾಯ್ ಮೇಲಿರಣ್ಡು ಪದಮುಮ್ ಫಲಪ್ರಾರ್ಥ ನಾ ಪರಮೆನ್ಸ್ರುಮ್ ಪದತ್ರಯಮುಮ್ ಅಡ್ವೈವೇ ತತ್ತ್ವೋಪಾಯ ಪುರುಷಾರ್ಥ ಪ್ರಾರ್ಥನಾಪರ ಮೆನ್ಸ್ರುಮ್ ಅನಂತಾರ್ಥ ಗರ್ಭಮಾನ ವಿತ್ತಿರುಮನ್ತ್ರತ್ತಿಲ್ ವಾಕ್ಯಾರ್ಥಙ್ಗಳ್ಪತ್ತು ಪಡಿಯಾಹ ಯಥಾಸಂಪ್ರದಾಯಮ್ ಅನುಸಂಧಿಪ್ಪಾರಹಳ್. ಇಪ್ಪಡಿ ಶಿಲವತ್ತೈಪ್ರಧಾನಮಾಹ ಅನುಸಂಧಿತ್ತಾಲುಮ್ ಮತ್ತುಳ್ಳವೈಯುಮ್ ಅರ್ಥಮಾಹಕ್ಕಡವದು.**

ತದೇವಂ ಪದವಾಕ್ಯಾರ್ಥೈ ಸ್ತತ್ತ್ವವಿದ್ಗುರುದರ್ಶಿತೈಃ ।
ತತ್ತತ್ಕುದೃಷ್ಟಿ ಕಥಿತಂ ನಿರಸ್ತಂ ಯೋಜನಾನ್ತರಮ್ ॥89॥

**ಇತ್ತಿರುಮನ್ತ್ರತ್ತಿಲ್ ಬಾಹ್ಯಕುದೃಷ್ಟಿ ಮತಂಗಳಾಲ್ ಕಲಕ್ಕವೊಣ್ಣಾದ ತೆಳಿವುಡೈಯವನ್ನೈ,**

1) **ಪ್ರಜ್ಞಾಪ್ರಾಸಾದ ಮಾರುಹ್ಯ ಹ್ಯಶೋಚ್ಯ ಶ್ಯೋಚತೋ ಜನಾನ್ ।**
**ಭೂಮಿಸ್ಥಾನಿವ ಶೈಲಸ್ಥೋ ಹ್ಯಜ್ಞಾನ್ ಪ್ರಾಜ್ಞಃ ಪ್ರಪಶ್ಯತಿ ॥" ಎನ್ಗಿರದು. "ಜ್ಞಾನೇನ ಹೀನಃ**

---

ಯಣಾಯ ಎಂಬ ಎರಡು ಪದಗಳು ಉಪಾಯ ಪರವೆಂದೂ, ಪ್ರಥಮ ಪದವು ಸಮರ್ಪಣ ಪರವಾಗಿಯೂ ಮುಂದೆ ಬರುವ ಎರಡು ಪದಗಳು ಫಲ ಪ್ರಾರ್ಥನಾಪರಗಳೆಂದೂ, ಮೂರು ಪದಗಳೂ ಕ್ರಮವಾಗಿ ತತ್ವ ಉಪಾಯ (ಹಿತ) ಪುರುಷಾರ್ಥ ಪ್ರಾರ್ಥನಾ ಪರವೆಂದೂ, ಅನಂತಾರ್ಥ ಗರ್ಭಿತವಾದ ಈ ಅಷ್ಟಾಕ್ಷರ ಮಂತ್ರದಲ್ಲಿ ಹತ್ತು ವಿಧವಾಗಿ ವಾಕ್ಯಾರ್ಥಗಳನ್ನು ಸಂಪ್ರದಾಯಾನುಗುಣವಾಗಿ ಅನುಸಂಧಾನ ಮಾಡುತ್ತಾರೆ. **ಇಪ್ಪಡಿ** ಇತ್ಯಾದಿ– ಹೀಗೆ ಅಷ್ಟಾಕ್ಷರ ಮಂತ್ರದಲ್ಲಿ, ಸ್ವರೂಪ. ಉಪಾಯ ಪುರುಷಾರ್ಥಗಳಲ್ಲಿ ಒಂದನ್ನೋ, ಎರಡನ್ನೋ ಪ್ರಧಾನವಾಗಿ ಅನುಸಂಧಾನ ಮಾಡಿದರೂ, ಇತರಗಳು ಅರ್ಥವಾಗಿ–ಅರ್ಥಾ ಲ್ಲಬ್ಧಗಳಾಗಿ ಆಗುತ್ತವೆ.

**ತದೇವಂಪ್ರದವಾಕ್ಯಾರ್ಥೈಃ**ಇತ್ಯಾದಿ–ಆದ ಕಾರಣ ಮೇಲೆ ಹೇಳಿದಂತೆ, ಆಚಾರ್ಯ ರಿಂದ ಉಪದೇಶಿಸಲ್ಪಟ್ಟ ಪದ ಮತ್ತು ವಾಕ್ಯಗಳ ಅರ್ಥದಿಂದ, ಆಯಾಯಾ ಕುದೃಷ್ಟಿಗಳಿಂದ ಹೇಳಲ್ಪಟ್ಟ ಯೋಜನಾಂತರಗಳು ನಿರಸ್ತಗಳು.

### ಅಷ್ಟಾಕ್ಷರದ ತಿಳಿವುವುಳ್ಳವನ ಶ್ರೇಷ್ಠತೆ

**ಇತ್ತಿರುಮಂತ್ರತ್ತಿಲ್** ಇತ್ಯಾದಿ–**ಈ** ಅಷ್ಟಾಕ್ಷರ ಮಂತ್ರದಲ್ಲಿ, ವೇದ ಬಾಹ್ಯಮತಗಳಿಂದಲೂ ಮತ್ತು ವೇದವನ್ನು ಪ್ರಮಾಣವಾಗಿ ಅಂಗೀಕರಿಸಿ ಕುತ್ಸಿತ ದೃಷ್ಟಿಯಿಂದ ಅಪಾರ್ಥಗಳನ್ನು ಹೇಳುವವರಿಂದಲೂ ಬುದ್ಧಿ ಚಲನವು ಉಂಟಾಗದಂತೆ **ತೆಳಿವುಡೈಯವನ್ನೈ**– ತಿಳುವಾದ ಜ್ಞಾನವುಳ್ಳವನನ್ನು 1) **ಪ್ರಜ್ಞಾ ಪ್ರಾಸಾದ ಮಾರುಹ** –ಜ್ಞಾನವೆಂಬ ಉಪ್ಪರಿಗೆಯನ್ನು ಹತ್ತಿ ಆದಾಗಿ ಆಚಾರ್ಯೋಪದೇಶದಿಂದ ತತ್ವಹಿತ ಪುರುಷಾರ್ಥ, ಜ್ಞಾನನಿಷ್ಠನಾಗಿ, ಆದರಿಂದಲೇ **ಅಶೋಚ್ಯಃ**–ಶೋಕವಿಲ್ಲದವನಾಗಿರುವ **ಪ್ರಾಜ್ಞಃ**– ಸರ್ವಜ್ಞಪ್ರಾಯನಾದ ಪುರುಷನು, **ಶೋಚತೋ ಜನಾನ್**– ಶೋಕದಿಂದ ಕೂಡಿದ ಜನರನ್ನು, **ಭೂಮಿಸ್ಥಾನ್ಇವಶೈಲಸ್ಥಃ** – ಬೆಟ್ಟದ ಮೇಲಿರುವವನು, ಭೂಮಿಯಲ್ಲಿರುವ ಜನರನ್ನು ನೋಡುವಂತೆ, **ಪಶ್ಯತಿ**– ಅಲ್ಪರನ್ನಾಗಿ ನೋಡುತ್ತಾನೆ, ಎಂದು ಹೇಳುತ್ತದೆ. 2) **ಜ್ಞಾನೇನ ಹೀನಃ ಪಶುಭಿಸ್ಸಮಾನಃ** ಎಂಬಲ್ಲಿ ಹೇಳುವ ಜ್ಞಾನ ಶಬ್ದಾರ್ಥವು, **ಈ** ರೀತಿಯಾದ ತಿಳುವಳಿಕೆಯೇ. **ಈ** ಶ್ಲೋಕಕ್ಕೆ ಬಾಕಿ ಮೂರು ಪಾದಗಳು "**ಸಾಕ್ಷಾತ್ಪಶುಃ ಪುಚ್ಛವಿಷಾಣಶೂನ್ಯಃ** । ತೃಣನ್ನ ಖಾದನ್ನಪಿ ಜೀವಮಾನಃ ತದೇವಭಾಗ್ಯಂ ಪರಮಂಪಶೂನಾಮ್ ಎಂಬುದು. ಅನುಷ್ಠಾನ ಪರ್ಯಂತವಾದ

---

1) ಭಾರತ ಶಾಂತಿಪರ್ವ 450 11

2) ಆಹಾರ ನಿದ್ರಾಭಯ ಮೈಥುನಾನಿ ಸಾಮಾನ್ಯಮೇತತ್ ಪಶುಭಿರ್ನರಾಣಾಮ್ ।
ಜ್ಞಾನಂಹಿತೇಷಾಮಧಿಕೋ ವಿಶೇಷೋ ಜ್ಞಾನೇನ ಹೀನಃ ಪಶುಭಿಸ್ಸಮಾನಃ ॥

ಊಟ, ನಿದ್ರೆ, ಭಯ. ಸ್ತ್ರೀಸಂಗಮ, ಇವುಗಳು ಮನುಷ್ಯನಿಗೂ ಮೃಗಗಳಿಗೂ ಸಮಾನವಾದದ್ದು. ಅವುಗಳ ಮಧ್ಯೆ ವೇದಾಂತ ಜ್ಞಾನವು ವಿಶೇಷವಾದದ್ದು. ಆ ಜ್ಞಾನವಿಲ್ಲದವನು ಪಶುಗಳಿಗೆ ಸಮನು. ನೃಸಿಂಹ ಪುರಾಣ 16-13)

ಪಶುಭಿಸ್ಸಮಾನಃ" ಎನ್ಱಿರ ವಿಡತ್ತಿಲ್ ಜ್ಞಾನಮೆನ್ಱಿರದುವುಮ್ ಇತ್ತೆಳಿವೈ. ಇಪ್ಪಡಿ ತೆಳಿನ್ದವನ
1) "ನಪ್ರಹೃಷ್ಯತಿ ಸಮ್ಮಾನೇ ನಾವಮಾನೇನು ತಪ್ಯತೇ ।
ಗಂಗಾಹ್ರದ ಇವಾಕ್ಷೋಭ್ಯೋ ಯಸ್ಸಪಂಡಿತ ಉಚ್ಯತೇ ॥"
ಎನ್ಱಿರ ಪಡಿಯೇ ಮಾನಾವಮಾನಾದಿಹಳಿಲ್ ಕಲಙ್ಗಾನ್.

ವ್ಯಾಪಕಾದಿ ಸರ್ವಮನ್ತ್ರೇಷು ಮೂಲಮನ್ತ್ರಸ್ಯ ಪಾರಮ್ಯಂ ಪ್ರದರ್ಶಯನ್ನಿಗಮಯತಿ.

ಇತ್ತಿರುಮನ್ತ್ರತ್ತಿಲ್, ಯಥಾರ್ಥಜ್ಞಾನಮುಮ್ ನಿಷ್ಠೈಯುಮುಡೈಯವನೈ ಆದರಿಕ್ಕುಮ್ ದೇಶತ್ತಿಲುಮ್,
1) ಯತ್ರಾಷ್ಟಾಕ್ಷರ ಸಂಸಿದ್ಧೋ ಮಹಾಭಾಗೋ ಮಹೀಯತೇ ।
ನತತ್ರ ಸಂಚರಿಷ್ಯನ್ತಿ ವ್ಯಾಧಿ ದುರ್ಭಿಕ್ಷ ತಸ್ಕರಾಃ ॥"
ಎನ್ಱಿರಪಡಿಯೇ ಒರು ದೋಷಙ್ಗಳುಮ್ ವಾರಾದು. ಇಶ್ಶ್ಲೋಕತ್ತಾಲ್
2) ರಾಗಾದಿ ರೋಗಾನ್ ಸತತಾನುಷಕ್ತಾನಶೇಷ ಕಾಯ ಪ್ರಸೃತಾ ನಶೇಷಾ ।
ಔತ್ಸುಕ್ಯ ಮೋಹಾರತಿದಾನ್ ಜಘಾನ ಯೋ ಪೂರ್ವವೈದ್ಯಾಯ ನಮೋಸ್ತು ತಸ್ಮೈ" ಎನ್ಱು ಆಯುರ್ವೇದವಿತ್ತುಕ್ಕಳ್ ಪ್ರಧಾನ ವ್ಯಾಧಿಗಳಾಹ ವೆಡುತ್ತ ರಾಗಾದಿಹಳುಮ್, ಸತ್ತುಕ್ಕಳುಕ್ಕು ಶ್ರೀಯೆನ್ಱೋದ

---

ಮೂಲ ಮಂತ್ರಾರ್ಥ ವಿಷಯಕವಾದ ಜ್ಞಾನವುಳ್ಳವನ ರೀತಿಯನ್ನು ಇಪ್ಪಡಿ ತೆಳಿಂದವನ್- ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಹೀಗೆ ಅಷ್ಟಾಕ್ಷರ ಮಂತ್ರಾರ್ಥಗಳ ತೆಳಿವನ್ನು ಹೊಂದಿದವನು, "ನಪ್ರಹೃಷ್ಯತಿ ಸಮ್ಮಾನೇ ಇತ್ಯಾದಿ-ಸಮ್ಮಾನದಿಂದ ಹೆಮ್ಮೆ ಪಡದೆ ಅವಮಾನದಿಂದ ಪರಿತಪಿಸದೆ ಗಂಗಾ ನದಿಯ ಮಡುವಿನ ಹಾಗೆ ಅಕ್ಷೋಭ್ಯನು ಯಾರೋ ಅವನು ಪಂಡಿತನು", ಎಂಬಂತೆ ಮಾನಾವಮಾನಗಳಿಂದ ಕ್ಷೋಭವನ್ನು ಹೊಂದುವದಿಲ್ಲ. **ಇತ್ತಿರುಮಂತ್ರತ್ತಿಲ್** ಇತ್ಯಾದಿ- ಈ ಅಷ್ಟಾಕ್ಷರ ಮಂತ್ರದಲ್ಲಿ ಯಥಾರ್ಥ ಜ್ಞಾನವನ್ನೂ ಅನುಷ್ಠಾನ ಪರ್ಯಂತವಾದ ನಿಷ್ಠೆಯನ್ನೂ ಉಳ್ಳವನನ್ನು ಆದರಿಸುವ ದೇಶದಲ್ಲೂ, 1) **ಯತ್ರಾಷ್ಟಾಕ್ಷರ ಸಂಸಿದ್ಧಃ**- ಇತ್ಯಾದಿ ಹೇಳುವಂತೆ ಅಷ್ಟಾಕ್ಷರ ಸಿದ್ಧಿಪಡೆದಿರುವ ಮಹಾಭಾಗ್ಯವಂತನು ಇರುವ ದೇಶದಲ್ಲಿ, ಅಥವಾ ಅವನನ್ನು ಗೌರವಿಸುವ ದೇಶದಲ್ಲಿ ವ್ಯಾಧಿ ದುರ್ಭಿಕ್ಷ, ತಸ್ಕರರು ಸಂಚರಿಸುವುದಿಲ್ಲ. ವ್ಯಾಧ್ಯಾದಿ ಶಬ್ದಗಳಿಗೆ ಆಚಾರ್ಯರು ತಾವೇ ವ್ಯಾಖ್ಯಾನ ಮಾಡುತ್ತಾರೆ. ಅದಾಗಿ **ಇಶ್ಶ್ಲೋಕತ್ತಾಲ್**, 2) "**ರಾಗಾದಿ ರೋಗಾನ್** ಇತ್ಯಾದಿ ವ್ಯಾಧಿ ಎಂದರೆ ಅರ್ಥ ಕಾಮಗಳಲ್ಲಿ ಆಸೆ. ಲೋಕದಲ್ಲಿರುವ ವ್ಯಾಧಿಗಳು ಸ್ವಲ್ಪಕಾಲ ಬಂದು ನಂತರ ಗುಣವಾಗುತ್ತವೆ. ರಾಗಾದಿ- ಹಣಕಾಸು ಸ್ತ್ರೀ ಮೊದಲಾದವುಗಳಲ್ಲಿರುವ ಆಸೆಯೆಂಬ ರೋಗಗಳು, ಯಾವಾಗಲೂ ಮನುಷ್ಯನನ್ನು ಅಂಟಿಕೊಂಡಿರುವುವು. ಶರೀರವನ್ನು ಪೂರ್ತಿ ಆಕ್ರಮಿಸಿರುವುವು. ಅಶೇಷಾನ್ – ಎಲ್ಲೆ ಇಲ್ಲದ, ಔತ್ಸುಕ್ಯ ಇತ್ಯಾದಿ- ಉತ್ಸುಕತೆ, ಅಂದರೆ ವಿಷಯ ಸುಖಗಳನ್ನು ಅನುಭವಿಸದೆ ಕ್ಷಣ ಕಾಲವೂ ಇರಲಾಗದ ಉತ್ಸುಕತೆ. ಮೋಹ- ಅಜ್ಞಾನ. ಅರತಿಃ- ಪ್ರೀತ್ಯ ಭಾವ, ಇವುಗಳನ್ನು ನಾಶಮಾಡಿದ. ಅಪೂರ್ವ ವೈದ್ಯಾಯ ಸಾಧಾರಣ ವೈದ್ಯನಂತೆ ಇಲ್ಲದೆ ಅಪೂರ್ವನಾದ ವೈದ್ಯ ಭಗವಂತ. ಅವನಿಗೆ ನಮಸ್ಕಾರ", ಎಂದು ಆಯುರ್ವೇದವನ್ನು ತಿಳಿದವರು ಪ್ರಧಾನ ವ್ಯಾಧಿಗಳಾಗಿ, ಎತ್ತಿ ಹೇಳಿದ ರಾಗಾದಿಗಳು "ವ್ಯಾಧಿ" ಶಬ್ದದಿಂದ ಹೇಳಲ್ಪಡುತ್ತವೆ. **ಸತ್ತುಕ್ಕಳುಕ್ಕುಶ್ರೀಯೆನ್ಱೋದಪ್ಪಟ್ಟ** ಎಂದಾರಂಭಿಸಿ ದುರ್ಭಿಕ್ಷ ಶಬ್ದವನ್ನು ವ್ಯಾಖ್ಯಾನಿಸುತ್ತಾರೆ. ಅದಾಗಿ, "**ಋಚೋಯಜೂಗ್‌ಂಷಿ ಸಾಮಾನಿ, ಸಾಹಿ ಶ್ರೀರಮೃತಾ ಸತಾಮ್**", ಎಂದು ವೇದಗಳಲ್ಲಿ ಹೇಳಲ್ಪಟ್ಟ

---

1). ನಾರದೀಯ 1-20 , 2) ವಾಗ್ಭಟ

ಪ್ಪಟ್ಟ ಜ್ಞಾನಸಂಪತ್ತಿನುಡೈಯ ಸಙ್ಕೋಚಮುಮ್, ಬಾಹ್ಯತಸ್ಕರರ್ಕ್ಕು ನಿಲಮಿಲ್ಲಾದ ಆತ್ಮಾಪಹಾರಾದಿ ಹಳೈಪ್ಪಣ್ಣುಮ್ ಮಹಾತಸ್ಕರರಾನ ಅಹಂಕಾರಾದಿಹಳುಮ್ ನಡೆಯಾಡಾದೆನ್ರುದಾಯಿತ್ತು.

### ಇತರ ವ್ಯಾಪಕ ಮನ್ತ್ರಯೋರಯಮೇವಾರ್ಥಃ

ಇತ್ತಿರುಮನ್ತ್ರತ್ತಿಲ್ ಅರುದಿಯಿಟ್ಟ ಪೊರುಳೇ ವಿಷ್ಣುವಾಸುದೇವ ಶಬ್ದವಿಶಿಷ್ಟಙ್ಗಳಾನ ವ್ಯಾಪಕ ಮನ್ತ್ರಾನ್ತರಙ್ಗಳುಕ್ಕುಮ್ ಪೊರುಳ್.

೧) "ವ್ಯಾಪ್ತಿಕಾಂತಿಪ್ರವೇಶೇಚ್ಛಾಸ್ತತ್ತದ್ಧಾತು ನಿಬಂಧನಾಃ ।
ಪರತ್ವೇಽಭ್ಯಧಿಕಾವಿಷ್ಣೋರ್ದೇವಸ್ಯ ಪರಮಾತ್ಮನಃ ॥"

ಎನ್ರು ಅಹಿರ್ಬುಧ್ನ್ಯಾದಿಹಳ್ ನಿರ್ವಚನಮ್ ಪಣ್ಣಿನ ಪಡಿಯೇ "ವಿಷಲ್ ವ್ಯಾಪ್ತೌ, ವಶಕಾನ್ತೌ, ವಿಶಪ್ರವೇಶನೇ, ಇಷು ಇಚ್ಛಾಯಾಂ" ಎನ್ಗಿರ ಧಾತುಕ್ಕಳಿಲೇ ನಿಷ್ಪನ್ನಮಾನ ವಿಷ್ಣು ಶಬ್ದತ್ತಿಲುಳ್ಳ ಪೊರುಳ್‌ಹಳುಮ್, ವಾಸುದೇವ ಶಬ್ದತ್ತಿಲುಮ್ "ವಸತಿ, ವಾಸಯತಿ" ಎನ್ರುಮ್ "ದೀವ್ಯತಿ" ಎನ್ರುಮ್ ತೋತ್ತಿನ ಸರ್ವ ವ್ಯಾಪಕತ್ವಮ್, ಸರ್ವಾಧಾರತ್ವಂ, ತದ್ಗತ ದೋಷರಹಿತತ್ವಮ್, ಕ್ರೀಡಾವಿಜಿಗೀಷಾದಿಮತ್ವಮ್ ಎನ್ಗಿಗಮಾಕಾರಙ್ಗಳುಮೆಲ್ಲಾಮ್ ನಾರಾಯಣಶಬ್ದಾರ್ಥತ್ತಿಲೇ ಏಕದೇಶಮ್.

---

ಋಗ್‌ಯಜುಸ್ಸಾಮ ವೇದಗಳೇ ಸತ್ಪುರುಷರಿಗೆ ಶಾಶ್ವತವಾದ ಸಂಪತ್ತು. ಈ ಜ್ಞಾನ ಸಂಪತ್ತಿನ ಸಂಕೋಚವು ದುರ್ಭಿಕ್ಷವೆಂದು ಹೇಳಲ್ಪಡುತ್ತದೆ. ಬಾಹ್ಯತಸ್ಕರರುಕ್ಕು ಇತ್ಯಾದಿ ಬಾಹ್ಯತಸ್ಕರರು ಹೊರಗಡೆ ಕಳ್ಳತನ ಮಾಡುವ ಕಳ್ಳರು. ಇವರಿಗೆ ನಿಲಮಲ್ಲಾದ-ವಿಷಯವಾಗದ, ಆತ್ಮಾಪಹಾರಾದಿಹಳೈಪ್ಪಣ್ಣುಮ್- ಆತ್ಮಾಪಹಾರವೆಂದರೆ ಭಗವಂತನಿಗೆ ಶೇಷ ಭೂತನಾದ ಆತ್ಮನನ್ನು, ತನ್ನದು, ತಾನು ಸ್ವತಂತ್ರನು ಎಂದು ಭಾವಿಸುವುದು. ಹೀಗೆ ಆತ್ಮಾಪಹಾರಾದಿಗಳನ್ನು ಮಾಡುವ ಮಹಾತಸ್ಕರರಾನ-ದೊಡ್ಡ ಕಳ್ಳರಾದ ಅಹಂಕಾರಾದಿಹಳುಮ್- ಇತ್ಯಾದಿ- ನಾನು ನನ್ನದು ಎಂಬ ಅಹಂಕಾರ ಮಮಕಾರಗಳು, ನಡೆಯಾಡಾದೆನ್ರುದಾಯಿಟ್ರು-ಸಂಚರಿಸುವುದಿಲ್ಲವೆಂದರ್ಥ. ಅಷ್ಟಾಕ್ಷರ ಸಂಸಿದ್ಧಿಯನ್ನು ಹೊಂದಿದ ಮಹಾಜ್ಞಾನಿಯನ್ನು ಆಶ್ರಯಿಸಿ ಜ್ಞಾನವನ್ನು ಪಡೆಯುವವನಿಗೆ, ರಾಗ, ದ್ವೇಷ, ಕಾಮ, ಕ್ರೋಧಗಳೂ, ಜ್ಞಾನವಿಹೀನತೆಯೂ ಅಹಂಕಾರಮಮಕಾರಗಳೂ ಉಂಟಾಗುವುದಿಲ್ಲವೆಂದು ತಾತ್ಪರ್ಯ.

### ಅಷ್ಟಾಕ್ಷರದ ಹಿರಿಮೆಗಳು

ಆನಂತರ ಅಷ್ಟಾಕ್ಷರದ ಮಹಿಮೆಗಳನ್ನು ಇತ್ತಿರುಮಂತ್ರತ್ತಿಲ್ ಎಂದಾರಂಭಿಸಿ ನಿರೂಪಿಸುತ್ತಾರೆ. ಆದಾಗಿ ಈ ಅಷ್ಟಾಕ್ಷರ ಮಂತ್ರದಲ್ಲಿ ನಿಶ್ಚಯಿಸಲ್ಪಟ್ಟ ಅರ್ಥಗಳೇ ವಿಷ್ಣು ವಾಸುದೇವ ಶಬ್ದಗಳಿಂದ ಕೂಡಿದ "ಓಂ ನಮೋವಿಷ್ಣವೇ ","ಓಂ ನಮೋಭಗವತೇ ವಾಸುದೇವಾಯ"ಎಂಬ ವ್ಯಾಪಕ ಮಂತ್ರಾಂತರಗಳಿಗೂ ಅರ್ಥ. 1)ವ್ಯಾಪ್ತಿ ಕಾಂತಿ ಇತ್ಯಾದಿಯಾಗಿ ಅಹಿರ್ಬುಧ್ನ್ಯಾದಿಗಳು ನಿರ್ವಚನ ಮಾಡಿರುವಂತೆ, ವಿಷಲ್ ವ್ಯಾಪ್ತೌ, ವಶಕಾಂತೌ, ವಿಶ ಪ್ರವೇಶನೇ, ಇಷು ಇಚ್ಛಾಯಾಂ ಎಂಬ ಧಾತುಗಳಿಂದ ನಿಷ್ಪನ್ನವಾದ ವಿಷ್ಣು ಶಬ್ದದಲ್ಲಿರುವ, ವ್ಯಾಪ್ತಿ, ಕಾಂತಿ ಅಂತರ್ಯಾಮಿತ್ವ, ಸಂಕಲ್ಪವೆಂಬ ಅರ್ಥಗಳೂ, ವಾಸುದೇವಶಬ್ದತ್ತಿಲುಮ್ ಇತ್ಯಾದಿ-ವಾಸುದೇವ ಶಬ್ದದಲ್ಲಿಯೂ, ವಸತಿ, ಇದು ಸರ್ವವ್ಯಾಪಕತ್ವ , ವಾಸಯತಿ- ತನ್ನಲ್ಲಿರಿಸಿಕೊಳ್ಳುತ್ತಾನೆ, ಸರ್ವಧಾರತ್ವ ಎಂದೂ, ದೀವ್ಯತಿ- ಪ್ರಕಾಶಿಸುತ್ತಾನೆ, ಸರ್ವ ವಸ್ತ್ವಂತರ್ಯಾಮಿತ್ವದಿಂದ ತದ್ಗತವಾದ ದೋಷ ರಹಿತತ್ವ, ದೇವ ಶಬ್ದದಿಂದ ಕ್ರೀಡಾವಿ

---

1) ಅಹಿರ್ಬುಧ್ನ್ಯ ಸಂಹಿತೆ (22-38) ವ್ಯಾಪ್ತಿ- ಎಲ್ಲವನ್ನೂ ವ್ಯಾಪಿಸಿರುವುದು, ಕಾಂತಿ-ಪ್ರಕಾಶದಿಂದ ಕೂಡಿರುವುದು, ಪ್ರವೇಶ ಅಂತಃ ಪ್ರವೇಶ, ಇಚ್ಛಾ-ಸಂಕಲ್ಪ. ಇವುಗಳು ಆಯಾಯಾ ಧಾತುಗಳನ್ನು ಕಾರಣವಾಗಿ ಕೊಂಡು ಏರ್ಪಡುವ ಅರ್ಥಗಳು. ವಿಷ್ಣುವೆಂಬ ಪರಮಾತ್ಮನಾದ, ದೇವಸ್ಯ- ಲಕ್ಷ್ಮೀಪತಿಯ ಪರತ್ವನಿರೂಪಣದಿಂದ, ಅಭ್ಯಧಿಕಾಃ- ಆ ಅರ್ಥಗಳನ್ನು ಅಧಿಕವಾಗಿ ತಿಳಿಸುತ್ತವೆ.

## ನಿಗಮನೇ ಮೂಲಮನ್ತ್ರಸ್ಯ ಅನವಚ್ಛಿನ್ನ ಪ್ರಭಾವಮಾಹ

೧ ಋಚೋ ಯಜೂಂಷಿ ಸಾಮಾನಿ ತಥೈವಾಥರ್ವಣಾನಿ ಚ ।
ಸರ್ವಮಷ್ಟಾಕ್ಷರಾಂತಸ್ಥಂ ಯಚ್ಚಾನ್ಯದಪಿ ವಾಙ್ಮಯಮ್ ॥" ಎನ್ಗ್ಯೈಯಾಲ್, ಇತ್ತಿರುವಷ್ಟಾಕ್ಷರಮೇ ಮುಮುಕ್ಷುಕ್ಕಳುಕ್ಕು ತತ್ವಹಿತಾನುಬಂಧಿಹಳಾನ ಸರ್ವಾಪೇಕ್ಷಿತಙ್ಗಳುಕ್ಕುಮ್ ಪ್ರಕಾಶಕಮ್.

೨) "ಋಚೋ ಯಜೂಂಷಿ ಸಾಮಾನಿ ಯೋಽಧೀತೇಽಸಕೃದಂಜಸಾ ।
ಸಕೃದಷ್ಟಾಕ್ಷರಂ ಜಪ್ತ್ವಾ ಸ ತಸ್ಯ ಫಲಮಶ್ನುತೇ ॥" ಎನ್ಱೈಯಾಲೇ, ಇದಿನುಡೈಯ ಸಕೃದುಚ್ಚಾರಣಮ್ ಸರ್ವವೇದ ಜಪತುಲ್ಯಮ್.

೩) "ಯಸ್ಯಯಾವಾಂಶ್ಚ ವಿಶ್ವಾಸಸ್ತಸ್ಯ ಸಿದ್ಧಿಶ್ಚ ತಾವತೀ ।
ಏತಾವಾನಿತಿ ನೈತಸ್ಯ ಪ್ರಭಾವಃ ಪರಿಮೀಯತೇ". ಎನ್ಱೈಯಾಲೇ, ತನ್ನಾಮ್ ವಿಶ್ವಾಸ ತಾರತಮ್ಯತ್ತುಕ್ಕೀಡಾಹ ಸಿದ್ಧಿತಾರತಮ್ಯಮುಣ್ಡಾನಾಲುಮ್, ಮಹಾ ವಿಶ್ವಾಸಮುಡೈಯಾರ್ ಪಕ್ಕಲ್ ಇತ್ತಿರುಮನ್ತ್ರಮ್ ಅನವಚ್ಛಿನ್ನ ಪ್ರಭಾವಮಾಯಿರುಕ್ಕುಮ್. ಇಶ್ಲೋಕತ್ತಿಲ್ ಇನ್ನಾರಾಲ್ ಪರಿಚ್ಛೇದಿಕ್ಕವೊಣ್ಣಾದೆನ್ರು ವಿಶೇಷಿಯಾಮೈಯಾಲೇ ೧) "ನರನಾರಣನಾಯುಲಹತ್ತರನೂಲ್ ಶಿಙ್ಗಾಮೈವಿರಿ

---

ಜಗೀಷಾಡಿಮತ್ವ ಎಂಬ ಆಕಾರಗಳೆಲ್ಲಾ, ನಾರಾಯಣ ಶಬ್ದಾರ್ಥದಲ್ಲಿನ ಏಕ ದೇಶಗಳು. ನಾರಶಬ್ದದಲ್ಲಿಯೂ, ಅಯನ ಶಬ್ದದಲ್ಲಿಯೂ ವ್ಯುತ್ಪತ್ತಿ ಸಿದ್ಧಗಳಾದ ಅರ್ಥಗಳ ಒಂದು ಭಾಗವೆಂದು ತಾತ್ಪರ್ಯ. ಹೀಗೆ ವ್ಯಾಪಕ ಮಂತ್ರಾಂತರಗಳು ಅಷ್ಟಾಕ್ಷರದ ಏಕದೇಶ ವೆಂಬುದಲ್ಲದೆ, ಋಕ್ ಯಜುಸ್ಸಾಮಾದಿ ಇತಿಹಾಸಪುರಾಣಾದಿ ಸರ್ವವಾಙ್ಮಯವೂ ಅವುಗಳ ಅರ್ಥಗಳೂ ಅಷ್ಟಾಕ್ಷರದಲ್ಲಿ ಅಂತರ್ಗತಗಳಾದ್ದರಿಂದ ಮುಮುಕ್ಷುಗಳಿಗೆ ಸರ್ವಾಪೇಕ್ಷಿತಾರ್ಥ ಪ್ರಕಾಶಕವು, ಎಂದು ಋಚೋಯಜೂಗ್ಂಷಿಸಾಮಾನಿ, ಇತ್ಯಾದಿ–ಆರಂಭಿಸಿ ನಿರೂಪಿಸುತ್ತಾರೆ. ಆದಾಗಿ ಋಗ್ಯಜುಸ್ ಸಾಮಾಥರ್ವಣ ವೇದಗಳೂ ಇತಿಹಾಸ ಪುರಾಣಾದಿ ಸರ್ವವಾಙ್ಮಯವೂ ಅಷ್ಟಾಕ್ಷರದಲ್ಲಿ ಅಡಗಿವೆ, ಎಂದು ಹೇಳುವುದರಿಂದ ಈ ಅಷ್ಟಾಕ್ಷರ ಮಂತ್ರವೇ ಮುಮುಕ್ಷುಗಳಿಗೆ ತತ್ವಹಿತಾನುಬಂಧಿಗಳಾದ ಸರ್ವಾಪೇಕ್ಷಿತಗಳಿಗೂ ಪ್ರಕಾಶಕವು. 2) ಋಚೋಯಜೂಂಗ್ಂಷಿ ಸಾಮಾನಿ । ಯೋಧೀತೇ, ಇತ್ಯಾದಿ ಹೇಳಿರುವುದರಿಂದ ಅಷ್ಟಾಕ್ಷರವು ಸಕಲವೇದಾರ್ಥ ಪ್ರಕಾಶಕವಾದುದಲ್ಲದೆ, ಸಕೃತ್ ಜಪದಿಂದಲೇ ಸಕಲವೇದಾಧ್ಯಯನ ಜನ್ಯವಾದ ಫಲವನ್ನು ಕೊಡುತ್ತದೆ. ಅದಕ್ಕೆ ತುಲ್ಯವೆಂದರ್ಥ. ಇದುಸ್ತುತ್ಯರ್ಥವೇ ? ಅಷ್ಟಾಕ್ಷರ ಜಪಕ್ಕೆ ವೇದೇತಿ ಹಾಸ ಪಠನ ಫಲವುಂಟೇ ಎಂಬ ಸಂದೇಹವನ್ನು 3)ಯಸ್ಯ ಯಾವಾಂಶ್ಚ ವಿಶ್ವಾಸಃ ಇತ್ಯಾದಿ ಆರಂಭಿಸಿ ಸಮಾಧಾನಗೊಳಿಸುತ್ತಾರೆ. "ಅದಾಗಿ ಯಾರಿಗೆ ಎಷ್ಟು ವಿಶ್ವಾಸವೋ ಅದಕ್ಕನುಗುಣವಾದ ಸಿದ್ಧಿಯು ಏರ್ಪಡುತ್ತದೆ. ಈ ಅಷ್ಟಾಕ್ಷರದ ಪ್ರಭಾವವು ಇಷ್ಟೇ ಎಂದು ಪರಿಮಿತಿಯಾಗಿ ಹೇಳಲಿಕ್ಕಿಲ್ಲ", ಎಂದು ಹೇಳಿರುವುದರಿಂದ ಅವರವರ ವಿಶ್ವಾಸತಾರತಮ್ಯಕ್ಕೆ ಅನುಗುಣವಾಗಿ ಸಿದ್ಧಿ ತಾರತಮ್ಯವು ಉಂಟಾದರೂ, ಮಹಾ ವಿಶ್ವಾಸವನ್ನುಳ್ಳವರಿಗೆ ಈ ಅಷ್ಟಾಕ್ಷರ ಮಂತ್ರವು ಅನವಚ್ಛಿನ್ನ ಪ್ರಭಾವಮಾಯಿರುಕ್ಕುಮ್–ಎಲ್ಲೆಯಿಲ್ಲದ ಪ್ರಭಾವದಿಂದ ಕೂಡಿರುತ್ತದೆ. ಇಶ್ಲೋಕತ್ತಿಲ್ ಇತ್ಯಾದಿ– ಈ ಶ್ಲೋಕದಲ್ಲಿ ಇಂಥಹವರಿಂದ ಪರಿಚ್ಛೇದಿಕ್ಕವೊಣ್ಣಾದು–ಅಳತೆಯಿಟ್ಟು ಹೇಳಲಾಗುವುದಿಲ್ಲವೆಂದು, ವಿಶೇಷಿಯಾಮೈಯಾಲ್–ವಿಶೇಷಿಸಿ ಹೇಳದೆ ಇರುವುದರಿಂದ1) ನರನಾರಣನಾಯುಲಗತ್ತರನೂಲ್ ಇತ್ಯಾದಿ

---

1) ನಾರದೀಯ ಕಲ್ಪ 1-9 2) ನಾರದೀಯ ಕಲ್ಪ 1-10

1) ಎಂಗಾನು ಮೀದೊಪ್ಪದೋರ್ ಮಾಯ ಮುಂಡೇ ನರನಾರಣಾನಾಯ್ ಉಲಗತ್ತರನೂಲ್
ಶಿಂಗಾಮೈವಿರಿತ್ತವನೆಂಬೆರುಮಾನ್ ಅದುವನ್ರಿಯುಮ್ ಶೆಂಜುಡರುಮ್ ನಿಲನುಮ್ ।

ಪ. ಶಿ. ಸೋ.

ತ್ತರ್ವ್ರ" ಎನ್ಗಿರಪಡಿಯೇ ಇತ್ತಿರುಮನ್ತ್ರತ್ತುಕ್ಕು ಪ್ರವರ್ತಕನುಮಾಯ್ ಪ್ರತಿಪಾದ್ಯನುಮಾಯಿರುಕ್ಕಿರ ಸ್ವತಸ್ಸರ್ವಜ್ಞನಾನ ನಾರಾಯಣನ್ ತಾನುಮಿದಿನ್ ಪ್ರಭಾವತ್ತೈ ಪರಿಚ್ಛೇದ ಯೋಗ್ಯಮನ್ರೆನ್ರರಿಯುಮತ್ತನೈ.

ಇಮ್ಮನ್ತ್ರತ್ತುಕ್ಕು ದ್ರಷ್ಟಾವುಮಾಯ್ ದೇವತೈಯುಮಾನವನ್ ಪಕ್ಕಲಿಲೇ ಇತ್ತೈ ಸಾರ್ಥಮಾಹ ಪ್ಪೆತ್ತ ತಿರುಮಂಗೈಯಾಳ್ವಾರ್ 2)"ಅನ್ತಣರ್ಮಾಟ್ಟನ್ದಿವೈತ್ತಮನ್ದಿರತ್ತೈಮನ್ದಿರತ್ತಾಲ್ಮರವಾದೆನ್ರುಮ್ ವಾೞ್ದಿಯೇಲ್ವಾೞಲಾಮ್" ಎನ್ರು ಅರುಳಿಚ್ಚೆಯ್‌ದಾರ್.

---

ನರನಾಗಿಯೂ ನಾರಾಯಣನಾಗಿಯೂ ಅವತರಿಸಿ ಜಗತ್ತಿಗೆ ದುರ್ಜ್ಞೇಯವಾದ ಅಷ್ಟಾಕ್ಷರ ಬ್ರಹ್ಮ ವಿದ್ಯೆಯನ್ನು ಶಿಥಿಲವಾಗದಂತೆ ಪ್ರಕಾಶ ಪಡಿಸಿದವನು ಎಂಬಂತೆ, ಈ ಅಷ್ಟಾಕ್ಷರ ಮಂತ್ರಕ್ಕೆ ಪ್ರವರ್ತಕನೂ, ಪ್ರತಿಪಾದ್ಯನೂ ಆಗಿರುವ ಸ್ವತಸ್ಸರ್ವಜ್ಞನಾದ ಬದರಿಕಾಶ್ರಮ ವಾಸಿಯಾದ ನಾರಾಯಣನು ತಾನೂ, ಇದರ ಪ್ರಭಾವವನ್ನು ಅಳವಿಟ್ಟು ಹೇಳಲು ಯೋಗ್ಯವಲ್ಲವೆಂದು ತಿಳಿದಿರುತ್ತಾನೆಯಷ್ಟೆ. ಇಮ್ಮಂತ್ರತ್ತುಕ್ಕು ಇತ್ಯಾದಿ– ಈ ಮಂತ್ರವನ್ನು ಸಾಕ್ಷಾತ್ಕರಿಸಿದವನೂ, ದೇವತೆಯಾದವನೂ ಆದ ಸರ್ವೇಶ್ವರನ ಸಕಾಶದಿಂದ, ಈ ಮಂತ್ರವನ್ನು ಸಾರ್ಥವಾಗಿ ಪಡೆದ ತಿರುಮಂಗೈಯಾಳ್ವಾರ್, ಅವರು 2) ಅಂದಣರ್ಮಾಟ್ಟಂದಿವೈತ್ತ ಮಂದಿರತ್ತೈ ಮಂದಿರತ್ತಾಲ್ಮರ ವಾದೆನ್ರುಮ್ ವಾೞ್ದಿಯೇಲ್ವಾೞಲಾಮ್"ಎನ್ರುಅರುಳಿಚ್ಚೆಯ್ದಾರ್-ಅದಾಗಿ ಬ್ರಾಹ್ಮಣರಧನವಾದ ವೇದದ ಶಿರಸ್ಸಾದ ವೇದಾಂತದಲ್ಲಿ ಪ್ರತಿ ಪಾದ್ಯವಾಗಿ ಹೇಳಲ್ಪಟ್ಟ ಮಂದಿರತ್ತೈ–'ಮಂತಾರಂ ತ್ರಾಯತೇ," ಎಂಬ ವ್ಯುತ್ಪತ್ತಿಯಿಂದ ತನ್ನನ್ನು ಧ್ಯಾನ ಮಾಡುವವನನ್ನು ರಕ್ಷಿಸುವನಾಗಿ ಹೇಳಲ್ಪಟ್ಟ ಈಶ್ವರನನ್ನು ಮಂದಿರತ್ತಾಲ್ ಅಷ್ಟಾಕ್ಷರ ಮಂತ್ರದಿಂದ. ಮರವಾದೆನ್ರುಮ್ ವಾೞ್ದಿಯೇಲ್– ಮರೆಯದೆ ಯಾವಾಗಲೂ ಧ್ಯಾನ ಮಾಡಿದರೆ ವಾೞಲಾಮ್–ಪರಮ ಪದದಲ್ಲಿ ಭಗವದನುಭವ ಪರೀವಾಹವಾದ ಸರ್ವವಿಧ ಕೈಂಕರ್ಯಗಳನ್ನೂ ಪಡೆದು ಸುಖ ವಾಗಿ ಬಾಳಬಹುದು, ಎಂದು ಅನುಗ್ರಹಿಸಿರುತ್ತಾರೆ.

---

ಪೊಂಗಾರ್ ಕಡಲುಮ್ ಪೊರುಪ್ಪುಮ್ ನೆರುಪ್ಪುಮ್ನೆರುಕ್ಕಿಪ್ಪುಹ ಪ್ಪೊನ್‌ಮಿಡರತ್ತನೈಪೋದು
ಅಂಗಾಂದರ್ವನ್ ಕಾಣ್ಮನೆನ್ರಾಯ್‌ಚಿಯರಿಲ್ ಅಳವಣ್ಣೆಯುಣ್ಡಾಪ್ಪುಂಡಿರುಂದವನೇ ॥

ಪೆರಿಯತಿರುಮೊೞಿ (10-6-1) ಭಗವಂತನು ನರನಾಗಿಯೂ ನಾರಾಯಣನಾಗಿಯೂ ಈ ಲೋಕದಲ್ಲಿ ಬದರಿಕಾಶ್ರಮದಲ್ಲಿ ಅವ ತರಿಸಿ, ಲೋಕಕ್ಕೆ ಅಷ್ಟಾಕ್ಷರ ಬ್ರಹ್ಮವಿದ್ಯೆಯನ್ನು-ಶಿಂಗಾಮ್ಮೆ ಶಿಥಿಲವಾಗದಂತೆ ಉಪದೇಶಿಸಿದನು.

2) ಇಂದಿರರ್ಕ್ಕುಮ್ ಪಿರಮರ್ಕ್ಕುಮ್ ಮುದಲ್ವನ್ ತನ್ನೈ
ಇರುನಿಲಮ್‌ಕಾಲ್ ತೀನೀರ್ ವಿಣ್‌ಪೂದಮೈಂದಾಯ್
ಶಂದಿರತ್ತ ತಮಿೞೋಶೈವಡಶೊಲ್ಲಾಹಿ
ತಿಶೈಸಾನ್ಗುಮಾಯ್ ತಿಂಗಳ್ ಞಾ ಯಿರಾಹಿ ।
ಅಂದರತ್ತಿಲ್ ತೇವರ್ಕ್ಕುಮ್ ಅರಿಯಾಲಾಹಾ
ಅಂದಣನೈ ಅಂದಣರ್ ಮಾಟ್ಟಂದಿವೈತ್ತ
ಮಂದಿರತ್ತೈ, ಮಂದಿರತ್ತಾಲ್ ಮರವಾದೆನ್ರುಮ್
ವಾೞ್ದಿಯೇಲ್ ವಾೞಲಾಮ್ ಮಡನೆಂಜಮೇ ॥

ಬ್ರಹ್ಮೇಶೇನೇಂದ್ರಾದಿಗಳಿಗೆ ಕಾರಣ ಭೂತನಾದವನೂ, ಪಂಚ ಭೂತಾತ್ಮಕನಾಗಿ ಸಂಸ್ಕೃತದ್ರಾವಿಡಾತ್ಮಕ ಕವಿತೆಗಳಿಂದ ಸ್ತುತ್ಯನೂ, ದಿಕ್ಕು, ಚಂದ್ರ ಸೂರ್ಯಾದಿ ದೇವತೆಗಳಿಗೂ ತಿಳಿಯಲಾಗದೆ ಬ್ರಾಹ್ಮಣರ ಧನವಾದ ವೇದದ ಅಂತ್ಯದಲ್ಲಿ ನಿರೂಪಿತನೂ ಆಗಿರುವ ಭಗವಂತನನ್ನು ಅಷ್ಟಾಕ್ಷರದಿಂದ ಧ್ಯಾನ ಮಾಡಿದರೆ ಪರಮ ಪದದಲ್ಲಿ ಸುಖವಾಗಿ ಬಾಳಬಹುದು.

ಎಟ್ಟುವಮಾವಮೂರ್ತ್ತಿಯೆಣ್ ಕಣ್ಣನೆಣ್ದಿಕ್ಕೆಟ್ಟೆರ್ರೈ ಯೆಣ್ ಪಿರಕಿರುತಿ
ಎಟ್ಟುವಮಾವರ್ರೈಹಳೀನ್ರ ವೆಣ್‌ಗುಣತ್ತೋನೆಟ್ಟೆಣುವೆಣ್‌ಗುಣಮತಿಯೋರ್ಕ್ಕು ।
ಎಟ್ಟುವಮಾವಮಲರೆಣ್ ಶಿತ್ತಿಯೆಣ್ಪತ್ತಿ ಎಟ್ಟುಯೋಗಾಙ್ಗವೆಣ್ ಶೆಲ್ವಮ್ ।
ಎಟ್ಟುವಮಾಗುಣವೆಟ್ಟೆಟ್ಟೆಣುಙ್ಕಲೈ ಹಳ್‌ಎಟ್ಟೆರಡ ವೇಲನವು ಮೆಟ್ಟನವೇ ॥೪೫॥

**ಸರ್ವಕಾರಣಭೂತನುವಮಾಯ್, ಅಖಿಲಹೇಯ ಪ್ರತ್ಯನೀಕ ಕಲ್ಯಾಣೈಕತಾನನುಮಾನ ಸರ್ವೇಶ್ವರನುಕ್ಕು ಪ್ರತಿಪಾದಕಮಾನ ತಿರುವಷ್ಟಾಕ್ಷರತ್ತೈ ಅನುಸಂಧಿಕ್ಕುಮ್ ಮಹಾಮತಿಹಳುಕ್ಕು, ಅತಗುಣಾದಿಹಳಿಲುಮ್, ಅಷ್ಟೈಶ್ವರ್ಯಾದಿಹಳಿಲುಮ್, ಯಥಾಮನೋರಥಮ್ ದುರ್ಲಭಮಾಯಿರುಪ್ಪದು ಒನ್ರುಮಿಲ್ಲೈಯೆನ್ನಿರದು.**

**"ಎಟ್ಟುವಮಾವಮೂರ್ತ್ತಿ"-ಆಕಾಶಾದಿಭೂತಙ್ಗಳೈನ್ದುಮ್, ಚಂದ್ರಾದಿತ್ಯರ್‌ಹಳುಮ್ ಯಜಮಾನನುಮ್ ತನುಕ್ಕು ಮೂರ್ತಿಹಳಾಹ ವರಪ್ಪೆತ್ತು ಅಷ್ಟಮೂರ್ತಿ ಎನ್ರುಪೇರ್ ಪೆತ್ತ ರುದ್ರನ್, "ಎಣ್ ಕಣ್ಣನ್" ಚತುರ್ಮುಖ ನಾಹೈಯಾಲೇ ಎಟ್ಟುಕಣ್ಣುಡೈಯ ಬ್ರಹ್ಮಾ;"ಎಣ್ದಿಕ್ಕು"-ಎಟ್ಟು ದಿಕ್ಕುಹಳ್, "ಎಟ್ಟೆರ್ರೈ"-ಇಂದ್ರಾದಿಹಳಾನ ಎಟ್ಟು ದಿಕ್ಪಾಲಕರ್ ; "ಎಣ್‌ಪಿರಕಿರುತಿ" - ಅವ್ಯಕ್ತ ಮಹದಹಂಕಾರಾದಿಹಳಾನ ಎಟ್ಟುತತ್ವಙ್ಗಳ್ !**

**"ಎಟ್ಟುವಮಾವರ್ರೈಹಳ್" – ಎಟ್ಟುಕುಲಪರ್ವತಙ್ಗಳ್; "ಈನ್ರವೆಣ್ಗುಣತ್ತೋನ್ – ಇವೈ ಯೆಲ್ಲಾತ್ತೈಯುಮ್ ಸೃಷ್ಟಿತ್ತ ಗುಣಾಷ್ಟಕ ವಿಶಿಷ್ಟನಾನ ಪರಮಾತ್ಮಾ; ಇವನುಕ್ಕು ಎಟ್ಟು ಗುಣಙ್ಗಳೆನ್ನಿರದು ಕರ್ಮ**

---

## ಶ್ರೀ ಮದಷ್ಟಾಕ್ಷರ ಮಂತ್ರವು ಸರ್ವಾಭೀಷ್ಟ ಸಿದ್ಧಿಕವು.

ಮಹಾ ವಿಶ್ವಾಸದಿಂದ ಅನುಸಂಧಾನ ಮಾಡುವವರಿಗೆ **ಸರ್ವಾಭೀಷ್ಟ** ಫಲಪ್ರದವಾದ, ಈ ಮೂಲಮಂತ್ರದ ಪ್ರಭಾವವನ್ನು **ಎಟ್ಟುವಮಾವಮೂರ್ತ್ತಿ** ಎಂದಾರಂಭಿಸಿ ವಿವರಿಸುತ್ತಾರೆ. ಇದರ ಅರ್ಥವನ್ನು ತಾವೇ ವ್ಯಾಖ್ಯಾನಿಸುತ್ತಾರೆ. ಅದಾಗಿ **ಸರ್ವಕಾರಣಭೂತನುವಮಾಯ್** ಇತ್ಯಾದಿ– ಸರ್ವಜಗತ್ತಿಗೂ ಕಾರಣಭೂತನಾಗಿಯೂ, ಅಖಿಲ ಹೇಯ ಪ್ರತ್ಯನೀಕ ಕಲ್ಯಾಣೈಕ ತಾನನಾದ **ಸರ್ವೇಶ್ವರನನ್ನು** ಪ್ರತಿಪಾದಿಸುವ ತಿರುವಷ್ಟಾಕ್ಷರವನ್ನು ಅನುಸಂಧಿಸುವ ಮಹಾ ಬುದ್ಧಿಶಾಲಿಗಳಿಗೆ, ಅಂದರೆ ಇದರ ಪ್ರಭಾವವನ್ನು ತಿಳಿಯದ ಮುಂದ ವಿಶ್ವಾಸಿಗಳಿಗೆ ಈ ಪಾಶುರದಲ್ಲಿ ಹೇಳಿದ ಫಲ ಸಿದ್ಧಿಗಳು ಲಭಿಸದಿದ್ದರೂ ಮಹಾ ವಿಶ್ವಾಸದಿಂದ ಕೂಡಿದ ಮಹಾ ವಿಶ್ವಾಸಶಾಲಿಗಳಿಗೆ, **ಅಷ್ಟೈಶ್ವರ್ಯಾದಿಹಳಿಲುಮ್** ಇತ್ಯಾದಿ– ಅಷ್ಟೈಶ್ವರ್ಯಾದಿಗಳಲ್ಲಿಯೂ, ತಮ್ಮ ಅಭಿಲಾಷೆಗನುಗುಣವಾಗಿ ದುಲರ್ಭವಾಗಿರುವುದು ಯಾವುದೂ ಇಲ್ಲವೆಂದು ತಿಳಿಸುತ್ತಾರೆ. **ಎಟ್ಟುವಮಾವಮೂರ್ತ್ತಿ**–ಆಕಾಶಾದಿ ಪಂಚಭೂತಗಳೂ, ಚಂದ್ರಾದಿತ್ಯರುಗಳೂ, ಯಜಮಾನನೂ ತನಗೆ ಮೂರ್ತಿಗಳಾಗಿ ವರವನ್ನು ಪಡೆದು, ಅಷ್ಟಮೂರ್ತಿ ಎಂದು ಹೆಸರನ್ನು ಪಡೆದ ರುದ್ರನೂ, **ಎನ್ ಕಣ್ಣನ್**-ಚತುರ್ಮುಖನಾದ್ದರಿಂದ ಎಂಟು ಕಣ್ಣುಗಳಿಂದ ಕೂಡಿದ ಬ್ರಹ್ಮದೇವನೂ, ಎಂಡಿಕ್ಕು–ಎಂಟು ದಿಕ್ಕುಗಳು, **ಎಟ್ಟೆರೈ** – ಇಂದ್ರಾದಿ ಎಂಟು ದಿಕ್ಪಾಲಕರು, (ಇರೈ–ಸ್ವಾಮಿ), **ಎಣ್‌ಪಿರಕಿರುದಿ**–ಅವ್ಯಕ್ತ ಮಹದಹಂಕಾರ, ಆದಿ ಶಬ್ದದಿಂದ ಪಂಚಭೂತತನ್ಮಾತ್ರೆಗಳು ಸೂಚಿತ, ಎಂಬ ಎಂಟು ಪ್ರಕೃತಿ ವಿಕಾರಗಳು, **ಎಟ್ಟುವಮಾವರ್ರೈಹಳ್** –

"ಹಿಮವಾನ್ ನಿಷಧೋ, ವಿಂಧ್ಯೋ, ಮಾಲ್ಯವಾನ್, ಪಾರಿಯಾತ್ರಕಃ !
ಮಂದರೋ, ಮಲಯಶ್ಚೈವ, ಮೇರುಣಾಷ್ಟಾಃ ಪ್ರಕೀರ್ತಿತಾಃ ॥

ಎಂಬ ಎಂಟು ಕುಲ ಪರ್ವತಗಳು, **ಈನ್ರವೆಣ್‌ಗುಣತ್ತೋನ್**-ಇವುಗಳನ್ನೆಲ್ಲಾ ಸೃಷ್ಟಿಸಿದ ಅಪಹತಪಾಪ್ಮತ್ವಾದಿ **ಎಂಟು** ಗುಣಗಳಿಂದ ಕೂಡಿದ ಪರಮಾತ್ಮಾ (ಅಪಹತಪಾಪ್ಮಾ,ವಿಜರಃ,ವಿಮೃತ್ಯುಃ,ವಿಶೋಕಃ, ಅವಿಜಿಘತ್ಸಃ,ಅಪಿಪಾಸಃ

ವಶ್ಯತ್ವ. ಜರಾಮರಣ ಶೋಕ ಕ್ಷುತ್ಪಿಪಾಸೈಹಳ್, ಅನ್ರಿಕ್ಕೇಯೊೞಿಹೈಯುಮ್, ನಿತ್ಯಙ್ಗಳಾನ ಭೋಗ್ಯ ಙ್ಗಳೈಯುಡೈಯವನಾಹೈಯುಮ್. ನಿನೈತ್ತದು ಮುಡಿಕ್ಕ ವಲ್ಲನಾ ಹೈಯುಮ್; "ಎಟ್ಟೆಣು-ಮೆಣ್ಗುಣಮದಿಯೋರ್ಕ್ಕು" – ಇಪ್ಪಡಿಪ್ಪಟ್ಟ ಸರ್ವೇಶ್ವರನುಕ್ಕು ಪ್ರಧಾನ ಮನ್ತ್ರಮಾನ ತಿರುವಷ್ಟಾಕ್ಷರತ್ತೈ ಸಾರ್ಥಮಾಹಕ್ಕೇಟ್ಟು ಅನುಸಂಧಿಕ್ಕುಮ್ ಅಷ್ಟಾಙ್ಗಬುದ್ಧಿಯುಡೈಯ ಅನನ್ಯರಾನ ಪ್ರತಿಬುದ್ಧರ್ಕ್ಕು, ಬುದ್ಧಿಕ್ಕು ಎಟ್ಟು ಅಙ್ಗಙ್ಗಳಾವನ ?

1) ಗ್ರಹಣಂ ಧಾರಣಂ ಚೈವ ಸ್ಮರಣಂ ಪ್ರತಿಪಾದನಮ್ ।
ಊಹಾಪೋಹೋರ್ಥವಿಜ್ಞಾನಂ ತತ್ವಜ್ಞಾನಂಚ ಧೀಗುಣಾಃ ॥" ಎನ್ಱಿರನ್ಮೈ ; ಎಟ್ಟುನಾಮಲರ್

2) "ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿನ್ದ್ರಿಯ ನಿಗ್ರಹಃ ।
ಸರ್ವಭೂತದಯಾ ಪುಷ್ಪಂ ಕ್ಷಮಾಪುಷ್ಪಂ ವಿಶೇಷತಃ ।
ಜ್ಞಾನಂ ಪುಷ್ಪಂ ತಪಃಪುಷ್ಪಂ ಧ್ಯಾನಂ ಪುಷ್ಪಂ ತಥೈವಚ ॥
ಸತ್ಯಮಷ್ಟವಿಧಂ ಪುಷ್ಪಂ ವಿಷ್ಣೋಃ ಪ್ರೀತಿಕರಂ ಭವೇತ್ ॥ ಎನ್ಱಿಂ ಪುಷ್ಪಂಗಳ್, ಎಣ್ ಶಿತ್ತಿ"

---

ಸತ್ಯಕಾಮಃ ಸತ್ಯಸಂಕಲ್ಪಃ ಎಂಬ ಎಂಟು ಗುಣಗಳು ಆದಾಗಿ ಪಾಪದ ಸಂಭಾವನೆಯೇ ಇಲ್ಲದವನು, ವೃದ್ಧಾಪ್ಯವಿಲ್ಲದೆ ನಿತ್ಯಯುವಾ, ಮರಣ ಧರ್ಮವಿಲ್ಲದವನು, ಶೋಕವಿಲ್ಲದವನು, ಹಸಿವು ಇಲ್ಲದವನು, ದಾಹವಿಲ್ಲದವನು ಇಷ್ಟಾರ್ಥಗಳನ್ನೆಲ್ಲಾ ಸತ್ಯವಾಗಿ ಪಡೆದವನು, ನೆನೆಸಿದುದನ್ನು ನೆರವೇರಿಸುವವನು,) ಇವನುಕ್ಕು ಇತ್ಯಾದಿ–ಎಂಟುಗುಣಗಳು ಯಾವುವೆಂದರೆ ತಾವೇವಿವರಿಸುತ್ತಾರೆ–ಕರ್ಮವಶ್ಯತ್ವ ಇತ್ಯಾದಿ-ಕರ್ಮಪರವಶತೆ,ಜರಾಮರಣಶೋಕ ಕ್ಷುತ್–ಹಸಿವು, ಪಿಪಾಸಾ–ಬಾಯಾರಿಕೆ ಇವುಗಳು ಇಲ್ಲದೆ ಇರುವುದೂ ನಿತ್ಯಗಳಾದ ಭೋಗ್ಯಗಳನ್ನುಳ್ಳವನೂ ನೆನೆಸಿದುದನ್ನು ನೆರವೇರಿಸುವ ಶಕ್ತಿಯುಳ್ಳವನಾಗಿರುವುದೂ ವಿವಕ್ಷಿತ, ಎಟ್ಟೆಣುಮೆಣ್‌ಗುಣಮತಿಯೋರ್ಕ್ಕು–ಅಷ್ಟಾಕ್ಷರವನ್ನು ಜಪಿಸುವ ಎಂಟು ಗುಣಗಳಿಂದ ಕೂಡಿದ ಬುದ್ಧಿಯುಳ್ಳವರಿಗೆ, ಇದನ್ನು ವಿವರಿಸುತ್ತಾರೆ. ಇಪ್ಪಡಿಪ್ಪಟ್ಟ ಇತ್ಯಾದಿ–ಅಪಹತಪಾಪ್ಮತ್ವಾದಿ ಗುಣಾಷ್ಟಕ ವಿಶಿಷ್ಟನಾದ ಸರ್ವೇಶ್ವರನಿಗೆ ಪ್ರಧಾನ ಮಂತ್ರವಾದ ಶ್ರೀಮದಷ್ಟಾಕ್ಷರವನ್ನು ಸಾರ್ಥವಾಗಿ ಕೇಳಿ ಅನುಸಂಧಾನ ಮಾಡುವ ಅಷ್ಟಾಂಗ ಬುದ್ಧಿಯಿಂದ ಕೂಡಿದ ಅನನ್ಯರಾದ ಪ್ರತಿಬುದ್ಧರಿಗೆ ಬುದ್ಧಿಕ್ಕುಎಟ್ಟಂಗಂಗಳಾವನ–ಬುದ್ಧಿಗೆ ಎಂಟು ಅಂಗಗಳು ಯಾವುವೆಂದರೆ, ಗ್ರಹಣಂ ಧಾರಣಂಚೈವ ಇತ್ಯಾದಿ- ಗ್ರಹಣಂ – ಶಬ್ದಾರ್ಥಗಳನ್ನು ಗ್ರಹಿಸುವುದು, ಧಾರಣಂ–ಮರೆಯದೆ ಜ್ಞಾಪಕದಲ್ಲಿಡುವುದು, ಸ್ಮರಣಂ– ಅಪೇಕ್ಷಿತ ಕಾಲದಲ್ಲಿ ಶೀಘ್ರವಾಗಿ ಜ್ಞಾಪಿಸಿಕೊಳ್ಳುವುದು, ಪ್ರತಿಪಾದನಂ- ಇತರರಿಗೆ ಬೋಧಿಸುವುದು, ಊಹಃ–ಹೇಳದೆ ಇರುವ ಅರ್ಥಗಳನ್ನು ಉಚಿತಸ್ಥಲದಲ್ಲಿ ಅನುಸಂಧಾನ ಮಾಡುವುದು ಅಪೋಹಃ– ಪ್ರಕರಣಕ್ಕೆ ಸಂಬಂಧವಿಲ್ಲದ ಅರ್ಥವನ್ನು ಹೇಳದಿರುವುದು, ಅರ್ಥ ವಿಜ್ಞಾನಂ– ಅರ್ಥಗಳನ್ನು ಚನ್ನಾಗಿ ತಿಳಿದಿರುವುದು, ತತ್ವಜ್ಞಾನಂ– ಸ್ವತ ಏವ ಯಥಾರ್ಥ ವಿಷಯಕ ಜ್ಞಾನ-ಇದು ಭಾವ ಪ್ರಧಾನ ನಿರ್ದೇಶ-ಇವು ಧೀಗುಣಾಃ- ಬುದ್ಧಿಯ ಗುಣಗಳು, ಎಂಬುವು. ಎಟ್ಟುನಾಮಲರ್–ಎಂಟು ಶ್ರೇಷ್ಟವಾದ ಪುಷ್ಪಗಳು–ಆದಾಗಿ 2) ಅಹಿಂಸಾ ಪ್ರಥಮಂ ಪುಷ್ಪಂ ಇತ್ಯಾದಿ–ಅಹಿಂಸೆ–ಭೂತಗಳನ್ನು ಹಿಂಸೆ ಮಾಡದಿರುವುದು, ಮೊದಲನೆ ಹೂವು, ಪುಷ್ಪಮ್ ಇಂದ್ರಿಯ ನಿಗ್ರಹಃ- ಇಂದ್ರಿಯ ನಿಗ್ರಹವು ಎರಡನೆ ಪುಷ್ಪ ಸರ್ವಭೂತದಯಾ–ಸರ್ವ ಭೂತಗಳಲ್ಲಿಯೂ ಕರುಣೆ, ಕ್ಷಮಾ– ಕ್ಷಾಂತಿ, ಜ್ಞಾನಂ–ಜ್ಞಾನವು, ತಪಃ ತಪಸ್ಸು, ಧ್ಯಾನಂ–ಧ್ಯಾನವು, ಸತ್ಯ-ಭೂತ ಹಿತವಾದ ರೀತಿಯಲ್ಲಿ ನಿಜವನ್ನು ಹೇಳುವುದು, ಹೀಗೆ ಎಂಟು ವಿಧವಾದ ಪುಷ್ಪಗಳು. ಇವುಗಳನ್ನು ಸಂಪಾದಿಸಿ ಇವುಗಳಿಂದ ಕೂಡಿದವನಾಗಿ ಮಾಡುವ ಭಗವಂತನ ಪೂಜೆಯು ಅವನಿಗೆ ಪ್ರೀತಿಕರ. ಎಣ್‌ಶಿದ್ದಿ–

---

1) [illegible] 2)

3) "ಊಹಸ್ತರ್ಕೋಽಧ್ಯಯನಂ ದುಃಖ ವಿಘಾತಾಸ್ತ್ರಯ ಸ್ಸುಹೃತ್ಪ್ರಾಪ್ತಿಃ ।
ಧ್ಯಾನಂಚ ಸಿದ್ಧಯೋಷ್ಟೌ ॥" ಎನ್ಡ್ರಿರವೈ. "ಎಣ್ಪತ್ತಿ"

4) ಮದ್ಭಕ್ತ ಜನವಾತ್ಸಲ್ಯಂ ಪೂಜಾಯಾಂ ಚಾನುಮೋದನಮ್ ।
ಮತ್ಕಥಾ ಶ್ರವಣೇ ಭಕ್ತಿಸ್ಸ್ವರ ನೇತ್ರಾಂಗ ವಿಕ್ರಿಯಾ ।
ಸ್ವಯಮಾರಾಧನೇ ಯತ್ನೋ ಮಮಾರ್ಥೇ ಡಂಭ ವರ್ಜನಮ್ ।
ಮಮಾನುಸ್ಮರಣಂ ನಿತ್ಯಂ ಯಚ್ಚಮಾಂ ನೋಪಜೀವತಿ ।
ಭಕ್ತಿರಷ್ಟ ವಿಧಾ್ಯಹ್ಯೇಷಾ" ಎನ್ಡ್ರಿರವೆಟ್ಟು ವಿಧಙ್ಗಳಾನ ಭಕ್ತಿಹಳ್ "ಎಟ್ಟುಯೋಗಾಙ್ಗಮ್" ಯೋಗಾಙ್ಗಮಾಹಚ್ಚೊಲ್ಲಪ್ಪಟ್ಟ ಯಮನಿಯಮಾದಿಹಳ್, "ಎಣ್ಶೆಲ್ವಮ್"

5) "ಅಣಿಮಾ ಮಹಿಮಾ ಚ ತಥಾ ಲಘಿಮಾ ಗರಿಮಾ ವಶಿತ್ವ ಮೈಶ್ವರ್ಯ ಮ್ ।
ಪ್ರಾಪ್ತಿಃ ಪ್ರಾಕಾಮ್ಯಂ ಚೇತ್ಯಷ್ಟೈಶ್ವರಾಣಿ ಯೋಗ ಯುಕ್ತಸ್ಯ ॥"
ಎನ್ಡ್ರಿರ ವಿಭೂತಿಹಳ್, "ಎಟ್ಟುಮಾಗುಣಮ್"-ಮುಕ್ತದಶೈಯಿಲ್ ಆವಿರ್ಭವಿಕ್ಕುಮ್ ಗುಣಾಷ್ಟಕಮ್,

---

ಅಷ್ಟಸಿದ್ಧಿಗಳು-ಅದಾಗಿ 3) **ಊಹಸ್ತರ್ಕೋಽಧ್ಯಯನಂ** ಇತ್ಯಾದಿ ಊಹಃ-ಹೇಳದಿರುವ ಅರ್ಥವನ್ನು ಊಹಿಸಿ ಕೊಳ್ಳುವುದು, ತರ್ಕಃ- ಯುಕ್ತಿಯಿಂದ ತಿಳಿಯುವುದು, ಅಧ್ಯಯನಂ- ಆಚಾರ್ಯನ ಮೂಲಕ ತಿಳಿಯುವುದು, ದುಃಖವಿಘಾತಾಸ್ತ್ರಯಃ- ಆಧ್ಯಾತ್ಮಿಕ ಆದಿಭೌತಿಕ, ಆದಿ ದೈವಿಕಗಳೆಂಬ ಮೂರು ವಿಧವಾದ ದುಃಖಗಳು ಇಲ್ಲದಿರುವುದು, ಸುಹೃತ್ ಪ್ರಾಪ್ತಿಃ- ವೇದಾಂತ ವಿಚಾರ ಹೇತು ಭೂತವಾದ ಸ್ನೇಹಿತನ ಸಮಾಗಮ, ದಾನಂ- ಸಚ್ಛಿಷ್ಯರಿಗೆ ವಿದ್ಯಾದಾನ, ಇವು ಎಂಟು ಸಿದ್ಧಿಗಳು. **ಎಣ್ಪತ್ತಿ**- ಅಷ್ಟ ವಿಧವಾದ ಭಕ್ತಿ. 4) **ಮದ್ಭಕ್ತ ಜನವಾತ್ಸಲ್ಯಂ** ಇತ್ಯಾದಿ- ನನ್ನ ಭಕ್ತರಲ್ಲಿ ವಾತ್ಸಲ್ಯ, ಪೂಜೆಯನ್ನು ಮಾಡುವವರನ್ನು ಅನುಮೋದಿಸುವುದು ನನ್ನ ಕಥೆಗಳನ್ನು ಕೇಳುವುದರಲ್ಲಿ ಭಕ್ತಿ, ಕೇಳುವುದರಿಂದ ಏರ್ಪಟ್ಟ ಗದ್ಗದಸ್ವರ, ಕಣ್ಣೀರು ಶರೀರದಲ್ಲಿ ಏರ್ಪಟ್ಟ ವಿಕಾರಗಳು-ಅದಾಗಿ ಭಗವಂತನು ಅವತಾರಗಳನ್ನೆತ್ತಿ ಜೀವಾತ್ಮೋದ್ಧಾರಣಕ್ಕಾಗಿ ಪಡುವ ಪ್ರಯಾಸಗಳನ್ನು ನೆನೆದು ಏರ್ಪಡುವ ವಿಕಾರಗಳೂ, ತಾನೂ ಪೂಜೆಯನ್ನು ಮಾಡಲು ಯತ್ನಿಸುವುದು, ಭಗವದ್ವಿಷಯದಲ್ಲಿ ಡಂಭವಿಲ್ಲದಿರುವುದು, ನಿತ್ಯವೂ ಭಗವದ್ಧ್ಯಾನ ಮಾಡುವುದು, ಯಚ್ಚಮಾಂನೋಪಜೀವತಿ-ದ್ರವ್ಯ ಸಂಪಾದನೆ ಮಾಡಿ ಜೀವಿಸುವುದಕ್ಕಾಗಿ ಭಗವಂತನ ಪೂಜೆಯನ್ನು ಮಾಡುವುದು ತಪ್ಪು- ಹಾಗಿಲ್ಲದೆ ಕೇವಲ ಭಗವತ್ಕೈಂಕರ್ಯವೆಂದು ತಿಳಿದು ಮಾಡತಕ್ಕದ್ದು. ಹೀಗೆ ಭಕ್ತಿಯು ಎಂಟು ಪ್ರಕಾರ. **ಎಟ್ಟುಯೋಗಾಙ್ಗಮ್**- ಯೋಗಾಂಗವಾಗಿ ಹೇಳಲ್ಪಟ್ಟ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ರೂಪವಾದ ಅಂಗಿಯೂ ಸೇರಿ ಎಂಟು ಅಂಗಗಳು. **ಎಣ್ಶೆಲ್ವಮ್**-ಅಷ್ಟೈಶ್ವರ್ಯ ಸಿದ್ಧಿ ಅದಾಗಿ 1) **ಅಣಿಮಾ** ಮಹಿಮಾ ಇತ್ಯಾದಿ **ಅಣಿಮಾ** ಶರೀರದಿಂದ ಅಣುವಾಗಿ ಗೋಡೆ ಮೊದಲಾದವುಗಳನ್ನು ಪ್ರವೇಶಿಸಿಕೊಂಡು ಹೋಗುವ ಸಾಮರ್ಥ್ಯ, **ಮಹಿಮಾ**-ಶರೀರದಿಂದ ಹನುಮಂತನ ಹಾಗೆ ದೊಡ್ಡದಾಗಿ ಬೆಳೆಯುವುದು, **ಗರಿಮಾ**- ಎತ್ತುಕೊಳ್ಳಲಾಗದ ಭಾರವಾದ ರೂಪವನ್ನು ತಾಳುವುದು, **ಲಘಿಮಾ** ಲಘುವಾಗಿಆಗುವಿಕೆ, "ರಿಪೂಣಾಮಪ್ರಕಂಪ್ಯೋಽಪಿ ಲಘುತ್ವಮಗಮತ್ಕಪೇಃ" ಎಂದು ಶಕ್ತ್ಯಾಯುಧದಿಂದ ಹೊಡೆಯಲ್ಪಟ್ಟ ಲಕ್ಷ್ಮಣನು ರಾವಣನು ಅಲಗಾಡಿಸಲೂ ಆಗದ ಗುರುತ್ವವನ್ನು ಹೊಂದಿದ್ದರೂ, ಭಕ್ತನಾದ ಆಂಜನೇಯನಿಗೆ ಲಘುವಾದ (ಭಾರವಿಲ್ಲದ) ರೂಪವನ್ನು ತಾಳಿದನೆಂಬ ರೀತಿಯಲ್ಲಿ ಗುರುತ್ವ, ಲಘುತ್ವಗಳನ್ನು ಪಡೆಯುವುದು.

---

3) ಸಾಂಖ್ಯಕಾರಿಕೆ 4) ಅಶ್ವಮೇಧಿಕ 116-23

5) ಸಾಂಖ್ಯಕಾರಿಕೆ

2) ಅಷ್ಟೌಗುಣಾಃ ಪುರುಷಂ ದೀಪಯನ್ತಿ" ತ್ಯಾದಿಹಳಿಲ್ ಚೊನ್ನವೈಯಾಹವುಮಾಮ್. "ಎಟ್ಟೆಟ್ಟಿ ಯುಮ್ ಕಲೈಹಳ್ ಚತುಷ್ಷಷ್ಟಿ ಕಲೈಹಳ್, ಎಟ್ಟಿರದ ಮೇಲದುವುಮ್,

3) "ಶೃಂಗಾರ ವೀರಕರುಣಾದ್ಭುತ ಹಾಸ್ಯ ಭಯಾನಕಾಃ !

ಬೀಭತ್ಸರೌದ್ರೌ ಚ ರಸಾಃ ॥" ಎನ್ನಿರ ರಸಜ್ಗಳ್, ಎಟ್ಟುಕ್ಕುಮ್ ಮೇಲಾನ ಶಾನ್ತಿರಸಮ್ "ಇವೈ ಯೆಲ್ಲಾ ಮೆಟ್ಟನವೇ"–ಇವತ್ತಿಲ್ ಇವನುಕ್ಕು ಇಚ್ಛೈಯುಳ್ಳಪೋದು ಎಟ್ಟಾದವೈ ಯೊನ್ರುಮಿಲ್ಲೈ.

ಆತ್ಮಗುಣಾದಿಹಳ್ ನಿರಮ್ಬಾದೊಳ್ಳಿರದು ಅನುಸಂಧಾನತ್ತಿಲ್ ಊತ್ತಮ್ಪೋರಾಮೈಯಾಲೇ, ಅಷ್ಟೈಶ್ವರ್ಯಾದಿಹಳ್ ವಾರಾದೊಳ್ಳಿರದು ಉಪೇಕ್ಷೆಯಾಲೇ, ಕಡುಹ ಸಂಸಾರಮ್ ನಿವರ್ತಿಯಾದೊಳ್ಳಿರದು ಇಚ್ಛೈಯಿಲ್ ಕುರೈವಾಲೇ, ಆಹೈಯಾಲೇ ಇರೇ 1) ನಮೋನಾರಾಯಣೇತಿ ಮನ್ತ್ರಸ್ಸರ್ವಾರ್ಥ ಸಾಧಕಃ" ಎನ್ನಿರದು.

> ಅವಿದ್ಯಾ ಪೂತನೋನ್ಮುಕ್ತೈ ರನವಜ್ಞಾತ ಸತ್ಪಥೈಃ।
> ಅಸದಾ ಸ್ವಾದ ಸನ್ತೃಪ್ತೈ ರ್ರಾದಿಷ್ಟ ಮಿತಿದರ್ಶಿತಮ್ ॥

---

ವಿವಕ್ಷಿತ. ವಶಿತ್ವಂ–ಎಲ್ಲರನ್ನೂ ತನ್ನ ವಶದಲ್ಲಿಟ್ಟುಕೊಳ್ಳುವುದು, ಎಲ್ಲವೂ ತನ್ನ ವಶದಲ್ಲಿರುವುದು ಎಂದೂ ಅರ್ಥ. ಐಶ್ವರ್ಯಂ– ಅನೇಕ ವಸ್ತುಗಳನ್ನು ನಿಯಮಿಸುವ ಕರ್ತೃತ್ವ. ಪ್ರಾಪ್ತಿಃ– ಸಂಕಲ್ಪದಿಂದಲೇ ಒಂದು ದೇಶದಿಂದ ಮತ್ತೊಂದು ದೇಶವನ್ನು ಹೊಂದುವುದು. ಉದಾಹರಣೆ ಕಾಂಚಿಯಲ್ಲಿರುವವನು ಇಚ್ಛೆಯಿಂದ ಕಾಶಿಗೆ ಹೋಗಿ ಸೇರುವುದು. ಪ್ರಾಕಾಮ್ಯ–ಸಿದ್ಧಸಂಕಲ್ಪತ್ವ, ಸಂಕಲ್ಪ ಮಾಡಿದುದು ಹಾಗೆಯೇ ಸಿದ್ಧಿಸುವುದು. ಎಟ್ಟುವಮಾಗು ಣಮ್–ಮುಕ್ತ ದಶೆಯಲ್ಲಿ ಆವಿರ್ಭವಿಸುವ ಅಪಹತ ಪಾಪ್ಮತ್ವಾದಿ ಗುಣಾಷ್ಟಕಗಳು. 2) ಅಷ್ಟೌಗುಣಾಃ ಪುರುಷಂ ದೀಪಯಂತಿ ಎಂದು ಹೇಳುವ ಎಂಟು ಗುಣಗಳೂ ವಿವಕ್ಷಿತಗಳಾಗಬಹುದು. ಎಟ್ಟೆಟ್ಟಿಯುಂಕಲೈಹಳ್– ಅರವತ್ತು ನಾಲ್ಕು ವಿದ್ಯಾ ಸ್ಥಾನಗಳು, ಎಟ್ಟಿರದಮೇಲದವುಮ್–ಎಂಟು ರಸಗಳು–ಶೃಂಗಾರ ವೀರ ಕರುಣಾ ಇತ್ಯಾದಿಯಾಗಿ ಹೇಳಿರುವ ಎಂಟು ರಸಗಳಿಗಿಂತ ಮೇಲಾದ ಶಾಂತಿರಸ. ಇವೈಯೆಲ್ಲಾಮ್ – ಇವೆಲ್ಲವೂ ಎಟ್ಟನವೇ–ಇವನಿಗೆ ಇಚ್ಛೆಯುಂಟಾದಾಗ ಲಭಿಸದೆ ಇರುವುವು ಯಾವುವೂ ಇಲ್ಲ. ಆತ್ಮಗುಣಾದಿಹಳ್ ಇತ್ಯಾದಿ ಆತ್ಮಗುಣಗಳು ತುಂಬದೇ ಇರುವುದು ಮಂತ್ರ ಮಂತ್ರಾರ್ಥಾನು ಸಂಧಾನದಲ್ಲಿ ಊಟ್ರಮ್ ಪೋರಾಮೈ ಯಾಲೇ–ವಿಶ್ವಾಸ ಮಾಂದ್ಯದಿಂದ. ಅಷ್ಟೈಶ್ವರ್ಯಾದಿಹಳುಮ್–ಇತ್ಯಾದಿ ಅಷ್ಟೈಶ್ವರ್ಯಗಳು ಸಿದ್ಧಿಸದೇ ಇರು ವುದು ಪರಮೈಕಾಂತಿಯಾದ ಇವನ ಉಪೇಕ್ಷೆಯಿಂದ. ಕಡುಹ ಸಂಸಾರಮ್ ನಿವರ್ತಿಯಾದೊಳ್ಳಿರದು– ಶೀಘ್ರದಲ್ಲಿಯೇ ಸಂಸಾರ ನಿವೃತ್ತಿಯು ಏರ್ಪಡದೇ ಇರುವುದು, ಇಚ್ಛೈಯಿಲ್ ಕುರೈವಾಲೇ- ಮೋಕ್ಷೇಚ್ಛೆಯು ಕಡಿಮೆಯಾಗಿರುವುದರಿಂದ, ಈಗಲೇ ಬೇಕೆಂಬ ತ್ವರೆಯಿಲ್ಲದಿರುವುದು – ಎಂದರ್ಥ.

ಆಹೈಯಾಲೇಯಿರೇ ಇತ್ಯಾದಿ- ಆದಕಾರಣದಿಂದಲೇ ಅಲ್ಲವೇ, 1) ನಮೋನಾರಾಯಣಾಯೇತಿ ಇತ್ಯಾದಿ ಅಷ್ಟಾಕ್ಷರ ಮಂತ್ರವು ಸರ್ವಾರ್ಥಗಳನ್ನೂ ಸಾಧಿಸಿಕೊಡುತ್ತದೆ. ತನ್ನ ವಿಶ್ವಾಸ ಮಾಂದ್ಯದಿಂದಲೋ, ಅನುಸಂಧಾನ ನ್ಯೂನತೆಯಿಂದಲೋ, ಉಪೇಕ್ಷೆಯಿಂದಲೋ, ತ್ವರೆಯಿಲ್ಲದಿರುವುದರಿಂದಲೋ ಇವನು ಅಪೇಕ್ಷಿಸಿದ ಫಲಸಿದ್ಧಿಯು ಉಂಟಾಗುದಿರುತ್ತದೆಯೇ ಹೊರತು ಮಂತ್ರಕ್ಕೆ ಪ್ರಭಾವವಿಲ್ಲವೆಂದಲ್ಲ ಎಂಬುದು ಭಾವ.

ಅವಿದ್ಯಾಪೂತನೋನ್ಮುಕ್ತೈಃ ಇತ್ಯಾದಿ – ಅವಿದ್ಯೆ-ಅಜ್ಞಾನವೆಂಬ ಪೂತನೆಯಿಂದ ಬಿಡಲ್ಪಟ್ಟವರೂ,

---

2) ಅಷ್ಟೌಗುಣಾಃಪುರುಷಂ ದೀಪಯಂತಿ ಪ್ರಜ್ಞಾಚ ಕೌಲ್ಯಂಚ ದಮಃಶ್ರುತಂಚ ।
ಪರಾಕ್ರಮಶ್ಚಾ ಬಹುಭಾಷಿತಾಚ ದಾನಂ ಯಥಾಶಕ್ತಿ ಕೃತಜ್ಞತಾ ಚ ॥

1) ನಾರದೀಯ 1–41

**ಉಯರ್ನ್ದ ನಙ್ಕಾವಲನಲ್ಲಾರ್ ಕ್ಕುರಿಮೈ ತುರನ್ದುಯಿರಾಯ್ ।**
**ಮಯರ್ನ್ದಮೈ ತೀರ್ನ್ದು ಮತ್ತೋರ್ ವಗೈಯಿನ್ರಿಯಡೈಕ್ಕಲಮಾಯ್ ।**
**ಪಯನ್ದವನ್ ನಾರಣನ್ ಪಾದಙ್ಗಳ್ ಶೇರ್ನ್ದಪಲ್ಲವಡಿಯಾರ್ ।**
**ನಯನ್ದ ಕುತ್ತೇವಲೆಲ್ಲಾ ನಾಡು ನನ್ಮನುವೋದಿನವೋ ॥34॥**

**ಇತ್ಥಂ ಸಂಘಟಿತಃ ಪದೈಸ್ತ್ರಿಭಿ ರಸಾ ವೇಕದ್ವಿಪಞ್ಚಾಕ್ಷರೈ ।**
**ರರ್ಥೈಸ್ತತ್ವಹಿತ ಪ್ರಯೋಜನಮಯೈ ರಧ್ಯಾತ್ಮಸಾರೈಸ್ತ್ರಿಭಿಃ ॥**
**ಆದ್ಯ ಸ್ತ್ರ್ಯಕ್ಷರ ವೇದಸೂತಿ ರಜಹತ್ ಸ್ಥೂಲಾದಿವೃತ್ತಿತ್ರಯ**
**ಸ್ತ್ರೈಗುಣ್ಯಪ್ರಶಮಂ ಪ್ರಯಚ್ಛತಿ ಸತಾಂ ತ್ರೈಯ್ಯನ್ತಸಾರೋ ಮನುಃ ॥64॥**

---

ಸನ್ಮಾರ್ಗವನ್ನೂ ಸ್ವಲ್ಪವೂ ಅತಿಲಂಘನ ಮಾಡದೆ ಇರುವವರೂ, ವಿಷಯ ಸುಖಗಳನ್ನು ಆಸ್ವಾದನೆ ಮಾಡವು ದರಲ್ಲಿ ಲಜ್ಜೆಯುಳ್ಳವರೂ ಆದ ಸದಾಚಾರ್ಯರುಗಳಿಂದ ಉಪದೇಶಿಸಲ್ಪಟ್ಟ ಶ್ರೀಮದಾಷ್ಟಕ್ಷರ ಮಂತ್ರಾರ್ಥವು ಈ ರೀತಿಯಲ್ಲಿ ನಿರೂಪಿಸಲ್ಪಟ್ಟಿದೆ.

ಅನಂತರ ಅಧಿಕಾರಾವಸಾನ ಶ್ಲೋಕದಲ್ಲಿ ತತ್ವಹಿತ **ಪುರುಷಾರ್ಥ** ಪರವಾದ ದಶಮ ಯೋಜನೆಯನು, ಪ್ರದರ್ಶಿಸಿ ಪ್ರತ್ಯಕ್ಷರಗಳಲ್ಲಿ ಅರ್ಥವನ್ನು ವಿಶದೀಕರಿಸಿ ಏತಾದೃಶ ಮೂಲ ಮಂತ್ರವನ್ನು ಆಚಾರ್ಯ ಸಕಾಶದಿಂದ ಅಭ್ಯಸಿದುದಾಗಿ ಅನುಸಂಧಿಸುತ್ತಾರೆ. ಅದಾಗಿ **ಉಯರ್ನ್ದ**– ಸರ್ವಜಗತ್ಕಾರಣತ್ವದಿಂದ ನಿಸ್ಸಮಾಭ್ಯಧಿಕನಾಗಿ ಪ್ರಕಾಶಿಸುವ **ನಙ್ಕಾವಲನ್**–ನಮಗೆ ರಕ್ಷಕನಾದ ಶ್ರಿಯಃ ಪತಿಗಿಂತ [ಇದು ಅಕಾರಾರ್ಥ] **ಅಲ್ಲಾರ್ಕ್ಕುರಿ ಮೈ ತುರಂದು**–ಬೇರು ಪಟ್ಟವರಿಗೆ ಶೇಷತ್ವವನ್ನು ಬಿಟ್ಟು (ಇದು ಲುಪ್ತ ಚತುರ್ಥಿ ಮತ್ತು ಉಕಾರಗಳ ಅರ್ಥ) **ಉಯಿರಾಯ್** ಜ್ಞಾನ ಸ್ವರೂಪ ಜ್ಞಾನಗುಣಕನಾದ ಅಹಮರ್ಥವಾಗಿ (ಇದು ಮಕಾರಾರ್ಥ) **ಮಯರ್ನ್ದಮೈ ತೀರ್ನ್ದು**– ಅಹಂಕಾರ ಮಮಕಾರ ರೂಪ ಅವಿದ್ಯೆಯನ್ನು ಬಿಟ್ಟು(ಇದು ಮಃ, ನ ಎಂಬುದರ ಅರ್ಥ) **ಮಟ್ರೋರ್ ವಗೈಯಿನ್ರಿ**– ಬೇರೆ ಉಪಾಯವಿಲ್ಲದೆ, ಇದು ನಮಮ ಕಿಂಚಿತ್ ಸ್ಯಾತ್ ಎಂಬುದರ ಅರ್ಥ. **ಪಯಂದ** ಜಗತ್ಸ್ರಷ್ಟಾವಾದ, **ಅನ್ನಾರಣನ್**– ಸ್ವರೂಪ ರೂಪ ಗುಣ ವಿಭೂತಿ ವಿಶಿಷ್ಟನಾದ ಶ್ರಿಯಃ ಪತಿ ನಾರಾಯಣನ (ನಾರಾಯಣ ಶಬ್ದಾರ್ಥ), **ಪಾದಂಗಳ್‌ಶೇರ್ನ್ದ**- ಶ್ರೀ ಪಾದಗಳನ್ನು ಆಶ್ರಯಿಸಿರುವ, **ಪಲ್ಲವಡಿಯಾರ್**– ನಿತ್ಯಸೂರಿಗಳೊಡನೆ, **ನಯನ್ದ**– ಪ್ರೀತಿಯಿಂದ ಮಾಡುವ **ಕುಟ್ರೇವಲೆಲ್ಲಾಮ್**– ಕೈಂಕರ್ಯಗಳೆಲ್ಲವನೂ, (ಇದು ಆಯ ಶಬ್ದಾರ್ಥ) **ನಾಡು**– ಪ್ರತಿಪಾದಿಸುವ **ನನ್ಮನು**–ಶ್ರೇಷ್ಟವಾದ ಅಷ್ಟಾಕ್ಷರ ಮಂತ್ರವನ್ನು ಓ **ದಿನವೋ**–ಆಚಾರ್ಯ ಸಕಾಶದಿಂದ ಸಾರ್ಥವಾಗಿ ಅಧ್ಯಯನ ಮಾಡಿದೆವು.

ಪ್ರಣವಾದಿ ಪದತ್ರಯಗಳಿಂದ ಕೂಡಿದ **ಈ** ಶ್ರೀಮದಷ್ಟಾಕ್ಷರ ಮಂತ್ರವು ತತ್ವ ಹಿತ ಪುರುಷಾರ್ಥ ಗಳನ್ನು ತಿಳಿಸಿ ಬ್ರಹ್ಮವಿತ್ತುಗಳಿಗೆ ಸಂಸಾರನಿವರ್ತಕತ್ವವನ್ನು ಮಾಡುತ್ತದೆಯೆಂದು ಅಧಿಕಾರಾರ್ಥವನ್ನು **ಇತ್ಥಂಸಂಘಟಿತಃಪದೈಃ** ಎಂದಾರಂಭಿಸುವ ಶ್ಲೋಕದಿಂದ ನಿರೂಪಿಸುತ್ತಾರೆ. ಅದಾಗಿ: – ಏಕ**ದ್ವಿಪಂಚಾಕ್ಷರೈಃ** - ಓಮ್ ಎಂಬ ಏಕಾಕ್ಷರ, **ನಮಃ** ಎಂಬ ಎರಡು ಅಕ್ಷರಗಳು ನಾರಾಯಣಾಯ ಎಂಬ ಐದು ಅಕ್ಷರ ಗಳು **ಇತ್ಥಂ**-ಹೀಗೆ **ತ್ರಿಭಿಃ ಪದೈ ಸಂಘಟಿತಃ**-ಮೂರು ಪದಗಳಿಂದ ಕೂಡಿದ **ಅಧ್ಯಾತ್ಮಸಾರೈಃ**-ವೇದಾಂತಸಾರಗಳಾದ ತತ್ವ-ಹಿತ **ಪ್ರಯೋಜನ ಮಯೈಃ**– ಕ್ರಮವಾಗಿ, ತತ್ವ, ಹಿತ, ಪುರುಷಾರ್ಥಗಳ ಪರಗಳಾದ **ತ್ರಿಭಿಃ ಅರ್ಥೈಃ** ಮೂರು ಅರ್ಥಗಳಿಂದ **ಸಂಘಟಿತಃ**- ಒಂದು ಗೂಡಿದ **ಆದ್ಯಸ್ತ್ರ್ಯಕ್ಷರಃ ವೇದಸೂತಿಃ**–ವೇದಕ್ಕೆ ಮೂಲವಾದ ಮೂರು ಅಕ್ಷರಗಳಿಂದ ಕೂಡಿದ ಪ್ರಣವವನ್ನು ಮೊದಲನೆಯದಾಗಿ ಉಳ್ಳ, **ಅಜಹತ್‌ಸ್ಥೂಲಾದಿವೃತ್ತಿತ್ರಯಃ**- **ಸ್ಥೂಲ** ಸೂಕ್ಷ್ಮ ಪರ ಯೋಜನೆಗಳೆಂಬ ಮೂರು ವೃತ್ತಿಗಳಿಂದ ಕೂಡಿದ ನಮಶಬ್ದವನ್ನುಳ್ಳ **ತ್ರಯ್ಯಂತಸಾರಃ**– **ವೇದಾಂತಸಾರ ಭೂತವಾದ ನಾರಾಯಣ** ಶಬ್ದವನ್ನುಳ್ಳ, **ಮನುಃ**- ಶ್ರೀಮದಷ್ಟಾಕ್ಷರ ಮಂತ್ರವು, **ಸತಾಂ**-

ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ ಶ್ರೀ ಮದ್ವೇಂಕಟನಾಥಸ್ಯ
ವೇದಾಂತಾಚಾರ್ಯಸ್ಯ ಕೃತಿಷು ಶ್ರೀಮದ್ರಹಸ್ಯ ತ್ರಯಸಾರೇ
ಮೂಲಮನ್ತ್ರಾಧಿಕಾರಸ್ಸಪ್ತವಿಂಶಃ
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ

---

ತನ್ನನ್ನು ಅನುಸಂಧಾನ ಮಾಡುವ ಬ್ರಹ್ಮವಿದಗ್ರೇಸರರಿಗೆ, **ತ್ರೈಗುಣ್ಯ ಪ್ರಶಮಾಯ**-ತ್ರಯೋಗುಣಾಃ-ತ್ರೈಗುಣ್ಯಂ ಸತ್ವರಜಸ್ತಮಸ್ಸುಗಳು, ಅವುಗಳ **ಪ್ರಶಮಂ**-ಆತ್ಯಂತಿಕ ನಾಶವನ್ನು ಅಂದರೆ ಪ್ರಕೃತಿ ಸಂಬಂಧ ವಿಮೋಚನ ವನ್ನು ಪ್ರಯಚ್ಛತಿ- ಕೊಡುತ್ತದೆ,

ಶ್ರೀಮದಷ್ಟಾಕ್ಷರ ದಿವ್ಯ ಮಂತ್ರವನ್ನು ಸಾರ್ಥವಾಗಿ ಆಚಾರ್ಯರುಗಳ ಮೂಲಕ ಉಪದೇಶ ಹೊಂದಿ ಅನುಸಂಧಾನ ಮಾಡುವವರಿಗೆ ಸಂಸಾರ ನಿವೃತ್ತಿಯು ಏರ್ಪಟ್ಟು ಭಗವತ್ಸಾಯುಜ್ಯವು ಉಂಟಾಗಿ ನಿರತಿ ಶಯಾನಂದವು ಲಭಿಸುತ್ತದೆ ಎಂಬು ತಾತ್ಪರ್ಯ.

ಶ್ರೀಮದ್ರಹಸ್ಯತ್ರಯಸಾರದ ಮೂಲಮಂತ್ರಾಧಿಕಾರಕ್ಕೆ ಸಾರ ಚಂದ್ರಿಕಾ ವ್ಯಾಖ್ಯಾನವು ಸಮಾಪ್ತವು.
ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ
ಅಸ್ಮದ್ಗುರು ಪರಂಪರಾಯೈ ನಮಃ

---

ಶ್ರೀಃ

ಶ್ರೀಮತೇ ಹಯಗ್ರೀವಾಯ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

# ದ್ವಯಾಧಿಕಾರಃ

ಆಕರ್ಣಿತೋ ವಿತನುತೇ ಕೃತಕೃತ್ಯ ಕಕ್ಷ್ಯಾಮ್ ।
ಆಮ್ರೇಡಿತೋದಿಶತಿ ಯಶ್ಚ ಕೃತಾರ್ಥಭಾವಮ್ ॥
ಪ್ರತ್ಯೂಷತಾಂ ಭಜತಿ ಸಂಸೃತಿ ಕಾಳರಾತ್ರೇಃ ।
ಪದ್ಮಾಸಹಾಯ ಶರಣಾಗತಿ ಮನ್ತ್ರ ಏಷಃ ॥

---

ಶ್ರೀಮತೇ ಹಯಗ್ರೀವಾಯ ನಮಃ

ಶ್ರೀಮತೇ ಲಕ್ಷ್ಮೀ ನೃಸಿಂಹ ಪರಬ್ರಹ್ಮಣೇನಮಃ

ಪರಾಂಕುಶ ಪರಕಾಲ ಯತಿವರಾದಿಭ್ಯೋನಮಃ ।

ಶ್ರೀಮತೇ ನಿಗಮಂತ ಮಹಾದೇಶಿಕಾಯನಮಃ ।

ಶ್ರೀಮತೇ ಶ್ರೀಸುಂದರ ಸೌಮ್ಯನಾರಾಯಣಾರ್ಯ ಮಹಾದೇಶಿಕಾಯ ನಮಃ ।

ಶ್ರೀಮತೇ ಶ್ರೀನಿವಾಸ ಗೋಪಾಲಾರ್ಯಾಯ ಮಹಾದೇಶಿಕಾಯ ನಮಃ

---

### ಶ್ರೀ ಮದ್ರಹಸ್ಯತ್ರಯಸಾರದ **ದ್ವಯಾಧಿಕಾರಕ್ಕೆ ಸಾರ ಚಂದ್ರಿಕಾ** ವ್ಯಾಖ್ಯಾ.

ಹೀಗೆ ಮೂಲಮಂತ್ರಾಧಿಕಾರವನ್ನು ಅನುಗ್ರಹಿಸಿ ಅನಂತರ ಮೂಲ ಮಂತ್ರದ ವಿವರಣವಾಗಿ ದ್ವಯ ಮಂತ್ರಕ್ಕೆ ವ್ಯಾಖ್ಯಾನವನ್ನು ಅನುಗ್ರಹಿಸುವವರಾಗಿ ಅದರ ಅಸಾಧಾರಣ ಪ್ರಭಾವವನ್ನು ಅಧಿಕಾರದ ಆರಂಭ ದಲ್ಲಿ **ಆಕರ್ಣಿತೋ ವಿತನುತೇ** ಎಂದಾರಂಭಿಸುವ ಶ್ಲೋಕದಿಂದ ಪ್ರಕಾಶ ಪಡಿಸುತ್ತಾರೆ. ಯಃ– ಯಾವ ಒಂದು ಮಂತ್ರವು **ಆಕರ್ಣಿತಃ**– ಭಗವಂತನು ಕೇಳುವಂತೆ ಉಚ್ಚರಿಸಲ್ಪಟ್ಟದಾಗಿ **ಕೃತ ಕೃತ್ಯಕಕ್ಷ್ಯಾಂ** – ಅನುಷ್ಠಿತೋ ಪಾಯನನ್ನಾಗಿ ಕೃತ ಕೃತ್ಯಾವಸ್ಥೆಯನ್ನು **ವಿತನುತೇ**– ಉಂಟುಮಾಡುತ್ತದೆಯೋ. **ಆಮ್ರೇಡಿತಃ**–ಆಮ್ರೇಡಿತಂ ದ್ವಿಸ್ತ್ರಿರುಕ್ತಂ ಇತ್ಯಮರಃ ಸಕೃದುಚ್ಚಾರಣದಿಂದ ಕೃತ ಕೃತ್ಯನಾದವನಿಂದ ದ್ವಯಮರ್ಥಾನು ಸಂಧಾನೇನ ಸಹ ಸದೈವಂ ವಕ್ತಾ, ಎಂಬಂತೆ, ಎರಡು ಮೂರು ಸಲ–ಇದು ಉಪಲಕ್ಷಣವಾಗಿ ಅನಂತ ಕಾಲಗಳಲ್ಲಿ ಅನವರತಾನು ಸಂಧಾನದಿಂದ **ಕೃತಾರ್ಥ ಭಾವಂಚ** ಕೃತಾರ್ಥಭಾವವನ್ನು **ದಿಶತಿ**–ಕೊಡುತ್ತದೆಯೋ ಇದರಿಂದ ಸಕೃದುಚ್ಚಾರಣವು ಉಪಾಯ ಕೋಟಿಯಲ್ಲಿಯೂ, ದ್ವಿತೀಯಾದ್ಯುಚ್ಚಾರಣವು ಕೈಂಕರ್ಯ ಕೋಟಿಯಲ್ಲಿಯೂ ನಿವೇಶಿಸುತ್ತದೆ ಎಂದರ್ಥ. **ಏಷಃ**–ಅಷ್ಟಾಕ್ಷರ ಮಂತ್ರಕ್ಕೂ ಇಲ್ಲದ ಇಂಥಹ ಪ್ರಭಾವವನ್ನುಳ್ಳ **ಪದ್ಮಸಹಾಯ ಶರಣಾಗತಿ ಮಂತ್ರಃ**–ಲಕ್ಷ್ಮೀ ನಾರಾಯಣನ ಸಹಾಯನಾದ ಶರಣಾಗತಿ ಪ್ರತಿಪಾದಕವಾದ ಮಂತ್ರವು, **ಸಂಸೃತಿಕಾಳ ರಾತ್ರೇಃ**-ಸಂಸಾರವೆಂಬ ಕಾಳ ರಾತ್ರಿಗೆ–**ಪ್ರತ್ಯೂಷತಾಂ**ಪ್ರಾತಃ ಸಂಧ್ಯಾಕಾಲದಂತೆ-ಪ್ರತ್ಯೂಷೋಹರ್ಮುಖಂಕಲ್ಯಂ" ಎಂದು ಅಮರ**ಭಜತಿ**–ಆಗುತ್ತದೆ ಅದಾಗಿ ಬೆಳಗಿನ ಝಾವದ ಬೆಳಕು ಹರಿದರೆ ಕತ್ತಲೆಯು ನಿವರ್ತಿಸಲ್ಪಡುವಂತೆ ಒಂದು ಸಲ ಈ ಶರಣಾಗತಿ ಮಂತ್ರೋ ಚ್ಚಾರಣೆಯು ಸಂಸಾರವೆಂಬ ಕತ್ತಲೆಯನ್ನು ಹೊಗಲಾಡಿಸುತ್ತದೆ ಎಂದು ತಾತ್ಪರ್ಯ.

## ದ್ವಯ ಮನ್ತ್ರಃ ಅಷ್ಟಾಕ್ಷರಸ್ಯ ವಿವರಣಮ್.

ತಿರುಮನ್ತ್ರತ್ತಿಲ್ ಮಧ್ಯಮಪದತ್ತಿಲ್ ಆರ್ಥಮಾಹವಾದಲ್, ಶಾಬ್ದಮಾಹವಾದಲ್, ಶೊನ್ನ ಉಪಾಯ ವಿಶೇಷತ್ತೈಯುಮ್, ಇದಿನ್ ಫಲಮಾಹತೃತೀಯ ಪದತ್ತಿಲ್ ಶೊನ್ನಪುರುಷಾರ್ಥ ವಿಶೇಷ ತ್ತೈಯುಮ್ ವಿಶದಮಾಹ ಪ್ರಕಾಶಿಪ್ಪಿಕ್ಕಿರದು ದ್ವಯಮ್.

### ಅಯಂ ಶ್ರುತಿಮೂಲ ತಾನ್ತ್ರಿಕಮನ್ತ್ರಃ

ಇದು ಕಠವಲ್ಲಿಯಿಲೇ ಪಿರಿಯವೋದಿಚ್ಚೇರ್ತ್ತನುಸಂಧಿಕ್ಕ ವಿಧಿಕ್ಕೈಯಾಲುಮ್, ಭಗವಚ್ಛಾಸ್ತ್ರ ತ್ತಿಲೇ ಶ್ರೀ ಪ್ರಶ್ನಸಂಹಿತಾದಿಹಳಿಲೇ ವರ್ಣೋದ್ಧಾರಾದಿಗಳುಮ್ಪಣ್ಣಿ ಪ್ರತಿಪಾದಿಕ್ಕೈಯಾಲುಮ್, ಶ್ರುತಿ ಮೂಲಮಾನ ತಾನ್ತ್ರಿಕ ಮನ್ತ್ರಮ್.

ಇತ್ತೈಪೂರ್ವಾಚಾರ್ಯವಾಕ್ಯಮೆನ್ರು ಶಿಲರ್ ಶೊನ್ನದವುಮ್, ಆಪ್ತರುಪದೇಶಿತ್ತಾರೆನ್ರು ಆದರಿಕ್ಕೈ

---

### ದ್ವಯವು ತಿರುಮಂತ್ರದ ಅರ್ಥ ವಿವರಣೆ

ತಿರು ಮಂತ್ರತ್ತಿಲ್ ಇತ್ಯಾದಿ ಶ್ರೀ ಮದಷ್ಟಾಕ್ಷರ ಮಂತ್ರದಲ್ಲಿ ಮಧ್ಯಮ ಪದದಲ್ಲಿ ಅರ್ಥ ಮಾಹವಾದ ಲ್ ಶಾಬ್ದಮಾಹವಾದಲ್ ಶೊನ್ನ ಇತ್ಯಾದಿ–ಸೂಕ್ಷ್ಮ ಯೋಜನೆಯಲ್ಲಿ ಅರ್ಥವಾಗಿಯೂ ಸ್ಥೂಲ ಪರ ಯೋಜನೆ ಗಳಲ್ಲಿ ಶಾಬ್ದವಾಗಿಯೂ ಹೇಳಿದ ಶರಣಾಗತಿರೂಪ ದಿವ್ಯ ಮಿಥುನೋದ್ದೇಶ್ಯವಾದ ಉಪಾಯ ವಿಶೇಷವನ್ನು, ಇವರ ಫಲವಾಗಿ ತೃತೀಯ ಪದತ್ತಿಲ್ಶೊನ್ನ ಇತ್ಯಾದಿ– ನಾರಾಯಣಾಯ ಎಂಬ ಮೂರನೇ ಪದದಲ್ಲಿ ಹೇಳಿದ ದಿವ್ಯ ಮಿಥುನೋದ್ದೇಶ್ಯಕವಾದ ಪುರುಷಾರ್ಥ ವಿಶೇಷವನ್ನೂ ವಿಶದವಾಗಿ ಅಂದರೆ ಉಪಾಯವು ಶ್ರೀ ಮನ್ನಾ ರಾಯಣ ಚರಣಾರವಿಂದಗಳಲ್ಲಿ ಮಾಡುವ ಶರಣಾಗತಿಯೆಂದೂ ಪುರುಷಾರ್ಥವೂ ಅನಿಷ್ಟ ನಿವೃತ್ತಿಪೂರ್ವಕ ಶ್ರೀ ಮನ್ನಾರಾಯಣನ ಅನುಭವ ಪರೀವಾಹವಾದ ಕೈಂಕರ್ಯವೆಂದೂ ದ್ವಯ ಮಂತ್ರವು ಪ್ರಕಾಶ ಪಡಿಸುತ್ತದೆ.

### ದ್ವಯವು ಶ್ರುತಿಮೂಲವಾದ ತಾಂತ್ರಿಕ ಮಂತ್ರ

ಇದು ಕಠವಲ್ಲಿಯಿಲ್ ಇತ್ಯಾದಿ ಈ ದ್ವಯ ಮಂತ್ರವು ಕಠವಲ್ಲಿಯಲ್ಲಿ, ಎರಡು ಖಂಡಗಳನ್ನು ಬೇರೆ ಬೇರೆ ಯಾಗಿ ಹೇಳಿ, ಆದಾಗಿ "ಶ್ರೀ ಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ", ಎಂದು ಮೊದಲು ಹೇಳಿ ಮಧ್ಯದಲ್ಲಿ ಇದಂ ಪೂರ್ಣಮದಃ ಪೂರ್ಣಂ ಇತ್ಯಾದಿ ವಾಕ್ಯಗಳನ್ನು ಹೇಳಿ ಅನಂತರ "ಶ್ರೀಮತೇ ನಾರಾಯಣಾಯ ನಮಃ" ಎಂದು ಬೇರೆಯಾಗಿ ಹೇಳಿ ಶೇರ್ತ್ತನು ಸಂಧಿಕ್ಕ ವಿಧಿಕ್ಕೈಯಾಲುಮ್ ಇತ್ಯಾದಿ – ಪುರುಷಾರ್ಥ ಕಾಂಕ್ಷಿಗಳು "ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ । ಶ್ರೀಮತೇ ನಾರಾಯಣಾಯ ನಮಃ॥" ಎಂದು ಸೇರಿಸಿ ಅನುಸಂಧಾನ ಮಾಡಬೇಕೆಂದು, ಅಲ್ಲೇ ವಿಧಿಸಿರುವುದರಿಂದಲೂ ಭಗವಚ್ಛಾಸ್ತ್ರದಲ್ಲಿ ಶ್ರೀ ಪ್ರಶ್ನಸಂಹಿತಾ ದಿಗಳಲ್ಲಿ ವರ್ಣೋದ್ಧಾರಾದಿಹಳುಮ್ಪಣ್ಣಿ ಶ್ರೀಃ ಪ್ರಥಮಾಕ್ಷರ, ಮಕಾರವು ದ್ವಿತೀಯಾಕ್ಷರ ಇತ್ಯಾದಿ ಕ್ರಮದಿಂದ ಒಂದೊಂದು ಅಕ್ಷರವನ್ನೂ ಎತ್ತಿ ಹೇಳಿ ಪ್ರತಿಪಾದಿಸಿರುವುದರಿಂದಲೂ ಶ್ರುತಿ ಮೂಲವಾದ ತಾಂತ್ರಿಕ ಮಂತ್ರ. ತಾಂತ್ರಿಕ ಮಂತ್ರವೆಂದರೆ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ಜಾತಿಯವರೂ ಹೇಳ ಬಹುದಾದ ಮಂತ್ರ.

ಇತ್ತೈಪೂರ್ವಾಚಾರ್ಯವಾಕ್ಯಮೆನ್ರು ಇತ್ಯಾದಿ–ಇದನ್ನು ಪೂರ್ವಾಚಾರ್ಯರುಗಳ ವಾಕ್ಯವೆಂದು ಕೆಲವರು ಹೇಳಿರುವುದೂ, ಆಪ್ತರು ಉಪದೇಶಿಸಿದರೆಂದು ಆದರಿಸುವುದಕ್ಕೋಸ್ಕರವಾಗಲಿ, ಪರಮಾಚಾರ್ಯನಾದ ಸರ್ವೇಶ್ವ

**ಕ್ಕಾಹವಾದಲ್, ಪರಮಾಚಾರ್ಯನಾನ ಸರ್ವೇಶ್ವರರ್ ಭಗವಚ್ಛಾಸ್ತ್ರತ್ತಿಲೇ ಅರುಳಿಚ್ಚೈಯ್‌ಗೈಯಾಲೇಯಾದ ಲಾಮತ್ತನ್ನೈ.**

**ಇದುಕ್ಕು ಋಷ್ಯಾದಿಹಳುಮ್ ಮೂಲಮನ್ತ್ರಾದಿಹಳಿರ್‌ಪೋಲೇ ಅಪೇಕ್ಷಮಾಣರ್‌ಕ್ಕು ಮನ್ತ್ರವ್ಯಾಕರಣಾದಿಹಳಿರ್ ಪಡಿಯೇ ಕಣ್ಡುಕೊಳ್ಳಲಾಮ್.**

## ದ್ವಯಶಬ್ದಪ್ರವೃತ್ತಿ ನಿಮಿತ್ತಮಾಹ

ಇಮ್ಮನ್ತ್ರಮ್ (೧) "ಸಭ್ರಾತುಶ್ಚರಣೌಗಾಢಂ" ೨) "ಭವಾಂಸ್ತು ಸಹ ವೈದೇಹ್ಯಾ" ಎನ್ನಿರಶ್ಲೋಕ

---

ರಸು, ಭಗವಚ್ಛಾಸ್ತ್ರತ್ತಿಲೇ-ಶ್ರೀಃ ಪ್ರಶ್ನ ಸಂಹಿತಾದಿಗಳಲ್ಲಿ ಅಂತಃಪುರದಲ್ಲಿ ಮಹಾಲಕ್ಷ್ಮಿಗೆ ಕೃಪೆಯಿಂದ ಉಪದೇಶ ಮಾಡಿದನೆಂಬ ಕಾರಣದಿಂದಾಗಲೀ, ಆಮತ್ತನ್ನೈ-ಆಗಬಹುದು. ಇದುಕ್ಕು ಇತ್ಯಾದಿ - ಈ ಮಂತ್ರಕ್ಕೆ ಋಷ್ಯಾದಿ ಛಂದೋದೇವತೆಗಳು ಮೂಲ ಮಂತ್ರಾದಿಗಳ ಹಾಗೆ **ಅಪೇಕ್ಷ ಮಾಣರ್ಕ್ಕು** – ಅಪೇಕ್ಷೆಯುಳ್ಳವರಿಗೆ ಮಂತ್ರ ಶಾಸ್ತ್ರ – ಆದಿಶಬ್ದದಿಂದ ಪಾಂಚರಾತ್ರಾಗಮ ಶಾಸ್ತ್ರಗಳಲ್ಲಿ ಹೇಳಿರುವಂತೆ, ತಿಳಿದುಕೊಳ್ಳಬಹುದು. ಅಪೇಕ್ಷೆಯಿಲ್ಲದವರು ಋಷಿಚ್ಛಂಧೋ ದೇವತೆಗಳನ್ನು ತಿಳಿಯದೆ ಅನುಸಂಧಾನ ಮಾಡಿದರೂ ಯಾತಯಾಮತ್ವಾದಿ ದೋಷಗಳು ಸಂಭವಿಸುವುದಿಲ್ಲ.ವೆಂದು ತಾತ್ಪರ್ಯ. ಪ್ರಪದನ ಸಮಯದಲ್ಲಿ ಋಷಿಚ್ಛಂಧೋ ದೇವತೆಗಳು ಹೇಳಬೇಕಿಲ್ಲ. ಜಪ ಕಾಲದಲ್ಲಿ ಬೇಕು ಎಂದು ತಾತ್ಪರ್ಯ.

ನಾನುಕೂಲ್ಯಂ ನ ನಕ್ಷತ್ರಂ ನತೀರ್ಥಾದಿ ನಿಷೇವಣಮ್ !
ನಪುರಶ್ಚರಣಂ ವಾಪಿ ಮಂತ್ರ ಮಾತ್ರೋಕ್ತಿರಿಷ್ಯತೇ ॥

ಎಂಬುದು ಶಾಸ್ತ್ರ ವಚನ. ಶ್ರೀ ಪ್ರಶ್ನ ಸಂಹಿತೆಯ ಪ್ರಕಾರ ಲಕ್ಷ್ಮೀ ನಾರಾಯಣನು ಋಷಿ. ಗಾಯತ್ರಿಯು ಛಂದಸ್ಸು. ಲಕ್ಷ್ಮೀ ನಾರಾಯಣನು ಮಂತ್ರ ಪ್ರತಿಪಾದ್ಯ ದೇವತೆ.

**ಈ ಮಂತ್ರಕ್ಕೆ "ದ್ವಯ" ಮಂತ್ರ ವೆಂದು ಹೆಸರು ಬರಲುಕಾರಣ.**

**ಇಮ್ಮಂತ್ರಮ್ ಇತ್ಯಾದಿ**- 1) ಸಭ್ರಾತುಶ್ಚರಣೌ ಗಾಢಂ, 2) ಭವಾಂಸ್ತು ಸಹವೈದೇಹ್ಯಾ. ಎಂಬ ಎರಡು **ಶ್ಲೋಕಗಳಲ್ಲಿ** ವಿವಕ್ಷಿತವಾದ ಉಪಾಯೋಪೇಯ ರೂಪವಾದ ಎರಡು **ಅರ್ಥಗಳನ್ನು** ಪ್ರತಿಪಾದಿಸುವುದರಿಂದ ದ್ವಯವೆಂಬ ಹೆಸರನ್ನು ಪಡೆದಿದೆ. ಇದರ **ಭಾವವೇನೆಂದರೆ,** ದಿವ್ಯ ದಂಪತಿಗಳು ಉಪಾಯ ಮತ್ತು ಉಪೇಯ ಭೂತರು. **ಮೂಲ ಮಂತ್ರದಲ್ಲಿಯೂ ಇವರುಗಳು** ಉಪಾಯೋಪೇಯರಾಗಿ ವಿವಕ್ಷಿತರಾಗಿದ್ದರೂ, ವಿಶದವಾದ ಪ್ರತೀತಿಯು

---

1) ರಾಮಾಯಣ 2-31-2

1) ಸಭ್ರಾತುಶ್ಚರಣೌಗಾಢಂ ನಿಪೀಡ್ಯರಘುನಂದನಃ ।
ಸೀತಾಮು ವಾಚಾತಿಯಶಾಃ ರಾಘವಂಚಮಹಾವ್ರತಮ್ ॥

ಶ್ರೀ ಲಕ್ಷ್ಮಣಸ್ವಾಮಿಯು ಸೀತಾವಿಶಿಷ್ಟನಾದ ಶ್ರೀರಾಮಚಂದ್ರನ ಪಾದಗಳಲ್ಲಿ ಮಹಾ ವಿಶ್ವಾಸಾದಿ ಪೂರ್ವಕವಾಗಿ ಶರಣಾಗತಿ ಮಾಡಿ, ಅವರಿಬ್ಬರನ್ನೂ ಕುರಿತು ವಿಜ್ಞಾಪಿಸಿದನು.

2) ಭವಾಂಸ್ತು ಸಹವೈದೇಹ್ಯಾಗಿರಿಸಾನುಷು ರಂಸ್ಯತೇ ।
ಅಹಂ ಸರ್ವಂ ಕರಿಷ್ಯಾಮಿ ಜಾಗತಸ್ಸ್ವಪತಶ್ಚತೇ ॥

ಸ್ವಾಮಿ ನೀವು ವೈದೇಹಿಯೊಡನೆ ಬೆಟ್ಟದ ತಪ್ಪಲು ಪ್ರದೇಶದಲ್ಲಿ ಕ್ರೀಡಿಸುವಾಗ, ನಿಮಗೆ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ನಾನು ಎಲ್ಲಾ ವಿಧವಾದ ಕೈಂಕರ್ಯವನ್ನೂ ಮಾಡುತ್ತೇನೆ.

2) ರಾಮಾಯಣ (2-31-28)

**ದ್ವಯತ್ತಿಲ್ ವಿವಕ್ಷಿತಮಾನ ಉಪಾಯೋಪೇಯರೂಪಮಾನ ಅರ್ಥದ್ವಯತ್ತೈ ಪ್ರತಿಪಾದಿಕ್ಕೈಯಾಲೇ "ದ್ವಯ" ಮೆನ್ರು ಪೇರ್‌ಪೆತ್ತದು.**

**ಅಸ್ಯಮನ್ತ್ರಸ್ಯ ಅಧಿಕಾರೀ ಕಃ ?**

**ಇಪ್ಪಡಿ ಇರುಕ್ಕೈಯಾಲ್ ಉಪಾಯಾನ್ತರಙ್ಗಳಿಲುಮ್ ಉಪೇಯಾನ್ತರಙ್ಗಳಿಲುಮ್ ತುವಕ್ಕತ್ತವನ್ ಇಮ್ಮನ್ತ್ರತ್ತುಕ್ಕು ಪೂರ್ಣಾಧಿಕಾರಿ.**

---

ಈ ಮಂತ್ರದ ಭಾಗ ದ್ವಯಗಳಿಂದ ಉಂಟಾಗುತ್ತದೆ. ಆದ್ದರಿಂದ ಉಪಾಯೋಪೇಯಗಳು ಈ ಶರಣಾಗತಿ ಮಂತ್ರದ ಖಂಡದ್ವಯಗಳಿಂದ ಪ್ರಕಾಶಮಾನವಾದ್ದರಿಂದ, ಈ ಮಂತ್ರವು ದ್ವಯವೆಂದು ಶ್ರುತ್ಯಾದಿ ಪ್ರಸಿದ್ಧ. ಹೇಗೆಂದರೆ, "ಸಭ್ರಾತುಶ್ಚರಣೌಗಾಢಂ" ಎಂಬ ವಚನವು ದ್ವಯ ಮಂತ್ರದ ಪೂರ್ವ ಖಂಡವನ್ನು ಉಪಬ್ರಂಹಿಸುತ್ತದೆ. ಸಮಸ್ತ ಪದವಾದ ಸಭ್ರಾತುಃ ಎಂಬುದಕ್ಕೆ ಸಸೀತಸ್ಯಭ್ರಾತುಃ ಎಂದು ಪದ ವಿಭಾಗ "ಸೀತಾಂ ರಾಘವಂ ಚ ಉವಾಚ" ಎಂದು ಮುಂದೆ ಹೇಳಿರುವುದರಿಂದ, ನಂತವ್ಯರಾಗಿ ಸನ್ನಿಹಿತರಾದ ಸೀತಾರಾಮರಿಬ್ಬರಿಂದಲೂ, ತನ್ನ ಕಾರ್ಯ ವಿಶೇಷವನ್ನು ಆಕಾಂಕ್ಷಿಸುತ್ತಾನೆಯಾದ್ದರಿಂದ, ಇಬ್ಬರಲ್ಲೊಬ್ಬರನ್ನು ಮಾತ್ರ ಆಶ್ರಯಿಸಿದರೆ ದೃಷ್ಟಾ ದೃಷ್ಟ ಪ್ರತ್ಯವಾಯಗಳು ಉಂಟಾಗುವ ಪ್ರಸಂಗವು ಏರ್ಪಡುತ್ತದೆ ಮತ್ತೂ ಲೋಕ ಬಹಿಷ್ಕೃತವಾದ ಆಚಾರ ಪ್ರವರ್ತನವು ವ್ಯಪದೇಶ್ಯರಿಗೆ ಅಯುಕ್ತವಾದದು. ಸೀತಾಂ ರಾಘವಂಚ ಉವಾಚ, ಎಂದು ಇಬ್ಬರನ್ನೂ ಕುರಿತು ಒಂದೇ ವಚನಕ್ರಿಯೆಯು ಪ್ರತೀಯಮಾನವಾಗಿರುವಾಗ ಪತ್ನಿಗೆ ಪುರುಷಕಾರತ್ವ ಮಾತ್ರದಿಂದ ವಚನ ಕ್ರಿಯೆಯನ್ನು ವ್ಯವಸ್ಥೆಗೊಳಿಸುವುದು ಅನ್ಯಾಯ. ಆದ್ದರಿಂದ ಸಿದ್ಧೋಪಾಯ ಭೂತರಾಗಿ ಶರಣಾಗತಿಯಿಂದ ವಶೀಕಾರ್ಯರಾಗುವವರು, ದಿವ್ಯ ದಂಪತಿಗಳಿಬ್ಬರೂ ಸಭ್ರಾತುಃ ಎಂಬ ಶ್ಲೋಕದಿಂದ ಪ್ರಕಾಶಿಸಲ್ಪಡುತ್ತಾರೆ. ಶ್ಲೋಕದಲ್ಲಿ ಚರಣ ಶಬ್ದದಿಂದ ದ್ವಯ ಮಂತ್ರದ ಪ್ರತ್ಯಭಿಜ್ಞಾಪನವು ಸ್ವರಸವಾಗಿ ತಿಳಿಯುತ್ತದೆ. 'ಗಾಢಂ' ಎಂದು ಮಹಾ ವಿಶ್ವಾಸ ಪೂರ್ವಕತ್ವವೂ, ಉಪಾಯಾಂತರ ಶೂನ್ಯತ್ವವೂ, ಆನುಕೂಲ್ಯಾದಿ ಸಂಕಲ್ಪತ್ವಗಳೂ ಸೂಚಿಸಲ್ಪಡುತವೆ. "ನಿವೇದ್ಯ ಎಂಬುದು "ಪ್ರಪದ್ಯೇ" ಎಂಬುದರ ಅರ್ಥ 'ಮಹಾವ್ರತಂ' ಎಂಬುದರಿಂದಲೂ, "ಅಭಯಮ್ ಸರ್ವ ಭೂತೇಭ್ಯೋ ದದಾಮ್ಯೇತದ್ವ್ರತಮ್", ಎಂಬ ತನ್ನ ವಾಕ್ಯದಿಂದ ಪ್ರಪನ್ನ ಸಂರಕ್ಷಣದಲ್ಲಿ ಬದ್ಧದೀಕ್ಷನೆಂಬುದು ತಿಳಿಸಲ್ಪಡುತ್ತದೆ. ಇದರಿಂದ ಶರಣ್ಯಕ್ಕೆ ಉಪಯುಕ್ತಗಳಾದ ವಾತ್ಸಲ್ಯ ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯ, ಪರಮಕಾರುಣಿಕತ್ವಾದಿ ಸಮಸ್ತ ಕಲ್ಯಾಣಗುಣಗಳು ಸಂಗ್ರಹಿಸಲ್ಪಡುತ್ತವೆ. ಸಮುಚ್ಚಯಾರ್ಥಕ "ಚ" ಶಬ್ದದಿಂದ ಸಿದ್ಧೋಪಾಯರುಗಳ, ಪರಸ್ಪರ ದಂಪತಿ ರೂಪ ಗುಣ ಪ್ರಧಾನಭಾವವು ತಿಳಿಸಲ್ಪಟ್ಟರೂ, ಪ್ರಪನ್ನರ ಸಂರಕ್ಷಣೆಯಲ್ಲಿ ಇಬ್ಬರೂ ಸಮನ್ವಿತರೆಂಬುದು ತಿಳಿಸಲ್ಪಡುತ್ತದೆ. "ಅಹಂ ಸರ್ವಂಕರಿಷ್ಯಾಮಿ ಜಾಗ್ರತ ಸ್ಸ್ವಪತಶ್ಚತೇ" ಎಂಬಲ್ಲಿಯ ಯುಷ್ಮತ್ ಪದವು "ಭವಾಂಸ್ತು ಸಹವೈದೇಹ್ಯಾ" ಎಂಬ ವಾಕ್ಯಾನುಸಾರವಾಗಿ "ಸಪತ್ನೀಕಸ್ಯತೇ" ಇತ್ಯಾದಿಯಾಗಿ ವಿಶಿಷ್ಟ ಗ್ರಾಹಕವು. ಆದ್ದರಿಂದ ಶರಣಾಗತಿ ಮಂತ್ರದ ಪೂರ್ವೋತ್ತರ ಖಂಡಗಳಿಂದ ಪ್ರಧಾನೋಪಾಯ ಭೂತರೂ, ಪರಮಪ್ರಾಪ್ಯರೂ ಆದ ದಿವ್ಯ ದಂಪತಿಗಳನ್ನು ಪ್ರಕಾಶಿಸುವುದರಿಂದ ದ್ವಯವೆಂಬ ಸಂಜ್ಞೆಯು ಉಪಪನ್ನವಾಗಿದೆ ಎಂದು ತಾತ್ಪರ್ಯ.

**ಇದಕ್ಕೆ ಅಧಿಕಾರಿ ಯಾರು**

ಇಪ್ಪಡಿಇರುಕ್ಕೈಯಾಲ್ ಇತ್ಯಾದಿ– ಹೀಗೆ ಈ ಮಂತ್ರವು ಲಕ್ಷ್ಮೀ ವಿಶಿಷ್ಟನಾದ ಭಗವಂತನನ್ನೇ ಉಪಾಯವನ್ನಾಗಿಯೂ ಉಪೇಯವನ್ನಾಗಿಯೂ ಪ್ರತಿಪಾದಿಸಿಕೊಂಡಿರುವುದರಿಂದ, ಉಪಾಯಾಂತರತ್ತಿಲುಮ್ ಉಪೇಯಾಂತರತ್ತಿಲುಮ್– ಲಕ್ಷ್ಮೀವಿಶಿಷ್ಟ ನಾರಾಯಣನೆಂಬ ಸಿದ್ಧೋಪಾಯದಲ್ಲಿಯೂ, ಲಕ್ಷ್ಮೀ ವಿಶಿಷ್ಟ ನಾರಾಯಣನೆಂಬ ಪರಮಪ್ರಾಪ್ಯದಲ್ಲೂ ದೃಢಾಭಿಸಂಧಿಯಿಂದ ಉಪಾಯಾಂತರದಲ್ಲಿಯೂ, ಪ್ರಾಪ್ಯಾಂತರದಲ್ಲಿಯೂ ಸಂಬಂಧವಿಲ್ಲದವನು ಈ ಮಂತ್ರಕ್ಕೆ ಪೂರ್ಣಾಧಿಕಾರಿಯಾಗುತ್ತಾನೆ.

### ದ್ವಯಶಬ್ದಸ್ಯ ಅರ್ಥಾನ್ತರಮಾಹ

ಇಮ್ಮನ್ತ್ರಮ್ ವರಣ ಸಮರ್ಪಣಙ್ಗಳೈ ಅಡೈವೇ ಪ್ರತಿಪಾದಿಕ್ಕೈಯಾಲೇ ದ್ವಯಮೆನ್ರು ಶೊಲ್ಲಪ್ಪಡುಹಿರದೆನ್ರುಮ್ ಶಿಲರ್ ಶೊಲ್ಲುವರ್‌ಹಳ್.

ಇಪ್ಪಡಿ "ಶ್ರೀಮನ್ನಾರಾಯಣಸ್ವಾಮಿನ್" ಇತ್ಯಾದಿ ಮನ್ತ್ರಾನ್ತರತ್ತಿಲುಮ್ "ದ್ವಯ" ಶಬ್ದಪ್ರಯೋಗತ್ತುಕ್ಕು ಇಪ್ಪೈಯೇ ನಿಮಿತ್ತಮ್.

### ದ್ವಯಾನುಷ್ಠಾನಕ್ರಮಃ

೧. "ಮನ್ತ್ರರಾಜಮಿಮಂ ವಿದ್ಯಾದ್ಗುರುವಂದನ ಪೂರ್ವ್ವಕಮ್ ।
ಗುರುರೇವ ಪರಂಬ್ರಹ್ಮ ಗುರುರೇವ ಪರಾಗತಿಃ ।
ಗುರುರೇವ ಪರಾವಿದ್ಯಾ ಗುರುರೇವ ಪರಾಯಣಮ್ ।
ಗುರುರೇವ ಪರಃಕಾಮೋ ಗುರುರೇವ ಪರಂಧನಮ್ ।
ಯಸ್ಮಾತ್ತದುಪದೇಷ್ಟಾಸೌ ತಸ್ಮಾದ್ಗುರುತರೋ ಗುರುಃ।
ನಾನುಕೂಲ್ಯಂ ನನಕ್ಷತ್ರಂ ನತೀರ್ಥಾದಿ ನಿಷೇವಣಮ್।
ನಪುರ ಶ್ಚರಣಂ ನಿತ್ಯಂಜಪಂ ವಾಪೇಕ್ಷತೇಹ್ಯಯಮ್।
ನಮಸ್ಕೃತ್ಯ ಗುರುಂ ದೀರ್ಘಪ್ರಣಾಮೈಸ್ತ್ರಿಭಿರಾದಿತಃ।

---

ಇಮ್ಮಂತ್ರಮ್ ಇತ್ಯಾದಿ– ಈ ಮಂತ್ರವು ಶರಣವರಣಾದ್ಯಂಗಗಳನ್ನೂ, ಸಮರ್ಪಣರೂಪವಾದ ಅಂಗಿಯನ್ನೂ ಕ್ರಮವಾಗಿ ಪ್ರತಿಪಾದಿಸುವುದರಿಂದ, ಅದಾಗಿ ಪೂರ್ವಖಂಡವು ಅಂಗಪರ, ಉತ್ತರಖಂಡವು ಅಂಗಿಪರವಾದ್ದರಿಂದ ದ್ವಯವೆಂದು ಹೇಳಲ್ಪಡುತ್ತದೆಯೆಂದು, ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್ ಪ್ರಭೃತಿಗಳು ಹೇಳುತ್ತಾರೆ. ಇಪ್ಪಡಿ "ಶ್ರೀಮನ್ನಾರಾಯಣಸ್ವಾಮಿನ್", ಇತ್ಯಾದಿ– ಹೀಗೆ,

ಶ್ರೀಮನ್ನಾರಾಯಣಸ್ವಾಮಿನ್ ಅನನ್ಯ ಶರಣಸ್ತ್ವವ !
ಚರಣೌಶರಣಂಯಾತಃ ತವಾಸ್ಮ್ಯೈಕ್ಯವಾಹಮಚ್ಯುತ ॥

ಇತ್ಯಾದಿ ಮಂತ್ರಾಂತರವನ್ನೂ ದ್ವಯವೆಂದು ಹೇಳುವುದಕ್ಕೆ ಉಪಾಯೋಪೇಯ ಪ್ರತಿಪಾದಕತ್ವವೂ ಅಂಗಾಗಿ ಪ್ರತಿಪಾದಕತ್ವವೂ ನಿಮಿತ್ತ.

### ದ್ವಯ ಮಂತ್ರವನ್ನು ಉಪದೇಶ ಹೊಂದುವ ಕ್ರಮ

ಮಂತ್ರ ರಾಜವೆಂದು ಹೇಳಲ್ಪಡುವ, "ತದ್ವಿಷ್ಣೋಃ ಪರಮಂಪದಂ" ಎಂಬ ಮಂತ್ರದಲ್ಲಿ ಹೇಳಿರುವ ಗುರುವಂದನ ಮೊದಲಾದವು ಈ ದ್ವಯ ಮಂತ್ರವನ್ನು ಉಪದೇಶವಾಗಿ ಪಡೆಯಲೂ ಬೇಕಾದವು ಎಂದು 1) ಮಂತ್ರರಾಜಮಿಮಂವಿದ್ಯಾತ್" ಎಂದಾರಂಭಿಸಿ ತಿಳಿಸುತ್ತಾರೆ, ಅದಾಗಿ, ಈ ಶ್ರೇಷ್ಠವಾದ ಮಂತ್ರವನ್ನು, ಆಚಾರ್ಯರನ್ನು ನಮಸ್ಕರಿಸಿ, ಅವರಿಂದ ಪಡೆಯಬೇಕು. ಗುರುವೇ ಸಾಕ್ಷಾತ್ ಸರ್ವೇಶ್ವರನು. ಸರ್ವೇಶ್ವರನೇ ಆಚಾರ್ಯರೂಪದಲ್ಲಿ ತೋರಿ ಶಿಷ್ಯನಿಗೆ ಮಂತ್ರ ಮಂತ್ರಾರ್ಥಗಳನ್ನು ಉಪದೇಶಿಸುತ್ತಾನೆ ಗುರುವೇ ಪರಾಗತಿಃ-ಪ್ರಾಪಕನು ಪರಂವಿದ್ಯಾ– ವಿದ್ಯೋಪದೇಶವನ್ನು ಮಾಡಿ ಗುರುವು ಪ್ರಾಪಕನಾಗುತ್ತಾನೆ–ಭಗವಂತನನ್ನು ಪಡೆಯುವಂತೆ ಸಹಾಯಮಾಡುತ್ತಾನೆಂದರ್ಥ. ಗುರುರೇವ ಪರಾಯಣಮ್-ಗುರುವೇ ಪರಮಪ್ರಾಪ್ಯನು. ಪರಃ ಕಾಮಃ ಉತ್ಕೃಷ್ಟವಾದ ಮೋಕ್ಷವನ್ನು ಪಡೆಯಲು ನಿಮಿತ್ತಭೂತನು, ಗುರುರೇವ ಪರಂಧನಮ್–ಜ್ಞಾನ ಶಕ್ತ್ಯಾದಿ ರೂಪ ಧನವು ಆಚಾರ್ಯನಿಂದಲೇ ಲಭಿಸತಕ್ಕದ್ದು- ಯಸ್ಮಾತ್ತದುಪದೇಷ್ಟಾಸೌ- ಆ ಮಂತ್ರವನ್ನು ಉಪದೇಶಿಸುವುದರಿಂದ ಗುರುವೇ ಬಹಳ ಪೂಜ್ಯನು. ನಾನುಕೂಲ್ಯಂ ನನಕ್ಷತ್ರಂ ಇತ್ಯಾದಿ– ಅನುಕೂಲ್ಯವೆಂದರೆ

---

1) ಸಾತ್ವಿಕತಂತ್ರ

**ತತ್ಪಾದೌಗೃಹ್ಯ ಮೂರ್ಧ್ನಿಸ್ವೇ ನಿಧಾಯ ವಿನಯಾನ್ವಿತಃ।**
**ಗೃಹ್ಣೀಯಾನ್ಮಂತ್ರರಾಜಾನಂ ನಿಧಿಕಾಂಕ್ಷೀವ ನಿರ್ಧನಃ।**
**ಲಬ್ಧೈವಂ ಮನ್ತ್ರರಾಜಾನಂ ಮಾಂಗಚ್ಛೇಚ್ಛರಣಂ ನರಃ ।**
**ಅನೇನೈವತು ಮನ್ತ್ರೇಣ ಸ್ವಾತ್ಮಾನಂ ಮಯಿ ನಿಕ್ಷಿಪೇತ್ ।**
**ಮಯಿನಿಕ್ಷಿಪ್ತಕರ್ತ್ತವ್ಯಃ ಕೃತಕೃತ್ಯೋಭವಿಷ್ಯತಿ-"ಎನ್ರು ಮನ್ತ್ರಾನ್ತರತ್ತಿಲ್ ಚೊನ್ನ ಗುರೂಪಸತ್ತ್ಯಾದಿಹಳ್ ಇಙ್ಗುಮ್ ವರಪ್ರಾಪ್ತಮ್.**

## ದ್ವಯಮನ್ತ್ರಮಾಹಾತ್ಮ್ಯ ಕಥನಮ್

**ಆಸ್ತಿಕನುಕ್ಕು ಇಮ್ಮನ್ತ್ರಾರ್ಥತ್ತಿನುಡೈಯ ಸಮುದಾಯ ಜ್ಞಾನ ಪೂರ್ವಕಮಾನ ಸಕೃದುಚ್ಚಾರಣಮೇ ಉತ್ತಾರಕ ಮೆನ್ರುಮಿಡಮ್ ಶಾಸ್ತ್ರ ಸಿದ್ಧಮ್.**

---

ಮಂತ್ರದ ಪ್ರಥಮಾಕ್ಷರಕ್ಕೂ, ತನ್ನ ಹೆಸರಿನ ಪ್ರಥಮಾಕ್ಷರಕ್ಕೂ ಸಿದ್ಧಾರಿಕೋಷ್ಟಗಳು. ಇವನ್ನು ನೋಡಬೇಕಾದ ಆವಶ್ಯಕತೆಯಿಲ್ಲ. ನಕ್ಷತ್ರಗಳ ಹೊಂದಾಣಿಕೆ, ಯೋಗ ಮೊದಲಾದವೂ, ಪುಣ್ಯ ತೀರ್ಥ ಸ್ನಾನವೂ, ಪುರಶ್ಚರಣೆ ಹೋಮ, ಪುಷ್ಪಾಂಜಲಿಯೂ, ಜಪವೂ, ಬೇಕಿಲ್ಲ **ನಮಸ್ಕೃತ್ಯ** ಇತ್ಯಾದಿ ಆಚಾರ್ಯನನ್ನು ಆದಿತಃ-ಮೊದಲು, ಮೂರು ದಂಡವತ್ ಪ್ರಣಾಮಗಳಿಂದ ನಮಸ್ಕರಿಸಿ ಅವರ ಪಾದಗಳನ್ನು ತನ್ನ ತಲೆಯಲ್ಲಿ ಧರಿಸಿ, ವಿನಯ ಪೂರ್ವಕವಾಗಿ ಈಮಂತ್ರವನ್ನು ನಿರ್ಧನನು ನಿಧಿಯನ್ನು ಅಪೇಕ್ಷಿಸುವಂತೆ ಪಡೆಯಬೇಕು. ಹೀಗೆ ಮಂತ್ರವನ್ನು ಪಡೆದು **ಮಾಂಗಚ್ಛೇತ್ ಶರಣಂನರಃ**-ನನ್ನನ್ನು ಶರಣಹೊಂದಬೇಕು. ಇದು ಭಗವಂತನ ವಾಕ್ಯವಾದ್ದರಿಂದ, ನನ್ನನ್ನು ಎಂದು ನಿರ್ದೇಶಿಸಿರುತ್ತಾನೆ. **ಅನೇನೈವತು ಮಂತ್ರೇಣ** ಇತ್ಯಾದಿ- ಈ ಮಂತ್ರವನ್ನು ಕರಣ ಮಂತ್ರವನ್ನಾಗಿ ಬಳಸಿ ತನ್ನ ಆತ್ಮ ವಸ್ತುವನ್ನು ನನ್ನಲ್ಲಿ ಸಮರ್ಪಿಸಬೇಕು. ಆತ್ಮ ರಕ್ಷಾ ಭರ ಸಮರ್ಪಣವನ್ನು ಮಾಡಬೇಕು ಎಂದರ್ಥ. ಹಾಗೆ ನನ್ನಲ್ಲಿ (ಭಗವಂತನಲ್ಲಿ) ಮಾಡಿದ ಆತ್ಮ ನಿಕ್ಷೇಪದಿಂದ ಕೃತ ಕೃತ್ಯನಾಗುತ್ತಾನೆ, **ಎನ್ರು ಪ್ರಪತ್ತಿ ಮಂತ್ರಾಂತರತ್ತಿಲ್ ಶೊನ್ನ** ಇತ್ಯಾದಿ- ಈ ರೀತಿಯಾಗಿ ಪ್ರಪತ್ತಿ ಮಾಡಲು ಹೇಳಲ್ಪಟ್ಟ "ತದ್ವಿಷ್ಣೋಃ ಪರಮಂಪದಂ" ಎಂಬ ಮಂತ್ರದಲ್ಲಿ ಹೇಳಿದ **ಗುರೂಪಸತ್ತ್ಯಾದಿಹಳ್**- ಆಚಾರ್ಯ ಸಮಾಶ್ರಯಣವೇ ಮೊದಲಾದವು, **ಇಂಗುಮ್ ವರಪ್ರಾಪ್ತಮ್**-ಇಲ್ಲಿಯೂ ಅನುಷ್ಠಿಸಬೇಕಾದವು. ಪ್ರಪತ್ತಿ ಮಂತ್ರಗಳಿಗೆಲ್ಲಾ ಏರ್ಪಟ್ಟ ಪ್ರಭಾವವಿದು.

## ದ್ವಯ ಮಂತ್ರದ ಪ್ರಭಾವ.

ಹೀಗೆ ಪ್ರಪತ್ತಿ ಮಂತ್ರಾಂತರಗಳ ಪ್ರಭಾವವನ್ನು ತಿಳಿಸಿ, ದ್ವಯ ಮಂತ್ರದ ಅಸಾಧಾರಣ ಪ್ರಭಾವವನ್ನು **ಆಸ್ತಿಕನುಕ್ಕು** ಎಂದಾರಂಭಿಸಿ ಆಚಾರ್ಯರು ತಿಳಿಸುತ್ತಾರೆ. ಅದಾಗಿ, **ಆಸ್ತಿಕನ್**- ಮಹಾ ವಿಶ್ವಾಸಶಾಲಿ, ಮಹಾ ವಿಶ್ವಾಸದಿಂದ ಕೂಡಿದವನಿಗೆ **ಇಮ್ಮಂತ್ರಾರ್ಥತ್ತಿನುಡೈಯ** ಇತ್ಯಾದಿ- ಈ **ದ್ವಯಮಂತ್ರಕ್ಕೆ** ಅರ್ಥವಾದ ಅಂಗಾಗಿಗಳ ಸಮುದಾಯ ಜ್ಞಾನ **ಪೂರ್ವಕವಾದ** ಸಕೃದುಚ್ಚಾರಣವೇ ಸಂಸಾರೋತ್ತಾರಕವಾಗಿ ಸಾಕ್ಷಾನ್ಮೋಕ್ಷ ಸಾಧನವೆಂಬುದು ಶಾಸ್ತ್ರ **ಸಿದ್ಧಮ್**. "ಸಕೃದುಚ್ಚಾರ ಸ್ಸಂಸಾರ ಮೋಚಕಂ ಭವತಿ", "ಸಕೃಜ್ಜಪ್ತೇನಮಂತ್ರೇಣ ಕೃತ ಕೃತ್ಯ ಸ್ಸುಖೀಭವೇತ್", ದ್ವಯೇನ ಪ್ರಾಪ್ನುಯಾತ್ ಪುತ್ರ ತದ್ವಿಷ್ಣೋಃ ಪರಮಂ ಪದಮ್", ಇತ್ಯಾದಿ ಶಾಸ್ತ್ರಗಳಿಂದ ಸಿದ್ಧ

ಹರೇರ್ವಿಜ್ಞಾಯಪಾರಮ್ಯಂ ಅಪಗಚ್ಛೇನ್ನರಾಧಮಃ!
**ಸೌಲಭ್ಯ ವೇದೀಕಶ್ಚಿತ್ತಂ ಭಜತೇ ಪರಮಾಸ್ತಿಕಃ॥,**

ಎಂದು ಭಗವಂತನ ಪರತ್ವವನ್ನು ತಿಳಿದು ಅವನು ನಮ್ಮ ಪುಣ್ಯ ಪಾಪಾನುಗುಣವಾಗಿ ಫಲವನ್ನೂ ಶಿಕ್ಷೆ

ಇವ್ಮನ್ತ್ರ ಪ್ರಭಾವತ್ತೈ 1) "ಯೇನಕೇನಾಪಿ ಪ್ರಕಾರೇಣ ದ್ವಯುವಕ್ತಾತ್ವವ್" ಎನ್ರು ಮನ್ತ್ರಾನ್ತರಙ್ಗಳಿಲ್ನಾಟ್ಟಲ್ ವ್ಯಾವೃತ್ತಿತೋತ್ತ ಅರುಳಿಚ್ಚೆಯ್‌ದಾರ್.

2) "ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ ।
ಪುಮಾನ್ ವಿಮುಚ್ಯತೇ ಸದ್ಯಸ್ಸಿಂಹತ್ರಸ್ತೈರ್ಮೃಗೈರಿವ ॥"

3) "ನಾಮ್ನೋಸ್ತೇಯಾವತೀ ಶಕ್ತಿಃ ಪಾಪನಿರ್ಹರಣೇ ಹರೇ ।
ಶ್ವಪಚೋಽಪಿ ನರಃ ಕರ್ತುಂ ಕ್ಷಮ ಸ್ತಾವನ್ನ ಕಿಲ್ಬಿಷಮ್" ಇತ್ಯಾದಿಹಳಿಲೇ ತಿರುನಾಮ ಸಂಕೀರ್ತನ ಮಾತ್ರತ್ತಿನುಡೈಯ ಪ್ರಭಾವಮಿರುಕ್ಕುಂಪಡಿ ಶರಣ್ಯ ಶರಣಾಗತಿ ತತ್ಫಲ ವಿಶೇಷಙ್ಗಳೈ ಪೂರ್ಣಮಾಹ ಪ್ರಕಾಶಪ್ಪಿಕ್ಕಿರ ಇವ್ಮನ್ತ್ರ ವಿಶೇಷತ್ತಿನುಡೈಯ ಸಕೃದುಚ್ಚಾರಣ ಮಾತ್ರತ್ತಿಳವಿಲುಳ್ಳ ಪ್ರಭಾವಮ್ ಶ್ರುತ್ಯಾದಿ ಪ್ರಮಾಣತ್ತಾಲೇ ಸುಗ್ರಹಮ್.

---

ಯನ್ನೂ ಕೊಡುತ್ತಾನೆ ಸುಲಭವಾಗಿ ಆಶ್ರಯಣೀಯ ನಲ್ಲನೆಂಬ ಭಾವನೆಯಿಂದ ದೂರ ಸರಿಯುವವನು ನರಾಧಮನು ಅವನ ಸೌಲಭ್ಯ ಸೌಶೀಲ್ಯ ಗುಣಗಳನ್ನು ತಿಳಿದು ಪರಮಾಸ್ತಿಕನು ಆ ಭಗವಂತನು ಶರಣಾಗತರನ್ನು ಸರ್ವಪಾಪಗಳಿಂದಲೂ ವಿನಿರ್ಮುಕ್ತರನ್ನಾಗಿಮಾಡಿ ಕಾಪಾಡುತ್ತಾನೆಂಬ ಮಹಾ ವಿಶ್ವಾಸದಿಂದ ಕೂಡಿ ಆಶ್ರಯಿಸುತ್ತಾನೆ. ಅಂಥಹ ಮಹಾವಿಶ್ವಾಸಶಾಲಿಯು ಈ ದ್ವಯ ಮಂತ್ರವನ್ನು ಅಂಗಾಂಗಿ ಸಮುದಾಯ ಜ್ಞಾನದೊಡನೆ ಒಂದು ಸಲ ಉಚ್ಚರಿಸಿದರೆ ಅದರಿಂದಲೇ ಸಂಸಾರ ನಿಸ್ತಾರವು ಏರ್ಪಡುತ್ತದೆ ಎಂಬುದು ಎವ ಕಾರಾರ್ಥ.

ಇತರ ಶರಣಾಗತಿಮಂತ್ರಗಳಿಗಿಂತ ಈ ಮಂತ್ರಕ್ಕೆ ಇರುವ ಪ್ರಭಾವಾತಿಶಯವನ್ನು ಇವ್ಮಂತ್ರಪ್ರಭಾವತ್ತೈಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ 1) "ಯೇನ ಕೇನಾಪಿ ಪ್ರಕಾರೇಣದ್ವಯ ವಕ್ತಾತ್ವಂ ಎಂದು ಸಮುದಾಯ ಜ್ಞಾನ ಪೂರ್ವಕವಾಗಿಯೋ ವಿಶದ ಜ್ಞಾನ ಪೂರ್ವಕವಾಗಿಯೋ ದ್ವಯ ಮಂತ್ರವನ್ನು ಉಚ್ಚರಿಸಿದವನಿಗೆ ನಿಶ್ಶೇಷ ಸಂಸಾರ ನಿವೃತ್ತಿಯುಹೇಳಲ್ಪಟ್ಟಿರುವುದರಿಂದಮಂತ್ರಾಂತರಗಳಿಂದ ವ್ಯಾವೃತ್ತಿ-ವೈಲಕ್ಷಣ್ಯವು ತೋರುವಂತೆ ಈ ದ್ವಯಮಂತ್ರದ ಅಸಾಧಾರಣ ಪ್ರಭಾವವನ್ನು ಭಗವದ್ಭಾಷ್ಯಕಾರರು ಗದ್ಯದಲ್ಲಿ ನಿರೂಪಿಸಿರುತ್ತಾರೆ. ಅನಂತರ ಕೈಮುತಿಕ ನ್ಯಾಯದಿಂದಲೂ ಈ ಮಂತ್ರಕ್ಕೆ ಪ್ರಭಾವವು ಅತಿಶಯವಾದದ್ದು ಎಂದು 4) "ಅವಶೇನಾಪಿ" ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಅವಶೇನಾಪಿ ಬುದ್ಧಿಪೂರ್ವಕವಿಲ್ಲದೆಯೇ ಭಗವಂತನ ನಾಮೋಚ್ಚಾರಣೆಮಾಡಿದರೂ, ಸಿಂಹದ ಹೆದರಿಕೆಯಿಂದ ಹುಲಿ ಮೊದಲಾದವು ತಾವು ಆಹಾರಾರ್ಥವಾಗಿ ಹಿಡಿದುಕೊಂಡ ಮೊಲ ಮೊದಲಾದ ಪ್ರಾಣಿಗಳನ್ನು ಬಿಟ್ಟು ಬಿಟ್ಟು ಓಡಿಹೋಗುವಂತೆ ತಕ್ಷಣವೇ ಪುರುಷನ ಸರ್ವ ಪಾಪಗಳೂ ಬಿಟ್ಟುಹೋಗುತ್ತವೆ 3) ನಾಮಸ್ತೇ ಯಾವತೀ ಶಕ್ತಿಃ ಇತ್ಯಾದಿ ಎಲೈ ಪಾಪಹರನಾದ ಭಗವಂತನೇ, ಪಾಪಗಳನ್ನು ಹೋಗಲಾಡಿಸುವುದರಲ್ಲಿ ನಿನ್ನ ನಾಮೋಚ್ಚಾರಣೆಗೆ ಎಷ್ಟು ಶಕ್ತಿಯಿದೆಯೋ ಅಷ್ಟು ಪಾಪವನ್ನು ಶ್ವಪಚನೂ ಮಾಡಲು ಸಮರ್ಥನಾಗಲಾರನು ಇತ್ಯಾದಿಗಳಲ್ಲಿ ಭಗವದ್ದಿವ್ಯನಾಮ ಸಂಕೀರ್ತನ ಮಾತ್ರಕ್ಕೆ ಇರುವ ಪ್ರಭಾವವನ್ನು ನೋಡಿದರೆ ಶರಣ್ಯ ಶರಣಾಗತಿ ತತ್ಫಲ ವಿಶೇಷಂಗಳೈ ಇತ್ಯಾದಿ–ಶರಣ್ಯನ ಸ್ವರೂಪ ಸ್ವಭಾವ, ಶರಣಾಗತಿಯ ಆ ಅಂಗಾಂಗಿಭಾವ, ಶರಣಾಗತಿಯ ಫಲ, ಇವುಗಳನ್ನು ಪೂರ್ಣವಾಗಿ ಪ್ರಕಾಶಪಡಿಸುವ ಇವ್ಮಂತ್ರ ವಿಶೇಷತ್ತಿನಡೈಯ ಈ ದ್ವಯ ಮಂತ್ರದ ಸಕೃದುಚ್ಚಾರಣ ಮಾತ್ರತ್ತಿಳವಿಲುಳ್ಳ ಪ್ರಭಾವಮ್ ಒಂದು ಸಲ ಉಚ್ಚಾರಣ ಮಾತ್ರದಿಂದ ಏರ್ಪಡುವ ಪ್ರಭಾವವು, ಶ್ರುತ್ಯಾದಿ ಪ್ರಮಾಣ ಬಲತ್ತಾಲೇ ಸುಗ್ರಹಮ್. "ಸಕೃದುಚ್ಚಾರ ಸ್ಸಂಸಾರ ಮೋಚನಂ ಭವತಿ", ಎಂಬ ಕಠಶ್ರುತಿ, ಆದಿಶಬ್ದದಿಂದ ಭಗವಚ್ಛಾಸ್ತ್ರ ಪಾದ್ಮ ಪುರಾಣ ವಚನಗಳಿಗೆ ಗ್ರಹಣ. ಪ್ರಮಾಣಗಳ ಬಲದಿಂದ ಸುಗ್ರಹಃ ಸುಲಭವಾಗಿ ತಿಳಿಯಲ್ಪಡುತ್ತದೆ.

---

1) ಶರಣಾಗತಿಗದ್ಯ. 2) ವಿಷ್ಣುಪುರಾಣ 6-8-19 3) ವಿಷ್ಣುಸ್ಮೃತಿ 109

ಇಪ್ಪ್ರಭಾವ ನಿಬಂಧನತ್ತೈಯುಮ್ ಇಙ್ಗೇ ಪ್ರಮಾಣ ಸಂಪ್ರದಾಯಙ್ಗಳಾಲೇ ಕಂಡುಕೊಳ್ವದು. ಇಪ್ಪಡಿಪ್ಪಟ್ಟ ರಹಸ್ಯತಮಾರ್ಥಙ್ಗಳಿಲ್ ಹೇತು ನಿರೂಪಣಮ್ ಪಣ್ಣಕ್ಕಡವದನ್ರು. ಶಾಸ್ತ್ರತ್ತೈಕ್ಕೊಂಡು ವಿಶ್ವಸಿಕ್ಕ ಮತ್ತನ್ವೈಯೆನ್ರುಮಿಡಮ್ ಮಹಾಭಾರ ತಾದಿಹಳಿಲೇ,

1) “ದೇವ ಗುಹ್ಯೇಷು ಚಾನ್ಯೇಷು ಹೇತು ರ್ದೇವಿ ನಿರರ್ಥಕಃ ।
ಬಧಿರಾಂಧವದೇ ವಾತ್ರ ವರ್ತಿತವ್ಯಂ ಹಿತೈಷಿಣಾ ॥” ಇತ್ಯಾದಿಹಳಾಲೇ ಶೊಲ್ಲಪ್ಪಟ್ಟದು.
ಇಮ್ಮನ್ತ್ರತ್ತಿಲೇ ವಿವಕ್ಷಿತಮಾನ ಆತ್ಮ ಸಮರ್ಪಣಮ್

೨) “ಸರ್ವೋಪಾಧಿ ವಿನಿರ್ಮುಕ್ತಂ ಕ್ಷೇತ್ರಜ್ಞಂ ಬ್ರಹ್ಮಣಿ ನ್ಯಸೇತ್ ।
ಏತದ್ಧ್ಯಾನಂಚ ಯೋಗಶ್ಚ ಶೇಷೋನ್ಯೋ ಗ್ರಂಥ ವಿಸ್ತರಃ ॥”

ಇತ್ಯಾದಿಹಳಾಲೇ ಪ್ರಕರಣಾನ್ತರಙ್ಗಳಿಲುಮ್ ಸ್ತುತಿಕ್ಕಪ್ಪಟ್ಟದು. “ಏತದ್ಧ್ಯಾನಂಚ ಧ್ಯೇಯಂಚ” ಎನ್ರು ಪಾಠಾಂತರಮ್.

---

**ಇಪ್ರಭಾವನಿಬಂಧನತ್ತೈಯುಮ್** ಇತ್ಯಾದಿ– ಪ್ರಭಾವದ ನಿಬಂಧನ – ಕಾರಣವನ್ನು ಇಲ್ಲಿ ಭಗವದ್ರಾಮಾನುಜದರ್ಶನದಲ್ಲಿ, **ಪ್ರಮಾಣ ಸಂಪ್ರದಾಯಂಗಳಾಲೇ ಕಂಡುಕೊಳ್ವದು**-ಪ್ರಮಾಣವು–“ ಅಹೋದ್ವಯಸ್ಯ ಮಾಹಾತ್ಮ್ಯಮ್” -ಇತ್ಯಾದಿಯಿಂದಲೂ, ಸಂಪ್ರದಾಯ-ಪರಾಂಕುಶಾದಿ ಗುರುಪರಂಪರಾಪ್ರಾಪ್ತವಾದ ಉಪದೇಶ ಪರಂಪರೆಯಿಂದಲೂ ತಿಳಿದುಕೊಳ್ಳತಕ್ಕದ್ದು. ಯಾವಜ್ಜೀವ ಅನುವರ್ತನೀಯವಾದ ಭಕ್ತಿಯಿಂದ ಹೊಂದಲ್ಪಡುವ ಮೋಕ್ಷವು ದ್ವಯ ಮಂತ್ರದ ಸಮುದಾಯ ಜ್ಞಾನ ಪೂರ್ವಕವಾದ ಸಕೃದುಚ್ಚಾರಣ ಮಾತ್ರದಿಂದ ವಿಳಂಬ ವಿಲ್ಲದೆ ಸಿದ್ಧಿಸುತ್ತದೆ ಎಂಬುದು ಯುಕ್ತಿಯುಕ್ತವಾಗಬಹುದೇ ಎಂದರೆ, ಅದಕ್ಕೆ ಸಮಾಧಾನವನ್ನು **ಇಪ್ಪಡಿಪ್ಪಟ್ಟ ರಹಸ್ಯತಮಾರ್ಥಂಗಳಿಲ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಈ ರೀತಿಯಾದ ರಹಸ್ಯತಮವಾದ ಅರ್ಥಗಳಲ್ಲಿ ಹೇತು ನಿರೂಪಣವನ್ನು ಮಾಡಲಾಗದು. **ಶಾಸ್ತ್ರತ್ತೈಕ್ಕೊಂಡು** ಇತ್ಯಾದಿ–ಶಾಸ್ತ್ರವನ್ನು ಪ್ರಮಾಣ ವಾಗಿ ಅಂಗೀಕರಿಸಿ ವಿಶ್ವಾಸದಿಂದ ಕೂಡಿರಬೇಕೆಂಬುದು ಮಹಾಭಾರತಾದಿಗಳಲ್ಲಿ 1) **ದೇವಗುಹ್ಯೇಷು ಚಾನ್ಯೇಷು** ಇತ್ಯಾದಿ- ದೇವತೆಗಳಿಗೂ ರಹಸ್ಯ ಭೂತವಾದ ಇಂಥಹ ಅರ್ಥಗಳಲ್ಲಿ ಹೇತು ಪ್ರಶ್ನೆಯಿಂದ ಏನೂ ಪ್ರಯೋಜನವಿಲ್ಲ. ಆತ್ಮ ಹಿತೈಷಿಯಾದವನು ಇಂತಹ ವಿಷಯಗಳಲ್ಲಿ ಬಧಿರಾಂಧವತ್–ಕಿವಿಡ, ಕುರುಡರ ಹಾಗೆ ಸುಮ್ಮನಿರಬೇಕು.

ಹಾಗಾದರೆ, ತಮೇವೈಕಂಜಾನಥಾತ್ಮಾನಮ್, ಅನ್ಯಾವಾಚೋ ವಿಮುಂಚಥಾಃ, ಅಮೃತಸ್ಯೈಷಸೇತುಃ ಎಂದೂ, ಕ್ಲೇಶಾನಾಂಚಕ್ಷಯಕರಂ ಯೋಗಾದನ್ಯನ್ನವಿದ್ಯತೇ, ಎಂದೂ ಶ್ರುತಿಸ್ಮೃತಿಗಳಲ್ಲಿ ಧ್ಯಾನವನ್ನೇ ಮಾಡ ಬೇಕು ಧ್ಯಾನವೇ ಸಂಸಾರ ವಿಮೋಚಕ, ಅದನ್ನು ಬಿಟ್ಟು ಬೇರೆ ಮಾತೇ ಬೇಕಾಗಿಲ್ಲವೆಂದು ಹೇಳಿರುವಾಗ ಇಲ್ಲಿ ದ್ವಯೋಚ್ಚಾರಣವೇ ಮೋಕ್ಷಜನಕವೆಂದು ಹೇಳಿ ವಿವರಿಸುವುದು ಯುಕ್ತವೇ, ಎಂದರೆ

**ಇಮ್ಮಂತ್ರತ್ತಿಲ್** ಇತ್ಯಾದಿ ಆರಂಭಿಸಿ ಸಮಾಧಾನವನ್ನು ಅನುಗ್ರಹಿಸುತ್ತಾರೆ. ಅದಾಗಿ ಈ ಮಂತ್ರದಲ್ಲಿ **ವಿವಕ್ಷಿತಮಾನ**–ಪ್ರಧಾನವಾಗಿ ತಾತ್ಪರ್ಯ ವಿಷಯ ಭೂತವಾದ **ಆತ್ಮಸಮರ್ಪಣಮ್**– ಆತ್ಮ ಸಮರ್ಪಣ ಗರ್ಭವಾದ ಭರಸಮರ್ಪಣವು, **ಸರ್ವೋಪಾಧಿವಿನಿರ್ಮುಕ್ತಂ** ಇತ್ಯಾದಿ ಕರ್ಮಾವಿದ್ಯಾದಿ ಸರ್ವೋಪಾಧಿಗಳಿಂದ ಬಿಡಲ್ಪಟ್ಟ, **ಕ್ಷೇತ್ರಜ್ಞಂ**–ನಿಷ್ಕೃಷ್ಟಾತ್ಮ ಸ್ವರೂಪವನ್ನು **ಬ್ರಹ್ಮಣಿನ್ಯಸೇತ್**– ಪರಮಾತ್ಮನಲ್ಲಿ ಭರದೊಡನೆ ಸಮರ್ಪಿಸಬೇಕು. ಏತದ್ಧ್ಯಾನಂಚ, ಈ **ಸಮರ್ಪಣವೇ** ಭಕ್ತಿಯೋಗ, **ಯೋಗಶ್ಚ**–ಕರ್ಮಯೋಗ ಜ್ಞಾನಯೋಗ

---

1) ಭಾರತ ಅನುಶಾಸನಿಕಪರ್ವ 228·60

1) ದಕ್ಷಸ್ಮೃತಿ 2) ವ್ಯಾಸಸ್ಮೃತಿ

**ಇಶ್ಲೋಕಮ್ ಸ್ವರೂಪ ಸಮರ್ಪಣ ಪರಮಾನಾಲುಮ್ ಇಙ್ಗು ಶೊಲ್ಲುಹಿರ ಭರಸಮರ್ಪಣಮ್ ತದನು ಪ್ರವಿಷ್ಟಮ್**

**ಇಸ್ಸಮರ್ಪಣತ್ತುಕ್ಕು, 1) ನಿವೇದಯೀತ ಸ್ವಾತ್ಮಾನಂ ವಿಷ್ಣಾವಮಲ ತೇಜಸಿ ।**

**ತದಾತ್ಮಾ ತನ್ಮನ ಶ್ಶಾನ್ತ ಸ್ತದ್ವಿಷ್ಣೋರಿತಿ ಮಂತ್ರತಃ ॥**

**ಎನ್ರು ವ್ಯಾಸ ಸ್ಮೃತ್ಯಾದಿಹಳಿಲುಮ್, ಶ್ವೇತಾಶ್ವರಾದಿಹಳಿಲುಮ್, ಶೊನ್ನ ಮನ್ತ್ರಾನ್ತರಂಗಳಿಪ್ಪಡಿ ಶರಣ್ಯ ಶರಣಾಗತಿ ತತ್ಫಲಂಗಳೈ ವಿಶದಮಾಹ ಪ್ರಕಾಶಿಪ್ಪಿಯಾದು. ತಿರುಮನ್ತ್ರತ್ತಿಲುಮ್ ಇವೈ ಮೂನ್ರುಮ್ ಸಂಕ್ಷಿಪ್ತಙ್ಗಳ್. ಆಹೈಯಾಲೇ ಪ್ರಾಪ್ಯಪ್ರಾಪಕ ವಿಶೇಷಙ್ಗಳೈ ಸಂಪೂರ್ಣಮಾಹ ಪ್ರಕಾಶಿಪ್ಪಿಕ್ಕಿರ ಇದ್ವಯಮೇ ಪ್ರಪತ್ತಿಮನ್ತ್ರಙ್ಗಳಿಲ್ಲಾತ್ತಿಲುಮ್ ಪ್ರಧಾನಮ್.**

**ಶರಣಾಗತಿ ಗದ್ಯಸ್ಯ ದ್ವಯವ್ಯಾಖ್ಯಾನರೂಪತ್ವಂ ದರ್ಶಯತಿ.**

**ಇದಿನ್ ಅರ್ಥತ್ತೈಶ್ರುತಿಸ್ಮೃತೀತಿಹಾಸ ಪುರಾಣ ಭಗವಚ್ಛಾಸ್ತ್ರಾದಿಹಳಿಲ್ ಪ್ರಸಿದ್ಧಮಾನ ಪಡಿಯೇ**

---

ಗಳೂ ಸಹ. ಅಂದರೆ ಕಮ ಜ್ಞಾನಾಂಗಕ ಭಕ್ತಿಯೋಗವು ಕೊಡುವ ಫಲವನ್ನು ಕೊಡುತ್ತದೆ, ಎಂದು ತಾತ್ಪರ್ಯ. **ಶೇಷೋನ್ಯೋಗ್ರಂಥ ವಿಸ್ತರಃ**–ಬಾಕಿ ಎಲ್ಲವೂ ಗ್ರಂಥ ವಿಸ್ತರ, ಇತ್ಯಾದಿಗಳಿಂದ ಪ್ರಕರಣಾಂತರದಲ್ಲಿಯೂ ಸ್ತುತಿಸಲ್ಪಟ್ಟಿದೆ. ಏತದ್ಧ್ಯಾನಂಚ **ಧ್ಯೇಯಂಚ** ಎಂಬ ಪಾಠಾಂತರದಲ್ಲಿಯೂ ಇದೇ ಧ್ಯಾನ–ಭಕ್ತಿಯೋಗ, ಧ್ಯೇಯ ಪ್ರಾಪ್ಯವಾದ ಪರಬ್ರಹ್ಮವು. (ಉಪಾಯ ಉಪೇಯ)ಇವುಗಳನ್ನು ಅಭೇದವಾಗಿ ಹೇಳಿರುತ್ತದೆ. **ಇಶ್ಲೋಕಮ್** ಇತ್ಯಾದಿ- ಈ ಶ್ಲೋಕವು ಸ್ವರೂಪ ಸಮರ್ಪಣವಾದರೂ, ಇಲ್ಲಿ ಹೇಳುವ ಭರ ಸಮರ್ಪಣವು, **ತದನುಪ್ರವಿಷ್ಟಮ್** ಶ್ಲೋಕದಲ್ಲಿ ವಿವಕ್ಷಿತ. ಭರದಿಂದ ಕೂಡಿದ ಆತ್ಮ ಸಮರ್ಪಣವೇ ಇಲ್ಲಿ ವಿವಕ್ಷಿತ. **ಇಸ್ಸಮರ್ಪಣತ್ತುಕ್ಕು** ಇತ್ಯಾದಿ – 'ತದ್ವಿಷ್ಣೋಃ' ಎಂಬ ಮಂತ್ರದಿಂದ ತನ್ನನ್ನು ವಿಷ್ಣುವಿನಲ್ಲಿ ಸಮರ್ಪಿಸಬೇಕೆಂದು ವ್ಯಾಸಸ್ಮೃತ್ಯಾದಿಗಳಲ್ಲಿಯೂ, "ಮುಮುಕ್ಷುರ್ವೈ ಶರಣ ಮಹಂ ಪ್ರಪದ್ಯೇ" ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಹೇಳಿರುವ ಇತರ ಮಂತ್ರಗಳು ದ್ವಯ ಮಂತ್ರದಲ್ಲಿ ಹೇಳಿರುವಂತೆ, ಶರಣ್ಯ, ಶರಣಾಗತಿ, ತತ್ಫಲಗಳನ್ನು ವಿಶದವಾಗಿ ಪ್ರಕಾಶಿಸುವುದಿಲ್ಲ. **ತಿರುಮಂತ್ರತ್ತಿಲುಮ್** ಇತ್ಯಾದಿ- ಅಷ್ಟಾಕ್ಷರ ಮಂತ್ರದಲ್ಲಿಯೂ ಇವು ಮೂರೂ ಸಂಕ್ಷಿಪ್ತಗಳು. ಆಹೈಯಾಲೇ-ಪ್ರಾಪ್ಯಪಾಪಕರೂಪವಾದ ಪರಿಪೂರ್ಣಾರ್ಥ ಪ್ರಕಾಶಕವಾದ್ದರಿಂದ ದ್ವಯಮಂತ್ರವೇ ಪ್ರಪತ್ತಿ ಮಂತ್ರಾಂತರಗಳಿಗಿಂತ ಪ್ರಧಾನವಾದದ್ದು. ಪ್ರಾಪ್ಯನು ಶ್ರೀಮನ್ನಾರಾಯಣನು. ಪ್ರಾಪಕನೂ ಅವನೇ.

ಇದಿನರ್ಥತ್ತೈ ಇತ್ಯಾದಿ– ಈ ದ್ವಯ ಮಂತ್ರದ ಅರ್ಥವನ್ನು **ಶ್ರುತಿಸ್ಮೃತೀತಿಹಾಸ** ಇತ್ಯಾದಿ- ಶ್ರುತಿ– "ಯೋಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ।ತಂಹದೇವಂಆತ್ಮಬುದ್ಧಿಪ್ರಸಾದಂ ಮುಮುಕ್ಷುರ್ವೈ ಶರಣಂ ಮಹಂ ಪ್ರಪದ್ಯೇ", ಎಂಬುದು,

ಸ್ಮೃತಿ–ಶ್ರೀಮತ್ವತ್ಪಾದಕಮಲೇ ಪ್ರಪದ್ಯೇ ಶರಣಂ ವಿಭೋ ।
ನಾರಾಯಣಾಯ ನಾಥಾಯ ಹರಯೇ ಶ್ರೀಮತೇ ನಮಃ ॥ ಇತ್ಯಾದಿ

ಇತಿಹಾಸ- ಸಭ್ರಾತುಶ್ಚರಣೌ ಗಾಢಂ ನಿಪೀಡ್ಯ ರಘುನಂದನಃ ।
ಸೀತಾಮುವಾಚಾತಿಯಶಾ ರಾಘವಂಚ ಮಹಾವ್ರತಮ್ ॥

---

1) ಸ್ವಾತ್ಮಾನಂ-ತನ್ನನ್ನು. ಪರಿಶುದ್ಧತೇಜಸ್ಸಿನಿಂದ ಕೂಡಿದ, ತೇಜೋವಿಶಿಷ್ಟನಾದ ಎಂದರ್ಥ ವಿಷ್ಣುವಿನಲ್ಲಿ, ತದಾತ್ಮಾ- ಸಃಆತ್ಮಾಯಸ್ಯಸಃ., ತಚ್ಛರೀರಭೂತನಾಗಿ ಅಂದರೆ ಅವನಿಗೆ ಶೇಷ ಭೂತನಾಗಿರುವುದರಿಂದ (ಹೇತು ಗರ್ಭ ವಿಶೇಷಣ) ತನ್ಮನಾಃ–ಪ್ರಾಪ್ಯನಾದವನಲ್ಲ ನ್ಯಸ್ತಮನಸ್ಕನಾಗಿ, ಶಾಂತಃ– ಪ್ರಯೋಜನಾಂತರಾಭಿಸಂಧಿಯಿಲ್ಲದವನಾಗಿ, ನಿವೇದಯೀತ-ಸಮರ್ಪಿಸಬೇಕು, ವ್ಯಾಸಸ್ಮೃತಿ

ಸದಾಚಾರ್ಯ ಸಂಪ್ರದಾಯ ಕ್ರಮತ್ತಾಲೇ ಗದ್ಯತ್ತಿಲೇ ವಿವರಿತ್ತರುಳಿನಾರ್.

ಎಙ್ಗನೇ ಎನ್ನಿಲ್ ? "ಭಗವನ್ನಾರಾಯಣಾಭಿಮತಾನು ರೂಪ ಸ್ವರೂಪ ರೂಪ" ಎನ್ರು ತುಡಙ್ಗಿ ಶ್ರೀಮಚ್ಛಬ್ದಾಭಿ ಪ್ರೇತತ್ತೈ ಅರುಳಿಚ್ಚೆಯ್‌ದಾರ್. "ಅಖಿಲಹೇಯ ಪ್ರತ್ಯನೀಕ" ಇತ್ಯಾದಿಯಾಲೇ ಸ್ವರೂಪರೂಪಗುಣ ವಿಭೂತಿಹಳೈ ಪ್ಪರಕ್ಕವರುಳಿಚ್ಚೆಯ್‌ಹೈಯಾಲೇ ನಾರಾಯಣ ಶಬ್ದಾರ್ಥಮ್‌ವ್ಯಾಖ್ಯಾತಮಾಯಿತ್ತು. ಮುಱ್ಪಡ ಪಿರಾಟ್ಟಿಯೈಚ್ಚೊಲ್ಲಚ್ಚೆಯ್‌ದೇ ಪುರುಷಕಾರತ್ವ ನಿರ್ವಾಹಾರ್ಥಮಾಹ ವಿಭೂತಿ ಮಧ್ಯತ್ತಿಲ್ ನಿಲೈ ತೋತ್ತುಹೈಕ್ಕಾಹ ಮೀಣ್ಡುಮ್ ನಾರಾಯಣ ಶಬ್ದ ವ್ಯಾಖ್ಯಾನತ್ತಿಲುಮ್ ಅರುಳಿಚ್ಚೆಯ್‌ದಾರ್.

---

ಭವಾಂಸ್ತು ಸಹವೈದೇಹ್ಯಾ ಗಿರಿಸಾನುಷು ರಂಸ್ಯತೇ ।
ಅಹಂಸರ್ವಂ ಕರಿಷ್ಯಾಮಿ ಜಾಗ್ರತಃಸ್ವಪತಶ್ಚತೇ ॥ ಇತ್ಯಾದಿ.

ಪುರಾಣ- ಉಪೇಯಸ್ಯ ತವಪ್ರಾಪ್ತ್ಯೈ ತ್ವಮುಪಾಯತಯಾವೃಣೇ । ಇತ್ಯಾದಿ.
ಭಗವಚ್ಛಾಸ್ತ್ರ-ಶ್ರೀಮನ್ನಾರಾಯಣಸ್ವಾಮಿನ್ ದಾಸೋಹಂ ತವತೆಸ್ಯವೈ ॥

ಪರಮೀ ಪ್ಸುಸ್ತಮೇವಾರ್ಥ ಮನುಕೂಲೋ ವಿವರ್ಜಯನ್ ॥
ಪ್ರಾತಿಕೂಲ್ಯಂ ಸುವಿಸ್ರಬ್ಧಸ್ಸಂಪ್ರಾರ್ಥ್ಯ ಶರಣಂ ಪರಮ್ ।
ವ್ರಜಾಮಿ ಯುಷ್ಮಚ್ಚರಣಂ ತತ್ರೈವಾಹಂ ಮಯಾರ್ಪಿತಃ ॥ ಇತ್ಯಾದಿ.

ಶಾಸ್ತ್ರಾದಿಹಳಿಲ್ ಎಂಬಲ್ಲಿ ಆದಿ ಶಬ್ದದಿಂದ ಭರತಮುನಿ ಪ್ರಣೀತವಾದ ಲಕ್ಷಣ ವಾಕ್ಯವೂ ವಿವಕ್ಷಿತ. ಅದಾಗಿ

ಅನನ್ಯ ಸಾಧ್ಯೇಸ್ವಾಭೀಷ್ಟೇ ಮಹಾ ವಿಶ್ವಾಸ ಪೂರ್ವಕಮ್ !
ತದೇಕೋಪಾಯತಾ ಯಾಂಚಾ ಪ್ರಪತ್ತಿಶ್ಶರಣಾಗತಿಃ ॥

ಪ್ರಸಿದ್ಧಮಾನಪಡಿಯೇ ಇತ್ಯಾದಿ- ಪ್ರಸಿದ್ಧವಾದ ರೀತಿಯಲ್ಲಿ ಸದಾಚಾರ್ಯ ಸಂಪ್ರದಾಯ ಕ್ರಮವಾಗಿ, ಗದ್ಯತ್ತಿಲೇ ವಿವರಿತ್ತರುಳಿನಾರ್-ಭಗವದ್ಭಾಷ್ಯಕಾರರು, ಶರಣಾಗತಿ ಗದ್ಯದಲ್ಲಿ ವಿವರವಾಗಿ ಅನುಗ್ರಹಿಸಿರುತ್ತಾರೆ.

ಎಂಗನೇಯೆನ್ನಿಲ್-ಹೇಗೆಂದರೆ, ಭಗವನ್ನಾರಾಯಣ ಇತ್ಯಾದಿ ಆರಂಭಿಸಿ ಶ್ರೀಮತ್ ಶಬ್ದದಲ್ಲಿ ಅಭಿಪ್ರೇತವಾದ ಅರ್ಥವನ್ನು ಪ್ರಕಾಶಪಡಿಸಿರುತ್ತಾರೆ. ಅಖಿಲಹೇಯ ಪ್ರತ್ಯನೀಕ ಎಂದಾರಂಭಿಸಿ ನಾರಾಯಣ ಶಬ್ದಾರ್ಥ ವನ್ನು ಸ್ವರೂಪ-ಸತ್ಯ ಜ್ಞಾನಾನಂದಾದಿ ಸ್ವರೂಪ ನಿರೂಪಕ ಧರ್ಮಗಳಿಂದ ಕೂಡಿದ ಭಗವತ್ಸ್ವರೂಪ, ರೂಪ-ಸೌಂದರ್ಯ, ಸೌಗಂಧ್ಯ ಸೌಕುಮಾರ್ಯ, ಲಾವಣ್ಯ, ಯೌವನಾದಿಗಳಿಂದ ಕೂಡಿದ ಅಪ್ರಾಕೃತ ದಿವ್ಯಮಂಗಳ ವಿಗ್ರಹ, ಗುಣ-ಜ್ಞಾನ ಬಲೈಶ್ವರ್ಯ ವೀರ್ಯಶಕ್ತಿ ಸೌಶಿಲ್ಯ ವಾತ್ಸಲ್ಯಾದಿ ಗುಣಗಳು, ವಿಭೂತಿ - ಭೂಷಣಾಯುಧ ಮಹಿಷೀಪರಿಜನಸ್ಥಾನ ವಿಶಿಷ್ಟ ವಿಭೂತಿ, ಮತ್ತು ಲೀಲಾವಿಭೂತಿಗಳು, ಇವುಗಳನ್ನು ಪರಕ್ಕ- ವಿಸ್ತಾರವಾಗಿ, ಅರುಳಿಚ್ಚೆಯ್ ಹೈಯಾಲೇ ಇತ್ಯಾದಿ- ಕೃಪೆಯಿಂದ ಹೇಳಿರುವುದರಿಂದ ನಾರಾಯಣ ಶಬ್ದಾರ್ಥವು ವ್ಯಾಖ್ಯಾನ ಮಾಡಲ್ಪಟ್ಟಿತು. ಮುಱ್ಪಡ ಪಿರಾಟ್ಟಿಯೈ ಇತ್ಯಾದಿ- ಭಗವನ್ನಾರಾಯಣ ಎಂದಾರಂಭಿಸಿ ಶ್ರೀಮತ್ ಶಬ್ದದಲ್ಲಿ ಅಡಗಿರುವ ಶ್ರೀ ಶಬ್ದದಲ್ಲಿ ಮಹಾಲಕ್ಷ್ಮಿಯನ್ನು ಸ್ವರೂಪ ಸ್ವಭಾವಗಳೊಡನೆ ನಿರೂಪಿಸಿರುವಾಗ ಪುರುಷಕಾರತ್ವ ನಿರ್ವಾಹಾರ್ಥಮಾಹ-ಪುರುಷಕಾರತ್ವ ನಿರ್ವಾಹಕ್ಕೋಸ್ಕರ ವಿಭೂತಿ ಮಧ್ಯದಲ್ಲಿ ನಿಲೈತೋಟ್ರುಹೈಕ್ಕಾಹ-ಸ್ಥಿತಿಯು ತೋರುವುದಕ್ಕೋಸ್ಕರ; "ಸ್ವಾಭಿಮತ ನಿತ್ಯನಿರವದ್ಯಾನುರೂಪ........ಕಲ್ಯಾಣ ಗುಣಗಣಶ್ರೀವಲ್ಲಭ-ಎಂದು ವಿಭೂತಿ ಮಧ್ಯೆ ಲಕ್ಷ್ಮಿಯನ್ನು ನಾರಾಯಣ ಶಬ್ದ ವ್ಯಾಖ್ಯಾನದಲ್ಲಿಯೂ ಕೃಪೆಮಾಡಿ ಅನುಗ್ರಹಿಸಿರುತ್ತಾರೆ. ಇದರಿಂದ ಲಕ್ಷ್ಮಿಯು ಈಶ್ವರ ಕೋಟಿಗೆ ಸೇರಿದವಳಲ್ಲ, ಜೀವಕೋಟಿ ಪ್ರವಿಷ್ಟಳು, ಎಂದು ಕೆಲವರು ಹೇಳುವುದು ಸಂಪ್ರದಾಯಾರ್ಥಾನಭಿಜ್ಞತೆಯಿಂದ ಎಂದು ಏರ್ಪಡುತ್ತದೆ.

ಅನನ್ತರಮ್ "ಶ್ರೀಮನ್ನಾರಾಯಣ" ಎನ್ರು ಫಲೋಪಾಯ ವಾಕ್ಯಙ್ಗಳಿಲ್ ಪ್ರಯುಕ್ತಮಾನ ವ್ಯಾಖ್ಯೇಯ ಶಬ್ದತ್ತೈಯುಮ್ ಉಪಾದಾನಂ ಪಣ್ಣಿಯರುಳಿನಾರ್. "ಪ್ರಪದ್ಯೇ" ಎನ್ಗಿರ ವಿಡತ್ತಿಲುತ್ತ ಮನಾಲೇ ವಿವಕ್ಷಿತಮಾನ ಅಧಿಕಾರಿ ವಿಶೇಷಮ್, "ಅನನ್ಯ ಶರಣೋಹಮ್" ಎನ್ರು ವಿವೃತಮಾಯಿತ್ತು. "ತ್ವತ್ಪಾದಾರವಿಂದ ಯುಗಳಂ ಶರಣಂ ಪ್ರಪದ್ಯೇ" ಎನ್ಗೈಯಾಲೇ "ಚರಣೌ" ಎನ್ಗಿರ ಶಬ್ದಮುಮ್, ಕ್ರಿಯಾಪದಮುಮ್ ಪ್ರದರ್ಶಿತಮಾಯಿತ್ತು.

ಅನನ್ತರಮ್ "ದ್ವಯಮ್" ಎನ್ರು ವ್ಯಾಖ್ಯೇಯತ್ತೈ ಪೂರ್ಣಮಾಹ ನಿರ್ದೇಶಿತ್ತಾರ್. ಅಡಿಯಿಲೇಯಾದಲ್, ಮುಡುವಿಲೇಯಾದಲ್ ದ್ವಯಮೆನ್ರು ನಿರ್ದೇಶಿಯಾದೇ ಇವ್ವಳವಿಲೇ ಶೊಲ್ಲವೇಣ್ಡು ವಾನೇನೆನ್ನಿಲ್? ಉಪಾಯ ಪ್ರಾಪ್ಯಙ್ಗಳಿಲ್ ಇಙ್ಗುಪ್ರಧಾನ ಭೂತನ್ ಶ್ರೀಮಾನಾನ ನಾರಾಯಣ ನಾಹೈಯಾಲೇ, ಇರಣ್ಡಿಡತ್ತಿಲುಮ್ ಕಿಡಕ್ಕಿರ ಸವಿಶೇಷಣ ನಾರಾಯಣ ಶಬ್ದಮ್ ವ್ಯಾಖ್ಯಾತಮಾಯ್ ನಿನ್ರವಳವಿಲೇ ಇಮ್ಮನ್ತ್ರತ್ತುಕ್ಕು ಪ್ರತಿಪಾದ್ಯಮಾನ ಸಾಧ್ಯೋಪಾಯತ್ತೋಡೇ ಕೂಡ ಪ್ರಧಾನೋಪಾಯಮುಮ್, ಪ್ರಧಾನ ಪ್ರಾಪ್ಯಮುಮ್ ವ್ಯಾಖ್ಯಾತಮೆನ್ರು ತೋತ್ತುಹೈಕ್ಕಾಹ ಇಂಗೇ ದ್ವಯಮೆನ್ರು ಅರುಳಿಚ್ಚೆಯ್‌ದಾರ್.

ಅನನ್ತರಮ್ "ಪಿತರಂ ಮಾತರಂ" ಎನ್ರು ತುಡಂಗಿ ಜಿತನ್ತಾ ವಿಶೇಷ ಭಗವದ್ಗೀತಾದಿ ಸ್ಥಿತಮಾನ

---

**ಅನಂತರಂ ಶ್ರೀಮನ್ನಾರಾಯಣ** ಇತ್ಯಾದಿ– ಅಖಿಲಹೇಯಪ್ರತ್ಯನೀಕ ಎಂದಾರಂಭಿಸಿ ನಾರಾಯಣ ಶಬ್ದವು ವ್ಯಾಖ್ಯಾನಿಸಲ್ಪಟ್ಟನಂತರ, ಶ್ರೀಮನ್ನಾರಾಯಣ ಅಶರಣ್ಯ ಶರಣ್ಯ ಇತ್ಯಾದಿ ವಾಕ್ಯದಲ್ಲಿ 'ಶ್ರೀಮನ್ನಾರಾಯಣ' ಎಂಬ **ಫಲೋಪಾಯವಾಕ್ಯಂಗಳಿಲ್** ಇತ್ಯಾದಿ– ದ್ವಯ ಮಂತ್ರದ ಉಪಾಯಪರವಾದ ಪೂರ್ವಖಂಡದಲ್ಲಿಯೂ ಫಲಪರವಾದ ಉತ್ತರ ಖಂಡದಲ್ಲಿಯೂ ಪ್ರಯುಕ್ತವಾದ ವ್ಯಾಖ್ಯೇಯ **ಶಬ್ದವನ್ನು**–ಶ್ರೀಮನ್ನಾರಾಯಣ, ಶ್ರೀಮತೇ ನಾರಾಯಣಾಯ ಎಂಬ ಶಬ್ದಗಳನ್ನು ಎತ್ತಿ ಹೇಳಿರುವುದು ಮೂಲ ಮಂತ್ರದ ಪ್ರದರ್ಶನಾರ್ಥ **'ಪ್ರಪದ್ಯೇ'** ಎಂಬಲ್ಲಿ ಉತ್ತಮ ಪುರುಷದಿಂದ ವಿವಕ್ಷಿತವಾದ ಅಧಿಕಾರಿ ವಿಶೇಷವನ್ನು **ಅನನ್ಯಶರಣೋಽಹಂ** ಎಂದು ವಿವರಿಸಿರುತ್ತಾರೆ. **ತ್ವತ್ಪಾದಾರವಿಂದ ಯುಗಳಂ ಶರಣಂಪ್ರಪದ್ಯೇ** ಎಂಬುದರಿಂದ, "ಚರಣೌಶರಣಂಪ್ರಪದ್ಯೇ" ಎಂಬ ಪದತ್ರಯಗಳ ಅರ್ಥವು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ.

**ಅನಂತರಂ ದ್ವಯಮ್ ಎನ್ರು**, ಅನಂತರ 'ಅತ್ರದ್ವಯಮ್' ಎಂದು ಹೇಳಿರುವುದು, ವ್ಯಾಖ್ಯೇಯವಾದ ಮಂತ್ರವು ಪೂರ್ಣವಾಗಿ ನಿರ್ದೇಶಿಸಲ್ಪಟ್ಟಿತು. **ಅಡಿಯಿಲೇಯಾದಲ್** ಇತ್ಯಾದಿ– ಅದಾಗಿ ಆರಂಭದಲ್ಲಿಯಾಗಲಿ ಕೊನೆಯಲ್ಲಿಯಾಗಲಿ "ದ್ವಯಂವ್ಯಾಖ್ಯಾಸ್ಯಾಮಿ" ಎಂದೋ "ವ್ಯಾಖ್ಯಾತಮ್" ಎಂದೋ ಹೇಳದೆ ಮಧ್ಯದಲ್ಲಿರುವುದಕ್ಕೆ 'ಅತ್ರದ್ವಯಂ' ಎಂದು ಹೇಳಬೇಕಾದ ಅವಶ್ಯಕತೆಯು ಏನಿದೆ ಎಂದರೆ, ಉಪಾಯ ಪ್ರಾಪ್ಯಗಳಲ್ಲಿ ಇಲ್ಲಿ ಪ್ರಧಾನ ಭೂತನು ಶ್ರೀಮಾನಾದ ನಾರಾಯಣನಾದ್ದರಿಂದ, ಪೂರ್ವೋತ್ತರ ಖಂಡಗಳಲ್ಲಿ ಹೇಳಿರುವ **ಸವಿಶೇಷಣ ನಾರಾಯಣಶಬ್ದಮ್**–ಲಕ್ಷ್ಮೀ ವಿಶಿಷ್ಟ ನಾರಾಯಣ ಶಬ್ದವು ವ್ಯಾಖ್ಯಾನಿಸಲ್ಪಟ್ಟದಾದ ಮೇಲೆ, ಈ ಮಂತ್ರಕ್ಕೆ ಪ್ರತಿಪಾದ್ಯವಿಷಯವಾದ ಸಾಧ್ಯೋಪಾಯದೊಡನೆ, ಪ್ರಧಾನವಾದ ಸಿದ್ಧೋಪಾಯವೂ ಪ್ರಧಾನ ಪ್ರಾಪ್ಯವೂ ವ್ಯಾಖ್ಯಾನಿಸಲ್ಪಟ್ಟಿತು, ಎಂದು ತೋರಿಸುವುದಕ್ಕಾಗಿ ಇಲ್ಲಿ **'ದ್ವಯಂ'** ಎಂದು ಕೃಪೆ ಮಾಡಿ ಹೇಳಿರುತ್ತಾರೆ.

**ಅನಂತರಮ್** ಪಿತರಂ ಮಾತರಂಎಂದಾರಂಭಿಸಿ ಜಿತಂತಾ ವಿಶೇಷ ಭಗವದ್ಗೀತಾದಿಗಳಲ್ಲಿ ಹೇಳಲ್ಪಟ್ಟ ಶ್ಲೋಕಗಳನ್ನು ಸಂವಾದರೂಪವಾಗಿ ಹೇಳಿ, ಅನನ್ಯ ಪ್ರಯೋಜನವಾಗಿಯೂ ಅನನ್ಯೋಪಾಯವಾಗಿಯೂ ಉಪಾಯವನ್ನು ಅನುಷ್ಠಿ

**ಸಂವಾದಕ ವಾಕ್ಯಮುಖತ್ತಾಲೇ ಅನನ್ಯಪ್ರಯೋಜನನಾಯ್, ಅನನ್ಯೋಪಾಯನಾಯ್‌ಕ್ಕೊಂಡು ಉಪಾಯ ಪರಿಗ್ರಹಮ್ ಪಣ್ಣಿನ ಪಡಿಯೈಯುಮ್, ಶರಣ್ಯಸ್ವಭಾವಾನುಸಂಧಾನ ಪೂರ್ವಕಮಾಹ ಅಪರಾಧ ಕ್ಷಾಮಣಮ್ ಪಣ್ಣಿಹಿರಪಡಿಯೈಯುಮ್, ದ್ವಯತ್ತುಕ್ಕು ಸಮುದಿತಾರ್ಥಮಾಹ ವರುಳಿಚ್ಚೆಯ್ದಾರ್.**

**ಮೇಲ್ ಅರ್ಥಕ್ರಮತ್ತಾಲೇ ಮುರ್ಪಡ ನಮಸ್ಸಾಲೇ ಪ್ರಾರ್ಥಿಕ್ಕಿರ ಅನಿಷ್ಟ ನಿವೃತ್ತಿಯೈ ವ್ಯಾಖ್ಯಾನಮ್ ಪಣ್ಣಿ ಪಿನ್ಬು ಇಙ್ಗುಳ್ಳ ಪರಭಕ್ತ್ಯಾದಿ ಪುರುಷಾರ್ಥ ಪೂರ್ವಕಮಾಹ ಚತುರ್ಥ್ಯಂತ ಪದಙ್ಗಳಿಲ್ ವಿಭಕ್ತ್ಯಭಿಪ್ರೇತಮಾನ ಪರಮಪುರುಷಾರ್ಥ ಲಾಭತ್ತೈವೆಳಿಯಿಟ್ಟರುಳಿನಾರ್,**

**ಇಪ್ಪಡಿ ಅನುಷ್ಠಿತೋಪಾಯನಾನ ಅಧಿಕಾರಿ ವಿಷಯತ್ತಿಲ್ ಇಙ್ಗುಮಙ್ಗು ಮುಳ್ಳಸಿದ್ಧಿಯೈಪ್ಪತ್ತ ಚರಮ ಶ್ಲೋಕತ್ತಿಲುತ್ತರಾರ್ಥತ್ತಿಲ್ ಪಡಿಯೇ ಸ್ವಾಭಾವಿಕ ದಯಾರ್ದ್ರಮಾನ ಭಗವದಭಿಪ್ರಾಯ ಮಿರುಕ್ಕ ಮ್ಪಡಿಯೈ, ತದ್ವ್ಯಂಜಕ ಭಗವದ್ವಾಕ್ಯ ಪ್ರಕ್ರಿಯೈಯಾಲೇ ಅರುಳಿಚ್ಚೆಯ್‌ದು ಕಾಟ್ಟಿನಾರ್. ಅಹೈ**

---

ಸಿದ ರೀತಿಯನ್ನೂ ಶರಣ್ಯನ ಸ್ವಭಾವಾನು ಸಂಧಾನ ಪೂರ್ವಕವಾಗಿ ಅಪರಾಧಗಳನ್ನು ಕ್ಷಮಿಸುವ ರೀತಿಯನ್ನೂ ದ್ವಯಕ್ಕೆ ಸಮುದಿತಾರ್ಥವಾಗಿ ಕೃಪೆ ಮಾಡಿ ಹೇಳಿರುತ್ತಾರೆ.

**ಮೇಲ್ ಅರ್ಥಕ್ರಮತ್ತಾಲೇ** ಇತ್ಯಾದಿ– ಅನಂತರ ಪ್ರಥಮ ಶ್ರುತವಾದ 'ಶ್ರೀಮತೇ ನಾರಾಯಣಾಯ' ಎಂಬಲ್ಲಿಯ "ಆಯ" ಎಂಬ ಚತುರ್ಥಿಗೆ ವ್ಯಾಖ್ಯಾನ ಮಾಡದೆ, ಚರಮ ಶ್ರುತವಾದ ನಮಃ ಎಂಬ ಪದಕಕೆ "ಮನೋವಾಕ್ಕಾಯೈಃ" ಎಂದಾರಂಭಿಸಿ ವಿವರಿಸಿದುದಕ್ಕೆ ಕಾರಣವನ್ನು "ಅರ್ಥಕ್ರಮತ್ತಾಲೇ" ಎಂದು ನಿರೂಪಿಸುತ್ತಾರೆ. ಅರ್ಥಕ್ರಮವೆಂದರೆ, "ಅಗ್ನಿಹೋತ್ರಂ ಜುಹೋತಿ, ಯವಾಗೂಂಪಚತಿ" ಎಂಬ ಶ್ರುತಿಯಲ್ಲಿ ಮೊದಲು ಯವಾಗುವನ್ನು (ಧಾನ್ಯ) ಅಡಿಗೆ ಮಾಡಿಕೊಂಡು ಅನಂತರ ಹೋಮ ಮಾಡುತ್ತಾನೆಂಬುದು. ಹೋಮಕ್ಕೆ ಬೇಕಾದ ಹವಿಸ್ಸಿಲ್ಲದೇ ಹೋಮ ಮಾಡಲಾಗುವುದಿಲ್ಲವಲ್ಲವೇ; ಆದ್ದರಿಂದ ಶ್ರುತಿಯಲ್ಲಿ ಹೇಳಿದ ಪಾಠ ಕ್ರಮಕ್ಕಿಂತ ಅರ್ಥ ಕ್ರಮವು ಬಲೀಯಸ್ಸು. ಆ ಕ್ರಮದಲ್ಲಿ ಕೈಂಕರ್ಯರೂಪ ಇಷ್ಟ ಪ್ರಾಪ್ತಿಯು "ಆಯ" ಎಂಬ ಶಬ್ದದಿಂದ ಮೊದಲು ಹೇಳಿದ್ದರೂ, ಅನಿಷ್ಟ ನಿವೃತ್ತಿಯಾದ ನಂತರವೇ ಅದು ಪ್ರಾಪ್ತವಾಗಬೇಕಾದ್ದರಿಂದ, "ನಮಃ" ಎಂಬಲ್ಲಿ ವಿವಕ್ಷಿತವಾದ ಅನಿಷ್ಟ ನಿವೃತ್ತಿಯನ್ನು ಮೊದಲು ವ್ಯಾಖ್ಯಾನ ಮಾಡುತ್ತಾರೆ. **ಮುರ್ಪಡ ನಮಸ್ಸಾಲೇ** ಇತ್ಯಾದಿ– ಮೊದಲು ನಮಶ್ಶಬ್ದದಿಂದ ಪ್ರಾರ್ಥಿಸಲ್ಪಡುವ ಅನಿಷ್ಟ ನಿವೃತ್ತಿಯನ್ನು ವ್ಯಾಖ್ಯಾನಮಾಡಿ **ಪಿನ್ಬು**– ಅನಂತರ **ಇಂಗುಳ್ಳ** ಇತ್ಯಾದಿ– ಇಹ ಲೋಕದಲ್ಲಿಯೇ ಪ್ರಪನ್ನನಿಗೆ ಪ್ರಾಪ್ತವಾಗುವ ಫಲಭಕ್ತ್ಯಾದಿರೂಪ ಪುರುಷಾರ್ಥ ಪ್ರಾರ್ಥನಾ ಪೂರ್ವಕವಾಗಿ ಚತುರ್ಥ್ಯಂತ ಪದಗಳಲ್ಲಿ 'ಆಯ' ಎಂಬ ವಿಭಕ್ತ್ಯಭಿಪ್ರೇತವಾದ ಪರಮಪುರುಷಾರ್ಥ ಲಾಭವನ್ನು ಪ್ರಕಾಶಪಡಿಸುತ್ತಾರೆ.

ಇಪ್ಪಡಿ **ಅನುಷ್ಠಿತೋಪಾಯನಾನ** ಇತ್ಯಾದಿ– ಈ ರೀತಿಯಾಗಿ ಉಪಾಯಾನುಷ್ಠಾನವನ್ನು ಮಾಡಿದ ಅಧಿಕಾರಿಯ ವಿಷಯದಲ್ಲಿ ಸ್ಥೂಲ ಸೂಕ್ಷ್ಮರೂಪಾಂವಿಸೃಜ್ಯ, ಎಂಬ ಪರ್ಯಂತ **ಇಂಗುಳ್ಳಸಿದ್ಧಿ**–ಪ್ರಕೃತಿ ಮಂಡಲ ದೊಳಗೆ ಏರ್ಪಡುವ ಸಿದ್ಧಿ, ತದಾನೀಮೇವ ಮತ್ಪ್ರಸಾದಲಬ್ಧ ಎಂದಾರಂಭಿಸಿ ಹೇಳಿರುವುದು **ಅಂಗುಳ್ಳಸಿದ್ಧಿ**– ಅಪ್ರಾಕೃತದೇಶವಿಶೇಷ ಪ್ರಾಪ್ತ್ಯನಂತರ ಉಂಟಾಗುವ ಸಿದ್ಧಿ, ಇವುಗಳನ್ನು **ಪತ್ತ**–ಕುರಿತು, ಚರಮ ಶ್ಲೋಕದಲ್ಲಿ ಉತ್ತರಾರ್ಧದಲ್ಲಿ "ಮಾಶುಚಃ" ಎಂದು ಹೇಳಿರುವಂತೆ ದಯಾರ್ದ್ರನಾದ ಭಗವಂತನ ಅಭಿಪ್ರಾಯವಿರುವ ರೀತಿಯನ್ನು ತದ್ವ್ಯಂಜಕಭಗವದ್ವಾಕ್ಯ **ಪ್ರಕ್ರಿಯೈಯಾಲೇ**– ಪ್ರಕಾಶಪಡಿಸುವ "ಏವಂಭೂತಮತ್ಕೈಂಕರ್ಯ ಪ್ರಾಪ್ತ್ಯುಪಾಯತಯಾ", ಎಂದಾರಂಭಿಸುವ ಭಗವದ್ವಾಕ್ಯರೀತಿಯಲ್ಲಿ ಕೃಪೆ ಮಾಡಿ ಹೇಳಿರುತ್ತಾರೆ. **ಅಹೈಯಾಲೇ**

ಯಾಲೇ, ಗದ್ಯತ್ತಿಲರುಳಿಚ್ಚೆಯ್‌ದದೆಲ್ಲಾಮ್ ದ್ವಯತ್ತಿಲೇ ವಿವಕ್ಷಿತಮ್. ಇದು "ದ್ವಯಮರ್ಥಾನು ಸಂಧಾನೇನ ಸಹ ಸದೈವಂ ವಕ್ತಾ", ಎನ್ಗಿರ ಪಾಶುರತ್ತಾಲುಮ್ ಸೂಚಿತಮ್,

---

ಇತ್ಯಾದಿ– ಆದ್ದರಿಂದ ಗದ್ಯದಲ್ಲಿ ಹೇಳಿರುವುದೆಲ್ಲಾ ದ್ವಯ ಮಂತ್ರದಲ್ಲಿ ವಿವಕ್ಷಿತವು. ಇದು ದ್ವಯಮರ್ಥಾನು ಸಂಧಾನೇನ ಇತ್ಯಾದಿ–ಇದು ದ್ವಯ ಮಂತ್ರವನ್ನು ಅರ್ಥಾನುಸಂಧಾನದೊಡನೆ, ಯಾವಾಗಲೂ ಹೇಳುತ್ತಿರುವವ ನಾಗಿ ಶ್ರೀರಂಗಾದಿ ದಿವ್ಯ ದೇಶಗಳಲ್ಲಿ ಸುಖವಾಗಿರು ಎಂಬ ಗದ್ಯ ಶ್ರೀ ಸೂಕ್ತಿಯಿಂದಲೂ ಸೂಚಿತವು.

ಈ ಗದ್ಯ ಗ್ರಂಥವು ದ್ವಯ ವಿವರಣ ರೂಪವಾದ ವಿಷಯದಲ್ಲಿ ಕೆಲವು ಮಂದಮತಿಗಳ ವಿಪ್ರತಿಪತ್ತಿಯನ್ನು ಆಚಾರ್ಯರು ಇದು ದ್ವಯಮರ್ಥಾನುಸಂಧಾನೇನ ಎಂದಾರಂಭಿಸಿ ಪ್ರಾಗಪ್ಯಸ್ವಭುವನ್ ಪ್ರಭುಮ್, ಎಂದು ಹೋಗ ಡಿಸಿರುತ್ತಾರೆ. ಆ ವಿಪ್ರತಿಪತ್ತಿಯ ಬೀಜವೂ ಅದಕ್ಕೆ ಸಮಾಧಾನವೂ ಸಾರಕೌಮುದೀ ಗ್ರಂಥದಲ್ಲಿ ಶ್ರೀ ಕರೂರು ಸ್ವಾಮಿಗಳಿಂದ ನಿರೂಪಿಸಿರುವ ರೀತಿಯಲ್ಲಿ ಇಲ್ಲಿ ಬರೆಯಲಾಗಿದೆ. ಆದಾಗಿ, ಆವಿಪ್ರತ್ತಿಪತ್ತಿಯು ಏನೆಂದರೆ–

ಶ್ರೀ ಮಚ್ಛಬ್ದವು ಸಿದ್ಧೋಪಾಯ ವಿಶೇಷಣ ಪರವೆಂಬುದು ಸಿದ್ಧಾಂತ. ಅದು ಪುರುಷಕಾರತ್ವವನ್ನು ಪ್ರದರ್ಶಿಸುತ್ತದೆಯೆಂದು "ಭಗವನ್ನಾರಾಯಣ" ಎಂದಾರಂಭಿಸಿ ಗದ್ಯದಲ್ಲಿ ನಿರೂಪಿಸಿರುವುದು ಗದ್ಯವು ದ್ವಯ ವಿವರಣವಲ್ಲವೆಂಬುದಕ್ಕೆಗಮಕ.'ಅಖಿಲ ಹೇಯ ಪ್ರತ್ಯನೀಕ'ಇತ್ಯಾದಿಯೂ ಭಗವಂತನ ಸ್ತೋತ್ರವೇವಿನಹ ರೂಢ್ಯರ್ಥ ಯೋಗಾರ್ಥಗಳಲ್ಲಿ ಯಾವುದಾದರೊಂದನ್ನೂ ವಿವರಿಸಿಲ್ಲವಾದ್ದರಿಂದ ನಾರಾಯಣ ಶಬ್ದ ವ್ಯಾಖ್ಯಾನವಲ್ಲ. ಪರಮ ಪ್ರಾಪಕಳಾಗಿಯೂ ಪರಮಪ್ರಾಪ್ಯಳಾಗಿಯೂ ಪತಿಯ ಹಾಗೆ ಪ್ರಮಾಣ ಸಿದ್ಧಳಾಗಿ ದ್ವಯ ಮಂತ್ರದಲ್ಲಿಯೂ ಹಾಗೆಯೇ ತಿಳಿಸಲ್ಪಡುವ ಲಕ್ಷ್ಮಿಯನ್ನು ಪತಿಯ ವಿಭೂತಿ ಮಧ್ಯದಲ್ಲಿರಿಸಿರುವುದೂ ಸರಿಯಲ್ಲ. ಮೇಲೂ ಆದಿ ಯಲ್ಲಿಯೂ ಅಂತ್ಯದಲ್ಲಿಯೂ ವಾಖ್ಯೇಯವಾದ ಮಂತ್ರದ ಪ್ರತೀಕವನ್ನು ಎತ್ತಿ ಹೇಳುವುದು ವ್ಯಾಖ್ಯಾನವೆಂಬು ದಕ್ಕೆ ಗಮಕ. ಈ ಗದ್ಯದಲ್ಲಿ ಹಾಗೆ ನಿರೂಪಿಸಿಲ್ಲ. "ಅತ್ರದ್ವಯಮ್" ಎಂಬುದು ತಾವು ಹೇಳಿದ ಅರ್ಥಕ್ಕೆ ಸಂವಾದಕ ಪ್ರಮಾಣವಾಗಿ ಉದಾಹರಿಸಿರುವುದಾಗಿ ಹೇಳಬಹುದು. ಪ್ರಪತ್ತಿಯು ಒಂದು ಸಲ ಮಾಡಬೇಕಾಗಿ ರುವುದರಿಂದ, ಈ ಗದ್ಯದಲ್ಲಿ ಅನೇಕ ಸಲ ನಿರೂಪಿಸಿರುವುದೂ ಕಾಣುತ್ತದೆ. ಸಕೃತ್ಕರ್ತವ್ಯವಾದ ವಿದ್ಯೆಯ ಸ್ವಭಾವಕ್ಕೆ ವಿರುದ್ಧವಾದದ್ದು. ಉತ್ತರ ಖಂಡದಲ್ಲಿಯೂ ಇಷ್ಟ ಪ್ರಾಪ್ತಿಯು ಮೊದಲು ಹೇಳಲ್ಪಟ್ಟು ಅನಂತರ ಅನಿಷ್ಟ ನಿವೃತ್ತಿಯು ಹೇಳಲ್ಪಡುತ್ತದೆ. ಗದ್ಯದಲ್ಲಿ ಇದನ್ನು ವ್ಯತ್ಯಾಸವಾಗಿ ಹೇಳಿರುತ್ತಾರೆ. "ಏವಂಭೂತ ಮತ್ಕೈಂಕರ್ಯ ಪ್ರಾಪ್ತ್ಯುಪಾಯತಯಾ" ಇತ್ಯಾದಿ ಭಗವದ್ವಾಕ್ಯವು ಗದ್ಯದಲ್ಲಿ ನಿಬದ್ಧವಾಗಿದೆ. ವ್ಯಾಖ್ಯೇಯ ವಾದ ದ್ವಯ ಮಂತ್ರದಲ್ಲಿ ಈ ಭಗವದ್ವಾಕ್ಯವನ್ನು ಹೇಳಿಲ್ಲ. "ಅತ್ರೈವ ಶ್ರೀರಂಗೇ ಸುಖಮಾಸ್ವ" ಎಂಬ ಭಗವದಾದೇಶವೂ ಪ್ರಪತ್ತಿ ನೈರಪೇಕ್ಷ್ಯಕ್ಕೆ ವಿರುದ್ಧವಾದದ್ದು. ಪರಭಕ್ತಿ, ಪರಜ್ಞಾನ, ಪರಮ ಭಕ್ತಿಗಳು ಗದ್ಯ ದಲ್ಲಿ ಪ್ರಾರ್ಥಿಸಲ್ಪಡುತ್ತವೆ. ಸ್ವತಂತ್ರ ಪ್ರಪತ್ತಿ ಮಂತ್ರ ಭೂತವಾದ ದ್ವಯಕ್ಕೆ, ಇದು ವ್ಯಾಖ್ಯಾನವಾಗ ಲಾರದು" ಇತ್ಯಾದಿ.

ಇದಕ್ಕೆ ಪರಿಹಾರ ರೂಪವಾಗಿ ಶ್ರೀ ಸೂಕ್ತಿಯ ಭಾವವೇನೆಂದರೆ– ಶ್ರೀಮಚ್ಛಬ್ದವು ಸಿದ್ಧೋಪಾಯ ವಿಶೇಷ ಣಾಂಶ ಪರವಾಗಿದ್ದರೂ, ಶ್ರೀ ಶಬ್ದದಲ್ಲಿ "ಶ್ರಾವಯತಿ" ಎಂಬ ವ್ಯುತ್ಪತ್ತಿಯು ಇರುವುದರಿಂದ ಅಕಿಂಚನಾಧಿಕಾರಿಗೆ ಉಪಾಯ ಪರಿಗ್ರಹ ದಶೆಯಲ್ಲಿ ಅಪೇಕ್ಷಿತವಾದ ಪುರುಷಕಾರತ್ವ, ಉಪಾಯತ್ವ, ಉಪೇಯತ್ವರೂಪ ಎಲ್ಲಾ ಆಕಾರ ಗಳಿಂದಲೂ ಕೂಡಿರುವ ಶ್ರೀಯನ್ನು ತಿಳಿಸುವ ಶ್ರೀ ಶಬ್ದದಲ್ಲಿ ಸಂದರ್ಭಕ್ಕೆ ಅನುಸಾರ ವಾಗಿ ಪುರುಷಕಾರತ್ವಕ್ಕೆ ಉಚಿತವಾದ ಆಕಾರವನ್ನು "ಭಗವನ್ನಾರಾಯಣ" ಇತ್ಯಾದಿ ಆರಂಭಿಸಿ ಪುರುಷಕಾರ ಪ್ರಪದನ ರೂಪವಾಗಿ ತಿಳಿಸಿರುತ್ತೆ. ಹೀಗೆ ಪುರುಷಕಾರತ್ವವನ್ನು ಅವಲಂಬಿಸಿ ಉಪಾಯತ್ವವು ಶ್ರೀಮಚ್ಛಬ್ದದಲ್ಲಿ

ಅಭಿಪ್ರೇತ. ಶ್ರೀಮಚ್ಛಬ್ದದ ಏಕ ದೇಶವಾದ ಶ್ರೀ ಶಬ್ದದಲ್ಲಿ ಶ್ರಾವಯತಿ ಎಂಬ ವ್ಯುತ್ಪತ್ತಿ ಸಿದ್ಧವಾದ ಪುರುಷಕಾರತ್ವವು ಶ್ರೀ ಮಚ್ಛಬ್ದದಲ್ಲಿ ಅಭಿಪ್ರೇತವೆಂದು ಹೇಳುವುದು ವಿರೋಧವಾಗುತ್ತದೆ. ಪುರುಷಕಾರತ್ವಾಭಿಪ್ರಾಯಕವು ಶ್ರೀ ಮತ್ಪದವೆಂದು ಶ್ರೀ ಸೂಕ್ತಿಗೆ ತಾತ್ಪರ್ಯವಿಲ್ಲ. "ಭಗವನ್ನಾರಾಯಣಾಭಿಮತ" ಇತ್ಯಾದಿಯಾಗಿ ವಿವರಿಸುವ ನಿರಂಕುಶೈಶ್ವರ್ಯ ಪ್ರಪಂಚನವು "ಶ್ರೀ" ಶಬ್ದಾಪ್ರೇತವೆಂಬುದು ಶ್ರೀ ಸೂಕ್ತಿ ತಾತ್ಪರ್ಯ. 'ಅಭಿಮತ' ವೆಂದರೆ ಪರಸ್ಪರೇಚ್ಛಾ ವಿಘಾತ ರಾಹಿತ್ಯ ಮಾತ್ರವೆಂದು ಗದ್ಯವ್ಯಾಖ್ಯಾನವಾದ ಶ್ರೀಮದ್ರಹಸ್ಯರಕ್ಷೆಯಲ್ಲಿ ವ್ಯಾಖ್ಯಾತವು. "ಸ್ವರೂಪ ರೂಪ ಗುಣ ವಿಭವೈಶ್ವರ್ಯಾ ದಿಗಳಿಗೆ ಅನುರೂಪ್ಯವು ದಿವ್ಯದಂಪತಿಗಳ ಅನವಧಿಕಾತಿಶಯ ಬೃಹತ ಬೃಂಹಣತ್ವಾದಿಗಳಲ್ಲಿ ವೈಷಮ್ಯವಿಲ್ಲದಿರುವುದೇ. "ದೇವದೇವ ದಿವ್ಯಮಹಿಷೀಂ" ಎಂಬುದೂ "ಕೃತಾಭಿಷೇಕಾಮಹಿಷೀ.. ಎಂಬ ಅಮರಕ್ಕೆ ಅನುಗುಣವಾಗಿ, ಏಕಾಧಿಪತ್ಯದಿಂದ ಕೂಡಿದ ಆಧಿ ರಾಜ್ಯವು ದಿವ್ಯ ದಂಪತಿಗಳಲ್ಲಿ ವ್ಯಾಸಜ್ಯವೃತ್ತಿಕ– ಪರಸ್ಪರ ಅನ್ವಯದಿಂದ ಕೂಡಿದುದು ಎಂದು ತಾತ್ಪರ್ಯ. ಇದೂ ಶ್ರೀಮದ್ರಹಸ್ಯ ರಕ್ಷೆಯಲ್ಲಿ ವ್ಯಕ್ತವು. ಆದ್ದರಿಂದ "ಭಗವನ್ನಾರಾಯಣ" ಇತ್ಯಾನಿಯಿಂದ ಮಾಡಲ್ಪಡುವ ಲಕ್ಷ್ಮಿಯ ಪಾರಮ್ಯೋಪಪಾದನವು ಶ್ರೀಮಚ್ಛಬ್ದದಲ್ಲಿ ಅಭಿಪ್ರೇತವಾದ ಅರ್ಥವರ್ಣನವೆಂಬುದು ಹೃದ್ಯತರ,

"ಅಖಿಲಹೇಯ ಪ್ರತ್ಯನೀಕ" ಎಂದಾರಂಭಿಸಿ ಹೇಳಿರುವುದು "ಎಣ್‌ಪೆರುಕ್ಕನ್ನಲತ್ತು" ಇತ್ಯಾದಿ ಆಚಾರ್ಯರೇ ವ್ಯಾಖ್ಯಾನ ಮಾಡಿರುವಂತೆ ನಾರಾಯಣ ಶಬ್ದದ ಯೋಗಾರ್ಥವೇ ವಿನಹ ಬೇರೆಯಲ್ಲ. ಇಲ್ಲವೆಂದು ಹೇಳುವುದು ಸಾಹಸದ ಮಾತು. ಗದ್ಯದಲ್ಲಿ ನಾರ ಶಬ್ದಾರ್ಥವೇ ಗುಣ, ವಿಗ್ರಹ, ವಿಭೂತಿಗಳ ವರ್ಣನಾತ್ಮಕವಾಗಿ ನಿರೂಪಿಸಲ್ಪಟ್ಟಿದೆ. ಲಕ್ಷ್ಮಿಯನ್ನು ನಾರಗಳ ಮಧ್ಯೆ ಹೇಳಿರುವುದು ಸರಿಯಲ್ಲವೆಂದು ಹೇಳುವುದೂ ಉಪಪನ್ನವಾಗಲಾರದು. ನರಸಂಬಂಧಿ ನಾರಃ, ಎಂಬ ಅರ್ಥದಲ್ಲಿ ಶ್ರೀಯನ್ನು ವಿಷ್ಣುವಿನೊಡನೆ ಕೂಡಿದವಳು ಎಂದು ಸಂಬಂಧಾರ್ಥದಲ್ಲಿ ಹೇಳುವುದು ತಪ್ಪಿಲ್ಲ. ಪತಿಯ ಹಾಗೆ ಪ್ರಪತ್ತವ್ಯಳಾದ (ಉಪಾಯಭೂತೆಯಾದ) ಲಕ್ಷ್ಮಿಗೆ, ಪುರುಷಕಾರತ್ವರೂಪವು ಅಧಿಕವಾದ್ದರಿಂದ, ಗದ್ಯದಲ್ಲಿ ಆ ಆಕಾರದಲ್ಲಿ ವಿಭೂತಿ ಮಧ್ಯದಲ್ಲಿರಿಸಿರುವುದು ಸಮಂಜಸವಾದದ್ದು. ಇದರಿಂದ, 'ಭಗವನ್ನಾರಾಯಣ' ಎಂದಾರಂಭಿಸುವ ಚೂರ್ಣಿಕೆಯು ಲಕ್ಷ್ಮಿಯು ಸಿದ್ಧೋಪಾಯ ಕೋಟಿಯಲ್ಲಿ ಸೇರಿದವಳು ಎಂದು ವಿವರಿಸುತ್ತದೆ. ತದನುಗುಣವಾದ ನಿರಂಕುಶೈಶ್ವರ್ಯವು ವರ್ಣಿಸಲ್ಪಟ್ಟಿರುತ್ತೆ. ವಸ್ತುವ್ಯಕ್ತಿಯಲ್ಲಿ "ಶ್ರಾವಯತಿ" ಎಂಬ ವ್ಯುತ್ಪತ್ತಿಯಿಂದ ತಿಳಿಸಲ್ಪಟ್ಟ ಶ್ರೀ ಶಬ್ದಾರ್ಥವು, ಪುರುಷಕಾರತ್ವರೂಪವಾಗಿ ಮೊದಲು ವರ್ಣಿಸಲ್ಪಟ್ಟಿತು. ದೇವಿಯು ಪುರುಷಕಾರಭೂತೆಯೂ ಆಹುದು ಎಂಬುದಕ್ಕೆ ಗದ್ಯ ಗ್ರಂಥದಲ್ಲಿ ವಿಭೂತಿಯ ಮಧ್ಯದಲ್ಲಿ ಲಕ್ಷ್ಮಿಯನ್ನು ಹೇಳಿರುವುದೇ ಪ್ರಮಾಣವು. ಪೂರ್ವ ಖಂಡದಲ್ಲಿ ಶ್ರೀಮತ್ಪದದಲ್ಲಿ, ಶ್ರೀ ವಿಶಿಷ್ಟನಿಗೆ ಉಪಾಯತ್ವವು ಹೇಳಲ್ಪಟ್ಟಿದೆ, ಎಂಬ ಶ್ರೀ ಭಾಷ್ಯಕಾರರ ಹೃದಯವು ಆಪತ್ಸಖ, ಶ್ರೀ ಮನ್ನಾರಾಯಣ, ಅಶರಣ್ಯಶರಣ್ಯ, ಎಂಬಲ್ಲಿ ಸಿದ್ಧೋಪಾಯವನ್ನು ತಿಳಿಸುವ ಸವಿಶೇಷಣ ನಾರಾಯಣ ಶಬ್ದದಿಂದ ತಿಳಿಯಲ್ಪಡುತ್ತದೆ- ಈ ರೀತಿಯಲ್ಲಿ "ಶ್ರೀಮನ್ನಾರಾಯಣ" ಎಂಬ ದ್ವಯ ಮಂತ್ರದ ಪ್ರತೀಕ ಧಾರಣದಿಂದ, ಆ ಮಂತ್ರಕ್ಕೆ ಗದ್ಯವು ವ್ಯಾಖ್ಯಾನವಾದದ್ದು ಎಂದು ತಿಳಿಸಲ್ಪಡುತ್ತದೆ. "ಚರಣೌ ಶರಣಂ ಪ್ರಪದ್ಯೇ" ಎಂಬುದು ತ್ವತ್ಪಾದಾರವಿಂದ ಯುಗಳಂ ಶರಣಂಪ್ರಪದ್ಯೇ" ಎಂದು ವ್ಯಾಖ್ಯಾನಿಸಲ್ಪಟ್ಟಿದೆ. ಶರಣಂ ಪ್ರಪದ್ಯೇ ಎಂದು ಪ್ರಪತ್ತಿಯನ್ನು ಸಂಗ್ರಹವಾಗಿಹೇಳಿ ಸಿದ್ಧೋಪಾಯದ ವಿಸ್ತಾರವನ್ನು ಹೇಳಿರುವುದು ಸಿದ್ಧೋಪಾಯದ ಪ್ರಾಧಾನ್ಯತೆಯನ್ನೂ ಪ್ರಪತ್ತಿಯು ವ್ಯಾಜಮಾತ್ರವೆಂಬುದನ್ನೂ ತಿಳಿಸುತ್ತದೆ. "ಅತ್ರದ್ವಯಮ್" ಎಂಬುದೂ ಮೇಲೆ ಹೇಳಿದ ಅರ್ಥಗಳು ದ್ವಯದಲ್ಲಿ ನಿರೂಪಿತಗಳು ಎಂದು ತಿಳಿಸಲು ಹೇಳಲ್ಪಟ್ಟಿದೆಯೇ ಹೊರತು ದ್ವಯವು ಮೇಲೆ ಹೇಳಿದ ಅರ್ಥಗಳಿಗೆ ಸಂವಾದಕರೂಪವೆಂದಲ್ಲ. "ಪಿತರಂ ಮಾತರಂ" ಇತ್ಯಾದಿ ಆರಂಭಿಸಿ, "ಲೋಕವಿಕ್ರಾಂತಚರಣೌ ಶರಣಂತೇವ್ರಜಂ ವಿಭೋ" ತಸ್ಮಾತ್ ಪ್ರಣಾಮ್ಯ ಪ್ರಣಿಧಾಯ ಕಾಯಂ, ಪ್ರಸಾದಯೇತ್ವಾಂ, ಇತ್ಯಾದಿ ಪುನಃ ಪುನಃ ಪ್ರಪತ್ತಿ ಮಾಡಿರುವುದು ಕಾಲುಷ್ಯ ಮೂಲಕವಾದದ್ದು. ದ್ರಮಿಡೋಪನಿಷತ್ತಿನಲ್ಲಿಯೂ ಆ ರೀತಿಯಾಗಿ ಅನೇಕ

ಸಲ ಆಳ್ವಾರವರು ಶರಣಾಗತಿ ಮಾಡಿರುತ್ತಾರೆಂದು ಹೇಳುವುದು ಅನಿರೂಪಣಕಲ್ಪಿತವು. ಅನಾದರಣೀಯವು. ಒಂದು ಸಲ ಮೋಕ್ಷಾರ್ಥವಾಗಿ ಶರಣಾಗತಿಯು ಅನುಷ್ಠಿಸಲ್ಪಟ್ಟ ನಂತರ, ಶರಣ್ಯನ ಗುಣಗಳಲ್ಲಿ ಭೋಗ್ಯತಾಬುದ್ಧಿಯಿಂದ ಅನೇಕ ಸಲ ಭೋಗ ಪ್ರಪತ್ತಿಯ ಅನುಸಂಧಾನವು ಉಪಪನ್ನವು. ಪ್ರಬಂಧಗಳಲ್ಲಿ ಈ ರೀತಿಯಾದ ಭೋಗಪ್ರಪತ್ತಿಯೂ, ಸ್ವಾಪರಾಧಕ್ಷಾಮಣವೂ ಸಹ ಸೇರಿಸಿ ಅನುಸಂಧಾನ ಮಾಡಲ್ಪಟ್ಟಿದೆಯಷ್ಟೇ. ನಮಃ ಪದವು ಮಂತ್ರದಲ್ಲಿ ಅನಂತರ ಪಠಿತವಾಗಿದ್ದರೂ ಪಾಠ ಕ್ರಮವನ್ನು ಅನುಸರಿಸಿ ಗದ್ಯದಲ್ಲಿ ಮೊದಲು ವ್ಯಾಖ್ಯಾನ ಮಾಡಲ್ಪಟ್ಟು ಅನಿಷ್ಟ ನಿವೃತ್ಯನಂತರ ಇಷ್ಟ ಪ್ರಾಪ್ತಿಯೂ "ಪರಭಕ್ತಿ ಪರಜ್ಞಾನ ಪರಮಭಕ್ತಿಕೃತ...........ನಿತ್ಯ ಕಿಂಕರೋ ಭವಾನಿ" ಎಂದು ಪ್ರಾರ್ಥಿಸಲ್ಪಟ್ಟಿದೆ.

ಈ ದ್ವಯ ಕರಣಕವಾದ ಪ್ರಪತ್ತಿಯಿಂದ ಭಕ್ತಿರೂಪ ಉಪಾಯಂತರದ ಹಾಗೆ ಕರ್ಮಾವಸಾನದಲ್ಲಿ ಮೋಕ್ಷವು, ಎಂಬುದಿಲ್ಲದೆಇವನು ಕ್ಲೃಪ್ತ ಮಾಡಿಹೇಳಿದಕಾಲದಲ್ಲೇಮೋಕ್ಷಪ್ರಾಪ್ತಿಯೆಂಬುದನ್ನು ತಿಳಿಸಲು "ಏವಂ ಭೂತಮತ್ಕೈಂಕರ್ಯ" ಎಂದಾರಂಭಿಸುವ ಭಗವದ್ವಾಕ್ಯ ಪ್ರಕ್ರಿಯೆಯು ಅನುಸಂಧಾನಮಾಡಲ್ಪಟ್ಟಿದೆ. ಇದೂ ಮಂತ್ರಕ್ಕೆ ಅಭಿಪ್ರಾಯವೆಂಬುದು "ಮಾಶುಚಃ" ಎಂಬ ಚರಮ ಶ್ಲೋಕವಾಕ್ಯ ಸಂವಾದದಿಂದ ತಿಳಿಸಲ್ಪಡುತ್ತದೆ. ಇದರಿಂದ ಮಂತ್ರದಲ್ಲಿ ಈ ಅರ್ಥವು ಪ್ರತಿಪಾದಿಸಿಲ್ಲವೆಂಬ ದೋಷಕ್ಕೆ ಅವಕಾಶವಿಲ್ಲ. ಗದ್ಯ ಗ್ರಂಥವು ದ್ವಯ ವ್ಯಾಖ್ಯಾನ ರೂಪವಾದದ್ದು ಎಂಬುದಕ್ಕೆ "ದ್ವಯ ಮರ್ಥಾನು ಸಂಧಾನೇನ ಸಹ ಸದೈವಂ ವಕ್ತಾ" ಎಂಬುದು ಗಮಕ. ಇಲ್ಲಿ 'ಸದಾ' ಎಂಬ ರೀತಿಯಲ್ಲಿ ಪುನಃ ಪುನಃ ಅನುಸಂಧಾನ ಮಾಡುವುದು ಕೃತಾರ್ಥ ಭಾವವನ್ನು ಕೊಡುತ್ತದೆ ಎಂದರ್ಥ- ಅಷ್ಟಲ್ಲದೆ ಪುನಃ ಪುನಃ ಪ್ರಪತ್ತ್ಯನುಷ್ಠಾನ ಮಾಡಿರುವುದು ಸಕೃದ ನುಷ್ಠಾನ ಶಾಸ್ತ್ರಕ್ಕೆ ಭಂಗರೂಪವು ಎಂದಲ್ಲ. "ಅತ್ರೈವ ಶ್ರೀ ರಂಗೇ ಸುಖಮಾಸ್ವ" ಎಂದ ಶ್ರೀ ರಂಗದಲ್ಲಿ (ಇದು ದಿವ್ಯ ದೇಶಗಳಿಗೆ ಉಪಲಕ್ಷಣ) ನಿತ್ಯವಾಸೋಕ್ತಿಯು ಪ್ರಪನ್ನನ ಸ್ವಾರಸಿಕವಾದ ಸ್ವಾಮಿ ಕೈಂಕರ್ಯಕ್ಕೆ ಅನುಗುಣವಾದದೆಂಬ ಆಶಯದಿಂದ ಹೇಳಲ್ಪಟ್ಟಿದೆ. ಇದು ಪ್ರಪತ್ತಿಯ ನೈರ ಪೇಕ್ಷ್ಯಕ್ಕೆ ಭಗವನ್ನುಂಟು ಮಾಡುವುದಿಲ್ಲ. ಇದು ಸಾಧನ ವೆಂಬ ದೃಷ್ಟಿಯಿಂದಲ್ಲ

ಪರ ಭಕ್ತ್ಯಾದಿ ಮೂಲಕ ಕೈಂಕರ್ಯ ಪ್ರಾರ್ಥನೆಯು ಮುಕ್ತೈಶ್ವರ್ಯ ಪ್ರಾರ್ಥನಾತ್ಮಕವಾದದ್ದು. ಕೆಲವು ಮಹಾತ್ಮರಿಗೆ ಈ ದೇಶದಲ್ಲಿಯೂ ಮುಕ್ತ ತುಲ್ಯವಾದ ಅನುಭವವು ಬೇಕೆಂಬ ತ್ವರೆಯು ಏರ್ಪಟ್ಟರೆ ಶರ್ಣ್ಯನ ಅನುಗ್ರಹ ವಿಶೇಷದಿಂದ ಅದೂ ಇಲ್ಲೇ ಉಂಟಾಗುತ್ತದೆ ಎಂದು ಶಿಷ್ಯ ಹಿತಕೋಸ್ಕರ ಹೇಳಲ್ಪಟ್ಟಿದೆ. ಅಯಂ ಭಾವಃ–ಮೋಕ್ಷದಶೆಯಲ್ಲಿ ಉಂಟಾಗುವ ಪರ ಭಕ್ತಿಯು ಉತ್ತರೋತ್ತರ ರೂಪವಾದ ಇಚ್ಛಾ ರೂಪ ಬುದ್ಧಿ ವಿಶೇಷ. ಪರಜ್ಞಾನವು ಉತ್ತರೋತ್ತರ ಸಾಕ್ಷಾತ್ಕಾರ–ಪರಮ ಭಕ್ತಿಯು ಸಾಕ್ಷಾತ್ಕಾರಾನಂತರ ವಿಚ್ಛೇದವಿಲ್ಲದೆ ನಿರಂತರವಾದ ಭಗವದನುಭವರೂಪ ಇಚ್ಛೆ. ಈ ರೀತಿಯಾದ ಅನುಭವವೂ ಇಲ್ಲೇ ಪ್ರಾರ್ಥಿಸಲ್ಪಡಬಹುದು.

ಈ ರೀತಿಯಾಗಿ ಗದ್ಯವು ದ್ವಯಾರ್ಥಾನುಸಾರವಾದದ್ದು. ಏಕದೇಶಿಗಳು ಗದ್ಯವು ದ್ವಯಾರ್ಥ ವಿವರಣವೆಂದು ಅಭಿಮಾನಿಸಿ, ಉಪಕ್ರಮದಲ್ಲಿ ಲಕ್ಷ್ಮಿಯ ಪಾರಮ್ಯಕ್ಕೆ ಭಂಗವನ್ನುಂಟು ಮಾಡಿ, ನಾರಶಬ್ದಾರ್ಥವಾಗಿ ಅವಳನ್ನು ಜೀವ ಕೋಟಿಯಲ್ಲಿ ಸೇರಿಸಿರುವುದು ಅನ್ಯಾಯ. ಏಕೆಂದರೆ ಪುರುಷಕಾರವು ಐಚ್ಛಿಕವಾಗಿ ಲಕ್ಷ್ಮೀ ಪಾರಮ್ಯಕ್ಕೆ ಭಂಗವನ್ನುಂಟುಮಾಡಲಾರದು. ಶ್ರೀಮನ್ನಾರಾಯಣ ಎಂಬಲ್ಲಿ ವಿಶಿಷ್ಟೋಪಾಯವು ಹೇಳಿರುದನ್ನು ಅಪಲಪಿಸುವುದು ದುಷ್ಪರಿಹರ. ಚರಮ ಶ್ಲೋಕದ ಉತ್ತರಾರ್ಧದಲ್ಲಿ ತಿಳಿಸಲ್ಪಟ್ಟ ಸ್ವಾಭಾವಿಕ ದಯಾರ್ದ್ರಚಿತ್ತನಾದ ಭಗವಂತನಲ್ಲಿ ಮಾಡಿದ ಶರಣಾಗತಿಯು ಫಲವನ್ನು ಕೊಡದೆ ಇರಲಾರದು, ಎಂಬುದು ಗದ್ಯದಲ್ಲಿ ಪ್ರಕಾಶಪಡಿಸಿದ್ದರೂ", "ಆರ್ತೋಪಚ್ಛಂದನಂ ಗದ್ಯಂ ಭಾಷ್ಯಂತು ಪರ ರಂಜನಮ್" ಎಂದು ಗದ್ಯಕ್ಕೆ

**ಪರಭಕ್ತ್ಯಾದಿ ಮೂಲತ್ವಂ ಕೈಂಕರ್ಯಸ್ಯ ಯದುಚ್ಯತೇ ।**
**ಗದ್ಯಾದಿಷು ತದಪ್ಯಾಹು ರಪವರ್ಗದಶಾಶ್ರಯಮ್ ॥91॥**

**ಉತ್ತರೋತ್ತರಯೋಃ ಸ್ವಾಮಿ ಸಾಕ್ಷಾತ್ಕರಣ ಭೋಗಯೋಃ ।**
**ಪೂರ್ವಪೂರ್ವಕ್ಷಣೇಷ್ಟತ್ವಾತ್ತನ್ಮೂಲತ್ವ ಮುದೀರಿತಮ್ ॥92॥**

**ಶರೀರ ಪಾತಕಾಲೇತು ಹಾರ್ದಸ್ಯಾನುಗ್ರಹ ಸ್ಸ್ವಯಮ್ ।**
**ಪರಿ ಪಾಕಂ ಪ್ರಪನ್ನಾನಾಂ ಪ್ರಯಚ್ಛತಿ ತಥಾವಿಧಮ್ ॥93॥**

**ಅಙ್ಕೋಲತೈಲ ಸಿಕ್ತಾನಾಂ ಬೀಜಾನಾ ಮಚಿರಾದ್ಯಥಾ ।**
**ವಿಪಾಕಃ ಫಲಪರ್ಯನ್ತ ಸ್ತಥಾತ್ರೇತಿ ನಿದರ್ಶಿತಮ್ ॥94॥**

**ದುಷ್ಟೇನ್ದ್ರಿಯ ವಶಾಚ್ಚಿತ್ತಂ ನೃಣಾಂ ಯತ್ಕಲ್ಮಷೈರ್ವೃತಮ್ ।**
**ತದಂತಕಾಲೇ ಸಂಶುದ್ಧಿಂ ಯಾತಿ ನಾರಾಯಣಾಲಯೇ ॥95॥**

---

ಪ್ರಾಮಾಣ್ಯವನ್ನು ನಿರಾಕರಿಸುವುದು ಶ್ರೀ ಭಾಷ್ಯಕಾರ ಸಂಪ್ರದಾಯಕ್ಕೆ ವಿರುದ್ಧವಾಗಿ ಕುದೃಷ್ಟಿಮತ ಪೋಷಕ ವಾಗಿ ಪರಿಣಮಿಸುತ್ತದೆ. ಸರ್ವೇಶ್ವರನ ಸ್ವಾತಂತ್ರ್ಯ ಮಾತ್ರದಿಂದ ಮುಕ್ತಿಯು ಏರ್ಪಡುತ್ತದೆ ಎಂಬುದು, ಸರ್ವಾ ಪರಾಧವನ್ನೂ ಕ್ಷಮಿಸುವ ಪ್ರಪದನಾನುಷ್ಠಾನವನ್ನು ಪ್ರಕಾಶಿಸುವ ಮಂತ್ರದ ಅಭಿಪ್ರಾಯಕ್ಕೆ ವಿರುದ್ಧವಾದದ್ದು. ಇಂಥಹ ವಾದಗಳನ್ನು ಸಾಧುಗಳು ಅನಾದರ ಮಾಡಬೇಕಾದದ್ದು ಎಂಬುದು ಭಾವ. ಅಲಂ ಪ್ರಸಕ್ತಾನು ಪ್ರಸಕ್ತೇನ.

**ಪರಭಕ್ತ್ಯಾದಿ ಮೂಲತ್ವಂ** ಇತ್ಯಾದಿ- ಗದ್ಯದಲ್ಲಿ ಕೈಂಕರ್ಯವು ಪರಭಕ್ತಿ ಪರಜ್ಞಾನ ಪರಮ ಭಕ್ತಿ ಮೂಲವು ಎಂದು ಹೇಳಿರುವುದು, ಅಪವರ್ಗ–ಮೋಕ್ಷ ದಶೆಯಲ್ಲಿ ಏರ್ಪಡತಕ್ಕದ್ದು. **ಉತ್ತರೋತ್ತರಯೋಃ** ಇತ್ಯಾದಿ- ಉತ್ತರೋತ್ತರ- ಮೇಲು ಮೇಲೆ ಭಗವಂತನ ಸಾಕ್ಷಾತ್ಕಾರ, ಕೈಂಕರ್ಯರೂಪ ಭೋಗ ಇವುಗಳಿಗೆ ಪೂರ್ವ ಪೂರ್ವ ಕ್ಷಣಗಳಲ್ಲಿ, ನನಗೆ ಸಾಕ್ಷಾತ್ಕಾರವು ಉಂಟಾಗಬೇಕು ತದ್ರೂಪ ಪರಿಪೂರ್ಣಾನುಭವ ಪರಿವಾಹವಾದ ಕೈಂಕರ್ಯವು ಬೇಕೆಂಬ ಇಚ್ಛೆಯು ಮೂಲವಾದ್ದರಿಂದ ಪರಭಕ್ತ್ಯಾದಿ ಮೂಲತ್ವವು ಹೇಳಲ್ಪಟ್ಟಿತು. ಅಪವರ್ಗದಶೆ ಯಲ್ಲಿ ಉಂಟಾಗುವ ಪರಭಕ್ತಿಯು ಉತ್ತರೋತ್ತರ ಸಾಕ್ಷಾತ್ಕಾರದ ಇಚ್ಛಾ ರೂಪವಾದ ಬುದ್ಧಿ ವಿಶೇಷ. ಪರ ಜ್ಞಾನವು ಉತ್ತರೋತ್ತರ ಸಾಕ್ಷಾತ್ಕಾರ. ಪರಮಭಕ್ತಿಯು ಈ ಸಾಕ್ಷಾತ್ಕಾರಾನುಭವವು ನಿರಂತರವಾಗಿರಬೇಕೆಂಬ ಹಂಬಲ.

ದೃಪ್ತ ಪ್ರಪನ್ನರಿಗೂ ಹಾರ್ದನಾದ ಭಗವಂತನ ಅನುಗ್ರಹದಿಂದ ಅಂಥಹ ಅನುಭವವು ಉಂಟಾಗುತ್ತದೆ ಯೆಂದು **ಶರೀರಪಾತಕಾಲೇತು**– ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ "ಶರೀರಪಾತಕಾಲೇತು ಕೇವಲಂ ಮದೀಯಯೈವ ದಯಯಾ ಅತಿಪ್ರಬುದ್ಧಃ", ಎಂದು ಗದ್ಯದಲ್ಲಿ ಭಗವದ್ಭಾಷ್ಯಕಾರರು ಅನುಗ್ರಹಿಸಿರುವಂತೆ, ಶರೀರವು ಕಳಚಿ ಬೀಳುವ ಸಮಯದಲ್ಲಿ ಹಾರ್ದನಾದ ಭಗವಂತನ ಅನುಗ್ರಹದಿಂದ, ಪ್ರಪನ್ನರಿಗೆ ಪರಭಕ್ತಿ, ಪರಜ್ಞಾನ, ಪರಮ ಭಕ್ತಿ ರೂಪವಾದ ಬುದ್ಧಿ ಪರಿಪಾಕವು ಕೊಡಲ್ಪಡುತ್ತದೆ. ಜೀವಿತ ಕಾಲದಲ್ಲಿ ಅನುಭವ ವಿಷಯವಾಗದ ಪರಭಕ್ತ್ಯಾದಿಗಳು ಕೊನೆಯಲ್ಲಿ ಭಗವತ್ಪ್ರಸಾದದಿಂದ ಉಂಟಾಗುತ್ತವೆ ಎಂಬುದಕ್ಕೆ **'ಅಂಕೋಲ ತೈಲಸಿಕ್ತಾನಾಂ'** ಎಂಬ ದೃಷ್ಟಾಂತವನ್ನು ಕೊಡುತ್ತಾರೆ. ಅದಾಗಿ ಮಾವಿನ ಬೀಜ ಮೊದಲಾದವು ಅಂಕೋಲ ತೈಲದಲ್ಲಿ ನೆನೆಸಲ್ಪಟ್ಟು ಭೂಮಿಯಲ್ಲಿ ನೆಡಲ್ಪಟ್ಟರೆ, ಒಡನೆ ಗಿಡವಾಗಿ ಬೆಳೆದು ಹೂವು ಕಾಯಿ ಹಣ್ಣುಗಳಿಂದ ಕೂಡಿ ಇರುವಂತೆ, ಇಲ್ಲಿಯೂ ಹಾರ್ದನ ಅನುಗ್ರಹದಿಂದ ಪರಭಕ್ತ್ಯಾದಿಗಳು ಉಂಟಾಗುತ್ತವೆ. **ದುಷ್ಟೇಂದ್ರಿಯ ವಶಾಚ್ಚಿತ್ತಂ**ಇತ್ಯಾದಿ–ದುಷ್ಟವಾದ ಇಂದ್ರಿಯಗಳಿಗೆ ಪರವಶವಾದ ಮನಸ್ಸು ಅಂತ್ಯಕಾಲದಲ್ಲಿಶ್ರೀರಂಗಾದಿ ದಿವ್ಯಕ್ಷೇತ್ರ

**ಇತಿ ವ್ರತ ವಿಶೇಷೇ ಯತ್ಸಾತ್ವತಾದಿಷು ಶಿಷ್ಯತೇ :**
**ತಪ್ಪದತ್ರೋಪಪದ್ಯೇತ ಗದ್ಯೋಕ್ತಾಂತ್ಯ ದಶಾಗಮಃ ॥96॥**

**ಅನುಗ್ರಹ ವಿಶೇಷೇಣ ಕೇನಚಿತ್ಪರಮಾತ್ಮನಃ ।**
**ಕುರುಕಾಧೀಶ ನಾಥಾದ್ಯಾಃ ಪ್ರಾಗಪ್ಯನ್ವಭುವನ್ ಪ್ರಭುಮ್ ॥97॥**

ಶ್ರೀ ಶಠಾರಿ ದಿವ್ಯಸೂಕ್ತಿಷು ಏತದ್ದ್ವಯಾರ್ಥಾನು ಸಂಧಾನ ಮಪಿ ವ್ಯಕ್ತಮಿತಿ
ಸಂಪ್ರದಾಯಂ ಪ್ರದರ್ಶಯತಿ.

**ಇದ್ವಯತ್ತಿಲರ್ಥತ್ತೈ ನಮ್ಮಾೞ್ವಾರುಮ್ 1) "ತಿರುನಾರಣನ್ತಾಳ್ ಕಾಲಮ್ಪೆರಚ್ಚಿನ್ದಿತ್ತುಯ್**

---

ವಾಸದಿಂದ ಶುದ್ಧವಾಗುತ್ತದೆ. ಇತಿ–ಹೀಗೆ ವ್ರತವಿಶೇಷೇ–ಮೋಕ್ಷಾರ್ಥವಾದ ವಿಶೇಷ ವ್ರತಗಳನ್ನು ಹೇಳುವ ಸಂದರ್ಭದಲ್ಲಿ, **ಸಾತ್ವತಾದಿಷು** ಇತ್ಯಾದಿ– ಸಾತ್ವತಾದಿ ಪುರಾಣಗಳಲ್ಲಿ ಉಪದೇಶಿಸಲ್ಪಟ್ಟಂತೆ, ಗದ್ಯೋಕ್ತವಾದ ಅಂತ್ಯದಶಾ ಪ್ರಾಪ್ತಿಯೂ ಉಪಪನ್ನವು. **ಅನುಗ್ರಹವಿಶೇಷಣ** ಇತ್ಯಾದಿ– ಭಗವಂತನ ವಿಲಕ್ಷಣವಾದ ಅನುಗ್ರಹ ವಿಶೇಷದಿಂದ ನಮ್ಮಾಳ್ವಾರ್, ನಾಥಮುನಿ ಪ್ರಭೃತಿಗಳು **ಪ್ರಾಗಪ್ಯನ್ವಭುವನ್‌ಪ್ರಭುಮ್**-ಭಗವಂತನನ್ನು ಈ ಬದ್ಧದಶೆಯಲ್ಲಿಯೂ ಸಾಕ್ಷಾತ್ಕರಿಸಿ ಅನುಭವಿಸಿದರು. ಆದಿಶಬ್ದದಿಂದ, ಕುರುಹೈಕ್ಕಾವಲಪ್ಪನ್, ತಿರುಕ್ಕಚ್ಚಿನಂಬಿ ಶ್ರೀ ಭಾಷ್ಯಕಾರರು, ಶ್ರೀ ಮನ್ನಿಗಮಾಂತ ಮಹಾದೇಶಿಕ ಪ್ರಭೃತಿಗಳು ಅಭಿಪ್ರೇತರು. ಕುರುಹೈಕ್ಕಾವಲಪ್ಪನ್ ಸಮಾಧಿದಶೆಯಲ್ಲಿ ಭಗವಂತನನ್ನು ಸಾಕ್ಷಾತ್ಕಾರ ಪೂರ್ವಕ ಅನುಭವಿಸುತ್ತಿದ್ದಾಗ, ಅವರಲ್ಲಿ ಭಕ್ತಿಯೋಗೋಪ ದೇಶವನ್ನು ಪಡೆಯಬೇಕೆಂದು ಅಲ್ಲಿಗೆ ಬಂದು ಗೋಡೆಯ ಹಿಂದೆ ನಿಂತಿದ್ದ, ಆಳವಂದಾರವರನ್ನು, ಭಗವಂತನು ಹಿಂತಿರುಗಿ ನೋಡಿದನು. ಆಗ ಕುರುಹೈಕ್ಕಾವಲಪ್ಪನ್ ಅವರು, ಸಮಾಧಿ ಭಂಗವಾಗಿ "ಶೊಟ್ಟೈಕ್ಕುಲತ್ತಾರ್ ಇಂಗುಂಡೋ" ಎಂದು ಕೇಳಲು, ಆಳವಂದಾರವರು "ನಾಯಿಂದೇ" ಎಂದು ಬಂದು ಪಾದೋಪ ಸರ್ಪಣವನ್ನು ಮಾಡಿದರೆಂಬ ವೃತ್ತಾಂತವು ಇಲ್ಲಿ ಅನುಸಂಧೇಯ. ಹಾಗೆಯೇ ತಿರುಕ್ಕಚ್ಚಿನಂಬಿಯವರು ದೇವಾಧಿರಾಜನನ್ನು ಅರ್ಚಾ ಸಮಾಧಿಯಲ್ಲಿ ಸಾಕ್ಷಾತ್ಕರಿಸಿ ಸಂಭಾಷಣ ಮಾಡುತ್ತಿದ್ದ ಶ್ರೀ ಭಾಷ್ಯಕಾರರ ಪ್ರಾರ್ಥನೆಯ ಪ್ರಕಾರ, "ಅಹಂಮೇವ ಪರಂ ತತ್ವಂ, ದರ್ಶನಂ ಭೇದ ಏವ ನಃ" ಎಂದಾರಂಭಿಸಿ ಆರು ಮಾತುಗಳನ್ನು ಭಗವಂತನಿಂದ ಕೇಳಿ ತಿಳಿದುಕೊಂಡು ಭಾಷ್ಯಕಾರರಿಗೆ ಉಪದೇಶಿದುದು ಇಲ್ಲಿ ಅನುಸಂಧೇಯ. ಭಗವದ್ಭಾಷ್ಯಕಾರರೂ ಶ್ರೀ ರಂಗದಲ್ಲಿ ಪಂಗುನಿ ಉತ್ತರದ ದಿವ್ಯ ದಿನದಲ್ಲಿ ಶೀ ರಂಗನಾಥನ ಪಾದಗಳನ್ನು ಶರಣ ಹೊಂದಿ ಅರ್ಚಾಸಮಾಧಿಯಲ್ಲಿ ಅಶ್ವಾಸನ ಮಾಡಲ್ಪಟ್ಟರೆಂಬುದೂ ಲೋಕವಿದಿತ. ಶ್ರೀ ಮನ್ನಿಗಮಾಂತ ಮಹಾದೇಶಿಕರಿಗೆ, ತಿರುವಹೀಂದ್ರಪುರದ ಓಷದಾದ್ರಿಯಲ್ಲಿ ಹಯಗ್ರೀವನ ಸಾಕ್ಷಾತ್ಕಾರವು ಏರ್ಪಟ್ಟು ಸಕಲ ವಿದ್ಯೆಗಳೂ ಉಪದೇಶವಾದುದೂ ಇಲ್ಲಿ ಅನುಸಂಧೇಯ.

**ಇದ್ವಯತ್ತಿಲರ್ಥತ್ತೈ**– ಇತ್ಯಾದಿ– ಈ ದ್ವಯ ಮಂತ್ರದ ಅರ್ಥವನ್ನು ನಮ್ಮಾಳ್ವಾರವರು. (1)**ತಿರು**

---

1) ಒರುನಾಯಕಮಾಯ್ ಓಡಉಲಹುಡನಾಂಡವರ್,
ಕರುನಾಯ್ ಕವರ್ನ್ದಕಾಲರ್ ಶಿದೈಗಿಯ ಪಾನೆಯರ್ ॥
ಪೆರುನಾಡುಕಾಣ ಇಮ್ಮೈಯಿಲೇ ಪಿಚ್ಚೈತಾಂಕೊಳ್ವರ್,
ತಿರನಾರಣನ್‌ತಾಳ್ ಕಾಲಂ ಪೆರಚ್ಚಿಂದಿತ್ತುಯ್‌ಮಿನೋ ॥
ತಿರುವಾಯ್‌ಮೊೞಿ (4-1-1) ಪ್ರಾಕೃತವಾದ ಐಶ್ವರ್ಯಾದಿಗಳು ಪು. ತಿ. ನೋ.

ವಿಂನೋ" ಎನ್ರುಮ್, 2) "ಮುಹಿಲ್‌ವಣ್ಣನಡಿಯೆಯಡೈನ್ದರುಳ್ ಶೂಡಿಯುಯ್‌ನ್ದವರ್" ಎನ್ರುಮ್. 3) "ಅಹಲಹಿಲ್ಲೇ" ಮುದಲಾನ ಪ್ರದೇಶಙ್ಗಳಿಲುಮ್ ಅರುಳಿಚ್ಚೆಯ್‌ದಾರ್.

ಅಥ ದ್ವಯಸ್ಯ ಪ್ರತಿಪದಮ್ ವಿಸ್ತರೇಣಾರ್ಥಮಾಹ.

ಇದಿಲ್ ಮುರ್ಪಡ "ಶ್ರೀಮನ್ನಾರಾಯಣ" ಎನ್ರು ಸರ್ವಶರಣ್ಯಮಾನ ಪರತತ್ವತ್ತೈ ಚ್ಚೊನ್ನಪಡಿ ಶ್ರಿಯಃಪತಿತ್ವ ಲಿಙ್ಗತ್ತಾಲುಮ್, ನಾರಾಯಣ ಶಬ್ದತ್ತಾಲುಮಿರೇ, ಶ್ರುತಿಹಳಿಲ್ ಪರತತ್ವವಿಶೇಷ ನಿರ್ಣ

---

ನಾರಣನ್‌ತಾಳ್ ಇತ್ಯಾದಿಯಾಗಿಯೂ, (2)ಮುಹಿಲ್‌ವಣ್ಣನಡಿಯೈ ಇತ್ಯಾದಿಯಾಗಿಯೂ, (3)ಅಹಲಹಿಲ್ಲೇನ್ ಮೊದಲಾದ ಪ್ರದೇಶಗಳಲ್ಲಿಯೂ ಕೃಪೆಮಾಡಿ ಹೇಳಿರುತ್ತಾರೆ. ಅದಾಗಿ "ತಿರುನಾರಣನ್‌ತಾಳ್"–ಶ್ರೀಮನ್ನಾರಾಯಣ ಚರಣೌಶಿಂದಿತ್ತು ಶರಣಂ ಪ್ರಪದ್ಯೇ ಎಂಬುದರ ಅರ್ಥ. ಉಯ್‌ವಿಂನೋ ಎಂಬುದು ದ್ವಯದ ಉತ್ತರಖಂಡದಅರ್ಥಮುಹಿಲ್ ವಣ್ಣನ್– ಶ್ರೀ ಮನ್ನಾರಾಯಣ ಶಬ್ದಾರ್ಥ. ಅಡಿಯೈ ಅಡೈಂದು–'ಶರಣಂಪ್ರಪದ್ಯೆ' ಎಂಬುದರ ಅರ್ಥ. "ಅರುಳ್‌ಶೂಡಿ ಉಯನ್ದವನ್"–ದ್ವಯಮಂತ್ರದ ಉತ್ತರಖಂಡಾರ್ಥ. 'ಅಹಲ ಹಿಲ್ಲೇನ್' ಇತ್ಯಾದಿ ಪೂರ್ಣವಾದ ಪಾಶುರದಿಂದ ಪೂರ್ವ ಖಂಡಾರ್ಥ. ಮೊದಲಾದಪ್ರದೇಶಗಳೆಂದರೆ, "ಒಂಡೊಡಿಯಾಳ್ ತಿರುಮಹಳುಮ್" ಇತ್ಯಾದಿಯು ದ್ವಯಮಂತ್ರದ ಉತ್ತರಾರ್ಧ ವಿವರಣ.

## ದ್ವಯ ಮಂತ್ರದ ಪದ ಪದಾರ್ಥ

ಅನಂತರ ದ್ವಯ ಮಂತ್ರದ ಪದಗಳ ಅರ್ಥವನ್ನು ಹೇಳ ತೊಡಗಿ ಮೊದಲು ಇದಿಲ್ ಮುರ್ಪಡ ಶ್ರೀಮನ್ನಾರಾಯಣ ಇತ್ಯಾದಿ ಆರಂಭಿಸಿ, "ಶ್ರೀಮನ್ನಾರಾಯಣ" ಎಂಬ ಪದದ ಅರ್ಥವನ್ನು ಅನುಗ್ರಹಿಸುತ್ತಾರೆ. ಅದಾಗಿ ಈ ಮಂತ್ರದಲ್ಲಿ ಮೊದಲು "ಶ್ರೀಮನ್ನಾರಾಯಣ" ಎಂದು ಸರ್ವಶರಣ್ಯವಾದ ಪರತತ್ವವನ್ನು ಹೇಳಿರುತ್ತದೆ. ಇದು ಹೇಗೆ ಎಂಬುದನ್ನು ಶ್ರಿಯಃ ಪ್ರತಿತ್ವ ಲಿಂಗಾತ್ತಾಲುಮ್ ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ "ಅದ್ಭ್ಯಸ್ಸಂಭೂತಃ", ಎಂದಾರಂಭಿಸುವ ಉತ್ತರ ನಾರಾಯಣಾನುವಾಕದಲ್ಲಿ "ಹ್ರೀಶ್ಚತೇ ಲಕ್ಷ್ಮೀಶ್ಚಪತ್ನ್ಯೌ"

---

ಅಸ್ಥಿರವೆಂದು ತಿಳಿದು, ಶ್ರಿಯಃಪತಿಯಾದ ನಾರಾಯಣನ ಪಾದಗಳನ್ನು ಶೀಘ್ರವಾಗಿಯೇ ಆಶ್ರಯಿಸಿ ಉಜ್ಜೀವಿಸಿ

2) ಮುಹಿಲ್‌ವಣ್ಣನಡಿಯೈ ಅಡೈಂದರುಳ್‌ಶೊಡಿ ಉಯ್‌ನ್ದವನ್ ಮೊಯ್‌ಪುನಲ್ ಪೊರುನಲ್ ।
ತುಹಿಲ್‌ವಣ್ಣತ್ತೂನೀರ್‌ಶೇರ್ಪನ್ ವಣ್‌ಪೊೞಿಲ್‌ಶೂೞ್ ವಣ್ಕುರುಹೂರ್ ಶಡಗೋಪನ್ ।
ಮುಹಿಲ್‌ವಣ್ಣನಡಿಮೇಲ್‌ಶೊನ್ನಶೊಲ್‌ಮಾಲೈಯಾಯಿರತ್ತಿಪ್ಪತ್ತುಮ್ ವಲ್ಲಾರ್,
ಮುಹಿಲ್‌ವಣ್ಣವಾನತ್ತಿಮೈಯವರ್ ಶೂೞವಿರುಪ್ಪರ್ ಪೇರಿನ್ಬವೆಳ್ಳತ್ತೇ ॥ ತಿರುವಾಯ್‌ಮೊೞಿ (7–-2–11)

ನೀಲಮೇಘಶ್ಯಾಮಳನಾದ ಭಗವಂತನ ಪಾದಗಳನ್ನಾ ಶ್ರಯಿಸಿ, ಅವನ ಕೃಪೆಯಿಂದ ಉಜ್ಜೀವಿಸಿದ ನಮ್ಮಾಳ್ವಾರವರು ಕೃಪೆಯಿಂದ ಅನುಗ್ರಹಿಸಿದ ಈ ಪಾಶುರಗಳನ್ನು ಅಭ್ಯಸಿಸಿದವರು ಶ್ರೀ ವೈಕುಂಠದಲ್ಲಿ ನಿತ್ಯ ಸೂರಿಗಳಿಂದ ಸುತ್ತುವರಿಯಲ್ಪಟ್ಟು ಮಹಾನಂದಸಾಗರ ದಲ್ಲಿ ಮುಳುಗಿ ಇರುತ್ತಾರೆ.

3) ಅಹಲಹಿಲ್ಲೇನ್ ಇರೈಯು ಮೆನ್ರು ಅಲರ್‌ಮೇಲ್‌ಮಂಗೈಯುರೈಮಾರ್ಬಾ,
ನಿಹರಿಲ್ ಪುಹೞಾಯ್ ಉಲಗಮೂನ್ರುಡೈಯಾಯ್ ಎನ್ನೈಯಾಳ್ವಾನೇ !
ನಿಹರಿಲ್ ಅಮರರ್ ಮುನಿಕ್ಕಣಂಗಳ್ ವಿರುಂಬುಮ್ ತಿರುವೇಂಗಡತ್ತಾನೇ
ಪುಹಲೊನ್ರಿಲ್ಲಾವಡಿಯೇನ್ ಉನ್ನಡಿಕ್ಕೀೞ್ ಅಮರ್‌ನ್ದುಪುಹುಂದೇನೇ ॥ ತಿರುವಾಯ್‌ಮೊೞಿ (6-10-11)

ಕ್ಷಣಕಾಲವೂ ನಿನ್ನನ್ನು ಬಿಟ್ಟಿರಲಾರೆ ಎಂದು ಹೇಳುವ ಪಂಕಜವಾಸಿನಿಯು ನಿತ್ಯವಾಸವನ್ನು ಮಾಡುವ ಎದೆಯನ್ನುಳ್ಳವನೇ ಸೌಲಭ್ಯ ಸೌಶಿಲ್ಯಾದಿಗುಣಗಳುಳ್ಳವನೇ, ! ನನಗೆ ಸ್ವಾಮಿಯೇ, ! ನಿತ್ಯಸೂರಿ ನಿರ್ವಾಹಕನಾಗಿದ್ದು ಸನ್ನಿಹಿತವಾದ ತಿರುವೇಂಗಡವೆಂಬ ಬೆಟ್ಟದಲ್ಲಿರುವವನೇ ! ಬೇರೆ ಆಶ್ರಯವಾವುದೂ ಇಲ್ಲದೇ ದಾಸನಾದ ನಾನು ನಿನ್ನ ಪಾದಗಳನ್ನು ಮಹಾ ವಿಶ್ವಾಸಪೂರ್ವಕವಾಗಿ ಶರಣಹೊಂದ್ದಿದೇನೆ.

ಯುಮ್ ಪಣ್ಣಪ್ಪಟ್ಟದು ನಾರಾಯಣನ್ ಶರಣ್ಯನಾಂಪೋದು ಲಕ್ಷ್ಮೀವಿಶಿಷ್ಟನಾಯಿರುಕ್ಕು ಮೆನ್ಸೈಕ್ಕಾಹ ಪೂರ್ವಖಂಡತ್ತಿಲ್ ಶ್ರೀಮಚ್ಛಬ್ದಮ್.

"ಆಕಾರಿಣಸ್ತು ವಿಜ್ಞಾನ ಮಾಕಾರಜ್ಞಾನ ಪೂರ್ವಕಮ್ ।
ತೇನಾಕಾರಂ ಶ್ರಿಯಂ ಜ್ಞಾತ್ವಾ ಜ್ಞಾತವ್ಯೋ ಭಗವಾನ್ ಹರಿಃ" ॥

ಎನ್ರರುಳಾಳಪ್ಪೆರುಮಾಳೆಮ್ಬೆರುಮಾನಾರರುಳಿಚ್ಚೆಯ್‌ದಾರ್. ಇದು ಉತ್ತರ ಖಂಡತ್ತಿಲ್ಪೋಲೇ ಪೂರ್ವ ಖಂಡತ್ತಿಲುಮ್ ವಿಶೇಷಣಮೆನ್ನುಮಿಡಮುಮ್, ಉಪಾಯ ವಿಶೇಷಣಙ್ಗಳಾಲ್ ಉಪಾಯದ್ವಿತ್ವಮ್

---

ಎಂದು ಹೇಳಲ್ಪಟ್ಟ ಶ್ರಿಯಃಪತಿತ್ವ (ಲಕ್ಷ್ಮೀಪತಿತ್ವ) ಲಿಂಗ-ಚಿಹ್ನೆಯಿಂದ ಪುರುಷ ಸೂಕ್ತದಲ್ಲಿ "ವೇದಾಹ ಮೇತಂ ಪುರುಷಂ ಮಹಾಂತಮ್", ಎಂದು ಹೇಳಲ್ಪಟ್ಟ ಮಹಾಪುರುಷನು ಪರತತ್ವವಾದ ನಾರಾಯಣನೆಂದು ತಿಳಿಸಲ್ಪಟ್ಟಿತು. ಇದನ್ನು "ಸಹಸ್ರಶೀರ್ಷಂ ದೇವಂ" ಎಂದಾರಂಭಿಸುವ ಅನುವಾಕದಲ್ಲಿ "ವಿಶ್ವಮೇವೇದಂಪುರುಷಃ "ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ", ಎಂದೂ, ನಾರಾಯಣ ಪರಬ್ರಹ್ಮ ತತ್ವಂನಾರಾಯಣಃ ಪರಃ ಎಂದೂ, ವಿಶ್ವ ಶಬ್ದ ಸಾಮಾನಾಧಿಕರಣ್ಯವಾಗಿ ಪಠಿಸಲ್ಪಟ್ಟ ಪುರುಷನೂ, ವಿಶ್ವಾತ್ಮನಾದ ನಾರಾಯಣನೂ, ಒಬ್ಬನೇ ಎಂದು ಏರ್ಪಟ್ಟು, ತತ್ವಂನಾರಾಯಣಃ ಪರಃ, ಎಂದು ಆ ನಾರಾಯಣನೇ ಪರತತ್ವವು ಎಂದು ಹೇಳಿರುವುದರಿಂದ, ಪುರುಷ ವಾಚ್ಯನೇ ನಾರಾಯಣನು, ಅವನೇ ಶ್ರಿಯಃಪತಿ ಎಂಬುದು ನಿರ್ವಿವಾದವಾಗಿ ಏರ್ಪಡುತ್ತದೆ. ನಾರಾಯಣಶಬ್ದವು ಒಂದೇ, ಪರತತ್ವ ನಿರ್ಧಾರಣಕ್ಕೆ ಸಾಕಾಗಿರುವಾಗ, ಮಂತ್ರದಲ್ಲಿ ಶ್ರೀ ಮಚ್ಛಬ್ದವನ್ನು ಏಕೆ ಪ್ರಯೋಗಿಸಬೇಕೆಂದರೆ, **ನಾರಾಯಣನ್ ಶರಣ್ಯನಾಮ್‌ಪೋದು** ಇತ್ಯಾದಿ ಆರಂಭಿಸಿ, ಈ ಶ್ರೀಮಚ್ಛಬ್ದ ಪ್ರಯೋಗಕ್ಕೆ ಪ್ರಯೋಜನವನ್ನು ಅನುಗ್ರಹಿಸುತ್ತಾರೆ. ಅದಾಗಿ **ನಾರಾಯಣನು ಶರಣ್ಯನಾಮ್ ಪೋದು**- ಶರಣಾಗತಿಗೆ ವಿಷಯನಾಗಿ ರಕ್ಷಕನಾಗುವಾಗ ಲಕ್ಷ್ಮೀವಿಶಿಷ್ಟನಾಗಿರುತ್ತಾನೆಂಬುದನ್ನು ತಿಳಿಸಲು, ಪೂರ್ವ ಖಂಡದಲ್ಲಿ ಶ್ರೀಮಚ್ಛಬ್ದವು ಹೇಳಲ್ಪಟ್ಟಿದೆ. ಶರಣಾಗತ್ಯುದ್ದೇಶ್ಯತ್ವವು ಕೇವಲ ನಾರಾಯಣನಿಗಲ್ಲ. ಶ್ರೀ ವಿಶಿಷ್ಟನಿಗೇನೆ ಎಂದು ತೋರುವುದಕ್ಕೋಸ್ಕರ ಶ್ರೀ ಮಚ್ಛಬ್ದವು ಹೇಳಲ್ಪಟ್ಟಿದೆ. ಅಂದರೆ, ಶರಣ್ಯತ್ವಕ್ಕೆ ಉಪಯುಕ್ತಗಳಾದ ಗುಣಗಳು ಮಹಾಲಕ್ಷ್ಮಿಯಲ್ಲೂ, ನಾರಾಯಣನಲ್ಲೂ ಸ್ವಾತಂತ್ರ್ಯೇಣ ಪರಸ್ಪರ ಸಂಬಂಧಾನಪೇಕ್ಷಿತಗಳಾಗಿವೆ, ಎಂಬುದನ್ನು ಶ್ರೀಮನ್ನಾರಾಯಣವೆಂಬ ವಿಶಿಷ್ಟ ಪದವು ತಿಳಿಸುತ್ತದೆ. ಇಲ್ಲದಿದ್ದರೆ ಶರಣ್ಯತ್ವಕ್ಕೆ ಉಪಯುಕ್ತಗಳಾದ ವಾತ್ಸಲ್ಯ ಕಾರುಣ್ಯ, ಸೌಲಭ್ಯ, ಸೌಶಿಲ್ಯಾದಿ ಗುಣಗಳು ವಿಶೇಷ್ಯ ಭೂತನಾದ ಕೇವಲ ನಾರಾಯಣ ನಿಷ್ಟಗಳಾಗಿ, ತತ್ಸಂಬಂಧದಿಂದ ಲಕ್ಷ್ಮಿಯಲ್ಲೂ ಅನುಸಂಧಾನ ಮಾಡಲ್ಪಡುತ್ತವೆ ಎಂಬ ಶಂಕೆಗೆ ಅವಕಾಶವು ಏರ್ಪಡುತ್ತದೆ. ಆದ್ದರಿಂದ **ಅಂತಹ ಶಂಕೆಯು ಉಂಟಾಗದಿರಲು, ಲಕ್ಷ್ಮಿಯಲ್ಲೂ ಶರಣ್ಯತೆಗೆ ಉಪಯುಕ್ತಗಳಾದ ಗುಣ ಜಾತಗಳನ್ನು** ವಿಶದವಾಗಿ ತಿಳಿಸಲು ಶ್ರೀಮತ್ಪದವು ಪ್ರಯೋಗಿಸಲ್ಪಟ್ಟಿದೆ ಎಂದು ಭಾವ.

ಸ್ವರೂಪನಿರೂಪಕ ಧರ್ಮತ್ವದಿಂದ, ಭಗವಂತನ ಸ್ವರೂಪ ಜ್ಞಾನ ದಶೆಯಲ್ಲಿ ಅವಿನಾಭೂತೆಯಾದ ಲಕ್ಷ್ಮಿಗೆ ಶರಣ್ಯತ್ವವನ್ನು ನಿರಾಕರಿಸುವುದು ಶಕ್ಯವಲ್ಲವಾದ್ದರಿಂದ, ಶರಣಾಗತಿ ಮಾಡುವಾಗಲೂ, ಕೈಂಕರ್ಯವನ್ನು ಮಾಡುವಾಗಲೂ. ಲಕ್ಷ್ಮೀ ವಿಶಿಷ್ಟನಾಗಿದ್ದಾನೆಂಬುದನ್ನು **ಆಕಾರಿಣಸ್ತುವಿಜ್ಞೇಯಃ** ಎಂದಾರಂಭಿಸಿ ನಿರೂಪಿಸಿರುತ್ತಾರೆ. ಅದಾಗಿ, ಆಕಾರೀ-ಧರ್ಮಿ, **ಆಕಾರ-ಧರ್ಮಃ**, ಆಕಾರಿಯಾದ ಘಟದ ಜ್ಞಾನವು ಆಕಾರವಾದ ಸ್ವರೂಪ ನಿರೂಪಕವಾದ ಘಟತ್ವಜ್ಞಾನ ಪೂರ್ವಕವಾಗಿಯೇ ಉಂಟಾಗುವಂತೆ, **ಆಕಾರಂ**- ಭಗವಂತನಿಗೆ ಸ್ವರೂಪ ನಿರೂಪಕ ಧರ್ಮವಾಗಿ, **ಶ್ರಿಯಂಜ್ಞಾತ್ವಾ**-ಲಕ್ಷ್ಮಿಯನ್ನು ತಿಳಿದುಕೊಂಡೇ, **ಜ್ಞಾತವ್ಯೋಭಗವಾನ್ ಹರಿಃ**-ಹರಿಯು ತಿಳಿಯಲ್ಪಡುತ್ತಾನೆ. ಲಕ್ಷ್ಮಿಗೆಉಪಾಯತ್ವವಿಲ್ಲವಾದ್ದರಿಂದ ಪೂರ್ವ ಖಂಡದಲ್ಲಿ ಅವಳಿಗೆ ವಿಶೇಷಣವು ಕೂಡದು, ಹಾಗೆ ಒಪ್ಪಿದರೆ ಉಪಾಯದ್ವಿತ್ವವು ಏರ್ಪಡುತ್ತದೆ, ಎಂಬ ಪರಪಕ್ಷವು ಹಿಂದೆಯೇ ನಿರಾಕರಿಸಲ್ಪಟ್ಟಿದೆ, ಎಂಬುದನ್ನು "**ಇದುಉತ್ತರ ಖಂಡತ್ತಿಲ್ಪೋಲೇ**" ಎಂದಾರಂಭಿಸಿ ಜ್ಞಾಪಿಸುತ್ತಾರೆ. ಆದಾಗಿ ಶ್ರೀಮತ್ಪದವು, ದ್ವಯ ಮಂತ್ರದ ಉತ್ತರ ಖಂಡದಲ್ಲಿ

ವಾರಾದೆನ್ನುಮಿಡಮುಮ್, ಸಿದ್ಧೋಪಾಯ ಶೋಧನತ್ತಿಲೇ ಶೊನ್ನೋಮ್.

### "ಶ್ರೀ" ಶಬ್ದಾರ್ಥಃ

"ಶ್ರೀ" ಶಬ್ದಂ "ಶ್ರೀಯತೇ, ಶ್ರಯತೇ, ಶೃಣೋತಿ, ಶ್ರಾವಯತಿ, ಶೃಣಾತಿ, ಶ್ರೀಣಾತಿ ಎನ್ರು ಆರು ಪಡಿಯಾಹ ಭಗವಚ್ಛಾಸ್ತ್ರಙ್ಗಳಿಲೇ ನಿರ್ವಚನಮ್ ಪಣ್ಣಪಟ್ಟಿರುಕ್ಕುಮ್. ಅವತ್ತಿಲ್ ಅಪೇಕ್ಷಿತ ಪದಾನ್ತರಙ್ಗಳ್ ಔಚಿತ್ಯತ್ತಾಲು ಮವ್ವೋ ಪ್ರಮಾಣ ಬಲತ್ತಾಲುಮ್ ವಿಶೇಷಿತ್ತರಿಯವೇಣುಮ್. ಅವ್ವಿಡತ್ತಿಲ್ ಸ್ವೋಜ್ಜೀವನಾರ್ಥಿಹಳಾಲೇ ಅಶ್ರಯಿಕ್ಕಪ್ಪಡಮೆನ್ರುಮ್, ಇವರ್‌ಹಳೈ ಉಜ್ಜೀವಿಪ್ಪಿಕ್ಕೈಕ್ಕಾಹ ಸರ್ವೇಶ್ವರನೈ ಅಶ್ರಯಿತ್ತಿರುಕ್ಕುಮೆನ್ರುಮ್ ಪೊರುಳಾನಪೋದು,

1) "ಪಿತೇವ ತ್ವತ್ಪ್ರೇಯರ್ಾ ಜನನಿ ಪರಿಪೂರ್ಣಾಗಸಿ ಜನೇ ಹಿತಸ್ರೋತೋವೃತ್ತ್ಯಾ ಭವತಿಚ ಕದಾಚಿತ್ಕಲುಷಧೀಃ । ಕಿಮೇತನ್ನಿರ್ದೋಷಃ ಕ ಇಹಜಗತೀತಿ ತ್ವಮುಚಿತೈ ರುಪಾಯೈರ್ವಿಸ್ಮಾರ್ಯ ಸ್ವಜನಯಸಿ ಮಾತಾ ತದಸಿ ನಃ ॥" ಎನ್ಗಿರಪಡಿಯೇ ಸಾಪರಾಧರಾನವರ್‌ಹಳ್ ಪಕ್ಕಲ್ ಸ್ವಯಂ ಹಿತೈಷಿಯಾಯ್,

---

ಹೇಳಿರುವಂತೆ, ಪೂರ್ವ ಖಂಡದಲ್ಲಿಯೂ ವಿಶೇಷಣವೆಂಬುದೂ, ಉಪಾಯ ವಿಶೇಷಣಗಳಿಂದ ಉಪಾಯದ್ವಿತ್ವವು ವುಂಟಾಗವುದಿಲ್ಲವೆಂದೂ ಸಿದ್ಧೋಪಾಯ ಶೋಧನಾಧಿಕಾರದಲ್ಲಿ ಹೇಳಲ್ಪಟ್ಟಿದೆ ಎಂದು ಆಚಾರ್ಯರು ಜ್ಞಾಪಕ ಪಡಿಸುತ್ತಾರೆ.

### ಶ್ರೀ ಶಬ್ದಕ್ಕೆ ಆರು ಅರ್ಥಗಳು

ಅನಂತರ ಶ್ರೀ ಶಬ್ದಮ್ ಎಂದಾರಂಭಿಸಿ, ಆರು ವಿಧವಾದ ಅರ್ಥಗಳನ್ನು ಶ್ರೀ ಶಬ್ದಕ್ಕೆ ನಿರೂಪಿಸುತ್ತಾರೆ. ಅದಾಗಿ ಶ್ರೀ ಶಬ್ದವು ಶ್ರೀಯತೇ– ಚೇತನರಿಂದ ಆಶ್ರಯಿಸಲ್ಪಡುತ್ತಾಳೆ, ಶ್ರಯತೇ– ಭಗವಂತನನ್ನು ಆಶ್ರಯಿಸುತ್ತಾಳೆ, ಶ್ರುಣೋತಿ–ಆರ್ತನಾದವನ್ನು ಕೇಳುತ್ತಾಳೆ, ಶ್ರಾವಯತಿ–ಭಗವಂತನು ಕೇಳುವಂತೆ ಹೇಳುತ್ತಾಳೆ, ಶೃಣಾತಿ-ಎಲ್ಲಾ ದೋಷಗಳನ್ನೂ ಹೋಗಲಾಡಿಸುತ್ತಾಳೆ, ಶ್ರೀಣಾತಿ– ತನ್ನ ಗುಣಗಳಿಂದ ಜಗತ್ತನ್ನು ಕಾಪಾಡುತ್ತಾಳೆ, ಎಂದು ಆರು ವಿಧವಾಗಿ ಭಗವಚ್ಛಾಸ್ತ್ರಗಳಲ್ಲಿ ನಿರ್ವಚನಮ್ ಪಣ್ಣಪ್ಪಟ್ಟದು–ವಿವರವಾಗಿ ಹೇಳಲ್ಪಟ್ಟಿದೆ. ಅವಟ್ರಿಲ್ ಇತ್ಯಾದಿ–ಅವುಗಳಲ್ಲಿ ವಾಕ್ಯಾರ್ಥವನ್ನು ಹೇಳುವಾಗ, ಅಪೇಕ್ಷಿತಗಳಾದ ಕರ್ತೃಕರಣಾದಿ ವಾಚಕ ಪದಾಂತರಗಳನ್ನು ಔಚಿತ್ಯದಿಂದಲೂ, ಆಯಾಯಾ ಪ್ರಮಾಣ ಬಲದಿಂದಲೂ ವಿಶೇಷವಾಗಿ ತಿಳಿಯಬೇಕು. ಶ್ರಿಞ್ ಶ್ರಯಣೇ ಎಂಬ ಧಾತುವಿನಲ್ಲಿ ಕರ್ಮಣಿ ಲಟ್, ಆದಾಗ ಸ್ವೋಜ್ಜೀವನಾರ್ಥಿಗಳಿಂದ ಎಂಬ ಕರ್ತೃವಾಚಕಪದವನ್ನು ಅಧ್ಯಾಹರಿಸಿ ಯೋಜಿಸಿ ತಾತ್ಪರ್ಯವನ್ನು ಅವ್ವಿಡತ್ತಿಲ್ ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಆ ಸಂದರ್ಭದಲ್ಲಿ ಸ್ವೋಜ್ಜೀವನಾರ್ಥಿಗಳಿಂದ "ಶ್ರೀಯತೇ"ಆಶ್ರಯಿಸಲ್ಪಡುತ್ತಾಳೆ, ಎಂದೂ ಇವರುಗಳನ್ನು ಉಜ್ಜೀವನಗೊಳಿಸಲು ಸರ್ವೇಶ್ವರನನ್ನು ಶ್ರಯತೇ – ಆಶ್ರಯಿಸುತ್ತಾಳೆಂದೂ, ಪೊರುಳ್ಆನಪೋದು–ಅರ್ಥವಾದಾಗ 1) ಪಿತೇವತ್ವತ್ಪ್ರೇಯಾನ್ ಇತ್ಯಾದಿಯಾಗಿ ಸಾಪರಾಧರಾದವರುಗಳಲ್ಲಿ, ಸ್ವಯಂ ಹಿತೈಷಿಯಾಗಿ ದಂಡಧರನಾದ ಸರ್ವೇಶ್ವರನ ಶೀಟ್ರತ್ತೈ– ಕೋಪವನ್ನು, ಆತ್ತಿ– ಹೋಗಲಾಡಿಸಿ, ಅವನ ಸಹಜ ಕಾರುಣ್ಯಾದಿಗಳು ಇವರುಗಳಿಗೆ ಉಜ್ಜೀವನಗಳಾಗುವಂತೆ, ಅದಾಗಿ ಲೋಕದಲ್ಲಿ ಯಾರು ತಾನೇ ತಪ್ಪು ಮಾಡುವುದಿಲ್ಲ ಇತ್ಯಾದಿಯಾದ

---

1, ಶ್ರೀಗುಣರತ್ನಕೋಶ- ಎಲೈ ತಾಯೇ, ಪರಿಪೂರ್ಣವಾದ ಪಾಪಗಳನ್ನು ಮಾಡಿದ ಜನರ ವಿಷಯದಲ್ಲಿ, ತಂದೆಯಹಾಗೆ, ನಿನ್ನ ವಲ್ಲಭನು, ಹಿತವನ್ನು ಬಯಸಲು ಯಾವಾಗಲಾದರೂ ಕಲುಷಮತಿಯಾಗಿ (ಕೋಪದಿಂದ ಕೂಡಿದವನಾಗಿ) ಆಗುತ್ತಾನೆ. ಆಗ ನೀನು ಏನಿದು,ಈ ಪ್ರಪಂಚದಲ್ಲಿ ತಪ್ಪು ಮಾಡದವರು ಯಾರು ? ಕೋಪಿಸಿಕೊಂಡೇನು ಪ್ರಯೋಜನ ? ನಮ್ಮನ್ನು ಶರಣಾಗತಿ ಹೊಂದಿದವರನು ನಾವು ಕೈ ಬಿಟ್ಟರೆ ಬೇರೆ ಯಾರು ನಮ್ಮಲ್ಲಿಗೆ ಬರುತ್ತಾರೆ. ಇತ್ಯಾದಿ ಉಪಾಯವಾದ ಮಾತುಗಳನ್ನು ಹೇಳಿ, ಮಂದಹಾಸ ವಿಸ್ಮಿತ ಭ್ರೂಕ್ಷೇಪಾದಿಗಳಿಂದ, ಭಗವಂತನು ಭಕ್ತನ ದೋಷಗಳನ್ನು ಮರೆಯುವಂತೆಮಾಡಿ-ನಿಗ್ರಹಾಭಿಸಂಧಿಯನ್ನು ಬಿಟ್ಟು, ನಮಗೆ ಬಂಧುವನ್ನಾಗಿ ಮಾಡುತ್ತೀಯಾ ಆದ್ದರಿಂದ ನೀನು ನಮಗೆ ತಾಯಿ.,

ದಂಡಧರನಾನ ಸರ್ವೇಶ್ವರನುಡೈಯ ಶೀಟತ್ತೈಯಾತ್ತಿ, ಅವನುಡೈಯ ಸಹಜಕಾರುಣ್ಯ ಮಿವರ್‌ಹಳುಕ್ಕು ಉಜ್ಜೀವಕವಾಮ್ಪಡಿಪಣ್ಣಿಕ್ಕೊಡುಕ್ಕೈಯಾಲ್ ಮಾತೃತ್ವ ಪ್ರಯುಕ್ತ ವಾತ್ಸಲ್ಯಾತಿ ಶಯತ್ತಾಲೇ, ಪುರುಷಕಾರ ಭೂತೈಯಾಯ್ ನಿರ್ಕಿರ ಏತ್ತಮ್ ಶೊಲ್ಲಿಟ್ರಾವ್, 2। "ಅವಿಜ್ಞಾತಾ" ಇತ್ಯಾದಿಹಳಿರ್ ಪೋಲೇ ಇಜು "ವಿಸ್ಮಾರ್ಯ" ಎನ್ರದುಕ್ಕುಮ್ 3) ಅಲ್ಲಿ ಮಲರ್ ಮಹಳ್ ಪೋಹಮಯಕ್ಕುಕ್ಕಳ್" ಇತ್ಯಾದಿಹಳುಕ್ಕುಮ್ ಸದಾ ಸರ್ವಜ್ಞನಾನ ಈಶ್ವರನುಡೈಯ ನಿಗ್ರಹಾಭಿಸಂಧಿ ನಿವೃತ್ತಿಯಿಲೇ ತಾತ್ಪರ್ಯಮ್.

ಸಾಪೇಕ್ಷನಾನ ಪುರುಷನುಕ್ಕುಅಪೇಕ್ಷಿತಮ್ ತಲೈಕ್ಕಟ್ಟಿಕ್ಕೊಡುಕ್ಕ ವಲ್ಲಚೇತನನ್‌ಅಭಿಗಮ್ಯನಾಹೈಕ್ಕು ಉಪಾಯಮಾಹ ವರಿಕ್ಕಪ್ಪಟ್ಟ ಚೇತನಾಂತರತ್ತೈ ಪುರುಷಕಾರಮೆನ್ರು ವ್ಯವಹರಿಪ್ಪಾರ್‌ಹಳ್. ಇಪ್ಪುರುಷ ಕಾರಮ್ ಫಲತ್ತುಕ್ಕು ಪರಂಪರಯಾ ಕಾರಣಮ್.

ಅರ್ಥಸ್ವಭಾವಾನುಷ್ಠಾನ ಲೋಕದೃಷ್ಟಿ ಗುರೂಕ್ತಿಭಿಃ ।
ಶ್ರುತ್ಯಾ ಸ್ಮೃತ್ಯಾಚ ಸಂಸಿದ್ಧಂ ಘಟಕಾರ್ಥಾವಲಂಬನಮ್ ॥

ಎನ್ರು ಇಪ್ಪುರುಷಕಾರ ಭಾವತ್ತುಕ್ಕು ಪ್ರಮಾಣಮ್ ನಿಕ್ಷೇಪರಕ್ಷೈಯಿಲೇ ಶೊನ್ನೋಮ್.

---

ಮಾತುಗಳನ್ನು ಹೇಳಿ, ಸಮಾಧಾನ ಪಡಿಸಿ, ಜೀವನನ್ನು ಅಂಗೀಕರಿಸುವಂತೆ, ಮಾಡಿ ಕೊಡುವುದರಿಂದ ಮಾತೃತ್ವ ಪ್ರಯುಕ್ತವಾದ ವಾತ್ಸಲ್ಯಾತಿಶಯದಿಂದ **ಪುರುಷಕಾರಭೂತೈಯಾಯ್**– ಪುರುಷ ಕಾರಭೂತೆಯಾಗಿ **ನಿರ್ಕಿರ**– ನಿಲ್ಲುವ, **ಏಟ್ರಮ್‌ಶೊಲ್ಲಿಟ್ರಾವ್**– ಪತಿಗಿಂತ ಪತ್ನಿಗೆ ಉತ್ಕರ್ಷವು ಹೇಳಲ್ಪಟ್ಟಿತು. ಇಲ್ಲಿ "ಆಕಾರತ್ರಯ ಸಂಪನ್ನಾಂ" ಎಂಬಂತೆ ಪುರುಷಕಾರತ್ವ, ಉಪಾಯತ್ವ, ಉಪೇಯತ್ವಾಕಾರಗಳು ಲಕ್ಷ್ಮಿಗೆ ಹೇಳಲ್ಪಟ್ಟಿರುವುದು ಅನುಸಂಧೇಯ. **ಅವಿಜ್ಞಾತಾ**– ಭಗವಂತನು ಸ್ವತಸ್ಸರ್ವಜ್ಞನಾದರೂ, ತನ್ನನ್ನು ಆಶ್ರಯಿಸಿದ ಭಕ್ತರ ದೋಷ ವನ್ನು ಗಣಿಸುವುದಿಲ್ಲ ಇತ್ಯಾದಿಗಳಲ್ಲಿ ಹೇಳಿರುವಂತೆ, ಇಲ್ಲಿಯೂ **ವಿಸ್ಮಾರ್ಯ**– ಎಂಬುದಕ್ಕೂ 2) **ಅಲ್ಲಿ ಮಲರ್‌ಮಹಳ್‌ಭೋಗಮಯಕ್ಕುಕ್ಕಳ್**– ಪಂಕಜವಾಸಿನಿಯ ಭೋಗದಿಂದ ಉಂಟಾದ ಬುದ್ಧಿ ವಿಸ್ಮರಣೆ ಗಳು ಇತ್ಯಾದಿಗಳಿಗೂ ಸದಾ ಸರ್ವಜ್ಞನಾದ ಭಗವಂತನ **ನಿಗ್ರಹಾಭಿನಿವೃತ್ತಿಯಿಲೇ**– ಕೋಪವೆಂಬ ಅಭಿಸಂಧಿಯು ನಿವೃತ್ತವಾಗುವುದರಲ್ಲಿ ತಾತ್ಪರ್ಯ, ಅಷ್ಟೇವಿನಹ ಭಗವಂತನಿಗೆ ವಿಸ್ಮರಣೆಯನ್ನು ಉಂಟು ಮಾಡುತ್ತದೆ ಎಂದಲ್ಲ.

**ಸಾಪೇಕ್ಷನಾನ ಪುರುಷನುಕ್ಕು** ಇತ್ಯಾದಿ– ಒಬ್ಬನ ಹತ್ತಿರ ಫಲವನ್ನು ಅಪೇಕ್ಷಿಸುವ ಪುರುಷನಿಗೆ, **ಅಪೇಕ್ಷಿತಂತಲೈಕ್ಕಟ್ಟಿಕ್ಕೊಡುಕ್ಕ**–ಅವನ ಅಪೇಕ್ಷಿತವನ್ನು ಸಾಧಿಸಿಕೊಡಲು **ವಲ್ಲಚೇತನನ್** – ಸಮರ್ಥನಾದ ರಾಜಾದಿರೂಪಚೇತನನು,**ಅಭಿಗಮ್ಯನಾಹೈಕ್ಕು**-ಆಶ್ರಯಣೀಯನಾಗಲು**ಉಪಾಯಮಾಹ ವರಿಕ್ಕಪ್ಪಟ್ಟಚೇತನಾಂತ ರತ್ತೈ**–ಉಪಾಯವಾಗಿ ಸಾಧಕನಾಗಿ ವರಿಸಲ್ಪಟ್ಟ ಚೇತನಾಂತರವನ್ನು, ಪುರುಷಕಾರವೆಂದು ವ್ಯವಹರಿಸುತ್ತಾರೆ. **ಇಪ್ಪುರುಷಕಾರಂ ಫಲತ್ತುಕ್ಕು** ಇತ್ಯಾದಿ– ಈ ಪುರುಷಕಾರವು ಫಲವನ್ನು ಪಡೆಯಲು ಪರಂಪರೆಯಾಗಿ ಕಾರಣ

**ಅರ್ಥಸ್ವಭಾವಾನುಷ್ಠಾನ** ಇತ್ಯಾದಿ– ಆರು ಕಾರಣಗಳನ್ನು ಪುರುಷಕಾರಭಾವಕ್ಕೆ ಪ್ರಮಾಣವಾಗಿ **ನಿಕ್ಷೇಪ ರಕ್ಷೆ**ಯಲ್ಲಿ ನಿರೂಪಿಸಿರುವುದಾಗಿ ಆಚಾರ್ಯರು ಅನುಗ್ರಹಿಸುತ್ತಾರೆ.

---

2) ಅಲ್ಲಲಿ ನ್ಬಮ್ ಅಳವಿರುಂ ದೆಂಗುಮ್ ಅಗ್ರಗಮರ್ ಶೂಗ್ರಿಒಳಿಯನ್
ಅಲ್ಲಿಮಲರ್‌ಮಹಳ್ ಭೋಗಮಯಕ್ಕುಕ್ಕಳ್‌ಅಹಿಯಮ್‌ನಿರ್ಕುಮಮ್ಮಾನ್ ।
ಎಲ್ಲೈಯಿಲ್ ಞಾನತ್ತನ್ ಞಾನಮಹ್‌ದೇಕೊಂಡು ಎಲ್ಲಾಕ್ಕರುಮಂಗಳುಮ್‌ಶೆಯ್
ಎಲ್ಲೆಯಿಲ್ ಮಾಯನೈಕ್ಕಣ್ಣನೈತ್ತಾಳ್‌ಪತ್ತಿಯಾ ನ್‌ಓರ್‌ದುಃಖಮಿಲನೇ ॥

ತಾಮರೈ ಪುಷ್ಪದಲ್ಲಿರುವ ಮಹಾಲಕ್ಷ್ಮಿಯಂ ಭೋಗಗಳಲ್ಲಿ ಮಗ್ನನಾಗಿ ಇರುವವನು ಭಗವಂತ. ಅಂತಹ ಭಗವಂತನ ಪಾದಗಳನು ಆಶ್ರಯಿಸಿ ನಾನು ದುಃಖವಿಲ್ಲದವನಾಗಿ ಆಗಿದ್ದೇನೆ।

೧) ಇವತ್ತಿಲ್ ಅರ್ಥಸ್ವಭಾವಮಾವದು? ಈಶ್ವರನೈಪ್ಪೋಲೇ ಪಿತೃತ್ವಾನುರೂಪಮಾನ ಪ್ರತಾಪೋಷ್ಮಳತ್ವಮ್ ಕಲಶಾದೇ ಮಾತೃತ್ವ ಪ್ರಯುಕ್ತಙ್ಗಳಾನ ವಾತ್ಸಲ್ಯಾದಿಹಳತಿಶಯಿತ್ತು ೧) "ನಕಶ್ಚಿನ್ನಾಪರಾಧ್ಯತಿ" ೨) "ಕಃಕುಪ್ಯೇದ್ವಾನರೋತ್ತಮ" ೩) "ಮರ್ಷಯಾಮೀಹ ದುರ್ಬಲಾ" ಎನ್ನೈಯೋ ಸ್ವಭಾವಮಾಯಿರುಕ್ಕೈಯುಮ್, ವಾಲ್ಲಭ್ಯಾತಿಶಯತ್ತಾಲೇ ಇವಳೈಮುನ್ನಿಟ್ಟಾಲ್ ಅವನ್ ಮರುಕ್ಕಮಾಟ್ಟಾದೊಳ್ಹಿಹೈಯುಮ್

ಇವ್ವರ್ಥಸ್ವಭಾವತ್ತಾಲೇ ಇವಳೈಪ್ಪತ್ತುವಾರ್ಕ್ಕು ಪುರುಷಕಾರಂತರಾ ಪೇಕ್ಷೆಯುಂಡಾಯ್ ಅನವಸ್ಥೈ ವಾರಾದು. ೨) ಅನುಷ್ಠಾನಮಾವದು- ಪ್ರಹ್ಲಾದ ವಿಷಯತ್ತಿಲ್ ಪ್ರೇಮಾತಿಶಯತ್ತಾಲೇ ಪ್ರತಿಕೂಲವಿಷ

---

ಇವತ್ತಿಲ್ ಅರ್ಥಸ್ವಭಾವಮಾವದು– ಇವುಗಳಲ್ಲಿ ಅರ್ಥಸ್ವಭಾವವೇನೆಂದರೆ-ಈಶ್ವರನೈಪ್ಪೋಲೇ ಇತ್ಯಾದಿ-ಈಶ್ವರನ ಹಾಗೆ ಪ್ರತಾಪ ಮತ್ತು ಊಷ್ಮಲತ್ವ–ಕೋಪಗಳು, ಉಂಟಾಗದೆ ಮಾತೃತ್ವ ಪ್ರಯುಕ್ತಗಳಾದ ವಾತ್ಸಲ್ಯಾದಿಗಳು ಹೆಚ್ಚಿ 1) ನಕಶ್ಚಿನ್ನಾಪರಾಧ್ಯತಿ 2) ಕಃಕುಪ್ಯೇದ್ವಾನರೋತ್ತಮ 3) ಮರ್ಷಯಾಮೀಹ ದುರ್ಬಲಾ ಎಂಬುದೇ ಸ್ವಭಾವಳಾದ ಮತ್ತು ವಾಲ್ಲಭ್ಯಾತಿಶಯದಿಂದ ಕೂಡಿದ ಈ ಲಕ್ಷ್ಮಿಯನ್ನು ಮುಂದಿಟ್ಟುಕೊಂಡು ಹೋದರೆ, ಭಗವಂತನು ಮರುಕ್ಕಮಾಟ್ಟಾದೊಳ್ಹಿಹೈಯುಮ್–ತಿರಸ್ಕರಿಸಲಾಗದೆ ಇರವುದು. ಅಂದರೆ, ಯಾರು ತಾನೇ ತಪ್ಪು ಮಾಡುವುದಿಲ್ಲ, ಕೋಪಗೊಂಡು ಏನು ಪ್ರಯೋಜನ, ನನ್ನ ಪ್ರಜೆಗಳು ಕಷ್ಟ ಪಟ್ಟರೆ ನೋಡಿ ಸಹಿಸಲಾರದ ದುರ್ಬಲವನ್ನುಳ್ಳ ನಾನು ಅವರ ಅಪರಾಧಗಳನ್ನು ಸಹಿಸಿಕೊಳ್ಳುತ್ತೇನೆ ಎಂಬ ಸ್ವಭಾವಳಾದ ಮಹಾಲಕ್ಷ್ಮಿಯು, ಭಗವಂತನಲ್ಲಿಯೂ ವಾಲ್ಲಭ್ಯವನ್ನುಳ್ಳವಳಾದ್ದರಿಂದ, ಇವಳ ಮಾತನ್ನು ಅವನು ಎತ್ತಿ ಹಾಕುವುದಿಲ್ಲವೆಂದು ತಾತ್ಪರ್ಯ.

ಇವ್ವರ್ಥಸ್ವಭಾವತ್ತಾಲೇ ಇತ್ಯಾದಿ– ಕೋಪದ ಸಂಬಂಧ ವಿಲ್ಲದೆ ಮೃದು ಸ್ವಭಾವದಿಂದ ಕೂಡಿರುವುದೆಂಬ ಅರ್ಥ ಸ್ವಭಾವದಿಂದ, ಈ ಲಕ್ಷ್ಮಿಯನ್ನು ಪಟ್ರುವಾರ್ಕ್ಕು–ಆಶ್ರಯಿಸುವವರಿಗೆ ಪುರುಷಕಾರಾಂತರಾಪೇಕ್ಷೆಯು, ಬೇಕಾಗಿ ಅನವಸ್ಥೆಯು ಬಾರಾದು.

ಅನುಷ್ಠಾನಮಾವದು ಇತ್ಯಾದಿ–ಅನುಷ್ಠಿಸಿರುವುದು, ಪ್ರಹ್ಲಾದನ ವಿಷಯದಲ್ಲಿ ಪ್ರೇಮಾತಿಶಯದಿಂದ, ಪ್ರತಿಕೂಲನಾದ ಹಿರಣ್ಯಕಶಿಪುವಿನ ವಿಷಯದಲ್ಲಿ ಏರ್ಪಟ್ಟ ಶ್ರೀಟ್ರತ್ತಿನ್ ಘನತ್ತೈಕ್ಕಂಡು ಇತ್ಯಾದಿ-ಕೋಪದ

---

1) ಪಾಪಾನಾಂ ವಾ ಶುಭಾನಾಂವಾ ವಧಾರ್ಹಾಣಾಂ ಪ್ಲವಂಗಮ ।
ಕಾರ್ಯಂಕರುಣ ಮಾರ್ಯೇಣ ನಕಶ್ಚಿನ್ನಾಪರಾಧ್ಯತಿ ॥ ರಾಮಾಯಣ ಯುದ್ಧಕಾಂಡ 116-43

ಎಲೈ ಕಪಿಯೇ ನಿನ್ನ ದೃಷ್ಟಿಯಲ್ಲಿ ಈ ರಾಕ್ಷಸಿಗಳು ಪಾಪ ಮಾಡಿದವರಾಗಿರಬಹುದು. ನನ್ನ ಪಾಪಕ್ಕೆ ಶಿಕ್ಷೆಯಾಗಿ ಇವರು ಒಳೆಯದನ್ನು ಮಾಡಿದ್ದಾರೆ. ಇವರು ವಧಾರ್ಹರಾಗಿದ್ದರೂ ದೊಡ್ಡ ಮನೋಭಾವವುಳ್ಳವನು ಇವರಲ್ಲಿ ದಯೆಯನ್ನು ತೋರಿಸಬೇಕು. ಲೋಕದಲ್ಲಿ ತಪ್ಪು ಮಾಡದವರು ಯಾರಿದ್ದಾರೆ,

2) ರಾಜ ಸಂಶ್ರಯವಶ್ಯಾನಾಂ ಕುರ್ವಂತೀನಾಂ ಪರಾಜ್ಞಯಾ ।
ವಿಧೇಯಾನಾಂಚ ದಾಸೀನಾಂ ಕಃಕುಪ್ಯೇದ್ವಾನರೋತ್ತಮ ॥ (ರಾಮಾಯಣ 6-116-37)

ರಾಜನಿಗೆ ಪರಾಧೀನರಾಗಿ ಅವನ ಆಜ್ಞೆಯ ಪ್ರಕಾರ ಕೆಲಸ ಮಾಡುವವರಾಗಿ ಅವನಿಗೆ ದಾಸಿಗಳಾದವರ ವಿಷಯದಲ್ಲಿ ಯಾರು ತಾನೇ ಕೋಪಗೊಳ್ಳುತ್ತಾರೆ.

3) ಪ್ರಾಪ್ತವ್ಯಂತು ದಶಾಯೋಗಾನ್ಮಯೈತದಿತಿ ನಿಶ್ಚಿತಮ್ ।
ದಾಸೀನಾಂ ರಾವಣಸ್ಯಾಹಂ ಮರ್ಷಯಾ ಮೀಹ ದುರ್ಬಲಾ ॥ ರಾಮಾಯಣ (6-116-39)

ನನ್ನ ಗ್ರಹದಶೆಯ ನಿಮಿತ್ತವಾಗಿ ಕಷ್ಟಗಳನ್ನು ಅನುಭವಿಸಬೇಕಾಗಿ ಬಂತೆಂದು ನಾನು ನಿಶ್ಚಯಿಸಿದ್ದೇನೆ. ರಾವಣನ ದಾಸಿಗಳು ಮಾಡಿದ ಅಪರಾಧಗಳನ್ನು ಕ್ಷಮಿಸುತ್ತೇನೆ. ಅವರಿಗೆ ಶಿಕ್ಷೆಯನ್ನು ವಿಧಿಸಿ ಅದರಿಂದ ಉಂಟಾಗುವ ಅವರ ಕಷ್ಟಗಳನ್ನು ನೋಡಿಸಹಿಸಲಾರೆ, ಆದ್ದರಿಂದ ಆ ಅಪರಾಧಗಳನ್ನು ಸಹಿಸಿಕೊಳ್ಳುತ್ತೇನೆಂದು ತಾತ್ಪರ್ಯ.

ಯತ್ತಿರ್ಪ್ಪಿರನ್ದ ಶೀತ್ತತ್ತಿನ್ ಕನತ್ತೈಕಂಡಣುಹವಂಜಿನ ಬ್ರಹ್ಮಾದಿಹಳ್ ಇವಳೈ ಶರಣಮಾಹಪ್ಪತ್ತಿ ಇವಳ್ ಮುನ್ನಿಲೈಯಾಹ ಶ್ರೀನೃಸಿಂಹರೂಪನಾನ ಸರ್ವೇಶ್ವರನೈಕ್ಕಿಟ್ಟೈ ಸ್ತೋತ್ರಮ್ ಪಣ್ಣಿನಾರ್ ಹಳೆನ್ರು ಪುರಾಣಪ್ರಸಿದ್ಧಮ್ ೧) "ಸೀತಾಪ ಎಮಾಚಾತಿಯಶಾ ರಾಘವಂಚ ಮಹಾವ್ರತಮ್". ೨) "ಸೀತಾಸಮುಕ್ಷಂ ಕಾಕುತ್ಸ್ಥಮ್ ಇತ್ಯಾದಿಗಳಿಲುಮ್ ಕಂಡುಕೊಳ್ವದು. ೩) ಲೋಕದೃಷ್ಟಿ ಯಾವದು ?–ಅಂತಃಪುರಪರಿಜನತ್ತೈ ಅಪರಾಧ ಭೂಯಸ್ತ್ವೈಯುಂಡಾನಾಲುಮ್ ರಾಜಾಕ್ಕಳ್ ಅಲ್ಪಙ್ಗಳಾನ ಪ್ರಸಾದನಙ್ಗಳಾಲೇ ಕ್ಷಮಿಕ್ಕಕ್ಕಾಣ್ಗೈ ಇವ್ವರ್ಥಮ್ ೩) "ಮಾತರ್ಲಕ್ಷ್ಮಿಯಥೈವ ಮೈಥಿಲಜನಃ" ಎನ್ಡಿರಶ್ಲೋಕತ್ತಿಲುಮ್ ವಿವಕ್ಷಿತಮ್. ೪) ಗುರೂಕ್ತಿಯಾವುದು ?– ನಮ್ಮಾೞ್ವಾರ್ ಮುದಲಾನ

ಆಧಿಕ್ಯವನ್ನು ಅಂದರೆ ಬಹಳ ಕೋಪಗೊಂಡಿರುವುದನ್ನು ನೋಡಿ,ಹೆದರಿದ ಬ್ರಹ್ಮಾದಿಗಳು ಇವಳನ್ನು ರಕ್ಷಕಳನ್ನಾಗಿ ಆಶ್ರಯಿಸಿ, ಇವಳನ್ನು ಪುರಸ್ಕರಿಸಿಕೊಂಡು ಶ್ರೀ ನೃಸಿಂಹರೂಪನಾದ ಸರ್ವೇಶ್ವರನನ್ನು ಸಮೀಪಿಸಿ ಸ್ತೋತ್ರ ಮಾಡಿದರೆಂದು, ಅದಾಗಿ

ಜಾಜ್ವಲ್ಯಮಾನಂ ತಂದೃಷ್ಟ್ವಾ ನರಸಿಂಹಂ ಸುರೋತ್ತಮಾಃ ‖
ಪುರಸ್ಕೃತ್ಯಶ್ರಿಯಂ ಭೇಜುಃ ಶರಣಂ ಶಾಂತಿ ಕಾಂಕ್ಷಿಣಃ ‖

ಎಂದು ಪುರಾಣ ಪ್ರಸಿದ್ಧ. ಇದರಿಂದ ಲಕ್ಷ್ಮಿಯು ಪುರುಷಕಾರಭೂತೆಯಾಗಿದ್ದು ದೇವತೆಗಳು ಭಗವಂತನನ್ನು ಆಶ್ರಯಿಸಲು ಸಹಕರಿಸಿದಳು, ಎಂಬ ಅನುಷ್ಠಾನವು ತಿಳಿಸಲ್ಪಟ್ಟಿತು. 1) **ಸೀತಾಮುವಾಚಾತಿಯಶಾಃ** 2) **ಸೀತಾಸಮುಕ್ಷಂಕಾಕುತ್ಸ್ಥಮ್** ಇತ್ಯಾದಿ–ಲಕ್ಷ್ಮಣನು ಸೀತೆಯನ್ನು ಪುರಸ್ಕರಿಸಿಕೊಂಡು ಶ್ರೀ ರಾಮಚಂದ್ರನನ್ನು ಆಶ್ರಯಿಸಿದನು. ಮತ್ತು ಸೀತೆಯ ಎದುರಿನಲ್ಲಿ ಶ್ರೀ ರಾಮಚಂದ್ರನಲ್ಲಿ ವಿಜ್ಞಾಪನೆ ಮಾಡಿದನು ಎಂಬ ವಚನಗಳಿಂದಲೂ ಪುರುಷಕಾರಾನುಷ್ಠಾನವು ವ್ಯಕ್ತವಾಗುತ್ತದೆ.

**ಲೋಕದೃಷ್ಟಿಯಾವದು** ಇತ್ಯಾದಿ–ಅಂತಃಪುರ-ರಾಜ ಮಹಿಷಿ,ಪರಿಜನತ್ತೈ-ಅವಳ ಹತ್ತಿರ ಸೇವೆಮಾಡುವ ಸೇವಕರು ಬಹಳ ಅಪರಾಧಗಳನ್ನು ಮಾಡಿದ್ದರೂ, ರಾಜರುಗಳು ಅಲ್ಪಗಳಾದ ಪ್ರಣಾಮಾದಿಗಳಿಂದ ಅವರುಗಳನ್ನು ಕ್ಷಮಿಸುವುದನ್ನೆ ನೋಡಿರುವುದು. **ಇವ್ವರ್ಥಮ್**–ಈ ಅರ್ಥವು 1) **ಮಾತರ್ಲಕ್ಷ್ಮಿಯಥೈವ ಮೈಥಿಲಜನಃ** ಎಂಬ ಶ್ಲೋಕದಲ್ಲಿಯೂ ವಿವಕ್ಷಿತ. ಅದಾಗಿ ಮಿಥಿಲಾನಗರದ ಜನರು ಮೈಥಿಲಿಯ ಸಂಬಂಧವನ್ನು ಪುರಸ್ಕರಿಸಿಕೊಂಡು ಜಾಮಾತಾ, ಮೈಥಿಲಿಯ ವಲ್ಲಭನು ಎಂದು ಶ್ರೀ ರಾಮಚಂದ್ರನನ್ನು ಆಶ್ರಯಿಸಿದಂತೆ ನಾವೂ ಲಕ್ಷ್ಮಿಯ ಸಂಬಂಧವನ್ನು ಪುರಸ್ಕರಿಸಿಕೊಂಡು ಭಗವಂತನನ್ನು ಆಶ್ರಯಿಸಿ ಕೈಂಕರ್ಯವನ್ನು ಮಾಡಿ ಸಂತೋಷಪಡಲೆಣಿಸುತ್ತೇವೆ. ಅದಾಗಿ ನಮ್ಮನ್ನು ಅಂತಃಪುರ ಪರಿಜನರನ್ನಾಗಿ ಭಾವಿಸಿ ಭಗವತ್ಕೈಂಕರ್ಯವನ್ನು ಮಾಡಲೆಣಿಸುತ್ತೇವೆ. ಇದರಿಂದ ಲಕ್ಷ್ಮೀಪರಿಜನರಾದ ನಮಗೆ ಭಗವತ್ಕಟಾಕ್ಷವು ಶೀಘ್ರವಾಗಿ ಲಭಿಸುತ್ತದೆ ಎಂದು ತಾತ್ಪರ್ಯ. **ಗುರೂಕ್ತಿಯಾವದು** ಇತ್ಯಾದಿ–ಆಚಾರ್ಯರುಗಳ ಶ್ರೀ ಸೂಕ್ತಿಗಳು ಯಾವುವು ಎಂದರೆ, ನಮ್ಮಾೞ್ವಾರ್ ಮುದಲಾದ ಆಚಾರ್ಯರುಗಳ

1) ರಾಮಾಯಣ ಅಯೋಧ್ಯಾಕಾಂಡ 31-2. 2) ರಾಮಾಯಣ ಅರಣ್ಯಕಾಂಡ 15-6

3) ಮಾತರ್ಲಕ್ಷ್ಮಿಯಥೈವ ಮೈಥಿಲ ಜನಸ್ತೇನಾಧ್ವನಾ ತೇ ವಯಂ
ತ್ವದ್ದಾಸ್ಯೈಕ ರಸಾಭಿಮಾನಸುಭಗೈರ್ಭಾವೈರಿಹಾಮುತ್ರಚ ।
ಜಾಮಾತಾ ದಯಿತಸ್ತವೇತಿ ಭವತೀ ಸಂಬಂಧ ದೃಷ್ಟ್ಯಾ ಹರಿಮ್
ಪಶ್ಯೇಮ ಪ್ರತಿಯಾಮ ಯಾಮಚ ಪರೀ ಚಾರಾನ್ ಪ್ರಹೃಷ್ಯೇಮಚ ॥ ಶ್ರೀ ಗುಣರತ್ನಕೋಶ 51

ಎಲ್ಶೈ ತಾಯೇ, ಮಹಾಲಕ್ಷ್ಮಿಯೇ ಮಿಥಿಲಾ ನಗರದ ಜನರು ಶ್ರೀ ರಾಮಚಂದ್ರನನ್ನು ನಮ್ಮೂರ ಅಳಿಯ, ಸೀತೆಯ ಗಂಡ ಎಂದು ಸೀತೆಯ ಸಂಬಂಧವನ್ನು ಪುರಸ್ಕರಿಸಿಕೊಂಡು ಹೇಗೆ ಅನುಭವಿಸಿದರೋ, ಆ ರೀತಿಯಲ್ಲಿ ನಾವೂ ನಿನಗೆ ಕೈಂಕರ್ಯ ಮಾಡುವುದೆಂಬ ರಸಾಭಿಮಾನದಿಂದ ಮನೋಜ್ಞಗಳಾದ ಭಾವಗಳಿಂದ ಇಲ್ಲಿಯೂ ಪರಲೋಕದಲ್ಲಿಯೂ ನಮ್ಮೂರಿನ ಅಳಿಯ, ನಿನ್ನ ಪ್ರಾಣವಲ್ಲಭನೆಂದು ನಿನ್ನ ಸಂಬಂಧ ದೃಷ್ಟಿಯಿಂದ ಶ್ರೀ ಹರಿಯನ್ನು ನೋಡುತ್ತೇವೆ. ಅವನಿಗೆ ಕೈಂಕರ್ಯವನ್ನು ಮಾಡಿ ಸಂತೋಷಪಡುತ್ತೇವೆ.

ಆಚಾರ್ಯರುಹಳುಡೈಯ 4)"ಅಹಲಹಿಲ್ಲೇನ್" ಮುದಲಾನ ಪಾಶುರಙ್ಗಳ್. ೫) ಇವತ್ತುಕ್ಕು ಮೂಲಮಾನ ಸೂಕ್ತ ವಿಶೇಷ ರೂಪೈಹಳಾನ ಶ್ರುತಿಹಳೈಯುಮ್ ಕಣ್ಡುಕೊಳ್ವದು.

ಇವೈಯುಡಿಯಾಹ ವನ್ದಸ್ಮೃತಿಹಳಾವನ ? 1) "ವಾಚಃ ಪರಂ ಪ್ರಾರ್ಥಯಿತಾ ಪ್ರಪದ್ಯೇನ್ನಿಯತಃ ಶ್ರಿಯಮ್" ಇತ್ಯಾದಿಹಳಾನ ಶೌನಕಾದಿ ವಾಕ್ಯಙ್ಗಳ್.

ಇಪ್ಪಡಿ ಇವಳುಕ್ಕು ಸರ್ವೇಶ್ವರನ್ ತಿರುವಡಿಹಳಿಲ್ ಘಟಕತ್ವಂ ಬಹು ಪ್ರಮಾಣ ಸಿದ್ಧಮಾಹೈ

---

2) ಅಹಲಹಿಲ್ಲೇನ್ ಮೊದಲಾದ ಪಾಶುರಗಳು– ಅಜ್ಞಾನ ಗಂಧವಿಲ್ಲದ ಪರಿಪೂರ್ಣ ಜ್ಞಾನವನ್ನು ಪಡೆದ ನಮ್ಮಾಳ್ವಾರ್ ಅವರು ಮೊದಲು ಮಹಾಲಕ್ಷ್ಮಿಯನ್ನು ಪುರುಷಕಾರವಾಗಿ ಅವಲಂಬಿಸಿ, ನಂತರ ಆ ದಿವ್ಯದಂಪತಿಗಳ ಪಾದ ಪದ್ಮದಲ್ಲಿ ಶರಣಾಗತಿಯನ್ನು ಮಾಡಿದರು ಎಂಬುದು, ಅವರ ಪಾಶುರದಿಂದ ಸ್ಪಷ್ಟ. ಶ್ರೀ ಭಾಷ್ಯಕಾರರೂ 'ಭಗವನ್ನಾರಾಯಣ' ಎಂದಾರಂಭಿಸಿ ಶ್ರೀ ಪ್ರಪತ್ತಿಯನ್ನು ಮೊದಲು ಮಾಡಿ ನಂತರ "ಅಖಿಲ ಹೇಯ ಪ್ರತ್ಯನೀಕ" ಎಂದಾರಂಭಿಸಿ ಭಗವತ್ಪ್ರಪತ್ತಿಯನ್ನು ಮಾಡಿದುದಾಗಿ ಶರಣಾಗತಿ ಗದ್ಯದಲ್ಲಿ ಅನುಸಂಧಾನ ಮಾಡಿರುವುದೂ ಮುದಲಾನ-ಎಂಬ ಪದದಿಂದ ಇಲ್ಲಿ ವಿವಕ್ಷಿತ. ಇವಟ್ರುಕ್ಕು ಮೂಲಮಾನ– ಈ ಸೂಕ್ತಿಗಳಿಗೆ ಮೂಲವಾದ, ಸೂಕ್ತವಿಶೇಷ ರೂಪೈಹಳಾನ–ಶ್ರೀ ಸೂಕ್ತ ಘಟಕವಾದ, "ಚಂದ್ರಾಂಪ್ರಭಾಸಾಂ ಯಶಸಾ ಜ್ವಲಂತೀಂ ಶ್ರಿಯಂ ಲೋಕೇದೇವಜುಷ್ಟಾಮುದರಾಂ ।,"ಇತ್ಯಾದಿ ಶ್ರುತಿಗಳನ್ನು ಕಂಡುಕೊಳ್ವದು–ನೋಡಿಕೊಳ್ಳುವುದು. ಇಲ್ಲಿ ಶ್ರಿಯಂ ಲೋಕೇ–ಎಂದು ಲೋಕದ ಜನರಿಗೆ ಆಶ್ರಯಣೀಯಳು ಎಂದು ಹೇಳಿ, ದೇವಜುಷ್ಟಾಂ–ಎಂದು ಭಗವಂತನನ್ನು ಆಶ್ರಯಿಸಿದವಳು, ಎಂದು ಹೇಳಿರುವುದರಿಂದ, ಲಕ್ಷ್ಮಿಯ ಪುರುಷಕಾರ ಸಮರ್ಪಕ ಮಂತ್ರವಿದು

ಇವೈಯುಡಿಯಾಹವಂದ ಸ್ಮೃತಿಹಳಾವನ– ಈ ಶ್ರುತಿ ವಾಕ್ಯವನ್ನು ಅವಲಂಬಿಸಿ ಬಂದಿರುವ ಸ್ಮೃತಿಗಳ್ಯಾವುವೆಂದರೆ1) ವಾಚಃಪರಂ ಪ್ರಾರ್ಥಯಿತಾ ಇತ್ಯಾದಿ–ವಾ ಚಾ ಮಗೋಚರನಾದ ಭಗವಂತನನ್ನು,ಪ್ರಾರ್ಥಯಿತಾ ಶರಣವಾಗಿ ವರಿಸುವವನು, ನಿಯತಃ–ನಿಯಮ ಯುಕ್ತನಾಗಿ, ಶ್ರಿಯಂ ಪ್ರಪದ್ಯೇತ್–ಪುರುಷಕಾರರೂಪದಿಂದ ಮಹಾಲಕ್ಷ್ಮಿಯನ್ನು ಶರಣಹೊಂದಬೇಕು. ಅಂದರೆ ಪುರುಷಕಾರವಾಗಿ ಶ್ರೀ ಪ್ರಪತ್ತಿಯನ್ನು ಮಾಡಬೇಕು, ಇತ್ಯಾದಿಯಾಗಿ ಹೇಳಿರುವ ಶೌನಕ ವಾಕ್ಯಗಳು.

ಇಪ್ಪಡಿ ಇವಳುಕ್ಕು-ಇತ್ಯಾದಿ– ಹೀಗೆ ಮಹಾಲಕ್ಷ್ಮಿಗೆ ಸರ್ವೇಶ್ವರನ ದಿವ್ಯ ಪಾದಗಳಲ್ಲಿ ಘಟಕತ್ವವು ಬಹು

---

4) ಅಹಲಹಿಲ್ಲೇನ್ಇರೈಯು ಮೆನ್ರಲರ್ ಮೇಲ್ ಮಂಗೈಯುರೈಮಾರ್ಬಾ
ನಿಹರಿಲ್ ಪುಹಳ್ಹಾಯ್ ಉಲಹಮೂನ್ರುಡೈಯಾಯ್ ಎನ್ನೈಯಾಳ್ವಾನೇ, ।
ನಿಹರಿಲ್ ಅಮರರ್ ಮುನಿಕ್ಕಣಂಗಳ್ ಪರಂಬುಮ್ ತಿರುವೇಂಗಡತ್ತಾನೆ
ಪುಹಲೊನ್ರಿಲಾವಡಿಯೇನ್ ಉನ್ನಡಿ ಕ್ಕೀಳ್ಅಮರ್ನ್ದು ಪುಹುಂದೇನೇ ॥ ತಿರುವಾಯ್ಮೊಳಿ (6–10–10)

ಕ್ಷಣಕಾಲವೂ ನಿನ್ನನ್ನು ಬಿಟ್ಟಿರಲಾರೆ. ಎಂಬ ಪಂಕಜ ವಾಸಿನಿಯಾದ ಪರಿಪೂರ್ಣೆಯು ನಿತ್ಯವಾಸ ಮಾಡಿಕೊಂಡಿರುವ ಎದೆಯುಳ್ಳವನೇ ಅಸ್ಸಾದೃಶವಾದ ಕಲ್ಯಾಣಗುಣಗಳನ್ನುಳ್ಳವನೇ, ಮೂರು ಲೋಕಕ್ಕೂ ಸ್ವಾಮಿಯೇ, ನನಗೂಸ್ವಾಮಿಯೇ, ತಮಗೆ ಸದೃಶವಾದವರಾರೂ ಇಲ್ಲದ ನಿತ್ಯಸೂರಿಗಳೂ ಮುಕ್ತಾತ್ಮರೂ ನಿನ್ನನ್ನು ಆದರಿಸುವಂತೆ ಪರಮ ಪದದಲ್ಲಿರುವಂತೆ, ಆಶ್ರಿತ ಸುಲಭನಾಗಿ ತಿರುವೇಗಡವೆಂಬ ಬೆಟ್ಟದಲ್ಲಿ ನಿತ್ಯಸಾನ್ನಿಧ್ಯವನ್ನು ಮಾಡಿಕೊಂಡಿರುವವನೇ, ಅನನ್ಯಗತಿಕನಾಗಿ ಲಕ್ಷ್ಮೀಪತಿಯಾದ ನಿನ್ನ ಪಾದಗಳನ್ನು ವಿಶ್ವಾಸ ಯುಕ್ತನಾಗಿ ಪುರುಷಕಾರ ಪ್ರಪತ್ತಿಪೂರ್ವಕ ಆಶ್ರಯಿಸಿದ್ದೇನೆ.

1) ಶೌನಕಸಂಹಿತೆ.

**ಯಾಲ್ ಇಙ್ಙುಙ್ ಇವ್ವಿವಕ್ಷೈಕ್ಕೊಳ್ಳ ಉಚಿತಮ್.**

**ಇಪ್ಪಡಿ ಪುರುಷಕಾರಭೂತೈಯುಮಾಯ್. ಸಿದ್ಧೋಪಾಯ ವಿಶೇಷಣಮುಮಾಯ್ ಕೊಣ್ಡು ಆಶ್ರಯಿಕ್ಕಪ್ಪಡುಮ್.**

**1) "ಸ್ವರೂಪಂ ಸ್ವಾತಂತ್ರ್ಯಮ್", 2) "ಸ್ವತಶ್ಶ್ರೀಸ್ತ್ವಂ ವಿಷ್ಣೋಸ್ಸ್ವಮಸಿ", ಎನ್ಗಿರ ಶ್ಲೋಕಙ್ಗಳಿನ್ ಪಡಿಯೇ ಆದಿತ್ಯಾದಿಕಳುಕ್ಕು ಪ್ರಭಾದಿಕಳ್ಪೋಲೇ ಅತಿಶಯ ಕಾರಿಣಿಯಾಯ್ಕ್ಕೊಣ್ಡು ಸಿದ್ಧೋಪಾಯತ್ತೈ ಆಶ್ರಯಿತ್ತಿರುಕ್ಕುಮ್.**

**ಎಲ್ಲಾರ್ಕ್ಕುಂ ಸೇವ್ಯೈಯಾಯ್ ಸರ್ವೇಶ್ವರನೈ ಸೇವಿತ್ತಿರುಕ್ಕು ಮೆನ್ನು ಪೊರುಳಾನ ಪೋದು ಎಲ್ಲಾರ್ಕ್ಕುಂ ಸ್ವಾಮಿನಿಯಾಯ್ 3) ಕಾಂತಸ್ತೇ ಪುರುಷೋತ್ತಮಃ" 4) "ಶೇಷಿತ್ವೇ ಪರಮಃಪುಮಾ**

---

ಪ್ರಮಾಣ ಸಿದ್ಧವಾದ್ದರಿಂದ **ಇಂಗುಮ್**–ಈ ದ್ವಯ ಮಂತ್ರದಲ್ಲಿಯೂ ಉಪಾಯಪರ **ಪೂರ್ವ**ಖಂಡದಲ್ಲಿ **ಇವ್ವಿವಕ್ಷೈಕೊಳ್ಳಉಚಿತಮ್**–ಈ ಪುರುಷಕಾರತ್ವವನ್ನು ವಿವಕ್ಷಿಸುವುದು ಉಚಿತ.

**ಇಪ್ಪಡಿ ಪುರುಷಕಾರ ಭೂತೈಯುಮಾಯ್** ಇತ್ಯಾದಿ– ಹೀಗೆ ಪುರುಷಕಾರ ಭೂತೆಯಾಗಿಯೂ, ಸಿದ್ಧೋಪಾಯ ವಿಶೇಷಣಳಾಗಿಯೂ ಸಹ (ಇದರಿಂದ ಉಪಾಯತ್ವವೂ ಹೇಳಲ್ಪಟ್ಟಿತು) ಆಶ್ರಯಿಸಲ್ಪಡುತ್ತಾಳೆಂದು "ಶ್ರೀಯತೇಚಾ ಖಿಲೈರ್ನಿತ್ಯಂ" ಎಂಬಲ್ಲಿ 'ಚ' ಕಾರದಿಂದ ದ್ಯೋತಿತ. ಇದು ಎರಡನೆಯ ಯೋಜನೆ. **ಶ್ರಯತೇ ಚಪದಂಪದಂ** ಎಂಬಲ್ಲಿ ಕೇವಲ ವಿಶೇಷಣ ಭೂತಳಾಗಿ ಭಗವಂತನನ್ನು ಆಶ್ರಯಿಸಿದ್ದಾಳೆಂಬುದು ಮಾತ್ರವಲ್ಲದೆ ಭಗವದ್ವಾಲ್ಲಭ್ಯಾತಿಶಯವು ತೋರುವುದಕ್ಕಾಗಿಯೂ ಅತಿಶಯ ಕಾರಿಣಿಯಾಗಿದ್ದು ಆಶ್ರಯಿಸುತ್ತಾಳೆಂಬುದನ್ನು ವಿವಕ್ಷಿಸಿದೆ. 1)**ಸ್ವರೂಪಂ ಸ್ವಾತಂತ್ರ್ಯಂ** 2) ಸ್ವತಃ **ಶ್ರೀಸ್ತ್ವಂ ವಿಷ್ಣೋಸ್ಸ್ವಮಸಿ** ಎಂಬ ಶ್ಲೋಕಗಳಲ್ಲಿ ಹೇಳಿರುವಂತೆಯೇ ಆದಿತ್ಯಾದಿಗಳಿಗೆ **ಪ್ರ**ಭೆಯ ಹಾಗೆ ಭಗವಂತನಿಗೆ ಅತಿಶಯವನ್ನುಂಟು ಮಾಡಿಕೊಂಡು, ಸಿದ್ಧೋಪಾಯನಾದ ಭಗವಂತನನ್ನು ಆಶ್ರಯಿಸಿರುತ್ತಾಳೆ. ಅದಾಗಿ ಭಗವಂತನ ಸ್ವರೂಪ, ಸ್ವಾತಂತ್ರ್ಯಗಳು, ಲಕ್ಷ್ಮಿಯ **ಸಂಶ್ಲೇಷ**ದಿಂದ ಅಂದರೆ ಲಕ್ಷ್ಮಿಯ ಪತಿಯೆಂಬ ಆ ಕಾ ರ ದಿಂ ದ ಉಂಟಾಗಿವೆ. **ಹಾಗೆಯೇ** ಲಕ್ಷ್ಮಿಯು ಸ್ವೇಚ್ಛೆಯಿಂದಲೇ ವಿಷ್ಣುವಿಗೆ **ಸ್ವ**ತ್ತಾಗಿದ್ದಾಳೆ. ಪ್ರಭೆಯಿಂದ ಪ್ರಭಾವಾನಿಗೆ (ಸೂರ್ಯನಿಗೆ) ಅತಿಶಯವು ಉಂಟಾಗುವಂತೆ ಮಹಾಲಕ್ಷ್ಮಿಯ ಸಂಬಂಧದಿಂದ ಭಗವಂತನಿಗೆ ಅತಿಶಯವು ಉಂಟಾಗಿದೆ. ಹೀಗೆ ಅತಿಶಯ**ಕಾರಿಣಿ**ಯಾಗಿದ್ದು**ಕೊಂಡು** ಭಗವಂತನನ್ನು ಆಶ್ರಯಿಸಿರುತ್ತಾಳೆಂದು **ತಾತ್ಪರ್ಯ.**

ಅನಂತರ ಮೂರನೆಯ **ಯೋಜನೆ**ಯಾಗಿ "ಶ್ರೀಞ್ ಸೇವಾಯಾಮ್ ಎಂಬ ಧಾತ್ವರ್ಥದಲ್ಲಿ ಅರ್ಥಾಂತರವನ್ನು ಅನುಗ್ರಹಿಸುತ್ತಾರೆ. ಆದಾಗಿ **ಎಲ್ಲೋರ್ಕ್ಕುಂಸೇವ್ಯೈಯಾಯ್** ಇತ್ಯಾದಿ– ಎಲ್ಲರಿಗೂ ಸೇವ್ಯಳಾಗಿ, ಸರ್ವೇಶ್ವರನನ್ನು ಸೇವಿಸಿರುತ್ತಾಳೆ, ಎಂಬ ಅರ್ಥದಲ್ಲಿ ಎಲ್ಲರಿಗೂ ಸ್ವಾಮಿನಿಯಾಗಿ, 3) **ಕಾಂತಸ್ತೇ ಪುರುಷೋತ್ತಮಃ**–ಪುರುಷೋತ್ತಮನು ನಿನ್ನ ಕಾಂತನು 4) **ಶೇಷಿತ್ವೇಪರಮಃ ಪುಮಾನ್**– ಪರನು ಪುರುಷನು ನಿನಗೆ ಶೇಷಿ– ಎನ್ಗಿರ

---

1) ಶ್ರೀಗುಣರತ್ನಕೋಶ, 28-6-6 29ನೇ ಪುಟನೋಡಿ 2) ಶ್ರೀ ಗುಣರತ್ನಕೋಶ 31 3) ಚತುಶ್ಶ್ಲೋಕೀ ।

4) ಹೇಲಾಯಾಮಖಿಲಂಚರಾಚರಮಿದಂ ಭೋಗೇ ವಿಭೂತಿ: ಪರಾ
ಪುಣ್ಯಾಸ್ತೇ ಪರಿಚಾರಕರ್ಮಣಿ ಸದಾಪಶ್ಯಂತಿ ಯೇ ಸೂರಯಃ ।
ಶ್ರೀರಂಗೇಶ್ವರ ದೇವಿ ಕೇವಲಕೃಪಾ ನಿರ್ವಾಹ್ಯ ವರ್ಗೇ ವಯಂ
ಶೇಷಿತ್ವೇ ಪರಮಃಪುಮಾನ್ ಪರಿಕಾರಾಹ್ಯೇತೇ ತವಸ್ಪಾರಣೇ ॥

ಪು. ತಿ, ನೋ

ಎನ್ಗಿರಪಡಿಯೇ ಅವನುಕ್ಕು ಶೇಷಮಾನನಿಲೈ ಶೊಲ್ಲಿತ್ತಾವ್. 1) "ಜಗತ್ಸಮಸ್ತಂ ಯದಪಾಙ ಸಂಶ್ರಯಮ್" ಇತ್ಯಾದಿಹಳಿಲ್ಪಡಿಯೇ ಎಲ್ಲಾವಸ್ತುಕ್ಕಳಾಲುಮ್ ಆಶ್ರಯಿಕ್ಕಪ್ಪಟ್ಟು, ಎಲ್ಲಾತ್ತೈಯುಂ ತಾನಾಶ್ರಯಿತ್ತಿರುಕ್ಕುಮೆನ್ರು ಪೊರುಳಾನಪೋದು ನಾರಾಯಣಾದಿ ಶಬ್ದಙ್ಗಳ್ ಶ್ರಿಯಃಪತಿಕ್ಕುಶೊಲ್ಲುಮ್ ಕಟ್ಟಳೈಯೈ ವಿಷ್ಣುಪತ್ನಿಕ್ಕುಮ್ ಶೊಲ್ಲಿತ್ತಾವ್.

ಶ್ರೀ ಭಾಷ್ಯಕಾರರುಮ್, 1) "ಭಗವನ್ನಾರಾಯಣ" ಎನ್ಗಿರ ನೇರಿಲೇ "ಭಗವತೀಂ ಶ್ರಿಯಮ್" ಎನ್ರರುಳಿಚ್ಚೆಯ್ದಾರ್.

ಶೃಣೋತಿ ಶ್ರಾವಯತೀತಿ ವ್ಯುತ್ಪತ್ತ್ಯಾ ವಿವಕ್ಷಿತಾರ್ಥಮಾಹ.

'ಶೃಣೋತಿ, ಶ್ರಾವಯತಿ' ಎನ್ಗಿರವ್ಯುತ್ಪತ್ತಿಹಳಿಲ್ ಸಾಪರಾಧರಾನ ಅಡಿಯೋಙ್ಗಳೈ ಸರ್ವೇಶ್ವರನ್ ತಿರುವಡಿಹಳಿಲೇ ಕಾಟ್ಟಿಕ್ಕೊಡುತ್ತರುಳವೇಣು ಮೆನ್ರಿಪ್ಪಡೈಹಳಿಲೇ ಆಶ್ರಿತರುಡೈಯ ಆರ್ತಧ್ವನಿಯೈ ಕ್ಕೇಟ್ಟು ಸರ್ವೇಶ್ವರನುಕ್ಕು ವಿಣ್ಣಪ್ಪಂ ಶೆಯ್ದು ಇವರ್ಹಳುಡೈಯ ಆರ್ತಿಯೈ ಶಮಿಪ್ಪಿಕ್ಕುಮೆನ್ರದಾಮ್.

---

ಪಡಿಯೇ–ಎಂಬಂತೆ,ಭಗವಂತನಿಗೆ ಶೇಷಭೂತೆಯಾಗಿದ್ದಾಳೆ, ಎಂಬ ನಿಲೈ–ಅವಸ್ಥೆಯು ಹೇಳಲ್ಪಟ್ಟಿತು. ಅನಂತರ ಶ್ರೀಯತೇ, ಶ್ರಯತೇ ಎಂಬುದಕ್ಕೆ ಅರ್ಥಾಂತರವನ್ನು ಅನುಗ್ರಹಿಸುತ್ತಾರೆ ಆದಾಗಿ 1) ಜಗತ್ಸಮಸ್ತಂ ಯದ ಪಾಂಗ ಸಂಶ್ರಯಂ–ಸ್ವಾಧೀನ ತ್ರಿವಿಧ ಚೇತನಾ ಚೇತನ ಸ್ವರೂಪ ಸ್ಥಿತಿ ಪ್ರವೃತ್ತಿ ಭೇದಮ್, ಎಂಬಂತೆ. ಸಮಸ್ತ ಪ್ರಪಂಚವೂ ಮಹಾಲಕ್ಷ್ಮಿಯ ಕಟಾಕ್ಷವನ್ನು ಅವಲಂಬಿಸಿದೆ, ಇತ್ಯಾದಿ ಹೇಳಿರುವಂತೆ ಎಲ್ಲಾ ವಸ್ತುಗಳಿಂದಲೂ ಆಶ್ರಯಿಸಲ್ಪಟ್ಟು (ಶ್ರೀಯತೇ–ಧಾರಕತ್ವ) ಎಲ್ಲಾ ವಸ್ತುಗಳನ್ನು ತಾನು ಆಶ್ರಯಿಸಿದ್ದಾಳೆ (ಶ್ರಯತೇ-ಸರ್ವ ವ್ಯಾಪಕತ್ವ,) ಎಂದು ಪೊರುಳಾನ ಪೋದು-ಅರ್ಥವಾದಾಗ ನಾರಾಯಣಾದಿ– ನಾರಾಯಣ, ವಿಷ್ಣು, ವಾಸುದೇವ ಶಬ್ದಗಳು ಶ್ರಿಯಃಪತಿಕ್ಕು– ಲಕ್ಷ್ಮೀಪತಿಗೆ ಹೇಳುವ ಸರ್ವಾಧಾರತ್ವ ಸರ್ವವ್ಯಾಪಕತ್ವ ಪ್ರಕಾರವನ್ನು ವಿಷ್ಣುಪತ್ನಿಕ್ಕುಂ ಶೊಲ್ಲಿಟ್ರಾರ್–ಮಹಾಲಕ್ಷ್ಮಿಗೂ ಹೇಳಿದೆ. ಶ್ರೀ ಭಾಷ್ಯಕಾರರುಮ್ ಇತ್ಯಾದಿ–ಭಗವದ್ಭಾಷ್ಯಕಾರರೂ 'ಭಗವನ್ನಾರಾಯಣ' ಎಂದು ಹೇಳಿರುವುದಕ್ಕೆ ಸಮನಾಗಿ, "ಭಗವತೀಂ ಶ್ರಿಯಮ್" ಎಂದು ಹೇಳಿರುತ್ತಾರೆ. ಆದಾಗಿ ನಾರಾಯಣ ಶಬ್ದದ ಹಾಗೆ ಶ್ರೀ ಶಬ್ದವೂ ಸ್ಥಾನ ಪ್ರಮಾಣ ಬಲದಿಂದ ಆಶ್ರಯತ್ವ ವ್ಯಾಪಕತ್ವಗಳನ್ನು ಶ್ರೀಯತೇ, ಶ್ರಯತೇ ಎಂಬ ವ್ಯುತ್ಪತ್ತಿಯಿಂದ ತಿಳಿಸುತ್ತದೆ ಎಂದರ್ಥ. ಶ್ರೀಯತೇ–ಆಶ್ರಯತ್ವ, ಅಂದರೆ ಧಾರಕತ್ವ ಶ್ರಯತೇ- ವ್ಯಾಪಕತ್ವ, ಎಲ್ಲವನ್ನೂ ಅಂತಃ ವ್ಯಾಪರಿಸಿ ನಿಯಮಿಸುವವಳು ಎಂದರ್ಥ. ವ್ಯಾಪನ ಭರಣಸ್ವಾಮ್ಯಾದಿಗಳಿಂದ ಚೇತನಾ ಚೇತನಗಳಿಗೂ ಇವಳಿಗೂ ಭಗವಂತನ ಹಾಗೆ ಶರೀರಾತ್ಮ ಭಾವವು ನಿರೂಪಿತವಾಯಿತು.

ಅನಂತರ "ಶೃಣೋತಿ" "ಶ್ರಾವಯತಿ" ಎಂಬ ವ್ಯುತ್ಪತ್ತಿಯಿಂದ ಸಿದ್ಧವಾದ ಅರ್ಥವನ್ನು ತಿಳಿಸುತ್ತಾರೆ- ಆದಾಗಿ ಶೃಣೋತಿ, ಶ್ರಾವಯತಿ ಎಂಬ ವ್ಯುತ್ಪತ್ತಿಗಳಲ್ಲಿ ಸಾಪರಾಧರಾನ ಅಡಿಯೋಂಗಳೈ ಇತ್ಯಾದಿ– ದಾಸಭೂತರನ್ನು ಸರ್ವೇಶ್ವರನ ಶ್ರೀ ಪಾದಗಳಲ್ಲಿ, ತೋರಿಸಿಕೊಟ್ಟು ಕೃಪೆ ಮಾಡಬೇಕೆಂಬ ರೀತಿಯಲ್ಲಿ ಆಶ್ರಿತರ ಆರ್ತಧ್ವನಿಯನ್ನು ಕೇಳಿ ಸರ್ವೇಶ್ವರನಿಗೆ ವಿಜ್ಞಾಪಿಸಿ ಇವರುಗಳ ಆರ್ತಿಯನ್ನು ಹೋಗಲಾಡಿಸುತ್ತಾಳೆಂದು ಅರ್ಥ

---

ಶ್ರೀ ಗುಣರತ್ನಕೋಶ 22 ಏಲೈ ಶ್ರೀ ರಂಗನಾಥನ ಮಹಿಷಿಯೇ ಈ ಚರಾ ಚರಾತ್ಮಕವಾದ ಪ್ರಪಂಚವು ನಿನ್ನ ಕ್ರೀಡೆಗೆ ವಿಷಯವಾದುದು. ನಿನಗೆ ಲೀಲೋಪಕರಣವೆಂದರ್ಥ. ಉತ್ಕೃಷ್ಟವಾದ ನಿತ್ಯವಿಭೂತಿಯು ನಿನ್ನ ಭೋಗಕ್ಕೆ ವಿಷಯದಾದದ್ದು. ಭೋಗೋಪಕರಣವಾದದ್ದು ಎಂದರ್ಥ. ಸರ್ವವನ್ನೂ ಸದಾ ಸಾಕ್ಷಾತ್ಕರಿಸಿಕೊಂಡಿರುವ ಪುಣ್ಯಾತ್ಮರಾದ ನಿತ್ಯ ಸೂರಿಗಳು ನಿನ್ನ ಕೈಂಕರ್ಯಕ್ಕೆ ಸಾಧನಭೂತರು. ನಾವು ಕೇವಲ ನಿನ್ನ ಕೃಪಾವರ್ಗಕ್ಕೆ ಸೇರಿದವರು. ಪರಮ ಪುರುಷನು ನಿನಗೆ ಶೇಷಿ–ಸ್ವಾಮಿ, ಇವೆಲ್ಲಾ ನಿನ್ನನ್ನು ಪ್ರಕಾಶಪಡಿಸುವುದಕ್ಕೆ ಪರಿಕರಗಳು.

1) ಆಳವಂದಾರ್‌ಸ್ತೋತ್ರ 37

ಇಪ್ಪಡಿ ಪುರುಷಕಾರಕೃತ್ಯತ್ತೈ ಶೊಲ್ಲುಹಿರಪಿದುಕ್ಕುಂ ಪುರುಷಕಾರ ಭಾವತ್ತಿಲೇನೋಕ್ಕು.

ಯೋಜನಾಂತರಮಾಹ.

1) 'ಮತ್ಪದದ್ವಂದ್ವಮೇಕಂ ಯೇ ಪ್ರಪದ್ಯನ್ತೇ ಪರಾಯಣಮ್ ।
ಉದ್ಧರಿಷ್ಯಾಮ್ಯಹಂ ದೇವಿ ಸಂಸಾರಾತ್ಸ್ವಯಮೇವ ತಾನ್ ॥
2) 'ಆನೃಶಂಸ್ಯಂ ಪರೋಧರ್ಮಃ' ಇತ್ಯಾದಿಹಳ್ಳೆಯುಮನ್ ಪಕ್ಕಲಿಲೇಕೇಟ್ಟು.
3) 'ಶೃಣುಚಾವಹಿತಃ ಕಾಂತ ಯತ್ತೇ ವಕ್ಷ್ಯಾಮ್ಯಹಂ ಹಿತಮ್ ।
ಪ್ರಾಣೈರಪಿ ತ್ವಯಾನಿತ್ಯಂ ಸಂರಕ್ಷ್ಯಶ್ಶರಣಾಗತಃ ॥"
ಎನ್ರು ಕಪೋತತ್ತೈ ಕಪೋತಿ ಕೇಟ್ಪಿತ್ತಾರ್‌ಪೋಲೇ ಅವಸರತ್ತಿಲೇ ಕೇಟ್ಪಿಕ್ಕುಮ್‌ಎನ್ನವುಮಾಮ್.

ತೃತೀಯ ಯೋಜನಾಮಾಹ

ಸರ್ವೇಶ್ವರ್ ಪಕ್ಕಲಿಲೇ ಲೋಕಹಿತತ್ತೈಕ್ಕೇಟ್ಟು 4) 'ಮಿತ್ರಮೌಪಯಿಕಂ ಕರ್ತುಮ್' ಇತ್ಯಾದಿ

---

**ಇಪ್ಪಡಿ ಪುರುಷಕಾರ ಕೃತ್ಯತ್ತೈ** ಇತ್ಯಾದಿ– ಹೀಗೆ ಪುರುಷ ಕಾರ ಕೃತ್ಯವನ್ನು ಹೇಳುವ ಇದಕ್ಕೆ ಪುರುಷ ಕಾರ ಭಾವದಲ್ಲಿ ದೃಷ್ಟಿ. ಅನಂತರ ಶೃಣೋತಿ ಶ್ರಾವಯತಿ ಎಂಬುದಕ್ಕೆ ಯೋಜನಾಂತರವನ್ನು ತಿಳಿಸುತ್ತಾರೆ. ಅದಾಗಿ 1) ಮತ್ಪದ ದ್ವಂದ್ವಮೇಕಂ ಯೇ ಇತ್ಯಾದಿ–2) **ಆನೃಶಂಸ್ಯಂ ಪರೋಧರ್ಮಃ**– ಇತ್ಯಾದಿಗಳನ್ನು ಭಗವಂತನ ಸಕಾಶದಿಂದ ಕೇಳಿ, (ಶೃಣೋತಿ) 3) **ಶುಣಚಾವಹಿತಃಕಾಂತ,** ಇತ್ಯಾದಿಯಾಗಿ ಗಂಡು ಕಪೋತಕ್ಕೆ ಹೆಣ್ಣು ಕಪೋತವು ಹೇಳುವಂತೆ ಹೇಳಿದ ರೀತಿಯಲ್ಲಿ **ಅವಸರತ್ತಿಲೇ** ಆಶ್ರಿತ ರಕ್ಷಣ ಸಮಯದಲ್ಲಿ ಭಗವಂತನು ಕೇಳುವಂತೆ ಹೇಳುತ್ತಾಳೆ. (ಶ್ರಾವಯತಿ) ಅಂದರೆ ವರಾಹ ರೂಪಿಯಾದ ಭಗವಂತನು ಭೂದೇವಿಗೆ **ಮತ್ಪದ ದ್ವಂದ್ವಂ**–ನನ್ನ ಪಾದಗಳನ್ನು **ಏಕಂ**–ಪ್ರಾಪ್ಯವನ್ನಾಗಿಯೂ, ಪ್ರಾಪಕವನ್ನಾಗಿಯೂ, **ಪರಾಯಣಂ** ಯೇ**ಪ್ರಪದ್ಯಂತೇ**-ಸಿದ್ಧೋಪಾಯವನ್ನಾಗಿ ಯಾರು ಆಶ್ರಯಿಸುತ್ತಾರೋ, **ಉದ್ಧರಿಷಾಮಿ** ಇತ್ಯಾದಿ– ಅವರುಗಳನ್ನು ಸಂಸಾರದಿಂದ ನಾನೇ ಉದ್ಧಾರ ಮಾಡುತ್ತೇನೆ. **ಆನೃಶಸ್ಯಂಪರೋಧರ್ಮಃ** ಇತ್ಯಾದಿ–ನೃಶಂಸಸ್ಯಭಾವಃ ನೃಶಂಸ್ಯಮ್. ಕ್ರೂರತ್ವ.ತದಭಾವಃಆನೃಶಂಸ್ಯಮ್-ದಯೆ,ಇದು ಪರೋಧರ್ಮಃಉತ್ಕೃಷ್ಟವಾದಧರ್ಮವೆಂದುತ್ವತ್ತಏವ ಮಯಾ ಶ್ರುತಃ ನಿನ್ನಿಂದಲೇ ನನಗೆ ಹೇಳಲ್ಪಟ್ಟಿತು, ಎಂಬೀ ಮಾತುಗಳನ್ನು ಭಗವಂತನ ಸಕಾಶದಿಂದ ಕೇಳಿ ಆರ್ತರಕ್ಷಣ ಸಮಯದಲ್ಲಿ ಭಗವಂತನಲ್ಲಿ ಇದೇ ಮಾತುಗಳನ್ನು ಹೇಳಿ ಆರ್ತರನ್ನು ಕಾಪಾಡುತ್ತಾಳೆ ಎಂದು **ತಾತ್ಪರ್ಯ.**

**ಶೃಣೋತಿ, ಶ್ರಾವಯತಿ** ಎಂಬುದಕ್ಕೆ **ಸರ್ವೇಶ್ವರನ್ ಪಕ್ಕಲಿಲೇ**–ಎಂದಾರಂಭಿಸಿ ಮತ್ತೊಂದು ಯೋಜನೆಯನ್ನು ತಿಳಿಸುತ್ತಾರೆ. ಅದಾಗಿ ಸರ್ವೇಶ್ವರನ ಸಕಾಶದಿಂದ ಲೋಕ ಹಿತವನ್ನು ಕೇಳಿ (ಶೃಣೋತಿ) 4) **ಮಿತ್ರಮೌಪಯಿಕಂ ಕರ್ತುಂ** ಇತ್ಯಾದಿ ರೀತಿಯಲ್ಲಿ, ಎಲೈ ರಾವಣನೇ ನೀನು ಲಂಕೆಯಲ್ಲಿ ಇರಬೇಕೆಂದು ಆಸೆಪಟ್ಟರೆ,

---

1) ವರಾಹ ಪುರಾಣ
2) ಆನೃಶಂಸ್ಯಂ ಪರೋಧರ್ಮಃ ತ್ವತ್ತ ಏವ ಮಯಾಶ್ರುತಃ ।
ಜಾನಾಮಿತ್ವಾಂ ಮಹಾವೀರ್ಯಂ ಮಹೋತ್ಸಾಹಂ ಮಹಾಬಲಮ್ ॥ ರಾಮಾಯಣ (5-38-41)
3) ಇತಿಹಾಸಸಮುಚ್ಚಯ (10-51)
4) ರಾಮಾಯಣ ಸುಂದರಕಾಂಡ 21–19
ಮಿತ್ರಮೌಪಯಿಕಂ ಕರ್ತುಂ ರಾಮ ಸ್ಥಾನಂ ಪರೀಪ್ಸತಾ ।
ವಧಂಚಾನಿಚ್ಛತಾ ಘೋರಂ, ತ್ವಯಾಸೌ ಪುರುಷರ್ಷಭಃ ॥
ಪು. ತಿ. ನೋ.

**ಹಳಿಕ್ಕಪ್ಪಡಿಯೇ ವಿಪರೀತರ್ಕ್ಕೈಯುಂವ್ ಕೂಡ ಕೇಟ್‌ಪಿಕ್ಕು ಮೆನ್ನವುಮಾವ್.**

**ಅಥ ಶೃಣಾತೀತಿ ಶ್ರೀರಿತಿ ವ್ಯುತ್ಪತ್ತ್ಯಂತರಮಾಹ.**

**"ಶೃಣಾತಿ ನಿಖಿಲಾನ್ ದೋಷಾನ್"ಎನ್ಱು ವ್ಯುತ್ಪತ್ತಿಯಾನಪೋದು,**

2) "ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ ।
ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಽಪಿ ಚ ಗೀಯತೇ ॥" ಎನ್ಱುಂವ್

3) **"ವೇರಿಮಾರಾದ ಪೂಮೇಲಿರುಪ್ಪಾಳ್ ವಿನೈತೀರ್‌ಕ್ಕುಮ್" ಎನ್ಱುಮ್ ಶೊಲ್ಲುಹಿರಪಡಿಯೇ ಉಪಾಯಾಧಿಕಾರಿಹಳುಕ್ಕು ವಿರೋಧಿಹಳಾನ ಕರ್ಮ್ಮಾದಿಹಳ್ಳೈ ಕ್ಕಳೈಕ್ಕುಮೆನ್ಱುದಾವ್.**

---

ಮತ್ತು ಘೋರವಾದ ವಧವನ್ನು ಇಚ್ಛಿಸದೆ ಇದ್ದರೆ, ಈ ಪುರುಷ ಶ್ರೇಷ್ಟನಾದ ರಾಮಚಂದ್ರನೊಡನೆ ಸ್ನೇಹವನ್ನು ಬೆಳೆಸಿಕೋ– ಅವನ ಕಾಲಲ್ಲಿ ಬಿದ್ದು ಅಪರಾಧ ಕ್ಷಮಾಪಣೆಯ ಯಾಚನಾ ಪೂರ್ವಕ ಶರಣಾಗತಿ ಮಾಡು, ಇತ್ಯಾದಿ ಹಿತ ವಾಕ್ಯವನ್ನು ವಿಪರೀತರ್ಕ್ಕೈಯುಂವ್ ಕೇಟ್ಪಿಕ್ಕುಮೆನ್ನವುಮಾವ್–ವಿಪರೀತಸ್ವಭಾವರಾದ ರಾವಣಾದಿಗಳನ್ನು ಕಿವಿಗೊಟ್ಟು ಕೇಳುವಂತೆ ಹೇಳುತ್ತಾಳೆ (ಶ್ರಾವಯತಿ), ಎಂದೂ ಹೇಳಬಹುದು.

ಅನಂತರ ಶೃಣಾತಿ, ಶ್ರೀಣಾತಿ, ಎಂಬ ಎರಡು ವ್ಯುತ್ಪತ್ತಿಗಳಿಗೂ ಅರ್ಥವನ್ನು ತಿಳಿಸುತ್ತಾರೆ. ಆದಾಗಿ ಶೃಣಾತಿ **ನಿಖಿಲಾನ್‌ದೋಷಾನ್"** ಎಂದು ವ್ಯುತ್ಪತ್ತಿಯಾದ ಸಮಯದಲ್ಲಿ 2) ಲಕ್ಷ್ಮ್ಯಾಸಹ**ಹೃಷೀಕೇಶೋ** ಇತ್ಯಾದಿಯಾಗಿಯೂ 3)**ವೇರಿಮಾರಾದಪೂಮೇಲಿರುಪ್ಪಾಳ್** ಇತ್ಯಾದಿಯಾಗಿಯೂ ಹೇಳುವ ಪ್ರಕಾರ,ಉಪಾಯಾಧಿಕಾರಿಗಳಿಗೆ ಮೋಕ್ಷ ವಿರೋಧಿಗಳಾದ ಸರ್ವಕರ್ಮಗಳನ್ನೂ ಹೋಗಲಾಡಿಸುತ್ತಾಳೆಂಬು ತಾತ್ಪರ್ಯ. ಹೃಷೀಕೇಶನ್ನು ದೇವಿಯಾದ ಕಾರುಣ್ಯರೂಪೆಯಾದ ಲಕ್ಷ್ಮಿಯೊಡಗೂಡಿಯೇ ರಕ್ಷಕನಾಗುತ್ತಾನೆ. ಪ್ರಾಪ್ತಿ ವಿರೋಧಿಪಾಪಗಳನು ಹೋಗಲಾಡಿಸುತ್ತಾನೆಂದರ್ಥ ಉಪಾಯಾಧಿಕಾರಿಹಳುಕ್ಕು–ಉಪಾಯನಿಷ್ಠರಿಗೆ ಎಂದರ್ಥ ವಿರೋಧಿಹಳಾದ–ಪ್ರಾಪ್ತಿ ವಿರೋಧಿಗಳಾದ ಎಂದು ಅರ್ಥ. ಶೃಣಾತಿ, ಎಂಬ ವ್ಯುತ್ಪತ್ತಿಗೆ, ಉಪಾಯ ವಿರೋಧಿ ಪಾಪವನ್ನು ಹೋಗಲಾಡಿಸಿ, ಶ್ರೀಣಾತಿ– ಎಂಬ ವ್ಯುತ್ಪತ್ತಿಗೆ ಉಪಾಯಾರ್ಹತಾ ದಶೆಯನ್ನು ಉಂಟು ಮಾಡುತ್ತಾಳೆ. ಪುರುಷಕಾರ

---

ಎಲೈ ರಾವಣನೇ ಸ್ಥಾನಂ ಪರೀಪ್ಸತಾ-ಲಂಕೆಯಲ್ಲಿ ಇರಲು ಆಸೆಯುಳ್ಳ ವನಾಗಿಯೂ, ಘೋರವಾದ ವಧವನ್ನು ಅಂದರೆ ಭ್ರಾತೃ ಪುತ್ರ ಬಂಧ್ವಾದಿಗಳನ್ನುಕೊಂದು ಅದರಿಂದ ಉಂಟಾದ ಶೋಕವನ್ನು ಅನುಭವಿಸಿದ ನಂತರ- ಒಂದೊಂದು ತಲೆಯನ್ನೂ ಕತ್ತರಿಸುವ ರೂಪವಾದ ಘೋರ ವಧವನ್ನು ಅಸೆಪಡದೆ ಇರುವವನಾಗಿಯೂ, ಇರುವ ನಿನ್ನಿಂದ, ರಾಮಚಂದ್ರನಾದ ಈ ಪುರುಷ ಶ್ರೇಷ್ಠನು. ಮಿತ್ರನಾಗಿ ಮಾಡಿಕೊಳ್ಳುವುದು ಉಪಯುಕ್ತವು.

2) ಲಕ್ಷ್ಮೀತಂತ್ರ 28-14 (3)

3) ಮಾರಿಮಾರಾದತಣ್ ಅಮ್‌ಮಲ್ಯೆ ವೇಂಗಡತ್ತಣ್ಣಲ್ಯೆ
ವಾರಿಮಾರಾದ ಪೈಮ್ ಪೂಮ್ ಪೊಳ್ಳಿಲ್‌ಶೂೞ್ ಕುರಹೂರ್‌ನಗರ್ ।
ಕಾರಿಮಾರನ್ ಶಡಗೋಪನ್ ಶೊಲ್ಲಾಯಿರತ್ತಿಪ್ಪತ್ತಾಲ್
ವೇರಿಮಾರಾದ ಪೂಮೇಲಿರುಪ್ಪಾಳ್, ವಿನೈತೀರ್ಕ್ಕುಮೇ ॥

ಸದಾ ವರ್ಷದಿಂದ ಶೀತಳವಾಗಿ ಸುಂದರವಾದ ತಿರುವೇಂಗಡಮಲೈ ಎಂಬ ಬೆಟ್ಟದಲ್ಲಿ ವಾಸವಾಗಿರುವವನು ಶ್ರೀನಿವಾಸ. ಅವ ವನ್ನು ಸದಾ ನೀರಿನಿಂದ ಕೂಡಿದ ಉದ್ಯಾನವಿಂದ ಸುತ್ತುವರಿಯಲ್ಪಟ್ಟ ಕುರುಕಾಪುರಿಯಲ್ಲಿರುವ ಆಳ್ವಾರ್ ಶಡಗೋಪರು, ಹಾಡಿರುವ ಸಾವಿರ ಪದ್ಯಗಳು. ಅವುಗಳಲ್ಲಿ ಈ ಹತ್ತು ಪಾಶುರಗಳನ್ನು ಹಾಡುವವರ ಸಕಲ ಪಾಪಗಳನ್ನೂ ವೇರಿ–ಪರಿಮಳ ಸದಾ ಪರಿಮಳಿತವಾದ ಪಂಕಜದಲ್ಲಿ ವಾಸ ಮಾಡುವ ಮಹಾಲಕ್ಷ್ಮಿಯು ಹೋಗಲಾಡಿಸುತ್ತಾಳೆ.

**ಅಥ ಶ್ರೀಣಾತಿ ಇತಿ ಶ್ರೀರಿತಿ ವ್ಯುತ್ಪತ್ತ್ಯರ್ಥಮಾಹ**

**"ಶ್ರೀಣಾತಿ ಚ ಗುಣೈರ್ಜಗತ್" ಎನ್ರು ನಿರುಕ್ತಿಯಿಲ್, ಕಾರುಣ್ಯಾದಿ ಗುಣಙ್ಗಳಾಲೇ" 1) ನಿನ್ತಿರುವರುಳಮ್ ಪಙ್ಗಯತ್ತಾಳ್ ತಿರುವರುಳುಮ್ ಕೊಣ್ಡು" ಇತ್ಯಾದಿಹಳಿಲ್ ಪಡಿಯೇ ಆಶ್ರಿತರುಕ್ಕು ಕೈಙ್ಕರ್ಯ ಪರ್ಯನ್ತ ಗುಣಪರಿಪಾಕತ್ತೈಯುಣ್ಡಾಕ್ಕುಮೆನ್ರದಾಮ್.**

---

ಪರವಾಗಿ ಅರ್ಥ ಮಾಡುವುದಕ್ಕಿಂತ, ಉಪಾಯಪರವಾಗಿ ಅರ್ಥ ಮಾಡುವುದು ಸ್ವರಸ- ಹೇಗೆಂದರೆ, ಇಲ್ಲಿ ಉದಾಹೃತಗಳಾದ 1,"ಲಕ್ಷ್ಮ್ಯಾಸಹ ಹೃಷಿಕೇಶಃದೇವ್ಯಾಕಾರುಣ್ಯ ರೂಪಯಾ ರಕ್ಷಕಃ, 2)"ವೇರಿಮಾರಾದ ಪೂಮೇಲಿರುಪ್ಪಾಳ್ ವಿನೈತೀರ್ಕ್ಕುಮೇ,ಎಂಬ ಪ್ರಮಾಣಗಳೆರಡೂ, ಪ್ರಾಪ್ತಿ ವಿರೋಧಿ ನಿರಸನದಲ್ಲಿ ಐಕಾಂತ್ಯಗಳು. ನಿಶ್ಶೇಷಾನಿಷ್ಟ ನಿರಸನವೇ ಎರಡು ಪ್ರಮಾಣಗಳಿಗೂ ಸ್ವಾರಸಿಕವಾಗಿ ಪ್ರತೀತಿ. ಏಕೆಂದರೆ ಲಕ್ಷ್ಮಿಗೆ ಪುರುಷಕಾರ ರೂಪ ರಕ್ಷಕತ್ವವನ್ನು ಮಾತ್ರ ವಿವಕ್ಷಿಸಿದರೆ ಜತೆಯಲ್ಲಿರುವ ಹೃಷಿಕೇಶನಿಗೆ ರಕ್ಷಕತ್ವವು ಪುರುಷಕಾರ ರೂಪವಲ್ಲದಿರುವುದರಿಂದ ಅವಿವಕ್ಷಿತವು ಏರ್ಪಡುತ್ತದೆ. ಆದ್ದರಿಂದ ಇಬ್ಬರೂ ಉಪಾಯಭೂತರಾಗಿ ರಕ್ಷಿಸುತ್ತಾರೆಂದು ಹೇಳಿದರೇನೆ ಶ್ರೀ ಸೂಕ್ತಿಗೆ ಸಾಮಂಜಸ್ಯವು ಏರ್ಪಡುತ್ತದೆ. ಆ ರಕ್ಷಕತ್ವವು ಸರ್ವಾನಿಷ್ಟ ನಿವಾರಣ ರೂಪವಾಗಿ ಮೋಕ್ಷ ರೂಪ ಪರಮ ಪುರುಷಾರ್ಥ ಪ್ರದಾನ ರೂಪವಾದದ್ದು ಎಂಬುದು "ಲಕ್ಷ್ಮ್ಯಾಸಹ ಹೃಷಿಕೇಶಃ ಎಂಬ ವಚನಗಳಿಗೆ ಸಮಂಜಸವಾಗುತ್ತದೆ ಎಂದರ್ಥ "ವೇರಿಮಾರಾದ ಪೂಮೇಲಿರುಪ್ಪಾಳ್ ವಿನೈತೀರ್ಕ್ಕುಮ್" ಎಂಬ ಶ್ರೀ ಸೂಕ್ತಿಯಲ್ಲಿ ವಿನೈ–ಪಾಪವೆಂಬ ಪದಕ್ಕೆ ಸಂಕೋಚವಿಲ್ಲದಿರುವುದರಿಂದ, ಸಿದ್ಧೋಪಾಯ ವಿಶೇಷನಾದ ಭಗವಂತನನ್ನು ಅವಲಂಬಿಸಿರುವ ಪಂಕಜವಾಸಿನಿಯು ಸರ್ವ ಪಾಪಗಳನ್ನು ಹೋಗಲಾಡಿಸುತ್ತಾಳೆಂಬುದು ಶ್ರೀ ಸೂಕ್ತಿಗೆ ಸ್ವಾರಸ್ಯವಾದದ್ದು. ಆದ್ದರಿಂದ ಮಂತ್ರವರ್ಣಕ್ಕನುಸಾರವಾಗಿ, ವಿಶಿಷ್ಟ ಶರಣ್ಯ ತತ್ವವನ್ನು ಅವಲಂಬಿಸುವವರಿಗೆ ಆ ದಿವ್ಯದಂಪತಿಗಳ ಪರಿಪೂರ್ಣಾನುಭವ ವಿರೋಧಿಗಳಾದ ಸರ್ವ ಕರ್ಮಗಳ ನಿಶ್ಶೇಷ ನಿವರ್ತನವು ದೇವಿಯಾದ ಪಂಕಜವಾಸಿನಿಯಿಂದ ಮಾಡಲ್ಪಡುತ್ತದೆಂಬುದು ಶ್ರೀಸೂಕ್ತಿ ತಾತ್ಪರ್ಯ ಶ್ರೀ ವಿಶಿಷ್ಟನು ಸರ್ವ ಪಾಪ ನಿವಾರಣಾ ಪೂರ್ವಕ ರಕ್ಷಿಸುತ್ತಾನೆಂದು ಹೇಳಿದರೇನೆ ಅಲ್ಲವೇ ಸರ್ವ ಪಾಪ ನಿವಾರಣವನ್ನು "ವಿನೈತೀರ್ಕ್ಕುಮ್" ಎಂಬ ಪದಗಳಲ್ಲಿ ವಿವಕ್ಷಿಸಬಹುದು, ಎಂದು ಕುಚೋದ್ಯ ಮಾಡುವವರಿಗೆ ಸಮಾಧಾನವೇನೆಂದರೆಭಗವಂತನು ಮಾತ್ರ ರಕ್ಷಿಸುತ್ತಾನೆಂದು ಹೇಳಿದರೂ,ಶ್ರೀ ವಿಶಿಷ್ಟನು ರಕ್ಷಿಸುತ್ತಾನೆಂದುಹೇಳಿದರೂ ಕುದೃಷ್ಟಿಗಳಿಗೆ ಸರ್ವಪಾಪವಿನಿರ್ಮೋಕ್ಷದಲ್ಲಿ ಲಕ್ಷ್ಮಿಗೆ ಅನ್ವಯವಿಲ್ಲವೆಂಬ ಭಾವನೆಯು ಉಂಟಾಗಬಹುದು ಅದುಉಂಟಾಗದಿರಲುಲಕ್ಷ್ಮಿಯು ಸರ್ವಪಾಪನಿವಾರಕಳೆಂದು ಸ್ಪಷ್ಟಪಡಿಸಿದ್ದಾರೆ ಅವಳು ಸ್ವಾಮಿಯಾದ ಭಗವಂತನ ಅಭಿಪ್ರಾಯಕ್ಕನುಗುಣವಾಗಿಯೇ ನಡೆಯುತ್ತಾಳಾದ್ದರಿಂದ ಇಬ್ಬರೂ ಸೇರಿಯೇ ಹಾಗೆ ಸಂಕಲ್ಪಿಸುತ್ತಾರೆಂದು ಪರ್ಯವಸಿತಾರ್ಥ.

**ಶ್ರೀಣಾತಿ ಚ ಗುಣೈರ್ಜಗತ್** ಎಂದು ನಿರುಕ್ತಿಯಲ್ಲಿ ತನ್ನ ಕಾರುಣ್ಯಾದಿ ಗುಣಗಳಿಂದ, 1) **ನಿನ್ತಿರುವರುಳುಮ್** ಇತ್ಯಾದಿಹಳಲ್ಲಿ ಹೇಳಿರುವಂತೆ ಆಶ್ರಿತರಿಗೆ ಕೈಂಕರ್ಯ ಪರ್ಯಂತ ಗುಣ ಪರಿಪಾಕವನ್ನು ಉಂಟು ಮಾಡುತ್ತಾಳೆ ಎಂದರ್ಥ. ಶ್ರೀಞ್ ಪರಿಪಾಕೇ ಎಂಬ ಧಾತುವಿನಿಂದ ಗುಣಪರಿಪಾಕವು ವಿವಕ್ಷಿತ. **"ಶ್ರೀಣಾತಿ ಚ ಗುಣೈರ್ಜಗತ್"**

---

1) ಪಂಡೈನಾಳಾಲೇ ನಿನ್ತಿರುವರುಳುಮ್ ಪಂಗಯತ್ತಾಳ್ ತಿರುವರುಳುಮ್ ಕೊಂಡು,
ನಿನ್ ಕೋಯಿಲ್ ಶೀಯ್ತ್ತು ಪ್ಪಲ್ ಪಡಿಹಾಲ್ ಕುಡಿಕುಡಿವಱಿವಂದಾಳ್ಕೆಯ್ಯುಮ್ ।
ತೊಂಡರೋರ್ಕ್ಕರುಳಿ ಚ್ಚೋದಿವಾಯ್ ತಿರಂದು ಉನ್ ತಾಮರೈಕ್ಕಣ್ಗಳಾಲ್ ನೋಕ್ಕಾಯ್
ತೆಣ್ ತಿರೈ ಪ್ಪೊರುನಲ್ ತಣಪಣೈಶೂೞ್ನ್ದ ತಿರುಪ್ಪುಳಿಂಗುಡಿಕ್ಕಿಡಂದಾನೇ ॥

ಶೀತಳವಾದ ತಾಮ್ರಪರ್ಣಿನದಿಯಿಂದ ಸುತ್ತುವರಿಯಲ್ಪಟ್ಟ ತಿರುಪ್ಪುಳಿಂಗುಡಿಯಲ್ಲಿ ಮಲಗಿರುವ ದೇವನೇ,
ಅನಾದಿ ಕಾಲದಿಂದ ಏರ್ಪಟ್ಟ ಸುಕೃತ ಪರಿಪಾಕದ ನಿಮಿತ್ತವಾಗಿ, ನಿನ್ನ ಶ್ರೀ ಮತ್ಕೃಪೆಯನ್ನೂ ಪಂಕಜವಾಸಿನಿಯ ಶ್ರೀಮತ್ಕೃಪೆಯನ್ನೂ ಪಡೆದು ನಿಮ್ಮ ದೇವಸ್ಥಾನದಲ್ಲಿ ಸಾರಿಸಿ, ಗುಡಿಸಿ, ವಂಶಪಾರಂಪರ್ಯವಾಗಿ ಕೈಂಕರ್ಯವನ್ನು ಮಾಡುವ, ದಾಸನಿಗೆ ಕೃಪೆ ಮಾಡಿ ನಿನ್ನ ವದನಾರವಿಂದವನ್ನು ತೆರೆದು, ತಾವರೆ ಪುಷ್ಪದಂತಿರುವ ಕಣ್ಣುಗಳಿಂದ ನನ್ನನ್ನು ಕಟಾಕ್ಷಿಸು.

ಎಂಬಲ್ಲಿ ಪರಿಪೂರ್ಣ ನಿತ್ಯ ಕೈಂಕರ್ಯ ಪರ್ಯಂತವಾದ ಅಪಹತ ಪಾಪ್ಮತ್ವಾದಿ ಗುಣಾಷ್ಟಕಾವಿರ್ಭಾವಲಕ್ಷಣ ಪರಿಪಾಕವು ವಿವಕ್ಷಿತ.. ಆದ್ದರಿಂದ "ಶೃಣಾತಿ ನಿಖಿಲಾನ್ ದೋಷಾನ್" ಎಂಬ ನಿರುಕ್ತವು ಬ್ರಹ್ಮಪ್ರಾಪ್ತಿಗೆ ವಿರೋಧಿಯಾದ ಪುಣ್ಯ ಪಾಪಾತ್ಮಕ ಸರ್ವವಿರೋಧಿ ನಿವೃತ್ತಿ ಪರವಾಗಿ ತೀರ್ಮಾನಿಸುವುದು ಯುಕ್ತವಾದದ್ದು. "ಶ್ರೀಣಾತಿ ಚಗುಣೈರ್ಜಗತ್", ಎಂಬಲ್ಲಿಯೂ "ಶ್ರೀಣಾತಿ" ಎಂಬ ಪದಕ್ಕೆ ಭಗವದಂತರಂಗ ಕೈಂಕರ್ಯ ಪರ್ಯಂತ ಗುಣಪರಿಪಾಕವು ವಿವಕ್ಷಿತವೆಂಬುದು, "ನಿನ್‌ತಿರುವರುಳುಮ್ ಪಂಗಯತ್ತಾಳ್ ತಿರುವರುಳುಮ್‌ಕೊಂಡು ನಿನ್‌ಕೋಯಿಲ್ ಶೀಯ್ತು" ಇತ್ಯಾದಿ ನಿನ್ನ ಮತ್ತು ಪಂಕಜ ವಾಸಿನಿಯ ಶ್ರೀ ಮತ್ಕೃಪೆಗಳನ್ನು ಪಡೆದು ನಿನ್ನ ದೇವಸ್ಥಾನದಲ್ಲಿ ಕೈಂಕರ್ಯ ಮಾಡಲೆಣಿಸುವೆ, ಎಂದು ಅನುಸಂಧಾನ ಮಾಡಿರುವ ಶ್ರೀ ಸೂಕ್ತಿಯನ್ನು ಈ ಸಂದರ್ಭದಲ್ಲಿ ಪ್ರಮಾಣವಾಗಿ ಬಳಿಸಿರುವುದರಿಂದ ನಿಶ್ಚಯಿಸಲ್ಪಡುತ್ತದೆ. ದಿವ್ಯ ಪ್ರಬಂಧ ಶ್ರೀ ಸೂಕ್ತಿಗಳಿಗೂ ನಿರುಕ್ತಾರ್ಥಗಳ ವಿವರಣಕ್ಕೂ ಅನುಗುಣ್ಯ ವೇನಿದೆ ಎಂದು ಚೋದ್ಯ ಮಾಡಬಾರದು. ದ್ವಯಾರ್ಥ ವಿವರಣವನ್ನು ಅಜ್ಞಾನಗಂಧಲೇಶವೂ ಇಲ್ಲದ ಆಳ್ವಾರವರು ಆಯಾಯಾ ಸಂದರ್ಭಗಳಲ್ಲಿ ದ್ವಯ ಮಂತ್ರದ ಪೂರ್ವೋತ್ತರ ಖಂಡಗಳಿಗೆ ಅನುಗುಣವಾಗಿಯೇ ತಿಳಿಸಿರುವುದರಿಂದ ಪರಸ್ಪರಾನುಗುಣ್ಯವಿದ್ದೇಇದೆ. ಈ ಪ್ರಕರಣದಲ್ಲಿ ವಿರೋಧಿ ನಿವರ್ತನ ಮಾತ್ರವು ಉಪಾಯ ಕೃತ್ಯ. ಸ್ವರೂಪಾವಿರ್ಭಾವವು ಸ್ವಾಭಾವಿಕಾನವಧಿ ಕಾತಿಶಯ ಕಾರುಣ್ಯ ಪರಿಣಾಮವಾದ ದಿವ್ಯ ದಂಪತಿಗಳ ಸಂಕಲ್ಪ ವಿಶೇಷಾಧೀನವಾದದ್ದು. ಆದ್ದರಿಂದ ಮೇಲೆ ನಿರೂಪಿಸಿದ ಸರ್ವವೂ ಉಪಪನ್ನವಾದದ್ದು.

ಮೇಲೆ ನಿರೂಪಿಸಿದ ಶ್ರೀ ಶಬ್ದಾರ್ಥವನ್ನು ಸಂಗ್ರಹಿಸುವುದಾದರೆ, ಶ್ರೀಯತೇ, ಶ್ರಯತೇ ಎಂಬ ವ್ಯುತ್ಪತ್ತಿಗಳಿಂದ, ಸಮಸ್ತ ಚೇತನಾ ಚೇತನಗಳಿಂದ ಆಶ್ರಯಿಸಲ್ಪಡುತ್ತಾಳೆ, ಸಮಸ್ತ ಚೇತನಾ ಚೇತನಗಳನ್ನು ತಾನೇ ಆಶ್ರಯಿಸಿದ್ದಾಳೆ. ಇದರಿಂದ ಧಾರಕತ್ವ ವ್ಯಾಪಕತ್ವಗಳೆರಡೂ ಪತಿಯ ಹಾಗೆ ಸಿದ್ಧ, ಇದರಿಂದ ಪರಾವರ ತತ್ವ ಯಾಥಾತ್ಮ್ಯ ಧೀ ವಿಕಾಸಕರತ್ವವು ಲಬ್ಧ. ಶೃಣೋತಿ, ಶ್ರಾವಯತಿ ಎಂಬ ಎರಡರಿಂದ ನಿತ್ಯಮಜ್ಞಾತನಿಗ್ರಹೆಯಾದ ಲೋಕಮಾತೆಯ ಪುರುಷಕಾರತ್ವವುಹೇಳಲ್ಪಟ್ಟು ಉಪಾಯ ವಿರೋಧಿಪಾಪ ನಿವರ್ತನತ್ವವನ್ನುತಿಳಿಸುತ್ತವೆ. ಅದರಿಂದಾಗಿ ಅನಿಷ್ಟಸಾಧನ ನಿವರ್ತನವೂ ಇಷ್ಟ ಸಾಧನ ಪ್ರಾಪಣವೂ ಲಕ್ಷ್ಮ್ಯಧೀನವೆಂಬುದು ಏರ್ಪಡುತ್ತದೆ. "ಶೃಣಾತಿ", ಶ್ರೀಣಾತಿ,' ಎಂಬ ವ್ಯುತ್ಪತ್ತಿಗಳಿಂದ ನಿರತಿಶಯ ಶ್ರೇಯೋರೂಪ ಮುಕ್ತೈಶ್ವರ್ಯಕ್ಕೆ ವಿರೋಧಿಗಳ ನಿರ್ಮೂಲನವೂ ಅಂದರೆ ಪ್ರಾಪ್ತಿ ವಿರೋಧಿ ನಿರಸನರೂಪ ಉಪಾಯಕತ್ವವೂ, ಸ್ವರೂಪೋಚಿತ ಪರಮಶೇಷಿ ಪರಿಪೂರ್ಣ ನಿತ್ಯ ಕೈಂಕರ್ಯ ಲಕ್ಷಣ ಪರಮ ಪುರುಷಾರ್ಥ ಪರಿವಾಹ ಪರ್ಯಂತ ಪರಿಪೂರ್ಣ ಬ್ರಹ್ಮಾನುಭವರೂಪ ಪರಿಪಾಕ ಪರಿಮಳಿತ ಸ್ವಾಭಾವಿಕ ಜ್ಞಾನ ವಿಕಾಸಾತ್ಮಕ ಮಂಗಲಮಹಿಮ ಹೇತುತ್ವವೂ ವಾಸ್ತವವಾದದ್ದು. ಎಂದು ಹೇಳಲ್ಪಟ್ಟಿತು. ಹೀಗೆ ಪರತತ್ವ, ಪರಮಹಿತ, ಪರಮ ಪುರುಷಾರ್ಥಗಳಲ್ಲಿ ಲಕ್ಷ್ಮಿಗೆ ಅಧೀನವಲ್ಲದುದು ಯಾವುದೂ ಇಲ್ಲವೆಂದು ತಿಳಿಸಲ್ಪಟ್ಟಿತು. ಹೀಗೆ ಒಪ್ಪದಿದ್ದರೆ ನಿರುಪಾಧಿಕ, ಅನವಧಿಕ ಮಂಗಳ ಪರ್ಯವಸನ್ನವಾದುದು, ಶ್ರೀ ಎಂಬ ಪದವೆಂಬುದೂ, ಅನವಧಿಕಾತಿಶಯ ಶ್ರೇಯೋರೂಪ ಮುಕ್ತಿ ಸಂಪತ್, 'ಶ್ರೀ' ಎಂಬುದೂ, ಪ್ರಮಾಣ ಶರಣರ ಗೋಷ್ಠಿಯಲ್ಲಿ ಹೇಳಲಿಕ್ಕಿಲ್ಲ. ಇವ್ವಭಿಪ್ರಾಯದಿಂದ, ಇವ್ವ್ಯುತ್ಪತ್ತಿಹಳಿಲ್ಲಾತ್ತಾಲುಮುಮ್– ಎಂದಾರಂಭಿಸಿ ಅಭಿಯುಕ್ತರ ಶ್ರೀ ಸೂಕ್ತಿಗಳನ್ನು ಪ್ರಮಾಣೀಕರಿಸುತ್ತಾರೆ. ಆದಾಗಿ ಮೇಲೆ ಹೇಳಿದ ಶ್ರೀ ಶಬ್ದದ ವ್ಯುತ್ಪತ್ತಿಗಳಿಲ್ಲದರಿಂದಲೂ, ಇರುವ ವೈಭವವನ್ನು ಕಣಿಶಿತ್ತು–ಪರ್ಯಾಲೋಚಿಸಿ, 1) ಶ್ರೀರಿತ್ಯೇವಚ ನಾಮತೇ ಭಗವತಿ, ಎಂದು ನಿನ್ನ ಮಹಿಮೆಯನ್ನು ಶ್ರೀ ಶಬ್ದದಿಂದ ಹೇಳುವುದು ವಿನಹ ಬೇರೆ ಹೇಗೆ

1) ಕಾಂತಸ್ತೇ ಪುರುಷೋತ್ತಮಃ ಫಣಿಪತಿಶ್ಶಯ್ಯಾಸನಂ ವಾಹನಂ
ವೇದಾತ್ಮಾ ವಿಹಗೇಶ್ವರೋ ಯವನಿಕಾ ಮಾಯಾ ಜಗನ್ಮೋಹಿನೀ ।
ಬ್ರಹ್ಮೇಶಾದಿ ಸುರವ್ರಜಸ್ಸದಯಿತಃ ತ್ವದ್ದಾಸದಾಸೀಗಣಃ
ಶ್ರೀರಿತ್ಯೇವಚ ನಾಮತೇ ಭಗವತೀ ಬ್ರೂಮಃ ಕಥಂ ತ್ವಾಂವಯಮ್ ॥ ಚತುಶ್ಶ್ಲೋಕಿ 1 ಪು.ತಿ.ನೋ.

**ವತಿ ಬ್ರೂಮಃ ಕಥಂ ತ್ವಾಂ ವಯಮ್' ಎನ್ರು ಆಳವಂದಾರ್ ಅರುಳಿಚ್ಚೆಯ್‌ದಾರ್. ಭಟ್ಟರುಮ್ ನಿರುಪಾಧಿಕಮಙ್ಗಳತ್ವತ್ತೈಯನಿನೈತ್ತು** 2) **'ಶ್ರೀರಸಿಯತಃ' ಎನ್ರಾರ್.**

**ಇವ್ವರ್ಥಙ್ಗಳಿಲೀಶ್ವರನುಡೈಯ ಉಪಾಯಭಾವತ್ತುಕ್ಕು ಉಪಯುಕ್ತಙ್ಗಳಾನವೈ ಪೂರ್ವಖಂಡತ್ತಿಲುಮ್, ಪ್ರಾಪ್ಯತ್ವಕ್ಕು ಉಪಯುಕ್ತಮಾನವೈ ಉತ್ತರಖಂಡತ್ತಿಲುಮ್ ಅನುಸಂಧೇಯಙ್ಗಳ್.**

**ಶ್ರೀ ವಿಶಿಷ್ಟಸ್ಯೈವೋಪಾಯೋಪೇಯತ್ವಂ ಚಾಹ**

**ಸ್ವಾಮ್ಯುಪಾಯ ಉಪೇಯಶ್ಚ ಸ್ವರೂಪಾದಿ ಸಮರ್ಪಣೇ ।**
**ಪ್ರಥಿತಃ ಪ್ರತಿಸಂಬಂಧೀ ಶ್ರೀಮಾನ್ನಿಗಮ ಚಕ್ಷುಷಾಮ್ ॥99॥**

---

ಹೇಳುವುದು ? ನಿನ್ನ ಮಹಿಮೆಯನ್ನು ಪೂರ್ಣವಾಗಿ ಹೇಳಲು ಅಶಕ್ಯ, ಪರಿಚ್ಛೇದಿಸಿ ಇಷ್ಟು ಎಂದು ಅಳತೆ ಮಾಡಿ ಹೇಳುವುದು ಅನುಚಿತ, ಎಂದು ಆಳವಂದಾರವರು ಅನುಗ್ರಹಿಸಿರುತ್ತಾರೆ. **ಭಟ್ಟರುಮ್** ಇತ್ಯಾದಿ ಪರಾಶರ ಭಟ್ಟರೂ ನಿರುಪಾಧಿಕ **ಮಂಗಳತ್ವವನ್ನು** ನೆನೆದು 2) **ಶ್ರೀರಸಿಯತಃ**– ಶ್ರೀ ಶಬ್ದ ವಾಚ್ಯೆಯಾಗಿದ್ದೀಯ ಎಂದು ಅನುಗ್ರಹಿಸಿರುತ್ತಾರೆ.

**ಇವ್ವರ್ಥಙ್ಗಳಿಲ್** ಇತ್ಯಾದಿ– ಈ ಅರ್ಥಗಳಲ್ಲಿ, ದ್ವಯಮಂತ್ರ ಪೂರ್ವ ಖಂಡದಲ್ಲಿ ಶ್ರೀ ಶಬ್ದದಿಂದ **ಈಶ್ವರನು**–ಶರಣ್ಯನು ಉಪಾಯವಾಗಿರಲು ಉಪಯುಕ್ತಗಳಾದ ಪುರುಷಕಾರತ್ವ, ಉಪಾಯತ್ವಗಳೂ, ಉತ್ತರ ಖಂಡದಲ್ಲಿ ಶ್ರೀ ಶಬ್ದದಿಂದ ಪ್ರಾಪ್ಯತ್ವಕ್ಕೆ ಉಪಯುಕ್ತಗಳಾದ ಉಭಯ ವಿಭೂತಿ **ಶೇಷಿತ್ವಾತಿಶಯಕರತ್ವಾದಿಗಳೂ** ಅನುಸಂಧೇಯಗಳು.

**ಶ್ರೀ ವಿಶಿಷ್ಟನೇ ಉಪಾಯ ಮತ್ತು ಉಪೇಯನು.**

ಏತಾದೃಶ ಮಹಿಮೆಯುಳ್ಳ 'ಶ್ರೀ' ಯೊಡನೆ ನಿತ್ಯ ಯೋಗವನ್ನುಳ್ಳ (ಸಂಬಂಧವನ್ನುಳ್ಳ) ಭಗವಂತನೇ ಸ್ವರೂಪ ಭರ ಫಲ ಸಮರ್ಪಣಗಳಲ್ಲಿ ಪ್ರತಿ ಸಂಬಂಧಿಯಾಗಿ ವೇದಾಂತಿಗಳಿಗೆ ಈ ದ್ವಯ ಮಂತ್ರದಲ್ಲಿ ಅನುಸಂಧೇಯನಾಗಿ ಪ್ರಸಿದ್ಧನಾಗಿದ್ದಾನೆಂದು **ಸ್ವಾಮ್ಯುಪಾಯ** ಎಂದಾರಂಭಿಸುವ ಕಾರಿಕೆಯಿಂದ ನಿರೂಪಿಸುತ್ತಾರೆ- ಆದಾಗಿ **ಸ್ವರೂಪಾದಿ ಸಮರ್ಪಣೇ**-ಸ್ವರೂಪ, ಭರ, ಫಲ **ಸಮರ್ಪಣ**ಗಳಲ್ಲಿ, **ಶ್ರೀ ವಿಶಿಷ್ಟನೇ** ಸ್ವರೂಪ ಸಮರ್ಪಣಕ್ಕೆ ಪ್ರತಿ ಸಂಬಂಧಿಯಾಗಿ **ಸ್ವಾಮೀ**–ಸ್ವಾಮಿಯು, ಶ್ರೀ ವಿಶಿಷ್ಟನೇ, ಭರ **ಸಮರ್ಪಣ**ದಲ್ಲಿ ಪ್ರತಿ ಸಂಬಂಧಿಯಾಗಿ **ಉಪಾಯವು**–ಉಪಾಯಭೂತನು, **ಚ**–ಮತ್ತು ಶ್ರೀ ವಿಶಿಷ್ಟನೇ ಫಲ ಸಮರ್ಪಣದಲ್ಲಿ ಪ್ರತಿಸಂಬಂಧಿಯಾಗಿ, **ಉಪೇಯ**–ಉಪೇಯನಾದವನು, ಅಂದರೆ ಸಮರ್ಪಣ ತ್ರಯದಲ್ಲಿಯೂ ಪ್ರತಿ ಸಂಬಂಧಿತ್ವವು ಶ್ರೀ ವಿಶಿಷ್ಟನಿಗೆ ವ್ಯಾಸಜವೃತ್ತಿಕವು. ಸ್ವರೂಪ ಸಮರ್ಪಣದಲ್ಲಿ ಸ್ವಾಮಿತ್ವವು ಇಬ್ಬರಲ್ಲಿಯೂ ವ್ಯಾಸಜ್ಯ ವೃತ್ತಿಯಿಂದ.

---

ಎಲೈ ತಾಯೇ ಪುರುಷೋತ್ತಮನು ನಿನಗೆ ವಲ್ಲಭನು. ಲೀಲಾ ವಿಭೂತಿ, ನಿತ್ಯ ವಿಭೂತಿಗಳೆರಡೂ ನಿನಗೂ ಅಧೀನವಾಗಿವೆ ಅಂತಹ ನಿನ್ನನ್ನು ನಾವು ಶ್ರೀಃ ಎಂಬ ಹೆಸರಿನಿಂದ ಕರೆಯುತ್ತೇವೆ. ಬೇರೆ ಹೇಗೆ ಹೇಳುವುದು,

2) ತವಸ್ಪರ್ಶಾದೀಶಂ ಸ್ಪೃಶತಿ ಕಮಲೇ ಮಂಗಳ ಪದಮ್
ತವೇದಂ ನೋಪಾಧೇರುಪನಿಪತಿತಂ ಶ್ರೀರಸಿಯತಃ! ।
ಪ್ರಸೂನಂ ಪುಷ್ಣಂತೀ ಮಪಿ ಪರಿಮಲರ್ಧಿಂ ಜಿಗದಿಷುಃ
ನಚೈವಂತ್ವಾದೇವಂ ಸ್ವದತ ಇತಿ ಕಶ್ಚಿತ್ ಕವಯತೇ ॥ ಶ್ರೀ ಗುಣರತ್ನಕೋಶ 19

ಎಲೈ ತಾಯೇ ನಿನ್ನ ಸಂಬಂಧದಿಂದಲೇ ಸ್ವಾಮಿಯಾದ ಭಗವಂತನನ್ನು ಮಂಗಳ ಶಬ್ದದಿಂದ ಕರೆಯುತ್ತೇವೆ. ನಿನಗೆ ಈ ಮಂಗಳತ್ವವು ಸ್ವತಃ ಸಿದ್ಧವು. ಕಾರಣವೇನೆಂದರೆ "ಶ್ರೀ" ಶಬ್ದ ವಾಚ್ಯೆಯಾಗಿದ್ದೀಯೆ,

**'ಶ್ರೀಮಾ'ನೆನ್ರು ಪೋದುವಿಲೇ ಶೊನ್ನಾಲುಮ್ ಪ್ರಮಾಣಾನುಸಾರತ್ತಾಲೇ ಇಙ್ಗು ಶ್ರಿಯಃಪತಿ ಯೆನ್ರಪಡಿ. ಸಾಮಾನ್ಯಮಾಹತ್ತೋತ್ತಿನ ಸಂಬಂಧಮ್ ಶ್ರುತಿಬಲತ್ತಾಲೇ ವಿಶೇಷಿತಮ್. ಸರ್ವರುಕ್ಕುಮ್ ಆಶ್ರಯಣೀಯೈಯಾಯ್ ಜಗನ್ಮಾತಾವಾನ ಇವಳುಕ್ಕು ಪತಿ ಎನ್ನವೇ ಪರತ್ವಮುಮ್, ಸೌಲಭ್ಯಮುಮ್ ತೋತ್ರುಮ್. ಇಙ್ಗು ಪಿರಾಟ್ಟಿಯೈ ವಿಶೇಷಿತ್ತಿಡುಕ್ಕೈಯಾಲೇ ನಾರಶಬ್ದಾರ್ಥಙ್ಗಳಾನ ವಸ್ತ್ವಂತರಙ್ಗಳಿಲ್ ಕಾಟ್ಟಿಲ್, ವ್ಯಾವೃತ್ತಿಯುಮ್, ವಿಶೇಷಣಮಾಹ ನಿರ್ದೇಶಿಕ್ಕೈಯಾಲೇ ಯಥಾಪ್ರಮಾಣಮ್ ಪತಿ ಪಾರಾರ್ಥ್ಯಮುಮ್ ಸೂಚಿತಮ್**

**ಇಹ ಮತುಪ್ ಪ್ರತ್ಯಯಾರ್ಥಃ**

**"ಭೂಮ ನಿಂದಾ ಪ್ರಶಂಸಾಸು ನಿತ್ಯಯೋಗೇ಼ತಿಶಾಯಿನೇ ।**
**ಸಂಸರ್ಗೇಽಸ್ತಿ ವಿವಕ್ಷಾಯಾಂ ಭವನ್ತಿ ಮತುಪಾದಯಃ ॥"**

---

ಕೂಡಿರುವುದು ಕಾರಣ. ಹಾಗೆಯೇ ಭರಸಮರ್ಪಣಕ್ಕೆ ಇಬ್ಬರೂ ಪ್ರತಿ ಸಂಬಂಧಿಗಳಾಗಿರುವುದಕ್ಕೆ(ಉದ್ದೇಶ್ಯಭೂತರು) ಸ್ವಾಮಿತ್ವ ವಿಶಿಷ್ಟ ಉಪಾಯತ್ವವು ಇಬ್ಬರಲ್ಲಿಯೂ ವ್ಯಾಸಜ್ಯ ವೃತ್ತಿಯಿಂದ ಕೂಡಿರುವುದು ನಿಮಿತ್ತ. ಫಲಸಮರ್ಪಣಕ್ಕೆ ಶ್ರೀ ವಿಶಿಷ್ಟನು ಪ್ರತಿಸಂಬಂಧಿಯಾಗಿರುವುದು ಸ್ವಾಮಿತ್ವ ಸಹಿತವಾದ ಉಪೇಯತ್ವ ನಿಬಂಧನ–ಕಾರಣ ಶ್ರೀಮಾನ್‌ನಿಗಮಚಕ್ಷುಷಾಮ್- ಆದಾಗಿ ಈ ಮೂರಕ್ಕೂ ಪ್ರತಿಸಂಬಂಧಿ ಶ್ರೀ ವಿಶಿಷ್ಟನೆಂಬುದು ವೇದಾಂತಿಗಳಲ್ಲಿ ಪ್ರಸಿದ್ಧವಾದದ್ದು.

ಅನಂತರ ಶ್ರೀ ಶಬ್ದದ ಮೇಲೆ ಬಂದಿರುವ "ಮತುಪ್" ಪ್ರತ್ಯಯಕ್ಕೆ ನಿತ್ಯಯೋಗ, ಅತಿಶಯ, ಸಂಬಂಧ ಅಸ್ತಿತ್ವ ಇತ್ಯಾದಿ ಅನೇಕಾರ್ಥಗಳಿದ್ದರೂ "ಪತಿಂ ವಿಶ್ವಸ್ಯ" ಎಂಬ ಪ್ರಮಾಣಾನುಸಾರದಿಂದ ಇಂಗು–ದ್ವಯ ಮಂತ್ರದಲ್ಲಿ, ಪತಿತ್ವ ಬೋಧಕ ಸಂಬಂಧದಿಂದ ಶ್ರಿಯಃ ಪತಿ ಎಂದು **ಅರ್ಥ. ಸಾಮಾನ್ಯಮಾಹ** ಇತ್ಯಾದಿ ಸಾಮಾನ್ಯವಾಗಿ **ತೋಚುವ** ದಂಪತಿ ಭಾವವನ್ನು ತಿಳಿಸುವ ದಿವ್ಯ ವಿಗ್ರಹಗಳಿಗೆ ಶೇಷ ಶೇಷಿ ಭಾವ ಸಂಬಂಧವು "ಅಸ್ಯೇಶಾನಾ ಜಗತೋ ವಿಷ್ಣು ಪತ್ನೀ", ಇತ್ಯಾದಿ ಶ್ರುತಿಯಿಂದ ವಿಶೇಷಿತವು.

ಅನ್ಯೋನ್ಯೇನಾ ವಿನಾಭಾವಾತ್, ಅನ್ಯೋನ್ಯೇನ ಸಮನ್ವಯಾತ್ ।
ತಾದರ್ಥ್ಯಂ ವಿದ್ಧಿ ಸಂಬಂಧಂ ಮಮನಾಥಸ್ಯಚೋಭಯೋಃ ॥

ಎಂಬ ವಚನದಿಂದ, ಈ ಎರಡು ವಿಧವಾದ ಸಂಬಂಧವು ವಿವಕ್ಷಿತ. ಆದಾಗಿ "ಅನ್ಯೋನ್ಯೇನಾವಿನಾಭಾವಾತ್" ಎಂದು ದಿವ್ಯಾತ್ಮ ಸ್ವರೂಪಗಳಿಗೆ ಅಪೃಥಕ್ ಸಿದ್ಧ ಶೇಷ ಶೇಷಿ ಭಾವವು, ಲಕ್ಷ್ಮೀ ತಂತ್ರದಲ್ಲಿ ಹೇಳಲ್ಪಟ್ಟಿದೆ. ಇದಕ್ಕೆ ಸಮಾನಾರ್ಥವಾಗಿ, "ಯತೋಹಮಾಶ್ರಯಶ್ಚಾಸ್ಯಾ ಮೂರ್ತಿರ್ಮಮ ತದಾತ್ಮಿಕಾ" ಎಂಬ ಸಾತ್ವತ ವಚನವು ತತ್ವ ಟೀಕೆಯಲ್ಲಿ ಉದಾಹರಿಸಲ್ಪಟ್ಟು, ದಿವ್ಯ ಸ್ವರೂಪಗಳೂ, ದಿವ್ಯ ವಿಗ್ರಹಗಳೂ ಪರಸ್ಪರ ಶೇಷ ಶೇಷಿ ಭಾವದಿಂದ, ಅಪೃಥಕ್ ಸಿದ್ಧ ವಿಶೇಷಣ ವಿಶಿಷ್ಟಗಳಾಗಿವೆ ಎಂದು ವಿವಕ್ಷಿಸಲ್ಪಟ್ಟಿದೆ. **ಸರ್ವರುಕ್ಕುಮ್ ಆಶ್ರಯಣೀಯೈಯಾಯ್** ಇತ್ಯಾದಿ–ಸರ್ವರಿಗೂ ಆಶ್ರಯಣೀಯೆಯಾದ ಲಕ್ಷ್ಮಿಗೆ ಪತಿ ಎಂದು ಹೇಳಿರುವುದರಿಂದ ಪರತ್ವವೂ, ಜಗನ್ಮಾತೆಯಾದ ಲಕ್ಷ್ಮಿಗೆ ಪತಿ ಎಂಬ ಆಕಾರದಲ್ಲಿ ಸೌಲಭ್ಯವೂ ಸಿದ್ಧಿಸುತ್ತದೆ. ನಾರ ಶಬ್ದದಲ್ಲಿ ಲಕ್ಷ್ಮಿಯು ಹೇಳಲ್ಪಟ್ಟಿರುವಾಗ ಇಂಗು **ಪಿರಾಟ್ಟಿಯೈ ವಿಶೇಷಿತ್ತು** ಇತ್ಯಾದಿ– ಈ ದ್ವಯ ಮಂತ್ರದಲ್ಲಿ ಲಕ್ಷ್ಮಿಯನ್ನು ವಿಶೇಷಣವಾಗಿ ಹೇಳಿರುವುದರಿಂದ, ವಸ್ತ್ವಂತರಗಳಿಗಿಂತ ವ್ಯಾವರ್ತಿಯೂ ಪತಿಪಾರಾರ್ಥ್ಯವೂ ಯಥಾ ಪ್ರಮಾಣ ಸೂಚಿತವು."ಅನನ್ಯಾರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ"ಎಂಬುದು ಆ ಪ್ರಮಾಣ.ಇಲ್ಲಿ ಭಾಸ್ಕರನಿಗೂ ಅವನ ಪ್ರಭೆಗೂ ಇರುವ ಧರ್ಮಿತ್ವ ಧರ್ಮತ್ವಗಳ ಹಾಗೆಶ್ರೀ ರಾಮಚಂದ್ರನಿಗೂ ಸೀತೆಗೂ,ಧರ್ಮಿತ್ವಧರ್ಮತ್ವಗಳೂ **ಸೂಚಿತ.**

**ಮತುಪ್ ಪ್ರತ್ಯಯದ ಅರ್ಥ.**

**ಭೂಮ** ನಿಂದಾ **ಪ್ರಶಂಸಾಸು** ಇತ್ಯಾದಿ–"ಮತುಪ್" ಪ್ರತ್ಯಯಕ್ಕೆ ಅನೇಕಾರ್ಥಗಳು ಇದ್ದರೂ "ಮತುಪ್"

ಎನ್ರು ಅನೇಕಾರ್ಥವಾಯಿರುನ್ದ ದೇಯಾಹಿಲುಮ್ ಇಙ್ಗು 'ಮತುಪ್' ಉಪಯೋಗವಿಶೇಷತ್ತಾಲೇಪ್ರಮಾಣ ಸಿದ್ಧಮಾನ ನಿತ್ಯಯೋಗತ್ತೈಚ್ಚೊಲ್ಲುಹಿರದು.

ವಿಗ್ರಹತ್ತಿಲ್ ಬ್ರಹ್ಮಚರ್ಯಾವಸ್ಥೈಯಿಲುಮುಳ್ಳಪಡಿ 1) ಕೃಷ್ಣಾಜಿನೇನ ಸಂವೃಣ್ವನ್ ವಧೂಂ ವಕ್ಷಸ್ಥಲಾಲಯಾಮ್" ಎನ್ನುಮಾಪಡಿಯಿರೇ ನಿತ್ಯಯೋಗಮಿರುಪ್ಪದು.

ಅಪೃಥಕ್ಸಿದ್ಧವಸ್ತುವುಕ್ಕು "ಶ್ರೀಮಾ"ನೆನ್ರು ಮತ್ವರ್ಥೀಯ ಪ್ರತ್ಯಯಂ ಸಾಪೇಕ್ಷಮಾಹ ಸಾಮಾನಾಧಿಕರಣ್ಯಮ್ ಕೂಡುಮೋವೆನ್ರುಮ್, ಪೃಥಕ್ಸಿದ್ಧ ಮಾಹಿಲ್ 1) "ಕೀರ್ತಿಶ್ಶ್ರೀರ್ವಾಕ್ಚ ನಾರೀಣಾಮ್"

---

ಪ್ರತ್ಯಯವು ಉಪಯೋಗ ವಿಶೇಷತ್ತಾಲೇ-ಪುರುಷಕಾರಾದಿ ಉಪಯೋಗವಿಶೇಷದಿಂದ, "ಲಕ್ಷ್ಮೀಮನಪಗಾಮಿನೀಂ" ವಿಷ್ಣೋಶ್ರೀ ರನಪಾಯಿನೀ, ಇತ್ಯಾದಿ ಪ್ರಮಾಣ ಸಿದ್ಧವಾದ ನಿತ್ಯ ಯೋಗವನ್ನು ಹೇಳುತ್ತದೆ. ಅನೇಕಾರ್ಥಗಳಾವುವು ಎಂದರೆ 1) ಭೂಮಾರ್ಥ-ಪಶುಮಾನ್, ಧನವಾನ್ ಎಂದು ಬಹಳ ಹಸುಗಳನ್ನುಳ್ಳವನೂ, ಬಹಳ ಧನವನ್ನುಳ್ಳವನೂ ವಿವಕ್ಷಿತ. ನಿಂದೆ-ಅಲ್ಪಾಯುಷ್ಯನನ್ನು ನಿಂದಿಸುವಾಗ "ಮಹದಿದಂ ಕೌಶಲಂ ಆಯುಷ್ಮತಃ", ಎಂದು ಪ್ರಯೋಗ. ಪ್ರಶಂಸೆಯಲ್ಲಿ "ಬುದ್ಧಿಮಾನ್" "ನೀತಿಮಾನ್", ಎಂದು ಪ್ರಯೋಗ. ನಿತ್ಯಯೋಗ-ಪ್ರಭಾವಾನ್, ಕೃಷ್ಣ ಸರ್ಪವಾನ್ ವಲ್ಮೀಕಃ, ಎಂಬ ಉದಾಹರಣೆಗಳು. ಅತಿಶಯಾರ್ಥದಲ್ಲಿ-ಶಕ್ತಿಮಾನ್, ವೀರ್ಯವಾನ್ ಎಂಬ ಉದಾಹರಣೆಗಳು. ಸಂಸರ್ಗ-ಸಂಪರ್ಕ, ಸ್ಫಟಿಕಃ ಲೌಹಿತ್ಯವಾನ್, ಎಂಬುದು ಉದಾಹರಣೆ. ಅಸ್ತಿ ವಿವಕ್ಷೆಗೆ ಉದಾಹರಣೆ, ಭೂತಲಂ ಘಟವತ್-ಭೂತಲದಲ್ಲಿ ಘಟವಿದೆ. ಪರ್ವತೋವಹ್ನಿಮಾನ್ ಎಂಬುವು-

ವಿಗ್ರಹತ್ತಿಲ್ ಬ್ರಹ್ಮಚರ್ಯಾವಸ್ಥೆಯುಮುಳ್ಪಡಿ ಇತ್ಯಾದಿ- ಈ ನಿತ್ಯ ಯೋಗವು-ನಿತ್ಯ ಸಂಬಂಧವು ಭಗವಂತನ ವಿಗ್ರಹದಲ್ಲಿ ವಿಶೇಷಣ ವಿಶಿಷ್ಟವಾಗಿದೆ. ಬಲಿಯ ಹತ್ತಿರ ಮೂರಡಿ ಭೂಮಿಯನ್ನು ಯಾಚಿಸಲು ಬ್ರಹ್ಮಚಾರಿಯ ಹಾಗೆ ವೇಷವನ್ನು ಹಾಕಿಕೊಂಡು ಹೋದ ಭಗವಂತನ ವಿಗ್ರಹದಲ್ಲೂ ವಕ್ಷಸ್ಥಲದಲ್ಲಿ ಲಕ್ಷ್ಮಿಯು ಇದ್ದಳು. ಆಗ 1) ಕೃಷ್ಣಾಜಿನೇನ ಸಂವೃಣ್ವನ್ ಎಂದು ತನ್ನ ವಕ್ಷಸ್ಥಲದಲ್ಲಿದ್ದ ಲಕ್ಷ್ಮಿಯನ್ನು ಕೃಷ್ಣಾಜನದಿಂದ ಮರೆಸಿಕೊಂಡು ಬಲಿಯ ಹತ್ತಿರಕ್ಕೆ ಹೋದನು, ಎಂದು ಹೇಳಿರುವುದರಿಂದ ಆ ಅವತಾರದಲ್ಲಿಯೂ ಸೇರಿ, ಎಲ್ಲಾ ಅವತಾರಗಳಲ್ಲಿಯೂ, ಭಗವಂತನಿಗೆ ಲಕ್ಷ್ಮಿಯ ನಿತ್ಯ ಯೋಗವು ಹೇಳಲ್ಪಡುತ್ತದೆ, ಎಂದು ತಾತ್ಪರ್ಯ. ಈ ಅಪೃಥಕ್ ಸಿದ್ಧ ಶೇಷ ಶೇಷಿ ಭಾವವು ದಿವ್ಯಾತ್ಮ ಸ್ವರೂಪದಲ್ಲಿಯೂ, "ವ್ಯಾಪಕಾವತಿ ಸಂಶ್ಲೇಷಾದೇಕ ತತ್ವಮಿವೋದಿತೌ" ಎಂಬ ಪ್ರಮಾಣಾನುಸಾರ ಇದೆ.

### ನಿತ್ಯಯೋಗ ವಿಷಯವಾದ ಚೋದ್ಯಗಳು ಮತ್ತು ಅವುಗಳಿಗೆ ಪರಿಹಾರಗಳು

**ಅಪೃಥಕ್ ಸಿದ್ಧ ವಸ್ತುವುಕ್ಕು ಇತ್ಯಾದಿ**-ಲಕ್ಷ್ಮಿಯು ಭಗವಂತನಿಗೆ ಅಪೃಥಕ್ ಸಿದ್ಧ ವಿಶೇಷಣಳಾದ್ದರಿ 'ಶ್ರೀಮಾನ್'. ಎಂಬಲ್ಲಿ ಮತ್ವರ್ಥೀಯ ಪ್ರತ್ಯಯ ಸಾಪೇಕ್ಷವಾದ ಪ್ರಯೋಗವು ಕೂಡದು. ಪೃಥಕ್ ಸಿದ್ಧ ವಿಶೇಷಣಳಾದರೆ ಗೀತೆಯಲ್ಲಿ 1) ಕೀರ್ತಿಃ, ಶ್ರೀಃ, ಎಂದು ಭಗವಂತನು ಕೀರ್ತಿ ಶಬ್ದವಾಚ್ಯನು, ಶ್ರೀಯೂ ಅವನೇ

---

1) ಮೃತ್ಯುಸ್ಸರ್ವಹರಶ್ಚಾಹಂ ಉದ್ಭವಶ್ಚ ಭವಿಷ್ಯತಾಮ್
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿ ರ್ಮೇಧಾ ಧೃತಿ ಕ್ಷಮಾ । (ಗೀತೆ 10-34)

ಸರ್ವರನ್ನೂ ಸಂಹಾರ ಮಾಡುವ ಯಮನೂ ನಾನೇ.ಉದ್ಭವಿಸುವವರಿಗೆ ಉದ್ಭವವೆಂಬ ಕರ್ಮವು ನಾನೇ.ನನ್ನ ಅಧೀನವೆಂದರ್ಥ. ಲಕ್ಷ್ಮಿಯೂ ನಾನೆ, ಸ್ತ್ರೀಗಳಿಗೆ ಕೀರ್ತಿಯೂ ನಾನೇ. ನಾರಿಗಳ ವಾಕ್, ಸ್ಮೃತಿ, ಬುದ್ಧಿ, ಧೈರ್ಯ,ಕ್ಷಮೆಯೂ ನಾನೇ. ಸ್ತ್ರೀಗಳಲ್ಲಿರುವ ಈ ಗುಣಗಳೆಲ್ಲಾ ಭಗವಂತನ ಅಸಾಧಾರಣ ಶಕ್ತಿಗಳು.

**2) "ಪೂವಿಲ್‌ವಾೞ್‌ಮಹಳಾಯ್" ಎನ್ಱುವದ್, ಮತ್ವರ್ಥೀಯ ಪ್ರತ್ಯಯ ನಿರಪೇಕ್ಷಮಾಹ, ಸಾಮಾನಾಧಿಕರಣ್ಯಮ್ ಕೂಡವೋ ? ಎನ್ಱುವದ್ ಶಿಲರ್ ಶೊಲ್ಲುಂ ಚೋದ್ಯಙ್ಗಳ್ ಇರಣ್ಡುಮ್ ಮಂದಙ್ಗಳ್.**

**ಎಙ್ಗನೇ ಎನ್ನಿಲ್ 1) "ತದ್ಗುಣಸಾರತ್ವಾತ್ತದ್ವ್ಯಪದೇಶಃ ಪ್ರಾಜ್ಞವತ್" ಎನ್ಗಿಱ ನ್ಯಾಯತ್ತಾಲೇ ಜ್ಞಾನಗುಣತ್ತೈ ಇಟ್ಟು ಆತ್ಮಾವೈ ಜ್ಞಾನಮೆನ್ಱು ಶೊಲ್ಲಲಾಯಿರುಕ್ಕಚ್ಚೆಯ್‌ದೇ, ಜ್ಞಾನವಾನ್, ಎನ್ಱು ಮತ್ವರ್ಥೀಯ ಪ್ರತ್ಯಯಾನ್ವಿತಮಾಹವುಮ್ ಸಾಮಾನಾಧಿಕರಣ್ಯ ಮುಣ್ಡಾಹಿರಾಪ್ಪೋಲೇ, ಇಙ್ಗುಮ್**

---

ಎಂಬಂತೆ ಸಾಮಾನಾಧಿಕರಣ್ಯ ಪ್ರಯೋಗವು ಮತ್ವರ್ಥೀಯ ಪ್ರತ್ಯಯ ನಿರಪೇಕ್ಷವಾಗಿ ಹೇಳಿರುವುದೂ, 2) "ಪೂವಿಲ್ ವಾೞ್‌ಮಹಳಾಯ್ – ಪಂಕಜವಾಸಿನಿಯಾದ ಲಕ್ಷ್ಮಿಯೂ ತಾನೇ (ಭಗವಂತನೇ), ಎಂಬ ಪ್ರಯೋಗಗಳೂ ಹೇಗೆ ಸಂಗತಗಳು ಎಂದು ಕೆಲವರು ಮಾಡುವ ಚೋದ್ಯಗಳೆರಡೂ ಬಲ್ಪಜವಾದವುಗಳು.

ಎಂಗನೇಯೆನ್ನಿಲ್– ಹೇಗೆಂದರೆ, 1) **ತದ್ಗುಣಸಾರತ್ವಾತ್** ಇತ್ಯಾದಿ– **ತದ್ಗುಣ**- ಜ್ಞಾನ ಗುಣಸಾರಃ ಯಸ್ಯ ತತ್ವಾತ್ ಎಂದು ವಿಗ್ರಹ ಜ್ಞಾನವೆಂಬ ಗುಣವು ಸಾರವಾಗಿರುವುದರಿಂದ, **ತದ್ವ್ಯಪದೇಶಃ**– ವಿಜ್ಞಾನಂ ಯಜ್ಞಂತನುತೇ' ಎಂಬಲ್ಲಿ ಜೀವನನ್ನು 'ವಿಜ್ಞಾತಾ' ಜ್ಞಾನವುಳ್ಳವನು ಎಂದು ಹೇಳದೆ, ವಿಜ್ಞಾನಂ – ಜ್ಞಾನಂ ಎಂದು ಹೇಳಿರುತ್ತಾರೆ. **ಪ್ರಾಜ್ಞವತ್**–ಪ್ರಾಜ್ಞನಾದ ಸರ್ವೇಶ್ವರನು, ಸಾರ ಭೂತವಾದ ಆನಂದ ಗುಣದಿಂದ ಕೂಡಿರುವಾಗ, ಶ್ರುತಿಯು "ಯದೇಷ ಆಕಾಶಃ ಆನಂದೋ ನ ಸ್ಯಾತ್" ಎಂದು ಆನಂದನೆಂದು ಅವನನ್ನು ವ್ಯವಹರಿಸುವಂತೆ. ಇದೂ ಸಹ, ಎಂದು ಸೂತ್ರಾರ್ಥ. **ಎನ್ಗಿಱನ್ಯಾಯತ್ತಾಲೇ**–ಎಂಬ ನ್ಯಾಯದಂತೆ, **ಜ್ಞಾನ, ಗುಣತ್ತೈಯಿಟ್ಟು** ಇತ್ಯಾದಿ- ಜ್ಞಾನ ಗುಣವನ್ನು ಇಟ್ಟುಕೊಂಡು ಆತ್ಮಾವನ್ನು ಜ್ಞಾನವೆಂದು ಹೇಳಬಹುದಾಗಿದ್ದರೂ, "**ಜ್ಞಾನವಾನ್**' ಎಂದು ಮತ್ವರ್ಥೀಯ ಪ್ರತ್ಯಯ ದಿಂದ **ಕೂಡಿಯೂ**, ಸಾಮಾನಾಧಿಕರಣ್ಯ ಪ್ರಯೋಗವು ಏರ್ಪಡುವಂತೆ, ಇಲ್ಲಿಯೂ ಅಪೃಥಕ್ ಸಿದ್ಧ ವಿಶೇಷಣಳಾದ ಶ್ರೀಯನ್ನು, ಕೀರ್ತಿಃ ಶ್ರೀರ್ವಾಕ್ಚ ಇತ್ಯಾದಿಯಾಗಿ ನಿರ್ದೇಶಿಸಿದೆ. ಅಪೃಥಕ್ ಸಿದ್ಧ ವಿಶೇಷಣವಾಗಿದ್ದರೆ ಮತ್ವರ್ಥೀಯ ಪ್ರತ್ಯಯ ನಿರಪೇಕ್ಷ ಸಾಮಾನಾಧಿಕರಣ್ಯವು ಬರಲಿಕ್ಕಿಲ್ಲ ಎಂಬ ನಿಯಮವಿಲ್ಲ. ಆದ್ದರಿಂದ ಜ್ಞಾನವಾನ್, ಜ್ಞಾನಂ ಎಂದು ಆತ್ಮಾವನ್ನು ವ್ಯವಹರಿಸುವಂತೆ ಇಲ್ಲಿಯೂ "ಶ್ರೀಮಾನ್, ಶ್ರೀಃ" ಎಂದು ವ್ಯವಹರಿಸುವುದಕ್ಕೆ ಆಕ್ಷೇಪವಿಲ್ಲವೆಂದು ತಾತ್ಪರ್ಯ.

ಮತುಪ್ ಪ್ರತ್ಯಯವನ್ನು ಪ್ರಯೋಗಿಸಿರುವುದರ ಸಾರಾಂಶವೇನೆಂದರೆ, ಮತುಪ್ ಪ್ರತ್ಯಯಕ್ಕೆ ಪತಿತ್ವ ನಿತ್ಯಯೋಗ, ಎಂಬ ಎರಡು ಅರ್ಥಗಳುಂಟು. ಇಲ್ಲಿ ಏಕ ಪ್ರಯೋಗದಲ್ಲಿ ಎರಡು ಅರ್ಥಗಳನ್ನೂ ಹೇಗೆ ಅನುಸಂಧಾನ ಮಾಡುವುದೆಂದರೆ, ಎರಡು ಅರ್ಥಗಳಿಗೂ ಉಪಯೋಗ ವಿಶೇಷವಿದ್ದರೂ, ಪತಿತ್ವವೆಂಬ ಶೇಷ ಶೇಷಿ ಭಾವವು ಅನುಸಂಧೇಯ. ಅದು ಸಿದ್ಧವಾಗಿ ಅಪೃಥಕ್ ಸಿದ್ಧಿ ಪರ್ಯಂತವಾದುದೆಂದೂ ಅನುಸಂಧೇಯ. ಈ ಅಪೃಥಕ್ ಸಿದ್ಧತ್ವವು ಲಕ್ಷ್ಮೀನಾರಾಯಣರಿಬ್ಬರ ದಿವ್ಯಾತ್ಮ ಸ್ವರೂಪಗಳಿಗೂ ದಿವ್ಯ ಮಂಗಳ ವಿಗ್ರಹಗಳಿಗೂ ಪ್ರಮಾಣ ಸಿದ್ಧವು. ಅಂದರೆ ಭಗವಂತನ ದಿವ್ಯಾತ್ಮ ಸ್ವರೂಪವು ಲಕ್ಷ್ಮಿಯ ದಿವ್ಯಾತ್ಮ ಸ್ವರೂಪದಿಂದ ವಿಶೇಷಿತವಾಗಿ ಪೃಥಕ್‌ಸ್ಥಿತ್ಯನರ್ಹವಾಗಿದೆ ಹಾಗೆಯೇ ಭಗವಂತನ ದಿವ್ಯ ಮಂಗಳ ವಿಗ್ರಹದಲ್ಲಿ–ಎದೆಯಲ್ಲಿ, ಲಕ್ಷ್ಮಿಯ ದಿವ್ಯ ಮಂಗಳ ವಿಗ್ರಹವು ಪೃಥಕ್‌ಸ್ಥಿತ್ಯನರ್ಹವಾಗಿ ಕೂಡಿದೆ. ಭಗವಂತನ ದಿವ್ಯಾತ್ಮ ಸ್ವರೂಪಗತವಾದ ಸರ್ವ ಶೇಷಿತ್ವವು "ಪತಿಂವಿಶ್ವಸ್ಯ" ಎಂಬ ಶ್ರುತ್ಯುಕ್ತವಾದದ್ದು. "ಹ್ರೀಶ್ಚತೇ ಲಕ್ಷ್ಮೀಶ್ಚಪತ್ನ್ಯೌ" ಎಂಬ ಶ್ರುತಿ ಪ್ರಮಾಣಾ

---

2) ಮೂವುಲಹಂಗಳು ಮಾಯ್ ಅಲ್ಲನಾಯ್ ಉಹಪ್ಪಾಯ್ ಮುನಿವಾಯ್
ಪೂವಿಲ್‌ವಾೞ್‌ಮಹಳಾಯ್ ತವ್ವೈಯಾಯ್ ಪುಹೞಾಯ್ ಪೞಿಯಾಯ್ ।
ತೇವರ್ ಮೇವಿತ್ತೊೞುಮ್ ತಿರುವಣ್ಣಗರ್ ಶೇರ್‌ನ್ದ ಪಿರಾನ್
ಪಾವಿಯೇನ್ ಮನತ್ತೇ ಉಱೈಹಿನ್ಱ ಪರಂ ಜುಡರೇ ॥

ತಿರುವಾಯ್‌ಮೊೞಿ 6-3-6

**ಕುರೈಯಿಲ್ಲೈ. ಆಹೈಯಾಲ್ ಮತ್ವರ್ಥೀಯ ಪ್ರತ್ಯಯಮಾತ್ರತ್ತೈಕ್ಕೊಂಡು ಪೃಥಕ್ಸಿದ್ಧನೆನ್ರು ನಿಶ್ಚಯಿಕ್ಕಪ್ಪೋಹಾದು. "ನರಪತಿರೀವ ಸರ್ವೇಲೋಕಾಃ" ಇತ್ಯಾದಿಹಳಿಲ್‌ಪೋಲೇ ವಿವಕ್ಷಾಂತರಮ್ ಸಂಭಾವಿತಮಾನ ವಿಡತ್ತಿಲ್ ಇಪ್ಪ್ರತ್ಯಯಮಿಲ್ಲಾದ ಸಾಮಾನಾಧಿಕರಣ್ಯಮಾತ್ರತ್ತೈಕ್ಕೊಣ್ಡು ಪೃಥಕ್ಸಿದ್ಧಮನ್ರೆನ್ರವುಮೊಣ್ಣಾದು. ಆನಪಿನ್ಪು ವಿಶದಮಾಹ ಪ್ರತಿಪಾದಿಕ್ಕುಮ್ ಪ್ರಮಾಣಾನ್ತರಂಗಳೈಕ್ಕೊಂಡು, ಇವ್ವಸ್ತುಸ್ಥಿತಿ ಇರುಕ್ಕುಮ್ಪಡಿ ತೆಳಿಯಪ್ಪ್ರಾಪ್ತಮ್.**

**ಶ್ರಿಯಃ ನಿತ್ಯಯೋಗೇ ಪ್ರಮಾಣಾನಿ**

**ಇಙ್ಗು ಉಪಾಯದಶೈಯಿಲುಮ್, ಫಲದಶೈಯಿಲುಮ್ ಪ್ರಮಾಣಙ್ಗಳ್ ನಿತ್ಯಯೋಗತ್ತೈಚ್ಚೊಲ್ಲು**

---

ನುಸಾರ ಲಕ್ಷ್ಮಿಗೆ ಪತಿಯೆಂಬುದು ವಿಶೇಷಿತವು. ಇದು **ಶ್ರೀಮಾನ್ ಎನ್ರುಪೋದುಮಿಲೇ ಶೊನ್ನಾಲುಮ್, ಪ್ರಮಾಣಾನುಸಾರತ್ತಾಲೇ ಇಂಗು ಶ್ರಿಯಃಪತಿ ಎನ್ನಪಡಿ"** ಎಂಬ ಪ್ರಥಮ ವಾಕ್ಯ ದಿಂದ ತಿಳಿಸಲ್ಪಟ್ಟಿದೆ. ಅಂದರೆ ಪತ್ನೀ ಎಂಬ ಆಕಾರಕ್ಕೆ ಪ್ರತಿ ಸಂಬಂಧಿಯಾದ್ದರಿಂದ ಏರ್ಪಡುವ ಪತಿತ್ವಕ್ಕಿಂತ ವಿಶ್ವಸ್ಯಪತಿ, ಎಂಬ ಸಾಮಾನ್ಯಾಕಾರವಾಗಿ ಶೇಷಿತ್ವರೂಪ ಪತಿತ್ವವೂ ಪ್ರಾಮಾಣಿಕವಾದದ್ದು. **'ಸಾಮಾನ್ಯ ಮಾಹತ್ತೋತ್ತಿನ ಸಂಬಂಧಮ್ ಶ್ರುತಿಬಲತ್ತಾಲೇ ವಿಶೇಷಿತಮ್,** ಎಂಬ ಎರಡನೆಯ ವಾಕ್ಯದಿಂದ ದಂಪತಿ ಭಾವ ವ್ಯಂಜಕವಾದ ದಿವ್ಯ ವಿಗ್ರಹಗಳಿಗೆ ಪರಸ್ಪರ ಶೇಷ ಶೇಷಿ ಭಾವವು **"ಅಸ್ಯೇಶಾನಾ ಜಗತೋವಿಷ್ಣು ಪತ್ನೀ"** ಇತ್ಯಾದಿ ಶ್ರುತಿಯಿಂದ ವಿಶೇಷಿತವು. **"ಅನ್ಯೋನ್ಯೇನಾವಿನಾಭಾವಾತ್, ಅನ್ಯೋನ್ಯೇನ ಸಮನ್ವಯಾತ್ । ತಾದಾರ್ಥ್ಯಂ ವಿದ್ಧಿ ಸಂಬಂಧಂ ಮಮನಾಥಸ್ಯ ಚೋಭಯೋಃ"** ಎಂದು ಹಿಂದೆಯೇ ಹೇಳಿದಂತೆ, "ಅನ್ಯೋನೇನಾವಿನಾಭಾವಾತ್ - ಪರಸ್ಪರ ಅವಿನಾಭಾವವು ಬೇರೆ ಬೇರೆಯಾಗಿರದೆ ಒಬ್ಬರೊಡನೆ ಮತ್ತೊಬ್ಬರು ಕೂಡಿರುವುದು, ಸ್ವರೂಪಗತವಾದ ಶೇಷ ಶೇಷಿ ಭಾವ. "ಅನೋನ್ಯೇನ ಸಮನ್ವಯಾತ್, ಎಂಬುದು ದಿವ್ಯ ವಿಗ್ರಹಗಳಿಗೆ ಅಪೃಥಕ್ ಸಿದ್ಧವಾದ ಶೇಷ ಶೇಷಿ ಭಾವ. "ಯತೋಹಮಾಶ್ರಯಶ್ಚಾಸ್ಯಾಃ ಮೂರ್ತಿ ರ್ಮಮ ತದಾತ್ಮಿಕಾ" ಎಂಬ ಸಾತ್ವತ ಸಂಹಿತಾ ವಚನದ ಪ್ರಕಾರ ಇದೇ ಅರ್ಥವು ಪ್ರತಿಪಾದಿಸಲ್ಪಡುತ್ತದೆ. "ಯತೋಹಮಾಶ್ರಯಶ್ಚಾಸ್ಯಾಃ" ಎಂಬುದು ಅಪೃಥಕ್ ಸಿದ್ಧವಾದ ಸ್ವರೂಪಗತ ಶೇಷ ಶೇಷಿ ಭಾವ. "ಮೂರ್ತಿರ್ಮಮ ತದಾತ್ಮಿಕಾ' ಎಂಬುದು ವಿಗ್ರಹ ಗತವಾದ ಅಪೃಥಕ್ ಸಿದ್ಧ ಶೇಷ ಶೇಷಿ ಭಾವ.

ಮತುಪ್ ಪ್ರತ್ಯಯಕ್ಕೆ ನಿತ್ಯಯೋಗವನ್ನು ಹೇಳುವುದು ಎರಡನೆಯ ಯೋಜನೆ. ಈ ನಿತ್ಯಯೋಗವು ದಿವ್ಯಾತ್ಮ ಸ್ವರೂಪಗಳಲ್ಲಿಯೂ, ದಿವ್ಯ ಮಂಗಳ ವಿಗ್ರಹಗಳಲ್ಲಿಯೂ ಇದೆ.

**ಆಹೈಯಾಲೇ ಮತ್ವರ್ಥೀಯ ಪ್ರತ್ಯಯ ಮಾತ್ರತ್ತೈಕ್ಕೊಂಡು** ಇತ್ಯಾದಿ- ಆದ್ದರಿಂದ ಮತ್ವರ್ಥವನ್ನು ಹೇಳುವ ಪ್ರತ್ಯಯವನ್ನು ಮಾತ್ರ ಅಂಗೀಕರಿಸಿ ಲಕ್ಷ್ಮೀನಾರಾಯಣರಿಬ್ಬರೂ ಅಪೃಥಕ್‌ಸಿದ್ಧರಲ್ಲವೆಂದು ಹೇಳಲಾಗುವುದಿಲ್ಲ. **"ನರಪತಿ ರೀವಸರ್ವೇಲೋಕಾಃ** ಇತ್ಯಾದಿ ಸ್ಥಳಗಳಲ್ಲಿ ಹೇಳಿರುವಂತೆ ನರಪತಿಗೆ ಜನರೆಲ್ಲರೂ ಅಧೀನರು ಎಂಬ ಅರ್ಥದಲ್ಲಿ **ವಿವಕ್ಷಾಂತರಂ**– ರಾಜರಿಗೆ ಜನರು ಅಧೀನರು ಎಂಬ ತಾದಧೀನ್ಯ ವಿವಕ್ಷೆಯಿಂದ ಮತ್ವರ್ಥೀಯ ಪ್ರತ್ಯಯ ನಿರಪೇಕ್ಷ ಸಾಮಾನಾಧಿಕರಣ್ಯ ಪ್ರಯೋಗವನ್ನು ಅಂಗೀಕರಿಸಿ, ಪೃಥಕ್ ಸಿದ್ಧವಲ್ಲವೆಂದೂ ಹೇಳಲಿಕ್ಕಿಲ್ಲ. **ಆನಪಿನ್ಪು** ಇತ್ಯಾದಿ ಈ ರೀತಿಯಾದ ವ್ಯವಸ್ಥೆಯಿಂದ, ವಿಶದವಾಗಿ ಪ್ರತಿಪಾದಿಸುವ ಪ್ರಮಾಣಾಂತರಗಳನ್ನು ಅಂಗೀಕರಿಸಿ ಈ ವಸ್ತು ಸ್ಥಿತಿಯು ಇರುವಂತೆ ತಿಳಿಯುವುದು ಯುಕ್ತ.

ಹೀಗೆ ನಿತ್ಯಯೋಗ (ನಿತ್ಯಸಂಬಂಧ) ವನ್ನು ಅವಶ್ಯವಾಗಿ ಅನುಸಂಧಾನ ಮಾಡುವುದರಿಂದ ಉಂಟಾಗುವ ಪ್ರಯೋಜನವನ್ನು **ಇಂಗು ಉಪಾಯದಶೆಯಿಲುಮ್** ಇತ್ಯಾದಿ–ತಿಳಿಸುತ್ತಾರೆ. ಆದಾಗಿ ಈ ದ್ವಯ ಮಂತ್ರದಲ್ಲಿ

---

ತಿರುವಿಣ್ಣಗರಲ್ಲಿ ಬಿಜಯ ಮಾಡಿಸಿರುವ ಪರಮೋಪಕಾರನು ಮೂರು ಲೋಕಗಳನ್ನೂ ಸೃಷ್ಟಿಸಿದವನು, ಸಂಹಾರ ಮಾಡಿದವನು ಸಂತೋಷವೂ, ಕೋಪವೂ, ಪುಷ್ಪದಲ್ಲಿ ವಾಸ ಮಾಡುವ ಲಕ್ಷ್ಮಿಯೂ, ಜ್ಯೇಷ್ಠಾ ದೇವಿಯೂ,ಅವನೇ—ಅವನ ಪ್ರಕಾರವೆಂದರ್ಥ. ಕೀರ್ತಿ, ನಿಂದೆ, ಮೊದಲಾದವೂ ಅವನ ವ್ಯಾಪಾರಗಳು, ಅಂತಹವನು ನನ್ನ ಮನಸ್ಸಿನಲ್ಲಿ ವಾಸವಾಗಿದ್ದಾನೆ.

ಹ್ಯೆಯಾಲುಮ್, ಇನ್ಮನ್ತ್ರತ್ತಿಲ್ ಇವ್ವರ್ಥಂ ಪ್ರಕಾಶಿಪ್ಪಿಕ್ಕೈ ಅಪೇಕ್ಷಿತಮಾಹೈಯಾಲುಮ್ ಪೂರ್ವೋತ್ತರ ಖಂಡಙ್ಗಳಿಲ್ ಮತುಪ್ಪಾಲೇ ೧ 'ಸಭ್ರಾತುಶ್ಚರಣೌಗಾಢಮ್ 2) "ಭವಾಂಸ್ತುಸಹ ವೈದೇಹ್ಯಾ ಎನ್ಗಿರ ಪಡಿಯೇ ಪಿರಿವತ್ತಪಡಿಶೊಲ್ಲಿತ್ತಾಯಿತ್ತು.

ನಮ್ಮಾಳ್ವಾರುಮ್ ಅಹಲಹಿಲ್ಲೇನ್ ಇಱೈಯುಮೆನ್ರಲರ್ ಮೇಲ್ ಮಙ್ಗೈಯುಱೈಮಾರ್ಪಾ' ಎನ್ರುಮ್, 3) ಒಣ್ದೊಡಿಯಾಳ್ ತಿರುಮಹಳುಮ್ ನೀಯುಮೇ ನಿಲಾನಿರ್ಪ' ಎನ್ರುಮ್. 4) 'ಇಙ್ಗು ಮಙ್ಗುಮ್ ತಿರುಮಾಲನ್ರಿ ಇನ್ಮೈಕಣ್ಡು ಎನ್ರುಮ್, ಉಪಾಯ ದಶೈಯಿಲುಮ್ ಫಲದಶೈಯಿಲುಮ್,

---

ಶರಣಾಗತಿಯನ್ನು ಅನುಷ್ಠಾನ ಮಾಡುವ ಕಾಲದಲ್ಲೂ, ಫಲದಶೆಯಲ್ಲೂ–ಕೈಂಕರ್ಯವನ್ನು ಮಾಡುವ ಕಾಲದಲ್ಲಿಯೂ, **ಪ್ರಮಾಣಂಗಳ್** 1) ಸಭ್ರಾತುಶ್ಚರಣೌಗಾಢಂ 2) ಭವಾಂಸ್ತು ಸಹವೈದೇಹ್ಯಾ, ಇತ್ಯಾದಿ ಪ್ರಮಾಣಗಳ್ ನಿತ್ಯಯೋಗ್ಯವನ್ನು ಹೇಳುವುದರಿಂದ ಈ ದ್ವಯ ಮಂತ್ರದಲ್ಲಿ ಈ ಅರ್ಥವನ್ನು ಪ್ರಕಾಶಪಡಿಸುವುದು ಅಪೇಕ್ಷಿತವು. **ಆಹೈಯಾಲುಮ್**– ಆದ್ದರಿಂದಲೂ ಪೂರ್ವ ಖಂಡದಲ್ಲಿ 'ಮತುಪ್' ಪ್ರತ್ಯಯದಿಂದ 1) **ಸಭ್ರಾತು ಶ್ಚರಣೌಗಾಢಂ** 2) **ಭವಾಂಸ್ತು ಸಹ** ವೈದಾಹ್ಯಾ ಎಂಬಂತೆ, **ಪಿರವಟ್ರಪಡಿ**–ಪರಸ್ಪರ ವಿಯೋಗವಿಲ್ಲದೆ ಇರುವುದು ಹೇಳಲ್ಪಟ್ಟಿದೆ. ದಿವ್ಯಾತ್ಮ ಸ್ವರೂಪದಲ್ಲಿ ವೈಶದ್ಯವಿಲ್ಲದವರಿಗೂ ದಿವ್ಯ ಮಂಗಳ ವಿಗ್ರಹಗಳಲ್ಲಿ ನಿತ್ಯ ಯೋಗವು ವಿಶದತರವಾಗಿ ಅನುಸಂಧಾನ ಮಾಡಲು ಶಕ್ಯವೆಂದು ತಾತ್ಪರ್ಯ.

**ನಮ್ಮಾಳ್ವಾರುಮ್** ಇತ್ಯಾದಿ–ನಮ್ಮಾಳ್ವಾರವರೂ, 'ಅಹಲಹಿಲ್ಲೇನಿಱೈಯುಮ್ ಇತಾದ್ಯಿಯಾಗಿ ಉಪಾಯ ದಶೆಯಲ್ಲಿ ನಿತ್ಯಯೋಗವನ್ನುಅನುಸಂಧಾನ ಮಾಡಿ3) **ಒಂಡೊಂಡಿಯಾಳ್ ತಿರುಮಹಳುಮ್** ಇತ್ಯಾದಿಯಾಗಿ ಫಲದಶೆ ಅಂದರೆ ಕೈಂಕರ್ಯದಶೆಯಲ್ಲಿಯೂ ಲಕ್ಷ್ಮೀನಾರಾಯಣರಿಬ್ಬರ ನಿತ್ಯ ಯೋಗವನ್ನು ಅನುಸಂಧಾನಮಾಡಿದ್ದಾರೆ.ಹೀಗೆಯೇ 4) **ಇಂಗುಮಂಗಮ್** ಇತ್ಯಾದಿ- ಇಂಗುಮ್-ಉಪಾಯ ದಶೆಯಲ್ಲಿಯೂ ಅಂಗುಮ್– ಕೈಂಕರ್ಯ ದಶೆಯಲ್ಲಿಯೂ, **ತಿರುಮಾಲನ್ರಿಇನ್ಮೈಕಂಡು**– ಲಕ್ಷ್ಮೀ, ಅವಳ ವಲ್ಲಭ, ಇವರಿಬ್ಬರು **ಅನ್ರಿ**–ಅಲ್ಲದೆ, **ಇನ್ಮೈಕಂಡು**–ಬೇರೆ ಇಲ್ಲವೆಂಬುದನ್ನು ತಿಳಿದು, ಎಂದು **ಉಪಾಯದಶೆಯಿಲುಮ್**–ಶರಣಾಗತ್ಯನುಷ್ಠಾನ ಕಾಲದಲ್ಲಿಯೂ- **ಫಲದಶೆ**

---

1) ಮತ್ತು 2) 942ನೇ ಪುಟ ನೋಡಿ,

3) ತಿರುವಾಯ್‌ಮೊೞಿ 4-9-10
ಕಂಡುಕೇಟ್ಟುಟ್ರುಮೋಂದುಂಡುೞಲುಮ್ ಐಂಗರುವಿ
ಕಂಡವಿನ್ಬಮ್, ತೆರಿವರಿಯ ಅಳವಿಲ್ಲಾಚ್ಚಿತ್ತಿನ್ಬಮ್ ।
ಒಂಡೊಡಿಯೊಳ್‌ತಿರುಮಹಳಮ್ ನೀಯುಮೇನಿಲಾನಿರ್ಪ
ಕಂಡಶದಿರ್ ಕಂಡೊೞಿಂದೇನ್ ಅಡೈಂದೇನ್ ಉನ್ತಿರುವಡಿಯೇ ॥

ಪಂಚೇಂದ್ರಿಯಗಳಿಂದ ಅನುಭಾವ್ಯವಾದ ಐಹಿಕ ಸುಖವನ್ನೂ ಪರಿಚ್ಛೇದವಿಲ್ಲದ ಅತ್ಯಂತಾನುಕೂಲವಾದ ಕೈವಲ್ಯ ಸುಖವನ್ನೂ, ಉಜ್ವಲವಾದ ಹಸ್ತಾಭರಣದಿಂದ ಕೂಡಿದ ಲಕ್ಷ್ಮಿಯೂ,ನೀನೂ ಆದಿಶೇಷನ ಮಡಿಯಲ್ಲಿರುವ ಸೌಭಾಗ್ಯವನ್ನುಸೇವಿಸಿದ ನಂತರ ಒೞಿಂದೇನ್ ಸವಾಸನವಾಗಿ ಬಿಟ್ಟು ಬಿಟ್ಟೆ. ಅದರಿಂದಾಗಿ ನಿನ್ನ ಪಾದ ಕಮಲಗಳನ್ನು ಶರಣವಾಗಿ ಹೊಂದಿದ್ದೇನೆ,

4) ತಿರುವಾಯ್‌ಮೊೞಿ (7-9-11)
ಇಂಗುಮಂಗುಮ್ ತಿರುಮಾಲನ್ರಿಇನ್ಮೈಕಂಡು
ಅಂಗನೇವಣ್ ಕುರುಹೂರ್ ಶಡಗೋಪನ್ ।
ಇಂಗನೇ ಶೊನ್ನಓರಾಯಿರತ್ತುಳಿಪ್ಪತ್ತುಮ್
ಎಂಗನೇಶೊಲ್ಲಿಲುಮ್ ಇನ್ಬಮ್ ಪಯಕ್ಕುಮೇ ॥

ಇಹ ಲೋಕದಲ್ಲಿ ಉಪಾಯ ದಶೆಯಲ್ಲಿಯೂ ಪರಲೋಕದಲ್ಲಿ ಪ್ರಾಪ್ತಿ ದಶೆಯಲ್ಲಿಯೂ ಲಕ್ಷ್ಮೀ ನಾರಾಯಣರಿಬ್ಬರಲ್ಲದೆ ಬೇರೆ ಇಲ್ಲವೆಂಬುದನ್ನು ತಿಳಿದು ನಮ್ಮಾಳ್ವಾರವರು ಅನುಸಂಧಾನ ಮಾಡಿದ ರೀತಿಯಲ್ಲಿ ಈಪಾಶುರಗಳನ್ನು ಅನುಸಂಧಾನ ಮಾಡುವವರಿಗೆ ಮೋಕ್ಷಾನಂದವು ಲಭಿಸುತ್ತದೆ.

**ಶ್ರೀ ಮಚ್ಛಬ್ಧತ್ತಿಲ್ ಶೊನ್ನ ನಿತ್ಯಯೋಗತ್ತೈ ಅನುಸಂಧಿತ್ತಾರ್. ಇವ್ವನುಸಂಧಾನವಮ್ ಸಾಪರಾಧರ್ಕ್ಕು ಅಣೆಯಿಡಾದೇ ನಿನ್ನೈತ್ತಪೋದೇ ಆಶ್ರಯಿಕ್ಕೈಕ್ಕುಕ್ಕುರುಪ್ಪಾಮ್.**

**ದ್ವಯಸ್ಯ ನಾರಾಯಣಶಬ್ದಾ ಅನುಸಂಧೇಯ ಕಲ್ಯಾಣಗುಣಾಃ**

**ಇಪ್ಪಡಿ ಅಪೇಕ್ಷಿತಮಾನ ಪುರುಷಕಾರಮ್ ತಾನುಮ್ ತನ್ನೇತ್ತಮಾಮ್ಪಡಿ ಇರುಕ್ಕಿರನ, ನಾರಾಯಣ ಶಬ್ದತ್ತಿಲ್ ತೋತ್ತುಹಿರ ಸಂಬಂಧಮುಮ್ ಗುಣಙ್ಗಳುಮ್. ಇದು 1) 'ತನ್ನಡಿಯಾರ್' ಎನ್ಡಿರ ಪ್ಪಾಟಲೇ ಕಾಣಲಾಮ್.**

---

**ಯಿಲುಮ್**– ಪ್ರಾಪ್ತಿ ಅಂದರೆ ಕೈಂಕರ್ಯ ದಶೆಯಲ್ಲಿಯೂ ಶ್ರೀಮತ್ ಎಂಬ ಶಬ್ದದಲ್ಲಿ ಹೇಳಿದ ನಿತ್ಯ ಯೋಗ ವನ್ನು ಅನುಸಂಧಾನ ಮಾಡಿದ್ದಾರೆ. **ಇವ್ವನುಸಂಧಾನಂ** ಇತ್ಯಾದಿ– ಈ ನಿತ್ಯ ಯೋಗದ ಅನುಸಂಧಾನವು, ಅಪರಾಧ ಮಾಡಿದವರಿಗೆ **ಅಣೆಯಿಡಾದೇ**– ಘಟಕರು ಯಾರೂ ಇಲ್ಲವಲ್ಲಾ ಈ ದಿವ್ಯ ದಂಪತಿಗಳನ್ನು ಹೇಗೆ ಮೋಕ್ಷಾರ್ಥವಾಗಿ ಆಶ್ರಯಿಸುವುದು, ಎಂದು ಸಂಶಯ ಪಡದೆ ಎಂದರ್ಥ, **ನಿನ್ನೈತ್ತಪೋದೇ**–ತನಗೆ ಅವರನ್ನು ಆಶ್ರಯಿಸಬೇಕೆಂಬ ಅಭಿಲಾಷೆ ಉಂಟಾದ ತಕ್ಷಣವೇ, **ಆಶ್ರಯಿಕ್ಕೈಕ್ಕುಕ್ಕುರುಪ್ಪಾಮ್** ಆಶ್ರಯಿಸುವುದಕೆಕ ಸಾಧನವಾಗುತ್ತದೆ.

**ನಾರಾಯಣ ಶಬ್ದಾರ್ಥ**

ಅನಂತರ **ಇಪ್ಪಡಿ ಅಪೇಕ್ಷಿತಮಾನ** ಎಂದಾರಂಭಿಸಿ ನಾರಾಯಣ ಶಬ್ದಾರ್ಥವನ್ನು ತಿಳಿಸುತ್ತಾರೆ. ಆದಾಗಿ ಹೀಗೆ ಅಪೇಕ್ಷಿತವಾದ ಲಕ್ಷ್ಮಿಯ ಪುರುಷ ಕಾರ ಕೃತ್ಯವೂ ತನ್ನೇಟ್ರಮಾಮ್ಪಡಿ ಇತಿ-ಅಧಿಕವೆಂದು ಅಂದರೆ ಬೇಕಿಲ್ಲವೆಂದು ಹೇಳ ಬಹುದಾದ ರೀತಿಯಲ್ಲಿ **ಇರುಕ್ಕಿರನ** ಇತ್ಯಾದಿ– ನಾರಾಯಣ ಶಬ್ದದಲ್ಲಿ ಸ್ವಾಮಿದಾಸ ಸಂಬಂಧವೂ ವಾತ್ಸಲ್ಯಾದಿ ಗುಣಗಳೂ ಇವೆ. ಅಂದರೆ ನಾರಾಯಣನ ಸ್ವಾಮಿತ್ವ, ವಾತ್ಸಲ್ಯ, ಸೌಲಭ್ಯ ಕಾರುಣ್ಯಾದಿ ಗುಣಗಳೇ ಕಾರ್ಯಕರಗಳಾಗಿ, ಲಕ್ಷ್ಮಿಯ ಪುರುಷಕಾರವು ಹೆಚ್ಚು ಎಂದು ತೋರುತ್ತದೆ. ಇದಕ್ಕೆ ಪ್ರಮಾಣವನ್ನು 1) **ತನ್ನಡಿಯಾರ್** – ಎಂದು ಆರಂಭಿಸಿ ತಿಳಿಸುತ್ತಾರೆ. ಆದಾಗಿ ತನ್ನ ಭಕ್ತರ ವಿಷಯ ದಲ್ಲಿ ಮಹಾಲಕ್ಷ್ಮಿಯೂ ದೋಷಾರೋಪಣೆ ಮಾಡಿದರೂ ( ಅಂತಹ ಸಂಭಾವನೆ ಇಲ್ಲವೆಂಬುದು ತಾತ್ಪರ್ಯ) ಪರಮ ಕಾರುಣಿಕನಾದ ಭಗವಂತನು, "ನನ್ನ ಭಕ್ತರು ಹಾಗೆ ಮಾಡುವುದಿಲ್ಲ, ಮಾಡಿದರೂ ನನ್ನ ಕ್ಷಮೆಗೆ ವಿಷಯವನ್ನು ತೋರಿಸಿಕೊಟ್ಟಂತಹ ಉಪಕಾರವನ್ನು ಮಾಡಿದರು", ಎಂದು ಹೇಳುವುದರಿಂದ ಸಂಬಂಧ ಮತ್ತು ಗುಣಗಳ ಶ್ರೇಷ್ಠತೆಯು ವ್ಯಕ್ತವು. "**ಶೆಯ್‌ದಾರೇಲ್**" ಎಂದು ಅಪ್ರತಿ ಬುದ್ಧದಶೆಯಲ್ಲಿ ಕೆಲವರು ಮಾಡಿದ್ದರೆ ಪ್ರಾಯ ಶ್ಚಿತಗಳಿಂದಲೋ, ಲಘು ಶಿಕ್ಷೆಯಿಂದಲೋ ನಾವು ಅದನ್ನು ಕ್ಷಮಿಸುತ್ತೇವೆಂದು ತಾತ್ಪರ್ಯ- ಇದೂ ಒಳ್ಳೆಯ ದಾಗಿಯೇ ಪರಿಣಮಿಸುತ್ತದೆ. "**ಎನ್ಬರ್ ಪೋಲುಮ್**" ಎಂಬ ವಾಕ್ಯದಿಂದ ವಸ್ತುತಃ ಅದು ದೋಷವಿಲ್ಲ ವೆಂದು ತಾತ್ಪರ್ಯವಿಲ್ಲ. ದೋಷವೇ ಅಹುದು, ಆದರೆ ನಮ್ಮ ಕ್ಷಮೆಗೆ ಪ್ರಾಪ್ತವಾಗುತ್ತದೆ,ಎಂದು ತಾತ್ಪರ್ಯ.

---

1) ತನ್ನಡಿಯಾರ್ ತಿರತ್ತಹತ್ತುತ್ತಾಮರೈಯಾಳಾ ಹಿಲುಂ ಶಿದಗುರೈಕ್ಕುಮೇಲ್.
ಎನ್ನಡಿಯಾರ್ ಅದುಶೆಯ್ಯಾರ್ ಶೆಯ್ದಾರೇಲ್‌ನನ್ರು ಶೆಯ್ದಾರೆನ್ಬರ್ ಪೋಲುಮ್ ।
ಮುನ್ನುಡೈಯ ವಿಭೀಷಣರ್ಕ್ಕಾಮದಿಳಿಲಂಗೈತ್ತಿಶೈನೋಕ್ಕಿಮಲರ್ ಕಣ್‌ವೈತ್ತ
ಎನ್ನುಡೈಯ ತಿರುಮಂಗರ್ ಕನ್ನಿಯುಮ್ ಮತ್ತೊರುವರ್ಕ್ಕಾಳಾವರೇ ॥ ಪೆರಿಯಾಳ್ವಾರ್‌ಮೊಳಿ—(4-10-2)

ತನ್ನ ಭಕ್ತರ ವಿಷಯದಲ್ಲಿ ಲಕ್ಷ್ಮಿಯೂ ಕೂಡ ದೋಷವನ್ನು (ಶಿದಗು–ದೋಷ) ಹೇಳಿದರೂ (ಹೇಳುವ ಸಂಭಾವನೆಯಿಲ್ಲದೆಂಬು ದು ಉರೈಕ್ಕುಮೇಲ್ ಎಂಬುದರಿಂದ ದ್ಯೋತಿತ.) ನನ್ನ ಭಕ್ತರು ಹಾಗೆ ತಪ್ಪು ಮಾಡುವುದಿಲ್ಲ, ಮಾಡಿದರೂ ನನ್ನ ಕ್ಷಮೆಗೆ ವಿಷಯ ವಾದ್ದರಿಂದ ಒಳ್ಳೆಯದೇ.

**೧) "ಶ್ರೀಧರ ಶ್ರೀಕರ ಶ್ರೇಯಃ ಶ್ರೀಮಾನ್ ಲೋಕತ್ರಯಾಶ್ರಯಃ" ಇತ್ಯಾದಿಹಳಿಲೇ ಭಗವನ್ನಾಮಮಾಹ ಪ್ರಸಿದ್ಧಮಾನ ಶ್ರೀ ಮಚ್ಛಬ್ದಮೇ ಅಮೈಯಾದೋವೆನ್ನಿಲ್ ? ಪೂರ್ವಖಂಡತ್ತಿಲ್ ಉಪಾಯ ಭಾವತ್ತುಕ್ಕುರುಪ್ಪಾನ ಗುಣ ವಿಶೇಷಾನುಸಂಧಾನಾರ್ಥ ಮಾಹವುಮ್, ಉತ್ತರಖಂಡತ್ತಿಲ್ ಸರ್ವವಿಶಿಷ್ಟನಾನ ಶೇಷೀ ಪ್ರಾಪ್ಯನಾಯ್ ತೋತ್ತುಕ್ಕೈಕ್ಕಾಹವುಮ್ ನಾರಾಯಣ ಶಬ್ದಮಪೇಕ್ಷಿತಮಾಹೈಯಾಲ್ ಇಙ್ಗು ಶ್ರೀಮಚ್ಛಬ್ದಮ್ ವಿಶೇಷಣಮ್.**

**ಇಙ್ಗುತ್ತೈ ನಾರಾಯಣಶಬ್ದತ್ತುಕ್ಕು ಮೂಲಮನ್ತ್ರಾಧಿಕಾರತ್ತಿಲ್ ವ್ಯುತ್ಪತ್ತಿಹಳಾಲೇ ಶೊನ್ನವರ್ಥಂಗಳೆಲ್ಲಾಮ್ ವಿವಕ್ಷಿತಂಗಳಾಹಿಲುಮ್, ಪೂರ್ವಖಂಡತ್ತಿಲ್ ನಾರಾಯಣ ಶಬ್ದತ್ತುಕ್ಕು ಶರಣ್ಯತ್ವೈಯಿಲೇ ನೋಕ್ಕಾಸಪಡಿಯಾಲೇ ೧ "ನಿಹರಿಲ್ ಪುಹಳಾಯ್ ಇತ್ಯಾದಿಹಳಿಲೇ ಸಂಗ್ರಹೀತಂಗಳಾನ ವಾತ್ಸಲ್ಯ ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯ, ಸರ್ವಜ್ಞತ್ವ, ಸರ್ವಶಕ್ತಿತ್ವ, ಸತ್ಯಸಂಕಲ್ಪತ್ವ, ಪರಮಕಾರುಣಿಕತ್ವ ಕೃತಜ್ಞತ್ವ, ಸ್ಥಿರತ್ವ, ಪರಿಪೂರ್ಣತ್ವ, ಪರಮೋದಾರತ್ವಾದಿಹಳಿಙ್ಗನುಸಂಧೇಯಙ್ಗಳಿಲ್, ಪ್ರಧಾನತಮಙ್ಗಳ್.**

---

## ಶ್ರೀಮತ್ ಶಬ್ದದೊಡನೆ ನಾರಾಯಣ ಶಬ್ದದ ಆವಶ್ಯಕತೆ.

ದ್ವಯ ಮಂತ್ರದಲ್ಲಿ ಶ್ರೀಮತ್ ಶಬ್ದವೊಂದೇ ಉಪಾಯವನ್ನು ನಿರ್ದೇಶಿಸಲು ಸಾಕಲ್ಲವೇ. ನಾರಾಯಣ ಶಬ್ದವು ಬೇಕೇ ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಅನುಗ್ರಹಿಸುತ್ತಾರೆ. ಆದಾಗಿ **"ಶ್ರೀಧರಃ, ಶ್ರೀಕರಃ, ಶ್ರೇಯಃ ಶ್ರೀಮಾನ್, ಲೋಕತ್ರಯಾಶ್ರಯಃ"** ಇತ್ಯಾದಿಗಳಲ್ಲಿ ಭಗವಂತನ ನಾಮವಾಗಿ ಪ್ರಸಿದ್ಧವಾದ ಶ್ರೀಮತ್ ಶಬ್ದವು ಸಾಕಲ್ಲವೇ ಎಂದರೆ, **ಪೂರ್ವಖಂಡತ್ತಿಲ್** ಇತ್ಯಾದಿ– ದ್ವಯ ಮಂತ್ರದ ಪೂರ್ವಖಂಡದಲ್ಲಿ ಉಪಾಯ ಭಾವಕ್ಕೆ ಉರುಪ್ಪಾನ–ಸಾಧಕಗಳಾದ **ಗುಣವಿಶೇಷ–** ಸ್ವಾಮಿತ್ವ ಸೌಶೀಲ್ಯಾದಿ ಗುಣಗಳನ್ನು ಅನುಸಂಧಾನ ಮಾಡುವುದಕ್ಕೂ **ಉತ್ತರಖಂಡತ್ತಿಲ್** ಇತ್ಯಾದಿ–ದ್ವಯ ಮಂತ್ರದ ಉತ್ತರ ಖಂಡದಲ್ಲಿ **ಸರ್ವ ವಿಶಿಷ್ಟನಾದ ಶೇಷೀ** ಪ್ರಾಪ್ಯಕ್ಕೆ ಉಪಯುಕ್ತಗಳಾದ ಗುಣ ವಿಶಿಷ್ಟನಾದ ಸ್ವಾಮಿಯು ಪ್ರಾಪ್ಯನು ಎಂದು ತಿಳಿಸುವುದಕ್ಕಾಗಿಯೂ ನಾರಾಯಣ ಶಬ್ದವು ಅಪೇಕ್ಷಿತವಾದ್ದರಿಂದ ಇಲ್ಲಿ ಶ್ರೀಮಚ್ಛಬ್ದವು ನಾರಾಯಣ ಶಬ್ದಕ್ಕೆ ವಿಶೇಷಣ.

## ನಾರಾಯಣ ಶಬ್ದದಿಂದ ಅನುಸಂಧೇಯವಾದ ಗುಣಗಳು, ಅವುಗಳ ಅರ್ಥ.

**ಇಂಗುತ್ತೈನಾರಾಯಣ ಶಬ್ದತ್ತುಕ್ಕು** ಇತ್ಯಾದಿ–ಇಲ್ಲಿ ಹೇಳಲ್ಪಟ್ಟ **ನಾರಾಯಣ ಶಬ್ದ**ಕ್ಕೆ ಮೂಲಮಂತ್ರಾಧಿಕಾರದಲ್ಲಿ ವ್ಯುತ್ಪತ್ತಿಗಳಿಂದ ಹೇಳಿದ ಅರ್ಥಗಳೆಲ್ಲಾ ವಿವಕ್ಷಿತಗಳಾದರೂ ಪೂರ್ವಖಂಡದಲ್ಲಿ ನಾರಾಯಣ ಶಬ್ದಕ್ಕೆ **ಶರಣ್ಯತ್ವೈಯಿಲೇ** ಇತ್ಯಾದಿ– ಉಪಾಯ ಭಾವದಲ್ಲಿ, ದೃಷ್ಟಿಯಿರುವುದರಿಂದ, 1) **ನಿಹರಿಲ್ ಪುಹಳಾಯ್ ಇತ್ಯಾದಿಗಳಲ್ಲಿ** ಸಂಗೃಹೀತಗಳಾದ, (ನಿಹರಿಲ್ ಪುಹಳಾಯ್) ಎಂದು ತನಗೆ ಸದೃಶವಿಲ್ಲದ ಗುಣವಾದ ವಾತ್ಸಲ್ಯ, "ಉಲಹಮೂನ್ರುಡೈಯಾಯ್" ಮೂರು ಲೋಕಕ್ಕೂ ಅಧಿಪತಿ, ಎಂದು ಸ್ವಾಮಿತ್ವ, ಎನ್ನೈಯಾಳ್ವಾನೇ ನನ್ನನ್ನು ಆಳುವವನೇ ಎಂದು ಸೌಶಿಲ್ಯ ಗುಣ, ತಿರುವೇಂಗಡತ್ತಾನೇ– ತಿರುಪತಿ ಬೆಟ್ಟದಲ್ಲಿರುವವನೇ, ಎಂದು ಸೌಲಭ್ಯ, ಇವುಗಳಿಂದ ಆಕ್ಷಿಪ್ತಗಳಾದ (ಅರ್ಥಾತ್ ಸಿದ್ಧವಾದ) ಸರ್ವಜ್ಞತ್ವ, ಸರ್ವಶಕ್ತಿತ್ವ. ಸತ್ಯ ಸಂಕಲ್ಪತ್ವ, ಪರಮ ಕಾರುಣಿಕತ್ವ, ಕೃತಜ್ಞತ್ವ, ಸ್ಥಿರತ್ವ, ಪರಿಪೂರ್ಣತ್ವ ಪರಮೋದಾರತ್ವಾದಿಗಳು ಇಲ್ಲಿ ಅನುಸಂಧಾನ ಮಾಡಲ್ಪಡುವ ಗುಣಗಳಲ್ಲಿ ಪ್ರಧಾನ ತಮಗಳು. ಸರ್ವಜ್ಞತ್ವಾದಿಗಳು ಅರ್ಥಾತ್ ಸಿದ್ಧಗಳು.

---

1) ತಿರುವಾಯ್ಮೊಳಿ 6-10-10 957 ನೇ ಪುಟ ನೋಡಿ.

ಇವತ್ತಿಲ್ ವಾತ್ಸಲ್ಯಮಾವದು ? 1) "ದೋಷೋಯದ್ಯಪಿ ತಸ್ಯ ಸ್ಯಾತ್ ಸತಾಮೇತದಗರ್ಹಿತಮ್" ಎನ್ನಿರಪಡಿಯೇ ಆಶ್ರಿತನುಡೈಯ ಅಪರಾಧತ್ತೈ ಪ್ಪಾರಾದೇ ಅಙ್ಗೀಕರಿಕ್ಕೈಕ್ಕೀಡಾನ ಇರಕ್ಕಮ್ ಇದು ತನ್ ದೋಷಂಗಳೈ ಪಾರ್ತ್ತು ಅಹಲಾಮೈಕ್ಕುರುಪ್ಪಾವದು. ಸ್ವಾಮಿತ್ವಮಾವದು ? ಪ್ರಣವಾದಿಹಳಿಲ್ ಶಿಕ್ಷಿತಮಾನ ಸಂಬಂಧವಿಶೇಷಮ್; ಇದು ತನ್ ಪೇರಾಹ ರಕ್ಷಿಕ್ಕುಮೆನ್ನಿಗ ತೇಱ್ಱತ್ತುಕ್ಕುರುಪ್ಪಾವದು.

ಸೌಶಿಲ್ಯಮಾವದು ? ತಾನ್ ಸರ್ವಾಧಿಕನಾಯ್ ನೈತ್ತುತ್ತಣ್ಣಿಯರಾನ ನಿಷಾದ ವಾನರ ಗೋಪಾಲಾದಿಹಳೋಡೇ ನೀರಂಧ್ರಸಂಶ್ಲೇಷಂ ಪಣ್ಣುಹೈ ಇದು 1) "ಅಮ್ಮಾನಾಯ್ಪ್ಪಿರಾನವನೆನ್ವಿಡತ್ತಾನ್ ಯಾನಾರ್ ಎನ್ರು ಅಹಲಾದೇ ಸಾರಥ್ಯದೂತ್ಯಾದಿ ಪರ್ಯನ್ತಮಾಹ ಅಪೇಕ್ಷಿಕ್ಕುಮ್ಪಡಿ ವಿಶ್ವಸನೀಯತೈಕ್ಕುರುಪ್ಪಾವದು.

---

ಅನಂತರ ಈ ಗುಣಗಳು ಉಪಾಯತ್ವಕ್ಕೆ ಹೇಗೆ ಸಾಧಕಗಳು ಎಂಬುದನ್ನು "ಇವಟ್ರಿಲ್ ವಾತ್ಸಲ್ಯಮಾವದು" ಎಂದಾರಂಭಿಸಿ ವಿವರಿಸುತ್ತಾರೆ ಆದಾಗಿ ವಾತ್ಸಲ್ಯವೆಂಬುದು 1) **ದೋಷೋಯದ್ಯಪಿ ತಸ್ಯಸ್ಯಾತ್** ಅವನಲ್ಲಿ ದೋಷ ವಿದ್ದರೂ ಬಾಧಕವಿಲ್ಲ. ನಮ್ಮ ದಯೆಗೆ ಅದು ವಿಷಯವಾಗುತ್ತದೆ. ಸತ್ಪುರುಷರಿಗೆ ಇಂಥಹ ವರನ್ನು ರಕ್ಷಿಸುವುದು ನಿಂದೆಗೆ ಕಾರಣವಾಗುವುದಿಲ್ಲ, ಎಂಬಂತೆ ಆಶ್ರಿತನ ಅಪರಾಧವನ್ನು ನೋಡದೆ ಅಂಗೀಕರಿಸುವುದಕ್ಕೆ ಅನುಗುಣವಾದ ದಯೆ. **ಸ್ವಾಮಿತ್ವಮಾವದು**– **ಸ್ವಾಮಿತ್ವವೆಂದರೆ** ಪ್ರಣವದಲ್ಲಿಯೂ, ಆದಿಪದದಿಂದ "ಯಸ್ಯಾಸ್ಮಿನ್ನತ ಮಂತರೇಮಿ" "ದಾಸಭೂತಾಸ್ಸ್ವತಸ್ಸರ್ವೇ, ಇತ್ಯಾದಿಗಳಲ್ಲಿಯೂ ಅನನ್ಯಾರ್ಹವಾಗಿ ಶಿಕ್ಷಿಸಲ್ಪಟ್ಟ ಸ್ವಾಮಿ ದಾಸ ರೂಪವಾದ ಸಂಬಂಧ ವಿಶೇಷ- **ಇದು** ಇತ್ಯಾದಿ **ತನ್ ಪೇರಾಹ**– ತನ್ನ ಪ್ರಯೋಜನಕ್ಕಾಗಿ ರಕ್ಷಿಸುತ್ತಾನೆಂಬ **ತೇಟ್ರತ್ತುಕ್ಕು**–ಮಹಾ ವಿಶ್ವಾಸಕ್ಕೆ **ಉರುಪ್ಪಾವದ್**-ಸಾಧನವು. **ಸೌಶೀಲ್ಯಮಾವದು** ಇತ್ಯಾದಿ– ತಾನು ಎಲ್ಲರಿಗಿಂತಲೂ ಮೇಲಾದವನಾಗಿದ್ದುಕೊಂಡೇ, **ತಣ್ಣಿಯರಾನ**–ಅತಿನೀಚರಾದ **ನಿಷಾದ**-ಗುಹ, ವಾನರ – ಸುಗ್ರೀವ, ಗೋಪಾಲಾದಿಗಳೊಡನೆ (ಗೊಲ್ಲರೇ ಮೊದಲಾದವರು) **ನಿರಂಧ್ರ ಸಂಶ್ಲೇಷಮ್**–ಗಾಢಾಲಿಂಗನ, ಮಾಡುವುದು. ಇದು 1) **ಅಮ್ಮಾನಾಯ್ ಪ್ಪಿರಾನ್** ಇತ್ಯಾದಿ–ಚಕ್ರಪಾಣಿಯಾಗಿ ಉಪಕರಿಸುವ, ಸರ್ವೋತ್ಕೃಷ್ಟನಾದ ನಮ್ಮ ಸ್ವಾಮಿಯು ಎಲ್ಲಿ ಇರತಕ್ಕವನು, **ಯಾನಾರ್**– ಅವನನ್ನು ಸಮೀಪಿಸಲು ಯೋಗ್ಯತೆ ಇಲ್ಲದ ನಾನು ಎಲ್ಲಿ, (ಅವನಿಗೂ ನನಗೂ ಬಹಳ ಅಂತರವಿದೆ ಎಂದರ್ಥ) ಎಂದು ತನ್ನ ನೈಚ್ಯವನ್ನೂ ಅವನ ಉತ್ಕರ್ಷವನ್ನೂ ನೋಡಿ **ಅಹಲಾದೇ** – ಅವನನ್ನು ಬಿಟ್ಟಿರದೆ, ಸಾರಥ್ಯ

---

1) ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ ।
ದೋಷೋಯದ್ಯಪಿ ತಸ್ಯಸ್ಯಾತ್ ಸತಾಮೇತದಗರ್ಹಿತಮ್ ॥

ಮಿತ್ರ ಭಾವೇನ– ಮೈತ್ರೀ ಭಾವದಿಂದ ಅಂದರೆ ಶರಣಾಗತನಾಗಿ ಬಂದವನನ್ನು ಯಾವ ಕಾರಣದಿಂದಲೂ ಬಿಡುವುದಿಲ್ಲ. ಅವನಲ್ಲಿ ದೋಷವಿರಬಹುದು. ದೋಷವು ಇರಲಿ ದೋಷವಿಲ್ಲದವನಿಗೆ ನಮ್ಮ ದಯೆಯಿಂದ ಆಗುವುದೇನಿದೆ ಎಂದು ಭಾವ. ಹೀಗೆ ದೋಷಯುಕ್ತನನ್ನು ರಕ್ಷಿಸುವುದು ಸತ್ಪುರುಷರಿಗೆ ನಿಂದೆಗೆ ಕಾರಣವಾಗುವುದಿಲ್ಲ. ರಾಮಾಯಣ (6-18-3)

1) **ಅಮ್ಮಾನಾಯ್ಪಿರಾನ್ ಅವನೆವ್ವಿಡತ್ತಾನ್ ಯಾನ್ಆರ್**
**ಎಮ್ಮಾಪಾವಿಯರ್ಕ್ಕುಂ ವಿಧಿವಾಯ್ ಕ್ರಿನ್ರು ವಾಯ್‌ಕುಂ ಕಂಡೀರ್ ।**
**ಕೈಮ್ಮಾತುಯರ್ತೀರ್ತ್ತಾಯ್ ಎನ್ರುಕೈತಲೈ ಪೂಶಲಿಟ್ಟೇ**
**ಮೆಯ್‌ಮಾಲಾಯೊೞಿಂದೇನ್ ಎಂಬಿರಾನುಮೆನ್ಮೇಲಾನೇ ॥**

**ಸ್ವಾಮಿಯಾದ ಚಕ್ರಪಾಣಿಯು ಎಲ್ಲಿ. ಅತ್ಯಂತ ನೀಚನಾದ ನಾನೆಲ್ಲಿ. ನಮ್ಮಿಬ್ಬರಿಗೂ ಬಹಳ ಅಂತರವಿದೆ. ಹಾಗಿದ್ದರೂ ನನ್ನಂಥಹ ಮಹಾಪಾಪಿಗೂ. ಅದೃಷ್ಟವು ಈ ದಿವಸ ಕೂಡಿ ಬಂದಿದೆ. ಗಜೇಂದ್ರನ ಕಷ್ಟವನ್ನು ತೀರಿಸಿದ ಪರಮ ಸೌಶೀಲ್ಯ ಯುಕ್ತನು ಎಂದು ಅಂಜಲಿಬಂಧನಾಗಿ ಅವನಲ್ಲಿ ವ್ಯಾಮೋಹದಿಂದ ಕೂಡಿದ್ದೇನೆ. ಸರ್ವೇಶ್ವರನು ನನಗೆ ಪರಮೋಪಕಾರನು.**

**ಸೌಲಭ್ಯಮಾವದು ?** ಸನಕ ಸನಂದನಾದಿ ಮಹಾಯೋಗಿಹಳುಕ್ಕುಮ್ ಕೂಡಕಿಟ್ಟನಿಲಮಲ್ಲಾದ ತನ್ನೈ 1) "ಸಕಲ ಮನುಜ ನಯನ ವಿಷಯತಾಂ ಗತಃ" ಎನ್ನುಮ್ಪಡಿ ಪಣ್ಣುಹೈ. ಇದು ಕಿಟ್ಟವರಿಯನೆನ್ನಿರ ನಿಸ್ಪೃಹತ್ತೈ ಮಾರಾಮೈಕ್ಕುರುಪ್ಪಾಮ್
**ಸರ್ವಜ್ಞತ್ವಮಾವದು ?** 2) "ಅಜ್ಞಾತಂ ನಾಸ್ತಿತೇ ಕಿಂಚಿತ್" 3) "ಯೋವೇತ್ತಿಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾಸ್ವತಃ" ಎನ್ಗಿರಪಡಿಯೇ ಸರ್ವತ್ತೈಯುಮ್ ಸಾಕ್ಷಾತ್ಕರಿಕ್ಕೈ. ಇದು ಆಶ್ರಿತರ್ಕ್ಕು ಕೊಡುಕ್ಕವೇಣ್ಡುಮ್ ನನ್ಮೈಹಳಿಲುಮ್, ಕಳಿಕ್ಕವೇಣ್ಡುಮ್ ವಿರೋಧಿಹಳಿಲುಮ್ ಇವನರಿಯಾದದಿಲ್ಲೈಯೆನ್ರುಮ್ ಅನುಸಂಧಾನತ್ತುಕ್ಕುರುಪ್ಪಾಮ್. **ಸರ್ವಶಕ್ತಿತ್ವಮಾವದು?** ಅಘಟಿತಘಟನಾ ಸಾಮರ್ಥ್ಯಮ್. ಇದು ಸಂಸಾರಿಹಳಾನ ನಮ್ಮೈ ನಿನೈತ್ತಪೋದು ನಿತ್ಯ ಸೂರಿಪರಿಷತ್ತಿಲೇ ನಿವೇಶಿಪ್ಪಿಕ್ಕವಲ್ಲನೆನ್ಗಿರ ನಿಶ್ಚಯತ್ತುಕ್ಕುಗುಪ್ಪಾಮ್. ಸತ್ಯಸಙ್ಕಲ್ಪ

---

ದೂತಕೃತ್ಯ- ಅಂದರೆ ಪಾಂಡವರಿಗೆ ದೂತನಾಗಿ ದುರ್ಯೋಧನನ ಬಳಿಗೆ ಹೋದದ್ದು, ಆದಿ ಶಬ್ದದಿಂದ ರಾಜಸೂಯಯಾಗದಲ್ಲಿ ಬ್ರಾಹ್ಮಣರ ಎಂಜಲೆಲೆಯನ್ನು ಎತ್ತಿ ಹಾಕಿ ಸ್ಥಲವನ್ನು ಶುದ್ಧಿ ಮಾಡಿದುದು ವಿವಕ್ಷಿತ, ಈ ರೀತಿಯಾದ ಸೌಶೀಲ್ಯ ಭಾವಗಳಿಂದ ಕೂಡಿರುವುದರಿಂದ, ಅತ್ಯಂತ ವಿಶ್ವಾಸನೀಯನು. ಧೈರ್ಯವಾಗಿ ಅವನನ್ನು ಆಶ್ರಯಿಸಬಹುದು ಎಂಬುದಕ್ಕೆ ಸಾಧಕವಾದದ್ದು.

**ಸೌಲಭ್ಯಮಾವದು**-ಸೌಲಭ್ಯವೆಂದರೆ, ಸನಕ ಸನಂದನಾದಿ ಮಹಾ ಯೋಗಿಗಳಿಗೂ ಕೂಡ **ಕಿಟ್ಟನಿಲಮಲ್ಲಾದ**-ಧ್ಯಾನಕ್ಕೆ ಗೋಚರನಾಗದ ತನ್ನನ್ನು 1) **ಸಕಲಮನುಜನಯನ ವಿಷಯತಾಂಗತಃ** ಎಲ್ಲಾ ಜನರ ಕಣ್ಣಿಗೆ ಕಾಣಿಸುವಂತೆ ಪರಮ ಸುಲಭನಾಗಿರುವುದು. ಇದು **ಕಿಟ್ಟವರಿಯನ್** ಇತ್ಯಾದಿ ಇದು ಆ ಭಗವಂತನು ಕಣ್ಣಿಗೆ ಕಾಣಿಸುವುದಿಲ್ಲ. ದುಷ್ಪ್ರಾಪನು, ಎಂಬ ಅಭಿಪ್ರಾಯವು ಏರ್ಪಟ್ಟು ಅವನನ್ನು ಹೊಂದಲು ಆಸೆ ಪಡದೆ ಇರುವ ಸ್ಥಿತಿಯು ಏರ್ಪಡದೆ ಇರಲು ಕಾರಣವಾಗುತ್ತದೆ.

**ಸರ್ವಜ್ಞತ್ವಮಾವದು**-ಸರ್ವಜ್ಞತ್ವವು ಏನೆಂದರೆ2) **ಅಜ್ಞಾತಂನಾಸ್ತಿತೇಕಿಂಚಿತ್** ನಿನಗೆತಿಳಿಯದೇ ಇರುವುದು ಯಾವುದೂ ಇಲ್ಲ. 3) **ಯೋವೇತ್ತಿಯುಗಪತ್ಸರ್ವಂ**-ಏಕ ಕಾಲದಲ್ಲಿಯೇ ಸರ್ವವನ್ನೂ **ಸಾಕ್ಷಾತ್ಕರಿಸಿಕೊಂಡಿರುತ್ತಾನೆ**, ಇತ್ಯಾದಿ ಹೇಳುವಂತೆ ಸರ್ವವನ್ನೂ ಪ್ರತ್ಯಕ್ಷವಾಗಿ ತಿಳಿದುಕೊಂಡಿರುವುದು. ಇದಕ್ಕೆ ಪ್ರಯೋಜನವೇನೆಂದರೆ, **ಇದು ಆಶ್ರಿತರುಕ್ಕು** ಇತ್ಯಾದಿ- ಇದು ಆಶ್ರಿತರಿಗೆ ಕೊಡಬೇಕಾದ ಒಳ್ಳೆಯದರಲ್ಲಿಯೂ ನಿವರ್ತಿಸಬೇಕಾದ ವಿರೋಧಿಗಳಲ್ಲಿಯೂ, ಇವನು ತಿಳಿಯದಿರುವುದು ಯಾವುದೂ ಇಲ್ಲ, ಎಂಬ ಅನುಸಂಧಾನಕ್ಕೆ **ಉರುಪ್ಪಾಮ್**-ಸಾಧಕವಾಗುತ್ತದೆ. **ಸರ್ವಶಕ್ತಿಯಾವದು**-ಸರ್ವ ಶಕ್ತಿತ್ವವೆಂದರೆ **ಅಘಟಿತ ಘಟನಾ ಸಾಮರ್ಥ್ಯಮ್**-ಘಟಿಸಲಾಗದೆ ಇರುವುದನ್ನೂ ಘಟಿಸುವುದು. **ಇದು ಸಂಸಾರಿಹಳಾನ** ಇತ್ಯಾದಿ- ಇದು ಸಂಸಾರಿಗಳಾದ ನಮ್ಮನ್ನು ನೆನೆಸಿದ ಕ್ಷಣದಲ್ಲಿ ನಿತ್ಯಸೂರಿಗಳ ಗೋಷ್ಠಿಯಲ್ಲಿ ಸೇರಿಸಲು ಶಕ್ಯನು ಎಂಬ ನಿಶ್ಚಯಕ್ಕೆ ಸಾಧಕವಾದದ್ದು. **ಸತ್ಯಸಂಕಲ್ಪ**

---

1) ಭಗವದ್ಗೀತಾಭಾಷ್ಯ-ಉಪೋದ್ಘಾತ.

2) ಅಜ್ಞಾತಂ ನಾಸ್ತಿತೇ ಕಿಂಚಿತ್ ತ್ರಿಷುಲೋಕೇಷು ರಾಘವ ।
ಆತ್ಮಾನಂ ಪೂಜಯನ್‌ರಾಮ ಪೃಚ್ಛಸ್ಯಸ್ಮಾನ್ ಸುಹೃತ್ತಯಾ ॥ ರಾಮಾ. (6-17-35)
ರಾಘವನೇ ಮೂರು ಲೋಕದಲ್ಲಿಯೂ ನಿನಗೆ ತಿಳಿಯದುದು ಯಾವುದೂ ಇಲ್ಲ. ಆದರೂ ನಮ್ಮಲ್ಲಿರುವ ಸೌಹಾರ್ದ ಭಾವದಿಂದ, ನಮ್ಮ ಅಭಿಪ್ರಾಯವನ್ನೂ ಕೇಳಿ ತಿಳಿದುಕೊಳ್ಳುವುದು ನಿನ್ನ ಘನತೆ.

3) ಯೋವೇತ್ತಿ ಯುಗಪತ್ ಸರ್ವಂ ಪ್ರತ್ಯಕ್ಷೇಣ ಸದಾ ಸ್ವತಃ ।
ತಂ ಪ್ರಣಮ್ಯ ಹೃಷೀಕೇಶಂ ನ್ಯಾಯತತ್ತ್ವಂ ಪ್ರಚಕ್ಷ್ಮಹೇ ॥ ನ್ಯಾಯತತ್ತ್ವ-ಮಂಗಳ ಶ್ಲೋಕ
ಭಗವಂತನು ಏಕ ಕಾಲದಲ್ಲಿಯೇ ಸರ್ವವನ್ನೂ ಸದಾ ಸಾಕ್ಷಾತ್ಕರಿಸಿಕೊಂಡಿರುವನು, ಆ ಹೃಷೀಕೇಶನನ್ನು ನಮಸ್ಕರಿಸಿ ನ್ಯಾಯತತ್ತ್ವವನ್ನು ಪ್ರಕಾಶ ಪಡಿಸುತ್ತೇನೆ

ತ್ವಮಾವದು ? ತನ್ ಸಙ್ಕಲ್ಪತ್ತುಕ್ಕುತ್ತನ್ನಾಲುಮ್ ಪ್ರತಿಹತಿ ಯಿನ್ರಿಕ್ಕೇಯೊಳ್ಳಿಹೈ. ಇದು 1) "ಅಹಂ ತ್ವಾಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎನ್ಗಿರ ಪಾಶುರಮ್ ಪಳುದಾಹಾದೆನ್ಗಿರ ವಿಸ್ರಂಭತ್ತುಕ್ಕುರುಪ್ಪಾಮ್. ಪರಮಕಾರುಣಿಕತ್ವಮಾವದು ? ಸ್ವಾರ್ಥ ನಿರಪೇಕ್ಷೈಯಾನ ಪರದುಃಖನಿರಾಕರಣೇಚ್ಛೈ ಇದು ಅನಂತಾಪರಾಧಙ್ಗಳುಡೈಯವರ್ ಪಕ್ಕೈಯುಮ್ 2) 'ಮಿತ್ರಭಾವೇನ ಸಂಪ್ರಾಪ್ತಂ' 3) "ಯದಿವಾ ರಾವಣಸ್ಸ್ವಯಂ" ಎನ್ಗಿರಪಡಿಯೇ, ಒರುವ್ಯಾಜಮಾತ್ರತ್ತಾಲೇ ಕ್ಷಮಿಕ್ಕುಮೆನ್ಗಿರತೆಳಿವುಕ್ಕುರುಪ್ಪಾಮ್.

ಕೃತಜ್ಞತ್ವಮಾವದು ? 4) "ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ। ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ" 5) "ಋಣಂಪ್ರವೃದ್ಧಮಿವಮೇ ಹೃದಯಾನ್ನಾಪಸರ್ಪತಿ" ಎನ್ಗಿರ

---

ತ್ವಮಾವದು-ಸತ್ಯಸಂಕಲ್ಪತ್ವವೆಂದರೆ, ತಾನು ಮಾಡಿದ ಸಂಕಲ್ಪಕ್ಕೆ ತನ್ನಿಂದಲೂ **ಪ್ರತಿಹತಿ**- ತಡೆ, ಇಲ್ಲದೆ ಇರುವುದು. ಇದಕ್ಕೆ ಪ್ರಯೋಜನವನ್ನು ತಿಳಿಸುತ್ತಾರೆ. ಇದು, 1) **ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ**, ಇದು ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡಿಸುತ್ತೇನೆ ಎಂಬ ಪಾಶುರವು-ಮಾತು, **ಪಳುದಾಹಾದು**-ವ್ಯರ್ಥವಾಗುವುದಿಲ್ಲವೆಂಬ **ವಿಸ್ರಂಭತ್ತುಕ್ಕು**-ನಂಬಿಕೆಗೆ, **ಉರುಪ್ಪಾಮ್**- ಸಾಧಕವಾಗುತ್ತದೆ. **ಪರಮಕಾರುಣಿಕತ್ವಮಾವದು**-ಪರಮಕಾರುಣಿಕತ್ವವು ಏನೆಂದರೆ, ಸ್ವಾರ್ಥ ನಿರಪೇಕ್ಷವಾದ ಪರದುಃಖನಿರಾಕರಣೆಯಲ್ಲಿ, ಇಚ್ಛೆಯುಳ್ಳವನಾಗಿರುವುದು ಇದರ ಪ್ರಯೋಜನವೇನೆಂದರೆ **ಅನಂತಾಪರಾಧಂಗಳೈಯುಡೈ ಯವರ್ ಹಕ್ಕೈಯುಮ್**-ಅನಂತಾ ಪರಾಧಗಳನ್ನು ಮಾಡಿದವರನ್ನೂ 2) **"ಮಿತ್ರಭಾವೇನ ಸಂಪ್ರಾಪ್ತಂ"** 3) **ಯದಿವಾ ರಾವಣಸ್ಸ್ವಯಮ್**, ಎಂದು, ಮೈತ್ರೀ ಭಾವದಿಂದ-**ಸಾಕ್ಷಾತ್** ರಾವಣನೇ ಬಂದರೂ ಶರಣಾಗತನೆಂಬ ಒಂದು ವ್ಯಾಜಮಾತ್ರದಿಂದ ಕ್ಷಮಿಸುತ್ತಾನೆಂಬ **ತೆಳಿವು**-ವಿಶ್ವಾಸವು, ಉಂಟಾಗಲು ಸಾಧಕವಾಗುತ್ತದೆ. **ಕೃತಜ್ಞತ್ವಮಾವದು**-ಕೃತಜ್ಞತ್ವವು ಏನೆಂದರೆ, 4) **ನಸ್ಮರತ್ಯಪಕಾರಾಣಾಂ** ಇತ್ಯಾದಿ-5) **ಋಣಂಪ್ರವೃದ್ಧಮಿವಮೇ** ಇತ್ಯಾದಿ-ಮಹೋದಾರ **ಸ್ವಭಾವನಾ**ದ್ದರಿಂದ **ಅ**ತ್ಯಲ್ಪವಾದ ಉಪಕಾರವನ್ನೂ ಮರೆಯದೆ ಇರುವುದೂ, ದ್ರೌಪದಿಯು ವಸ್ತ್ರಾಪಹಾರ ಸಮಯದಲ್ಲಿ 'ಗೋವಿಂದ' ಎಂದು ಆಕ್ರಂದನ ಮಾಡಲು ಅವಳ ಮಾನ ಸಂರಕ್ಷಣೆಯನ್ನು ಮಾಡಿದ್ದರೂ

---

1) ಸರ್ವಧರ್ಮಾನ್ ಪರಿತ್ಯಜ್ಯಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥ ಗೀತೆ-ಚರಮಶ್ಲೋಕ 18-66

2) ರಾಮಾಯಣ ಯುದ್ಧಕಾಂಡ 18-3-978 ನೇ ಪುಟ ನೋಡಿ

3) ಆನಯೈನಂ ಹರಿ ಶ್ರೇಷ್ಠ ದತ್ತಮಸ್ಯಾಭಯಂಮಯಾ ।
ವಿಭೀಷಣೋವಾ ಸುಗ್ರೀವ ಯದಿ ವಾ ರಾವಣ ಸ್ಸ್ವಯಮ್ ॥

ಎಲೈ ಸುಗ್ರೀವ ಮಹಾರಾಜನೇ ಅಂತಂಕ್ಷದಲ್ಲಿದ್ದು ನನ್ನನ್ನು ಶರಣ ಹೊಂದಿದ ಇವನು ವಿಭೀಷಣನೇ ಆಗಿರಲಿ, ಅವನ ವೇಷವನ್ನು ಹಾಕಿಕೊಂಡು ಬಂದ ರಾವಣನೇ ಆಗಲಿ, ಈತನಿಗೆ ನಾನು ಅಭಯ ಪ್ರದಾನ ಮಾಡಿರುತ್ತೇನೆ. ಇವನನ್ನು ಕರೆದುಕೊಂಡು ಬಾ.
ರಾಮಾಯಣ ಯುದ್ಧಕಾಂಡ

4) ಕಥಂಚಿದುಪಕಾರೇಣ ಕೃತೇನೈ ಕೇನ ತುಷ್ಯತಿ ॥
ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ ॥ ರಾಮಾ (2-1-13)

ನಾವು ಮಾಡಿದ ಒಂದು ಕೃತ್ಯವು ಯದೃಚ್ಛೆಯಾಗಿಯಾದರೂ ಸತ್ಕಾರ್ಯವೆನಿಸಿದರೆ ಅದನ್ನು ಮಹೋಪಕಾರ ಮಾಡಿದುದಾಗಿ ಶ್ರೀ ರಾಮಚಂದ್ರನು ತಿಳಿದು ಸಂತೋಷ ಪಡುತ್ತಾನೆ. ಮಹೋದಾರ ಸ್ವಭಾವನಾದ್ದರಿಂದ ನೂರು ಅಪಕಾರಗಳನ್ನೂ (ಅನಂತಾಪರಾಧಗಳನ್ನು ಎಂದು ಭಾವ.) ನೆನೆಯುವುದಿಲ್ಲ.

5) ಗೋವಿಂದೇತಿ ಯದಾ ಕ್ರಂದತ್ ಕೃಷ್ಣಾ ಮಾಂ ದೂರವಾಸಿನಮ್॥
ಋಣಂ ಪ್ರವೃದ್ಧಮಿವಮೇ ಹೃದಯಾನ್ನಾಪಸರ್ಪತಿ ॥ ಭಾರತ ಉದ್ಯೋಗ ಪರ್ವ

ಪಡಿಯೇ ಅತ್ಯಲ್ಪಾನುಕೂಲ ವ್ಯಾಪಾರತ್ತೈಯುಂ ಪರಮೋಪಕಾರಂ ಪಣ್ಣಿನಾರ್ಪೋಲೇ ಮರವಾದೊಳ್ಗೈ.ಇದು ತನ್ ಪಕ್ಕಲಿಲ್ಏತೇನು ಮೊರುವಲ್ಲ್ ಕುರಿ ಕಂಡಾಲ್ ಇನಿ ನಮ್ಮೈಯೊರುಕಾಲತ್ತಿಲುಮ್ ಕೈವಿಡಾನೆನ್ರಿರುಕ್ಕೈಕ್ಕುರುಪ್ಪಾಮ್.

೧೦) ಸ್ಥಿರತ್ವಮಾವದು ? ಆಶ್ರಿತರಕ್ಷಣತ್ತಿಲ್ ನಿಲೈಯುಡೈಮೈ. ಇದು ಅತ್ಯಂತಾನ್ತರಂಗರ್ ವಿಲಕ್ಕಿಲುಮ್ 1) "ನತ್ಯಜೇಯಂ ಕಥಂಚನ" ಎನ್ಗಿರಪಡಿಯೇ ನಮ್ಮೈವಿಡಾನೆನ್ರು ನಮ್ಬುಹೈಕ್ಕುರುಪ್ಪಾಮ್.

೧೧. ಪರಿಪೂರ್ಣತ್ವಮಾವದು ? ಅವಾಪ್ತ ಸಮಸ್ತ ಕಾಮತ್ವಮ್. ಇದು 2) "ಅಣ್ವಪ್ಯುಪಹೃತಂ ಭಕ್ತೈಃ ಪ್ರೇಮ್ಣಾಭೂರ್ಯೇವಮೇಭವೇತ್ !" 3) "ಪತ್ರಂಪುಷ್ಪಂ ಫಲಂತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ"ಇತ್ಯಾದಿಹಳಿಲ್ ಪಡಿಯೇ ಭಾವ ಬಂಧಮ್ ಪಾರ್ರುಮತ್ತನ್ಯೈಯೊಳ್ಳಿಯ ಮತ್ತುಮ್ ನಾಮಿಡುಂ ಪಚ್ಚೈಯಿಲ್ ವರಿಶೈ ಪಾರಾನೆನ್ರು ವಲ್ಲ ಕಿಂಚಿತ್ಕಾರತ್ತಿಲೇ ಮುಯಲ್ಹೈಕ್ಕುರುಪ್ಪಾಮ್.

೧೨. ಪರಮೋದಾರತ್ವಮಾವದು ? ಉಪಾಯ ಲಾಘವಮುಮ್ ಉಪೇಯ ಗೌರವಮುಮ್, ಪಾತ್ರಾಪಕರ್ಷಮುಮ್ ಪಾರಾದೇ ಸರ್ವಸ್ವದಾನಮ್ ಪಣ್ಣಿಯುಮ್, ನಾಮ್ ಶೆಯ್ದದು ಪೋರಾದನ್ರಿರುಕ್ಕಮ್

---

ಆ ಆಕ್ರಂದನದ ಸಾಲವನ್ನು ಇನ್ನೂ ತೀರಿಸಲಿಕ್ಕಾಗಿಲ್ಲ ಎಂದು ಭಗವಂತನು ಹೇಳಿರುವಂತೆ, ಅತ್ಯಲ್ಪಾನುಕೂಲ ವ್ಯಾಪರತ್ತೈಯುಮ್– ಬಹಳ ಅಲ್ಪವಾದ ಶರಣಾಗತಿ ರೂಪ ಅನುಕೂಲ ವ್ಯಾಪಾರವನ್ನು ಪರಮೋಪಕಾರ ಮಾಡಿದುದಾಗಿ ಮರೆಯದೆ ಇರುವುದು. ಇದುತನ್‌ಪಕ್ಕಲಿಲೇ ಇತ್ಯಾದಿ– ಇದು ತನ್ನ ಹತ್ತಿರ ಯಾವುದಾದರೂ ಒಂದು ವಲ್ಲಕುರಿ–ತನಗೆ ಶಕ್ಯವಾದ ವ್ಯಾಜವು ಏರ್ಪಟ್ಟರೆ ಅನಂತರ ನಮ್ಮನ್ನು ಒಂದು ಸಮಯದಲ್ಲೂ ಕೈಬಿಡುವುದಿಲ್ಲವೆಂದಿರುವುದಕ್ಕೆ ಸಾಧನವಾಗುತ್ತದೆ ಸ್ಥಿರತ್ವಮಾವದು-ಸ್ಥಿರತ್ವವು ಯಾವುದೆಂದರೆ, ಆಶ್ರಿತರಕ್ಷಣದಲ್ಲಿ ನಿಲೈಯುಡೈಮೈ– ಅಪ್ರಕಂಪ್ಯವಾದ ಮನೋಭಾವವನ್ನುಳ್ಳವನಾಗಿರುವುದು. ಇದು ಅತ್ಯಂತ ಇತ್ಯಾದಿ– ಇದು ಬಹಳ ಅಂತರಂಗರು (ತನಗೆ ಬೇಕಾದವರು) ತಡೆದರೂ 1) ನತ್ಯಜೇಯಂ ಕಥಂಚನ– ಯಾವ ಕಾರಣದಿಂದಲೂ ಬಿಡುವುದಿಲ್ಲ ಎಂಬಂತೆ ಶರಣಾಗತರಾದ ನಮ್ಮನ್ನು ಕೈ ಬಿಡುವುದಿಲ್ಲವೆಂದು ನಂಬುವುದಕ್ಕೆ ಉರುಪ್ಪಾಮ್– ಸಾಧನವಾಗುತ್ತದೆ. ಪರಿಪೂರ್ಣತ್ವಮಾವದು–ಪರಿಪೂರ್ಣತ್ವವೆಂದರೆ ಅವಾಪ್ತಸಮಸ್ತಕಾಮತ್ವ. ತಾನು ಇಚ್ಛಿಸಿದುದನ್ನು ಪಡೆಯುವುದು. ಇದು 2) ಅಣ್ವಪ್ಯುಪಹೃತಂಭಕ್ತೈಃ ಇತ್ಯಾದಿ– ಇದು ಭಕ್ತರು ಬಹಳ ಸ್ವಲ್ಪವಾದ ಉಪಹಾರವನ್ನು ಸಮರ್ಪಿಸಿದರೂ ಅವರ ಭಕ್ತಿಯನ್ನು ನೋಡಿ ಬಹಳ ದ್ರವ್ಯವನ್ನು ಸಮರ್ಪಿಸಿದುದಾಗಿ ಭಾವಿಸುವುದೂ, 3) ಪತ್ರಂಪುಷ್ಪಂ ಫಲಂತೋಯಂ ಇತ್ಯಾದಿ ಒಂದು ತುಳಸಿದಳ, ಒಂದು ಹೂವು, ಒಂದು ಹಣ್ಣು, ಒಂದು ಉದ್ಧರಿಣೀತೀರ್ಥ ಇವುಗಳನ್ನು ಭಕ್ತಿಯಿಂದ ಯಾರು ಸಮರ್ಪಿಸುತ್ತಾರೋ ಅವರ ಶುದ್ಧ ಭಾವವನ್ನು ನೋಡಿ ನಾನು ತೃಪ್ತಿಯಾಗಿ ಅದನ್ನು ಸ್ವೀಕರಿಸುತ್ತೇನೆ, ಇತ್ಯಾದಿ ಹೇಳಿರುವಂತೆ ಭಾವಬಂಧಮ್ ನಮ್ಮ ಭಕ್ತಿ ಭಾವವನ್ನು ನೋಡುತ್ತಾನೆಯೇ ವಿನಹ, ನಾವು ಸಮರ್ಪಿಸುವ ಪಚ್ಚೈಯಿಲೇ–ಪತ್ರ, ಪುಷ್ಪಾದಿಗಳಲ್ಲಿ ವರಿಶೈಪಾರಾನ್– ತಾರತಮ್ಯವನ್ನು ನೋಡುವುದಿಲ್ಲವೆಂದು ತಿಳಿದು ವಲ್ಲಕಿಂಚಿತ್ಕಾರತ್ತಿಲೇ–ತನಗೆ ಶಕ್ಯವಾದ ಯಾವುದಾದರೂ ಒಂದು ಒಳ್ಳೆಯ ಕೆಲಸದಲ್ಲಿ ಪ್ರವರ್ತಿಸುವುದಕ್ಕೆ ಸಾಧಕವಾಗುತ್ತದೆ ಪರ ಮೋದಾರತ್ವಮಾವದು ಇತ್ಯಾದಿ– ಪರಮೋದಾರತ್ವವೆಂದರೆ ಕ್ಷಣಕಾಲ ಸಾಧ್ಯವಾದ ಉಪಾಯಭಾವವನ್ನೂ, ಪ್ರಾಪ್ಯವಾದ ಪರಮ

---

1) ರಾಮಾಯಣ 6-18-3 ಪುಟ ನೋಡಿ

2). ಅಣ್ವಪ್ಯುಪಹೃತಂ ಭಕ್ತೈಃ ಪ್ರೇಮ್ಣಾ ಭೂರ್ಯೇವ ಮೇ ಭವೇತ್ ।
ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ ॥ ಭಾಗವತ (10·81-3)
ನನ್ನ ಭಕ್ತರು ಪ್ರೀತಿಯಿಂದ ಸಮರ್ಪಿಸಿದ ಅತ್ಯಲ್ಪವಾದ ಉಪಹಾರವೂ ನನಗೆ ಬಹಳ ಸಮರ್ಪಿಸಿದುದಾಗಿಆಗುತ್ತದೆ ಭಕ್ತರಲ್ಲದವರು ಬಹಳ ಸಮರ್ಪಿಸಿದರೂ ನನಗೆ ಸಂತೋಷವನ್ನುಂಟು ಮಾಡುವುದಿಲ್ಲ.

3) ತದಹಂಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥ ಇದು ಉತ್ತರಾರ್ಧ-ಗೀತೆ 9-26

**ವದಾನ್ಯತೈ ಇದು ದಧಿಭಾಂಡಾದಿಹಳೈಪ್ಪೋಲೇ ಹಠಾತ್ಕಾರಂ ಪಣ್ಣಿಯುಂ ಅನುಬಂಧಿ ಪರ್ಯಂತಮಾಹ ಪರಮಪುರುಷಾರ್ಥತ್ತೈಯಪೇಕ್ಷಿಕ್ಕೈಕ್ಕುರುಪ್ಪಾಮ್.**

ಇಪ್ಪಡಿ ಪುತ್ತುಮ್ ಶರಣ್ಯತ್ತೈಕ್ಕು ಉಪಯುಕ್ತಮಾನ ಗುಣಙ್ಗಳೈಯುಂ, ಅವತ್ತಿನುಡೈಯ ಉಪಯೋಗ ವಿಶೇಷಙ್ಗಳೈಯುಂ ಇಙ್ಗೇ ಅನುಸಂಧಿತ್ತುಕ್ಕೊಳ್ವದು.

ಉತ್ತರಖಂಡಸ್ಥ ನಾರಾಯಣ ಶಬ್ದೇ ಅನುಸಂಧೇಯ ಗುಣಾಃ

**ಉಪಾಯಾನುಷ್ಠಾನದಶೈಯಿಲವ್ವೋವಿದ್ಯೈಹಳುಕ್ಕಡೈತ್ತ ಕತಿಪಯ ಗುಣ ವಿಶಿಷ್ಟನ್ ಅನುಸಂಧೇಯ ನಾಯ್, ಪ್ರಾಪ್ತಿದಶೈಯಿಲ್ ಸಮಸ್ತಗುಣ ವಿಭೂತಿವಿಶಿಷ್ಟನ್ ಅನುಭಾವ್ಯನ ನಾಲುಮ್, ಇಙ್ಗು ಉತ್ತರ ಖಂಡತ್ತಿಲ್ ನಾರಾಯಣಶಬ್ದತ್ತುಕ್ಕು ಸ್ವರೂಪಕೃತಮಾಯುಂ, ಗುಣಕೃತಮಾಯುಂ, ವರುಮ್ ಕೈಂಕರ್ಯ ಪ್ರತಿಸಂಬಂಧಿತ್ವತ್ತಿಲೇ ನೋಕ್ಕಾನಪಡಿಯಾಲೇ, ಅದುಕ್ಕು ಉಪಯುಕ್ತಙ್ಗಳಾನ ಶೇಷಿತ್ವ ನಿರತಿಶಯ ಭೋಗ್ಯತ್ವಾದಿಹಳ್ ಪ್ರಧಾನತಮಙ್ಗಳ್.**

---

ಪದದಲ್ಲುಳ್ಳ ಉತ್ಕರ್ಷ ವಿಶೇಷವೆಂಬ ಉಪೇಯ ಗೌರವವನ್ನೂ ಈ ಫಲವನ್ನು ಹೊಂದಲೆಣಿಸುವ ಪ್ರಪನ್ನನ ಅತಿ ನೀಚತೆಯೆಂಬ ಪಾತ್ರಾಪಕರ್ಷವನ್ನೂ ನೋಡದೆ ಸರ್ವಸ್ವದಾನವನ್ನು ಮಾಡಿಯೂ ನಾವು ಮಾಡಿದುದು ಸಾಲದು ಎಂದಿರುವ ವದಾನ್ಯತೆ– ಔದಾರ್ಯ– ಇದು **ದಧಿಭಾಂಡಾದಿಹಳೈ ಪ್ಪೋಲೇ**– ಈ ಔದಾರ್ಯವು ದಧಿಭಾಂಡಾದಿಗಳ ಹಾಗೆ ಹಠಾತ್ಕಾರಮ್–ಬಲಾತ್ಕಾರವನ್ನು ಮಾಡಿಯೂ ಅನುಬಂಧಿಹಳ್-ತನಗೆ ಸೇರಿದ ಜನರ ಪರ್ಯಂತವಾಗಿ ಪರಮ ಪುರುಷಾರ್ಥವಾದ ಮೋಕ್ಷವನ್ನು ಅಪೇಕ್ಷಿಸುವುದಕ್ಕೆ ಸಾಧಕವಾಗುತ್ತದೆ. ಅದಾಗಿ ದಧಿಭಾಂಡನೆಂಬ ಗೋಪನು ಒಂದು ಸಲ ಕೃಷ್ಣನು ಕಣ್ಣಾಮುಚ್ಚಾಲೆಯಾಡುತ್ತಾ, ತನ್ನ ಮನೆಯಲ್ಲಿ ಅವಿತುಕೊಳ್ಳಲು ಬಂದಾಗ ಅವನನ್ನು ತನ್ನ ದೊಡ್ಡ ಮಡಕೆಯೊಳಗೆ ಅವಿಸಿಟ್ಟು, ಮೇಲೆ ಮುಚ್ಚಳವನ್ನೂ ಹಾಕಿ ಮರೆಸಿದನು. ಹುಡುಕಲು ಬಂದ ಹುಡುಗರು ಅವನ ಮನೆಯನ್ನೆಲ್ಲಾ ಹುಡುಕಿ, ಕೃಷ್ಣನು ಇಲ್ಲವೆಂದು ಹೇಳಿಕೊಂಡು ಹೋದ ಮೇಲೆ ಕೃಷ್ಣನು ದಧಿಭಾಂಡನನ್ನು ಮುಚ್ಚಳ ತೆಗೆದು ತನ್ನನ್ನು ಹೊರಗೆ ಬಿಡೆಂದು ಕೇಳಲು, ದಧಿಬಾಂಡನು, ಕೃಷ್ಣಾ ನೀನು ದೇವರಂತೆ, ಹಾಗಾದರೆ ನನಗೆ ಮೋಕ್ಷವನ್ನು ಕೊಡು ಎಂದು ಕೇಳಿದನು. ಆಗ ಕೃಷ್ಣನು ಕೊಟ್ಟೆ ಎಂದು ಹೇಳಲು, ನನ್ನ ಈ ಮಡಕೆಗೂ ಕೊಡು ಎಂದು ಕೇಳಲು, ಕೊಟ್ಟೆನೆಂದು ಕೃಷ್ಣನು ಹೇಳಿದನು- ಆದಿ ಶಬ್ದದಿಂದ ಧ್ರುವನು ತನ್ನ ತಾಯಿಗೂ, ಮೋಕ್ಷವನ್ನು ಅಪೇಕ್ಷಿಸಿದುದೂ, ಘಂಟಾಕರ್ಣನು ತನ್ನ ಒಡ ಹುಟ್ಟಿದವನಿಗೂ ಮೋಕ್ಷವನ್ನು ಅಪೇಕ್ಷಿಸಿದುದು ವಿವಕ್ಷಿತ. ಹೀಗೆ ಅನುಬಂಧಿ ಪರ್ಯಂತ ಮೋಕ್ಷವನ್ನು ಕೊಡುವುದು ಪ್ರಪತ್ತಿ ವಿದ್ಯೆಗೆ ಅಸಾಧಾರಣವಾದ ಮಹಿಮೆ.

ಇಪ್ಪಡಿ ಹೀಗೆ **ಶರಣ್ಯತ್ತೈಕ್ಕು**–ರಕ್ಷಕತ್ವಕ್ಕೆ ಉಪಯುಕ್ತಗಳಾದ ಮಾರ್ದವ, ಆರ್ಜವಾದಿ ಗುಣಗಳನ್ನೂ ಅವುಗಳ ಉಪಯೋಗ ವಿಶೇಷಗಳನ್ನೂ ಇಲ್ಲಿ ಅನುಸಂಧಾನ ಮಾಡಿಕೊಳ್ಳತಕ್ಕದ್ದು.

**ಉತ್ತರಖಂಡದಲ್ಲಿಯ ನಾರಾಯಣ ಶಬ್ದದಲ್ಲಿ ಅನುಸಂಧೇಯವಾದ ಗುಣಗಳು.**

ಪ್ರಸಂಗವಾಗಿ ಉತ್ತರ ಖಂಡದಲ್ಲಿರುವ ನಾರಾಯಣ ಶಬ್ದವನ್ನು **ಉಪಾಯಾನುಷ್ಠಾನದಶೈಯಿಲ್**– ಎಂದಾರಂಭಿಸಿ ವ್ಯಾಖ್ಯಾನಿಸುತ್ತಾರೆ. ಅದಾಗಿ ಉಪಾಯಾನುಷ್ಠಾನವನ್ನು ಮಾಡುವಾಗ ಆಯಾಯಾ ವಿದ್ಯೆಗಳಿಗೆ ಅಂದರೆ ದಹರ ಶಾಂಡಿಲ್ಯ, ವೈಶ್ವಾನರ, ಭೂಮ ನ್ಯಾಸ ವಿದ್ಯೆಗಳಿಗೆ, ಹೇಳಿದ ಕೆಲವು ಗುಣಗಳಿಂದ ಕೂಡಿದವನು ಆದಿ ಶಬ್ದದಿಂದ ವಿಗ್ರಹ ವಿಶಿಷ್ಟನಾಗಿ ಅನುಸಂಧೇಯನಾಗಿ, **ಪ್ರಾಪ್ತಿದಶೆಯಲ್ಲಿ ಸಮಸ್ತಗುಣ** ವಿಭೂತಿ ವಿಶಿಷ್ಟನಾಗಿ ಅನುಭಾವ್ಯನಾದರೂ ಇಂಗು **ಉತ್ತರಖಂಡತ್ತಿಲ್**– ಈ ಶರಣಾಗತಿ ಮಂತ್ರದಲ್ಲಿ ಉತ್ತರಖಂಡದಲ್ಲಿಯ ನಾರಾಯಣ ಶಬ್ದಕ್ಕೆ ಸ್ವರೂಪ ಕೃತವಾಗಿಯೂ ಗುಣಕೃತವಾಗಿಯೂ ಉಂಟಾಗುವ ಕೈಂಕರ್ಯ ಪ್ರತಿ ಸಂಬಂಧಿಯಾದ

ಇಙ್ಗು ಸಂಬಂಧವಿಶೇಷಾದಿ ಮುಖತ್ತಾಲೇ ಆನುಕೂಲ್ಯ ಸಂಕಲ್ಪಮುಮ್ ಪ್ರಾತಿಕೂಲ್ಯವರ್ಜನ ಮುಮ್ ಸೂಚಿತಮಾನಪಡಿ ಅಧಿಕಾರಾಂತರತ್ತಿಲೇ ಶೊನ್ನೋಮ್.

## ಚರಣ ಶಬ್ದಾರ್ಥಃ

ಇವ್ವಿಡತ್ತಿಲ್, "ಶ್ರೀಮನ್ನಾರಾಯಣ ಚರಣೌ" ಎನ್ರು ಸಮಸ್ತಮಾಹವುಮ್ ಯೋಜಿಪ್ಪರ್‌ಹಳ್. ೧) "ಕಮಲನಯನ ವಾಸುದೇವ ಭವಶರಣಮ್" ಎನ್ಗಿರ ಪ್ರಯೋಗತ್ತೈಯುಮ್, "ತ್ವಮೇವೋಪಾಯ ಭೂತೋ ಮೆ ಭವ" ಎನ್ಗಿರ ವಾಕ್ಯತ್ತೈಯುಮ್, ೨) "ಅಹಲಹಿಲ್ಲೇನ್" ಎನ್ಗಿರ ಪಾಟ್ಟೈಯುಮ್, ೩) "ಅಕಿಂಚನೋಽನನ್ಯಗತಿ ಶ್ಶರಣ್ಯ" ಎನ್ಗಿರ ಸ್ತೋತ್ರವಾಕ್ಯತ್ತೈಯುಮ್, ೪) "ಶ್ರೀಮನ್ನಾರಾಯಣ ಸ್ವಾಮಿನ್" ಇತ್ಯಾದಿ ಮನ್ತ್ರಾಂತರಂಗಳೈಯುಮ್, ದ್ವಯ ವಿವರಣಮಾನ ಗದ್ಯತ್ತೈಯುಮ್, ಪಾರ್ತ್ತು, "ಶ್ರೀಮನ್, ನಾರಾಯಣ" ಎನ್ರಿರಣ್ಡು ಸಂಬುದ್ಧಿಹಳಾಕ್ಕಿ "ತವ" ಎನ್ರೊರುಪದತ್ತೈ ಅಧ್ಯಾಹರಿತ್ತುಮ್ ಯೋಜಿಪ್ಪರ್‌ಹಳ್.

---

ಭಗವಂತನ ಗುಣಗಳಲ್ಲಿ ದೃಷ್ಟಿ, ಅದಕ್ಕೆ ಪ್ರಯುಕ್ತಗಳಾದವು ಶೇಷಿತ್ವ, (ಇದು ಸ್ವರೂಪಕ್ಕೆ ವುಚಿತವಾದುದು) ನಿರತಿಶಯ ಭೋಗ್ಯತ್ವವು, (ಗುಣಕೃತವಾದುದು) ಇವು ಪ್ರಧಾನತಮಗಳು ಇಂಗುಸಂಬಂಧ ವಿಶೇಷಾದಿಮುಖ ತ್ತಾಲೇ ಇತ್ಯಾದಿ- ಇಲ್ಲಿ ಸ್ವಸ್ವಾಮಿ ಭಾವರೂಪ ಸಂಬಂಧ ವಿಶೇಷ, ಆದಿ-ಶಬ್ದದಿಂದ ಸೂಚಿತವಾದ ಸರ್ವ ಶರೀರಿತ್ವ, ಇವುಗಳ ಮೂಲಕ ಆನುಕೂಲ್ಯ ಸಂಕಲ್ಪವೂ ಪ್ರಾತಿ ಕೂಲ್ಯವರ್ಜನವೂ ಸೂಚಿತವಾದ ರೀತಿಯನ್ನು ಅಧಿಕಾರಾಂತರತ್ತಿಲೇ–ಪರಿಕರ ವಿಭಾಗಾಧಿಕಾರದಲ್ಲಿ ಹೇಳಿದುದಾಗಿ ಆಚಾರ್ಯರು ಅನುಗ್ರಹಿಸುತ್ತಾರೆ.

## ಚರಣ ಶಬ್ದಾರ್ಥ

ಅನಂತರ ಚರಣ ಶಬ್ದಾರ್ಥವನ್ನು "ಇವ್ವಿಡತ್ತಿಲ್ ಶ್ರೀಮನ್ನಾರಾಯಣ ಚರಣೌ" ಎಂದಾರಂಭಿಸಿ ಅನು ಗ್ರಹಿಸುತ್ತಾರೆ. ಆದಾಗಿ ಇಲ್ಲಿ ಶ್ರೀಮನ್ನಾರಾಯಣಚರಣೌ ಎಂದು ಸಮಸ್ತ ಪದವಾಗಿಯೂ ಯೋಜಿಸುತ್ತಾರೆ. ವ್ಯಸ್ತ ಪದಗಳಾಗಿ ಯೋಜಿಸುವುದಕ್ಕೆ ಪ್ರಮಾಣಗಳನ್ನು ಅನುಗ್ರಹಿಸುತ್ತಾರೆ. ಅದಾಗಿ 1) "ಕಮಲನಯನ ವಾಸುದೇವ ! ಭವ ಶರಣಂ". ಎಂಬ ಪ್ರಯೋಗದಲ್ಲಿ ಸಂಬುದ್ಧಿಯಾಗಿ ಭಗವನ್ನಾಮಗಳನ್ನು ಹೇಳಿ, ನೀನು ನನಗೆ ಶರಣ್ಯನಾಗು-ರಕ್ಷಕನಾಗು, ಎಂಬ ಪ್ರಯೋಗವನ್ನೂ, ತ್ವಮೇವೋಪಾಯ ಭೂತೋ ಮೇ ಭವ",ಎಂಬ ವಾಕ್ಯ ವನ್ನೂ 2) ಅಹಲಹಿಲ್ಲೇನ್ ಎಂಬ ಪಾಶುರವನ್ನೂ 3) ಅಕಿಂಚನೋಽನನ್ಯಗತಿಶ್ಶರಣ್ಯ ಎಂಬ ಸ್ತೋತ್ರ ವಾಕ್ಯವನ್ನೂ 4) ಶ್ರೀಮನ್ನಾರಾಯಣ ಸ್ವಾಮಿನ್-ಇತ್ಯಾದಿ ಮಂತ್ರಾಂತರಗಳನ್ನೂ, ದ್ವಯ ವಿವರಣವಾದ ಗದ್ಯವನ್ನೂ ನೋಡಿ ಶ್ರೀಮನ್ ನಾರಾಯಣ ! ಎಂದು ಎರಡು ಸಂಬೋಧನ ಪದಗಳನ್ನು ಹೇಳಿ, 'ತವ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು ಸಹ ಯೋಜಿಸುತ್ತಾರೆ.

ಇಲ್ಲಿ ಶರಣಾಗತಿ ಗದ್ಯದಲ್ಲಿ "ಶ್ರೀಮನ್ನಾರಾಯಣ ತ್ವತ್ಪಾದಾರವಿಂದ ಯುಗಳಮ್, ಎಂದೂ ಶ್ರೀರಂಗ ಗದ್ಯದಲ್ಲಿ "ಶ್ರೀಮನ್ನಾರಾಯಣ ತವ ಚರಣಾರವಿಂದ ಯುಗಳಂ ಶರಣ ಮಹಂ ಪ್ರಪದ್ಯೇ "ಎಂದೂ ಅನುಸಂಧಾನ ಮಾಡಿರುವುದು ವಿವಕ್ಷಿತ.

---

1) ವಿಷ್ಣು ಪುರಾಣ 3-7-33 2) ತಿರುವಾಯ್ ಮೊಳಿ (6-10-10) 3) ಆಳವಂದಾರ ಸ್ತೋತ್ರ 22
4) ಪೌಷ್ಕರ ಸಂಹಿತೆ

ಇಪ್ಪಡಿ ವ್ಯಸ್ತಸಮಾಸಾಲುಮ್, ಸಮಸ್ತಸಮಾಸಾಲುಮ್ ವಿಶೇಷಣ ವಿಶೇಷ್ಯಂಗಳ್ ನಿರ್ಕುಂ ನಿಲೈಕ್ಕು ವೈಷಮ್ಯಮಿಲ್ಲೈ. ಇನ್ನಿಲೈ ಪೂರ್ವೋತ್ತರ ಖಂಡಗಳಿಲು ನೊಕ್ಕುಮ್.

"ಚರಣೌ" ಎನ್ಗಿರ ಶಬ್ದಮ್ ನಿತ್ಯಮಾನ ದಿವ್ಯ ಮಂಗಳ ವಿಗ್ರಹತ್ತುಕ್ಕು ಉಪಲಕ್ಷಣಮ್. ಶ್ರಿಯಃಪತಿಯಿನುಡೈಯ ಸರ್ವಸ್ಮಾತ್ಪರತ್ವಮುಮ್, ನಿತ್ಯವಿಗ್ರಹ ಯೋಗಮುಮ್, ಜ್ಞಾತವ್ಯಙ್ಗಳಿಲ್ ಪ್ರಧಾನತಮ ಮೆನ್ನುಮಿಡಮ್,

1) "ನಿತ್ಯಸಿದ್ಧೇ ತದಾಕಾರೇ ತತ್ಪರತ್ವೇಚ ಪೌಷ್ಕರ ।
ಯಸ್ಯಾಸ್ತಿಸತ್ತಾ ಹೃದಯೇ ತಸ್ಯಾಸೌ ಸನ್ನಿಧಿಂ ವ್ರಜೇತ್ ॥"

ಇತ್ಯಾದಿಹಳಿಲೇ ಪ್ರಸಿದ್ಧಮ್. ಆಹೈಯಾಲ್ "ಶ್ರೀಮನ್ನಾರಾಯಣ" ಎನ್ಗಿರವಿಡತ್ತಿಲೇ ಸೌಲಭ್ಯಾನ್ವಿತಮಾನ ಪರತ್ವಮುಮ್, "ಚರಣೌ" ಎನ್ಗಿರವಿಡತ್ತಿಲೇ ನಿತ್ಯವಿಗ್ರಹ ಯೋಗಮುಮ್ ಅನುಸಂಧೇಯಮ್.

**ದಿವ್ಯಾತ್ಮ ಸ್ವರೂಪಕಲ್ಯಾಣ ಗುಣಾಪೇಕ್ಷಯಾ ಜ್ಞಾತವ್ಯತ್ವೇ ದಿವ್ಯಮಙ್ಗಳ ವಿಗ್ರಹಸ್ಯ ಕಥಂ ಪ್ರಾಧಾನ್ಯಮ್ ?**

ದಿವ್ಯಾತ್ಮಸ್ವರೂಪತ್ತಿಲುಮ್, ಕೀರ್ಶೊನ್ನ ಗುಣಾದಿಹಳಿಲುಮ್, ತೆಳಿವಿಲ್ಲಾದಾರ್ಕುಮ್ ಶುದ್ಧಸತ್ತ್ವ

---

ಇಪ್ಪಡಿ ವ್ಯಸ್ತಸಮಾಸಾಲುಮ್ ಇತ್ಯಾದಿ – ಹೀಗೆ ಬಿಡಿಸಿ ಹೇಳಿದರೂ, ಸಮಸ್ತ–ಸಮಾಸ ಯುಕ್ತವಾಗಿ ಹೇಳಿದರೂ ಶ್ರೀ ಪುತ್ಪದವು ವಿಶೇಷಣವಾಗಿಯೂ, ನಾರಾಯಣ ಪದವು ವಿಶೇಷ್ಯವಾಗಿಯೂ ಇರುವ ನಿಲೈಕ್ಕು–ಸ್ಥಿತಿಗೆ ವೈಷಮ್ಯಮಿಲ್ಲೈ– ವ್ಯತ್ಯಾಸವಿಲ್ಲ, ತುಲ್ಯವೆಂದರ್ಥ. ಇನ್ನಿಲೈ ಇತ್ಯಾದಿ – ಈ ವಿಶೇಷಣ ವಿಶೇಷ್ಯ ಭಾವವು ಪೂರ್ವೋತ್ತರ ಖಂಡಗಳಲ್ಲಿ ಸಮಾನವಾದುದು. ಇದರಿಂದ ಉಪಾಯದ್ವಿತ್ವವೋ ಉಪೇಯದ್ವಿತ್ವವೋ ವಾರಿತವು. ವಿಶೇಷಣ ವಿಶೇಷ್ಯ ಭಾವದಿಂದ ಕೂಡಿದ ತತ್ವವು ಒಂದೇ.

ಚರಣೌ ಎಂಬ ಶಬ್ದವು ನಿತ್ಯವಾದ ದಿವ್ಯ ಮಂಗಳ ವಿಗ್ರಹಕ್ಕೆ ಉಪಲಕ್ಷಣ. ಅಂದರೆ ಚರಣವೆಂಬ ಅವಯವವು ಅವಯವಿಯನ್ನು ಉಪಲಕ್ಷಿಸುತ್ತದೆ. ಇದರಿಂದ ನಾರಾಯಣಾದಿ ದಿವ್ಯ ನಾಮಗಳಿಗೆ ದಿವ್ಯಮಂಗಳ ವಿಗ್ರಹ ವಿಶಿಷ್ಟತ್ವ, ಲಕ್ಷ್ಮೀ ವಿಶಿಷ್ಟತ್ವ ಚತುರ್ಭುಜ ತ್ವಾದ್ಯಸಾಧಾರಣಾ ಕಾರವು ರೂಢಿ ನಿಮಿತ್ತ. ಶ್ರಿಯಃಪತಿಯಿನುಡೈಯ ಇತ್ಯಾದಿ- ಲಕ್ಷ್ಮೀಪತಿಯ ಸರ್ವಸ್ಮಾತ್ ಪರತ್ವವೂ, ನಿತ್ಯ ವಿಗ್ರಹ ಯೋಗವೂ ತಿಳಿಯಲ್ಪಡಬೇಕಾದವುಗಳಲ್ಲಿ ಪ್ರಧಾನಗಳು. ಈ ಅಂಶವು 1) ನಿತ್ಯಸಿದ್ಧೇತದಾಕಾರೇ ಇತ್ಯಾದಿಗಳಲ್ಲಿ ಪ್ರಸಿದ್ಧ. ಹೇಪೌಷ್ಕರ-ತಾವರೆ ಪುಷ್ಪದಲ್ಲಿ ವುಂಟಾಗಿರುವ ಬ್ರಹ್ಮದೇವನೇ, ನಿತ್ಯಸಿದ್ಧೇತದಾಕಾರೇ–ನಿತ್ಯ ಸಿದ್ಧವಾದ ಭಗವಂತನ ದಿವ್ಯ ಮಂಗಳ ವಿಗ್ರಹದಲ್ಲಿಯೂ, ತತ್ಪರತ್ವೇಚ–ಅವನಸರ್ವಸ್ಮಾತ್ ಪರತ್ವದಲ್ಲಿಯೂ ಯಸ್ಯಾಸ್ತಿ ಸತ್ತಾಹೃದಯೇ ಇತ್ಯಾದಿ ಯಾವನಿಗೆ ಹೃದಯದಲ್ಲಿ ಜ್ಞಾನವು ರೂಢವಾಗಿದೆಯೋ, ಅವನಿಗೆ ಭಗವಂತನು ಪ್ರತ್ಯಕ್ಷನಾಗುತ್ತಾನೆ. ಆದಾಗಿ ಪರ ವ್ಯೂಹ ವಿಭವಾರ್ಚನಾದಿ ಶುಭಾಶ್ರಯ ದಿವ್ಯಮಂಗಳ ವಿಗ್ರಹಗಳು ಅವರವರ ಇಷ್ಟಾನುಸಾರಬ್ರಹ್ಮ ವಿದ್ಯೆಯಲ್ಲಿ ಅನುಸಂಧೇಯಗಳಾದರೂ, ವ್ಯೂಹ ವಿಭವಾರ್ಚನಾದಿ ರೂಪಗಳು ಶ್ರೀ ವೈಕುಂಠದಲ್ಲಿ ವಿರಾಜಮಾನನಾಗಿ ದಿವ್ಯ ಮಂಗಳವಿಗ್ರಹ ವಿಶಿಷ್ಟನಾಗಿರುವ ಭಗವಂತನ ನಿತ್ಯ ಸಿದ್ಧವಾದ ಪರರೂಪದ ಪರಿಣಾಮಗಳೆಂದು ತಿಳಿಯಲ್ಪಡಬೇಕೆಂದು ತಾತ್ಪರ್ಯ. ಆಹೈಯಾಲಿತ್ಯಾದಿ, ಆದ್ದರಿಂದ ಶ್ರೀಮನ್ನಾರಾಯಣ ಎಂಬಲ್ಲಿ ಸೌಲಭ್ಯದಿಂದ ಕೂಡಿದ ಪರತ್ವವೂ ಚರಣೌ ಎಂಬಲ್ಲಿ ನಿತ್ಯ ವಿಗ್ರಹ ಯೋಗವೂ ಅನುಸಂಧೇಯವು.

**ದಿವ್ಯ ಮಂಗಳ ವಿಗ್ರಹದ ಉತ್ಕರ್ಷ**

ದಿವ್ಯಾತ್ಮಸ್ವರೂಪಕ್ಕಿಂತಲೂ, ಗುಣಗಳಿಗಿಂತಲೂ ದಿವ್ಯ ಮಂಗಳ ವಿಗ್ರಹಕ್ಕೆ ಉತ್ಕರ್ಷವನ್ನು ದಿವ್ಯಾತ್ಮ ಸ್ವರೂಪತ್ತಿಲುಮ್ ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು

ದ್ರವ್ಯಮಯಮಾಯ್, ಸ್ವವಿಷಯಜ್ಞಾನತ್ತಾಲೇ ಜ್ಞಾನಸಙ್ಕೋಚತ್ತುಕ್ಕು ನಿವರ್ತಕಮಾಯ್, ಪರತ್ವ ಸೌಲಭ್ಯ ವ್ಯಂಜಕಮಾನ ದಿವ್ಯಮಙ್ಗಳ ವಿಗ್ರಹಮೇಯಿಲಕ್ಕಾವ್.

ದಿವ್ಯಮಙ್ಗಳ ವಿಗ್ರಹಾನು ಸಂಧಾನ ಪ್ರಾಧಾನ್ಯೇ ಪ್ರಮಾಣಾನಿ.

ಇಪ್ಪ್ರಾಧಾನ್ಯತ್ತೈಪ್ಪತ್ತಿ ಗದ್ಯತ್ತಿಲ್ ಗುಣಙ್ಗಳುಕ್ಕುಮುನ್ನೇ ದಿವ್ಯಮಙ್ಗಳ ವಿಗ್ರಹತ್ತೈಯರುಳಿಚ್ಚೆಯ್‌ದಾರ್. ದಿವ್ಯಾತ್ಮಸ್ವರೂಪತ್ತಿಲ್ ತೆಳಿವುಡೈಯರಾಯಿರುಕ್ಕಚ್ಚೆಯ್‌ದೇಯುಮ್ 1) ಮೂರ್ತಂ

---

ಉಪನಿಷತ್ಪ್ರತಿಪಾದ್ಯವಾದ ಭಗವಂತನ ದಿವ್ಯಾತ್ಮ ಸ್ವರೂಪದಲ್ಲಿಯೂ, ಕೀೞ್ಚೊನ್ನ-ಪೂರ್ವ ದಲ್ಲಿನಾರಾಯಣ ಶಬ್ದದಲ್ಲಿ ಹೇಳಿದ ಗುಣ ವಿಭೂತ್ಯಾದಿಗಳಲ್ಲಿಯೂ ವೈಶದ್ಯವಾದ ಜ್ಞಾನವಿಲ್ಲದವರಿಗೂ ಶುದ್ಧಸತ್ವ ದ್ರವ್ಯಮಯವಾಗಿ **ಸ್ವವಿಷಯಜ್ಞಾನತ್ತಾಲೇ ಜ್ಞಾನ ಸಂಕೋಚತ್ತುಕ್ಕು**-ತನ್ನನ್ನು ಧ್ಯಾನ ಮಾಡಿದ ಮಾತ್ರದಿಂದ ದಿವ್ಯಾತ್ಮ ಸ್ವರೂಪಜ್ಞಾನ ಸಂಕೋಚವನ್ನು **ನಿವರ್ತಕಮಾಯ್**-ಹೋಗಲಾಡಿಸುವ ಪರತ್ವ ಸೌಲಭ್ಯ ವ್ಯಂಜಕವಾದ ಶುಭಾಶ್ರಯ ದಿವ್ಯಮಂಗಳ ವಿಗ್ರಹವೇ **ಯಿಲಕ್ಕಾವ್**-ಲಕ್ಷ್ಯವು. ಅಂದರೆ **ಶ್ರೀಮನ್ನಾರಾಯಣ** ಶಬ್ದದಲ್ಲಿ ತಿಳಿಸಲ್ಪಟ್ಟ ಪರತ್ವ ಸೌಲಭ್ಯಗಳೂ ಅದಕ್ಕೆ ಉಚಿತವಾದ ಕಲ್ಯಾಣ ಗುಣಗಳೂ ನ್ಯಾಸೋಪಾಸನ ವಿದ್ಯೆಗಳನ್ನು **ಅನುಷ್ಠಿ**ಸುವವರಿಗೆ ಪ್ರತ್ಯಕ್ಷವಲ್ಲದೆ ಇದ್ದರೂ, ದಿವ್ಯ ಮಂಗಳ ವಿಗ್ರಹವು, ಮನುಷ್ಯರ ಕಣ್ಣು ಮತ್ತು ಮನಸ್ಸನ್ನು ಸೆಳೆಯುವಂತೆ ಬಹಳ ಸುಂದರವಾಗಿ ಪ್ರತ್ಯಕ್ಷವಾಗಿ ಕಾಣುತ್ತದೆ. ಇದು ಪರತ್ವ ಸೌಲಭ್ಯಗಳಲ್ಲಿಯೂ ಅವುಗಳಿಗೆ ಉಚಿತವಾದ ಕಲ್ಯಾಣ ಗುಣಗಳಲ್ಲಿಯೂ ಎಲ್ಲರಿಗೂ ದರ್ಶನ ಸಮಾನಾಕಾರವಾದ ವಿಶದಾನುಭವವು ಉಂಟಾಗಲು ಉಪಯುಕ್ತವಾದ ಸತ್ವೋನ್ಮೇಷವನ್ನೂ ಉಂಟು ಮಾಡಿ ಉಪಕಾರ ಮಾಡುತ್ತದೆ. ಈ ವಿಷಯವು

"ಅಸೌರಾಮೋಮಹಾಬಾಹುಃ ಅತಿಮಾನುಷ ಚೇಷ್ಟಯಾ !
ತೇಜೋಮಹತ್ತ್ವಯಾ ಚಾಪಿ ಸಂಸ್ಮಾರ ಯತಿ ಪೂರುಷಮ್ ॥

ಎಂದು ತಿಳಿಸಲ್ಪಟ್ಟಿದೆ ಆದಾಗಿ ಮಹಾಪರಾಕ್ರಮ ಶಾಲಿಯಾದ ಈ ರಾಮನು ತನ್ನ ಅತಿಮಾನುಷವಾದ ವ್ಯಾಪಾರ ದಿಂದಲೂ, ಪರಾಭಿಭವನರೂಪತೇಜಸ್ಸಿನಿಂದಲೂ ಪುರುಷ ಶಬ್ದ ವಾಚ್ಯನಾದ ಭಗವಂತನನ್ನು ಜ್ಞಾಪಕಪಡಿಸುತ್ತಾನೆ. ಸರ್ವಾಸ್ಮಾತ್ಪರನಾದ ಪುರಮ **ಪುರುಷನೇ** ಇವನು, ಎಂದು ದ್ಯೋತವಾಗುತ್ತದೆ, ಎಂದು ತಾತ್ಪರ್ಯ,

ಈ ರೀತಿಯಾದ ಉಪಕಾರತಿಶಯದಿಂದ ವಿದ್ಯಾ ನಿಷ್ಪತ್ತಿಗೆ **ದಿವ್ಯ** ಮಂಗಳ ವಿಗ್ರಹವು ಗುಣಗಳಿಗಿಂತಲೂ ಪ್ರಧಾನವಾದದ್ದು, **ಎಂಬುದನ್ನು ತಿಳಿಯಪಡಿಸಲು "ಚರಣ"** ಶಬ್ದದಿಂದ ಉಪಲಕ್ಷಿತವಾಗಿ ದ್ವಯ **ಮಂತ್ರ**ದಲ್ಲಿ "ನಾರಾಯಣ" ಶಬ್ದಾನಂತರ ಪಠಿತವಾಗಿದ್ದರೂ ಭಗವದ್ಭಾಷ್ಯಕಾರರಿಂದ, ಶರಣಾಗತಿ ಗದ್ಯದಲ್ಲಿ ನಾರಾಯಣ ಶಬ್ದಾರ್ಥವಾದ ಗುಣಗಳಿಗಿಂತ, ಮುಂಚಿತವಾಗಿಯೇ "ಸ್ವಾಭಿಮತಾನುರೂಪೈ ಕರೂಪ........ದಿವ್ಯರೂಪ" ಎಂದು ದಿವ್ಯ ಮಂಗಳ ವಿಗ್ರಹವು ಅನುಸಂಧಾನ ಮಾಡಲ್ಪಟ್ಟಿದೆ. **ಈ** ವಿಷಯವನ್ನು **ಇಪ್ರಾಧಾನ್ಯತ್ತೈಪ್ಪಟ್ರಿ** ಎಂದಾ ರಂಭಿಸಿ ಆಚಾರ್ಯರು ತಾವೇ ನಿರೂಪಿಸುತ್ತಾರೆ. ಅಂದರೆ ದಿವ್ಯ ಮಂಗಳ ವಿಗ್ರಹದ ಪ್ರಾಧಾನ್ಯವನ್ನು ಕುರಿತು ಗದ್ಯದಲ್ಲಿ ಗುಣಗಳಿಗೆ ಮುಂಚಿತವಾಗಿ ದಿವ್ಯ ಮಂಗಳ ವಿಗ್ರಹವನ್ನು ಅನುಸಂಧಾನ ಮಾಡಿರುತ್ತಾರೆ. ದಿವ್ಯ ಮಂಗಳ ವಿಗ್ರಹದ ಪ್ರಾಧಾನ್ಯವನ್ನು ಕುರಿತು ಒಂದು ಐತಿಹ್ಯ ಆದಾಗಿ **ದಿವ್ಯಾತ್ಮಸ್ವರೂಪತ್ತಿಲ್** ಇತ್ಯಾದಿ- ಭಗವಂತನ ದಿವ್ಯಾತ್ಮ ಸ್ವರೂಪದಲ್ಲಿ ತಿಳುವಳಿಕೆಯುಳ್ಳವರಾಗಿದ್ದುಕೊಂಡೇ 1) **ಮೂರ್ತಂಬ್ರಹ್ಮ** ಇತ್ಯಾದಿ –

---

1) ಶಾಂತಾನಂತ ಮಹಾವಿಭೂತಿಪರಮಂ ಯದ್ಬ್ರಹ್ಮ ರೂಪಂ ಹರೇಃ
ಮೂರ್ತಂ ಬ್ರಹ್ಮತತೋಽಪಿ ತತ್ಪ್ರಿಯತರಂ ರೂಪಂಯದತ್ಯದ್ಭುತಮ್ !
ಯಾನ್ಯನ್ಯಾನಿ ಯ ಥಾಸುಖಂ ವಿಹರತೋ ರೂಪಾಣಿ ಸರ್ವಾಣಿ ತಾನಿ
ಆಹುಸ್ವೈರನುರೂಪ ರೂಪವಿಭವೈಃ ಗಾಢೋಪಗೂಢಾನಿತೇ ॥ ಪ್ರ.ತಿ.ಸೋ

ಬ್ರಹ್ಮತತೋಽಪಿ ತತ್ಪ್ರಿಯತರಂ ರೂಪಂ ಯದತ್ಯದ್ಭುತಮ್" ಎನ್ನುಮ್ಬಡಿ, ಈಶ್ವರನ್‌ತನಕ್ಕುಂ ಭೋಗ್ಯತಮಮಾನ ನಿತ್ಯವಿಗ್ರಹಾನುಭವತ್ತಿಲ್ ಊತ್ತತ್ತಾಲೇ ತಿರುಮಂಗೈಯಾಳ್ವಾರ್ ತಮ್ಮೈ ಈಶ್ವರ ವಿಷಯತ್ತಿಲ್ ದೇಹಾತ್ಮವಾದಿಹಳಾಹ ವರುಳಿಚ್ಚೆಯ್‌ದಾರ್.

ದಿವ್ಯಮಂಗಳ ವಿಗ್ರಹಸ್ಯ ಶುಭಾಶ್ರಯತ್ವಮ್

ಸರ್ವೇಶ್ವರನುಡೈಯ ದಿವ್ಯಮಂಗಳ ವಿಗ್ರಹತ್ತುಕ್ಕು,

---

ಮೂರ್ತಂಬ್ರಹ್ಮ–ದಿವ್ಯ ಮಂಗಳ ವಿಗ್ರಹವು, ತತೋಽಪಿ ಸ್ವರೂಪಕ್ಕಿಂತಲೂ ಸೌಂದರ್ಯಾದಿ ಗುಣಗಳಿಂದ ಕೂಡಿ ಅತ್ಯದ್ಭುತವಾಗಿದೆ. ಎಂದು ಹೇಳುವಂತೆ, ಈಶ್ವರನ್ ತನಕ್ಕುಮ್ ಇತ್ಯಾದಿ–ಭಗವಂತನಿಗೂ ಭೋಗ್ಯತಮವಾದ ಅವನ ನಿತ್ಯ ವಿಗ್ರಹದ ಅನುಭವದಲ್ಲಿ ಅಭಿನಿವೇಶದಿಂದ ತಿರುಮಂಗೈಯಾಳ್ವಾರ್‌ರವರು ಭಗವಂತನ ವಿಷಯದಲ್ಲಿ ಅವನ ದೇಹವೇ ಆತ್ಮ ಸ್ವರೂಪ–ಬ್ರಹ್ಮ ಸ್ವರೂಪವೆಂದುಹೇಳುತ್ತಿದ್ದರು. ದೇಹವೂ ಆತ್ಮ ವೂ ಒಂದೇ ಪ್ರಕಾರವಾದವುಎಂದು ಹೇಳುವರು. ಈ ದೇಹಾತ್ಮ ವಾದವು ಅಜ್ಞಾನ ಕೃತವಲ್ಲ ಭಗವಂತನ ದಿವ್ಯಾತ್ಮ ಸ್ವರೂಪದ ಹಾಗೆ, ಅವನ ಪಂಚ ಪ್ರಕಾರಗಳಾದ ಪರ ವ್ಯೂಹ ವಿಭವ, ಹಾರ್ದ ಅಂತರ್ಯಾಮಿ ವಿಗ್ರಹಗಳೂ ಜ್ಞಾನ(ಸ್ವಯಂ ಪ್ರಕಾಶ) ಆನಂದಮಯಗಳಾಗಿ ದೃಷ್ಟಿ ಚಿತ್ತಾ ಪಹಾರಗಳಾಗಿರುವುವು ಎಂದು ತಾತ್ಪರ್ಯ. ಎರಡೂ ಒಂದೇ ವಿಧವಾಗಿರುವುವು. ಎಂದು ಭಾವ. ಈ ಸಂದರ್ಭದಲ್ಲಿ,

1) ವಿಶ್ವಾತಿಶಾಯಿ ಸುಖ ರೂಪ ಯದಾತ್ಮಕಸ್ತ್ವಂ
ವ್ಯಕ್ತಿಂ ಕರೀಶ ಕಥಯಂತಿ ತದಾತ್ಮಿಕಾಂತೇ !
ಯೇನಾಧಿರೋಹತಿ ಮತಿಸ್ತ್ವದು ಪಾಸಕಾನಾಂ
ಸಾ ಕಿಂ ತ್ವಮೇವ ತವ ವೇತಿ ವಿತರ್ಕ ಡೋಲಾಮ್ ॥ ವರದರಾಜ ಪಂಚಾಶತ್ 17)

ಎಲೈ ಕರೀಶ! ನಿನ್ನ ಸ್ವರೂಪವು. ವಿಶ್ವಾತಿಶಯವಾದ ಜ್ಞಾನಾನಂದ ರೂಪವು. ನಿನ್ನ ದಿವ್ಯ ಮಂಗಳ ವಿಗ್ರಹವೂ ಹಾಗೆಯೇ ಜ್ಞಾನನಂದ ಸ್ವರೂಪವಾದದ್ದು. ಇದರಿಂದ ನಿನ್ನನ್ನು ಉಪಾಸನೆ ಮಾಡುವವರಿಗೆ ಆ ದಿವ್ಯ ಮಂಗಳ ವಿಗ್ರಹವೇನೀನೇ ? ಅಥವಾ ಅದು ನಿನ್ನ ಶರೀರವೇ ಎಂಬ ಸಂದೇಹವು ಉಂಟಾಗುತ್ತದೆ.

2) ಕಿಮಾತ್ಮ ಕೋ ಭಗವಾನ್, ಕಿಮಾತ್ಮಿಕಾ ವ್ಯಕ್ತಿಃ,
ಜ್ಞಾನಾತ್ಮಕೋ ಭಗವಾನ್, ಜ್ಞಾನಾತ್ಮಿಕಾ ವ್ಯಕ್ತಿಃ, ರಹಸ್ಯಾಮ್ನಾಯ)

(ಭಗವಂತನು ಯಾವ ರೂಪನು. ಅವನ ವ್ಯಕ್ತಿ–ಶರೀರವು ಯಾವ ರೂಪವಾದದ್ದು. ಭಗವಂತನು ಜ್ಞಾನಾತ್ಮಕನು. ಅವನು ಶರೀರವು ಜ್ಞಾನಾತ್ಮಕವಾದದ್ದು. ಸ್ವಯಂ ಪ್ರಕಾಶವು.) ಇತ್ಯಾದಿ ಪ್ರಮಾಣಗಳು ಇಲ್ಲಿ ಅನುಸಂಧೇಯಗಳು.

ಸರ್ವೇಶ್ವರನುಡೈಯ ದಿವ್ಯ ಮಂಗಳ ವಿಗ್ರಹತ್ತುಕ್ಕು ಇತ್ಯಾದಿ– ಸರ್ವೇಶ್ವರನ ದಿವ್ಯ ಮಂಗಳ ವಿಗ್ರಹಕ್ಕೆ ಶುಭತ್ವವು (ಪಾಪಹಾರಿತ್ವವೂ) ಆಶ್ರಯತ್ವವೂ – ಚಿತ್ತಾಲಂಬನತ್ವವೂ ಉಂಟು. ಇದಕ್ಕೆ ಪ್ರಮಾಣ

---

ಹಸಿವು ದಾಹ, ಮೊದಲಾದವುಗಳಿಲ್ಲದ ಭಗವಂತನ ಸ್ವರೂಪವೇನು, ಬೇರೆ ಅವತಾರ ವಿಗ್ರಹಗಳೇನು ಇವೆಲ್ಲಕ್ಕೂ ಲಕ್ಷ್ಮಿಯು ಸದೃಶವಾದ ಸ್ವರೂಪ ರೂಪ ವಿಗ್ರಹ, ವಿಭವೈಃ- ಅನುಕೂಲ್ಯಗಳಿಂದ ಗಾಢವಾಗಿ ಸಂಶ್ಲಿಷ್ಟಳಾಗಿದ್ದಾಳೆ. ಚತುಶ್ಶ್ಲೋಕೀ-4

1) "ಪಾಪಂಹರತಿ ಯತ್ಪುಂಸಾಂ ಸ್ಮೃತಂ ಸಂಕಲ್ಪನಾಮಯಮ್ ।
ತತ್ಪುಂಡರೀಕ ನಯನಮ್ ವಿಷ್ಣೋರ್ದ್ರಕ್ಷ್ಯಾಮ್ಯಹಂ ಮುಖಮ್ ॥"

2) "ರೂಪೌದಾರ್ಯಗುಣೈಃ ಪುಂಸಾಂ ದೃಷ್ಟಿಚಿತ್ತಾಪಹಾರಿಣಮ್" ಇತ್ಯಾದಿಹಳಿರ್ಪಡಿಯೇ, ಶುಭತ್ವಮುಮ್ ಆಶ್ರಯತ್ವಮುಮುಣ್ಡು. ಬದ್ದರ್ಕ್ಕು ಆಶ್ರಯತ್ವಮುಂಡಾಹಿಲುಮ್ ಶುಭತ್ವಮಿಲ್ಲೈ. ಭಗವತ್ಸ್ವರೂಪತ್ತುಕ್ಕು ಶುಭತ್ವಮುಣ್ಡೇಯಾಹಿಲುಮ್ ಆಶ್ರಯತ್ವಮಿಲ್ಲೈ.

---

1) **ಪಾಪಂಹರತಿ** ಇತ್ಯಾದಿ ಶುಭ ಪ್ರದತ್ವಕ್ಕೆ ದೃಷ್ಟಾಂತವಿದು. 2) **ರೂಪೌದಾರ್ಯಗುಣೈಃ** ಇತ್ಯಾದಿ–ಅತ್ಯಂತ ಸುಂದರವಾದ್ದರಿಂದ ದೃಷ್ಟಿ ಚಿತ್ತಾಪಹಾರಿಯಾಗಿ ಚಿತ್ತಾಲಂಬನವಾಗಿದೆ. ಮನಸ್ಸಿಗೆ ವಿಷಯವಾಗುತ್ತದೆಯೆಂದರ್ಥ

**ಬದ್ದರ್ಕ್ಕಾಶ್ರಯತ್ವಮ್** ಇತ್ಯಾದಿ– ಬದ್ಧ ಜೀವರಿಗೆ ಶರೀರದಿಂದ ಕೂಡಿರುವುದರಿಂದ, ಆಶ್ರಯತ್ವವು–ಮನೋಗ್ರಾಹ್ಯರೂಪವಾದ ಆಶ್ರಯತ್ವವು ಇದ್ದರೂ ಪಾಪಹರತ್ವರೂಪವಾದ ಶುಭತ್ವವಿಲ್ಲ. **ಭಗವತ್ಸರೂಪತ್ತುಕ್ಕು**–ಇತ್ಯಾದಿ–ಭಗವಂತನ ಸ್ವರೂಪವು ಧ್ಯಾನಿಸಲ್ಪಟ್ಟು ಪಾಪವನ್ನು ಹೋಗಲಾಡಿಸುತ್ತದೆ. ಆದರೆ ಮನೋಗ್ರಾಹ್ಯತ್ವರೂಪವಾದ ಆಶ್ರಯತ್ವವಿಲ್ಲ. "ನತತ್ ಯೋಗಯುಜಾ ಶಕ್ಯಂ ನೃಪಚಿಂತಯಿತುಂ ಯತಃ "ಎಂದು ಆರಂಭದಲ್ಲಿ ಯೋಗದಿಂದ ಕೂಡಿದ ಮನಸ್ಸಿಗೆ ಭಗವತ್ಸ್ವರೂಪವು ಗೋಚರವಾಗುವುದಿಲ್ಲವೆಂದು ವಿಷ್ಣು ಪುರಾಣವು ಹೇಳುತ್ತದೆ. ಆದರೆ ಶುಭಾಶ್ರಯ ದಿವ್ಯ ಮಂಗಳ ವಿಗ್ರಹವನ್ನು ಚಿಂತನೆ ಮಾಡುವುದರಿಂದ ಯೋಗವು ನಿಷ್ಪನ್ನವಾಗಿ, ತದನಂತರ ಸ್ವರೂಪವು ಧ್ಯಾನಕ್ಕೆ ವಿಷಯವಾಗುತ್ತದೆಯೆಂದು "ನಿಷ್ಪನ್ನಯೋಗಿ ಧ್ಯೇಯಂತತ್" ಎಂದು ಹೇಳಿರುವುದರಿಂದ, ಭಗವತ್ಸ್ವರೂಪಕ್ಕೆ ಆಶ್ರಯತ್ವವು ಇಲ್ಲವೆಂಬುದು ಆರಂಭಯೋಗಿ ವಿಷಯ. ಭಗವತ್ಸ್ವರೂಪಕ್ಕೆ ಆಶ್ರಯತ್ವವು ಇದೆಯೆಂಬುದು ನಿಷ್ಪನ್ನ ಯೋಗಿ ವಿಷಯ.

ಇದರ ತಾತ್ಪರ್ಯವೇನೆಂದರೆ ಮನಸ್ಸಿನ ಕಲ್ಮಷತ್ವವನ್ನು ನಿವಾರಿಸುವುದಕ್ಕೆ ಶುಭವೆಂದರ್ಥ. ಆಶ್ರಯತ್ವವೆಂದರೆ ಮನಸ್ಸು ವಿಷಯಾಂತರಗಳಲ್ಲಿ ಹೋಗದೆ ಅವುಗಳಲ್ಲಿ ನಿಸ್ಪೃಹತೆಯನ್ನುಂಟು ಮಾಡುವಂತೆ ಸರ್ವಾಧಿಕ ಸೌಗಂಧ್ಯ ಸೌಕುಮಾರ್ಯ ಲಾವಣ್ಯಾದಿ ಗುಣಗಳಿಂದ ಕೂಡಿದ್ದು ಮನಸ್ಸನ್ನು ಸೆಳೆಯುವುದು. ದಿವ್ಯಾತ್ಮ ಸ್ವರೂಪವು ಮನೋಮಾಲಿನ್ಯವನ್ನು ಹೋಗಲಾಡಿಸಿದರೂ, ಉಪಾಸನೆಯು ನಿಷ್ಪನ್ನವಾದ ಮೇಲೆಯೇ ಮನಸ್ಸಿಗೆ ವಿಷಯವಾಗುತ್ತದೆ. ಅನಂತರವೇ ಮಾಲಿನ್ಯವನ್ನು **ಹೋಗಲಾಡಿಸ**ಲು ಸಮರ್ಥವಾಗುತ್ತದೆ. ದಿವ್ಯ ಮಂಗಳ ವಿಗ್ರಹವು ವಿದ್ಯಾಧಿಕಾರದಶೆಯಲ್ಲೇ ಅಂದರೆ ಆರಂಭದಲ್ಲೇ ಮಾಲಿನ್ಯ ನಿವಾರಕವಾಗುತ್ತದೆ. ಆದ್ದರಿಂದ ಶುಭಶ್ಚಾಸೌ ಆಶ್ರಯಶ್ಚ ಶುಭಾಶ್ರಯಃ ಎಂದು ದಿವ್ಯ ಮಂಗಳ ವಿಗ್ರಹವು ವಿಶೇಷಿಸಲ್ಪಡುತ್ತದೆ.

---

1) ವಿಷ್ಣು ಪುರಾಣ (5-12-4)

**ಭಗವಂತನ ಸಂಕಲ್ಪನಾಮಯಂ**– ಇಚ್ಛೆಯಿಂದ ಪರಿಗ್ರಹಿಸಲ್ಪಟ್ಟ ದಿವ್ಯ ಮಂಗಳ ವಿಗ್ರಹವು ನೋಡುವವರ ಪಾಪಗಳನ್ನು ಹೋಗಲಾಡಿಸುತ್ತದೆ. ಆ ಭಗವಂತನ ತಾವರೆಪುಷ್ಪಕ್ಕೆ ಸದೃಶವಾದ ಕಣ್ಣುಗಳಿಂದ ಕೂಡಿದ ಮುಖವನ್ನು ನೋಡುವ ಭಾಗ್ಯವು ನನಗಿದೆ (ಅಕ್ರೂರರ ಮಾತು ಇದು)

2) ಚಂದ್ರಕಾಂತಾನನಂ ರಾಮಂ ಅತೀವ ಪ್ರಿಯ ದರ್ಶನಮ್ ॥
ರೂಪೌದಾರ್ಯ ಗುಣೈಃಪುಂಸಾಂ ದೃಷ್ಟಿಚಿತ್ತಾಪಹಾರಿಣಮ್ ॥
ನ ತತರ್ಪ ಸಮಾಯಾಂತಂ ಪಶ್ಯಮಾನೋ ನರಾಧಿಪಮ್ ॥

ಚಂದ್ರನ ಹಾಗೆ ಪ್ರಕಾಶವಾದ ಮುಖವುಳ್ಳವನು ಶ್ರೀ ರಾಮಚಂದ್ರನು ಅವನ ದರ್ಶನವು ಬಹಳ ಪ್ರಿಯಕರ. ರೂಪದ ಔದಾರ್ಯ-ಮಹತ್ವದಿಂದಲೂ (ಉದಾರೋದಾತ್ತಮಹತೋ. ಎಂದು ಅಮರ,) ಕಲ್ಯಾಣ ಗುಣಗಳಿಂದಲೂ ಗಂಡಸರ ಕಣ್ಣು ಮನಸ್ಸನ್ನು ಸೆಳೆಯುವವನು. ರೂಪದ ಔದಾರ್ಯ ದಾನ ಅಂದರೆ ನೋಡುವವರಿಗೆ ತನ್ನ ಸೌಂದರ್ಯವನ್ನು ದಾನ ಮಾಡಿ ಅವರ ಮನಸ್ಸನ್ನು ಸೆಳೆಯುವವನು. ದಶರಥನು ಇಂಥಹ ಶ್ರೀ ರಾಮಚಂದ್ರನನ್ನು ನೋಡಿ ತೃಪ್ತಿಯನ್ನು ಹೊಂದಲೇ ಇಲ್ಲ.

ಸಂಸಾರಬಂಧರಹಿತಮಾನ ಪರಿಶುದ್ಧಾತ್ಮ ಸ್ವರೂಪತ್ತುಕ್ಕು, ಸಂಸರಿಕ್ಕೈಕ್ಕು ಸಹಕಾರಿಯೋಗ್ಯತೈಯಿಲ್ಲೈಯೇ ಯಾಹಿಲುಮ್, ಪರತಂತ್ರಚೇತನತ್ತೈಯಾಲೇ ಸಂಸರಿಕ್ಕೈಕ್ಕು ಸ್ವರೂಪಯೋಗ್ಯವಸ್ತುವಾಹೈಯಾಲೇ ಅದುಕ್ಕು ಹೇಯಪ್ರತ್ಯನೀಕತ್ವರೂಪ ಶುಭತ್ವಮುಮಿಲ್ಲೈ, ಆಶ್ರಯತ್ವಮುಮಿಲ್ಲೈ. ಮುಕ್ತರುಡೈಯ ವಿಗ್ರಹ ಪರಿಗ್ರಹ ದಶೈಯಿಲುಮ್, ನಿತ್ಯವಿಗ್ರಹರಾನ ನಿತ್ಯರ್ಕ್ಕುಮ್, ಆಶ್ರಯತ್ವಮುಣ್ಡೇಯಾಹಿಲುಮ್ ಸಂಸಾರನಿವರ್ತನ ಕ್ಷಮಮಾನ ಶುಭತ್ವಮಿಲ್ಲೈ. ಆಹೈಯಾಲ್ ದಿವ್ಯಮಂಗಳ ವಿಗ್ರಹತ್ತುಕ್ಕೇ ಮುಮುಕ್ಷೂಪಯುಕ್ತಮಾನ ಶುಭತ್ವಮುಮ್, ಆಶ್ರಯತ್ವಮುಮ್ ಉಳ್ಳದು.

ಉಕ್ತಮರ್ಥಂ ಕಾರಿಕಯಾ ಸಂಗೃಹ್ಣಾತಿ

ಪರಾವರ ಸುಖಗ್ರಾಹ್ಯಂ ಪ್ರೇಮಬೋಧ ಪ್ರಸಾವಕಮ್ ।
ಸ್ವರೂಪಾತ್ ಸ್ವಾಮಿನೋರೂಪ ಮುಪಾದೇಯತಮಂ ವಿದುಃ॥100॥

---

ಸಂಸಾರಬಂಧರಹಿತಮಾನ ಇತ್ಯಾದಿ– ಸಂಸಾರ ಬಂಧವಿಲ್ಲದ ಮುಕ್ತಾತ್ಮ ಸ್ವರೂಪಕ್ಕೆ ಪುನಃ ಸಂಸಾರದಲ್ಲೇ ಹುಟ್ಟಲು ಕರ್ಮಪರವಶ್ಯತ್ವವೆಂಬ ಸಹಕಾರಿ ಯೋಗ್ಯತೆಯು ಇಲ್ಲದೆ ಇದ್ದರೂ, **ಪರತಂತ್ರ ಚೇತನತ್ತೈಯಾಲೇ** ಭಗವಂತನಿಗೆ ಪರತಂತ್ರ ಚೇತನತ್ವ ರೂಪ ಸಂಸರಣ ಸ್ವರೂಪಯೋಗ್ಯತೆಯಿಂದ ಕೂಡಿದ ವಸ್ತುವಾದ್ದರಿಂದ ಆ ಮುಕ್ತಾತ್ಮ ಸ್ವರೂಪಕ್ಕೆಹೇಯ ಪ್ರತ್ಯನೀಕತ್ವ ರೂಪ ಶುಭತ್ವವು ಇಲ್ಲ. ವಿಗ್ರಹವಿಲ್ಲದಿರುವುದರಿಂದ ಯೋಗಯುಂಜಾನೋ ಗ್ರಾಹ್ಯತ್ವರೂಪ ಆಶ್ರಯತ್ವವೂ ಇಲ್ಲ. **ಮುಕ್ತರುಡೈಯ** ಇತ್ಯಾದಿ – ದಿವ್ಯ ವಿಗ್ರಹವನ್ನು ಪರಿಗ್ರಹಿಸಿರುವ ದಶೆಯಲ್ಲಿ ಮುಕ್ತರಿಗೂ ನಿತ್ಯ ವಿಗ್ರಹದಿಂದ ಕೂಡಿದ ನಿತ್ಯರಿಗೂ ಆಶ್ರಯತ್ವವು ಇದ್ದರೂ ಸಂಸಾರ ನಿವರ್ತನ ಕ್ಷಮವಾದ ಶುಭತ್ವವು ಇಲ್ಲ. **ಆಹೈಯಾಲ್**–ಆದ್ದರಿಂದ ಭಗವಂತನ ದಿವ್ಯ ಮಂಗಳ ವಿಗ್ರಹಕ್ಕೇ ಮುಮುಕ್ಷುಗಳಿಗೆ ಉಪಯುಕ್ತವಾದ ಶುಭತ್ವವೂ ಆಶ್ರಯತ್ವವೂ ಉಂಟು.

ಮೇಲೆ ಹೇಳಿದ ಅರ್ಥವನ್ನು ಕಾರಿಕಾರೂಪವಾಗಿ ಸಂಗ್ರಹಿಸುತ್ತಾರೆ. **ಪರಾವರ ಸುಖಗ್ರಾಹ್ಯಂ** ಇತ್ಯಾದಿ– ಪರ-ಬ್ರಹ್ಮಾದಿಗಳು, ಅವರ–ನಿಷ್ಪನ್ನಯೋಗಿಗಳಲ್ಲದ ನಾವುಗಳು, ಈ ಇಬ್ಬರಿಗೂ ಸುಖವಾಗಿ ಗ್ರಹಿಸತಕ್ಕದ್ದು. ಆಶ್ರಯತ್ವವೆಂಗರ್ಥ. ಇಲ್ಲಿ ಅವರ ಗ್ರಾಹ್ಯಂ ಎಂದು ಹೇಳಿರುವುದು ಯೋಗ ಯುಕ್ಕುಗಳಿಗೆ ಭಗವತ್ಸ್ವರೂಪವು ಸುಖ ಗ್ರಾಹ್ಯವಲ್ಲವಾದ್ದರಿಂದ ನಿರಾಲಂಬನಯೋಗ ವಿಷಯವಾದ ದಿವ್ಯಾತ್ಮ ಸ್ವರೂಪಕ್ಕೆ ನಿಷ್ಪನ್ನಯೋಗಿಗಳಲ್ಲದೆ ಆರೂಢ ಯೋಗರಿಗೆ ಆಶ್ರಯ ತ್ವವಿಲ್ಲವೆಂಬುದು ಸೂಚಿಸಲ್ಪಟ್ಟಿತು. **ಪ್ರೇಮಬೋಧ**–ಭಕ್ತಿಗೂ, ದಿವ್ಯಾತ್ಮ ಸ್ವರೂಪ ಸಾಕ್ಷಾತ್ಕಾರಕ್ಕೂ ವಿರೋಧಿ ನಿವರ್ತನ ದ್ವಾರಾ, **ಪ್ರಸಾವಕಮ್**–ಉತ್ಪಾದಕವು. ಇದರಿಂದ ಶುಭತ್ವವು ಸಿದ್ಧ. **ಸ್ವಾಮಿನಃ**– ಸ್ವಾಮಿಯ **ಸ್ವರೂಪಾತ್** ದಿವ್ಯಾತ್ಮ ಸ್ವರೂಪಕ್ಕಿಂತ **ರೂಪಂ**–ದಿವ್ಯಮಂಗಳ ವಿಗ್ರಹವು **ಉಪಾದೇಯತಮಂ ವಿದುಃ**– ಧ್ಯಾನಕ್ಕಾಗಿ ಸ್ವೀಕರಿಸಲು ಬಹಳ ಶ್ರೇಷ್ಟವು- ದಿವ್ಯಾತ್ಮ ಸ್ವರೂಪವು ಹೇಯ ನಿವರ್ತಕವಾಗಿ ಉಪಾದೇಯವು. ನಿಷ್ಪನ್ನ ಯೋಗಿಗಳಿಂದ ಧ್ಯಾನಿಸಲ್ಪಡುವುದರಿಂದ ಉಪಾದೇಯತರ. ಅದಕ್ಕಿಂತಲೂ, ಯೋಗ ಯುಕ್ಕುಗಳಾದವರಿಗೆ (ಯೋಗಾರಂಭ ದಶೆಯಲ್ಲಿರುವರಿಗೆ) ಸುಖ ಗ್ರಾಹ್ಯವಾದ್ದರಿಂದ ದಿವ್ಯ ಮಂಗಳ ವಿಗ್ರಹವು ಉಪಾದೇಯತಮವು. ಧ್ಯಾನ ಮಾಡಲು ಸ್ವೀಕರಿಸುವುದಕ್ಕೆ ಬಹಳ ಶ್ರೇಷ್ಠವು.

ಇಲ್ಲಿ, ಪದ್ಮಾಭಿರಾಮ ವದನೇಕ್ಷಣ ಪಾಣಿ ಪಾದಂ
ದಿವ್ಯಾಯುಧಾಭರಣಮಾಲ್ಯ ವಿಲೇಪಿನಂ ತ್ವಾಮ್ ।
ಯೋಗೇನ ನಾಥ ಶುಭಮಾಶ್ರಯಮಾತ್ಮವಂತಃ
ಸಾಲಂಬನೇನ ಪರಿಚಿಂತ್ಯ ನಯಾಂತಿ ತೃಪ್ತಿಮ್ ॥

**ಶರಣಾಗತಿ ವಿಧಾಯಕ ವಾಕ್ಯತ್ತಿಲುಮ್ "ಮಾಮೇಕಂ ಶರಣಂವ್ರಜ।" ಎನ್ರು ವಿಗ್ರಹ ವಿಶಿಷ್ಟನ್ ಇಲಕ್ಕಾಯ್ ತೋತ್ರಿನಾನ್.**

---

ಎಂಬ ಶರಣಾಗತಿ ದೀಪಿಕಾ ಶ್ಲೋಕವು ಅನುಸಂಧೇಯವು. (ತಾಮರೆ ಹೂವಿನಂತೆ ಮನೋಜ್ಞವಾದ ಬಾಯಿ, ಕಣ್ಣು, ಕೈ ಕಾಲುಗಳನ್ನುಳ್ಳವನಾಗಿ ದಿವ್ಯವಾದ ಆಯುಧ, ಆಭರಣ, ಚಂದನ, ಮಾಲೆಗಳಿಂದ ಅಲಂಕೃತವಾದ ಶುಭಾಶ್ರಯ ದಿವ್ಯಮಂಗಳ ವಿಗ್ರಹ ವಿಶಿಷ್ಟನಾದ ಭಗವಂತನನ್ನು ಸಾಲಂಬನ ಯೋಗದಿಂದ ಧ್ಯಾನ ಮಾಡಿ ಸಾಕ್ಷಾತ್ಕರಿಸಿ ತೃಪ್ತಿಯನ್ನು ಹೊಂದುವುದಿಲ್ಲ.)

"ಓಮಿತ್ಯಾತ್ಮಾನಂ ಯುಂಜೀತ" ಎಂದು ಪ್ರಪದನವನ್ನು ವಿಧಿಸುವ ವಾಕ್ಯದಲ್ಲಿ ದಿವ್ಯ ಮಂಗಳ ವಿಗ್ರಹವನ್ನು ವೇದ್ಯವಾಗಿ ತಿಳಿಸಲಿಲ್ಲವಲ್ಲವೇ. ದ್ವಯ ಮಂತ್ರದಲ್ಲಿ ಚರಣ ಶಬ್ದವನ್ನು ಹೇಳಿರುವುದು ಶ್ರುತ್ಯನುಸಾರ ವೇದ್ಯ ವಲ್ಲದುದರಿಂದ, ಅಧಿಕವಾಗಿ ಹೇಳಿರುವುದು ದೋಷವಲ್ಲ ಆದ್ದರಿಂದ ಶ್ರೀಮನ್ನಾರಾಯಣ ಎಂಬಲ್ಲಿ ಸ್ವರೂಪವೇ ವಿವಕ್ಷಿತವೆಂದು ಚೋದ್ಯ. ಇದಕ್ಕೆ ಸಮಾಧಾನವನ್ನು '**ಶರಣಾಗತಿವಿಧಾಯಕ ವಾಕ್ಯತ್ತಿಲುಮ್**- ಎಂದಾ ರಂಭಿಸಿ ಸಮಾಧಾನವನ್ನು ತಿಳಿಸುತ್ತಾರೆ. ಅದಾಗಿ ಶರಣಾಗತಿಯನ್ನು ವಿಧಿಸುವ "ಸರ್ವಧರ್ಮಾನ್ ಪರಿತ್ಯಜ್ಯ" ಎಂದಾರಂಭಿಸುವ ಚರಮ ಶ್ಲೋಕದಲ್ಲಿ "ಮಾಮೇಕಂ ಶರಣಂವ್ರಜ" ಎಂದು ವಿಗ್ರಹ ವಿಶಿಷ್ಟನು **ಇಲಕ್ಕಾಯ್**- ಲಕ್ಷ್ಯವಾಗಿ **ತೋಟ್ರಿನಾನ್**-ಪ್ರಕಾಶಿಸಿದನು. ಇದಕ್ಕೆ ಭಾವವೇನೆಂದರೆ ಚರಮ ಶ್ಲೋಕವು ಶರಣಗತಿ ವಿಧಿವಾಕ್ಯ ಶ್ರುತಿ ವಿಹಿತವಾದುದಕ್ಕೆ ಸ್ಮೃತಿಯಲ್ಲಿಯೂ ವಿಧಿ ಕಲ್ಪನೆ ಮಾಡುವುದರಿಂದ ಏನು ಪ್ರಯೋಜನವೆಂದು ಕೇಳಬಾರದು. ಶ್ರುತಿಯನ್ನು ಉಪಜೀವಿಸಿ ಪ್ರವೃತ್ತಗಳಾದ ಪುರುಷಕೃತಗಳಾದ ಗ್ರಂಥಗಳಿಗೆ ಶ್ರುತಿಯೇ ಮೂಲವಾದ್ದರಿಂದ ಶ್ರುತಿ ವಿಧಿಯೇ ಸಾಕು. ಪೌರುಷೇಯ ಗ್ರಂಥಗಳು ಶ್ರುತಿಯ ಅನುವಾದ ಮಾತ್ರವಾಗಿದ್ದು ಅಬಾಧಿತಾರ್ಥಗಳಲ್ಲಿ ಮಾತ್ರ ಪ್ರಮಾಣಗಳಾಗುತ್ತವೆ, ಎಂಬುದು ಒಪ್ಪಲ್ಪಡುತ್ತದೆ- ಆದರೆ ಭಗವಂತನಿಂದ ಪ್ರಣೀತಗಳಾದ ಶ್ರೀ ಗೀತೋಪನಿಷದ್ಭಗವಚ್ಛಾಸ್ತ್ರಗಳು ಸ್ವಾಭಾವಿಕ ಸರ್ವಜ್ಞಮೂಲಕತ್ವವಾದ್ದರಿಂದ ಶ್ರುತಿ ಮೂಲಕತ್ವವು ಬೇಕೆಂಬ ಅವಶ್ಯಕತೆಯಿಲ್ಲ. ಶ್ರುತಿಗಳಲ್ಲಿಯೂ ಅನ್ಯೋನ್ಯವಾದ ಉಪಜೀವ್ಯೋಪಜೀವಕ ಭಾವವು ಹೇಗೆ ಇಲ್ಲವೋ ಹಾಗೆಯೇ ಭಗವದ್ವಾಕ್ಯಗಳಿಗೂ ಶ್ರುತಿ ವಾಕ್ಯಗಳಿಗೂ ಪರಸ್ಪರ ಉಪಜೀವ್ಯೋಪಜೀವಕ ಭಾವವು ಇಲ್ಲ, ವೇದ ಸಂವಾದವು ಸಾರ್ವತ್ರಿಕವಾದ್ದರಿಂದ ವೈದಿಕತ್ವವೂ ಹೋಗುವುದಿಲ್ಲ. ವೇದ ಶಾಖೆಗಳಲ್ಲಿಯೂ ಒಂದೇ ಕರ್ಮವನ್ನು ವಿಧಿಸಿದರೂ ಪತಿ ಪತ್ನ್ಯತ್ವಭೇದದಿಂದ ಸಾರ್ಥಕತೆ ಸಾಧಿಸಲ್ಪಟ್ಟದೆ. ಅಲ್ಲಿಯೂ ಅನೇಕ ಧರ್ಮಗಳನ್ನು ತಿಳಿಸುವ ವಾಕ್ಯಗಳೇ ಕರ್ಮ ವಿಧಾಯಕಗಳು. ಅಲ್ಪ ಧರ್ಮವನ್ನು ವಿಧಿಸುವ ವಾಕ್ಯಗಳು ಆ ಗುಣಗಳ ವಿಧ್ಯರ್ಥಗಳಾಗಿ ಅನ್ಯತ್ರವಿಹಿತವಾದ ಕರ್ಮಗಳ ಅನುವಾದ ಮಾತ್ರವೆಂದು ಮೀಮಾಂಸಕರ ಅಭಿಪ್ರಾಯ ಆದ್ದರಿಂದ "ಓಮಿತ್ಯಾ ತ್ಮಾನಂ ಯುಂಜೀತ", ಎಂಬ ಶ್ರುತಿ ವಾಕ್ಯಕ್ಕಿಂತಲೂ, ಅಧಿಕಾರಿನೈರಪೇಕ್ಷ್ಯವೇದ್ಯಾಕಾರ ಫಲವಿಶೇಷಾದಿ, ಅನೇಕ ಧರ್ಮಗಳು ಹೇಳಲ್ಪಡುವುದರಿಂದ ಚರಮ ಶ್ಲೋಕವೇ ಶರಣಾಗತಿಗೆ ವಿಧಿ ವಾಕ್ಯವೆಂದು ಅಂಗೀಕರಿಸುವುದು. ಯುಕ್ತವೆಂಬುದು ತತ್ವ, ಈ ಚರಮ ಶ್ಲೋಕದಲ್ಲಿ "ಮಾಮೇಕಂ ಶರಣವ್ರಜ" ಎಂಬ ವಿಧಿಯಲ್ಲಿ ದಿವ್ಯ ಮಂಗಳ ವಿಗ್ರಹ ವಿಶಿಷ್ಟನಾದ ತನ್ನನ್ನು "ಮಾಮ್" ಎಂದು ತಿಳಿಸುವುದರಿಂದ, ಶುಭಾ ಶ್ರಯವಾದ ದಿವ್ಯಮಂಗಳ ವಿಗ್ರಹ ವಿಶಿಷ್ಟತೆಯಿಲ್ಲದೆ ದಿವ್ಯಾತ್ಮ ಸ್ವರೂಪವು ಗ್ರಹಿಸಲ ಶಕ್ಯವಾದ್ದರಿಂದ, ದಿವ್ಯ ಮಂಗಳವಿಗ್ರಹವಿಶಿಷ್ಟನೇ ಪ್ರಪತ್ತವ್ಯನು. ವಿಗ್ರಹ ವಿಶಿಷ್ಟನಲ್ಲೇ ಶರಣಾಗತಿಯನ್ನು ಮಾಡಬೇಕೆಂದು ವಿಧಿಯು ಪರ್ಯವಸಾನವಾಗುತ್ತದೆ. "ಓಮಿತ್ಯಾತ್ಮಾನಂ" ಎಂಬಲ್ಲಿಯೂ ವಿಶದತರವಾಗಿ ಹೇಳಲ್ಪಡುವ ವಾಕ್ಯಾಂತರಗಳಿಗೆ ಅನುಗುಣವಾಗಿ ವಿಗ್ರಹ ವಿಶಿಷ್ಟನೇ ನ್ಯಾಸ ವಿದ್ಯೆಯಿಂದ ವಶೀಕಾರ್ಯನು ಎಂಬುದು ಅಭಿಮತವಾದದ್ದು. ಆದರಿಂದ ವಸ್ತು ಸಾಮರ್ಥ್ಯದಿಂದಲೂ ವಿಧಿ ಬಲ ದಿಂದಲೂ ದಿವ್ಯಮಂಗಳ ವಿಗ್ರಹ ವಿಶಿಷ್ಟನೇ ಪ್ರಪತ್ತವ್ಯನು ಎಂಬುದು ಸಿದ್ಧಾಂತವೆಂದೂ ಕರೂರು ಸ್ವಾಮಿಗಳು ತಮ್ಮ ಸಾರಕೌಮುದೀ ವ್ಯಾಖ್ಯಾನದಲ್ಲಿ ವ್ಯವಸ್ಥೆಗೊಳಿಸಿದ್ದಾರೆ.

ಇದ್ದಿವ್ಯವಿಗ್ರಹಂ ಪರವ್ಯೂಹಾದ್ಯವಸ್ಥಾಪಂಚಕತ್ತಿಲುಮ್ ಶುಭಾಶ್ರಯಮೆನ್ನುಮಿಡಮ್ ಶಾಸ್ತ್ರ ಸಿದ್ಧಮ್.

ದಿವ್ಯಮಂಗಳ ವಿಗ್ರಹಸ್ಯ ಶುಭಾಶ್ರಯತ್ವೇ ಸ್ಥಿತೇ, ಚರಣಯೋರೇವ ಶರಣತ್ವೇ ಕೋ ಹೇತುಃ ?

ಚಿತ್ತಾಲಂಬನ ಸೌಕರ್ಯ ಕೃಪೋತ್ತಂಭಕ (ಸ) ತಾದಿಭಿಃ ।
ಉಪಾಯತ್ವಮಿಹ ಸ್ವಾಮಿಪಾದಯೋರನುಸಂಹಿತಮ್ ॥

ಇಜ್ಗು ದಾಸಭೂತನ್ ಔಚಿತ್ಯಾತಿಶಯತ್ತಾಲುಮ್.1) "ಅನತಿಕ್ರಮಣೀಯಂಹಿ ಚರಣಗ್ರಹಣಮ್" ಎನ್ಗಿಪಡಿಯೇ ಕೃಪೋತ್ತಂಭಕತ್ವಾತಿ ಶಯತ್ತಾಲುಮ್,2)"ತವಾಮೃತಸ್ಯಂದಿನಿ" ಇತ್ಯಾದಿಹಳಿರ್ಪಡಿಯೇ ಭೋಗ್ಯತ್ವಾತಿಶಯತ್ತಾಲುಮ್ ತಿರುವಡಿಹಳೈ ಅವಲಂಬಿಕ್ಕಿರಾನ್.

---

ಹಾಗಾದರೆ ಉತ್ಪತ್ತಿ ವಿಶಿಷ್ಟ ಶ್ರೀ ಪಾರ್ಥ ಸಾರಥಿಯ ದಿವ್ಯ ವಿಗ್ರಹದಿಂದ ಕೂಡಿದ ಭಗವಂತ ನಲ್ಲಿ ಶರಣಾಗತಿಯನ್ನು ಮಾಡಬೇಕೆಂದು ಏರ್ಪಟ್ಟು ವಿಗ್ರಹಾಂತರಗಳು ಅನ್ವಯಿಸದೆ ಅವತಾರಾಂತರಗಳಲ್ಲಿ ಪ್ರಪತ್ತಿಯನ್ನು ಮಾಡುವುದು ತಡೆಯಲ್ಪಡುತ್ತದೆ ಯೆಂದರೆ ಅದಕ್ಕೆ ಸಮಾಧಾನವನ್ನು ಇದ್ದಿವ್ಯ ವಿಗ್ರಹಮ್ ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಈ ದಿವ್ಯ ವಿಗ್ರಹವು ಪರವ್ಯೂಹಾದ್ಯವಸ್ಥೆಗಳಿಂದ ಕೂಡಿದ ಐದು ರೂಪ ಗಳಲ್ಲಿಯೂ ಶುಭಾ ಶ್ರಯವೆಂಬುದು ಶಾಸ್ತ್ರ ಸಿದ್ಧ. ಆದ್ದರಿಂದ ಆಯಾಯಾ ಶಾಸ್ತ್ರಗಳಿಂದ ಅಲ್ಲಲ್ಲಿ ಹೇಳಲ್ಪಟ್ಟು ಪರವ್ಯೂಹಾದಿ ಎಲ್ಲಾ ರೂಪಗಳೂ ಶುಭಾಶ್ರಯಗಳಾದ್ದರಿಂದ ಪ್ರಪತ್ತವ್ಯಗಳು ಮತ್ತು ಉಪಾಸ್ಯಗಳು ಎಂದು ಉಪದೇಶಿಸಲ್ಪಟ್ಟಿದೆ. ಇವುಗಳಿಗೆ ವಿರೋಧವಿಲ್ಲದೆ ಸರ್ವ ಪ್ರಕಾರ ಶುಭಾಶ್ರಯ ವಿಶಿಷ್ಟನಾದ ಪಾರ್ಥ ಸಾರಥಿ ರೂಪದಲ್ಲಿರುವ ತನ್ನನ್ನು ಪ್ರಪತ್ತವ್ಯನನ್ನಾಗಿ "ಮಾಮೇಕಂ ಶರಣಂವ್ರಜ" ಎಂದು ಹೇಳಿರುವುದು ಇತರ ರೂಪಗಳಿಗೂ ಉಪ ಲಕ್ಷಣವೆಂಬುದು ಸಿದ್ಧಾಂತ.

ಹಾಗಾದರೆ ಅಚೇತನವಾದ ಚರಣಗಳನ್ನು ಶರಣವಾಗಿ ಹೇಳಿರುವುದಕ್ಕೆ ಏನು ತಾತ್ಪರ್ಯವೆಂದರೆ ಅದನ್ನು ಚಿತ್ತಾಲಂಬನ ಸೌಕರ್ಯ ಇತ್ಯಾದಿಯಾಗಿ ಆರಂಭಿಸಿ ನಿರೂಪಿಸುತ್ತಾರೆ. ಅದಾಗಿ ದೊಡ್ಡದಾದ ಭಗವಂತನ ವಿಗ್ರಹವನ್ನು ಉಪಾಯವಾಗಿ ಧ್ಯಾನ ಮಾಡುವುದಕ್ಕಿಂತ ಚಿಕ್ಕದಾದ ಶ್ರೀ ಪಾದಗಳನ್ನು ಉಪಾಯವಾಗಿ ಧ್ಯಾನ ಮಾಡುವುದರಲ್ಲಿ ಚಿತ್ತಕ್ಕೆ–ಆಲಂಬನ ಆಶ್ರಯ ಸೌಕರ್ಯವಿರುವುದರಿಂದಲೂ ಕೃಪೋತ್ತಂಭನ ತಾದಿಭಿಃ ಕೃಪೆಗೆ ಉತ್ತಂ ಭಕವಾದ್ದರಿಂದಲೂ ಉಪಾಯತ್ವಂ-ನಿರಪೇಕ್ಷ ರಕ್ಷಕತ್ವವು ಸ್ವಾಮಿಯಾದ ಭಗವಂತನ ಪಾದಗಳಲ್ಲಿ ಅನುಸಂಧಾನ ಮಾಡಲ್ಪಟ್ಟಿದೆ. ಇದನ್ನು ಇಂಗು ದಾಸ ಭೂತನು ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಇಂಗು ಈ ಪ್ರಕರಣದಲ್ಲಿ ದಾಸ ಭೂತನಿಗೆ ಪಾದಗ್ರಹಣವು ಅತ್ಯಂತ ಉಚಿತವಾದ್ದರಿಂದಲೂ "ಅನತಿ ಕ್ರಮಣೀಯಂ ಹಿ ಚರಣ ಗ್ರಹಣಮ್" ದಯಾಳುವು ತನ್ನ ಕಾಲನ್ನು ಹಿಡಿದವನ ಇಷ್ಟಾರ್ಥವನ್ನು ಕೊಡದೆ ಬಿಡಿಸಿಕೊಂಡು ಹೋಗಲಾಗುವುದಿಲ್ಲ, ಎಂಬಂತೆ ಕೃಪೋತ್ತಂಭಕ ತ್ವಾತಿಶಯತ್ತಾಲಮ್ ಚರಣ ಗ್ರಹಣವು ಭಗವಂತನ ಕೃಪೆಯನ್ನು ಅಧಿಕ ಪಡಿ ಸುತ್ತದೆಯಾದ್ದರಿಂದಲೂ 2) ತವಾಮೃತ ಸ್ಯಂಧಿನಿ ಇತ್ಯಾದಿಗಳಲ್ಲಿ ಹೇಳಿರುವಂತೆ ಭೋಗ್ಯತ್ವಾತಿಶಯದಿಂದಲೂ ಪ್ರಪನ್ನನು ಭಗವಂತನ ಶ್ರೀಪಾದವನ್ನು ಆಶ್ರಯಿಸುತ್ತಾನೆ.

---

1) 2) ತವಾಮೃತಸ್ಯಂದಿನಿ ಪಾದಪಂಕಜೇ ನಿವೇಶಿತಾತ್ಮಾ ಕಥಮನ್ಯದಿಚ್ಛತಿ ।
ಸ್ಥಿತೇಽರವಿಂದೇ ಮಕರಂದ ನಿರ್ಭರೇ ಮಧುವ್ರತೋನೇಕ್ಷುರಕಂಹಿ ವೀಕ್ಷತೇ ॥

ಭಗವಂತನೇ ನಿನ್ನ ಮಧುಸ್ಯಂದಿಯಾದ ಪಾದಪದ್ಮದಲ್ಲಿ ಮನಸ್ಸನ್ನಿಟ್ಟವನು, ಐಶ್ವರ್ಯ ಕೈವಲ್ಯಾದಿ ಇತರ ಕ್ಷುದ್ರಪುರುಷಾರ್ಥ ಗಳನ್ನು ಅಪೇಕ್ಷಿಸುವುದಿಲ್ಲ. ಹೇಗೆಂದರೆ ಜೇನಿನಿಂದ ಪೂರ್ಣವಾದ ತಾವರೆಪುಷ್ಪವು ಇರುವಾಗ, ಮಧುಕರವು-ಜೇನುಹುಳವು ಇಕ್ಷುರಕಂ-ಕೀರ್ಮುಳ್ಳಿ ಕಳ್ಳಿಹೂವನ್ನು ಅಪೇಕ್ಷಿಸುವುದಿಲ್ಲವಲ್ಲವೇ.

ಇನ್ವರ್ಥಂ 3) "ಸರ್ವದಾ ಚರಣದ್ವಂದ್ವಮ್" 4) "ತ್ವತ್ಪಾದ ಕಮಲಾದನ್ಯತ್" 5) ಮಮತೇ ಪಾದಯೋಃಸ್ಥಿತಮ್" 6) "ಲೋಕ ವಿಕ್ರಾನ್ತ ಚರಣೌ ಶರಣಂ ತೇ ವ್ರಜಂ ವಿಭೋ" 7) "ಸಭ್ರಾತು ಶ್ಚರಣೌ ಗಾಢಮ್"

8) "ತಸ್ಯ ತಾಮ್ರತಲೌ ತಾತ ಚರಣೌ ಸುಪ್ರತಿಷ್ಠಿತೌ ।
ಸುಜಾತ ಮೃದುರಕ್ತಾಭಿ ರಙ್ಗುಲೀಭಿರಲಂಕೃತೌ ।
ಪ್ರಯತೇನ ಮಯಾಮೂರ್ಧ್ನಾ ಗೃಹೀತ್ವಾಹ್ಯಭಿವಂದಿತೌ ॥"

9) "ಚರಣೌ ಶರಣಂಯಾತಃ" 10) ಪ್ರಪನ್ನಾಘೌಘವಿಧ್ವಂಸಿ ಚರಣೌ ಶರಣಂಗತಃ" ಇತ್ಯಾದಿಹೇಳಲುವ್

---

ಇನ್ವರ್ಥಮ್ ಇತ್ಯಾದಿ ಶೇಷಭೂತನು ಭಗವಂತನ ಪಾದಗಳನ್ನೇ ಆಶ್ರಯಿಸುವುದು ಯುಕ್ತವಾದದ್ದು ಎಂಬುದಕ್ಕೆ ವಚನಾಂತರಗಳನ್ನು ಪ್ರಮಾಣೀಕರಿಸಲು **ಇನ್ವರ್ಥಮ್** – ಎಂದಾರಂಭಿಸಿ ಆಚಾರ್ಯರು ಅನುಗ್ರಹಿಸುತ್ತಾರೆ. ಅದಾಗಿ 3) **ಸರ್ವದಾಚರಣ ದ್ವಂದ್ವಮ್** ಪ್ರಜಾಮಿ ಶರಣಂ ತವ, ಎಂಬುದು ಮುಂದಿನ ಪಾದ. ನಿನ್ನ ಎರಡು ಪಾದಗಳನ್ನು ಶರಣ ಹೊಂದಿದ್ದೇನೆ 4) ತ್ವತ್ಪಾದ **ಕಮಲಾ ದನ್ಯತ್** ನಿನ್ನ ಪಾದಕಮಲವಲ್ಲದೆ ಕ್ಷೇಮವನ್ನು ಕೊಡತಕ್ಕದ್ದು ನನಗೆ ಬೇರೆ ಯಾವುದೂ ಇಲ್ಲ 5) **ಮಮ ತೇ ಪಾದಯೋಃ ಸ್ಥಿತಮಗಿ** "ನ ಕಾಮ ಕಲುಷಂ ಚಿತ್ತಂ"ಎಂಬುದು ಮೊದಲನೇಯ ಪಾದ.ನನ್ನ ಶುದ್ಧ ಮನಸ್ಸು ನಿನ್ನ ಪಾದಗಳಲ್ಲಿ ಲಗ್ನವಾಗಿದೆ **6) ಲೋಕ ವಿಕ್ರಾಂತ ಚರಣೌ ಶರಣಂತೇ** ವಜ್ರಂ ವಿಭೋ–ಲೋಕಗಳನ್ನು ಅಳೆದ ನಿನ್ನ ಪಾದಗಳಲ್ಲಿಶರಣು 7) **ಸಭ್ರಾತು ಶ್ಚರಣೌಗಾಢಂ** –ಲಕ್ಷ್ಮಣನು ಸೀತೆಯೊಡಗೂಡಿದ ಅಣ್ಣನ ಕಾಲುಗಳಲ್ಲಿ ವಿಶ್ವಾಸಯುಕ್ತನಾ ಶರಣು ಹೊಂದಿದನು 8) **ತಸ್ಯ ತಾಮ್ರ ತಲೌ ತಾತ ಚರಣೌ ಸುಪ್ರತಿಷ್ಠಿತೌ** ಇತ್ಯಾದಿ– ಪರಿಶುದ್ಧನಾಗಿದ್ದು ಆ ಕೃಷ್ಣ ಪರಮಾತ್ಮನ ಪಾದಗಳನ್ನು ತಲೆಯಲ್ಲಿ ಧರಿಸಿ ನಮಸ್ಕರಿಸಿದೆನು 9) **ಚರಣೌ ಶರಣಂ ಯಾತಃ** ಪಾದಗಳನ್ನು ಶರಣು ಹೊಂದಿದೆನು 10) **ಪ್ರಪನ್ನಾ ಘೌಘ ವಿಧ್ವಂಸಿ ಚರಣೌ ಶರಣಂ ಗತಃ**– ಪ್ರಪನ್ನರ

---

3) ದೇವಾನಾಂ ದಾನವಾನಾಂ ಚ ಸಾಮಾನ್ಯ ಮಧಿ ದೈವತಮ್।
ಸರ್ವದಾ ಚರಣ ದ್ವಂದ್ವಂ ವ್ರಜಾಮಿ ಶರಣಂ ತವ ॥ **ಜಿತಂತಾಸ್ತೋತ್ರ**(1-2)
ದೇವತೆಗಳಿಗೂ,ದಾನವರಿಗೂ, ಭಗವಂತನು ಸಾಮಾನ್ಯನಾದ ದೇವರು.ಎಲ್ಲರಿಗೂ ಬೇಕಾದವನು.ಅಂಥಹ ನಿನ್ನ ಎರಡು ಪಾದಗಳನ್ನು ಸರ್ವಕಾಲಗಳಲ್ಲಿಯೂ ರಕ್ಷಕಗಳನ್ನಾಗಿ ಆಶ್ರಯಿಸುತ್ತೇನೆ.

4) ತ್ವತ್ಪಾದ ಕಮಲಾದನ್ಯತ್ ನಮೇ ಜನ್ಮಾಂತರೇಷ್ವಪಿ !
ನಿಮಿತ್ತಂ ಕುಶಲಸ್ಯಾಸ್ತಿ ಯೇನ ಗಚ್ಛಾಮಿ ಸದ್ಗತಿಮ್ ॥ **ಜಿಂತತಾಸ್ತೋತ್ರ** (1-10)
ಜಿತಂತೇ (1–10) ಸ್ವಾಮಿಯೇ । ನಿನ್ನಪಾದ ಕಮಲಗಳನ್ನು ಬಿಟ್ಟರೆ, ನನಗೆ ಕ್ಷೇಮವನ್ನುಂಟುಮಾಡಿ ಸದ್ಗತಿಯನ್ನು ಪಡೆಯಲು ನಿಮಿತ್ತವು ಬೇರೆ ಯಾವುದೂ ಇಲ್ಲ,

5) ನ ಕಾಮ ಕಲುಷಂಚಿತ್ತಂ ಮಮತೇಪಾದಯೋಃ ಸ್ಥಿತಮ್ ।
ಕಾಮಯೇ ವೈಷ್ಣವತ್ವಂತು ಸರ್ವಜನ್ಮಸು ಕೇವಲಮ್ ॥ **ಜಿಂತತಾಸ್ತೋತ್ರಮ್** (1-13
ಇತರ ವಿಷಯಗಳಲ್ಲಿ ಆಸೆಯೆಂಬ ಕಾಲುಷ್ಯವಿಲ್ಲದ ನನ್ನಮನಸ್ಸು ನಿನ್ನ ಪಾದಗಳಲ್ಲಿ ಸಕ್ತವಾಗಿದೆ. ಎಲ್ಲಾ ಜನ್ಮಗಳಲ್ಲಿಯೂ ವಿಷ್ಣುವಿಗೆ ದಾಸನಾಗಿರುವುದನ್ನೇ ಆಸೆಪಡುತ್ತೇನೆ.

6) ಜಿತಂತಾಸ್ತೋತ್ರ

7) ರಾಮಾಯಣ ಆರಣ್ಯಕಾಂಡ (15-6) 942ನೇ ಪುಟನೋಡಿ

8) ಭಾರತ ಆರಣ್ಯಪರ್ವ (160-135)

9) 10)

ಪ್ರಸಿದ್ಧವ್- ಇವತ್ತೈಯಡಿಯೊತ್ತಿನವರ್‌ಹಳುವ್ ) "ಉನ್ನಡಿ ಕ್ಕೀೞ್ ಅಮರ್‌ನ್ದು ಪುಹುನ್ದೇನೇ" ಎನ್ರುವ್ 2) "ತ್ವತ್ಪಾದಮೂಲಮ್ ಶರಣಂ ಪ್ರಪದ್ಯೇ" ಎನ್ರುವ್ ಅರುಳಿಚ್ಚೆಯ್‌ದಾರ್.

ಸೌಗಂಧ ಸೌಕುಮಾರ್ಯಾದಿ ಗುಣವಿಗ್ರಹವಾನ್ ಹರಿಃ ।
ತಸ್ಯಸ್ವಾತ್ಮ ಪ್ರದಾನೇತು ಸಾಧನಂ ಸ್ವಪದ ದ್ವಯಮ್" ॥

ಎನ್ರು ಅಭಿಯುಕ್ತರುಮ್ ಪ್ರತಿಪಾದಿತ್ತಾರ್‌ಹಳ್.

## ಚರಣ ಶಬ್ದೇ ಅವಧಾರಣಂ ವಿವಕ್ಷಿತಮ್.

ಚರಣೌ ಎನ್ಗಿರ ವಿಡತ್ತಿಲೇ 4) "ತಮೇವ ಶರಣಂ ಗಚ್ಛ" 5) "ಕೞಲ್‌ಹಳ್‌ನ್ನೈಯೇ ಶರಣಾಹ

---

ಪಾಪಗಳನ್ನು ಹೋಗಲಾಡಿಸುವ ಪಾದಗಳನ್ನು ಶರಣ ಹೊಂದಿದೆನು ಇತ್ಯಾದಿ ವಾಕ್ಯಗಳಲ್ಲಿಯೂ ಭಗವಂತನ ಪಾದಗಳನ್ನಾಶ್ರಯಿಸುವುದು ಪ್ರಸಿದ್ಧವಾಗಿದೆ.

**ಇವಟ್ರೈಯಡಿಯೊತ್ತಿನವರ್ ಹಳುವ್** ಇತ್ಯಾದಿ– ಈ ಶ್ರೀ ಸೂಕ್ತಿಗಳನ್ನು 1) **ಉನ್ನಡಿಕ್ಕೀೞ್ ಅಮರ್‌ನು ಪುಹುಂದೇನೇ** - ನಿನ್ನ ಪಾದ ಪರಿಸರಗಳಲ್ಲಿ ಮಹಾ ವಿಶ್ವಾಸದಿಂದ ನನ್ನಾತ್ಮ ರಕ್ಷಾತ್ಮ ಭರವನ್ನು ಸಮರ್ಪಿಸಿದ್ದೇನೆ ಎಂದೂ 2) ತ್ವತ್ಪಾದ **ಮೂಲಂ ಶರಣಂ ಪ್ರಪದ್ಯೇ** – ನಿನ್ನ ಪಾದ ಮೂಲವನ್ನು ಶರಣ ಹೊಂದಿದ್ದೇನೆ ಎಂದೂ ಕೃಪೆಮಾಡಿ ಹೇಳಿದ್ದಾರೆ. 3) **ಸೌಗಂಧ್ಯ ಸೌಕುಮಾರ್ಯಾದಿ** – ಎಂದು ಸೌಗಂಧ್ಯ ಸೌಕುಮಾರ್ಯಾದಿ ಗುಣಗಳಿಂದ ಕೂಡಿದ ದಿವ್ಯ ಶರೀರವನುಳ್ಳವನು ಶ್ರೀ ಹರಿಯು. ಅವನು ತನ್ನನ್ನು ನಮಗೆ ಅನುಭವಿಸಲು ಕೊಡುವುದಕ್ಕೆ ಅವನ ಎರಡು ಪಾದಗಳೇ ಉಪಾಯ ಭೂತಗಳು ಎಂದು ಅರುಳಾಳ ಪ್ಪೆರುಮಾಳ್ ಎಂಬೆರುಮಾನಾರ್ ಪ್ರತಿಪಾದಿಸಿದ್ದಾರೆ. **ಚರಣೌ ಎನ್ಗಿರ ವಿಡತ್ತಿಲ್** ಇತ್ಯಾದಿ ಚರಣೌ ಎಂಬಲ್ಲಿ "ತಮೇವ ಶರಣಂಗಚ್ಛ" ಅವನನ್ನೇ ಉಪಾಯವಾಗಿ ವರಿಸು 5) **ಕೞಲ್‌ಹಳನ್ನೈಯೇ ಶರಣಾಹ**-ಪಾದಗಳನ್ನೇ ಉಪಾಯ

---

1) ಅಹಿಲಹಿಲ್ಲೇನ್...............ಉನ್ನಡಿಕ್ಕೀೞ್ ಅಮರ್ನ್ದು ಪುಹುಂದೇನೇ ।
ತಿರುವಾಯ್‌ಮೊೞಿ (6-10-10, 963 ನೇ ಪುಟ ನೋಡಿ,

2) ನಧರ್ಮನಿಷ್ಠೋಽಸ್ಮಿ ನಚಾತ್ಮವೇದೀ ನಭಕ್ತಿಮಾನ್ ತ್ವಚ್ಚರಣಾರ ವಿಂದೇ ।
ಅಕಿಂಚನೋಽನನ್ಯಗತಿ ಶ್ಶರಣ್ಯ ತ್ವತ್ಪಾದಮೂಲಂ ಶರಣಂ ಪ್ರಪದ್ಯೇ ॥ ಆಳವಂದಾರ್ ಸ್ತೋತ್ರ

3) ಸೌಗಂಧ್ಯ ಸೌಕುಮಾರ್ಯ ಲಾವಣ್ಯಾದಿ-ಶರಣಾಗತಿ ಗದ್ಯ.

4) ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥
ಗೀತೆ (18–62) ಎಲೈ ಅರ್ಜುನ, ಸರ್ವಾತ್ಮನಾ ಆ ಭಗವಂತನನ್ನೇ ಶರಣ ಹೊಂದು. ಸರ್ವಕರ್ಮ ಬಂಧನದಿಂದಬಿಡಲ್ಪಟ್ಟು ಶಾಶ್ವತವಾದ ಪರಮ ಪದವನ್ನು ಹೊಂದುತ್ತೀಯೆ.

5) ಉೞಲೈಯನ್ಬಿಲ್ ಪೇಯ್‌ಚಿಮುಲೆಯೂಡು ಅವಳೈಉಯಿರುಂಡಾನ್
ಕೞಲ್ ಹಳನ್ನೈಯೇ ಶರಣಾಹ ಕ್ಕೊಂಡ ಕುರುಹೂರ್ ಶಡಗೋಪನ್ ।
ಕುೞಲಿನ್ ಮಲಿಯಚ್ಚೊನ್ನ ಓರಾಯಿರತ್ತುಳಿಪ್ಪತ್ತುಮ್
ಮೞಲೈತೀರವಲ್ಲಾರ್ ಕಾಮರ್ ಮಾನೇಯ್ ನೋಕ್ಕಿಯರ್ಕ್ಕೇ ॥
ತಿರುವಾಯ್‌ಮೊೞಿ (5-8–11) ಪೂತನಾಸಂಹಾರ ಮಾಡಿ ವಿರೋಧಿ ಪಾಪಾಸುರನ ವಧಿಸಿದ ಭಗವಂತನ ಪಾದಗಳನ್ನೇ ಉಪಾಯವಾಗಿ ಆಶ್ರಯಿಸಿದ ನಮ್ಮಾಳ್ವಾರ್

6) ನಾಕಣ್ಮೈನಿಚ್ಚೈ ನಮ್ಪಿರಾನ್ ಶರಣೇ ಶರಣ್" ಇತ್ಯಾದಿಹಳಿರ್‌ಪಡಿಯೇ ಅವಧಾರಣಮ್ ವಿವಕ್ಷಿತಮ್.

---

6) ನಾಗಣ್ಮೈ ನಿಚ್ಚೈ ನಂಜಿರಾನ್ ಶರಣೇ ಶರಣ್ – ಆದಿ ಶೇಷನ ಮೇಲೆ ನಮಗೆ ಪರಮೋಪಕಾರನಾಗಿ ಕುಳಿತಿರುವ ಭಗವಂತನ ಶರಣೇ–ಶ್ರೀ ಪಾದಗಳೇ, ಶರಣ್–ಉಪಾಯ ಇತ್ಯಾದಿ ವಚನಗಳಲ್ಲಿ ನಿರೂಪಿಸಿರುವಂತೆ, "ಸರ್ವಂವಾಕ್ಯಂ, ಸಾವಧಾರಣಂ" ಎಂಬ ನ್ಯಾಯವನ್ನವಲಂಬಿಸಿ ಅವಧಾರಣಮ್–ಅವಧಾರಣವು ವಿವಕ್ಷಿತ. ಇದರ ತಾತ್ಪರ್ಯವೇನೆಂದರೆ, ಇಲ್ಲಿ "ಚರಣಾವೇವ ಶರಣಂ ಪ್ರಪದ್ಯೇ" ನಿನ್ನ ಪಾದಗಳನ್ನೇ ಉಪಾಯವಾಗಿ ಅಧ್ಯವಸಾಯ ಮಾಡುತ್ತೇನೆ" ಎಂದು ಹೇಳುವುದರಿಂದ, ನಿನ್ನ ಪಾದಗಳು ವಿನಹ ಬೇರೆ ಪಾದಗಳು ನನಗೆ ಉಪಾಯವಿಲ್ಲವೆಂದು ಫಲಿಸುತ್ತದೆ. ಇದರಿಂದ ಬೇರೆ ಸಿದ್ಧೋಪಾಯವು ಯಾವುದೂ ಇಲ್ಲವೆಂದು ಏರ್ಪಡುತ್ತದೆ ಯಲ್ಲವೆ. ಇದು ಉಪಾಸನಕ್ಕೂ ಸಾಧಾರಣವಾದ್ದರಿಂದ ಪ್ರಪತ್ತಿಗೆ ವಿಶೇಷವೇನಿದೆ,"ಎಂಬ ಚೋದ್ಯಕ್ಕೆ ಪರಿಹಾರವು ಇಲ್ಲಿ ವಿವಕ್ಷಿತವು. ಅದಾಗಿ–

"ದೇವತಾಂತರ ಧರ್ಮ್ಯಾದಿ ತ್ಯಾಗೋಕ್ತಿರ ವಿರೋಧಿನಿ।
ಉಪಾಸಕೇऽಪಿತುಲ್ಯತ್ವಾದಿಹಸಾ ನ ವಿಶೇಷಿತಾ॥

ಎಂದು ಹೇಳಿರುವಂತೆ ಸಿದ್ಧೋಪಾಯಂತರವು ಏವಕಾರದಿಂದ ವ್ಯಾವರ್ತಿಸಲ್ಪಡುತ್ತದೆ ಎಂದು ಹೇಳುವುದು ಇಲ್ಲಿನ ಅವಧಾರಣಕ್ಕೆ ತಾತ್ಪರ್ಯವಿಲ್ಲ. ಮತ್ತೇನೆಂದರೆ "ತವಚರಣಾವೇವ ಶರಣಂ ಅಧ್ಯವಸ್ಯಾಮಿ, ನತು ಮಾಮಪಿ ಮದ್ರಕ್ಷಾಯಾಮ್ ಉಪಾಯಮಾಕಲಯಾಮಿ"ಎಂದರೆ ನಿನ್ನ ಪಾದಗಳನ್ನೇ ಉಪಾಯವನ್ನಾಗಿ ಅಧ್ಯವಸಾಯ ಮಾಡುತ್ತೇನೆ. ನನ್ನನ್ನೂ ನನ್ನ ರಕ್ಷೆಯಲ್ಲಿ ಉಪಾಯವನ್ನಾಗಿ ಸೇರಿಸಿಕೊಳ್ಳುತ್ತೇನೆಂದಲ್ಲ. ಎಂದು ತನ್ನನ್ನು ಉಪಾಯ ಕೋಟಿ ಯಿಂದ ನಿವರ್ತಿಸಿ, ತನ್ನಲ್ಲಿ ತನ್ನ ಭರದ ಅನ್ವಯವನ್ನು ನಿವರ್ತಿಸಿಕೊಳ್ಳುವುದು ವಿವಕ್ಷಿತವು. "ಇತಃ ಪಶ್ಚಾದಸ್ಮದ್ಯತನ ನಿರಪೇಕ್ಷೇಣ ಭವತಾ ಸಮರ್ಥ್ಯೋऽಸಾವರ್ಥಃ" ಎಂದು ಅನುಗ್ರಹಿಸಿದ ರೀತಿಯಲ್ಲಿ ನಿರಪೇಕ್ಷೋಪಾಯತ್ವವು ಪ್ರಪತ್ತಿಗೆ ವಿಶೇಷವಾದ ವೇದ್ಯಾಕಾರ ಪ್ರಪತ್ತಿಗೆ ಅಸಾಧಾರಣವಾಗಿ "ತದೇಕೋಪಾಯತಾಯಾಂಚಾ,ತ್ವಮೇವೋಪಾಯ ಭೂತೋಮೇಭವ,ಇತ್ಯಾದಿಗಳಲ್ಲಿ ಪ್ರಸಿದ್ಧವಾದ ಈನಿರಪೇಕ್ಷೋಪಾಯತ್ವವು ಅಧ್ಯಾಹರಿಸಲ್ಪಟ್ಟ ಅವಧಾರಣವಾದ–ಏವಕಾರದಿಂದ ಫಲಿತವು ಎಂದು ತಿಳಿಯುವುದು ಯುಕ್ತ. ಶರಣ ಶಬ್ದದಲ್ಲಿಯೇ ನಿರಪೇಕ್ಷೋಪಾಯತ್ವವನ್ನು ಕೆಲವರು ಅನುಸಂಧಾನ ಮಾಡುವುದು ಅವಧಾರಣಾರ್ಥಕವಾದ ಏವಕಾರವನ್ನು ಇಲ್ಲಿ ಅಧ್ಯಾಹಾರ ಮಾಡಿ ಅನುಸಂಧಾನ ಮಾಡಿರುವ ವಚನಗಳಿಗೆ ವೈಫಲ್ಯವನ್ನುಂಟು ಮಾಡುವುದರಿಂದಸರಿಯಲ್ಲ. ಈ ಅಂಶವು ಮುಂದಿನ ಅಧಿಕಾರದಲ್ಲಿ"ಮಾಮೇಕಂ ಶರಣಂವ್ರಜ" ಎಂಬಲ್ಲಿ ವ್ಯಕ್ತ.

**ಚರಣೌ ಎಂಬಲ್ಲಿ ವಿಭಕ್ತ್ಯಭಿ ಪ್ರೇತವಾದ ಅರ್ಥ.**

**ಉಪಾಯದ್ವಿತ್ವ ಪ್ರಸಂಗ ಪರಿಹಾರ – ವಿಶೇಷಣ ವಿಶಿಷ್ಟವಾದ ತತ್ವ ವಿವಕ್ಷೆ.**

ಈ ದ್ವಯ ಮಂತ್ರದಲ್ಲಿ ಪೂರ್ವ ಖಂಡದಲ್ಲಿ ಲಕ್ಷ್ಮಿಗೆ ವಿಶೇಷಣತ್ವವನ್ನು ಒಪ್ಪಿದರೆ ಅವಳಿಗೂ ಉಪಾಯತ್ವವು ಏರ್ಪಟ್ಟು ಚರಣೌ ಎಂಬಲ್ಲಿ ದ್ವಿ ವಚನಕ್ಕೆ ಬಾಧಕವು ಏರ್ಪಡುತ್ತದೆ. ಅದನ್ನು ಪರಿಹರಿಸಲು ಚರಣಾನ್ ಎಂದು ಪ್ರಯೋಗವಿರಬೇಕಾಗಿ ಬರುತ್ತದೆ. ಆದರೆ ಮಂತ್ರದಲ್ಲಿ ಚರಣೌ ಎಂದು ದ್ವಿವಚನ ಪ್ರಯೋಗ

---

6) ನಾಗಣ್ಮೈನಿಚ್ಚೈನಂಜಿರಾನ್ ಶರಣೇ ಶರಣ್ ನಮಕ್ಕೆನ್ರುನಾಳ್‌ದೊರುಮ್
ಏಕಸಿಂದ್ಪೈಯನಾಯ್ ಕುರುಹೂರ್ ಶಡಗೋಪನ್‌ಮಾರನ್ ।
ಆಹನೂಟ್ರವಂದಾದಿ ಆಯಿರುತ್ತುಳ್ ಇಪ್ಪೈಯುಮೋರ್‌ಪತ್ತುಂವಲ್ಲಾರ್.
ಮಾಕಪ್ಪೈಕುಂದತ್ತು ಮಹಿಳ್ವೆಯ್‌ದುವರ್ ವೈಹಲುಮೇ ॥

ಪು. ತಿ. ನೋ.

**"ಚರಣೌ" ಇತಿ ದ್ವಿವಚನಾತ್ ಪೂರ್ವಖಂಡೇ ಶ್ರಿಯೋಪ್ಯುಪಾಯತ್ವಾನುಪಪತ್ತಿರಿತ್ಯತ್ರಾಹ.**

**ಚರಣಾವಿತಿ ನಿರ್ದೇಶಃ ಪತ್ನೀ ವೈಶಿಷ್ಟ್ಯಬಾಧಕಃ ।**
**ಇತಿಮಂದೈರಿದಂ ಪ್ರೋಕ್ತಂ ಶ್ರೀಮಚ್ಛಬ್ದ ವಿರೋಧತಃ ॥ 102॥**
**ಶಬ್ದಸ್ವರಸತಃ ಪ್ರಾಪ್ತಂ ವೈಶಿಷ್ಟ್ಯಂ ಪ್ರಥಮ ಶ್ರುತಮ್ !**
**ವಿಶೇಷ್ಯ ಚರಣದ್ವಿತ್ವಂ ನಹಿಬಾಧಿತು ಮರ್ಹತಿ ॥1(2॥**
**ಚರಣಾನಿತಿವಕ್ತವ್ಯ ಮಿತಿಯಚ್ಚ ಪ್ರಸಂಜಿತಮ್ ।**
**ಗ್ರಂಥಜ್ಞೈರಪಹಾಸ್ಯಂ ತತ್ಪತಿ ಪ್ರಾಧಾನ್ಯತೋಽನ್ವಯಾತ್॥॥1(4॥**

---

ವಿರುವುದರಿಂದ ಲಕ್ಷ್ಮಿಗೆ ವಿಶೇಷಣತ್ವವನ್ನೂ ಉಪಾಯತ್ವವನ್ನೂ ಹೇಳಕೂಡದು" ಎಂಬ ಏಕದೇಶಿಗಳ ಮತವನ್ನು ಅನುವಾದಮಾಡಿ ಸಮಾಧಾನವನ್ನು **ಚರಣಾವಿತಿ ನಿರ್ದೇಶಃ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ–

**ಚರಣಾವಿತಿ ನಿರ್ದೇಶಃ** ಮಂತ್ರದಲ್ಲಿ ಚರಣೌ ಎಂದು ನಿರ್ದೇಶ ಮಾಡಿರುವುದು **ಪತ್ನೀವೈಶಿಷ್ಟ್ಯಬಾಧಕಃ** ಲಕ್ಷ್ಮಿ ವೈಶಿಷ್ಟ್ಯವನ್ನು ಬಾಧಿಸುತ್ತದೆ ಎಂಬುದು **ಇತಿಂಮಂದೈರಿದಂಪ್ರೋಕ್ತಂ** – ಮಂದ ಬುದ್ಧಿಗಳು ಹೇಳುವ ಮಾತು. ಈ ಮಾತನ್ನು ಶ್ರೀಮಚ್ಛಬ್ಧಒಪ್ಪಿದರೆ **ವಿರೋಧತಃ** ಪತ್ನೀ ವೈಶಿಷ್ಟ್ಯ ಬೋಧಕವಾದ ಶ್ರೀ ಮಚ್ಛಬ್ದಕ್ಕೆ ವಿರೋಧವು ಏರ್ಪಡುತ್ತದೆ ಇದರ ತಾತ್ಪರ್ಯವೇನೆಂದರೆ ಉಪ ಕ್ರಮಾಧಿಕಾರಣ ನ್ಯಾಯವನ್ನನುಸರಿಸಿ ಆರಂಭದಲ್ಲಿ ಶ್ರೀಮಚ್ಛಬ್ದವು ವಿಶೇಷಣ ವಿಶಿಷ್ಟವಾಗಿ ಪ್ರಯೋಗಿಸಲ್ಪಟ್ಟಿರುವಾಗ ಉಪ ಕ್ರಮಾನುಗುಣವಾಗಿಯೇ ವುಪ ಸಂಹಾರ ವಾಕ್ಯವನ್ನು ನಯುನ ಮಾಡಬೇಕಾದದ್ದು ಅವಶ್ಯ. ಇದನ್ನು **ಶಬ್ದ ಸ್ವರಸತಃ ಪ್ರಾಪ್ತಂ** ಎಂದಾರಂಭಿಸಿ ನಿರೂಪಿಸುತ್ತಾರೆ ಆದಾಗಿ ಮತುಪ್ ಪ್ರತ್ಯಯಾಂತವಾದ ಶ್ರೀ ಮತ್ ಶಬ್ದದ ಸ್ವಾರಸ್ಯದಿಂದ ಪ್ರಾಪ್ತವಾಗಿಯೂ ಉಪ ಕ್ರಮದಲ್ಲಿ ಮಂತ್ರದ ಆರಂಭದಲ್ಲಿ **ಶ್ರುತ**ವಾದ ಪತ್ನೀ ವಿಶಿಷ್ಟತ್ವವನ್ನು ಉಪ ಸಂಹಾರ ಮಂತ್ರದ ಕೊನೆಯಲ್ಲಿ ಹೇಳಲ್ಪಟ್ಟ **ವಿಶೇಷ್ಯ ಚರಣದ್ವಿತ್ವಮ್** ವಿಶೇಷ್ಯ ಭೂತನಾದ ಭಗವಂತನ ಚರಣದ್ವಿತ್ವವು – ಎರಡುಪಾದಗಳು ಎಂಬ ಪದವು ಉಪ ಕ್ರಮಾಧಿಕರಣ ನ್ಯಾಯಕ್ಕೆ ಬಾಧಕವಾಗುತ್ತದೆ ಯಾದ್ದರಿಂದ **ನಹಿಬಾಧಿತುಮರ್ಹತಿ** ಭಾಧಿಸಲು ಅರ್ಹವಾಗುವುದಿಲ್ಲ. ಹಿ ಎಂಬುದು ಆ ನ್ಯಾಯದ ಪ್ರಸಿದ್ಧಿಯನ್ನು ತಿಳಿಸುತ್ತದೆ. **ಚರಣಾನಿತಿ ವಕ್ತವ್ಯಮ್**ಇತ್ಯಾದಿ ಮಂತ್ರದಲ್ಲಿಲಕ್ಷ್ಮಿಗೆವಿಶೇಷಣತ್ವವನ್ನು ಒಪ್ಪಿದರೆ ಅವಳೂ, ಉಪಾಯ ಭೂತೆಯಾಗಿ ಆಗ ಬೇಕಾದ್ದರಿಂದ ಚರಣಾನ್ ಎಂದು ಹೇಳಬೇಕಾಗುತ್ತದೆ ಎಂಬ ಯಾವುದೊಂದು ಪ್ರಸಂಗವು ಹೇಳಲ್ಪಡುತ್ತದೆಯೋ ಅದು **ಗ್ರಂಥಜ್ಞೈಃ**–ಶ್ರೀನಾರಾಯಣ ಶಬ್ದವು ಉಭಯ ಪ್ರಧಾನವೆಂದೂ**ಶ್ರೀಮನ್ನಾ**ರಾಯ ಣ ಎಂಬಶಬ್ದವು ಶ್ರೀವಿಶಿಷ್ಟನಾರಾಯಣ ಪ್ರಧಾನವೆಂದೂ ತಿಳಿದಶಾಸ್ತ್ರಜ್ಞರಿಂದ**ಅಪಹಾಸ್ಯ**-ಪರಿಹಾಸ್ಯಮಾಡಲ್ಪಡುತ್ತದೆ. **ಪತಿಪ್ರಾಧಾನ್ಯತೋಽನ್ವಯಾತ್** ಶ್ರೀಮನ್ನಾರಾಯಣ ಎಂಬಲ್ಲಿ ಶ್ರೀ ಎಂಬ ವಿಶೇಷಣ ವಿಶಿಷ್ಟ ನಾರಾಯಣನಿಗೆ ಚರಣೌ ಎಂಬಲ್ಲಿ ಪ್ರಧಾನಾನ್ವಯ, ವಿಶೇಷಣ ವಿಶಿಷ್ಟವಾದ ತತ್ವವು ಒಂದು "ಸಾಮಾತ್ಯಃ ರಾಜಾ ಆಹ' ಎಂದು ಮಂತ್ರಿಯೊಡಗೂಡಿದ ರಾಜನು ಹೇಳಿದನು ಎಂದು ಹೇಳುತ್ತಾರೆಯೇ ಹೊರತು ಆಹತುಃ – ಹೇಳಿದರು ಎಂದು ಬಹುವಚನ ಪ್ರಯೋಗವಿಲ್ಲ. "ಗುರೋಸ್ಸದಾರಸ್ಯ ನಿಪೀಡ್ಯ ಪಾದೌ" ಎಂದು ಕವಿ ಶ್ರೇಷ್ಠರ ಪ್ರಯೋಗ. 'ಪಾದಾನ್' ಎಂದು ಹೇಳುವುದು

---

ತಿರುವಾಯ್‌ಮೊಳಿ (5-10-11) ಆದಿಶೇಷನ ಮಡಿಯಲ್ಲಿರುವ ಪರಮೋಪಕಾರನಾದ ಭಗವಂತನ ಶ್ರೀಪಾದಗಳನ್ನೇ ಉಪಾಯವಾಗಿ ಪ್ರತಿದಿವಸವೂ ಅಧ್ಯವಸಾಯ ಮಾಡುವ ನಮ್ಮಾಳ್ವಾರ್ ಅವರ ಸಾವಿರ ಪಾಶುರಗಳಲ್ಲಿ ಈ ಹತ್ತು ಪಾಶುರಗಳನ್ನು ಅನುಸಂಧಾನ ಮಾಡುವವರು ಪರಮಾಕಾಶವೆಂಬ ಪರಮಪದದಲ್ಲಿ ನಿರಂತರ ಭಗವದನುಭವ ಜನಿತ ನಿರವಧಿಕಾತಿಶಯವಾದ ಆನಂದದಿಂದ ಕೂಡಿರುತ್ತಾರೆ.

ನ ಸಮ್ರಾಜಿ ಸಪತ್ನೀಕೇ ಸದ್ವಿತೀಯೋಕ್ತಿ ಸಾಹಸಮ್ ।
ತಥಾತ್ರೇತ್ಯ ಪರಾಮೃಶ್ಯ ದರ್ಶಿತ ಗುರುಸಾಹಸಮ್ ॥ 5॥

ಶ್ರಿಯೋಪ್ಯುಪಾಯತ್ವೇ ಭಗವತ್ಸರ್ವಶಕ್ತಿತ್ವ ವಿರೋಧ ಇತ್ಯಾಶಂಕ್ಯ ಪರಿಹರತಿ.

ಸರ್ವಶಕ್ತಿಯಾನವನ್ ಉಪಾಯಮಾಮ್ಪೋದು ಇವ್ವಿಶೇಷತ್ತಾಲ್ ಅಪೇಕ್ಷೈಎನ್ ?ಸಾಪೇಕ್ಷನಾಹಿಲ್ ಸರ್ವಶಕ್ತಿಯನ್ರಿಕ್ಕೇ ಯೊರ್ಯಯಾನೋವೆನ್ನಿಲ್ ? ಇಚ್ಚೋದ್ಯಂ ನಾರಾಯಣ ಶಬ್ದತ್ತಾಲುಮ್, ಚರಣ ಶಬ್ದತ್ತಾಲುಮ್, ಶೊಲ್ಲಪ್ಪಟ್ಟ ಗುಣವಿಗ್ರಹಯೋಗತ್ತಿಲುಮ್ ಪಣ್ಣಲಾಮ್.

ಅವೈ ಇವನುಕ್ಕು ವಿಶೇಷಣಙ್ಗಳಾಹೈಯಾಲುಮ್ ಅವತ್ತುಕ್ಕು ವಸ್ತ್ವನುರೂಪಮಾಹ ಉಪಯೋಗ ವಿಶೇಷಙ್ಗಳ್‌ಉಣ್ಡಾಹೈಯಾಲುಮ್ ಅವತ್ತಾಲ್‌ಸರ್ವಶಕ್ತಿತ್ವವಿರೋಧ ಮಿಲ್ಲೈಯೆನ್ರು ಯಥಾಪ್ರಮಾಣಮ್

---

ಅಸಾಧು. ನಸಮ್ರಾಜಿಸಪತ್ನೀಕೇ ಇತ್ಯಾದಿ–ಪತ್ನಿಯಿಂದ ಕೂಡಿದ ಸಾಮ್ರಾಟ್–ರಾಜನನ್ನುರಾಜನು ಅದ್ವಿತೀಯನು ಎಂದು ಹೇಳಬೇಕೇ ವಿನಹ,ಸದ್ವಿತೀಯನೆಂಬುದು ಸಾಹಸದ ಮಾತುತಥಾತ್ರೇತ್ಯಪರಾಮೃಶ್ಯ–ಹಾಗೆಯೇ ಇಲ್ಲಿಯೂ ಚರಣೌ ಎಂಬುದು ಯುಕ್ತವಾದದ್ದು. ಇದನ್ನು ಪರಾಮರ್ಶಿಸದೆ, 'ಚರಣಾನ್' ಎಂದು ಹೇಳಬೇಕೆಂಬುದು ಗುರುಸಾಹಸಮ್–ಬಹಳ ಸಾಹಸವಾದ ಮಾತು. ಚರಣಾನ್ ಎಂದು ಹೇಳಕೂಡದೆಂಬುದು ತಾತ್ಪರ್ಯ. ಪತಿಯ ದಿವ್ಯಾತ್ಮ ಸ್ವರೂಪದಲ್ಲಿ ತಾನೂ ಸ್ವರೂಪದಿಂದ ಅವನಿಗೆ ಸ್ವರೂಪ ನಿರೂಪಕ ಧರ್ಮ ಪ್ರಧಾನಳಾಗಿ ಲಕ್ಷ್ಮಿಯು ವಿಶೇಷಣ ಭೂತಳಾಗಿರುವಂತೆ ಪತಿಯ ದಿವ್ಯ ವಿಗ್ರಹದಲ್ಲಿಯೂ ತನ್ನ ವಿಗ್ರಹದಿಂದ ವಿಶೇಷಣ ಭೂತಳಾಗಿದ್ದಾಳೆ. ಹೀಗೆ ವಿಶೇಷಣ ವಿಶಿಷ್ಟವಾದ ಪತಿಯ ವಿಗ್ರಹವು ಒಂದೇಯಾದ್ದರಿಂದ ಚರಣೌ ಎಂಬ ನಿರ್ದೇಶವು ಉಪಪನ್ನವಾದದ್ದು. ಆದ್ದರಿಂದ ವಿಶೇಷಣಕ್ಕೆ ಪೃಥಕ್ಕಾಗಿ ಚರಣ ಗ್ರಹಣವನ್ನು ಮಾಡಬಾರದು. ವಿಶೇಷಣಾಂಶದಲ್ಲಿ ಚರಣ ಗ್ರಹಣವನ್ನು ಹೇಳಿಲ್ಲವಾದರೂ ವಿಶೇಷಣ ಭೂತೆಯಾದ ಲಕ್ಷ್ಮಿಯ ಶರಣ್ಯತ್ವವು–ಉಪಾಯತ್ವವು ಹೋಗುವುದಿಲ್ಲ. ಆದ್ದರಿಂದ ಚರಣೌ ಎಂದು ದ್ವಿವಚನವೇ ಯುಕ್ತವಾದದ್ದು. ಲಕ್ಷ್ಮಿಕಲ್ಯಾಣದಲ್ಲಿ "ಸ್ವಯಂ ವಸ್ತು ಕುರ್ವನ್ ಜನಮಿಮಮುಕಸ್ಮಾತ್ ಸರಸಿಜ ಪ್ರಕಾರೌ ಪದ್ಮಾಯಾಸ್ತವಚ ಚರಣೌ ನಶ್ಶರಣಯನ್, ಎಂದು ನಮ್ಮಾಳ್ವಾರ್ ಅವರ ಶ್ರೀ ಸೂಕ್ತಿಯಿಂದು ಪರಾಶರಭಟ್ಟರು ಅನು ಸಂಧಾನ ಮಾಡಿರುವುದಾಗಿ ಶ್ರೀ ಮತ್ಸಾರಸಾರದಲ್ಲಿವರ್ಣಿತವು. ಪದ್ಮಾಯಾಸ್ತವಚ ಚರಣೌ ಲಕ್ಷ್ಮಿಯ ಮತ್ತು ನಿನ್ನ ಎರಡು ಚರಣಗಳಲ್ಲಿ ಎಂದು ವಿಶೇಷ್ಯ ನಿಷ್ಠ ಚರಣ ದ್ವಿತ್ವಗಳನ್ನೇ ಹೇಳಿ ಅವುಗಳನ್ನು ನಾವು ಉಪಾಯವಾಗಿ ಸ್ವೀಕರಿಸುವಂತೆ ಅನುಗ್ರಹಿಸುವ ಭಗವಂತನೆಂದು ಅನು ಸಂಧಾನ ಮಾಡಿರುವುದನ್ನು ಪ್ರಾಮಾಣಿಕರು ಅಂಗೀಕರಿಸಬೇಕು. ಏತಾವತಾ ಲಕ್ಷ್ಮಿಯೂ ಉಪಾಯಭೂತೆ ಎಂಬುದಕ್ಕೆ ಆಕ್ಷೇಪವು ಇಲ್ಲವೆಂಬುದು ನಿರೂಪಿಸಲ್ಪಟ್ಟಿತು.

## ಲಕ್ಷ್ಮಿಯ ಉಪಾಯತ್ವದಿಂದ ಭಗವಂತನ ಸರ್ವಶಕ್ತಿತ್ವಕ್ಕೆ ಭಂಗವಿಲ್ಲ

ಸರ್ವ ಶಕ್ತಿಯಾನವನ್ ಇತ್ಯಾದಿ ಸರ್ವ ಶಕ್ತನಾದ ಭಗವಂತನು ಮೋಕ್ಷಕ್ಕೆ ಉಪಾಯ ವಾಗುವಾಗ ಲಕ್ಷ್ಮಿಯು ವಿಶೇಷಣ ಭೂತಳಾಗಿ ತಾನು ಉಪಾಯಭೂತೆಯಾಗಿರಬೇಕಾದ ಅಪೇಕ್ಷೆ ಏನಿದೆ ಲಕ್ಷ್ಮಿಯ ಉಪಾಯತ್ವವನ್ನು ಅಪೇಕ್ಷಿಸುವುದಾದರೆ ಸರ್ವಶಕ್ತಿ ಅನ್ರಿಕ್ಕೇ ಭಗವಂತನಿಗೆ ಸರ್ವಶಕ್ತಿಯು ಇಲ್ಲದೆ ಒರ್ಯಯಾನೋವೆನ್ನಿಲ್ ಹೋಗುತ್ತಾನಲ್ಲವೇ ಎಂದರೆ ಇಚ್ಚೋದ್ಯಮ್ ಇತ್ಯಾದಿ– ಈ ಚೋದ್ಯವು ನಾರಾಯಣ ಶಬ್ದದಿಂದಲೂ. ಚರಣ ಶಬ್ದದಿಂದಲೂ ಹೇಳಲ್ಪಟ್ಟ ಗುಣ ವಿಗ್ರಹಗಳ ಸಂಬಂಧದಲ್ಲಿಯೂ ಪಣ್ಣಲಾಮ್ ಮಾಡಬಹುದು

ಅವೈಯಿವನುಕ್ಕು ಇತ್ಯಾದಿ ಆ ಗುಣ ವಿಗ್ರಹಗಳು ಭಗವಂತನಿಗೆ ವಿಶೇಷಣಗಳಾದ್ದರಿಂದ ಅವುಗಳಿಗೆ ವಸ್ತುವಿಗೆ ತಕ್ಕಂತೆ ಉಪಯೋಗ ಪ್ರಯೋಜನಗಳು ಉಂಟಾಗುವುದರಿಂದ ಅವುಗಳಿಂದ ಸರ್ವ ಶಕ್ತಿತ್ವಕ್ಕೆ ವಿರೋಧ

ಕೊಳ್ಳಿಲ್, ಇದು ಬಹು ಪ್ರಮಾಣಪ್ರಾಪ್ತಮಾಯ್ ಇಙ್ಗು ಶ್ರೀಮಚ್ಛಬ್ದತ್ತಿಲುಮ್ ಸ್ವಾರಸಿಕ ವಿಶೇಷಣ ಭಾವಮಾನ ಪತ್ನೀ ಸಂಬಂಧತ್ತಿಲುಮ್ ತುಲ್ಯಮ್.

ಇಪ್ಪಡಿ ಇರುಕ್ಕ "ಚರಣೌ ಎನ್ಗಿರ ದ್ವಿವಚನಮಾತ್ರತ್ತೈಕ್ಕೊಂಡು ಶ್ರೀಸಂಬಂಧತ್ತೈ ಉಪಲಕ್ಷಣ ಮೆನ್ನಿಲ್, ಇಗ್ಗುಣಾದಿ ಸಂಬಂಧತ್ತೈಯುಂ ಇಪ್ಪಡಿ ಶೊಲ್ಲಪ್ರಸಙ್ಗಿಕ್ಕುಮ್. ಚರಣಶಬ್ದತ್ತಿಲ್ ಉಪಾಯವಾಚಿ ಶಬ್ದ ಸಮಭಿವ್ಯಾಹಾರತ್ತಾಲೇ ಉಪಯುಕ್ತಗುಣ ವಿಗ್ರಹ ವಿಶಿಷ್ಟ ಉಪಾಯಮಾಹಿರಾ ನೆನ್ರು ವಿವಕ್ಷಿತಮೆನ್ನಿಲ್, ಇದು ಇಙ್ಗುಮ್ ತುಲ್ಯಮ್.

ಇಪ್ಪಡಿಯಿರುಕ್ಕ ಇವಳೈ ವಿಶೇಷಣಮಾಹಕ್ಕೊಳ್ಳಿಲ್ ಸರ್ವಶಕ್ತಿತ್ವ ವಿರೋಧಮ್ ವರುಮೆನ್ಬಾರ್ಕ್ಕು

---

ಈ ಸಮಾಧಾನವು ಅನೇಕ ಪ್ರಮಾಣಗಳಿಂದ ಏರ್ಪಟ್ಟು, ಇಂಗು ಇಲ್ಲಿ ಶ್ರೀಮಚ್ಛಬ್ದತ್ತಿಲ್ - ಶ್ರೀಮತ್ ಶಬ್ದದಲ್ಲಿಯೂ ಸ್ವಾರಸಿಕ ವಿಶೇಷಣ ಭಾವಮಾನ ಸ್ವರಸಸಿದ್ಧ ವಿಶೇಷಣ ಭಾವವನ್ನುಳ್ಳ ಪತ್ನೀ ಸಂಬಂಧದ ಲ್ಲಿಯೂ ತುಲ್ಯಮ್ - ಸಮಾನವಾದದ್ದು. ಲಕ್ಷ್ಮಿ ವಿಷಯದಲ್ಲಿಯೂ ಪ್ರಯೋಜನಗಳನ್ನು ಉದ್ದೇಶಿಸಿ ವಿಶೇಷಣತ್ವ ವನ್ನು ಒಪ್ಪಿಕೊಳ್ಳಬೇಕೆಂದು ತಾತ್ಪರ್ಯ.

ಇಪ್ಪಡಿ ಯಿರುಕ್ಕ ಇತ್ಯಾದಿ – ಲಕ್ಷ್ಮಿಗೂ ವಿಗ್ರಹಾದಿಗಳಿಗೂ ವಿಶೇಷಣತ್ವದಲ್ಲಿರುವ ಚೋದ್ಯ ಪರಿಹಾರ ಗಳು ಸಮವಾಗಿರುವಾಗ ಚರಣೌ ಎನ್ಗಿರ ಇತ್ಯಾದಿ ಚರಣೌ ಎಂಬ ದ್ವಿವಚನ ಮಾತ್ರವನ್ನು ಸ್ವೀಕರಿಸಿ, ಶ್ರೀ ಸಂಬಂಡವನ್ನು ಉಪಲಕ್ಷಣವೆಂದು ಹೇಳಿದರೆ ಗುಣಾದಿ ಸಂಬಂಧವೂ ಹೀಗೆ ಉಪಲಕ್ಷಣವೆಂದು ಹೇಳಬಹು ದಾದ ಪ್ರಸಂಗವು ಬರುತ್ತದೆ. ಚರಣ ಶಬ್ದತ್ತಿಲ್ ಇತ್ಯಾದಿ ನಾರಾಯಣನ ಚರಣ ಶಬ್ದದಲ್ಲಿ ಉಪಾಯವಾಚಿ ಶಬ್ದ ಸಮಭಿವ್ಯಾಹಾರತ್ತಾಲೇ – ಉಪಾಯವನ್ನು ತಿಳಿಸುವ ಶರಣ ಶಬ್ದವನ್ನು ಜತೆಯಲ್ಲಿ ಹೇಳಿರುವುದರಿಂದ ಉಪಯುಕ್ತ ಗುಣ ವಿಗ್ರಹ ವಿಶಿಷ್ಟನುಪಾಯ ಮಾಹಿರಾನೆನ್ರು ಉಪಾಯಕ್ಕೆ ಉಪಯುಕ್ತವಾದ ಗುಣ ವಿಗ್ರಹ ವಿಶೇಷಣಗಳಿಂದ ಕೂಡಿದವನು ಉಪಾಯವಾಗುತ್ತಾನೆಂಬುದು ವಿವಕ್ಷಿತವೆಂದರೆ ಇದು ಇಂಗುಂ ತುಲ್ಯಮ್ ಈ ಉಪಾಯಕ್ಕೆ ಉಪಯುಕ್ತವಾದ ಲಕ್ಷ್ಮಿ ಸಂಬಂಧಕ್ಕೂ ಈ ವಿಶೇಷಣತ್ವವು ಸಮಾನ. ಇದರ ತಾತ್ಪರ್ಯವೇನೆಂದರೆ ಪೂರ್ವ ಪಕ್ಷಿಯು ಚರಣೌ ಶರಣಂ ಎಂದು ನಾರಾಯಣನ ಚರಣಗಳನ್ನು ಉಪಾಯವನ್ನಾಗಿ ವರಿಸಲು ಗುಣ ವಿಗ್ರಹಗಳು ವಿಶೇಷಣಗಳಾಗಿರಬೇಕೆಂದು ವಿವಕ್ಷಿಸುತ್ತಾನೆ ಅದೇ ರೀತಿಯಲ್ಲಿ ಲಕ್ಷ್ಮಿಯು ವಿಶೇಷಣ ಭೂತೆಯಾಗಿ ಭಗವಂತನೊಡನೆ ಉಪಾಯ ಭೂತೆಯಾಗಿದ್ದಾಳೆಂಬುದು ವಿವಕ್ಷಿತವೆಂಬುದು ನ್ಯಾಯವಾದದ್ದು ಎಂದು ಸಿದ್ಧಾಂ ತಿಯ ಉತ್ತರ.

ಇಪ್ಪಡಿ ಯಿರುಕ್ಕ . ಇತ್ಯಾದಿ ಹೀಗೆ ಗುಣ ವಿಗ್ರಹಗಳ ಹಾಗೆ ಶ್ರೀಯನ್ನೂ ವಿಶೇಷಣಳನ್ನಾಗಿ ಅಂಗೀಕರಿಸಿದರೆ ಭಗವಂತನ ಸರ್ವ ಶಕ್ತಿತ್ವಕ್ಕೆ ವಿರೋಧವು ಬರುತ್ತದೆ ಎಂದು ಹೇಳುವವರಿಗೆ ಇಪ್ಪುರುಷಕಾರಾ ಪೇಕ್ಷೆಯಿಲುಮ್ ಇತ್ಯಾದಿ -ಲಕ್ಷ್ಮಿಯನ್ನು ಪುರುಷಕಾರ ಭೂತೆಯನ್ನಾಗಿ ಅಪೇಕ್ಷಿಸಿದರೆ ಸರ್ವ ಶಕ್ತಿತ್ವಕ್ಕೆ ವಿರೋಧವು ಬರುವ ಪ್ರಸಂಗವು ಏರ್ಪಡುತ್ತದೆ ಎಂದು ಪ್ರತಿ ಬಂದಿಯಾಗಿ ಉತ್ತರವನ್ನು ಆಚಾರ್ಯರು ಹೇಳು ತ್ತಾರೆ. ಈ ರೀತಿಯಾದ ಉತ್ತರಕ್ಕೆ ಪ್ರತಿಯಾಗಿ ಪೂರ್ವ ಪಕ್ಷಿಯು ಪುನಃ ಈಶ್ವರನು ಉಪಾಯವಾಗುವುದೂ, ಲಕ್ಷ್ಮಿಯು ಪುರುಷಾಕಾರ ವಾಗುವುದೂ ಈಶ್ವರನ ಸ್ವಾತಂತ್ರ್ಯ ನಿಯತವೆಂದು ಸಮಾಧಾನವನ್ನು ಹೇಳುತ್ತಾನೆ. ಈಶ್ವರ ವಿಶೇಷಣಳಾಗಿದ್ದುಕೊಂಡು "ಲಕ್ಷ್ಮ್ಯಾ ಸಹ ಹೃಷೀಕೇಶಃ" ಎಂಬ ಪ್ರಮಾಣದಂತೆ ಲಕ್ಷ್ಮಿಯು ಉಪಾಯ ವಾಗುವುದು ಈಶ್ವರನ ಸ್ವಾತಂತ್ರ್ಯ ನಿಯತವೆಂದು ಹೇಳುವುದು ಯಾವ ಪ್ರಮಾಣಗಳಿಗೂ ವಿರೋಧವಾ

**ಇಪ್ಪುರುಷಕಾರಾಪೇಕ್ಷೈಯಿಲುಮ್ ಸರ್ವಶಕ್ತಿತ್ವ ವಿರೋಧಮ್ ಪ್ರಸಂಗಿಕ್ಕುಮ್. 1) "ಯುವತ್ವಾದೌ ತುಲ್ಯೇ" ಎನ್ಗಿರ ಶ್ಲೋಕತ್ತಿರ್ ಚೊನ್ನ ಗುಣ ವಿಭಾಗತ್ತಿನ್ ಪಡಿಯೇ ಪುಂಸ್ತ್ವಪಿತೃತ್ವ ಪ್ರಶಾಸಿತೃತ್ವಾದಿಹಳಾಲೇ ಪ್ರತಾಪೋತ್ತರನಾಯ್, ದಂಡಧರನಾಯ್, ನಿರ್ಕಿರ ಈಶ್ವರನೈಪ್ಪತ್ತ ಇ[ಱ]ವಾರ್ಕ್ಕು ಸ್ತ್ರೀತ್ವಮಾತೃತ್ವಾದಿಹಳಾಲೇ ವನ್ದಮಾರ್ದವ ವಾತ್ಸಲ್ಯಾದಿಗುಣಾತಿಶಯತ್ತಾಲೇ ಇವಳ್ ಅವನೈಪ್ಪತ್ತ ನಮಕ್ಕು ಪುರುಷಕಾರಮಾಹೈಯುಮ್, ಈಶ್ವರ ಸ್ವಾತಂತ್ರ್ಯನಿಯತಮೆನ್ರು ಶೊಲ್ಲಿಲ್, ಇಪ್ಪಡಿಯೇ ಸಹಧರ್ಮಚಾರಿಣಿಯಾನ ಅವಳಾಲೇ ವಿಶಿಷ್ಟನಾಯ್‌ಕ್ಕೊಂಡು ಶರಣ್ಯನಾಹೈಯುಮ್, ಈಶ್ವರ ಸ್ವಾತಂತ್ರ್ಯ ನಿಯತಮೆನ್ರು ಕೊಣ್ಡಾಲ್ ಒರು ಪ್ರಮಾಣತ್ತಿಕ್ಕುಮ್ ವಿರೋಧಮಿಲ್ಲೈ.**

**ಶರಣ ಶಬ್ದಾರ್ಥ:**

**ಇವ್ವಿಡತ್ತಿಲ್ "ಶರಣ" ಶಬ್ದಮ್,**

1) "ಉಪಾಯೇ ಗೃಹರಕ್ಷಿತ್ರೋಃ ಶಬ್ದಶ್ಶರಣಮಿತ್ಯಯಮ್ ।
ವರ್ತತೇ ಸಾಂಪ್ರತಂ ತ್ವೇಷ ಉಪಾಯಾರ್ಥೈಕವಾಚಕಃ ॥"

**ಎನ್ರು ವಿಶೇಷಿಕ್ಕೈಯಾಲೇ ಉಪಾಯಪರಮ್.**

---

ಗುವುದಿಲ್ಲವೆಂದು 1) **ಯುವತ್ವಾದೌ ತುಲ್ಯೇಪಿ** ಎಂದಾರಂಭಿಸಿ ಆಚಾರ್ಯರು ತಿಳಿಸುತ್ತಾರೆ. ಅದಾಗಿ ಯುವತ್ವಾದೌ ತುಲ್ಯೇಪಿ ಎಂಬ ಶ್ಲೋಕದಲ್ಲಿ ಹೇಳಿದ ಗುಣ ವಿಭಾಗದ ಕ್ರಮದಲ್ಲಿ ಪುಂಸ್ತ್ವ ಪಿತೃತ್ವ ಪ್ರಶಾಸಿತೃತ್ವಾದಿಗಳಿಂದ ಪ್ರತಾಪೋತ್ತರನಾಗಿ ದಂಡಧರನಾಗಿರುವ ಈಶ್ವರನನ್ನು ಆಶ್ರಯಿಸಲು ಹೋಗುವವರಿಗೆ ಸ್ತ್ರೀತ್ವ ಮಾತೃತ್ವಾದಿಗಳಿಂದ ಉಂಟಾದ ಮಾರ್ದವ ವಾತ್ಸಲ್ಯಾದಿ ಗುಣಾತಿಶಯದಿಂದ ಕೂಡಿದ ಲಕ್ಷ್ಮಿಯು ಪುರುಷಕಾರ ಭೂತೆಯಾಗಿರುವುದು ಈಶ್ವರನ ಸ್ವಾತಂತ್ರ್ಯ ನಿಯತವೆಂದು ಹೇಳಿದರೆ ಹಾಗೆಯೇ ಸಹ ಧರ್ಮಚಾರಿಣಿಯಾದ ಲಕ್ಷ್ಮಿಯೊಡಗೂಡಿಯೇ **ಶರಣ್ಯ ನಾಹೈಯುಮ್ ಉಪಾಯಭೂತನಾಗುವುದೂ** ಈಶ್ವರನ ಸ್ವಾತಂತ್ರ್ಯ ನಿಯತವೆಂದು ಅಂಗೀಕರಿಸಿದರೆ ಯಾವ ಪ್ರಮಾಣಕ್ಕೂ ವಿರೋಧವಾಗಲಾರದು ಎಂದು ಆಚಾರ್ಯರು ನಿಗಮಿಸುತ್ತಾರೆ. ಇಲ್ಲಿ **ಈಶ್ವರ ಸ್ವಾತಂತ್ರ್ಯ ನಿಯತ** ವೆಂದರೆ ಕೇವಲ ನಾರಾಯಣನ ಸ್ವಾತಂತ್ರ್ಯ ನಿಯತವೆಂದು ಅಭಿಪ್ರಾಯವಿಲ್ಲ ಈಶ್ವರ ಶಬ್ದವು ದ್ವಿನಿಷ್ಠ. ಲಕ್ಷ್ಮೀನಾರಾಯಣರಿಬ್ಬರಲ್ಲಿಯೂ ಅನ್ವಯಿಸುತ್ತದೆ. ಆದ್ದರಿಂದ ಭಗವಂತ ಮತ್ತು ಲಕ್ಷ್ಮೀ ಇಬ್ಬರ ಸ್ವಾತಂತ್ರ್ಯದಿಂದ ನಿಯತವಾಗಿ ಪರಸ್ಪರ ಐಕರಸ್ಯಭಾವದಿಂದ ಲಕ್ಷ್ಮಿಯ ಪುರುಷಕಾರತ್ವವೂ ನಂತರ ದಿವ್ಯ ದಂಪತಿಗಳಿಬ್ಬರ **ಉಪಾಯತ್ವವೂ** ಸಂಪ್ರತಿ ಪನ್ನವು ಎಂದು ತಾತ್ಪರ್ಯ,

**ಶರಣ ಶಬ್ದಾರ್ಥ.**

ಅನಂತರ **ಇವ್ವಿಡತ್ತಿಲ್** ಎಂದಾರಂಭಿಸಿ ಶರಣ ಶಬ್ದಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಅದಾಗಿ ಈ ದ್ವಯ ಮಂತ್ರದಲ್ಲಿ **ಶರಣ ಶಬ್ದಮ್**–ಶರಣ ಶಬ್ದವು 1) **ಉಪಾಯೇ ಗೃಹ ರಕ್ಷಿತ್ರೋಃ**ಇತ್ಯಾದಿಯಾಗಿ ಉಪಾಯ ಹೇತು, ಮನೆ, ರಕ್ಷಕನಾದ ಪುರುಷ ಎಂದ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತದೆ. **ಸಾಪ್ರತಂ ತ್ವೇಷ**- ಈ ದ್ವಯ ಮಂತ್ರಾರ್ಥ ಪ್ರಕರಣದಲ್ಲಿ ಉಪಾಯರ್ಥವನ್ನು ತಿಳಿಸುತ್ತದೆ **ಎನ್ರು ವಿಶೇಷಿಕ್ಕೈಯಾಲೇ** ಎಂದು ವಿಶೇಷವಾಗಿ ಹೇಳಿರುವುದರಿಂದ ಶರಣ ಶಬ್ದವು ಉಪಾಯಪರ.

ಈ ಪ್ರಕರಣದಲ್ಲಿ ಭಗವಂತನ ರಕ್ಷಕತ್ವವು ಇದ್ದೇ ಇದೆ. ರಕ್ಷಕತ್ವ ಪ್ರಾರ್ಥನೆಯು **ಗೋಪ್ತೃತ್ವ** ವರಣವೆಂಬ ಅಂಗ ರೂಪವಾಗಿ ವಿಧಿಸಲ್ಪಡುತ್ತದೆ ಇದರ ಪ್ರಕಾಶನವು ಇಲ್ಲಿ ಉಚಿತವಾದದ್ದು ಆದರೂ ಆ ರಕ್ಷಕತ್ವ ಪ್ರಾರ್ಥನೆಯು ವಿದ್ಯಾಂತರ ಸಾಧಾರಣವಾದದ್ದು. **ನಿರಪೇಕ್ಷೋಪಾಯತ್ವವು** ಪ್ರಪತ್ತಿಗೆ **ಅಸಾಧಾರಣವಾದ**

---

1" ಶ್ರೀ ಗುಣರತ್ನಕೋಶ (34) 122ನೇ ಪುಟನೋಡಿ

### ಶರಣಶಬ್ದಸ್ಯೋಪಾಯಪರತ್ವಂ ಕಥಮಿತ್ಯತ್ರಾಹ

ಭರನ್ಯಾಸ ಬಲಾದೇವ ಸ್ವಯತ್ನವಿನಿವೃತ್ತಯೇ ।
ಅತ್ರೋಪಾಯಾಂತರಸ್ಥಾನೇ ರಕ್ಷಕೋ ವಿನಿವೇಶಿತಃ ॥೧೦೬॥

ಸರ್ವಾಧಿಕಾರಿಹಳುಕ್ಕುಮ್ ಅವ್ವೋಶಾಸ್ತ್ರಾರ್ಥಙ್ಗಳಾಲೇ ಆರಾಧಿತನಾನ ಸರ್ವೇಶ್ವರನ್ ಫಲೋಪಾಯ ಮಾಯಿರುಕ್ಕ ಇಙ್ಗು, ವಿಶೇಷಿತ್ತು ಉಪಾಯಮೆನ್ನವೇಣ್ಡುತ್ತು ? ಉಪಾಯಾನ್ತರ ಸ್ಥಾನತ್ತಿಲೇ ಸಹಜಕಾರುಣ್ಯಾದಿ ವಿಶಿಷ್ಟನಾನ ಈಶ್ವರನೈನಿರುತ್ತುಹಿರ ಪ್ರಪತ್ತಿ ಪ್ರಕಾರಮ್ ತೋತ್ತುಹೈಕ್ಕಾಹ ವಾಮು ತ್ತನೈ. ಇಙ್ಗು ಭಕ್ತಿಯೋಗಸ್ಥಾನತ್ತಿಲೇ ಪ್ರಪತ್ತಿ ನಿಲ್ಲಾನಿರ್ಕ ಈಶ್ವರನುಪಾಯಾಂತರ ಸ್ಥಾನತ್ತಿಲೇ ನಿರ್ಕೈ ಯಾವದೆನ್ನೆನ್ನಿಲ್ ? ಆಙ್ಗಮಾಹ ಪ್ರಪತ್ತಿಯುಮ್ ಪಣ್ಣಿ, ಉಪಾಯಮಾಹ ಉಪಾಸನಮು ಮನುಷ್ಠಿತ್ತು

---

ವೇದ್ಯಾಕಾರ ಅದರಲ್ಲಿ ನೈರಪೇಕ್ಷ್ಯಾಂಶಲಾಭವು ಅಧ್ಯಾಹಾರ ಮಾಡಲ್ಪಟ್ಟ ಅವಧಾರಣದಿಂದ (ಏವಕಾರದಿಂದ) ಏರ್ಪಡುತ್ತದೆ. ಇದು ತಮೇವ ಶರಣಂಗಚ್ಛ ಇತ್ಯಾದಿ ಪ್ರಮಾಣಾಂತರಾನುಗುಣ್ಯವು. ಆದ್ದರಿಂದ ಶರಣಾಗತಿಗೆ ಅಸಾಧಾರಣ ವೇದ್ಯಾಕಾರವು ಶರಣಶಬ್ದಕ್ಕೆ ನಿರಪೇಕ್ಷೋಪಾಯ ತ್ವಾರ್ಥಕತ್ವವೆಂಬುದೇ ಯುಕ್ತವಾದದ್ದು.

### ಉಪಾಯಾಂತಾರ ಸ್ಥಾನ ನಿವೇಶ ವೆಂಬುದರ ಅರ್ಥ

ಶರಣ ಶಬ್ದವನ್ನು ಉಪಾಯ ಪರವಾಗಿ ನಿಷ್ಕರ್ಷಿಸುವುದಕ್ಕೆ ಪ್ರಯೋಜನವನ್ನು 'ಭರನ್ಯಾಸ ಬಲಾದೇವ' ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಅತ್ರ-ಈ ಮಂತ್ರದಲ್ಲಿ ಶರಣ ಶಬ್ದದಿಂದ ಭರನ್ಯಾಸ ಬಲಾದೇವ ಭರ ಸಮರ್ಪಣ ಬಲದಿಂದ ರಕ್ಷಕಃ-ಸರ್ವಾಧಿಕಾರಿಗಳಿಗೂ ರಕ್ಷಕನಾಗಿ ಪ್ರಸಿದ್ಧನಾದ ಭಗವಂತನು ಉಪಾಯಾಂತರ ಸ್ಥಾನೇ - ಮೋಕ್ಷಕ್ಕೆ ಉಪಾಯವಾದ ಭಕ್ತಿ ಯೋಗಸ್ಥಾನದಲ್ಲಿ ಸ್ವಯತ್ನ ವಿನಿವೃತ್ತಯೇ-ತನ್ನ ಪ್ರಯತ್ನದ ನಿವೃತ್ತಿಗೋಸ್ಕರ ವಿನಿವೇಶಿತಃ- ನಿವೇಶಿಸಲ್ಪಟ್ಟಿದ್ದಾನೆ. ಅದಾಗಿ ಭಕ್ತ್ಯಾದಿಗಳಲ್ಲಿ ಅಶಕ್ತನಾಗಿ ಅಕಿಂಚನನಾದ ಅಧಿಕಾರಿಯು ನನಗೆ ಭಕ್ತ್ಯಾದ್ಯುಪಾಯಗಳನ್ನು ಅನುಷ್ಠಿಸಲು ಶಕ್ತಿಯಿಲ್ಲ, ಆ ಉಪಾಯಗಳ ಸ್ಥಾನದಲ್ಲಿ ನೀವೇ ಇದ್ದು ಅಂದರೆ ಭಕ್ತ್ಯಾದ್ಯುಪಾಯಾಂತರ ನಿರಪೇಕ್ಷನಾಗಿ ಮೋಕ್ಷವನ್ನು ದಯಪಾಲಿಸಬೇಕು ಎಂದು ಭಗವಂತನನ್ನು ಪ್ರಾರ್ಥಿಸುವುದು ಉಪಾಯಾಂತರ ಸ್ಥಾನ ನಿವೇಶಕ್ಕೆ ಅರ್ಥ. ಈ ಪ್ರಾರ್ಥನೆಯು ಭರನ್ಯಾಸ ಬಲಾದೇವ ಭಕ್ತ್ಯಾದ್ಯುಪಾಯಾಂತರ ರೂಪವಾದ ಭರವನ್ನು ಭಗವಂತನಲ್ಲಿ ಸಮರ್ಪಿಸಿ ಅಂದರೆ ಆ ಉಪಾಯಾಂತರಗಳನ್ನು ಅಪೇಕ್ಷಿಸದೇ ಫಲ ಪ್ರದಾನವನ್ನು ಮಾಡಬೇಕೆಂಬ ಪ್ರಾರ್ಥನಾಬಲದಿಂದ, ತನಗೆ ಉಪಾಯಾಂತರದಲ್ಲಿ ಪ್ರವೃತ್ತಿಯು ಇಲ್ಲದಿರಲು ಉಪಾಯಾಂತರ ಸ್ಥಾನ ನಿವೇಶವೆಂದು ತಾತ್ಪರ್ಯ. ಸರ್ವಾಧಿಕಾರಿ ಹಳುಕ್ಕುಮ್ ಸರ್ವಾಧಿಕಾರಿಗಳಿಗೂ ಆಯಾಯಾ ಶಾಸ್ತ್ರಾರ್ಥಗಳಿಂದ ಆರಾಧಿತನಾದ ಸರ್ವೇಶ್ವರನು ಫಲಕ್ಕೆ ಉಪಾಯವಾಗಿರುವಾಗ ಈ ಪ್ರಕರಣದಲ್ಲಿ ವಿಶೇಷವಾಗಿ ಉಪಾಯವಾಗಬೇಕೆಂದು ಪ್ರಾರ್ಥಿಸುವುದು, ಉಪಾಯಾಂತರ ಸ್ಥಾನದಲ್ಲಿ ಸಹಜಕಾರುಣ್ಯಾದಿ ವಿಶಿಷ್ಟನಾದ ಈಶ್ವರನನ್ನು ಸ್ಥಾಪಿಸುವುದೆಂಬ ಪ್ರಪತ್ತಿಪ್ರಕಾರಂ ತೋಟ್ರುಪೈಕ್ಕಾಹವಾಮುತ್ತನೈ- ಉಪಾಯತ್ವ ಪ್ರಾರ್ಥನಾರೂಪವಾದ ಪ್ರಕಾರ ಅಂಗಿವಿಶೇಷಣವು ತೋರುವುದಕ್ಕೋಸ್ಕರವಷ್ಟೇ. ಇಂಗ್ಗು ಭಕ್ತಿ ಯೋಗ ಸ್ಥಾನತ್ತಿಲೇ ಇತ್ಯಾದಿ-ಇಲ್ಲಿ,

"ಯದ್ಯೇನ ಕಾಮಕಾಮೇನ ನಸಾಧ್ಯಂ ಸಾಧನಾಂತರೈಃ।
ತೇನತೇನಾಪ್ಯತೇ ತತ್ರ ನ್ಯಾಸೇನೈವ ಮಹಾಮುನೇ॥,"

ಎಂಬ ಕಾರಿಕೆಯ ಪ್ರಕಾರ, ಭಕ್ತಿಯೋಗಾದಿಗಳನ್ನು ಅನುಷ್ಠಿಸಲು ಅಶಕ್ತರಿಗೆ, ಭಕ್ತಿಸ್ಥಾನದಲ್ಲಿ ಭರನ್ಯಾಸವನ್ನು ವಿಧಿಸಿರುವಾಗ, ಈಶ್ವರನು ಉಪಾಯಾಂತರ ಸ್ಥಾನತ್ತಿಲೇ ನಿರ್ಕೈಯಾವದು -ಭಗವಂತನು ಉಪಾಯಾಂತರ ಸ್ಥಾನದಲ್ಲಿ ಇರುವುದೇಕೆಂದರೆ, ಅಂಗಮಾಹ ಇತ್ಯಾದಿ ಅಂಗವಾಗಿ ಪ್ರಪತ್ತಿಯನ್ನು ಮಾಡಿ ಉಪಾಯ

ಪ್ಪೆರವೇಣ್ಡುಮ್ ಫಲತ್ತೈ ಅವ್ವುಪಾಯವೊೞಿಯವೇ ಪ್ರಪತ್ತಿಮಾತ್ರತ್ತಾಲೇಪೆರುಹೈಕ್ಕಡಿ ಈಶ್ವರನುಡೈಯ ಸಹಜಕಾರುಣ್ಯಾದಿ ಸ್ವಭಾವ ವಿಶೇಷಮ್ ; ಅಹೈಯಾಲೇ ಆಕಿಂಚನನುಕ್ಕು ಈಶ್ವರ್ನ ಉಪಾಯಾಂತರ ಸ್ಥಾನತ್ತಿಲೇ ನಿನ್ಱಾನೆನ್ನಿರದು. ಅಭಿಮತಫಲತ್ತುಕ್ಕು ಉಪಾಯಮಾಹ ವಿಹಿತಮಾನಭರಮ್ ಶುಮಕ್ಕ ಮಾಟ್ಟಾದ ವಕಿಂಚನನ್ ಗೋಪ್ತಾವಾಯ್ ನಿರ್ಕಿರ ಅವನೈ. ನೀ ಎನಕ್ಕು ಉಪಾಯಮಾಹ ವೇಣುಮೆನ್ರು ಉಪಾಯಾನ್ತರ ಸ್ಥಾನತ್ತಿಲೇ ನಿವೇಶಿಪ್ಪಿಕ್ಕೈಯಾವದು?ಎನ್ ತಲೈಯಿಲ್ ಉಪಾಯಾನ್ತರತ್ತೈಚ್ಚುಮತ್ತಾದೇ ಅವತ್ತೈಚ್ಚುಮನ್ದಾಲ್ ಮೇಲ್ವರುಮ್ ಅಭಿಮತಮೆಲ್ಲಾಮ್ ತೆರುಗೈ ಸಮರ್ಥ ಕಾರುಣಿಕನಾನವುನಕ್ಕೇ ಭರಮಾಹ ಏರಿಟ್ಟುಕೊಳ್ಳವೇಣುಮೆನ್ಗೈ.

---

ವಾಗಿ ಉಪಾಸನವನ್ನೂ ಅನುಷ್ಠಿಸಿ ಹೊಂದಬೇಕಾದ ಫಲವನ್ನು ಆ ಉಪಾಯವನ್ನು ಮಾಡದೇನೇ ಪ್ರಪತ್ತಿ ಮಾತ್ರದಿಂದ ಹೊಂದುವುದಕ್ಕೆ ಅಡಿ-ಕಾರಣವಾಗಿ, ಸಹಜಕಾರುಣ್ಯಾದಿ ವಿಶಿಷ್ಟನಾದ ಈಶ್ವರನನ್ನು ಭಕ್ತಿಸ್ಥಾನ ದಲ್ಲಿ ನಿವೇಶಿಸುವುದೆಂದರ್ಥ. ಹೀಗೆ ಭಕ್ತಿಸ್ಥಾನದಲ್ಲಿ ಭಗವಂತನನ್ನು ನಿವೇಶಿಸುವುದೇ ಪ್ರಪತ್ತಿಯಾದ್ದರಿಂದ ಶಾಸ್ತ್ರಾದಿಗಳಲ್ಲಿ ಅಶಕ್ತನಿಗೆ, ಆ ಸ್ಥಾನದಲ್ಲಿ ಪ್ರಪತ್ತಿಯನ್ನು ವಿಧಿಸುವ ಪ್ರಮಾಣವು ಸಂಗತವಾಗುತ್ತದೆ ಎಂದು ತಾತ್ಪರ್ಯ.

ಪ್ರತಿದಿನವೂ ಪರಿಕರಗಳೊಡನೆ ಮೋಕ್ಷಕ್ಕೆ ಪ್ರಯಾಣ ಮಾಡುವ ಪರ್ಯಂತ ಅಭ್ಯಾಸ ಮಾಡಿದ ಉಪಾಸನ ದಿಂದ ಸಮರ್ಥಾಧಿಕಾರಿಯಾದ ಮುಮುಕ್ಷುವಿಗೆ ಭಗವಂತನ ಮೋಕ್ಷಜನಕವಾದ ಅನುಗ್ರಹವು-ಪ್ರಸನ್ನತೆಯು ಎಷ್ಟರಮಟ್ಟಿಗೆ ಅವಿಕಲವಾಗಿ ಉಂಟಾಗುತ್ತದೆಯೋ, ಅಷ್ಟು ಪ್ರಸನ್ನತೆಯೂ, ಅಕಿಂಚನನಿಗೆ ಆದೇ ಕ್ಷಣದಲ್ಲಿ ಸಪರಿಕರ ಸಕೃತ್ಕೃತ ಭರನ್ಯಾಸ ಮಾತ್ರದಿಂದ, ಸರ್ವೇಶ್ವರನಿಗೆ ಉಂಟಾಗುತ್ತದೆ ಎಂಬ ನೈರ್ಭರ್ಯ ಸಿದ್ಧಿಗೋಸ್ಕರ, ಭಗವಂತನು ಉಪಾಯಾಂತರ ಸ್ಥಾನದಲ್ಲಿ ನಿವೇಶಿಸಲ್ಪಡುತ್ತಾನೆ. ಈ ರೀತಿಯಾದ ವ್ಯಾಜ ಮಾತ್ರ ಪ್ರಸನ್ನನಾದ ಭಗವಂತನ ಕಾರುಣ್ಯ ಪರಿಪಾಕದಲ್ಲಿ ಪರಮಾದರವು ಸಿದ್ಧೋಪಾಯ ಪ್ರಾಧಾನ್ಯ ವಾದಕ್ಕೆ ಕಾರಣ.

ನಿದ್ರಾಯಿತಾನ್ ನಿಗಮವರ್ತ್ಮನಿ ಚಾರುದರ್ಶೀ
ಪ್ರಸ್ಥಾನ ಶಕ್ತಿ ಸಹಿತಾನ್ ಪ್ರತಿಬೋಧ್ಯ ಜಂತೂನ್.!
ಜೀರ್ಣಸ್ತ ನಂಧಯ ಜಡಾಂಧ ಮುಖಾನಿಮಾಸ್ಮಾನ್
ನೇತುಂ ಮುಕುಂದ ಯತಸೇ ದಯಯಾ ಸಹತ್ವಮ್ ॥

ಎಂಬ ಶರಣಾಗತಿ ದೀಪಿಕಾ (ಶ್ಲೋಕ) ಶ್ರೀಸೂಕ್ತಿಯು ಇಲ್ಲಿ ಅನುಸಂಧೇಯ. ಯಾಂಚಾ ನ್ವಿತ ಭರನ್ಯಾಸ ರೂಪ ಪ್ರಪದನದಲ್ಲಿ ಯಾಂಚೆಯು ಪ್ರಕಾರ. ಇದನ್ನು ಪ್ರಶ್ನಪೂರ್ವಕವಾಗಿ ವಿವರಿಸುತ್ತಾರೆ. **ಅಭಿಮತ ಫಲತ್ತುಕ್ಕು** ಇತ್ಯಾದಿ. ಅಭಿಮತ ಫಲಕ್ಕೆ ಉಪಾಯವಾದ ಭರವನ್ನು ಹೊತ್ತುಕೊಳ್ಳಲಾಗದ ಆಕಿಂಚನನು, ಗೋಪ್ತಾವಾಗಿ ನಿಂತಿರುವ ಭಗವಂತನನ್ನು, "ನೀನು ನನಗೆ ಉಪಾಯವಾಗಬೇಕೆಂದು ಉಪಾಯಾಂ ತರ ಸ್ಥಾನದಲ್ಲಿ ನಿವೇಶಿಸುವುದೇನೆಂದರೆ **ಎನ್ ತಲೈಯಿಲುಪಾಯಾಂತರತ್ತೈಚ್ಚುಮತ್ತಾದೇ** ಇತ್ಯಾದಿ -ನನ್ನ ಮೇಲೆ ಭಕ್ತಿ ಯೋಗವೆಂಬ ಉಪಾಯಾಂತರವನ್ನು ಅನುಷ್ಠಿಸುವ ಭಾರವನ್ನು ಹೊರಿಸದೆ ಆ ಭಾರವನ್ನು ಹೊತ್ತರೆ ಮುಂದೆ ಬರುವ ಸಂಸಾರ ನಿವೃತ್ತಿಪೂರ್ವಕ ಭಗವತ್ಪ್ರಾಪ್ತಿರೂಪ ಇಷ್ಟಾರ್ಥಗಳನ್ನೆಲ್ಲಾ ಕೊಡುವುದು ಉಪಾಯಂತರ ನಿರಪೇಕ್ಷನಾಗಿ, ಸಮರ್ಥ ಕಾರಣಿಕನಾದ ನಿನಗೇ ಭರವಾಗಿ **ಏರಿಟುಕ್ಕೊಳ್ಳವೇಣುಮೆನ್ಗೈ**- ಸ್ವೀಕರಿಸಬೇಕೆಂಬ ಪ್ರಾರ್ಥನೆ. ಇದೇ ಭರ ಸ್ವೀಕಾರ ಪ್ರಾರ್ಥನೆ. ನಿರಪೇಕ್ಷ ರಕ್ಷಕತ್ವ ಪ್ರಾರ್ಥನೆ.

ಇದರಿಂದ ಕೇವಲ ಭರನ್ಯಾಸವು ಪ್ರಪತ್ತಿ ಶಬ್ದ ವಾಚ್ಯವಲ್ಲ, ಮತ್ತೇನೆಂದರೆ ತದೇಕೋಪಾಯತಾ ಯಾಂಚಾ ವಿಶಿಷ್ಟ ಭರನ್ಯಾಸವು ಪ್ರಪತ್ತಿ ಶಬ್ದಾರ್ಥ. ಅಂದರೆ ಭಗವಂತನೇ ಉಪಾಯವಾಗಿರಬೇಕೆಂಬ ಪ್ರಾರ್ಥನಾ ವಿಶಿಷ್ಟವಾದ

**ಇಷ್ವಂಶತ್ತ್ಯೈ ನಿಷ್ಕರ್ಷಿತ್ತು ನಿಕ್ಷೇಪತ್ತೈ ಅಙ್ಗಿಂಯನ್ರು ಶೊಲ್ಲುಹಿರದು. ಇದು ಸ್ವನಿರ್ಭರತ್ವ ಪರ್ಯಂತಮ್.**

---

ಭರನ್ಯಾಸವು ಪ್ರಪತ್ತಿ ಶಬ್ದಕ್ಕೆ ಅರ್ಥ. ಆಜ್ಞಾ ದಕ್ಷಿಣಾಪೂರ್ವಕ ಭರನ್ಯಾಸಗಳಿಗಿಂತ ಬೇರೆಯಾದುದು, ಪ್ರಾರ್ಥನಾನ್ವಿತ ಭರನ್ಯಾಸ. ಈ ವಸ್ತುವನ್ನು ಕಾಪಾಡುವ ಭಾರವು ನಿನ್ನದು ಎಂದು ರಾಜನು ಭೃತ್ಯನನ್ನು ಆಜ್ಞೆಮಾಡಿ ಆ ವಸ್ತುವನ್ನು ಅವನಲ್ಲಿಡುವುದು ಆಜ್ಞಾಪೂರ್ವಕ ಭರನ್ಯಾಸ. ಆ ವಸ್ತುವನ್ನು ಕಾಪಾಡಲು ಸ್ವಲ್ಪ ದ್ರವ್ಯವನ್ನು ಕೊಟ್ಟು ಒಬ್ಬನಲ್ಲಿಡುವುದು ದಕ್ಷಿಣಾಪೂರ್ವಕ ಭರನ್ಯಾಸ. ಇವೆರಡೂ ಭಗವಂತನಲ್ಲಿ ಕಾರ್ಯಕಾರಿಯಾಗಲಾರವು. ಆದ್ದರಿಂದ ಈ ಆತ್ಮವಸ್ತುವನ್ನು ಕಾಪಾಡುವ ಭಾರವು ನಿನ್ನದು ಎಂದು ಪ್ರಾರ್ಥನಾಪೂರ್ವಕವಾಗಿ ಇದನ್ನು ಭಗವಂತನಲ್ಲಿ ಸಮರ್ಪಿಸುವುದು, ಪ್ರಾರ್ಥನಾಪೂರ್ವಕ ಭರನ್ಯಾಸ.

ಪ್ರಾರ್ಥನಾ ಭರನ್ಯಾಸಗಳೆರಡರಲ್ಲಿ ಯಾವುದು ಪ್ರಪತ್ತಿ ಶಬ್ದಾರ್ಥವೆಂದು ನಿಷ್ಕರ್ಷಿಸಲು ಬ್ರಹ್ಮದೇವನು ಶರಣಾಗತಿ ಸ್ವರೂಪವೇನು ಎಂದು ಭಗವಂತನನ್ನು ಪ್ರಾರ್ಥಿಸಲು,

"ಅನೇನೈವತು ಮಂತ್ರೇಣ ಸ್ವಾತ್ಮಾನಂ ಮಯಿ ನಿಕ್ಷಿಪೇತ್ ।
ಮಯಿ ನಿಕ್ಷಿಪ್ತ ಕರ್ತವ್ಯಃ ಕೃತಕೃತ್ಯೋಭವಿಷ್ಯತಿ ॥

ಈ ಮಂತ್ರವನ್ನು ಹೇಳಿಕೊಂಡು ತನ್ನ ಆತ್ಮವಸ್ತುವನ್ನು ನನ್ನಲ್ಲಿಡಬೇಕು. ನನ್ನಲ್ಲಿಟ್ಟನೆಂಬ ಕರ್ತವ್ಯದಿಂದ ಕೃತಕೃತ್ಯನಾಗುತ್ತಾನೆ, ಎಂದು ಭಗವಂತನು ಪ್ರತ್ಯುತ್ತರವನ್ನು ಕೊಡುತ್ತಾನೆಂದು ಸಾತ್ವತ ತಂತ್ರದಲ್ಲಿ ಹೇಳಿದೆ. ಇದರಿಂದ ನಿಕ್ಷೇಪವೇ ಶರಣಾಗತಿ ಎಂದು ಏರ್ಪಡುತ್ತದೆ. ಪ್ರಾರ್ಥನೆಯೂ ಶರಣಾಗತಿ ಶಬ್ದವಾಚ್ಯವೆಂದು,

"ತ್ವಮೇವೋಪಾಯ ಭೂತೋ ಮೇ ಭವೇತಿ ಪ್ರಾರ್ಥನಾಮತಿಃ । ಶರಣಾಗತಿರಿತ್ಯುಕ್ತಾ",

ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸಪೂರ್ವಕಮ್ । ತದೇಕೋಪಾಯತಾಯಾಂಚಾ ಪ್ರಪತ್ತಿಶ್ಶರಣಾಗತಿಃ ॥

ಇತ್ಯಾದಿವಚನಗಳು ಹೇಳಿವೆಯಾದ್ದರಿಂದ, ಯಾವುದು ಸರಿ ಎಂಬುದು ಪ್ರಶ್ನೆ. ಇವುಗಳಿಗೆ ಸಮಾಧಾನವನ್ನು **ಇಷ್ವಂಶತ್ತ್ಯೈ ನಿಷ್ಕರ್ಷಿತ್ತು**-ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ 'ಭರಸ್ವೀಕಾರ ಪ್ರಾರ್ಥನಾ ವಿಶಿಷ್ಟ ಭರನ್ಯಾಸವು' ಪ್ರಪತ್ತಿ ಶಬ್ದಾರ್ಥ. ಅಲ್ಲಿ "ನಿಕ್ಷೇಪಾಪರ ಪರ್ಯಾಯೋ ನ್ಯಾಸಃ ಪಂಚಾಂಗ ಸಂಯುತಃ', ಇತ್ಯಾದಿ ವಚನಗಳಿಂದ ಹೇಳಲ್ಪಟ್ಟ ಆನುಕೂಲ್ಯಸಂಕಲ್ಪಗಳಿಂದ ಕೂಡಿದ ಅಂಗಿಯು, ಕೇವಲ ಪ್ರಾರ್ಥನಾರೂಪವಲ್ಲ. ನಿಕ್ಷೇಪವಿಲ್ಲದೆ ಕೇವಲ ಪ್ರಾರ್ಥನೆಯಿಂದ ಪ್ರಯೋಜನವು ಏರ್ಪಡಲಾರದು. ಕೇವಲ ಭರನ್ಯಾಸವೂ ಅಂಗಿಸ್ವರೂಪವಾಗಲಾರದು. ಆಜ್ಞಾದಕ್ಷಿಣಾ ಪೂರ್ವಕ ಭರನ್ಯಾಸಗಳಲ್ಲಿ ವ್ಯಭಿಚರಿತವಾಗುತ್ತದೆ. ಆದ್ದರಿಂದ ಉಪಾಯತ್ವ ಪ್ರಾರ್ಥನಾರೂಪ ಭರಸ್ವೀಕಾರ ಪ್ರಾರ್ಥನಾ ವಿಶಿಷ್ಟ ಸ್ವನಿರ್ಭರತ್ವ ಪರ್ಯಂತ ಭರನ್ಯಾಸವೇ ಪ್ರಪತ್ತಿ ಶಬ್ದಾರ್ಥ. ಪ್ರಾರ್ಥನೆಯು ಪ್ರಪತ್ತಿಯ ಅಂಶ–ವಿಶೇಷಣ.

**ಇಷ್ವಂಶತ್ತ್ಯೈ ನಿಷ್ಕರ್ಷಿತ್ತು**–ವಿಶೇಷಣ ಭೂತವಾದ ಈ ಪ್ರಾರ್ಥನಾಂಶವನ್ನು ಪೃಥಕ್ಕಾಗಿ ಹೇಳಿ,(ನಿಷ್ಕರ್ಷವೆಂದರೆ–ವ್ಯವಚ್ಛೇದ–ಪೃಥಕ್ಕರಿಸಿ) **ನಿಕ್ಷೇಪತ್ತೈ ಅಂಗಿ** ಎನ್ರುಕೊಲ್ಲುಹಿರದು–ಭರನ್ಯಾಸವನ್ನು ಅಂಗಿ ಎಂದು ವ್ಯವಹರಿಸುವುದು, ಎಂದು ಆಚಾರ್ಯರು ವಿವರಿಸಿತ್ತಾರೆ. ಅದಾಗಿ ಉಪಾಯತ್ವ (ಭರಸ್ವೀಕಾರ) ಪ್ರಾರ್ಥನೆಯು ಅಂಗಿತಾವಚ್ಛೇದಕ–ಅಂಗಿ ವಿಶೇಷಣ. ನಿಕ್ಷೇಪವು ಅಂಗಿ ಎಂದು ತಾತ್ಪರ್ಯ. ಆದ್ದರಿಂದ ಪ್ರಾರ್ಥನೆಯು ಮಾತ್ರ ಎಲ್ಲಿ ಹೇಳಲ್ಪಟ್ಟಿತೋ ಅಲ್ಲಿ ಭರಸಮರ್ಪಣವೂ ಆಕ್ಷಿಪ್ತ. ಎಲ್ಲಿ ಸ್ವತಂತ್ರ ಪ್ರಪತ್ತಿರೂಪ ಭರಸಮರ್ಪಣವೋ ಅಲ್ಲಿ ಪ್ರಾರ್ಥನೆಯೂ ಆಕ್ಷಿಪ್ತವಾಗಿ ಸಿದ್ಧಿಸುತ್ತದೆ. ಪ್ರಾರ್ಥನಾಮಾತ್ರವೇ ಭರಸಮರ್ಪಣವಲ್ಲ. ಭರಸಮರ್ಪಣವೇ ಪ್ರಾರ್ಥನೆಯಲ್ಲ. ಎರಡೂ ಸೇರಿ ಅಂಗಿ ನಿಷ್ಪತ್ತಿ. ಒಂದನ್ನು ಹೇಳಿದರೆ ಎರಡೂ ಸಿದ್ಧಿಸುತ್ತದೆ ಎಂದರೆ,

"ಅಕಾತ್ಮೀಯಂ ಭರಂಸರ್ವಂ ನಿಕ್ಷಿಪ್ಯ ಶ್ರೀಪತೇಃ ಪದೇ ।

ಉಪಾಯಂ ವೃಣು ಲಕ್ಷ್ಮೀಶಂ, ತಮುಪೇಯಮಿಚಿಂತಯ ॥

ಇತ್ಯಾದಿ ವಚನಗಳಲ್ಲಿ ಭರಸಮರ್ಪಣವೂ, ಉಪಾಯತ್ವ ಪ್ರಾರ್ಥನೆಯೂ ಹೇಳಿರುವುದಕ್ಕೆ ತಾತ್ಪರ್ಯವೇನೆಂದರೆ ಉಪಾಯತ್ವ ಪ್ರಾರ್ಥನಾ ವಿ ಶಿ ಷ್ಟ ಭ ರ ನ್ಯಾ ಸ ವು ವಿವಕ್ಷಿತವೆಂದು ಭಾವ. ಉಪಾಯತ್ವ ಪ್ರಾರ್ಥನೆಯೂ ಭರಸ್ವೀಕರ್ತೃತ್ವ ಪ್ರಾರ್ಥನೆಯೂ ಅನತಿಭಿನ್ನಗಳು. ಉಪಾಯತ್ವಪ್ರಾರ್ಥನೆಯು ಭಕ್ತಿಯೆಂಬ ಉಪಾಯ ವನ್ನು ಅನುಷ್ಠಿಸಬೇಕೆಂದು ಅಪೇಕ್ಷಿಸದೆ ಆಸ್ಥಾನದಲ್ಲಿ ಭಗವಂತನನ್ನು ಇರಿಸುವುದೆಂಬ ಪ್ರಾರ್ಥನೆ. ಇದೇ ಭರ ಸ್ವೀಕಾರ ಪ್ರಾರ್ಥನೆ ಆದ್ದರಿಂದ ಉಪಾಯತ್ವವರಣ ರೂಪವಾದ ಭರಸ್ವೀಕಾರ ಪ್ರಾರ್ಥನೆಯು ಭರನ್ಯಾಸಕ್ಕೆ ಅಂತರಂಗ ವಿಶೇಷಣವೆಂಬುದು ತಾತ್ಪರ್ಯ **ಇದು ಸ್ವನಿರ್ಭರತ್ವ ಪರ್ಯಂತವಮ್–ಈ** ನಿಕ್ಷೇಪವು ತನಗೆ ನೈರ್ಭರ್ಯವು ಉಂಟಾಗುವ ಪರ್ಯಂತವಾಗಬೇಕು. **ಇನಿಷ್ಕರ್ಷತ್ತ್ಯ ನಿನ್ನೈತ್ತು**-ನಿರಪೇಕ್ಷ ರಕ್ಷಕತ್ವ ಪ್ರಾರ್ಥನಾನ್ವಿತ ಸ್ವನಿರ್ಭ ರತ್ವ ಪರ್ಯಂತವಾದ ಭರನ್ಯಾಸವೇ ಅಂಗಿ ಎಂಬ ನಿಷ್ಕರ್ಷವನ್ನು ತಿಳಿದು, (ಕೇವಲ ಉಪಾಯತ್ವವು ವ್ಯವಚ್ಛೇದಿಸ ಲ್ಪಡುತ್ತದೆ ಎಂದು ನಿಷ್ಕರ್ಷ ಶಬ್ದಾರ್ಥ.) **ಸಾಂಪ್ರತಂತ್ವೇಷಃ ಉಪಾಯಾರ್ಥೈಕ ವಾಚಕಃ**–ಇದು ಉಪಾಯಾ ರ್ಥವನ್ನು ತಿಳಿಸುತ್ತದೆ ಎಂದು ಪ್ರಮಾಣವಚನವು ಹೇಳುತ್ತದೆ.

> ಅಕೃತೇತು ಭರನ್ಯಾಸೇ ರಕ್ಷಾಪೇಕ್ಷಣ ಮಾತ್ರತಃ ।
> ಪಶ್ಚಾತ್ಸ್ವಪ್ರಯತ್ನವಿರತಿಃ ನ ಪ್ರಸಿಧ್ಯತಿ ಲೋಕವತ್ ॥

ಎಂದು ಹಿಂದೆಯೇ ಅನುಗ್ರಹಿಸಿದ ರೀತಿಯಲ್ಲಿ, ರಕ್ಷಿಸಬೇಕೆಂದು ಪ್ರಾರ್ಥನೆಯನ್ನು ಮಾತ್ರ ಮಾಡಿ, ಭರನ್ಯಾಸ ವನ್ನು ಮಾಡದೆ ಇದ್ದರೆ ಅಂದರೆ ರಕ್ಷ್ಯವಸ್ತುವನ್ನು ಸಮರ್ಪಿಸದಿದ್ದರೆ. ಅನಂತರ ಸ್ವಪ್ರಯತ್ನ ನಿವೃತ್ತಿಯು ಏರ್ಪಡುವುದಿಲ್ಲ. ಹೇಗೆಂದರೆ ಲೋಕವತ್ – ಲೋಕದಲ್ಲಿ ತನ್ನಿಂದ ರಕ್ಷಿಸಲಾಗದ ವಸ್ತುವನ್ನು ರಕ್ಷಿಸಲು ಸಮರ್ಥ ನನ್ನು ಪ್ರಾರ್ಥಿಸಿ, ಆ ರಕ್ಷ್ಯವಸ್ತುವನ್ನು ಅವನಲ್ಲಿ ಸಮರ್ಪಿಸುವುದನ್ನು ನೋಡಿದ್ದೇವೆ. ಅದೇ ನ್ಯಾಯವನ್ನು ಇಲ್ಲಿಯೂ ಅವಲಂಬಿಸಬೇಕು ಇದನ್ನೇ ಆಚಾರ್ಯರು ಸಾಧ್ಯೋಪಾಯ ಶೋಧನಾಧಿಕಾರದಲ್ಲಿ,

> ಆಕಿಂಚನ್ಯ ಭರನ್ಯಾಸೋಪಾಯತ್ವ ಪ್ರಾರ್ಥನಾತ್ಮನಾಮ್ ।
> ತ್ರಯಾಣಾಂ ಸೌಹೃದಂ ಸೂಕ್ಷ್ಮಮ್ ಯಃ ಪಶ್ಯತಿ ಸಪಶ್ಯತಿ ॥

ಎಂಬ ಕಾರಿಕೆಯಿಂದ ವಿಶದೀಕರಿಸಿದ್ದಾರೆ ಅದಾಗಿ ಆಕಿಂಚನ್ಯ-ಸ್ವನೈರ್ಭರ್ಯ. ಅಂಗರೂಪವಾದ ಆಕಿಂಚನ್ಯವಲ್ಲ. ಭರನ್ಯಾಸ ಭರವನ್ನು ಸಮರ್ಪಿಸುವುದು ಪ್ರಾರ್ಥನಾ–ಭರಸ್ವೀಕಾರ ಪ್ರಾರ್ಥನಾ ರೂಪ ಉಪಾಯತ್ವ ಪ್ರಾರ್ಥನೆ. ಇವುಗಳಲ್ಲಿ ಸೌಹಾರ್ದಭಾವವನ್ನು ತಿಳಿದವನು ಪ್ರಪತ್ತಿ ಶಬ್ದಾರ್ಥವನ್ನು ತಿಳಿದವನಾಗುತ್ತಾನೆ. ಅದಾಗಿ ತನ್ನಿಂದ ರಕ್ಷಿಸಲ್ಪಡಲಾಗದ ವಸ್ತುವನ್ನು ರಕ್ಷಿಸಲು ಸಮರ್ಥ (ಉಪಾಯ ಭೂತ)ನಾದವನಲ್ಲಿ ಸಮರ್ಪಿಸುವಾಗ ನೀನೇ ಈ ವಸ್ತುವನ್ನು ರಕ್ಷಿಸಲು ಉಪಾಯಭೂತನು. ಈ ವಸ್ತುವನ್ನು ಸ್ವೀಕರಿಸಿ ರಕ್ಷಿಸು ಎಂಬ ಪ್ರಾರ್ಥನೆ. ಅನಂತರ ಆ ವಸ್ತುವನ್ನು ಅವನಲ್ಲಿ ಸಮರ್ಪಿಸುವುದು ಅನಂತರ ನಿರ್ಭರೋ ನಿರ್ಭಯೋಽಸ್ಮಿ ಎಂಬ ಅನುಸಂಧಾನ ಶರಣಾಗತಿಯಲ್ಲಿ ಇವು ಮೂರೂ ಸೇರಿಯೇ ಇವೆ ಎಂದು ತಾತ್ಪರ್ಯ. ಇಂಥಹ ಭರಸಮರ್ಪಣವು ಪ್ರಪತ್ತಿ ಶಬ್ದವಾಚ್ಯವೆಂದು,

> ಉಪಾಯೇಗೃಹ ರಕ್ಷಿತ್ರೋಶ್ಶಬ್ದ ಶ್ಶರಣಮಿತ್ಯಯಂ ।
> ವರ್ತತೇ ಸಾಂಪ್ರತಂ ತ್ವೇಷ ಉಪಾಯಾರ್ಥೈಕವಾಚಕಃ ॥

ಎಂದು ಶರಣ ಶಬ್ದ ನಿಷ್ಕರ್ಷ ವಚನದಿಂದ ಅಭಿಪ್ರೇತವು. ಸ್ವನಿರ್ಭರತ್ವ ಪರ್ಯಂತ ಭರಸಮರ್ಪಣಕ್ಕೆ ನಿರಪೇಕ್ಷೋ ಪಾಯತ್ವವು ವೇದ್ಯಾಕಾರವು. ಇದು ಉಪಾಯಾರ್ಥೈಕ ವಾಚಕಃ, ಎಂಬ ನಿಷ್ಕರ್ಷಕ ವಚನದಿಂದ ಏರ್ಪಡುತ್ತದೆ. ಉಪಾಯತ್ವವೆಂದರೆ ರಕ್ಷಾನುಕೂಲ ಪ್ರಯತ್ನವತ್ವ. ಇದರಿಂದ ತನ್ನ ರಕ್ಷಣೆಗೋಸ್ಕರ ಸಮರ್ಥಕಾರುಣಿಕನು ಪ್ರಯತ್ನಿಸುತ್ತಾನೆಂದು ನಿಶ್ಚಯವನ್ನುಳ್ಳ ಅಸಮರ್ಥನು, ಬೇರೆ ಪ್ರಯತ್ನಗಳನ್ನು ಮಾಡುವುದಿಲ್ಲವೆಂಬುದು

**ಉಪಾಯ ಪ್ರಾರ್ಥನೈಯೈಯುಂ ನಿಕ್ಷೇಪತ್ತೈಯುಂ** ಓರ್ **ಇಡತ್ತಿಲೇ ಪಿರಿಯಚ್ಚೊಲ್ಲುಮಿಡಂಗಳಿಲ್ ಉಪಾಯಶಬ್ದತ್ತಿಲ್ ಇನ್ವಿವಕ್ಷೈಯೈತ್ತವಿರುತಲ್, ಭರಸಮರ್ಪಣಾದಿಹಳ್ ಸುವ್ಯಕ್ತಙ್ಗಳಾಹೈಕ್ಕಾಹ ಪಿರಿಯಚ್ಚೊಲ್ಲುಹಿರದಾದಲ್, ಇಙ್ಗು ಸ್ವರೂಪಮುಂ ಫಲಮುಂ ಸಮರ್ಪಣೀಯಮಾಹೈಯಾಲೇ ಅನೇಕಾಂಶ ವಿಶಿಷ್ಟಮಾನಸಮರ್ಪಣತ್ತಿಲ್ ಅಂಶಾನ್ತರಪರಮಾದಲಾಹಕ್ಕಡವದು. ಇವ್ವೈ ಮೂನ್ರುಪ್ರಕಾರತ್ತುಕ್ಕುಂ ಪುನರುಕ್ತಿದೋಷಮಿಲ್ಲೈ ಇವ್ವುಪಾಯತ್ವಂ ನ್ಯಾಸವಿದ್ಯೈಕ್ಕು**

---

ಅರ್ಥಸಿದ್ಧ. ಆದ್ದರಿಂದ ನಿರಪೇಕ್ಷೋಪಾಯತ್ವ ತಾತ್ಪರ್ಯದಿಂದಲೇ ನಿಕ್ಷಪ ವಚನವು ಪ್ರವೃತ್ತ. ಆದೇ ತಾತ್ಪರ್ಯದಿಂದಲೇ 'ಚರಣಗಳಲ್ಲಿಯೇ ಶರಣ' ಎಂಬ ಅವಧಾರಣವು ಅಭಿಮತವೆಂದು ಹಿಂದೆಯೇ ವ್ಯಾಖ್ಯಾತವಾಗಿದೆ. ಆದ್ದರಿಂದ ಸ್ವನಿರ್ಭರತ್ವ ಪರ್ಯಂತ ನಿರಪೇಕ್ಷ ರಕ್ಷಕತ್ವ ಪ್ರಾರ್ಥನಾರೂಪ ಉಪಾಯತ್ವ ಪ್ರಾರ್ಥನಾನ್ವಿತ ಭರನ್ಯಾಸವು ಅಂಗಿಭೂತವಾಗಿ ಪ್ರಪದನ ಶಬ್ದಾರ್ಥ, ಎಂಬುದು ಪರಿನಿಷ್ಪನ್ನವು.

**ಉಪಾಯ ಪ್ರಾರ್ಥನೆ ಮತ್ತು ನಿಕ್ಷೇಪ ಇವೆರಡನ್ನೂ ಹೇಳುವ ಭಾಗಗಳಲ್ಲಿ ಪುನರುಕ್ತಿ ಪರಿಹಾರ**

**ಉಪಾಯತ್ವ ಪ್ರಾರ್ಥನೈ ಯೈಯುಂ** ಇತ್ಯಾದಿ –

**ಆತ್ಮಾತ್ಮೀಯಂ ಭರಂ ಸರ್ವಂ ನಿಕ್ಷಿಪ್ಯಶ್ರೀಪತೇಃ ಪದೇ ।**

**ಉಪಾಯಂ ವೃಣು ಲಕ್ಷ್ಮೀಶಂ, ತಮುಪೇಯಂ ವಿಚಿಂತಯ ॥**

ಎಂಬಂತೆ **ಭರಸಮರ್ಪಣವನ್ನೂ**, ಉಪಾಯತ್ವ ಪ್ರಾರ್ಥನೆಯನ್ನೂ ಬೇರೆ ಬೇರೆ ಹೇಳಿರುವ **ಸ್ಥ**ಲಗಳಲ್ಲಿ, ಉಪಾಯ ಶಬ್ದದಲ್ಲಿ ಭರಸಮರ್ಪಣಾಂಶವನ್ನು ತ್ಯಜಿಸುವುದು, ಅಥವಾ ಭರಸಮರ್ಪಣಾದಿಗಳು **ಸ್ಪಷ್ಟ**ವಾಗಲು, ಬೇರೆ ಬೇರೆ ಹೇಳಿರುತ್ತಾರೆ. **ಇಂಗು ಸ್ವರೂಪಮುಂ** ಇತ್ಯಾದಿ – ಇಲ್ಲಿ ಸ್ವರೂಪವೂ, ಭರವೂ ಫಲವೂ ಸಮರ್ಪಣೀಯವಾದ್ದರಿಂದ ಅನೇಕಾಂಶ ವಿಶಿಷ್ಟವಾದ ಸಮರ್ಪಣದಲ್ಲಿ, **ಅಂಶಾಂತರಪರಮಾದಲಾಹಕ್ಕಡವದು** – 'ಆತ್ಮಾತ್ಮೀಯಂಭರಂ' ಎಂಬ ವಚನದಲ್ಲ ಭರಶಬ್ದವು ಹೇಳಲ್ಪಟ್ಟದ್ದರೂ, ಆತ್ಮಸ್ವರೂಪ ಸಮರ್ಪಣದಲ್ಲಿ **ತಾತ್ಪರ್ಯ** ಸಾಹಚರ್ಯದಿಂದ ಭರವೂ ಹೇಳಲ್ಪಟ್ಟಿದೆ. ಇದರಿಂದಾಗಿ 'ಆತ್ಮಾತ್ಮೀಯಂ ಭರಂ ನಿಕ್ಷಿಪ್ಯ' ಎಂದು ಸ್ವರೂಪ ಸಮರ್ಪಣವೂ, 'ಉಪಾಯಂ ವೃಣು ಲಕ್ಷ್ಮೀಶಂ' – ಎಂದು ಉಪಾಯತ್ವ ವಿಶಿಷ್ಟ ಭರನ್ಯಾಸವೂ, ತಮುಪೇಯಂ ವಿಚಿಂತಯ ಎಂದು ಫಲ ಸಮರ್ಪಣವೂ ವಿವಕ್ಷಿತವೆಂದು ತಾತ್ಪರ್ಯ. ಈ ಪಕ್ಷವೇ ಉತ್ತಮವೆಂಬುದು ಆಚಾರ್ಯರ ಹೃದಯ. **ಇವ್ವೈಮೂನ್ರುಪ್ರಕಾರತ್ತುಕ್ಕುಂ** ಇತ್ಯಾದಿ – ಈ ಮೂರು ಪ್ರಕಾರಗಳಿಗೂ ಪುನರುಕ್ತಿ ದೋಷವಿಲ್ಲ. ಇದರಿಂದ ಸ್ವರೂಪ ಸಮರ್ಪಣವನ್ನು ಮೊದಲು ಮಾಡಿ, ಅನಂತರ ಉಪಾಯತ್ವ ಪ್ರಾರ್ಥನಾರೂಪ ಭರಸ್ವೀಕಾರ ಪ್ರಾರ್ಥನಾಪೂರ್ವಕ ಭರನ್ಯಾಸವನ್ನು ಮಾಡಿ, ಅನಂತರ ಫಲ ಸಮರ್ಪಣವನ್ನು ಮಾಡಬೇಕೆಂಬ ಕ್ರಮವೂ ಸೂಚಿತ, ಈ ರೀತಿಯಾದ ತಾತ್ಪರ್ಯ ವಿಷಯಾಂಶದಲ್ಲಿ ಪುನರುಕ್ತಿದೋಷವು ಉಂಟಾಗುವುದಿಲ್ಲವೆಂದು ಆಚಾರ್ಯರ ಅಭಿಪ್ರಾಯ. ಇದರಿಂದ ಉಪಾಯತ್ವ (ಭರಸ್ವೀಕಾರ) ಪ್ರಾರ್ಥನೆಯು ಶರಣಾಗತಿಯಲ್ಲಿ ಅಂತರ್ಭವಿಸಿರುತ್ತದೆ ಎಂಬುದು ಸರ್ವಾನುಪಪತ್ತಿ ಪರಿಹಾರ ಪೂರ್ವಕ ಸಮರ್ಥಿಸಲ್ಪಟ್ಟಿದ್ದಾಯಿತು.

### ಪ್ರಪತ್ತಿಗೆ ವಿಶೇಷವಾದ ವೇದ್ಯಾಕಾರ

ಈ ಉಪಾಯತ್ವ ಪ್ರಾರ್ಥನೆಯು 'ಶರಣಾಗತಿ' ಎಂದು ಹೇಳಲ್ಪಟ್ಟ ನ್ಯಾಸ ವಿದ್ಯೆಯಲ್ಲಿ ಅನುಪ್ರವಿಷ್ಟವಾಗಿರುವುದೇ ವಿನಹ ಅಂಗಗಳಲ್ಲಿಯಾಗಲಿ, ಅಧಿಕಾರ ವಿಶೇಷಣವಾಗಿಯಾಗಲಿ ಸೇರುವುದಿಲ್ಲವೆಂಬ ಅಭಿಪ್ರಾಯದಿಂದ **ಇವ್ವುಪಾಯತ್ವಂ** ಇತ್ಯಾದಿ ಅನುಗ್ರಹಿಸುತ್ತಾರೆ. ಅದಾಗಿ **ಇವ್ವುಪಾಯತ್ವಂ** – ಈ ನಿರಪೇಕ್ಷ ರಕ್ಷಕತ್ವೋಪಾಯತ್ವವು ವಾತ್ಸಲ್ಯಾದಿ ಗುಣಗಳಿಗಿಂತ, ಈ ನ್ಯಾಸವಿದ್ಯೆಗೆ ಅಸಾಧಾರಣವಾದ **ವೇದ್ಯಾಕಾರ** –

**ವಿಶೇಷಿತ್ತು ವೇದ್ಯಾಕಾರಮ್. ಇದುಕ್ಕು ಅಪೇಕ್ಷಿತ ಮಾಯ್‌ಕ್ಕೊಣ್ಡು ಜ್ಞಾನಶಕ್ತ್ಯಾದಿಹಳ್ ವರುಹಿನ್ರನ.**

**ಅಥ "ಪ್ರಪದ್ಯೇ" ಇತ್ಯಸ್ಯಾರ್ಥಮಾಹ**

**ಪ್ರಪದ್ಯೇ" ಎನ್ನಿರವಿಡತ್ತಿಲ್ ಗತಿವಾಚಿಯಾನ ಧಾತು ಗತ್ಯರ್ಥಙ್ಗಳ್ ಬುದ್ಧ್ಯರ್ಥಂಗಳಾಹೈಯಾಲೇ ಇಙ್ಗ ಅಪೇಕ್ಷಿತ ಬುದ್ಧಿವಿಶೇಷತ್ತೈಚ್ಚೊಲ್ಲುಹಿರದು. ಬುದ್ಧಿಯಾವುದು ? ಇನ್ವಿಡತ್ತಿಲ್ "ರಕ್ಷಿಷ್ಯತೀತಿ ವಿಶ್ವಾಸಃ" ಎನ್ನಿರ ಅಧ್ಯವಸಾಯಮ್. ಅಙ್ಗಙ್ಗಳಿಲ್ ಸಾರಮಾನ ವಿಶ್ವಾಸತ್ತೈ ಮುನ್ನಿಟ್ಟುಕ್ಕೊಂಡು**

---

ವೇದ್ಯವಾದ ಗುಣ. ನೈರಪೇಕ್ಷ್ಯವು ಮುಕ್ತಕಂಠವಾಗಿ ಹೇಳಲ್ಪಡದೆ ಇದ್ದರೂ, ಸ್ವನಿರ್ಭರತ್ವ ಪರ್ಯಂತ ಭರ ನ್ಯಾಸವೆಂದು ಹೇಳುವುದರಿಂದ, ನೈರಪೇಕ್ಷ್ಯವು ವಿವಕ್ಷಿತವೆಂದು ಹೇಳುವುದು ಅನುಪಪನ್ನವಾಗಲಾರದು.

ಹಾಗಾದರೆ ವಾತ್ಸಲ್ಯ ಸ್ವಾಮಿತ್ವಾದಿ ಕಲ್ಯಾಣಗುಣಗಳು ಪೂರ್ವಖಂಡದಲ್ಲಿರುವ 'ನಾರಾಯಣ' ಶಬ್ದ ದಲ್ಲಿ ವಿಶೇಷವಾಗಿ ವಿವಕ್ಷಿಸಲ್ಪಡುತ್ತವೆ ಎಂದು ಪೂರ್ವದಲ್ಲಿ ಹೇಳಿರುವುದರಿಂದ ಅವುಗಳೇ ಅಲ್ಲವೇ ನ್ಯಾಸವಿದ್ಯೆಗೆ ವಿಶೇಷವಾದ ವೇದ್ಯಾಕಾರಗಳು. ಅವಗಳನ್ನು ಬಿಟ್ಟು "ನಿರಪೇಕ್ಷೋಪಾಯತ್ವವನ್ನು ಪ್ರಪತ್ತಿಗೆ ವಿಶೇಷವಾದ ವೇದ್ಯಾಕಾರವೆಂದು ಹೇಳುವುದು ಸರಿಯೇ ಎಂಬ ಆಕ್ಷೇಪಕ್ಕೆ ಸಮಾಧಾನವಾಗಿ **ಇದುಕ್ಕಪೇಕ್ಷಿತಮಾಯ್ ಕ್ಕೊಂಡು** ಎಂದಾರಂಭಿಸಿ ಆಚಾರ್ಯರು ಅನುಗ್ರಹಿಸುತ್ತಾರೆ. ಆದಾಗಿ ನಿರಪೇಕ್ಷೋಪಾಯತ್ವವೇ ಪ್ರಪತ್ತಿಗೆ ವಿಶೇಷವಾದ ವೇದ್ಯಾಕಾರ. ನಿರಪೇಕ್ಷೋಪಾಯತ್ವವೆಂದರೆ, ಭಕ್ತಿಯೋಗವನ್ನು ಅಪೇಕ್ಷಿಸದೆ ತತ್ಸ್ಥಾನದಲ್ಲಿ ಭಗವಂತನೇ ಉಪಾಯವಾಗಿರುವುದು ಎಂದರ್ಥ.

"ತ್ವಮೇವೋಪಾಯ ಭೂತೋ ಮೇ ಭವ,' "ತದೇಕೋಪಾಯತಾ ಯಾಂಚಾ," ಇತ್ಯಾದಿ ಪ್ರಮಾಣದಿಂದ ಈ ಅರ್ಥವು ದ್ಯೋತಿತ. ವಾತ್ಸಲ್ಯ, ಸ್ವಾಮಿತ್ವ, ಆದಿಶಬ್ದಗ್ರಾಹ್ಯಗಳಾದ, ಸೌಶೀಲ್ಯ, ಸೌಲಭ್ಯ, ಸಾರ್ವಜ್ಞ್ಯಾದಿ ಗುಣಗಳು ನಿರಪೇಕ್ಷೋಪಾಯತ್ವಕ್ಕೆ ಅಪೇಕ್ಷಿತಗಳಾಗಿ, ನಾರಾಯಣ ಶಬ್ದದಲ್ಲಿ ಅನುಸಂಧೇಯಗಳು. "ತ್ವದ್ಜ್ಞಾನಶಕ್ತಿ ಕರುಣಾಸು ಸತೀಷು ನೈವಪಾಪಂ ಪರಾಕ್ರಮಿತು ಮರ್ಹತಿಮಾಮಕೀನಮ್" ಎಂಬ ಕೂರೇಶರ ಶ್ರೀಸೂಕ್ತಿಯು ಇಲ್ಲಿ ಅನುಸಂಧೇಯ.

## "ಪ್ರಪದ್ಯೇ" ಶಬ್ದಾರ್ಥ

ಅನಂತರ "ಪ್ರಪದ್ಯೇ" ಎಂಬ ಪದಕ್ಕೆ ಅರ್ಥವನ್ನು **'ಪ್ರಪದ್ಯೇ ಎನ್ನಿರವಿಡತ್ತಿಲ್'** ಎಂದಾರಂಭಿಸಿ ಆಚಾರ್ಯರು ಅನುಗ್ರಹಿಸುತ್ತಾರೆ. ಆದಾಗಿ "ಪ್ರಪದ್ಯೇ" ಎಂಬಲ್ಲಿ **ಗತಿವಾಚಿಯಾನ ಧಾತು** "ಪದಲ್‌ಗತೌ" ಎಂಬ ಶಬ್ದಾನು ಶಾಸನದ ಪ್ರಕಾರ ಗತ್ಯರ್ಥಗಳು ಬುದ್ಧ್ಯರ್ಥಗಳಾದ್ದರಿಂದ **ಇಂಗಪೇಕ್ಷಿತ** ಇತ್ಯಾದಿ – ಇಲ್ಲಿ ಅಪೇಕ್ಷಿತವಾದ ಬುದ್ಧಿ ವಿಶೇಷವನ್ನು ಹೇಳುತ್ತದೆ. ತೀವ್ರತರವಾದ ಶೋಕದಿಂದ ಶರಣ್ಯನ ಚರಣಗಳಲ್ಲಿ ಅಕಿಂಚನನಾದ ಮುಮುಕ್ಷುವು ನಮಸ್ಕರಿಸಿ ಹಸ್ತಗಳಿಂದ ಅವನ ಕಾಲುಗಳನ್ನು ಕಟ್ಟಿಕೊಳ್ಳುವುದನ್ನು ನೋಡುತ್ತೇವೆ. ಇದು ಯುಕ್ತವಾದರೂ ಸರ್ವತ್ರ ಇದು ಸಂಭವಿಸಲಾರದು. ಗಜೇಂದ್ರ ದ್ರೌಪದೀ ವಿಭೀಷಣ ಶರಣಾಗತಿ ಪ್ರಕರಣದಲ್ಲಿ ದೂರಸ್ಥನಾದ ಶರಣ್ಯನನ್ನು ಕುರಿತು ಶರಣಾಗತಿ ಮಾಡಿರುವುದರಿಂದ ತತ್ಕಾಲದಲ್ಲಿ ಪಾದೋಪಸಂಗ್ರಹಣಕ್ಕೆ ಅವಕಾಶವಿಲ್ಲ. ಅದ್ದರಿಂದಲೂ, ಜ್ಞಾನಾನ್ಮೋಕ್ಷೋಪದೇಶವನ್ನು ಹೇಳಿರುವುದರಿಂದಲೂ ಪ್ರಪದ್ಯೇ ಎಂಬಲ್ಲಿ ಗತಿವಾಚಿ ಧಾತುವಿಗೆ ಬುದ್ಧಿವಾಚಿತ್ವವನ್ನು ಶಬ್ದಾನುಶಾಸನ ಪ್ರಕಾರ ಅಂಗೀಕರಿಸುವುದು ಯುಕ್ತವಾದದ್ದು ಎಂಬ ಅಭಿಪ್ರಾಯದಿಂದ ಬುದ್ಧ್ಯರ್ಥವನ್ನು ದೃಢೀಕರಿಸುತ್ತಾರೆಂದು ತಾತ್ಪರ್ಯ. ಪ್ರಪದ್ಯೇ ಎಂಬುದು ತಿಙಂತಶಬ್ದ. ಧಾತುವು ತಿಙಿಗೆ ಪ್ರಕೃತಿ. ಇದರಿಂದ ಈ ಗತ್ಯರ್ಥಕ್ಕೆ ಬುದ್ಧ್ಯರ್ಥವನ್ನು ಹೇಳುವುದು ದೋಷವಾಗಲಾರದು. **ಬುದ್ಧಿಯಾವದು** ಇತ್ಯಾದಿ – **ಬುದ್ಧಿಯು** ಯಾವುದೆಂದರೆ, ಇಲ್ಲಿ **ರಕ್ಷಿಷ್ಯತೀತಿವಿಶ್ವಾಸಃ** – ರಕ್ಷಿಸುತ್ತಾನೆಂಬ ವಿಶ್ವಾಸವೆಂಬ ಅಧ್ಯವಸಾಯ. **ಅಂಗಗಳಿಲ್** ಇತ್ಯಾದಿ –ಮಹಾ

**ಸಪರಿಕರಮಾನ ಸಾಧ್ಯೋಪಾಯಮ್ ಇಙ್ಗೇತೋತ್ತುಹಿರದು ಎಙ್ಗನೇಯೆನ್ನಿಲ್ ? ಇಙ್ಗು "ಪ್ರ" ಎನ್ಗಿರ ಉಪಸರ್ಗಮ್ ವಿಶ್ವಾಸತ್ತಿನುಡೈಯ ಪ್ರಕರ್ಷರೂಪಮಾನ ಮಹತ್ತ್ವತ್ತೈಕ್ಕಾಟ್ಟುಮ್. ಇವ್ವಿಶ್ವಾಸ ಪ್ರಕರ್ಷಮ್ ಶ್ರೀ ಮಚ್ಛಬ್ದತ್ತಿಲುಮ್ ನಾರಾಯಣ ಶಬ್ದತ್ತಿಲುಮ್ ಉಳ್ಳಪುರುಷಕಾರ ಸಂಬಂಧಗುಣಾದಿ ಹಳ್ಳೈ ಅನುಸಂಧಿತ್ತವಾರೇ ವರುಮ್. ಇತ್ತಾಲೇ ತನ್ ಅಪಚಾರ ಪ್ರಾಚುರ್ಯಾದಿಹಳ್ ಅಡಿಯಾಹವರುಂ ಶಙ್ಕೈಹಳೆಲ್ಲಾಂ ಕಳೈಯುಮ್.**

---

ವಿಶ್ವಾಸವು ಅಂಗಗಳಲ್ಲಿ ಸಾರವಾದದ್ದು. ಅದನ್ನು ಮುಂದಿಟ್ಟುಕೊಂಡು **ಸಪರಿಕರಮಾನ ಸಾಧ್ಯೋಪಾಯಮ್** – ನಿರಪೇಕ್ಷೋಪಾಯತ್ವ ಪ್ರಾರ್ಥನಾ ವಿಶಿಷ್ಟ ಭರನ್ಯಾಸವು ಇಲ್ಲಿ ತೋಟ್ರುಹಿರದು ಹೇಳಲ್ಪಡುತ್ತದೆ. "ಪ್ರಪತ್ತಿ" ಶಬ್ದಕ್ಕೆ "ತದೇಕೋಪಾಯತಾ ಯಾಂಚಾ ಪ್ರಪತ್ತಿ" ಎಂದು ಯಾಂಚಾನ್ವಿತ ಭರನ್ಯಾಸವು ರೂಢ್ಯರ್ಥ. ಹೀಗೆ "ಪ್ರಪದ್ಯೇ" ಎಂಬ ಶಬ್ದಕ್ಕೆ ಯಾಂಚಾನ್ವಿತ ಭರನ್ಯಾಸವೇ ರೂಢ್ಯರ್ಥವಾದರೆ, ಅಷ್ಟರಿಂದಲೇ ಅನುಷ್ಠೇಯಾರ್ಥವು ಸಂಪನ್ನವಾಗುವುದರಿಂದ ವಿಶ್ವಾಸಾರ್ಥಕತ್ವವೂ ಏತಕ್ಕೆ ಅಂಗೀಕರಿಸಲ್ಪಡುತ್ತದೆಂದರೆ, ಸಾಂಗ ಪ್ರಪತ್ತಿಯ ಪ್ರಕಾಶನಾರ್ಥವೆಂದು ತಾತ್ಪರ್ಯ. ಹಾಗಾದರೆ ಇತರ ಅಂಗಗಳು ಬೇಡವೆಂದಲ್ಲ, ಮಹಾವಿಶ್ವಾಸವೆಂಬ ಅಂಗವು ಪ್ರಧಾನವಾದದ್ದು. ನಾವು ಸಮರ್ಪಿಸುವ ಭರವನ್ನು ನಿರ್ವಹಿಸುವ ಸಾಮರ್ಥ್ಯವು ಭಗವಂತನಿಗೆ ಇದೆ ಎಂಬ ಅಧ್ಯವಸಾಯವೇ ಮಹಾವಿಶ್ವಾಸ. **ಈ** ಅಧ್ಯವಸಾಯವಿಲ್ಲದಿದ್ದರೆ ಭರಸಮರ್ಪಣವೇ ಘಟಿಸುವುದಿಲ್ಲ. ಆದ್ದರಿಂದ ಅಂಗಗಳಲ್ಲಿ ಸಾರಭೂತವಾದದ್ದು ವಿಶ್ವಾಸ. ಅಂಥಹ ಸಾರವನ್ನು ಪ್ರಕಾಶಪಡಿಸಲು ಧಾತುವಿನಲ್ಲಿ ವಿಶ್ವಾಸವನ್ನೂ ಸೇರಿಸಿ ಹೇಳಿರುತ್ತದೆ. ಇದು ಉಪಪತ್ತಿಮಾತ್ರ ಕಲ್ಪಿತವಲ್ಲ.

"ಅನನ್ಯ ಸಾಧ್ಯೇಸ್ವಾಭೀಷ್ಟೇ ಮಹಾವಿಶ್ವಾಸ ಪೂರ್ವಕಮ್ ।

ತದೇಕೋಪಾಯತಾಯಾಂಚಾ ಪ್ರಪತ್ತಿಶ್ಶರಣಾಗತಿಃ ॥,

ಎಂಬ ಲಕ್ಷಣ ವಚನದಿಂದಲೂ ಸಿದ್ಧ. ಆದ್ದರಿಂದ ಮಹಾವಿಶ್ವಾಸಪೂರ್ವಕ ಯಾಂಚಾನ್ವಿತ ಭರನ್ಯಾಸವು, 'ಪ್ರಪದ್ಯೇ' ಎಂಬ ಧಾತುವಿಗೆ ಅರ್ಥ. ಶ್ರೀಮತ್ತಾತ್ಪರ್ಯ ಚಂದ್ರಿಕೆಯಲ್ಲೂ "ರಕ್ಷಿಷ್ಯತೀತಿವಿಶ್ವಾಸಪೂರ್ವಕ ವಿಶಿಷ್ಟಾಧ್ಯವಸಾಯ ಲಕ್ಷಣ ಬುದ್ಧಿ ವಿಶೇಷ ರೂಢತ್ವಂ," "ಪ್ರಪದ್ಯಸ್ವ' – ಎಂಬಲ್ಲಿ ವ್ಯಾಖ್ಯಾತವು. ಇಲ್ಲಿಯೂ ವಿಶಿಷ್ಟಾಧ್ಯವಸಾಯವೆಂದರೆ, ಯಾಂಚಾನ್ವಿತ ಭರನ್ಯಾಸವೆಂದರ್ಥ

ಯಾಂಚಾನ್ವಿತ ಭರನ್ಯಾಸವು "ಪ್ರಪದ್ಯೇ" ಎಂಬಲ್ಲಿ ರೂಢಿಯಾಗಿ ಪ್ರಮಾಣಾನುಸಾರವಾಗಿ ಸಿದ್ಧಿಸಿದರೆ, ವಿಶ್ವಾಸರೂಪವಾದ ಅಂಗವು ಹೇಗೆ ಸಿದ್ಧಿಸುತ್ತದೆ ಎಂದರೆ ಅದನ್ನು **ಎಂಗನೇಯೆನ್ನಿಲ್**, ಇಂಗು **"ಪ್ರ" ಎನ್ಗಿರ ಉಪಸರ್ಗಮ್** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ "ಪ್ರ" ಎಂಬ ಉಪಸರ್ಗವು ವಿಶ್ವಾಸದ ಮಹತ್ತ್ವವನ್ನು ತಿಳಿಸುತ್ತದೆ. ಸರಿ ಹೀಗಾದರೂ ಅವಯವ ಶಕ್ತಿಯಿಂದ ಮಹಾವಿಶ್ವಾಸವು ಲಬ್ಧ, ಸಮುದಾಯ ಶಕ್ತಿಯಿಂದ ಪ್ರಪದನರೂಪ ಅಂಗಿಯೂ ತಿಳಿಸಲ್ಪಡುತ್ತದೆ ಇವೆರಡಕ್ಕೂ ಹೇಗೆ ಅನ್ವಯವೆಂದರೆ **ಅಂಗಂಗಳಿಲ್ ಸಾರವಾನ ವಿಶ್ವಾಸತ್ತೈ ಮುನ್ನಿಟ್ಟುಕೊಂಡು ಸಪರಿಕರಮಾನಸಾಧ್ಯೋಪಾಯಂ ಇಂಗೇ ತೋಟ್ರುಹಿರದು"** ಎಂಬ ಪೂರ್ವಶ್ರೀಸೂಕ್ತಿಯಿಂದ ಇದು ವಿವೃತವು. ಶ್ರೀಮತ್ತ್ಸಾರಸಾರದಲ್ಲಿಯೂ ವಿಶ್ವಾಸ ಪೂರ್ವಕ ಪ್ರಾರ್ಥನಾ, ಎಂದು ಅನುಗ್ರಹಿಸಲ್ಪಟ್ಟಿದೆ. ಇದರಿಂದ ಅಂಗಿಯಾದ ಶರಣಾಗತಿಗೆ ಸಂಬಂಧಪಟ್ಟು, ವಿಶ್ವಾಸ ವಿಶಿಷ್ಟ ಪ್ರಪದನವು "ಪ್ರಪದ್ಯತೇ" ಎಂಬ ಧಾತುವಿಗೆ ಅರ್ಥ. ಶ್ರೀಮದ್ರಹಸ್ಯರಕ್ಷೆಯಲ್ಲಿಯೂ, ಗದ್ಯ ಸ್ತೋತ್ರ ವ್ಯಾಖ್ಯಾನಗಳಿವೆರಡರಲ್ಲಿಯೂ, "ಪ್ರಪದ್ಯೇ ಇತ್ಯನೇನೈವ ಭರನ್ಯಾಸಾಭಿಧಾನಮ್" ಎಂದು ವ್ಯಾಖ್ಯಾತವು. ಆದ್ದರಿಂದ ಕೆಲವರು ಪ್ರಪತ್ತಿ ಶಬ್ದಕ್ಕೆ ಮಹಾವಿಶ್ವಾಸಮಾತ್ರವೆಂದು ಅರ್ಥಮಾಡಿ, ಬೇರೆಯೊಂದು ಪದವನ್ನು ಅಧ್ಯಾಹರಿಸಿ ಭರನ್ಯಾಸವನ್ನು ವಿವಕ್ಷಿಸಿರುವುದು, ಪ್ರಪತ್ತಿ ಲಕ್ಷಣವಾಕ್ಯಕ್ಕೆ ವಿರೋಧ. **ಸಪರಿಕರಮಾನ ಸಾಧ್ಯೋಪಾಯಂ ಇಂಗೇತೋತ್ತುಹಿರದು"** ಎಂಬ ಶ್ರೀಸೂಕ್ತಿಗೂ ವಿರೋಧವಾದದ್ದು. ಹೀಗೆ ಮಹಾವಿಶ್ವಾಸಾಂಗಕ

## "ಪ್ರಪದ್ಯೇ" ಇತ್ಯತ್ರಸೂಚಿತ ಮಹಾವಿಶ್ವಾಸಸ್ಯ ಅವಶ್ಯಕತ್ವಮ್.

ಇವ್ವಿಶ್ವಾಸದಾರ್ಢ್ಯಂ ವೇಣುಮೆನ್ನುಮಿಡತ್ತಿಲ್,
1) "ರಾಕ್ಷಸಾನಾಮ ವಿಸ್ರಂಭಾ ದಾಂಜನೇಯಸ್ಯಬನ್ಧನೇ ।
ಯಥಾವಿಗಳಿತಾ ಸದ್ಯಸ್ತ್ವಮೋಘಾಪ್ಯ ಸ್ತ್ರಬಂಧನಾ ।

---

ಪ್ರಾರ್ಥನಾನ್ವಿತ ಭರನ್ಯಾಸವು "ಪ್ರಪದ್ಯೇ" ಶಬ್ದಾರ್ಥವೆಂದು ಹೇಳಲ್ಪಟ್ಟಿತು. ಈ ವಿಧವಾದ ಪ್ರಾರ್ಥನಾನ್ವಿತ ಭರನ್ಯಾಸದಿಂದ ಸಾಕ್ಷಾನ್ಮೋಕ್ಷಹೇತುವಾದ ಪ್ರಸನ್ನತೆಯು ಭಗವಂತನಿಗೆ ಉಂಟಾಗುತ್ತದೆ. ಶರಣ್ಯನೂ ಪ್ರಯತ್ನಾಂತರವನ್ನು ಅಪೇಕ್ಷಿಸದೇನೆಯೇ ಪರಮಕರುಣೆಯಿಂದ ಅಕಿಂಚನನ ವಿಷಯದಲ್ಲಿ ಆವನ ಮನೋರಥಕ್ಕೆ ಅನುಗುಣವಾಗಿ ಪರಮಫಲವನ್ನು ಕೊಡುತ್ತಾನೆಂಬುದು ವಿಶೇಷ. ಲಘುತರವಾಗಿ, ಅಂಗಗಳೊಡನೆ ಒಂದೇಸಲ ಅನುಷ್ಠಿಸಲ್ಪಟ್ಟ ಪ್ರಪತ್ತಿಯನ್ನು ವ್ಯಾಜವಾಗಿಟ್ಟುಕೊಂಡು ಶರಣ್ಯನು ವಿಶೇಷವಾಗಿ ಕರುಣಿಸಿ ರಕ್ಷಿಸುವುದರಿಂದ, ಆವನನ್ನು ಪ್ರಧಾನೋಪಾಯವೆಂದು, ಹೇಳಿ ಪ್ರಪತ್ತಿಯು ಅನುಪಾಯವೆಂಬ ವಾದವು ಹೊರಟಿದೆ ಅಷ್ಟೇ, ಎಂದು ಅಭಿಪ್ರಾಯಪಟ್ಟು

ಇಯಂ ಕೇವಲ ಲಕ್ಷ್ಮೀಶೋಪಾಯತ್ವ ಪ್ರಾರ್ಥನಾತ್ಮಿಕಾ !
ಸ್ವಹೇತುತ್ವಧಿಯಂ ರುಂಧೇ ಕಿಂ ಪುನಃ ಸಹಕಾರಿಣಾಮ್ ॥

ಎಂಬುದಾಗಿ ಆಚಾರ್ಯರು ನಿಕ್ಷೇಪರಕ್ಷೆಯಲ್ಲಿ ಅನುಗ್ರಹಿಸಿದ್ದಾರೆ. ಇದರ ಅಭಿಪ್ರಾಯವೇನೆಂದರೆ, "ರಾಮೇಣ ಬಾಣೇನ ಹತೋ ವಾಲೀ" ಎಂಬಲ್ಲಿ ವಾಲಿಯ ಹನನಕ್ಕೆ ಅವ್ಯವಹಿತ ಪೂರ್ವವೃತ್ತಿಯಾದ ಬಾಣವು ಪ್ರಧಾನ ಕಾರಣ. ರಾಮನು ಬಾಣ ಪ್ರಯೋಗಕ್ಕೆ ಕಾರಣ. ಈ ರೀತಿಯಲ್ಲಿ "ಮೋಕ್ಷಯಿಷ್ಯಾಮಿ" ಎಂಬ ಅವ್ಯವಹಿತ ಸಂಕಲ್ಪವನ್ನು ಮಾಡುವ ಭಗವಂತನು ಪ್ರಧಾನೋಪಾಯ. ಆ ಸಂಕಲ್ಪಕ್ಕೆ ಸಾಧಕವಾದ ವ್ಯಾಜರೂಪವಾದ ಪ್ರಪತ್ತಿಯು ವ್ಯವಹಿತ ಕಾರಣ. ಆದ್ದರಿಂದ ಪ್ರಧಾನ–ಸಾಧಕತಮವಾದ ನಿರಪೇಕ್ಷೋಪಾಯನಾದ ಶರಣ್ಯನು ಉಪಾಯಭೂತನು ಎಂಬ ವಾದವು ಯುಕ್ತವು. ಈ ಅಭಿಪ್ರಾಯವನ್ನೇ ಆಚಾರ್ಯರು ಶ್ರೀಮತ್ತಾತ್ಪರ್ಯ ಸಾರ, ವಿರೋಧ ಪರಿಹಾರ, ನ್ಯಾಯಸಿದ್ಧಾಂಜನ, ನ್ಯಾಸತಿಲಕಾದಿ ಪ್ರಬಂಧಗಳಲ್ಲಿಯೂ ಈ ಪ್ರಬಂಧದಲ್ಲಿಯೂ, ಅನೇಕಸಲ ಅನುಗ್ರಹಿಸಿದ್ದಾರೆ. "ಸ್ವಹೇತುತ್ವಧಿಯಂರುಂಧೇ" ಎಂಬುದಕ್ಕೆ ಸಾಕ್ಷಾತ್ಸಾಧನವಲ್ಲವೆಂಬುದು ತಾತ್ಪರ್ಯ. ಸಿದ್ಧೋಪಾಯನಾದ ಭಗವಂತನ ವಶೀಕಾರಕ್ಕೆ ಉಪಾಯ

ಪ್ರಕೃತಮನುಸರಾಮಃ – ಇವ್ವಿಶ್ವಾಸ ಪ್ರಕರ್ಷಮ್ – ಇತ್ಯಾದಿ ಈ ವಿಶ್ವಾಸದ ಪ್ರಕರ್ಷವು ಹೆಚ್ಚು) ಶ್ರೀ ಮಚ್ಛಬ್ದದಲ್ಲಿಯೂ ನಾರಾಯಣ ಶಬ್ದದಲ್ಲಿಯೂ ವಿವಕ್ಷಿತಗಳಾದ ಪುರುಷಕಾರ, ಸಂಬಂಧ, ಗುಣ, ವ್ಯಾಪಾರ ಪ್ರಯೋಜನಗಳನ್ನು ಅನುಸಂಧಾನ ಮಾಡಿದರೆ ಉಂಟಾಗುತ್ತದೆ. ಈ ವಿಷಯವನ್ನು ಹಿಂದೆಯೇ ಪರಿಕರ ವಿಭಾಗಾಧಿಕಾರದಲ್ಲಿ ಆಚಾರ್ಯರು ನಿರೂಪಿಸಿರುತ್ತಾರೆ. ಇತ್ತಾಲೇ–ಇತ್ಯಾದಿ–ಇದರಿಂದ ತನ್ನ ಅಪಚಾರ ಪ್ರಾಚುರ್ಯಾದಿಗಳು ಕಾರಣವಾಗಿ ಬರುವ ಶಂಕೆಗಳೆಲ್ಲಾ ಹೋಗಿ ವಿಶ್ವಾಸದಾರ್ಢ್ಯವು ಏರ್ಪಡುತ್ತದೆ. ಇವ್ವಿಶ್ವಾಸ ದಾರ್ಢ್ಯಮ್ ಈ ವಿಶ್ವಾಸದ ದಾರ್ಢ್ಯವು ಅಂದರೆ ಪ್ರಪತ್ತಿಗೆ ಉತ್ತರ ಕಾಲದಲ್ಲಿಯೂ, ಭಗವಂತನು ಅವಶ್ಯ ರಕ್ಷಿಸುತ್ತಾನೆಂಬುದು ಬೇಕೆಂಬುದನ್ನು ) ರಾಕ್ಷಸಾನಾ ಮವಿಸ್ರಂಭಾತ್, ಎಂದಾರಂಭಿಸಿ ಆಚಾರ್ಯರು ದೃಷ್ಟಾಂತ ಪೂರ್ವಕ ನಿರೂಪಿಸುತ್ತಾರೆ. ಅದಾಗಿ ಇಂದ್ರಜಿತ್ತು ಹನುಮಂತನನ್ನು ಕಟ್ಟಿ ಹಾಕಲು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದಿಂದ ಕಟ್ಟಬಿದ್ದ ಹನುಮಂತನನ್ನು, ರಾಕ್ಷಸರು ಎಲ್ಲಿ ಬ್ರಹ್ಮಾಸ್ತ್ರವು ಕಳಚಿಕೊಳ್ಳುತ್ತದೆಯೋ ಎಂಬ ಉತ್ತರ

---

1) ಸನತ್ಕುಮಾರ ಸಂಹಿತೆ,

ತಥಾ ಪುಂಸಾಮ ವಿಸ್ರಂಭಾತ್ ಪ್ರಪತ್ತಿಃ ಪ್ರಚ್ಯುತಾಭವೇತ್ ।
ತಸ್ಮಾದ್ವಿಸ್ರಂಭಯುಕ್ತಾನಾಂ ಮುಕ್ತಿಂ ದಾಸ್ಯತಿ ಸಾಚಿರಾತ್ ॥" ಎನ್ರು ಶೊಲ್ಲಿತ್ತು.

ಇವ್ವ್ಯವಸಾಯತ್ತಿನುಡೈಯ ಪ್ರಭಾವಮ್ 1) ವ್ಯವಸಾಯಾದೃತೇ ಬ್ರಹ್ಮನಾಸಾದಯತಿ ತತ್ಪರಮ್" 2) ನಿಸ್ಸಂಶಯೇಷು ಸರ್ವೇಷು ನಿತ್ಯಂ ವಸತಿ ವೈ ಹರಿಃ ।
ಸಸಂಶಯಾನ್ ಹೇತುಬಲಾನ್ನಾಧ್ಯಾವಸತಿ ಮಾಧವಃ।" ಇತ್ಯಾದಿಹಳಿಲುಮ್ ಸುಪ್ರಸಿದ್ಧಮ್ ಇಮ್ಮಹಾ ವಿಶ್ವಾಸಮ್ ಉಂಡಾನಾಲ್ ಪಿನ್ಬು ವಿಮರ್ಶಕಾಲತ್ತಿಲ್ ಒರುಕಾಲುಮ್ ಸಂಶಯಮ್ ಪಿರವಾದು.
ಆಹೈಯಾಲ್ ಪಿನ್ಬು ಒರುಕಾಲುಮ್ ಇವ್ವಿಷಯತ್ತಿಲ್ ಸಂಶಯಮ್ ಪಿರವಾದಪಡಿಯಾನ ಪ್ರಥಮ ಕ್ಷಣತ್ತಿಲ್ ಮಹಾವಿಶ್ವಾಸಮ್ ಪ್ರಪತ್ತಿಕ್ಕು ಅಙ್ಗಮ್. ಇದು ಮಂದಮಾಯಿರುನ್ದಾಲುಂ ವಿಶೇಷಿತ್ತು

---

ಕಾಲ ಶಂಕೆ–ಅವಿಶ್ವಾಸದಿಂದ, ಹಗ್ಗಗಳಿಂದ ಕಟ್ಟಿದರು. ಈ ರೀತಿಯಾದ ಅವಿಶ್ವಾಸಕಾರ್ಯದಿಂದ ಅಮೋಘವಾದ ಬ್ರಹ್ಮಾಸ್ತ್ರವು ಕಳಚಿಕೊಂಡಿತು. ಇದೇ ರೀತಿಯಲ್ಲಿ ಪ್ರಪತ್ತ್ಯನುಷ್ಠಾನ ಕಾಲದಲ್ಲಿಯೂ ತಾನು ಅನುಷ್ಠಿಸಿದ ಪ್ರಪತ್ತಿಯು ಫಲವನ್ನು ಕೊಡುತ್ತದೆಯೋ ಇಲ್ಲವೋ ಎಂಬ ಶಂಕೆ – ಅವಿಶ್ವಾಸವು, ಒಬ್ಬನಿಗೆ ಏರ್ಪಟ್ಟರೆ ಪ್ರಪತ್ತಿಯು ಪ್ರಚ್ಯುತಾ ಭವೇತ್ ಜಾರಿಕೊಳ್ಳುತ್ತದೆ. ಅಂದರೆ ಫಲಕಾರಿಯಾಗುವುದಿಲ್ಲ. ಅಂದರೆ ಪ್ರಪತ್ತಿ ಸ್ವರೂಪವು ಪೂರ್ಣವಾಗಿ ನಿಷ್ಪನ್ನವಾಗಲಾರದು ಮ ಹಾ ವಿ ಶ್ವಾ ಸ ದಿಂ ದ ಮಾಡಿದ ಪ್ರಪತ್ತಿಯು ಫಲಕಾರಿಯಾಗದೆ ಇರುವುದಿಲ್ಲ. ಆದ್ದರಿಂದ ಪ್ರಪತ್ತ್ಯನುಷ್ಠಾನಕಾಲದಲ್ಲಿ ಮಂದ ವಿಶ್ವಾಸದಿಂದ ಮಾಡಿದ ಪ್ರಪತ್ತಿಯು ನಿಷ್ಪತ್ತಿಯಾಗಲಾರದು ಎಂದು ತಾತ್ಪರ್ಯ. ಆದ್ದರಿಂದ ವಿಸ್ರಂಭಯುಕ್ತಾನಾಂ–ವಿಶ್ವಾಸಯುಕ್ತರಿಗೇನೆ ಪ್ರಪತ್ತಿಯು ಅಚಿರಾತ್–ವಿಳಂಬವಿಲ್ಲದೆ ಅವರವರು ಅಪೇಕ್ಷಿಸಿದ ಕಾಲದಲ್ಲಿ ಮೋಕ್ಷ ಫಲವನ್ನು ಕೊಡುತ್ತದೆ. ಇಲ್ಲಿ 'ಅಚಿರಾತ್' ಎಂಬ ಪದವು ಪ್ರಯೋಗಿಸಲ್ಪಟ್ಟಿರುವುದರಿಂದ ಮಂದ ವಿಶ್ವಾಸದಿಂದ ಅನುಷ್ಠಿಸಲ್ಪಟ್ಟ ಪ್ರಪತ್ತಿಯೂ ವಿಶೇಷ ಸುಕೃತವಾಗಿ ಪರಿಣಮಿಸಿ, ಮಹಾ ವಿಶ್ವಾಸದಿಂದ ಕೂಡಿದ ಪುನಃ ಪ್ರಪತ್ತಿಯಲ್ಲಿ ಇವನನ್ನು ತೊಡಗಿಸಿ ಮುಕ್ತಿಯನ್ನು ಕೊಡಿಸುತ್ತದೆ ಎಂದು ತಾತ್ಪರ್ಯ.

ಇವ್ವ್ಯವಸಾಯತ್ತಿನುಡೈಯ ಪ್ರಭಾವಮ್ ಇತ್ಯಾದಿ–ಈ ಮಹಾ ವಿಶ್ವಾಸದ ಪ್ರಭಾವವು 1) ವ್ಯವಸಾಯಾದೃತೇ ಬ್ರಹ್ಮ ಇತ್ಯಾದಿ-ಮಹಾ ವಿಶ್ವಾಸವಿಲ್ಲದೆ, ಯಾವ ಮನುಷ್ಯನೂ ಆ ಪರಬ್ರಹ್ಮವನ್ನು ಪಡೆಯಲಾಗುವುದಿಲ್ಲ. "ಭವಾಂಶ್ಚೋತ್ಪನ್ನ ವಿಜ್ಞಾನಃ ಸ್ಥಿರ ಬುದ್ಧಿರಲೋಲುಪಃ । ಎಂಬುದು ಪೂರ್ವಾರ್ಧ. 2) ನಿಸ್ಸಂಶಯೇಷು ಸರ್ವೇಷು ಇತ್ಯಾದಿ–ಹಿಂದೆ ಹೇಳಿದ ಸಂದೇಹಗಳಾವುವೂ ಇಲ್ಲದ ಮಹಾ ವಿಶ್ವಾಸ ಶಾಲಿಗಳಾದವರಲ್ಲಿ ಭಗವಂತನು ನಿತ್ಯವಾಸ ಮಾಡುತ್ತಾನೆ, ಸಂಶಯ ಯುಕ್ತರಾಗಿ, ಆದ್ದರಿಂದಲೇ ಹೇತು ವಾದ ಮಾಡುವವರಲ್ಲಿ ಆ ಶ್ರಿಯಃಪತಿಯು ಒಂದು ಕಾಲದಲ್ಲಿಯೂ ವಾಸಮಾಡುವುದಿಲ್ಲ. ಇತ್ಯಾದಿಹಳಿಲುಮ್ ಇತ್ಯಾದಿ–ಇತ್ಯಾದಿ ವಾಕ್ಯಗಳಿಂದಲೂ ಮಹಾವಿಶ್ವಾಸವು ಅವಶ್ಯಬೇಕೆಂಬುದು ಸುಪ್ರಸಿದ್ಧ. ಇಮ್ಮಹಾವಿಶ್ವಾಸಮ್ ಇತ್ಯಾದಿ ಈ ಮಹಾ ವಿಶ್ವಾಸವು ಪ್ರಪತ್ತಿಯನ್ನು ಅನುಷ್ಠಿಸುವಾಗ ಏರ್ಪಟ್ಟರೆ, ಪ್ರಪತ್ತ್ಯನುಷ್ಠಾನಾನಂತರ ವಿಮರ್ಶಕಾಲತ್ತಿಲ್–ಪರಾಮರ್ಶನೆ ಮಾಡುವ ಕಾಲಗಳಲ್ಲಿ ಯಾವಾಗಲೂ ಸಂಶಯವು ಪಿರವಾದು–ಉಂಟಾಗುವುದಿಲ್ಲ. ಆಹೈಯಾಲ್ ಇತ್ಯಾದಿ–ಪ್ರಪತ್ತ್ಯನುಷ್ಠಾನಾ ನಂತರ, ವಿಮರ್ಶೆಮಾಡುವ ಎಲ್ಲಾ ಕಾಲದಲ್ಲಿಯೂ ಈ ಪ್ರಪತ್ತಿಯಿಂದ ಮೋಕ್ಷವು ಲಭಿಸುತ್ತದೆ ಎಂಬ ವಿಷಯದಲ್ಲಿ ಸಂಶಯವು ಏರ್ಪಡದಂತಹ, ಪ್ರಪತ್ತಿ ಪ್ರಥಮಕ್ಷಣಾವಚ್ಛಿನ್ನ ಮಹಾವಿಶ್ವಾಸವೇ ಪ್ರಪತ್ತಿಗೆ ಅಂಗ. ಇದು ಮಂದಮಾಯಿರುಂದಾಲುಮ್ ಇತ್ಯಾದಿ–ಪ್ರಪತ್ತ್ಯನುಷ್ಠಾನ ಕ್ಷಣದಲ್ಲಿ ಈ ವಿಶ್ವಾಸವು

---

1) 2) ಭಾರತಶಾಂತಿಪರ್ವ 334-47, 359-71

**ಕಟಾಕ್ಷಿಕ್ಕತ್ತೊಡಂಗಿನ ಈಶ್ವರನ್ ಶೇಷಪೂರಣಂ ಪಣ್ಣುಮ್.**

"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ" ಎನ್ರು ಶರಣ್ಯನ್ ಅರುಳಿಚ್ಚೆಯ್‌ದಾನಿರೇ. ಅಂಜಲ್ಯಾದಿಹಳುಮ್ ಅಹಪ್ಪಡ 2) "ನಜಾತುಹೀಯತೇ" ಎನ್ರುಮ್ಬಡಿಯಿರೇ ಇರುಪ್ಪದು.

---

ಮಂದ–ಸಡಿಮೆಯಾಗಿದ್ದರೂ, ವಿಶೇಷಿಸಿ ಕಟಾಕ್ಷಿಸಲು ತೊಡಗಿದ ಈಶ್ವರನ್–ಲಕ್ಷ್ಮೀಪತಿಯು, ಶೇಷಪೂರಣಮ್ ಪಣ್ಣುಮ್–ಇವನು ಅಪೇಕ್ಷಿಸಿದ ಕಾಲದೊಳಗೆ ಮಹಾವಿಶ್ವಾಸವನ್ನುಂಟು ಮಾಡಿ ಮಹಾವಿಶ್ವಾಸಪೂರ್ವಕ ಉಪಾಯಾನುಷ್ಠಾನವನ್ನು ಮಾಡಿಸಿ ರಕ್ಷಿಸುತ್ತಾನೆಂದರ್ಥ.

1) ಮಿತ್ರಭಾವೇನ ಸಂಪ್ರಾಪ್ತಮ್ ಇತ್ಯಾದಿ ಮಿತ್ರಭಾವೇನ – ಮೈತ್ರೀಭಾವದಿಂದ, ಇದರಿಂದ ವಿಶ್ವಾಸಮಾಂದ್ಯವು ತೋರುತ್ತದೆ. ಹೀಗೆ ಮಂದ ವಿಶ್ವಾಸದಿಂದ ಕೂಡಿದವನಾದರೂ, ಸಂಪ್ರಾಪ್ತಂ–ಪುತ್ರದಾರಾದಿಗಳನ್ನು ಬಿಟ್ಟು, ನನ್ನನ್ನು ಆಶ್ರಯಿಸಬೇಕೆಂಬ ಒಳ್ಳೆಯ ತೀರ್ಮಾನದೊಡನೆ, ಪುರುಷಕಾರ ಪೂರ್ವಕವಾಗಿ ನನ್ನಲ್ಲಿಗೆ ಬಂದವನನ್ನು ನತ್ಯಜೇಯಂ ಕಥಂಚನ–ಯಾವ ಕಾರಣದಿಂದಲೂ ಬಿಡುವುದಿಲ್ಲ. "ದೋಷೋಯದ್ಯಪಿತಸ್ಯಸ್ಯಾತ್ ಸತಾಮೇತದ ಗರ್ಹಿತಮ್" ಎಂಬುದು ಉತ್ತರಾರ್ಧ. ಶರಣಾಗತನಿಗೆ ಗುಣಗಳು ಇಲ್ಲದಿದ್ದರೂ, ದೋಷಗಳು ಅನೇಕವಿದ್ದರೂ, ರಾವಣನಂತಹ ಪರಮದುಷ್ಟನನ್ನೂ ಶರಣಾಗತನೆಂಬ ಮಾತ್ರಕ್ಕೆ ಭಗವಂತನು ಅಂಗೀಕರಿಸಲು ಇಚ್ಛಿಸಿದನೆಂಬ ಮಹಾಗುಣಸಿದ್ಧಿಗೋಸ್ಕರ "ಸ್ಯಾತ್" ದೋಷಗಳು ಅವನಲ್ಲಿರಬೇಕೆಂಬ ಹಂಬಲ ಭಗವಂತನದು. ಇಂಥಹ ಮಹಾ ಪಾಪಿಯನ್ನೂ ಭಗವಂತನು ಅಂಗೀಕರಿಸುವನೆಂಬುದು, ಶಿಷ್ಟಗರ್ಹೆಗೆ ಕಾರಣವಾಗುವುದಿಲ್ಲವೇ ಎಂದರೆ, ಸತಾಂ ಏತತ್–ಸತ್ಪುರುಷರಿಗೆ ಈ ಪಾಪಿಗಳ ರಕ್ಷಣವೂ ಅಗರ್ಹಿತಮ್–ಗರ್ಹಿತಾದನ್ಯತ್ ಪೂಜಿತಮ್–ಪೂಜ್ಯವಾದದ್ದು. ಎನ್ರುಶರಣ್ಯನರುಳಿಚ್ಚೆಯ್‌ದಾನಿರೇ – ಎಂದು ಶರಣ್ಯನು ಕೃಪೆ ಮಾಡಿ ಹೇಳಿದನಲ್ಲವೇ. ಅಂಜಲ್ಯಾದಿಹಳುಮ್ ಉಳ್‌ಪಡ–ಇತ್ಯಾದಿ ಭಗವಂತನಲ್ಲಿ ಮಾಡಿದ ಅಂಜಲ್ಯಾದಿಗಳೂ ಆದಿ ಶಬ್ದದಿಂದ ಪ್ರದಕ್ಷಿಣ, ಪ್ರಣಾಮನಾಮ ಸಂಕೀರ್ತನಗಳು ಗ್ರಾಹ್ಯ. 2) ನಜಾತುಹೀಯತೇ–ಕ್ರಮವಾಗಿ ಸುಕೃತ ಪರಂಪರೆಗಳ ಮೂಲಕ ಮೋಕ್ಷಾಂತವಾದ ಫಲವನ್ನು ಕೊಟ್ಟೂ ನಶಿಸುವುದಿಲ್ಲ. ಇದರಿಂದ ಕೈಮುತಿಕ ನ್ಯಾಯವು ಸೂಚಿತ ಹೀಗೆ ಅಂಜಲ್ಯಾದಿಗಳಿಗೇ ಈ ಪ್ರಭಾವವಿದ್ದರೆ, ಮಂದ ವಿಶ್ವಾಸದಿಂದ ಕೂಡಿದ ಶರಣಾಗತಿಯೂ ವಿಶೇಷ ಸುಕೃತವಾಗಿ ಪರಿಣಮಿಸಿ ಮಹಾವಿಶ್ವಾಸ ಪೂರ್ವಕವಾದ ಪುನಃ ಪ್ರಪತ್ತಿಯನ್ನು ಅನುಷ್ಠಿಸುವಂತೆ ಮಾಡಿ ಫಲವನ್ನು ಕೊಡುತ್ತದೆ ಯೆಂಬುದರಲ್ಲಿ ಸಂಶಯವಿಲ್ಲ

---

1) ರಾಮಾಯಣ ಯುದ್ಧಕಾಂಡ 18-3

2) ತ್ವದಂಘ್ರಿ ಮುದ್ದಿಶ್ಯ ಕದಾಪಿಕೇನಚಿತ್
ಯಥಾ ತಥಾವಾಪಿ ಸಕೃತ್ ಕೃತೋಂಜಲಿಃ।
ತದೈವ ಮುಷ್ಣಾತ್ಯ ಶುಭಾನ್ಯ ಶೇಷತಃ
ಶುಭಾನಿ ಪುಷ್ಣಾತಿ ನಜಾತು ಹೀಯತೇ॥ ಆಳವಂದಾರ್‌ಸ್ತೋತ್ರ-28

ಎಲೈ ಭಗವಂತನೇ! ನಿನ್ನ ಪಾದಗಳನ್ನು ಉದ್ದೇಶಿಸಿ ಯಾವಾಗಲಾದರೂ ಯಾರಿಂದಲಾದರೂ (ಬಾಲನಾಗಲಿ ಸ್ತ್ರೀಯಾಗಲಿ, ಪಂಡಿತನಾಗಲಿ, ಜ್ಞಾನವಿಲ್ಲದವನಾಗಲಿ, ಶ್ವಪಾಕನಾಗಲಿ) ಪರಾವರತತ್ವ ವಿಷಯಗಳಲ್ಲಿ ವಿಶದ ಬುದ್ಧಿಯು ಇರಲಿ ಇಲ್ಲದಿರಲಿ, ಮುಷ್ಟಿಪ್ಕ ಸಂಪುಟಾದಿಗಳಲ್ಲಿ ಯಥೇಷ್ಟ ಪ್ರಕಾರವಾಗಿರಲಿ ಕೈಗಳಿಲ್ಲದವನಿಗೆ ವಾಕ್ಕಿನಿಂದಾಗಲಿ ಮನಸ್ಸಿನಿಂದಾಗಲಿ ಯಾವ ಪ್ರಕಾರವಾಗಿಯಾಗಲಿ ಮಾಡಿದ ಸಕೃತ್ಕೃತಃ–ಒಂದು ಸಲ ಮಾಡಿದ ಅಂಜಲಿಯೂ, ಎಲ್ಲಾ ಪಾಪಗಳನ್ನೂ ಹೋಗಲಾಡಿಸುತ್ತದೆ. ಮಂಗಳಗಳನ್ನುಂಟು ಮಾಡುತ್ತದೆ, ನಜಾತುಹೀಯತೇ-ಯಾವ ಕಾರಣದಿಂದಲೂ ನಷ್ಟವಾಗುವುದಿಲ್ಲ. ಸ್ವರ್ಗಾದಿ ಫಲಗಳು ಕರ್ಮಕ್ಷಯವಾದ ನಂತರ ನಶಿಸಿ ಹೋಗುವಂತೆ, ಕ್ರಮೇಣ ಮೋಕ್ಷಾಂತವಾದ ಪರಮ ಫಲಕ್ಕೆ ಯಾವಾಗಲೂ ನಾಶವಿಲ್ಲವೆಂದು ತಾತ್ಪರ್ಯ.

**ಆಹೈಯಾಲ್‌ಮಂದವಿಶ್ವಾಸನುಮ್ ಮಹಾವಿಶ್ವಾಸಪರ್ಯಂತಮಾನ್.**

**ಇಪ್ಪಡಿ ಉಪಾಯಮಾಹ ಅಧ್ಯವಸಿಕ್ಕಿರೇನೆನ್ರು ಮಹಾವಿಶ್ವಾಸತ್ತೈಚ್ಚೊಲ್ಲ**

**1) "ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸ ಪೂರ್ವಕಮ್**
**ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ ॥**

**2) "ತ್ವಮೇವೋಪಾಯಭೂತೋಮೇ ಭವೇತಿ ಪ್ರಾರ್ಥನಾಮತಿಃ ಶರಣಾಗತಿರಿತ್ಯುಕ್ತಾ ॥"**

**3) "ಭವಶರಣಮ್" ಇತ್ಯಾದಿ ಪ್ರಮಾಣಾನುಸಾರತ್ತಾಲೇ ಪ್ರಾರ್ಥನೈಯುಮ್ ಇಙ್ಗೇಶೊಲ್ಲಿತ್ತಾಯಿತ್ತು.**

---

ಮಂದ ವಿಶ್ವಾಸದಿಂದ ಕೂಡಿ ಮಾಡಿದ ಪ್ರಪತ್ತಿಯು ಪೂರ್ಣವಾಗಿ ನಿಷ್ಪನ್ನವಾಗುವುದಿಲ್ಲವೆಂಬುದು "ಪ್ರಪತ್ತಿಃ ಪ್ರಚ್ಯುತಾಭವೇತ್" ಎಂಬುದಕ್ಕೆ ತಾತ್ಪರ್ಯ. ಪ್ರಪತ್ತಿಯು ಪೂರ್ಣವಾಗಿ ನಿಷ್ಪನ್ನವಾದರೆ ಪ್ರಚ್ಯುತವಾಗುವುದಿಲ್ಲವಲ್ಲವೇ. ಏಕೆಂದರೆ ಪ್ರಾರ್ಥನಾಪೂರ್ವಕ ಭರನ್ಯಾಸದಿಂದ, ಭರವನ್ನು ಸ್ವೀಕರಿಸಿದ ಸತ್ಯಸಂಕಲ್ಪನಾದ ಭಗವಂತನು ರಕ್ಷಿಸದೇ ಇರುವುದಿಲ್ಲವಲ್ಲವೇ. ಅವಿಕಲವಾದ ಪ್ರಪತ್ತಿಯು ಹೇಗೆ ಭರಸ್ವೀಕಾರವನ್ನು ಉಂಟುಮಾಡುವುದಿಲ್ಲ? ಮಾಡಿಯೇ ಮಾಡುತ್ತದೆ ಎಂದರ್ಥ. ಆದ್ದರಿಂದ ಮಂದವಿಶ್ವಾಸಯುಕ್ತರಾಗಿ ಪ್ರಪತ್ತಿಮಾಡಿದವರಿಗೆ, ಪ್ರಪತ್ತಿಯು ಯಥಾವಸ್ಥಿತವಾದ ಆಕಾರದಿಂದ ನಿಷ್ಪನ್ನವಾಗುವುದಿಲ್ಲವೆಂದು ಭಾವ.

ಈ ವಿಷಯದಲ್ಲಿ ಕೆಲವರು ಪ್ರಪತ್ತಿಯ ಅನುಷ್ಠಾನಕಾಲದಲ್ಲಿ ವಿಶ್ವಾಸವು ಮಂದವಾಗಿದ್ದರೂ ಅನಂತರ ಆ ವಿಶ್ವಾಸವು ಮಹಾ ವಿಶ್ವಾಸವಾಗಿ ಪರಿಣಮಿಸಿ ಪುನಃ ಪ್ರಪತ್ತಿಯನ್ನು ಮಾಡಬೇಕಾದ ಆವಶ್ಯವಿಲ್ಲದೇ, ಫಲವನ್ನು ಕೊಡುತ್ತದೆಯೆಂದು ಹೇಳಿ ಇದಕ್ಕೆ "ಮಿಶ್ರಭಾವೇನಸಂಪ್ರಾಪ್ತಂ" ಎಂಬ ವಚನವನ್ನು ಪ್ರಮಾಣೀಕರಿಸಿ ವ್ಯಾಖ್ಯಾನ ಮಾಡುತ್ತಾರೆ, ಇದು ಯುಕ್ತವಲ್ಲ. ಮಂದವಿಶ್ವಾಸದಿಂದ ಕೂಡಿದವರಿಗೂ, ಶರಣ್ಯನ ಅನುಗ್ರಹ ವಿಶೇಷದಿಂದ, ಮಹಾವಿಶ್ವಾಸವು ಉಂಟಾಗಿ, ನಂತರ ಪೂರ್ಣಪ್ರಪತ್ತಿಯು ಅನುಷ್ಠಿಸಲ್ಪಟ್ಟು ಪರಮಪುರುಷಾರ್ಥವು ಲಭಿಸುತ್ತದೆ ಎಂಬುದು "ಮಿಶ್ರಭಾವೇನ ಸಂಪ್ರಾಪ್ತಮ್" ಎಂಬ ವಚನದ ತಾತ್ಪರ್ಯವೆಂದು ನಿರ್ಯಾಣಾಧಿಕಾರದಲ್ಲಿ ಆಚಾರ್ಯರಿಂದ ನಿರ್ಣೀತವಾಗಿದೆ. ಸನ್ನಿಪತ್ಯೋಪಕಾರಿಯಾದ ಅಂಗವೈಕಲ್ಯದಿಂದ ಅಂಗಿಸ್ವರೂಪನಿಷ್ಪತ್ತಿಯು ಅಸಂಭಾವಿತ. ಶರಣಾಗತ್ಯನಂತರ ಮಂದ ವಿಶ್ವಾಸವು ಮಹಾವಿಶ್ವಾಸಾವಸ್ಥೆಯಾಗಿ ಪರಿಣಮಿಸಿದರೂ ಪೂರ್ವದಲ್ಲಿ ಮಾಡಿದ ಪ್ರಪತ್ತಿಗೆ ಅಂಗವಾಗಲಾರದು. ಆದ್ದರಿಂದ ಯಾವನಿಗೆ ಪ್ರಪತ್ತಿಕ್ಷಣದಿಂದ ಆರಂಭಿಸಿ ಯಾವಜ್ಜೀವ ಶಂಕಾಪಂಚಕದಲ್ಲಿ ಯಾವ ಒಂದೂ ಪ್ರಸಕ್ತವಾಗುವುದಿಲ್ಲವೋ ಆ ಮಹಾತ್ಮನಿಗೆ ಪ್ರಪತ್ತ್ಯನುಷ್ಠಾನ ಪ್ರಥಮಕ್ಷಣದಲ್ಲಿ ಉಂಟಾದ ವಿಶ್ವಾಸವೇ, ಮಹಾವಿಶ್ವಾಸ. ಯಾವನಿಗೆ ಶಂಕಾಪಂಚಕಗಳಲ್ಲಿ ಯಾವುದಾದರೂ ಒಂದು ಉಂಟಾಗುತ್ತದೆಯೋ ಅವನಿಗೆ ಪುನಃ ಪೂರ್ಣಪ್ರಪತ್ತಿಯಿಂದಲೇ ಪರಮಪುರುಷಾರ್ಥಲಾಭವೇ ಹೊರತು ಬೇರೆಯಲ್ಲವೆಂಬುದು ಆಚಾರ್ಯರ ಹೃದಯ ಆದ್ದರಿಂದ **ಆಹೈಯಾಲ್ ಮಂದ ವಿಶ್ವಾಸನುಮ್ ಮಹಾವಿಶ್ವಾಸ ಪರ್ಯಂತಮಾನ್** – ಮಂದ ವಿಶ್ವಾಸಪೂರ್ವಕವಾಗಿ ಅನುಷ್ಠಿಸಲ್ಪಟ್ಟ ಪ್ರಪತ್ತಿಯು ಮಹಾವಿಶ್ವಾಸಾಂಗಕ ಪ್ರಪತ್ತಿಯನ್ನು ಉಂಟುಮಾಡಿ ತತ್ಪರ್ಯಂತವಾಗಿ ಆಗುತ್ತದೆ ಎಂದರ್ಥ.

**ಇಪ್ಪಡಿ ಉಪಾಯಮಾಹ ಅಧ್ಯವಸಿಕ್ಕಿರೇನ್** ಇತ್ಯಾದಿ – ಹೀಗೆ ಉಪಾಯವನ್ನಾಗಿ ಅಧ್ಯವಸಾಯ ಮಾಡಿ ಎಂದು ಮಹಾವಿಶ್ವಾಸವನ್ನು ಹೇಳಲು, (1) **ಅನನ್ಯಸಾಧ್ಯೇಸ್ವಾಭೀಷ್ಟೇ** ಇತ್ಯಾದಿ (2) **ತ್ವಮೇವೋಪಾಯ ಭೂತೋಮೇಭವ** ಇತ್ಯಾದಿ (3) **ಭವಶರಣಮ್** ಇತ್ಯಾದಿ ಪ್ರಮಾಣಗಳನ್ನು ಅನುಸರಿಸಿ ಉಪಾಯತ್ವ ಪ್ರಾರ್ಥನೆಯೂ ಇಲ್ಲಿ ಹೇಳಲ್ಪಟ್ಟಿವೆ. (1) ಪ್ರಪತ್ತ್ಯೇತರನಿಂದ ಸಾಧ್ಯವಲ್ಲದ ಸ್ವಾಭೀಷ್ಟವನ್ನು ಮಹಾವಿಶ್ವಾಸಪೂರ್ವಕವಾಗಿ, ಒಬ್ಬನಲ್ಲಿ ನೀಯೇ ಉಪಾಯವಾಗಿದ್ದು ಅಭೀಷ್ಟವನ್ನು ಕೊಡು ಎಂದು ಪ್ರಾರ್ಥಿಸಿ ಆ ಭರವನ್ನು ಅವನಲ್ಲಿ ಸಮರ್ಪಿಸುವುದು ಪ್ರಪತ್ತಿ, ಶರಣಾಗತಿ ಎಂದರ್ಥ. ಇದಕ್ಕೆ ಸಮಾನಾರ್ಥಕವಾಗಿ (2) ನೀನೇ ಉಪಾಯವಾಗಿರು ಎಂದು ಪ್ರಾರ್ಥನಾರೂಪವಾದ ಬುದ್ಧಿ ವಿಶೇಷವು ಶರಣಾಗತಿ. ಸಾದೇವೇಸ್ಮಿನ್ ಪ್ರಯುಜ್ಯ

**ಉಪಾಯ ಪ್ರಾರ್ಥನಾಯಾಂ ಗೋಪ್ತೃತ್ವವರಣಮ್ ಅಂತರ್ಗತಮ್**

**ಇವ್ವುಪಾಯಪ್ರಾರ್ಥನೆಯಿಲೇ ಗೋಪ್ತೃತ್ವವರಣಮ್ ಅಂತರ್ಗತಂ, ಪೃಥಗ್ಭೂತಮನ್ರು.**

**ಪ್ರಪದ್ಯೇ ಇತ್ಯತ್ರ ಪ್ರಾರ್ಥನೀಯಾಂಶ ನಿರ್ಧಾರಣಮ್**

**ಇಷ್ಟಪ್ರಾಪ್ತ್ಯನಿಷ್ಟನಿವೃತ್ತಿರೂಪಮಾನ ಫಲತ್ತಿನುಡೈಯ ಪ್ರಾರ್ಥನೈಯೋ ಉತ್ತರಖಂಡತ್ತಿಲೇ ಪಣ್ಣಾ**

---

ತಾಮ್" ಎಂಬುದು ನಾಲ್ಕನೇ ಪಾದ. ಆ ಶರಣಾಗತಿಯನ್ನು ಭಗವಂತನಲ್ಲಿ ಮಾಡು, ಅಂದರೆ ಆ ರೀತಿಯಲ್ಲಿ ಪ್ರಾರ್ಥಿಸಿ ಭರಸಮರ್ಪಣ ಮಾಡು (3)ಭವಶರಣಮ್ – ನೀನು ಉಪಾಯವಾಗು ಇತ್ಯಾದಿ ಪ್ರಮಾಣಾನುಸಾರದಿಂದ **ಉಪಾಯ ಪ್ರಾರ್ಥನೈಯುಮ್** ಇತ್ಯಾದಿ – ಉಪಾಯಪ್ರಾರ್ಥನೆಯು "ಪ್ರಪದ್ಯೇ" ಎಂಬಲ್ಲಿ ಹೇಳಲ್ಪಟ್ಟಿತು.

**ಇವ್ವುಪಾಯ ಪ್ರಾರ್ಥನೆಯಿಲೇ** ಇತ್ಯಾದಿ – ಈ ಉಪಾಯ ಪ್ರಾರ್ಥನೆಯನ್ನು ಹೇಳುವ ಪದದಲ್ಲಿ ಗೋಪ್ತೃತ್ವವರಣವೂ ಅಂತರ್ಗತ. ಎನ್ ತಲೈಯಿಲ್ ಉಪಾಯಾಂತರತ್ತೈಚ್ಚುಮತ್ತಾದೇ, ಅವಟ್ರೈಚ್ಚುಮಂದಾ" ಪೋಲ್ ಮರುಮುಖಿಮತ ಮೊಲಾಂತರುಹ್ಮೆ ಸಮರ್ಥಕಾರುಣಿಕನಾನವ್ವುನಕ್ಕೇ ಭರಮಾಹ ವೇರಿಟ್ಟುಕೊಳ್ಳವೇಣುಮ್," ಎಂದು ಹೇಳಿದ ಉಪಾಯಾಂತರ ನಿರಪೇಕ್ಷ ರಕ್ಷಕತ್ವ ಪ್ರಾರ್ಥನಾರೂಪ ಉಪಾಯತ್ವ ಪ್ರಾರ್ಥನೆಯಲ್ಲಿ, ರಕ್ಷಕತ್ವರೂಪ ಗೋಪ್ತೃತ್ವವರಣವು ಅಂತರ್ಗತವೆಂದರ್ಥ. ಇವೆರಡೂ 'ಶರಣಂ ಪ್ರಪದ್ಯೇ" ಎಂಬಲ್ಲಿ ವಿವಕ್ಷಿತ. **ಪೃಥಗ್ಭೂತಮನ್ರು** ಪ್ರತ್ಯೇಕವಾಗಿ ಅಧ್ಯಾಹರಿಸಲ್ಪಟ್ಟ ಪದಾಂತರದಿಂದಾಗಲಿ, ಶರಣಶಬ್ದದ ಶಕ್ತಿಭೇದದಿಂದಲಾಗಲಿ ಪ್ರಕಾಶ್ಯವಲ್ಲವೆಂದು ತಾತ್ಪರ್ಯ.

ಗೋಪ್ತೃತ್ವವು ಚೇತನನಿಗೆ ಸೇರಿದುದು. ಉಪಾಯತ್ವವು ಚೇತನಾಚೇತನಗಳೆರಡಕ್ಕೂ ಸಾಧಾರಣವಾಗಿ ಕರಣರೂಪವಾದದ್ದು. ವಿಧಿ ಪ್ರಕಾರ ಯಾವ ಶಬ್ದದಿಂದ ಯಾವುದು ಅನುಷ್ಠಿಸಲ್ಪಡಬೇಕೋ, ಯಾವುದು ವಿಧಿಸಲ್ಪಟ್ಟದೆಯೋ ಹಾಗೆಯೇ ಅದೇ ಶಬ್ದದಿಂದಲೂ ಮಂತ್ರದಿಂದಲೂ ಅದು ಪ್ರಕಾಶ್ಯವು ಮತ್ತು ಅನುಷ್ಠೇಯವು ಆದ್ದರಿಂದ ಶಬ್ದಗಳಲ್ಲಿ ಹೇಳಿರುವಂತೆ ಗೋಪ್ತೃತ್ವವರಣ ಮತ್ತು ಉಪಾಯತ್ವವರಣವೆರಡೂ ಪ್ರತ್ಯೇಕವಾಗಿ ಅನುಷ್ಠಿಸಲ್ಪಡಬೇಕು. ಆಗ್ಯೆ ಗೋಪ್ತೃತ್ವವರಣವು ಅಂಗಪಂಚಕಗಳ ಮಧ್ಯೆ ಪರಿಗಣಿತವು. ಉಪಾಯತ್ವವರಣವು ಅಂಗಿಭೂತವಾದ ಭರನ್ಯಾಸಕ್ಕೆ ಅಂತರಂಗ ವಿಶೇಷಣವಾಗಿದ್ದುಕೊಂಡು, ಪ್ರಪತ್ತಿಶಬ್ದಾರ್ಥ ಸ್ವರೂಪ ನಿರೂಪಕವು. ಕೆಲವರು ನ್ಯಾಸವಿದ್ಯೆಗೆ ವಿಶೇಷ ವೇದ್ಯಾಕಾರವಾದ ನಿರಪೇಕ್ಷೋಪಾಯತ್ವವರಣವನ್ನು ಗೋಪ್ತೃತ್ವವರಣ ಸ್ಥಾನದಲ್ಲಿ ಅನುಷ್ಠಿಸಿ, ತದಂತರ್ಗತವಾದ ಗೋಪ್ತೃತ್ವವರಣವೂ ಅಂಗವಾಗಿ ಅನುಷ್ಠಿಸಲ್ಪಟ್ಟದಾಗಿ ಭಾವಿಸುತ್ತಾರೆ. ಮತ್ತೆ ಕೆಲವರು ಮಹಾವಿಶ್ವಾಸವೆಂಬ ಅಂಗಸ್ವರೂಪದಲ್ಲಿ ನಿರಪೇಕ್ಷೋಪಾಯತ್ವವನ್ನೂ ಸೇರಿಸಿ ಅನುಸಂಧಾನ ಮಾಡುತ್ತಾರೆ. ಇವುಗಳೆಲ್ಲಾ "ಇತಃಪಶ್ಚಾದಸ್ಮದ್ಯತನ ನಿರಪೇಕ್ಷೇಣ ಭವತಾ **ಸಮರ್ಥ್ಯೋಸಾವರ್ಥಃ** ಇತಿಮತಿವಿಶೇಷಂತದವಿದುಃ," ಎಂಬ ಆಚಾರ್ಯ ಶ್ರೀಸೂಕ್ತಿಯಲ್ಲಿ ಉಪಾಯತ್ವ ಪ್ರಾರ್ಥನಾ ವಿಶಿಷ್ಟವಾಗಿ ಅನುಸಂಧಾನ ಮಾಡಿರುವ ಶ್ರಿಸೂಕ್ತಿಗೆ ವಿರುದ್ಧವಾದವು.

### ದ್ವಯಮಂತ್ರದ ಎರಡು ಭಾಗಗಳಿಂದಲೂ ಪ್ರಾರ್ಥನೀಯವಾದ ಅಂಶ

**ಇಷ್ಟಪ್ರಾಪ್ತ್ಯನಿಷ್ಟನಿವೃತ್ತಿರೂಪಮಾನ** ಇತ್ಯಾದಿ – "ಪ್ರಪದ್ಯೇ" ಎಂಬಲ್ಲಿ ಮಹಾವಿಶ್ವಾಸವನ್ನೂ ಪ್ರಾರ್ಥನೆಯನ್ನೂ ಹೇಳಿದೆ ಎನ್ನುತ್ತೀರಲ್ಲಾ, ಆ ಪ್ರಾರ್ಥನೆಯು ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿ ಪ್ರಾರ್ಥನೆಯೆಂದರೆ ಉತ್ತರಖಂಡದಲ್ಲಿ ಹೇಳಿರುವುದಕ್ಕೆ ಪುನರುಕ್ತಿದೋಷವು ಏರ್ಪಡುತ್ತದೆ. ಉಪಾಯಪ್ರಾರ್ಥನೆಯೆಂದರೆ ಸಿದ್ಧೋಪಾಯ ಪ್ರಾರ್ಥನೆಯು ಇಬ್ಬರಿಗೂ ಸಮ, ಸಾಧ್ಯೋಪಾಯವಾದ ಭಕ್ತಿಪ್ರಾರ್ಥನೆಯು ಅಂಗ ಪ್ರಪತ್ತಿ ನಿಷ್ಠನಿಗೆ

**ನಿರ್ಕ ಇಜ್ಜು ಮ್ ಫಲಪ್ರಾರ್ಥನೈಯೈಪ್ಪಣ್ಣಿನಾಲ್ ಪುನರುಕ್ತಿಯುಂಡಾಮ್.** ಪ್ರಪತ್ತಿಕ್ಕುಫಲಮಾಹ ಭಕ್ತಿ ರೂಪೋಪಾಯತ್ತೈ ಪ್ರಾರ್ಥಿಕ್ಕುಮಾಪ್ಪೋಲೇ ಸ್ವತಂತ್ರಪ್ರಪತ್ತಿನಿಷ್ಠನುಕ್ಕು ಅಜ್ಜು ಸಾಧ್ಯಮಾಯ್ ಪ್ರಾರ್ಥನೀಯಮಾಯಿರುಪ್ಪದೊರು ಉಪಾಯಮಿಲ್ಲೈ. ಆನಪಿನ್ಪು, ಇಜ್ಜು ಪ್ರಾರ್ಥನೈಶೊಲ್ಲುಹಿರಪಡಿ ಎನ್ನೆನ್ನಿಲ್? ಫಲಪ್ರದಾನ ಮ್ಪಣ್ಣುಹಿರಪಡಿಮ್ ಸರ್ವಾಧಿಕಾರಿ ವಿಷಯತ್ತಿಲುಮ್ ಪೊದುವಾಯಿರುಕ್ಕ ಅಕಿಂಚನನಾಯ್ ಸರ್ವಭರನ್ಯಾಸಂ ಪಣ್ಣುಹಿರವನ್ ಪಕ್ಕಲ್ ಪ್ರಪತ್ತಿ, ವೇರೊರು ವುಪಾಯತ್ತುಕ್ಕು ಅಂಗಮಾಹ ನಿಲ್ಲಾದ ಪಡಿ ಶರಣ್ಯನ್ ತಾನ್ ವುಪಾಯಾನ್ತರಸ್ಥಾನತ್ತಿಲೇ ನಿನ್ರುಫಲಮ್ ಕೊಡುಕ್ಕಿರ ಅಂಶಮ್, ಏತ್ತಮಾನಪಡಿ ಯಾಲೇ ಅವ್ವೇತ್ತಮಾನ ಭರಸ್ವೀಕಾರಾಂಶಂ ಇಜ್ಜು ಪ್ರಾರ್ಥಿಕ್ಕಪ್ಪಡುಹಿರದು.

**ಆನಾಲುಮ್, ಇಪ್ಪಡಿ ವುಪಾಯಮಾಯ್ ನಿರ್ಕವೇಣುಮೆನ್ರು ಅಪೇಕ್ಷಿಕ್ಕವೇ ಅಭಿಮತಫಲವಿಶೇಷತ್ತೈ ಉಪಾಯಾನ್ತರ ವ್ಯವಧಾನಮರತ್ತರ ವೇಣುಮೆನ್ರು ಪ್ರಾರ್ಥಿತ್ತದಾಹಾದೋ, ಆಹೈಯಾಲ್** ಉತ್ತರ ಖಂಡತ್ತಿಲ್ ಪ್ರಾರ್ಥನೈ ಮಿಹುದಿಯನ್ರೋವೆನ್ನಿಲ್, ಉಕ್ತಪ್ರಕಾರತ್ತಾಲೇ ಪ್ರಾರ್ಥನಾ ವಿಷಯತ್ತಿಲ್ ಅಂಶಭೇದಂ ತೋತ್ತುಹೈಕ್ಕಾಹಪ್ಪಿರಿಯ ಅಪೇಕ್ಷಿಕ್ಕಿರದಾಹೈಯಾಲೇ ಮಿಹುದಿಯಿಲ್ಲೈ. ಉತ್ತರಖಂಡ ತ್ತಿಲ್ ಅಪೇಕ್ಷಣೀಯ ಫಲವಿಶೇಷವ್ಯಂಜಕಮಾನ ವಾಕ್ಯತ್ತಿನುಡೈಯ ಅನ್ವಯಮಾತ್ರತ್ತುಕ್ಕಾಹ ಪ್ರಾರ್ಥನಾ ಪದಮ್ ಅಧ್ಯಾಹರಿತ್ತಾಲುಮ್ ಫಲಸ್ವರೂಪಮಾತ್ರತ್ತಿಲೇ ತಾತ್ಪರ್ಯಮೆನ್ರು ಪರಿಹಾರಮಾಹವುಮಾಮ್.

---

ವಿನಹ ಸ್ವತಂತ್ರ ಪ್ರಪತ್ತಿನಿಷ್ಠನಿಗೆ ಕೂಡದು ಆದ್ದರಿಂದ ಮಹಾವಿಶ್ವಾಸದಿಂದ ಆಕ್ಷಿಪ್ತವಾದ ಪ್ರಾರ್ಥನೆಯು ಯಾವುದು ಎಂದು ಕೇಳಿಕೊಂಡು ಸಮಾಧಾನವನ್ನು ಅನುಗ್ರಹಿಸುತ್ತಾರೆ. **ಫಲಪ್ರದಾನಂಪಣ್ಣುಹಿರವಿಡಮ್** ಇತ್ಯಾದಿ – ಫಲವನ್ನು ಕೊಡುವುದು ಭಕ್ತ, ಪ್ರಪನ್ನರಿಬ್ಬರಿಗೂ ಸಮಾನವಾಗಿರುವಾಗ, ಅಕಿಂಚನನಾಗಿ ಸರ್ವಭರ ನ್ಯಾಸವನ್ನು ಮಾಡುವವನ ವಿಷಯದಲ್ಲಿ ಪ್ರಪತ್ತಿಯು ಬೇರೆಯೊಂದು ಉಪಾಯಕ್ಕೆ ಅಂಗವಾಗಿರದೆ, ಶರಣ್ಯನೇ ಉಪಾಯಾಂತರ ಸ್ಥಾನದಲ್ಲಿ ನಿಂತು ಫಲವನ್ನು ಕೊಡುವ ಅಂಶವು **ಏತ್ತಮಾನಪಡಿಯಾಲೇ** – ಉತ್ಕೃಷ್ಟ ವಾದ್ದರಿಂದ, ಆ ಉತ್ಕೃಷ್ಟವಾದ ಭರಸ್ವೀಕಾರಾಂಶವು ಇಲ್ಲಿ ಪ್ರಾರ್ಥಿಸಲ್ಪಡುತ್ತದೆ. **ಆನಾಲುಮ್** – ಇತ್ಯಾದಿ– ಆದರೂ ಹೀಗೆ ಉಪಾಯವಾಗಿರಬೇಕೆಂದು ಅಪೇಕ್ಷಿಸಿದರೆ ಅಭಿಮತ ಫಲವಿಶೇಷವನ್ನು ಉಪಾಯಾಂತರ ವ್ಯವಧಾನ ವಿಲ್ಲದೆ ಕೊಡಬೇಕೆಂದು ಪ್ರಾರ್ಥಿಸಲ್ಪಡುತ್ತದೆಯಲ್ಲವೇ, ಆದ್ದರಿಂದ ಉತ್ತರ ಖಂಡದಲ್ಲಿ, "ಶ್ರೀಮತೇ ನಾರಾಯ ಣಾಯ ಭವೇಯಮ್" ಎಂದು 'ಭವೇಯಂ' ಎಂಬ ಪ್ರಾರ್ಥನಾ ಪದವನ್ನು ಅಧ್ಯಾಹಾರ ಮಾಡಿ ಪ್ರಾರ್ಥಿಸುವುದು ಅಧಿಕವಲ್ಲವೇ ಎಂದರೆ, **ಉಕ್ತ ಪ್ರಕಾರತ್ತಾಲೇ** ಇತ್ಯಾದಿ-ಮೇಲೆ ಹೇಳಿದ ರೀತಿಯಾಗಿ **ಪ್ರಾರ್ಥನಾ ವಿಷಯ ತ್ತಿಲ್**–ವಿಶಿಷ್ಟವಾದ ಪ್ರಾರ್ಥನಾ ವಿಷಯದಲ್ಲಿ **ಅಂಶಭೇದಮ್ ತೋಟ್ರುಹೈಕ್ಕಾಹ**-ಎನ್ ಪಲ್ಲೈಯಿಲ್ .... ಶುಮ ತ್ತಾದೇ ಎಂಬುದರಿಂದ ಉಪಾಯಾಂತರ ನಿರಪೇಕ್ಷತ್ವಾಂಶವೂ "ಮೇಲ್ ವರುಮಭಿಮತ ಮೆಲ್ಲಾತರುಹೈ ಉನಕ್ಕೇ ಭರ ಮಾಹ ಏರಿಟ್ಟುಕ್ಕೊಳ್ಳವೇಣುಮ್" – ಎಂಬುದರಿಂದ ಫಲಪ್ರದತ್ವ ರೂಪ ರಕ್ಷಕತ್ವಾಂಶವೂ ತೋರಲು, **ಪಿರಿಯವಪೇಕ್ಷಿಕ್ಕಿರದಾಹೈಯಾಲ್** – 'ಪ್ರಪದ್ಯೇ' ಎಂದು ಪೂರ್ವ ಖಂಡದಲ್ಲಿ ಉಪಾಯಾಂತರ ನಿರಪೇಕ್ಷ ರಕ್ಷಕತ್ವಾಂಶವನ್ನು ಬಿಡಿಸಿಯೂ, ಉತ್ತರ ಖಂಡದಲ್ಲಿ ಫಲ ಪ್ರದತ್ವಾಂಶವನ್ನು ಪ್ರತ್ಯೇಕವಾಗಿ ಅಪೇಕ್ಷಿಸಿಯೂ ಇರುವುದರಿಂದ **ಮಿಹುದಿಯಿಲ್ಲೈ** – ಪುನರುಕ್ತಿಯಿಲ್ಲ. ಪರಿಹಾರಾಂತರವನ್ನು **ಉತ್ತರಖಂಡತ್ತಿಲ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಪ್ರಪದ್ಯೇ ಎಂಬಲ್ಲಿ ನಿರಪೇಕ್ಷತ್ವ ವಿಶಿಷ್ಟ ರಕ್ಷಕತ್ವದ ಪ್ರಾರ್ಥನೆ ಎಂದೇ ಅಂಗೀಕರಿಸಿದರೂ, ಉತ್ತರಖಂಡದಲ್ಲಿ ಪ್ರಾರ್ಥನಾಪದವಿಲ್ಲದುದರಿಂದ ಅದಕ್ಕೆ ಇಷ್ಟ ಪ್ರಾಪ್ತಿ, ಅನಿಷ್ಟ ನಿವೃತ್ತಿರೂಪ ಫಲಸ್ವರೂಪ ಮಾತ್ರ ಪ್ರತಿಪಾದನದಲ್ಲಿ ತೃಪ್ತಿಯಿರುವುದರಿಂದ, ಅಲ್ಲಿ ಪ್ರಾರ್ಥನಾ ಪದವು ದ್ಯೋತ್ಯವಿಲ್ಲ. ಅನ್ವಯಾರ್ಥವಾಗಿ "ಭವೇಯಂ" ಸ್ಯಾಮ್," ಎಂದು ಪ್ರಾರ್ಥನಾಪದಗಳನ್ನು ಅಧ್ಯಾ ಹಾರ ಮಾಡಿಕೊಂಡರೂ ಉತ್ತರಖಂಡಕ್ಕೆ ಫಲಸ್ವರೂಪದಲ್ಲಿ ಮಾತ್ರ ತಾತ್ಪರ್ಯವೇ ಹೊರತು ಪ್ರಾರ್ಥನಾ ಎಂಬು

### ಖಂಡದ್ವಯೇನ ಏಕವಾಕ್ಯಾರ್ಥಸಿದ್ಧಿಃ, ದ್ವಯಸ್ಯನಿಷ್ಕೃಷ್ಟಾರ್ಥಃ

**ಪೂರ್ವೋತ್ತರ ಖಂಡಙ್ಗಳ್ ಇರಣ್ಡುಕ್ಕುಮ್ ತಿರಂಡಪೊರುಳ್ ನಿಷ್ಕರ್ಷಿಕ್ಕುಮಿಡತ್ತಿಲ್, “ಅಕಿಂಚನನಾಸ ಎನಕ್ಕು ನೀ ಉಪಾಯಾಂತರ ಸ್ಥಾನತ್ತಿಲೇ ನಿನ್ರು ಫಲವಿಶೇಷತ್ತೈ ತರುಹೈಕ್ಕಾಕ ಯಥೋಕ್ತಮಾನ ಆತ್ಮರಕ್ಷಾಭರನಿಕ್ಷೇಪಂ, ಪಣ್ಣುಹಿರೇನ್ ಎನ್ರು ಒರುವಿಶಿಷ್ಟಪ್ರಾರ್ಥನಾನ್ವಿತ ಭರಸಮರ್ಪಣಮಾನ್.**

---

ದರಲ್ಲಿ ತಾತ್ಪರ್ಯವಿಲ್ಲದ್ದರಿಂದ,ಪೌನರುಕ್ತ್ಯವಿಲ್ಲವೆಂದು ಪರಿಹಾರ ಮಾಡಬಹುದು. ಈ ಪಕ್ಷವೇ ಮೇಲೆಂಬುದು ಆಚಾರ್ಯರ ಅಭಿಮತ.

### ದ್ವಯಮಂತ್ರದ ಪೂರ್ವೋತ್ತರ ಖಂಡಗಳಿಗೆ ಒಂದುಗೂಡಿದ ಅರ್ಥ.

ಪೂರ್ವಖಂಡದಲ್ಲಿ ಹೇಳಲ್ಪಡುವ ಪ್ರಾರ್ಥನೆಯು ನಿರಪೇಕ್ಷೋಪಾಯ ಪರ, ಉತ್ತರ ಖಂಡದಲ್ಲಿ ಹೇಳಲ್ಪಡುವ ಫಲಪ್ರಾರ್ಥನೆಯು ಬೇರೆ ಎಂಬ ಪಕ್ಷದಲ್ಲಿ ಫಲ ವಿಶೇಷಾರ್ಥಕ್ಕೋಸ್ಕರ ಭರಸಮರ್ಪಣವೂ ನಿರಪೇಕ್ಷೋಪಾಯತ್ವಾರ್ಥಕ್ಕಾಗಿ ಭರಸಮರ್ಪಣವೂ ಎಂದು ಇರಲಿ ಎಂದರೆ ಎರಡು ವಾಕ್ಯವು ಏರ್ಪಡುತ್ತದೆಯೆಂಬ ಶಂಕೆಗೆ ಅವಕಾಶವಾಗುತ್ತದೆ ಉತ್ತರಖಂಡದಲ್ಲಿ ಪ್ರಾರ್ಥನಾರ್ಥವಾದ ಕ್ರಿಯಾಪದದ ಅಧ್ಯಾಹಾರದಲ್ಲಿ ತಾತ್ಪರ್ಯವಿಲ್ಲ. ಫಲವಿಶೇಷದಲ್ಲೇ ಪರಮ ತಾತ್ಪರ್ಯವೆಂಬ ಪಕ್ಷದಲ್ಲಿ ವಾಕ್ಯ ಭೇದ ಶಂಕೆಯೇ ಉಂಟಾಗುವುದಿಲ್ಲ. ಆದ್ದರಿಂದ ಈ ಪಕ್ಷವೇ ಮೇಲಾದುದೆಂಬ ಅರ್ಥದಲ್ಲಿ ಶಾಬ್ದಬೋಧವನ್ನು **ಪೂರ್ವೋತ್ತರ ಖಂಡಗಳ್**–ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಪೂರ್ವೋತ್ತರ ಖಂಡಗಳಿಗೆ ಮಹಾ ವಾಕ್ಯಾರ್ಥವಾಗಿ ಒಂದುಗೂಡಿದ ಅರ್ಥವನ್ನು **ನಿಷ್ಕರ್ಷಿಕ್ಕು ಮಿಡತ್ತಿಲ್** –ನಿಷ್ಕರ್ಷಿಸುವ ಸಂದರ್ಭದಲ್ಲಿ, **ಅಕಿಂಚನನಾವೆನಕ್ಕು**–ಇತ್ಯಾದಿ–ಅಕಿಂಚನನಾದ ನನಗೆ ನೀನು ಉಪಾಯಾಂತರ ಸ್ಥಾನದಲ್ಲಿ ನಿಂತು ಫಲವಿಶೇಷವನ್ನು ಕೊಡುವುದಕ್ಕೋಸ್ಕರ ಯಥೋಕ್ತವಾದ ಆತ್ಮರಕ್ಷಾ ಭರ **ನಿಕ್ಷೇಪಮ್** – ಸಮರ್ಪಣವನ್ನು ಮಾಡುತ್ತೇನೆಂದು ಒಂದು ವಿಶಿಷ್ಟ ಪ್ರಾರ್ಥನಾನ್ವಿತ ಭರಸಮರ್ಪಣವೆಂದಾಗುತ್ತದೆ. “**ಇಲ್ಲಿ ಉಪಾಯಾಂತರ ಸ್ಥಾನತ್ತಿಲೇ ನಿನ್ರು**” ಎಂಬುದು ಉಪಾಯತ್ವ ಪ್ರಾರ್ಥನಾದ್ಯೋತಕ. “**ಫಲವಿಶೇಷತ್ತೈ ತ್ತರುಹೈಕ್ಕಾಕ**” ಎಂಬುದು ರಕ್ಷಕತ್ವ ಪ್ರಾರ್ಥನಾರೂಪ ಗೋಪ್ತೃತ್ವವರಣ ದ್ಯೋತಕ. **ಯಥೋಕ್ತಮಾನ**–ಅಂಗಪಂಚಕ ಸಂಪನ್ನವಾದ, **ಆತ್ಮರಕ್ಷಾ ಭರನಿಕ್ಷೇಪಮ್ ಪಣ್ಣುಹಿರೇನ್** ಎಂಬುದು ಪ್ರಪದ್ಯೇ ಎಂಬ ಪದದಲ್ಲಿ ಹೇಳಲ್ಪಡುವ ಭರಸಮರ್ಪಣ ಪರ. **ಒರು ವಿಶಿಷ್ಟ ಪ್ರಾರ್ಥನಾನ್ವಿತ**–ಎಂಬುದು ಫಲವಿಶಿಷ್ಟ ನಿರಪೇಕ್ಷೋಪಾಯತ್ವ ಪ್ರಾರ್ಥನೆ ಎಂದರ್ಥ. **ಅನ್ವಿತಮಾನ ಭರಸಮರ್ಪಣಮಾಮ್**–ನಿರಪೇಕ್ಷೋಪಾಯತ್ವ ಪ್ರಾರ್ಥನಾರೂಪ ಭರಸ್ವೀಕಾರ ಪ್ರಾರ್ಥನಾನ್ವಿತ ಭರಸಮರ್ಪಣವೆಂದರ್ಥ. ಇಲ್ಲಿ ಉಪಾಯತ್ವ ಪ್ರಾರ್ಥನೆಯನ್ನು ಅಂಗಪಂಚಕಕ್ಕಿಂತ ಬೇರೆಯಾಗಿ ತೋರಿಸಿರುವುದರಿಂದ ಉಪಾಯತ್ವ ಪ್ರಾರ್ಥನೆ ಮತ್ತು ಗೋಪ್ತೃತ್ವ ಪ್ರಾರ್ಥನೆ ಎಂಬ ಎರಡನ್ನೂ ಅನುಷ್ಠಿಸಬೇಕೆಂಬುದು ದ್ಯೋತಿತ. ಗೋಪ್ತೃತ್ವವರಣವು ಅಂಗಪಂಚಕಗಳಲ್ಲಿ ಒಂದಾಗಿ ಪರಿಗಣಿತವು. ಉಪಾಯತ್ವವರಣವು ಅಂಗಿಭೂತವಾದ ಭರನ್ಯಾಸಕ್ಕೆ ಅಂತರಂಗ ವಿಶೇಷಣವಾಗಿದ್ದು ಪ್ರಪತ್ತಿಪದಾರ್ಥದ ಸ್ವರೂಪವನ್ನು ನಿರೂಪಿಸುತ್ತದೆ. ಉಪಾಯಪ್ರಾರ್ಥನಾ ವಿಶಿಷ್ಟವಾದ ಭರನ್ಯಾಸವೇ ಅಂಗಿ ಎಂಬುದನ್ನು ಅನೇಕ ಕಡೆಗಳಲ್ಲಿ ನಿರೂಪಿಸಿರುತ್ತಾರೆ.

ಕೆಲವರು ಉಪಾಯತ್ವ ಪ್ರಾರ್ಥನೆಯು ಅಂಗಿವಿಶೇಷಣವೆಂದು ಎಲ್ಲಿಯೂ ಆಚಾರ್ಯರು ಸ್ಪಷ್ಟವಾಗಿ ಹೇಳಿಲ್ಲವೆಂದು ಗ್ರಂಥ ಪರಿಚಯದ ನ್ಯೂನತೆಯಿಂದ ಹೇಳುವ ಮಾತು. “ಅಭೀಪ್ಸಿತೇದುಸ್ಸಾಧೇ’ ಎಂಬ ಸಾಂಗ ಪ್ರಪದನಾಧಿಕಾರದ ಮೊದಲನೆಯ ಶ್ಲೋಕದಲ್ಲಿಯೇ “ಯಾಂಚಾ ವಿಶಿಷ್ಟವು” ಭರನ್ಯಾಸವೆಂದು ಹೇಳಿ, ಯಾಂಚಾ ಸ್ವರೂಪವನ್ನು “ಅತಃ ಪಶ್ಚಾದಸ್ಮದ್ಯತನ” ಇತ್ಯಾದಿ ಆರಂಭಿಸಿ ಹೇಳಿರುತ್ತಾರೆ. ಅಕಿಂಚನಾನುಷ್ಠೇಯವಾದ ಪ್ರಪತ್ತಿಯನ್ನು

## ಇಸ್ಸಮರ್ಪಣಮುಮ್ ಅಧ್ಯವಸಾಯ ಶಬ್ದಾರ್ಥಮಾಮ್.

ಆಜ್ಞಾದಕ್ಷಿಣಾ ಪೂರ್ವಕ ಭರನ್ಯಾಸಗಳಿಗಿಂತಲೂ ಬೇರೆಯಾದದ್ದು ಎಂದು ತಿಳಿಸಲು ಪ್ರಾರ್ಥನಾ ವಿಶಿಷ್ಟ ಭರನ್ಯಾಸವೆಂದು ಅನೇಕ ಕಡೆಗಳಲ್ಲಿ ಹೇಳಿರುವುದಲ್ಲದೆ, ಪ್ರಪದನ ಶಬ್ದಾರ್ಥವು "ನಿರಪೇಕ್ಷೋಪಾಯತ್ವ ವಿಶಿಷ್ಟ ಭರಸಮರ್ಪಣ'ವೆಂದು ಅಲ್ಲಲ್ಲೇ ವಿವರಿಸಿರುತ್ತಾರೆ.

ಶರಣಶಬ್ದೋಪಶ್ಲಿಷ್ಟ ಬುದ್ಧಿ ಸಾಮಾನ್ಯವಾಚಕ ಪ್ರಪೂರ್ವಕ ಪದಲ್ ಧಾತುವಿಗೆ ಪ್ರಕೃತಾಧಿಕಾರ್ಯನುಗುಣವಾಗಿ ಮಹಾವಿಶ್ವಾಸ ರೂಪ ಅಧ್ಯವಸಾಯಾರ್ಥಕತ್ವವನ್ನು ಹೇಳಿ, ಅದರ ಪ್ರಸಕ್ತಿಯಿಂದ ಆಕ್ಷಿಪ್ತವಾದ ಪ್ರಾರ್ಥನಾ ಸ್ವರೂಪವನ್ನು ವಿಚಾರಿಸಿ ಕೊನೆಯಲ್ಲಿ ಬುದ್ಧಿಸಾಮಾನ್ಯವಾದ ಧಾತುವೇ ಭರಸಮರ್ಪಣ ರೂಪವಾದ ಅಧ್ಯವಸಾಯವನ್ನು ಹೇಳುತ್ತದೆಯೆಂದು ಇಸ್ಸಮರ್ಪಣಮುಮ್–ಇತ್ಯಾದಿ ಅನುಗ್ರಹಿಸುತ್ತಾರೆ. ಆದಾಗಿ ಈ ಭರಸಮರ್ಪಣವೂ ಅಧ್ಯವಸಾಯ ಶಬ್ದಾರ್ಥವು ಎಂದರ್ಥ–ಅಂದರೆ ಅಧ್ಯವಸಾಯ ವಾಚಕ ಪದಲ್ ಧಾತುರೂಪ ಶಬ್ದಾರ್ಥವೆಂದರ್ಥ. ಇದು ಕೆಲವರ ಮತವೆಂದು ಕುಮಾರ ವರದ ಗುರುಗಳು ತಮ್ಮ ಗ್ರಂಥದಲ್ಲಿ ಅನುಗ್ರಹಿಸಿದ್ದಾರೆ. "ಇಸ್ಸಮರ್ಪಣಮ್ ಅಧ್ಯವಸಾಯ ಶಬ್ದಾರ್ಥಮುಮಾಮ್" ಎಂಬ ಪಾಠಾಂತರದಲ್ಲಿಯೂ ಇದೇ ಅರ್ಥ. ತಥಾಚ ಎರಡು ಪಾಠಗಳಲ್ಲಿಯೂ "ಪ್ರಪದ್ಯೇ" ಎಂಬುದಕ್ಕೆ ಪ್ರಾರ್ಥನಾನ್ವಿತ ಭರನ್ಯಾಸವೆಂದರ್ಥ. ಈ ಸಿದ್ಧಾಂತಿ ಮತದಲ್ಲಿ ಮತ್ತೊಂದು ಸೂಕ್ಷ್ಮವಾದ ಅಂಶವು ತಿಳಿಯಲ್ಪಡಬೇಕು, ಯಾವುದೆಂದರೆ, 'ಶರಣ' ಶಬ್ದವಿಲ್ಲದೆ ಕೇವಲ ಪ್ರಪದ್ಯತಿ ಎಂಬ ಧಾತುವೇ ಪ್ರಪತ್ತಿ ಪದದ ಹಾಗೆ ಪ್ರಾರ್ಥನಾನ್ವಿತ ಭರನ್ಯಾಸವಾಚಕ. "ಸಪತ್ನೀಃ ಪ್ರಾಪದ್ಯತ" ತಮೇವ ಚಾದ್ಯಂ ಪುರುಷಂ ಪ್ರಪದ್ಯೇತ್ಯಾದಿ ಪ್ರಯೋಗಪ್ರಾಚುರ್ಯಗಳು ಇದಕ್ಕೆ ಪ್ರಮಾಣಗಳು. ಹಾಗಾದರೆ "ಶರಣಂ ಪ್ರಪದ್ಯೇ" ಎಂದು ದ್ವಯಮಂತ್ರದಲ್ಲಿಯೂ ಶ್ವೇತಾಶ್ವತರ ಮಂತ್ರದಲ್ಲಿ "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" ಎಂದೂ, ಗದ್ಯ ಸ್ತೋತ್ರಾದಿಗಳಲ್ಲಿಯೂ 'ಶರಣಂಪ್ರಪದ್ಯೇ' ಎಂದು ರೂಢಿಯಾಗಿ, ಶರಣಶಬ್ದವನ್ನು ಸೇರಿಸಿ 'ಪ್ರಪದ್ಯೇ' ಎಂದು ಪ್ರಯೋಗಿಸಿರುವುದಕ್ಕೆ ಏನು ಪ್ರಯೋಜನವೆಂಬ ಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಆಚಾರ್ಯರು 'ಪ್ರಪದ್ಯೇ ಎನ್ನಿಹರವಳವಾಲುಂ ಅವ್ಯೆಂದಿರುಕ್ಕ, ಶರಣಶಬ್ದ ಮುಪಾಯಾಂತರ ಸ್ಥಾನ ನಿವೇಶ ಭಾನಾರ್ಥಮ್'– ಪ್ರಪದ್ಯೇ ಎಂಬ ಶಬ್ದದಿಂದಲೇ ಉಪಾಯ ಪ್ರಾರ್ಥನಾ ವಿಶಿಷ್ಟ ಭರನ್ಯಾಸವೆಂದು ಅರ್ಥವಾದರೂ, "ಶರಣ' ಶಬ್ದವು ಭಗವಂತನು ಉಪಾಯಾಂತರ ಸ್ಥಾನದಲ್ಲಿ ನಿವೇಶಿಸಲ್ಪಡುತ್ತಾನೆಂಬ ಅರ್ಥವನ್ನು ಪ್ರಕಾಶ ಪಡಿಸಿ 'ಶರಣಂ ಪ್ರಪದ್ಯೇ' ಎಂಬ ವಿಶಿಷ್ಟಪದವು ತಾದೃಶ ಉಪಾಯತ್ವ ಪ್ರಾರ್ಥನಾ ವಿಶಿಷ್ಟ ಭರನ್ಯಾಸವೆಂಬುದನ್ನು ಸ್ಪಷ್ಟೀಕರಿಸುತ್ತದೆ, ಎಂದು ಸಾರಸಾರದಲ್ಲಿ ಸಮಾಧಾನವು ಹೇಳಲ್ಪಟ್ಟಿದೆ ಇದರ ಅಭಿಪ್ರಾಯವೇನೆಂದರೆ– 'ಪ್ರಪದ್ಯತೇ' ಎಂಬ ಧಾತುವು ಸಮುದಾಯ ಶಕ್ತಿಯಿಂದ, ಭರಸ್ವೀಕಾರ ಪ್ರಾರ್ಥನಾನ್ವಿತ ಭರನ್ಯಾಸವನ್ನು ತಿಳಿಸಿ, ಅದರಿಂದ ಪ್ರಪತ್ತಿವಿದ್ಯಾ ವೇದ್ಯಾಕಾರಭೂತ ನಿರಪೇಕ್ಷೋಪಾಯತ್ವವನ್ನು ತಿಳಿಸುತ್ತದೆ. ಪ್ರ ಎಂಬ ಉಪಸರ್ಗದಿಂದ ಕೂಡಿದ ಧಾತುವಿಗೆ ಶಕ್ತ್ಯಂತರದಿಂದ ಮಹಾವಿಶ್ವಾಸ ವಾಚಿತ್ವವೂ, ಗತ್ಯರ್ಥಗಳಿಗೆ ಬುದ್ಧ್ಯರ್ಥಗಳು ಅನುಶಾಸನ ಬಲದಿಂದ, ಸಂಪ್ರತಿಪನ್ನವು. ಈ ಮಹಾ ವಿಶ್ವಾಸವು ಪ್ರಪತ್ತವ್ಯನಲ್ಲಿ ನಿರಪೇಕ್ಷೋಪಾಯತ್ವಾಧ್ಯವಸಾಯ ವಿಶೇಷರೂಪವಾದುದ್ದು. ಬೇರೆ ವಿಧವಾದ ವಿಶ್ವಾಸವು ಈ ಪ್ರಕರಣದಲ್ಲಿ ಅನಪೇಕ್ಷಿತ. ಈ ಮಹಾವಿಶ್ವಾಸಕ್ಕೆ ವಿಷಯ ಭೂತವಾದ ನಿರಪೇಕ್ಷೋಪಾಯತ್ವವು ಶರಣ ಶಬ್ದದಿಂದಲೇ ಉಪಸ್ಥಾಪನೀಯ. "ಶರಣ"ಶಬ್ದವು ಉಪಾಯತ್ವ ಮಾತ್ರ ವಾಚಕವಾದರೂ, "ನಾಗಣ್ಯೆಮಿಶ್ಶೈ ನಂಬಿರಾನ್ ಶರಣೇ ಶರಣ್", ತಮೇವ ಶರಣಂಗಚ್ಛ, ಮಾಮೇಕಂ ಶರಣಂವ್ರಜ, ಇತ್ಯಾದಿಗಳಲ್ಲಿ ಏವಕಾರದಿಂದಲೂ. ಏಕಶಬ್ದದಿಂದಲೂ ನೈರಪೇಕ್ಷ್ಯವು ಅಭಿಪ್ರೇತವು. ಆದ್ದರಿಂದಲೇ ದ್ವಯಮಂತ್ರದ 'ಚರಣ' ಶಬ್ದದಲ್ಲಿಯೂ "ಚರಣಾವೇವ" ಎಂದು ಅವಧಾರಣ ಗರ್ಭತ್ವವು ವ್ಯಾಖ್ಯಾತವು. ಆದ್ದರಿಂದ ಅವಧಾರಣಸಹಿತವಾದ 'ಶರಣ' ಶಬ್ದದಿಂದ ಪ್ರತಿಪನ್ನವಾದ ನಿರಪೇಕ್ಷೋಪಾಯತ್ವವು 'ಪ್ರಪದ್ಯೇ' ಎಂಬ ಧಾತುವಿನಲ್ಲಿ ಅವಯವಶಕ್ತಿಯಿಂದ ಉಪಸ್ಥಾಪಿತವಾದ ಮಹಾ ವಿಶ್ವಾಸಕ್ಕೆ

**ಇಪ್ಪಡಿ ಸಪರಿಕರಮಾನ ಭರಸಮರ್ಪಣಮೇ ಪ್ರಪತ್ತಿಶಾಸ್ತ್ರಾರ್ಥಮೆನ್ನುಮಿಡಮ್ ಪ್ರಮಾಣ ಸಂಪ್ರದಾಯಙ್ಗಳಾಲೇ ಪಲವಿಡತ್ತಿಲುಮ್ ಸಮರ್ಥಿತ್ತೋಮ್.**

1) "ಅನೇನೈವತು ಮನ್ತ್ರೇಣ ಸ್ವಾತ್ಮಾನಂ ಮಯಿ ನಿಕ್ಷಿಪೇತ್ ।
ಮಯಿನಿಕ್ಷಿಪ್ತಕರ್ತವ್ಯಃ ಕೃತಕೃತ್ಯೋಭವಿಷ್ಯತಿ" ॥

**ಎನ್ರು ಪ್ರಪತ್ತಿಮನ್ತ್ರಾಂತರತ್ತಿಲ್ಸೊನ್ನ ಕರ್ತವ್ಯ ನಿಕ್ಷೇಪ ಪ್ರಾಧಾನ್ಯಮ್ ಇಂಗುಮ್ ತುಲ್ಯಮ್. ಮೋಕ್ಷಪ್ರದಮಾನ ಸಿದ್ಧೋಪಾಯತ್ತುಕ್ಕು, ಮುಮುಕ್ಷುವಿನ್ ಪಕ್ಕಲಿಲೇ ಉಳ್ಳದೊರು ಶಾಸ್ತ್ರೀಯಮಾನ ಸಾಧ್ಯ ವ್ಯಾಜಮ್ ವಶೀಕರಣಮೆನ್ನುಮಿಡಮ್ ತನ್ನೈಕರ್ತಾವಾಹಕ್ಕಾಟ್ಟುಹಿರ ಉತ್ತಮನಾಲೇ ಸಿದ್ಧಮ್.**

---

ಅಪೇಕ್ಷಿತವಾದ ಪ್ರಕಾರ ವಿಶೇಷವಾಗಿ ಸೇರಿಸಲ್ಪಡುತ್ತದೆ. ಅಂದರೆ ಅತ್ಯಂತಾಕಿಂಚನನಾದ ಅತಿಪರತಂತ್ರನಾದ ಮತ್ತು ಅತಿನೀಚನಾದ ನನಗೆ ಉಪಾಯಾಂತರ ನಿರಪೇಕ್ಷನಾಗಿ, ನೀನೇ (ಭಗವಂತನೇ) ತ್ವದನುಭವಜನಿತ ಪ್ರೀತಿ ಕಾರಿತ ಸರ್ವವಿಧ ಕೈಂಕರ್ಯರೂಪ ಪರಮಪುರುಷಾರ್ಥ ಸಿದ್ಧಿಯನ್ನು ಕೊಡುತ್ತೀಯೆಂದು ಸುದೃಢವಾದ ಅಧ್ಯವಸಾಯದಿಂದ ಕೂಡಿದ್ದೇನೆಂಬ ಮಹಾವಿಶ್ವಾಸಕ್ಕೆ "ನಿರಪೇಕ್ಷೋಪಾಯನಾಗಿ", ಎಂಬುದು ವಿಶೇಷಣವೆಂದು ತಾತ್ಪರ್ಯ-

'ಪ್ರಪದ್ಯೇ' ಎಂಬಲ್ಲಿ ಮಹಾವಿಶ್ವಾಸ ರೂಪ ಅಧ್ಯವಸಾಯ ವಿಶೇಷವು ತಿಳಿಯುತ್ತದೆಯಾದ್ದರಿಂದ, ಅದೇ ಪ್ರಪತ್ತಿ ಶಬ್ದಾರ್ಥವಾಗಲಿ, ಅದಕ್ಕಿಂತ ಬೇರೆಯಾದ 'ಭರನ್ಯಾಸ' ವೆಂಬುದನ್ನು "ಪ್ರಪದ್ಯೇ" ಎಂಬಲ್ಲಿಅರ್ಥವಾಗಿ ಹೇಳಬೇಕೇ ಎಂಬ ಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು, ವಿಶ್ವಾಸಾಂಗಕ ಭರಸ್ವೀಕಾರ ಪ್ರಾರ್ಥನಾ ಪೂರ್ವಕ ಭರನ್ಯಾಸವೇ 'ಪ್ರಪದ್ಯೇ' ಎಂಬಲ್ಲಿ ವಿವಕ್ಷಿತವೆಂದು ಸಾಧ್ಯೋಪಾಯ ಶೋಧನಾಧಿಕಾರದಲ್ಲಿಯೂ ನಿಕ್ಷೇಪರಕ್ಷಾದಿ ಪ್ರಬಂಧಾಂತರಗಳಲ್ಲಿಯೂ ಪ್ರಮಾಣೋಪಪತ್ತಿ ಸಂಪ್ರದಾಯ ಪುರಸ್ಸರವಾಗಿ ನಿರೂಪಿಸಿದ ಅರ್ಥವನ್ನೇ ಪುನಃ ಇಲ್ಲಿಯೂ ಇಪ್ಪಡಿ ಸಪರಿಕರಮಾನ ಭರಸಮರ್ಪಣಮೇ ಪ್ರಪತ್ತಿ ಶಾಸ್ತ್ರಾರ್ಥಮ್ ಇತ್ಯಾದಿಯಾಗಿ ತುಲ್ಯಮ್-ಅತ್ಯಂತವಾಗಿ ಸಿದ್ಧಾಂತೀಕರಿಸುತ್ತಾರೆ. ಹೀಗೆ ವಿಶ್ವಾಸ, ಪ್ರಾರ್ಥನಾದಿಪರಿಕರ ಸಹಿತವಾದ ಭರಸಮರ್ಪಣವೇ "ಪ್ರಪತ್ತಿ" ಶಬ್ದಾರ್ಥವೆಂಬುದನ್ನು ಪ್ರಮಾಣಸಂಪ್ರದಾಯಂಗಳಾಲೇ-ಪ್ರಮಾಣ ಪುರಸ್ಸರವಾಗಿಯೂ ಸಂಪ್ರದಾಯ ವಚನಗಳನ್ನು ಎತ್ತಿ ತೋರಿಸಿಯೂ ಪಲವಿಡತ್ತಿಲುಮ್ ಅನೇಕ ಸ್ಥಳಗಳಲ್ಲಿಯೂ ಸಮರ್ಥಿತ್ತೋಮ್-ಸಮರ್ಥಿಸಿದುದಾಗಿ ಆಚಾರ್ಯರು ನಿಗಮಿಸುತ್ತಾರೆ.

1) ಅನೇನೈವತು ಮಂತ್ರೇಣ ಇತ್ಯಾದಿ – ಪ್ರಪತ್ತಿ ಮಂತ್ರಾಂತರಗಳಲ್ಲಿ ಹೇಳಲ್ಪಟ್ಟ ಕರ್ತವ್ಯವಾದ, ನಿಕ್ಷೇಪ ಪ್ರಾಧಾನ್ಯಮ್–ಭರಸಮರ್ಪಣದ ಪ್ರಾಧಾನ್ಯವು, ಇಂಗುಂ ತುಲ್ಯಮ್ – ಇಲ್ಲಿಯೂ ಸಮಾನ. "ಮಯಿ ನಿಕ್ಷಿಪ್ತ ಕರ್ತವ್ಯಃ "ಆತ್ಮಾತ್ಮೀಯ ಭರನ್ಯಾಸಃ", ಇತ್ಯಾದಿ ಶಾಸ್ತ್ರಗಳ ಪ್ರಕಾರ ಭರನ್ಯಾಸರೂಪವಾದ ಆತ್ಮನಿಕ್ಷೇಪವೇ ಇಲ್ಲಿ ತಿಳಿಸಲ್ಪಡುತ್ತದೆ. ದೇವದತ್ತನಲ್ಲಿ, ಧನವು ನಿಕ್ಷಿಪ್ತವು ಎಂದರೆ, ಅವನಿಂದ ರಕ್ಷಿಸಲ್ಪಡಲು ಧನವು ದೇವದತ್ತನಲ್ಲಿಡಲ್ಪಟ್ಟಿದೆ ಎಂದು ಅರ್ಥ. ಆ ಅರ್ಥದಲ್ಲಿ ಭರಸಮರ್ಪಣವು ಪ್ರಧಾನ. ಸ್ವರೂಪ ಫಲ ನಿಕ್ಷೇಪಗಳು ಮೋಕ್ಷಕಾಂಕ್ಷಿಗಳಿಗೆ ಅಧಿಕ.

### ಪ್ರಪದ್ಯೇ ಎಂಬಲ್ಲಿಯ ಆಖ್ಯಾತ ಪ್ರತ್ಯಯಕ್ಕೆ ಅರ್ಥ,

ಇದುವರೆಗೆ ಧಾತುವಿನ ಅರ್ಥವು ಹೇಳಲ್ಪಟ್ಟಿತು, ಅನಂತರ "ಪ್ರಪದ್ಯೇ' ಎಂಬಲ್ಲಿಯ ಆಖ್ಯಾತ ಪ್ರತ್ಯಯಕ್ಕೆ ಅರ್ಥವನ್ನು ಮೋಕ್ಷಪ್ರದಮಾನ-ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಮೋಕ್ಷವನ್ನು ದಯಪಾಲಿಸಲು ಸಿದ್ಧೋಪಾಯನಾದ ಭಗವಂತನ ವಶೀಕಾರಕ್ಕಾಗಿ ಮೋಕ್ಷವನ್ನು ಬಯಸುವವನು ಅನುಷ್ಠಿಸಬೇಕಾದ ಶಾಸ್ತ್ರೀಯವಾದ ವ್ಯಾಜವಿಶೇಷವು, ತನ್ನನ್ನು ಕರ್ತಾವಾಗಿ ತೋರಿಸುವ ಉತ್ತಮ ಪುರುಷದಿಂದ ಸಿದ್ಧ. ಅದಾಗಿ ಭಗವಂತನು ಪರಮಕಾರುಣಿಕನಾಗಿಯೂ ಸಿದ್ಧೋಪಾಯನಾಗಿಯೂ ಫಲಪ್ರದನಾಗಿದ್ದರೂ ತನಗೆ ವೈಷಮ್ಯ ನೈರ್ಘೃಣ್ಯಗಳೂ ಸರ್ವ

**"ಪ್ರಪದ್ಯೇ" ಇತಿ ಶಬ್ದೇನ ಅಧಿಕಾರ ವಿಶೇಷಂ ಪರಿಕರಸಾಙ್ಗ ಪ್ರಪದನಂಚ ।**
**ಸಪ್ರಮಾಣಮುಪಪಾದಯತಿ ॥**

**ಇದಿಲ್ ಔಚಿತ್ಯತ್ತಾಲೇ 1) "ಪುಹಲೊನ್ರಿಲ್ಲಾವಡಿಯೇನ್", 2) "ಅಹಮಸ್ಮ್ಯಪರಾಧಾನಾ ಮಾಲಯೋಽಕಿಂಚನೋಽಗತಿಃ" 3) ನಧರ್ಮ ನಿಷ್ಠೋಽಸ್ಮಿ ನಚಾತ್ಮವೇದೀ" ಇತ್ಯಾದಿಹಳಿಲ್ಪಡಿಯೇ ಅಧಿಕಾರ ವಿಶೇಷ ಮುಮ್ ಕಾರ್ಪಣ್ಯಮಾಹಿರ ಪರಿಕರಮುಮ್ ಸೂಚಿತಮ್.**

**ಇದು ಗದ್ಯತ್ತಿಲ್ "ಅನನ್ಯ ಶರಣಃ" ಎನ್ಡಿರಪದತ್ತಿಲುಮ್. ಶಿರು ಗದ್ಯತ್ತಿಲ್ "ಸ್ವಾತ್ಮ ನಿತ್ಯನಿಯಾಮ್ಯ॰**

---

ಮುಕ್ತಿ ಪ್ರಸಂಗವೂ ಬಾರದೆ ಇರಲು ಜೀವಕರ್ತೃಕವಾದ ಒಂದು ಶಾಸ್ತ್ರೀಯವಾದ ವ್ಯಾಜವನ್ನು ಅಪೇಕ್ಷಿಸಿಯೇ ರಕ್ಷಿಸುತ್ತಾನೆಂದರ್ಥ. ಕರ್ತಾಶಾಸ್ತ್ರಾರ್ಥವತ್ತ್ವಾತ್ ಎಂಬ ಸೂತ್ರಾರಂಭಕವಾದ ಕರ್ತ್ರಧಿಕರಣವು ಇಲ್ಲಿ ಸೂಚಿತ. ಈ ಅರ್ಥವು ಮುಮುಕ್ಷುವನ್ನು 'ಕರ್ತಾವಾಗಿ' ತೋರಿಸುವ ಉತ್ತಮ ಪುರುಷದಿಂದ ಏರ್ಪಡುತ್ತದೆ. "ಪ್ರಪತ್ತಿ" ಎಂಬ ಉಪಾಯಕ್ಕೆ ಆಶ್ರಯ ಭೂತನಾದವನು 'ಕರ್ತಾ' ಎಂಬದು ಇಲ್ಲಿ ವಾಚ್ಯವಾದ ಅರ್ಥ. ಇದರಿಂದ ಸೂಚಿಸಲ್ಪಡುವ ಅರ್ಥವನ್ನು **ಇದಿಲ್ ಔಚಿತ್ಯತ್ತಾಲೇ**–ಇತ್ಯಾದಿಯಾಗಿ ವಿವರಿಸುತ್ತಾರೆ. ಆದಾಗಿ ಕರ್ತೃಸಾಮಾನ್ಯ ವಾಚಕವಾದ ಉತ್ತಮಪುರುಷದಲ್ಲಿ, ಶರಣಶಬ್ದಾದಿ ಸಾಹಚರ್ಯದಿಂದಲೂ, ಶರಣಾಗತಿ ಪ್ರತಿಪಾದಕ ಪ್ರಮಾಣ ಪರಾಮರ್ಶದಿಂದಲೂ, ಆಕಿಂಚನನಾದ ಅಧಿಕಾರಿಯೂ ಕಾರ್ಪಣ್ಯರೂಪವಾದ ಅಂಗವೂ ಸೂಚಿತವು. ಆಕಿಂಚನ್ಯವೆ ಅಧಿಕಾರ, ಅದರಿಂದ ಏರ್ಪಟ್ಟ ಗರ್ವಹಾನಿಯು ಕಾರ್ಪಣ್ಯ. (1) **ಪುಹಲೊನ್ರಿಲ್ಲಾವಡಿಯೇನ್**, – ಉಪಾಯಾಂತರ ಶಕ್ತನಾದ ದಾಸನು (2) **ಅಹಮಸ್ಮ್ಯಪರಾಧಾನಾಂ ಆಲಯಃ** – ನಾನು ಅಪರಾಧಗಳಿಗೆಲ್ಲಾ ಆಶ್ರಯಭೂತನು – ಅಪರಾಧಗಳಿಂದ ಕೂಡಿದವನೆಂದರ್ಥ. **ಅಕಿಂಚನಃ** – ಉಪಾಯಾಂತರ ಶೂನ್ಯನು, **ಅಗತಿಃ** – ಶರಣ್ಯಾಂತರ ಶೂನ್ಯನು – ಬೇರೆ ಯಾರೂ ರಕ್ಷಕರಿಲ್ಲ. (3) **ನಧರ್ಮನಿಷ್ಠೋಽಸ್ಮಿನಚಾತ್ಮವೇದೀ** – ಇತ್ಯಾದಿ. ಕರ್ಮಜ್ಞಾನಾಂಗಕಭಕ್ತಿಯೋಗವನ್ನು ಅನುಷ್ಠಿಸಲು ಅಶಕ್ತನು – ಉಪಾಯಾಂತರ ಶೂನ್ಯನು, ಎಂದರ್ಥ. ಇತ್ಯಾದಿಗಳಲ್ಲಿ ಹೇಳಿರುವಂತೆ, ಆಕಿಂಚನನಾದ ಅಧಿಕಾರಿಯು ಉತ್ತಮಪುರುಷದಿಂದ ಹೇಳಲ್ಪಟ್ಟು, ಅದರಿಂದ ಏರ್ಪಟ್ಟ ಕಾರ್ಪಣ್ಯರೂಪ **ಪರಿಕರಮ್** – ಅಂಗವು ಹೇಳಲ್ಪಟ್ಟಿತು. ಕಾರ್ಪಣ್ಯಪದದಿಂದ, ಉಪಾಯಾಂತರ ಸಂಪತ್ತಿನ ಅಭಾವವೂ ತತ್ಪ್ರಯುಕ್ತ ಗರ್ವಹಾನಿಯೂ ಸಿದ್ಧ. ಉಪಾಯಾಂತರಗಳನ್ನು ಸ್ವರೂಪ ವಿರುದ್ಧಗಳೆಂದು ತಿಳಿಯಬೇಕೆಂದು ಏಕದೇಶಿಗಳು ಹೇಳುವುದು ಸರಿಯಲ್ಲ. "ಜ್ಞಾನಕ್ರಿಯಾ ಭಜನ ಸಂಪದಕಿಂಚನೋಽಹಮ್" – ಕರ್ಮಜ್ಞಾನಭಕ್ತಿಗಳೆಂಬ ಸಂಪತ್ತು ಇಲ್ಲದ ಆಕಿಂಚನನು, ಎಂದು, ಸಂಪತ್ತಾಗಿ ಹೇಳಿರುವ ಕರ್ಮಜ್ಞಾನಭಕ್ತಿಗಳನ್ನು ವಿಪತ್ತಾಗಿ ಕಲ್ಪಿಸುವುದು ಪರಿಹಾಸ್ಯಾಸ್ಪದ. **ಇದು** –ಈ ಆಕಿಂಚನ್ಯವೂ, ಕಾರ್ಪಣ್ಯವೂ, **ಗದ್ಯತ್ತಿಲ್** – ಶರಣಾಗತಿಗದ್ಯದಲ್ಲಿ **'ಅನನ್ಯಶರಣಃ'** ಎಂಬಪದದಲ್ಲಿಯೂ, **ಶಿರುಗದ್ಯತ್ತಿಲ್**–ಶ್ರೀರಂಗ ಗದ್ಯದಲ್ಲಿ **ಸ್ವಾತ್ಮನಿತ್ಯನಿಯಾಮ್ಯ**

---

(1) ತಿರುವಾಯ್‌ಮೊಳಿ 6 - 10 - 10 :- 3ನೇ ಪುಟ ನೋಡಿ
(2) ಅಹಿರ್ಬುಧ್ನ್ಯಸಂಹಿತೆ - 37 – 30 .
(3) ಆಳವಂದಾರ್ ಸ್ತೋತ್ರ – 32 .
ನಧರ್ಮ ನಿಷ್ಠೋಽಸ್ಮಿ ನಚಾತ್ಮವೇದೀ
ನ ಭಕ್ತಿ ಮಾನ್ ತ್ವಚ್ಚರಣಾರವಿಂದೇ ।
ಅಕಿಂಚನೋಽನನ್ಯ ಗತಿಶ್ಶರಣ್ಯ
ತ್ವತ್ಪಾದಮೂಲಂ ಶರಣಂ ಪ್ರಪದ್ಯೇ ॥
ಕರ್ಮಜ್ಞಾನಭಕ್ತಿಗಳಲ್ಲಿ ಅನ್ವಯವಿಲ್ಲದವನು, ಉಪಾಯಾಂತರಶೂನ್ಯನು ರಕ್ಷಕಾಂತರ ಶೂನ್ಯನು, ಎಲೈಶರಣ್ಯನೇ ನಿನ್ನ ಪಾದಗಳನ್ನು ಉಪಾಯವಾಗಿ ಆಶ್ರಯಿಸಿದ್ದೇನೆ.

ಎನ್ಗಿ ರ ಚೂರ್ಣೈಯಿಲುಂ, ಶ್ರೀ ವೈಕುಂಠಗದ್ಯತ್ತಿಲ್ "ತತ್ಪ್ರಾಪ್ತ್ಯೇಚ ತತ್ಪಾದಾಂಬುಜದ್ವಯ ಪ್ರಪತ್ತೇರನ್ಯನ್ನಮೇ ಕಲ್ಪಕೋಟಿ ಸಹಸ್ರೇಣಾಪಿ ಸಾಧನಮಸ್ತೀತಿ ಮನ್ವಾನಃ" ಎನ್ಗಿ ರಚೂರ್ಣೈಯಿಲುಮ್, ಪ್ರಪಂಚಿತಮಾಯಿತ್ತು.

ಅರುಳಾಳಪ್ಪೆರುಮಾಳೆಂಬೆರುಮಾನಾರುಮ್
"ಸ್ವಾಭೀಷ್ಟೇಪರಸಂಬಂಧೇ ಸ್ವಾಶಕ್ತ್ಯಾ ಹೀನಸಾಧನಃ ।
ತತ್ಪ್ರಾಪ್ತ್ಯುಪಾಯಂ ತತ್ಪಾದೌ ಕೃತ್ವಾ ವಿಶ್ವಾಸಪೂರ್ವಕಮ್ ॥"

---

ಎಂದಾರಂಭಿಸಿ "ಅನಾಗತಾನಂತ ಕಾಲಸಮೀಕ್ಷಯಾಪ್ಯದೃಷ್ಟಸಂತಾರೋಪಾಯಃ" - ಮುಂದೆ ಬರುವ ಅನಂತ ಕಾಲಗಳಲ್ಲಿಯೂ ಸಂಸಾರವನ್ನು ದಾಟುವ ಉಪಾಯವಾವುದನ್ನೂ ತಿಳಿಯದವನು, ಎಂದೂ ಶ್ರೀವೈಕುಂಠ ಗದ್ಯತ್ತಿಲ್ ತತ್ಪ್ರಾಪ್ತ್ಯೇಚ ಇತ್ಯಾದಿ – ಆ ಭಗವಂತನನ್ನು ಪಡೆಯಲು ಅವನ ಪಾದಗಳಲ್ಲಿ ಪ್ರಪತ್ತಿವಿನಹ ಬೇರೆ ಯಾವುದೂ ಅನೇಕ ಸಹಸ್ರ ಕೋಟಿ ಕಲ್ಪಗಳಲ್ಲಿಯೂ ಸಾಧನವಿಲ್ಲವೆಂಬ, ಚೂರ್ಣಿಕೆಯಿಂದಲೂ ವಿವರಿಸಲ್ಪಟ್ಟಿದೆ.

'ಸ್ವಾತ್ಮನಿಯಾಮ್ಯ' ಎಂಬ ಚೂರ್ಣಿಕೆಯಲ್ಲಿ, ಸ್ವರೂಪಾವಿರ್ಭಾವಪೂರ್ವಕ ಪರಿಪೂರ್ಣ ಭಗವದನುಭವ ಪರೀವಾಹ ನಿತ್ಯಕೈಂಕರ್ಯೈಕ ಭೋಗಲಕ್ಷಣ ಪರಮಪುರುಷಾರ್ಥಕ್ಕೆ ಭಕ್ತಿಯೋಗವು ಉಪಾಯ. ಅದಕ್ಕೆ ಕರ್ಮಯೋಗ ಜ್ಞಾನಯೋಗಗಳಿಂದ ಅಧಿಕಾರವು ಸಂಪಾದಿಸಲ್ಪಡುತ್ತದೆ- ಕರ್ಮಯೋಗ ಜ್ಞಾನಯೋಗಗಳು ಅಂಗವೆಂದರ್ಥ. ಇದಕ್ಕೆ ಅಧಿಕಾರವು ನಿತ್ಯನೈಮಿತ್ತಿಕ ವರ್ಣಾಶ್ರಮಗಳ ಅನುಷ್ಠಾನದಿಂದ ಸಂಪಾದಿಸಲ್ಪಡುತ್ತದೆ. ಈ ವರ್ಣಾಶ್ರಮ ಧರ್ಮಾನುಷ್ಠಾನವು ಸಾತ್ವಿಕತೆ, ಆಸ್ತಿಕ್ಯ, ಅಧ್ಯಾತ್ಮ (ವೇದಾಂತ) ಶಾಸ್ತ್ರಗಳಿಂದ ಅವಗತವಾದ ಆತ್ಮಗುಣ ಸಂಪತ್ತಿಯಿಂದ ಏರ್ಪಡುತ್ತದೆ. ಇಂತಹ ಸಮಸ್ತ ವಿಧವಾದ ಮಹಾಸಂಪತ್ತಿಗೆ ಪ್ರತಿಬಂಧಕವಾದದ್ದು ದುರಂತ ಕರ್ಮಪ್ರವಾಹವೆಂಬ ಸುಳಿಯಲ್ಲಿ ಸಿಕ್ಕಿಕೊಂಡಿರುವುದು, ಇದು ಆಕಿಂಚನ್ಯಕ್ಕೆ ಕಾರಣ. ಹೀಗಿರುವಾಗ ಕೆಲವರು ಭಕ್ತಿಯೋಗವು ಸ್ವರೂಪ ವಿರೋಧವೆಂದೂ, ಕರ್ಮಯೋಗ ಜ್ಞಾನಯೋಗಗಳು ಮುಕ್ತಿಗೆ ಸಾಕ್ಷಾತ್ಕಾರಣಗಳು, ಎಂದೂ ಹೇಳಿ ಉಪಾಯಾಂತರದ ಅನುಷ್ಠಾನದಿಂದ ಮೋಕ್ಷವನ್ನು ಪಡೆದವರಿಗೆ ಕೈಂಕರ್ಯ ಪರ್ಯಂತವಾದ ಅನುಭವವಿಲ್ಲವೆಂದು ಕಲ್ಪಿಸುವುದೂ ವಿಪರೀತಗ್ರಹಣ ಫಲ. ಪ್ರಪತ್ತಿಯು ಅಧಿಕಾರಿ ವಿಶೇಷಣವೆಂಬವಾದವೂ, ತತ್ಪ್ರಾಪ್ತ್ಯೇ ಚ ತತ್ಪಾದಾಂಬುಜದ್ವಯ ಪ್ರಪತ್ತೇರನ್ಯನ್ನಮೇ ಕಲ್ಪಕೋಟಿಸಹಸ್ರೇಣಾಪಿ ಸಾಧನಮಸ್ತೀತ್ಯಾದಿ – ಆ ಭಗವಂತನನ್ನು ಪಡೆಯಲು ಅವನ ಎರಡು ಪಾದಕಮಲಗಳಲ್ಲಿಯೂ ಶರಣಾಗತಿ ವಿನಹ ಕೋಟಿಕಲ್ಪಸಹಸ್ರಗಳಲ್ಲಿಯೂ ಬೇರೆ ಯಾವುದೂ ಸಾಧನವಿಲ್ಲವೆಂದು–ಹೇಳಿರುವ ಗದ್ಯಶ್ರೀಸೂಕ್ತಿಗೆ ವಿರೋಧವಾದದ್ದು, ಅಲಂಪ್ರಸಾಕ್ತ್ಯಾನು ಪ್ರಸಕ್ತೇನ.

ಹೀಗೆ ಗದ್ಯಗ್ರಂಥಾನುಸಾರವಾಗಿ ಆಖ್ಯಾತಪ್ರತ್ಯಯಕ್ಕೆ ಅರ್ಥವನ್ನು ಹೇಳಿ, ಇದೇ ಭಾಷ್ಯಕಾರರ ಅಂತರಂಗ ಶಿಷ್ಯರುಗಳಾದ ಪೂರ್ವಾಚಾರ್ಯರುಗಳ ಅಭಿಮತವೆಂದೂ, ಅವರುಗಳ ಉಪದೇಶೋಪಜ್ಞವಾದ ಸಂಪ್ರದಾಯವೆಂದೂ, ಅಭಿಪ್ರಾಯಪಟ್ಟು ಅರುಳಾಳ ಪ್ಪೆರುಮಾಳೆಂಬೆರುಮಾನಾರುಮ್ ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಅರುಳಾಳ ಪ್ಪೆರುಮಾಳೆಂಬೆರುಮಾನಾರವರೂ, ಸ್ವಾಭೀಷ್ಟೇಪರಸಂಬಂಧೇ ಇತ್ಯಾದಿ – ತನಗೇ ಇಷ್ಟವಾದ, ಪರಸಂಬಂಧದಲ್ಲಿ ಅಂದರೆ ದೇಶವಿಶೇಷ ಪ್ರಾಪ್ತಿಪೂರ್ವಕ ಭಗವತ್ಪ್ರಾಪ್ತಿರೂಪ ಸಂಬಂಧ ವಿಷಯದಲ್ಲಿ, ಸ್ವಾಶಕ್ತ್ಯಾ – ತನ್ನ ಅಜ್ಞಾನಾಶಕ್ತಿಗಳಿಂದ ಹೀನಸಾಧನಃ – ಭಕ್ತಿರೂಪ ಉಪಾಯಾನುಷ್ಠಾನ ಮಾಡಲನರ್ಹನಾಗಿ, ವಿಶ್ವಾಸಪೂರ್ವಕಮ್ – ಮಹಾವಿಶ್ವಾಸಪೂರ್ವಕವಾಗಿ ತತ್ಪ್ರಾಪ್ತ್ಯುಪಾಯಂ – ಆ ಭಗವಂತನನ್ನು ಹೊಂದಲು ಉಪಾಯವಾಗಿ ಅವನ ಪಾದಗಳನ್ನು ಆಶ್ರಯಿಸಬೇಕೆಂದು, ಅರುಳಿಚ್ಚೆಯ್ದಾರ್ – ಕೃಪೆಮಾಡಿ ಹೇಳಿದ್ದಾರೆ. ಇದರಿಂದ ಆಕಿಂಚನ್ಯವೂ ಕಾರ್ಪಣ್ಯವೂ, ಸಿದ್ಧವಾದವು. ಮಹಾವಿಶ್ವಾಸಪೂರ್ವಕವಾಗಿ ಭಗವಂತನ

**ಎನ್ರರುಳಿಚ್ಚೆಯ್‌ದಾರ್. ಇಪ್ಪಡಿ ಅಕಿಂಚನಾಧಿಕಾರವಾಯ್ ಭರಸಮರ್ಪಣ ರೂಪಮಾನ ಉಪಾಯತ್ತೈ ಚೊಲ್ಲುಹೈಯಾಲೇ ದುಷ್ಕರ ಕರ್ಮಾಂತರ ನೈರಪೇಕ್ಷ್ಯಂ ಅರ್ಥಸಿದ್ಧಮ್.**

**ಪೂರ್ವಖಂಡೇ ಸಪರಿಕರಭರನ್ಯಾಸ ಇತ್ಯಾಹ.**

**ಇಪ್ಪಡಿ ಶರಣ ಶಬ್ದಾನ್ವಿತಮಾಹ "ಪ್ರಪದ್ಯೇ" ಎನ್ಗಿರಪದತ್ತಿಲೇ**

**"ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವವರಣಂ ತಥಾ ।**

**ಆತ್ಮನಿಕ್ಷೇಪ ಕಾರ್ಪಣ್ಯೇ" ॥ ಎನ್ರು ನಿರ್ದಿಷ್ಟ ಮಾನ ನಾಲುಮ್ ಶೊಲ್ಲಿತ್ತಾಯಿತ್ತು.**

**1) "ಚರಾಚರಾಣಿ ಭೂತಾನಿ ಸರ್ವಾಣಿ ಭಗವದ್ವಪುಃ ।**

**ಅತಸ್ತದಾನುಕೂಲ್ಯಂಮೇ ಕಾರ್ಯಮಿತ್ಯೇವ ನಿಶ್ಚಯಃ ।**

**2) ಸ್ವಸ್ಯಸ್ವಾಮಿನಿವೃತ್ತಿರ್ಯಾ ಪ್ರಾತಿಕೂಲ್ಯಸ್ಯ ವರ್ಜನಮ್**

---

ಪಾದಗಳಲ್ಲಿ ಶರಣಹೊಂದಬೇಕೆಂಬುದೂ ಸಿದ್ಧವು. "ಉಪಾಯಾಂತರವು ಸ್ವರೂಪ ವಿರೋಧವಾದದ್ದು ಭಗವಂತನೇ ರಕ್ಷಿಸುತ್ತಾನೆಂಬ ಮಹಾವಿಶ್ವಾಸವೇ ಪ್ರಪತ್ತಿ ಶಬ್ದಾರ್ಥವೆಂಬ ಏಕದೇಶಿಗಳ ಮತವು ನಿರಸ್ತವಾಯಿತು. **ಇಪ್ಪಡಿ ಅಕಿಂಚನಾಧಿಕಾರಮಾಯ್** – ಇತ್ಯಾದಿ ಹೀಗೆ ಅಕಿಂಚನರಿಗೆ ಅಧಿಕಾರವಾದ ಭರಸಮರ್ಪಣರೂಪವಾದ ಉಪಾಯವನ್ನು ಹೇಳುವುದರಿಂದ, **ದುಷ್ಕರ ಕರ್ಮಾಂತರ ನೈರಪೇಕ್ಷ್ಯಮ್** –ಮಾಡಲಶಕ್ಯವಾದ ಭಕ್ತಿರೂಪ ಉಪಾಯಾಂತರಗಳ ನಿರಪೇಕ್ಷತ್ವವು, **ಅರ್ಥಸಿದ್ಧಮ್** – ಅರ್ಥಾತ್ ಸಿದ್ಧವು. ನಿರಪೇಕ್ಷೋಪಾಯತ್ವವು ವೇದ್ಯಾಕಾರವೆಂದು "ಶರಣ" ಶಬ್ದ ವ್ಯಾಖ್ಯಾನ ಸಂದರ್ಭದಲ್ಲಿ ಹೇಳಿದ್ದರೂ, ಶರಣಾಗತಿ ವಿದ್ಯಾವಿಶೇಷದಿಂದಲೂ ಉಪಾಯಾಂತರ ನೈರಪೇಕ್ಷ್ಯವು ಸಿದ್ಧವೆಂದು ಪುನಃ ಅನುಗ್ರಹಿಸಲ್ಪಟ್ಟಿದೆ.

**'ಶರಣಂ ಪ್ರಪದ್ಯೇ' ಎಂಬಲ್ಲಿ ಅನುಸಂಧಾನ ಮಾಡಬೇಕಾದ ನಾಲ್ಕು ಅರ್ಥಗಳು.**

**ಇಪ್ಪಡಿ ಶರಣಶಬ್ದಾನ್ವಿತಮಾನ** ಇತ್ಯಾದಿ – ಹೀಗೆ "ಶರಣ" ಶಬ್ದದಿಂದ ಕೂಡಿದ "ಪ್ರಪದ್ಯೇ" ಎಂಬ ಪದದಲ್ಲಿ **ರಕ್ಷಿಷ್ಯತೀತಿವಿಶ್ವಾಸಃ** ಇತ್ಯಾದಿ – ಮಹಾವಿಶ್ವಾಸ, ಗೋಪ್ತೃತ್ವವರಣ, ಕಾರ್ಪಣ್ಯ ಆತ್ಮನಿಕ್ಷೇಪವೆಂದು ನಿರ್ದೇಶಿಸಲ್ಪಟ್ಟ ನಾಲ್ಕೂ ಹೇಳಲ್ಪಟ್ಟಿತು. ಅಂದರೆ ಮಹಾವಿಶ್ವಾಸ, ಗೋಪ್ತೃತ್ವವರಣ, ಕಾರ್ಪಣ್ಯರೂಪ ಅಂಗಗಳೊಡನೆ, ನಿರಪೇಕ್ಷೋಪಾಯತ್ವ ಪ್ರಾರ್ಥನಾರೂಪ ಭರಸ್ವೀಕಾರ ಪ್ರಾರ್ಥನಾನ್ವಿತ ಭರಸಮರ್ಪಣವು ನಿರ್ದೇಶಿಸಲ್ಪಟ್ಟಿತೆಂದು ತಾತ್ಪರ್ಯ. ಇದರಿಂದ, "ಪ್ರಪದ್ಯೇ" ಎಂಬುದು ವಿಶ್ವಾಸಮಾತ್ರ ಬೋಧಕವೆಂದು ಹೇಳಿ, 'ಪ್ರಾರ್ಥಯಾಮಿ' ಎಂಬ ಪದವನ್ನು ಅಧ್ಯಾಹಾರಮಾಡಿಕೊಂಡು, ಶ್ರೀಮನ್ನಾರಾಯಣ ಚರಣೌ ಶರಣಂ, ಭಾವಯಾಮಿ, ಪ್ರಾರ್ಥಯಾಮಿ, ಎಂದು, ಪ್ರಪತ್ತಿಕಲ್ಪನವನ್ನು ಕೆಲವರು ಹೇಳುವುದು ಅಪರಾಮರ್ಶಮೂಲವಾದದ್ದು.

**ಅನುಕೂಲ್ಯಸಂಕಲ್ಪ ಪ್ರಾತಿಕೂಲ್ಯವರ್ಜನಗಳನ್ನು ದ್ವಯಮಂತ್ರದಲ್ಲಿ ಅನುಸಂಧಾನ ಮಾಡುವ ಸ್ಥಲ.**

ಅನಂತರ ಅನುಕೂಲ್ಯಸಂಕಲ್ಪ, ಪ್ರಾತಿಕೂಲ್ಯವರ್ಜನವೆಂಬ ಎರಡು ಅಂಗಗಳನ್ನು ಅನುಸಂಧಾನ ಮಾಡುವ ಸ್ಥಲವನ್ನು (1) **"ಚರಾಚರಾಣಿಭೂತಾನಿ"** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಚರಾಚರಭೂತಗಳೆಲ್ಲವೂ, ಭಗವಂತನಿಗೆಶರೀರ. ಅವನ ನಿಯಮನಕ್ಕೆ ಒಳಪಟ್ಟವು, ಅವನು ಶರೀರಿ - ಸ್ವಾಮಿ, ಆದ್ದರಿಂದ ಸರ್ವಭೂತಗಳಲ್ಲಿಯೂ ಅನುಕೂಲನಾಗಿರುವುದೇ ಸ್ವಾಮಿಗೆ ಅನುಕೂಲನಾಗಿರುವುದೆಂಬುದು, ದಾಸನ ಸ್ವರೂಪ. **ಕಾರ್ಯಮಿತ್ಯೇವನಿಶ್ಚಯಃ** – ಅನುಕೂಲ್ಯಸಂಕಲ್ಪವನ್ನು ಮಾಡಲು ಈ ವಚನವು ಪ್ರಮಾಣ. (2) **ಸ್ವಸ್ಯಸ್ವಾಮಿನಿ**

---

(1) ಮತ್ತು (2) ಅಹಿರ್ಬುಧ್ನ್ಯಸಂಹಿತೆ 52 - 23.

ಇತ್ಯಾದಿ ಪ್ರಮಾಣಂಗಳಿನ್ ಪಡಿಯೇ ಸ್ವಾಮಿತ್ವಾದಿ ನಿಬಂಧನಙ್ಗಳೈ ಚ್ಚೊಲ್ಲುಹಿರ ಸವಿಶೇಷಣ ಮಾನ ನಾರಾಯಣ ಶಬ್ದತ್ತಿಲೇ ಅನುಕೂಲ್ಯ ಸಙ್ಕಲ್ಪಮುಮ್ ಪ್ರಾತಿಕೂಲ್ಯ ವರ್ಜನಮುಮ್ ಸೂಚಿತ ಮೆನ್ನುಮಿಡಮ್ ಮುನ್ಬೇ ಶೊನ್ನೋಮ್.

ಇಪ್ಪರಿಕರಙ್ಗಳುಮ್ ಉಪಾಯಾರ್ಥಮಾಹ ಸಕೃತ್ಕರ್ತ್ತವ್ಯಙ್ಗಳ್, ಎನ್ನುಮಿಡಮ್ ಅಧಿಕಾರಾಂತರ ತ್ತಿಲೇ ಶೊನ್ನೋಮ್.

"ಪ್ರಪದ್ಯೇ" ಇತ್ಯತ್ರ ವರ್ತ್ತಮಾನ ನಿರ್ದೇಶಸ್ಯ ತಾತ್ಪರ್ಯಮಾಹ. ಇತರ ತಾತ್ಪರ್ಯಾಣಾಂ ಪ್ರಮಾಣ ವಿರೋಧಂ ದರ್ಶಯತಿ.

ಇಕ್ರಿಯಾ ಪದತ್ತಿಲ್ ವರ್ತ್ತಮಾನ ನಿರ್ದೇಶಮ್ "ಬರ್ಹಿರ್ದೇವಸದನಾದಿ" ಮನ್ತ್ರಙ್ಗಳಿರ್ಪೋಲೇ ಅನುಷ್ಠಾನಕಾಲಾಭಿಪ್ರಾಯಮ್ : ಇಙ್ಗನನ್ರಿಕ್ಕೇ ಈ ವರ್ತ್ತಮಾನ ವ್ಯಪದೇಶಮ್ ವರ್ತ್ತಮಾನ ದೇಹಾ

---

ವೃತ್ತಿರ್ವಾ ಇತ್ಯಾದಿ – ತನ್ನ ಯಜಮಾನನಲ್ಲಿ ಪ್ರಾತಿಕೂಲ್ಯವರ್ಜನವೆಂಬ ಆಜ್ಞಾವ್ಯಾಘಾತವರ್ಜನ ರೂಪ ವೃತ್ತಿಯು – ಅವನ ಆಜ್ಞೆಯನ್ನು ಮೀರದೆ ನಡೆದುಕೊಳ್ಳಬೇಕೆಂಬ ವೃತ್ತಿಯು – ಪ್ರಾತಿಕೂಲ್ಯವರ್ಜನವು: ಇದು ಐದನೆ ಅಂಗ, ಇತ್ಯಾದಿ **ಪ್ರಮಾಣಂಗಳಿನ್ ಪಡಿಯೇ** – ಈ ರೀತಿಯಾದ ಪ್ರಮಾಣಗಳಿಗೆ ಅನುಸಾರವಾಗಿ, **ಸ್ವಾಮಿತ್ವ ನಿಬಂಧನಂಗಳೈಚ್ಚೊಲ್ಲುಹಿರ** – ಅನುಕೂಲ್ಯಸಂಕಲ್ಪ ಪ್ರಾತಿಕೂಲ್ಯವರ್ಜನಗಳಿಗೆ ಕಾರಣವು ಭಗವಂತನು ಸ್ವಾಮಿ ಎಂಬುದು ಸ್ವಾಮಿ ವಿಷಯದಲ್ಲಿ ದಾಸನು ಆಜ್ಞಾಪಾಲಕನಾಗಿ, ಅವನಿಗೆ ಅನುಕೂಲವಾಗಿ ನಡೆದುಕೊಳ್ಳಬೇಕೆಂಬುದು ಅರ್ಥಾತ್ ಸಿದ್ಧ. ಈ ಅಂಶವನ್ನು, **ಸವಿಶೇಷಣ ನಾರಾಯಣಶಬ್ದತ್ತಿಲೇ** – ಲಕ್ಷ್ಮೀ ವಿಶಿಷ್ಟ ನಾರಾಯಣ ಶಬ್ದವು ತಿಳಿಸುತ್ತದೆ ಇದರಿಂದ "ಶ್ರೀ" ಶಬ್ದಕ್ಕೆ 'ನಾರಾಯಣ' ಶಬ್ದ ಸಮಾನಾರ್ಥವು ದ್ಯೋತಿತ. ಅಂದರೆ ಶ್ರೀಯತೇ ಶ್ರಯತೇ ಎಂಬ ವ್ಯುತ್ಪತ್ತಿಗಳಿಂದ ಶರೀರಾತ್ಮ ಭಾವವು ದ್ಯೋತಿತವಾಗಿ, ಲಕ್ಷ್ಮೀ ತದ್ವಿಭೂತಿಗಳಲ್ಲಿಯೂ, ಸರ್ವಭೂತಸೌಹಾರ್ದವೂ ಪ್ರತಿಕೂಲಾಚರಣವಿಲ್ಲದಿರುವುದೂ ಇಲ್ಲಿಯೂ ವಿವಕ್ಷಿತ. ಸ್ವಾಮಿತ್ವವು ಲಕ್ಷ್ಮೀನಾರಾಯಣರೆಂಬ, ಉಭಯರಲ್ಲಿಯೂ ವಿವಕ್ಷಿತ, ಈ ಅರ್ಥಗಳನ್ನು ಹಿಂದೆಯೇ ಪರಿಕರವಿಭಾಗಾಧಿಕಾರದಲ್ಲಿ ಅನುಗ್ರಹಿಸಿರುವುದಾಗಿ ಆಚಾರ್ಯರು ತಿಳಿಸುತ್ತಾರೆ.

ಹೀಗೆ ಸ್ವಾಮಿತ್ವಾದಿ ಗುಣಗಳು ನಿತ್ಯಗಳಾದ್ದರಿಂದ ತನ್ನಿಬಂಧನ(ಕಾರಣ)ಗಳಾದ ಪ್ರಾತಿಕೂಲ್ಯವರ್ಜನಾದ್ಯಂಗಗಳು ನಿತ್ಯವಾಗಿ ಅನುಷ್ಠೇಯಗಳೇ ಎಂದರೆ, **ಇಪ್ಪರಿಕರಂಗಳುಮ್** ಇತ್ಯಾದಿ ಅನುಗ್ರಹಿಸುತ್ತಾರೆ. ಅದಾಗಿ ಈ ಅಂಗಗಳು, ಉಪಾಯಾನುಷ್ಠಾನದಶೆಯಲ್ಲಿ **ಸಕೃತ್ಕರ್ತವ್ಯಂಗಳ್** - ಒಂದುಸಲ ಅನುಷ್ಠಿಸಲ್ಪಡತಕ್ಕವು, ಎಂಬುದನ್ನು **ಅಧಿಕಾರಾಂತರತ್ತಿಲೇ** – ಇತ್ಯಾದಿ ಪರಿಕರ ವಿಭಾಗಾಧಿಕಾರದಲ್ಲಿ ಹೇಳಿರುವುದಾಗಿ ಆಚಾರ್ಯರು ತಿಳಿಸುತ್ತಾರೆ.

### "ಪ್ರಪದ್ಯೇ" ಎಂಬಲ್ಲಿ ವರ್ತಮಾನ ನಿರ್ದೇಶದ ಅಭಿಪ್ರಾಯ.

**ಇಕ್ರಿಯಾಪದತ್ತಿಲ್** ಇತ್ಯಾದಿ – ಈ ಕ್ರಿಯಾಪದದಲ್ಲಿ ವರ್ತಮಾನಕಾಲವನ್ನು ತಿಳಿಸಿರುವುದು, 'ಬರ್ಹಿರ್ದೇವಸದನಂ ದಾಮಿ' ಎಂಬ ಲವನ ಮಂತ್ರವೂ ದೇವಸದನ(ಸ್ಥಾನ)ವಾದ ಬರ್ಹಿ:-ದರ್ಭವನ್ನು ಕತ್ತರಿಸುತ್ತೇನೆ ಆದಿ ಶಬ್ದದಿಂದ "ಅಗ್ನಯೇಜುಷ್ಟಂನಿರ್ವಪಾಮಿ ಎಂಬ ನಿರ್ವಾಪನ ಮಂತ್ರವೂ, ಅನುಷ್ಠಾನ ಕಾಲಾಭಿಪ್ರಾಯದಿಂದ ವರ್ತಮಾನ ನಿರ್ದೇಶ ಆ ರೀತಿಯಲ್ಲಿ ಪ್ರಪತ್ತ್ಯನುಷ್ಠಾನ ಕಾಲದಲ್ಲಿ ಕರ್ತವ್ಯತ್ವವನ್ನು ವಿವಕ್ಷಿಸುತ್ತದೆಯೆಂದು ಅಭಿಪ್ರಾಯ. ಇಂಗನನ್ರಿಕ್ಕೇ ಇತ್ಯಾದಿ – ಹೀಗಲ್ಲದೆ ಈ ವರ್ತಮಾನವ್ಯಪದೇಶವು, ವರ್ತಮಾನ –

ವಧಿಯಾಹ ಪ್ರಪತ್ತ್ಯನುಷ್ಠಾನಕರ್ತವ್ಯತೈಯೈ ವಿವಕ್ಷಿಕ್ಕಿರದೆನ್ರುಮ್ ಫಲಮ್‌ವರು ಮಳವುಮ್ ಪ್ರಪತ್ತಿ ಪರಿಕರಮಾನ ವಿಶ್ವಾಸಾನುವೃತ್ತಿಯೈ ವಿವಕ್ಷಿಕ್ಕಿರದೆನ್ರುಮ್, ಪ್ರಪತ್ತಿ ಕಾಲತ್ತಿಲ್ ತಾನ್ ಸಙ್ಕಲ್ಪಿತ್ತಪಡಿಯೇ ಆನುಕೂಲ್ಯಾದಿಹಳ್ ಪ್ರಪತ್ತಿಪರಿಕರ ಮಾಹವೇ ಮೇಲ್ ಅನುವರ್ತಿಕ್ಕವೇಣ್ಡುಮ್ ಪಡಿಯೈ ಕಾಟ್ಟುಹಿರತೆನ್ರುಮ್ ಶೊಲ್ಲುಮ್ ಪಕ್ಷಙ್ಗಳ್, ಇವ್ವುಪಾಯಮ್ ಸಪರಿಕರಮಾಹ ಸಕೃತ್ಕರ್ತವ್ಯ ಮೆನ್ರು ಕಾಟ್ಟುಹಿರ ಪ್ರಮಾಣಙ್ಗಳೋಡೇ ವಿರೋಧಿಕ್ಕುಮ್. ತ್ವರಾತಿಶಯತ್ತಾಲುಮ್ ಭೋಗರೂಪ ತೈಯಾಲುಮ್ ವರುಮ್ ಆವೃತ್ತಿಕ್ಕುಮ್, ಪೂರ್ವಖಂಡತ್ತಿಲ್ ಶೊನ್ನಪಡಿಯೇ ಅನುಷ್ಠೇಯಮಾನ ಉಪಾಯ ಶರೀರತ್ತಿಲ್ ಪ್ರವೇಶಮಿಲ್ಲೈ. ಆಹೈಯಾಲ್ ಉಪಾಯ ವಾಕ್ಯತ್ತಿಲ್ ವರ್ತಮಾನ ವ್ಯಪದೇಶಮ್ "ದ್ವಯಮರ್ಥಾನುಸಂಧಾನೇನ ಸಹ ಸದೈವಂ ವಕ್ತಾ" ಎನ್ಗಿರ ರಾಗಪ್ರಾಪ್ತ ಭೋಗ ರೂಪಾನು ವೃತ್ತಿಯೈ ವಿವಕ್ಷಿಕ್ಕಿರದುಮುನ್ರು.

### ಪೂರ್ವಖಂಡಸ್ಥಾರ್ಥಾನ್ ನಿಗಮಯತಿ

ಇಪ್ಪಡಿ ಸರ್ವಶರಣ್ಯತ್ವಮುಮ್ ಶರಣಾಗತಿ ಸ್ವರೂಪಮುಮ್ ಇದಿನ್ ಪರಿಕರಙ್ಗಳುಮ್ ಅಧಿಕಾರಿ ವಿಶೇಷ ಮುಮ್ ಪೂರ್ವಖಂಡತ್ತಿಲೇ ಪ್ರಕಾಶಿತಮಾಯಿತ್ತು. ಇತ್ತಾಲ್ ಅನನ್ಯೋಪಾಯತ್ವಮುಮ್ ಸಿದ್ಧಿತ್ತದು.

---

(ಈಗ ಧರಿಸಿರುವ) ದೇಹಾವಧಿಯಾಗಿ ಪ್ರಪತ್ತ್ಯನುಷ್ಠಾನ ಕರ್ತವ್ಯವನ್ನು ವಿವಕ್ಷಿಸುತ್ತದೆಯೆಂದೂ, ಫಲವು ಬರುವ ಪರ್ಯಂತ ಪ್ರಪತ್ತಿ ಪರಿಕರವಾದ ವಿಶ್ವಾಸಾನುವೃತ್ತಿಯನ್ನು ವಿವಕ್ಷಿಸುತ್ತದೆಯೆಂದೂ, ಪ್ರಪತ್ತಿಕಾಲದಲ್ಲಿ ತಾನು ಸಂಕಲ್ಪಿಸಿದ ರೀತಿಯಲ್ಲಿ ಆನುಕೂಲ್ಯಾದಿಗಳು ಪ್ರಪತ್ತಿಗೆ ಅಂಗವಾಗಿ ಮುಂದೆಯೂ ಅನುವರ್ತಿಸಬೇಕೆಂಬುದನ್ನು ತಿಳಿಸುತ್ತದೆ ಎಂದೂ ಹೇಳುವ ಪಕ್ಷಗಳು, ಈ ಉಪಾಯವು ಅಂಗಗಳೊಡನೆ, ಒಂದೇಸಲ ಅನುಷ್ಠಿಸಲ್ಪಡಬೇಕೆಂದು ತಿಳಿಸುವ "ಸಕೃದುಚ್ಚಾರ ಸಂಸಾರ ಮೋಚನಂ ಭವತಿ," ಸಕೃದೇವಪ್ರಪನ್ನಾಯ, ಇತ್ಯಾದಿ ಪ್ರಮಾಣಗಳೊಡನೆ ವಿರೋಧಿಸುತ್ತದೆ **ತ್ವರಾತಿಶಯತ್ತಾಲುಮ್** – ದೇಹಾವಸಾನದಲ್ಲಿ ಮೋಕ್ಷವನ್ನು ಅಪೇಕ್ಷಿಸಿ ಪ್ರಪತ್ತಿಮಾಡಿದವನಿಗೆ, ಅನಂತರ ಸಂಸಾರದಲ್ಲಿ ವೈರಾಗ್ಯದಿಂದ ಇನ್ನೂ ಶೀಘ್ರದಲ್ಲೇ ಮೋಕ್ಷವನ್ನು ಪಡೆಯಬೇಕೆಂಬ ಆಸೆಯಿಂದ ತ್ವರೆಯು ಏರ್ಪಟ್ಟರೆ, ಆ ಕಾಲದೊಳಗೇ ಮೋಕ್ಷಾರ್ಥವಾಗಿ ಮಾಡುವ ಪುನಃ ಪ್ರಪತ್ತಿಗೂ, **ಭೋಗರೂಪತೈಯಾಲುಮ್** –ಭೋಗ ರ್ಥವಾಗಿ ಅನುಸಂಧಾನ ಮಾಡುವ ಪ್ರಪತ್ತಿಯಿಂದ ಏರ್ಪಡುವ ಆವೃತ್ತಿಗೂ, ಪೂರ್ವಖಂಡದಲ್ಲಿ ಹೇಳಿದಂತೆ ಅನು ಷ್ಠಿಸಲ್ಪಟ್ಟ ಉಪಾಯದಲ್ಲಿ ಪ್ರವೇಶವಿಲ್ಲ. ಅದರೊಡನೆ ಇದು ಸೇರುವುದಿಲ್ಲವೆಂದರ್ಥ. **ಆಹೈಯಾಲ್ ಇವ್ವುಪಾಯ ವಾಕ್ಯತ್ತಿಲ್** ಇತ್ಯಾದಿ ಆದ್ದರಿಂದ ಈ ಉಪಾಯ ಪರವಾದ **ಪೂರ್ವಖಂಡದಲ್ಲಿ** ವರ್ತಮಾನವ್ಯಪದೇಶವು '**ದ್ವಯ ಮರ್ಥಾನುಸಂಧಾನೇನ ಸಹಸದೈವಂವಕ್ತಾ**' – ದ್ವಯಮಂತ್ರವನ್ನು ಅರ್ಥಾನುಸಂಧಾನದೊಡನೆ ಯಾವಾಗಲೂ ಹೇಳುತ್ತಾ ಇರು, ಎಂಬ **ರಾಗಪ್ರಾಪ್ತಭೋಗರೂಪಾನುವೃತ್ತಿಯೈ** – ಇತ್ಯಾದಿ ಆ ಉಪಾಯದಲ್ಲಿರುವ ಪ್ರೀತಿ ಯಿಂದ ಏರ್ಪಟ್ಟ ಭೋಗರೂಪವಾದ ಅನುಸಂಧಾನದ ಅನುವೃತ್ತಿಯನ್ನು ವಿವಕ್ಷಿಸುತ್ತದೆ ಎಂಬುದೂ ಅಲ್ಲ.

### ದ್ವಯಮಂತ್ರದ ಪೂರ್ವಖಂಡದ ವಿಷಯಗಳ ಸಂಗ್ರಹ.

**ಇಪ್ಪಡಿ ಸರ್ವಶರಣ್ಯತ್ವಮುಮ್** – ಇತ್ಯಾದಿ ಹೀಗೆ 'ಶರಣ' ಶಬ್ದದಿಂದ, ಸರ್ವಶರಣ್ಯತ್ವವೂ, "ಶರಣಂ ಪ್ರಪದ್ಯೇ" ಎಂಬ ಪದಗಳಿಂದ **ಉಪಾಯತ್ವವರಣವೂ** ಹೇಳಲ್ಪಟ್ಟು, ಶರಣಾಗತಿಯ ಸ್ವರೂಪವೂ, **ಇದಿನ್ ಪರಿ ಕರಂಗಳುಮ್**, –ಇದರ ಅಂಗಗಳು 'ಶ್ರೀಮನ್ನಾರಾಯಣ' ಶಬ್ದಗಳಿಂದ ಅನುಕೂಲ್ಯ ಸಂಕಲ್ಪ ಪ್ರಾತಿಕೂಲ್ಯ ವರ್ಜನಗಳೂ, "ಶರಣಂಪ್ರಪದ್ಯೇ" ಎಂಬಲ್ಲಿ ಮಹಾವಿಶ್ವಾಸವೂ ಗೋಪ್ತೃತ್ವವರಣವೂ, ಉತ್ತಮಪುರುಷಪ್ರತ್ಯಯ ದಿಂದ, **ಅಧಿಕಾರಿವಿಶೇಷಮುಮ್** – ಅಕಿಂಚನನಾದ ಅಧಿಕಾರಿ ವಿಶೇಷವೂ, **ಪೂರ್ವಖಂಡತ್ತಿಲ್ ಪ್ರಕಾಶಿತ ಮಾಯಿಟ್ರು** – ಪೂರ್ವಖಂಡದಲ್ಲಿ ಪ್ರಕಾಶಿತವಾಯಿತು. **ಇತ್ತಾಲೇ** ಇತ್ಯಾದಿ –ಹೀಗೆ ಸರ್ವಶರಣ್ಯತ್ವಪೂರ್ವಕ ಉಪಾ ಯಾಂತರಸ್ಥಾನ ನಿವೇಶರೂಪ ಪ್ರಪತ್ತಿ ಸ್ವರೂಪ ಪ್ರತಿಪಾದನದಿಂದ ಅನನ್ಯೋಪಾಯತ್ವವೂ ಸಿದ್ಧಿಸಿತು.

**ಉತ್ತರಖಂಡಃ ಫಲಪ್ರಾರ್ಥನಾರೂಪ ಇತಿ ವ್ಯಾಖ್ಯಾತುಂ, ಪೂರ್ವೋತ್ತರ ಖಂಡಯೋ ಸ್ಸಙ್ಗತಿಮಾಹ**

**ಇಪ್ಪಡಿತ್ತೋತ್ತಿನ ಶರಣಾಗತಿ 1) "ತಾವದಾರ್ತಿ ಸ್ತಥಾವಾಂಛಾ" ಇತ್ಯಾದಿಹಳಿಪ್ಪಡಿಯೇ ಸಕಲ ಫಲಸಾಧನಮಾಹೈಯಾಲುಮ್, 2) ತದನ್ಯಃ ಕೋ ಮಹೋದಾರಃ ಎನ್ಗಿರಪಡಿಯೇ ಪರಮೋದಾರ ನಾನ ಶರಣ್ಯನ್ ಅರ್ಥಿತಾರ್ಥ ಪರಿದಾನದೀಕ್ಷಿತನಾಯ್ 3) "ಕೊಳ್ಳಕ್ಕುರೈವಿಲನ್ ವೇಣ್ಡಿತ್ತೆಲ್ಲಾಂ ತರುಮ್" ಎನ್ನುಮ್ಪಡಿಯೇ ನಿರ್ಕೈಯಾಲುಮ್ ಇಙ್ಗ ಎನ್ನ ಫಲತ್ತುಕ್ಕಾಹ ಪ್ರಪತ್ತಿ ಪಣ್ಣುಹಿರದೆನ್ಗಿರ**

---

## ದ್ವಯಮಂತ್ರದ ಉತ್ತರ ಖಂಡಾರ್ಥ.

ಅನಂತರ ದ್ವಯಮಂತ್ರದ ಉತ್ತರಖಂಡಾರ್ಥವನ್ನು ನಿರೂಪಿಸುತ್ತಾರೆ. **ಇಪ್ಪಡಿತೋಟ್ರಿನ ಶರಣಾಗತಿ** ಇತ್ಯಾದಿ–ಹೀಗೆ ಪ್ರಕಾಶಪಡಿಸಿದ ಶರಣಾಗತಿಯು 1 **ತಾವದಾರ್ತಿಸ್ತಥಾವಾಂಛಾ** ಇತ್ಯಾದಿ ಹೇಳಲ್ಪಟ್ಟ ರೀತಿಯಲ್ಲಿ ಸಕಲ ಫಲವನ್ನೂ ಸಾಧಿಸಿಕೊಡುವುದಾದ್ದರಿಂದ, 2) **ತದನ್ಯಃಕೋ ಮಹೋದಾರಃ ಇತ್ಯಾದಿ**– ಅವನನ್ನು ಬಿಟ್ಟು ಬೇರೆ ಯಾರು ಪರಮೋದಾರರು ಇದ್ದಾರೆ, ಎಂಬಂತೆ, ಪರಮೋದಾರನಾದ ಶರಣ್ಯನು **ಅರ್ಥಿತಾರ್ಥ ಪರಿದಾನದೀಕ್ಷಿತನಾಯ್**–ಯಾಚಿಸಿದವರ ಇಷ್ಟಾರ್ಥವನ್ನು ಅನುಬಂಧಿ ಪರ್ಯಂತ ಕೊಡುವುದರಲ್ಲಿ ದೀಕ್ಷಿತ ನಾಗಿ, 3) **ಕೊಳ್ಳಕ್ಕುರೈವಿಲನ್** ಇತ್ಯಾದಿ – ಯಾಚಕರು ದಾನವನ್ನು ಸ್ವೀಕರಿಸುವುದರಿಂದ, ಭಗವಂತನಿಗೆ ಕೊರತೆಯು ಏರ್ಪಡದೆ ಯಾಚಕರು ಅಪೇಕ್ಷಿಸುವುದನ್ನೆಲ್ಲಾ ಕೊಡುವ ದೃಢ ಸಂಕಲ್ಪನಾಗಿ

---

1 . ತಾವದಾರ್ತಿಸ್ತಥಾವಾಂಛಾ ತಾವನ್ಮೋಹಸ್ತಥಾಽಸುಖಮ್ ।
ಯಾವನ್ನಯಾತಿಶರಣಂ ತ್ವಾಮಶೇಷಾಘನಾಶನಮ್ ॥

ವಿಷ್ಣು ಪುರಾಣ 1 - 9 - 73 . ಸಕಲ ಪಾಪಗಳನ್ನೂ ಹೋಗಲಾಡಿಸುವ ಭಗವಂತನನ್ನುಶರಣ ಹೊಂದದೆ ಇರುವ ಪರ್ಯಂತವೇ ನೂತನ ಐಶ್ವರ್ಯವು ಲಭಿಸದೆ ಇರುವುದೂ, ಕಳೆದುಹೋದ ಐಶ್ವರ್ಯದ ಪುನರಪ್ರಾಪ್ತಿಯೂ, ಕೈವಲ್ಯವು ಲಭಿಸದೆ ಇರುವುದೂ, ಭಗವತ್ಪ್ರಾಪ್ತಿಯು ಲಭಿಸದೇ ಇರುವುದೂ ಸಹ ಏರ್ಪಡುತ್ತದೆ. ಆ ಭಗವಂತನನ್ನು ಶರಣಹೊಂದಿದರೆ, ಐಶ್ವರ್ಯ, ಕೈವಲ್ಯ, ಮೋಕ್ಷವೆಂಬ ಸಕಲ ಫಲಗಳೂ ಲಭಿಸುತ್ತವೆ ಎಂದು ತಾತ್ಪರ್ಯ.

2 . ತಸ್ಮಾತ್ತ್ವಮಪಿ ರಾಜೇಂದ್ರ । ನಾರಾಯಣ ಪರೋಭವ ।
ತದನ್ಯಃ ಕೋ ಮಹೋದಾರಃ ಪ್ರಾರ್ಥಿತಂ ದಾತುಮೀಶ್ವರಃ ॥

ಇತಿ ಸಮು ( 31 – 114 ) ಎಲೈರಾಜನೇ ನೀನೂ ನಾರಾಯಣ ಪರಾಯಣನಾಗು. ಅವನನ್ನು ಬಿಟ್ಟರೆ, ಬೇರೆ ಯಾರೂ ನಮ್ಮ ಇಷ್ಟಾರ್ಥವನ್ನು ಕೊಡಲು ಮಹೋದಾರನಲ್ಲ, ಸಮರ್ಥನೂ ಅಲ್ಲ.

(3) ತಿರುವಾಯ್ಮೊೞಿ ( 3 - 9 - 5 ) .
ಕೊಳ್ಳುಮ್ ಪಯನಿಲ್ಲೈ ಕುಪ್ಪೈಕಿಳರ್ತನ್ನ ಶೆಲ್ವತ್ತೈ
ವಳ್ಳಲ್ ಪುಹೞ್ನ್ದು ನುಮ್ ವಾಯ್ಮೈ ಯಿೞಕ್ಕುಮ್ ಪುಲವೀರ್ಹಾಳ್ ।
ಕೊಳ್ಳಕ್ಕುರೈವಿಲನ್ ವೇಂಡಿತ್ತೆಲ್ಲಾಮ್ ತರುಂ ಕೋದಿಲನ್, ಎನ್
ವಳ್ಳಲ್ ಮಣಿವಣ್ಣನ್ ತನ್ನೈ ಕ್ಕವಿ ಶೊಲ್ಲವಮ್ಮಿನೋ ॥

ಎಲೈ ಪಂಡಿತರೇ ಉದಾರನಾದವನನ್ನು ಸ್ತೋತ್ರಮಾಡಿ ಕಸಕ್ಕೆ ಸದೃಶವಾದ ಐಶ್ವರ್ಯವನ್ನು ಪಡೆದು ಏನೂ ಪ್ರಯೋಜನ ವಿಲ್ಲ, ಅದು ಅನಿತ್ಯ. ನಿಮ್ಮ ಸ್ವರೂಪಯೋಗ್ಯತೆಯನ್ನು ಕಳೆದುಕೊಳ್ಳುತ್ತೀರಿ ಅಷ್ಟೇ. ನಾವು ಎಷ್ಟು ಅಪೇಕ್ಷಿಸಿ ಪಡೆದರೂ, ಅಂದರೆ ನಮಗೆ ಎಷ್ಟು ಕೊಟ್ಟರೂ ಭಗವಂತನಿಗೆ ಕೊರತೆ ಏರ್ಪಡದು, ನಮ್ಮ ಅಪೇಕ್ಷಿತಾರ್ಥವನ್ನೆಲ್ಲಾ ಕೊಡುವ ಮಹೋದಾರನು, ದೋಷರಹಿತನು, ಅಹಿತವಾದವನ್ನು ಕೊಡದೆ ರಕ್ಷಿಸುವವನು ಎಂದರ್ಥ. ಅಂಥಹ ರತ್ನದಂತೆ ಪರಮ ಸುಲಭನಾದ, ಮತ್ತು ಸುಂದರಾಂಗನಾದ ಭಗವಂತನನ್ನು ಸ್ತೋತ್ರಮಾಡಲು ಬನ್ನಿ.

**ಅಪೇಕ್ಷೈಯಿಲೇ ಮಹೋದಾರನಾನ ಶರಣ್ಯನುಕ್ಕುಮ್ ಸರ್ವೋತ್ಕೃಷ್ಟ ವಿಷಯಮಾನ ಇವ್ವಶೀಕರಣ ವಿಶೇಷತ್ತುಕ್ಕುಮ್ ಶೇಷತೈಕರಸನಾನ ತನ್ ಸ್ವರೂಪತ್ತುಕ್ಕುಮ್ ಅನುರೂಪಮಾನ ಫಲವಿಶೇಷತ್ತೈ ಉತ್ತರಖಂಡಮ್, 1) "ತನಕ್ಕೇಯಾಹವೆನ್ನೈ ಕ್ಕೊಳ್ಳುಮೀದೇ" ಎನ್ಗಿರಪಡಿಯೇ, ಸಮಸ್ತ ವಿರೋಧಿ ನಿವೃತ್ತಿ ಪರ್ಯನ್ತಮಾಹ ಪ್ರಾರ್ಥಿಕ್ಕಿರದು. ಇತ್ತಾಲೇ ಅನನ್ಯ ಪ್ರಯೋಜನತ್ವಮುಮ್ ಸಿದ್ಧಿಕ್ಕಿರದು.**

### ಉತ್ತರಖಂಡಸ್ಥ ನಾರಾಯಣ ಶಬ್ದಾರ್ಥಃ

**ಇವ್ವಿಡತ್ತಿಲೇ ಸವಿಶೇಷಣಮಾನ ನಾರಾಯಣ ಶಬ್ದಮ್, ಪ್ರಾಪ್ಯತ್ತೈಕ್ಕು ಅನುರೂಪಮಾನ ಸ್ವಾಮಿತ್ವಾದಿಹಳುಮ್, ಅನಂತಗುಣ ವಿಭೂತಿ ವಿಶಿಷ್ಟನಾನ ಸ್ವಾಮಿಯಿನುಡೈಯ ಸರ್ವಪ್ರಕಾರ ನಿರತಿಶಯ ಭೋಗ್ಯತೈಯುಮ್ ಮಾಹಿರ ಆಕಾರಂಗಳೈ ಯಥಾಪ್ರಮಾಣಮ್ ಪ್ರಾಧಾನ್ಯೇನ ಕಾಟ್ಟುಹಿರದು. ಇಪ್ಪಡಿ ಉಭಯ ವಿಭೂತಿ ವಿಶಿಷ್ಟನ್ ಪ್ರಾಪ್ಯಮಾಯಿರುಕ್ಕಚ್ಚೆಯ್‌ದೇಯುಮ್ ಆತ್ಮಹವಿರುದ್ದೇಶ್ಯರುಮಾಯ್,**

---

ಸಿದ್ಧನಾಗಿರುವ್ರದರಿಂದ, ಇಲ್ಲಿ ಯಾವ ಫಲಕ್ಕಾಗಿ ಪ್ರಪತ್ತಿಯನ್ನು ಮಾಡಬೇಕೆಂದು ಕೇಳಿದರೆ, ಅದನ್ನು **ಮಹೋದಾರನಾನ** ಎಂದಾರಂಭಿಸಿ ವಿವರಿಸುತ್ತಾರೆ. ಆದಾಗಿ ಪರಮೋದಾರನಾದ ಶರಣ್ಯನಿಗೂ, ಸರ್ವೋತ್ಕೃಷ್ಟವಾದ ಈ ಪ್ರಪತ್ತಿರೂಪ ವಶೀಕರಣಕ್ಕೂ, ಭಗವಂತನಿಗೆ ಶೇಷ ವೃತ್ತಿ ಮಾಡುವುದರಲ್ಲಿಯೇ ರುಚಿಯನ್ನುಳ್ಳ, ದಾಸನಾದ ತನ್ನ ಸ್ವರೂಪಕ್ಕೂ ಉಚಿತವಾದ ಫಲ ವಿಶೇಷವನ್ನು, ದ್ವಯಮಂತ್ರದ ಉತ್ತರಖಂಡವು 1) **ತನಕ್ಕೇಯಾಹ ಎನ್ನೈಕ್ಕೊಳ್ಳುಮೀದೇ**–ತನ್ನ ಕೈಂಕರ್ಯಕ್ಕೋಸ್ಕರವಾಗಿಯೇ ನನ್ನನ್ನು ಕಿಂಕರನಾಗಿ ಸ್ವೀಕರಿಸಬೇಕೆಂಬುದೇ, ಇಲ್ಲಿ ಸಮಸ್ತ ವಿರೋಧಿಪರ್ಯಂತ ಪ್ರಾರ್ಥಿಸಲ್ಪಡುತ್ತದೆ. **ಇತ್ತಾಲೇ ಅನನ್ಯ ಪ್ರಯೋಜನತ್ವಮುಮ್** ಇತ್ಯಾದಿ–ಪೂರ್ವ ಖಂಡದಲ್ಲಿ ಅನನ್ಯೋಪಾಯತ್ವವು ಸಿದ್ಧಿಸುವಂತೆ, ಉತ್ತರ ಖಂಡದಲ್ಲಿ ಪ್ರಾರ್ಥನೆಯಿಂದ ಅನನ್ಯ ಪ್ರಯೋಜನತ್ವವು, ಅಂದರೆ ಭಗವಂತನೇ ಉಪಾಯವೆಂಬಂತೆ ಭಗವಂತನೇ ಪ್ರಾಪ್ಯನೆಂಬುದು ಸಿದ್ಧಿಸುತ್ತದೆ.

### ಉತ್ತರ ಖಂಡದ ನಾರಾಯಣ ಶಬ್ದಾರ್ಥ.

**ಇವ್ವಿಡತ್ತಿಲ್**–ಉತ್ತರ ಖಂಡದಲ್ಲಿ **ಸವಿಶೇಷಣಮಾನ ನಾರಾಯಣ ಶಬ್ದಮುಮ್** ಇತ್ಯಾದಿ–ಲಕ್ಷ್ಮೀ ವಿಶೇಷಣ ವಿಶಿಷ್ಟವಾದ ನಾರಾಯಣ ಶಬ್ದವು ಪ್ರಾಪ್ಯತ್ವಕ್ಕೆ ಅನುಗುಣವಾದ ಸ್ವಾಮಿತ್ವ, ಆದಿ ಶಬ್ದದಿಂದ ಲಕ್ಷ್ಮೀ ವಿಶಿಷ್ಟತ್ವ, ಸುಕುಮಾರ,ಸುಂದರ ವಿಗ್ರಹವತ್ತ್ವಾದಿಗಳನ್ನೂ ಅನಂತ ಗುಣ ವಿಭೂತಿ ವಿಶಿಷ್ಟನಾದ, ಸ್ವಾಮಿಯ ಸರ್ವ ಪ್ರಕಾರ ನಿರತಿಶಯ ಭೋಗ್ಯತ್ವವೆಂಬ ಆಕಾರಗಳನ್ನೂ "ವಿರಾಜಮಾನೋಜ್ವಲ ಪೀತವಾಸಸಂ" ಎಂಬ ಪ್ರಮಾಣದಂತೆ ಪ್ರಧಾನವಾಗಿ ತೋರಿಸಿ ಕೊಡುತ್ತದೆ.

### ಉತ್ತರ ಖಂಡದಲ್ಲಿ "ಶ್ರೀಮತ್" ಶಬ್ದಾರ್ಥ.

ಅನಂತರ ಶ್ರೀಮತ್ ಶಬ್ದಕ್ಕೆ ಪ್ರಯೋಜನವನ್ನು **ಇಪ್ಪಡಿ ಉಭಯವಿಭೂತಿ ವಿಶಿಷ್ಟನ್**ಎಂದಾರಂಭಿಸಿ ತಿಳಿಸುತ್ತಾರೆ

---

(1) ತಿರುವಾಯ್ ಮೊಳಿ 2-9-4.

ಎನಕ್ಕೇ ಯಾಳ್‌ಶೆಯ್ ಎಕ್ಕಾಲತ್ತುಮೆನ್ರು * ಎನ್
ಮನಕ್ಕೇವಂದು, ಇಡೈವೀಡಿನ್ರಿ ಮನ್ನಿ. ।
ತನಕ್ಕೇಯಾಹ ಎನ್ನೈಕ್ಕೊಳ್ಳುಮೀದೇ *
ಎನಕ್ಕೇ ಕಣ್ಣನೈ ಯಾನ್‌ಕೊಳ್ ಶಿರಪ್ಪೇ ॥

ನನಗೇ ಎಲ್ಲಾಕಾಲದಲ್ಲಿಯೂ ಕೈಂಕರ್ಯವನ್ನು ಮಾಡೆಂದು, ಮಧ್ಯೆ ಬಿಟ್ಟು ಹೋಗುವುದೆಂಬುದು ಇಲ್ಲದೆ ನನ್ನ ಮನಸ್ಸಿನಲ್ಲೇ ಸ್ಥಿರವಾಗಿ ನೆಲಸಿ, ತನ್ನ ಪ್ರಯೋಜನಕ್ಕಾಗಿಯೇ ನನ್ನನ್ನು ಸ್ವೀಕರಿಸಬೇಕೆಂಬುದೇ ನಾನು ಭಗವಂತನಿಂದ ಪಡೆಯುವ ಭಾಗ್ಯ.

ಷತ್ವ ಪ್ರತಿಸಂಬಂಧಿಹಳುಮಾಯ್, ಅದಡಿಯಾಹವರುಹಿರ ಕೈಙ್ಕರ್ಯತ್ತುಕ್ಕುಮ್ ಇಲಕ್ಕಾಯ್ ಕೊಂಡು ಪ್ರಧಾನ ಪ್ರಾಪ್ಯರುಮಾಯಿರುಪ್ಪಾರ್ ಇವ್ವಿಶಿಷ್ಟ ದಂಪತಿಗಳೆನ್ರು ತೋತ್ತುಹೈಕ್ಕಾಹ ಇಙ್ಗು ಶ್ರೀಮಚ್ಛಬ್ದಮ್. ಇನ್ವರ್ಥಂ 1) "ವೈಕುಂಠೇತು ಪರೇಲೋಕೇ ಶ್ರಿಯಾಸಾರ್ಧಂ ಜಗತ್ಪತಿಃ" 2) "ತಯಾ ಸಹಾಸೀನಮನನ್ತಭೋಗಿನಿ" 3) "ಆತ್ಮಾನುರೂಪಯಾ ಶ್ರಿಯಾ ಸಹಾಸೀನಮ್" 4) "ಒಣ್ಡೊಡಿಯಾಳ್ ತಿರುಮಹಳುಮ್ ನೀಯುಮೇ ನಿಲಾನಿರ್ಪ" 5) "ಕೋಲತ್ತಿರುಮಾಮಹಳೋಡುನ್ನೈ" ಇತ್ಯಾದಿಗಳಿಲುಮ್ ವಿವಕ್ಷಿತಮ್. ಇಂಗುತ್ತೈ ಶ್ರೀ ಶಬ್ದಮ್

---

ಆದಾಗಿ, ಹೀಗೆ ಉಭಯವಿಭೂತಿ ವಿಶಿಷ್ಟನು ಪ್ರಾಪ್ಯನು. ಅಂದರೆ ನಾರಾಯಣನು ಪ್ರಾಪ್ಯನೆಂದರೆ, ನಾರ ಶಬ್ದಾರ್ಥವಾದ ಉಭಯ ವಿಭೂತಿ ವಿಶಿಷ್ಟನು ಮತ್ತು ತದಂತರ್ಗತ ಶ್ರೀ ವಿಶಿಷ್ಟನು ಪ್ರಾಪ್ಯನೆಂದು, ಏರ್ಪಟ್ಟದೂ, ಆತ್ಮಹವಿರುದ್ದೇಶ್ಯರುಮಾಯ್ ಇತ್ಯಾದಿ-ಆತ್ಮಾ ಎಂಬ ಹವಿಸ್ಸಿಗೆ ಉದ್ದೇಶ್ಯಭೂತರಾಗಿಯೂ, ಇದರಿಂದ ಉಪಾಯತ್ವದಲ್ಲಿ ಪ್ರಧಾನೋದ್ದೇಶ್ಯಭೂತರೇ, ಶೇಷತ್ವ ಪ್ರತಿಸಂಬಂಧಿಹಳುಮಾಯ್ – ಇತ್ಯಾದಿ ಶೇಷಿಗಳಾಗಿ, ಅದಡಿಯಾಹವರುಹಿರ ಕೈಂಕರ್ಯತ್ತುಕ್ಕುಮ್ ಇಲಕ್ಕಾಯ್ ಇತ್ಯಾದಿ–ತನ್ಮೂಲಕವಾಗಿ ಏರ್ಪಡುವ ಕೈಂಕರ್ಯಕ್ಕೂ ಲಕ್ಷ್ಯಭೂತರಾಗಿದ್ದುಕೊಂಡು ಪ್ರಧಾನ್ಯ ಪ್ರಾಪ್ಯರುಗಳಾಗಿಯೂ ಇರುವರು, ಇವ್ವಿಶಿಷ್ಟ ದಂಪತಿಹಳೆನ್ರು ಇತ್ಯಾದಿ – ಈ ಲಕ್ಷ್ಮೀ ವಿಶಿಷ್ಟನಾರಾಯಣನೆಂಬ ದಂಪತಿಗಳು ಎಂದು ತೋರುವುದಕ್ಕಾಗಿ ಇಲ್ಲಿ ಶ್ರೀಮತ್ ಶಬ್ದವು ಪ್ರಯೋಗಿಸಲ್ಪಟ್ಟಿದೆ. ಇನ್ವರ್ಥಮ್–ಇತ್ಯಾದಿ ಈ ವಿಶಿಷ್ಟ ದಂಪತಿಗಳೇ ಪ್ರಧಾನ ಪ್ರಾಪ್ಯರೆಂಬುದು 1) ವೈಕುಂಠೇತು ಪರೇಲೋಕೇ 2) ತಯಾಸಹಾಸೀನಂ 3) ಆತ್ಮಾನುರೂಪಯಾ ಶ್ರಿಯಾ 4) ಒಂಡೊಡಿಯಾಳ್ ತಿರುಮಹಳುಮ್– 5) ಕೋಲತ್ತಿರುಮಾಮಹಳೋಡುನ್ನೈ ಇತ್ಯಾದಿ ಪ್ರಮಾಣ

---

(1) ಆಸ್ತೇ ವಿಷ್ಣುರಚಿಂತ್ಯಾತ್ಮಾ ಭಕ್ತೈರ್ಭಾಗವತೈಸ್ಸಹ ॥.

ಇದು ಉತ್ತರಾರ್ಧ. ಶ್ರೀವೈಕುಂಠವೆಂಬ ಉತ್ತಮಸ್ಥಾನದಲ್ಲಿ ಅಚಿಂತ್ಯಮಹಿಮನಾದ ವಿಷ್ಣುವು ಲಕ್ಷ್ಮಿಯೊಡಗೂಡಿ ಜಗತ್ತಿಗೆ ಶೇಷಿಯಾಗಿದ್ದಾನೆ. ನಿತ್ಯಸೂರಿಗಳೂ ಮುಕ್ತಾತ್ಮರೂ ಸಹ ಅಲ್ಲಿದ್ದಾರೆ – ಲೈಂಗಪುರಾಣ.

(2) ತಯಾಸಹಾಸೀನಮನಂತ ಭೋಗಿನಿ ಪ್ರಕೃಷ್ಟ ವಿಜ್ಞಾನ ಬಲೈಕಧಾಮನಿ ।
ಫಣಾಮಣಿ ವ್ರಾತಮಯೂಖ ಮಂಡಲ ಪ್ರಕಾಶಮಾನೋದರ ದಿವ್ಯಧಾಮನಿ ॥ ಆಳವಂದಾರ್ ಸ್ತೋತ್ರ-39

ಪ್ರಕೃಷ್ಟ ಜ್ಞಾನಬಲಗಳಿಂದ ಕೂಡಿದ ಆದಿಶೇಷನ ಮಡಿಲಲ್ಲಿ ಲಕ್ಷ್ಮಿಯೊಡಗೂಡಿ ಆ ಭಗವಂತನು ಶ್ರೀ ವೈಕುಂಠದಲ್ಲಿ ಕುಳಿತಿದ್ದಾನೆ ಆ ಆದಿಶೇಷನ ಹೆಡೆಗಳಲ್ಲಿರುವ ರತ್ನಗಳ ಕಿರಣ ಸಮೂಹಗಳ ಕಾಂತಿಯಿಂದ ಆ ಆಸನವೆಲ್ಲಾ ಪ್ರಕಾಶಮಾನವಾಗಿದೆ,

3) ವೈಕುಂಠಗದ್ಯ-ಶೀಲರೂಪಗುಣ ವಿಲಾಸಾದಿಭಿರಾತ್ಮಾನುರೂಪಯಾ ಶ್ರಿಯಾ ಸಹಾಸೀನಂ..........ಭಗವಂತಂ ನಾರಾಯಣಂ ಧ್ಯಾನ ಯೋಗೇನ ದೃಷ್ಟ್ವಾ-ಶೀಲರೂಪ ಗುಣಾದಿಗಳಿಂದ ತನಗೆ ಅನುರೂಪಳಾದ ಲಕ್ಷ್ಮಿಯೊಡಗೂಡಿ ಕುಳಿತಿರುವ ಭಗವಂತನಾದ ನಾರಾಯಣನನ್ನು ಧ್ಯಾನಯೋಗದಿಂದ ಸಾಕ್ಷಾತ್ತಾಗಿ ನೋಡಿ.

4) ತಿರುವಾಯ್ ಮೊಳಿ (4-9-10) 975ನೇ ಪುಟ ನೋಡಿ.

5) ತಿರುವಾಯ್ ಮೊಳಿ (6-9-3)
ಞಾಲತ್ತೂಡೇ ನಡಂದುಮ್, ನಿನ್ರುಮ್ ಕಿಡಂದಿರುಂದುಮ್
ಶಾಲಪ್ಪಲನಾಳ್ ಉಹಂದೋರುಯಿರ್‌ಹಳ್ ಕಾಪ್ಪಾನೇ ।
ಕೋಲತ್ತಿರುಮಾಮಹಳೋಡುನ್ನೈಕ್ಕೂಡಾದೇ
ಶಾಲಪ್ಪಲನಾಳ್, ಅಡಿಯೇನ್ ಇನ್ನುಂ ತಳರ್‌ವೇನೋ ॥

ಈ ಭೂಮಿಯಲ್ಲಿ ಅವತರಿಸಿ ನಡೆದು, ನಿಂತು, ಮಲಗಿ ಬಹಳ ಕಾಲದಿಂದಲೂ ಕಟಾಕ್ಷಿಸಿ, ಜೀವರನ್ನು ಕಾಪಾಡಿ ಸಂತೋಷಪಡುವ ಲಕ್ಷ್ಮಿಯೊಡಗೂಡಿದ ನಿನ್ನನ್ನು, ಇನ್ನೂ ಬಹಳ ಕಾಲವಾದರೂ. ಪಡೆಯದೆ ನಾನು ಕಷ್ಟ ಪಡುತ್ತಿದ್ದೇನೆ.

"ಶೃಣಾತಿ ನಿಖಿಲಾನ್ ದೋಷಾನ್ ಶ್ರೀಣಾತಿ ಚ ಗುಣೈರ್ಜಗತ್ ।
ಶ್ರೀಯತೇ ಚಾಖಿಲೈರ್ನಿತ್ಯಂ ಶ್ರಯತೇ ಚ ಪರಂಪದಮ್ ।
ಶ್ರಯನ್ತೀಂ ಶ್ರೀಯಮಾಣಾಂ ಚ ಶೃಣಂತೀಂ ಶೃಣ್ವತೀಮಪಿ ।" ಇತ್ಯಾದಿಹಳಿರ್ಪಡಿಯೇ ಅನೇಕಾರ್ಥಂಗಳ್ ಉಂಡೇಯಾಹಿಲುಮ್, "ಶ್ರೀಞ್ ಸೇವಾಯಾಮ್" ಎನ್ನಿಱ ಧಾತುವಿಲೇ ಸೇವ್ಯತ್ವಾದಿಹಳೈ ಚೊಲ್ಲಿಕ್ಕೊಂಡು ಕೈಙ್ಕರ್ಯ ಪ್ರತಿಸಂಬಂಧಿತ್ವಪರಮ್.

### ಅತ್ರತ್ಯ ನಾರಾಯಣ ಶಬ್ದಸ್ಯ ಪ್ರಯೋಜನಮಾಹ

ಶ್ರೀಮತೇ ಎನ್ನಿಱ ಶಬ್ದಮ್ ತನ್ನಾಲೇ ವಿಶಿಷ್ಟಮಾನ ಪ್ರತಿಸಂಬಂಧಿ ತೋೞ್ತ್ತೇಯಾಹಿಲುಮ್, ಸರ್ವವಿಧ ಕೈಙ್ಕರ್ಯತ್ತುಕ್ಕುಮ್ ಪ್ರಯೋಜಕಮಾನ ಪ್ರೀತಿವಿಶೇಷತ್ತೈಪ್ಪಿರಪ್ಪಿಕ್ಕುಮ್ ಸಂಬಂಧ ಗುಣ ವಿಭೂತ್ಯಾದಿ ಪರಿಪೂರ್ಣಾನುಭವ ಸಿದ್ಧಿಕ್ಕಾಹ ಇಙ್ಗು ನಾರಾಯಣಶಬ್ದಮ್ ಪ್ರಯುಕ್ತಮಾಹಿಱದು.

### ಅಥ ಚತುರ್ಥ್ಯರ್ಥಮಾಹ

ಇಙ್ಗು ಚತುರ್ಥೀ ತಾದರ್ಥ್ಯ ಮುಖತ್ತಾಲೇ ಕೈಙ್ಕರ್ಯತ್ತೈ ಲಕ್ಷಣಿಕ್ಕಿಱದು. ತಾದರ್ಥ್ಯಮಾತ್ರಮ್ ನಿತ್ಯ

---

ವಾಕ್ಯಗಳೆಲ್ಲಿಯೂ, ಲಕ್ಷ್ಮೀ ವಿಶಿಷ್ಟ ದಂಪತಿಗಳೇ ಪ್ರಾಪ್ಯರೆಂಬುದು ವಿವಕ್ಷಿತ. ಇಂಗುಟ್ರೈ ಶ್ರೀ ಶಬ್ದಮ್ ಶೃಣಾತಿ ನಿಖಿಲಾನ್ ದೋಷಾನ್ ಇತ್ಯಾದಿ – ಇಲ್ಲಿರುವ ಶ್ರೀ ಶಬ್ದಕ್ಕೆ ಮೋಕ್ಷವಿರೋಧಿ ಸಕಲ ಪಾಪಗಳನ್ನೂ ಹೋಗಲಾಡಿಸುವವಳು, ತನ್ನ ಗುಣಗಳಿಂದ ಜಗತ್ತನ್ನು ಕಾಪಾಡುತ್ತಾಳೆ (ಉಪಾಯತ್ವ) ಎಲ್ಲರಿಂದಲೂ ಆಶ್ರಯಿಸಲ್ಪಟ್ಟು ಭಗವಂತನನ್ನು ಆಶ್ರಯಿಸುತ್ತಾಳೆ (ಪುರುಷಕಾರತ್ವ) ಶ್ರಯಂತೀ ಶ್ರೀಯಮಾಣಾಂಚ ಇತ್ಯಾದಿ–ಭಗವಂತನನ್ನು ಆಶ್ರಯಿಸುವವಳು, ಜೀವರಿಂದ ಆಶ್ರಯಿಸಲ್ಪಡುವವಳು ಆರ್ತರ ಕಷ್ಟಗಳನ್ನು ಕೇಳಿ ಭಗವಂತನಿಗೆ ತಿಳಿಸುವವಳೂ ಇತ್ಯಾದಿಯಾಗಿ, ಅನೇಕಾರ್ಥಗಳಿದ್ದರೂ ಶ್ರೀ ಞ್ ಸೇವಾಯಾಂ ಎಂಬ ಧಾತುವಿನಲ್ಲಿ ಸೇವ್ಯತ್ವಾದಿಗಳನ್ನು ಹೇಳಿಕೊಂಡು ಕೈಂಕರ್ಯ ಪ್ರತಿಸಂಬಂಧಿತ್ವದಲ್ಲಿ ಅಂದರೆ ಕೈಂಕರ್ಯಗಳನ್ನು ಸ್ವೀಕರಿಸುವವಳು ಎಂಬ ಅರ್ಥದಲ್ಲಿ ದೃಷ್ಟಿ.

### ನಾರಾಯಣ ಶಬ್ದದ ಪ್ರಯೋಜನ.

ಶ್ರೀಮತೇ ಎನ್ಱಿಱ ಶಬ್ದಂ ತನ್ನಾಲೇ ಇತ್ಯಾದಿ–ಶ್ರೀಮತೇ ಎಂಬ ಶಬ್ದದಿಂದ ಲಕ್ಷ್ಮೀ ವಿಶಿಷ್ಟನಾದ ನಾರಾಯಣನು ಕೈಂಕರ್ಯ ಪ್ರತಿಸಂಬಂಧಿಯಾಗಿ ತೋರಿದರೂ ಸರ್ವವಿಧ ಕೈಂಕರ್ಯಕ್ಕೂ ಪ್ರಯೋಜಕ ಮಾನ–ಪ್ರೇರಕವಾದ ಪ್ರೀತಿ ವಿಶೇಷವನ್ನು ಉಂಟುಮಾಡುವ ಗುಣ ವಿಗ್ರಹ, ಸಂಬಂಧ ವಿಭೂತಿ ವ್ಯಾಪಾರಗಳನ್ನು ಮುಕ್ತಕಂಠವಾಗಿ ಹೇಳುವುದರಿಂದ ಏತದ್ವಿಶಿಷ್ಟ ಪರಿಪೂರ್ಣ ಭಗವದನುಭವ ಸಿದ್ಧಿಗೋಸ್ಕರ ಇಲ್ಲಿ "ನಾರಾಯಣ" ಶಬ್ದವು ಪ್ರಯುಕ್ತವಾಗಿದೆ. ಮೂಲಮಂತ್ರಾಧಿಕಾರದಲ್ಲಿ ಹೇಳಿರುವಂತೆ ಪ್ರಾಪ್ಯತ್ವಕ್ಕೆ ಉಪಯುಕ್ತವಾದ ಅನಂತ ಗುಣ ವಿಶಿಷ್ಟವಾದ ಈ ನಾರಾಯಣ ಶಬ್ದವು. ಭಗವಚ್ಛಾಸ್ತ್ರ ಸ್ಮೃತೀತಿಹಾಸ ಪುರಾಣಗಳಲ್ಲಿ ಉಪಬೃಂಹಿತಗಳಾದ ಅನೇಕ ಶ್ರುತಿನಿಕರಗಳಿಂತ ವರ್ಣಿತವಾದ ಅಪಾರಮಹಿಮೆಯಿಂದ ಕೂಡಿದುದು ಎಂದರ್ಥ.

### ಚತುರ್ಥೀ ವಿಭಕ್ತ್ಯರ್ಥ.

ಕೈಂಕರ್ಯಪ್ರತಿ ಸಂಬಂಧಿಗಳಾಗಿ ಲಕ್ಷ್ಮೀ ನಾರಾಯಣರನ್ನು ಈ ಉತ್ತರ ಖಂಡದಲ್ಲಿ ಹೇಳಿರುತ್ತದೆ ಎಂಬುವಕ್ಕೆ ಏನು ಗಮಕವೆಂಬುದನ್ನು ಇಂಗು ಚತುರ್ಥೀ ತಾದರ್ಥ್ಯಮುಖತ್ತಾಲೇ ಇತ್ಯಾದಿ ತಿಳಿಸುತ್ತಾರೆ. 'ಶ್ರೀಮತೇ ನಾರಾಯಣಾಯ' ಎಂಬಲ್ಲಿ ನಾರಾಯಣ ಪದದ ಮೇಲೆ 'ಆಯ' ಎಂಬ ತಾದರ್ಥ್ಯ ಚತುರ್ಥೀ ವಿಭಕ್ತಿಯಿಂದ ತಾದರ್ಥ್ಯಮುಖತ್ತಾಲೇ–ಶೇಷತ್ವವನ್ನು ದ್ವಾರೀಕರಿಸಿ ಕೈಂಕರ್ಯತ್ತೈ ಲಕ್ಷಣಿಕ್ಕಿಱದು–ಲಕ್ಷಣಯಾ ಕೈಂಕರ್ಯವನ್ನು

**ಮಾಹೈಯಾಲೇ 1) "ತಚ್ಛೇಷತ್ವಾನು ಸಂಧಾನಪೂರ್ವ ತಚ್ಛೇಷವೃತ್ತಿಕಃ" "ಅಹಂ ಸರ್ವಂ ಕರಿಷ್ಯಾಮಿ"** ಇತ್ಯಾದಿಹಳಿರ್‌ಪಡಿಯೇ ಪರಿಪೂರ್ಣಾನುಭವ **ಪೂರ್ವಕಮಾನ ಕೈಙ್ಕರ್ಯಮ್ ಪ್ರಾರ್ಥನೀಯಮ್**

**ಶರಣಾಗತನಾವ್ಪೋದು ಶರಣ್ಯನ್ಯೆ ಅಭಿಮತ ಪ್ರಾರ್ಥನೈ ಪಣ್ಣುಹಿರನಾಹೈಯಾಲೇ ಇಙ್ಗೇ "ಭವೇಯಮ್"** ಎನ್ರೊರುಪದಮ್ ಅಧ್ಯಾಹಾರ್ಯಮ್.

**ಅಥ ನಮಶ್ಶಬ್ದಾರ್ಥಃ**

ಇಪ್ಪಡಿ **ಪ್ರಾಧಾನ್ಯತ್ತಾಲೇ** ಮುರ್ಪಡ ಇಷ್ಟಪ್ರಾಪ್ತಿಯೈ **ಅಪೇಕ್ಷಿತ್ತು** ಇದಕ್ಕಾಹ **ಅನಂತರಮ್** ನಮಸ್ಸಾಲೇ ಸರ್ವಾನಿಷ್ಟ ನಿವೃತ್ತಿಯೈಯುಮ್ **ಪ್ರಾರ್ಥಿಕ್ಕಿರದು.**

**ನಮಶ್ಶಬ್ದಾರ್ಥ ಬೋಧಿತ ವಿರೋಧಿಸ್ವರೂಪಂ ತನ್ನಿವೃತ್ತಿ ಪ್ರಕಾರಂಚ ಶ್ಲೋಕೇನ ಸಂಗೃಹ್ಣಾತಿ.**

**ಅಪ್ರಾಪ್ತಿತಃ ಪರಿಹರನ್ ಸ್ವಪರೈಸ್ಸ್ವರಕ್ಷಾಂ ತಾದರ್ಥ್ಯಧೀ ಪರಿಹೃತ ಸ್ವಪರಾರ್ಥಭಾವಃ।**
**ಅನ್ಯೋಪಭೋಗ ವಿರಹಾದನಘಃ ಪ್ರಪನ್ನೋ ಭುಂಕ್ತೇ ಸ್ವಭೋಗ ಮಖಿಲಂ ಪತಿಭೋಗಶೇಷಮ್॥**

---

ಬೋಧಿಸುತ್ತದೆ. **ತಾದರ್ಥ್ಯಮ್** ಇತ್ಯಾದಿ – ತಾದರ್ಥ್ಯವೆಂದರೆ–ಅವನ (ಲಕ್ಷ್ಮೀಪತಿಯ) ಪ್ರಯೋಜನಕ್ಕಾಗಿಯೇ ಶೇಷಭೂತನೆಂದರ್ಥ. ಈ ಶೇಷತ್ವವು ನಿತ್ಯವಾದ್ದರಿಂದ 1) **ತಚ್ಛೇಷತ್ವಾನು ಸಂಧಾನ** ಇತ್ಯಾದಿ– ಆ ಭಗವಂತನಿಗೆ ಶೇಷಭೂತನೆಂಬ ಅನುಸಂಧಾನ ಪೂರ್ವಕವಾಗಿ ಅವನಿಗೆ ಎಲ್ಲಾ ಕೈಂಕರ್ಯವನ್ನೂ ಮಾಡುತ್ತೇನೆ, ಇತ್ಯಾದಿಗಳಲ್ಲಿ ಹೇಳಿರುವಂತೆ ಇಲ್ಲಿ ಪರಿಪೂರ್ಣವಾದ ಅನುಭವ ಪೂರ್ವಕವಾದ ಕೈಂಕರ್ಯವು ಪ್ರಾರ್ಥನೀಯ.

**ಶರಣಾಗತ ನಾವ್ಪೋದು** ಇತ್ಯಾದಿ–ಶರಣಾಗತಿಯನ್ನು ಮಾಡುವಾಗ ಶರಣ್ಯನನ್ನು ಕುರಿತು ಅಭಿಮತ ಫಲವನ್ನು ಪ್ರಾರ್ಥಿಸುತ್ತಾನಾದ್ದರಿಂದ ಇಲ್ಲಿ "ಭವೇಯಂ" ಎಂದೊಂದು ಪದವು ಅಧ್ಯಾಹಾರ್ಯವು.

**ನಮಶ್ಶಬ್ದಾರ್ಥ.**

**ಇಪ್ಪಡಿ ಪ್ರಾಧಾನ್ಯತ್ತಾಲೇ** ಇತ್ಯಾದಿ – ಹೀಗೆ ಪ್ರಧಾನವಾದ್ದರಿಂದ ಮೊದಲು ಇಷ್ಟ ಪ್ರಾಪ್ತಿಯನ್ನು ಅಪೇಕ್ಷಿಸಿ, ಈ ಇಷ್ಟಪ್ರಾಪ್ತಿಗೆ ಶೇಷವಾಗಿ ಅನಂತರ '**ನಮಸ್ಸಾಲೇ**'–ನಮಶ್ಶಬ್ದದಿಂದ ಸರ್ವಾನಿಷ್ಟ ನಿವೃತ್ತಿಯೂ ಪ್ರಾರ್ಥಿಸಲ್ಪಡುತ್ತದೆ. ಅನಿಷ್ಟವು ಪ್ರಕೃತಿ ಸಂಬಂಧ, ಅದರಿಂದ ಕೂಡಿದ **ಸಾರ್ಥಕರ್ತೃತ್ವ** ಸ್ವಾಧೀನ ಕರ್ತೃತ್ವಾಭಿಮಾನರೂಪವಾದದ್ದು. ಅದರ ನಿವೃತ್ತಿಯು ಪ್ರಾರ್ಥಿಸಲ್ಪಡುತ್ತದೆ. ಅಥವಾ ಸ್ವರಕ್ಷಣ ವಿರೋಧಿರೂಪ ಅನಿಷ್ಟ ನಿವೃತ್ತಿಯೂ ಸ್ವಶೇಷತ್ವ ಜ್ಞಾನ ವಿರೋಧಿರೂಪವಾದ ಅನಿಷ್ಟ ನಿವೃತ್ತಿಯೂ ಸ್ವಾಮಿಕೈಂಕರ್ಯ ವಿರೋಧಿರೂಪಾನಿಷ್ಟ ನಿವೃತ್ತಿಯೂ ಪ್ರಾರ್ಥಿಸಲ್ಪಡುತ್ತದೆ. ಸರ್ವಾನಿಷ್ಟ ನಿವೃತ್ತಿಯೇ ಮೋಕ್ಷಾಖ್ಯವಾದ ಪುರುಷಾರ್ಥತ್ವವಾದರೂ, ಆ ಮೋಕ್ಷವು ಮತಾಂತರಸ್ಥರು ಹೇಳುವಂತೆ ಪಾಷಾಣ ಕಲ್ಪವಲ್ಲವೆಂಬುದನ್ನು ತಿಳಿಯಪಡಿಸಲು, **ಶ್ರೀಮತೇ ನಾರಾಯಣಾಯ** ಭವೇಯಂ' ಎಂದು ಭಗವದನುಭವ ಪರಿವಾಹ ಪುರಸ್ಸರವಾದ ಕೈಂಕರ್ಯವೆಂದು ತಿಳಿಸಿ ಅದಕ್ಕೋಸ್ಕರ ಅನಂತರ ಅನಿಷ್ಟ ನಿವೃತ್ತಿಯ ಪ್ರಾರ್ಥನೆಯು ಉಚಿತತರ ವೆಂಬುದು ಭಾವ.

ಅನಂತರ **ನಮ** ಶ್ಶಬ್ದಾರ್ಥವನ್ನು '**ಅಪ್ರಾರ್ಥಿತಃ ಪರಿಹರನ್**' ಎಂಬ ಕಾರಿಕೆಯಿಂದ ಸಂಗ್ರಹಿಸುತ್ತಾರೆ ಅದಾಗಿ ಸ್ವಪರೈಃ – ತನ್ನಿಂದಲೂ, ಇತರರಿಂದಲೂ ಸ್ವರಕ್ಷಾಂ – ತನ್ನ ರಕ್ಷಣವನ್ನು, **ಅಪ್ರಾಪ್ತಿತಃ** – ಪಡೆಯಲಾಗದೆ ಇರುವುದರಿಂದಲೇ, **ಪರಿಹರನ್** – ಪರಿಹರಿಸುವವನಾಗಿ ಇದರಿಂದ **ಅನನ್ಯರಕ್ಷ್ಯತ್ವರೂಪ** ಪೂರ್ವಖಂಡಾರ್ಥವು ಹೇಳಲ್ಪಟ್ಟಿತು. **ತಾದರ್ಥ್ಯಧೀ** ಭಗವದೇಕ ಶೇಷತ್ವವೆಂಬ ಬುದ್ಧಿಯಿಂದ **ಪರಿಹೃತ** – ಪರಿಹರಿಸಲ್ಪಟ್ಟ, **ಸ್ವಪರಾರ್ಥಭಾವಃ** – ಸ್ವಶೇಷತ್ವ ಬುದ್ಧಿಯನ್ನು ಉಳ್ಳವನಾಗಿ, ಇದರಿಂದ ಶೇಷತ್ವಜ್ಞಾನ ವಿರೋಧಿಯೂ,

---

1) ಪರಾಶರ ಭಟ್ಟರ ನಿತ್ಯಗ್ರಂಥ

ಇನ್ನಮಸ್ಸುಕ್ಕುಮ್ ಕ್ರಿಯಾಪದಮ್. ಅಧ್ಯಾಹರಿತ್ತುಕ್ಕೊಳ್ಳವೇಣುಮ್"ನಮಮ ಸ್ಯಾಮ್"ಎನ್ರು "ಎನಕ್ಕಾನೇನಲ್ಲೇನ್" ಎನ್ರುಪಡಿ."ನಮಮ ಕಿಂಚಿತ್ಸ್ಯಾತ್" ಎನ್ರು ಸರ್ವವಿಷಯ ಮಮಕಾರ ನಿವೃತ್ತಿಯೈ ಪ್ರಾರ್ಥಿಕ್ಕಿರದಾಹವುಮಾಮ್ ತಿರುಮನ್ತ್ರತ್ತಿಲ್ ಇಷ್ಟಪ್ರಾಪ್ತ್ಯನಿಷ್ಟನಿವೃತ್ತಿಗಳಿಲ್ಸೊನ್ನ ಚೋದ್ಯಪರಿಹಾರಙ್ಗಳ್ ಇಙ್ಗುಮ್ ಅನುಸನ್ಧಿತ್ತುಕ್ಕೊಳ್ವದು

ಅಥ ನಮಶ್ಶಬ್ದೇನ ಪ್ರಾರ್ಥಿತಾನಿಷ್ಟನಿವೃತ್ತೌ ಪ್ರಧಾನ ತಾತ್ಪರ್ಯಮಾಹ.

ಇನ್ನಮಶ್ಶಬ್ದತ್ತಾಲೇ ಅವಿದ್ಯಾಕರ್ಮತದುಭಯ ವಾಸನಾರುಚಿ ಪ್ರಕೃತಿ ಸಂಬಂಧಾದಿ ರೂಪಙ್ಗಳಾನ ಸರ್ವವಿರೋಧಿಹಳೈಯುಮ್ ಕಳ್ಳಿಯಾ ನಿರ್ಕಚ್ಚೇಯಯ್‌ದೇಯುಮ್ ಇದುಕ್ಕು ನಿರ್ವಚನಂ ಪಣ್ಣುಹಿರ ಶ್ರುತಿಯಿನ್‌ಪಡಿಯೇ ಪರಿಪೂರ್ಣ ಕೈಙ್ಕರ್ಯ ರೂಪ ಫಲದಶೈಯಿಲ್ ಫಲಾನ್ತರಾನುಭವ ನ್ಯಾಯತ್ತಾಲೇ ಶಙ್ಕಿತ

---

ಅದರ ಪರಿಹಾರಕ್ಕೆ ಕಾರಣವೂ, 'ಶ್ರೀಮತೇ ನಾರಾಯಣಾಯ' ಎಂಬ ಚತುರ್ಥ್ಯಂತ ಪದಗಳಿಂದ ಸೂಚಿಸಲ್ಪಟ್ಟದಾಗಿ, ಹೇಳಲ್ಪಟ್ಟಿತು. **ಅನ್ಯೋಪಭೋಗವಿರಹಾದನಘಃ** – ಮೋಕ್ಷೇತರವಾದ ಸುಖಗಳು ಇಲ್ಲದೆ ಇರುವುದರಿಂದ, ಪಾಪರಹಿತನಾಗಿ : ಮೋಕ್ಷೇತರ ಭೋಗಗಳು ಪಾಪನಿಮಿತ್ತಗಳೆಂದು ತಾತ್ಪರ್ಯ, ಇದು ನಮಶ್ಶಬ್ದಾರ್ಥ ಪ್ರಸನ್ನಃ – ಪ್ರಸನ್ನನು, **ಅಖಿಲಂ ಸ್ವಭೋಗಂ** – ಭಗವದನುಭವದಿಂದ ತನಗೆ ಉಂಟಾದ ಸರ್ವಭೋಗವನ್ನೂ **ಪತಿಭೋಗಶೇಷಂ** – ರಾಜಾಂತಃಪುರ ನ್ಯಾಯದಿಂದ ಅಂದರೆ ರಾಜನಿಗೆ ಭೋಗವು ಅಂತಃಪುರ ಸ್ತ್ರೀಗಳಿಂದ ಏರ್ಪಟ್ಟು, ತದಧೀನವಾದ ಭೋಗವು ಆ ಸ್ತ್ರೀಗಳಿಗೂ ಉಂಟಾಗುವಂತೆ, ಪತಿಯಭೋಗಕ್ಕೆ ಶೇಷವಾಗಿ **ಅಖಿಲಂ ಸ್ವಭೋಗಂ ಭುಂಕ್ತೇ** – ತನ್ನ ಎಲ್ಲಾ ಭೋಗಗಳನ್ನು ಅನುಭವಿಸುತ್ತಾನೆ.

"ಮಮ ಯಾಃ ಕ್ರಿಯಾಃ ತಾಸ್ಸರ್ವಾ ಭಗವತ ಏವ" ಇತ್ಯಾದಿ ರಹಸ್ಯಾಮ್ನಾಯ ಬ್ರಾಹ್ಮಣದಲ್ಲಿ ಅಧೀತವಾದ ಅರ್ಥವು ಶ್ರೀಮತ್ತಾತ್ಪರ್ಯ ಚಂದ್ರಿಕೆಯಲ್ಲಿ ಉದಾಹರಿಸಲ್ಪಟ್ಟ ರೀತಿಯಲ್ಲಿ ಇಲ್ಲೂ ಅನುಸಂಧೇಯವು.

**ಇನ್ನಮಸ್ಸುಕ್ಕುಮ್ ಕ್ರಿಯಾಪದಮ್ ಇತ್ಯಾದಿ** – ಈ ನಮಶ್ಶಬ್ದಕ್ಕೂ ಕ್ರಿಯಾಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅದು 'ಸ್ಯಾಂ', ಎಂಬುದು. 'ನ ಮಮ ಸ್ಯಾಂ' ಎಂದು ನನಗೋಸ್ಕರನಲ್ಲವೆಂದು ಅರ್ಥ. ಇದು ಅಹಂಕಾರ ನಿವೃತ್ತಿಯನ್ನು ತಿಳಿಸುತ್ತದೆಯೆಂಬ ಪ್ರಥಮ ಯೋಜನೆ. 'ಕಿಂಚಿತ್‌ಸ್ಯಾತ್' ಎಂಬ ಪದಗಳನ್ನು ಅಧ್ಯಾಹಾರ ಮಾಡಿ, ನಮಮ ಕಿಂಚಿತ್‌ಸ್ಯಾತ್ ಎಂದು ಒಂದು ವಾಕ್ಯವನ್ನು ಅನುಸಂಧಾನ ಮಾಡಿದರೆ, **ಸರ್ವ ವಿಷಯ ಮಮಕಾರ ನಿವೃತ್ತಿಯುಮಾಹತ್ತಾಲೇ ಇತ್ಯಾದಿ** – ಸ್ವವಿಷಯ ಮತ್ತು ಸ್ವಕೀಯ ವಿಷಯವಾದ ಮಮಕಾರದ ನಿವೃತ್ತಿ ಪೂರ್ವಕ ಸರ್ವಾನಿಷ್ಟ ನಿವೃತ್ತಿಯೂ ಪ್ರಾರ್ಥಿಸಲ್ಪಡುತ್ತದೆ ಎಂದು ಆಗಬಹುದು. ಇದು ದ್ವಿತೀಯ ಯೋಜನೆ.

**ತಿರುಮಂತ್ರತ್ತಿಲ್ ಇತ್ಯಾದಿ** - ಅಷ್ಟಾಕ್ಷರ ಮಂತ್ರದಲ್ಲಿ ಇಷ್ಟಪ್ರಾಪ್ತ್ಯನಿಷ್ಟ ನಿವೃತ್ತಿಗಳಲ್ಲಿ ಹೇಳಿದ ಚೋದ್ಯ ಪರಿಹಾರಗಳು ಇಲ್ಲಿಯೂ ಅನುಸಂಧೇಯಗಳು. ಅದಾಗಿ ಇಷ್ಟಪ್ರಾಪ್ತಿಯನ್ನು ಪ್ರಾರ್ಥಿಸಿದರೆ 'ಭಾವಾಂತರಾಭಾವ' ವಾದಿಗಳ ಪಕ್ಷದಲ್ಲಿ ಅನಿಷ್ಟ ನಿವೃತ್ತಿ ಪ್ರಾರ್ಥನೆಯೂ ಸಿದ್ಧಿಸುತ್ತದೆ ಎಂಬುದು ಇಲ್ಲಿ ವಿವಕ್ಷಿತವು.

**ಇನ್ನಮಶ್ಶಬ್ದತ್ತಾಲೇ ಇತ್ಯಾದಿ** - ಈ ನಮಶ್ಶಬ್ದದಿಂದ ಅವಿದ್ಯಾ, ಕರ್ಮ, ಇವೆರಡುಗಳ ವಾಸನೆ, ರುಚಿ, ಪ್ರಕೃತಿ ಸಂಬಂಧವೇ ಮೊದಲಾದ ಸರ್ವ ವಿರೋಧಿಗಳನ್ನೂ ನಿರ್ವಹಿಸುವುದಾದರೂ, **ಇದುಕ್ಕು ನಿರ್ವಚನಮ್ ಪಣ್ಣುಹಿರಶ್ರುತಿಯಿನ್ ಪಡಿಯೇ**–ಈ ನಮಶ್ಶಬ್ದಕ್ಕೆ ನಿರ್ವಚನವನ್ನು ಹೇಳುವ "ನ ಮಮಾಹಮಸ್ಮಿ। ಭಗವತ ಏವಾಹಮಸ್ಮಿ" ಎಂಬ ಶ್ರುತಿಯು ಹೇಳುವ ಪ್ರಕಾರ ಪರಿಪೂರ್ಣ ಕೈಂಕರ್ಯ ರೂಪ ಫಲದಶೆಯಲ್ಲಿ, **ಫಲಾಂತರಾನುಭವ ನ್ಯಾಯತ್ತಾಲೇ**–ಐಶ್ವರ್ಯ ಕೈವಲ್ಯಾದ್ಯನುಭವ ದಶೆಯಲ್ಲಿ ನಾನೇ ಕರ್ತಾ, ನಾನೇ ಭೋಕ್ತಾ, ನಾನು ಸ್ವಾಧೀನನು–ಸ್ವತಂತ್ರನು ಎಂಬ ನ್ಯಾಯದಂತೆ **ಶಂಕಿತಮಾನ ಇತ್ಯಾದಿ**–ಶಂಕಿಸಲ್ಪಟ್ಟ ಸ್ವಾಧೀನಸ್ವಾರ್ಥ ಕರ್ತೃತ್ವ

ಮಾನ ಸ್ವಾಧೀನ ಸ್ವಾರ್ಥಕರ್ತೃತ್ವ ಸ್ವಾಧೀನ ಸ್ವಾರ್ಥ ಭೋಕ್ತೃತ್ವಮಾಹಿರಕಳೈಹಳೈಕ್ಕ್ಕಿಕ್ಕೈಯಿಲೇ ಇಙ್ಗು ಪ್ರಧಾನ ತಾತ್ಪರ್ಯಮ್ ಎನ್ರು ಅನುಸನ್ಧಿಪ್ಪಾರ್‌ಹಳ್. ಇತ್ತಾಲ್ ಫಲಾನ್ತರಾನುಭವ ದಶೈಯಿಲುಣ್ಡಾಮ್ ಸ್ವಾಧೀನ ಸ್ವಾರ್ಥಕರ್ತೃತ್ವ ಭೋಕ್ತೃತ್ವ ಭ್ರಮಙ್ಗಳ್ ಮುಕ್ತದಶೈಯಿಲ್ ಕೈಙ್ಕರ್ಯತ್ತಿಲ್ ಇಲ್ಲಾದಪಡಿ ಕಣ್ಡು ಅಕ್ಕಟ್ಟಳೈಯಿಲ್ ಪ್ರಾರ್ಥಿಕ್ಕಿರಾನೆನ್ರದಾಯಿತ್ತು.

ಅರುಳಾಳ್ ಪ್ಪೆರುಮಾಳೆಂಬೆರುಮಾನಾರ್ಯಸ್ಯ ದ್ವಯಾರ್ಥಮಾಹ.

"ಪರಮಾತ್ಮನಿ ನಾರಾಣಾಂ ಸರ್ವಭಾರಸಮರ್ಪಣಾತ್ ।
ಸಂಜಾತಂ ನೈರಪೇಕ್ಷ್ಯಂತು ನಮ ಇತ್ಯುಚ್ಯತೇ ಬುಧೈಃ ॥

ಎನ್ರು ಇಙ್ಗುತ್ತೈ ನಮಸ್ಸೈ ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್ ವ್ಯಾಖ್ಯಾನಮ್ ಪಣ್ಣಿನಾರ್ ಇನ್ದ ಶ್ಲೋಕತ್ತಿಲ್ ಚೊನ್ನ ನೈರಪೇಕ್ಷ್ಯಮ್, ಸ್ವರಕ್ಷಣತ್ತಿಲ್ ನಿರ್ಭರತ್ವಮ್. ಇನ್ದ ನಿರ್ಭರತ್ವತ್ತಾಲೇ ಭರಸಮರ್ಪಣಮ್ ಸೂಚಿತಮಾದಲ್ ಸ್ವನಿರ್ಭರತ್ವ ಪರ್ಯನ್ತಮಾನ ಭರಸಮರ್ಪಣಮ್ ಇವ್ವಿಡತ್ತಿಲೇ ವಿವಕ್ಷಿತಮಾಹಲಾಹಕ್ಕಡವದು. ಹವಿಸ್ಸಮರ್ಪಣತ್ತಿಲ್, "ಇದಮಿನ್ದ್ರಾಯ ನಮಮ" ಎನ್ನುಮಾಪ್ಪೋಲೇ "ಅಹಂ ಶ್ರೀಮತೇ ನಾರಾಯಣಾಯ" ಎನ್ರಿಙ್ಗು ಭರಗರ್ಭಮಾಹ ಸಮರ್ಪಿತ್ತು, "ನಮಮ" ಎನ್ರು

---

ಸ್ವಾಧೀನ ಸ್ವಾರ್ಥ ಭೋಕ್ತೃತ್ವವಾದ **ಕಳೈಹಳೈ**–ವಿರೋಧಿ ಪಾಪಗಳನ್ನು **ಕ್ಕಿಕ್ಕೈಯಿಲೇ**–ನಿವರ್ತಿಸುವುದರಲ್ಲಿ, **ಇಂಗು** ಇತ್ಯಾದಿ–ಈ ನಮಶ್ಶಬ್ದಕ್ಕೆ ಪ್ರಧಾನ ತಾತ್ಪರ್ಯವೆಂದು ಅನುಸಂಧಾನ ಮಾಡುತ್ತಾರೆ. **ಇತ್ತಾಲ್ ಫಲಾಂತರಾನುಭವ ದಶೈಯಿಲುಂಡಾಮ್** ಇತ್ಯಾದಿ–ಇದರಿಂದ ಫಲಾಂತರವನ್ನು ಅಂದರೆ ಐಶ್ವರ್ಯ ಕೈವಲ್ಯಗಳನ್ನು ಅನುಭವಿಸುವ ದಶೆಯಲ್ಲಿ ಉಂಟಾಗುವ ಸ್ವಾಧೀನ ಸ್ವಾರ್ಥ ಕರ್ತೃತ್ವ ಭೋಕ್ತೃತ್ವ ಭ್ರಮಗಳು ಮುಕ್ತದಶೆಯಲ್ಲಿ ಕೈಂಕರ್ಯ ಮಾಡುವಾಗ ಇರುವುದಿಲ್ಲವಾಗಿ ಶಾಸ್ತ್ರದಿಂದ ತಿಳಿದು ಆ ರೀತಿಯಲ್ಲಿ ಪ್ರಾರ್ಥಿಸುತ್ತಾನೆಂದು ಆಯಿತು.

ಅನಂತರ **ಪೂರ್ವಖಂಡವು** ಅಂಗಪಂಚಕ ಪ್ರತಿಪಾದಕ ಉತ್ತರಖಂಡವು ಸ್ವರೂಪ, ಭರ, ಫಲಸಮರ್ಪಣಪರವೆಂಬ ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್ ಅವರ ಮತವನ್ನು ಪರಿಷ್ಕರಿಸಿ ನಿರೂಪಿಸುತ್ತಾರೆ. ಆದಾಗಿ **ಪರಮಾತ್ಮನಿ ನಾರಾಣಾಂ** ಇತ್ಯಾದಿ **ಪರಮಾತ್ಮನಿ**–ಭಗವಂತನಲ್ಲಿ, **ನಾರಾಣಾಂ** – ಮುಮುಕ್ಷು ಜೀವರುಗಳಿಂದ, **ಸರ್ವಭಾರಸಮರ್ಪಣಾತ್**–ಅನಿಷ್ಟ ನಿವೃತ್ತಿ, ಇಷ್ಟಪ್ರಾಪ್ತಿ ರೂಪ ರಕ್ಷಾಭರಸಮರ್ಪಣದಿಂದ, **ಸಂಜಾತಂ**–ಉಂಟಾದ, **ನೈರಪೇಕ್ಷ್ಯಂತು**–ನಿರ್ಭರತ್ವವು **ನಮಇತಿ**–ನಮಶ್ಶಬ್ದಕ್ಕೆ ಅರ್ಥವಾಗಿ **ಬುಧೈರುಚ್ಯತೇ**–ಪಂಡಿತರುಗಳಿಂದ ಹೇಳಲ್ಪಡುತ್ತದೆ. **ಎನ್ರು ಇಂಗುತ್ತೈನಮಸ್ಸೈ** ಇತ್ಯಾದಿ–ಎಂದು ಈ ದ್ವಯಮಂತ್ರದಲ್ಲಿರುವ ನಮಶ್ಶಬ್ದವನ್ನು ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್ ಎಂಬ ಆಚಾರ್ಯರು ವ್ಯಾಖ್ಯಾನಮಾಡಿದ್ದಾರೆ. **ಇಂದ ಶ್ಲೋಕತ್ತಿಲ್** ಇತ್ಯಾದಿ ಈ ಶ್ಲೋಕದಲ್ಲಿ ಹೇಳಲ್ಪಡುವ ನೈರಪೇಕ್ಷ್ಯವು ಸ್ವರಕ್ಷಣದಲ್ಲಿ ನಿರ್ಭರತ್ವವು. **ಇಂದ ನಿರ್ಭರತ್ವತ್ತಾಲೇ**-ಇತ್ಯಾದಿ ಭರಸಮರ್ಪಣವನ್ನು ಮಾಡದೆ ನಿರ್ಭರತ್ವವು ಉಂಟಾಗುವುದಿಲ್ಲವಾದ್ದರಿಂದ ಈ ಶ್ಲೋಕದಲ್ಲಿ ಹೇಳಿರುವ ನೈರಪೇಕ್ಷ್ಯದಿಂದ ಅಂದರೆ ನಿರ್ಭರತ್ವದಿಂದ 1) ಭರಸಮರ್ಪಣವು ಸೂಚಿಸಲ್ಪಟ್ಟದಾಗಿಯಾಗಲಿ, 2) ಸ್ವನಿರ್ಭರತ್ವ ಪರ್ಯಂತವಾದ ಭರಸಮರ್ಪಣವು ಇಲ್ಲಿ ವಿವಕ್ಷಿತವಾಗಿ **ಆಹಕ್ಕಡವದು**–ಆಗಬಹುದು, ಸೂಚನೆಗಿಂತ, ಶಾಬ್ದತ್ವವು ಮೇಲು–ಅದಕ್ಕಿಂತಲೂ ಪ್ರತ್ಯೇಕವಾಗಿ ವಾಕ್ಯಾಂತರದಿಂದ ಸಮರ್ಪಣವು ಪ್ರಧಾನವಾಗಿ ಪ್ರಕಾಶಿಸಲ್ಪಡುವುದು ಮೇಲೆಂದು **ಹವಿಸ್ಸಮರ್ಪಣತ್ತಿಲ್** ಎಂದಾರಂಭಿಸಿ ಮೂರನೆಯ ಯೋಜನೆಯನ್ನು ತಿಳಿಸುತ್ತಾರೆ. ಅದಾಗಿ 3) ಹವಿಸ್ಸನ್ನು ಸಮರ್ಪಿಸುವಾಗ 'ಇದಮಿಂದ್ರಾಯ ನಮಮ' ಎಂದು ಈ ಹವಿಸ್ಸು ಇಂದ್ರನಿಗೆ ಸಮರ್ಪ್ಯವು ಎಂದು ಸಂಪ್ರದಾನಾರ್ಥಕ ಚತುರ್ಥಿಯಿಂದ ತಿಳಿಸಲ್ಪಟ್ಟು 'ನಮಮ' ಎಂದು **ತನ್ನುಡನ್ ತುವಕ್ಕರುಕ್ಕಿರದೆನ್ರಾಲ್**–ತನಗೆ ಸಂಬಂಧವನ್ನು ನಿವರ್ತಿಸುತ್ತದೆ ಎಂದರೆ, **ಇಸ್ಸಮರ್ಪಣಯೋಜನೈಕ್ಕು** –ಈ ಭರಸಮರ್ಪಣ ಯೋಜನೆಗೆ **ಸ್ವರಸಮ್**–ಸ್ವಾರಸ್ಯವು ಅಧಿಕ ಎಂದರ್ಥ. ಈ ಯೋಜನೆಯಲ್ಲಿ (ಅಹಂ) **"ಅಹಂ ಶ್ರೀಮತೇ ನಾರಾಯಣಾಯ"** ಎಂದು

ತನ್ನುಡೈ ತುವಕ್ಕರುಕ್ಕಿರದೆನ್ರಾಲ್ ಇಸ್ಸಮರ್ಪಣಯೋಜನೈಕ್ಕು ಸ್ವರಸಮ್. ಇಂದ ಯೋಜನೈಯಿಲ್ ಪೂರ್ವಖಂಡಂ ಅಂಗಪಂಚಕ ಪರಮ್. ಉತ್ತರಖಂಡಂ ಅಂಗಿ ಪ್ರತಿಪಾದಕಮ್ 1) "ಅಹಮದ್ಯೈವ ಮಯಾ ಸಮರ್ಪಿತಃ" ಎನ್ಗಿರಪಡಿಯೇ, ಇವ್ವಿಡತ್ತಿಲ್, ನಾನ್ ಶ್ರೀಮಾನಾನ ನಾರಾಯಣನುಕ್ಕೆನ್ರು ಸಮರ್ಪಿಕ್ಕ 2) "ಯತ್ಸಂರಕ್ಷ್ಯತಯಾರ್ಪ್ಯತೇ" 3) "ತವೈವಾಸ್ಮಿಹಿ ಭರಃ" ಇತ್ಯಾದಿಹಳಿಲ್ಪಡಿಯೇ ಸ್ವರಕ್ಷಣ ಭರಮುಮ್. ಸ್ವರಕ್ಷಣ ಫಲಮುಮ್ ಅವನದೆನ್ರಿಙ್ಗೇ ಅಭಿಪ್ರೇತ ಮಾಹವುಮಾಮ್. ನಮಃ ಎನ್ಗಿರ

---

ಭರವಿಶಿಷ್ಟವಾಗಿ ತನ್ನನ್ನು ಸಮರ್ಪಿಸಿ, ಅಂದರೆ ಶ್ರೀಮಾನಾದ ನಾರಾಯಣನಲ್ಲಿ, ಭರಗರ್ಭಮಾಹ–ರಕ್ಷಾಭರದೊಡನೆ ತನ್ನನ್ನು ಸಮರ್ಪಿಸಿ ನಮಮ–ಎಂದು ತನ್ನ ರಕ್ಷೆಯಲ್ಲಿ ತನಗೂ ಸಂಬಂಧವಿದೆಯೆಂಬುದನ್ನು ನಿವರ್ತಿಸಿಕೊಂಡರೆ ಇಸ್ಸಮರ್ಪಣ ಯೋಜನೈಕ್ಕುಸ್ವರಸಮ್ – ಈ ಭರ ಸಮರ್ಪಣ ಯೋಜನೆಗೆ ಸ್ವರಸ. ಇಂದ ಯೋಜನೈಯಿಲ್ – ಈ ಭರಸಮರ್ಪಣ ಯೋಜನೆಯಲ್ಲಿ ಪೂರ್ವಖಂಡವು ಅಂಗ ಪಂಚಕ ಪರ, ಉತ್ತರ ಖಂಡವು ಅಂಗಿಪ್ರತಿಪಾದಕ. ಈ ಯೋಜನೆಯಲ್ಲಿ "ತದೇಕೋಪಾಯತಾಯಾಂಚಾ, ತ್ವಮೇವೋಪಾಯ ಭೂತೋಮೇಭವ, ಎಂಬ ಉಪಾಯತ್ವ ಪ್ರಾರ್ಥನಾ ರೂಪ ಭರಸ್ವೀಕಾರ ಪ್ರಾರ್ಥನೆಯು 'ಪ್ರಪದ್ಯೇ' ಎಂಬ ಧಾತುವಿಗೆ ಮುಖ್ಯಾರ್ಥ ರೂಢಿಯಿಂದ ಪ್ರಾರ್ಥನೆಯು ಹೇಳಲ್ಪಟ್ಟು. ಅವಯವ ಶಕ್ತಿಯಿಂದ ಮಹಾ ವಿಶ್ವಾಸವು ವಿಶೇಷಣವಾಗಿ ಅನ್ವಯಿಸುತ್ತದೆ. ಈ ಯೋಜನೆಯಲ್ಲಿ ಉಪಾಯತ್ವ ಪ್ರಾರ್ಥನೆಯು ಅಂಗ. ಗೋಪ್ತೃತ್ವವರಣವು ಇದರಲ್ಲಿ ಅಂತರ್ಗತ. ಹೀಗೆ ಪೂರ್ವಖಂಡವು ಅಂಗಗಳನ್ನು ತಿಳಿಸಿ, ಉತ್ತರಖಂಡದಲ್ಲಿ ಅಂಗಿಯು ಪ್ರತಿಪಾದಿಸಲ್ಪಟ್ಟಿದೆ, ನಾಲ್ಕನೆಯ ಯೋಜನೆಯನ್ನು 1) ಅಹಮದ್ಯೈವ ಮಯಾ ಸಮರ್ಪಿತಃ–ಎಂಬಂತೆ ನಾನು ಶ್ರೀಮಾನಾದ ನಾರಾಯಣನಿಗೆಂದು ಸಮರ್ಪಿಸಲ್ಪಡಲು, 2) ಯತ್ಸಂರಕ್ಷ್ಯತಯಾರ್ಪ್ಯತೇ–ರಕ್ಷಾರೂಪ ಫಲ ವಿಶಿಷ್ಟವಾಗಿ ಸಮರ್ಪಿಸಲ್ಪಡುತ್ತದೆ 3) ತವೈವಾಸ್ಮಿಹಿಭರಃ-ರಕ್ಷಾಭರವಿಶಿಷ್ಟವಾದ ಆತ್ಮಸಮರ್ಪಣವು ತಿಳಿಸಲ್ಪಡುತ್ತದೆ ಇತ್ಯಾದಿಗಳಲ್ಲಿ ಹೇಳಿರುವಂತೆ ಸ್ವರಕ್ಷಣಭರಮುಮ್ ಇತ್ಯಾದಿ ಸ್ವರಕ್ಷಣಭರವೂ ಸ್ವರಕ್ಷಣ ಫಲವೂ, ಅವನದೇ ನ್ರಿಂಗೇ ಅಭಿಪ್ರೇತಮಾಮ್–ಆ ಭಗವಂತನದೆಂದು ಶ್ರೀಮತೇ ನಾರಾಯಣಾಯ, ಎಂಬಲ್ಲಿ ಅಭಿಪ್ರೇತವಾಗುತ್ತದೆ

---

1) ವಪುರಾದಿಷು ಯೋಽಪಿ ಕೋಽಪಿ ವಾ
ಗುಣತೋಽಸಾನಿ ಯಥಾತಥಾ ವಿಧಃ ।
ತದಯಂ ತವ ಪಾದ ಪದ್ಮಯೋಃ
ಅಹಮದ್ಯೈವ ಮಯಾ ಸಮರ್ಪಿತಃ ॥ ಆಳವಂದಾರ ಸ್ತೋತ್ರಮ್ 52

ಅಹಂ ಶಬ್ದವಾಚ್ಯನಾದ ನಾನು ಶರೀರೇಂದ್ರಿಯಗಳಲ್ಲೊಬ್ಬನೇ, ಅವುಗಳಿಗಿಂತ ಬೇರೆಯೋ, ಅಣುವೇ, ವಿಭುವೇ ಇತ್ಯಾದಿ ವಿಚಾರದಲ್ಲಿ ನನಗೆ ನಿರ್ಬಂಧವಿಲ್ಲ: ನಿನಗೆ ಶೇಷಭೂತವಾದ ವಸ್ತು ಎಂಬುದರಲ್ಲಿ ಮಾತ್ರ ನಿರ್ಬಂಧ. ನಿನಗೆ ಶೇಷಭೂತವಾದ ಅಹಂ ಶಬ್ದವಾಚ್ಯವಾದ ಈ ವಸ್ತುವನ್ನು ನಿನ್ನ ಪಾದ ಪದ್ಮಗಳಲ್ಲಿ ಈಗಲೇ ನಿನಗೆ ಶೇಷಭೂತವಾಗಿ ಸಮರ್ಪಿಸಿದ್ದೇನೆ.

2) ಅಹಿರ್ಬುಧ್ನ್ಯ ಸಂಹಿತೆ 52-36

3) ಪಿತಾ ತ್ವಂ ಮಾತಾ ತ್ವಂ ದಯಿತ ತನಯಸ್ತ್ವಂ ಪ್ರಿಯಸುಹೃತ್
ತ್ವಮೇವ ತ್ವಂ ಮಿತ್ರಂ ಗುರುರಸಿ ಗತಿಶ್ಚಾಸಿ ಜಗತಾಮ್ ।
ತ್ವದೀಯ ಸ್ತ್ವದ್ಭೃತ್ಯಸ್ತವ ಪರಿಜನ ಸ್ತ್ವದ್ಗತಿರಹಂ
ಪ್ರಪನ್ನಶ್ಚೈವಂ ಸತ್ಯಹಮಪಿ ತವೈವಾಸ್ಮಿಹಿ ಭರಃ ॥ ಆಳವಂದಾರ್ ಸ್ತೋತ್ರ (60

ಎಲೈ ಭಗವಂತನೇ ನೀನು ಲೋಕಕ್ಕೆ ತಂದೆಯಂತೆ ಉತ್ಪಾದಕನು-ಹಿತಪ್ರವರ್ತಕನು ತಾಯಿಯಂತೆ ಪ್ರಿಯಪ್ರವರ್ತಕನು. ಸರ್ವಾಧಿಕ ಪ್ರೀತಿ ವಿಷಯವಾಗಿ ರಕ್ಷಕನು, ಪ್ರಿಯನಾದ ಸ್ನೇಹಿತನು, ಮಿತ್ರನಂತೆ ಸರ್ವರಹಸ್ಯಯೋಗ್ಯನು, ಗುರು ಉಪಾಯನು, ಪ್ರಾಪ್ಯನು. ನಾನು ನಿನ್ನವನು, ನಿನ್ನಿಂದ ಭರಿಸಲ್ಪಡುವವನು, ನಿನ್ನ ಸೇವೆ ಮಾಡತಕ್ಕವನು ನೀನೇ ನನಗೆ ಪ್ರಯೋಜನನು ಪ್ರಪನ್ನನೂ ಸಹ. ನಾನೂ ನಿನಗೆ ರಕ್ಷಣೀಯನು

ವಿತ್ತಾಲೇ ಆತ್ಮಾತ್ಮೀಯಂಗಳೋಡುಮ್ ಸ್ವರಕ್ಷಣತತ್ಫಲಂಗಳೋಡುಂ, ತನಕ್ಕುತ್ತುವಕ್ಕತ್ತನ್ನೈ ಕಾಟ್ಟು ಹಿರದು. ಪರಸಂಬಂಧ ವಿಧಿಯಿಲುಂತಾತ್ಪರ್ಯಮಾಕೈಯಾಲೇ ಇಚ್ಚತುರ್ಥೀ ನಮಸ್ಸುಕ್ಕಳ್ ಇರಣ್ಡುಕ್ಕುಮ್ ಫಲಮುಣ್ಡು. ಇಸ್ಸಮರ್ಪಣಮ್ ತನ್ನಿಲುಂ ಪರನಿರಪೇಕ್ಷಕರ್ತೃತ್ವಾದಿಹಳೈ ನಿಷೇಧಿಕ್ಕೈಕ್ಕಾಹ "ನಮಃ" ಎನ್ನಿರದಾಹವುಮಾಮ್. ಸ್ಥೂಲಪ್ರಕ್ರಿಯೈಯೈಕ್ಕೊಂಡಾಲುಮ್ "ನಮಾಮಿ" ಎನ್ನಿರಪದತ್ತೈ ಆತ್ಮಸಮರ್ಪಣಾರ್ಥಮೆನ್ರು ವ್ಯಾಖ್ಯಾನಮ್ ಪಣ್ಣಿನ ಪದಸ್ತೋತ್ರ ಪ್ರಕ್ರಿಯೈಯಾಲೇ ಇನ್ನಮಶ್ಶಬ್ದಮ್ ಸಮರ್ಪಣ ಪೊರುಳುಕ್ಕು ಸಂಗತಮ್. ಇಪ್ಪಡಿ ಉತ್ತರಖಂಡತ್ತೈ ಆತ್ಮಸಮರ್ಪಣಪರಮಾಹ ಅನುಸಂಧಿಪ್ಪಾರ್ಕ್ಕು ಇದುಕ್ಕು ಅನುರೂಪಮಾಯ್ ಸ್ವರೂಪಾನುಬಂಧಿಯಾನ ಫಲವಿಶೇಷಂ ಇಜ್ಜಿಗೇ ಸ್ವತಃ ಪ್ರಾಪ್ತಮ್.

ಪೂರ್ವೋಕ್ತಮಾನಪಡಿಯೇ ಫಲಪರಮಾಹ ಉತ್ತರಖಂಡತ್ತೈ ಅನುಸಂಧಿಪ್ಪಾರ್ಕ್ಕು ಇವ್ವಾತ್ಮರಕ್ಷಾಭರ

---

**ನಮಃ ಎನ್ನಿರವಿತ್ತಾಲೇ ಇತ್ಯಾದಿ**– ಅನಂತರ 'ನಮಃ' ಎಂಬ ಶಬ್ದದಿಂದ ಆತ್ಮಾತ್ಮೀಯ ರಕ್ಷಣ ಭರ ಮತ್ತು ಫಲಗಳೊಡನೆ, ತನಗೆ ಸಂಬಂಧವಿಲ್ಲವೆಂಬುದು ತಿಳಿಸಲ್ಪಡುತ್ತದೆ. **ಪರಸಂಬಂಧ ವಿಧಿಯಿಲುಮ್ ಇತ್ಯಾದಿ** – ಹೀಗೆ "ಶ್ರೀಮತೇ ನಾರಾಯಣಾಯ", ಎಂಬಲ್ಲಿಯ ಚತುರ್ಥೀ ವಿಭಕ್ತಿಯಿಂದ, ಪರಸಂಬಂಧ ವಿಧಿಯು ಸಂಪ್ರದಾನಾರ್ಥ ವಾಗಿ ಹೇಳಲ್ಪಟ್ಟರೆ ಇದರಿಂದ ಸ್ವಸಂಬಂಧ ನಿಷೇಧವು ತಾತ್ಪರ್ಯವಾಗಿ ಸಿದ್ಧಿಸಿದರೂ, ಚತುರ್ಥೀ ವಿಭಕ್ತಿಯು ಪರಸಂಬಂಧ ವಿಧಿಯಲ್ಲೇ ತಾತ್ಪರ್ಯಕ. "ನಮಃ" ಎಂದು ಸ್ವಸಂಬಂಧ ನಿಷೇಧದಲ್ಲಿಯೇ ತತ್ಪರವಾದ್ದರಿಂದ, ಈ ಚತುರ್ಥೀ ನಮಶ್ಶಬ್ದಗಳಿಗೆ ಫಲವುಂಟು. **ಇಸ್ಸಮರ್ಪಣಂ ತನ್ನಿಲುಮ್** ಚತುರ್ಥೀ ವಿಭಕ್ತಿಯಲ್ಲಿ ತೋರಿದ ಸ್ವರೂಪ ಭರ ಫಲ ಸಮರ್ಪಣಗಳಲ್ಲಿಯೂ **ಪರನಿರಪೇಕ್ಷ ಕರ್ತೃತ್ವಾದಿಹಳೈ ನಿಷೇಧಿಕ್ಕೈಕ್ಕಾಹ** ಇತಿ–ಚತುರ್ಥಿ ಯಲ್ಲಿ ಸ್ವರೂಪ ಭರ ಫಲಗಳಿಗೆ ಪರಸಂಬಂಧ ವಿಧಿಯೂ, ಆರ್ಥಿಕವಾಗಿ ಸ್ವಸಂಬಂಧ ನಿಷೇಧವೂ ಅಭಿಪ್ರೇತ ವಾದರೂ ಶಾಬ್ದವಾಗಿ ನಮಸ್ಸಿಗೆ ಸಮರ್ಪಣತ್ರಯದಲ್ಲಿ ಪರನಿರಪೇಕ್ಷ ಕರ್ತೃತ್ವಾದಿಗಳನ್ನು ನಿಷೇಧಿಸುವುದರಲ್ಲಿ ತಾತ್ಪರ್ಯವಾದ್ದರಿಂದ **ಪುನರುಕ್ತಿಯಿಲ್ಲ.**

ಅನಂತರ ಅಹಿರ್ಬುಧ್ನ್ಯ ಸಂಹಿತೆಯಲ್ಲಿ ಹೇಳಿದ **ಸ್ಥೂಲಪ್ರಕ್ರಿಯೈಕ್ಕೊಂಡಾಲುಮ್**-ಏವಮಂಗೈರುಪಾಂಗೈಶ್ಚ ನಮನಂತೇ ಪ್ರಕೀರ್ತಿತಮ್" ಎಂಬ ಸ್ಥೂಲ ಪ್ರಕ್ರಿಯೆಯನ್ನು ಅವಲಂಬಿಸಿದರೂ, **ನಮಾಮಿ ಎನ್ನಿರ ಪದತ್ತೈ** ಇತ್ಯಾದಿ–ಮಂತ್ರರಾಜ ಪದ ಸ್ತೋತ್ರದಲ್ಲಿ "ನಮಾಮಿ", ಎಂಬ ಪದಕ್ಕೆ ಆತ್ಮಸಮರ್ಪಣ ಪರವಾಗಿ ವ್ಯಾಖ್ಯಾನ ಮಾಡಿದ ರೀತಿಯಲ್ಲಿ ಈ ನಮಶ್ಶಬ್ದವು 'ಸಮರ್ಪಣ'ವೆಂಬ ಅರ್ಥಕ್ಕೆ ಸಂಗತವು. 'ನಮಸ್ಕಾರಾತ್ಮಕಂ ಯಸ್ಮೈ ವಿಧಾಯಾತ್ಮ ನಿವೇದನಮ್' ಎಂದು ನಮಸ್ಸು ಆತ್ಮನಿವೇದನ ಪರವೆಂದು ಮಂತ್ರರಾಜ ಪದಸ್ತೋತ್ರದಲ್ಲಿ ವ್ಯಾಖ್ಯಾತವು. ಆತ್ಮನಿವೇದನವೆಂಬುದು ಕೇವಲ ಸ್ವರೂಪ ಸಮರ್ಪಣವಲ್ಲ. ಮತ್ತೇನೆಂದರೆ ಭಗವದೇಕ ರಕ್ಷ್ಯತ್ವೇನ ಸಮರ್ಪಣವೆಂದರ್ಥ.

ಹೀಗೆ ಪೂರ್ವಖಂಡವು ಅಂಗಪಂಚಕವನ್ನು ತಿಳಿಸಿ ಉತ್ತರಖಂಡವು ಅಂಗಿಯಾದ ಭರ ಸಮರ್ಪಣಪರವಾದರೆ ಫಲವಿಶೇಷ ಪ್ರಕಾಶನಕ್ಕೆ ಅವಕಾಶವಿಲ್ಲವಾಗುತ್ತದೆಯಲ್ಲಾ ಎಂದು ಕೇಳಿದರೆ **ಇದಕ್ಕನುರೂಪಮಾಯ್...... ...ಸ್ವತಃ ಪ್ರಾಪ್ತಮ್** ಎಂದು ಅನುಗ್ರಹಿಸುತ್ತಾರೆ. ಅದಾಗಿ ಫಲವಿಶೇಷವು ಪರಮಶೇಷಿಯಲ್ಲಿ ಸ್ವರೂಪೋಚಿತ ಪರಿಪೂರ್ಣ ನಿತ್ಯಕೈಂಕರ್ಯ ರೂಪವೆಂಬುದು. ಬೋಧಕ ವಾಕ್ಯವಿಲ್ಲದಿದ್ದರೂ ಸಾಧನಾನುಷ್ಠಾನ ದಶೆಯಲ್ಲಿ ಅನುಸಂಧಾನ ಮಾಡಲ್ಪಟ್ಟು ಸ್ವತಃ ಪ್ರಾಪ್ತವಾಗುತ್ತದೆ. ಹೀಗೆ ಅರುಳಾಳಪ್ಪೆರುಮಾಳ್ ಎಂಬೆರುಮಾನಾರ್ ಅವರ ಮತವನ್ನು ಪರಿಷ್ಕರಿಸಿ ಹೇಳಿ, ಶ್ರೀ ಭಾಷ್ಯಕಾರರು ಗದ್ಯ ಗ್ರಂಥದಲ್ಲಿ ಹೇಳಿರುವ ರೀತಿಯಲ್ಲಿ ಆರಂಭದಲ್ಲಿ ವಿವರಿಸಿದ ಪ್ರಕಾರವೇ ಮೇಲು ಎಂಬುದನ್ನು '**ಪೂರ್ವೋಕ್ತಮಾನಾಪಡಿಯೇ**– ಎಂದು ಅನುಗ್ರಹಿಸುತ್ತಾರೆ. ಅದಾಗಿ ಹಿಂದೆ ಹೇಳಿದ ರೀತಿಯಲ್ಲಿಯೇ ಫಲಪರವಾಗಿ ಉತ್ತರಖಂಡವನ್ನು ಅನುಸಂಧಾನ ಮಾಡುವವರಿಗೆ. **ಈ** ಆತ್ಮರಕ್ಷಾಭರಸಮರ್ಪ

**ಸಮರ್ಪಣಂ ಉಪಾಯಪರಮಾನ ಪೂರ್ವಖಂಡತ್ತಿಲ್ ಶರಣಶಬ್ದಾನ್ವಿತಮಾನ ಕ್ರಿಯಾಪದತ್ತಿಲೇ ಅನುಸನ್ಧೇಯಮ್.**

**ದ್ವಯಪ್ರತಿಪಾದಿತಾರ್ಥಾನ್ ಸುಖಾನುಸಂಧಾನಾಯ ಕ್ರಮೇಣ ದರ್ಶಯತಿ**

**ಇಪ್ಪಡಿ ದ್ವಯತ್ತಿಲ್ ಪದಂಗಳಿಲಡೈವೇ ಶಬ್ದಾರ್ಥ ಸ್ವಭಾವಂಗಳಾಲೇ ಪುರುಷಕಾರಯೋಗಮ್,**

---

ಣವು ಉಪಾಯಪರವಾದ ಪೂರ್ವಖಂಡದಲ್ಲಿ "ಶರಣ" ಶಬ್ದದಿಂದ ಕೂಡಿದ "ಪ್ರಪದ್ಯೇ", ಎಂಬ ಕ್ರಿಯಾಪದದಲ್ಲಿ ಅನುಸಂಧೇಯವು.

ಪುನಃ ಆಚಾರ್ಯರು ಪೂರ್ವದಲ್ಲಿ ಹೇಳಿದ ರೀತಿಯನ್ನು ಇಲ್ಲಿ ಅನುವಾದಿಸುವದರ ಭಾವವೇನೆಂದರೆ–"ಸಭ್ರಾತುಶ್ಚರಣೌಗಾಢಂ" "ಭವಾಂಸ್ತು ಸಹ ವೈದೇಹ್ಯಾ" ಎಂಬ ಶ್ಲೋಕಗಳಿಂದ ಶರಣಾಗತಿ ಮಂತ್ರದ ಉಪಬೃಂಹಣವು ಮಾಡಲ್ಪಟ್ಟಿದೆ. ದ್ವಯವೆಂಬ ಶರಣಾಗತಿ ಮಂತ್ರದಲ್ಲಿ ಪೂರ್ವೋತ್ತರ ಖಂಡಗಳಲ್ಲಿ ಉಪಾಯ ಫಲಗಳು ಕ್ರಮವಾಗಿ ಹೇಳಲ್ಪಟ್ಟಿವೆ, ಎಂಬುದು ಶ್ರುತ್ಯಭಿಮತವೆಂಬುದು ಸಂಪ್ರದಾಯ ವೃದ್ಧ ವ್ಯವಹಾರಸಿದ್ಧ. 'ಶರಣ' ಶಬ್ದದಿಂದ ಕೂಡಿದ 'ಪ್ರಪದ್ಯೇ' ಎಂಬ ಧಾತುವೇ ಪ್ರಾರ್ಥನಾನ್ವಿತ ಭರಸಮರ್ಪಣ ಪರ್ಯಂತವೆಂಬುದು "ತದೇಕೋಪಾಯತಾ ಯಾಂಚಾ ಪ್ರಪತ್ತಿಃ, ತ್ವಮೇವೋಪಾಯ ಭೂತೋಮೇ ಭವೇತಿ ಪ್ರಾರ್ಥನಾಮತಿಃ ಶರಣಾಗತಿಃ", ಎಂಬ ಪ್ರಪತ್ತಿ ಲಕ್ಷಣವಚನಗಳಿಂದ ಹೇಳಲ್ಪಟ್ಟಿದೆ. ಈ ಲಕ್ಷಣವಚನಗಳಲ್ಲಿ "ಏವ ಕಾರದಿಂದಲೂ "ಏಕ"ವಚನದಿಂದಲೂ ಅಕಿಂಚನಾಧಿಕಾರಿಗೆ ಪ್ರಯತ್ನಾಂತರ ನೈರಪೇಕ್ಷ್ಯವು ಹೇಳಲ್ಪಟ್ಟಿರುವುದರಿಂದ, ಸಮರ್ಥ ಕಾರುಣಿಕನಲ್ಲಿ ಭರಸಮರ್ಪಣವನ್ನು ಮಾಡದೆ ಪ್ರಯತ್ನಾಂತರ ನೈರಪೇಕ್ಷ್ಯವು ಸಿದ್ಧಿಸುವುದಿಲ್ಲವಾದ್ದರಿಂದ ಯಾಂಚೆಯು, ಯಾಂಚಾ ವಿಶಿಷ್ಟ ಭರಸಮರ್ಪಣದಲ್ಲಿ ವಿಶ್ರಾಂತವೆಂಬುದು ತಿಳಿಯಲ್ಪಡತಕ್ಕದ್ದು. ಉಪಾಯತ್ವವರಣಗಳೆರಡೂ ಚೋದನಾನುಸಾರವಾಗಿ ಅನುಷ್ಠಿಸಬೇಕಾದ್ದರಿಂದ, ಯಥಾಚೋದಸಂ ಬೇರೆ ಬೇರೆಯಾಗಿಯೇ ಅನುಷ್ಠಿಸಲ್ಪಡಬೇಕು. ಉಪಾಯತ್ವವರಣವನ್ನು ಮಾತ್ರ ಅಂಗವಾಗಿ ಅನುಷ್ಠಿಸಿ ಅದರಲ್ಲಿ ಗೋಪ್ತೃತ್ವವರಣವೂ ಅಂತರ್ಗತವೆಂದು ಹೇಳಿ ಪೃಥಕ್ಕಾಗಿ ಗೋಪ್ತೃತ್ವವರಣವನ್ನು ಅನುಷ್ಠಿಸದೆ ಹೋದರೆ ಶಾಸ್ತ್ರಾರ್ಥ ವೈಕಲ್ಯವು ಏರ್ಪಡುತ್ತದೆ. ಪ್ರಪತ್ತಿ ಪದಕ್ಕೆ ಪ್ರಾರ್ಥನೆಯಲ್ಲಿ ವಿಶ್ರಾಂತಿಯನ್ನು ಹೇಳಿ ಅದೇ ಅಂಗಿ, ಭರಸಮರ್ಪಣವು ಗೌಣವೆಂದು ಹೇಳುವುದು ಅಂಗಿಸ್ವರೂಪ ನಿಷ್ಪತ್ತಿಗೆ ವಿರೋಧವನ್ನುಂಟು ಮಾಡುತ್ತದೆ. ಅದರಿಂದ ಅಂಗಿಯೇ ನಿಷ್ಪನ್ನವಾಗದೆ ಶಾಸ್ತ್ರಾರ್ಥಕ್ಕೆ ಲೋಪವು ಏರ್ಪಡುತ್ತದೆ. ಆದ್ದರಿಂದ ಉಪಾಯತ್ವ ಪ್ರಾರ್ಥನಾರೂಪ ಭರಸ್ವೀಕಾರ ಪ್ರಾರ್ಥನಾವಿಶಿಷ್ಟ ಭರನ್ಯಾಸವೇ ಅಂಗಿ. ಅಂಗಗಳೊಡನೆ ಈ ಅಂಗಿಯೂ ನಿಷ್ಪನ್ನವಾದರೇನೆ ಶರಣಾಗತಿ ಶಾಸ್ತ್ರವು ಯಾವ ಲೋಪಗಳೂ ಇಲ್ಲದೆ ನಿಷ್ಪನ್ನವಾಗುತ್ತದೆಯೆಂಬುದು ಯುಕ್ತವು. ಉತ್ತರಖಂಡವು ಫಲಪರವಾಗಿ ವ್ಯಾಖ್ಯಾನ ಮಾಡಲ್ಪಡುವುದರಿಂದ, ಶರಣಾಗತಿಯ ಅನುಷ್ಠಾನ ಸಮಯದಲ್ಲಿ ಅಭಿಮತವಾದ ಫಲವಿಶೇಷ ಸಾಧನತ್ವವು ಶಾಬ್ದವಾಗಿ ಭಾಸಮಾನವಾಗುತ್ತದೆ. ಮಂತ್ರಕ್ಕೆ ಈ ವ್ಯಾಖ್ಯಾನವೇ ನ್ಯಾಯವಾದದ್ದು. ಶ್ರೀಭಾಷ್ಯಕಾರರು ಗದ್ಯದಲ್ಲಿ ಅವಲಂಬಿಸಿರುವ ಕ್ರಮವೂ ಇದೇ ಅರುಳಾಳ ಪ್ಪೆರುಮಾಳ್ ಎಂಬೆರುಮಾನಾರ್ ಅವರ ಯೋಜನೆಯಲ್ಲಿ ಫಲವು ಅಶಾಬ್ದವಾಗಿರುವುದು ಅಸ್ವಾರಸಿಕವೆಂದು ಭಾವ.

**ಹೀಗೆ ದ್ವಯಮಂತ್ರದಲ್ಲಿ ಪ್ರತಿಪಾದಿಸಿದ ಅರ್ಥಗಳ ಸಂಗ್ರಹ.**

ಹೀಗೆ ಆಯಾಯಾ ಪ್ರಮಣೋಪಪತ್ತಿ ಸಂಪ್ರದಾಯಾನುಸಾರವಾಗಿ ವಿವರಿಸಲ್ಪಟ್ಟ ಪ್ರಪತ್ತಿಯ ಪದಾರ್ಥಗಳೂ, ವಾಕ್ಯಾರ್ಥವೂ ಸುಖವಾಗಿ ತಿಳಿಯಲ್ಪಡುವುದಕ್ಕೋಸ್ಕರ ಆನುಪೂರ್ವಿಯಾಗಿ ನಿಷ್ಕೃಷ್ಟವಾದ ಪದಗಳ ಅರ್ಥ ಮತ್ತು ವಾಕ್ಯಾರ್ಥದ ಸಾರಾಂಶವನ್ನು **ಇಪ್ಪಡಿ ದ್ವಯತ್ತಿಲ್ ಪದಂಗಳಿಲ್ ಅಡೈವೇ** ಎಂದಾರಂಭಿಸಿ ಪರಿಷ್ಕರಿಸಿ ಅನುಗ್ರಹಿಸುತ್ತಾರೆ. ಅದಾಗಿ ಹೀಗೆ ದ್ವಯಮಂತ್ರದ ಪದಗಳಲ್ಲಿ **ಅಡೈವೇ** – ಕ್ರಮವಾಗಿ, ಶಬ್ದಾರ್ಥಗಳ ಸ್ವಭಾವದಿಂದ, **ಪುರುಷಕಾರ ಯೋಗಂ** – ಪುರುಷಕಾರಯೋಗವು – ಇದು ಶ್ರೀಮಚ್ಛಬ್ದದಲ್ಲಿರುವ

**ಅದಿನ್‌ನಿತ್ಯತ್ವಮ್, ಉಪಾಯ ವೈಶಿಷ್ಟ್ಯಮ್, ಶರಣ್ಯಗುಣಪೂರ್ಣತ್ವಮ್, ಸಂಬಂಧವಿಶೇಷಮ್, ದಿವ್ಯ ಮಂಗಳವಿಗ್ರಹಯೋಗಮ್, ಅದಿಲ್ ಶೇಷಭೂತನ್ನಿಟ್ಟಿಯುಮ್‌ತುರೈ, ಅದಿಲ್ ಉಪಾಯತ್ವಪ್ರಕಾರಮ್, ವಶೀಕರಣ ವಿಶೇಷಮ್, ತತ್ಪರಿಕರಂಗಳ್, ಅಧಿಕಾರಿ ವಿಶೇಷಮ್, ಪ್ರಾಪ್ಯವೈಶಿಷ್ಟ್ಯಮ್, ಗುಣವಿಭೂತಿ**

---

ಶ್ರೀಶಬ್ದಾರ್ಥ. **ಅದಿನ್ ನಿತ್ಯತ್ವಮ್** – ಅದರ ನಿತ್ಯತ್ವ - ಇದು ಮತುಪ್ ಪ್ರತ್ಯಯಾರ್ಥ. **ಉಪಾಯ ವೈಶಿಷ್ಟ್ಯಮ್** – ಶ್ರೀವಿಶಿಷ್ಟನು ಉಪಾಯಭೂತನು ಎಂದರ್ಥ. ಇದು ಶ್ರೀಮತ್ ಶಬ್ದಾರ್ಥ. ವೈಶಿಷ್ಟ್ಯವು ಮತುಬರ್ಥ, ಉಪಾಯತ್ವವೂ ಉಭಯಸಾಧಾರಣವಾಗಿ ನಿತ್ಯಸಿದ್ಧವು ಎಂದರ್ಥ. ಶ್ರೀಯು ವಿಶೇಷಣಭೂತಳೆಂಬುದು ಈ ಅಧಿಕಾರದಲ್ಲಿಯೂ, ಸಿದ್ಧೋಪಾಯ ಶೋಧನಾಧಿಕಾರ, ಮೂಲ ಮಂತ್ರಾಧಿಕಾರ, ತತ್ವತ್ರಯಚಿಂತನ, ಪರದೇವ ತಾಪಾರಮಾರ್ಥ್ಯಾಧಿಕಾರಗಳಲ್ಲಿಯೂ ಸಿದ್ಧಾಂತಿತವು. ತತ್ವತ್ರಯಚಿಂತನ ಪರದೇವತಾಪಾರಮಾರ್ಥ್ಯಾಧಿಕಾರಗಳಲ್ಲಿ ಪತಿಯು ಹಾಗೆ ಪತ್ನಿಗೂ ಪಾರಮ್ಯವು ಯಾವ ವೈಕಲ್ಯವೂ ಇಲ್ಲದೆ ತಿಳಿಸಲ್ಪಟ್ಟಿದೆ. ಪ್ರಕಾರ ಪ್ರಕಾರಿಭಾವವು ಸ್ವತಂತ್ರರಾದ ಇಬ್ಬರ ಇಚ್ಛೆಯಿಂದ ಸಿದ್ಧವೆಂದು ಸಮರ್ಥಿಸಲ್ಪಟ್ಟಿದೆ. ಪ್ರಾಪ್ಯಪ್ರಾಪಕಭಾವವು ಇಬ್ಬರಲ್ಲಿಯೂ ಸಮಾನವೆಂಬುದು ಅನೇಕ ಕಡೆಗಳಲ್ಲಿ ಹೇಳಲ್ಪಟ್ಟಿದೆ. ದಿವ್ಯಾತ್ಮಸ್ವರೂಪ, ದಿವ್ಯವಿಗ್ರಹಗಳ ನಿತ್ಯಯೋಗಪ್ರಕಾರವೂ, ಉಪಾಯೋಪೇಯ ದಶೆಗಳಲ್ಲಿ ಅನುರೂಪವೆಂಬುದು ತೋರಿಸಲ್ಪಟ್ಟಿದೆ ಹೀಗೆ ವಿಶಿಷ್ಟವಾದ ಪರತತ್ವದಲ್ಲಿ ವಿಶೇಷಣ ಭೂತೆಯಾದ, ಜಗನ್ಮಾತೆಯಾದ ಲಕ್ಷ್ಮಿಗೆ, ಪ್ರಜೆಗಳನ್ನು ಪುರುಷಕಾರಭೂತೆಯಾಗಿಯೂ ಇದ್ದು ಪರಿಪಾಲನಮಾಡುವುದು ಅಧಿಕವಾದ ಆಕಾರವೆಂಬುದು ಪ್ರಾಮಾಣಿಕನಾದ ಮಾತು, ಎಂಬುದು "ಆಕಾರತ್ರಯ ಸಂಪನ್ನಾಮ್", - ಉಪಾಯತ್ವ, ಉಪೇಯತ್ವ, ಪುರುಷಕಾರತ್ವವೆಂಬ ಮೂರು ಆಕಾರಗಳಿಂದ ಕೂಡಿದ್ದಾಳೆಂದು ಹೇಳುವ ಕೂಟಸ್ಥರಾದ, 'ಅಮ್ಮಾಳ್' – ಎಂಬ ವಾತ್ಸ್ಯವರದಾಚಾರ್ಯರವರ ಶ್ರೀಸೂಕ್ತಿಯಿಂದ ಏರ್ಪಡುತ್ತದೆ. "ಯದ್ವಾನಮೇ ಭುಜಬಲಂ ತವಪಾದಪದ್ಮೆ ಲಾಭೇತ್ವಮೇವ ಶರಣಂ ವಿಧಿತಃ ಕೃತಾಸಿ" ಎಂಬ ಪರಾಶರಭಟ್ಟರ ಶ್ರೀಸೂಕ್ತಿಯೂ ( ಶ್ರೀಗುಣರತ್ನಕೋಶ ) ಪುರುಷಕಾರತ್ವಕ್ಕೆ ಪ್ರಮಾಣವಾದದ್ದು. ಪತಿಯು ಹಾಗೆ ಪತ್ನಿಗೆ ಉಪಾಯತ್ವವು ಸುನಿಶ್ಚಿತವಾದ ಮೇಲೆ, "ಶ್ರಾವಯತಿ" ಎಂಬ ವ್ಯುತ್ಪತ್ತಿಯಿಂದ ಶ್ರೀಶಬ್ದದಲ್ಲಿ ಪುರುಷಕಾರತ್ವವೂ ಸಿದ್ಧವೆಂಬುದೂ, ಅದರ ನಿತ್ಯತ್ವವೂ, ಪ್ರಜೆಗಳಿಗೆ ಹಿತಬುದ್ಧಿಯಿಂದ ಪತಿಯಲ್ಲಿ ಲಕ್ಷ್ಮಿಯಿಂದ ಪರಿಪಾಲಿಸಲ್ಪಡುತ್ತದೆ ಯೆಂಬುದೂ ಪ್ರಾಮಾಣಿಕರಿಂದ ಅಂಗೀಕರಿಸಬೇಕೆಂಬುದು ಸಿದ್ಧಾಂತ. ಈ ಅರ್ಥಗಳು ಶ್ರೀ, ಶ್ರೀಮತ್ ಶಬ್ದಗಳಿಂದ ತಿಳಿಸಲ್ಪಡುತ್ತವೆಯೆಂಬುದು ಆಚಾರ್ಯರ ಹೃದಯ. **ಶರಣ್ಯ ಗುಣಪೂರ್ಣತ್ವಮ್** – ಉಪಾಯತ್ವಕ್ಕೆ ಅಪೇಕ್ಷಿತವಾದ ಕಲ್ಯಾಣಗುಣಗಳ ಪರಿಪೂರ್ತಿ - ಇದು ನಾರಾಯಣ ಶಬ್ದಾರ್ಥ. **ಸಂಬಂಧ ವಿಶೇಷಮ್** – ಇದೂ ನಾರಾಯಣ ಶಬ್ದಾರ್ಥ. ಆಧಾರತ್ವ ವ್ಯಾಪ್ಯತ್ವಾದಿಗಳೂ, "ಮಾತಾಪಿತಾಭ್ರಾತಾ ನಿವಾಸಶ್ಶರಣಂ ಸುಹೃತ್ ಗತಿ ರ್ನಾರಾಯಣಃ" ಎಂಬ ಶ್ರುತ್ಯುಕ್ತವಾದ ಸಂಬಂಧ ವಿಶೇಷಣವೂ ವಿವಕ್ಷಿತ. **ದಿವ್ಯಮಂಗಳ ವಿಗ್ರಹ ಯೋಗಮ್** ಇದು "ಚರಣ" ಶಬ್ದದಿಂದ ಉಪಲಕ್ಷಿತವಾದ ಅರ್ಥ. ದಿವ್ಯಮಂಗಳ ವಿಗ್ರಹವೂ ಲಕ್ಷ್ಮೀ ವಿಶೇಷಣ ವಿಶಿಷ್ಟವಾದದ್ದೆಂಬುದೂ ವಿವಕ್ಷಿತ. **ಅದಿಲ್ ಶೇಷಭೂತನ್ ಇಟ್ಟಿಯುಮ್‌ತುರೈ** – ಇದೂ, ಚರಣಶಬ್ದಾರ್ಥ. ಶೇಷಭೂತನು ಭಗವಂತನ ಪಾದಗಳನ್ನು ಕಟ್ಟಿಕೊಂಡು ತನ್ನ ಅಪೇಕ್ಷಿತಾರ್ಥವನ್ನು ದೈನ್ಯದಿಂದ ವಿಜ್ಞಾಪಿಸಿದರೆ, ಭಗವಂತನಿಗೆ ಇವನಲ್ಲಿ ವಿಶೇಷಕೃಪೆಯು ಉಂಟಾಗುತ್ತದೆಯೆಂಬುದುಭಾವ. **ಅದಿನ್ ಉಪಾಯತ್ವ ಪ್ರಕಾರಮ್** – ಇದು "ಚರಣ" ಶಬ್ದದಿಂದ ಕೂಡಿದ "ಶರಣ" ಶಬ್ದಾರ್ಥ. **ವಶೀಕರಣ ವಿಶೇಷಮ್** – 'ಪ್ರಪದ್ಯೇ' ಎಂಬ ಧಾತ್ವರ್ಥ. ಅಂಗಿಯಾದ ಭರಸಮರ್ಪಣಾರ್ಥ **ತತ್ಪರಿಕರಂಗಳುಮ್**, ಪ್ರ ಎಂಬ ಉಪಸರ್ಗದಿಂದ ಮಹಾವಿಶ್ವಾಸವೂ, ಶರಣಂಪ್ರಪದ್ಯೇ - ಎಂಬಲ್ಲಿ ಉಪಾಯತ್ವ ಪ್ರಾರ್ಥನಾಂತರ್ಗತ ಗೋಪ್ತೃತ್ವವರಣವೂ, ಉತ್ತಮಪುರುಷದಿಂದ ಕಾರ್ಪಣ್ಯವೂ, ಶ್ರೀಮನ್ನಾರಾಯಣ ಶಬ್ದದಿಂದ ಆನುಕೂಲ್ಯ ಸಂಕಲ್ಪ ಪ್ರಾತಿಕೂಲ್ಯ ವರ್ಜನ ಸಂಕಲ್ಪಗಳೂ, ಈ ರೀತಿಯಾದ ಐದು ಅಂಗಗಳೂ ವಿವಕ್ಷಿತ. **ಅಧಿಕಾರಿ ವಿಶೇಷಮ್** – ಆಕಿಂಚನ್ಯಾನನ್ಯಗತಿತ್ವಗಳು

**ವಿಶಿಷ್ಟ ಪ್ರಾಪ್ಯತ್ವಮ್. ಕೈಂಕರ್ಯ ಪ್ರತಿ ಸಂಬಂಧಿತ್ವಮ್. ಕೈಂಕರ್ಯ ಪ್ರಾರ್ಥನೈ, ಸರ್ವವಿಧ ಕೈಂಕರ್ಯ ಲಾಭಮ್, ಸರ್ವಾನಿಷ್ಟ ನಿವೃತ್ತಿ, ಅದಿನುಡೈಯ ಆತ್ಯಂತಿಕತ್ವಮ್, ಪರಾಧೀನ ಪರಾರ್ಥಕರ್ತೃತ್ವಮ್ ತಥಾವಿಧ ಭೋಕ್ತೃತ್ವಮ್, ಎನ್ರಿವೈ ಪ್ರಧಾನಮಾಯ್, ಇವತ್ತುಕ್ಕು ಅಪೇಕ್ಷಿತಂಗಳುಮೆಲ್ಲಾಮ್ ಸಿದ್ಧಸಾಧ್ಯ ವಿಭಾಗವತ್ತಾನ ಉಪಾಯುಮೆನ್ರುಮ್ ಉಪೇಯುಮೆನ್ರುಮ್, ಇರಣ್ಡು ಪ್ರಧಾನ ಪ್ರತಿಪಾದ್ಯಂಗಳೋಡೇ ತುವಕ್ಕುಣ್ಡು ಪ್ರಕಾಶಿತಂಗಳಾಯಿತ್ತು.**

**ಅನುಷ್ಠಾನಕಾಲೇ ಅನುಸಂಧಾನಕ್ರಮಂ ಶಿಕ್ಷಯತಿ.**

**ಇಪ್ಪಡಿ ಶಾರೀರಕ ಶಾಸ್ತ್ರತ್ತಿಲ್ಪೋಲೇ ತತ್ವವಿಶೇಷಮುಮ್, ಉಪಾಯ ವಿಶೇಷಮುಮ್, ಫಲವಿಶೇಷಮುಮ್ ಇಮ್ಮಂತ್ರರತ್ನತ್ತಿಲೇ ಪ್ರತಿಪಾದಿತಮಾನಾಲುಮ್ ಇದು ಶ್ವೇತಾಶ್ವತರ ಮಂತ್ರಮ್ಪೋಲೇ ಫಲಾ**

---

ಇದು ಉತ್ತಮನಲ್ಲಿ ಶಾಬ್ದ. **ಪ್ರಾಪ್ಯವೈಶಿಷ್ಟ್ಯಮ್** – ಉತ್ತರಖಂಡದಲ್ಲಿ ಶ್ರೀವಿಶಿಷ್ಟನು ಪ್ರಾಪ್ಯನೆಂಬುದು, ಶ್ರೀಮತ್ ಶಬ್ದದಲ್ಲಿ ವಿವಕ್ಷಿತವು. **ಗುಣ ವಿಭೂತಿ ವಿಶಿಷ್ಟ ಪ್ರಾಪ್ಯತ್ವಮ್** – ಇದು ಉತ್ತರಖಂಡದ ಚತುರ್ಥ್ಯಂತ ನಾರಾಯಣ ಶಬ್ದಾರ್ಥ – ಗುಣ, ವಿಗ್ರಹ, ವಿಭೂತಿಗಳಿಂದ ಕೂಡಿದ ಭಗವಂತನು ಪ್ರಾಪ್ಯನು. **ಕೈಂಕರ್ಯ ಪ್ರತಿಸಂಬಂಧಿತ್ವಮ್** – ಕೈಂಕರ್ಯಕ್ಕೆ ಉದ್ದೇಶ್ಯಭೂತನು - ಇದು ಚತುರ್ಥಿಗೆ ಅರ್ಥ. **ಕೈಂಕರ್ಯ ಪ್ರಾರ್ಥನಾ** – "ಭವೇಯಂ" ಎಂಬ ಪದದಿಂದ ಕೂಡಿದ ಚತುರ್ಥಿಗೆ ಕೈಂಕರ್ಯವನ್ನು ಪ್ರಾರ್ಥಿಸುವುದು ಅರ್ಥ. **ಸರ್ವವಿಧ ಕೈಂಕರ್ಯ ಲಾಭಮ್** – ಇದೂ ಚತುರ್ಥಿಗೆ ಅರ್ಥ. **ಸರ್ವಾನಿಷ್ಟ ನಿವೃತ್ತಿ** – ಸರ್ವಅನಿಷ್ಟಗಳು ಹೋಗುವುದು **ಅದಿನುಡೈಯ ಅತ್ಯಂತಿಕತ್ವಮ್** – ಅದಕ್ಕೆ ಉತ್ತರಾವಧಿ ಇಲ್ಲದಿರುವುದು **ಪರಾಧೀನ ಪರಾರ್ಥ ಕರ್ತೃತ್ವಮ್**- ಕೈಂಕರ್ಯವನ್ನು ಮಾಡುವುದು ಭಗವದಧೀನ. ಕರ್ತೃತ್ವವು ಪರಾರ್ಥ – ಭಗವಂತನ ಪ್ರಯೋಜನಕ್ಕಾಗಿ ಮಾಡತಕ್ಕದ್ದು. **ತಥಾವಿಧ ಭೋಕ್ತೃತ್ವಮ್** – ಪರಾಧೀನ ಭೋಕ್ತೃತ್ವವು ಜೀವನದು. ಇವು ನಾಲ್ಕೂ ನಮಶ್ಶಬ್ದಾರ್ಥಗಳು. **ಎನ್ರಿವೈಪ್ರಧಾನಮಾಯ್ ಇತ್ಯಾದಿ** – ಇವುಗಳೇ ಪ್ರಧಾನವಾಗಿ ಇವುಗಳಿಗೆ ಅಪೇಕ್ಷಿತವಾದವುಗಳೆಲ್ಲಾ **ಸಿದ್ಧಸಾಧ್ಯ ವಿಭಾಗವತ್ತಾನ ಉಪಾಯುಮೆನ್ರುಮ್ ಉಪೇಯುಮೆನ್ರುಮ್** – ಸಿದ್ಧೋಪಾಯ - ಶ್ರೀಮನ್ನಾರಾಯಣನು, ಸಾಧ್ಯೋಪಾಯ ಶರಣಾಗತಿ ಇದು ಪೂರ್ವಖಂಡ ಪ್ರತಿಪಾದ್ಯವು. ಸಿದ್ಧೋಪೇಯ - ಭಗವತ್ಪರಿಪೂರ್ಣಾನುಭವ ಕೈಂಕರ್ಯಾದಿ, ಇದು ಉತ್ತರಖಂಡ ಪ್ರತಿಪಾದ್ಯವು, ಈ ರೀತಿಯಾಗಿ **ಇರಂಡು ಪ್ರಧಾನ ಪ್ರತಿಪಾದ್ಯಂಗಳೋಡೇ** – ಎರಡು ಪ್ರಧಾನವಾಗಿ ಪ್ರತಿಪಾದ್ಯಗಳೊಡನೆ **ತುವಕ್ಕುಂಡು** – ಸಂಬಂಧವನ್ನು ಹೊಂದಿ **ಪ್ರಕಾಶಿತಂಗಳಾಯಿಟ್ರು** – **ಪ್ರಕಾಶಿತಗಳಾಗಿವೆ.**

**ಅನುಷ್ಠಾನಕಾಲದಲ್ಲಿ ದ್ವಯಾರ್ಥಾನುಸಂಧಾನ ಕ್ರಮ**

ಅನಂತರ ಅನುಷ್ಠೇಯಾರ್ಥ ಪ್ರಕಾಶವಾದ ಈ ದ್ವಯಮಂತ್ರದ ಅರ್ಥವನ್ನು ಅನುಸಂಧಾನಮಾಡಬೇಕಾದ ರೀತಿಯನ್ನು **ಇಪ್ಪಡಿ ಶಾರೀರಕ ಶಾಸ್ತ್ರತ್ತಿಲ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ, ಹೀಗೆ ಶಾರೀರಕ ಶಾಸ್ತ್ರದಲ್ಲಿ ಅಂದರೆ ಬ್ರಹ್ಮಸೂತ್ರ ವ್ಯಾಖ್ಯಾನವಾದ ಶ್ರೀಭಾಷ್ಯಾದಿಗ್ರಂಥಗಳಲ್ಲಿ ತತ್ವವಿಶೇಷವು ಮೊದಲೆರಡು ಅಧ್ಯಾಯಗಳಿಂದ ಹೇಳಲ್ಪಟ್ಟಿದೆ. ಉಪಾಯವಿಶೇಷವು ಸಾಧನಾಧ್ಯಾಯವೆಂಬ ಮೂರನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ, ಫಲ ವಿಶೇಷವು ಫಲಾಧ್ಯಾಯವೆಂಬ ನಾಲ್ಕನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಈ ರೀತಿಯಲ್ಲಿ **ತತ್ವವಿಶೇಷವು** ದ್ವಯಮಂತ್ರದಲ್ಲಿ ಪೂರ್ವಖಂಡದಲ್ಲಿ 'ಶ್ರೀಮನ್ನಾರಾಯಣ' ಶಬ್ದಗಳಲ್ಲಿ ಹೇಳಲ್ಪಟ್ಟಿದೆ. **ಉಪಾಯ ವಿಶೇಷವು** "ಚರಣೌ ಶರಣಂ ಪ್ರಪದ್ಯೇ" ಎಂಬಲ್ಲಿ ಹೇಳಲ್ಪಟ್ಟಿದೆ. **ಫಲವಿಶೇಷವು** ಉತ್ತರಖಂಡದಲ್ಲಿ ಪ್ರತಿಪಾದಿತವಾಗಿದೆ. **ಆನಾಲುಮ್** – ಹೀಗೆ ತತ್ವಹಿತ ಪುರುಷಾರ್ಥಗಳ ಕ್ರಮವು, ಉತ್ಪತ್ತಿ ಕ್ರಮ ಮತ್ತು ಪಾಠ ಕ್ರಮಗಳನ್ನು ಅನುಸರಿಸಿ ಏರ್ಪಟ್ಟಿದ್ದರೂ **ಇದುಶ್ವೇತಾಶ್ವತರ ಮಂತ್ರಮ್ಪೋಲೇ** – ಶ್ವೇತಾಶ್ವತರ ಮಂತ್ರ

**ಪೇಕ್ಷಾಪೂರ್ವಕಮಾನ ಉಪಾಯಾನುಷ್ಠಾನ ಪ್ರಧಾನಮಾಹೈಯಾಲ್, ಉಪಾಯಫಲಂಗಳುಡೈಯ ಉತ್ಪತ್ತಿಕ್ರಮತ್ತೋಡೇ ಶೇರ್‌ನ್ದ ಪಾಠಕ್ರಮತ್ತಾಲೇ ಫಲಪ್ರತಿಪಾದಕ ವಾಕ್ಯಮ್ ಪಿರ್ಪಟ್ಟಾಲುಮ್, ಅರ್ಥಕ್ರಮತ್ತಾಲೇ** ಇದು ಮುರ್ಪಡ ಅನುಸಂಧೇಯಮೆನ್ರು ಪೂರ್ವರ್‌ಹಳ್ ಅರುಳಿಚ್ಚೆಯ್‌ವರ್‌ಹಳ್. ಪುರುಷನ್ ಪುರುಷಾರ್ಥತ್ತೈ ವಿಮರ್ಶಿತ್ತುಕ್ಕೊಂಡನ್ರಿ ಉಪಾಯ ವಿಮರ್ಶನಮುಮ್, ಉಪಾಯಾನುಷ್ಠಾನಮುಮ್ ಪಣ್ಣಾನಿರೇ. ಇಪ್ಪಡಿ ತಿರುಮನ್ತ್ರತ್ತಿಲುಮ್, ಉಪಾಯಫಲಪ್ರತಿಪಾದಿಕಾಂಶಙ್ಗಳಿಲ್ ಕ್ರಮಪ್ರಕಾರಙ್ಗಳೈಕ್ಕಣ್ಡುಕೊಳ್ವದು. ಫಲಾರ್ಥಿಯಾಯ್ ಅಧಿಕಾರಿಯಾನಾಲಿರೇ ಇವನುಕ್ಕಿವ್ವುಪಾಯಾನುಷ್ಠಾನಮ್ ವರುವದು.

1 "ದ್ವಯೇನ ಶರಣಂವ್ರಜೇತ್ 2) ದ್ವಯಾರ್ಥಶ್ಶರಣಾಗತಿಃ" ಎನ್ಗಿರ ಅಭಿಯುಕ್ತರ್ ಪಾಶುರಙ್ಗಳಾಲುಮ್ ದ್ವಯಮ್ ಉಪಾಯಾನುಷ್ಠಾನತ್ತೈಪ್ರಧಾನಮಾಹ ಪ್ರಕಾಶಿಪ್ಪಿಕ್ಕಿರದು.

---

ದಲ್ಲಿ "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" 'ಮೋಕ್ಷವನ್ನು ಇಚ್ಛಿಸಿ, ಶರಣ ಹೊಂದುತ್ತೇನೆ' ಎಂದು ಫಲಾಪೇಕ್ಷಾಪೂರ್ವಕವಾಗಿ ಉಪಾಯಾನುಷ್ಠಾನವು ಹೇಳಲ್ಪಟ್ಟಿರುವ ಕ್ರಮದಲ್ಲಿ **ಫಲಾಪೇಕ್ಷಾಪೂರ್ವಕಮಾನ** ಇತ್ಯಾದಿ – ಫಲವನ್ನು ಮೊದಲು ಅಪೇಕ್ಷಿಸಿ **ಉಪಾಯಾನುಷ್ಠಾನ ಪ್ರಧಾನಮಾಹೈಯಾಲೇ** – ಅನಂತರ ಪ್ರಧಾನವಾದ ಉಪಾಯಾನುಷ್ಠಾನವು ಮಾಡಬೇಕಾದ್ದರಿಂದ **ಉಪಾಯಫಲಂಗಳುಡೈಯ** ಇತ್ಯಾದಿ ಉಪಾಯ–ಶರಣಾಗತಿ, ಫಲ - ಮೋಕ್ಷ, ಇವುಗಳು ಉತ್ಪತ್ತಿಕ್ರಮದೊಡನೆ ಸೇರಿದ ಪಾಠಕ್ರಮವನ್ನು ಅನುಸರಿಸಿ ಫಲಪ್ರತಿಪಾದಕ ವಾಕ್ಯವು **ಪಿರ್ಪಟ್ಟಾಲುಮ್** – ದ್ವಯಮಂತ್ರದಲ್ಲಿ ಅನಂತರ ಹೇಳಲ್ಪಟ್ಟಿದ್ದರೂ, ಅರ್ಥಕ್ರಮದಲ್ಲಿ ಈ ಫಲಾಪೇಕ್ಷೆಯು ಮೊದಲು ಅನುಸಂಧೇಯವೆಂದು ಪೂರ್ವಾಚಾರ್ಯರುಗಳು ಅನುಗ್ರಹಿಸಿದ್ದಾರೆ. "ಆದಾಗಿ ಮಂತ್ರಗಳಿಗೆ ಪದಕ್ರಮವು ಅಧ್ಯಯನನಿಯತ. ಅನ್ವಯವು ಅರ್ಥಾನುಗುಣವಾಗಿ ಮಾಡಲ್ಪಡುತ್ತದೆ" ಎಂದು ಪೂರ್ವಾಧಿಕಾರದಲ್ಲಿ ಹೇಳಿರುವಂತೆ, ಇಲ್ಲಿಯೂ ಉತ್ತರಖಂಡದಲ್ಲಿ ಹೇಳಿರುವ ಭಗವದನುಭವ ರೂಪ ಪರಿವಾಹವಾದ ಕೈಂಕರ್ಯವನ್ನು ಮೊದಲು ಅಪೇಕ್ಷಿಸಿ ನಂತರ ಪೂರ್ವಖಂಡದಲ್ಲಿ ಹೇಳಿರುವ ಶರಣಾಗತಿರೂಪ ಉಪಾಯಾನುಷ್ಠಾನವನ್ನು ಮಾಡಬೇಕು ಎಂದು ತಾತ್ಪರ್ಯ. ಇದಕ್ಕೆ ಕಾರಣವೇನೆಂದರೆ **ಪುರುಷನ್ ಪುರುಷಾರ್ಥತ್ತೈ** ಇತ್ಯಾದಿ – ಯಾವ ಪುರುಷನೂ ಪುರುಷಾರ್ಥವನ್ನು (ಪ್ರಯೋಜನವನ್ನು)ಮೊದಲು ವಿಮರ್ಶೆಮಾಡಿಕೊಂಡಲ್ಲದೆ, ಉಪಾಯ ವಿಮರ್ಶವನ್ನೂ ಉಪಾಯಾನುಷ್ಠಾನವನ್ನೂ ಮಾಡುವುದಿಲ್ಲ. **ಇಪ್ಪಡಿ ತಿರುಮಂತ್ರತ್ತಿಲುಮ್** ಇತ್ಯಾದಿ –ಹೀಗೆ ಅಷ್ಟಾಕ್ಷರಮಂತ್ರದಲ್ಲಿಯೂ ಉಪಾಯ ಫಲಪ್ರತಿಪಾದಕಾಂಶಗಳಲ್ಲಿ ಕ್ರಮ ಪ್ರಕಾರಗಳನ್ನು ತಿಳಿದುಕೊಳ್ಳತಕ್ಕದ್ದು. **ಫಲಾರ್ಥಿಯಾಯ್** ಇತ್ಯಾದಿ – ಫಲವನ್ನು ಅರ್ಥಿಸಿ (ಅಪೇಕ್ಷಿಸಿ) ಫಲಾರ್ಥಿತ್ವರೂಪ ಅಧಿಕಾರಿಯಾದರೇನೇ ಇವನಿಗೆ ಈ ಉಪಾಯಾನುಷ್ಠಾನವು ಘಟಿಸುತ್ತದೆ. ಅಧಿಕಾರವು ಸಿದ್ಧಿಸಲು ಮೊದಲು ಫಲವನ್ನು ಅನು ಸಂಧಾನ ಮಾಡಬೇಕು.

(1) **ದ್ವಯೇನ ಶರಣಂ ವ್ರಜೇತ್** – ದ್ವಯಮಂತ್ರವನ್ನು ಕರಣಮಂತ್ರವನ್ನಾಗಿ ಬಳಸಿ ಶರಣಾಗತಿ ಮಾಡಬೇಕು. (2) **ದ್ವಯಾರ್ಥಶ್ಶರಣಾಗತಿಃ**–ಶರಣಾಗತಿಯೇ ದ್ವಯಮಂತ್ರಕ್ಕೆ ಪ್ರತಿಪಾದ್ಯವಾದ ಅರ್ಥವೆಂದು, ಅಭಿಯುಕ್ತರ (ಅಗ್ರಗಣ್ಯರು) ಶ್ರೀಸೂಕ್ತಿಗಳಿಂದಲೂ ದ್ವಯಮಂತ್ರವು ಉಪಾಯಾನುಷ್ಠಾನವನ್ನು ಪ್ರಧಾನವಾಗಿ, ಪ್ರಕಾಶಪಡಿಸುತ್ತದೆ.

---

1) .................. 2) ನಾರಾಯಣಮ್

## ದ್ವಯಸ್ಯ ಅಖಂಡಾರ್ಥವ್

**ಇಙ್ಗು ಪೂರ್ವಖಂಡಮುಮ್, ಚತುರ್ಥ್ಯನ್ತ ಪದಙ್ಗಳುಮ್, ನಮಸ್ಸುಮಾಹ ಮೂನ್ರು ಅವಾಂತರ ವಾಕ್ಯಙ್ಗಳಾನಾಲುಮ್ ತಿರಳ ಉಪಾಯ ಪ್ರಧಾನಮಾನ ಒರುವಾಕ್ಯಮಾಯ್ತ್ತಲೈಕ್ಕಟ್ಟಕ್ಕಡವದು.**

---

## ದ್ವಯಮಂತ್ರಕ್ಕೆ ವಾಕ್ಯಾರ್ಥ

ಅನಂತರ ದ್ವಯಮಂತ್ರದಲ್ಲಿ ಮೂರು ಅವಾಂತರವಾಕ್ಯಗಳಿದ್ದರೂ ಉಪಾಯಪ್ರಧಾನವಾದ ಮಹಾವಾಕ್ಯವು ಒಂದೇ ಎಂದು **ಇಂಗು ಪೂರ್ವಖಂಡಮುಮ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಈ ದ್ವಯಮಂತ್ರದಲ್ಲಿ ಪೂರ್ವಖಂಡವು ಒಂದು ವಾಕ್ಯ. "ಶ್ರೀಮತೇ ನಾರಾಯಣಾಯ"ಎಂಬ ಚತುರ್ಥ್ಯಂತ ಪದಗಳು ಸೇರಿ ಒಂದು ವಾಕ್ಯ. ನಮಶ್ಶಬ್ದವು ಒಂದು ವಾಕ್ಯ. ಹೀಗೆ ಮೂರು ಬೇರೆ ಬೇರೆ ಅವಾಂತರ ವಾಕ್ಯಗಳಾದರೂ, ಉಪಾಯಪ್ರಧಾನವಾದ ಏಕವಾಕ್ಯವಾಗಿ **ತಲೈಕ್ಕಟ್ಟಕ್ಕಡವದು** – ಒಂದುಗೂಡಿಸಲ್ಪಡಬೇಕು. ಉತ್ತರಖಂಡದಲ್ಲಿ ಅಧ್ಯಾಹೃತಗಳಾದ ಕ್ರಿಯಾಪದಗಳಿಂದ ಎರಡು ವಾಕ್ಯಗಳಿಗೂ ಭೇದವು ಅಭಿಮತ. ಅದಾಗಿ "ಶ್ರೀಮತೆ ನಾರಾಯಣಾಯ ಭವೇಯಮ್", 'ನಮಮ ಕಿಂಚಿತ್ಸ್ಯಾತ್' ಎಂದು ಎರಡು ವಾಕ್ಯಗಳು. "ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ" ಎಂಬುದು ಒಂದು ವಾಕ್ಯ. ಒಟ್ಟು ಮೂರು ವಾಕ್ಯಗಳು. ಪೂರ್ವಖಂಡದಲ್ಲಿ 'ಪ್ರಾರ್ಥಯಾಮಿ' ಎಂಬ ಪದವನ್ನು ಅಧ್ಯಾಹಾರ ಮಾಡಿ ಪ್ರಾರ್ಥನಾನ್ವಿತ ಭರನ್ಯಾಸವನ್ನು ಅಂಗೀಕರಿಸುವವರಿಗೆ, ಪ್ರಪದ್ಯೇ ಎಂಬುದು ಮಹಾವಿಶ್ವಾಸಮಾತ್ರದಲ್ಲಿ ಪರ್ಯವಸನ್ನವಾಗಿ, ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಾರ್ಥಯಾಮಿ, ಪ್ರಪದ್ಯೇ, ಎಂದು ಎರಡು ಅವಾಂತರ ವಾಕ್ಯಗಳು ಏರ್ಪಟ್ಟು ಒಟ್ಟು ನಾಲ್ಕು ಅವಾಂತರ ವಾಕ್ಯಗಳಾಗುತ್ತವೆ. ಇದು ಮೂರು ವಾಕ್ಯಗಳೆಂಬ ಆಚಾರ್ಯ ಶ್ರೀಸೂಕ್ತಿಗೆ ವಿರೋಧವಾದದ್ದು. ಆದ್ದರಿಂದ 'ಪ್ರಾರ್ಥಯಾಮಿ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ಅನುಚಿತ. "ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ" ಎಂಬುದು ಒಂದೇ ವಾಕ್ಯ,

ಹಾಗಾದರೆ ಮಹಾವಿಶ್ವಾಸ ಭರನ್ಯಾಸಗಳೆರಡೂ. "ಪ್ರಪದ್ಯೇ" ಎಂಬ ಒಂದೇ ಧಾತುವಿನಿಂದ ಹೇಗೆ ತಿಳಿಯುತ್ತವೆ, ಶಾಬ್ದಬೋಧ ಪ್ರಕಾರವು ಹೇಗೆ ಎಂದರೆ ಅದನ್ನು ಆಚಾರ್ಯರೇ ತಿಳಿಸಿರುತ್ತಾರೆ. ಅದಾಗಿ ಶ್ರೀಮತ್ತಾತ್ಪರ್ಯ ಚಂದ್ರಿಕೆಯಲ್ಲಿ, "ಮಹಾವಿಶ್ವಾಸಪೂರ್ವಕ ವಿಶಿಷ್ಟಾಧ್ಯವಸಾಯ ವಿಶೇಷೇ ಪ್ರಾರ್ಥನಾನ್ವಿತ ಭರನ್ಯಾಸೇ ಪ್ರಪದ್ಯತೇ ರ್ಧಾತೋಃ ಮಹಾವಿಶ್ವಾಸಪೂರ್ವಕಂ, "ತದೇಕೋ ಪಾಯತಾ ಯಾಂಚಾ ಪ್ರಪತ್ತಿಃ",ಇತಿ ಲಕ್ಷಣವಚನಾನು ಸಾರೇಣ ರೂಢೇಃ ಪ್ರದರ್ಶನಾತ್, ಎಂದು ಪ್ರಪದ್ಯೇ ಎಂಬ ಧಾತುವೇ ಶಕ್ತಿದ್ವಯದಿಂದ (ಒಂದು ಅವಯವಶಕ್ತಿ, ಮತ್ತೊಂದು ರೂಢಿಶಕ್ತಿ)ಮಹಾವಿಶ್ವಾಸ, ಅದನ್ನು ಅಂಗವಾಗಿ ಉಳ್ಳ ಪ್ರಪತ್ತಿ ಎಂಬ ಎರಡನ್ನೂ ತಿಳಿಸುತ್ತದೆಯೆಂಬುದು ಸಿದ್ಧಾಂತ ಇದೇ, "ಅಂಗಗಳಿಲ್ ಸಾರಮಾನ ವಿಶ್ವಾಸತ್ತೈ ಮುನ್ನಿಟ್ಟುಕ್ಕೊಂಡು ಸಪರಿಕರಮಾನ ಸಾಧ್ಯೋಪಾಯ ಮಿಂಗೇ ತೋತ್ತುಹಿರದು. ಶರಣಶಬ್ದಾನ್ವಿತಮಾನ ಪ್ರಪದ್ಯೇ ಎನ್ನಿರ ಪದತ್ತಿಲೇ, "ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವ ವರಣಂತಥಾ, ಆತ್ಮನಿಕ್ಷೇಪ ಕಾರ್ಪಣ್ಯೇ" ಎನ್ರು ನಿರ್ದಿಷ್ಟಮಾನ ನಾಲುಂ ಶೊಲ್ಲಿತ್ತಾಯಿಟ್ರು", ಎಂದು ಹಿಂದೆಯೇ ವ್ಯಕ್ತವಾಗಿ ಅನುಗ್ರಹಿಸಲ್ಪಟ್ಟಿದೆ. ಶ್ರೀಮತ್ಸಾರಸಾರ, ರಹಸ್ಯರಕ್ಷಾದಿ ಗ್ರಂಥಗಳಲ್ಲಿಯೂ "ಪ್ರಪದ್ಯೇ" ಎಂಬುದಕ್ಕೆ ಭರನ್ಯಾಸಪರ್ಯಂತ ಅರ್ಥವೆಂದು ವ್ಯಕ್ತವಾಗಿ ಹೇಳಲ್ಪಟ್ಟಿರುವುದಕ್ಕೆ ವಿರೋಧವಾಗಿ ಬೇರೆ ಯಾವುದನ್ನೂ ಹೇಳಕೂಡದು. ಆದ್ದರಿಂದ "ಶ್ರೀಮನ್ನಾರಾಯಣ ! ನಿನ್ನ ಚರಣಗಳನ್ನು ನಿರಪೇಕ್ಷೋಪಾಯವಾಗಿ ಅಧ್ಯವಸಾಯಮಾಡಿ "ಶರಣಂಪ್ರಪದ್ಯೇ" ಪ್ರಾರ್ಥನಾನ್ವಿತ ಭರನ್ಯಾಸವನ್ನು ಮಾಡುತ್ತೇನೆಂಬುದು ವಿವಕ್ಷಿತ. ಇಲ್ಲಿ "ಚರಣಾವೇವ" ಎಂದು ಅವಧಾರಣವನ್ನು ಹೇಳುವುದರಿಂದ ನಿರಪೇಕ್ಷತ್ವವು ಏರ್ಪಡುತ್ತದೆ ಈ ನಿರಪೇಕ್ಷೋ

**ಎಙ್ಗನೇ ಎನ್ನಿಲ್ ? ಸರ್ವಸ್ವಾಮಿಯಾಯ್, ಸರ್ವಪ್ರಕಾರ ನಿರತಿಶಯ ಭೋಗ್ಯನಾಯ್, ಪೆರಿಯ ಪಿರಾಟ್ಟಿಯಾ ರೋಡು ಪಿರಿವಿಲ್ಲಾದ ನಾರಾಯಣ್ ತಿರುವಡಿಹಳಿಲ್ ಸ್ವರೂಪ ಪ್ರಾಪ್ತಮಾನ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವವಿಧ ಕೈಙ್ಕರ್ಯತ್ತುಕ್ಕುಮ್ ವಿರೋಧಿಯಾನ ಸರ್ವಮುಮ್ ಕಳಿತ್ತು ಪರಿಪೂರ್ಣ ಕೈಙ್ಕರ್ಯಮ್ ಪೆರುಹೈಕ್ಕು ಅಕಿಂಚನನಾನ ಅಡಿಯೇನ್ ಸ್ವರಕ್ಷಣ ಭರಾದಿಹಳಿಲ್ ಎನಕ್ಕು ಅನ್ವಯಮು ರುಕ್ಕುಮ್ಪಡಿ ಶ್ರೀಮಾನಾನ ನಾರಾಯಣ್ ತಿರುವಡಿಹಳಿಲೇ ಅಙ್ಗಪಂಚಕ ಸಂಪನ್ನಮಾನ ಆತ್ಮರಕ್ಷಾಭರ**

---

ಪಾಯತ್ವವು ಉಪಸರ್ಗದಿಂದ ಕೂಡಿದ ಧಾತ್ವರ್ಥವಾದ ಮಹಾವಿಶ್ವಾಸಕ್ಕೆ ವಿಷಯಭೂತವು. ಅಂದರೆ, ಉಪಾಯಾಂತರಗಳನ್ನು ಅಪೇಕ್ಷಿಸದೆ ನೀನೇ ರಕ್ಷಿಸುತ್ತೀಯಾ ಎಂಬ ಮಹಾವಿಶ್ವಾಸದಿಂದ ಕೂಡಿದ್ದೇನೆಂಬ ಅಧ್ಯವಸಾಯ· "ಪ್ರಪದ್ಯತೇ" ಎಂಬುದಕ್ಕೆ ಸಮುದಾಯ ಶಕ್ತಿಯಿಂದ, "ತದೇಕೋ ಪಾಯತಾ ಯಾಂಚಾನ್ವಿತ ಭರನ್ಯಾಸವು ವಿವಕ್ಷಿಸಲ್ಪಡುತ್ತದೆ. ಅಲ್ಲಿ 'ನಿರಪೇಕ್ಷೋಪಾಯತ್ವವು ಶಬ್ದಾರ್ಥದಲ್ಲಿಯೇ ಅಂತರ್ಗತವಾದ್ದರಿಂದ "ಶರಣ" ಶಬ್ದಕ್ಕೆ ವಿಷಯ ಸಮರ್ಪಕತ್ವವು ಅಂಗೀಕರಿಸಲ್ಪಡಬೇಕಿಲ್ಲ. ಇದನ್ನು ಅಭಿಪ್ರಾಯದಲ್ಲಿಟ್ಟುಕೊಂಡೇ, ಶ್ರೀಮತ್ಸಾರಸಾರದಲ್ಲಿ "ಪ್ರಪದ್ಯೇ ಎನ್ನಿಹ ವಳವಾಲುಮಮ್ಯೆಂದಿರುಕ್ಕ ಉಪಾಯಾಂತರ ನಿವೇಶಂ ತೋಟ್ರುಹೈಕ್ಕಾಹ 'ಶರಣ' ಶಬ್ದವೆಂದು ಅನುಗ್ರಹಿಸಲ್ಪಟ್ಟಿದೆ. "ಅಮ್ಯೆಂದಿರುಕ್ಕ" ಎಂಬುದರಿಂದ ನಿರಪೇಕ್ಷೋಪಾಯತ್ವವನ್ನೊಳಗೊಂಡ ವ್ಯವಸಾಯವಿಶೇಷರೂಪವಾದ ಪ್ರಪತ್ತಿಗೆ ಅದೇ ಧಾತುವಿನಿಂದಲೇ ಮುಖ್ಯವೃತ್ತಿಯಾಗಿ ವಿವಕ್ಷೆಯು ಸಿದ್ಧ. ಉಪಾಯಾಂತರ ಸ್ಥಾನನಿವೇಶವೇ ನಿರಪೇಕ್ಷೋಪಾಯತ್ವ.

ಈ ವಿಷಯಗಳನ್ನು ಅನುಸರಿಸಿ, **ಎಂಗನೇಯನ್ನಿಲ್**–ಎಂದಾರಂಭಿಸಿ ಮಹಾವಾಕ್ಯಾರ್ಥವನ್ನು ಆಚಾರ್ಯರು ಅನುಗ್ರಹಿಸುತ್ತಾರೆ. ಅದಾಗಿ, **ಸರ್ವಸ್ವಾಮಿಯಾಯ್**–ಎಲ್ಲರಿಗೂ ಸ್ವಾಮಿಯಾಗಿ, (ಇದು ಉತ್ತರಖಂಡದಲ್ಲಿ ಲಕ್ಷ್ಮೀ ವಿಶಿಷ್ಟ ನಾರಾಯಣ ಶಬ್ದಾರ್ಥ) **ಸರ್ವಪ್ರಕಾರ ನಿರತಿಶಯ ಭೋಗ್ಯನಾಯ್**-ಎಲ್ಲಾ ರೀತಿಗಳಲ್ಲಿಯೂ ಅತ್ಯಂತ ಭೋಗ್ಯನಾಗಿ (ಸರ್ವಸ್ವಾಮಿತ್ವವೂ ನಿರತಿಶಯ ಭೋಗ್ಯತ್ವವೂ ಲಕ್ಷ್ಮೀನಾರಾಯಣರಿಬ್ಬರಿಗೂ ಸಮಾನ)**ಪೆರಿಯ ಪಿರಾಟ್ಟಿಯಾರೋಡು ಪಿರಿವಿಲ್ಲಾದ**-ಮಹಾಲಕ್ಷ್ಮಿಯೊಡನೆ ವಿಶ್ಲೇಷವಿಲ್ಲದೆ ಒಡಗೂಡಿರುವ, (ಇದು ಶ್ರೀಮತೇ ಶಬ್ದಾರ್ಥ)**ನಾರಾಯಣನ್ ತಿರುವಡಿಹಳಿಲ್** ನಾರಾಯಣನ ಶ್ರೀ ಪಾದಗಳಲ್ಲಿ – ಶ್ರೀ ಪಾದಗಳು ದಾಸನಿಗೆ ಸ್ವರೂಪ ಪ್ರಾಪ್ತವಾದ ಕೈಂಕರ್ಯ ಸ್ಥಾನ. **ಸ್ವರೂಪ ಪ್ರಾಪ್ತಮಾನ** ಇತ್ಯಾದಿ–ಸ್ವರೂಪ ಪ್ರಾಪ್ತವಾದ ಸರ್ವದೇಶ ಸರ್ವಕಾಲ, ಸರ್ವಾವಸ್ಥೋಚಿತ ಸರ್ವವಿಧ ಕೈಂಕರ್ಯಕ್ಕೆ (ಇದು "ಸಂಪದ್ಯಾವಿರ್ಭಾವ ಸ್ವೇನಶಬ್ದಾತ್ ಎಂಬ ಅಧಿಕರಣಾರ್ಥ)ವಿರೋಧಿಯಾದ ಸರ್ವಪಾಪಗಳೂ ಕಳೆದು (ಇದು ನಮಶ್ಶಬ್ದಾರ್ಥ) ಅಂದರೆ ಅನಂತ ಮದ್ವಿರೋಧಿ ಪಾಪಾಕ್ರಾಂತೋಽಪಿ ಎಂದು ಆರಂಭಿಸಿ ಶರಣಾಗತಿ ಗದ್ಯದಲ್ಲಿ ನಿರೂಪಿಸಿರುವ ಎಂಟು ವಿಧವಾದ ವಿರೋಧಿ ಪಾಪಗಳೂ, ಕಳೆದು ಎಂದರ್ಥ. **ಪರಿಪೂರ್ಣ ಕೈಂಕರ್ಯಮ್ ಪೆರುಹೈಕ್ಕು**–ಪರಿಪೂರ್ಣವಾದ ಭಗವದನುಭವ ಪರೀವಾಹವಾದ ಕೈಂಕರ್ಯವನ್ನು ಪಡೆಯುವುದಕ್ಕೆ (ಇದು ನಾರಾಯಣ ಶಬ್ದದ ಮೇಲೆ ಬಂದಿರುವ 'ಆಯ' ಎಂಬ ಚತುರ್ಥಿಗೆ ಅರ್ಥ.) **ಅಂಕಿಚನನಾನ ಅಡಿಯೇನ್**–ಅಕಿಂಚನನಾದ ದಾಸಭೂತನು (ಪ್ರಪದ್ಯೇ ಎಂಬಲ್ಲಿ ಉತ್ತಮ ಪುರುಷಕ್ಕೆ ಅರ್ಥ) ಆಕಿಂಚನ್ಯವು "ಏವಂಭೂತಮತ್ಕೈಂಕರ್ಯ ಪ್ರಾಪ್ತ್ಯುಪಾಯತಯಾ ಅವಕ್ಲೃಪ್ತ ಸಮಸ್ತವಸ್ತು ವಿಹೀನೋಽಪಿ" ಎಂದು ಗದ್ಯದಲ್ಲಿ ವಿವರಿಸಲ್ಪಟ್ಟಿರುವುದು ಇಲ್ಲಿ ವಿವಕ್ಷಿತ. **ಸ್ವರಕ್ಷಣ ಭರಾದಿಹಳಿಲ್ ಎನಕ್ಕು ಅನ್ವಯಮುಗುಕ್ಕುಮ್‌ಪಡಿ**–ಸ್ವರಕ್ಷಣ ಭರಾದಿಗಳಲ್ಲಿ ನನಗೆ ಯಾವ ಸಂಬಂಧವೂ ಇಲ್ಲದೆ (ಇದು 'ಚರಣಾವೇವ' ಎಂಬ ಅರ್ಥಾನುಸಂಧಾನದಲ್ಲಿ ಏರ್ಪಟ್ಟ ಏವಕಾರಾರ್ಥ) **ಶ್ರೀಮಾನಾನ ನಾರಾಯಣನ್ ತಿರುವಡಿಹಳಿಲ್**–ಶ್ರೀಮನ್ನಾರಾಯಣನ ಶ್ರೀ ಪಾದಗಳಲ್ಲಿ (ಶ್ರೀಮನ್ನಾರಾಯಣ ಚರಣೌ ಎಂಬುದರ ಅರ್ಥ.)**ಅಂಗಪಂಚಕ ಸಂಪನ್ನಮಾನ**

**ಸಮರ್ಪಣಮ್ ಪಣ್ಣುಹಿರೇನ್ ಎನ್ರು ದ್ವಯತ್ತಿಲ್ ತಿರಣ್ಡಪೊರುಳ್.**

**ವೈರಾಗ್ಯ ವಿಜಿತಸ್ವಾಂತೈಃ ಪ್ರಪತ್ತಿ ವಿಜಿತೇಶ್ವರೈಃ ।**
**ಅನುಕ್ರೋಶೈಕ ವಿಜಿತೈರಿತ್ಯುಪಾದೇಶಿ ದೇಶಿಕೈಃ ॥108॥**

---

**ಆತ್ಮರಕ್ಷಾಭರಸಮರ್ಪಣಮ್ ಪಣ್ಣುಹಿರೇನ್**-ಐದು ಅಂಗಗಳಿಂದ ಕೂಡಿದ ಅಂಗಿಯಾದ ಪ್ರಾರ್ಥನಾ ವಿಶಿಷ್ಟ ಆತ್ಮರಕ್ಷಾಭರಸಮರ್ಪಣವನ್ನು ಮಾಡುತ್ತೇನೆಂದು (ಇದು "ಪ್ರಪದ್ಯೇ" ಎಂಬುದರ ಸಮುದಾಯ ಶಕ್ತ್ಯರ್ಥ.) **ತಿರಂಡಪೊರುಳ್**–ಮಹಾವಾಕ್ಯಾರ್ಥ.

**ಶ್ರೀಮಾನಾನ ನಾರಾಯಣನ್ ತಿರುವಡಿಹಳಿಲ್** ಲಕ್ಷ್ಮೀ ವಿಶಿಷ್ಟ ನಾರಾಯಣನ ಶ್ರೀ ಪಾದಗಳಲ್ಲಿ ಎಂದು ಸಪ್ತಮೀ ವಿಭಕ್ತಿಕವಾಗಿ ಹೇಳಿರುವುದು, "ಚರಣೌ" ಎಂಬಲ್ಲಿ ದ್ವಿತೀಯಾಂತವಾಗಿ ಮಂತ್ರದಲ್ಲಿ ಹೇಳಿರುವುದಕ್ಕೆ ಹೇಗೆ ಸಂಗತವು ಎಂದರೆ:–'ಚರಣೌ ಶರಣಂ' ಎಂಬಲ್ಲಿ ಕಳಲ್‌ಹಳವೈಯೇ ಶರಣ್' ಎಂಬ ಅರ್ಥಾನುಸಂಧಾನದ ಪ್ರಕಾರ ಅವಧಾರಣಾರ್ಥವು ವಿವಕ್ಷಿಸಲ್ಪಟ್ಟು, ಸಾಪಧಾರಣ ಶರಣ ಶಬ್ದದಿಂದ ಕೂಡಿದ ಸೋಪಸರ್ಗ ಧಾತುವಿಗೆ ಅವಯವ ಶಕ್ತಿಯಿಂದ ಏರ್ಪಟ್ಟ ನಿರಪೇಕ್ಷೋಪಾಯತ್ವ ರೂಪ ಮಹಾವಿಶ್ವಾಸವು ವಿಷಯವಾದರೂ, ವಿಭಕ್ತಿ ವ್ಯತ್ಯಾಸ ದಿಂದ ಚರಣಗಳಲ್ಲಿ ಎಂದು ಅನುಸಂಧಾನ ಮಾಡಿ ಭರಸಮರ್ಪಣವು ಕಾರ್ಯವೆಂದು ತಾತ್ಪರ್ಯ, ಹೀಗೆ **ಪ್ರಪದ್ಯೇ** ಎಂಬುದಕ್ಕೆ ಭರಸಮರ್ಪಣಂ ಪಣ್ಣುಹಿರೇನ್' ಎಂದು ಅರ್ಥ ಮಾಡಿರುವ ಶ್ರೀ ಸೂಕ್ತಿಯಿಂದ **"ಚರಣೌ ಶರಣಂ"** ಎಂಬುದು ಸೋಪಸರ್ಗಧಾತುವಿನಿಂದ ಲಬ್ಧವಾದ ಮಹಾವಿಶ್ವಾಸ ವಿಷಯತ್ವರೂಪ ಕರ್ಮತ್ವವನ್ನು ತಿಳಿಸುತ್ತದೆ. ಶ್ರೀ ಪಾದಗಳನ್ನು ಉಪಾಯವನ್ನಾಗಿ ಅಧ್ಯವಸಾಯ ಮಾಡುತ್ತೇನೆಂದು ಅರ್ಥ. ಸಮುದಾಯ ಶಕ್ತಿಯಿಂದ ಏರ್ಪಟ್ಟ ಪ್ರಾರ್ಥನಾನ್ವಿತ ಭರಸಮರ್ಪಣವನ್ನು 'ಚರಣಯೋಃ ಶ್ರೀ ಪಾದಗಳಲ್ಲಿ' ಎಂದು ವಿಭಕ್ತಿ ವ್ಯತ್ಯಾಸ ಪೂರ್ವಕ ಅನ್ವಯ ಮಾಡಿ ಅನುಸಂಧಾನ ಮಾಡಬೇಕೆಂದು ವ್ಯವಸ್ಥೆ ಮಾಡಲ್ಪಟ್ಟಿದೆ. **'ಅಂಗಪಂಚಕ ಸಂಪನ್ನ ಮಾನ'** ಇತ್ಯಾದಿಯಿಂದ ಇತರ ಅಂಗಗಳ ಹಾಗೆ ಮಹಾವಿಶ್ವಾಸವೂ ಅಂಗವಾಗಿ ಗಣಿಸಲ್ಪಟ್ಟು, ಭರಸಮರ್ಪಣ ದಲ್ಲಿ ಮಹಾವಿಶ್ವಾಸವೂ ಕೂಡಿರುವುದಾಗಿ ಹೇಳಿರುವುದರಿಂದ 'ಪ್ರಪದ್ಯೇ' ಎಂಬ ಧಾತುವು ಕೇವಲ ವಿಶ್ವಾಸಾರ್ಥ ದಲ್ಲಿ ವಿಶ್ರಾಂತವೆಂಬವಾದವು ದೂರೀಕೃತ. **ತಿರಂಡಪೊರುಳ್**–ಹೀಗೆ ಅಖಂಡನಾದ ಶಾಬ್ದ ಬೋಧವನ್ನು ತಿಳಿಸು ವುದರಿಂದ ದ್ವಯಮಂತ್ರವು ಒಂದು ಮಹಾವಾಕ್ಯವಾಗಿ, ಎರಡು ಖಂಡಗಳೂ ಸೇರಿ ಒಂದೇ ಮಂತ್ರವೆಂಬುದು ಉಪ ಪನ್ನವಾಗಿದೆ ಎಂಬುದು ಭಾವ. ಹೇಗೆಂದರೆ ಪೂರ್ವೋತ್ತರ ಖಂಡಗಳು ಅನನ್ಯೋಪಾಯತ್ವ, ಅನನ್ಯ ಪ್ರಯೋ ಜನತ್ವ ಪರ್ಯವಸಾನವೃತ್ತಿಯಿಂದ ಬೇರೆ ಬೇರೆಯಾಗಿ ಹೇಳಿದರೂ ಏಕವಾಕ್ಯಕ್ಕೆ ಯಾವ ವಿರೋಧವೂ ಇಲ್ಲ. ಉಪಾಯೋಪೇಯತ್ವಗಳು ಪರಸ್ಪರ ಸಾಕಾಂಕ್ಷತ್ವಗಳಾದ್ದರಿಂದ ಅಖಂಡವಾದ ಅರ್ಥೈಕ್ಯವು ಏರ್ಪಡುತ್ತದೆ. "ಪ್ರಪದ್ಯೇ" ಎಂಬಲ್ಲಿ ಉತ್ತಮ ಪುರುಷದಿಂದ ಆ ಕಿಂಚನ್ಯವೂ ಉಪಾಯಾಂತರ ಶೂನ್ಯತ್ವವೂ ಅವಗತವು. ಅಲ್ಲಿ ಯಾವ ಫಲವನ್ನು ಸಾಧಿಸಲು ಉಪಾಯವು ದುಷ್ಕರವೆಂಬ ಜಿಜ್ಞಾಸೆಯು ಏರ್ಪಡುವಾಗ ಉತ್ತರ ಖಂಡಾರ್ಥವು ಅನ್ವಿತವಾಗುತ್ತದೆ. ಪೂರ್ವಖಂಡಾರ್ಥವೂ ಆಕಿಂಚನ್ಯಾಧಿಕಾರಾನುರೂಪವಾಗಿ ಸಮನ್ವಿತವು. ಆದ್ದರಿಂದ ದ್ವಯ ಮಂತ್ರವು ಒಂದು ಮಹಾವಾಕ್ಯಾರ್ಥವನ್ನು ನಿರೂಪಿಸುತ್ತದೆಯೆಂಬುದು ಸಮನ್ವಿತವಾಗುತ್ತದೆ.

ಹೀಗೆ ದ್ವಯವ್ಯಾಖ್ಯಾನ ರೂಪವಾದ ಅರ್ಥಗಳೆಲ್ಲಾ ನಮ್ಮ ಬುದ್ಧಿ ಚಾತುರ್ಯದಿಂದ ಹೇಳಿರುವವಲ್ಲ. ಸತ್ಸಂ ಪ್ರದಾಯ ಸಿದ್ಧ ಸದಾಚಾರ್ಯರುಗಳಿಂದ ಉಪದೇಶಿಸಲ್ಪಟ್ಟವು ಎಂದು **ವೈರಾಗ್ಯವಿಜಿತಸ್ವಾಂತೈಃ**– ಎಂದಾರಂಭಿಸಿ, ಆಚಾರ್ಯರು ಅನುಗ್ರಹಿಸುತ್ತಾರೆ.

**ವೈರಾಗ್ಯ ವಿಜಿತ ಸ್ವಾಂತೈ**–ಅರ್ಥಕಾಮಗಳಲ್ಲಿ ಸ್ಪೃಹೆ ಇಲ್ಲದೆ ಚಂಚಲವಾದ ಮನಸ್ಸನ್ನು ಜಯಿಸಿದ ರಿಂದ–ಇದರಿಂದ ಉಪಾಯಾಂತರ ನೈಸ್ಪೃಹತೆಯು ಹೇಳಲ್ಪಟ್ಟು ಇಂಥಹವರೇ ದ್ವಯಮಂತ್ರದಲ್ಲಿ ಪೂರ್ಣಾಧಿ ಕಾರಿಗಳೆಂದು ತಿಳಿಸಲ್ಪಟ್ಟಿತು. **ಪ್ರಪತ್ತಿ ವಿಜಿತೇಶ್ವರೈಃ**– ಪ್ರಪತ್ತಿಯಿಂದ ಈಶ್ವರನನ್ನು ಜಯಿಸಿದವರು–"ತಸ್ಯಚ ವಶೀಕರಣಂ ತಚ್ಛರಣಾಗತಿರೇವ" ಎಂದು ಹೇಳಲ್ಪಟ್ಟ ಪ್ರಪತ್ತಿಯಿಂದ ಈಶ್ವರನನ್ನು ಜಯಿಸಿದವರು. ಅಂದರೆ ತಮಗೆ ವಶವಾಗುವಂತೆ ಮಾಡಿಕೊಂಡವರು. **ಅನುಕ್ರೋಶೈಕ ವಿಜಿತೈಃ**–ದಯೆಯಿಂದ ಮಾತ್ರ ಜಯಿಸಲ್ಪಟ್ಟವರಾಗಿ

**ಇದಮಷ್ಟಪದಂವ್ಯಾಸೇ ಸಮಾಸೇಷಟ್ಪದಂವಿದುಃ ।**
**ವಾಕ್ಯಂ ಪಂಚ ಪದೈರ್ಯುಕ್ತ ಮಿತ್ಯಾಖ್ಯಾತ ಪ್ರಧಾನಕಮ್ ॥109॥**

**ಅಥ ದ್ವಯಂ ಪ್ರಶಂಸತಿ,**

**ಏಕಂದ್ವಯಮ್ ತ್ರ್ಯವಯವಮ್ ಸುಖಲಭ್ಯತುರ್ಯಮ್ ।**
**ವ್ಯಕ್ತಾರ್ಥಪಂಚಕ ಮುಪಾತ್ತ ಷಡಂಗ ಯೋಗಮ್॥**

---

ಅಂದರೆ ದಯಾಪರವಶರಾಗಿ ಶಿಷ್ಯರಿಗೆ ಸಮೀಚೀನ ಶಾಸ್ತ್ರಾರ್ಥಗಳನ್ನು ಉಪದೇಶ ಮಾಡಿದವರು. "ಸತ್ಕಾರ ಕೀರ್ತಿ ಧನಲಬ್ಧಿಸು ನಿರ್ವ್ಯಪೇಕ್ಷಃ" ಎಂದು ಗೌರವ ಕೀರ್ತಿ ಧನ ಪ್ರಾಪ್ತಿಗಳಲ್ಲಿ ಆಸೆ ಇಲ್ಲದವರಾಗಿದ್ದು ಪರಮಕೃಪೆಯಿಂದ ಸಂಸಾರ ಕ್ಲೇಶಗಳಿಂದ ಬಹಳ ದುಃಖಿಗಳಾದ ಚೇತನರಲ್ಲಿ ಪ್ರಸನ್ನರಾಗುತ್ತಾರೆಂದು ಭಾವ. ಇಂಥಹ **ದೇಶಿಕೈಃ**–ಉಪದೇಶವನ್ನು ಮಾಡಲು ಅರ್ಹರಾಗಿ ಜ್ಞಾನಪರಿಪೂರ್ಣರಾದ ಆಚಾರ್ಯರುಗಳಿಂದ–ಸಂಸಾರಿ ಚೇತನರನ್ನು ಉದ್ಧರಿಸುವ ಸಾಮರ್ಥ್ಯವಿಲ್ಲದವರ ದಯೆಯು ತಮಗೆ ಬಾಧಕವಾಗುತ್ತದೆ. ಇತರರಿಗೂ ಉಪಕಾರವಾಗಲಾರದು. ಆದ್ದರಿಂದ ದೇಶಿಕೈಃ ಎಂಬ ವಿಶೇಷ್ಯವು ಜ್ಞಾನ ಪರಿಪೂರ್ಣತೆಯನ್ನು ತಿಳಿಸುತ್ತದೆ. **ಇತ್ಯುಪಾದೇಶಿ** ಹೀಗೆ ದ್ವಯಾರ್ಥವು ಉಪದೇಶಿಸಲ್ಪಟ್ಟಿತು.

**ಇದಮ್**–ಈ ದ್ವಯಮಂತ್ರವು **ವ್ಯಾಸೇ**–ಪದ ವಿಭಾಗ ಮಾಡಿ ಹೇಳುವಾಗ, **ಅಷ್ಟಪದಂ**–ಎಂಟು ಪದಗಳಿಂದ ಕೂಡಿದುದು. ಅದಾಗಿ ಶ್ರೀಮನ್, ನಾರಾಯಣ ಎಂಗು ಸಂಬುದ್ಧ್ಯಂತವಾಗಿ ಪದಗಳನ್ನು ಹೇಳಿ, ತವ–ಎಂಬ ಪದವನ್ನು ಅಧ್ಯಾಹಾರ ಮಾಡಿ ಅನುಸಂಧಾನ ಮಾಡುವ ಯೋಜನೆಯಲ್ಲಿ ಎಂಟು ಪದಗಳಿಂದ ಕೂಡಿದುದು. ಎಂದರ್ಥ. ಅದಾಗಿ ಶ್ರೀಮನ್ ನಾರಾಯಣ (ತವ) ಚರಣೌ, ಶರಣಂ, ಪ್ರಪದ್ಯೇ, ಶ್ರೀಮತೇ, ನಾರಾಯಣಾಯ ನಮಃ ಎಂದು ಎಂಟು ಪದಗಳು. **ಸಮಾಸೇ**-"ಶ್ರೀಮನ್ನಾರಾಯಣಚರಣೌ, ಎಂದು ಸಮಸ್ತವಾಗಿ ಒಂದು ಪದವಾಗಿ ಗಣಿಸಿ, ಶರಣಂ, ಪ್ರಪದ್ಯೇ, ಶ್ರೀಮತೇ ನಾರಾಯಣಾಯ ನಮಃ ಎಂಬ ಇತರ ಪದಗಳೊಡನೆ ಸೇರಿ **ಷಟ್ಪದಂ**-ಆರು ಪದಗಳನ್ನಾಗಿ, **ವಿದುಃ**–ತಿಳಿದಿದ್ದಾರೆ.**ವಾಕ್ಯಂಪಂಚ ಪದೈರ್ಯುಕ್ತಮ್**–ವಾಕ್ಯವು ಐದು ಪದಗಳಿಂದ ಕೂಡಿ **ಇತಿ**–ಈ ರೀತಿಯಲ್ಲಿ **ಆಖ್ಯಾತ ಪ್ರಧಾನಕಮ್**–'ಪ್ರಪದ್ಯೇ' ಎಂಬಲ್ಲಿ ಶರಣಾಗತಿಯನ್ನು ಮಾಡುವವನನ್ನು ಪ್ರಧಾನವಾಗಿ ಅಂದರೆ ಮುಖ್ಯ ವಿಶೇಷ್ಯವಾಗಿವುಳ್ಳದ್ದಾಗಿದೆಯೆಂದು**ವಿದುಃ**ತಿಳಿದಿದ್ದಾರೆ.**ವಾಕ್ಯಂಪಂಚಪದೈರ್ಯುಕ್ತಮ್**–ಎಂಬುದು ಅನನ್ಯೋಪಾಯತ್ವ ಪರವಾದ ಪೂರ್ವಖಂಡವು ಆಖ್ಯಾತ ಪ್ರಧಾನವಾಗಿ,ಐದು ಪದಗಳಿಂದ ಕೂಡಿದೆ· ಹಾಗೆಯೇ ಅನನ್ಯಪ್ರಯೋಜನತ್ವ ಪರವಾದ ಉತ್ತರಖಂಡವೂ,ನಮಶ್ಶಬ್ದವನ್ನು, ನ, ಮಃ ಎಂಬ ಸೂಕ್ಷ್ಮ ಯೋಜನೆಯಲ್ಲಿ ಎರಡು ಪದಗಳನ್ನಾಗಿ ವಿಭಜಿಸಿ ಭವೇಯಂ ಎಂಬ ಆಖ್ಯಾತ ಪದವನ್ನು ಅಧ್ಯಾಹಾರ ಮಾಡಿಕೊಂಡು,ಶ್ರೀಮತೇ ನಾರಾಯಣಾಯ, ಭವೇಯಂ, ನ, ಮಃ ಎಂದು ಐದುಪದಗಳಿಂದ ಕೂಡಿದೆ ಎಂಬುದೂ ಇಲ್ಲಿ ಆಚಾರ್ಯರ ಅಭಿಪ್ರಾಯ.

ಅನಂತರ ಈ ದ್ವಯಮಂತ್ರದ ಪ್ರಭಾವವನ್ನು **ಏಕಂ ದ್ವಯಂ**-ಎಂದಾರಂಭಿಸಿ ವಿವರಿಸುತ್ತಾರೆ. **ಏಕಂ**–ಏಕವಾಕ್ಯದಿಂದ ಕೂಡಿರುವುದು ಅಥವಾ ಉಚ್ಚಾರಣದಿಂದಲೇ ಮೋಕ್ಷವನ್ನು ತರುವ ಮಂತ್ರವೆಂದು "ಸಕೃದುಚ್ಚಾರಃ ಸಂಸಾರ ಮೋಚನಂ ಭವತಿ" ಎಂದು ಶ್ರುತಿಯು ಹೇಳಿರುವುದರಿಂದ ಇತರ ಮಂತ್ರಗಳಿಗಿಂತ ಮೇಲಾದದು. ಏಕೇ ಮುಖ್ಯಾನ್ಯ ಕೇವಲಾಃ ಎಂಬ ಅಮರದ ಪ್ರಕಾರ, ಏಕ ಶಬ್ದಕ್ಕೆ ಮುಖ್ಯಾರ್ಥವೂ ಅಂದರೆ ಮೇಲಾದುದು ಎಂಬ ಅರ್ಥವುಂಟು. **ದ್ವಯಂ**–ಉಪಾಯೋಪೇಯ ಪ್ರತಿಪಾದಕವಾದ ಖಂಡದ್ವಯಗಳಿಂದ ಕೂಡಿದುದು. **ತ್ರ್ಯವಯವಂ**-ಅವಾಂತರ ವಾಕ್ಯತ್ರಯದಿಂದ ಕೂಡಿದುದು **ಸುಖಲಭ್ಯತುರ್ಯಂ**–ಸುಖೇನಲಭ್ಯಃ ತುರ್ಯಃ–ಮೋಕ್ಷಾಖ್ಯ ಪುರುಷಾರ್ಥಃ, ಅಂದರೆ ಸುಖವಾಗಿ ನಾಲ್ಕನೇ ಪುರುಷಾರ್ಥವಾದ ಮೋಕ್ಷವು ಈ ಮಂತ್ರೋಚ್ಚಾರಣದಿಂದ ಸುಖವಾಗಿ ಲಭ್ಯವು. **ವ್ಯಕ್ತಾರ್ಥ ಪಂಚಕಂ**– ಅರ್ಥಪಂಚಕಗಳನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. ಪ್ರಾಪ್ಯವಾದ

**ಸಪ್ತಾರ್ಣವೀಮಹಿಮವದ್ವಿವೃತಾಷ್ಟವರ್ಣಮ್**
**ರಂಗೇ ಸತಾಮಿಹರಸಮ್ ನವಮ್ ಪ್ರಸೂತೇ ॥66॥**

**ದ್ವಯಾರ್ಥಂ ದ್ರಾವಿಡಗಾಥಯಾ ಸಂಗಹ್ಣಾತಿ.**

**ಓದುಮಿರಣ್ಡ್ಯಿಶೈನ್ದರುಳಾಲುದವುನ್ತಿರುಮಾಲ್ ।**
**ಪಾದಮಿರಣ್ಡುಮ್ ಶರಣೆನಪ್ಪತ್ತಿ ನಮ್ಪಙ್ಗಯತ್ತಾಳ್ ॥**
**ನಾತನ್ನೈ ನಣ್ಣಿ ನಲನ್ತಿಗಳ್ ನಾಟ್ಟಿಲಡಿಮೈಯೆಲ್ಲಾಮ್ ।**
**ಕೋದಿಲುಣರ್ನ್ದಿಯುಡನ್ ಕೊಳ್ಳುಮಾರು ಕುರಿತ್ತನಮೇ ॥3॥**

---

ಬ್ರಹ್ಮವು ಶ್ರೀ ವಿಶಿಷ್ಟ ನಾರಾಯಣನು ಎಂಬುದು ಸ್ಪಷ್ಟ. ಪ್ರಾಪ್ತನಾದ ಜೀವನು ಪ್ರಪದ್ಯೇ ಎಂಬಲ್ಲಿ ಉತ್ತಮ ಪುರುಷ ಪ್ರತಿಪಾದ್ಯನು. ಉಪಾಯವು ಪೂರ್ವಖಂಡಾರ್ಥ. ಫಲವು ಉತ್ತರಖಂಡದಲ್ಲಿ ಶ್ರೀಮತೇ ನಾರಾಯಣಾಯ (ಸ್ಯಾಂ), ಎಂಬ ಪದಗಳಿಂದ ಸ್ಪಷ್ಟವು, ಪ್ರಾಪ್ತಿ ವಿರೋಧಿಯು ನಮಶ್ಶಬ್ದಾರ್ಥ. **ಉಪಾತ್ತ ಷಡಂಗಯೋಗಮ್** ಷಡಂಗಯೋಗವು ಶರಣಾಗತಿವಿದ್ಯೆ. ಐದು ಅಂಗಗಳೂ, ಅಂಗಿಯೂ ಕೂಡಿ, ಅಷ್ಟಾಂಗಯೋಗವೆಂದು ವ್ಯವಹಾರ ಮಾಡುವಂತೆ,ಷಡಂಗಯೋಗವೆಂದುವ್ಯವಹರಿಸಲ್ಪಡುತ್ತದೆ. ಪ್ರಪತ್ತಿಯೋಗವನ್ನು ತಿಳಿಸುತ್ತದೆ ಎಂದರ್ಥ. ಪೂರ್ವಖಂಡವು ಉಪಾಯಪರ. ಉತ್ತರಖಂಡವು ಉಪಾಯಪರತ್ವವಲ್ಲದಿದ್ದರೂ, **ಉಪಾಯ** ಪ್ರಧಾನವಾದ ಮಂತ್ರದಲ್ಲಿ ಫಲ **ಪ್ರ**ದಾನಾಂಶವನ್ನು ಉಪಾಯಕ್ಕೆ ಶೇಷಭೂತವಾಗಿ ತಿಳಿಸುತ್ತದೆ ಎಂದರ್ಥ. ಫಲಾನುಸಂಧಾನವಿಲ್ಲದೆ ಉಪಾಯಾನು **ಷ್ಠಾ**ನವನ್ನು ಮಾಡುವುದಿಲ್ಲವಲ್ಲವೇ **ಸಪ್ತಾರ್ಣವೀ ಮಹಿಮವತ್**-ಸಪ್ತಸಮುದ್ರಗಳ ಹಾಗೆ ಅಪಾರ ಮಹಿಮೆ ಯುಳ್ಳದು. **ವಿವೃತಾಷ್ಟವರ್ಣಮ್**-ಅಷ್ಟಾಕ್ಷರ ಬ್ರಹ್ಮವಿದ್ಯೆಯ ವಿವರಣರೂಪವಾದದ್ದು ಅಂದರೆ ಅದರಲ್ಲಿ **ನಿ**ರೂಪಿಸಿರುವ ತತ್ವ ಹಿತ ಪುರುಷಾರ್ಥಗಳನ್ನು ವಿವರಿಸಿ ತಿಳಿಸತಕ್ಕದ್ದು. **ಇಹ ರಂಗೇ**-ಇಲ್ಲಿ ಶ್ರೀರಂಗದಲ್ಲಿ ಇದರಿಂದ **ಈ** ಪ್ರಬಂಧವು ಶ್ರೀರಂಗದಲ್ಲಿ ರಚಿತವು ಎಂಬುದು ದ್ಯೋತಿತವು. **ಸತಾಂ**-ಸತ್ಪುರುಷರಿಗೆ, **ನವಮಂ ರಸಂ**-ಒಂಭತ್ತನೆಯದಾದ ಶಾಂತಿ ರಸವನ್ನು **ಪ್ರಸೂತೇ**- ಕೊಡುತ್ತದೆ "ಶಮಸ್ತು ಪರಿಶಿಷ್ಯತೇ ಶಮಿತಃ ಚಿತ್ತಖೇದೋದಯಃ" ಎಂದು ಶಾಂತಿರಸವು ಮನಸ್ಸಿನಲ್ಲಿರುವ ಕಷ್ಟಗಳನ್ನೆಲ್ಲಾ ಹೋಗಲಾಡಿಸಿ ತಾನು ಮಾತ್ರ ಉಳಿಯುತ್ತದೆ. ಎಂದು ತಾತ್ಪರ್ಯ.

ಅನಂತರ ಅಧಿಕಾರದ ಅರ್ಥವನ್ನು ಒಂದು ಪಾಶುರದಿಂದ ಸಂಗ್ರಹಿಸುತ್ತಾರೆ. ಅದಾಗಿ **ಓದುಮಿರಂಡ್ಯೆಯಿಶ್ಶೆಂದು**-ಇತ್ಯಾದಿ **ಓದುಂ**-ಕಠಶ್ರುತಿಯಲ್ಲಿ ಪಠಿಸಲ್ಪಟ್ಟ **ಇರಂಡೈ**-"ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ ಎಂಬ ಪೂರ್ವಖಂಡವನ್ನೂ, "**ಶ್ರೀಮತೇ ನಾರಾಯಣಾಯ** ನಮಃ" ಎಂಬ ಉತ್ತರ ಖಂಡವನ್ನೂ, **ಇಶ್ಶೆಂದು**-ಮೋಕ್ಷವನ್ನು ಸಾಧಿಸಿಕೊಡುವುದಾಗಿ ಅಂಗೀಕರಿಸಿ, "ಓದಿಯಿರಂಡೈ ಇಶ್ಶೆಂದು" ಎಂದು ಪಾಠವಾದರೆ ಇರಂಡೈ-ಪೂರ್ವೋತ್ತರಖಂಡಗಳನ್ನು ಇಶ್ಶೆಂದು ಒಂದುಗೂಡಿಸಿ ಉಚ್ಚಾರಣ ಮಾಡುವಂತೆ ಸಮ್ಮತಿಸಿ, ಅಥವಾ ಇಚ್ಛಾಪೂರ್ವಕವಾಗಿ ಓದಿ-ಉಚ್ಚರಿಸಿ ಎಂದು ಅರ್ಥ. **ಅರುಳಾಲ್** - ಕೃಪೆಯಿಂದ **ಉದವುಮ್** ಉಪಕರಿಸುವ, **ತಿರುಮಾಲ್**-ಲಕ್ಷ್ಮಿಯಲ್ಲಿ ವ್ಯಾಮೋಹವನ್ನುಳ್ಳ ನಾರಾಯಣನ (ಇದು ಶ್ರೀಮನ್ನಾರಾಯಣ ಶಬ್ದಾರ್ಥ) **ಪಾದಮಿರಂಡುಂ**-ಎರಡು ಪಾದಗಳನ್ನೂ **ಶರಣೆನಪ್ಪಟ್ರ**- ಉಪಾಯವಾಗಿ ಆಶ್ರಯಿಸಿ, ಶ್ರೀ ಪಾದಗಳಲ್ಲಿ ಸಾಂಗವಾದ ಭರಸಮರ್ಪಣವನ್ನು ಮಾಡಿ ಎಂದರ್ಥ ಇದು ಚರಣೌ ಶರಣಂ ಪ್ರಪದ್ಯೇ ಎಂಬುದರ ಅರ್ಥ) **ನಮ್**-ನಮ್ಮಲ್ಲಿ ಬಹಳ ಕೃಪೆಯಿಂದ ಕೂಡಿದ **ಪಂಗಯತ್ತಾಳ್ ನಾದನ್ಮೈ**- ಪಂಕಜವಾಸಿನಿಗೆ ಸ್ವಾಮಿಯಾದ ನಾರಾಯಣನನ್ನು **ನಣ್ಣಿ**-ಪರಮಪದದಲ್ಲಿ ಒಂದುಗೂಡಿ, **ನಲಮ್**-ಆನಂದದಿಂದ, **ತಿಹ**ೞ್-ಪ್ರಕಾಶಿಸುವ **ನಾಟ್ಟಿಲ್** ಶ್ರೀ ವೈಕುಂಠದಲ್ಲಿ **ಅಡಿಮೈಯೆಲ್ಲಾಮ್**-ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವಶೇಷ ವೃತ್ತಿಯನ್ನೂ

## ದ್ವಯಸ್ಯ ಹಿತತಮತ್ವ ಮುಪಪಾದಯತಿ.

ನ ವೇದಾಂತಾಚ್ಛಾಸ್ತ್ರಂ ನ ಮಧುಮಥನಾತ್ತತ್ವ ಮಧಿಕಮ್
ನ ತದ್ಭಕ್ತಾತ್ತೀರ್ಥಂ ನತದಭಿಮತಾ ತ್ಸಾತ್ವಿಕಪದಮ್ ।
ನ ಸತ್ವಾದಾರೋಗ್ಯಂ ನ ಬುಧ ಭಜನಾದ್ಬೋಧ ಜನಕಮ್ ।
ನಮುಕ್ತೇಸ್ಸೌಖ್ಯಂ, ನ ದ್ವಯಮವಚನತಃ ಕ್ಷೇಮಕರಣಮ್ ॥

---

ಅಂದರೆ ಎಲ್ಲಾ ಕೈಂಕರ್ಯವನ್ನೂ **ಕೋದಿಲ್**-ಸ್ವಾರ್ಥಕರ್ತೃತ್ವಾದಿ ಭ್ರಮ ರೂಪವಾದ **ದೋಷವಿಲ್ಲದೆನಮಶ್ಯಬ್ದಾರ್ಥ** ಅಣರ್ತಿಯುಡನ್-ಪರಿಪೂರ್ಣ ಬ್ರಹ್ಮಾನುಭವದೊಡನೆ **ಕೊಳ್ಳಮಾರು** - ಅನುಷ್ಠಿಸುವ ಪ್ರಕಾರವನ್ನು **ಕುರಿತ್ತ ನಮೋ**-ದ್ವಯ ಮಂತ್ರದಲ್ಲಿ ನಿರ್ಣಯಿಸಿ ತಿಳಿಸಿದ್ದೇವೆ.

ಅನಂತರ, "ಅಥ ಸಕೃದುಚ್ಚಾರ ಸ್ಸಂಸಾರ ಮೋಚನಂ ಭವತಿ," ಅಹೋದ್ವಯಸ್ಯ ಮಾಹಾತ್ಮ್ಯಂ" ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ, ದ್ವಯಮಂತ್ರದ ಸಕೃದುಚ್ಚಾರಣವೇ ಮೋಕ್ಷಸಾಧನವೆಂದು ಹೇಳಿ ಈ ದ್ವಯಮಂತ್ರ ಕ್ಕಿಂತ ಬೇರೆ ಮೋಕ್ಷ ಸಾಧನವಿಲ್ಲವೆಂದು ಇದರ ಮಾಹಾತ್ಮ್ಯವನ್ನು ಅನೇಕ ದೃಷ್ಟಾಂತಗಳೊಡನೆ ತಿಳಿಸುತ್ತಾರೆ. ಆದಾಗಿ **ನ ವೇದಾಂತಾತ್ ಶಾಸ್ತ್ರಂ**– ವೇದಾಂತಕ್ಕಿಂತಲೂ ಉತ್ತಮವಾದ ಶಾಸ್ತ್ರವು ಹೇಗೆ ಇಲ್ಲವೋ, "ಸತ್ಯಂ ಸತ್ಯಂಪುನಸ್ಸತ್ಯಂ ಉದ್ಧೃತ್ಯಭುಜಮುಚ್ಯತೇ । ವೇದಾತ್ ಶಾಸ್ತ್ರಂ ಪರಂನಾಸ್ತಿ" ಎಂದು ಶಪಥಪೂರ್ವಕವಾಗಿ ಉಪನಿಷದ್ರೂಪವಾದ ವೇದಕ್ಕಿಂತಲೂ ಉತ್ಕೃಷ್ಟವಾದ ಶಾಸ್ತ್ರವಿಲ್ಲವೆಂದು ಮಹರ್ಷಿಯು ಉದ್ಘೋಷಿಸಿರುವುದ ರಿಂದ, ಇದು ವಾಸ್ತವಾರ್ಥ, ಉತ್ಪ್ರೇಕ್ಷೆಯಲ್ಲವೆಂದು ಭಾವ. **ನ ಮಧು ಮಥನಾತ್ ತತ್ವಮಧಿಕಂ** – ಮಧ ವೆಂಬ ರಾಕ್ಷಸನನ್ನು ಕೊಂದ ಭಗವಂತನಿಗಿಂತ ಮೇಲಾದ ತತ್ವವು ಬೇರೆ ಯಾವುದೂ ಇಲ್ಲ. **ನ ತದ್ಭಕ್ತಾತ್ ಅಧಿಕಂ ತೀರ್ಥಂ** – ಭಗವದ್ಭಕ್ತರಾದ ಭಾಗವತರಿಗಿಂತ ಮೇಲಾದ ಪರಿಶುದ್ಧಿಕರವಾದ ವಸ್ತುವು ಯಾವುದೂ ಇಲ್ಲ. "ತೀರ್ಥೀಕುರ್ವಂತಿ ತೀರ್ಥಾನಿ ಸ್ವಾಂತಸ್ಥೇನಗದಾಭೃತಾ," "ತೇಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ," ಇತ್ಯಾದಿ ವಚನಗಳು ಹೇಳಿರುವಂತೆ ಪುಣ್ಯತೀರ್ಥಗಳನ್ನೂ, ಭಾಗವತರು ತಮ್ಮಲ್ಲಿ ನೆಲೆಸಿರುವ ಗದಾ ಧರನಿಂದ ಸ್ನಾನಕಾಲದಲ್ಲಿ ಪವಿತ್ರೀಕರಿಸುತ್ತಾರೆಂದೂ, ದರ್ಶನಮಾತ್ರದಿಂದಲೇ ಸಾಧುಗಳು ಇತರರನ್ನು ಪವಿತ್ರೀ ಕರಿಸುತ್ತಾರೆ ಎಂಬುದೂ ಇಲ್ಲಿ ವಿವಕ್ಷಿತ. **ತದಭಿಮತಾದಧಿಕಂ ಸಾತ್ವಿಕಪದಂ ನ**– ಆ ಭಾಗವತರಿಗೆ ಅಭಿಮತ ವಾದ ಕ್ಷೇತ್ರಕ್ಕಿಂತಲೂ ಉತ್ಕೃಷ್ಟವಾದ ಬೇರೆ ಕ್ಷೇತ್ರವಿಲ್ಲ.

"ಯತ್ರಾಷ್ಟಾಕ್ಷರ ಸಂಸಿದ್ಧೋ ಮಹಾಭಾಗೋ ಮಹೀಯತೇ ।
ನತತ್ರ ಸಂಚರಿಷ್ಯಂತಿ ವ್ಯಾಧಿ ದುರ್ಭಿಕ್ಷ ತಸ್ಕರಾಃ ॥,
"ನಿಗ್ರಹೇತೇಂದ್ರಿಯಗ್ರಾಮೋ ಯತ್ರಯತ್ರವಸ್ಸೇನ್ನರಃ ।
ತತ್ರತತ್ರ ಕುರುಕ್ಷೇತ್ರಂ ನೈಮಿಶಂ ಪುಷ್ಕರಂ ತಥಾ ॥"

ಇತ್ಯಾದಿ ವಚನಗಳಲ್ಲಿ ಭಾಗವತಾಭಿಮಾನ ಸ್ಥಳಕ್ಕೆ ಸರ್ವೋತ್ಕೃಷ್ಟತ್ವವು ಹೇಳಿರುವುದು ಇಲ್ಲಿ ವಿವಕ್ಷಿತ. **ಸತಾ ದಧಿಕಮಾರೋಗ್ಯಂನ** – ಸತ್ವಗುಣಕ್ಕಿಂತಲೂ ಆರೋಗ್ಯಜನಕವಾದದು ಬೇರೆ ಯಾವುದೂ ಇಲ್ಲ. "ಸತ್ವಾತ್ ಸಂಜಾಯತೇ ಜ್ಞಾನಮ್," "ಸತ್ವಂ ಸುಖೇ ಸಂಜಯತಿ," ಎಂಬ ವಚನಗಳು ಇಲ್ಲಿ ವಿವಕ್ಷಿತ. **ಬುಧ ಭಜ ನಾದಧಿಕಂ ಬೋಧ ಜನಕಂ ನ**– ಸದಾಚಾರ್ಯರುಗಳ ಅನವರತ ಭಜನಕ್ಕಿಂತಲೂ ಅಧಿಕವಾದ ಜ್ಞಾನಜನಕ ವಾದ ಬೇರೆ ಸಾಧನವಿಲ್ಲ. "ಸತ್ಸಂಗಶ್ಚ ವಿವೇಕಶ್ಚ ನಿಶ್ಚಿತಂ ನಯನದ್ವಯಮ್," ಇತ್ಯಾದಿ ವಚನಗಳು ವಿವ ಕ್ಷಿತಗಳು. **ಮುಕ್ತೇಃ** – ಮಹಾನಂದರೂಪವಾದ ಮೋಕ್ಷಕ್ಕಿಂತಲೂ **ಅಧಿಕಂ** – ಮೇಲಾದ, **ಸೌಖ್ಯಂ** –

**ಇತಿ ಶ್ರೀಮದ್ರಹಸ್ಯತ್ರಯಸಾರೇ "ದ್ವಯಾಧಿಕಾರಃ" ಸಂಪೂರ್ಣಃ ।**
**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ।**
**ಅಸ್ಮದ್ಗುರು ಪರಂಪರಾಯೈ ನಮಃ ॥**

---

ಸುಖಾನುಭವವು **ಯಥಾನ** – ಹೇಗೆ ಇಲ್ಲವೋ "ಮುಕ್ತಿರ್ಮೋಕ್ಷೋಮಹಾನಂದಃ, ನಿರಸ್ತಾತಿಶಯಾಹ್ಲಾದ ಸುಖಭಾವೈಕಲಕ್ಷಣಮ್ । ಭೇಷಜಂ ಭಗವತ್ಪ್ರಾಪ್ತಿಃ" ಎಂಬ ವಚನವು ಇಲ್ಲಿ ಅಭಿಪ್ರೇತವು. ಹಾಗೆ **ಸದ್ವಯ ವಚನತಃ ಕ್ಷೇಮಕರಣಮ್** – ದ್ವಯೋಕ್ತಿಗಿಂತಲೂ ಮೇಲಾದ ಮೋಕ್ಷರೂಪ ಕ್ಷೇಮಕ್ಕೆ ಕರಣ ಸಾಧನವು, ಬೇರೆ ಇಲ್ಲ. ದ್ವಯೋಕ್ತಿಯೇ ಮೋಕ್ಷಸಾಧಕವೆಂದರ್ಥ.

ದ್ವಯಾಧಿಕಾರಕ್ಕೆ **'ಸಾರಚಂದ್ರಿಕಾ'** ವ್ಯಾಖ್ಯಾನವು ಸಮಾಪ್ತವು.

ಶ್ರೀಮತೇ ನಿಗಮಾಂತಮಹಾದೇಶಿಕಾಯನಮಃ. ।

ಶ್ರೀಮತೇ ಸುಂದರಸೌಮ್ಯನಾರಾಯಣಾರ್ಯ ಮಹಾದೇಶಿಕಾಯನಮಃ ।

**ಶ್ರೀಮತೇ ಶ್ರೀನಿವಾಸ ಗೋಪಾಲಾರ್ಯಾಯ ಮಹಾದೇಶಿಕಾಯನಮಃ ।**

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ
ಅಸ್ಮದ್ಗುರು ಪರಂಪರಾಯೈ ನಮಃ

# ಚರಮಶ್ಲೋಕಾಧಿಕಾರಃ

**ಯ ಉಪನಿಷದಾ ಮನ್ತೇ ಯಸ್ಮಾದನಂತ ದಯಾಂಬುಧೇಃ ।**
**ತ್ರುಟಿತ ಜನತಾಶೋಕಃ ಶ್ಲೋಕಸ್ಸ್ವಯಂ ಸಮಜಾಯತ ॥**
**ತಮಿಹ ವಿಧಿನಾ ಕೃಷ್ಣಂ ಧರ್ಮಂ ಪ್ರಪದ್ಯ ಸನಾತನಮ್ ।**
**ಶಮಿತ ದುರಿತಾ ಶ್ಯಜ್ಕಾಕ್ಕಜ್ಯತ್ಯಜ ಸ್ಸುಖ ಮಾಸ್ಮಹೇ ॥68॥**

---

ಶ್ರೀಮತೆ ನಿಗಮಾಂತ ಮಹಾದೇಶಿಕಾಯ ನಮಃ

## ಶ್ರೀಮದ್ರಹಸ್ಯತ್ರಯಸಾರದಲ್ಲಿ ಚರಮ ಶ್ಲೋಕಾಧಿಕಾರಕ್ಕೆ "ಸಾರಚಂದ್ರಿಕಾ" ವ್ಯಾಖ್ಯಾನ

ಹೀಗೆ ಶರಣಾಗತ್ಯನುಷ್ಠಾಪಕವಾದ "ದ್ವಯ"ಮಂತ್ರಕ್ಕೆ ವ್ಯಾಖ್ಯಾನವನ್ನು ಮಾಡಿ ಶರಣಾಗತಿ ವಿಧಾಯಕವಾದ ಚರಮಶ್ಲೋಕಕ್ಕೆ ವ್ಯಾಖ್ಯಾನವನ್ನು ಮಾಡಲೆಣಿಸಿ **ಯ ಉಪನಿಷದಾಮಂತೇ,** ಎಂದು ಅಧಿಕಾರಾರ್ಥವನ್ನು ನಿರೂಪಿಸುತ್ತಾರೆ.

**ಯಃ**-ಯಾವನೊಬ್ಬನು **ಉಪನಿಷದಾಂ**-ವೇದಾಂತಗಳ **ಅಂತೇ**-ಮಧ್ಯದಲ್ಲಿ "ಸಾಯಂಕಾಲೇವನಾಂತೇ" ಎಂಬಲ್ಲಿ ಅಂತ ಶಬ್ದವು ಮಧ್ಯವಾಚಿ, ಹಾಗೆ ಸರ್ವೋಪನಿಷತ್ತುಗಳಲ್ಲಿಯೂ ಉಪಕ್ರಮೋಪಸಂಹಾರಗಳಿಗೆ ಅನುಗುಣವಾಗಿ ಮಹಾವಾಕ್ಯ ಪ್ರತಿಪಾದಕತ್ವವು ಹೇಳಲ್ಪಟ್ಟಿತು ಅಥವಾ ಅಂತಶಬ್ದವು ಸಮೀಪವಾಚೀ ಸರ್ವೋಪನಿಷತ್ತುಗಳ ಸಮೀಪದಲ್ಲಿ ವರ್ತಿಸುತ್ತಾನೆಂದರೆ ಸರ್ವೋಪನಿಷತ್ಪ್ರತಿಪಾದ್ಯನು ಎಂದು ಸೂಚಿತ.

"ಉಪನಿಷದಾಂ" ಎಂದು ಗೀತೋಪನಿಷತ್ತೂ ವಿವಕ್ಷಿತ. "ಭಗವದ್ಗೀತಾಸು ಉಪನಿಷತ್ಸು" ಎಂಬ ಪ್ರಸಿದ್ಧಿಗೆ ಅನುಸಾರವಾಗಿ ಬಹುವಚನ. ಇಲ್ಲಿ ಉಪನಿಷತ್ ಪದವು ಗೀತೋಪನಿಷತ್ತನ್ನು ಸೂಚಿಸುವುದಾಗಿ ಹೇಳುವುದೇ ಮೇಲು "ಉಪನಿಷದ ಮುದಾರಾ ಮುದ್ವಮನ್ ಕ್ಷಿಪಿಲಕ್ಷ್ಮೀ, ಶರಣಮುಪಗತಾನ್ನಃ ತ್ರಾಯತೇ ಶಾರ್ಙ್ಗಧನ್ವಾ" ಎಂದು ಆಚಾರ್ಯರು ಗೀತಾಭಾಷ್ಯ ತಾತ್ಪರ್ಯ ಚಂದ್ರಿಕಾ ವ್ಯಾಖ್ಯಾನದ ಆರಂಭದಲ್ಲಿ ಅನುಗ್ರಹಿಸಿರುವ ಶ್ಲೋಕದ ಪ್ರಕಾರ, ಭಗವದ್ಗೀತೆಯೆಂಬುದು ಉಪನಿಷತ್ತು. "ಅತ್ರೋಪ ನಿಷದಂ ಪುಣ್ಯಂ ಕೃಷ್ಣದ್ವೈಪಾಯನೋಽಬ್ರವೀತ್ ಎಂದು "ಭಾರತಃ ಪಂಚಮೋವೇದಃ' ಎಂದು ಪ್ರಸಿದ್ಧವಾದ ಮಹಾಭಾರತವೆಂಬ ಐದನೆಯ ವೇದದಲ್ಲಿ ಉಪನಿಷದ್ಭಾಗವಾಗಿ ಗೀತೆಯು ಹೇಳಲ್ಪಟ್ಟಿದೆ. ಭಗವಂತನಿಂದ ಸಾಕ್ಷಾತ್ತಾಗಿ ಪ್ರಣೀತವಾಗಿ ಅರ್ಜುನನಿಗೆ ಉಪದೇಶಿಸಲ್ಪಟ್ಟ ಪ್ರಬಂಧವು ವ್ಯಾಸಮಹರ್ಷಿಗಳಿಂದ ಮಹಾಭಾರತದ ಮಧ್ಯದಲ್ಲಿ ಯಥಾಸ್ಥಾನ ಬರೆಯಲ್ಪಟ್ಟಿದೆ ಎಂಬುದು ಸಂಪ್ರದಾಯ. ಭಗವದ್ಗೀತಯ 15ನೇ ಅಧ್ಯಾಯದಲ್ಲಿ 75ನೇ ಶ್ಲೋಕದಲ್ಲಿ "**ಸಾಕ್ಷಾತ್ ಕಥಯತ ಸ್ಸ್ವಯಮ್**" ಎಂಬ ಗೀತಾ ವಾಕ್ಯಕ್ಕೆ "**ಕೃಷ್ಣಾತ್ ಸ್ವಯಮೇವ ಕಥಯತಃ ಸಾಕ್ಷಾತ್ ಶ್ರುತವಾನಹಮ್**" ಎಂಬುದು ಗೀತಾಭಾಷ್ಯ. "ಸ್ವಯಮೇವ ಕಥಯತಃ. ನತುಪರೈರ್ವಾಚಯತಃ" ಎಂದು ತಾತ್ಪರ್ಯ ಚಂದ್ರಿಕೆ. 76ನೇ ಶ್ಲೋಕದ "ಸಂವಾದಮಿಮ ಮದ್ಭುತಮ್' ಎಂಬ ವಾಕ್ಯಕ್ಕೆ "ಅದ್ಭುತಂ-ಶಬ್ದತಃ ಅರ್ಥತಶ್ಚ ಆಶ್ಚರ್ಯಾವಹಮ್" ಎಂಬುದ

ದುರ್ವಿಜ್ಞಾನೈರ್ನಿಯಮಗಹನೈರ್ದೂರವಿಶ್ರಾಂತಿದೇಶೈಃ ।
ಬಾಲಾನರ್ಹೈರ್ಬಹುಭಿರಯನೈಶ್ಶೋಚತಾಂ ನಸ್ಸುಪನ್ಥಾಃ ।

---

ತಾತ್ಪರ್ಯ ಚಂದ್ರಿಕಾ ವ್ಯಾಖ್ಯಾನ. ಆದ್ದರಿಂದ ಭಗವದ್ಗೀತೆಯು ಭಗವನ್ಮುಖಾರವಿಂದದಿಂದ ಹೊರಟ ಶಬ್ದಗಳ ರಾಶಿ. ಕೃಷ್ಣಪರಮಾತ್ಮನು ಉಪದೇಶಿಸಿದ ಗೀತಾರ್ಥವನ್ನು ವ್ಯಾಸಮಹರ್ಷಿಗಳು ಸ್ವವಾಕ್ಯದಿಂದ ರಚಿಸಿದ ಪ್ರಬಂಧವೆಂದಲ್ಲ. ಪಾಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾನಾರಯಣಸ್ಸ್ವಯಮ್" ಎಂದು ಪಾಂಚರಾತ್ರ ಸಂಹಿತಗಳನ್ನು ಭಗವಂತನು ಸಾಕ್ಷಾತ್ತಾಗಿ ಉಪದೇಶಿಸಿದ ಹಾಗೆ ಈ ಗೀತೋಪನಿಷತ್ತೂ ಸಾಕ್ಷಾತ್ತಾಗಿ ಭಗವಂತನಿಂದ ಉಪದೇಶಿಸಿದುದು. ಆ ವಾಕ್ಯಗಳನ್ನೇ ವ್ಯಾಸರು ತಮ್ಮ ಪ್ರಬಂಧದಲ್ಲಿ ಗ್ರಥಿಸಿದ್ದಾರೆ. ಆದ್ದರಿಂದ ಈ ಉಪನಿಷತ್ತಿನ **'ಅಂತೇ'** ಅಂತ್ಯಭಾಗದಲ್ಲಿ **ಪಠಿತವಾದ** "ಸರ್ವಧರ್ಮಾನ್ ಪರಿತ್ಯಜ್ಯ" ಎಂದು ಆರಂಭಿಸುವ ಚರಮ ಶ್ಲೋಕವು ಎಂದು ವಿವಕ್ಷಿಸುವುದು ಯುಕ್ತತರ **ವರ್ತತೇ**–ಪ್ರತಿಪಾದ್ಯನಾಗಿ ಇದ್ದಾನೆಯೋ, **ಯಸ್ಮಾದನಂತದಯಾಂಭುಧೇಃ** ಅಪರಿಮಿತದಯಾಸಾಗರವಾಗಿ ಅವತರಿಸಿದ ಕೃಷ್ಣಪರಮಾತ್ಮನ ಸಕಾಶದಿಂದ **ತುಟ್ರೃತಜನತಾಶೋಕಃ**–ಜನಸಮುದಾಯದ ಸಂಸಾರ ಕ್ಲೇಶವನ್ನು, ಹೋಗಲಾಡಿಸುವ **ಶ್ಲೋಕಃ** – ಭರನ್ಯಾಸಾನುಷ್ಠಾನವನ್ನು ವಿಧಿಸುವ ಚರಮ ಶ್ಲೋಕವು **ಸ್ವಯಂಸಮಜಾಯತ**–ವ್ಯಾಧನಿಂದ ಹೊಡೆಯಲ್ಪಟ್ಟ ಕ್ರೌಂಚ ಪಕ್ಷಿಯನ್ನು ನೋಡಿ ಶೋಕಗೊಂಡ ವಾಲ್ಮೀಕಿ ಮಹರ್ಷಿಗಳ ಶೋಕವು "ಮಾನಿಷಾದ ಪ್ರತಿಷ್ಠಾಂತ್ವಂ" ಎಂಬ ಶ್ಲೋಕವಾಗಿ ಸ್ವಯಂ ಪರಿಣಮಿಸಿದಂತೆ, ದುಷ್ಕರ ಭಕ್ತಿಯೋಗಾದಿಗಳನ್ನು ಮಾಡಬೇಕೆಂದು ಕೇಳಿದ ಅರ್ಜುನನು ಶೋಕಪಡಲು, ಆ ಶೋಕವನ್ನು ನೋಡಿ ಅದರಿಂದ ಉಂಟಾದ ಭಗವಂತನ ದಯೆಯು ಚರಮಶ್ಲೋಕವಾಗಿ ತಾನಾಗಿಯೇ ಪರಿಣಮಿಸಿತು. 'ಸ್ವಯಂ ಸಮಜಾಯತ, ದಯಾಂಬುಧೇಃ' ಎಂಬ ಪದಗಳಿಂದ ದಯಾಸಮುದ್ರದಿಂದ ಉಂಟಾದ ಅಮೃತವು ಈ ಚರಮ ಶ್ಲೋಕವೆಂಬುದೂ ಇದನ್ನು ಪಾನ ಮಾಡುವವರು ಅಂದರೆ ಈ ಚರಮ ಶ್ಲೋಕಾರ್ಥವನ್ನು ಗ್ರಹಿಸಿ ಶರಣಾಗತ್ಯನುಷ್ಠಾನ ಮಾಡುವವರು, ಶಾಶ್ವತವಾದ ಅಮರತ್ವವನ್ನು ಹೊಂದಬಹುದು ಎಂಬುದು ಸೂಚಿತ. **ತಂ–ಸನಾತನಂ–ಧರ್ಮಂ ಕೃಷ್ಣಂ**–ಆ ಸನಾತನ ಧರ್ಮನಾದ ಕೃಷ್ಣಪರಮಾತ್ಮನನ್ನು, **ಇಹ**-ಈ ಲೋಕದಲ್ಲಿ ವಿಧಿನಾ ಚರಮಶ್ಲೋಕದಲ್ಲಿ "ಮಾಮೇಕಂ ಶರಣಂ ವ್ರಜ' ಎಂಬ ವಿಧಿ ವಾಕ್ಯಾನುಸಾರವಾಗಿ, **ಪ್ರಪದ್ಯ** – ಶರಣಹೊಂದಿ **ಶಮಿತದುರಿತಾಃ**–"ಸರ್ವಪಾಪೇಭ್ಯೋ ಮೋಕ್ಷ್ಯಯಿಷ್ಯಾಮಿ" ಎಂಬಂತೆ ಸರ್ವಪಾಪ ವಿಮುಕ್ತರಾಗಿ **ಶಂಕಾತಂಕತ್ಯಜಃ**-ಸಂದೇಹವೆಂಬ ವ್ಯಾಧಿಯನ್ನು ಬಿಟ್ಟು ಅವಶ್ಯ ಭಗವಂತನು ರಕ್ಷಿಸುತ್ತಾನೆಂಬ ಮಹಾವಿಶ್ವಾಸ ಯುಕ್ತರಾಗಿ (**ಮಾಶುಚಃ** ಎಂಬ ವಾಕ್ಯದ ಅರ್ಥ.) **ಸುಖಮಾಸ್ಮಹೇ**-ಸುಖವಾಗಿರುತ್ತೇವೆ.

ಭಗವಂತನು ದುಷ್ಕರ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನು ತಿಳಿದು ಶೋಕಪಡುವ ಅಕಿಂಚನರಾದ ಜೀವರಿಗೆ ಸುಲಭವಾದ ಶರಣಾಗತಿ ಮಾರ್ಗವನ್ನು ತೋರಿಸಿಕೊಟ್ಟಿದ್ದಾನೆಂದು ದುರ್ವಿಜ್ಞಾನೈಃ ಎಂದಾರಂಭಿಸುವ ಶ್ಲೋಕದಿಂದ ತಿಳಿಸುತ್ತಾರೆ. ಅದಾಗಿ **ದುರ್ವಿಜ್ಞಾನೈಃ**–ಕಷ್ಟಪಟ್ಟರೂ, ತಿಳಿಯಲಾಗದ **ನಿಯಮಗಹನೈಃ**–ನಿಯಮಗಳಿಂದ ಕೂಡಿರುವುದರಿಂದ ಅನುಷ್ಠಿಸಲು ಅಶಕ್ಯಗಳಾದ **ದೂರ ವಿಶ್ರಾಂತಿ ದೇಶೈಃ**-ಚಿರಕಾಲ ಸಾಧ್ಯವಾದ ಫಲದಶೆಯನ್ನುಳ್ಳಂಥ, ಆದ್ದರಿಂದಲೇ **ಬಾಲಾನರ್ಹೈಃ**–ಅಕಿಂಚನರುಗಳಿಗೆ ಚಿಂತಿಸಲೂ ಅಶಕ್ಯಗಳಾದ **ಬಹುಭಿಃ**-ನಾನಾಪ್ರಕಾರಗಳಾದ **ಅಯನೈಃ**-ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ರೂಪಗಳಾದ ಉಪಾಯಗಳಿಂದ, ಅಂದರೆ ಆ ಉಪಯಗಳ ಜ್ಞಾನದಿಂದ **ಶೋಚತಾಂ**–ಸರ್ವದಾ ಶೋಕಿಸುತ್ತಿರುವ, **ನಃ**–ನಮಗೆ **ಸುಪಂಥಾಃ** ಸುಲಭೋಪಾಯನಾಗಿ, ಅಂದರೆ ಆ ದುಷ್ಕರ ಕರ್ಮಯೋಗ ಜ್ಞಾನಯೋಗ ಸಹಕೃತ ಭಕ್ತಿಯೋಗ ಸ್ಥಾನದಲ್ಲಿ ತಾನೇ ನಿಲ್ಲುವವನಾಗಿ–ಅವುಗಳನ್ನು ಅನುಷ್ಠಿಸಿದರೆ ಕೊಡುವ ಫಲವನ್ನು ಅಕಿಂಚನನ ವಿಷಯದಲ್ಲಿ ಅವುಗಳನ್ನು ಅನುಷ್ಠಿಸದಿರೇ ಪ್ರಪತ್ತಿ ವಶೀಕೃತನಾಗಿ ಕೊಡುವವನಾಗಿ ಎಂದರ್ಥ- **ನಃ**–ನಮ್ಮನ್ನು **ನಿಷ್ಪ್ರತ್ಯೂಹಂ** – ಯಾವ

**ನಿಷ್ಪತ್ಯೂಹಂ ನಿಜಪದಮಸೌ ನೇತು ಕಾಮಸ್ಸ್ವಭೂಮ್ನಾ।**
**ಸತ್ಪಾಥೇಯಂ ಕಿಮಪಿ ವಿದಧೇ ಸ್ಸಾರಥಿ ಸ್ಸರ್ವನೇತಾ ॥೬೨॥**
**ಒಣ್ದೊಡಿಯಾಳ್ ತಿರುಮಹಳುನ್ದಾನು ಮಾಹಿ,**
**ಯೊರುವಿನೈ ವಾಲೀನ್ರವುಯಿರೆಲ್ಲಾ ಮುಯ್ಯ।**
**ವಣ್ದುವರೈನಗರ್ ವಾಳ್ ವಶುದೇವರ್ಕಾಯ್,**
**ಮನ್ನವರ್ಕ್ಕುತ್ತೇರ್ಪ್ಪಾಹನಾಹಿ ನಿನ್ರ॥**
**ತಣ್ದುಳವ ಮಲರ್ ಮಾರ್ಬನ್ದಾನೇ ಶೊನ್ನ**
**ತನಿತ್ತರುಮನ್ದಾನೆಮಕ್ಕಾಯ್ ತ್ತನ್ನೈಯೆನ್ರ।**

---

ವಿಘ್ನವೂ ಇಲ್ಲದೆ **ಸ್ವಭೂಮ್ನಾ**–ತನ್ನ ಮಾಹಾತ್ಮ್ಯದಿಂದ **ನಿಜಪದಂ**–ತನ್ನ ಪದವನ್ನು ಅಂದರೆ ತನಗೆ ಅಸಾಧಾರಣವಾದ ಪರಮಪದವನ್ನು **ನೇತುಕಾಮಃ**-ಕರೆದೊಯ್ಯಲು ಆಸೆಯುಳ್ಳ **ಸರ್ವನೇತಾ** – ಸರ್ವನಿಯಂತಾವಾದ, **ಸಾರಥಿಃ**-ಆಶ್ರಿತ ವಾತ್ಸಲ್ಯದಿಂದ ಅರ್ಜುನನಿಗೆ ಸಾರಥಿಯಾದ, **ಅಸೌ**–ಈ ಪಾರ್ಥಸಾರಥಿಯು **ಕಿಮಪಿ**-- ಅನಿರ್ವಚನೀಯವಾದ, **ಸತ್ಪಾಥೇಯಂ**-ಅರ್ಚಿರಾದಿ ಮಾರ್ಗದಲ್ಲಿ ಹೋಗಲು ಯೋಗ್ಯವಾದ ಶರಣಾಗತಿಯೆಂಬ ಉಪಾಯ 'ಸತ್' ಎಂಬ ಶಬ್ದದಿಂದ, ಸರ್ವಾಧಿಕಾರಿ ಸಾಧಾರಣತ್ವವೂ, ಸರ್ವಾನಿಷ್ಟನಿವರ್ತನ ಕ್ಷಮತ್ವವೂ ಸರ್ವೇಷ್ಟ ಸಾಧನತ್ವವೂ ಸುಕರತ್ವವೂ, ಸಕೃತ್ಕರ್ತವ್ಯತ್ವವೂ ಶೀಘ್ರ ಫಲಪ್ರದತ್ವವೂ ಪ್ರತಿಬಂಧಾನರ್ಹತ್ವವೂ, ಉಪಾಯಾಂತರ ಪ್ರಯೋಗಾಸಹತ್ವಾದಿಗಳೂ ವಿವಕ್ಷಿತಗಳು, **ವಿದಧೇ**–'ಮಾಮೇಕಂ ಶರಣಂ ವ್ರಜ' ಎಂದು ವಿಧಿಸಿದನು

ಅನಂತರ **ಒಂಡೊಡಿಯಾಳ್ ತಿರುಮಹಳುವ್ ತಾನುಮಾಹಿ** ಎಂದಾರಂಭಿಸಿ ಶ್ರಿಯಃಪತಿಯು ಜಗತ್ತನ್ನು ಸೃಷ್ಟಿಸಿ ಆ ಜಗತ್ತು ಉಜ್ಜೀವಿಸಲು ತಾನೇ ಕೃಷ್ಣನಾಗಿ ಅವತರಿಸಿ, ಅರ್ಜುನನಿಗೆ ಸಾರಥಿಯಾಗಿದ್ದು, ಅವನಿಗೆ ಉಪದೇಶಿಸುವ ವ್ಯಾಜದಿಂದ ಲೋಕಕ್ಷೇಮಕ್ಕಾಗಿ ಗೀತೆಯನ್ನು ಉಪದೇಶಿಸಿದನು ಎಂದು ಅಧಿಕಾರಾರ್ಥಕ್ಕೆ ಅವತಾರಿಕೆಯನ್ನು ಅನುಗ್ರಹಿಸುತ್ತಾರೆ, ಅದಾಗಿ **ಒಣ್**-ಉಜ್ವಲವಾದ **ತೊಡಿಯಾಳ್ – ತೋಳು** ಬಳೆಗಳನ್ನುಳ್ಳ **ತಿರುಮಹಳುಮ್–**ಮಹಾಲಕ್ಷ್ಮಿಯೂ **ತಾನುಮಾಹಿ**-ತಾನೂ ಕೂಡ ಇದ್ದು **ಒರುವಿನೈವಾಲೀನ್ರ** –ಇಬ್ಬರೂ ಸೇರಿ ಮಾಡಿದ ಸಂಕಲ್ಪದಿಂದ ಸೃಷ್ಟಿಸಲ್ಪಟ್ಟ **ಉಯಿರೆಲ್ಲಾ ಮುಯ್ಯ**–ಜೀವರಾಶಿಗಳೆಲ್ಲಾ ಉಜ್ಜೀವಿಸುವುದಕೊಸ್ಕರ ಇದರಿಂದ ತದೈಕ್ಷತ, ಬಹುಸ್ಯಾಂ ಪ್ರಜಾಯೇಯ ಎಂಬ ಜಗತ್ಸೃಷ್ಟಿ ಸಂಕಲ್ಪವೂ ಇಬ್ಬರಿಂದಲೂ ಮಾಡಲ್ಪಡುತ್ತದೆ ಎಂಬುದು ಸೂಚಿತ. ಏಕಮೇವ" ಎಂಬ ಐಕ್ಯ ಶ್ರುತಿಗೆ ವಿರೋಧವಿಲ್ಲ. ಲಕ್ಷ್ಮಿಯು ಅಪೃಥಗ್ಭೂತ ಶಕ್ತಿತ್ವವಾದ್ದರಿಂದ ಶಕ್ತಿ ಶಕ್ತಿಮಾನ್ ಎಂಬುದು ಒಂದೇ ತತ್ವ. **ಭಾಸ್ವಾನೇಕೋ ಲೋಕ ಪ್ರಕಾಶಕಃ**–ಪ್ರಕಾಶದಿಂದ ಕೂಡಿದ **ಸೂರ್ಯನು ಒಬ್ಬನೇ ಲೋಕಕ್ಕೆ ಪ್ರಕಾಶಕನು** ಎಂದರೆ **ಭಾಸ-ಪ್ರಕಾಶವೂ ಭಾಸ್ವಾನ್**–ಪ್ರಕಾಶದಿಂದ ಕೂಡಿದವನೂ **ವಿಶೇಷಣ ವಿಶಿಷ್ಟವಾದ** ಒಂದೇ ತತ್ವವೆಂದರ್ಥ. "ಕವಿತುರಿದ ಮಿತ್ಥಂತ್ವ ವಿಭವಾತ್" ಎಂಬಂತೆ ಇದಂ ಶಬ್ದಕ್ಕೆ ಇತ್ಥಂತ್ವದ ಹಾಗೆ ಲಕ್ಷ್ಮಿಯೂ- "**ವ್ಯಾಪಕಾವತಿ ಸಂಶ್ಲೇಷಾದೇಕತತ್ವಮಿವೋದಿತೌ**" ಎಂಬ ಶಾಸ್ತ್ರ ಸಂದರ್ಶಿತ ರೀತಿಯಲ್ಲಿ, ಪರಮಕಾರಣವಾಚಿ ಶಬ್ದಗಳಲ್ಲಿ ವಿಶೇಷಣ ವಿಶಿಷ್ಟಳಾಗಿ ಎಂದು ತತ್ವವೂ ಸೇರಿ ಒಂದು ಎಂದೇ ಹೇಳುವ ರೀತಿಯಲ್ಲಿ ಅಂಗರ್ತತೆ. **ತಿರುಮಹಳುವ್ ತಾನುಮಾಹಿ**–ಎಂದು ವಿಶಿಷ್ಟೈಕ ತತ್ವವಾಗಿದ್ದಾಳೆಂಬುದು ತಾತ್ಪರ್ಯ. **ವಣ್ ತುವರೈ ನಗರ್ ವಾಳ್**-ಉದಾರವಾದ ಅಂದರೆ 'ಪುರೀದ್ವಾರವತೀಚೈವ ಸಪ್ತೈತೇ ಮುಕ್ತಿ ದಾಯಕಾಃ' ಎಂದು ಮೋಕ್ಷಪ್ರದವಾದ ನಗರ ಅದರಲ್ಲಿ ವಾಸಮಾಡುವ **ವಸುದೇವರ್ಕಾಯ್** ವಸುದೇವರಿಗೆ ಪುತ್ರನಾಗಿ ಅವತರಿಸಿ 'ವಾಳ್' ಎಂದು ಪಾಠವಾದರೆ ಆ ನಗರದ ಜನಗಳು ಉಜ್ಜೀವಿಸುವಂತೆ ಎಂದರ್ಥ, **ಮನ್ನವರ್ಕ್ಕು**–ರಾಜನಾದ ಅರ್ಜುನನಿಗೆ, **ತೇರ್ ಪಾಹನಾಹಿನಿನ್ರ**-ಸಾರಥಿಯಾಗಿ ನಿಂತ **ತಣ್**–ಶೀತಲವಾದ, **ತುಳುವ ಮಲರ್ ಮಾರ್ಬನ್**–ತುಳಸೀಮಾಲೆಯನ್ನು ಎದೆಯಲ್ಲಿ ಧರಿಸಿದ, **ತಾನೇ ಶೊನ್ನ**–ಕೃಪಾ

ಙ್ಕಣ್ಡುಕಳಿತ್ತಡಿ ಶೂಡ ವಿಲಕ್ಕಾಯ್ ನಿನ್ರ
ಕಣ್ಪುದೈಯಲ್ ವಿಳೈಯಾಟ್ಟೈಕ್ಕಳಿಕ್ಕಿನ್ರಾನೇ ॥

## ಚರಮ ಶ್ಲೋಕಸ್ಯ ಅವತಾರಿಕಾ

1) "ಏಷ ನಾರಾಯಣ ಶ್ರೀಮಾನ್ ಕ್ಷೀರಾರ್ಣವ ನಿಕೇತನಃ ।
ನಾಗಪರ್ಯಙ್ಕ ಮುತ್ಸೃಜ್ಯಹ್ಯಾಗತೋ ಮಧುರಾಂಪುರೀಮ್ ॥"
ಎನ್ಗಿರಪಡಿಯೇ ಶ್ರಿಯಃ ಪತಿಯಾನ ಸರ್ವೇಶ್ವರನ್, ಸಾಧುಪರಿತ್ರಾಣ, ದುಷ್ಕೃದ್ವಿನಾಶ ಧರ್ಮಸಂಸ್ಥಾಪನ ಙ್ಗಳುಕ್ಕಾಕ, ವಣ್ತುವರಾಪತಿ ಮನ್ನನ್ನಾಯ್, ವನ್ದವತರಿತ್ತರುಳಿ ಸರ್ವಸುಲಭನಾಯ್, 1) ದ್ರೌಪದ್ಯಾ ಸಹಿತಾ ಸ್ಸರ್ವೇ ನಮಶ್ಚಕ್ರುರ್ಜನಾರ್ದನಮ್, ಎನ್ಗಿರಪಡಿಯೇ, ಶರಣಾಗತರಾನ ಪಾಂಡವರ್‌ಹಳುಕ್ಕುಂ

---

ವಿಶೇಷದಿಂದ ತಾನಾಗಿಯೇ ಉಪದೇಶಿಸಿದ **ತನಿತ್ತರುಮಮ್ ತಾನ್** – ಅದ್ವಿತೀಯ ಧನವು ತಾನೇ ಆಗಿ, **ಎಮಕ್ಕಾವತ್**–ನಮಗೋಸ್ಕರ ಭರಸ್ವೀಕಾರ ಮಾಡಿ ಉಪಾಯಾಂತರ ಸ್ಥಾನದಲ್ಲಿ ನಿಲ್ಲುವವನಾಗಿ **ತನ್ನೈ**-ಉಭಯ ವಿಭೂತಿ ವಿಶಿಷ್ಟನಾಗಿ ಸಮಸ್ತ ಕಲ್ಯಾಣ ಗುಣ ಪೂರ್ಣನಾದ ತನ್ನನ್ನು ಎನ್ರುಮ್–ಸರ್ವಕಾಲದಲ್ಲಿಯೂ, **ಕಂಡು** ಸಾಕ್ಷಾತ್ಕರಿಸಿ, **ಕಳಿತ್ತು**-ಸಂತೋಷಪಟ್ಟು, (ಆನಂದಿಸಿ ಎಂದರ್ಥ) ಆದರಿಂದ **ಅಡಿಶೂಡ**–ಶ್ರೀ ಪಾದಗಳನ್ನು ಶಿರ ಸಾವಹಿಸುವುದೇ ಮೊದಲಾದ ಕೈಂಕರ್ಯಗಳಿಗೆ **ವಿಲಕ್ಕಾಯ್ ನಿನ್ರ** –ಪ್ರತಿಬಂಧಕವಾಗಿರುವ **ಕಣ್ ಪುದೈಯಲ್ ವಿಳೈಯಾಟ್ಟೈ**-ಮಕ್ಕಳು ಕಣ್ಣಾಮುಚ್ಚಾಲೈ ಆಟವಾಡುವಂತೆ, ನಮಗೆ ತತ್ವಹಿತ ಪುರುಷಾರ್ಥಗಳ ವಿಷಯವಾದ ಜ್ಞಾನವನ್ನು ಮರೆಸುವ ಸಂಸಾರ ಬಂಧ ಲೀಲೆಯನ್ನು **ಕಳಿಕ್ಕಿನ್ರಾನೇ**–ಹೋಗಲಾಡಿಸುತ್ತಾನೆ.

## ಪ್ರಬಂಧಾವತಾರ

ಅನಂತರ ಈ ಪಾಶುರದಲ್ಲಿ ಹೇಳಿದ ಚರಮಶ್ಲೋಕದ ಅವತಾರ ಕ್ರಮದ ಪೀಠಿಕೆಯನ್ನೇ 1) **ಏಷನಾರಾಯಣ ಶ್ರೀಮಾನ್** ಎಂದಾರಂಭಿಸಿ ವಿಸ್ತಾರವಾಗಿ ತಿಳಿಸುತ್ತಾರೆ. ಆದಾಗಿ ಈ ಶ್ರೀಮಾನಾದ ನಾರಾಯಣನು ಕ್ಷೀರಾರ್ಣವನನ್ನು ತನಗೆ ವಾಸಸ್ಥಾನವಾಗಿ ಪಡೆದಿದ್ದು, ಆದಿಶೇಷನೆಂಬ ಹಾಸಿಗೆಯನ್ನು ಮುಂಚಿತವಾಗಿಯೇ ಬಲರಾಮನಾಗಿ ಅವತರಿಸುವಂತೆ ಭೂಮಿಗೆ ಕಳುಹಿಸಿ- "ಭೂಮಾ ವುತ್ಸೃಜ್ಯ, ನಂತರ ತಾನು ಮಧುರಾನಗರದಲ್ಲಿ ಬಂದು ಕೃಷ್ಣನಾಗಿ ಅವತರಿಸಿದನು, **ಎನ್‌ಹಿರಪಡಿಯೇ**–ಎಂದು ಹೇಳುವಂತೆ, **ಶ್ರಿಯಃಪತಿಯಾನ ಸರ್ವೇಶ್ವರನ್**–ಲಕ್ಷ್ಮೀಪತಿಯಾದ ಸರ್ವೇಶ್ವರನು **ಸಾಧು ಪರಿತ್ರಾಣ**–ಇತ್ಯಾದಿ ಸಾಧು ಪರಿತ್ರಾಣ ದುಷ್ಕೃದ್ವಿನಾಶ ಸಂಕಲ್ಪಗಳೇ ಮೊದಲಾದ ಎಲ್ಲಾ ಕಾರ್ಯಗಳನ್ನೂ ಲಕ್ಷ್ಮೀ ಮತ್ತು ಅವಳ ಪತಿಯಾದ ನಾರಾಯಣರಿಬ್ಬರೂ ಸೇರಿ ನಡೆಸುತ್ತಾರೆಂಬುದಕ್ಕೆ "ಏಷನಾರಾಯಣ ಶ್ರೀಮಾನ್", ಎಂಬ ವಚನವು ಪ್ರಮಾಣ. ಇದನ್ನು ಅನುಸರಿಸಿಯೇ "ಶ್ರಿಯಃ ಪತಿಯಾನ ಸರ್ವೇಶ್ವರನ್" ಎಂದು ಅನುಗ್ರಹಿಸಿರುತ್ತಾರೆ. ಗೀತಾ ಭಾಷ್ಯದ ಆರಂಭದಲ್ಲಿಯೂ ಇದೇ ಅಭಿಪ್ರಾಯದಿಂದ "ಶ್ರಿಯಃ ಪತಿಃ" ಎಂದು ಆರಂಭಿಸಲ್ಪಟ್ಟಿದೆ. ಹೀಗೆ ಶ್ರಿಯಃ ಪತಿಯು ಸಾಧುಗಳನ್ನು ರಕ್ಷಿಸಲೂ, ದುಷ್ಟರನ್ನು ನಾಶಪಡಿಸಲೂ, ಧರ್ಮಸಂಸ್ಥಾಪನಕ್ಕಾಗಿಯೂ. **ವಣ್‌ತುವರಾ ಪತಿಮನ್ನನಾಯ್**-ಇತ್ಯಾದಿ ಉಜ್ವಲವಾದ ದ್ವಾರಕಾನಗರಕ್ಕೆ ರಾಜನಾಗಿ ಬಂದು ಅವತಾರಮಾಡಿ ಸರ್ವಸುಲಭ ನಾಗಿ, 1) **ದ್ರೌಪದ್ಯಾಸಹಿತಾಸ್ಸರ್ವೇ** ಇತ್ಯಾದಿ–ದ್ರೌಪದಿಯೊಡನೆ ಕೂಡಿ ಪಾಂಡವರು ಜನಾರ್ದನನನ್ನು ಶರಣಾ ಗತಿ ಹೊಂದಿದರು–ಎಂದು ಹೇಳಿರುವಂತೆ ಶರಣಾಗತರಾದ ಪಾಂಡವರಿಗೆ, **ಇನ್ನಾರ್ ತೂದನನನಿನ್ರು**–ಇಂಥಹವರಿಗೆ

---

1) ಹರಿವಂಶ-113-62
1) ಭಾರತ ಅರಣ್ಯ ಪರ್ವ-192-56

**ಇನ್ನಾರ್ ದೂತನೆನನಿನ್ರು, ಅರ್ಜುನನ್ನೈರಥಿಯಾಕ್ಕಿ, ತಾನ್ ಸಾರಥಿಯಾಯ್, ಅವನುಕ್ಕು ವಿಧೇಯ ನಾಯ್, ನಿನ್ರವಳವಿಲೇ ಇವ್ವರ್ಜುನನ್ ತನ್ನೈ ನಿಮಿತ್ತಮಾತ್ರ ಮಾಹಕ್ಕೊಂಡು ಸರ್ವೇಶ್ವರನ್ ತನ್‌ಪ್ರತಿ ಪಕ್ಷಙ್ಗಳೈ ನಿರಸಿಕ್ಕ ನಿನ್ರ ನಿಲೈಯೈಕ್ಕಂಡು ಬಂಧುವಿನಾಶಮ್ ಸಿದ್ಧಮೆನ್ರು ನಿಶ್ಚಯಿತ್ತು. ಅಸ್ಥಾನ ಸ್ನೇಹತ್ತಾಲ್ ಪಿರನ್ದ ಶೋಕತ್ತಾಲುಮ್ ಅಸ್ಥಾನ ಕೃಪೈಯಾಲುಮ್, ಆಚಾರ್ಯಾದಿಹಳ್ ಯುದ್ಧೋನ್ಮುಖರೇಯಾಹಿಲುಮ್, ಅವರ್‌ಹಳ್ ವಧತ್ತಾಲೇ ಪಾಪಮ್ ವರುಹಿರದೆನ್ರಿರ ಭಯತ್ತಾಲುಮ್ ಕಲಙ್ಗ ಎದುಹಿತಮೆನ್ರು ತೆಳಿಯವೇಣುಮೆನ್ರು ಪಾರ್ತ್ತ 1) "ಯಚ್ಛ್ರೇಯಸ್ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್" ಎನ್ರು ವಿಣ್ಣಪ್ಪಂ ಶೆಯ್ಯ,**

**ಅವನುಡೈಯ ಶೋಕತ್ತೈ ನಿವರ್ತ್ತಿಪ್ಪಿಕ್ಕೈಕ್ಕಾಹ ದೇಹಾದಿವ್ಯತಿರಿಕ್ತಮಾಯ್, ಪರಶೇಷತೈಕರಸ ಮಾನ ನಿತ್ಯಾತ್ಮ ಸ್ವರೂಪತ್ತೈಯುಮ್, ಇಸ್ಸ್ವರೂಪಮ್ ತೆಳಿನ್ದವನುಕ್ಕು ಪರಮಪುರುಷಾರ್ಥ ಲಾಭ ತ್ತುಕ್ಕು ಪರಂಪರಯಾ ಕಾರಣಙ್ಗಳಾನ ಕರ್ಮಯೋಗ ಜ್ಞಾನಯೋಗಙ್ಗಳೈಯುಮ್, ಸಾಕ್ಷಾದುಪಾಯ ಮಾಹ ಚೋದಿತಮಾನ ಭಕ್ತಿಯೋಗತ್ತೈಯುಮ್, ಸಪರಿಕರಮಾಹ ಉಪದೇಶಿಕ್ಕ, ಇಪ್ಪರಮ ಪುರು**

---

**ತಾನು** ದೂತನು ಎಂದು ಹೇಳುವಂತೆ-ಇದರಿಂದ ಸೌಲಭ್ಯವೂ ಸೌಶೀಲ್ಯವೂ ವ್ಯಕ್ತ-ಅರ್ಜುನನನ್ನು **ರಥಿಯಾಕ್ಕಿ** ಇತ್ಯಾದಿ ರಥದಲ್ಲಿ ಕುಳಿತಿರುವನಾಗಿ ಮಾಡಿ, ತಾನು ಸಾರಥಿಯಾಗಿ, ಅವನಿಗೆ ವಿಧೇಯನಾಗಿ **ನಿನ್ರವಳವಿಲೇ**- ಭಗವಂತನು ನಿಂತುಕೊಂಡನು. ಈ ಸಂದರ್ಭದಲ್ಲಿ **ಇವ್ವರ್ಜುನನ್** ಇತ್ಯಾದಿ-ಈ ಅರ್ಜುನನು ತನ್ನನ್ನು ನಿಮಿತ್ತ ವಾಗಿಟ್ಟುಕೊಂಡು ಸರ್ವೇಶ್ವರನು ತನ್ನ (ಅರ್ಜುನನ) ಪ್ರತಿಪಕ್ಷಿಗಳನ್ನು ನಿರಸನ ಮಾಡಲು ನಿಂತಿರುವುದನ್ನು **ನೋಡಿ** ಬಂಧುವಿನಾಶವು ಸಿದ್ಧವೆಂದು ನಿಶ್ಚಯಿಸಿ, **ಅಸ್ಥಾನ ಸ್ನೇಹತ್ತಾಲೇ** ಇತ್ಯಾದಿ-ಯುದ್ಧ ಭೂಮಿಯಲ್ಲಿ ಯುದ್ಧಮಾಡದೆ ಪ್ರಾಪ್ತವಲ್ಲದ ಸ್ಥಳದಲ್ಲಿ, ಬಂಧು ಸ್ನೇಹದಿಂದ ಉಂಟಾದ **ಶೋಕದಿಂದಲೂ** ಕರುಣೆಯಿಂದಲೂ **ಆಚಾರ್ಯರುಗಳು** ಯುದ್ಧೋನ್ಮುಖರಾಗಿ, ಅವರುಗಳ ವಧದಿಂದ ಪಾಪವು ಸಂಭವಿಸಿತ್ತದೆ ಎಂದು ಭಯಗೊಂಡ **ಅರ್ಜುನನು, ಕಲಂಗಿ**-ಮನಸ್ಸು ಕಲಗಿ ನಿಂತನು. **ಎದುಹಿತಮೆನ್ರು** ಇತ್ಯಾದಿ-ಆಗ ಯುದ್ಧಮಾಡುವುದು ಹಿತವೇ ಮಾಡದೆ ಇರುವುದು ಹಿತವೇ ಎಂದು ತಿಳುವಾಗಿ ತಿಳಿದುಕ್ಕೊಳ್ಳಬೇಕೆಂದು ಸೋಡಿ, 1) **ಯಚ್ಛ್ರೇಯಃಸ್ಯಾನ್ನಿಶ್ಚಿತಂಬ್ರೂಹಿ ಇತ್ಯಾದಿ** ನನಗೆ ಯಾವುದು ಶ್ರೇಯಸ್ಸೆಂಬುದನ್ನು ನಿಶ್ಚಿಸಿದಿಯೋ ತಿಳಿಸು, ಅದಕೋಸ್ಕರ ನಿನ್ನಲ್ಲಿ ಶರಣಾಗತಿ ಮಾಡಿದ್ದೇನೆ. ನನ್ನನ್ನು **ಶಾಧಿ**-ಶಾಸನೆ ಮಾಡು ಎಂದು ಪ್ರಾರ್ಥಿಸಿದನು.

**ಅವನುಡೈಯ ಶೋಕತ್ತೈ** ಇತ್ಯಾದಿ-ಅರ್ಜುನನ ಶೋಕವನ್ನು ಹೋಗಲಾಡಿಸಲು, **ದೇಹಾದಿವ್ಯತಿರಿಕ್ತಮಾಮ್** ದೇಹಕ್ಕಿಂತಲೂ ಬೇರೆಯಾಗಿ **ಪರಶೇಷತೈಕರಸಮಾನ** ಇತ್ಯಾದಿ ಸರ್ವೋತ್ಕೃಷ್ಟನಾದ ಭಗವಂತನಿಗೆ ಶೇಷ ಭೂತ ನಾಗಿರುವುದೇ ತನಗೆ ಸ್ವಭಾವವಾದ ಆತ್ಮನ ನಿತ್ಯ ಸ್ವರೂಪವನ್ನೂ ಈ ಸ್ವರೂಪವನ್ನು ತಿಳಿದವನಿಗೆ ಪರಮ ಪುರು ಷಾರ್ಥ ಲಾಭಕ್ಕೆ ಪರಂಪರೆಯಾಗಿ ಕಾರಣಗಳಾದ ಕರ್ಮಯೋಗ ಜ್ಞಾನಯೋಗಗಳನ್ನೂ, **ಸಾಕ್ಷಾದುಪಾಯವಾಗಿ ಚೋದಿತಮಾನ**-ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಭಕ್ತಿಯೋಗವನ್ನೂ **ಸಪರಿಕರಮಾಹ** ಇತ್ಯಾದಿ-ಅಂಗಗಳೊಡನೆ,

---

1) ಕಾರ್ಪಣ್ಯದೋಷೋಪಹತ ಸ್ವಭಾವಃ
ಪೃಚ್ಛಾಮಿ ತ್ವಾ ಧರ್ಮಸಂಮೂಢಚೇತಾಃ ।
ಯಚ್ಛ್ರೇಯಸ್ಸ್ಯಾಂ ನಿಶ್ಚಿತಂ ಬ್ರೂಹಿತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ಗೀತೆ 2-7

ಕರ್ತವ್ಯಾಕರ್ತವ್ಯ ಜ್ಞಾನವಿಲ್ಲದೆ, ಧರ್ಮವು ಯಾವುದೆಂದು ತಿಳಿಯದೆ ನಿನ್ನಲ್ಲಿ ಶರಣು ಹೊಂದಿದ್ದೇನೆ. ನನಗೆ ಯುದ್ಧ ಮಾಡು ವುದು ಶ್ರೇಯಸ್ಸೇ, ಮಾಡದಿರುವುದು, ಶ್ರೇಯಸ್ಸೇ ಎಂಬ ಎರಡರಲ್ಲಿ ಯಾವುದನ್ನು ನಿಶ್ಚಯಿಸಿದೆಯೋ ಅದನ್ನು ನಿನ್ನ ಶಿಷ್ಯನಾದ ನನಗೆ ತಿಳಿಸಿ, ನನ್ನನ್ನು ಶಾಸಿಸು-ಮುಂದಿನ ಕಾರ್ಯದಲ್ಲಿ ಆಜ್ಞಾಪಿಸು

ಷಾರ್ಥತ್ತೈ ಕ್ಕಡುಕ ಪೆರವೇಣುಂ ಎನ್ನು ತ್ವರೈಯುಣ್ಡೇಯಾಹಿಲುಮ್ ಸಪರಿಕರಮಾನ ಇಪ್ಪುಪಾಯತ್ತಿ ನ್ನುಡೈಯ ದುಷ್ಕರತ್ತೈಯಿನ್ನಾಲುಮ್, ಇಪ್ಪುಪಾಯಾನುಷ್ಠಾನತ್ತುಕ್ಕು ಅಪೇಕ್ಷಿತ ಜ್ಞಾನಶಕ್ತಿಯುಂಡೇ ಯಾಹಿಲುಮ್ ಅನೇಕಾವಧಾನತ್ತೋಡೇ ಕೂಡ ಚಿರಕಾಲ ಸಾಧ್ಯಮಾನ ಉಪಾಯ ಸ್ವಭಾವತ್ತಾಲೇ ಅಭಿಮತಮ್ ಕಡುಹತ್ತಲೈಕ್ಕಟ್ಟಾದಪಡಿ ಇರುಕ್ಕೈಯಾಲುಮ್, ನಿರತಿಶಯ ಶೋಕಾವಿಷ್ಟನಾನ ಅರ್ಜುನನೈ ವ್ಯಾಜಮಾಹಕ್ಕೊಣ್ಡು ಪರಮಕಾರುಣಿಕನಾನ ಗೀತೋಪನಿಷದಾಚಾರ್ಯನ್

1) ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾ ವಾ ಮಹಾಮತೇ ।
ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ಯೋ ಮಮ ಕೈಂಕರ್ಯ ಲಿಪ್ಸುಭಿಃ ॥"

ಎನ್ರು ತಾನ್ ವಿಕಲ್ಪಿತ್ತು ವಿಧಿತ್ತ ಉಪಾಯಙ್ಗಳಿಲ್,

2) "ತಾವದಾರ್ತಿಸ್ತಥಾ ವಾಂಛಾ ತಾವನ್ಮೋಹಸ್ತಥಾಽಸುಖಮ್" ಎನ್ಗಿರಪಡಿಯೇ ತನ್ತಿರುವಡಿಹಳೈ ಪ್ಪೆರುಹೈಕ್ಕುಮ್, ಮತ್ತುಮುಳ್ಳ ಅಭಿಮತಙ್ಗಳಾನವೈ ಎಲ್ಲಾತ್ತುಕ್ಕುಮ್ ಪೊದುವಾನ ಸಾಧನಮಾಯ್ ಆನುಕೂಲ್ಯ ಸಙ್ಕಲ್ಪಾದಿ ವ್ಯತಿರಿಕ್ತ ಪರಿಕರ ನಿರಪೇಕ್ಷಮಾಯ್, ಲಘುತರಮಾಯ್ ಕ್ಷಣಮಾತ್ರ ಸಾಧ್ಯ ಮಾನ ರಹಸ್ಯತಮೋಪಾಯತ್ತೈ ಶ್ರೋತವ್ಯ ಶೇಷಮಿಲ್ಲಾದಪಡಿ ಉಪದೇಶ ಪರ್ಯವಸಾನಮಾನ ಚರಮ ಶ್ಲೋಕತ್ತಾಲ್ ಸಕಲ ಲೋಕ ರಕ್ಷಾರ್ಥಮಾಹ ಅರುಳಿಚ್ಚೆಯ್ದಾನ್.

ಶ್ರುತಿಸಿದ್ಧಮಾನ ಇವ್ವರ್ಥತ್ತೈ ಶರಣ್ಯನಾನ ಸರ್ವೇಶ್ವರನ್ ತಾನೇ ಉಪದೇಶಿಕ್ಕವಿದು ತಾನೇ

---

ಉಪದೇಶಿಸಿದನು. ಆಗ ಇಷ್ಟರವು ಪುರುಷಾರ್ಥತ್ತೈ ಈ ಪರಮಪುರುಷಾರ್ಥವನ್ನು ಕಡುಹ–ಶೀಘ್ರವಾಗಿ, ಪಡೆಯ ಬೇಕೆಂಬ ತ್ವರೆಯು ಉಂಟಾದರೂ, ಸಪರಿಕರವಾದ ಭಕ್ತಿಯೋಗ ರೂಪವಾದ– ಈ ಉಪಾಯವು ದುಷ್ಕರವಾದ್ದ ರಿಂದಲೂ ಈ ಉಪಾಯಾನುಷ್ಠಾನಕ್ಕೆ ಅಪೇಕ್ಷಿತವಾದ ಜ್ಞಾನ ಶಕ್ತಿಗಳು ಇದ್ದರೂ ಬಹಳ ಸಾವಧಾನವಾಗಿದ್ದು ಕೊಂಡು ಚಿರಕಾಲ ಸಾಧ್ಯವಾದ ಈ ಉಪಾಯದ ಸ್ವಭಾವದಿಂದ ಇಷ್ಟಾರ್ಥವು ಕಡುಹ-ಶೀಘ್ರವಾಗಿ, ತಲೈ ಕ್ಕಟ್ಟಾದ ಪಡಿ ಯಿರುಕ್ಕೈಯಾಯ್ ಸಿದ್ಧಿಸುವುದಿಲ್ಲವಾದ್ದರಿಂದಲೂ ನಿರತಿಶಯ ಶೋಕದಿಂದ ಕೂಡಿದ ಅರ್ಜುನ ನನ್ನು ವ್ಯಾಜವಾಗಿಟ್ಟುಕೊಂಡು ಪರಮ ಕಾರುಣಿಕನಾದ ಗೀತೋಪನಿಷದಾಚಾರ್ಯನಾದ ಕೃಷ್ಣ ಪರಮಾತ್ಮನು 1) ಭಕ್ತ್ಯಾಪರಮಯಾವಾಪಿ ಪ್ರಪತ್ತ್ಯಾವಾ-ಭಕ್ತಿಯಿಂದಾಗಲಿ ಪ್ರಪತ್ತಿಯಿಂದಾಗಲಿತನ್ನನ್ನು ಪಡೆಯಬಹುದು ಎಂದು ತಾನು ವಿಕಲ್ಪಿಸಿ ವಿಧಿಸಿದ ಉಪಾಯಗಳಲ್ಲಿ 2) ತಾವದಾರ್ತಿಸ್ತಥಾವಾಂಛಾ ಇತ್ಯಾದಿಯಾಗಿ ಹೇಳಿ ರುವಂತೆ ತನ್ನ ಶ್ರೀ ಪಾದಗಳನ್ನು ಪಡೆಯುವುದಕ್ಕೂ, ಮತ್ತು ಇತರ ಪುರುಷಾರ್ಥಗಳೆಲ್ಲವನ್ನೂ ಪಡೆಯುವುದಕ್ಕೂ ಸಾಧಾರಣವಾದ ಆನುಕೂಲ್ಯ ಸಂಕಲ್ಪಾದಿಗಳಿಗಿಂತ ಬೇರೆ ಯಾವ ಅಂಗಗಳೂ ಬೇಕಿಲ್ಲವಾಗಿ ಲಘುತರವಾಗಿ ಕ್ಷಣಕಾಲ ಸಾಧ್ಯವಾದ ರಹಸ್ಯತಮವಾದ ಶರಣಾಗತಿಯೆಂಬ ಉಪಾಯವನ್ನು ನಿರವಶೇಷವಾಗಿ ಉಪದೇಶದ ಎಲ್ಲೆಯಾದ ಚರಮ ಶ್ಲೋಕದಿಂದ ಸಕಲ ಲೋಕ ರಕ್ಷಣಾರ್ಥವಾಗಿ ಕೃಪೆಮಾಡಿ ಹೇಳುತ್ತಾನೆ.

"ನಪ್ರಸೀದತಿ ವೈ ವಿದ್ಯಾ ವಿನಾ ಸದುಪದೇಶತಃ" ಎಂದು ಸದಾಚಾರ್ಯೋಪದೇಶವಿಲ್ಲದೆ ವಿದ್ಯೆಯು ಫಲಕಾರಿ ಯಾಗುವುದಿಲ್ಲವೆಂದರೆ, ಏತಾದೃಶ ಅರ್ಥವನ್ನು ಉಪದೇಶಿಸಿದ ಶ್ರೀಕೃಷ್ಣ ಪರಮಾತ್ಮನೇ ಆಚಾರ್ಯನಾಗಿರುವುದ ರಿಂದ, ಈ ಉಪದೇಶವು ಆಚಾರ್ಯನ ಅನುಜ್ಞೆಯೂ ಆಗಿದೆ ಎಂದು ಶ್ರುತಿಸಿದ್ಧಮಾನ ಇವ್ವರ್ಥತ್ತೈ ಎಂದಾ ರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" ಎಂಬ ಶ್ವೇತಾಶ್ವತರ ಶ್ರುತಿ ವಿಹಿತವಾದ ಶರಣಾಗತಿರೂಪವಾದ ಅರ್ಥವನ್ನು ಶರಣ್ಯನಾದ ಸರ್ವೇಶ್ವರನು ತಾನೇ ಉಪದೇಶಿಸಲು, ಇದೇ

---

1) 2)

1) "ಸಂತ್ಯಜ್ಯ ವಿಧಿನಾ ನಿತ್ಯಂ ಷಡ್ವಿಧಾಂ ಶರಣಾಗತಿಮ್ ।
ಆಚಾರ್ಯಾನುಜ್ಞಯಾ ಕುರ್ಯಾಚ್ಛಾಸ್ತ್ರದೃಷ್ಟೇನ ವರ್ತ್ಮನಾ" ।
ಎನ್ರು ಶ್ರೀ ವಿಷ್ಣುತತ್ವಾದಿಹಳಿಲ್ಶೊನ್ನ ಆಚಾರ್ಯಾನುಜ್ಞೈಯುಮಾಯಿತ್ತು.

## ಚರಮಶ್ಲೋಕಸ್ಯ ಮುಖ್ಯದೃಷ್ಟಿಃ

ಸರ್ವಧರ್ಮಾನಿತ್ಯಾದಿ – ಇನ್ದಶ್ಲೋಕತ್ತುಕ್ಕು ಶಙ್ಕರಾದಿ ಕುದೃಷ್ಟಿಹಳ್ ಶೊಲ್ಲುಂ ಪೊರುಳ್‌ಹಳೈ ಯೆಲ್ಲಾಮ್ ತಾತ್ಪರ್ಯ ಚನ್ದ್ರಿಕೈಯಿಲುಮ್, ನಿಕ್ಷೇಪ ರಕ್ಷೈಯಿಲುಮ್ ಪರಕ್ಕದೂಷಿತ್ತೋಮ್. ಇಙ್ಗು ಸಾರಮಾನ ಅರ್ಥಙ್ಗಳೈ ಸತ್ಸಂಪ್ರದಾಯ ಸಿದ್ಧಮಾನಪಡಿಯೇ ಶೊಲ್ಲುಹಿರೋಮ್.

ಇದಿಲ್ ಪೂರ್ವಾರ್ಥಮ್ ಉಪಾಯ ವಿಧಾಯಕಮ್. ಉತ್ತರಾರ್ಥಮ್ ಫಲನಿರ್ದೇಶಾದಿ ಮುಖತ್ತಾಲೇ ವಿಧಿಶೇಷಮ್. ಆಹೈಯಾಲ್ ಇಶ್ಲೋಕಂ ಉಪಾಯ ವಿಧಾನ ಪ್ರಧಾನಮ್.

---

(1) ಸಂತ್ಯಜ್ಯ ವಿಧಿನಾ ಇತ್ಯಾದಿ ವಿಷ್ಣು ತತ್ವಾದಿಗಳಲ್ಲಿ ಹೇಳಿರುವಂತೆ ಆಚಾರ್ಯೋಪದೇಶಪೂರ್ವಕ ಆಚಾರ್ಯಾನುಜ್ಞೆಯೂ ಆಯಿತು. ಅರ್ಜುನನನ್ನು ಕುರಿತು ಪ್ರಥಮಾಚಾರ್ಯನಾದ ಸರ್ವೇಶ್ವರನೇ ಶರಣಾಗತಿ ವಿದ್ಯೆಯನ್ನು ಉಪದೇಶಿಸಿ, "ಮಾಮೇಕಂ ಶರಣಂವ್ರಜ" ಎಂದು ತನ್ನನ್ನೇ ಶರಣವಾಗಿ ಆಶ್ರಯಿಸುವಂತೆ ನಿಯಮಿಸಿದ್ದುದರಿಂದ ಇದೇ ಆಚಾರ್ಯೋಪದೇಶವೂ ಆಚಾರ್ಯಾನುಜ್ಞೆಯೂ ಆಯಿತು ಎಂದು ತಾತ್ಪರ್ಯ.

## ಚರಮಶ್ಲೋಕದ ಮುಖ್ಯದೃಷ್ಟಿ.

ಅನಂತರ ಶಂಕರಾದಿಗಳು ಈ ಚರಮಶ್ಲೋಕಕ್ಕೆ ಅನ್ಯಥಾವಾಗಿ ವ್ಯಾಖ್ಯಾನ ಮಾಡಿರುವಾಗ, ಇದು ಪ್ರಪತ್ತಿಶಾಸ್ತ್ರ ಪರವೆಂಬುದು ಹೇಗೆ ಎಂದರೆ ಅದನ್ನು **ಸರ್ವಧರ್ಮಾನಿತ್ಯಾದಿ** – ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಈ ಚರಮಶ್ಲೋಕಕ್ಕೆ ಶಂಕರಾದಿ ಕುದೃಷ್ಟಿಗಳು ಹೇಳುವ ಅರ್ಥಗಳೆಲ್ಲವನ್ನೂ ತಾತ್ಪರ್ಯ ಚಂದ್ರಿಕೆಯಲ್ಲಿಯೂ, ನಿಕ್ಷೇಪರಕ್ಷೆಯಲ್ಲೂ, **ಪರಕ್ಕ** – ವಿಸ್ತಾರವಾಗಿ ದೂಷಿಸುದುದಾಗಿ ಆಚಾರ್ಯರು ತಿಳಿಸುತ್ತಾರೆ. **ಇಂಗು ಸಾರಮಾನ** –ಇತ್ಯಾದಿ ಇಲ್ಲಿ ಸಾರವಾದ ಅರ್ಥವನ್ನು ಸತ್ಸಂಪ್ರದಾಯ ಸಿದ್ಧಮಾನ್ನ ಪಡಿಯೇ– ತಿರುಕ್ಕೋಟ್ಟಿಯೂರ್ ನಂಬಿ ಪ್ರಭೃತಿಗಳಿಂದ ಉಪದೇಶ ಪರಂಪರಾ ಪೂರ್ವಕವಾಗಿ ಹೇಗೆ ಪ್ರಾಪ್ತವಾಯಿತ್ತೋ ಹಾಗೆಯೇ **ಶೊಲ್ಲುಹಿರೋಮ್** – ನಿರೂಪಿಸುತ್ತೇವೆಂದು ಆಚಾರ್ಯರು ಪ್ರತಿಜ್ಞೆಮಾಡುತ್ತಾರೆ.

**ಇದಿಲ್ ಪೂರ್ವಾರ್ಥಮ್** – ಇತ್ಯಾದಿ ಈ ಶ್ಲೋಕದಲ್ಲಿ ಪೂರ್ವಾರ್ಧವು ಉಪಾಯವನ್ನು ವಿಧಿಸುತ್ತದೆ. **ಉತ್ತರಾರ್ಥಮ್** – ಇತ್ಯಾದಿ ಉತ್ತರಾರ್ಧವು ಶರಣಾಗತಿಫಲವನ್ನು ತಿಳಿಸುವುದರಿಂದ, ಶರಣಾಗತಿವಿಧಿಗೆ ಶೇಷಭೂತವು. **ಆಹೈಯಾಲ್** – ಇತ್ಯಾದಿ ಆದ್ದರಿಂದ ಈ ಶ್ಲೋಕವು ಉಪಾಯವನ್ನು ವಿಧಿಸುವುದರಲ್ಲಿ ಪ್ರಧಾನದೃಷ್ಟಿಯುಳ್ಳದ್ದು.

---

1) ಸರ್ವಧರ್ಮಾನ್ ಸರ್ವಕಾಮಾನ್ ಐಹಿಕಾ ಮುಷ್ಮಿಕಾನಪಿ ।
ಸಂತ್ಯಜ್ಯ ವಿಧಿನಾ ನಿತ್ಯಂ ಷಡ್ವಿಧಾಂ ಶರಣಾಗತಿಮ್ ॥
ಆಚಾರ್ಯಾನುಜ್ಞಯಾ ಕುರ್ಯಾಚ್ಛಾಸ್ತ್ರ ದೃಷ್ಟೇನ ವರ್ತ್ಮನಾ ॥ ವಿಷ್ಣುತತ್ವ

ಸರ್ವಧರ್ಮಾನ್-ನಿತ್ಯಕರ್ಮಗಳನ್ನೂ, ಸರ್ವಕಾಮಾನ್-ಐಹಿಕಾಮುಷ್ಮಿಕ ಕಾಮ್ಯಫಲಗಳನ್ನೂ, ಸಂತ್ಯಜ್ಯ–ಇವು ಪ್ರಪತ್ತಿಗೆ ಅಂಗವಲ್ಲವೆಂದು ಬಿಟ್ಟು, ವಿಧಿನಾ–ಸಾತ್ವಿಕ ತ್ಯಾಗಪೂರ್ವಕವಾಗಿ ಷಡ್ವಿಧಾಂ-ಐದು ಅಂಗಗಳಿಂದ ಕೂಡಿ, ಆರನೆಯದಾದ ಅಂಗಿಯಾದ ಶರಣಾಗತಿಯನ್ನು ಆಚಾರ್ಯೋಪದೇಶ ಮೂಲಕವಾದ ಅನುಜ್ಞೆಯಿಂದ, ಶಾಸ್ತ್ರೀಯವಾದ ಮಾರ್ಗದಿಂದ, ಅನುಷ್ಠಿಸಬೇಕು.

### "ಸರ್ವಧರ್ಮಾನ್" ಶಬ್ದಾರ್ಥವಾಹ

"ಧರ್ಮ"ಮಾವದು? ಶಾಸ್ತ್ರಮೇ ಕೊಂಡರಿಯವೇಣ್ಡಿಯಿರುಕ್ಕುಮ್ ಪುರುಷಾರ್ಥಸಾಧನಮ್. "ಧರ್ಮಾನ್" ಎನ್ಗಿರ ಬಹುವಚನತ್ತಾಲೇ ಅಭಿಮತಸಾಧನಮಾಹ ಶಾಸ್ತ್ರಚೋದಿತಙ್ಗಳಾನ ಧರ್ಮಂಗಳುಡೈಯ ಬಾಹುಳ್ಯತ್ತೈ ಚ್ಚೊಲ್ಲುಹಿರದು. ಸರ್ವಶಬ್ದತ್ತಾಲೇ ಸಪರಿಕರಮಾನ ನಿಲೈಯೈ ವಿವಕ್ಷಿಕ್ಕಿರದು. ಧರ್ಮಪರಿಕರಙ್ಗಳೈಯುಮ್ ಧರ್ಮಮೆನ್ರು ಶೊಲ್ಲಕ್ಕುರೈಯಿಲ್ಲೈಯಿರೇ. ಇಸ್ಸರ್ವಶಬ್ದತ್ತೈ ಏಕಶಬ್ದ ಪ್ರತಿಸಂಬಂಧಿಯಾಹ ಯೋಜಿಕ್ಕುಮ್ಪೋದು ಇದು ಅಙ್ಗಿಹಳಾನ ನಾನಾಧರ್ಮಙ್ಗಳಿನುಡೈಯ ಕಾತ್ಸ್ನ್ಯತ್ತೈ ಚ್ಚೊಲ್ಲುಹಿರದು. ಇಪ್ಪಡಿ ಪೊದುವಿಲೇ ಶೊನ್ನಾಲುಮ್, ಇಙ್ಗು ಪ್ರಕರಣ ವಶತ್ತಾಲೇ ಮೋಕ್ಷಾರ್ಥಮಾಹ ಶಾಸ್ತ್ರವಿಹಿತಙ್ಗಳಾಯ್, ನಾನಾಪ್ರಕಾರಙ್ಗಳಾನ ಉಪಾಸನಙ್ಗಳೈಯೆಲ್ಲಾಮ್ ಶೊಲ್ಲುಹೈಯಿಲೇ ತಾತ್ಪರ್ಯಮ್.

### ಇತರಾಭಿಪ್ರಾಯಾನ್ ನಿರಾಕರೋತಿ.

ಪುರುಷೋತ್ತಮತ್ವಜ್ಞಾನಂ ಸರ್ವವಿದ್ಯೈಹಳುಕ್ಕುಮ್ ಉಪಕಾರಮಾನ ತತ್ವಜ್ಞಾನಮಾತ್ರಮಾಹವುಮ್ ಅವತಾರ ರಹಸ್ಯಚಿನ್ತನಮ್ ಅನುಷ್ಠಿಕ್ಕಿರ ಉಪಾಸನಾದಿಹಳುಡೈಯ ಶೀಘ್ರ ನಿಷ್ಪತ್ತಿ ಹೇತುವಾಹವುಮ್ ದೇಶವಾಸಾದಿಹಳ್ ಉಪಾಯವಿರೋಧಿ ಪಾಪಕ್ಷಯ ಹೇತುಕ್ಕಳಾಯ್ಕ್ಕೊಂಡು ಉಪಾಯ ನಿಷ್ಪಾದಕಙ್ಗಳಾಹವುಮ್, ಶ್ರೀಗೀತಾಭಾಷ್ಯಾದಿಹಳಿಲೇ ಸಮರ್ಥಿಕ್ಕೈಯಾಲೇ ಇವತ್ತೈ ಸಾಕ್ಷಾನ್ಮೋಕ್ಷೋಪಾಯಙ್ಗ

---

### ಚರಮಶ್ಲೋಕದ ಪೂರ್ವಾರ್ಧ ವಿವರಣೆ.

### 'ಸರ್ವಧರ್ಮಾನ್' ಶಬ್ದಾರ್ಥ.

(ಸರ್ವಧರ್ಮಾನಿತ್ಯಾದಿ) ಧರ್ಮಮಾವದು – ಧರ್ಮವೆಂದರೆ ಶಾಸ್ತ್ರಮೇಕೊಂಡು ಇತ್ಯಾದಿ – ಅಲೌಕಿಕ ಶ್ರೇಯಸ್ಸಾಧನತಾಕತ್ವಮ್ ಧರ್ಮಮ್ - ಅಲೌಕಿಕ ಅಂದರೆ ಶಾಸ್ತ್ರೇತರ ಪ್ರತ್ಯಕ್ಷ, ಅನುಮಾನಗಳಿಗೆ ಗೋಚರವಲ್ಲದಾಗಿ, ಶಾಸ್ತ್ರದಿಂದಲೇ ತಿಳಿಯತಕ್ಕಗು ಎಂದರ್ಥ. ಯಜ್ಞಯಾಗಾದಿಗಳೂ, ಅವುಗಳಲ್ಲಿ ಉಪಯೋಗಿಸುವ ವ್ರೀಹಿ, ಪುರೋಡಾಶ, ಆಜ್ಯಮೊದಲಾದವು ಪ್ರತ್ಯಕ್ಷಗಳಾಗಿದ್ದರೂ, ಆ ಯಜ್ಞಾನುಷ್ಠಾನದಿಂದ ಪಡೆಯಲ್ಪಡುವ ಸ್ವರ್ಗಾದಿಫಲಗಳು ಪ್ರತ್ಯಕ್ಷವಲ್ಲದೆ ಶಾಸ್ತ್ರದಿಂದಲೇ ತಿಳಿಯಲ್ಪಡುತ್ತವೆ. ಆದ್ದರಿಂದ ಧರ್ಮವು ಶಾಸ್ತ್ರದಿಂದಲೇ ತಿಳಿಯಲ್ಪಡತಕ್ಕ ಪುರುಷಾರ್ಥಕ್ಕೆ ಸಾಧನ. ಧರ್ಮಾನ್ – ಧರ್ಮಗಳು ಎಂಬ ಬಹುವಚನವು ಅಭಿಮತ-ಇಷ್ಟಾರ್ಥಸಾಧನವಾಗಿ ಶಾಸ್ತ್ರಚೋದಿತಗಳಾದ ಧರ್ಮಗಳ ಬಾಹುಳ್ಯವನ್ನು ತಿಳಿಸುತ್ತದೆ. ಸರ್ವಶಬ್ದತ್ತಾಲೇ – ಇತ್ಯಾದಿ ಸರ್ವಶಬ್ದದಿಂದ ಆ ಧರ್ಮಗಳ ಅಂಗಗಳು ತಿಳಿಸಲ್ಪಡುತ್ತವೆ. ಧರ್ಮ ಪರಿಕರಂಗಳೈಯುಮ್ – ಇತ್ಯಾದಿ ಧರ್ಮಗಳ ಅಂಗಗಳನ್ನೂ ಧರ್ಮವೆಂದು ವ್ಯಪದೇಶಿಸುವುದಕ್ಕೆ ಬಾಧಕವಿಲ್ಲ. ಇಸ್ಸರ್ವಶಬ್ದತ್ತೈ – ಇತ್ಯಾದಿ ಈ ಸರ್ವಶಬ್ದವನ್ನು 'ಮಾಮೇಕಂ' ಎಂಬಲ್ಲಿ ಹೇಳುವ "ಏಕ" ಶಬ್ದಕ್ಕೆ ಪ್ರತಿಸಂಬಂಧಿಯಾಗಿ ಯೋಜಿಸುವಾಗ, ಇದು ಅಂಗಿಗಳಾದ ಅನೇಕ ಧರ್ಮಗಳ ಕಾತ್ಸ್ನ್ಯತ್ತೈ – ಸಮೂಹವನ್ನು ತಿಳಿಸುತ್ತದೆ. ಇಪ್ಪಡಿ ಪೊದುವಿಲೇ ಶೊನ್ನಾಲುಮ್ – ಹೀಗೆ ಸಾಮಾನ್ಯವಾಗಿ ಹೇಳಿದರೂ, ಇಂಗು ಪ್ರಕರಣವಶಾತ್ತಾಲೇ – ಇತ್ಯಾದಿ ಇಲ್ಲಿ ಮೋಕ್ಷಾರ್ಥವಾದ ಪ್ರಕರಣಕ್ಕೆ ಅನುಗುಣವಾಗಿ, ಮೋಕ್ಷಾರ್ಥವಾಗಿ ಶಾಸ್ತ್ರವಿಹಿತಗಳಾಗಿ ಅಂಗಗಳೊಡನೆ ಕೂಡಿದ ನಾನಾ ಪ್ರಕಾರಗಳಾದ ಉಪಾಸನಗಳನ್ನೆಲ್ಲಾ ಹೇಳುವುದರಲ್ಲಿ ತಾತ್ಪರ್ಯ.

ಪುರುಷೋತ್ತಮತ್ವ ಜ್ಞಾನಮ್ – ಇತ್ಯಾದಿ ಪುರುಷೋತ್ತಮತ್ವಜ್ಞಾನವು ಸರ್ವವಿದ್ಯೆಗಳಿಗೂ ಉಪಕಾರಕವಾದ ತತ್ವಜ್ಞಾನಮಾತ್ರವಾಗಿಯೂ, ಅವತಾರ ರಹಸ್ಯಚಿಂತನವು ಅನುಷ್ಠಿಸುವ ಉಪಾಸನಾದಿಗಳು ಶೀಘ್ರವಾಗಿ

ಳಾಕ್ಕಿ ಅಜ್ಗಿಬಹುತ್ವ ವಿಷಯಮಾನ ಬಹುವಚನತ್ತಾಲೇ ವಿವಕ್ಷಿಕ್ಕಿರದೆನ್ಗೈ ಉಚಿತಮನ್ರು "ನಾನಾ ಶಬ್ದಾದಿ ಭೇದಾತ್ ಎನ್ಗಿರಪಡಿಯೇ ಇನ್ನೈಯೋರ್ಗ್ಯಯುವುಮ್, ಸದ್ವಿದ್ಯಾದಹರ ವಿದ್ಯಾದಿ ಭೇದತ್ತಾಲೇ ಅಂಗಿ ಬಹುತ್ವಮ್‌ಕಿಡಕ್ಕೈಯಾಲ್ ಇಬ್ಬಹುವಚನಂ ಸಾರ್ಥಮ್. ಅಂಗಿಬಹುತ್ವತ್ತೈಯುಮ್ ಪರಿಕರ ಬಹುತ್ವತೈಯುಮ್ ಕೂಡ ವಿವಕ್ಷಿತ್ತಾಲುಮ್ ವಿರೋಧಮಿಲ್ಲೈ.

**ಪರಿತ್ಯಜ್ಯ ಶಬ್ದಸ್ಯಾರ್ಥಃ**

ಪರಿತ್ಯಜ್ಯ ಎನ್ಗಿರವಿಡತ್ತಿಲ್ ತ್ಯಾಗಮಾವದು?"ಅನಯಾಚ ಪ್ರಪತ್ತ್ಯಾ ಮಾಕಿಂಚನ್ಯೈಕ ಪೂರ್ವಕಮ್" ಇತ್ಯಾದಿಹಳಿರ್‌ಪಡಿಯೇ ಆಕಿಂಚನನಾನ ತನ್ನಿಲೈಯೈ ಕ್ಕಂಡು ಉಪಾಯಾನ್ತರಙ್ಗಳಿಲ್ಪಿರಂದ ನೈರಾ

---

ಫಲಿಸಲು ಹೇತುವಾಗಿಯೂ, ಪುಣ್ಯಕ್ಷೇತ್ರವಾಸಾದಿಗಳು ಉಪಾಯವಿರೋಧಿ ಪಾಪಕ್ಷಯ ಹೇತುಗಳಾಗಿ ಉಪಾಯವು ನಿಷ್ಪತ್ತಿಯಾಗಲು ಕಾರಣವಾಗಿಯೂ ಶ್ರೀಗೀತಾಭಾಷ್ಯ ಸಾತ್ವತಸಂಹಿತಾದಿಗಳಲ್ಲಿ ಸಮರ್ಥಿತಗಳಾದ್ದರಿಂದ, ಇವುಗಳನ್ನು ಸಾಕ್ಷಾನ್ಮೋಕ್ಷೋಪಾಯಗಳಾಗಿ ಹೇಳಿ "ಧರ್ಮಾನ್" ಎಂಬಲ್ಲಿಯ ಬಹುವಚನದಿಂದ ಅನೇಕ ಧರ್ಮಗಳೆಂದು ವಿವಕ್ಷಿಸುವುದು ಉಚಿತವಲ್ಲ. ಆದಾಗಿ ಭಗವದ್ಗೀತೆ 15ನೇ ಅಧ್ಯಾಯದಲ್ಲಿ"ಯೋಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ । ಸ ಸರ್ವವಿದ್ಭಜತಿಮಾಮ್" ಎಂದು ಪುರುಷೋತ್ತಮಜ್ಞಾನವು ಭಗವದ್ಭಜನ ಹೇತುವಾದ ತತ್ವಜ್ಞಾನವಾಗಿ ಹೇಳಲ್ಪಟ್ಟಿದೆ. ಗೀತೆಯಲ್ಲಿ ನಾಲ್ಕನೇ ಅಧ್ಯಾಯದಲ್ಲಿ

"ಜನ್ಮಕರ್ಮಚಮೇದಿವ್ಯಂ ಏವಂ ಯೋವೇತ್ತಿ ತತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ"

ಎಂದು ಉಪಾಸಕನಿಗೆ ಸಂಶಯ ವಿಪರ್ಯಯರಹಿತವಾಗಿ ಅವತಾರರಹಸ್ಯ ಚಿಂತನವು, ಆದೇ ಜನ್ಮದಲ್ಲಿ ಉಪಾಸನವು ನಿಷ್ಪನ್ನವಾಗಲು ಹೇತುವಾಗಿ, ಮತ್ತೊಂದು ಜನ್ಮವು ಇಲ್ಲದೆ ಸಹಕರಿಸುತ್ತದೆ. ಸಾತ್ವತಸಂಹಿತೆಯಲ್ಲಿ

"ದುಷ್ಟೇಂದ್ರಿಯ ವಶಾಚ್ಚಿತ್ತಂ ನೃಣಾಂ ಯತ್ಕಲ್ಮಷೈರ್ವೃತಮ್ ।
ತದಂತಕಾಲೇ ಸಂಶುದ್ಧಿಂ ಯಾತಿ ನಾರಾಯಣಾಲಯೇ ॥ ,

ಎಂದು ಭಗವತ್ಕ್ಷೇತ್ರವಾಸವು ಪಾಪವನ್ನು ಹೋಗಲಾಡಿಸಿ ಮನೋನೈರ್ಮಲ್ಯವನ್ನುಂಟುಮಾಡಿ, ಮುಂದಿನ ಜನ್ಮದಲ್ಲಿ ಉಪಾಯಾನುಷ್ಠಾನಕ್ಕೆ ಹೇತುವಾಗುತ್ತದೆ. ಆದ್ದರಿಂದ **ಇನ್ನೈಯೋರ್ಗ್ಯಯುವುಮ್** – ಇತ್ಯಾದಿ ಪುರುಷೋತ್ತಮತ್ವ ಜ್ಞಾನಾದಿಗಳನ್ನು ಬಿಟ್ಟು, ಸದ್ವಿದ್ಯಾ ದಹರವಿದ್ಯಾದಿಭೇದದಿಂದ ಅಂಗಿಯಾದ ಧರ್ಮಗಳ ಬಹುತ್ವವು ಏರ್ಪಡುವುದರಿಂದ, 'ಧರ್ಮಾನ್' ಎಂಬ ಬಹುವಚನಕ್ಕೆ ಸಾರ್ಥಕ್ಯವು ಏರ್ಪಡುತ್ತದೆ. **ಅಂಗಿಬಹುತ್ವತ್ತೈಯುಮ್** – ಇತ್ಯಾದಿ ಪುರುಷೋತ್ತಮತ್ವಜ್ಞಾನಾದಿಗಳು ಉಪಾಯಕ್ಕೆ ಪರಿಕರಗಳಾದ್ದರಿಂದ ಅವುಗಳನ್ನು ಸಾಕ್ಷಾದುಪಾಯಗಳೆಂದು ಹೇಳಿ ಅಂಗಿ ಬಹುತ್ವವನ್ನು 'ಧರ್ಮಾನ್' ಎಂಬಲ್ಲಿ ವಿವಕ್ಷಿಸುವುದು ಯುಕ್ತವಲ್ಲವಾದರೂ, ಪರಿಕರಗಳನ್ನೂ ಅಂಗಿಗಳನ್ನೂ ಸೇರಿಸಿ 'ಧರ್ಮಾನ್' ಎಂಬಲ್ಲಿ ವಿವಕ್ಷಿಸಿದರೂ ಬಾಧಕವಿಲ್ಲ. ಅಂದರೆ ಪುರುಷೋತ್ತಮ ಜ್ಞಾನಾದಿ ಪರಿಕರ ವಿಶಿಷ್ಟಗಳಾದ ದಹರ ವಿದ್ಯಾದಿಗಳು ಸಾಕ್ಷಾದುಪಾಯಗಳಾಗಿ ಧರ್ಮ ಶಬ್ದಬಹುತ್ವಕ್ಕೆ ವಿವಕ್ಷಿತಗಳೆಂದು ತಾತ್ಪರ್ಯ.

**'ಪರಿತ್ಯಜ್ಯ' ಶಬ್ದಾರ್ಥ.**

(1) ಅನಂತರ "ಪರಿತ್ಯಜ್ಯ" ಎಂಬುದಕ್ಕೆ ಅರ್ಥವನ್ನು ಅನುಗ್ರಹಿಸುತ್ತಾರೆ. **'ಪರಿತ್ಯಜ್ಯ' ಎನ್ಗಿರವಿಡತ್ತಿಲ್** ಇತ್ಯಾದಿ – ಪರಿ ಎಂಬ ಉಪಸರ್ಗ, ತ್ಯಜ್ ಧಾತು ಲ್ಯಪ್‌ಪ್ರತ್ಯಯ ಮೂರೂ 'ಪರಿತ್ಯಜ್ಯ' ಎಂಬಲ್ಲಿ ಸೇರಿವೆ. ಮೊದಲು ಧಾತುವಿನ ಅರ್ಥವನ್ನು ತಿಳಿಸುತ್ತಾರೆ. ಪರಿತ್ಯಜ್ಯ ಎಂಬಲ್ಲಿ ತ್ಯಾಗವು ಯಾವುದೆಂದರೆ "**ಅನಯಾಚ ಪ್ರಪತ್ತ್ಯಾ**" ಇತ್ಯಾದಿ ಹೇಳಿರುವಂತೆ ಆಕಿಂಚನನಾದ ತನ್ನ **ನಿಲೈ** – ಸ್ಥಿತಿ, ಅದನ್ನು ತಿಳಿದು ಉಪಾಯಾಂತರಗಳಲ್ಲಿ ಉಂಟಾದ **ನೈರಾಶ್ಯ** ಇತರೋಪಾಯಗಳಲ್ಲಿ ಉಂಟಾದ ನಿರಾಸೆಯು **ಪೂರ್ವಕವಾಗಿ**, **ಈ** ಪ್ರಪತ್ತಿಯಿಂ

**ಶೈಮ್. ಆಶೈಯಾಲೇ ಪತ್ತಾನಾಲ್ ಆಶೈಯೈವಿಡುಹೈ ತ್ಯಾಗಮೆನ್ನ ಉಚಿತಮಿರೇ ಆದಿಲ್ "ಪರಿ" ಎನ್ಗಿರ ಉಪಸರ್ಗತ್ತಾಲೇ 1) "ಅನಾಗತಾನಂತಕಾಲ ಸಮೀಕ್ಷಯಾಪ್ಯ ದೃಷ್ಟಸಂತಾರೋಪಾಯಃ" ತ್ವತ್ಪಾದಕಮಲಾದನ್ಯನ್ನಮೇ ಜನ್ಮಾಂತರೇಷ್ವಪಿ" ಇತ್ಯಾದಿಹಳಿಲ್ ಪಡಿಯೇ, ಅತ್ಯಂತಾಕಿಂಚನನುಕ್ಕು ಸರ್ವಕಾಲತ್ತಿಲುಮ್ ಸರ್ವಪ್ರಕಾರತ್ತಾಲುಮ್ ಯೋಗ್ಯತೈಯಿಲ್ಲಾಮೈ ತೆಳಿಹೈಯಾಲೇ ಪಿರನ್ದ ನೈರಾಶ್ಯಾತಿಶಯಮ್ ಶೊಲ್ಲಪ್ಪಡುಹಿರದು.**

### ಪರಿತ್ಯಜ್ಯ ಪದಸ್ಯ ಅನುವಾದಾರ್ಥಮಾಹ

**ಸರ್ವಪ್ರಕಾರತ್ತಾಲುಮ್ ತ್ಯಾಗಮಾವದು ? ಪೂರ್ಣಾನುಷ್ಠಾನ ಶಕ್ತಿ ಇಲ್ಲಾದಪ್ಪೋದು ಯಥಾಶಕ್ತ್ಯನುಷ್ಠಾನಮ್ ಪಣ್ಣುಹಿರೋಮೆನ್ರುಮ್, ಅದಕ್ಕು ಯೋಗ್ಯತೈ ಇಲ್ಲಾದ ದಶೈಯಿಲೇ ವೇರೆ ಶಿಲ ಅನುಕಲ್ಪಂಗಳೈಯಾದಲ್, ಉಪಾಯೋಪಾಯಂಗಳೈಯಾದಲ್, ಅನುಷ್ಠಿಕ್ಕಿರೋಮೆನ್ರುಮ್, ತನಕ್ಕು ದುಷ್ಕರಂಗಳೈಕ್ಕಣಿಶಿಕ್ಕುಮ್ ದುರಾಶೈಯತ್ತಿರುಕ್ಕೈ.**

### ಅನುವಾದಾರ್ಥ ಪ್ರಯೋಜನಮಾಹ.

**ಇವ್ವನುವಾದತ್ತುಕ್ಕು ಅಧಿಕಾರ ವಿಶೇಷತ್ತೈ ಕಾಟ್ಟುಕೈ ಪ್ರಯೋಜನಮ್. ಆದಿಲ್, "ಪರಿ" ಎನ್ಗಿರ ಉಪಸರ್ಗಮ್ ಅಧಿಕಾರ ದೌಷ್ಕಲ್ಯತ್ತೈ ವಿವಕ್ಷಿಕ್ಕಿರದು. 'ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜ**

---

ದಲೇ ತನ್ನನ್ನು ವಶೀಕರಿಸಬೇಕೆಂಬುದು. ಉಪಾಯವನ್ನು ಬಿಡುವುದು ತ್ಯಾಗ ಶಬ್ದಾರ್ಥವಾಗಿರುವಾಗ, ನೈರಾಶ್ಯವನ್ನು ತ್ಯಾಗ ಶಬ್ದಕ್ಕೆ ಅರ್ಥವಾಗಿ ಹೇಳುವುದು ಸರಿಯೇ ಎಂದರೆ **ಆಶೈಯಾಲೇ ಪಟ್ರಿನಾಲ್** ಎಂದು ಸಮಾಧಾನವನ್ನು ಹೇಳುತ್ತಾರೆ. ಅದಾಗಿ ಆಸೆಯಿಂದ ಉಪಾಯಾಂತರಗಳನ್ನು ಅಂಗೀಕರಿಸಿದರೆ, ಆ ಆಸೆಯನ್ನು ಬಿಟ್ಟರೆ, ಉಪಾಯಾಂತರಗಳಲ್ಲಿ ಸಂಬಂಧವು ಸ್ವತಃ ತಪ್ಪುವುದರಿಂದ ಆಸೆಯನ್ನು ಬಿಡುವುದು ತ್ಯಾಗಶಬ್ದಾರ್ಥವಾಗಲು ಉಚಿತ. **'ಆದಿಲ್ 'ಪರಿ' ಎನ್ಗಿರ ಉಪಸರ್ಗತ್ತಾಲೇ'** ಇತ್ಯಾದಿ, ನೈರಾಶ್ಯವು ತ್ಯಾಗಶಬ್ದಾರ್ಥವಾದರೆ 'ಪರಿ' ಎಂಬ ಉಪಸರ್ಗವು ಅದರ ಅತಿಶಯವನ್ನು ತಿಳಿಸುತ್ತದೆ. (1) **ಅನಾಗತಾನಂತ ಕಾಲಸಮೀಕ್ಷ್ಯಯಾಪಿ** (2) **ತ್ವತ್ಪಾದಕಮಲಾದನ್ಯತ್** ಎಂಬಂತೆ ಬಹಳ ಅಕಿಂಚನನಾದವನಿಗೆ ಸರ್ವಕಾಲದಲ್ಲಿಯೂ, ಸರ್ವಪ್ರಕಾರದಿಂದಲೂ ಯೋಗ್ಯತೆಯಿಲ್ಲವೆಂಬುದು ತಿಳಿಯಲ್ಪಟ್ಟು ಅದರಿಂದ ಉಂಟಾದ ನೈರಾಶ್ಯದ ಅತಿಶಯವು 'ಪರಿ' ಎಂಬ ಉಪಸರ್ಗದಿಂದ ತಿಳಿಯಲ್ಪಡುತ್ತದೆ. **ಸರ್ವಪ್ರಕಾರತ್ತಾಲುಮ್ ತ್ಯಾಗಮಾವದು** – ಇತ್ಯಾದಿ ಸರ್ವಪ್ರಕಾರದಿಂದಲೂ ತ್ಯಾಗವೆಂಬುದು ಪೂರ್ಣಾನುಷ್ಠಾನವನ್ನು ಮಾಡಲು ಶಕ್ತಿಯಿಲ್ಲದ ದಶೆಯಲ್ಲಿ ಬೇರೆ ಕೆಲವು **ಅನುಕಲ್ಪಂಗಳೈಯಾದಲ್** – ಪ್ರತಿನಿಧಿಯಾಗಿ ಗೌಣವಾದ ಉಪಾಯಗಳನ್ನಾಗಲಿ, ಮುಖ್ಯೋಪಾಯಕ್ಕೆ ಉಪಾಯಗಳನ್ನಾಗಲಿ, ಇವನ್ನು ಅನುಷ್ಠಿಸಿದರೆ ಮುಖ್ಯೋಪಾಯವನ್ನು ಅನುಷ್ಠಿಸಲು ಸಾಧ್ಯವಾಗುತ್ತದೆಯೆಂಬ ಭಾವನೆಯಿಂದ ಅನುಷ್ಠಿಸುತ್ತೇನೆಂದು ತನಗೆ ದುಷ್ಕರೋಪಾಯಗಳನ್ನು **ಕಣಿಶಿಕ್ಕುಮ್** – ಇತ್ಯಾದಿ ವಿಷಯೀಕರಿಸುವ, ದುರಾಶೆಯನ್ನು ಬಿಡುವುದು. **ಇವ್ವನುವಾದತ್ತುಕ್ಕು** – ಇತ್ಯಾದಿ ಈ ಅನುವಾದಕ್ಕೆ ಆಕಿಂಚನ್ಯರೂಪವಾದ ಅಧಿಕಾರ ವಿಶೇಷವನ್ನು ತಿಳಿಸುವುದರಲ್ಲಿ ಪ್ರಯೋಜನ. **ಅದಿಲ್ "ಪರಿ"** ಇತ್ಯಾದಿ ಅದರಲ್ಲಿ 'ಪರಿ' ಎಂಬ ಉಪಸರ್ಗವು ಆಕಿಂಚನ್ಯರೂಪವಾದ ಅಧಿಕಾರದ ದೌಷ್ಕಲ್ಯವನ್ನು ವಿವಕ್ಷಿಸುತ್ತದೆ. **'ಅನಿತ್ಯ ಮಸುಖಂ ಲೋಕಂ'** ಇತ್ಯಾದಿ ಲ್ಯಪ್ ಪ್ರತ್ಯಯವು ಅನುವಾದಕ್ಕೂ ವಿಧಿಗೂ ಸಾಧಾರಣ. "ಭುಕ್ತ್ವಾ ಚಾಂದ್ರಾಯಣಂ ಚರೇತ್" ಎಂಬಲ್ಲಿ ಭುಜಿ ಧಾತುವಿನ ಮೇಲೆ ಬಂದಿರುವ 'ಕ್ತ್ವಾ' ಎಂಬ ಪ್ರತ್ಯಯವು ನಿಷಿದ್ಧ ಭೋಜನವನ್ನು ಮಾಡಿದವನು, ಎಂದು ಭೋಜನವನ್ನು ಅನುವಾದಮಾಡಿ ಚಾಂದ್ರಾಯಣ ವ್ರತವನ್ನು ಅನುಷ್ಠಿಸಬೇಕು ಎಂದು ಪ್ರಾಯಶ್ಚಿತ್ತವನ್ನು ತಿಳಿಸುತ್ತದೆ. "ಸ್ನಾತ್ವಾ ಭುಂಜೀತ" ಎಂಬಲ್ಲಿ ಸ್ನಾನವನ್ನು ಲ್ಯಪ್ ಪ್ರತ್ಯಯವು ವಿಧಿಸುತ್ತದೆ. ಇದೇ ರೀತಿಯಲ್ಲಿ ಅನಿತ್ಯಮಸುಖಂ "ಲೋಕ ಮಿಮಂ ಪ್ರಾಪ್ಯ ಭಜಸ್ವಮಾಂ" ಎಂಬಲ್ಲಿ 'ಪ್ರಾಪ್ಯ' ಎಂಬುದು ವಿಧಿಯಲ್ಲಿದೆ,

**ಅವತ್ತುಕ್ಕು ವಿರುದ್ಧಮಾಹ ಶಂಕರಾದ್ಯುಕ್ತಙ್ಗಳಾನ ಸರ್ವಧರ್ಮಸ್ವರೂಪ ತ್ಯಾಗಾದ್ಯರ್ಥಙ್ಗಳಿಲ್ ಕಾಟ್ಟಿಲುಮ್ ಉಪಾದೇಯಮ್.**

**ಪ್ರಪತ್ತಿಕ್ಕಾಹ ಪ್ಪೊರು ಧರ್ಮಙ್ಗಳುಮ್ ಅನುಷ್ಠಿಕ್ಕವೇಣ್ಡಾವೆನ್ರು ಪ್ರಪತ್ತಿಯಿನುಡೈಯ ನೈರಪೇಕ್ಷ್ಯತ್ತೈಚ್ಚೊಲ್ಲುಹಿರದೆನ್ಗೈ ವಿಧಿಪಕ್ಷತ್ತುಕ್ಕು ಉಚಿತಮ್. ಅಪ್ಪೋದು "ಪರಿ" ಎನ್ಗಿರ ಉಪಸರ್ಗಮ್ "ಅಚಾನ್ತೇನ ಕರ್ತವ್ಯಮ್" "ಶುಚಿನಾಕರ್ತವ್ಯಮ್" ಇತ್ಯಾದಿಹಳಿಲ್ ಚ್ಚೊಲ್ಲುಹಿರ ಸರ್ವಸಾಧಾರಣ ಯೋಗ್ಯತಾಪಾದಕಙ್ಗಳುಮ್, ಇದಕ್ಕು ಅಙ್ಗಮಾಹ ಸ್ವೀಕಾರ್ಯಙ್ಗಳಾಹಾದೆನ್ರು ವಿವಕ್ಷಿಕ್ಕಿರದು.**

## ಸ್ವರೂಪತ್ಯಾಗವಾದನಿರಸನಮಾಹ.

**ಇಙ್ಗನನ್ರಿಕ್ಕೇ ಕರ್ಮಯೋಗಮ್, ಜ್ಞಾನಯೋಗಮ್, ಭಕ್ತಿಯೋಗಮ್, ಎನ್ಗಿರ ಧರ್ಮಙ್ಗಳಿನುಡೈಯ ಸ್ವರೂಪತ್ಯಾಗಮ್ ಪ್ರಪತ್ತಿಕ್ಕು ಅಙ್ಗಮ್ ಎನ್ನುಮ್ ಪಕ್ಷತ್ತಿಲ್, ಪ್ರಪತ್ತಿ ಸರ್ವಾಧಿಕಾರಮನ್ರಿಕ್ಕೇ ಯೊಳಿಯುಮ್. ಧರ್ಮಾನುಷ್ಠಾನ ಶಕ್ತನುಕ್ಕಿರೇ ಅವತ್ತಿನುಡೈಯ ತ್ಯಾಗತ್ತೈ ವಿಧಿಕ್ಕವೇಣ್ಡುವದು? ಇದು ಬಹುಪ್ರಮಾಣ ಸಿದ್ಧಮಾನ ಕಾರ್ಪಣ್ಯಮಾಹಿರ ಅಙ್ಗತ್ತುಕ್ಕುಮ್ 1) "ಪುಹಲೊನ್ರಿಲ್ಲಾವಡಿಯೇನ್" 2) "ಕುಲಙ್ಗಳಾಯ" 3) "ಕುಳಿತ್ತುಮೂನ್ರು" 4) "ನಧರ್ಮನಿಷ್ಠೋಸ್ಮಿ" ಇತ್ಯಾದಿಪಳಿಲೇ ಪ್ರಸಿದ್ಧಮಾನ ಆಕಿಂಚನಾಧಿಕಾರಮೆನ್ಗಿರ ಸಂಪ್ರದಾಯತ್ತುಕ್ಕುಮ್ ವಿರುದ್ಧಮಾಮ್.**

---

ಇತ್ಯಾದಿ – ಆದ್ದರಿಂದ ವಿಳಂಬಿತ ಪ್ರತೀತಿಕವಾದ ಅರ್ಥಕ್ಕೆ ವಿರುದ್ಧವಾಗಿ **ಶಂಕರಾದ್ಯುಕ್ತಂಗಳಾನ** – ಶಂಕರರು, ಆದಿಶಬ್ದದಿಂದ ಏಕದೇಶಿಗಳ ಗ್ರಹಣ, ಇವರುಗಳಿಂದ ಹೇಳಲ್ಪಟ್ಟ ಸರ್ವಧರ್ಮಗಳನ್ನೂ ಸ್ವರೂಪತಃ ಬಿಡಬೇಕೆಂಬ ಅರ್ಥಗಳಿಗಿಂತ, **ಉಪಾದೇಯಮ್** – ನಾವು ಹೇಳಿದ ಅರ್ಥವು ಅಂಗೀಕಾರ್ಯವು ಎಂದು ಆಚಾರ್ಯರ ಅಭಿಪ್ರಾಯ.

(iii) **ಪ್ರಪತ್ತಿಕ್ಕಾಹ** – ಇತ್ಯಾದಿ ಪ್ರಪತ್ತಿಗೋಸ್ಕರ ಯಾವ ಧರ್ಮಗಳನ್ನೂ ಅನುಷ್ಠಿಸಕೂಡದೆಂದು, ಪ್ರಪತ್ತಿಯ ನೈರಪೇಕ್ಷ್ಯವನ್ನು ಹೇಳುತ್ತದೆಯೆಂಬುದು ವಿಧಿಪಕ್ಷಕ್ಕೆ ಉಚಿತವಾದದ್ದು. **ಅಪ್ಪೋದು** – ಇತ್ಯಾದಿ ಆಗ 'ಪರಿ' ಎಂಬ ಉಪಸರ್ಗವು "ಆಚಮನಮಾಡಿ ಮಾಡಬೇಕು", "ಶುಚಿಯಾಗಿ ಮಾಡಬೇಕು", ಇತ್ಯಾದಿಗಳಲ್ಲಿ ಹೇಳುವ ಸರ್ವಸಾಧಾರಣವಾದ ಯೋಗ್ಯತೆಯನ್ನು ಸಂಪಾದಿಸಿಕೊಡುವ, ಸ್ನಾನಾಚಮನಗಳನ್ನೂ ಈ ಪ್ರಪತ್ತಿಗೆ ಅಂಗವಾಗಿ ಸ್ವೀಕರಿಸಲಾಗದು ಎಂದು ವಿವಕ್ಷಿಸುತ್ತದೆ.

**"ಪರಿತ್ಯಜ್ಯ"ವಿಗೆ ಇತರರು ಹೇಳುವ ಅರ್ಥಖಂಡನೆ. (1 ಸರ್ವಧರ್ಮಗಳ ಸ್ವರೂಪ ತ್ಯಾಗವೆಂಬ ಮತದ ಖಂಡನೆ**

**ಇಂಗನನ್ರಿಕ್ಕೇ** ಇತ್ಯಾದಿ–ಹೀಗಲ್ಲದೆ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗವೆಂಬ ಧರ್ಮಗಳ ಸ್ವರೂಪ ತ್ಯಾಗವು ಪ್ರಪತ್ತಿಗೆ ಅಂಗವೆಂದು ಹೇಳುವ ಪಕ್ಷದಲ್ಲಿ ಪ್ರಪತ್ತಿಯು ಸರ್ವಾಧಿಕಾರವಲ್ಲದೇ ಹೋಗುತ್ತದೆ. **ಧರ್ಮಾನುಷ್ಠಾನ ಶಕ್ತನುಕ್ಕಿರೇ** – ಇತ್ಯಾದಿ ಧರ್ಮಾನುಷ್ಠಾನವನ್ನು ಮಾಡಲು ಶಕ್ತನಾದವನಿಗಲ್ಲವೇ ಅವುಗಳ ತ್ಯಾಗವನ್ನು ವಿಧಿಸಬೇಕು. ಶಕ್ತನಿಗೇ ಸರ್ವಧರ್ಮ ಸ್ವರೂಪ ತ್ಯಾಗವನ್ನು ವಿಧಿಸುವುದು ಇಷ್ಟಾಪತ್ತಿಯೆಂದರೆ **ಇದು ಬಹುಪ್ರಮಾಣ ಸಿದ್ಧಮಾನ** – ಇತ್ಯಾದಿ ಇದು ಅನೇಕ ಪ್ರಮಾಣಗಳಿಂದ ಸಿದ್ಧವಾದ ಕಾರ್ಪಣ್ಯವೆಂಬ ಅಂಗಕ್ಕೂ (1) **ಪುಹಲೊನ್ರಿಲ್ಲಾವಡಿಯೇನ್** (2) **ಕುಲಂಗಳಾಯ** (3) **ಕುಳಿತ್ತುಮೂನ್ರು** (4) **ನಧರ್ಮನಿಷ್ಠೋಽಸ್ಮಿ**–ಇತ್ಯಾದಿ ವಚನಗಳಲ್ಲಿ ಪ್ರಸಿದ್ಧವಾದ ಆಕಿಂಚನಾಧಿಕಾರವೆಂಬ ಸಂಪ್ರದಾಯಕ್ಕೂ ವಿರುದ್ಧ.

---

1) ತಿರುವಾಯ್‌ಮೊಳಿ 6-10-10 ಬೇರೆ ಆಶ್ರಯವಿಲ್ಲದ ದಾಸನು

2) ತಿರುಚ್ಚಂದ ವಿರುತ್ತಮ್ 90-ಧರ್ಮನುಷ್ಠಾನಕ್ಕೆ ಯೋಗ್ಯವಾದ ನಾಲ್ಕು ಕುಲಗಳಲ್ಲಿಯೂ ಹುಟ್ಟಿದವನು.

3) ತಿರುಮಾಲೈ-25 ಸ್ನಾನ –ಮಾಡಿ ತ್ರೇತಾಗ್ನಿ ಪರಿಚರ್ಯ ಮಾಡುವ ಬ್ರಾಹ್ಮಣ್ಯವನ್ನು ಮರೆಸಿಟ್ಟೆ.

4) ಆಳ-ಸ್ತೋತ್ರ-ಕರ್ಮಜ್ಞಾನ ಭಕ್ತಿಗಳಲ್ಲ ಯೋಗ್ಯತೆ ಇಲ್ಲದ ಅಕಿಂಚನನು, ಅನನ್ಯಗತಿ.

## ಗುರುಪಾಯ ತ್ಯಾಗವಿಧಿ ಪಕ್ಷ ಖಂಡನಮ್.

**ಈಶ್ವರನೈಪ್ಪತ್ತ** ಅತ್ಯನ್ತ ಪರತಂತ್ರತ್ತೈಯಾಲ್ ಉಪಾಯಾನ್ತರಂಗಳುಕ್ಕು ಕ್ಷೇತ್ರಜ್ಞನ್ ನಿತ್ಯಾಶಕ್ತನೆನ್ರು ಕಾಟ್ಟ ಇವನುಕ್ಕವತ್ತಿನುಡೈಯತ್ಯಾಗತ್ತೈ ವಿಧಿಕ್ಕಿರದೆನ್ರುವದು ಸರ್ವಶಾಸ್ತ್ರ ಸ್ವವಚನ ಸ್ವ ಪ್ರವೃತ್ತ್ಯಾದಿ ವಿರೋಧತ್ತಾಲೇ ಅತ್ಯನ್ತ ಪರಿಹಾಸ್ಯಮ್. ಅಪ್ಪೋದು ತುಲ್ಯ ನ್ಯಾಯತ್ತೈಯಾಲೇ "ವ್ರಜ" ಎನ್ಗೈತಾನುಮ್ ಘಟಿಯಾದು ಉಪಾಯಾಂತರಂಗಳುಕ್ಕು ಜೀವಾತ್ಮಾ ನಿತ್ಯಾಶಕ್ತನೆನ್ಗೈ ತಂಗಳುಕ್ಕು ಸ್ಥಿರೀಕರಣಂ ಪಣ್ಣಿನ ಪಡಿಯಾ ಮತ್ತನ್ರೈ. ಏಕಪ್ರಯೋಗಮ್ ತಾನೇ ಅಶಕ್ತನೈಪ್ಪತ್ತ ತ್ಯಾಗಾನುವಾದಮಾಯ್, ಇತರನೈಪ್ಪತ್ತ ತ್ಯಾಗವಿಧಿಯಾಹೈ ಏಕವಾಕ್ಯತ್ತಿಲ್ ಘಟಿಯಾದು.

ಫಲತ್ತಿಲ್ ವೈಷಮ್ಯಮುಮ್ ಅನ್ರಿಕ್ಕೇ ಅಧಿಕಾರಿಯುಮ್ ಏಕನಾಯಿರುಕ್ಕ ಗುರು ಲಘುವಿಕಲ್ಪ

---

## ಗುರೂಪಾಯ ತ್ಯಾಗ ವಿಧಿ ಪಕ್ಷ ಖಂಡನೆ

ಯದ್ಯಪಿ ಶಕ್ತನಾಗಿರುವವನಿಗೇ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳ ಸ್ವರೂಪತ್ಯಾಗವು ವಿಹಿತವೆಂದರೆ, ಅಶಕ್ತಾಧಿಕಾರತ್ವವೆಂಬ ಸಂಪ್ರದಾಯಕ್ಕೆ ವಿರುದ್ಧವಾಗುತ್ತದೆ. ಹಾಗಿಲ್ಲದೆ ಅತ್ಯಂತ ಪಾರತಂತ್ರ್ಯತೆಯಿಂದ ನಿತ್ಯಾಶಕ್ತನಾದ ಜೀವನಿಗೆ ಕರ್ಮಯೋಗಾದಿ ಸ್ವರೂಪತ್ಯಾಗವು ವಿಹಿತವೆಂದು ಹೇಳಿ, ಇದು ಅಕಿಂಚನಾಧಿಕಾರತ್ವ ಸಂಪ್ರದಾಯಕ್ಕೆ ವಿರೋಧವಾಗುವುದಿಲ್ಲವೆಂದರೆ, ಆ ಪಕ್ಷದಲ್ಲಿಯೂ ಸರ್ವಶಾಸ್ತ್ರ ಸ್ವವಚನ ಸ್ವಪ್ರವೃತ್ತ್ಯಾದಿಗಳೊಡನೆ ವಿರೋಧವು ಏರ್ಪಡುತ್ತದೆ ಎಂದು **ಈಶ್ವರನೈಪ್ಪಟ್ರ** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಈಶ್ವರನಿಗೆ ಅತ್ಯಂತ ಪರತಂತ್ರನೆಂದು ಹೇಳಿ ಅದರಿಂದ ಉಪಾಯಾಂತರಗಳಿಗೆ ಕ್ಷೇತ್ರಜ್ಞನು ನಿತ್ಯಾಶಕ್ತನೆಂಬ ಕಥೆಯೊಂದನ್ನು ಕಟ್ಟಿ, ಇವನಿಗೆ ಅವುಗಳ ತ್ಯಾಗವನ್ನು ವಿಧಿಸುತ್ತದೆ ಎಂಬುದು ಸರ್ವಶಾಸ್ತ್ರ ಸ್ವವಚನ ಸ್ವಪ್ರವೃತ್ತ್ಯಾದಿಗಳಿಗೆ ವಿರೋಧವಾಗುವುದರಿಂದ ಬಹಳ ಪರಿಹಾಸ್ಯದ ಮಾತಾಗುತ್ತದೆ. ಹೇಗೆಂದರೆ ಅಶಕ್ತನೆಂದು ಸರ್ವಧರ್ಮಸ್ವರೂಪತ್ಯಾಗವನ್ನು ಹೇಳಿದರೆ, ಉತ್ತರಕೃತ್ಯವನ್ನು ವಿಧಿಸುವ ಸರ್ವಶಾಸ್ತ್ರಗಳೂ ವಿರೋಧವಾಗುತ್ತವೆ. ಉಪಾಯಾಂತರದಲ್ಲಿ ಇವನು ನಿತ್ಯಾಶಕ್ತನೆಂದು ಹೇಳಿ ಅವನಿಗೆ ಅದರ ತ್ಯಾಗವನ್ನು ವಿಧಿಸುತ್ತದೆಯೆಂದರೆ ಸ್ವವಚನ ವಿರೋಧ. ಅಶಕ್ತನಾಗಿ ಕರ್ಮಯೋಗಾದಿಗಳನ್ನು ಮಾಡದವನಿಗೆ, ತ್ಯಾಗಪ್ರಸಂಗವೆಲ್ಲಿ. ಸ್ನಾನ, ಊರ್ಧ್ವ ಪುಂಡ್ರಧಾರಣ, ಜಪ, ಮಾಲೆಯನ್ನು ಕಟ್ಟುವುದು, ದೀಪವನ್ನು ಹಚ್ಚುವುದು ಮೊದಲಾದ ಸ್ವಪ್ರವೃತ್ತಿ ವಿರೋಧವೂ ಏರ್ಪಡುತ್ತದೆ. "ಆದಿ" ಶಬ್ದದಿಂದ ಶಿಷ್ಟಾನುಷ್ಠಾನ ವಿರೋಧವೂ ಸೂಚಿತವಾಗಿ ಇಂತಹ ಮಾತುಗಳೆಲ್ಲಾ ಪರಿಹಾಸ್ಯಾಸ್ಪದವೆಂದು ನಗುತ್ತಾರೆ. **ಅಪ್ಪೋದುತುಲ್ಯನ್ಯಾಯತ್ತಾಲೇ** – ಇತ್ಯಾದಿ ಜೀವನನ್ನು ನಿತ್ಯಾಶಕ್ತನೆಂದು ಒಪ್ಪಿದರೆ ಇವನನ್ನು ಕುರಿತು "ಶರಣಂವ್ರಜ" ಎಂದು ವಿಧಿಸುವುದೂ ಘಟಿಸುವುದಿಲ್ಲ. **ಉಪಾಯಾಂತರಂಗಳುಕ್ಕು** – ಇತ್ಯಾದಿ ಉಪಾಯಾಂತರಗಳಲ್ಲಿ ಜೀವನು ನಿತ್ಯಾಶಕ್ತನೆಂದರೆ, ತಮಗೆ ಅನಿಷ್ಟವಾದ ತ್ಯಾಗಾನುವಾದ ಪಕ್ಷಕ್ಕೆ **ಸ್ಥಿರೀಕರಣಮ್** – ಇತ್ಯಾದಿ ಅನುಕೂಲವೆಂದು ಏರ್ಪಡುತ್ತದೆ. **ಏಕಪ್ರಯೋಗಂತಾನೇ** – ಇತ್ಯಾದಿ 'ಪರಿತ್ಯಜ್ಯ' ಎಂಬುದು ಉಪಾಯಾಂತರದಲ್ಲಿ ಶಕ್ತನನ್ನು ಕುರಿತು ವಿಧಿರೂಪವಾಗಿಯೂ ಅಶಕ್ತನನ್ನು ಕುರಿತು ಅನುವಾದರೂಪವಾಗಿಯೂ ಆದರೇನು ಎಂದರೆ ಏಕಪ್ರಯೋಗವು ಅಶಕ್ತನನ್ನು ಕುರಿತು ತ್ಯಾಗಾನುವಾದವಾಗಿಯೂ, ಶಕ್ತನನ್ನು ಕುರಿತು ತ್ಯಾಗವಿಧಿಯಾಗಿಯೂ, ಆಗುವುದು ಏಕವಾಕ್ಯದಲ್ಲಿ ಘಟಿಸಲಾರದು. ವಾಕ್ಯಭೇದವನ್ನು ಅಂಗೀಕರಿಸಿದರೂ ಇದೇ ದೋಷ.

ii) **ಫಲತ್ತಿಲ್ ವೈಷಮ್ಯಮುಮ್ ಇನ್ರಿಕ್ಕೇ** – ಇತ್ಯಾದಿ ಉಪಾಯಾಂತರ ಶಕ್ತನನ್ನು ಕುರಿತು ಉಪಾಯಾಂತರ ತ್ಯಾಗವಿಧಿ ಪೂರ್ವಕವಾಗಿ ಲಘುವಾದ ಶರಣಾಗತಿಯನ್ನು ವಿಧಿಸುತ್ತದೆಯೆಂದೂ ಅವನಿಗೇನೆ ವಿಕಲ್ಪದಿಂದ ಗುರುವಾದ ಉಪಾಸನಾಂತರವನ್ನೇ ಉಪಾಸನವಾಕ್ಯವು ವಿಧಿಸುತ್ತದೆಯೆಂಬುದೂ ಹೇಳುವುದು ಸರಿಯಲ್ಲ. ಏಕೆಂ

**ಸಮಾವರ್ತನಾದಿಹಳಿಲ್ ಗುರುಲಘುವಿಕಲ್ಪಮುಮ್ ಅವಸ್ಥಾವಿಶೇಷಂಗಳಾಲೇ ನಿಯತಮೆನ್ರು ಕೊಳ್ಳಾದಪೋದು ಗುರುವಿಧಾನ ವೈಯರ್ಥ್ಯಮುಮ್ ವರುಮ್.**

**ಜ್ಞಾನ ವಿಶ್ವಾಸ ಪೂರ್ತಿಃ ಪ್ರಪತ್ತ್ಯಧಿಕಾರಃ, ತಯೋರ್ಮಾನ್ದ್ಯಂ ಭಕ್ತ್ಯಧಿಕಾರಃ ಇತ್ಯಭಿಪ್ರಾಯಂ ನಿರಸ್ಯತಿ**

**ಜ್ಞಾನಪೂರ್ತಿಯಾದಲ್, ವಿಶ್ವಾಸಪೂರ್ತಿಯಾದಲ್, ಉಡೈಯವನ್ ಪ್ರಪತ್ತಿಕ್ಕು ಅಧಿಕಾರಿ. ಜ್ಞಾನಮಾಂದ್ಯಮಾದಲ್, ವಿಶ್ವಾಸಮಾಂದ್ಯಮಾದಲ್, ಉಡೈಯವನ್ ಉಪಾಸನಾದಿಹಳುಕ್ಕು ಅಧಿಕಾರಿ, ಎನ್ನಿಲ್, ಇಚ್ಚರಮಶ್ಲೋಕಾದಿಹಳುಕ್ಕು ಉಪದೇಷ್ಟಾಕ್ಕಳುಮಾಯ್, ಪರಮಾಪ್ತ ತರುಮಾಹೈಯಾಲೇ ಪೂರ್ಣಜ್ಞಾನ ವಿಶ್ವಾಸರಾನ ವ್ಯಾಸಾದಿಹಳುಕ್ಕು ಉಪಾಸನಾದಿಹಳಿಲ್ ಅಧಿಕಾರಮಿಲ್ಲೈಯಾಮ್.**

---

"ಉಪಾಯಾಂತರ ದೌಷ್ಕರ್ಯಾತ್ ಶೋಚನ್ತ್ವಂ ಮದವಾಪ್ತಯೇ ।
ಸಾಧನತ್ವೇನ ನಿರ್ಣೀತಾನ್ ಸರ್ವಾನ್ ಸಂತ್ಯಜ್ಯದೂರತಃ ।
ಮಾಮೇಕಂ ಶರಣಂ ಯಾಹಿ ॥"

ಎಂಬಲ್ಲಿ ಉಪಾಯಾಂತರ ದೌಷ್ಕರ್ಯದಿಂದ ಮೋಕ್ಷ ಸಾಧನಗಳಾಗಿ ನಿರ್ಣೀತಗಳಾದ ಸರ್ವಧರ್ಮಗಳನ್ನೂ ಬಿಟ್ಟು ಶೋಕಿಸುತ್ತಿರುವ ನೀನು ನನ್ನನ್ನು ಒಬ್ಬನನ್ನೇ ಉಪಾಯವಾಗಿ ಆಶ್ರಯಿಸು, ಎಂದು ಅನ್ವಯಿಸಿ, ಅರ್ಥವನ್ನು ಮಾಡಿದರೆ, ಅನುವಾದಪಕ್ಷದಲ್ಲಿ ಆರಂಭದಲ್ಲಿ ಹೇಳಲ್ಪಟ್ಟ ಅರ್ಥವೇ ಸಿದ್ಧಿಸುವುದರಿಂದ, ಗುರು ಲಘು ವಿಕಲ್ಪಪ್ರಸಕ್ತಿಯೇ ಬರುವುದಿಲ್ಲ. ಆದ್ದರಿಂದ ಗುರುವಾದ ಉಪಾಯವನ್ನು ಮಾಡಲಶಕ್ತನು ಅದನ್ನು ಬಿಟ್ಟು **ಲಘುವಾದ** ಉಪಾಯವನ್ನು ಅನುಷ್ಠಿಸಬಹುದು ಎಂದು **ಇವ್ವಳವೇ ವಿವಕ್ಷಿತ ಮಾಹೈಯಾಲ್** – ಇಷ್ಟೇ ವಿವಕ್ಷಿತವಾದ್ದರಿಂದ, **ಒರು ವಿರೋಧಮುಮ್ ಇಲ್ಲೈ** – ಯಾವ ವಿರೋಧವೂ ಇಲ್ಲ.

**ಸಮಾವರ್ತನಾದಿಹಳಿಲ್** – ಇತ್ಯಾದಿ ವೇದವನ್ನು ಅಧ್ಯಯನ ಮಾಡಿದ ನಂತರ ವ್ರತ ಸಮಾವರ್ತನವೆಂಬ ಕರ್ಮವು ವಿಧಿಸಲ್ಪಟ್ಟಿದೆ. ಆಗ "ವೇದ ಮಧೀತ್ಯ ಸ್ನಾಸ್ಯನ್ ಪ್ರಾಗುದಯಾತ್ ವ್ರಜಂಪ್ರವಿಶ್ಯ" ಎಂದಾರಂಭಿಸಿ ಅಜ್ಯಭಾಗಾಂತಂ. "ಇಮಂಸ್ತೋಮ ಮರ್ಹತೇ ಜಾತವೇದಸೇ", ಇತ್ಯಾದಿ ಹೋಮವಿಶೇಷಗಳನ್ನು ಹೇಳಿ ಗುರುವಾದ ಸ್ನಾನವು ವಿಹಿತ. ಆ ಪ್ರಕರಣದಲ್ಲಿಯೇ "ಅಥೈತದಪರಂ ತೂಷ್ಣೀಮೇವ ತೀರ್ಥೇಸ್ನಾತ್ವಾ" ಎಂದು ಲಘುವಾದ ತೂಷ್ಣೀಂಸ್ನಾನವು ವಿಧಿಸಿದೆ. ಇವು ಸಮವಿಕಲ್ಪವಾಗಿ ವಿಧಿಸಲ್ಪಡಲಿಲ್ಲವೇ ಎಂಬುದು ಚೋದ್ಯ. ಇಲ್ಲವೆಂಬುದು ಪ್ರತ್ಯುತ್ತರ. ಅಧಿಕಾರಭೇದವನ್ನು ಇಟ್ಟೇ ಇಲ್ಲೂ ವ್ಯವಸ್ಥೆ ಮಾಡಿರುತ್ತದೆಯೆಂಬುದು, ಸಮಾವರ್ತನ ಪ್ರಕರಣದಲ್ಲಿ ನಿಬಂಧನಕಾರರು ಉದಾಹರಿಸಿರುವ,

"ಪ್ರಭುಃ ಪ್ರಥಮ ಕಲ್ಪಸ್ಯಯೋಽನುಕಲ್ಪೇನ ವರ್ತತೇ ।
ನಸಾಂಪರಾಯಿಕಂ ತಸ್ಯ ದುರ್ಮತೇರ್ವಿದ್ಯತೇ ಫಲಮ್"

ಎಂಬ ಸ್ಮೃತಿಯ [illegible] ವಚನವು ಸಾಕ್ಷಿ. [illegible] "[illegible]" [illegible] ಕಾಲವಿಳಂಬ ಕ್ಷಮರಿಗೆ ಮತ್ತು, ವಿಳಂಬಾಕ್ಷಮರಿಗೆ [illegible] ವಿಧಿಸಿದೆ. ಆದ್ದರಿಂದ ಗುರು ಲಘು ವಿಕಲ್ಪಮುಮ್ – [illegible] ಗುರು ಲಘು ವಿಕಲ್ಪವು [illegible] ನಿಯತಗಳು ಎಂದು ಅಂಗೀಕರಿಸದೆ ಹೋದರೆ ಗುರುವಾದುದನ್ನು ವಿಧಿಸುವ ಶಾಸ್ತ್ರಕ್ಕೆ ವ್ಯರ್ಥತ್ವವು ಬರುತ್ತದೆ.

ii) **ಜ್ಞಾನಪೂರ್ತಿಯಾದಲ್** – ಇತ್ಯಾದಿ ಜ್ಞಾನವು ಪೂರ್ಣವಾಗಿರುವವನೋ, ವಿಶ್ವಾಸವು ಪೂರ್ಣವಾಗಿರುವವನೋ ಪ್ರಪತ್ತಿಗೆ ಅಧಿಕಾರಿ, ಜ್ಞಾನವು [illegible] ಕಡಿಮೆಯಾಗಿರುವವನೋ, ವಿಶ್ವಾಸವು ಕಡಿಮೆ

ಅವರ್‌ಹಳ್ ಉಪದೇಶಕಾಲತ್ತಿಲೇ ಜ್ಞಾನ ವಿಶ್ವಾಸಙ್ಗಳೈಯುಡೈಯವರಾಯ್ ಪಿನ್ಬು ಕಲಙ್ಗಿ ಉಪಾಸಕರಾನಾರ್‌ಹಳೆನ್ಗೈಕ್ಕೊರು ಪ್ರಮಾಣಮಿಲ್ಲೈ. ಪ್ರಪನ್ನರಾಯ್ ವೈತ್ತು, ಲೋಕಸಙ್ಗ್ರಹಾರ್ಥಮಾಹ ಉಪಾಸನಾದಿಹಳೈ ಅನುಷ್ಠಿತ್ತಾರ್‌ಹಳೆನ್ಗೈಕ್ಕುಮುವ್ವೋ ಪ್ರಬಂಧಙ್ಗಳಿಲೊರುವಚನಮಿಲ್ಲೈ. ಇಪ್ಪಡಿ ಕಲ್ಪಿಕ್ಕಪ್ಪುಕ್ಕಾಲುಮ್ ತನ್ ಅಧಿಕಾರತ್ತುಕ್ಕು ನಿಷಿದ್ಧಮಾನವತ್ತೈ ಲೋಕಸಂಗ್ರಹಾರ್ಥಮಾಹವನುಷ್ಠಿಕ್ಕಪ್ಪುಕ್ಕಾಲ್,ಅನ್ಯೈ ಇವನ್ ತನಕ್ಕುಮ್ ಪಾಪಮಾಯ್,ಅಧಿಕಾರತ್ತುಕ್ಕು ವಿರುದ್ಧಾನುಷ್ಠಾನಮ್ ಪಣ್ಣುಹೈಯಾಲೇ ತನ್ನನುಷ್ಠಾನತ್ತೈ ಇಟ್ಟು ಲೋಕಸಂಗ್ರಹಮ್ ಪಣ್ಣವುಮ್ ಕಡಪ್ಪಡಾದೊಳ್ಳಿಯುಮ್.

### ಲೋಕಸಂಗ್ರಹ ಶಬ್ದಾರ್ಥಃ

ತನಕ್ಕಿರಂಡು ವಳ್ಳಿಹಳ್ ಶಾಸ್ತ್ರಾನುಮತಙ್ಗಳಾನಾಲ್, ಅವತ್ತಿಲ್ ಲೋಕತ್ತಾರ್ಕ್ಕು ಶಕ್ಯಮಾಯ್, ಅವರುಹಳುಕ್ಕು ಹಿತಮಾಯಿರುಪ್ಪದೊನ್ರೈತ್ತಾನ್ ಅನುಷ್ಠಿತ್ತುಕ್ಕಾಟ್ಟಿ, ಲೋಕತ್ತಾರೈಯದಿಲೇ ನಿಲೈನಿರುತ್ತುಹೈಯೇ ಲೋಕಸಂಙ್ಗ್ರಹಮೆನ್ರು ಶ್ರೀ ಗೀತಾಭಾಷ್ಯತ್ತಿಲೇ ಅರುಳಿಚ್ಚೆಯ್‌ದಾರ್.

ಅಲ್ಲದು ಸನ್ನ್ಯಾಸಿಕ್ಕು ನಿಷಿದ್ಧಮಾನ ಗೃಹಸ್ಥೈಕಾಂತಧರ್ಮತ್ತೈ ಸನ್ನ್ಯಾಸಿಯನುಷ್ಠಿತ್ತು ಕ್ಕಾಟ್ಟುಮದು, ಲೋಕಸಂಗ್ರಹಾರ್ಥಮಾಹಾದು. ಇದು ಅಜ್ಞಾತಿಲಂಘನಮಾಮತ್ತನೈ.

---

ಯಾಗಿರುವವನೋ, ಉಪಾಸನಾದಿಗಳಿಗೆ ಅಧಿಕಾರಿಯೆಂದರೆ, ಈ ಚರಮಶ್ಲೋಕವನ್ನು ಉಪದೇಶ ಮಾಡಿದ ಮತ್ತು **ಆದಿಶಬ್ದದಿಂದ** - ಮಹಾಭಾರತವನ್ನು ಉಪದೇಶಿಸಿದ, ಪರಮಾಸ್ತಿಕರಾದ್ದರಿಂದ ಪೂರ್ಣಜ್ಞಾನ ವಿಶ್ವಾಸಯುಕ್ತರಾದ, ವ್ಯಾಸಾದಿಗಳಿಗೆ ಉಪಾಸನಾದಿಗಳಲ್ಲಿ ಅಧಿಕಾರವಿಲ್ಲವೆಂದು ಏರ್ಪಡುತ್ತದೆ. **ಅವರ್‌ಹಳ್** – ಇತ್ಯಾದಿ ವ್ಯಾಸಾದಿಗಳು ಉಪದೇಶಕಾಲದಲ್ಲಿ ಜ್ಞಾನವಿಶ್ವಾಸಗಳನ್ನು ಹೊಂದಿದವರಾಗಿ, ಅನಂತರ ಬುದ್ಧಿಯು ಕಲಗಿ ಉಪಾಸಕರಾದರೆಂದು ಹೇಳುವುದಕ್ಕೆ ಯಾವ ಪ್ರಮಾಣವೂ ಇಲ್ಲ. **ಪ್ರಪನ್ನರಾಯ್‌ವೈತ್ತು** – ಇತ್ಯಾದಿ ವ್ಯಾಸಾದಿಗಳು ಪ್ರಪನ್ನರುಗಳೇ ಆದರೂ ಮಂದ ಜ್ಞಾನವಿಶ್ವಾಸವುಳ್ಳ ಸಾಧಾರಣಋಷಿಗಳೇ ಮೊದಲಾದ ಜನರ ಸಂಗ್ರಹಾರ್ಥವಾಗಿ ಉಪಾಸನಾದಿಗಳನ್ನು ಅನುಷ್ಠಿಸಿದರೆಂದು ಹೇಳುವುದಕ್ಕೆ ಆಯಾಯಾ ಪ್ರಬಂಧಗಳಲ್ಲಿ ವಾಸಾದಿಗಳು ಪ್ರಪನ್ನರೆಂದು ಹೇಳಲು ಯಾವ ವಚನ ಪ್ರಾಮಾಣ್ಯವೂ ಇಲ್ಲ. **ಅಪ್ಪಡಿ ಕಲ್ಪಿಕ್ಕಪ್ಪುಕ್ಕಾಲುಮ್** – ಇತ್ಯಾದಿ ವ್ಯಾಸಾದಿಗಳಿಗೆ ಪ್ರಪನ್ನತ್ವವನ್ನು ಕಥಂಚಿತ್ ಕಲ್ಪಿಸಿದರೂ ತನ್ನ ಅಧಿಕಾರಕ್ಕೆ ನಿಷಿದ್ಧವಾದವುಗಳನ್ನು ಲೋಕಸಂಗ್ರಹಾರ್ಥವಾಗಿ ಅನುಷ್ಠಿಸಲು ಹೋದರೆ ಅವುಗಳು ಇವನಿಗೆ ಪಾಪವಾಗಿ ಅಧಿಕಾರಕ್ಕೆ ವಿರುದ್ಧವಾದ ಅನುಷ್ಠಾನವನ್ನು ಮಾಡುವುದರಿಂದ ತನ್ನ ಅನುಷ್ಠಾನವನ್ನು ತೋರಿಸಿ **ಲೋಕಸಂಗ್ರಹಮ್ ಪಣ್ಣುವುಮ್** ಇತ್ಯಾದಿ– ಜನರು ಹಾಗೆ ಅನುಷ್ಠಾನ ಮಾಡಲೆಂದು, ಮಾರ್ಗದರ್ಶನ ಮಾಡಲಾಗುವುದಿಲ್ಲ. **ತನಕ್ಕು** ಇತ್ಯಾದಿ-ತನಗೆ ಎರಡು ಮಾರ್ಗಗಳು ಶಾಸ್ತ್ರದಿಂದ ಅನುಮತಗಳಾದರೆ ಅವುಗಳಲ್ಲಿ ಲೋಕದಲ್ಲಿರುವ ಜನರಿಗೆ ಶಕ್ಯವಾಗಿ ಅವರುಗಳಿಗೆ ಹಿತವಾಗಿರುವದೊಂದನ್ನು ತಾನು ಅನುಷ್ಠಿಸಿ ತೋರಿಸಿ ಲೋಕ ಜನರು ಆ ಮಾರ್ಗವನ್ನು **ನಿಲೈನಿರುತ್ತುಹೈಯೇ**–ಅವಲಂಬಿಸುವಂತೆ ಮಾಡುವುದೇ ಲೋಕಸಂಗ್ರಹವೆಂದು ಶ್ರೀ ಗೀತಾಭಾಷ್ಯದಲ್ಲಿ ಕೃಪೆ ಮಾಡಿ ಹೇಳಿರುತ್ತಾರೆ. ಆಗ ಎರಡು ಮಾರ್ಗಗಳೂ ಶಾಸ್ತ್ರಸಮ್ಮತವಾದ್ದರಿಂದ ಲಘುವಾದ ಉಪಾಯವನ್ನು ಅನುಷ್ಠಿಸಿದರೆ ಅಧಿಕಾರ ವಿರೋಧವಿಲ್ಲವೆಂದು ತಾತ್ಪರ್ಯ.

**ಅಲ್ಲದು ಸನ್ಯಾಸಿಕ್ಕು** ಇತ್ಯಾದಿ– "ಉಪಾಯಾಪಾಯ ಸಂತ್ಯಾಗೀ ಮಧ್ಯಮಾಂ ವೃತ್ತಿಮಾಶ್ರಿತಃ" ಎಂದು ಉಪಾಯಾಂತರವೆಂಬ ಅಪಾಯಕಾರ್ಯವನ್ನು ಬಿಟ್ಟು ಪ್ರಪನ್ನನು ಇರಬೇಕೆಂದು ಹೇಳಿರುವಾಗ, ತನ್ನ ಅಧಿಕಾರಕ್ಕೆ ನಿಷಿದ್ಧವಾದ ಉಪಾಸನವನ್ನು ಅನುಷ್ಠಿಸಿ ತೋರಿಸುವುದು, ಸನ್ಯಾಸಿಯು ತನಗೆ ನಿಷಿದ್ಧವಾದ ಗೃಹಸ್ಥನಿಗೇ ಏಕಾಂತವಾದ ಪ್ರಜೋತ್ಪತ್ತಿ ಮೊದಲಾದ ಧರ್ಮಗಳನ್ನು ಅನುಷ್ಠಿಸಿ ತೋರಿಸುವಂತೆ, ಲೋಕ ಸಂಗ್ರಹವಾಗಲಾರದು. **ಇದು ಅಜ್ಞಾತಿಲಂಘನಮ್** ಇತ್ಯಾದಿ–ಇದು ಶಾಸ್ತ್ರರೂಪ ಭಗವದಾಜ್ಞಾತಿಲಂಘನವಾಗುತ್ತದೆ.

ಇಪ್ಪಡಿಯೇ ಪ್ರಪತ್ತ್ಯಧಿಕಾರಿಕ್ಕು ನಿಷಿದ್ಧತ್ತೈ ಅವನ್ತಾನೇ ಕೈಙ್ಕರ್ಯ ಬುದ್ಧಿಯಾಲೇ ಅನುಷ್ಠಿಕ್ಕೈಯುಂವ್ ಸ್ವಾಧಿಕಾರ ವಿರುದ್ಧಮ್.

ವರ್ಣಾಶ್ರಮಧರ್ಮಾನ ತ್ಯಾಜ್ಯಮ್, ಶಾಸ್ತ್ರ ವಿಹಿತತ್ವಾತ್.

ಪ್ರಪತ್ತಿಕ್ಕು ಅನಪೇಕ್ಷಿತಙ್ಗಳಾನ ಶಾಸ್ತ್ರೀಯಙ್ಗಳೈ ಕೈಂಕರ್ಯ ಬುದ್ಧಿಯಾಲೇ ಅನುಷ್ಠಿಪ್ಪಾರ್ಕ್ಕು ವಿರೋಧಮಿಲ್ಲೈ. ತನ್ದಾಮ್ ಜಾತ್ಯಾದಿಹಳುಕ್ಕು ಅನುರೂಪಂಗಳುಮಾಯ್, ತನ್ದಾಮುಕ್ಕು ಶಕ್ಯಂಗಳುಮಾನ ಸರ್ವಧರ್ಮಂಗಳಿನುಡೈಯ ಸ್ವರೂಪತ್ಯಾಗಮ್ ಅಂಗಮಾಹ ವಿಧೇಯಮೆನ್ನುಮ್ ಪಕ್ಷತ್ತಿಲುಮ್, ಪ್ರಪತ್ತ್ಯುತ್ತರಕಾಲಮ್ ತನ್ ವರ್ಣಾಶ್ರಮಾದ್ಯಧಿಕಾರಙ್ಗಳುಕ್ಕು ಅನುರೂಪಮಾಹಪಡೈತ್ತ ಕೈಙ್ಕರ್ಯಫಲತ್ತೈಯುಮಿಳನ್ದು ಅಹಿಂಸಾ ಸತ್ಯವಚನಾದಿ ಸಾಮಾನ್ಯ ಧರ್ಮಙ್ಗಳೈಯುಂವ್ ಆಚಾರ್ಯವಂದನಾದಿಹಳೈ

---

ಇಪ್ಪಡಿಯೇ ಇತ್ಯಾದಿ–ಹೀಗೇಯೇ ಪ್ರಪತ್ತ್ಯಧಿಕಾರಿಗೆ ನಿಷಿದ್ಧವಾದದನ್ನು ಕಾಮ್ಯಬುದ್ಧಿಯಿಂದ ಅನುಷ್ಠಿಸುವುದು ದೋಷವಾಗುವಂತೆ, ಅವನ್ನೇ ಕೈಂಕರ್ಯ ಬುದ್ಧಿಯಿಂದ ಅನುಷ್ಠಿಸುವುದೂ ಸ್ವಾಧಿಕಾರ ವಿರುದ್ಧ–ದೋಷಾವಹ. ಹಾಗಾದರೆ ಪ್ರಪತ್ತಿಗೆ ಅನಪೇಕ್ಷಿತಗಳಾದ ವರ್ಣಾಶ್ರಮ ಧರ್ಮಗಳನ್ನು ಅನುಷ್ಠಿಸ ಕೂಡದೆ, ಎಂದರೆ, ಪ್ರಪತ್ತಿಕ್ಕನಪೇಕ್ಷಿತಂಗಳಾನ ಎಂದಾರಂಭಿಸಿ ಉತ್ತರಿಸುತ್ತಾರೆ. ಅದಾಗಿ ವರ್ಣಾಶ್ರಮ ಧರ್ಮಗಳು ಭಕ್ತಿಗೆ "ಸಹಕಾರಿತ್ವೇನಚ" ಎಂದು ಅನುಷ್ಠಿಸಬೇಕಾದವು. ಪ್ರಪತ್ತಿಗೆ ಇವುಗಳು ಅಂಗವಾಗಿ ಅನಪೇಕ್ಷಿತಗಳು. ಆದರೂ, ಶಾಸ್ತ್ರವಿಹಿತಗಳಾದ್ದರಿಂದ, ಶಾಸ್ತ್ರೀಯ ವರ್ಣಾಶ್ರಮ ಧರ್ಮಗಳನ್ನು ಕೈಂಕರ್ಯ ಬುದ್ಧಿಯಿಂದ ಅನುಷ್ಠಿಸುವವರಿಗೆ ವಿರೋಧವಿಲ್ಲ.

**ವರ್ಣಾಶ್ರಮ ಧರ್ಮತ್ಯಾಗ ವಿಧಿ ಪಕ್ಷ ಖಂಡನೆ.**

"ಸರ್ವ ಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳ ಸ್ವರೂಪ ತ್ಯಾಗವು ಪ್ರಪತ್ತಿಗೆ ಅಂಗವಾಗಿ ವಿಧಿಸಲ್ಪಡುತ್ತದೆಯೆಂದರೆ ಅವುಗಳಿಗೆ ಅಧಿಕಾರಿಗಳಾದವರೇ ಅವುಗಳನ್ನು ಬಿಡಬೇಕೆಂದು ಏರ್ಪಟ್ಟು, ಪ್ರಪತ್ತಿಯು ಸರ್ವಾಧಿಕಾರವಲ್ಲವೆಂದು ಏರ್ಪದುತ್ತದೆ. ಆದ್ದರಿಂದ 'ಸರ್ವ ಧರ್ಮಾನ್' ಎಂಬಲ್ಲಿ **ತಂದಾಮ್ ಜಾತ್ಯಾದಿಹಳುಕ್ಕು ಅನುರೂಪಂಗಳಾಯ್** ಇತ್ಯಾದಿ-ಹೇಳಿರುವಂತೆ ತಮ್ಮ ತಮ್ಮ ಜಾತಿಗಳಿಗೆ ಅನುರೂಪಗಳಾಗಿ ತಮ ತಮಗೆ ಶಕ್ಯಗಳಾದ ಸರ್ವಧರ್ಮಗಳ ಸ್ವರೂಪ ತ್ಯಾಗವು ಅಂಗವಾಗಿ **ವಿಧೇಯಮ್** ಇತ್ಯಾದಿ–ವಿಧಿಸಲ್ಪಟ್ಟಿದೆ, ಎಂಬ ಪಕ್ಷದಲ್ಲಿಯೂ, ಪ್ರಪತ್ತ್ಯುತರ ಕಾಲದಲ್ಲಿ ತನ್ನ ವರ್ಣಾಶ್ರಮಾದಿ ಅಧಿಕಾರಗಳಿಗೆ ಅನುರೂಪವಾದ ಕೈಂಕರ್ಯವನ್ನು ಮಾಡದೆ ಅವುಗಳ ಫಲವನ್ನೂ ಕಳೆದುಕೊಂಡು, ಅಹಿಂಸೆ, ಸತ್ಯವಚನಾದಿ ಸಾಮಾನ್ಯ ಧರ್ಮಗಳನ್ನೂ ಆಚಾರ್ಯವಂದನಾದಿಗಳನ್ನೂ ಬಿಟ್ಟು ಪಶುಮೃಗ ಪಕ್ಷ್ಯಾದಿಗಳ ಹಾಗೆ ಸ್ವೇಚ್ಛೆಯಾಗಿ ತಿರುಗಾಡಿಕೊಂಡು ಇರುವಂತೆ ಏರ್ಪಡುತ್ತದೆ. ಸರ್ವಧರ್ಮ ಸ್ವರೂಪ ತ್ಯಾಗವು ಪ್ರಪತ್ತಿಗೆ ಅಂಗವಾಗಿ ಪ್ರಪತ್ತಿಗೆ ಪೂರ್ವಕಾಲದಲ್ಲಿ ತ್ಯಜಿಸಲ್ಪಟ್ಟರೆ, ಪ್ರಪತ್ತ್ಯುತ್ತರ ಕಾಲದಲ್ಲಿ ಅವುಗಳನ್ನು ಅನುಷ್ಠಿಸಿದರೆ, ಪೂರ್ವಕಾಲದಲ್ಲಿ ಅಂಗವಾಗಿ ತ್ಯಜಿಸಲ್ಪಟ್ಟಂತೆ ಆಗುವುದಿಲ್ಲ. ಉತ್ತರ ಕಾಲದಲ್ಲಿಯೂ ತನ್ನ ಸ್ವರೂಪ ಶಕ್ತ್ಯನು ಗುಣಗಳಾದ ಕೈಂಕರ್ಯವನ್ನು ಬಿಡಬೇಕಾದ ಪ್ರಸಂಗವು ಏರ್ಪಡುತ್ತದೆಯೆಂಬ ಅಭಿಪ್ರಾಯದಿಂದ ಹೀಗೆ ಸ್ವವರ್ಣಾಶ್ರಮ ಧರ್ಮಗಳನ್ನು ಬಿಟ್ಟು ಸ್ವೇಚ್ಛಾವಿಹಾರಿಯಾಗಿ ಪಶು ಮೃಗ ಪಕ್ಷಿಗಳಂತೆ ಇರುವ ಪ್ರಸಂಗವು ಏರ್ಪಡುತ್ತದೆ ಎಂಬ ದುರವಸ್ಥೆಯು ಹೇಳಲ್ಪಟ್ಟಿತು.

ಇಲ್ಲಿ 'ಸರ್ವಧರ್ಮ" ಶಬ್ದದಿಂದ ಸ್ವರಕ್ಷಣಾರ್ಥ ಸ್ವ ವ್ಯಾಪಾರವೇ ವಿವಕ್ಷಿತ. ಅವುಗಳ ತ್ಯಾಗವು ಪ್ರಪತ್ತಿಗೆ ಅಂಗ. "ನ ಕಳಂಜಂ ಭಕ್ಷಯೇತ್, ನಾನೃತಂ ವದೇತ್" ಇತ್ಯಾದಿ ನಿಷೇಧ ವಾಕ್ಯಸಿದ್ಧಗಳಾದ ಕಳಂಜಭಕ್ಷಣಾಭಾವ, ಅನೃತ ವದನಾಭಾವಗಳು, ಅಭಾವ ರೂಪಗಳಾದ್ದರಿಂದ, ಅವುಗಳಿಗೆ ಸ್ವರಕ್ಷಣಾರ್ಥ ಸ್ವ ವ್ಯಾಪಾರತ್ವವು

ಯುಂವ್ ತವಿರ್‌ನ್ದು ಪಶು ಮೃಗ ಪಕ್ಷ್ಯಾದಿಹಳೈಪ್ಪೋಲೇ ತಿರುಯುಂಪ್ಪಡಿಯಾವ್. ನಿಷೇಧ ವಾಕ್ಯ ಸಿದ್ಧಙ್ಗಳಾನ ನಿವೃತ್ತಿರೂಪ ಧರ್ಮಙ್ಗಳ್ ಸ್ವರಕ್ಷಣಾರ್ಥ ಸ್ವವ್ಯಾಪಾರ ಮಲ್ಲಾಮೈಯಾಲೇ ಶರಣಾಗತಿಯೋಡು ವಿರೋಧಮಿಲ್ಲಾಮೈಯಾಲ್, ಇಙ್ಗು ಪ್ರವೃತ್ತಿರೂಪ ಧರ್ಮಙ್ಗಳಿನುಡೈಯ ತ್ಯಾಗಮೇ ವಿವಕ್ಷಿತಮೆನ್ಱುಮ್ ನಿರ್ವಾಹಮುಂವ್ ಮುಂದಮ್. ನಿವೃತ್ತಿಯುಂವ್ ವ್ಯಾಪಾರ ವಿಶೇಷಮೆನ್ನುಮಿಡಮುಂವ್ ಅದುವುಮ್ ಸ್ವರಕ್ಷಣಾರ್ಥಮಾಮೆನ್ನುಮಿಡಮುಂವ್, ಲೋಕ ವೇದ ಸಿದ್ಧಮಿರೇ.

ಇವ್ವಿಧಿ ಬಲತ್ತಾಲೇ ಪ್ರವೃತ್ತಿ ನಿವೃತ್ತಿರೂಪಙ್ಗಳಾನ ಸರ್ವಧರ್ಮಙ್ಗಳೈಯುಂವ್ ತವಿರನ್ದು ತಿರಿಗೈ ತಾನೇ ಪ್ರಪನ್ನನುಕ್ಕು ಶಾಸ್ತ್ರಾರ್ಥಮಾನಾಲೋವೆನ್ನಿಲ್ ?-ಪ್ರಪನ್ನರಾನ ಪೂರ್ವರ್‌ಹಳುಮ್, ಇಪ್ಪೋದುಳ್ಳಾರುಮ್ ಸಾವಧಾನರಾಯ್‌ಪ್ಪಣ್ಣಿಪ್ಪೋರುಹಿರ ಕೈಙ್ಕರ್ಯಙ್ಗಳುಮ್, ಅಪಚಾರ ಪರಿಹಾರಙ್ಗಳುಮ್, ವಿರುದ್ಧಾನುಷ್ಠಾನಮಾಮ್. ಯಥಾಪ್ರಮಾಣಮ್ ಪ್ರಪತ್ತಿ ಸಂಪ್ರದಾಯ ಪ್ರವರ್ತ್ತಕರಾಯ್ ಪರಮ ಕಾರುಣಿಕರುಮಾಯ್ ಇರುಕ್ಕಿರವರ್‌ಹಳುಕ್ಕು ಭ್ರಮ ವಿಪ್ರಲಂಭ ಸಂಭಾವನೆಯುಮಿಲ್ಲೈ. ಯಾವಜ್ಜೀವಮ್ ಸರ್ವಧರ್ಮತ್ಯಾಗಮ್ ವಿಧೇಯಮಾಹಿಲನ್ರೋ ಇವ್ವಿರೋಧಮುಳ್ಳದು ; ಪ್ರಪತ್ತ್ಯನುಷ್ಠಾನ ಕ್ಷಣತ್ತಿಲ್ ಸರ್ವಧರ್ಮಙ್ಗಳಿನುಡೈಯ ಸ್ವರೂಪತ್ಯಾಗಮ್ ಅಂಗಮಾನಾಲ್ ವಿರೋಧಮಿಲ್ಲೈ? ಎನ್ನಿಲ್,

---

ಇಲ್ಲದುದರಿಂದ ಅವುಗಳನ್ನು ತ್ಯಾಗ ಮಾಡುವುದರಿಂದ ನಿಷಿದ್ಧವನ್ನು ಅನುಷ್ಠಿಸಿದಂತೆಯಾಗುತ್ತದೆ ಎಂದು ಹೇಳಲಾಗುವುದಿಲ್ಲವೆಂದು ವಾದಿಸಿ, ಪ್ರವೃತ್ತಿರೂಪ ಕೈಂಕರ್ಯ, ಆಚಾರ್ಯವಂದನತ್ಯಾಗಾದಿ ವಿಷಯಗಳಲ್ಲಿ ಹೇಳಿದ ಪ್ರಸಂಗವೂ, ಇಷ್ಟ ಪ್ರಸಂಗವೆಂದು ವಾದಿಸುವವರಿಗೆ **ನಿಷೇಧ ವಾಕ್ಯ ಸಿದ್ಧಂಗಳಾನ** ಎಂದಾರಂಭಿಸಿ ಉತ್ತರಿಸುತ್ತಾರೆ. ಆದಾಗಿ ನಿಷೇಧ ವಾಕ್ಯಸಿದ್ಧಗಳಾದ ನಿವೃತ್ತಿರೂಪ ಧರ್ಮಗಳು ಸ್ವರಕ್ಷಣಾರ್ಥ ಸ್ವ ವ್ಯಾಪಾರವಲ್ಲದುದರಿಂದ, ಶರಣಾಗತಿಗೆ ವಿರೋಧವಲ್ಲದುದರಿಂದ, ಇಲ್ಲಿ ಪ್ರವೃತ್ತಿರೂಪ ಧರ್ಮಗಳ ತ್ಯಾಗವೇ ವಿವಕ್ಷಿತವೆಂಬ ನಿರ್ವಾಹವೂ ಬಲ್ಪಜವಾದದ್ದು. ಹೇಗೆಂದರೆ **ನಿವೃತ್ತಿಯುಂವ್** ಇತ್ಯಾದಿ–ಅಮಾನಿತ್ವ–ಅಹಂಕಾರವಿಲ್ಲದಿರುವುದು. ಅದಂಭಿತ್ವ–ಡಂಭಾಚಾರವಿಲ್ಲದಿರುವುದು ಇತ್ಯಾದಿ ಏಕಾದಶಿಯಲ್ಲಿ ಅನ್ನಭೋಜನ ನಿವೃತ್ತಿ ಮೊದಲಾದವೂ, ವ್ಯಾಪಾರ ವಿಶೇಷಗಳು ಎಂಬುದೂ, **ಅದುವುವ್**–ಆನಿವೃತ್ತಿರೂಪ **ವ್ಯಾಪಾರವೂ** ಸ್ವರಕ್ಷಣಾರ್ಥವಾಗುತ್ತದೆ ಎಂಬುದೂ ಲೋಕ ವೇದ ಸಿದ್ಧಗಳು. ಲೋಕದಲ್ಲಿ ರಾಜಾಪರಾಧ ನಿವೃತ್ತಿಯೂ, ವಿಷಭಕ್ಷಣಾದಿ ನಿವೃತ್ತಿಯೂ ಸ್ವರಕ್ಷಣಾರ್ಥ ಸ್ವ ವ್ಯಾಪಾರ ಸಿದ್ಧಗಳು. ವೇದದಲ್ಲಿ "ನಹಿಂಸ್ಯಾತ್ ಸರ್ವಾಭೂತಾನಿ" ಎಂದು ಹೇಳಲ್ಪಟ್ಟ ಹಿಂಸಾ ನಿವೃತ್ತಿಯೂ ಸ್ವರಕ್ಷಣಾರ್ಥ ಸ್ವ ವ್ಯಾಪಾರವಾಗಿ ಪ್ರಸಿದ್ಧ.

**ಇವ್ವಿಧಿ ಬಲತ್ತಾಲೇ** ಇತ್ಯಾದಿ–ಸ್ವೇಚ್ಛೆಯಿಂದ ಪ್ರವೃತ್ತಿ ನಿವೃತ್ತಿ ರೂಪ ಸರ್ವಧರ್ಮಗಳನ್ನೂ ಬಿಡುವುದು ದೋಷವಾದರೂ, "ಪರಿತ್ಯಜ್ಯ ಎಂಬ ವಿಧಿ ಬಲದಿಂದ ಅವುಗಳನ್ನು ಬಿಡುವುದು ದೋಷವಾಗದು, ಶಾಸ್ತ್ರಾರ್ಥ ಪರಿಪಾಲನೆಯಾಗುತ್ತದೆ, ಆದ್ದರಿಂದ ಸರ್ವಧರ್ಮಗಳನ್ನೂ ಬಿಟ್ಟು ಸ್ವೇಚ್ಛೆಯಾಗಿ ಸಂಚರಿಸುವುದೇ ಪ್ರಪನ್ನನಿಗೆ ಶಾಸ್ತ್ರಾರ್ಥ–ಸ್ವರೂಪವೆಂದರೆ **ಪ್ರಪನ್ನರಾನ ಪೂರ್ವರ್‌ಹಳುಮ್** ಇತ್ಯಾದಿ–ಪ್ರಪನ್ನರಾದ ಭಾಷ್ಯಕಾರಾದಿ ಪೂರ್ವಾಚಾರ್ಯರುಗಳೂ ಈಗ ಇರುವ ಶಿಷ್ಟರುಗಳೂ ಸಾವಧಾನವಾಗಿ ಮಾಡುತ್ತಿರುವ ಕೈಂಕರ್ಯಗಳೂ, ಅಪಚಾರಗಳು ಏರ್ಪಟ್ಟರೆ ಅವುಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದೂ, ವಿರುದ್ಧಾನುಷ್ಠಾನವಾಗುತ್ತದೆ. [ಇದು ಪೂರ್ವಪಕ್ಷಿಗೂ ಸಮ್ಮತವಲ್ಲದದು) ಇವರುಗಳು ಭ್ರಮದಿಂದಲೂ ವಿಪ್ರಲಂಭ ಬುದ್ಧಿಯಿಂದಲೂ ಮಾಡುತ್ತಾರೆಂದರೆ, **ಯಥಾಪ್ರಮಾಣಮ್** ಇತ್ಯಾದಿ–ಪ್ರಮಾಣವನ್ನು ಅನುಸರಿಸಿ ಪ್ರಪತ್ತಿ ಸಂಪ್ರದಾಯ ಪ್ರವರ್ತಕರಾಗಿಯೂ ಪರಮ ಕಾರುಣಿಕರಾಗಿಯೂ ಇರುವವರಿಗೆ ಭ್ರಮ ವಿಪ್ರಲಂಭ ಸಂಭಾವನೆಯಿಲ್ಲ. ಸಂಪ್ರದಾಯ ಪ್ರವರ್ತಕರಾದ್ದರಿಂದ ಭ್ರಮವಿಲ್ಲ. ಪರಮಕಾರುಣಿಕರಾದ್ದರಿಂದ ವಿಪ್ರಲಂಭ–ವಂಚನಾಬುದ್ಧಿಯಿಲ್ಲವೆಂದು ತಾತ್ಪರ್ಯ. **ಪ್ರಪತ್ತ್ಯನುಷ್ಠಾನಕಾಲತ್ತಿಲ್** ಇತ್ಯಾದಿ–ಪ್ರಪತ್ತ್ಯನುಷ್ಠಾನಕಾಲದಲ್ಲಿ - ಸರ್ವಧರ್ಮಗಳನ್ನೂ ಸ್ವರೂಪತಃ ಬಿಡುವುದು ಪ್ರಪ

ಅಪ್ಪೋದು ಸಂಭಾವಿತಮಲ್ಲಾದವತ್ತಿನುಡೈಯ ಸ್ವರೂಪತ್ಯಾಗಮ್ ವಿಧಿಕ್ಕವೇಣ್ಡಾ. ಸಂಭಾವಿತಮಾನವತ್ತಿನುಡೈಯ ಸ್ವರೂಪತ್ಯಾಗಮ್ ವಿಧೇಯಮಾಹಿಲ್ ಅಪ್ಪೋದುಂಡಾನ ಭಗವತ್ ಕ್ಷೇತ್ರವಾಸ ಶಿಖಾಯಜ್ಞೋಪವೀತೋರ್ಧ್ವಪುಂಡ್ರಧಾರಣಾದಿಹಳೈ ತ್ತವಿರನ್ದುಕೊಂಡು ಪ್ರಪತ್ತಿಪಣ್ಣ ಪ್ರಸಂಗಿಕ್ಕುಮ್.

ತಸ್ಮಾತ್ತ್ಯಾಗವಿಧ್ಯರ್ಥಮುಪದಿಶನ್ ಉಪಸಂಹರತಿ.

ಆಹೈಯಾಲ್, ಉಪಾಸನತ್ತಿಲ್ ವರುಮ್ ಕರ್ಮಾದ್ಯಙ್ಗಂಗಳಾಲೇ ನಿರಪೇಕ್ಷೈಯಾಯಿರುಕ್ಕಿರ ಪ್ರಪತ್ತಿಕ್ಕು ಅಂಗಮಾಹವೊರು ಧರ್ಮಙ್ಗಳೈಯುಮಪ್ಪತ್ತಸೇಣ್ಡಾವೆನ್ಗೈಯೇ ತ್ಯಾಗವಿಧಿ ಪಕ್ಷತ್ತುಕ್ಕು ಉಚಿತಮ್. ಇನ್ದತ್ಯಾಗ ವಿಧಿಯಾನಪಕ್ಷಮ್ ತನ್ನಿಲುಮ್ ಉಪಾಯಾಂತರ ಸಾಮರ್ಥ್ಯಮಿಲ್ಲಾದಾರ್ಕ್ಕುಮ್ ಅದುಣ್ಡಾಹಿಲುಮ್ ವಿಳಂಬಕ್ಷಮರಲ್ಲಾದಾರ್ಕ್ಕುಮ್ ಇಪ್ಪ್ರಪತ್ತಿಯಿಲ್ ಅಧಿಕಾರಮ್. ಇಪ್ಪಡಿಯಾನಾಲೊರು ಪ್ರಮಾಣಙ್ಗಳುಕ್ಕುಮ್ ವಿರೋಧಮಿಲ್ಲೈ.

ಪೂರ್ವಾಚಾರ್ಯರ್ಹಳುಮ್ ಇವ್ವಿಡತ್ತಿಲ್ ಸರ್ವಧರ್ಮ ಸ್ವರೂಪತ್ಯಾಗಮ್ ಪ್ರಪತ್ತ್ಯಙ್ಗಮೆನ್ರುಮ್,

---

ತ್ತಿಗೆ ಅಂಗವಾಗಿ ವಿರೋಧವಲ್ಲ. ಎಂದರೆ ಅಪ್ಪೋದು ಸಂಭಾವಿತ ಮಲ್ಲಾದ ಇತ್ಯಾದಿ–ಆಗ ಸಂಭವವಿಲ್ಲದ ಧರ್ಮಗಳ ಸ್ವರೂಪ ತ್ಯಾಗವನ್ನು ವಿಧಿಸಬೇಕಿಲ್ಲ. ಆಗ ಸಂಭಾವಿತಗಳಾದ ಧರ್ಮಗಳ ಸ್ವರೂಪ ತ್ಯಾಗವು ವಿಧಿಸಲ್ಪಡುತ್ತದೆಯೆಂದರೆ, ಅಪ್ಪೋದುಂಡಾನ–ಆಗ ಏರ್ಪಟ್ಟಿರುವ ಭಗವತ್ಕ್ಷೇತ್ರವಾಸ, ಶಿಖೆ ಯಜ್ಞೋಪವೀತ ಊರ್ಧ್ವಪುಂಡ್ರಧಾರಣಾದಿಗಳನ್ನು **ತವಿರ್‌ನ್ದುಕೊಂಡು** – ತೆಗೆದುಹಾಕಿ, **ಪ್ರಪತ್ತಿ ಪಣ್ಣ ಪ್ರಸಿಂಗಿಕ್ಕುಮ್**–ಪ್ರಪತ್ತಿಯನ್ನು ಮಾಡಬೇಕೆಂದು ಏರ್ಪಡುತ್ತದೆ. ಇದು ಅತ್ಯಂತಾ ನಿಷ್ಟಕರವೆಂದು ತಾತ್ಪರ್ಯ.

**ತ್ಯಾಗವಿಧಿ ಪಕ್ಷಕ್ಕೆ ಸಮೀಚೀನವಾದ ಅರ್ಥ.**

ಹಾಗಾದರೆ, ತ್ಯಾಗವಿಧಿ ಪಕ್ಷಕ್ಕೆ ಹೇಗೆ ನಿರ್ವಾಹವೆಂದರೆ **ಆಹೈಯಾಲ್ ಉಪಾಸನತ್ತಿಲ್ ವರುಮ್**–ಇತ್ಯಾದಿ–ಅನುಗ್ರಹಿಸುತ್ತಾರೆ. ಧರ್ಮಸ್ವರೂಪ ತ್ಯಾಗವು ಅನಿಷ್ಟಕರವಾದ್ದರಿಂದ, ಉಪಾಸನದಲ್ಲಿ ಏರ್ಪಡುವ ಕರ್ಮಯೋಗ ಜ್ಞಾನಯೋಗಗಳಿಂದ, ನಿರಪೇಕ್ಷದಾಗಿರುವ ಅಂದರೆ ಅವುಗಳ ಅಪೇಕ್ಷೆಯಿಲ್ಲದಿರುವ ಪ್ರಪತ್ತಿಗೆ ಅಂಗವಾಗಿ ಯಾವ ಧರ್ಮಗಳನ್ನೂ ಅವಲಂಬಿಸಬೇಕಿಲ್ಲವೆಂಬ ಸರ್ವಧರ್ಮ ನೈರಪೇಕ್ಷ್ಯವೇ, ತ್ಯಾಗ ವಿಧಿ ಪಕ್ಷಕ್ಕೆ ಸ್ವರಸವಾದದ್ದು. **ಇಂದ ತ್ಯಾಗವಿಧಿಯಾನ ಪಕ್ಷಂತನ್ನಿಲುಮ್** ಇತ್ಯಾದಿ–ಈ ಸರ್ವಧರ್ಮಸ್ವರೂಪ ತ್ಯಾಗವನ್ನು ವಿಧಿಸುವ ಪಕ್ಷದಲ್ಲಿಯೂ, ಉಪಾಯಾಂತರದಲ್ಲಿ ಸಾಮರ್ಥ್ಯವಿಲ್ಲದವರಿಗೂ, ಅದು ಇದ್ದರೂ ವಿಳಂಬವನ್ನು ಸಹಿಸಲಾರದವರಿಗೂ ಆಕಿಂಚನ್ಯಾಧಿಕಾರವು ಏರ್ಪಡುತ್ತದೆಯೆಂದು ತಾತ್ಪರ್ಯ. **ಇಪ್ಪಡಿಯಾನಾಲ್** ಇತ್ಯಾದಿ–ಹೀಗೆ ಹೇಳಿದರೆ ಯಾವ ಪ್ರಮಾಣಗಳಿಗೂ ವಿರೋಧವಿಲ್ಲ.

**ಪೂರ್ವಾಚಾರ್ಯರುಗಳಲ್ಲಿ ಏರ್ಪಟ್ಟ ವಿವಾದ–ಆ ವಿವಾದಕ್ಕೆ ಸರ್ವಧರ್ಮ ಸ್ವರೂಪ ತ್ಯಾಗವು ವಿಷಯವಲ್ಲವೆಂಬುದರ ವಿವರ.**

ಶ್ರೀ ಭಾಷ್ಯಕಾರರ ಕಾಲದಲ್ಲಿ ಅವರಿದುರಿಗೇನೇ ಈ ಶ್ಲೋಕ ವಿಷಯವಾಗಿ 'ಸರ್ವಧರ್ಮಸ್ವರೂಪ ತ್ಯಾಗವು' ಪ್ರಪತ್ತಿಗೆ ಅಂಗವಾಗಿ ಈ ಚರಮ ಶ್ಲೋಕದಲ್ಲಿ ವಿಧಿಸಿದೆ ಎಂದೂ ಹಾಗಲ್ಲವೆಂದೂ ವಿವಾದವು ಏರ್ಪಟ್ಟಿತೆಂದೂ ಎರಡು ಪಕ್ಷಗಳೂ ಸರಿಯೆಂದು ಭಾಷ್ಯಕಾರರು ಮೌನವಾಗಿದ್ದರೆಂದೂ ಹೇಳುವ ಐತಿಹ್ಯವು ಕಲ್ಪಿತವೆಂದು ಅಭಿಪ್ರಾಯ ಪಟ್ಟು ಆಚಾರ್ಯರು **ಪೂರ್ವಾಚಾರ್ಯರ್ಹಳುಮ್** ಎಂದಾರಂಭಿಸಿ ವಿವಾದ ವಿಷಯವೇನೆಂಬುದನ್ನು

ವಿವಾದಂಪಣ್ಣಿನಾರ್‌ಹಳೆನ್ರು ಪ್ರಪತ್ತಿಕ್ಕು ಅಧಿಕಾರವಾನ ಆಕಿಂಚನ್ಯಮುಮ್, ಪ್ರಪತ್ತಿಯಿನುಡೈಯ ನೈರಪೇಕ್ಷ್ಯಮುಮ್, ಇಚ್ಚರಮಶ್ಲೋಕತ್ತಿಲ್ ಎನ್ನ ಪದಙ್ಗಳಿಲೇ ವಿವಕ್ಷಿಕ್ಕೈಯುಚಿತಮೆನ್ರು ವಿಮರ್ಶಿತ್ತಾರ್ ಹಳತ್ತನ್ನೈ

ಅಧಿಕಾರಂ ಪುರಸ್ಕೃತ್ಯೋಪಾಯಸ್ಯ ನಿರಪೇಕ್ಷತಾಮ್ ।
ಏಕಶಬ್ದೇನ ವಕ್ತೀತಿ ಕೇಚಿದ್ವಾಕ್ಯವಿದೋ ವಿದುಃ ॥110॥

ನೈರಪೇಕ್ಷ್ಯಂ ಪುರಸ್ಕೃತ್ಯ ವಿಹಿತಸ್ಯ ಲಘೀಯಸಃ ।
ಉಪಾಯಸ್ಯಾಧಿಕಾರಂತು ಶೋಕದ್ಯೋತ್ಯಂ ವಿದುಃ ಪರೇ ॥111॥

ಇತ್ಥಮರ್ಥೇ ವಿಶೇಷೇಽಪಿ ಯೋಜನಾ ಭೇದಮಾತ್ರತಃ ।
ಪ್ರಾಚಾಂವಿವಾದ ಸ್ಸಂವೃತ್ತೋ ಭಾಷ್ಯಕಾರೈ ರವಾರಿತಃ ॥112॥

---

ತಿಳಿಸಿ ಸಮಾಧಾನವನ್ನು ಹೇಳುತ್ತಾರೆ. ಅದಾಗಿ ಪೂರ್ವಾಚಾರ್ಯರುಗಳು ಈ ಚರಮ ಶ್ಲೋಕದಲ್ಲಿ ಸರ್ವಧರ್ಮ ಸ್ವರೂಪ ತ್ಯಾಗವು ಪ್ರಪತ್ತಿಗೆ ಅಂಗವೇ, ಅಲ್ಲವೇ ಎಂದು ವಾದ ಮಾಡಲಿಲ್ಲ. ಮತ್ತೇನೆಂದರೆ ಪ್ರಪತ್ತಿಗೆ ಅಧಿಕಾರ ವಾದ ಆಕಿಂಚನ್ಯವೂ ಪ್ರಪತ್ತಿಯ ನೈರಪೇಕ್ಷ್ಯವೂ ಈ ಚರಮಶ್ಲೋಕದಲ್ಲಿ ಯಾವ ಪದಗಳಲ್ಲಿ ವಿವಕ್ಷಿಸುವುದು ಉಚಿತವೆಂದು ವಿಮರ್ಶೆಮಾಡಿದರಷ್ಟೇ. ಇದನ್ನು ಕಾರಿಕಾ ರೂಪದಲ್ಲಿ ವಿವರಿಸುತ್ತಾರೆ.

**ಅಧಿಕಾರಂ ಪುರಸ್ಕೃತ್ಯ** – ಇತ್ಯಾದಿ "ಸರ್ವಧರ್ಮಾನ್ ಪರಿತ್ಯಜ್ಯ" ಎಂಬಲ್ಲಿ 'ಸ್ಥಿತಸ್ತ್ವಂ' ಎಂಬ ಪದ ವನ್ನು ಅಧ್ಯಾಹಾರ ಮಾಡಿಕೊಂಡು ಅದರಿಂದ ಪ್ರಾಪ್ತವಾದ ಆಕಿಂಚನ್ಯವನ್ನು ಮುಂದಿಟ್ಟುಕೊಂಡು ಉಪಾಯದ ನೈರಪೇಕ್ಷ್ಯವನ್ನು "ಏಕ"ಶಬ್ದವು ತಿಳಿಸುತ್ತದೆಯೆಂದು ವಾಕ್ಯಸ್ವಾರಸ್ಯವನ್ನು ತಿಳಿದ ಕೆಲವರು ಹೇಳಿದರು. ಮತ್ತೆ ಕೆಲವರು **ನೈರಪೇಕ್ಷ್ಯಂಪುರಸ್ಕೃತ್ಯ** – ಪ್ರಪತ್ತಿಗೆ ಬೇರೆ ಯಾವ ಧರ್ಮಾನುಷ್ಠಾನವೂ ಬೇಕಿಲ್ಲವೆಂಬನಿರಪೇಕ್ಷತೆ ಯನ್ನು ಮುಂದಿಟ್ಟುಕೊಂಡು, ವಿಹಿತವಾದ ಲಘೂಪಾಯವಾದ ಪ್ರಪತ್ತಿಗೆ ಅಧಿಕಾರವಾದ ಆಕಿಂಚನ್ಯವು, "ಮಾಶುಚಃ" ಎಂಬಲ್ಲಿ ನಿಷೇಧಿಸಲ್ಪಟ್ಟ ಶೋಕದಿಂದ ತಿಳಿಸಲ್ಪಡುತ್ತದೆ ಎಂದು ಹೇಳಿದರು.

ಹೀಗೆ ಅಧಿಕಾರವೂ, ನೈರಪೇಕ್ಷ್ಯವೂ ಚರಮಶ್ಲೋಕದಲ್ಲಿ ಹೇಳಲ್ಪಡುತ್ತದೆ ಎಂಬ ಅಂಶದಲ್ಲಿ ವಿವಾದವಿಲ್ಲ ದಿದ್ದರೂ, ಕೆಲವರು "ಸ್ವರ್ಗಕಾಮೋಯಜೇತ" 'ವೃಷ್ಟಿಕಾಮೋಯಜೇತ' ಎಂದು ಹೇಳುವಂತೆ ಅಧಿಕಾರವನ್ನು ಮುಂದಿಟ್ಟುಕೊಂಡು ಉಪಾಯವನ್ನು ವಿಧಿಸುವುದು ಸ್ವರಸವೆಂದೂ, ಮತ್ತೆ ಕೆಲವರು "ಮನ್ಮನಾಭವ" ಎಂಬ ಶ್ಲೋಕದಲ್ಲಿ ಹೇಳಿದ ಭಕ್ತಿಯೋಗದ ದುಷ್ಕರತ್ವವನ್ನು ನೆನೆದು ಶೋಕಿಸಿದ ಅರ್ಜುನನಿಗೆ, ಆರಂಭದಲ್ಲೇ, ತಾನು ವಿಧಿಸುವ ಪ್ರಪತ್ತ್ಯುಪಾಯದ ಲಘುತ್ವವನ್ನು (ಸುಲಭವಾಗಿರುವುದೆಂಬುದನ್ನು) ಹೇಳುವುದು ಅವಶ್ಯಕವೆಂದೂ ನೈರಪೇಕ್ಷ್ಯವನ್ನು ಮೊದಲು ಹೇಳುವುದು ಉಚಿತವೆಂದೂ 'ಸರ್ವಧರ್ಮಾನ್ ಪರಿತ್ಯಜ್ಯ' ಎಂದು ಪ್ರಪತ್ತಿಗೆ ಇತರ ಧರ್ಮಗಳ ಅಪೇಕ್ಷೆಯಿಲ್ಲವೆಂದೂ ಕೃಷ್ಣಪರಮಾತ್ಮನು ಹೇಳಿದನೆಂದು, ಅಭಿಪ್ರಾಯಪಟ್ಟರು. ಹೀಗೆ ಯೋಜನಾ ಭೇದದಲ್ಲಿ ವಿವಾದವು ಇದ್ದರೂ ಯಾವ ಕಕ್ಷಿಯನ್ನೂ ಭಾಷ್ಯಕಾರರು ನಿಷೇಧಿಸಲಿಲ್ಲ. ವಸ್ತುಸ್ಥಿತಿಯು ಹೀಗಿರು ವಾಗ ನಡೆದ ವೃತ್ತಾಂತವನ್ನು ಸರಿಯಾಗಿ ತಿಳಿಯದ ಪ್ರತಿವಾದಿಗಳು, ಸರ್ವಧರ್ಮ ಸ್ವರೂಪತ್ಯಾಗವು ಪ್ರಪತ್ತಿಗೆ ಅಂಗವಾಗಿ ವಿಹಿತವೆಂದೂ, ಹಾಗಲ್ಲವೆಂದೂ ವಿವಾದವು ನಡೆದುದಾಗಿಯೂ ಈ ಎರಡು ಕಕ್ಷಿಗಳನ್ನೂ ಭಾಷ್ಯಕಾ ರರು ನಿಷೇದಿಸಲಿಲ್ಲವಾದ್ದರಿಂದ, ಸರ್ವಧರ್ಮ ಸ್ವರೂಪ ತ್ಯಾಗ ವಿಧಿಪಕ್ಷವು ಭಾಷ್ಯಕಾರ ಸಮ್ಮತವೆಂದು ಹೇಳುವುದು

**ಅಜ್ಞಾತ ಪೂರ್ವವೃತ್ತಾಂತೈ ರ್ಯತ್ತತ್ಸಾರೋಪಿತಂ ಪರೈಃ ।**
**ತತ್ತು ಶ್ರೀ ವಿಷ್ಣುಚಿತ್ತಾದ್ಯೈರ್ನಿರ್ಮೂಲ ಮಿತಿ ದರ್ಶಿತಮ್ ॥113॥**

**ಆನಾಲ್ 1) "ಇದಂ ಶರಣ ಮಜ್ಞಾನಾ ಮಿದ ಮೇವ ವಿಜಾನತಾಮ್ ।**
**ಇದಂ ತಿತೀರ್ಷತಾಂ ಪಾರಮಿದ ಮಾನಂತ್ಯ ಮಿಚ್ಛತಾಮ್ ॥" ಎನ್ರುಮ್**
**2) "ಅವಿದ್ಯಾತೋ ದೇವೇ ಪರಿಬೃಢತಯಾ ವಾ ವಿದಿತಯಾ ಸ್ವಭಕ್ತೇ**
**ರ್ಭೂಮ್ನಾ ವಾ ಜಗತಿ ಗತಿ ಮನ್ಯಾ ಮವಿದುಷಾಮ್ ॥ ಎನ್ರುಮ್ ಶೊಲ್ಲುಹಿರ ಅಧಿಕಾರ**

---

ಸತ್ಯವಚನಕ್ಕೆ ಬಹುದೂರವಾದದ್ದು, ಆರೋಪಿತವು ಎಂದರ್ಥ. **ಅಜ್ಞಾತಪೂರ್ವವೃತ್ತಾಂತೈಃ** – ಇತ್ಯಾದಿ ಹೀಗೆ ಹಿಂದೆ ನಡೆದ ವೃತ್ತಾಂತವನ್ನು ತಿಳಿಯದವರು ಆಲೋಚನೆ ಮಾಡಿ ಹೇಳಿದ ಅಪಸಿದ್ಧಾಂತವನ್ನು, ಶ್ರೀವಿಷ್ಣುಚಿತ್ತರೇ ಮೊದಲಾದವರು ನಿರ್ಮೂಲವೆಂದು ತಿಳಿಸಿರುತ್ತಾರೆ.

"ಯತ್ಸ್ವ ವರ್ಣಾಶ್ರಮಾಧೀನಂ ಕರ್ಮ ನ ತ್ಯಜ್ಯಮೇವ ತತ್ ।
ಯಾವದ್ದೇಹಂ ಪ್ರಪನ್ನೈಶ್ಚತ್ಯಾಗ ಹೇತೋರದರ್ಶನಾತ್ ॥
ಶ್ರುತಿಸ್ಮೃತ್ಯಾದಿ ವಿಹಿತ ಮನುಷ್ಠಾನಂತು ನೈತ್ಯಕಮ್ ॥"

ಇತ್ಯಾದಿ ನಿಬಂಧನಪೂರ್ವಕ ಪ್ರದರ್ಶಿತವೆಂದು ತಾತ್ಪರ್ಯ. ಅಂದರೆ ತನ್ನ ವರ್ಣಾಶ್ರಮಕ್ಕೆ ಅನುಗುಣವಾದ ಕರ್ಮ ವನ್ನು ಯಾವಾಗಲೂ ಪ್ರಪನ್ನನು ಬಿಡಬಾರದು. ಹಾಗೆ ಬಿಡುವಂತೆ ಯಾವ ವಚನವೂ ಇಲ್ಲ. ಶ್ರುತಿಸ್ಮೃತ್ಯಾದಿ ವಿಹಿತವಾದ ನಿತ್ಯನೈಮಿತ್ತಿಕ ಕರ್ಮಗಳು ಅವಶ್ಯಾನುಷ್ಠೇಯಗಳು.

**"ಇದಂಶರಣಮಜ್ಞಾನಾಂ", "ಅವಿದ್ಯಾತೋ ದೇವೇ", ಎಂಬ ಶ್ಲೋಕಗಳಿಗೆ ಋಜುವಾದ ಅರ್ಥ.**

ಜ್ಞಾನ ವಿಶ್ವಾಸಪೂರ್ಣರು ಪ್ರಪತ್ತಿಗೆ ಅಧಿಕಾರಿಗಳು, ಎಂದು ಹೇಳಿ ಮಂದ ಜ್ಞಾನ ವಿಶ್ವಾಸಶಾಲಿಗಳು ಭಕ್ತಿಗೆ ಅಧಿಕಾರಿಗಳೆಂಬುದನ್ನು ದೂಷಿಸಿದರು. "ಲಕ್ಷ್ಮೀತಂತ್ರದಲ್ಲಿ ಇದಂ ಶರಣಮಜ್ಞಾನಾಂ ಇದಮೇವವಿಜಾನತಾಂ," ಎಂದು ಅತ್ಯಂತ ಅಜ್ಞರಿಗೂ, ಅತ್ಯಂತ ಜ್ಞಾನಿಗಳಿಗೂ, ಪ್ರಪತ್ತಿಯು ಉಪಾಯವೆಂದು ಹೇಳಿರುವುದರಿಂದ, ಇವೆರಡು ರೀತಿಯೂ ಇಲ್ಲದೆ, ಮಂದ ಜ್ಞಾನವನ್ನುಳ್ಳವರಿಗೇನೆ ಭಕ್ತಿಯಲ್ಲಿ ಅಧಿಕಾರವೆಂದು ಏರ್ಪಡುತ್ತದೆಯಲ್ಲವೇ. ಅದನ್ನು ಹಿಂಬಾಲಿಸಿಯೇ ಭಟ್ಟರು "ಅವಿದ್ಯಾತೋ ದೇವೇ" ಎಂಬ ಮುಕ್ತಕಶ್ಲೋಕದಲ್ಲಿ ಅತ್ಯಂತ ಅಜ್ಞಾನಿಗಳಿಗೂ, ಅತ್ಯಂತ ಜ್ಞಾನಿಗಳಿಗೂ ಭಗವಂತನು ಉಪಾಯವಾಗುತ್ತಾನೆಂದು ಹೇಳುವುದರಿಂದ, ಮಧ್ಯಸ್ಥರಾದ ಮಂದ ಜ್ಞಾನವುಳ್ಳವರಿಗೆ ಭಕ್ತಿಯು ಉಪಾಯವೆಂದು ಏರ್ಪಡುತ್ತದೆಂದು ಶಂಕಿಸಿ, ಆಶ್ಲೋಕಗಳಿಗೆ ಭಾವವನ್ನು ತಿಳಿಸಲು, **'ಆನಾಲ್ ಇದಂ ಶರಣಮಜ್ಞಾನಾಂ'** ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ. ಆಗಾಗಿ (1) ಇದಂ ಶರಣಮಜ್ಞಾನಾಂ ಇತ್ಯಾದಿಯಾಗಿಯೂ, (2) ಅವಿದ್ಯಾತೋದೇವೇ ಇತ್ಯಾದಿಯಾಗಿಯೂ

---

1) ಇದಂ ಶರಣಮಜ್ಞಾನಾಂ ಇತ್ಯಾದಿ-ಭಕ್ತಿಯೋಗಾದಿಗಳಲ್ಲಿ ತಿಳುವಾದ ಜ್ಞಾನವೋ, ಪ್ರಪತ್ತಿಯಲ್ಲಿಯೂ ಸೂಕ್ಷ್ಮವಾದ ವಿಶೇಷಾಂಶಗಳಲ್ಲಿ ಜ್ಞಾನವೋ ಇಲ್ಲದವರಿಗೂ, ಈ ಪ್ರಪತ್ತಿಯೇ ತಕ್ಕ ಉಪಾಯ. ಭಕ್ತಿಯೋಗಾದಿಗಳಲ್ಲಿ ತಿಳಿವಾದ ಜ್ಞಾನವಿದ್ದು ಕಾಲವಿಳಂಬಾಕ್ಷಮರಾಗಿ ಶೀಘ್ರವಾಗಿ ಸಂಸಾರವನ್ನು ದಾಟಬೇಕೆನ್ನುವವರಿಗೂ, ಪ್ರಪತ್ತಿಯಲ್ಲಿಯೂ ತಿಳುವಾದ ಜ್ಞಾನವುಳ್ಳವರಾಗಿ ಶ್ರೀ ವೈಕುಂಠವನ್ನು ಪಡೆದು ಪರಿಪೂರ್ಣ ಭಗವದನುಭವವನ್ನು ಪಡೆಯಬೇಕೆಂಬ ಆಸೆಯಿಂದ ಕೂಡಿದವರಿಗೂ ಈ ಪ್ರಪತ್ತಿಯೇ ಉಪಾಯ,

ಲಕ್ಷ್ಮೀತಂತ್ರ (17–100)

2) ಅವಿದ್ಯಾತೋದೇವೇ ಪರಿಬೃಢತಯಾ ವಾವಿದಿತಯಾ
ಸ್ವಭಕ್ತೇರ್ಭೂಮ್ನಾವಾ ಜಗತಿ ಗತಿಮನ್ಯಾಮವಿದುಷಾಮ್ ।
ಗತಿರ್ಗಮ್ಯಶ್ಚಾಸೌ ಹರಿರಿತಿ ಜಿತಾಂತಾಹ್ವಯ ಮನೋಃ
ರಹಸ್ಯಂ ವ್ಯಾಜಹ್ರೇ ಸ ಖಲು ಭಗವಾನ್ ಶೌನಕಮುನಿಃ ॥

ಪು. ತಿ. ಸೋ.

**ಭೇದ ಮಿರುಕ್ಕಪ್ಪಡಿಯೆನ್ನಿಲ್ ? ಇವ್ವಿಡತ್ತಿಲ್ ಚೊನ್ನ ಅಜ್ಞಾನಮ್ ಪಶ್ವಾದಿಹಳೈಪ್ಪೋಲೇ** ಶಾಸ್ತ್ರೀಯ ಮೊನ್ರು ಮರಿಯಾದೊಳ್ಳೈಯನ್ರು : **ಮತ್ತೇದೆನ್ನಿಲ್ ?** ಉಪಾಸನಾದಿಹಳಿಲ್ ತೆಳಿವಿಲ್ಲಾ ಮೈಯಾದಲ್, ಪ್ರಪತ್ತಿ ತನ್ನಿಲುಮ್ ಸೂಕ್ಷ್ಮ ವಿಶೇಷಙ್ಗಳ್ ಅರಿಯಾಮೈಯಾದಲಾಮತ್ತನ್ನೈ, ಇವ ತ್ತಿಲ್ "ವಿಜಾನತಾಮ್" ಎನ್ರುಮ್ **"ದೇವೇ ಪರಿಬೃಢತಯಾ ವಾ ವಿದಿತಯಾ"** ಎನ್ನುಮ್ ಶೊನ್ನ ಜ್ಞಾನವಿಶೇಷಮುಮ್ ಉಪಾಸನಾದಿಹಳಿಲ್ ತೆಳಿವಾದಲ್ ಪ್ರಪತ್ತಿಕ್ಕು ಉಪಯುಕ್ತಮಾನ ಶರಣ್ಯಗುಣ ವಿಷಯತ್ತಿಲ್ ತೆಳಿವಾದಲಾ ಮಿತ್ತನ್ನೈ **ಅಲ್ಲದು** ಇದುಕ್ಕು ಅನಪೇಕ್ಷಿತಮಾನ ಸರ್ವವಿಷಯಜ್ಞಾನಮನ್ರು. ಪರಿಬೃಢತ್ವರೂಪ ಶರಣ್ಯಗುಣವಿಶೇಷ ಜ್ಞಾನಮಿರೇ ಇಙ್ಗು ಕೊಳ್ಳಪ್ಪಡುಹಿರದು. ಇವ್ವುಪಯುಕ್ತಜ್ಞಾನ ಮುಂಡಾನಾಲುಮ್ ಉಪಾಯಾಂತರತ್ತಿಲ್ ಶಕ್ತಿಯಿಲ್ಲಾದಪೋದು ಅಕಿಂಚನನಾಯ್ ಪ್ರಪತ್ತಿಕ್ಕು ಅಧಿ ಕಾರಿಯಾಮ್.

ಶರಣ್ಯೋಪಯುಕ್ತ ಗುಣಜ್ಞಾನಾತ್ ಸ್ವಪ್ರವೃತ್ತಿ ನಿವೃತ್ತಿರೇವ ಉಚಿತೇತಿವಾದಸ್ಯ ಖಂಡನಮ್.

ಶಕ್ತಿಯುಂಡೇಯಾಹಿಲುಮ್ (೧) "ಶರೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರಬಲಾರ್ದನ ।
ಮಾಂ ನಯೇದ್ಯದಿ ಕಾಕುತ್ಥಸ್ತತ್ತಸ್ಯ ಸದೃಶಂ ಭವೇತ್ ॥"

---

ಹೇಳಿರುವುದಕ್ಕೆ ಏನು ಅರ್ಥವೆಂದರೆ :- ಇಲ್ಲಿ ಹೇಳಿರುವ ಅಜ್ಞಾನಕ್ಕೆ ಪಶ್ವಾದಿಗಳ ಹಾಗೆ ಅತ್ಯಂತಾಜ್ಞಾನ ವನ್ನುಳ್ಳವರೆಂದು ಅರ್ಥವನ್ನು ಮಾಡಿದರೆ ಶಾಸ್ತ್ರವಶ್ಯನಾಗಿ ಪ್ರಪತ್ತ್ಯನುಷ್ಠಾನವನ್ನು ಮಾಡಲಾಗುವುದಿಲ್ಲವಾದ್ದ ರಿಂದ ಇದು ಅಜ್ಞರಿಗೂ ಉಪಾಯವೆಂದು ಹೇಳಿರುವುದು ಸಮರ್ಥಕವಾಗುವುದಿಲ್ಲ. ಆದ್ದರಿಂದ "ಅನುದರಾಕನ್ಯಾ" ಇತ್ಯಾದಿ ವ್ಯವಹಾರಗಳ ಹಾಗೆ "ನಞ್"ಗೆ ಅಲ್ಪಾರ್ಥಕತ್ವವನ್ನು ಸ್ವೀಕರಿಸಿ, **'ಇವ್ವಿಡತ್ತಿಲ್ ಶೊನ್ನ ವಜ್ಞಾನಂ'** ಎಂದಾರಂಭಿಸಿ ವಿವರಿಸುತ್ತಾರೆ. ಇಲ್ಲಿ ಹೇಳಿರುವ ಅಜ್ಞಾನವು ಪಶ್ವಾದಿಗಳ ಹಾಗೆ ಶಾಸ್ತ್ರೀಯವಾದ ಒಂದನ್ನೂ ತಿಳಿಯದೆ ಇರುವುದೆಂದಲ್ಲ. ಬೇರೆ ಏನೆಂದರೆ **ಉಪಾಸನಾದಿಹಳಿಲ್** ಇತ್ಯಾದಿ ಉಪಾಸನಾದಿಗಳಲ್ಲಿ ತಿಳಿವು ಇಲ್ಲದೆ ಇರುವುದಾಗಲಿ, ಪ್ರಪತ್ತಿಯಲ್ಲಿಯೂ ಸೂಕ್ಷ್ಮ ವಿಶೇಷಗಳನ್ನು ತಿಳಿಯದೆ ಇರುವುದಾಗಲಿ ಅರ್ಥವಷ್ಟೇ. **ಇವಟ್ರಿಲ್ ವಿಜಾನತಾಂ** ಎಂದೂ, **"ದೇವೇಪರಿಬೃಢತಯಾ ವಾ ವಿದಿತಯಾ"** ಎಂದೂ ಹೇಳಿದ ಜ್ಞಾನ ವಿಶೇಷವು ಉಪಾಸನಾದಿಗಳಲ್ಲಿ ತಿಳುವಾದ ಜ್ಞಾನವಾಗಲಿ, ಪ್ರಪತ್ತಿಗೆ ಉಪಯುಕ್ತವಾದ ಶರಣ್ಯನ ಗುಣಾದಿ ವಿಷಯದಲ್ಲಿ ತಿಳುವಾದ ಜ್ಞಾನವಾಗಲಿ ಇಷ್ಟೇ ವಿವಕ್ಷಿತ. **ಅಲ್ಲದು** ಇತ್ಯಾದಿ ಹೀಗಲ್ಲದೆ ಈ ಉಪಾಯಕ್ಕೆ ಅನ ಪೇಕ್ಷಿತವಾದ ಸರ್ವವಿಷಯ ಜ್ಞಾನವಲ್ಲ. **ಪರಿಬೃಢತ್ವರೂಪ** – ಇತ್ಯಾದಿ ಪ್ರಪತ್ತಿಗೆ ಅಪೇಕ್ಷಿತವಾದ ಸ್ವಾಮಿತ್ವ, ಸರ್ವಜ್ಞತ್ವ. ಸರ್ವಶಕ್ತಿತ್ವ ವಾತ್ಸಲ್ಯತ್ವ, ಸೌಶೀಲತ್ವ, ಸೌಲಭ್ಯತ್ವಾದಿ ಶರಣ್ಯಗುಣ ವಿಶೇಷಗಳ ಜ್ಞಾನವೇ ಇಲ್ಲಿ ವಿವಕ್ಷಿತ **ಇವ್ವುಪಯುಕ್ತ ಜ್ಞಾನ ಮುಂಡಾನಾಲುಮ್** – ಇತ್ಯಾದಿ ಪ್ರಪತ್ತಿಗೆ ಉಪಯುಕ್ತಗಳಾದ ಈ ಗುಣಾದಿ ವಿಷಯಕ ಜ್ಞಾನವು ಏರ್ಪಟ್ಟರೂ, ಉಪಾಯಾಂತರಗಳಲ್ಲಿ ಶಕ್ತಿಯಿಲ್ಲದೆ ಇರುವಾಗ ಅಕಿಂಚನನಾಗಿ ಪ್ರಪ ತ್ತಿಗೆ ಅಧಿಕಾರಿಯಾಗುತ್ತಾನೆ. **ಶಕ್ತಿಯುಂಡೇ ಯಾಹಿಲುಮ್** – ಉಪಾಯಾಂತರದಲ್ಲಿ ಶಕ್ತಿಯಿದ್ದರೂ 1) **ಶರೈ ಸ್ತು ಸಂಕುಲಾಂಕೃತ್ವಾ** – ಇತ್ಯಾದಿ ಹೇಳಿರುವಂತೆ ರಕ್ಷಕನನ್ನು **ಕೈಪಾರ್ತ್ತು** – ಎದುರು ನೋಡಿಕೊಂಡು **ತಾನ್ ಕೈವಾಂಗಿಯಿರುಕ್ಕೈಯನ್ರೋ ಉಚಿತಮೆನ್ನಿಲ್** – ತಾನು ಯಾವ ಪ್ರಯತ್ನವನ್ನೂ ಮಾಡದೆ ಇರುವುದಲ್ಲವೇ

---

ಪರಾಶರಭಟ್ಟರ ಮುಕ್ತಕಶ್ಲೋಕ - ಭಕ್ತಿಯೋಗಾದಿಗಳಲ್ಲಿ ತಿಳುವಾದ ಜ್ಞಾನವಿಲ್ಲದೆಯೂ ಪ್ರಪತ್ತಿಯಲ್ಲಿ ಸೂಕ್ಷ್ಮಜ್ಞಾನವಿಲ್ಲದೆಯೂ ಅಥವಾ ಇವೆರಡರಲ್ಲಿಯೂ ಪೂರ್ಣಜ್ಞಾನವುಳ್ಳವರಾಗಿಯೂ ಇದ್ದು ತಮ್ಮ ಪ್ರೀತ್ಯಾಧಿಕ್ಯದಿಂದ ಅತ್ಯಂತ ಶೀಘ್ರದಲ್ಲಿ **ಪರಿಪೂರ್ಣ** ಭಗವದನುಭವವನ್ನು ಪಡಯಲು ಆಸೆಯಿಂದ ಬೇರೆ ಉಪಾಯವನ್ನು ತಿಳಿಯದವರಿಗೆ ಭಗವಂತನೇ ಉಪಾಯ, ಪ್ರಾಪ್ಯನೂ ಅವನೇ ಈ ರೀತಿಯಾಗಿ "ಜಿತಂತೇ" ಎಂದಾರಂಭಿಸುವ ಮಂತ್ರದ ರಹಸ್ಯವನ್ನು ಶೌನಕ ಮುನಿಗಳು ತಿಳಿಸಿದರು.

1) ರಾಮಾಯಣ ಸುಂದರಕಾಂಡ 39-30

ಎನ್ಗಿರಪಡಿಯೇ ರಕ್ಷಕನ್ ಕೈಪಾರ್ತ್ತು ತ್ತಾನ್ ಕೈವಾಙ್ಗಿಯಿರುಕ್ಕೈಯನ್ರೋ ಉಚಿತಮೆನ್ರಿಲ್? ಇದು ಪ್ರಪನ್ನನುಡೈಯ ಉತ್ತರಕೃತ್ಯವಿಶೇಷತ್ತುಕ್ಕು ಉದಾಹರಣಮಾವ್. ಅಲ್ಲಾದಪ್ಪೋದು ಉಪಾಯ ವಿಧಾಯಕ ಶಾಸ್ತ್ರಙ್ಗಳ್ ನಿರರ್ಥಕಙ್ಗಳಾವ್.

**ಉಪಾಯಾನ್ತರತ್ತಿಲ್ ತನಕ್ಕು ಜ್ಞಾನಮುಂಡಾಯ್ ಅದಿಲ್ ಅನುಷ್ಠಾನ ಶಕ್ತಿಯುಂಡಾನಾಲುಮ್ ವಿಳಂಬಕ್ಷಮನನ್ರಿಕ್ಕೇ ಯಿರುಕ್ಕುಮಾಹಿಲ್, ಕಡುಹ ಫಲಂ ತರವಲ್ಲ ಪ್ರಪತ್ತಿಯೇ ನಮಕ್ಕು ಉಚಿತ್ತೈ ಯೆನ್ರಿರುಕ್ಕು ಮವನುಮ್ ಇಪ್ರಪತ್ತಿಕ್ಕು ಅಧಿಕಾರಿಯಾಮ್.ಇತ್ತೈ 'ಇದಂ ತಿತೀರ್ಷತಾಂ ಪಾರಂ ಇತ್ಯಾದಿ ಹಳಿಲೇ ಶೊಲ್ಲುಹಿರದು. ಎಙ್ಗನೇ ಎನ್ನಿಲ್? "ತಿತೀರ್ಷತಾಂ ಪಾರಂ" ಎನ್ರದು ಕಡುಹ ಅನಿಷ್ಟನಿವೃತ್ತಿ ಪಿರಕ್ಕವೇಣು ಮೆನ್ನುಮ್ ತ್ವರೆಯುಡೈಯಾರ್ಕ್ಕು ಎನ್ರಪಡಿ. ಆನಂತ್ಯಮಿಚ್ಛತಾಮ್, ಎನ್ರದು ಸ್ವರೂಪ ಪ್ರಾಪ್ತಪರಿಪೂರ್ಣ ಭಗವದನುಭವತ್ತೈ ಪೆತ್ತಲ್ಲದು ಧರಿಕ್ಕಮಾಟ್ಟಾದಾರ್ಕ್ಕೆನ್ರಪಡಿ. ಇವ್ವೈಇರಣ್ಡೈಯುಮ್ ನಿನೈತ್ತು "ಸ್ವಭಕ್ತೇ ರ್ಭೂರ್ಮವ್ನಾ ವಾ" ಎನ್ಗಿರಾರ್. ಇಙ್ಗು ಭಕ್ತಿಯೆನ್ರದು ಪ್ರೇಮ ಪಾರವಶ್ಯತ್ತೈ**

---

ಅತ್ಯಂತ ಪರತಂತ್ರನಾದ ಜೀವನಿಗೆ ಉಚಿತವೆಂದರೆ ಈ ಶ್ಲೋಕವು ಪ್ರಪನ್ನನ ಉತ್ತರಕೃತ್ಯಕ್ಕೆ ಉದಾಹರಣ ಮಾತ್ರ. ಹೇಗೆಂದರೆ ಸೀತೆಯು ಶ್ರೀರಾಮಚಂದ್ರನಿಗೆ ಭಾರ್ಯೆಯಾಗಿ ಜನಕರಿಂದ ಸಮರ್ಪಿಸಲ್ಪಟ್ಟಳು. ಭಾರ್ಯಾ ರಕ್ಷಣವು ಭರ್ತ್ರಧೀನ. ಆದ್ದರಿಂದ ಶ್ರೀರಾಮಚಂದ್ರನು ಲಂಕೆಯನ್ನು ಬಾಣಗಳಿಂದ ಹೊಡೆದು ತನ್ನನ್ನು ಕರೆದು ಕೊಂಡು ಹೋಗಬೇಕೆಂದು ಅಪೇಕ್ಷಿಸುವುದು ಉಚಿತವಾದದ್ದು. ಅದೇ ರೀತಿಯಲ್ಲಿ ಪ್ರಪನ್ನನು ತನ್ನ ಆತ್ಮರಕ್ಷಾ ಭರಸಮರ್ಪಣವನ್ನು ಭಗವಂತನಲ್ಲಿ ಸಮರ್ಪಿಸದ ನಂತರ, ತನ್ನ ರಕ್ಷಣೆಗೋಸ್ಕರ ಪುನಃ ಯಾವ ಪ್ರಯತ್ನವನ್ನೂ ಮಾಡಬೇಕಿಲ್ಲ. ನಿರ್ಭರೋ ನಿರ್ಭಯೋಽಸ್ಮಿ ಎಂದಿರಬೇಕು. ಶರಣ್ಯನೇ ಇವನ ರಕ್ಷಣ ಭರವನ್ನು ತನ್ನ ಕರ್ತ ವ್ಯವಾಗಿ ಹೊತ್ತುಕೊಂಡು ರಕ್ಷಿಸುತ್ತಾನೆಂದು ಅರ್ಥ. ಅಂದರೆ ಸಮರ್ಪಿತಭರನು ಪ್ರಪತ್ತ್ಯುತ್ತರ ಕಾಲದಲ್ಲಿ ಉಪಾಯಾಂತರ ಶಕ್ತನಾಗಿದ್ದರೂ ಸ್ವರಕ್ಷಣೆಗೆ ಪುನಃ ಯಾವ ವಿಧವಾದ ಪ್ರಯತ್ನವನ್ನೂ ಮಾಡದಿರಬೇಕೆಂಬುದು ತಾತ್ಪರ್ಯ. **ಅಲ್ಲಾದಪೋದು**–ಭಕ್ತಿಯ ಹಾಗೆ ಪ್ರಪತ್ತಿಯೂ ಸ್ವರಕ್ಷಣಾರ್ಥ ಸ್ವವ್ಯಾಪಾರವಾದ್ದರಿಂದ, ಪರತಂತ್ರನಾದ ಜನನು ಅದನ್ನುಅನುಷ್ಠಿಸಬೇಕಿಲ್ಲವೆಂದರೆ, **ಉಪಾಯ ವಿಧಾಯಕ ಶಾಸ್ತ್ರಂಗಳ್** – ಇತ್ಯಾದಿ "ಓಮಿತ್ಯಾತ್ಮಾನಂ ಧ್ಯಾಯಥ",ಎಂಬಉಪಾಸನ ವಿಧಾಯಕ ಶಾಸ್ತ್ರದ ಹಾಗೆ,"ಮಾಮೇಕಂ ಶರಣಂ ವ್ರಜ"ಎಂಬ ಪ್ರಪತ್ತಿ ವಿಧಾಯಕ ಶಾಸ್ತ್ರವೂ ಅಧಿಕಾರಿ ದೌರ್ಲಭ್ಯದಿಂದ, ವ್ಯರ್ಥವಾಗಿ ಹೋಗುತ್ತದೆ.

"ಇದಂ ತಿತೀರ್ಷತಾಂಪಾರಂ" ಎಂಬುದಕ್ಕೆ ಅರ್ಥವಾಗಿ **ಉಪಾಯಾಂತರತ್ತಿಲ್ ತನಕ್ಕು** - ಇತ್ಯಾದಿ ಅನು ಗ್ರಹಿಸುತ್ತಾರೆ. ಅದಾಗಿ ಉಪಾಸನದಲ್ಲಿ ತನಗೆ ಜ್ಞಾನವಿದ್ದು ಅದನ್ನು ಅನುಷ್ಠಿಸಲು ಶಕ್ತಿಯಿದ್ದರೂ, ವಿಳಂಬ ವನ್ನು ಸಹಿಸಲಾರದೆ ಶೀಘ್ರವಾಗಿ ಮೋಕ್ಷವನ್ನು ಪಡೆಯಬೇಕೆಂಬ ತ್ವರೆಯಿದ್ದರೆ, ಶೀಘ್ರಫಲವನ್ನು ಕೊಡತಕ್ಕ ಪ್ರಪತ್ತಿಯೇ ನಮಗೆ ಉಚಿತವೆಂದಿರುವವನೂ ಈ ಪ್ರಪತ್ತಿಗೆ ಅಧಿಕಾರಿ, ಇದನ್ನು **'ಇದಂತಿತೀರ್ಷತಾಂಪಾರಂ** ಇತ್ಯಾಗಳಲ್ಲಿ ಹೇಳಿದೆ. **ಎಂಗನೇ ಯೆನ್ನಿಲ್** – ಹೇಗೆಂದರೆ, **"ತಿತೀರ್ಷತಾಂ ಪಾರಂ"** ಎಂಬುದು ಶೀಘ್ರವಾಗಿ ಅನಿಷ್ಟ ನಿವೃತ್ತಿಯು ಉಂಟಾಗಬೇಕೆಂಬ ತ್ವರೆಯುಳ್ಳವರಿಗೆ ಎಂದರ್ಥ. **'ಆನಂತ್ಯಮಿಚ್ಛತಾಂ'** ಇಷ್ಟಪ್ರಾಪ್ತಿ ಯಲ್ಲಿ ಪ್ರೇಮಾತಿಶಯವನ್ನುಳ್ಳವರಿಗೂ - ಅಂದರೆ ಸ್ವರೂಪಪ್ರಾಪ್ತ ಪರಿಪೂರ್ಣ ಭಗವದನುಭವವನ್ನು **ಪೆಟ್ರಲ್ಲದು**– ಪಡೆಯದೆ, **ಧರಿಕ್ಕಮಾಟ್ಟಾದಾರ್ಕ್ಕೆನ್ರಪಡಿ** – ಆತ್ಮಧಾರಣವನ್ನು ಮಾಡಿಕೊಳ್ಳಲಾಗದೆ ಕಳವಳಪಡುವವರಿಗೆ ಎಂದ ರ್ಥ. **ಇವ್ವೈಯಿರಂಡೈಯುಮ್ ನಿನೈತ್ತು** – ಈ ಎರಡು ಅಧಿಕಾರಗಳನ್ನೂ ಒಂದುಗೂಡಿಸಿ ಅಂದರೆ ಅನಿಷ್ಟ ನಿವೃತ್ತಿಯಲ್ಲಿ ತ್ವರೆಯಿರುವವರನ್ನೂ, ಇಷ್ಟಪ್ರಾಪ್ತಿಯಲ್ಲಿ ಪ್ರೇಮಾತಿಶಯವನ್ನುಳ್ಳವರನ್ನೂ ಒಂದುಗೂಡಿಸಿ **ಸ್ವಭಕ್ತೇ ರ್ಭೂರ್ಮವ್ನಾ** ವಾ' ಎಂದು ಹೇಳಿರುತ್ತಾರೆ. **ಇಂಗು** ಇತ್ಯಾದಿ - ಇಲ್ಲಿ ಭಕ್ತಿಯೆಂಬುದು ಪ್ರೇಮಪಾರವಶ್ಯವನ್ನು

**ಚೊನ್ನಪಡಿ; ಅಲ್ಲದು ಭಕ್ತಿಯೋಗತ್ತೈಚ್ಚೊನ್ನಪಡಿಯನ್ರು.** ಇಭ್ಭಕ್ತಿಯಿನುಡೈಯ ಭೂಮಾವಾಹಿರುದು, ಕಡುಹಪ್ರಾಪ್ತಿ ಕಿಡೈಯಾದಪೋದು ಅಳಿಯುಮ್ಪಡಿಯಾನ ಅವಸ್ಥಾವಿಶೇಷಮ್. ಇದು ಶಿಲರ್ಕ್ಕು ಕಟ್ಟಳೈಪ್ಪಟ್ಟ ಭಕ್ತಿಯೋಗ ಮಿಲ್ಲೈಯಾಹಿಲುಮ್, ಸುಕೃತ ವಿಶೇಷಮೂಲಮಾನ ಭಗವತ್ಪ್ರಸಾದತ್ತಾಲೇ ವರುಮ್. ಇವ್ವವಸ್ಥೈಯುಡೈಯವನುಮ್ ಪ್ರಪತ್ತಿಕ್ಕು ಅಧಿಕಾರಿ.

**ಶ್ಲೋಕದ್ವಯಾರ್ಥಾನ್ ಉಪಪಾದಯನ್ ನಿಗಮಯತಿ.**

ಇಪ್ಪಡಿಯಾಹೈಯಾಲ್ ಉಪಾಯಾನ್ತರತ್ತಿಲ್ ಅಜ್ಞರಾಯ್, ಇವ್ವುಪಾಯತ್ತಿಲ್ ಸಮುದಾಯ ಜ್ಞಾನಮಾತ್ರ ಮುಡೈಯರಾ ಯಿರುಪ್ಪಾರ್ಕ್ಕುಮ್ ಇದಿಲುಂ ಉಪಾಯಾನ್ತರತ್ತಿಲುಂ ತೆಳಿವುಣ್ಡಾನಾಲುಮ್ ಉಪಾಯಾನ್ತರತ್ತಿಲ್ ಅನುಷ್ಠಾನಶಕ್ತಿ ಇಲ್ಲಾದಾರ್ಕ್ಕುಮ್ ಇವ್ವೈಯಿರಣ್ಡು ಮುಂಡಾನಾಲುಮ್, ವಿಳಂಬಂ ಪೊರಾದ ಆರ್ತ್ಯತಿಶಯ ಮುಡೈಯಾರ್ಕ್ಕುಮ್, ಪ್ರಪತ್ತಿಯಿಲೇಯಿಳಿಯಲಾಮ್.

ಇವ್ವಿಳಂಬಾಕ್ಷಮನುಮ್ ತಾನ್ ನಿನೈತ್ತ ಕಾಲತ್ತಿಲೇ ಫಲಂ ಪೆರುಹೈಕ್ಕು ಉಪಾಯಾಂತರ ರಹಿತನ್ ಇಪ್ಪ್ರಕಾರತ್ತೈ ನಿನೈತ್ತು "ಜಗತಿ ಗತಿ ಮನ್ಯಾಮವಿದುಷಾಂ" ಎನ್ಗಿರದು.

---

ತಿಳಿಸುತ್ತದೆ. **ಅಲ್ಲದು ಭಕ್ತಿಯೋಗತ್ತೈ** ಹೇಳಿದೆಯೆಂದಲ್ಲ. ಇಲ್ಲಿ ಭಕ್ತಿಯೋಗವನ್ನು ಅಧಿಕಾರವಾಗಿ ಹೇಳಿದರೆಯಲ್ಲವೇ, ಪ್ರಪತ್ತಿಗೆ ಆಕಿಂಚನಾಧಿಕಾರತ್ವವನ್ನು ಹೇಳುವ ಪ್ರಮಾಣಗಳಿಗೆ ವಿರೋಧವು ಏರ್ಪಡುತ್ತದೆ ಎಂದು ತಾತ್ಪರ್ಯ. **ಇಬ್ಭಕ್ತಿಯಿನುಡೈಯ** – ಈ ಪ್ರೇಮ ಭಕ್ತಿಯ **ಭೂಮಾ** – ಆಧಿಕ್ಯವು ಯಾವುದೆಂದರೆ **ಕಡುಹಪ್ರಾಪ್ತಿ** ಯಿತ್ಯಾದಿ – ಶೀಘ್ರವಾಗಿ ಫಲವು ಲಭಿಸದೆ ಹೋದರೆ ತಾನು ನಶಿಸಿಹೋಗುವ ಅವಸ್ಥೆಯನ್ನುಂಟು ಮಾಡುವುದು ಎಂದರ್ಥ. ಭಕ್ತಿಯೋಗ ನಿಷ್ಠನಿಗೆ ಈ ಅವಸ್ಥೆಯು ಬರತಕ್ಕದುದಲ್ಲವೇ, ಪ್ರಪತ್ತಿಯೋಗ ನಿಷ್ಠನಿಗೂ ಇಂತಹ ಅವಸ್ಥೆಯು ಬರುತಕ್ಕದ್ದೇ ಎಂದರೆ, ಇದು **ಶಿಲರ್ಕು** ಇತ್ಯಾದಿ – ಇದು ಕೆಲವರಿಗೆ, **ಕಟ್ಟಳೈಪ್ಪಟ್ಟ** – ಅಧಿಕಾರಾನುಗುಣವಾಗಿ ವ್ಯವಸ್ಥಿತವಾದ ಭಕ್ತಿಯೋಗವಿಲ್ಲದಿದ್ದರೂ **ಸುಕೃತ ವಿಶೇಷ ಮೂಲಮಾನ** ಇತ್ಯಾದಿ ಸುಕೃತವಿಶೇಷ ಮೂಲವಾದ ಭಗವತ್ಪ್ರಸಾದದಿಂದ ಬರುತ್ತದೆ. ಈ ಸುಕೃತ ವಿಶೇಷ ಮೂಲವಾದ ಭಗವತ್ಪ್ರಸಾದವು ಕೇವಲ ಆಕಿಂಚನನಿಗೂ ಸಂಭವಿಸಬಹುದಾದ್ದರಿಂದ, ಆ ಭಗವತ್ಪ್ರಸಾದದಿಂದ ಉಂಟಾದ ಪ್ರೇಮಾತಿಶಯವು ಭಕ್ತಿಯೋಗದ ಉತ್ತರ ಕಾಲದಲ್ಲಿಯೇ ಉಂಟಾಗಬೇಕೆಂಬ ನಿರ್ಬಂಧವಿಲ್ಲವೆಂದು ತಾತ್ಪರ್ಯ. **ಇವ್ವವಸ್ಥೈಯುಡೈಯವನುಮ್** ಇತ್ಯಾದಿ ಈ ಪ್ರೇಮಭಕ್ತಿಯ ಆಧಿಕ್ಯವೆಂಬ ದಶೆಯನ್ನುಳ್ಳವನೂ, ಪ್ರಪತ್ತಿಗೆ ಅಧಿಕಾರಿ.

**ಇಪ್ಪಡಿಯಾಹೈಯಾಲ್** ಇತ್ಯಾದಿ – ಹೀಗೆ ಭಕ್ತಿಯಲ್ಲಿ ಜ್ಞಾನಶಕ್ತಿಗಳಿದ್ದರೂ ವಿಳಂಬಕ್ಷಮನಲ್ಲದಿದ್ದರೆ ಪ್ರಪತ್ತಿಗೆ ಅಧಿಕಾರಿಯಾದ್ದರಿಂದ, ಉಪಾಯಾಂತರದಲ್ಲಿ ಅಜ್ಞರಾಗಿ, ಈ ಉಪಾಯದಲ್ಲಿ ಸಮುದಾಯ ಜ್ಞಾನ ಮಾತ್ರವನ್ನುಳ್ಳವರಾಗಿರುವವರಿಗೂ, ಇದರಲ್ಲಿಯೂ ಉಪಾಯಾಂತರದಲ್ಲಿಯೂ ತಿಳುವಾದ ಜ್ಞಾನವುಂಟಾದರೂ, ಉಪಾಯಾಂತರದಲ್ಲಿ ಅನುಷ್ಠಾನಶಕ್ತಿಯಿಲ್ಲದವರಿಗೂ, ಇವೆರಡೂ ಇದ್ದರೂ ವಿಳಂಬವನ್ನು ಸಹಿಸಲಾರದ ಆರ್ತ್ಯತಿಶಯವನ್ನುಳ್ಳವರಿಗೂ ಪ್ರಪತ್ತಿಯು ಅಧಿಕಾರವಾಗಿ ಅದನ್ನು ಅನುಷ್ಠಿಸಬಹುದು.

**ಇವ್ವಿಳಂಬಾಕ್ಷಮನುಮ್** ಇತ್ಯಾದಿ – **ಈ ವಿಳಂಬಾಕ್ಷಮನೂ ತಾನು ನೆನೆದ ಕಾಲದಲ್ಲಿ ಫಲವನ್ನು ಹೊಂದಲು** ಬೇರೆ ಉಪಾಯವಿಲ್ಲದವನು. **ಇಪ್ರಕಾರತ್ತೈನಿನೈತ್ತು** – **ಈ** ಪ್ರಕಾರವನ್ನು ತಿಳಿದು **"ಜಗತಿ ಗತಿಮನ್ಯಾಮವಿದುಷಾಂ"** – ಪ್ರಪಂಚದಲ್ಲಿ ಬೇರೆ ಉಪಾಯವನ್ನು ತಿಳಿಯದವರು ಎಂದು ಹೇಳಿರುತ್ತದೆ. ಹೀಗೆ ಭಕ್ತಿಯಲ್ಲಿ ಜ್ಞಾನಶಕ್ತಿಯುಳ್ಳವರೂ ವಿಳಂಬವನ್ನು ಸಹಿಸಲಾಗದ ಆಕಿಂಚನ್ಯವನ್ನು ಅಧಿಕಾರವಾಗಿಟ್ಟುಕೊಂಡು ಪ್ರಪತ್ತಿಯನ್ನು ಅನುಷ್ಠಿಸಬಹುದೆಂದರೆ, ಪರಿಪೂರ್ಣಜ್ಞಾನಶಕ್ತಿಗಳನ್ನುಳ್ಳ ವ್ಯಾಸಾದಿಗಳೂ ವಿಳಂಬಾಕ್ಷಮರಾಗಿ ಏಕೆ ಪ್ರಪತ್ತಿ

**ವ್ಯಾಸಾದಿಷು ಭಕ್ತಿಯೋಗೇ ಅಧಿಕಾರಸ್ತು ನ ಜ್ಞಾನಶಕ್ತಿ ಮಾಂದ್ಯೇನ, ಅಪಿತು ಅರ್ಥಿತ್ವ ಸಾಮರ್ಥ್ಯ ವಿಳಂಬ ಕ್ಷಮಾದ್ಯೈಃ**

**ವ್ಯಾಸಾದಿಗಳ್ ಅಧಿಕಾರಿ ಪುರುಷರ್‌ಹಳಾಹೈಯಾಲೇ ವಿಳಂಬಕ್ಷಮರುಮಾಯ್ ಉಪಾಯಾನ್ತರ ಶಕ್ತರುಮಾಯ್ ಯಿರುಪ್ಪಾರ್‌ಹಳಾಹೈಯಾಲ್** ಉಪಾಸನತ್ತಿಲ್ ಯಿಳಿಂದಾರ್‌ಹಳ್; **ಅಲ್ಲದು ಜ್ಞಾನ ಮಾಂದ್ಯ ಮಾದಲ್ ವಿಶ್ವಾಸಮಾಂದ್ಯ ಮಾದಲ್** ವುಂಡಾಯಿಳಿಂದಾರ್‌ಹಳನ್ರು.

**ಅಶಕ್ತಸ್ಯಾತಿಕೃಚ್ಛ್ರೇಷು ದುರಾಶಾ ದಾರ್ಢ್ಯಶಾಲಿನಃ ।**
**ಕಸ್ಯಚಿದ್ಬುದ್ಧಿ ದೌರ್ಬಲ್ಯಂ ಲಘುತ್ಯಾಗಸ್ಯಕಾರಣಮ್** ॥ 14॥
**ತತ್ರ ಪ್ರಪತ್ತ್ಯನರ್ಹಾಣಾ ಮನ್ಯದಿತ್ಯಪಿ ಯುಜ್ಯತೇ ।**
**ವ್ಯಾಸಾದಿಷುತು ನೈವೈಷಾ ನೀತಿಸ್ಸಂಶಯಘಾತಿಷು** ॥ 15॥

---

ಮಾಡಲಿಲ್ಲವೆಂದರೆ, **ವ್ಯಾಸಾದಿಹಳ್ ಅಧಿಕಾರಿ ಪುರುಷರ್ ಹಳಾಹೈಯಾಲೇ ಇತ್ಯಾದಿ** ಅನುಗ್ರಹಿಸುತ್ತಾರೆ. ಆದಾಗಿ ವ್ಯಾಸಾದಿಗಳು ಭಗವಂತನಿಂದ ಆಜ್ಞಾಪಿಸಲ್ಪಟ್ಟ ಕಾರ್ಯವನ್ನು ನಡೆಸಿಕೊಡುವುದರಲ್ಲಿ ಶ್ರದ್ಧೆಯಿಂದ ಶೇಷತ್ವ ಪಾರತಂತ್ರ್ಯಕಾಷ್ಠೆಯನ್ನುವಹಿಸಿ"ಯಾವದಧಿಕಾರ ಮವಸ್ಥಿತಿ ರಾಧಿಕಾರಿಕಾಣಾಮ್", ಎಂಬ ಸೂತ್ರದ ಪ್ರಕಾರ ಪದವಿ ಯೊಂದನ್ನು ವಹಿಸಿದರು. ಮೇಲೂ **ವಿಳಂಬಕ್ಷಮರುಮಾಯ್**– ಇವರುಗಳು ಪದವಿಯಲ್ಲಿ ಆಸೆಯಿಂದ ವಿಳಂಬ ಕ್ಷಮರಲ್ಲ. "ಭಜನಸುಖಮೇಕಸ್ಯ ವಿಪುಲಂ" ಎಂದು ಆಚಾರ್ಯರೇ ಅನುಗ್ರಹಿಸಿದಂತೆ ಭಕ್ತಿಯೋಗ ನಿಷ್ಠನಿಗೆ ಭಕ್ತಿ ಯೋಗ ದಶೆಯಲ್ಲಿ ವಿಪುಲವಾದ ಭಗವದನುಭವ ಸುಖವು "ಅತ್ರ ಬ್ರಹ್ಮ ಸಮಶ್ನುತೇ" "ಅಮೃತತ್ವಂಚಾನು ಪ್ರೋಷ್ಯ"ಎಂಬ ಶ್ರುತಿ ಸೂತ್ರ ಪ್ರಮಾಣಾನುಸಾರವಾಗಿ ಲಭಿಸುತ್ತದೆಯಾದ್ದರಿಂದ ವಿಳಂಬಕ್ಷಮರಾಗಿ **ಉಪಾಯಾಂತರ ಶಕ್ತರುಮಾಯ್ ಇತ್ಯಾದಿ** – ಉಪಾಯಾಂತರದಲ್ಲಿ ಶಕ್ತರಾಗಿ ಉಪಾಸನದಲ್ಲಿ ತೊಡಗಿದರು. ವೈರಾಗ್ಯ ವಿಲ್ಲವೆಂದಲ್ಲವೆಂದು ಭಾವ. ದೃಪ್ತ ಪ್ರಪನ್ನನೂ ಅರ್ಚಾವತಾರ ಸೇವೆಯಿಂದಲೂ, ವೇದಾಂತ ಕಾಲಕ್ಷೇಪವನ್ನು ಅನೇಕರಿಗೆ ಹೇಳಿ ಅಧ್ಯಾತ್ಮ ಗ್ರಂಥ ನಿರ್ಮಾಣವನ್ನು ಮಾಡಿಕೊಂಡು ಕಾಲವನ್ನು ಕಳೆಯುವ ಆಸೆಯಿಂದಲೂ ದೇಹಾವಸಾನ ಪರ್ಯಂತ ಸಂಸಾರದಲ್ಲಿರಲು ಅಪೇಕ್ಷಿಸಿ ವಿಳಂಬಕ್ಷಮನೆಂಬುದೂ ಇದೇ ನ್ಯಾಯವನ್ನವಲಂಬಿಸಿದೆ. **ಅಲ್ಲದು ಜ್ಞಾನಮಾಂದ್ಯಮಾದಲ್ ಇತ್ಯಾದಿ**–ಪ್ರತಿವಾದಿಗಳು ಹೇಳುವ ರೀತಿಯಲ್ಲಿ ಪಾಪಜನಕವಾದ ಹೇತ್ವಂತರ ದಿಂದ ಉಪಾಸನವನ್ನು ಮಾಡಿದರೆಂದಲ್ಲವೆಂದು ವಿವರಿಸುತ್ತಾರೆ. ಜ್ಞಾನಮಾಂದ್ಯದಿಂದಲೋ, ವಿಶ್ವಾಸ ಮಾಂದ್ಯ ದಿಂದಲೋ ಭಕ್ತಿಯೋಗದಲ್ಲಿ ಇಳಿದವರಲ್ಲ.

ಹೀಗಾದರೆ "ನರಸ್ಯ ಬುದ್ಧಿ ದೌರ್ಬಲ್ಯಾತ್ ಉಪಾಯಾಂತರ ಮಿಷ್ಯತೇ"ಎಂದು ಒಬ್ಬನಿಗೆ ಬುದ್ಧಿಯದೌರ್ಬಲ್ಯ ದಿಂದ ಉಪಾಯಾಂತರವಾದ ಭಕ್ತಿಯೋಗವು ಅಪೇಕ್ಷಿಸಲ್ಪಡುತ್ತದೆ ಎಂದು ಹೇಳಿರುವ ಪ್ರಕಾರ,ವ್ಯಾಸಾದಿಗಳು ಬುದ್ಧಿ ದೌರ್ಬಲ್ಯದಿಂದ ಭಕ್ತಿಯೋಗವನ್ನವಲಂಬಿಸಿದರಲ್ಲವೇ ಎಂದರೆ, ಇದಕ್ಕೆ ತಾತ್ಪರ್ಯವನ್ನು "**ಅಶಕ್ತಸ್ಯಾತಿಕೃಚ್ಛ್ರೇಷು** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಅತಿಕೃಚ್ಛ್ರೇಷ್ವಶಕ್ತಸ್ಯ–ಅತ್ಯಂತ ಕಷ್ಟ ಸಾಧ್ಯಗಳಾದ ಉಪಾ ಯಾಂತರಗಳಲ್ಲಿ ಅಶಕ್ತನಾಗಿ **ದುರಾಶಾದಾರ್ಢ್ಯಶಾಲಿನಃ**–ಅವುಗಳ ಕಷ್ಟಗಳನ್ನು ತಿಳಿದೂ ಹೇಗಾದರೂ ಅವುಗಳನ್ನು ಮಾಡಿಮುಗಿಸಬೇಕೆಂಬ ದುರಾಶೆಯ ದಾರ್ಢ್ಯವನ್ನುಳ್ಳ **ಕಸ್ಯಚಿತ್**-ಒಬ್ಬನಿಗೆ **ಬುದ್ಧಿದೌರ್ಬಲ್ಯಂ**–ಮಂದಬುದ್ಧಿ ತ್ವವು **ಲಘುತ್ಯಾಗಸ್ಯಕಾರಣಮ್**–ಲಘುವಾದ ಪ್ರಪತ್ತಿಯನ್ನು ಬಿಡಲು ಕಾರಣವಾಗುತ್ತದೆ. ಇಲ್ಲಿ "ನರಸ್ಯ" ಶಬ್ದವು ದುರಾಶೆಯುಳ್ಳ ಅಶಕ್ತನನ್ನು ತಿಳಿಸುತ್ತದೆ. ತತ್ರ ಲಘೂಪಾಯವಾದ ಪ್ರಪತ್ತಿಯನ್ನು ಬಿಡುವುದಕ್ಕೆ ಕಾರಣವಾದ ಬುದ್ಧಿ ದೌರ್ಬಲ್ಯವು ಇದ್ದರೆ, **ಪ್ರಪತ್ತ್ಯನರ್ಹಾಣಾಂ**–ಪ್ರಪತ್ತಿ ಮಾಡಲು ಅನರ್ಹರಾದವರಿಗೆ, ಅನ್ಯದಿತ್ಯಪಿಯುಜ್ಯತೇ–ದುರಾಸೆಯ ನಿಮಿತ್ತ ಪ್ರಪತ್ತಿಗಿಂತ ಬೇರೆಯಾದ ಉಪಾಯದಲ್ಲಿ ಪ್ರವೃತ್ತಿಯುಂಟಾಗುತ್ತದೆ ಯೆಂದು ಹೇಳುವುದು ಯುಕ್ತ. **ಸಂಶಯಘಾತಿಷು ವ್ಯಾಸಾದಿಷು**–ಇತರರ ಸಂಶಯವನ್ನು ಹೋಗಲಾಡಿಸುವ ವ್ಯಾಸಾದಿಗಳ ವಿಷಯದಲ್ಲಿ, **ಏಷಾನೀತಿರ್ನೈವ**-ಅಶಕ್ತನಾದ್ದರಿಂದ ಉಪಾಯಾಂತರಕ್ಕೆ ಅನರ್ಹನಾಗಿ, ಬುದ್ಧಿ

**ಇಪ್ಪಡಿ ಉಪಾಸನ ಪ್ರಪದನಙ್ಗಳುಕ್ಕು ಅಧಿಕಾರಮ್ ವ್ಯವಸ್ಥಿತಮಾಹೈಯಾಲ್ ಇರಣ್ಡು ಶಾಸ್ತ್ರಮುಮ್ ಸಪ್ರಯೋಜನಮ್.**

**ಇರಣ್ಡಧಿಕಾರಿಹಳುಕ್ಕುಮ್ ಸ್ವಧರ್ಮತ್ತಿಲ್ ಪ್ರತಿಪತ್ತಿ ವೈಷಮ್ಯಮೇ ಉಳ್ಳದು. ಪ್ರಪನ್ನನುಕ್ಕು ಕೋಲಿನ ಫಲತ್ತೈಪ್ಪತ್ತ ವೇರೊನ್ನೈ ಅನುಷ್ಠಿಕ್ಕಿಲ್ ಬ್ರಹ್ಮಾಸ್ತ್ರಬಂಧ ನ್ಯಾಯತ್ತಾಲೇ ವಿರೋಧಮುಂಡಾನಾಲುಃಮ್ಸ್ವಯಂ ಪ್ರಯೋಜನಮಾಹವಾದಲ್ ಭಗವದ್ಭಾಗವತಸಮೃದ್ಧ್ಯಾದಿಫಲಾಂತರತ್ತೈ ಪ್ಪತ್ತವಾದಲ್ ವೇರೊನ್ನೈ ಅನುಷ್ಠಿತ್ತಾಲ್ ವಿರೋಧಮಿಲ್ಲೈ,**

**ಉಪಾಯತ್ವ ಬುದ್ಧಿತ್ಯಾಗ ವಾದಸ್ಯ ನಿರಸನಮ್**

**ಇಪ್ಪಡಿ ಸ್ವರೂಪತ್ಯಾಗಮ್ ಕೂಡಾದೊಳ್ಳಿನ್ದಾಲುಮ್, ಉಪಾಯತ್ವ ಬುದ್ಧಿ ತ್ಯಾಗಮ್ ಪಣ್ಣುಹೈ "ಪರಿತ್ಯಜ್ಯ"ವುಕ್ಕು ಪ್ಪೊರುಳಾನಾಲೋವೆನ್ನಿಲ್ ಪ್ರಪನ್ನನುಕ್ಕು ಉತ್ತರಕೃತ್ಯಗೋಚರಙ್ಗಳಾನ ವಾಕ್ಯಙ್ಗಳಿಲ್ ಉಪಾಯ ಬುದ್ಧಿ ತ್ಯಾಗಮ್ ವಿಧಿಕ್ಕಿರ ವಿಡಮ್ ಉಚಿತಮ್. ಇಙ್ಗು ಉತ್ತರಕೃತ್ಯಪರಮನ್ರಿಕ್ಕೇ**

---

ದೌರ್ಬಲ್ಯದಿಂದ ಪ್ರಪತ್ತಿಯನ್ನು ಅನುಷ್ಠಿಸಲೂ ಅನರ್ಹನಾಗಿ ಹೋದವನ ನ್ಯಾಯವು ಸಂಭವಿಸುವುದಿಲ್ಲ. **ಇಪ್ಪಡಿ** ಇತ್ಯಾದಿ-ಹೀಗೆ ಉಪಾಸನಕ್ಕೂ ಪ್ರಪತ್ತಿಗೂ ಸಕಿಂಚನತ್ವ, ಅಕಿಂಚನತ್ವ ರೂಪವಾದ ಅಧಿಕಾರವು ವ್ಯವಸ್ಥಿತವಾದ್ದರಿಂದ ಉಪಾಸನ ವಿಧಾಯಕ ಶಾಸ್ತ್ರವೂ ಪ್ರಪತ್ತಿವಿಧಾಯಕ ಶಾಸ್ತ್ರವೂ ಪ್ರಯೋಜನವುಳ್ಳದ್ದಾಗಿದೆ.

**ಇರಂಡಧಿಕಾರಿಹಳುಕ್ಕುಮ್** ಇತ್ಯಾದಿ-ಈ ಎರಡು ಅಧಿಕಾರಿಗಳಿಗೂ **ಸ್ವಧರ್ಮತ್ತಿಲ್ ಪ್ರತಿಪತ್ತಿವೈಷಮ್ಯಮೇಯುಳ್ಳದು**-ನೈರಪೇಕ್ಷ್ಯವಿಧಿ ಪಕ್ಷದಲ್ಲಿ ಸ್ವವರ್ಣಾಶ್ರಮ ಧರ್ಮಗಳನ್ನು ಅನುಷ್ಠಿಸುವಾಗ ಉಪಾಸಕನಿಗೆ, "ಸಹಕಾರಿತ್ವೇನಚ",ಎಂಬ ಸೂತ್ರದ ಪ್ರಕಾರ ಅಂಗತ್ವ ಪ್ರತಿಪತ್ತಿಯೂ,ಪ್ರಪನ್ನನಿಗೆ ಕೈಂಕರ್ಯಬುದ್ಧಿಯೂ ಇರುತ್ತದೆ.ಪ್ರಪನ್ನನಿಗೆ ಪ್ರಪತ್ತ್ಯೇತರ ಧರ್ಮಗಳನ್ನು ಅನುಷ್ಠಿಸಿದರೆ ಬ್ರಹ್ಮಾಸ್ತ್ರನ್ಯಾಯವು ಸಂಭವಿಸುವುದಿಲ್ಲವೇ ಎಂದರೆ **ಪ್ರಪನ್ನನುಕ್ಕು** ಇತ್ಯಾದಿ ಅನುಗ್ರಹಿಸುತ್ತಾರೆ. ಆದಾಗಿ ಪ್ರಪನ್ನನು ತಾನು ಅಪೇಕ್ಷಿಸಿದ ಮೋಕ್ಷರೂಪ ಫಲವನ್ನು ಉದ್ದೇಶಿಸಿ ಬೇರೆಯೊಂದು ಧರ್ಮವನ್ನು ಅನುಷ್ಠಿಸಿದರೆ ಬ್ರಹ್ಮಾಸ್ತ್ರ ನ್ಯಾಯದಿಂದ ವಿರೋಧವು ಏರ್ಪಡುತ್ತದೆಯಷ್ಟೇ. **ಸ್ವಯಂ ಪ್ರಯೋಜನಮಾಹವಾದಲ್** ಇತ್ಯಾದಿ ಸ್ವಯಂ ಪ್ರಯೋಜನವಾಗಿಯಾಗಲಿ. ಭಗವದ್ಭಾಗವತ ಸಮೃದ್ಧ್ಯರ್ಥವಾಗಿಯಾಗಲಿ ಫಲಾಂತರವನ್ನು ಅಪೇಕ್ಷಿಸಿ ಬೇರೆಯೊಂದು ಧರ್ಮವನ್ನು ಅನುಷ್ಠಿಸಿದರೆ ವಿರೋಧವಿಲ್ಲ.

**ಸರ್ವಧರ್ಮಾನ್ ಎಂಬಲ್ಲಿ "ಉಪಾಯತ್ವ ಬುದ್ಧಿ ತ್ಯಾಗ" ಪಕ್ಷ ಖಂಡನೆ.**

ಮೇಲೆ ಹೇಳಿದ ರೀತಿಯಲ್ಲಿ ಸರ್ವಧರ್ಮಗಳ ಸ್ವರೂಪ ತ್ಯಾಗವು ಕೂಡದಾದರೂ, ಆ ಧರ್ಮಗಳಲ್ಲಿ ಉಪಾಯತ್ವ ಬುದ್ಧಿ ತ್ಯಾಗವನ್ನು "ಪರಿತ್ಯಜ್ಯ" ಎಂಬುದಕ್ಕೆ ಅರ್ಥವಾಗಿ ಸ್ವೀಕರಿಸಕೂಡದೇ. ಪರಿತ್ಯಜ್ಯ ಎಂಬುದಕ್ಕೆ ಧರ್ಮಗಳ ಪರಿತ್ಯಾಗವೇ ತೋರುತ್ತದೆಯಲ್ಲದೆ, ಉಪಾಯತ್ವ ಬುದ್ಧಿ ತ್ಯಾಗವು ತೋರುವುದಿಲ್ಲವೆಂದರೆ, ಪ್ರಪತ್ತ್ಯುತ್ತರ ಕೈಂಕರ್ಯದಲ್ಲಿ "ಉಪಾಯತಾಂ ಪರಿತ್ಯಜ್ಯ" ಎಂದು **ಗೀತಾರ್ಥ** ಸಂಗ್ರಹದಲ್ಲಿ ಹೇಳಿದಂತೆ ಇಲ್ಲೂ ಹೇಳಬಹುದಲ್ಲವೇ ಎಂದರೆ, **ಇಪ್ಪಡಿ ಸ್ವರೂಪತ್ಯಾಗಮ್** ಇತ್ಯಾದಿ ಆರಂಭಿಸಿ ಸಮಾಧಾನನ್ನು ತಿಳಿಸುತ್ತಾರೆ. ಆದಾಗಿ ಹೀಗೆ ಸ್ವರೂಪ ತ್ಯಾಗವು ಕೂಡದೆ ಇದ್ದರೂ ಉಪಾಯತ್ವ ಬುದ್ಧಿ ತ್ಯಾಗವನ್ನು ಮಾಡುವುದು 'ಪರಿತ್ಯಜ್ಯ'ವೆಂಬುದಕ್ಕೆ ಅರ್ಥವಾಗಿ ಹೇಳಿದರೇನು ಎಂದರೆ, ಪ್ರಪನ್ನನಿಗೆ ಉತ್ತರ ಕೃತ್ಯಗೋಚರಗಳಾದ ವಾಕ್ಯಗಳಲ್ಲಿ ಉಪಾಯ ಬುದ್ಧಿ ತ್ಯಾಗವನ್ನು ವಿಧಿಸುವುದು ಉಚಿತ. **ಇಂಗು ಉತ್ತರಕೃತ್ಯಪರಮನ್ರಿಕ್ಕೇ** ಇತ್ಯಾದಿ-ಇಲ್ಲಿ ಉತ್ತರ ಕೃತ್ಯಪರವಲ್ಲದೆ ಉಪಾಯವನ್ನು ವಿಧಿಸುವ ಈ ಚರಮ ಶ್ಲೋಕದಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ" ಎಂದು ಹೇಳುವುದರಿಂದ, ಬುದ್ಧಿತ್ಯಾಗ ಪೂರ್ವಕವಾಗಿ ಧರ್ಮ

**ಉಪಾಯ ವಿಧಾಯಕವಾಯಿರುಕ್ಕಿರ** ಇವ್ವಾಕ್ಯತ್ತಿರ್ಚೊಲ್ಲುಹೈಯಾಲೇ ಇಬ್ಬುದ್ಧಿ ತ್ಯಾಗಪೂರ್ವಕವಾನ ಧರ್ಮಸ್ವರೂಪವ್ ಪ್ರಪತ್ತಿಕ್ಕು ಅಂಗವಾಹ ಅನುಷ್ಠೇಯಮೆನ್ರು ಫಲಿಕ್ಕೈಯಾಲ್ ಸ್ವಯಂಪ್ರಯೋಜನ ವಾನ ಕೇವಲ ಕೈಂಕರ್ಯವ್ ವುತ್ತರಕೃತ್ಯಮೆನ್ನಿರ ಮತವ್ ಸಿದ್ಧಿಯಾದು.

ಇವ್ವುಪಾಯತ್ತುಕ್ಕು ಚೊಲ್ಲುಹಿರ ಧರ್ಮಾಂತರ ನೈರಪೇಕ್ಷ್ಯಮುಮ್ ಕಿಡೈಯಾದು ; ಇವ್ವುಪಾ ಯಮ್ ಅಕಿಂಚನಾಧಿಕಾರಮನ್ರಿಕ್ಕೇ ಯೊಳ್ಳಿಯುಮ್, ಎಙ್ಗನೇಯೆನ್ನಿಲ್ ?–ಉಪಾಯಮಲ್ಲಾದವತ್ತಿಲ್ ಉಪಾಯ ಬುದ್ಧಿತ್ಯಾಗವ್ ವಿಧಿಕ್ಕವೇಣ್ಡಾ. ಉಪಾಯವಾನವತ್ತಿಲ್ ಉಪಾಯ ಬುದ್ಧಿತ್ಯಾಗಪ್ಪಣ್ಣಿ ಅನು ಷ್ಠಿಕ್ಕೈಯಾವದು? ಪಣ್ಣೈಯ ಉಪಾಸನಾದಿಹಳಿಲ್ ನಿಲ್ಲೈಯಾಮ್. ಇಙ್ಗು ಉಪಾಯತ್ವ ಬುದ್ಧಿತ್ಯಾಗವ್ ಪೊರುಳಾಹ ಚೊಲ್ಲುಹಿರಪಕ್ಷತ್ತಿಲ್, ತ್ಯಾಗವಿಧಿಕ್ಕುಮ್ ಅನುಷ್ಠಾನವಿಧಿಕ್ಕುಮ್, ಅಧಿಕಾರಿ ಭೇದತ್ತಾಲೇ ವಿರೋಧವ್ ಪರಿಹರಿತ್ತವಿಡಮುಮ್ ಅನಪೇಕ್ಷಿತ ವಚನವ್. ಇಙ್ಗು ಸ್ವರೂಪತ್ಯಾಗವ್ ಶೊಲ್ಲುಂ ಪೋದಿರೇ ಇವ್ವಿರೋಧ ಪ್ರಸಙ್ಗಮುಳ್ಳದು. ಇಪ್ಪಡಿ ಬುದ್ಧಿ ವಿಶೇಷ ತ್ಯಾಗಪೂರ್ವಕ ಕರ್ಮಜ್ಞಾನ ಭಕ್ತಿ ಹಳೈಪ್ರಪತ್ತಿಕ್ಕು ಅಙ್ಗವಾಹ ವಿಶೈಯುಮ್ಪಕ್ಷತ್ತಿಲ್ ಉಪಾಸನ ಪ್ರಪದನಙ್ಗಳುಕ್ಕು ಅಙ್ಗಾಙ್ಗಿ ವ್ಯಪದೇಶ

---

ಸ್ವರೂಪವು ಪ್ರಪತ್ತಿಗೆ ಅಂಗವಾಗಿ ಅನುಷ್ಠೇಯವೆಂದು ಫಲಿಸುತ್ತದೆಯಾದ್ದರಿಂದ ಸ್ವಯಂ ಪ್ರಯೋಜನವಾದ ಕೇವಲ ಕೈಂಕರ್ಯವು ಉತ್ತರ ಕೃತ್ಯವೆಂಬುದು ಸಿದ್ಧಿಸುವುದಿಲ್ಲ. ಅಂದರೆ ಪ್ರಪತ್ತಿಗೆ ಉತ್ತರ ಕಾಲದಲ್ಲಿ ಸ್ವವರ್ಣಾಶ್ರಮೋ ಚಿತವಾದ ಧರ್ಮಗಳಲ್ಲಿ ಉಪಾಯತ್ವ ಬುದ್ಧಿಯನ್ನು ಬಿಟ್ಟು ಮಾಡಬೇಕೆಂದು ಫಲಿಸುತ್ತದೆ. ಪ್ರಪತ್ತಿಗೆ ಪೂರ್ವ ಕಾಲದಲ್ಲಿ ಆ ಸರ್ವ ಧರ್ಮಗಳಲ್ಲಿಯೂ ಉಪಾಯತ್ವ ಬುದ್ಧಿಯನ್ನು ಬಿಟ್ಟು ಪ್ರಪತ್ತಿಯನ್ನು ಮಾಡಬೇಕೆಂದರೆ ಸರ್ವಧರ್ಮಗಳೂ ಪ್ರಪತ್ತಿಗೆ ಅನುಷ್ಠೇಯವೆಂದು ಫಲಿಸುವುದರಿಂದ, ಉತ್ತರಕೃತ್ಯವೆಲ್ಲಾ ಸ್ವಯಂಪ್ರಯೋಜನ ವಾಗಿ ಅನುಷ್ಠಿಸಬೇಕೆಂಬುದು ಸಿದ್ಧಿಸುವುದಿಲ್ಲವೆಂದು ತಾತ್ಪರ್ಯ.

ದೂಷಣಾಂತರವನ್ನು **ಇವ್ವುಪಾಯತ್ತುಕ್ಕು** ಇತ್ಯಾದಿ ನಿರೂಪಿಸುತ್ತಾರೆ. ಆದಾಗಿ ಈ ಉಪಾಯಕ್ಕೆ ಹೇಳುವ ಧರ್ಮಾಂತರ ನೈರಪೇಕ್ಷ್ಯವೂ ಸಿದ್ಧಿಸುವುದಿಲ್ಲ. ಮೇಲೂ **ಇವ್ವುಪಾಯಮ್** ಇತ್ಯಾದಿ–ಈ ಉಪಾಯದಲ್ಲಿ ಅಕಿಂಚನರಿಗೆ ಮಾತ್ರ ಅಧಿಕಾರವೆಂಬುದೂ ಇಲ್ಲದೆ ಹೋಗುತ್ತದೆ. **ಎಙ್ಗನೇ ಎನ್ನಿಲ್** – ಹೇಗೆಂದರೆ, **ಉಪಾಯ ಮಲ್ಲಾದವಟ್ರಿಲ್** ಇತ್ಯಾದಿ – ಉಪಾಯವಲ್ಲದ ಧರ್ಮಗಳಲ್ಲಿ ಉಪಾಯತ್ವ ಬುದ್ಧಿ ತ್ಯಾಗವನ್ನು ವಿಧಿಸುವುದು ಕೂಡದು–ವ್ಯರ್ಥ. ಉಪಾಯವಾದ ಉಪಾಸನಾದಿಗಳಲ್ಲಿ ಉಪಾಯತ್ವ ಬುದ್ಧಿ ತ್ಯಾಗವನ್ನು ವಿಧಿಸುತ್ತದೆಯೆಂದರೆ ಸ್ವರೂಪತ್ಯಾಗ ವಿಧಿ ಪಕ್ಷದಲ್ಲಿ ಹೇಳಿದಂತೆ ಉಪಾಯವಾದ ಉಪಾಸನಾದಿಗಳನ್ನು ಅನುಷ್ಠಿಸಬೇಕೆಂದು ಸಿದ್ಧಿಸುವು ದರಿಂದ ಭಕ್ತಿಗೆ ಪ್ರಪತ್ತಿಯು ಅಂಗವಾಗಿರುವಂತೆ ಪ್ರಪತ್ತಿಗೆ ಭಕ್ತ್ಯಂಗಕತ್ವವು ಹೇಳಿದಂತೆ ಪರಿಣಮಿಸುವುದ ರಿಂದ ಪ್ರಪತ್ತಿಯು ಅಕಿಂಚನಾಧಿಕಾರಕವೆಂದು ಹೇಳಿರುವುದು ಸಿದ್ಧಿಸುವುದಿಲ್ಲ ಎಂದು ತಾತ್ಪರ್ಯ. **ಉಪಾಯತ್ವ ಬುದ್ಧಿ ತ್ಯಾಗವ್** ಇತ್ಯಾದಿ–ಹೀಗೆ ಉಪಾಯತ್ವ ಬುದ್ಧಿ ತ್ಯಾಗವನ್ನು ವಿಧಿಸುತ್ತದೆಯೆಂಬ ಪಕ್ಷದಲ್ಲಿ ಪ್ರಸನ್ನನು ತ್ಯಾಗಾಧಿ ಕಾರೀ, ಭಕ್ತನು ಅನುಷ್ಠಾನಾಧಿಕಾರೀ ಎಂದು ಹೇಳಿದ ತಮ್ಮ ಗ್ರಂಥಕ್ಕೆ ವಿರೋಧವು ಏರ್ಪಡುತ್ತದೆ ಎಂದು ತಿಳಿಸುತ್ತಾರೆ' **ಇಂಗು ಸ್ವರೂಪ ತ್ಯಾಗವ್** ಇತ್ಯಾದಿ ಇಲ್ಲಿ ಸ್ವರೂಪ ತ್ಯಾಗವನ್ನು ಹೇಳುವುದಾದರೆಯಲ್ಲವೇ ಈ ವಿರೋಧ ಪ್ರಸಂಗವು ಏರ್ಪಡುತ್ತದೆ. ಉಪಾಯತ್ವ ಬುದ್ಧಿ ತ್ಯಾಗ ಪೂರ್ವಕವಾದ ಕರ್ಮ ಜ್ಞಾನ ಭಕ್ತಿಗಳನ್ನು ಪ್ರಪತ್ತಿಗೆ ಅಂಗವಾಗಿ ಒಪ್ಪಿದರೆ ಏನು ಬಾಧಕವೆಂಬುದನ್ನು **ಇಪ್ಪಡಿ ಬುದ್ಧಿ ವಿಶೇಷ ತ್ಯಾಗ ಪೂರ್ವಕ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಹೀಗೆ ಉಪಾಯತ್ವ ಬುದ್ಧಿ ವಿಶೇಷ ತ್ಯಾಗ ಪೂರ್ವಕವಾಗಿ ಕರ್ಮ ಜ್ಞಾನ ಭಕ್ತಿಯೋಗ ಗಳನ್ನು ಪ್ರಪತ್ತಿಗೆ ಅಂಗವಾಗಿ ಅಂಗೀಕರಿಸಿದರೆ ಉಪಾಸನ ಪ್ರಪದನಗಳಿಗೆ **ಅಂಗಾಂಗಿ ವ್ಯಪದೇಶತ್ತಿಲ್** ಇತ್ಯಾದಿ ಉಪಾಸನ ಸ್ಥಲದಲ್ಲಿ ಉಪಾಸನವು ಅಂಗಿ, ಪ್ರಪತ್ತಿ ಅಂಗವೆಂದೂ, ಪ್ರಪತ್ತಿ ಸ್ಥಲದಲ್ಲಿ ಪ್ರಪತ್ತಿಯು ಅಂಗಿ

**ತ್ತಿಲ್ ನಾರಾಟ್ಟಮೇಯುಳ್ಳದು. ಅಂಗ ಭಾವತ್ತಿಲೇ ಯಥಾ ಕಥಂಚಿದನುಷ್ಠಾನಮ್ ಅಮ್ಮೈಯುಂ ಮೆನ್ನಿರ ವೈಷಮ್ಯಮುಮ್ ಮಂದಮ್. "ಸಕಲಾಂಗೋಪ ಸಂಹಾರೇ ಕಾಮ್ಯಂ ಕರ್ಮಪ್ರಸಿಧ್ಯತಿ"ಎನ್ರು ಶೊಲ್ಲಪಟ್ಟದಿರೇ.**

**ಅತಃ ಸ್ವರೂಪ ತ್ಯಾಗೋಕ್ತ್ಯಾ ಕೈಂಕರ್ಯಸ್ಯಾಪಚರತಾ ।**
**ಉಪಾಯತ್ವ ಮತಿತ್ಯಾಗೇ ತತ್ಸ್ವರೂಪಾಂಗತಾ ಭವೇತ್ ॥1।2॥**

**ಸಾತ್ವಿಕ ತ್ಯಾಗಯುಕ್ತಾನಾಂ ಧರ್ಮಾಣಾ ಮೇತದಂಗತಾ ।**
**ನೂನಂ ವಿಸ್ಮೃತ ಕಾಕಾದಿ ವೃತ್ತಾನ್ತೈ ರುಪವರ್ಣಿತಾ ॥।1 ॥**

**ಸಕೃತ್ಪ್ರಪದನೇನೈವ ಧರ್ಮಾಂತರ ದವೀಯಸಾ ।**
**ತತ್ಕ್ಷಣೇಭಿಮತಂ ಪೂರ್ವೇಸಂಪ್ರಾಪು ರಿತಿ ಶುಶ್ರುಮ ॥।18॥**

---

ಉಪಾಸನಾದಿಗಳು ಅಂಗಗಳು ಎಂಬ ಶಬ್ದ ಭೇದವು ಉಂಟೇ ಹೊರತು ಇಬ್ಬರೂ ಎರಡನ್ನೂ ಅಂಗವಾಗಿಯೋ ಅಂಗಿಯಾಗಿಯೋ ಅನುಷ್ಠಿಸಬೇಕೆಂಬುದಕ್ಕೆ ನಿವಾರಕರಿಲ್ಲವೆಂದು ತಾತ್ಪರ್ಯ. **ಅಂಗಭಾವತ್ತಿಲ್** ಇತ್ಯಾದಿ- ಭಕ್ತಿಯನ್ನು ಅಂಗಿಯನ್ನಾಗಿಯೂ ಅದಕ್ಕೆ ಪ್ರಪತ್ತಿಯನ್ನು ಅಂಗವನ್ನಾಗಿಯೂ ಅನುಷ್ಠಿಸುವ ಉಪಾಸಕನಿಗೆ ಭಕ್ತಿರೂಪವಾದ ಅಂಗಿಯು ಪೂರ್ಣವಾಗಿ ಅನುಷ್ಠಿಸಲ್ಪಡಬೇಕು. ಪ್ರಪತ್ತಿಯನ್ನು ಅಂಗಿಯಾಗಿ ಭಕ್ತಿಯನ್ನು ಅಂಗವಾಗಿ ಅನುಷ್ಠಿಸುವ ಪ್ರಪನ್ನನಿಗೆ ಭಕ್ತಿಯು ಯಥಾಕಥಂಚಿತ್ ಅನುಷ್ಠಿಸಲ್ಪಟ್ಟರೆ ಸಾಕು, ಎಂದು ಹೇಳುವುದು ಸರಿಯಿಲ್ಲ. **ಅಂಗಭಾವತ್ತಿಲ್ ಯಥಾಕಥಂಚಿದನುಷ್ಠಾನಮ್ ಅಮ್ಮೈಯುಂ ಮೆನ್ನಿರ ವೈಷಮ್ಯಮುಮ್ ಮಂದಮ್** ಪ್ರಪತ್ತಿಗೆ ಅಂಗವಾಗಿ ಭಕ್ತಿಯನ್ನು ಹೆಚ್ಚು ಕಡಿಮೆ ಅನುಷ್ಠಿಸಿದರೆ ಸಾಕು ಎಂದು **ವೈಷಮ್ಯ-ವ್ಯತ್ಯಾಸವೂ ಮಂದಮ್**-ಸರಿಯಲ್ಲವೆಂದರ್ಥ. ಏಕೆಂದರೆ, **ಸಕಲಾಂಗೋಪಸಹಾರೇ** ಇತ್ಯಾದಿ-**ಕಾಮ್ಯಂಕರ್ಮ**-ಒಂದು ಫಲಕ್ಕೋಸ್ಕರ ಆಸೆಪಟ್ಟು ಮಾಡುವ ಕರ್ಮವು ಎಲ್ಲಾ ಅಂಗಗಳೂ ಒಂದುಗೂಡಿ ಅನುಷ್ಠಿಸಲ್ಪಟ್ಟರೇನೆ ಸಿದ್ಧಿಸುತ್ತದೆ, ಎಂದು ಹೇಳಲ್ಪಟ್ಟದೆಯಲ್ಲವೇ. ಪ್ರಪತ್ತಿಯೂ ಒಂದು ಫಲವನ್ನುದ್ದೇಶಿಸಿ ಅನುಷ್ಠಿಸಲ್ಪಡುವುದರಿಂದ ಸಕಲಾಂಗಗಳನ್ನೂ ಯಥಾನ್ಯಾಯ ಅನುಷ್ಠಿಸದೆ ಹೋದರೆ ಮೋಕ್ಷ ಫಲವನ್ನು ಕೊಡಲಾರದು.

ಉಕ್ತಾರ್ಥಗಳನ್ನು ಕಾರಿಕೆಯಿಂದ ಸಂಗ್ರಹಿಸುತ್ತಾರೆ. ಆದಾಗಿ **ಅತಃ ಸ್ವರೂಪತ್ಯಾಗೋಕ್ತ್ಯಾ** ಇತ್ಯಾದಿ- 'ಸರ್ವಧರ್ಮಾನ್ ಪರಿತ್ಯಜ್ಯ" ಎಂದು ಎಲ್ಲಾ ಧರ್ಮಗಳನ್ನೂ ಸ್ವರೂಪತಃ ಬಿಡಬೇಕೆಂದರೆ ವರ್ಣಾಶ್ರಮೋಚಿತ ಧರ್ಮಾನುಷ್ಠಾನವೂ ಗುರು ವಂದನಾದಿಗಳೂ ಅಪಚಾರವಾಗಿ ಪರ್ಯವಸಾನವನ್ನು ಹೊಂದುತ್ತವೆ. **ಉಪಾಯತ್ವ ಮತಿತ್ಯಾಗೇ** ಇತ್ಯಾದಿ-ಧರ್ಮಗಳಲ್ಲಿ ಉಪಾಯತ್ವ ಬುದ್ಧಿಯನ್ನು ಬಿಡಲು ವಿಧಿಸುತ್ತದೆಯೆಂದರೆ ಧರ್ಮಗಳ ಸ್ವರೂಪವು ಪ್ರಪತ್ತಿಗೆ ಅಂಗವಾಗಬೇಕಾಗುತ್ತದೆ. **ಸಾತ್ವಿಗ ತ್ಯಾಗಯುಕ್ತಾನಾಂ** ಇತ್ಯಾದಿ-ಸಾತ್ವಿಕ ತ್ಯಾಗ ಯುಕ್ತವಾದ ಧರ್ಮಾನುಷ್ಠಾನವು ಈ ಪ್ರಪತ್ತಿಗೆ ಅಂಗವೆಂದು ಹೇಳುವ ಕೆಲವರ ಮಾತೂ, ಸಾತ್ವಿಕ ತ್ಯಾಗಪೂರ್ವಕ ಧರ್ಮಾನುಷ್ಠಾನಗಳನ್ನು ಪ್ರಪತ್ತಿಗೆ ಅಂಗವಾಗಿ ಮಾಡದೆ, ಕೇವಲ ಪ್ರಪತ್ತಿಯನ್ನು ಅನುಷ್ಠಿಸಿದ ಕಾಕ ವಿಭೀಷಣ ಮೊದಲಾದವರ ವೃತ್ತಾಂತಗಳನ್ನು ಮರೆತು ಹೇಳುವ ಮಾತು. **ಧರ್ಮಾಂತರ ದವೀಯಸಾ**-ಒಂದು ಧರ್ಮಗಳೂ ಅಂಗವಾಗಿಲ್ಲದೆ ಇರುವುದರಿಂದ, **ಅವುಗಳಿಗೆ** ಬಹು ದೂರದಲ್ಲಿರುವ **ಸಕೃತ್ ಪ್ರಪದನೇನೈವ**-ಒಂದು ಸಲ ಅನುಷ್ಠಿಸಿದ ಪ್ರಪತ್ತಿಯಿಂದಲೇ, ತತ್ಕ್ಷ**ಣೇಽಭಿಮತಂ ಪೂರ್ವೇ** ಆ ಕ್ಷಣದಲ್ಲಿಯೇ ಪೂರ್ವರು ತಮ್ಮ ಇಷ್ಟಾರ್ಥಗಳನ್ನು, **ಸಂಪ್ರಾಪುರಿತಿ ಶುಶ್ರುಮ**-ಪಡೆದರೆಂದು ಇತಿಹಾಸ ಪುರಾಣಗಳಿಂದ ಕೇಳಿರುತ್ತೇವೆ.

ನೈರಪೇಕ್ಷ್ಯ ವಿಧಿಪಕ್ಷೇತು ನ ಕಸ್ಯಾಪಿ ಬಾಧ ಇತ್ಯಾಹ,

ಪ್ರಸಕ್ತಾಂಗತ್ವ ಬಾಧೇತು ಬ್ರಹ್ಮಾಸ್ತ್ರ ಸಮತೇಜಸಃ ।
ಉಪಾಯಸ್ಯ ಪ್ರಭಾವಶ್ಚ ಕೈಂಕರ್ಯಾದಿಚ ಸುಸ್ಥಿರಮ್ ॥

ಆಹೈಯಾಲ್, ಇಙ್ಙು ಸರ್ವಧರ್ಮಙ್ಙಳಿನುಡೈಯ ಸ್ವರೂಪ ತ್ಯಾಗತ್ತೈ ಅಙ್ಗಮಾಹ ವಿಧಿಕ್ಕಿರದೆನ್ರುಮ್ ಅನ್ರೈ ಅಙ್ಗಮಾಮ್ಪಡಿ ಇಙ್ಙು ಬುದ್ಧಿ ವಿಶೇಷ ತ್ಯಾಗಮಾತ್ರಮ್ ವಿಧಿಕ್ಕಿರದೆನ್ರುಮ್ ಶೊಲ್ಲುಹಿರ ಪಕ್ಷಂಗಳ್, ಅಜ್ಞಾನು ಪಾಲನಾದಿ ಶಾಸ್ತ್ರಂಗಳುಕ್ಕುಮ್, ಪ್ರಪತ್ತಿಕ್ಕು ನೈರಪೇಕ್ಷ್ಯಂ ಶೊಲ್ಲುಹಿರ ಶಾಸ್ತ್ರಙ್ಙಳುಕ್ಕುಮ್ ಪೂರ್ವಾಚಾರ್ಯ ಸಂಪ್ರದಾಯಙ್ಙಳುಕ್ಕುಮ್ ಪ್ರಪನ್ನರಾಯ್ ಪೋನ್ದ ಪೂರ್ವಶಿಷ್ಟರ್‌ಹಳುಡೈಯ ಆಚಾರತ್ತುಕ್ಕುಮ್ ವಿರುದ್ಧಙ್ಙಳಾಮ್. ಇಪ್ಪಡಿ ಉಕ್ತ ದೋಷಙ್ಙಳಾಲೇ ಧರ್ಮಙ್ಙಳಿನುಡೈಯ ಸ್ವರೂಪ ತ್ಯಾಗಮುಮ್ ಪ್ರಪತ್ತಿಕ್ಕು ಅಂಗಮನ್ರು. ಉಕ್ತ ನೈರಪೇಕ್ಷ್ಯತ್ತಾಲೇ ಅಂದ ಧರ್ಮಂಗಳಿನುಡೈಯ ಸ್ವರೂಪಮುಮ್ ಇದುಕ್ಕು ಅಂಗಮನ್ರು. ಆಹೈಯಾಲ್ ಇಙ್ಙು ಮತ್ತೊರು ಧರ್ಮತ್ತಾಲುಮ್ ಇಪ್ರಪತ್ತಿಕ್ಕು ಆಪೇಕ್ಷೆಯಿಲ್ಲೈಯೆನ್ಗೈಯಿಲೇ ಇತ್ತ್ಯಾಗ ವಿಧಿಕ್ಕು ತಾತ್ಪರ್ಯಮ್.

ನೈರಪೇಕ್ಷ ವಿಧಿಸಿದ್ಧ್ಯನ್ತೇ ಪ್ರಸಕ್ತಿಂ ಪ್ರಸಕ್ತಾಂಶ್ಚ ದರ್ಶಯತಿ

ಇಪ್ಪಡಿ ಪ್ರತಿಷೇಧಿಕ್ಕೈಕ್ಕು ಪ್ರಸಙ್ಗಮ್ ವೇಣುಮ್. ಇಙ್ಙು ಎನ್ನ ಧರ್ಮಙ್ಙಳ್ ಪ್ರಸಕ್ತಙ್ಙಳಾಯ್

---

ನೈರಪೇಕ್ಷ್ಯ ವಿಧಿ ಪಕ್ಷದಲ್ಲಿ, ಉಪಾಯ ಪ್ರಭಾವವು ಸಿದ್ಧಿಸುವುದಲ್ಲದೆ ಕೈಂಕರ್ಯಾದಿಗಳೂ ಸ್ಥಿರ ಪ್ರತಿಷ್ಠಿತಗಳಾಗುತ್ತವೆಂದು ಪ್ರಸಕ್ತಾಂಗತ್ವ ಬಾಧೇತು ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಇತರ ಬ್ರಹ್ಮ ವಿದ್ಯಾನಾಯದಂತೆ ನ್ಯಾಸ ವಿದ್ಯಾರೂಪವಾದ ಪ್ರಪತ್ತಿಗೆ ಅಂಗವಾಗಿ ವರ್ಣಾಶ್ರಮ ಧರ್ಮಗಳು ಅನುಷ್ಠೇಯಗಳು ಎಂದು ಪ್ರಸಕ್ತವಾಗಲು, ಅವುಗಳು ಅಂಗಗಳಲ್ಲವೆಂದು "ಸರ್ವಧರ್ಮಾನ್ ಪರಿತ್ಯಜ್ಯ" ಎಂಬುದರಿಂದ ಅವುಗಳ ನೈರಪೇಕ್ಷ್ಯವು ವಿಧಿಸಲ್ಪಡುತ್ತದೆಯೆಂದು ಹೇಳಿ ಬ್ರಹಾಸ್ತ್ರ ಸಮತೇಜಸಃ–ಸಹಾಯಾಂತರ ನಿರಪೇಕ್ಷವಾದ ಬ್ರಹ್ಮಾಸ್ತ್ರಕ್ಕೆ ಸಮಾನವಾದ ಪ್ರಭಾವವನ್ನುಳ್ಳ ಉಪಾಯಸ್ಯ ಪ್ರಭಾವಶ್ಚ-ಪ್ರಪತ್ತಿಯ ಪ್ರಭಾವವು ಹೇಳಲ್ಪಟ್ಟಿತು. ಕೈಂಕರ್ಯಾದಿಚ ಸುಸ್ಥಿರಮ್–ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳು ಪ್ರಪತ್ತಿಗೆ ಅಂಗವಲ್ಲದಿದ್ದರೂ, ಆಶ್ರಮ ಧರ್ಮಗಳಾದ್ದರಿಂದ ಅನುಷ್ಠಿಸಲ್ಪಡಬೇಕಾದವು. ಅವುಗಳು ಭಗವದಾಜ್ಞಾ ಪರಿಪಾಲನ ರೂಪ ಕೈಂಕರ್ಯ ಬುದ್ಧಿಯಿಂದ ಸ್ವಯಂ ಪ್ರಯೋಜನಗಳಾಗಿ ಮಾಡಲ್ಪಡಬೇಕೆಂಬುದು ಸಿದ್ಧ.

'ಪರಿತ್ಯಜ್ಯ" ಎಂಬ ತ್ಯಾಗ ವಿಧಿಗೆ ತಾತ್ಪರ್ಯ.

ಮೇಲೆ ಹೇಳಿದ ಕಾರಣಗಳಿಂದ "ಸರ್ವ ಧರ್ಮಗಳ ಸ್ವರೂಪ ತ್ಯಾಗಪಕ್ಷದಲ್ಲಿಯೂ,ಅವುಗಳ ಉಪಾಯತ್ವ ಬುದ್ಧಿ ತ್ಯಾಗ ಪಕ್ಷದಲ್ಲಿಯೂ ಹೇಳಿದ ದೂಷಣಗಳನ್ನು ಆಹೈಯಾಲ್ ಎಂದಾರಂಭಿಸಿ ಉಪಸಂಹಾರಮಾಡುತ್ತಾರೆ. ಅದ್ದರಿಂದ ಇಲ್ಲಿ ಸರ್ವಧರ್ಮಗಳ ಸ್ವರೂಪತ್ಯಾಗವನ್ನು ಅಂಗವಾಗಿ ವಿಧಿಸುತ್ತದೆಯೆಂದೂ ಆ ಧರ್ಮಗಳು ಅಂಗವಾಗುವಂತೆ ಬುದ್ಧಿ ವಿಶೇಷ ತ್ಯಾಗ ಮಾತ್ರವುವಿಧಿಸಲ್ಪಡುತ್ತದೆಯೆಂದೂ ಹೇಳುವಪಕ್ಷಗಳು ಆಜ್ಞಾನುಪಾಲನ ಶಾಸ್ತ್ರಗಳಿಗೂಪ್ರಪತ್ತಿಗೆ ನೈರಪೇಕ್ಷ್ಯವನ್ನು ಹೇಳುವ ಶಾಸ್ತ್ರಗಳಿಗೂ, ಪೂರ್ವಾಚಾರ್ಯ ಸಂಪ್ರದಾಯಗಳಿಗೂ ಪ್ರಪನ್ನರಾಗಿದ್ದ ಪೂರ್ವಶಿಷ್ಟರುಗಳ ಆಚಾರಗಳಿಗೂ ವಿರುದ್ಧಗಳು. ಇಪ್ಪಡಿ ಉಕ್ತದೋಷಂಗಳಾಲೇ ಇತ್ಯಾದಿ–ಹೀಗೆ ಹೇಳಲ್ಪಟ್ಟ ದೋಷಗಳಿಂದ ಧರ್ಮಗಳ ಸ್ವರೂಪ ತ್ಯಾಗವೂ ಪ್ರಪತ್ತಿಗೆ ಅಂಗವಲ್ಲ. ಪ್ರಪತ್ತಿಯ ನೈರಪೇಕ್ಷ್ಯದಿಂದ ಆ ಧರ್ಮಗಳ ಸ್ವರೂಪವು ಪ್ರಪತ್ತಿಗೂ ಅಂಗವಲ್ಲ ಅಂದರೆ ಧರ್ಮಾಂತರ ನೈರಪೇಕ್ಷ್ಯದಲ್ಲಿ ಈ ತ್ಯಾಗ ವಿಧಿಗೆ ತಾತ್ಪರ್ಯವೆಂದು ಭಾವ.

ಪ್ರಪತ್ತಿಗೆ ಸರ್ವಧರ್ಮಸಾಪೇಕ್ಷತ್ವ ಪ್ರಸಂಗವು ಇದ್ದರೆ ಅಲ್ಲವೇ, ಈ ಪ್ರಶ್ನೆಯು ಸಂಭವಿಸುತ್ತದೆಯೆಂದು ಇಪ್ಪಡಿ ಪ್ರತಿಷೇಧಿಕ್ಕೈಕ್ಕು ಇತ್ಯಾದಿ ಹೇಳುತ್ತಾರೆ. ಅದಾಗಿ ಹೀಗೆ ಪ್ರತಿಷೇಧಿಸುವುದಕ್ಕೆ ಪ್ರಸಂಗವು ಬೇಕು. ಇಂಗು

**ಪ್ರತಿಷೇಧಿಕ್ಕಪ್ಪಡುಹಿರನವೆನ್ನಿಲ್ ? ವೇದಾನ್ತ ಚೋದಿತ್ತೈಹಳಾನ ವಿದ್ಯೈಹಳಿಲ್ ಒರುವಿದ್ಯೈಯಿಲೇ ಯೋದಿ ಅಙ್ಗಙ್ಗಳಾಯ್ ಶ್ರೋತ್ತಿನ ವರ್ಣಾಶ್ರಮ ಧರ್ಮಂಗಳುಮ್, ಗತಿಚಿನ್ತನಾದಿಹಳುಮ್ ವಿದ್ಯಾನ್ತರತ್ತಿಲುಮ್ ವರುಮಾಪ್ಪೋಲೇ ನ್ಯಾಸವಿದ್ಯೈಯಿಲುಮ್ ಇವ್ವೈ ತುಲ್ಯ ನ್ಯಾಯತ್ತಾಲೇ ಅಂಗಂಗಳಾಯ್ ವರಪ್ಪ್ರಾಹ ಇಪ್ಪಡಿ ಅಂಗತ್ವ ಪ್ರಸಙ್ಗಮುಡೈಯ ಸರ್ವಧರ್ಮಂಗಳಾಲುಮ್ ಇದುಕ್ಕು ಅಪೇಕ್ಷೈಯಿಲ್ಲೈಯೆನ್ಗೈ ಇವ್ವಿಡುತ್ತುಕ್ಕು ಉಚಿತಮ್.**

**ನೈರಪೇಕ್ಷ್ಯ ವಿಧೌ ಪ್ರಪನ್ನಾನಾಂ ವರ್ಣಾಶ್ರಮ ಧರ್ಮಾನುಷ್ಠಾನಮ್ ಕಥಂ ಸಂಗಚ್ಛತಿ ?**

**ಇದ್ಧರ್ಮಙ್ಗಳುಕ್ಕು "ಸಹಕಾರಿತ್ವೇನ ಚ" ಎನ್ಗಿರ ಸೂತ್ರತ್ತಿಲ್ಸೊನ್ನ ವಿದ್ಯಾ ಸಹಕಾರಿತ್ವವೇಷಮ್ ತವಿರ್ನ್ದಾಲುಮ್"ವಿಹಿತತ್ವಾಚ್ಚ ಆಶ್ರಮ ಕರ್ಮಾಪಿ"ಎನ್ರ ಸೂತ್ರಾನ್ತರತ್ತಿಲ್ಸೊನ್ನ ವಿನಿಯೋಗಾನ್ತರತ್ತುಕ್ಕು ಪ್ರಪನ್ನನ್ ಪಕ್ಕಲ್ ನಿವಾರಕರಿಲ್ಲೈ. ಆಹೈಯಾಲ್ ಇದ್ಧರ್ಮಙ್ಗಳಿನುಡೈಯ ಅನುಷ್ಠಾನಮುಮ್,ಧರ್ಮಂಗಳೈ ತ್ಯಜಿಕ್ಕೈಯುಮ್ ಪ್ರಪತ್ತಿಕ್ಕು ಅಂಗಮಲ್ಲಾಮೈಯಾಲ್, ಅಶಕ್ಯಙ್ಗಳಿಲ್ ನೈರಾಶ್ಯಂ, ಅಧಿ**

---

**ಎನ್ನಧರ್ಮಂಗಳ್** –ಇತ್ಯಾದಿ ಇಲ್ಲಿ ಯಾವ ಧರ್ಮಗಳು ಪ್ರಸಕ್ತಗಳಾಗಿ ಪ್ರತಿಷೇಧಿಸಲ್ಪಡುತ್ತವೆಯೆಂದರೆ, **ವೇದಾಂತ ಚೋದಿತ್ತೈಹಳಾನ** ಎಂದಾರಂಭಿಸಿ ಉತ್ತರಿಸುತ್ತಾರೆ. ಅದಾಗಿ ವೇದಾಂತಗಳಲ್ಲಿ – ಉಪನಿಷತ್ತುಗಳಲ್ಲಿ ಚೋದಿಸಲ್ಪಟ್ಟ ಮೋಕ್ಷ ವಿದ್ಯೆಗಳಲ್ಲಿ **ಓದಿ** – ಇತ್ಯಾದಿ ಒಂದು ವಿದ್ಯಾಪ್ರಕರಣದಲ್ಲಿ, "ಯಜ್ಞೇನ, ದಾನೇನ, ತಪಸಾಽನಾಶಕೇನ" ಎಂದು ಅಂಗವಾಗಿ ಶ್ರುತಗಳಾದ ವರ್ಣಾಶ್ರಮ ಧರ್ಮಗಳು, ಚಿತ್ತಸುದ್ಧ್ಯಾಪಾದಕತ್ವರೂಪವಾದ ಅರ್ಥಸಾಮರ್ಥ್ಯದಿಂದ ಎಲ್ಲಾ ವಿದ್ಯೆಗಳಿಗೂ ಅಂಗಗಳಾಗಿ ಆಗುವಂತೆಯೂ, ಪಂಚಾಗ್ನಿ ವಿದ್ಯೆಗಳಲ್ಲಿ ಶ್ರುತವಾದ ಅರ್ಚಿರಾದಿ ಮಾರ್ಗ ಚಿಂತನವು ಫಲಪ್ರಾಪ್ತಿಗೆ ಅನುಕೂಲವಾಗಿ ಇತರ ವಿದ್ಯೆಗಳಲ್ಲಿಯೂ **ವರುಮಾಪ್ಪೋಲೇ** – ಅನುಷ್ಠಿಸಲ್ಪಡಬೇಕಾಗಿ ಪ್ರಾಪ್ತವಾಗುವಂತೆಯೂ **ನ್ಯಾಸವಿದ್ಯೈಯಿಲುಮ್** – ನ್ಯಾಸವಿದ್ಯೆಯಲ್ಲೂ, **ಇವ್ವೈತುಲ್ಯನ್ಯಾಯತ್ತೈಯಾಲೇ** – ಅಂದರೆ ಇದೂ ಮೋಕ್ಷವಿದ್ಯೆಯೆಂಬ ಸಮಾನನ್ಯಾಯದಿಂದ **ಅಂಗಂಗಳಾಹವರಪ್ಪ್ರಾಹ** – ಅಂಗಗಳಾಗಿ ಈ ಸರ್ವಧರ್ಮಗಳೂ ಅನುಷ್ಠಿಸಲ್ಪಡಬೇಕೆಂಬ ಪ್ರಸಂಗವು ಏರ್ಪಡುತ್ತದೆ ಎಂಬುದು ಇಲ್ಲಿ ಆಕ್ಷೇಪ. ಇದಕ್ಕೆ ಸಮಾಧಾನವಾಗಿ **ಇಪ್ಪಡಿ ಅಂಗತ್ವಪ್ರಸಂಗತ್ವ ಮುಡೈಯ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಹೀಗೆ ಅಂಗತ್ವ ಪ್ರಸಂಗವನ್ನುಳ್ಳ ಸರ್ವಧರ್ಮಗಳಿಂದಲೂ, **ಇದುಕ್ಕಪೇಕ್ಷೈಯಿಲ್ಲೈ** – ಇತ್ಯಾದಿ ಈ ಪ್ರಪತ್ತಿಗೆ ಅಪೇಕ್ಷೆಯಿಲ್ಲವೆಂಬುದು ಇಲ್ಲಿ ಉಚಿತವು.

**ಧರ್ಮಗಳು ಪ್ರಪತ್ತಿಗೆ ಅಂಗವಲ್ಲ. ವಿಹಿತಗಳಾದ್ದರಿಂದ ನಿತ್ಯನೈಮಿತ್ತಿಕವರ್ಣಾಶ್ರಮ ಧರ್ಮಗಳು ಪ್ರಪನ್ನನಿಂದ ಅವಶ್ಯಾನುಷ್ಠೇಯಗಳು.**

**ಇದ್ಧರ್ಮಂಗಳುಕ್ಕು** – ಇತ್ಯಾದಿ ಈ ಧರ್ಮಗಳಿಗೆ, "ಸಹಕಾರಿತ್ವೇನಚ [ಬ್ರಹ್ಮಸೂತ್ರ (3-4-33)] ಎಂಬ ಸೂತ್ರದಲ್ಲಿ ಹೇಳಿದ ವಿದ್ಯಾ ಸಹಕಾರಿತ್ವ ವೇಷವು, ನ್ಯಾಸವಿದ್ಯಾ ವಿಷಯದಲ್ಲಿ ಇಲ್ಲದಿದ್ದರೂ, "ವಿಹಿತತ್ವಾಚ್ಚ ಆಶ್ರಮಕರ್ಮಾಪಿ" [ಬ್ರ. ಸೂ (3-4-3?)] ಎಂಬ ಸೂತ್ರಾಂತರದಲ್ಲಿ ಆಶ್ರಮಾಂಗವಾಗಿ ವಿಹಿತವಾದ ವಿನಿಯೋಗಾಂತರಕ್ಕೆ ಪ್ರಪನ್ನನ ವಿಷಯದಲ್ಲಿ **ನಿವಾರಕರಿಲ್ಲೈ** – ತಡೆಯುವವರಾರೂ ಇಲ್ಲ. ಅಂದರೆ, ಪ್ರಪನ್ನನಿಗೆ ವರ್ಣಾಶ್ರಮ ಧರ್ಮಗಳು, ಪ್ರಪತ್ತಿಗೆ ಅಂಗಗಳಾಗಿ ಅನುಷ್ಠಿಸಲ್ಪಡಬೇಕಾಗಿಲ್ಲವಾದರೂ, ವಿನಿಯೋಗ ಪೃಥಕ್ತ್ವ ನ್ಯಾಯದಿಂದ, ಆಶ್ರಮಧರ್ಮಗಳಾಗಿ ವಿಹಿತಗಳಾದ್ದರಿಂದ ಅವಶ್ಯಾನುಷ್ಠೇಯಗಳೆಂದು ತಾತ್ಪರ್ಯ. **ಆಹೈಯಾಲ್** ಇತ್ಯಾದಿ–ಆದ್ದರಿಂದ ಈ ಧರ್ಮಗಳ ಅನುಷ್ಠಾನವೂ, ಧರ್ಮಗಳನ್ನೂ ಬಿಡುವುದೂ, ಪ್ರಪತ್ತಿಗೆ ಅಂಗವಲ್ಲವಾದ

**ಕಾರತ್ತಿಲೇ ಶೊರುಹುಮ್. ಶಕ್ಯಮಾನ ನಿತ್ಯನೈಮಿತ್ತಿಕಂಗಳುಡೈಯ ಅನುಷ್ಠಾನಂ, ಆಜ್ಞಾನುಪಾಲನ ಮಾನ ಕೈಙ್ಕರ್ಯಮಾತ್ರಮ್.**

**ವರ್ಣಾಶ್ರಮ ಧರ್ಮಾಣಾಮಪಿ, ವಿಹಿತತ್ವಾತ್ ಅನುಕೂಲ್ಯಸಙ್ಕಲ್ಪೇ ಅಂತರ್ಗತತ್ವಾಚ್ಚ ಪ್ರಪತ್ತೇಃ ರಂಗತ್ವಮಿತಿ ವಾದಸ್ಯ ನಿರಾಸಃ**

**ಸಙ್ಕಲ್ಪಮಾತ್ರಮೇವಾಂಗಂ ಶ್ರುತ ಮಾಚರಣಂ ಪುನಃ।**
**ಅನಂಗ ಮಾಜ್ಞಯಾ ಪ್ರಾಪ್ತಂ ನ ಸಂಕಲ್ಪ ನಿಬಂಧನಮ್ ॥12॥**

**ಅನುಜ್ಞಾಕೈಂಕರ್ಯಾಣಾಂ ಪ್ರಪನ್ನೋಚಿತಂ ಪ್ರಯೋಜಕಮಾಹ**

**ಇಪ್ಪಡಿಯಾಹಿಲ್ ಇವನುಕ್ಕು ನಿತ್ಯನೈಮಿತ್ತಿಕಂಗಳಿಲ್ ಅಡೈಕ್ಕಮೊಣ್ಣಾದ ಪ್ರಭೂತ ಕೈಂಕರ್ಯಂಗಳುಕ್ಕು ಪ್ರಯೋಜಕರಾರ್ ? ಎನ್ನಿಲ್ – ಇವೈ ಇವನುಕ್ಕು ಉಪಾಯಾಂತರತ್ತಿಲ್ಪುಹಾದು. ಅಂಗಾಂತರ ನಿರ್ಪೇಕ್ಷೈಯಾನ ಪ್ರಪತ್ತಿಕ್ಕು ಪರಿಕರಂಗಳುಮಾಹಾದು. ಅಕರಣತ್ತಿಲ್ ಈಶ್ವರನ್ ವೆರುಕ್ಕುಮೆನ್ರು ಶಿಯ್**

---

ರಿಂದ, ಅಶಕ್ಯಗಳಾದ ಧರ್ಮಗಳಲ್ಲಿ ನೈರಾಶ್ಯವು ಅಧಿಕಾರದಲ್ಲಿ ಸೇರಿಕೊಳ್ಳುತ್ತದೆ. **ಶಕ್ಯಮಾನನಿತ್ಯನೈಮಿತ್ತಿಕಂಗಳ್** ಇತ್ಯಾದಿ – ಶಕ್ಯಗಳಾದ ನಿತ್ಯನೈಮಿತ್ತಿಕ ಧರ್ಮಗಳ ಅನುಷ್ಠಾನವು ಆಜ್ಞಾನುಪಾಲನವಾದ ಕೈಂಕರ್ಯ ಮಾತ್ರ, ಪ್ರಪತ್ತಿಗೆ ಅಂಗವಲ್ಲವೆಂದು ತಾತ್ಪರ್ಯ.

**ಸಂಕಲ್ಪ ಮಾತ್ರ ಮೇವಾಂಗಂ,** ಇತ್ಯಾದಿ – ಪ್ರಪತ್ತಿಗೆ ಅಂಗಗಳಾದವುಗಳಲ್ಲಿ, "ಆನುಕೂಲ್ಯಸ್ಯಸಂಕಲ್ಪಃ", ಎಂದು ಆನುಕೂಲ್ಯ ಸಂಕಲ್ಪವು ಅಂಗವಾಗಿ ತೋಚುವುದಾದ್ದರಿಂದ, ಅದರ ಆಚರಣವು ಅಂಗವಾಗಬೇಡವೇ ಎಂದರೆ, 'ಆನುಕೂಲ್ಯಸ್ಯಸಂಕಲ್ಪಃ' ಎಂದು ಆನುಕೂಲ್ಯದ ಸಂಕಲ್ಪ ಮಾತ್ರವೇ ಅಂಗವೆಂದು ಶ್ರುತವು. **ಶ್ರುತಮಾಚರಣಂಪುನಃ** – ಅದರ ಆಚರಣೆಯು ಆಜ್ಞೆಯಿಂದಶ್ರುತವು. **ಅನಂಗ ಮಾಜ್ಞಯಾ ಪ್ರಾಪ್ತಂ** – ಆಜ್ಞೆಯಿಂದ ಅಂದರೆ ಶಾಸ್ತ್ರವು ವಿಧಿಸಿರುವುದರಿಂದ. ಅದು ಪ್ರಾಪ್ತವು. ಆಚರಣೆಯು ಅಂಗವಲ್ಲ. **ನಸಂಕಲ್ಪ ನಿಬಂಧನಮ್** –ಪ್ರಪತ್ತ್ಯಂಗಭೂತವಾದ ಆನುಕೂಲ್ಯ ಸಂಕಲ್ಪ ಪ್ರಯುಕ್ತವಲ್ಲ.

**ಪ್ರಪನ್ನನು ಅನುಜ್ಞಾ ಕೈಂಕರ್ಯಗಳನ್ನು ಮಾಡಲು ವಿಧಿ ಯಾವುದು.**

**ಇಪ್ಪಡಿ ಯಾಹಿಲ್** – ಇತ್ಯಾದಿ ಹೀಗೆ ಆನುಕೂಲ್ಯಾಚರಣವು ಆಜ್ಞೆಯಿಂದ ಅಂದರೆ ಸ್ವತಂತ್ರ ವಿಧಿಯಿಂದ ಪ್ರಾಪ್ತವೆಂದು ಹೇಳಿದರೆ, ಅನುಜ್ಞಾಕೈಂಕರ್ಯಗಳಿಗೆ ವಿಧಿ ಯಾವುದು ಎಂದರೆ ಅದನ್ನು ವಿವರಿಸುತ್ತಾರೆ. **ಇವನುಕ್ಕು ನಿತ್ಯನೈಮಿತ್ತಿಕಂಗಳಿಲ್** ಇತ್ಯಾದಿ – ಈ ಪ್ರಪನ್ನನಿಗೆ ನಿತ್ಯನೈಮಿತ್ತಿಕ ಕೈಂಕರ್ಯಗಳಾದ ಸ್ನಾನ, ಸಂಧ್ಯಾವಂದನ, ಜಪ, ಭಗವದಾರಾಧನೆ, ವೈಶ್ವದೇವ ಪಂಚಮಹಾಯಜ್ಞಗಳಿಗೆ ಬಹಿರ್ಭೂತಗಳಾದ, ಪುಷ್ಪ ಮಾಲೆಯನ್ನು ತೊಡುವುದು, ಭಗವತ್ಸನ್ನಿಧಿಯಲ್ಲಿ ದೀಪವನ್ನು ಹಚ್ಚಿಡುವುದು, ದೇವಸ್ಥಾನಕ್ಕೆ ಮಂಟಪ, ಗೋಪುರ, ನಂದನ ವನಗಳನ್ನು ನಿರ್ಮಾಣ ಮಾಡುವುದು ಉತ್ಸವಾದಿಗಳನ್ನು ನಡೆಸುವುದು ಇತ್ಯಾದಿ ಅನೇಕ ಕೈಂಕರ್ಯಗಳಲ್ಲಿ **ಪ್ರಯೋಜಕರಾರೆನ್ನಿಲ್**–ಪ್ರವರ್ತಿಸುವುದಕ್ಕೆ ಕಾರಣವು ಯಾವುದೆಂದರೆ, ಇವೈ ಇತ್ಯಾದಿ–ಇವುಗಳು ಈ ಪ್ರಪನ್ನನಿಗೆ ಉಪಾಯಾಂತರದಲ್ಲಿ ಸೇರುವುದಿಲ್ಲ. **ಅಂಗಾಂತರ ನಿರಪೇಕ್ಷಮಾನ** ಇತ್ಯಾದಿ-ಅವಶ್ಯಗಳಾದ ಐದು ಅಂಗಗಳಿಗಿಂತ ಬೇರೆ ಯಾವುವನ್ನೂ ಅಪೇಕ್ಷಿಸದ, ಪ್ರಪತ್ತಿಗೆ ಈ ಅನುಜ್ಞಾ ಕೈಂಕರ್ಯಗಳು ಪರಿಕರಗಳೂ– ಅಂಗಗಳೂ ಆಗುವುದಿಲ್ಲ, **ಅಕರಣತ್ತಿಲ್** ಇತ್ಯಾದಿ ಮಾಡದಿದ್ದರೆ ಭಗವಂತನು ಇವನನ್ನು **ವೆರುಕ್ಕಿರಾನ್**– ತಿರಸ್ಕರಿಸುತ್ತಾನೆಂದು ಮಾಡುವುದೂ ಇಲ್ಲ. **ತನಿಯೇ** ಇವೈ ಇತ್ಯಾದಿ–ಇವುಗಳು ಪ್ರತ್ಯೇಕವಾಗಿ ಪಾಪಾಂತರ

ಹಿರಾನುಮಲ್ಲನ್. ತನಿಯೇ ಇವ್ವೈ ತನಕ್ಕೊರು ಪಾಪಕ್ಷಯಂ, ಸ್ವರ್ಗ, ಪಶು, ಪುತ್ರಾದಿ ಫಲಾಂತರತ್ತೈ ಆಶೈಪ್ಪಟ್ಟುಚ್ಚೆಯ್‌ಹಿರಾನುಮಲ್ಲನ್. ಲೌಕಿಕರಾನುವರ್‌ಹಳ್ ದ್ಯೂತಾದಿಹಳ್ ಪ್ಪಣ್ಣುಮಾಪ್ಪೋಲೇ ಕೇವಲಂ ತನ್ನುಹಪ್ಪಾಲೇ ಪ್ರವರ್ತಿಕ್ಕಿರಾನುಮಲ್ಲನ್ ; ಮುಕ್ತರೈಪ್ಪೋಲೇ ಭಗವದಭಿಪ್ರಾಯತ್ತೈ ಪ್ರತ್ಯಕ್ಷಮಾಹಕ್ಕಂಡು ಅವನೈ ಉಹಪ್ಪಿಕ್ಕೈಕ್ಕು ಪ್ರವರ್ತಿಕರಾನುಮಲ್ಲನ್. ಮತ್ತೆಂಗನೇ ಎನ್ನಿಲ್? ಇಕ್ಕೈಂಕರ್ಯಂಗಳುಕ್ಕುಮ್ ಫಲಾಂತರಂಗಳ್ ಪೋಲೇ ಭಗವತ್ಪ್ರೀತಿಯುಮ್ ಫಲಮಾಹ ಶಾಸ್ತ್ರಸಿದ್ಧಮಾಹೈಯಾಲೇ ಅವನುಹಪ್ಪಿಲೇ ಸತ್ವೋತ್ತರನಾನ ತನ್ಪ್ರಕೃತಿ ಸ್ವಭಾವತ್ತಾಲೇ ರುಚಿಪಿರಕ್ಕೈಯಾಲೇ

---

ಪ್ರಾಯಶ್ಚಿತ್ತವೆಂದೋ ಸ್ವರ್ಗ, ಪಶು, ಪುತ್ರಾದಿ ಫಲಾಂತರಗಳಿಗೆ ಆಸೆಪಟ್ಟು ಮಾಡುವವನೂ, ಅಲ್ಲ. ಲೌಕಿಕರಾನವರ್‌ಹಳ್ ಇತ್ಯಾದಿ-ಲೌಕಿಕರು ಕ್ರೀಡಾರ್ಥವಾಗಿ ದ್ಯೂತ-ಪಗಡೆ ಮೊದಲಾದವುಗಳನ್ನು ಆಡುವಂತೆ, ಕೇವಲ ತನ್ ಉಹಪ್ಪಾಲೇ-ತನ್ನ ಸಂತೋಷಕ್ಕಾಗಿ ಪ್ರವರ್ತಿಸುವವನೂ ಅಲ್ಲ. ಮುಕ್ತರೈಪ್ಪೋಲೇ ಇತ್ಯಾದಿ-ಮುಕ್ತರ ಹಾಗೆ ಭಗವಂತನ ಅಭಿಪ್ರಾಯವನ್ನು ಪ್ರತ್ಯಕ್ಷವಾಗಿ ತಿಳಿದುಕೊಂಡು, ಅವನನ್ನು ಸಂತೋಷಗೊಳಿಸಲು ಪ್ರವರ್ತಿಸುವುದೂ ಅಲ್ಲ. ಮಟ್ರೆಂಗನೇ ಎನ್ನಿಲ್-ಬೇರೆ ಹೇಗೆಂದರೆ, ಇಕ್ಕೈಂಕರ್ಯಂಗಳುಕ್ಕು ಇತ್ಯಾದಿ-ಈ ಅನುಜ್ಞಾಕ್ಕೈಂಕರ್ಯಗಳಿಗೂ ಇತರ ಫಲಗಳ ಹಾಗೆ ಭಗವತ್ಪ್ರೀತಿಯೂ ಫಲವೆಂದು ಶಾಸ್ತ್ರಸಿದ್ಧವಾದ್ದರಿಂದ. ಆ ಭಗವಂತನನ್ನು ಸಂತೋಷಗೊಳಿಸಿ ಅದರಿಂದ ಸಾತ್ವಿಕ ಗುಣದಿಂದ ಕೂಡಿದ ತನಗೂ ಪ್ರೀತಿಯು ಉಂಟಾಗುವುದರಿಂದ ಸುಹೃತ್ ಪುತ್ರಾದ್ಯುಪಲಾಳನದ ಹಾಗೆ, ಸರ್ವವಿಧ ಬಂಧುವಾದ ಆ ಭಗವಂತನ ಪ್ರೀತಿ ಕಾರ್ಯಗಳಲ್ಲಿ ಶಾಸ್ತ್ರವು ಕೈ ದೀಪವಾಗಿ ಪ್ರವರ್ತಿಸುತ್ತಾನೆ.

ಮೇಲೆ ಹೇಳಿದ ವಿಷಯಗಳ ತಾತ್ಪರ್ಯವೇನೆಂದರೆ – ನಿತ್ಯ ನೈಮಿತ್ತಿಕ ಕರ್ಮಗಳಿಗೆ ಬಹಿರ್ಭೂತಗಳಾದ, ದೇವತಾಂತರ ವಾಚಕ ಮಂತ್ರಗಳ ಉಚ್ಚಾರಣ ಪೂರ್ವಕ ಕಾಮ್ಯ ಕರ್ಮಗಳನ್ನು ಸಾತ್ವಿಕ ತ್ಯಾಗ ಪುರಸ್ಸರವಾಗಿ ಕೇವಲ ಭಗವತ್ಪ್ರೀಣನ ಬುದ್ಧಿಯಿಂದ ಅನುಷ್ಠಾನ ಮಾಡಲು ಅನುಮತಿಯಿಲ್ಲ. ನಿತ್ಯನೈಮಿತ್ತಿಕ ಕರ್ಮಗಳಲ್ಲಿ, ಅಂತರ್ಗತವಲ್ಲದ ದೇವತಾಂತರ ಸ್ಪರ್ಶವು ಈ ಅಧಿಕಾರದಲ್ಲೇ ಮುಂದೆ ನಿರಾಕರಿಸಲ್ಪಡುತ್ತದೆ. ಶಾಸ್ತ್ರ ವಿಧಿ ಬಲದಿಂದ ನಿತ್ಯ ನೈಮಿತ್ತಿಕ ವರ್ಣಾಶ್ರಮ ಧರ್ಮಾನುಷ್ಠಾನಗಳನ್ನು ಮಾಡುವಾಗ ಅಗ್ನೀಂದ್ರಾದಿ ದೇವತಾಂತರ ಶಬ್ದ ಘಟಿತ ಮಂತ್ರಗಳನ್ನು ಉಚ್ಚಾರಣೆ ಮಾಡುವಾಗ, ಆ ಶಬ್ದಗಳನ್ನು ಅಗ್ರಂ ನಯತೀತ್ಯಗ್ನಿಃ – ಮೋಕ್ಷಕ್ಕೆ ಕರೆದೊಯ್ಯುವವನು, ಇದಿ ಪರಮೈಶ್ವರ್ಯೇ ಇತೀಂದ್ರ-ಪರಮೈಶ್ವರ್ಯವಾದ ಪರಮಪದ ಸ್ಥಾನೀಯನು ಇಂದ್ರ ಶಬ್ದವಾಚ್ಯನಾದ ಭಗವಂತ, ಎಂದು ಸಾಕ್ಷಾದ್ಭಗವದ್ವಾಚಕಗಳನ್ನಾಗಿ ಅರ್ಥಮಾಡಿಯೂ ದೇವತಾಂತರ ಲಿಂಗ ಘಟಿತಗಳಾದ ಅಂದರೆ “ಇಂದ್ರಶ್ಶಚೀಪತಿಃ” “ರುದ್ರಃ ಪಶುಪತಿಃ” ಇತ್ಯಾದಿ ಶಬ್ದಗಳಿಗೆ ತದಂತರ್ಯಾಮಿಯಾದ ಭಗವತ್ಪರವಾಗಿಯೂ ಅನುಸಂಧಾನ ಮಾಡಿ ಮಾಡುವುದರಿಂದ ದೇವತಾಂತರ ಸ್ಪರ್ಶವು ಏರ್ಪಡುವುದಿಲ್ಲ. ಇದು ವಿಧಿಬಲಪ್ರಾಪ್ತ. ಕಾಮ್ಯ ಕರ್ಮಗಳಿಗೆ ಅನ್ವಯಿಸುವುದಿಲ್ಲ. ಸ್ಪರ್ಶವೆಂದರೆ ದೇವತಾಂತರ ವಾಚಕ ಶಬ್ದೋಚ್ಚಾರಣವು. ಶಾಸ್ತ್ರ ತತ್ವ ವಿಮರ್ಶದಶೆಯಲ್ಲಿ ದೇವತಾಂತರ ವಾಚಕ ಸ್ಪರ್ಶವು, ಭಾರತ ರಾಮಾಯಣಾದಿ ಪಠನದ ಸಮಯದಲ್ಲಿ ಚೈದ್ಯ ರಾವಣರುಗಳ ವೃತ್ತಾಂತಗಳೂ ಅವರಿಂದ ದೂಷಿಸಲ್ಪಟ್ಟ ಭಗವದಪರಾಧಾದ್ಯನುವಾದಗಳೂ ಹೇಗೆ ಭಗವನ್ಮಹಿಮೆಯ ವರ್ಣನೆಯಿಂದ ಉಪಕ್ಷೀಣಗಳಾಗುತ್ತವೆಯೋ ಹಾಗೆ ಭಗವತ್ಪಾರಮ್ಯ ನಿಷ್ಕರ್ಷೆಯಿಂದ ಉಪಕ್ಷೀಣಗಳಾಗುತ್ತವೆ. ಇದರಿಂದಾಗಿ “ಸತತಂ ಚಾತ್ಮಶುದ್ಧಯೇ”, “ಸದೈವಂವಕ್ತಾ” “ಎಣ್ಣಕ್ಕಂಡವಿರಲ್‌ಹಳ್” ಇತ್ಯಾದಿಗಳಲ್ಲಿ ಅಭಿಪ್ರೇತಗಳಾದ ಶ್ರೀ ಮನ್ಮೂಲ ಮಂತ್ರಾದಿ ಜಪಗಳನ್ನೂ ಭಗವತ್ಪ್ರದಕ್ಷಿಣ ಪ್ರಣಾಮಾದಿ ಕೈಂಕರ್ಯಗಳೇ ಮೊದಲಾದ ಭಗವದೇಕಾಂತ್ಯಕ್ಕೆ ಅನುಗುಣಗಳಾದ ಕರ್ಮಗಳನ್ನೂ “ಪ್ರಭೂತ ಕೈಂಕರ್ಯ” ಶಬ್ದದಿಂದ ಆಚಾರ್ಯರು ತಿಳಿಸುತ್ತಾರೆಂಬ್ದು ತಾತ್ಪರ್ಯ. ಇವು ಭಕ್ತಿಯೋಗನಿಷ್ಠನಿಗೂ ಸಮಾನವೆಂದು “ಮತ್ಕರ್ಮ ಪರಮೋಭವ”, ಎಂಬಲ್ಲಿಯ ಗೀತಾಭಾಷ್ಯ

**ಸುಹೃತ್ಪುತ್ರಾದ್ಯುಪಲಾಳನಙ್ಗಳಿಲ್ ಪೋಲೇ ಸರ್ವವಿಧ ಬಂಧುವಾನ ಅವನುಡೈಯ ಪ್ರೀಣನಙ್ಗಳಿಲೇ ಶಾಸ್ತ್ರಂ ಕೈವಿಳಕ್ಕಾಹ ಪ್ರವರ್ತಿಕ್ಕಿರಾನ್**

**ಪ್ರಪನ್ನಸ್ಯ ಪರಶೇಷತ್ವರೂಪ ಸ್ವರೂಪಜ್ಞಾನಂ ಆವಶ್ಯಕಂ ಶಾಸ್ತ್ರಜ್ಞಾನಂ ಕಿಮರ್ಥಂ ? ಇತಿಕೇಷಾಂ ಚಿಚ್ಛಂಕಾ ಮಾಕ್ಷಿಪ್ಯ ಪರಿಹರತಿ.**

**ಇವ್ವಿಡತ್ತಿಲ್ ಶಿಲರ್ ಸರ್ವೇಶ್ವರ ಪಕ್ಕಲಿಲೇ ಸರ್ವಭರನ್ಯಾಸಂ ಪಣ್ಣಿನ ವಿವೇಕಿಕ್ಕು ತ್ಯಾಜ್ಯೋಪಾದೇಯ ವಿಭಾಗ ನಿರ್ಣಾಯಕಂ ಸ್ವರೂಪ ಜ್ಞಾನಮನ್ರೋ ? ಇಪ್ಪಡಿ ಇವನ್ ಸ್ವರೂಪ ವಶ್ಯನಾಮತ್ತನೈಪ್ಪೋಕ್ಕಿ, ಶಾಸ್ತ್ರವಶ್ಯ ನಾಮ್ಪಡಿ ಯೆನ್ನೆನ್ರು ಶೊಲ್ಲುವರ್‌ಹಳ್. ಇದುವುಮ್ ಅನುಪಪನ್ನಮ್. ಎಙ್ಗನೇ ಎನ್ನಿಲ್ ? ಸ್ವರೂಪಂ ಇನ್ನಪಡಿ ಇರುಕ್ಕು ಮೆನ್ರು ಶಾಸ್ತ್ರತ್ತೈಕ್ಕೊಂಡು ಅರುದಿಯಿಟ್ಟಾಲ್, ಇಸ್ವರೂಪತ್ತುಕ್ಕು ಇನ್ನ ಪುರುಷಾರ್ಥಮುಮ್ ತದುಪಾಯಮುಮ್ ತ್ಯಾಜ್ಯಂ, ಇನ್ನ ಪುರುಷಾರ್ಥಮುಮ್ ತದುಪಾಯಮುಮ್ ಉಪಾದೇಯಮೆನ್ರು ಪಿರಿತ್ತು ತ್ತೆಳಿಹೈಕ್ಕು ಮುಕ್ತನಾಮಳವುಮ್ ಶಾಸ್ತ್ರ**

---

ದಲ್ಲಿ (ಭಗವದ್ಗೀತೆ 12ನೇ ಅಧ್ಯಾಯ 10ನೇ ಶ್ಲೋಕ)ವಿವಕ್ಷಿತವೆಂದು ಆದರ ತಾತ್ಪರ್ಯ ಚಂದ್ರಿಕೆಯಲ್ಲಿ ಆಚಾರ್ಯರು ವ್ಯಕ್ತಪಡಿಸಿರುತ್ತಾರೆ,

ಹಾಗಾದರೆ ತನ್ನ ನಿತ್ಯನೈಮಿತ್ತಿಕ ಕರ್ಮಗಳಿಗೆ ಬಹಿರ್ಭೂತಗಳಾದ, ಪುತ್ರ ಶಿಷ್ಯಾದಿಗಳ ಉಪನಯನಾದಿ ವರ್ಣಾಶ್ರಮ ಧರ್ಮಗಳನ್ನು ಆಚರಿಸುವುದರಿಂದ ಪರಮೈಕಾಂತಿಯಾದ ತನಗೆ ದೋಷವು ಸಂಭವಿಸುವುದಿಲ್ಲವೇ ಎಂದರೆ, **"ಸುಹೃತ್ಪುತ್ರಾದ್ಯು ಪಲಾಳನಂಗಳಿಲ್ ಪೋಲೇ"** ಎಂಬ ಶ್ರೀ ಸೂಕ್ತಿಯಿಂದ ಉತ್ತರಿಸುತ್ತಾರೆ. ಅದಾಗಿ ಸುಹೃತ್ಪುತ್ರಾದ್ಯುಪಲಾಳನ ನ್ಯಾಯದಂತೆ, ಇವು ಸರ್ವಸುಹೃತ್ತಾದ ಭಗವಂತನಿಗೆ ಅಭಿಮತಗಳು. ಇಷ್ಟು ಮಾತ್ರ ಸದಾಚಾರ ಶಿಕ್ಷಾರ್ಥವಾಗಿ ಸುಹೃತ್ಪುತ್ರಾದ್ಯುಪಲಾಳನ ನ್ಯಾಯದಿಂದ ಅಂಗೀಕೃತವು. ಇದರಿಂದ ತನ್ನ ಪುತ್ರಾದಿಗಳಲ್ಲಿರುವ ಪ್ರೀತಿಯನ್ನು ಮುಂದಿಟ್ಟುಕೊಂಡು ಅವರಿಗೆ ಚೌಲೋಪನಯನಾದಿ ಸಂಸ್ಕಾರಗಳನ್ನು ಮಾಡ್ತಾನೆಂಬಲ್ಲದೆ, ಭಗವದಭಿಮತವಾದ ವಂಶದಲ್ಲಿ ಹುಟ್ಟಿರುವುದೇ ಮೊದಲಾದ ಸಂಬಂಧದಿಂದ ಉಂಟಾದ ಸ್ನೇಹವನ್ನು ಪುರಸ್ಕರಿಸಿ, ಆಯಾಯ ವರ್ಣಾಶ್ರಮಾನುಗುಣವಾದ ಧರ್ಮಾನುಷ್ಠಾನವನ್ನು ತಾನು ಮಾಡಿದರೂ, ನಿಸ್ಸಂಗ ಪೂರ್ವಕವಾಗಿ ಮಾಡಬೇಕೆಂಬುದು ದ್ಯೋತಿತವೆಂದು ತಾತ್ಪರ್ಯ.

**ಪ್ರಪನ್ನನು ಸ್ವರೂಪವಶ್ಯನು ಶಾಸ್ತ್ರವಶ್ಯನಲ್ಲವೆಂಬ ಮತಖಂಡನೆ.**

ಅನಂತರ ಪ್ರಪನ್ನನಾದ ಇವನು ಸ್ವರೂಪವಶ್ಯನಾಗಿರಬೇಕೇ ವಿನಹ ಶಾಸ್ತ್ರವಶ್ಯನಾಗಿರಬೇಕಿಲ್ಲವೆಂದು ಹೇಳುವ ಕೆಲವರ ಮತವನ್ನು ಅನುವಾದ ಮಾಡಿ ಖಂಡಿಸುತ್ತಾರೆ. **ಇವ್ವಿಡತ್ತಿಲ್ ಶಿಲರ್** ಇತ್ಯಾದಿ – ಇಲ್ಲಿ ಕೆಲವರು ಸರ್ವೇಶ್ವರನಲ್ಲಿ ಸರ್ವಭರನ್ಯಾಸವನ್ನು ಮಾಡಿದ ವಿವೇಕಿಗೆ **ತ್ಯಾಜ್ಯೋಪಾದೇಯ ವಿಭಾಗನಿರ್ಣಾಯಕಮ್**– ಇದನ್ನು ಬಿಡಬೇಕು, ಇದನ್ನು ಅಂಗೀಕರಿಸಬೇಕೆಂಬ ವಿಭಾಗವನ್ನು ನಿರ್ಣಯ ಮಾಡಿಕೊಡುವುದು, ಸ್ವರೂಪ ಜ್ಞಾನವೇ ಅಲ್ಲವೇ. **ಇಪ್ಪಡಿ ಇವನ್** ಇತ್ಯಾದಿ–ಹೀಗೆ ಇವನು ಸ್ವರೂಪ ವಶ್ಯನಾಗಿರುವುದಷ್ಟಲ್ಲದೆ, ಶಾಸ್ತ್ರಕ್ಕೆ ವಶಪಟ್ಟಿರಬೇಕೆಂಬುದು ಏತಕ್ಕೆ ಎಂದು ಕೆಲವರು ಕೇಳುತ್ತಾರೆ. **ಇದುವುಮ್**–ಇದೂ **ಅನುಪಪನ್ನಮ್**-ಯುಕ್ತವಲ್ಲ. **ಎಂಗನೇಯನ್ನಿಲ್**-ಹೇಗೆಂದರೆ, **ಸ್ವರೂಪ ಮಿನ್ನಪಡಿ** ಇತ್ಯಾದಿ–ಸ್ವರೂಪ ಜ್ಞಾನವು **ಇನ್ನಪಡಿ**–ಭಗವಚ್ಛೇಷ ಭೂತನಾಗಿರುವುದೆಂದು ಶಾಸ್ತ್ರವನ್ನು ಬಳಸಿ ನಿಶ್ಚಯಿಸಿದರೆ, ಈ ಆತ್ಮ ಸ್ವರೂಪಕ್ಕೆ ಈ ಪುರುಷಾರ್ಥವೂ ಅದರ ಉಪಾಯವೂ ತ್ಯಾಜ್ಯ, ಸ್ವರೂಪಕ್ಕೆ ಅನುಗುಣವಾದ ಈ ಪುರುಷಾರ್ಥವೂ ಅದರ ಉಪಾಯವೂ **ಉಪಾದೇಯ**-ಸ್ವೀಕಾರ್ಯವೆಂದು, ವಿಭಾಗ ಮಾಡಿ ತಿಳಿಯಲು ಮೋಕ್ಷವನ್ನು ಪಡೆಯುವ ಪರ್ಯಂತ ಶಾಸ್ತ್ರವನ್ನು ಬಿಟ್ಟರೆ

ವೊಳ್ಳಿಯು ವಳ್ಳಿಯಿಲ್ಲೈ. ಸ್ವರೂಪತ್ತಿಲ್ ಶೇಷತ್ವಾದಿಹಳೈಕ್ಕೊಂಡು ಶಿಲ ಔಚಿತ್ಯಮಾತ್ರ ಮರಿಯ ಲಾಮ್ ಅತ್ತನೈಯಲ್ಲದು ಶೇಷಿಯುಹನ್ದ ಕೈಂಕರ್ಯತ್ತಿನ್ ಪ್ರಕಾರಮಿದು ಇಕ್ಕೈಙ್ಕರ್ಯತ್ತುಕ್ಕು. ಉಪಾಯ ಙ್ಗಳ್ ಇವೈ.ಎನ್ರು ಸ್ವರೂಪ ಜ್ಞಾನಂ ನಿಯಮಿತ್ತುಕ್ಕಾಟ್ಟಾದು. ಆನಪಿನ್ಬು ಶಾಸ್ತ್ರತ್ತೈ ಅನಾದರಿತ್ತು ನಿಷಿದ್ಧ ದ್ರವ್ಯಙ್ಗಳೈಕ್ಕೊಂಡಾಲ್, ವಿಹಿತಙ್ಗಳ್ ತನ್ನಿಲುಂ ನ್ಯಾಯಾರ್ಜಿತ ಮಲ್ಲಾದ ದ್ರವ್ಯಙ್ಗಳೈ ಕ್ಕೊಂಡಾದಲ್, ತನಕ್ಕು ರುಚಿತ್ತಪಡಿಯೇ ಶಾಸ್ತ್ರ ವಿರುದ್ಧಮಾಯಿರುಕ್ಕುಙ್ಕಟ್ಟಳೈಯಿಲೇ ಕೈಙ್ಕರ್ಯತ್ತೈ ನಡತ್ತಪ್ಪಾರ್ತ್ತಾಲ್ ಉಪಚಾರಾಪಚಾರಙ್ಗಳುಕ್ಕು ಪಿರಿವಿಲ್ಲೈಯಾಮ್. ಅಪ್ಪೋದು ತನ್ ರುಚಿಯೊ಴ಿ ಯ ವೇರು ನಿಯಾಮಕ ಮಿಲ್ಲಾಮೈಯಾಲೇ ಮುಮುಕ್ಷುಕ್ಕಳ್ ತವಿರ್‌ನ್ದು ಪೋರುಹಿರ ಸರ್ವ ನಿಷಿದ ಙ್ಗಳೈಯುಮ್ ತನ್ ರುಚಿ ಮಾತ್ರತ್ತಾಲೇ ಕೈಙ್ಕರ್ಯಮಾಹ ಅನುಷ್ಟಿಕ್ಕ ಪ್ರಸಂಗಿಕ್ಕುಮ್. ಹವಿರ್ನಿವೇದ ನತ್ತಿಲುಮ್ ಶ್ರೀ ಭಾಷ್ಯಕಾರರ್ (1) "ಶಾಸ್ತ್ರಾವಿರುದ್ಧಾನಿ ಸಂಭೃತ್ಯ" ಎನ್ರು ಅರುಳಿಚ್ಚೆಯ್‌ದಾರ್,

ಅತಃ ಸರ್ವತ್ರ ಶಾಸ್ತ್ರವಶ್ಯತಾ ಆವಶ್ಯಕೀ

ಆಹೈಯಾಲ್ ಶಾಸ್ತ್ರವಶ್ಯನಾಯ್ ತನ್ ಅಧಿಕಾರತ್ತುಕ್ಕು ಶಾಸ್ತ್ರಮುಡೈತ್ತ ಕೈಙ್ಕರ್ಯಙ್ಗಳೈಯೇ ಪಣ್ಣಪ್ರಾಪ್ತಮ್,

(2) "ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತೌ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮಕರ್ತು ಮಿಹಾರ್ಹಸಿ ॥

ಎನ್ರು ಉಪದೇಶಂ ಸರ್ವಾಧಿಕಾರಿಹಳುಕ್ಕುಮ್ ಪೊದುವಾಯಿರುಕ್ಕುಮ್.

---

ಬೇರೆ ದಾರಿಯಿಲ್ಲ. **ಸ್ವರೂಪತ್ತಿಲ್** ಇತ್ಯಾದಿ–ತನ್ನ ಸ್ವರೂಪವು ಭಗವಂತನಿಗೆ ಶೇಷಭೂತವಾದದ್ದು ಎಂಬ ಶೇಷತ್ವ ಜ್ಞಾನವನ್ನು ಕೊಂಡು ಶೇಷಭೂತನಿಗೆ ಶೇಷಿಯು ಇಷ್ಟಪಡುವ ಕೈಂಕರ್ಯವೇ ಪುರುಷಾರ್ಥವೆಂದು, ಇಷ್ಟು ಮಾತ್ರ ತಿಳಿಯಬಹುದು. **ಅಲ್ಲದು** ಇತ್ಯಾದಿ–ಇಷ್ಟಲ್ಲದೆ ಶೇಷಿಯು ಸಮ್ಮತಿಸುವ ಕೈಂಕರ್ಯದ ಪ್ರಕಾರವು ಇದು, ಈ ಕೈಂಕರ್ಯಕ್ಕೆ ಉಪಾಯಗಳು ಇವು ಎಂದು ಸ್ವರೂಪ ಜ್ಞಾನವು **ನಿಯಮಿತ್ತುಕ್ಕಾಟ್ಟಾದು**–ವಿಭಾಗ ಮಾಡಿ ತೋರಿಸಲಾರದು **ಆನಪಿನ್ಬು** ಇತ್ಯಾದಿ – ಆದ್ದರಿಂದ ಶಾಸ್ತ್ರವನ್ನು ಅನಾದರಿಸಿ ಶಾಸ್ತ್ರ ನಿಷಿದ್ಧ ದ್ರವ್ಯಗಳನ್ನು ಕೊಂಡಾಗಲಿ ತನ್ನ ಇಷ್ಟಾನುಸಾರವಾಗಲಿ ಶಾಸ್ತ್ರವಿರುದ್ಧವಾಗಿರುವ ರೀತಿಯಲ್ಲಿ ಕೈಂಕರ್ಯವನ್ನು ಅನುಷ್ಠಿಸಲು ನೋಡಿದರೆ, ಉಪಚಾರಯಾವುದು ಅಪಚಾರಯಾವುದು ಎಂದು ವ್ಯವಸ್ಥೆಮಾಡಲಾಗುವುದಿಲ್ಲ. **ಅಪ್ಪೋದು** ಇತ್ಯಾದಿ–ಆಗ ತನ್ನ ಇಷ್ಟವನ್ನು ಬಿಟ್ಟು ಬೇರೆ ನಿಯಾಮಕವು ಇಲ್ಲದೆ, ಮುಮುಕ್ಷುಗಳು **ತವಿರ್‌ನ್ದು ಪೋರುಹಿರ**–ಪರಿತ್ಯಜಿಸುವ, ಸರ್ವನಿಷಿದ್ಧಗಳನ್ನೂ ತನ್ನ ಇಷ್ಟಾನುಸಾರ ಕೈಂಕರ್ಯಮಾಹ ಅನುಷ್ಠಿಸುವ ಪ್ರಸಂಗವು ಏರ್ಪಡುತ್ತದೆ. ಇದು ಶೇಷ ಭೂತನಾದ ತನ್ನ ಸ್ವರೂಪಕ್ಕೆ ಉಚಿತವಲ್ಲ. ಪ್ರಪನ್ನನು ಸರ್ವ ವಿಷಯದಲ್ಲೂ ಶಾಸ್ತ್ರವಶ್ಯನಾಗಿಯೇ ಇರಬೇಕೆಂಬುದಕ್ಕೆ ಶ್ರೀ ಭಾಷ್ಯಕಾರರ ಸಮ್ಮತಿಯನ್ನು ಸ್ಥಾಲೀ ಪುಲಾಕ ನ್ಯಾಯ ರೀತ್ಯಾ ಹವಿರ್ನಿವೇದನ ಸಮಯದಲ್ಲಿ ತಿಳಿಸುತ್ತಾರೆ, ಅದಾಗಿ **ಹವಿರ್ನಿವೇದನತ್ತಿಲುಮ್** ಇತ್ಯಾದಿ–ಭಗವಂತನಿಗೆ ಆರಾಧನ ಕಾಲದಲ್ಲಿ ಹವಿಸ್ಸನ್ನು (ಅನ್ನ ಮೊದಲಾದವು) ಸಮರ್ಪಿಸುವ ಕಾಲದಲ್ಲಿ **ಶ್ರೀ ಭಾಷ್ಯಕಾರರ್** 1) **ಶಾಸ್ತ್ರಾವಿರುದ್ಧಾನಿ ಸಂಭೃತ್ಯ**–ಶ್ರೀ ಭಾಷ್ಯಕಾರರು ಶಾಸ್ತ್ರವಿರುದ್ಧವಲ್ಲದವನ್ನು ಸಂಪಾದಿಸಿ ತಂದು ಸಮರ್ಪಿಸಬೇಕೆಂದು, ಅನುಗ್ರಹಿಸಿರುತ್ತಾರೆ. **ಆಹೈಯಾಲ್** – ಆದ್ದರಿಂದ ಶಾಸ್ತ್ರವಶ್ಯನಾಗಿ ತನ್ನ ಅಧಿಕಾರಕ್ಕೆ ಅನುಗುಣವಾಗಿ **ಶಾಸ್ತ್ರಮುಡೈತ್ತ**–ಶಾಸ್ತ್ರವು ವ್ಯವಸ್ಥೆಗೊಳಿಸಿದ, ಕೈಂಕರ್ಯಗಳನ್ನೇ ಮಾಡುವುದು ಪ್ರಾಪ್ತವಾದದ್ದು. 2) **ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ** ಇತ್ಯಾದಿ–ಮಾಡಬೇಕಾದದು ಇದು, ಮಾಡಕೂಡದು ಇದು ಎಂಬ ವ್ಯವಸ್ಥೆಗೆ ಶಾಸ್ತ್ರವೇ ಪ್ರಮಾಣ. ಶಾಸ್ತ್ರವು ವಿಧಿಸಿರುವುದನ್ನು ತಿಳಿದು ಕರ್ಮವನ್ನು ಮಾಡಬೇಕೆಂಬುದು, ಗೀತೋಪದೇಶ. **ಎನ್ರು ವುಪದೇಶಮ್**–ಎಂಬ ಈ ಉಪದೇಶವು ಪ್ರಪನ್ನಾಪ್ರಪನ್ನ ಸರ್ವಾಧಿಕಾರಿಗಳಿಗೂ ಸಮಾನವಾಗಿರುತ್ತದೆ. ಅಧಿಕಾರಿ ವಿಶೇಷವನ್ನು ಇಲ್ಲಿ ಹೇಳದಿರುವುದರಿಂದ ಇದು ಎಲ್ಲರಿಗೂ ಸಮಾನವಾದ ಉಪದೇಶವೆಂದು ತಾತ್ಪರ್ಯ.

---

(1) ನಿತ್ಯಗ್ರಂಥ. (2) ಗೀತೆ 16 – 24.

## "ಪ್ರೀತ್ಯೈವಕಾರಿತಃ" ಇತಿ ಯಾಮುನೋಕ್ತ್ಯಾ ಪ್ರಪನ್ನಸ್ಯ ನ ಶಾಸ್ತ್ರವಶ್ಯತಾ ಇತಿ ವಾದಸ್ಯ ಖಂಡನಮ್.

ಆಳವಂದಾರ್ ಶ್ರೀ ಗೀತಾರ್ಥ ಸಂಗ್ರಹತ್ತಿಲೇ,

3) ಜ್ಞಾನೀತು ಪರಮೈಕಾಂತೀ ಪರಾಯತ್ತಾತ್ಮ ಜೀವನಃ ।
ತತ್ಸಂಶ್ಲೇಷ ವಿಯೋಗೈಕ ಸುಖ ದುಃಖ ಸ್ತದೇಕಧೀಃ ।
ಭಗವದ್ಧ್ಯಾನ ಯೋಗೋಕ್ತಿ ವಂದನ ಸ್ತುತಿ ಕೀರ್ತನೈಃ ।
ಲಬ್ಧಾತ್ಮಾ ತದ್ಗತ ಪ್ರಾಣಮನೋ ಬುದ್ಧೀನ್ದ್ರಿಯ ಕ್ರಿಯಃ ॥
ನಿಜಕರ್ಮಾದಿ ಭಕ್ತ್ಯಂತಂ ಕುರ್ಯಾತ್ಪ್ರೀತ್ಯೈವ ಕಾರಿತಃ ।
ಉಪಾಯತಾಂ ಪರಿತ್ಯಜ್ಯ ನ್ಯಸ್ಯೇದ್ದೇವೇತು ತಾಮಭೀಃ ॥31॥

ಎನ್ರು ಅರುಳಿಚ್ಚೆಯ್ದ ವಿಡತ್ತಿಲ್ "ಪ್ರೀತ್ಯೈವಕಾರಿತಃ" ಎನ್ರದುವುಮ್ ಶಾಸ್ತ್ರಂ ವೇಣ್ಡಾವೆನ್ರ ಪಡಿಯನ್ರು. ಇಙ್ಗು ಶಾಸ್ತ್ರಮ್‌ಕೊಂಡೇ ಅರಿಯವೇಂಡುಹಿರ ಕೈಂಕರ್ಯಮ್ ತನ್ನಿಲ್ ಸ್ವಾಮಿ ಸಂತೋಷ ಜನಕತ್ವ ಮುಡಿಯಾಹ ಶೇಷಭೂತನಾನ ತನುಕ್ಕು ಪ್ಪಿರಕ್ಕಿರ ಪ್ರೀತಿಯಿನುಡೈಯ ಪ್ರೇರಕತ್ವಾತಿಶಯಮುಮ್ ಶೊಲ್ಲುಕೈಯಿಲೇ ತಾತ್ಪರ್ಯಮ್.

ಇಶ್ಲೋಕಙ್ಗಳೈ ಉಪಾಸನಾಧಿಕಾರಿಪಕ್ಕಲಿಲೇ ಯೋಜಿಕ್ಕುಮ್‌ಪೋದು ಉಪಾಸನಾದಿಹಳುಡೈಯ

---

### ಕೈಂಕರ್ಯಗಳನ್ನು ಮಾಡಬೇಕಾದ ಕ್ರಮವನ್ನು ತಿಳಿಸುವ ಆಳವಂದಾರವರ ಗೀತಾರ್ಥ ಸಂಗ್ರಹದ ತಾತ್ಪರ್ಯ,

**ಆಳವಂದಾರ್ ಶ್ರೀ ಗೀತಾರ್ಥ ಸಂಗ್ರಹತ್ತಿಲೇ** ಇತ್ಯಾದಿ-ಆಳವಂದಾರವರು ಶ್ರೀ ಗೀತಾರ್ಥ ಸಂಗ್ರಹದಲ್ಲಿ 3) **ಜ್ಞಾನೀತು ಪರಮೈಕಾಂತೀ** ಇತ್ಯಾದಿ ಹೇಳಿರುವ ಸ್ಥಳದಲ್ಲಿ **"ಪ್ರೀತ್ಯೈವಕಾರಿತಃ"** ಇತ್ಯಾದಿ-ಪ್ರೀತಿಯಿಂದಲೇ ಮಾಡಿಸಲ್ಪಟ್ಟವನಾಗಿ ಎಂದು ಹೇಳಿರುವುದೂ, ಶಾಸ್ತ್ರವು ಬೇಡವೆಂದಲ್ಲ. ಶಾಸ್ತ್ರವನ್ನು ಕೊಂಡೇ ತಿಳಿಯಬೇಕಾದ ಕೈಂಕರ್ಯಗಳಲ್ಲಿ ಸ್ವಾಮಿಯಾದ ಭಗವಂತನ ಸಂತೋಷವನ್ನುಂಟು ಮಾಡುವ, ಶೇಷಭೂತನಾದ ತನಗೆ ಉಂಟಾಗುವ ಪ್ರೀತಿಯ ಪ್ರೇರಕತ್ವಾತಿಶಯವನ್ನು ಹೇಳುವುದರಲ್ಲಿ ತಾತ್ಪರ್ಯ.

**ಇ ಶ್ಲೋಕಂಗಳೈ ಉಪಾಸನಾಧಿಕಾರಿ ಪಕ್ಕಲಿಲೇ** ಇತ್ಯಾದಿ – ಈ ಶ್ಲೋಕಗಳನ್ನು ಉಪಾಸನಾಧಿಕಾರಿಯಾದ ಭಕ್ತಿಯೋಗನಿಷ್ಠನ ವಿಷಯವಾಗಿ ಯೋಜಿಸುವಾಗ ಉಪಾಸನಾದಿಗಳ ಸಾದುತಮತ್ವವನ್ನೂ, ಫಲಕ್ಕೆ

---

(3) ಗೀತಾರ್ಥ ಸಂಗ್ರಹ 29 30, 31

ಐಶ್ವರ್ಯ ಕೈವಲ್ಯಗಳಲ್ಲಿ ಅಪೇಕ್ಷೆಯಿಲ್ಲದೆ ಭಗವಂತನಲ್ಲೇ ಭಕ್ತಿಯುಳ್ಳ ಜ್ಞಾನಿಯು, ಪರಮೈಕಾಂತಿಯು – ದೇವತಾಂತರ ಉಪಾಯಾಂತರಗಳಲ್ಲಿ ಆಸೆಯಿಲ್ಲದೆ ಭಗವಂತನಲ್ಲೇ ಆಸೆಯುಳ್ಳವನಾಗಿರುವವನು. ಅವನ ಪ್ರಾಣಧಾರಣಗಳು ಭಗವದಧೀನ, ಭಗವತ್ಸಂಶ್ಲೇಷವೇ ಅವನಿಗೆ ಸುಖ. ಭಗವದ್ವಿಯೋಗವೇ ಅವನಿಗೆ ದುಃಖವೆಂದು ತಿಳಿದು ಅವನಲ್ಲೇ ನೆಟ್ಟಮನಸ್ಕನು ಭಗವದ್ಧ್ಯಾನ, ಯೋಗ, ವಂದನ, ಸ್ತುತಿ, ಕೀರ್ತನೆಗಳಿಂದ ಆತ್ಮಸತ್ತೆಯುಳ್ಳವನಾಗಿ, ಆ ರೀತಿಯಾದ ಭಗವದನುಭವವಿಲ್ಲದಿದ್ದರೆ ತನ್ನ ಕರಣ ಕಳೇಬರಗಳು ಶಿಥಿಲವಾಗುವ ದಶೆಯನ್ನುಳ್ಳವನಾಗುತ್ತಾನೆ. ಇಂತಹ ಭಕ್ತನು ತನ್ನ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳೇ ಆದಿಯಾಗಿ ಭಕ್ತಿಯೋಗ ಪರ್ಯಂತವಾದ ಕರ್ಮಗಳನ್ನು ಪ್ರೀತಿಯಿಂದಲೇ ಮಾಡಿಸಲ್ಪಟ್ಟದಾಗಿ, ಮಾಡಬೇಕು. ಇವುಗಳ ಮೋಕ್ಷಕ್ಕೆ ಉಪಾಯವಲ್ಲವೆಂಬ ಬುದ್ಧಿಯನ್ನು ಬಿಟ್ಟು, ಆ ಉಪಾಯತ್ವ ಬುದ್ಧಿಯನ್ನು ನಿರ್ಭಯನಾಗಿ ಭಗವಂತನಲ್ಲೇ ಇಡಬೇಕು ಭಗವಂತನೇ ಮೋಕ್ಷಕ್ಕೆ ಸಾಕ್ಷಾತ್ ಸಿದ್ಧೋಪಾಯನೆಂದು ತಿಳಿಯಬೇಕು. ಭಕ್ತಿಯು ಅವನ ಪ್ರೀತಿಗೆ ಕಾರಣವಾಗಿ, ಮೋಕ್ಷವನ್ನು ಕೊಡುವ ಸಂಕಲ್ಪವನ್ನು ಮಾಡಿಸುತ್ತದೆ ಎಂದು ಭಾವ.

ಸ್ವಾದುತಮತ್ವತ್ತೈಯುಮ್, ಫಲೋಪಾಯಮಾನ ಶರಣ್ಯನುಕ್ಕು ಪ್ರಸಾದನಮಾಯ್‌ಕ್ಕೊಂಡು, ಫಲತ್ತುಕ್ಕು ಸಾಕ್ಷಾದುಪಾಯ ಮನ್ರಿಕ್ಕೇ ನಿರ್ಕಿರ ನಿಲೈಯೈಯುಮ್, ಇವ್ವುಪಾಸನತ್ತಾಲೇ ಪ್ರಸನ್ನನಾನ ಸರ್ವೇಶ್ವರನ್ ತಾನೇ ಫಲತ್ತುಕ್ಕು ಸಾಕ್ಷಾದ ಪಾಯಮಾಯ್ ನಿರ್ಕಿರ ನಿಲೈಯೈಯುಮ್ ಶೊಲ್ಲುಹೆಯಿಲೇ ನೋಕ್ಕಾಹಕ್ಕಡವದು.

ಸ್ವತಂತ್ರ ಪ್ರಪತ್ತಿ ನಿಷ್ಠನ್ತಿರತ್ತಿಲ್ ಇಶ್ಲೋಕಙ್ಗಳೈ ಯೋಜಿಕ್ಕುಮ್ಪೋದು ಇವನ್ ಆಜ್ಞಾನುಜ್ಞೈಹಳಾಲೇ ಪಣ್ಣುಮ್ ಕೈಙ್ಕರ್ಯಙ್ಗಳೆಲ್ಲಾಮ್ ಭಕ್ತಿಯೋಗಾದಿಹಳಿನ್ ಕಟ್ಟಳೈ ಕುಲೈಯಾದಿರುನ್ದಾಲುಮ್ ಸ್ವಾಮಿ ಸಂತೋಷಮೊೞಿಯ ವೇರೊರು ಸ್ವರ್ಗಮೋಕ್ಷಾದಿ ಪ್ರಯೋಜನತ್ತುಕ್ಕು ಉಪಾಯಮಾಹ ವನುಷ್ಠಿಕ್ಕಿರಾ ನಲ್ಲಾಮೈಯಾಲೇ ಇವನುಕ್ಕು ಅನನ್ಯೋಪಾಯತೈಯುಮ್ ಅನನ್ಯ ಪ್ರಯೋಜನತೈಯುಮ್ ಕುಲೈಯಾದೇ ಇರುಕ್ಕಿರಪಡಿಯೈಯುಮ್ ಅಕಿಂಚನನಾನ ಇವನುಕ್ಕು ಈಶ್ವರನ್ ತಾನೇ ಉಪಾಯಾನ್ತರ ಸ್ಥಾನತ್ತಿಲೇ ನಿನ್ರು ಫಲಂ ಕೊಡುಕ್ಕಿರ ಪಡಿಯೈಯುಮ್, ಶೊಲ್ಲುಹೈಯಿಲೇತಾತ್ಪರ್ಯಮ್.

ಇತ್ಥಂ ಶಾಸ್ತ್ರ ರೀತ್ಯಾ ಆಜ್ಞಾನುಜ್ಞಾ ಕೈಂಕರ್ಯಾನುಷ್ಠಾನೇ ದೇವತಾನ್ತರ ಸಂಬಂಧೇನ ಪರಸ್ಯೈಕಾನ್ತಿತ್ವ ಅಹಾನಿರಿತ್ಯತ್ರಾಹ.

ಇರಣ್ಡಧಿಕಾರಿಹಳುಮ್ 1) "ಪ್ರತಿಬುದ್ಧಾನ ಸೇವಂತೇ" 2) "ಅನನ್ಯದೇವತಾ ಭಕ್ತಾಃ

---

ಸಾಕ್ಷಾತ್ ಉಪಾಯ ಭೂತನಾಗಿ "ಅಮೃತಸ್ಯೈಷಸೇತುಃ ಎಂದು ಹೇಳಲ್ಪಟ್ಟ ಶರಣ್ಯನಿಗೆ ಇವುಗಳು ಪ್ರಸಾದಮಾಯ್ ಕೊಂಡು-ಆತನ ನಿಗ್ರಹವನ್ನು ಹೋಗಲಾಡಿಸಿ ಅನುಗ್ರಹವನ್ನು ಮಾಡುವುದಕ್ಕೆ ಕಾರಣವಾದ ಪ್ರಸನ್ನತೆಯನ್ನು ಉಂಟುಮಾಡುವುದಾಗಿ ಸ್ವೀಕರಿಸಿ, ಉಪಾಯತಾಂ ಪರಿತಜ್ಯ-ಫಲಕ್ಕೆ ಭಕ್ತಿಯೋಗವು ಸಾಕ್ಷಾದುಪಾಯವಲ್ಲವೆಂಬ ಸ್ಥಿತಿಯನ್ನೂ ಈ ಉಪಾಸನದಿಂದ ಪ್ರಸನ್ನನಾದ ಭಗವಂತನೇ ಸಾಕ್ಷಾದುಪಾಯವಾಗಿ (ಸಿದ್ಧೋಪಾಯ) ನಿರ್ಕಿರನಿಲೈಯೈಯುಮ್ ಇತ್ಯಾದಿ,-ಇರುವ ಸ್ಥಿತಿಯನ್ನು ತಿಳಿಸುವುದರಲ್ಲಿ ದೃಷ್ಟಿ "ನ್ಯಸ್ಯೇದ್ದೇವೇತು ತಾಮಭೀಃ" ಇತ್ಯಾದಿ-ಎಂಬುದು, ಈ ಉಪಾಸನದಿಂದ ಪ್ರಸನ್ನನಾದ ಭಗವಂತನಲ್ಲೇ ಸಾಕ್ಷಾದುಪಾಯತ್ವ ಬುದ್ಧಿಯನ್ನು ಮಾಡಬೇಕೆಂಬುದು ಹೇಳಲ್ಪಟ್ಟಿತೆಂದು ತಾತ್ಪರ್ಯ,

"ಸ್ವತಂತ್ರ ಪ್ರಪತ್ತಿ ನಿಷ್ಠನ್ ತಿರತ್ತಿಲ್" ಇತ್ಯಾದಿ-ಸ್ವತಂತ್ರ ಪ್ರಪತ್ತಿ ನಿಷ್ಠನ ವಿಷಯದಲ್ಲಿ ಈ ಶ್ಲೋಕಗಳನ್ನು ಯೋಜಿಸುವಾಗ ಇವನು ಆಜ್ಞಾನುಜ್ಞೈಗಳಿಂದ ಮಾಡುವ ಕೈಂಕರ್ಯಗಳೆಲ್ಲಾ ಭಕ್ತಿಯೋಗಾದಿಗಳ ಕಟ್ಟಳೈ-ವ್ಯವಸ್ಥೆಯು ಕುಲೈಯಾದಿರುಂದಾಲುಮ್-ನಶಿಸಿ ಹೋಗದೆ ಇದ್ದರೂ "ಏವಕಾರದಿಂದ ಸ್ವಾಮಿಯ ಸಂತೋಷವಲ್ಲದೆ ಬೇರೆ ಸ್ವರ್ಗಮೋಕ್ಷಾದಿ ಪ್ರಯೋಜನಕ್ಕೆ ಉಪಾಯವಾಗಿ ಅನುಷ್ಠಿಸುವುದಿಲ್ಲವಾದ್ದರಿಂದ ಮೋಕ್ಷ ಫಲನಿಷೇಧದಿಂದ ಇವನಿಗೆ ಅನನ್ಯೋಪಾಯತೆಯೂ ಫಲಾಂತರ ನಿಷೇಧದಿಂದ ಅನನ್ಯ ಪ್ರಯೋಜನತೆಯೂ ನಶಿಸ್ಸುವುದಿಲ್ಲವಾಗಿರುವ ರೀತಿಯನ್ನೂ ಅಕಿಂಚನನಾದ ಇವನಿಗೆ "ಉಪಾಯತಾಂ ಪರಿತ್ಯಜ್ಯ ನ್ಯಸ್ಯೇದ್ದೇವೇತು ತಾಮಭೀಃ ಈ ಪ್ರಪತ್ತಿಯು ಸಾಕ್ಷಾದುಪಾಯ ವೆಂಬುದನ್ನು ಬಿಟ್ಟು ಭಗವಂತನೇ ಉಪಾಯಾಂತರ ಸ್ಥಾನತ್ತಿಲೇ ನಿನ್ರು ಭಕ್ತಿಯೋಗಸ್ಥಾನದಲ್ಲಿ ಪ್ರಪತ್ತಿ ವಶೀಕೃತನಾಗಿ ನಿಂತು, ತಾದೃಶ ಉಪಾಯಾಂತರ ನಿರಪೇಕ್ಷನಾಗಿ ಫಲವನ್ನು ಕೊಡುತ್ತಾನೆಂಬುದರಲ್ಲಿ ತಾತ್ಪರ್ಯ.

**ವರ್ಣಾಶ್ರಮ ಧರ್ಮಗಳು ಪಾರಮೈಕಾಂತ್ಯವನ್ನು ಹೋಗಲಾಡಿಸುವುದಿಲ್ಲ-ವಿವರಣೆ.**

ಇರಂಡಧಿಕಾರಿಹಳುಮ್ ಇತ್ಯಾದಿ - ಭಕ್ತಿಯೋಗನಿಷ್ಠನೂ, ಪ್ರಪತ್ತಿಯೋಗನಿಷ್ಠನೂ, (1) ಪ್ರತಿಬುದ್ಧಾ

---

1) 2) ಪ್ರ.ತಿ ನೋ

3 ನಾನ್ಯಂದೇವಂ ನಮಸ್ಕುರ್ಯಾತ್" ಇತ್ಯಾದಿಹಳಿಲ್ ಪಡಿಯೇ ಪರಮೈಕಾಂತಿಹಳಾಯಿರುಕ್ಕ. ಇಙ್ಗು "ನಿಜಕರ್ಮಾದಿ ಭಕ್ತ್ಯಂತಂ" ಎನ್ರು ಅರುಳಿಚ್ಚೆಯ್‌ದಪಡಿಯೇ ವರ್ಣಾಶ್ರಮಾದಿ ಧರ್ಮಂಗಳೈ ಇವರ್‌ಹಳ್ ಅನುಷ್ಠಿಕ್ಕಪ್ಪುಕ್ಕಾಲ್, ಅಗ್ನೀಂದ್ರಾದಿ ದೇವತಾ ವ್ಯಾಮಿಶ್ರತೈಯಾಲೇ ಪರಮೈಕಾಂತಿತ್ವಂ ಕುಲೈಯಾದೋ? ಎನ್ರು ವೇದಾಂತ ವ್ಯುತ್ಪತ್ತಿ ಪಣ್ಣಾದಾರ್ ಚೋದ್ಯಂ ಪಣ್ಣುವಾರ್‌ಹಳ್. ಇವ್ವಿಡತ್ತಿಲ್ "ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎನ್ಗಿರ ಸೂತ್ರತ್ತಿನ್ ಪಡಿಯೇ ಅಗ್ರನಯನಾದಿ ವ್ಯುತ್ಪತ್ತಿಹಳಾಲೇ ಅಗ್ನ್ಯಾದಿ ಶಬ್ದಙ್ಗಳ್ ಸರ್ವೇಶ್ವರನುಕ್ಕು ಸಾಕ್ಷಾದ್ವಾಚಕಙ್ಗಳಾಹ ನಿರ್ವಹಿಕ್ಕಲಾ ಮಿಡತ್ತಿಲ್, ಇವೈ ಶ್ರೀ ಸಹಸ್ರನಾಮತ್ತಿನ್ ತಿರುನಾಮಙ್ಗಳಿಲ್ ಪಡಿಯೇ ನಿರ್ಕೈಯಾಲೇ ಇವತ್ತಿಲ್ ದೇವತಾಂತರ ಸ್ಪರ್ಶ ಮಿಲ್ಲೈ

---

ನಸೇವಂತೇ (2) ಅನನ್ಯ ದೇವತಾಭಕ್ತಾಃ (3) ನಾನ್ಯಂ ದೇವಂ ನಮಸ್ಕುರ್ಯಾತ್, ಇತ್ಯಾದಿ ವಚನಗಳಲ್ಲಿ ಹೇಳಿರುವಂತೆ, ದೇವತಾಂತರಗಳನ್ನು ಭಜಿಸದೆ, ಪರಮೈಕಾಂತಿಗಳು ಯಿರುವಾಗ, ಇಲ್ಲಿ **'ನಿಜಕರ್ಮಾದಿ ಭಕ್ತ್ಯಂತಂ'** ಎಂದು ಹೇಳಿರುವಂತೆ ವರ್ಣಾಶ್ರಮ ಧರ್ಮಗಳನ್ನು ಇವರುಗಳು ಅನುಷ್ಠಿಸಲು ಆರಂಭಿಸಿದರೆ ಆ ಧರ್ಮಗಳು ಅಗ್ನೀಂದ್ರಾದಿ ದೇವತಾಂತರ ಪ್ರತಿಪಾದಕ ಮಂತ್ರಗಳನ್ನು ಬಳಸಿ ಅನುಷ್ಠಿಸಬೇಕಾದ್ದರಿಂದ, ದೇವತಾಂತರ ಸ್ಪರ್ಶವು ಏರ್ಪಟ್ಟು ಪರಮೈಕಾಂತಿತ್ವವು ನಶಿಸಿಹೋಗುವುದಿಲ್ಲವೇ ಎಂದು ವೇದಾಂತ ವ್ಯುತ್ಪತ್ತಿ ಮಾಡದವರು ಚೋದ್ಯವನ್ನು ಮಾಡುತ್ತಾರೆ. **ಇವ್ವಿಡತ್ತಿಲ್** ಇತ್ಯಾದಿ – ಈ ಚೋದ್ಯವನ್ನು ಎರಡು ವಿಧವಾಗಿ ಪರಿಹರಿಸಲು ಅಭಿಪ್ರಾಯಪಡುತ್ತಾರೆ. ಮೊದಲನೇ ವಿಧವನ್ನು (4) **'ಸಾಕ್ಷಾದಪ್ಯವಿರೋಧಂಜೈಮಿನಿಃ'** (ಬ್ರಹ್ಮಸೂತ್ರ - 1 - 2 - 29) ಎಂಬ ಸೂತ್ರದ ರೀತಿಯಲ್ಲಿ, ಅಗ್ರಂನಯತೀತ್ಯಗ್ನಿಃ ಇತ್ಯಾದಿ ಅಗ್ರನಯನಾದಿ ವ್ಯುತ್ಪತ್ತಿಗಳನ್ನು ಸ್ವೀಕರಿಸಿ, ಅಗ್ನ್ಯಾದಿ ಶಬ್ದಗಳನ್ನು ಸರ್ವೇಶ್ವರನಿಗೆ ಸಾಕ್ಷಾದ್ವಾಚಕಗಳನ್ನಾಗಿ ಹೇಳಬಹುದು. ಹಾಗೆ **ನಿರ್ವಹಿಕ್ಕಲಾಮಿಡತ್ತಿಲ್** – ದೇವತಾಂತರ ಲಿಂಗಸೂಚಕಗಳಾದ, ಪಶುಪತಿ, ಶಚೀಪತಿ, ಇತ್ಯಾದಿ ಶಬ್ದಗಳಿಲ್ಲದ ಸ್ಥಳಗಳಲ್ಲಿ ಸಾಕ್ಷಾತ್ತಾಗಿಯೇ ಶ್ರೀವಿಷ್ಣು ಸಹಸ್ರನಾಮದಲ್ಲಿ 'ಯಾನಿ ನಾಮಾನಿ ಗೌಣಾನಿ' ಎಂದು ಭಗವಂತನ ಗುಣಕೃತ ನಾಮಗಳನ್ನು ಹೇಳುವ ರೀತಿಯಲ್ಲಿ ಈ ಅಗ್ನೀಂದ್ರಾದಿ ಶಬ್ದಗಳು ಭಗವದ್ವಾಚಕಗಳಾಗಿ ಪರಮೈಕಾಂತಿ ಧರ್ಮಕ್ಕೆ ಬಾಧಕಗಳಾಗುವುದಿಲ್ಲ. ಅಂದರೆ ಶ್ರೀವಿಷ್ಣು ಸಹಸ್ರನಾಮದಲ್ಲಿ, "ಸರ್ವಶ್ಶರ್ವಶ್ಶಿವಃ ಸ್ಥಾಣುಃ", ಎಂಬಲ್ಲಿ ಶುಭಾವಹತ್ವ, ಶುಭಸ್ವಗನನ್ನು ತಿಳಿಸುವ, ಶರ್ವ, ಶಿವ ಮೊದಲಾದ ಶಬ್ದಗಳ ಉಚ್ಚಾರಣದಂತೆ, ಅಗ್ರಂನಯತೀತ್ಯಗ್ನಿಃ, ಇದಿಪರಮೈಶ್ವರ್ಯೇಇತೀಂದ್ರಃ – ಎಂಬ ಯೋಗವ್ಯುತ್ಪತ್ತಿಯಿಂದ, ನಿರುಪಾಧಿಕ ಅಗ್ರನಯನಾದಿರೂಪ – ಪರಮ ಪದಕ್ಕೆ ಕರೆದುಕೊಂಡು ಹೋಗುವ, ಗುಣ ವಿಶಿಷ್ಟ ಪರಮಾತ್ಮಾ ಅಗ್ನಿಃ, ಇದಿ

---

1) ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾ ದೇವತಾ ಸ್ಮೃತಾಃ ।
ಪ್ರತಿಬುದ್ಧಾನ ಸೇವಂತೇ ಯಸ್ಮಾತ್ ಪರಿಮಿತಂ ಫಲಮ್ ॥ ಭಾರತ ಶಾಂತಿ ಪರ್ವ 350–36

ಚತುರ್ಮುಖ ಬ್ರಹ್ಮ, ರುದ್ರ ಮತ್ತು ಇತರ ದೇವತೆಗಳು ಯಾರೋ, ಇವರುಗಳನ್ನು ಪ್ರತಿಬುದ್ಧಾಃ-ಪರಮೈಕಾಂತಿಗಳು ಸೇವಿಸುವುದಿಲ್ಲ. ಏಕೆಂದರೆ ಅವರುಗಳು ಅಲ್ಪ ಫಲಗಳನ್ನು ಕೊಡತಕ್ಕವರು. ಅನಂತವಾದ ಮತ್ತು ಅಕ್ಷಯವಾದ ಮೋಕ್ಷ ಫಲವನ್ನು ಕೊಡತಕ್ಕವರಲ್ಲವೆಂದು ತಾತ್ಪರ್ಯ.

2) ಭಾರತ ಅಶ್ವಮೇಧಿಕ ಪರ್ವ 104–9।
ಅನನ್ಯ ದೇವತಾ ಭಕ್ತಾ
ದೇವತಾಂತರ ಭಕ್ತಿ [illegible], [illegible]

3) ಬಾದರಾಯಣರೆಂದು ಪಾಂಚರಾತ್ರ ರಕ್ಷೆ
ನಾನ್ಯಂ ದೇವಂ ನಮಸ್ಕುರ್ಯಾತ್-ಅನ್ಯದೇವತೆಯನ್ನು ನಮಸ್ಕರಿಸಬಾರದು.

**"ದೇವಾನ್ಋಷೀನ್ಪಿತೄನ್ಭಗವದಾತ್ಮಕಾನ್ ಧ್ಯಾತ್ವಾ ಸಂತರ್ಪ್ಯ" ಎನ್ರು ನಿತ್ಯ ಪ್ರಭೃತಿಹಳಿಲ್ ಶ್ರೀ ಭಾಷ್ಯಕಾರರ್ ಅರುಳಿಚ್ಚೆಯ್‌ದ ಪಡಿಯೇ ತತ್ತದ್ದೇವತಾ ಶರೀರಕನಾಹ ಪರಮಾತ್ಮಾವೈ ಅನುಸಂಧಿತ್ತು "ಉಪಾಸಾತ್ತ್ರೈವಿಧ್ಯಾತ್" ಎನ್ಗಿರಪಡಿಯೇ ಪ್ರತರ್ದನ ವಿದ್ಯಾದಿಹಳಿಲ್, ವಿಶೇಷ್ಯಮಾನ ದಿವ್ಯಾತ್ಮ ಸ್ವರೂಪತ್ತಾಲುಮ್ ಚೇತನಾ ಚೇತನ ವಿಶಿಷ್ಟನಾಹವುಮ್ ಪರಮಾತ್ಮಾವೈ ಉಪಾಸಿಯಾ ನಿನ್ರಾಲುಮ್. ವಿಶೇಷಣಮಾನ ಚೇತನಾ ಚೇತನಙ್ಗಳಿಲ್ ಅರಾಧ್ಯತ್ವಮ್ ಇಲ್ಲಾದಾಪ್ಪೋಲೇ ಇವ್ವಿಡತ್ತಿಲುಮ್,**

**ವಿಶೇಷಣ ಮಾನ ದೇವರ್ಷಿ ಪಿತ್ರಾದಿಹಳೈ ಇವನ್ ಅರಾಧಿಕ್ಕಿರಾನಲ್ಲನ್. 1) ಅಹಂಹಿ ಸರ್ವಯ**

---

ಪರಮೈಶ್ವರ್ಯೇ – ಪರಮೈಶ್ವರ್ಯದಿಂದ ಕೂಡಿದ ಪರಮಾತ್ಮಾ ಇಂದ್ರಃ, ಎಂದು ಸಾಕ್ಷಾತ್ತಾಗಿ ಅಗ್ನೀಂದ್ರಾದಿ ಶಬ್ದಗಳು ಭಗವದ್ವಾಚಕಗಳಾಗಿ, ತಾದೃಶ ಶಬ್ದ ಘಟಿತ ಮಂತ್ರೋಚ್ಚಾರಣಪೂರ್ವಕವಾಗಿ ವರ್ಣಾಶ್ರಮ ಧರ್ಮ ಗಳನ್ನು ಅನುಷ್ಠಿಸುವುದು ಪಾರಮೈಕಾಂತ್ಯ ಧರ್ಮಕ್ಕೆ ಭಂಗವನ್ನುಂಟು ಮಾಡುವುದಿಲ್ಲವೆಂದು ತಾತ್ಪರ್ಯ. ಎರ ಡನೆಯ ಪರಿಹಾರವು ಏನೆಂದರೆ, **'ದೇವಾನ್ಋಷೀನ್ ಪಿತೄನ್ ಭಗವದಾತ್ಮಕಾನ್ ಧ್ಯಾತ್ವಾ ಸಂತರ್ಪ್ಯ, 'ಎನ್ರು** ಇತ್ಯಾದಿ – ದೇವ ಋಷಿ ಪಿತೃಗಳನ್ನು ಭಗವದಾತ್ಮಕರೆಂದು (ಅಂದರೆ ಅವರುಗಳಿಗೆ ಭಗವಂತನು ಅಂತ ರ್ಯಾಮಿಯೆಂದು) ತಿಳಿದು ತಾದೃಶ ದೇವತಾ ಶರೀರಕ ಪರಮಾತ್ಮನು ಆರಾಧ್ಯನೆಂದು ಅನುಸಂಧಾನಮಾಡಿ ಕೊಂಡು ಆಯಾಯಾ ಕರ್ಮಗಳನ್ನು ಅನುಷ್ಠಿಸುವುದು ಪರಮೈಕಾಂತಿ ಧರ್ಮಕ್ಕೆ ಬಾಧಕವಿಲ್ಲ. ಇದು ವಿಧಿ ಬಲಪ್ರಾಪ್ತವಾದ್ದರಿಂದ, ವಿಶೇಷಣೀ ಭೂತ ದೇವತಾಂತರಗಳಿಗೆ ಆರಾಧ್ಯತ್ವವು ಉಂಟಾಗುವುದಿಲ್ಲ. ಇದನ **ಶಾಸ್ತ್ರ ಬಲಸಿದ್ಧಮಾನ ವಿಡತ್ತಿಲ್** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಅನನ್ಯಥಾ ಸಿದ್ಧ ಜೀವಾದಿ ಲಿಂಗಗಳಿಂದ ಕೂಡಿದ, ಕರ್ಮವಿಶೇಷದಲ್ಲಿ, ಶಾಸ್ತ್ರ ವಿಧಿಬಲದಿಂದ, "ಉಪಾಸಾತ್ತ್ರೈವಿಧ್ಯಾತ್" (ಇಂದ್ರ ಪ್ರಾಣಾ ಧಿಕರಣ ಬ್ರಹ್ಮಸೂತ್ರ (1 – 1– 32) ಎಂಬಂತೆ ಪ್ರತರ್ದನಾದಿ ವಿದ್ಯೆಗಳಲ್ಲಿ ವಿಶೇಷ್ಯವಾದ ದಿವ್ಯಾತ್ಮ ಸ್ವರೂಪ ದಿಂದಲೂ, ಚೇತನಾ ಚೇತನ ವಿಶಿಷ್ಟ ರೂಪದಿಂದಲೂ ಪರಮಾತ್ಮನನ್ನು ಉಪಾಸನೆ ಮಾಡಿದರೂ, ವಿಶೇಷಣ ಗಳಾದ ಚೇತನಾ ಚೇತನಗಳಲ್ಲಿ **ಆರಾಧ್ಯತ್ವವು ಇಲ್ಲದಿರುವಂತೆ, ಇವ್ವಿಡತ್ತಿಲುಮ್** – ಇಲ್ಲಿಯೂ ವಿಶೇಷಣ ಭೂತರಾದ–ದೇವ ಋಷಿ ಪಿತ್ರಾದಿಗಳನ್ನು ಇವನು ಆರಾಧಿಸುವುದಿಲ್ಲವಾದ್ದರಿಂದ, ದೇವತಾಂತರ ಸ್ಪರ್ಶ ರೂಪ ದೋಷವು ಏರ್ಪಡುವುದಿಲ್ಲ. ಪ್ರತರ್ದನ ವಿದ್ಯೆಯಲ್ಲಿ, ಇಂದ್ರನು 'ಮಾಮುಪಾಸ್ವ' ಎಂದು ಹೇಳಿರುವುದು ತನ್ನ ಶರೀರಕನಾದ ಪರಮಾತ್ಮನನ್ನು ಉಪಾಸನೆ ಮಾಡುವಂತೆ ವಿಧಿ – ಅಚೇತನ ವಿಶಿಷ್ಟ ಪರಮಾತ್ಮೋಪಾ ಸನದಲ್ಲಿ ಅಚೇತನಕ್ಕೆ ಆರಾಧ್ಯತ್ವವು ಇಲ್ಲದಂತೆ, **ಚೇತನ ವಿಶಿಷ್ಟ** ಪರಮಾತ್ಮೋಪಾಸನದಲ್ಲಿಯೂ ವಿಶೇಷಣೀ ಭೂತರಾದ ಚೇತನರಿಗೆ ಆರಾಧ್ಯತ್ವವು ಏರ್ಪಡುವುದಿಲ್ಲವೆಂದು ತಾತ್ಪರ್ಯ.

ಶಂಕಾತತ್ಪರಿಹಾರ ಗ್ರಂಥಗಳ ಅಭಿಪ್ರಾಯವನ್ನು ಸರಿಯಾಗಿ ವಿಮರ್ಶೆ ಮಾಡಿದರೆ ಪ್ರಪನ್ನನ ಹಾಗೆ ಭಕ್ತಿಯೋಗ ನಿಷ್ಠನಿಗೂ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳು ಮಾತ್ರ ಅನುಷ್ಠೇಯಗಳು. ಇವುಗಳ ಲ್ಲದೆ ಬೇರೆ ದೇವತಾಂತರ ವಾಚಕ ಮಂತ್ರಗಳಿಂದ ಸಾಧ್ಯಗಳಾದ ಧರ್ಮಗಳು ಸಾತ್ವಿಕ ತ್ಯಾಗ ಪುರಸ್ಸರವಾ ಗಿಯೂ ಅನುಷ್ಠೇಯಗಳಲ್ಲ. ಭಕ್ತಿಯೋಗ ನಿಷ್ಠನಿಗೆ ವರ್ಣಾಶ್ರಮ ಧರ್ಮಗಳು 'ಸಹಕಾರಿತ್ವೇನಚ' ಎಂಬ ಸೂತ್ರದ ಪ್ರಕಾರ ವಿದ್ಯೆಗೆ ಅಂಗವಾಗಿ ಅನುಷ್ಠೇಯಗಳು. ಪ್ರಪನ್ನನಿಗೆ ಆಶ್ರಮ ಧರ್ಮಗಳೆಂಬ ಆಕಾರದಿಂದ ಮಾತ್ರ, ವಿಹಿತಗಳಾಗಿ ಅನುಷ್ಠೇಯಗಳು. ಪ್ರಪತ್ತಿ ಯೋಗಕ್ಕೆ ಅಂಗವಾಗಿಯಲ್ಲ. ಭಕ್ತಿಯೋಗ ನಿಷ್ಠನಿಗೆ ಕಾಮ್ಯಕರ್ಮಗಳು ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡಿ, ನಂತರ ಸಾತ್ವಿಕ ತ್ಯಾಗ ಪುರಸ್ಸರವಾಗಿ ಅನು ಷ್ಠೇಯಗಳೆಂಬುದು ಕರ್ಮಯೋಗ ದಶೆಯಲ್ಲಿ ಮಾತ್ರವೆಂಬ ವ್ಯವಸ್ಥೆ

"ವಿಶೇಷಣಮಾನ **ದೇವರ್ಷಿ ಪಿತ್ರಾದಿಗಳೈ ಇವನಾರಾಧಿಕ್ಕಿರಾನಲ್ಲನ್"** ಎಂದು ಆಚಾರ್ಯರು ಅನು ಗ್ರಹಿಸಿರುವುದರಿಂದ ಭಗವಚ್ಛರೀರಗಳಾಗಿಯೂ ದೇವತಾಂತರಗಳಲ್ಲಿ ಆರಾಧ್ಯತ್ವ ಬುದ್ಧಿಯು ಭಕ್ತ ಪ್ರಪನ್ನರಿಗೆ

ಜ್ಞಾನಾಂ ಭೋಕ್ತಾಚ ಪ್ರಭುರೇವಚ 2) "ಹವ್ಯಕವ್ಯ ಭುಗೇಕಸ್ತ್ವಂ ಪಿತೃದೇವ ಸ್ವರೂಪಧೃತ್
3) "ಯೇ ಯಜನ್ತಿ ಪಿತೄನ್ ದೇವಾನ್ ಬ್ರಾಹ್ಮಣಾನ್ ಸಹುತಾಶನಾನ್ ।
ಸರ್ವಭೂತಾಂತರಾತ್ಮಾನಂ ವಿಷ್ಣುಮೇವ ಯಜನ್ತಿತೇ ॥"

ಎನ್ಗಿಱಪಡಿಯೇ, ಸರ್ವಾಂತರ್ಯಾಮಿಯಾನವನೇ ಪ್ರತಿಬುದ್ಧನಾನ ಇವನುಕ್ಕು ಆರಾಧ್ಯನಾಹೈಯಾಲೇ ಇಪ್ಪಡಿ ತೆಳಿನ್ದು ಅನುಷ್ಠಿಕ್ಕುಮವ್ ಅವನುಕ್ಕು ಯಥಾಶಾಸ್ತ್ರ ಮನುಷ್ಠಿಕ್ಕಿಱ ಕೈಙ್ಕರ್ಯಙ್ಗಳಾಲ್ ಉಪಾಯಾನ್ತರಸ್ಪರ್ಶಂ ವಾರಾದಪ್ಪೋಲವುಮ್, ಕೈಙ್ಕರ್ಯಾರ್ಥಙ್ಗಳಾನ ದ್ರವ್ಯಾರ್ಜನ ನಿವೇದಿತೋಪಯೋಗಾದಿಹಳಾಲ್ ಪ್ರಯೋಜನಾಂತರ ಸ್ಪರ್ಶಮ್ ವಾರಾದಾಪ್ಪೋಲವುಮ್, ಆರಾಧ್ಯ ವಿಶೇಷಣಮಾಹ ವಿಧಿಬಲ ಪ್ರಾಪ್ತಙ್ಗಳಾನ ಚೇತನಾಚೇತನಙ್ಗಳಾಲ್ ದೇವತಾನ್ತರ ಸ್ಪರ್ಶದೋಷಮ್ ವಾರಾದು

4) "ನಾರಾಯಣಂ ಪರಿತ್ಯಜ್ಯ ಹೃದಿಸ್ಥಂ ಪ್ರಭುಮೀಶ್ವರಮ್ ।
ಯೋಽನ್ಯಮರ್ಚಯತೇ ದೇವಂ ಪರಬುದ್ಧ್ಯಾ ಸ ಪಾಪಭಾಕ್ ॥

5) "ಯಸ್ತು ನಾರಾಯಣಂ ದೇವಂ ಸಾಮಾನ್ಯೇನಾಭಿಮನ್ಯತೇ ।
ಸ ಯಾತಿ ನರಕಂ ಘೋರಂ ಯಾವಚ್ಚಂದ್ರ ದಿವಾಕರಮ್ ॥"

---

ಉಂಟಾಗುವುದಿಲ್ಲವೆಂದು ತಾತ್ಪರ್ಯ. ಹಾಗೆ ಉಂಟಾಗುತ್ತದೆಂಬ ವಾದವು, ಈ ವಾಕ್ಯದಿಂದ ನಿರ್ಧೂತವು.

(1) **ಅಹಂಹಿಸರ್ವಯಜ್ಞಾನಾಂ** ಇತ್ಯಾದಿ (2 **ಹವ್ಯಕವ್ಯಭುಗೇಕಸ್ತ್ವಂ** ಇತ್ಯಾದಿ (3) **ಯೇಯಜಂತಿ ಪಿತೄನ್ ದೇವಾನ್** ಇತ್ಯಾದಿಗಳಲ್ಲಿ ಹೇಳಿರುವಂತೆ ಸರ್ವಾಂತರ್ಯಾಮಿ ಯಾದವನೇ ಪ್ರತಿಬುದ್ಧನಾದ ಈ ಜ್ಞಾನಿಗೆ ಆರಾಧ್ಯನಾದ್ದರಿಂದ, ಹೀಗೆ ತಿಳಿದು ಅನುಷ್ಠಿಸುವವನಿಗೆ ಯಥಾಶಾಸ್ತ್ರವಾಗಿ ಅನುಷ್ಠಿಸುವ ಕೈಂಕರ್ಯಗಳಿಂದ ಉಪಾಯಾಂತರ ಸ್ಪರ್ಶವು ಬಾರದಿರುವಂತೆಯೂ, ಆ ರೀತಿಯಲ್ಲಿ ಕೈಂಕರ್ಯಾರ್ಥಗಳಾದ ದ್ರವ್ಯಾರ್ಜನ ನಿವೇದಿತ ನಿವೇದನಾದಿಗಳಿಂದ ಪ್ರಯೋಜನಾಂತರ ಸ್ಪರ್ಶವು ಬಾರದೆ ಇರುವಂತೆಯೂ ಆರಾಧ್ಯ ವಿಶೇಷಣವಾಗಿ ವಿಧಿಬಲ ಪ್ರಾಪ್ತಗಳಾದ ಚೇತನಾ ಚೇತನಗಳಿಂದ ದೇವತಾಂತರ ಸ್ಪರ್ಶ ದೋಷವು ಉಂಟಾಗಲಾರದು.

(4) **'ನಾರಾಯಣಂ ಪರಿತ್ಯಜ್ಯ'**, ಇತ್ಯಾದಿ, (5) **ಯಸ್ತು ನಾರಾಯಣಂ ದೇವಂ** ಇತ್ಯಾದಿ

---

(1) ನತು ಮಾಮಭಿಜಾನಂತಿ ತತ್ವೇನಾತ ಶ್ಚ್ಯವಂತಿತೇ ॥ ಎಂಬುದು ಉತ್ತರಾರ್ಧ.
ಸರ್ವಯಜ್ಞಗಳಿಂದಲೂ ಆರಾಧ್ಯನು ನಾನೇ ಭೋಕ್ತಾ, ಸ್ವಾಮಿಯೂ ಸಹ. ಇದನ್ನು ಸರಿಯಾಗಿ ತಿಳಿಯದೆ ಅಗ್ನೀಂದ್ರಾದಿ ದೇವತೆಗಳ ಆರಾಧನೆಯೆಂದು ತಿಳಿದು ಅವರು ಕೊಡುವ ಅಲ್ಪಫಲಗಳಿಂದ ಸ್ವರ್ಗಾದ್ಯತ್ಯಲ್ಪ ಸುಖಗಳನ್ನು ಅನುಭವಿಸಿ ಪುನಃ ಸಂಸಾರಕ್ಕೆ ಹಿಂತಿರುಗುತ್ತಾರೆ. ಗೀತೆ 9-24

2) ತ್ವಾಂ ಯೋಗಿನಶ್ಚಿಂತಯಂತಿ ತ್ವಾಯಜಂತಿಚ ಯಾಜಕಾಃ ।
ಹವ್ಯಕವ್ಯ ಭುಗೇಕಸ್ತ್ವಂ ಪಿತೃದೇವ ಸ್ವರೂಪ ಧೃತ್ ॥
ಎಲೈ ಭಗವಂತನೇ ನಿನ್ನನ್ನು ಯೋಗಿಗಳು ಧ್ಯಾನಿಸುತ್ತಾರೆ. ಯಾಗದಲ್ಲಿ ಯಾಜಕರು ನಿನ್ನನ್ನೇ ಪೂಜಿಸುತ್ತಾರೆ. ಪಿತೃಶರೀರಕನಾಗಿ ಕವ್ಯಗಳನ್ನು ಭುಜಿಸುತ್ತೀಯಾ. ದೇವ ಶರೀರಕನಾಗಿ ಹವ್ಯಗಳನ್ನು ಭುಜಿಸುತ್ತೀಯಾ. ವಿ. ಪು 1-19-73

3) ಪಿತೃಗಳನ್ನೂ, ದೇವತೆಗಳನ್ನೂ, ಬ್ರಾಹ್ಮಣರನ್ನೂ, ಅಗ್ನಿಗಳನ್ನೂ ಆರಾಧಿಸುವವರು ಸರ್ವಾಂತರ್ಯಾಮಿಯಾದ ಭಗವಂತನನ್ನೇ ಆರಾಧಿಸುತ್ತಾರೆ. ಭಾರತ ಶಾಂತಿಪರ್ವ 355-41.

4) 5) ಪು.ತಿ.ನೋ

6) "ಬುದ್ಧರುದ್ರಾದಿ ವಸತಿಂ ಶ್ಮಶಾನಂ ಶವಮೇವಚ।
ಅಟವೀಂ ರಾಜಧಾನೀಂಚ ದೂರತಃ ಪರಿವರ್ಜಯೇತ್ ॥"

ಇತ್ಯಾದಿಹಳಿಱ್ ಪಡಿಯೇ ದೇವತಾಂತರಙ್ಗಳಿಲೇ ಪರತ್ವ ಬುದ್ಧಿಪಣ್ಣುದಲ್, ಸಮತ್ವಬುದ್ಧಿ ಪಣ್ಣುದಲ್, ನಿತ್ಯನೈಮಿತ್ತಿಕಙ್ಗಳಿಲ್ ತುವಕ್ಕತ್ತ ದೇವತಾಂತರ ಸ್ಥಲಂಗಳಿಲ್ ಶೆಲ್ಲುತಲ್ ಶೆಯ್‌ಯಿಲ್, ಪರಮೈಕಾಂತಿಕ್ಕು ದೋಷಮಾಮ್. ಅಲ್ಲದು, ನಿತ್ಯನೈಮಿತ್ತಿಕಙ್ಗಳಿಲ್ ಆರಾಧ್ಯನಾನ ಸರ್ವಾಂತರ್ಯಾಮಿಕ್ಕು ಶರೀರಮಾಯ್ ನಿರ್ಕ್ಕಿರ ನಿಲೈಯಿಲ್ ಇದ್ದೇವತೈಹಳ್ ಪಕ್ಕಲ್ ಪರತ್ವಬುದ್ಧಿಯುಮ್, ಸಾಮ್ಯ ಬುದ್ಧಿಯುಮ್, ಸ್ವನಿಷ್ಠತ್ವ ಬುದ್ಧಿಯುಮ್ ಆರಾಧ್ಯತ್ವ ಬುದ್ಧಿಯುಮ್, ಫಲಪ್ರದತ್ವ ಬುದ್ಧಿಯುಮ್, ಇಲ್ಲಾಮೈಯಾಲ್, ಉಪಾಸ್ಯ ವಿಶೇಷಣಙ್ಗಳಾನ ಪ್ರಾಣ ವೈಶ್ವಾನರ ತ್ರೈಲೋಕ್ಯಾದಿಹಳಾಲ್, ಇವನುಕ್ಕು ವ್ಯಭಿಚಾರಮ್ ವಾರಾದಾಪ್ಪೋಲೇ ಶಾಸ್ತ್ರಸಿದ್ಧಙ್ಗಳಾನ ಅಗ್ನೀಂದ್ರಾದಿ ವಿಶೇಷಣಙ್ಗಳಾಲುಮ್ ಇವನುಕ್ಕು ಐಕಾಂತ್ಯವಿರೋಧಮ್ ವಾರಾದು.

---

(3) **ಬುದ್ಧ ರುದ್ರಾದಿ ವಸತಿಂ** ಇತ್ಯಾದಿ ಹೇಳಿರುವಂತೆ, ನಾರಾಯಣನನ್ನು ಬಿಟ್ಟು, ದೇವತಾಂತರಗಳನ್ನು ಪರದೇವತೆಗಳೆಂದು ಭಾವಿಸುವುದೂ, ನಾರಾಯಣನೂ ದೇವತಾಂತರಗಳೂ ಸಮವೆಂದು ಭಾವಿಸುವುದೂ, ನಿತ್ಯ ನೈಮಿತ್ತಿಕಗಳಲ್ಲಿ ಸಂಬಂಧವಿಲ್ಲದ **ದೇವತಾಂತರ ಸ್ಥಲಂಗಳಿಲ್ ಶೆಲ್ಲುದಲ್ ಶೆಯ್ಯಿಲ್** – ದೇವತಾಂತರ ಶಬ್ದೋಚ್ಚಾರಣವನ್ನೂ ಅವರುಗಳ ಆಲಯಗಳಿಗೂ ಹೋಗುವುದನ್ನೂ ಮಾಡಿದರೆ, **ಪರಮೈಕಾಂತಿಕ್ಕು** – ಇತ್ಯಾದಿ ಪರಮೈಕಾಂತಿತ್ವಕ್ಕೆ ದೋಷವು ಏರ್ಪಡುತ್ತದೆ. ಇದಲ್ಲದೆ **ನಿತ್ಯನೈಮಿತ್ತಿಕಂಗಳಿಲ್** ಇತ್ಯಾದಿ – ನಿತ್ಯನೈಮಿತ್ತಿಕ ಕರ್ಮಗಳಲ್ಲಿ ಆರಾಧ್ಯನಾದ ಸರ್ವಾಂತರ್ಯಾಮಿಗೆ ಶರೀರವಾಗಿರುವ ಸ್ಥಿತಿಯಲ್ಲಿ, **ಇದ್ದೇವತೈಹಳ್ ಪಕ್ಕಲ್** ಇತ್ಯಾದಿ – ಈ ಅಗ್ನೀಂದ್ರಾದಿ ದೇವತೆಗಳನ್ನು ಕುರಿತು, ಇವರು ನಾರಾಯಣನಿಗಿಂತ ಮೇಲಾದವರು, ನಾರಾಯಣನಿಗಿಂತ **ಸ್ವನಿಷ್ಟತ್ವಬುದ್ಧಿ** – **ಸ್ವತಂತ್ರರು** ಎಂಬ ಬುದ್ಧಿಯೂ, **ಆರಾಧ್ಯತ್ವಬುದ್ಧಿಯೂ**– ನಾವು ಅನುಷ್ಠಿಸುವ ಕರ್ಮಗಳಲ್ಲಿ ವಿಶೇಷಣೀಭೂತರಾದ (ಶರೀರವಾಗಿರುವ) ಆಯಾಯಾ ದೇವತೆಗಳು ಆರಾಧ್ಯರೆಂಬ ಬುದ್ಧಿಯೂ, **ಫಲಪ್ರದತ್ವಬುದ್ಧಿಯೂ,** – ವಿಶೇಷಣೀ ಭೂತರಾದ ದೇವತೆಗಳೂ ಫಲವನ್ನು ಕೊಡುತ್ತಾರೆಂಬ ಬುದ್ಧಿಯೂ **ಇಲ್ಲಾಮೈಯಾಲೇ** – ಈ ಪರಮೈಕಾಂತಿಗೆ ಇರುವುದಿಲ್ಲ. ಇದಕ್ಕೆ ಅನುರೂಪವಾದ ದೃಷ್ಟಾಂತವನ್ನು **ಉಪಾಸ್ಯ ವಿಶೇಷಣಂಗಳಾನ** ಎಂದಾರಂಭಿಸಿ ತೋರಿಸಿಕೊಡುತ್ತಾರೆ. ಅದಾಗಿ ಇಂದ್ರ ಪ್ರಾಣಾಧಿಕರಣ, ವೈಶ್ವಾನರಾಧಿಕರಣಾದಿಗಳಲ್ಲಿ, ಇಂದ್ರ ಶರೀರಕನಾಗಿಯೂ, ಪ್ರಾಣ ಶರೀರಕನಾಗಿಯೂ, ಜಾಠರಾಗ್ನಿ ಶರೀರಕನಾಗಿಯೂ, ತ್ರೈಲೋಕ್ಯ ಶರೀರಕನಾಗಿಯೂ, ಉಪಾಸನೆಯನ್ನು ಮಾಡುವ ಸ್ಥಲಗಳಲ್ಲಿ, ಚೇತನಾಚೇತನಗಳ ಸಂಬಂಧದಿಂದ, ಪಾರಮೈಕಾಂತ್ಯ ಭಂಗವು ಏರ್ಪಡದಂತೆ, ಶಾಸ್ತ್ರಸಿದ್ಧಗಳಾದ ನಿತ್ಯನೈಮಿತ್ತಿಕ ಕರ್ಮಗಳಲ್ಲಿಯೂ, ಕರ್ಮಾರಾಧ್ಯನಾದ ಅಂತರ್ಯಾಮಿಗೆ ವಿಶೇಷಣಗಳಾದ ಅಗ್ನೀಂದ್ರಾದಿ ಶಬ್ದೋಚ್ಚಾರಣದಿಂದಲೂ ಇವನ ಪಾರಮೈಕಾಂತ್ಯಕ್ಕೆ ಭಂಗವಿಲ್ಲ. ವಿಶೇಷಣೀ ಭೂತಗಳಾದ ಅಚೇತನಗಳ ಹಾಗೆ, ಈ ಚೇತನರುಗಳಿಗೂ ಆರಾಧ್ಯತ್ವವಿಲ್ಲವಾಗಿ, ಐಕಾಂತ್ಯಕ್ಕೆ ಭಂಗವಿಲ್ಲವೆಂದು ತಾತ್ಪರ್ಯ.

---

4) ಪ್ರಾಜಾಪತ್ಯ ಸ್ಮೃತಿ-ಹೃದಯದಲ್ಲಿ ಬಂದು ನೆಲೆಸಿರುವ, ಸ್ವಾಮಿಯೂ ಈಶ್ವರನೂ (ನಿಯಮಿಸುವವನೂ ಆದ ನಾರಾಯಣನನ್ನು ಬಿಟ್ಟು, ಬೇರೆ ದೇವತೆಯನ್ನು ಪರದೇವತೆಯೆಂದು ಭಾವಿಸಿ ಪೂಜಿಸುವವನು ಪಾಪಗಳಿಂದ ಕೂಡಿದವನಾಗುತ್ತಾನೆ,

5) ಮಹಾ ಭಾರತ – ನಾರಾಯಣನನ್ನು ಇತರ ದೇವತೆಗಳಿಗೆ ಸಮವಾಗಿ ಭಾವಿಸುವವನು ಚಂದ್ರ ಸೂರ್ಯರುಗಳು ಇರುವ ಪರ್ಯಂತ ಘೋರವಾದ ನರಕಕ್ಕೆ ಹೋಗುತ್ತಾನೆ,

6 ಶಾಂಡಿಲ್ಯ ಸ್ಮೃತಿ 4-191 ಬುದ್ಧ ರುದ್ರರ ಆಲಯಗಳನ್ನೂ ಸ್ಮಶಾನ, ಶವ, ಕಾಡು, ರಾಜಧಾನಿ, ಇವುಗಳನ್ನೂ ದೂರದಿಂದಲೇ ಪರಿವರ್ಜಿಸಬೇಕು. ಇವುಗಳ ಸಮೀಪಕ್ಕೂ ಹೋಗಬಾರದು. ಈ ಆಲಯಗಳಿಗೆ ಪ್ರವೇಶಿಸುವುದು ಸರ್ವಥಾ ನಿಷಿದ್ಧವು ಎಂದು ತಾತ್ಪರ್ಯ.

**ಪೂರ್ವಾಚಾರ್ಯ ಸಂಪ್ರದಾಯಾನುಷ್ಠಾನಾಭ್ಯಾಂ ದೃಢೀಕರೋತಿ**

**ವಂಗಿ ಪುರತ್ತು ನಂಬಿಯುುಮ್ ಪ್ರಪನ್ನನುಕ್ಕು ಅಹೋರಾತ್ರ ಕೃತ್ಯಮಾನ ಭಗವತ್ಸಮಾರಾಧನತ್ತೈ ಚ್ಚೊಲ್ಲವಿಱ್ಱನ್ದು**

1) **ಗಾಯತ್ರೀ ಜಪ ಪರ್ಯಂತಂ ಮನ್ತ್ರಾಚಮನ ಪೂರ್ವಕಮ್ ।**
**ಸಾಧ್ಯಂ ಕರ್ಮಾಖಿಲಂ ಸಾಧು ಸಮಾಪ್ಯಚ ಯಥಾವಿಧಿ ॥**

---

ಏತಾವತಾ ಪ್ರಬಂಧೇನ. ಹೇಳಿರುವ ವಿಷಯಗಳ ತಾತ್ಪರ್ಯವೇನೆಂದರೆ :–

ಮೋಕ್ಷಾರ್ಥೋಪಾಸನಗಳಾದ ವೈಶ್ವಾನರಾದಿ ವಿದ್ಯೆಗಳಲ್ಲಿ ತ್ರೈಲೋಕ್ಯ ಶರೀರಕನಾಗಿ ಭಗವದ್ಧ್ಯಾನವು ಹೇಳಲ್ಪಟ್ಟು, ತಾದೃಶ ತ್ರೈಲೋಕ್ಯಾದಿಗಳು ವಿಶೇಷಣಗಳಾಗಿ ಬುದ್ಧಿಯಲ್ಲಿ ಆರೂಢಗಳಾದರೂ, ಅವುಗಳಲ್ಲಿ ಪ್ರಸಾದ್ಯತ್ವ ಬುದ್ಧಿಯು ಬಾಧಿತವು. ಹಾಗೆಯೇ ಉಪಾಸನಾಂಗ ಭೂತಗಳಾದ ಆಯಾಯಾ ದೇವತಾವಾಚಿ ಮಂತ್ರಾದಿಗಳಿಂದ ಸಾಧ್ಯಗಳಾದ ಧರ್ಮಗಳಲ್ಲಿಯೂ, ವಿಧಿಬಲದಿಂದ ಆಯಾಯಾ ದೇವತಾ ಶರೀರಕ ಪರಮಾತ್ಮನು ಉಪಾಸ್ಯನಾಗಿ ಪ್ರೀತಿ ವಿಷಯನಾಗುತ್ತಾನೆಯೇ ಹೊರತು, ಆಯಾಯಾ ದೇವತೆಗಳಲ್ಲಿ ಪ್ರೀಣನೀಯತ್ವ ಬುದ್ಧಿಯು ಪರಮೈಕಾಂತಿಯಾದ ಇವನಿಗೆ ಇಲ್ಲವೇ ಇಲ್ಲ. ಶಾಸ್ತ್ರಪ್ರಾಪ್ತವಾದ ಇಂತಹ ಪಾರಮೈಕಾಂತ್ಯವು ಆರಬ್ಧ ಭಕ್ತಿಯೋಗನಿಗೂ, ಪ್ರಪನ್ನನಿಗೂ ತುಲ್ಯ. ಉಪಯುಕ್ತವಾದ ಕರ್ಮಗಳ ನಡುವೆ ಕಾರೀರ್ಯಾದಿ ಯಾಗಗಳ ಸಂಗ್ರಹೋಕ್ತಿಯು, ಭಾಷ್ಯಾದಿಗಳಲ್ಲಿ ಅಲ್ಲಲ್ಲೇ ಕಾಣಲ್ಪಡುತ್ತದೆ. ಇದು ಅನಾದಿಕಾಲದಿಂದ ಅನುಸ್ಯೂತವಾಗಿ ಬಂದ ಕರ್ಮವರ್ಗಗಳು ಅನಂತಗಳಾಗಿದ್ದು, ಹಿಂದೆ ಫಲವನ್ನು ಕೊಡದೆ ಈಗ ಫಲವನ್ನು ಕೊಟ್ಟು ಉಪಕರಿಸುತ್ತವೆ, ಅಥವಾ ಈಗ ಇಲ್ಲದೆ ಮುಂದೆ ಫಲಪ್ರದಗಳಾಗುತ್ತವೆ, ಎಂಬುದನ್ನು ಪ್ರಕರಣಾನುಗುಣವಾಗಿ ತಿಳಿಸುವುದರಲ್ಲಿ ತಾತ್ಪರ್ಯವಾದ್ದರಿಂದ, ಯಾವ ವಿರೋಧವೂ ಇಲ್ಲ. ಆದ್ದರಿಂದ ಭಕ್ತ ಪ್ರಪನ್ನರಿಗೆ ಸರ್ವಥಾ ದೇವತಾಂತರಗಳಲ್ಲಿ ನಿತ್ಯನೈಮಿತ್ತಿಕ ಕರ್ಮಗಳ ಅನುಷ್ಠಾನ ಸಮಯದಲ್ಲಿ ಆರಾಧ್ಯತ್ವ ಬುದ್ಧಿಗಂಧವಿಲ್ಲ. ನಿತ್ಯನೈಮಿತ್ತಿಕಗಳಿಗೆ ಬಹಿರ್ಭೂತಗಳಾದ ವ್ಯಾಮಿಶ್ರ ಧರ್ಮೋಪಸಂಗ್ರಹವು ಯಾವ ಕಾರಣದಿಂದಲೂ ನಿರವಕಾಶವು ಎಂಬುದು ತತ್ವವಿತ್ತುಗಳ ರಹಸ್ಯ ಸರಣಿ.

## ಪೂರ್ವಾಚಾರ್ಯ ಶ್ರೀ ಸೂಕ್ತ್ಯನುಷ್ಠಾನಗಳು

ನಿತ್ಯನೈಮಿತ್ತಿಕ ಕರ್ಮಗಳಲ್ಲಿ ಅನ್ಯಥಾ ಸಿದ್ಧ ಜೀವಲಿಂಗ ಸ್ಥಲದಲ್ಲಿ, ಅಂದರೆ ಭಗವತ್ಪರವಾಗಿ ಆ ಶಬ್ದಗಳಿಗೆ ಅರ್ಥವನ್ನು ಹೇಳಬಹುದಾದ ಸಂದರ್ಭಗಳಲ್ಲಿ, ಸಾಕ್ಷಾದ್ಭಗವಂತನನ್ನೂ ಅನನ್ಯಥಾ ಸಿದ್ಧ ಜೀವಲಿಂಗ ಸ್ಥಲಗಳಲ್ಲಿ ಅಂದರೆ ಇಂದ್ರಶ್ಶಚೀಪತಿಃ, ರುದ್ರಃ ಪಶುಪತಿಃ ಇತ್ಯಾದಿಯಾಗಿ ಶಚೀಪತಿತ್ವ, ಪಶುಪತಿತ್ವ ಲಿಂಗ (ಗುರುತು) ಗಳಿಂದ ಆಯಾಯಾ ದೇವತೆಗಳನ್ನು ಸ್ಪಷ್ಟವಾಗಿ ಹೇಳುವ ಸ್ಥಳಗಳಲ್ಲಿ, ಅವರವರಿಗೆ ಅಂತರ್ಯಾಮಿಯಾದ ಭಗವಂತನನ್ನೇ ಆರಾಧಿಸುವುದರಿಂದ, ದೇವತಾಂತರ ಸ್ಪರ್ಶವು ಬರುವುದಿಲ್ಲ. ಇದಕ್ಕೆ ಸಂವಾದವಾಗಿ ಪೂರ್ವಾಚಾರ್ಯರುಗಳ ಶ್ರೀ ಸೂಕ್ತಿಗಳನ್ನೂ ಅವರುಗಳ ಅನುಷ್ಠಾನಗಳನ್ನೂ ಪ್ರಮಾಣೀಕರಿಸುತ್ತಾರೆ. ಆದಾಗಿ **ವಂಗಿಪುರತ್ತು ನಂಬಿಯುುಮ್** ಇತ್ಯಾದಿ – ಶ್ರೀ ಭಾಷ್ಯಕಾರರ ಶಿಷ್ಯರಾದ ವಂಗಿಪುರತ್ತು ನಂಬಿಗಳು "ಆಹ್ನಿಕಕಾರಿಕೆ"ಯನ್ನು ರಚಿಸಿರುತ್ತಾರೆ. ಆ ಪ್ರಬಂಧದಲ್ಲಿ, ಭಗವಂತನ ಪೂಜಾವಿಧಿಯನ್ನು ಹೇಳಲು ಉಪಕ್ರಮಿಸಿ, (1) **ಗಾಯತ್ರೀಜಪ ಪರ್ಯಂತಮ್** ಇತ್ಯಾದಿ, 'ಸೂರ್ಯಶ್ಚಮಾಮನ್ಯುಶ್ಚ', ಇತ್ಯಾದಿ ಮಂತ್ರಾಚಮನ ಪೂರ್ವಕವಾಗಿ ಗಾಯತ್ರೀಜಪ ಪರ್ಯಂತವಾಗಿ ಪ್ರಾತಸ್ಸಂಧ್ಯಾವಂದನಾದಿ ಕರ್ಮಗಳನ್ನು 'ಬ್ರಹ್ಮಯಜ್ಞಾಂತ

---

1) 2) 3) ವಂಗೀಪುರತ್ತು ನಂಬಿಯ ನಿತ್ಯ-77.84,90.496

2) ಸಮಿದಾಜ್ಯಾದಿ ಭಿರ್ದ್ರವ್ಯೈರ್ಮನ್ತ್ರೈರಪಿ ಯಥೋದಿತೈಃ ।
ಹುತ್ವಾಗ್ನೀನಗ್ನಿಹೋತ್ರಾದೌ ಉಕ್ತಂ ಕಾಲ ಮನಿಕ್ಷಿಪನ್॥ ಎನ್ರುಮ್

3) "ತತೋ ಮಾಧ್ಯಂದಿನಂ ಕರ್ಮಸ್ವೋದಿತಂ ಶ್ರುತಿಚೋದಿತಮ್ ।
ಸ್ನಾನಾದಿ ಬ್ರಹ್ಮಯಜ್ಞಾಂತಂ ಕೃತ್ವಾಖಿಲ ಮತಂದ್ರಿತಃ ॥" ಎನ್ರುಮ್,

4) "ಹೋಮಂ ಪಿತೃಕ್ರಿಯಾಂ ಪಶ್ಚಾದನುಯಾಗಾದಿಕಂಚಯತ್ ॥" ಎನ್ರುಮ್, ಇ ಪ್ಪ್ರಕಾರಙ್ಗಳಿಲೇ ತತ್ತನ್ಮನ್ತ್ರ ಪೂರ್ವಕಙ್ಗಳಾನ ವರ್ಣಾಶ್ರಮ ಧರ್ಮಙ್ಗಳೈ ಅರುಳಿಚ್ಚೆಯ್‌ದಾರ್. ಭಟ್ಟರುಮ್ ಆಳ್ವಾನುಮ್ ತನ್ನಾಙ್ಗಳ್ ಅರುಳಿಚ್ಚೆಯ್‌ದ ನಿತ್ಯಙ್ಗಳಿಲೇ,

1] "ಶ್ರುತಿ ಸ್ಮೃತ್ಯುದಿತಂ ಕರ್ಮಯಾವಚ್ಛಕ್ತಿ ಪರಾತ್ಮನಃ ।
ಆರಾಧನತ್ವೇನಾಪಾದ್ಯ ಸೌರ್ಧ್ವ ಪುಂಡ್ರಶ್ಚ ತರ್ಪಯೇತ್॥" ಇತ್ಯಾದಿಹಳೈ ಅರುಳಿಚ್ಚೆಯ್‌ದಾರ್‌ಹಳ್. ಪೆರಿಯಜೀಯರುಮ್, "ಶ್ರೀ ಪರಾಶರ ಭಟ್ಟಾರ್ಯ ಚರಣೌ ಸಂಶ್ರಯೇಮಹಿ. ಇತ್ಯಾದಿಯಾಲೇ ಸಂಪ್ರದಾಯ ವಿಶೇಷ ಜ್ಞಾಪನಾರ್ಥಮಾಹ ಗುರುನಮಸ್ಕಾರಾದಿಹಳೈಪ್ಪಣ್ಣಿ,

2] "ಭಗವಚ್ಚರಣಾಂಭೋಜ ಪರಿಚರ್ಯಾ ವಿಧಿಕ್ರಮಮ್ ।
ಏಕಾನ್ತಿಭಿರನುಷ್ಠೇಯಂ ನಿತ್ಯಂ ಸಮಭಿದಧ್ಮಹೇ ॥ಎನ್ರು ತುಡಙ್ಗಿ
ಆಪೋಹಿಷ್ಠಾದಿಭಿರ್ಮನ್ತ್ರೈರ್ವ್ಯಾಚಕೈಃ ಪರಮಾತ್ಮನಃ ।
ಸಂಪ್ರೋಕ್ಷ್ಯ ಮನಾತ್ರಚಮನಂ ಮನ್ತ್ರೈ ಸ್ತತ್ಪ್ರತಿಪಾದಕೈಃ ।
ಆದಿತ್ಯಾಂತಸ್ಸ್ಥಿತಸ್ಯಾರ್ಘ್ಯಂ ವಿತೀರ್ಯ ಪರಮಾತ್ಮನಃ ।
ಪ್ರತಿಪಾದಕಯಾ ವಿಷ್ಣೋಸ್ಸಾವಿತ್ರ್ಯಾತಂ ಜಪೇದ್ಧರಿಮ್ ।
ಧ್ಯಾಯನ್ ಜಪ್ತ್ವೋಪತಿಷ್ಠೇತ ತನೇವ ಪುರುಷೋತ್ತಮಮ್ ।
ನಾರಾಯಣಾತ್ಮಕಾನ್ ದೇವಾನ್ ಋಷೀನ್ ಸಂತರ್ಪಯೇತ್ಪಿತ್ರ್ನ್ ॥" ಎನ್ರರುಳಿಚ್ಚೆಯ್‌ದಾರ್.

---

ಮಾಡಿ ಅಗ್ನಿಹೋತ್ರಗಳನ್ನು ಸಮಿತ್, ಆಜ್ಯಾಹುತಿಗಳಿಂದ ಮಾಡಿ, ಮಾಧ್ಯಂದಿನ ಕರ್ಮವಾದ ಮಾಧ್ಯಾಹ್ನಿಕ ಸ್ನಾನ, ಇಜ್ಯೆ, ಹೋಮಂ ಪಿತೃಕ್ರಿಯಾಂ – ವೈಶ್ವದೇವ ಪಂಚಮಹಾ ಯಜ್ಞಗಳನ್ನು ಮಾಡಿ (ಪಿತೃಕ್ರಿಯೆ-ಪಿತೃಯಜ್ಞ.), ಬೆಳಗ್ಗೆ ಮಾಡಲಾಗದೆ ಹೋದರೆ, ಪಂಚ ಮಹಾ ಯಜ್ಞಗಳಲ್ಲಿ ಸೇರಿದ ಬ್ರಹ್ಮಯಜ್ಞವನ್ನು ಮನುಷ್ಯ ಯಜ್ಞಾನಂತರ ಮಾಡಬಹುದು. (ಪಂಚ ಮಹಾಯಜ್ಞಗಳು – ದೇವಯಜ್ಞ, ಪಿತೃಯಜ್ಞ, ಭೂತ ಯಜ್ಞ, ಮನುಷ್ಯ ಯಜ್ಞ, ಬ್ರಹ್ಮಯಜ್ಞಗಳು,) ಅನುಯಾಗ – ಊಟವಾದ ನಂತರ ಮಾಡಬೇಕಾದ ಉತ್ತರ ಮಾಧ್ಯಾಹ್ನಿಕ. ಈ ರೀತಿಯಾಗಿ ಆಯಾಯಾ ಮಂತ್ರಗಳನ್ನು ಬಳಸಿ ಮಾಡಬೇಕಾದ ಕರ್ಮಗಳನ್ನು ಕೃಪೆ ಮಾಡಿ ತಿಳಿಸಿರುತ್ತಾರೆ, **ಭಟ್ಟರುಮ್ ಆಳ್ವಾನುಮ್** ಇತ್ಯಾದಿ – ಪರಾಶರಭಟ್ಟರೂ ಕೂರತ್ತಾಳ್ವಾನ್ ಅವರೂ ತಾವುಗಳು ರಚಿಸಿರುವ ನಿತ್ಯಗ್ರಂಥಗಳಲ್ಲಿ (1) **ಶ್ರುತಿಸ್ಮೃತ್ಯುದಿತಂ ಕರ್ಮ** ಇತ್ಯಾದಿ – ಶ್ರುತಿಗಳಲ್ಲಿಯೂ ಸ್ಮೃತಿಗಳಲ್ಲಿಯೂ ಹೇಳಿರುವ ಕರ್ಮಗಳನ್ನು ತನ್ನ ಶಕ್ತ್ಯನುಗುಣವಾಗಿ ಭಗವಂತನ ಆರಾಧನರೂಪವೆಂದು ತಿಳಿದು ಮಾಡಬೇಕು. ದ್ವಾದಶೋರ್ಧ್ವ ಪುಂಡ್ರಗಳನ್ನು ಧರಿಸಿ ದೇವಋಷಿ ಪಿತೃತರ್ಪಣಗಳನ್ನು ಮಾಡಬೇಕು, ಇತ್ಯಾದಿಗಳನ್ನು ಕೃಪೆಯಿಂದ ಹೇಳಿರುತ್ತಾರೆ. **ಪೆರಿಯಜೀಯರುಮ್** – ನಾರಾಯಣ ಮುನಿ ಎಂಬ ನಂಜೀಯರೂ "ಶ್ರೀ ಪರಾಶರಭಟ್ಟಾರ್ಯರ ಪಾದಗಳನ್ನು ಆಶ್ರಯಿಸಿ" ಇತ್ಯಾದಿಯಿಂದ ಸಂಪ್ರದಾಯ ವಿಶೇಷ ಜ್ಞಾಪಕಾರ್ಥವಾಗಿ, ಗುರುನಮಸ್ಕಾರಾದಿಗಳನ್ನು ಮಾಡಿ (2) **ಭಗವಚ್ಚರಣಾಂಭೋಜ** ಇತ್ಯಾದಿ ಆರಂಭಿಸಿ, ಪರಮೈಕಾಂತಿಗಳಿಂದ ಅನುಷ್ಠಿಸಲ್ಪಡಬೇಕಾದ ಭಗವದಾರಾಧನ ರೂಪವಾದ ನಿತ್ಯಕರ್ಮಗಳನ್ನು ತಿಳಿಸುವುದಾಗಿ, ಆರಂಭಿಸಿ, **ಆಪೋಹಿತ್ಯಾದಿಭಿಃ ಮಂತ್ರೈಃ** – ಇತ್ಯಾದಿ ಆಪೋಹಿಷ್ಠಾ ಮಯೋಭುವಃ ಇತ್ಯಾದಿ

1) ಭಟ್ಟರ್ ನಿತ್ಯ 2) ನಂಜೀಯರ್ ನಿತ್ಯ

ಭಾಷ್ಯಕಾರರ್ ಸಂಪ್ರದಾಯತ್ತಿಲುಳ್ಳ ಕುಲಙ್ಗಳೆಲ್ಲಾಮ್ ಇನ್ರಳವುಮ್ ಸ್ವಸೂತ್ರೋಕ್ತಮಾನ ಪಡಿಯೇ ತತ್ತದ್ದೇವತಾ ಮನ್ತ್ರಙ್ಗಳೈಕ್ಕೊಂಡು ವಿವಾಹೋಪನಯನಾದಿಹಳ್ ಅನುಷ್ಠಿಕ್ಕವುಮ್ ಕಾಣಾನಿನ್ರೋಮ್. ಪೆರಿಯನಂಬಿ ಮುದಲಾನ ಪರಮಾಚಾರ್ಯರ್‌ಹಳುಮ್ ತಂದಾಮ್ ಸೂತ್ರಙ್ಗಳಿನ್ಪಡಿಯೇ ಯಜ್ಞಾದಿಹಳ್ ಪಣ್ಣಿನಾರ್‌ಹಳೆನ್ನುಮಿಡಮ್ ಸರ್ವರುಕ್ಕುಮ್ ಪ್ರಸಿದ್ಧಮ್.

ಆನಪಿನ್ಪು, ಭಾಷ್ಯಕಾರರುಡೈಯವುಮ್ ತಚ್ಛಿಷ್ಯ ಪ್ರಶಿಷ್ಯರ್‌ಹಳುಡೈಯವುಮ್, ಉಪದೇಶಾನುಷ್ಠಾನಙ್ಗಳಿಲೇ ನಿಷ್ಠೈಯುಡೈಯಾರ್‌ಕ್ಕು ಆಗಮ ಸಿದ್ಧಾನ್ತಾನುವರ್ತಿಹಳಾನ ಸಂಹಿತಾ ವಿಶೇಷಙ್ಗಳಿಲ್ ಪ್ರತಿನಿಯತಮಾಹಚ್ಚೊಲ್ಲುಮ್ ಮನ್ತ್ರವಿಶೇಷಙ್ಗಳೈಕ್ಕೊಂಡು ಕ್ರಿಯಾವಿಶೇಷಙ್ಗಳ್‌ಅನುಷ್ಠಿಕ್ಕವೊಣ್ಣಾದು.

ವರ್ಣಾಶ್ರಮ ಧರ್ಮಾನುಷ್ಠಾನೇ ಪಾಂಚರಾತ್ರ ಶಾಸ್ತ್ರಸ್ಯ ನ ವಿರೋಧಃ

ಅಧಿಕಾರಾದಿಹಳುಕ್ಕು ಅನುರೂಪಮಾಹ ಚತುರ್ವಿಧ ಪಾಂಚರಾತ್ರಮುಮ್ ವಿಭಕ್ತಮಾಯ್ ನಿರ್ಕುಮ್ ನಿಲೈಯುಮ್ ವಚನವಿರೋಧಮಿಲ್ಲಾದ ವಿಡತ್ತಿಲ್ "ಅನುಕ್ತಮನ್ಯತೋಗ್ರಾಹ್ಯಮ್" ಎನ್ಗಿರ ನ್ಯಾಯಂ ನಡಕ್ಕುಮ್ ಪಡಿಯುಮ್, ನಾಲು ಆಶ್ರಮತ್ತಾಲುಮ್ ಬ್ರಹ್ಮವಿದ್ಯೆಯುಮ್ ಮೋಕ್ಷಲಾಭ

---

ಪರಮಾತ್ಮವಾಚಕ ಮಂತ್ರಗಳಿಂದ ಪ್ರೋಕ್ಷಿಸಿಕೊಂಡು, ಆಚಮನವನ್ನು ಮಾಡಿ ಸೂರ್ಯಾಂತರ್ವರ್ತಿಯಾದ ಪರಮಾತ್ಮನಿಗೆ, ತತ್ಪ್ರತಿಪಾದಕ ಮಂತ್ರಗಳಿಂದ ಅಂದರೆ ಗಾಯತ್ರೀ ಮಂತ್ರವು ಸೂರ್ಯಾಂತರ್ವರ್ತಿ ಪರಮಾತ್ಮನನ್ನು ಪ್ರತಿಪಾದಿಸುತ್ತದೆಯಾದ್ದರಿಂದ ಆ ಮಂತ್ರದಿಂದ ಆ ಪರಮಾತ್ಮನಿಗೆ ಅರ್ಘ್ಯವನ್ನು ಕೊಟ್ಟು, ವಿಷ್ಣು ಪರಮಾತ್ಮನನ್ನು ಪ್ರತಿಪಾದಿಸುವ ಸಾವಿತ್ರೀ(ಗಾಯತ್ರೀ) ಮಂತ್ರದಿಂದ, ಆ ಹರಿಯನ್ನು ಧ್ಯಾನಮಾಡಿಕೊಂಡು, ಆ ಪುರುಷೋತ್ತಮನನ್ನು ಉಪಸ್ಥಾನ ಮಾಡಬೇಕು. ಅನಂತರ ನಾರಾಯಣಾತ್ಮಕರಾದ ದೇವಋಷಿ ಪಿತೃಗಳನ್ನು ತರ್ಪಿಸಬೇಕು ಎಂದು ಅನುಗ್ರಹಿಸಿರುತ್ತಾರೆ. ಹಿಂದೆಯೇ ಹೇಳಿದ ಪ್ರಕಾರ ಅನ್ಯಥಾ ಸಿದ್ಧಜೀವ ಲಿಂಗಗಳ ಸ್ಥಳದಲ್ಲಿ "ಸಾಕ್ಷಾದಪ್ಯ ವಿರೋಧಂ ಜೈಮಿನಿಃ", ಎಂಬ ಸೂತ್ರದಂತೆ ಅಗ್ನಿಂದ್ರಾದಿ ಶಬ್ದಗಳು, ಸಾಕ್ಷಾತ್ಪರ ಮಾತ್ಮವಾಚಕಗಳಾಗಿಯೂ,ಅನನ್ಯಥಾ ಸಿದ್ಧಜೀವ ಲಿಂಗಸ್ಥಳದಲ್ಲಿ ಆಯಾಯಾದೇವತಾಂತರ್ಯಾಮಿ ಭಗವದ್ವಾಚಕಗಳೆಂದೂ ಶಾಸ್ತ್ರ ನಿರ್ಣಯ.

**ಭಾಷ್ಯಕಾರ ಸಂಪ್ರದಾಯತ್ತಿಲುಳ್ಳ ಕುಲಂಗಳೆಲ್ಲಾಮ್** ಇತ್ಯಾದಿ – ಶ್ರೀ ಭಾಷ್ಯಕಾರರ ಸಂಪ್ರದಾಯನಿಷ್ಠರಾದ ಅವರ ವಂಶಸ್ಥರುಗಳೆಲ್ಲಾ, ಈವತ್ತಿನವರೆಗೂ ತಮ್ಮ ತಮ್ಮ ಸೂತ್ರಗಳಲ್ಲಿ ಹೇಳಿರುವ ರೀತಿಯಲ್ಲಿಯೇ ಆಯಾಯಾ ದೇವತಾ ಮಂತ್ರಗಳನ್ನು ಕೊಂಡು ವಿವಾಹೋಪನಯನಾದಿಗಳನ್ನು ಅನುಷ್ಠಿಸಿ ಬರುವುದನ್ನು ಕಾಣುತ್ತಿದ್ದೇವೆ. **ಪೆರಿಯ ನಂಬಿ ಮುದಲಾನ** ಇತ್ಯಾದಿ–ಪೆರಿಯನಂಬಿ ಮೊದಲಾದ ಪರಮಾಚಾರ್ಯರುಗಳೂ ತಮ್ಮ ತಮ್ಮ ಸೂತ್ರದ ಪ್ರಕಾರ ಯಜ್ಞಾದಿಗಳನ್ನು ಮಾಡಿದರೆಂಬುದು ಸರ್ವತ್ರ ಪ್ರಸಿದ್ಧ.

ಈ ರೀತಿಯಾದ ಶಾಸ್ತ್ರ ಸಂಪ್ರದಾಯಗಳನ್ನು ಉಲ್ಲಂಘಿಸಿ, ಕೆಲವರು ದೇವತಾಂತರ ಸ್ಪರ್ಶವು ಏರ್ಪಡುತ್ತದೆಯೆಂದು ಹೇಳಿಕೊಂಡು, ದೇವರ್ಷಿಪಿತೃತರ್ಪಣಗಳನ್ನೂ, ವೈಶ್ವದೇವ ಪಂಚಮಹಾಯಜ್ಞಗಳನ್ನೂ, ಶ್ರಾದ್ಧದಲ್ಲಿ ಹೋಮಗಳನ್ನೂ ಮಾಡದೆ ಇರುವುದು ಕರ್ಮಭ್ರಷ್ಟತೆಯನ್ನುಂಟು ಮಾಡುತ್ತದೆಂಬುದು ಇಲ್ಲಿಯ ಭಾವ

**ಶಾಸ್ತ್ರ ರೀತಿಯನ್ನು ಅತಿಕ್ರಮಿಸಿ ತನಗೆ ಇಷ್ಟವಾದ ಮಂತ್ರಗಳನ್ನು ಬಳಸಿ ಕರ್ಮಾನುಷ್ಠಾನ ಮಾಡಕೂಡದು.**

**ಆನಪಿನ್ಪು** ಇತ್ಯಾದಿ-ಹೀಗೆ ಶಾಸ್ತ್ರ ವ್ಯವಸ್ಥೆಯು ಏರ್ಪಟ್ಟಿರುವಾಗಿ ಭಾಷ್ಯಕಾರರ ಮತ್ತು ಅವರ ಶಿಷ್ಯ ಪ್ರಶಿಷ್ಯರುಗಳ ಉಪದೇಶಾನುಷ್ಠಾನಗಳಲ್ಲಿ ನಿಷ್ಠೆಯುಳ್ಳವರಿಗೆ ಪಾಂಚರಾತ್ರ ಆಗಮ ಸಿದ್ಧಾಂತವನ್ನು ಅನುವರ್ತಿಸಿ ಬರುವ ಸಂಹಿತಾ ವಿಶೇಷಗಳಲ್ಲಿ **ಪ್ರತಿನಿಯತ ಮಾಹ**–ಆಗಮ ಸಿದ್ಧಾಂತಿಗಳಿಗೆ ವ್ಯವಸ್ಥಿತವಾಗಿ. ಹೇಳುವ ಮಂತ್ರ ವಿಶೇಷಗಳನ್ನು, ಬಳಸಿ ಕ್ರಿಯಾ ವಿಶೇಷಗಳನ್ನು ಅನುಷ್ಠಿಸಕೂಡದು. ಆಗಮ ಸಿದ್ಧಾಂತಿಗಳಿಗೂ, **ಅಧಿಕಾರಾದಿಹಳುಕ್ಕು** ಇತ್ಯಾದಿ–ಅಧಿಕಾರಗಳಿಗೆ ಅನುರೂಪವಾಗಿ, ಚತುರ್ವಿಧ ಪಂಚರಾತ್ರವೂ ವಿಭಕ್ತವಾಗಿ ನಿಲ್ಲುವ ನಿಲೆಯೂ

**ಮುಮ್ ಉಂಡೆನ್ರು ಶಾರೀರಕಾದಿಹಳಿಲೇ ಸಮರ್ಥಿತ್ತಾರ್ಹ್ಪೋಲೇ ಆಗಮ ಸಿದ್ಧಾಂತಾದಿಹಳ್ ನಾಲಿಲುಮ್ ಸಾಕ್ಷಾನ್ಮೋಕ್ಷೋಪಾಯಮುಮ್ ಮೋಕ್ಷಪ್ರಾಪ್ತಿಯುಮ್ ಉಂಡೆನ್ರುಮ್ ಶ್ರೀ ಪಾಂಚರಾತ್ರರಕ್ಷೈಯಿಲೇಯುಪಪಾದಿತ್ತೋಮ್. ಇಶ್ಶಾಸ್ತ್ರಙ್ಗಳಿಲ್ ವ್ಯವಸ್ಥಿತಮಾಹ ವಿಧಿತ್ತಪಡಿಯೊಳ್ಳಿಯ ತನ್ನಾಮುಕ್ಕು ರುಚಿತ್ತ ಮನ್ತ್ರಙ್ಗಳೈಕ್ಕೊಂಡು ಸರ್ವಕರ್ಮಙ್ಗಳೈಯುಮ್ ಅನುಷ್ಠಿತ್ತಾಲ್ ಪ್ರಾಯಶ್ಚಿತ್ತಾದಿಹಳುಮ್ ಪರಕ್ಕಚ್ಚೊಲ್ಲಪ್ಪಟ್ಟದು. ಆನಸಿನ್ಸು ಮುಕ್ತನಾಮಳವುಮ್ ಸ್ವಾಧಿಕಾರಾನು ಗುಣಮಾಹ ಶಾಸ್ತ್ರಮ್ ಶೊನ್ನಕಟ್ಟಳೈಯನ್ರಿಕ್ಕೇ ಕೈಂಕರ್ಯಂ ಪಣ್ಣವಿರಹಿಲ್ಲೈ.**

**ಇಪ್ಪಡಿ ಪ್ರಪನ್ನನುಕ್ಕುಮ್ ಶಾಸ್ತ್ರವಶ್ಯನಾಯ್ ಶಾಸ್ತ್ರೋಕ್ತ ಕೈಂಕರ್ಯಮೇ ಪಣ್ಣವೇಣ್ಡುಹೈಯಾಲೇ ) ವಿಧಿನಿಷೇಧ ಲಂಘನ ಪಕ್ಷಮುಮ್, 2) ವಿಹಿತ ನಿಷಿದ್ಧ ತಾಗಪಕ್ಷಮುಮ್ 3) ವರ್ಣಾಶ್ರಮಧರ್ಮಙ್ಗಳ್ ಔಪಾಧಿಕಙ್ಗಳಾಹೈಯಾಲೇ ಸ್ವರೂಪಜ್ಞಾನಂ ಪಿರನ್ದವನುಕ್ಕು ತ್ಯಾಜ್ಯಙ್ಗಳ್ ಎನ್ಗಿರಪಕ್ಷಮುಮ್ 4) ಇವೈ ಶೆಯ್ಯುವುಮಾಮ್ ತವಿರವುಮಾಮ್ ಎನ್ಗಿರ ಪಕ್ಷಮುಮ್ 5) ಇವೈ ತವಿರ್ನ್ದಾಲುಮ್ ಉಹಪ್ಪಿಕ್ಕುಮತ್ತನೈಯೇ ವೇರೊರು ಪ್ರತ್ಯವಾಯ ಮಿಲ್ಲೈ ಎನ್ಗಿರಪಕ್ಷಮುಮ್ 6) ಇವೈ ಅನುಷ್ಠಿಯಾದ ಪೋದು ಲೋಕವಿರೋಧ ಮಾತ್ರಮೇ ಪ್ರತವಾಯ ಮೆನ್ಗಿರಪಕ್ಷಮುಮ್ 7) ಮತ್ತುಮ್**

---

ವಚನ ವಿರೋಧವಿಲ್ಲದ ಸ್ಥಳದಲ್ಲಿ, 'ಅನುಕ್ತಮನ್ಯತೋ ಗ್ರಾಹ್ಯಮ್' ಎಂಬ ನ್ಯಾಯವು ಸಂಚರಿಸುವ ರೀತಿಯೂ ನಾಲ್ಕು ಆಶ್ರಮಗಳಲ್ಲಿಯೂ, ಬ್ರಹ್ಮವಿದ್ಯೆಯೂ, ಮೋಕ್ಷಲಾಭವೂ ಉಂಟೆಂದು ಶಾರೀರಕಾದಿಗಳಲ್ಲಿ ಸಮರ್ಥಿಸಿರುವಂತೆ ಆಗಮ ಸಿದ್ಧಾಂತಾದಿಗಳಲ್ಲಿ **ನಾಲ್ಕರಲ್ಲಿಯೂ** ಸಾಕ್ಷಾನ್ಮೋಕ್ಷೋಪಾಯವೂ ಮೋಕ್ಷ ಪ್ರಾಪ್ತಿಯೂ ಉಟೆಂಬುದು ಪಾಂಚರಾತ್ರ ರಕ್ಷೆಯಲ್ಲಿ **ಆಚಾರ್ಯರಿಂದ** ಸ್ಥಾಪಿಸಲ್ಪಟ್ಟದೆ. **ಇಚ್ಛಾಸ್ತ್ರಂಗಳಿಲ್** ಇತ್ಯಾದಿ–ಈ ಶಾಸ್ತ್ರಗಳಲ್ಲಿ ಆಯಾಯಾ ಅಧಿಕಾರಿಗಳಿಗೆ ವ್ಯವಸ್ಥಿತವಾಗಿ ವಿಹಿತಗಳಾದ ದೇವತಾಂತರ ಶಬ್ದ ಘಟಿತ ಮಂತ್ರಗಳನ್ನು ಬಳಸಿ ಕರ್ಮಾನುಷ್ಠಾನವನ್ನು ಮಾಡಬೇಕು. **ಅವುಗಳನ್ನು ಬಿಟ್ಟು** ತಮಗೆ ರುಚಿಸಿದ ಸ್ವಬ್ರಹ್ಮ ನಾರಾಯಣಾದಿ ಶಬ್ದ ಘಟಿತ ಮಂತ್ರಗಳನ್ನು ಬಳಸಿ ಸರ್ವಕರ್ಮಗಳನ್ನೂ ಅನುಷ್ಠಿಸಿದರೆ ಪಾಪವು ಸಂಭವಿಸಿ ಪ್ರಾಯಶ್ಚಿತ್ತಾದಿಗಳೂ ವಿಧಿಸಲ್ಪಟ್ಟಿವೆ. ಆನಸಿನ್ಸು–ಹೀಗೆ ಕರ್ಮಾನುಷ್ಠಾನವು ಅವರವರ ಅಧಿಕಾರಾನು ಗುಣವಾಗಿ ವೇದ ಮಂತ್ರಗಳನ್ನು ಬಳಸಿಯೇ ಮಾಡಬೇಕೆಂದು ವ್ಯವಸ್ಥಿತವಾದ್ದರಿಂದ, **ಮೋಕ್ಷವನ್ನು** ಪಡೆಯುವವರೆಗೆ ಸ್ವಾಧಿಕಾರಾನು ಗುಣವಾಗಿ **ಶಾಸ್ತ್ರವು** ಹೇಳಿದ **ಕಟ್ಟಳೈ**–ರೀತಿಯಲ್ಲಿ ಮಾಡಬೇಕೇ ವಿನಹ ಬೇರೆ ರೀತಿಯಲ್ಲಿ ಆ ಕರ್ಮಾನುಷ್ಠಾನ ರೂಪ **ಕೈಂಕರ್ಯ**ಗಳನ್ನು ಮಾಡಲು **ವಿರಹಿಲ್ಲೈ**–ದಾರಿಯಿಲ್ಲ.

**ಪಕ್ಷಾಂತರಗಳು ಪರಿತ್ಯಾಜ್ಯಗಳು.**

**ಇಪ್ಪಡಿ ಪ್ರಪನ್ನನುಕ್ಕು** ಇತ್ಯಾದಿ–ಹೀಗೆ ಪ್ರಪನ್ನನು ಶಾಸ್ತ್ರವಶ್ಯನಾಗಿ ಶಾಸ್ತ್ರೋಕ್ತಗಳಾದ ಕೈಂಕರ್ಯಗಳನ್ನೇ ಮಾಡಬೇಕಾದ್ದರಿಂದ 1) **ವಿಧಿ ನಿಷೇಧಲಂಘನ ಪಕ್ಷಮುಮ್**–ವಿಹಿತಗಳಾದ ಸಂಧ್ಯಾವಂದನಾದಿಗಳನ್ನು ಅತಿಕ್ರಮಿಸುವುದೂ ಪರದಾರ ಗಮನಾದಿ ನಿಷಿದ್ಧಗಳನ್ನು ಮಾಡುವ ಪಕ್ಷವೂ, 2) **ವಿಹಿತ ನಿಷಿದ್ಧ ತ್ಯಾಗ ಪಕ್ಷಮುಮ್** ವಿಹಿತ ನಿಷಿದ್ಧಗಳನ್ನು ಮಾಡದಿರುವುದೂ, ನಿಷಿದ್ಧ ತ್ಯಾಗವು ಪಾಪವಿಲ್ಲದಿದ್ದರೂ ವಿಹಿತ ತ್ಯಾಗವು ಪಾಪಜನಕ 3) **ವರ್ಣಾಶ್ರಮ ಧರ್ಮಂಗಳ್** ಇತ್ಯಾದಿ – ಆತ್ಮ ಸ್ವರೂಪದಲ್ಲಿ ಬ್ರಾಹ್ಮಣಾದಿ ವರ್ಣವೂ ಬ್ರಹ್ಮಚರ್ಯಾದ್ಯಾಶ್ರಮವೂ ಇಲ್ಲವಾದ್ದರಿಂದ, ವರ್ಣಾಶ್ರಮದಿಂದ **ಕೂಡಿದ** ಶರೀರ ಸಂಬಂಧವನ್ನು ಇಟ್ಟು ಆತ್ಮಾವಿಗೆ ವರ್ಣಾಶ್ರಮ ಧರ್ಮಗಳು ವಿಹಿತಗಳಾದ್ದರಿಂದ, ಅವು **ಸೋಪಾಧಿಕವು**, ಸ್ವರೂಪ ಜ್ಞಾನವನ್ನು ಪಡೆದವನಿಗೆ ಅವು ತ್ಯಾಜ್ಯಗಳು ಎಂಬ ಪಕ್ಷವೂ 4) **ಇವೈಶೆಯ್ಯುವುಮಾಮ್** ತವಿರವುಮಾಮ್ ಇತ್ಯಾದಿ – ಈ ವರ್ಣಾಶ್ರಮ ಧರ್ಮಗಳನ್ನು ಮಾಡಬಹುದು, ಮಾಡದೂ ಇರಬಹುದು ಎಂಬ ಪಕ್ಷವೂ 5) ಇವೈಯನುಷ್ಠಿಯಾದ **ಪೋದು**– ಇವುಗಳನ್ನು ಅನುಷ್ಠಿಸದೆ ಇದ್ದರೆ **ಲೋಕ ವಿರೋಧ**

ಇಪ್ಪಡೈಹಳಿಲುಳ್ಳ ಪಕ್ಷಙ್ಗಳೆಲ್ಲಾಮ್ ಸಮ್ಯಙ್ನ್ಯಾಯಾನುಗೃಹಿತ ಶಾಸ್ತ್ರ ಸಂಪ್ರದಾಯ ವಿರುದ್ಧಙ್ಗಳಾನ ಪಡಿಯಾಲೇ ಸತ್ವಸ್ಥರ್ಕ್ಕು ಅನುಪಾದೇಯಙ್ಗಳ್.

ಸನ್ಯಾಸಾಶ್ರಮಸ್ಥರ್ಕ್ಕು ಪಣ್ಣುಮವೈ ಶಿಲವತ್ತೈ ನಿಷೇಧಿತ್ತು, ಪುದಿದಾಹ ಶಿಲವತ್ತೈ ವಿಧಿಕ್ಕುಮಾಪ್ಪೋಲೇ ಭಾಗವತತ್ವಮಡಿಯಾಹ ಚಿಲವತ್ತೈ ನಿಷೇಧಿತ್ತು ಶಿಲವತ್ತೈ ಅಪೂರ್ವಮಾಹ ವಿಧಿತ್ತಾಲುಮ್ 1) "ಸಂಧ್ಯಾಹೀನೋಽಶುಚಿರ್ನಿತ್ಯ ಮನರ್ಹಸ್ಸರ್ವಕರ್ಮಸು" ಇತ್ಯಾದಿಹಳಾಲೇ ಅವಶ್ಯಕರ್ತವ್ಯಂಗಳಾಹ ಚೊಲ್ಲಪ್ಪಟ್ಟ ಕರ್ಮಙ್ಗಳೈ ವಿಡವೊಣ್ಣಾದು.

ಧರ್ಮಶಾಸ್ತ್ರಸೂತ್ರ ಭೇದಙ್ಗಳಿರ್ಪ್ಪೋಲೇ, ಭಗವಚ್ಛಾಸ್ತ್ರಸಂಹಿತಾ ಭೇದಙ್ಗಳಿಲುಮ್, ಇತಿಹಾಸ ಪುರಾಣಙ್ಗಳಿಲುಮ್, ಶೊಲ್ಲುಮ್ ಸನ್ಧ್ಯೋಪಾಸನಾ ಭೇದಙ್ಗ(ಳೈ) ಅವ್ವೋ ಶಾಸ್ತ್ರಙ್ಗಳಿಲೇ ಇೞಿನ್ದವರ್‌ಹಳನುಷ್ಠಿಕ್ಕಕ್ಕಡವರ್‌ಹಳ್. 1) "ದೈವತಾನ್ಯಭಿಗಚ್ಛೇತ್ತು" ಎನ್ರುಮ್ "ದೇವಸ್ಥಾನ ಪ್ರಣಾಮ

---

ಮಾತ್ರಮೋ ಇತ್ಯಾದಿ–ಲೋಕ ನಿಂದಾ ರೂಪ ದೃಷ್ಟ ಪ್ರತ್ಯವಾಯವೇ ವಿನಹ, ಭಗವನ್ನಿಗ್ರಹ ರೂಪ ಪರಲೋಕಾಪ್ರಾಪ್ತಿರೂಪ ಅದೃಷ್ಟ ಪ್ರತ್ಯವಾಯವಿಲ್ಲವೆಂಬ ಪಕ್ಷವೂ, **ಮಟ್ರುಮ್ ಇಪ್ಪಡೈಹಳಿಲ್** ಇತ್ಯಾದಿ–ಇನ್ನೂ ಈ ಪ್ರಕಾರಗಳಾದ ಪಕ್ಷಗಳೆಲ್ಲಾ **ಸಮ್ಯಙ್ನ್ಯಾಯಾನುಗೃಹೀತ** ಇತ್ಯಾದಿ-ಸಮೀಚಿನಗಳಾದ ನ್ಯಾಯಗಳಿಂದ ಅನುಗೃಹೀತಗಳಾದ ಶಾಸ್ತ್ರ ಸಂಪ್ರದಾಯಗಳಿಗೆ ವಿರುದ್ಧಗಳಾದ್ದರಿಂದ ಸಾತ್ವಿಕರಿಗೆ ಈ ಪಕ್ಷಗಳು ಅನುಪಾದೇಯಗಳು–ಸ್ವೀಕರಿಸಲು ಅನರ್ಹಗಳು.

### ಸಂಧ್ಯಾವಂದನಾದಿಗಳನ್ನು ಬಿಡಕೂಡದು. ಅವರವರ ಸೂತ್ರದ ಪ್ರಕಾರ ಅವುಗಳನ್ನು ಮಾಡಲೇಬೇಕು, ನಿತ್ಯನೈಮಿತ್ತಿಕ ಕರ್ಮಗಳಿಗೆ ವಿರೋಧವು ಉಂಟಾಗದಂತೆ, ಅನುಜ್ಞಾ ಕೈಂಕರ್ಯಗಳನ್ನು ಮಾಡಬೇಕು

**ಸನ್ನ್ಯಾಸಾಶ್ರಮಸ್ಥರುಕ್ಕು** ಇತ್ಯಾದಿ–ಸನ್ನ್ಯಾಸಾಶ್ರಮದವರಿಗೆ ಪೂರ್ವಾಶ್ರಮದಲ್ಲಿ ಮಾಡುತ್ತಿದ್ದ ಕೆಲವು ಕರ್ಮಗಳನ್ನು ಅಂದರೆ ಔಪಾಸನ, ಪಂಚ ಮಹಾಯಜ್ಞಶ್ರಾದ್ಧ ತರ್ಪಣಾದಿಗಳನ್ನು ನಿಷೇಧಿಸಿ, ಹೊಸದಾಗಿ ಕೆಲವು ಕರ್ಮಗಳನ್ನು ವಿಧಿಸಿರುವಂತೆ, ಭಾಗವತನೆಂಬ ಆಕಾರದಿಂದ ದೇವತಾಂತರ ಸಂಬಂಧಾದಿಗಳನ್ನು ನಿಷೇಧಿಸಿ, ಅಭಿಗಮನಾದಿ ಕೆಲವು ಕರ್ಮಗಳನ್ನು ಹೊಸದಾಗಿ ವಿಧಿಸಿದರೂ, 1) **ಸಂಧ್ಯಾಹೀನೋ ಅಶುಚಿರ್ನಿತ್ಯಮ್** ಇತ್ಯಾದಿ–ಸಂಧ್ಯಾಹೀನನು ನಿತ್ಯವೂ ಅಶುದ್ಧನು, ಬೇರೆ ಯಾವ ಕರ್ಮಗಳನ್ನೂ ಮಾಡಲು ಅನರ್ಹನು, ಇತ್ಯಾದಿ ಪ್ರಮಾಣಗಳಿಂದ ಅವಶ್ಯಕರ್ತವ್ಯಗಳಾದ ಸಂಧ್ಯಾವಂದನಾದಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಪ್ರಪನ್ನನು ಬಿಡಕೂಡದು.

ಹಾಗಾದರೆ ಪರಮೈಕಾಂತಿಯಾದ ಪ್ರಪನ್ನನು ಅಗ್ನೀಂದ್ರಾದಿ ಶಬ್ದ ಘಟಿತ ಮಂತ್ರಗಳನ್ನು ಬಿಟ್ಟು, ಪಾಂಚರಾತ್ರಾಗಮಗಳಲ್ಲಿ ವಿಹಿತಗಳಾದ ವಿಷ್ಣು, ವಾಸುದೇವ ಶಬ್ದ ಘಟಿತ ಮಂತ್ರಗಳನ್ನು ಬಳಸಿ ಸಂಧ್ಯಾವಂದನಾದಿಗಳನ್ನು ಮಾಡಿದರೆ ಏನು ತಪ್ಪು ಎಂಬ ಆಕ್ಷೇಪಕ್ಕೆ ಸಮಾಧಾನವಾಗಿ **ಧರ್ಮಶಾಸ್ತ್ರ ಸೂತ್ರಭೇದಂಗಳಿರ್ಪೋಲೇ** ಇತ್ಯಾದಿ–ಆರಂಭಿಸಿ ಸಮಾಧಾನವನ್ನು ಅನುಗ್ರಹಿಸುತ್ತಾರೆ. ಅದಾಗಿ ಧರ್ಮಶಾಸ್ತ್ರ, ಆಪಸ್ತಂಬ, ಬೋಧಾಯನ, ಆಶ್ವಲಾಯನಾದಿ ಸೂತ್ರಗಳಲ್ಲಿ ಹೇಳಿರುವ ರೀತಿಯಲ್ಲೇ ಆಯಾಯಾ ಸೂತ್ರ ನಿಷ್ಠರುಗಳು ವ್ಯವಸ್ಥಿತವಾಗಿ ಅನುಷ್ಠಿಸುವಂತೆ, ಆಯಾಯಾ ಸಂಹಿತಾ ಭೇದಗಳಲ್ಲಿಯೂ ಇತಿಹಾಸ–ಪುರಾಣಗಳಲ್ಲಿಯೂ ಹೇಳಿರುವ ಸಂಧ್ಯೋಪಸನಾದಿಗಳನ್ನು ಆಯಾಯಾ ಶಾಸ್ತ್ರ ನಿಷ್ಠರುಗಳೇ ಅನುಷ್ಠಿಸಬೇಕೇ ವಿನಹ ಪ್ರಪನ್ನ ಸಾಮಾನ್ಯರು ಅವುಗಳ ರೀತಿಯಲ್ಲಿ ಅನುಷ್ಠಿಸಕೂಡದು.

ಹೀಗೆ ಪ್ರಪನ್ನನಿಗೂ ಶಾಸ್ತ್ರವಶ್ಯತೆಯು ಬೇಕೆಂದರೆ, **ದೈವತಾನ್ಯಭಿಗಚ್ಛೇತ್ತು** ಎಂದೂ **ದೇವಸ್ಥಾನ ಪ್ರಣಮನಂ** ಎಂದೂ ಈ ರೀತಿಯಲ್ಲಿ ದೇವಾಲಯಗಳಲ್ಲಿ ದೇವತೆಗಳನ್ನು ನಮಸ್ಕರಿಸಬೇಕೆಂದು, ಧರ್ಮಶಾಸ್ತ್ರ

ನಮ್" ಎನ್ರು ಮಿಪ್ಪಡೈಹಳಿಲೇ ಧರ್ಮಶಾಸ್ತ್ರೇತಿಹಾಸಾದಿಹಳಿಲ್ಶೊನ್ನ ಆಚಾರಮುಮ್. ಪರಮೈಕಾಂತಿಕ್ಕು ಶಾಸ್ತ್ರ ಬಲತ್ತಾಲೇ ಭಗವದ್ವಿಷಯತ್ತಿಲೇ ನಿಯತಮ್. ಆಹೈಯಾಲ್ ಒರುಶಾಸ್ತ್ರಙ್ಗಳುಕ್ಕು ವಿರೋಧಮಿಲ್ಲೈ.

1) "ತಸ್ಮಾದಷ್ಟಾಕ್ಷರಂ ಮನ್ತ್ರಂ ಮದ್ಭಕ್ತೈರ್ವಿಗತ ಕಲ್ಮಷೈಃ ।
ಸಂಧ್ಯಾಕಾಲೇಷು ಜಪ್ತವ್ಯಂ ಸತತಂಚಾತ್ಮಶುದ್ಧಯೇ ॥

ಎನ್ರು ಶ್ರೀ ವೈಷ್ಣವ ಧರ್ಮಶಾಸ್ತ್ರಙ್ಗಳಿಲ್ಶೊನ್ನದುವುಮ್ 2) ದ್ವಯಮರ್ಥಾನು ಸಂಧಾನೇನ ಸಹ ಸದೈವಂ ವಕ್ತಾ" ಎನ್ರು ಗದ್ಯತ್ತಿಲ್ ಅರುಳಿಚ್ಚೆಯ್‌ದದುವುಮ್, ಮತ್ತುಮ್ ಇಪ್ಪಡಿಹಳಿಲುಳ್ಳವೈಯೆಲ್ಲಾಮ್ ಅವಶ್ಯ ಕರ್ತವ್ಯಙ್ಗಳಾನ ನಿತ್ಯ ನೈಮಿತ್ತಿಕಙ್ಗಳುಕ್ಕು ವಿರೋಧಮ್ ವಾರಾದಪಡಿ ಅವತ್ತುಕ್ಕುಪ್ಪೋಕ್ಕಿ ಮಿಕ್ಕ ಕಾಲತ್ತಿಲೇ ಯಾಹಕ್ಕಡವದು. 1) "ಶ್ರೌತಸ್ಮಾರ್ತಾವಿರುದ್ಧೇಷು ಕಾಲೇಷು ಜಪ

---

ಇತಿಹಾಸ ಪುರಾಣಗಳಲ್ಲಿ ಹೇಳಿರುವಂತೆ ದೇವತಾಂತರ ಮಂದಿರಗಳಿಗೂ ಹೋಗಿ ಆ ದೇವತೆಗಳನ್ನು ನಮಸ್ಕರಿಸಬಹುದೆಂದು ಏರ್ಪಡುವುದಿಲ್ಲವೇ ಎಂದರೆ, ಈ ವಚನಗಳಲ್ಲಿ **"ದೈವತಾ, ದೇವ"** ಶಬ್ದಗಳು ಸಾಮಾನ್ಯ ಶಬ್ದಗಳಾದ್ದರಿಂದ, "ನಾನ್ಯಂ ದೇವಂ ನಮಸ್ಕುರ್ಯಾತ್ ವಿಷ್ಣು ಪಾದಾಬ್ಜ ಸಂಶ್ರಯಃ" ಎಂದು ಪ್ರಪನ್ನನಿಗೆ ದೇವತಾಂತರ ನಮಸ್ಕಾರ ನಿಷೇಧ ರೂಪ ವಚನಬಲದಿಂದ "ದೈವತಾ". "ದೇವ" ಶಬ್ದಗಳು ನಾರಾಯಣರೂಪ ದೈವತ, ದೇವ ವಿಶೇಷ ಶಬ್ದದಲ್ಲಿ ಪರ್ಯವಸಾನವನ್ನು ಹೊಂದುವುದರಿಂದ ದೇವಾಲಯ ದೇವತಾ ನಮಸ್ಕಾರ ರೂಪ ಆಚಾರವು ಪರಮೈಕಾಂತಿಗೆ ಶಾಸ್ತ್ರಬಲದಿಂದ ಭಗವದ್ವಿಷಯದಲ್ಲಿಯೇ ನಿಯತವು. ಅನನ್ಯಥಾ ಸಿದ್ಧ ಜೀವಲಿಂಗಕ ಪ್ರಕರಣಸ್ಥ ದೇವ ಋಷಿ ಪಿತೃ ಶಬ್ದಗಳಂತೆ ತದಂತರ್ಯಾಮಿ ಪರವಾಗಿ ನಯನ ಮಾಡಿದೇವತಾಂತರಗಳನ್ನು ನಮಸ್ಕರಿಸಬಹುದು ಎಂಬ ನ್ಯಾಯವು ಇಲ್ಲಿ ಬರುವುದಿಲ್ಲ. ಕಾರಣ ಇವು ನಿತ್ಯನೈಮಿತ್ತಿಕಗಳಿಗೆ ಬೇರೆಯಾದ ಅನುಜ್ಞಾ ಕೈಂಕರ್ಯಗಳು. **ಆಹೈಯಾಲ್** ಇತ್ಯಾದಿ-ಸಾಮಾನ್ಯ ಶಾಸ್ತ್ರಗಳಿಗೆ ವಿಶೇಷ ಶಾಸ್ತ್ರಗಳಲ್ಲಿ ಪರ್ಯವಸಾನವು ನ್ಯಾಯ ಸಿದ್ಧವಾದ್ದರಿಂದ, ಯಾವ ಶಾಸ್ತ್ರಗಳಿಗೂ ವಿರೋಧವಿಲ್ಲ.

(1) **"ತಸ್ಮಾದಷ್ಟಾಕ್ಷರಂ ಮಂತ್ರಂ** ಇತ್ಯಾದಿ – ಎಂದು ವೈಷ್ಣವ ಧರ್ಮಶಾಸ್ತ್ರಗಳಲ್ಲಿ ಹೇಳಿರುವುದೂ (2) **'ದ್ವಯಮರ್ಥಾನುಸಂಧಾನೇನ'** ಎಂದು ಗದ್ಯದಲ್ಲಿ ಕೃಪೆ ಮಾಡಿ ಹೇಳಿರುವುದೂ, **ಮಟ್ರುಮ್** – ಇತ್ಯಾದಿ ಇನ್ನೂ ಈ ರೀತಿಯಾಗಿ "ಗುರೋರ್ನಾಮ ಸದಾಜಪೇತ್" ಎಂದು ಹೇಳಿರುವುವೆಲ್ಲಾ ಅವಶ್ಯ ಕರ್ತವ್ಯಗಳಾದ ನಿತ್ಯನೈಮಿತ್ತಿಕಗಳಿಗೆ ವಿರೋಧವು ಏರ್ಪಡದಂತೆ **ಅವಟ್ರುಕ್ಕುಪ್ಪೋಕ್ಕಿ** – ಆಕಾಲಗಳನ್ನು ಬಿಟ್ಟು, **ಇತರ ಕಾಲಗಳಲ್ಲಿ** ಮಾಡತಕ್ಕವು. ಪ್ರಪನ್ನನು ನಿತ್ಯನೈಮಿತ್ತಿಕ ಕರ್ಮಗಳಿಗೆ ಬದಲಾಗಿ ಇವನ್ನು ಮಾಡಬೇಕೆಂದಲ್ಲ. ಶ್ರೀಪಾಂಚರಾತ್ರ ರಕ್ಷೆಯಲ್ಲಿಯೂ ಅಷ್ಟಾಕ್ಷರ ಮಂತ್ರ ಜಪವು, "ಅಷ್ಟಾಕ್ಷರ ಮಂತ್ರ ಜಪೋಽಪಿ ಸಂಧ್ಯಾಯಾಂ ಅವಸರೇಕಾರ್ಯಃ" ಎಂದು ಸಂಧ್ಯಾವಂದನ ಕ್ರಿಯೆಯಲ್ಲಿ ಜಪವನ್ನು ಮಾಡುವಾಗ, ಮಾಡಬೇಕೆಂದು ಆಚಾರ್ಯರು ತಿಳಿಸಿರುತ್ತಾರೆ. **(1) ಶ್ರೌತಸ್ಮಾರ್ತಾಽವಿರುದ್ಧೇಷು ಕಾಲೇಷು ಜಪಮಾಚರೇತ್** – ಶ್ರೌತಸ್ಮಾರ್ತ

---

1) ಭಾರತ ಆಶ್ವಮೇಧಿಕ (98-69) ಅಷ್ಟಾಕ್ಷರ ಮಂತ್ರವು, ಪಾಪಗಳು ಇಲ್ಲದೆ ಶುದ್ಧ ಮನಸ್ಕರಾದ ನನ್ನ ಭಕ್ತರಿಂದ, ಆತ್ಮಶುದ್ಧಿಗೋಸ್ಕರ, ಸಂಧ್ಯಾ ಕಾಲಗಳಲ್ಲಿ ಸದಾ ಜಪ್ಯವು.

2) ಶರಣಾಗತಿಗದ್ಯ. "ದ್ವಯಮರ್ಥಾನು ಸಂಧಾನೇನ ಸಹ ಸದೈವಂ ವಕ್ತಾ ಯಾವಚ್ಛರೀರ ಪಾತಂ ಅತ್ರೈವ ಶ್ರೀರಂಗೇ ಸುಖಮಾಸ್ವ"-ದ್ವಯಮಂತ್ರದೆನ್ನು ಅರ್ಥಾನು ಸಂಧಾನದೊಡನೆ ವಿಹಿತಗಳಾದ ನಿತ್ಯ ನೈಮಿತ್ತಿಕಗಳಿಗೆ ವಿರೋಧವಿಲ್ಲದೆ ಇತರ ಕಾಲಗಳಲ್ಲಿ ಸದಾ ಹೇಳಿಕೊಂಡು, ಶರೀರಪಾತ ಪರ್ಯಂತ ಶ್ರೀರಂಗಾದಿ ಪುಣ್ಯಕ್ಷೇತ್ರಗಳಲ್ಲಿ ಸುಖವಾಗಿ ವಾಸಮಾಡುತ್ತಿರು, ಎಂದು ಪ್ರಪನ್ನನಿಗೆ ಶ್ರೀ ಭಾಷ್ಯಕಾರರ ಆದೇಶ.

1) ಸರ್ವೇಷಾಂ ಶ್ರುತಿಮೂಲಾನಾಂ ನಿತ್ಯನೈಮಿತ್ತಿಕಾತ್ಮನಾಮ್ ।
ಶ್ರೌತಸ್ಮಾರ್ತಾ ವಿರುದ್ಧೇಷು ಕಾಲೇಷು ಜಪಮಾಚರೇತ್ ॥ ನಾರದೀಯ ಅಷ್ಟಾಕ್ಷರ ಬ್ರಹ್ಮವಿದೆ

ಮಾಚರೇತ್" ಎನ್ರು ನಾರದಾದಿಹಳುಮ್ ಶೊನ್ನಾರ್ಹಳ್. 2) ಹುತ್ವಾಗ್ನೀನಗ್ನಿ ಹೋತ್ರಾದ್ಯಾ... ಪ್ರಕ್ತಂ ಕಾಲಮುಪಿಕ್ಷಿಪನ್" ಎನ್ರು ವಙ್ಗಿಪುರತ್ತುನಂಬಿ ಅರುಳಿಚ್ಚೆಯ್‌ದಾರ್. ಭಾಷ್ಯಕಾರರ್ ಅನ್ತಿಮ ದಶೈಯಿಲುಮ್ ಮರುನ್ದಿಂಪಿ ಎನ್ದಿರುನ್ದು ಸಂಧ್ಯಾಕಾಲತ್ತಿಲೇ ಜಲಾಂಜಲಿ ಪ್ರಕ್ಷೇಪಮ್ ಪಣ್ಣಿಯರುಳಿನಾರ್

ಆಹೈಯಾಲ್ ವರ್ಣಾಶ್ರಮ ಧರ್ಮಙ್ಗಳ್ ಔಪಾಧಿಕಙ್ಗಳೆನ್ರು ತ್ಯಜಿಕ್ಕೈ ಪೂರ್ವಾನುಷ್ಠಾನಾದಿ ವಿರುದ್ಧಮ್. ಇಪ್ಪಡಿ ತ್ಯಜಿಕ್ಕಿಲ್ ದೇಹೇನ್ದ್ರಿಯಾದ್ಯುಪಾಧಿಹಳೈಯೊಳ್ಳಿಯ ಮಾಲಾಕರಣ ದೀಪಾರೋಪಣಾದಿ ವಿಶೇಷ ಕೈಙ್ಕರ್ಯಙ್ಗಳುಮ್ ಅನುಷ್ಠಿಕ್ಕವೊಣ್ಣಾಮೈಯಾಲ್, ಅವೈಯುಮೆಲ್ಲಾಮ್ ಔಪಾಧಿಕಙ್ಗಳಾಯ್ ತ್ಯಾಜ್ಯಙ್ಗಳಾಮ್. ಅವೈ ಅನುಷ್ಠಿಕ್ಕ ಆಶೈಪ್ಪಡಿಲ್, ಅವತ್ತುಕ್ಕು ಯೋಗ್ಯತಾಪಾದಕಙ್ಗಳಾನ ಶೌಚಾಚಾರ ಸಂಸ್ಕಾರಾದಿಹಳೈಯುಮ್ ವಿಡವೊಣ್ಣಾದು.

ಆನಪಿನ್ಬು.

1) ಆಹಾರಗ್ರ (ಗೃ)ಹ ಮನ್ತ್ರಾರ್ಥ ಜಾತ್ಯಾದಿ ನಿಯಮೈರ್ಯುತಃ ।
ಕುರ್ಯಾ ಲ್ಲಕ್ಷ್ಮೀಶ ಕೈಂಕರ್ಯಂ ಶಕ್ತ್ಯಾಽನನ್ಯ ಪ್ರಯೋಜನಃ ॥122॥

---

ಕರ್ಮಾನುಷ್ಠಾನಗಳಿಗೆ ವಿರುದ್ಧವಲ್ಲದ ಕಾಲಗಳಲ್ಲಿ ಅಷ್ಟಾಕ್ಷರಾದಿ ಮಂತ್ರ ಜಪಗಳನ್ನು ಮಾಡಬೇಕೆಂದು ನಾರದಾದಿಗಳೂ ಹೇಳಿರುತ್ತಾರೆ. (2) **ಹುತ್ವಾಗ್ನೀನಹೋತ್ರಾದೌ** ಇತ್ಯಾದಿ – ಅಗ್ನಿಹೋತ್ರಾದಿ ಕಾರ್ಯಗಳನ್ನು ಮಾಡಿ, ಇತರ ಕಾಲಗಳಲ್ಲಿ ಜಪಾದಿಗಳನ್ನು ಮಾಡಬೇಕೆಂದು ವಂಗಿಪುರದ ನಂಬಿಗಳೂ ಹೇಳಿರುತ್ತಾರೆ. ಇದು ಸಾಂಪ್ರದಾಯಿಕವೆಂದು ತಾತ್ಪರ್ಯ. ಸಂಧ್ಯಾವಂದನಾದಿ ಕರ್ಮಗಳಲ್ಲಿ ಶ್ರೀಭಾಷ್ಯಕಾರರ ಅನುಷ್ಠಾನವನ್ನೂ ತಿಳಿಸುತ್ತಾರೆ. ಅದಾಗಿ **ಶ್ರೀಭಾಷ್ಯಕಾರರ್** ಇತ್ಯಾದಿ – ಶ್ರೀಭಾಷ್ಯಕಾರರು ತಮ್ಮ ಅಂತಿಮ ದಶೆಯಲ್ಲಿಯೂ **ಮರುಂದಿ ಎಳ್ಳುಂದಿರುಂದು** - ಶಿಷ್ಯರ ಸಹಾಯದಿಂದ ಕಷ್ಟಪಟ್ಟು ಎದ್ದು ನಿಂತು, ಸಂಧ್ಯಾಕಾಲದಲ್ಲಿ, **ಜಲಾಂಜಲಿ ಪ್ರಕ್ಷೇಪಮ್** –ಅರ್ಘ್ಯ ಪ್ರದಾನವನ್ನು ಕೃಪೆಮಾಡಿ ಮಾಡಿದರು.

## ವರ್ಣಾಶ್ರಮ ಧರ್ಮ ಪೂರ್ವಕ ಭಗವತ್ಕೈಂಕರ್ಯಗಳನ್ನು ಮಾಡಬೇಕು.

**ಆಹೈಯಾಲ್** ಇತ್ಯಾದಿ–ಹೀಗೆ ಪ್ರಮಾಣವಚನಗಳೂ, ಪೂರ್ವಾಚಾರ್ಯರ ಅನುಷ್ಠಾನಗಳೂ ಇರುವಾಗ, ವರ್ಣಾಶ್ರಮ ಧರ್ಮಗಳನ್ನು ಔಪಾಧಿಕಗಳೆಂದು ಬಿಡುವುದು ಪೂರ್ವಾಚಾರ್ಯರ ಅನುಷ್ಠಾನಗಳಿಗೆ ವಿರುದ್ಧವು. **ಇಪ್ಪಡಿತ್ಯಜಿಕ್ಕಿಲ್**–ಹೀಗೆ ಔಪಾದಿಕ ಬುದ್ಧಿಯಿಂದು ನಿತ್ಯನೈಮಿತ್ತಿಕಗಳನ್ನು ಬಿಟ್ಟರೆ, ದೇಹೇಂದ್ರಿಯಾದ್ಯುಪಾಧಿಗಳಿಲ್ಲದೆ ಅಂದರೆ ದೇಹೇಂದ್ರಿಯಾದಿಗಳಿಲ್ಲದೆ, ಮಾಲಾಕರಣ,ದೀಪಾರೋಪಣವೇ ಮೊದಲಾದ ವಿಶೇಷ ಕೈಂಕರ್ಯಗಳನ್ನು ಅನುಷ್ಠಿಸಲಾಗುವುದಿಲ್ಲವಾದ್ದರಿಂದ ಅವುಗಳನ್ನೂ ಔಪಾಧಿಕಗಳನ್ನಾಗಿ ಬಿಡಬೇಕಾಗುತ್ತದೆ. ಅವುಗಳನ್ನು ಅನುಷ್ಠಿಸಲು ಆಸೆಪಟ್ಟರೆ ಅವುಗಳಿಗೆ ಯೋಗ್ಯತೆಯನ್ನು ಸಂಪಾದಿಸಿ ಕೊಡುವ **ಆಚಾರಸಂಸ್ಕಾರಾದಿಹಳೈಯುಮ್** – ಶೌಚ, ಸ್ನಾನ, ಸಂಧ್ಯಾವಂದನಾದಿಗಳನ್ನೂ ಬಿಡಲಾಗದು.

ಉಕ್ತಾರ್ಥಗಳನ್ನು ಶಿಷ್ಯಬುದ್ಧಿ ಸೌಕರ್ಯಾರ್ಥವಾಗಿ ಕಾರಿಕಾರೂಪದಲ್ಲಿ ಸಂಗ್ರಹಿಸುತ್ತಾರೆ.

1) **ಆಹಾರ ಗ್ರಹ ಮಂತ್ರಾದಿ** ಇತ್ಯಾದಿ. ಆಹಾರ ನಿಯಮ ಜಾತಿ,ಆಶ್ರಯ,ನಿಮಿತ್ತ, ಇವುಗಳಿಂದ ದುಷ್ಟವಾಗದ ಅನ್ನವನ್ನು ಭುಜಿಸಬೇಕು. **ಗೃಹ ನಿಯಮ**–ಗ್ರಹವೆಂದು ಪಾಠವಾದರೆ ಜ್ಞಾನವನ್ನು ಗ್ರಹಿಸುವುದರಲ್ಲಿ ನಿಯಮ. ಗೃಹ ವಾಸಸ್ಥಾನ ನಿಯಮ ಭಾಗವತೋತ್ತರ ದೇಶವಾಸ. **ಮಂತ್ರ ನಿಯಮ**–ಸದಾಚಾರ್ಯಸಕಾಶದಿಂದ ಮಂತ್ರೋಪದೇಶ ಮಾಡಬೇಕೆಂಬುದು. **ಅರ್ಥ ನಿಯಮ** – ಕುಲಟಾ ವೇಶ್ಯೆ. ಷಂಡ, ಪತಿತ, ಶತ್ರು ಮೊದಲಾದವರುಗಳಿಂದ ಆಪದ್ಧಶೆಯಲ್ಲಿಯೂ ಬಿಡಿಕಾಸನ್ನೂ ಸ್ವೀಕರಿಸದೆ, ನ್ಯಾಯಾರ್ಜಿತವಾದ ಧನದಿಂದ ಭಗವದಾರಾಧನೆಗಳನ್ನು ಮಾಡುವುದೆಂಬ ನಿಯಮ. **ಜಾತಿ ನಿಯಮ** - ತನ್ನ ಬ್ರಾಹ್ಮಣಾದಿ ಜಾತಿಗೆ ಅನು

2) ಮಂಙ್ಗಳ್ಯ ಸೂತ್ರ ವಸ್ತ್ರಾದೀನ್ ಸಂರಕ್ಷತಿ ಯಥಾವಧೂಃ ।
ತಥಾ ಪ್ರಪನ್ನ ಶ್ಯಾಸ್ತ್ರೀಯ ಪತಿಕೈಙ್ಕರ್ಯ ಪದ್ಧತಿಮ್ ॥123॥

3) ಯದ್ವನ್ಮಙ್ಗಳ್ಯ ಸೂತ್ರಾದೇಸ್ತ್ಯಾಗೇ ಸಂರಕ್ಷಣೇಪಿವಾ ।
ರಕ್ಷೇನ್ನಿರೋಧ್ಯೈರ್ಭೋಗೈರ್ವಾ ಪತಿ ಸ್ತದ್ವದಿಹಾಪಿ ನಃ ॥124॥

4) ಅವಜ್ಞಾರ್ಥ ಮನರ್ಥಾಯ ಭಕ್ತಜನ್ಮಾದಿ ಚಿನ್ತನಮ್ ।
ಶಾಸ್ತ್ರವ್ಯವಸ್ಥಾಮಾತ್ರಾರ್ಥಂ ನ ತು ತದ್ದೂಷ್ಯತಿ ಕ್ವಚಿತ್ ॥125॥

5) ಅತ ಏವಹಿ ಶಾಸ್ತ್ರೇಷು ತತ್ತಜ್ಜಾತ್ಯೈವ ದರ್ಶಿತಾಃ ।
ಧರ್ಮವ್ಯಾಧ ತುಲಾಧಾರ ಶಬರೀ ವಿಧುರಾದಯಃ ॥126॥

6) ಸ್ವಜಾತ್ಯನುಗುಣ್ಯೈ ವೈಷಾ ವೃತ್ತಿರಪ್ಯೈತಿಹಾಸಿಕೀ ।
ವಿಶೇಷ ವಿಧಿ ಸಿದ್ಧಂತು ತದ್ಬಲಾತ್ತತ್ರ ಯುಜ್ಯತೇ॥127॥

7) ದೇಶಕಾಲಾಧಿಕಾರ್ಯಾದಿ ವಿಶೇಷೇಷು ವ್ಯವಸ್ಥಿತಾಃ ।
ನ ಧರ್ಮಾಃ ಪ್ರಾಪ್ತಿಮರ್ಹನ್ತಿ ದೇಶಕಾಲಾನ್ತರಾದಿಷು ॥128॥

---

ಗುಣವಾದ ಆಚಾರ ಪರಿಗ್ರಹ. ಆದಿಶಬ್ದದಿಂದ ಆಶ್ರಮ ನಿಯಮ - ಬ್ರಹ್ಮಚಾರಿಯು ಗೃಹಸ್ಥಾಶ್ರಮ ಧರ್ಮವನ್ನು ನಡೆಸದೆ ಇರುವುದು ಇತ್ಯಾದಿ ಗ್ರಹಿಸಲ್ಪಡುತ್ತದೆ. ಈ ರೀತಿಯಾದ ನಿಯಮಗಳಿಂದ ಕೂಡಿದವನಾಗಿ ಶ್ರೀಪತಿಯ ಕೈಂಕರ್ಯವನ್ನು ಯಥಾಶಕ್ತಿ ಅನನ್ಯ ಪ್ರಯೋಜನದಿಂದ ಮಾಡಬೇಕು.

(2) **ಮಂಗಳ್ಯ ಸೂತ್ರ ವಸ್ತ್ರಾದೀನ್** ಇತ್ಯಾದಿ – ಪತಿವ್ರತಾಸ್ತ್ರೀಯು ಮಾಂಗಲ್ಯ ಸೂತ್ರವನ್ನೂ, ವಸ್ತ್ರಾದಿಗಳನ್ನೂ ರಕ್ಷಿಸಿ ಹೇಗೆ ತನ್ನ ಪತಿಗೆ ಸಂತೋಷವನ್ನುಂಟು ಮಾಡುತ್ತಾಳೋ, ಹಾಗೆ ಪ್ರಪನ್ನನು ಶಾಸ್ತ್ರೀಯವಾದ ಮಾರ್ಗವನ್ನು, ಭಗವತ್ಪ್ರೀತಿಯನ್ನು ಸಂಪಾದಿಸಲು ಅನುಷ್ಠಿಸಬೇಕು.

(3) **ಯದ್ವನ್ ಮಂಗಳ ಸೂತ್ರಾದೇಃ** ಇತ್ಯಾದಿ – ಮಂಗಳ ಸೂತ್ರಾದಿಗಳನ್ನು ಪರಿತ್ಯಾಗ ಮಾಡಿದರೆ ತನ್ನ ಪತಿಯ ಪ್ರೀತಿಯನ್ನು ಕಳೆದುಕೊಳ್ಳುತ್ತಾಳೆ. ಸಂರಕ್ಷಿಸಿದರೆ ಅವನ ಪ್ರೀತಿಗೆ ವಿಷಯಳಾಗಿ ಅವಳನ್ನು ಪತಿಯು ಭೋಗದಿಂದ ಸಂರಕ್ಷಿಸುತ್ತಾನೆ. ಹಾಗೆ ಭಗವಂತನೂ ವರ್ಣಾಶ್ರಮ ಧರ್ಮಪರಿಪಾಲನೆ ಮಾಡುವವನನ್ನು ಕೈಂಕರ್ಯರೂಪ ಭೋಗಗಳನ್ನು ಕೊಟ್ಟು ಕಾಪಾಡುತ್ತಾನೆಂದರ್ಥ.

(4) **ಅವಜ್ಞಾರ್ಥಮನರ್ಥಾಯ** ಇತ್ಯಾದಿ – ಭಕ್ತರ ಜನ್ಮಾದಿಗಳನ್ನು ಚಿಂತಿಸುವುದು ತಿರಸ್ಕಾರಕ್ಕಾಗಿ **ಯಾದರೆ** ಅನರ್ಥಕರ. ಶಾಸ್ತ್ರ ವ್ಯವಸ್ಥೆಯನ್ನು ಮಾಡಲು ಹೇಳತಕ್ಕದ್ದು ದೋಷವಾಗಲಾರದು. (5) **ಅತ ಏವಹಿ** – ಶಾಸ್ತ್ರ ವ್ಯವಸ್ಥೆಯನ್ನನುಸರಿಸಿ ಧರ್ಮವ್ಯಾಧನು ಬೇಡನೆಂದೂ, ತುಲಾಧಾರನು – ವೈಶ್ಯನೆಂದೂ, ಶಬರಿಯು – ನಿಷಾದಸ್ತ್ರೀ ಎಂದೂ, ವಿದುರರು – ಕ್ಷತ್ತಾ ಎಂದೂ ಆಯಾಯಾ ಜಾತಿಯನ್ನು ನಿರ್ದೇಶಿಸಿ ಹೇಳಲ್ಪಟ್ಟಿರುತ್ತಾರೆ. ನಿಂದೆಗೋಸ್ಕರವಲ್ಲ. (6) **ಸ್ವಜಾತ್ಯಗುಣ್ಯೈವೇಷಾಂ** ಇತ್ಯಾದಿ ತಮ್ಮ ಜಾತಿಗೆ ಅನುಗುಣವಾದ ವೃತ್ತಿಯೂ ಜೀವನವೂ **ಐತಿಹಾಸಿಕೀ** – ಇತಿಹಾಸಗಳಲ್ಲಿ ಹೇಳಿದೆ. **ವಿಶೇಷ ವಿಧಿಸಿದ್ಧಂತು** – ಅಶರೀರಿವಾಕ್ ಮೊದಲಾದ ವಿಶೇಷ ವಿಧಿಯಿಂದ ಏರ್ಪಟ್ಟ ವಿಲಕ್ಷಣವಾದ ಆಚಾರಗಳೂ **ತದ್ಬಲಾತ್ತತ್ರ ಯುಜ್ಯತೇ**– ಆ ವಿಶೇಷ ವಿಧಿಬಲದಿಂದ ಅವರಿಗೆ ಮಾತ್ರ ಯೋಗ್ಯವಾದದ್ದು. 7) **ದೇಶಕಾಲಾಧಿಕಾರ್ಯಾದಿ** ಇತ್ಯಾದಿ– ದೇಶ – ಉಪಾಕರ್ಮವು ನರ್ಮದೋತ್ತರ ದೇಶವಾಸಿಗಳಿಗೆ ಸಿಂಹಶ್ರಾವಣದಲ್ಲಿಯೂ, ತದ್ದಕ್ಷಿಣ ದೇಶವಾಸಿಗಳಿಗೆ ಕರ್ಕಾಟಕ ಶ್ರಾವಣದಲ್ಲಿಯೂ ವಿಧಿಸಲ್ಪಟ್ಟಿದೆ, ಕೃತ ಯುಗಾದಿಗಳಲ್ಲಿ 'ಸಮಾಂಸೋ ಮಧುಪರ್ಕಃ' ಎಂದು ಮಧುಪರ್ಕವು ಅಳಿಯನಿಗೆ ಕನ್ಯಾದಾನ ಸಮಯದಲ್ಲಿ ಮಾಂಸ ಸಹಿತವಾಗಿ ಕೊಡಲು ಹೇಳಿದೆ. ಕಲಿಯುಗದಲ್ಲಿ ಮಾಂಸವು ನಿಷೇಧಿಸಲ್ಪಟ್ಟಿದೆ. ಇತರ ಯುಗಗಳಲ್ಲಿ ಅನುಜ್ಞಾತಗಳಾದ, ಸನ್ಯಾಸ, ಪಲಪೈತೃಕ–

8 **ಕೇಚಿತ್ತತ್ತದುಪಾಖ್ಯಾನ ತಾತ್ಪರ್ಯಗ್ರಹಣಾಕ್ಷಮಾಃ ।**
**ಕಲಿಕೋಲಾಹಲಕ್ರೀಡಾಂ ವರ್ಧಯನ್ತಿ ರಮಾಪತೇಃ ॥1 9॥**
**ಮಾತೃಭಿಃ ಪಿತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।**
**ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥ 30॥**
**ಜಾಮಯೋ ಯಾನಿಗೇಹಾನಿ ಶಪನ್ತ್ಯಪ್ರತಿಪೂಜಿತಾಃ ।**
**ತಾನಿ ಕೃತ್ಯಾಹತಾನೀವ ವಿನಶ್ಯನ್ತಿ ಸಮಂತತಃ ॥13 ॥**
**ಏವಮಾದಿಷು ಪೂಜ್ಯೋಕ್ತಿರ್ಯಥೌಚಿತ್ಯಾನ್ನಿಯಮ್ಯತೇ ।**
**ಭಕ್ತಮ್ಲೇಚ್ಛಾದಿ ಪೂಜೋಕ್ತಿರೇವಮೇವ ನಿಯಮ್ಯತಾಮ್ ॥13॥**

**ಇನ್ನಿಯಮಙ್ಗಳೆಲ್ಲಾಮ್ ಸಂಪ್ರತಿಪನ್ನ ಶಿಷ್ಟಾನುಷ್ಠಾನ ಪರಂಪರೈಯಾಲುಮ್ ಸಿದ್ಧಙ್ಗಳ್. ಆಹೈ**

---

ಮಾಂಸವನ್ನು ಬಡಿಸಿ ಪಿತೃ ಶ್ರಾದ್ಧಾಚರಣೆ,ದೇವರ (ಮೈದುನ)ನಿಂದ ಮಕ್ಕಳನ್ನು ಹಡೆದುಕೊಳ್ಳುವುದು, ಇತ್ಯಾದಿ ಕಲಿಯುಗದಲ್ಲಿ ನಿಷಿದ್ಧವು. **ಅಧಿಕಾರ್ಯಾದಿ** – ಅಧಿಕಾರಿಗಳೇ ಮೊದಲಾದವರು, ಇದು ದೃಷ್ಟಾಂತಾರ್ಥ, **ಈ** ವಿಶೇಷಗಳಲ್ಲಿ ವ್ಯವಸ್ಥಿತಾಃ – ವ್ಯವಸ್ಥಿತಗಳಾದ **ಈ** ಧರ್ಮಗಳು, ದೇಶಕಾಲಾಂತರಗಳಲ್ಲಿ ಮಾಡಲು ಅರ್ಹಗಳಲ್ಲ. (8) **ಕೇಚಿತ್ತು** ಇತ್ಯಾದಿ ಕೆಲವರು **ಈ** ಉಪಾಖ್ಯಾನಗಳ ತಾತ್ಪರ್ಯವನ್ನು ಗ್ರಹಿಸಲು ಅಶಕ್ತರಾಗಿ, ವರ್ಣಾಶ್ರಮ ಧರ್ಮಗಳನ್ನು ನಾಶಮಾಡಿ, ರಮಾಪತಿಗೆ ಕಲಿಯುಗದ ಕ್ರೀಡಾಕೋಲಾಹಲವನ್ನು ಅಭಿವೃದ್ಧಿಗೊಳಿಸುತ್ತಾರೆ.

ಭಕ್ತಿರಷ್ಟವಿಧಾಹ್ಯೇಷಾ ಯಸ್ಮಿನ್ ಮ್ಲೇಚ್ಛೇಪಿವರ್ತತೇ ।
ತಸ್ಮೈದೇಯಂ ತತೋಗ್ರಾಹ್ಯಂ ಸ ಚ ಪೂಜ್ಯೋ ಯಥಾಹ್ಯಹಮ್ ॥"

ಎಂದ ಮ್ಲೇಚ್ಛನೂ ಭಗವದ್ಭಕ್ತನಾದರೆ, ಅವನಿಗೆ ಹೆಣ್ಣು ಕೊಡಬೇಕು. ಅವನ ಹೆಣ್ಣನ್ನು ತಂದುಕೊಂಡು, ಅವನನ್ನು ಪೂಜಿಸಬೇಕು ಎಂದು ಹೇಳಿಲ್ಲವೇ. ಇದರಿಂದ ಜಾತಿ ನಿಯಮವು ಇಲ್ಲವೆಂದು ಏರ್ಪಡುವುದಿಲ್ಲವೇ ಎಂದರೆ, **ಮಾತೃಭಿಃ ಪಿತೃಭಿಶ್ಚೈತಾಃ** ಎಂದಾರಂಭಿಸಿ ಇದರ ಭಾವವನ್ನು ತಿಳಿಸುತ್ತಾರೆ. ಅದಾಗಿ ಮನೆಗೆ ಬಂದ ಸೊಸೆಯರನ್ನು, ಅತ್ತೆ, ಮಾವ, ಗಂಡ, ಮೈದುನ ಮೊದಲಾದವರು ಪೂಜಿಸಿ, ಒಡವೆ ಮೊದಲಾದವುಗಳನ್ನು ಕೊಟ್ಟು ಅಲಂಕರಿಸಬೇಕು. ಯಾವ ಮನೆಯಲ್ಲಿ ಜಾಮಯಃ – ಸೊಸೆಯರು, ಗೌರವವನ್ನು ಪಡೆಯದೆ ಮನೆಯವರನ್ನು ಶಪಿಸುತ್ತಾರೋ ಆ ಮನೆಯು ಪಿಶಾಚಿನಿಂದ ಆಕ್ರಮಿಸಲ್ಪಟ್ಟದಾಗಿ ಸಂಪೂರ್ಣವಾಗಿ ನಾಶವಾಗುತ್ತದೆ. ಈ ರೀತಿಯಾದ ಸ್ಥಳಗಳಲ್ಲಿ 'ಪೂಜಾ' ಶಬ್ದಕ್ಕೆ ಗೌರವಿಸಿ ಸಂತೋಷಪಡಿಸಬೇಕೆಂದು ಔಚಿತ್ಯದಿಂದ ಸಂಕೋಚವು ಹೇಳಲ್ಪಡುತ್ತದೆ ಇದೇ ರೀತಿಯಲ್ಲಿ **ಭಕ್ತಮ್ಲೇಚ್ಛಾದಿ ಪೂಜೋಕ್ತಿಃ – ಭಕ್ತ**ರಾದ ಮ್ಲೇಚ್ಛರನ್ನು ಪೂಜಿಸಬೇಕೆಂಬ ಮಾತೂ, ಗೌರವಿಸಬೇಕೆಂಬ ಅರ್ಥದಲ್ಲಿ **ಸಂಕೋಚಪಡಿಸಬೇಕು.** ಆದ್ದರಿಂದ ಮೋಹನ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಜಾತ್ಯುದ್ಧಾರ ಪ್ರಕ್ರಿಯೆಯು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡಕೂಡದು. ಈ ಅಂಶವು ಹಿಂದೆಯೇ ಪ್ರಭಾವ ವ್ಯವಸ್ಥಾಧಿಕಾರದಲ್ಲಿ ಹೇಳಲ್ಪಟ್ಟಿದೆ. ಅದನ್ನು ಇಲ್ಲಿಯೂ ಅನುಸಂಧಾನಮಾಡಬೇಕು. ಇದರಿಂದ ಸರ್ವಧರ್ಮಸ್ವರೂಪ ತ್ಯಾಗವಾದದಲ್ಲಿ ಕೆಲವರು ಅಲೇಪಕರ ಮತವನ್ನು ಅನುಸರಿಸಿರುವುದೂ, ಜಾತ್ಯುದ್ಧಾರ ಪ್ರಕ್ರಿಯೆಯಲ್ಲಿ ಶೈವಾಗಮವನ್ನು ಅನುಸರಿಸಿರುವುದೂ ಸರಿಯಲ್ಲವೆಂಬುದು ಆಚಾರ್ಯರ ಹೃದಯ.

**ಇನ್ನಿಯಮಂಗಳೆಲ್ಲಾಮ್** ಇತ್ಯಾದಿ – ಉತ್ಕೃಷ್ಟ ಜಾತಿಯರು ಅಪಕೃಷ್ಟ ಜಾತಿಯರನ್ನು ಪೂಜಿಸಬೇಕೆಂಬುದೂ, ಸಹಪಂಕ್ತಿಭೋಜನ, ಸಂಬಂಧವನ್ನು ಬೆಳೆಸುವುದು ಮೊದಲಾದವು ಕೂಡದು, ಎಂಬ ನಿಯಮಗಳೆಲ್ಲಾ, **ಸಂಪ್ರತಿಪನ್ನ ಶಿಷ್ಟಾನುಷ್ಠಾನ ಪರಂಪರೆಯಾಲುಮ್** – ಸರ್ವರಿಂದ ಗೌರವಿಸಲ್ಪಡುವ ಶಿಷ್ಟರುಗಳ ಅನುಷ್ಠಾನಗಳ ಪರಂಪರೆಗಳಿಂದಲೂ ಸಿದ್ಧಗಳು. **ಆಹೈಯಾಲ್** ಇತ್ಯಾದಿ–ಆದ್ದರಿಂದ ತನ್ನ ವರ್ಣಾಶ್ರಮಾದಿ

ಯಾಲ್, ತನ್ ವರ್ಣಾಶ್ರಮಾದಿಹಳುಕ್ಕಡೈತ್ತ ನಿಯಮಙ್ಗಳೋಡೇ ಭಗವತ್ಕೈಙ್ಕರ್ಯಮ್ ಪಣ್ಣುಗೈ ಪರಮೈಕಾಂತಿತ್ವ ವಿರುದ್ಧಮನ್ರು.

ಸಾಕ್ಷಾಲ್ಲಕ್ಷ್ಮೀಪತಾವೇವ ಕೃತಂ ಕೈಙ್ಕರ್ಯಮಞ್ಜಸಾ ॥
ಸಾರಕಲ್ಕ ವಿಭಾಗೇನ ದ್ವಿಧಾ ಸದ್ಭಿ ರುದೀರ್ಯತೇ ॥1 2॥
ಕೃತಕೃತ್ಯಸ್ಯ ಕೈಂಕರ್ಯಂ ಯದನನ್ಯ ಪ್ರಯೋಜನಮ್ ।
ಗುರ್ವಾದಿ ರಕ್ಷಣಾರ್ಥಂವಾ ತತ್ಸಾರಂ ಸಂಪ್ರಚಕ್ಷತೇ ॥133॥
ದಂಭಾರ್ಥಂ ಪರಪೀಡಾರ್ಥಂ ತನ್ನಿರೋಧಾರ್ಥಮೇವವಾ ।
ಪ್ರಯೋಜನಾಂತರಾರ್ಥಂ ವಾ ಕೈಂಕರ್ಯಂ ಕಲ್ಕ ಇಷ್ಯತೇ ॥134॥

ಪರಮೈಕಾನ್ತಿಹಳಲ್ಲಾದಾರ್ ಪಣ್ಣುಂ ಕೈಂಕರ್ಯತ್ತೈ ಸರ್ವೇಶ್ವರನ್ ತಿರುವಡಿಹಳಾಲೇ ಕೈಕ್ಕೊಳ್ಳು ಮೆನ್ರು ವಿಡತ್ತೈಯುಮ್ ಪರಮೈಕಾನ್ತಿಹಳ್ ಪಣ್ಣುಂ ಕೈಂಕರ್ಯತ್ತೈ ತಿರುಮುಡಿಯಾಲೇ ಕೈ ಕ್ಕೊಳ್ಳುಮೆನ್ರು ವಿಡತ್ತೈಯುಮ್ 1) "ತತ್ಸರ್ವಂ ದೇವದೇವಸ್ಯ ಚರಣಾವುಪತಿಷ್ಠತೇ" ಎನ್ರುಮ್
2) ಯಾಃ ಕ್ರಿಯಾಸ್ಸಂಪ್ರಯುಕ್ತಾಸ್ಸ್ಯುರೇಕಾಂತಗತ ಬುದ್ಧಿಭಿಃ ।
ತಾಸ್ಸರ್ವಾಶ್ಶಿರಸಾದೇವಃ ಪತಿಗೃಹ್ಣಾತಿ ವೈ ಸ್ವಯಮ್ ॥
ಎನ್ರುಮ್ ಶ್ರೀ ವೇದವ್ಯಾಸ ಭಗವಾನರುಳಿಚ್ಚೆಯ್ದಾರ್.

---

ಗಳಿಗೆ ಅಡೈತ್ತ - ಏರ್ಪಟ್ಟ, ನಿಯಮಗಳೊಡನೆ ಭಗವತ್ಕೈಂಕರ್ಯವನ್ನು ಮಾಡುವುದು ಪರಮೈಕಾಂತಿತ್ವಕ್ಕೆ ವಿರುದ್ಧವಲ್ಲ.

### ಪರಮೈಕಾಂತಿಗಳ ಮತ್ತು ಇತರರ ಕೈಂಕರ್ಯಗಳನ್ನು ಭಗವಂತನು ಅಂಗೀಕರಿಸುವದರಲ್ಲಿ ವ್ಯತ್ಯಾಸ

**ಸಾಕ್ಷಾಲ್ಲಕ್ಷ್ಮೀಪತಾವೇವ** ಇತ್ಯಾದಿ - ಲಕ್ಷ್ಮೀಪತಿಯ ವಿಷಯವಾಗಿಯೇ ಅವನಲ್ಲಿಯೇ ಮಾಡುವ ಕೈಂಕರ್ಯವು ಸಾರ, ಕಲ್ಕ ಎಂಬ ಎರಡು ವಿಧವಾಗಿದೆಯೆಂದು ಸತ್ಪುರುಷರು ಹೇಳಿರುತ್ತಾರೆ. ಅದಾಗಿ ಅನನ್ಯ ಪ್ರಯೋಜನವಾಗಿ ಕೃತಕೃತ್ಯನಾದ ಪ್ರಪನ್ನನು ಮಾಡುವ ಕೈಂಕರ್ಯವೂ, ಆಚಾರ್ಯಾದಿಗಳ ರಕ್ಷಣೆಗೋಸ್ಕರ ಮಾಡುವ ಭಗವತ್ಕೈಂಕರ್ಯವೂ "ಸಾರ" ವೆಂದು ಹೇಳಿರುತ್ತಾರೆ. ಡಂಭಕ್ಕಾಗಿಯೂ, ಇತರರನ್ನು ಹಿಂಸಿಸುವುದ ಕ್ಕಾಗಿಯೂ ಇತರರ ಕೈಂಕರ್ಯವನ್ನು ತಡೆಯುವುದಕ್ಕಾಗಿಯೂ, ಪ್ರಯೋಜನಾಂತರವಾಗಿಯೂ ಮಾಡುವ ಕೈಂಕರ್ಯವು "ಕಲ್ಕ" ವೆಂದು ವಿಭಾಗಿಸಲ್ಪಟ್ಟಿದೆ. **ಪರಮೈಕಾಂತಿಹಳಲ್ಲಾದಾರ್** - ಇತ್ಯಾದಿ ಪರಮೈಕಾಂತಿಗಳಲ್ಲದವರು ಮಾಡುವ ಕೈಂಕರ್ಯವನ್ನು ಸರ್ವೇಶ್ವರನು ತನ್ನ ಶ್ರೀಪಾದಗಳಲ್ಲಿ ಸ್ವೀಕರಿಸುತ್ತಾನೆಂದೂ, ಪರಮೈಕಾಂತಿಗಳು ಮಾಡುವ ಕೈಂಕರ್ಯವನ್ನು ತನ್ನ ದಿವ್ಯ ಶಿರಸ್ಸಿನಿಂದ ಸ್ವೀಕರಿಸುತ್ತಾನೆಂದೂ, (1) **ತತ್ಸರ್ವಂದೇವ ದೇವಸ್ಯ** ಎಂದೂ (2) **ಯಾಃ ಕ್ರಿಯಾಸ್ಸಂ ಪ್ರಯುಕ್ತಾಸ್ಸ್ಯುಃ** ಇತ್ಯಾದಿಯಾಗಿಯೂ ಶ್ರೀವೇದವ್ಯಾಸ ಭಗವಾನ್

---

1) ಹವ್ಯಂ ಕವ್ಯಂಚ ಸತತಂ ವಿಧಿಪೂರ್ವಂ ಪ್ರಯುಜ್ಯತೇ ।
ತತ್ಸರ್ವಂ ದೇವದೇವಸ್ಯ ಚರಣಾ ವುಪತಿಷ್ಠತೇ ॥ ಭಾರತ ಶಾಂತಿಪರ್ವ (358-63)
ಪರಮೈಕಾಂತಿಗಳಲ್ಲದವರು ವಿಧಿ ಪೂರ್ವಕವಾಗಿ ಸಮರ್ಪಿಸುವ ಹವ್ಯಗಳೂ, ಕವ್ಯಗಳೂ ಭಗವಂತನ ಪಾದಗಳನ್ನು ಸೇರುತ್ತವೆ. ಭಗವಂತನು ತನ್ನ ಕಾಲಿನಿಂದ ಸ್ವೀಕರಿಸುತ್ತಾನೆ, ಅದರಲ್ಲಿ ಅನಾದರವೆಂದರ್ಥ,

2) ಭಾರತ ಶಾಂತಿಪರ್ವ (358-64) ಪರಮೈಕಾಂತಿಗಳು ಅನನ್ಯ ಪ್ರಯೋಜನರಾಗಿ ಯಾವ ಕೈಂಕರ್ಯಗಳನ್ನು ಮಾಡುತ್ತಾರೆಯೋ ಅವೆಲ್ಲವನ್ನು ಭಗವಂತನು ತನ್ನ ಶಿರಸ್ಸಿನಿಂದ ತಾನೇ ಸ್ವೀಕರಿಸುತ್ತಾನೆ. ಇದರಿಂದ ಪರಮೈಕಾಂತಿಗಳು ಮಾಡುವ ಕೈಂಕರ್ಯದಲ್ಲಿ ಆದರಾತಿಶಯವು ತೋರಿಸಲ್ಪಟ್ಟಿತು.

### ನೈರಪೇಕ್ಷ ವಿಧಿಪಕ್ಷಮುಂ ಸಂಹರತಿ

**ಇಪ್ಪಡಿ ಇವನ್ ಭಗವದಾಜ್ಞೈಯಾಲೇಯನುಷ್ಠಿಕ್ಕಿರ ನಿತ್ಯನೈಮಿತ್ತಿಕಙ್ಗಳುಮ್ ಭಗವದನುಜ್ಞೈಯಾಲೇ ಯುವನುಹಪ್ಪೇ ಪ್ರಯೋಜನಮಾಹ ವನುಷ್ಠಿಕ್ಕಿರ ವಿತ್ತಮಾನ ಕೈಂಕರ್ಯಙ್ಗಳುಮ್ ಇಪ್ಪ್ರಪತ್ತಿಯೋಡು ತುವಕ್ಕತ್ತು ನಿನ್ರನಿಲೈ "ಸರ್ವಧರ್ಮಾನ್ ಪರಿತ್ಯಜ್ಯ" ಎನ್ಗಿರ ವಿಧಾನತ್ತಾಲೇ ಸಿದ್ಧಮಾಯಿಟ್ರು**

**ಅತಶ್ಶಕ್ಯಾನಿ ಸರ್ವಾಣಿ ಸಪ್ರಪತ್ತ್ಯರ್ಥ ಮಾಚರೇತ್ ।**
**ಅಶಕ್ಯೇಷು ಚ ಸಾಮರ್ಥ್ಯಂ ನತದರ್ಥಂ ಸಮಾರ್ಜಯೇತ್ ॥ ೭ ॥**

### ಅಸ್ಮಿನ್ ವಿಧಿಪಕ್ಷೇ ಆಕಿಂಚನ್ಯ ರೂಪಾಧಿಕಾರಮ್ ದರ್ಶಯತಿ.

**ಇನ್ದ ಯೋಜನೈಯಿಲ್ ಅಧಿಕಾರಮಾನ ಆಕಿಂಚನ್ಯಮುಮ್ ಶೋಕಿಯಾದೇ ಕೊಳ್ಳೈನ್ರು ತೋತ್ತು ವಿಕ್ಕಿರ ವಾಕ್ಯತ್ತಾಲೇ ಸೂಚಿತಮ್.**

### ಅನುವಾದಪಕ್ಷೇ ಅಂಗನೈರಪೇಕ್ಷ್ಯಂ "ಏಕ" ಶಬ್ದೇನ ವಿವಕ್ಷಿತಮ್.

**ಅನುವಾದ ಪಕ್ಷತ್ತಿಲ್ ತನ್ ಅಶಕ್ತಿಯಾಲೇ ಕಾಸ್ದುವೈಯೊಳ್ಳಿಯು ಶಕ್ಯಮಾಯ್ ಚ್ಚೈಯ್‌ಹಿರ ಆಜ್ಞಾನುಪಾಲನಾದಿಹಳುಮ್ ಪ್ರಪತ್ತಿಯಿಲ್ ತುವಕ್ಕೊಣ್ಣಾದೆನ್ರುಮಿಡಮುಮ್ ಏಕಶಬ್ದತ್ತಿಲೇ ವಿವಕ್ಷಿತಮಾಹಕ್ಕಡವದು.**

**ಇಪ್ಪಕ್ಷತ್ತಿಲ್ "ಮಾಶುಚಃ" ಎನ್ಗಿರವಾಕ್ಯಮ್ "ಸರ್ವಧರ್ಮಾನ್ ಪರಿತ್ಯಜ್ಯ" ಎನ್ರು ಉಕ್ತಮಾನ**

---

ಕೃಪೆಯಿಂದ ಹೇಳಿರುತ್ತಾರೆ. ಇದರಿಂದ ಪರನೈಕಾಂತಿಗಳು ಮಾಡುವ ಕೈಂಕರ್ಯದಲ್ಲಿ ಆದರವೂ, ಇತರರು ಮಾಡುವ ಕೈಂಕರ್ಯದಲ್ಲಿ ಅನಾದರವೂ, ಭಗವಂತನಿಗೆ ಉಂಟಾಗುತ್ತದೆಂಬುದು ವ್ಯಕ್ತಪಡಿಸಿದಂತೆ ಆಯಿತು.

### ಆಜ್ಞಾನುಜ್ಞಾ ಕೈಂಕರಗಳು ಪ್ರಪತ್ತಿಗೆ ಅಂಗವಲ್ಲ.

**ಇಪ್ಪಡಿ ಇವನ್** ಇತ್ಯಾದಿ – ಹೀಗೆ ಇವನು ಭಗವದಾಜ್ಞೆಯಿಂದ ಅನುಷ್ಠಿಸುವ ನಿತ್ಯನೈಮಿತ್ತಿಕಗಳೂ ಭಗವಂತನ ಅನುಜ್ಞೆಯಿಂದ, ಇವನ ಸಂತೋಷವೇ ಪ್ರಯೋಜನವಾಗಿ ಅನುಷ್ಠಿಸುವ **ವಿಟ್ರಮಾನ – ಶ್ಲಾಘ್ಯ**ವಾದ ಕೈಂಕರ್ಯಗಳೂ ಪ್ರಪತ್ತಿಗೆ ಸಂಬಂಧವಿಲ್ಲದವು. ಅಂದರೆ ಪ್ರಪತ್ತಿಗೆ ಅಂಗವಾಗುವುದಿಲ್ಲವೆಂದು **ನಿನ್ರನಿಲೈ–** ಇರುವ ಸ್ಥಿತಿಯು **'ಸರ್ವಧರ್ಮಾನ್ ಪರಿತ್ಯಜ್ಯ'** ಎಂಬ ವಿಧಿಯಿಂದ ಸಿದ್ಧವು. ಈ ನೈರಪೇಕ್ಷ್ಯವಿಧಿಯಿಂದ ಫಲಿಸುವ ಅರ್ಥವನ್ನು **ಅತಶ್ಶಕ್ಯಾನಿ ಸರ್ವಾಣಿ** – ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ, 'ಪರಿತ್ಯಜ್ಯ' ಎಂಬುದಕ್ಕೆ ನೈರಪೇಕ್ಷ್ಯ ವಿಧಿಪರತ್ವವನ್ನು ಹೇಳಿದುದರಿಂದ, ಶಕ್ಯವಾದ ಕರ್ಮಗಳನ್ನು ಪ್ರಪತ್ತಿಗೆ ಅಂಗವಾಗಿ ಅನುಷ್ಠಿಸಬೇಕಿಲ್ಲ ಅಶಕ್ಯಗಳಾದ ಕರ್ಮಗಳಲ್ಲಿ ಸಾಮರ್ಥ್ಯವನ್ನು ಪ್ರಪತ್ತ್ಯರ್ಥವಾಗಿ ಸಂಪಾದಿಸಬೇಕಿಲ್ಲ - ಹೀಗೆ "ಪರಿತ್ಯಜ್ಯ" ಎಂಬುದಕ್ಕೆ ನೈರಪೇಕ್ಷ್ಯ ವಿಧಿಪರತ್ವ ಯೋಜನೆಯಲ್ಲಿ, ಚರಮಶ್ಲೋಕದಲ್ಲಿ ಅಧಿಕಾರವನ್ನು ತಿಳಿಸುವ ಸ್ಥಳವು ಯಾವುದೆಂಬುದನ್ನು **ಇಂದ ಯೋಜನೈಯಿಲ್** ಇತ್ಯಾದಿ -- ತಿಳಿಸುತ್ತಾರೆ. ಹೀಗೆ "ಪರಿತ್ಯಜ್ಯ" ವೆಂಬುದಕ್ಕೆ ನೈರಪೇಕ್ಷ್ಯ ವಿಧಿಪರತ್ವವಾದ ಈ ಯೋಜನೆಯಲ್ಲಿ ಅಧಿಕಾರವಾದ ಆಕಿಂಚನ್ಯವು ಶೋಕಿಸದೆ ಇರು, ಎಂದು **ತೇಟ್ರುಹಿರ** – ಸಮಾಧಾನಪಡಿಸುವ, "ಮಾಶುಚಃ" ಎಂಬ ವಾಕ್ಯದಿಂದ ಸೂಚಿತವು. **ಅನುವಾದ ಪಕ್ಷತ್ತಿಲ್** – ಇತ್ಯಾದಿ 'ಪರಿತ್ಯಜ್ಯ ಸ್ಥಿತಸ್ತ್ವಂ' ಎಂಬ ಅನುವಾದ ಪಕ್ಷದಲ್ಲಿ, ತನ್ನ ಅಶಕ್ತಿಯಿಂದ ಮಾಡಲಾಗದವನ್ನು ಬಿಟ್ಟು, ಶಕ್ಯವಾಗಿ ಮಾಡುವ ಆಜ್ಞಾನುಪಾಲನಾದಿಗಳೂ, ಪ್ರಪತ್ತಿಯೊಡನೆ ಸಂಬಂಧವನ್ನು ಪಡೆಯುವುದಿಲ್ಲವೆಂಬುದು "ಏಕ" ಶಬ್ದದಿಂದ ವಿವಕ್ಷಿತವಾಗುತ್ತದೆ. **ಇಪ್ಪಕ್ಷತ್ತಿಲ್** – ಇತ್ಯಾದಿ ಈ ಪಕ್ಷದಲ್ಲಿ **"ಮಾಶುಚಃ"** ಎಂಬ ವಾಕ್ಯವು **'ಸರ್ವ ಧರ್ಮಾನ್ ಪರಿತ್ಯಜ್ಯ'**, ಎಂದು ಹೇಳಲ್ಪಟ್ಟ ಅಧಿಕಾರವನ್ನು

**ಅಧಿಕಾರತ್ತೈನ್ಯಕ್ತಮಾಕ್ಕಿಕ್ಕೊಣ್ಡು ಮೇಲುಳ್ಳ ನಿರ್ಭರತ್ವಾದಿಹಳೈ ಮುನ್ನಿಟ್ಟು ಉತ್ತರಕಾಲತ್ತಿಲಿರುಕ್ಕಕ್ಕಡವ ಪಡಿಯೈಯೆಲ್ಲಾಮ್ ಉಪಲಕ್ಷಿಕ್ಕಿರದು. ತ್ಯಾಗವಿಧಿಪಕ್ಷತ್ತುಕ್ಕು ಪ್ರಮಾಣ ವಿರೋಧಮ್ ವಾರಾದಪಡಿ ಇನ್ನಮುಮ್ ಶಿಲಗತಿಹಳುಂಡು.**

**ತ್ಯಾಗವಿಧಿಪಕ್ಷೇತು ಅರ್ಥಾಂತರಾಣಿ ಉಪದಿಶತಿ.**

1) **ಆತ್ಮಾಶಕ್ಯ ವೃಥಾಯಾಸ ನಿವಾರಣ ಮಿಹಾಪಿವಾ ।
ಲಜ್ಜಾ ಪುರಸ್ಸರ ತ್ಯಾಗವಾದೋಪ್ಯತ್ರ ನಿಯಮ್ಯತಾಮ್ ॥36॥**

2) **ಸ್ವದುಷ್ಕರೇಷು ಧರ್ಮೇಷು ಕುಶಕಾಶಾವಲಂಬತಃ ।
ಆಶಾಲೇಶಾನು ವೃತ್ತಿರ್ವಾ ತ್ಯಾಗೋಕ್ತ್ಯಾ ವಿನಿವಾರ್ಯತೇ ॥ 37॥**

3) **ಅವಿಶಿಷ್ಟ ಫಲತ್ವೇನ ವಿಕಲ್ಪೋ ಯಶ್ಚ ಸೂತ್ರಿತಃ ।
ತನ್ಮುಖೇನಾ ಪಿ ವಾ ತ್ರೇಷ್ಟಂ ಬ್ರಹ್ಮಾಸ್ತ್ರನ್ಯಾಯ ಸೂಚನಮ್ ॥38॥**

**ಅಶಕ್ಯತ್ತಿಲೇ ಪ್ರವೃತ್ತನೈ ತ್ತವಿರ್ ಎನ್ಗೈಯುಮ್, ತನಕ್ಕು ದುಷ್ಕರಙ್ಗಳಿಲ್ ಅಭಿನಿವೇಶ ಮುಡೈ**

---

ವ್ಯಕ್ತಪಡಿಸಿಕೊಂಡು, ಮೇಲೆ ಹೇಳಲ್ಪಡುವ ನಿರ್ಭರತ್ವಾದಿಗಳನ್ನು ಮುಂದಿಟ್ಟುಕೊಂಡು, ಉತ್ತರಕಾಲದಲ್ಲಿ ಇರ ತಕ್ಕ **ಪಡಿ** – ರೀತಿ ಯೆಲ್ಲವನ್ನೂ ಉಪಲಕ್ಷಿಸುತ್ತದೆ.

**ತ್ಯಾಗವಿಧಿಪಕ್ಷಕ್ಕೆ ಸದೃಶವಾದ ಮತ್ತೆ ಕೆಲವು ವಿವರಣೆಗಳು.**

**ತಾಗವಿಧಿಪಕ್ಷತ್ತುಕ್ಕು** – ಇತ್ಯಾದಿ ಸರ್ವಧರ್ಮಗಳ, ಸ್ವರೂಪ ತ್ಯಾಗವನ್ನು ವಿಧಿಸುವ ಪಕ್ಷಕ್ಕೆ ಪ್ರಮಾಣ ವಿರೋಧವು ಉಂಟಾಗದಂತೆ ಮತ್ತೆ ಕೆಲವು **ಗತಿಹಳ್** – ದಾರಿಗಳು, ಉಂಟು. ಅದಾಗಿ (1) **ಆತ್ಮಾಶಕ್ಯ ವೃಥಾಯಾಸ** ಇತ್ಯಾದಿ – ಅಪಿವಾ – ಅಥವಾ, ಇಹ – **ಈ** "ಪರಿತ್ಯಜ್ಯ" – ಬಿಡು, ಎಂಬುದಕ್ಕೆ ತನಗೆ ಅಶಕ್ಯಗಳಾದ ಭಕ್ತ್ಯಾದಿಗಳಲ್ಲಿ, ನಿಷ್ಫಲವಾದ ಉದ್ಯೋಗವು, **ನಿವಾರಣಮ್** – ಬೇಡವೆಂಬುದೂ, **ಲಜ್ಜಾ ಪುರಸ್ಸರ ತ್ಯಾಗೋಽಪಿ** – 'ಪರಿ' ಎಂಬ ಉಪಸರ್ಗದಿಂದ ಲಜ್ಜಾಪುರಸ್ಸರ ತ್ಯಾಗವೂ, ಅಂದರೆ ಅಶಕ್ಯವಾದ ಕರ್ಮವನ್ನು ಮಾಡಲು ಆರಂಭಿಸಿದುದು ಎಲ್ಲಾ ವ್ಯರ್ಥವಾಯಿತಲ್ಲಾ, ಎಂಬ ಲಜ್ಜೆ, – ಅವಮಾನ, ಅದನ್ನು ಮುಂದಿಟ್ಟುಕೊಂಡು ಚಿಂತೆ - ಅನುತಾಪಗಳ ತ್ಯಾಗವೂ ಕೂಡ, **ಅತ್ರನಿಯಮ್ಯತಾಮ್** – ಇಲ್ಲಿ ವಿವಕ್ಷಿಸಲ್ಪಡಬಹುದು. (ii) **ಸ್ವದುಷ್ಕರೇಷು** ಇತ್ಯಾದಿ – ತನಗೆ ಅತ್ಯಂತಾಶಕ್ಯಗಳಾದ ಧರ್ಮಗಳಲ್ಲಿ, **ಕುಶಾಕಾಶಾವಲಂಬನಂ** – ಪ್ರವಾಹದ ನೀರಲ್ಲಿ ತೇಲಿ ಹೋಗುವವನು ದರ್ಭೆ ಅಥವಾ ಜೊಂಡನ್ನು ಅವಲಂಬಿಸುವಂತೆ **ಆಶಾಲೇಶಾನುವೃತ್ತಿರ್ವಾ** – ಅಂದರೆ ಯೋಗಾಂಗವಾದ ಪ್ರಾಣಾಯಾಮವನ್ನು ಸಾಧಿಸೋಣ, ಆಸನ ಜಯವನ್ನು ಪರಿಚಯ ಮಾಡೋಣ ಎಂಬ ಆಶಾಲೇಶದ ಅನುವೃತ್ತಿಯೂ, **ತ್ಯಾಗೋಕ್ತ್ಯಾ** ಇತ್ಯಾದಿ – ಪರಿತ್ಯಜ್ಯ ಎಂಬಲ್ಲಿ ತ್ಯಾಗವಿಧಿಯಿಂದ, **ವಿನಿವಾರ್ಯತೇ** – ತಡೆಯಲ್ಪಡುತ್ತದೆ. (iii) **ಅವಿಶಿಷ್ಟ ಫಲತ್ವೇನ** ಇತ್ಯಾದಿ – "ವಿಕಲ್ಪೋಽವಿಶಿಷ್ಟ ಫಲತ್ವಾತ್" ಎಂಬ ಸೂತ್ರದಲ್ಲಿ, ಫಲೈಕ್ಯದಿಂದ, ದಹರಾದಿವಿದ್ಯೆಗಳಲ್ಲಿ, ಯಾವುದಾದರೂ ಒಂದು ವಿದ್ಯೆಯನ್ನು ಅನುಷ್ಠಿಸಿದರೆ ಸಾಕು, ಎಂದು ಹೇಳಿರುವುದರಿಂದ, ಅಲ್ಪಕಾಲಸಾಧ್ಯವಾದ ಪ್ರಪತ್ತಿಯಿಂದ ಮೋಕ್ಷವು ಲಭಿಸುತ್ತದೆಯೇ ಎಂದು ಶಂಕಿಸಿ ಉಪಾಯಾಂತರವನ್ನು ಅನುಷ್ಠಿಸಿದರೆ ಬ್ರಹ್ಮಾಸ್ತ್ರ ನ್ಯಾಯವು ಸೂಚಿಸಲ್ಪಡುತ್ತದೆ ಎಂಬುದೂ ತ್ಯಾಗ ವಿಧಿಪಕ್ಷಕ್ಕೆ ವಿವಕ್ಷಿತ ಅಂದರೆ ಪರಸ್ಪರ ನಿರಪೇಕ್ಷಗಳಾಗಿ ಹೇಳಲ್ಪಟ್ಟ ಮೋಕ್ಷವಿದ್ಯೆಗಳಲ್ಲಿ ಒಂದಾದ ಪ್ರಪತ್ತಿರೂಪ ನ್ಯಾಸವಿದ್ಯೆಗೆ, ಕ್ಷಣಕಾಲ ಸಾಧ್ಯತೆಯಿಂದ ಫಲಸಾಧನತ್ವ ಶಂಕೆಯು ಏರ್ಪಟ್ಟು ವಿದ್ಯಾಂತರಗಳನ್ನು ಜತೆಗೆ ಸೇರಿಸಿ ಅನುಷ್ಠಿಸುವುದರಿಂದ, ಬ್ರಹ್ಮಾಸ್ತ್ರ ನ್ಯಾಯವು ಪ್ರಸಕ್ತವಾಗಿ, ಪ್ರಪತ್ತಿಯು ಜಾರಿಕೊಳ್ಳುವುದರಿಂದ, ಇತರ ಧರ್ಮಗಳನ್ನು ಪ್ರಪತ್ತಿಗೆ ಸೇರಿಸಿ ಅನುಷ್ಠಿಸಕೂಡದೆಂಬುದೂ, ಪರಿತ್ಯಜ್ಯ ಎಂಬಲ್ಲಿ ವಿವಕ್ಷಿತ. ಮೇಲೆ ಹೇಳಿದ ಶ್ಲೋಕಗಳ ತಾತ್ಪರ್ಯವನ್ನು **ಅಶಕ್ಯತ್ತಿಲೇ** ಎಂದಾರಂಭಿಸಿ

ಯುವನ್ಱೈ ಇದುವೇಣ್ಡಾವೆನ್ಱೈಯುಮ್, ವಿಕಲ್ಪಿತ್ತ ಉಪಾಯಾನ್ತರಙ್ಗಳಿಲೇ ಒನ್ಱೈ ಇಙ್ಗೇ ಕೂಟ್ಟಿಲ್ ಬ್ರಹ್ಮಾಸ್ತ್ರ(ಬಂಧ)ನ್ಯಾಯತ್ತಾಲೇ ವಿರೋಧಿಕ್ಕುಮೆನ್ಱು ಕಳೈಕ್ಕೈಯುಮ್ ವಿಧಿಪ್ರಕಾರಙ್ಗಳ್.

**ಅಥ "ಸರ್ವಧರ್ಮಾನ್ ಪರಿತ್ಯಜ್ಯ" ಇತ್ಯಸ್ಯ ಉಕ್ತಾರ್ಥಾನ್ ಸುಖಾನುಸಂಧಾನಾರ್ಥಂ ಶ್ಲೋಕಾಭ್ಯಾಂ ಸಂಗೃಹ್ಣಾತಿ.**

ಅತೋಽಶಕ್ತಾಧಿಕಾರತ್ವ ಮಾಕಿಂಚನ್ಯ ಪುರಸ್ಕ್ರಿಯಾ ।
ಅನಂಗಭಾವೋ ಧರ್ಮಾಣಾಮಶಕ್ಯಾರಂಭ ವಾರಣಮ್ ॥39॥

ತತ್ಪ್ರತ್ಯಾಶಾ ಪ್ರಶಮನಮ್ ಬ್ರಹ್ಮಾಸ್ತ್ರ ನ್ಯಾಯಸೂಚನಮ್ ।
ಸರ್ವಧರ್ಮ ಪರಿತ್ಯಾಗ ಶಬ್ದಾರ್ಥೇ [ರ್ಥಾ]ಸ್ಸಾಧು ಸಂಮತಃ [ತಾಃ]॥40॥

**ವಿಧಿಪಕ್ಷೇ ಪಕ್ಷಾನ್ತರ ಮನೂದ್ಯ ತದ್ವಿವಕ್ಷಾಯಾ ಮೌಚಿತ್ಯಂ ನಾಸ್ತೀತ್ಯಾಹ**

ದೇವತಾಂತರ ಧರ್ಮಾದಿ ತ್ಯಾಗೋಕ್ತಿ ರವಿರೋಧಿನೀ ।
ಉಪಾಸಕೇಽಪಿ ತುಲ್ಯತ್ವಾದಿಹಸಾ ನವಿಶೇಷಿಕಾ [ತಾ] ॥ 41॥

---

ತಿಳಿಸುತ್ತಾರೆ. ಆದಾಗಿ ಅಶಕ್ಯಗಳಾದ ಧರ್ಮಗಳಲ್ಲಿ ಪ್ರವೃತ್ತಿಯನ್ನು ಬಿಡು ಎಂಬುದೂ, ತನಗೆ ಮಾಡಲಶಕ್ಯಗಳಾಗಿ ಬಿಟ್ಟ ಧರ್ಮಗಳಲ್ಲಿ ಅಭಿನಿವೇಶವುಳ್ಳವನನ್ನು ಇವು ಬೇಡವೆಂಬುದೂ, ವಿಕಲ್ಪಿಸಿ ಹೇಳಿದ ಉಪಾಯಾಂತರಗಳಲ್ಲಿ, ಒಂದನ್ನು ಪ್ರಪತ್ತಿಯೊಡನೆ ಸೇರಿಸಿಕೊಂಡರೆ ಬ್ರಹ್ಮಾಸ್ತ್ರನ್ಯಾಯದಿಂದ ವಿರೋಧವು ಏರ್ಪಡುತ್ತದೆಯೆಂದು, ಆದನ್ನು ಬಿಡುವುದೂ, 'ಪರಿತ್ಯಜ್ಯ' ಎಂಬ ವಿಧಿಯ ಪ್ರಕಾರಗಳು.

**'ಸರ್ವಧರ್ಮಾನ್ ಪರಿತ್ಯಜ್ಯ' ಎಂಬುದಕ್ಕೆ ಹೇಳಿದ ಆರು ಅರ್ಥಗಳ ಸಂಗ್ರಹ.**

ಸರ್ವಧರ್ಮಾನ್ ಪರಿತ್ಯಜ್ಯ ಎಂಬುದಕ್ಕೆ ತಾವು ಮೇಲೆ ಹೇಳಿದ ಆರು ಅರ್ಥಗಳನ್ನು **ಅತೋಽಶಕ್ತಾಧಿಕಾರತ್ವಮ್** ಎಂದಾರಂಭಿಸಿ ಸಂಗ್ರಹಿಸುತ್ತಾರೆ. **ಅತಃ** – ಶಾಸ್ತ್ರವಿರುದ್ಧವಾದ ವಿಧಿಪ್ರಕಾರಗಳನ್ನು ತೋರಿಸಿದುದರಿಂದ, (1) **ಅಶಕ್ತಾಧಿಕಾರತ್ವಂ** – "ಸರ್ವಧರ್ಮಾನ್ ಪರಿತ್ಯಜ್ಯ ವರ್ತಮಾನಃ" ಎಂಬ ಅನುವಾದ ಪಕ್ಷದಲ್ಲಿ ಪ್ರಪತ್ತಿಗೆ ಅಶಕ್ತಾಧಿಕಾರತ್ವವೂ, ವಿಧಿಪಕ್ಷದಲ್ಲಿ, (ii) **ಆಕಿಂಚನ್ಯಪುರಸ್ಕ್ರಿಯಾ** – ಆಕಿಂಚನ್ಯದ ಪುರಸ್ಕರಣವೂ (iii) **ಅನಂಗಭಾವೋ ಧರ್ಮಾಣಾಂ** – ಸ್ವವರ್ಣಾಶ್ರಮಧರ್ಮಗಳನ್ನು ಪ್ರಪತ್ತಿಗೆ ಅಂಗವಾಗಿ ಸ್ವೀಕರಿಸದೆ, ಪರಿತ್ಯಜ್ಯ – ಬಿಡಬೇಕೆಂಬುದೂ (iv) **ಅಶಕ್ಯಾರಂಭ ವಾರಣಮ್** – ಅಶಕ್ಯಗಳನ್ನು ಮಾಡದಿರುವುದು, (v) **ತತ್ಪ್ರತ್ಯಾಶಾ ಪ್ರಶಮನಂ** – ಪ್ರವೃತ್ತಿಯಿಲ್ಲದಿದ್ದರೂ ಆ ಇತರ ಧರ್ಮಗಳನ್ನು ಹೇಗಾದರೂ ಅನುಷ್ಠಿಸಬೇಕೆಂಬ ಯಾವ ಆಸೆಯುಂಟೋ ಅದನ್ನು ಬಿಡು ಎಂಬುದೂ (vi) **ಬ್ರಹ್ಮಾಸ್ತ್ರನ್ಯಾಯಸೂಚನಂ**– ವಿಕಲ್ಪಿತಗಳಾದ ಇತರ ಧರ್ಮಗಳನ್ನು ಸೇರಿಸಿಕೊಂಡು ಪ್ರಪತ್ತಿಯನ್ನು ಅನುಷ್ಠಿಸಿದರೆ, ಬ್ರಹ್ಮಾಸ್ತ್ರನ್ಯಾಯದಂತೆ, ಪ್ರಪತ್ತಿಯು ಜಾರಿಕೊಳ್ಳುತ್ತದೆ. ಆದ್ದರಿಂದ ಇತರೋಪಾಯಗಳನ್ನು ಪ್ರಪತ್ತಿಗೆ ಸೇರಿಸದೆ ಬಿಡು ಎಂಬುದೂ **'ಸರ್ವಧರ್ಮ ಪರಿತ್ಯಾಗ'** ಶಬ್ದಗಳಿಗೆ ಸಾಧುಸಮ್ಮತಗಳಾದ ಅರ್ಥಗಳು. **ದೇವತಾಂತರ ಧರ್ಮಾದಿ** ಇತ್ಯಾದಿ – ದೇವತಾಂತರ ಸಂಬಂಧ ಧರ್ಮಗಳನ್ನು ಬಿಡು ಎಂದು ತ್ಯಾಗೋಕ್ತಿಗೆ ಅರ್ಥ ಹೇಳುವುದು ಅವಿರೋಧವಾದರೂ, ಈ ದೇವತಾಂತರ ಸಂಬಂಧತ್ಯಾಗವು ಭಕ್ತಿಯೋಗ ನಿಷ್ಠನಿಗೂ ಸಮಾನವಾದ್ದರಿಂದ, ಇಲ್ಲಿ ಪ್ರಪತ್ತಿಯೋಗ ನಿಷ್ಠನಿಗೆ ಪ್ರಪತ್ತ್ಯಂಗವಾಗಿ ವಿಧಿಸುವುದರಲ್ಲಿ ಪ್ರಯೋಜನವಿಲ್ಲವಾದ್ದರಿಂದ, ದೇವತಾಂತರ ಧರ್ಮತ್ಯಾಗ ವಿಧಿಯು ಇಲ್ಲಿ ಸಂಗ್ರಹಿಸಲ್ಪಡುವುದಿಲ್ಲ.

"ಉಪಾಯಾಪಾಯ ಸಂತ್ಯಾಗೀ" ಇತ್ಯಾದಿಹಳಿಲ್ ಚೊನ್ನ ಉಪಾಯ ತ್ಯಾಗಮುಮ್ ಇಪ್ಪ್ರಕಾರಙ್ಗಳಿಲೇ ನಿರ್ವಾಹ್ಯಮ್.

ಸರ್ವಧರ್ಮಾನ್ ಪರಿತ್ಯಜ್ಯೇತ್ಯಸ್ಯ ಷಡರ್ಥ ಸಙ್ಗ್ರಹಃ.

ಮೂಣ್ಡಾಲು ಮರಿಯದನಿಲ್ ಮುಯಲವೇಣ್ಡಾ ।
ಮುನ್ನಮತಿಲಾ ಶೈತನ್ಯೆ ವಿಡುಗೈತಿಣ್ಮೈ ।
ವೇಣ್ಡಾದು ಶರಣನೆರಿ ವೇರೋರ್ ಕೂಟ್ಟು
ವೇಣ್ಡಿಲ ಯನತ್ತಿರಮ್ಪೋಲ್ ವೆಳ್‌ಹಿನಿರ್ಕುಮ್ ॥
ನೀಣ್ಡಾಹು ನಿರೈಮದಿಯೋರ್ ನೆರಿಯಿಲ್ಕೂಡಾ ।
ನಿನ್ತನಿಮೈತುಣ್ಯೆಯಾಹವೆನ್ತನ್ಪಾದಮ್ ।
ಪೂಣ್ಡಾಲು ನ್ವಿಣೈಕಳೆಲ್ಲಾಮ್ಪೋರು ಪ್ಪೇನೆನ್ರ
ಪುಣ್ಣಿಯನಾರ್ ಪುಹೞನೈತ್ತುಮ್ಪುಕೞ್ವೋಮೇ ॥42॥

---

ಲಕ್ಷ್ಮೀತಂತ್ರದಲ್ಲಿ 'ಉಪಾಯಾಪಾಯಸಂತ್ಯಾಗೀ' ಮಧ್ಯಮಾಂ ವೃತ್ತಿಮಾಶ್ರಿತಃ ।
ಮಾಮೇಕಂ ಶರಣಂ ಪ್ರಾಪ್ಯ ಮಾಮೇವಾಂತೇ ಸಮಶ್ನುತೇ ॥
ಎಂಬಲ್ಲಿ ಅಪಾಯ – ನಿಷಿದ್ಧ, ಉಪಾಯ – ಸರ್ವಧರ್ಮಗಳು, (ಉಪಾಯಾಂತರಗಳು), ನಿಷಿದ್ಧಗಳು ಸ್ವರೂಪತಃ ತ್ಯಾಜ್ಯಗಳಾಗಿ ಪ್ರಪತ್ತಿಗೆ ಅಂಗವಾದರೂ, ಸರ್ವಧರ್ಮ ಸ್ವರೂಪತ್ಯಾಗವು ಬಹುಪ್ರಮಾಣಗಳಿಗೆ ವಿರುದ್ಧವಾದ್ದರಿಂದ, ಉಪಾಯತ್ಯಾಗವೆಂಬುದು, ಮೇಲೆ ಹೇಳಿದ ರೀತಿಯಲ್ಲಿ ನಿರ್ವಾಹ್ಯ.

ಮೇಲೆ ಹೇಳಿದ ಸರ್ವಧರ್ಮಾನ್ ಪರಿತ್ಯಜ್ಯವೆಂಬುದರ ಅರ್ಥವನ್ನು ಪಾಶುರ ರೂಪದಲ್ಲಿ ಸಂಗ್ರಹಿಸುತ್ತಾರೆ. ಆದಾಗಿ **ಮೂಂಡಾಲುಮ್** ಇತ್ಯಾದಿ – **ಅಱಿಯದನಿಲ್** – ತಿಳಿಯಲಾಗದ ಭಕ್ತಿಯೋಗದಲ್ಲಿ, **ಮೂಂಡಾಲುಮ್** ಪ್ರವರ್ತಿಸಿದರೂ, ಮಾಡಿಬಿಡೋಣ ಎಂದು ಪ್ರಥಮತಃ ಪ್ರವರ್ತಿಸಿದರೂ **ಮುಯಲವೇಂಡಾ** – ದ್ವಿತೀಯಾದಿ ಪ್ರವೃತ್ತಿಗಳನ್ನು ಮಾಡಬೇಡ, ಇದರಿಂದ ಅಶಕ್ಯಾರಂಭ ವಾರಣವು ತಿಳಿಸಲ್ಪಟ್ಟಿತು. **ಮುನ್ನಮ್ ಅದಿಲಾ ಶೈದನ್ಯೆ** – ಆರಂಭದಲ್ಲೇ ಅದರಲ್ಲಿ ಆಸೆಯನ್ನು **ವಿಡುಕೈತಿಣ್ಮೈ** – ಬಿಟ್ಟುಬಿಡುವುದು ಶ್ರೇಷ್ಠವಾದದ್ದು. "ಸರ್ವಧರ್ಮಾನ್ ಪರಿತ್ಯಜ್ಯ" ಎಂಬುದಕ್ಕೆ "ತತ್ಪ್ರತ್ಯಾಶಾ ಪ್ರಶಮನ ಪರತ್ವವು", ಹೇಳಲ್ಪಟ್ಟಿತು. **ಶರಣನೆರಿ**– **ಶರಣಾ**ಗತಿ ರೂಪವಾದ ಉಪಾಯವು, **ವೇರೋರ್ ಕೂಟ್ಟು ವೇಂಡಾದು** – ಆನುಕೂಲ್ಯಸಂಕಲ್ಪಾದ್ಯಂಗ **ಪಂಚಕ** ಪರಿಕರವನ್ನು ಬಿಟ್ಟು ಬೇರೆ ಯಾವ ಪರಿಕರವನ್ನೂ ಅಪೇಕ್ಷಿಸುವುದಿಲ್ಲ. ಇದರಿಂದ ಸರ್ವಧರ್ಮಾನ್ ಪರಿತ್ಯಜ್ಯ ಎಂಬುದಕ್ಕೆ "ಅನಂಗಭಾವೋಧರ್ಮಾಣಾಮ್" ಎಂಬ ಅರ್ಥವು ತಿಳಿಸಲ್ಪಟ್ಟಿತು. **ವೇಂಡಿಲ್ ಅಯಸ ತ್ತಿರಮ್ ಪೋಲ್ ವೆಳ್‌ಹಿನಿರ್ಕುಮ್** – ಹಾಗೆ ಇತರ ಪರಿಕರಗಳನ್ನು ಸ್ವಬುದ್ಧಿಯಿಂದ ಸೇರಿಸಿಕೊಂಡರೆ, ಬ್ರಹ್ಮಾಸ್ತ್ರದ ಹಾಗೆ,ಪ್ರಪತ್ತಿಯುಫಲವನ್ನು ಸಾಧಿಸಿಕೊಡದೆ ಬಿಟ್ಟು ಹೋಗುತ್ತದೆ.(ವೆಳ್‌ಹಿ–ಬಿಟ್ಟು)ಆಂಜನೇಯನನ್ನು ಕಟ್ಟಿ ಹಾಕಿದ ಬ್ರಹ್ಮಾಸ್ತ್ರವು, ರಾಕ್ಷಸರು ತಿಳಿವಳಿಕೆಯಿಲ್ಲದೆ ಹಗ್ಗಗಳಿಂದ ಆಂಜನೇಯನನ್ನು ಕಟ್ಟಿಹಾಕಲು ಬಿಟ್ಟು ಹೋಯಿತು. **ನೀಂಡಾಹುಮ್** – ಚಿರಕಾಲ ಸಾಧ್ಯವಾದ, **ನಿರೈಮದಿಯೋರ್** – ಭಕ್ತಿಯೋಗವನ್ನು ಅನುಷ್ಠಿಸಲು ಪೂರ್ಣಜ್ಞಾನಿಗಳ, **ನೆರಿಯಿಲ್** – ಮಾರ್ಗದಲ್ಲಿ **ಕೂಡಾ** – ಸೇರದಿರುವ, ಅಕಿಂಚನನಾದ ನೀನು, ಇದರಿಂದ "ಸರ್ವಧರ್ಮಾನ್ ಪರಿತ್ಯಜ್ಯ ಸ್ಥಿತಸ್ತ್ವಂ", ಎಂಬ ಅಶಕ್ತಾಧಿಕಾರತ್ವವು ಸೂಚಿತ. **ನಿನ್ ತನಿಮೈ** – ನಿನ್ನ ಅಸಹಾಯತೆ ಅಂದರೆ ಆಕಿಂಚನ್ಯತ್ವವನ್ನು **ತುಣೈಯಾಹ** –ಸಹಕಾರಿಯಾಗಿ ಕೊಂಡು, "ಆಕಿಂಚನ್ಯ ಪುರಸ್ಕ್ರಿಯಾ" ಎಂಬುದರ ಅರ್ಥ, **ಎನ್ತನ್** – ನನ್ನ **ಪಾದಮ್** – ಶ್ರೀಪಾದಗಳನ್ನು, **ಪೂಂಡಾಲ್** – ಶರಣವಾಗಿ ಆಶ್ರಯಿಸಿದರೆ, ಇದರಿಂದ, "ಮಾಮೇಕಂ ಶರಣಂ ವ್ರಜ." ಎಂಬುದರ ಅರ್ಥವು ದ್ಯೋತಿತ;

**ಅಥ "ಮಾಂ"ಮಿತಿ ಪದಸ್ಯ ತಥಾ ಉತ್ತರಾರ್ಧಸ್ಯ "ಅಹಂ" ಶಬ್ದಸ್ಯ ಚ ಅರ್ಥಮಾಹ.**

ಇಙ್ಗೇ ಮಾಮಹಂ" ಎನ್ಗಿರ ಪದಙ್ಗಳುಕ್ಕು ಅಡೈವೇ "ಅವತಾರ ರಹಸ್ಯತ್ತಿಲುಮ್"ಪುರುಷೋ- ಮತ್ವ ಪ್ರತಿಪಾದನ ಪ್ರಕರಣತ್ತಿಲುಮ್" ಶೊಲ್ಲುಹಿರಪಡಿಯೇ ಸೌಲಭ್ಯತ್ತಿಲುಮ್ ಸ್ವಾತಂತ್ರ್ಯತ್ತಿಲುಮ್ ಪ್ರಾಧಾನ್ಯೇನ ನೋಕ್ಕು.

ಅವತಾರಸ್ಯ ಸತ್ಯತ್ವ ಮಜಹತ್ಸ್ವ ಸ್ವಭಾವತಾ ।
ಶುದ್ಧ ಸತ್ವಮಯತ್ವಂಚ ಸ್ವೇಚ್ಛಾ ಮಾತ್ರ ನಿದಾನತಾ ॥142॥

---

ಉನ್ ಪಿ-॥ ಹಳೆಲ್ಲಾಮ್ – ನಿನ್ನ ಪಾಪಗಳನ್ನೆಲ್ಲಾ ಪೊರುಪ್ಪೇನೆನ್ರ – ಕ್ಷಮಿಸುತ್ತೇನೆಂದು ಹೇಳಿದ, ಇದರಿಂದ "ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂಬುದರ ಅರ್ಥವು ಸೂಚಿತ. **ಪುಣ್ಣಿಯನಾರ್** ಕೃಷ್ಣಂ ಧರ್ಮಂ ಸನಾತನಂ' ಎಂದು ಕೊಂಡಾಡಲ್ಪಟ್ಟ, ಪುಣ್ಯಸ್ವರೂಪನಾದ ಕೃಷ್ಣ ಪರಮಾತ್ಮನ, **ಪುಹಳ್ಗಳೈ ತ್ತುಮ್**-ಎಲ್ಲಾ ಕಲ್ಯಾಣಗುಣಗಳನ್ನೂ, ಪುಹಳ್ವೋಮೇ-ಸ್ತೋತ್ರ ಮಾಡೋಣ.

### "ಮಾಮ್ ಅಹಂ" ಎಂಬ ಪದಗಳಿಗೆ ಅರ್ಥ.

"ಇಂಗುಮಾಮ್ ಅಹಂ" ಇತ್ಯಾದಿ-ಅನಂತರ ಮಾಮೇಕಂ" ಎಂಬ ಪದಗಳಲ್ಲಿ ಅರ್ಥವನ್ನು ಹೇಳುವವರಾಗಿ ಸೌಕರ್ಯಾರ್ಥವಾಗಿ **"ಮಾಮ್ ಅಹಂ"** ಎಂಬ ಪದಗಳಿಗೆ ಒಂದಾಗಿ ಅರ್ಥವನ್ನು ಅನುಗ್ರಹಿಸುತ್ತಾರೆ. ಅದಾಗಿ ಈ ಚರಮ ಶ್ಲೋಕದಲ್ಲಿ **"ಮಾಂ ಅಹಂ"** ಎಂಬ ಪದಗಳಿಗೆ **ಅಡೈವೇ**-ಕ್ರಮವಾಗಿ, ಅವತಾರರಹಸ್ಯ ಪ್ರಕರಣದ ಲ್ಲಿಯೂ (ಗೀತೆ 4ನೇ ಅಧ್ಯಾಯ) ಪುರುಷೋತ್ತಮತ್ವ ಪ್ರತಿಪಾದಕತ್ವ ಪ್ರಕರಣದಲ್ಲಿಯೂ [ಗೀತೆ 15ನೇ ಅಧ್ಯಾಯ] ಹೇಳುವ ಪ್ರಕಾರ ಸೌಲಭ್ಯದಲ್ಲಿಯೂ, ಸ್ವಾತಂತ್ರ್ಯದಲ್ಲಿಯೂ ಪ್ರಾಧಾನ್ಯೇನ ದೃಷ್ಟಿ. **"ಮಾಂ"** ಎಂದು ಸೌಲಭ್ಯ, ಅಹಂ ಎಂದು ಸ್ವಾತಂತ್ರ್ಯವು ಸೂಚಿತ.

### ಅವತಾರ ರಹಸ್ಯ ಜ್ಞಾನ ಅದರ ಫಲ.

ಅನಂತರ ಅವತಾರ ರಹಸ್ಯ ಜ್ಞಾನವನ್ನೂ ಅದರ ಫಲವನ್ನೂ "ಅವತಾರಸ್ಯಸತ್ಯತ್ವಂ" ಎಂದಾರಂಭಿಸಿ ತಿಳಿಸು ತ್ತಾರೆ. ಅದಾಗಿ 1] ಭಗವಂತನ ಅವತಾರಗಳು ಪರಮಾರ್ಥಗಳು- ನಿಜ, ಇಂದ್ರಜಾಲ ವಿದ್ಯೆಯಂತೆ ಸುಳ್ಳಲ್ಲ. ಅವತಾರ ಜ್ಞಾನದಿಂದ ಸಂಸಾರ ಬಂಧ ನಿವೃತ್ತಿಯು ಏರ್ಪಡುವುದರಿಂದ ಅದು ಸತ್ಯ. ಮಿಥ್ಯೆಯಲ್ಲ. ಮಿಥ್ಯಾ ಜ್ಞಾನದಿಂದ ಬಂಧನ ನಿವೃತ್ತಿಯು ಏರ್ಪಡಲಾರದು. "ಬಹೂನಿಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ" ಎಂದು ಅರ್ಜುನನ ಜನ್ಮಗಳ ಹಾಗೆ ಭಗವಂತನ ಜನ್ಮ-ಅವತಾರಗಳಿಗೂ, ಅತೀತತ್ವವನ್ನು-ಕಳೆದು ಹೋದದ್ದನ್ನು, ಹೇಳು ವುದರಿಂದ ಭಗವದವತಾರಗಳು ಮಿಥ್ಯೆಯಲ್ಲವೆಂದರ್ಥ. **ಅಜಹತ್ಸ್ವ ಸ್ವಭಾವತಾ**-ಅವತಾರ ದಶೆಯಲ್ಲೂ ಸ್ವಾಭಾ ವಿಕವಾದ ಸರ್ವಜ್ಞತ್ವಾದಿಗಳನ್ನೂ ಅಪ್ರಾಕೃತ ದಿವ್ಯಮಂಗಳ ವಿಗ್ರಹತ್ವಾದಿಗಳನ್ನೂ ಬಿಡದಿರುವ ಸ್ವಭಾವವುಳ್ಳವನು.

"ಅಜೋಽಪಿಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ ॥"

ಎಂದು ಗೀತಾಚಾರ್ಯನು ತಾನೇ ಹೇಳಿರುತ್ತಾನೆ **ಶುದ್ಧ ಸತ್ವ ಮಯತ್ವಂಚ**-ರಜಸ್ತಮೋ ಗುಣಗಳಿಂದ ಮಿಶ್ರ ವಲ್ಲದ ಶುದ್ಧ ಸತ್ವ ಪ್ರಚುರವಾದ ದಿವ್ಯಮಂಗಳ ವಿಗ್ರಹವುಳ್ಳವನು. "ಜನ್ಮ ಕರ್ಮಚ ಮೇ ದಿವ್ಯಂ" ಎಂಬ ಶ್ಲೋಕದ ಅರ್ಥ. **ಸ್ವೇಚ್ಛಾಮಾತ್ರನಿದಾನತಾ**-ತನ್ನ ಸಂಕಲ್ಪವೇ ಕಾರಣವಾಗಿ, ಅವತಾರ ಮಾಡುವವನು. ಬದ್ಧಜೀವನ ಹಾಗೆ ಕರ್ಮವು ಕಾರಣವಲ್ಲವೆಂದರ್ಥ. ಮಾತ್ರ ಪದದಿಂದ ಕರ್ಮವ್ಯಾವೃತ್ತಿ. "ಮಾಯಾ" ಪದವು ಮಿಥ್ಯೆ ಎಂಬ ಅರ್ಥವನ್ನು ತಿಳಿಸುವುದಿಲ್ಲ. ವೇದ ನಿಘಂಟುವಿನಲ್ಲಿ "ಮಾಯಾವಯುನಂ ಜ್ಞಾನಂ" ಎಂದು

ಧರ್ಮಗ್ಲಾನೌ ಸಮುದಯಃ ಸಾಧುಸಂರಕ್ಷಣಾರ್ಥತಾ ।
ಇತಿ ಜನ್ಮರಹಸ್ಯಂ ಯೋ ವೇತ್ತಿ ನಾಸ್ಯ ಪುನರ್ಭವಃ ॥143॥

ಭಕ್ತ ಪ್ರಪನ್ನಯೋರವತಾರ ರಹಸ್ಯಜ್ಞಾನಸ್ಯ ಪ್ರಯೋಜನಮಾಹ.

ಇವ್ವವತಾರ ರಹಸ್ಯಜ್ಞಾನಮ್ ಸದ್ವಾರಕ ಪ್ರಪತ್ತಿ ನಿಷ್ಠನುಕ್ಕು ಉಪಾಯಪೂರಕಮ್. ಸ್ವತಂತ್ರ ಪ್ರಪತ್ತಿ ನಿಷ್ಠನುಕ್ಕು ಸ್ವತಂತ್ರನುಡೈಯ ಸೌಲಭ್ಯತ್ತೈಕ್ಕಾಟ್ಟುಮ್. ಇ ಪ್ರಕರಣಙ್ಗಳಿರಣ್ಡಿಲ್ ಸಿದ್ಧಮಾನ ಸೌಲಭ್ಯಮುಮ್, ಸ್ವಾತಂತ್ರ್ಯಮುಮ್, ಒನ್ರುಕ್ಕೊನ್ರು ತುಣೈಯಾಯಿರುಕ್ಕುಮ್.

ಸ್ವತಂತ್ರಸ್ಯ ದೌರ್ಲಭ್ಯೇ ಆಶ್ರಯಣಮೇವ ನ ಘಟತೇ. ಸುಲಭಸ್ಯಾಸ್ವಾತಂತ್ರ್ಯತ್ವೇ ಆಶ್ರಯಣಫಲಂ ನಾಸ್ತಿ.

ಸ್ವತಂತ್ರಸ್ಯಾಪಿ ನೈವಸ್ಯಾದಾಶ್ರಯೋ ದುರ್ಲಭಸ್ಯತು ।
ಅಸ್ವತಂತ್ರಾತ್ಫಲಂ ನಸ್ಯಾತ್ಸುಲಭಾದಾಶ್ರಿತಾದಪಿ ॥144॥

---

ಮಾಯಾ ಶಬ್ದಕ್ಕೆ ಜ್ಞಾನವು ಅರ್ಥವೆಂದು ಹೇಳಲ್ಪಟ್ಟಿದೆ. **ಧರ್ಮಗ್ಲಾನೌ ಸಮುದಯಃ**–

"ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।

ಅಭ್ಯುತ್ಥಾನಮ ಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥"

ಎಂದು ಹೇಳಿರುವಂತೆ ಧರ್ಮಕ್ಕೆ ಗ್ಲಾನಿಯೂ ಏರ್ಪಟ್ಟು ಅಧರ್ಮವು ಹೆಚ್ಚಿದಾಗಿ ಭಗವಂತನು ಅವತರಿಸುತ್ತಾನೆ. **ಸಾಧು ಸಂರಕ್ಷಣಾರ್ಥತಾ**–ಸಾಧುಗಳನ್ನು ಕಾಪಾಡುವುದೇ ಮುಖ್ಯ ಉದ್ದೇಶ್ಯ. ದುಷ್ಟರ ನಾಶವು ಆನುಷಂಗಿಕ. "ಪರಿತ್ರಾಣಾಯ ಸಾಧೂನಾಂ" ಎಂದು ಸಾಧು ಸಂರಕ್ಷಣವನ್ನು ಮೊದಲು ಹೇಳಿ, "ದುಷ್ಕೃದ್ವಿನಾಶಾಯಚ", ಎಂದು ಅನ್ವಾಚಯಾರ್ಥಕವಾದ "ಚ" ಶಬ್ದದೊಡನೆ ದುಷ್ಟರ ವಿನಾಶವನ್ನು ಹೇಳಿರುವದರಿಂದ ಈ ಅರ್ಥವು ದ್ಯೋತಿತ. **ಇತಿಜನ್ಮ ರಹಸ್ಯಂ** ಹೀಗೆ ಜನ್ಮ ರಹಸ್ಯವನ್ನು **ಯೋವೇತ್ತಿ ನಾಸ್ಯ ಪುನರ್ಭವಃ**–ಯಾರು ತಿಳಿದಿರುತ್ತಾನೋ ಅವನಿಗೆ ಪುನಸ್ಸಂಸಾರವೆಂಬುದು ಇಲ್ಲ. ಪುನಃ ಜನಿಸದೇ ಒಂದೇ ಜನ್ಮದಲ್ಲಿ ಮೋಕ್ಷವನ್ನು ಪಡೆಯುತ್ತಾನೆಂದು

"ಜನ್ಮ ಕರ್ಮಚ ಮೇ ದಿವ್ಯಂ ಏವಂ ಯೋವೇತ್ತಿ ತತ್ವತಃ ।

ತ್ಯಕ್ತ್ವಾದೇಹಂ ಪುನರ್ಜನ್ಮನೈತಿ ಮಾಮೇತಿ ಸೋಽರ್ಜುನ ॥"

ಎಂಬ ಗೀತಾ ಶ್ಲೋಕದಲ್ಲಿ ಹೇಳಲ್ಪಟ್ಟಿದೆ.

**ಇವ್ವವತಾರ ರಹಸ್ಯಜ್ಞಾನಂ**–ಇತ್ಯಾದಿ–ಈ ಅವತಾರ ರಹಸ್ಯದ ಜ್ಞಾನವು ಸದ್ವಾರಕ ಪ್ರಪತ್ತಿ ನಿಷ್ಠನಿಗೆ–ಅಂದರೆ ಭಕ್ತಿಯೋಗ ನಿಷ್ಠನಿಗೆ ಜನ್ಮಾಂತರ ಹೇತುಭೂತಗಳಾದ ಪಾಪಗಳನ್ನು ಹೋಗಲಾಡಿಸಿ ಅದೇ ಜನ್ಮದಲ್ಲಿ ಅಂತಿಮ ಪ್ರತ್ಯಯಾವಧಿಯಾದ ಉಪಾಯ ಪೂರ್ತಿಯನ್ನುಂಟು ಮಾಡಿ ಮೋಕ್ಷಕ್ಕೆ ಸಹಕರಿಸುತ್ತದೆ. **ಸ್ವತಂತ್ರ ಪ್ರಪತ್ತಿನಿಷ್ಠನುಕ್ಕು** ಇತ್ಯಾದಿ-ಸ್ವತಂತ್ರ ಪ್ರಪತ್ತಿ ನಿಷ್ಠನಿಗೆ ಸ್ವತಂತ್ರನಾದ ಭಗವಂತನ ಸೌಲಭ್ಯವನ್ನು ತಿಳಿಯ ಪಡಿಸಿ ಪ್ರಪತ್ತ್ಯನುಷ್ಠಾನಕ್ಕೆ ಕಾರಣವಾಗುತ್ತದೆ. **ಇಪ್ಪ್ರಕರಣಂಗಳಿರಂಡಿಲ್**–ಇತ್ಯಾದಿ ಈ ಎರಡು ಪ್ರಕರಣ ಗಳಲ್ಲಿಯೂ ಸಿದ್ಧವಾದ ಸೌಲಭ್ಯವೂ ಸ್ವಾತಂತ್ರ್ಯವೂ ಅಶ್ರಯಣೀಯ ದಶೆಯಲ್ಲಿಯೂ, ಫಲವನ್ನು ಕೊಡುವ ದಶೆ ಯಲ್ಲೂ ಒಂದಕ್ಕೊಂದು ಸಹಕಾರವಾಗಿ ಇರುವುವು.

ಸ್ವಾತಂತ್ರ್ಯ ಸೌಲಭ್ಯವೂ ಒಂದು ಗೂಡದೆ ಇದ್ದರೆ, ಆಶ್ರಯಿಸುವುದಕ್ಕೂ ಫಲವನ್ನು ಕೊಡುವುದಕ್ಕೂ ಉಪಕಾರಿಯಾಗುವುದಿಲ್ಲವೆಂದು **"ಸ್ವತಂತ್ರಸ್ಯಾಪಿ ನೈವಸ್ಯಾತ್"** ಎಂದು ಆರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಫಲಪ್ರದಾನದಲ್ಲಿ ಸ್ವತಂತ್ರನು ದುರ್ಲಭನಾದರೆ ಅವನನ್ನು ಆಶ್ರಯಿಸಲಾಗುವುದಿಲ್ಲ. **ಅಸ್ವತಂತ್ರಾತ್**–ಇತ್ಯಾದಿ

ಅಸ್ವತಂತ್ರೇ ನ ಕೈಙ್ಕರ್ಯಂ ಸಿದ್ಧ್ಯೇತ್ಸ್ವೈರ ಪ್ರಸಂಗತಃ ।
ದುರ್ಲಭೇ ಸಾಧ್ಯಮಪ್ಯೇತನ್ನ ಹೃದ್ಯಂ ಲೋಕ ನೀತಿತಃ ॥145॥

ಆಹೈಯಾಲೇ ಕೇವಲ ಸುಲಭಮಾನ ತೃಣಾದಿಹಳೈಪ್ಪೋಲನ್ರಿಕ್ಕೇ ಶ್ಲಾಘ್ಯನುಮಾಯ್ ದುರ್ಲಭಮಾನ ಮೇರುವೈಪ್ಪೋಲುಮನ್ರಿಕ್ಕೇ ಸುಲಭನುಮಾಯ್ ಪರನುಮಾನ ಶರಣ್ಯನ್ ಆಶ್ರಯಣೀಯನುಮಾಯ್ ಪ್ರಾಪ್ಯನು ಮಾಹಿರಾನ್.

ಇವ್ವಿರಣ್ಡು ಪದತ್ತಿಲುಮ್ ಸರ್ವರಕ್ಷಕನಾನ ಸರ್ವಶೇಷೀ ರಕ್ಷಣತ್ತುಕ್ಕು ಅವಸರಂ ಪಾರ್ತ್ತು ನಿರ್ಕ್ಕಿರ ನಿಲೈತೋತ್ತುಹಿರದು. 1 "ರಕ್ಷಾಪೇಕ್ಷಾಂ ಪ್ರತೀಕ್ಷತೇ" ಎನ್ಗಿರಪಡಿಯೇ ಎನ್ರೋ ನಮ್ಮೈ ಇವರ್ ಹಳ್ ಅಪೇಕ್ಷಿಪ್ಪದೆನ್ಗಿರ ಅಭಿಪ್ರಾಯತ್ತಾಲೇ ಅಭಿಮುಖನಾಯ್ ನಿರ್ಕ್ಕಿರ ನಿಲೈ "ಮಾಂ" ಎನ್ಗಿರ ಪದತ್ತಾಲೇ ಸೂಚಿತಮ್. ಎನ್ರುನಾಮ್ ಇವರ್ಹಳೈ ಆಟ್ಕೊಳ್ಳುಕ್ಕ ತ್ತಿನ ಅಭರಣತ್ತೈಪ್ಪೋಲೇ ಅಂಗೀಕರಿಪ್ಪದು

---

ಒಬ್ಬನು ಸುಲಭನಾಗಿ ಆಶ್ರಯಿಸಲ್ಪಟ್ಟರೂ ಫಲ ಪ್ರದಾನದಲ್ಲಿ ಸ್ವತಂತ್ರನಲ್ಲದಿದ್ದರೆ, ಅನಿಷ್ಟ ನಿವೃತ್ತಿ ಪೂರ್ವಕ ಇಷ್ಟ ಪ್ರಾಪ್ತಿರೂಪ ಫಲವು ಅವನಿಂದ ಲಭಿಸಲಾರದು. **ಅಸ್ವತಂತ್ರೇನ ಕೈಂಕರ್ಯಂ**-ಇತ್ಯಾದಿ-ಮೇಲೂ ಅಸ್ವತಂತ್ರನ ವಿಷಯದಲ್ಲಿ ಕೈಂಕರ್ಯವು ಸಿದ್ಧಿಸುವುದಿಲ್ಲ. ಏಕೆಂದರೆ ಸಾಧುಗಳಾದ ಕೆಲವರಿಗೆ ವಿಶ್ವಾಸದಿಂದ ಕೈಂಕರ್ಯವು ಸಿದ್ಧಿಸಿದರೂ, ಕಠಿಣ ಸ್ವಭಾವವುಳ್ಳವನಿಗೆ ಅಸ್ವತಂತ್ರನಲ್ಲಿ ಭಯವಿಲ್ಲದಿರುವುದರಿಂದ ಸ್ವೇಚ್ಛೆಯಾಗಿರಲು ಅಪೇಕ್ಷೆಯು ಏರ್ಪಟ್ಟು, ಕೈಂಕರ್ಯವು ಸಿದ್ಧಿಸುವುದಿಲ್ಲ. ದುರ್ಲಭನಾದ ಪುರುಷನ ಹತ್ತಿರ, ಸ್ವೈರ ಪ್ರಸಂಗವಿಲ್ಲದ ಕೈಂಕರ್ಯವು ಸಾಧ್ಯವಾದರೂ, ಕಠಿಣನಾದ ರಾಜನ ಹತ್ತಿರ ಕ್ಲೇಶದಿಂದ ಭೃತ್ಯರು ಮಾಡುವ ಕೈಂಕರ್ಯ -ಸೇವೆಯ ಹಾಗೆ ಮನಸ್ಸಿಗೆ ತೃಪ್ತಿಕರವಾಗಲಾರದು. ಇದು ಲೋಕ ನೀತಿಯನ್ನು ಅನುಸರಿಸಿದೆ.

**ಆಹೈಯಾಲೇ** ಇತ್ಯಾದಿ-ಆದಕಾರಣ ಕೇವಲ ಸುಲಭವಾದ **ತೃಣಾದಿ** -ಹುಲ್ಲುಕಡ್ಡಿ ಮೊದಲಾದವುಗಳಂತೆ ಇಲ್ಲದೆಯೂ ಶ್ಲಾಘ್ಯವಾಗಿ ದುರ್ಲಭವಾದ ಮೇರು ಪರ್ವತದ ಹಾಗೆ ಇಲ್ಲದೆಯೂ ಸುಲಭನಾಗಿಯೂ, ಪರ-ಮೇಲಾದವನಾಗಿಯೂ ಇರುವ ಶರಣ್ಯನು ಆಶ್ರಯಣೀಯನಾಗಿಯೂ ಪ್ರಾಪ್ಯನಾಗಿಯೂ ಆಗುತ್ತಾನೆ.

**ಇವ್ವಿರಂಡು ಪದತ್ತಿಲುಮ್**-"ಶರಣ"ಶಬ್ದದೊಡನೆ ಕೂಡಿದ "ಮಾಂ' ಎಂಬ ಪದದಲ್ಲಿ ಸರ್ವರಕ್ಷಕತ್ವವು ವಿವಕ್ಷಿತ. "**ಮೋಕ್ಷಯಿಷ್ಯಾಮಿ**" ಎಂಬ ಪದದೊಡನೆ ಕೂಡಿದ "**ಅಹಂ**" ಎಂಬ ಪದದಲ್ಲಿ ಸರ್ವಶೇಷಿತ್ವವು ವಿವಕ್ಷಿತ. ಹೀಗೆ ಸರ್ವರಕ್ಷಕನಾದ ಸರ್ವಶೇಷಿಯು ರಕ್ಷಣಕ್ಕೆ **ಅವಸರ**-ಸಕಾಲವನ್ನು ನೋಡಿಕೊಂಡು ಇರುವ **ನಿಲೈಯುಮ್**-ಸ್ಥಿತಿಯೂ ತೋರುತ್ತದೆ. **ಇಪ್ಪಡಿ** ಇತ್ಯಾದಿ-ಹೀಗೆ ಅವಸರ ಪ್ರತೀಕ್ಷನಾದ **ಈ**ಶ್ವರನು 1) "**ರಕ್ಷಾಪೇಕ್ಷಾಂ ಪ್ರತೀಕ್ಷತೇ**" ಎಂಬಂತೆ, ಯಾವತ್ತಿಗೆ ಈ ಬದ್ಧ ಜೀವಿಗಳು ನಮ್ಮನ್ನು ಅಪೇಕ್ಷಿಸುತ್ತಾರೆಂಬ ಅಭಿಪ್ರಾಯದಿಂದ ಅಭಿಮುಖನಾಗಿ ನಿಂತಿರುವ ಸ್ಥಿತಿಯು "ಮಾಂ" ಎಂಬ ಪದದಲ್ಲಿ ಸೂಚಿತವು. **ಎನ್ರುನಾಮ್ ಇವರ್ಹಳೈ** ಇತ್ಯಾದಿ

---

1) ಲಕ್ಷ್ಮೀತಂತ್ರ 17-78 ಸರ್ವಜ್ಞೋಽಪಿಹಿ ವಿಶ್ವೇಶಃ ಸದಾ ಕಾರುಣಿಕೋಽಪಿಸನ್ ।
ಸಂಸಾರ ತಂತ್ರವಾಹಿತ್ವಾತ್ ರಕ್ಷಾಪೇಕಾಂ ಪ್ರತೀಕ್ಷತೇ ॥

ಭಗವಂತನು ಸರ್ವಜ್ಞನಾಗಿದ್ದರೂ ಸದಾ ಕರುಣೆಯಿಂದ ಕೂಡಿದವನಾಗಿದ್ದರೂ, ಸಂಸಾರ ತಂತ್ರ-ಕರ್ಮಾನುಗುಣವಾಗಿ ಫಲಪ್ರದನಾದ್ದರಿಂದ ವೈಷಮ್ಯನೈರ್ಘೃಣ್ಯಾದಿ ದೋಷಗಳು ಬಾರದಿರಲು ರಕ್ಷಾಪೇಕ್ಷಾಂ-"ನನ್ನನ್ನು ರಕ್ಷಿಸು" ಎಂಬ ಅಪೇಕ್ಷೆಯನ್ನು ಎದುರು ನೋಡುತ್ತಾನೆ.

ಎನ್ಗಿರ ಅಭಿಪ್ರಾಯತ್ತಾಲೇ ಸತ್ವರನಾಯ್ ತನ್ ಪೇರಾಹ ಫಲಂ ಕೊಡುಕ್ಕ ನಿರ್ಕಿರನಿಲೈ "ಅಹಂ" ಎನ್ಗಿರ ಪದತ್ತಾಲೇ ಕಾಟ್ಟಪ್ಪಡುಹಿರದು.

"ಮಾಮೇಕಂ" ಸಿದ್ಧೋಪಾಯ ಪ್ರದರ್ಶನಪರಂ. "ಅಹಂ" ಸಾಧ್ಯೋಪಾಯೇನ
ಪ್ರಸನ್ನೇಶ್ವರಸ್ಯ ಫಲಪ್ರದಾತೃತ್ವಪರಮ್.

ಇಪ್ಪಡಿ ಅಕಿಂಚನನಾನ ಅಧಿಕಾರಿಕ್ಕು ಯಥಾವಿಧಿ ರಕ್ಷಾಪೇಕ್ಷಾ ಪೂರ್ವಕ ಭರನ್ಯಾಸತ್ತೈಯೊಳಿಯ ವೇರೊನ್ರಾಲ್ ಅಪೇಕ್ಷೈಯಿಲ್ಲಾದ ಸಿದ್ಧೋಪಾಯತ್ತೈ "ಮಾಮೇಕಂ" ಎನ್ರು ಕಾಟ್ಟಿ ಅದಿನುಡೈಯ ವಶೀಕರಣಾರ್ಥಮಾನ ಸಾಧ್ಯೋಪಾಯತ್ತೈ 'ಶರಣಂ ವ್ರಜ' ಎನ್ರು ವಿಧಿಯಾಲೇ ಕಾಟ್ಟುಹಿರದು. ಇಪ್ಪಡಿ ವಿಧಿಕ್ಕಿರ ಪ್ರಪತ್ತಿರೂಪ ವಿದ್ಯೈಕ್ಕು ಶರಣ್ಯ ಪ್ರಸಾದನಮಾಹ ಚೋದಿತತ್ವತ್ತಾಲೇ ವರುಹಿರ ಉಪಾಯತ್ವಮ್ ಭಕ್ತಿಯೋಡು ತುಲ್ಯಮ್. ಇದನಾಲೇ ಪ್ರಸನ್ನನಾನ ಈಶ್ವರನ್ ಮೋಕ್ಷತ್ತುಕ್ಕು ಸಾಕ್ಷಾದುಪಾಯಮ್

"ಮಾಮೇಕ" ಮಿತ್ಯತ್ರ ವೇದ್ಯಾಕಾರಾಣಿ ಸರ್ವಾಣ್ಯಾಹ.

ಇವ್ವಿದ್ಯೈಕ್ಕು ವಿಶೇಷಿತ್ತ ವೇದ್ಯಾಕಾರಮ್ ನಿರಪೇಕ್ಷೋಪಾಯತ್ವಮ್.

---

ಯಾವತ್ತಿಗೆ ನಾವು ಇವರನ್ನು ಕೊಳೆಯನ್ನು ನೀಗಿಸಿದ ಆಭರಣದ ಹಾಗೆ ಅಂಗೀಕರಿಸುವುದೆಂಬ ಅಭಿಪ್ರಾಯದಿಂದ **ಸತ್ವರನಾಯ್**–ತ್ವರೆಯಿಂದ ಕೂಡಿದವನಾಗಿ **ತನ್ ಪೇರಾಹ**–ತನ್ನ ಪ್ರಯೋಜನಕ್ಕೋಸ್ಕರ ಫಲವನ್ನು ಕೊಡಲು ನಿಂತಿರುವ ಸ್ಥಿತಿಯು, "ಅಹಂ" ಎಂಬ ಪದದಲ್ಲಿ ತಿಳಿಸಲ್ಪಡುತ್ತದೆ.

**ಇಪ್ಪಡಿ ಅಕಿಂಚನನಾನ ಅಧಿಕಾರಿಕ್ಕು** ಇತ್ಯಾದಿ – ಹೀಗೆ ಆಕಿಂಚನನಾದ ಅಧಿಕಾರಿಗೆ ಯಥಾವಿಧಿ ರಕ್ಷಾಪೇಕ್ಷಾ ಪೂರ್ವಕವಾದ ಭರನ್ಯಾಸವನ್ನು ಬಿಟ್ಟರೆ ಬೇರೆ ಯಾವುದರಿಂದಲೂ ಅಪೇಕ್ಷೆಯಿಲ್ಲದ ಸಿದ್ಧೋಪಾಯನಾದ ಭಗವಂತನು ತನ್ನನ್ನು "ಮಾಮೇಕಂ" ಎಂದು ತೋರಿಸಿ, ಆ ತನ್ನ ವಶೀಕರಣಾರ್ಥವಾಗಿ ಸಾಧ್ಯೋಪಾಯವನ್ನು "ಶರಣಂ ವ್ರಜ" – ಶರಣು ಹೋಗು ಎಂಬ ವಿಧಿಯಿಂದ ತೋರಿಸುತ್ತಾನೆ. **ಇಪ್ಪಡಿ ವಿಧಿಕ್ಕಿರ** ಇತ್ಯಾದಿ–ಹೀಗೆ ವಿಧಿಸುವ ಪ್ರಪತ್ತಿರೂಪ ವಿದ್ಯೆಗೆ **ಶರಣ್ಯಪ್ರಸಾದನ**–ಶರಣ್ಯನು ಪ್ರಸನ್ನನಾಗುವಂತೆ, ಚೋದಿತವಾದ್ದರಿಂದ ಏರ್ಪಡುವ ಉಪಾಯತ್ವವು **ಭಕ್ತಿಯೋಡು ತುಲ್ಯಮ್**–ಭಗವತ್ಪ್ರಸಾದ ಜನಕಗಳಾಗಿ ಚೋದಿತಗಳಾದ ಸದ್ವಿದ್ಯಾ, ದಹರವಿದ್ಯಾ ಮೊದಲಾದ ಭಕ್ತಿರೂಪ ವಿದ್ಯೆಗಳಿಗೆ ಸಮಾನವಾದದ್ದು.

**ಹೀಗೆ** ಪ್ರಪತ್ತಿಗೂ ಉಪಾಯತ್ವವನ್ನು ಅಂಗೀಕರಿಸಿದರೆ ಭಗವಂತನೇ ಉಪಾಯನೆಂಬ ಸಿದ್ಧೋಪಾಯತ್ವಕ್ಕೆ **ಕೊತ್ತೈ**-ನ್ಯೂನತೆಯು ಏರ್ಪಡುವುದಿಲ್ಲವೇ ಎಂದರೆ–**ಇದನಾಲೇ ಪ್ರಸನ್ನನಾನ ಈಶ್ವರನ್**–ಈ ಭಕ್ತಿ ಅಥವಾ ಪ್ರಪತ್ತಿಯಿಂದ ಪ್ರಸನ್ನನಾದ ಈಶ್ವರನು–ಲಕ್ಷ್ಮೀ ವಿಶಿಷ್ಟನು ಮೋಕ್ಷಕ್ಕೆ ಸಾಕ್ಷಾದುಪಾಯ. ಭಕ್ತಿ ವಿದ್ಯೆಗಳಲ್ಲಿ ಪ್ರತಿ ವಿದ್ಯೆಗೂ ವೇದ್ಯಾಕಾರ ಭೇದವಿರುವಂತೆ, ಇವ್ವಿದ್ಯೈಕ್ಕು–ಈ ಪ್ರಪತ್ತಿರೂಪ ವಿದ್ಯೆಗೂ ನಿರಪೇಕ್ಷೋಪಾಯತ್ವವು ವಿಶೇಷವಾದ ವೇದ್ಯಾಕಾರ. ನಿರಪೇಕ್ಷೋಪಾಯತ್ವವೆಂದರೆ, ಉಪಾಯಾಂತರ ಸ್ಥಾನಾಪನ್ನತ್ವವೆಂದು ಕೆಲವರು ವ್ಯಾಖ್ಯಾನ ಮಾಡಿರುತ್ತಾರೆ. ಇದು ಸರಿಯಲ್ಲ. "ತ್ವಮೇವೋಪಾಯ ಭೂತೋಮೇಭವ", "ತದೇಕೋಪಾಯತಾ ಯಾಂಚಾ" ಇಯಂ ಕೇವಲ ಲಕ್ಷ್ಮೀಶೋಪಾಯತ್ವ ಪ್ರತ್ಯಯಾತ್ಮಿಕಾ, ""ಉಪಾಯಾರ್ಥೈಕವಾಚಕಃ" ಇತ್ಯಾದಿ ಭಗವಂತನನ್ನೇ ಉಪಾಯವಾಗಿರುವಂತೆ ಪ್ರಾರ್ಥಿಸುವ ಪ್ರಮಾಣಗಳಿಗೆ ವಿರೋಧವಾಗುತ್ತದೆ. ಶರಣ ಶಬ್ದಕ್ಕೆ ಉಪಾಯವೆಂದರ್ಥವೇ ಹೊರತು, ಉಪಾಯಾಂತರಸ್ಥಾನ ನಿವಿಷ್ಟತ್ವವೆಂದರ್ಥವಲ್ಲ. ಆದ್ದರಿಂದ ಭಕ್ತಿಪ್ರಪತ್ತಿಗಳೆರಡೂ ಮುಖ್ಯ ಸಾಧನಗಳು. ನಿರಪೇಕ್ಷೋಪಾಯತ್ವವೆಂದರೆ, ಭಕ್ತ್ಯಾದಿಗಳನ್ನು ಅಪೇಕ್ಷಿಸದೆ, ಭಗವಂತನೇ ಉಪಾಯವೆಂದರ್ಥ.

ಆದಾಗಿ ಭಕ್ತಿ ಪ್ರಪತ್ತಿ ರೂಪಗಳಾದ ಎರಡು ವಿಧ ವಿದ್ಯೆಗಳೂ ಭಗವಂತನ ಕಾಲುಷ್ಯವನ್ನು ಹೋಗಲಾಡಿಸಿ ಅವನ ಪ್ರಸನ್ನತೆಯನ್ನುಂಟು ಮಾಡುತ್ತವೆ. ಇದರಿಂದಾಗಿ ಇವು ವ್ಯವಹಿತೋಪಾಯಗಳು – ವ್ಯಾಜರೂಪಗಳು. ಸಾಕ್ಷಾದುಪಾಯವು ಭಗವಂತನೇ ಎಂಬುದು ಸಿದ್ಧಾಂತ. ಈ ಅರ್ಥಗಳನ್ನು ಆಚಾರ್ಯರು ನ್ಯಾಸತಿಲಕದಲ್ಲಿ,

"ಹೇತುರ್ವೈಪೃಥೇ ವಿಮುಕ್ತೇರ್ ಭಜನವದಿತರತ್ ಕಿಂತ್ವನುಷ್ಠಾನಕಾಲೇ
ವೇದ್ಯಸ್ತದ್ರೂಪಭೇದೋ ವಿವಿಧಇಹ ಸತೂಪಾಯತಾನ್ಯಾನಪೇಕ್ಷಾ ।
ರಂಗಿನ್ ಪ್ರಾರಬ್ಧ ಭಂಗಾತ್ ಫಲಮಧಿಕ ಮನಾವೃತ್ತಿರುಕ್ತೇಽಪ್ಯವತ್ವಾಸ್ಯತ್
ನಾನಾ ಶಬ್ದಾದಿ ಭೇದಾತ್ ಪ್ರಪದನ ಭಜನೇ ಸೂತ್ರಿತೇ ಸೂತ್ರಕಾರೈಃ ॥"

[ನ್ಯಾಸತಿಲಕ 1 ಶ್ಲೋಕ] ಎಂದು ತಿಳಿಸಿರುತ್ತಾರೆ. ಆದಾಗಿ ಶಾಸ್ತ್ರವು ಭಕ್ತಿಯಹಾಗೆ ಪ್ರಪತ್ತಿಯನ್ನೂ ವಿಧಿಸಿರುತ್ತದೆ. ಅನುಷ್ಠಾನಸಮಯದಲ್ಲಿ ಪ್ರಪತ್ತಿಗೆ ವೇದ್ಯವಾದ ನಿರಪೇಕ್ಷೋಪಾಯತ್ವವು ವಿಶೇಷವಾದ ವೇದ್ಯಾಕಾರವಾದ್ದರಿಂದ ರೂಪಭೇದವು ಏರ್ಪಟ್ಟಿದೆ. ಪ್ರಾರಬ್ಧಕರ್ಮಾನಂತರ ಮೋಕ್ಷ. ಸೂತ್ರಕಾರರು "ನಾನಾ ಶಬ್ದಾದಿ ಭೇದಾತ್" ಎಂಬ ಸೂತ್ರದಲ್ಲಿ ಪ್ರಪದನ, ಭಜನಗಳೆರಡನ್ನೂ ಸೂತ್ರಿಸಿದ್ದಾರೆ. ಉಪಾಸೀತ, ಪ್ರಪದ್ಯೇತ, ಎಂದು ಭಜನ ಪ್ರಪದನಗಳು ಪರ್ಯಾಯ ಶಬ್ದಗಳಲ್ಲ. ಶಬ್ದಭೇದವು ಸ್ಪಷ್ಟ. ಪ್ರಪದನವು ಕ್ಷಣಿಕ ವ್ಯಾಪಾರ, ಭಜನವು ಆಜನ್ಮ ಮಾಡಬೇಕಾದದ್ದು. ಈ ಕಾರಣಗಳಿಂದ ಭಕ್ತಿ ಪ್ರಪತ್ತಿಗಳಿಗೆ ಪರಸ್ಪರ ವೈಲಕ್ಷಣ್ಯವಿದೆ.

ಭಕ್ತಿ ಪ್ರಪತ್ತಿಗಳೆರಡೂ ತುಲ್ಯ ಫಲಪ್ರದಗಳು ಎಂದು ಹೇಳಿರುವಾಗ, ಪ್ರಪತ್ತಿಯು ಭಕ್ತಿಸ್ಥಾನದಲ್ಲಿ ಭಗವಂತನನ್ನು ಇರಿಸುತ್ತದೆ ಎಂದರೆ ಪ್ರಪತ್ತಿಗೆ ಭಕ್ತಿಯಹಾಗೆ ಫಲಪ್ರದತ್ವವಿಲ್ಲವೆಂದು ಏರ್ಪಡುತ್ತದೆಯಾದ್ದರಿಂದ, **"ಇಪ್ರಪತ್ತಿರೂಪ ವಿದ್ಯೈಕ್ಕು-ಉಪಾಯತ್ವಂ ಭಕ್ತಿಯೋಡು ತುಲ್ಯಮ್"** ಎಂಬ ಶ್ರೀ ಸೂಕ್ತಿಗೆ ವಿರುದ್ಧವಾಗುತ್ತದೆ. "ವಿಕಲ್ಪೋಽವಿಶಿಷ್ಟ ಫಲತ್ವಾತ್" ಎಂಬ ಸೂತ್ರದ ಪ್ರಕಾರ ಭಕ್ತಿ, ಪ್ರಪತ್ತಿಗಳೆರಡಕ್ಕೂ ಫಲವು ಒಂದೇ ಎಂದು ಹೇತುವನ್ನು ಹೇಳಿ, ವಿಕಲ್ಪತ್ವವು ಹೇಳಲ್ಪಟ್ಟಿದೆ. ಪ್ರಪತ್ತಿಯು ಭಕ್ತಿ ಸ್ಥಾನದಲ್ಲಿ ಭಗವಂತನನ್ನು ಇರಿಸಿ ಉಪರತ ವ್ಯಾಪಾರವಾಗುತ್ತದೆಯೆಂದರೆ ಪ್ರಪತ್ತಿಗೆ ಭಕ್ತಿತುಲ್ಯವಾದ ಫಲತ್ವವಿಲ್ಲವೆಂದು ಏರ್ಪಡುತ್ತದೆ. ಎರಡು ವಿದ್ಯೆಗಳೂ ಸಾಕ್ಷಾತ್ ಭಗವತ್ ಪ್ರಸನ್ನತೆಯನ್ನು ಸಮಾನವಾಗಿ ಉಂಟು ಮಾಡುತ್ತವೆ. ಪ್ರಸನ್ನನಾದ ಭಗವಂತನು "ಮೋಕ್ಷಯಿಷ್ಯಾಮಿ" ಎಂದು ಸಂಕಲ್ಪಿಸುತ್ತಾನೆಂದು ಹೇಳುವುದು ಸರ್ವ ಶ್ರೀ ಸೂಕ್ತಿಗಳಿಗೂ ಸಮಂಜಸವಾದದ್ದು. "ಶರಣಾಗತಿ ರ್ಯಥಾವಸ್ಥಿತಾ ಅವಿರತಾಸ್ತುಮೇ" ಎಂಬ ಗದ್ಯ ಶ್ರೀ ಸೂಕ್ತಿಗೆ "ಅವಿರತಿಶ್ಶರಣಾಗತೇ ರಾಮೋಕ್ಷಲಾಭಾತ್ ಸ್ವಜನ್ಯ ಪ್ರಸಾದಾನುವೃತ್ತ್ಯಾ, ಎಂದು ಶ್ರೀ ಮದ್ರಹಸ್ಯ ರಕ್ಷೆಯಲ್ಲಿ ವ್ಯಾಖ್ಯಾನ ಮಾಡಿರುವುದೂ ಇಲ್ಲಿ ಗಮನಾರ್ಹ. ಪ್ರಪತ್ತಿಯು ಭಗವತ್ಪ್ರಸಾದ ಜನಕವಲ್ಲದಿದ್ದರೆ, ಅದಕ್ಕೆ ಮೋಕ್ಷ ಹೇತುತ್ವವು ಹೇಗೆ ಉಂಟಾಗುತ್ತದೆ. "ಪ್ರಪತ್ತ್ಯೈ ತಸ್ಯೋಕ್ತೇ ಪ್ರಪದನ ನಿಧಿಧ್ಯಾಸನಗತೀ" ಎಂದು ಭಕ್ತಿ ಪ್ರಪತ್ತಿಗಳೆರಡಕ್ಕೂ ತುಲ್ಯಫಲ ಸಾಧನತ್ವವು ಹೇಳಲ್ಪಟ್ಟಿರುವುದು ವಿರೋಧಿಸುತ್ತದೆ.

ಹಾಗಾದರೆ ಪ್ರಪನ್ನನಿಗೆ ಭಗವಂತನು ಉಪಾಯಾಂತರ ಸ್ಥಾನದಲ್ಲಿ ನಿಲ್ಲುತ್ತಾನೆಂಬ ಮಾತಿಗೆ ಏನರ್ಥವೆಂದರೆ ಅಂಗ ಪ್ರಪತ್ತಿ ಭಕ್ತಿಗಳಿಂದ ಸಾಧ್ಯವಾದ ಪರಮ ಪುರುಷಾರ್ಥವು ಪ್ರಪತ್ತಿ ಮಾತ್ರದಿಂದ ಅಕಿಂಚನನಿಗೆ ಲಭಿಸುತ್ತದೆ. ಎಂದರ್ಥ. ಅತ್ಯಂತಾಕಿಂಚನನ ವಿಷಯದಲ್ಲಿ ಶರಣ್ಯನ ಪರಮಕಾರುಣ್ಯಾತಿಶಯವೇ ಇದಕ್ಕೆ ನಿಯಾಮಕ. ಭಕ್ತಿರೂಪ ಗುರುತರವಾದ ಪ್ರಯತ್ನದಿಂದ ಪ್ರಸನ್ನನಾಗುವ ಪರಮಾತ್ಮನಿಗೆ ಲಘುತರವಾದ ಉಪಾಯದಿಂದ ಪ್ರಸನ್ನತೆಯು ಕಾರುಣ್ಯಾತಿಶಯದಿಂದ ಅಕಿಂಚನಾಧಿಕಾರಿಯ ವಿಷಯದಲ್ಲಿ ಏರ್ಪಡುತ್ತದೆ ಎಂಬ ಅಭಿಪ್ರಾಯದಿಂದ ಉಪಾಯಾಂತರ ಸ್ಥಾನ ನಿವೇಶತ್ವವು ಈ ಗ್ರಂಥದಲ್ಲಿಯೂ, ಶ್ರೀಮತ್ಸಾರಸಾರ, ವಿರೋಧಿ ಪರಿಹಾರ ಪ್ರಬಂಧಗಳಲ್ಲಿಯೂ ಸುವ್ಯಕ್ತವಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಪ್ರಪತ್ತಿಯು ಭಕ್ತಿಸ್ಥಾನದಲ್ಲಿ ಭಗವಂತನನ್ನು ಇರಿಸುತ್ತದೆ ಎಂಬ ಮಾತು ಔಪಚಾರಿಕ.

ಇದುಕ್ಕು ಉಪಾಯುಕ್ತಾಕಾರಙ್ಗಳೆಲ್ಲಾಮ್ "ಮಾಮೇಕಂ" ಪದಙ್ಗಳಿಲೇ ವಿವಕ್ಷಿತಙ್ಗಳ್. (1) "ವಿಷನಾರಾಯಣ ಶ್ರೀಮಾನ್" ಇತ್ಯಾದಿಹಳಿಲೇ ನಿರ್ದಿಷ್ಟ ಪ್ರಕಾರನಾನ ಶರಣ್ಯನೈ ಚ್ಚೊಲ್ಲುಹಿರ "ಮಾಮ್" ಎನ್ಗಿರ ಪದತ್ತಾಲೇ ತಿರುಮನ್ತ್ರತ್ತಿಲುಮ್ ದ್ವಯತ್ತಿಲುಮ್ ಪ್ರಕಾಶಿತಮಾನ ಸರ್ವರಕ್ಷಕತ್ವಮುಮ್ ಸರ್ವ ಶೇಷಿತ್ವಮುಮ್ ಶ್ರಿಯಃಪತಿತ್ವಮುಮ್, ನಾರಾಯಣತ್ವಮುಮ್ ಇವತ್ತಾಲ್ ಆಕೃಷ್ಟಮಾಯ್ ಪರತ್ವ ಸೌಲಭ್ಯಙ್ಗಳುಕ್ಕುರುಪ್ಪಾಯ್ ವರುಹಿರ ಸರ್ವಜ್ಞತ್ವ ಸರ್ವಶಕ್ತಿತ್ವಾದಿಹಳುಮ್, ಪರಮಕಾರುಣಿಕತ್ವ ಸೌಶೀಲ್ಯ ವಾತ್ಸಲ್ಯಾದಿಹಳುಮ್, ದ್ವಯತ್ತಿಲ್ ದ್ವಿವಚನಾಂತ ಪದತ್ತಾಲೇ ತೋತ್ತಿನ ಶುಭಾಶ್ರಯಮಾಯ್, ಪರತ್ವ ಸೌಲಭ್ಯ ವ್ಯಂಜಕಮಾನ ಪಾರ್ಥಸಾರಥಿಯಿನುಡೈಯ ದಿವ್ಯಮಙ್ಗಳ ವಿಗ್ರಹ ವಿಶೇಷಮುಮ್ ಕಾಟ್ಟಪ್ಪಡುಹಿರನ.

ಇಙ್ಗೇ (1) "ನಿಹರಿಲ್ ಪುಹ‌ಳಾಯ್" ಇತ್ಯಾದಿಹಳಿಲ್ ಶೊಲ್ಲುಹಿರ ವಾತ್ಸಲ್ಯ ಸ್ವಾಮಿತ್ವ ಸೌಶೀಲ್ಯ ಸೌಲಭ್ಯ ರೂಪಮಾನ ಇಗ್ಗುಣ ಚತುಷ್ಟಯಮುಮ್ ಅಡಿಯಿಲೇ ಅಸ್ಥಾನ ಸ್ನೇಹಾದಿಹಳಾಲೇ

---

ಹಾಗಾದರೆ "ಸ್ವಹೇತುತ್ವ ಧಿಯಂ ರುಂಧೇ" ಎಂಬುದು ಹೇಗೆ ಉಪಪನ್ನವಾಗುತ್ತದೆ ಎಂದರೆ ಉಪಾಯಾಂತರದ ಹಾಗೆ ಪ್ರಪತ್ತಿಯೂ ಮೋಕ್ಷಕ್ಕೆ ಸಾಕ್ಷಾತ್ ಸಾಧನವಲ್ಲ. ಭಗವಂತನೇ ಸಾಕ್ಷಾದುಪಾಯ. ಅವನ ಕಾಲುಷ್ಯವನ್ನು ಹೋಗಲಾಡಿಸಿ 'ಮೋಕ್ಷಯಿಷ್ಯಾಮಿ' ಎಂಬ ಸಂಕಲ್ಪಕ್ಕೆ ಕಾರಣವಾಗುತ್ತದೆ. ಪ್ರಪತ್ತಿಯು ಭಕ್ತಿ ನಿರಪೇಕ್ಷವಾದದ್ದು ಎಂಬುದು ಪ್ರಮಾಣ ಸಿದ್ಧವಾದ್ದರಿಂದ ಅಕಿಂಚನನ ವಿಷಯದಲ್ಲಿ ಭಕ್ತಿಸ್ಥಾನದಲ್ಲಿ ಪ್ರಪತ್ತಿಯು ವಿಹಿತವೆಂಬುದು ಸ್ವರಸ. ಆದ್ದರಿಂದ ಮೇಲೆ ಹೇಳಿದ ಶ್ರೀ ಸೂಕ್ತಿಯ ಪ್ರಕಾರ ಭಕ್ತಿ ಪ್ರಪತ್ತಿಗಳೆರಡೂ ಮೋಕ್ಷಕ್ಕೆ ಸಮಾನವಾದ ವ್ಯವಹಿತ ಕಾರಣಗಳು. ಭಗವಂತನೇ ಸಾಕ್ಷಾದುಪಾಯ ಎಂಬುದು ತತ್ವ.

### "ಮಾಮ್" ಎಂಬ ಶಬ್ದದ ಅರ್ಥ.

**ಇದುಕ್ಕು ಉಪಯುಕ್ತಾಕಾರಂಗಳೆಲ್ಲಾಮ್** ಇತ್ಯಾದಿ – ಈ ನಿರಪೇಕ್ಷೋಪಾಯತ್ವಕ್ಕೆ ಉಪಯುಕ್ತಗಳಾದ ಆಕಾರಗಳೆಲ್ಲಾ "ಮಾಮೇಕಂ" ಎಂಬ ಪದಗಳಲ್ಲಿ ವಿವಕ್ಷಿತಗಳು. "ವಿಷನಾರಾಯಣ ಶ್ರೀಮಾನ್" ಇತ್ಯಾದಿಗಳಲ್ಲಿ ನಿರ್ದಿಷ್ಟ ಪ್ರಕಾರನಾದ ಶರಣ್ಯನನ್ನು ತಿಳಿಸುವ "**ಮಾಂ**"ಎಂಬ ಪದದಿಂದ ತಿರುಮಂತ್ರದಲ್ಲಿಯೂ ದ್ವಯ ಮಂತ್ರದಲ್ಲಿಯೂ ಪ್ರಕಾಶಿತವಾದ ಅಂದರೆ ತಿರುಮಂತ್ರದಲ್ಲಿ ಪ್ರಣವದ ಮೊದಲನೆ ಅಕ್ಷರವಾದ ಅಕಾರದಲ್ಲಿ ಪ್ರಕಾಶಿತವಾದ ಸರ್ವರಕ್ಷಕತ್ವವೂ, ಸರ್ವಶೇಷಿತ್ವವೂ, ದ್ವಯಮಂತ್ರದಲ್ಲಿಯೂ ಪ್ರಕಾಶಿತವಾದ ಶ್ರಿಯಃ ಪತಿತ್ವವೂ **ನಾರಾಯಣತ್ವವೂ**, ಇವುಗಳಿಂದ ಆಕೃಷ್ಟವಾಗಿ ಪರತ್ವ, ಸೌಲಭ್ಯಗಳಿಗೆ **ಉರುಪ್ಪಾಮ್**–ಪ್ರಕಾಶಕಗಳಾಗಿ, **ಬರುವ ಸರ್ವಜ್ಞತ್ವ** ಸರ್ವಶಕ್ತಿತ್ವಾದಿಗಳೂ ಪರಮಕಾರುಣಿಕತ್ವ, ಸೌಶೀಲ್ಯವಾತ್ಸಲ್ಯಾದಿಗಳೂ ದ್ವಯದಲ್ಲಿ"ಚರಣೌ" ಎಂಬ ದ್ವಿವಚನಾಂತ ಪದದಿಂದ ಶುಭಾಶ್ರಯತ್ವವಾಗಿ ಪರತ್ವ ಸೌಲಭ್ಯ ವ್ಯಂಜಕವಾದ ಪಾರ್ಥಸಾರಥಿಯ ದಿವ್ಯಮಂಗಳ ವಿಗ್ರಹ ವಿಶೇಷವೂ ತೋರಿಸಲ್ಪಡುತ್ತದೆ.

**ಇಂಗೇ 1) ನಿಹರಿಲ್ ಪುಹಳಾಯ್** ಇತ್ಯಾದಿ–ಈ"ಮಾಂ"ಎಂಬ ಶಬ್ದದಲ್ಲಿ, 'ನಿಹರಿಲ್ ಪುಹಳಾಯ್' ಇತ್ಯಾದಿಗಳಲ್ಲಿ ಹೇಳಲ್ಪಡುವ ತನಗೆ ಸದೃಶವಿಲ್ಲದ ಕೀರ್ತಿಯುಳ್ಳವನೆಂದು ವಾತ್ಸಲ್ಯವು ವಿವಕ್ಷಿತ ಭಗವದ್ಗುಣಗಳಲ್ಲಿ ದೋಷಾನಾದರಹೇತು ಸ್ನೇಹರೂಪವಾದ ವಾತ್ಸಲ್ಯಕ್ಕೆ ಸದೃಶವಾದ ಗುಣವಿಲ್ಲವಲ್ಲವೇ. "ಉಲಹಮೂನ್ರುಡೈಯಾಯ್" ಎಂಬುದರಿಂದ ಸ್ವಾಮಿತ್ವವೂ, "ಎನ್ನೈಯಾಳ್ವಾನೇ" ಎಂಬುದರಿಂದ ಸೌಶೀಲ್ಯವೂ "ತಿರುವೇಂಗಡತ್ತಾನೇ"ಎಂಬುದರಿಂದ ಸೌಲಭ್ಯವೂ ಹೇಳಲ್ಪಟ್ಟಿತು. ಹೇಗೆಂದರೆ ಗೀತೆಯಲ್ಲಿ ಆರಂಭದಲ್ಲಿ ಅಸ್ಥಾನ ಸ್ನೇಹಕಾರುಣ್ಯಗಳನ್ನು

---

1) ಅಹಲಹಿಲ್ಲೇನ್ ಇರೈಯುಮೆನ್ರು.............................ನಿಹರಿಲ್ ಪುಹಳಾಯ್, ಇತ್ಯಾದಿ-863ನೇ ಪುಟನೋಡಿ.

ಕಲಜ್ಙಿನ ಅರ್ಜುನನ್ನೈ ಅನಾದರಿಯಾನ್ಮೈಯಾಲುಮ್. 2) "ಮತ್ತಃ ಪರತರಂ ನಾನ್ಯತ್" ಎನ್ರು ತಾನೇ ಅರುಳಿಚ್ಚೆಯ್‌ಹೈಯಾಲುಮ್ 3) "ಹೇ ಕೃಷ್ಣ ಹೇ ಯಾದವ" 4) ರಥಂಸ್ಥಾಪಯಮೇಽಚ್ಯುತ"ಎನ್ರು ಪ್ಪಡಿ ನಿನ್ರು ಸಾರಥ್ಯಾದಿಹಳೈಪ್ಪಣ್ಣುಹೈಯಾಲುಮ್ ಕಾಣವೇಣುಮೆನ್ರ ಸ್ವನ್ನೈಶ್ವರೂಪತ್ತೈ ಕ್ಕಾಟ್ಟಿ ಮೀಣ್ಡುಮ್ ಪಣ್ಡೈಯ ಸೌಮ್ಯ ವಿಗ್ರಹತ್ತೈಕಾಟ್ಟವೇಣು ಮೆನ್ರಪೋದೇ ಸಾರಥಿರೂಪನಾಯ್ ತೋತ್ತಿ ನಿಕ್ಕೈಯಾಲುಮ್ ವ್ಯಂಜಿತಮಾಯಿತ್ತು.

ಉಕ್ತಮಾನ ಶರಣ್ಯ ಗುಣಙ್ಗಳಿಲ್ ಆಶ್ರಿತ ರಕ್ಷಣತ್ತುಕ್ಕು ಪ್ರಧಾನತಮಙ್ಗಳ್ (1) ಸರ್ವಜ್ಞೋಽಪಿ ಹಿ ವಿಶ್ವೇಶಃ ಸದಾಕಾರುಣಿಕೋಽಪಿ ಸನ್" ಎನ್ರು ಭಗವಚ್ಛಾಸ್ತ್ರತ್ತಿಲುಮ್ (2) "ತ್ವದ್ಜ್ಞಾನಶಕ್ತಿ ಕರುಣಾಸು ಸತೀಷು" ಎನ್ನಿರ ಅಭಿಯುಕ್ತ ವಾಕ್ಯತ್ತಿಲುಮ್ ಸಙ್ಗ್ರಹಿಕ್ಕಪ್ಪಟ್ಟನ.

ಅಥಸರ್ವಗುಣೇಭ್ಯಃ ದಯಾಯಾಃ ಸರ್ವಾತಿಶಯತ್ವಂ ಉಪಪಾದಯತಿ

ಇವೈ ಮೂನ್ರಿಲುಮ್ ಜ್ಞಾನಶಕ್ತಿಹಳ್ ನಿಗ್ರಹಾನುಗ್ರಹ ಸಾಧಾರಣಙ್ಗಳ್. ಸ್ವಾಮಿತ್ವಮುಮ್

---

ತೋರಿಸಿದುದರಿಂದ ವಾತ್ಸಲ್ಯವೂ 2) "ಮತ್ತಃ ಪರತರಂ ನಾನ್ಯತ್" ಎಂದು ಹೇಳುವುದರಿಂದ ಸ್ವಾಮಿತ್ವವೂ 3] "ಹೇ ಕೃಷ್ಣಹೇ ಯಾದವ ಹೇಸಖೇತಿ" 4] "ರಥಂಸ್ಥಾಪಯಮೇಽಚ್ಯುತ ಎಂದು ಹೇಳಲ್ಪಡುವಂತೆ ಸೌಶೀಲ್ಯವೂ 5) "ಯೋಗೇಶ್ವರ ತತೋಮೇತ್ವಂ ದರ್ಶಯಾತ್ಮಾನ ಮವ್ಯಯಮ್"ಎಂದು ಆಸೆಪಟ್ಟ ತತ್ಕ್ಷಣವೇ 6] ಪಶ್ಯಮೇ ಪಾರ್ಥರೂಪಾಣಿ" ಎಂದು ತನ್ನ ವಿಶ್ವರೂಪವನ್ನು ತೋರಿಸಿ, ಅದನ್ನು ನೋಡಿ ಹೆದರಿದ ಅರ್ಜುನನ ಪ್ರಾರ್ಥನೆಗೆ ಅನುಗುಣವಾಗಿ 7] ಭೂತ್ವಾ ಪುನಃ ಸೌಮ್ಯವಪು ರ್ಮಹಾತ್ಮಾ" ಎಂದು ಹಳೆಯ ಸೌಮ್ಯರೂಪವಾದ, ಪಾರ್ಥ ಸಾರಥಿ ವೇಷದಿಂದ ಕೂಡಿದುದರಿಂದ "ಸೌಲಭ್ಯವೂ' **ವ್ಯಂಜಿತಮಾಯಿಟ್ರು**–ಪ್ರಕಾಶಿತವಾಯಿತು.

**ಉಕ್ತಮಾನ ಶರಣ್ಯಗುಣಂಗಳಿಲ್ ಇತ್ಯಾದಿ**– ಹೀಗೆ ಹೇಳಲ್ಪಟ್ಟ ಶರಣ್ಯನ ಗುಣಗಳಲ್ಲಿ ಆಶ್ರಿತ ರಕ್ಷಣಕ್ಕೆ ಪ್ರಧಾನಗಳಾದ, (1) **ಸರ್ವಜ್ಞೋಽಪಿ ಹಿ ವಿಶ್ವೇಶಃ**, ಇತ್ಯಾದಿ ಭಗವಚ್ಛಾಸ್ತ್ರದಲ್ಲಿಯೂ, "ಸರ್ವಜ್ಞಃ", ಎಂದು ಸರ್ವಜ್ಞತ್ವವೂ, ವಿಶ್ವೇಶಃ ಎಂದು ಸರ್ವಶಕ್ತಿತ್ವವೂ, ಕಾರುಣಿಕಃ ಎಂದು ಕಾರುಣ್ಯವೂ ಸಂಗ್ರಹಿಸ ಲ್ಪಟ್ಟಿತು. (2) **"ತ್ವದ್ಜ್ಞಾನ ಶಕ್ತಿ ಕರುಣಾಸು ಸತೀಷು"** ಎಂಬ ಅಭಿಯುಕ್ತರ (ಕೂರತ್ತಾಳ್ವಾನ್) ವಾಕ್ಯದಲ್ಲಿಯೂ ಜ್ಞಾನ, ಶಕ್ತಿ, ಕರುಣೆಗಳು ಸಂಗ್ರಹಿಸಲ್ಪಟ್ಟವು. **ಇವೈಮೂನ್ರಿಲುಮ್** – ಇತ್ಯಾದಿ ಈ ಮೂರು ಗುಣಗಳ ಮಧ್ಯೆ ಜ್ಞಾನಶಕ್ತಿಗಳು, ನಿಗ್ರಹಾನುಗ್ರಹ ಸಾಧಾರಣಗಳು. **ಸ್ವಾಮಿತ್ವಮುಮ್** – ಇತ್ಯಾದಿ

---

2) ಗೀತೆ 1-7 3) ಗೀತೆ 11-41 4) ಗೀತೆ 1-21. 5) ಗೀತೆ 1-4 6) ಗೀತೆ 11-5 7) 11-50

1) ಲಕ್ಷ್ಮೀತಂತ್ರ 17-78

2) ಪಾಪೀಯಸೋಽಪಿ ಶರಣಾಗತಿ ಶಬ್ದಭಾಜಃ
ನೋಪೇಕ್ಷಿತುಂ ಮಮ ತವೋಚಿತ ಮೀಶ್ವರಸ್ಯ ।
ತ್ವದ್ಜ್ಞಾನಶಕ್ತಿ ಕರುಣಾಸು ಸತೀಷು ನೈವ
ಪಾಪಂ ಪರಾಕ್ರಮಿತು ಮರ್ಹತಿ ಮಾಮಕೀನಮ್ ॥

ಅತಿಮಾನುಷಸ್ತವ 61ನೇ ಶ್ಲೋಕ, ನಾನು ಬಹಳ ಪಾಪಿಯಾಗಿದ್ದರೂ, ಶರಣಾಗತನೆಂಬ ಹೆಸರು ಪಡೆದಿದ್ದೇನೆ. ನೀನು ಈಶ್ವರನಾಗಿ ಸರ್ವಶಕ್ತನಾಗಿ ಸರ್ವಸ್ವತಂತತ್ರನಾಗಿದ್ದರೂ ನನ್ನನ್ನು ಉಪೇಕ್ಷಿಸಲು ಉಚಿತವಲ್ಲ. ನಿನ್ನ ಜ್ಞಾನ ಶಕ್ತಿ, ಕರುಣೆಗಳು ಇರುವಾಗ, ನನ್ನ ಪಾಪಗಳು ಅವುಗಳನ್ನು ಅತಿಕ್ರಮಿಸಲು, ಅಂದರೆ ಸೋಲಿಸಲು ಆಗಲಾರವು ನಿನ್ನ ಜ್ಞಾನಶಕ್ತಿಗಳೂ, ಪರಮಕರುಣೆಯೂ ನನ್ನ ಪಾಪಗಳನ್ನು ಹೋಗಲಾಡಿಸಿ ನನ್ನನ್ನು ರಕ್ಷಿಸಲು ಅರ್ಹವಾದವು,

**ಲೀಲೋಪಕರಣ ಮಾಕ್ಕುಮ್ಮೈಕ್ಕುಮ್, ಭೋಗೋಪಕರಣ ಮಾಕ್ಕುಹೈಕ್ಕುಮ್ ಪೊದುವಾಹೈಯಾಲೇ ಜ್ಞಾನಶಕ್ತಿಹಳ್ಳೈ ರಕ್ಷಣೈಕಾಂತಙ್ಗಳಾಹ ನಿಯಮಿಕ್ಕಮಾಟ್ಟಾದು. ಕಾರುಣ್ಯಮುಮ್ ಇದಿನ್ ಕವಡು ಹಳಾನ ಸೌಶೀಲ್ಯ ವಾತ್ಸಲ್ಯಾದಿಹಳುಮ್ ಅನುಗ್ರಹತ್ತುಕ್ಕು ಏಕಾನ್ತಙ್ಗಳ್.**

**ಇಪ್ಪಡಿ ಇಕ್ಕಾರುಣ್ಯತ್ತಿನುಡೈಯ ವಾಶಿಯೈಕ್ಕಣ್ಣ ಪೂರ್ವರ್‌ಹಳ್**

**1) "ಸೋಽಹಂತೇ ದೇವದೇವೇಶ ನಾರ್ಚನಾದೌ ಸ್ತುತೌ ನಚ ।**
**ಸಾಮರ್ಥ್ಯವಾನ್ ಕೃಪಾಮಾತ್ರ ಮನೋವೃತ್ತಿಃ ಪ್ರಸೀದಮೇ ॥" ಎನ್ರುಮ್.**

**2) "ನಿನ್ನರುಳೇ ಪುರಿನ್ದಿರುನ್ದೇನ್ ಎನ್ರುಮ್, 3) "ತುಣೆಯೇನಿನಿ ನಿನ್ನರುಳಲ್ಲದೆನಕ್ಕು" ಎನ್ರುಮ್**

---

ಸ್ವಾಮಿತ್ವವೂ ಲೀಲೆಗೆ ಉಪಕರಣವನ್ನಾಗಿ ಮಾಡುವುದಕ್ಕೂ ಭೋಗಕ್ಕೆ ಉಪಕರಣವನ್ನಾಗಿ ಮಾಡುವುದಕ್ಕೂ **ಪೊದುವಾಹೈಯಾಲೇ** – ಸಮಾನವಾದ್ದರಿಂದ, ಅಂದರೆ ಭಗವಂತನು ಉಭಯ ವಿಭೂತಿಗೂ ಸ್ವಾಮಿಯಾದ್ದರಿಂದ ತನ್ನ ಲೀಲೆಯನ್ನು ನಡೆಸಲು ಒಬ್ಬ ಜೀವನನ್ನು ಸಂಸಾರದಲ್ಲಿ ಹುಟ್ಟಿಸಿ ಲೀಲಾರಸವನ್ನು ಅನುಭವಿಸುತ್ತಾನೆ. ಹಾಗೆಯೇ ಅವನಿಗೆ ಮೋಕ್ಷವನ್ನು ಕೊಟ್ಟು ಅವನ ಕೈಂಕರ್ಯಗಳಿಂದ ಸಂತೋಷಪಡುತ್ತಾನೆ. ಹೀಗೆ ಲೀಲಾಭೋಗಗಳ ಅನುಭವಕ್ಕೆ ಸ್ವಾಮಿತ್ವವು ಸಮಾನವು. ಆದ್ದರಿಂದ ಸ್ವಾಮಿತ್ವವು, ಜ್ಞಾನಶಕ್ತಿಗಳನ್ನು ರಕ್ಷಣೆಗೆ ಏಕಾಂತಗಳನ್ನಾಗಿ ಅಡಗಿಸುವುದಿಲ್ಲ. **ಕಾರುಣ್ಯಮುಮ್** ಇತ್ಯಾದಿ – ಕಾರುಣ್ಯವೂ ಇದರ **ಕವಡು**–ಕವಲುಗಳಾದ ಸೌಶೀಲ್ಯ, ವಾತ್ಸಲ್ಯಾದಿಗಳೂ ಅನುಗ್ರಹಕ್ಕೆ **ಏಕಾಂತಂಗಳ್** - ಪ್ರತ್ಯೇಕವಾಗಿ ಏರ್ಪಟ್ಟವು.

**ಇಪ್ಪಡಿ ಇಕ್ಕಾರುಣ್ಯತ್ತಿನುಡೈಯ** – ಹೀಗೆ ಈ ಕಾರುಣ್ಯದ **ವಾಶಿಯೈ** – ರಕ್ಷಣೆಗೆ ಏಕಾಂತವಾಗಿರುವುದನ್ನು, ತಿಳಿದ **ಪೂರ್ವಾಚಾರ್ಯರುಗಳೂ** (1) **ಸೋಽಹಂತೇದೇವದೇವೇಶ** ಇತ್ಯಾದಿಯಾಗಿಯೂ (2) **ನಿನ್ನರುಳೇ** ಇತ್ಯಾದಿ (3) **ತುಣೆಯೇನಿನಿ** ಇತ್ಯಾದಿ (4) **ಉನ್ನರುಳೇಪಾರ್ಪನ್** ಇತ್ಯಾದಿ (5) **ತಿರುವಾಮಹಳೊಪ್ಪೆತ್ತುಂ** ಇತ್ಯಾದಿ (6) **ನಿನ್‌ತಿರುವರುಳಾಲನ್ರಿ** ಇತ್ಯಾದಿ (7) **ನಿನ್‌ತಿರುವರುಳುಮ್** ಇತ್ಯಾದಿ

---

1) ಸೋಽಹಂತೇದೇವದೇವೇಶ ನಾರ್ಚನಾದೌಸ್ತುತೌನಚ ।
ಸಾಮರ್ಥ್ಯವಾನ್ ಕೃಪಾಮಾತ್ರಮನೋವೃತ್ತಿಃ ಪ್ರಸೀದಮೇ ॥ ವಿಷ್ಣುಪುರಾಣ 5-7-70

ಎಲೈದೇವ ದೇವನೇ, ನಾನು ನಿನ್ನನ್ನು ಅರ್ಚಿಸುವುದಕ್ಕೋ ಸ್ತೋತ್ರ ಮಾಡುವುದಕ್ಕೋ ಸಮರ್ಥನಲ್ಲ. ನಿನ್ನ ಕೃಪೆಯನ್ನೇ ಅವಲಂಬನವಾಗಿ ಮನಸ್ಸಿನಲ್ಲಿ ಧ್ಯಾನಮಾಡಿಕೊಂಡಿದ್ದೇನೆ, ನನಗೆ ಕರುಣಿಸು.

2) ಶೆನ್ನಿಯೋಂಗು ತಣ್‌ತಿರುವೇಂಗಡಮುಡೈಯಾಯ್ ಉಲಗು
ತನ್ನೈವಾಳ್ನಿನ್ರನಮ್ಬೀ ದಾಮೋದರಾ ಶದಿರಾ ।
ಎನ್ನೈಯುಮ್ ಎನ್ನುಡೈಮೈಯೈಯುಮ್ ಉನ್ ಶೆಕ್ಕರಪ್ಪೊರಿಯೊತ್ತಿಕ್ಕೊಂಡು
ನಿನ್ನರುಳೇ ಪುರಿಂದಿರುಂದೇನ್ ಇನಿ ಎನ್ ತಿರುಕ್ಕುರಿಪ್ಪೇ ॥ ಪೆರಿಯಾಳ್ವಾರ್ ತಿರು ಮೊಳ್ಳಿ (5-4-1)

ಎತ್ತರವಾದ ಶಿಖರಗಳಿಂದ ಕೂಡಿದ ಶೀತಳವಾದ ತಿರುಪತಿ ಬೆಟ್ಟದಲ್ಲಿ ವಾಸಮಾಡುವವನೇ ಲೋಕವನ್ನು ಕಾಪಾಡುವ ಪರಿಪೂರ್ಣನೇ, ದಾಮೋದರಾ, ಆಶ್ರಿತ ದೋಷವನ್ನು ಕಾಣದೇ ಇರುವ ಸಾಮರ್ಥ್ಯವುಳ್ಳವನೇ ನನ್ನನ್ನೂ ನನಗೆ ಸೇರಿದ ಸ್ವತ್ತುಗಳನ್ನೂ, ನಿನ್ನ ಚಕ್ರದಿಂದ ಅಂಕಿತಗಳನ್ನಾಗಿ ಮಾಡಿಕೊಂಡು ನಿನ್ನ ಕೃಪೆಯನ್ನು ಆಶ್ರಯಿಸಿದ್ದೇನೆ, ಬೇರೆ ಏನು ತಮ್ಮ ಚಿತ್ತದಲ್ಲಿದೆ. ಕೃಪೆ ಮಾಡಿ ಹೇಳಿ.

3) ಅಣಿಯಾರ್ ಪೊಳ್ಳಿಲ್ ಶೂಳ್ ಅರಂಗನಹರಪ್ಪಾ
ತುಣೆಯೇನ್ ಇನಿ ನಿನ್ನರುಳಲ್ಲದೆನಕ್ಕು ॥
ಮಣಿಯೇ ಮಣಿ ಮಾಣಿಕ್ಕಮೇ ಮದುಶೂದಾ
ಪಣಿಯಾಯ್ ಎನಕ್ಕುಯ್ಯುಮ್‌ವಹೈ, ಪರಂಜೋದೀ ॥ ಪೆರಿಯತಿರುಮೊಳ್ಳಿ (11-8-8)

ಸೌಂದರ್ಯದಿಂದ ಕೂಡಿದ ರಂಗನಾಥನೇ, ನಿನ್ನ ಕೃಪೆಯಲ್ಲದೆ ನನಗೆ ರಕ್ಷಕವಾಗಿ ಬೇರೆ ಯಾವುದನ್ನೂ ನಂಬಿಲ್ಲ. ರತ್ನವೇ, ಮಾಣಿ

4) "ಉಪದರುಳೇ ಪಾರ್‌ಪನಡಿಯೇನ್" 5) ತಿರುಪೂಮುಕಳ್ಳೈಪ್ಪೆತ್ತು ವೆನ್ನೆಞ್ಜಹವ್ ಕೋಯಿಲ್ ಕೊಂಡ ಪೇರಗುಳಾಳನ್ ಎನ್ಬ್ರುಮ್, 6) "ಉನ್ನಿರುಪರುಳಾಲನ್ರಿಕ್ಕಾಪರಿತು" ಎನ್ಬ್ರುಮ್ 7) "ನಿನ್ತಿರು

---

ಕ್ಯವೇ–ಅವುಗಳಂತೆ ಪರಮಸುಲಭನೇ, ಕಾಂತಿಯಿಂದ ಕೂಡಿದವನೇ, ಮಧುಸೂದನನೇ ಪರಂಜ್ಯೋತಿಸ್ಸೇ ನಾವು ಉಜ್ಜೀವಿಸುವ ದಾರಿಯನ್ನು ಅನುಗ್ರಹಿಸು

4) ವಾಳಾಲ್ ಅರುತ್ತುಚ್ಚುಡಿನುಮ್ ಮರುತ್ತುವನ್‌ಪಾಲ್
ಮಾಳಾದಕಾದಲ್ ನೋಯಾಳನ್ ಪೋಲ್ ಮಾಯತ್ತಾಲ್
ಮೀಳಾತ್ತುಯರ್ ತರಿನುಮ್ ವಿತ್ತುವಕ್ಕೋಟ್ಟಮ್ಮಾ ನೀ
ಆಳಾಉನದರುಳೇ ಪಾರ್ಪನಡಿಯೇನೇ — ಪೆರುಮಾಳ್ ತಿರುಮೊಳ್ಳಿ (5-4)

ವೈದ್ಯನು ಶಸ್ತ್ರಚಿಕಿತ್ಸೆ ಮಾಡಿದರೂ ರೋಗಿಯು ಅವನಲ್ಲಿ ಪ್ರೀತಿಯಿಂದಿರುವಂತೆ, ನಿನ್ನ ಸಂಕಲ್ಪದಿಂದ ನನ್ನ ಪಾಪಗಳಿಗೆ ಶಿಕ್ಷೆಯನ್ನು ಕೊಟ್ಟು ಅದರಿಂದ ಬಹಳ ದುಃಖವನ್ನು ಕೊಟ್ಟರೂ, ಎಲೈ ವಿದ್ದುವಕ್ಕೋಡಿನಲ್ಲಿರುವ ಸ್ವಾಮಿಯೇ ದಾಸನಾದ ನನಗೆ ನಿನ್ನ ಕೈಂಕರ್ಯವು ಸಿದ್ಧಿಸಲು, ನಿನ್ನ ಕೃಪೆಯನ್ನೇ ಅವಲಂಬಿಸಿದ್ದೇನೆ.

5) ಶೆತ್ತವನ್ ತೆನ್ನಿಲಂಗೈ ಮಲಂಗ ದೇವಪಿರಾನ್ ತಿರುಮಾಮಹಳ್ಳೈ
ಪ್ಪೆತ್ತುಮ್, ಎನ್ನೆಂಜಮ್ ಕೋಯಿಲ್‌ಕೊಂಡ ಪೇರರುಳಾಳನ್ ಪೆರುಮೈಪೇಶ
ಕ್ಕಟ್ರವನ್, ಕಾಮರುಶೀರ್ ಕಲಿಯನ್ ಕಣ್ಣಹತ್ತುಮ್ ಮನತ್ತುಮ್ ಅಹಲಾ
ಕ್ಕೊತ್ತವನ್, ಮುತ್ತುಲಕಾಳಿನಿನ್ರು ಕುರುಂಗುಡಿಕ್ಕೇ ಎನ್ನೈ ಉಯತ್ತಿಡುಮಿನ್ — ಪೆರಿ ತಿರುಮೊಳ್ಳಿ 9-5-10

ದಕ್ಷಿಣ ದಿಕ್ಕಿನಲ್ಲಿರುವ ಲಂಕಾನಗರವು ನಾಶವಾಗುವಂತೆ ದುಷ್ಟರನ್ನೆಲ್ಲಾ ಕೊಂದವನು, ಆ ಸ್ವಾಮಿಯು ಮಹಾಲಕ್ಷ್ಮಿಯೊಡಗೂಡಿ ಪರಮ ಕರುಣೆಯಿಂದ ನನ್ನ ಮನಸ್ಸಿನಲ್ಲಿ ಸಾನ್ನಿಧ್ಯವನ್ನು ಪಡೆದಿರುವನು. ಅವನ ಹಿರಿಮೆಯನ್ನು ಹೇಳಲು ಕಲಿತಿದ್ದೇನೆ ಕಲಿಯನ್ ಎಂಬ ಹೆಸರುಳ್ಳ ನನ್ನ ಮನಸ್ಸಿಗೂ ಕಣ್ಣಿಗೂ ಗೋಚರನಾಗಿ ನನ್ನನ್ನು ಬಿಡದಿರುವವನು, ಮೂರು ಲೋಕಗಳಿಗೂ ಸ್ವಾಮಿಯಾದ ಅವನ ವಾಸಸ್ಥಾನವಾದ ತಿರುಕ್ಕುರುಂಗುಡಿಗೆ ನನ್ನನ್ನು ಕರೆದೊಯ್ಯಿರಿ,

6) ಇರ್‌ಯೋ ಇರಕ್ಕಿನುಮ್ ಈಂಗೋರ್ ಪೆಣ್‌ಪಾಲ್ ಎನವು ಮಿರಂಗಾದು
ಅರ್ೈಯೋ ಎನ ನಿನ್ರದಿರುಮ್ ಕರುಂಗಡಲ್ ಈಂಗಿವಳ್‌ತನ್ ।
ನಿರ್ೈಯೋ ಇನಿಉನ್ ತಿರುವರುಳಾನ್ರಿ ಕ್ಕಾಪ್ಪರಿದಾಲ್,
ಮುರ್ೈಯೋ, ಅರವಣೈಮೇಲ್ ಪಳ್ಳಿಕೊಂಡ ಮುಹಿಲ್‌ವಣ್ಣನೇ ॥

ತಿರುವಿರುತ್ತಮ್ (62) ಸ್ವಾಮಿಯೇ ನೀವು ಕೃಪಾಶಾಲಿಗಳು ಆದರೆ ಈ ಸ್ತ್ರೀ ವಿಷಯದಲ್ಲಿ ಕೃಪೆಯಿಲ್ಲವೆಂದು ಸಮುದ್ರವೂ, ಘೋಷಿಸುತ್ತದೆ. ಆಳ್ವಾರಾಗಿರುವ ಈ ಸ್ತ್ರೀಯು ತನ್ನ ಗಾಂಭೀರ್ಯವನ್ನು ನಿನ್ನ ಕೃಪೆಯಿಲ್ಲದೆ ಕಾಪಾಡಲು ಸಾಧ್ಯವಿಲ್ಲ. ಆದಿಶೇಷನ ಮೇಲೆ ಮಲಗಿರುವ ಮೇಘ ಶ್ಯಾಮಳನೇ ಮೇಘದಂತೆ ಉದಾರ ಸ್ವಭಾವನೇ, ಇದು ನಿನಗೆ ಸಹಜವೇ. ನಿನ್ನ ಕೃಪೆಯನ್ನು ತೋರಿಸಿ ರಕ್ಷಿಸು ಎಂಬರ್ಥ.

7) ಪಂಡ್ಪೈನಾಳಾಲೇ ನಿನ್ ತಿರುವರುಳುಮ್ ಪಂಗಯತ್ತಾಳ್ ತಿರುವರುಳುಮ್
ಕೊಂಡು, ನಿನ್‌ಕೋಯಿಲ್ ಶೀಯ್ತುಪ್ಪಲ್ ಪಡಿಕಾಲ್, ಕುಡಿಕುಡಿವೞಿವಂದಾಳ್ ಶೆಯ್ಯುಮ್ !
ತೊಂಡರೋರ್ಕ್ಕರುಳಿಚ್ಚೋದಿವಾಯ್‌ತಿರಂದು ಉನ್‌ತಾಮರೈಕ್ಕಣ್ಗಳಾಲ್ ನೋಕ್ಕಾಯ್
ತೆಂಪಿರೈಪ್ಪಾಣನಲ್ ತಣ್‌ಪನ್ನೈಶೂೞ್ ತಿರುಪ್ಪುಳಿಂಗುಡಿಕ್ಕಿಡಂದಾನೇ ॥ — ತಿರುವಾಯ್‌ಮೊೞಿ (9-2-1)

ಪೂರ್ವಕಾಲದಿಂದಲೇ ನಿನ್ನ ಮತ್ತು ಪಂಕಜವಾಸಿನಿಯಾದ ಲಕ್ಷ್ಮಿಯ ಶ್ರೀಮತ್ ಕೃಪೆಯನ್ನು ಪಡೆದು, ನಿನ್ನ ದಿವ್ಯಾಲಯವನ್ನು ಶುದ್ಧಮಾಡಿ, ವಂಶಪಾರಂಪರ್ಯವಾಗಿ ಸೇವೆ ಮಾಡುತ್ತಿದ್ದೇನೆ. ತಾಮ್ರಪರ್ಣಿ ನದಿಯು ಶೀತಳವಾದ ನೀರಿನಿಂದ ಸುತ್ತುಮುತ್ತಿಟ್ಟ ತಿರುಪ್ಪುಳಿಂಗುಡಿ ದಿವ್ಯ ದೇಶದಲ್ಲಿ ವಿಜಯ ಮಾಡಿಸಿರುವ ಸ್ವಾಮಿಯೇ ಈ ದಾಸನಿಗೆ ಕೃಪೆಮಾಡಿ ನಿನ್ನ ಜ್ಯೋತಿರೂಪವಾದ ಬಾಯನ್ನು ತೆರೆದು ಆಶೀರ್ವಾದಮಾಡಿ, ನಿನ್ನ ತಾವರೆಯದಳದಂತಿರುವ ಕಣ್ಣುಗಳಿಂದ ಕಟಾಕ್ಷಿಸು.

**ವರುಳುವರ್ ಪಜ್ಗಯೆತ್ತಾಳ್ ತಿರುವರುಳುವರ್" ಎನ್ರುವರ್ 8) ಆವಾವೆನ್ರರುಳ್ ಶೆಯ್‌ದು ಎನ್ರುವರ್ 9] "ಕೃಪಯಾ ಕೇವಲ ಮಾತ್ಮಸಾತ್ಕುರು" ಎನ್ರುವರ್ 10) "ಕರೀಶ ತೇಷಾಮಪಿ ತಾವಕೀದಯಾ ತಥಾತ್ವ ಕೃತ್ಸೈವತು ಮೇ ಬಲಂ ಮತಮ್" ಎನ್ರುವರ್. ಇಪ್ರಕಾರಙ್ಗಳಿಲೇ ಇಕ್ಕೃಪಾಗುಣತ್ತೈ ತಞ್ಜ ಮಾಹ ಅನುಸಂಧಿತ್ತು ಸಂಬಂಧತ್ತೈಯುಮ್ ಗುಣಾನ್ತರಙ್ಗಳೈಯುಮ್, ಕಾರುಣ್ಯತ್ತುಕ್ಕುಚ್ಚೊಲ್ಲಿತ್ತುಚ್ಚೆಯ್ ವಾರಾಕ್ಕಿತ್ತಾಙ್ಗಳ್ ಕಾರುಣ್ಯೈಕಾನ್ತಿಹಳಾಯ್ ಪ್ಪೋನ್ದಾರ್‌ಹಳ್:**

**ಪಿರಾಟ್ಟಿಯುಮ್ ಗುಣಾನ್ತರಗಳಿರುಕ್ಕ 11)"ವಧಾರ್ಹಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್ ಎನ್ರರುಳಿಚ್ಚೆಯ್‌ದಾಳ್.**

---

8) **ಆವಾವೆನ್ರರುಳ್‌ಶೆಯ್‌ದು** ಇತ್ಯಾದಿ (9) **ಕೃಪಯಾಕೇವಲಮ್** ಇತ್ಯಾದಿ ಎಂದೂ (10) **ಕರೀಶ ಶೇಷಾಮಪಿ** ಇತ್ಯಾದಿಯಾದ ಪ್ರಕಾರಗಳಲ್ಲಿ ಈ ಕೃಪಾಗುಣವನ್ನು **ತಂಜಮಾಹ** – ಆಶ್ರಯವಾಗಿ, ಅನುಸಂಧಾನ ಮಾಡಿ, ಸಂಬಂಧವನ್ನೂ ಗುಣಾಂತರಗಳನ್ನೂ ಕಾರುಣ್ಯಕ್ಕೆ **ಶೊಲ್ಲಿತ್ತುಚ್ಚೆಯ್‌ವಾರಾಕ್ಕಿ** – ಆಜ್ಞಾಕರರನ್ನಾಗಿ ಮಾಡಿ ಅಂದರೆ ಸಂಬಂಧವನ್ನೂ ಗುಣಾಂತರಗಳನ್ನೂ, ಕಾರುಣ್ಯ ಗುಣ ಪರತಂತ್ರಗಳನ್ನಾಗಿ ಮಾಡಿ, ತಾವುಗಳು **ಕಾರುಣ್ಯೈಕಾಂತಿಹಳಾಯ್** – ಕಾರುಣ್ಯವನ್ನೇ ಅವಲಂಬಿಸಿ ನಿಂತರು.

**ಪಿರಾಟ್ಟಿಯುಮ್** ಇತ್ಯಾದಿ – ಸೀತಾದೇವಿಯೂ, ಇತರ ಗುಣಗಳೂ ಇರುವಾಗ (ii) **ವಧಾರ್ಹಮಪಿ ಕಾಕುತ್ಸ್ಥಃ** ಇತ್ಯಾದಿ ವಧಾರ್ಹನಾದ ಕಾಕಾಸುರನನ್ನು ಕೃಪೆಯಿಂದಲೇ ಕಾಪಾಡಿದನು, ಎಂದು ಹೇಳಿರುತ್ತಾಳೆ.

---

8) ಆವಾರಾರ್ ತುಣೈಯೆನ್ರು ಅಲೈನೀರ್ ಕಡಲುಳಳ್ಞುಂದುಮ್
ನಾವಾಯ್‌ಪೋಲ್ ಪಿರವಿಕ್ಕಡಲುಳ್ ನಿನ್ರುನಾನ್ ತುಳಂಗ
ತೇವಾರ್ ಕೋಲತ್ತೊಡುಮ್- ತಿರುಚ್ಚಕ್ಕರಮ್ ಶೆಂಗಿನೊಡುಮ್
ಆವಾ ವೆನ್ರರುಳ್‌ಶೆಯ್‌ದು ಅಡಿಯೇ ನೊಡುಮ್ ಆವಾನೇ ॥ ತಿರುವಾಯ್ ಮೊಳಿ (5-1-9)

ಅಲೆಗಳಿಂದ ಕೂಡಿದ ಸಮುದ್ರದಲ್ಲಿ ಮುಳುಗುತ್ತಿರುವ ಹಡಗಿನಂತೆ ಸಂಸಾರ ಸಮುದ್ರದಲ್ಲಿ ಯಾರು ದಿಕ್ಕು ಎಂದು ಮುಳುಗಿ ತೇಲುತ್ತಿರುವ ನನಗೆ ಪರಿಪೂರ್ಣವಾದ ಸೊಬಗಿನಿಂದಲೂ ಶಂಖ ಚಕ್ರಗಳೊಡನೆಯೂ ಬಂದು ತೋರಿ ಭಗವಂತನು ಅಯ್ಯೋ ಎಂದು ಕೃಪೆ ಮಾಡಿ ನನ್ನೊಡನೆ ಕೂಡುವವನು.

9) ಅಪರಾಧ ಸಹಸ್ರಭಾಜನಂ ಪತಿತಂ ಭೀಮ ಭವಾರ್ಣವೋದರೇ ।
ಅಗತಿಂ ಶರಣಾಗತಂಹರೇ ಕೃಪಯಾ ಕೇವಲ ಮಾತ್ಮಸಾತ್ಕುರು ॥ ಆಳವಂದಾರ್ ಸ್ತೋತ್ರ (48)

ಅಪರಾದ ಸಹಸ್ರಗಳಿಗೆ ನಾನು ವಾಸಸ್ಥಾನ. ಭಯಂಕರವಾದ ಸಂಸಾರ ಸಮುದ್ರದಲ್ಲಿ ಬಿದ್ದಿರುವೆ. ಇಂಥಹ ನಾನು ನಿನ್ನಲ್ಲಿ ಶರಣಾಗತನಾಗಿದ್ದೇನ. ಕೇವಲ ನಿನ್ನ ಕೃಪೆಯಿಂದ ನನ್ನನ್ನು ನಿನ್ನಲ್ಲಿ ಬರಮಾಡಿಕೊಂಡು ನಿನಗೆ ಕೈಂಕರ್ಯವನ್ನು ಮಾಡುವಂತೆ ಅನುಗ್ರಹಿಸು.

10) ಸ್ವಕೈರ್ಮಣೈ ಸ್ಸ್ವೈಶ್ಚರಿತ್ರೈಃ ಸ್ವವೇದನಾತ್
ಭಜಂತಿಯೇತ್ವಾಂ ತ್ವಯಿ ಭಕ್ತಿತೋಽಥವಾ ।
ಕರೀಶ ತೇಷಾಮಪಿ ತಾವಕೀದಯಾ
ತಥಾತ್ವಕೃತ್ ಸ್ಸೈವತುಮೇ ಬಲಮ್ ಮತಮ್ ॥ ವರದರಾಜಸ್ತವ (94)

ಎಲೈ ಹಸ್ತಿಗಿರೀಶನೇ, ಯಾರು ತನ್ನ ವೈರಾಗ್ಯಾದಿಗುಣಗಳಿಂದಲೂ ತನ್ನ ಕರ್ಮಾನುಷ್ಠಾನಗಳಿಂದಲೂ. ತನ್ನ ವಿಷಯವಾದ ಜ್ಞಾನಯೋಗಗಳಿಂದಲೂ, ನಿನ್ನಲ್ಲಿ ಭಕ್ತಿಯೋಗದಿಂದಲೂ ನಿನ್ನನ್ನು ಭಜಿಸುತ್ತಾರೋ ಅವರುಗಳಿಗೆ ನಿನ್ನ ದಯೆಯೇ ತಥಾತ್ವಕೃತ್– ಭಕ್ತ್ಯಾದಿಗಳನ್ನು ಉಳ್ಳವರನ್ನಾಗಿ ಮಾಡುತ್ತದೆ. ಅಥವಾ ಮೋಕ್ಷ ಸಾಮ್ರಾಜ್ಯವನ್ನು ಪಡೆಯುವಂತೆ ಮಾಡುತ್ತದೆ. ಸೈವತು ಮೇಬಲಂ ಮತಮ್–ಆ ಕೃಪೆಯೇ ನನಗೆ ಪುರುಷಾರ್ಥಸಾಧನವಾಗಿ ಸಮ್ಮತವು,

11) ಸ ತಂ ನಿಪತಿತಂ ಭೂಮೌ ಶರಣ್ಯಃ ಶರಣಾಗತಮ್ ।
ವಧಾರ್ಹಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್ ॥ ರಾಮಾಯಣ (5-38-84) ಪು.ತಿ.ನೋ

ಗದ್ಯತ್ತಿಲುಮ್ 1) "ಮದೀಯಯೈವ ದಯಯಾ" ಎನ್ಗೈಯಾಲೇ ಇಕ್ಕೃಪೈಯಿನ್ ಪ್ರಾಧಾನ್ಯಮ್ ವಿವಕ್ಷಿತಮ್

"ಮಾ" ಮಿತಿ ಪದಸ್ಯಾರ್ಥಂ ನಿಗಮಯತಿ.

ಇಪ್ಪಡಿ ಆಶ್ರಿತ ರಕ್ಷಣತ್ತುಕ್ಕು ಪ್ರಧಾನಮಾಯುಮ್ ಪರಿಕರಮಾಯುಮ್, ಉಳ್ಳ ಸರ್ವಾಕಾರ ಙ್ಗಳಾಲುಮ್, ವಿಶಿಷ್ಟನಾನ ತನ್ನೈ ಅಭಿಮುಖ ಸ್ಥಿತಿಯಿಲೇ "ಮಾಂ" ಎನ್ರು ನಿರ್ದೇಶಿತ್ತರುಳಿನಾನ್.

---

**ಗದ್ಯತ್ತಿಲುಮ್** – ಶರಣಾಗತಿಗದ್ಯದಲ್ಲೂ (1) **ಮದೀಯಯೈವದಯಯಾ** – ಇತ್ಯಾದಿ ಕೇವಲ ನನ್ನ ದಯೆಯಿಂದಲೇ ಪ್ರಕೃತಿ ಸಂಬಂಧವನ್ನು ಬಿಟ್ಟು ನಿತ್ಯಕಿಂಕರನಾಗಿ ಆಗುತ್ತೀಯೆ, ಎಂದು ಹೇಳಿರುವು ದರಿಂದ ಈ ಕೃಪೆಯ ಪ್ರಾಧಾನ್ಯವು ವಿವಕ್ಷಿತ. ಅಂದರೆ ಭಗವಂತನ ಕೃಪೆಯೇ ಭಗವತ್ಪ್ರಾಪ್ತಿಗೆ ಮುಖ್ಯ ಕಾರಣ.

**ಇಪ್ಪಡಿ ಆಶ್ರಿತರಕ್ಷಣತ್ತುಕ್ಕು** ಇತ್ಯಾದಿ – ಹೀಗೆ ಆಶ್ರಿತರಕ್ಷಣಕ್ಕೆ ಕರುಣೆಯು ಪ್ರಧಾನವಾಗಿಯೂ, ಜ್ಞಾನ ಶಕ್ತಿ ಸ್ವಾಮಿತ್ವಾದಿಗಳೂ ವಿಗ್ರಹಾದಿಗಳೂ ಪರಿಕರಗಳಾಗಿಯೂ ಇರುವ ತನ್ನನ್ನು **ಅಭಿಮುಖ ಸ್ಥಿತಿಯಿಲೇ** ಎದುರಿನಲ್ಲಿದ್ದುಕೊಂಡು, **ಮಾಂ ಎನ್ರು** ಇತ್ಯಾದಿ – 'ಮಾಂ' ನನ್ನನ್ನು, ಎಂದು ಕೃಪೆಯಿಂದ ತೋರಿಸಿ ಕೊಡುತ್ತಾನೆ. ಇಲ್ಲಿ 'ಮಾಂ' ಎಂಬುದು ಲಕ್ಷ್ಮೀ ವಿಶಿಷ್ಟನಾದ ತನ್ನನ್ನು ಎಂದರ್ಥ. ಪ್ರಪತ್ತಿಯು ಲಕ್ಷ್ಮೀ ವಿಶಿಷ್ಟನಲ್ಲಿ ಮಾಡಬೇಕೆಂಬುದು ದ್ವಯಮಂತ್ರದಲ್ಲಿ ಕಂಠೋಕ್ತ. ಅಲ್ಲಿ "ಶ್ರೀಮತ್" ಶಬ್ದದ, ಮತುಪ್ ಪ್ರತ್ಯಯದಿಂದ "ನಿತ್ಯಯೋಗವು" ಸ್ಪಷ್ಟ. ಆದ್ದರಿಂದ-ಆಶ್ರಿತರಕ್ಷಣೆಗೆ ಪ್ರಧಾನವಾದ ಕರುಣೆಯೂ ಪರಿಕರಗಳಾದ ಜ್ಞಾನ ಶಕ್ತಿ ಸ್ವಾಮಿತ್ವಾದಿಗಳೂ, ವಿಗ್ರಹಾದಿಗಳೂ ಇಬ್ಬರಿಗೂ ಸಾಧಾರಣಗಳೆಂಬುದು ವಿವಕ್ಷಿತ. ಈ ಪ್ರಕರಣದಲ್ಲಿ ದಯೆಗೆ ಪ್ರಧಾನ್ಯತೆಯನ್ನು ಹೇಳಿರುವುದು "ಶ್ರೀನಿವಾಸಾನುಕಂಪಯಾ", "ಶ್ರೀನಿವಾಸ ದಯಾಂಭೋಧೇಃ", "ದೀನಾಲಂಬನ ದಿವ್ಯ ದಂಪತಿ ದಯಾ", "ಪದ್ಮಾಸಹಾಯ ಕರುಣೇ", ಪದ್ಮಾಕಾಂತಂ ಪ್ರಣಿಹಿತವತೀಂ", ಇತ್ಯಾದಿ ದಯಾಶತಕದಲ್ಲಿ ನಿರೂಪಿಸಿರುವಂತೆ ದಿವ್ಯದಂಪತಿಗಳ ದಯೆಯೆಂದು ವಿವಕ್ಷಿತ ಕೆಲವೆಡೆಗಳಲ್ಲಿ "ಬಹುಮತಿ ಮನಪಾಯಂ ವಿಂದಸಿ ಶ್ರೀಧರಣ್ಯೋಃ", "ಲಕ್ಷ್ಮೀಭೂಮಿನೀಳಾಸು ಪ್ರಥಯತಿ ಬಹುಮಾನಂ" ಎಂದು ಲಕ್ಷ್ಮಿಯನ್ನು ಭೂಮಿ ನೀಳೆಗಳೊಡನೆ ಸೇರಿಸಿ, ಭಗವಂತನ ದಯೆಯು, ಅವರು ಗಳಿಂದ ಶ್ಲಾಘಿಸಲ್ಪಡುತ್ತದೆ ಎಂದು ಪೃಥಕ್ಕರಿಸಿರುವುದು, ಲಕ್ಷ್ಮಿಯ ಪುರುಷಕಾರತ್ವ ರೂಪದಿಂದ ಅಷ್ಟೇ, ಭೂಮಿ ನೀಳೆಗಳಿಗೆ ಪುರುಷಕಾರತ್ವವು ಮಾತ್ರ. ಆದ್ದರಿಂದ ಅವರೊಡನೆ ಕೂಡಿದ ಲಕ್ಷ್ಮೀಯೂ ಪುರುಷ ಕಾರತ್ವ ವೇಷದಿಂದ ಭಗವಂತನ ದಯೆಯನ್ನು ಶ್ಲಾಘಿಸುತ್ತಾಳೆಂದು ಭಾವ. ಇದರಿಂದ ವಿಶಿಷ್ಟ ತತ್ವದ ದಯೆಯು ಚೇತನನಿಗೆ ಉಪಾಯಭೂತವೆಂಬ ಸಿದ್ಧಾಂತವು ನಿವರ್ತಿಸಲ್ಪಡುವುದಿಲ್ಲ. ಶ್ರೀನಿವಾಸನ ದಯೆಯ ಮಹಿಮ ವರ್ಣನದಲ್ಲಿ ಲಕ್ಷ್ಮೀ ದಯಾ ಮಹಿಮ ವರ್ಣನವೂ ಅಂತರ್ಗತ. "ಈಶ್ವರನ್ ಶರಣ್ಯನ್" ಇತ್ಯಾದಿ ಸ್ಥಲಗಳಲ್ಲಿ ಪತಿಪ್ರಾಧಾನ್ಯ ವಿವಕ್ಷೆಯಿಂದ ಏಕವಚನವನ್ನು ಹೇಳಿದ್ದರೂ ಲಕ್ಷ್ಮೀವಿಶಿಷ್ಟವಾದ ತತ್ವವು "ಈಶ್ವರ" ಶಬ್ದಕ್ಕೆ ವಿಷಯವೆಂಬುದು ಅನೇಕ ಕಡೆಗಳಲ್ಲಿ ಆಚಾರ್ಯರಿಂದ ನಿರೂಪಿಸಲ್ಪಟ್ಟಿರುವುದು ಗಮನಾರ್ಹ.

---

ಆ ರಕ್ಷಕನಾದ ಶ್ರೀರಾಮಚಂದ್ರನು ತನ್ನ ಪಾದಗಳ ಹತ್ತಿರ ಭೂಮಿಯಲ್ಲಿ ಬಂದು ಬಿದ್ದು ಶರಣಾಗತನಾದ ಕಾಕಾಸುರ ನನ್ನು, ವಧೆಗೆ ಅರ್ಹನಾಗಿದ್ದರೂ ಕೇವಲ ಕೃಪೆಯಿಂದಲೇ ಪರಿಪಾಲಿಸಿದನು,

## ಅಥ ಏಕ ಶಬ್ದಂ ವ್ಯಾಚಷ್ಟೇ.

"ಮಾಂ" ಎನ್ಗಿರ ಪದತ್ತಿಲೇ ಏಕವಚನತ್ತಾಲೇ ಏಕತ್ವಮ್‌ತೋತ್ತಾನಿರ್ಕ ಪಿನ್ಬು "ಏಕ" ಶಬ್ದಂ 2) "ಎನಕ್ಕೇ ತನ್ನೈ ತನ್ದ ಕರ್‌ಪಹಮ್" ಎನ್ಗಿರಪಡಿಯೇ ಪ್ರಾಪ್ಯಮಾನ ಅವನ್ ತಾನೇ ಪ್ರಾಪಕನಾನಪಡಿಯಾಲೇ ಉಪಾಯಫಲೈಕ್ಯತ್ತೈಚ್ಚೊಲ್ಲುಹಿರದೆನ್ರುಮ್ ಯೋಜಿಪ್ಪರ್‌ಹಳ್. ಇದರ್ಕ್ಕು 1) "ಮಾಮೇಕ ಮೇವ ಶರಣಮ್" ಎನ್ಗಿರ ಸಮಾನ ಪ್ರಕರಣವಾಕ್ಯಮುಮ್ ಅನುಗುಣಮ್ ಏವಕಾರ ಮುಂಡಾಯಿರುಕ್ಕ ಏಕ ಶಬ್ದಮ್‌ಕಿಡನ್ದಾಲ್ ಅದುಕ್ಕು ಅವಧಾರಣಮೊೞಿಯ ವೇರೇ ಪೊರುಳ್‌ಕೊಳ್ಳುಹೈ ಉಚಿತಮಿರ್ರೇ

ಇಙ್ಙನನ್ರಿಕ್ಕೇ "ಮುಖ್ಯಾನ್ಯ ಕೇವಲೇಷ್ವೇಕಮ್" ಎನ್ಗಿರಪಡಿಯೇ ಬಹ್ವರ್ಥಮಾನ "ಏಕ" ಶಬ್ದಮಿಙ್ಙ

---

### ಏಕಶಬ್ದಕ್ಕೆ ಆರು ವಿಧವಾದ ಅರ್ಥ.

(i) **ಉಪಾಯವೂ ಫಲವೂ ಒಂದೇ "ಮಾಂ" ಎನ್ಗಿರ ಪದತ್ತಿಲೇ** ಇತ್ಯಾದಿ – "ಮಾಂ" ಎಂಬ ಪದದಲ್ಲಿ ಏಕವಚನದಿಂದ ಏಕತ್ವವು **ತೋಟ್ರಾನಿರ್ಕ** – ತೋರುತ್ತಿರುವಾಗ, **ಪಿನ್ಬುಮ್ ಏಕ ಶಬ್ದಮ್** ಇತ್ಯಾದಿ – ತಿರುಗಿಯೂ "ಏಕಂ" ಎಂಬ ಶಬ್ದವು (2) **ತನ್ನೈತ್ತಂದ ಕರ್ಪಹಮ್** – ತನ್ನನ್ನೇ ತಂದುಕೊಟ್ಟ ಕಲ್ಪವೃಕ್ಷವು, ಎಂಬಂತೆ ಪ್ರಾಪ್ಯನಾದ **ತಾನೇ ಪ್ರಾಪಕನಾನ ಪಡಿಯಾಲೇ** – ಮೋಕ್ಷದಲ್ಲಿ ಹೊಂದಲ್ಪಡುವವನು ತಾನೇ ತನ್ನನ್ನು ಮೋಕ್ಷಕ್ಕೆ ಕರೆದೊಯ್ಯುವುದರಿಂದ **ಉಪಾಯ ಫಲೈಕ್ಯತ್ತೈ** ಇತ್ಯಾದಿ – ಉಪಾಯವೂ ಮೋಕ್ಷಕ್ಕೆ ಉಪಾಯವೂ, ಮೋಕ್ಷವೆಂಬ ಫಲವೂ ತಾನೇ (ಭಗವಂತನೇ) ಎಂದು ತಿಳಿಸುತ್ತದೆ, ಎಂದೂ ಯೋಜಿಸುತ್ತಾರೆ. ಈ ಯೋಜನೆಗೆ ಸಮಾನ ಪ್ರಕರಣಗಳಲ್ಲಿ ಹೇಳಿರುವ ಪ್ರಮಾಣ ವಾಕ್ಯಗಳನ್ನು, **ಇದುಕ್ಕು (1) "ಮಾಮೇಕ ಮೇವ ಶರಣಂ"** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಈ ಉಪಾಯವೂ ಫಲವೂ ಅವನೇ ಎಂಬ ಯೋಜನೆಗೆ, ನನ್ನೊಬ್ಬನನ್ನೇ ಉಪಾಯವನ್ನಾಗಿಯೂ, ಫಲವನ್ನಾಗಿಯೂ ಪಡೆ, ಎಂಬ ಸಮಾನ ಪ್ರಕರಣ ವಾಕ್ಯವೂ ಅನುಗುಣವಾದದ್ದು. **ಏವಕಾರ ಮುಂಡಾಯಿರಕ್ಕ** ಇತ್ಯಾದಿ 'ಮಾಮೇಕ ಮೇವ' ಎಂಬಲ್ಲಿ ಏವಕಾರವು ಇರುವಾಗ ನನ್ನನ್ನೇ ಎಂಬ ಅವಧಾರಣಾರ್ಥವು ಏರ್ಪಡುತ್ತದೆ. ಆಗ "ಏಕ" ಶ್ಬದಕ್ಕೆ ಬೇರೆ ಅರ್ಥವನ್ನು ಅಂದರೆ ಪ್ರಾಪ್ಯಪ್ರಾಪಕಗಳೆರಡೂ ಅವನೇ ಎಂಬ ಅರ್ಥವನ್ನು ಸ್ವಿಕರಿಸುವುದು ಉಚಿತವಲ್ಲವೇ.

### (ii) ಜೀವ ಪ್ರಾಧಾನ್ಯ ನಿವಾರಣೆ – ಏಕಶಬ್ದಾರ್ಥ.

**ಇಂಗನನ್ರಿಕ್ಕೇ** ಇತ್ಯಾದಿ – ಹೀಗಲ್ಲದೆ, "ಮುಖ್ಯಾನ್ಯ ಕೇವಲೇಷ್ವೇಕಮ್" ಎಂಬಂತೆ – ಏಕಶಬ್ದವು.

---

1) ಶರೀರಪಾತಸಮಯೇ ಕೇವಲಂಮದೀಯ ಯೈವ ದಯಯಾ ಅತಿಪ್ರಬುದ್ಧಃ... ಪ್ರಕೃತಿಂ ಸ್ಥೂಲ ಸೂಕ್ಷ್ಮರೂಪಾಂವಿಸೃಜ್ಯ........... ನಿತ್ಯಕಿಂಕರೋ ಭವಿಷ್ಯಸಿ (ಶರಣಾಗತಿ ಗದ್ಯ) ಪ್ರಪನ್ನನ ಶರೀರವು ಬಿಟ್ಟುಹೋಗುವ ಸಮಯದಲ್ಲಿ ಭಗಮತನು ಕೇವಲ ತನ್ನ ದಯೆಯಿಂದಲೇ ಜೀವನು ತನ್ನನ್ನು ನನೆಸಿಕೊಳ್ಳುವಂತೆ ಪ್ರಬುದ್ಧನನ್ನಾಗಿ ಮಾಡಿ (ಅಂತಿಮ ಸ್ಮೃತಿಯನ್ನುಂಟು ಮಾಡಿ) ಒಡನೇ ಈ ಪ್ರಕೃತಿ ಸಂಬಂಧವನ್ನು ಬಿಡಿಸಿ ಮೋಕ್ಷಕ್ಕೆ ಕರೆದೊಯ್ದು ತನ್ನ, ಅನುಭವ ಪರೀವಾಹವಾದ ನಿತ್ಯ ಕೈಂಕರ್ಯವನ್ನು ದಯಪಾಲಿಸುತ್ತಾನೆ.

2) ಪರ್ಪನಾಬನ್ ಉಯರ್‌ವರ ವುಯರುಮ್ ಪೆರುಂತಿರಲೋನ್,<br>
ಎರ್ಪ್ಪರನ್ ಎನ್ನೈಯಾಕ್ಕಿಕ್ಕೊಂಡು ಎನಕ್ಕೇ ತನ್ನೈತ್ತಂದ,<br>
ಕರ್ಪ್ಪಹಮ್, ಎನ್ ಅಮುದಮ್ ಕಾರ್ಮುಹಿಲ್ ಪೋಲುಮ್ ವೇಂಗಡ ನಲ್<br>
ವೆರ್ಪನ್, ವಿಶುಂಬೋರ್ ಪಿರಾನ್ ಎಂದೈ ತಾಮೋದರನೇ ॥ ತಿರುವಾಯ್ ಮೊೞಿ (2-7-1)

1) ಮಾಮೇಕ ಮೇವ ಶರಣಂ ಆತ್ಮಾನಂ ಸರ್ವದೇಹಿನಾಮ್ ।<br>
ಯಾಹಿ ಸರ್ವಾತ್ಮ ಭಾವೇನ ಯಾಸ್ಯಸಿಹ್ಯಕುತೋ ಭಯಮ್ ಶ್ರೀ ಭಾಗವತ(11-12-14)

ಸರ್ವಪ್ರಾಣಿಗಳಿಗೂ ಅಂತರಾತ್ಮನಾದ ನನ್ನನ್ನೇ ಸರ್ವಾತ್ಮಭಾವೇನ - ಉಪಾಯವೂ ಫಲವೂ ಇವನೇ ಎಂಬ ಭಾವನೆಯಿಂದ ಶರಣಹೊಂದು, ಆನಂತರ ಸಂಸಾರಾದಿ ಭಯಗಳು ಯಾವುವೂ ಇರುವುದಿಲ್ಲ.

ಕೇವಲ ಪರ್ಯ್ಯಾಯಮಾಯ್, 2 "ಮಾಮೇವ ಯೇ ಪ್ರಪದ್ಯಂತೇ" 3] "ತಮೇವ ಶರಣಂ ಗಚ್ಛ" ಇತ್ಯಾದಿಹಳಿರ್‌ಪಡಿಯೇ, ಅವಧಾರಣಾರ್ಥಮಾಯ್, ಶರಣ್ಯಗುಣ ಪೌಷ್ಕಲ್ಯತ್ತಾಲೇ ಸ್ವ ಸ್ವಾತಂತ್ರ್ಯಾದಿಹಳೈ ನಿವರ್ತ್ತಿಪ್ಪಿಕ್ಕಿರದೆನ್ರು ಶೊಲ್ಲುವರ್‌ಹಳ್.

ಎಙ್ಙನೇ ಎನ್ನಿಲ್ ? ಸ್ವರಕ್ಷೈಕ್ಕು ಉಪಯುಕ್ತಙ್ಗಳಾನ ವಶೀಕರಣಙ್ಗಳೈ ಶಾಸ್ತ್ರನಿಯುಕ್ತನಾನ ತಾನ್ ಅನುಷ್ಠಿಕ್ಕೈಯಾಲೇ ರಕ್ಷೈಯಿಲೇ ತನಕ್ಕುಮ್ ಕರ್ತ್ತೃತ್ವಮ್ ತೋತ್ತಿ ಸಿದ್ಧೋಪಾಯ ಭೂತನಾನ ಶರಣ್ಯನೋಡೊಕ್ಕ ತನ್ನೈಯುಮ್ ಉಪಾಯಮಾಹ ಎಣ್ಣಪ್ಪುಹ ಪ್ರಸಕ್ತಮಾನ ಉಪಾಯದ್ವಿತ್ವತ್ತೈಕ್ಕಳಿಕ್ಕಿರದು ಏಕಶಬ್ದಮ್. ಅದು ಕಳಿನ್ದಪಡಿ ಯೆನ್ನನ್ನಿಲ್ "ಕರ್ತ್ತಾಶಾಸ್ತ್ರಾರ್ಥವತ್ತ್ವಾತ್", ಎನ್ಗಿರ ಪಡಿಯೇ ಜೀವನುಕ್ಕು ಕರ್ತ್ತೃತ್ವಮ್ ಪ್ರಾಮಾಣಿಕಮೇಯಾಹಿಲುಮ್ ಇದು ಪರಾಧೀನಮುಮಾಯ್

---

ಮುಖ್ಯ, ಬೇರೆ. ಕೇವಲ, ಎಂದು ಅನೇಕಾರ್ಥಗಳಿಂದ ಕೂಡಿ, ಇಲ್ಲಿ ಕೇವಲನೆಂಬ ಅರ್ಥದಲ್ಲಿ, (2) **ಮಾಮೇವಯೇಪ್ರಪದ್ಯಂತೇ** – ನನ್ನನ್ನೇ ಯಾರು ಶರಣ ಹೊಂದುತ್ತಾರೆಯೋ, (3) **ತಮೇವ ಶರಣಂಗಚ್ಛ**– ಅವನನ್ನೇ ಶರಣಹೊಂದು, ಇತ್ಯಾದಿಗಳಲ್ಲಿ ಹೇಳಿರುವಂತೆ, **ಅವಧಾರಣಾರ್ಥಮಾಮ್** – ಅವನನ್ನೇ ಎಂದು ಒತ್ತಿ ಹೇಳುವುದಾಗಿ. ಶರಣ್ಯನ ಗುಣಪೌಷ್ಕಲ್ಯದಿಂದ ಸ್ವಸ್ವಾತಂತ್ರ್ಯಾದಿಗಳನ್ನು, **ನಿವರ್ತಿಪ್ಪಿಕ್ಕಿರದೆನ್ರುಮ್**– ಹೋಗಲಾಡಿಸುತ್ತದೆಯೆಂದೂ, ಹೇಳುತ್ತಾರೆ.

**ಎಂಗನೇಯೆನ್ನಿಲ್** – ಹೇಗೆಂದರೆ, **ಸ್ವರಕ್ಷೈಕ್ಕು** ಇತ್ಯಾದಿ – ತನ್ನ ರಕ್ಷಣಕ್ಕೆ ಉಪಯುಕ್ತಗಳಾದ **ವಶೀಕರಣಂಗಳೈ** – ಭಕ್ತಿಪ್ರಪತ್ತಿ ಮೊದಲಾದವನ್ನು, ಶಾಸ್ತ್ರದಿಂದ ವಿಧಿಸಲ್ಪಟ್ಟು ತಾನು ಅನುಷ್ಠಿಸುವುದರಿಂದ ರಕ್ಷಣದಲ್ಲಿ ತನಗೂ ಕರ್ತೃತ್ವವು ತೋರಿ, ಸಿದ್ಧೋಪಾಯಭೂತನಾದ ಶರಣ್ಯನಿಗೆ ಸಮಾನವಾಗಿ ತನ್ನನ್ನೂ ಉಪಾಯವಾಗಿ **ಎಣ್ಣಪ್ಪುಹ** – ಗಣಿಸಲು, ಹೀಗೆ ಪ್ರಸಕ್ತವಾದ ಉಪಾಯದ್ವಿತ್ವವನ್ನು, (ತಾನೂ ಭಗವಂತನೂ ಇಬ್ಬರೂ ಉಪಾಯವೆಂಬುದನ್ನು ), ಏಕಶಬ್ದವು ಹೋಗಲಾಡಿಸುತ್ತದೆ. **ಅದುಕಳಿಂದಪಡಿ ಎಂಗನೇಯೆನ್ನಿಲ್**– ಆ ಉಪಾಯದ್ವಿತ್ವವು ಕಳೆದುಹೋದದು ಹೇಗೆಂದರೆ, **"ಕರ್ತಾಶಾಸ್ತ್ರಾರ್ಥವತ್ತ್ವಾತ್"** – ಬ್ರಹ್ಮಸೂತ್ರ (2 - 3 - 33) ಜೀವನುಕರ್ತಾ, ಶಾಸ್ತ್ರಗಳು ಹೀಗೆ ಮಾಡು, ಹೀಗೆ ಮಾಡಬೇಡ ಎಂದು ಜೀವನನ್ನು ಕುರಿತು ಹೇಳುವುದರಿಂದ ಜೀವನಿಗೆ ಕರ್ತೃತ್ವವನ್ನು ಹೇಳಿದರೇನೇ ವಿಧಿ ನಿಷೇಧ ಶಾಸ್ತ್ರಗಳಿಗೆ ಪ್ರಯೋಜನತ್ವವು ಏರ್ಪಡುತ್ತದೆ. - ಎಂಬಂತೆ ಜೀವನಿಗೆ ಕರ್ತೃತ್ವವು ಪ್ರಾಮಾಣಿಕವೇ ಆದರೂ, ಇದು **ಪರಾಧೀನ**ವಾಗಿ ಅಂದರೆ "ಪರಾತ್ತುತಚ್ಛ್ರುತೇಃ" ಎಂದು ಭಗವದಧೀನವಾಗಿರುತ್ತದೆಯಾದ್ದರಿಂದ ಜೀವನು **ಸ್ವತಂತ್ರ**

---

2) ದೈವೀಹ್ಯೇಷಾಗುಣಮಯೀ ಮಮಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥
ಸತ್ವರಜಸ್ತಮೋಃ ಗುಣಗಳಿಂದ ಕೂಡಿದ ಪ್ರಕೃತಿ (ಮಾಯಾ)ಸಂಬಂಧವು ಜಗದ್ವ್ಯಾಪಾರವೆಂಬ ಕ್ರೀಡೆಯಿಂದ ಕೂಡಿದ ನನ್ನಿಂದ (ಕೃಷ್ಣಪರಮಾತ್ಮನಿಂದ) ನಿರ್ಮಿತವು, ಜೀವನು ಇದನ್ನು ತಾನೇ ಬಿಡಿಸಕೊಳ್ಳಲಾಗದು, ನನ್ನನ್ನು ಯಾರು ಶರಣ ಹೊಂದುತ್ತಾರೋ ಅವರು ಈ ಪ್ರಕೃತಿ ಸಂಬಂಧದಿಂದ ಬಿಡುಗಡೆ ಹೊಂದುತ್ತಾರೆ.

3) ತಮೇವ ಶರಣಂಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ ಗೀತೆ (18-62)
ಸರ್ವಭಾವನೆಯಿಂದಲೂ ಅಂದರೆ ಅಂತರ್ಯಾಮಿ, ಉಪದೇಷ್ಟಾ, ಪ್ರಾಪ್ಯ, ಪ್ರಾಪಕನು ಎಂಬ ಭಾವನೆಯಿಂದ ಆ ಭಗವಂತನನ್ನೇ ಶರಣ ಹೊಂದು ಅವನ ಅನುಗ್ರಹದಿಂದ ಸರ್ವಕರ್ಮಗಳಿಂದಲೂ ಬಿಡಲ್ಪಡುತ್ತೀಯಾ. ಶಾಶ್ವತವಾದ ಪರಮಪದವನ್ನು ಹೊಂದುತ್ತೀಯಾ.

ಅಲ್ಪವಿಷಯಮುಮಾಯ್ ಪ್ರತಿಹತಿಯೋಗ್ಯಮುಮಾಯ್ ಇರುಕ್ಕುಮ್.

ಆಹೈಯಾಲ್ ಇವನ್ದಾನ್ ಉಪಾಯಾನುಷ್ಠಾನಂ ಪಣ್ಣಿತ್ತುಮ್ 1) "ವರದ ತವಖಲು ಪ್ರಸಾದಾದೃತೇ ಶರಣಮಿತಿ ವಚೋಪಿ ಮೇ ನೋದಿಯಾತ್" ಎನ್ರು ಶೊಲ್ಲುಹಿರಪಡಿಯೇ ಅವನ್ ಕಟಾಕ್ಷಮಡಿಯಾಹ ವರುಹೈಯಾಲೇ ಅವನಾಲೇ ಪ್ರೇರಿತನಾಯ್ ಅವನ್ ಸಹಕರಿಯಾದಪೋದು ನೀಟ ಮುಡುಕ್ಕ ಮಾಟ್ಟಾದೇ ಅವನ್ ಕೊಡುತ್ತ ಕರಣ ಕಳೇಬರಙ್ಗಳೈಕ್ಕೊಂಡು, ಅವನ್ ಕಾಟ್ಟಿನ ಉಪಾಯತ್ತೈ ಅವನ್ ತುಣೈ ಶೆಯ್ಯ ಅನುಷ್ಠಿತ್ತು ಅವನ್ ಕೊಡುಕ್ಕಪ್ಪುಹುಹಿರ ಫಲತ್ತುಕ್ಕು ಚಾತಕನ್ಪೋಲೇ ಯಣ್ಣಾನ್ದಿರುಕ್ಕಿರ ಇವನೈ ಸ್ವಾಧೀನ ಸರ್ವವಿಷಯಾಪ್ರತಿಹತ ಕರ್ತೃತ್ವಮುಡೈಯವನೋಡೇ ತುಲ್ಯನಾಹ ಇರಣ್ಡಾಮ್, ಸಿದ್ಧೋಪಾಯಮಾಹ ವೇಣ್ಣುಹೈ ವಿವೇಕಿಯಾನ ಮುಮುಕ್ಷುವುಕ್ಕು ಉಚಿತಮನ್ರೆನ್ರು "ಏಕ" ಶಬ್ದತ್ತಾಲೇ ಶೊಲ್ಲಿತ್ತಾಯಿತ್ತು.

### ಸಾಧ್ಯೋಪಾಯ ವ್ಯವಚ್ಛೇದ ಪರತ್ವಮುಪಿ ಏಕ ಶಬ್ದ ತಾತ್ಪರ್ಯಮ್

ಇಕ್ಕಟ್ಟಳೈಯಿಲೇ ಸಾಧ್ಯೋಪಾಯಮಾನ ಪ್ರಪತ್ತಿಯೈಯುಮ್ ಸಿದ್ಧೋಪಾಯತ್ತೋಡೊರು

---

ಕರ್ತಾವಲ್ಲ ಮೇಲೂ ಇವನ ಕರ್ತೃತ್ವವು **ಅಲ್ಪವಿಷಯಮುಮಾಯ್** – ಏಕದೇಶವಾಗಿಯೂ, **ಪ್ರತಿಹತಿಯೋಗ್ಯಮುಮಾಯ್** – ಪ್ರತಿಬಂಧಕಗಳಿಗಂದ ತಡೆಯಲ್ಪಡುತ್ತದೆ.

**ಆಹೈಯಾಲ್** ಇತ್ಯಾದಿ ಇವನು ಭಕ್ತಿ, ಪ್ರಪತ್ತಿರೂಪ ಉಪಾಯಾನುಷ್ಠಾನಗಳನ್ನು ಮಾಡುವುದೂ (1) **ವರದತವಖಲು ಪ್ರಸಾದಾದೃತೇ** ಇತ್ಯಾದಿ ಹೇಳಿರುವಂತೆ ಭಗವಂತನ ಕಟಾಕ್ಷವೇ ಕಾರಣವಾಗಿ ಏರ್ಪಡುವುದರಿಂದ, ಅವನಿಂದ ಪ್ರೇರೇಪಿಸಲ್ಪಟ್ಟವನಾಗಿ ಅವನು ಸಹಕರಿಸದೆ ಇದ್ದರೆ ಕೈಕಾಲುಗಳನ್ನು ಚಾಚಲೂ, ಮಡಿಸಿಕೊಳ್ಳಲೂ ಆಗದೆ, ಅವನು ಕೊಟ್ಟ **ಕರಣಕಳೇಬರಂಗಳೈಕ್ಕೊಂಡು** – ಇಂದ್ರಿಯಗಳನ್ನೂ ಶರೀರವನ್ನೂ ಧರಿಸಿ ಅವನು ತೋರಿಸಿಕೊಟ್ಟ ಭಕ್ತಿ ಪ್ರಪತ್ತಿರೂಪ ಉಪಾಯವನ್ನು, ಅವನು ಜತೆಯಲ್ಲಿದ್ದು ಸಹಕರಿಸಲು, ಅನುಷ್ಠಿಸಿ, ಅವನು ಕೊಡಲು ಉಪಕ್ರಮಿಸುವ ಫಲಕ್ಕೆ ಚಾತಕಪಕ್ಷಿ ಮೇಘವನ್ನು ತಲೆಯೆತ್ತಿ ನೋಡಿಕೊಂಡಿರುವಂತೆ **ಅಣ್ಣಾಂದಿರುಕ್ಕಿರ** – ಭಗವತ್ಪ್ರಾಪ್ತಿಯು ಯಾವಾಗ ಲಭಿಸುತ್ತದೆಯೆಂದು, ಮೇಲೆ ನೋಡುತ್ತಿರುವ **ಇವನೈ** – ಈ ಜೀವನನ್ನು, ಸ್ವಾಧೀನ ಸರ್ವವಿಷಯಗಳಲ್ಲಿ ತಡೆಯಿಲ್ಲದ ಕರ್ತೃತ್ವವನ್ನುಳ್ಳ ಭಗವಂತನೊಡನೆ **ಸಮಾನವಾಗಿ**, ಎರಡನೇ ಸಿದ್ಧೋಪಾಯವಾಗಿ ನೆನೆಸುವುದು ವಿವೇಕಿಯಾದ ಮುಮುಕ್ಷುವಿಗೆ ಉಚಿತವಲ್ಲವೆಂಬುದು "ಏಕ"ಶಬ್ದದಿಂದ ಹೇಳಿದಂತಾಯಿತು. ಈ ರೀತಿಯಾದ ಭಗವತ್ಪಾರತಂತ್ರ್ಯವನ್ನು ತಿಳಿದವನಿಗೆ, ಅವಧಾರಣಾರ್ಥವಾದ, "ಏಕ"ಶಬ್ದವು ಸ್ವಸ್ವಾತಂತ್ರ್ಯಾದಿಗಳನ್ನು ನಿರ್ವಹಿಸುತ್ತದೆ ಎಂದು ತಾತ್ಪರ್ಯ.

### (iii) ಪ್ರಪತ್ತಿರೂಪಸಾಧ್ಯೋಪಾಯವು, ಸಿದ್ಧೋಪಾಯನಾದ ಭಗವಂತನಿಗೆ ಸಮಾನವಾದ ಉಪಾಯವೆಂದು ತಿಳಿಯಬಾರದು.

**ಇಕ್ಕಟ್ಟಳೈಯಿಲೇ** – ಇತ್ಯಾದಿ ಈ ರೀತಿಯಲ್ಲಿ ಸಾಧ್ಯೋಪಾಯವಾದ ಪ್ರಪತ್ತಿಯನ್ನೂ ಸಿದ್ಧೋ

---

1) ಇಯಮಿಹ ಮತಿರಸ್ಮದುಜ್ಜೀವನೀ ವರದತವಖಲು ಪ್ರಸಾದಾದೃತೇ
ಶರಣಮಿತಿ ವಚೋಽಪಿಮೇ ನೋದಿಯಾತ್ತ ಮಸಿಮಯಿ ತತಃ ಪ್ರಸಾದೋನ್ಮುಖಃ ॥ ವರದರಾಜಸ್ತವ (98)
ಹೇವರದ ಪ್ರಭೋ ನಮ್ಮ ಉಜ್ಜೀವನಕ್ಕಾಗಿ ಏರ್ಪಡುವ ನೀನೇ ಶರಣು ಎಂಬ ಈ ಬುದ್ಧಿಯೂ ನಿನ್ನ ಅನುಗ್ರಹದಿಂದ ಅಲ್ಲದೇ ಬೇರಿಂದಲ್ಲ. ನಿನ್ನ ಅನುಗ್ರಹವಿಲ್ಲದೆ ಈ ವಾಕ್ಯೂ ಉಂಟಾಗಲಾರದು. ಆದ್ದರಿಂದ ನೀನು ನನ್ನಲ್ಲಿ ಅನುಗ್ರಹ ಪರನಾಗಿದ್ದೀಯಾ.

**ಕೋರ್‌ವೈಯಾಹ ವೇಣ್ಣಾವೈಕ್ಕಾಹ "ಏಕ" ಶಬ್ದವೆನ್ರುಮ್ ಶೊಲ್ಲುವರ್‌ಹಳ್. ಅದು ಎಙ್ಙನೇ ಎನ್ನಿಲ್ ? ಇಪ್ರಪತ್ತಿಯುಮ್ ಭಕ್ತಿಯೋಗಂ ಪೋಲೇ ಪ್ರಸಾದನಮಾಹ ವಿಧಿಕ್ಕಪಟ್ಟದೇಯಾಹಿಲುಮ್ ಸಹಜ ಕಾರುಣ್ಯಾದಿ ವಿಶಿಷ್ಟನಾನ ಸರ್ವೇಶ್ವರನುಡೈಯ ಕಾಲುಷ್ಯ ಶಮನ ಮಾತ್ರಾರ್ಥಮಾಯ್ ಸಾಕ್ಷಾತ್ಫಲತ್ತುಕ್ಕು ಸಹಜ ಸಾಮರ್ಥ್ಯಕಾರುಣ್ಯ ವಿಶಿಷ್ಟನಾನ ಅವನ್ನಿನೈವೇ ಕಾರಣಮಾವ್ ಪಡಿಯಾಯ್ ಅವನ್ನಾನೇ ಅತ್ಯಂತಾಕಿಂಚನನಾನ ಪ್ರಪನ್ನನುಕ್ಕು ಭರಸ್ವೀಕಾರತ್ತಾಲೇ ಭಕ್ತಿಯೋಗಾದಿಹಳಾನ ಗುರುತರೋಪಾಯಙ್ಗಳಿನ್ನಿರೇ ನಿನ್ರು ಇವ್ವಾನುಕೂಲ್ಯ ಸಂಕಲ್ಪಾದಿಯುಕ್ತ ಪ್ರಪತ್ತಿಮಾತ್ರ ವ್ಯಾಜ ಸಾಪೇಕ್ಷನಾಯ್, ವೇರೊನ್ರಾಲ್ ಅಪೇಕ್ಷೈಯಿಲ್ಲಾವೈಯಾಲ್ ನಿರಪೇಕ್ಷೋಪಾಯತ್ವಮೇ ಇನ್ನ್ಯಾಸವಿದ್ಯೈಕ್ಕು ವೇದ್ಯಾಕಾರಮಾಹಕ್ಕೊಂಡು 1) "ತ್ವಮೇವೋಪಾಯ ಭೂತೋಮೇ ಭವ" ಎನ್ರು ಅಪೇಕ್ಷಣೀಯನಾಯಿರುಕ್ಕ 2) "ಎನ್ನುಣರ್ವಿನುಳ್ಳೇಯಿರುತ್ತಿನೇ ನದುವು ಮವನದು ಇನ್ನರುಳೇ" ಎನ್ರುಮ್**

**(3) "ಇಶ್ಯೈವಿತ್ತೆನ್ನೈಯುನ್ತಾಳಿಣೈಕ್ಕೀೞಿರುತ್ತು ಮಮ್ಮಾನೇ" ಎನ್ರುಮ್ ಶೊಲ್ಲುಹಿರಪಡಿಯೇ**

---

ಪಾಯನಾದ ಭಗವಂತನೊಡನೆ **ಒರುಕೋರ್‌ವೈಯಾಹ** – ಸಮಾನವಾಗಿ, ಲೆಖ್ಖಿಸದೆ ಇರುವುದಕ್ಕಾಗಿ, "ಏಕ" ಶಬ್ದವೆಂಗೂ ಹೇಳುತ್ತಾರೆ. **ಅದೆಂಗನೇ ಯೆನ್ನಿಲ್** ಇತ್ಯಾದಿ – ಅದು ಹೇಗೆ ಎಂದರೆ, ಈ ಪ್ರಪತ್ತಿಯೂ ಭಕ್ತಿಯೋಗದ ಹಾಗೆ ಭಗವಂತನ ಪ್ರಸನ್ನತೆಯನ್ನುಂಟು ಮಾಡುವುದಾಗಿ ವಿಧಿಸಲ್ಪಟ್ಟಿದ್ದರೂ ಸಹಜಕಾರುಣ್ಯಾದಿ ವಿಶಿಷ್ಟನಾದ ಸರ್ವೇಶ್ವರನ ಕಾಲುಷ್ಯವನ್ನು ಶಮನ ಮಾಡುವುದು ಮಾತ್ರಾರ್ಥವಾಗಿ ಸಾಕ್ಷಾತ್ಫಲಕ್ಕೆ ಸಹಜ ಸಾಮರ್ಥ್ಯ ಕಾರುಣ್ಯ ವಿಶಿಷ್ಟನಾದ **ಭಗವಂತನ** ಸಂಕಲ್ಪವೇ ಕಾರಣವಾಗಿರುತ್ತದೆ. ಆ ರೀತಿಯಲ್ಲಿ ಅವನೇ ಅತ್ಯಂತಾಕಿಂಚನನಾದ ಪ್ರಪನ್ನನ ಭರಸ್ವೀಕಾರದಿಂದ, ಭಕ್ತಿಯೋಗಾದಿಗಳಾದ ಗುರುತರೋಪಾಯಗಳ ಸ್ಥಾನದಲ್ಲಿ ನಿಂತು, ಈ ಆನುಕೂಲ್ಯ ಸಂಕಲ್ಪಾದಿ ಯುಕ್ತ ಪ್ರಪತ್ತಿ ಮಾತ್ರ ವ್ಯಾಜಸಾಪೇಕ್ಷನಾಗಿ ಬೇರೆ ಯಾವುದನ್ನೂ ಅಪೇಕ್ಷಿಸುವುದಿಲ್ಲ. ಆದರಿಂದ ನಿರಪೇಕ್ಷೋಪಾಯತ್ವವೇ ಈ ನ್ಯಾಸವಿದ್ಯೆಗೆ ವೇದ್ಯಾಕಾರ. **(1) 'ತ್ವಮೇವೋಪಾಯ ಭೂತೊಮೇಭವ'** – ನೀನೇ ಉಪಾಯವಾಗಿರು ಎಂಬ ಪ್ರಾರ್ಥನಾಪೂರ್ವಕ ಭರನ್ಯಾಸವನ್ನೇ ಮಾತ್ರ ಅಪೇಕ್ಷಿಸುತ್ತಾನಾಗಿ, (2) **ಎನ್ನುಣರ್ ವಿನುಳ್ಳೇ ಇರುತ್ತಿನೇನ್** ಇತ್ಯಾದಿ (3) **ಇಶ್ಯೈವಿತ್ತೆನ್ನೈಉನ್**

---

1) ಅಹಿರ್ಬುಧ್ನ್ಯ ಸಂಹಿತೆ 37-31

2) ಉಣರ್‌ವಿಲುಂಬ ರೊರುವನ್ನೈ ಅವನದರುಳಾಲ್ ಉರಲ್ ಪೊರುಟ್ಟು ಎನ್
ಉಣರ್‌ವಿನುಳ್ಳೇ ಇರುತ್ತಿನೇನ್ ಅದುವುಮ್ ಅವನದು ಇನ್ನರುಳೇ,
ಉಣರ್ವುಮ್ ಉಯಿರುಮ್ ಉಡಂಬುಮ್ ಮಟ್ರುಲಪ್ಪಿನವುಮ್ ಪೞುದೇಯಾಮ್
ಉಣರ್ವೈಪ್ಪೆರ ಊರ್‌ನ್ದಿರವೇರಿ ಯಾನುಮ್ ತಾನಾಯೊೞಿನ್ದಾನೇ ॥ ತಿರುವಾಯ್‌ಮೊೞಿ(8-8-3)

ನಿತ್ಯಸೂರಿಗಳಿಗೂ ಮೇಲಾದ ಭಗವಂತನನ್ನು ನನಗೆ ಉಪಾಯವೆಂಬ ಜ್ಞಾನಕ್ಕೆ ವಿಷಯವನ್ನಾಗಿ ಮಾಡಿದೆನು. ಅದಕ್ಕೆ ಕಾರಣ ಅವನ ಭೋಗ್ಯವಾದ ಕೃಪೆಯೇ–ಕೃಪಾಕಾರ್ಯವೆಂದರ್ಥ,

3) ಇಶ್ಯೈವಿತ್ತೆನ್ನೈ ಉನ್‌ತಾಳಿಣೈಕ್ಕೀೞ್ ಇರುತ್ತುಮಮ್ಮಾನೇ
ಅಶ್ಯೈವಿಲಮರರ್ ತಲೈವರ್ ತಲೈವಾ ಆದಿಪ್ಪೆರುಮೂರ್ತಿ
ತಿಶೈವಿಲ್ ವೀಶುಮ್ ಶೆೞುಮಾಮಣಿಹಳ್ ಶೇರುಮ್ ತಿರುಕ್ಕುಡಂದೈ
ಅಶ್ಯೈವಿಲುಲಹಮ್ ಪರವಕ್ಕಿಡಂದಾಯ್ ಕಾಣವಾರಾಯೇ ॥ ತಿರುವಾಯ್ ಮೊೞಿ(5-8-9)

ಇತರ ವಿಷಯಗಳಲ್ಲಿ ಮನಸ್ಸು ಹೋಗದಂತೆ ಈ ಆತ್ಮಾ ನಿನಗೇ ದಾಸನು ಎಂದು ನನ್ನನ್ನು ಒಪ್ಪಿಸಿ, ನಿನ್ನ ಪಾದ ಪರಿಸರದಲ್ಲಿ ಇಟ್ಟುಕೊಳ್ಳುವ ಸ್ವಾಮಿಯೇ ನಿತ್ಯಸೂರಿಗಳಿಗೂ ನಿರ್ವಾಹಕನೇ ಆದಿ ಮೂರ್ತಿಯೇ ದಿಕ್ಕುಗಳಲ್ಲೆಲ್ಲಾ ಜ್ಞಾನವನ್ನು ಹರಡುವ ಶ್ಲಾಘ್ಯರಾದ ತಿರುಮೞಿಶೈಯಾಳ್ವಾರ್ ಪ್ರಭೃತಿಗಳು ವಾಸಮಾಡುವ ತಿರುಕ್ಕುಡಂದೈ–ಕುಂಭ ಘೋಣದಲ್ಲಿ, ಲೋಕದ ಜನರೆಲಾ ಸ್ತೋತ್ರ ಮಾಡುವಂತೆ ಮಲಗಿರುವ ಸ್ವಾಮಿಯೇ ನನ್ನ ಕಣ್ಣಿಗೆ ಕಾಣಿಸಿಕೋ.

**ಉಪಾಯಭೂತನಾನ ಅವನ್ ಶೆಯ್ ವಿಕ್ಕಚ್ಚೆಯ್ ಹಿರ ವ್ಯಾಜಮಾತ್ರತ್ತೈಯುವನೋಡೊಕ್ಕ ಉಪಾಯ ಮಾಹ ಎಣ್ಣುಹೈ ಉಚಿತಮನ್ರೆನ್ರು "ಏಕ" ಶಬ್ದತ್ತುಕ್ಕು ತಾತ್ಪರ್ಯಮ್.**

**ಪ್ರಪತ್ತಿ ವಿಷಯಕ ಅತಿವಾದಸ್ಯ ಖಂಡನಮ್**

**ಇಪ್ಪಡಿ ಸಿದ್ಧೋಪಾಯತ್ತೈಪ್ಪತ್ತ ಸಾಧ್ಯೋಪಾಯಮ್ ವ್ಯಾಜಮಾತ್ರಮಾಯ್ ಪ್ರಧಾನಮನ್ರಿಕ್ಕೇ ನಿಱ್ಕಿರ ನಿಲೈಯೈಪ್ಪತ್ತ (1) ಸಂಬಂಧಜ್ಞಾನಮಾತ್ರಮ್ (2) ಸಿದ್ಧೋಪಾಯ ಪ್ರತಿಪತ್ತಿಮಾತ್ರಮ್ (3) ಅನಿವಾರಣಮಾತ್ರಮ್ (4) ಅನುಮತಿ ಮಾತ್ರಮ್ (5) ಅಚಿದ್ವ್ಯಾವೃತ್ತಿಮಾತ್ರಮ್ (6) ಚೈತನ್ಯ ಕೃತ್ಯಮ್ (7) ಚಿತ್ತ ಸಮಾಧಾನಮ್ (8) ಅಧಿಕಾರಿ ವಿಶೇಷಣಮ್ ಎನ್ರಿಪ್ಪಡಿಹಳಿಲೇ ಅತಿವಾದಮ್ ಪಣ್ಣಿನಾರ್ ಹಳ್. ಇವ್ವನ್ಯ ಪರೋಕ್ತಿಯೈಕ್ಕೊಂಡು ಇವೈತಾನೇ ಅರ್ಥಮೆನ್ರರುದಿಯಿಡವೊಣ್ಣಾದು. ಇವೈಯೆಲ್ಲಾಮ್ "ಶರಣಂವ್ರಜ" ಎನ್ಗಿರ ವಿಧಿಕ್ಕು ವಿರುದ್ಧಙ್ಗಳಾಮ್. ಅತಿಪ್ರಸಙ್ಗಾದಿ ದೋಷಙ್ಗಳುಂ ಉಂಡು.**

**ಅದೆಙ್ಗನೇ ಎನ್ನಿಲ್ – ಸಂಬಂಧಜ್ಞಾನಮಾತ್ರಮೆನ್ರಾಲುಮ್, ಸಿದ್ಧೋಪಾಯ**

---

**ತಾಳಿಣೈಕ್ಕೀ಴್** ಇತ್ಯಾದಿ ಹೇಳುವಂತೆ ಉಪಾಯಭೂತನಾದ ಅವನು ಮಾಡಿಸಲು, ತಾನು ಮಾಡುವ ವ್ಯಾಜ ಮಾತ್ರವನ್ನು ಅವನಿಗೆ ಸಮಾನವಾದ ಉಪಾಯವಾಗಿ ಗಣಿಸುವುದು ಉಚಿತವಲ್ಲವೆಂದು "ಏಕ"ಶಬ್ದಕ್ಕೆ ತಾತ್ಪರ್ಯ.

ಪ್ರಪತ್ತಿಯನ್ನು ಕುರಿತು ಕೆಲವರು **ಮಾಡುವ ಅತಿವಾದಗಳ ಖಂಡನೆ.**

**ಇಪ್ಪಡಿ** ಇತ್ಯಾದಿ–ಹೀಗೆ ಸಿದ್ಧೋಪಾಯವನ್ನು ಕುರಿತು ಸಾಧ್ಯೋಪಾಯವು ವ್ಯಾಜಮಾತ್ರವಾಗಿ, ಇದು ಪ್ರಧಾನವಲ್ಲದೇ ಇರುವ ಸ್ಥಿತಿಯನ್ನು ನೋಡಿ, ಸಾಧ್ಯೋಪಾಯವು ಸಂಬಂಧ **ಜ್ಞಾನ ಮಾತ್ರಮ್**– ಶಾಸ್ತ್ರದಿಂದ ವಿಧಿಸಲ್ಪಡದೆ ಕೇವಲ ಶೇಷತ್ವರೂಪ ಸಂಬಂಧ ಜ್ಞಾನಮಾತ್ರ, **ಸಿದ್ಧೋಪಾಯ ಪ್ರತಿಪತ್ತಿ ಮಾತ್ರಮ್** ಭಗವಂತನೇ ಸಿದ್ಧವಾದ ಉಪಾಯವೆಂಬ ಜ್ಞಾನಮಾತ್ರ, **ಅನಿವಾರಣ ಮಾತ್ರಮ್**–ಸ್ವರಕ್ಷಣಾರ್ಥಸ್ವವ್ಯಾಪಾರ ರೂಪವಾದ ಶರಣಾಗತಿಯನ್ನು ಮಾಡಿ ಭಗವಂತನನ್ನು ರಕ್ಷಿಸಲು ಅವಕಾಶ ಕೊಡದೆ ತಡೆಯುವುದು ನಿವಾರಣ ಶಬ್ದಾರ್ಥ, ಹಾಗೆ ತಡೆಯದೇ ಇರುವುದು ಅನಿವಾರಣ ಅಂದರೆ ಸ್ವಪ್ರವೃತ್ತಿ ನಿವೃತ್ತಿಯೇ ಪ್ರಪತ್ತಿ ಎಂದರ್ಥ.

**ಅನುಮತಿಮಾತ್ರಮ್,** – ಭಗವಂತನು ತಾನೇ ರಕ್ಷಿಸಲು ಬಂದಾಗ ಓಡಿಹೋಗದೆ ತನ್ನ ಅನುಮತಿಯನ್ನು **ಕೊಡುವುದು ಮಾತ್ರ. ಅಚಿದ್ವ್ಯಾವೃತ್ತಿಮಾತ್ರಮ್**– ಚೇತನಕ್ಕಿಂತ ಬೇರೆ ಎಂದು ತಿಳಿಸುವಂತೆ ರಕ್ಷಾಪೇಕ್ಷೆಯನ್ನು ಮಾಡುವುದು ಮಾತ್ರ. **ಚೈತನ್ಯಕೃತ್ಯಮ್**– ಕೃಪಾಜನಕವಾದ ಕೃಪಣವೃತ್ತಿ, ಆದಾಗಿ ಅಂಜಲಿಬಂಧ, ದಂತ ಪ್ರದರ್ಶನಾದಿಗಳು; **ಚಿತ್ತ ಸಮಾಧಾನಮ್** – ನಿರ್ಭರತ್ವ, **ಅಧಿಕಾರಿ ವಿಶೇಷಣಮ್** – ಆಕಿಂಚನ್ಯಾನನ್ಯಗತಿತ್ವ, ಎಂದು ಈ ರೀತಿಯಾದ ಅತಿವಾದವನ್ನು ಕೆಲವರು ಮಾಡಿದರು. **ಇವ್ವನ್ಯ ಪರೋಕ್ತಿಯೈ ಕೊಂಡು** ಇತ್ಯಾದಿ.

ಸ್ವೋಜ್ಜೀವನೇಚ್ಛಾಯದಿತೇ ಸ್ವಸತ್ತಾಯಾಂ ಸ್ಪೃಹಾಯದಿ ।
ಆತ್ಮದಾಸ್ಯಂ ಹರೇಸ್ಸ್ವಾಮ್ಯಂ ಸ್ವಭಾವಂಚ ಸದಾಸ್ಮರ॥

ಇತ್ಯಾದಿಗಳಲ್ಲಿ ಸಂಬಂಧ ಜ್ಞಾನಮಾತ್ರವು ಉಜ್ಜೀವಕವೆಂದು ತೋರುವಂತೆ ಹೇಳಿರುವ ಅನ್ಯಪರವಾದ ಮಾತನ್ನು ಅಂಗೀಕರಿಸಿ ಇವುಗಳೇ ಅರ್ಥವೆಂದು ನಿಶ್ಚಯಿಸಬಾರದು.

**ಇವೆಯೆಲ್ಲಾಮ್**–ಇತ್ಯಾದಿ–ಇವುಗಳೆಲ್ಲಾ "ಶರಣಂ ವ್ರಜ" ಎಂಬ ವಿಧಿಗೆ ವಿರುದ್ಧಗಳು **ಅತಿಪ್ರಸಾಂಗದಿ**-ಅಧಿಕ ಪ್ರಸಂಗವೆಂಬ ದೋಷಗಳು ಬರುತ್ತವೆ. ಅದೆಂಗನೇ **ಎನ್ನಿಲ್**–ಅದು ಹೇಗೆಂದರೆ, **ಸಂಬಂಧ ಜ್ಞಾನಮ್**

**ಪ್ರತಿಪತ್ತಿಮಾತ್ರಮೆನ್ರಾಲುಮ್, ಅದು ವಾಕ್ಯಮಾತ್ರ ಜನ್ಯಮಾಹಿಲ್ ವಿಧಿವಿಷಯ ಮಾಹಮಾಟ್ಟಾದು. ಅವಿಧೇಯಜ್ಞಾನತ್ತಾಲೇ ಮೋಕ್ಷಮೆನ್ಬಾರ್ಕ್ಕು ಉಪಾಸನಾದಿ ವಿಧಿವಿರೋಧಮ್ ಭಾಷ್ಯಾದಿ ಸಿದ್ಧಮ್. ತತ್ವಜ್ಞಾನ ಮುಡೈಯವನಕ್ಕು ಪಿನ್ಬು ಕರ್ತವ್ಯಮಾನ ಜ್ಞಾನಾನ್ತರಮಾಹಿಲ್ ಪ್ರಪತ್ತಿಯಿನುಡೈಯ ವಿಧಿ ಲಕ್ಷಣಾನುಷ್ಠಾನ ವಾಕ್ಯಜ್ಗಳ್ ಶೊಲ್ಲುಹಿರ ಪಡಿಯೇ, ಇದಿನ್ ಸ್ವರೂಪಮ್ ಅಙ್ಗೀಕರಿಕ್ಕವೇಣುಮ್.**

**ಸಿದ್ಧೋಪಾಯ ಸ್ವೀಕಾರಮೆನ್ರ ಪಾಶುರತ್ತುಕ್ಕುಮ್ ಸಿದ್ಧೋಪಾಯತ್ತೈ ಅರಿನ್ದು ಅದುತನಕ್ಕು ಕಾರ್ಯಕರಮಾಮ್ಪಡಿ ಪಣ್ಣುಹಿರ ವಿಧಿಪ್ರಾಪ್ತ ಪ್ರಾರ್ಥನಾಪೂರ್ವಕ ಭರನ್ಯಾಸ ರೂಪಾಧಿಕಾರಿ ಕೃತ್ಯತ್ತಿಲೇಯಿರೇ ತಾತ್ಪರ್ಯಮ್.**

**ಅನಿವಾರಣ ಮಾತ್ರಮೆನ್ರದು ವಿಲಕ್ಕಾದ ಮಾತ್ರಮಾನಾಲ್, ರಕ್ಷಕನಾನ ಈಶ್ವರನೈ ಇವನ್ ಮುನ್ಬು ಪ್ರಬಲನಾಯ್ ವಿಲಕ್ಕಿನಾನಾಹಿಲ್, ಈಶ್ವರನುಡೈಯ ಈಶ್ವರತ್ವಮ್ ಸಂಕುಚಿತಮಾಮ್.**

**ಅಪರಾಧತ್ತಾಲೇ ನಿಗ್ರಹತ್ತೈಯುಂಡಾಕ್ಕಿ ವಿಲಕ್ಕಿನಾನಾಹಿಲ್ ಇವನ್ ಪಣ್ಣುಹಿರ ಪ್ರಪತ್ತಿ**

---

ಇತ್ಯಾದಿ – ಸಂಬಂಧ ಜ್ಞಾನಮಾತ್ರವೇ ಪ್ರಪತ್ತಿ ಎಂದರೆ, ಸಂಬಂಧಜ್ಞಾನವು "ಶೇಷೋಽಹಿಪರಮಾತ್ಮನಃ" ಎಂದ ಭಗವಂತನಿಗೆ ಶೇಷಭೂತನೆಂಬ ಶಾಸ್ತ್ರಜನ್ಯವಾದ ಜ್ಞಾನ ಮಾತ್ರವಾಗಿ ಶಬ್ದಶ್ರವಣದಿಂದಲೇ ಉಂಟಾಗಿ, ವಿಧಿಗೆ ವಿಷಯವಾಗುವುದಿಲ್ಲ. ಹಾಗೆಯೇ **ಸಿದ್ಧೋಪಾಯ ಪ್ರತಿಪತ್ತಿ** ಇತ್ಯಾದಿ - ಭಗವಂತನೇ ಸಿದ್ಧನಾದ ಉಪಾಯವೆಂದು ತಿಳಿದು ಅದರಲ್ಲಿ ನಂಬಿಕೆಯಿಂದಿರುವುದು ಎಂಬುದೂ **ವಾಕ್ಯಮಾತ್ರ ಜನ್ಯಮಾಹಿಲ್** – ಶಾಸ್ತ್ರಜನ್ಯ ಜ್ಞಾನವಾಗಿ ಕೇವಲ ಶ್ರವಣದಿಂದಲೇ ಉಂಟಾಗುತ್ತದೆ. ಇದೂ ಹೀಗೆ ಮಾಡು, ಹೀಗೆ ಮಾಡಬೇಡ ಎಂಬ ಶಾಸ್ತ್ರವಿಧಿಗೆ ವಿಷಯವಾಗುವುದಿಲ್ಲ. **ಅವಿಧೇಯ ಜ್ಞಾನತ್ತಾಲೇ** ಇತ್ಯಾದಿ – ವಿಧಿ ವಿಷಯವಾಗದ ಜ್ಞಾನದಿಂದಲೇ ಮೋಕ್ಷವೆಂದು ಹೇಳುವವರಿಗೆ ಉಪಾಸನಾದಿ ವಿಧಿಗಳಿಗೆ ವಿರೋಧವು ಏರ್ಪಡುತ್ತದೆ ಎಂಬುದು ಭಾಷ್ಯಾದಿ ಸಿದ್ಧ. ಅದ್ವೈತಿಗಳು "ತತ್ವಮಸಿ, ಅಹಂಬ್ರಹ್ಮಾಸ್ಮಿ" ಇತ್ಯಾದಿ ಶಾಸ್ತ್ರಜನ್ಯ ಜ್ಞಾನದಿಂದಲೇ ಅಜ್ಞಾನ ನಿವೃತ್ತಿರೂಪ ಮೋಕ್ಷವು ಸಿದ್ಧ ಎಂದು ಹೇಳುವಂತೆ ಇದೂ ಸಹ ಅವಿಧೇಯ ಜ್ಞಾನವಾಗಿ ಭಾಷ್ಯಾದಿ ವಿರುದ್ಧವಾಗುತ್ತದೆ. **ತತ್ವಜ್ಞಾನ ಮುಡೈಯವನುಕ್ಕು** ಇತ್ಯಾದಿ – ಸಂಬಂಧ ಜ್ಞಾನರೂಪ ತತ್ವಜ್ಞಾನವುಳ್ಳವನಿಗೆ ಅನಂತರ ಕರ್ತವ್ಯವಾದ ಜ್ಞಾನಾಂತರವಾದರೆ, ಪ್ರಪತ್ತಿಯ ವಿಧಿ, ಅದರ ಲಕ್ಷಣ, ಅದರ ಅನುಷ್ಠಾನವನ್ನು ತಿಳಿಸುವ ವಾಕ್ಯಗಳು ಹೇಳುವಂತೆ, ಈ ಪ್ರಪತ್ತಿಯ ಸ್ವರೂಪವನ್ನು ಅಂಗೀಕರಿಸಬೇಕು. ಸಿದ್ಧೋಪಾಯ ಪ್ರತಿಪತ್ತಿ ಎಂಬ ಮಾತಿಗೆ ಪರ್ಯಾಯವಾದ, ಸಿದ್ಧೋಪಾಯ ಸ್ವೀಕಾರ – ಅಂದರೆ ಸಿದ್ಧೋಪಾಯನಾದ ಭಗವಂತನು ನಮ್ಮನ್ನು ಅಂಗೀಕರಿಸುವುದು ಪ್ರಪತ್ತಿ ಎಂಬ ವಾಕ್ಯಕ್ಕೂ ಸಿದ್ಧೋಪಾಯವನ್ನು ತಿಳಿದು ಅದು ತನಗೆ ಕಾರ್ಯಕರವಾಗುವಂತೆ, ಮಾಡುವ ವಿಧಿಪ್ರಾಪ್ತವಾದ ಪ್ರಾರ್ಥನಾಪೂರ್ವಕ ಭರನ್ಯಾಸರೂಪವಾದ ಅಧಿಕಾರಿಕೃತ್ಯದಲ್ಲಿಯೇ ತಾತ್ಪರ್ಯ. **ಅನಿವಾರಣಮಾತ್ರಮೆನ್ರದು** ಇತ್ಯಾದಿ – ಇದನ್ನು ಮೂರು ವಿಧವಾಗಿ ವಿಕಲ್ಪಿಸಿ ಖಂಡಿಸುತ್ತಾರೆ. ಅದಾಗಿ ಅನಿವಾರಣ ಮಾತ್ರವೆಂಬುದು (1) **ವಿಲಕ್ಕಾದ ಮಾತ್ರಮಾನಾಲ್** – ಭಗವಂತನು ರಕ್ಷಣೋನ್ಮುಖನಾಗಿರುವಾಗ ತಾನು ತಡೆಯದೇ ಇರುವುದೆಂದರೆ, ರಕ್ಷಕನಾದ ಈಶ್ವರನನ್ನು ಇವನು ಪೂರ್ವದಲ್ಲಿ ಪ್ರಬಲವಾಗಿ ತಡೆದಿದ್ದರೆ, ಈಶ್ವರನ ಈಶ್ವರತ್ವಕ್ಕೆ ಸಂಕೋಚವು ಏರ್ಪಡುತ್ತದೆ. (2) **ಅಪರಾಧತ್ತಾಲೇ** ಇತ್ಯಾದಿ – ಅಪರಾಧಗಳನ್ನು ಮಾಡಿ, ಭಗವಂತನಿಗೆ ನಿಗ್ರಹ – ಕೋಪ, ವನ್ನುಂಟು ಮಾಡಿ ತಡೆದರೆ ಇವನು ಮಾಡುವ ಪ್ರಪತ್ತಿಯು **ಪ್ರಸಾದನ** – ಪ್ರಸನ್ನತೆಯನ್ನೇ ಉಂಟು

**ಪ್ರಸಾದನಮೋ ಯಾಹವೇಣುಮ್. ಸ್ವರಕ್ಷಣಾರ್ಥ ವ್ಯಾಪಾರತ್ತಾಲೇ ವಿಲಕ್ಕಿನಾನೆನ್ರಿಲ್ ನಿರ್ವ್ಯಾಪಾರಮಾನ ಸುಷುಪ್ತಿ ಪ್ರಳಯಾದ್ಯವಸ್ಥೈಹಳಿಲುಮ್ ವ್ಯಾಪಿರಿಕ್ಕ ಯೋಗ್ಯಮಾಯಿರುಕ್ಕಿರ ಜಾಗ್ರದವಸ್ಥೈಯಿಲ್ ವಿಲಕ್ಕಾದೇ ಇರಕ್ಕುಂಪೋದು ಈಶ್ವರರ್ ಮೋಕ್ಷ ಪ್ರದಾನಂ ಪಣ್ಣಪ್ರಸಜ್ಗಿಕ್ಕುಮ್.**

(4) **ಅನುಮತಿ ಮಾತ್ರ ಮೆನ್ನಿಲ್, ಅದು ಉಪಾಸನನುಕ್ಕುಂ ತುಲ್ಯಮ್** (5) **ಅಚಿದ್ವ್ಯಾವೃತ್ತಿ ಮಾತ್ರಮ್, ಪ್ರತಿಕೂಲ ದಶೈಯಿಲುಮ್ ಉಂಡಾಹೈಯಾಲೇ ಇವ್ವಳವೇ ರಕ್ಷಣೀಯತೈಕ್ಕು ಉರುಪ್ಪಾಹಾದು.** (6) **ಚೈತನ್ಯ ಕೃತ್ಯ ಮೆನ್ರಾಲ್, ಉಪಾಸನಾದಿಹಳುಮ್ ಮತ್ತುಮುಳ್ಳ ಚೇತನ ವೃತ್ತಿಹಳು ಮೆಲ್ಲಾಮ್ ಚೈತನ್ಯ ಕೃತ್ಯಮಾಹೈಯಾಲೇ ಇದುಕ್ಕೋರು ವಾಶಿ ಶೊಲ್ಲಿತ್ತಾಹಾದು. ಚೇತನ ನುಕ್ಕು ತಾನೇ ವರುಮದೆನ್ರು ವಿವಕ್ಷಿಕ್ಕಿಲ್, ಉಪದೇಶಾದಿಹಳ್ ವೇಣ್ಡಾದೊಳ್ಳಿಯುಮ್.** (7) **ಫಲಾನುಪಯುಕ್ತ ಚಿತ್ತ ಸಮಾಧಾನಮಾತ್ರಮೆನ್ನಿಲ್, ತನ್ನಾದ್ರುಚ್ಯನುರೂಪಮಾಹ ಪ್ರತಿಪುರುಷಮ್**

---

ಮಾಡಬೇಕು. (3) **ಸ್ವರಕ್ಷಣಾರ್ಥ ಸ್ವವ್ಯಾಪಾರತ್ತಾಲೇ** ಇತ್ಯಾದಿ – ತನ್ನ ರಕ್ಷಣೆಗೆ ತಾನು ಮಾಡುವ ವ್ಯಾಪಾರದಿಂದ, ತಡೆದವನಾದರೆ, ವ್ಯಾಪಾರಶೂನ್ಯವಾದ – **ಸುಷುಪ್ತಿ** – ಗಾಢನಿದ್ರೆ, ಪ್ರಳಯಾದ್ಯವಸ್ಥೆಗಳಲ್ಲಿಯೂ, ವ್ಯಾಪರಿಸಲು ಯೋಗ್ಯವಾದ ಜಾಗ್ರದ್ದಶೆಯಲ್ಲಿಯೂ, ತಡೆಯದೇ ಇರುವ ಸಮಯದಲ್ಲಿ, ಈಶ್ವರನು ಮೋಕ್ಷಪ್ರದಾನವನ್ನು ಮಾಡುವ ಪ್ರಸಂಗವು ಏರ್ಪಡುತ್ತದೆ. ಹಾಗೆ ರಕ್ಷಿಸುವುದನ್ನು ನೋಡಿಲ್ಲವಾದ್ದರಿಂದ ಈ ವಾದವೂ ಸರಿಯಲ್ಲವೆಂದು ತಾತ್ಪರ್ಯ.

ಅನಂತರ ಅನುಮತಿ ಪಕ್ಷವನ್ನು ದೂಷಿಸುತ್ತಾರೆ. ಅನಾಗಿ **ಅನುಮತಿ ಮಾತ್ರ ಮೆನ್ರಾಲ್** ಇತ್ಯಾದಿ– ಭಗವಂತನು ರಕ್ಷಿಸಲು ಬರುವಾಗ ನಾವು ಅನುಮತಿಸುವುದು ಮಾತ್ರ ಉಪಾಯವೆಂದರೆ ಇದು ಉಪಾಸಕನಿಗೂ ಸಮ. ಉಪಾಸಕನನ್ನೂ ಭಗವಂತನು ರಕ್ಷಿಸಲು ಬರುವಾಗ ಅವನು ಅನುಮತಿಸಿದರೆ ಸಾಕು. ಉಪಾಸನಾರಂಭ ಕಾಲದಲ್ಲಿಯೇ ಅನುಮತಿಯು ಸಿದ್ಧವಾಗಿರುವುದರಿಂದ ಉಪಾಸನೆ ಮಾಡಬೇಕಾದ ಪ್ರಸಂಗವೇ ಇಲ್ಲದೆ ಉಪಾಸನ ವಿಧಾಯಕ ಶಾಸ್ತ್ರಗಳೆಲ್ಲಾ ವ್ಯರ್ಥ. ಉಪಾಸನಾನುಷ್ಠಾನವೂ ವ್ಯರ್ಥವಾಗಿ ಏರ್ಪಡುತ್ತದೆ. **ಅಚಿದ್ವ್ಯಾವೃತ್ತಿ ಮಾತ್ರಮ್** ಇತ್ಯಾದಿ – ಜೀವನು ಅಚೇತನಕ್ಕಿಂತ ಬೇರೆಯಾದವನು ಎಂಬುದು ಮಾತ್ರ ರಕ್ಷಣೆಗೆ ಕಾರಣವಾದರೆ, ಭಗವಂತನಿಗೆ ಪ್ರತಿಕೂಲನಾಗಿ ಅಂದರೆ ವಿರೋಧಿಯಾಗಿರುವ ದಶೆಯಲ್ಲೂ ಅಚಿದ್ವ್ಯಾವೃತ್ತಿಯು ಏರ್ಪಟ್ಟಿರುವುದರಿಂದ, ಇಷ್ಟೇ ರಕ್ಷಣೆಗೆ ಕಾರಣವಾಗಲಾರದು. ಪ್ರತಿಕೂಲರನ್ನೂ ರಕ್ಷಿಸಬೇಕಾದ ಪ್ರಸಂಗವು ಬರುತ್ತದೆ.

**ಚೈತನ್ಯಕೃತ್ಯಮೆನ್ರಾಲ್ – ಚೇತನನು ಮಾಡುವ ವ್ಯಾಪಾರವೇ** ಪ್ರಪತ್ತಿಯೆಂದರೆ, ಉಪಾಸನಾದಿಗಳೂ, ಇನ್ನೂ ಇತರ ಚೇತನವೃತ್ತಿಗಳೆಲ್ಲಾ ಚೇತನಕೃತ್ಯವಾದ್ದರಿಂದ, ಉಪಾಸನಕ್ಕೂ ಇತರ ವ್ಯಾಪಾರಗಳಿಗೂ ವ್ಯತ್ಯಾಸವಿಲ್ಲದೆ, ಎಲ್ಲಾ ಸಮಾನ ಫಲವನ್ನು ಕೊಡುವಂತೆ ಆಗುತ್ತದೆ. ಇದು ಲೋಕ ವಿರುದ್ಧ ಅಥವಾ **ಚೇತನನುಕ್ಕು ತಾನೇ ವರುಮದೆನ್ರು** ಇತ್ಯಾದಿ ಚೇತನನ ಸಾಭಾವಿಕ ನಿಮೇಷೋನ್ಮೇಷಾದಿ – ಕಣ್ಣು ತೆರೆಯುವುದು, ಮುಚ್ಚುವುದು ಮೊದಲಾದ ವ್ಯಾಪಾರದಂತೆ ಭಗವದನುಗ್ರಹವೂ ತಾನೇ ಬರುವುದೆಂದರೆ, ಉಪದೇಶಾದಿಗಳು ಬೇಡವೆಂದು ಏರ್ಪಡುತ್ತದೆ. **ಫಲಾನುಪಯುಕ್ತ ಚಿತ್ತ ಸಮಾಧಾನಮ್** ಇತ್ಯಾದಿ – ಫಲಕ್ಕೆ ಉಪಯುಕ್ತವಾದ ಚಿತ್ತ ಸಮಾಧಾನ – ಮನಸ್ಸನ್ನು ಇತರ ವಿಷಯಗಳಲ್ಲಿ ಹೋಗದಂತೆ ಅಡಗಿಸಿಕೊಳ್ಳುವುದು, ಪ್ರಪತ್ತಿಯಲ್ಲಿ ಪರ್ಯವಸನ್ನವಾಗುತ್ತದೆ. ಫಲಕ್ಕೆ ಉಪಯೋಗವಲ್ಲದ ಚಿತ್ತ ಸಮಾಧಾನವು ಮಾತ್ರ ಪ್ರಪತ್ತಿಯೆಂದರೆ, ಈ ಚಿತ್ತ ಸಮಾಧಾನವು ತಮ್ಮ ತಮ್ಮ ರುಚ್ಯನುಸಾರ, ಪ್ರತಿ ಪುರುಷನಿಗೂ ಬೇರೆ ಬೇರೆಯಾಗಿರುತ್ತದೆ. ಇದರಿಂದ ಅನುಗತವಾದ ಪ್ರಪತ್ತಿಯು ಸಿದ್ಧಿಸುವುದಿಲ್ಲ.

**ವೇರುಪಡುಮ್ (8) "ವ್ರಜ" ಎನ್ರು ವಿಧೇಯಮಾಯ್ ಫಲ ತತ್ಕಾಮನಾದಿಹಳನ್ರಿಕ್ಕೇ ಇರುಕ್ಕಿರ ಇತ್ತೈ ಅಧಿಕಾರವಿಶೇಷಣಮೆನ್ನ ವೊಣ್ಣಾದು. ಕರ್ತವ್ಯಮಾಹ ವಿಧಿಕ್ಕಿರ ಪ್ರಪತ್ತಿತನಕ್ಕೇ ಇಪ್ಪಡಿ ಏದೇನುಂ ಒರುಕಣ್ಣಳಿವು ಪಣ್ಣಿಲ್ ಉಪಾಸನಾದಿಹಳೈಯುಮ್ ಇಪ್ಪಡಿ ಕಣ್ಣಳಿಕ್ಕಲಾಮ್. ಅಪ್ಪೋದು ಇವ್ವುಕ್ತಿಹಳಾಲೇ ಉಪಾಸನಾದಿಹಳಿಲ್ ಕಾಟ್ಟಿಲ್ ಪ್ರಪತ್ತಿಕ್ಕುವ್ಯಾವೃತ್ತಿ ಶೊಲ್ಲ ನಿನೈತ್ತದು ತಲೈಕ್ಕಟ್ಟಾದು ಸ್ವವಿಷಯ ಸ್ವೀಕಾರ ವಿಶಿಷ್ಟಮಾಯ್ ಕ್ಕೊಣ್ಡು ಫಲಪ್ರದ ಮಾಹಾನಿರ್ಕಚ್ಚೈಯ್ದೇ ಇಸ್ಸಿದ್ಧೋಪಾಯಮ್ ಸ್ವೀಕಾರತ್ತಾಲುಮ್ ನಿರಪೇಕ್ಷಮೆನ್ರು ಬುದ್ಧಿಪಣ್ಣವೇಣುಮೆನ್ನಿಲ್, ಇದು ದೃಷ್ಟಿವಿಧಿಪೋಲೇ ಆರೋಪಿತಮಾದಲ್ ಸ್ವವಚನವಿರುದ್ಧ ಮಾದಲಾಮ್.**

### ಅಥ ಏಕಶಬ್ದಸ್ಯ ಸಿದ್ಧಾನ್ತಾರ್ಥಮಾಹ

**ಆಹೈಯಾಲ್ ಈಶ್ವರನ್ ಪ್ರಸಾದನೀಯನಾಯ್ ಪ್ರಧಾನಮಾನ ಸಿದ್ಧೋಪಾಯಮ್. ಭಕ್ತಿ**

**'ವ್ರಜ' ಎನ್ರು ವಿಧೇಯಮಾಯ್** ಇತ್ಯಾದಿ – ವ್ರಜ – ಆಶ್ರಯಿಸು, ಎಂದು ಪ್ರಪತ್ತಿಯು ವಿಧಿ ಪ್ರಯುಕ್ತವಾಗಿ ತೋರುತ್ತದೆ. ಪ್ರಪತ್ತಿಯು ಫಲ ಆದರ ಆಸೆ ಮೊದಲಾದವು ಇಲ್ಲದೆ ಫಲತತ್ಕಾಮನಾದಿ ಭಿನ್ನವಾದ್ದರಿಂದಲೂ, ಇದನ್ನು ಅಧಿಕಾರಿ ವಿಶೇಷಣವೆಂದು ಹೇಳಲಾಗುವುದಿಲ್ಲ. ಯಾಮುನಾಚಾರ್ಯರು,

ಫಲಾದಿಭ್ಯೋ ವಿಭಕ್ತತ್ವಾತ್, ಪ್ರಪತ್ತಿರ್ವಿದ್ಧ್ಯನನ್ವಯಾತ್ ।
ವಿಧೇಯಾಂತರ ಹಾನೇಶ್ಚನಾಧಿಕಾರಿ ವಿಶೇಷಣಮ್ ॥

ಎಂದು ಅನುಗ್ರಹಿಸಿರುವುದು ಇಲ್ಲಿ ಅನುಸಂಧೇಯ – ಅದಾಗಿ ಫಲತತ್ಕಾಮನಾದಿ ಭಿನ್ನವು ಪ್ರಪತ್ತಿ. ಅಧಿಕಾರಿ ವಿಶೇಷಣವೆಂದರೆ ಪ್ರಪತ್ತಿಯು ವಿಧಿಸಲಾಗದು. ವಿಧೇಯಾಂತರವೂ ಆಗುವುದಿಲ್ಲ. ಆದ್ದರಿಂದ ಅಧಿಕಾರಿ ವಿಶೇಷಣ ವಾಗಲಾರದು ಎಂದರ್ಥ.

ಮೇಲೆ ಹೇಳಿದ ಪಕ್ಷಗಳಿಗೆಲ್ಲಾ ಸಾಧಾರಣವಾದ ದೂಷಣವನ್ನು **ಕರ್ತವ್ಯಮಾಹ ವಿಧಿಕ್ಕಿರ** ಎಂದಾ ರಂಭಿಸಿ ತಿಳಿಸುತ್ತಾರೆ. ಅದಾಗಿ ಕರ್ತವ್ಯವಾಗಿ ವಿಧಿಸಲ್ಪಡುವ ಪ್ರಪತ್ತಿಗೇನೆ, ಹೀಗೆ ಯಾವುದಾದರೊಂದು **ಕಣ್ಣಳಿವು** – ಕಣ್ಮರೆಯನ್ನು ಮಾಡಿದರೆ, ಉಪಾಸನಾದಿಗಳನ್ನೂ ಹೀಗೆ ಕಣ್ಮರೆ ಮಾಡಬಹುದು. ಆದರೇನು ಬಾಧಕವೆಂದರೆ, **ಅಪ್ಪೋದು** ಇತ್ಯಾದಿ ಆಗ ಈ ರೀತಿಯಲ್ಲಿ ಉಪಾಸನಾದಿಗಳಿಗಿಂತ ಪ್ರಪತ್ತಿಗೆ ವ್ಯಾವೃತ್ತಿ - ಬೇರೆಯೆಂಬುದನ್ನು ಹೇಳಲು ನೆನೆಸಿದುದು ಸಿದ್ಧಿಸುವುದಿಲ್ಲ. "ಶರಣಂ ವ್ರಜ" ಎಂದು ಸ್ವವಿಷಯ ಸ್ವೀಕಾರ ವನ್ನು ವಿಧಿಸುತ್ತದೆಯೆಂದೂ, ಸಿದ್ಧೋಪಾಯವು ಸ್ವವಿಷಯ ಸ್ವೀಕಾರದಿಂದಲೂ ನಿರಪೇಕ್ಷವೆಂದು ಬುದ್ಧಿ ಮಾಡ ಬೇಕೆಂಬುದು, ಏಕಶಬ್ದದಿಂದ ದ್ಯೋತಿತವೆಂದೂ ಹೇಳುವ ಪೂರ್ವಪಕ್ಷವನ್ನು **ಸ್ವವಿಷಯ ಸ್ವೀಕಾರ ವಿಶಿಷ್ಟ ಮಾಯ್‌ಕೊಂಡು** ಎಂದಾರಂಭಿಸಿ ಖಂಡಿಸುತ್ತಾರೆ. ಅದಾಗಿ ತನ್ನನ್ನು ಸ್ವೀಕರಿಸುವವನಾಗಿ ಫಲಪ್ರಧಾನ ಮಾಡಲು ನಿಂತಿದ್ದರೂ, ಈ ಸಿದ್ಧೋಪಾಯವು "ಶರಣಂ ವ್ರಜ" ಎಂಬ ಸ್ವೀಕಾರದಿಂದಲೂ ನಿರಪೇಕ್ಷವೆಂದು ತಿಳಿಯಬೇಕೆಂದು ಹೇಳಿದರೆ, ಇದು ದೃಷ್ಟಿವಿಧಿಯ ಹಾಗೆ ಆರೋಪಿತವಾಗಿಯಾಗಲಿ, ಸ್ವವಚನ ವಿರೋಧವಾಗಿ ಯಾಗಲಿ ಆಗುತ್ತದೆ. ಅಂದರೆ, ವಸ್ತುತಃ ಸ್ವವಿಷಯ ಸ್ವೀಕಾರ ಸಾಪೇಕ್ಷವಾದ ಸಿದ್ಧೋಪಾಯವನ್ನು ತನ್ನಿರ ಪೇಕ್ಷವಾಗಿ ಅನುಸಂಧಾನ ಮಾಡಿದರೆ, "ಮನೋಬ್ರಹ್ಮೇತ್ಯು ಪಾಸೀತ" ಎಂಬ ದೃಷ್ಟಿವಿಧಿಯಂತೆ ಆರೋಪಿತ ವಾಗಿ ಭ್ರಮರೂಪವಾಗುತ್ತದೆ. ಆಗ್ಯೆ ಅದು ಮೋಕ್ಷಪ್ರದವಾಗುವುದಿಲ್ಲ. 'ಶರಣಂ ವ್ರಜ' ಎಂದು ತನ್ನ ವಿಷಯಸ್ವೀಕಾರವನ್ನು ವಿಧಿಸುತ್ತದೆಯೆಂದು ಹೇಳಿ, ಏಕಶಬ್ದವು, ತನ್ನ ಸ್ವೀಕಾರದಿಂದಲೂ ನಿರಪೇಕ್ಷವೆಂದು ಹೇಳುವುದು ಸ್ವವಚನ ವಿರುದ್ಧವಾಗುತ್ತದೆಯಲ್ಲದೆ ಭಗವದ್ವಚನಕ್ಕೇ ಪರಸ್ಪರ ವಿರುದ್ಧಾರ್ಥವನ್ನು ಕಲ್ಪಿಸಿ ದಂತೆ ಆಗುತ್ತದೆ.

### ಏಕಶಬ್ದಕ್ಕೆ ಸಿದ್ಧಾಂತಾರ್ಥ

ಸಿದ್ಧಾಂತಾರ್ಥವನ್ನು **ಆಹೈಯಾಲ್** ಎಂದಾರಂಭಿಸಿ ನಿಗಮಿಸುತ್ತಾರೆ. ಆದಕಾರಣ ಈಶ್ವರನು ಪ್ರಸಾದ

**ಪ್ರಪತ್ತಿಹಳಿರಣ್ಡುಮ್ ಪ್ರಸಾದನಙ್ಗಳಾಯ್ ಕೊಂಡು ಪ್ರಧಾನಮಲ್ಲಾದ ಸಾಧ್ಯೋಪಾಯಙ್ಗಳ್. ಇನ್ನೈ ಇರಣ್ಡಿತ್ತೊನ್ರಿಲೇ ಯಥಾಧಿಕಾರಮ್ ನಿಲೈಯಾಹಕ್ಕಡವದು.**

### ಅಥ ಏಕ ಶಬ್ದಸ್ಯಾನ್ಯೋಪಾಯತಯಾನನ್ಯ ಪರತ್ವಮಾಹ

**ಅಪೇಕ್ಷಿತ ಫಲತ್ತುಕ್ಕು ಉಪಾಯಮಾಹ ವಿಧಿತ್ತ ಸಾಧನಾಂತರಙ್ಗಳೈ ಯಿಡೈಯಿಡವೇಣ್ಡಾದ ಪಡಿ ಪ್ರಪತ್ತಿಕ್ಕು ಅನಂತರಮ್ ಭರಸ್ವೀಕಾರಂ ಪಣ್ಣಿನ ಶರಣ್ಯನ್ ತನಿತ್ತುನಿರ್ಕುಮ್ ನಿಲೈಯೈ ಸ್ಪತ್ತ "ಏಕ" ಶಬ್ದಮೆನ್ರುಮ್ ಶೊಲ್ಲುವರ್ಹಳ್. ಅದೆಙ್ಗನೇಯೆನ್ನಿಲ್ :- ಪ್ರಪತ್ತಿಯುಮ್ಪಣ್ಣಿ ಅನಂತರಮುದಡಿಯಾಹ ಉಪಾಸನಾದಿಹಳುಮ್ ಅನುಷ್ಠಿತ್ತಾಲ್ ಫಲೋಪಾಯ ಮಾಹಕ್ಕಡವನಾನ ಶರಣ್ಯನ್ ಅಕಿಂಚನನಾಯ್ ವಿಳಂಬ ಕ್ಷಮನಲ್ಲಾದ ವಿವನ್ವಿಷಯತ್ತಿಲ್ ಪ್ರಪತ್ತಿಕ್ಕುಮ್ ತನಕ್ಕುಮ್ ನಡುವೇ ನಿರ್ಪದೊರು ಶುಮೈಶುಮತ್ತಾದೇ ಇವನ್ ಶುಮೈಯೈತ್ತನ್ ಗುಣಙ್ಗಳಿನ್ ಮೇಲೆಯೇರಿಟ್ಟು**

**"ಶರಣಂತ್ವಾಂ ಪ್ರಪನ್ನಾಯೇ ಧ್ಯಾನಯೋಗ ವಿವರ್ಜಿತಾಃ।**
**ತೇಪಿಮೃತ್ಯು ಮತಿಕ್ರಮ್ಯಯಾನ್ತಿ ತದ್ವೈಷ್ಣವಂ ಪದಮ್" ಎನ್ರುಮ್**
**"ಆರೆನಕ್ಕು ನಿನ್ ಪಾದಮೇ ಶರಣಾಹ ತ್ತಂದೊಳಿಂದಾಯ್" ಎನ್ರುಮ್.**

---

ನೀಯನಾಗಿ ಪ್ರಧಾನವಾದ ಸಿದ್ಧೋಪಾಯ. ಭಕ್ತಿ ಪ್ರಪತ್ತಿಗಳೆರಡೂ ಆವನನ್ನು ಪ್ರಸನ್ನನಾಗಿ ಮಾಡಿಕೊಂಡು ಪ್ರಧಾನವಲ್ಲದ, ಸಾಧ್ಯೋಪಾಯಗಳು – ವ್ಯಾಜಭೂತ ಸಾಧ್ಯೋಪಾಯಗಳೆಂದು ತಿಳಿಸಲ್ಪಟ್ಟಿವು. **ಇನ್ನೈಯಿರಂಡ ತ್ತೊನ್ರಿಲ್** ಇತ್ಯಾದಿ – ಈ ಎರಡು ಉಪಾಯಗಳಲ್ಲಿ ಯಾವುದಾದರೂ ಒಂದರಲ್ಲಿ ತನ್ನ ಅಧಿಕಾರಕ್ಕೆ ಅನು ಗುಣವಾಗಿ, **ನಿರ್ಕೈಯಾಹಕ್ಕಡವದು,** ಸ್ಥಿತಿಯನ್ನು ಅವಲಂಬಿಸಬೇಕು.

(iv ಅನಂತರ ಏಕಶಬ್ದಕ್ಕೆ ನಾಲ್ಕನೆ ಯೋಜನೆಯನ್ನು **ಅಪೇಕ್ಷಿತ ಫಲತ್ತುಕ್ಕು** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಅಪೇಕ್ಷಿಸಿದ ಫಲಕ್ಕೆ ಉಪಾಯವಾಗಿ ವಿಧಿಸಿದ ಸಾಧನಾಂತರಗಳನ್ನು **ಇಡೈಯಿಡ ವೇಂಡಾದಪಡಿ** – ಮಧ್ಯದಲ್ಲಿ ಇರಿಸದೆ, ಪ್ರಪತ್ತಿ ಮಾಡಿದ ನಂತರ ಈ ಪ್ರಪನ್ನನ ಭರವನ್ನು ಸ್ವೀಕರಿಸಿದ ಶರಣ್ಯನು, ಪ್ರತ್ಯೇಕವಾಗಿ ನಿಂತಿರುವ ಸ್ಥಿತಿಯನ್ನು ಕುರಿತು "ಏಕ"ಶಬ್ದವೆಂದೂ ಹೇಳುವರು. **ಅದೆಂಗನೇ ಯೆನ್ನಿಲ್** ಅದು ಹೇಗೆಂದರೆ, ಅಂಗಪ್ರಪತ್ತಿಯನ್ನೂ ಮಾಡಿ ಅನಂತರ ತನ್ಮೂಲಕವಾಗಿ ಉಪಾಸನಾದಿಗಳನ್ನೂ **ಅನುಷ್ಠಿ**ಸಿದರೆ, **ಫಲೋಪಾಯಮಾಹಕ್ಕಡವನಾನ**- ಮೋಕ್ಷವೆಂಬ ಫಲವನ್ನು ಕೊಡುವವನಾದ ಶರಣ್ಯನು ಅಕಿಂಚನ ನಾಗಿ ವಿಳಂಬಕ್ಷಮನಲ್ಲಾದ ಇವನ ವಿಷಯದಲ್ಲಿ, ಪ್ರಪತ್ತಿಗೂ ತನಗೂ ನಡುವೆ **ನಿರ್ಪದೊರು ಶುಮೈ ಶುಮತ್ತಾದೇ** ಇತ್ಯಾದಿ – ನಿಲ್ಲುವ ಉಪಾಸನವೆಂಬ ಭಾರವನ್ನು ಹೊರಿಸದೆ, ತನ್ನ ಗುಣಗಳ ಮೇಲೆ ಇವನ ಭಾರವನ್ನು ಹೊತ್ತುಕೊಂಡು ಅಂದರೆ ಭಕ್ತಿಯೋಗವನ್ನು ಮಾಡಿದರೆ ಉಂಟಾಗುವ ಪ್ರಸನ್ನತೆಯನ್ನು ಅಕಿಂ ಚನನ ವಿಷಯದಲ್ಲಿ ಕೇವಲ ಪ್ರಪತ್ತಿ ವಶೀಕೃತನಾಗಿ ತನ್ನ ಕರುಣೆಯಿಂದಲೇ ಮಾಡಿ ಅಪೇಕ್ಷಿಸುವ ಫಲವನು ಸಂಕಲ್ಪಿಸಿ ಅನುಗ್ರಹಿಸುತ್ತಾನೆ. (1) **ಶರಣಂ ತ್ವಾಂ ಪ್ರಪನ್ನಾಯೇ** ಇತ್ಯಾದಿ (ನಿನ್ನನ್ನು ಸ್ವತಂತ್ರವಾಗಿ ಶರಣ ಹೊಂದಿದವರು ಭಕ್ತಿಯೋಗವನ್ನು ಅನುಷ್ಠಿಸದೇನೆ ಪುಣ್ಯ ಪಾಪ ರೂಪ ಕರ್ಮಗಳನ್ನು ನಿಶ್ಶೇಷವಾಗಿ ನೀಗಿಸಿಕೊಂಡು ವೈಷ್ಣವಪದವನ್ನು ಹೊಂದುತ್ತಾರೆ, ಎಂದು ಹೇಳಿರುವಂತೆಯೂ, (2) **ಆರೆನಕ್ಕು ನಿನ್**

---

(1) ಬ್ರಾಹ್ಮ ಪುರಾಣ.

(2) ಆರೆನಕ್ಕು ನಿನ್ಪಾದಮೇ ಶರಣಾಹತ್ತಂದೊಳಿಂದಾಯ್, ಉನಕ್ಕೋರ್ಕೈ ಮ್ಮಾರು ನಾನೊನ್ರಿಲೇನ್, ಎನದಾವಿಯುಮುನದೇ । ತಿ. ತಿ. ನೋ.

**ಶೊಲ್ಲುಹಿರಪಡಿಯೇ ಗುಣವಿಶಿಷ್ಟನಾನ ತಾನೇ ನಿರಪೇಕ್ಷ ಫಲಪ್ರದನಾಯ್ ನಿರ್ಕುಮ್ ನಿಲೈಯೈ ಅನುಸಂಧಿತ್ತುಕ್ಕೊಂಡು ಶರಣಮಾಹ ಪ್ಪಣ್ಣೈಯೆನ್ರು ಇಜ್ಜ್ಞ ಶೊಲ್ಲಿತ್ತಾಯಿತ್ತು.**

ಏಕಶಬ್ದಸ್ಯ ಅಂಗಾಂತರಾನನ್ವಯ ಪರತ್ವಂಚಾಹ.

**ಇಪ್ಪಡಿಯೇ ಪರಿಪೂರ್ಣನಾನ ತನ್ನೈ ಪ್ರಪತ್ತಿ ಪಣ್ಣುಂಪೋದು ಆನುಕೂಲ್ಯ ಸಂಕಲ್ಪಾದಿಹಳ್ಳೈ ಯೊಳ್ಳಿಯ ವೇರೊರು ಪರಿಕರತ್ತೈ ಇದಿಲೇ ವಿದ್ಯಾಂತರತ್ತಿಲ್ಪೋಲೇ ಶೊರುಹಿಕ್ಕೊಂಡು ಅದುವುಮ್ ಪ್ರಸಾದನಮಾನ ಉಪಾಯಕೋಟಿಯಿಲೇ ನಿರ್ಕಿರದೆನ್ರುಮ್, ನಿನ್ನೈವೈಕ್ಕಳ್ಳಿಕ್ಕೈಕ್ಕಾಹ "ಏಕ" ಶಬ್ದಮೆನ್ರುಮ್ ಶೊಲ್ಲುವರ್‌ಹಳ್. ಆಜ್ಞಾನುಜ್ಞೈಹಳಾಲೇ ಅನುಷ್ಠಿಕ್ಕುಮ್ ಕರ್ತವ್ಯಾಂತರಙ್ಗಳುಮೆಲ್ಲಾಮ್ ಪ್ರಪತ್ತಿಕ್ಕು ತುಣೈಯನ್ರು ಇಪ್ಪ್ರಪತ್ತಿಯಾಲೇ ವಶೀಕೃತನಾಯ್ ಫಲಂ ತರ ವಿರುಕ್ಕಿರನಾನೊರು**

---

ಪಾದಮೇ ಶರಣಾಹತ್ತಂದೊಳ್ಳಿಂದಾಯ್ - (ನಿನ್ನ ಪಾದಗಳನ್ನೇ ನನಗೆ ಮುಖ್ಯವಾದ ಉಪಾಯವಾಗಿ ಅನುಗ್ರಹಿಸಿದೀಯೇ) ಎಂದು ಹೇಳಿರುವಂತೆಯೂ, **ಗುಣ ವಿಶಿಷ್ಟನಾನ ತಾನೇ** ಇತ್ಯಾದಿ – ಗುಣಗಳಿಂದ ಕೂಡಿದ ತಾನೇ **ನಿರಪೇಕ್ಷ ಫಲಪ್ರದನಾಯ್ ನಿರ್ಕುಮ್ ನಿಲೈಯೈ** ಇತ್ಯಾದಿ – ಭಕ್ತಿಯೋಗವೆಂಬ ಉಪಾಯವನ್ನು ಅಪೇಕ್ಷಿಸದೇನೇ ಫಲಪ್ರದನಾಗಿ ಇರುವ ಸ್ಥಿತಿಯನ್ನು ಅನುಸಂಧಿಸಿಕೊಂಡು ಶರಣ ಹೊಂದು ಎಂದು, ಏಕಶಬ್ದಕ್ಕೆ ಅರ್ಥವನ್ನು ಹೇಳಿದಂತಾಯಿತು.

### 5. ಏಕಶಬ್ದವು, ಪ್ರಪತ್ತಿಗೆ ಏರ್ಪಟ್ಟಿರುವ ಐದು ಅಂಗಗಳನ್ನು ಬಿಟ್ಟು ಬೇರೆ ಯಾವುದನ್ನೂ ಅಂಗವಾಗಿ ಅಪೇಕ್ಷಿಸುವುದಿಲ್ಲ.

ಏಕಶಬ್ದಕ್ಕೆ, ಐದನೆಯ ಯೋಜನೆಯನ್ನು ಅನುಗ್ರಹಿಸುತ್ತಾರೆ. **ಇಪ್ಪಡಿಯೇ ಪರಿಪೂರ್ಣನಾನತನ್ನೈ** ಇತ್ಯಾದಿ – ಹೀಗೆ ಪರಿಪೂರ್ಣನಾದ ತನ್ನನ್ನು ಕುರಿತು ಪ್ರಪತ್ತಿ ಮಾಡುವಾಗ ಆನುಕೂಲ್ಯ ಸಂಕಲ್ಪವೇ ಮೊದಲಾದ ಐದು ಅಂಗಗಳು ವಿನಹ ಬೇರೆಯೊಂದು **ಪರಿಕರ** – ಅಂಗವನ್ನು ಇದರಲ್ಲಿ ವಿದ್ಯಾಂತರದ ಹಾಗೆ ಸೇರಿಸಿಕೊಂಡು ಅದೂ **ಪ್ರಸಾದನಮಾನ** – ಭಗವಂತನನ್ನು ಪ್ರಸನ್ನನನ್ನಾಗಿ ಮಾಡುವ ಉಪಾಯಕೋಟಿಯಲ್ಲಿ ನಿಲ್ಲುತ್ತದೆಯೆಂಬ **ನಿನ್ನೈವೈ** – ಅಭಿಪ್ರಾಯವನ್ನು ಹೋಗಲಾಡಿಸಲು "ಏಕ" ಶಬ್ದವೆಂದೂ ಹೇಳುತ್ತಾರೆ.

ವರ್ಣಾಶ್ರಮ ಧರ್ಮಾದಿಗಳು ಪ್ರಪತ್ತಿಗೆ ಸಹಕರಿಸುವುದಿಲ್ಲವೆಂಬುದನ್ನು ಭಗವಂತನ ವಾಕ್ಯವಾಗಿ **ಆಜ್ಞಾನುಜ್ಞೈಹಳಾಲೇ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ ಆಜ್ಞಾಕೈಂಕರ್ಯಗಳು ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳು. ಅನುಜ್ಞಾಕೈಂಕರ್ಯಗಳು ಭಗವದಾಲಯ ಸಮ್ಮಾರ್ಜನ, ಉಪಲೇಪನ, ಮಾಲಾಕರಣ, ದೀಪಾರೋಪಣೆ ಜಪ, ಪಾರಾಯಣಾದಿಗಳು. ಇವುಗಳೆಲ್ಲಾ ಪ್ರಪತ್ತಿಗೆ ಅಂಗಗಳಲ್ಲ. ಸಹಕರಿಸುವುದಿಲ್ಲ. **ಇಪ್ರಪತ್ತಿಯಾಲೇ** – ಇತ್ಯಾದಿ ಈ ಪ್ರಪತ್ತಿಯಿಂದ ವಶೀಕೃತನಾಗಿ ಫಲವನ್ನು ಕೊಡಲು ಸಿದ್ಧನಾಗಿರುವ **ನಾನೊರು**

---

ಶೇರ್‌ಕೊಳ್ ವಿಶುಂಬುಮ್ ಪೆರುಂ ಶೆನ್ನಲುಮ್ ಮಲಿತಣ್ ಶಿರೀವರಮಂಗೈ
ನಾರು ಪೂಣ್‌ತಣ್ ತುಳ್ಳಾಯ್ ಮುಡಿಯಾಯ್! ದೈವನಾಯಕನೇ ॥
ತಿರುವಾಯ್ (5 - 7 - 10) ದೈವನಾಯಕನೇ ನಿನ್ನ ಪಾದಗಳನ್ನೇ ನನಗೆ ಮುಖ್ಯೋಪಾಯವಾಗಿ – ಅಂದರೆ ಭಕ್ತಿಯೋಗವನ್ನು ಅಪೇಕ್ಷಿಸದೆ ಅಸ್ಥಾನದಲ್ಲಿ ಪ್ರಪತ್ತಿ ವಶೀಕೃತನಾಗಿ ನೀನೇ ನಿಂತು ಫಲವನ್ನು ಕೊಡುವವನಾಗಿದ್ದೀಯೇ, ನಿನಗೆ ಏನು ಪ್ರತ್ಯುಪಕಾರ ಮಾಡಲಿ, ಈ ಆತ್ಮಾ ನಿನಗೆ ಸೇರಿದುದು.

**ವನುಮೋ ಇಕ್ಷಣಿಕೋಪಾಯತ್ತುಕ್ಕು ಪ್ರತಿಭೂವಾಯ್ ನಿನ್ರೇನ್; ಇಪ್ಪ್ರಪತ್ತಿ ಫಲತ್ತೈಪ್ಪತ್ತ ವೇರೊರುತೇವೈಶೆಯ್ಯವೇಣ್ಡಾ; ಅತ್ತೇವೈಯ್ಯೈತ್ತುಣೈಯಾಹಕ್ಕೊಂಡು ಉನ್ನೈ ನಾನ್ ರಕ್ಷಿಕ್ಕಪುಹುಕಿರೇನಲ್ಲೇನೆನ್ರು ತಾತ್ಪರ್ಯಮ್. ಇತ್ತಾಲ್, ಆನುಕೂಲ್ಯ ಸಂಕಲ್ಪಾದಿ ವಿಶಿಷ್ಟ ಪ್ರಪತ್ತಿಯೊಳ್ಳಿಯು ಪ್ರಪತ್ತಿ ಪರಿಕರಮೆನ್ರು ಪೇರಿಟ್ಟುತನಕ್ಕು ವೇರೊರು ಸಹಕಾರಿ ಕಾರಣತ್ತೈಕ್ಕೂಟ್ಟ ವೇಣ್ಡಾವೆನ್ರು ಶೊಲ್ಲಿತ್ತಾಯಿತ್ತು.**

**"ಯೇನ ಕೇನಾಪಿ ಪ್ರಕಾರೇಣ ದ್ವಯವಕ್ತಾತ್ವಂ" ಎನ್ರುಮ್ "ಪ್ರಪತ್ತಿವಾಚೈವ ನಿರೀಕ್ಷಿತುಂ ವೃಣೇ" ಎನ್ರುಮ್ ಶೊಲ್ಲುಹಿರಪಡಿಯೇ ಪೂರ್ಣಪ್ರಪತ್ತಿಕ್ಕು ಅಪೇಕ್ಷಿತಮಾನ ತೆಳಿವಿಲ್ಲಾವಿಡುಲುಮ್ ಯಥಾಕಥಂಚಿದನುಷ್ಠಾನತ್ತಾಲೇ ಕಾರ್ಯಂಶೆಯ್ಯಹಿರ ಇವ್ವುಪಾಯತ್ತುಕ್ಕು ವೇರೊರು ಪರಿಕರತ್ತೈತ್ತೇಡ ಪ್ರಸಙ್ಗಮಿಲ್ಲೈಯಿರೇ.**

**ನನು ರಾಘವ ಬ್ರಹ್ಮದತ್ತ ಶರಣಾಗತ್ಯೋಃ ಅನ್ಯಪರಿಕರಾಪೇಕ್ಷಾದೃಷ್ಟಾ**
**ಇತಿಪೂರ್ವಪಕ್ಷಂ ಕೃತ್ವಾ ಪರಿಹರತಿ.**

**"ತತಸ್ಸಾಗರವೇಲಾಯಾಂ ದರ್ಭಾನ್ ಆಸ್ತೀರ್ಯರಾಘವಃ।**
**ಬಾಹುಂಭುಜಗ ಭೋಗಾಭಂ ಉಪಧಾಯಾರಿಸೂದನಃ।**
**ಅಂಜಲಿಂಪ್ರಾಙ್ಮುಖಂ ಕೃತ್ವಾಪ್ರತಿಶಿಶ್ಯೇ ಮಹೋದಧೇಃ ॥" ಎನ್ರು**
**ಪೆರುಮಾಳ್ ಸಮುದ್ರತ್ತೈಪ್ಪತ್ತ ಶರಣಾಗತಿ ಪಣ್ಣಿನವಿಡತ್ತಿಲುಮ್,**

---

**ವನುಮೋ** – ನಾನು (ಭಗವಂತನು) ಒಬ್ಬನೇ ಈ ಕ್ಷಣಿಕೋಪಾಯಕ್ಕೆ **ಪ್ರತಿಭೂವಾಯ್** – ಸ್ವೀಕರಿಸುವವನಾಗಿ ನಿಂತಿದ್ದೇನೆ. ಈ ಪ್ರಪತ್ತಿಯಿಂದ ಉಂಟಾಗುವ ಫಲಕ್ಕೆ ಬೇರೆಯೊಂದು ಅಪೇಕ್ಷೆಯು ಬೇಡ. **ಅತ್ತೇವೈಯ್ಯೈ** – ಆ, ಅಪೇಕ್ಷೆಯನ್ನು ಸಹಕಾರಿಯಾಗಿಕೊಂಡು ನಿನ್ನನ್ನು ನಾನು ರಕ್ಷಿಸುವವನಲ್ಲ ಎಂದು ತಾತ್ಪರ್ಯ.

**ಇತ್ತಾಲ್ ಆನುಕೂಲ್ಯ ಸಂಕಲ್ಪಾದಿ ವಿಶಿಷ್ಟ ಪ್ರಪತ್ತಿಯೊಳ್ಳಿಯು** ಇತ್ಯಾದಿ – ಇದರಿಂದ ಆನುಕೂಲ್ಯ ಸಂಕಲ್ಪಾದಿ ವಿಶಿಷ್ಟವಾದ ಪ್ರಪತ್ತಿಯು ವಿನಹ, ಪ್ರಪತ್ತಿ ಪರಿಕರವೆಂದು ಹೆಸರಿಟ್ಟು, **ತನಕ್ಕು** – ಭಗವಂತನಾದ ತನಗೆ, ಬೇರೆಯೊಂದು ಸಹಕಾರಿ ಕಾರಣವನ್ನು ಸೇರಿಸಬೇಡವೆಂದು ಏಕಶಬ್ದಕ್ಕೆ ಅರ್ಥವನ್ನು ಹೇಳಿದಂತಾಯಿತು.

(1) **ಯೇನ ಕೇನಾಪಿ ಪ್ರಕಾರೇಣ ದ್ವಯವಕ್ತಾತ್ವಂ** – ಸಮುದಾಯ ಜ್ಞಾನಪೂರ್ವಕವಾಗಿಯಾಗಲಿ, ವಿಶದ ಜ್ಞಾನಪೂರ್ವಕವಾಗಿಯಾಗಲಿ ಆಚಾರ್ಯೋಪದಿಷ್ಟ ದ್ವಯಮಂತ್ರವನ್ನು ಉಚ್ಚರಿಸುವ ನೀನು ಎಂದೂ, (2) **ಪ್ರಪತ್ತಿವಾಚೈವ ನಿರೀಕ್ಷಿತುಂ ವೃಣೇ** – ಪ್ರಪತ್ತಿವಾಕ್ಯದಿಂದಲೇ ಅನುಗ್ರಹಿಸುವಂತೆ ವರಿಸುತ್ತೇನೆ ಎಂದೂ ಹೇಳುವಂತೆ ಪೂರ್ಣಪ್ರಪತ್ತಿಗೆ ಅಪೇಕ್ಷಿತವಾದ ತಿಳಿವು ಜ್ಞಾನವಿಲ್ಲದಿದ್ದರೂ, ಯಥಾಕಥಂಚಿದನುಷ್ಠಾನದಿಂದ ಕಾರ್ಯವನ್ನು ಮಾಡುವ ಈ ಉಪಾಯಕ್ಕೆ ಬೇರೆಯೊಂದು ಪರಿಕರವನ್ನು ಹುಡುಕುವ ಪ್ರಸಂಗವಿಲ್ಲವಲ್ಲವೇ.

---

(1) ಶರಣಾಗತಿಗದ್ಯ. (2) ವರದರಾಜಸ್ತವ.

"ಸರಾಜಾ ಪರಮಾಪನ್ನೋ ದೇವ ಶ್ರೇಷ್ಠಮಗಾತ್ತದಾ।
ಶರಣ್ಯಂ ಸರ್ವಭೂತಾನಾಂ ಭಕ್ತ್ಯಾ ನಾರಾಯಣಂ ಹರಿಮ್।
ಸಮಾಹಿತೋ ನಿರಹಾರ ಷ್ಷಡ್ರಾತ್ರೇಣ ಮಹಾಯಶಾಃ।
ದದರ್ಶಾದರ್ಶನೇ ರಾಜಾ ದೇವಂ ನಾರಾಯಣಂ ಪ್ರಭುಮ್॥

ಎನ್ರು ಸಪ್ತ ವ್ಯಾಧೋಪಾಖ್ಯಾನತ್ತಿಲೇ ಬ್ರಹ್ಮದತ್ತ ಚರಿತ್ರತ್ತಿಲುಮ್ ಶೊನ್ನ ಪ್ರಕಾರಙ್ಗಳುಮೆಲ್ಲಾಮ್ ಪ್ರಪತ್ತಿಕ್ಕು ಅಙ್ಗಮನ್ರು.

ಇವ್ವಿರಣ್ಡಿಡಮುಮ್ ಸಪರಿಕರ ಪ್ರತಿಶಯನಾದಿ ಪ್ರಧಾನಮಾಹೈಯಾಲೇ ಅಙ್ಗ ಅನ್ದ ನಿಯಮಙ್ಗಳ್ ಶೊಲ್ಲ ಪ್ರಾಪ್ತಮ್. ಇಪ್ಪಡಿ ಸುಕೃತ ಪ್ರಣಾಮತ್ತಿಲುಮ್ ಕಂಡುಕೊಳ್ವದು. ಇಙ್ಗ ಪ್ರಪತ್ತ್ಯಧ್ಯಾಯಾದಿಹಳಿಲ್ ಚೊನ್ನವಾನುಕೂಲ್ಯ ಸಙ್ಕಲ್ಪಾದಿ ಪರಿಕರಙ್ಗಳೊಕ್ಕಿಯ ವೇರೊರು

---

(3) ತತಸ್ಸಾಗರವೇಲಾಯಾಂ ಇತ್ಯಾದಿಯಾಗಿ, ಭಗವಂತನು ಸಮುದ್ರರಾಜನನ್ನು ಶರಣಾಗತಿ ಮಾಡಿದ ಸಂದರ್ಭದಲ್ಲೂ (4) ಸರಾಜಾ ಪರಮಾಪನ್ನೋ ಇತ್ಯಾದಿಯಾಗಿ ಸಪ್ತವ್ಯಾಧೋಪಾಖ್ಯಾನದಲ್ಲಿಯೂ ಹೇಳಿದ ದರ್ಭಾಸ್ತರಣ, ನಿರಾಹಾರತ್ವಾದಿ ಪರಿಕರಗಳೆಲ್ಲಾ, ಪ್ರಪತ್ತಿಗೆ ಅಂಗವಲ್ಲ. ಇವ್ವಿರಂಡಿಡಮುಮ್ ಇತ್ಯಾದಿ- ಈ ಎರಡು ಸಂದರ್ಭಗಳೂ ಸಪರಿಕರ ಪ್ರತಿಶಯನಾದಿ ಪ್ರಧಾನವಾದ್ದರಿಂದ ಅಲ್ಲಿ ಆ ನಿಯಮಗಳನ್ನು ಹೇಳಿರುವುದು ಯುಕ್ತ. ಇವು ಪ್ರಪತ್ತಿಗೆ ಅಂಗವಲ್ಲವೆಂದು ತಾತ್ಪರ್ಯ. ಇಪ್ಪಡಿ ಸುಕೃತ ಪ್ರಣಾಮತ್ತಿಲುಮ್ ಇತ್ಯಾದಿ – ಹೀಗೆಯೇ ಸುಕೃತ ಪ್ರಣಾಮಾದಿಗಳನ್ನೂ, ಪ್ರಪತ್ತಿಯಲ್ಲವೆಂದುತಿಳಿದುಕೊಳ್ಳುದು. ಆದಾಗಿ,

ಏಕೋಽಪಿ ಕೃಷ್ಣೇ ಸುಕೃತ ಪ್ರಣಾಮಃ
ದಶಾಶ್ವ ಮೇಧಾಽವ ಭೃತೇನ ತುಲ್ಯಃ।
ದಶಾಶ್ವಮೇಧೀ ಪುನರೇತಿ ಜನ್ಮ
ಕೃಷ್ಣ ಪ್ರಣಾಮೀ ನ ಪುನರ್ಭವಾಯ॥

ಎಂದು ಸುಕೃತ ಪ್ರಣಾಮವು ಹತ್ತು ಅಶ್ವಮೇಧ ಯಾಗಗಳಿಗೆ ಸಮವೆಂದು ಹೇಳಲ್ಪಟ್ಟಿದೆ. ಅಶ್ವಮೇಧ ಯಾಗವನ್ನು ಮಾಡಿದವನು ತಿರುಗಿಯೂ ಸಂಸರಿಸುತ್ತಾನೆ. ಕೃಷ್ಣನನ್ನು ಕುರಿತು ಸುಕೃತ ಪ್ರಣಾಮವನ್ನು ಮಾಡಿದವನು ತಿರುಗಿ ಸಂಸರಿಸುವುದಿಲ್ಲ. ಸುಕೃತ ಪ್ರಣಾಮದ ಸ್ವರೂಪವೇನೆಂದರೆ, ತೋಳುಗಳಿಂದ ಮೂರು ಸಲ ವಿಸ್ತಾರವಾಗಿ ಅಜಂಲಿ ಮಾಡುವುದು, ಮೂರು ಸಲ ಮಂಡಿಯವರಿಗೆ ತೋಳುಗಳನ್ನು ನೀಡುವುದು. ಹಣೆ, ಮೂಗು, ಕಪೋಲಗಳನ್ನು ಮೂರು ಸಲ ಭೂಸ್ಪರ್ಶವಾಗುವಂತೆ, ಸಾಷ್ಟಾಂಗ ಪ್ರಣಾಮವನ್ನು ಹನ್ನೆರಡು ಸಲ ಮಾಡಿದರೆ ಅದು ಸುಕೃತ ಪ್ರಣಾಮವೆಂದು ಹೇಳಲ್ಪಟ್ಟಿದೆ. ಈ ಸುಕೃತ ಪ್ರಣಾಮವನು ಮಾಡುವವನಿಗೆ ಪುನರ್ಜನ್ಮವಿಲ್ಲವೆಂದು ಹೇಳಿದೆ. ಇದು ಪ್ರಪತ್ತಿಯಲ್ಲ. ಪುನರ್ಜನ್ಮ ನಿವರ್ತಕವಾದ ಪ್ರಣಾಮರೂಪ ಕ್ರಿಯಾವಿಶೇಷ. ಆದ್ದರಿಂದ ಅಲ್ಲಿ ಹೇಳಿದ ಪರಿಕರಗಳು ಪ್ರಪತ್ತಿಗೆ ಅಂಗಗಳಲ್ಲ. ಭಕ್ತಿ ಪ್ರಪತ್ತಿಗಳಲ್ಲಿ ಮೂಡಿಸಿ ಪುನರ್ಜನ್ಮ ನಿವರ್ತಕವೆಂಬುದು ಪ್ರಮಾಣಾಂತರಗಳಿಂದ ಏರ್ಪಡುತ್ತದೆ. (1122ನೇಪುಟ ನೋಡಿ)

ಇಂಗು ಪ್ರಪತ್ತ್ಯಧ್ಯಾಯಾದಿಹಳಿಲ್ ಇತ್ಯಾದಿ – ಇಲ್ಲಿ ಪ್ರಪತ್ತ್ಯಧ್ಯಾಯಾದಿಗಳಲ್ಲಿ ಹೇಳಿದ ಆನು

---

(3) ರಾಮಾಯಣ ಯುದ್ಧಕಾಂಡ 21 - 1, 2.

ಅನಂತರ ಸಮುದ್ರದ ತೀರದಲ್ಲಿ ಶ್ರೀ ರಾಮಚಂದ್ರನು ದರ್ಭೆಗಳನ್ನು ಹರಡಿ ಭುಜಗದ ಶರೀರದಂತೆ ಅಗಲವಾಗಿರುವ ಬಾಹುವನ್ನು ತಲೆಗೆ ದಿಂಬಾಗಿ ಇಟ್ಟುಕೊಂಡು ಪ್ರಾಙ್ಮುಖನಾಗಿ ಅಂಜಲಿ ಬಂಧನನ್ನು ಮಾಡಿಕೊಂಡು ಸಮುದ್ರಕ್ಕೆ ಎದುರಿನಲ್ಲಿ ಮಲಗಿದನು

4) ಆ ರಾಜನು ಬಹಳ ಆಪತ್ತಿನಿಂದ ಕೂಡಿದವನಾಗಿ ದೇವ ಶ್ರೇಷ್ಠನೂ ಶರಣ್ಯನೂ ಆದ ಹರಿನಾರಾಯಣನನ್ನು ಇಂದ್ರಿಯಗಳನು ಅಡಗಿಸಿಕೊಂಡು, ಆರು ರಾತ್ರಿ ಆಹಾರವಿಲ್ಲದೆ ಶರಣ ಹೊಂದಿದನು. ಮಹಾ ಕೀರ್ತಿವಂತನಾದ ಆ ರಾಜನು ಆ ಹರಿ ನಾರಾಯಣನನ್ನು ಸಾಕ್ಷಾತ್ಕರಿಸಿದನು - ಹರಿವಂಶ (27-10-22)

**ನಿಯಮಙ್ಗಳ್ ವೇಣ್ಡಾ. ಆಕಿಂಚನ್ಯೈಕ ಧನರಾನ ದ್ರೌಪದಿ, ದಮಯಂತೀ, ರಾಕ್ಷಸೀ, ವಿಭೀಷಣ, ಕ್ಷತ್ರಬಂಧು, ಮುಚಕುಂದ, ಗಜೇಂದ್ರ, ಪಾಂಡವ, ದೇವ, ಸುಮುಖ, ತ್ರಿಶಂಕು, ಶುನಶ್ಶೇಫ ಕಿರಾತ, ಕಾಕ, ಕಪೋತಾದಿಹಳ್ ಶರಣಾಗತರಾಹಿರಪ್ಪೋದು ಅಪ್ಪೋದೈಯ ಆನುಕೂಲ್ಯಾದಿಹಳೈ ಯೊೞಿಯ ವೇರೊರು ಇತಿಕರ್ತವ್ಯತೈಯೈ ಕೊಲ್ಲಕ್ಕಂಡಿಲೋಮ್.**

**ಕ್ಷಣಕಾಲ ಸಾಧ್ಯಮಾಯ್, ನಿರಪೇಕ್ಷಮಾನ ಪ್ರಪತ್ತಿ ಮಾತ್ರತ್ತಾಲೇ ಕಡುಹ ಅವ್ವೋ ಶರಣಾಗತರ್ಕ್ಕು, ಅವ್ವೋ ಅಪೇಕ್ಷಿತ ಸಿದ್ಧಿಯುಮ್ ಕಣ್ಡೋಮ್.**

**ಇಪ್ಪಡಿ ಮೋಕ್ಷಾರ್ಥ ಪ್ರಪತ್ತಿಯಿಲುಮ್ ಇವನ್ ಕೋಲಿನ ಕಾಲತ್ತಿಲೇ ಫಲಸಿದ್ಧಿಕ್ಕು ಕ್ಕುರೈಯಿಲ್ಲೈ.**

---

**ಕೂಲ್ಯ** ಸಂಕಲ್ಪಾದಿ ಪರಿಕರಗಳು ವಿನಹ ಬೇರೆ ಯಾವ ನಿಯಮವೂ ಬೇಡ. **ಆಕಿಂಚನ್ಯೈಕ ಧನರಾನ ಇತ್ಯಾದಿ** – ಆಕಿಂಚನ್ಯವನ್ನೇ ಧನವನ್ನಾಗಿ ಉಳ್ಳ ದ್ರೌಪದೀ, ದಮಯಂತೀ, ರಾಕ್ಷಸೀ, ವಿಭೀಷಣ, ಕ್ಷತ್ರುಬಂಧು, ಮುಚಕುಂದ, ಗಜೇಂದ್ರ, ಪಾಂಡವರು, ದೇವತೆಗಳು, ಸುಮುಖ, ತ್ರಿಶಂಕು, ಶುನಶ್ಶೇಫ ಕಿರಾತ, ಕಾಕ, ಕಪೋತಾದಿಗಳು ಶರಣಾಗತರಾಗಿ ಬಂದ ಸಮಯದಲ್ಲಿ ತಾತ್ಕಾಲಿಕವಾದ, ಆನುಕೂಲ್ಯಾದಿಗಳು ವಿನಹ ಬೇರೆಯೊಂದು ಇತಿಕರ್ತವ್ಯತೈಯೈ – ಅಂಗವನ್ನು **ಕಂಡಿಲೋಮ್** – ನೋಡಿಲ್ಲ. (i) ದಮಯಂತಿಯು ನಳನನ್ನು ವರಿಸಲು ಬಂದಾಗ ದೇವತೆಗಳು ನಾಲ್ವರು ನಳನಂತೆ ವೇಷ ಹಾಕಿಕೊಂಡು ನಿಜವಾದ ನಳ ನೊಡನೆ ಕುಳಿತಿದ್ದರು. ಆಗ ದಮಯಂತಿಯು ನಿಜವಾದ ನಳನನ್ನು ತೋರಿಸಿಕೊಡುವಂತೆ ದೇವತೆಗಳನ್ನು ಕುರಿತು ಶರಣಾಗತಿ ಮಾಡಿದಳು. (ii) ಗರುಡನು ಸುಮುಖನೆಂಬ ಸರ್ಪದ ತಂದೆಯನ್ನು ತಿಂದು ಹಾಕಿ, ಸುಮುಖ ನನ್ನೂ ಅಟ್ಟಿಸಿಕೊಂಡು ಬಂದಾಗ, ಆ ಸುಮುಖನು ಭಗವಂತನನ್ನು ಪ್ರಾಣಾರ್ಥಿಯಾಗಿ ಶರಣುಹೊಕ್ಕನು. (iii) ರಾಕ್ಷಸಿ - ತ್ರಿಜಟೆಯು ಸೀತೆಯ ಹತ್ತಿರ ತನ್ನನ್ನೂ ರಾಕ್ಷಸಿಯರನ್ನೂ ರಕ್ಷಿಸಬೇಕೆಂದು ಮಾಡಿದ ಶರಣಾಗತಿ (iv) ದೇವತೆಗಳು ರಾವಣನ ಭಯ ನಿವಾರಣೆಗೋಸ್ಕರ ಭಗವಂತನಲ್ಲಿ ಶರಣಾಗತಿ ಮಾಡಿದರು. v) ತ್ರಿಶಂಕು, ಶುನಶ್ಶೇಫರುಗಳು ವಿಶ್ವಾಮಿತ್ರರಲ್ಲಿ ಮಾಡಿದ ಶರಣಾಗತಿ. vi) ಕಿರಾತನು ಮಳೆ ಛಳಿ ಭಯದಿಂದ ವನ ದೇವತೆಗಳನ್ನು ಕುರಿತು ಮಾಡಿದ ಶರಣಾಗತಿ. ಅವನು ನಿಂತಿದ್ದ ಮರದ ಮೇಲಿದ್ದ ಗಂಡು ಕಪೋತವು, ತನ್ನ ಗೆಳತಿಯು ಆ ಬೇಡನ ಕೈಸೆರೆಗೆ ಸಿಕ್ಕಿ ಅವನ ಚೀಲದಲ್ಲಿದ್ದುದನ್ನು ತಿಳಿದೂ, ಅವನನ್ನು ಛಳಿ, ಹಸಿವು ಗಳಿಂದ ರಕ್ಷಿಸಿದ ವೃತ್ತಾಂತವು ಇಲ್ಲಿ ಅನುಸಂಧೇಯ. ಕಾರಣ ತನ್ನ ಗೆಳತಿಯು ಈತನು ನಮ್ಮ ವಾಸಸ್ಥಾನದ ಹತ್ತಿರ ಬಂದು ಶರಣಾಗತಿ ಮಾಡಿದುದನ್ನು, ತಮ್ಮಲ್ಲಿ ಮಾಡಿದುದಾಗಿ, ತಿಳಿಸಲು, ಗಂಡು ಕಪೋತವು ಅವನನ್ನು ಛಳಿಯಿಂದಲೂ ಹಸಿವಿನಿಂದಲೂ ರಕ್ಷಿಸಿತು. vii) ಕಾಕ – ಕಾಕಾಸುರನು ಪ್ರಾಣಾರ್ಥಿಯಾಗಿ ರಾಮನಲ್ಲಿ ಮಾಡಿದ ಶರಣಾಗತಿ. viii) ಕಪೋತವು ಶಿಬಿಚಕ್ರವರ್ತಿಯಲ್ಲಿ ಪ್ರಾಣಾರ್ಥಿಯಾಗಿ ಮಾಡಿದ ಶರಣಾಗತಿ. ix) ಪಾಂಡ ವರು ಶ್ರೀಕೃಷ್ಣಪರಮಾತ್ಮನಲ್ಲಿ ಮಾಡಿದ ಶರಣಾಗತಿ. x) ದ್ರೌಪದಿ ಶ್ರೀಕೃಷ್ಣಪರಮಾತ್ಮನಲ್ಲಿ ಮಾನಸಂರಕ್ಷಣಾ ರ್ಥವಾಗಿ ಮಾಡಿದ ಶರಣಾಗತಿ. xi) ವಿಭೀಷಣನು ಶ್ರೀರಾಮಚಂದ್ರನಲ್ಲಿ ಮೋಕ್ಷಾರ್ಥವಾಗಿ ಮಾಡಿದ ಶರಣಾಗತಿ. ಇವರುಗಳು **ಕ್ಷಣಕಾಲ ಸಾಧ್ಯಮಾಯ್** ಇತ್ಯಾದಿ – ಕ್ಷಣಕಾಲ ಮಾಡಲರ್ಹವಾದ, **ನಿರಪೇಕ್ಷಮಾನ ಪ್ರಪತ್ತಿ ಮಾತ್ರತ್ತಾಲೇ,** - ಐದು ಅಂಗಗಳು ವಿನಹ ಬೇರೆ ಯಾವುದನ್ನೂ ಅಪೇಕ್ಷಿಸದ ಪ್ರಪತ್ತಿಮಾತ್ರದಿಂದ **ಕಡುಹ** – ಶೀಘ್ರವಾಗಿಯೇ ಆಯಾಯಾ ಶರಣಗತರಿಗೆ ಆಯಾಯಾ ಅಪೇಕ್ಷಿತಗಳು, ಸಿದ್ಧಿಸುದುದನ್ನು **ಕಂಡೋಮ್** – ಪ್ರತ್ಯಕ್ಷವಾಗಿಯೂ, ಶಾಸ್ತ್ರದಿಂದಲೂ ನೋಡಿದ್ದೇವೆ. **ಇಪ್ಪಡಿ ಮೋಕ್ಷಾರ್ಥ ಪ್ರಪತ್ತಿ ಯಿಲುಮ್** ಇತ್ಯಾದಿ – ಹೀಗೆ ಮೋಕ್ಷಾರ್ಥವಾಗಿ ಮಾಡುವ ಪ್ರಪತ್ತಿಯಲ್ಲಿಯೂ ಇವನು ಅಪೇಕ್ಷಿಸಿದ ಕಾಲದಲ್ಲಿ ಫಲಸಿದ್ಧಿಯಾಗುವುದರಲ್ಲಿ ಸಂಶಯವಿಲ್ಲ. ಆದಾಗಿ "ಸಾಮಾನ್ಯತಸ್ತು ದೃಷ್ಟಾತ್, ಅತೀಂದ್ರಿಯಾಣಾಮ್

ಇದು "ಮಾಶುಚಃ" ಎನ್ನಿಹಿರ ವಾಕ್ಯತ್ತುಕ್ಕುಮ್ ತಾತ್ಪರ್ಯಮ್. "ಪರಿತ್ಯಜ್ಯ" ಎನ್ನಿಹಿರ ವಿಡತ್ತಿಲೇ ಪರಿಕರಾನ್ತರ ನೈರಪೇಕ್ಷ್ಯಮ್ ಶೊನ್ನಪ್ಪೊರುಳಿಲೇ ಏಕಶಬ್ದತ್ತಿಲ್ ಇಂಪ ಯೋಜನೈ ದೃಢೀಕರಣಾರ್ಥಮಾಹಕ್ಕಡವದು ಇದಕ್ಕು ಅರ್ಥಾನ್ತರಮ್ ವಿವಕ್ಷಿತ. ಮಾಹವುಮಾಮ್ "ಏಕ ಶಬ್ದತ್ತುಕ್ಕುಇದು ಪೊರುಳಾನಾಲ್ "ಪರಿತ್ಯಜ್ಯ" ಎನ್ನಿಹಿರ ವಿದುಕ್ಕು ಅನ್ಗುಶೊನ್ನ ಅರ್ಥಾನ್ತರಙ್ಗಳೈ ಕ್ಕೊಳ್ಳವುಮಾಮ್.

ಸಪರಿಕರ ಪ್ರಪತ್ತಿಕ್ಕು ಉಪಾಸನಾದಿಹಳಾನ ಅಂಗಿಹಳೈಯುಮ್ ಇವತ್ತಿನ್ ಪರಿಕರಙ್ಗಳಾನ ಧರ್ಮಾನ್ತರಙ್ಗಳೈಯುಮ್ ಕಳೈಕ್ಕಿರ ಪೊರುಳ್‌ಹಳಿಲ್ ಇಪ್ಪೇಕಶಬ್ದಮ್ ಶರಣ್ಯನೈ ವಿಶೇಷಿತ್ತಪಡಿಯೆನ್ನೆನ್ನಿಲ್? ಆಕಿಂಚನನ್ ಪಕ್ಕಲಿಲೇ, ಇದು ಪ್ರಸಾದನ ಮಾಯ್‌ಕ್ಕೊಂಡು ಶರಣ್ಯನೋಡು ತುವಕ್ಕತ್ತನೈ ಕಾಟ್ಟುಹೈಕ್ಕಾಹ "ಮಾಮೇಕಂ" ಎನ್ನಿಹಿರದು.

(6) ಅಥ "ಏಕ" ಶಬ್ದಸ್ಯ ಸರ್ವಫಲ ಸಾಧನಂ ಮಾಮಿತ್ಯರ್ಥಾನ್ತರಮಾಹ –

"ಸರ್ವಧರ್ಮಾನ್" ಎನ್ನಿಹಿರ ಕೀೞಿಲ್ "ಸರ್ವ" ಶಬ್ದತ್ತೈಯುಮ್, "ಸರ್ವ ಪಾಪೇಭ್ಯಃ" ಎನ್ನಿಹಿರ

---

ಪ್ರತೀತಿರನುಮಾನಾತ್" ಎಂಬ ನ್ಯಾಯದಂತೆ, ದೃಷ್ಟಾರ್ಥ ಪ್ರಪತ್ತಿ ದೃಷ್ಟಾಂತದಿಂದ, ಅದೃಷ್ಟಾರ್ಥಪ್ರಪತ್ತಿಯಲ್ಲೂ ಫಲಸಿದ್ಧಿಯು ಅನುಮಾನದಿಂದ ನಿಶ್ಚಿತವು. ಇದು ಇತ್ಯಾದಿ – ಹೀಗೆ ಇವನು ಅಪೇಕ್ಷಿಸಿದ ಕಾಲದಲ್ಲಿ ಫಲಸಿದ್ಧಿಯು, ಏರ್ಪಟ್ಟು, "ಮಾಶುಚಃ" ಎಂಬ ವಾಕ್ಯಕ್ಕೆ ಶೋಕನಿಷೇಧದಲ್ಲಿ ತಾತ್ಪರ್ಯವಾದ್ದರಿಂದ, ಅದರಿಂದ ಪರಿಕರಾಂತರಾಭಾವ ಕಾಲವಿಳಂಬ ಪ್ರಯುಕ್ತ ಶೋಕವೂ ನಿವರ್ತ್ಯವೆಂದು ಭಾವ. **"ಪರಿತ್ಯಜ್ಯ" ಎನ್ನಿಹಿರ ವಿಡತ್ತಿಲೇ** ಇತ್ಯಾದಿ – "ಪರಿತ್ಯಜ್ಯ" ಎಂಬಲ್ಲಿ ಪರಿಕರಾಂತರ ನೈರಪೈಕ್ಷ್ಯವನ್ನು ಹೇಳಿರುವುದು ವಿವಕ್ಷಿತವಾಗಿ ಈ ಯೋಜನೆಯು 'ಏಕ' ಶಬ್ದದಲ್ಲಿ ದೃಢೀಕರಿಸಲ್ಪಟ್ಟದಾಗಿ ಆಗಬಹುದು. ಇದರಿಂದ ಪುನರುಕ್ತಿ ದೋಷವಿಲ್ಲವೆಂದು ತಾತ್ಪರ್ಯ. **ಇದುಕ್ಕು** ಇತ್ಯಾದಿ – ಇದಕ್ಕೆ ಅರ್ಥಾಂತರವು ವಿವಕ್ಷಿತವಾಗಲೂ ಬಹುದು. ಅದಾಗಿ "ಪರಿತ್ಯಜ್ಯ" ಎಂಬುದಕ್ಕೆ ನೈರಪೇಕ್ಷ್ಯವನ್ನು ಹೇಳುವ ಪಕ್ಷದಲ್ಲಿ ಏಕಶಬ್ದಕ್ಕೆ "ಪ್ರಾಪ್ಯನೇ ಪ್ರಾಪಕನು" ಎಂಬ ಅರ್ಥಾಂತರಗಳನ್ನು ಸ್ವೀಕರಿಸಬಹುದು. **ಏಕಶಬ್ದತ್ತುಕ್ಕು ಇದು** ಇತ್ಯಾದಿ – ಏಕಶಬ್ದಕ್ಕೆ ನೈರಪೇಕ್ಷ್ಯಾರ್ಥಕತ್ವವನ್ನು ಹೇಳುವುದಾದರೆ, ಪರಿತ್ಯಜ್ಯವಿಗೆ ಅನುವಾದಾದ್ಯರ್ಥಾಂತರವನ್ನು ಸ್ವೀಕರಿಸಬಹುದು.

ಹೀಗೆ "ಏಕ"ಶಬ್ದದಿಂದ ಸಪರಿಕರ ಪ್ರಪತ್ತಿಯಲ್ಲಿ ಉಪಾಸನಕ್ಕೂ ಅದರ ಅಂಗಗಳಿಗೂ ಅನ್ವಯವಿಲ್ಲವೆಂಬುದು ಹೇಳಲ್ಪಡುತ್ತದೆಯಾದರೆ, ಈ ಏಕಶಬ್ದವು ಶರಣ್ಯನಿಗೆ ಹೇಗೆ ವಿಶೇಷಣವಾಗುತ್ತದೆ ಎಂಬ ಚೋದ್ಯಕ್ಕೆ ಸಮಾಧಾನವಾಗಿ **ಸಪರಿಕರಪ್ರಪತ್ತಿಕ್ಕು** ಎಂದಾರಂಭಿಸಿ ಅನುಗ್ರಹಿಸುತ್ತಾರೆ ಅದಾಗಿ ಸಪರಿಕರವಾದ ಪ್ರಪತ್ತಿಗೆ ಉಪಾಸನಾದಿಗಳಾದ ಅಂಗಿಗಳನ್ನೂ, ಇವುಗಳ **ಪರಿಕರ** - ಅಂಗಗಳಾದ ಧರ್ಮಾಂತರಗಳನ್ನೂ ನಿವರ್ತಿಸುವ ಈ ಅರ್ಥದಲ್ಲಿ, ಈ ಏಕಶಬ್ದವು ಶರಣ್ಯನಿಗೆ ಹೇಗೆ ವಿಶೇಷಣವಾಗುತ್ತದೆಯೆಂದರೆ, **ಆಕಿಂಚನನ್ ಪಕ್ಕಲಿಲೇ** ಇತ್ಯಾದಿ – ಆಕಿಂಚನನ ವಿಷಯದಲ್ಲಿ **ಇವೈ** – ಈ ಉಪಾಸನವೂ ಅದರ ಅಂಗಗಳೂ, ಪ್ರಸಾದನಗಳಾಗಿ ಶರಣ್ಯನೊಡನೆ ಸಂಬಂಧಪಡದೆ ಇರುವುದನ್ನು ತೋರಿಸಲು, **"ಮಾಮೇಕಂ"** ಎಂದು ಹೇಳುತ್ತದೆ.

(6)"ಏಕ"ಶಬ್ದವು **ಭಗವಂತನೇ ಸಕಲಫಲಸಾಧಕನು ಎಂಬುದನ್ನು ತಿಳಿಸುತ್ತದೆ.**

**"ಸರ್ವಧರ್ಮಾನ್"** ಇತ್ಯಾದಿ – 'ಸರ್ವಧರ್ಮಾನ್' ಎಂದು ಪೂರ್ವದಲ್ಲಿ ಹೇಳಿರುವ ಸರ್ವಶಬ್ದವನ್ನೂ, **ಸರ್ವಪಾಪೇಭ್ಯಃ** ಎಂಬಲ್ಲಿ ಮುಂದೆ ಹೇಳಿರುವ ಸರ್ವಶಬ್ದವನ್ನೂ, ನೋಡಿ ಈ ಏಕಶಬ್ದವು ಸರ್ವಶಬ್ದಕ್ಕೆ ಪ್ರತಿಸಂಬಂಧಿಯಾಗಿ ನಿಂತಿದೆ ಎಂದೂ ಹೇಳುತ್ತಾರೆ. ಅಂದರೆ ಎಲ್ಲಾ ಧರ್ಮಗಳನ್ನೂ ಅನುಷ್ಠಿಸಿದರೆ ಲಭಿಸುವ ಫಲವನ್ನು, ನಾನೊಬ್ಬನೇ ಶರಣಾಗತಿಗೆ ವಶನಾಗಿ ಕೊಡುತ್ತೇನೆ. ಹಾಗೆಯೇ ಶರಣಾಗತಿಗೆ ವಶನಾಗಿ, ಸರ್ವ

**ಮೇಲಿಲ್ "ಸರ್ವ" ಶಬ್ದತ್ತೈಯುಮ್, ಪಾರ್ತ್ತು ಇವ್ವೇಕ ಶಬ್ದಮ್, ಸರ್ವಶಬ್ಧತ್ತುಕ್ಕು ಪ್ರತಿಸಂಬಂಧಿ ಯಾಯ್ ನಿರ್ಕಿರದೆನ್ರುಮ್ ಶೊಲ್ಲುವರ್‌ಹಳ್. ಅಪ್ಪೋದು**

**"ಸುದುಷ್ಕರೇಣ ಶೋಚೇದ್ಯೋ ಯೇನ ಯೇನೇಷ್ಟ ಹೇತುನಾ ।**
**ಸ ಸ ತಸ್ಯಾಹಮೇವೇತಿ ಚರಮಶ್ಲೋಕ ಸಙ್ಗ್ರಹಃ ॥"**

**ಇತ್ತಾಲೇ ಎನ್ ಶೊಲ್ಲಿತ್ತಾಯಿತ್ತೆನ್ನಿಲ್ ? –**
**(1) "ಯದ್ಯೇನ ಕಾಮ ಕಾಮೇನ ನ ಸಾಧ್ಯಂ ಸಾಧನಾನ್ತರೈಃ ।**
**ಮುಮುಕ್ಷುಣಾ ಯತ್ಸಾಂಖ್ಯೇನ ಯೋಗೇನ ನಚ ಭಕ್ತಿತಃ ।**
**ಪ್ರಾಪ್ಯತೇ ಪರಮಂಧಾಮ ಯತೋನಾವರ್ತ್ತತೇಯತಿಃ ।**
**ತೇನತೇನಾಪ್ಯತೇ ತತ್ತನ್ನ್ಯಾಸೇನೈವ ಮಹಾಮುನೇ ।**
**ಪರಮಾತ್ಮಾಚ ತೇನೈವ ಸಾಧ್ಯತೇ ಪುರುಷೋತ್ತಮಃ ॥"**

**ಎನ್ಹಿರ ಕಟ್ಟಳೈಯಿಲೇ ತನಕ್ಕು ಅಭಿಮತಙ್ಗಳಾಯಿರುಪ್ಪದೇದೇನು ಮೊರು ಫಲಙ್ಗಳೈಪ್ಪತ್ತ ಅವ ತ್ತುಕ್ಕು ಅನುಗುಣಮಾಹ ತನಿತ್ತನಿಯೇ ಶಾಸ್ತ್ರಙ್ಗಳಾಲೇ ವಿಧಿಕ್ಕಪ್ಪಟ್ಟ ಉಪಾಯಙ್ಗಳಿಲ್, ಜ್ಞಾನಾ ಭಾವತ್ತಾಲೇಯಾದಲ್, ಜ್ಞಾನಮುಂಡಾಯಿರುಕ್ಕ ಶಕ್ತ್ಯಭಾವತ್ತಾಲೇಯಾದಲ್, ಇವ್ವೈ ಇರಣ್ಡು ಮುಂಡಾಯಿರುಕ್ಕ ವಿಳಂಬಾಕ್ಷಮತ್ವತ್ತಾಲೇ ಯಾದಲ್ ಶೋಕಿತ್ತ ಅಧಿಕಾರಿಯೈಪ್ಪತ್ತ ಅವ್ವುಪಾಯ ಙ್ಗಳಿಲೊನ್ರಿಲುಮ್, ನೀ ಯತ್ನೈಯುವೇಣ್ಡಾ, ಅವ್ವೈ ತನಿತ್ತನಿಯೇ ತರುಮ್ ಫಲಙ್ಗಳುಕ್ಕೆಲ್ಲಾಮ್ "ಪ್ರಪತ್ತಿ ವಶೀಕೃತನಾನ ನಾನೊರುವನುಮೇ ಅಮೈಯುಮೆನ್ರು ಶೊಲ್ಲಿತ್ತಾಯಿತ್ತು. ಫಲ ಔಷಧ**

---

ಪಾಪಗಳನ್ನೂ ನಾನೊಬ್ಬನೇ ನಿವರ್ತಿಸುತ್ತೇನೆಂಬುದು ತಾತ್ಪರ್ಯ. **ಅಪ್ಪೋದು** – ಆಗ, **ಸುದುಷ್ಕರೇಣ** ಇತ್ಯಾದಿ – ಯಾವ ಯಾವ ಇಷ್ಟಾರ್ಥವನ್ನು ಸಾಧಿಸಿಕೊಡವುದಕ್ಕೆ ಹೇತುವಾದ ಕರ್ಮಗಳನ್ನು ಅನುಷ್ಠಿಸಲು ಸಾಧ್ಯವಿಲ್ಲದೆ ಶೋಕಿಸುತ್ತಾನೋ, ಆಯಾಯಾ ಕರ್ಮಗಳ ಸ್ಥಾನದಲ್ಲಿ, ಪ್ರಪತ್ತಿ ವಶೀಕೃತನಾದ, ನಾನೇ (ಭಗವಂತನೇ) ಆಯಾಯಾ ಫಲಗಳನ್ನು ಸಾಧಿಸಿಕೊಡುತ್ತೇನೆ, ಎಂಬುದು ಚರಮಶ್ಲೋಕದ ಸಂಗ್ರಹಾರ್ಥ.

**ಇತ್ತಾಲೇ** ಇತ್ಯಾದಿ – ಈ ಕಾರಿಕೆಯಿಂದ ಏನು ಹೇಳಲ್ಪಟ್ಟಿತು ಎಂದರೆ **ಯದ್ಯೇನ ಕಾಮ ಕಾಮೇನ** ಇತ್ಯಾದಿ – [ಅಹಿರ್ಬುಧ್ನ್ಯಸಂಹಿತೆ] ತನಗೆ ಇಷ್ಟವಾದ ಲೌಕಿಕ ಪುರುಷಾರ್ಥಗಳನ್ನು ಸಾಧನಾಂತರಗಳಿಂದ **ಸಾಧಿಸಿಕೊಳ್ಳಲಾಗದವನೂ, ಮೋಕ್ಷದಲ್ಲಿ** ಆಸೆಯಿಂದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನು **ಮಾಡಲು ಅಶಕ್ತನಾಗಿರುವವನೂ,** ಆಯಾಯಾ ಫಲಗಳನ್ನು ಪ್ರಪತ್ತಿಯಿಂದಲೇ ಪಡೆಯುತ್ತಾನೆ. ಪುನರಾವರ್ತಿ ಯಿಲ್ಲದ ಪರಮಪದವೂ, ಪರಮಾತ್ಮನ ಸಾಯುಜ್ಯವೂ ಆ ಶರಣಾಗತಿಯಿಂದಲೇ ಹೊಂದಲ್ಪಡುತ್ತದೆ, **ಎನ್ಹಿರ ಕಟ್ಟಳೈಯಿಲೇ** ಇತ್ಯಾದಿ – ಎಂಬ ರೀತಿಯಲ್ಲಿ, ತನಗೆ ಅಭಿಮತಗಳಾಗಿರುವ ಯಾವುದಾದರೊಂದು ಫಲಗಳನ್ನು ಕುರಿತು, ಅವುಗಳಿಗೆ ಅನುಗುಣವಾಗಿ, ಪ್ರತ್ಯೇಕವಾಗಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಉಪಾಯಗಳಲ್ಲಿ ಜ್ಞಾನವಿಲ್ಲ ದೆಯೋ ಜ್ಞಾನವಿದ್ದು ಶಕ್ತಿಯಿಲ್ಲದೆಯೋ, ಇವೆರಡೂ ಇದ್ದರೂ ವಿಳಂಬವನ್ನು ಸಹಿಸಲಾಗದೆಯೋ ಶೋಕಿಸಿದ ಅಧಿಕಾರಿಯನ್ನು ಕುರಿತು, ನೀನು ಆ ಉಪಾಯಗಳಲ್ಲಿ ಯಾವುದಾದರೂ ಒಂದನ್ನು ಅನುಷ್ಠಿಸುತ್ತೇನೆಂದು ಶ್ರಮಪಡಬೇಡ. ಅವುಗಳು ಪ್ರತ್ಯೇಕವಾಗಿ ಕೊಡುವ ಫಲಗಳನ್ನೆಲ್ಲಾ ಪ್ರಪತ್ತಿ ವಶೀಕೃತನಾದ ನಾನೊಬ್ಬನೇ ಕೊಡುತ್ತೇನೆ ಎಂದು ಹೇಳಿದಂತಾಯಿತು. ಇದಕ್ಕೆ ದೃಷ್ಟಾಂತವನ್ನು **ಫಲ ಔಷಧಂಗಳ್ ತರವಲ್ಲ** ಇತ್ಯಾದಿ– ತಿಳಿಸುತ್ತಾರೆ. ಅದಾಗಿ ಅನೇಕ ಔಷಧಿಗಳು ಕೊಡತಕ್ಕ ಆರೋಗ್ಯವನ್ನೆಲ್ಲಾ ಈ ಸಿದ್ಧೌಷದ ಒಂದೇ ಕೊಡ ತಕ್ಕದಾದ್ದರಿಂದ ನೀನು ಬೇರೆ ಬೇರೆ ಔಷಧಿಗಳನ್ನು ಸೇವಿಸಲು ಹೋಗದೆ, ಈ ಸಿದ್ಧೌಷದವೊಂದನ್ನೇ ಸೇವಿ

ಙ್ಗಳ್ ತರವಲ್ಲ ಆರೋಗ್ಯತ್ತೈಯೆಲ್ಲಾಮ್, ಇಸ್ಸಿದ್ಧೌಷದ ಮೊನ್ರುಮೇ ತರವತ್ತಾಕ್ಕೈಯಾಲೇ, ನೀ ಔಷಧಾಂತರಙ್ಗಳುಕ್ಕು ಅಲಮರವಾದೇ ಇನ್ದ ಔಷಧಮೊನ್ರೈಯುಮೇ ಉಪಜೀವಿಕ್ಕವಮೈಯುಮ್. ಇದು ಉನಕ್ಕುಅನ್ದ ಔಷಧಙ್ಗಳಾಲೇ ಕಳಿಕ್ಕಪ್ಪಡುಮ್ ವ್ಯಾಧಿಗಳೆಲ್ಲಾತ್ತೈಯುಮ್ ಕಳಿಕ್ಕುಮ್ ಉನಕ್ಕು ಪಿನ್ಬು ಸರ್ವಭೋಗಙ್ಗಳೈಯುಮ್ ಭುಜಿಕ್ಕಲಾಮ್ ; ನೀ ಆರೋಗ್ಯತ್ತೈಯುಮ್ ಭೋಗಙ್ಗಳೈಯುಮ್ ಇೞಕ್ಕಿರೋಮೆನ್ರು ವೆರುಕ್ಕವೇಂಡಾವೆನ್ರು ಶೊಲ್ಲುಮಾಪ್ಪೋಲೇ ಇರುಕ್ಕಿರದು, ಇಚ್ಚರಮಶ್ಲೋಕಮ್.

"ಸರ್ವ" ಶಬ್ದ ಪ್ರತಿಸಂಬಂಧಿಯಾಹ "ಏಕ" ಶಬ್ದಂ ಸಿದ್ಧೋಪಾಯ ಪ್ರಾಧಾನ್ಯತ್ತಾಲೇ ಶರಣ್ಯನೈ ವಿಶೇಷಿತ್ತುಕ್ಕೊಂಡು ನಿನ್ರಾಲುಮ್, "ನ್ಯಾಸೇನೈವ" ಎನ್ಗಿರಪಡಿಯೇ ಪ್ರಪತ್ತಿಯೊನ್ರುಮೇ ಸರ್ವಧರ್ಮಾಂತರ ಸ್ಥಾನತ್ತಿಲುಮ್ ವಿಧಿಕ್ಕಪಡುಹಿರದೆನ್ರು ಫಲಿಕ್ಕುಮ್. ಇತ್ತಾಲ್ ತ್ರಿವರ್ಗಾರ್ಥಿಹಳುಮ್ ಇಬ್ಭಗವತ್ಪ್ರಪತ್ತಿ ಪಣ್ಣಲಾಮೆನ್ರದಾಯಿಟ್ರು. ಅಪ್ಪೋದು

(1) ತ್ವಯಾಪಿ ಪ್ರಾಪ್ತಮೈಶ್ವರ್ಯಂ ಯತಸ್ತಂ ತೋಷಯಾಮ್ಯಹಮ್ ।
ನಾಹಮಾರಾಧಯಾಮಿ ತ್ವಾಂ ತವಬದ್ಧೋಯಮಂಜಲಿಃ ।

2) ಸತ್ವಂ ಪ್ರಹರವಾ ಮಾವಾ ಮಯಿ ವಜ್ರಂ ಪುರಂದರ ।
ನಾಹಮುತ್ಸೃಜ್ಯ ಗೋವಿಂದ ಮನ್ಯ ಮಾರಾಧಯಾಮಿ ಭೋ ॥"

---

ಸಿದರೆ ಸಾಕು, ಇದು ನಿನಗೆ ಆಯಾಯಾ ಔಷಧಿಗಳಿಂದ ನಿವರ್ತಿಸಲ್ಪಡುವ ವ್ಯಾಧಿಗಳೆಲ್ಲನನ್ನೂ ಹೋಗಲಾಡಿಸುತ್ತದೆ. ಅನಂತರ ನೀನು ಸರ್ವಭೋಗಗಳನ್ನೂ ಅನುಭವಿಸಬಹುದು. ನೀನು ಆರೋಗ್ಯವನ್ನೂ ಭೋಗಗಳನ್ನೂ ಕಳೆದುಕೊಳ್ಳುತ್ತೇನೆಂದು ದುಃಖಿಸಬೇಡವೆಂದು ಹೇಳುವಂತೆ ಇದೆ ಈ ಚರಮಶ್ಲೋಕ. ದಾರ್ಷ್ಟಾಂತಿಕದಲ್ಲಿ ಸರ್ವಧರ್ಮಗಳನ್ನೂ ಅನುಷ್ಠಿಸಲು ಶಕ್ತಿಯಿಲ್ಲದ ನೀನು ನನ್ನೊಬ್ಬನನ್ನೇ ಶರಣಹೊಂದು. ನಾನು ಸರ್ವಪಾಪಗಳಿಂದಲೂ ನಿನ್ನನ್ನು ಬಿಡಿಸಿ ನಿನಗೆ ಮೋಕ್ಷವನ್ನು ಕೊಡುತ್ತೇನೆ

## ಪ್ರಪತ್ತಿಯು ಎಲ್ಲಾ ಉಪಾಯಗಳ ಸ್ಥಾನದಲ್ಲಿ ಇರುತ್ತದೆ ಎಂಬುದರ ಭಾವ.

ಅಹಿರ್ಬುಧ್ನ್ಯಸಂಹಿತೆಯಲ್ಲಿ "ನ್ಯಾಸೇನೈವ" ಎಂದು ಹೇಳಿರುವುದಕ್ಕೆ ಭಾವವನ್ನು ತಿಳಿಸುತ್ತಾರೆ. ಆದಾಗಿ **ಸರ್ವಶಬ್ದ ಪ್ರತಿಸಂಬಂಧಿಯಾನ** ಇತ್ಯಾದಿ – 'ಸರ್ವ ಧರ್ಮಾನ್' ಎಂಬಲ್ಲಿ 'ಸರ್ವ' ಶಬ್ದಕ್ಕೆ ಪ್ರತಿಸಂಬಂಧಿಯಾದ (ಎದುರಾದ) **ಏಕಶಬ್ದಮ್** – ಏಕಶಬ್ದವು, ಸಿದ್ಧೋಪಾಯ ಪ್ರಾಧಾನ್ಯದಿಂದ ಶರಣ್ಯನನ್ನು ವಿಶೇಷ್ಯನನ್ನಾಗಿ ತಿಳಿಸಿದರೂ, **ನ್ಯಾಸೇನೈವ** - ಎಂಬಂತೆ ಶರಣಾಗತಿಯೊಂದೇ ಸರ್ವಧರ್ಮಾಂತರ ಸ್ಥಾನದಲ್ಲಿಯೂ ವಿಧಿಸಲ್ಪಡುತ್ತದೆ ಎಂದು ಫಲಿತ. **ಇತ್ತಾಲ್** ಇತ್ಯಾದಿ –ಇದರಿಂದ ತ್ರಿವರ್ಗಾರ್ಥಿಗಳೂ ಅಂದರೆ ಧರ್ಮ, ಅರ್ಥ, ಕಾಮಗಳನ್ನು ಅಪೇಕ್ಷಿಸುವವರೂ ಸಹ, ಆಯಾಯಾ ಫಲಗಳಿಗೆ ಭಗವಂತನಲ್ಲಿ ಪ್ರಪತ್ತಿ ಮಾಡಬಹುದು ಎಂದು ಹೇಳಿದಂತಾಯಿತು. **ಅಪ್ಪೋದು** – ತ್ರಿವರ್ಗಾರ್ಥಿಗಳೂ ಭಗವಂತನಲ್ಲಿ ಶರಣಾಗತಿ ಮಾಡಬಹುದೆಂದು ಸಿದ್ಧಿಸಿದ ಮೇಲೆ, (1) **"ತ್ವಯಾಪಿ ಪ್ರಾಪ್ತಮೈಶ್ವರ್ಯಂ"** ಇತ್ಯಾದಿ – (2) **ಸತ್ವಂ ಪ್ರಹರವಾ ಮಾವಾ** ಇತ್ಯಾದಿಯಾಗಿಯೂ ಹೇಳಿರುವಂತೆ ನಿತ್ಯನೈಮಿತ್ತಿಕಗಳಲ್ಲಿ – ಪ್ರತರ್ದನ ವಿದ್ಯಾನ್ಯಾಯದಂತೆ, ಆಯಾಯಾ ಅನನ್ಯಥಾ

---

1) ವಿಷ್ಣುಧರ್ಮ 2-14 ಒಂದು ಪರಮೈಕಾಂತಿಯಾದ ತಪಸ್ವಿಯನ್ನು ಕುರಿತು ಇಂದ್ರನು "ನನ್ನನು ಆರಾಧಿಸು" ಎಂದು ಹೇಳಲು ಆ ಪರಮೈಕಾಂತಿಯು ನಿನಗೂ ಯಾರಿಂದ ಐಶ್ವರ್ಯವು ಪ್ರಾಪ್ತವಾಯಿತೋ ಆ ಭಗವಂತನನ್ನು ನಾನು ಆರಾಧಿಸುತ್ತೇನೆ, ನಿನ್ನನ್ನು ಆರಾಧಿಸುವುದಿಲ್ಲ ನಿನಗೆ ನಮಸ್ಕಾರ ಹೊರಟು ಬಾ" ಎಂದನು

2) ವಿಷ್ಣುಧರ್ಮ 8-28 ಎಲೈ ಇಂದ್ರನೇ ನನ್ನನ್ನು ವಜ್ರಾಯುಧದಿಂದ ಬೇಕಾದರೂ ಹೊಡೆ ಅಥವಾ ಬಿಡು. ಗೋವಿಂದನನ್ನು ಬಿಟ್ಟು ಬೇರೆಯೊಬ್ಬನನ್ನು ನಾನು ಆರಾಧಿಸುವುದಿಲ್ಲ.

**ಇತ್ಯಾದಿಹಳಿಲ್ ಪಡಿಯೇ ನಿತ್ಯನೈಮಿತ್ತಿಕಙ್ಗಳಿಲ್ ವಿಶೇಷಣಮಾಯ್ ಪುಹುಮಳವೊೞಿಯ ಮತ್ತುಮ್ ಸರ್ವಾವಸ್ಥೈಯಿಲುಮ್ ದೇವತಾಂತರ ಸ್ಪರ್ಶಮ್ ಅತ್ತಿರುಕ್ಕೈ ಉಚಿತಮ್.**

**ಮೋಕ್ಷತ್ತುಕ್ಕು ಉಪಾಯಾನ್ತರಾರ್ಥಿಹಳಾಯ್ ಉಪಾಯ ವಿರೋಧಿಹಳೈಕ್ಕೞಿಕ್ಕ ವೇಣ್ಡುವಾರ್ಕ್ಕುಮ್ ಇಪ್ಪ್ರಪತ್ತಿ ಪಣ್ಣಲಾಮ್. ಪ್ರಾಪ್ತಿವಿರೋಧಿಯೈ ಕ್ೞಿಕ್ಕವೇಣ್ಡುವಾರ್ಕ್ಕುಮ್ ಇಪ್ಪ್ರಪತ್ತಿ ತಾನೇಯಮೈಯುಮೆನ್ರು ಪ್ರಪತ್ತಿಯಿನುಡೈಯ ಸಕಲಾಭಿಮತ ಸಾಧನತ್ವಮ್ ಇಙ್ಗೇ ಶೊಲ್ಲಿತ್ತಾಯಿತ್ತು.**

**ಪ್ರಪತ್ತೇಃ ವಿರೋಧಿ ನಿವರ್ತನೇನ ಭಕ್ತಿನಿಷ್ಪಾದಕತ್ವಂ ಸಾಕ್ಷಾನ್ಮೋಕ್ಷ ಸಾಧನಂ ಚ ಅಸ್ತೀತಿ ಶ್ರೀಭಾಷ್ಯಕಾರ ಸಂಮತಮಿತ್ಯಾಹ**

**ಇದಿಲ್ ಪ್ರಪತ್ತಿ ಉಪಾಯ ವಿರೋಧಿಯೈಕ್ಕೞಿಕ್ಕುಮ್ ಕಟ್ಟಳೈಯೈ ಶ್ರೀ ಗೀತಾ ಭಾಷ್ಯತ್ತಿಲೇ ದ್ವಿತೀಯ ಯೋಜನೈಯಿಲೇ ಅರುಳಿಚ್ಚೆಯ್ದಾರ್. ಪ್ರಾಪ್ತಿ ವಿರೋಧಿಯೈಕ್ಕೞಿಕ್ಕುಮ್ ಕಟ್ಟಳೈಯೈ ಗದ್ಯತ್ತಿಲೇ ಯರುಳಿಚ್ಚೆಯ್ದಾರ್.**

**ಇವೈ ಇರಣ್ಡಿಡತ್ತಿಲುಮ್ ಒನ್ನೈ ಅನಾದರಿತ್ತೊನ್ನೈ ಯರುಳಿಚ್ಚೆಯ್ದ ಪಡಿಯನ್ರು. ಇರಣ್ಡಿಡಮುಮ್ ಸರ್ವಾಭಿಮತ ಸಾಧನಮಾನ ಇವ್ವುಪಾಯತ್ತಿನ್ ಪ್ರಭಾವತ್ತುಕ್ಕು ಉದಾಹರಣಪರಮ್. ಪ್ರಣವಮ್, ಮನ್ತ್ರಾಂತರತ್ತಿಲ್ ಪ್ರವೇಶಿತ್ತು ನಿನ್ರುಮ್, ಸ್ವತಂತ್ರಮಾಯುಮ್ ನಿರ್ಕುಮಾಪ್ಪೋಲೇ**

---

ಸಿದ್ಧಜೀವ ಲಿಂಗಸಹಿತ ವಾಕ್ಯ ಪ್ರತಿಪಾದಕ ಮಂತ್ರಗಳ ಉಚ್ಚಾರಣೆಯಿಂದ ಅಂತರ್ಯಾಮಿಯಾದ ಭಗವಂತನೇ ಆರಾಧ್ಯನಾದ್ದರಿಂದ, ವಿಶೇಷಣ ಭೂತರಾದ ದೇವತೆಗಳಿಗೆ ಆರಾಧ್ಯತ್ವವಿಲ್ಲದಿರುವಂತೆ, ಇದು ವಿನಹ, **ಮಟ್ರುಮ್** ಇತ್ಯಾದಿ – ಇತರ ಸರ್ವಾವಸ್ಥೆಗಳಲ್ಲಿಯೂ ದೇವತಾಂತರ ಸ್ಪರ್ಶವನ್ನು ಬಿಟ್ಟಿರುವುದು ಉಚಿತವಾದದ್ದು.

**ಮೋಕ್ಷತ್ತುಕ್ಕು** ಇತ್ಯಾದಿ – ಮೋಕ್ಷಕ್ಕಾಗಿ ಭಕ್ತಿಯೋಗರೂಪವಾದ ಉಪಾಯಾಂತರಗಳನ್ನು ಅನುಷ್ಠಿಸುವವರಾಗಿ, ಭಕ್ತಿಯೋಗವು ಸುಲಭವಾಗಿ ನಿಷ್ಪನ್ನವಾಗಲು ವಿರೋಧಿಗಳಾಗಿ ಅಶಕ್ಯಾನುಷ್ಠಾನಗಳಾದ ಪಾಪಗಳನ್ನು ಕಳೆಯಲು ಆಸೆಪಡುವವರಿಗೂ **ಇಪ್ಪ್ರಪತ್ತಿತಾನೇ** – ಈ ಪ್ರಪತ್ತಿಯೊಂದೇ **ಅಮೈಯುಮ್** – ಸಾಕಾಗುತ್ತದೆ ಎಂದು ಪ್ರಪತ್ತಿಯ ಸಕಲಾಭಿಮತ ಸಾಧನತ್ವವು ಇಲ್ಲಿ ಹೇಳಲ್ಪಟ್ಟದಾಯಿತು. **ಇದಿಲ್ ಪ್ರಪತ್ತಿ** ಇತ್ಯಾದಿ – ಈ ಸಕಲಾಭಿಮತ ಸಾಧನವಿಷಯದಲ್ಲಿ, ಈ ಪ್ರಪತ್ತಿಯು ಭಕ್ತಿರೂಪ ವಿರೋಧಿ ಪಾಪವನ್ನು ನಿವರ್ತಿಸುವ **ಕಟ್ಟಳೈಯೈ** – ಪ್ರಕಾರವನ್ನು ಶ್ರೀಗೀತಾಭಾಷ್ಯದಲ್ಲಿ, ದ್ವಿತೀಯ ಯೋಜನೆಯಲ್ಲಿ ಭಗವದ್ಭಾಷ್ಯಕಾರರು ಅನುಗ್ರಹಿಸಿರುತ್ತಾರೆ. ಅಲ್ಲಿ ಚರಮಶ್ಲೋಕಕ್ಕೆ ಅಂಗ ಪ್ರಪತ್ತಿಪರವಾಗಿ ವ್ಯಾಖ್ಯಾನ ಮಾಡಿರುತ್ತಾರೆ. **ಪ್ರಾಪ್ತಿವಿರೋಧಿಯೈ** ಇತ್ಯಾದಿ – ಮೋಕ್ಷವನ್ನು ಪಡೆಯಲು ವಿರೋಧಿಯಾದ ಪಾಪವನ್ನು ನಿವರ್ತಿಸಲು ಸ್ವತಂತ್ರ ಪ್ರಪತ್ತ್ಯನುಷ್ಠಾನವನ್ನು ಶರಣಾಗತಿಗದ್ಯದಲ್ಲಿ ಭಗವದ್ಭಾಷ್ಯಕಾರರು ಅನುಗ್ರಹಿಸಿರುತ್ತಾರೆ. **ಇವೈ ಯಿರಂಡಿಡತ್ತಿಲುಮ್** ಇತ್ಯಾದಿ – ಈ ಎರಡು ಜಾಗಗಳಲ್ಲಿಯೂ ಒಂದನ್ನು (ಅಂಗತ್ವವನ್ನು) ಅನಾದರಿಸಿ ಮತ್ತೊಂದನ್ನು (ಸ್ವತಂತ್ರತ್ವವನ್ನು) ಹೇಳಿದ್ದಾರೆಂದಲ್ಲ. **ಇರಂಡಿಡಮುಮ್** ಇತ್ಯಾದಿ – ಈ ಎರಡು ಸ್ಥಲಗಳೂ ಸರ್ವಾಭಿಮತ ಸಾಧನವಾದ ಈ ಉಪಾಯದ ಪ್ರಭಾವಕ್ಕೆ ಉದಾಹರಣೆಗಳು.

ಪ್ರಪತ್ತಿಗೇನೇ, ಅಂಗತ್ವವನ್ನೂ ಸ್ವತಂತ್ರತ್ವವನ್ನೂ ಹೇಳುವುದು ಯುಕ್ತವೇ ಎಂಬ ಶಂಕೆಯನ್ನು **ಪ್ರಣವಮ್** ಎಂದಾರಂಭಿಸಿ ದೃಷ್ಟಾಂತಪೂರ್ವಕವಾಗಿ ಹೋಗಲಾಡಿಸುತ್ತಾರೆ. ಅದಾಗಿ ಪ್ರಣವವು ವ್ಯಾಪಕಮಂತ್ರಗಳಲ್ಲಿ, ವ್ಯಾಪಕನಾಮಕ್ಕೆ ಅಂದರೆ ನಾರಾಯಣ, ವಿಷ್ಣು, ವಾಸುದೇವ ಶಬ್ದಗಳಿಗೆ ಶೇಷವಾಗಿ ಅನ್ವಯಿಸಿ ಅಪ್ರಧಾನವಾಗಿ ನಿಲ್ಲುವಂತೆಯೂ, ನ್ಯಾಸವಿದ್ಯೆಯಲ್ಲಿ "ಓಮಿತ್ಯಾತ್ಮಾನಂ ಯುಂಜೀತ", ಎಂದು ಸ್ವತಂತ್ರವಾಗಿಯೂ ಪ್ರಪತ್ತಿ

**ಇಪ್ರಪತ್ತಿ ಅಧಿಕಾರಿ ವಿಶೇಷತ್ತಿಲೇ ಭಕ್ತ್ಯಂಗಮುಮಾಯ್, ಅಧಿಕಾರ್ಯಂತರತ್ತಿಲೇ ಸ್ವತಂತ್ರಮುಮಾಯ್ ಇರುಕ್ಕೈ ವಚನ ಬಲತ್ತಾಲೇ ಸಿದ್ಧಮ್.**

**ಇಪ್ಪಡಿ ನಿಯತಾಧಿಕಾರಮಾಹ ಭಕ್ತಿಪ್ರಪತ್ತಿಹಳ್ ವಿಕಲ್ಪಿತ್ತು ನಿರ್ಕಿರ ನಿಲೈ "ಭಕ್ತ್ಯಾಪರಮಯಾವಾಪಿ ಪ್ರಪತ್ತ್ಯಾವಾ ಮಹಾಮತೇ," ಇತ್ಯಾದಿಹಳಿಲೇ ಪ್ರಸಿದ್ಧಮ್. ಆಹೈಯಾಲ್**

**"ಸಮ್ಯಕ್ ಜ್ಞಾನೇನವಾ ಮೋಕ್ಷಂ ಗಂಗಾಯಾಂ ಮರಣೇನವಾ ।**
**ಪ್ರಣಾಮಾದ್ವಾಪಿ ಸುಕೃತಾದ್ಭಕ್ತ್ಯಾವಾ ಲಭತೇ ನರಃ ॥**

**ಇತ್ಯಾದಿಹಳಿಲೇ ಸಾಕ್ಷಾದುಪಾಯತ್ತೋಡೇ ಕೂಡ ಪರಂಪರೋಪಾಯಙ್ಗಳೈ ಎಡುತ್ತದುವುಮ್ ಅವತ್ತಿನುಡೈಯ ಪ್ರಾಶಸ್ತ್ಯಾತಿಶಯಮ್ ತೋತ್ತುಹೈಕ್ಕಾಹವತ್ತನೈ.**

**ಏಕ ಶಬ್ದಸ್ಯ ಉಕ್ತಾರ್ಥಾನ್ ಕಾರಿಕಯಾ ಸಂಗೃಹ್ಣಾತಿ**

**ಪ್ರಾಪ್ಯಸ್ಯೈವ ಪ್ರಾಪಕತ್ವಂ ಸ್ವಪ್ರಾಧಾನ್ಯ ನಿವಾರಣಮ್ ।**

---

ಕರಣಮಂತ್ರವಾಗಿ ನಿಲ್ಲುವಂತೆಯೂ ಈ ಪ್ರಪತ್ತಿಶಾಸ್ತ್ರವೂ, **ಅಧಿಕಾರ ವಿಶೇಷತ್ತಿಲೇ** – ಭಕ್ತಿಯೋಗವನ್ನು ಅನುಷ್ಠಿಸುವ ಸಕಿಂಚನನಾದ ಅಧಿಕಾರಿಯ ವಿಷಯದಲ್ಲಿ ಭಕ್ತಿಗೆ ಅಂಗವಾಗಿಯೂ, **ಅಧಿಕಾರ್ಯಂತರತ್ತಿಲೇ** – ಅಕಿಂಚನನಾದ ಅಧಿಕಾರಿಯ ವಿಷಯದಲ್ಲಿ, ಸ್ವತಂತ್ರವಾಗಿಯೂ ಇರುವುದು ವಚನಬಲದಿಂದ ಸಿದ್ಧ. ಶ್ರೀಗೀತೆಯಲ್ಲಿ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನು ಹೇಳಿ, "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂದು ಅವುಗಳಿಗೆ ಅಂಗವಾಗಿ ಪ್ರಪತ್ತಿಯನ್ನು ವಿಧಿಸಿರುವುದರಿಂದ ಅಂಗತ್ವವೂ,

"ಶರಣಂತ್ವಾಂ ಪ್ರಪನ್ನಾಯೇ ಧ್ಯಾನಯೋಗ ವಿವರ್ಜಿತಾಃ ।
ತೇಽಪಿಮೃತ್ಯುಮತಿಕ್ರಮ್ಯಯಾಂತಿ ತದ್ವೈಷ್ಣವಂ ಪದಮ್ ॥

ಎಂದು ಧ್ಯಾನಯೋಗಶೂನ್ಯರಿಗೆ ಪ್ರಪತ್ತಿಯನ್ನು ಮೋಕ್ಷಸಾಧನವಾಗಿ ಹೇಳಿರುವುದರಿಂದ ಸ್ವತಂತ್ರತ್ವವೂ ವಚನಬಲಸಿದ್ಧ. ಅಧಿಕಾರಿಭೇದದಿಂದ ಪ್ರಪತ್ತಿಗೆ ಅಂಗತ್ವ, ಸಾತಂತ್ರ್ಯತ್ವವನ್ನು ಹೇಳುವುದು ವಿರುದ್ಧವಲ್ಲವೆಂದೂ, ಏಕಾಧಿಕಾರಿ ವಿಷಯದಲ್ಲಿ ಅಂಗವಾಗಿಯೂ ಸ್ವತಂತ್ರವಾಗಿಯೂ ಪ್ರಪತ್ತಿಯನ್ನು ಅನುಷ್ಠಿಸಬಹುದೆಂದರೆ ವಿರುದ್ಧವಾಗುತ್ತದೆಯೆಂದೂ ತಾತ್ಪರ್ಯ.

**ಇಪ್ಪಡಿ ನಿಯತಾಧಿಕಾರಮಾಹ** ಇತ್ಯಾದಿ – ಹೀಗೆ ನಿಯತಾಧಿಕಾರವಾಗಿ ಭಕ್ತಿಪ್ರಪತ್ತಿಗಳು ವ್ಯವಸ್ಥಿತವಾಗಿ ವಿಕಲ್ಪಿಸಲ್ಪಟ್ಟು, ಇರುವ ಸ್ಥಿತಿಯು (1) **ಭಕ್ತ್ಯಾಪರಮಯಾವಾಪಿ** ಇತ್ಯಾದಿಗಳಲ್ಲಿ ಪ್ರಸಿದ್ಧ. **ಆಹೈಯಾಲ್** ಅಂದರೆ ಉತ್ಕೃಷ್ಟವಾದ ಭಕ್ತಿಯಿಂದಾಗಲಿ, ಉತ್ಕೃಷ್ಟವಾದ ಪ್ರಪತ್ತಿಯಿಂದಾಗಲಿ(ಭಗವಂತನು) ನಾನು ಪ್ರಾಪ್ಯನು. ಬೇರೆ ಯಾವ ರೀತಿಯಲ್ಲಿಯೂ, ನನ್ನ ಕೈಂಕರ್ಯವನ್ನು ಮಾಡಲೆಣಿಸುವವರು ನನ್ನನ್ನು ಪಡೆಯಲಾಗುವುದಿಲ್ಲ. **ಆಹೈಯಾಲ್** – ಆದ್ದರಿಂದ (2) **ಸಮ್ಯಕ್ ಜ್ಞಾನೇನವಾ ಮೋಕ್ಷಃ** ಇತ್ಯಾದಿ ವಾಕ್ಯಗಳಲ್ಲಿ ಸಾಕ್ಷಾದುಪಾಯವಾದ ಭಕ್ತಿಯೋಗ ರೂಪ ಸಮ್ಯಕ್‌ಜ್ಞಾನದ ಜತೆಗೆ ಗಂಗೆಯಲ್ಲಿ ಮರಣವನ್ನೂ, ಸುಕೃತ ಪ್ರಣಾಮವನ್ನೂ ಸೇರಿಸಿಹೇಳಿರುವುದು, ಗಂಗಾಮರಣ,ಸುಕೃತಪ್ರಣಾಮಗಳು, ಪರಂಪರೆಯಾಗಿ ಮೋಕ್ಷಕಾರಣಗಳಾಗುತ್ತವೆ. ಸಾಕ್ಷಾದುಪಾಯವಾದ ಭಕ್ತಿಯೋಗದೊಡನೆ ಸೇರಿಸಿ ಹೇಳಿರುವುದು ಅವುಗಳ ಪ್ರಾಶಸ್ತ್ಯವನ್ನು ತಿಳಿಸಲು ಅಷ್ಟೇ.

ಹೀಗೆ ವಿಸ್ತಾರವಾಗಿ ಹೇಳಿದ ಏಕಶಬ್ದಾರ್ಥವನ್ನು ಶಿಷ್ಯಬುದ್ಧಿ ಸೌಕರ್ಯಕ್ಕಾಗಿ (1) **ಪ್ರಾಪ್ಯಸ್ಯೈವ**

---

1) ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ಯಃಮಮ ಕೈಂಕರ್ಯಲಿಪ್ಸುಭಿಃ ॥ ಇದು ಉತ್ತರಾರ್ಧ.

**ಪ್ರಪತ್ತೇಃ ವ್ಯಾಜಮಾತ್ರತ್ವಂ ಅನ್ಯೋಪಾಯೈರನನ್ವಯಃ ।**
**ತದಂಗೈರಪ್ಯ ಸಂಬಂಧಃ ಸರ್ವಸಾಧ್ಯೇಷ್ವ ಭಿನ್ನತಾ ।**
**ಇತ್ಥಮರ್ಥಾಷ್ಷಡಾಚಾರ್ಯೈಃ ಏಕಶಬ್ದಸ್ಯ ದರ್ಶಿತಾಃ ॥**

---

**ಪ್ರಾಪಕತ್ವಂ** ಎಂದಾರಂಭಿಸಿ ಸಂಗ್ರಹಿಸುತ್ತಾರೆ. ಆದಾಗಿ (1)ಪ್ರಾಪ್ಯನೇ ಪ್ರಾಪಕನು (2) ತನ್ನ ಪ್ರಾಧಾನಿ ನಿವಾರಣೆ (3) ಪ್ರಪತ್ತಿಯು ವ್ಯಾಜಮಾತ್ರ (4) ಇತರ ಉಪಾಯಗಳಾದ ಭಕ್ತಿಯೋಗಾದಿಗಳೊಡನೆ ಸಹಕಾರಿ ಯಾಗಿ ಅನ್ವಯವಿಲ್ಲದಿರುವುದು. (5) ಭಕ್ತಿಯ ಅಂಗಗಳೊಡನೆಯೂ ಸಂಬಂಧವಿಲ್ಲದಿರುವುದು. (6) ಸರ್ವ ಸಾಧ್ಯ ವಿಷಯಗಳಲ್ಲಿ ಏಕೋಪಾಯತ್ವ **ಇತ್ಥಮರ್ಥಾಃ** ಇತ್ಯಾದಿ - ಹೀಗೆ ಆರು ಅರ್ಥಗಳು ಆಚಾರ್ಯರು ಗಳಿಂದ ಏಕಶಬ್ದಕ್ಕೆ ತಿಳಿಸಲ್ಪಟ್ಟವು.

ಪ್ರಪತ್ತಿಕಾಲದಲ್ಲಿ ಏಕಶಬ್ದಕ್ಕೆ ಹೇಳಿರುವ ಆರು ಅರ್ಥಗಳೂ ಅನುಸಂಧೇಯಗಳು 'ಮಾಮೇಕಂ' ಎಂಬಲ್ಲಿ ಉಪಾಯೋಪೇಯಗಳ ಐಕ್ಯವೂ ಪ್ರಪದನಕಾಲದಲ್ಲಿ ಭಾಸಮಾನವಾಗುತ್ತದೆ. **ಸ್ವಪ್ರಾಧಾನ್ಯ ನಿವಾ ರಣಮ್ –** ಇತ್ಯಾದಿ ಸ್ವಪ್ರಾಧಾನ್ಯ ನಿವಾರಣವೂ ಭಾಸವಾಗುತ್ತದೆ. ಇದನ್ನು ಆಚಾರ್ಯರು ನ್ಯಾಸದಶಕದಲ್ಲಿ,

"ಸ್ವಾಮೀಸ್ವಶೇಷಂ ಸ್ವವಶಂ ಸ್ವಭರತ್ವೇನ ನಿರ್ಭರಮ್ ।
ಸ್ವದತ್ತಸ್ವಧಿಯಾ ಸ್ವಾರ್ಥಂ ಸ್ವಸ್ಮಿನ್ನ್ಯಸ್ಯತಿಮಾಂ ಸ್ವಯಮ್ ॥

ಎಂದು ಅನುಗ್ರಹಿಸಿರುತ್ತಾರೆ. ಆತ್ಮಸಮರ್ಪಣ ದಶೆಯಲ್ಲಿ ಈ ಅಂಶವು ಅನುಸಂಧೇಯವೆಂದು ಸಿದ್ಧೋಪಾಯ ಶೋಧನಾಧಿಕಾರದಲ್ಲಿ ಹೇಳಲ್ಪಟ್ಟಿದೆ. ಇದು ಸಾತ್ವಿಕತ್ಯಾಗ ಪರವಲ್ಲ. ಸಾತ್ವಿಕ ತ್ಯಾಗವು ನಿವೃತ್ತಿ ಧರ್ಮ ಗಳಿಲ್ಲೆಲ್ಲಾ ಅನುಸಂಧೇಯವಾದ್ದರಿಂದ, ವಿಶೇಷವಾಗಿ ಹೇಳಿರುವ ಸ್ವಪ್ರಾಧಾನ್ಯ ನಿವಾರಣೆಗೆ ಸಾರ್ಥಕತ್ವವನ್ನು ಹೇಳಬೇಕಾದುದು ಅವಶ್ಯ. ಅದು, ಭಗವಂತನಿಗೆ, ಅನನ್ಯಾರ್ಹಶೇಷತ್ವ ಪಾರತಂತ್ರ್ಯಕಾಷ್ಠೆಯನ್ನು ತನ್ನಲ್ಲಿ ಅನುಸಂಧಾನಮಾಡಿ, ಹೀಗೆ ಅತ್ಯಂತ ಪರತಂತ್ರನಾದ ಅಕಿಂಚನನಾದ ನನ್ನ ರಕ್ಷಾಭರಣ ಸರ್ವಸ್ವವೂ, ನಿರು ಪಾಧಿಕ ಸರ್ವಸ್ವಾಮಿಯಾದ ನಿರಂಕುಶ ಸ್ವಾತಂತ್ರ್ಯಶಾಲಿಯಾದ ಸರ್ವರಕ್ಷಕನಾದ ಶ್ರೀಮನ್ನಾರಾಯಣನಿಗೇ ಸೇರಿ ದ್ದುದು, ನನಗಲ್ಲ ಎಂದು ತನ್ನ ಪ್ರಾಧಾನ್ಯ ನಿವೃತ್ತಿಯು ಅವಶ್ಯವಾಗಿ ಭಾಸಮಾನವಾಗಬೇಕೆಂಬುದು.

ಇದನ್ನು ಅಭಿಪ್ರಾಯದಲ್ಲಿಟ್ಟುಕೊಂಡೇ ಶ್ರೀಮನ್ನ್ಯಾಸತಿಲಕದಲ್ಲಿ ಆಚಾರ್ಯರು,

ಆರ್ತೇಷ್ವಾಶು ಫಲಾ ತದನ್ಯವಿಷಯೇ ಪ್ಯುಚ್ಛಿನ್ನ ದೇಹಾಂತರಾ
ವಹ್ನ್ಯಾದೇರನ ಪೇಕ್ಷಣಾತ್ತನು ಭೃತಾಂ ಸತ್ಯಾದಿವದ್ವ್ಯಾಪಿನೀ ।
ಶ್ರೀರಂಗೇಶ್ವರ ಯಾವದಾತ್ಮ್ಯ ನಿಯತ ತ್ವತ್ಪಾರತಂತ್ರ್ಯೋಚಿತಾ
ತ್ವಯ್ಯೇವ ತ್ವದುಪಾಯಧೀರಪಿಹಿತಸ್ವೋಪಾಯ ಭಾವಾಸ್ತುಮೇ ॥

ಎಂದು ಅನುಸಂಧಾನ ಮಾಡಿರುತ್ತಾರೆ.

ಈ ಶ್ಲೋಕದಲ್ಲಿ "ಯಾವದಾತ್ಮ್ಯನಿಯತ ತ್ವತ್ಪಾರತಂತ್ರ್ಯೋಚಿತಾ," ಎಂದು ಭಗವತ್ಪಾರತಂತ್ರ್ಯವು ನ್ಯಾಸವಿದ್ಯಾ ವಿಶೇಷಣವಾಗಿ ಹೇಳಲ್ಪಡುತ್ತದೆ. ಪರತಂತ್ರನಿಗೆ ಉಚಿತವಾದದ್ದು ಪಾರತಂತ್ರ್ಯ ಸ್ವರೂಪ ಜ್ಞಾನದ ಅನುಸಂಧಾನ. ಇದು ಭಕ್ತಿನಿಷ್ಠನಿಗೆ ಇಲ್ಲವೇ ಎಂದರೆ ಭಕ್ತಿನಿಷ್ಠನಿಗೂ ಇದ್ದೇ ಇದೆ. ಅವನಿಗಿ ಲ್ಲವೆಂದು ಹೇಳಿ ಭಕ್ತಿಯು ಸ್ವರೂಪ ವಿರುದ್ಧವೆಂಬುದು ಈ ಶ್ಲೋಕದಿಂದ ದ್ಯೋತ್ಯವಾಗುತ್ತದೆಯೆಂದು ಕೆಲ ವರು ಹೇಳುವುದು ಅಪರಾಮರ್ಶಮೂಲ. ಭಕ್ತಿಯೋಗ ನಿಷ್ಠನಿಗೆ ದಹರಾದ್ಯುಪಾಸನಗಳಲ್ಲಿ ಆಯಾಯಾ ವಿದ್ಯೆ ಗಳಿಗೆ ಪ್ರತಿನಿಯತಗಳಾದ ಗುಣಾನುಸಂಧಾನವು ಮುಖ್ಯ. ಪ್ರಪತ್ತಿಗೆ 'ಏಕ' ಶಬ್ದದಲ್ಲಿ ಹೇಳಿರುವಂತೆ ಪಾರ ತಂತ್ರ್ಯದಕಾಷ್ಠೆಯು ಶರಣಾಗತಿಯಲ್ಲಿ ವಿಷಯತಯಾ ಭಾಸಮಾನವಾಗಿ ಅನುಸಂಧೇಯವು. ಇದನ್ನು ಉದ್ದೇಶ್ಯ ದಲ್ಲಿಟ್ಟುಕೊಂಡು 'ಯಾವಾದಾತ್ಮ್ಯನಿಯತತ್ವತ್ಪಾರ ತಂತ್ರ್ಯೋಚಿತಾ' ಎಂದು ಹೇಳಲ್ಪಟ್ಟಿದೆ. **ತ್ವಯ್ಯೇವತ್ವದ ಪಾಯಧೀರಿತ್ಯಾದಿ –** ನೀನೇ ಉಪಾಯವೆಂಬ ಬುದ್ಧಿಯೂ, ನಿನ್ನಲ್ಲಿಡಲ್ಪಟ್ಟಿದೆ – ಅಪಿಹಿತಸ್ವೋಪಾಯಭಾವಾ – ಈ ಪ್ರಪತ್ತಿಯು ಸಾಕ್ಷಾದುಪಾಯವಲ್ಲ. ಪರಮಕಾರುಣಿಕನಾದ ಸರ್ವಸ್ವತಂತ್ರನಿಂದ, ಅಜ್ಞನೂ ಅಲ್ಪಶಕ್ತಿಯೂ,

**ಪ್ರಪತ್ತೇರ್ವ್ಯಾಜ ಮಾತ್ರತ್ವ ಮನ್ಯೋಪಾಯೈರನನ್ವಯಃ ।**
**ತದಙ್ಗೈರಪ್ಯ ಸಂಬಂಧಃ ಸರ್ವಸಾಧ್ಯೇಷ್ವಭಿನ್ನತಾ ।**
**ಇತ್ಥಮರ್ಥಾ ಷ್ಷಡಾಚಾರ್ಯೈರೈಕ ಶಬ್ದಸ್ಯ ದರ್ಶಿತಾಃ ॥**

---

ಭಕ್ತಿಯೋಗವನ್ನನುಷ್ಠಿಸಲು ಅಲಸನೂ ಆದ ನನಗೆ ನನ್ನ ಅಧಿಕಾರಕ್ಕೆ ತಕ್ಕಂತೆ ಯಾವ ಈ ಪ್ರಪತ್ತಿಯು ನಿನ್ನಿಂದ ಸಂಕಲ್ಪಿಸಲ್ಪಟ್ಟಿತೋ, ನಿನ್ನನ್ನು ಹೊಂದುವುದಕ್ಕೆ ಸಹಕಾರಿಭೂತವಾಗಿ, ನಿನ್ನಲ್ಲಿಯೇ ರಕ್ಷಾಭರ ಸಮರ್ಪಣವು ಮಾಡಿಸಲ್ಪಟ್ಟಿತೋ, ಆ ಈ ಪ್ರಪತ್ತಿಯು ವ್ಯಾಜಮಾತ್ರ. ಅದನ್ನು **ಪ್ರಪತ್ತೇಃ ವ್ಯಾಜ ಮಾತ್ರತ್ವಂ** – ಎಂದು ಆಚಾರ್ಯರು ಅನುಗ್ರಹಿಸುತ್ತಾರೆ. ಪ್ರಧಾನೋಪಾಯವು **ಸ್ವಾಭಾವಿಕ ಪರಮಕಾರುಣ್ಯ** ನಿಧಿಯಾದ ಸರ್ವಲೋಕ ಶರಣ್ಯನಾದ ನೀನೇ, ಈ ಅಂಶವೂ ಪ್ರಪತ್ತ್ಯನುಷ್ಠಾನಕಾಲದಲ್ಲಿ ಭಾಸಮಾನವಾಗಿದ್ದದೆಯೆಂದು ತಾತ್ಪರ್ಯ. ಉಪಾಯತ್ವವೆಂದರೆ ಸಾಧಕತಮತ್ವವು. ಅದು ಮೇಲೆ ಹೇಳಿದಂತೆ ಭಗವಂತನಲ್ಲಿ ಅವಗಾಹ್ಯವು. ಈ ಅಂಶವು ಪ್ರಪದನಾಧಿಕಾರದಲ್ಲಿಯೂ ಹೇಳಲ್ಪಟ್ಟಿದೆ. ಅದಾಗಿ "ಇವತ್ತಿನುಡೈಯ ರಕ್ಷಣಭರಮುಮವ್", ನಹಿಪಾಲನ ಸಾಮರ್ಥ್ಯಂ ಋತೇ ಸರ್ವೇಶ್ವರಂ ಹರಿಮ್ । ಎನ್ನಿಹ್ರಪಡಿಯೇ ಸರ್ವರಕ್ಷಕನಾನ ಅವನದೇ", ಎಂದು ಹೇಳಲ್ಪಟ್ಟಿದೆ. 'ಸರ್ವರಕ್ಷಕನಾನ' ಎಂಬುದರಿಂದಲೂ, "ನಹಿಪಾಲನ ಸಾಮರ್ಥ್ಯಮೃತೇ ಸರ್ವೇಶ್ವರಮ್" ಎಂಬುದರಿಂದಲೂ, ಸ್ವರಕ್ಷಣ ವ್ಯಾಪಾರದಲ್ಲಿ, ತಾನು ಮಾಡುವ ಪ್ರಪತ್ತಿಯೂ ಅವನಿಂದ ಮಾಡಿಸಲ್ಪಟ್ಟು, ಅವನ ಸಂಕಲ್ಪವಿಲ್ಲದೆ ತನಗೆ ಸಾಮರ್ಥ್ಯವಿಲ್ಲವೆಂಬುದೂ ತೋರುತ್ತದೆ. ಆದ್ದರಿಂದ ಮೇಲೆ ಹೇಳಿದಂತೆ ಸರ್ವವೂ ಉಪಪನ್ನ.

(4) **ಅನ್ಯೋಪಾಯೈರನನ್ವಯಃ** (5 **ತದಂಗೈರಪ್ಯ ಸಂಬಂಧಃ,** ಭಕ್ತ್ಯಾದ್ಯುಪಾಯಗಳೊಡನೆ ಸಹಕಾರಿಭಾವದಿಂದಲೂ **ಸಂಬಂಧವಿಲ್ಲದಿರುವುದು.** ಭಕ್ತಿಯ ಅಂಗಗಳೊಡನೆಯೂ ಸಂಬಂಧವಿಲ್ಲದಿರುವುದು. ಈ ಎರಡು ಪಾದಗಳಿಂದ ಪ್ರದರ್ಶಿತವಾದ ನಿರಪೇಕ್ಷೋಪಾಯತ್ವವು ನ್ಯಾಸವಿದ್ಯೆಗೆ ವಿಶೇಷವಾದ ವೇದ್ಯಾಕಾರ. ಇದು ಪ್ರಪತ್ತಿ ಪ್ರಯೋಗದ ಅನುಸಂಧಾನ ದಶೆಯಲ್ಲಿ ಸೇರಿಸಿಕೊಂಡು ಅನುಸಂಧಾನ ಮಾಡಬೇಕೆಂಬುದು ನಿರ್ವಿವಾದ. "ಪ್ರಪತ್ತಿ ವಶೀಕೃತನಾದ ನಾನೊರುವನುಮೇ ಅಮೈಯುಮ್", – ಪ್ರಪತ್ತಿ ವಶೀಕೃತನಾದ ನಾನೊಬ್ಬನೇ ಸಾಕು, ಎಂದು ಆಚಾರ್ಯರು ಹಿಂದೆಯೇ ಅನುಗ್ರಹಿಸಿರುತ್ತಾರೆ.

**ಯದ್ಯೇನ ಕಾಮ ಕಾಮೇನ ನ ಸಾಧ್ಯ ಸಾಧನಾಂತರೈ !**
ತೇನತೇ ನಾಪ್ಯತೇ ತತ್ತನ್ನ್ಯಾಸೇ ನೈವ ಮಹಾಮುನೇ ॥
ಪರಮಾತ್ಮಾಚ ತೇನೈವ ಸಾಧ್ಯತೇ ಪುರುಷೋತ್ತಮಃ ॥

ಎಂಬ ವಚನವು ಇಲ್ಲಿ ಪ್ರಮಾಣ. ಯಾವ ಯಾವ ಪುರುಷಾರ್ಥಗಳು ಉಪಾಯಾಂತರಗಳಿಂದ ಸಾಧ್ಯವಿಲ್ಲವೋ ಅವುಗಳು ಪ್ರಪತ್ತಿಯಿಂದ ಸಾಧ್ಯಗಳು. ಪರಮಾತ್ಮನು ಆ ಪ್ರಪತ್ತಿ ವಶೀಕೃತನಾಗಿ ಆ ಪುರುಷಾರ್ಥಗಳನ್ನು ಕೊಡುತ್ತಾನೆಂದರ್ಥ. ಇದರಿಂದ ಉಪಾಯಾಂತರ ಸ್ಥಾನದಲ್ಲಿ ಪ್ರಪತ್ತಿಯು ವಿಧಿಸಲ್ಪಟ್ಟಿದೆ. ಇಲ್ಲಿ "ಪ್ರಾಧಾನ್ಯೇನ ಶರಣ್ಯನೈ ವಿಶೇಷಿತ್ತುಕ್ಕೊಂಡು ನಿನ್ರಾಲುಮ್, ನ್ಯಾಸೇನೈವ, ಎನ್ನಿಹ್ರಪಡಿಯೇ ಪ್ರಪತ್ತಿಯೊನ್ರುಮೇ ಸರ್ವಧರ್ಮಾಂತರ ಸ್ಥಾನತ್ತಿಲುಮ್ ವಿಧಿಕ್ಕಪ್ಪಡುಹಿರದೆನ್ರು ಫಲಿಕ್ಕುಮ್" ಎಂದು ಆಚಾರ್ಯರು ಈ ಶ್ಲೋಕಕ್ಕೆ ತಾವೇ ವ್ಯಾಖ್ಯಾನ ಮಾಡಿರುತ್ತಾರೆ. ಹೀಗೆ ವಚನಬಲದಿಂದ ಉಪಾಯಾಂತರ ಸ್ಥಾನದಲ್ಲಿ, ಶರಣ್ಯನನ್ನು ಪ್ರಪತ್ತಿಯು ನಿಲ್ಲಿಸುತ್ತದೆ, ಎಂದು ಹೇಳಬಹುದಾದರೂ ಶರಣಾಗತಿಯೇ ಉಪಾಯಾಂತರ ಸ್ಥಾನದಲ್ಲಿ ವಿಧಿಸಲ್ಪಡುತ್ತದೆ ಎಂಬುದು "ಪ್ರಪತ್ತಿಯೊನ್ರುಮೇ ಸರ್ವಧರ್ಮಾಂತರ ಸ್ಥಾನತ್ತಿಲುಮ್ ವಿಧಿಕ್ಕಪ್ಪಡು ಹಿರದೆನ್ರು ಫಲಿಕ್ಕುಮ್" ಎಂಬ ಶ್ರೀಸೂಕ್ತಿಯಿಂದ ಸ್ಪಷ್ಟ.

ಅನಂತರ ಶ್ರೀಸೂಕ್ತಿಯಲ್ಲಿಯೂ, "ಭಕ್ತ್ಯಾಪರಮಯಾವಾಪಿ ಪ್ರಪತ್ತ್ಯಾವಾ ಮಹಾಮತೇ" ಎಂಬ

**ಅಥ ಲಕ್ಷ್ಮೀವಿಶಿಷ್ಟಃ ಏಕ ಏವ ಶರಣ್ಯಃ ಇತ್ಯಾಹ ನವಭಿಃ ಕಾರಿಕೈಃ**

**ಕೇಚತ್ತ್ವಿಹೈಕ ಶಬ್ದಾರ್ಥಂ ಶರಣ್ಯೈಕ್ಯಂ ಪ್ರಚಕ್ಷತೇ ।**
**ವಿಶಿನಷ್ಟಿ ತಥಾಪಿ ಶ್ರೀರ್ಗುಣ ವಿಗ್ರಹವತ್ಪ್ರಭುಮ್** ॥ 148 ॥

**ಈಶ್ವರೀ ಸರ್ವಭೂತಾನಾ ಮಿಯಂ ಭಗವತಃಪ್ರಿಯಾ ।**
**ಸಂಶ್ರಿತ ತ್ರಾಣದೀಕ್ಷಾಯಾಂ ಸಹಧರ್ಮಚರೀ ಸ್ಮೃತಾ** ॥ 1-9 ॥

---

ಶ್ರೀಸೂಕ್ತಿಯನ್ನು ಉದಾಹರಿಸಿ, ಇದರಿಂದ ಭಕ್ತಿಯ ಹಾಗೆ ಪ್ರಪತ್ತಿಯೂ ಸಮಾನವಾದ ಉಪಾಯವೆಂಬುದು ವ್ಯಕ್ತ. ಕೆಲವರು ಭಕ್ತಿಯು ಮುಖ್ಯೋಪಾಯ, ಪ್ರಪತ್ತಿಯು ಭಕ್ತಿಯನ್ನು ಉಂಟುಮಾಡುತ್ತದೆ, ಎಂದು ತಾತ್ಪರ್ಯ ವೆಂದು ಹೇಳಿ, ಅದಕ್ಕೆ ದೃಷ್ಟಾಂತವಾಗಿ ಸಮ್ಯಕ್ ಜ್ಞಾನೇನವಾ ಮೋಕ್ಷೋ ಗಂಗಾಯಾಂ ಮರಣೇನವಾ - ಪೂರ್ಣಜ್ಞಾನ(ಭಕ್ತಿ)ದಿಂದಲೋ ಅಥವಾ ಗಂಗೆಯಲ್ಲಿ ಬಿದ್ದು ಪ್ರಾಣವನ್ನು ಬಿಡುವುದರಿಂದಲೋ ಮೋಕ್ಷವು ಲಭಿಸುತ್ತದೆ, ಎಂದು ಸಾಕ್ಷಾದುಪಾಯವನ್ನೂ, ಪರಂಪರೋಪಾಯವನ್ನೂ (ಗಂಗೆಯಲ್ಲಿ ಮರಣ) ಒಂದ್ಗೂಡಿಸಿ ಹೇಳಿರುವಂತೆ ಪ್ರಪತ್ತಿಯು ಭಕ್ತಿಯನ್ನುಂಟು ಮಾಡಿ, ಭಕ್ತಿಯಿಂದ ಮೋಕ್ಷವೆಂದು ಹೇಳಿ, ಪ್ರಪತ್ತಿಗೆ ಪರಂಪರೋಪಾಯತ್ವವನ್ನು ಹೇಳುವುದು ಅನುಚಿತ.

(6) **ಸರ್ವಸಾಧ್ಯೇಷ್ವ ಭಿನ್ನತಾ** - ಸರ್ವಸಾಧ್ಯ ವಿಷಯಗಳಲ್ಲಿ ಏಕೋಪಾಯತ್ವವು - ಅಂದರೆ ಎಲ್ಲಾ ಪ್ರಯೋಜನಗಳನ್ನೂ ತಾನೊಬ್ಬನೇ ಕೊಡಬಲ್ಲ ಸ್ವಭಾವ. **ಇತ್ಥ ಮರ್ಥಾಷ್ಷಡಾ ಚಾರ್ಯೈಃ ಏಕಶಬ್ದಸ್ಯ ದರ್ಶಿತಾಃ** - ಹೀಗೆ ಏಕಶಬ್ದಕ್ಕೆ ಆರು ಅರ್ಥಗಳು ಆಚಾರ್ಯರುಗಳಿಂದ ಉಪದೇಶಿಸಲ್ಪಟ್ಟಿವೆ.

**"ಮಾಮೇಕಂ" ಎಂಬಲ್ಲಿ ಲಕ್ಷ್ಮಿಗೆ ಉಪಾಯತ್ವವಿಲ್ಲವೆಂಬ ಮತದ ಖಂಡನೆ.**

ಇಲ್ಲಿ ಕೆಲವರು "ಮಾಮೇಕಂ ಶರಣಂ ವ್ರಜ", ಎಂದು ಭಗವಂತನೊಬ್ಬನನ್ನೇ ಉಪಾಯವನ್ನಾಗಿ ಆಶ್ರಯಿಸಬೇಕೆಂದೂ ಲಕ್ಷ್ಮಿಗೆ ಉಪಾಯತ್ವದಲ್ಲಿ ಅನ್ವಯವಿಲ್ಲವೆಂದೂ ಹೇಳುತ್ತಾರೆ. ಆ ಪಕ್ಷವನ್ನು **ಕೇಚಿತಿಹೈಕ ಶಬ್ದಾರ್ಥಂ** ಎಂದು ಅನುವಾದ ಮಾಡಿ ನಿರಾಕರಿಸುತ್ತಾರೆ. ಅದಾಗಿ ಕೆಲವರು ಇಲ್ಲಿ ಏಕಶಬ್ದಾರ್ಥವು ಶರಣ್ಯೈಕ್ಯವನ್ನು ತಿಳಿಸುತ್ತದೆ ಎನ್ನುತ್ತಾರೆ. ಅಂದರೆ ಲಕ್ಷ್ಮಿಗೆ ಅನ್ವಯವಿಲ್ಲದೆ ಕೇವಲ ನಾರಾಯಣನೇ ಉಪಾಯವೆಂದು ಹೇಳುತ್ತಾರೆಂದರ್ಥ. ಇದನ್ನು ನಿರಾಕರಿಸುತ್ತಾರೆ - **ವಿಶಿನಷ್ಟಿತಥಾಪಿ ಶ್ರೀಃ** ಇತ್ಯಾದಿ ಏಕಶಬ್ದಾರ್ಥಕ್ಕೆ ಶರಣ್ಯಶಬ್ದವು ವಿಶೇಷಣವಾಗಿ ತೋರಿದರೂ, ಏಕಶಬ್ದಾರ್ಥಕ್ಕೆ ವಿಶೇಷ್ಯವಾದ 'ಮಾಂ' ಎಂಬ ಅಸ್ಮಚ್ಛಬ್ದವು ಲಕ್ಷ್ಮೀ ಗುಣವಿಗ್ರಹ ವಿಶಿಷ್ಟವಾದ್ದರಿಂದ, ಗುಣವಿಗ್ರಹಗಳ ಹಾಗೆ ಲಕ್ಷ್ಮಿಯೂ ವಿಶೇಷಣವಾಗಿ ತೋರುವುದರಿಂದ ವಿಶಿಷ್ಟೋಪಾಯತ್ವ ಸಿದ್ಧಿಗೆ ಬಾಧಕವಿಲ್ಲವೆಂದರ್ಥ. ಹೀಗೆ ಸರ್ವದಾ ಅಪೃಥಕ್ ಸಿದ್ಧವಿಶೇಷಣಳಾಗಿ ಇರುವುದರಿಂದಲೂ ಸಂಕಲ್ಪಾರ್ಹ ಚೇತನಳಾಗಿರುವುದರಿಂದಲೂ, ವಿಶಿಷ್ಟವು ಉಪಾಯವಾಗಿರುವಾಗ ವಿಶೇಷಣವೂ ಉಪಾಯವಾಗಿರುತ್ತದೆ ಎಂಬುದು ಸಿದ್ಧಿಸುತ್ತದೆ ಎಂದು ತಾತ್ಪರ್ಯ.

ಹೀಗೆ ಭಗವಂತನಿಗೆ ವಿಶೇಷಣ ಭೂತಳಾಗಿರುವ ಮಾತ್ರದಿಂದಲೇ ಉಪಾಯತ್ವವು ಏರ್ಪಡುತ್ತದೆ ಎಂಬುದಲ್ಲದೆ, ಪ್ರಮಾಣವಚನಗಳೂ ಲಕ್ಷ್ಮಿಯ ಉಪಾಯತ್ವವನ್ನು **"ಈಶ್ವರೀಗ್ಂ ಸರ್ವಭೂತಾನಾಂ"** ಇತ್ಯಾದಿ ಎತ್ತಿ ತೋರಿಸುತ್ತವೆ. **ಈಶ್ವರೀಗ್ಂ ಸರ್ವಭೂತಾನಾಂ** - ಗುಣವಿಗ್ರಹಾದಿಗಳ ಹಾಗೆ ವಿಶೇಷಣ ಮಾತ್ರವಲ್ಲದೆ, ಅಶೇಷಲೋಕಕ್ಕೂ ಭಗವಂತನ ಹಾಗೆ ನಿಯಂತ್ರಿಯಾಗಿರುವುದರಿಂದಲೂ **ಇಯಂ ಭಗವತಃ ಪ್ರಿಯಾ** - 'ತದಿಂಗಿತ ಪರಾಧೀನೋ ವಿಧತ್ತೇಽಖಿಲಂ' ಎಂಬಂತೆ ಲಕ್ಷ್ಮಿಯ ಇಂಗಿತಕ್ಕೆ ಪರಾಧೀನನಾಗಿ ಭಗವಂತನು ಸಕಲವ್ಯಾಪಾರಗಳನ್ನೂ ಮಾಡುತ್ತಾನೆಂದು ಹೇಳಿರುವುದರಿಂದ ಭಗವಂತನಿಗೆ ಪ್ರಿಯತಮೆಯಾಗಿರುವುದರಿಂದಲೂ, **ಸಂಶ್ರಿತತ್ರಾಣದೀಕ್ಷಾಯಾಂ** - ಆಶ್ರಿತರಕ್ಷಣ ವಿಷಯದಲ್ಲಿ ಭಗವಂತನು

ಏಕಂ ಜಗದುಪಾದಾನ ಮಿತ್ಯುಕ್ತೇऽಪಿ ಪ್ರಮಾಣತಃ ।
ಯಥಾಪೇಕ್ಷಿತ ವೈಶಿಷ್ಟ್ಯಂ ತಥಾತ್ರಾಪಿ ಭವಿಷ್ಯತಿ ॥ 150 ॥
ಏಕೋಪಾಸ್ತಿ ವಿಧಾನೇಽಪಿ ಗುಣಾದೀನಾಂ ಯಥಾನ್ವಯಃ ।
ತಥೈಕಶರಣಂ ವ್ರಜ್ಯಾ ವಿಧಾನೇಷ್ವ್ಯನುಮನ್ಯತಾಮ್ ॥ 151 ॥
ಯಥಾ ಗುಣಾದಿ ವೈಶಿಷ್ಟ್ಯೇ ಸಿದ್ಧೋಪಾಯೈಕ್ಯ ಮುಕ್ಷತಮ್ ।
ಏವಂ ಪತ್ನೀ ವಿಶಿಷ್ಟತ್ವೇऽಪ್ಯ ಭೀಷ್ಟಂ ಶಾಸ್ತ್ರ ಚಕ್ಷುಷಾಮ್ ॥ 152 ॥

---

"ಮೋಕ್ಷಯಿಷ್ಯಾಮಿ" ಎಂದು ಸಂಕಲ್ಪ ಮಾಡಿದರೆ, ಇವಳೂ **ಸಹಧರ್ಮಚಾರಿಣಿ** ಯಾಗಿ ಕೂಡ ಇದ್ದು "ಉಪಾಯೋಭವಾನಿ" ಎಂದು ಸಂಕಲ್ಪಿಸುತ್ತಾಳೆಂದೂ, "ಲಕ್ಷ್ಮ್ಯಾ ಸಹಹೃಷೀಕೇಶಃ ದೇವ್ಯಾ ಕಾರುಣ್ಯರೂಪಯಾ । ರಕ್ಷಕಃ", ಇತ್ಯಾದಿ ಪ್ರಮಾಣಗಳಲ್ಲಿ ಭಗವಂತನ ಹಾಗೆ ಲಕ್ಷ್ಮಿಗೂ ಉಪಾಯತ್ವವು ನಿಶ್ಚಿತವೆಂದು ತಾತ್ಪರ್ಯ. ಇಲ್ಲಿ "ಸರ್ವಭೂತಾನಾಮೀಶ್ವರೀ", "ಭಗವತಃ ಪ್ರಿಯಾ" ಎಂಬ ಎರಡು ವಿಶೇಷಣಗಳೂ ಹೇತುಗರ್ಭ. ಭಗವದನುರೂಪವಾದ ಈಶ್ವರತ್ವವು ಇವಳಲ್ಲಿರುವುದರಿಂದಲೂ, ಭಗವದಭಿಮತೆಯಾಗಿರುವುದರಿಂದಲೂ ಸಹಧರ್ಮಚಾರಿಣಿಯಾಗಿ ಸ್ಮೃತಿಕಾರರುಗಳು ಹೇಳಿರುತ್ತಾರೆ.

"ಮಾಮೇಕಂ ಶರಣಮ್", ಎಂದು ಭಗವಂತನೊಬ್ಬನಿಗೇ ಉಪಾಯತ್ವವು ತೋರುವಂತೆ ಇಲ್ಲವೇ; ಹಾಗಿರುವಾಗ ಹೇಗೆ ಅವನಿಗೆ ಶ್ರೀ ವಿಶಿಷ್ಟತ್ವವನ್ನು ಹೇಳುವುದೆಂಬುದನ್ನು, ವಿಶೇಷಣವು ಅಪೇಕ್ಷಿತವಾದರೆ, ತದ್ವಿಶಿಷ್ಟತ್ವವು ಅವಶ್ಯ ತೋರುತ್ತದೆಯೆಂದು, ದೃಷ್ಟಾಂತಪೂರ್ವಕವಾಗಿ, **"ಏಕಂ ಜಗದುಪಾದಾನಂ",** ಇತ್ಯಾದಿಯಾಗಿ ಸಮರ್ಥಿಸುತ್ತಾರೆ. ಆದಾಗಿ "ಏಕಮೇವಾ ದ್ವಿತೀಯಂ ಬ್ರಹ್ಮ" ಎಂಬ ಶ್ರುತಿಯಲ್ಲಿ ಏಕನಿಗೇ ಜಗದುಪಾದಾನತ್ವವು ಹೇಳಿದ್ದರೂ, **ಯಥಾऽಪೇಕ್ಷಿತ ವೈಶಿಷ್ಟ್ಯಂ** ಹೇಗೆ ಅಪೇಕ್ಷಿತಗಳಾದ ಸೂಕ್ಷ್ಮ ಚೇತನಾಚೇತನ ವೈಶಿಷ್ಟ್ಯವು ಅಂಗೀಕರಿಸಲ್ಪಡುತ್ತದೆಯೋ **ತಥಾತ್ರಾऽಪಿ ಭವಿಷ್ಯತಿ** ಹಾಗೆಯೇ, 'ಮಾಮೇಕಂ ಶರಣಂ' ಎಂಬಲ್ಲಿಯೂ ಉಪಾಯವಾಗಿ ಹೇಳಲ್ಪಟ್ಟ ಭಗವಂತನಿಗೆ ಮೇಲೆ ಹೇಳಿದ ಪ್ರಮಾಣ **ಶ್ಲೋಕಾನುಸಾರವಾಗಿ** ಅಪೇಕ್ಷಣೀಯವಾದ ಶ್ರೀ ವೈಶಿಷ್ಟ್ಯವು ತೋರುತ್ತದೆ ಎಂದು ಭಾವ.

ಮತ್ತೊಂದು ದೃಷ್ಟಾಂತವನ್ನು **'ಏಕೋಪಾಸ್ತಿವಿಧಾನೇऽಪಿ'** ಎಂದಾರಂಭಿಸಿ ಅನುಗ್ರಹಿಸುತ್ತಾರೆ. "ತಮೇವೈಕಂ ಜಾನಥಾತ್ಮಾನಮ್" – ಅವನೊಬ್ಬನನ್ನೇ ಉಪಾಸನೆ ಮಾಡಿ, **'ತಮೇವ ವಿದಿತ್ವಾऽತಿಮೃತ್ಯುಮೇತಿ'** – ಅವನನ್ನು ಉಪಾಸನೆಮಾಡಿ ಸಂಸಾರವನ್ನು ದಾಟುತ್ತಾನೆ, ಇತ್ಯಾದಿಗಳಾದ ಭಗವದೇಕೋಪಾಸನ ವಿಧಾನಸ್ಥಲಗಳಲ್ಲಿಯೂ, ಹೇಗೆ ಸಗುಣ ಬ್ರಹ್ಮವಾದಿಗಳಾದ ನಮಗೆ **ಗುಣಾದೀನಾಂ ಯಥಾನ್ವಯಃ – ಗುಣ** ವೈಶಿಷ್ಟ್ಯವು ತೋರುವುದಾಗಿ ಅಂಗೀಕರಿಸಬೇಕೋ **ತಥೈಕ ಶರಣವ್ರಜ್ಯಾ ವಿಧಾನೇಪಿ** – ಹಾಗೆಯೇ ಭಗವಂತನೊಬ್ಬನನ್ನೇ ಶರಣವಾಗಿ ಹೊಂದು ಎಂದು ವಿಧಿಸುವ ಸ್ಥಲದಲ್ಲಿಯೂ, **ಅನುಮನ್ಯತಾಮ್ – ಲಕ್ಷ್ಮೀ** ವೈಶಿಷ್ಟ್ಯವನ್ನು ಅಂಗೀಕರಿಸಬೇಕು.

ಹೀಗೆ ಲಕ್ಷ್ಮೀ ವೈಶಿಷ್ಟ್ಯವನ್ನು ಒಪ್ಪಿದರೆ ಉಪಾಯೈಕ್ಯಕ್ಕೆ ಭಂಗವು ಏರ್ಪಡುವುದಿಲ್ಲವೇ ಎಂದರೆ **ಯಥಾ ಗುಣಾದಿ ವೈಶಿಷ್ಟ್ಯೇ** ಎಂದಾರಂಭಿಸಿ ಸಮಾಧಾನವನ್ನು ಅನುಗ್ರಹಿಸುತ್ತಾರೆ. – ಆದಾಗಿ **ಗುಣವಿಗ್ರಹ**ಗಳಿಂದ ಕೂಡಿದ **ಸಿದ್ಧೋಪಾಯೈಕ್ಯ ಮುಕ್ಷತಮ್** – ಸಿದ್ಧೋಪಾಯನಾದ ಭಗವಂತನ ಏಕತ್ವಕ್ಕೆ ಕ್ಷತಿ – ನಾಶವಿಲ್ಲವೋ, **ಏವಂ ಪತ್ನೀ ವಿಶಿಷ್ಟತ್ವೇऽಪಿ ಅಭೀಷ್ಟಂ ಶಾಸ್ತ್ರಚಕ್ಷುಷಾಮ್** – ಹಾಗೆಯೇ ಶಾಸ್ತ್ರಪ್ರಮಾಣವನ್ನವಲಂಬಿಸುವವರಿಗೆ ಪತ್ನಿಯಾದ ಲಕ್ಷ್ಮಿಯ ವಿಶೇಷಣ ವಿಶಿಷ್ಟತ್ವವು **ಸಮ್ಮತವು.** ವಿಶೇಷಣ ವೈಶಿಷ್ಟ್ಯವು ವಿಶೇಷ್ಯೈಕ್ಯತ್ವಕ್ಕೆ ಬಾಧಕವಾಗುವುದಿಲ್ಲ ಎಂಬುದನ್ನು ಶಾಸ್ತ್ರಜ್ಞರೆಲ್ಲರೂ ಅಂಗೀಕರಿಸಿದ್ದಾರೆಂದು ಭಾವ.

**ಪ್ರಭಾಪ್ರಭಾವತೋರ್ಯದ್ವದೇ ಕೋಕ್ತ್ಯಾ ವಿತರಾ ನ್ವಯಃ ।**
**ಏವಮನ್ಯತರೋಕ್ತ್ಯಾ ಸ್ಯಾತ್ಸಹವೃತ್ತ್ಯ ಭಿಧಾನತಃ ॥ 3 ॥**

---

**ಲಕ್ಷ್ಮಿಗೂ ಶರಣ್ಯಾಂತರ್ಭಾವವು ಏಕಶಬ್ದದಿಂದ ವಿವಕ್ಷಿತ.**

ಇಲ್ಲಿ "ಮಾಮೇಕಂ ಶರಣಂ ವ್ರಜ" ಎಂದು ಭಗವಂತನೊಬ್ಬನನ್ನೇ ಉಪಾಯವಾಗಿ ಹೇಳಿರುವಾಗ ಲಕ್ಷ್ಮಿಗೆ ಹೇಳದೇ ಇರುವ ಶರಣ್ಯಾಂತರ್ಭಾವವು ಹೇಗೆ ಕೂಡುತ್ತದೆ ಎಂದರೆ **ಪ್ರಭಾ ಪ್ರಭಾವತೋರ್ಯದ್ವತ್** ಎಂದಾರಂಭಿಸಿ ನಿರೂಪಿಸುತ್ತಾರೆ. ಅದಾಗಿ ಪ್ರಭೆಗೂ, ಪ್ರಭೆಯಿಂದ ಕೂಡಿದ ವಸ್ತುವಿಗೂ, ಏಕೋಕ್ತ್ಯಾವಿತರಾನ್ವಯಃ – ಒಂದನ್ನು ಹೇಳಿದರೆ ಮತ್ತೊಂದಕ್ಕೆ ಅನ್ವಯವಿರುವಂತೆ ಅಂದರೆ ಸಹವೃತ್ತಿತ್ವವಿರುವಂತೆ, ಭಗವಂತನಿಗೂ ಲಕ್ಷ್ಮಿಗೂ ಸಹವೃತ್ತಿತ್ವವನ್ನು ಪ್ರಮಾಣಗಳು ಹೇಳುವುದರಿಂದ ಈ ದೃಷ್ಟಾಂತವನ್ನನುಸರಿಸಿ ಭಗವಂತನೊಬ್ಬನನ್ನೇ ಶರಣವಾಗಿ ಹೇಳಿರುವ ಸ್ಥಳಗಳಲ್ಲಿ ಲಕ್ಷ್ಮಿಗೂ ಶರಣ್ಯಾಂತರ್ಭಾವವು ಕೂಡುತ್ತದೆ ಎಂದು ಸಿದ್ಧಾಂತ. ಗ್ಲಪಯತ್ಯಾತಪಃ – ಬಿಸಿಲು ಸುಡುತ್ತದೆ, ಆಹ್ಲಾದಯತಿಜ್ಯೋತ್ಸ್ನಾ – ಬೆಳದಿಂಗಳು ಆಹ್ಲಾದವನ್ನುಂಟು ಮಾಡುತ್ತದೆ ಎಂದು ಪ್ರಭೆಯ ಕಾರ್ಯವು ಪ್ರಭಾವಾನಲ್ಲಿಯೂ ಅನ್ವಯಿಸುತ್ತದೆಯಲ್ಲವೇ. "ಸೂರ್ಯಃ ಶೋಷಯತಿ" – ಸೂರ್ಯನು ಒಣಗಿಸುತ್ತಾನೆ, 'ಚಂದ್ರಃ ಶೀತಳಯತಿ'– ಚಂದ್ರನು ಶೈತ್ಯವನ್ನುಂಟು ಮಾಡುತ್ತಾನೆ ಎಂದು ಪ್ರಭಾವಾನ್‌ಗಳ ಕಾರ್ಯವು ಆತಪ, ಜ್ಯೋತ್ಸ್ನಾದಿಗಳಿಗೂ ಅನ್ವಯಿಸುತ್ತದೆಯಲ್ಲವೇ. ಇದೇ ರೀತಿಯಲ್ಲಿ ಈ ವಿಶಿಷ್ಟ ದಂಪತಿಗಳಲ್ಲಿ ಒಬ್ಬನು ಶರಣ್ಯನೆಂದರೆ ಇತರರಿಗೂ ಶರಣ್ಯಾಂತರ್ಭಾವವು ಸಿದ್ಧಿಸುತ್ತದೆ. ಇದನ್ನು **ಏವಮನ್ಯತರೋಕ್ತ್ಯಾ ಸ್ಯಾತ್ ಸಹವೃತ್ತ್ಯಭಿದಾನತಃ** – ಒಬ್ಬರನ್ನು ಶರಣ್ಯನೆಂದು ಹೇಳಿದರೆ ಮತ್ತೊಬ್ಬರಿಗೆ ಅದು ಅನ್ವಯಿಸುತ್ತದೆಯೆಂದು ತಾತ್ಪರ್ಯ. ಇದಕ್ಕೆ ಕಾರಣ ಸಹವೃತ್ತ್ಯಭಿಧಾನ.

ಸಿದ್ಧಾಂತದಲ್ಲಿ ಪರತತ್ವವು ಲಕ್ಷ್ಮಿ ವಿಶಿಷ್ಟ ನಾರಾಯಣನು. ಆ ವಿಶಿಷ್ಟ ತತ್ವವೇ ಬ್ರಹ್ಮಶಬ್ದವಾಚ್ಯ. ಜಗತ್ಕಾರಣವೂ, ಉಪಾಯವೂ, ಪ್ರಾಪ್ಯವೂ ಸಹ. ಈ ಅಂಶವು ಹೇಗೆ ಏರ್ಪಡುತ್ತದೆ? ಶ್ರುತಿಗಳಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆಯೇ ? 'ಏಕಮೇವಾದ್ವಿತೀಯಂ' ಇತ್ಯಾದಿ ವಾಕ್ಯಗಳಲ್ಲಿ ಏಕಶಬ್ದಕ್ಕೆ ಲಕ್ಷ್ಮೀವಿಶಿಷ್ಟನೆಂದು ಹೇಳುವುದು ಹೇಗೆ ಸಮಂಜಸವಾಗುತ್ತದೆ ಇತ್ಯಾದಿ ಪೂರ್ವಪಕ್ಷಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಅದಕ್ಕೆ ಸಮಾಧಾನವಾಗಿ "ಪ್ರಭಾ, ಪ್ರಭಾವತೋರ್ಯದ್ವತ್" ಎಂದಾರಂಭಿಸುವ ಕಾರಿಕೆಯನ್ನು ಆಚಾರ್ಯರು ಅನುಗ್ರಹಿಸಿರುತ್ತಾರೆ. ಇದರ ತಾತ್ಪರ್ಯವನ್ನು ಕರೂರುಸ್ವಾಮಿಗಳವರು ತಮ್ಮ "ಸಾರತಾತ್ಪರ್ಯ ಕೌಮುದಿ" ಯಲ್ಲಿ 17–ಶ್ಲೋಕಗಳಿಂದ ವಿವರಿಸುತ್ತಾರೆ. ಅದನ್ನು ಇಲ್ಲಿ ಅರ್ಥದೊಡನೆ ಬರೆಯಲಾಗಿದೆ.

(1) ಪ್ರಭಾಕರಾಂಶುಮತ್ ಭಾಸ್ವದ್ಭಾಸ್ಕರಾದಿ ಪದೈರ್ಯಥಾ !
ಪ್ರಭಾ ವಿಶಿಷ್ಟಸ್ತಪನಃ ಪ್ರೋಚ್ಯತೇ ನತುಕೇವಲಃ ॥

ಪ್ರಭಾಕರಃ, ಅಂಶುಮಾನ್, ಭಾಸ್ವಾನ್, ಭಾಸ್ಕರಃ, ಮೊದಲಾದ ಪದಗಳಿಂದ ಪ್ರಭೆಯಿಂದ ಕೂಡಿದ ಸೂರ್ಯನು ಹೇಳಲ್ಪಡುತ್ತಾನೆ, ಪ್ರಭೆಯಿಲ್ಲದ ಸೂರ್ಯನು ಹೇಳಲ್ಪಡುವುದಿಲ್ಲ.

(2) ಏವಂ ನಾರಾಯಣಾದ್ಯೈಃಶ್ಚ ಭಗವಾನ್ ದಿವ್ಯನಾಮಭಿಃ ।
ಶ್ರಿಯಾವಿಶಿಷ್ಟೋ ವ್ಯಾವೃತ್ತಃ ಪ್ರೋಚ್ಯತೇ ದೇವತಾಂತರಾತ್ ॥

ಹೀಗೆ ನಾರಾಯಣ, ವಿಷ್ಣು, ವಾಸುದೇವ ಮೊದಲಾದ ದಿವ್ಯನಾಮಗಳಿಂದ ಲಕ್ಷ್ಮೀ ವಿಶಿಷ್ಟನಾದ ಭಗವಂತನು ದೇವತಾಂತರ ವ್ಯಾವೃತ್ತನಾಗಿ ತಿಳಿಸಲ್ಪಡುತ್ತಾನೆ.

(3) ಸೂರ್ಯಪ್ರಭಾದಿಶಬ್ದೇಷು ಸ್ವಾಶ್ರಯೇಣ ವಿಶೇಷಿತಾ ।
ಪ್ರಭೋಚ್ಯತೇ ತತೋ ದೀಪ ಪ್ರಭಾದಿಭ್ಯೋ ವಿಭಿದ್ಯತೇ ॥

ಸೂರ್ಯನ ಪ್ರಭೆ ಮೊದಲಾದ ಶಬ್ದಗಳಲ್ಲಿ, ಸ್ವಾಶ್ರಯದಿಂದ ವಿಶಿಷ್ಟವಾದ ಪ್ರಭೆಯು ಹೇಳಲ್ಪಟ್ಟು, ದೀಪ ಪ್ರಭೆ ಮೊದಲಾದವುಗಳಿಂದ ಬೇರೆಯೆಂದು ಹೇಳಲ್ಪಡುತ್ತದೆ.

(4) ಶ್ರೀ ಲಕ್ಷ್ಮ್ಯಾದಿ ಪದೈರೇವಂ ವಿಷ್ಣುಪತ್ನೀ ವಿಶಿಷ್ಯತೇ ।
ವಿಷ್ಣುನೈವ ತತೋ ನ್ಯಾಭ್ಯಃ ಪತ್ನ್ಯಾವ್ಯಾವರ್ತ್ಯತೇ ಸ್ವಯಮ್ ॥

ಹೀಗೆ, ಶ್ರೀ, ಲಕ್ಷ್ಮೀ ಮೊದಲಾದ ಪದಗಳಿಂದ ವಿಷ್ಣುವಿನ ಪತ್ನಿಯು ವಿಶೇಷಣಭೂತಳಾಗಿ ಹೇಳಲ್ಪಟ್ಟು, ವಿಷ್ಣುಶಬ್ದ ಸಾಹಚರ್ಯದಿಂದ ಇತರ ಪತ್ನಿಗಳಾದ ಭೂಮಿ ನೀಳೆಗಳಿಗಿಂತ ಬೇರೆಯಾದವಳು ಎಂದು ವ್ಯಾವರ್ತಿಸಲ್ಪಡುತ್ತಾಳೆ.

(5 ಇತ್ಥಂಚ ದಿವ್ಯದಂಪತ್ಯೋ ರೇಕೋಕ್ತಾವಿತರಾನ್ವಯಾತ್ ।
ಮಹಿಮೋಕ್ತಿಸ್ತತ್ರತತ್ರ ದ್ವಯೋರಪಿ ಸಮನ್ವಿತಾ ॥

ಹೀಗೆ ದಿವ್ಯದಂಪತಿಗಳಲ್ಲಿ, ಒಬ್ಬರನ್ನು ಹೇಳಿದರೆ ಮತ್ತೊಬ್ಬರಿಗೆ ಅನ್ವಯವಿರುವುದರಿಂದ, ಅಲ್ಲಲ್ಲಿ ಅವರವರ ಮಹಿಮೆಗಳನ್ನು ಹೇಳಿರುವುದು ಇಬ್ಬರಲ್ಲಿ ಸಮನ್ವಯವಾಗುತ್ತದೆ.

(6) ಇದಮಿತ್ಥಂತ್ವವಚ್ಛೈತೌ ದಂಪತೀ ಸಾಂಪ್ರದಾಯಿಕೈಃ ।
ಏಕಯೋಕ್ತ್ಯಾಸಿಧ್ಯತ ಇತ್ಯುಕ್ತ ಮಪ್ಯತ್ರ ಭಾವ್ಯತಾಮ್ ॥

ಶ್ರೀಪರಾಶರ ಭಟ್ಟಾಚಾರ್ಯರು ತಮ್ಮ ಶ್ರೀಗುಣ ರತ್ನಕೋಶದಲ್ಲಿ,

ಸ್ವರೂಪಂ ಸ್ವಾತಂತ್ರ್ಯಂಭಗವತ ಇದಂ ಚಂದ್ರವದನೇ
ತ್ವದಾಶ್ಲೇಷೋತ್ಕರ್ಷಾತ್ ಭವತಿಖಲು ನಿಷ್ಕರ್ಷಸಮಯೇ ।
ತ್ವಮಾಸೀರ್ಮಾತಃಶ್ರೀಃ ಕಮಿತುರಿದಮಿತ್ಥಂತ್ವ ವಿಭವಃ
ತದಂತರ್ಭಾವಾತ್ತ್ವಂ ನ ಪೃಥಗಭಿಧತ್ತೇ ಶ್ರುತಿರಪಿ ॥

ಎಂದು ಸಾಂಪ್ರದಾಯಿಕವಾದ ಅರ್ಥವನ್ನು ವಿವರಿಸಿದ್ದಾರೆ. ಆದಾಗಿ, ಹೇ ಚಂದ್ರವದನೇ – ಚಂದ್ರನಂತೆ ಆಹ್ಲಾದಕರವಾದ ಮುಖವನ್ನುಳ್ಳವಳೇ, ನಿಷ್ಕರ್ಷ ಸಮಯೇ – ತತ್ವನಿರ್ಣಯವನ್ನು ಮಾಡುವ ಸಮಯದಲ್ಲಿ, ಭಗವತಃ – ಭಗವಂತನ ಇದಂ ಸ್ವರೂಪಂ, – ಈ ದಿವ್ಯಾತ್ಮ ಸ್ವರೂಪವೂ, ಸ್ವಾತಂತ್ರ್ಯಂ – ನಿರಂಕುಶವಾದ ಸ್ವತಂತ್ರತ್ವವೂ, ತ್ವದಾಶ್ಲೇಷೋತ್ಕರ್ಷಾತ್ – ನಿನ್ನ ನಿತ್ಯನಾದ ಸಂಶ್ಲೇಷದ ಉತ್ಕೃಷ್ಟತೆಯಿಂದ ಭವತಿಖಲು – ಉಂಟಾಗುತ್ತದೆಯಷ್ಟೇ. ಭಗವಂತನ ಸ್ವರೂಪ ಸ್ವಾತಂತ್ರ್ಯಗಳು ಲಕ್ಷ್ಮಿಯ ನಿತ್ಯಸಂಶ್ಲೇಷದಿಂದ ಉತ್ಕೃಷ್ಟಗಳಾಗಿವೆ. ಹೇ ಮಾತಃ, ಶ್ರೀಃ – ಎಲೈ ತಾಯಿಯಾದ ಶ್ರೀದೇವಿಯೇ ತ್ವಂ – ನೀನು ಕಮಿತುಃ – ನಿನ್ನ ಪ್ರಿಯನಿಗೆ, ಇದಮಿತ್ಥಂತ್ವ ವಿಭವಃ ಆಸೀಃ – ಇದಂ ಶಬ್ದವು ಇತ್ಥಂತ್ವ – ಈ ಪ್ರಕಾರವಾದದ್ದು, ಎಂಬಂತೆ ಭಗವಂತನು ಲಕ್ಷ್ಮೀ ಪ್ರಕಾರಕ ವೈಭವವನ್ನುಳ್ಳವನಾಗಿದ್ದಾನೆ, ಎಂಬಂತೆ ಇದ್ದೀಯಾ, ತದಂತರ್ಭಾವಾತ್ – ಭಗವಂತನಿಗೆ ಅಪೃಥಕ್ ಸಿದ್ಧ ವಿಶೇಷಣಳಾಗಿ ಅಡಗಿರುವುದರಿಂದ ಶ್ರುತಿರಪಿ – ವೇದವೂ, ನಪೃಥಗಭಿಧತ್ತೇ – ನಿನ್ನನ್ನು ಪ್ರತ್ಯೇಕವಾಗಿ ಹೇಳುವುದಿಲ್ಲ.

ಶ್ರುತಿಯು "ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂಬ್ರಹ್ಮ", ಹಿರಣ್ಯಗರ್ಭಸ್ಸಮವರ್ತತಾಗ್ರೇ. ಆತ್ಮಾವಾ ಇದಮೇಕಮೇವಾಗ್ರ ಆಸೀತ್, ಎಂದು ಬ್ರಹ್ಮ, ಹಿರಣ್ಯ ಗರ್ಭ,ಸತ್, ಆತ್ಮಾ ಎಂಬ ಶಬ್ದವಾಚ್ಯನು ಏಕಮೇವ ಒಬ್ಬನೇ, ಎಂದು ಹೇಳಿರುತ್ತದೆ. ಈ ಸ್ಥಳಗಳಲ್ಲಿ ಈ ಶಬ್ದಗಳಿಗೆ ಶ್ರೀವಿಶಿಷ್ಟನೊಬ್ಬನೇ ಎಂದು ತಿಳಿಯಬೇಕು ಎಂಬುದು ಸಾಂಪ್ರದಾಯಿಕವಾದ ಮಾತು.

(7) ಇದಮಗ್ರೇತ್ಯಾದಿ ವಾಕ್ಯಾತ್ ಸತೋಕ್ತಿರ್ಧರ್ಮ ಧರ್ಮಿಣೋಃ ।
ಯಥೈವಂ ಕಾರಣತ್ವಾದಿ ಸಿದ್ಧಿ ರ್ಲಕ್ಷ್ಮೀಶದೀಶಯೋಃ ॥
'ಸದೇವ ಸೋಮ್ಯೇದಮಗ್ರ ಆಸೀತ್' ಎಂಬಲ್ಲಿ ಇದಮ್, ಆಸೀತ್, ಸಚ್ಛಬ್ದವಾಚ್ಯನು ಇದ್ದನು ಎಂಬ ವಾಕ್ಯದಿಂದ, ಜಗತ್ಕಾರಣತ್ವವು ಧರ್ಮವಿಶಿಷ್ಟ ಧರ್ಮಿಯನ್ನು ತಿಳಿಸುವಂತೆ, ಲಕ್ಷ್ಮೀವಿಶಿಷ್ಟನಾದ ಭಗವಂತನನ್ನೂ ತಿಳಿಸುತ್ತದೆ.

(8) ಇದಮೇಕ ಮುಪಾದೇಯಂ ಇತ್ಯಾದ್ಯುಕ್ತಾ ವಿದಂತ್ವನತ್ ।
"ಮಾಮೇಕ" ಮಿತಿವಾಕ್ಯಾತ್ಸ್ಯಾತ್ ಶರಣ್ಯತ್ವಂ ದ್ವಯೋರಪಿ ॥
ಈ ಒಂದು ಉಪಾದೇಯವು ಎಂಬ ಮಾತಿನಲ್ಲಿ, ಇದಂ ಶಬ್ದವು ಇದಂತ್ವ ವಿಶಿಷ್ಟವಾಗಿರುವಂತೆ, "ಮಾಮೇಕಂ ಶರಣಂ ವ್ರಜ", ಎಂಬ ವಾಕ್ಯದಲ್ಲಿ ಶರಣ್ಯತ್ವವು ಲಕ್ಷ್ಮೀನಾರಾಯಣರಿಬ್ಬರಲ್ಲಿಯೂ ಅನ್ವಯಿಸುತ್ತದೆ.

(9) ಮಾಮೇಕಾಂ ಶರಣಂ ಪ್ರಾಪ್ಯ ತರೇತ್ ಸಂಸಾರ ಸಾಗರಮ್ ।
ಉಪೇಯಾಂಚಾಪ್ಯವ ಪ್ರಾಪ್ತ್ಯೈ ತ್ವಾಮುಪಾಯತಯಾ ವೃಣೇ ॥

(10) ಇತ್ಯೇವಂಭಗವಚ್ಛಾಸ್ತ್ರೇ ನಿರ್ಬಾಧಾ ಲಕ್ಷ್ಮ್ಯುಪಾಯತಾ ।
ಪ್ರೋಕ್ತಾಪತ್ಯುರುಪಾಯತ್ವೇ ತದಂತರ್ಭಾವ ಭಾವತಃ ॥
ನನ್ನನ್ನೇ (ಲಕ್ಷ್ಮಿಯನ್ನೇ) ಉಪಾಯವಾಗಿ ಆಶ್ರಯಿಸಿ ಸಂಸಾರಸಾಗರವನ್ನು ದಾಟಬೇಕು ಎಂದೂ ಪಾಂಚರಾತ್ರಸಂಹಿತೆಯಲ್ಲಿ, ಉಪೇಯಭೂತೆಯಾದ ನಿನ್ನನ್ನು ಪಡೆಯಲು, ನಿನ್ನನ್ನೇ ಉಪಾಯವಾಗಿ ವರಿಸುತ್ತೇನೆ, ಎಂದೂ ಲಕ್ಷ್ಮಿಯ ಉಪಾಯತ್ವವು, ಯಾವ ಆಕ್ಷೇಪವೂ ಇಲ್ಲದೆ ಹೇಳಲ್ಪಟ್ಟಿದೆ. ಪತಿಯು ಉಪಾಯವಾಗಿರುವಾಗ, ಅವನಲ್ಲಿ ವಿಶೇಷಣ ವಿಶಿಷ್ಟಳಾಗಿರುವುದರಿಂದ ಲಕ್ಷ್ಮಿಗೂ ಉಪಾಯತ್ವವು ನಿರ್ಬಾಧವಾಗಿ ಹೇಳಿದೆ ಎಂದು ತಾತ್ಪರ್ಯ.

(11) ಪ್ರಮಾಣನ್ಯಾಯ ಸಚಿವ ಸಂಪ್ರದಾಯಾನುಸಾರತಃ ।
ತುಲ್ಯೈವ ದಿವ್ಯದಂಪತ್ಯೋಃ ಪರವಿದ್ಯಾ ಪ್ರಸಾದ್ಯತಾ ॥
ಪ್ರಮಾಣಗಳೊಡನೆ ಸಾಚಿವ್ಯವನ್ನು ಪಡೆದ ಸಂಪ್ರದಾಯಾನುಸಾರವಾಗಿ ದಿವ್ಯದಂಪತಿಗಳಿಬ್ಬರಿಗೂ ಪರವಿದ್ಯೆಯಿಂದ ಪ್ರಸನ್ನರಾಗಿ ಉಪಾಯಭೂತರಾಗುವುದು, ಸಮ.

(12) ಪತ್ನ್ಯಾಃ ಪುರುಷಕಾರತ್ವಮಪಿ ಸ್ವೇಚ್ಛಾ ವಿಭಾವಿತಮ್ ।
ಪತಿಪಾರಾರ್ಥ್ಯವನ್ನಿತ್ಯಂ ನ ಪಾರಮ್ಯ ವಿರೋಧಿತತ್ ॥
ಪತ್ನಿಯ (ಲಕ್ಷ್ಮಿಯ) ಪುರುಷಕಾರತ್ವವು ಸ್ವೇಚ್ಛೆಯಿಂದ ಏರ್ಪಟ್ಟಿದೆ. ನಿತ್ಯ ಪತಿಪಾರಾರ್ಥ್ಯವನ್ನು ಭಾವಿಸುವಂತೆ ಇದೂ ಸಹ. ಇದರಿಂದ ಅವಳ ಪಾರಮ್ಯಕ್ಕೆ ವಿರೋಧವೇನೂ ಇಲ್ಲ.

(13) ಆವಯೋರೇತದಖಿಲ ಮಿತಿ ಲಕ್ಷ್ಮೀಶದೀಶಯೋಃ ।
ಸಂಕಲ್ಪಾಚ್ಚಿದಚಿತ್ತತ್ವಂ ಸಕಲಂ ಶೇಷತಾಂಗತಮ್ ॥
ಈ ಚೇತನಾ ಚೇತನಾತ್ಮಕವಾದ ಪ್ರಪಂಚವು ಎಲ್ಲಾ ಲಕ್ಷ್ಮಿಯ ಮತ್ತು ಅವಳಿಗೆ ಈಶನಾದ ಭಗವಂತನ "ಆವಯೋರೇತದಖಿಲಂ" ಎಂಬ ಸಂಕಲ್ಪದಿಂದ, ಅವರುಗಳಿಗೆ ಶೇಷಭೂತವಾಗಿದೆ.

(14) ಮಹ್ಯಂ ವಸ್ತುಭ್ಯಮೇವಾಹಮಿತಿ ಸಂಕಲ್ಪತೋಽನ್ಯತಃ ।
ಪರಸ್ಪರಂತಯೋರೇಕಂ ಶೇಷ ಶೇಷಿತ್ವ ಮಿಷ್ಯತೇ ॥

**ಸ್ಮರನ್ತಿ ಚೈನಾಂ ಮುನಯಃ ಸಂಸಾರಾರ್ಣವತಾರಿಣೀಮ್ ।**
**ಊಚತು ಸ್ವಯಮಪ್ಯೇತತ್ಸಾತ್ವತಾದಿಷು ತಾವುಭೌ ॥ 154 ॥**

---

ನೀವೆಲ್ಲರೂ ನನಗೆ ಶೇಷಭೂತರು ಎಂಬ ಭಗವತ್ಸಂಕಲ್ಪದಿಂದಲೂ, ನಾನು ನಿಮಗೆ ಸ್ವೇಚ್ಛೆಯಿಂದ ಶೇಷಭೂತಳು ಎಂಬ ಲಕ್ಷ್ಮಿಯ ಸಂಕಲ್ಪದಿಂದಲೂ ಲಕ್ಷ್ಮೀನಾರಾಯಣರಿಬ್ಬರಿಗೂ ಶೇಷ ಶೇಷಿತ್ವವು ಸಮ್ಮತವಾಗಿದೆ.

(15) ನಾತಃ ಪ್ರಪಂಚವತ್ತಸ್ಯಾಃ ವಿಭೂತಿಷು ನಿವೇಶ್ಯತಾ ।
ನರಶಬ್ದೋ ಭಗವತಿ ನಾರಾಯಣ ಪದಾದಿವತ್ ॥

ಪ್ರಪಂಚವು ಭಗವಂತನಿಗೆ ವಿಭೂತಿಯಾಗಿರುವ ರೀತಿಯಲ್ಲಿ, ಲಕ್ಷ್ಮಿಯನ್ನು ವಿಭೂತಿಕೋಟಿಯಲ್ಲಿ ಸೇರಿಸಬಾರದು; ಪುರುಷಕಾರ ಭಾವದಿಂದ ಸ್ವೇಚ್ಛೆಯಾಗಿ ವಿಭೂತಿಮಧ್ಯೆ ಪರಿಗಣನೆಯು ಬಾಧಕವಿಲ್ಲವೆಂದು ಭಾವ. ನರಶಬ್ದವು ಹೇಗೆ ವಿಭೂತಿ ಮಧ್ಯೆ ನಾರಾಯಣನ ಅವತಾರ ವಿಶೇಷವಾಗಿ ಪರಿಗಣಿಸಲ್ಪಡುತ್ತದೆಯೋ ಹಾಗೆ ಲಕ್ಷ್ಮಿಯು ಪುರುಷಕಾರ ಭಾವದಿಂದ ವಿಭೂತಿಮಧ್ಯೆ ಪರಿಗಣಿಸಲ್ಪಡುತ್ತಾಳೆಯಷ್ಟೇ.

(16) ನಾರತ್ವಂ ನರಸಂಬಂಧಾತ್ ನಿರುಕ್ತಂತು ಶ್ರಿಯೋಽಪಿತತ್ ।
ಭವಾನ್ನಾರಾಯಣೋದೇವೋ ಭಾವೋ ಲಕ್ಷ್ಮೀರಹಂತತಃ ॥

(17) ಭವದ್ಭಾವಾತ್ಮಕಂಬ್ರಹ್ಮ ಲಕ್ಷ್ಮೀನಾರಾಯಣಾನ್ವಯಮ್ ।
ಇತ್ಯಾದಿ ಭಗವಚ್ಛಾಸ್ತ್ರಂ ಪ್ರಮಾಣಮಿಹ ಭಣ್ಯತಾಮ್ ॥

ನರಸಂಬಂಧಿಯಾದ ನಾರತ್ವವು ವಿಭೂತಿಯ ಹಾಗೆ ಆಶ್ರಯತ್ವವು. ಪುರುಷಕಾರತ್ವವು ಲಕ್ಷ್ಮಿಯ ವಿಭೂತಿ, ನಾರಾಯಣನು, ಭವಾನ್(ಸತ್) ಶಬ್ದವಾಚ್ಯನು, ಲಕ್ಷ್ಮಿಯು ಭಾವಶಬ್ದವಾಚ್ಯಳು, ಭವದ್ಭಾವಾತ್ಮಕವಾದ ಬ್ರಹ್ಮವು ಲಕ್ಷ್ಮೀನಾರಾಯಣಾತ್ಮಕವು, ಇತ್ಯಾದಿ ಭಗವಚ್ಛಾಸ್ತ್ರವು, **"ಮಾಮೇಕಂ"** ಎಂಬಲ್ಲಿ ಏಕಶಬ್ದವು ಲಕ್ಷ್ಮೀವಿಶಿಷ್ಟ ನಾರಾಯಣವಾಚಿ ಎಂಬುದನ್ನು ಪ್ರಮಾಣೀಕರಿಸುತ್ತದೆ.

ಲಕ್ಷ್ಮಿಗೆ ಉಪಾಯತ್ವವನ್ನು ಕಾಶ್ಯಪಾದಿ ಋಷಿಗಳೂ ಹೇಳಿದ್ದಾರೆಂದು **ಸ್ಮರಂತಿ ಚೈನಾಂ ಮುನಯಃ** ಎಂದಾರಂಭಿಸಿ ತಿಳಿಸುತ್ತಾರೆ ಅದಾಗಿ,

ಸರ್ವಕಾಮ ಪ್ರದಾಂರಮ್ಯಾಂ ಸಂಸಾರಾರ್ಣವತಾರಿಣೀಮ್ ।
ಕ್ಷಿಪ್ರ ಪ್ರಸಾದಿನೀಂ ದೇವೀಂಶರಣ್ಯಾ ಮನುಚಿಂತಯೇತ್ ॥
ಯಾಮಾಲಂಬ್ಯ ಸುಖನೇಮಂ ದುಸ್ತರಂ ಹಿಗುಣೋದಧಿಮ್ ।
ನಿಸ್ತರಂತ್ಯಚಿರೇಣೈವ ವ್ಯಕ್ತಧ್ಯಾನ ಪರಾಯಣಾಃ ॥,

ಎಂದು ಕಾಶ್ಯಪಸ್ಮೃತಿಕಾರರು ಸಂಸಾರವನ್ನು ದಾಟಿಸುವವಳು ಎಂದು ಸ್ಪಷ್ಟವಾಗಿ ಲಕ್ಷ್ಮಿಗೆ ಉಪಾಯತ್ವವನ್ನು ಹೇಳಿದ್ದಾರೆ. 'ತಾರಿಣೀಂ' ಎಂದು 'ತಾಚ್ಛೀಲ್ಯೇಣಿನಿ' ಪ್ರತ್ಯಯ, ಸಾಕ್ಷಾದುಪಾಯತ್ವವನ್ನು ತಿಳಿಸುತ್ತದೆ. **ಊಚತು ಸ್ವಯಮಪ್ಯೇತತ್** ಇತ್ಯಾದಿ – ಸ್ಮೃತಿಕಾರರು ಹೇಳಿರುವುದಲ್ಲದೆ ಸಾತ್ವತಾದಿ ಸಂಹಿತೆಗಳಲ್ಲಿ, ಈ ದಿವ್ಯದಂಪತಿಗಳು ತಾವೇ ಹೇಳಿರುತ್ತಾರೆ. ಅದಾಗಿ,

ಲಕ್ಷ್ಮೀಂ ಮಾಂಚ ಸುರೇಶೇಚಂ ದ್ವಯೇನ ಶರಣಂಗತಃ ।
ಮಲ್ಲೋಕ ಮಚಿರಾಲ್ಲಬ್ಧ್ವಾ ಮತ್ಸಾಯುಜ್ಯಂ ಸಗಚ್ಛತಿ ॥
ಮಾಮೇಕಾಂ ದೇವ ದೇವಸ್ಯ ಮಹಿಷೀಂ ಶರಣಂ ವ್ರಜೇತ್ ॥

ಎಂದು ಹೇಳಿರುತ್ತಾರೆ. ಮಾಮೇಕಾಂ ಎಂಬುದು ಪತ್ನ್ಯಂತರ ವ್ಯಾವೃತ್ತಿಯನ್ನು ತಿಳಿಸುತ್ತದೆ.

ಶ್ಲೋಕಾರ್ಥವೇನೆಂದರೆ, ಲಕ್ಷ್ಮಿಯನ್ನೂ ಸುರೇಶನಾದ ನನ್ನನ್ನೂ ದ್ವಯಮಂತ್ರದಿಂದ ಶರಣ ಹೊಂದಿದವನು, ಶೀಘ್ರದಲ್ಲಿಯೇ ನನ್ನ ಲೋಕವನ್ನು ಪಡೆದು ನನ್ನ ಸಾಯುಜ್ಯವನ್ನು – ಸಮಾನ ಭೋಗವನ್ನು

**ಉಪಾಯೋ ಪೇಯದಶಯೋರ್ದ್ವಯೇಽಪಿ ಶ್ರೀ ಸ್ಸಮನ್ವಿತಾ ।**
**ಇಷ್ಟಾಚ ಶೇಷಿಣಿ ದ್ವಂದ್ವೇಶೇಷವೃತ್ತಿ ರ್ಯಥೋಚಿತಾ ॥ 155 ॥**
**ಅತೋಽನನ್ಯ ಪರಾನೇಕ ಶ್ರುತಿಸ್ಮೃತ್ಯನುಸಾರತಃ ।**
**ಪತ್ನೀವಿಶಿಷ್ಟ ಏವೈಕಃಪ್ರಪತ್ತವ್ಯ ಇಹೋದಿತಃ ॥ 156 ॥**

**ಅಥ ಶರಣ ಶಬ್ದಾರ್ಥಮಾಹ**

**ಇಙ್ಗುತ್ತೈ "ಶರಣ" ಶಬ್ದತ್ತುಕ್ಕುಮ್ ದ್ವಯಾಧಿಕಾರತ್ತಿಲ್ ಶೊನ್ನಪೊರುಳೈ ಅನುಸನ್ದಿತ್ತುಕ್ಕೊಳ್ವದು ಇನ್ದಶರಣವರಣಮ್ ಅರ್ಜುನನೈಕ್ಕುರಿತ್ತು ಉಪದೇಶಿಕ್ಕಪ್ಪಟ್ಟದೇಯಾಹಿಲುಮ್**

ಪಡೆಯುತ್ತಾನೆ. ದೇವ ದೇವನ ಮಹಿಷಿಯಾದ ನನ್ನನ್ನು (ಇತರ ಮಹಿಷಿಗಳನ್ನಲ್ಲ) ಶರಣಂ ವ್ರಜೇತ್ – ಉಪಾಯವಾಗಿ ವರಿಸಬೇಕು. ಇದರಿಂದ ಲಕ್ಷ್ಮಿಗೂ ಉಪಾಯತ್ವವು ಸ್ಪಷ್ಟ.

ಹೆಚ್ಚು ಹೇಳಿ ಏನು ?- ದ್ವಯವೆಂಬ ಶರಣಮಂತ್ರದಲ್ಲಿಯೇ ಉಪಾಯೋಪೇಯ ದಶೆಗಳಲ್ಲಿ ಶ್ರೀವೈಶಿಷ್ಟ್ಯವು ಸ್ಪಷ್ಟವೆಂದು **ಉಪಾಯೋಪೇಯ ದಶಯೋಃ** ಎಂದಾರಂಭಿಸಿ ಅನುಗ್ರಹಿಸುತ್ತಾರೆ ಅದಾಗಿ ಯಥಾಕ್ರಮ್ ಉಪಾಯತ್ವ, ಉಪೇಯತ್ವ ಪ್ರತಿಪಾದಕಗಳಾದ ದ್ವಯಮಂತ್ರದ ಪೂರ್ವೋತ್ತರ ಖಂಡಗಳಲ್ಲಿ ಲಕ್ಷ್ಮಿಯು ಅಪೃಥಕ್ ಸಿದ್ಧ ವಿಶೇಷಣಳಾಗಿ ಹೇಳಲ್ಪಟ್ಟಿದ್ದಾಳೆ. **ಇಷ್ಟಾಚಶೇಷಿಣಿದ್ವಂದ್ವೇ** ಇತ್ಯಾದಿ – ಶೇಷಿದಂಪತಿಗಳಲ್ಲಿ ಶೇಷವೃತ್ತಿಯು – ಕೈಂಕರ್ಯವು ಯಥೋಚಿತವಾಗಿ ಸಮ್ಮತವು. ಆದ್ದರಿಂದ ಉಪಾಯ ದಶೆಯಲ್ಲಿಯೂ **ಶ್ರೀ ವೈಶಿಷ್ಟ್ಯವನ್ನು** ಅಕಾಮನೂ ಒಪ್ಪಬೇಕು.

ಉಕ್ತಾರ್ಥವನ್ನು **ಅತೋಽನನ್ಯ ಪರಾನೇಕ** ಎಂದಾರಂಭಿಸಿ ನಿಗಮಿಸುತ್ತಾರೆ. ಆದ ಕಾರಣ ಅನನ್ಯ ಪರಗಳಾದ ಅನೇಕ ಶ್ರುತಿಸ್ಮೃತ್ಯನುಸಾರವಾಗಿ ಪತ್ನೀ ವಿಶಿಷ್ಟನಾದ ಏಕನೇ – ಭಗವಂತನೇ ಪ್ರಪತ್ತವ್ಯನು ಉಪಾಯಭೂತನು ಎಂಬುದು "ಮಾಮೇಕಂ" ಎಂಬಲ್ಲಿ ವಿವಕ್ಷಿತವು. ಅನನ್ಯಪರಗಳಾದ **ಶ್ರುತಿಗಳು** ಯಾವುವು ಎಂದರೆ :–

i) ಚಂದ್ರಾಂ ಪ್ರಭಾಸಾಂ ಯಶಸಾಜ್ವಲಂತೀಂ ಶ್ರಿಯಂ ಲೋಕೇದೇವಜುಷ್ಟಾಮುದಾರಾಮ್ ।
ತಾಂಪದ್ಮನೇಮೀಂ ಶರಣಮಹಂ ಪ್ರಪದ್ಯೇಽಲಕ್ಷ್ಮೀರ್ಮೇನಶ್ಯತಾಂ ತಾಂವೃಣೇ ॥

(ಇದು ಪುರುಷಕಾರತ್ವ ಉಪಾಯಪರತ್ವ ಪ್ರತಿಪಾದಕಶ್ರುತಿ) ii) **ಕಾಮವತ್ಸಾಽಮೃತಂದುಹಾನಾ –** ಇಷ್ಟಾರ್ಥಗಳನ್ನು **ಕೊಡುವವಳು ಅಮೃತಂ – ಮೋಕ್ಷವನ್ನು** ದುಹಾನಾ – **ಕೊಡುವವಳು. iii) ಸಾನೋಲೋಕ ಮಮೃತಂ** ದಧಾತು – ಆ ಲಕ್ಷ್ಮಿಯು ನಮಗೆ ಮೋಕ್ಷಲೋಕವನ್ನು ಕೊಡಲಿ. ಅದರಲ್ಲಿ ಅಧಿಕಾರವಿರುವವಳನ್ನಲ್ಲವೇ ಪ್ರಾರ್ಥಿಸುತ್ತೇವೆ. ಆದ್ದರಿಂದ ಮೋಕ್ಷಪ್ರದತ್ವವು ಲಕ್ಷ್ಮಿಗೂ ಸಿದ್ಧ. iv) ಶ್ರೀಯಂವಸಾನಾ ಅಮೃತತ್ವ ಮಾಯನ್ – ಇತ್ಯಾದಿ. ಸ್ಮೃತಿಗಳು – ಸಂಸಾರಾರ್ಣವತಾರಿಣೀಂ, (**ಕಾಶ್ಯಪಸ್ಮೃತಿ**), ವಿಮುಕ್ತಿ ಫಲದಾಯಿನೀ (ವಿ. ಪುರಾಣ) ಈ ಪ್ರಮಾಣಗಳನ್ನು ಅನುಸರಿಸಿ **ಇಹೋದಿತಃ** – ಗೀತೆಯಲ್ಲಿಯೂ ಲಕ್ಷ್ಮೀ ವಿಶಿಷ್ಟನು ಪ್ರಪತ್ತವ್ಯನಾಗಿ ಹೇಳಲ್ಪಟ್ಟಿದ್ದಾನೆ.

**ಶರಣ ಶಬ್ದಾರ್ಥ.**

ಅನಂತರ 'ಶರಣ' ಶಬ್ದಾರ್ಥವನ್ನು **ಇಂಗುತ್ತೈ ಶರಣ ಶಬ್ದತ್ತುಕ್ಕುಮ್** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಇಲ್ಲಿ ಹೇಳಿರುವ "ಶರಣ" ಶಬ್ದಕ್ಕೂ ದ್ವಯಾಧಿಕಾರದಲ್ಲಿ ಹೇಳಿದ ಅರ್ಥವನ್ನು ಅನುಸಂಧಾನ ಮಾಡಿಕೊಳ್ಳತಕ್ಕದ್ದು. ಇಲ್ಲಿ ಶರಣವರಣವು ಅರ್ಜುನನನ್ನು ಕುರಿತು "ಮಾಮೇಕಂ ಶರಣಂ ವ್ರಜ" ಎಂದು ಹೇಳಿರುವುದರಿಂದ ಇದು ಎಲ್ಲರಿಗೂ ಹೇಗೆ ಅನ್ವಯಿಸುತ್ತದೆ ಎಂಬ ಶಂಕೆಗೆ, **ಇಂದ ಶರಣವರಣಮ್** ಎಂದಾರಂಭಿಸಿ ಸಮಾಧಾನವನ್ನು ಅನುಗ್ರಹಿಸುತ್ತಾರೆ. ಅದಾಗಿ ಈ ಶರಣವರಣವು **ಅರ್ಜುನನನ್ನು ಕುರಿತು**

(1) "ಅನಾಲೋಚಿತ ವಿಶೇಷಾಶೇಷ ಲೋಕಶರಣ್ಯ" ಎನ್ಗಿರಪಡಿಯೇ ಸರ್ವವಿಷಯ ಮೆನ್ರು ನಿಡವನ್ ಶ್ವೇತಾಶ್ವತರ ಶ್ರುತಿ ಪ್ರಸಿದ್ಧಮ್ (2) "ಕೃಷ್ಣಂಧರ್ಮಂಸನಾತನಮ್" 3) "ಶರಣ್ಯಂ ಶರಣಂ ಚತ್ವಾಮ್" (4) "ಯೋಗೋ ಯೋಗವಿದಾಂನೇತಾ" 5) ಅವ್ಯುತಂ ಸಾಧನಂ ಸಾಧ್ಯಮ್" ಇತ್ಯಾದಿಹಳಿಲುಮ್ ಸಙ್ಕೋಚಮಿಲ್ಲಾಮೈಯಾಲೇ ಸರ್ವವಿಷಯತ್ವಂ ವಿವಕ್ಷಿತಮ್. ಇಪ್ಪಡಿ ಇವನ್ ಶರಣಮಾಹ ವರಣೀಯನಾಂಪೋದೈಕ್ಕು ತಾನ್ ಅನನ್ಯ ಶರಣನಹೈಯೇ ವೇಣ್ಡುವದು.

### ಅಥ "ವ್ರಜ" ಶಬ್ದಾರ್ಥಮಾಹ

"ವ್ರಜ" ಎನ್ಗಿರ ಶಬ್ದಮುಮ್, "ಪ್ರಪದ್ಯೇ" ಎನ್ಗಿರ ವಿಡತ್ತಿಲ್ ಅರುದಿಯಿಟ್ಟ ಸಪರಿಕರಾತ್ಮ ನಿಕ್ಷೇಪತ್ತೈಯೇ ಸೊಲ್ಲುಹಿರದು. ಅವ್ವಿಡಮ್ ಅನುಷ್ಠಾತಾವಿನುಡೈಯ ಅನುಸಂಧಾನ ಮಾನಪಡಿ

---

ಉಪದೇಶಿಸಲ್ಪಟ್ಟಿದೆ, (1) ಅನಾಲೋಚಿತ ವಿಶೇಷಾಶೇಷ ಲೋಕಶರಣ್ಯ – ಯೋಗ್ಯತಾ ಯೋಗ್ಯತೆಯನ್ನು ಪರಾಮರ್ಶಿಸದೆ ಸಕಲ ಲೋಕಕ್ಕೂ ಶರಣ್ಯನು ಎಂದು ಹೇಳುವಂತೆ ಸರ್ವವಿಷಯವೆಂಬುದು ಶ್ವೇತಾಶ್ವತರ ಶ್ರುತಿ ಪ್ರಸಿದ್ಧ. ಅಲ್ಲಿ "ಸರ್ವಸ್ಯ ಶರಣಂ ಸುಹೃತ್" "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ", ಎಂದು ಸರ್ವರಿಗೂ ಉಪಾಯಭೂತನು, ಮೋಕ್ಷವನ್ನು ಬಯಸುವವನು ಶರಣಾಗತಿಗೆ ಅಧಿಕಾರಿ, ಎಂದು ಏರ್ಪಡುತ್ತದೆಯಲ್ಲವೇ. (2) ಕೃಷ್ಣಂಧರ್ಮಂ ಸನಾತನಮ್ ; – ಕೃಷ್ಣನು ಸನಾತನಧರ್ಮ, (3) ಶರಣ್ಯಂ ಶರಣಂಚತ್ವಾಂ –ಉಪಾಯವೂ ಪ್ರಾಪ್ಯವೂ ನೀನೇ (4 ಯೋಗೋ ಯೋಗವಿದಾಂನೇತಾ – ಮೋಕ್ಷಕ್ಕೆ ಉಪಾಯಭೂತನು, ಭಕ್ತಿಯೋಗವನ್ನು ಅನುಷ್ಠಿಸುವವರಿಗೆ ಫಲಪ್ರದನು (5) ಅವ್ಯುತಂ ಸಾಧನಂ ಸಾಧ್ಯಂ– ಎಂದಿಗೂ ನಾಶವಿಲ್ಲದ ಉಪಾಯವು, ಫಲವೂ ಅವನೇ ಇತ್ಯಾದಿಗಳಲ್ಲಿ ಸಂಕೋಚವನ್ನು ಹೇಳದೆಯಿರುವುದರಿಂದ, ಭಗವಂತನು ಸರ್ವರಿಗೂ ಉಪಾಯಭೂತನು ಎಂಬುದು ವಿವಕ್ಷಿತ. ಭಕ್ತಿಯೋಗ ನಿಷ್ಠನೂ ಇಲ್ಲಿ ವಿವಕ್ಷಿತವೇ ಎಂದರೆ, ಭಕ್ತಿಯೋಗವನ್ನು ಅವಲಂಬಿಸಿರುವುದರಿಂದ ಅವನು ಅನ್ಯಶರಣನು. ಇಪ್ಪಡಿಯಿವನ್ ಇತ್ಯಾದಿ – ಹೀಗೆ ಭಗವಂತನು ಶರಣವಾಗಿ ವರಣೀಯನಾಗುವುದಕ್ಕೆ ತಾನು ಅನನ್ಯ ಶರಣನಾಗಿರುವುದೇ ಅಪೇಕ್ಷಿತವು.

### 'ವ್ರಜ' ಶಬ್ದಾರ್ಥ.

'ವ್ರಜ' ಎನ್ಗಿರ ಶಬ್ದಮುಮ್ ಇತ್ಯಾದಿ – 'ವ್ರಜ' ಎಂಬ ಶಬ್ದವೂ 'ಪ್ರಪದ್ಯೇ' ಎಂಬಲ್ಲಿ ಅರುದಿಯಿಟ್ಟ – ವ್ಯವಸ್ಥೆಗೊಳಿಸಿದ, ಸಪರಿಕರವಾದ ಆತ್ಮನಿಕ್ಷೇಪವನ್ನು ತಿಳಿಸುತ್ತದೆ. ಅದಾಗಿ ವ್ರಜ ಧಾತುವು ಗತ್ಯರ್ಥವಾದರೂ, ಗತ್ಯರ್ಥಕ್ಕೆ ಬುದ್ಧ್ಯರ್ಥತ್ವವು ಉಂಟಾಗಿರುವುದರಿಂದ, ದ್ವಯಮಂತ್ರದಲ್ಲಿ 'ಪ್ರಪದ್ಯೇ' ಎಂಬ ಶಬ್ದದ ಹಾಗೆ "ವ್ರಜ", ಎಂಬ ಶಬ್ದಕ್ಕೂ, ಸಪರಿಕಾರಾತ್ಮ ನಿಕ್ಷೇಪ ಬುದ್ಧಿವಿಶೇಷವು ವಿವಕ್ಷಿತವೆಂದು ತಾತ್ಪರ್ಯ. ಅವ್ವಿಡಮ್ ಇತ್ಯಾದಿ – ದ್ವಯಮಂತ್ರದಲ್ಲಿ ಶರಣಾಗತಿಯನ್ನು ಅನುಷ್ಠಿಸುವುದರಿಂದ, "ಅಹಂ ಪ್ರಪದ್ಯೇ" ಎಂದು ಉತ್ತಮಪುರುಷವು ಹೇಳಲ್ಪಟ್ಟಿದೆ. ಇವ್ವಿಡಮ್ ಇತ್ಯಾದಿ – ಚರಮಶ್ಲೋಕದಲ್ಲಿ

---

1) ಶರಣಾಗತಿಗದ್ಯ 2) ಭಾರತ ಆರಣ್ಯ ಪರ್ವ 71-123

3) ಶರಣ್ಯಂ ಶರಣಂ ಚ ತ್ವಾಂ ಆಹುರ್ದಿವ್ಯಾ ಮಹರ್ಷಯಃ, ರಾಮಾಯಣ ಯುದ್ಧಕಾಂಡ 120-18

4) ವಿಷ್ಣು ಸಹಸ್ರನಾಮ – ಯೋಗೋ ಯೋಗವಿದಾಂನೇತಾ ಪ್ರಧಾನ ಪುರುಷೇಶ್ವರಃ ।
ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ ॥

5) ಅಚ್ಯುತಂ ಸಾಧನಂ ಸಾಧ್ಯಂ ಯಂ ಪಶ್ಯಂತಿ ಮನೀಷಿಣಃ ।
ಜ್ಞೇಯಾಖ್ಯಂ ಪರಮಾತ್ಮಾನಂ ವಿಷ್ಣುಂಧ್ಯಾಯನ್ನಸೀದತಿ ॥ ವಿಷ್ಣುಧರ್ಮ (32-4)

ಯಾಲೇ ಉತ್ತಮನಾಯಿತ್ತು. ಇವ್ವಿಡಂ (1) "ಶಿಷ್ಯಸ್ತೇಽಹಂ ಶಾಧಿಮಾಂ" ಎನ್ರು ಅಭಿಮುಖನಾಹ ನಿನ್ರವನೈ ಕ್ಕುರಿತ್ತು ವಿಧಿಕ್ಕಿರದಾಹೈಯಾಲೇ ಮಧ್ಯಮನಾಯಿತ್ತು. ಇವ್ವಾನುಕೂಲ್ಯ ಸಂಕಲ್ಪಾದ್ಯಂಗಾಂತರಙ್ಗಳುಮ್ ಇಙ್ಗೇ ಸೂಚಿತಮಾನಪಡಿಯ್ಯೈ ದ್ವಯತ್ತಿಲ್ಪೋಲೇ ಉಚಿತ ಪದಙ್ಗಳಿಲೇ ಕಣ್ಡುಕೊಳ್ವದು. "ಸಕೃತ್ಕೃತ ಶ್ಶಾಸ್ತ್ರಾರ್ಥಃ ಎನ್ಗಿರ ನಿರ್ಣಯತ್ತುಕ್ಕು ಉಪಾಸನತ್ತಿಲ್ ಪೋಲ್ ಇಙ್ಗು ಆವೃತ್ತಿ ವೇಣ್ಡುಮ್ಪಡಿ ಅಪವಾದ ಮಿಲ್ಲೈ.

ಇವ್ವರ್ಥಂ "ಸಕೃದೇವ ಪ್ರಪನ್ನಾಯ" ಇತ್ಯಾದಿ ವಚನತ್ತಾಲುಮ್ ಪ್ರತಿಷ್ಠಿತಮ್. ಇಪ್ಪಡಿ ಮಹೋದಾರನಾನ ಸರ್ವಶಕ್ತಿ ಪಕ್ಕಲಿಲೇ ಭರನ್ಯಾಸಂ ಪಣ್ಣುಮವನುಕ್ಕು ಸ್ವಾಭಿಪ್ರಾಯವಿಶೇಷಮೊೞಿಯ ಫಲ ವಿಳಂಬತ್ತುಕ್ಕು ಹೇತುವಿಲ್ಲೈ. ಆಹೈಯಾಲೇ ಇನ್ನ್ಯಾಸ ವಿದ್ಯೈಕ್ಕು ಪ್ರಾರಬ್ಧ ನಿವರ್ತಕತ್ವಂ ವಿಶೇಷ ಮಾಹಿರದು.

ಅತ್ಯನ್ತಪಾರತಂತ್ರ್ಯ ವಿಷಯೇ ಶರಣಂವ್ರಜ ಇತಿವಿಧಿರನುಪಪನ್ನಮಿತ್ಯಾಶಂಕಾ
ಮನೂದ್ಯ ಪರಿಹರತಿ.

ಇವ್ವಿಡತ್ತಿಲ್ ಶಿಲರ್ ಸ್ವತಂತ್ರನೈಕ್ಕುರಿತ್ತನ್ರೋ ಒನ್ನೈವಿಧಿಪ್ಪದು, ಅತ್ಯಂತ ಪರತನ್ತ್ರನಾಹ

---

(1) **"ಶಿಷ್ಯಸ್ತೇಽಹಂ ಶಾಧಿಮಾಂ"** ಎಂದು, 'ನಿನ್ನ ಶಿಷ್ಯನಾದ ನನ್ನನ್ನು ನಿಯಮಿಸು' ಎಂದು ಅಭಿಮುಖವಾಗಿ ನಿಂತ ಅರ್ಜುನನನ್ನು ಕುರಿತು ವಿಧಿಸುವುದಾದ್ದರಿಂದ 'ವ್ರಜ' ಎಂದು ಮಧ್ಯಮ ಪುರುಷವು ಹೇಳಲ್ಪಟ್ಟಿದೆ. **ಇವ್ವಾನುಕೂಲ್ಯ ಸಂಕಲ್ಪಾದಿ** ಇತ್ಯಾದಿ – ಆನುಕೂಲ್ಯ ಸಂಕಲ್ಪಾದ್ಯಂಗಗಳೂ ಈ ಚರಮ ಶ್ಲೋಕದಲ್ಲಿ ಉಚಿತವಾದ ಪದಗಳಲ್ಲಿ ಅನುಸಂಧೇಯಗಳು. ಹೇಗೆಂದರೆ – ಪ್ರಥಮಪಾದದಲ್ಲಿ ಉಪಾಯಾಂತರಗಳಲ್ಲಿ ಆಶೆಯನ್ನು ಬಿಡಬೇಕೆಂದು ಹೇಳಿರುವುದರಿಂದ ಪ್ರಾತಿಕೂಲ್ಯ ವರ್ಜನವೂ ಅರ್ಥಾತ್ ಆನುಕೂಲ್ಯ ಸಂಕಲ್ಪವೂ, ವ್ರಜಶಬ್ದದಲ್ಲಿ ಮಹಾವಿಶ್ವಾಸವೂ ಶರಣಶಬ್ದದಿಂದ ಕೂಡಿದ ವ್ರಜಶಬ್ದದಲ್ಲಿ ಗೋಪ್ತೃತ್ವವರಣವೂ, "ಮಾಶುಚಃ", ಎಂಬಲ್ಲಿ ಆಕಿಂಚನ್ಯಾನುಸಂಧಾನರೂಪ ಕಾರ್ಪಣ್ಯವೂ ಅನುಸಂಧೇಯಗಳು. **'ಸಕೃತ್ಕೃತಶ್ಶಾಸ್ತ್ರಾರ್ಥಃ** ಇತ್ಯಾದಿ – ಒಂದು ಸಲ ಅನುಷ್ಠಿಸಿದರೆ ಶಾಸ್ತ್ರಾರ್ಥವು ನೆರವೇರುತ್ತದೆ, ಎಂಬ ನಿರ್ಣಯಕ್ಕೆ ಉಪಾಸನದಂತೆ, ಪ್ರಪತ್ತಿಗೆ ಆವೃತ್ತಿಯು ಬೇಕೆಂಬ ಅಪವಾದವಿಲ್ಲ. **ಇವ್ವರ್ಥಮ್** ಇತ್ಯಾದಿ – ಈ ಅರ್ಥವು **ಸಕೃದೇವ ಪ್ರಪನ್ನಾಯ,** ಇತ್ಯಾದಿ – ವಚನಗಳಿಂದ ತೀರ್ಮಾನವಾದದ್ದು. **ಇಪ್ಪಡಿ** ಇತ್ಯಾದಿ – ಹೀಗೆ **ಮಹೋದಾರನಾದ ಸರ್ವಶಕ್ತನಾದ** ಭಗವಂತನಲ್ಲಿ ಭರನ್ಯಾಸವನ್ನು ಮಾಡುವವನಿಗೆ, **ಸ್ವಾಭಿಪ್ರಾಯ ವಿಶೇಷಮೊೞಿಯ** – ತಾನು ಗುರುತಿಸಿದ ಕಾಲ ನಿರ್ಣಯವೇ ಹೊರತು ಫಲವಿಳಂಬಕ್ಕೆ ಭಗವಂತನ ಔದಾರ್ಯದಲ್ಲಿ ನ್ಯೂನತೆಯೋ, ಶಕ್ತಿಯ ಕೊರತೆಯೋ, ಬೇರೆ ಯಾವ ಕಾರಣವೂ ಇಲ್ಲ. **ಆಹೈಯಾಲ್** ಇತ್ಯಾದಿ – ಆದ್ದರಿಂದ ಈ ನ್ಯಾಸವಿದ್ಯೆಗೆ ಪ್ರಾರಬ್ಧ ನಿವರ್ತಕತ್ವವು ವಿಶೇಷವಾದ ಅಂಶ.

**ಜೀವನ ಕರ್ತೃತ್ವ ಸಮರ್ಥನೆ; ಪಾರತಂತ್ರ್ಯದ ಸ್ವರೂಪ.**

"ಶರಣಂವ್ರಜ" ಎಂದು ಅತ್ಯಂತ ಪರತಂತ್ರನಾದ ಜೀವನನ್ನು ಕುರಿತು ಶರಣವರಣವನ್ನು ವಿಧಿಸಬಹುದೇ ಎಂದು ಕೇಳಿಕೊಂಡು ಸಮಾಧಾನವನ್ನು ಅನುಗ್ರಹಿಸುತ್ತಾರೆ ಆದಾಗಿ, **ಇವ್ವಿಡತ್ತಿಲ್ ಶಿಲರ್** ಇತ್ಯಾದಿ – ಈ ಸಂದರ್ಭದಲ್ಲಿ ಕೆಲವರು ಸ್ವತಂತ್ರನನ್ನು ಕುರಿತಲ್ಲವೇ ಒಂದು ಕೆಲಸವನ್ನು ವಿಧಿಸಬೇಕು. **ಅತ್ಯಂತ**

---

1) ಗೀತೆ 2-7

ಅಧ್ಯಾತ್ಮಶಾಸ್ತ್ರಙ್ಗಳಿಲುಮ್, ಮೂಲಮನ್ತ್ರಾದಿಕಳಿಲುಮ್ ಶಿಕ್ಷಿತನಾನ ಅಧಿಕಾರಿಯೈಕ್ಕುರಿತ್ತು 'ವ್ರಜ' ಎನ್ರೊರು ಕರ್ತವ್ಯತ್ತೈ ವಿಧಿಕ್ಕು ಮ್ಪಡಿಯೆನ್ನೆನ್ರು ಶೊಲ್ಲುವರ್ಹಳ್. ಇದು ಪಾರತಂತ್ರ ಕಾಷ್ಠೈಯೈ ಪರಾಮರ್ಶಿಯಾಮಲ್ ಶೊನ್ನಪಡಿ.

ಎಙ್ಗನೇಎನ್ನಿಲ್ (1) "ಕರ್ತಾಶಾಸ್ತ್ರಾರ್ಥವತ್ತ್ವಾತ್" (2) "ಪರಾತ್ತುತಚ್ಛ್ರುತೇಃ" ಎನ್ರು ವೇದಾಂತತ್ತಿಲ್ ಅರುದಿಯಿಟ್ಟಪಡಿಯೇ, ಇವನಕ್ಕು ಭಗವದಧೀನ ಕರ್ತೃತ್ವಮುಂಡಾಗೈಯಾಲೇ ಇವನೈಪ್ಪತ್ತ ವಿಧಿಕ್ಕಕ್ಕುರೈಯಿಲ್ಲೈ

ಅಚಿತ್ತುಕ್ಕಳ್ ಶಬ್ದಾದಿಹಳೈ ಈಶ್ವರ ನುಂಡಾಕ್ಕ ಚ್ಚುಮಕ್ಕಿರಾಪ್ಪೋಲೇ ಇವ್ವಳವು ಸ್ವಾತಂತ್ರ್ಯತ್ತೈ

---

**ಪರತಂತ್ರನಾಹ** ಇತ್ಯಾದಿ – ಅತ್ಯಂತ ಪರತಂತ್ರನಾಗಿ ಅಧ್ಯಾತ್ಮ ಶಾಸ್ತ್ರಗಳಲ್ಲಿ, ಯ ಆತ್ಮನಿ ತಿಷ್ಠನ್ ಆತ್ಮನೋ ಅಂತರಃ .... ಯ ಆತ್ಮಾನಮಂತರೋ ಯಮಯತಿ - (ಆತ್ಮನನ್ನು ಅಂತಃ ಪ್ರವಿಷ್ಟನಾಗಿ ಭಗವಂತನು ನಿಯಮಿಸುತ್ತಾನೆ. ಎಂದೂ, ಮೂಲಮಂತ್ರಾದಿಗಳಲ್ಲಿಯೂ "ನಮಃ" ಎಂಬ ಪದಗಳಲ್ಲಿ ನಮಮ ಸ್ವಾತಂತ್ರ್ಯಂ, ಇತ್ಯಾದಿಯಾಗಿಯೂ, ಅತ್ಯಂತಪರತಂತ್ರನಾಗಿ ಶಿಕ್ಷಿತನಾದ ಅಧಿಕಾರಿಯನ್ನು ಕುರಿತು "ವ್ರಜ" ಎಂದು ಶರಣವರಣವನ್ನು ಕರ್ತವ್ಯವಾಗಿ ವಿಧಿಸುವುದು ಹೇಗೆ ಎಂದು ಕೇಳುತ್ತಾರೆ. **ಇದು ಪಾರತಂತ್ರ್ಯಕಾಷ್ಠೈಯೈ** ಇತ್ಯಾದಿ – ಇದು ಪಾರತಂತ್ರ್ಯಕಾಷ್ಠೆಯನ್ನು ಪರಾಮರ್ಶಿಸದೆ ಹೇಳುವ ಮಾತು, ಎಂದು ಆಚಾರ್ಯರು ಅನುಗ್ರಹಿಸಿ, **ಎಂಗನೇ ಎನ್ನಿಲ್** – ಹೇಗೆಂದರೆ ಎಂದಾರಂಭಿಸಿ (1) **'ಕರ್ತಾಶಾಸ್ತ್ರಾರ್ಥವತ್ತ್ವಾತ್', (2) ಪರಾತ್ತುತಚ್ಛ್ರುತೇಃ, ಎನ್ರು** ಇತ್ಯಾದಿ – ವಿವರಿಸುತ್ತಾರೆ.

ಆದಾಗಿ ಜೀವನು ಕರ್ತಾ, ಏಕೆಂದರೆ "ಯಜೇತ ಸ್ವರ್ಗಕಾಮಃ," – ಸ್ವರ್ಗದಲ್ಲಿ ಆಸೆಯುಳ್ಳವನು ಯಾಗ ಮಾಡಬೇಕು, "ಮುಮುಕ್ಷುಃ ಬ್ರಹ್ಮೋಪಾಸೀತ" – ಮೋಕ್ಷದಲ್ಲಿ ಆಸೆಯುಳ್ಳವನು ಪರಬ್ರಹ್ಮವನ್ನು ಉಪಾಸನೆ ಮಾಡಬೇಕು, ಇತ್ಯಾದಿಯಾದ ಶಾಸ್ತ್ರಗಳು ಸ್ವರ್ಗಮೋಕ್ಷಾದಿ ಫಲಗಳನ್ನು ಅನುಭವಿಸುವವನನ್ನೇ ಕರ್ತೃತ್ವದಲ್ಲಿ ನಿಯೋಗಿಸುತ್ತವೆ. ಶಾಸನ ಮಾಡುವುದರಿಂದ ಶಾಸ್ತ್ರವೆಂದು ಹೆಸರು. ಶಾಸನವೆಂದರೆ ಪ್ರವರ್ತಕತ್ವವು. ಆದ್ದರಿಂದ ಶಾಸ್ತ್ರಗಳಿಗೆ ಭೋಕ್ತೃವಾದ ಚೇತನನು ಕರ್ತಾವಾದರೇನೇ ಪ್ರಯೋಜನತ್ವವು ಉಂಟಾಗುತ್ತದೆ. "ಶಾಸ್ತ್ರಫಲಂ ಪ್ರಯೋಕ್ತರಿ" ಎಂದು ಹೇಳಲ್ಪಟ್ಟಿದೆ. ಆದರೆ ಆ ಕರ್ತೃತ್ವಕ್ಕೆ 'ಪರಾತ್' – ಪರಮಾತ್ಮಾ ಹೇತು. "ಅಂತಃ ಪ್ರವಿಷ್ಟಃ ಶಾಸ್ತಾ ಜನಾನಾಗ್ಂ ಸರ್ವಾತ್ಮಾ", ಯ ಆತ್ಮನಿ ತಿಷ್ಠನ್ – – – ಯ ಆತ್ಮಾನಮಂತರೋ ಯಮಯತಿ, ಇತ್ಯಾದಿಯಾಗಿ ಶ್ರುತಿಗಳೂ, ಸರ್ವಸ್ಯ ಚಾಹಂ ಹೃದಿಸನ್ನಿವಿಷ್ಟಃ ಮತ್ತಃ ಸ್ಮೃತಿಃ ಜ್ಞಾನಮಪೋಹನಂಚ', 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ। ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ" ಇತ್ಯಾದಿಯಾಗಿ ಸ್ಮೃತಿಗಳೂ, ಹೇಳುತ್ತವೆ. ಕರ್ತೃತ್ವಕ್ಕೆ ಪರಮಾತ್ಮಾ ಕಾರಣಭೂತನು. ಈ ರೀತಿಯಲ್ಲಿ **ವೇದಾಂತತ್ತಿಲ್ ಅರುದಿಯಿಟ್ಟಪಡಿಯೇ** ಇತ್ಯಾದಿ – ವೇದಾಂತದಲ್ಲಿ ಹೇಳಿರುವ ಪ್ರಕಾರ, ಜೀವನಿಗೆ ಭಗವದಧೀನವಾದ ಕರ್ತೃತ್ವವು ಉಂಟು. ಆದ್ದರಿಂದ ಈ ಜೀವನನ್ನು ಕುರಿತು ವಿಧಿಸುವುದಕ್ಕೆ ಯಾವ ಆಕ್ಷೇಪವೂ ಇಲ್ಲ. ಜೀವನಿಗೆ ಕರ್ತೃತ್ವವನ್ನು ಒಪ್ಪಿ ಅದು ಇವನ ಪಾರತಂತ್ರ್ಯಕ್ಕೆ ವಿರೋಧವಾಗುವುದಿಲ್ಲವೇ ಎಂದರೆ, ಭಗವಂತನು ಕೊಟ್ಟ ಕರ್ತೃತ್ವವನ್ನು ಹೊರುವುದೇ ಇವನ ಪಾರತಂತ್ರ್ಯಕ್ಕೆ ಅನುಗುಣವಾದದ್ದು. ಆ ಕರ್ತೃತ್ವವನ್ನು ವಹಿಸದೇ ಇರುವುದೇ ಇವನ ಭಗವತ್ಪಾರತಂತ್ರ್ಯಕ್ಕೆ ವಿರೋಧವಾಗುತ್ತದೆ. ಇದನ್ನು **ಅಚಿತ್ತುಕ್ಕಳ್** ಇತ್ಯಾದಿ ಆರಂಭಿಸಿ ವಿವರಿಸುತ್ತಾರೆ.

---

1) ಬ್ರಹ್ಮಸೂತ್ರ 2-3-33 2) ಬ್ರಹ್ಮಸೂತ್ರ 2-3-40

ಯೆಡುತ್ತು ಚ್ಚುಮುಕ್ಕೈಯುಮ್ ಇವನುಕ್ಕು ಭಗವತ್ಪಾರತಂತ್ರ್ಯ ಕಾಷ್ಠೈಯಿರುನ್ದಪಡಿ.

ಇವನುಕ್ಕೊರು ವ್ಯಾಪಾರಮುಮ್ ಕರ್ತೃತ್ವಮಿಲ್ಲೈ ಎನ್ನಿಲ್ ಪ್ರಕೃತ್ಯವಿದ್ಯಾದಿಹಳುಕ್ಕು ಕರ್ತೃತ್ವಂ ಶೊಲ್ಲಹಿರ ಸಿದ್ಧಾನ್ತ ತುಲ್ಯಮಾಮ್. ಕರ್ತೃತ್ವಂ ಸ್ವಾಧೀನಮೆನ್ನಿಲ್ ಸರ್ವಾತ್ಮ ನಿಯನ್ತಾವೊರು ವನೆನ್ಗಿರವರ್ಥಂ ಕಿಡೈಯಾಮೈಯಾಲೇ ನಿರೀಶ್ವರ ಸಿದ್ಧಾನ್ತಪ್ಪಡಿಯಾಮ್.

ಈಶ್ವರಾಧೀನ ಮಾಹಮರುಮ್ ಕರ್ತೃತ್ವಂ ತಾನುಮ್, ಜ್ಞಾತೃತ್ವಮಾತ್ರಮೆನ್ನಿಲ್ ಪುರುಷಾರ್ಥ ಸಂಪಾದನರುಚಿಯುಮ್, ತದುಪಾಯ ಪ್ರವೃತ್ತಿಯುಮ್ ತವಿರಪ್ರಸಙ್ಗಿಕ್ಕುಮ್.

ಜ್ಞಾನಮುಂ ಅದಿನ್ ಅವಸ್ಥಾ ವಿಶೇಷಮಾನ ಇಚ್ಛೈಯುಮೇ ಉಳ್ಳದು, ವೇರೊರು ವ್ಯಾಪಾರಮಿಲ್ಲೈಯೆನ್ನಿಲುಂ ದೃಷ್ಟಾದೃಷ್ಟಾರ್ಥಙ್ಗಳಾನ ವೊರು ಉಪಾಯಙ್ಗಳೈಯುಂ ಸ್ವಯಂಪ್ರಯೋಜನ ಮಾನ ಕೈಙ್ಕರ್ಯಙ್ಗಳೈಯುಮ್ ಅನುಷ್ಠಿಕ್ಕವಿರಗಿಲ್ಲೈ. ಆಹೈಯಾಲೇ ಜ್ಞಾನ ಚಿಕೀರ್ಷಾ ಪ್ರಯತ್ನ ಙ್ಗಳ್ ಮೂನ್ರುಮ್ ಆತ್ಮಾವುಕ್ಕು ಉಣ್ಡು. ಇದಿಲ್ ಚಿಕೀರ್ಷಾ ಪ್ರಯತ್ನಙ್ಗಳ್ ಜ್ಞಾನತ್ತಿನುಡೈಯ

---

ಆದಾಗಿ ಅಚೇತನ ಪದಾರ್ಥಗಳು ಶಬ್ದಾದಿ ವಿಷಯಗಳನ್ನು ಈಶ್ವರನು ಉಂಟುಮಾಡಿ ಧರಿಸಿರುವಂತೆ, ಇಷ್ಟು ಸ್ವಾತಂತ್ರ್ಯವನ್ನು ಅಂಗೀಕರಿಸಿ ಧರಿಸುವುದೂ ಇವನಿಗೆ ಭಗವತ್ಪಾರತಂತ್ರ್ಯಕಾಷ್ಠೆಯು ಇರುವ ರೀತಿ. **ಇವನುಕ್ಕು ಒರುವ್ಯಾಪಾರಮುಮ್** ಇತ್ಯಾದಿ – ಜೀವನಿಗೆ ಕರ್ತೃತ್ವವನ್ನು ಒಪ್ಪಿ ಅದು ಪರಾಧೀನವೆಂದು ಹೇಳುವುದಕ್ಕಿಂತ, ಜೀವನಿಗೆ ಯಾವ ರೀತಿಯಲ್ಲಿಯೂ ಕರ್ತೃತ್ವವೇ ಇಲ್ಲವೆಂದು ಹೇಳುವುದು ಯುಕ್ತವಲ್ಲವೇ ಎಂದರೆ, ಪ್ರಕೃತಿ, ಅವಿದ್ಯೆಗಳಿಗೆ ಕರ್ತೃತ್ವವನ್ನು ಹೇಳುವ ಸಾಂಖ್ಯ, ಅದ್ವೈತಮತಗಳಿಗೆ ಸಮಾನವಾಗುತ್ತದೆ. **ಕರ್ತೃತ್ವಮ್** ಇತ್ಯಾದಿ -- ಕರ್ತೃತ್ವವು ಸ್ವಾಧೀನವೆಂದರೆ, ಸರ್ವಾತ್ಮರುಗಳಿಗೂ ನಿಯಂತಾ ಒಬ್ಬನೆಂಬ ಅರ್ಥವು "ಯ ಇಮಂಚ ಲೋಕಂ ಪರಂಚ ಲೋಕಂ ಸರ್ವಾಣಿಚ ಭೂತಾನಿ ಯೋऽಂತರೋ ಯಮಯತಿ" ಎಂದು ಹೇಳಲ್ಪಡುವ ಶ್ರುತ್ಯರ್ಥವು ಘಟಿಸದೆ **ನಿರೀಶ್ವರ ಸಿದ್ಧಾಂತಪ್ಪಡಿಯಾಮ್** – ನಿರೀಶ್ವರ ಮೀಮಾಂಸಕರ ಸಿದ್ಧಾಂತಕ್ಕೆ ಸದೃಶವಾಗುತ್ತದೆ. ಅನಂತರ ಮೇಲೆ ಹೇಳಿದ ಪರಾಧೀನ ಕರ್ತೃತ್ವವನ್ನು **ಈಶ್ವರಾಧೀನಮಾಹಮರುಂ** ಇತ್ಯಾದಿ ವಿಚಾರಿಸುತ್ತಾರೆ. ಆದಾಗಿ ಜ್ಞಾನಚಿಕೀರ್ಷಾಪ್ರಯತ್ನಾಶ್ರಯತ್ವವು ಕರ್ತೃತ್ವ ಸ್ವರೂಪವಾಗಿರುವಾಗ, ಭಗವದಧೀನವಾಗಿ ಬರುವ ಕರ್ತೃತ್ವವು ಕೇವಲ ಜ್ಞಾತೃತ್ವಮಾತ್ರವೆಂದರೆ, ಇಚ್ಛೆಯಿಲ್ಲದಿರುವುದರಿಂದ **ಪುರುಷಾರ್ಥ ಸಂಪಾದನ ರುಚಿಯುಮ್** ಇತ್ಯಾದಿ – ಪುರುಷಾರ್ಥವನ್ನು ಸಂಪಾದಿಸಬೇಕೆಂಬ ಆಸೆಯು, ಇಲ್ಲದೆ ಹೋಗುತ್ತದೆ. ಪ್ರಯತ್ನವಿಲ್ಲದಿರುವುದರಿಂದ ಆ ಪುರುಷಾರ್ಥವನ್ನು ಸಾಧಿಸಿಕೊಡುವ **ತದುಪಾಯಪ್ರವೃತ್ತಿಯೂ**– ಉಪಾಯದಲ್ಲಿ ಪ್ರವೃತ್ತಿಯೂ ಇಲ್ಲದೆ ಹೋಗುತ್ತದೆ. **ಜ್ಞಾನಮುಮ್ ಅದಿನ್ ಅವಸ್ಥಾ ವಿಶೇಷಮಾನ** ಇತ್ಯಾದಿ – ಜ್ಞಾನವೂ ಅದರ ಅವಸ್ಥಾ ವಿಶೇಷವಾದ ಇಚ್ಛೆಯು ಮಾತ್ರ ಇದೆ. ಬೇರೆ ಯಾವ ವ್ಯಾಪಾರವೂ ಇಲ್ಲವೆಂದರೆ, **ದೃಷ್ಟಾದೃಷ್ಟಂಗಳಾನ** ಇತ್ಯಾದಿ – ಕರ್ತೃತ್ವವು ಪ್ರವೃತ್ತಿ ಘಟಿತವಲ್ಲದೆ ಇರುವುದರಿಂದ, ಯಾವ ವಿಧವಾದ ಉಪಾಯಾನುಷ್ಠಾನವನ್ನೂ, ಸ್ವಯಂ ಪ್ರಯೋಜನವಾದ (ಫಲವಾದ) ಯಾವ ಕೈಂಕರ್ಯಗಳನ್ನೂ ಅನುಷ್ಠಿಸಲು ವಿರಹಿಲ್ಲೈ – ದಾರಿಯಿಲ್ಲ. **ಆಹೈಯಾಲ್** ಇತ್ಯಾದಿ ಜ್ಞಾನ ಚಿಕೀರ್ಷಾ ಪ್ರಯತ್ನಗಳು ಮೂರೂ ಆತ್ಮಾವಿಗೆ ಉಂಟು.

**ಇದಿಲ್ ಚಿಕೀರ್ಷಾ ಪ್ರಯತ್ನಂಗಳ್** – ಇತ್ಯಾದಿ ಚಿಕೀರ್ಷಾ – ಕೆಲಸ ಮಾಡಲು ಇಚ್ಛೆ, ಪ್ರಯತ್ನ-ವ್ಯಾಪಾರ, ಚಿಕೀರ್ಷಾ ಪ್ರಯತ್ನಗಳು ಜ್ಞಾನದ ಅವಸ್ಥಾ ವಿಶೇಷಗಳು ಎಂಬುದನ್ನು ವೇದಾರ್ಥ ಸಂಗ್ರಹ

ಅವಸ್ಥಾವಿಶೇಷಙ್ಗಳೆನ್ರುಮಿಡತ್ತೈ ವೇದಾರ್ಥಸಂಗ್ರಹತ್ತಿಲ್ ಅರುಳಿಚ್ಚೆಯ್ದ ಲಾಘವೋಕ್ತಿಯಾಲೇ ಕಂಡುಕೊಳ್ವದು.

**ಕರ್ತೃತ್ವಂ ದ್ವಿವಿಧಮ್**

ಕ್ರಿಯಾಶ್ರಯತ್ವರೂಪ ಕರ್ತೃತ್ವಂ ಚೇತನಾಚೇತನ ಸಾಧರಣಮ್. ಪ್ರಯತ್ನಾಶ್ರಯತ್ವ ರೂಪಮಾನ ಕರ್ತೃತ್ವಂ ಚೇತನೈಕಾಂತಮ್.

ಪ್ರಯತ್ನಮಾವದು ? ಶರೀರಾದಿಪ್ರೇರಣ ಹೇತುವಾನ ಬುದ್ಧಿವಿಶೇಷಮ್. ಜ್ಞಾನಮಾತ್ರತ್ತುಕ್ಕು ಆಶ್ರಯಮಾನಪೋದುಮ್, ಭೋಗಮಾತ್ರತ್ತುಕ್ಕು ಆಶ್ರಯಮಾನಪೋದುಮ್ ಕ್ರಿಯಾಶ್ರಯತ್ವ ಮಾತ್ರಮಾನ ಸಾಮಾನ್ಯಕರ್ತೃತ್ವಮೇ ಉಳ್ಳದು ಒನ್ರೈತ್ತನ್ಬುದ್ಧಿಯಾಲೇ ಉತ್ಪಾದಿಕ್ಕುಂಪೋದು ಪ್ರಯತ್ನಾಶ್ರಯತ್ವರೂಪಮಾನ ಕರ್ತೃತ್ವಮ್.

**ಉಪಾಯಾನುಷ್ಠಾನೇಪಿ ಪ್ರಯತ್ನಾಶ್ರಯತ್ವರೂಪ ಕರ್ತೃತ್ವಮಸ್ತಿ**

ಇಪ್ಪಡಿ ಪಟ್ಟ ಕರ್ತೃತ್ವಂ ಕೈಙ್ಕರ್ಯಮಾತ್ರತ್ತಿಲೇ ಯೆನ್ಹೈಯುಮ್ ಉಚಿತಮನ್ರು. ಅಙ್ಗಂ

---

ವಲ್ಲಿ ಭಗವದ್ಭಾಷ್ಯಕಾರರು ಕೃಪೆಮಾಡಿ ಹೇಳಿರುವ, ಲಾಘವೋಕ್ತಿಯಿಂದ ತಿಳಿದುಕೊಳ್ಳುವುದು. ನೈಯಾಯಿಕರು ಚಿಕೀರ್ಷಾ ಪ್ರಯತ್ನಗಳನ್ನು ಪೃಥಕ್ ಗುಣಗಳನ್ನಾಗಿ ಒಪ್ಪಿರುವುದು ಅಧಿಕ. ಅವುಗಳನ್ನು ಅವಸ್ಥಾವಿಶೇಷಾ ಪನ್ನವಾದ ಜ್ಞಾನವನ್ನಾಗಿಯೇ ಅಂಗೀಕರಿಸುವುದು ಲಾಘವೋಕ್ತಿ. ಕರ್ತೃತ್ವವು ಎರಡು ವಿಧ. ಕ್ರಿಯಾ ಶ್ರಯತ್ವರೂಪ ಕರ್ತೃತ್ವ. ಪ್ರಯತ್ನಾಶ್ರಯತ್ವರೂಪ ಕರ್ತೃತ್ವ. **ಕ್ರಿಯಾಶ್ರಯತ್ವರೂಪಮಾನ** ಇತ್ಯಾದಿ – "ರಥೋಗಚ್ಛತಿ" ಎಂಬಲ್ಲಿ ಗಮನರೂಪವಾದ ಕ್ರಿಯೆಗೆ ಆಶ್ರಯತ್ವರೂಪವಾದ ಕರ್ತೃತ್ವವು ರಥಕ್ಕೆ ಉಂಟು. ಈ ರೀತಿಯಾದ ಕ್ರಿಯಾಶ್ರಯತ್ವರೂಪ ಕರ್ತೃತ್ವವು ಚೇತನಾ ಚೇತನ ಸಾಧಾರಣ. **ಪ್ರಯತ್ನಾಶ್ರಯತ್ವ** ಇತ್ಯಾದಿ – ಪ್ರಯತ್ನಕ್ಕೆ ಆಶ್ರಯವಾದ ಕರ್ತೃತ್ವವು ಚೇತನನಿಗೆ ಮಾತ್ರ ಉಂಟು. **ಪ್ರಯತ್ನಮಾವದು**– ಪ್ರಯತ್ನವೆಂದರೆ ಶರೀರಾದಿ ಪ್ರೇರಣಕ್ಕೆ ಕಾರಣವಾದ ಬುದ್ಧಿವಿಶೇಷ. ಆದಾಗಿ ಶರೀರೇಂದ್ರಿಯಾದಿ ವ್ಯಾಪಾರ ಜನಕವಾದ ಜ್ಞಾನತ್ವವು ಪ್ರಯತ್ನತ್ವವೆಂದರ್ಥ. ಚೇತನನಿಗೆ ಸರ್ವತ್ರ ಪ್ರಯತ್ನಾಶ್ರಯತ್ವರೂಪ ವ್ಯಾಪಾರವೇ ಸಂಭವಿಸುವಾಗ, ಕ್ರಿಯಾಶ್ರಯರೂಪ ಕರ್ತೃತ್ವಕ್ಕೆ ಆಶ್ರಯತ್ವವು ಹೇಗೆ ಎಂದರೆ **ಜ್ಞಾನಮಾತ್ರತ್ತುಕ್ಕು** ಇತ್ಯಾದಿ – ಜ್ಞಾನ ಮಾತ್ರಕ್ಕೆ ಆಶ್ರಯವಾದಾಗಲೂ, ಭೋಗಮಾತ್ರಕ್ಕೆ ಆಶ್ರಯವಾದಾಗಲೂ ಕ್ರಿಯಾಶ್ರ ಯತ್ವವಾದ ಸಾಮಾನ್ಯ ಕರ್ತೃತ್ವ. ಭುಂಕ್ತೇ – "ಊಟ ಮಾಡುತ್ತಾನೆ" ಎಂಬಲ್ಲಿ ಭೋಗಕ್ಕೆ ಆಶ್ರಯವಾದ ಕರ್ತೃತ್ವ. ಎರಡು ಸ್ಥಲಗಳಲ್ಲಿಯೂ ಆಖ್ಯಾತಕ್ಕೆ ಆಶ್ರಯತ್ವವನ್ನೇ ಅರ್ಥವಾಗಿ ಸ್ವೀಕರಿಸಬೇಕಾದ್ದರಿಂದ, ಅಂತಹ ಸ್ಥಲಗಳಲ್ಲಿ ಧಾತ್ವರ್ಥವಾದ ಜ್ಞಾನಾದಿರೂಪ ಕ್ರಿಯಾಶ್ರಯತ್ವವನ್ನೂ ಅರ್ಥವಾಗಿ ಅಂಗೀಕರಿಸಬೇಕಾ ದ್ದರಿಂದ ಕ್ರಿಯಾಶ್ರಯತ್ವರೂಪ ಕರ್ತೃತ್ವವೇ ಇರುತ್ತದೆ. ಆದಾಗಿ ಜಾನಾತಿ – ತಿಳಿಯುತ್ತಾನೆ ಜ್ಞಾನಮಾತ್ರಕ್ಕೆ ಆಶ್ರಯವಾದ ಕರ್ತೃತ್ವ, ಚೇತನನಿಗೂ ಉಂಟು. ಅಂದರೆ ಚೇತನನಿಗೆ ಸಾಧಾರಣವಾದದ್ದು. ಪ್ರಯತ್ನಾ ಶ್ರಯತ್ವರೂಪ ಚೇತನೈಕಾಂತ ಕರ್ತೃತ್ವವನ್ನು ಒನ್ರೈತ್ತನ್ **ಬುದ್ಧಿಯಾಲೇ** ಎಂದಾರಂಭಿಸಿ ವಿವರಿಸುತ್ತಾರೆ. ಆದಾಗಿ ಒಂದು ಕಾರ್ಯವನ್ನು ತನ್ನ ಬುದ್ಧಿಯಿಂದ – ಇಚ್ಛಾವಸ್ಥಾಪನ್ನ ಜ್ಞಾನದಿಂದ, ನೆರವೇರಿಸುವಾಗ ಪ್ರಯತ್ನಾಶ್ರಯತ್ವರೂಪ ಕರ್ತೃತ್ವವು ಏರ್ಪಡುತ್ತದೆ. ಇಪ್ಪಡಿಪ್ಪಟ್ಟ ಇತ್ಯಾದಿ – ಇಂತಹ ಇಚ್ಛಾಪೂರ್ವಕ ಕರ್ತೃತ್ವವು ಫಲದಶೆಯಲ್ಲಿ ಕೈಂಕರ್ಯ ವಿಷಯದಲ್ಲಿ ಮಾತ್ರ ಸ್ವರೂಪಾನುಗುಣವಾಗಿ ಉಂಟಾಗುತ್ತದೆ ಎಂಬುದು ಉಚಿತವಲ್ಲ. **ಅಂಗುಮ್** ಇತ್ಯಾದಿ – ಅಲ್ಲಿಯೂ ಭಗವತ್ಪ್ರೀತಿ ಎಂಬ ಒಂದು ಪ್ರಯೋಜನವನ್ನು ಉದ್ದೇಶಿಸಿ

ಭಗವತ್ಪ್ರೀತಿಯೆನ್ನೊರು ಪ್ರಯೋಜನತ್ತೈ ಉದ್ದೇಶಿತ್ತು ಉಪಾಯಾನುಷ್ಠಾನಂ ಪಣ್ಣಿನಾನಾಯಿರೇ ಯಿರುಪ್ಪದು.

ಪ್ರಯತ್ನಾಶ್ರಯತ್ವರೂಪ ಕರ್ತೃತ್ವಂ ಬಂಧ ಹೇತುತ್ವೇ ಸತಿ ತ್ಯಾಜ್ಯಮ್

ಆನಪಿನ್ಬು ಕರ್ತೃತ್ವತ್ತಿಲ್ ಬಂಧಹೇತುವಾನ ಆಕಾರಮೇ ತ್ಯಾಜ್ಯಮ್. ಅದು ಏದು ಎನ್ನಿಲ್ ಈಶ್ವರನ್ ಕೊಡುತ್ತ ಜ್ಞಾನಶಕ್ತ್ಯಾದಿಹಳೈಯುಮ್ ಕರಣ ಕಳೇಬರಾದಿಹಳೈಯುಮ್ ಕೊಂಡು ಅವನ್ ಪ್ರೇರಕನುಮಾಯ್ ಧಾರಕನುಮಾಯ್, ಫಲಿಯುಮಾಯ್ಕ್ಕೊಂಡು ಸಹಕರಿಕ್ಕ ಪ್ರವರ್ತಿಕ್ಕಿರ ತನ್ನೈ, ಇದುಕ್ಕು ವಿಪರೀತಮಾಹ ಅನುಸಂಧಿತ್ತಿರುಕ್ಕೈಯುಮ್, ಇವ್ವನು ಸಂಧಾನತ್ತಿಲ್ ತಿರುತ್ತ ಮುಣ್ಡೇಯಾಹಿಲುಮ್. ಇದಿಲೇ ಪ್ರಯೋಜನಾಂತರತ್ತೈ ಯಿಡುಕ್ಕಿ ಅನುಷ್ಠಿಕ್ಕೈಯುಮ್ ಬಂಧಕಮ್. ಭಕ್ತಿಪ್ರಪತ್ತಿಹಳ್ ತಾಮುಮ್ ಪ್ರಯೋಜನಾಂತರ ಪರನುಕ್ಕು ಬಂಧಕಮಾಯಿರೇ ಇರುಪ್ಪದು. ಆಹೈಯಾಲ್ ಸ್ವಾಭಾವಿಕ ಕೈಂಕರ್ಯಾರ್ಥಿಯಾಯ್ ಅನನ್ಯಪ್ರಯೋಜನನಾಯಿರುಕ್ಕುಮವನುಕ್ಕುಮ್, ಫಲದಶೈಯಿಲ್ ಕರ್ತೃತ್ವಂಪೋಲೇ, ಉಪಾಯದಶೈಯಿಲ್ ಕರ್ತೃತ್ವಮುಮ್ ವಿರುದ್ಧಮನ್ರು.

ಫಲದಶಾ ಸಂಸಾರದಶಾ ಕರ್ತೃತ್ವಯೋಃ ತಾರತಮ್ಯಕಥನಮ್

ಫಲದಶೈಯಿಲ್ ವಿವಿಧ ವಿಚಿತ್ರ ಕೈಂಕರ್ಯ ಕರ್ತೃತ್ವಮ್ ಕೇವಲಂ ಈಶ್ವರೇಚ್ಛಾ ವೈಚಿತ್ರಿಯೋಡೇ ಪೊರುನ್ದಿನ ಸ್ವೇಚ್ಛೈಯಾಲೇ ಯಾಯಿರುಕ್ಕುಮ್. ಸಂಸಾರ ದಶೈಯಿಲುಳ್ಳ ಕರ್ತೃತ್ವಮೆಲ್ಲಾಮ್

---

ಉಪಾಯಾನುಷ್ಠಾನವನ್ನು ಮಾಡಿದವನಾಗಿಯಲ್ಲವೇ ಇರುವುದು. ಅಂದರೆ ಕೈಂಕರ್ಯವೂ ಭಗವತ್ಪ್ರೀತಿ ಹೇತುವಾದ್ದರಿಂದ ಉಪಾಯವಾಗಿ ಪರ್ಯವಸಾನವಾಗುವುದೆಯಾದ್ದರಿಂದ ಉಪಾಯ ಕರ್ತೃತ್ವವು ಸ್ವರೂಪ ವಿರುದ್ಧವೆಂದು ಹೇಳುವವರಿಗೆ, ಕೈಂಕರ್ಯವೂ ಲಭಿಸುವುದಿಲ್ಲ. ಆನಪಿನ್ಬು ಇತ್ಯಾದಿ ಹೀಗೆ ಉಪಾಯ ಕರ್ತೃತ್ವವು ಇವನ ಪಾರತಂತ್ರ್ಯ ಸ್ವರೂಪಕ್ಕೆ ಅನುಗುಣವಾದ್ದರಿಂದ, ಕರ್ತೃತ್ವದಲ್ಲಿ ಬಂಧಹೇತುವಾದ ಆಕಾರವೇ ತ್ಯಾಜ್ಯವಾದದ್ದು. **ಅದೇದೆನ್ನಿಲ್** – ಆ ಬಂಧಹೇತುವಾದ ಆಕಾರವು ಯಾವುದೆಂದರೆ, **ಈಶ್ವರನ್ ಕೊಡುತ್ತ ಇತ್ಯಾದಿ** – ಈಶ್ವರನು ಕೊಟ್ಟ ಜ್ಞಾನಶಕ್ತ್ಯಾದಿಗಳನ್ನೂ ಕರಣ ಕಳೇಬರಗಳನ್ನೂ ಉಪಯೋಗಿಸಿಕೊಂಡು, **ಅವನು** ಪ್ರೇರಕನಾಗಿಯೂ ಧಾರಕನಾಗಿಯೂ ಫಲಿಯಾಗಿಯೂ ಇದ್ದುಕೊಂಡು ಸಹಕರಿಸಲು ಪ್ರವರ್ತಿಸುವ **ತನ್ನನ್ನು** ಇದಕ್ಕೆ ವಿಪರೀತವಾಗಿ ನಾನು ಸ್ವತಂತ್ರನು, ಎಂದು ಅನುಸಂಧಾನ ಮಾಡುವುದೂ, ಈ ಅನುಸಂಧಾನದಲ್ಲಿ **ತಿರುತ್ತಮ್** – ವೈಶದ್ಯವು ಉಂಟಾಗಿದ್ದರೂ ಅಂದರೆ ಭಗವಂತನು ಪ್ರೇರಕನಾಗಿ ಪ್ರವರ್ತಿಸುವುದಾಗಿ ತಿಳಿದಿದ್ದರೂ, ಇದರಲ್ಲಿ ಐಶ್ವರ್ಯ ಕೈವಲ್ಯಾದಿ ಪ್ರಯೋಜನಾಂತರಗಳನ್ನು, ಇಡುಕ್ಕಿ – ಸೇರಿಸಿಕೊಂಡು ಅನುಷ್ಠಿಸುವುದೂ ಬಂಧಕ. **ಭಕ್ತಿ ಪ್ರಪತ್ತಿಹಳ್ ತಾಮುಮ್** ಇತ್ಯಾದಿ – ಭಕ್ತಿಪ್ರಪತ್ತಿಗಳೂ ಪ್ರಯೋಜನಾಂತರಗಳನ್ನು ಅಪೇಕ್ಷಿಸಿ, ಅನುಷ್ಠಿಸುವವನಿಗೆ ಬಂಧಕಗಳು **ಆಹೈಯಾಲ್** ಇತ್ಯಾದಿ – ಪ್ರಯೋಜನಾಂತರವಾದ ಕರ್ತೃತ್ವವೇ ಬಂಧಕವಾಗಿ ತ್ಯಾಜ್ಯವಾದ್ದರಿಂದ, ಸ್ವಾಭಾವಿಕ ಕೈಂಕರ್ಯಾರ್ಥಿಯಾಗಿ ಅನನ್ಯ ಪ್ರಯೋಜನನಾಯಿರುಕ್ಕುಮವನಿಗೂ, **ಫಲದಶೈಯಿಲ್ ಕರ್ತೃತ್ವಮ್ ಪೋಲೇ** – ಇತ್ಯಾದಿ ಕೈಂಕರ್ಯದಶೆಯಲ್ಲಿ ಕರ್ತೃತ್ವದ ಹಾಗೆ, ಉಪಾಯದಶೆಯಲ್ಲಿ ಕರ್ತೃತ್ವವು ಸ್ವರೂಪ ವಿರುದ್ಧವಲ್ಲ ಸ್ವರೂಪಕ್ಕೆ ಅನುಗುಣವಾದದ್ದೇ.

**ಫಲ ದಶೈಯಿಲ್** ಇತ್ಯಾದಿ – ಕೈಂಕರ್ಯ ದಶೆಯಲ್ಲಿ ವಿವಿಧ ವಿಚಿತ್ರವಾದ ಕೈಂಕರ್ಯ ರೂಪ ಕರ್ತೃತ್ವವು ಕೇವಲ ಭಗವಂತನ ಇಚ್ಛಾ ವೈಚಿತ್ರ್ಯೊಡನೆ ಕೂಡಿದ ಸ್ವೇಚ್ಛೆಯಿಂದ ಮಾಡತಕ್ಕದ್ದು. **ಸಂಸಾರ**

ಕರ್ಮಾನುರೂಪಮಾಹ ಈಶ್ವರನ್ ಪರಿಣಮಿಪ್ಪಿತ್ತ ಸತ್ವರಜಸ್ತಮಸ್ಸುಕ್ಕಳೈ ಉಪಾಧಿಯಾಹಕ್ಕೊಂಡು ಬಹುವಿಧಮಾಯಿರುಕ್ಕುಮ್.

ಸಂಸಾರದಶಾಯಾಂ ಕರ್ತೃತ್ವಂ ಕದಾ ಬಂಧಕಂ, ಕದಾಮೋಕ್ಷಹೇತುಕಮ್ ?

ಇದಿಲ್ ರಜಸ್ಸಾಲುಮ್, ತಮಸ್ಸಾಲುಮ್, ಪ್ರಯೋಜನಾಂತರ ಸಂಗಹೇತುವಾನ ಸತ್ವತ್ತಾಲುಮ್, ವರುಮ್ ಕರ್ತೃತ್ವಮ್ ಬಂಧಕಮ್. ಭಗವತ್ಪ್ರಾಪ್ತಿಯಿಲೇ ಸಂಗತ್ತೈ ಪುಣರ್ಕ್ಕುಮ್ ಪ್ರಕೃಷ್ಟ ಸತ್ವವಿಶೇಷ ಮಡಿಯಾಹ ವರುಮ್ ಕರ್ತೃತ್ವಂ ಮೋಕ್ಷಕಾರಣಮ್. ಇಗ್ಗುಣ ತ್ರಯತ್ತೋಡು ತುವಕ್ಕತ್ತಿರುಕ್ಕುಮ್ ಮುಕ್ತದಶೈಯಿಲ್ ಕರ್ತೃತ್ವಮ್.

ಕರ್ತೃತ್ವಸ್ಯ ಭಾವಾಭಾವ ಬೋಧಕ ಪ್ರಮಾಣಾನಾಂ ವಿರೋಧೋನಾಸ್ತಿ

ಇಪ್ಪಡಿ ಇರುಕ್ಕೈಯಾಲೇ ಆತ್ಮಾವುಕ್ಕು ಕರ್ತೃತ್ವಮಿಲ್ಲೈ ಎನ್ನಿರ ವಾಕ್ಯಙ್ಗಳುಕ್ಕುಮ್, ಕರ್ತೃತ್ವ ಮುಂಡೆನ್ನಿರ ವಾಕ್ಯಙ್ಗಳುಕ್ಕುಮ್, ವಿಷಯವ್ಯವಸ್ಥೈ ಯುಂಡಾಹೈಯಾಲೇ ವಿರೋಧ ಮಿಲ್ಲೈ. ಅದೇಙ್ಗನೇ ಎನ್ನಿಲ್ ? ಕರ್ತೃತ್ವಮಿಲ್ಲೈ ಎನ್ನಿರವಾಕ್ಯಙ್ಗಳ್ ಈಶ್ವರಾಧೀನಮಾಯುಮ್, ತದಾಯತ್ತ ಪ್ರಕೃತಿಗುಣಾಧೀನಮಾಯುಮ್, ವರುಮ್ ಕರ್ತೃತ್ವತ್ತೈ, ನಿರಪೇಕ್ಷಮೆನ್ರು ನಿನೈಕ್ಕಲಾಹಾದೆನ್ಗಿರನ. ಕರ್ತೃತ್ವಮುಣ್ಡೆನ್ನಿರ ವಾಕ್ಯಙ್ಗಳ್ ಈಶ್ವರೇಚ್ಛಾದಿಹಳ್ ಅಡಿಯಾಹವೇ ವಂದ ಜ್ಞಾನತ್ತುಕ್ಕುಮ್ ಇವನೇ ಆಶ್ರಯಮೆನ್ರು ಮಿಡತ್ತೈ ಚೊಲ್ಲುಹಿರನ.

---

ದಶೈಯಿಲುಳ್ಳ ಇತ್ಯಾದಿ – ಸಂಸಾರ ದಶೆಯಲ್ಲಿ ಏರ್ಪಡತಕ್ಕ ಸಾಂಸಾರಿಕ ವ್ಯಾಪಾರ ಕರ್ತೃತ್ವವೂ ಉಪಾಯಾನುಷ್ಠಾನ ಕರ್ತೃತ್ವವೂ ಕರ್ಮಾನುಗುಣವಾಗಿ ಈಶ್ವರನು ಪರಿಣಮಿಸಿದ ಸತ್ತ್ವ ರಜಸ್ತಮೋ ಗುಣಗಳನ್ನು ಕಾರಣವಾಗಿ ಕೊಂಡು ಪುರುಷಭೇದದಿಂದ ಬಹುವಿಧವಾಗಿರುತ್ತದೆ. ವಿಚಿತ್ರವಾಗಿರುತ್ತದೆ ಎಂದರ್ಥ. **ಇದಿಲ್** ಇತ್ಯಾದಿ – ಈ ಸಾಂಸಾರಿಕ ದಶೆಯಲ್ಲಿ ರಜಸ್ತಮೋ ಗುಣಗಳಿಂದ ಪ್ರಯೋಜನಾಂತರ ಸಂಗಹೇತುವಾದ ಸತ್ವ ಗುಣದಿಂದ ಉಂಟಾಗುವ ಕರ್ತೃತ್ವವು ಬಂಧಕ. **ಭಗವತ್ಪ್ರಾಪ್ತಿಯಿಲೇ** ಇತ್ಯಾದಿ – ಭಗವಂತನ ಪ್ರಾಪ್ತಿಯಲ್ಲಿ ಸಂಗವನ್ನು **ಪುಣರ್ಕ್ಕುಮ್** – ಉಂಟು ಮಾಡುವ ಪ್ರಕೃಷ್ಟ ಸತ್ವ ಗುಣದ ದಸೆಯಿಂದ ಏರ್ಪಡುವ ಕರ್ತೃತ್ವವು ಮೋಕ್ಷಕ್ಕೆ ಕಾರಣವಾಗುತ್ತದೆ. **ಇಗ್ಗುಣತ್ರಯತ್ತೋಡು** ಇತ್ಯಾದಿ – ಈ ಸತ್ವರಜಸ್ತಮೋ ಗುಣಗಳೊಡನೆ **ತುವಕ್ಕು** – ಸಂಬಂಧ, ಪಡೆಯದೆ ಇರುವುದು ಮುಕ್ತಿ ದಶೆಯಲ್ಲಿಯ ಕರ್ತೃತ್ವ.

**ಇಪ್ಪಡಿಇರುಕ್ಕ** ಹೀಗೆ ಜೀವನ ಕರ್ತೃತ್ವವು "ಕರ್ತಾಭೋಕ್ತಾ ವಿಜ್ಞಾನಾತ್ಮಾಪುರುಷಃ" ಎಂದು ಬಹು ವಿಧವಾಗಿ ನಿರೂಪಿಸಲ್ಪಟ್ಟಿರುವುದರಿಂದ, "ನ ಕರ್ತೃತ್ವಂ ನಕರ್ಮಾಣಿ ಲೋಕಸ್ಯ ಸೃಜತಿಪ್ರಭುಃ" ಎಂದು ಜೀವನಿಗೆ ಕರ್ತೃತ್ವವಿಲ್ಲವೆಂಬ ವಾಕ್ಯಗಳಿಗೂ, ಕರ್ತೃತ್ವವು ಉಂಟು ಎಂದು ಹೇಳುವ ವಾಕ್ಯಗಳಿಗೂ ವಿಷಯ ವ್ಯವಸ್ಥೆಯಿಂದ ವಿರೋಧವಿಲ್ಲ **ಅದೆಂಗನೇ ಎನ್ನಿಲ್** - ಅದು ಹೇಗೆಂದರೆ ಜೀವನಿಗೆ ಕರ್ತೃತ್ವವು ಇಲ್ಲವೆಂಬ ವಾಕ್ಯಗಳು, ಜೀವನಿಗೆ ಕರ್ತೃತ್ವ ಸಾಮಾನ್ಯ ನಿಷೇಧ ಪರವಲ್ಲ. ಬೇರಿಯೇನೆಂದರೆ ಈಶ್ವರಾಧೀನವಾಗಿಯೂ ತದಧೀನವಾದ, ಪ್ರಕೃತಿ ಗುಣಾಧೀನವಾಗಿಯೂ ಏರ್ಪಡುವ ಜೀವಕರ್ತೃತ್ವವು, ನಿರಪೇಕ್ಷ ಕರ್ತೃತ್ವ ನಿಷೇಧಪರ. ಅಂದರೆ ಜೀವನ ಸ್ವೇಚ್ಛೆಯಿಂದ ಮಾಡತಕ್ಕವುಗಳಲ್ಲವೆಂದರ್ಥ. **ಕರ್ತೃತ್ವ ಮುಂಡೆನ್ನಿರ** ಇತ್ಯಾದಿ - ಜೀವನಿಗೆ ಕರ್ತೃತ್ವವು ಉಂಟು ಎಂದು ಹೇಳುವ ವಾಕ್ಯಗಳು ಈಶ್ವರನ ಇಚ್ಛಾದಿಗಳ ನಿಮಿತ್ತವಾಗಿಯೇ ಏರ್ಪಟ್ಟ ಜ್ಞಾನಕ್ಕೂ ಅದರ ರೂಪ ವಿಶೇಷವಾದ ಚಿಕೀರ್ಷಾ ಪ್ರಯತ್ನಗಳಿಗೂ ಈ ಜೀವನೇ ಆಶ್ರಯ ಭೂತನು ಎಂಬುದನ್ನು ತಿಳಿಸುತ್ತವೆ.

ಇನ್ನಿಷ್ಕರ್ಷ ಪ್ರಕಾರತ್ತೈ (1) "ಶರೀರವಾಙ್ಮನೋಭಿರ್ಯತ್" ಎನ್ರುತುಡಙ್ಗ ಗೀತಾಚಾರ್ಯನ್ ತಾನೇ ಅರುದಿಯಿಟ್ಟಾನ್. ಅವ್ವಿಡತ್ತಿಲ್ "ದೈವಂಚೈವಾತ್ರಪಂಚಮಮ್" ಎನ್ರು ಪುರುಷೋತ್ತಮನ್ನೈ ಚ್ಚೊಲ್ಲುಹಿರದು.

ಕಾರಯಿತೃತ್ವ, ಕರ್ತೃತ್ವ, ಉಪೇಕ್ಷಕತ್ವ, ಅನುಮಂತೃತ್ವ,
ಸಹಕಾರಿತ್ವಾದಿಮುಖೇನ, ಪರಮ ಪುರುಷಸ್ಯ ಕರ್ತೃತ್ವಂ ಪಂಚವಿಧಮ್.

ಇವನ್‌ಜೀವನ್ನೈಯೊರುಕಾರ್ಯತ್ತಿಲ್ ಪ್ರವರ್ತಿಕ್ಕುಮ್ಪೋದು ಅಕ್ಕಾರ್ಯತ್ತೈಪ್ಪತ್ತಕಾರಯಿತಾವೆನ್ರು ಶೊಲ್ಲಪ್ಪಡುಮ್. ತಾನೇ ಪ್ರವೃತ್ತಿಕ್ಕುಮ್ ಫಲಪ್ರದಾನಾದಿಹಳಿಲುಮ್, ಸೃಷ್ಟ್ಯಾದಿಹಳಿಲುಮ್, ಕರ್ತಾವೆನ್ರುಶೊಲ್ಲಪ್ಪಡುಮ್. ಒನ್ರಿಲೇ ಪ್ರವೃತ್ತನಾನ ಚೇತನನ್ನೈ ವಿಲಕ್ಕಾದವಳವಿಲ್ ಉಪೇಕ್ಷಕನ್. ಅಪ್ಪೋದು

---

ಇನ್ನಿಷ್ಕರ್ಷಪ್ರಕಾರತ್ತೈ ಇತ್ಯಾದಿ ಈ ನಿಷ್ಕರ್ಷದ ಪ್ರಕಾರವನ್ನು (1) ಶರೀರವಾಙ್ಮನೋಭಿರ್ಯತ್" ಎಂದು ಆರಂಭಿಸಿ ಗೀತಾಚಾರ್ಯನು ತಾನೇ **ಅರುದಿಯಿಟ್ಟಾನ್** ವ್ಯವಸ್ಥೆಗೊಳಿಸಿದ್ದಾನೆ. ಅಂದರೆ, **"ಅಧಿಷ್ಠಾನಂ ತಥಾಕರ್ತಾ"** ಎಂದಾರಂಭಿಸಿ, ಶರೀರ, ಜೀವ, ಇಂದ್ರಿಯಗಳು, ಪ್ರಾಣ, ದೈವ, ಎಂದು ಐದು ಪ್ರಕಾರವಾಗಿ ಕರ್ತೃತ್ವವು ನಿರೂಪಿಸಲ್ಪಟ್ಟಿದೆ. ಜೀವನು ತನ್ನ ಶರೀರೇಂದ್ರಿಯಗಳನ್ನು ಅಧಿಷ್ಠಾನಮಾಡಿ ಮಾಡುವ ಪ್ರಾಣಾಧೀನ ವಿವಧ ವ್ಯಾಪಾರಗಳನ್ನು ಈಶ್ವರನು ಕರ್ಮಾಧೀನವಾಗಿ ಪ್ರೇರೇಪಿಸಲು ಮಾಡುತ್ತಾನೆಂದರ್ಥ. ದೈವಂ ಚೈವಾತ್ರ ಪಂಚಮಂ ಎಂದು ಈಶ್ವರನನ್ನು ಐದನೆಯ ಸ್ಥಾನದಲ್ಲಿ ಹೇಳಿರುವುದರಿಂದ ಪುಣ್ಯ ಪಾಪರೂಪ ಕರ್ಮಕರ್ತೃತ್ವವು ಜೀವನನ್ನೇ ಆಶ್ರಯವಾಗಿ ಕೊಂಡಿದೆ ಎಂದು ತಾತ್ಪರ್ಯ. **'ದೈವಂ ಚೈವಾತ್ರ'** ಎಂದು ದೇವಶಬ್ದವು "ನದೈವಂ ಕೇಶವಾತ್ಪರಂ", "ದೈವಾಧೀನಂ ಜಗತ್ಸರ್ವಂ" ಇತ್ಯಾದಿಗಳಲ್ಲಿ ಹೇಳಿರುವಂತೆ ಪುರುಷೋತ್ತಮನನ್ನು ತಿಳಿಸುತ್ತದೆ.

### ಪರಮ ಪುರುಷನ ಕರ್ತೃತ್ವವು ಐದು ವಿಧ.

ಪ್ರಸಂಗಾತ್ ಈಶ್ವರ ಕರ್ತೃತ್ವವನ್ನು ಐದು ಪ್ರಕಾರವಾಗಿ ನಿರೂಪಿಸುತ್ತಾರೆ. ಅದಾಗಿ **ಇವನ್‌ಜೀವನ್ನೈ** ಇತ್ಯಾದಿ – (i) ಈ ಈಶ್ವರನು ಜೀವನನ್ನು ಒಂದು ಕಾರ್ಯದಲ್ಲಿ ಪ್ರವರ್ತಿಸುವಾಗ ಈ ಕಾರ್ಯಕ್ಕೆ "ಕಾರಯಿತಾ" ಮಾಡಿಸುವವನು ಎಂದು ಹೇಳಲ್ಪಡುತ್ತಾನೆ. (ii) **ತಾನೇ ಪ್ರವರ್ತಿಕ್ಕುಮ್** ಇತ್ಯಾದಿ ತಾನೇ ಪ್ರವರ್ತಿಸುವ ಫಲಪ್ರದಾನಾದಿಗಳಲ್ಲಿಯೂ, ಸೃಷ್ಟ್ಯಾದಿವ್ಯಾಪಾರಗಳಲ್ಲಿಯೂ "ಕರ್ತಾ"ವೆಂದು ಹೇಳಲ್ಪಡುತ್ತಾನೆ. (iii) **ಒನ್ರಿಲೇ ಪ್ರವೃತ್ತನಾನ** ಇತ್ಯಾದಿ ಪ್ರಥಮ ಪ್ರವೃತ್ತಿಯಾಗಿ ಒಂದು ಕಾರ್ಯದಲ್ಲಿ ತೊಡಗಿದ ಚೇತನನನ್ನು ತಡೆಯದೆ **ಇರುವುದರಿಂದ ಉಪೇಕ್ಷಕನು** (iv) **ಅಪ್ಪೋದಿಶೈನ್ದಿರುಕ್ಕೈಯಾಲೇ** ಇತ್ಯಾದಿ – ಆಕಾರ್ಯವನ್ನು ಮಾಡುವಂತೆ

---

1) ಅಧಿಷ್ಠಾನಂ ತಥಾ ಕರ್ತಾ ಕರಣಂಚ ಪೃಥಗ್ವಿಧಮ್ ।
ವಿವಿಧಾಚ ಪೃಥಕ್‌ಚೇಷ್ಟಾ ದೈವಂ ಚೈವಾತ್ರಪಂಚಮಮ್ ॥
ಶರೀರವಾಙ್ಮನೋರ್ಭಿರ್ಯತ್ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂವಾ ಪಂಚೈತೇ ತಸ್ಯಹೇತವಃ ॥

ಗೀತೆ (18–14, 15) -ಅಧಿಷ್ಠಾನಂ - ಶರೀರ, ಕರ್ತಾ - ಜೀವ, ಪೃಥಗ್ವಿಧಮ್ ಕರಣಂ – ವಾಕ್ ಪಾಣಿಪಾದ ಪಾಯು ಉಪಸ್ಥರೂಪ ಐದುಕರ್ಮೇಂದ್ರಿಯಗಳೂ ಮನಸ್ಸಿನೊಡನೆ ಕೂಡಿರುವವು. ನಾನಾ ವಿಧವಾದ ಕರ್ಮನಿಷ್ಪತ್ತಿಯಿಂದ ಪೃಥಗ್ವ್ಯಾಪಾರಗಳಿಂದ ಕೂಡಿರುವುವು. ವಿವಧಾಚ ಪೃಥಕ್‌ಚೇಷ್ಟಾ - ಪ್ರಾಣಾಪಾನ ವ್ಯಾನೋದಾನ ಸಮಾನವೆಂಬ ಪಂಚಪ್ರಾಣಗಳೂ ಅವುಗಳ ವಿವಿಧವಾದ ವ್ಯಾಪಾರಗಳೂ, ದೈವಂ ಚೈವಾತ್ರ ಪಂಚಮಮ್ – ಅಂತರ್ಯಾಮಿಯಾದ ಪರಮಾತ್ಮಾ ಐದನೆಯವನು.

ಶರೀರ ವಾಕ್ ಮನಸ್ಸುಗಳನ್ನು ಒಡಗೂಡಿಸಿ ಜೀವನು ಮಾಡುವ ಶಾಸ್ತ್ರೀಯವಾದ ಮತ್ತು ಅಶಾಸ್ತ್ರೀಯವಾದ ಸರ್ವ ಕರ್ಮಗಳಿಗೂ ಈ ಐದೂ ಕಾರಣಗಳು.

ಇಶ್ಶೈನ್ದಿರುಕ್ಕೈಯಾಲೇ ಅನುಮನ್ತಾ. ಇಳನ್ತಲೈ ಎಡುಕ್ಕುಮವನುಕ್ಕು ಪ್ರಬಲನ್ ಪೆರುನ್ತಲೈ ಶುಮಕ್ಕುಮಾಪ್ಪೋಲೇ ಕೂಡ ಪ್ರವರ್ತಿಕ್ಕೈಯಾಲ್ ಸಹಕಾರಿ.

### ಈಶ್ವರಸ್ಯ ಕರ್ತೃತ್ವಾಕರ್ತೃತ್ವ ಬೋಧಕ ಪ್ರಮಾಣೇಷು ನವಿರೋಧಃ

ಸೃಷ್ಟ್ಯಾದಿಹಳಿಲ್ ದೇವ ಮನುಷ್ಯಾದಿ ವೈಷಮ್ಯಮ್ ಜೀವಕರ್ಮ ವಿಶೇಷೋಪಾಧಿಕಮಾಹೈಯಾಲೇ 1. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ।

ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥,

ಎನ್ರು ಈಶ್ವರನುಕ್ಕು ಕರ್ತೃತ್ವ ನಿಷೇಧಮ್ ಪಣ್ಣಿಹಿರದು.

---

ಒಪ್ಪಿಸುವುದರಿಂದ ದ್ವಿತೀಯಕ್ಷಣದಲ್ಲಿ ಅನುಮಂತಾ – ಅನುಮತಿ ದಾನ ಮಾಡುವವನು (v) **ಇಳಂತಲೈಶುಮಕ್ಕುಮವನಕ್ಕು** ಇತ್ಯಾದಿ ಅಡಿಭಾಗವು ದಪ್ಪನಾಗಿ ಭಾರವಾಗಿದ್ದು ತುದಿಭಾಗವು ಸಣ್ಣದಾಗಿ ಭಾರವಿಲ್ಲದೆ ಇರುವ ಮರದ ತುದಿಭಾಗವನ್ನು ಹೊರುವ ಬಾಲಕನಿಗೆ, ಬಲಿಷ್ಠನಾದವನು ಭಾರವಾದ ಅಡಿಭಾಗವನ್ನು ಹೊತ್ತು ಸಹಕರಿಸುವಂತೆ, ಒಂದು ಕಾರ್ಯದಲ್ಲಿ ತೊಡಗಿಸಿದ ಜೀವನಿಗೆ ಸಹಕರಿಸುವ ಈಶ್ವರನು "ಸಹಕಾರಿ". ಇಲ್ಲಿ ಜೀವನು ಪ್ರವರ್ತಿಸುವ ಕಾರ್ಯದಲ್ಲಿ ಈಶ್ವರನ ಪ್ರವೃತ್ತಿಯು ಜೀವನ ಪ್ರವೃತ್ತಿಗಿಂತ ಅಧಿಕವಾದದ್ದು ಎಂದು ತಿಳಿಸಲು ಇಳಂತಲೆ – ಭಾರವಿಲ್ಲದ ತುದಿಭಾಗ, ಪೆರುಂತಲೈ – ಭಾರವಾದ ಅಡಿಭಾಗವೆಂಬ ದೃಷ್ಟಾಂತವನ್ನು ಆಚಾರ್ಯರು ಅನುಗ್ರಹಿಸಿರುತ್ತಾರೆ.

ಕೆಲವಡೆಗಳಲ್ಲಿ ಈಶ್ವರನಿಗೆ ಕರ್ತೃತ್ವವಿಲ್ಲವೆಂದು ಹೇಳುವ ವಚನಗಳಿಗೆ ತಾತ್ಪರ್ಯವನ್ನು **ಸೃಷ್ಟ್ಯಾದಿಹಳಿಲ್** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ದೇವ ಮನುಷ್ಯ ತಿರ್ಯಕ್ ಸ್ಥಾವರಗಳೆಂಬ ಚತುರ್ವಿಧ ಸೃಷ್ಟಿಗಳಲ್ಲಿ, ದೇವತ್ವ, ಮನುಷ್ಯತ್ವ, ತಿರ್ಯಕ್ತ್ವಾದಿ, ವೈಷಮ್ಯಗಳಿಗೆ ಜೀವನಕರ್ಮ ವಿಶೇಷವೇ ಕಾರಣವಾದ್ದರಿಂದ, (1) **ಚಾತುರ್ವರ್ಣ್ಯಂ** ಮಯಾಸೃಷ್ಟಂ ಎಂದು ಅವರವರ ಪುಣ್ಯಪಾಪ ರೂಪ ಕರ್ಮ ಮೂಲಕವಾಗಿ ಚತುರ್ವಿಧ ಸೃಷ್ಟಿಯು ಏರ್ಪಟ್ಟಿರುವುದರಿಂದ, ಈಶ್ವರನಿಗೆ ಪ್ರಧಾನ ಕರ್ತೃತ್ವವನ್ನು ನಿಷೇಧಿಸಿದೆ. ಈ ಅಂಶವು ವಿಷ್ಣು ಪುರಾಣದಲ್ಲಿಯೂ,

ನಿಮಿತ್ತ ಮಾತ್ರಮೇವಾಸೌ ಸೃಜ್ಯಾನಾಂ ಸರ್ಗಕರ್ಮಣಿ ।

ಪ್ರಧಾನಕಾರಣೀ ಭೂತಾಯತೋವೈ ಸೃಜ್ಯಶಕ್ತಯಃ ॥

ಸೃಜ್ಯಪದಾರ್ಥಗಳ ಸೃಷ್ಟಿಕಾರ್ಯದಲ್ಲಿ ಭಗವಂತನು ಅಪ್ರಧಾನ ಕಾರಣ. ಆ ಸೃಜ್ಯ ಪದಾರ್ಥಗಳ (ಜೀವರುಗಳ) ಶಕ್ತಯಃ– ಪುಣ್ಯ ಪಾಪ ರೂಪ ಕರ್ಮಗಳು ಪ್ರಧಾನಕಾರಣಗಳು. ಅದಕ್ಕನುಗುಣವಾಗಿ ದೇವ ಮನುಷ್ಯಾದಿ ಸೃಷ್ಟಿಯು ಭಗವಂತನಿಂದ ಮಾಡಲ್ಪಡುತ್ತದೆಯಾದ್ದರಿಂದ ಭಗವಂತನು ಅಪ್ರಧಾನಕಾರಣವೆಂದು ತಾತ್ಪರ್ಯ.

---

1) ಗೀತೆ 4-13 ಚಾತುರ್ವರ್ಣ್ಯಂ - ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರನೆಂಬ ನಾಲ್ಕು ಜಾತಿಗಳು ಸತ್ವ ರಜಸ್ತಮೋಗುಣಗಳ ಮತ್ತು ಶಮ ದಮಾದಿ ಕರ್ಮಗಳ ವಿಭಾಗದಿಂದ ಸೃಷ್ಟಿಸಲ್ಪಟ್ಟಿವೆ. ಆ ವರ್ಣ ವಿಭಾಗಗಳನ್ನು ನಾನು ಮಾಡಿದ್ದರೂ (ಕರ್ತಾ) ಅವರವರ ಕರ್ಮಾನುಗುಣವಾಗಿ ಮಾಡಿರುವುದರಿಂದ. ನಾನು ಕರ್ತಾವಲ್ಲ. ಅವರವರ ಪುಣ್ಯಪಾಪ ರೂಪ ಕರ್ಮಗಳೇ ಕಾರಣ.

ವ್ರಜ ಶಬ್ದೇನ ಮುಮುಕ್ಷೋಃ ವಿಧಿಯೋಗ್ಯತ್ವಂ ಸಿದ್ಧಮಿತಿ ನಿಗಮಯತಿ.

ಇಪ್ಪಡಿ ಸರ್ವವಿಷಯ ಸಾಧಾರಣ ಕರ್ತೃತ್ವಮುಡೈಯ ಈಶ್ವರನಡಿಯಾಹ ಜೀವನುಕ್ಕು ಸ್ವಬುದ್ಧಿ ಪೂರ್ವ ಪ್ರವೃತ್ತಿ ಶಕ್ತಿರೂಪಮಾನ ನಿಯೋಗ ಯೋಗ್ಯತ್ವಮ್ ಸಿದ್ಧಮ್. ಆಹೈಯಾಲೇ ಇಙ್ಙು "ವ್ರಜ" ಎನ್ರು ವಿಧಿಕ್ಕಕ್ಕುರೈಯಿಲ್ಲೈ.

ಶ್ರೀ ಪಿಳ್ಳಾನ್‌ವಾರ್ತ್ತಾಯಾಃ ವಿಶ್ವಾಸ ಜನನದ್ವಾರಾ ಪರಾಧೀನ ಕರ್ತೃತ್ವೇತಾತ್ಪರ್ಯಮ್

ಇಪ್ಪಡಿ ಭಕ್ತ್ಯಾದಿಹಳ್ ಪೋಲೇ ಶರಣಾಗತಿಧರ್ಮಮುಮ್ ಕರ್ತವ್ಯಮಾಹ ವಿಧಿಕ್ಕಪ್ಪಡುಹೈಯಾಲ್ "ತನ್ನಾಲ್ ವರುಮ್ ನನ್ಮೈ ವಿಲೈಪ್ಪಾಲ್ ಪೋಲೇ, ಈಶ್ವರನಾಲ್ ವರುಮ್ ನನ್ಮೈ ಮುಲೈಪ್ಪಾಲ್ ಪೋಲೇ" ಎನ್ರು ಪಿಳ್ಳಾನ್ ವಾರ್ತ್ತೈಕ್ಕು ಭಕ್ತಿ ಪ್ರಪತ್ತ್ಯಾದಿಹಳೆಲ್ಲಾಮ್ ಅವನಾಲೇ ವರುಹಿರನವೆನ್ರು ನಿನೈಕ್ಕವೇಣ್ಡುಮೆನ್ರು, ತನ್ನುಡೈಯ ಪರಾಧೀನಕರ್ತೃತ್ವತ್ತಿಲೇ ತಾತ್ಪರ್ಯಮ್.

ಅನ್ಯವಿಶ್ವಾಸಸಿದ್ಧ್ಯರ್ಥಂ ಭಕ್ತ್ಯುಪಾಯ ವಿಧಿಂ ವದನ್ ।
ಸರ್ವಶಾಸ್ತ್ರೇಷ್ವವಿಶ್ವಾಸ ಮಾಧತ್ತೇ ಮುಖಭೇದತಃ ॥ 157 ॥

---

**ಇಪ್ಪಡಿ ಸರ್ವ ವಿಷಯ** ಇತ್ಯಾದಿ – ಹೀಗೆ ಸರ್ವ ವಿಷಯಗಳಲ್ಲಿಯೂ ಸಾಧಾರಣ ಕರ್ತೃತ್ವವನ್ನುಳ್ಳ ಈಶ್ವರನ ಮೂಲಕ ಜೀವನಿಗೆ ಸ್ವಬುದ್ಧಿ ಪೂರ್ವಕವಾದ ಪ್ರವೃತ್ತಿ ಶಕ್ತಿಯು ಕೊಡಲ್ಪಟ್ಟು ಇರುವುದರಿಂದ, **ನಿಯೋಗ ಯೋಗ್ಯತ್ವಮ್** – ಒಂದು ಕಾರ್ಯದಲ್ಲಿ ಪ್ರವರ್ತಿಸಲು ಯೋಗ್ಯತೆಯು ಜೀವನಿಗೆ ಇದ್ದೇ ಇದೆ. ಆದರಿಂದಾಗಿ ಅವನನ್ನು ಕುರಿತು ಇಲ್ಲಿ **"ವ್ರಜ"** – ಶರಣಾಗತಿಮಾಡು, ಎಂದು ವಿಧಿಸಲು ಆಕ್ಷೇಪವಿಲ್ಲ. **ಇಪ್ಪಡಿ** ಇತ್ಯಾದಿ ಹೀಗೆ – ಭಕ್ತ್ಯಾದಿಗಳ ಹಾಗೆ ಶರಣಾಗತಿ ಧರ್ಮವೂ ಕರ್ತವ್ಯವಾಗಿ ವಿಧಿಸಲ್ಪಡುವುದರಿಂದ, **ತನ್ನಾಲ್‌ವರುಮ್‌ನನ್ಮೈ** ಇತ್ಯಾದಿ – ತಾನು ಅನುಷ್ಠಿಸಿ ಅದರಿಂದ ಬರುವ ಕ್ಷೇಮವು ಕ್ರಯಕ್ರೀತವಾದ ಹಾಲಿನಂತೆ, **ಈಶ್ವರನಾಲ್‌ವರುಮ್‌ನನ್ಮೈ** ಇತ್ಯಾದಿ – ಈಶ್ವರನ ಮೂಲಕವಾಗಿ ಬರುವ ಕ್ಷೇಮಗಳು ತಾಯಿಯ ಸ್ತನ್ಯದಂತೆ, ಎಂದು **ಪಿಳ್ಳಾನ್** ಅವರು ಅನುಗ್ರಹಿಸಿರುವ ಮಾತಿಗೆ, **ಭಕ್ತಿಪ್ರಪತ್ತಿಹಳ್** ಇತ್ಯಾದಿ– ಭಕ್ತಿ ಪ್ರಪತ್ತ್ಯಾದಿ ಕರ್ತೃತ್ವವೂ ಭಗವಂತನಿಂದಲೇ ಏರ್ಪಟ್ಟವು ಎಂದು ನೆನೆದರೆ, ತನ್ನ ಕರ್ತೃತ್ವವೂ ಅದರ ಮೂಲಕವಾಗಿ ಏರ್ಪಡುವ ಕಾರ್ಯಗಳೂ, ಈಶ್ವರನಿಂದ ಏರ್ಪಟ್ಟ ಕ್ಷೇಮವಾಗಿಯೇ ಪರಿಣಮಿಸುವುದರಿಂದ ಮಾತೃಸ್ತನ್ಯ ತುಲ್ಯವೆಂದು ಏರ್ಪಟ್ಟು, ತನ್ನ ಪರಾಧೀನ ಕರ್ತೃತ್ವದಲ್ಲಿ ತಾತ್ಪರ್ಯ. ಇಷ್ಟಲ್ಲದೆ ಅತ್ಯಂತ ಪರತಂತ್ರನಾದ ಜೀವನಿಗೆ ಕರ್ತೃತ್ವವಿಲ್ಲವೆಂದು ತಾತ್ಪರ್ಯವಲ್ಲ.

ಕೆಲವರು ಪ್ರಪತ್ತಿಯಲ್ಲಿ ವಿಶ್ವಾಸವನ್ನುಂಟು ಮಾಡಲು ಶಾಸ್ತ್ರದಲ್ಲಿ ಭಕ್ತಿಯು ವಿಧಿಸಲ್ಪಟ್ಟಿದೆಯೇ ಹೊರತು, ಭಕ್ತಿಯೋಗವನ್ನು ವಿಧಿಸುವುದರಲ್ಲಿ ಶಾಸ್ತ್ರಕ್ಕೆ ತಾತ್ಪರ್ಯವಿಲ್ಲವೆನ್ನುತ್ತಾರೆ. ಈ ಪಕ್ಷವನ್ನು **ಅನ್ಯವಿಶ್ವಾಸಸಿದ್ಧ್ಯರ್ಥಂ** ಎಂದಾರಂಭಿಸುವ ಕಾರಿಕೆಯಿಂದ ನಿರಾಕರಿಸುತ್ತಾರೆ ಅದಾಗಿ ಅನ್ಯಶಬ್ದವು ಪ್ರಪತ್ತಿಪರ. ಶಾಸ್ತ್ರವು, ಲಘುವಾದ ಪ್ರಪತ್ತಿ ಶಾಸ್ತ್ರದಲ್ಲಿ ವಿಶ್ವಾಸವುನ್ನುಂಟು ಮಾಡಲು ಗುರುವಾದ ಭಕ್ತಿಯನ್ನು ಅಶಕ್ತನಿಗೆ ವಿಧಿಸುತ್ತದೆ ಎಂದು ಹೇಳುವುದರಿಂದ ಸರ್ವಶಾಸ್ತ್ರಗಳಲ್ಲಿಯೂ ಪ್ರಕಾರ ಭೇದದಿಂದ ಅವಿಶ್ವಾಸವನ್ನು ಹೇಳಿದಂತಾಗುತ್ತದೆ. ಅದಾಗಿ ಮೊದಲು ಭಕ್ತಿಯೋಗ ವನ್ನು ವಿಧಿಸಿಅದನು ಮಾಡುವುದಕ್ಕೆ ಶಕ್ತಿಯಿಲ್ಲವೆಂದು ತೋರಿಸಿ, ಸುಲಭವಾದ ಪ್ರಪತ್ತಿಯಲ್ಲಿ ವಿಶ್ವಾಸವನ್ನುಂಟು ಮಾಡಲು ಭಕ್ತಿಯನ್ನು ವಿಧಿಸಿದೆಯೇ ಹೊರತು, ಆ ಭಕ್ತಿಯೋಗವು ಸಾಕ್ಷಾನ್ಮೋಕ್ಷೋಪಾಯವಲ್ಲವೆಂದು ತಿಳಿಸುವುದೇ ಶಾಸ್ತ್ರ ತಾತ್ಪರ್ಯವೆಂಬುದು ಪೂರ್ವಪಕ್ಷಿಯ ಮಾತು. ಹಾಗಾದರೆ ಲಘುವಾದ ಅಗ್ನಿಹೋತ್ರದಲ್ಲಿ ವಿಶ್ವಾಸನ್ನುಂಟು ಮಾಡಲು, ಜ್ಯೋತಿಷ್ಟೋಮ ವಿಧಾನವೆಂದೂ, ಲಘುವಾದ ನಾಮ ಸಂಕೀರ್ತನದಲ್ಲಿ ವಿಶ್ವಾಸ ಸಿಧ್ಯರ್ಥವಾಗಿ

**ಮದ್ಯೋಪಹತ ಪಾತ್ರಸ್ಥ ತೀರ್ಥದೃಷ್ಟಾಂತ ವರ್ಣನಮ್ ।**
**ಅಹಂಕಾರಾ ನ್ವಯೇತು ಸ್ಯಾತ್ಪ್ರಪತ್ತಾವಪಿ ಭಕ್ತಿವತ್ ॥ 158 ॥**

**ಆಳವಂದಾರ್ ಶ್ರೀ ಸೂಕ್ತಿ ತಾತ್ಪರ್ಯ ಕಥನಮ್**

**ಆಹ್ಯೆಯಾಲೇ "ಪ್ರಸೀದ ಮದ್ವೃತ್ತಮಚಿಂತಾಯಿತ್ವಾ" ಇತ್ಯಾದಿಹಳ್ ಮುನ್ಬುತಾಮ್ ಪಣ್ಣಿನ ಪ್ರಪತ್ತಿಕ್ಕು ಕ್ಷಮೈ ಕೊಳ್ಳುಹಿರಪಡಿ ಎನ್ರು ಶಿಲರ್ ಶೊಲ್ಲುವದುಮ್, ಅಹಂಕಾರ ಸ್ಪರ್ಶಾದಿ ಶಂಕೈಯ್ಯೈಪ್ಪತ್ತಾಮ್ ಅತ್ತನ್ನೈ; ಅಲ್ಲದು ಯಥಾಶಾಸ್ತ್ರಮನುಷ್ಠಿತ್ತ ಪ್ರಪತ್ತಿ ಅಪರಾಧಮಾಯ್ ಅದುಕ್ಕು ಕ್ಷಮೈಕೊಳ್ಳುಹಿರ ಪಡಿಯನ್ರು. ಅಪ್ಪಡಿಯಾಹಿಲ್ "ಪಿತಾಮಹಂ ನಾಥಮುನಿಂವಿಲೋಕ್ಯ ಪ್ರಸೀದ" ಎನ್ಗಿರ ಪೂರ್ವಾಚಾರ್ಯ ಪುರಸ್ಕಾರಾದಿಹಳುಮ್ ತಾಮ್ ಶೆಯ್‌ಹಿಂದಾಹ್ಯೆಯಾಲೇಯದುಕ್ಕುಮ್ ಕ್ಷಮೈಕೊಳ್ಳವೇಣ್ಡಿ ಅನವಸ್ಥೈಯಾಮ್. ಇದು ಸ್ವಪರ ನಿರ್ವಾಹಕಮಾಹಿಲ್ ಇದುಪ್ಪೋಲೇ ಮುನ್ಪು ಪಣ್ಣಿನ ಪ್ರಪದನಮುಮ್ ಸ್ವಪರ ನಿರ್ವಾಹಕಮೆನ್ನಲಾಮ್. ಇಙ್ಙಶೊಲ್ಲುಮ್ ಕುತರ್ಕಙ್ಗಳಾಲೇ**

---

ಪ್ರಪತ್ತಿಯನ್ನು ವಿಧಿಸಿದೆಯೆಂದೂ ಹೇಳಿ ಈ ರೀತಿಯಾಗಿ ವಿಹಿತಗಳಾದ ಸರ್ವಶಾಸ್ತ್ರಗಳಲ್ಲಿಯೂ ಅವಿಶ್ವಾಸವನ್ನು ಪೂರ್ವ ಪಕ್ಷಿಯು ಉಂಟು ಮಾಡಿದಂತಾಗುತ್ತದೆಂದು ಪ್ರತಿಬಂಧಿಯಾಗಿ ಆ ಪೂರ್ವ ಪಕ್ಷವನ್ನು ನಿರಾಕರಿಸುತ್ತಾರೆ.

**ಮದ್ಯೋಪಹತಪಾತ್ರಸ್ಥ** ಇತ್ಯಾದಿ – ಒಂದು ಪಾತ್ರದ ನೀರಿನಲ್ಲಿ ಮದ್ಯದ ಬಿಂದುವನ್ನು ಸೇರಿಸಿದ ಹಾಗೆ, ಭಕ್ತಿಯೋಗವು ಅಹಂಕಾರ ಗರ್ಭಿತವಾಗಿ ಅಂದರೆ ನಾನು ಕರ್ತಾ" ಎಂಬ ಅನುಸಂಧಾನ ಗರ್ಭಿತವಾದ್ದರಿಂದ, ಅದು ಸ್ವರೂಪ ವಿರುದ್ಧ, ತ್ಯಾಜ್ಯವು' ಎಂದು ಹೇಳುವುದು ಅಸುಪಪನ್ನವು. ಭಕ್ತಿಯೋಗವನ್ನೂ ಸಾತ್ವಿಕ ತ್ಯಾಗ ಪುರಸ್ಸರವಾಗಿಯೇ ಮಾಡಬೇಕಾದ್ದರಿಂದ ಇದರಲ್ಲಿ ಅಹಂಕಾರ ಸ್ಪರ್ಶವಿಲ್ಲ. ಅಹಂಕಾರ ಗರ್ಭಿತವೆಂದರೆ ಪ್ರಪತ್ತಿಯನ್ನೂ "ಅಹಂಕರೋಮಿ" ನಾನು ಮಾಡುತ್ತೇನೆಂದು ಹೇಳಿದರೆ ಅದೂ ಸ್ವರೂಪ ವಿರುದ್ಧವಾಗುತ್ತದೆ. ಅಲ್ಲಿಯೂ ಸಾತ್ವಿಕ ತ್ಯಾಗ ಪುರಸ್ಸರವಾಗಿ ಅನುಷ್ಠಾನವನ್ನು ಹೇಳಿರುವುದರಿಂದ ಅಹಂಕಾರ ಗರ್ಭತ್ವವಿಲ್ಲ. ಆದ್ದರಿಂದ ಜೀವನ ಪಾರತಂತ್ರ್ಯ ಕರ್ತೃತ್ವಕ್ಕೆ ಭಂಗವಿಲ್ಲವೆಂದು ತಾತ್ಪರ್ಯ.

**ಆಳವಂದಾರ್ ಅವರು ತಾವು ಮಾಡಿದ ಪ್ರಪತ್ತಿಗೆ ಕ್ಷಮೆ ಬೇಡಿದರೆಂಬ ವಾದ ಖಂಡನೆ**

ಕೆಲವರು "ಪಿತಾಮಹಂ ನಾಥಮುನಿಂ ವಿಲೋಕ್ಯ ಪ್ರಸೀದ ಮದ್ವೃತ್ತಮಚಿಂತಯಿತ್ವಾ" ಇತ್ಯಾದಿಗಳು ತಾವು ಮಾಡಿದ ಪ್ರಪತ್ತಿಗೆ ಆಳವಂದಾರವರು ಪ್ರಾಯಶ್ಚಿತ್ತವಾಗಿ ಭಗವಂತನಲ್ಲಿ ಕ್ಷಮಾಪಣೆಯನ್ನು ಯಾಚಿಸಿರುದಾಗಿ ಹೇಳುತ್ತಾರೆ ಇದು ತಾವು ಮಾಡಿದ ಪ್ರಪತ್ತಿಗೆ ಅಹಂಕಾರ ಸ್ಪರ್ಶವೇ ಮೊದಲಾದವು ಏರ್ಪಟ್ಟವೋ ಎಂಬ ಶಂಕೆಯನ್ನು ಕುರಿತು ಮಾಡಿದ ಕ್ಷಮಾಪಣೆಯೇ, **ಅಲ್ಲದು**–ಹೊರತು **ಯಥಾಶಾಸ್ತ್ರಮ್** ಶಾಸ್ತ್ರವನ್ನು ಅನುಸರಿಸಿ ಮಾಡಿದ ಪ್ರಪತ್ತಿಯು ಅಪರಾಧವಾಗಿ ಪರಿಣಮಿಸಿ ಅದಕ್ಕೆ ಕ್ಷಮಾಪಣೆಯನ್ನು ಬೇಡುತ್ತಾರೆಂದಲ್ಲ. **ಅಪ್ಪಡಿಯಾಹಿಲ್** ಇತ್ಯಾದಿ–ತಾವು ಮಾಡಿದ ಪ್ರಪತ್ತಿಗೆ ಪ್ರಾಯಶ್ಚಿತ್ತವೇ ಇದು ಎಂದು ಹೇಳಿದರೆ, ಪೂರ್ವಾಚಾರ್ಯ ಪುರಸ್ಕಾರಾದಿಗಳೂ ಅಸ್ವತಂತ್ರನಾದ ತಾನು ಮಾಡುವ ವ್ಯಾಪಾರವಾದ್ದರಿಂದ ಇದಕ್ಕೂ ಕ್ಷಮೆಯನ್ನು ಯಾಚಿಸಬೇಕಾಗಿ ಅನವಸ್ಥೆಯು ಏರ್ಪಡುತ್ತದೆ. **ಇದು ಸ್ವಪರ ನಿರ್ವಾಹಕಮಾಹಿಲ್**, ಈ ಕ್ಷಮಾಪಣವು ಸ್ವಾನುಷ್ಠಾನದಿಂದ ಏರ್ಪಡುವ ಅಪರಾಧಕ್ಕೂ ಪರವಾದ ಪ್ರಪತ್ತಿಯಿಂದ ಏರ್ಪಡುವ ಅಪರಾಧಕ್ಕೂ ಕ್ಷಮಾಪಣೆಯಾಗುತ್ತದೆ ಎಂದರೆ, ಪ್ರಪತ್ತಿಯೂ ಸ್ವಪರ ನಿರ್ವಾಹಕವೆಂದು ಹೇಳಬಹುದು. ಅಂದರೆ ಸರ್ವಪಾಪ ಪ್ರಾಯಶ್ಚಿತ್ತವಾಗಿ ಮೊದಲು ಮಾಡಿದ ಪ್ರಪತ್ತಿಯೇ ಸ್ವಾನುಷ್ಠಾನದಿಂದ ಏರ್ಪಟ್ಟ ದೋಷಕ್ಕೂ ಪ್ರಾಯಶ್ಚಿತ್ತವಾಗಬಹುದು ಎಂದು ತಾತ್ಪರ್ಯ. ಇಂಗು **ಶೊಲ್ಲುಮ್ ಕುತರ್ಕಂಗಳಾಲೇ** ಇತ್ಯಾದಿ – ಹೀಗೆ ಯಥಾಶಾಸ್ತ್ರಾನುಷ್ಠಿತವಾದ ಪ್ರಪತ್ತಿಯನ್ನೂ ಕುತರ್ಕಗಳಿಂದ ದೋಷವನ್ನಾಗಿ ಹೇಳಿದರೆ,

**ಪೂರ್ವರ್‌ಹಳ್ ಪಣ್ಣಿನ ಪ್ರಪದನಮುಮ್ ಅಪರಾಧಮಾಯ್ ಅಗಹೈಯಾಲೇ ಪೂರ್ವರ್ ಹಳೈ ಮುನ್ನಿಡ ವುಮ್ ವೊಣ್ಣಾದೊಳ್ಳಿಯುಮ್.**

"ಆಚಾರ್ಯಾನುಜ್ಞಯಾ ಕುರ್ಯಾತ್" ಇತಿ ತತ್ಪುರಸ್ಕಾರಃ ಪ್ರಪತ್ತ್ಯಪೇಕ್ಷಿತ: ಇತಿನಿಗಮಯತಿ.

**ಆಹೈಯಾಲ್ ಇಸ್ತೋತ್ರತ್ತಿಲ್ ಆದ್ಯನ್ತಙ್ಗಳಿಲ್ ಪಣ್ಣಿನ ಪೂರ್ವಾಚಾರ್ಯ ಪುರಸ್ಕಾರಮ್ ಇಙ್ಗು ಅರುಳಿಚ್ಚೆಯ್‌ಹಿರ ಪ್ರಪತ್ತಿಕ್ಕು ಅಪೇಕ್ಷಿತಮಾಯಾದಲ್, ವೈಕಲ್ಯಪರಿಹಾರಾರ್ಥಮಾಯಾದಲ್ ಉಪ ಯುಕ್ತಮಾಯ್ ವಂದ ದಿತ್ತನ್ನೈ. ಇವ್ವಾಚಾರ್ಯ ಪುರಸ್ಕಾರತ್ತಿಲ್ ಪೋಲೇ ಪ್ರಪತ್ತ್ಯಾದಿಗಳಿಲುಮ್ ಪರಾಧೀನಕರ್ತೃತ್ವಮ್ ದೋಷಮನ್ರು.**

ಪರಾಧೀನಕರ್ತೃತ್ವೇ, ಸ್ವಾತಂತ್ರ್ಯಾಭಾವಾತ್ ನಿಷಿದ್ಧಕರ್ಮಣಾಮ್ ಅಲೇಪಪಕ್ಷನಿರಾಸಃ

**ಇಪ್ಪಡಿ ಪರಾಧೀನಕರ್ತೃತ್ವಮ್ ಪ್ರಾಮಾಣಿಕಮಾಹೈಯಾಲೇ ಆತ್ಮಾವುಕ್ಕು ಕರ್ತೃತ್ವಮಿಲ್ಲಾಮೈ ಯಾಲೇ ಸ್ವರೂಪಮ್ ತೆಳಿನ್ದವನ್ನೈನಿಷಿದ್ಧ ಕರ್ಮಙ್ಗಳೊನ್ರುಮ್ ಲೇಪಿಯಾದೆನ್ಗಿರ ಪಕ್ಷಮುಮ್ ನಿರಸ್ತಮ್. ಮುಮುಕ್ಷುವುಕ್ಕು ಚೊನ್ನ ಬಾಲ್ಯಂ ಬಾಲಕೃತ್ಯಙ್ಗಳಾನ ಕಾಮಚಾರಾದಿಹಳನ್ರು; ಸ್ವಮಾಹಾತ್ಮ್ಯಾಽನಾ**

---

ಪೂರ್ವಾ ಚಾರ್ಯರುಗಳು ಅನುಷ್ಠಿಸಿದ ಪ್ರಪತ್ತಿಯೂ ದೋಷದಿಂದ ಕೂಡಿರುವಾಗಿ ಏರ್ಪಡುವುದರಿಂದ ಅವರನ್ನು ಮುಂದಿಟ್ಟುಕೊಂಡು ಹೋಗುವುದೇ ದೋಷವಾಗಿ, ಅವರನ್ನು ಮುಂದಿಡ ಕೂಡದಾಗಿ ಪರ್ಯವಸಾನವಾಗುತ್ತದೆ. ಆದ್ದರಿಂದ ಈ ಪ್ರಪದನವು ಅಪರಾಧ ರೂಪವಾಗಲಾರದು. ಅದಕ್ಕಾಗಿ ಕ್ಷಮಾಪಣವೂ ಬೇಕಿಲ್ಲ. ಹಾಗಾದರೆ ಸ್ತೋತ್ರರತ್ನದಲ್ಲಿ ಆದ್ಯಂತಗಳಲ್ಲಿ ಮಾಡಿರುವ ಆಚಾರ್ಯ ಪುರುಸ್ಕಾರಕ್ಕೆ ಪ್ರಯೋಜನವೇನೆಂದರೆ, **ಆಹೈಯಾಲ್** ಇತ್ಯಾದಿ ಅನುಗ್ರಹಿಸುತ್ತಾರೆ. ಆಹೈಯಾಲ್ – ಅಹಂಕಾರ ಸ್ಪರ್ಶವಿಲ್ಲದ ಪ್ರಪದನವು ಅಪರಾಧವಾಗುವುದಿಲ್ಲ ವಾದ್ದರಿಂದ, ಈ ಸ್ತೋತ್ರದಲ್ಲಿ ಆದ್ಯಂತಗಳಲ್ಲಿ ಮಾಡಿದ ಆಚಾರ್ಯ ಪುರಸ್ಕಾರವು ಇಲ್ಲಿ ಕೃಪೆಮಾಡಿ ಹೇಳುವ ಪ್ರಪತ್ತಿಗೆ ಅಪೇಕ್ಷಿತವಾಗಿಯಾಗಬಹುದು. "ಗುರುಂ ಪ್ರಪದ್ಯ ಪ್ರಥಮಂ ತದ್ಗುರೂಂಶ್ಚ ತತೋಹರಿಮ್" ಇತ್ಯಾದಿ ಗಳಲ್ಲಿ ಹೇಳಿರುವಂತೆ ಭಗವತ್ಪ್ರಪತ್ತಿಗೆ **ಮೊದಲು** ಆಚಾರ್ಯ ಪುರಸ್ಕಾರವು ಅಪೇಕ್ಷಿತವು. **ವೈಕಲ್ಯಪರಿಹಾರ ಮಾಯಾದಲ್** ಇತ್ಯಾದಿ – ಪ್ರಾತಿಕೂಲ್ಯ ವರ್ಜನಾದ್ಯಂಗಗಳಲ್ಲಿ ಸಂಭವಿಸಬಹುದಾದ ವೈಕಲ್ಯ ಪರಿಹಾರಾರ್ಥ ವಾಗಿ ಉಪಯುಕ್ತವಾಗಿ ಏರ್ಪಡುತ್ತದೆಯಷ್ಟೇ. **ಇವ್ವಾಚಾರ್ಯ ಪುರಸ್ಕಾರತ್ತಿಲ್ ಪೋಲೇ** ಇತ್ಯಾದಿ – ಈ ಆಚಾರ್ಯ ಪುರಸ್ಕಾರದಲ್ಲಿರುವಂತೆ ಪ್ರಪತ್ತ್ಯಾದಿಗಳಲ್ಲಿಯೂ ಪರಾಧೀನವಾದ ಕರ್ತೃತ್ವವು ದೋಷವಲ್ಲ. 'ಆದಿ' ಶಬ್ದದಿಂದ ಭಕ್ತಿಯೋಗವು ಹೇಳಲ್ಪಡುತ್ತದೆ.

**ಜೀವನಿಗೆ ಕರ್ತೃತ್ವವಿಲ್ಲವಾದ್ದರಿಂದ ನಿಷಿದ್ಧಕರ್ಮಗಳು ಲೇಪಿಸುವುದಿಲ್ಲವೆಂಬ ಮತ ಖಂಡನೆ.**

**ಇಪ್ಪಡಿ ಪರಾಧೀನ ಕರ್ತೃತ್ವಮ್** ಇತ್ಯಾದಿ – ಹೀಗೆ ಪರಾಧೀನ ಕರ್ತೃತ್ವವು ಪ್ರಾಮಾಣಿಕವಾದ್ದ ರಿಂದ "ಆತ್ಮಾವಿಗೆ ಕರ್ತೃತ್ವವೇ ಇಲ್ಲವಾದ್ದರಿಂದ ಪಾರತಂತ್ರ್ಯರೂಪ ಸ್ವರೂಪವನ್ನು ತಿಳಿದವನಿಗೆ ನಿಷಿದ್ಧ ಕರ್ಮಗಳೊಂದೂ ಲೇಪಿಸುವುದಿಲ್ಲವೆಂಬ ಪಕ್ಷವೂ ನಿರಸ್ತ. ಮುಮುಕ್ಷುವನ್ನು ಕುರಿತು, "ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್" ಎಂದು ಉಪನಿಷತ್ತಿನಲ್ಲಿ ಬಾಲನ ಹಾಗೆ ಸ್ವೇಚ್ಛೆಯಾಗಿ ಆಹಾರ ವಿಹಾರಗಳನ್ನು ಮಾಡಿಕೊಂಡಿರಬಹುದು ಎಂದು ಹೇಳಿರುವುದರಿಂದ, ಪ್ರಪನ್ನನಿಗೆ ನಿಷಿದ್ಧ ಕರ್ಮಾನುಷ್ಠಾನವು ಲೇಪಿಸುವುದಿಲ್ಲವೆಂದು ಹೇಳುವ ಪಕ್ಷವೂ ನಿರಸ್ತ. ಹೇಗೆಂದರೆ **ಮುಮುಕ್ಷುವುಕ್ಕು ಚೊನ್ನ** ಇತ್ಯಾದಿ – ಮುಮುಕ್ಷುವಿಗೆ ಹೇಳಿದ ಬಾಲ್ಯವು ಬಾಲಕೃತ್ಯಗಳಾದ ಕಾಮಚಾರ – ಸ್ವೇಚ್ಛಾವಿಹಾರಾ

**ವಿಷಯ್ಕರ ಮಾತ್ರಮೆನ್ಱುಮಿಡಮ್, "ಅನಾವಿಷ್ಕುರ್ವನ್ನನ್ವಯಾತ್" ಎನ್ಗಿಱಸೂತ್ರತ್ತಿಲೇ ಸಮರ್ಥಿತಮ್. 1) "ಅನಿಷ್ಟ ಮಿಷ್ಟಂ ಮಿಶ್ರಂಚ" (2) "ಯಸ್ಯನಾಹಂಕೃತೋಭಾವಃ" ಇತ್ಯಾದಿವಚನಂಗಳ್ ಬುದ್ಧಿ ಪೂರ್ವೋತ್ತರಾಘ ವಿಷಯಙ್ಗಳೆನ್ಱುಮಿಡಂ. ಬಹುಶಾಸ್ತ್ರ ವಿರೋಧಮ್ ವಾರಾನ್ಮೈಕ್ಕಾಹ ಭಾಷ್ಯಾದಿಗಳಿಲೇ ಸಮರ್ಥಿಕ್ಕಪ್ಪಟ್ಟದು. "ಹತ್ವಾಪಿ" ಎನ್ಱದುವುಮ್ ಧರ್ಮಯುದ್ಧ ವಿಷಯಮ್.**

---

ದಿಗಳಲ್ಲ. ಮತ್ತೇನೆಂದರೆ, ಸ್ವಮಾಹಾತ್ಮ್ಯವನ್ನು ಆವಿಷ್ಕರಿಸದೆ ಇರುವುದು, ಎಂಬುದು, "ಅನಾವಿಷ್ಕುರ್ವನ್ನನ್ವಯಾತ್" – ಬ್ರಹ್ಮಸೂತ್ರ (3 - 3 - 49). ಎಂಬ ಸೂತ್ರದಲ್ಲಿ ಸಮರ್ಥಿಸಲ್ಪಟ್ಟಿದೆ. ಅಂದರೆ

"ನಾಽವಿರತೋದುಶ್ಚರಿತಾತ್ ನಾಽಶಾಂತೋ ನಾಽಸಮಾಹಿತಃ ।
ನಾ ಶಾಂತಮಾನಸೋ ವಾಪಿ ಪ್ರಜ್ಞಾನೇನೈನ ಮಾಪ್ನುಯಾತ್ ॥

ಎಂಬ ವಚನದ ಪ್ರಕಾರ ನಿಷಿದ್ಧಾನುಷ್ಠಾನವನ್ನು ಮಾಡುವವನು ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಲಾರನ ಎಂದು ಹೇಳಿರುವುದರಿಂದ ನಿಷಿದ್ಧಗಳಾದ ಕಾಮಚಾರ ಕಾಮಭಕ್ಷಣಗಳು ಇಲ್ಲಿ ವಿಧಿಸಲ್ಪಡುವುದಿಲ್ಲ. ಮತ್ತೇನೆಂದರೆ ತನ್ನ ಮಾಹಾತ್ಮ್ಯವನ್ನು ಆವಿಷ್ಕರಿಸದೇ ಇರುವುದೇ ಇಲ್ಲಿ ಹೇಳಿರುತ್ತದೆ. (1) **ಅನಿಷ್ಟ ಮಿಷ್ಟಂ ಮಿಶ್ರಂಚ,** (2) **ಯಸ್ಯನಾಹಂ ಕೃತೋಭಾವಃ** ಇತ್ಯಾದಿ ವಚನಗಳು ಪ್ರಪನ್ನನಿಗೆ (ಸನ್ಯಾಸಿಗೆ) ಬುದ್ಧಿ ಪೂರ್ವೋತ್ತರ ಪಾಪವು ಲೇಪಿಸುವುದಿಲ್ಲವೆಂದು ಗೀತಾಚಾರ್ಯನ ಅಭಿಪ್ರಾಯವಲ್ಲ. ಹೀಗೆ ಹೇಳಿದರೆ ಬಹುಶಾಸ್ತ್ರ ವಿರೋಧವು ಬರುವುದರಿಂದ, ಆ ವಿರೋಧವು ಬರದೆ ಇರಲು ಗೀತಾ ಭಾಷ್ಯಾದಿಗಳಲ್ಲಿ ಬುದ್ಧಿ ಪೂರ್ವೋತ್ತರಾಘ ವಿಷಯಗಳಲ್ಲ. ಮತ್ತೇನೆಂದರೆ, ಕರ್ಮಗಳಿಗೆ ನರಕವು ಫಲ, ಸ್ವರ್ಗವು ಫಲ, ಪುತ್ರಪಶ್ವನ್ನಾದಿಗಳು ಫಲವೆಂದು ಮೂರು ವಿಧವಾಗಿ ವಿಭಾಗವು ಏರ್ಪಟ್ಟಿದೆ. ಈ ಮೂರು ವಿಧವಾದ ಫಲಗಳು, ಕರ್ತೃತ್ವ, ಮಮತಾ, ಫಲತ್ಯಾಗ ಮಾಡದೆ ಇರುವವರಿಗೆ ಆಯಾಯಾ ಫಲಗಳು ಏರ್ಪಡುತ್ತವೆ. ನರಕಫಲಕ ಕರ್ಮವು ಪ್ರಾಮಾದಿಕವಾಗಿ ಮಾಡುವ ಪಾಪ ಕರ್ಮಗಳು. ಅಲ್ಲದೆ ತಪ್ಪುಕಾರ್ಯಗಳನ್ನು ಬುದ್ಧಿಪೂರ್ವಕವಾಗಿ ಮಾಡಿ, ಫಲಸಂಗ ಕರ್ತೃತ್ವ ಮಮತಾ ತ್ಯಾಗಮಾಡಿದರೆ ಆ ಪಾಪ ಫಲಗಳು ಹೋಗುತ್ತವೆ ಎಂದಲ್ಲ. ಫಲಸಂಗಕರ್ತೃತ್ವ ಮಮತಾ, ತ್ಯಾಗ ಪುರಸ್ಸರ ಮಾಡುವ ಕರ್ಮಗಳು – ಸನ್ಯಾಸಿಗಳಿಗೆ ಅಂದರೆ ಆ ಫಲಸಂಗಾದಿಗಳಲ್ಲಿ ಆಸೆಯಿಲ್ಲದೆ ಕೇವಲ ಭಗವತ್ಪ್ರೀತಿಯಿಂದ ಮಾಡುವವರಿಗೆ ಲೇಪಿಸುವುದಿಲ್ಲ. ನಾನು ಕರ್ತಾವೆಂಬ ಭಾವನೆಯಿಲ್ಲದೆ ಪರಮಪುರುಷ ಕರ್ತೃತ್ವ ಭಾವನೆಯಿಂದಲೂ ಮಮತಾ ತ್ಯಾಗದಿಂದಲೂ ಫಲತ್ಯಾಗ ಪುರಸ್ಸರವಾಗಿಯೂ ಮಾಡುವ ಯುದ್ಧಾದಿ

---

(1) ಅನಿಷ್ಟ ಮಿಷ್ಟಂ ಮಿಶ್ರಂಚ ತ್ರಿವಿಧಂ ಕರ್ಮಣಃ ಫಲಮ್ ।
ಭವತ್ಯತ್ಯಾಗಿನಾಂ ಪ್ರೇತ್ಯ ನತು ಸನ್ನ್ಯಾಸಿನಾಂ ಕ್ವಚಿತ್ ॥

ಗೀತೆ (18 - 12) ಕರ್ಮಗಳಿಗೆ ಅನಿಷ್ಟ – ನರಕ, ಇಷ್ಟ – ಸ್ವರ್ಗ, ಮಿಶ್ರ – ಪುತ್ರಪಶ್ವಾದಿಗಳು, ಫಲ. ಆಯಾಯಾ ಫಲಗಳನ್ನು ಅಪೇಕ್ಷಿಸಿ ಮಾಡುವವರಿಗೆ ಅನಂತರ ಈ ಫಲವು ಲಭಿಸುತ್ತವೆ. ನರಕ ಫಲಕವಾದ ಕರ್ಮ – ಪ್ರಾಮಾದಿಕವಾದದ್ದು. ಸನ್ನ್ಯಾಸಿಗಳಿಗೆ ಅಂದರೆ ಫಲಸಂಗ ಕರ್ತೃತ್ವ ಮಮತಾ ತ್ಯಾಗ ಮಾಡುವವರಿಗೆ ಇವುಗಳು ಲಭಿಸುವುದಿಲ್ಲ. ಭಗವತ್ಪ್ರೀತಿಯೇ ಅವರಿಗೆ ಫಲ.

(2) ಯಸ್ಯನಾಹಂ ಕೃತೋ ಭಾವೋ ಬುದ್ಧಿರ್ಯಸ್ಯ ನಲಿಪ್ಯತೇ ॥
ಹತ್ವಾಪಿಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ॥

ಪರಮಪುರುಷ ಕರ್ತೃತ್ವಾನು ಸಂಧಾನದಿಂದ, ನಾನು ಮಾಡುತ್ತೇನೆಂಬ ಬುದ್ಧಿಯು ಯಾರಿಗಿಲ್ಲವೋ, ನಾನು ಕರ್ತಾವಲ್ಲದಿರುವುದರಿಂದ ಫಲವೂ ನನಗೆ ಸಂಬಂಧಿಸುವುದಿಲ್ಲವೆಂಬ ಭಾವನೆಯೂ ಯಾರಿಗಿದೆಯೋ, ಅವನು ಈ ಧರ್ಮಯುದ್ಧದಲ್ಲಿ ಈ ಬಂಧು ಮಿತ್ರರುಗಳನ್ನು ಕೊಂದರೂ, ತಾನು ಕೊಲ್ಲುವುದಿಲ್ಲ. ಕೊಲ್ಲುವುದರಿಂದ ಉಂಟಾಗುವ ಫಲವನ್ನು ಅನುಭವಿಸುವುದಿಲ್ಲ.

**ಕಾ॥ ಉಪಭುಕ್ತೌಷಧನ್ಯಾಯಾದುತ್ತರಾಪಥ್ಯಮರ್ದನಮ್ ।**
**ಅನನ್ಯಪರ ನಿರ್ಬಾಧ ಶ್ರುತಿ ಸ್ಮೃತಿಶತೈರ್ಹತಮ್ ॥ ॥ 159 ॥**

**ಮನ್ವಾದಿಹಳುಮ್** (1) **"ಜೀವಿತಾತ್ಯಯಮಾಪನ್ನೋ ಯೋಽನ್ನಮತ್ತಿಯತಸ್ತತಃ ।**
**ಆಕಾಶ ಇವ ಪಂಕೇನ ನ ಸ ಪಾಪೇನ ಲಿಪ್ಯತೇ ॥**
(2) **"ಪ್ರಾಣಸಂಶಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ॥ಎನ್ರುನಿಯಮಿತ್ತಾರ್‌ಹಳ್॥**

**ಇದು ಬ್ರಹ್ಮವಿತ್ತುಕ್ಕುಮ್ ತುಲ್ಯಮೆನ್ನುಮಿಡಮ್,** (3) **"ಸರ್ವಾನ್ನಾನುಮತಿಶ್ಚಪ್ರಾಣಾತ್ಯಯೇ ತದ್ದರ್ಶನಾತ್" ಎನ್ಗಿರ ಸೂತ್ರತ್ತಿಲೇ ದೃಷ್ಟಾಂತರೂಪೇಣ ಸಾಧಿತಮಾಯಿತ್ತು.**

**ಆಹೈಯಾಲ್, ಕರ್ತೃತ್ವಮಾತ್ಮಾವುಕ್ಕಿಲ್ಲೈ ಎನ್ರಾದಲ್, ಪಾರತಂತ್ರ್ಯ ಜ್ಞಾನ ಮಾತ್ರತ್ತೈ ಕೊಂಡಾದಲ್, ಬುದ್ಧಿಪೂರ್ವೋತ್ತರಾಘಮ್ ಒರುಪಡಿಕ್ಕುಮ್ ಲೇಪಿಯಾದೆನ್ಗೈಯುಮ್,**

---

ಕರ್ಮಗಳಲ್ಲಿ ಬಂಧುಮಿತ್ರರನ್ನು ನಿರಸನ ಮಾಡಿದರೂ ಅದರಿಂದ ಉಂಟಾದ ಪಾಪವು ಇವನಿಗೆ ಲೇಪಿಸುವುದಿಲ್ಲ ಎಂದು ಹೇಳಿರುವುದೂ ಧರ್ಮಯುದ್ಧ ವಿಷಯ. ಅಲ್ಲದೆ ಬುದ್ಧಿ ಪೂರ್ವೋತ್ತರಾಘವು ಲೇಪಿಸುವುದೆಂದಲ್ಲ.

**ಉಪಭುಕ್ತೌಷದನ್ಯಾಯಾತ್** ಇತ್ಯಾದಿ – ಒಬ್ಬನು ಒಂದು ಸಿದ್ಧೌಷಧವನ್ನು ಸೇವಿಸಿದರೆ ಅದು ತನ್ನ ಮಾಹಾತ್ಮ್ಯದಿಂದ ಉತ್ತರಕಾಲದಲ್ಲಿ ಏರ್ಪಡುವ ಅಪಥ್ಯವನ್ನೆಲ್ಲಾ ಹೋಗಲಾಡಿಸುವುದಿಲ್ಲವೇ. ಆ ರೀತಿಯಲ್ಲಿ ಒಬ್ಬನು ಪ್ರಪತ್ತಿಯನ್ನು ಅನುಷ್ಠಿಸಿದರೆ ಅದು ತನ್ನ ಮಾಹಾತ್ಮ್ಯದಿಂದ ಉತ್ತರಕಾಲಿಕ ಬುದ್ಧಿ ಪೂರ್ವೋತ್ತ ರಾಘವನ್ನೂ ಹೋಗಲಾಡಿಸುತ್ತದೆ. ಇತ್ಯಾದಿ ಚೋದ್ಯಗಳೆಲ್ಲಾ ಪ್ರಪನ್ನನನ್ನು ಕುರಿತು ಹೇಳಿರುವ "ಇಹೈವೇಷಾಂ ಕೇಚಿದುಪ ಕ್ಲೇಶಾ ಭವಂತಿ, ಖಂಜಾ ಭವಂತಿ, ಕಾಣಾ ಭವಂತಿ," "ಅಪಾಯ ಸಂಪ್ಲವೇಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್", ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನ ಶ್ಶರಣಂ ವ್ರಜೇತ್" ಇತ್ಯಾದಿ ಬಹು ಪ್ರಮಾಣಗಳಿಗೆ ವಿರೋಧವು ಏರ್ಪಡುತ್ತದೆಯಾದ್ದರಿಂದ, ಅಂತಹ ಕುತರ್ಕಗಳೆಲ್ಲಾ ನಿರ್ಮೂಲಿತವು.

**ಮನ್ವಾದಿಹಳುಮ್** ಇತ್ಯಾದಿ – ಮನು ಮೊದಲಾದ ಸ್ಮೃತಿಕಾರರುಗಳೂ (1) **ಜೀವಿತಾತ್ಯಯಮಾಪನ್ನಃ,** (2) **ಪ್ರಾಣಸಂಶಯಮಾಪನ್ನಃ** ಇತ್ಯಾದಿಯಾಗಿ ಪ್ರಾಣಸಂಶಯ ಕಾಲದಲ್ಲಿ ಸಿಕ್ಕಿದ ಆಹಾರವನ್ನು ತಿಂದರೂ ಆಕಾಶವು ಕೆಸರಿನಲ್ಲಿ ಬಳಿಯಲ್ಪಡಲಾಗದ ರೀತಿಯಲ್ಲಿಯೂ, ತಾವರೆ ಎಲೆಯಲ್ಲಿ ನೀರು ಅಂಟದಿರುವಂತೆಯೂ, ಪಾಪಗಳು ಅವನಿಗೆ ಲೇಪಿಸುವುದಿಲ್ಲ ಎಂದು ವ್ಯವಸ್ಥೆಗೊಳಿಸಿದ್ದಾರೆ. **ಇದು ಬ್ರಹ್ಮವಿತ್ತುಕ್ಕುಮ್** ಇತ್ಯಾದಿ – **ಈ** ಪ್ರಾಣಾಪದ್ದಶೆಯಲ್ಲಿ ಸಿಕ್ಕಿದ ಆಹಾರವನ್ನು ತಿನ್ನಬಹುದೆಂಬುದು, ಬ್ರಹ್ಮ ವಿತ್ತುಗಳಿಗೂ **ಸಮಾನವಾಗಿ ಅನ್ವಯಿಸುತ್ತದೆ** ಎಂಬುದು (3 **ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್**– ಪ್ರಾಣಸಂಶಯ ಕಾಲದಲ್ಲಿ ಜಾತಿ ಮೊದಲಾದ ವ್ಯತ್ಯಾಸವಿಲ್ಲದೆ ಎಲ್ಲಿ ಬೇಕಾದರೆ ಅಲ್ಲಿ ಲಭಿಸುವ ಅನ್ನವನ್ನು ಊಟ ಮಾಡಬಹುದು ಎಂಬುದನ್ನು ದೃಷ್ಟಾಂತಪೂರ್ವಕ ಸೂತ್ರಕಾರರು ತಿಳಿಸಿರುತ್ತಾರೆ. –ಅದಾಗಿ "ಉಷಸ್ತಿ" ಎಂಬ ಪ್ರಾಣ ವಿದ್ಯೋಪಾಸಕರು ತಮಗೆ ಎಲ್ಲಿಯೂ ಆಹಾರ ಸಿಗದೆ ಇರತಕ್ಕ ಕ್ಷಾಮಕಾಲದಲ್ಲಿ ಒಬ್ಬ ಆನೆ ಪೋಷಕನ ಹತ್ತಿರ ಹೋಗಿ ಅವನು ತಿಂದು ಮಿಕ್ಕ ಎಂಜಲು ಕುಲ್ಮಾಷಗಳನ್ನು (ಬೇಯಿಸಿದ ಹುರುಳಿಯನ್ನು) ಕೇಳಿ ತೆಗೆದುಕೊಂಡು ತಿಂದರು. ಪ್ರಾಣಧಾರಣವಾಯಿತು. ನಂತರ ಅವನು ಕೊಟ್ಟ ನೀರನ್ನು ತಿನ್ನಕೂಡದು, ಉಚ್ಛಿಷ್ಟವನ್ನು ತಿಂದಂತೆ ಯಾಗುತ್ತದೆ ಎಂದು ತಿರಸ್ಕರಿಸಿದರು. **ಆಹೈಯಾಲ್** ಇತ್ಯಾದಿ – ಆತ್ಮಾವಿಗೆ ಪರಾಧೀನ ಕರ್ತೃತ್ವವು ಉಂಟೆಂದು ನಿರೂಪಿಸಲ್ಪಟ್ಟಿರುವುದರಿಂದಲೂ, ನಿಷೇಧ ಶಾಸ್ತ್ರವು ಕರ್ತೃತ್ವವನ್ನು ಅವಲಂಬಿಸಿಯೇ ಇರುವುದರಿಂದಲೂ, ಆತ್ಮಾವಿಗೆ ಕರ್ತೃತ್ವವು ಇಲ್ಲ ಎಂದಾಗಲಿ, ಪಾರತಂತ್ರ್ಯ ಜ್ಞಾನ

---

(1) ಮನುಸ್ಮೃತಿ 6 – 194, (2) ........ 3) ಬ್ರಹ್ಮಸೂತ್ರ (3 - 4 - 27)

ಇತ್ತೈಪ್ಪತ್ತ ಪುನಃ ಪ್ರಪದನಮ್ ವೇಂಡಾ ಎನ್ಗೈಯುಮ್ ಪರಪಕ್ಷಮಾಮ್.

**"ವ್ರಜ" ಇತಿನವಿಧಿಃ- ಕಿಂತು ಸಂಬಂಧ ಜ್ಞಾನೇ ತಾತ್ಪರ್ಯಮಿತಿ ವಾದಸ್ಯ ಖಂಡನಮ್.**

ಇವ್ವಿಡತ್ತಿಲೇ ಶಿಲರ್ "ವ್ರಜ" ಇತ್ಯಾದಿ ವಿಧಿಹಳೈ ಅನ್ಯಪರಙ್ಗಳಾಕ್ಕಿ,

(1) ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪದ್ಯತೇ ।
ಕಿಂತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥"

(2) "ಯಮೋವೈವಸ್ವತೋ ರಾಜಾಯಸ್ತ ವೈಷ ಹೃದಿಸ್ಥಿತಃ ।
ತೇನ ಚೇದ ವಿವಾದಸ್ತೇ ಮಾ ಗಂಗಾಂ ಮಾ ಕುರೂನ್ ಗಮಃ ॥"

(3) "ಆತ್ಮದಾಸ್ಯಂ ಹರೇಃಸ್ವಾಮ್ಯಂ ಸ್ವಭಾವಂಚ ಸದಾಸ್ಮರ" ಇತ್ಯಾದಿಹಳಿಲ್ ತಾತ್ಪರ್ಯ ಗತಿಹಳೈಯುಮ್ ಪರಾಮರ್ಶಿಯಾದೇ ಇವತ್ತೈಕ್ಕೊಂಡು, ಶಾಸ್ತ್ರ ಜನ್ಯಸಂಬಂಧ ಜ್ಞಾನನ್ನೊಳ್ಳಿಯ ವೇರು ಮುಮುಕ್ಷುವುಕ್ಕು ಅನುಷ್ಠೇಯಮಾಯ್ ಇರುಪ್ಪದೊರು ಉಪಾಯಮಿಲ್ಲೈಯೆನ್ಬರ್‌ಹಳ್. ಇದು ಭಕ್ತಿಪ್ರಪತ್ತ್ಯಾದಿ ವಿಧಿ ಸ್ವಾರಸ್ಯ ವಿರುದ್ಧಮ್. ರಾಗ ಪ್ರಾಪ್ತ ಶ್ರವಣ ಮನನಙ್ಗಳಾಲೇ ಸಿದ್ಧಮಾನ

---

ಮಾರ್ಗವನ್ನು ಅಂಗೀಕರಿಸಿಯಾಗಲಿ, ಬುದ್ಧಿ ಪೂರ್ವೋತ್ತರಾಘವು ಯಾವ ರೀತಿಯಲ್ಲೂ ಲೇಪಿಸುವುದಿಲ್ಲವೆಂದೂ ಇದಕ್ಕಾಗಿ ಪುನಃ ಪ್ರಪತ್ತಿಯು ಬೇಡವೆಂದೂ ಹೇಳುವ ಪಕ್ಷಗಳೆಲ್ಲಾ **ಪರಪಕ್ಷಮಾಮ್** – ಭಾಷ್ಯಕಾರ ಸಂಪ್ರದಾಯ ವಿರುದ್ಧಗಳು.

**'ವ್ರಜ' ಎಂಬುದಕ್ಕೆ ವಿಧಿಯಲ್ಲಿ ತಾತ್ಪರ್ಯವಿಲ್ಲ – ಸಂಬಂಧ ಜ್ಞಾನ ವಿನಹ ಬೇರೆ ಯಾವ ಉಪಾಯವನ್ನೂ ಅನುಷ್ಠಿಸಬೇಕಿಲ್ಲವೆಂಬ ಮತದ ಖಂಡನೆ.**

ಇವ್ವಿಡತ್ತಿಲ್ **ಶಿಲರ್** ಇತ್ಯಾದಿ – ಇಲ್ಲಿ ಕೆಲವರು "ವ್ರಜ" ಶರಣಾಗತಿಯನ್ನು ಅನುಷ್ಠಿಸು, ಇತ್ಯಾದಿ ವಿಧಿವಾಕ್ಯಗಳನ್ನು, **ಅನ್ಯಪರಂಗಳಾಕ್ಕಿ** – "ಈ ಅರ್ಥವನ್ನು ತಿಳಿದುಕೋ", ಎಂಬಂತೆ ನನ್ನನ್ನು ಉಪಾಯವಾಗಿ ತಿಳಿದುಕೋ ಎಂದು ಭಗವಂತನೇ ಉಪಾಯವೆಂಬ ಜ್ಞಾನಮಾತ್ರ ಬೋಧನ ಪರವಾಗಿ, ಹೇಳುತ್ತಾರೆ. (1) **ಯೋ ನ್ಯಥಾ ಸಂತಮಾತ್ಮಾನಂ, (2 ಯಮೋವೈವಸ್ವತೋ (3) ಆತ್ಮದಾಸ್ಯಂ ಹರೇಃಸ್ವಾಮ್ಯಂ** ಇತ್ಯಾದಿ ವಚನಗಳ ಆಧಾರದ ಮೇಲೆ ಸಂಬಂಧ ಜ್ಞಾನವೇ ಮೋಕ್ಷಸಾಧಕವೆಂದು ಆಪಾತತಃ ಗ್ರಹಣಮಾಡಿ, ತಾತ್ಪರ್ಯಗತಿಯನ್ನು ಅಂದರೆ ಪ್ರಪತ್ತಿಗೆ ಮೂಲವಾದ ಸಂಬಂಧ ಜ್ಞಾನದ ಪ್ರಾಶಸ್ತ್ಯವನ್ನು ಪರಾಮರ್ಶಿಸುವುದಿಲ್ಲ. ಈ ಪ್ರಮಾಣವಚನಗಳನ್ನು ಕೊಂಡು ಶಾಸ್ತ್ರಜನ್ಯ ಜ್ಞಾನ ವಿನಹ ಬೇರೆ ಮುಮುಕ್ಷುವಿಗೆ ಅನುಷ್ಠೇಯವಾದ ಉಪಾಯವು ಯಾವುದೂ ಇಲ್ಲವೆನ್ನುತ್ತಾರೆ. **ಇದು ಭಕ್ತಿಪ್ರಪತ್ತ್ಯಾದಿ** ಇತ್ಯಾದಿ – ಹೀಗೆ ಹೇಳುವುದು ಭಕ್ತಿ ಪ್ರಪತ್ತಿಗಳನ್ನು ವಿಧಿಸುವ, ಧ್ಯಾಯೀತ, ಉಪಾಸೀತ, ತಮೇವಶರಣಂಗಚ್ಛ, ವ್ರಜ, ಇತ್ಯಾದಿ ವಿಧಿಸ್ವಾರಸ್ಯಕ್ಕೆ

---

(1 ಭಾರತ ಉದ್ಯೋಗ ಪರ್ವ 42 - 35.
ಭಗವಂತನಿಗೆ ಶೇಷಭೂತವಾದ ಆತ್ಮವಸ್ತುವನ್ನು ಸ್ವತಂತ್ರನೆಂದು ತಿಳಿಯುವವನು ಮಹಾ ಪಾಪಿ. ಆತ್ಮಾಪಹಾರ ಚೌರ್ಯವನ್ನು ಮಾಡಿದವನು.

(2) ನಿನ್ನ ಹೃದಯದಲ್ಲಿರುವ ಭಗವಂತನು ಸರ್ವರನ್ನೂ ನಿಯಮಿಸುವವನು. ಸರ್ವಪ್ರಕಾಶಕನು. ಅವನೊಡನೆ ವಿವಾದವಿಲ್ಲದಿದ್ದರೆ ಅಂದರೆ ಆತ್ಮ ಅವನಿಗೆ ಶೇಷಭೂತನಲ್ಲ ಎಂಬ ವಿವಾದವಿಲ್ಲದೆ ಇದ್ದರೆ ಸಾಕು. ಗಂಗೆಗೂ ಕುರುಕ್ಷೇತ್ರಕ್ಕೂ ಪಾಪವನ್ನು ಕಳೆಯಲು ಹೋಗಬೇಕಾದ ಆವಶ್ಯಕವಿಲ್ಲ - ಮನುಸ್ಮೃತಿ – (8 - 92)

(3) ವಿಷ್ಣು ತತ್ವ - ಭಗವಂತನು ಸ್ವಾಮಿ. ನಾನು ದಾಸನು ಎಂಬ ಸ್ವಭಾವ ಜ್ಞಾನವನ್ನು ಸದಾ ಅನುಸಂಧಾನ ಮಾಡು.

ಶಾಸ್ತ್ರ ಜನ್ಯಜ್ಞಾನತ್ತೈವಿಧಿಕ್ಕವುಮ್ ವೇಣ್ಡಾ. ಅವಿಧೇಯಜ್ಞಾನತ್ತೈಮೋಕ್ಷ ಸಾಧನಮಾಹಚ್ಚೊಲ್ಲುವಾರ್ಕ್ಕು ವಿಧಿವಿರೋಧಾದಿದೋಷಙ್ಗಳುಮ್ ವರುಮೆನ್ರುಸಾಧಿತ್ತದಿರೇ

### ಕೇವಲ ಸಂಬಂಧ ಜ್ಞಾನಮೇವ ಮೋಕ್ಷಹೇತುರಿತಿವಾದ ನಿರಾಸನಮ್ ನಿಗಮಯತಿ

ಆನಪಿನ್ಬು ಸರ್ವವಿದ್ಯಾನಿಷ್ಠರಾನ ಮುಮುಕ್ಷುಕ್ಕಳುಕ್ಕುಮ್ ಪೊದುವಾಯ್, ಪರಮ್ಪರಯಾ ಉಪಕಾರಕಮಾನ ಜೀವ ಪರಮಾತ್ಮ ಸಮ್ಬನ್ಧ ಜ್ಞಾನಮ್ ಶಾಸ್ತ್ರತ್ತಾಲೇ ಪಿರನ್ದವನುಕ್ಕು ನಮ್ಮುಡೈಯ ಸ್ವಾಮಿಯಾಯ್ ನಿರತಿಶಯ ಭೋಗ್ಯನಾನ ಶ್ರಿಯಃಪತಿಯೈ ಪ್ರಾಪಿಕ್ಕೈಕ್ಕುವಿರಹೇದೆನ್ಗಿರ ಉಪಾಯಾಕಾಂಕ್ಷೈ ಪಿರನ್ದವಳವಿಲ್ ಇಙ್ಗು ಅವ್ವೋಅಧಿಕಾರಿ ವಿಶೇಷಾನುರೂಪಮಾಹ ವಿಧಿಕ್ಕಪ್ಪಡುಗಿರ ಜ್ಞಾನಾನ್ತರಙ್ಗಳ್ ಭಕ್ತಿಪ್ರಪತ್ತಿಗಳ್. ಅವತ್ತಿಲ್ ಪ್ರಪತ್ತಿಯಾವದು ? ( ) “ಯತ್ಸಂರಕ್ಷತಯಾರ್ಪ್ಯತೇ” ಇತ್ಯಾದಿಹಳಿರ್ಪಡಿಯೇ ಸಪರಿಕರಮಾನ ಸ್ವರಕ್ಷಾಭರ ಸಮರ್ಪಣಮ್ ಇದು ಸಂಬಂಧಾನು ಸಂಧಾನ ಗರ್ಭಮಾಹ ವೇಂಡುಮೆನ್ಗೈಕ್ಕಾಹ ಸಂಬಂಧಜ್ಞಾನಮ್ ಪ್ರಪತ್ತಿ ಎನ್ರು ಶೊನ್ನಾರ್ಹಳತ್ತನೈ. ಇಭ್ಭರನ್ಯಾಸರೂಪ ಪ್ರಪತ್ತಿಯಿನ್ ಸ್ವರೂಪ ಪರಿಕರಾಧಿಕಾರಾದಿಹಳೈ ಮುನ್ಬೇ ಪರಕ್ಕಚ್ಚೊನ್ನೋಮ್.

ಏಕಶಬ್ದಾರ್ಥಂ ದ್ರಾವಿಡಗಾಥಯಾ ಸಂಗೃಹ್ಣಾತಿ

ಶಾದನಮುಮ್ ನರ್ಪಯನುಮ್ ನಾನೇಯಾವನ್, ಶಾದಕನುಮ್ ವಶಮಾಯೆನ್ನೈಪ್ಪತ್ತುಮ್
ಶಾದನಮುಮ್ ಶರಣನ್ರಿಯನ್ರುನಕ್ಕು ಚ್ಚಾದನಙ್ಗಳಿನ್ನಿಲ್ಲೈಕ್ಕೇರಿಡೈಯಿಲ್ ನಿಲ್ಲಾ ।

---

ವಿರುದ್ಧವಾದದ್ದು. ಶಾಸ್ತ್ರಜನ್ಯವಾದ ಸಂಬಂಧ ಜ್ಞಾನವನ್ನೇ ವಿಧಿಸಿದಂತೆ ಇರಲಿ, ಎಂದರೆ **ರಾಗಪ್ರಾಪ್ತ ಶ್ರವಣ ಮನನಂಗಳಾಲೇ** ಇತ್ಯಾದಿ – ರಾಗ – ಇವನ ಆಸೆಯಿಂದ ಪ್ರಾಪ್ತವಾದ ಶ್ರವಣ ಮನನಗಳಿಂದ ಸಿದ್ಧವಾದ ಶಾಸ್ತ್ರಜನ್ಯ ಸಂಬಂಧ ಜ್ಞಾನವನ್ನು ವಿಧಿಸಬೇಕಿಲ್ಲ. **ಅವಿಧೇಯಜ್ಞಾನತ್ತೈ** ಇತ್ಯಾದಿ – ಸಂಬಂಧಜ್ಞಾನವು ವಿಧೇಯವಲ್ಲ. ಇಂತಹ ಅವಿಧೇಯವಾದ ಶಾಸ್ತ್ರಜನ್ಯ ಜ್ಞಾನವನ್ನು ಮೋಕ್ಷಕ್ಕೆ ಸಾಧನವಾಗಿ ಹೇಳುವವರಿಗೆ ವಿಧಿವಿರೋಧಾದಿ ದೋಷಗಳು ಬರುತ್ತವೆ ಎಂಬುದನ್ನು ಹಿಂದೆಯೇ ಸ್ಥಾಪಿಸಿದೆ. ಇದು ಅದ್ವೈತಿಗಳು ಹೇಳುವ ವಾಕ್ಯಾರ್ಥಜ್ಞಾನದಿಂದ ಮೋಕ್ಷವೆಂಬ ಸಿದ್ಧಾಂತಕ್ಕೆ ತುಲ್ಯ. ಆದ್ದರಿಂದ ಸಂಬಂಧ ಜ್ಞಾನವು ಪರಂಪರೆಯಾಗಿ ಉಪಕಾರಕವು. **ಆನಪಿನ್ಬು** ಇತ್ಯಾದಿ – ಅವಿಧೇಯವಾದ ಸಂಬಂಧ ಜ್ಞಾನಮಾತ್ರ ಮೋಕ್ಷ ಸಾಧನವಲ್ಲವಾದ್ದರಿಂದ, ಸರ್ವವಿದ್ಯಾನಿಷ್ಠರಾದ ಮುಮುಕ್ಷುಗಳಿಗೂ ಸಾಮಾನ್ಯವಾಗಿ, ಪರಂಪರೆಯಾಗಿ ಉಪಕಾರಕವಾದ ಜೀವ ಪರಮಾತ್ಮ ಸಂಬಂಧ ಜ್ಞಾನವು ಶಾಸ್ತ್ರದಿಂದ ಏರ್ಪಟ್ಟು, ನಮ್ಮ ಸ್ವಾಮಿಯಾಗಿ ನಿರತಿಶಯ ಭೋಗ್ಯನಾದ **ಶ್ರಿಯಃ ಪತಿಯನ್ನು** ಪ್ರಾಪಿಸಲು ಉಪಾಯವು ಯಾವುದು ಎಂಬ ಆಕಾಂಕ್ಷೆಯು ಉಂಟಾದ ಸಮಯದಲ್ಲಿ **ಇಲ್ಲಿ** ಆಯಾಯಾ ಅಧಿಕಾರಿ ವಿಶೇಷಕ್ಕೆ ಅನುರೂಪವಾಗಿ ವಿಧಿಸಲ್ಪಡುವ ಜ್ಞಾನಾಂತರಗಳು ಭಕ್ತಿ ಪ್ರಪತ್ತಿಗಳು. **ಅವಟ್ರಿಲ್** ಇತ್ಯಾದಿ – ಆ ಭಕ್ತಿಪ್ರಪತ್ತಿಗಳ ಮಧ್ಯೆ, (1) **ಯತ್ ಸ ರಕ್ಷತಯಾಽರ್ಪ್ಯತೇ** – ರಕ್ಷಿಸಲ್ಪಡಲು ಯಾವುದು ಸಮರ್ಪಿಸಲ್ಪಡುತ್ತದೆಯೋ ಅದು ಪ್ರಪತ್ತಿ, ಇತ್ಯಾದಿಗಳಲ್ಲಿ ಹೇಳಿರುವಂತೆ ಸ್ವರಕ್ಷಾ ಭರ ಸಮರ್ಪಣವು ಪ್ರಪತ್ತಿ ಶಬ್ದವಾಚ್ಯವು. **ಇದು ಸಂಬಂಧಾನುಸಂಧಾನಗರ್ಭಮ್** ಇತ್ಯಾದಿ – ಇದು ಸಂಬಂಧ ಜ್ಞಾನಾನುಸಂಧಾನ ಗರ್ಭವಾಗ ಬೇಕೆಂಬುದಕ್ಕಾಗಿ, ಸಂಬಂಧ ಜ್ಞಾನವು ಪ್ರಪತ್ತಿಯೆಂದು ಹೇಳಿರುತ್ತಾರೆಯಷ್ಟೇ. **ಇಭ್ಭರನ್ಯಾಸರೂಪ** ಇತ್ಯಾದಿ – ಈ ಭರನ್ಯಾಸ ರೂಪವಾದ ಪ್ರಪತ್ತಿಯ ಸ್ವರೂಪ, ಪರಿಕರ ಅಂಗಗಳು, ಅಧಿಕಾರವೇ ಮೊದಲಾದವುಗಳನ್ನು, ಪ್ರಪತ್ತಿಯೋಗ್ಯಾಧಿಕಾರ, ಪರಿಕರ ವಿಭಾಗಾಧಿಕಾರ, ಸಾಂಗ ಪ್ರಪದನಾಧಿಕಾರಗಳಲ್ಲಿ ಹಿಂದೆಯೇ ಪರಕ್ಕ – ವಿಸ್ತಾರವಾಗಿ ಹೇಳಿರುವುದಾಗಿ ಆಚಾರ್ಯರು ನಿಗಮಿಸುತ್ತಾರೆ.

### “ಏಕ” ಶಬ್ದಾರ್ಥ ಸಂಗ್ರಹ

**ಶಾದನಮುಮ್ ನರ್ಪಯನುಮ್** ಇತ್ಯಾದಿಯಾಗಿ ಏಕಶಬ್ದದ ಆರು ಅರ್ಥಗಳನ್ನು ಸಂಗ್ರಹಿಸುತ್ತಾರೆ. ಅದಾಗಿ **ಶಾದನಮುಮ್** – ಸಾಧನವೂ, ಪ್ರಾಪಕವು ಎಂದರ್ಥ, **ನರ್ಪಯನುಮ್** – ಒಳ್ಳೆಯ ಫಲವೂ,

**ವೇದನೈಶೇರ್ ವೇರಙ್ಗ ಮಿದನಿಲ್ ವೇಂಡಾ, ವೇರೆಲ್ಲಾ ನಿರ್ಕುಮ್‌ನಿಲೈ ನಾನೇ ನಿರ್ಪನ್,**
**ತೂದನುಮಾನಾದನುಮಾ ಮೆನ್ನೈಪ್ಪತ್ತಿಚ್ಚೋಕಂತೀರೆನ ಉರೈತ್ತಾನ್ ಶೂಡಿಹಿನ್ರಾನೇ ||**

**ಇಪ್ಪಡಿ ಪೂರ್ವಾರ್ಧತ್ತಾಲೇ ಓರಧಿಕಾರವಿಶೇಷತ್ತುಕ್ಕು ದ್ವಯತ್ತಿಲ್ ಪೂರ್ವಖಂಡತ್ತಿಲೇ ಅನುಸಂಧೇಯಮಾಯ್, ಸರ್ವಧರ್ಮಙ್ಗಳುಕ್ಕು ಮುಳ್ಳಪ್ರಭಾವತ್ತೈಯುಮ್, ಅವತ್ತಿಕ್ಕಿಲ್ಲಾದ ಸ್ವಾಸಾಧಾರಣ ಪ್ರಭಾವತ್ತೈಯುಮ್, ಉಡೈತ್ತಾನ ಸಕೃತ್ಕರ್ತವ್ಯೋಪಾಯವಿಶೇಷತ್ತೈ ಅಧಿಕಾರನ್ನೈರಪೇಕ್ಷ್ಯಾದಿ**

---

ಪ್ರಾಪ್ಯವೆಂದರ್ಥ, **ನಾನೇಯಾವನ್** – ನಾನೊಬ್ಬನೇ ಆಗಿದ್ದೇನೆ. ಇದರಿಂದ, 'ಪ್ರಾಪ್ಯಸ್ಯೈವ ಪ್ರಾಪಕತ್ವ' ವೆಂಬ ಅರ್ಥವು ಹೇಳಲ್ಪಟ್ಟಿತು. **ಶಾದಕನುಮ್ ಎನ್‌ವಶಮಾಯ್ ಎನ್ನೈಪ್ಪತ್ತುಮ್** – ಪ್ರಪತ್ತಿಯನ್ನು ಸಾಧಿಸುವ ಕರ್ತಾನವಾದ ಜೀವನೂ, ನಾನು ಕೊಟ್ಟ ಶರೀರೇಂದ್ರಿಯಗಳನ್ನು ಉಪಯೋಗಿಸಿ ಸ್ವತಂತ್ರನಲ್ಲದೆ ನನಗೆ (ಭಗವಂತನಿಗೆ) ಪರವಶನಾಯ್, ನನ್ನನ್ನು ಆಶ್ರಯಿಸುತ್ತಾನೆ. ಇದರಿಂದ 'ಸ್ವಪ್ರಾಧಾನ್ಯ ನಿವಾರಣಮ್' ಎಂಬುದು ತಿಳಿಸಲ್ಪಟ್ಟಿತು **ಶರಣನೆರಿ** – ಶರಣಾಗತಿ ಮಾರ್ಗವೂ, **ಉಮಕ್ಕುಚ್ಚಾದನಮುಮ್ ಅನ್ರು**-ನಿಮಗೆ (ಪ್ರಸಿತ್ಸುವಿಗೆ) ಪ್ರಧಾನಸಾಧನವಲ್ಲ, ಭಗವಂತನ ಕಾಲುಷ್ಯ ನಿವೃತ್ತಿ ಪೂರ್ವಕ ಪ್ರಸನ್ನತೆಯನ್ನುಂಟು ಮಾಡುವ ವ್ಯಾಜಮಾತ್ರ. ಇದರಿಂದ 'ಪ್ರಪತ್ತೇರ್ವ್ಯಾಜಮಾತ್ರತ್ವಂ' – ಎಂಬುದು ವಿವರಿಸಲ್ಪಟ್ಟಿತು. **ಶಾದನಂಗಳ್** – ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳು, **ಇನ್ನಿಲೈಕ್ಕು** – ಈ ಶರಣಾಗತಿಗೆ, **ಓರಿಡ್ಯೆಯಿಲ್‌ನಿಲ್ಲಾ** - ಒಂದು ಸಹಕಾರಿ ಸ್ಥಾನದಲ್ಲಿ ನಿಲ್ಲುವುದಿಲ್ಲ, ಇದರಿಂದ 'ಅನ್ಯೋಪಾಯೈರನನ್ವಯಃ' ಎಂಬುದರ ಅರ್ಥವು ತಿಳಿಸಲ್ಪಟ್ಟಿತು. **ವೇದನೈಶೇರ್** – ದುಃಖದಿಂದ ಕೂಡಿದ, **ವೇರಂಗಮ್** – ಆನುಕೂಲ್ಯ ಸಂಕಲ್ಪಾದ್ಯತಿರಿಕ್ತಗಳಾದ ಕಷ್ಟಸಾಧ್ಯಗಳಾದ ಬೇರೆಯಾವ ಅಂಗಗಳೂ, **ಇದನಿಲ್‌ವೇಂಡಾ** – ಈ ಪ್ರಪತ್ತಿಗೆ ಬೇಕಿಲ್ಲ. **ವೇರೆಲ್ಲಾಮ್ ನಿರ್ಕುಮ್** – ಪ್ರಪತ್ತಿ ವ್ಯತಿರಿಕ್ತಗಳಾದ ಉಪಾಯಗಳೆಲ್ಲಾ ಇರುವ, **ನಿಲೈ** – ಸ್ವಭಾವದಲ್ಲಿ, ಅಂದರೆ ಆ ಇತರ ಉಪಾಯಗಳಿಂದ ಸಾಧಿಸಲ್ಪಡುವ ಪುರುಷಾರ್ಥ ಸ್ಥಾನದಲ್ಲಿ, **ನಾನೇನಿರ್ಪನ್** - ನಾನೊಬ್ಬನೇ ಇರುತ್ತೇನೆ. ಇದರಿಂದ "ಸರ್ವಸಾಧ್ಯೇಷ್ವಭಿನ್ನತಾ" – ಎಂಬುದು ವ್ಯಾಖ್ಯಾತವು. ಇದು ಪಾಪದಲ್ಲಿಯೂ ಶೋಕ ನಿವೃತ್ತಿಯಲ್ಲಿಯೂ ಉಪಯೋಗ ಪಡುತ್ತದೆ **ತೂದನುಮಾ ನಾದನುಮಾನೆನ್ನೈಪ್ಪತ್ತಿ** – **ದೂತನೆಂಬುದರಿಂದ ಸೌಲಭ್ಯ** ಸೌಶೀಲ್ಯಗಳು ದ್ಯೋತಿತ. **ನಾದನು** ಎಂಬುದರಿಂದ ಸ್ವಾಮಿತ್ವ ಪರತ್ವಾದಿಗಳು ಹೇಳಲ್ಪಟ್ಟವು – ಇದರಿಂದ ಸುಲಭನು ಸುಶೀಲನೂ, ಸ್ವಾಮಿಯೂ ಸರ್ವಸ್ಮಾತ್ಪರನೂ ಆದ ನನ್ನನ್ನು ಆಶ್ರಯಿಸಿ ಎಂದರ್ಥ, **ಶೋಕಂತೀರ್** – ನಿನಗೆ ಸಂಭಾವಿತಗಳಾದ ದುಃಖಗಳನ್ನೆಲ್ಲಾ ಬಿಟ್ಟು ಬಿಡು **ಎನಉರೈತ್ತಾನ್** – ಎಂದು ಲೋಕೋಜ್ಜೀವನಾರ್ಥವಾಗಿ ಅರ್ಜುನನನ್ನು ವ್ಯಾಜವಾಗಿಟ್ಟುಕೊಂಡು ಉಪದೇಶಿಸಿದ ಶ್ರೀ ಕೃಷ್ಣ ಪರಮಾತ್ಮನು **ಶೂಡಿಹಿನ್ರಾನೇ** – ಈಗಲೂ ನಮ್ಮನ್ನು ತನ್ನ ವಶಪಡಿಸಿಕೊಳ್ಳಲು ಸುತ್ತಿಕೊಂಡು ಬರುತ್ತಾನೆ. ಅಂದರೆ ಜೀವರುಗಳ ಸ್ವೋಜ್ಜೀವನ ವ್ಯಾಪಾರಕ್ಕಾಗಿ ತಾನಾಗಿಯೇ ಪ್ರವರ್ತಿಸುತ್ತಾನೆ.

**ಚರಮಶ್ಲೋಕದ ಉತ್ತರಾರ್ಧ ವ್ಯಾಖ್ಯಾನ**
**ಉತ್ತರಾರ್ಧಕ್ಕೆ ಪೂರ್ವಾರ್ಧದೊಡನೆ ಸಂಗತಿ.**

ಹೀಗೆ ಚರಮಶ್ಲೋಕದ ಪೂರ್ವಾರ್ಧಕ್ಕೆ ವ್ಯಾಖ್ಯಾನವನ್ನು ಅನುಗ್ರಹಿಸಿ, ಉತ್ತರಾರ್ಧಕ್ಕೆ ವ್ಯಾಖ್ಯಾನವನ್ನು ಆಚಾರ್ಯರು ಅನುಗ್ರಹಿಸಲು ಉಪಕ್ರಮಿಸುತ್ತಾರೆ. **ಇಪ್ಪಡಿ ಪೂರ್ವಾರ್ಧತ್ತಾಲೇ** ಇತ್ಯಾದಿ – ಹೀಗೆ ಚರಮ ಶ್ಲೋಕದ ಪೂರ್ವಾರ್ಧದಿಂದ, **ಓರ್‌ಅಧಿಕಾರಿ ವಿಶೇಷತ್ತುಕ್ಕು** – ಆಕಿಂಚನನಾದ ಅಧಿಕಾರಿಗೆ, ದ್ವಯ ಮಂತ್ರದಲ್ಲಿ ಪೂರ್ವಖಂಡದಲ್ಲಿ ಅನುಸಂಧೇಯವಾಗಿ ಸರ್ವಧರ್ಮಗಳಿಗೂ ಇರುವ ಪ್ರಭಾವವನ್ನೂ ಅವುಗಳಿಗೆ

ವಿವರಣ ಪೂರ್ವಕಮಾಹ ವಿಧಿತ್ತು, ಉತ್ತರಾರ್ಧತ್ತಾಲೇ ದ್ವಯತ್ತಿಲ್ ಉತ್ತರಖಂಡತ್ತಿಲೇ ಫಲತ್ತೈನಮಶ್ಶಬ್ದ ಸಂಕ್ಷಿಪ್ತಾನಿಷ್ಟ ನಿವೃತ್ತಿ ವಿವರಣ ಮುಖತ್ತಾಲೇ ಅರುಳಿಚ್ಚೈಯ್‌ಗಿರಾನ್ ಇಙ್ಗು ಪೂರ್ವಾರ್ಧತ್ತಾಲೇ ಅಧಿಕಾರಕೃತ್ಯತ್ತೈ ಅರುಳಿಚ್ಚೈಯ್‌ದಾನ್; ಉತ್ತರಾರ್ಧತ್ತಾಲೇ ಶರಣ್ಯನಾಯ್ ಸ್ವೀಕೃತಭರನಾನ ತನ್‌ಕೃತ್ಯತ್ತೈ ಅರುಳಿಚೆಯ್‌ದು ಕೃತಕೃತ್ಯನಾನ ಇವನೈತ್ತೇತ್ತುಹಿರಾನ್.

### ಉತ್ತರಾರ್ಧೇ ಅಹಮಿತಿ ಪ್ರಥಮಪದಸ್ಯ ಪ್ರಯೋಜನಮಾಹ

**ಇವ್ವಿಡತ್ತಿಲ್ ಮೋಕ್ಷಯಿಷ್ಯಾಮಿ ಎನ್ಗಿರ** ಉತ್ತಮನಾಲೇ ನಾನೆನ್ರು ತೋತ್ತಾ ನಿರ್ಕ ಮಿಹುದಿಯಾನ **ಅಹಂ ಎನ್ಗಿರಪದಮ್, ಅರ್ಥಸ್ವಭಾವತ್ತಾಲೇ** ಸರ್ವಪಾಪ ವಿಮೋಚನತ್ತುಕ್ಕುರುಪ್ಪಾನ **ಅಘಟಿತಘಟನಾ ಶಕ್ತ್ಯಾದಿಹಳೈ** ವಿವಕ್ಷಿತ್ತು ಸಪ್ರಯೋಜನಮಾಹಿರದು. ಅಪರಾಧಂ ಪಣ್ಣಿನವನೈ ವಿಲಙ್ಗಿಟ್ಟುವೈತ್ತ ಸಮಾಧಿಕದರಿದ್ರನಾನ ನಾನ್, ಒರು ವ್ಯಾಜತ್ತಾಲೇ ಉಲ್ಲಸಿತಕಾರುಣ್ಯನಾಯ್ ಅಪರಾಧತ್ತೈಪ್ಪೊರುತ್ತುವಿಡುಮ್ಪೋದು ವಿಲಕ್ಕ ವಲ್ಲಾರಿಲ್ಲೈ. ವೇರೊರುವನಾಲೇ ಇವನೈ ಮುಕ್ತನಾಕ್ಕವುಮ್ ಒಣ್ಣಾದೆನ್ರು ಇಙ್ಗು ತಾತ್ಪರ್ಯಮ್. ಇವ್ವರ್ಥಮ್ (1) ಮೋಕ್ಷದೋ ಭಗವಾನ್ ವಿಷ್ಣುಃ"

---

ಇಲ್ಲಗೆ ತನಗೇ ಅಸಾಧಾರಣವಾದ ಪ್ರಭಾವವನ್ನೂ, ಉಳ್ಳ ಸಕೃತ್ಕರ್ತವ್ಯವಾದ, **ಉಪಾಯ ವಿಶೇಷತ್ತೈ** - ಪ್ರಪತ್ತಿರೂಪ ಉಪಾಯವನ್ನು ಅಧಿಕಾರ ನೈರಪೇಕ್ಷ್ಯಾದಿ ವಿವರಣ ಪೂರ್ವಕವಾಗಿ, "ಶರಣಂ ವ್ರಜ" ಎಂದು ಕೃಷ್ಣ ಪರಮಾತ್ಮನು ವಿಧಿಸಿದ್ದಾನೆ. **ಉತ್ತರಾರ್ಧತ್ತಾಲೇ** ಇತ್ಯಾದಿ – ಚರಮಶ್ಲೋಕದ ಉತ್ತರಾರ್ಧದಿಂದ ದ್ವಯಮಂತ್ರದ ಉತ್ತರ ಖಂಡದಲ್ಲಿ ಫಲವನ್ನು ನಮಶ್ಶಬ್ದದಲ್ಲಿ ಸಂಕ್ಷಿಪ್ತವಾದ ಅನಿಷ್ಟ ನಿವೃತ್ತಿ ವಿವರಣ ಪೂರ್ವಕ "ಅಹಂತ್ವಾಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂದು ಕೃಪೆಮಾಡಿ ಹೇಳಿರುತ್ತಾನೆ. **ಇಂಗು ಪೂರ್ವಾರ್ಧತ್ತಾಲೇ** ಇತ್ಯಾದಿ – **ಪೂರ್ವಾರ್ಧದಲ್ಲಿ** ಅಕಿಂಚನನು ಮಾಡಬೇಕಾದ ಪ್ರಪತ್ತಿ ರೂಪ **ಕೃತ್ಯವನ್ನು** ಹೇಳಿರುತ್ತಾನೆ. **ಉತ್ತರಾರ್ಧತ್ತಾಲೇ** ಇತ್ಯಾದಿ – ಉತ್ತರಾರ್ಧದಿಂದ ಶರಣ್ಯನಾಗಿ ಸ್ವೀಕೃತ ಭರನಾದ ತನ್ನ ಕೃತ್ಯವನ್ನು ಕೃಪೆಯಿಂದ ಹೇಳಿ ಕೃತಕೃತ್ಯನಾದ ಅರ್ಜುನನ್ನು **ತೇಟ್ರುಹಿರಾನ್** - ಶೋಕ ನಿವೃತ್ತಿ ಪೂರ್ವಕ ಸಮಾಧಾನ ಪಡಿಸುತ್ತಾನೆ.

### "ಅಹಂ" ಶಬ್ದಾರ್ಥ

**ಇಂಗು ಮೋಕ್ಷಯಿಷ್ಯಾಮಿ** ಇತ್ಯಾದಿ – ಇಲ್ಲಿ "ಮೋಕ್ಷಯಿಷ್ಯಾಮಿ" ಎಂಬಲ್ಲಿಯ ಉತ್ತಮ ಪುರುಷದಿಂದಲೇ ನಾನು ಎಂದು **"ಅಹಂ"** ಶಬ್ದವು ಆಕ್ಷಿಪ್ತವಾಗಿರುವಾಗ, **ಅಹಂ** ಶಬ್ದವನ್ನು ಪೃಥಕ್ಕಾಗಿ ಹೇಳ**ಬೇಕಾದದ್ದೇನಿದೆ**, ಎಂದರೆ, ಈ '**ಅಹಂ**' ಶಬ್ದವು ಅರ್ಥಸ್ವಭಾವದಿಂದ, ಸವ ಪಾಪ ವಿಮೋಚನೆಗೆ ಕಾರಣವಾದ ಅಘಟಿತ ಘಟನಾ ಸಾಮರ್ಥ್ಯ, ಸಾರ್ವಜ್ಞ್ಯಾದಿ ಗುಣಗಳನ್ನು ವಿವಕ್ಷಿಸಿ ಪ್ರಯೋಜನವುಳ್ಳದ್ದಾಗುತ್ತದೆ. **ಅಪರಾಧಂ ಪಣ್ಣಿನವನೈ** ಇತ್ಯಾದಿ - ಅಪರಾಧಗಳನ್ನು ಮಾಡಿದವನನ್ನು ಅಘಟಿತ ಘಟನಾ ಸಾಮರ್ಥ್ಯದಿಂದ **ವಿಲಂಗಿಟ್ಟುವೈತ್ತ** - ಬೇಡಿಹಾಕಿಟ್ಟ, **ಸಮಾಧಿಕ ದರಿದ್ರನಾನ** ಇತ್ಯಾದಿ – ನನಗೆ ಸಮರೋ, ಮೇಲ್ಪಟ್ಟವರೋ ಇಲ್ಲದೇ ಇರುವ, ನಾನೊಬ್ಬನೇ ಪ್ರಪತ್ತಿ ರೂಪವಾದ ಒಂದು ವ್ಯಾಜದಿಂದ, **ಉಲ್ಲಸಿತಕಾರುಣ್ಯನಾಯ್** - ಕರುಣೆಯು ಹೆಚ್ಚಾಗಿ, ಅಪರಾಧವನ್ನು ಕ್ಷಮಿಸಿ ಬಿಡುವಾಗ, ಅದನ್ನು ತಡೆಯಲು ಸಾಮರ್ಥ್ಯವುಳ್ಳವರು ಯಾರೂ ಇಲ್ಲ. **ವೇರೊರುವನಾಲುಮ್** ಇತ್ಯಾದಿ – ಬೇರೊಬ್ಬನಿಂದ ಈ ಸಂಸಾರಿ ಚೇತನನ್ನು ಮುಕ್ತನಾಗಿ ಮಾಡಲೂ ಸಾಧ್ಯವಿಲ್ಲವೆಂದು ಈ "**ಅಹಂ**" ಶಬ್ದಕ್ಕೆ ತಾತ್ಪರ್ಯ. **ಇವ್ವರ್ಥಮ್** ಇತ್ಯಾದಿ – ಈ ಅರ್ಥವು, 1) **ಮೋಕ್ಷದೋ**

---

1) ಪು. ತಿ. ಸೋ.

(2) "ಪಶವಃ ಪಾಶಿತಾಃ ಪೂರ್ವಂ ಪರಮೇಣ ಸ್ವಲೀಲಯಾ ।
ತೇನೈವಮೋಚನೀಯಾಸ್ತೇ ನಾನ್ಯೈರ್ಮೋಚಯಿತುಂ ಕ್ಷಮಾಃ ॥
ಇತ್ಯಾದಿಹಳಿಲೇ ಪ್ರಸಿದ್ಧಮ್.

ಇವ್ವಹಂ ಎನ್ಗಿರಪದತ್ತಿಲ್ ಸಹಜಕಾರುಣ್ಯಾದಿಹಳ್ ಪೇರಣಿಯಾಯ್ ಪ್ರಪತ್ತಿಯಡಿಯಾಹ ವಂದ ಪ್ರಸಾದ ವಿಶೇಷಂ ಇಳವಣಿಯಾಯ್ ನಿರಂಕುಶಮಾನ ಸ್ವಾತಂತ್ರ್ಯಮ್ ಸರ್ವವಿರೋಧಿ ನಿರಾಕರಣಾರ್ಥಮಾಹ ಮುನ್ನೇನಿರ್ಕಿರದು. ಅದು ಎಙ್ಗನೇಯೆನ್ನಿಲ್ ? ಸಹಜಕಾರುಣ್ಯ ಮಲ್ಪ ವ್ಯಾಜತ್ತೈ ಕ್ಕೊಣ್ಡು ಅನಂತಾಪರಾಧಙ್ಗಳೈ ಅನಾದರಿಕ್ಕುಮ್ಪಡಿಯಾನ ಪ್ರಸಾದತ್ತೈ ಉಣ್ಡಾಕ್ಕುಹಿರದು. ಇಪ್ಪ್ರಸಾದವಿಶೇಷಮ್ ಕಾರುಣ್ಯೋಪಶ್ಲಿಷ್ಟಮಾಯ್ ಕ್ಕೊಣ್ಡುನಿರಙ್ಕುಶ ಸ್ವಾತಂತ್ರ್ಯತ್ತೈ ಆಶ್ರಿತರುಡೈಯ ಸರ್ವವಿರೋಧಿ ನಿರಾಕರಣತ್ತುಕ್ಕುರುಪ್ಪಾಕ್ಕುಹಿರದು.

### ಅಹಂ ಶಬ್ದೇನ ನಿರಪೇಕ್ಷ ಕರ್ತೃತ್ವಮ್ ಅವಧಾರಣಮುಖೇಫಲಿತಮ್

ಇಪ್ಪಡಿ ಸರ್ವಪಾಪ ವಿಮೋಚನತ್ತುಕ್ಕು ಅಪೇಕ್ಷಿತಮಾನ ಸರ್ವಾಕಾರತ್ತಾಲುಮ್ ವಿಶಿಷ್ಟನಾನ ವೀಶ್ವರನುಡೈಯ ನಿರಪೇಕ್ಷಕರ್ತೃತ್ವ ತತ್ಪರಮಾನ "ಅಹಂ" ಶಬ್ದತ್ತಿಲೇ ಅವಧಾರಣಂ ಫಲಿತಮ್.

---

**ಭಗವಾನ್ವಿಷ್ಣುಃ (2) ಪಶವಃ ಪಾಶಿತಾಃಪೂರ್ವಂ.** ಇತ್ಯಾದಿ ಪ್ರಮಾಣ ವಾಕ್ಯಗಳಿಂದ ಭಗವದ್ವಿಷ್ಣುವೇ ಮೋಕ್ಷವನ್ನು ಕೊಡುವವನು, ಪರಮನು ತನ್ನ ಲೀಲಾರ್ಥವಾಗಿ ಕಟ್ಟಿಹಾಕಿರುವ ಪಶುಗಳನ್ನು (ಬದ್ಧ ಜೀವಿಗಳನ್ನು) ತಾನೇ ಬಿಡಿಸಬಲ್ಲನು ಇತರರಿಂದ ಸಾಧ್ಯವಿಲ್ಲ, – ಎಂದು ಪ್ರಸಿದ್ಧವು.

**ಇವ್ವಹಂ ಎನ್ಗಿರ ಪದತ್ತಿಲ್** ಇತ್ಯಾದಿ – ಈ ಅಹಂ ಎಂಬ ಪದದಲ್ಲಿ ಸಹಜ ಕಾರುಣ್ಯಾದಿಗಳು **ಪೇರಣಿಯಾಯ್** – ಪ್ರಬಲ ಸಹಕಾರಿಯಾದ, ಮೂಲಬಲವಾಗಿ, ಪ್ರಪತ್ತಿಯು ಕಾರಣವಾಗಿ ಏರ್ಪಟ್ಟ ಪ್ರಸಾದ ವಿಶೇಷವು **ಇಳವಣಿಯಾಯ್** – ಆಗಂತುಕ ಸಹಕಾರಿಯಾಗಿ, ನಿರಂಕುಶವಾದ ಸ್ವಾತಂತ್ರ್ಯವು, ಸರ್ವವಿರೋಧಿ ನಿರಾಕರಣಾರ್ಥವಾಗಿ, ಮುಂದೆ ನಿಲ್ಲುತ್ತದೆ. ಇದನ್ನು ವಿವರಿಸುತ್ತಾರೆ.

**ಅದೆಂಗನೇಯೆನ್ನಿಲ್** – ಅದಾಗಿ - **ಸಹಜಕಾರುಣ್ಯಮ್** ಇತ್ಯಾದಿ - ಸಹಜಕಾರುಣ್ಯವು – ತನಗೆ ಒಂದು ಕಾರಣಾಂತರವನ್ನು ಅಪೇಕ್ಷಿಸದೇ ಸಹಜವಾಗಿ ಪ್ರಧಾನ ಕಾರಣವಾಗಿದ್ದುಕೊಂಡು ಕರ್ತಾವಿಗೆ ತಿಳಿಯದ ಯಾದೃಚ್ಛಿಕ ಸುಕೃತಾದಿಗಳನ್ನು ಬಳಸಿ ಭಕ್ತಿ ಪ್ರಪತ್ತಿರೂಪ ಉಪಾಯಾದಿಗಳಲ್ಲಿ ಮೂಡಿಸಿ ಭಗವಂತನ ಅನುಗ್ರಹವನ್ನುಂಟು ಮಾಡುವುದರಿಂದ ಮೂಲ ಬಲ. ಇದು ಭಕ್ತಿಪ್ರಪತ್ತಿರೂಪ ಉಪಾಯಾದಿಗಳನ್ನು ವ್ಯಾಜವಾಗಿಟ್ಟುಕೊಂಡು ಅನಂತಾಪರಾಧಗಳನ್ನು ಅನಾದರಿಸುವ ಪ್ರಸನ್ನತೆಯನ್ನುಂಟು ಮಾಡುತ್ತದೆ. **ಇಪ್ಪ್ರಸಾದ ವಿಶೇಷಮ್** ಇತ್ಯಾದಿ – ಉಪಾಯಾನುಷ್ಠಾನದಿಂದ ಏರ್ಪಟ್ಟ ಈ ಅನುಗ್ರಹ ವಿಶೇಷವು, ಕಾರುಣ್ಯದಿಂದ ಕೂಡಿ, ಭಗವಂತನ ನಿರಂಕುಶ ಸ್ವಾತಂತ್ರ್ಯವನ್ನು ಆಶ್ರಿತರ ಸರ್ವ ವಿರೋಧಿಗಳನ್ನು ಹೋಗಲಾಡಿಸಲು, ಕಾರಣವನ್ನಾಗಿ ಮಾಡುತ್ತದೆ. ಇಪ್ಪಡಿ ಇತ್ಯಾದಿ - ಹೀಗೆ ಸರ್ವ ಪಾಪ ವಿಮೋಚನಕ್ಕೆ ಅಪೇಕ್ಷಿತವಾದ ಸರ್ವಾಕಾರದಿಂದಲೂ ವಿಶಿಷ್ಟನಾದ ಈಶ್ವರನ ನಿರಪೇಕ್ಷ ಕರ್ತೃತ್ವ ತತ್ಪರವಾದ **ಅಹಂ** ಶಬ್ದದಲ್ಲಿ, ಅಹಮೇವ- ನಾನೇ ಎಂದು ಅವಧಾರಣವು ಫಲಿತ. ಅಂದ ಹಾಗೆ "ಮಾಮೇಕಂ ಶರಣಂ ವ್ರಜ" ಎಂಬಲ್ಲಿ

---

1) 2) ವಿ. ತತ್ವಮ್ (1-2-10) ಪಶುಗಳಂತೆ ಇರುವ ಬದ್ಧ ಜೀವರು ಪರಮ ಪುರುಷನಿಂದ ಲೀಲಾರ್ಥವಾಗಿ ಸಂಸಾರದಲ್ಲಿ ಕಟ್ಟಲ್ಪಟ್ಟಿದ್ದಾರೆ. ಇವರುಗಳು ಆ ಭಗವಂತನಿಂದಲೇ ಸಂಸಾರಬಂಧದಿಂದ ಬಿಡಿಸಲ್ಪಡಬೇಕು. ಇತರರಿಂದ ಬಿಡಿಸಲು ಸಾಧ್ಯವಿಲ್ಲ

## ಅಥ "ತ್ವಾ" ಶಬ್ದಾರ್ಥಪಾಹ

**"ತ್ವಾ" ಎನ್ರುದು, "ನತ್ವೇವಾಹಂ" ಮುದಲಾನ ಉಪದೇಶಪರಂಪರೈಯಾಲೇ ಚಿದಚಿದೀಶ್ವರ ತತ್ವತ್ರಯ ವಿವೇಕಂ ಪಿರನ್ದು, ಐಶ್ವರ್ಯಾದಿ ಪುರುಷಾರ್ಥಙ್ಗಳಿನುಡೈಯ ಅಲ್ಪತ್ವಾಸ್ಥಿರತ್ವಾದಿ ದೋಷಂಗಳೈತ್ತೆಳಿನ್ದು, ಮತ್ಪ್ರಾಪ್ತಿ ರೂಪಮಾನ ಪರಮಪುರುಷಾರ್ಥತ್ತೈ ಪ್ಪೆರವೇಣುಂ ಮೆನ್ರಭಿನಿವಿಷ್ಟನಾಯ್, ಇದುಕ್ಕು ಉಪದಿಷ್ಟಮಾನ ದುಷ್ಕರೋಪಾಯಾನ್ತರತ್ತಿಲ್ ತುವಕ್ಕತ್ತು, ಪ್ರಾಪ್ಯನಾಯ್ ಸರ್ವವಿರೋಧಿ ನಿರಾಕರಣಕ್ಷಮನಾನ ಎನ್‌ಪಕ್ಕಲಿಲೇ ಭರನ್ಯಾಸಂ ಪಣ್ಣಿ ಕೃತಕೃತ್ಯನಾಯ್ ಕೋಲಿನ ಫಲ ಲಾಭತ್ತೈಪ್ಪೆತ್ತ ಇನಿಯೊರು ಕರ್ತವ್ಯಾಂತರತ್ತಿಲ್ ಪ್ರಾಪ್ತಿಯಿಲ್ಲಾದ ಉನ್ನೈ, ಎನ್ರಪಡಿ.**

---

ಮಾಂ - ನನ್ನನ್ನು ನಿರಪೇಕ್ಷೋಪಾಯತ್ವನನ್ನಾಗಿ ಅಧ್ಯವಸಾಯ ಮಾಡಿ ಭರನ್ಯಾಸವನ್ನು ಮಾಡೆಂಬ ವಿಧಿಬಲದಿಂದ, ಭರವನ್ನು ಸ್ವೀಕರಿಸು ಎಂದು ನಿರಪೇಕ್ಷೋಪಾಯತ್ವವೂ ಸಿದ್ಧವಾಗಿ ಅಕಿಂಚನನಿಗೆ ಸಕೃತ್ಪ್ರಪದನಕ್ಕಿಂತ ಅಧಿಕವಾದ ಯಾವ ಪ್ರಯತ್ನವನ್ನೂ ಮಾಡಬೇಕಿಲ್ಲವೆಂದು ತಾತ್ಪರ್ಯ. ಆದರಿಂದಾಗಿ ಪ್ರಪನ್ನನಿಗೆ ಪ್ರಯತ್ನಾಂತರವನ್ನು ಅಪೇಕ್ಷಿಸದೇನೆ "ಅಹಮೇವ ಮೋಕ್ಷಯಿಷ್ಯಾಮಿ" ನಾನೇ ಸಂಸಾರ ಬಂಧದಿಂದ ಬಿಡಿಸುತ್ತೇನೆ ಎಂಬುದು ಅವಧಾರಣದಿಂದ ಫಲಿತವು, ಎಂದು ಅನುಗ್ರಹಿಸಲ್ಪಟ್ಟಿತು

ಇಲ್ಲಿ "ಮೋಕ್ಷಯಿಷ್ಯಾಮಿ" ಎಂಬಲ್ಲಿ ನೈರಪೇಕ್ಷ್ಯವು ಗರ್ಭಿತವಾಗಿ ವ್ಯಾಖ್ಯಾನ ಮಾಡಿರುವುದರಿಂದ "ಭರಸ್ವೀಕಾರಾತ್ಮಕವಾದ ಅನುಗ್ರಹವು ಮೊದಲು ಉಂಟಾಗುತ್ತದೆ, ನಂತರ ಮೋಕ್ಷ ಹೇತುವಾದ ಅನುಗ್ರಹವು ಉಂಟಾಗುತ್ತದೆ, ಎಂದು ಕೆಲವರು ಕಲ್ಪಿಸಿರುವುದು ನಿರವಕಾಶೀಕೃತವು. ಶರಣಂವ್ರಜ, ಮೋಕ್ಷಯಿಷ್ಯಾಮಿ, ಎಂಬುದರಿಂದ ಸಾಕ್ಷಾತ್ಫಲ ಹೇತು ಭೂತ ಪ್ರಸಾದವೇ ಪ್ರಪತ್ತಿಯಿಂದ ಉಂಟಾಗುತ್ತದೆ ಎಂದು ಸ್ವರಸತರವಾಗಿ ತಿಳಿಯಲ್ಪಡುತ್ತದೆ. ಆದರಿಂದ ವ್ಯವಧಾನ ಕಲ್ಪನವು ಅನ್ಯಾಯ.

### "ತ್ವಾ" ಶಬ್ದಾರ್ಥ

**"ತ್ವಾ" ಎನ್ರದು** ಇತ್ಯಾದಿ – 'ತ್ವಾ' ಎಂಬುದು, "ನತ್ವೇವಾಹಂ" ಮೊದಲಾದ ಉಪದೇಶ ಪರಂಪರೆಯಿಂದ ಚಿದಚಿದೀಶ್ವರ ತತ್ವತ್ರಯ ವಿವೇಕವು ಉಂಟಾಗಿ ಐಶ್ವರ್ಯಾದಿ ಪುರುಷಾರ್ಥಗಳ ಅಲ್ಪತ್ವಾಸ್ಥಿರತ್ವಾದಿ ದೋಷಗಳನ್ನು ತೆಳುವಾಗಿ ತಿಳಿದು, ಮತ್ಪ್ರಾಪ್ತಿರೂಪವಾದ ಪರಮಪುರುಷಾರ್ಥವನ್ನು ಹೊಂದಬೇಕೆಂದು ಅಭಿನಿವೇಶವುಳ್ಳವನಾಗಿ **ಇದುಕ್ಕು ಪದಿಷ್ಟಮಾನ ದುಷ್ಕರೋಪಾಯತ್ತಿಲ್‌ತುವಕ್ಕಟ್ರು** – ಇದಕ್ಕಾಗಿ ಉಪದೇಶಿಸಲ್ಪಟ್ಟ ಕಷ್ಟಸಾಧ್ಯವಾದ ಭಕ್ತ್ಯುಪಾಯದಲ್ಲಿ ಸಂಬಂಧವನ್ನು ಬಿಟ್ಟು. ಸರ್ವವಿರೋಧಿಗಳನ್ನೂ ಹೋಗಲಾಡಿಸಲು ಶಕ್ತನಾದ, **ಎನ್‌ಪಕ್ಕಲಿಲೇ** ಇತ್ಯಾದಿ – ನನ್ನಲ್ಲಿ (ಭಗವಂತನಲ್ಲಿ) ಭರನ್ಯಾಸವನ್ನು ಮಾಡಿ ಕೃತಕೃತ್ಯನಾಗಿ ತಾನು ಅಪೇಕ್ಷಿಸಿದ ಫಲ ಲಾಭಕ್ಕಾಗಿ ಬೇರೆ ಯಾವ ಕರ್ತವ್ಯದಲ್ಲಿಯೂ ಪ್ರವೇಶಿಸದೆ ಇರುವ "ನಿನ್ನನ್ನು" ಎಂದರ್ಥ. ಆದಾಗಿ ಗೀತೆಯಲ್ಲಿ "ನತ್ವೇವಾಹಂ" ಎಂದಾರಂಭಿಸಿ ಮೊದಲು ಚೇತನನು ಅಚೇತನಕ್ಕಿಂತಲೂ, ಈಶ್ವರನಿಗಿಂತಲೂ ಬೇರೆ ಎಂಬುದಾದ ಚಿದಚಿದೀಶ್ವರ ವಿವೇಕವನ್ನು ಪಡೆದು, "ಜ್ಞಾನೀತ್ವಾತ್ಮೈವ ಮೇಮತಮ್", "ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂಪ್ರಪದ್ಯತೇ । ವಾಸುದೇವಸ್ಸರ್ವಮ್", ಇತ್ಯಾದ್ಯುಪದೇಶದಿಂದ ಐಶ್ವರ್ಯಾದಿಗಳಲ್ಲಿ ವಿರಕ್ತನಾಗಿ ಭಗವತ್ಪ್ರಾಪ್ತಿಯಲ್ಲಿ ಆಸೆಯುಳ್ಳವನಾಗಿ, ಅದಕ್ಕೆ ಉಪಾಯವಾದ "ಮನ್ಮನಾಭವಮದ್ಭಕ್ತಃ, ಎಂದು ಹೇಳಿದ ಭಕ್ತ್ಯುಪಾಯದಲ್ಲಿ, ಅಶಕ್ತನಾಗಿ ಪ್ರಾಪ್ಯನೂ ಸಮರ್ಥನೂ ಆದ ಭಗವಂತನಲ್ಲಿ "ಶರಣಂವ್ರಜ" ಎಂದು ಹೇಳಿದಂತೆ ಶರಣಾಗತಿಯನ್ನು ಮಾಡಿ, "ಸರ್ವಧರ್ಮಾನ್ ಪರಿತ್ಯಜ್ಯ" ಎಂದು ಕರ್ತವ್ಯಾಂತರ ಶೂನ್ಯನಾದ

## ಸರ್ವಪಾಪೇಭ್ಯಃ ಇತ್ಯಸ್ಯಾರ್ಥಮಾಹ

**ಇಪ್ಪಡಿ ಬಂಧಮೋಕ್ಷಶಕ್ತನಾನ ಮೋಕ್ಷಪ್ರದನೈಯುಂ, ಅಶಕ್ತನಾಯವನ್ ಪಕ್ಕಲಿಲೇ ನ್ಯಸ್ತಭರನಾನ ಮುಮುಕ್ಷುವೈಯುಂ ಶೊಲ್ಲಿ, ಮೇಲ್ "ಸರ್ವಪಾಪೇಭ್ಯಃ" ಎನ್ರು ಬಂಧಕಙ್ಗಳೈ ಚ್ಚೊಲ್ಲುಹಿರದು. ಪಾಪಮಾವದು ? ಶಾಸ್ತ್ರವೇದ್ಯಮಾನ ಅನರ್ಥಸಾಧನಮ್. ಅನರ್ಥಮಾವದು ? ಪ್ರತಿಕೂಲಪ್ರಾಪ್ತಿಯುಂ. ಅನುಕೂಲ ನಿವೃತ್ತಿಯುಂ. ಇಙ್ಗು "ಪಾಪ ಶಬ್ದಮ್ ಮುಮುಕ್ಷು ವೈಪ್ಪತ್ತ ಅನಿಷ್ಟ ಫಲಙ್ಗಳಾನ ಸಾಂಸಾರಿಕ ಪುಣ್ಯಂಗಳೈಯುಂ ಶೊಲ್ಲುಹಿರದು.**

---

ಅಭಿಮುಖ ಚೇತನನಾದ ಅರ್ಜುನನ ವ್ಯಾಜದಿಂದ ಪ್ರಪನ್ನನನ್ನು ಕುರಿತು **"ತ್ವಾ"** ಎಂದು ಕೃಷ್ಣ ಪರಮಾತ್ಮನು ಹೇಳುತ್ತಾನೆಂದು ತಾತ್ಪರ್ಯ.

### "ಸರ್ವಪಾಪೇಭ್ಯಃ" ಶಬ್ದಾರ್ಥ

**ಇಪ್ಪಡಿ ಬಂಧಮೋಕ್ಷ ಶಕ್ತನಾನ** ಇತ್ಯಾದಿ - ಹೀಗೆ ಸಂಸಾರದಲ್ಲಿ ಬಂಧಿಸಲೂ, ಅದರಿಂದ ಬಿಡಿಸಲೂ ಶಕ್ತನಾದ ಮೋಕ್ಷ ಪ್ರದನನ್ನೂ, ಅಶಕ್ತನಾಗಿ ಅವನಲ್ಲಿ ನ್ಯಸ್ತಭರನಾದ ಮುಮುಕ್ಷುವನ್ನೂ ಹೇಳಿ, ಅನಂತರ, "**ಸರ್ವಪಾಪೇಭ್ಯಃ**" ಎಂದು ಬಂಧಕಗಳನ್ನು ತಿಳಿಸುತ್ತಾರೆ. **ಪಾಪಮಾವದು** ಇತ್ಯಾದಿ – ಪಾಪವೆಂದರೆ ಶಾಸ್ತ್ರದಿಂದ ತಿಳಿಯಲ್ಪಡುವ ಅನರ್ಥ ಸಾಧನ. **ಅನರ್ಥಮಾವದು** – ಅನರ್ಥವೆಂದರೆ ಪ್ರತಿಕೂಲ ಪ್ರಾಪ್ತಿ ಮತ್ತು ಅನುಕೂಲ ನಿವೃತ್ತಿ. **ಇಂಗು ಪಾಪಶಬ್ದಮ್** ಇತ್ಯಾದಿ – ಇಲ್ಲಿ "ಪಾಪ" ಶಬ್ದವು ಮುಮುಕ್ಷುವನ್ನು ಉದ್ದೇಶಿಸಿ ಅನಿಷ್ಟ ಫಲಗಳಾದ ಸಾಂಸಾರಿಕ ಪುಣ್ಯಗಳನ್ನೂ ಹೇಳುತ್ತದೆ. ಮುಮುಕ್ಷುವಿಗೆ ಪಾಪಗಳು ಹೇಗೆ ಮೋಕ್ಷ ಪ್ರತಿಬಂಧಕಗಳಾಗಿ ಸಂಸಾರದಲ್ಲೇ ಇರಿಸುವುವೆಯೋ ಹಾಗೆ ಪುಣ್ಯಗಳೂ ಸ್ವರ್ಗಾದಿ ಸುಖಗಳಲ್ಲೇ ಇರಿಸಿ ಮೋಕ್ಷಪ್ರತಿಬಂಧಕಗಳಾಗುತ್ತವೆ ಆದ್ದರಿಂದ ಪಾಪಶಬ್ದವು ಈ ಪ್ರಕರಣದಲ್ಲಿ "ಪುಣ್ಯ ಪಾಪ"ಗಳೆರಡನ್ನೂ ವಿವಕ್ಷಿಸುತ್ತದೆ. ಇದಕ್ಕೆ ಅನುಗುಣವಾದ ಲಕ್ಷಣವನ್ನು ಪಾಪಶಬ್ದಕ್ಕೆ ಆಚಾರ್ಯರು ಅನುಗ್ರಹಿಸಿದ್ದಾರೆ. ಪ್ರತಿಕೂಲ ಪ್ರಾಪ್ತಿ – ಅನಿಷ್ಟದ ಪ್ರಾಪ್ತಿ, ಅನುಕೂಲ ನಿವೃತ್ತಿ – ಇಷ್ಟವಾದ ಸಾಂಸಾರಿಕ ಸುಖಾದಿಗಳ ನಿವೃತ್ತಿ

"ಪಾಪವೆಂದರೆ ನಾವು ಮಾಡಿದ ಶಾಸ್ತ್ರ ವಿರೋಧವಾದ ತಪ್ಪು ಕೆಲಸದಿಂದ ಏರ್ಪಟ್ಟ ಕೋಪ. ಈ ಕೋಪವು ಲಕ್ಷ್ಮಿಗೆ ಉಂಟಾಗುವುದೇ ಇಲ್ಲ. ಏಕೆಂದರೆ ಅವಳು 'ನಿತ್ಯಮಜ್ಞಾತ ನಿಗ್ರಹಾಮ್' ಎಂದು ಕೋಪವೇನೆಂಬುದನ್ನೇ ತಿಳಿಯದವಳು. ಆದ್ದರಿಂದ ಅವಳು ಪಾಪಗಳಿಂದ ಬಿಡಿಸುತ್ತಾಳೆಂಬ ಪ್ರಸಕ್ತಿಯೇ ಇಲ್ಲವಾಗಿ, "ಮೋಕ್ಷಯಿಷ್ಯಾಮಿ" ಎಂಬ ಸಂಕಲ್ಪವನ್ನು ಭಗವಂತನೊಬ್ಬನೇ ಮಾಡುತ್ತಾನೆ. ಲಕ್ಷ್ಮಿಯು ಮಾಡುವುದಿಲ್ಲ. ಇದರಿಂದಾಗಿ ಮೋಕ್ಷ ಪ್ರದತ್ವರೂಪ ಉಪಾಯತ್ವವು ಲಕ್ಷ್ಮಿಗೆ ಇಲ್ಲ", ಎಂದು ಕೆಲವರು ಚೋದ್ಯ ಮಾಡುತ್ತಾರೆ. ಇದು ಸರಿಯಲ್ಲ. ಹೇಗೆಂದರೆ "ಪಾಪ" ಶಬ್ದದಿಂದ ಪುಣ್ಯಗಳೂ ವಿವಕ್ಷಿತಗಳು. ಜೀವನು ಮಾಡಿರುವ ಸುಕೃತ ವಿಶೇಷಗಳಿಗೆ ಅನುಗ್ರಹ ಪೂರ್ವಕವಾಗಿ ಐಶ್ವರ್ಯ ಕೈವಲ್ಯಗಳನ್ನು ಲಕ್ಷ್ಮಿಯೂ ಕೊಡುತ್ತಾಳೆಂಬುದು "ಐಶ್ವರ್ಯ ಮಕ್ಷರಗತಿಂ" ಎಂಬ ಶ್ಲೋಕದಲ್ಲಿ ಪರಾಶರಭಟ್ಟರು ಅನುಗ್ರಹಿಸಿರುತ್ತಾರೆ. ಈ ಪುಣ್ಯಗಳೂ ಮೋಕ್ಷ ವಿರೋಧಿಯಾದ್ದರಿಂದ "ಮೋಕ್ಷಯಿಷ್ಯಾಮಿ" ಎಂಬ ಸಂಕಲ್ಪವನ್ನು ಲಕ್ಷ್ಮಿಯೂ ಮಾಡಿ ಪುಣ್ಯಗಳನ್ನೆಲ್ಲಾ ನಿವರ್ತಿಸುತ್ತಾಳೆಯಾದ್ದರಿಂದ, ಲಕ್ಷ್ಮಿಗೂ ಮೋಕ್ಷ ಪ್ರದತ್ವ ರೂಪ ಉಪಾಯತ್ವವು ಸಿದ್ಧಿಸುತ್ತದೆ. ಆದ್ದರಿಂದ ಶರಣ್ಯ ದಂಪತಿಗಳಿಬ್ಬರೂ ಸಮಾನವಾಗಿ "ಮೋಕ್ಷಯಿಷ್ಯಾಮಿ" ಎಂದು ಸಂಕಲ್ಪಿಸುತ್ತಾರೆಂಬುದು ನಿರ್ಬಾಧವಾದ ಶಾಸ್ತ್ರ ತಾತ್ಪರ್ಯ.

1) "ಏತೇನ್ವೈನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ" ಎನ್ಗೈಯಾಲೇ, ಸ್ವರ್ಗಾದಿಹಳುಮ್ ಮುಮುಕ್ಷುವುಕ್ಕು ನರಕಮಾಹೈಯಾಲ್, ಇವನುಕ್ಕು ಸ್ವರ್ಗಹೇತುವೋಡು ನರಕಹೇತುವೋಡುವಾಶಿ ಇಲ್ಲೈ. ಆಹೈಯಾಲಿರೇ ಮುಮುಕ್ಷುವುಕ್ಕು ಪಾಪಙ್ಗಳೈ ಪಿಡಚ್ಚೊಲ್ಲುಹಿರಾಪ್ಪೋಲೇ.(2) ತ್ರೈವರ್ಗಿಕಾಂಸ್ತ್ಯಜೇದ್ಧರ್ಮ್ಮಾ"ಎನ್ರುವಿಧಿಕ್ಕಿರದು.(3) "ಇರುವಲ್ ವಿನೈಹಳುಮ್ ಶರಿತ್ತು"ಎನ್ಗಿರಪಡಿಯೇ ಸುಕೃತ ದುಷ್ಕೃತಙ್ಗಳಿರಣ್ಡುಮ್ ಮುಮುಕ್ಷುವುಕ್ಕು ನಿರಾಕರಣೀಯಙ್ಗಳಾಹ ವಿರೇ ಶ್ರುತಿಸ್ಮೃತಿಹಳ್ ಶೊಲ್ಲು ಹಿರನ. ಇಪ್ಪಡಿ ಪುಣ್ಯಪಾಪರೂಪಮಾನ ಬಂಧಕಾರಣತ್ತೈ "ಪಾಪ" ಶಬ್ದತ್ತಾಲೇ ಶೊಲ್ಲಿ, ಬಹುವಚನ ತ್ತಾಲೇ ಪುಣ್ಯಪಾಪಙ್ಗಳಿನುಡೈಯ ವಾನಂತ್ಯತ್ತೈ ವಿವಕ್ಷಿಕ್ಕಿರದು.

ಪಾಪೇಭ್ಯಃ ಇತಿ ಬಹುವಚನೇನ "ಸರ್ವ" ಶಬ್ದಸ್ಯ ಕಿಂ ಪ್ರಯೋಜನಮ್ ?

ಇನಿ ಸರ್ವಶಬ್ದತ್ತಾಲೇ ವಿಶೇಷಿಕ್ಕಿರದೆನ್ನೆನ್ನಿಲ್ ? ಪ್ರಾಪ್ತಿ ವಿರೋಧಿಯಾನ ಕರ್ಮತ್ತುಕ್ಕು ಕಾರಣ ಮಾಯುಮ್ ಕಾರ್ಯಮಾಯುಮ್ ವರುಹಿರ ಅವಿದ್ಯೈಯೈಯುಮ್, ವಿಪರೀತವಾಸನೈಯೈಯುಮ್

---

1) **ಏತೈನ್ವೈನಿರಯಾಸ್ತಾತ** ಇತ್ಯಾದಿ – ಪರಮಾತ್ಮನ ಸ್ಥಾನವಾದ ಪರಮಪದಕ್ಕೆ ಹೋಲಿಸಿ ನೋಡಿದರೆ, ಸ್ವರ್ಗಲೋಕಾದಿಗಳೂ ನರಕತುಲ್ಯಗಳಾಗಿವೆ, ಎಂದು ಹೇಳಿರುವುದರಿಂದ, ಸ್ವರ್ಗಾದಿಗಳೂ ಮುಮುಕ್ಷುವಿಗೆ ನರಕವಾದ್ದರಿಂದ, ಇವನಿಗೆ ಸ್ವರ್ಗಕ್ಕೆ ಕಾರಣವಾದ ಪುಣ್ಯಗಳಿಗೂ, ನರಕಕ್ಕೆ ಕಾರಣವಾದ ಪಾಪಗಳಿಗೂ ಯಾವ ವ್ಯತ್ಯಾಸವೂ ಇಲ್ಲ. **ಆಹೈಯಾಲೇ ಇರೇ** ಇತ್ಯಾದಿ – ಆದ ಕಾರಣದಿಂದಲೇ ಅಲ್ಲವೇ ಮುಮುಕ್ಷುವಿಗೆ ಪಾಪಗಳನ್ನು ಬಿಡಹೇಳುವಂತೆ, (2) **ತ್ರೈವರ್ಗಿಕಾಂಸ್ತ್ಯಜೇದ್ಧರ್ಮಾನ್** ಎಂದು ಧರ್ಮಾರ್ಥಕಾಮರೂಪ ತ್ರಿವರ್ಗಪುರುಷಾರ್ಥ ಸಾಧನಗಳನ್ನೂ, ಬಂಧಹೇತುಗಳಾದ್ದರಿಂದ ಬಿಡುವಂತೆ ವಿಧಿಸುತ್ತದೆ. (3) **"ಇರುವಲ್‌ವಿನೈಹಳುಂ ಶರಿತ್ತು"**, ಇತ್ಯಾದಿ – ಪುಣ್ಯ ಪಾಪ ರೂಪ ಎರಡು ಪ್ರಬಲ ಕರ್ಮಗಳನ್ನೂ ಹೋಗಲಾಡಿಸಿ, ಎಂದು ಹೇಳಿರುವಂತೆ ಸುಕೃತದುಷ್ಕೃತಗಳೆರಡೂ ಮುಮುಕ್ಷುವಿಗೆ ನಿರಾಕರಣೀಯಗಳಾಗಿಯಲ್ಲವೇ ಶ್ರುತಿ ಸ್ಮೃತಿಗಳು ಹೇಳಿರುತ್ತವೆ. ಅದಾಗಿ "ತತ್ಸುಕೃತ ದುಷ್ಕೃತೇ ಧೂನುತೇ" ಎಂಬ ಶ್ರುತಿಗಳು ಅವು.

ಅನಂತರ ಬಹುವಚನಕ್ಕೆ ಅರ್ಥವನ್ನು ತಿಳಿಸುತ್ತಾರೆ. ಇಪ್ಪಡಿ **ಪುಣ್ಯಪಾಪ ರೂಪಮಾನ** ವಿತ್ಯಾದಿ– ಹೀಗೆ ಪುಣ್ಯಪಾಪ ರೂಪವಾದ ಬಂಧ ಕಾರಣವನ್ನು ಪಾಪ ಶಬ್ದದಿಂದ ಹೇಳಿ, ಬಹುವಚನದಿಂದ ಪುಣ್ಯಪಾಪಗಳ ಆನಂತ್ಯವನ್ನು ವಿವಕ್ಷಿಸುತ್ತಾನೆ. **ಇನಿಸರ್ವಶಬ್ದತ್ತಾಲೇ** ಇತ್ಯಾದಿ – ಅನಂತರ ಸರ್ವ ಶಬ್ದದಿಂದ ವಿಶೇಷಿಸಿ

1) ಭಾರತ ಶಾಂತಿ ಪರ್ವ. 2) ವಿಷ್ಣುಪುರಾಣ

3) ಶಾರ್ನ್ದ ಇರುವಲ್ ವಿನೈಹಳುಂಶರಿತ್ತು ಮಾಯಪ್ಪತ್ತರುತ್ತು
ತೀರ್ನ್ದುತನ್ಪಾಲ್ ಮನಂ ವೈಕ್ಕತ್ತಿರುತ್ತಿವೀಡುತಿರುತ್ತುವಾನ್ ।
ಆರ್ನ್ದಜ್ಞಾನಚ್ಚುಡರಾಹಿ ಅಹಲಂಕೀೞ್ಮೇಲಳವಿರನ್ದು
ನೇರ್ನ್ದಉರುವಾಯ್ ಅರುವಾಹುಮ್ ಇವತ್ತಿನು ಯಿರಾಮ್ ನೆಡುಮಾಲೇ ॥ ತಿರುವಾಯ್‌ಮೊೞಿ 1-5-10)

ನಮ್ಮನ್ನು ಅಂಟಿಕೊಂಡಿರುವ ಪುಣ್ಯಪಾಪ ರೂಪಗಳಾದ ಎರಡು ಬಲಿಷ್ಠಗಳಾದ ಕರ್ಮಗಳನ್ನು ಛೇಧಿಸಿ, ಕರ್ಮ ಪಾಶ ರೂಪ ಪ್ರಾಕೃತ ವಿಷಯಗಳಲ್ಲಿರುವ ಆಸೆಯನ್ನೂ ಛೇದಿಸಿ ತೀರ್ಮಾನವಾಗಿ ತನ್ನಲ್ಲಿ ಮನಸ್ಸನ್ನು ಇಡುವಂತೆ ನನ್ನ ಬುದ್ಧಿಯನ್ನು ಪರಿಪಕ್ವವಾಗಿ ಮಾಡಿ, ಶ್ರೀ ವೈಕುಂಠವನ್ನು ಅಲಂಕಾರ ಪಡಿಸುತ್ತಾನೆ. ಅವನುಯಾರೆಂದರೆ, ಸತ್ಯಜ್ಞಾನಾನಂತ ಸ್ವರೂಪನಾಗಿ ಸ್ಥೂಲಸೂಕ್ಷ್ಮ ಪದಾರ್ಥಗಳಿಗೆಲ್ಲಾ ಅಂತರಾತ್ಮನಾಗಿ, ಆಶ್ರಿತರಲ್ಲಿ ದೀರ್ಘವಾದ ವ್ಯಾಮೋಹವುಳ್ಳವನು.

ವಿಪರೀತ ರುಚಿಯೈಯುಮ್, ಸ್ಥೂಲಸೂಕ್ಷ್ಮರೂಪ ಪ್ರಕೃತಿಸಂಬಂಧತ್ತೈಯುಮ್, ಪಾಪರಾಶಿಯಿಲೇ ಶೇರ್ಕ್ಕೈಕ್ಕಾಹ.

ಇಪ್ಪಡಿ "ಸರ್ವ ಪಾಪೇಭ್ಯಃ" ಎನ್ಗಿರ ವಿರೋಧಿ ವರ್ಗತ್ತೈಯೆಲ್ಲಾಮ್ (1) "ಮನೋವಾಕ್ಕಾಯೈಃ" ಎನ್ರು ತುಡಙ್ಗಿ ಮೂನ್ರು ಚೂರ್ಣೈಕೈಯಾಲೇ ಶಾಬ್ದಮಾಹವುಮ್ ಅರ್ಥಮಾಹವುಮ್ ಅರುಳಿಚ್ಚೆಯ್ದಾರ್.

(1) ಕ್ಷಪಯಿತ್ವಾಧಿಕಾರಾನ್ ಸ್ವಾನ್ ಶಶ್ವತ್ಕಾಲೇನ ಭೂಯಸಾ ।
ವೇಧಸೋಯತ್ರ ಮೋದನ್ತೇ ಶಙ್ಕರಾಸ್ಸಪುರಂದರಾಃ ॥" ಎನ್ರುಮ್

(2) ಯಾವದಧಿಕಾರ ಮವಸ್ಥಿತಿ ರಾಧಿಕಾರಿಕಾಣಾಮ್" ಎನ್ರುಮ್ ಶೊಲ್ಲುಹಿರ ಪಡಿಯೇ ಶಿಲರ್ಕ್ಕು ಅಧಿಕಾರಾವಸಾನತ್ತಿಲೇ ಮೋಕ್ಷಮಾಯಿರುಕ್ಕುಮದು. ಅಧಿಕಾರಿಹಳಲ್ಲಾದಾರ್ಕ್ಕುಮ್ (3) "ಅನಾರಬ್ಧಕಾರ್ಯೇ

---

ಹೇಳುವುದು ಯಾವುದೆಂದರೆ, ಪ್ರಾಪ್ತಿವಿರೋಧಿಯಾನ ಇತ್ಯಾದಿ – ಪ್ರಾಪ್ತಿ ವಿರೋಧಿಯಾದ ಕರ್ಮಕ್ಕೆ ಕಾರಣವಾಗಿರುವ ದೇಹಾತ್ಮಭ್ರಮಾದಿರೂಪ ಅವಿದ್ಯೆಯೂ, ಅವಿದ್ಯಾ ಕಾರ್ಯವಾಗಿರುವ, ವಿಪರೀತ ಶಬ್ದಾದಿ ವಿಷಯ ವಾಸನೆಯೂ, ಶಬ್ದಾದಿ ವಿಷಯಗಳಲ್ಲಿರುವ ವಿಪರೀತ ರುಚಿಯೂ, **ಸ್ಥೂಲ ಸೂಕ್ಷ್ಮರೂಪ ಪ್ರಕೃತಿ ಸಂಬಂಧತ್ತೈಯುಮ್** ಇತ್ಯಾದಿ - ಸೂಕ್ಷ್ಮ ಪ್ರಕೃತಿ – ಸೂಕ್ಷ್ಮ ಶರೀರ, ಸ್ಥೂಲ ಪ್ರಕೃತಿ – ಸ್ಥೂಲ ಶರೀರ, ಇವುಗಳ ಸಂಬಂಧವನ್ನೂ, ಪಾಪರಾಶಿಯಲ್ಲಿ ಸೇರಿಸುವುದಕ್ಕೋಸ್ಕರ 'ಸರ್ವ' ಶಬ್ದವನ್ನು ಹೇಳಿರುವುದು.

**ಇಪ್ಪಡಿ 'ಸರ್ವಪಾಪೇಭ್ಯಃ' ಎನ್ಗಿರ** ಇತ್ಯಾದಿ – ಹೀಗೆ ಸರ್ವಪಾಪಗಳಿಂದಲೂ ಎಂದು ಹೇಳಿರುವ ವಿರೋಧಿ ವರ್ಗವನ್ನೆಲ್ಲಾ (1) **"ಮನೋವಾಕ್ಕಾಯೈಃ"** ಎಂದಾರಂಭಿಸಿ ಮೂರು ಚೂರ್ಣಿಕೆಗಳಿಂದ ಶಾಬ್ದವಾಗಿಯೂ, ಆರ್ಥವಾಗಿಯೂ – ಅದಾಗಿ (1) **"ಮನೋವಾಕ್ಕಾಯೈಃ"** ಎಂದಾರಂಭಿಸುವ ಚೂರ್ಣಿಕೆಯಿಂದ ಕರ್ಮರೂಪ ಪಾಪಗಳೂ, (2) **ಅನಾದಿ ಕಾಲಪ್ರವೃತ್ತಂ, ವಿಪರೀತಜ್ಞಾನಂ** ಎಂದಾರಂಭಿಸುವ ಚೂರ್ಣಿಕೆಯಿಂದ ಜ್ಞಾನ ರೂಪಪಾಪವೂ (3) **"ಮದೀಯಾನಾದಿಕರ್ಮ ಪ್ರವಾಹ ಪ್ರವೃತ್ತಾಂ"** ಎಂಬ ಚೂರ್ಣಿಕೆಯಿಂದ ಪ್ರಕೃತಿ ರೂಪಪಾಪವೂ ಶಾಬ್ದವಾಗಿ ಹೇಳಲ್ಪಟ್ಟು, ಆರ್ಥವಾಗಿ ವಾಸನಾರುಚ್ಯಾದಿಗಳು ಹೇಳಲ್ಪಟ್ಟು ಇರುತ್ತವೆ.

'ಕ್ಷಪಯಿತ್ವಾಧಿಕಾರಾನ್‌ಸ್ವಾನ್' ಇತ್ಯಾದಿಯಾಗಿಯೂ ಅನಾರಬ್ಧಕಾರ್ಯೇಏವ, ಇತ್ಯಾದಿ ಪ್ರಮಾಣಗಳಲ್ಲಿ ಆರಬ್ಧಕಾರ್ಯಗಳಾದ ಪಾಪಗಳು ಅನುಭವೈಕನಾಶ್ಯಗಳಾಗಿ ತೋರುವಾಗ, ಶರಣಾಗತಿ ಗದ್ಯದಲ್ಲಿ ಭಗವದ್ಭಾಷ್ಯಕಾರರು, "ಆರಬ್ಧಕಾರ್ಯಾನ್" ಎಂದಾರಂಭಿಸಿ, ಫಲವನ್ನು ಕೊಡಲು ಆರಂಭಿಸಿರುವ ಕರ್ಮಗಳನ್ನೂ ಸರ್ವಪಾಪಗಳಲ್ಲಿ ಸೇರಿಸಿ, ಅವನ್ನೂ ಕ್ಷಮಿಸಬೇಕೆಂದು ಪ್ರಾರ್ಥಿಸಿರುವುದು ಸರಿಯೇ ಎಂದು ಶಂಕಿಸಿ, ಸ್ವತಂತ್ರ ಪ್ರಪತ್ತಿ ನಿಷ್ಠನ ವಿಷಯದಲ್ಲಿ ಅದು ಸರಿ, ಎಂದು (1) **ಕ್ಷಪಯಿತ್ವಾಧಿಕಾರಾನ್** ಎಂದಾರಂಭಿಸಿ ಸಮಾಧಾನ ಪಡಿಸುತ್ತಾರೆ ಅದಾಗಿ **ವೇಧಸೋ, ಶಂಕರಾಸ್ಸಪುರಂದರಾಃ** – ಚತುರ್ಮುಖ ಬ್ರಹ್ಮ, ಶಿವ, ಇಂದ್ರರುಗಳು **ಅಧಿಕಾರನ್** - ಅಧಿಕಾರ ಹೇತುಗಳಾದ, **ಸ್ವಾನ್** – ಸ್ವಕೀಯಗಳಾದ ಕರ್ಮಗಳನ್ನು, **ಶಶ್ವತ್ ಕಾಲೇನ ಭೂಯಸಾ** - ಬಹಳ ಕಾಲಾನಂತರ, **ಕ್ಷಪಯಿತ್ವಾ** – ಭೋಗದಿಂದ ಹೋಗಲಾಡಿಸಿ, **ಯತ್ರಮೋದಂತೇ** – ಯಾವ ಪರಮ ಪದದಲ್ಲಿ ಸಂತೋಷಪಡುತ್ತಾರೋ, ಆ ವಿಷ್ಣುಸ್ಥಾನ ಎಂದೂ, (2) **ಯಾವದಧಿಕಾರ ಮವ**

---

1), 2), 3) ಶರಣಾಗತಿಗದ್ಯ

1) ಲಕ್ಷ್ಮೀತಂತ್ರ 17-18 2) ಬ್ರಹ್ಮಸೂತ್ರ 3-3-31

ಏವತುಪೂರ್ವೇತದವಧೇಃ" ಎನ್ಗಿರಪಡಿಯೇ ಪ್ರಾರಬ್ಧಕರ್ಮ ಭೋಗಾವಸಾನತ್ತಿಲೇಯಾಯಿರುಕ್ಕುಮ್. ಇಪ್ಪಡಿಯಿರುಕ್ಕ, ಇವ್ವಿಡತ್ತಿಲ್ ಆರಬ್ಧಕಾರ್ಯತ್ತೈಕ್ಷಮಿಕ್ಕೈಯಾವದೆನ್ನೆನ್ನಿಲ್ ; ಫಲಪ್ರಧಾನ ಪ್ರವೃತ್ತಮಾನ ಕರ್ಮತ್ತಿಲುಮ್ ಜನ್ಮಾಂತರ, ದಿವಸಾಂತರ ಸ್ಥಿತ್ಯಾದಿಹಳುಕ್ಕು ಆರಂಭಕಮಾನ ಅಂಶಮುಮ್ ಇ ಸ್ವತಂತ್ರ ಪ್ರಪತ್ತಿನಿಷ್ಠನುಕ್ಕು ಅನಿಷ್ಟಮಾಯ್, ಅತ್ತೈಯುಮ್ ಪತ್ತ ಇವನ್ ಶೋಕಿಕ್ಕಿಲ್, ಅವ್ವಂಶತ್ತೈಯುಮ್ ಈಶ್ವರನ್ ಕ್ಷಮಿಕ್ಕುಮ್.

ಅಪ್ಪೋದೇ ಮೋಕ್ಷಮ್ ಪೆತ್ತನ್ರಿ ಧರಿಕ್ಕಮಾಟ್ಟಾದ ಆರ್ತ್ಯತಿಶಯಮುಡೈಯಾರ್ಕ್ಕು ಅಕ್ಷಣತ್ತಿಲೇ ಪ್ರಾರಬ್ಧಕಾರ್ಯಮಾನ ಕರ್ಮತ್ತೈ ನಿಶ್ಶೇಷಮಾಹ ಕ್ಷಮಿಕ್ಕುಮ್. ಆಹೈಯಾಲ್, ಆರಬ್ಧ ಕಾರ್ಯತ್ತೈ ಕ್ಷಮಿಕ್ಕವೇಣುಮೆನ್ರು ಅಪೇಕ್ಷಿಕ್ಕ ಕುರೈಯಿಲ್ಲೈ.

ಇವ್ವಿಡತ್ತಿಲ್ ಪ್ರಪತ್ತಿಕಾಲತ್ತುಕ್ಕು ಮುನ್ಬುಳ್ಳವತ್ತೈ ಕೃತಾನೆನ್ರೆಡುತ್ತು ಪಿನ್ಬುಳ್ಳವತ್ತೈ ಕರಿಷ್ಯಮಾಣಾನೆನ್ರು ಶೊಲ್ಲಾನಿನ್ರದು-ಪ್ರಪತ್ತಿಕಾಲತ್ತಿಲೇ ಪಣ್ಣುವನ ಶಿಲಪಾಪಙ್ಗಳ್ ಕಾಣ್ಗಿರಿಲೋಮ್. ಇಪ್ಪಡಿ ಇರುಕ್ಕ ಕ್ರಿಯಮಾಣಙ್ಗಳೈ ಕ್ಷಮಿಕ್ಕೈ ಯಾವದೆನ್ನೆನ್ನಿಲ್? ( ) "ಪ್ರಾರಬ್ಧೋಪರಿಸಮಾಪ್ತೇಷ್ಟ

---

**ಸ್ಥಿತಿರಾಧಿಕಾರಿಕಾಣಾಮ್** – ವಸಿಷ್ಠಾದಿ ಅಧಿಕಾರ ಪುರುಷರಿಗೆ ತಮ್ಮ ಅಧಿಕಾರವು ಮುಗಿಯುವ ಪರ್ಯಂತ ಆಯಾಯಾ ಸ್ಥಾನದಲ್ಲಿದ್ದು ಕರ್ಮಕ್ಷಯವು ಏರ್ಪಟ್ಟ ನಂತರ, ಪರಮಪದ ಪ್ರಾಪ್ತಿಯು ಏರ್ಪಡುತ್ತದೆ, ಎಂದು ಹೇಳಿರುವಂತೆ ಕೆಲವರಿಗೆ ಅಧಿಕಾರದ ಕೊನೆಯಲ್ಲಿ ಮೋಕ್ಷವು ಏರ್ಪಡುತ್ತದೆ (3) **ಅನಾರಬ್ಧಕಾರ್ಯೇ** ಇತ್ಯಾದಿ– ಅಧಿಕಾರಿಗಳಲ್ಲಿದ್ದವರಿಗೂ ಅನಾರಬ್ಧಕಾರ್ಯೇ – ಎಂಬಂತೆ, ಪ್ರಾರಬ್ಧ ಕರ್ಮ ಭೋಗಾವಸಾನದಲ್ಲಿಯೇ ಮೋಕ್ಷವು ಪ್ರಾಪ್ತವು. ಇದರಿಂದ ಆರಬ್ಧಕಾರ್ಯಗಳಾದ ಪುಣ್ಯಪಾಪಗಳು ನಶಿಸುವುದಿಲ್ಲವೆಂದು ಏರ್ಪಡುತ್ತದೆ. **ಇಪ್ಪಡಿಯಿರುಕ್ಕ** ಇತ್ಯಾದಿ – ಹೀಗಿರುವಾಗ ಇಲ್ಲಿ ಆರಬ್ಧ ಕಾರ್ಯವನ್ನು ಕ್ಷಮಿಸುವುದೇನೆಂದರೆ, ಫಲಪ್ರಧಾನ ಪ್ರವೃತ್ತವಾದ ಕರ್ಮದಲ್ಲಿಯೂ, ಜನ್ಮಾಂತರ, ದಿವಸಾಂತರ ಸ್ಥಿತ್ಯಾದಿಗಳಿಗೆ ಆರಂಭಕವಾದ ಪುಣ್ಯಪಾಪದ ಭಾಗವೂ ಈ ಸ್ವತಂತ್ರ ಪ್ರಪತ್ತಿ ನಿಷ್ಠನಿಗೆ ಅನಿಷ್ಟವಾಗಿ ಅದನ್ನು ಕುರಿತು ಇವನು ಶೋಕಿಸಿದರೆ ಆ ಅಂಶವನ್ನೂ ಈಶ್ವರನು ಕ್ಷಮಿಸುತ್ತಾನೆ. **ಅಪ್ಪೋದೇಮೋಕ್ಷಮ್** ಇತ್ಯಾದಿ – ಆಗಲೇ ಮೋಕ್ಷವನ್ನು ಪಡೆಯದಿದ್ದರೆ ಧರಿಸಲಾಗದ ಆರ್ತ್ಯತಿಶಯವನ್ನುಳ್ಳವರಿಗೆ ಆಕ್ಷಣದಲ್ಲಿಯೇ ಪ್ರಾರಬ್ಧ ಕಾರ್ಯವಾದ ಕರ್ಮವನ್ನು ನಿಶ್ಶೇಷವಾಗಿ ಕ್ಷಮಿಸುತ್ತಾನೆ. **ಆಹೈಯಾಲ್** ಇತ್ಯಾದಿ – ಆದ್ದರಿಂದ ಸ್ವತಂತ್ರ ಪ್ರಪತ್ತಿ ನಿಷ್ಠನು ಆರಬ್ಧ ಕಾರ್ಯವನ್ನು ಕ್ಷಮಿಸಬೇಕೆಂದು ಅಪೇಕ್ಷಿಸುವುದಕ್ಕೆ ಏನೂ ಬಾಧಕವಿಲ್ಲ.

**ಇವ್ವಿಡತ್ತಿಲೇ** ಇತ್ಯಾದಿ – ಈ ಸಂದರ್ಭದಲ್ಲಿ ಪ್ರಪತ್ತ್ಯನುಷ್ಠಾನ ಕಾಲಕ್ಕೆ ಪೂರ್ವಭಾವಿಗಳಾದ ಕರ್ಮಗಳನ್ನು **"ಕೃತಾನ್"** ಎಂದು ಹೇಳಿ, ಪಶ್ಚಾದ್ಭಾವಿಗಳಾದ ಕರ್ಮಗಳನ್ನು **"ಕರಿಷ್ಯಮಾಣಾನ್"** ಎಂದು ಹೇಳಿರುತ್ತಾರೆ. ಪ್ರಪತ್ತಿ ಕಾಲದಲ್ಲಿ ಮಾಡುವ ಪಾಪಗಳು ಯಾವುವು ಎಂದು ತಿಳಿಯೆವು. **ಇಪ್ಪಡಿಯಿರುಕ್ಕ**– ಹೀಗಿರುವಾಗ **ಕ್ರಿಯಮಾಣ** ಪಾಪಗಳನ್ನು ಕ್ಷಮಿಸುವುದೆಂದರೆ ಯಾವುದು, ಎಂದರೆ (1) **ಪ್ರಾರಬ್ಧೋಪರಿ**

---

3) ಬ್ರಹ್ಮಸೂತ್ರ 4-1-15

1) ಕಾಶಿಕ 3-2-123

ವರ್ತಮಾನಃ" ಎನ್ಗಿರ ಪ್ರಕ್ರಿಯೈಯಾಲೇ ಪ್ರಪತ್ತಿ ಮುನ್ಬೇತೊಡಙ್ಗಿ ಪಿನ್ಬೇತಲೈಕಟ್ಟ ವೇಣ್ಡುಮ್ಪಡಿ, ಚಿರಕಾಲ ಸಾಧ್ಯಮಾಯಿರುಕ್ಕುಮವತ್ತೈಯುಮ್, ತತ್ಕ್ಷಣತ್ತಿಲ್ ಪ್ರಾಮಾದಿಕಙ್ಗಳೈಯುಮ್. ಇಙ್ಗು ಕ್ರಿಯಮಾಣ ಮೆನ್ಗಿರದು. ಕರಿಷ್ಯಮಾಣಙ್ಗಳಾವನ ಪಿನ್ಬುತುಡಙ್ಗುಮವೈ. ಇಪ್ಪಡಿ ಕ್ರಿಯಮಾಣೈಕ ದೇಶಙ್ಗಳಾಯುಮ್, ಕರಿಷ್ಯಮಾಣಙ್ಗಳಾಯುಮುಳ್ಳ ಉತ್ತರಾಘತ್ತಿಲ್ ಬುದ್ಧಿಪೂರ್ವಕಮಲ್ಲಾದವೈ ಈಶ್ವರನ್ ಕ್ಷಮಿಕ್ಕ, ಶ್ಲೇಷಿಯಾದೇ ಪೋಂ. ಬುದ್ಧಿಪೂರ್ವಕಙ್ಗಳಾನವೈ ಪ್ರಪನ್ನನುಕ್ಕು 1) ಪ್ರಾಯಶ್ಚಿತ್ತಿರಿಯಂ ಸಾತ್ರಯತ್ಪುನಶ್ಶರಣಂವ್ರಜೇತ್" ಎನ್ಗೈಯಾಲೇ ಪುನಃ ಪ್ರಪತ್ತಿಯಾಲೇ ಶಮಿಕ್ಕುಮ್.

ಸರ್ವೇಶ್ವರನ್ ತಾನ್ ಮೋಕ್ಷನ್ತರ ನಿನೈಕ್ಕುಮ್ಪೋದು ಪಾತಕಙ್ಗಳುಮ್ ವಿಲಕ್ಕಾಹಾದೆನ್ರುಮ್ ವಾರ್ತ್ತೈಯುಮ್ ಬುದ್ಧಿಪೂರ್ವೋತ್ತರಾಘತ್ತಿಲ್ ನಿಗ್ರಹಮುಮ್ ವಾರಾದು, ಪ್ರಾಯಶ್ಚಿತ್ತಮುಮ್ ವೇಣ್ಡಾ ವೆನ್ರುಪಡಿಯನ್ರು. ಪ್ರಸಾದನತ್ತಾಲ್ ಅವನ್ ಪ್ರಸನ್ನನಾನಾಲ್ ಮೋಕ್ಷಮವಶ್ಯಂಭಾವಿ ಎನ್ರುಪಡಿ; ಇದುಕ್ಕಿಪ್ಪಡಿ ಈಶ್ವರನ್ ಪ್ರಾಯಶ್ಚಿತ್ತತ್ತಿಲೇ ಮೂಟ್ಟುಹಿರದುಮ್ ಕ್ಷಮಾಫಲಮ್.

ಪ್ರಿಯತಮೈಯುಡಂಬಿಲ್ ಅಳುಕ್ಕುಮ್, ವತ್ಸತ್ತಿನ್ ವಳುಮ್ಬುಮ್ಪೋಲೇ ಪ್ರಪನ್ನನುಡೈಯ ದೋಷಮೆನ್ಗಿರ ವಾರ್ತ್ತೈಯುಮ್ ದುಷ್ಟರುಮ್ ಶರಣಾಗತರಾನಾಲ್ ಈಶ್ವರನ್ ಕೈವಿಡಾದೇ ತಿರುತ್ತು

---

ಸಮಾಪ್ತಶ್ಚವರ್ತಮಾನಃ – ಎಂಬ ಪ್ರಕ್ರಿಯೆಯಿಂದ ಪ್ರಪತ್ತಿ ಮಾಡುವುದಕ್ಕೆ ಪೂರ್ವದಲ್ಲಿಯೇ ಆರಂಭಿಸಿ ಪ್ರಪತ್ತ್ಯನಂತರವೇ ತಲೈಕ್ಕಟ್ಟವೇಂಡುಂಪಡಿ – ಮುಗಿಯುವಂತಹ ಚಿರಕಾಲ ಸಾಧ್ಯವಾದ ಕರ್ಮಗಳನ್ನೂ, ತತ್ಕ್ಷಣತ್ತಿಲ್ ಪ್ರಾಮಾದಿಕಂಗಳೈಯುಮ್ – ಪ್ರಪತ್ತ್ಯನುಷ್ಠಾನ ಕಾಲದಲ್ಲಿ ಅನವಧಾನತೆಯಿಂದ ಮಶಕಗಳ ಮರ್ದನ, ಅಧೋವಾಯು ವಿಸರ್ಜನಾದಿ ಪಾಪಗಳನ್ನೂ ಇಲ್ಲಿ ಕ್ರಿಯಮಾಣಗಳೆನ್ನುತ್ತಾರೆ. ಕರಿಷ್ಯಮಾಣಂಗಳಾವನ ಇತ್ಯಾದಿ – ಭವಿಷ್ಯದಲ್ಲಿ ಮಾಡತಕ್ಕ ಪಾಪಗಳು ಇಪ್ಪಡಿಕ್ರಿಯಮಾಣೈಕದೇಶಂಗಳಾಯುಮ್ ಇತ್ಯಾದಿ – ಹೀಗೆ ಕ್ರಿಯಮಾಣ ಪಾಪಗಳಲ್ಲಿ ಕೆಲವೂ, ಕರಿಷ್ಯಮಾಣಗಳಾದ ಉತ್ತರಕಾಲಿಕ ಪಾಪಗಳಲ್ಲಿ ಬುದ್ಧಿಪೂರ್ವಕವಲ್ಲದೆ ಮಾಡುವವೂ ಈಶ್ವರನು ಕ್ಷಮಿಸಲು, ಲೇಪಿಸದೆ ಕಳೆಯುತ್ತವೆ. ಬುದ್ಧಿಪೂರ್ವಂಗಳಾನವೈ ಇತ್ಯಾದಿ – ಬುದ್ಧಿಪೂರ್ವಪಾಪಗಳು ಪ್ರಪನ್ನನಿಗೆ, (1) ಪ್ರಾಯಶ್ಚಿತ್ತಿರಿಯಂಸಾತ್ರ ಎಂಬ ವಚನದಂತೆ, ಪ್ರಾಯಶ್ಚಿತ್ತ ರೂಪವಾದ ಪುನಃ ಪ್ರಪತ್ತಿಯಿಂದ ಕಳೆಯುತ್ತವೆ.

ಸರ್ವೇಶ್ವರನ್‌ತಾನ್ ಇತ್ಯಾದಿ – ಸರ್ವೇಶ್ವರನು ಮೋಕ್ಷವನ್ನು ಕೊಡಲು ಸಂಕಲ್ಪಿಸುವಾಗ, ಪಾಪಗಳೂ ತಡೆಯಲಾರವು ಎಂಬ ಮಾತು, ಬುದ್ಧಿಪೂರ್ವೋತ್ತರಾಘದಲ್ಲಿ (ಅಘ-ಪಾಪ) ಈಶ್ವರನಿಗೆ ನಿಗ್ರಹವು ಉಂಟಾಗುವುದಿಲ್ಲ, ಪ್ರಾಯಶ್ಚಿತ್ತವೂ ಬೇಡವೆಂದಲ್ಲ. ಬುದ್ಧಿ ಪೂರ್ವಗಳಾದ ಪಾಪಗಳಿಗೆ ಪ್ರಸಾದನತ್ತಾಲೇ ಇತ್ಯಾದಿ– ಪ್ರಾಯಶ್ಚಿತ್ತವನ್ನು ಅನುಷ್ಠಿಸುವುದರಿಂದ, ಅವನು ಪ್ರಸನ್ನನಾಗುತ್ತಾನೆ. ಪ್ರಾಯಶ್ಚಿತ್ತವನ್ನು ಅನುಷ್ಠಿಸದವನಿಗೆ ಶಿಕ್ಷೆಯನ್ನು ಕೊಟ್ಟು, ಅಪೇಕ್ಷಿಸಿದ ಕಾಲದಲ್ಲಿ ಮೋಕ್ಷವನ್ನು ಅವಶ್ಯವಾಗಿ ಕೊಡುತ್ತಾನೆಯೆಂದರ್ಥ. ಇದುಕ್ಕಿಪ್ಪಡಿ ಇತ್ಯಾದಿ – ಹೀಗೆ ಭಗವಂತನು ಪುನಃ ಪ್ರಪತ್ತಿಯಾದ ಪ್ರಾಯಶ್ಚಿತ್ತದಲ್ಲಿ ಮೂಡಿಸುವುದೂ ಕ್ಷಮಾಫಲ.

### ದೋಷಭೋಗ್ಯವೆಂಬುದಕ್ಕೆ ತಾತ್ಪರ್ಯ.

ಪ್ರಿಯತಮೈಯುಡಂಬಿಲ್ ಇತ್ಯಾದಿ – ತನಗೆ ಬಹಳ ಪ್ರಿಯಳಾದ ಹೆಂಗಸಿನ ಮೈಯಲ್ಲಿರುವ ಕೊಳೆಯೂ, ವತ್ಸತ್ತಿನುಡೈಯ ಇತ್ಯಾದಿ – ತತ್ಕಾಲ ಪ್ರಸೂತವಾದ ಕರುವಿನ ಮೈಯಲ್ಲಿರುವ ವಳುಂಬುಮ್ – ಕೊಳೆಯೂ ಹಸುವಿಗೆ ಪ್ರಿಯವಾಗಿರುವಂತೆ, ಪ್ರಪನ್ನನ ದೋಷವೂ ಭಗವಂತನಿಗೆ ಪ್ರಿಯವೆಂಬ ಮಾತೂ, ದುಷ್ಟರೂ ಶರಣಾಗತರಾದರೆ, ಈಶ್ವರನು ಕೈಬಿಡದೆ ತಿರುತ್ತುಮ್ – ದೌಷ್ಟ್ಯ ಸ್ವಭಾವವನ್ನು ಹೋಗಲಾಡಿಸಿ ರಕ್ಷಿಸುತ್ತಾ

---

1) ಲಕ್ಷ್ಮೀ ತಂತ್ರ 17-92

ನೆನ್ರಪಡಿ. ಇಙ್ಗನನ್ರಿಕ್ಕೇ ಬುದ್ಧಿಪೂರ್ವೋತ್ತರಾಘಙ್ಙಳುಮ್ ಈಶ್ವರನುಕ್ಕು ಭೋಗ್ಯಮಾಮೆನ್ರು ವಿವಕ್ಷಿತಮಾಹಿಲ್ ಪ್ರಪನ್ನನುಕ್ಕಿದುವೇ ಯಥಾಶಕ್ತಿ ಸಂಪಾದ್ಯಮಾಮ್.

ಪ್ರಕೃತಿ ವಿಶೇಷ ಸ್ವಭಾವತ್ತಾಲೇ ಅಪರಾಧಙ್ಗಳ್ ಬುದ್ಧಿಪೂರ್ವಕ ಮಾಹವನ್ದಾಲುಮ್ ಪುನಃ ಪ್ರಪತ್ತಿ ಪಣ್ಣಾದಾರ್ ಪಕ್ಕಲಿಲುಮ್,

1) ದೇವಂ ಶಾರ್ಙ್ಗಧರಂ ವಿಷ್ಣುಮ್ ಯೇ ಪ್ರಪನ್ನಾಃ ಪರಾಯಣಮ್ ।
ನ ತೇಷಾಂ ಯಮ ಸಾಲೋಕ್ಯಂ ನ ಚ ತೇ ನರಕೌಕಸಃ ॥"

2) ಯಸ್ಮಿನ್ ಕಸ್ಮಿನ್ ಕುಲೇ ಜಾತಾ ಯತ್ರಕುತ್ರ ನಿವಾಸಿನಃ ।
ವಾಸುದೇವರತಾ ನಿತ್ಯಂ ಯಮ ಲೋಕಂ ನಯಾನ್ತಿ ತೇ ॥

ಇತ್ಯಾದಿಹಳಿರ್‌ಪಡಿಯೇ ನರಕಾದಿಹಳ್ ವಾರಾದ ಪಡಿ ಪಣ್ಣಿ ರಾಜಪುತ್ರಾದ್ಯಪರಾಧತ್ತಿರ್‌ಪೋಲೇ ಲಘು ಪ್ರತ್ಯವಾಯತ್ತಾಲೇ ಕಣ್ಣಳಿಕ್ಕಿರದುವುಮ್ ಕ್ಷಮಾ ವಿಶೇಷಮ್. ಪಾಪಙ್ಗಳುಕ್ಕು ದೃಷ್ಟಪ್ರತ್ಯವಾಯ

---

ಸಂದರ್ಭ. **ಇಂಗನನ್ರಿಕ್ಕೇ** ಇತ್ಯಾದಿ - ಹೀಗಲ್ಲದೇ, ಬುದ್ಧಿ ಪೂರ್ವೋತ್ತರಾಘವು ಈಶ್ವರನಿಗೆ ಭೋಗ್ಯವೆಂದು ವಿವಕ್ಷಿಸಿದರೆ ಪ್ರಪನ್ನನಿಗೆ ಇದೇ ಯಥಾಶಕ್ತಿ ಸಂಪಾದಿಸಲ್ಪಡಬೇಕಾಗುತ್ತದೆ. ಇದು ಇಷ್ಟಾಪತ್ತಿ ಎಂದರೆ ಪುನಃ ಪ್ರಪತ್ತಿವಿಧಾಯಕ ಶಾಸ್ತ್ರವು ವ್ಯರ್ಥವಾಗುತ್ತದೆ. ಇಂಥಹವರನ್ನು ಕುರಿತು

ಅಹೋಬತ ಮಹತ್ಕಷ್ಟಂ ವಿಪರೀತಮಿದಂ ಜಗತ್ ।
ಯೇನಾಪತ್ರಪತೇ ಸಾಧುಃ ಅಸಾಧುಸ್ತೇನ ತುಷ್ಯತಿ ॥

ಎಂದ ವ್ಯಾಸಮಹರ್ಷಿಯು ನಿರ್ವೇದಪಟ್ಟರು ಆದಾಗಿ "ಅಯ್ಯೋ ಬಹಳ ಕಷ್ಟ. ಈ ಕಲಿಯುಗದಲ್ಲಿ ಜನರು ಧರ್ಮಗಳನ್ನು ಬಿಟ್ಟು ವಿಪರೀತಾಚರಣೆಯನ್ನು ಮಾಡುತ್ತಾರೆ. ಸತ್ಪುರುಷರು ಮಾಡಲು ಹೆದರುವ ದುಷ್ಕಾರ್ಯಗಳನ್ನು ಅಯೋಗ್ಯನು ಮಾಡಿ ಸಂತೋಷ ಪಡುತ್ತಾನೆ, ಎಂದು ವ್ಯಾಸಮಹರ್ಷಿಗಳು ನಿರ್ವೇದಪಟ್ಟಿರುವುದೇ ಹೀಗೆ ಶಾಸ್ತ್ರೋಲ್ಲಂಘನೆ ಮಾಡಿ ಅದನ್ನೇ ಸರಿ ಎಂದು ಹೇಳುವವರಿಗೆ ಪ್ರತ್ಯುತ್ತರ.

### ಪ್ರಪನ್ನನಿಗೆ ಯಾವ ಕಾರಣದಿಂದಲೂ ಯಮ ಲೋಕಗಮನವಿಲ್ಲ.

**ಪ್ರಕೃತಿ ವಿಶೇಷ ಸ್ವಭಾವತ್ತಾಲೇ** ಇತ್ಯಾದಿ–ಪ್ರಕೃತಿ ವಿಶೇಷದ ಸ್ವಭಾವದಿಂದ ಬುದ್ಧಿ ಪೂರ್ವಕವಾದ ಅಪರಾಧಗಳು ಏರ್ಪಟ್ಟರೂ ಆ ಅಪರಾಧಗಳಿಗೆ ನಿರ್ವೇದಪಟ್ಟು ಯಥೋಕ್ತ ಪ್ರಾಯಶ್ಚಿತ್ತವನ್ನಾಗಲಿ ಅದಕ್ಕೆ ಶಕ್ತಿಯಿಲ್ಲದವನು ಪ್ರಾಯಶ್ಚಿತ್ತ ಪ್ರಪತ್ತಿಯನ್ನಾಗಲಿ ಮಾಡಿಕೊಳ್ಳದೇ ಇದ್ದರೂ **1) ದೇವಂ ಶಾರ್ಙ್ಗಧರಂ ವಿಷ್ಣುಂ** ಇತ್ಯಾದಿಯಾಗಿಯೂ 2) **ಯಸ್ಮಿನ್ ಕಸ್ಮಿನ್ ಕುಲೇಜಾತಾಃ** ಇತ್ಯಾದಿಯಾಗಿಯೂ ಹೇಳಿರುವಂತೆ, ಪ್ರಪನ್ನನಿಗೆ ನರಕಾದಿಗಳು ಬಾರದಂತೆ, ರಾಜ ಪುತ್ರಾಪರಾಧ ನ್ಯಾಯದಂತೆ ಲಘುವಾದ ಶಿಕ್ಷೆಯನ್ನು ಕೊಟ್ಟು **ಕಣ್ಣಳಿಕ್ಕಿರದುವುಮ್**–ಬುದ್ಧಿ ಪೂರ್ವೋತ್ತರ ಪಾಪಗಳನ್ನು ಹೋಗಲಾಡಿಸುವುದೂ **ಕ್ಷಮಾ ವಿಶೇಷಮ್**–ಕ್ಷಮಾಗುಣ ಕಾರ್ಯ.

---

1) ದೇವಂಶಾರ್ಙ್ಗಧರಂ ವಿಷ್ಣುಂ ಯೇ ಪ್ರಪನ್ನಾಃ ಪರಾಯಣಮ್ ।
ನ ತೇಷಾಂ ಯಮ ಸಾಲೋಕ್ಯಂ ನ ಚ ತೇ ನರಕೌಕಸಃ ॥

ಶಾರ್ಙ್ಗವನ್ನು ಧರಿಸಿರುವ ಲಕ್ಷ್ಮೀಪತಿಯಾದ ವಿಷ್ಣುವನ್ನು ಪ್ರಾಪ್ಯ ಪ್ರಾಪಕನನ್ನಾಗಿ ಶರಣ ಹೊಂದಿದವರು ಯಮ ಲೋಕಕ್ಕೆ ಹೋಗುವುದಿಲ್ಲ. ಅಲ್ಲಿ ವಾಸವನ್ನೂ ಮಾಡುವುದಿಲ್ಲ. ವಾಮನ ಪುರಾಣ (94-43)

2) ಯಸ್ಮಿನ್ ಕಸ್ಮಿನ್ ಕುಲೇ ಜಾತಾಃ ಇತ್ಯಾದಿ- ಯಾವ ಕುಲದಲ್ಲಿ ಹುಟ್ಟಿದ್ದರೂ ಎಲ್ಲಿಯಾದರೂ ವಾಸವಾಗಿರುವವರಾದರೂ, ವಾಸುದೇವನಲ್ಲಿ ಭಕ್ತಿಯಿಟ್ಟವರು ಯಮ ಲೋಕಕ್ಕೆ ಹೋಗುವುದಿಲ್ಲ.

**ಙ್ಗಳುಮ್, ನರಕಾದಿ ಪ್ರತ್ಯವಾಯಙ್ಗಳುಂ ಉಣ್ಡಾಯಿರುಕ್ಕ ನರಕಾದಿಹಳ್ ಇವನುಕ್ಕಿಲ್ಲೈ ಎನ್ರು ವಿಶೇಷವಚನಙ್ಗಳ್ ಶೊನ್ನಾಲ್. ದೃಷ್ಟಪ್ರತ್ಯವಾಯಙ್ಗಳುಕ್ಕು ಬಂಧಕರಿಲ್ಲೈ. ವಚನ ವಿರೋಧತ್ತಿಲ್ ನ್ಯಾಯಮ್ ಪ್ರವರ್ತ್ತಿಯಾದು. ಸಾಪರಾಧರುಮಾಯ್ ಅನುತಾಪ ಮುನ್ರಿಕ್ಕೇಪುನಃ ಪ್ರಪತ್ತಿಯುಮ್ ಪಣ್ಣಾದೇ ಇರುಪ್ಪಾರ್ ಶಿಲಪ್ರಪನ್ನರ್ಕ್ಕು ಉಪಕ್ಲೇಶಙ್ಗಳಾಹ ಚೊಲ್ಲ್ಹ ಕಾಣತ್ವಾದಿ ದೃಷ್ಟಪ್ರತ್ಯವಾಯಙ್ಗಳ್, ಕಾಣಾದಿರಾ ನಿನ್ರೋಮೆನ್ಗೈಮನ್ದಚೋದ್ಯಮ್. ಅವರ್ಹಳುಕ್ಕುಮ್ ಅಪರಾಧಾದಿ ತಾರತಮ್ಯತ್ತುಕ್ಕಿಡಾಹ ನಾನಾ ಪ್ರಕಾರ ತಾಪತ್ರಯಾನುಭವಮ್, ಉಪಯುಕ್ತ ಜ್ಞಾನಮಾಂದ್ಯಮ್ ಇಙ್ಗುಳ್ಳಭಗವದನುಭವ ರಸ ಸಂಕೋಚ ವಿಚ್ಛೇದಙ್ಗಳ್, ಭಗವದ್ಭಾಗವತ ಕೈಂಕರ್ಯರಸ ವಿಚ್ಛೇದಮ್, ಭಗವದಪಚಾರ ಭಾಗವತಾಪಚಾರಾದಿಹಳ್, ಶಿಷ್ಟ ಬಹಿಷ್ಕಾರಾದಿಹಳ್, ಸುಕೃತ ವಿಶೇಷನಾಶಮ್, ಸಾತ್ವಿಕಾನಾದರಮ್, ಮನೋರಥ ಭಂಗ ಕ್ಲೇಶಮ್, ಎನ್ರಿಪ್ಪಡೈಹಳಿಲ್ ಏದೇನುಮೊರು ಉಪಕ್ಲೇಶ ರೂಪಮಾನ ಪ್ರತ್ಯವಾಯಮ್ ಕಾಣಲಾಮ್.**

---

## ಬುದ್ಧಿ ಪೂರ್ವೋತ್ತರ ಪಾಪಗಳಿಗೆ ಲಘು ದಂಡನೆಯುಂಟು.

ಪ್ರಪನ್ನನಿಗೆ ಯಮ ಲೋಕಗಮನವಿಲ್ಲದಿದ್ದರೆ, ಅದೇ ನ್ಯಾಯವನ್ನವಲಂಬಿಸಿ ದೃಷ್ಟ ಪ್ರತ್ಯವಾಯಗಳೂ ಇಲ್ಲವೆಂದು ಹೇಳಬಹುದೇ ಎಂದರೆ, ಹಾಗೆ ಹೇಳಿದರೆ ಬುದ್ಧಿಪೂರ್ವಾಪರಾಧಗಳಿಗೆ ಪ್ರಾಯಶ್ಚಿತ್ತವೂ ಬೇಡವೆಂದು ಏರ್ಪಡುತ್ತದೆಯಾದ್ದರಿಂದ **ಈ** ಮತವನ್ನು **ಪಾಪಂಗಳಕ್ಕು**-ಎಂದಾರಂಭಿಸಿ ನಿರಾಕರಿಸುತ್ತಾರೆ. ಅದಾಗಿ ಪ್ರಪನ್ನನು ಮಾಡುವ ಪಾಪಗಳಿಗೆ ದೃಷ್ಟ ಪ್ರತ್ಯವಾಯಗಳೂ, ನರಕಾದಿಗಳೂ ಏರ್ಪಟ್ಟಿರುವಾಗ ನರಕಾದಿಗಳಿಲ್ಲವೆಂದು ವಿಶೇಷ ವಚನಗಳು ಹೇಳಿದರೆ ದೃಷ್ಟ ಪ್ರತ್ಯವಾಯಗಳಿಗೆ ಬಾಧಕರಿಲ್ಲ. ಇಹೈವೇಷಾಂಕೇಚಿದುಪಕ್ಲೇಶಾಭವಂತಿ, ಖಂಜಾಭವಂತಿ, ಕಾಣಾ ಭವಂತಿ, ಅವಿಧೇಯಪುತ್ರಾಭವಂತಿ, ಅವಿಧೇಯ ಭಾರ್ಯಾಭವಂತಿ - ಇಹಲೋಕದಲ್ಲಿಯೇ ಬುದ್ಧಿ ಪೂರ್ವಾಪರಾಧಗಳಿಗೆ ದೃಷ್ಟ ಪ್ರತ್ಯವಾಯಗಳು-ಪ್ರತ್ಯಕ್ಷವಾದ ಶಿಕ್ಷೆಗಳು ಕಾಣಲ್ಪಡುತ್ತವೆ. ಅದಾಗಿ ಕುಂಟರಾಗುತ್ತಾರೆ, ಕುರುಡರಾಗುತ್ತಾರೆ. ಭಾರ್ಯಾ ಪುತ್ರರುಗಳು ಅವಿಧೇಯರಾಗುತ್ತಾರೆ. **ವಚನವಿರೋಧತ್ತಿಲೇ** ಇತ್ಯಾದಿ-ಹೀಗೆ ದೃಷ್ಟ ಪ್ರತ್ಯವಾಯಗಳನ್ನು ಹೇಳುವ ವಚನಗಳಿಗೆ ವಿರೋಧವಾಗಿ ನ್ಯಾಯವು ಪ್ರವರ್ತಿಸುವುದಿಲ್ಲ. ಅಂದರೆ "ನತೇಷಾಂ ಯಮ ಸಾಲೋಕ್ಯಂ ನಚತೇ ನರಕೌಕಸಃ" ಎಂದು ಪ್ರಪನ್ನನಿಗೆ ಯಮಲೋಕವಿಲ್ಲವೆಂದು ವಿಶೇಷ ವಚನವು ಹೇಳಿದ ಮಾತ್ರಕ್ಕೆ, "ಇಹೈವೇಷಾಂ ಕೇಚಿದುಪಕ್ಲೇಶಾ ಭವಂತಿ" ಎಂಬಂತೆ ಇಹಲೋಕದಲ್ಲಿ ಶಿಕ್ಷೆಗಳು ಇಲ್ಲವೆಂದಿಲ್ಲ. ಬುದ್ಧಿಪೂರ್ವಕವಾಗಿ ಪಾಪಗಳನ್ನು ಪ್ರಪತ್ತ್ಯನಂತರ ಮಾಡುವ ಕೆಲವು ಪ್ರಪನ್ನರಿಗೆ ಕುಂಟುತನ ಕುರುಡುತನ ಮೊದಲಾದ ಶಿಕ್ಷೆಗಳು ಗೋಚರವಾಗಲಿಲ್ಲವಲ್ಲಾ ಎಂದರೆ **ಸಾಪರಾಧರುಮಾಯ್** ಎಂದಾರಂಭಿಸಿ ಉತ್ತರಿಸುತ್ತಾರೆ. ಅದಾಗಿ ಅಪರಾಧವನ್ನು ಮಾಡಿ ಅನುತಾಪವೂ ಇಲ್ಲದೆ ಪುನಃ ಪ್ರಪತಿಯನ್ನೂ ಮಾಡದೆ ಇರುವ ಕೆಲವು ಪ್ರಪನ್ನರಿಗೆ **ಉಪಕ್ಲೇಶಂಗಳಾಹಚ್ಚೊನ್ನ** - ಶಿಕ್ಷೆಗಳಾಗಿ ಶ್ರುತಿಯಲ್ಲಿ ಹೇಳಲ್ಪಟ್ಟ **ಕಾಣತ್ವಾದಿ** - ಕುರುಡುತನ ಮೊದಲಾದ **ದೃಷ್ಟಪ್ರತ್ಯವಾಯಂಗಳ್** - ಪ್ರತ್ಯಕ್ಷವಾದ ಶಿಕ್ಷೆಗಳು, ಕಾಣಲ್ಪಡಲಿಲ್ಲವೆಂಬುದು **ಮಂದಚೋದ್ಯಮ್** - ಪೂರ್ವಪಕ್ಷಿಯು ಹೇಳುವ ಬಲ್ಪಜವಾದ ಚೋದ್ಯ. **ಅವರ್ಹಳುಕ್ಕುಮ್** ಇತ್ಯಾದಿ - ಅವರುಗಳಿಗೂ ಅಪರಾಧ **ತಾರತಮ್ಯಕ್ಕೆ ಈಡಾಹ** - ಅನುಗುಣವಾಗಿ ನಾನಾ ಪ್ರಕಾರವಾದ ತಾಪತ್ರಯಗಳ ಅನುಭವವೂ ಉತ್ತರ ಕೈಂಕರ್ಯಕ್ಕೆ ಉಪಯುಕ್ತವಾದ ಜ್ಞಾನವು ಮಂದವಾಗಿರುವಿಕೆ-ಕಡಿಮೆಯಾಗಿರುವಿಕೆ ಎಂದರ್ಥ, **ಇಂಗುಳ್ಳ** ಇತ್ಯಾದಿ - **ಈ** ಲೋಕದಲ್ಲಿರುವ ಭಗವದನುಭವ ರಸದ ಸಂಕೋಚ ವಿಚ್ಛೇದಗಳು, ಭಗವದ್ಭಾಗವತ ಕೈಂಕರ್ಯರಸಕ್ಕೆ ವಿಚ್ಛೇದ, ಭಗವದಪಚಾರ, ಭಾಗವತಾಪಚಾರಾದಿಗಳು, ಶಿಷ್ಟರು ಗರ್ಹಿಸಿ ಬಹಿಷ್ಕಾರ ಮಾಡುವುದೇ ಮೊದಲಾದವು. ಸುಕೃತ ವಿಶೇಷನಾಶ, ಸಾತ್ವಿಕರು ಅನಾದರಿಸುವುದು, ಮನೋರಥ ಭಂಗರೂಪವಾದಕ್ಲೇಶ, ಎಂದು ಈ ರೀತಿಯಾದ ಯಾವುದಾದರೊಂದು ಉಪಕ್ಲೇಶ ರೂಪವಾದ ಪ್ರತ್ಯವಾಯ-ಶಿಕ್ಷೆಯನ್ನು ನೋಡಬಹುದು.

**ಅಕೃತ್ಯಕರಣ ಕೃತ್ಯಾಕರಣಾದಿ ರೂಪಙ್ಗಳಾನ ನಾನಾ ವಿಧ ಪಾಪಙ್ಗಳಿಕ್ಕಿಪ್ಪಡಿ ನಾನಾವಿಧ ದೃಷ್ಟ ಪ್ರತ್ಯವಾಯ ಕರತ್ವಮುಮ್, ಶ್ರುತಿಹಳಿಲುಮ್ ಮನ್ವಾದಿ ಧರ್ಮಶಾಸ್ತ್ರಙ್ಗಳಿಲುಮ್, ಇತಿಹಾಸ, ಪುರಾಣ ಭಗವಚ್ಛಾಸ್ತ್ರಾದಿಹಳಿಲುಮ್ ಪ್ರಸಿದ್ಧಮ್. ಆಹೈಯಾಲೇ ಕಾಣತ್ವಾದ್ಯುಪ ಕ್ಲೇಶ ವಿಶೇಷೋದಾಹರಣಂ ಉಪಲಕ್ಷಣಮೆನ್ನುಮಿಡಮ್ ವಾಕ್ಯೋಪಕ್ರಮತ್ತಿಲ್ ಸಮುದಾಯ ನಿರ್ದೇಶಾದಿಹಳಾಲೇ ಸಿದ್ಧಮ್.**

**ವಚನ ಬಲಸಿದ್ಧಮಾಯ್ ಬುದ್ಧಿಪೂರ್ವೋತ್ತರಾಘ ಫಲಮಾನ ಉಪಕ್ಲೇಶ ವರ್ಗತ್ತೈ ಪ್ರಾರಬ್ಧ ಕರ್ಮ ವಿಶೇಷ ಫಲಮೆನ್ರು ನಿಷ್ಕರ್ಷಿಕ್ಕ ವಿರಹಿಲ್ಲೈ ಇವೈ ಯಥಾಸಂಭವಂ ಉಭಯವಿಧ ಕರ್ಮತ್ತಾಲುಮ್ ವರುಮ್. ಆಹೈಯಾಲೇಯಿರೇ ಬುದ್ಧಿ ಪೂರ್ವೋತ್ತರಾಘತ್ತುಕ್ಕು ಸಾತ್ವಿಕರ್ ಅಂಜಿಪ್ಪೋರುಹಿರದು.**

**ಉತ್ತರಾಘ ಪ್ರತ್ಯವಾಯಾನಂಗೀಕಾರೇ ಬಾಧಕಮಾಹ**

**ಇಙ್ಗನಲ್ಲಾದಪೋದು ಪುನಃ ಪ್ರಪತ್ತಿ ವಿಧಾಯಕ ಶಾಸ್ತ್ರಮುಮ್, ಅಪ್ಪಡಿಕ್ಕು ಶಿಷ್ಟಾನುಷ್ಠಾನ**

---

**ಅಕೃತ್ಯಕರಣಕೃತ್ಯಾಕರಣಾದಿ ರೂಪಂಗಳಾನ** ಇತ್ಯಾದಿ – ಶಾಸ್ತ್ರ ನಿಷಿದ್ಧ ಕಾರ್ಯಗಳನ್ನು ಮಾಡುವುದೂ, ಶಾಸ್ತ್ರವು ವಿಧಿಸಿದ ಕರ್ಮಗಳನ್ನು ಮಾಡದೆ ಇರುವುದು ಮೊದಲಾದ ನಾನಾ ವಿಧಗಳಾದ ಪಾಪಗಳಿಗೆ ಹೀಗೆ ನಾನಾ ವಿಧವಾದ ದೃಷ್ಟ ಪ್ರತ್ಯವಾಯ - ಪ್ರತ್ಯಕ್ಷವಾದ ಶಿಕ್ಷಾದಿಗಳು, ಶ್ರುತಿಗಳಲ್ಲಿಯೂ ಮನ್ವಾದಿ ಧರ್ಮ ಶಾಸ್ತ್ರಗಳಲ್ಲಿಯೂ, ಇತಿಹಾಸ ಪುರಾಣ ಭಗವಚ್ಛಾಸ್ತ್ರಾದಿಗಳಲ್ಲಿಯೂ ಪ್ರಸಿದ್ಧ. **ಆಹೈಯಾಲ್** ಇತ್ಯಾದಿ ಆದ್ದರಿಂದ **ಕಾಣತ್ವಾದಿ** - ಕುರುಡು ಮೊದಲಾದ ಉಪಕ್ಲೇಶ ವಿಶೇಷಗಳನ್ನು ಶ್ರುತಿಯು ಉದಾಹರಿಸಿರುವುದು ಉಪಲಕ್ಷಣ - ಉದಾಹರಣ ರೂಪವಾದದ್ದು ಎಂಬುದು, "ಇಹೈವೇಷಾಂ ಕೇಚಿದುಪಕ್ಲೇಶಾಭವಂತಿ" -ಎಂಬ ವಾಕ್ಯದ ಆರಂಭದಲ್ಲಿ ಉಪಕ್ಲೇಶತ್ವ ರೂಪವಾದ ಸಾಮಾನ್ಯ ನಿರ್ದೇಶದಿಂದ ಸಿದ್ಧ. ಎಲ್ಲಾ ಉಪಕ್ಲೇಶಗಳನ್ನೂ ಸಮುದಾಯವಾಗಿ ಉಪಕ್ಲೇಶ ಶಬ್ದದಿಂದ ನಿರ್ದೇಶಿಸಿರುವುದರಿಂದ ಉದಾಹರಣೆಗಾಗಿ ಖಂಜತ್ವಾದಿ ಕೆಲವನ್ನು ಎತ್ತಿ ಹೇಳಿದೆ ಎಂದು ತಾತ್ಪರ್ಯ.

**ಬುದ್ಧಿಪೂರ್ವೋತ್ತರಾಘಕ್ಕೆ ಕೊಡುವ ಶಿಕ್ಷೆಯನ್ನು ಪ್ರಾರಬ್ಧಕರ್ಮ ಫಲವೆಂದು ಹೇಳಲಿಕ್ಕಿಲ್ಲ.**

**ವಚನಬಲಸಿದ್ಧಮಾಯ್** ಇತ್ಯಾದಿ – "ಇಹೈವೇಷಾಂಕೇಚಿದುಪ ಕ್ಲೇಶಾಭವಂತಿ" ಎಂದು ಬುದ್ಧಿಪೂರ್ವಕವಾಗಿ ಪಾಪಗಳನ್ನು ಮಾಡುವವರನ್ನು ಕುರಿತು "ಏಷಾಂ" ಎಂದು ನಿರ್ದೇಶಮಾಡಿ ಉಪಕ್ಲೇಶಗಳು - ಕಷ್ಟಗಳು ಉಂಟಾಗುತ್ತವೆ ಎಂದು ವಚನವು ಹೇಳಿರುವುದರಿಂದ "ಯದನಂತರ" ನ್ಯಾಯದಿಂದ, ಬುದ್ಧಿಪೂರ್ವಕವಾಗಿ ಮಾಡಿದ ಪಾಪಗಳಿಗೆ ಅನಂತರ ಉಪಕ್ಲೇಶಗಳು ಸಂಭವಿಸುವುದರಿಂದ, ಆ ಬುದ್ಧಿಪೂರ್ವಕ ಪಾಪಗಳ ಫಲವಾಗಿಯೇ ಉಪಕ್ಲೇಶಗಳು ಉಂಟಾಗಿರುವುದಾಗಿ ತೀರ್ಮಾನ ಮಾಡಬೇಕೇ ಹೊರತು ಈ ಉಪಕ್ಲೇಶಗಳು ಪ್ರಾರಬ್ಧ ಕರ್ಮ ಫಲವೆಂದು ಹೇಳಲಿಕ್ಕಿಲ್ಲ. ಹಾಗೆ **ನಿಷ್ಕರ್ಷಿಕ್ಕವಿರಹಿಲ್ಲೈ** - ಪ್ರಾರಬ್ಧಕರ್ಮ ಫಲವೆಂದು ನಿಷ್ಕರ್ಷಿಸಲು ದಾರಿಯಿಲ್ಲ. **ಇವೈಯಥಾಸಂಭವಮ್** ಇತ್ಯಾದಿ - ಪ್ರಪನ್ನನಿಗೆ ಉತ್ತರ ಕಾಲದಲ್ಲಿ ಸಂಭವಿಸುವ ಉಪಕ್ಲೇಶಾದಿಗಳು **ಉಭಯವಿಧಕರ್ಮತ್ತಾಲುಮ್** ಅಭ್ಯುಪಗತ ಪ್ರಾರಬ್ಧ ಕರ್ಮ ಫಲವಾಗಿಯೂ ಬುದ್ಧಿಪೂರ್ವಕವಾದ ಪಾಪಗಳಿಗೆ ಶಿಕ್ಷಾರೂಪ ಫಲವಾಗಿಯೂ ಯಥಾಸಂಭವ ಉಂಟಾಗುತ್ತವೆ. **ಆಹೈಯಾಲ್ಲೇ ಇರೇ** ಇತ್ಯಾದಿ - ಆದ್ದರಿಂದಲೇ ಅಲ್ಲವೇ ಸಾತ್ವಿಕರು ಬುದ್ಧಿಪೂರ್ವೋತ್ತರಾಘಗಳಿಗೆ **ಅಂಜಿಪ್ಪೋರುಹಿರದು** – ಭಯಪಟ್ಟು ಅಂಥಹ ಬುದ್ಧಿಪೂರ್ವಕ ಪಾಪಗಳನ್ನು ಮಾಡದೆ ನಡೆದು ಬರುತ್ತಿದ್ದಾರೆ. **ಇಂಗನಲ್ಲಾದಪೋದು** ಇತ್ಯಾದಿ-ಹೀಗೆ ಬುದ್ಧಿಪೂರ್ವೋತ್ತರಾಘಕ್ಕೆ ಪ್ರತ್ಯವಾಯವಿಲ್ಲವೆಂದರೆ ಪುನಃ ಪ್ರಪತ್ತಿವಿಧಾಯಕ ಶಾಸ್ತ್ರವೂ,

**ಮುಮ್, ಪೂರ್ವಸಂಪ್ರದಾಯಮುಮ್, ವಿರೋಧಿಕ್ಕುಮ್. "ಅಪರಾಧಾನಂತರಮ್ ಅನುತಾಪಂ ಪಿರನ್ದದಿಲ್ಲೈಯಾಹಿಲ್ ಜ್ಞಾನಮ್ ಪಿರನ್ದದಿಲ್ಲೆ ಯಾಹಕ್ಕಡವದ"ನ್ಡಿರ ನಂಜೀಯರ್ ವಾರ್ತ್ತೈಕ್ಕುಮ್ ಅನುತಾಪಮ್ ಪಿರವಾದಾರುಡೈಯ ಜ್ಞಾನಮಾಂದ್ಯತ್ತಿಲೇ ತಾತ್ಪರ್ಯಮ್.**

**ಧೀಪೂರ್ವೋತ್ತರಾಘವಿಷಯೇ ಉಪಪಾದಿತಾರ್ಥಾನ್ ನಿಗಮಯತಿ**

**ಸೋಪಾಧಿಕಙ್ಗಳಾನ ಭಗವದಭಿಪ್ರಾಯ ಭೇದಂಗಳುಕ್ಕೀಡಾಹ ವರುಮ್ ಬುದ್ಧಿಪೂರ್ವಾಪಚಾರಮ್ ಶಿಲರ್ಕ್ಕು ಪ್ಪಿರವಾದು. ಶಿಲರ್ಕ್ಕು ಪ್ಪಿರನ್ದು ಅನ್ಱೈ ಅನುತಾಪಾದಿಹಳಾಲೇ ಕ್ಷಯಿಯುಮ್. ಕಠಿನ ಪ್ರಕೃತಿಹಳುಕ್ಕು ಅನುತಾಪಮುಮ್ ಪಿರವಾದು. ಆಹೈಯಾಲ್ ಬುದ್ಧಿ ಪೂರ್ವೋತ್ತರಾಘಂ ಪಿರನ್ದಾಲ್ ಅನುತಪ್ತನಾಯ್ ಪುನಃ ಪ್ರಪತ್ತಿ ಪಣ್ಣಾದ ಪೋದು ಉಪಕ್ಲೇಶಂ ಶೊಲ್ಲುಹಿರ ಶ್ರುತ್ಯಾದಿಹಳಿನ್ ಕಟ್ಟಳೈಯಿಲೇ ಲಘುಪ್ರತ್ಯವಾಯತ್ತಾಲೇ ತೀರುಮ್.**

**ವಿವೇಕಿನಾಂ ಪ್ರಪನ್ನಾನಾಂ ಧೀಪೂರ್ವಾಗಸ್ಯನುದ್ಯಮಃ ।**
**ಮಧ್ಯಾನಾ ಮನುತಾಪಾದಿ ಶಿಕ್ಷಾಕಠಿನ ಚೇತಸಾಮ್ ॥**

---

ಆ ರೀತಿಯಲ್ಲಿ ಶಿಷ್ಟಾನುಷ್ಠಾನವೂ **ಪೂರ್ವರುಗಳ ಸಂಪ್ರದಾಯವೂ** ವಿರೋಧಿಸುತ್ತದೆ. **ಅಪಚಾರಾನಂತರಂ** ಇತ್ಯಾದಿ - ಅಪಚಾರಪಟ್ಟ ಅನಂತರ ಅನುತಾಪವು ಉಂಟಾಗದಿದ್ದರೆ ಜ್ಞಾನವು ಉಂಟಾಗಲಿಲ್ಲವೆಂದು ಹೇಳಿದ ನಂಜೀಯರವರ ಮಾತಿಗೆ ಅನುತಾಪ ಉಂಟಾಗದೇ ಇರುವವರ ಜ್ಞಾನಮಾಂದ್ಯದಲ್ಲಿ ತಾತ್ಪರ್ಯ. ಅಷ್ಟೇ ವಿನಹ ಪ್ರಪತ್ತಿರೂಪ ಜ್ಞಾನವೇ ಉಂಟಾಗಲಿಲ್ಲವೆಂದು ತಾತ್ಪರ್ಯವಲ್ಲ. ಅದಾಗಿ

ಅನುತಾಪೋಪರಮಾತ್ ಪ್ರಾಯಶ್ಚಿತ್ತೋನ್ಮುಖತ್ವತಃ ।
ತತ್ಪೂರಣಾಚ್ಚಾಪಚಾರಾಸ್ಸರ್ವೇ ನಶ್ಯಂತಿ ಪಾದಶಃ ॥

ಎಂದು ಹೇಳಿರುವಂತೆ, ಅನುತಾಪ, ಅನಂತರ ಅಪಚಾರ ನಿವೃತ್ತಿ, ಅನಂತರ ಪ್ರಾಯಶ್ಚಿತ್ತದಲ್ಲಿ ಉನ್ಮುಖತೆ, ಅನಂತರ ಅದನ್ನು ಪೂರ್ತಿಗೊಳಿಸುವುದು, ಎಂಬ ಜ್ಞಾನ ಪೂರ್ತಿಯ ಅಭಾವವು ನಂಜೀಯರ್ ವಾಕ್ಯದಿಂದ ಹೇಳಲ್ಪಡುತ್ತದೆಯೇ ವಿನಹ ಪ್ರಪತ್ತಿರೂಪ ಜ್ಞಾನಾಭಾವವು ಹೇಳಲ್ಪಡಲಿಲ್ಲ. **ಸೋಪಾಧಿಕಂಗಳಾನ** ಇತ್ಯಾದಿ– ಆಯಾಯಾ ಅಪರಾಧಗಳನ್ನು ಕಾರಣವಾಗಿ ಕೊಂಡ **ಭಗವದಭಿಪ್ರಾಯಭೇದಂಗಳುಕ್ಕು** ಭಗವಂತನ ಸಂಕಲ್ಪ ಭೇದಗಳಿಗೆ **ಈಡಾಹ** - ಅನುಗುಣವಾಗಿ **ವರುಮ್** – ಉಂಟಾಗುವ **ಬುದ್ಧಿಪೂರ್ವಾಪಚಾರಮ್** ಇತ್ಯಾದಿ - ಬುದ್ಧಿಪೂರ್ವಾಪರಾಧವು ಕೆಲವರಿಗೆ ಉಂಟಾಗುವುದಿಲ್ಲ. **ಶಿಲರ್ಕ್ಕು** ಇತ್ಯಾದಿ – ಕೆಲವರಿಗೆ ಉಂಟಾದವು ಅನುತಾಪಾದಿಗಳಿಂದ ಕಳೆದು ಹೋಗುತ್ತವೆ. **ಕಠಿನ ಪ್ರಕೃತಿಹಳುಕ್ಕು** ಇತ್ಯಾದಿ - ಕಠಿನ ಪ್ರಕೃತಿಗಳಿಗೆ ಅನುತಾಪವೂ ಉಂಟಾಗುವುದಿಲ್ಲ. **ಆಹೈಯಾಲ್** ಇತ್ಯಾದಿ-ಆದ್ದರಿಂದ ಬುದ್ಧಿಪೂರ್ವೋತ್ತರಾಘವು ಉಂಟಾದರೆ ಅನುತಪಿಸಿ ಪುನಃ ಪ್ರಪತ್ತಿ ಪಣ್ಣಾದಪೋದು ಉಪಕ್ಲೇಶವನ್ನು ಹೇಳುವ ಶ್ರುತ್ಯಾದಿಗಳ **ಕಟ್ಟಳೈಯಿಲೇ** – ರೀತಿಯಲ್ಲಿ, ಆ ಉತ್ತರಾಘಗಳು **ಲಘುಪ್ರತ್ಯವಾಯತಾಲೇ** –"ಲಘುರ್ದಂಡಃ ಪ್ರಪನ್ನಸ್ಯ", ಎಂಬಂತೆ ಲಘುವಾದ ಶಿಕ್ಷೆಯಿಂದ, **ತೀರುಮ್** – ಕಳೆಯುತ್ತವೆ.

ಮೇಲೆ ಹೇಳಿದ ಅರ್ಥಗಳನ್ನು ಕಾರಿಕೆಯ ಮೂಲಕ ಸಂಗ್ರಹಿಸುತ್ತಾರೆ. **ವಿವೇಕಿನಾಂಪ್ರಪನ್ನಾನಾಂ** ಇತ್ಯಾದಿ ವಿವೇಕಿಗಳಾದ ಪ್ರಪನ್ನರಿಗೆ ಬುದ್ಧಿಪೂರ್ವಗಳಾದ ಪಾಪಗಳಲ್ಲಿ **ಅನುದ್ಯಮಃ**–ಪ್ರವೃತ್ತಿಯು ಉಂಟಾಗುವುದಿಲ್ಲ. **ಮಧ್ಯಾನಾಮನುತಾಪಾದಿ** – ವಿವೇಕವಿಲ್ಲದೆ ಕಠಿಣ ಬುದ್ಧಿಯಿಲ್ಲದೆ ಮಧ್ಯಸ್ಥರಾಗಿರುವವರಿಗೆ, ಅನುತಾಪ, ಆದಿ ಶಬ್ದದಿಂದ ಅಂತಹ ಪಾಪಗಳಲ್ಲಿ ಉಪರತಿ ಏರ್ಪಟ್ಟು, ಪ್ರಾಯಶ್ಚಿತ್ತದಲ್ಲಿ ಪ್ರವೃತ್ತಿಯು ಏರ್ಪಡುತ್ತದೆ. **ಕಠಿನಚೇತಸಾಂ ಶಿಕ್ಷಾ** – ಕಠಿನ ಬುದ್ಧಿಯುಳ್ಳವರಿಗೆ ಅಂದರೆ ಬುದ್ಧಿ ಪೂರ್ವಾಪರಾಧಗಳನ್ನು ಮಾಡಿ ಪ್ರಾಯಶ್ಚಿತ್ತಗಳನ್ನೂ ಮಾಡಿಕೊಳ್ಳದವರಿಗೆ ಶಿಕ್ಷೆಯು ಏರ್ಪಡುತ್ತದೆ

**ಆನ ಪಿನ್ಪು ಒರುಪಡಿಯಾಲುಮ್ ಭಗವನ್ನಿಗ್ರಹಮ್ ವಾರಾಮೈಕ್ಕಾಹ ಬುದ್ಧಿ ಪೂರ್ವಾಪರಾಧಮ್ ಪರಿಹರಣೀಯಮ್,**

**ಪ್ರೀತಿಮೇವ ಸಮುದ್ದಿಶ್ಯ ಸ್ವತಂತ್ರಾಜ್ಞಾನುಪಾಲನೇ ।**
**ನಿಗ್ರಹಾನುದಯೇಽಪ್ಯಸ್ಯ ನಾಂತರೀಯಕ ಮೇವ ವಾ ॥**

**ಇಪ್ಪಡಿ ಯಥಾಶಕ್ತಿ ಅಪರಾಧಙ್ಗಳೈ ಪ್ಪರಿಹರಿತ್ತುಕ್ಕೊಂಡು ಪೋರಾ ನಿನ್ರಾಲ್ ಭಾಗವತಾಪಚಾರಮುಮ್ ಅದುಡೈಯಾರೋಡು ಸಂಸರ್ಗಮುಮ್ ಪೋರಪ್ಪರಿಹರಣೀಯಮ್.**

ಉಕ್ತಾರ್ಥಾನ್ ಕಾರಿಕಯಾ ಸಂಗೃಹ್ಣಾತಿ

**ಬ್ರಹ್ಮವಿತ್ಪಾಪವರ್ಗಾಣಾ ಮನಂತಾನಾಂ ಮಹೀಯಸಾಮ್ ।**
**ತದ್ವೇಷಿ ಸಂಕ್ರಮಂ ಜಾನನ್ ತ್ರಸ್ಯೇತ್ತದಪರಾಧತಃ ॥**
**ಸಾಪರಾಧೇಷು ಸಂಸರ್ಗೇಽಪ್ಯಪರಾಧಾನ್ ವಹತ್ಯಸೌ ।**
**ವೋಢುಮೀಶ್ವರ ಕೃತ್ಯಾನಿ ತದ್ವಿರೋಧಾದಭೀಪ್ಸತಿ ॥**

---

**ಆನಪಿನ್ಪು** ಇತ್ಯಾದಿ – ಬುದ್ಧಿ ಪೂರ್ವಾಪರಾಧಕ್ಕೆ ಅನುತಪಿಸಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆ ಇರುವ ಪ್ರಪನ್ನನಿಗೆ, ಲಘುವಾದ ಶಿಕ್ಷೆಯು ಅವಶ್ಯ ಉಂಟಾಗುತ್ತದೆಯೆಂದು ತೀರ್ಮಾನವಾದ ನಂತರ, ಲಘುವಾದ ಶಿಕ್ಷಾ ರೂಪವಾಗಿಯಾಗಲಿ ಯಾವ ರೀತಿಯಲ್ಲಿಯೂ ಭಗವನ್ನಿಗ್ರಹವು ಉಂಟಾಗದಿರಲು ಬುದ್ಧಿ ಪೂರ್ವಾಪರಾಧವು ಅವಶ್ಯ ಪರಿಹರಣೀಯ.

**ಪ್ರೀತಿಮೇವ ಸಮುದ್ದಿಶ್ಯ** ಇತ್ಯಾದಿ – ಶೇಷಿಯಾದ ಭಗವಂತನ ಪ್ರೀತಿಯನ್ನೇ ಮುಖ್ಯ ಫಲವಾಗಿ ಉದ್ದೇಶಿಸಿ, ಸ್ವತಂತ್ರವಾದ ಅವನ ಆಜ್ಞೆಯನ್ನು ಪರಿಪಾಲನೆ ಮಾಡುವುದರಿಂದ ನಿಗ್ರಹವು ಉಂಟಾಗವುದಿಲ್ಲ. ಅವನ ಕೈಂಕರ್ಯಗಳಿಗೆ ಅಡಚಣೆಯೂ ಏರ್ಪಡುವುದಿಲ್ಲ

### ಭಾಗವತಾಪಚಾರ ಮತ್ತು ತತ್ಸಂಸರ್ಗಿಗಳೊಡನೆ ಸಂಬಂಧವು ಅವಶ್ಯ ಪರಿಹರಣೀಯ

**ಇಪ್ಪಡಿ ಯಥಾಶಕ್ತಿ** ಇತ್ಯಾದಿ– ಹೀಗೆ ಯಥಾಶಕ್ತಿ ಅಪರಾಧಗಳನ್ನು ಪರಿಹರಿಸಿಕೊಂಡು **ಪೋರಾನಿನ್ರಾಲ್– ಕಾಲವನ್ನು** ಕಳೆಯುತ್ತಿದ್ದರೆ, ಭಾಗವತಾಪಚಾರವೂ ಅದನ್ನು ಮಾಡುವವರೊಡನೆ ಸಂಸರ್ಗವೂ, **ಪೋರ** – ಅವಶ್ಯ, **ಪರಿಹರಣೀಯವು**.

ಬ್ರಹ್ಮವಿತ್ **ಪಾಪವರ್ಗಾಣಾಂ** ಇತ್ಯಾದಿ–ಬ್ರಹ್ಮವಿತ್ತುಗಳು ಮಾಡಿರುವ **ಅನಂತಾನಾಂಮಹೀಯಸಾಮ್**– ಅನಂತಗಳಾದ ಮತ್ತು ಮಹಿಷ್ಠಗಳಾದ ಪಾಪಗಳು **ತದ್ವೇಷಿಸಂಕ್ರಮಂಜಾನನ್** – ಆ ಬ್ರಹ್ಮವಿತ್ತುಗಳನ್ನು ದ್ವೇಷಿಸುವವರುಗಳಿಗೆ ಸಂಕ್ರಮಿಸುತ್ತವೆ ಎಂಬುದನ್ನು "ದ್ವಿಷಂತಃ ಪಾಪಕೃತ್ಯಾಮ್" ಎಂಬ ಶ್ರುತಿ ವಾಕ್ಯದಿಂದ ತಿಳಿದು, **ತ್ರಸ್ಯೇತ್ತದಪರಾಧತಃ** – ಬ್ರಹ್ಮವಿತ್ತುಗಳಲ್ಲಿ ಅಪಚಾರಗಳನ್ನು ಮಾಡಲು ಹೆದರಬೇಕು.

**ಸಾಪರಾಧೇಷು ಸಂಸರ್ಗೇಪಿ** ಇತ್ಯಾದಿ – ಆ ಬ್ರಹ್ಮವಿತ್ತುಗಳಲ್ಲಿ ಅಪಚಾರವನ್ನು ಪಡುವವರೊಡನೆ ಸಂಸರ್ಗವನ್ನು ಮಾಡುವವನೂ, ಅಂದರೆ ಅವರುಗಳೊಡನೆ ಸೇರುವವನೂ, **ಅಪರಾಧಾನ್‌ವಹತ್ಯಸೌ** – ಭಗವದ ಪಚಾರವನ್ನು ಹೊರುತ್ತಾನೆ. ಅಂದರೆ ಬ್ರಹ್ಮ ವಿದಪಚಾರಿ ಸಂಸರ್ಗವೂ ಪಾಪಕರ. **ವೋಢುಮೀಶ್ವರ ಕೃತ್ಯಾನಿ** ಇತ್ಯಾದಿ – ಆ ಬ್ರಹ್ಮವಿದಪರಾಧಿಗಳನ್ನೂ, ತತ್ಸಂಸರ್ಗಿಗಳನ್ನೂ ಶಿಕ್ಷಿಸುವುದು ಈಶ್ವರ ಕೃತ್ಯವಾದ್ದರಿಂದ, ಇತರನು ಆ ಕಾರ್ಯಕ್ಕೆ ಪ್ರವೇಶಿಸಬಾರದು. ಹಾಗೆ ಪ್ರವೇಶಿಸಿದರೆ ಈಶ್ವರ ಕೃತ್ಯವನ್ನು ಇತರನು

## ಮೋಕ್ಷಯಿಷ್ಯಾಮಿ ಶಬ್ದಾರ್ಥಮಾಹ

ತನ್ನಿನೈವಿಲ್ ವಿಲಕ್ಕಿನ್ರಿತ್ತನ್ನೈ ನಣ್ಣಾರ್ ನಿನೈವನೈತ್ತುಮ್ ತಾನ್ವಿಳೈತ್ತುಮ್ ವಿಲಕ್ಕುನಾದನ್ ।
ಎನ್ನಿನೈವೈಯಿಪ್ಪವತ್ತಲಿನ್ರು ಮಾತ್ತಿಯಿಣೈಯಡಿಕ್ಕೀಳ್ ಅಡೈಕ್ಕಲಮೆನ್ರೆನ್ನೈವೈತ್ತು ॥
ಮುನ್ನಿನೈವಾಲ್ ಯಾನ್ಮುಯನ್ರ ವಿನೈಯಾಲ್ ವನ್ದ ಮುನಿವಯರ್ನ್ದು ಮುತ್ತಿತರಮುನ್ನೇ ತೋನ್ರಿ ।
ನನ್ನಿನೈ ವಾಲ್ನಾಮಿಶೈಯುಮ್ ಕಾಲಮಿನ್ರೋನಾಳೈಯೋವೆನ್ರು ನಹೈಶೆಯ್‌ಹಿನ್ರಾನೇ ॥೪೬॥

"ಮೋಕ್ಷಯಿಷ್ಯಾಮಿ" ಎನ್ರದು ಉನಕ್ಕಿಷ್ಟ ಮಾನ ಪೋದು ಮುಕ್ತನಾಕ್ಕುವನ್ ಎನ್ರಪಡಿ. ಶಿಲರ್ ಪಾಪಙ್ಗಳೈ "ನಕ್ಷನಾಮಿ" ಎನ್ಗೈಯುಮ್, ಇಙ್ಗೇ "ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ",

---

ಮಾಡಲು ಆಸೆಪಟ್ಟಂತೆ ಆಗಿ ಅದೂ ಭಗವದಪಚಾರವಾಗುತ್ತದೆ. ಆದ್ದರಿಂದ ಬ್ರಹ್ಮವಿದಪರಾಧಿ ವಿಷಯದಲ್ಲಿ ಆನುಕೂಲ್ಯಾಚರಣವೂ ಪ್ರಾತಿಕೂಲ್ಯಾಚರಣವೂ ಇಲ್ಲದೆ ಉದಾಸೀನನಾಗಿ ವರ್ತಿಸಬೇಕೆಂದು ಆಚಾರ್ಯರ ಹೃದಯು

## "ಮೋಕ್ಷಯಿಷ್ಯಾಮಿ" ಎಂಬುದರ ಅರ್ಥ

"ಮೋಕ್ಷಯಿಷ್ಯಾಮಿ" ಎಂದು ಗೀತಾಚಾರ್ಯನು "ಲೃಟ್" ಪ್ರಯೋಗವನ್ನು ಮಾಡಿರುವುದಕ್ಕೆ ಭಾವವನ್ನು **ತನ್ನಿನೈವಿಲ್** ಎಂದಾರಂಭಿಸಿ ಪಾಶುರದ ಮೂಲಕ ಆಚಾರ್ಯರು ತಿಳಿಸುತ್ತಾರೆ. **ತನ್ನಿನೈವಿಲ್** –ತನ್ನ ಸಂಕಲ್ಪದಲ್ಲಿ, **ವಿಲಕ್ಕಿನ್ರಿ** – ತಡೆಯಿಲ್ಲದೆ ಅಪ್ರತಿಹತ ಸಂಕಲ್ಪನಾಗಿ **ತನ್ನೈನಣ್ಣಾರ್** – ತನ್ನನ್ನು ಆಶ್ರಯಿಸದೆ ಇರುವವರ, **ನಿನೈವನೈತ್ತುಮ್** –ಸಾಂಸಾರಿಕ ಭೋಗ ವಿಷಯವಾದ ಸಂಕಲ್ಪಗಳೆಲ್ಲವನ್ನೂ **ತಾನ್ವಿಳೈತ್ತುಮ್**– ತಾನೇ ಉಂಟುಮಾಡಿ, **ವಿಲಕ್ಕುನಾದನ್** – ಹೋಗಲಾಡಿಸುವ ಸ್ವಾಮಿ, ಆ ಸಾಂಸಾರಿಕ ಭೋಗಗಳಲ್ಲಿ ಅವರಿಗಿರುವ ಆಸೆಯನ್ನು ಹೋಗಲಾಡಿಸುವ ಸ್ವಾಮಿ, **ಯಿಪ್ಪವತ್ತಿಲ್ ಎನ್ನಿನೈವೈ** – ಈ ಸಂಸಾರದಲ್ಲಿ ನನ್ನ ಆಸೆಯನ್ನು, **ಇನ್ರುಮಾತ್ತಿ** – ಯಾದೃಚ್ಛಿಕ ಸುಕೃತಾದಿ ಮೂಲಕವಾಗಿ, ಮೋಕ್ಷೋಪಾಯದಲ್ಲಿ ಆಸೆಯುಂಟಾಗುವಂತೆ, ಈಗ ಸಾಂಸಾರಿಕ ಭೋಗಗಳಲ್ಲಿ ಆಸೆಯನ್ನು ಹೋಗಲಾಡಿಸಿ, **ಇಣೈಯಡಿಕ್ಕೀಳ್ ಅಡೈಕ್ಕಲಮ್ ಎನ್ರೆನ್ನೈವೈತ್ತು** – ತನ್ನ ಎರಡು ಪಾದಗಳಲ್ಲಿ ರಕ್ಷ್ಯ ವಸ್ತುವಾಗಿ ನನ್ನನ್ನು ನಿವೇಶಿಸಿ, **ಮುನ್ನಿನೈವಾಲ್**– ಪೂರ್ವದಲ್ಲಿ ನನಗೆ ಉಂಟಾಗಿದ್ದ ಅಜ್ಞಾನ ಭ್ರಾಂತಿಗಳಿಂದ **ಯಾನ್ಮುಯನ್ರ** – ನಾನು ಸ್ವಪ್ರಯತ್ನದಿಂದ ಮಾಡಿದ **ವಿನೈಯಾಲ್ವನ್ದ** - ಪಾಪದಿಂದ ಬಂದ, **ಮುನಿವು** – ನಿಗ್ರಹಸಂಕಲ್ಪವು, **ಅಯರ್ನ್ದು** – ನೀಗಿ, ಬಿಟ್ಟುಬಿಟ್ಟು ಎಂದು ಅರ್ಥ, **ಮುತ್ತಿತರ ಮುನ್ನೇತೋನ್ರಿ** – ಮೋಕ್ಷವನ್ನು ಕೊಡಲು, ವಿಭವಾವತಾರದಲ್ಲಿ ನನಗೆ ಎದುರಿನಲ್ಲಿ ಆವಿರ್ಭವಿಸಿ, **ನನ್ನಿನೈವಾಲ್ ನಾಮಿಶೈಯುಮ್ ಕಾಲಮ್** – ಒಳ್ಳೆಯ ಸಂಕಲ್ಪದಿಂದ ನಾವು ಮೋಕ್ಷವನ್ನು ಪಡೆಯಲು ಸಮ್ಮತಿಸುವ ಕಾಲವು, **ಇನ್ರೋನಾಳೆಯೋವೆನ್ರು** – ಈವತ್ತೋ, ನಾಳೆಯೋ ಎಂದು **ನಹೈಶೆಯ್‌ಹಿನ್ರಾನೇ** – ಮಂದಹಾಸದಿಂದ ಕೂಡಿ ಇರುತ್ತಾನೆ. ಆದಾಗಿ ನಾವು "ಏತದ್ದೇಹಾವಸಾನೇ ಮಾಂ ತ್ವತ್ಪಾದಂ ಪ್ರಾಪಯಿಷ್ಯಸಿ" ಎಂದು ಈ ದೇಹಾವಸಾನದಲ್ಲಿ ಮೋಕ್ಷವನ್ನು ಕೊಡುವಂತೆ ಪ್ರಾರ್ಥಿಸಿದರೂ, ಆ ಕಾಲವು **ಈವತ್ತೋ** ನಾಳೆಯೋ ಎಂದು ನಗುತ್ತಿರುತ್ತಾನೆಂದರ್ಥ.

**'ಮೋಕ್ಷಯಿಷ್ಯಾಮಿ' ಎನ್ರದು** ಇತ್ಯಾದಿ – ಮೋಕ್ಷವನ್ನು ಕೊಡುತ್ತೇನೆ ಎಂದು ಹೇಳುವುದು, **ಉನಕ್ಕಿಷ್ಟಮಾನಪೋದು** – ನಿನಗೆ ಇಷ್ಟವಾದ ಸಮಯದಲ್ಲಿ **ಮುಕ್ತನಾಕ್ಕುವನ್ ಎನ್ರಪಡಿ** – ಮುಕ್ತನನ್ನಾಗಿ ಮಾಡುತ್ತೇನೆ, ಎಂದು ಹೇಳಿದಂತಾಯಿತು. ಇದರಿಂದ ಪ್ರಾರಬ್ಧ ಕರ್ಮಾವಸಾನದಲ್ಲಿ ಭಕ್ತಿಯೋಗ ನಿಷ್ಠನಿಗೆ

**ಎನ್ಗೈಯುಮ್ ವಿರುದ್ಧಮನ್ರೋ ? ಆಹೈಯಾಲ್ ಇದು ಉಪಚ್ಛಂದನಮಾಮತ್ತನ್ಯೈಯನ್ರೋ ? ವೆನ್ನಿಲ್, ಇವ್ವಿರಣ್ಡುಮ್ ಭಿನ್ನವಿಷಯಮಾಹೈಯಾಲೇ ವಿರೋಧಮಿಲ್ಲೈ. "ನಕ್ಷಮಾಮಿ"ಎನ್ಗದು 1) "ಪದ್ಮಪತ್ರಶತೇನಾಪಿ ನಕ್ಷಮಾಮಿ ವಸುಂಧರೇ। ಉಪಚಾರಶತೇನಾಪಿ ನಕ್ಷಮಾಮಿ ವಸುಂಧರೇ" ಎನ್ನಾರ್ಪೋಲೇ ಶೊಲ್ಲುಹಿರ ಪೋಲಿಯಾನ ಪ್ರಾಯಶ್ಚಿತ್ತಾನ್ತರಙ್ಗಳಾಲ್ ಕ್ಷಮಿಯೇನ್ ಎನ್ಗಪಡಿ. ಇಙ್ಗು ಸರ್ವಪಾಪ ಪ್ರಾಯಶ್ಚಿತ್ತಮಾಯಿರುಪ್ಪದೊರು ಉಪಾಯ ವಿಶೇಷತ್ತಾಲೇ ಎಲ್ಲಾತ್ತೈಯುಮ್ ಕ್ಷಮಿಪ್ಪೇನೆನ್ಗಿರದು. 2) "ಯದಿವಾ ರಾವಣಸ್ಸ್ವಯಂ" ಎನ್ಗಿರೇ ಶರಣ್ಯಾಭಿಪ್ರಾಯ ಮಿರುಪ್ಪದು. ಇಪ್ಪಡಿ ವ್ಯವಸ್ಥಿತ ವಿಷಯಮಾಹ ವಚನಙ್ಗಳ್ ತಾನೇ ಕಾಟ್ಟುಹೈಯಾಲೇ ವಿರೋಧಮಿಲ್ಲಾಮೈಯಾಲ್**

---

ಮೋಕ್ಷವು ಲಭಿಸಿದರೂ, ಪ್ರಪನ್ನನಿಗೆ ಇವನು ನಿರ್ದೇಶ ಮಾಡಿ ಹೇಳಿದ ಕಾಲದಲ್ಲಿ ಮೋಕ್ಷವು ಅವಶ್ಯ ಲಭಿಸುತ್ತದೆಯೆಂದರ್ಥ. ಇದರಿಂದ ಪ್ರಾರಬ್ಧ ಕರ್ಮಾವಸಾನದಲ್ಲಿ ಮೋಕ್ಷವನ್ನು ಪಡೆಯುವ ಭಕ್ತಿಯೋಗ ನಿಷ್ಠನಿಗಿಂತಲೂ ತನಗೆ ಇಷ್ಟವಾದ ಕಾಲದಲ್ಲಿ ಮೋಕ್ಷವನ್ನು ಪಡೆಯುವ ಪ್ರಪನ್ನನಿಗೆ ವ್ಯತ್ಯಾಸವು ಹೇಳಲ್ಪಟ್ಟಿತು.

"ಪದ್ಮ ಪತ್ರಶತೇನಾಪಿ ನಕ್ಷಮಾಮಿ ವಸುಂಧರೇ", "ಉಪಚಾರಶತೇನಾಪಿ ನಕ್ಷಮಾಮಿ ವಸುಂಧರೇ", – ನೂರು ತಾವರೆ ದಳಗಳಿಂದ ಅರ್ಚನೆ ಮಾಡಿದರೂ, ನೂರು ಉಪಚಾರಗಳನ್ನು ಸಮರ್ಪಿಸಿದರೂ, ಎಲೈ ಭೂದೇವಿಯೇ, ಮನುಷ್ಯನು ಮಾಡಿದ ಕೆಲವು ತೀಕ್ಷ್ಣವಾದ ಪಾಪಗಳನ್ನು ಕ್ಷಮಿಸುವುದಿಲ್ಲ. ನೂರು ಎಂಬುದು ಉಪಲಕ್ಷಣ, ಅಂದರೆ ಲಕ್ಷಾರ್ಚನೆ, ಕೋಟ್ಯರ್ಚನೆ ಮಾಡಿದರೂ ಕೆಲವು ಕ್ರೂರಗಳಾದ ಪಾಪಗಳನ್ನು ಭಗವಂತನು ಕ್ಷಮಿಸುವುದಿಲ್ಲವೆಂದು ಹೇಳಿರುವಾಗ "ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಸರ್ವಪಾಪಗಳಿಂದಲೂ ಬಿಡಿಸುತ್ತೇನೆಂದು ಹೇಳಿರುವುದು ಕೇವಲ ಉಪಚ್ಛಂದನವಲ್ಲವೇ. ಅಂದರೆ ಪ್ರಪತ್ತಿಯು ಭಗವಂತನ ಪ್ರೀತಿಯನ್ನು ಸಂಪಾದಿಸಿಕೊಡುತ್ತದೆಯಷ್ಟೆ, ಸರ್ವಪಾಪಗಳಿಂದ ಜೀವನನ್ನು ಬಿಡಿಸುವುದಿಲ್ಲವೆಂಬ ಶಂಕೆಯನ್ನು ಹೋಗಲಾಡಿಸಲು **ಶಿಲಪಾಪಂಗಳೈ** ಎಂದಾರಂಭಿಸಿ ಆಚಾರ್ಯರು ಶಂಕಾನಿವಾರಣೆ ಮಾಡುತ್ತಾರೆ. ಅದಾಗಿ ಕೆಲವು ಪಾಪಗಳನ್ನು ಕ್ಷಮಿಸುವುದಿಲ್ಲವೆಂಬುದೂ, ಇಲ್ಲಿ ಸರ್ವ ಪಾಪಗಳನ್ನೂ ಹೋಗಲಾಡಿಸುತ್ತೇನೆಂಬುದೂ ಪರಸ್ಪರ ವಿರುದ್ಧವಲ್ಲವೇ. ಆದ್ದರಿಂದ ಸರ್ವಪಾಪ ನಿವಾರಣ ವಾಕ್ಯವು ಉಪಚ್ಛಂದನವಲ್ಲವೇ ಎಂದರೆ, **ಇವ್ವಿರಂಡುಮ್** ಇತ್ಯಾದಿ – ಇವೆರಡೂ ಭಿನ್ನ ವಿಷಯಗಳಾದ್ದರಿಂದ ವಿರೋಧವಿಲ್ಲ. **ನಕ್ಷಮಾಮಿ** - ಕ್ಷಮಿಸುವುದಿಲ್ಲವೆಂಬುದು 1) **ಪದ್ಮಪತ್ರಶತೇನಾಪಿ, ಉಪಚಾರಶತೇನಾಪಿ** -ಎಂದು ನೂರು ಅರ್ಚನೆ, ಉಪಚಾರ ಸಮರ್ಪಣೆ, **ಇತ್ಯಾದಿ ಹೇಳುವ ಪೋಲಿಯಾನ** –ಅಲ್ಪಪ್ರಭಾವಗಳನ್ನುಳ್ಳ ಪ್ರಾಯಶ್ಚಿತ್ತಾಂತರಗಳಿಂದ ಕ್ಷಮಿಸುವುದಿಲ್ಲವೆಂದು ತಾತ್ಪರ್ಯ. **ಇಂಗು** – ಚರಮ ಶ್ಲೋಕದಲ್ಲಿ **ಸರ್ವಪಾಪಪ್ರಾಯಶ್ಚಿತ್ತಮಾಹ** ಇತ್ಯಾದಿ – ಸರ್ವಪಾಪಗಳಿಗೆ ಪ್ರಾಯಶ್ಚಿತ್ತವಾಗಿ ಇರುವ ಉಪಾಯ ವಿಶೇಷದಿಂದ ಎಲ್ಲಾ ಪಾಪಗಳನ್ನೂ ಕ್ಷಮಿಸುತ್ತೇನೆಂದು ಹೇಳಿರುತ್ತದೆ. ಇದರಿಂದ **ಸ**ರ್ವಪಾಪ ಪ್ರಾಯಶ್ಚಿತ್ತ ರೂಪವಾದ ಮಹಾಪ್ರಭಾವವತ್ತಾದ ಪ್ರಪತ್ತಿಗೂ, ಕೆಲವು ಪಾಪಗಳನ್ನು ಮಾತ್ರ ಹೋಗಲಾಡಿಸುವ ಅಲ್ಪ ಪ್ರಭಾವವನ್ನುಳ್ಳ ಪದ್ಮಪತ್ರಾರ್ಚನಾದಿಗಳಿಗೂ ಬಹಳ ವ್ಯತ್ಯಾಸವಿರುವುದರಿಂದ, "ಸರ್ವಪಾಪೇ ಭ್ಯೋ ಮೋಕ್ಷಯಿಷ್ಯಾಮಿ", ಎಂಬ ವಚನವು ಉಪಚ್ಛಂದನವಲ್ಲ.

2) **"ಯದಿವಾರಾವಣಸ್ಸ್ವಯಮ್"** ಎಂದು ರಾವಣನೇ ಶರಣಾಗತನಾಗಿ ಬಂದರೂ ನಾನು ಅವನ ಸರ್ವ ಪಾಪಗಳನ್ನೂ ಕ್ಷಮಿಸಿ ಅಂಗೀಕರಿಸುತ್ತೇನೆ ಎಂದಲ್ಲವೇ ಶರಣ್ಯನ ಅಭಿಪ್ರಾಯವಿರುತ್ತದೆ. **ಇಪ್ಪಡಿ ವ್ಯವಸ್ಥಿತ ವಿಷಯಮಾಹ** ಇತ್ಯಾದಿ – ಹೀಗೆ ಭಿನ್ನ ಭಿನ್ನ ವಿಷಯಗಳನ್ನು ವಚನಗಳು ತೋರಿಸಿಕೊಡುವುದರಿಂದ ಪರಸ್ಪರ ವಿರೋಧವಿಲ್ಲವಾಗಿ ಈ "ಸರ್ವ ಪಾಪ ವಿಮೋಕ್ಷಣ" ವಚನವು ಉಪಚ್ಛಂದನವಾಗುವುದಿಲ್ಲ.

---

1) ವಾಮನಪುರಾಣ ಪು. ತಿ. ನೋ.

**ಇದು ಉಪಜೀವ್ಯಂದನ ಮಾತ್ರಮನ್ರು. ಇಙ್ಙನಲ್ಲಾದಪ್ಪೋದು ಭಕ್ತಿ ಪ್ರಪತ್ತಿರೂಪ ಮೋಕ್ಷೋಪಾಯಙ್ಙಳೈ ವಿಧಿಕ್ಕಿರ ಶಾಸ್ತ್ರಙ್ಙಳೆಲ್ಲಾಮ್ ವ್ಯಾಕುಲಙ್ಙಳಾಮ್.**

**ಪಾಪಮೋಕ್ಷಣ ಶಬ್ದಾರ್ಥಂ ತತ್ಪ್ರಕಾರಾಂಶ್ಚಾಹ**

**ಇಙ್ಙು ಪಾಪಙ್ಙಳಿಲ್ ನಿನ್ರುಮ್ ವಿಡುವಿಕ್ಕೈಯಾವದು ? ಅನಾದಿಯಾನ ವಿಪರೀತಾನುಷ್ಠಾನತ್ತಾಲೇ ಪಿರನ್ದನಿಗ್ರಹಾಭಿಪ್ರಾಯತ್ತೈ ಈಶ್ವರನ್ ತಾನ್ ವಿಡುಹೈ. ಇನ್ನಿಗ್ರಹ ನಿವೃತ್ತಿಯಾಲೇ ನಿಗ್ರಹ ಕಾರ್ಯಙ್ಙಳಾನ ಅವಿದ್ಯಾದಿಹಳೆಲ್ಲಾಮ್ ನಿವೃತ್ತಙ್ಙಳಾಮ್. ಈಶ್ವರನುಡೈಯ ನಿಗ್ರಹ ನಿವೃತ್ತಿಯಾವದು 1) "ಮತ್ಪ್ರಸಾದಾತ್" ಎನ್ಗಿರ ಅಭಿಪ್ರಾಯ ವಿಶೇಷಮ್. ಜೀವನುಕ್ಕು ಅವಿದ್ಯಾದಿಹಳುಡೈಯ ನಿವೃತ್ತಿಯಾವದು ಜ್ಞಾನವಿಕಾಸಾದಿಹಳ್.**

---

**ಇಂಗನಲ್ಲಾದಪ್ಪೋದು** – ಹೀಗೆ ಪಾಪ ವಿಮೋಚನ ವಚನಗಳು ಭಿನ್ನ ಭಿನ್ನ ವಿಷಯಗಳಲ್ಲವೆಂದರೆ, **ಭಕ್ತಿ ಪ್ರಪತ್ತಿರೂಪ** ಇತ್ಯಾದಿ – ಭಕ್ತಿ ಪ್ರಪತ್ತಿ ರೂಪ ಮೋಕ್ಷೋಪಾಯಗಳನ್ನು ವಿಧಿಸುವ ಶಾಸ್ತ್ರಗಳೆಲ್ಲಾ ಅತ್ಯಂತ ವ್ಯಾಕುಲಗಳಾಗುತ್ತವೆ. "ಸರ್ವೇಪಾಪ್ಮಾನಃ ಪ್ರದೂಯಂತೇ".

**ಪಾಪ ವಿಮೋಚನ ಶಬ್ದಾರ್ಥ**

ಪಾಪ ಶಬ್ದವು ಜೀವನು ಮಾಡುವ ವಿಪರೀತಾನುಷ್ಠಾನ ರೂಪ ಕ್ರಿಯಾ ವಿಶೇಷವಾದರೆ ಆ ಕ್ರಿಯೆಯು ಕ್ಷಣಭಂಗುರವಾದ್ದರಿಂದ ಅದನ್ನು ಹೋಗಲಾಡಿಸಬೇಕೆಂಬ ಪ್ರಸಕ್ತಿಯಿಲ್ಲ. ಜೀವನು ಮಾಡುವ ಪಾಪಗಳಿಂದ ಉಂಟಾದ ಭಗವನ್ನಿಗ್ರಹ ಸಂಕಲ್ಪವೆಂದರೆ ಅದು ಜೀವಗತವಲ್ಲವಾದ್ದರಿಂದ, 'ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ' ಎಂಬುದು ಹೇಗೆ ಸಂಗತವಾಗುತ್ತದೆ ಎಂದರೆ **ಇಂಗು ಪಾಪಂಗಳಿನಿನ್ರುಮ್ ವಿಡುವಿಕ್ಕೈಯಾವದು** ಎಂದಾರಂಭಿಸಿ ಶಂಕಾಪರಿಹಾರ ಮಾಡುತ್ತಾರೆ. ಆದಾಗಿ ಈ ಚರಮ ಶ್ಲೋಕದಲ್ಲಿ ಸರ್ವ ಪಾಪಗಳಿಂದಲೂ ಬಿಡಿಸುತ್ತೇನೆಂದು ಹೇಳಿರುವುದು, ಜೀವನು ಅನಾದಿಯಾಗಿ ಮಾಡಿರುವ ವಿಪರೀತಾನುಷ್ಠಾನದಿಂದ ಉಂಟಾದ ನಿಗ್ರಹಾಭಿಸಂಧಿಯನ್ನು ಭಕ್ತಿ ಅಥವಾ ಪ್ರಪತ್ತಿ ವಶೀಕೃತನಾದ ಈಶ್ವರನು ತಾನೇ ಬಿಡುವುದು. ಜೀವರುಗಳು ಮಾಡಿದ ವಿಪರೀತಾನುಷ್ಠಾನದಿಂದ ಉಂಟಾದ ಈಶ್ವರನ ನಿಗ್ರಹಾಭಿಸಂಧಿಯೇ ಪಾಪ ಶಬ್ದವಾಚ್ಯವಾದ್ದರಿಂದ ಅದು ಅಪೃಥಕ್ಸಿದ್ಧ ರೂಪ ಸಂಬಂಧದಿಂದ ಈಶ್ವರಗತವಾಗಿಯೇ ಇರುತ್ತದೆ. ಆದರೂ ಈ ನಿಗ್ರಹಾಭಿಸಂಧಿಯೂ ವಿಪರೀತಾನುಷ್ಠಾನವನ್ನು ಮಾಡಿರುವ ಜೀವರುಗಳಲ್ಲಿ ವಿಷಯತಾಸಂಬಂಧದಿಂದ ಇರುತ್ತದೆಯಾದ್ದರಿಂದ, ಇದನ್ನು ಜೀವರುಗಳ ಪಾಪವೆಂದು ವ್ಯವಹರಿಸುತ್ತೇವೆ. ಈ ಜೀವ ವಿಷಯಕವಾದ ನಿಗ್ರಹಾಭಿಪ್ರಾಯವನ್ನು ಈಶ್ವರನು ಬಿಟ್ಟುಬಿಟ್ಟರೆ, ಆ ನಿಗ್ರಹ ಸಂಕಲ್ಪರೂಪ ಅಭಿಪ್ರಾಯವು ವಿಷಯತಾ ಸಂಬಂಧದಿಂದ ಜೀವರುಗಳನ್ನು ಬಿಡುವುದರಿಂದ, ಜೀವನನ್ನು ಪಾಪದಿಂದ ಬಿಡಿಸುತ್ತೇನೆಂದು ಹೇಳುವುದು ಸಂಗತವಾಗುತ್ತದೆ.

ಈಶ್ವರನು ಜೀವ ವಿಷಯಕ ನಿಗ್ರಹವನ್ನು ಬಿಟ್ಟರೂ ಅವಿದ್ಯಾದಿಗಳು ಬಂಧಕಗಳಾಗುವುದಿಲ್ಲವೇ ಎಂಬ ಶಂಕೆಗೆ **ಇನ್ನಿಗ್ರಹನಿವೃತ್ತಿಯಾಲೇ** ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ. ಭಗವಂತನ ಈ ಜೀವಗತ ನಿಗ್ರಹ ನಿವೃತ್ತಿಯಿಂದ ನಿಗ್ರಹ ಕಾರ್ಯಗಳಾದ ಅವಿದ್ಯಾದಿಗಳೆಲ್ಲಾ ನಿವೃತ್ತಗಳಾಗುತ್ತವೆ, ಎಂದು ತಾತ್ಪರ್ಯ. **ಈಶ್ವರನುಡೈಯ ನಿಗ್ರಹ ನಿವೃತ್ತಿಯಾವದು** ಇತ್ಯಾದಿ – ಈಶ್ವರನ ನಿಗ್ರಹವು ಹೋಗುತ್ತದೆ ಎಂದರೆ ಏನು ಎಂದರೆ, (1) **ಮತ್ಪ್ರಸಾದಾತ್** ಇತ್ಯಾದಿ – ನಿಗ್ರಹವೆಂಬುದು ಜೀವನ ವಿಪರೀತಾನುಷ್ಠಾನದಿಂದ ಉಂಟಾದ

---

2) ಅನಯೈನಂ ಹರಿಶ್ರೇಷ್ಠ ದತ್ತಮ ಸ್ಯಾಭಯಂ ಮಯಾ ।
ವಿಭೀಷಣೋವಾ ಸುಗ್ರೀವ ಯದಿವಾರಾವಣಃ ಸ್ವಯಮ್ ॥ ರಾಮಾ. ಯುದ್ಧಕಾಂಡ 18-34

1) ಪು.ತಿ.ನೊ

**ಇವನುಕ್ಕಿಪ್ಪಡಿ ಪುಣ್ಯಪಾಪ ರೂಪಮಾನ ಸಂಸಾರ ಕಾರಣಮ್ ಕ್ಕೞಿಯುಮ್ ಕ್ರಮುಮೇದೆನ್ನಿಲ್, ಉಪಾಯ ವಿರೋಧಿಹಳ್ ಮುನ್ನೇ ಸ್ವಹೇತುಕ್ಕಳಾಲೇ ಕ್ಕೞಿನ್ದಾಲ್, ಪ್ರಾರಬ್ಧೇತರಙ್ಗಳಾಯ್ ಪ್ರಾಪ್ತಿ ವಿರೋಧಙ್ಗಳಾಹವಲ್ಲ, ಪೂರ್ವಪುಣ್ಯ ಪಾಪಙ್ಗಳ್ ಉಪಾಯಾರಂಭತ್ತಿಲೇ ನಿಶ್ಶೇಷಮಾಹ ಕ್ಕೞಿಯುಮ್.**

**ಉತ್ತರಙ್ಗಳಾನ ಪಾಪಙ್ಗಳಿಲ್ ಬುದ್ಧಿಪೂರ್ವಮಲ್ಲಾದವೈಯುಮ್ ದೇಶಕಾಲ ವೈಗುಣ್ಯಾದಿಹಳಾಲ್**

---

ದಂಡನೆಗೆ ಹೇತುವಾದ ಸಂಕಲ್ಪರೂಪ ಕೋಪ. ಅದರ ನಿವೃತ್ತಿಯು ಯಾವುದೆಂದರೆ ಈ ಭಕ್ತಿ ಅಥವಾ ಪ್ರಪತ್ತಿರೂಪ ಉಪಾಯವನ್ನು ಈ ಜೀವನು ಅನುಷ್ಠಿಸಿರುವುದರಿಂದ, ಇವನನ್ನು ಇನ್ನು ಮೇಲೆ ದಂಡಿಸುವುದಿಲ್ಲ ವೆಂಬ ಪ್ರಸನ್ನತಾ ರೂಪವಾದ ಅಭಿಪ್ರಾಯ ವಿಶೇಷ. ಅನಂತರ ಅವಿದ್ಯಾನಿವೃತ್ತಿ ಸ್ವರೂಪವೇನೆಂಬುದನ್ನು **ಜೀವನುಕ್ಕು ಅವಿದ್ಯಾದಿಹಳುಡೈಯ** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಜೀವನಿಗೆ ಅವಿದ್ಯಾ, ಆದಿ ಶಬ್ದದಿಂದ, ಕರ್ಮವಾಸನಾ, ರುಚಿ, ಪ್ರಕೃತಿ ಸಂಬಂಧಗಳು ನಿವೃತ್ತವಾಗುತ್ತವೆ ಎಂದರೆ ಜ್ಞಾನವಿಕಾಸ, ಆದಿಶಬ್ದದಿಂದ ದೇಶವಿಶೇಷ ಪ್ರಾಪ್ತಿ- ಶ್ರೀ ವೈಕುಂಠ ಲೋಕ ಪ್ರಾಪ್ತಿ, ಪರಜ್ಯೋತಿಸ್ಸಾದ ಭಗವಂತನ ಪ್ರಾಪ್ತಿ ಗಳು. "ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಎಂದು ಶ್ರೀ ವೈಕುಂಠ ಲೋಕದಲ್ಲಿ ಪರಂಜ್ಯೋತಿಶ್ಶಬ್ದ ವಾಚ್ಯನಾದ ಭಗವಂತನನ್ನು ಸಮೀಪಿಸಿ ಅವನೊಡನೆ ಸಂಬಂಧವು ಏರ್ಪಟ್ಟ ನಂತರ ಜೀವನಿಗೆ ಪರಿಪೂರ್ಣ ಜ್ಞಾನ ವಿಕಾಸವು ಏರ್ಪಡುತ್ತದೆ. ಆಗ ಸೂಕ್ಷ್ಮಗಳಾದ ಅವಿದ್ಯಾ ಕರ್ಮವಾಸನೆಗಳು ನಿಶ್ಶೇಷವಾಗಿ ನಿವೃತ್ತವಾಗುತ್ತವೆ.

## ಪ್ರಪನ್ನನಿಗೆ ಸರ್ವಪಾಪಗಳು ನಿವೃತ್ತಗಳಾಗುವ ಕ್ರಮ

ಸರ್ವಪಾಪ ವಿಮೋಚನ ಕ್ರಮವನ್ನು ಪ್ರಶ್ನೆ ಪೂರ್ವಕವಾಗಿ **ಇವನುಕ್ಕಿಪ್ಪಡಿ** ಇತ್ಯಾದಿ ಆರಂಭಿಸಿ ತಿಳಿಸುತ್ತಾರೆ. ಅದಾಗಿ ಜೀವನಿಗೆ ಪಾಪಗಳು ಉಪಾಯ ವಿರೋಧಿಗಳೆಂದೂ ಪ್ರಾಪ್ತಿ ವಿರೋಧಿಗಳೆಂದೂ ಎರಡು ವಿಧ. ಹೀಗೆ ಪುಣ್ಯ ಪಾಪ ರೂಪವಾದ ಸಂಸಾರ ಕಾರಣವು ಕಳೆಯುವ ಕ್ರಮವು ಯಾವುದೆಂದರೆ– **ಉಪಾಯ ವಿರೋಧಿಹಳ್** ಇತ್ಯಾದಿ – ಉಪಾಯ ವಿರೋಧಿ ಪಾಪಗಳು ಮೊದಲೇ ಯಾದೃಚ್ಛಿಕ ಸುಕೃತಾದಿ ಪೂರ್ವಕವಾದ ಆಚಾರ್ಯ ಪ್ರಾಪ್ತ್ಯುಪ ದೇಶಾದಿಗಳಿಂದ ನಿವೃತ್ತಗಳಾಗಿರುವುದು, ಮೋಕ್ಷೋಪಾಯವಾದ ಭಕ್ತಿ ಪ್ರಪತ್ತಿಗಳ ಉತ್ಪತ್ತಿಯಿಂದ ಅನುಮೇಯ. ಉಪಾಯೋತ್ತರ ಕಾಲಿಕವಾದ ಪಾಪವಿಮೋಚನ ಕ್ರಮವು "ಮೋಕ್ಷಯಿಷ್ಯಾಮಿ" ಎಂಬಲ್ಲಿ ನಿರೂಪಣೀಯವಾಗಿರುವುದರಿಂದ, ಉಪಾಯ ವಿರೋಧಿ ಪಾಪ ಕಥನವು ಪ್ರಸಂಗಾತ್ ಸಂಗತವು. **ಪ್ರಾರಬ್ಧೇತರಂಗಳಾಯ್** ಇತ್ಯಾದಿ –ಪ್ರಾರಬ್ಧೇತರ ಪಾಪಗಳು ಫಲಪ್ರದಾನವನ್ನು ಮಾಡಲಾರಂಭಿಸದೇ ಇರುವ ಪುಣ್ಯಪಾಪ ರೂಪ ಕರ್ಮಗಳು. ಇವು **ಸಂಚಿತ ಕರ್ಮಗಳು.**

ಈ ಸಂಚಿತ ಕರ್ಮಗಳು ಅಂದರೆ ಪ್ರಾಪ್ತಿ ವಿರೋಧಿಗಳಾಗ ತಕ್ಕ ಪೂರ್ವ ಪುಣ್ಯ ಪಾಪಗಳು ಉಪಾಯಾ ರಂಭದಲ್ಲಿ "ಪ್ರಾರಬ್ಧೇತರ ಪೂರ್ವ ಪಾಪಮುಖಿಲಂ" ಎಂದು "ಅಪರಾಧ ಪರಿಹಾರಾಧಿಕಾರದ" ಅಂತಿಮ ಶ್ಲೋಕ ದಲ್ಲಿ ಹೇಳಿರುವಂತೆ ಉಪಾಯಾರಂಭದಲ್ಲಿ ನಿಶ್ಶೇಷವಾಗಿ ಕಳೆದು ಹೋಗುತ್ತವೆ. **ಉತ್ತರಂಗಳಾನ** ಇತ್ಯಾದಿ –

---

1) ಸರ್ವಕರ್ಮಾಣ್ಯಪಿ ಸದಾಕುರ್ವಾಣೋ ಮದ್ವ್ಯಪಾಶ್ರಯಃ ।
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥ ಗೀತೆ 18-56

ಎಲ್ಲಾ ಕರ್ಮಗಳನ್ನೂ ನನ್ನ ಪ್ರೀತ್ಯರ್ಥವಾಗಿ ಮಾಡುವವನು, ನನ್ನ ಅನುಗ್ರಹದಿಂದ ಶಾಶ್ವತವಾದ ಪರಮಪದವನು ಹೊಂದುತ್ತಾನೆ.

ವರುಮವೈಯುಂವುಮ್, ಒನ್ರುಮ್ ಲೇಪಿಯಾದು. ಅನಾಪತ್ತಿಲ್ ಬುದ್ಧಿಪೂರ್ವೋತ್ತರಾಘಂಗಳ್ ಸ್ವಾಧಿಕಾರಾನುಗುಣ ಪ್ರಾಯಶ್ಚಿತ್ತ ವಿಶೇಷತ್ತಾಲೇ ಯಾದಲ್, ಶಿಕ್ಷಾರ್ಥಮಾಹ ಲಘು ಫಲ ವಿಶೇಷತ್ತಾಲೇ ಯಾದಲ್ ತೀರುಮ್. ಪ್ರಪನ್ನನುಕ್ಕು ಪ್ರಾರಬ್ಧತ್ತಿಲ್ ಇಶೈನ್ದಕಾಲತ್ತುಕುಳ್ಳೇ ವಿಪಕ್ವಮಾಮ್ ಕರ್ಮ್ಮಾಂಶಮ್ ಅನುಭವತ್ತಾಲುಮ್ ಅವಾನ್ತರ ಪ್ರಾಯಶ್ಚಿತ್ತತ್ತಾಲುಮ್ ನಾಶ್ಯಮ್. ಮೇಲುಳ್ಳದುಮ್ ಉಪಾಯಮಾಹಾತ್ಮ್ಯತ್ತಾಲೇ ಕழியುಂವುಮ್

## ಪುಣ್ಯಸ್ಯ ನಿವೃತ್ತಿ ಪ್ರಕಾರಮಾಹ

ಉಭಯ ಭಾವನಾ ಕ್ರಮತ್ತಾಲೇ ವಂದ ಬುದ್ಧಿ ಪೂರ್ವೋತ್ತರ ಪುಣ್ಯಙ್ಗಳಿಲ್, ಪ್ರತಿಬಂಧಕಮಿಲ್ಲಾದ ವೈಯುಂವುಮ್ ಉಪಾಸಕನುಕ್ಕು ವಿದ್ಯಾನುಗುಣ ಪೂರ್ವೋತ್ತರ ಪುಣ್ಯಙ್ಗಳುಮ್, ಫಲಪ್ರದಾನತ್ತಾಲೇ ಕழியುಮ್: ವಿದ್ಯೈಕ್ಕು ಅನುಪಯುಕ್ತ ಬುದ್ಧಿ ಪೂರ್ವೋತ್ತರ ಪುಣ್ಯಙ್ಗಳಿಲ್ ಪ್ರತಿಬದ್ಧ

---

ಪ್ರಪತ್ತ್ಯುತ್ತರ ಕಾಲದಲ್ಲಿ ಮಾಡುವ ಪಾಪಗಳಲ್ಲಿ ಬುದ್ಧಿಪೂರ್ವಗಳಲ್ಲದವೂ, ದೇಶಕಾಲ ವೈಗುಣ್ಯಾದಿಗಳಿಂದ ಉಂಟಾಗುವವೂ ಯಾವುವೂ ಲೇಪಿಸುವುದಿಲ್ಲ. ಆದಿಶಬ್ದದಿಂದ ಅವಸ್ಥಾ ವೈಗುಣ್ಯಗಳು – ವ್ಯಾಧ್ಯಾದಿ ಅವಸ್ಥೆಗಳಲ್ಲಿ ಏರ್ಪಡುವುವು. ದೇಶಕಾಲ ಅವಸ್ಥಾವೈಗುಣ್ಯದಿಂದ ಏರ್ಪಡುವ ಪಾಪಗಳೂ ಪ್ರಾಮಾದಿಕ ಪಾಪತುಲ್ಯಗಳಾಗಿ ಲೇಪಿಸುವುದಿಲ್ಲ. **ಅನಾಪತ್ತಿಲ್** ಇತ್ಯಾದಿ – ರೋಗಾದ್ಯಾಪದ್ದಶೆಯಲ್ಲಿ ಮಾಡುವ ಬುದ್ಧಿ ಪೂರ್ವಕ ಪಾಪಗಳು ಪ್ರಾಮಾದಿಕ ಪಾಪತುಲ್ಯಗಳಾಗಿ ನಿವೃತ್ತವಾಗುವೆಂದು ಹೇಳಿ, ಆಪದ್ದಶೆಯಲ್ಲದ ಕಾಲದಲ್ಲಿ ಆ ಪಾಪಗಳೇ ಬುದ್ಧಿ ಪೂರ್ವ ಪಾಪಗಳಾಗುತ್ತವೆ. ಆದ್ದರಿಂದ ಅನಾಪದ್ದಶೆಯಲ್ಲಿ ಬುದ್ಧಿಪೂರ್ವಕವಾಗಿ ಮಾಡುವ ಪಾಪಗಳು ಮೃದು ಪ್ರಕೃತಿಗಳಿಗೆ ಸ್ವಾಧಿಕಾರಾನುಗುಣವಾದ ಪ್ರಾಯಶ್ಚಿತ್ತ ವಿಶೇಷದಿಂದಾಗಲಿ, ಕಠಿನ ಪ್ರಕೃತಿಗಳಿಗೆ ಶಿಕ್ಷಾರೂಪವಾದ ಲಘುವಾದ ಫಲವಿಶೇಷದಿಂದಾಗಲಿ ನಿವೃತ್ತವಾಗುತ್ತವೆ. **ಪ್ರಪನ್ನನುಕ್ಕು** ಇತ್ಯಾದಿ – ಪ್ರಪನ್ನನಿಗೆ ಪ್ರಾರಬ್ಧ ಪಾಪದಲ್ಲಿ ಅಭ್ಯುಪಗತವಾದ ಪಾಪವು ಅನುಭವದಿಂದಲೂ **ಅವಾಂತರ ಪ್ರಾಯಶ್ಚಿತ್ತ** – ಪ್ರಾಯಶ್ಚಿತ್ತ ಪ್ರಪತ್ತಿಯಿಂದಲೂ ನಾಶವಾಗುತ್ತದೆ ಅಭ್ಯುಪಗತವಲ್ಲದ ಉತ್ತರ ಭಾಗ ಪಾಪಗಳೂ ಉಪಾಯಮಾಹಾತ್ಮ್ಯದಿಂದ ನಿವೃತ್ತವಾಗುತ್ತವೆ. ಪ್ರಾರಬ್ಧೇತರ ಪೂರ್ವಪಾಪ ನಾಶವೂ, ಪ್ರಾಮಾದಿಕವಾದ ಉತ್ತರ ಪಾಪಗಳ ಅಶ್ಲೇಷವೂ ಭಕ್ತಪ್ರಪನ್ನ ಸಾಧಾರಣ. ಪ್ರಪನ್ನನಿಗೆ ಪ್ರಪತ್ತ್ಯುತ್ತರ ಕಾಲದಲ್ಲಿ ಅಭ್ಯುಪಗತವಲ್ಲದ, ಅಂದರೆ ದೇಹಾವಸಾನ ಪರ್ಯಂತ ಇತ್ಯಾದಿ ರೀತಿಯಲ್ಲಿ ಕಾಲವನ್ನು ವ್ಯವಸ್ಥೆಮಾಡಿರುವುದರಿಂದ, ತದುತ್ತರಕಾಲಿಕ ಪಾಪಾಂಶವೂ ಪ್ರಪತ್ತಿಯ ಮಾಹಾತ್ಮ್ಯದಿಂದ ಕಳೆದು ಹೋಗುತ್ತದೆ ಎಂಬುದು ವಿಶೇಷ. ಭಕ್ತನಿಗೆ ಪ್ರಾರಬ್ಧ ಕರ್ಮಾವಸಾನದಲ್ಲಿ ಮೋಕ್ಷ. ಈ ವ್ಯತ್ಯಾಸವನ್ನು ತಿಳಿಸಲು ಇಲ್ಲಿ "ಪ್ರಪನ್ನನುಕ್ಕು" ಎಂದು ಆಚಾರ್ಯರು ವಿಶೇಷಿಸಿ ಹೇಳಿರುತ್ತಾರೆಂಬುದು ಗಮನಾರ್ಹ. **ಮೇಲುಳ್ಳದುಮ್** ಇತ್ಯಾದಿ – ಪ್ರಪನ್ನನಿಗೆ ಅಭ್ಯುಪಗತೇತರ ಪ್ರಾರಬ್ಧ ಕರ್ಮಾಂಶವೂ, ಭಕ್ತನಿಗೆ ಪ್ರಾರಬ್ಧ ಕರ್ಮಕ್ಕೆ ಅನಂತರ ಪ್ರಾಪ್ತವಾಗುವ ಪಾಪಗಳೂ, ಉಪಾಯ ಮಾಹಾತ್ಮ್ಯದಿಂದ ಕಳೆಯುತ್ತದೆ.

ಹೀಗೆ ಪಾಪಾಂಶದ ನಿವೃತ್ತಿ ಪ್ರಕಾರವನ್ನು ತಿಳಿಸಿ, "ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇತು" – [ಬ್ರಹ್ಮಸೂತ್ರ (4–1–14)] ಎಂಬ ಸೂತ್ರದ ಪ್ರಕಾರ ಪುಣ್ಯಾಂಶ ನಿವೃತ್ತಿ ಪ್ರಕಾರವನ್ನು **ಉಭಯಭಾವನಾ ಕ್ರಮತ್ತಾಲೇ** "ಬ್ರಹ್ಮೈವಕುರ್ಯಾಂ" – ಬ್ರಹ್ಮಧ್ಯಾನವನ್ನೇ ಮಾಡುತ್ತೇನೆಂಬುದು ಬ್ರಹ್ಮಭಾವನೆ. ಇದು ಸನಕಾದಿಗಳಿಗೆ ಏರ್ಪಡುತ್ತದೆ. "ಕರ್ಮೈವಕುರ್ಯಾಂ" ಎಂಬುದು ಕರ್ಮಭಾವನೆ ಇದು ಸಂಸಾರಿಗಳಿಗೆ ಏರ್ಪಡುತ್ತದೆ. ಬ್ರಹ್ಮಚಕುರ್ಯಾಂ, ಕರ್ಮಚಕುರ್ಯಾಂ, ಎಂಬುದು ಉಭಯ ಭಾವನೆ. ಬ್ರಹ್ಮಧ್ಯಾನವನ್ನೂ ಸೃಷ್ಟ್ಯಾದಿ ವ್ಯಾಪಾರವನ್ನೂ ಮಾಡುತ್ತೇನೆಂಬುದು. ಇದು ಬ್ರಹ್ಮದೇವನಿಗೆ ಉಂಟು. ಹೀಗೆ ಉಭಯ ಭಾವನಾ

**ಫಲಙ್ಗಳುಮ್, ವಿದ್ಯೋಪಯುಕ್ತ ಪೂರ್ವೋತ್ತರ ಪುಣ್ಯಙ್ಗಳಿಲ್ ಅನುಕೂಲ ಪ್ರತಿಕೂಲ ಪ್ರಬಲ ಕರ್ಮಾನ್ತರ ಫಲಙ್ಗಳಾಲೇ ನಿರುದ್ಧಾವಸರಙ್ಗಳಾಯ್ ಫಲಮ್ ಕೊಡುಕ್ಕಪ್ಪೆರಾ ದೇಮಿಹುದಿಯಾಯ್ ನಿನ್ರವೈಯುಮ್ ಅನ್ತಿಮ ಕಾಲತ್ತಿಲೇ ಕಳಿಯುಮ್. ಇವ್ವರ್ಥಮ್ 1) "ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇತು" ಎನ್ಗಿರ ಸೂತ್ರತ್ತಿಲೇ ಅಭಿಪ್ರೇತಮ್. ಭಗವತ್ಪ್ರೀತಿಮಾತ್ರಮೇ ಫಲಮಾಹ ಅನುಷ್ಠಿತ್ತ ಕೇವಲ ಕೈಙ್ಕರ್ಯರೂಪ ಸುಕೃತಙ್ಗಳ್ ಅಪ್ಪೋದೇ ದತ್ತಫಲಂಗಳಾಹೈಯಾಲೇ ಯಿವತ್ತುಕ್ಕು ಅಶ್ಲೇಷಮ್ ಶೊಲ್ಲವೇಣ್ಡಾ. ಲೋಕಸಙ್ಗ್ರಹಾರ್ಥ ವಿಧಿಯಾಲ್ ಅನುಷ್ಠಿಕ್ಕುಮವೈಯುಮ್ ತನಕ್ಕು ಅಪ್ಪಡಿಯೇ ಭಗವದಾಜ್ಞಾ ಸಿದ್ಧಙ್ಗಳಾಹೈಯಾಲೇ, ಅವೈಯುಮ್ ಇವನುಕ್ಕು ಕೇವಲ ಕೈಙ್ಕರ್ಯಙ್ಗಳಾಯ್ ದತ್ತ ಫಲಙ್ಗಳ್. ಇವತ್ತಿಲ್ ಅನವಧಾನತ್ತಾಲೇ ಸಾತ್ವಿಕತ್ಯಾಗರಹಿತಮಾಹ ಅನುಷ್ಠಿತಙ್ಗಳ್ ಉಣ್ಡಾಹಿಲ್ ಅವೈಯುಮ್ ಎಲ್ಲಾಮ್ 2) "ತಾನ್ಯೇವ ಭಾವೋಪಹತಾನಿಕಲ್ಕಃ" ಎನ್ಗಿರಪಡಿಯೇ ಪಾಪತುಲ್ಯಙ್ಗಳಾಯ್ ಮೋಕ್ಷಯಿಷ್ಯಾಮಿಕ್ಕು ವಿಷಯಮಾಮ್.**

---

ಕ್ರಮದಿಂದ ಏರ್ಪಟ್ಟ ಬುದ್ಧಿಪೂರ್ವೋತ್ತರ ಪುಣ್ಯಗಳಲ್ಲಿ ಪ್ರತಿಬಂಧಕವಿಲ್ಲದವೂ, ಉಪಾಸಕನಿಗೆ ವಿದ್ಯಾನುಗುಣ ಪೂರ್ವೋತ್ತರ ಪುಣ್ಯಗಳೂ ಫಲಪ್ರದಾನದಿಂದ ಕಳೆಯುತ್ತವೆ. ವಿದ್ಯೆಗೆ ಉಪಯುಕ್ತವಲ್ಲದ ಬುದ್ಧಿಪೂರ್ವೋತ್ತರ ಪುಣ್ಯಗಳಲ್ಲಿಪ್ರತಿಬದ್ಧ ಫಲಗಳೂ ವಿದ್ಯೋಪಯುಕ್ತ ಪೂರ್ವೋತ್ತರ ಪುಣ್ಯಗಳಲ್ಲಿ ಅನುಕೂಲ ಪ್ರತಿಕೂಲ ಪ್ರಬಲ ಕರ್ಮಾಂತರ ಫಲಗಳಿಂದ, **ನಿರುದ್ಧಾವಸರಂಗಳಾಯ್** – ಫಲವನ್ನು ಕೊಡಲು ತಡೆಯಲ್ಪಟ್ಟವುಗಳಾಗಿ, ಫಲವನ್ನು ಕೊಡಲು ಅವಸರ – ಅವಕಾಶವಿಲ್ಲದೆ ಬಾಕಿಯಾಗಿರುವ ಕರ್ಮಗಳೂ ಅಂತಿಮ ಕಾಲದಲ್ಲಿ ಕಳೆದು ಹೋಗುತ್ತವೆ. ಈ ಅರ್ಥವು (1) **"ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇತು"** ಎಂಬ ಸೂತ್ರದಲ್ಲಿ ಅಭಿಪ್ರೇತವು. ಹೀಗೆ ಫಲವನ್ನು ಕೊಡಲು ಅವಕಾಶವಿಲ್ಲದ ಪುಣ್ಯಗಳು ಅಂತಿಮ ಕಾಲದಲ್ಲಿ ಕಳೆದು ಹೋದರೆ, ನಿತ್ಯನೈಮಿತ್ತಿಕ ಕರ್ಮಗಳೂ ಫಲದಲ್ಲಿ ಆಸೆಯಿಲ್ಲದೆ ಲೋಕ ಸಂಗ್ರಹಾರ್ಥವಾಗಿ ಮಾಡುವ ಕರ್ಮಗಳೂ ಫಲ ಪ್ರದಾನಕ್ಕೆ ಅವಕಾಶವಿಲ್ಲದೆ ಅಂತಿಮ ಕಾಲದಲ್ಲಿ ಕಳೆದು ಹೋಗುತ್ತವೆಯೋ ಎಂದರೆ **ಭಗವತ್ಪ್ರೀತಿಮಾತ್ರಮೇ** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಭಗವತ್ಪ್ರೀತಿಯನ್ನೇ ಫಲವನ್ನಾಗಿ ಅಭಿಸಂಧಾನ ಮಾಡಿ ಅನುಷ್ಠಿಸಿದ **ಕೇವಲಕೈಂಕರ್ಯರೂಪಸುಕೃತಂಗಳ್** – ನಿತ್ಯನೈಮಿತ್ತಿಕ ಕರ್ಮಗಳು ಆವಾಗಲೇ ದತ್ತ ಫಲಗಳಾದ್ದರಿಂದ ಅವುಗಳಿಗೆ ಅಶ್ಲೇಷವನ್ನು ಹೇಳಬೇಕಾದ ಆವಶ್ಯಕತೆಯಿಲ್ಲ. **ಲೋಕಸಂಗ್ರಹಾರ್ಥವಿಧಿಯಾಲೇ** ಇತ್ಯಾದಿ – **ಇವಟ್ರಿಲ್** ಇತ್ಯಾದಿ ಈ ನಿತ್ಯನೈಮಿತ್ತಿಕ ಲೋಕಸಂಗ್ರಹಾರ್ಥ ಕರ್ಮಗಳಲ್ಲಿ **ಅನವಧಾನತ್ತಾಲೇ** – ಅಜಾಗರೂಕತೆಯಿಂದ **ಸಾತ್ವಿಕತ್ಯಾಗರಹಿತವಾಗಿ** ಅನುಷ್ಠಿಸಲ್ಪಡುವವು, ಉಂಟಾದರೆ ಅವೆಲ್ಲವೂ, (2) **"ತಾನ್ಯೇವಭಾವೋಪಹ**

---

1) ಬ್ರಹ್ಮಸೂತ್ರ (1-1-14) ಭಕ್ತಿಯೋಗಾರಂಭಕ್ಕೆ ಮೊದಲು ಮಾಡಿದ ಪುಣ್ಯ ಕರ್ಮವೂ ಪಾಪದ ಹಾಗೆ, ನಶಿಸಿ ಹೋಗುತ್ತದೆ. ಅನಂತರ ಮಾಡುವ ಪುಣ್ಯ ಕರ್ಮವೂ ಭಕ್ತನಲ್ಲಿ ಪಾಪದ ಹಾಗೆ ಸಂಪರ್ಕಿಸುವುದಿಲ್ಲ. ಆದರೆ ಭಕ್ತಿಯೋಗವು ಅನುಷ್ಠಿಸಲ್ಪಟ್ಟು ಬರುವುದಕ್ಕೆ ಬೇಕಾದ ಶರೀರಧಾರಣಕ್ಕೆ ಅವಶ್ಯವಾದ, ಮಳೆ, ಬೆಳೆ, ಆರೋಗ್ಯ, ಅನ್ನ ಮೊದಲಾದ ಫಲಗಳನ್ನು ಕೊಡುವ ಪುಣ್ಯ ಕರ್ಮವು ಮಾತ್ರ ಶರೀರವು ಇರುವ ಪರ್ಯಂತ ಇದ್ದು, ಇವನು ಮೃತನಾಗುವಾಗ ನಾಶ ಹೊಂದುತ್ತವೆ,

2) ತಪೋ ನಕಲ್ಕೋಧ್ಯಯನಂ ನ ಕಲ್ಕಃ ಸ್ವಾಭಾವಿಕೋ ವೇದ ವಿಧಿರ್ನ ಕಲ್ಕಃ ।
ಪ್ರಸಹ್ಯವಿತ್ತಾ ಹರಣಂ ನ ಕಲ್ಕಃ ತಾನ್ಯೇವ ಭಾವೋಪಹತಾನಿ ಕಲ್ಕಃ ॥

ತಪಸ್ಸು ಪಾಪವಲ್ಲ, ವೇದಾಧ್ಯಯನವು ಪಾಪವಲ್ಲ. ಅವರವರಿಗೆ ವಿಧಿಸಲ್ಪಟ್ಟ ಕರ್ಮಗಳೂ ಪಾಪವಲ್ಲ. ಆ ಕರ್ಮಾನುಷ್ಠಾನಕ್ಕಾಗಿ ಕಷ್ಟಪಟ್ಟು ಹಣವನ್ನು ಸಂಪಾದಿಸುವುದೂ ಪಾಪವಲ್ಲ. ಆದರೆ ಮೇಲೆ ಹೇಳಿದ ಕರ್ಮಾನುಷ್ಠಾನಗಳನ್ನು ವಿಪರೀತವಾದ ಅಭಿಸಂಧಿಯಿಂದ ಅಂದರೆ "ನಾನೇ ಮಾಡುತ್ತೇನೆ, ನನಗೋಸ್ಕರವೇ ಮಾಡುತ್ತೇನೆ, ಇದು ನನಗೇ ಸೇರಿದುದ್ದು, ಎಂಬ ಭಾವನೆಯಿಂದ ಮಾಡಿದರೆ ಅದು ಪಾಪವಾಗುತ್ತದೆ.

**ಫಲಾನ್ತರಾರ್ಥಮಾಹ ಪ್ಪಣ್ಣಿನ ಪ್ರಪತ್ತ್ಯಂತರಙ್ಗಳುಮ್ ದತ್ತಫಲಙ್ಗಳಾಯ್ ಪ್ರೋಮ್. ಪೂರ್ವ ಪ್ರಪತ್ತಿಕ್ಕು ಕ್ಕೋಲಿನ ಫಲತ್ತೈಪ್ಪತ್ತ ಪುನಃ ಪ್ರಪತ್ತಿ ಪಣ್ಣುಕೈ ಮಹಾವಿಶ್ವಾಸತ್ತೋಡೇ ಕೂಡ ಅನುಷ್ಠಿತ್ತ ಪೂರ್ವ ಪ್ರಪತ್ತಿ ಪ್ರತಿ ಸಂಧಾನತ್ತಾಲೇ ಕೂಡಾದು.**
**ಅನೇಕ ಪ್ರಪತ್ತಿಹಳ್ ಕೂಡ ಏಕಫಲ ಸಾಧನಮೆನ್ರುನಿನೈತ್ತು ಅನುಷ್ಠಿತ್ತಾಲ್ ಉಪಾಯಾನ್ತರಚ್ಚಾಯೈಯಾಮ್.**

**ಅಶ್ಲೇಷ ವಿನಾಶ ಶಬ್ದಯೋರರ್ಥಮಾಹ.**

**ವಿದ್ಯಾ ಮಾಹಾತ್ಮ್ಯತ್ತಾಲೇ ಇಕ್ಕರ್ಮಙ್ಗಳುಕ್ಕು ವಿನಾಶ ಮಾವದು, ಈಶ್ವರನ್ ಇವತ್ತುಕ್ಕು ಪ್ರಾಪ್ತಮಾನ ಫಲಪ್ರದನಾಭಿಸಂಧಿಯೈ ವಿಡುಹೈ. ಅಶ್ಲೇಷಮಾವದು ? ಇವ್ವಾಶ್ರಿತರ ತಿರತ್ತಿಲ್ ಇಕ್ಕರ್ಮ ಫಲಪ್ರದಾನಾಭಿಸಂಧಿ ಉದಿಯಾದೊಳ್ಹೈ.**

**ಇಪ್ಪಡಿ ಸರ್ವಕರ್ಮಙ್ಗಳುಙ್ಕ್ಷಯಾನಿರ್ಕ ಸುಹೃತ್ತುಕ್ಕಳುಮ್ ದ್ವಿಷತ್ತುಕ್ಕಳುಮ್ ಕೂರಿಟ್ಟು**

---

ತಾನಿಕಲ್ಕಃ" – ನಾನು ಮಾಡುತ್ತೇನೆ, ನನ್ನ ಪ್ರಯೋಜನಕ್ಕೆ ಮಾಡುತ್ತೇನೆಯೆಂಬ ಭಾವನೆಯಿಂದ ಕೂಡಿದ ಕರ್ಮಗಳಂತೆ ಪಾಪತುಲ್ಯಗಳಾಗಿ 'ಮೋಕ್ಷಯಿಷ್ಯಾಮಿ' ಎಂಬ ಭಗವತ್ಸಂಕಲ್ಪಕ್ಕೆ ವಿಷಯಗಳಾಗುತ್ತವೆ.

**ಫಲಾಂತರಾರ್ಥಮಾಹ** ಇತ್ಯಾದಿ – ಮೋಕ್ಷಾರ್ಥ ಪ್ರಪತ್ತ್ಯನಂತರ ಇತರ ಫಲಗಳಿಗಾಗಿ ಮಾಡಿದ ಪ್ರಪತ್ತ್ಯಂತರಗಳೂ ಆಯಾಯಾ ಫಲವನ್ನು ಕೊಟ್ಟು ಕಳೆದು ಹೋಗುತ್ತವೆ. **ಪೂರ್ವಪ್ರಪತ್ತಿಕ್ಕು** ಇತ್ಯಾದಿ– ಪೂರ್ವದಲ್ಲಿ ಮಾಡಿದ ಪ್ರಪತ್ತಿಗೆ ಅಪೇಕ್ಷಿತವಾದ ಫಲವನ್ನು ಉದ್ದೇಶಿಸಿ ಪುನಃ ಪ್ರಪತ್ತಿಯನ್ನು ಮಾಡುವುದು, ಮಹಾವಿಶ್ವಾಸದಿಂದ ಕೂಡಿ ಅನುಷ್ಠಿಸಿದ ಪೂರ್ವ ಪ್ರಪತ್ತಿಯ ಪ್ರತಿಸಂಧಾನದಿಂದ ಕೂಡದು. ಮಹಾವಿಶ್ವಾಸದಿಂದ ಕೂಡಿ ಅನುಷ್ಠಿಸಿದ ಪೂರ್ವ ಪ್ರಪತ್ತಿಯೇ ಫಲವನ್ನು ಕೊಡುತ್ತದೆಯೆಂಬ ಪ್ರತಿಸಂಧಾನವು ಇದ್ದರೆ, "ಸಕೃದೇವ" ಎಂಬ ಶಾಸ್ತ್ರಕ್ಕೆ ವಿರೋಧವಾಗುವುದರಿಂದ ಪುನಃ ಪ್ರಪತ್ತಿಯು ಕೂಡದು ಎಂದು ತಾತ್ಪರ್ಯ. **ಅನೇಕಪ್ರಪತ್ತಿಹಳ್‌ಕೂಡ** ಇತ್ಯಾದಿ – ಅನೇಕ ಪ್ರಪತ್ತಿಗಳೂ ಸಹ ಒಂದೇ ಫಲಕ್ಕೆ ಸಾಧನಗಳಾಗುತ್ತವೆ ಎಂದು ನೆನೆಸಿಕೊಂಡು ಅನುಷ್ಠಿಸಿದರೂ ಉಪಾಯಾಂತರವನ್ನು ಸಹಾಯಾರ್ಥವಾಗಿ ಅನುಷ್ಠಿಸುವ ದೋಷವು ಏರ್ಪಡುತ್ತದೆ. ಅಂದರೆ ಮೋಕ್ಷಾರ್ಥವಾಗಿ ಪ್ರಪತ್ತಿಯನ್ನು ಅನುಷ್ಠಿಸಿ ಅದಕ್ಕೆ ಸಹಾಯಕವಾಗಿ ಭಕ್ತಿಯೋಗವನ್ನು ಅನುಷ್ಠಿಸಿದರೆ ಅದು ಹೇಗೆ ಪಾಪವಾಗಿ ಪರಿಣಮಿಸಿ ಪ್ರಾಯಶ್ಚಿತ್ತವನ್ನು ಅಪೇಕ್ಷಿಸುತ್ತದೆಯೋ ಹಾಗೆ ಮೋಕ್ಷಾರ್ಥವಾಗಿ ಮಾಡಿದ ಪ್ರಪತ್ತಿಗೆ ಸಹಾಯವಾಗಿ ಮತ್ತೊಂದು ಪ್ರಪತ್ತಿಯನ್ನು ಮಾಡಿದರೂ ಅದೂ ಪಾಪವಾಗಿ ಅದಕ್ಕೆ ಪ್ರಾಯಶ್ಚಿತ್ತವನ್ನು ಅಪೇಕ್ಷಿಸುತ್ತದೆ.

**ವಿದ್ಯಾಮಾಹಾತ್ಮ್ಯತ್ತಾಲೇ** ಇತ್ಯಾದಿ ಆರಂಭಿಸಿ ಅಶ್ಲೇಷ ವಿನಾಶ ಶಬ್ದಗಳಿಗೆ ಅರ್ಥವನ್ನು ತಿಳಿಸುತ್ತಾರೆ. ಅದಾಗಿ ವಿದ್ಯಾಮಾಹಾತ್ಮ್ಯದಿಂದ ಈ ಕರ್ಮಗಳಿಗೆ ವಿನಾಶವು ಹೇಗೆ ಎಂದರೆ - ಈಶ್ವರನು ಇದಕ್ಕೆ ಪ್ರಾಪ್ತವಾದ ಫಲವನ್ನು ಕೊಡುವ ಅಭಿಸಂಧಿಯೈ – ಸಂಕಲ್ಪವನ್ನು, ಬಿಡುವುದು. **ಅಶ್ಲೇಷಮಾವದು** ಅಶ್ಲೇಷವೆಂದರೆ ಈ ಆಶ್ರಿತರ ವಿಷಯದಲ್ಲಿ ಈ ಕರ್ಮ ಫಲ ಪ್ರದಾನವನ್ನು ಮಾಡುವ ಸಂಕಲ್ಪವು ಉಂಟಾಗದಿರುವುದು.

**ಸುಕೃತ ದುಷ್ಕೃತಗಳ ಸಂಕ್ರಮಣ**

**ಇಪ್ಪಡಿ ಸರ್ವಕರ್ಮಂಗಳುಂ ಕ್ಷಯಾನಿರ್ಕ** ಇತ್ಯಾದಿ – ಹೀಗೆ ಪ್ರಪನ್ನನಿಗೆ ಪೂರ್ವೋತ್ತರ ಪುಣ್ಯಪಾಪಗಳೆಲ್ಲಾ ಕಳೆದುಹೋಗುತ್ತವೆ ಎಂದು ಹೇಳಿದರೆ, "ಸುಹೃದಸ್ಸಾಧುಕೃತ್ಯಾಂ, ದ್ವಿಷಂತಃ ಪಾಪಕೃತ್ಯಾಮ್"

**ಕೊಳ್ಳುಮವೈ, ಎನ್ನೈ ಎನ್ನಿಲ್ ಅಶ್ಲೇಷವಿನಾಶ ವಿಷಯಙ್ಗಳುಮ್ ಬುದ್ಧಿಪೂರ್ವೋತ್ತರ ಪುಣ್ಯಙ್ಗಳಿಲ್ ಕರ್ಮಾನ್ತರ ಪ್ರತಿಬದ್ಧ ಫಲಙ್ಗಳುಮ್; ಇವತ್ತೈ ಈಶ್ವರನ್ ಉಪಾಯಾರಂಭತ್ತಿಲ್ ಸುಹೃತ್ತುಕ್ಕಳ್ ಪಕ್ಕಲಿಲುಮ್ ದ್ವಿಷತ್ತುಕ್ಕಳ್ ಪಕ್ಕಲಿಲುಮ್ ಸಂಕ್ರಮಿಪ್ಪಿಯಾದೇ ಅನ್ತಿಮದಶೆಯಳವುಮ್ ಪಾರ್ತ್ತಿರುಕ್ಕವೇಣ್ಡುವಾನೇನ್ ಎನ್ನಿಲ್, ಇವ್ವಾಶ್ರಿತರ್ ಪಕ್ಕಲ್ ಪಣ್ಣಿನ ಅನುಕೂಲ್ಯತ್ತುಕ್ಕು ಮೇಲ್ ವಿಪರೀತಮ್ ಶೆಯ್ಯಿಲ್, ಇಸ್ಸುಕೃತಙ್ಗಳೈ ಸಂಕ್ರಮಿಪ್ಪಿಯಾದೊಳಿಕೈಕ್ಕಾಹವುಮ್, ಆಶ್ರಿತರ್ ಪಕ್ಕಲಿಲ್ ಪಣ್ಣಿನ ಪ್ರಾತಿಕೂಲ್ಯತ್ತುಕ್ಕು ಮೇಲ್ ಕ್ಷಮೈಕೊಳ್ಳ ಅವಸರಮ್ ಕೊಡುಕ್ಕೈಕ್ಕಾಹವುಮ್, ಇವ್ವಾಶ್ರಿತರುಡೈಯ ಅನ್ತಿಮ ಶರೀರ ವಿಶ್ಲೇಷತ್ತಳವುಮ್ ಇವರ್ಗಳುಡೈಯ ಪುಣ್ಯಪಾಪಙ್ಗಳೈ ಅಶಲ್ ಪಿಳನ್ದೇರಿಯಾದೊಳಿಹಿರಾನ್. ಸ್ವರ್ಗಾದ್ಯರ್ಥಸುಕೃತಮ್ ಮುಮುಕ್ಷುವುಕ್ಕು ಪಾಪ ಸಮಾನ ಮಾಹೈಯಾಲೇ, ಅದುವುಮ್ ಮುಮುಕ್ಷುವಾನ ಸುಹೃತ್ತಿನ್ ಪಕ್ಕಲ್ ಸಂಕ್ರಮಿಯಾದು. ಆರೇನುಮ್ ಪಣ್ಣಿನ ಕರ್ಮಙ್ಗಳ್ ವೇರೇ ಶಿಲರ್ ಪಕ್ಕಲಿಲೇ ಸಂಕ್ರಮಿಕ್ಕೈಯಾವದೆನ್ನೆನ್ನಿಲ್ ಕರ್ತ್ತಾವೈಪ್ಪತ್ತ ಈಶ್ವರನುಕ್ಕುವರುಮ್ ನಿಗ್ರಹಾನುಗ್ರಹಙ್ಗಳೋಡು ಸಮಾನಮಾಹ ಇವನುಡೈಯ ಶತ್ರುಮಿತ್ರರ್ಗಳ್ ಪಕ್ಕಲಿಲೇ ನಿಗ್ರಹಾನುಗ್ರಹಂಗಳ್ ಉದಿಕ್ಕೈ.**

---

ಎಂದು ಪ್ರಪನ್ನನ ಸ್ನೇಹಿತರೂ, ಶತ್ರುಗಳೂ ಪ್ರಪನ್ನನ ಅಂತಿಮ ಕಾಲದಲ್ಲಿ ವಿಭಾಗಮಾಡಿಕೊಳ್ಳುವ ಪುಣ್ಯ ಪಾಪಗಳು ಯಾವುವು ಎಂದರೆ **ಅಶ್ಲೇಷವಿನಾಶ ವಿಷಯಂಗಳುಮ್** ಎಂದಾರಂಭಿಸಿ ವಿವರಿಸುತ್ತಾರೆ. ಅದಾಗಿ ಅಶ್ಲೇಷ - ಪ್ರಾಮಾದಿಕ ಪಾಪಗಳು ಅಂಟದೆ ಇರುವುವು, ಪ್ರಾರಬ್ಧೇತರಗಳಾದ ಸಂಚಿತ ಪಾಪಗಳು ವಿನಾಶವಾಗುವವು. ಹೀಗೆ ಅಶ್ಲೇಷ ವಿನಾಶಗಳಿಗೆ ವಿಷಯಗಳಾದ ಪ್ರಾಮಾದಿಕ ಮತ್ತು ಪ್ರಾರಬ್ಧೇತರ ಸಂಚಿತ ಪಾಪಗಳೂ, **ಬುದ್ಧಿಪೂರ್ವೋತ್ತರ ಪುಣ್ಯಂಗಳಿಲ್** ಇತ್ಯಾದಿ – ಬುದ್ಧಿ ಪೂರ್ವಕವಾದ ಪ್ರಪತ್ತ್ಯುತ್ತರಕಾಲಿಕ ಪುಣ್ಯಗಳಲ್ಲಿ ಕರ್ಮಾಂತರ ಪ್ರತಿಬದ್ಧ ಫಲಗಳು ಸುಹೃತ್ತುಗಳಲ್ಲಿಯೂ ದ್ವಿಷತ್ತುಗಳಲ್ಲಿಯೂ ಸಂಕ್ರಮಿಸುತ್ತವೆ. **ಇವತ್ತೈ ಈಶ್ವರನ್** ಇತ್ಯಾದಿ – ಈ ಅಶ್ಲೇಷ ವಿನಾಶ ವಿಷಯಗಳಾದ ಪುಣ್ಯಪಾಪಗಳನ್ನು ಈಶ್ವರನು ಉಪಾಯಾರಂಭದಲ್ಲಿ ಉಪಾಯ ನಿಷ್ಠನ ಸುಹೃತ್ತುಗಳ ಪಕ್ಕದಲ್ಲಿಯೂ ದ್ವಿಷತ್ತು (ಶತ್ರು) ಗಳ ಪಕ್ಕದಲ್ಲಿಯೂ ಸಂಕ್ರಮಿಸದೆ (ಸೇರಿಸದೆ) ಅಂತಿಮ ದಶೆಯ ಪರ್ಯಂತ ನೋಡಿಕೊಂಡಿರ ಬೇಕಾದದು ಏತಕ್ಕೆಂದರೆ, **ಇವ್ವಾಶ್ರಿತರ್ ಪಕ್ಕಲ್** ಇತ್ಯಾದಿ-ಈ ಆಶ್ರಿತರ ವಿಷಯದಲ್ಲಿ ಮಾಡಿದ ಆನುಕೂಲ್ಯಕ್ಕೆ ಮುಂದೆ ವಿಪರೀತಾಚರಣೆಯನ್ನು ಮಾಡಿದರೆ ಈ ಸುಕೃತಗಳನ್ನು ಅವರೊಡನೆ ಸೇರಿಸದೆ ಇರುವುದಕ್ಕಾಗಿಯೂ, ಆಶ್ರಿತರ ವಿಷಯದಲ್ಲಿ ಮಾಡಿದ ಪ್ರಾತಿಕೂಲ್ಯಗಳಿಗೆ ಅನಂತರ ಅಪಚಾರ ಕ್ಷಮಾಪಣೆಯನ್ನು ಮಾಡಿಕೊಳ್ಳಲು **ಅವಸರಮ್** – ಅವಕಾಶವನು ಕೊಡುವುದಕ್ಕಾಗಿಯೂ ಈ ಆಶ್ರಿತರ ಅಂತಿಮ ಶರೀರ ವಿಶ್ಲೇಷ ಪರ್ಯಂತ ಇವರುಗಳ ಪುಣ್ಯ ಪಾಪಗಳನ್ನು **ಅಶಲ್ ಪಿಳಂದೇರಿಡಾದೊಳಿಹಿರಾನ್** – ಸುಹೃತ್ ದ್ವಿಷತ್ತುಗಳ ಹತ್ತಿರ ಆರೋಪಿಸಿದೆ ಇರುತ್ತಾನೆ. (ಅಶಲ್ – ಅನ್ಯತ್ರ, ಪಿಳಂದು – ಕಿತ್ತು, ಏರಿಡಾದು– ಆರೋಪಿಸದೆ, ಒಳಿಹಿರಾನ್ - ಇರುತ್ತಾನೆ.) **ಸ್ವರ್ಗಾದ್ಯರ್ಥ ಸುಕೃತಮ್** ಇತ್ಯಾದಿ – ಸ್ವರ್ಗಫಲಕ್ಕಾಗಿ ಮಾಡುವ ಸುಕೃತವೂ ಮುಮುಕ್ಷುವಿಗೆ ಪಾಪವಾದ್ದರಿಂದ ಅದು ಮುಮುಕ್ಷುವಾದ ಸುಹೃತ್ತಿನೊಡನೆ ಸಂಕ್ರಮಿಸುವುದಿಲ್ಲ. **ಆರೇನುಮ್** ಇತ್ಯಾದಿ – ಯಾರಾದರೂ ಮಾಡಿದ ಕರ್ಮಗಳು ಬೇರೆ ಕೆಲವರಲ್ಲಿ ಸಂಕ್ರಮಿಸುವುದು ಹೇಗೆ. ಅದಾಗಿ ಪುಣ್ಯಪಾಪಗಳು ಕ್ರಿಯಾರೂಪಗಳಾದ್ದರಿಂದ ಕರ್ತಾವಿನಲ್ಲಿಯೇ ಇರತಕ್ಕವಲ್ಲವೇ. ಮೇಲೂ ಈ ಕ್ರಿಯೆಗಳು, ಮಾಡಿದ ಕ್ಷಣದಲ್ಲಿಯೇ ಭಂಗುರಗಳಾದ್ದರಿಂದ ಇತರರಲ್ಲಿ ಸಂಕ್ರಮಿಸುವ ಬಗೆ ಹೇಗೆ ಎಂಬುದು ಪ್ರಶ್ನೆ. ಇದಕ್ಕೆ ಉತ್ತರವಾಗಿ **ಇಕ್ಕರ್ತಾವೈಪ್ಪಟ್ರ** ಎಂದಾರಂಭಿಸಿ ಅನುಗ್ರಹಿಸುತ್ತಾರೆ ಅದಾಗಿ ಈ ಪುಣ್ಯಪಾಪಗಳನ್ನು ಮಾಡುವ ಕರ್ತಾವಿನ ವಿಷಯದಲ್ಲಿ ಈಶ್ವರನಿಗೆ ಉಂಟಾಗುವ ನಿಗ್ರಹಾನುಗ್ರಹಗಳಿಗೆ ಸಮಾನವಾಗಿ ಇವನ ಶತ್ರುಗಳಲ್ಲಿ ನಿಗ್ರಹ – ಕೋಪವೂ, ಮಿತ್ರರುಗಳಲ್ಲಿ ಅನುಗ್ರಹ - ಕೃಪೆಯೂ ಉಂಟಾಗುವಿಕೆ ಸಿದ್ಧಾಂತದಲ್ಲಿ ಒಬ್ಬನು ವಿಪರೀತಾನುಷ್ಠಾನವನ್ನು

**ಆರೇನುಮ್ ಅನುಷ್ಠಿತ್ತ ಕರ್ಮಙ್ಗಳುಕ್ಕು ಆರೇನುಮ್ಪಕ್ಕಲಿಲೇ ನಿಗ್ರಹಾನುಗ್ರಹಂಗಳ್ ಪಿರನ್ದಾಲ್ ಅತಿಪ್ರಸಂಗಮ್ ವಾರಾದೋವೆನ್ನಿಲ್, ಇದುವುಮ್ ಮುಮುಕ್ಷು ವಿಷಯತ್ತಿಲ್ ಅನುಕೂಲ ಪ್ರತಿಕೂಲರ್ಕ್ಕು ಉಪಚಾರಾಪಚಾರ ರೂಪಮಾನ ಕರ್ಮಮಡಿಯಾಹೈಯಾಲೇ ಅತಿಪ್ರಸಂಗಮಿಲ್ಲೈ. ಆಹೈಯಾಲೇಯಿರೇ ಉದಾಸೀನರ್ಪಕ್ಕಲ್ ಸುಕೃತ ದುಷ್ಕೃತಂಗಳಿರಣ್ಡುಮ್ ಸಂಕ್ರಮಿಕ್ಕುಮೆನ್ನಾದೊಳ್ಳಿಹಿರದು. ಫಲಸಾರೂಪ್ಯ ಮಾತ್ರತ್ತಾಲೇ ಇಙ್ಗು ಸಂಕ್ರಮಣೋಪಚಾರಮ್. ಇಸ್ಸುಕೃತ ದುಷ್ಕೃತ ಸಂಕ್ರಾಂತಿ ಶೊಲ್ಲು**

---

ಮಾಡಿದರೆ ಅದರ ನಿಮಿತ್ತವಾಗಿ, ಅವನ ವಿಷಯದಲ್ಲಿ ಭಗವಂತನಿಗೆ ಉಂಟಾಗುವ ನಿಗ್ರಹವೇ ಪಾಪವೆಂದೂ, ಒಬ್ಬನು ಸದನುಷ್ಠಾನವನ್ನು ಮಾಡಿದರೆ ಅದರಿಂದ ಅವನ ವಿಷಯದಲ್ಲಿ ಭಗವಂತನಿಗೆ ಉಂಟಾಗುವ ಅನುಗ್ರಹವೇ ಪುಣ್ಯವೆಂದೂ ಇವುಗಳು ಧರ್ಮ ಭೂತ ಜ್ಞಾನದ ಅವಸ್ಥಾ ವಿಶೇಷಗಳಾಗಿ ದ್ರವ್ಯಗಳೆಂದೂ ವಿಷಯತಾ ಸಂಬಂಧದಿಂದ ಆಯಾಯಾ ಕರ್ತೃವಿನ ಹತ್ತಿರ ಉಂಟಾಗುತ್ತವೆಯೆಂದೂ ಫಲಪ್ರದಾನ ಪರ್ಯಂತ ಆಯಾಯಾ ಕರ್ತೃಗಳಲ್ಲಿಯೇ ಇರುತ್ತವೆಯೆಂದೂ ಒಪ್ಪಲ್ಪಟ್ಟಿವೆ. ಇದರಿಂದ ವಿದ್ಯಾನಿಷ್ಠರುಗಳು ಮಾಡಿದ ಸದ್ವಿಪರೀತಾನುಷ್ಠಾನಗಳಿಂದ ಅವರುಗಳ ವಿಷಯದಲ್ಲಿ ಒಂದು ರೀತಿಯ ಅನುಗ್ರಹವೂ ನಿಗ್ರಹವೂ, ಭಗವಂತನಿಗೆ ಉಂಟಾಗಿರುತ್ತದೆ. ಆ ವಿದ್ಯಾನಿಷ್ಠನ ಅಂತಿಮ ಕಾಲದಲಿ ಅವನ ಸ್ನೇಹಿತರುಗಳಲ್ಲಿಯೂ, ಶತ್ರುಗಳಲ್ಲಿಯೂ, ಅವನ (ವಿದ್ಯಾನಿಷ್ಠನ) ಸದ್ವಿಪರೀತಾನುಷ್ಠಾನಗಳಿಂದ ಉಂಟಾದ ಅನುಗ್ರಹ ನಿಗ್ರಹ ಸಂಕಲ್ಪಗಳಿಗೆ ಸಮಾನವಾದ ಅನುಗ್ರಹ ನಿಗ್ರಹ ಸಂಕಲ್ಪಗಳನ್ನು ಭಗವಂತನು ವಿಷಯತಾ ಸಂಬಂಧದಿಂದ ಉಂಟು ಮಾಡಿಕೊಳ್ಳುತ್ತಾನೆ ಎಂಬದೇ ಸಂಕ್ರಮಣ ಶಬ್ದಾರ್ಥವಾದ್ದರಿಂದ ಯಾವ ಚೋದ್ಯಕ್ಕೂ ಅವಕಾಶವಿಲ್ಲ.

ಸರಿ ಹಾಗಾದರೆ, "ಶಾಸ್ತ್ರಫಲಂ ಪ್ರಯೋಕ್ತರಿ" ಎಂಬ ನ್ಯಾಯದಂತೆ ಶಾಸ್ತ್ರಾನುಷ್ಠಾನದ ಫಲವು ಆ ಅನುಷ್ಠಾತಾವಿಗೆ ತಾನೇ ಸೇರುತ್ತದೆ. ಹಾಗಿರುವಾಗ ಇದಕ್ಕೆ ವಿಪರೀತವಾಗಿ ಬ್ರಹ್ಮ ವಿತ್ತುಗಳ ಸದ್ವಿಪರಿತಾನುಷ್ಠಾನಗಳ ಫಲವನ್ನು ಅವರ ಸುಹೃತ್ತುಗಳಲ್ಲಿಯೂ ದ್ವಿಷತ್ತು(ಶತ್ರು)ಗಳಲ್ಲಿಯೂ ಸಂಕ್ರಮಿಸುವುದು ಹೇಗೆ ನ್ಯಾಯವೆಂಬುದು ಪುನಃಶ್ಚೋದ್ಯ. ಇದನ್ನು **ಆರೇನುಮ್** ಎಂದಾರಂಭಿಸಿ ಕೇಳಿಕೊಂಡು **ಇದುವುಮ್ ಮುಮುಕ್ಷು ವಿಷಯತ್ತಿಲ್** ಎಂದಾರಂಭಿಸಿ ಸಮಾಧಾನ ಮಾಡುತ್ತಾರೆ. ಅದಾಗಿ ಯಾರಾದರೂ ಮಾಡಿದ ಕರ್ಮಗಳಿಗೆ ಬೇರೆ ಯಾರಾದವರ ಹತ್ತಿರ ನಿಗ್ರಹಾನುಗ್ರಹಗಳು ಉಂಟಾದರೆ ಅತಿಪ್ರಸಂಗ ದೋಷವು ಉಂಟಾಗುವುದಿಲ್ಲವೇ ಎಂದರೆ, ಇದು ಮುಮುಕ್ಷು ವಿಷಯದಲ್ಲಿ ಅನುಕೂಲ ಪ್ರತಿಕೂಲರಿಗೆ ಉಂಟಾಗುವುದರಿಂದ ಅತಿಪ್ರಸಂಗವಿಲ್ಲ. 'ಶಾಸ್ತ್ರಫಲಂ ಪ್ರಯೋಕ್ತರಿ' ಎಂಬ ನ್ಯಾಯಕ್ಕೆ ಯಾವ ಬಾಧಕವೂ ಇಲ್ಲವೆಂದರ್ಥ.

ಈ ಅರ್ಥವನ್ನು ವ್ಯತಿರೇಕ ಪ್ರದರ್ಶನ ಪೂರ್ವಕವಾಗಿ **ಆಹೈಯಾಲೇ ಇರೇ** ಎಂದಾರಂಭಿಸಿ ದೃಢೀಕರಿಸುತ್ತಾರೆ. ಆದ್ದರಿಂದಲೇ ಅಲ್ಲವೇ ಉದಾಸೀನರಾಗಿರುವವರಿಗೆ ಬ್ರಹ್ಮವಿತ್ತಿನ ಸುಕೃತ ದುಷ್ಕೃತಗಳೆರಡೂ ಸಂಕ್ರಮಿಸುತ್ತವೆ ಎಂದು ಹೇಳದೇ ಇರುವುದು. ಅಂದರೆ ಉದಾಸೀನರು ಬ್ರಹ್ಮವಿದ್ವಿಷಯದಲ್ಲಿ ಅನುಕೂಲಾಚರಣೆಯನ್ನಾಗಲಿ, ಪ್ರತಿಕೂಲಾಚರಣೆಯನ್ನಾಗಲಿ ಮಾಡಿಲ್ಲವಾದ್ದರಿಂದ, ಬ್ರಹ್ಮವಿದ್ವಿಷಯಕವಾದ ಭಗವಂತನ ಅನುಗ್ರಹ ನಿಗ್ರಹ ಸಂಕಲ್ಪಗಳಿಗೆ ಸಮಾನಗಳಾದ ಸಂಕಲ್ಪಗಳು ಉದಾಸೀನರ ವಿಷಯದಲ್ಲಿ ಭಗವಂತನಿಗೆ ಉಂಟಾಗುವುದಿಲ್ಲ. ಹೀಗೆ ಬ್ರಹ್ಮವಿತ್ತಿನ ಸುಕೃತ ದುಷ್ಕೃತಗಳ ನಿಮಿತ್ತ ಭಗವಂತನಿಗೆ ಉಂಟಾಗುವ ಅನುಗ್ರಹ ನಿಗ್ರಹಗಳಿಗೆ ಸಮಾನವಾದ ಅನುಗ್ರಹ ನಿಗ್ರಹ ಸಂಕಲ್ಪಗಳು ಆ ಬ್ರಹ್ಮವಿತ್ತಿನ ಸುಹೃದ್ದುಷ್ಕೃತ್ತುಗಳ ವಿಷಯದಲ್ಲಿ ಉಂಟಾದರೆ, ಇದನ್ನು ಬ್ರಹ್ಮವಿತ್ತಿನ ಪುಣ್ಯಪಾಪ ಸಂಕ್ರಮಣವೆಂದು ಹೇಳಲಾಗುತ್ತದೆಯೇ ಎಂದರೆ **ಫಲಸಾರೂಪ್ಯಮಾತ್ರತ್ತಾಲೇ** ಎಂದಾರಂಭಿಸಿ ಇದು ಔಪಚಾರಿಕವೆನ್ನುತ್ತಾರೆ. ಆದಾಗಿ ಫಲವು ಸಮಾನವಾಗಿರುವುದರಿಂದ ಇಲ್ಲಿ ಪುಣ್ಯ ಪಾಪಗಳು ಅನ್ಯರಲ್ಲಿ ಸಂಕ್ರಮಿಸುತ್ತದೆಯೆಂಬುದು ಔಪಚಾರಿಕ. **ಇಸ್ಸುಕೃತ ದುಷ್ಕೃತ ಸಂಕ್ರಾಂತಿ** ಇತ್ಯಾದಿ – ಈ ಸುಕೃತ ದುಷ್ಕೃತಗಳು ಬ್ರಹ್ಮವಿತ್ತಿನ ಸುಹೃತ್ತುಗಳ ಮತ್ತು

ಹಿರ ಶ್ರುತಿಯಾಲೇ ಈಶ್ವರನುಕ್ಕು ಅತ್ಯರ್ಥಪ್ರಿಯನಾನ ಜ್ಞಾನಿ ವಿಷಯತ್ತಿಲ್ಪಣ್ಣಿನ ಉಪಚಾರಾಪಚಾರಙ್ಗಳಾಲ್ ವರುಮ್ ಪ್ರೀತಿಕೋಪಙ್ಗಳಿನುಡೈಯ ತೀವ್ರತಮತ್ವಂ ಸೂಚಿತ ಮಾಯಿತ್ತು.

## ಸರ್ವಪಾಪೇಭ್ಯ ಇತಿ ಪ್ರಯೋಗೇ ಸರ್ವಶಬ್ದಾರ್ಥವಾಹ

"ಸುದುಷ್ಕರೇಣ ಶೋಚೇದ್ಯಃ" ಎನ್ನಿರಶ್ಲೋಕತ್ತಿಲ್ ಚೊನ್ನ ಯೋಜನೈಯಿಲ್ "ಸರ್ವಪಾಪೇಭ್ಯಃ" ಎನ್ಗಿರದು ಅಧಿಕಾರಿಯುಡೈಯ ಅಪೇಕ್ಷೈಕ್ಕೀಡಾಹ ಪ್ರಾಪ್ತಿ ವಿರೋಧಿಹಳೈಯುಮ್ ಉಪಾಯವಿರೋಧಿಹಳೈಯುಮ್ ಪ್ರತಿಕೂಲಾನುಭವ ಹೇತುಕ್ಕಳೈಯುಮ್, ಸಙ್ಗ್ರಹಿಕ್ಕಿರದು. ಇಙ್ಗು ಪ್ರಾಪ್ತಿವಿರೋಧಿಯಾವದು ಸಾಪರಾಧನಾನ ಇವನ್ ನಮ್ಮೈ ಅನುಭವಿಕ್ಕಕ್ಕಡವನಲ್ಲನ್, ಎನ್ನಿರ ಭಗವತ್ಸಙ್ಕಲ್ಪಮ್. ಉಪಾಯ ವಿರೋಧಿಯಾವದು, ನಮ್ಮೈ ಇವನ್ ತೆಳಿನ್ದು ವಶೀಕರಿಕ್ಕಕ್ಕಡವನಲ್ಲನೆನ್ನಿರ ಸಙ್ಕಲ್ಪಮ್. ಪ್ರತಿಕೂಲಾನುಭವ ಹೇತುವಾವದು ? ಅವ್ವೋ ಪ್ರತಿಕೂಲಾನುಷ್ಠಾನಙ್ಗಳಾಲೇ ವನ್ದ ಅವ್ವೋ ಫಲ ಪ್ರದಾನ ಸಙ್ಕಲ್ಪಮ್. ಮುಮುಕ್ಷುವೈಪ್ಪತ್ತ ಸರ್ವನಿಗ್ರಹಙ್ಗಳುಮ್ ನಿವೃತ್ತಙ್ಗಳಾನಾಲ್, ನಿಗ್ರಹಕಾರ್ಯಙ್ಗಳಾನ ಅಚಿತ್ಸಂಬಂಧಾದಿಹಳ್ ನಿಗ್ರಹನಿವೃತ್ತಿರೂಪ ಪ್ರಸಾದತ್ತಾಲೇ ನಿವೃತ್ತಙ್ಗಳಾಮ್. ಪಿನ್ಬು ಕಾರಣಾಭಾವತ್ತಾಲೇ ಕಾರ್ಯಮಾನ ಪ್ರತಿಕೂಲಙ್ಗಳಿಲ್ ಒನ್ರುಮ್ ವಾರಾದು. ಇದು "ಅನಾವೃತ್ತಿಶ್ಶಬ್ದಾತ್

---

ರ್ನೃಷ್ಕೃತ್ಯಗಳಲ್ಲಿ ಸಂಕ್ರಮಿಸುತ್ತವೆ ಎಂದು ಹೇಳಿರುವ ಶ್ರುತಿಯಿಂದ ಈಶ್ವರನಿಗೆ ಅತ್ಯರ್ಥ ಪ್ರಿಯನಾದ ಜ್ಞಾನಿ ವಿಷಯದಲ್ಲಿ ಮಾಡಿದ ಉಪಚಾರಗಳಿಂದ ಉಂಟಾಗುವ ಪ್ರೀತಿ ಕೋಪಗಳ ತೀವ್ರ ತಮತ್ವವು ಸೂಚಿಸಲ್ಪಟ್ಟಿತು. ಆದ್ದರಿಂದ ಬ್ರಹ್ಮವಿದಪಚಾರವು ಅತ್ಯಂತ ಪರಿಹರಣೀಯ. ಹಾಗೆ ಬ್ರಹ್ಮವಿತ್ತುಗಳಲ್ಲಿ ಉಪಚಾರಗಳು ಅತ್ಯಂತ ಶ್ಲಾಘನೀಯ. ಈ ರೀತಿಯಾಗಿ ಬ್ರಹ್ಮವಿತ್ತಿನ ಪುಣ್ಯಪಾಪಗಳನ್ನು ಅನ್ಯರಲ್ಲಿ ಸಂಕ್ರಮಿಸುವುದು ಭಗವಂತನಿಗೆ ವೈಷಮ್ಯ ನೈರ್ಘೃಣ್ಯಗಳನ್ನು ಉಂಟು ಮಾಡುವುದಿಲ್ಲವೆಂಬುದೂ ಇಲ್ಲಿ ಆಚಾರ್ಯರ ಅಭಿಪ್ರಾಯ.

## ಸರ್ವ ಪಾಪಶಬ್ದದಲ್ಲಿ ಅಡಗಿರುವ ಅಂಶಗಳು – ಅವುಗಳ ವಿವರ

**'ಸುದುಷ್ಕರೇಣಶೋಚೇದ್ಯಃ'** ಎಂಬ ಶ್ಲೋಕದಲ್ಲಿ ಹೇಳಿದ ಯೋಜನೆಯಲ್ಲಿ, "ಸರ್ವಪಾಪೇಭ್ಯ" ಎಂಬುದು ಅಧಿಕಾರಿಯ ಅಪೇಕ್ಷೆಯನ್ನನುಸರಿಸಿ ಮೋಕ್ಷವನ್ನು ಕುರಿತು ಪ್ರಪತ್ತಿ ಮಾಡಿದವರಿಗೆ ಪ್ರಾಪ್ತಿ ವಿರೋಧಿಗಳನ್ನೂ ಪಾಯವನ್ನು ಉದ್ದೇಶಿಸಿ ಪ್ರಪತ್ತಿ ಮಾಡಿದವರಿಗೆ, ಉಪಾಯ ವಿರೋಧಿಗಳನ್ನೂ ಪ್ರತಿಕೂಲಾನುಭವ ಹೇತುಗಳನ್ನೂ ಸಂಗ್ರಹಿಸುತ್ತದೆ. **ಇಂಗುಪ್ರಾಪ್ತಿ ವಿರೋಧಿಯಾವದು** ಇತ್ಯಾದಿ – ಭಗವತ್ಪ್ರಾಪ್ತಿಗೆ ವಿರೋಧಿಯು ಯಾವುದೆಂದರೆ, ಸಾಪರಾಧನಾದ ಈ ಚೇತನನು ನಮ್ಮನ್ನು ಅನುಭವಿಸಲು ಯೋಗ್ಯನಲ್ಲನೆಂಬ ಭಗವತ್ಸಂಕಲ್ಪ. ಭಗವದನುಭವವೇ ಭಗವತ್ಪ್ರಾಪ್ತಿ. **ಉಪಾಯವಿರೋಧಿಯಾವದು** ಇತ್ಯಾದಿ – ಉಪಾಯ ವಿರೋಧಿಯು ಯಾವುದೆಂದರೆ, ನಮ್ಮನ್ನು ಇವನು **ತೆಳಿಂದು** – ಕೂಲಂಕಷವಾಗಿ ತಿಳಿದುಕೊಂಡು **ವಶೀಕರಿಕ್ಕಕ್ಕಡವನಲ್ಲನ್.** ವಶೀಕಾರವೇ – ಉಪಾಯ, ಆ ಉಪಾಯವನ್ನು ಅನುಷ್ಠಿಸಲು ಯೋಗ್ಯವಲ್ಲವೆಂಬ ಸಂಕಲ್ಪ. **ಪ್ರತಿಕೂಲಾನುಭವಹೇತುವಾವದು** – ಪ್ರತಿಕೂಲಾನುಭವಕ್ಕೆ ಕಾರಣವು ಯಾವುದೆಂದರೆ – ಆಯಾಯಾ ಪ್ರತಿಕೂಲ ಕರ್ಮಾನುಷ್ಠಾನಗಳಿಂದ ಏರ್ಪಟ್ಟ ಆಯಾಯಾ ಫಲ ಪ್ರದಾನ ಸಂಕಲ್ಪ. **ಮುಮುಕ್ಷುವೈಪ್ಪತ್ತ** ಇತ್ಯಾದಿ– ಮುಮುಕ್ಷುವನ್ನು ಕುರಿತು ಸರ್ವನಿಗ್ರಹಗಳೂ ನಿವೃತ್ತಗಳಾದರೆ ನಿಗ್ರಹ ಕಾರ್ಯಗಳಾದ ಅಚಿತ್ಸಂಬಂಧಾದಿಗಳು ನಿಗ್ರಹ ನಿವೃತ್ತಿ ರೂಪ ಪ್ರಸನ್ನತೆಯಿಂದ ನಿವೃತ್ತಗಳಾಗುತ್ತವೆ. **ಪಿನ್ಬು** ಇತ್ಯಾದಿ – ಅನಂತರ "ಕಾರಣಾಭಾವಾತ್ ಕಾರ್ಯಾಭಾವಃ" ಎಂಬ ನ್ಯಾಯದಂತೆ ಅಚಿತ್ಸಂಬಂಧಕ್ಕೆ ಕಾರಣವಾದ ಭಗವನ್ನಿಗ್ರಹವು ಶರಣಾಗತಿಯಿಂದ ನಿವೃತ್ತವಾದರೆ, ಕಾರ್ಯಗಳಾದ ಪ್ರತಿಕೂಲಗಳೆಂದೂ ಉಂಟಾಗುವುದಿಲ್ಲ. ಈ ಅರ್ಥವು (1) ಅನಾವೃತ್ತಿಶ್ಶಬ್ದಾತ್

ಎನ್ಱಿರ ಸೂತ್ರತ್ತಿಲೇ ವಿವಕ್ಷಿತಮ್. **ಇನ್ದ ನಿಷ್ಕರ್ಷಙ್ಗಳೆಲ್ಲಾಮ್ ಭಾಷ್ಯತ್ತಿಲೇ ಸತ್ಸಂಪ್ರದಾಯತ್ತೋಡೇ ಕೂಡ ಚಿರಪರಿಚಯಮ್ ಪಣ್ಣಿನ ಮಹಾಪ್ರಾಜ್ಞರುಕ್ಕು ನಿಲಮಾಯಿರುಕ್ಕುಮ್.**

**“ಇಪ್ಪಡಿ “ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ”** ಎನ್ಱು ಕಾರ್ಯಕಾರಣ **ರೂಪ ಸಮಸ್ತ ಪ್ರತಿಬಂಧಕ** ಪ್ರವಾಹ ನಿವೃತ್ತಿಯೈ ಚೊಲ್ಲ ಸ್ವತಃಪ್ರಾಪ್ತಮಾನ ಪರಿಪೂರ್ಣ **ಭಗವದನುಭವಾವಿರ್ಭಾವಮ್ ಶೊಲ್ಲಿತ್ತಾಯಿತ್ತು.** 1) “ಯಥಾನಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಳನಾನ್ಮಣೇಃ ।
ದೋಷಪ್ರಹಾಣಾನ್ನ ಜ್ಞಾನ ಮಾತ್ಮನಃ ಕ್ರಿಯತೇ ತಥಾ ।
ಯಥೋದಪಾನಕರಣಾತ್ ಕ್ರಿಯತೇ ನಜಲಾಂಬರಮ್ ।
ಸದೇವ ನೀಯತೇ ವ್ಯಕ್ತಿಂ ಅಸತ ಸ್ಸಂಭವಃ ಕುತಃ
ತಥಾ ಹೇಯಗುಣಧ್ವಂಸಾತ್ ಅವಬೋಧಾದಯೋ ಗುಣಾಃ ।
ಪ್ರಕಾಶ್ಯನ್ತೇ ನ ಜನ್ಯನ್ತೇ ನಿತ್ಯಾ ಏವಾ ಆತ್ಮನೋ ಹಿ ತೇ ।

---

ಎಂಬ ಸೂತ್ರದಲ್ಲಿ ವಿವಕ್ಷಿತವು. **ಇಂದ ನಿಷ್ಕರ್ಷಂಗಳೆಲ್ಲಾಮ್** ಇತ್ಯಾದಿ – ಮೇಲೆ ಹೇಳಿದ **ನಿಷ್ಕೃಷ್ಟಾರ್ಥಗಳೆಲ್ಲಾ** ಶ್ರೀ ಭಾಷ್ಯ ಗೀತಾಭಾಷ್ಯಾದಿಗಳಲ್ಲಿ **ಸತ್ಸಂಪ್ರದಾಯತ್ತೋಡೇಕೂಡ** ಆಳ್ವಾರವರುಗಳ ಶ್ರೀ ಸೂಕ್ತಿಗಳೊಡನೆ ಸದಾಚಾರ್ಯ ಸನ್ನಿಧಿಯಲ್ಲಿ ಕಾಲಕ್ಷೇಪ ಪೂರ್ವಕ **ಚಿರಪರಿಚಯಮ್** – ಚಿರಕಾಲ ಪರಿಚಯ ಮಾಡಿದ **ಮಹಾಪ್ರಾಜ್ಞರುಕ್ಕು** – ವಿಷ್ಣು ಚಿತ್ತ ವಾದಿಹಂಸಾಂಬುವಾಹ ವರದಾಚಾರ್ಯಾದಿಗಳ ಹಾಗೆ ಇರುವ ಮಹಾಪ್ರಾಜ್ಞರುಗಳಿಗೆ **ನಿಲಮಾಯಿರುಕ್ಕುಮ್** – ಸಮ್ಯಕ್ ಗ್ರಾಹ್ಯಗಳಾಗುತ್ತವೆ. ಇಲ್ಲಿ ‘ಸತ್’ ಪದವು ಭಾಷ್ಯಾಕಾರೇತರ ಸಂಪ್ರದಾಯವನ್ನು ವ್ಯವಚ್ಛೇದಿಸುತ್ತದೆ. ಪ್ರಾಜ್ಞ ಶಬ್ದವು ಮಂದ ಬುದ್ಧಿಗಳನ್ನು ವ್ಯವಚ್ಛೇದಿಸುತ್ತದೆ. ಚಿರಶಬ್ದವು ಅಲ್ಪಕಾಲ ಪರಿಚಯವನ್ನು ವ್ಯವಚ್ಛೇದಿಸುತ್ತದೆ. ಮಹಚ್ಛಬ್ದವು ಪ್ರಾಜ್ಞರಲ್ಲಿಯೂ ವಿಶೇಷ ಪ್ರಾಜ್ಞರಾದ ವಿಷ್ಣುಚಿತ್ತ, ವರದಾಚಾರ್ಯಾದಿಗಳನ್ನು ತಿಳಿಸುತ್ತದೆ.

### ಪ್ರತಿಬಂಧಕ ನಿವೃತ್ತಿಯನ್ನು ‘ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ’ ಎಂದು ಹೇಳಿರುವುದರಿಂದ ಇಷ್ಟ ಪ್ರಾಪ್ತಿಯೂ ಹೇಳಿದಂತೆ.

ಪ್ರತಿಬಂಧಕವಾದ ಸರ್ವಪಾಪ ನಿವೃತ್ತಿಯು ಏರ್ಪಟ್ಟ ನಂತರ, ಪರಿಪೂರ್ಣ ಬ್ರಹ್ಮಾನುಭವ **ರೂಪ ಇಷ್ಟ** ಪ್ರಾಪ್ತಿಯೂ ಹೇಳಿದಂತೆಯಾಯಿತೆಂದು **‘ಇಪ್ಪಡಿ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ’** ಎಂದಾರಂಭಿಸಿ ಉಪಪಾದಿಸುತ್ತಾರೆ. ಅದಾಗಿ ಹೀಗೆ ಸರ್ವ ಪಾಪಗಳಿಂದಲೂ ನಿನ್ನನ್ನು ಬಿಡಿಸುತ್ತೇನೆಂದು ಕಾರ್ಯಕಾರಣರೂಪ ಸಮಸ್ತ ಪ್ರತಿಬಂಧಕ ಪ್ರವಾಹ ನಿವೃತ್ತಿಯನ್ನು ಹೇಳಲು, ಸ್ವತಃ ಪ್ರಾಪ್ತವಾದ ಪರಿಪೂರ್ಣ ಭಗವದನುಭವದ ಆವಿರ್ಭಾವವು – ಪ್ರಕಾಶ್ಯತ್ವವು ಹೇಳಲ್ಪಟ್ಟಂತೆ ಆಯಿತು. (1 **ಯಥಾನಕ್ರಿಯತೇ ಜ್ಯೋತ್ಸ್ನಾ** ಇತ್ಯಾದಿ ಶೌನಕ ಭಗವಾನ್ ಕೃಪೆಮಾಡಿ ಹೇಳಿದಂತೆ ರತ್ನದ ಕೊಳೆಯು ನೀಗಿದರೆ ಸ್ವತಃ ಪ್ರಾಪ್ತವಾದ ರತ್ನದ ಕಾಂತಿಯು ಪ್ರಕಾಶಿಸುವಂತೆ ಆತ್ಮನ ಜ್ಞಾನವು ಸ್ವಯಂ ಪ್ರಕಾಶವಾಗುತ್ತದೆ. ಹೊಸದಾಗಿ ಜ್ಞಾನವು ಉಂಟು ಮಾಡಲ್ಪಡುವುದಿಲ್ಲ. ಭಾವಿಯನ್ನು ತೋಡಿದರೆ ಹೇಗೆ ನೀರೂ, ನೀರಿಲ್ಲದಿದ್ದರೆ ಅವಕಾಶವೂ ಸ್ವಯಮಾಗಿಯೇ ಉದ್ಭವಿಸುತ್ತವೆಯೋ ಹೊಸದಾಗಿ ಮಾಡಲ್ಪಡುವುದಿಲ್ಲವೋ, ಹಾಗೆ ಹೇಯ ಗುಣಗಳು ನಾಶಗಳಾದರೆ ಅವಬೋಧ – ಜ್ಞಾನ, ಮೊದಲಾದ ಗುಣಗಳು ಸ್ವಯಮಾಗಿಯೇ ಪ್ರಕಾಶಿಸುತ್ತವೆ. ಹೊಸದಾಗಿ ಉಂಟು

---

1) ವಿಷ್ಣು ಧರ್ಮ 105-55-57

ಎನ್ರು ಶ್ರೀ ಶೌನಕ ಭಗವಾನ್ ಅರುಳಿಚ್ಚೆಯ್‌ದಾನ್. ಜ್ಞಾನದ್ರವ್ಯಮುಮ್ ಇದಿನುಡೈಯ ಸರ್ವವಿಷಯ ವಿಕಾಸತ್ತುಕ್ಕು ಸ್ವರೂಪಯೋಗ್ಯತಾರೂಪೈಯಾನ ಶಕ್ತಿಯುಮ್ ನಿತ್ಯಙ್ಗಳಾಹೈಯಾಲೇ ಅವತ್ತಿಲ್ ಅವಿರ್ಭಾವ ಶಬ್ದಮ್ ಮುಖ್ಯಮ್. ಸರ್ವವಿಷಯ ವಿಕಾಸಮುಮ್ ದುಃಖನಿವೃತ್ತ್ಯಾದಿಹಳುಮ್, ಸಂಕಲ್ಪಾದಿಹಳುಮ್ ಕೈಂಕರ್ಯಂಗಳುಮ್ ಅಗಂತುಕಙ್ಗಳಾಯಿರುಕ್ಕ, ಇವೈ ನಿವೃತ್ತಪ್ರತಿಬಂಧ ಸ್ವರೂಪೋಪಾಧಿಕಙ್ಗಳಾಹೈಯಾಲೇ ಮೇಲ್ ಮುಟ್ರಕ್ಕ ನಡಕ್ಕುಮ್ಪಡಿ ತೋತ್ತುಹೈಕ್ಕಾಹ ಇವತ್ತಿಲ್ "ಅವಿಸ್ಸ್ಯುರ್ಮಮ ಸಹಜ ಕೈಂಕರ್ಯವಿಧಯಃ" ಇತ್ಯಾದಿಹಳಾಲೇ "ಆವಿರ್ಭಾವ" ಶಬ್ದಮ್ ಪ್ರಯುಕ್ತಮಾಹಿರದು. ಸ್ವರೂಪಯೋಗ್ಯತ್ವತ್ತಾಲೇ ಕರ್ಮೋಪಾಧಿಕಮಾನ ಬಹುವಿಧರೂಪ ಆನುಕೂಲ್ಯ ಪ್ರಾತಿಕೂಲ್ಯಙ್ಗಳ್ ನಡನ ಭಗವದ್ವಿಭೂತಿಯಾನ ವಸ್ತುಕ್ಕಳುಕ್ಕು ಮೇಲೆಲ್ಲಾಮ್ ಮೋಕ್ಷದಶೈಯಿಲ್ ಅನುಕೂಲ್ಯಮೇ ಸ್ವರೂಪಪ್ರಾಪ್ತಮಾಹೈಯಾಲೇ, ಅದಿಲುಮ್ ಅವಿರ್ಭಾವ ಶಬ್ದತ್ತುಕ್ಕು ವಿರೋಧಮಿಲ್ಲೈ. ಆಹೈಯಾಲೇ "ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎನ್ರು ಇವ್ವನುಕೂಲಾವಸ್ಥಾಂತರಮ್ ಸಿದ್ಧಮಾಯಿತ್ತು. ಏಕಶಬ್ದತ್ತುಕ್ಕು ಉಪಾಯ ಫಲೈಕ್ಯಮ್ ಪೊರುಳಾನ ಪ್ರೀದು, ಇವ್ವಿಷ್ಟ ಪ್ರಾಪ್ತಿಯುಮ್ ಇ ಶ್ಲೋಕತ್ತಿಲೇ ಸುವ್ಯಕ್ತಮಾಹ ಚೊಲ್ಲಿತ್ತಾಮ್.

---

ಮಾಡಲ್ಪಡುವುದಿಲ್ಲ. ಜ್ಞಾನಾದಿ ಗುಣಗಳು ಆತ್ಮಾವಿಗೆ ನಿತ್ಯಗಳು. **ಜ್ಞಾನದ್ರವ್ಯಮುಮ್** ಇತ್ಯಾದಿ – ಜ್ಞಾನ ದ್ರವ್ಯವೂ ಅದರ ಸರ್ವ ವಿಷಯ ವಿಕಾಸಕ್ಕೆ ಸ್ವರೂಪಯೋಗ್ಯತಾ ರೂಪವಾದ ಶಕ್ತಿಯೂ ನಿತ್ಯಗಳಾದ್ದರಿಂದ ಅವುಗಳಲ್ಲಿ ಆವಿರ್ಭಾವ ಶಬ್ದವು ಮುಖ್ಯ. **ಸರ್ವವಿಷಯ ವಿಕಾಸಮುಮ್** ಇತ್ಯಾದಿ – ಸರ್ವ ವಿಷಯ ವಿಕಾಸವೂ ದುಃಖ ನಿವೃತ್ತ್ಯಾದಿಗಳೂ ಸಂಕಲ್ಪಾದಿಗಳೂ ಕೈಂಕರ್ಯಗಳೂ ಪ್ರತಿಬಂಧ ಸ್ವರೂಪಗಳ ನಿವೃತ್ತಿಯೇ ಕಾರಣವಾಗಿ **ಆಗಂತುಕಂಗಳಾಯಿರುಕ್ಕ** – ಬಂದವುಗಳಾಗಿ, ಮುಂದೆ ಯಾವತ್ಕಾಲ ನಡೆದು ಬರುವಂತೆ ತೋರುವುದಕ್ಕಾಗಿ ಇವುಗಳಲ್ಲಿ (2) **ಆವಿಸ್ಸ್ಯುಃ ಮಮ ಸಹಜ ಕೈಂಕರ್ಯ ವಿಧಯಃ** –ಸಹಜಗಳಾದ ಕೈಂಕರ್ಯ ವಿಧಿಗಳು ನನಗೆ ಪ್ರಕಾಶಿಸಲಿ, ಇತ್ಯಾದಿ ಆವಿರ್ಭಾವ ಶಬ್ದವು ಪ್ರಯುಕ್ತವಾಗಿದೆ. **ಸ್ವರೂಪ ಯೋಗ್ಯತ್ವತ್ತಾಲೇ ಇತ್ಯಾದಿ** – ಸ್ವರೂಪ ಯೋಗ್ಯತ್ವದಿಂದ ಕರ್ಮೋಪಾಧಿಕವಾಗಿ ಬಹು ವಿಧವಾದ ಆನುಕೂಲ್ಯ ಪ್ರಾತಿಕೂಲ್ಯಗಳು ಏರ್ಪಟ್ಟ ಭಗವದ್ವಿಭೂತಿಯಾದ ವಸ್ತುಗಳಿಗೆ, ಮುಂದೆ **ಮೋಕ್ಷ** ದಶೆಯಲ್ಲೆಲ್ಲಾ, ಆನುಕೂಲ್ಯವೇ ಸ್ವರೂಪತಃಪ್ರಾಪ್ತವಾದ್ದರಿಂದ ಅದರಲ್ಲೂ ಆವಿರ್ಭಾವ ಶಬ್ದವನ್ನು ಪ್ರಯೋಗಿಸುವುದು ಬಾಧಕವಾಗಲಾರದು. **ಆಹೈಯಾಲ್** ಇತ್ಯಾದಿ –"ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂದು ಅನಿಷ್ಟ ನಿವರ್ತನವನ್ನು ಹೇಳಿದುದರಿಂದ ಈ **ಅನುಕೂಲವಾದ** ಅವಸ್ಥಾಂತರವು ಸಿದ್ಧವಾಯಿತು. ಹೀಗೆ ಅಪ್ರಧಾನವಾದ ಅನಿಷ್ಟ ನಿವೃತ್ತಿಯು ಸ್ಪಷ್ಟವಾಗಿ ಹೇಳಲ್ಪಟ್ಟು, ಪ್ರಧಾನವಾದ ಇಷ್ಟಪ್ರಾಪ್ತಿಯು ಅರ್ಥಾತ್ ಪ್ರಾಪ್ತವಾಯಿತಲ್ಲಾ ಎಂದರೆ ಅದೂ ಶಾಬ್ದವಾಗಿಯೇ "ಏಕ" ಶಬ್ದದಲ್ಲಿ ಹೇಳಲ್ಪಟ್ಟಿದೆ, ಎಂದು ಆಚಾರ್ಯರು **'ಏಕಶಬ್ದತ್ತುಕ್ಕು'** ಎಂದಾರಂಭಿಸಿ ತಿಳಿಸುತ್ತಾರೆ. ಅದಾಗಿ ಏಕಶಬ್ದಕ್ಕೆ ಉಪಾಯ ಫಲಗಳ ಐಕ್ಯವು ಅಂದರೆ ಪ್ರಾಪ್ಯನೇ ಪ್ರಾಪಕನು ಎಂದು ಎರಡೂ ಸೇರಿ ಅರ್ಥವಾದಾಗ, ಈ ಇಷ್ಟ ಪ್ರಾಪ್ತಿಯೂ ಈ ಚರಮಶ್ಲೋಕದಲ್ಲಿ ಸುವ್ಯಕ್ತವಾಗಿ ಹೇಳಲ್ಪಟ್ಟಿದೆ, ಎಂದು ತಾತ್ಪರ್ಯ. **ಆಹೈಯಾಲ್ "ಮಾಮೇವೈಷ್ಯಸಿ"**, ಇತ್ಯಾದಿ–

---

2) ಅಕಾರಾರ್ಥಾಯೈವ ಸ್ವಮಹಮಥ ಮಹ್ಯಂ ನ ನಿವಹಾ ನರಾಣಾಂ ನಿತ್ಯಾನಾ ಮಯನ ಮಿತಿ ನಾರಾಯಣ ಪದಮ್ । ಯಮಾಹಾಸ್ಮೈ ಕಾಲಂ ಸಕಲಮ ಪಿ ಸರ್ವತ್ರ ಸಕಲಾ ಸ್ವವಸ್ಥಾ ಸ್ವಾವಿಃ ಸ್ಯುರ್ಮಮ ಸಹಜ ಕೈಂಕರ್ಯ ವಿಧಯಃ ॥ ಅಷ್ಟಶ್ಲೋಕೀ –3

ಚರಮ ಶ್ಲೋಕೋಽಯಂ ಅಂಗಪ್ರಪತ್ತಿವಿಧಾಯಕಃ ಕಿಂನ ಸ್ಯಾದಿತ್ಯತ್ರಾಹ.

ಆಹೈಯಾಲ್ "ಮಾಮೇವೈಷ್ಯಸಿ" ಎನ್ರು ಕೀೞಿಲ್ ಶ್ಲೋಕತ್ತಿಲೇ ವಿಶದಮಾಹ ಚ್ಚೊನ್ನ ಅರ್ಥಮ್ ಇಙ್ಗು ಪ್ರಾಪ್ತಿವಿರೋಧಿಯೈಕ್ಕೞಿಕ್ಕೈಯಾಲುಮ್, ಏಕ ಶಬ್ದತ್ತಿಲ್ ವಿವಕ್ಷಾ ವಿಶೇಷತ್ತಾಲುಮ್ ಶೊಲ್ಲಿತ್ತಾಮ್. ಆನಪಿನ್ಬು ಇದು ಸಾಪೇಕ್ಷಮಾಯ್‌ಕ್ಕೊಂಡು ಕೀೞಿಲ್ ಶ್ಲೋಕತ್ತುಕ್ಕು ಶೇಷಮಾಹಿರದನ್ರು.

ಕೈವಲ್ಯೇ ಸರ್ವಪಾಪ ನಿವೃತ್ತಿಸ್ತು ನಾಸ್ತೀತ್ಯಾಹ

"ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎನ್ರು ಇಪ್ಪಳವಾಲ್ "ಮಾಮೇವೈಷ್ಯಸಿ" ಎನ್ರು ಶೊನ್ನ ಭಗವತ್ಪ್ರಾಪ್ತಿ ಸಿದ್ಧಿಕ್ಕುಮೋ? ಸರ್ವಪಾಪ ನಿವೃತ್ತಿಯುಂಡಾಯೇ ಭಗವತ್ಪ್ರಾಪ್ತಿ ಯನ್ರಿಕ್ಕೇ ಸ್ವಾತ್ಮ ಮಾತ್ರಾನುಭವರೂಪ ಮಾನ ಕೈವಲ್ಯಮ್ ಪೆರುವಾರು ಮಿಲ್ಲೈಯೋ? ಭಗವತ್ಪ್ರಾಪ್ತಿಯಿಲ್ ಕಾಟ್ಟಿಲ್‌ವೇರು ಪಟ್ಟ ಕೈವಲ್ಯಮ್ 1) ಐಹಲೌಕಿಕ ಮೈಶ್ವರ್ಯಂ ಸ್ವರ್ಗಾದ್ಯಂ ಪಾರಲೌಕಿಕಮ್ ।

ಕೈವಲ್ಯಂಭಗವಂತಂ ಚ ಮಂತ್ರೋಽಯಂ ಸಾಧಯಿಷ್ಯತಿ ॥

---

ಕೆಲವರು ಚರಮಶ್ಲೋಕದಲ್ಲಿ ಅನಿಷ್ಟ ನಿವೃತ್ತಿ ಮಾತ್ರವೇ 'ಮೋಕ್ಷಯಿಷ್ಯಾಮಿ' ಎಂಬ ವಚನದಿಂದ ಹೇಳಲ್ಪಡುವುದರಿಂದ 'ಮಾಮೇವೈಷ್ಯಸಿ' ಎಂಬ ಇಷ್ಟ ಪ್ರಾಪ್ತಿಯನ್ನು ಹೇಳುವ ಭಕ್ತಿವಿಧಾಯಕ ವಾಕ್ಯವಾದ 'ಮನ್ಮನಾಭವ' ಎಂಬ ಪೂರ್ವ ಶ್ಲೋಕದೊಡನೆ ಸಾಕಾಂಕ್ಷವಾಗಿ, ಸರ್ವಧರ್ಮಾನ್ ಪರಿತ್ಯಜ್ಯವೆಂಬ ಶ್ಲೋಕವು ಅಂಗ ಪ್ರಪತ್ತಿ ವಿಧಾಯಕವೆಂದು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಚರಮಶ್ಲೋಕದಲ್ಲಿಯೇ, "ಮೋಕ್ಷಯಿಷ್ಯಾಮಿ" ಎಂದು ಆರ್ಥಿಕವಾಗಿಯೂ. 'ಏಕ' ಶಬ್ದದಿಂದ ಶಾಬ್ದವಾಗಿಯೂ ಇಷ್ಟ ಪ್ರಾಪ್ತಿಯು ಹೇಳಲ್ಪಟ್ಟಿರುವುದರಿಂದ ಪೂರ್ವ ಶ್ಲೋಕದ ಸಾಕಾಂಕ್ಷತೆಯು ಸಂಗತವಲ್ಲವೆಂದು, **ಆಹೈಯಾಲ್ 'ಮಾಮೇವೈಷ್ಯಸಿ'** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಪೂರ್ವ ಶ್ಲೋಕದ ಸಾಕಾಂಕ್ಷತೆಯು ಈ ಚರಮಶ್ಲೋಕಕ್ಕೆ ಬೇಕಿಲ್ಲವಾದ್ದರಿಂದ, ಮಾಮೇವೈಷ್ಯಸಿ ಎಂದು ಪೂರ್ವ ಶ್ಲೋಕದಲ್ಲಿ ವಿಶದವಾಗಿ ಹೇಳಿದ ಅರ್ಥವು, ಇಲ್ಲಿ ಪ್ರಾಪ್ತಿ ವಿರೋಧಿಯನ್ನು ನಿವೃತ್ತಿಸುವುದರಿಂದಲೂ, ಏಕ ಶಬ್ದದಲ್ಲಿ ವಿವಕ್ಷಾ ವಿಶೇಷದಿಂದಲೂ ಹೇಳಲ್ಪಟ್ಟಿತು. **ಆನಪಿನ್ಬು** ಇತ್ಯಾದಿ – ಹೀಗೆ ಏರ್ಪಟ್ಟ ಮೇಲೆ ಈ ಚರಮಶ್ಲೋಕವು ಸಾಪೇಕ್ಷವಾಗಿ ಪೂರ್ವ ಶ್ಲೋಕಕ್ಕೆ ಶೇಷ ಭೂತವಾಗುವುದಿಲ್ಲ.

### ಕೈವಲ್ಯ ವಿಷಯಕವಾದ ಚರ್ಚೆ

**'ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ'** ಇತ್ಯಾದಿ – 'ಸರ್ವಪಾಪಗಳಿಂದಲೂ ಬಿಡಿಸುತ್ತೇನೆ' ಎಂದು ಹೇಳುವ ಮಾತ್ರಕ್ಕೆ 'ಮಾಮೇವೈಷ್ಯಸಿ' – ನನ್ನನ್ನು ಪಡೆಯುತ್ತೀಯೆ, ಎಂದು ಹೇಳಿದ ಭಗವತ್ಪ್ರಾಪ್ತಿಯು ಸಿದ್ಧಿಸುತ್ತದೆಯೇ ?, ಸರ್ವಪಾಪ ನಿವೃತ್ತಿಯುಂಟಾಗಿಯೇ, ಭಗವತ್ಪ್ರಾಪ್ತಿಯು ಏರ್ಪಡದೆ, ಸ್ವಾತ್ಮ ಮಾತ್ರಾನುಭವ ರೂಪವಾದ ಕೈವಲ್ಯವನ್ನು ಪಡೆಯುವವರೂ ಇದ್ದಾರೆಯಲ್ಲವೇ? **ಭಗವತ್ಪ್ರಾಪ್ತಿಯಿಲ್ ಕಾಟ್ಟಿಲ್** ಇತ್ಯಾದಿ-(1) ಐಹಲೌಕಿಕ ಮೈಶ್ವರ್ಯಂ, ಇತ್ಯಾದಿಯಾಗಿ **ಈ** ಮಂತ್ರವು ಇಹಲೋಕದಲ್ಲಿ ಐಶ್ವರ್ಯವನ್ನೂ, ಪರಲೋಕದಲ್ಲಿ ಸ್ವರ್ಗಾದಿ ಫಲಗಳನ್ನೂ, ಕೈವಲ್ಯವನ್ನೂ, ಭಗವತ್ಪ್ರಾಪ್ತಿಯನ್ನೂ ಸಾಧಿಸಿ ಕೊಡುತ್ತದೆಯೆಂದು ಭಗವತ್ಪ್ರಾಪ್ತಿಗಿಂತ ಕೈವಲ್ಯವು ಬೇರೆಯಾದದ್ದೆಂದು ನಾರದಾದಿಗಳು ಹೇಳಿದ್ದಾರೆಯಲ್ಲವೇ. **ಆಳವಂದಾರುಮ್** ಇತ್ಯಾದಿ–

---

1) ನಾರದೀಯಕಲ್ಪ

**ಎನ್ರು ನಾರದಾದಿಹಳಾಲೇ ಶೊಲ್ಲಪ್ಪಟ್ಟದಿರೇ. ಆಳವಂದಾರುವ್ 2) ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವಚ್ಛರಣಾರ್ಥಿನಾಮ್ 3) ಸಂಸೃತ್ಯಕ್ಷರ ವೈಷ್ಣವಾಧ್ವಸು ಎನ್ರುಮ್ ಅರುಳಿಚ್ಚೆಯ್‌ದಾರ್, ಗದ್ಯತ್ತಿಲುಮ್ 4) "ಸರ್ವಕಾಮಾಂಶ್ಚಸಾಕ್ಷರಾನ್ ಎನ್ಹಿರವಾಕ್ಯಮ್ ಉಪಾತ್ತಮಾಯ್‌ತ್ತು. ಶ್ರೀ ಗೀತಾಭಾಷ್ಯಾದಿಹಳಿಲುಮ್ ಇವ್ವರ್ಥಂ ಪ್ರಪಂಚಿತಮ್. ಆಹೈಯಾಲೇ "ಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ" ಎನ್ಹಿರ ಸರ್ವಪಾಪ ನಿವೃತ್ತಿ ಕೈವಲ್ಯತ್ತುಕ್ಕುಮ್ ಭಗವತ್ಪ್ರಾಪ್ತಿಕ್ಕುಮ್ ಪೊದುವನ್ರೋ ವೆನ್ಗೈ ಮಂದಚೋದ್ಯಮ್. ಎಙ್ಗನೇ ಯನ್ನಿಲ್-ಸರ್ವಪಾಪಙ್ಗಳುಮ್ ಕಳಿನ್ದಾಲ್ ಸ್ವತಃಪ್ರಾಪ್ತಮಾನ ಭಗವದನುಭವತ್ತೈ ಇಳಂದು ಕಿಡೈಕ್ಕೈಕ್ಕುಕ್ಕಾರಣ ಮಿಲ್ಲಾಮೈಯಾಲೇ, ಅಪ್ಪೋದು ಭಗವದನುಭವರಹಿತಮಾನ ವಾತ್ಮ**

---

ಆಳವಂದಾರವರೂ (2) ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವಚ್ಛರಣಾರ್ಥಿನಾಂ – ಐಶ್ವರ್ಯ, ಅಕ್ಷರ ಯಾಥಾತ್ಮ್ಯ–ಕೈವಲ್ಯ, ಭಗವಚ್ಛರಣ ಪ್ರಾಪ್ತಿ ಎಂದೂ, (3) ಸಂಸೃತ್ಯಕ್ಷರ ವೈಷ್ಣವಾಧ್ವಸು – ಸಂಸಾರ, ಅಕ್ಷರ–ಕೈವಲ್ಯ, ಪರಮ ಪದವೆಂದೂ, ಕೈವಲ್ಯವನ್ನೂ ಭಗವತ್ಪ್ರಾಪ್ತಿಯನ್ನೂ ಬೇರೆ ಬೇರೆಯಾಗಿ ಹೇಳಿರುತ್ತಾರೆಯಲ್ಲವೇ ? **ಗದ್ಯತ್ತಿಲುಮ್** ಇತ್ಯಾದಿ-ಗದ್ಯದಲ್ಲಿಯೂ ಭಗವದ್ಭಾಷ್ಯಕಾರರು,(4) ಸರ್ವಕಾಮಾಂಶ್ಚಸಾಕ್ಷರಾನ್ ಎಂಬ ವಿಹಗೇಶ್ವರ ಸಂಹಿತಾ ವಾಕ್ಯವನ್ನು ಎತ್ತಿ ಹೇಳಿರುತ್ತಾರೆ. **ಶ್ರೀ ಗೀತಾಭಾಷ್ಯಾದಿಹಳಿಲುಮ್** ಇತ್ಯಾದಿ –ಶ್ರೀಮದ್ಗೀತೆಯ

ಯಸ್ಸಸರ್ವೇಷು ಭೂತೇಷು ನಶ್ಯತ್ಸುನವಿಶ್ಯತಿ । ಅವ್ಯಕ್ತೋಽಕ್ಷರ ಇತ್ಯುಕ್ತಃ,

(ಗೀತೆ 8–20) ಇತ್ಯಾದಿ ಶ್ಲೋಕ ಭಾಷ್ಯದಲ್ಲಿಯೂ ಈ ಅರ್ಥವು ಪ್ರಪಂಚಿತವು. ಅದಾಗಿ ಕೈವಲ್ಯ ಲೋಕವು ಪರಮ ಪದಕ್ಕಿಂತ ಬೇರೆ. ಈ ಲೋಕವು ಪ್ರಕೃತಿ ಮಂಡಲದೊಳಗೆ ಧ್ರುವ ಮಂಡಲಕ್ಕೆ ಮೇಲೆ ಇದೆ. ಆದ್ದರಿಂದ ಕೈವಲ್ಯ ಪುರುಷಾರ್ಥವು ಪ್ರಕೃತಿ ಮಂಡಲಕ್ಕಿಂತ ಮೇಲೆ ಇರುವ ಪರಮ ಪದದಲ್ಲಿ ಏರ್ಪಡುವ ಭಗವತ್ಪ್ರಾಪ್ತಿಗಿಂತ ಬೇರೆಯಾದದ್ದು. **ಆಹೈಯಾಲ್** ಇತ್ಯಾದಿ – ಆದ್ದರಿಂದ "ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂಬ ಸರ್ವಪಾಪ ನಿವೃತ್ತಿಯು ಕೈವಲ್ಯಕ್ಕೂ ಭಗವತ್ಪ್ರಾಪ್ತಿಗೂ **ಪೊದುವನ್ರೋ** – ಸಮಾನವಲ್ಲವೇ ಎಂಬುದು **ಮಂದಚೋದ್ಯಮ್** – ಬಲ್ಪಜವಾದ ಆಕ್ಷೇಪ. ಸಮೀಚೀನವಾದ ಆಕ್ಷೇಪವಲ್ಲವೆಂದು ತಾತ್ಪರ್ಯ. ಇದನ್ನು **ಎಂಗನೇಯೆನ್ನಿಲ್** ಎಂದಾರಂಭಿಸಿ ಉಪಪಾದಿಸುತ್ತಾರೆ. ಅದಾಗಿ **ಸರ್ವಪಾಪಂಗಳುಮ್‌ಕಳಿಂದಾಲ್** ಇತ್ಯಾದಿ – ಸರ್ವಪಾಪಗಳೂ ತೊಲಗಿದರೆ ಭಗವದನುಭವವನ್ನು ಪಡೆಯದೆ ಇರುವುದಕ್ಕೆ ಕಾರಣವಿಲ್ಲದಿರುವುದರಿಂದ ಆಗ ಭಗವದನುಭವ ರಹಿತವಾದ ಆತ್ಮಮಾತ್ರಾನುಭವವು ಘಟಿಸುವುದಿಲ್ಲ.

---

2) ವೇದ್ಯೋಪಾದೇಯ ಭಾವಾನಾಂ ಅಷ್ಟಮೇ ಭೇದಉಚ್ಯತೇ ॥ ಎಂಬುದು ಉತ್ತರಾರ್ಧ – ಗೀತಾರ್ಥ ಸಂಗ್ರಹ (12)

3) ಈಷತ್ತ್ವತ್ಕರುಣಾ ನಿರೀಕ್ಷಣ ಸುಧಾಸಂಧುಕ್ಷಣಾದ್ರಕ್ಷ್ಯತೇ
ನಷ್ಟಂಪ್ರಾಕ್ತದಲಾಭತಸ್ತ್ರಿಭುವನಂ ಸಂಪ್ರತ್ಯನಂತೋದಯಮ್ ।
ಶ್ರೇಯೋನ ಹ್ಯರ ವಿಂದಲೋಚನ ಮನಃ ಕಾಂತಾಪ್ರಸಾದಾದೃತೇ
ಸಂಸೃತ್ಯಕ್ಷರ ವೈಷ್ಣವಾಧ್ವಸು ನೃಣಾಂ ಸಂಭಾವ್ಯತೇ ಕರ್ಹಿಚಿತ್ ॥ (ಚತುಶ್ಲೋಕಿ-3)

4) ಸರ್ವಧರ್ಮಾಂಶ್ಚ ಸಂತ್ಯಜ್ಯ, ಸರ್ವಕಾಮಾಂಶ್ಚ ಸಾಕ್ಷರಾನ್ ।
ಲೋಕ ವಿಕ್ರಾಂತ ಚರಣೌ ಶರಣಂ ತೇಽವ್ರಜಂ ವಿಭೋ ॥
ಕರ್ಮ ಯೋಗಾದಿ ಸರ್ವ ಧರ್ಮಗಳನ್ನೂ ಬಿಟ್ಟು- ಐಶ್ವರ್ಯ ಕೈವಲ್ಯಾದಿಗಳಲ್ಲಿ ಆಸೆಯನ್ನು ಬಿಟ್ಟು ಮೂರು ಲೋಕಗಳನ್ನೂ ಅಳೆದ ನಿನ್ನ ಚರಣ ದ್ವಂದ್ವಗಳನ್ನು ಎಲೈ ವಿಭುವೇ ಶರಣ ಹೊಂದಿದ್ದೇನೆ. (ವಿಹಗೇಶ್ವರ ಸಂಹಿತೆ)

ಮಾತ್ಮಾನುಭವಮ್, ಘಟಿಯಾದು. ಆಹೈಯಾಲ್ ಅವ್ವವಸ್ಥೈಯಿಲ್ ಐಶ್ವರ್ಯಮುಮ್ ಜರಾಮರಣಾದಿ ದುಃಖಙ್ಗಳುಮ್ ವರುಹೈಕ್ಕಿಡಾನ ಕರ್ಮಙ್ಗಳ್ ಕಳಿನ್ದು ಪರಿಪೂರ್ಣ ಭಗವದನುಭವತ್ತುಕ್ಕು ಪ್ರತಿಬಂಧಕಮಾನ ಕರ್ಮಂಕಳ್ ಯಾದೇ ಕಿಡಕ್ಕಿರವಳವಿಲೇ 1) "ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ" ಎನ್ರು ಸೊಲ್ಲುಮ್ಪಡಿಯಿರುಪ್ಪದೊರು ಸ್ವಾತ್ಮಾನುಭವಾನಂದವಿಶೇಷಮ್. 2) "ಆತ್ಮಾರ್ಥೀಚೇತ್ ತ್ರಯೋಽಪ್ಯೇತೇ ತತ್ಕೈವಲ್ಯಸ್ಯ ಸಾಧಕಾಃ" ಎನ್ರು ಶೊಲ್ಲುಹಿರಪಡಿಯೇ, ತನಕ್ಕು ಶಕ್ಯಮಾಯ್ ಇರುಕ್ಕುಮ್ಪದೊರು ಉಪಾಯ ವಿಶೇಷತ್ತಾಲೇ ಸಿದ್ಧಿತ್ತ ಇವ್ವನುಭವತ್ತೈ ಅಚಿದನುಭವತ್ತೋಡುಮ್. ತುವಕ್ಕಿಲ್ಲಾದ ಪಡಿಯಾಲೇ ಕೈವಲ್ಯಮೆನ್ರು ಪೇರಿಟ್ಟಾರ್‌ಕಳ್.

ಭಗವತ್ಪ್ರಾಪ್ತಿಯಿಲ್ ಕೈವಲ್ಯಶಬ್ದಮ್ ಸರ್ವೋಪಾಧಿನಿವೃತ್ತಿಯೈ ನಿನೈಕ್ಕಿರದು. ಆತ್ಮಮಾತ್ರಾ

---

**ಆಹೈಯಾಲ್** ಇತ್ಯಾದಿ – ಆದ್ದರಿಂದ ಆ ಅವಸ್ಥೆಯಲ್ಲಿ ಐಶ್ವರ್ಯವೂ ಜರಾಮರಣಾದಿ ದುಃಖಗಳೂ ಉಂಟಾಗುವುದಕ್ಕೆ ಕಾರಣಗಳಾದ ಕರ್ಮಗಳು ನಿವರ್ತಗಳಾಗಿ ಪರಿಪೂರ್ಣ ಭಗವದನುಭವಕ್ಕೆ ಪ್ರತಿಬಂಧಕವಾದ ಕರ್ಮಗಳು ಹೋಗದೇ ಇರುವ ಸಂದರ್ಭದಲ್ಲಿ, 1) **'ಯಂಲಬ್ಧ್ವಾಚಾಽಪರಂಲಾಭಂ** ಇತ್ಯಾದಿ - ಯಾವ ಕೈವಲ್ಯ ಪುರುಷಾರ್ಥವನ್ನು ಪಡೆದರೆ ಇದಕ್ಕೆ ಬೇರೆಯಾದ ಮತ್ತು ಅಧಿಕವಾದ ಪುರುಷಾರ್ಥವು ಇಲ್ಲವೆಂದು ತಿಳಿಯುತ್ತಾನೆಯೋ, ಇತ್ಯಾದಿ ಹೇಳಿರುವುದೆಲ್ಲಾ ಪ್ರಾಕೃತ ಬ್ರಹ್ಮಾದಿ ಪದವೀ ರೂಪವಾದ ಐಶ್ವರ್ಯಕ್ಕಿಂತ ಮೇಲೆಂದು ಹೇಳಲ್ಪಡುವ ಸ್ವಾತ್ಮಾನಂದ ವಿಶೇಷ. ಇಷ್ಟೇ ವಿನಹ ಶಾಶ್ವತವಾದ ಭಗವತ್ಪ್ರಾಪ್ತಿಗೆ ಸದೃಶವಲ್ಲ. (2) **ಆತ್ಮಾರ್ಥೀಚೇತ್** ಇತ್ಯಾದಿ ಹೇಳುವಂತೆ ತನಗೆ ಶಕ್ಯವಾಗಿರುವ , ಒಂದು ಉಪಾಯ ವಿಶೇಷದಿಂದ ಸಿದ್ಧಿಸಿದ ಈ ಅನುಭವವು ಅಚಿದನುಭವದೊಡನೆಯೂ ಭಗವದನುಭವದೊಡನೆಯೂ **ತುವಕ್ಕು** – ಸಂಬಂಧವಿಲ್ಲದಿರುವುದರಿಂದ, ಇದನ್ನು ಕೈವಲ್ಯವೆಂದು ಹೆಸರಿಟ್ಟರು. ಇದು ಭಗವತ್ಪ್ರಾಪ್ತಿಗಿಂತ ಬೇರೆಯಾದ ಪ್ರಕೃತಿ ಮಂಡಲದೊಳಗೆ ಲಭಿಸುವ ಆನಂದ. ಇದೂ ನಶ್ವರವೇ.

### ಭಗವತ್ಪ್ರಾಪ್ತಿಯನ್ನು ಕೈವಲ್ಯ ಶಬ್ದದಿಂದ ವ್ಯವಹರಿಸುವುದರ ತಾತ್ಪರ್ಯ.

ಕೈವಲ್ಯ ಶಬ್ದವು ಯೋಗವ್ಯುತ್ಪತ್ತಿಯಿಂದಲ್ಲ. ಮತ್ತೇನೆಂದರೆ ಪರಿಭಾಷೆ. "ಯದಾಸ ಕೇವಲೀಭೂತಃ" ಇತ್ಯಾದಿಗಳಲ್ಲಿ ಭಗವತ್ಪ್ರಾಪ್ತಿಯಲ್ಲಿ ಕೈವಲ್ಯ ಶಬ್ದಕ್ಕೆ ಮುಖ್ಯ ವೃತ್ತಿಯಾದ್ದರಿಂದ, ಇದು ಸರ್ವಪಾಪ ನಿವೃತ್ತಿಯನ್ನು ಜ್ಞಾಪಿಸುತ್ತದೆಯೆಂದು **ಭಗವತ್ಪ್ರಾಪ್ತಿಯಿಲ್** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಭಗವತ್ಪ್ರಾಪ್ತಿಯಲ್ಲಿ ಕೈವಲ್ಯ ಶಬ್ದ ಪ್ರಯೋಗವು ಸರ್ವ ಪಾಪ ನಿವೃತ್ತಿಯನ್ನು ತಿಳಿಸುತ್ತದೆ. **ಆತ್ಮಮಾತ್ರಾನುಭವ ವಿಷಯ**

---

1) ಯಂಲಬ್ಧ್ವಾಚಾಽಪರಂ ಲಾಭಂ ಮನ್ಯತೇ ನಾಧಿಕಂತತಃ ।
ಯಸ್ಮಿನ್ ಸ್ಥಿತೋ ನದುಃಖೇನ ಗುರುಣಾಪಿ ವಿಚಾಲ್ಯತೇ ॥ ಭಗವದ್ಗೀತೆ 6-22

ಈ ಕೈವಲ್ಯ ಪುರುಷಾರ್ಥವನ್ನು ಪಡೆದವನು ಇದಕ್ಕೆ ಮೇಲಾದ ಆನಂದವಿಲ್ಲವೆಂದೂ, ಈ ಕೈವಲ್ಯಾನಂದಾನುಭವದಲ್ಲಿ ಇರುವವನಿಗೆ ಸತ್ಪುತ್ರ ಮರಣ ಶೋಕವು ಏರ್ಪಟ್ಟರೂ ಮನಸ್ಸು ಚಲಿಸುವುದಿಲ್ಲ.

2) ಭಕ್ತಿಯೋಗಸ್ತದರ್ಥೀಚೇತ್ ಸಮಗ್ರೈಶ್ವರ್ಯ ಸಾಧಕಃ ।
ಆತ್ಮಾರ್ಥೀಚೇತ್ ತ್ರಯೋಽಪ್ಯೇತೇ ತತ್ಕೈವಲ್ಯಸ್ಯ ಸಾಧಕಾಃ ॥

ಗೀತಾರ್ಥ ಸಂಗ್ರಹ (27) ಪೂರ್ಣವಾದ ಐಶ್ವರ್ಯದಲ್ಲಿ ಆಸೆಯುಳ್ಳವನಿಗೆ ಭಕ್ತಿಯೋಗವು ಆ ಐಶ್ವರ್ಯವನ್ನು ಸಾಧಿಸಿಕೊಡುತ್ತದೆ. ಕರ್ಮಜ್ಞಾನ ಭಕ್ತಿಯೋಗಗಳು, ಸ್ವಾತ್ಮಾನುಭವದಲ್ಲಿ ಆಸೆಯುಳ್ಳವನಿಗೆ ಆ ಜೀವಾತ್ಮಾನುಭವವಾದ ಕೈವಲ್ಯವನ್ನು ಸಾಧಿಸಿ ಕೊಡುತ್ತವೆ.

**ನುಭವ ವಿಷಯಮಾಹ 3 "ಸ್ವಾತ್ಮಾನುಭೂತಿರಿತಿ ಯಾಕಿಲ ಮುಕ್ತಿರುಕ್ತಾ" ಇತ್ಯಾದಿಹಳಿಲ್ ಪ್ರಯುಕ್ತಮಾನ ಮುಕ್ತಿಶಬ್ದಮುಮ್ 4) "ವಿಗತೇಚ್ಛಾಭಯಕ್ರೋಧೋಯಸ್ಸದಾ ಮುಕ್ತ ಏವಸಃ"ಇತ್ಯಾದಿ ಹಳಿಲ್‌ಪೋಲೇ ನಿರ್ವಾಹ್ಯಮ್. 5) "ಜರಾಮರಣ ಮೋಕ್ಷಾಯ" ಎನ್ರದುವುಮ್ ದೇವರ್‌ಹಳುಡೈಯ ಅಮರತ್ವವ್ಯಪದೇಶಮ್ಪೋಲೇ ಆಪೇಕ್ಷಿಕಮ್. ಕ್ರಮೇಣ ಮುಕ್ತಿಪರ್ಯಂತಮಾಮ್ ವಿಷಯತ್ತೈಪ್ಪತ್ತಿಚ್ಚೊಲ್ಲುಹಿರದಾಹವುಮಾಮ್. ಇಪ್ಪಡಿ ವಿಭವವ್ಯೂಹ ಸಾಲೋಕ್ಯಾದಿ ಮಾತ್ರತ್ತಿಲ್ ಮುಕ್ತಿ ಶಬ್ದಮುಮ್ ನಿರ್ವಾಹ್ಯಮ್.**

---

**ಮಾಹ** ಇತ್ಯಾದಿ – ಆತ್ಮ ಮಾತ್ರದ ಅನುಭವ ವಿಷಯವಾಗಿ, (3) **"ಸ್ವಾತ್ಮಾನುಭೂತಿರಿತಿಯಾಕಿಲಮುಕ್ತಿರುಕ್ತಾ"** ಇತ್ಯಾದಿಗಳಲ್ಲಿ ಪ್ರಯುಕ್ತವಾದ ಮುಕ್ತಿಶಬ್ದವೂ, (4) **ವಿಗತೇಚ್ಛಾಭಯಕ್ರೋಧೋ ಯಸ್ಸದಾ ಮುಕ್ತಏವಸಃ"** ಇತ್ಯಾದಿಗಳಲ್ಲಿ ಪ್ರಯೋಗಿಸಿರುವಂತೆ ನಿರ್ವಹಿಸಬೇಕು. ಆ ಸ್ಥಳದಲ್ಲಿ ಮುಕ್ತ ಶಬ್ದಕ್ಕೆ ಕೆಲವು ಪಾಪಗಳನ್ನು ಮಾತ್ರ ಹೋಗಲಾಡಿಸುತ್ತದೆ ಎಂದು ಅರ್ಥ ಮಾಡುವಂತೆ ಆತ್ಮಾನುಭೂತಿಯನ್ನು ಮುಕ್ತಿ ಶಬ್ದದಿಂದ ವ್ಯವಹರಿಸಿರುವುದೂ ಅದೇ ಅರ್ಥದಲ್ಲಿ ಎಂದು ತಾತ್ಪರ್ಯ. (5) **'ಜರಾಮರಣ ಮೋಕ್ಷಾಯ'**– ಮುದಿತನ, ಮರಣ ಇವುಗಳ ಮೋಕ್ಷಕ್ಕಾಗಿ ಅಂದರೆ ಇವು ಉಂಟಾಗದಿರಲು, ಎಂಬಲ್ಲಿ ಮೋಕ್ಷ ಶಬ್ದವು ದೇವತೆಗಳ ಅಮರತ್ವದ ಹಾಗೆ ಆಪೇಕ್ಷಿಕವಾಗಿ ನಿರ್ವಾಹ್ಯವು. **'ಕ್ರಮೇಣಮುಕ್ತಿಪರ್ಯಂತಮಾಮ್** ಇತ್ಯಾದಿ – ಕ್ರಮವಾಗಿ ಮುಕ್ತಿ ಪರ್ಯಂತವಾಗಿ ಉಂಟಾಗುವ ವಿಷಯವನ್ನು ಕುರಿತು ಹೇಳುವುದಾಗಿಯೂ ಅರ್ಥ ಮಾಡಬಹುದು. ಇಪ್ಪಡಿ ಇತ್ಯಾದಿ – ಹೀಗೆ ವಿಭವ ವ್ಯೂಹ ಸಾಲೋಕ್ಯಾದಿ ಮಾತ್ರದಲ್ಲಿಯೂ ಮುಕ್ತಿ ಶಬ್ದವು

---

3) ಭೋಗಾ ಇಮೇ ವಿಧಿಶಿವಾದಿ ಪದಂಚ ಕಿಂಚ ಸ್ವಾತ್ಮಾನುಭೂತಿರಿತಿ ಯಾ ಕಿಲ ಮುಕ್ತಿರುಕ್ತಾ ।
ಸರ್ವಂ ತದೂಷ ಜಲಜೋಷ ಮಹಂ ಜುಷೇಯ ಹಸ್ತ್ಯದ್ರಿನಾಥ ತವ ದಾಸ್ಯ ಮಹಾ ರಸಜ್ಞಃ ॥

ವರದರಾಜಸ್ತವ (81) – ಚತುರ್ಮುಖ ಬ್ರಹ್ಮದೇವ, ಪರಮಶಿವ, ಮಹೇಂದ್ರ ಮೊದಲಾದವರ ಐಶ್ವರ್ಯರೂಪ ಭೋಗವೂ, ಜನ್ಮ, ಜರಾ, ಮರಣಗಳಿಂದ ಮುಕ್ತವಾದ ಕೇವಲ ಸ್ವಾತ್ಮಾನುಭವ ರೂಪವಾದ ಮುಕ್ತಿಯೂ (ಕೈವಲ್ಯವೂ) ಸಹ ಎಲೈ ಹಸ್ತ್ಯದ್ರಿನಾಥ ನಿನ್ನ ಕೈಂಕರ್ಯ ರೂಪ ಮಹಾರಸವನ್ನು ರುಚಿ ನೋಡಿದ ನಾನು, ಊಷಜಲಜೋಷಂ - ಉಪ್ಪು ನೀರನ್ನು ರುಚಿ ನೋಡಿದಂತೆ, ಜುಷೇಯ – ಅಸಾರವಾಗಿ ತಿಳಿಯುತ್ತೇನೆ.

4) ಯತೇಂದ್ರಿಯ ಮನೋಬುದ್ಧಿಃ ಮುನಿರ್ಮೋಕ್ಷ ಪರಾಯಣಃ ।
ವಿಗತೇಚ್ಛಾಭಯ ಕ್ರೋಧೋ ಯಸ್ಸದಾ ಮುಕ್ತ ಏವಸಃ ॥

ಇಂದ್ರಿಯಗಳು, ಮನಸ್ಸು, ಬುದ್ಧಿ ಮೊದಲಾದವುಗಳನ್ನು ಅಡಗಿಸಿಕೊಂಡು, ಮನನ ಶೀಲನಾಗಿ ಸ್ವಾತ್ಮಾನುಭವ ರೂಪ ಮೋಕ್ಷ ಪರಾಯಣನಾಗಿ, ಇಚ್ಛಾಭಯ ಕ್ರೋಧಗಳಿಲ್ಲದೆ ಇರುವವನು ಪ್ರಾಪ್ಯ ದಶೆಯಲ್ಲಲ್ಲದೆ, ಉಪಾಯ ದಶೆಯಲ್ಲಿಯೂ ಮುಕ್ತ ತುಲ್ಯನಾಗುತ್ತಾನೆ.

5) ಜರಾಮರಣ ಮೋಕ್ಷಾಯ ಮಾಮಾಶ್ರಿತ್ಯ ಯತಂತಿಯೇ ।
ತೇ ಬ್ರಹ್ಮ ತದ್ವಿದುಃಕೃತ್ಸ್ನಂ ಅಧ್ಯಾತ್ಮಂ ಕರ್ಮಚಾಖಿಲಮ್ ॥

ಗೀತೆ (7-29) ಜರಾಮರಣಗಳಿಲ್ಲದೆ ಅಂದರೆ ಪ್ರಕೃತಿ ವಿಯುಕ್ತ ಆತ್ಮ ಸ್ವರೂಪವನ್ನು ಸಾಕ್ಷಾತ್ಕರಿಸಲು ನನ್ನನ್ನು ಯಾರು ಉಪಾಸನೆ ಮಾಡುತ್ತಾರೆಯೋ ಅವರು ಆ ಬ್ರಹ್ಮ – ಶುದ್ಧ ಜೀವ ಸ್ವರೂಪವನ್ನೂ, ಪ್ರಕೃತಿ ಸ್ವರೂ ಪವನ್ನೂ, ಶರೀರೋತ್ಪತ್ತಿಗೆ ಅವಶ್ಯವಾದ ರೇತೋ ವಿಸರ್ಗವಾದ ಕರ್ಮವನ್ನೂ ತಿಳಿದವರು.

1) **ಲೋಕೇಷುವಿಷ್ಣೋರ್ನಿವಸನ್ತಿಕೇಚಿ ತ್ಸಮೀಪಮೃಚ್ಛನ್ತಿ ಚ ಕೇಚಿದನ್ಯೇ ।**
**ಅನ್ಯೇತುರೂಪಂ ಸದೃಶಂ ಭಜನ್ತೇ ಸಾಯುಜ್ಯಮನ್ಯೇ ಸತುಮೋಕ್ಷಉಕ್ತಃ" ಎನ್ರು**
**ನಿಯಮಿಕ್ಕಪ್ಪಟ್ಟದಿರೇ. ಇದಿಲ್ ಶೊನ್ನ ಸಾಯುಜ್ಯಮ್ ಪರಮಪದತ್ತಿಲ್ ಶೆನ್ರವನುಡೈಯಭೋಗಸಾಮ್ಯಮ್ ಕೇವಲಾತ್ಮಾನುಭವಮ್ ನಿತ್ಯಮನ್ರೆನ್ರು ಮಿಡಮುಮ್, ಸಾಕ್ಷಾನ್ಮೋಕ್ಷ ಮನ್ರೆನ್ರು ಮಿಡಮುಮ್,**

2) ಚತುರ್ವಿಧಾ ಮಮಜನಾ ಭಕ್ತಾ ಏವ ಹಿ ತೇ ಶ್ರುತಾಃ ।
ತೇಷಾ ಮೇಕಾನ್ತಿನಃ ಶ್ರೇಷ್ಠಾ ಸ್ತೇಚೈವಾನನ್ಯದೇವತಾಃ ।
ಅಹಮೇವ ಗತಿಸ್ತೇಷಾಂ ನಿರಾಶೀಃ ಕರ್ಮ ಕಾರಿಣಾಮ್ ।
ಯೇತು ಶಿಷ್ಟಾಸ್ತ್ರಯೋ ಭಕ್ತಾಃ ಫಲಕಾಮಾ ಹಿ ತೇ ಮತಾಃ ।
ಸರ್ವೇ ಚ್ಯವನ ಧರ್ಮಾಣಃ ಪ್ರತಿಬುದ್ಧಸ್ತು ಮೋಕ್ಷಭಾಕ್ ।" ಎನ್ಗಿರ ವಚನತ್ತಾಲೇ ಸಿದ್ಧಮ್.

ಕೈವಲ್ಯ ನಿಷ್ಠೋಽಪಿ ಕ್ರಮೇಣ ಮುಕ್ತೋಭವತೀತ್ಯಾಹ.

3) **"ಮುಚ್ಯೇತಾರ್ತಸ್ತಥಾ ರೋಗಾತ್ ಶ್ರುತ್ವೇ ಮಾ ಮಾದಿತಃ ಕಥಾಮ್ ।**
**ಜಿಜ್ಞಾಸುರ್ಲಭತೇ ಭಕ್ತಿಂ ಭಕ್ತೋ ಭಕ್ತಗತಿಂ ಲಭೇತ್ ॥**

---

**ನಿರ್ವಾಹ್ಯಮ್** – ನಿರ್ವಹಿಸತಕ್ಕದ್ದು. (1) **ಲೋಕೇಷು ವಿಷ್ಣೋ ರ್ನಿವಸಂತಿಕೇಚಿತ್** ಇತ್ಯಾದಿ – ಕೆಲವರು ವಿಷ್ಣು ಲೋಕದಲ್ಲಿ ವಾಸವಾಗಿದ್ದಾರೆ, ಕೆಲವರು ವಿಷ್ಣುಲೋಕಕ್ಕೆ ಸಮೀಪದಲ್ಲಿದ್ದಾರೆ, ಮತ್ತೆ ಕೆಲವರು ಭಗವಂತನಿಗೆ ಸದೃಶವಾದ ರೂಪವನ್ನು ಹೊಂದಿದ್ದಾರೆ. ಈ ಸಾಲೋಕ್ಯ, ಸಾಮೀಪ್ಯ ಸಾದೃಶ್ಯಾದಿಗಳೆಲ್ಲಾ ಸಾಯುಜ್ಯ ಶಬ್ದಾರ್ಥವಲ್ಲ. **ಸಾಯುಜ್ಯಮನ್ಯೇ ಸತುಮೋಕ್ಷಉಕ್ತಃ** – ಮತ್ತೆ ಕೆಲವರು ಸಾಯುಜ್ಯವನ್ನು ಪಡೆದಿದ್ದಾರೆ - ಸಯುಜೋಭಾವಃ ಸಾಯುಜ್ಯಮ್ - ಸಮಾನ ಭೋಗವತ್ವ. ಇದೇ ಮೋಕ್ಷವೆಂದರ್ಥವಾಗಿ **ನಿಯಮಿಕ್ಕಪಟ್ಟದಿರೇ** - ವ್ಯವಸ್ಥೆಗೊಳಿಸಲ್ಪಟ್ಟದೆ. **ಇದಿಲ್‌ಶೊನ್ನಸಾಯುಜ್ಯಮ್** ಇತ್ಯಾದಿ – ಇಲ್ಲಿ ಹೇಳಿದ **ಸಾಯುಜ್ಯವು** ಪರಮ ಪದವನ್ನು ಹೊಂದಿದವನು ಭಗವಂತನಿಗೆ ಸಮಾನವಾದ ಭೋಗಸಾಮ್ಯವನ್ನು ಪಡೆಯುವುದೆಂದರ್ಥ. **ಕೇವಲಾತ್ಮಾನುಭವಮ್** ಇತ್ಯಾದಿ-ಕೇವಲಾತ್ಮಾನುಭವವು ನಿತ್ಯವಲ್ಲವೆಂಬುದೂ, ಸಾಕ್ಷಾನ್ಮೋಕ್ಷವಲ್ಲವೆಂಬುದೂ, (2) **ಚತುರ್ವಿಧಾಭಜಂತೇಮಾಮ್** ಇತ್ಯಾದಿಯಾಗಿ ಹೇಳುವ ವಚನದಲ್ಲಿ ಚ್ಯವನ ಧರ್ಮವನ್ನುಳ್ಳವರು – ಅಂದರೆ ಆಯಾಯಾ ಸ್ಥಾನದಿಂದ ಜಾರಿಕೊಳ್ಳತಕ್ಕವರು ಎಂದು ಹೇಳಿರುವ ವಚನದಿಂದ ಸಿದ್ಧ. ಕೇವಲಾತ್ಮಾನುಭವವು ಅನಿತ್ಯ – ಶಾಶ್ವತವಾದದ್ದಲ್ಲ. **ಸರ್ವೇಚ ವನ ಧರ್ಮಾಣಃ** ಎಂದು ಹೇಳಿರುತ್ತದೆ. ಇವರುಗಳ ಮಧ್ಯೆ ಏಕಾಂತಿಗಳು–ಭಗವಂತನನ್ನೇ ಉಪಾಯವನ್ನಾಗಿಯೂ ಪ್ರಾಪ್ಯನನ್ನಾಗಿಯೂ ನಿಶ್ಚಯಿಸಿರುವವರು. ಇವರುಗಳು **ಅನನ್ಯದೈವತಕರು.** ಬೇರೆಯೊಬ್ಬನನ್ನು ಪರದೇವತೆಯನ್ನಾಗಿ ಭಾವಿಸದವರು. **ನಿರಾಶೀಃ ಕರ್ಮಕಾರಿಣಾಂ** – ಪ್ರಯೋಜನಾಂತರದಲ್ಲಿ ಆಸೆಯಿಲ್ಲದೆ ಕೈಂಕರ್ಯವನ್ನು ಮಾಡುವ ಇವರಿಗೆ **ಅಹಮೇವಗತಿಃ** – ನಾನೇ ಗತಿ. **ಯೇತುಶಿಷ್ಟಾಃ** ಇತ್ಯಾದಿ – ಉಳಿದ ಮೂವರು ಭಕ್ತರು ನೂತನ ಐಶ್ವರ್ಯ, ಭ್ರಷ್ಟೈಶ್ವರ್ಯ, ಕೈವಲ್ಯಗಳಲ್ಲಿ ಆಸೆಯುಳ್ಳವರು. **ಪ್ರತಿಬುದ್ಧಸ್ತು** – ಭಗವಂತನೇ ಉಪಾಯ ಉಪೇಯವೆಂಬ ಬುದ್ಧಿಯುಳ್ಳ ವಿಲಕ್ಷಣಾಧಿಕಾರಿಯೇ, **ಮೋಕ್ಷಭಾಕ್** – ಮೋಕ್ಷವನ್ನು ಪಡೆಯತಕ್ಕವನು. ಇದರಿಂದ ಜಿಜ್ಞಾಸುವಿಗೆ ಫಲವಾಗಿ ಹೇಳಲ್ಪಟ್ಟ ಕೈವಲ್ಯವು ಮೋಕ್ಷವಲ್ಲವೆಂದು ಹೇಳಿದಂತಾಯಿತು. (3) **ಮುಚ್ಯೇತಾರ್ತಸ್ತಥಾರೋಗಾತ್** ಇತ್ಯಾದಿ – ಆರ್ತಃ – ನಷ್ಟವಾದ ದ್ರವ್ಯದಲ್ಲಿ ಅಭಿಲಾಷೆಯುಳ್ಳವನು ರೋಗಾತ್ – ಐಶ್ವರ್ಯವು ಧ್ವಂಸವಾಯಿತಲ್ಲಾ ಎಂಬ ರೋಗದಿಂದ, ಶ್ರುತ್ವೇಮಾಮಾದಿತಃ ಕಥಾಮ್ – ಈ ಮಹಾಭಾರತ ಕಥೆಯನ್ನು ಮೊದಲಿನಿಂದ ಕೇಳಿದರೆ, ಮುಚ್ಯೇತ – ಬಿಡಲ್ಪಡುತ್ತಾನೆ. ನಷ್ಟೈಶ್ವರ್ಯವು ಲಭಿಸುತ್ತದೆ ಜಿಜ್ಞಾಸುಃ – ಕೈವಲ್ಯ ನಿಷ್ಠನು, ಭಕ್ತಿಂ

---

1) ಶ್ರೀಭಾಗವತ 2) ಭಾರತ ಶಾಂತಿ ಪರ್ವ 350-33-35 3) ಭಾರತ ಶಾಂತಿ ಪರ್ವ 348-81

**ಎನ್ಗ್ಯೈಯಾಲೇ ಶ್ರೀ ಗೀತೆಯಿಲ್ "ಜಿಜ್ಞಾಸುಃ" ಎನ್ಗಿರ ಆತ್ಮನಿಷ್ಠನುಮ್ ಕ್ರಮೇಣ ಜ್ಞಾನಿಯಾ ಮೆನ್ರು ಉಕ್ತಮಾಯಿತ್ತು.**

**ಭಗವದನುಭವಂ ನಿತ್ಯಮ್, ಕೈವಲ್ಯ ಮನಿತ್ಯಮಿತಿ ನಮ್ಮಾಳ್ವಾರ್ ಪಾಶುರ ಮುದಾಹರತಿ.**

**4) ಮನ್ನುರಿಲ್" ಎನ್ರು ಭಗವದನುಭವತ್ತೈ ನಿತ್ಯಮೆನ್ಗೈಯಾಲುಮ್ ಇದುಕ್ಕು ವ್ಯವಚ್ಛೇದ್ಯ ಮಾಹಚ್ಚೊಲ್ಲುಮ್ ಆತ್ಮಮಾತ್ರಾನುಭವಮ್ ನಿತ್ಯ ಮನ್ರೆನ್ನು ಮಿಡಂ ವ್ಯಂಜಿತಮ್. ಇದುಕ್ಕು 5) "ಇರುದಿಕೂಡಾ" ಇತ್ಯಾದಿಹಳಿಲ್ ನಾಶಮಿಲ್ಲೈ ಎನ್ಗಿರ ಪಾಶುರಮುಮ್, ಚಾತುರ್ಮಾಸ್ಯಾದಿ ಕರ್ಮ ಫಲ ವಿಶೇಷಙ್ಗಳಿಲ್ ಅಕ್ಷಯ್ಯತ್ವೋಕ್ತಿಪೋಲೇ "ಎನ್ನೈಯೂೞಿ" ಎನ್ಗಿರ ಅತಿಚಿರಕಾಲಸ್ಥಾಯಿತಾಭಿಪ್ರಾಯಮ್.**

---

ಲಭತೇ – ಕ್ರಮೇಣ ಭಗವಂತನಲ್ಲಿ ಪರಭಕ್ತಿಯನ್ನು **ಹೊಂದಿ,** ಭಕ್ತಗತಿಂಲಭೇತ್ – ಭಕ್ತರುಗಳಿಗೆ ಪ್ರಾಪ್ಯವಾದ ಮೋಕ್ಷವನ್ನು ಪಡೆಯುತ್ತಾನೆ, **ಎನ್‌ಹೈಯಾಲೇ** ಇತ್ಯಾದಿ - ಎಂದು ಹೇಳಿರುವುದರಿಂದ ಶ್ರೀ ಗೀತೆಯಲ್ಲಿ 'ಜಿಜ್ಞಾಸುಃ' ಎಂಬ ಆತ್ಮ ನಿಷ್ಠನೂ ಕ್ರಮೇಣ ಜ್ಞಾನಿಯಾಗುತ್ತಾನೆಂದು ಹೇಳಲ್ಪಟ್ಟಿತು. (4) **ಮನ್ನುರಿಲ್** – ನಿತ್ಯವಾಗಿರಲು ಆಸೆಪಟ್ಟರೆ, ಎಂದು ಭಗವದನುಭವವನ್ನು ನಿತ್ಯವೆಂದು ಹೇಳುವುದರಿಂದಲೂ, **ಇದುಕ್ಕು ವ್ಯವಚ್ಛೇದ್ಯ ಮಾಹಚ್ಚೊಲ್ಲುಮ್** ಇತ್ಯಾದಿ – ಇದಕ್ಕಿಂತ ಬೇರೆಯಾಗಿ ಹೇಳಲ್ಪಡುವ ಆತ್ಮಮಾತ್ರಾನುಭವವು ನಿತ್ಯವಲ್ಲವೆಂಬುದು ವ್ಯಂಜಿತಮ್ – ಪ್ರಕಾಶಿತವು. **ಇದುಕ್ಕು** (5) **ಇರುದಿಕೂಡಾ** ಇತ್ಯಾದಿ – ಈ ಆತ್ಮಾನುಭವಕ್ಕೆ ನಾಶವಿಲ್ಲವೆಂದು ಹೇಳುವ ಪಾಶುರವೂ **ಚಾತುರ್ಮಾಸ್ಯಾದಿ** ಇತ್ಯಾದಿ – "ಅಕ್ಷಯ್ಯಂ ಹವೈ ಚಾತುರ್ಮಾಸ್ಯ ಯಾಜಿನಃ ಸುಕೃತಂಭವತಿ", ಎಂದು ಚಾತುರ್ಮಾಸ್ಯಾದಿ ಕರ್ಮಗಳಿಗೆ ವಿಶೇಷವಾದ ಫಲವನ್ನು ಹೇಳುವಾಗ "ಅಕ್ಷಯ್ಯಮ್" – ಕ್ಷಯವಿಲ್ಲದುದು ಎಂಬ ಉಕ್ತಿಯ ಹಾಗೆ **ಎನ್ನೈಯೂೞಿ** – ಬಹಳ ಕಲ್ಪಗಳು ಎಂದು ಹೇಳಿರುವುದು ಈ ಸ್ವಾತ್ಮಾನುಭವ ರೂಪ ಕೈವಲ್ಯಾನಂದವು ಚಿರಕಾಲ ಸ್ಥಾಯಿ – ಬಹಳ ಕಾಲವಿರುತ್ತದೆ ಎಂಬ ಅಭಿಪ್ರಾಯದಿಂದ ಹೇಳಲ್ಪಟ್ಟಿದೆಯೇ ಹೊರತು ಇದು ನಿತ್ಯವಲ್ಲವೆಂದು ತಾತ್ಪರ್ಯ.

---

4) ಅತ್ತದು ಪತ್ತೆನಿಲ್, ಉಟ್ರದು ವೀಡುಯಿರ್
**ಶೆಟ್ರದು ಮನ್ನುರಿಲ್ ಅಟ್ರಿರೈ ಪತ್ತೇ ॥** ತಿರುವಾಯ್ ಮೊೞಿ (1 2-5)

ವಿಷಯ ಸುಖಗಳಲ್ಲಿ ಆಸೆಯನ್ನು ಬಿಟ್ಟವನಂತರ ಶರೀರಕ್ಕಿಂತ ಬೇರೆಯಾದ ಸುಖ ರೂಪವಾದ ಆತ್ಮಾನುಭವ ರೂಪ ಕೈವಲ್ಯಾನಂದವನ್ನು ಪಡೆ. ನಿತ್ಯವಾದ ಭಗವತ್ಪ್ರಾಪ್ತಿಯನ್ನು ಪಡೆಯಲು ಅಪೇಕ್ಷಿಸಿದರೆ ಆ ಕೈವಲ್ಯದಲ್ಲಿ ಆಸೆಯನ್ನು ಬಿಟ್ಟು, ಭಗವಂತನನ್ನು ಆಶ್ರಯಿಸು.

5) ಕುರುಹಾನೀಳಾ ಇರುದಿಕೂಡಾ ಎನ್ನೈಯೂೞಿ ಶಿರುಹಾ ಪೆರುಹಾ ಅಳವಿಲಿನ್ಬಮ್ ಶೇರ್ನ್ದಾಲುಮ್ ।
ಮರುಹಾಲಿನ್ರಿಮಾಯೋನ್ ಉನಕ್ಕೇ ಯಾಳಾಹುಮ್ ಶಿರುಕಾಲತ್ತೈಯೂರುಮೋ ಅಂದೋ ತೆರಿಯಿಲೇ ॥

ತಿರುವಾಯ್ ಮೊೞಿ (6-9-10) ಸ್ವರೂಪದಲ್ಲಿ ಸಂಕೋಚ ವಿಕಾಸವಿಲ್ಲದೆ, ಬಹಳ ಕಾಲ ನಾಶವಿಲ್ಲದ ಅಂದರೆ ಚಿರಕಾಲ ಸ್ಥಾಯಿಯಾದ, ಸ್ವಲ್ಪ, ಅಧಿಕವೆಂಬ ವ್ಯತ್ಯಾಸವಿಲ್ಲದೆ ಅಳತೆಯಿಲ್ಲದ ಸ್ವಾತ್ಮಾನುಭವ ರೂಪ ಆನಂದವನ್ನು ಪಡೆದರೂ, ಆಶ್ಚರ್ಯ ಗುಣಚೇಷ್ಟಿತನಾದ ಭಗವಂತನೇ ! ತೆರಿಯಿಲ್ - ನಿರೂಪಿಸಿ ನೋಡದರೆ, ಮರುಕಾಲಿನ್ರಿ - ಎರಡನೇ ಸಲವೆಂದು ಹೇಳದೆ, ಕ್ಷಣಮಾತ್ರ ವಿದ್ದರೂ, ನಿನಗೆ ದಾಸನಾಗಿದ್ದು ಅನುಭವಿಸುವ ಕೈಂಕರ್ಯ ರಸದ ಅತ್ಯಲ್ಪ ಕಾಲಕ್ಕೆ ಕೈವಲ್ಯಾನಂದವು ಸಮವಾಗುತ್ತದೆಯೇ. ಇಲ್ಲವೆಂದು ಹೇಳಬೇಕು.

**ಕೇವಲಾನಾಂ ಸ್ಥಾನಾತ್ ಬ್ರಹ್ಮೋಪಾಸಕಾನಾಂ ಸ್ಥಾನಂ ಭಿನ್ನಮಿತಿ ಪ್ರಮಾಣಂ ದರ್ಶಯತಿ**

1) ಯೋಗಿನಾ ಮಮೃತಂ ಸ್ಥಾನಂ ಸ್ವಾತ್ಮಸಂತೋಷ ಕಾರಿಣಾಮ್ . ಎನ್ರು ಇಸ್ವಾತ್ಮಾನುಭವಸ್ಥಾನವಿಶೇಷಮುಮ್ ಶೊಲ್ಲಪ್ಪಟ್ಟದು. ಇಸ್ಥಾನ ವಿಶೇಷಮುಮ್ ಪರಮಪದ ಮನ್ರೆನ್ನು ಮಿಡಮ್ ಇ ಪ್ರಕರಣಂತನ್ನಿಲೇ

2) ಏಕಾನ್ತಿ ನ ಸ್ಸದಾ ಬ್ರಹ್ಮಧ್ಯಾಯಿನೋ ಯೋಗಿನೋ ಹಿ ಯೇ ।
ತೇಷಾಂ ತತ್ಪರಮಂ ಸ್ಥಾನಂ ಯದ್ವೈ ಪಶ್ಯನ್ತಿಸೂರಯಃ ॥"

ಎನ್ರು ಭಗವತ್ಪ್ರಾಪ್ತಿ ಕಾಮನಾನ ಪರಮೈಕಾನ್ತಿಕ್ಕು ಸೂರಿದೃಶ್ಯಮಾನ ಸ್ಥಾನಾನ್ತರಮ್ ಶೊಲ್ಲುಹೈಯಾಲೇ ಸಿದ್ಧಮ್.

---

## ಕೈವಲ್ಯ ಲೋಕವು ಪ್ರಕೃತಿ ಮಂಡಲದೊಳಗೆ ಧ್ರುವ ಮಂಡಲಕ್ಕೆ ಮೇಲೆ ಇರುವ ಸ್ಥಾನ ವಿಶೇಷ

ಸ್ವಾತ್ಮಾನುಭವಸ್ಥಾನವು ಪರಮಪದದಲ್ಲಿ ಒಂದು ಮೂಲೆ ಎಂದು ಕೆಲವರು ಹೇಳುತ್ತಾರೆಯಲ್ಲಾ. ಪರಮಪದವು ನಿತ್ಯ ಸ್ಥಾನವಾದ್ದರಿಂದ, ಈ ಕೈವಲ್ಯ ಸ್ಥಾನವೂ ನಿತ್ಯವಾದ ಸ್ಥಾನವೇ ? ಎಂಬ ಆಕ್ಷೇಪಕ್ಕೆ ಸಮಾಧಾನವಾಗಿ **ಯೋಗಿನಾಮಮೃತಂ ಸ್ಥಾನಮ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ ಸ್ವಾತ್ಮಾನುಭವ ರೂಪ ಆನಂದವನ್ನುಳ್ಳ ಯೋಗಿಗಳಿಗೆ "ಅಮೃತಂ ಸ್ಥಾನಂ" ಎಂದು ಸ್ಥಾನ ವಿಶೇಷವು ಹೇಳಲ್ಪಟ್ಟಿದೆ. 'ಅಮೃತಂಸ್ಥಾನಂ' ಎಂಬುದು ಪರಮಪದವಲ್ಲವೆಂಬುದನ್ನು ಇಸ್ಥಾನ **ವಿಶೇಷಮ್** ಎಂದಾರಂಭಿಸಿ ವಿವರಿಸುತ್ತಾರೆ. ಈ ಸ್ಥಾನ ವಿಶೇಷವು ಪರಮಪದವಲ್ಲವೆಂಬುದು ಈ ಪ್ರಕರಣದಲ್ಲಿ ( ) ಏಕಾಂತಿನಸ್ಸದಾ ಬ್ರಹ್ಮಧ್ಯಾಯಿನೊ ಇತ್ಯಾದಿ – ಭಗವತ್ಪ್ರಾಪ್ತಿ ಕಾಮನಾದ ಪರಮೈ ಕಾಂತಿಗೆ ಅಂದರೆ ಸದಾ ಪರಬ್ರಹ್ಮಧ್ಯಾನ ಮಾಡುವ ಯೋಗಿಗಳಿಗೆ, ನಿತ್ಯಸೂರಿಗಳು ಸಾಕ್ಷಾತ್ಕರಿಸಿ ಕೊಂಡಿರುವ ಆ ಪರಮಸ್ಥಾನವೆಂದು ಪ್ರತ್ಯೇಕವಾಗಿ ಒಂದು ಸ್ಥಾನ ವಿಶೇಷವು ಹೇಳಲ್ಪಟ್ಟಿರುವುದರಿಂದ, ಕೈವಲ್ಯ ನಿಷ್ಠನಿಗೆ ಈ ಪರಮ ಸ್ಥಾನಕ್ಕಿಂತ ಬೇರೆಯಾದ ಸ್ಥಾನವೆಂಬುದು ಸಿದ್ಧ. ಮೇಲೂ ಈ ಪ್ರಕರಣದಲ್ಲಿ "ಪ್ರಾಜಾಪತ್ಯಂ ಬ್ರಾಹ್ಮಣಾನಾಂ" ಎಂದಾರಂಭಿಸಿ ಅರ್ವಾಚೀನವಾದ ಸ್ಥಾನ ವಿಶೇಷಗಳನ್ನು ಹೇಳಿ ಬರುತ್ತಾ, ಈ ಶ್ಲೋಕ ವ್ಯಾಖ್ಯಾನದಲ್ಲಿ ವಿಷ್ಣುಚಿತ್ತೀಯದಲ್ಲಿ, "ಯೋಗಿನಾಮಿತಿ ಆಶ್ರಮಿಷ್ವೇವ ಯೇಪ್ರತೀಕೋಪಾಸಕಾಃ ಯೋಗಿನಃ ತೇಷಾಂ ಅಮೃತ ಮಿತಿ, ವಿಷ್ಣು ಪದ್ಯಾಖ್ಯಂ, ಧ್ರುವಾದುಪರಿಸ್ಥಾನಂ, ಯತೋಗಂಗಾ ಪ್ರವಹತೀತಿ ವಕ್ಷ್ಯಮಾಣಂ", ಎಂದು, ಕೇವಲ ಜೀವನನ್ನು ಸ್ವರೂಪದಿಂದಲೋ ಬ್ರಹ್ಮದೃಷ್ಟಿಯಿಂದಲೋ ಉಪಾಸನೆ ಮಾಡುವ ಪ್ರಾಣ ವಿದ್ಯಾ ನಿಷ್ಠನಾದ ಪ್ರತೀಕೋಪಾಸಕನಿಗೆ ಸ್ಥಾನವೆಂದೂ, ಇದು ಧ್ರುವ ಮಂಡಲಕ್ಕೆ ಮೇಲೆ ಗಂಗೆಯು ಪ್ರವಹಿಸಿ ಬರುವ ಸ್ಥಾನವೆಂದೂ ಹೇಳಿರುವುದರಿಂದ, ಪ್ರಕೃತಿ ಮಂಡಲದೊಳಗಿರುವ ಈ ಕೈವಲ್ಯ ಲೋಕವು, ಪರಮಪದವಾಗಲಾರದು. ಈ ಕೈವಲ್ಯ ಲೋಕವು ಅನಿತ್ಯ. ಪರಮಪದದಂತೆ ಶಾಶ್ವತವಲ್ಲ.

---

1)

2) ವಿಷ್ಣು ಪುರಾಣ 1-6-39 ಸದಾ ಪರಬ್ರಹ್ಮನನ್ನು ಧ್ಯಾನ ಮಾಡುವ ಯೋಗಿಗಳಿಗೆ ಆ "ಪರಮಂಸ್ಥಾನಂ" ಎಂದು ಹೇಳಲ್ಪಡುವ ಪರಮಪದ ಸ್ಥಾನವು ಲಭಿಸುತ್ತದೆ. ಆ ಪರಮಪದವು ಸೂರಿ ದೃಶ್ಯವಾದ ಸ್ಥಾನ ವಿಶೇಷ. ಅಂದರೆ ನಿತ್ಯಸೂರಿಗಳು ಸದಾ ಅಲ್ಲಿ ವಾಸ ಮಾಡುತ್ತಾ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಸಾಮಗಾನ ಮಾಡುತ್ತಿರುವ ಸ್ಥಾನ ವಿಶೇಷವು ಅದು. ಪುರುಷ ಸೂಕ್ತದಲ್ಲಿ ಈ ಸ್ಥಾನ ವಿಶೇಷವು "ನಾಕಂ ಮಹಿಮಾನಃ" ಎಂದು ಹೇಳಲ್ಪಟ್ಟು "ಯತ್ರಪೂರ್ವೇ ಸಾಧ್ಯಾಃ ಸಂತಿದೇವಾಃ" ಎಂದು ನಿತ್ಯಸೂರಿಗಳು ಅಲ್ಲಿ ವಾಸಮಾಡುತ್ತಿದ್ದಾರೆಯೆಂದು ಹೇಳಲ್ಪಟ್ಟಿದೆ.

ಪಂಚಾಗ್ನಿ ವಿದ್ಯಾದಿಹಳಿಲ್ ಚೊನ್ನ ಬ್ರಹ್ಮಾತ್ಮಕ ಸ್ವಾತ್ಮಾನುಸಂಧಾನಮ್ ಪಣ್ಣುವಾರ್ಕು ಭಾಷ್ಯಾದಿಹಳಿಲೇ ಅರ್ಚಿರಾದಿಗತಿಯುಮ್ ಬ್ರಹ್ಮಪ್ರಾಪ್ತಿಯುಮ್ ಶೊಲ್ಲಪ್ಪಟ್ಟದು. ಆಹೈಯಾಲ್ ಇಪ್ಪಂಚಾಗ್ನಿ ವಿದ್ಯಾನಿಷ್ಠರ್ಕು ಆತ್ಮಮಾತ್ರಾನುಭವರೂಪಮಾನ ಅವಾಂತರ ಫಲಮ್ ವನ್ದಾಲುಮ್ ಮಧು ವಿದ್ಯಾನ್ಯಾಯತ್ತಾಲೇ ಬ್ರಹ್ಮಪ್ರಾಪ್ತಿ ಪರ್ಯನ್ತಮಾಯ್ ವಿಡುಮ್.

ಕೇವಲಜೀವಾತ್ಮೋಪಾಸಕಾನಾಂ ನ ಬ್ರಹ್ಮಪ್ರಾಪ್ತಿಃ

ಪ್ರಕೃತಿ ಸಂಸೃಷ್ಟಮಾಯಾದಲ್, ಪ್ರಕೃತಿವಿಯುಕ್ತಮಾಯಾದಲ್, ಇರುಕ್ಕುಮ್ ಇವ್ವಾತ್ಮವಸ್ತುವೈ ಸ್ವರೂಪೇಣವಾದಲ್ ಬ್ರಹ್ಮದೃಷ್ಟಿಯಾಲೇ ಯಾದಲ್ ಪಣ್ಣುಮ್ ಅನುಸಂಧಾನಂಗಳ್ ನಾಲುಕ್ಕುಮ್ ನಾಮಾದ್ಯುಪಾಸನಙ್ಗಳುಕ್ಕುಪ್ಪೋಲೇ ಅರ್ಚಿರಾದಿಗತಿಯುಮ್ ಬ್ರಹ್ಮಪ್ರಾಪ್ತಿಯುಮ್ ಇಲ್ಲೈಯೆನ್ರು ಮಿಂಡತ್ತೈ "ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣಃ ಉಭಯಥಾಚ ದೋಷಾತ್ ತತ್ಕ್ರ

---

ಪಂಚಾಗ್ನಿ ವಿದ್ಯಾನಿಷ್ಠನಿಗೆ ಕೈವಲ್ಯ ಪ್ರಾಪ್ತಿ ಪೂರ್ವಕ ಮೋಕ್ಷ ಪ್ರಾಪ್ತಿ.

ಹಾಗಾದರೆ ಬ್ರಹ್ಮಾತ್ಮಕ ಸ್ವಾತ್ಮಾನು ಸಂಧಾನ ರೂಪವಾದ ಪಂಚಾಗ್ನಿ ವಿದ್ಯಾನಿಷ್ಠನಿಗೆ ವಿಘ್ನವಾಗಿ ಬರುವ ಸ್ವಾತ್ಮಾನುಭವವು "ಯೋಗಿನಾಮಮೃತಂಸ್ಥಾನಂ" ಎಂದು ಹೇಳಲ್ಪಟ್ಟ ಈ ಕೈವಲ್ಯ ಲೋಕದಲ್ಲಿಯೇ ಏರ್ಪಡುತ್ತದೆ ಎಂದು ಹೇಳಬೇಕಲ್ಲವೇ. ಈ ಲೋಕವು ಅನಿತ್ಯವೆಂದರೆ ಪಂಚಾಗ್ನಿ ವಿದ್ಯಾನಿಷ್ಠನಿಗೆ ಬರುವ ಫಲವು ನಿತ್ಯವೆಂದು ಹೇಳಿರುವುದು ವಿರೋಧಿಸುತ್ತದೆಯಲ್ಲಾ ಎಂದು ಆಕ್ಷೇಪ ಮಾಡಿಕೊಂಡು ಇದಕ್ಕೆ **ಪಂಚಾಗ್ನಿ ವಿದ್ಯಾದಿಹಳಿಲ್ ಚೊನ್ನ** ಎಂದಾರಂಭಿಸಿ ಸಮಾಧಾನವನ್ನು ಹೇಳುತ್ತಾರೆ. ಅದಾಗಿ ಪಂಚಾಗ್ನಿ ವಿದ್ಯೆ ಮೊದಲಾದವುಗಳಲ್ಲಿ ಹೇಳಲ್ಪಟ್ಟ ಬ್ರಹ್ಮಾತ್ಮಕ ಸ್ವಾತ್ಮಾನು ಸಂಧಾನವನ್ನು ಮಾಡುವವರಿಗೆ ಭಾಷ್ಯಾದಿಗಳಲ್ಲಿ ಅರ್ಚಿರಾದಿಗತಿಯೂ ಬ್ರಹ್ಮಪ್ರಾಪ್ತಿಯೂ ಹೇಳಲ್ಪಟ್ಟದೆ. **ಆಹೈಯಾಲ್** ಇತ್ಯಾದಿ – ಆದ್ದರಿಂದ ಪಂಚಾಗ್ನಿ ವಿದ್ಯಾನಿಷ್ಠರಿಗೆ ಆತ್ಮಮಾತ್ರಾನುಭವರೂಪ ಅವಾಂತರ ಫಲವು ಏರ್ಪಟ್ಟರೂ, ಮಧು ವಿದ್ಯಾ ನ್ಯಾಯದಂತೆ, ಪಂಚಾಗ್ನಿ ವಿದ್ಯೆಯಲ್ಲಿ ಹೇಳಿರುವಂತೆ "ಅರ್ಚಿಷಮೇವ ತೇಸರ್ವೇಗಚ್ಛಂತಿ .... ಸ ಏನಾನ್ ಬ್ರಹ್ಮ ಗಮಯತಿ", ಎಂದು ಹೇಳಿದ ಬ್ರಹ್ಮ ಪ್ರಾಪ್ತಿ ರೂಪ ನಿತ್ಯಫಲವು ಸಿದ್ಧಿಸುವುದರಿಂದ ಯಾವ ವಿರೋಧವೂ ಇಲ್ಲ. ಮಧು ವಿದ್ಯಾನ್ಯಾಯವು ಯಾವುದೆಂದರೆ, "ಅಸೌವಾ ಆದಿತ್ಯೋ ದೇವ ಮಧು" ಎಂದು ಸೂರ್ಯನನ್ನು **"ಮಧು"**ವನ್ನಾಗಿ ಉಪಾಸನೆ ಮಾಡುವ ಮಧುವಿದ್ಯಾನಿಷ್ಠನಿಗೆ ವಸ್ವಾದಿಪದ ಪ್ರಾಪ್ತಿ ರೂಪ ಅವಾಂತರ ಫಲವು **ಅನಿತ್ಯವಾಗಿ ಏರ್ಪಟ್ಟು**, ಅನಂತರ, "ಅಥತತ ಏತ್ಯ, ನೈವೋದೇತಾ ನಾಸ್ತಮೇತ, ಏಕಲ ಏವ ಮಧ್ಯೇಸ್ಥಾತಾ" **ಎಂದು** ಹೇಳಲ್ಪಟ್ಟ ಬ್ರಹ್ಮಪ್ರಾಪ್ತಿರೂಪ ನಿತ್ಯ ಫಲ ಸಿದ್ಧಿಯುಉಂಟಾಗುತ್ತದೆ ಎಂಬುದು ಅದೇರೀತಿಯಲ್ಲಿ ಪಂಚಾಗ್ನಿ ವಿದ್ಯಾನಿಷ್ಠನಿಗೂ ಅನಿತ್ಯವಾದ ಕೈವಲ್ಯ ಲೋಕ ಪ್ರಾಪ್ತಿಯು ಏರ್ಪಟ್ಟು ಸ್ವಾತ್ಮಾನುಭವ ರೂಪ ಆನಂದವು ಲಭಿಸಿ, ಅನಂತರ ಪರಮ ಪದ ಪ್ರಾಪ್ತಿಯು ಲಭಿಸುತ್ತದೆ. ಆದ್ದರಿಂದ ಕೈವಲ್ಯ ಸ್ಥಾನವೂ ಕೈವಲ್ಯಾನುಭವವೂ ಅನಿತ್ಯವೆಂಬ ಸಿದ್ಧಾಂತಕ್ಕೆ ಯಾವ ಭಂಗವೂ ಇಲ್ಲವೆಂದು ತಾತ್ಪರ್ಯ.

ಕೇವಲ ಜೀವನನ್ನು ಉಪಾಸನೆ ಮಾಡುವವನಿಗೆ ಬ್ರಹ್ಮ ಪ್ರಾಪ್ತಿಯಿಲ್ಲ.

ಮೇಲೆ ಹೇಳಿದಂತೆ ವಿಷ್ಣು ಪದವೆಂಬ ಕೈವಲ್ಯ ಸ್ಥಾನದಲ್ಲಿ ಸ್ವಾತ್ಮಾನುಭವವನ್ನು ಮಾಡುವ ಕೇವಲರುಗಳಲ್ಲಿ ಪಂಚಾಗ್ನಿ ವಿದ್ಯಾ ನಿಷ್ಠನಾದ ಕೇವಲನಿಗೆ ಆ ಅನುಭವವು ಮುಕ್ತಿ ಪರ್ಯಂತವೆಂದರೆ, ಪ್ರಾಣ ವಿದ್ಯಾನಿಷ್ಠರುಗಳಾಗಿ ಸ್ವಾತ್ಮಾನುಭವವನ್ನು ಮಾಡುವ ಕೇವಲರಿಗೆ ಆ ಬ್ರಹ್ಮ ಪ್ರಾಪ್ತಿಯು ಇಲ್ಲವೇ ಎಂದರೆ, ಇಲ್ಲವೆಂದು ಸಿದ್ಧಾಂತವನ್ನು ಪ್ರಕೃತಿ **ಸಂಸೃಷ್ಟಮಾಯಾದಲ್** ಎಂದಾರಂಭಿಸಿ ಆಚಾರ್ಯರು ಕೃಪೆಮಾಡಿ ಹೇಳುತ್ತಾರೆ. ಅದಾಗಿ ಪ್ರಕೃತಿ ಸಂಸೃಷ್ಟ–ಪ್ರಕೃತಿಯೊಡನೆ ಕೂಡಿದವನಾಗಿಯಾಗಲಿ, ಪ್ರಕೃತಿ ಸಂಬಂಧವಿಲ್ಲದೆ

**ತುಶ್ಚ" ಎನ್ನಿರ ಸೂತ್ರತ್ತಿಲೇಯುರುಳಿಚ್ಚೆಯ್‌ದಾರ್. "ಶ್ರುತೋಪನಿಷತ್ಕಗತ್ಯಭಿದಾನಾಚ್ಚ" ಎನ್ನಿರಸೂತ್ರ ತ್ತಿಲುವ್ ಒರುವಿದ್ಯಾ ವಿಶೇಷತ್ತಿಲ್ ಉಪಾಸ್ಯನ್ನೈ ಪರಮಾತ್ಮಾವೆನ್ನಕ್ಕು ಅರ್ಚಿರಾದಿಗತಿಶೊನ್ನದೈ ಹೇತುವಾಹಕ್ಕೊಂಡು ಸಾಧಿಕ್ಕೈಯಾಲೇ ಜೀವಮಾತ್ರೋಪಾಸನತ್ತುಕ್ಕು ಅರ್ಚಿರಾದಿಗತಿಯಿಲ್ಲೈ ಎನ್ನು ಮಿಡಮ್ ಸಿದ್ಧಮಾಯಿತ್ತು.**

**ಆಹೈಯಾಲ್ ಬ್ರಹ್ಮಪ್ರಾಪ್ತಿಯಿಲ್ಲಾದಾರ್ಕ್ಕು ಇಶ್ಲೋಕತ್ತಿಲ್ ಚೊಲ್ಲುಹಿರ ಸರ್ವಪಾಪ ನಿವೃತ್ತಿ**

---

ಶುದ್ಧನಾಗಿಯಾಗಲಿ ಇರುವ ಆತ್ಮ ವಸ್ತುವನ್ನು, ಸ್ವರೂಪದಿಂದಾಗಲಿ ಬ್ರಹ್ಮದೃಷ್ಟಿಯಿಂದಾಗಲಿ ಮಾಡುವ ನಾಲ್ಕು ವಿಧ ಅನುಸಂಧಾನಗಳಿಗೂ, "ನಾಮಬ್ರಹ್ಮೇತ್ಯುಪಾಸೀತ" ಎಂಬ ಅಚೇತನವಾದ ನಾಮವನ್ನು ಬ್ರಹ್ಮವೆಂದು ಉಪಾಸನೆ ಮಾಡುವ ರೀತಿಯಲ್ಲಿ, ಅರ್ಚಿರಾದಿಗತಿಯೂ ಬ್ರಹ್ಮ ಪ್ರಾಪ್ತಿಯೂ ಇಲ್ಲವೆಂಬುದನ್ನು ಸೂತ್ರಕಾರರು 'ಅಪ್ರತೀಕಾಲಂಬನಾನ್ನಯತೀತಿ' ಎಂಬ ಸೂತ್ರದಲ್ಲಿ ಹೇಳಿರುತ್ತಾರೆ.

ಆದಾಗಿ ಆತ್ಮೋಪಾಸನೆಯನ್ನು ಮಾಡುವವರು ಐದು ವಿಧ. ಸ್ವಾತ್ಮ ವಿಶೇಷ್ಯಕ ಬ್ರಹ್ಮಾತ್ಮಕತ್ವ ಪ್ರಕಾರಕನು ಪಂಚಾಗ್ನಿ ವಿದ್ಯಾನಿಷ್ಠನು. ಈ ಪಂಚಾಗ್ನಿ ವಿದ್ಯೆಯಲ್ಲಿ ಪರಿಪೂರ್ಣವಾದ ಬ್ರಹ್ಮವೇ ಸ್ವಾತ್ಮಾವಿಗೆ ಪ್ರಕಾರವಾಗಿ ತೋರುವುದರಿಂದ ಇದೂ ಬ್ರಹ್ಮೋಪಾಸನ ರೂಪವಾದದ್ದು. ವೇದಾಂತ ಸಾರದಲ್ಲಿ ಭಾಷ್ಯಕಾರರು, "ಉಭಯೋಽಪಿಹಿ ಪರಿಪೂರ್ಣ ಬ್ರಹ್ಮೋಪಾಸತೇ ಮುಖಭೇದೇನ" ಎಂದು ಹೇಳಿರುತ್ತಾರೆ. ಆದಾಗಿ ಬ್ರಹ್ಮ ವಿಶೇಷ್ಯಕ ಅಹಮರ್ಥ ಪ್ರಕಾರಕವಾದ 'ಬ್ರಹ್ಮಾಹಮಸ್ಮಿ' ಎಂದು ಉಪಾಸನೆ ಮಾಡುವ ಬ್ರಹ್ಮ ವಿದ್ಯಾ ನಿಷ್ಠನಿಗೂ, ಸ್ವಾತ್ಮ ವಿಶೇಷ್ಯಕ ಬ್ರಹ್ಮ ಪ್ರಕಾರಕವಾದ 'ಅಹಂಬ್ರಹ್ಮಾಸ್ಮಿ' ಎಂದು ಉಪಾಸನೆ ಮಾಡುವ ಪಂಚಾಗ್ನಿ ವಿದ್ಯಾನಿಷ್ಠನಿಗೂ ಉಪಾಸನದಲ್ಲಿ ವಿಶೇಷ್ಯ ಪ್ರಕಾರಗಳ ವ್ಯತ್ಯಾಸವಿದ್ದರೂ ಆ ಇಬ್ಬರೂ ಪರಿಪೂರ್ಣ ಬ್ರಹ್ಮವನ್ನೇ ಉಪಾಸನೆ ಮಾಡುತ್ತಾರೆಂಬುದು ಅದರ ಅರ್ಥ. ಇದರಿಂದಾಗಿ ಪಂಚಾಗ್ನಿ ವಿದ್ಯಾನಿಷ್ಠನೂ ಬ್ರಹ್ಮೋಪಾಸಕನಾದ್ದರಿಂದ ಅವನಿಗೆ ಸ್ವಾತ್ಮಾನುಭವ ರೂಪ ಕೈವಲ್ಯವು ಭಗವದನುಭವ ಪರ್ಯಂತವಾಗುತ್ತದೆ. ಪ್ರಾಣ ವಿದ್ಯಾ ನಿಷ್ಠರಾದ ಕೇವಲರು ಎರಡು ವಿಧ. ಅವರುಗಳು ಪ್ರಕೃತಿ ವಿಶಿಷ್ಟ ಜೀವನನ್ನು ಬ್ರಹ್ಮ ದೃಷ್ಟಿಯಿಂದಲೋ, ಸ್ವರೂಪದಿಂದಲೋ ಉಪಾಸನೆ ಮಾಡುವವರು. ಹಾಗೆಯೇ ಪ್ರಕೃತಿ ವಿಯುಕ್ತ ಜೀವನನ್ನು ಬ್ರಹ್ಮ ದೃಷ್ಟಿಯಿಂದಲೋ ಸ್ವರೂಪದಿಂದಲೋ ಉಪಾಸನೆ ಮಾಡುವವರು ಇಬ್ಬರು. ಈ ನಾಲ್ಕು ಜನರೂ ಬ್ರಹ್ಮಕ್ಕೆ ಪ್ರತೀಕವಾದ - ಅವಯವವಾದ ಜೀವ ಮಾತ್ರೋಪಾಸಕರುಗಳಾದ್ದರಿಂದ ನಾಮಾದ್ಯುಪಾಸಕರುಗಳ ಹಾಗೆ ಪ್ರತೀಕೋಪಾಸಕರುಗಳು. "ಅಪ್ರತೀಕಾಲಂಬನಾನ್ನಯತೀತಿಬಾದರಾಯಣಃ, ಉಭಯಥಾಚದೋಷಾತ್ತತ್ಕ್ರತುಶ್ಚ, ಎಂಬ ಬ್ರಹ್ಮ ಸೂತ್ರದ (4-3-14) ಪ್ರಕಾರ, ಪ್ರತೀಕೋಪಾಸನವಲ್ಲದೆ. ಬ್ರಹ್ಮವನ್ನು ಸಾಕ್ಷಾತ್ತಾಗಿಯೋ, ಪ್ರಕೃತಿ ವಿಯುಕ್ತಾತ್ಮವನ್ನು ಬ್ರಹ್ಮಾತ್ಮಕವಾಗಿಯೊ ಉಪಾಸನೆ ಮಾಡುವವರನ್ನು ಮಾತ್ರ ಅರ್ಚಿರಾದ್ಯಾತಿವಾಹಕರು ಮೋಕ್ಷಕ್ಕೆ ಕರೆದೊಯ್ಯುತ್ತಾರೆ. ಬಾಕಿ ಪ್ರತೀಕೋಪಾಸಕರಗಳನ್ನು ಮೋಕ್ಷಕ್ಕೆ ಕರೆದೊಯ್ಯುವುದಿಲ್ಲ. ಆದ್ದರಿಂದ ಇವರುಗಳಿಗೆ ಸ್ವಾತ್ಮಾನುಭವವು ಅರ್ಚಿರಾದಿ ಮಾರ್ಗದಿಂದ ಬ್ರಹ್ಮ ಪ್ರಾಪ್ತಿ ಪರ್ಯಂತವಾಗುವುದಿಲ್ಲ. **ಶ್ರುತೋಪನಿಷತ್ಕ ಗತ್ಯಭಿಧಾನಾಚ್ಚ** (ಬ್ರಹ್ಮ ಸೂತ್ರ 1–2–17) ಎಂಬ ಸೂತ್ರದಲ್ಲಿಯೂ **ಒರುವಿದ್ಯಾವಿಶೇಷತ್ತಿಲ್** – ಉಪಾಸ್ಯನು ಪರಮಾತ್ಮಾವೆಂದು ಸಾಧಿಸುವುದಕ್ಕೆ ಆ ವಿದ್ಯೆಯಲ್ಲಿ ಅರ್ಚಿರಾದಿ ಮಾರ್ಗವನ್ನು ಹೇತುವಾಗಿಕೊಂಡು ಸಾಧಿಸಿರುವುದರಿಂದ ಜೀವ ಮಾತ್ರೋಪಾಸಕನಿಗೆ ಅರ್ಚಿರಾದಿಗತಿಯಿಲ್ಲವೆಂಬುದು ಸಿದ್ಧವಾಯಿತು. **ಆಹೈಯಾಲ್** ಇತ್ಯಾದಿ – ಆದ್ದರಿಂದ ಬ್ರಹ್ಮ ಪ್ರಾಪ್ತಿಯಿಲ್ಲದವರಿಗೆ ಈ ಚರಮಶ್ಲೋಕದಲ್ಲಿ ಹೇಳುವ ಸರ್ವ ಪಾಪ ನಿವೃತ್ತಿಯಿಲ್ಲ. ಅಂದರೆ ಕೈವಲ್ಯದಲ್ಲಿ ಸರ್ವ ಪಾಪ ನಿವೃತ್ತಿಯಿಲ್ಲದೆ ಇರುವುದರಿಂದ ಕೇವಲಾತ್ಮಾನುಭವವುಳ್ಳವನಿಗೆ ಬ್ರಹ್ಮ ಪ್ರಾಪ್ತಿಯಿಲ್ಲ. ಕೈವಲ್ಯ ಪುರುಷಾರ್ಥವೂ ಅನಿತ್ಯವೆಂದು ಅರ್ಥ.

ಯಿಲ್ಲೈ. ಸರ್ವಪಾಪ ನಿವೃತ್ತಿಯುಡೈಯಾರ್ಕ್ಕು ಬ್ರಹ್ಮಾನುಭವ ಸಂಕೋಚಮಿಲ್ಲೈ.

ಅನಿಷ್ಟ ನಿವೃತ್ತ್ಯೈ ಇಷ್ಟಪ್ರಾಪ್ತಿ ಸಿದ್ಧಿರಿತಿ ಉಪಸಂಹಾರಃ

ಇಪ್ಪಡಿ ಇಙ್ಗು ಸರ್ವಪಾಪ ನಿವೃತ್ತಿಯೈ ಚ್ಚೊಲ್ಲುಕೈಯಾಲೇ ಕೇವಲಾತ್ಮಾನುಭವತ್ತಿರ್ಕ್ಕು ಕ್ಕಾರಣಮಾಯ್ ಪರಿಪೂರ್ಣಬ್ರಹ್ಮಾನುಭವತ್ತುಕ್ಕು ಪ್ರತಿಬಂಧಕಮಾನ ಕರ್ಮವಿಶೇಷಮುಮ್ ಕ್ಕಳೈಹೈಯಾಲೇ "ಮಾಮೇವೈಷ್ಯಸಿ" ಎನ್ರು ಕೀಳ್ ಶ್ಲೋಕತ್ತಿಲ್ ಚೊನ್ನ ಅರ್ಥಮ್ ಇಂಗುಮ್ ಸಿದ್ಧಮಾಯಿತ್ತು.

"ಮಾಮೇವೈಷ್ಯಸಿ" ಎನ್ಗಿರ ಪ್ರಾಪ್ತಿಯಾವುದು, ಪರಿಪೂರ್ಣಾನುಭವಮ್. ಇಪ್ಪಡಿ ಪರಿಪೂರ್ಣಾನುಭವ ಸಿದ್ಧಿಕ್ಕಾಹ ಅರ್ಚಿರಾದಿಗತಿಯುಮ್ ದೇಶವಿಶೇಷ ಪ್ರಾಪ್ತಿಯುಮುಣ್ಡಾಹಿರದು.

ಇಕ್ಕ್ರಮತ್ತಿಲೇ ಇವ್ವನುಭವಮ್ ಕೊಡುಪ್ಪದಾಹ ಸ್ವತಂತ್ರನ್ ಅನಾದಿಯಾಹ ನಿಯಮಿತ್ತು ವೈತ್ತಾನೆನ್ರುಮಿಡಮ್, ಇಗ್ಗತಿವಿಶೇಷಾದಿಹಳೈ ಪ್ರತಿಪಾದಿಕ್ಕಿರ ಶಾಸ್ತ್ರಙ್ಗಳಾಲೇ ಸಿದ್ಧಮ್.

ಇಗ್ಗತಿವಿಶೇಷತ್ತುಕ್ಕು ಮುನ್ಬು ಶಾಸ್ತ್ರತ್ತಾಲೇ ಬ್ರಹ್ಮಸ್ವರೂಪತ್ತೈ ಯರಿಹಿರಪೋದುಮ್, ಯೋಗತ್ತಾಲೇ ಸಾಕ್ಷಾತ್ಕರಿಕ್ಕಿರಪೋದುಮ್, ವಿಭವಲೋಕಾದಿಹಳಿಲ್ ಪ್ರಾಪಿಕ್ಕುಮ್ ಪೋದುಮ್, ಪಿರಕ್ಕುಂ

---

**ಸರ್ವ ಪಾಪ ನಿವೃತ್ತಿಯುಡೈಯಾರ್ಕ್ಕು** ಇತ್ಯಾದಿ – ಸರ್ವಪಾಪ ನಿವೃತ್ತಿಯುಳ್ಳವರಿಗೆ ಬ್ರಹ್ಮಾನುಭವ ಸಂಕೋಚವಿಲ್ಲ. **ಇಪ್ಪಡಿ ಇಂಗು** ಇತ್ಯಾದಿ – ಹೀಗೆ ಈ ಚರಮಶ್ಲೋಕದಲ್ಲಿ ಸರ್ವ ಪಾಪ ನಿವೃತ್ತಿಯನ್ನು ಹೇಳುವುದರಿಂದ ಕೇವಲಾತ್ಮಾನುಭವಕ್ಕೆ ಕಾರಣವಾಗಿ ಪರಿಪೂರ್ಣ ಬ್ರಹ್ಮಾನುಭವಕ್ಕೆ ಪ್ರತಿಬಂಧಕವಾದ ಕರ್ಮ ವಿಶೇಷವು ಕಳೆಯುವುದರಿಂದ, **"ಮಾಮೇ ವೈಷ್ಯಸಿ"** ಎಂದು ಹೇಳುವ ಪ್ರಾಪ್ತಿಯು ಪರಿಪೂರ್ಣ ಬ್ರಹ್ಮಾನುಭವವು. ಬ್ರಹ್ಮ ಸ್ವರೂಪವು ವಿಭುವಾದ್ದರಿಂದ ಇಲ್ಲಿಯೇ ಪರಿಪೂರ್ಣ ಬ್ರಹ್ಮಾನುಭವವು ಸಿದ್ಧಿಸಬಹುದೇ ಎಂದರೆ **ಇಪ್ಪರಿಪೂರ್ಣ ಬ್ರಹ್ಮಾನುಭವ ಸಿದ್ಧಿಕ್ಕಾಹ** ಎಂದು ಆರಂಭಿಸಿ ಉತ್ತರಿಸುತ್ತಾರೆ. ಈ ಪರಿಪೂರ್ಣಬ್ರಹ್ಮಾನುಭವ ಸಿದ್ಧಿಗೋಸ್ಕರವೇ ಅರ್ಚಿರಾದಿ ಮಾರ್ಗವೂ ದೇಶ ವಿಶೇಷ ಪ್ರಾಪ್ತಿಯೂ ಉಂಟಾಗುತ್ತದೆ.

**ಇಕ್ರಮತ್ತಿಲೇ** ಇತ್ಯಾದಿ – ಈ ಅರ್ಚಿರಾದಿ ಮಾರ್ಗವಾಗಿ ಹೋಗಿ ದೇಶ ವಿಶೇಷ ಪ್ರಾಪ್ತಿಯು ಉಂಟಾದ **ಮೇಲೆ, ಈ** ಪರಿಪೂರ್ಣ ಬ್ರಹ್ಮಾನುಭವವನ್ನು ಕೊಡಲು ಸ್ವತಂತ್ರನು ಅನಾದಿಯಾಗಿ ಸಂಕಲ್ಪವನ್ನು **ಮಾಡಿದ್ದಾನೆಂಬುದು,** ಈ ಗತಿ ವಿಶೇಷಗಳನ್ನು ಪ್ರತಿಪಾದಿಸುವ, "ತೇ ರ್ಚಿಷಮಭಿ ಸಂಭವಂತಿ .... ಸಏನಾನ್ ಬ್ರಹ್ಮಗಮಯತಿ, ಸರ್ವಂಹ ಪಶ್ಯಃ ಪಶ್ಯತಿ, ಮನಸೈತಾನ್‌ಕಾಮಾನ್ ಪಶ್ಯನ್ ರಮತೇ ಸ ಏತೇ ಬ್ರಹ್ಮ ಲೋಕೇ" ಇತ್ಯಾದಿ ಶಾಸ್ತ್ರಗಳಿಂದ ಸಿದ್ಧ.

**ಮುಕ್ತ ದಶೆಯಲ್ಲಿ ಉಂಟಾಗುವ ಪರಿಪೂರ್ಣ ಬ್ರಹ್ಮಾನುಭವ ರೂಪ**
**ಜ್ಞಾನವಿಕಾಸಕ್ಕೂ ಬದ್ಧ ದಶೆಯಲ್ಲಿ ಯೋಗಾಭ್ಯಾಸದಿಂದ ಏರ್ಪಡುವ**
**ಸಾಕ್ಷಾತ್ಕಾರ ರೂಪ ಜ್ಞಾನ ವಿಕಾಸಕ್ಕೂ ಇರುವ ವ್ಯತ್ಯಾಸ.**

**ಇಗ್ಗತಿ ವಿಶೇಷತ್ತುಕ್ಕು ಮುನ್ಬು** ಇತ್ಯಾದಿ – ಈ ಅರ್ಚಿರಾದಿ ಮಾರ್ಗ ವಿಶೇಷದಲ್ಲಿ ಪ್ರವೇಶಿಸಿ ಮೋಕ್ಷದಲ್ಲಿ ಭಗವಂತನನ್ನು ಅನುಭವಿಸುವುದಕ್ಕೆ ಮೊದಲು, ಶಾಸ್ತ್ರದಿಂದ ಬ್ರಹ್ಮ ಸ್ವರೂಪವನ್ನು ತಿಳಿಯುವಾಗಲೂ, ಯೋಗ ದಶೆಯಲ್ಲಿ ಸಾಕ್ಷಾತ್ಕರಿಸುವಾಗಲೂ, ವಿಭವಲೋಕಾದಿಗಳಲ್ಲಿ ಭಗವಂತನನ್ನು ಅನುಭವಿಸುವಾಗಲೂ **ಪಿರಕ್ಕುಮ್ ಪ್ರಕಾಶಮ್** – ಉಂಟಾಗುವ ಭಗವದನುಭವ ರೂಪ ಜ್ಞಾನ ಪ್ರಕಾಶವು **ಸುಕೃತಾಧೀನಮಾಯ್**–

**ಶಮ್ ಸುಕೃತಾಧೀನಮಾಯ್ ಕರಣಾಯತ್ತಮಾಯ್, ವರುಹಿರದಾಹೈಯಾಲೇ ಪರಿಮಿತಮುಮಾಯ್ ವಿಚ್ಛೇದವತ್ತುಮಾಯ್ ಇರುಕ್ಕುಮ್; ಮುಕ್ತದಶೈಯಿಲ್ ಪಿರಕ್ಕಿರ ಪ್ರಕಾಶಮ್ ಸಂಕೋಚ ವಿಚ್ಛೇದಙ್ಗಳುಕ್ಕು ಕಾರಣಮೊನ್ರು ಮಿಲ್ಲಾಮೈಯಾಲೇ ಪರಿಪೂರ್ಣವಿಷಯಮುಮಾಯ್, ಪುನರ್ವಿಚ್ಛೇದ ರಹಿತಮುಮಾಯ್ ಇರುಕ್ಕುಮ್. ಇವ್ವನುಭವಪರೀವಾಹಮಾಯ್ 1) "ಕ್ರಿಯತಾಮಿತಿಮಾಂವದ ಎನ್ಗಿರಪಡಿಯೇ ಶೇಷಿಯುಹನ್ದ ಪರಿಪೂರ್ಣಕೈಂಕರ್ಯಮ್ ಮರುಹಿರದು. 2) "ಪಾರಮಾರ್ಥಿಕ" ಎನ್ಗಿರ ಗದ್ಯವಾಕ್ಯತ್ತಿರ್ಸೊನ್ನ ಫಲಪರ್ವಪರಂಪರೈಯೆಲ್ಲಾಮ್ ಇಙ್ಗೇಯಥಾಪ್ರಮಾಣಮ್ ವಿವಕ್ಷಿಕ್ಕಪ್ಪಡುಹಿರನ**

---

ಇವನು ಮಾಡಿರುವ ಸುಕೃತಕ್ಕೆ ಅಧೀನವಾಗಿ, **ಕರಣಾಯತ್ತಮಾಯ್** ಇತ್ಯಾದಿ – ಇಂದ್ರಿಯಗಳಿಗೆ ಗೋಚರವಾಗಿ ತದಧೀನವಾಗಿ, ಉಂಟಾಗುವುದಾದ್ದರಿಂದ, ಪರಿಮಿತವಾಗಿಯೂ ಮಧ್ಯೆ ಮಧ್ಯೆ **ವಿಚ್ಛೇದ** – ಬಿಟ್ಟು ಹೋಗುವುದಾಗಿಯೂ, ಇರುತ್ತದೆ. **ಮುಕ್ತದಶೆಯಿಲ್** ಇತ್ಯಾದಿ ಮೋಕ್ಷ ದಶೆಯಲ್ಲಿ ಉಂಟಾಗುವ ಬ್ರಹ್ಮಾನುಭವ ರೂಪ ಪ್ರಕಾಶವು ಸಂಕೋಚ ವಿಚ್ಛೇದಗಳಿಗೆ ಯಾವ ಕಾರಣವೂ ಇಲ್ಲದೆಯಿರುವುದರಿಂದ ಪರಿಪೂರ್ಣ ಬ್ರಹ್ಮ ವಿಷಯವಾಗಿ ಪುನಃ ವಿಚ್ಛೇದವಿಲ್ಲದೆ ಇರುವುದಾಗಿ ಇರುತ್ತದೆ **ಇವ್ವನುಭವ ಪರೀವಾಹಮಾಯ್** ಇತ್ಯಾದಿ– ಈ ಅನುಭವದ ಪರೀವಾಹವಾಗಿ, (1) **"ಕ್ರಿಯತಾಮಿತಿಮಾಂವದ"** ನಿನಗೆ ಇಷ್ಟವಾದ ಕೈಂಕರ್ಯವನ್ನು ಮಾಡು ಎಂಬಂತೆ, ಶೇಷಿಯಾದ ಭಗವಂತನು ಉಹಂದ ಸಂತೋಷ ಪಟ್ಟ ಪರಿಪೂರ್ಣ ಕೈಂಕರ್ಯವು ಏರ್ಪಡುತ್ತದೆ. **'ಪಾರಮಾರ್ಥಿಕ'** ಇತ್ಯಾದಿ – "ಪಾರಮಾರ್ಥಿಕ ಭಗವಚ್ಚರಣಾವಿಂದ" ಎಂದಾರಂಭಿಸಿ ಶರಣಾಗತಿ ಗದ್ಯದಲ್ಲಿ ಭಗವದ್ಭಾಷ್ಯಾಕಾರರು ಹೇಳಿರುವ ಪರಭಕ್ತಿ, ಪರಜ್ಞಾನ, ಪರಮಭಕ್ತಿ ರೂಪ ಫಲಪರ್ವದ ಪರಂಪರೆಗಳೆಲ್ಲಾ ಇಲ್ಲಿ ಪ್ರಮಾಣಾನುಸಾರವಾಗಿ ವಿವಕ್ಷಿಸಲ್ಪಡುತ್ತವೆ. ಆದಾಗಿ (2) ಪಾರಮಾರ್ಥಿಕ ಭಗವಚ್ಚರಣಾರವಿಂದ ಯುಗಳೈ ಕಾಂತಿಕಾತ್ಯಂತಿಕ ಪರಭಕ್ತ್ಯಾದಿ ಕೃತತ್ವ – ಪರಮ ಪ್ರಯೋಜನವಾದ ಭಗವಂತನ ಚರಣಾರವಿಂದಗಳಲ್ಲೇ ನೆಟ್ಟ ಮನಸ್ಕವಾದ ಅಂತ್ಯವಿಲ್ಲದೆ ಇರುವ ಉತ್ಕೃಷ್ಟವಾದ ಭಕ್ತಿ, ತದನಂತರ ಸಾಕ್ಷಾತ್ಕಾರ, ತದನಂತರ ಮೇಲೆ ಮೇಲೆ ಈ ಸಾಕ್ಷಾತ್ಕಾರವು ವಿಚ್ಛೇದವಿಲ್ಲದೆ ಏರ್ಪಡಬೇಕೆಂಬ ಪರಮಭಕ್ತಿ ಕೃತತ್ವ, ಪರಿಪೂರ್ಣತ್ವ, ಅನವರತತ್ವ, ನಿತ್ಯತ್ವ, ವಿಶದತಮತ್ವ, ಅನನ್ಯ ಪ್ರಯೋಜನತ್ವ, ಅನವಧಿಕಾತಿಶಯ ಪ್ರಿಯತ್ವ, ವಿಶಿಷ್ಟ ಭಗವದನುಭವ ಜನಿತತ್ವ, ಅನವಧಿಕಾತಿಶಯ ಪ್ರೀತಿಕಾರಿತತ್ವ, ಅಶೇಷಾವಸ್ಥೋಚಿತತ್ವ, ಅಶೇಷ ಶೇಷತ್ವೈಕರತಿ ರೂಪತ್ವ, ನಿತ್ಯತ್ವ ವಿಶಿಷ್ಟಗಳಾದ ಕೈಂಕರ್ಯಗಳು ವಿವಕ್ಷಿಸಲ್ಪಡುತ್ತವೆ ಎಂದರ್ಥ.

---

1) ಪರವಾನಸ್ಮಿ ಕಾಕುತ್ಸ್ಥ ತ್ವಯಿ ವರ್ಷಶತಂ ಸ್ಥಿತೇ ।
ಸ್ವಯಂತು ರುಚಿರೇ ದೇಶೇ ಕ್ರಿಯತಾಮಿತಿ ಮಾಂವದ ॥ ರಾಮಾಯಣ 3-15-7

ಎಲೈ ಕಾಕುತ್ಸ್ಥನೇ ನೀನು ನೂರಾರು ವರುಷ ಕಾಲ ಅಂದರೆ ಅನೇಕಾನೇಕ ವರ್ಷಕಾಲ ಇರುವ ಪರ್ಯಂತ ನಿನಗೆ ನಾನು ಪರತಂತ್ರನು. ನಿನಗೆ ಇಷ್ಟವಾದ ಸ್ಥಳದಲ್ಲಿ ಪರ್ಣಶಾಲೆಯನ್ನು ಕಟ್ಟೆಂದು ಅಜ್ಞಾಪಿಸು. ನಿನ್ನಲ್ಲಿ ಪ್ರೀತಿ ಪುರಸ್ಕೃತನಾಗಿ ನಾನು ಕೈಂಕರ್ಯ ಮಾಡಲೆಣಿಸುತ್ತೇನೆಂದು ತಾತ್ಪರ್ಯ.

2) ಪಾರಮಾರ್ಥಿಕ ಭಗವಚ್ಚರಣಾರವಿಂದ ಯುಗಳೈಕಾಂತಿಕಾತ್ಯಂತಿಕ ಪರಭಕ್ತಿ ಪರಜ್ಞಾನ
ಪರಮಭಕ್ತಿ ಕೃತ ಪರಿಪೂರ್ಣಾನವರತ ನಿತ್ಯವಿಶದತಮಾನನ್ಯ ಪ್ರಯೋಜನ, ಅನವಧಿಕಾತಿಶಯ
ಪ್ರಿಯಭಗವದನುಭವಜನಿತಾನವಧಿ ಕಾತಿಶಯ ಪ್ರೀತಿಕಾರಿತಾ ಶೇಷಾವಸ್ಥೋಚಿತ, ಅಶೇಷ
ಶೇಷತ್ವೈಕರತಿ ರೂಪ ನಿತ್ಯ ಕೈಂಕರ್ಯ ಪ್ರಾಪ್ತ್ಯ ಪೇಕ್ಷಯಾ
ಪಾರಮಾರ್ಥಿಕೀ ಭಗವಚ್ಚರಣಾರವಿಂದ ಶರಣಾಗತಿ ರ್ಯಥಾವಸ್ಥಿತಾಽವಿರತಾಸ್ತುಮೇ ॥ ಶರಣಾಗತಿಗದ್ಯ

### "ಮಾಶುಚಃ" ಇತಿವಾಕ್ಯಸ್ಯ ಅರ್ಥ ವಿಶೇಷಾಃ

**ಇನಿಮೇಲ್**"ಮಾಶುಚ" ಎನ್ಗಿರವಿತ್ತಾಲೇ ಕೀಃಗ ಅರುಳಿಚ್ಚೆಯ್‌ದ ಅರ್ಥತ್ತಿಲ್ ತೀರ್‌ವು ಪ್ರಕಾಶಿತ ಮಾಹಿರದು. ಶಿಲರ್ "ಮಾಶುಚಃ" ಎನ್ಗಿರವಿದು ವಿಧಿಯಾಹೈಯಾಲೇ ಪ್ರಪನ್ನನಾನ ಪಿನ್ಪು ಶೋಕಿಕ್ಕೈ ವಿಧ್ಯತಿಲಂಘನಮಾಯ್ ಇವನೈ ಉಪಾಯಭೂತನಾನ ಶರಣ್ಯನ್ ನೆಹಿೞನ್ದು ತನ್‌ಕಾರ್ಯತ್ತುಕ್ಕುತ್ತಾನೇ ಕಡವನಾಹೈಯಾಹಿರ ಪ್ರತ್ಯವಾಯಮುಂಡಾಮೆನ್ರು ಶೊನ್ನವಿಡಂ ಬುದ್ಧಿಪೂರ್ವೋತ್ತರಾಘತ್ತೈಯುಮ್ "ಸರ್ವಪಾಪೇಭ್ಯಃ" ಎನ್ಗಿರವಿಡತ್ತಿಲೇ ಕೂಟ್ಟಿತ್ತಾಙ್ಗಳೀ ಪಣ್ಣಿನ ವ್ಯಾಖ್ಯಾನತ್ತುಕ್ಕುಮ್, ಪ್ರಪನ್ನನೈ ಶರಣ್ಯನ್ ಒರುಪಡಿಯಾಲುಮ್ ಕೈವಿಡಾನೆನ್ಗಿರ ವಾಕ್ಯತ್ತುಕ್ಕುಮ್ ವಿರುದ್ಧಮಾಮ್. ಆಹೈಯಾಲ್ ಇವ್ವುಪಾಯತ್ತಿಲಿೞಿಯುಮವನುಕ್ಕು ಶೋಕಹೇತುಕ್ಕಳೆಲ್ಲಾಮ್ ಕೞಿಹೈಯಾಲೇ ಶೋಕಿಕ್ಕ ವೇಣ್ಡಾ ಮೆನ್ರು ವಿಡತ್ತೈಚ್ಚೊಲ್ಲಿಕ್ಕೊಂಡು ವಿಶ್ವಾಸತ್ತೈ ದೃಢೀಕರಿಕ್ಕೈಯಿಲೇ ತಾತ್ಪರ್ಯಮ್.

ಬಂಧು ನಾಶಾದಯಃಪೂರ್ವಂ ಬಹವ ಶ್ಶೋಕ ಹೇತವಃ ।
ತತ್ತತ್ಸ ಮುಚಿತೈ ಸ್ಸಮ್ಯ ಗುಪದೇಶೈ ರಪೋದಿತಾಃ ॥
ಸುದುಷ್ಕರತ್ವಾದ್ಧರ್ಮಾಣಾ ಮಪಾರ ತ್ವಾದ್ವಿರೋಧಿನಾಮ್ ।
ಸಿದ್ಧಃಫಲ ವಿಳಂಬಾಚ್ಚ ಶೋಕೋಽದ್ಯ ವಿನಿವಾರ್ಯತೇ ॥

---

### 'ಮಾಶುಚಃ' ಎಂಬ ವಾಕ್ಯಕ್ಕೆ ಅರ್ಥ ವಿಶೇಷಗಳು

**ಇನಿಮೇಲ್ "ಮಾಶುಚಃ"** ಇತ್ಯಾದಿ – ಅನಂತರ, ಮಾಶುಚಃ – ದುಃಖಿಸಬೇಡ ಎಂದು ಹೇಳುವುದರಿಂದ ಮೊದಲು ಹೇಳಿದ ಅನಿಷ್ಟ ನಿವೃತ್ತಿ ಪೂರ್ವಕ ಇಷ್ಟ ಪ್ರಾಪ್ತಿಯೆಂಬ ಅರ್ಥದಲ್ಲಿ **ತೀರ್ವು** – ತೀರ್ಮಾನವು ಅಂದರೆ ಮೋಕ್ಷಾರ್ಥ ಶರಣಾಗತಿಯನ್ನು ಮಾಡಿದ್ದರಿಂದ, ಸರ್ವ ಪಾಪ ನಿವೃತ್ತಿಯು ಏರ್ಪಟ್ಟು, ಭಗವತ್ಪ್ರಾಪ್ತಿಯು ಏರ್ಪಡುವುದರಿಂದ, ನೀನು ಶೋಕಿಸಬೇಕಿಲ್ಲವೆಂದು ತೀರ್ಮಾನವು ಪ್ರಕಾಶ ಪಡಿಸಲ್ಪಡುತ್ತದೆ. **ಶಿಲರ್**–ಇತ್ಯಾದಿ– ಕೆಲವರು, ಮಾಶುಚಃ - ದುಃಖಿಸಬೇಡ ಎಂದು ವಿಧಿಸುವುದರಿಂದ ಪ್ರಪತ್ತಿಯನ್ನು ಮಾಡಿದ ನಂತರ ಶೋಕಿಸಿದರೆ ತನ್ನ ಕಾರ್ಯಕ್ಕೆ ತಾನೇ ನಿರ್ವಾಹಕನಾಗುವುದೆಂಬ ದೋಷವು ಉಂಟಾಗುತ್ತದೆಯೆಂದು ಹೇಳಿರುವುದು, ಬುದ್ಧಿ ಪೂರ್ವೋತ್ತರಾಘವನ್ನೂ "ಸರ್ವಪಾಪೇಭ್ಯಃ" ಎಂಬಲ್ಲಿ ಸೇರಿಸಿ ತಾವೇ ವ್ಯಾಖ್ಯಾನ ಮಾಡಿರುವುದಕ್ಕೂ, ಪ್ರಪನ್ನ ನನ್ನು, ಶರಣ್ಯನು ಯಾವ ವಿಧದಲ್ಲಿಯೂ ಕೈಬಿಡುವುದಿಲ್ಲವೆಂಬ ವಾಕ್ಯಗಳಿಗೂ ವಿರುದ್ಧವಾಗುತ್ತದೆ. **ಆಹೈಯಾಲ್** ಇತ್ಯಾದಿ - ಆದ್ದರಿಂದ ಈ ಉಪಾಯದಲ್ಲಿ **ಇೞಿಯುಮವನುಕ್ಕು** – ತೊಡಗುವವನಿಗೆ ಶೋಕ ಹೇತುಗಳೆಲ್ಲಾ ಕಳೆಯುವುದರಿಂದ ಶೋಕಿಸಬೇಡವೆಂದು ಹೇಳಿಕೊಂಡು ಮಹಾ ವಿಶ್ವಾಸವನ್ನು ದೃಢೀಕರಿಸುವುದರಲ್ಲಿ ತಾತ್ಪರ್ಯ.

### "ಮಾಶುಚಃ" ಎಂಬುದರಿಂದ ನಿವರ್ತಿಸಲ್ಪಡುವ ಶೋಕವು ಯಾವುದು ಎಂಬುದರ ವಿವೇಚನೆ

**ಬಂಧುನಾಶಾದಯಃ** ಇತ್ಯಾದಿ – ಬಂಧುಗಳ ನಾಶವೇ ಮೊದಲಾದ ಅನೇಕ ದುಃಖ ಹೇತುಗಳೆಲ್ಲಾ, "ಅಶೋಚ್ಯಾನನ್ವ ಶೋಚಸ್ತ್ವಂ", "ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ", "ಮಾಶುಚಃ ಸಂಪದಂದೈವೀಂ", ಇತ್ಯಾದಿ ಸಮುಚಿತಗಳಾದ ಉಪದೇಶಗಳಿಂದ ಪೂರ್ವದಲ್ಲಿಯೇ ಹೋಗಲಾಡಿಸಲ್ಪಟ್ಟವು. ಇಲ್ಲಿ ಹೇಳಿರುವ "ಮಾಶುಚಃ" ಎಂಬುದು ಬೇರೆ ವಿಧವಾದ ಶೋಕ ಹೇತುವನ್ನು ನಿವರ್ತಿಸುವುದರಿಂದ ಪುನರುಕ್ತಿ ದೋಷವಾಗಲಾರದು ಎಂದು ಭಾವ. ಅದಾಗಿ **ಸುದುಷ್ಕರತ್ವಾತ್ ಧರ್ಮಾಣಾಂ** ಇತ್ಯಾದಿ ಕರ್ಮ ಯೋಗ ಜ್ಞಾನ ಯೋಗ ಭಕ್ತಿಯೋಗ ರೂಪ ಧರ್ಮಗಳನ್ನು ಅನುಷ್ಠಿಸುವುದು ಬಹಳ ಕಷ್ಟ ಸಾಧ್ಯವಾದ್ದರಿಂದಲೂ, ವಿರೋಧಿ ಪಾಪಗಳು ಅನಂತ ಗಳಾದ್ದರಿಂದಲೂ ಫಲವು ವಿಳಂಬಿಸುವುದರಿಂದಲೂ, ಉಂಟಾಗುವ ಶೋಕವು ಇಲ್ಲಿ ನಿವರ್ತಿಸಲ್ಪಡುತ್ತದೆ ಎಂದು

ಅಭಿಮತ ಫಲತ್ತುಕ್ಕು ದುಷ್ಕರ ಸಾಧನಮುಮನ್ರಿಕ್ಕೇ ಸರ್ವವಿರೋಧಿ ನಿವರ್ತ್ತನಕ್ಷಮುಮಾಯ್,ಫಲವಿಳಂಭಮುಮನ್ರಿಕ್ಕೇ ಇರುಕ್ಕಿರ ಇವ್ವುಪಾಯ ವಿಶೇಷತ್ತೈ ಉಪದಿಷ್ಟಮಾನ ಪಿನ್ಬು, ಉಪಾಯ ದೌಷ್ಕರ್ಯಾದಿಹಳಡಿಯಾಹ ಉನಕ್ಕು ಶೋಕಿಕ್ಕ ಪ್ರಾಪ್ತಿಯಿಲ್ಲೈ. ಇವ್ವುಪಾಯ ಮನುಷ್ಠಿತ್ತಾಲ್ ಉನ್‌ಕಾರ್ಯಂ ಎನಕ್ಕು ಭರಮಾಯ್, ನಾನೇ ಫಲಿಯುಮಾಯ್, ಉನ್ನೈರಕ್ಷಿಯಾದ ಪೋದು ಎನಕ್ಕೇ ಅವದ್ಯಮಾಮ್ಪಡಿಯಿರುಕ್ಕುಮ್ ದಶೈಯಿಲುಮ್ ಧನಾದಿತುಲ್ಯನಾನ ನೀನಕ್ಕು ಶೋಕಿಕ್ಕ ಪ್ರಾಪ್ತಿಯುಂಡೋ ವೆನ್ರು ತಿರುವುಳ್ಳಮ್. ಇಙ್ಗು ಶೋಕಮ್ ಯಥಾವಸ್ಥಿತಾತ್ಮೋಪದೇಶಾದಿಹಳಾಲೇ ಕಳೈನ್ದ ಬಂಧು ವಧಾದಿನಿಮಿತ್ತಮಾನ ಪಳೈಯ ಶೋಕಮನ್ರು. ಪ್ರಕರಣಾನುಗುಣಮಾನ ಶೋಕಾನ್ತರಮ್; ಎಙ್ಗನೇಯೆನ್ನಿಲ್ 1) "ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ" ಎನ್ರುಪಿರಿತ್ತು ಚೊನ್ನವಾರೇ ನಾಮ್ ಆಸುರ ಪ್ರಕೃತಿಹಳಾಹಿರ್ ಚೆಯ್‌ವದೆನ್ನೆನ್ರು ಶೋಕಿತ್ತ ಅರ್ಜುನನೈಪ್ಪಾರ್ತ್ತು ಮಾಶುಚಸ್ಸಂಪದಂ ದೈವೀಮಭಿಜಾತೋಽಸಿ ಪಾಂಡವ" ಎನ್ರಾರ್‌ಪೋಲೇ ಇಙ್ಗು, ಶೀರಿಯ ಫಲತ್ತಿಲ್ ತೀವ್ರ ಸಂಗಮ್ ನಡವಾನಿರ್ಕ ಚಿರಕಾಲ ಸೇವ್ಯಮಾಯ್, ಅಂತರಾಯ ಬಹುಳಮಾಯ್, ಅತ್ಯಂತಾವಹಿತರ್ಕ್ಕುಂ, ಕೃಛ್ರಸಾಧ್ಯಮಾನ ಉಪಾಯತ್ತೈಯುಮ್ ತನ್ನಳವೈಯುಮ್ ಕಣ್ಡು,ನಮಕ್ಕಿವ್ವುಪಾಯಮ್ ತಲೈಕ್ಕಟ್ಟ ಯೆಙ್ಙೇ

---

ಹೇಳುಖೆದು ಯುಕ್ತವಾದದ್ದು. ಇದು ಹೇಗೆಂದರೆ, ಅಭಿಮತ ಫಲತ್ತುಕ್ಕು ಇತ್ಯಾದಿ ವಿವರಿಸುತ್ತಾರೆ. ಆದಾಗಿ ತನಗೆ ಅಭಿಮತವಾದ ಫಲಕ್ಕೆ ಮಾಡಲಶಕ್ಯವಾದ ಉಪಾಯವಲ್ಲದೆ ಸುಲಭವಾದ ಉಪಾಯವಾಗಿ "ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂದು ಸರ್ವ ವಿರೋಧಿ ನಿವರ್ತನ ಕ್ಷಮವಾಗಿ, "ಅಹಂ" ಎಂದು **ಸರ್ವಜ್ಞ** ಸರ್ವ ಶಕ್ತನಾದ ನಾನು ಫಲಪ್ರದನಾದ್ದರಿಂದ, ಫಲ ವಿಳಂಬವೂ ಇಲ್ಲದೇ ಇರುವ ಈ ಉಪಾಯ **ದೌಷ್ಕರ್ಯವೇ** ಮೊದಲಾದವುಗಳು ಕಾರಣವಾಗಿ ನೀನು ಶೋಕಿಸಲು ಪ್ರಾಪ್ತಿಯಿಲ್ಲ. **ಇವ್ವುಪಾಯಮನುಷ್ಠಿತ್ತಾಲ್** ಇತ್ಯಾದಿ ಈ ಉಪಾಯವನ್ನು ಅನುಷ್ಠಿಸಿದರೆ ನಿನ್ನ ಕಾರ್ಯವು ನನಗೆ ಭರವಾಗಿ ನಾನೇ ಫಲಿಯಾಗಿ ನಿನ್ನನ್ನು ರಕ್ಷಿಸದೆ ಇದ್ದರೆ ನನಗೆ ಅವದ್ಯವಾಗಿರುವ ದಶೆಯಲ್ಲಿಯೂ ಧನಾದಿ ತುಲ್ಯನಾದ ನಿನಗೆ **ಶೋಕಿಸ** ಬೇಕಾದ ಆವಶ್ಯಕವೇನಿದೆ ಎಂದು ಅಭಿಪ್ರಾಯ. **ಇಂಗುಕ್ಕೞಿಕ್ಕಿರ ಶೋಕಮ್** ಇತ್ಯಾದಿ – ಇಲ್ಲಿ ನಿವರ್ತಿಸಲ್ಪಡುವ ಶೋಕವು ಯಥಾವಸ್ಥಿತವಾದ **ಆತ್ಮೋಪದೇಶಾದಿಗಳಿಂದ** ಕಳೆಯಲ್ಪಟ್ಟ ಬಂಧುವಧ ನಿಮಿತ್ತವಾದ ಹಳೆಯ ಶೋಕವಲ್ಲ. ಪ್ರಕರಣಾನು ಗುಣವಾದ ಶೋಕಾಂತರ. **ಎಂಗನೇಯೆನ್ನಿಲ್** ಹೇಗೆಂದರೆ, 1) **ದೈವೀಸಂಪದ್ವಿಮೋಕ್ಷಾಯ** ಇತ್ಯಾದಿಯಾಗಿ ದೈವಿಕ ಸಂಪತ್ತು ಅಂದರೆ ಭಗವದಾಜ್ಞಾಪರಿಪಾಲನ ರೂಪ ಸಂಪತ್ತು, ಸಂಸಾರ ಬಂಧದಿಂದ ಬಿಡುಗಡೆಯಾಗಲು ಕಾರಣವಾಗುತ್ತದೆ. ಆಸುರೀ – ಭಗವದಾಜ್ಞೆಯನ್ನು ಅತಿಕ್ರಮಿಸಿ ನಡೆದು **ಕೊಳ್ಳುವ** ಸಂಪತ್ತು, ಅಧೋಗತಿ ಪ್ರಾಪ್ತಿಗೆ ಕಾರಣವಾಗುತ್ತದೆ, ಎಂದು ದೈವ ಸಂಪತ್ತನ್ನೂ ಆಸುರ ಸಂಪತ್ತನ್ನೂ ವಿಭಾಗ ಮಾಡಿ ಗೀತಾಚಾರ್ಯನು ಹೇಳಿದಾಗ, ಅರ್ಜುನನಿಗೆ ತಾನು ಆಸುರ ಪ್ರಕೃತಿಯಾಗಿದ್ದರೆ ಏನು ಮಾಡುವುದು ಎಂದ ಶೋಕಿಸಲು, ಅವನನ್ನು ಕುರಿತು "ನೀನು ದುಃಖಿಸಬೇಡ, ನೀನು ಅಭಿಜಾತ್ಯ ಕುಲದಲ್ಲಿ ಹುಟ್ಟಿದ್ದೀಯೊ, ದೈವೀ ಸಂಪತ್ತನ್ನುಳ್ಳವನು", ಎಂದು ಹೇಳಿದನು. ಹೀಗಿರುವಾಗ ಉತ್ತಮ ಫಲದಲ್ಲಿ ತೀವ್ರ ಸಂಗವು ಉಂಟಾಗಿ, ಚಿರಕಾಲ ಸೇವ್ಯವಾಗಿ, **ಅಂತರಾಯ** – ವಿಘ್ನಗಳು, ಅಧಿಕವಾಗಿ, **ಅತ್ಯಂತಾವಹಿತರ್ಕ್ಕುಮ್** – ಬಹಳ ಸಾವಧಾನವಾಗಿರುವವರಿಗೂ **ಕೃಚ್ಛ್ರ** – ಕಷ್ಟದಿಂದ ಸಾಧಿಸಲ್ಪಡ ತಕ್ಕ ಭಕ್ತಿಯೋಗ ರೂಪ ಉಪಾಯವನ್ನೂ ತನ್ನ **ಅಳವು** ಜ್ಞಾನ ಶಕ್ತಿಗಳ ಮಾಂದ್ಯವನ್ನೂ ನೋಡಿಕೊಂಡು, ನಮಗೆ ಈ ಉಪಾಯವು **ತಲೈಕ್ಕಟ್ಟ** – ನಿಷ್ಪತ್ತಿಯಾಗಿ, ಹೇಗೆ ಫಲಸಿದ್ಧಿಯು ಉಂಟಾಗುತ್ತದೆಂದು ಶೋಕಿಸಿದ ಅರ್ಜುನನಿಗೆ, ಕ್ಷಣ

---

1) "ಮಾಶುಚಃ ಸಂಪದಂ ದೈವೀಂ ಅಭಿಜಾತೋಽಸಿಪಾಂಡವ" ಎಂಬುದು ಉತ್ತರಾರ್ಧ ಪಕ್ತಿ ಅರ್ಜುನನೇ ಗೀತೆ 16.5
ನೀನು ಸತ್ಕುಲ ಪ್ರಸೂತನು. ದೈವೀ ಸಂಪತ್ತನ್ನುಳ್ಳವನು ಶೋಕಿಸಬೇಡ.

**ಇಪ್ಫಲ ಸಿದ್ಧಿಯುಂಡಾಹ ಪ್ಪೋಹಿರದೆನ್ರುಶೋಕಿತ್ತ ವರ್ಜುನನಕ್ಕು, ಕ್ಷಣಕಾಲ ಸಾಧ್ಯಮಾಯ್, ಸರ್ವಾನ್ತರಾಯ ರಹಿತಮಾಯ್, ಸುಕರಮಾನ ಉಪಾಯತ್ತೈಕ್ಕಾಟ್ಟಿಕ್ಕೊಡುತ್ತು ಅಮ್ಮುಖತ್ತಾಲೇ ಫಲಸಿದ್ಧಿಯಿಲೇ ನಿರ್ಭರನುಮಾಯ್ ನಿಸ್ಸಂಶಯನುಮಾಮ್ಪಡಿ ಪಣ್ಣಿ "ಮಾಶುಚಃ" ಎನ್ರು ಶೊನ್ನಾಲ್ ಇದು ಉಪಾಯಾನ್ತರ ದೌಷ್ಕರ್ಯಾದಿಹಳ್ ಅಡಿಯಾಹ ಪಿರನ್ದ ಶೋಕತ್ತೈಕ್ಕ್ಕಿರದಾಮಿತ್ತನ್ಯೈಯಿರೇ.**

**ಇಭ್ಭಗವದ್ಗೀತೈಯಿಲ್ ಮುರ್ಪಡ ಪ್ರಕೃತ್ಯಾತ್ಮ ವಿವೇಕತ್ತೈಯುಂಡಾಕ್ಕಿ ಪಿನ್ಬು ಪರಂಪರಯಾ ಮೋಕ್ಷಕಾರಣಙ್ಗಳಾನ ಕರ್ಮಯೋಗ ಜ್ಞಾನಯೋಗಙ್ಗಳೈಯುಮ್, ಸಾಕ್ಷಾನ್ಮೋಕ್ಷ ಸಾಧನಮಾಹ ವೇದಾನ್ತ ವಿಹಿತಮಾನ ಭಕ್ತಿಯೋಗತ್ತೈಯುಮ್, ಸಪರಿಕರಮಾಹ ಉಪದೇಶಿತ್ತು**

1) **ಇತಿತೇ ಜ್ಞಾನ ಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತ ದಶೇಷೇಣ ಯಥೇಚ್ಛಸಿ ತಥಾ ಕುರು ॥"**

**ಎನ್ರು ಅರುಳಿಚೆಯ್ದವಾರೇ ಅರ್ಜುನನುಡೈಯ ಮುಖತ್ತಿಲುರಾವುತಲೈ ಕ್ಕಣ್ಡರುಳಿಯಿರುಕ್ಕಚ್ಚೆಯ್ದೇ ಕಡುಹ ಲಘೂಪಾಯತ್ತೈ ಯರುಳಿಚ್ಚೆಯ್ಯಾದೇ 1) "ಪರೀಕ್ಷಾಂಚ ಜಗನ್ನಾಥಃ ಕರೋತ್ಯ ದೃಢ**

---

ಕಾಲಸಾಧ್ಯವಾಗಿ, **ಸರ್ವಾಂತರಾಯ ರಹಿತಮಾಯ್** – ಸರ್ವ ವಿಘ್ನರಹಿತವಾಗಿ **ಸುಕರಮಾನ** – ಸುಲಭವಾಗಿ ಅನುಷ್ಠಿಸಲ್ಪಡತಕ್ಕ ಪ್ರಪತ್ತಿರೂಪ ಉಪಾಯವನ್ನು, ತೋರಿಸಿ ಕೊಟ್ಟು **ಅಮ್ಮುಖತ್ತಾಲೇ** – ಅದರ ಮುಖವಾಗಿ ಫಲಸಿದ್ಧಿಯಲ್ಲಿ ನಿರ್ಭರನನ್ನಾಗಿಯೂ, ನಿಸ್ಸಂಶಯನನ್ನಾಗಿಯೂ ಇರುವಂತೆ ಮಾಡಿದನು. ಅನಂತರ **ಮಾಶುಚಃ** – ದುಃಖಿಸಬೇಡ ಎಂದು ಹೇಳಿದರೆ ಇದು ಭಕ್ತಿ ರೂಪ ಉಪಾಯಾಂತರವನ್ನು **ದೌಷ್ಕರ್ಯಾದಿಗಳಡಿಯಾಹ** – ಮಾಡಲಸಾಧ್ಯವೆಂಬ ನಿಮಿತ್ತವಾಗಿ, ಉಂಟಾದ **ಶೋಕವನ್ನು** ನಿವರ್ತಿಸುತ್ತದೆಯಲ್ಲವೇ.

**ಇಭ್ಭಗವದ್ಗೀತೆಯಿಲ್ ಮುರ್ಪಡ** ಇತ್ಯಾದಿ - ಈ ಭಗವದ್ಗೀತೆಯಲ್ಲಿ, **ಮುರ್ಪಡ** – ಆರಂಭದಲ್ಲಿ ಎರಡನೇ ಅಧ್ಯಾಯದಲ್ಲಿ, ಅಚೇತನವಾದ ಪ್ರಕೃತಿಗಿಂತ ಚೇತನನಾದ ಜೀವನು ಬೇರೆ ಎಂಬ ಜ್ಞಾನವನ್ನು ಉಂಟುಮಾಡಿ, ಅನಂತರ ಮೂರನೆ ಅಧ್ಯಾಯದಿಂದ ಆರಂಭಿಸಿ ಹದಿನೆಂಟನೇ ಅಧ್ಯಾಯ ಪರ್ಯಂತ ಪರಂಪರೆಯಾಗಿ ಮೋಕ್ಷ ಕಾರಣಗಳಾದ ಕರ್ಮ ಯೋಗ ಜ್ಞಾನ ಯೋಗಗಳನ್ನೂ, ಸಾಕ್ಷಾನ್ಮೋಕ್ಷ ಸಾಧನವಾಗಿ ವೇದಾಂತ (ಉಪನಿಷತ್ತು) ಗಳಲ್ಲಿ ವಿಧಿಸಲ್ಪಟ್ಟ ಭಕ್ತಿಯೋಗವನ್ನೂ ಸಪರಿಕರವಾಗಿ ಉಪದೇಶಿಸಿ, (1) **"ಇತಿತೇ ಜ್ಞಾನ ಮಾಖ್ಯಾತಂ"** ಎಂದಾರಂಭಿಸಿ, ನಿನಗೆ ಹೀಗೆ ಪರಮ ಗುಹ್ಯವಾದ ಭಕ್ತಿಯೋಗ ರೂಪವಾದ ಜ್ಞಾನವು ಉಪದೇಶಿಸಲ್ಪಟ್ಟಿತು, ಇದನ್ನು ಪೂರ್ಣವಾಗಿ ವಿಮರ್ಶಿಸಿ ನಿನಗೆ ಕರ್ಮಯೋಗದಲ್ಲಿಯಾಗಲಿ, ಜ್ಞಾನ ಯೋಗದಲ್ಲಿಯಾಗಲಿ, ಭಕ್ತಿಯೋಗದಲ್ಲಿಯಾಗಲಿ, ಯಾವುದರಲ್ಲಿ ಅಧಿಕಾರವೋ ಅದನ್ನು ವಿಮರ್ಶಿಸಿ ಅನುಷ್ಠಿಸು, ಎಂದು ಗೀತಾಚಾರ್ಯನು ಕೃಪೆ ಮಾಡಿ ಹೇಳಲು, ಅರ್ಜುನನ **ಮುಖದಲ್ಲಿ ಉರಾವುದಲೈ** – ದೈನ್ಯವನ್ನು **ನೋಡಿಕೊಂಡು** (ಅಂದರೆ ದುಷ್ಕರವಾದ ಕರ್ಮ ಯೋಗಾದಿಗಳನ್ನು ಮಾಡೆಂದು ನಿರ್ಬಂಧಿಸುತ್ತಾನೆಯಲ್ಲಾ ಎಂಬ ದೈನ್ಯತೆ) **ಕಡುಹಲಘೂಪಾಯತ್ತೈ** ಇತ್ಯಾದಿ - ಶೀಘ್ರವಾಗಿ **ಲಘೂಪಾಯವನ್ನು** ಉಪದೇಶಿಸದೆ **(1) ಪರೀಕ್ಷಾಂಚ ಜಗನ್ನಾಥಃ** ಇತ್ಯಾದಿ ದೃಢವಾದ ಮನಸ್ಸಿಲ್ಲದವರನ್ನು ಭಗವಂತನು ಪರೀಕ್ಷಿಸುತ್ತಾನೆಂದು ಹೇಳುವ ರೀತಿಯನ್ನು

---

1) ಭಗವದ್ಗೀತೆ (18-63)

1) ಪರೀಕ್ಷಾಂಚ ಜಗನ್ನಾಥಃ ಕರೋತ್ಯ ದೃಢ ಚೇತಸಾಮ್ ।
ನರಾಣಾಮರ್ಥ ವಿಧ್ವಂಸ ನಿಕಷೇಷು ಜನಾರ್ದನಃ ॥ ವಿಷ್ಣುಧರ್ಮ (74-89)

ಭಗವಂತನು ತನ್ನಲ್ಲಿ ಪೂರ್ಣ ಭಕ್ತಿಯಿಲ್ಲದವರ ಹಣಕಾಸುಗಳನ್ನು ಧ್ವಂಸ ಮಾಡಿ, ಹಾಗೆಯೂ ಅವರು ತನ್ನಲ್ಲಿ ಭಕ್ತಿಯಿಂದ ಕೂಡಿದ್ದಾರೆಯೋ ಎಂಬುದನ್ನು ಪರೀಕ್ಷೆ ಮಾಡುತ್ತಾನೆ.

**ಚೇತಸಾವ್", ಎನ್ಱಿರ ಕಟ್ಟಳೈಯೈ ಕಂಡರುಳಿ, ನಾಮ್ ಇನ್ನದುನಕ್ಕು ಸಾಕ್ಷಾನ್ಮೋಕ್ಷ ಸಾಧನಮಾನ ಪರಮಹಿತಮ್, ಇತ್ತೈ ಪ್ರಧಾನಮಾಹ ಕ್ಕಣಿಶಿತ್ತು, ಇದಕ್ಕು ಅನುರೂಪಮಾಹ ವರ್ತಿ ಎನ್ಱು ನಿಗಮಿಯಾದೇ 2) "ಏಷಪಂಥಾ ವಿದರ್ಭಾಣಾಮೇಷ ಯಾಸ್ಯತಿಕೋಸಲಾನ್" ಎನ್ನುಮಾಪ್ಪೋಲೇ, ಉಪೇಕ್ಷಕತ್ವ ಶಂಕೈಪಣ್ಣಲಾಮ್ಪಡಿ, "ಯಥೇಚ್ಛಸಿ ತಥಾಕುರು" ಎನ್ಱು ಶೊಲ್ಲಿತ್ತಲೈ ಕ್ಕಟ್ಟಿನೋಮ್ ಎನ್ಱು ಇದು ವ್ಯಾಜಮಾಹ ಶೋಕಿತ್ತಾನೆನ್ಱು ಭಾವಿತ್ತು, ಇನ್ನು ಮೊರುನಿಲೈ ಪ್ರಧಾನಮಾನ ಭಕ್ತಿ ಯೋಗತ್ತೈ ನಿಷ್ಕರ್ಷಿತ್ತು ಉಪದೇಶಿತ್ತುಪ್ಪಾರ್ಪ್ಪೋಮೆನ್ಱು ಇದೊರು ವಿನೋದತ್ತೈ ಕ್ಕಣಿಶಿತ್ತರುಳಿ, ಪಣ್ಡು ಉಪದೇಶಿತ್ತ ಭಕ್ತಿಯೋಗಮ್ ತನ್ನೈಯೇ "ಸರ್ವಗುಹ್ಯತಮಮ್ ಭೂಯಃ" ಎನ್ಱು ತುಡಙ್ಗಿ ಇರಣ್ಡು ಶ್ಲೋಕತ್ತಾಲೇ ಅತ್ಯಾದರಂ ತೋತ್ತ ಸಪ್ರತ್ಯಭಿಜ್ಞಮಾಮ್ಪಡಿ ನಿಷ್ಕರ್ಷಿತ್ತು ನಿಗಮಿಕ್ಕ ಅವ್ವಳವಿಲುಮ್ ಇವನ್ಶೋಕಮ್ ಇರಟ್ಟಿತ್ತು ತೋತ್ತಿನ ಪಡಿಯೈ ಕ್ಕಣ್ಡರುಳಿನ ಸಾರಥಿ ರೂಪನಾನ ಸರ್ವೇಶ್ವರನ್, ಇನಿ ಇವನ್ ಪರಮ ರಹಸ್ಯಮಾಯ್ ಅತಿ ಲಘುವಾನ ಮೋಕ್ಷೋಪಾಯತ್ತೈ ಉಪದೇಶಿಕ್ಕೈಕ್ಕು ಪೂರ್ಣಪಾತ್ರ ಮಾನಾನೆನ್ಱು ತಿರುವುಳ್ಳಂಪತ್ತಿ ಅರುಳಿಚ್ಚೆಯ್ಯ ಪ್ಪೋಹಿರ ಶೀರಿಯ ಲಘೂಪಾಯತ್ತುಕ್ಕು ಪ್ರಶಂಸಾ ರೂಪಮಾನ ಒರುಕಾಲಕ್ಷೇಪಂ ಪಣ್ಣಾದೇ ಕಡುಹ ಸಕಲ ಫಲಸಾಧನಮಾನ ಸ್ವವಿಷಯ ಶರಣಾಗತಿಯೈ ಉಪದೇಶಿತ್ತು ಇವನುಡೈಯ ಮನೋರಥತ್ತುಕ್ಕುಮ್ ಸಾರಥಿಯಾಯ್ ಸರ್ವಶೋಕತ್ತೈಯುಮ್ ಕಳ್ಳಿ**

---

ತಿಳಿದು, ನಾವು "ನಿನಗೆ ಇದು ಪರಮಹಿತವಾದ ಮೋಕ್ಷ ಸಾಧನ, ಇದನ್ನು ಪ್ರಧಾನವಾಗಿ ತಿಳಿದು ಇದಕ್ಕೆ ಅನುಗುಣವಾಗಿ ವರ್ತಿಸು", ಎಂದು **ನಿಗಮಿಯಾದೇ** – ಹೇಳಿ ಮುಗಿಸದೇ (2) **ಏಷಪಂಥಾವಿದರ್ಭಾಣಾಂ** ಇತ್ಯಾದಿ – ಇದು ವಿದರ್ಭ ದೇಶಕ್ಕೆ ಹೋಗುವ ಮಾರ್ಗ, ಇದು ಕೋಸಲ ದೇಶಕ್ಕೆ ಹೋಗುವ ಮಾರ್ಗ, ಎಂದು ಹೇಳುವಂತೆ ಉಪೇಕ್ಷಕತ್ವ ಶಂಕೆಯನ್ನು ಮಾಡುವಂತೆ **ಯಥೇಚ್ಛಸಿ ತಥಾಕುರು** – ಕರ್ಮ ಯೋಗ ಜ್ಞಾನಯೋಗ ಭಕ್ತಿಯೋಗಗಳಲ್ಲಿ ಯಾವುದರಲ್ಲಿ ನಿನಗೆ ಅಧಿಕಾರವೋ ಅದನ್ನು ಮಾಡು ಎಂದು ಹೇಳಿ ಮುಗಿಸಿದೆವು, ಎನ್ಱು **ಇದುವ್ಯಾಜಮಾಹ** – ಎಂದು ಇದನ್ನು ವ್ಯಾಜವಾಗಿಟ್ಟುಕೊಂಡು ಶೋಕಿಸುತ್ತಾನೆಂದು ಭಾವಿಸಿ, **ಇನ್ನಮೊರುನಿಲೈ** ಇತ್ಯಾದಿ ಇನ್ನೂ ಒಂದು ಸಲ ಪ್ರಧಾನವಾದ ಭಕ್ತಿಯೋಗವನ್ನು ನಿಷ್ಕರ್ಷಿಸಿ ಉಪದೇಶ ಮಾಡಿ ನೋಡೋಣ ಎಂದು ಈ ಒಂದು ವಿನೋದವನ್ನು ಗಣನೆ ಮಾಡಿ, ಪೂರ್ವದಲ್ಲಿ ಉಪದೇಶಿಸಿದ ಭಕ್ತಿಯೋಗವನ್ನೇ **"ಸರ್ವಗುಹ್ಯತಮಂಭೂಯಃ"** ಎಂದಾರಂಭಿಸಿ ಎರಡು ಶ್ಲೋಕಗಳಿಂದ ಅತ್ಯಾದರವು ಉಂಟಾಗುವಂತೆ, ಮೊದಲು 9ನೇ ಅಧ್ಯಾಯದಲ್ಲಿ ಹೇಳಲ್ಪಟ್ಟ ಭಕ್ತಿಯೋಗವೇ ಇದು ಎಂದು ಜ್ಞಾಪಕಕ್ಕೆ ಬರುವಂತೆ ನಿಷ್ಕರ್ಷಿಸಿ ನಿಗಮಿಸಿದನು. **ಅವ್ವಳವಿಲು ಮಿವನ್ ಶೋಕಮ್** ಇತ್ಯಾದಿ - ಆಗಲೂ, ಇವನ ಶೋಕವು ದ್ವಿಗುಣೀ ಭೂತವಾಗಿ ತೋರಿದ ರೀತಿಯನ್ನು ನೋಡಿದ ಸಾರಥಿ ರೂಪಿಯಾದ **ಸರ್ವೇಶ್ವರನು**, ಇನ್ನು ಇವನು ಪರಮ ರಹಸ್ಯವಾಗಿ ಅತಿಲಘುವಾದ ಮೋಕ್ಷೋಪಾಯವನ್ನು ಉಪದೇಶಿಸಲು **ಪೂರ್ಣಪಾತ್ರ** ನಾಗಿದ್ದಾನೆಂದು ಭಾವಿಸಿ, ತಾನು ಕೃಪೆಮಾಡಿ ಹೇಳುವ ಉತ್ಕೃಷ್ಟವಾದ ಲಘೂಪಾಯವಾದ ಸ್ವತಂತ್ರ ಪ್ರಪತ್ತಿಗೆ, ಪ್ರಶಂಸಾ ರೂಪವಾದ ಒಂದು ಕಾಲಕ್ಷೇಪವನ್ನು ಮಾಡದೆ ಶೀಘ್ರದಲ್ಲಿಯೇ ಸಕಲ ಫಲ ಸಾಧನವಾದ ಸ್ವವಿಷಯಕವಾದ ಸ್ವತಂತ್ರ ಶರಣಾಗತಿಯನ್ನು ಉಪದೇಶಿಸಿ, ಇವನ ಮನೋರಥಕ್ಕೆ **ಸಾರಥಿಯಾಯ್** –

---

2) ಏಷ ಪಂಥಾ ವಿದರ್ಭಾಣಾಂ ಏಷಯಾಸ್ಯತಿ ಕೋಸಲಾನ್ ।
ಅತಃ ಪರಂಚ ದೇಶೋऽಯಂ ದಕ್ಷಿಣೋ ದಕ್ಷಿಣಾ ಪಥಃ ॥ ಭಾರತ ವನಪರ್ವ (50-48)
ಇದು ವಿದರ್ಭ ದೇಶಕ್ಕೆ ಹೋಗುವ ಮಾರ್ಗ. ಇದು ಕೋಸಲ ದೇಶಕ್ಕೆ ಹೋಗುವ ಮಾರ್ಗ. ಇದಕ್ಕಿಂತಲೂ ಬೇರೆಯಾದದ್ದು ದಕ್ಷಿಣ ದೇಶವು. ಇದು ದಕ್ಷಿಣ ಮಾರ್ಗವಲ್ಲವೆ (ನಳನು ದಮಯಂತಿಗೆ ಹೇಳುವ ಮಾತು ಇದು).

ಕ್ಕಿರಾನಾಹೈಯಾಲೇ, ಇಙ್ಗು ನಿವಾರಿಕ್ಕಿರ ಶೋಕಮ್, ಪೂರ್ವಯ ಶೋಕಙ್ಗಳಿಲ್ ವೇರುಪಟ್ಟದೆನ್ರು ಮಿಡಮ್ ಪ್ರಕರಣ ಪರಾಮರ್ಶತ್ತಾಲೇ ಸುವ್ಯಕ್ತಮ್.

### ಚರಮಶ್ಲೋಕೇ ನಿರ್ಭರತ್ವ, ನಿರ್ಭಯತ್ವ, ನಿಸ್ಸಂಶಯತ್ವಾದಿಃ ಫಲಿತಮ್

ಉಪಾಯಾನ್ತರ ರಹಿತನಾನವನೈಕ್ಕುರಿತ್ತು "ಮಾಮೇಕಂ ಶರಣಂವ್ರಜ" ಎನ್ರು ವಿಧಿತ್ತಕಟ್ಟಳೈಯಿಲೇ ಅಶಕ್ತನಾನವನ್ ಶಕ್ತನ್‌ಕೈಯಿಲೇ ಭರಸಮರ್ಪಣಂ ಪಣ್ಣುಹೈಯಾಲುಮ್, ಸ್ವತಂತ್ರ ಕಾರುಣಿಕನಾನ ಶೇಷಿ ಭರಸ್ವೀಕಾರಂ ಪಣ್ಣುಹೈಯಾಲುಮ್ ಇಪ್ರಪನ್ನನುಕ್ಕು ಇಶ್ಲೋಕತ್ತಿಲ್ ಪೂರ್ವಾರ್ಧತ್ತಿಲೇ ನಿರ್ಭರತ್ವಮುಮ್, ಸರ್ವಶಕ್ತಿಯಾಯ್ ಸ್ವೀಕೃತಭರನಾಯ್ ಆಶ್ರಿತವಿಷಯತ್ತಿಲ್ ಸತ್ಯವಾದಿಯಾನ ಶೇಷಿ "ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎನ್ರು ಅರುಳಿಚ್ಚೆಯ್‌ಗೈಯಾಲೇ ನ್ಯಸ್ತಭರನಾನ ಇವನುಕ್ಕಿನಿ ಆಗಾಮಿ ನರಕಾದಿ ಪ್ರತ್ಯವಾಯ ಶಂಕಾ ಪ್ರಸಂಗ ಮಿಲ್ಲಾಮೈಯಾಲೇ ನಿರ್ಭಯತ್ವಮುಮ್, ಇಶ್ಲೋಕಮ್ (1) ಶೆಮ್ಮೈಯುಡೈಯ ತಿರುವರಂಗರ್‌ತಾಮ್ ಪಣಿತ್ತ ಮೆಯ್ಮ್ಮೈ ಪ್ಪೆರುವಾರ್‌ತ್ತೈಯಾಹೈಯಾಲೇ ನಿಸ್ಸಂಶಯತ್ವಮುಮ್ ಫಲಿತಮ್.

---

ಪ್ರವರ್ತಕನಾಗಿ (ಲಘೂಪಾಯವನ್ನು ಮಾಡುವಂತೆ) ಸರ್ವಶೋಕವನ್ನೂ ನಿವರ್ತಿಸುತ್ತಾನೆಯಾದ್ದರಿಂದ, ಇಲ್ಲಿ ನಿವರ್ತಿಸುವ ಶೋಕವು ಪೂರ್ವದಲ್ಲಿ ಉಂಟಾದ ಶೋಕಗಳಿಗಿಂತ ಬೇರೆಯಾದುದು ಎಂಬುದು ಪ್ರಕರಣ ಪರಾಮರ್ಶದಿಂದ ಸುವ್ಯಕ್ತ.

### ಚರಮಶ್ಲೋಕದಲ್ಲಿ ನಿರ್ಭರತ್ವಾಗಳು ಫಲಿತ.

**ಉಪಾಯಾಂತರ ರಹಿತನಾನವನೈಕ್ಕುರಿತ್ತು** ಇತ್ಯಾದಿ- ಭಕ್ತಿ ರೂಪ ಉಪಾಯಾಂತರ ರಹಿತನಾದವನನ್ನು ಕುರಿತು, "ಮಾಮೇಕಂ ಶರಣಂ ವ್ರಜ", ಎಂದು ವಿಧಿಸಿದ ರೀತಿಯಲ್ಲಿ ಅಶಕ್ತನಾದ ಅಧಿಕಾರಿಯು ಶಕ್ತನಾದವನಲ್ಲಿ ಭರಸಮರ್ಪಣವನ್ನು ಮಾಡುವುದರಿಂದಲೂ, ಸ್ವತಂತ್ರಕಾರುಣಿಕನಾದ **ಶೇಷಿ** - ಸ್ವಾಮಿಯು ಭರಸ್ವೀಕಾರವನ್ನು ಮಾಡುವುದರಿಂದಲೂ ಈ ಪ್ರಪನ್ನನಿಗೆ ಈ ಶ್ಲೋಕದ ಪೂರ್ವಾರ್ಧದಲ್ಲಿ ನಿರ್ಭರತ್ವವೂ, ಸರ್ವಶಕ್ತಿಯಾಗಿ ಆಶ್ರಿತ ವಿಷಯದಲ್ಲಿ ಸತ್ಯವಾದಿಯಾದ ಶೇಷಿಯು **"ಅಹಂತ್ವಾಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ"**, ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡುಸುತ್ತೇನೆ, ಎಂದು ಹೇಳಿರುವುದರಿಂದ, ನ್ಯಸ್ತ ಭರನಾದ ಈ ಪ್ರಪನ್ನನಿಗೆ ಇನ್ನು ಮೇಲೆ ಆಗಾಮಿ ನರಕಾದಿ ಪ್ರತ್ಯವಾಯ ಶಂಕಾ ಪ್ರಸಂಗವು ಇಲ್ಲದೆ ಇರುವುದರಿಂದ **ನಿರ್ಭಯತ್ವವೂ** ಏರ್ಪಡುತ್ತದೆ. ಇಶ್ಲೋಕಮ್ (1) **ಶೆಮ್ಮೈಯುಡೈಯ** ಇತ್ಯಾದಿ - ಈ ಶ್ಲೋಕವು **ಋಜು ಸ್ವಭಾವವುಳ್ಳ** ಶ್ರೀರಂಗನಾಥನು ತಾನೇ ಹೇಳಿದ, ಯಾಥಾರ್ಥ್ಯವಾದ ದೊಡ್ಡಮಾತಾದ್ದರಿಂದ ನಿಸ್ಸಂಶಯತ್ವವೂ ಫಲಿತ.

---

1. ಶೆಮ್ಮೈಯುಡೈಯ ತಿರುವರಂಗರ್‌ತಾಮ್ ಪಣಿತ್ತ
ಮೆಯ್ಮ್ಮೈ ಪ್ಪೆರುವಾರ್ತ್ತೈ ವಿಷ್ಣು ಚಿತ್ತರ್ ಕೇಟ್ಟಿರುಪ್ಪರ್ ।
ತಮ್ಮೈಯುಹಪ್ಪಾರೈ ತ್ತಾಮುಹಪ್ಪರೆನ್ನುಮ್ ಶೊಲ್
ತಮ್ಮಿಡೈಯೇ ಪೊಯ್ಯಾನಾಲ್ ಶಾದಿಪ್ಪಾರಾರಿನಿಯೇ ॥ ನಾಚ್ಚಿಯಾರ್ ತಿರುಮೊಳಿ (11-10)

ಈ ಚರಮಶ್ಲೋಕವು ಋಜುವಾದ ಕಪಟ ಸ್ವಭಾವವಿಲ್ಲದ ಶ್ರೀರಂಗನಾಥನು ತಾನೇ ಹೇಳಿದ ಸತ್ಯವಾದ, ಶ್ಲಾಘ್ಯವಾದ ಮಾತು. ಇದನ್ನು ವಿಷ್ಣು ಚಿತ್ತರು ಕೇಳಿ ತಿಳಿದಿದ್ದಾರೆ. ತನ್ನನ್ನು ಪ್ರೀತಿಸುವವರನ್ನು, ತಾನೂ ಪ್ರೀತಿಸುತ್ತಾನೆಂಬ ಮಾತು, ತನ್ನಲ್ಲಿಯೇ ಸುಳ್ಳಾದರೆ, ಇನ್ನು ಮೇಲೆ ಹೇಳುವುದೇನಿದೆ. ಈ ಮಾತು ಸುಳ್ಳಾಗುವುದಿಲ್ಲವೆಂದು ಭಾವ.

**ಆಹೈಯಾಲಿಙ್ಗು ಉಪಾಯ ವಿಶೇಷ ಶ್ರವಣಾನುಷ್ಠಾನಙ್ಗಳ್ ವನ್ದಾಲ್ ಉಪಾಯಾನು ಬಂಧಿಯಾಯುಮ್ ಫಲಾನುಬಂಧಿಯಾಯುಮ್ ವರುಮ್ ಶೋಕತ್ತಿಲ್ ಪ್ರಾಪ್ತಿಯಿಲ್ಲೈ ಯೆನ್ಱಿರದು.**

**ಪ್ರಪದನೇ ಶೋಕೋ ಭೀತಿಶ್ಚ ಅಧಿಕಾರಃ**

**ಇತ್ತಾಲೇ ಶೋಕವಿಶೇಷಾವಿಷ್ಟರ್ ಪ್ರಪತ್ತಿಕ್ಕು ಅಧಿಕಾರಿಯೆನ್ಱು ತೋತ್ತಾನಿರ್ಕ "ಅಹಂ ಭೀತೋಽಸ್ಮಿ" ಎನ್ಱುಮ್, ಪಾವೀ ತಳ್ಳುವೆನ ಪೊಹ್ಱಿವದರ್ಕಿಞ್ಜಿ ನಮ್ಬುನೇವನ್ದುನ್ ತಿರುವಡಿ ಯಡೈನ್ದೇನ್" ಎನ್ಱುಮ್. ಭೀತನಾನವನ್ ಪ್ರಪತ್ತಿಕ್ಕು ಅಧಿಕಾರಿ ಎನ್ಱು ಶೊಲ್ಲುಹಿರಪಡಿ ಎನ್ನೆನ್ನಿಲ್? ಕೀ಴್ ಅಭಿಮತಮ್ ಸಿದ್ಧಿಯಾದೇ ನಿನ್ಱನಿಲೈಯೈಪ್ಪಾರ್ತು ಶೋಕಮುಮ್, ಮೇಲಭಿಮತತ್ತುಕ್ಕು ಪ್ರತಿಬಂಧಕಙ್ಗಳಾನ ಪ್ರಬಲ ವಿರೋಧಿಹಳೈ ಪ್ಪಾರ್ತ್ತು ಭಯಮುಮ್, ನಡೈಯಾಡುಹಿಱದಾಲ್ಯೈಯಾಲೇ ಮುಮುಕ್ಷುವುಕ್ಕು ಅನಿಷ್ಟ ನಿವೃತ್ತಿಯಿಲುಮ್ ಇಷ್ಟಪ್ರಾಪ್ತಿಯಿಲುಮ್ ಒನ್ಱೈಚ್ಚೊಲ್ಲ ಇರಣ್ಡುಮ್ ವರುಮಾಪ್ಪೋಲೇ ಅಧಿಕಾರತ್ತಿಲುಮ್, ಒನ್ಱೈಚ್ಚೊಲ್ಲ ಇರಣ್ಡುಮ್ ಸಿದ್ಧಿಕ್ಕುಮ್. ಅತ್ಯಂತಾಕಿಂಚನನುಕ್ಕು ಭಯಶೋಕಙ್ಗಳಿರಣ್ಡುಮ್ ವಿಂಜಿ ಇರುಕ್ಕುಮ್. ಆಹೈಯಾಲ್ ಇಙ್ಗು ಅತಿಶಯಿತ ಶೋಕಾವಿಷ್ಟನಾನ**

---

**ಆಹೈಯಾಲಿಂಗು** ಇತ್ಯಾದಿ – ಆದ್ದರಿಂದ ಇಲ್ಲಿ ಚರಮಶ್ಲೋಕದಲ್ಲಿ ಹೇಳಿರುವ ಉಪಾಯ ವಿಶೇಷ ಶ್ರವಣವು ಅನುಷ್ಠಾನಾಂತವಾಗಿ ಪರ್ಯವಸಾನವಾದರೆ, ಉಪಾಯಾನು ಬಂಧಿಯಾಗಿಯೂ, ಚಕಾರದಿಂದ, ಫಲಾನುಬಂಧಿಯಾಗಿಯೂ ಬರುವ ಶೋಕದಲ್ಲಿ ಪ್ರಾಪ್ತಿಯಿಲ್ಲವೆಂದು ತಿಳಿಸುತ್ತದೆ.

**ಶೋಕಾವಿಷ್ಟನು ಪ್ರಪತ್ತಿಗೆ ಅಧಿಕಾರಿ ಎಂದು ಹೇಳುವಾಗ, ಭಯವುಳ್ಳವನೂ ಪ್ರಪತ್ತಿಗೆ ಅಧಿಕಾರಿ ಎಂದು ಹೇಳುವುದರ ತಾತ್ಪರ್ಯ**

**ಇತ್ತಾಲೇ** ಇತ್ಯಾದಿ – ಇದರಿಂದ ಶೋಕ ವಿಶೇಷದಿಂದ ಕೂಡಿದವನು ಪ್ರಪತ್ತಿಗೆ ಅಧಿಕಾರಿ ಎಂದು ತೋರುವಾಗ, **'ಅಹಂಭೀತೋಽಸ್ಮಿ'** – ನಾನು ಹೆದರಿದವನು ಎಂದೂ **ಪಾವೀತಳ್ಳುವೆನಪೊಹ್ಱಿವದರ್ಕಂಜಿ** ಇತ್ಯಾದಿ – ಎಲೈ ಪರದಾರಗಮನವನ್ನು ಮಾಡಿದ ಪಾಪಿ ಈ ಅಗ್ನಿಯಿಂದ ಜ್ವಲಿಸುವ ಸ್ತ್ರೀರೂಪವಾದ ತಾಮ್ರ ಬೊಂಬೆಯನ್ನು ಕಟ್ಟಿಕೋ ಎಂದು ಯಮ ಭಟರು ಹೇಳುವ ಮಾತಿಗೆ ಅಂಜಿ, ನನ್ನ ಸ್ವಾಮಿಯೇ! ನಿನ್ನ ಶ್ರೀ ಪಾದಗಳನ್ನು ಶರಣ ಹೊಂದಿದ್ದೇನೆ ಎಂದೂ, ಹೆದರಿದವನು ಪ್ರಪತ್ತಿಗೆ ಅಧಿಕಾರಿಯೆಂದು ಹೇಳುವುದರ ಅರ್ಥವೇನೆಂದರೆ, **ಕೀೞ್ಅಭಿಮತಮ್ ಸಿದ್ಧಿಯಾದೇ ನಿನ್ಱ** ಇತ್ಯಾದಿ – ಪೂರ್ವದಲ್ಲಿ ಅಭಿಮತವು ಸಿದ್ಧಿಸದೆ ಇರುವ ಕಾರಣವಾದ ಉಪಾಯ ದೌಷ್ಕರ್ಯದಿಂದ ಏರ್ಪಟ್ಟ ತನ್ನ ಸ್ಥಿತಿಯನ್ನು ನೋಡಿ ಶೋಕವೂ, ಪ್ರಪತ್ತ್ಯನಂತರ ಅಭಿಮತಕ್ಕೆ ಪ್ರತಿಬಂಧಕಗಳಾದ ಪ್ರಬಲ ವಿರೋಧಿಗಳನ್ನು ನೋಡಿ ಭಯವೂ ಉಂಟಾಗುತ್ತದೆಯಾದ್ದರಿಂದ ಮುಮುಕ್ಷುವಿಗೆ ಅನಿಷ್ಟ ನಿವೃತ್ತಿಯಲ್ಲೂ ಇಷ್ಟ ಪ್ರಾಪ್ತಿಯಲ್ಲೂ ಒಂದನ್ನು ಹೇಳಿದರೆ ಶೋಕ ಭಯಗಳೆರಡೂ ಬರುವಂತೆ, ಅಧಿಕಾರದಲ್ಲಿಯೂ ಭಯ ಶೋಕಗಳಲ್ಲಿ ಒಂದನ್ನು ಹೇಳಿದರೆ ಎರಡೂ ಸಿದ್ಧಿಸುತ್ತವೆ. **ಅತ್ಯಂತಾಕಿಂಚನನುಕ್ಕು** ಇತ್ಯಾದಿ - ಉಪಾಯಾಂತರ ಶಕ್ತನಿಗೆ ವಿಘ್ನಗಳು ಅನೇಕವಾಗಿದ್ದು, ಬಹ್ವಾಯಾಸ ಸಾಧ್ಯವಾದ್ದರಿಂದ ಈ ಫಲವು ಹೇಗೆ ಸಿದ್ಧಿಸುತ್ತದೆಯೆಂಬ ಶೋಕವೂ ಭಯವೂ ಸ್ವಲ್ಪವಾಗಿಯಾದರೂ ಬರಲು ಸಾಧ್ಯ. ಉಪಾಯಾಂತರಾಶಕ್ತನಾದ ಅತ್ಯಂತಾಕಿಂಚನನಿಗೆ, ಉಪಾಯಾಂತರವಾದ ಭಕ್ತಿಯೋಗವು ತನ್ನಿಂದ ಅನುಷ್ಠಿಸಲು ಸಾಧ್ಯವಿಲ್ಲವೆಂದು ನಿಶ್ಚಯವಿರುವಾಗ ಶೋಕ ಭೀತಿಗಳು ಅಧಿಕವಾಗಿ ಇರುವುದರಿಂದ, ಈ ಅಧಿಕವಾದ ಶೋಕ ಭೀತಿಯೇ ಅಧಿಕಾರವಾದ್ದರಿಂದ ಅದನ್ನು ವಿಶೇಷಿಸಿ ಪ್ರಪತ್ತ್ಯಧಿಕಾರವೆಂದು ಹೇಳಬಹುದೆಂದು ತಾತ್ಪರ್ಯ. **ಆಹೈಯಾಲಿಂಗು** ಇತ್ಯಾದಿ – ಆದ್ದರಿಂದ ಇಲ್ಲಿ ಅತಿಶಯಿತ ಶೋಕಾವಿಷ್ಟನಾದ ಈ ವಿಶೇಷಾಧಿಕಾರಿಗೆ

**ಅಧಿಕಾರಿ ವಿಶೇಷತ್ತುಕ್ಕು ಅನುಗುಣಮಾನ ಉಪಾಯವಿಶೇಷತ್ತೈಕ್ಕಾಟ್ಟಿ, ಇವನೈ ನಿಸ್ಸಂಶಯನುಮಾಯ್ ನಿರ್ಭರನುಮಾಯ್, ನಿರ್ಭಯನುಮಾಯ್, ಹೃಷ್ಟಮನಾವು ಮಾಕ್ಕಿತ್ತಲೈಕಟ್ಟುಹಿರದು.**

**ಇವ್ವತಿಶಯಿತಭಯತ್ತೈಪ್ಪತ್ತ "ಅಂಜಿನ ನೀಯೆನ್ನೈಯಡೈ ಎನ್ರಾರ್‌ವನ್ನಾರ್", ಎನ್ರುವಮ್ ಶೊನ್ನೋಮ್.**

**ಇಪ್ಪಡಿ ಕೃತಕೃತ್ಯನಾನ ಇವನುಕ್ಕು (1) "ತತ್ತ್ವಕರ್ಮಸಮಾಚರೇತ್" ಎನ್ರು ವಿಹಿತಮಾನ ಕರ್ತವ್ಯಾಂತರಮ್ ಕೈಂಕರ್ಯಾನು ಪ್ರವಿಷ್ಟ ಸದಾಚಾರ ವಿಶೇಷ ಮೆನ್ರು ಮಿಡಮ್ ಪೂರ್ವಾಪರಗ್ರಂಥ ಙ್ಗಳಾಲುಮ್ ಇಶ್ಲೋಕಮ್ ತನ್ನಿಲ್ "ಅಕ್ರಿಯಾವದನರ್ಥಾಯ" ಎನ್ಗೈಯಾಲುಮ್ ಸಿದ್ಧಮ್.**

### ಪ್ರಪನ್ನಸ್ಯ ಹೃಷ್ಟಮನಸ್ಕತ್ವಮ್ ಕಥಮಿತಿಶಂಕಾಪರಿಹಾರಃ

**ಆಹೈಯಾಲ್ ಮೇಲ್‌ಫಲಸಿದ್ಧಿಯಿಲ್ ಸಂಶಯಮಿಲ್ಲಾಮೈಯಾಲುಮ್ ಸ್ವೋಕ್ಷೋಪಾಯಮಾಹ**

---

ಅನುಗುಣವಾದ ಉಪಾಯ ವಿಶೇಷವನ್ನು ತೋರಿಸಿ ಇವನನ್ನು ನಿಸ್ಸಂಶಯನನ್ನಾಗಿಯೂ ನಿರ್ಭರನನ್ನಾಗಿಯೂ, ನಿರ್ಭಯನನ್ನಾಗಿಯೂ, **ಹೃಷ್ಟಮನಾವುಮಾಕ್ಕಿ** – ಸಂತೋಷದಿಂದ ಕೂಡಿದ ಮನಸ್ಸುಳ್ಳವನನ್ನಾಗಿ **ತಲೈಕ್ಕಟ್ಟುಹಿರದು** - "ಮಾಶುಚಃ" ದುಃಖಿಸಬೇಡವೆಂದು ಹೇಳಿ ಪೂರ್ತಿಗೊಳಿಸುತ್ತಾರೆ. ಆದಾಗಿ 'ಸರ್ವಧರ್ಮಾನ್' ಎಂಬ ಶ್ಲೋಕದ ಪೂರ್ವಾರ್ಧದಿಂದ ನಿರ್ಭರತ್ವವೂ, ಉತ್ತರಾರ್ಧದಿಂದ ನಿರ್ಭಯತ್ವವೂ, ಶ್ಲೋಕದ ಸಮುದಾಯಾರ್ಥವಾಗಿ ನಿಸ್ಸಂಶಯತ್ವವೂ, ಫಲಿಸುವಂತೆ "ಮಾಶುಚಃ" ಎಂಬುದರಿಂದ ಫಲವು ಅವಶ್ಯ ಸಿದ್ಧಿಸುತ್ತದೆ ಎಂಬ ಮನಸ್ಸಂತೋಷವೂ ಫಲಿಸುತ್ತದೆಂದು ತಾತ್ಪರ್ಯ **ಇವ್ವತಿಶಯತ್ತೈಪ್ಪಟ್ರ** ಇತ್ಯಾದಿ– ಈ ಅತಿಶಯವನ್ನು ಕುರಿತು, "ಅಂಜಿನನೀಯೆನ್ನೈ ಅಡೈಯೆನ್ನಾರ್ ವಂದಾರ್" – ಅತ್ಯಂತ ಭೀತನಾದ ನೀನು ನನ್ನನ್ನು ಕುರಿತು ಶರಣನಾಗು ಎಂದು ಆಚಾರ್ಯರು ತಿರುಚ್ಚಿನ್ನಮಾಲೈ 8ನೇ ಪಾಶುರದಲ್ಲಿ ಹೇಳಿರುವುದಾಗಿ, ತಿಳಿಸುತ್ತಾರೆ.

### ಪ್ರಪನ್ನನಿಗೆ ಶೋಕ ನಿವೃತ್ತಿಯೂ, ನಿರ್ವೇದವೂ ಪರಸ್ಪರ ವಿರೋಧವಲ್ಲ.

**ಇಪ್ಪಡಿ ಕೃತಕೃತ್ಯನಾನ ಇವನುಕ್ಕು** ಇತ್ಯಾದಿ – ಹೀಗೆ ಕೃತಕೃತ್ಯನಾದ ಇವನಿಗೆ (1) **"ತತ್ತ್ವಕರ್ಮ ಸಮಾಚರೇತ್"** ಎಂದು ವಿಹಿತವಾದ ಸಾಧುಕರ್ಮ, - ಕೈಂಕರ್ಯ ರೂಪವಾದ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮಗಳು, **ಎನ್ರುಮಿಡಮ್** ಇತ್ಯಾದಿ – ಎಂಬುದು ಪೂರ್ವಾಪರಗ್ರಂಥಗಳಿಂದಲೂ, ಈ ಶ್ಲೋಕದಲ್ಲಿ **"ಅಕ್ರಿಯಾವದನರ್ಥಾಯ"** - ಮಾಡದೆ ಹೋದರೆ ಅನರ್ಥವು ಏರ್ಪಡುತ್ತದೆ, ಎಂದು ಹೇಳಿರುವುದರಿಂದ ಸಿದ್ಧ. **ಆಹೈಯಾಲ್** ಇತ್ಯಾದಿ ಅದ್ದರಿಂದ ಮುಂದೆ ಫಲಸಿದ್ಧಿಯಲ್ಲಿ ಸಂಶಯವಿಲ್ಲದಿರುವುದರಿಂದಲೂ, ಇವನು ಮಾಡಬೇಕಾದ ಕರ್ತವ್ಯವು ಆಜ್ಞಾನುಪಾಲನ ರೂಪವಾದ ಸ್ವಯಂ ಪ್ರಯೋಜನವಾದ್ದರಿಂದಲೂ, ಅಪರಾಧಗಳು

---

1) "ಕ್ರಿಯಮಾಣಂ ನ ಕಸ್ಮೈಚಿತ್ ಯದರ್ಥಾಯ ಪ್ರಕಲ್ಪತೇ ।
ಅಕ್ರಿಯಾವದನರ್ಥಾಯ ತತ್ತ್ವಕರ್ಮ ಸಮಾಚರೇತ್ ॥" ಲಕ್ಷ್ಮೀತಂತ್ರ (17–88)

ಯಾವಕರ್ಮವು ಅನುಷ್ಠಿಸಲ್ಪಟ್ಟದಾಗಿ ಫಲವನ್ನು ಕೊಡುವುದಿಲ್ಲವೋ, ಮಾಡದೇ ಇದ್ದರೆ ಅನರ್ಥವನ್ನುಂಟು ಮಾಡುತ್ತದೆಯೋ ಅಂಥಹ ನಿತ್ಯಕರ್ಮವನ್ನು ಪ್ರಪನ್ನನು ಕೈಂಕರ್ಯ ಬುದ್ಧಿಯಿಂದ ಮಾಡತಕ್ಕವನು.

ಒರುಕರ್ತವ್ಯ ಶೇಷಮಿಲ್ಲಾಮೈಯಾಲುಮ್, ಇವನುಕ್ಕುಳ್ಳಕರ್ತವ್ಯಮ್ ಅಜ್ಞಾನುಪಾಲನರೂಪಮಾನ ಸ್ವಯಂಪ್ರಯೋಜನಮಾಹೈಯಾಲುಮ್, ಅಪರಾಧಮ್ ಪ್ರಸಕ್ತಮಾನಾಲ್ ಅಧಿಕಾರಾನ್ತರತ್ತಿಲ್‌ಚೊನ್ನ ಕಟ್ಟಳೈಯಿಲೇ "ಅನುತಾಪಾದಿಹಳಾಲೇ ಸುಪರಿಹರಮಾಹೈಯಾಲುಮ್ ಇವನ್ ಹೃಷ್ಟಮನಾಮಾಹಕ್ಕುರೈಯಿಲ್ಲೈ. ಇನ್ದಹರ್ಷಮ್ ವಿವೇಕಿಯಾಯ್ ಹೇಯಮಾನ ಶರೀರಾದಿಹಳೋಡೇ ತುವಕ್ಕುಣ್ಡಿರುಕ್ಕಿರ ಇವನುಕ್ಕು ನಿರ್ವೇದ ಮಿಶ್ರಮಾಯ್ ನಡನ್ದದೇ ಯಾಹಿಲುಮ್, ಇನ್ನಿರ್ವೇದಮುಮ್ ಇಶ್ಶೋಕ ನಿವೃತ್ತಿಯುಮ್ ಭಿನ್ನ ವಿಷಯಙ್ಗಳಾಹೈಯಾಲೇ ವಿರೋಧಮಿಲ್ಲೈ.

"ಮಾಶುಚಃ" ಎನ್ಱಿರವಿದುವೇ ಶೋಕನಿಮಿತ್ತಮಾನವೈಯೆಲ್ಲಾಮ್ ಮೋಚನೀಯಮಾಹೈಕ್ಕು ನಿಯಾಮಕ ಮಾಹೈಯಾಲೇ ಪ್ರಾರಬ್ಧಕರ್ಮತ್ತಿಲುಮ್ ಶೋಕ ನಿಮಿತ್ತಾಂಶಮೆಲ್ಲಾಮ್ ಕೞಿಗೈಯಾಲೇ ಅರ್ತ್ಯತಿಶಯ ಮುಡೈಯವನುಕ್ಕು ಅಪ್ಪೋದೇ ಮೋಕ್ಷಂ ಸಿದ್ಧಿಕ್ಕುಮ್. 1) "ಮರಣಮಾನಾಲ್ ವೈಹುಂದಂ ಕೊಡುಕ್ಕುಂ ಪಿರಾನ್" ಇತ್ಯಾದಿಹಳಿಲ್ ಪಡಿಯೇ ಪ್ರಾರಬ್ಧಕರ್ಮತ್ತಿಲುಮ್ ಮೇಲುಳ್ಳದೆಲ್ಲಾಮ್ ಕೞಿನ್ದು ಶರೀರಾವಸಾನತ್ತಿಲೇ ಮೋಕ್ಷಮೆನ್ಱಿಶೈಯ ವೇಣ್ಡಿಯದಾಲ್, ಇಶ್ಶರೀರಮ್ ತನ್ನಿಲುಮ್ ಆಯುಶ್ಶೇಷಮ್ ಅನಿಷ್ಟಮಾನಪೋದು ಇದುವುಮ್ ಪ್ರಪತ್ತಿ ವಶೀಕೃತ ಸರ್ವಶಕ್ತಿ ಸಙ್ಕಲ್ಪತ್ತಾಲೇ ಕೞಿಯುಕ್ಕುರೈಯಿಲ್ಲೈಯಿಱೇ.

---

ಪ್ರಸಕ್ತವಾದರೆ ಅಪರಾಧ ಪರಿಹಾರವೆಂಬ ಅಧಿಕಾರದಲ್ಲಿ ಹೇಳಿದ ರೀತಿಯಲ್ಲಿ ಅನುತಾಪಾದಿಗಳುಂಟಾಗಿ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡರೆ ಸುಲಭವಾಗಿ ಪರಿಹೃತಗಳಾಗುವುದರಿಂದಲೂ, ಇವನು ಸಂತೋಷದಿಂದ ಕೂಡಿರುವವನಾಗಲು ಯಾವ ಅಡ್ಡಿಯೂ ಇಲ್ಲ. **ಇಂದಹರ್ಷಮ್** ಇತ್ಯಾದಿ - ಈ ಹರ್ಷವು ವಿವೇಕಿಯಾಗಿಯೂ, ಹೇಯವಾದ ವರ್ತಮಾನ ಶರೀರೇಂದ್ರಿಯಗಳೊಡನೆ ಸಂಬಂಧ ಪಟ್ಟಿರುವ ಇವನಿಗೆ ನಿರ್ವೇದ ಮಿಶ್ರವಾಗಿ ನಡೆದು ಬಂದರೂ, ಈ ನಿರ್ವೇದವೂ ಈ ಶೋಕ ನಿವೃತ್ತಿಯೂ ಭಿನ್ನ ವಿಷಯಗಳಾದ್ದರಿಂದ ವಿರೋಧವಿಲ್ಲ.

## ಆರ್ತ ದೃಪ್ತ ಪ್ರಪನ್ನ ವಿಭಾಗಃ

**"ಮಾಶುಚಃ" ವೆನ್ಱಿರ ವಿದುವೇ** ಇತ್ಯಾದಿ - "ಮಾಶುಚಃ" ಎಂಬ ಈ ಮಾತೇ ಶೋಕಕ್ಕೆ ಕಾರಣಗಳಾದವುಗಳೆಲ್ಲಾ ಬಿಡಲ್ಪಡಲು ನಿಯಾಮಕವಾದ್ದರಿಂದ ಪ್ರಾರಬ್ಧ ಕರ್ಮದಿಂದಲೂ, ಶೋಕ ನಿಮಿತ್ತಾಂಶಗಳೆಲ್ಲಾ ಕಳೆಯುವುದಾದ್ದರಿಂದ ಆರ್ತ್ಯತಿಶಯವುಳ್ಳವನಿಗೆ ಆವಾಗಲೇ ಮೋಕ್ಷವು ಸಿದ್ಧಿಸುತ್ತದೆ. (1) **'ಮರಣಮಾನಾಲ್ ವೈಹುಂದಂ ಕೊಡುಕ್ಕುಂ ಪಿರಾನ್'** ಇತ್ಯಾದಿಗಳಲ್ಲಿ ಹೇಳಿರುವಂತೆ **ಪ್ರಾರಬ್ಧಕರ್ಮತ್ತಿಲ್** - ಫಲವನ್ನು ಕೊಡಲು ಆರಂಭಿಸಿದ ಕರ್ಮದಲ್ಲಿ ಮುಂದೆ ಬರುವ ಭಾಗಗಳೆಲ್ಲಾ ಕಳೆದು ಈ ಶರೀರಾವಸಾನದಲ್ಲಿ ಮೋಕ್ಷವೆಂದು ಅಂಗೀಕರಿಸಬೇಕಾದ್ದರಿಂದ ಈ ಶರೀರದಲ್ಲಿಯೂ ಆಯುಶ್ಶೇಷವು ಅನಿಷ್ಟವಾದರೆ, ಇದೂ ಪ್ರಪತ್ತಿವಶೀಕೃತನಾದ ಸರ್ವಶಕ್ತಿಯ ಸಂಕಲ್ಪದಿಂದ ಕಳೆದು ಹೋಗುವುದರಲ್ಲಿ ಯಾವ ಬಾಧಕವೂ ಇಲ್ಲ.

---

1) ಶರಣಮಾಹುಮ್ ತನದಾಳ್ ಅಡೈಂದಾರ್ಕೆಲ್ಲಾಮ್,
ಮರಣಮಾನಾಲ್ ವೈಹುಂದಮ್ ಕೊಡುಕ್ಕುಂ ಪಿರಾನ್
ಅರಣ ಮೈಂದ ಮದಿಳ್ ಶೂೞ್ ತಿರುಕ್ಕಣ್ಣಪುರ
ತ್ತರಣಿಯಾಳನ್ ತನದನ್ಬರ್ಕನ್ಬಾಹುಮೇ ॥ ತಿರುವಾಯ್‌ಮೊೞಿ (9-10-6)

ಭಗವಂತನು ತನ್ನ ಪಾದವನ್ನು ಶರಣು ಹೊಂದಿದವರಿಗೆಲ್ಲಾ ರಕ್ಷಕನಾಗುತ್ತಾನೆ. ಶರೀರಾವಸಾನದಲ್ಲಿ ಮರಣವು ಏರ್ಪಟ್ಟ ಅನಂತರ ಶ್ರೀ ವೈಕುಂಠವನ್ನು ಪ್ರಾಪಿಸುವ ಪರಮೋಪಕಾರಕನು. ಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟ ತಿರುಕ್ಕಣ್ಣಪುರಕ್ಕೆ ಸ್ವಾಮಿಯಾದವನು ತನ್ನ ಭಕ್ತರಲ್ಲಿ ಪ್ರೀತಿಯುಳ್ಳವನಾಗಿದ್ದಾನೆ.

"ಪ್ರಾಯಶ್ಚಿತ್ತ ವಿಶೇಷೇಷು ಸರ್ವಸ್ವಾರಾದಿ ಕೇಷುಚ ।
ನಾತ್ಮಹಿಂಸನ ದೋಷೋಸ್ತಿ ತಥಾರ್ತ ಶರಣಾಗತೌ ।
ದೃಪ್ತಸ್ಯತು ಯಥಾಶಾಸ್ತ್ರಂ ಚಿರಂಜೀವಿತು ಮಿಚ್ಛತಃ ।
ಪ್ರಾಣರಕ್ಷಣ ಶಾಸ್ತ್ರಾರ್ಥಲಂಘನಂ ತ್ವಪರಾಧನಮ್ ॥
ಯೋಗಿಹಳ್ ಯೋಗವಿಶೇಷತ್ತಾಲೇ ದೇಹನ್ಯಾಸಮ್ ಪಣ್ಣುಮಾಪ್ಪೋಲೇ ಅರ್ತ್ಯತಿಶಯ ಮುಡೈಯವನ್ ಪ್ರಪತ್ತಿಯಾಲೇ ದೇಹನ್ಯಾಸಪ್ಪಣ್ಣುಹೈಕ್ಕು ತೀರ್ಥಪ್ರವೇಶಾದಿಹಳಿಲ್‌ಪ್ಪೋಲೇ ಯುಗ

---

**ಪ್ರಾಯಶ್ಚಿತ್ತ ವಿಶೇಷು** ಇತ್ಯಾದಿ - "ಯಃಕಾಮತೋನರಃ ಪಾಪಂ ಮಹತ್ಕುರ್ಯಾತ್ಕಥಂಚನ ।
ನತಸ್ಯನಿಷ್ಕೃತಿರ್ದೃಷ್ಟಾ ಭೃಗ್ವಗ್ನಿ ಪತನಾದೃತೇ ॥
ಅಂತ್ಯೇನ ಸಹಸಂಪರ್ಕೇ ಭೋಜನೇ ಮೈಥುನೇಕೃತೇ ।
ಪ್ರವಿಶೇತ್ಸಂ ಪ್ರದೀಪ್ತಾಗ್ನೌ ಮೃತ್ಯುನಾಽಸೌವಿಶುಧ್ಯತಿ ॥

ಒಬ್ಬ ಮನುಷ್ಯನು ಕಾಮದಿಂದ (ಫಲದಲ್ಲಿ ಆಸೆಯಿಂದ) ಮಹತ್ತಾದ ಪಾಪವನ್ನು ಮಾಡಿದರೆ, ಅವನಿಗೆ ಒಡನೆ ಅಗ್ನಿಯಲ್ಲಿ ಬಿದ್ದು ಪ್ರಾಣವನ್ನು ಬಿಡುವುದಕ್ಕಿಂತ ಬೇರೆ ಪ್ರಾಯಶ್ಚಿತ್ತವಿಲ್ಲ. ಅಂತ್ಯನೊಡನೆ ಸಂಪರ್ಕವೋ ಭೋಜನವೋ, ಮೈಥುನವೋ ಏರ್ಪಟ್ಟರೆ ಚೆನ್ನಾಗಿ ಉರಿಯುತ್ತಿರುವ ಅಗ್ನಿಯನ್ನು ಪ್ರವೇಶಿಸ ಬೇಕು. ಅಗ್ನಿಯಲ್ಲಿ ಬೆಂದು ಮರಣಾನಂತರ, ಆ ಆತ್ಮಾವಿಗೆ ವಿಶುದ್ಧಿಯು ಏರ್ಪಡುತ್ತದೆ. ಇಂಥಹ ವಿಶೇಷ ಪ್ರಾಯಶ್ಚಿತ್ತಗಳಲ್ಲಿಯೂ, **ಸರ್ವ ಸ್ವಾರಾದಿಕೇಷುಚ** – ಸರ್ವಸ್ವಾರವೆಂಬುದು ಒಂದು ಯಾಗ. ಆ ಯಾಗದಲ್ಲಿ ಅವಭೃತ ಸ್ನಾನ ಸ್ಥಾನದಲ್ಲಿ ಅಗ್ನಿಯಲ್ಲಿ ತನ್ನ ಶರೀರವನ್ನು ಬಿಡುವಂತೆ ಹೇಳಲ್ಪಟ್ಟಿದೆ. ಇಂಥಹ ಸಂದರ್ಭ ಗಳಲ್ಲಿಯೂ **ತಥಾಽರ್ತಶರಣಾಗತೌ** – ಹಾಗೆಂಯೇ ಆರ್ತನಾಗಿ ಒಡನೇ ಮೋಕ್ಷವು ಬೇಕೆಂದು ಅಪೇಕ್ಷಿಸುವವನು ಶರಣಾಗತಿ ಮಾಡಿದರೆ, ಅದರಿಂದಲೂ, ನಾಽತ್ಮಹಿಂಸನ **ದೋಷೋಸ್ತಿ** ಆತ್ಮ ಹಿಂಸೆ ಮಾಡಿದ ದೋಷವು ಉಂಟಾಗುವುದಿಲ್ಲ.

**ದೃಪ್ತಸ್ಯತು ಯಥಾಶಾಸ್ತ್ರಂ** ಇತ್ಯಾದಿ – "ಯಸ್ಯದೇಹಾಂತರ ಪ್ರಾಪ್ತೇ ಶೋಕೋ ದೃಪ್ತಸ್ಸ ಉಚ್ಯತೇ" ಎನ್ನು ದೇಹಾಂತರ ಸಂಬಂಧವಾದ ಶೋಕವುಳ್ಳವನು ಅಂದರೆ ದೇಹಾವಸಾನದಲ್ಲಿಯೇ ಮೋಕ್ಷವನ್ನಪೇಕ್ಷಿಸುವವನು ದೃಪ್ತನೆಂದು ಹೇಳಲ್ಪಡುತ್ತಾನೆ. ಅವನು ಶಾಸ್ತ್ರವನ್ನನುಸರಿಸಿ ಚಿರಕಾಲ (ದೇಹಾವಸಾನ ಕಾಲ ಪರ್ಯಂತ) ಜೀವಿಸಲು ಇಚ್ಛೆಯುಳ್ಳವನು. ಅವನಿಗೆ ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಬೇಕೆಂಬ ಶಾಸ್ತ್ರಾರ್ಥವನ್ನು ಉಲ್ಲಂಘಿ ಸಿದರೆ ಅಪರಾಧವು ಏರ್ಪಡುತ್ತದೆ. ಪ್ರಾಣ ರಕ್ಷಣ ಶಾಸ್ತ್ರಾರ್ಥವು ಯಾವುದೆಂದರೆ, "ಸರ್ವತ ಏವ ಆತ್ಮಾನಂ ಗೋಪಾಯೀತ್" ಎಂಬುದು. ಅಂದರೆ ಮರಣ ಪ್ರದವಾದ ಸಾಹಸ ಕಾರ್ಯವನ್ನು ಮಾಡದಿರುವುದು, ವ್ಯಾಧಿ ಗ್ರಸ್ತನು ಚಿಕಿತ್ಸೆ ಮಾಡಿಕೊಳ್ಳುವುದು. ಪ್ರಾಣ ರಕ್ಷಣವಾದ ಈ ಕಾರ್ಯಗಳನ್ನು ಮಾಡಿಕೊಳ್ಳದಿದ್ದರೆ ಆತ್ಮ ಹಿಂಸೆ ಮಾಡಿದ ದೋಷವು ಏರ್ಪಟ್ಟು ಅಪರಾಧವುಂಟಾಗುತ್ತದೆ.

ಸ್ವರ್ಗಾದ್ಯರ್ಥಂ ತಪಸ್ತಪ್ತ್ವಾ ಸುಮಹತ್ಪೂರ್ಣ ಮಾನಸಃ ।
ತೀರ್ಥಾದಿಷು ತ್ಯಜೇದ್ದೇಹನ್ನೈವಂ ಕಲಿಯುಗೇ ಭವೇತ್ ॥

ಕೃತ, ತ್ರೇತ, ದ್ವಾಪರ ಯುಗಗಳಲ್ಲಿ ಒಬ್ಬ ಮನುಷ್ಯನು ಸ್ವರ್ಗಾದಿ ಪುರುಷಾರ್ಥಗಳಿಗೆ ತಪಸ್ಸು ಮಾಡಿ ಪೂರ್ಣ ಮನಸ್ಕನಾಗಿ, ಪುಣ್ಯ ತೀರ್ಥಾದಿಗಳಲ್ಲಿ ಶರೀರವನ್ನು ಬಿಡಬೇಕು. ಕಲಿಯುಗದಲ್ಲಿ ಹೀಗೆ ಮಾಡಕೂಡದು ಎಂದು ಹೇಳಿದೆಯಲ್ಲವೇ. ಆ ರೀತಿಯಲ್ಲಿ ಕಲಿಯುಗದಲ್ಲಿ ಆರ್ತ ಪ್ರಪತ್ತಿಯನ್ನು ಅನುಷ್ಠಿಸಿ ಶರೀರ ತ್ಯಾಗ ಮಾಡುವುದು ಶಾಸ್ತ್ರ ಸಮ್ಮತವೇ ಎಂಬ ಚೋದ್ಯಕ್ಕೆ **ಯೋಗಿಹಳ್ ಯೋಗವಿಶೇಷತ್ತಾಲೇ** ಎಂದ ಆರಂಭಿಸಿ ಉತ್ತರಿಸುತ್ತಾರೆ. ಅದಾಗಿ ಯೋಗಿಗಳು ಯೋಗ ವಿಶೇಷದಿಂದ ದೇಹನ್ಯಾಸವನ್ನು ಮಾಡುವಂತೆ

ವಿಶೇಷನಿಯಮಮಿಲ್ಲೈ. ಇವ್ವಾರ್ತ ಪ್ರಪನ್ನನೇ ಎಲ್ಲಾರಿಲುಮ್ ಕಡುಹ ಆತ್ಮರಕ್ಷಣಮ್ ಪಣ್ಣು ಹಿರವನ್.

**ಅಥ ಅರ್ತ ದೃಪ್ತ ಶಬ್ದಯೋರರ್ಥೌ ವದತಿ**

ಇಪ್ಪಡಿ ಆರ್ತ್ತನ್, ದೃಪ್ತನ್ ಎನ್ಗಿರ ಪಿರಿವುಮ್ ಇವನುಕ್ಕು ಪಿರನ್ದ ಶೋಕತ್ತಿಲ್ ವೈಷಮ್ಯ ಮಡಿಯಾಹ ಚೊಲ್ಲುಹಿರದತ್ತನೈ. ಒರುವನುಕ್ಕು ಶೋಕಮಿಲ್ಲಾಮೈಯನ್ರು ಜನ್ಮಾಂತರಾದಿ ಮಾತ್ರಮ್ ಶೋಕನಿಮಿತ್ತಮಾಯ್ ಏದೇನು ಮೊರುನಾಳ್ ಮೋಕ್ಷಮ್ ಪೆರುವೋ ಮೆನ್ರು ತೇರಿಯಿರುಕ್ಕುಮವನ್ ಇಙ್ಗು ದೃಪ್ತನ್. ಅಲ್ಲದು ಉತ್ಕೃಷ್ಟಜನಾವಮಾನಾದಿ ಹೇತುವಾನ ಗರ್ವರೂಪಮಾನ ಅನಾತ್ಮ ಗುಣತ್ತೈ ಯುಡೈಯವನಲ್ಲನ್:

ಇಶ್ಶರೀರತ್ತಿಲ್ ಚತುರ್ಮುಖೈಶ್ವರ್ಯಮ್ ಪೆತ್ತಾಲುಮ್, ಇದುಪರಿಪೂರ್ಣ ಭಗವದನುಭವ ವಿರೋಧಿಯಾನ ಪಡಿಯಾಲೇ ಇವ್ವನರ್ಥಮಾನ ದೇಹ ಸಂಬಂಧಮುಮ್ ಕೂಡ ಮಹಾಗ್ನಿಪೋಲೇ ದುಸ್ಸಹಮಾಯ್ "ಉಡಲುಮ್ ಉಯಿರುಮ್ ಮಙ್ಗವೊಟ್ಟು" ಎನ್ರುಪ್ಪಡಿ ಪ್ರಪತ್ತ್ಯನುಷ್ಠಾನಾನಂತರಮ್ ಕ್ಷಣಮಾತ್ರ ವಿಳಂಬ ಕ್ಷಮನಲ್ಲಾದವನ್ ಆರ್ತಪ್ರಪನ್ನನ್. ಅಲ್ಲದು "ಆರ್ತೋಜಿಜ್ಞಾಸುರರ್ಥಾರ್ಥೀ" ಎನ್ಗಿರವಿಡತ್ತಿಲ್ ಚೊಲ್ಲಪ್ಪಟ್ಟವನಲ್ಲನ್

---

ಆರ್ತ್ಯತಿಶಯವುಳ್ಳವನು ಪ್ರಪತ್ತಿಯಿಂದ ದೇಹನ್ಯಾಸವನ್ನು ಮಾಡುವುದಕ್ಕೆ, ತೀರ್ಥ ಪ್ರವೇಶ ಮೊದಲಾದವುಗಳಿಗೆ ಇರುವಂತೆ, ಯುಗ ವಿಶೇಷ ನಿಯಮವಿಲ್ಲ. **ಇವ್ವಾರ್ತಪ್ರಪನ್ನನೇ** ಇತ್ಯಾದಿ – ಈ ಆರ್ತ ಪ್ರಪನ್ನನೇ ಎಲ್ಲರಿಗಿಂತಲೂ **ಕಡುಹ** – ಶೀಘ್ರವಾಗಿ ಆತ್ಮರಕ್ಷಣವನ್ನು ಮಾಡುವವನು

**ಇಪ್ಪಡಿ ಆರ್ತನ್ ದೃಪ್ತನ್** ಇತ್ಯಾದಿ – ಈ ಆರ್ತನು, ದೃಪ್ತನು ಎಂದು ಹೇಳುವ ವಿಭಾಗವು ಇವನಿಗೆ ಉಂಟಾದ ಶೋಕದಲ್ಲಿ ವೈಷಮ್ಯ ನಿಮಿತ್ತವಾಗಿ ಹೇಳಲ್ಪಡುತ್ತದೆಯಷ್ಟೆ. **ಒರುವನುಕ್ಕು** ಇತ್ಯಾದಿ- ಒಬ್ಬನಿಗೆ ಶೋಕವಿಲ್ಲವೆಂದಲ್ಲ. **ಜನ್ಮಾಂತರಾದಿ ಮಾತ್ರಮ್** ಇತ್ಯಾದಿ – ಜನ್ಮಾಂತರ ಪ್ರಾಪ್ತಿಯು ಮಾತ್ರ ಶೋಕಕ್ಕೆ ಕಾರಣವಾಗಿ, ಯಾವುದಾದರೊಂದು ದಿವಸ ಈ ಜನ್ಮದಲ್ಲಿಯೇ ಮೋಕ್ಷವನ್ನು ಹೊಂದುತ್ತೇನೆಂದು ಸಮಾಧಾನದಿಂದಿರುವವನು ದೃಪ್ತನು. ಇಷ್ಟಲ್ಲದೆ ಉತ್ಕೃಷ್ಟಜನಾವಮಾನಾದಿ ಹೇತುವಾದ ಗರ್ವರೂಪವಾದ ಅನಾತ್ಮ ಗುಣವನ್ನುಳ್ಳವನಲ್ಲ.

**ಇಶ್ಶರೀರತ್ತಿಲ್** ಇತ್ಯಾದಿ – ಈ ಶರೀರದಲ್ಲಿ ಚತುರ್ಮುಖನ ಐಶ್ವರ್ಯವನ್ನು ಪಡೆದರೂ ಇದು ಪರಿಪೂರ್ಣ ಭಗವದನುಭವ ವಿರೋಧಿಯಾದ್ದರಿಂದ ಈ ವರ್ತಮಾನ ದೇಹ ಸಂಬಂಧವೂ ಕೂಡ ಮಹಾಗ್ನಿಯಂತೆ ದುಸ್ಸಹವಾಗಿ **"ಉಡಲು ಮುುಯಿರುಮ್ ಮಂಗವೊಟ್ಟು"**–ದೇಹವನ್ನೂ ದೇಹವನ್ನು ಆಶ್ರಯಿಸಿರುವ ಪ್ರಾಣನನ್ನೂ ಈಗಲೇ ನಶಿಸುವಂತೆ ಮಾಡು, ಎಂಬಂತೆ ಪ್ರಪತ್ತ್ಯನುಷ್ಠಾನಾನಂತರ ಕ್ಷಣಮಾತ್ರ ವಿಳಂಬ ಕ್ಷಮನಲ್ಲದವನು ಆರ್ತಪ್ರಪನ್ನನು. **ಅಲ್ಲದು** ಇತ್ಯಾದಿ – ಅಲ್ಲದೆ 'ಆರ್ತೋ ಜಿಜ್ಞಾಸುರರ್ಥಾರ್ಥೀ' ಎಂಬಲ್ಲಿ ಹೇಳಲ್ಪಟ್ಟವನಲ್ಲ. ಅಲ್ಲಿ ಆರ್ತನೆಂದರೆ ಕಳೆದು ಹೋದ ಐಶ್ವರ್ಯವನ್ನು ಪುನಃ ಪಡೆಯಬೇಕೆಂದು ಹಂಬಲಿಸುವವನು. ಇಲ್ಲಿ ಆರ್ತನೆಂದರೆ ಶರೀರಾನುವೃತ್ತಿಯು ಅತ್ಯಂತ ದುಸ್ಸಹವಾಗಿ ಕೂಡಲೇ ಭಗವತ್ಸಾಯುಜ್ಯವನ್ನು ಪಡೆಯಲೆಣಿಸುವವನು ಎಂದು ತಾತ್ಪರ್ಯ.

1) ಆರ್ತೋವಾಯದಿವಾದೃಪ್ತಃ" ಎನ್ಗಿಱ ಇಡಮ್ ಅತಿವಾದಮೆನ್ಬಾರ್ಗಳ್ ಇಜ್ಜಗ್ ವ್ವರ್ಥ ಸ್ಥಿತಿಯಿಲ್ ವಿವಾದಮ್ ಪಣ್ಣವೊಣ್ಣಾದು. ಉಪಾಯಾನುಷ್ಠಾನತ್ತುಕ್ಕು ಪ್ಪಿನ್ಬು ಫಲಮಾಹೈಯಾಲುಮ್ ಇದು ಉಪದೇಶವೇಳೈಯಾಹೈಯಾಲುಮ್ ಇವ್ವಾರ್ತ್ತನ್ ತಿಱತ್ತಿಲುಮ್ ಮೋಕ್ಷಯಿಷ್ಯಾಮಿ ಎನ್ಱ ಭವಿಷ್ಯನ್ನಿರ್ದ್ದೇಶತ್ತುಕ್ಕು ಕ್ಕುಱೈಯಿಲ್ಲೈ. ಇವ್ವಾರ್ತ್ತದೃಪ್ತಾದಿ ವಿಭಾಗಙ್ಗಳೆಲ್ಲಾಮ್ ಸುಕೃತ ತಾರತಮ್ಯಮೂಲಮಾನ ಭಗವದನುಗ್ರಹತಾರತಮ್ಯತ್ತಾಲೇ ವರುಮ್. 2) ಪ್ರಾರಬ್ಧಮಾತ್ರ ಭುಕ್ ತತ್ರತತ್ವಪಿತ್ಸುಖಮಾಪ್ನುಯಾತ್" ಇತ್ಯಾದಿ ವಚನಙ್ಗಳ್ ಆರ್ತ್ತಪ್ರಪನ್ನ ವಿಷಯತ್ತಿಲೇ ನಿರವಕಾಶಙ್ಗಳ್.

ದೃಪ್ತಪ್ರಪನ್ನನ್ ತಿಱತ್ತಿಲ್ ಉತ್ತರ ಕೃತ್ಯಾಂಶತ್ತೈಪ್ಪತ್ತ "ಮಾಶುಚಃ" ಎನ್ಗಿಱ ವಾಕ್ಯತ್ತಿನ್

---

(1) "ಆರ್ತೋವಾಯದಿವಾದೃಪ್ತಃ", ಎಂಬ ಶ್ರೀಮದ್ರಾಮಾಯಣ ವಚನದಲ್ಲಿ, ದೃಪ್ತ ಪದವನ್ನು ಗರ್ವಿತನೆಂಬ ಅರ್ಥದಲ್ಲಿ ಹೇಳಬೇಕಾದ್ದರಿಂದ ಅವನಿಗೆ ರಕ್ಷಿತವ್ಯತ್ವವನ್ನು ಹೇಳಿರುವುದು ಅತಿವಾದವೆಂದು ಕೆಲವರು ಹೇಳಿದ್ದಾರೆಯಲ್ಲಾ, ಆ ರೀತಿಯಲ್ಲಿ ದೃಪ್ತನನ್ನು ಕುರಿತು "ಮೋಕ್ಷಯಿಷ್ಯಾಮಿ" ಎಂಬುದೂ ಅತಿವಾದವಲ್ಲವೇ ಎಂದರೆ ಅಲ್ಲವೆನ್ನುತ್ತಾರೆ. ಅಲ್ಲಿ ಹೇಳಲ್ಪಟ್ಟವನು ಗರ್ವಿತನಾದರೂ, ಇಲ್ಲಿ ಜನ್ಮಾಂತರವನ್ನು ಸಹಿಸದೆ ಏತದ್ದೇಹಮಾತ್ರಾಭ್ಯುದಗವು ಮಾಡಿದವನು ದೃಪ್ತ ಪ್ರಪನ್ನನಾಗಿ ಗರ್ವಾದ್ಯನಾತ್ಮ ಗುಣ ರಹಿತನಾದ್ದರಿಂದ ಅವನ ವಿಷಯದಲ್ಲಿ 'ಮೋಕ್ಷಯಿಷ್ಯಾಮಿ' ಎಂದು ಹೇಳುವುದು ಅತಿವಾದವಾಗಲಾರದು. ಉಪಾಯಾನುಷ್ಠಾನತ್ತುಕ್ಕು ಇತ್ಯಾದಿ – ಉಪಾಯಾನುಷ್ಠಾನಕ್ಕೆ ಅನಂತರ ಫಲವು ಏರ್ಪಡುವುದರಿಂದಲೂ, ಈಗ ಉಪದೇಶ ವೇಳೆಯಾಗಿರುವುದರಿಂದಲೂ, ಈ ಆರ್ತನ ವಿಷಯದಲ್ಲಿಯೂ, "ಮೋಕ್ಷಯಿಷ್ಯಾಮಿ" ಎಂದು ಭವಿಷ್ಯತ್ಕಾಲ ನಿರ್ದೇಶಕ್ಕೆ ಬಾಧಕವೇನೂ ಇಲ್ಲ. ಇವ್ವಾರ್ತದೃಪ್ತವಿಭಾಗಮೆಲ್ಲಾಮ್ ಇತ್ಯಾದಿ – ಈ ಆರ್ತ ದೃಪ್ತ ವಿಭಾಗಗಳೆಲ್ಲಾ ಸುಕೃತ ತಾರತಮ್ಯ ಮೂಲವಾದ ಭಗವದನುಗ್ರಹ ತಾರತಮ್ಯದಿಂದ ಉಂಟಾಗುತ್ತವೆ. (2) ಪ್ರಾರಬ್ಧಮಾತ್ರ ಭುಕ್ತತ್ರ ಇತ್ಯಾದಿ – ತತ್ವವನ್ನು ತಿಳಿದವನಾಗಿದ್ದರೂ, ಪ್ರಾರಬ್ಧ ಕರ್ಮಫಲವನ್ನು ಅನುಭವಿಸಿಯೇ ಬ್ರಹ್ಮಾನುಭವ ಸುಖವನ್ನು ಅನುಭವಿಸುತ್ತಾನೆಂದು ಹೇಳಿರುವ ಇದೇ ಮೊದಲಾದ ವಚನಗಳು ಆರ್ತ ಪ್ರಪನ್ನನ ವಿಷಯದಲ್ಲಿ ಅನ್ವಯಿಸುವುದಿಲ್ಲ (1) "ಆರ್ತೇಷ್ವಾಶುಫಲಾ, ಸಕೃದೇವಕೃತಾಹ್ಯಸೌ" ಎಂಬ ವಚನಗಳು ಆರ್ತನ ವಿಷಯದಲ್ಲಿ ಆರ್ತಿ ಪ್ರಪತ್ತಿಯು ಆಗಲೇ ಪ್ರಾರಬ್ಧವನ್ನು ಹೋಗಲಾಡಿಸಿ ಫಲವನ್ನು ಕೊಡುತ್ತದೆಯೆಂದು ಹೇಳಿರುವುದರಿಂದ ಉತ್ಸರ್ಗಾಪವಾದ ನ್ಯಾಯದಿಂದ "ಪ್ರಾರಬ್ಧ ಮಾತ್ರಭುಕ್" ಎಂಬ ವಚನವು ಆರ್ತಪ್ರಪನ್ನ ವ್ಯತಿರಿಕ್ತ ವಿಷಯ. ದೃಪ್ತಪ್ರಪನ್ನನಿಗೂ ದೇಹಾವಸಾನ ಪರ್ಯಂತಗಳಾದ ಕರ್ಮಗಳು ಮಾತ್ರ ಅನುಭಾವ್ಯಗಳಾದ್ದರಿಂದ 'ಪ್ರಾರಬ್ಧಮಾತ್ರಭುಕ್' ಎಂಬ ವಚನವು ಪ್ರಾರಬ್ಧ ಸಾಮಾನ್ಯಾನುಭವಾನಂತರವೇ ಫಲವೆಂದು ಹೇಳುವುದರಿಂದ, ದೃಪ್ತ ಪ್ರಪನ್ನನ ವಿಷಯದಲ್ಲೂ ಅನ್ವಯಿಸುವುದಿಲ್ಲ.

**'ದೃಪ್ತಪ್ರಪನ್ನನ್ ತಿಱತ್ತಿಲ್'** ಇತ್ಯಾದಿ – ದೃಪ್ತ ಪ್ರಪನ್ನನ ವಿಷಯದಲ್ಲಿ ಉತ್ತರ ಕೃತ್ಯಾಂಶವನ್ನು ಕುರಿತು, "ಮಾಶುಚಃ" ಎಂಬ ವಾಕ್ಯದ ತಾತ್ಪರ್ಯವನ್ನು, "ಆಧ್ಯಾತ್ಮಿಕಾಧಿ ಭೌತಿಕಾಧಿದೈವಿಕ" ಎಂದಾರಂಭಿಸಿ, "ಅತಸ್ತ್ವಂತವತತ್ವತೋ" ಇತ್ಯಾದಿಯಾಗಿ ಕೃಪೆಮಾಡಿ ಹೇಳಿರುತ್ತಾರೆ. ಆದಾಗಿ ಉತ್ತರ ಕೃತ್ಯಾಂಶಗಳು ಯಾವುವೆಂದರೆ, ತಾಪತ್ರಯ ಸಹಿಷ್ಣುತ್ವ, ದ್ವಯಾರ್ಥಾನು ಸಂಧಾನ, ಭಗವದ್ಧ್ಯಾನ ದರ್ಶನ ಪ್ರಾಪ್ತಿಗಳಲ್ಲಿ

---

1) ಆರ್ತೋವಾ ಯದಿವಾ ದೃಪ್ತಃ ಪರೇಷಾಂ ಶರಣಾಗತಃ ।
ಅರಿಃ ಪ್ರಾಣಾನ್ ಪರಿತ್ಯಜ್ಯ ರಕ್ಷಿತವ್ಯಃ ಕೃತಾತ್ಮನಾ ॥ ಶ್ರೀಮದ್ರಾಮಾಯಣ ಯುದ್ಧಕಾಂಡ 18-28

ಕರುತ್ತೈ "ಆಧ್ಯಾತ್ಮಿಕ ಆದಿಭೌತಿಕ ಎನ್ಱು ತುಡಙ್ಗಿ "ಅತಸ್ತ್ವಂ ತವ ತತ್ವತೋ ಮದ್‌ಜ್ಞಾನ ದರ್ಶನ ಪ್ರಾಪ್ತಿಷು ನಿಸ್ಸಂಶಯಸ್ಸುಖಮಾಸ್ವ" ಎನ್ಱರುಳಿಚ್ಚೆಯ್‌ದಾರ್.

ಇಙ್ಗು ಶೊಲ್ಲುಹಿರ ಶೋಕ ನಿವೃತ್ತಿಕ್ಕು ಒರುಪಡಿಯಾಲುಮ್ ಸಂಕೋಚ ಮಿಲ್ಲಾಮೈಯಾಲೇ ಉಪಾಯ ವಿಶೇಷ ಜ್ಞಾನತ್ತಾಲುಮ್ ಅನುಷ್ಠಾನತ್ತಾಲುಮಾಹ ಸರ್ವ ಪ್ರಕಾರ ಶೋಕ ಹೇತುಕ್ಕಳೆಲ್ಲಾಮ್ ಕೞಿಯುಮ್ಪಡಿ ಶೊಲ್ಲಿತ್ತಾಹಿರದು. ಅನುಷ್ಠಾನ ಪರ್ಯನ್ತ ಜ್ಞಾನಮಾತ್ರಮ್ ಇವ್ವುಪದೇಶತ್ತಾಲೇ ಪಿರನ್ದಾಲುಮ್.

1) ನಗಾಥಾ ಗಾಥಿನಂ ಶಾಸ್ತಿ ಬಹುಚೇದಪಿ ಗಾಯತಿ ।
ಪ್ರಕೃತಿಂ ಯಾನ್ತಿಭೂತಾನಿ ಕುಲಿಂಗ ಶಕುನಿರ್ಯಥಾ" ॥

---

ನಿಸ್ಸಂಶಯತ್ವ, ಉಚಿತ ಕ್ಷೇತ್ರ ವಾಸಾದಿಗಳು. ಇದರಲ್ಲಿ ತಾಪತ್ರಯ ಸಹಿಷ್ಣುತ್ವಾಂಶವು "ಆಧ್ಯಾತ್ಮಿಕ, ಆದಿ ಭೌತಿಕ, ಆದಿ ದೈವಿಕ ದುಃಖ ವಿಘ್ನಗಂಧ ರಹಿತಸ್ತ್ವಮ್" ಎಂಬ ವಾಕ್ಯದಿಂದ ಪ್ರಕಾಶಿತವು. ದ್ವಯಾರ್ಥಾನುಸಂಧಾನಾಂಶವು, "ದ್ವಯ ಮರ್ಥಾನುಸಂಧಾನೇನ ಸಹಸದೈವಂ ವಕ್ತಾ" ಎಂಬುದರಿಂದ ಪ್ರಕಾಶಿತವು. ಉಚಿತ ಕ್ಷೇತ್ರವಾಸಾಂಶವು "ಯಾವಚ್ಛರೀರಪಾತಂ ಅತ್ರೈವ ಶ್ರೀರಂಗೇ ಸುಖಮಾಸ್ವ" ಎಂಬುದರಿಂದ ಹೇಳಲ್ಪಟ್ಟಿತು. ಭಗವದ್ಜ್ಞಾನ ದರ್ಶನ ಪ್ರಾಪ್ತಿಗಳಲ್ಲಿ ನಿಸ್ಸಂಶಯತ್ವಾಂಶವು, "ಅತಸ್ತ್ವಂತವತತ್ವತೋ ಮದ್ಜ್ಞಾನ ದರ್ಶನ ಪ್ರಾಪ್ತಿಷು ನಿಸ್ಸಂಶಯಸ್ಸುಖಮಾಸ್ವ", ಎಂಬ ವಾಕ್ಯದಿಂದ ತಿಳಿಸಲ್ಪಟ್ಟಿತು.

### ಶೋಕಕ್ಕೆ ಕಾರಣಗಳು. "ಮಾಶುಚಃ", ಎಂಬುದಕ್ಕೆ ಹತ್ತು ವಿಧ ಅರ್ಥಗಳು

**ಇಂಗುಶೊಲ್ಲುಹಿರ** ಇತ್ಯಾದಿ – ಇಲ್ಲಿ ಹೇಳುವ ಶೋಕ ನಿವೃತ್ತಿಗೆ ಒಂದು ರೀತಿಯಲ್ಲೂ ಸಂಕೋಚಕರಿಲ್ಲದಿರುವುದರಿಂದ ಈ ಉಪಾಯ ವಿಶೇಷ ಜ್ಞಾನದಿಂದಲೂ, ಅನುಷ್ಠಾನದಿಂದಲೂ ಕೂಡ ಸರ್ವ ಪ್ರಕಾರ ಶೋಕ ಹೇತುಗಳೆಲ್ಲಾ ಕಳೆದು ಹೋಗುವಂತೆ ಹೇಳಲ್ಪಟ್ಟಿತು. ಚರಮಶ್ಲೋಕದ ಉಪದೇಶದಿಂದ ಏರ್ಪಟ್ಟ ಉಪಾಯ ಜ್ಞಾನ ಮಾತ್ರದಿಂದ ಶೋಕಸಾಮಾನ್ಯವು ನಿವೃತ್ತವಾಗುವುದೇ ಎಂದರೆ ಆಗುವುದಿಲ್ಲವೆಂದು ಸೋಪಪತ್ತಿಕವಾಗಿ **ಅನುಷ್ಠಾನ ಪರ್ಯಂತ ಮಲ್ಲಾದ** ಎಂದಾರಂಭಿಸಿ ತಿಳಿಸುತ್ತಾರೆ. ಆದಾಗಿ ಜ್ಞಾನವು ಅನುಷ್ಠಾನ ಪರ್ಯಂತವಾಗಬೇಕು ಉಪಾಯ ಜ್ಞಾನವನ್ನು ಪಡೆದ ನಂತರ ಶರಣಾಗತಿಯನ್ನು ಅನುಷ್ಠಿಸಲೇಬೇಕು. ಕೇವಲ ಜ್ಞಾನವು ಕಾರ್ಯಕರವಾಗುವುದಿಲ್ಲ ಅನುಷ್ಠಾನ ಪರ್ಯಂತವಲ್ಲದ ಜ್ಞಾನ ಮಾತ್ರವು ಈ ಉಪದೇಶದಿಂದ ಉಂಟಾದರೂ, (1) **"ನಗಾಥಾಗಾಥಿನಂ ಶಾಸ್ತಿ"** ಇತ್ಯಾದಿ ಗಾಥಾ–ಶ್ಲೋಕವು, ಶಾಸ್ತ್ರವೆಂದರ್ಥ. ಗಾಥಿನಂ– ಅಭ್ಯಸ್ತ ಶಾಸ್ತ್ರನಾದ ಪುರುಷನನ್ನು, ಬಹುಗಾಯತಿ ಚೇದಪಿ–ಇತರರಿಗೆ ಉಪದೇಶ ಮಾಡುವವನಾಗಿದ್ದರೂ, ನಶಾಸ್ತಿ–ನಿಯಮಿಸುವುದಿಲ್ಲ. ಪ್ರಕೃತಿಂ ಯಾಂತಿಭೂತಾನಿ – ಬಹುಶಾಸ್ತ್ರ ಜ್ಞಾನಿಯಾಗಿದ್ದರೂ ಪ್ರಾಣಿಗಳು ತಮ್ಮ ತಮ್ಮ ಸ್ವಭಾವವನ್ನು ಕುಳಿಂಗ ಶಕುನಿರ್ಯಥಾ – ಕುಳಿಂಗ ಪಕ್ಷಿಯು ಹೇಗೆ ತನ್ನ ಸ್ವಭಾವವನ್ನು ಬಿಡುವುದಿಲ್ಲವೋ ಹಾಗೆ ಬಿಡದೆ ಅನುಸರಿಸುತ್ತಾರೆ. ಕುಳಿಂಗ ಪಕ್ಷಿಯು ಸದಾ "ಮಾಸಾಹಸಂ ಕುರು" – ಸಾಹಸಕಾರ್ಯವನ್ನು ಮಾಡಬೇಡವೆಂದು ಹೇಳಿಕೊಂಡೇ, ಸಿಂಹವು ಆಕಳಿಕೆ ಮಾಡುವಾಗ ಅದರ ತೆರೆದ ಬಾಯೊಳಗೆ ಪ್ರವೇಶಿಸಿ ಅದರ ಹಲ್ಲುಗಳಲ್ಲಿ ಅಂಟಿ ಕೊಂಡಿರುವ ಮಾಂಸದ ಚೂರನ್ನು ತಟ್ಟನೆ ಕಚ್ಚಿಕೊಂಡು ಹೊರಬೀಳುತ್ತದೆ.

---

1) ಭಾರತ ಸಭಾಪರ್ವ 42-21

**ಎನ್ನಿರ ಕಣಕ್ಕಾಯ್ ನಿಷ್ಪ್ರಯೋಜನ ಮಾಹೈಯಾಲೇ ಜ್ಞಾನಾನುಷ್ಠಾನಙ್ಗಳಿರಣ್ಡಿನುಡೈಯವುಮ್ ಫಲಮಾನ ಶೋಕ ನಿವೃತ್ತಿಯೆಲ್ಲಾಮ್ ಇಙ್ಗು ವಿವಕ್ಷಿಕ್ಕಿರದು. ಆಹೈಯಾಲ್ ಉಪಾಯಾನುಷ್ಠಾನತ್ತಿಲ್ ಪೂರ್ವಾಪರಮಧ್ಯ ದಶೈಹಳೈಪ್ಪತ್ತ ಸಂಭಾವಿತಮಾನ ಶೋಕಮೆಲ್ಲಾಮ್ ಇಙ್ಗೇ ಕಳೈಕ್ಕಪ್ಪಡುಹಿರನ. ಎಙ್ಗನೇ ಎನ್ನಿಲ್ ಅಧಿಕಾರವಿಶೇಷತ್ತೈಯುಮ್ ಉಪಾಯವಿಶೇಷತ್ತೈಯುಮ್, ಉತ್ತರ ಕೃತ್ಯ ವಿಶೇಷತ್ತೈಯುಮ್ ಪರಿಪೂರ್ಣ ಪರ್ಯನ್ತ ಫಲಸಿದ್ಧಿಯೈಯುಮ್ಪತ್ತ ಪಲಪಡಿಯಾಹ ಶೋಕಮ್ ಸಂಭಾವಿತಮ್. 1) ಅದಿಲೇ ಅನುಷ್ಠಿಕ್ಕಪ್ಪುಹುಹಿರ ಶರಣಾಗತಿ ಧರ್ಮಮ್ ಜಾತಿ ವರ್ಣಾಶ್ರಮಾದಿ ವಿಶೇಷ ನಿಯತಮಲ್ಲಾಮೈಯಾಲ್ ಪ್ರಾಪ್ಯರುಚಿಯುಮ್ ಪ್ರಾಪಕ ವಿಶ್ವಾಸಮುಮ್, ಆಕಿಂಚನ್ಯ ಜ್ಞಾನಾದಿಹಳುಮುಣ್ಡಾನಪೋದೊರುವರುಕ್ಕುಮ್ ನಾಮಿದುಕ್ಕು ಅಧಿಕಾರಿಹಳಲ್ಲೋಮ್ ಎನ್ರುಶೊಕ್ಕಿಕ್ಕವೇಣ್ಡಾ.**

**2) ಇವ್ವುಪಾಯ ವಿಶೇಷಮ್ ಸಪರಿಕರಮಾಹ ಕ್ಷಣಕಾಲ ಸಾಧ್ಯಮಾಯ್, ಸುಕರಮಾಯ್,ಆವೃತ್ತಿ ನಿರಪೇಕ್ಷಮಾಯ್ ಉಪಾಯಾನ್ತರ ವ್ಯವಧಾನಮುಮ್ ದುಷ್ಕರ ಪರಿಕರಾನ್ತರಮುಮಿನ್ರಿಕ್ಕೇ ಇರುಪ್ಪದಾಯ್ ಕೋಲಿನ ಕಾಲತ್ತಿಲೇ ಅಪೇಕ್ಷಿತ ಫಲಙ್ಗಳೆಲ್ಲಾವತ್ತೈಯುಮ್ ತರವಟ್ರಾಯಿರುಕ್ಕೈಯಾಲ್ ಆಕಿಂಚನ್ಯಮುಮ್ ಫಲವಿಳಂಬ ಭಯಮುಮುಡೈಯವನುಕ್ಕು ಸಪರಿಕರಮಾಹ ಚಿರಕಾ**

---

**ಎನ್ನಿರಕಣಕ್ಕಾಯ್ ನಿಷ್ಪ್ರಯೋಜನಮಾಹೈಯಾಲೇ** ಇತ್ಯಾದಿ- ಈ ರೀತಿಯಲ್ಲಿ ಕೇವಲಜ್ಞಾನವು ನಿಷ್ಪ್ರಯೋಜನವಾಗುತ್ತದೆಯಾದ್ದರಿಂದ ಜ್ಞಾನಾನುಷ್ಠಾನಗಳೆರಡರ ಫಲವಾದ ಶೋಕ ನಿವೃತ್ತಿಯನ್ನೆಲ್ಲಾ ಇಲ್ಲಿ ವಿವಕ್ಷಿಸುತ್ತದೆ. **ಆಹೈಯಾಲ್** ಇತ್ಯಾದಿ - ಆದ್ದರಿಂದ ಉಪಾಯಾನುಷ್ಠಾನದಲ್ಲಿ ಪೂರ್ವಾಪರ ಮಧ್ಯದಶೆಗಳನ್ನು ಕುರಿತು ಸಂಭಾವಿತವಾದ ಶೋಕವೆಲ್ಲಾ ಇಲ್ಲಿ ನಿವರ್ತಿಸಲ್ಪಡುತ್ತದೆ. **ಎಂಗನೇಯೆನ್ನಿಲ್** ಇತ್ಯಾದಿ - ಹೇಗೆಂದರೆ, ಅಧಿಕಾರಿ ವಿಶೇಷವನ್ನೂ (ಇದು ಪೂರ್ವದಶಾವಿಷಯ), ಉಪಾಯ ವಿಶೇಷವನ್ನೂ (ಇದು ಮಧ್ಯದಶಾವಿಷಯ), ಉತ್ತರ ಕೃತ್ಯ ವಿಶೇಷವನ್ನೂ ಪರಿಪೂರ್ಣ ಕೈಂಕರ್ಯ ಪರ್ಯಂತ ಫಲಸಿದ್ಧಿಯನ್ನೂ (ಇವೆರಡೂ ಅಪರದಶಾವಿಷಯ) ಕುರಿತು ಅನೇಕ ವಿಧವಾದ ಶೋಕಗಳು ಸಂಭಾವಿತಗಳು.

### ಅಧಿಕಾರ ಸಂಬಂಧವಾದ ಶೋಕ ನಿವೃತ್ತಿ-

1)**ಆದಿಲ್ ಅನುಷ್ಠಿಕ್ಕಪ್ಪುಹುಹಿರ** ಇತ್ಯಾದಿ - ಅದರಲ್ಲಿ ಅನುಷ್ಠಿಸಲು ಆರಂಭಿಸುವ ಶರಣಾಗತಿ ಧರ್ಮವು ಒಂದು ಜಾತಿ ವರ್ಣಾಶ್ರಮಾದಿ ವಿಶೇಷ **ನಿಯತಮ್ ಅಲ್ಲಾಮೈಯಾಲೇ** - ನಿರ್ಬಂಧವಿಲ್ಲದಿರುವುದರಿಂದ. (ಅಂದರೆ ಬ್ರಾಹ್ಮಣ, ಸನ್ಯಾಸಿಎಂಬ ನಿರ್ಬಂಧವಿಲ್ಲದೆ) ಪ್ರಾಪ್ಯರುಚಿಯೂ,ಪ್ರಾಪಕ ವಿಶ್ವಾಸವೂ ಆಕಿಂಚನ್ಯ ಜ್ಞಾನಾದಿಗಳು ಉಂಟಾದಸಮಯದಲ್ಲಿ ಯಾರಿಗೂ ನಾವು ಈ ಪ್ರಪತ್ತಿಗೆ ಅಧಿಕಾರಿಗಳಲ್ಲವೆಂದು ಶೋಕಿಸಬೇಕಿಲ್ಲ.

### ಉಪಾಯ ವಿಶೇಷ ಸಂಬಂಧವಾದ ಶೋಕ ನಿವೃತ್ತಿ

2) **ಇವ್ವುಪಾಯ ವಿಶೇಷಮ್** ಇತ್ಯಾದಿ - ಈ ಉಪಾಯ ವಿಶೇಷವು **ಸಪರಿಕರಮಾಹ** - ಅಂಗಗಳೊಡನೆ ಕ್ಷಣಕಾಲ ಸಾಧ್ಯವಾಗಿ ಸುಲಭವಾಗಿ ಅನುಷ್ಠಿಸಲ್ಪಡಲು ಶಕ್ಯವಾಗಿ, ಆವೃತ್ತಿ ನಿರಪೇಕ್ಷವಾಗಿ, ಉಪಾಯಾಂತರ ವ್ಯವಧಾನವೂ (ಅಂದರೆ ಭಕ್ತಿಯೋಗವನ್ನು ಅನುಷ್ಠಿಸಿದ ನಂತರ ಫಲಸಿದ್ಧಿ ಎಂಬುದೂ) **ದುಷ್ಕರ ಪರಿಕರಾಂತರಮುಮ್**–ಮಾಡಲ ಶಕ್ಯಗಳಾದ ಯಮನಿಯಮಾದಿ ಅಂಗಗಳೂ,**ಇನ್ರಿಕ್ಕೇಇರುಪ್ಪದಾಯ್** ಇಲ್ಲದೇ ಇರುವುದಾಗಿ **ಕೋಲಿನಕಾಲತ್ತಿಲೇ** ಇತ್ಯಾದಿ - ಇವನು ಅಪೇಕ್ಷಿಸಿದ ಕಾಲದಲ್ಲೇ, ಇವನಿಗೆ ಅಪೇಕ್ಷಿತಗಳಾದ ಎಲ್ಲಾ ಫಲಗಳನ್ನೂ ಕೊಡುವಂತೆ ಇರುವುದರಿಂದ ಆಕಿಂಚನ್ಯವನ್ನೂ ಫಲವಿಳಂಬ ಭಯವನ್ನೂ

ಲಾನು ವರ್ತಿನೀಯಮಾಯ್, ಅತ್ಯಶ್ತಾವ ಹಿತರ್ಕ್ಕುಮ್ ಕೃಛ್ರಸಾಧ್ಯಮಾಯ್, ತಥಾವಿಧ ಪರಿಕರಾಂತರ ಸಾಪೇಕ್ಷಮುಮಾಯ್ ಫಲವಿಳಂಬ ಮುಮುಡೈತ್ತಾನ ಉಪಾಯಾನ್ತರತ್ತಿಲೇ ಅಲೈಯವೇಣ್ಡುಹಿರದೋ ವೆನ್ರು ಶೋಕಿಕ್ಕವೇಣ್ಡಾ.

3) ಇಪ್ಪಡಿ ಲಘೂಪಾಯಮಾತ್ರತ್ತಾಲೇ ವಶೀಕಾರ್ಯನಾಯ್. ಫಲ ಪ್ರದಾನಮ್ ಪಣ್ಣ ವಿರುಕ್ಕಿರ ಶರಣ್ಯನ್ ಸರ್ವ ಸುಲಭನಾಯ್ ವಿಶ್ವಸನೀಯ ತಮನಾಯ್ ಪರಮ ಕಾರುಣಿಕನಾಯ್, ನಿರಙ್ಕುಶ ಸ್ವತಂತ್ರನಾಯ್ ಇರುಕ್ಕೈಯಾಲ್ ಸಿದ್ಧೋಪಾಯತ್ತೈಪ್ಪತ್ತ ಶೋಕಿಕ್ಕವೇಣ್ಡಾ.

4) ಇವ್ವುಪಾಯಾನುಷ್ಠಾನತ್ತುಕ್ಕುಪ್ಪಿನ್ಪು ಆಜ್ಞಾನುಜ್ಞೈಹಳಾಲೇ ಪಣ್ಣುಮ್ ಸತ್ಕರ್ಮಙ್ಗಳೆಲ್ಲಾಮ್ ಇಪ್ಪ್ರಪತ್ತಿಕ್ಕು ಅಙ್ಗಮಲ್ಲಾಮೈಯಾಲೇ ಅವತ್ತುಕ್ಕು ದೇಶ ಕಾಲಾದಿ ವೈಗುಣ್ಯತ್ತಾಲೇ ಶಿಲ ವೈಕಲ್ಯಮುಣ್ಡಾನಾಲುಮ್, ಉಪಾಸನತ್ತುಕ್ಕುಪ್ಪೋಲ್ ಇದುಕ್ಕು ಪರಿಕರ ವೈಕಲ್ಯಂ ಪಿರಕ್ಕಿರದೋವೆನ್ರು ಶೋಕಿಕ್ಕವೇಣ್ಡಾ.

5) ಭಗವತ್ಕೈಙ್ಕರ್ಯಾದಿಹಳುಕ್ಕು ಅನರ್ಹತೈಯುಂಡಾಕ್ಕುಮ್ ಬುದ್ಧಿಪೂರ್ವ ಮಹಾಭಾಗವತಾಪಚಾರಾದಿಹಳೈ ವಿಳೈತ್ತು ದಗ್ಧಪಟಂಪೋಲೇ ಆಕ್ಕವಲ್ಲ ಪ್ರಾರಬ್ಧ ಫಲಮಾನ ಪಾಪವಿಶೇಷತ್ತುಕ್ಕಂಜಿ ಪ್ರಥಮ ಪ್ರಪತ್ತಿ ಕಾಲತ್ತಿಲೇ ಯಾದಲ್, ಪಿನ್ಬೊರುಕಾಲ್ ಅದಕ್ಕಾಹ ಪ್ರಪತ್ತಿಪಣ್ಣಿಯಾದಲ್, ನಿರಪರಾಧಮಾನ ಉತ್ತರ ಕೃತ್ಯತ್ತೈ ಅಪೇಕ್ಷಿತ್ತಾಲ್ ಮೇಲ್ ಅಪರಾಧ ಪ್ರಸಙ್ಗತ್ತೈಯುಮ್ ಪತ್ತ ಶೋಕಿಕ್ಕವೇಣ್ಡಾ.

---

ಪಡೆದಿರುವ ನಮಗೆ ಸಪರಿಕರವಾಗಿ (ಅಂಗಗಳೊಡನೆ) ಚಿರಕಾಲಾನುವರ್ತಿನೀಯವಾಗಿ **ಅತ್ಯಂತಾವಹಿತರ್ಕ್ಕುಮ್**– ಬಹಳ ಸಾವಧಾನವಾಗಿರುವವರಿಗೂ **ಕೃಚ್ಛ್ರಸಾಧ್ಯಮಾಯ್** – ಕಷ್ಟ ಸಾಧ್ಯವಾಗಿಯೂ, ಆ ವಿಧವಾದ ಪರಿಕರಾಂತರಗಳನ್ನು ಅಪೇಕ್ಷಿಸ ತಕ್ಕುದಾಗಿಯೂ, ಫಲವು ವಿಳಂಬವನ್ನೂ ಪಡೆದಿರುವ ಭಕ್ತಿರೂಪ ಉಪಾಯಾಂತರದಲ್ಲಿ ಅಲೆದಾಡಬೇಕಾಗಿ ಬರುತ್ತದೆಯೋ ಯೆಂದು ಶೋಕಿಸಬೇಡ.

### ಸಿದ್ಧೋಪಾಯವನ್ನು ಕುರಿತು ಏರ್ಪಡುವ ಶೋಕ ನಿವೃತ್ತಿ

(3) **ಇಪ್ಪಡಿ ಲಘೂಪಾಯ ಮಾತ್ರತ್ತಾಲೇ** ಇತ್ಯಾದಿ – ಹೀಗೆ ಲಘುವಾದ ಶರಣಾಗತಿಯೆಂಬ ಉಪಾಯ ಮಾತ್ರದಿಂದ ವಶೀಕಾರ್ಯನಾಗಿ ಫಲಪ್ರದಾನವನ್ನು ಮಾಡಲಿರುವ ಶರಣ್ಯನು ಸರ್ವಸುಲಭನಾಗಿ ವಿಶ್ವಸನೀಯತಮನಾಗಿ ಪರಮಕಾರುಣಿಕನಾಗಿ ನಿರಂಕುಶ ಸ್ವತಂತ್ರನಾಗಿರುವುದರಿಂದ ಸಿದ್ಧೋಪಾಯವನ್ನು ಕುರಿತು ಶೋಕಿಸಬೇಕಿಲ್ಲ.

### ಉತ್ತರ ಕೃತ್ಯ ವಿಷಯಕ ಶೋಕ ನಿವೃತ್ತಿ

(4) ಈ ಉಪಾಯಾನುಷ್ಠಾನಾನಂತರ ಆಜ್ಞಾನುಜ್ಞೈಗಳಿಂದ ಮಾಡುವ ನಿತ್ಯ ನೈಮಿತ್ತಿಕಾದಿ ಸತ್ಕರ್ಮಗಳೆಲ್ಲಾ ಈ ಪ್ರಪತ್ತಿಗೆ ಅಂಗವಲ್ಲವಾದ್ದರಿಂದ ಅವುಗಳಿಗೆ ದೇಶಕಾಲಾದಿ ವೈಗುಣ್ಯದಿಂದ ಕೆಲವು **ವೈಕಲ್ಯಮ್**– ನ್ಯೂನತೆಯು ಉಂಟಾದರೂ, ಉಪಾಸನೆಗೆ ಇರುವಂತೆ, ಈ ಪ್ರಪತ್ತಿಗೆ ಪರಿಕರ – ಅಂಗಗಳ ವೈಕಲ್ಯವು ಉಂಟಾಗುತ್ತದೆಯೋ ಎಂದು ಶೋಕಿಸಬೇಕಿಲ್ಲ.

(5) **ಭಗವತ್ಕೈಂಕರ್ಯಾದಿಹಳುಕ್ಕು** ಇತ್ಯಾದಿ – ಭಗವತ್ಕೈಂಕರ್ಯಾದಿಗಳಿಗೆ ಅನರ್ಹತೆಯನ್ನುಂಟು ಮಾಡುವ ಬುದ್ಧಿ ಪೂರ್ವಕ ಮಹಾಭಾಗವತಾಪಚಾರಾದಿಗಳನ್ನು ಉಂಟು ಮಾಡಿ **ದಗ್ಧಪಟಂ ಪೋಲೇ** – ಸುಟ್ಟ ಬಟ್ಟೆಯಂತೆ

**6) ಇಪ್ಪಡಿ ನಿರಪರಾಧಮಾನ ಉತ್ತರಕೃತ್ಯತ್ತೈ ಅಪೇಕ್ಷೈಯಾದಾರ್ಕ್ಕುಮ್ ಮೇಲ್ ಬುದ್ಧಿ ಪೂರ್ವಾಪರಾಧಮ್ ವನ್ದಾಲುಮ್ 1) "ನತ್ಯಜೇಯಂ ಕಥಂಚನ" ಎನ್ರು ಇರುಕ್ಕ ಕ್ಕಡವ ಶರಣ್ಯನ್ ಇವನುಕ್ಕು ಅನುತಾಪತ್ತೈಯುಂಡಾಕ್ಕಿ ಪುನಃ ಪ್ರಪತ್ತಿಯಾಹಿರ ಪ್ರಾಯಶ್ಚಿತ್ತ ವಿಶೇಷತ್ತಿಲೇ ಮೂಟ್ಟಿಯುಮ್, ಅದುವುಮ್ ಕೈತಪ್ಪುಮ್ಪಡಿಯಾನ ಕಠಿಣ ಪ್ರಕೃತಿಹಳುಕ್ಕು ಶಿಕ್ಷಾರೂಪಙ್ಗಳಾನ ಉಪಕ್ಲೇಶಮಾತ್ರಂ ಗಳೈಕ್ಕಾಟ್ಟಿ, ಮೇಲಪರಾಧಮ್ ಪಣ್ಣಾದಪಡಿ ವಿಲಕ್ಕಿಯುಮ್, ಫಲಮ್ ಕೋಲಿನ ಕಾಲತ್ತುಕ್ಕು ಮುನ್ಬೇ ಕಣ್ಣಳಿಕ್ಕೈಯಾಲೇ ಪ್ರಪನ್ನನುಕ್ಕು ಮಿನ್ನೊಳಿಪೋಲೇ ತೋನ್ರಿ ನಿಲೈ ನಿಲ್ಲಾದೇಪೋಹಿರ ಬುದ್ಧಿ ಪೂರ್ವಾಪರಾಧ ಲೇಶಙ್ಗಳಾಲೇ ನರಕಾದಿ ಮಹಾಕ್ಲೇಶಙ್ಗಳ್ ವರಿಲ್ ಶೆಯ್ವದೆನ್ರು ಶಂಕಿತ್ತು ಶೋಕಿಕ್ಕವೇಣ್ಡಾ.**

7) ಆರ್ತ ಪ್ರಪನ್ನನುಕ್ಕು ಅಪ್ಪೋದೇ ಫಲಸಿದ್ಧಿಯುಂಡಾಮ್ಪಡಿಯಿರುಕ್ಕೈಯಾಲೇ 2) **ದೇಹೇ ಚೇತ್ಪ್ರೀತಿಮಾನ್ ಮೂಢೋ ಭವಿತಾ ನರಕೇಪಿಸಃ" ಎನ್ರುಮ್ಪಡಿ, ನರಕ ತುಲ್ಯಮಾನ ಇಶ್ಶರೀರಂ ಅನುವರ್ತಿಕ್ಕಿರದೋವೆನ್ರು ಶೋಕಿಕ್ಕವೇಣ್ಡಾ.**

---

ಮಾಡಬಲ್ಲ ಪ್ರಾರಬ್ಧ ಫಲವಾದ ಪಾಪ ವಿಶೇಷಕ್ಕೆ ಹೆದರಿ ಪ್ರಥಮ ಪ್ರಪತ್ತಿ ಕಾಲದಲ್ಲೇ ಆಗಲಿ, ಅನಂತರ ಕಾಲದಲ್ಲಿಯಾಗಲಿ ಅದಕ್ಕಾಗಿ ಪ್ರಪತ್ತಿಯನ್ನು ಮಾಡಿ, ನಿರಪರಾಧವಾದ ಉತ್ತರ ಕೃತ್ಯವನ್ನು ಅಪೇಕ್ಷಿಸಿದರೆ ತದನಂತರ ಅಪರಾಧಗಳು ಸಂಭವಿಸುತ್ತವೆಯೋ ಎಂದು ಶೋಕಿಸಬೇಡ.

6) **ಇಪ್ಪಡಿನಿರಪರಾಧಮಾನ** ಇತ್ಯಾದಿ – ಹೀಗೆ ನಿರಪರಾಧವಾದ ಉತ್ತರ ಕೃತ್ಯವನ್ನು ಅಪೇಕ್ಷಿಸದೆ ಇರುವವರಿಗೂ ಅನಂತರ ಬುದ್ಧಿ ಪೂರ್ವಾಪರಾಧವು ಬಂದರೂ (1) **ನತ್ಯಜೇಯಂಕಥಂಚನ** – ಯಾವ ರೀತಿಯಲ್ಲೂ ಕೈಬಿಡುವುದಿಲ್ಲವೆಂದಿರುವ ಅಶರಣ್ಯ ಶರಣ್ಯನು ಇವನಿಗೆ ಅನುತಾಪವನ್ನುಂಟು ಮಾಡಿ ಪುನಃ ಪ್ರಪತ್ತಿಯೆಂಬ ಪ್ರಾಯಶ್ಚಿತ್ತ ವಿಶೇಷದಲ್ಲಿ ಸೂಡಿಸಿಯೂ, ಅದೂ ಕೈತಪ್ಪುವಂತೆ ಇರುವ ಕಠಿನ ಪ್ರಕೃತಿಗಳಿಗೆ ಶಿಕ್ಷಾರೂಪಗಳಾದ ಉಪಕ್ಲೇಶ ಮಾತ್ರಗಳನ್ನು ತೋರಿಸಿ ಮುಂದೆ ಅಪರಾಧಗಳನ್ನು ಮಾಡದೆ ಇರುವಂತೆ ತಡೆದೂ ಫಲವನ್ನು ಅಪೇಕ್ಷಿಸಿದ ಕಾಲಕ್ಕೆ ಮುಂಚಿತವಾಗಿಯೇ **ಕಣ್ಣಳಿಕ್ಕೈಯಾಲೇ**–ಆ ಪಾಪಗಳನ್ನುಹೋಗಲಾಡಿಸುವುದರಿಂದಲೂ,ಪ್ರಪನ್ನನಿಗೆ **ಮಿನ್ನೊಳಿಪೋಲೇತೋಟ್ರಿ** –ಮಿಂಚಿನಂತೆ ತೋರಿ, ನಿಲ್ಲೆಯಾಗಿಲ್ಲದೆ ಮರೆಯುವ, ಬುದ್ಧಿ ಪೂರ್ವಾಪರಾಧ ಲೇಶಗಳಿಂದ ನರಕಾದಿ ಮಹಾಕ್ಲೇಶಗಳು ಬಂದರೆ ಮಾಡುವುದೇನೆಂದು ಶಂಕಿಸಿ ಶೋಕಿಸಬೇಡ. ಅಂಥಹ ನರಕಾದಿಕ್ಲೇಶಗಳು ಬರುವುದಿಲ್ಲವೆಂದು ತಾತ್ಪರ್ಯ.

(7) **ಆರ್ತಪ್ರಪನ್ನನುಕ್ಕು** ಇತ್ಯಾದಿ – ಆರ್ತ ಪ್ರಪನ್ನನಿಗೆ ಆಗಲೇ ಫಲಸಿದ್ಧಿಯುಂಟಾಗುವಂತೆ ಇರುವುದರಿಂದ (2) **ದೇಹೇಚೇತ್‌ಪ್ರೀತಿಮಾನ್** ಇತ್ಯಾದಿ –ಮಾಂಸ, ರಕ್ತ ಮೊದಲಾದವುಗಳಿಂದ ತುಂಬಿದ ಈ ದೇಹದಲ್ಲಿ ಪ್ರೀತಿಯುಳ್ಳವನು, ನರಕದಲ್ಲಿಯೂ ಪ್ರೀತಿಯುಳ್ಳವನಾಗುತ್ತಾನೆ, ಎಂದು ಹೇಳುವಂತೆ, ನರಕ ತುಲ್ಯವಾದ ಈ ಶರೀರವು ಅನುವರ್ತಿಸುತ್ತದೆಯೋ ಎಂದು ಶೋಕಿಸಬೇಡ.

---

1) ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ ।
ದೋಷೋ ಯದ್ಯಪಿ ತಸ್ಯಸ್ಯಾತ್ ಸತಾಮೇತದಗರ್ಹಿತಮ್ ॥
ಶ್ರೀ ಮದ್ವಾಲ್ಮೀಕಿ ರಾಮಾಯಣ ಯುದ್ಧಕಾಂಡ 18-3 ಮೈತ್ರೀಭಾವದಿಂದ ನನ್ನಲ್ಲಿ ಶರಣಾಗತನಾದವನನ್ನು ಯಾವ ವಿಧದಲ್ಲಿಯೂ ಕೈಬಿಡುವುದಿಲ್ಲ. ಅವನಲ್ಲಿ ದೋಷಗಳಿದ್ದರೂ ಸತ್ಪುರುಷರು ಅವನನ್ನು ತಿರಸ್ಕರಿಸುವುದಿಲ್ಲ.

2) ಮಾಂಸಾಸೃಕ್‌ಪೂಯವಿಣ್‌ಮೂತ್ರಸ್ನಾಯು ಮಜ್ಜಾಸ್ಥಿ ಸಂಭವಾ ॥
ದೇ ಹೇಚೇತ್ ಪ್ರೀತಿಮಾನ್ ಮೂಢೋ ಭವಿತಾ ನರಕೇಪಿ ಸಃ ॥ ವಿಷ್ಣುಪುರಾಣ ॥-17-63

8) ಕರ್ಮಯೋಗವ್ ಮೊದಲಾನ ನಿವೃತ್ತಿ ಧರ್ಮಙ್ಗಳೆಲ್ಲಾಮ್ "ನೇಹಾಭಿಕ್ರಮ ನಾಶೋಽಸ್ತಿ" ಇತ್ಯಾದಿಹಳಿಲ್ ಪಡಿಯೇ ಯಿಟ್ಟ ಪಡೈಕ್ಕರ್ಪಡೈಯಾಹೈಯಾಲುಮ್ ಇಶ್ಶರಣಾಗತನ್ನೈಪ್ಪತ್ತ ವಿಶೇಷಿತ್ತು "ನ ತ್ಯಜೇಯಂ ಕಥಂಚನ ಎನ್ಗೈಯಾಲುಮ್, ದೃಪ್ತ ಪ್ರಪನ್ನನುಕ್ಕು ಕೋಲಿನ ಕಾಲತ್ತಳವು ವಿಳಂಬತ್ತಾಲುಮ್, ಫಲಸಿದ್ಧಿಯಿಲ್ ಸಂಶಯ ಮಿಲ್ಲಾಮೈಯಾಲೇ,
3) "ಯಜ್ಞೋಽನೃತೇನ ಕ್ಷರತಿ ತಪಃ ಕ್ಷರತಿ ವಿಸ್ಮಯಾತ್ ।
ಆಯುರ್ವಿಪ್ರಪರೀವಾದಾತ್ ದಾನಂ ಚ ಪರಿ ಕೀರ್ತನಾತ್" ಇತ್ಯಾದಿಹಳಿಲ್ ಪಡಿಯೇ ಸುಕೃತನಾಶಕಙ್ಗಳಾಯಿರುಪ್ಪನ ಶಿಲದುಷ್ಕೃತಙ್ಗಳಾಲೇ ಇಪ್ಪ್ರಪತ್ತಿ ರೂಪಮಾನ ಸುಕೃತಮ್ ನಶಿತ್ತು ಫಲಂ ಕಿಡೈಯಾದೊಳಿಯಿಲ್ ಶೆಯ್ವದೆನ್ನೆನ್ರು ಶೋಕಿಕ್ಕವೇಣ್ಡಾ.

9) ಇಶ್ಶರೀರಾನನ್ತರಂ ಮೋಕ್ಷಮ್ ಪೆರವೇಣುಮೆನ್ರು ಕಾಲಂ ಕುರಿಕ್ಕೈಯಾಲೇ ಜನ್ಮಾಂತರಾದಿ ಹೇತುಕ್ಕಳಾನ ಪ್ರಾರಬ್ಧ ಕರ್ಮ ವಿಶೇಷಙ್ಗಳಾಲೇ ನಮಕ್ಕು ಜನ್ಮಾಂತರಙ್ಗಳ್ ವರಿಲ್ ಶೆಯ್ವದೆನ್ನೆನ್ರು ಶೋಕಿಕ್ಕವೇಣ್ಡಾ.

10) ಅನನ್ಯ ಪ್ರಯೋಜನನಾಯ್ ಪ್ರಪನ್ನನಾನ ಇವನುಕ್ಕು ಪ್ರತಿ ಬಂಧಕಂಗಳಾನ ಸರ್ವಪಾಪಙ್ಗಳುಮ್

---

8) **ಕರ್ಮಯೋಗವ್ ಮುದಲಾನ** ಇತ್ಯಾದಿ – ಕರ್ಮಯೋಗವೇ ಮೊದಲಾದ ನಿವೃತ್ತಿ ಧರ್ಮಗಳೆಲ್ಲಾ "3)ನೇಹಾಭಿಕ್ರಮನಾಶೋಽಸ್ತಿ" (ಆರಂಭಿಸಿದ ಧರ್ಮಾನುಷ್ಠಾನವು ನಶಿಸದೆ, ಸ್ವಲ್ಪವಾಗಿದ್ದರೂ ಮಹತ್ತರವಾದ ಭಯದಿಂದ ಕಾಪಾಡುತ್ತದೆ,)ಇತ್ಯಾದಿ ಹೇಳಿರುವಂತೆ **ಇಟ್ಟಪಡೈಕ್ಕರ್ಪಡೈ**–ಹಾಕಿದ ಅಸ್ತಿವಾರವು ಕಲ್ಲುಕಟ್ಟಡದಂತೆ ಶಾಶ್ವತವಾಗಿರುವುದರಿಂದಲೂ, ಈ ಶರಣಾಗತನನ್ನು ಕುರಿತು ವಿಶೇಷಿಸಿ **'ನತ್ಯಜೇಯಂ ಕಥಂಚನ'** ಯಾವ ರೀತಿಯಲ್ಲೂ ಕೈಬಿಡುವುದಿಲ್ಲವೆಂದು ಹೇಳಿರುವುದರಿಂದಲೂ ದೃಪ್ತಪ್ರಪನ್ನನಿಗೂ ಅವನು ಅಪೇಕ್ಷಿಸಿದ ಕಾಲ ಪರ್ಯಂತ ವಿಳಂಬಿಸಿದರೂ ಫಲಸಿದ್ಧಿಯಲ್ಲಿ ಸಂಶಯವಿಲ್ಲದಿರುವುದರಿಂದ (3) **"ಯಜ್ಞೋಽನೃತೇನಕ್ಷರತಿ"** ಇತ್ಯಾದಿ -- ಯಾಗವು ಸುಳ್ಳು ಹೇಳುವುದರಿಂದ ನಶಿಸುತ್ತದೆ, ತಪಸ್ಸು ವಿಸ್ಮಯದಿಂದ ಅಂದರೆ ಇಷ್ಟು ಕಷ್ಟವಾದ ತಪಸ್ಸನ್ನು ನಾನು ಮಾಡಿದೆ, ಎಂದು ಆಶ್ಚರ್ಯ ಪಟ್ಟು ಸ್ತೋತ್ರ ಮಾಡಿಕೊಳ್ಳುವುದರಿಂದ ನಶಿಸುತ್ತದೆ. ಬ್ರಾಹ್ಮಣರ ದೂಷಣೆಯಿಂದ ಆಯುಸ್ಸು ಕ್ಷೀಣಿಸುತ್ತದೆ. ದಾನವು ಹೇಳಿ ಕೊಳ್ಳುವುದರಿಂದ ಫಲಸಿದ್ಧಿಯಿಲ್ಲದೆ ನಶಿಸುತ್ತದೆ – ಇತ್ಯಾದಿಗಳಲ್ಲಿ ಹೇಳಿರುವಂತೆ ಸುಕೃತ ನಾಶಕಗಳಾಗಿರುವ ಕೆಲವು ದುಷ್ಕಾರ್ಯಗಳಿಂದ ಈ ಪ್ರಪತ್ತಿ ರೂಪವಾದ ಸುಕೃತವು ನಶಿಸಿ ಫಲವು ಲಭಿಸದೇ ಹೋದರೆ ಮಾಡುವುದೇನು ಎಂದು ಶೋಕಿಸಬೇಕಿಲ್ಲ. ಈ ಪ್ರಪತ್ತಿಯು ನಶಿಸುವುದಿಲ್ಲವೆಂದು ತಾತ್ಪರ್ಯ.

(9) **ಇಶ್ಶರೀರಾನಂತರಮ್** ಇತ್ಯಾದಿ – ಈ ಶರೀರವು ಕಳೆದು ಹೋದ ನಂತರ ಮೋಕ್ಷವನ್ನು ಹೊಂದಬೇಕೆಂದು ಕಾಲವನ್ನು ನಿರ್ದೇಶಿಸಿರುವುದರಿಂದ ಜನ್ಮಾಂತರಾದಿಗಳಿಗೆ ಕಾರಣಗಳಾದ ಪ್ರಾರಬ್ಧ ಕರ್ಮ ವಿಶೇಷಗಳಿಂದ ನಮಗೆ ಜನ್ಮಾಂತರಗಳು ಉಂಟಾದರೆ ಮಾಡುವುದೇನೆಂದು ಶೋಕಿಸಬೇಡ. ದೇಹಾವಸಾನದಲ್ಲಿ ಮೋಕ್ಷವನ್ನು ಅಪೇಕ್ಷಿಸಿ ಶರಣಾಗತಿ ಮಾಡಿದವರಿಗೆ ಯಾವ ಕಾರಣದಿಂದಲೂ ಮೋಕ್ಷವು ವಿಳಂಬಿಸುವುದಿಲ್ಲವೆಂದು ತಾತ್ಪರ್ಯ.

**ಪರಿಪೂರ್ಣ ಕೈಂಕರ್ಯ ಪರ್ಯಂತ ಫಲಸಿದ್ಧಿ ವಿಷಯಕವಾದಶೋಕ ನಿವೃತ್ತಿ.**

(10) **ಅನನ್ಯ ಪ್ರಯೋಜನನಾಯ್** ಇತ್ಯಾದಿ – ಅನನ್ಯ ಪ್ರಯೋಜನನಾಗಿ ಪ್ರಪನ್ನನಾದ ಇವನಿಗೆ

---

3) ಮಹಾಸ್ಮೃತಿ 4-23)

**ಕಳ್ಳಿಗೈಯಾಲೇ ಕೇವಲಾತ್ಮಾನುಭವಾದಿಹಳಾನ ಅಂತರಾಯಙ್ಗಳಾಲೇ ಪರಮ ಫಲತ್ತುಕ್ಕು ವಿಳಂಬಂ ವರುಹಿರದೋ ಎನ್ರು ಶೋಕಿಕ್ಕವೇಣ್ಡಾ.**

**ಇಪ್ಪಡಿ ಸರ್ವಪ್ರಕಾರ ಶೋಕ ಹೇತುಕ್ಕಳುಮ್ ಕಳ್ಳಿಯುಮ್ಪಡಿಯೆನಕ್ಕು ಅನುಗ್ರಹ ವಿಷಯ ಭೂತನಾನ್ ನೀ ಇನಿ ಶೋಕಿಕ್ಕೈಯಾವದು ಮುನ್ಬು ನಿಗ್ರಹ ಭೂತನಾಯ್ ನಿನ್ರದಶೆಯಿಲ್ ಶೋಕಿಯಾದಾಪ್ಪೋಲೇ ಅನಿಪುಣಕೃತ್ಯಮಾಯ್, ಇವ್ವುಪಾಯ ವೈಲಕ್ಷಣ್ಯತ್ತುಕ್ಕುಮ್ ರಕ್ಷಣ ಭರಮ್ ಏರಿಟ್ಟುಕ್ಕೊಳ್ಳುಹಿರ ಸಿದ್ಧೋಪಾಯಭೂತನಾನ ಎನ್ಪ್ರಭಾವತ್ತುಕ್ಕುಮ್ ಎನ್ಪಕ್ಕಲಿಲೇ ಸರ್ವಭರನ್ಯಾಸಮ್ ಪಣ್ಣಿ ಕೃತಕೃತ್ಯನಾಯಿರುಕ್ಕಿರ ಉನ್ನಿಲೈಕ್ಕುಮ್ ತಹುದಿಯನ್ರೆನ್ರು ತಿರುವುಳ್ಳಮ್.**

**ಇಪ್ಪಡಿ ಚರಮ ಶ್ಲೋಕತ್ತಿಲ್ ಸಾರತಮಮಾನ "ಮಾಶುಚಃ" ಎನ್ಡಿರ ಚರಮ ಶ್ಲೋಕತ್ತಿಲ್ ತಾತ್ಪರ್ಯತ್ತೈತ್ತಙ್ಗಳ್ ಚರಮ ದಶೈಯಿಲೇ ಆಚಾರ್ಯರ್ ಸಚ್ಛಿಷ್ಯರುಕ್ಕು ಉಪದೇಶಿಪ್ಪಾರ್ಹಳ್.**

### ಚರಮಶ್ಲೋಕ ಪದಾರ್ಥಾನ್ ಸಙ್ಗ್ರಹೇಣಾಹ

**ಇಶ್ಲೋಕತ್ತಿಲ್ ಪದಙ್ಗಳಿಲ್ ಅಡೈವೇ ಅಧಿಕಾರ ವಿಶೇಷಮ್, ಅಕಿಂಚನ್ಯ ಪುರಸ್ಕಾರಮ್, ದುಷ್ಕರ**

---

ಪ್ರತಿಬಂಧಕಗಳಾದ ಸರ್ವಪಾಪಗಳೂ ನಿವೃತ್ತಿಯಾಗುವುದರಿಂದ ಕೇವಲಾತ್ಮಾನುಭವಾದಿಗಳಾದ, **ಅಂತರಾಯಂಗಳಾಲೇ** – ವಿಘ್ನಗಳಿಂದ ಪರಮ ಫಲಕ್ಕೆ ವಿಳಂಬವು ಬರುತ್ತದೆಯೋ ಎಂದು ಶೋಕಿಸಬೇಡ.

**ಇಪ್ಪಡಿ ಸರ್ವ ಪ್ರಕಾರ** ಇತ್ಯಾದಿ – ಹೀಗೆ ಸರ್ವಪ್ರಕಾರ ಶೋಕ ಹೇತುಗಳೂ ಕಳೆದು ಹೋಗುವಂತೆ ನನಗೆ ಅನುಗ್ರಹ ವಿಷಯ ಭೂತನಾದ ನೀನು ಇನ್ನು ಮೇಲೆ ಶೋಕಿಸುವುದೆಂದರೆ, ಪೂರ್ವದಲ್ಲಿ ನಿಗ್ರಹ ವಿಷಯ ಭೂತನಾಗಿ ನಿಂತಿರುವ ದಶೆಯಲ್ಲಿ ಶೋಕಿಸದೆ ಇರುವಂತೆ ಅನಿಪುಣ ಕೃತ್ಯವಾಗಿ, ಈ ಉಪಾಯ ವಿಶೇಷದ ವೈಲಕ್ಷಣ್ಯಕ್ಕೂ, ರಕ್ಷಣ ಭರವನ್ನು ಮೇಲೆ ಹೊರುವ ಸಿದ್ಧೋಪಾಯ ಭೂತನಾದ, ನನ್ನ (ಭಗವಂತನ) ಪ್ರಭಾವಕ್ಕೂ, ನನ್ನಲ್ಲಿ ಸರ್ವ ಭರನ್ಯಾಸವನ್ನು ಮಾಡಿ ಕೃತಕೃತನಾಗಿರುವ ನಿನ್ನ ಸ್ಥಿತಿಗೂ ಸರಿಯಲ್ಲವೆಂದು ಭಗವಂತನ ಅಭಿಪ್ರಾಯ.

### ಮೇಲೆ ಹೇಳಿದ ಅರ್ಥಗಳು ಅತ್ಯಂತ ರಹಸ್ಯಗಳು

**ಇಪ್ಪಡಿ** ಇತ್ಯಾದಿ – ಹೀಗೆ ಚರಮಶ್ಲೋಕದಲ್ಲಿ ಸಾರತಮವಾದ "ಮಾಶುಚಃ" ಎಂಬ ಚರಮ ವಾಕ್ಯದಲ್ಲಿ ತಾತ್ಪರ್ಯವನ್ನು ತಮ್ಮ **ಚರಮ** – ಅಂತಿಮ ದಶೆಯಲ್ಲಿ ಆಚಾರ್ಯರುಗಳು ಸಚ್ಛಿಷ್ಯರುಗಳಿಗೆ ಉಪದೇಶಿಸುತ್ತಾರೆ. ಇವು ಅತ್ಯಂತ ರಹಸ್ಯಗಳು ಎಂದರ್ಥ

### ಚರಮಶ್ಲೋಕದ ಅರ್ಥ ಸಂಗ್ರಹ

ಅನಂತರ ಚರಮಶ್ಲೋಕದ ಅರ್ಥವನ್ನು **ಇಶ್ಲೋಕತ್ತಿಲ್ ಅಡೈವೇ** ಎಂದಾರಂಭಿಸಿ ಸಂಗ್ರಹಿಸುತ್ತಾರೆ. ಅದಾಗಿ ಚರಮಶ್ಲೋಕದಲ್ಲಿ ಅಡೈವೇ – ಕ್ರಮವಾಗಿ, (1) **ಅಧಿಕಾರ ವಿಶೇಷಮ್** – ಸರ್ವಧರ್ಮಾನ್ ಪರಿತ್ಯಜ್ಯ ಎಂಬಲ್ಲಿ "ಅತೋಽಶಕ್ತಾಧಿಕಾರತ್ವಮ್" ಎಂದು ಅಶಕ್ತನಿಗೆ ಅಧಿಕಾರತ್ವವು ಹೇಳಲ್ಪಟ್ಟಿತು. ಇದು ಅನುವಾದ ಪಕ್ಷದಲ್ಲಿ ಹೇಳಿದ ಆಕಿಂಚನ್ಯ ರೂಪವಾದ ಅಧಿಕಾರ ವಿಶೇಷ. (2) **ಆಕಿಂಚನ್ಯ ಪುರಸ್ಕಾರಮ್**– ಆಕಿಂಚನ್ಯವನ್ನು ಮುಂದಿಟ್ಟುಕೊಳ್ಳುವುದು. ವಿಧಿ ಪಕ್ಷದಲ್ಲಿ ಅಕಿಂಚನನಾದ ನೀನು ಕರ್ಮಯೋಗಾದಿ ಸರ್ವ ಧರ್ಮಗಳನ್ನೂ ಬಿಟ್ಟು, ಎಂದು ಹೇಳುವುದು. ಆಕಿಂಚನ್ಯಾನುಸಂಧಾನಾತ್ಮವಾದ ಕಾರ್ಪಣ್ಯ ರೂಪಾಂಗ ವಿಧಾನವೆಂದರ್ಥ. (3) **ದುಷ್ಕರ ಪರಿಕರಾಂತರನೈರಪೇಕ್ಷ್ಯಮ್** – ಪ್ರಪತ್ತಿಗೆ ವಿಹಿತಗಳಾದ ಐದು ಅಂಗಗಳು

**ಪರಿಕರಾಂತರ ನೈರಪೇಕ್ಷ್ಯವುಮ್, ಅಶಕ್ಯಪ್ರವೃತ್ತ್ಯನೌಚಿತ್ಯವುಮ್, ದುಷ್ಕರಾಭಿನಿವೇಶ ವೈಯ್ಯರ್ಥ್ಯವುಮ್ ಉಪಾಯ ವಿಶೇಷತ್ತಿನ್ ಶುಣ್ಣೈಯುಡಮೈ, ಮುಮುಕ್ಷುವುಕ್ಕು ಶರಣ್ಯ ವಿಶೇಷವುಮ್, ಶರಣ್ಯನುಡೈಯ ಸುಲಭತ್ವ ಸುಶೀಲತ್ವಾದಿ ಗುಣಪೂರ್ಣತ್ವಂ, ಪ್ರಾಪ್ಯನೇ ಪ್ರಾಪಕನಾನಮೈ, ಹಿತತಮೋಪದೇಶಿತ್ವವುಮ್, ನಿರಪೇಕ್ಷ ಸರ್ವವಿಷಯ ನಿಷ್ಪ್ರತ್ಯೂಹ ಕರ್ತೃತ್ವವುಮ್, ವ್ಯಾಜಮಾತ್ರ ಪ್ರತೀಕ್ಷತ್ವವುಮ್, ಉಪಾಯಾನ್ತರ ವ್ಯವಧಾನ ನಿರಪೇಕ್ಷತ್ವವುಮ್, ಪರಿಕರಾಂತರ ನಿರಪೇಕ್ಷ ಪ್ರಸಾದ್ಯತ್ವವುಮ್, ಸರ್ವಫಲಾರ್ಥಿಶರಣ್ಯತ್ವವುಮ್, ಶರಣ್ಯಾಂತರ ಪರಿಗ್ರಹಾಸಹತ್ವವುಮ್, ಶರಣ್ಯ ವೈಶಿಷ್ಟ್ಯವುಮ್, ಉಪಾಯಾನ್ತರ ಸ್ಥಾನ ನಿವೇಶ್ಯತ್ವವುಮ್, ಭರ ಸ್ವೀಕರ್ತೃತ್ವವುಮ್,**

**ಭರನ್ಯಾಸರೂಪ ಸಾಧ್ಯೋಪಾಯ ವಿಶೇಷವುಮ್, ಅದಿನ್ ಪರಿಕರಙ್ಗಳ್, ಸರ್ವಾಧಿಕಾರತ್ವವುಮ್,**

---

ಯಾವವೂ ಬೇಡದಿರುವುದು. ಇದನ್ನು ‘ಅಸಂಗಭಾವೋಧರ್ಮಾಣಾಂ’ ಎಂದು ಸಂಗ್ರಹಿಸಿರುತ್ತಾರೆ. 4) **ಅಶಕ್ಯ ಪ್ರವೃತ್ತ್ಯ ನೌಚಿತ್ಯಂ** – ‘ಅಶಕ್ಯಾರಂಭವಾರಣ’ ಎಂದು ಹೇಳಿದ ಅಶಕ್ಯವಾದ ಕಾರ್ಯಗಳಲ್ಲಿ ಪ್ರವೃತ್ತಿಯು ಅನುಚಿತ ವೆಂಬುದು, (5) **ದುಷ್ಕರಾಭಿನಿವೇಶ ವೈಯ್ಯರ್ಥ್ಯವುಮ್** – ‘ತತ್ಪ್ರತ್ಯಾಶಾಪ್ರಶಮನಮ್’ –ಭಕ್ತಿಯೋಗವನ್ನು ಸ್ವಲ್ಪವಾದರೂ ಆರಂಭಿಸಿ ಮಾಡೋಣ ಎಂಬ ಪ್ರತ್ಯಾಶೆಯು ವ್ಯರ್ಥವೆಂದು ತಿಳಿದು ಅದನ್ನು ಬಿಟ್ಟು ಶಾಂತ ಮನಸ್ಕನಾಗಿರುವುದು. (6) **ಉಪಾಯ ವಿಶೇಷತ್ತಿನ್ ಶುಣ್ಣೈಯುಡೈಮೈ** – ಉಪಾಯಾಂತರಾಸಹಿಷ್ಣುತ್ವ ರೂಪ ಅತಿಶಯವುಳ್ಳವನಾಗಿರುವುದು, “ಬ್ರಹ್ಮಾಸ್ತ್ರ ನ್ಯಾಯ ಸೂಚನಮ್” ಎಂದರ್ಥ. ಈ ಆರೂ ಸರ್ವ ಧರ್ಮ ಪರಿತ್ಯಾಗ ಶಬ್ದಾರ್ಥಗಳು (7) **ಮುಮುಕ್ಷುವುಕ್ಕು ಶರಣ್ಯ ವಿಶೇಷವುಮ್** – ಮೋಕ್ಷದಲ್ಲಿ ಆಸೆ ಯುಳ್ಳವನಿಗೆ ಶರಣ್ಯನು ಸರ್ವೇಶ್ವರನು, (8 **ಶರಣ್ಯನ್ನುಡೈಯ** ಇತ್ಯಾದಿ – ಶರಣ್ಯನ ಸುಲಭತ್ವ ಸುಶೀಲತ್ವಾದಿ ಗುಣ ಪರಿಪೂರ್ಣತ್ವ, (9) **ಹಿತತಮೋಪದೇಶಿತ್ವವುಮ್** – ಹಿತತಮವಾದ ಉಪಾಯವನ್ನು ಉಪದೇಶಿಸುವುದು, (7, 8, 9) ಇವು ಮೂರು “ಮಾಂ” ಶಬ್ದಾರ್ಥಗಳು. ಅನಂತರ ಏಕಶಬ್ದಕ್ಕೆ ಎಂಟು ಅರ್ಥಗಳನ್ನು ಹೇಳುತ್ತಾರೆ :– (10) **ಪ್ರಾಪ್ಯನೇ ಪ್ರಾಪಕನಾನಮೈ** – ಪ್ರಾಪ್ಯನಾದ ಭಗವಂತನೇ, ಪ್ರಾಪಕನು – “ಪ್ರಾಪ್ಯಸ್ಯೈವ ಪ್ರಾಪಕತ್ವಮ್” ಎಂಬುದು ಮೋಕ್ಷವನ್ನು ಕೊಡುವವನಾಗಿರುವುದು, (11) **ನಿರಪೇಕ್ಷ ಸರ್ವ ವಿಷಯ** ಇತ್ಯಾದಿ – ಸ್ವಪ್ರಾಧಾನ್ಯ ನಿವಾರಣಮ್ ಎಂಬುದರ ಅರ್ಥ – ಯಾವ ಅಪೇಕ್ಷೆಯೂ ಇಲ್ಲದೆ ಸರ್ವ ವಿಷಯಗಳಲ್ಲಿಯೂ ಯಾವ ತಡೆಯೂ ಇಲ್ಲದೆ ಪ್ರಧಾನ ಕರ್ತಾ ಭಗವಂತನೆಂಬುದು (12) **ವ್ಯಾಜ ಮಾತ್ರ ಪ್ರತೀಕ್ಷತ್ವವುಮ್** – ವ್ಯಾಜಸಾಪೇಕ್ಷನಾಗಿರುವುದು. ಪ್ರಪತ್ತೇ ರ್ವ್ಯಾಜಮಾತ್ರತ್ವಮ್ ಎಂಬುದರ ಅರ್ಥ, (13) **ಉಪಾಯಾಂತರ ವ್ಯವಧಾನ ನಿರಪೇಕ್ಷತ್ವವುಮ್** – ಅನ್ಯೋಪಾಯೈರನನ್ವಯಃ ಎಂಬುದರ ಅರ್ಥ – ಅದಾಗಿ ಭಕ್ತಿಯೋಗ ರೂಪವಾದ ಉಪಾಯಾಂತರ ವ್ಯವಧಾನವನ್ನು ಅಪೇಕ್ಷಿಸದಿರುವುದು. (14) **ಪರಿಕರಾಂತರ ನಿರಪೇಕ್ಷ ಪ್ರಸಾದ್ಯತ್ವವುಮ್** – ತದಂಗೈರಪ್ಯ ಸಂಬಂಧಃ, ಪ್ರಪತ್ತಿಗೆ ಐದು ಅಂಗಗಳು ವಿನಹ ಇತರ ಅಂಗಗಳು ಬೇಡದಿಲ್ಲವಾಗಿ, ಪ್ರಪನ್ನನಾಗುವುದು. (15) **ಸರ್ವಫಲಾರ್ಥಿ ಶರಣ್ಯತ್ವವುಮ್** – ‘ಸರ್ವಸಾಧ್ಯೇಷ್ವ ಭಿಸ್ನತಾ’ ಎಂದು ಹೇಳಿರುವಂತೆ ಸರ್ವ ಫಲಗಳನ್ನು ಅರ್ಥಿಸುವವರಿಗೂ ಶರಣ್ಯನಾಗಿರುವುದು (16) **ಶರಣ್ಯಾಂತರ ಪರಿಗ್ರಹಾಸಹತ್ವವುಮ್** – ಇತರರನ್ನು ರಕ್ಷಕರನ್ನಾಗಿ ವರಿಸಕೂಡದೆಂಬುದು (17) **ಶರಣ್ಯವೈಶಿಷ್ಟ್ಯವುಮ್** – ಲಕ್ಷ್ಮೀವಿಶಿಷ್ಟನಾಗಿರುವುದು (16) ಮತ್ತು (17) ಇವೆರಡೂ ಏಕಶಬ್ದದಲ್ಲಿ ಆರ್ಥಿಕವಾಗಿ ಲಭಿಸುವ ಅರ್ಥಗಳು. (18) **ಉಪಾಯಾಂತರ ಸ್ಥಾನನಿವೇಶ್ಯತ್ವವುಮ್** ಭಕ್ತಿಯೋಗವೆಂಬ ಉಪಾಯಾಂತರ ಸ್ಥಾನದಲ್ಲಿರಿಸುವುದು. (19) **ಭರಸ್ವೀಕರ್ತೃತ್ವವುಮ್** – ಭಕ್ತಿಯೋಗವೆಂಬ ಭರವನ್ನು ತನ್ನ ಮೇಲೆ ಏರಿಸಿಕೊಳ್ಳುವುದು. (18) ಮತ್ತು (19) ಇವೆರಡೂ ಶರಣ ಶಬ್ದಾರ್ಥಗಳು

ಅನಂತರ **‘ವ್ರಜ’** ಎಂಬುದಕ್ಕೆ ಶಾಬ್ದವಾಗಿಯೂ ಆರ್ಥವಾಗಿಯೂ ಲಭಿಸುವ ಅರ್ಥಗಳನ್ನು ಭರನ್ಯಾಸ

ಸಕೃತ್ಕರ್ತ್ತವ್ಯತ್ವಮ್, ಸುಕರತ್ವಮ್, ಆವಿಳಂಬಿತ ಫಲಪ್ರದತ್ವಮ್, ಪ್ರಾರಬ್ಧ ನಿವರ್ತ್ತಕಕ್ಷಮತ್ವಮ್, ಅಧಿಕಾರಿಯಿನುಡೈಯ ಪರಾಧೀನ ಕರ್ತೃತ್ವಮ್,

ಶಾಸ್ತ್ರವಶ್ಯತ್ವಮ್ ರಕ್ಷಕನುಡೈಯ ಪರಮಕಾರುಣಿಕತ್ವಮ್, ಸುಪ್ರಸನ್ನತ್ವಮ್ ನಿರಙ್ಕುಶ ಸ್ವಾತಂತ್ರ್ಯಮ್, ದುರ್ನಿವಾರತ್ವಮ್, ಪರಾನಪೇಕ್ಷತ್ವಮ್,ಅವಸರ ಪ್ರತೀಕ್ಷತ್ವಮ್,ಶರಣಾಗತನುಡೈಯ ಕೃತಕೃತ್ಯತ್ವಮ್. ಪರಿಗೃಹೀತೋಪಾಯ ತತ್ಫಲಂಗಳೈಪ್ಪತ್ತ ಕರ್ತವ್ಯಾನ್ತರತ್ತಿಲ್ ಪ್ರಾಪ್ತಿಯಿಲ್ಲಾಮೈ. ಭಗವದತ್ಯರ್ಥಪ್ರಿಯತ್ವಮ್, ತ್ರೈಕಾಲಿಕ ವಿರೋಧಿಭೂಯಸ್ತ್ವಮ್,ವಿರೋಧಿವರ್ಗ ವೈಚಿತ್ರ್ಯಮ್. ಅವತ್ತಿನುಡೈಯ ಈಶ್ವರ ಸಙ್ಕಲ್ಪ ನಿವರ್ತ್ಯತ್ವಮ್, ಪ್ರಪನ್ನೇಚ್ಛಾನಿಯತಮಾನ ವಿರೋಧಿ ನಿವೃತ್ತಿ

---

ರೂಪ ಸಾಧ್ಯೋಪಾಯ ವಿಶೇಷಮ್ ಎಂದಾರಂಭಿಸಿ ಪ್ರಾರಬ್ಧ ನಿವರ್ತನಕ್ಷಮತ್ವಮ್ ಎಂದು ಏಳು ಅಂಶಗಳಿಂದ ತಿಳಿಸುತ್ತಾರೆ. ಅದಾಗಿ (20) **ಭರನ್ಯಾಸ ರೂಪ ಸಾಧ್ಯೋಪಾಯವು** ವ್ರಜ ಎಂಬ ಧಾತುವಿನಿಂದ ವಿಧಿಸಲ್ಪಡುತ್ತದೆ. (21) **ಅದಿನ್ ಪರಿಕರಂಗಳ್** – ಆ ಉಪಾಯ ವಿಶೇಷವು ಆನುಕೂಲ್ಯ ಸಂಕಲ್ಪಾದಿ ಪರಿಕರಗಳೊಡನೆ ಅನುಷ್ಠಿಸತಕ್ಕದ್ದು. (22) **ಸಾರ್ವಾಧಿಕಾರತ್ವಮ್** – ಆ ಉಪಾಯದಲ್ಲಿ ಆಕಿಂಚನ್ಯಾನನ್ಯ ಗತಿತ್ವಗಳನ್ನುಳ್ಳ ಸರ್ವರಿಗೂ, ಜಾತ್ಯಾದಿ ವ್ಯತ್ಯಾಸವಿಲ್ಲದೆ ಅಧಿಕಾರ, ಅಗು (23) **ಸಕೃತ್ಕೃತ್ಯತ್ವಮ್** – ಒಂದು ಸಲವೇ ಮಾಡತಕ್ಕದ್ದು. (24) **ಸುಕರತ್ವಮ್** - ಸುಲಭವಾಗಿ ಅನುಷ್ಠೇಯವು 25) **ಅವಿಳಂಬಿತಫಲ ಪ್ರದತ್ವಮ್** – ವಿಳಂಬವಿಲ್ಲದೆ ಫಲವನ್ನು ಕೊಡತಕ್ಕದ್ದು. (26) **ಪ್ರಾರಬ್ಧ ನಿವರ್ತನಕ್ಷಮತ್ವಮ್** – ಪ್ರಾರಬ್ಧ ಕರ್ಮವನ್ನೂ ಹೋಗಲಾಡಿಸತಕ್ಕದ್ದು (27) **ಅಧಿಕಾರಿಯಿನುಡೈಯ ಪರಾಧೀನ ಕರ್ತೃತ್ವಮ್** –ಶರಣಾಗತಿ ಮಾಡುವ ಅಧಿಕಾರಿಯು ಭಗವದಧೀನನಾದ ಕರ್ತಾ.ಎಂಬುದು 28) **ಶಾಸ್ತ್ರವಶ್ಯತ್ವಮ್**–ಶಾಸ್ತ್ರಕ್ಕೆ ವಶಪಟ್ಟಿರುವುದು ಇವೆರಡೂ 'ವ್ರಜ' ಎಂಬ ಧಾತುವಿನ ಪ್ರೇರಿಸುವ ಮಧ್ಯಮ ಪುರುಷದ ಅರ್ಥ.

ಅನಂತರ "**ಅಹಂ**" ಶಬ್ದದ ಆರು ಅರ್ಥಗಳನ್ನು (29) "**ರಕ್ಷಕನುಡೈಯ ಪರಮಕಾರುಣಿಕತ್ವಮ್**" ಎಂದಾರಂಭಿಸಿ ತಿಳಿಸುತ್ತಾರೆ ಅದಾಗಿ ರಕ್ಷಕನಾದ ಭಗವಂತನ ಪರಮಕಾರುಣಿಕತ್ವ, (30) **ಸುಪ್ರಸನ್ನತ್ವಮ್** ಪ್ರಪತ್ತಿಯಿಂದ ಪ್ರಸನ್ನನಾಗಿರುವಿಕೆ, (31) **ನಿರಂಕುಶ ಸ್ವಾತಂತ್ರ್ಯಮ್** – 'ಮೋಕ್ಷಯಿಷ್ಯಾಮಿ' ಎಂಬ ಸಂಕಲ್ಪಕ್ಕೆ ಯಾವ ತಡೆಯೂ ಇಲ್ಲದ ಸ್ವಾತಂತ್ರ್ಯ, 32) **ದುರ್ನಿವಾರತ್ವಮ್** – ನಿರಂಕುಶ ಸ್ವಾತಂತ್ರ್ಯದಿಂದ ಯಾವ ತಡೆಯೂ ಇಲ್ಲದಿರುವಿಕೆ. (33) **ಪರಾನಪೇಕ್ಷತ್ವಮ್** – ಇತರರ ಅಪೇಕ್ಷೆಯಿಲ್ಲದಿರುವಿಕೆ. (34) **ಅವಸರ ಪ್ರತೀಕ್ಷತ್ವಮ್** ಕಾಲವನ್ನು ಪ್ರತೀಕ್ಷಿಸುತ್ತಿರುವಿಕೆ. ಅನಂತರ ಮೂರು ಅಂಶಗಳಿಂದ "**ತ್ವಾ**" ಶಬ್ದಾರ್ಥವನ್ನು ಸಂಗ್ರಹಿಸುತ್ತಾರೆ. ಅದಾಗಿ (35 **ಶರಣಾಗತನುಡೈಯ ಕೃತಕೃತ್ಯತ್ವಮ್** – 'ತ್ವಾ' ಪದದಿಂದ ಶರಣಾಗತನಾದ ನೀನು ಕೃತಕೃತ್ಯನು ಎಂಬುದು, (36) **ಪರಿಗೃಹೀತ ಉಪಾಯತತ್ಫಲಂಗಳೈ** ಇತ್ಯಾದಿ **ಇವನು** ಅನುಷ್ಠಿಸಿದ ಶರಣಾಗತಿಯೆಂಬ ಉಪಾಯ ಮತ್ತು ಅದರ ಫಲಗಳನ್ನು ಕುರಿತು ಬೇರೆ ಯಾವ ಕರ್ತವ್ಯಗಳೂ ಮಾಡಬೇಕಿಲ್ಲದೆ ಇರುವುದು. (37 **ಭಗವದತ್ಯರ್ಥ ಪ್ರಿಯತ್ವಮ್** – ಭಗವಂತನಿಗೆ ಬಹಳ ಪ್ರೀತಿಪಾತ್ರನಾಗಿರುವಿಕೆ, **'ಸರ್ವಪಾಪೇಭ್ಯೋ'** ಶಬ್ದಾರ್ಥಗಳು ಮೂರು, (38) **ತ್ರೈಕಾಲಿಕ ವಿರೋಧಿಭೂಯಸ್ತ್ವಮ್** – ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲಿ ಏರ್ಪಟ್ಟ ವಿರೋಧಿ ಪಾಪಗಳು ಪಾಪ ಶಬ್ದಾರ್ಥ. ಅವುಗಳು ಅನಂತಗಳಾಗಿರುವುದು ಬಹುವಚನಾರ್ಥ. (39) **ವಿರೋಧಿ ವರ್ಗವೈಚಿತ್ರ್ಯಮ್** – ಪಾಪಗಳು ವಿಚಿತ್ರಗಳಾಗಿರುವುದು ಸರ್ವಶಬ್ದಾರ್ಥ–ಅನಂತರ **ಮೋಕ್ಷಯಿಷ್ಯಾಮಿ** ಶಬ್ದಾರ್ಥವನ್ನು (40) **ಅವಟ್ರಿನುಡೈಯ ಈಶ್ವರ ಸಂಕಲ್ಪಮಾತ್ರ ನಿವರ್ತ್ಯತ್ವಮ್** ಎಂದಾರಂಭಿಸಿ, (41) **'ಅಪುನರಾವೃತ್ತಿ'** ಪರ್ಯಂತ ಕ್ರೋಡೀಕರಿಸುತ್ತಾರೆ. ಅದಾಗಿ (42) **ಅವಟ್ರಿನುಡೈಯ** ಇತ್ಯಾದಿ - ಆ ಪಾಪಗಳು ಕ್ಷಮಿಷ್ಯೇ – ಕ್ಷಾಂತಮ್ ಎಂಬ ಈಶ್ವರನ ಸಂಕಲ್ಪ ಮಾತ್ರದಿಂದ ಹೋಗಲಾಡಿಸತಕ್ಕವು. (43) **ಪ್ರಪನ್ನೇಚ್ಛಾನಿಯತಮಾನ ವಿರೋಧಿ**

**ಕಾಲಮ್. ವಿರೋಧಿ ನಿವೃತ್ತಿ ಸ್ವರೂಪಮ್, ಆತ್ಮಕೈವಲ್ಯವ್ಯಾವೃತ್ತ ಯಥಾವಸ್ಥಿತಸ್ವರೂಪಾವಿರ್ಭಾವಮ್ ಪರಿಪೂರ್ಣ ಭಗವದನುಭವಮ್, ಸರ್ವವಿಧ ಕೈಂಕರ್ಯಮ್, ಅಪುನರಾವೃತ್ತಿ, ಮುನ್ಬು ಶೋಕಹೇತು ಪ್ರಾಚುರ್ಯಮ್.ಪಿನ್ಬು ಶೋಕ ಪ್ರಾಪ್ತಿಯಿಲ್ಲಾಮೈ,ವಿಮರ್ಶಕಾಲಮೆಲ್ಲಾಮ್ ನಿಸ್ಸಂಶಯತ್ವಮ್,ಶೋಕ ನಿವೃತ್ತಿ, ನಿರ್ಭಯತ್ವಮ್, ಹರ್ಷವಿಶೇಷಮ್, ಶರೀರಪಾತಕಾಲ ಪ್ರತೀಕ್ಷತ್ವಮ್, ನಿರಪರಾಧ ಕೈಂಕರ್ಯ ರಸಿಕತ್ವಮ್, ಎನ್ರು ಇವೈ ಪ್ರಧಾನಮಾಯ್ ಮತ್ತು ಮಿವತ್ತುಕ್ಕು ಅಪೇಕ್ಷಿತಙ್ಗಳೆಲ್ಲಾಮ್ ಶಬ್ದ ಶಕ್ತಿ ಯಾಲುಮ್ ಅರ್ಥಸ್ವಭಾವತ್ತಾಲುಮ್. ಅನುಶಿಷ್ಟಂಗಳ್,**

### ಚರಮಶ್ಲೋಕಸ್ಯ ಸಮುದಿತಾರ್ಥಃ.

**ಅಲ್ಪಜ್ಞನಾಯ್, ಅಲ್ಪಶಕ್ತಿಯಾಯ್, ಪರಿಮಿತಕಾಲವರ್ತಿಯಾಯ್, ವಿಳಂಬಕ್ಷಮನು ಮನ್ರಿಕ್ಕೇ ಇರುಕ್ಕಿರ ಉನ್ನಾಲೇ, ಅರಿಯವುಮ್ ಅನುಷ್ಟಿಕ್ಕವುಮ್ ಅರಿದಾಯ್ ಫಲವಿಳಂಬಮುಮುಣ್ಡಾಯಿರು ಕ್ಕಿರ ಉಪಾಯಾನ್ತರಙ್ಗಳಲ್ಲೈಯಾದೇ ಸರ್ವ ಸುಲಭನಾಯ್ ಸರ್ವಲೋಕಶರಣ್ಯನಾಯ್ ಶರಣ್ಯತ್ವೋಪ**

---

**ನಿವೃತ್ತಿಕಾಲಮ್** – ಆ ವಿರೋಧಿಗಳನ್ನು ಹೋಗಲಾಡಿಸುವ ಕಾಲವು ಪ್ರಪನ್ನನ ಇಚ್ಛಾನುಸಾರವಾಗಿ ದೇಹಾವಸಾನದಲ್ಲಿಯೋ, ಕ್ಷಿಪ್ರವಾಗಿಯೋ, ಪ್ರಾರಬ್ಧ ಕರ್ಮಾವಸಾನದಲ್ಲಿಯೋ ಏರ್ಪಡತಕ್ಕದ್ದು. (44 **ವಿರೋಧಿ ನಿವೃತ್ತಿ ಸ್ವರೂಪಮ್** – ವಿರೋಧಿ ಪಾಪಗಳ ನಿವರ್ತನ ಸ್ವರೂಪ, (42, 43, 44) ಇವು ಮೂರೂ ಅನಿಷ್ಟ ನಿವೃತ್ತಿ ರೂಪಗಳು (45) **ಆತ್ಮಕೈವಲ್ಯ ವ್ಯಾವೃತ್ತ ಯಥಾವಸ್ಥಿತ ಸ್ವರೂಪಾವಿರ್ಭಾವಮ್**– ಸ್ವಾತ್ಮಾನುಭವರೂಪ ಕೈವಲ್ಯಾನಂದಕ್ಕಿಂತ ಬೇರೆಯಾದ ಯಥಾವಸ್ಥಿತವಾದ ಭಗವಚ್ಛೇಷತ್ವರೂಪ ಸ್ವಸ್ವರೂಪಾ ವಿರ್ಭಾವ (46) **ಪರಿಪೂರ್ಣಭಗವದನುಭವಮ್** – ಪರಿಪೂರ್ಣವಾದ ಭಗವಂತನ ಅನುಭವ. (47) **ಸರ್ವ ವಿಧ ಕೈಂಕರ್ಯಮ್** – ಸರ್ವದೇಶ, ಸರ್ವಕಾಲ, ಸರ್ವಾವಸ್ಥೋಚಿತ ಸರ್ವವಿಧ ಕೈಂಕರ್ಯ, (48) **ಅಪುನ ರಾವೃತ್ತಿ** – ಹಿಂತಿರುಗಿ ಬರದೇ ಇರುವುದು (45) ರಿಂದ (48) ರವರೆಗೆ ಇವು ನಾಲ್ಕು ಇಷ್ಟ ಪ್ರಾಪ್ತಿ ರೂಪ. (49 **ಮುನ್ಬು ಶೋಕ ಹೇತುಪ್ರಾಚುರ್ಯಮ್** ಎಂದಾರಂಭಿಸಿ ಎಂಟು ಅಂಶಗಳು "**ಮಾಶುಚಃ**" ಎಂಬುದರ ವಾಕ್ಯಾರ್ಥ. ಅದಾಗಿ ಪ್ರಪತ್ತಿಗೆ ಮೊದಲು ಪ್ರಚುರವಾದ **ಶೋಕ ಹೇತು**. (50) **ಪಿನ್ಬು ಶೋಕಿಕ್ಕ ಪ್ರಾಪ್ತಿ ಯಿಲ್ಲಾಮೈ** - ಶರಣಾಗತನಾಗಿ ನ್ಯಸ್ತ ಭರನಾದ ನಂತರ ಶೋಕಿಸಲು ಪ್ರಾಪ್ತಿಯಿಲ್ಲದಿರುವುದು. (51) **ವಿಮರ್ಶ ಕಾಲಮೆಲ್ಲಾಮ್ ನಿಸ್ಸಂಶಯತ್ವಮ್** – ಪ್ರಪತ್ತ್ಯನಂತರ ವಿಮರ್ಶನ ಕಾಲದಲ್ಲೆಲ್ಲಾ ಫಲಸಿದ್ಧಿಯಲ್ಲಿ ಸಂಶಯ ವಿಲ್ಲದಿರುವುದು (52) **ಶೋಕನಿವೃತ್ತಿ** – ಸರ್ವವಿಧಗಳಾದ **ಶೋಕಗಳ** ನಿವೃತ್ತಿ. (53) **ನಿರ್ಭಯತ್ವಂ**– ಪ್ರಪತ್ತ್ಯನಂತರ ನರಕ ಭಯವಿಲ್ಲದಿರುವುದು (54) **ಹರ್ಷ ವಿಶೇಷಮ್** – ಮೋಕ್ಷ ಫಲವುಸಿದ್ಧಿಸುತ್ತದೆಯೆಂಬ ಹರ್ಷ ವಿಶೇಷ. (55) **ಶರೀರ ಪಾತಕಾಲಪ್ರತೀಕ್ಷತ್ವಮ್** – ಯಾವಾಗ ಈ ಶರೀರ ಪತನಕಾಲವು ಬರುತ್ತದೆ ಅಂದರೆ ಅಭ್ಯುಪಗತ ಪ್ರಾರಬ್ಧ ಕರ್ಮವು ಯಾವಾಗ ಕಳೆಯುತ್ತದೆಯೆಂದು ಪ್ರತೀಕ್ಷಿಸಿ ಕೊಂಡಿರುವಿಕೆ. (56) **ನಿರಪ ರಾಧ ಕೈಂಕರ್ಯರಸಿಕತ್ವಮ್** – ನಿರಪರಾಧವಾದ ಕೈಂಕರ್ಯದಲ್ಲಿ ರಾಸಿಕ್ಯವಿರುವಿಕೆ, **ಎನ್ರಿವೈಪ್ರಧಾನಮಾಯ್** ಇತ್ಯಾದಿ – ಎಂದು ಇವುಗಳು ಪ್ರಧಾನಗಳಾಗಿ, ಮೇಲೂ ಇವುಗಳಿಗೆ ಅಪೇಕ್ಷಿತಗಳಾದವೆಲ್ಲಾ ಶಬ್ದಶಕ್ತಿಯಿಂದಲೂ ಅರ್ಥ ಸ್ವಭಾವದಿಂದಲೂ **ಅನುಶಿಷ್ಟಂಗಳ್** – ಅನುಸರಿಸಿ ಹೇಳಲ್ಪಟ್ಟವು.

### ಚರಮಶ್ಲೋಕದ ಸಮುದಿತಾರ್ಥ

ಅನಂತರ ಚರಮಶ್ಲೋಕದ ಸಮುದಾಯಾರ್ಥವನ್ನು **ಅಲ್ಪಜ್ಞನಾಯ್** ಇತ್ಯಾದಿ ತಿಳಿಸುತ್ತಾರೆ. ಅದಾಗಿ ಅಲ್ಪಜ್ಞನಾಗಿಯೂ, ಅಲ್ಪಶಕ್ತಿಯಾಗಿಯೂ, ಪರಿಮಿತಕಾಲ ವರ್ತಿಯಾಗಿಯೂ ವಿಳಂಬ ಕ್ಷಮನೂ ಅಲ್ಲದೇ ಇರುವ ನಿನ್ನಿಂದ ತಿಳಿಯಲೂ ಅನುಷ್ಠಿಸಲೂ ಕಷ್ಟವಾಗಿ ಫಲವಿಳಂಬವೂ ಉಂಟಾಗಿರುವ ಭಕ್ತಿರೂಪ ಉಪಾಯಾಂತರ

ಯುಕ್ತ ಸರ್ವಾಕಾರ ವಿಶಿಷ್ಟನಾನ ಎನ್ನೈ ಒರುವನ್ನೈಯುಮೇ ಉಪಾಯಮಾಹ ಅಧ್ಯವಸಿತ್ತುಕ್ಕೊಂಡು ಅಙ್ಗಪಂಚಕ ಸಂಪನ್ನಮಾನ ಆತ್ಮರಕ್ಷಾಭರ ಸಮರ್ಪಣತ್ತೈಪ್ಪಣ್ಣು. ಇಪ್ಪಡಿ ಅನುಷ್ಠಿತೋಪಾಯನಾಯ್, ಕೃತಕೃತ್ಯನಾಯ್, ಎನಕ್ಕಡೈಕ್ಕಲಮಾಯ್, ಅತ್ಯರ್ಥಪ್ರಿಯತಮನಾನ ಉನ್ನೈ, ಪರಮ ಕಾರುಣಿಕನಾಯ್ ಸುಪ್ರಸನ್ನನಾಯ್, ನಿರಙ್ಕುಶ ಸ್ವಾತಂತ್ರ್ಯನಾಯ್, ಸ್ವಾರ್ಥಪ್ರವೃತ್ತನಾನ ನಾನೇ, ಎನ್ ಸಙ್ಕಲ್ಪಮಾತ್ರಮೇ ತುಣೈಯಾಹಕ್ಕೊಂಡು, ಬಹು ಪ್ರಕಾರಮಾಯ್, ಅನಂತಮಾಯ್, ದುರತ್ಯಯಮಾನ ಸರ್ವವಿರೋಧಿ ವರ್ಗತ್ತೋಡುಮ್ ಪಿನ್‌ತುಡರ್ಚ್ಚಿಯಿಲ್ಲಾದ ಪಡಿ ತುವಕ್ಕರುತ್ತು, ಎನ್ನೋಡೊಕ್ಕ ಎನ್ನುಡೈಯ ಆತ್ಮಾತ್ಮೀಯಙ್ಗಳೆಲ್ಲಾಮ್ ಅನುಭವಿಕ್ಕೈಯಾಲೇ ತುಲ್ಯಭೋಗನಾಕ್ಕಿ ಪರಿಪೂರ್ಣಾನುಭವ ಪರೀವಾಹರೂಪಮಾನ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವವಿಧ ಕೈಂಕರ್ಯತ್ತೈಯುಮ್ ತನ್ದುಹಪ್ಪನ್. ನೀಯೊನ್ರುಕ್ಕುಮ್ ಶೋಕಿಕ್ಕವೇಣ್ಡಾವೆನ್ರು ಚರಮ ಶ್ಲೋಕತ್ತಿಲ್ ತಿರಂಡಪೊರುಳ್.

> ಏಕಂ ಸರ್ವಪ್ರದಂ ಧರ್ಮಂ ಶ್ರಿಯಾಜುಷ್ಟಂ ಸಮಾಶ್ರಿತೈಃ ।
> ಅಪೇತ ಶೋಕೈ ರಾಚಾರ್ಯೈರಯಂ ಪನ್ಥಾಃ ಪ್ರದರ್ಶಿತಃ ॥

---

ಗಳಲ್ಲಿ ಅಲೆದಾಡದೆ (ಸರ್ವ ಧರ್ಮಾನ್ ಪರಿತ್ಯಜ್ಯ ಎಂಬುದರ ಅರ್ಥ) ಸರ್ವ ಸುಲಭನಾಗಿ ಸರ್ವಲೋಕ ಶರಣ್ಯತ್ವೋಪಯುಕ್ತ ಸರ್ವಾಕಾರ ವಿಶಿಷ್ಟನಾದ ನನ್ನೊಬ್ಬನನ್ನೇ (ಮಾಮೇಕಂ ಎಂಬುದರ ಅರ್ಥ) ಉಪಾಯವಾಗಿ ಅಧ್ಯವಸಾಯ ಮಾಡಿಕೊಂಡು ಅಂಗಪಂಚಕ ಸಂಪನ್ನವಾದ ಆತ್ಮರಕ್ಷಾಭರಸಮರ್ಪಣವನ್ನು ಮಾಡು. (ಶರಣಂ ವ್ರಜ ಎಂಬುದರ ಅರ್ಥ.) **ಇಪ್ಪಡಿ** ಇತ್ಯಾದಿ – ಹೀಗೆ ಉಪಾಯಾನುಷ್ಠಾನವನ್ನು ಮಾಡಿ ಕೃತಕೃತ್ಯನಾಗಿ ನನ್ನಲ್ಲಿ ಶರಣಾಗತನಾದ ಅತ್ಯರ್ಥ ಪ್ರಿಯನಾದ ನಿನ್ನನ್ನು (ತ್ವಾ ಶಬ್ದಾರ್ಥ), ಪರಮಕಾರುಣಿಕನಾಗಿ ಸುಪ್ರಸನ್ನನಾಗಿ ನಿರಂಕುಶ ಸ್ವತಂತ್ರನಾಗಿ ಸ್ವಾರ್ಥಕ್ಕಾಗಿ ಪ್ರವರ್ತಿಸಿದ ನಾನೇ ನನ್ನ ಸಂಕಲ್ಪವನ್ನೇ ಸಹಾಯವಾಗಿ ಕೊಂಡು (ಅಹಂ ಶಬ್ದಾರ್ಥ), ಬಹು ಪ್ರಕಾರವಾಗಿ ಅನಂತವಾಗಿ ದುರತ್ಯಯವಾದ – ದಾಟಲ ಶಕ್ಯವಾದ ಸರ್ವ ವಿರೋಧಿ ವರ್ಗದೊಡನೆ (ಸರ್ವಪಾಪೇಭ್ಯಃ ಎಂಬುದರ ಅರ್ಥ,) ಅನುವರ್ತನೀಯವಾವುದೂ ಇಲ್ಲದ ರೀತಿಯಲ್ಲಿ ಸಂಬಂಧವನ್ನು ನೀಗಿಸಿ (ಮೋಕ್ಷಯಿಷ್ಯಾಮಿ – ಅನಿಷ್ಟ ನಿವೃತ್ತ್ಯರ್ಥ) ನನ್ನೊಡನೆ ನನಗೆ ಸಮಾನವಾದ ಆತ್ಮಾತ್ಮೀಯಗಳನ್ನೆಲ್ಲಾ ಅನುಭವಿಸುವುದರಿಂದ ತುಲ್ಯ ಭೋಗವನ್ನು ಪಡೆದವನಾಗಿ ಮಾಡಿ ಪರಿಪೂರ್ಣಾನುಭವ ಪರಿವಾಹವಾದ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವ ವಿಧ ಕೈಂಕರ್ಯವನ್ನೂ ಕೊಟ್ಟು ಸಂತೋಷ ಪಡಿಸುವೆನು. (ಇಷ್ಟ ಪ್ರಾಪ್ತ್ಯರ್ಥ.) ನೀನು ಯಾವುದಕ್ಕೂ ಶೋಕಿಸಬೇಡವೆಂದು (ಮಾಶುಚಃ ಶಬ್ದಾರ್ಥ) **ಚರಮಶ್ಲೋಕದ** ಸಮುದಿತಾರ್ಥ – ಮಹಾ ವಾಕ್ಯಾರ್ಥ.

**ಏಕಂ ಸರ್ವಪ್ರದಂ ಧರ್ಮಮ್** ಇತ್ಯಾದಿ – ಅನಂತರ ಈ ಚರಮಶ್ಲೋಕಾರ್ಥವು ತಿರುಕ್ಕೋಟ್ಟಿಯೂರ್ ನಂಬಿ, ಶ್ರೀ ಭಾಷ್ಯಕಾರರು ಮೊದಲಾದವರ ಸಂಪ್ರದಾಯ ಪರಂಪರೆಯಿಂದ ಉಪದೇಶಿಸಲ್ಪಟ್ಟಿರುವುದು. ಇದನ್ನು ಉಪದೇಶ ಹೊಂದಿ ದಿವ್ಯದಂಪತಿಗಳಲ್ಲಿ ನ್ಯಸ್ತಭರರಾಗಿ ಸಾಂಸಾರಿಕ ಕ್ಲೇಶಾದಿಗಳನ್ನೆಲ್ಲಾ ಬಿಟ್ಟ ವಾದಿಹಂಸಾಬುವಾಹರಾದ ಆಚಾರ್ಯ ವರ್ಯರಿಂದ ಈ ಶರಣಾಗತಿ ಮಾರ್ಗವು ಉಪದೇಶಿಸಲ್ಪಟ್ಟಿತು, ಎಂದು **'ಏಕಂಸರ್ವಪ್ರದಂಧರ್ಮಂ'** ಎಂದಾರಂಭಿಸಿ ಆಚಾರ್ಯರು ಅನುಗ್ರಹಿಸುತ್ತಾರೆ **ಏಕಂ** – 'ಮಾಂ' ಶಬ್ದಾರ್ಥ. **ಸರ್ವಪ್ರದಂ** – ಮೋಕ್ಷಾಂತವಾದ ಸಕಲಪುರುಷಾರ್ಥಗಳನ್ನು ಕೊಡತಕ್ಕ **ಶ್ರಿಯಾಜುಷ್ಟಂ** – ಲಕ್ಷ್ಮೀ ವಿಶಿಷ್ಟನಾದ **ಧರ್ಮಂ** – 'ಕೃಷ್ಣಂ ಧರ್ಮಂಸನಾತನಂ' ಎಂಬ ಸನಾತನ ಧರ್ಮಸ್ವರೂಪನಾದ ಕೃಷ್ಣ ಪರಮಾತ್ಮನನ್ನು. ಮಾಂ, 'ಏಕಂ' ಎಂಬಲ್ಲಿ ಸ್ವಾಸಾಧಾರಣ ಸ್ವರೂಪ ನಿರೂಪಕ ಧರ್ಮಳಾದ **ಲಕ್ಷ್ಮಿಯು** ಇಲ್ಲದೆ ತನ್ನ ಸ್ವರೂಪವು ದೇವತಾಂತರ ವ್ಯಾವರ್ತಕವಾಗಿ ತಿಳಿಯಲಾಗದೆ ಇರುವುದರಿಂದ, ಶ್ರೀ ವಿಶಿಷ್ಟತ್ವವು ಅವಶ್ಯಾನುಸಂಧೇಯವೆಂಬುದು ಭಾವ.

**ಕುರಿಪ್ಪುಡನ್ ಮೇವುನ್ತರುಮಙ್ಗಳನ್ರಿ ಯ ಕ್ಕೋವಲನಾರ್**
**ವೆರಿತ್ತುಳವಕ್ಕೞಲ್ ಮೆಯ್ಯರಣೆನ್ರು ವಿಶ್ವೈನ್ದಡೈನ್ದು ।**
**ಪಿರಿತ್ತವಿನೈತ್ತಿರಳ್ ಪಿನ್ತುಡ ರಾವಹೈಯಪ್ಪೆರಿಯೋರ್**
**ಮರಿಪ್ಪುಡೈ ಮನ್ನರುಳ್ ವಾಶಹತ್ತಾಲ್ ಮರುಳತ್ತನಮೇ ॥2 ॥**
**ವ್ಯಾಸಾಮ್ನಾಯಪಯೋಧಿ ಕೌಸ್ತುಭನಿಭಂ ಹೃದ್ಯಂ ಹರೇರುತ್ತಮಮ್ ।**
**ಶ್ಲೋಕಂ ಕೇಚನ ಲೋಕವೇದ ಪದವೀ ವಿಶ್ವಾಸಿತಾರ್ಥಂ ವಿದುಃ ॥**

---

ಇದರಿಂದ '**ಅಹಂ**' ಎಂಬಲ್ಲಿಯೂ "**ಅಹಮೇವ**" ಎಂಬುದು ಸಾವಧಾರಣಾರ್ಥದ ಅಭಿಪ್ರಾಯದಲ್ಲಿ ಸರ್ವೇಶ್ವರನು ಶ್ರೀ ವಿಶಿಷ್ಟನಾಗಿಯೇ ನಿರಪೇಕ್ಷೋಪಾಯನಾಗಿ ಆಶ್ರಿತ ಭರಸ್ವೀಕಾರ ಮಾಡಿ ಫಲಪ್ರದಾನ ಮಾಡುತ್ತಾನೆಂಬುದೂ ವಿವಕ್ಷಿತ. **ಸಮಾಶ್ರಿತೈಃ** ಸಮ್ಯಕ್ಕಾಗಿ ಆಶ್ರಯಿಸಿದ ಅಂದರೆ ಅವನಲ್ಲಿ ನ್ಯಸ್ತಭರರಾಗಿ, **ಅಪೇತಶೋಕೈ ರಾಚಾರ್ಯೈಃ** – ಶೋಕವನ್ನು ಪರಿತ್ಯಜಿಸಿದ ಆಚಾರ್ಯರುಗಳಾದ ವಾದಿಹಂಸಾಬುವಾಹಾಚಾರ್ಯರಿಂದ, **ಅಯಂ ಪಂಥಾಃ ಪ್ರದರ್ಶಿತಃ** - ತಾವು ಪೂರ್ವಾಚಾರ್ಯರುಗಳಿಂದ ಉಪದೇಶ ಹೊಂದಿದ ಈ ಪ್ರಪತ್ತಿ ಶಾಸ್ತ್ರಾರ್ಥವು ಉಪದೇಶಿಸಲ್ಪಟ್ಟಿತು.

ಅನಂತರ ಚರಮಶ್ಲೋಕಾರ್ಥವನ್ನು **ಕುರಿಪ್ಪುಡನ್ ಮೇವುಮ್** ಎಂಬ ಶ್ಲೋಕದ ಮೂಲಕ ಸಂಗ್ರಹಿಸುತ್ತಾರೆ. **ಕುರಿಪ್ಪುಡನ್**– ಸಾವಧಾನವಾಗಿ, **ಮೇವುಮ್** - ಅನುಷ್ಠಿಸಲ್ಪಡ ತಕ್ಕ, **ತರುಮಂಗಳೆನ್ರಿ** ಸರ್ವಧರ್ಮಗಳನ್ನೂ ಬಿಟ್ಟು, ಅಕಿಂಚನನಾದ, **ಅಕ್ಕೋವಲನಾರ್** – ಪ್ರಾಪ್ಯನಾಗಿಯೂ ಪ್ರಾಪಕನಾಗಿಯೂ ಇರುವ ಆಗೋಪಾಲನ, **ವೆರಿತ್ತುಳವಕ್ಕೞಲ್** - ಪರಿಮಳವು ತುಂಬಿದ ತುಳಸಿಯಿಂದ ಅಲಂಕೃತವಾದ ಶ್ರೀ ಪಾದಗಳನ್ನು **ಮೆಯ್ಯರಣೆನ್ರು** – ಸತ್ಯವಾದ ಉಪಾಯವೆಂದು, **ವಿಶ್ವೆಂದು** – ವಿಶ್ವಾಸ ಪೂರ್ವಕ **ಅಡೈಂದು**– ಶರಣ ಹೊಂದಿ, **ಪಿರಿತ್ತ** – ಬಿಡಿಸಲ್ಪಟ್ಟ, **ವಿನೈತ್ತಿರಳ್** – ಪಾಪ ಸಮೂಹಗಳು, ತಿರುಗಿಯೂ **ಪಿನ್ ತುಡರಾವಹೈ** – ಹಿಂಬಾಲಿಸದೆ ಮಾಡಿದ **ಅಪ್ಪೆರಿಯೋರ್** – "ಮಹಾನ್ ಪ್ರಭುರ್ವೈ", ಎಂದು ಶ್ರುತಿಯಲ್ಲಿ ಪ್ರಸಿದ್ಧನಾಗಿ ಹೇಳಲ್ಪಟ್ಟ ಪುರುಷೋತ್ತಮನ, **ಮರಿಪ್ಪುಡೈ**–ಬಳಸಿಕೊಳ್ಳುವ ಅಂದರೆ ವಶೀಕಾರವನ್ನು ಮಾಡುವ, **ಮನ್ನರುಳ್** – ದೃಢವಾದ ಕೃಪೆಯಿಂದ ಉಂಟಾದ ಕೃಪಾಪ್ರವಾಹವಾದ, **ವಾಶಕತ್ತಾಲ್** – ಚರಮಶ್ಲೋಕ ರೂಪವಾದ ವಾಕ್ಯದಿಂದ **ಮರುಳಟ್ರನಮೇ** - ಅಜ್ಞಾನವನ್ನು ನಿವೃತ್ತಿಸಿದೆವು. ಅಜ್ಞಾನವೂ ಆದರಿಂದ ಉಂಟಾದ ಶೋಕವೂ ಭೀತಿಯೂ ಹೋಗಿ ಸಂತುಷ್ಟರಾದೆವು.

ಶ್ರದ್ಧಾ ಭಕ್ತಿಯಿಂದ ಮಾಡಲ್ಪಡತಕ್ಕ ಕರ್ಮಯೋಗಾದಿ ಸರ್ವಧರ್ಮಗಳನ್ನೂ ಬಿಟ್ಟು ತದ್ವಿಷಯಕ ಅಜ್ಞಾನಾಶಕ್ತಿಗಳಿಂದ ಕೂಡಿದ ನಾವು ಸಾಕ್ಷಾದುಪಾಯವೂ ಪ್ರಾಪ್ಯವೂ ಆದ ಆ ಶ್ರೀಕೃಷ್ಣ ಪರಮಾತ್ಮನ ಪಾದಾರವಿಂದಗಳಲ್ಲಿ ಶರಣಾಗತಿ ಮಾಡಿ ಮೋಕ್ಷ ವಿರೋಧಿಯಾದ ಸರ್ವಪ್ರತಿಬಂಧಕಗಳನ್ನೂ ತೊರೆದು, ಭಗವಂತನ ಕೃಪೆಗೆ ಪಾತ್ರರಾಗಿ ಆದೆವು. ಈ ಅರ್ಥ ವಿಶೇಷಗಳನ್ನು ತಿಳಿಸುವ ಚರಮಶ್ಲೋಕ ರೂಪ ಭಗವದ್ವಾಕ್ಯದಿಂದ ಅಜ್ಞಾನವೆಲ್ಲಾ ತೊರೆದು ಸಂಸಾರ ಭಯ ಶೋಕಗಳಾವುವೂ ಇಲ್ಲದೆ 'ನಿರ್ಭರೋ ನಿರ್ಭ ಯೋಽಸ್ಮಿ' ಎಂದಾದೆವು.

ಅನಂತರ ಈ ಚರಮಶ್ಲೋಕವನ್ನು, ಮಹರ್ಷಿಗಳಿಂದಲೂ ಕೊಂಡಾಡಲ್ಪಡತಕ್ಕ ಮಹಾಪ್ರಭಾವಶಾಲಿಗಳಾದ ನಮ್ಮಾಳ್ವಾರ್, ನಾಥಮುನಿಗಳು, ಆಳವಂದಾರ್, ಭಗವದ್ಭಾಷ್ಯಕಾರರೇ ಮೊದಲಾದ ಪರಮಾಚಾರ್ಯರುಗಳು ಲೋಕದಲ್ಲಿಯೂ ವೇದದಲ್ಲಿಯೂ ವಿಶ್ವಸಿಸಲ್ಪಟ್ಟ ಶರಣಾಗತಿ ರೂಪ ಮಹಾರ್ಥ ಪ್ರತಿಪಾದಕವೆಂದು ತಿಳಿದು ಅನುಷ್ಠಿಸಿದರಾದ್ದರಿಂದ ಅದೇ ನಮಗೆ ಉಪಾದೇಯವೆಂದು ಸ್ತುತಿಸುತ್ತಾರೆ. ಅದಾಗಿ, **ವ್ಯಾಸಾಮ್ನಾಯ**

**ಯೇಷಾ ಮುಕ್ತಿಷು ಮುಕ್ತಿ ಸೌಧ ವಿಶಿಖಾ ಸೋಪಾನ ಪಙ್ಕ್ತಿಷ್ವಮೀ ।**
**ವೈಶಂಪಾಯನ ಶೌನಕ ಪ್ರಭೃತಯಶ್ಶ್ರೇಷ್ಠಾಶ್ಶಿರಃ ಕಂಪಿನಃ ॥69॥**

**ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರಸ್ಯ ಸ್ವತಂತ್ರ ಶ್ರೀ ಮದ್ವೇಙ್ಕಟನಾಥಸ್ಯ**
**ವೇದಾನ್ತಾಚಾರ್ಯಸ್ಯ ಕೃತಿಷು ಶ್ರೀಮದ್ರಹಸ್ಯತ್ರಯಸಾರೇ**
**ಚರಮ ಶ್ಲೋಕಾಧಿಕಾರ ಏಕೋನತ್ರಿಂಶಃ ।**

**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ ॥**

---

**ಪಯೋಧಿ** – "ಭಾರತಃ ಪಂಚಮೋವೇದಃ" ಎಂದು ಕೊಂಡಾಡಲ್ಪಡತಕ್ಕ ಮಹಾಭಾರತ ರೂಪ ಸಮುದ್ರದಲ್ಲಿ, **ಕೌಸ್ತುಭನಿಭಂ** – ಕೌಸ್ತುಭರತ್ನ ತುಲ್ಯವಾಗಿ, **ಹೃದ್ಯಂಹರೇರುತ್ತಮಮ್** - ಭಗವಂತನಿಗೆ ಬಹಳ ಹೃದ್ಯವಾದ **ಶ್ಲೋಕಂ** - ಈ ಚರಮಶ್ಲೋಕವನ್ನು **ಕೇಚನ** - ಭಗವತ್ಪ್ರಸಾದಲಬ್ಧ ಜ್ಞಾನರಾದ ನಮ್ಮಾಳ್ವಾರ್, ನಾಥ ಮುನಿಗಳು, ಆಳವಂದಾರ್, ಶ್ರೀಭಾಷ್ಯಕಾರಾದಿಗಳು **ಲೋಕವೇದಪದವೀ ವಿಶ್ವಾಸಿತಾರ್ಥಂ** - ಲೋಕದಲ್ಲಿಯೂ, ವೇದಮಾರ್ಗ - ಶ್ರುತಿಗಳಲ್ಲಿಯೂ ಅಮೋಘವಾಗಿ ಪ್ರಸಿದ್ಧವಾದ ಶರಣಾಗತಿ ರೂಪವಾದ ಅರ್ಥದಿಂದ ಕೂಡಿದು ದಾಗಿ, **ವಿದುಃ** – ಅನುಷ್ಠಾನ ಪರ್ಯಂತ ತಿಳಿದಿರುತ್ತಾರೆ. ಅದಾಗಿ ಲೋಕದಲ್ಲಿ ಶರಣಾಗತ ಸಂರಕ್ಷಣ ಸಂರಂಭವು ಪಾಮರರಲ್ಲಿಯೂ ತಿಳಿದಿದೆ.ಅಥವಾ ಲೋಕ ಶಬ್ದವು ಸ್ಮೃತಿಪರ. ಲೋಕ್ಯತೇ ಅನೇನೇತಿಲೋಕಃ-ಸ್ಮೃತಿ ಮತ್ತು ವೇದ ಪದವೀ–ವೇದದಲ್ಲಿಯೂ, 'ದೇವಾವೈತ್ವಷ್ಟಾರಮ ಜಿಘಾಸನ್, ಸಪತ್ನೀಃ ಪ್ರಾಪದ್ಯತ' ಎಂದು ದೇವತೆಗಳು 'ತ್ವಷ್ಟಾ' ವನ್ನು ಕೊಲ್ಲಲು ಇಚ್ಛಿಸಿದಾಗ, ಅವನು ದೇವ ಪತ್ನಿಗಳನ್ನು ಶರಣ ಹೊಂದಿದನು. ಆ ದೇವ ಪತ್ನಿಗಳು ಅವನನ್ನು ಕಾಪಾಡಿದರು, ಎಂದು ಹೇಳಿದೆ.ವೇದದಲ್ಲಿ ಶರಣಾಗತರನ್ನು ಕಾಪಾಡಬೇಕೆಂದು "ತಸ್ಮಾದ್ವಧ್ಯಂ ಪ್ರಪನ್ನಂ ನಪ್ರತಿ ಪ್ರಯಚ್ಛಂತಿ" – ವಧ್ಯನಾಗಿದ್ದರೂ ಪ್ರಪನ್ನನಾದವನನ್ನು ಶತ್ರುವಿಗೆ ತೋರಿಸಿ ಕೊಡಕೂಡದೆಂದು ಶರಣಾಗತ ಸಂರಕ್ಷಣ ಧರ್ಮವನ್ನು ತಿಳಿಸುತ್ತದೆ. ಹಾಗೆಯೇ ಕಪೋತ ವೃತ್ತಾಂತವೂ ಶ್ರುತೀತಿ ಹಾಸಗಳಲ್ಲಿ ಹೇಳಲ್ಪಟ್ಟಿದೆ. ಹೀಗೆ ಶರಣಾಗತಿ ಧರ್ಮವನ್ನು ಶ್ರುತಿಸ್ಮೃತಿಗಳಿಂದ ತಿಳಿದು ತಮ್ಮ ಗೀತಾಪ್ರಬಂಧದಲ್ಲಿ ಮಹರ್ಷಿ ವ್ಯಾಸ ಮಹರ್ಷಿಗಳು "ಸರ್ವಧರ್ಮಾನ್ ಪರಿತ್ಯಜ್ಯ", ಎಂದಾರಂಭಿಸುವ ಚರಮಶ್ಲೋಕದಲ್ಲಿ ನಿಬಂಧಿಸಿರುತ್ತಾರೆ. ಇದನ್ನು ಅವಲಂಬಿಸಿ, **ಯೇಷಾಮ್** – ನಮ್ಮಾಳ್ವಾರ್ ಪ್ರಭೃತಿಗಳ, **ಮುಕ್ತಿಸೌಧ ವಿಶಿಖಾಸೋಪಾನ ಪಂಕ್ತಿಷು** – ಮೋಕ್ಷವೆಂಬ ಉಪ್ಪರಿಗೆಗೆ ಬೀದಿಯಿಂದ ಏರುತ್ತಿರುವ ಸೋಪಾನ ಮಾರ್ಗ **ಗಳಾದ, ಉಕ್ತಿಷು** – ಶ್ರೀ ಸೂಕ್ತಿಗಳಲ್ಲಿ ಅದಾಗಿ (i) ಪುಹಲೊನ್ರಿಲ್ಲಾವಡಿಯೇನ್ ಉನ್ನಡಿಕ್ಕೀೞ್ ಅಮರ್ನ್ದು ಪುಹುಂದೇನೇ, (ii) **ನಾಗಣೈಮಿಶೈನಂಬಿರಾನ್** ಶರಣೇ ಶರಣ್ ನಮಕ್ಕೆನ್ರು, (ನಮ್ಮಾಳ್ವಾರ್ ತಿರುವಾಯ್ ಮೊೞಿ) (iii) ತ್ವತ್ಪಾದ ಮೂಲಂ ಶರಣಂ ಪ್ರಪದ್ಯೇ; (ಸ್ತೋತ್ರರತ್ನ) ಅನನ್ಯಶರಣಃ ತ್ವತ್ಪಾದಾರವಿಂದ ಯುಗಳಂ ಶರಣಮಹಂ ಪ್ರಪದ್ಯೇ, (ಶರಣಾಗತಿ ಗದ್ಯ) ಇತ್ಯಾದಿ ಶ್ರೀ ಸೂಕ್ತಿಗಳನ್ನು, **ಶ್ರೇಷ್ಠಾಃ**-ಉತ್ಕೃಷ್ಟರಾದ, **ಅಮೀ – ಈ ವೈಶಂಪಾಯನ** – ಸಾಕ್ಷಾದ್ವ್ಯಾಸ ಶಿಷ್ಯರಾದ ವೈಶಂಪಾಯನರು ಇವರು ಇತಿಹಾಸ ಪುರಾಣ ಪ್ರವಚನ ಕರ್ತಾವಾದ್ದರಿಂದ ವಿಭವಾವತಾರದಲ್ಲಿ ನಿರತಿಶಯ ಭಕ್ತಿಯುಕ್ತರು – ಆ ಭಗವಂತನ ಚರಮಶ್ಲೋಕ ಶ್ರೀ ಸೂಕ್ತಿಗಳಲ್ಲಿ ವಿಶೇಷ ಅಭಿಮಾನವುಳ್ಳವರು. **ಶೌನಕಪ್ರಭೃತಯಃ** - ಶೌನಕೋಮಹಾಶಾಲಃ ಎಂದು ಶ್ರುತಿ ಪ್ರಸಿದ್ಧರು. ಇವರು ಋಗ್ವೇದಾಚಾರ್ಯರಾದ ಆಶ್ವಲಾಯನರಿಗೆ ಆಚಾರ್ಯರು. "ಶೌನಕೋऽಹಂ ಪ್ರವಕ್ಷ್ಯಾಮಿ ನಿತ್ಯಂ ವಿಷ್ಣ್ವರ್ಚನಂ ಪರಮ್" ಎಂದು ಅರ್ಚಾವತಾರಾರ್ಚನಾದಿಗಳನ್ನು ಹೇಳಿ,

"ಸುರೂಪಾಂಪ್ರತಿಮಾಂ ವಿಷ್ಣೋಃ ಪ್ರಸನ್ನವದನೇಕ್ಷಣಾಮ್ ।
ಕೃತ್ವಾತ್ಮನಃ ಪ್ರೀತಿಕರೀಂ ಸುವರ್ಣರಜತಾದಿಭಿಃ ।

ತಾಮರ್ಚಯೇತ್ತಾಂ ಪ್ರಣಮೇತ್ತಾಂ ಯಜೇತ್ತಾಂ ವಿಚಿಂತಯೇತ್ ।
ವಿಶತ್ಯಪಾಸ್ತದೋಷಸ್ತು ತಾಮೇವ ಬ್ರಹ್ಮರೂಪಿಣೀಂ ॥

ಇತ್ಯಾದಿ ವಾಕ್ಯಗಳಿಂದ ಅರ್ಚಾರೂಪಿಯಾದ ಭಗವಂತನೇ ಧ್ಯೇಯನೆಂದು ಅವನಲ್ಲಿ ಭಕ್ತಿ ಅಥವಾ ಶರಣಾಗತಿ ಮಾಡಿ ಸಕಲ ಪಾಪ ವಿನಿರ್ಮುಕ್ತನಾಗಿ ಮೋಕ್ಷವನ್ನು ಪಡೆಯಬಹುದೆಂದು ಹೇಳಿರುತ್ತಾರೆ. **ಪ್ರಭೃತಿ** ಶಬ್ದದಿಂದ ಶುಕರೇ ಮೊದಲಾದವರು ಸಂಗೃಹೀತರು. **ಶಿರಃಕಂಪಿನ** – ಶ್ಲಾಘಿಸಿ ಶಿರಃ ಕಂಪನ ಮಾಡುತ್ತಾರೆ. ವೈಶಂಪಾಯನ ಶೌನಕಾದಿಗಳು ಶಠಗೋಪ ಯಾಮುನ ರಾಮಾನುಜಾದಿ ಪರಮಾಚಾರ್ಯರುಗಳು ತಮ್ಮ ತಮ್ಮ ಶ್ರೀ ಸೂಕ್ತಿಗಳಲ್ಲಿ ನಿರೂಪಿಸಿರುವ ಚರಮಶ್ಲೋಕ ವಿಹಿತವಾದ ಶರಣಾಗತ್ಯನುಷ್ಠಾನ ಪ್ರಕಾರ ವೈಖರಿಗಳನ್ನು ಶ್ಲಾಘಿಸುತ್ತಾರೆಂದರ್ಥ. ಅಥವಾ ಜ್ಞಾನದೃಷ್ಟಿಯಿಂದ ಶ್ರೀ ಶಠಗೋಪಾದಿಗಳ ಶ್ರೀ ಸೂಕ್ತಿಗಳನ್ನು ಸಾಕ್ಷಾತ್ಕರಿಸಿ ಸರ್ವದಾ ಶಿರಃಕಂಪನ ಶೀಲರಾಗಿರುತ್ತಾರೆಂದರ್ಥ.

ಕೃಷ್ಣ ಪರಮಾತ್ಮನು ಗೀತಾಚರಮಶ್ಲೋಕದಲ್ಲಿ ಹೇಳಿರುವ "ಶರಣಾಗತಿ" ಧರ್ಮವು ವೇದೋಕ್ತವಾದದ್ದು. ಇದು ವೇದವ್ಯಾಸರು ಹೇಳಿರುವ ಮಹಾಭಾರತವೆಂಬ (ಪಂಚಮ ವೇದ) ಸಮುದ್ರ ಮಥನ ಮಾಡಿ ಅದರಿಂದ ಪಡೆದ ಕೌಸ್ತುಭರತ್ನ ತುಲ್ಯವಾದದು. ಭಗವಂತನಿಗೆ ಹೃದ್ಯವಾದದು. ಇದರ ಅರ್ಥವನ್ನೇ ನಮ್ಮ ಪೂರ್ವಾಚಾರ್ಯರುಗಳು ತಮ್ಮ ತಮ್ಮ ಪ್ರಬಂಧಗಳಲ್ಲಿ ಗ್ರಥಿಸಿದ್ದಾರೆ. ಈ ಅರ್ಥವನ್ನೇ ಆಚಾರ್ಯವರ್ಯರು ಚರಮಶ್ಲೋಕಾಧಿಕಾರದಲ್ಲಿ ನಿರೂಪಿಸಿರುತ್ತಾರೆ. ಈ ಶರಣಾಗತಿ ವಿದ್ಯೆಯ ನಿರೂಪಣವು ಮೋಕ್ಷವನ್ನು ಪಡೆಯಲು ಸೋಪಾನ ಮಾರ್ಗದಂತಿದೆ. ಸುಲಭವಾಗಿ ಈ ಸೋಪಾನ ಮಾರ್ಗವನ್ನು ಹತ್ತಿ ಅಂದರೆ ಸ್ವತಂತ್ರ ಶರಣಾಗತಿಯನ್ನನುಷ್ಠಿಸಿ ಎಲ್ಲರೂ ಮೋಕ್ಷವನ್ನು ಪಡೆಯಬಹುದು. ಇದನ್ನು ವೈಶಂಪಾಯನ ಶೌನಕ ಪ್ರಭೃತಿಗಳು ಶ್ಲಾಘಿಸಿತ್ತಾರೆಂದು ತಾತ್ಪರ್ಯ.

ಶ್ರೀಮದ್ರಹಸ್ಯತ್ರಯಸಾರದ **"ಚರಮಶ್ಲೋಕಾಧಿಕಾರ"**ಕ್ಕೆ
**"ಸಾರಚಂದ್ರಿಕಾ"** ವ್ಯಾಖ್ಯಾನವು ಸಂಪೂರ್ಣ.
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ
ಅಸ್ಮದ್ಗುರು ಪರಂಪರಾಯೈ ನಮಃ

---

श्रियै नमः
श्रीमते रामानुजाय नमः
श्रीमते निगमान्त महादेशिकाय नमः

ಸಂಪ್ರದಾಯ ಪ್ರಕ್ರಿಯಾಭಾಗಃ ।

# ಆಚಾರ್ಯಕೃತ್ಯಾಧಿಕಾರಸ್ತ್ರಿಂಶಃ

**ಅಧಿಜಿಗಮಿಷುರಾದ್ಯಂ ಧಾಮ ದಿವ್ಯಂ ತ್ರಿಧಾಮ್ನಃ**
**ಶ್ರುತ ವಿವಿಧ ಪರೀಕ್ಷಾಶೋಧಿತೇ ಕ್ವಾಪಿ ಪಾತ್ರೇ ।**
**ಅನಘ ಗುಣ ದಶಾಯಾ ಮಾಹಿತಸ್ನೇಹಮಾರ್ಯಃ**
**ಪ್ರದಿಶತಿ ನಿರಪಾಯಂ ಸಂಪ್ರದಾಯ ಪ್ರದೀಪಮ್ ॥**

---

**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ**

ಶ್ರೀಮದ್ರಹಸ್ಯತ್ರಯಸಾರದಲ್ಲಿ **"ಆಚಾರ್ಯಕೃತ್ಯಾಧಿಕಾರ"ಕ್ಕೆ 'ಸಾರಚಂದ್ರಿಕಾ'** ವ್ಯಾಖ್ಯಾನ

ಹೀಗೆ 'ಪದವಾಕ್ಯ ಯೋಜನಾ ಭಾಗ' ವೆಂಬ ಮೂರನೆಯ ಭಾಗವನ್ನು ಕೃಪೆಮಾಡಿ ರಚಿಸಿ, ಆಚಾರ್ಯರು "ಸಂಪ್ರದಾಯ ಪ್ರಕ್ರಿಯಾಭಾಗ"ವೆಂಬ ನಾಲ್ಕನೆಯ ಭಾಗವನ್ನು ಕೃಪೆಮಾಡಿ ಹೇಳಲು, ಮೊದಲು "ಆಚಾರ್ಯ ಕೃತ್ಯ"ಗಳನ್ನು ಈ ಅಧಿಕಾರದಲ್ಲಿ **"ಅಧಿಜಿಗಮಿಷುರಾದ್ಯಂ"** ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಅದಾಗಿ **ತ್ರಿಧಾಮ್ನಃ** – "ಅಂಭಸ್ಯ ಪಾರೇ, ಭುವನಸ್ಯಮಧ್ಯೇ, ನಾಕಸ್ಯಪೃಷ್ಠೇ", ಎಂದು ಶ್ರುತಿಯು ಹೇಳುವ ಕ್ಷೀರಾಬ್ಧಿ, ಭೂಲೋಕದಲ್ಲಿ ಶ್ರೀರಂಗಾದಿ ದಿವ್ಯ ಕ್ಷೇತ್ರಗಳು, ಶ್ರೀ ವೈಕುಂಠವೆಂಬ ಪರಮಪದ ಇವುಗಳನ್ನು ಸ್ಥಾನವನ್ನಾಗಿ ಉಳ್ಳ ಭಗವಂತನ, **ದಿವ್ಯಂಧಾಮ** – ಪರಮಪದವನ್ನು **ಅಧಿಜಿಗಮಿಷುಃ** – ಹೊಂದಬೇಕೆಂಬ ಆಸೆಯುಳ್ಳವನಾಗಿ, **ಆರ್ಯಃ** – ಆಚಾರ್ಯನಾದವನು **ಶ್ರುತವಿವಿಧಪರೀಕ್ಷಾ** –

"ಸಂವತ್ಸರಂ ತದರ್ಧಂವಾ ಮಾಸತ್ರಯ ಮಥಾಪಿವಾ ।
ಪರೀಕ್ಷ್ಯವಿವಿಧೋಪಾಯೈಃ ಕೃಪಯಾ ನಿಸ್ಪೃಹೋ ವದೇತ್ ॥"

ಒಂದು ವರ್ಷಕಾಲ ಅಥವಾ ಆರು ತಿಂಗಳು ಅಥವಾ ಮೂರು ತಿಂಗಳು ಕಾಲ ಅನೇಕ ರೀತಿಯಲ್ಲಿ ಶಿಷ್ಯನನ್ನು ಪರೀಕ್ಷಿಸಿ ಅಂದರೆ ಪ್ರಜಾಪತಿ ವಿದ್ಯೆಯಲ್ಲಿ ಬ್ರಹ್ಮಾ ಇಂದ್ರನನ್ನು ಕುರಿತು, "ವಸಾಪರಾಣಿ ದ್ವಾತ್ರಿಂಶತಂ ವರ್ಷಾಣಿ" ಎಂದು ಬಹುಕಾಲಯಾಪನ ಮಾಡಿ ಶಿಷ್ಯನಿಗೆ ವೇದಾಂತ ವಿದ್ಯೆಯನ್ನು ಅಧಿಕರಿಸಲು ಶ್ರದ್ಧಾ ಭಕ್ತಿಗಳು ಇವೆಯೇ ಎಂದು ಪರೀಕ್ಷೆ ಮಾಡಿದನು. ಪ್ರಶ್ನೋಪನಿಷತ್ತಿನಲ್ಲಿ, ಸುಕೇಶಾದಿಗಳನ್ನು ಪಿಪ್ಪಲಾದರು. "ತಾನ್ ಹ ಋಷಿರುವಾಚ ಭೂಯ ಏವತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ, ಸಂವತ್ಸರಂವತ್ಸ್ಯಥ, ಯಥಾಕಾಮಂ ಪ್ರಶ್ನಾನ್ ಪೃಚ್ಛಥ, ಯದಿವಿಜ್ಞಾಸ್ಯಾಮೋ ಸರ್ವಂ ಹವೋವಕ್ಷ್ಯಾಮ ಇತಿ,"–ಇನ್ನೂ ಒಂದು ವರ್ಷ ಕಾಲ ತಪಸ್ಸು

**ಅಸ್ಮಿನ್ ಶ್ಲೋಕೇ ಸಂಗೃಹೀತಮಾಚಾರ್ಯಕೃತ್ಯಂ ವಿಸ್ತರೇಣಾಹ**

**ಇಪ್ಪಡಿ** 1) **"ಗುರುರ್ಗರೀಯಾನ್"** **ಎನ್ರುಮ್** 2) **"ತನಿಮುಂ ಸರ್ವಸಂಪನ್ನಮಾಚಾರ್ಯಂ**

---

ಬ್ರಹ್ಮಚರ್ಯೆಗಳನ್ನು ಮಾಡಿಕೊಂಡು ಶ್ರದ್ಧಾ ಭಕ್ತಿಯಿಂದ ಇಲ್ಲಿಯೇ ವಾಸವಾಗಿರಿ. ನಂತರ ನೀವು ಕೇಳುವುದನ್ನು ತಿಳಿದ ಮಟ್ಟಿಗೆ ಹೇಳುತ್ತೇನೆಂದು ಸಂವತ್ಸರ ಕಾಲ ಅವರ ತಪೋ ಬ್ರಹ ಚರ್ಯಾದಿ ನಿಷ್ಠೆಗಳನ್ನು ಪರೀಕ್ಷೆ ಮಾಡಲೆಣಿಸಿದಂತೆಯೂ, ಹೀಗೆಯೇ ಸತ್ಯಕಾಮಾದಿಗಳಿಗೆ ಸಮಿತ್ಕು ಶಾಹರಣ ಧೇನು ಪರಿರಕ್ಷಣ, ಅಗ್ನಿ ಪರಿಚರ್ಯಾದಿಗಳನ್ನು ವಿಧಿಸಿ ಅವರವರ ಶ್ರದ್ಧಾಭಕ್ತ್ಯಾದಿಗಳನ್ನು ಪರೀಕ್ಷಿಸಿ ನಂತರ ಬ್ರಹ್ಮವಿದ್ಯೆಯನ್ನು ಉಪದೇಶಿಸಿದಂತೆಯೂ, **ಶೋಧಿತೇ** – ಪರೀಕ್ಷಿಸಲ್ಪಟ್ಟ **ಕ್ವಾಪಿ** –ನಿರ್ದುಷ್ಟವಾದ ಮತ್ತು ದುರ್ಲಭವಾದ, **ಪಾತ್ರೇ** – ವಿದ್ಯೆಗೆ ಪಾತ್ರಭೂತನಾದ ಸಚ್ಛಿಷ್ಯನಲ್ಲಿ (ಕೊಳೆ ತೂತುವಗೈರೆ ಇಲ್ಲದೆ ಶುದ್ಧವಾದ ಒಂದು ದೀಪ ಪಾತ್ರದಲ್ಲಿ) **ಅನಘಗುಣದಶಾಯಾಂ** – ರಜಸ್ಸು ತಮಸ್ಸು ಮಿಶ್ರವಲ್ಲದ ಸತ್ತ್ವೋ ನ್ಮೇಷ ದಶೆಯಲ್ಲಿ (ಶುದ್ಧವಾದ ಬತ್ತಿಯಲ್ಲಿ) **ಆಹಿತಸ್ನೇಹಂ** – ನಿರತಿಶಯ ಪ್ರೀತಿಯುಳ್ಳವನಾಗಿ (ಎಣ್ಣೆಯನ್ನು ಹಾಕಿ) **ನಿರಪಾಯಂ** – ನಾಶರಹಿತವಾದ [ಪ್ರವಾಹತಃ ನಿತ್ಯವಾದ] **ಸಂಪ್ರದಾಯಪ್ರದೀಪಂ** – ಪರಮಾ ಚಾರ್ಯನಾದ ಭಗವಂತನಿಂದ ಆರಂಭಿಸಿ, ವಿಚ್ಛೇದವಿಲ್ಲದೆ ಪರಂಪರಯಾ ಉಪದೇಶಿಸಲ್ಪಡುವ ಮಂತ್ರ ಮಂತ್ರಾರ್ಥ ವಿಶೇಷಗಳನ್ನು– ಅಜ್ಞಾನಾಂಧಕಾರ ನಿವೃತ್ತಿಕರವಾದ ವೇದಾಂತ ಶಾಸ್ತ್ರಾರ್ಥವನ್ನು ಎಂದರ್ಥ [ದೀಪವನ್ನು] ಸಮ್ಯಕ್ ಪದಾರ್ಥ ಜ್ಞಾನವನ್ನುಂಟು ಮಾಡುವುದರಿಂದ ದೀಪನೆಂದು ರೂಪಕ. **ಆರ್ಯೈಃ** – ಸದಾಚಾರ್ಯನು **ಪ್ರದಿಶತಿ** – ಪ್ರದಿಶೇತ್ ಎಂದು ವಿಧಿ, ಉಪದೇಶ ಮಾಡಬೇಕು.

"ಪಾತ್ರಸ್ಥಮಾತ್ಮಜ್ಞಾನಂತು ಕೃತ್ವಾ ಪಿಂಡಂ ಸಮುತ್ಸೃಜೇತ್ ।
ನಾಂತರ್ಧಾಯ ಸ್ವಯಂ ಯಾತಿ ಜಗದ್ಬೀಜ ಮಬೀಜಕೃತ್ ॥

ತನ್ನಲ್ಲಿರುವ ಜ್ಞಾನವನ್ನು ಸತ್ಪಾತ್ರದಲ್ಲಿಟ್ಟು ಶರೀರವನ್ನು ಬಿಡಬೇಕು, ಜ್ಞಾನವೆಂಬ ಬೀಜವನ್ನು ತನ್ನಲ್ಲೇ ಅಡಗಿಸಿಕೊಂಡು, ಜಗತ್ತಿನಲ್ಲಿ ಜ್ಞಾನ ಬೀಜವನ್ನು ಬಿತ್ತದೆ ಹೋಗಬಾರದು, ಎಂದು ವಿಧಿ. ಆದ್ದರಿಂದ ಸದಾಚಾರ್ಯನು ಸಚ್ಛಿಷ್ಯನಿಗೆ ವೇದಾಂತ ಶಾಸ್ತ್ರವನ್ನು ಉಪದೇಶಿಸಿಯೇ ತನ್ನ ಪ್ರಾಕೃತ ಶರೀರವನ್ನು ಬಿಡ ಬೇಕೆಂಬುದು ಶಾಸ್ತ್ರವಿಧಿ.

## ಆಚಾರ್ಯನ ಕರ್ತವ್ಯ

ಹೀಗೆ ಆಚಾರ್ಯರಿಗೆ ವಿಹಿತವಾದ ಸಂಪ್ರದಾಯ ಪ್ರದಾನದ ಪ್ರಕಾರವನ್ನು ವಿಶದವಾಗಿ ಕೃಪೆ ಮಾಡಿ ಹೇಳುತ್ತಾರೆ. ಅದಾಗಿ – **ಇಪ್ಪಡಿ** (1) **ಗುರುರ್ಗರೀಯಾನ್** ಇತ್ಯಾದಿ – ಹೀಗೆ ಗುರುವು ದೊಡ್ಡವನು ಎಂದೂ (2) **ತನಿಮುಂ ಸರ್ವ ಸಂಪನ್ನಂ** ಇತ್ಯಾದಿಯಾಗಿಯೂ ಹೇಳುವಂತೆ ಪರಮಾಚಾರ್ಯನಾದ ಸರ್ವೇಶ್ವರನೇ

---

1) ಪಿತಾಸಿ ಲೋಕಸ್ಯಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।
ನತ್ವತ್ಸಮೋಸ್ತ್ಯಭ್ಯಧಿಕಃ ಕುತೋಽನ್ಯಃಲೋಕತ್ರಯೇಽಪ್ಯಪ್ರತಿಮ ಪ್ರಭಾವ ॥
ಗೀತೆ (11-43) ಚರಾಚರಾತ್ಮಕವಾದ ಈ ಪ್ರಪಂಚಕ್ಕೆ ನೀನು ತಂದೆ. ಪೂಜ್ಯನು. ಪರಮಾಚಾರ್ಯನು. ನಿನಗೆ ಸಮನೂ ಮೇಲಾದವನೂ ಮೂರು ಲೋಕದಲ್ಲಿಯೂ ಬೇರೆ ಯಾರೂ ಇಲ್ಲ. ನಿನಗೆ ಸಮಾನವಾದ ಮಹಿಮೆಯುಳ್ಳವನು ಯಾರೂ ಇಲ್ಲ.

2) ಮಮಾಪ್ಯಖಿಲ ಲೋಕಾನಾಂ ಗುರುರ್ನಾರಾಯಣೋಽಗುರುಃ ॥ ಎಂಬುದು ಉತ್ತರಾರ್ಧ, ಸಭಾಪರ್ವ(41-21)
ಈ ಕೃಷ್ಣ ಪರಮಾತ್ಮನು ಸರ್ವ ಗುಣ ಸಂಪನ್ನನು, ಆಚಾರ್ಯನು, ಪಿತಾ, ಗುರು. ನನಗೂ ಸರ್ವಲೋಕಗಳಿಗೂ ಗುರು. ಇವನಿಗೆ ಗುರು ಯಾರೂ ಇಲ್ಲ.

**ಪಿತರಂ ಗುರುಂ" ಎನ್ರುವ್ ಶೊಲ್ಲುಹಿರಪಡಿಯೇ, ಪರಮಾಚಾರ್ಯನಾನ ಸರ್ವೇಶ್ವರನ್ ಮುದಲಾಹ ಸದಾಚಾರ್ಯರ್ ಸಂಪ್ರದಾಯ ಸಮಾಗತಙ್ಗಳಾಯ್ ಸಿಂಹೀಸ್ತನ್ಯಂಪೋಲೇ ವಿಜಾತೀಯರುಕ್ಕು ರಸಂ ತೆರಿಯಾದ ರಹಸ್ಯತ್ರಯಾರ್ಥಂಗಳೈ ಸಂಗ್ರಹೇಣ ಶೇತ್ತರ್ ತ್ತಾಂಗಳುಮ್ ಅನುಸಂಧಿತ್ತು,**

3) **ಯೋ ಗೋಪಾಯತ್ಯಯೋಗ್ಯಾನಾಂ ಯೋಗ್ಯಾನಾಂ ಸಂಪ್ರಯಚ್ಛತಿ ।**
**ಇಮಮರ್ಥಂ ಸಮಾನ್ಯೋಮೇ ಸ್ವಸ್ತಿವೋಽಸ್ತು ವ್ರಜಾಮ್ಯಹಮ್ ॥**

4) **"ಇದಂತೇ ನಾತಪಸ್ಕಾಯ ನಾಽಭಕ್ತಾಯ ಕದಾಚನ ।**
**ನ ಚಾಽಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥**
**ಯ ಇಮ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿಪರಾಂ ಕೃತ್ವಾ ಮಾಮೇವೈಷ್ಯತ್ಯ ಸಂಶಯಃ ॥"**

5) **"ನಾಽವೇದನಿಷ್ಠಸ್ಯ ಜನಸ್ಯ ರಾಜನ್**
**ಪ್ರದೇಯ ಮೇತತ್ಪರಮಂ ತ್ವಯಾ ಭವೇತ್ ।**
**ವಿವಿತ್ಸಮಾನಸ್ಯ ವಿಭೋಧ ಕಾರಕಂ**
**ಪ್ರಭೋಧಹೇತೋಃ ಪ್ರಣತಸ್ಯ ಶಾಸನಮ್ ॥"**

---

ಮೊದಲಾದ ಸಂಪ್ರದಾಯ ಪೂರ್ವಕ ಬಂದು, **ಸಿಂಹೀಸ್ತನ್ಯಂಪೋಲೇ** ಇತ್ಯಾದಿ- ಹೆಣ್ಣು ಸಿಂಹದ ಹಾಲು ಸಿಂಹಶಿಶುವಲ್ಲದೆ ಇತರ ಪ್ರಾಣಿಗಳಿಗೆ ತಿಳಿಯದಂತೆ, ವಿಜಾತೀಯರಿಗೆ-ನಮ್ಮ ಸಿದ್ಧಾಂತಕ್ಕೆ ಬಹಿರ್ಭೂತರಾದವರಿಗೆ **ರಸಂತೆರಿಯಾದ**-ಭಗವಚ್ಛೇಷತ್ವಾದಿ ರಸವನ್ನು ತಿಳಿಯದ, ರಹಸ್ಯತ್ರಯದ ಅರ್ಥಗಳನ್ನು ಸಂಗ್ರಹೇಣ ಒಂದು ಗೂಡಿಸಿ ತಾವುಗಳೂ ಅನುಸಂಧಾನ ಮಾಡಿ3)**ಯೋಗೋಪಾಯತ್ಯಯೋಗ್ಯಾನಾಂ** ಇತ್ಯಾದಿ 4)**ಇದಂತೇ ನಾತಪಸ್ಕಾಯ** 5) **ನಾಽವೇದನಿಷ್ಠಸ್ಯ** ಇತ್ಯಾದಿ-ಇದು ವಸಿಷ್ಠರು ಜನಕ ವಂಶದಲ್ಲಿ ಉತ್ಪನ್ನನಾದ ಕರಾಳನೆಂಬ ರಾಜನಿಗೆ ಉಪದೇಶ

---

3) ಸಾತ್ವತ ಸಂಹಿತೆ (25-375) ಈ ರಹಸ್ಯಾರ್ಥಗಳನ್ನು ಅಯೋಗ್ಯರಿಗೆ ಉಪದೇಶಿಸದೆ, ಯೋಗ್ಯರಿಗೆ ಮಾತ್ರ ಉಪದೇಶಿಸುವವನು ನನಗೆ ಬಹಳ ಗೌರವ್ಯನು. ನಿಮಗೆ ಮಂಗಳವಾಗಲಿ ಹೋಗಿ ಬರುತ್ತೇನೆ.

4) ತಪಸ್ಸು, ನನ್ನಲ್ಲಿ ಭಕ್ತಿ, ಇಲ್ಲದವನಿಗೆ ಈ ಗೀತಾ ರಹಸ್ಯವನ್ನು ಉಪದೇಶಿಸಕೂಡದು. ಕೇಳಬೇಕೆಂಬ ಆಸೆಯಿಲ್ಲದವನಿಗೆ ಹೇಳಕೂಡದು. ನನ್ನನ್ನು ದ್ವೇಷಿಸುವವನಿಗೆ ಉಪದೇಶಿಸಲೇ ಕೂಡದು. ಈ ಪರಮ ರಹಸ್ಯವನ್ನು ನನ್ನ ಭಕ್ತರಿಗೆ ಉಪದೇಶಿಸುವವನು, ನನ್ನಲ್ಲಿ ಉತ್ಕೃಷ್ಟವಾದ ಭಕ್ತಿಯನ್ನು ಮಾಡಿ ನನ್ನನ್ನೇ ಪಡೆಯುತ್ತಾನೆ. ಗೀತೆ 18-66, 68

5) ವೇದಾಧ್ಯಯನ ಸಂಪನ್ನನಲ್ಲದವನಿಗೆ ಈ ಉತ್ಕೃಷ್ಟವಾದ ಅರ್ಥಗಳನ್ನು ಹೇಳಕೂಡದು. ಜ್ಞಾನವನ್ನು ಸಂಪಾದಿಸಬೇಕೆಂದು ಆಸೆಯುಳ್ಳವನಾಗಿ, ಪ್ರಣಾಮ ಪೂರ್ವಕ ಪ್ರಾರ್ಥಿಸುವವನಿಗೆ ಜ್ಞಾನಕಾರಕವಾದ ಈ ವಿದ್ಯೆಯನ್ನು ಉಪದೇಶಿಸಬೇಕು. (ಮಹಾಭಾರತ ವಸಿಷ್ಠ ಕರಾಳ ಸಂವಾದದಲ್ಲಿ ಹೇಳಿರುವ ಮಾತು ಇದು.) ಸುಳ್ಳು ಹೇಳುವವನಿಗೂ, ವಂಚಕನಿಗೂ, ನಪುಂಸಕನಿಗೂ, ವಕ್ರಬುದ್ಧಿಯುಳ್ಳವನಿಗೂ, ಪಂಡಿತಂಮನ್ಯನಿಗೂ, ಇತರರಿಗೆ ತಾಪವನ್ನುಂಟು ಮಾಡುವವನಿಗೂ ಈ ವೇದಾಂತಾರ್ಥಗಳನ್ನು ಹೇಳಕೂಡದು. ಶ್ರದ್ಧೆಯಿಂದ ಕೂಡಿದವನಿಗೂ, ಗುಣಾಢ್ಯನಿಗೂ, ಇತರರನ್ನು ದೂಷಿಸದೇ ಇರುವವನಿಗೂ, ವಿಶುದ್ಧಯೋಗಾಯ-ಭಕ್ತಿಯುಳ್ಳವನಿಗೂ, ಪಂಡಿತನಿಗೂ, ಹಿತಪರನಿಗೂ, ಏಕಾಂತ ವಾಸತತ್ಪರನಿಗೂ, ಶಾಸ್ತ್ರದಲ್ಲಿ ಹೇಳಿದ ಕರ್ಮಗಳನ್ನು ಮಾಡುವುದರಲ್ಲಿ ಪ್ರೀತಿಯುಳ್ಳವನಿಗೂ, ವಾದಗಳಲ್ಲಿ ಪ್ರವೇಶಿಸದವನಿಗೂ, ಬಹು ಶ್ರುತನಿಗೂ, ಹಿತ, ಕ್ಷಮೆ, ದಯಾದಿಗಳನ್ನುಳ್ಳವನಿಗೂ, ಸರ್ವರಲ್ಲಿಯೂ ಆತ್ಮ ತುಲ್ಯವಾದ ಪ್ರೀತಿಯುಳ್ಳವನಿಗೂ ಈ ರಹಸ್ಯಾರ್ಥಗಳನ್ನು ಉಪದೇಶಿಸತಕ್ಕದ್ದು. ಈ ಗುಣಗಳಿಲ್ಲದವನಿಗೆ ಪರಿಶುದ್ಧವಾದ ಈ ಪರಬ್ರಹ್ಮ ಸ್ವರೂಪವನ್ನು ಉಪದೇಶಿಸಕೂಡದು. ಅಂಥಹ ಅ ಪಾತ್ರದಲ್ಲಿ ಧರ್ಮವನ್ನು ಉಪದೇಶಮಾಡಿದವನಿಗೆ

ಪು.ತಿ.ನೋ

"ನದೇಯಮೇತಚ್ಚ ತಥಾऽನೃತಾತ್ಮನೇ ಶಠಾಯ ಕ್ಲೀಬಾಯ ನಜಿಹ್ಮಬುದ್ಧಯೇ।
ನ ಪಂಡಿತಜ್ಞಾಯ ಪರೋಪತಾಪಿನೇದೇಯಂ ತ್ವಯೇದಂವಿನಿಬೋಧ ಯಾದೃಶೇ॥
ಶ್ರದ್ಧಾನ್ವಿತಾಯಾऽಥ ಗುಣಾನ್ವಿತಾಯ ಪರಾಪವಾದಾದ್ವಿರತಾಯ ನಿತ್ಯಂ।
ವಿಶುದ್ಧಯೋಗಾಯ ಬುಧಾಯಚೈವ ಕ್ರಿಯಾವತೇऽಥ ಕ್ಷಮಿಣೇ ಹಿತಾಯ॥

ವಿವಿಕ್ತಶೀಲಾಯ ವಿಧಿಪ್ರಿಯಾಯ ವಿವಾದಭೀತಾಯ ಬಹುಶ್ರುತಾಯ।
ವಿಜಾನತೇಚೈವ ತಥಾ ಹಿತಕ್ಷಮಾದಮಾಯ ನಿತ್ಯಾತ್ಮಸಮಾಯದೇಹಿನಾಮ್॥
ಏತೈರ್ಗುಣೈರ್ಹೀನತಮೇ ನ ದೇಯಮೇ ತತ್ಪರಂ ಬ್ರಹ್ಮವಿಶುದ್ಧಮಾಹುಃ।
ನ ಶ್ರೇಯಸಾಯೋಕ್ಷ್ಯತಿ ತಾದೃಶೇ ಕೃತಂ ಧರ್ಮ ಪ್ರವಕ್ತಾರಮ ಪಾತ್ರದಾನಾತ್॥

ಪೃಥ್ವೀಮಿಮಾಂ ಯದ್ಯಪಿ ರತ್ನಪೂರ್ಣಾಂ ದದ್ಯಾನ್ನದೇಯಂತ್ವಿದಮವ್ರತಾಯ।
ಜಿತೇಂದ್ರಿಯಾಯೈತದಸಂಶಯಂ ತೇ ಭವೇತ್ಪ್ರದೇಯಂ ಪರಮಂ ನರೇಂದ್ರ॥
ಕರಾಳ ಮಾತೇ ಭಯಮಸ್ತು ಕಿಂಚಿದೇತತ್ಪರಂ ಬ್ರಹ್ಮಶ್ರುತಂ ತ್ವಯಾದ್ಯ।
ಯಥಾವದುಕ್ತಂ ಪರಮಂ ಪವಿತ್ರಂ ವಿಶೋಕಮತ್ಯನ್ತಮನಾದಿ ಮಧ್ಯಮ್॥

6) ವಿದ್ಯಯೈವ ಸಮಂ ಕಾಮಂ ಮರ್ತವ್ಯಮ್ ಬ್ರಹ್ಮವಾದಿನಾ॥
ಆಪದ್ಯಪಿ ಚ ಘೋರಾಯಾಂ ನತ್ವೇನಾ ಮೀರಿಣೇ ವಪೇತ್॥

7) ಮೂರ್ಖಾಶ್ಚ ಪಂಡಿತಂ ಮನ್ಯಾ ಅಧರ್ಮಾಧಾರ್ಮಿಕಾಇವ।
ಧರ್ಮಯುಕ್ತಾನ್ ಪ್ರಭಾಧಂತೇ ಸಾಧೂನಾಂ ಲಿಂಗಮಾಸ್ಥಿತಾಃ॥
ಏಕತಸ್ತ್ವ ಪವರ್ಗಾರ್ಥ ಮನುಷ್ಠಾನಾದಿ ಕೌಶಲಮ್।
ಲೋಕಾನುಸಾರಸ್ತ್ವೇಕತ್ರ ಗುರುಃ ಪಶ್ಚಾದುದೀರಿತಃ॥

---

ಮಾಡಿದ ಸಂವಾದ. ಯೋಗ್ಯನಾದ ಸಚ್ಛಿಷ್ಯನಿಗೆ ಈ ವೇದಾಂತಾರ್ಥಗಳು ಉಪದೇಶಿಸಲ್ಪಡತಕ್ಕವು. ಅಯೋಗ್ಯನಿಗೆ ಉಪದೇಶಿಸಲ್ಪಡ ಕೂಡದೆಂದು ವಿಸ್ತಾರವಾಗಿ ನಿರೂಪಿಸುತ್ತಾರೆ. (6) **ವಿದ್ಯಯೈವಸಮಂಕಾಮಂ** ಇತ್ಯಾದಿ ಮನುಸ್ಮೃತಿ (2-113). ಬ್ರಹ್ಮವಿತ್ತಾದವನು ಯಾರಿಗೂ ಉಪದೇಶಿಸದೆ ವಿದ್ಯೆಯೊಡನೆ ಮರಣ ಹೊಂದಿದರೂ ಚಿಂತೆಯಿಲ್ಲ. ಘೋರವಾದ ಆಪದ್ದಶೆಯಲ್ಲಿಯೂ ಬ್ರಹ್ಮ ವಿದ್ಯಾಬೀಜವನ್ನು ಈರಿಣೇ-ಊಷರ ಭೂಮಿಯಲ್ಲಿ, ಬಿತ್ತಕೂಡದು. ಅಪಾತ್ರದಲ್ಲಿ ಈ ಬ್ರಹ್ಮ ವಿದ್ಯಾದಾನವನ್ನು ಮಾಡಕೂಡದೆಂದು ತಾತ್ಪರ್ಯ. 7) **ಮೂರ್ಖಾಶ್ಚಪಂಡಿತಂಮನ್ಯಾಃ** ಇತ್ಯಾದಿ ಶಾಂಡಿಲ್ಯಸ್ಮೃತಿ-(4-251 ರಿಂದ 258ರವರೆಗೆ) ಮೂರ್ಖರೂ, ತಮ್ಮನ್ನೇ ಪಂಡಿತರನ್ನಾಗಿ ತಿಳಿದವರೂ ಆದ ಅಧರ್ಮಿಷ್ಠರು ಸಾಧುಗಳಂತೆ ಧಾರ್ಮಿಕ ವೇಷವನ್ನು ತಾಳಿ ಧರ್ಮದಿಂದಿರುವವರನ್ನು ಬಾಧಿಸುತ್ತಾರೆ. ಮೋಕ್ಷಾರ್ಥವಾಗಿ ಅನುಷ್ಠಾನವನ್ನು ಮಾಡುವ ಕೌಶಲವುಳ್ಳವರು ಒಂದು ಗುಂಪು. ಲೋಕಾನುಸಾರವಾಗಿ ಪಂಡಿತಂ ಮನ್ಯರಾದವರು ಮತ್ತೊಂದು ಗುಂಪು. ಈ ಎರಡನೆಯ

---

ಶ್ರೇಯಸ್ಸು ಉಂಟಾಗಲಾರದು. ರತ್ನ ಸಂಪೂರ್ಣವಾದ ಭೂಮಿಯನ್ನು ಕೊಟ್ಟರೂ ಗುಣವಿಲ್ಲದೆ ವ್ರತಾನುಷ್ಠಾನಗಳಿಲ್ಲದವನಿಗೆ ಈ ರಹಸ್ಯಾರ್ಥಗಳನ್ನು ಉಪದೇಶಿಸಕೂಡದು. ಜಿತೇಂದ್ರಿಯನಾಗಿರುವವನಿಗೆ ಈ ಉತ್ಕೃಷ್ಟವಾದ ಪರಮರಹಸ್ಯವು ಉಪದೇಶಿಸಲ್ಪಡತಕ್ಕದ್ದು. ಎಲೈ ಕರಾಳನೇ (ಜನಕರ ವಂಶದಲ್ಲಿ ಉತ್ಪನ್ನರಾದ ರಾಜನಿವನು), ಪರಮ ಪವಿತ್ರವಾದ ಆದಿ ಮಧ್ಯಾಂತ ರಹಿತನಾದ ಪರಬ್ರಹ್ಮ ವಿಷಯಕವಾದ ಈ ಪರಮ ರಹಸ್ಯವು ನಿನಗೆ ಉಪದೇಶಿಸಲ್ಪಟ್ಟಿದೆ. ನೀನು ಸ್ವಲ್ಪವೂ ಭಯಪಡಬೇಕಿಲ್ಲ.

**ಭವನ್ತಿ ಬಹವೋಮೂರ್ಖಾಃ ಕ್ವಚಿದೇಕೋ ವಿಶುದ್ಧಧೀಃ ।**
**ತ್ರಾಸಿತೋಽಪಿ ಸದಾಮೂರ್ಖೈರಚಲೋಯಸ್ಸ ಬುದ್ಧಿಮಾನ್ ॥**
**ನ ವಿಶ್ವಾಸಃ ಕ್ವಚಿತ್ಕಾರ್ಯೋ ವಿಶೇಷಾತ್ತು ಕಲೌಯುಗೇ ।**
**ಪಾಪಿಷ್ಠಾವಾದವರ್ಷೇಣ ಮೋಹಯನ್ತ್ಯವಿಚಕ್ಷಣಾನ್**

**ಗೋಪಯನ್ನಾಚರೇದ್ಧರ್ಮಂ ನಾಽಪೃಷ್ಟಃ ಕಿಂಚಿದುಚ್ಚರೇತ್ ॥**
**ಪೃಷ್ಟೋಽಪಿನವದೇ ದರ್ಥಂ ಗುಹ್ಯಂ ಸಿದ್ಧಾನ್ತಮೇವಚ ।**
**ಆಶ್ರಿತಾಯಾತಿ ಭಕ್ತಾಯ ಶಾಸ್ತ್ರ ಶ್ರದ್ಧಾಪರಾಯಚ ।**
**ನ್ಯಾಯೇನ ಪೃಚ್ಛತೇ ಸರ್ವಂ ವಕ್ತವ್ಯಂ ಶೌಚಯೋಗಿನೇ ॥**

**ಆತ್ಮಪೂಜಾರ್ಥ ಮರ್ಥಾರ್ಥಂ ಡಂಭಾರ್ಥಮಪಿ ಖಿನ್ನಧೀಃ ॥**
**ಅಯೋಗ್ಯೇಷು ವದಞ್ಛಾಸ್ತ್ರಂ ಸನ್ಮಾರ್ಗಾತ್ಪ್ರಚ್ಯುತೋ ಭವೇತ್ ।**
**ಊಷರೇ ನಿವಪೇದ್ಬೀಜಂಷಂಡೇ ಕನ್ಯಾಂ ಪ್ರಯೋಜಯೇತ್ ॥**
**ಸೃಜೇದ್ವಾ ವಾನರೇ ಮಾಲಾಂ ನಾಪಾತ್ರೇ ಶಾಸ್ತ್ರಮುತ್ಸೃಜೇತ್ ॥**

---

ಗುಂಪಿನೊಂದಿಗೆ ಸೇರಿರುವರ ಆಚಾರ್ಯನು ಪಶ್ಚಾದುದೀರಿತಃ – ಅಧಮನು. **ಭವಂತಿಬಹವೋಮೂರ್ಖಾಃ** – ಎಷ್ಟೋ ಜನ ಮೂರ್ಖರು ಲೋಕದಲ್ಲಿ ಆಚಾರ್ಯಕೃತ್ಯವನ್ನು ವಹಿಸಿ ಇರುತ್ತಾರೆ. ಪರಿಶುದ್ಧ ಜ್ಞಾನವುಳ್ಳವನ ಕ್ವಚಿದೇಕಃ – ಎಲ್ಲಿಯೋ ಒಬ್ಬ ಮೂರ್ಖರಿಂದ ಹೆದರಿಸಲ್ಪಟ್ಟರೂ ಅಪವರ್ಗಾರ್ಥವಾದ ಅನುಷ್ಠಾನದಿಂದ ಚಲಿಸದವನು ಬುದ್ಧಿವಂತನು. ಅಂಥಹ ಮೂರ್ಖರ ಮಾತಿನಲ್ಲಿ ಸ್ವಲ್ಪವೂ ವಿಶ್ವಾಸವನ್ನು ಮಾಡತಕ್ಕದ್ದಲ್ಲು **ಪಾಪಿಷ್ಠಾವಾದವರ್ಷೇಣ** ಇತ್ಯಾದಿ – ಪಾಪಿಷ್ಠರು ವಾದದ ಮಳೆಯನ್ನು ಸುರಿಸಿ, ಸಿದ್ಧಾಂತ ವಿರುದ್ಧವಾದ ಅರ್ಥಗಳನ್ನು ಹೇಳಿ ವಿಚಕ್ಷಣರಲ್ಲದವರನ್ನು ಮೋಹಗೊಳಿಸುತ್ತಾರೆ. ಅಂಥಹವರ ಮಾತಿನಲ್ಲಿ ಯಾವಾಗಲೂ, ವಿಶೇಷವಾಗಿ ಕಲಿಯುಗದಲ್ಲಿ ವಿಶ್ವಾಸವನ್ನಿಡಕೂಡದು. **ಗೋಪಯನ್ನಾಚರೇದ್ಧರ್ಮಮ್** ಇತ್ಯಾದಿ – ಧರ್ಮವನ್ನು ಗೋಪ್ಯವಾಗಿ ಅನುಷ್ಠಿಬೇಕು. **ನಾಽಪೃಷ್ಟಃ** ಇತ್ಯಾದಿ – ಕೇಳದೇ ಇರುವವನಿಗೆ ಹೇಳಕೂಡದು. **ಪೃಷ್ಟೋಽಪಿ** ಇತ್ಯಾದಿ – ಕೆಲವರು ಕೇಳಿದರೂ ಗುಹ್ಯವಾದ ಸಿದ್ಧಾಂತವನ್ನು (ರಹಸಾರ್ಥಗಳನ್ನು) ಸಮ್ಯಕ್ ಪರೀಕ್ಷೆ ಮಾಡದೆ ಹೇಳಕೂಡದು. **ಆಶ್ರಿತಾಯಾಽತಿಭಕ್ತಾಯ** ಇತ್ಯಾದಿ – ಭಕ್ತಿಶ್ರದ್ಧೆಯಿಂದ ಆಶ್ರಯಿಸಿ ಮತ್ತು ಶಾಸ್ತ್ರದಲ್ಲಿ ವಿಶ್ವಾಸವನ್ನುಳ್ಳವನಾಗಿರುವವನಿಗೆ **ನ್ಯಾಯೇನ ಪೃಚ್ಛತೇ** – ತದ್ವಿದ್ಧಿ ಪ್ರಣಿಪಾತೇನ ಇತ್ಯಾದಿಯಾಗಿ ಆಚಾರ್ಯ ವರಣಮಾಡಿ ಪ್ರಣಿಪಾತಪುರಸ್ಸರವಾಗಿ **ಶೌಚಯೋಗಿನೇ** – ಕರಣತ್ರಯದಿಂದಲೂ ಶುದ್ಧನಾಗಿ ಕೇಳುವವನಿಗೆ, ಎಲ್ಲವನ್ನೂ ಉಪದೇಶಿಸಬೇಕು. **ಆತ್ಮಪೂಜಾರ್ಥಂ** ಇತ್ಯಾದಿ – ಖ್ಯಾತಿ ಲಾಭ ಪೂಜೆಗಳಿಗಾಗಿಯೂ ಡಂಭಾರ್ಥ ವಾಗಿಯೂ, **ಖಿನ್ನಧೀಃ** ದಾರಿದ್ರ್ಯಾದಿಗಳಿಂದ ಪೀಡಿತನಾಗಿ ದ್ರವ್ಯಾರ್ಜನೆಗಾಗಿಯೂ, ಅಯೋಗ್ಯರಿಗೆ ವೇದಾಂತ ಶಾಸ್ತ್ರವನ್ನು ಉಪದೇಶಿಸಿದರೆ ಸನ್ಮಾರ್ಗದಿಂದ ಜಾರಿಬೀಳುತ್ತಾನೆ, **ಊಷರೇ ನಿವಪೇದ್ಬೀಜಂ** ಇತ್ಯಾದಿ – (ಉಪ್ಪು) ಚೌಳುಮಣ್ಣಿನಿಂದ ಕೂಡಿದ ಭೂಮಿಯಲ್ಲಿ ಬೀಜವನ್ನು ಬಿತ್ತಬಹುದು, ಷಂಡನಿಗೆ ಕನ್ಯಾದಾನ ಮಾಡಬಹುದು, ಕಪಿಯ ಕತ್ತಿಗೆ ಹೂಮಾಲೆ ಹಾಕಬಹುದು, ಅಂದರೆ ಇವುಗಳು ಹೇಗೆ ನಿಷ್ಪ್ರಯೋಜನವೋ ಹಾಗೆ ಅಪಾತ್ರದಲ್ಲಿ ಶಾಸ್ತ್ರೋಪದೇಶವು ನಿಷ್ಪ್ರಯೋಜನ. ಆದ್ದರಿಂದ ಅಪಾತ್ರದಲ್ಲಿ ವೇದಾಂತ ಶಾಸ್ತ್ರವನ್ನು ಉಪದೇಶಿಸಕೂಡದು.

1) ನನಾಸ್ತಿಕಾಯಾ ನೃಜವೇ ನಾಭಕ್ತಾಯ ಕದಾಚನ ।
ನೈವ ಹಿಂಸಾಭಿರುಚಯೇ ನಲುಬ್ಧಾಯ ವಿಶೇಷತಃ ।
ದಾತವ್ಯೋಮನ್ತ್ರರಾಜೋಽಯಂ ಮನ್ತ್ರೋಽಯಂ ಹಿ ನ ತಾದೃಶಃ ।
ಋಜವೇ ಗುರುಭಕ್ತಾಯ ವೈಷ್ಣವಾಯ ವಿಶೇಷತಃ ।
ಸರ್ವ ಪ್ರಾಣ್ಯನುಕೂಲಾಯ ದಾತವ್ಯೋ ದೇಶಿ ಕೇನ ತು"

2) "ತೊಂಡರ್ಕ್ಕಮುದುಣ್ಣಚ್ಚೊಲ್ ಮಾಲೈಹಳ್ ಶೊನ್ನೇನ್ ।
'ಅನ್ದಾದಿಮೇಲಿಟ್ಟರಿವಿತ್ತೇನಾೞ್ ಪೊರುಳೈಚ್ಚಿನ್ದಾಮಲ್ ಕೊಣ್ಮಿನೀರ್ ತೇರ್ನ್ದು"
ಎನ್ರು(ಶ್ರೀ ಸಾತ್ವತ ಭಗವದ್ಗೀತಾ ವಸಿಷ್ಠ ಕರಾಳಸಂವಾದ ಶಾಣ್ಡಿಲ್ಯಸ್ಮೃತಿ ಸಾತ್ಯಕಿತನ್ತ್ರಾದಿಹಳಿಲ್ ಶ್ಚೊಲ್ಲು ಹಿರಪಡಿಯೇ ಶರಣ್ಯನ್ ಅನುಮತಿಪಣ್ಣುಪ್ಪಡಿಕ್ಕೀಡಾನಸಾತ್ವಿಕತಾಸ್ತಿಕ್ಯಾದಿ ಗುಣಂಗಳೈಯುಡೈಯರಾಯ್

---

1) ನ ನಾಸ್ತಿಕಾಯಾನೃಜವೇ ಇತ್ಯಾದಿ – ನಾಸ್ತಿಕ, ಕರಣತ್ರಯಸಾರೂಪ್ಯವೆಂಬ ಋಜು ಬುದ್ಧಿಯಿಲ್ಲದವನು, ಭಗವದ್ಭಕ್ತಿಯಿಲ್ಲದವನು, ಪ್ರಾಣಿಹಿಂಸಾರುಚಿಯುಳ್ಳವನು, ಅರ್ಥಲೌಭ್ಯವುಳ್ಳವನು, ಇತ್ಯಾದಿಗಳಿಗೆ 'ತದ್ವಿಷ್ಣೋಃ' ಎಂಬ ಈ ಮಂತ್ರರಾಜವು ಉಪದೇಶಿಸಲ್ಪಡತಕ್ಕದಲ್ಲ. ಋಜು ಬುದ್ಧಿಯಾಗಿ, ಗುರುಭಕ್ತಿಯಿಂದ ಕೂಡಿ, ವಿಶೇಷವಾಗಿ ವಿಷ್ಣು ಭಕ್ತಿಯುಳ್ಳವನಾಗಿ, ಸರ್ವ ಪ್ರಾಣಿಗಳಲ್ಲಿಯೂ ಭಗವಚ್ಛರೀರವೆಂಬ ಭಾವನೆಯಿಂದ ಹಿಂಸಾಕೃತ್ಯಗಳನ್ನಾಚರಿಸದವನಿಗೆ ಆಚಾರ್ಯನು ಈ ಮಂತ್ರವನ್ನು ಉಪದೇಶಿಸತಕ್ಕದ್ದು.

ಹೀಗೆ ರಹಸ್ಯಾರ್ಥಗಳನ್ನು ಯೋಗ್ಯರಿಗೆ ಹೇಳಬೇಕೆಂಬುದಕ್ಕೂ, ಅಯೋಗ್ಯರಿಗೆ ಹೇಳದೆ ರಕ್ಷಿಸಬೇಕೆಂಬುದಕ್ಕೂ ನಮ್ಮಾೞ್ವಾರ್, ತಿರುಮೞಿಶೈಯಾೞ್ವಾರ್ ಅವರುಗಳ ಶ್ರೀಸೂಕ್ತಿಗಳನ್ನು ಪ್ರಮಾಣೀಕರಿಸುತ್ತಾರೆ. **2) ತೊಂಡರ್ಕಮುದಣ್ಣ** ಇತ್ಯಾದಿ – ಭಗವತ್ಕೈಂಕರ್ಯ ಪರರಾದ ಭಗವದ್ಭಕ್ತರಿಗೇ, ಹೂಮಾಲೆಯಂತೆ ಭಗವಂತನಿಗೆ ಹೃದಯಂಗಮವಾದ ಶ್ರೀಸೂಕ್ತಿ ಮಾಲೆಗಳನ್ನು ಹೇಳಿದೆನು, **ಅಂದಾದಿಮೇಲಿಟ್ಟು** ಇತ್ಯಾದಿ – ಅಂತ್ಯಾದಿ ರೂಪವಾದ ಪ್ರಬಂಧವನ್ನು ವ್ಯಾಜವಾಗಿಕೊಂಡು ಅತಿಗೂಢವಾದ ರಹಸ್ಯಾರ್ಥಗಳನ್ನು, ಪಾಮರರೂ ಸುಲಭವಾಗಿ ತಿಳಿದು ಕೊಳ್ಳುವಂತೆ ಹೇಳಿದ್ದೇನೆ. ಇದನ್ನು **ತೇರ್ನ್ದು** – ಪರಾಮರ್ಶಿಸಿ (3) **ಶಿಂದಾಮಲ್ ಕೊಣ್ಮಿನೀರ್** – ಅಯೋಗ್ಯರುಗಳಿಗೆ ಉಪದೇಶಿಸದೆ ಗ್ರಹಿಸಿ, ಇತ್ಯಾದಿಯಾಗಿ, ಶ್ರೀಸಾತ್ವತ ಸಂಹಿತಾ, ಭಗವದ್ಗೀತಾ, ವಸಿಷ್ಠ ಕರಾಳ ಸಂವಾದ ಶಾಂಡಿಲ್ಯಸ್ಮೃತಿ, ಸಾತ್ಯಕಿತಂತ್ರ, **ಆದಿ** ಶಬ್ದದಿಂದ ಆಳ್ವಾರುಗಳ ಶ್ರೀ ಸೂಕ್ತಿಗಳಲ್ಲಿ ಹೇಳಿರುವ ರೀತಿಯಲ್ಲಿ ಶರಣ್ಯನು ಅನುಮತಿ ಮಾಡುವುದಕ್ಕೆ ಯೋಗ್ಯವಾದ ಸಾತ್ವಿಕತೆ, ಆಸ್ತಿಕತೆ ಮೊದಲಾದ ಗುಣಗಳನ್ನುಳ್ಳವರಾದ, ಆಚಾರ್ಯರುಗಳು ದೈವ ಪ್ರಕೃತಿಗಳಾದ ಸಚ್ಛಿಷ್ಯರುಗಳಿಗೆ ರಹಸ್ಯಾರ್ಥಗಳನ್ನು ರಕ್ಷಿಸಿಡುವಂತೆ ಉಪದೇಶಿಸುತ್ತಾರೆಂದುನಿಗಮಿಸುತ್ತಾರೆ. ದೈವಪ್ರಕೃತಿಗಳಾದಅಂಥಹಸಚ್ಛಿಷ್ಯರುಗಳು

---

1) ಸಾತ್ಯಕಿ ತಂತ್ರ.

2) ಕಂಡುಕೊಂಡೇನ್ ಕಣ್ಣಿಣೈಯಾರಕ್ಕಳಿತ್ತು,
ಪಂಡೈವಿನೈಯಾಯಿನ ಪತ್ತೋಡರುತ್ತು,
ತೊಂಡರ್ಕ್ಕಮುದುಣ್ಣಚ್ಚೊಲ್ ಮಾಲೈಹಳ್ ಶೊನ್ನೇನ್
ಅಂಡತ್ತಮರರ್ ಪೆರುಮಾನಡಿಯೇನೇ ॥ ತಿರುವಾಯ್‌ಮೊೞಿ(9-4-9)

ಭಗವಂತನನ್ನು ಕಣ್ಣಿಂದ ತೃಪ್ತಿಯಾಗಿ ನೋಡಿ ಸಂತೋಷಪಟ್ಟು, ಪ್ರಾಚೀನ ಕರ್ಮಗಳನ್ನು ಸವಾಸನೆಯಾಗಿ ಬಿಟ್ಟು ಭಗವದ್ಭಕ್ತರು ಭಗವದ್ಗುಣಾನುಭವವೆಂಬ ಅಮೃತ ಪ್ರಾಶನ ಮಾಡಲು ಹೂಮಾಲೆಯಂತೆ ಭಗವಂತನಿಗೆ ಹೃದಯಂಗಮವಾದ ಹಾಡಿನ ಮಾಲೆ

ಪು.ತಿ.ನೋ.

4) "**ಅಭಯಂ ಸತ್ವ ಸಂಶುದ್ಧಿ ರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ।**
**ಅಹಿಂಸಾ ಸತ್ಯ ಮಕ್ರೋಧಸ್ತ್ಯಾಗಶ್ಶಾನ್ತಿರ ಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀ ರಚಾ ಪಲಮ್ ।**

---

ಯಾರೆಂದರೆ (4) **ಅಭಯಂ ಸತ್ವಸಂಶುದ್ಧಿಃ** ಎಂದಾರಂಭಿಸಿ ಉಪಪಾದಿಸುತ್ತಾರೆ. ಆದಾಗಿ **ಅಭಯಂ**–ಆಗಾಮಿ ದುಃಖಹೇತುಗಳನ್ನು ದರ್ಶನ ಮಾಡುವುದರಿಂದ ಉಂಟಾದ ದುಃಖವು ಭಯ. ಅದಿಲ್ಲದಿರುವುದು ಅಭಯ. **ಸತ್ವಸಂಶುದ್ಧಿಃ** – ಸತ್ವಗುಣ ಸಂಶುದ್ಧಿ – ಸತ್ವೋದ್ರೇಕ ಅಥವಾ ಸತ್ವಸ್ಯ – ಅಂತಕರಣದ ಸಂಶುದ್ಧಿ – ರಜಸ್ತಮೋಗುಣಗಳಿಲ್ಲದಿರುವಿಕೆ, **ಜ್ಞಾನಯೋಗವ್ಯವಸ್ಥಿತಿಃ** – ಪ್ರಕೃತಿ ವಿಯುಕ್ತವಾದ ಆತ್ಮ ಸ್ವರೂಪ ಸಂಶೀಲನ. **ದಾನಂ** – ನ್ಯಾಯಾರ್ಜಿತವಾದ ಧನವನ್ನು ಸತ್ಪಾತ್ರದಲ್ಲಿ ಅರ್ಪಣ ಮಾಡುವುದು. **ದಮಃ** – ವಿಷಯ ಸುಖಗಳನ್ನು ನೆನೆದುಕೊಳ್ಳದೆ ಇರುವಂತೆ ಮನಸ್ಸನ್ನು ಅಡಗಿಸುವುದು, ಅಂದರೆ ಅಂತಃಕರಣವನ್ನು ಅಡಗಿಸಿಡುವುದು. **ಯಜ್ಞಃ**–ಸಾತ್ವಿಕ ತ್ಯಾಗಯುಕ್ತವಾದ ಭಗವದಾರಾಧನ, ಪಂಚಮಹಾ ಯಜ್ಞಾದ್ಯನುಷ್ಠಾನ. **ಸ್ವಾಧ್ಯಾಯಃ**– ವೇದಗಳು ಭಗವದಾರಾಧನ ಪ್ರತಿಪಾದಕಗಳೆಂದು ತಿಳಿದು, ಅವುಗಳನ್ನು ಅಧ್ಯಾಯನ ಮಾಡುವುದು, **ತಪಃ**– ಕೃಚ್ಛ್ರಚಾಂದ್ರಾಯಣ ರೂಪ ಕಾಯಕ್ಲೇಶವನ್ನು ಮಾಡುವುದು, **ಅರ್ಜವಂ** – ಮನೋವಾಕ್ಕಾಯಗಳ ಪ್ರವೃತ್ತಿಯು ಏಕರೂಪವಾಗಿರುವುದು. **ಅಹಿಂಸಾ** – ಉತ್ತರ ಕಾಲದಲ್ಲಿ ಸುಖಕರವಲ್ಲದೆ ಇರುವಂತಹ ಸುಖೋದರ್ಕವಿಲ್ಲದ ಪರಪೀಡಾವರ್ಜನ. **ಸತ್ಯ** – ಭೂತಹಿತವಾದ ಯಥಾದೃಷ್ಟಾರ್ಥ ವಚನ. **ಅಕ್ರೋಧಃ**– ಇತರರಿಗೆ ಕಷ್ಟವನ್ನುಂಟು ಮಾಡುವ ಚಿತ್ತವಿಕಾರವಿಲ್ಲದಿರುವುದು, **ತ್ಯಾಗಃ** – ತನ್ನ ಹಿತಕ್ಕೆ ವಿರುದ್ಧವಾದವುಗಳನ್ನು ಬಿಡುವುದು. **ಶಾಂತಿಃ** – ಬಹಿರಿಂದ್ರಿಯಗಳಿಗೆ ವಿಷಯ ಪ್ರಾವಣ್ಯ ನಿವೃತ್ತಿಯನ್ನು ಮಾಡುವುದು ಅಂದರೆ ಬಹಿರಿಂದ್ರಿಯ ನಿಗ್ರಹ, **ಅಪೈಶುನಂ** – ಇತರರಿಗೆ ಅನರ್ಥವನ್ನುಂಟು ಮಾಡುವ ಪಿಶುನತೆ–ಚಾಡಿಯನ್ನು, ಹೇಳದಿರುವುದು. **ಭೂತೇಷು ದಯಾ** – ಪ್ರಾಣಿ ದಯೆ. **ಅಲೋಲುತ್ವಂ** – ವಿಷಯಗಳಲ್ಲಿ ಆಸೆಯಿಲ್ಲದಿರುವುದು. **ಮಾರ್ದವಂ** – ಕಾಠಿಣ್ಯ ಸ್ವಭಾವವಿಲ್ಲದೆ ಸಾಧುಜನರೊಡನೆ ಕೂಡಿಯಿರುವುದಕ್ಕೆ ಅರ್ಹತೆ, **ಹ್ರೀಃ** - ತಪ್ಪು ಮಾಡಿದರೆ ಲಜ್ಜೆಪಡುವುದು, **ಅಚಾಪಲಂ** – ಸ್ಪೃಹಣೀಯವಾದ ವಿಷಯಸಾನ್ನಿಧ್ಯದಲ್ಲಿ ಅಚಂಚಲತೆ, **ತೇಜಃ**– ದುರ್ಜನರಿಂದಲೂ, ಇಂದ್ರಿಯಗಳಿಂದಲೂ ಪರಾಭವವಿಲ್ಲದಿರುವ ಮನ ಸ್ಥೈರ್ಯ. **ಕ್ಷಮಾ** – ತನ್ನನ್ನು ಪೀಡಿಸು

---

ಯನ್ನು ಬ್ರಹ್ಮಾದಿ ಅಂಡಾಂತವರ್ತಿಗಳಾದ ಅಮರರುಗಳಿಗೂ ನಿತ್ಯಮುಕ್ತರಿಗೂ ಸ್ವಾಮಿಯಾದ ಭಗವಂತನಿಗೆ ದಾಸನಾಗಿದ್ದುಕೊಂಡು ಸಮರ್ಪಿಸಿದ್ದೇನೆ.

3) ನಾನ್ಮುಹನ್ನೈ ನಾರಾಯಣನ್ ಪಡೈತ್ತಾನ್ ನಾನ್ಮುಕನುಮ್
ತಾನ್ಮುಹಮಾಯ್ ಶಂಕರನೈತ್ತಾನ್ ಪಡೈತ್ತಾನ್ ॥
ಯಾನ್ಮುಖಮಾಯ್ ಅಂದಾದಿ ಮೇಲಿಟ್ಟು ಅರವಿತ್ತೇನ್ ಆಳ್ಪೊರುಳ್ಳೈ
ಶಿಂದಾಮಲ್ ಕೊಣ್ಮಿನೀರ್ ತೇರ್ನ್ದು ॥

ಚತುರ್ಮುಖನನ್ನು ನಾರಾಯಣನು ಸೃಷ್ಟಿಸಿದನು. ಭಗವಂತನು ಅಂತರ್ಯಾಮಿಯಾಗಿದ್ದುಕೊಂಡು ತನ್ಮೂಲಕವಾಗಿ ಚತುರ್ಮುಖನೂ ಶಂಕರನನ್ನು ಸೃಷ್ಟಿಸಿದನು. ನಾನೂ ಅಂತರ್ಯಾಮಿಯಾದ ಭಗವಂತನ ಮೂಲಕ ಅಂತ್ಯಾದಿರೂಪವಾದ ಪಾಶುರಗಳಿಂದ, ಪರಮ ರಹಸ್ಯವಾದ ಅರ್ಥಗಳನ್ನು ಉಪದೇಶಿಸಿದ್ದೇನೆ. ಇವುಗಳನ್ನು ನೀವು ಅಸತ್ಪಾತ್ರದಲ್ಲಿ ದಾನ ಮಾಡದೆ ನಿಮ್ಮಲ್ಲೇ ಶೇಖರಿಸಿಟ್ಟುಕೊಳ್ಳಿ.

4) ಗೀತೆ 16-1-2-3.

**ತೇಜಃ ಕ್ಷಮಾ ಧೃತಿಶ್ಶೌಚಮದ್ರೋಹೋ ನಾತಿಮಾನಿತಾ ।**
**ಭವನ್ತಿ ಸಂಪದಂ ದೈವೀಮಭಿಜಾತಸ್ಯ ಭಾರತ॥ ಎನ್ನುಮ್,**

2) **"ದ್ವಿವಿಧೋಽಭೂತಸರ್ಗೋಽಯಂ ದೈವ ಆಸುರ ಏವ ಚ ॥**
**ವಿಷ್ಣುಭಕ್ತಿ ಪರೋದೈವಃ" ಎನ್ರುಮ್ ಶೊಲ್ಲಪ್ಪಟ್ಟ ದೈವ ಪ್ರಕೃತಿಹಳುಕ್ಕು**

3) **"ಸಂವತ್ಸರಂ ತದರ್ಧಂವಾ ಮಾಸತ್ರಯ ಮಥಾಪಿವಾ ।**
**ಪರೀಕ್ಷ್ಯ ವಿವಿಧೋಪಾಯೈಃ ಕೃಪಯಾ ನಿಸ್ಪೃಹೋ ವದೇತ್ ॥**

4) **"ಯದೃಚ್ಛಯೋಪಸನ್ನಾನಾಂ ದೇಶಾನ್ತರ ನಿವಾಸಿನಾಮ್ ।**
**ಇಷ್ಟೋಽಪದೇಶಃಕರ್ತವ್ಯೋ ನಾರಾಯಣ ರತಾತ್ಮನಾಮ್॥, ಇತ್ಯಾದಿಹಳಿಲ್ ಚೊನ್ನ**
**ಪರೀಕ್ಷಾದಿ ಮೂಲ ಗುಣ ನಿಶ್ಚಯ ಪೂರ್ವಕಮಾಹ**

1) **"ಶ್ರುತಾದನ್ಯತ್ರ ಸಂತುಷ್ಟಸ್ತತ್ರೈವಚ ಕುತೂಹಲೀ ।ಎನ್ರಲಾಮವಸ್ಥೈಯಿಲೇ**
**ಅಷಟ್ಕರ್ಣಮಾಹವೆಳಿಯಿಟ್ಟು,**

---

ವವರಲ್ಲಿಯೂ ಕೋಪವಿಲ್ಲದಿರುವುದು. **ಧೃತಿಃ**-ಧೈರ್ಯ ಎಷ್ಟು ಕಷ್ಟಗಳು ಬಂದರೂ ವಿಹಿತವಾದ ಕರ್ಮಗಳನ್ನು ಮಾಡಲೇಬೇಕೆಂಬ ಅಧ್ಯವಸಾಯ. **ಶೌಚಂ** – ಬಾಹ್ಯಾಂತರ ಕರಣ ಶರೀರಗಳಿಗೆ ಕರ್ಮಾನುಷ್ಠಾನ ಮಾಡಲು ಅರ್ಹತೆಯನ್ನು ಸಂಪಾದಿಸಿಕೊಳ್ಳುವುದು, **ಅದ್ರೋಹಃ** - ಇತರರ ಸ್ವಚ್ಛಂದ ವೃತ್ತಿಯನ್ನು ತಡೆಯದೆ ಇರುವುದು ದ್ರೋಹ ಬುದ್ಧಿಮಾಡದಿರುವುದು. **ನಾತಿಮಾನಿತಾ** - ತನಗೆ ಉಚಿತವಲ್ಲದ ಗರ್ವವಿಲ್ಲದೆ ಇರುವುದು. **ಭಾರತ** – ಭರತ ವಂಶ ಪ್ರಸೂತನಾದ ಎಲೈ ಅರ್ಜುನನೇ, ಇಂಥಹ **ಸಂಪದಂ**–ಸದ್ಗುಣಗಳೆಂಬ ಸಂಪತ್ತು **ದೈವೀಂ ಅಭಿಜಾತಸ್ಯ ಭವಂತಿ** - ಸತ್ಕುಲ ಪ್ರಸೂತನಿಗೆ ಉಂಟಾಗುತ್ತವೆ, ಎಂದು 2) **ದ್ವಿವಿಧೋ ಭೂತ ಸರ್ಗೋಽಯಂ** ಇತ್ಯಾದಿ – ಈ ಪ್ರಾಣಿಗಳ ಸೃಷ್ಟಿಯು ಎರಡು ವಿಧ. ಒಂದು ದೈವ ಪ್ರಕೃತಿ ಮತ್ತೊಂದು ಆಸುರ ಪ್ರಕೃತಿ. ವಿಷ್ಣು ಭಕ್ತಿಯುಳ್ಳವನು ದೈವ ಪ್ರಕೃತಿ. (ಅದಿಲ್ಲದಿರುವವನು ಆಸುರ ಪ್ರಕೃತಿ) ಎಂದು ಹೇಳಲ್ಪಟ್ಟ ದೈವ ಪ್ರಕೃತಿಗಳು ಶಿಷ್ಯರಾಗಿ ಬಂದರೆ (3) **ಸಂವತ್ಸರಂ ತದರ್ಧಂವಾ**– ಒಂದು ಸಂವತ್ಸರಕಾಲ ಅಥವಾ ಅದರಲ್ಲಿ ಅರ್ಧ ಅಥವಾ ಮೂರು ತಿಂಗಳು ಕಾಲವಾದರೂ ಕಾಲಯಾಪನೆಗೆ **ತನ್ನ ಶುಶ್ರೂಷಾದಿ** ವಿವಿಧಗಳಾದ ಉಪಾಯಗಳಿಂದ ಪರೀಕ್ಷೆ ಮಾಡಿ ಕೃಪೆಯಿಂದಲೂ ಸತ್ಕಾರ ಕೀರ್ತಿ ಧನ **ಲಾಭಗಳಲ್ಲಿ** ಆಸೆಯಿಲ್ಲದೆಯೂ ವೇದಾಂತ ಕಾಲಕ್ಷೇಪವನ್ನು ಹೇಳಬೇಕು. (4) **ಯದೃಚ್ಛಯೋಪಸನ್ನಾನಾಂ**– ಇತ್ಯಾದಿ – ದೇಶಾಂತರ ವಾಸಿಗಳಾಗಿ ಯದೃಚ್ಛೆಯಾಗಿ ಬಂದು ಆಶ್ರಯಿಸಿ, ನಾರಾಯಣನಲ್ಲಿ ಭಕ್ತಿಯುಳ್ಳವರಿಗೆ, ಚಿರಕಾಲ ಪರೀಕ್ಷೆಯಿಲ್ಲದೆ ಇಷ್ಟವಾದ (ಅವರು ಅಪೇಕ್ಷಿಸುವ) ವೇದಾಂತಾರ್ಥಗಳನ್ನು ಉಪದೇಶಿಸಬೇಕು. **ಇತ್ಯಾದಿಹಳಿಲ್ ಚೊನ್ನ** – ಇತ್ಯಾದಿಗಳಲ್ಲಿ ಹೇಳಿದ ಪರೀಕ್ಷಾದಿ ಮೂಲಗುಣ ನಿಶ್ಚಯ ಪೂರ್ವಕವಾಗಿ (1) **ಶ್ರುತಾದನ್ಯತ್ರಸಂತುಷ್ಟಃ** – ತನಗೆ ಕೇಳಬೇಕೆಂಬ ರಹಸ್ಯ ವಿಷಯಗಳನ್ನು ಬಿಟ್ಟು ಇತರ ವಿಷಯಗಳಲ್ಲಿ ಆಸೆಯಿಲ್ಲದೆ ಆ ರಹಸ್ಯ ವಿಷಯಗಳನ್ನು ಕೇಳುವುದರಲ್ಲಿಯೇ ಕುತೂಹಲನಾಗಿರುವ ಅವಸ್ಥೆಯಲ್ಲಿ **ಅಷಟ್ಕರ್ಣಮಾಹ** ಇತ್ಯಾದಿ – ಆಚಾರ್ಯ ಶಿಷ್ಯರಿಬ್ಬರು ವಿನಹ ಪಕ್ಕದಲ್ಲಿ ಬೇರೆಯವರಿಲ್ಲದ ರೀತಿಯಲ್ಲಿ [ಮೂರನೆಯವನಿದ್ದರೆ ಆರು ಕಿವಿಗಳು ಕೇಳುತ್ತವೆ. ಹಾಗಿಲ್ಲದೆ ಆಚಾರ್ಯ ಶಿಷ್ಯರು ಇಬ್ಬರೇ ಇದ್ದು ಎಂದರ್ಥ] ಶಿಷ್ಯನಿಗೆ

---

2) - 3) ಶಾಂಡಿಲ್ಯ ಸ್ಮೃತಿ 1-116. 4) ಸಾತ್ವತ ಸಂಹಿತೆ 21-45

2) "ಡಂಭೋದರ್ಪೋತಿ ಮಾನಶ್ಚ ಕ್ರೋಧಃ ಪಾರುಷ್ಯಮೇವಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ ಎನ್ಱುಮ್,

3) ವಿಪರೀತಸ್ತಥಾಽಸುರಃ,

ಎನ್ಱುಂ ಶೊಲ್ಲಪ್ಪಟ್ಟ ಆಸುರ ಪ್ರಕೃತಿಹಳುಕ್ಕು ಮಱೈತ್ತು, ಶೀರಿಯ ಧನಮುಡೈಯಾರ್ ಶೇಮಿತ್ತು ವಾೞುಮಾಪ್ಪೋಲೇ ಚರಿತಾರ್ಥರಾಯ್, ವರ್ತ್ತಿಪ್ಪಾರ್ಹಳ್ ಪೂರ್ವಾಚಾರ್ಯರ್ಹಳ್.

**ಅಧಿಕಾರಿಭೇಧೇನ ವಿಸ್ತರ ಸಙ್ಗ್ರಹರೂಪಾಚಾರ್ಯೋಪದೇಶ ಕ್ರಮಃ**

ಇವರ್ಹಳ್ ದೇಹೇಂದ್ರಿಯಾದಿ ವ್ಯತಿರಿಕ್ತನಾಯ್, ನಿತ್ಯನಾಯ್ ಇರುಪ್ಪಾನೊರು ಆತ್ಮಾವುಂಡು, ಇಚ್ಚೇತನಾಚೇತನಙ್ಗಳಿರಣ್ಡುಮೊೞಿಯ ಇವತ್ತುಕ್ಕು ಅನ್ತರ್ಯಾಮಿಯಾಯ್ ಶೇಷಿಯಾಯ್ ಇರುಪ್ಪಾ

---

ಉಪದೇಶ ಮಾಡಬೇಕು. (2) **ಡಂಭೋದರ್ಪೋಽತಿಮಾನಶ್ಚ** – ಡಂಭಃ – ತನ್ನನ್ನು ಎಲ್ಲರೂ ಧಾರ್ಮಿಕನೆಂದು ಹೇಳಬೇಕೆಂಬ ಸ್ವಾಭಿಮಾನದಿಂದ ಧರ್ಮಾನುಷ್ಠಾನ ಮಾಡುವುದು, **ದರ್ಪಃ** – ಕೃತ್ಯಾಕೃತ್ಯಗಳನ್ನು ವಿವೇಕಿಸದೆ ಅನುಷ್ಠಿಸತಕ್ಕ, ಸಂತೋಷಾತಿಶಯದಿಂದ ಕೂಡಿರುವುದು, **ಅತಿಮಾನಃ** – ತನ್ನ ವಿದ್ಯೆಗೂ ಆಭಿಜಾತ್ಯಕ್ಕೂ ಅನುಗುಣವಲ್ಲದ ಅಹಂಭಾವ. **ಕ್ರೋಧಃ** – ಕೋಪ, **ಪಾರುಷ್ಯಮ್** – ವಾಕ್ಕಿನಲ್ಲಿ ಕಠಿಣತೆ, **ಅಜ್ಞಾನಂ** – ಪರಾವರ ತತ್ವಗಳಲ್ಲಿ ಭೇದವನ್ನು ತಿಳಿಯದಿರುವುದು, ಇತ್ಯಾದಿ ಆಸುರ ಸಂಪತ್ತುಗಳು,ಅಭಿಜಾತನಿಗೂ ಉಂಟಾಗತಕ್ಕವು, ಎಂದೂ, 3) **ವಿಪರೀತಸ್ತಥಾಽಸುರಃ**–ಅಸುರ ಪ್ರಕೃತಿಯು ವಿಪರೀತ ವರ್ತನೆಯುಳ್ಳವನು. ವಿಷ್ಣು ಭಕ್ತಿಗೆ ವಿಪರೀತವಾಗಿ ವಿಷ್ಣು ದ್ವೇಷವನ್ನುಳ್ಳವನು ಆಸುರ ಪ್ರಕೃತಿ ಎಂದರ್ಥ. **ಎನ್ಱುಂಶೊಲ್ಲಪಟ್ಟ** ಇತ್ಯಾದಿ – ಇತ್ಯಾದಿಯಾಗಿ ಹೇಳಲ್ಪಟ್ಟ ಆಸುರ ಪ್ರಕೃತಿಗಳಿಗೆ **ಈ** ಸದುಪದೇಶಾದಿಗಳನ್ನು ಮಾಡದೆ ಮರೆಯಾಗಿಟ್ಟು, **ಶೀರಿಯಧನ ಮುಡೈಯಾರ್** ಇತ್ಯಾದಿ – ಬಹಳ ಶ್ಲಾಘ್ಯವಾದ ಧನವನ್ನುಳ್ಳವರು, ಸಕಾಲದಲ್ಲಿ ಉಪಯೋಗಿಸಲು, ಅದನ್ನು ರಕ್ಷಿಸಿಟ್ಟು ಸುಖವಾಗಿ ಬಾಳುವಂತೆ, **ಚರಿತಾರ್ಥರಾಯ್** – ಕೃತಾರ್ಥರಾಗಿ, ನಮ್ಮ ಪೂರ್ವಾಚಾರ್ಯರುಗಳು ಇದ್ದರು ಇದರಿಂದ ಆಚಾರ್ಯರುಗಳು ರಹಸ್ಯಾರ್ಥಗಳನ್ನು ಸತ್ಪುರುಷರಿಗೆ ಉಪದೇಶ ಮಾಡಬೇಕೆಂದೂ, ಅಸತ್ಪುರುಷರುಗಳಿಗೆ ಉಪದೇಶಮಾಡಕೂಡದೆಂದೂ ತಿಳಿಸಲ್ಪಟ್ಟಿತು

**ಆಚಾರ್ಯರುಗಳು ಸಚ್ಛಿಷ್ಯನಿಗೆ ಉಪದೇಶಿಸುವ ತತ್ವಹಿತ ಪುರುಷಾರ್ಥಗಳ ಸಂಗ್ರಹ**

ಹೀಗೆ ಶ್ಲಾಘ್ಯವಾದ ವಿದ್ಯೆಯಿಂದ ಕೂಡಿದ ಆಚಾರ್ಯರುಗಳು ಪರಮಾಸ್ತಿಕನಾಗಿ ಅಲ್ಪಶ್ರುತನಾದ ಶಿಷ್ಯನೂ, ಹಾಗೆಯೇ ಪರಮಾಸ್ತಿಕರಾದ ಸ್ತ್ರೀಶೂದ್ರಾದಿಗಳೂ ಚನ್ನಾಗಿ ತಿಳಿದುಕೊಳ್ಳುವಂತೆ ಉಪದೇಶಿಸುವ ಪ್ರಕಾರವನ್ನು **ಇವರ್ಹಳ್** ಎಂದಾರಂಭಿಸಿ ಅನುಗ್ರಹಿಸುತ್ತಾರೆ ಅದಾಗಿ **ಈ** ಆಚಾರ್ಯರುಗಳು ದೇಹೇಂದ್ರಿಯಗಳಿಗಿಂತ (ಅಂದರೆ ಅಚೇತನ ಪದಾರ್ಥಕ್ಕಿಂತೆ) ಬೇರೆಯಾದವನೂ, ನಿತ್ಯನೂ ಆಗಿರುವ ಜೀವಾತ್ಮ (ಚೇತನ ಪದಾರ್ಥ) ಇದ್ದಾನೆ. **ಈ** ಚೇತನ ಮತ್ತು ಅಚೇತನಗಳೆರಡೂ **ಒೞಿಯ** – ಅಲ್ಲದೆ ಇವುಗಳಿಗಿಂತ ಬೇರೆಯಾಗಿ, ಇವುಗಳಿಗೆ ಅಂತರ್ಯಾಮಿಯಾಗಿ ಶೇಷಿಯಾಗಿರುವ ಪರಮಾತ್ಮ ತತ್ವವೂ ಉಂಟು. (ಇದು **ಈ**ಶ್ವರ ತತ್ವೋಪದೇಶ) **ಅಂತರ್ಯಾಮಿಯಾಯ್ ಶೇಷಿಯಾಯ್** ಎಂಬ ಪದಗಳು ಲಕ್ಷ್ಮೀನಾರಾಯಣರಿಬ್ಬರ ದಿವ್ಯಾತ್ಮ ಸ್ವರೂಪವನ್ನು ತಿಳಿಸುತ್ತದೆ, ವಿಶೇಷಣ ವಿಶಿಷ್ಟ ವೇಷದಿಂದ **ಈ** ತತ್ವವು ಒಂದು ಎಂಬುದನ್ನು **ಇರುಪ್ಪಾನೊರುಪರಮಾತ್ಮಾ** ಎಂದು ನಿರೂಪಿಸುತ್ತಾರೆ "ಯಥಾಸರ್ವಗತೋ ವಿಷ್ಣುಸ್ತಥೈವೇಯಂದ್ವಿಜೋತ್ತಮ" ಎಂಬಲ್ಲಿ ಸರ್ವಾಂತರ್ಯಾಮಿತ್ವಕ್ಕೆ ಅನುಗುಣವಾದ ವ್ಯಾಪ್ತಿಯು ಲಕ್ಷ್ಮೀನಾರಾಯಣರಿಬ್ಬರಿಗೂ ಹೇಳಲ್ಪಡುತ್ತದೆ, ಎಂದು **ಈ** ವಿಷ್ಣು ಪುರಾಣ ಶ್ಲೋಕಕ್ಕೆ, ವಿಷ್ಣು ಚಿತ್ತರು ವ್ಯಾಖ್ಯಾನ ಮಾಡಿರುವುದರಿಂದ "ಸರ್ವಾಂತರ್ಯಾಮಿ" ಪದವು ಉಭಯ ಸಾಧಾರಣ. 'ಉಭಯಾಧಿಷ್ಠಾನಮ್ ಏಕಶೇಷಿತ್ವಮ್' ಎಂಬ ಪ್ರಮಾಣಾನುಸಾರ "ಶೇಷಿ" ಪದವು ಉಭಯ

**ನೊರು ಪರಮಾತ್ಮಾ ಉಂಡು. ಇಪ್ಪರಮಾತ್ಮಾವ್ಯೆಯೊೞಿಯ ವಿಶ್ವಾತ್ಮಾವುಕ್ಕುತ್ತಾನುಮ್ ಪಿರರುಮ್, ರಕ್ಷಕರಲ್ಲಾಹಮಾಟ್ಟಾರೆನ್ರು ತತ್ವತ್ತೈಯುಮ್, ಅನಾದಿಕಾಲಮನ್ದಾದಿಯಾಹ ಸಂಸರಿತ್ತು ಪ್ಪೋನ್ದವಡಿ ಯೇನುಕ್ಕು ಇನಿಯೊರು ಗರ್ಭವಾಸಾದಿ ಕ್ಲೇಶಮ್ ವಾರಾದಪಡಿ ತಿರುವಡಿಹಳೈತ್ತಂದು ರಕ್ಷಿತ್ತರುಳ ವೇಣುಮೆನ್ರು ಆಚಾರ್ಯನ್ ಪ್ರಸಾದಿತ್ತ ಗುರುಪರಂಪರಾಪ್ರೂರ್ವಕ ದ್ವಯತ್ತಾಲೇ ಶ್ರೀಮಾನಾನ ನಾರಾಯಣನ್ ತಿರುವಡಿಹಳೈ ಶರಣಮಾಹಪ್ಪತ್ತಿ. ಆತ್ಮಾತ್ಮೀಯಙ್ಗಳುಮ್ ಅವತ್ತೈಪ್ಪತ್ತವರುಮ್ ಶುಮ್ಮೈಹ ಳೈಯುಮ್ ಅಙ್ಗೇ ಸಮರ್ಪಿಪ್ಪದೆನ್ರು ಹಿತತ್ತೈಯುಮ್, ಸದಾಚಾರ್ಯನ್ ಕಾಟ್ಟಿಕ್ಕೊಡುಕ್ಕ ಕೈಕ್ಕೊಂಡ ಎಂಬೆರುಮಾನ್ ಇನಿ ನಮ್ಮೈ ಒರುಪಡಿಕ್ಕುಮ್ ಕೈವಿಡಾನೆನ್ರಿರತೇತ್ತತ್ತೋಡೇ ಇಙ್ಗಿರುನ್ದಕಾಲಮ್ ಅಪವರ್ಗಪೂರ್ವರಂಗಮಾನ ನಿರಪರಾಧಾನುಕೂಲವೃತ್ತಿಯೋಡೇ ನಡಪ್ಪದೆನ್ರು ಉತ್ತರಕೃತ್ಯತ್ತೈಯುಮ್ ಸಙ್ಗ್ರಹರುಚಿಹಳುಕ್ಕುಚ್ಚುರುಂಗವರುಳಿಚ್ಚೈವರ್ಹಳ್.**

---

ಸಾಧಾರಣ. ಸರ್ವಾಂತರ್ಯಾಮಿತ್ವ ಸರ್ವಶೇಷಿತ್ವಗಳೆಂಬಲೇ, ಪರಮಾತ್ಮ ತತ್ವವು ಅಭಿಪ್ರೇತವೆಂದು ತಿಳಿಸಲು ಇಲ್ಲಿ ಆಚಾರ್ಯರು "ಪರಮಾತ್ಮ" ಪದವನ್ನು ಪ್ರಯೋಗಿಸಿರುತ್ತಾರೆಂಬುದು ಭಾವ. **ಇಪ್ಪರಮಾತ್ಮಾವ್ಯೆಯೊೞಿಯ** ಇತ್ಯಾದಿ – **ಈ** ಪರಮಾತ್ಮನನ್ನು ಬಿಟ್ಟು **ಈ** ಜೀವಾತ್ಮಾವಿಗೆ ತಾನೂ ಇತರರೂ ರಕ್ಷಕರಾಗುವುದಿಲ್ಲವೆಂದು ತತ್ವವನ್ನೂ, ಅನಾದಿ ಕಾಲದಿಂದ **ಅಂದಾದಿಯಾಹ**–ಅಂತ್ಯಕಾಲದಲ್ಲಿ ತನ್ನ ಶರೀರದಿಂದ ಸೂಕ್ಷ್ಮಗಳಾದ ಪಂಚ ಭೂತಗಳನ್ನೂ, ಇಂದ್ರಿಯಗಳನ್ನೂ ತೆಗೆದುಕೊಂಡು ಸೂಕ್ಷ್ಮವಾದ ಶರೀರವೊಂದನ್ನು ಏರ್ಪಡಿಸಿಕೆ ೂಳ್ಳುವುದು ಉತ್ತರ ಶರೀರಕ್ಕೆ ಆದಿಯಾಗುತ್ತದೆ. **ಈ** ರೀತಿಯಾಗಿ ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಪ್ರವೇಶಿಸಿ ಜೀವಾತ್ಮಾ ಸಂಸರಿಸುತ್ತಾನೆ. ಹುಟ್ಟುತಾನೆಂದರ್ಥ. ಇಂಥಹ **ಅಡಿಯೇನುಕ್ಕು** ಇತ್ಯಾದಿ – ದಾಸಭೂತನಿಗೆ ಇನ್ನು ಮೇಲೆ ಗರ್ಭವಾಸಾದಿಕ್ಲೇಶವು ಬರದೆ ಇರಲು **ತಿರುವಡಿಹಳೈತ್ತಂದು ರಕ್ಷಿತ್ತರುಳವೇಂಡುಮ್** ಇತ್ಯಾದಿ – ನಿನ್ನ ಶ್ರೀಪಾದಗಳನ್ನು ಕೊಟ್ಟು ಕೃಪೆಮಾಡಿ ರಕ್ಷಿಸಬೇಕೆಂದು, ಆಚಾರ್ಯನು **ಪ್ರಸಾದಿತ್ತ** – ಉಪದೇಶಿಸಿದ ದ್ವಯ ಮಂತ್ರದಿಂದ ಗುರುಪರಂಪರಾ ಪೂರ್ವಕವಾಗಿ **ಶ್ರೀಮಾನಾನ ನಾರಾಯಣನ್ ತಿರುವಡಿಹಳೈ ಶರಣಮಾಹ ಪ್ಪಟ್ರ** ಇತ್ಯಾದಿ – ದ್ವಯಮಂತ್ರವನ್ನು ಉಚ್ಚರಿಸಿ ಶ್ರಿಯಃ ಪತಿಯಾದ ನಾರಾಯಣನ ಶ್ರೀ ಪಾದಗಳನ್ನು ಉಪಾಯವಾಗಿ ಅಧ್ಯವಸಾಯಮಾಡಿ – ಲಕ್ಷ್ಮೀವಿಶಿಷ್ಟನಾದ ನಾರಾಯಣನೇ ಸರ್ವಶರಣ್ಯವಾದ ಪರತತ್ವವೆಂಬುದನ್ನು ತಿಳಿಸಲು ಇಲ್ಲಿ **"ದ್ವಯತ್ತಾಲೇ"** ಎಂದು ಆಚಾರ್ಯನು ಹೇಳಿರುತ್ತಾರೆಂಬುದು ಗಮಕ – **ಶರಣಮಾಹಪ್ಪಟ್ರ ಎಂಬುದರಿಂದ ನಿರಪೇಕ್ಷೋಪಾಯವಾಗಿ** ಸುದೃಢವಾಗಿ ಅಧ್ಯವಸಾಯ ಮಾಡಿ (ವಿಶ್ವಾಸದಿಂದ ಕೂಡಿ) ಎಂದರ್ಥ **ಆತ್ಮಾತ್ಮೀಯಂಗಳೈಯುಮ್** ಇತ್ಯಾದಿ ಆತ್ಮ-ಸ್ವರೂಪ, ಆತ್ಮೀಯ - ಫಲ, ಅವಟ್ರೈಪ್ಪಟ್ರವರುಂಶುಮ್ಮೈಹಳೈಯುಮ್ ಭರ, ಅಥವಾ ತಾನು ಮತ್ತು ತನ್ನನ್ನಾಶ್ರಯಿಸಿರುವ ಶಿಷ್ಯಾದಿಗಳ ಸ್ವರೂಪ ಭರ, ಫಲಗಳನ್ನು, ಆ ಭಗವಂತನ **ಪಾದಾ**ರವಿಂದಗಳಲ್ಲಿ ಸಮರ್ಪಿಸಬೇಕೆಂಬ ಹಿತವನ್ನೂ, – ಇಲ್ಲಿ ಆತ್ಮಾತ್ಮೀಯಗಳನ್ನು ಹೇಳಿರುವುದು ಆಚಾರ್ಯ ನಿಷ್ಠೆಯಲ್ಲಿ ವಿಶೇಷಾಭಿಮಾನದಿಂದ ಎಂಬುದು ಭಾವ – **ಸದಾಚಾರ್ಯನ್ ಕಾಟ್ಟಿಕ್ಕೊಡುಕ್ಕ** ಇತ್ಯಾದಿ– ಸದಾಚಾರ್ಯನು ಉಪದೇಶ ಪೂರ್ವಕವಾಗಿ ತೋರಿಸಿಕೊಡಲು **ಕೈಕ್ಕೊಂಡ ಎಂಬೆರುಮಾನ್** ಇತ್ಯಾದಿ – ಆ ಭರವನ್ನು ಅಂಗೀಕರಿಸಿದ ಭಗವಂತನು, ಇನ್ನು ಮೇಲೆ ನಮ್ಮನ್ನು ಯಾವ ರೀತಿಯಲ್ಲೂ ಕೈಬಿಡುವುದಿಲ್ಲವೆಂಬ **ತೇಟ್ರತ್ತೋಡೇ** – ನಿರ್ಭರತೆಯಿಂದ, ಈ ಲೋಕದಲ್ಲಿರುವ ಕಾಲ **ಅಪವರ್ಗ ಪೂರ್ವರಂಗಮಾನ**– ಮೋಕ್ಷಕ್ಕೆ ಪೂರ್ವಭಾವಿಯಾದ, ನಿರಪರಾಧವಾದ ಅನುಕೂಲ ವೃತ್ತಿಯೊಡನೆ ನಡೆದು ಬರುವುದೆಂಬ ಉತ್ತರ ಕೃತ್ಯವನ್ನೂ **ಸಂಗ್ರಹ ರುಚಿಹಳುಕ್ಕು** – ಸಂಗ್ರಹವಾಗಿ ತಿಳಿದುಕೊಳ್ಳಬೇಕೆಂಬ ಆಸೆಯುಳ್ಳವರಿಗೆ. **ಶುರುಂಗವರುಳಿಚ್ಚೆಯ್ ವರ್ಹಳ್** – ಸಂಕ್ಷೇಪವಾಗಿ ಕೃಪೆಯಿಂದ ಆಚಾರ್ಯರುಗಳು ಉಪದೇಶಿಸುತ್ತಾರೆ.

**ಏವಮೇವ ಮಮ ಆಚಾರ್ಯಾಃ ಉಪದಿದಿಶುರಿತ್ಯಾಹ**

**ಪ್ರತ್ಯಗ್ವಸ್ತು (ಪ್ರತ್ಯೇಯಸ್ತು)ವಿಲಕ್ಷಣಂ ಪ್ರಕೃತಿತ ಸ್ವಾತ್ಮಪತಿಸ್ತತ್ಪರಃ**
**ತಸ್ಮಿನ್ನಾತ್ಮ ಭರಾರ್ಪಣಂ ಹಿತತಮಂ ತಚ್ಛೇಷವೃತ್ತಿಃ ಫಲಮ್ ।**

---

ಹೀಗೆ ಸಂಗ್ರಹವಾಗಿ ಹೇಳಿದ ಅರ್ಥವನ್ನು ಸುಖಾನುಸಂಧಾನಾರ್ಥಕ್ಕಾಗಿ **ಪ್ರತ್ಯಗ್ವಸ್ತು ವಿಲಕ್ಷಣಂ** ಎಂಬ ಶ್ಲೋಕದಿಂದ ಆಚಾರ್ಯರುಗಳು ತಮಗೆ ಉಪದೇಶಿಸಿದುದಾಗಿ ಅನುಸಂಧಾನ ಮಾಡುತ್ತಾರೆ.

ಇಲ್ಲಿ **'ಪ್ರತ್ಯಗ್ವಸ್ತು ವಿಲಕ್ಷಣಂ'** ಎಂಬ ಪಾಠವು ಸಮೀಚೀನವೆಂದು ಪೂರ್ವಾಚಾರ್ಯರುಗಳು ಇದನ್ನೇ ಅಂಗೀಕರಿಸಿದ್ದಾರೆ. ಈ ಪಾಠದಲ್ಲಿ ಅಧ್ಯಾಹಾರ ದೋಷಗಳಿಲ್ಲದೆ ವಿಶೇಷವಾದ ಅರ್ಥವು ದ್ಯೋತ್ಯವಾಗಿರುವುದರಿಂದ ಈ ಪಾಠಭೇದವನ್ನು ಅಂಗೀಕರಿಸಿ ಚತುಶ್ಶಾಸ್ತ್ರ ವಿದ್ವಾನ್ ಪುತ್ತಂಕೋಟ್ಟಕಂ ಶ್ರೀನಿವಾಸಾಚಾರ್ಯ ಮಹಾದೇಶಿಕನ್ ರವರು ಈ ಶ್ಲೋಕಕ್ಕೆ ವಿಸ್ತಾರವಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಅದನ್ನು ಕೆಳಗೆ ಬರೆಯಲಾಗಿದೆ. ಈ ಶ್ಲೋಕದಲ್ಲಿ ಜ್ಞಾತವ್ಯಗಳಾದ, ತತ್ವ ಹಿತ ಪುರುಷಾರ್ಥಗಳು ಸಂಗ್ರಹಿಸಲ್ಪಟ್ಟಿವೆ ಅದಾಗಿ - **ಪ್ರತ್ಯಗ್ವಸ್ತು** – ಜೀವಾತ್ಮಾ. ಪ್ರತ್ಯಕ್ ಶಬ್ದವು ರೂಢಿ ಶಕ್ತಿಯಿಂದ ಜೀವಾತ್ಮ ವಾಚಕವು. "ಅಹಂ" ಎಂಬ ಶಬ್ದಕ್ಕೆ ಪರ್ಯಾಯವಾದದ್ದು. **ಪ್ರಕೃತಿ ಶಬ್ದವು**

"ಪ್ರಕೃತಿಃ ಪಂಚಭೂತೇಷು ಸ್ವಭಾವೇ ಸಚಿವಾದಿಷು ।

ಪ್ರಧಾನೇ, ಕಾರಣೇ, ಗುಹ್ಯೇ, ಜಂತೌ ಛಂದಸಿ ಮಾತರಿ ॥,

ಎಂಬ ನಾನಾರ್ಥರತ್ನಮಾಲಾ ಕೋಶದ ಪ್ರಕಾರ ಅನೇಕಾರ್ಥಗಳನ್ನುಳ್ಳದ್ದಾಗಿದ್ದರೂ. ಗೋಶಬ್ದವು ಪ್ರಸಿದ್ಧಿ ಪ್ರಾಚುರ್ಯದಿಂದ ಹಸುವನ್ನು ತಿಳಿಸುವಂತೆ. 'ಪ್ರಕೃತಿ' ಶಬ್ದವು ಮೂಲ ಪ್ರಕೃತಿಯನ್ನು ತಿಳಿಸುವುದಾಗಿ ಸ್ವೀಕರಿಸಿ ಅದರ ಕಾರ್ಯಭೂತವಾದ "ಶರೀರ"ವನ್ನು ತಿಳಿಸುತ್ತದೆ. ಪ್ರಕೃತಿ – ಶರೀರವೆಂದರ್ಥ. ಕಾರಣ ಶಬ್ದದಿಂದ ಕಾರ್ಯವನ್ನು ಔಪಚಾರಿಕವಾಗಿ ಹೇಳುವುದೂ ಯುಕ್ತವಾದದ್ದು. ಪ್ರತ್ಯಕ್ತ್ವವೆಂದರೆ ಸ್ವಸ್ಮೈಭಾಸಮಾನತ್ವವೆಂದರ್ಥ. ಅಂದರೆ ತನಗೆ ತಾನೇ ತೋಚುವುದು. ಜೀವಾತ್ಮತತ್ವವು ಪ್ರತಿಕ್ಷಣವೂ "ಅಹಂ", "ಅಹಂ" ಎಂದು ತನಗೆ ತಾನೇ ತೋಚುತ್ತದೆ. ತನಗೆ ತಾನೇ ತೋಚುವ ಪ್ರತ್ಯಕ್ತ್ವ ವಿಶಿಷ್ಟ ತತ್ವವು ಪ್ರತ್ಯಗ್ವಸ್ತು – ಜೀವಾತ್ಮಾ. ಇದು **"ಪ್ರಕೃತಿತಃ ವಿಲಕ್ಷಣಂ"** ದೇಹಕ್ಕಿಂತ ಬೇರೆಯಾದದ್ದು. ಕಾರಣವೇನೆಂದರೆ ಪ್ರತ್ಯಕ್ತ್ವ ಗುಣವುಳ್ಳದ್ದಾಗಿದೆ. ದೇಹವು ಅಚೇತನ ತತ್ವ. ತನಗೆ ತಾನೇ ತೋಚುವುದಿಲ್ಲ. ಪರಸ್ಮೈಭಾಸ ಮಾನವು – ಇತರರಿಗೇ ತೋಚತಕ್ಕದ್ದು.

ಅಹಮರ್ಥೋ ನ ಚೇದಾತ್ಮಾ ಪ್ರತ್ಯಕ್ತ್ವಂ ನಾತ್ಮನೋ ಭವೇತ್ ।

ಅಹಂಬುದ್ಧ್ಯಾ ಪರಾಗರ್ಥಾತ್ ಪ್ರತ್ಯಗರ್ಥೋಹಿ ಭಿದ್ಯತೇ ॥

ಎಂದು ಯಾಮುನಾಚಾರ್ಯ ಶ್ರೀ ಸೂಕ್ತಿಯ ಪ್ರಕಾರ ಇತರರಿಗೇನೆ ಪ್ರಕಾಶಿಸುವ ಸ್ವಭಾವವುಳ್ಳ ದೇಹಕ್ಕಿಂತ, ತನಗೆ ತಾನೇ ಪ್ರಕಾಶಿಸುವ ಜೀವಾತ್ಮತತ್ವವು ಬೇರೆಯಾದದ್ದು ಚೇತನತ್ವ, ಸ್ವಯಂ ಪ್ರಕಾಶತ್ವ, ವಿಕಾರ ರಹಿತತ್ವ, ಜ್ಞಾನಸ್ವರೂಪತ್ವ, ಭೋಗಾನುಭವಿತೃತ್ವಾದಿ ಗುಣಗಳನ್ನುಳ್ಳ ಜೀವನು ಅಚೇತನವಾದ ದೇಹಕ್ಕಿಂತ ಬೇರೆಯೆಂಬುದು ಸ್ಪಷ್ಟವಾಗುತ್ತದೆಯೆಂಬುದು ತಾತ್ಪರ್ಯ.

ಬೃಹದಾರಣ್ಯಕದಲ್ಲಿ (6–3–7)'ಕತಮ ಆತ್ಮಾ' ಎಂಬ ಜನಕರ ಪ್ರಶ್ನೆಗೆ ಯಾಜ್ಞವಲ್ಕ್ಯರು ಉತ್ತರಿಸುತ್ತಾ "ಯೋऽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತ ಜ್ಯೋತಿಃ ಪುರುಷಃ ಸ ಸಮಾನಸ್ಸನ್ನುಭೌ ಲೋಕೌ,

ಅನುಸಂಚರತಿ ಸವಾ ಅಯಂಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ, ಪಾಪ್ಮಭಿಃ ಸಂಸೃಜ್ಯತೇ ಸಉತ್ಕ್ರಾಮನ್ಮ್ರಿಯಮಾಣಃ ಪಾಪ್ಮನೋ ವಿಜಹಾತಿ" ಎಂದು ಜ್ಞಾನಸ್ವರೂಪನೂ ಜ್ಞಾನಗುಣಕನೂ ಆದ ಜೀವಾತ್ಮಾ ಹೃದಯದಲ್ಲಿ ವಾಸವಾಗಿರುತ್ತಾನೆ. ಇವನು ಪುಣ್ಯಪಾಪರೂಪ ಕರ್ಮಗಳ ದೆಸೆಯಿಂದ ಶರೀರ ಸಂಬಂಧವನ್ನು ಪಡೆದು ಹುಟ್ಟುತ್ತಾನೆ. ಶರೀರವನ್ನು ಕರ್ಮಾನು ಗುಣಫಲಾನುಭವಾನಂತರ ಬಿಟ್ಟುಹೋಗುತ್ತಾನೆ. 'ಅವಿನಾಶೀವಾ ಅರೇ ಅಯಮಾತ್ಮಾ', ಅನುಚ್ಛಿತ್ತಿಧರ್ಮಾ – ಈ ಆತ್ಮಾನಾಶವಿಲ್ಲದ್ದು. ಇದರ ಧರ್ಮಕ್ಕೆ ಛೇದವಿಲ್ಲ. ಇತ್ಯಾದ್ಯನೇಕ ಪ್ರಮಾಣಗಳು ದೇಹಾತ್ಮ ವಿವೇಕವನ್ನು ತಿಳಿಸುತ್ತವೆ.

> ಆತ್ಮಾ ನಿತ್ಯೋಽವ್ಯಯ ಶ್ಶುದ್ಧಃ ಏಕಃ ಕ್ಷೇತ್ರಜ್ಞ ಆಶ್ರಯಃ ।
> ಅವಿಕ್ರಿಯ ಸ್ಸ್ವದೃಗ್ಘೇತು ವ್ಯಾಪಕೋಽ ಸಂಗ್ಯನಾವೃತಃ ॥ (ಭಾಗ. 7 ಸ್ಕಂಧ)

| ಆತ್ಮಾ | ದೇಹ |
|---|---|
| 1 ಆತ್ಮಾ ನಿತ್ಯನು-ಉತ್ಪತ್ತಿನಾಶರಹಿತನು. | 1. ದೇಹವು ಅನಿತ್ಯ–ಉತ್ಪತ್ತಿನಾಶವುಳ್ಳದ್ದು. |
| 2. " ಅವ್ಯಯಃ–ಕ್ಷಯ, ನಾಶಗಳಿಲ್ಲದವನು. | 2. " ಕ್ಷಯನಾಶಗಳನ್ನುಳ್ಳದ್ದು. |
| 3. " ಶುದ್ಧಃ–ಸತ್ವಾದಿಗುಣದೋಷರಹಿತನು | 3. " ಸತ್ವಾರಜಸ್ತಮೋ ಗುಣದೋಷವುಳ್ಳದ್ದು |
| 4. " ಏಕಃ – ಜ್ಞಾನೈಕಾಕಾರನು. | 4. " ಅನೇಕಾಕಾರವುಳ್ಳದ್ದು. |
| 5. " ಕ್ಷೇತ್ರಜ್ಞಃ–ಜ್ಞಾನಾಶ್ರಯನು. | 5. " ಜ್ಞಾನರಹಿತವು |
| 6. " ಆಶ್ರಯಃ ದೇಹೇಂದ್ರಿಯಾಧಾರನು. | 6. " ಇಂದ್ರಿಯಗಳಿಗೆ ಆಧೇಯಭೂತವು. |
| 7. " ಅವಿಕ್ರಿಯಃ–ಪರಿಣಾಮರಹಿತನು. | 7. " ವೃದ್ಧ್ಯಾದಿ ವಿಕಾರಗಳನ್ನುಳ್ಳದ್ದು. |
| 8 " ಸ್ವದೃಕ್–ತನಗೆ ತಾನೇ ತೋರುವವನು. | 8. " ಇತರರಿಗೇ ತೋರತಕ್ಕದ್ದು. |
| 9. " ಹೇತುಃ–ಶರೀರವು ಕಾರ್ಯವನ್ನು ಮಾಡುವುದಕ್ಕೆ ಕಾರಣಭೂತನು. | 9. " ಕರ್ತೃತ್ವ ಸಾಧನ. |
| 10. " ವ್ಯಾಪಕಃ–ಸರ್ವಶರೀರಗಳಲ್ಲಿಯೂ ಅಂತಃ ವ್ಯಾಪರಿಸಿರುವವನು. | 10. " ವ್ಯಾಪ್ಯವು. |
| 11. " ಅಸಂಗೀ–ಬಂಧುರಹಿತನು. | 11. " ಪುತ್ರಾದಿ ಬಂಧು ಯುಕ್ತವು. |
| 12. " ಅನಾವೃತಃ–ಅನುಕೂಲನಾಗಿ ಸ್ವಯಂ ಪ್ರಕಾಶನು | 12. " ಜಡನು, ಪರಾಧೀನ ಪ್ರಕಾಶನು. |

ಹೀಗೆ ದೇಹವೇ ಆತ್ಮಾವೆಂಬ ಜ್ಞಾನವು ಅವವುಗಳಿಗೆ ಇರುವ ಲಕ್ಷಣಗಳಿಂದ ನಿರಾಕೃತವು.

ಅನಂತರ ಇಂದ್ರಿಯಾತ್ಮವಾದವು ನಿರಾಕರಿಸಲ್ಪಡುತ್ತದೆ ಪ್ರತ್ಯಗ್ವಸ್ತು – ಆತ್ಮಾ ಪ್ರಕೃತಿತಃ – ಪ್ರಕೃತಿ ಪರಿಣಾಮಗಳಾದ ಇಂದ್ರಿಯಗಳಿಂದ ವಿಲಕ್ಷಣನು. ಹಿಂದೆ ಹೇಳಿದಂತೆ ದೇಹವೇ ಆತ್ಮಾವೆಂಬುದು ಇಲ್ಲವಾದರೂ, ನಾನು ನೋಡುತ್ತೇನೆ, ನನಗೆ ಕೇಳುತ್ತದೆ ಎಂಬಂತೆ, ಕಣ್ಣುನೋಡುತ್ತದೆ, ಕಿವಿ ಕೇಳುತ್ತದೆ, ಪಾದವು ನಡೆಯುತ್ತದೆ ಇತ್ಯಾದಿಯಾಗಿ ಇಂದ್ರಿಯಗಳೇ ಆತ್ಮಾವೆಂದು ಕಲ್ಪಿಸುವುದು ಯುಕ್ತವೆಂದು ತೋರುತ್ತದೆ ಯೆಂದರೆ ಈ ಭ್ರಮವೂ ಜೀವಾತ್ಮಾ - ಪ್ರತ್ಯಗ್ವಸ್ತು, ಪ್ರಕೃತಿತಃ – ಇಂದ್ರಿಯಗಳಿಂದ ವಿಲಕ್ಷಣಂ –ಬೇರೆ ಎಂದು ಹೇಳಿ ನಿರಾಕರಿಸಲ್ಪಡುತ್ತದೆ. ಹೇಗೆಂದರೆ ಒಂದು ಶರೀರದಲ್ಲಿ ಕಣ್ಣು, ಮೂಗು, ನಾಲಿಗೆ, ಕಿವಿ, ತ್ವಕ್, ಪಾಯು, ಉಪಸ್ಥ, ಪಾದ, ಪಾಣಿ, ವಾಕ್ ಎಂಬ ಐದು ಜ್ಞಾನೇಂದ್ರಿಯಗಳೂ ಐದು ಕರ್ಮೇಂದ್ರಿಯಗಳೂ ಇವೆ. ಇವು ಒಂದೊಂದೂ ಆತ್ಮಾ ಎಂದು ಹೇಳುವುದಾದರೆ ಶರೀರಕ್ಕೆ ಅನೇಕಾತ್ಮತ್ವವು ಏರ್ಪಟುವ

ಬಹು ನಾಯಕತ್ವ ದೋಷವು ಏರ್ಪಡುತ್ತದೆ. ಇವುಗಳ ಸಮುದಾಯವು ಆತ್ಮಾವೆಂದರೆ, ಕಣ್ಣು ನೋಡುತ್ತದೆ, ಕಿವಿ ಕೇಳುತ್ತದೆ ಇತ್ಯಾದಿ ಬೇರೆ ಬೇರೆ ವ್ಯವಹಾರಗಳು ಸರಿಹೋಗುವುದಿಲ್ಲ. ಮೇಲೂ ಸಮುದಾಯವು ಆತ್ಮಾವಾದರೆ ಕಣ್ಣು ಶಬ್ದಗ್ರಹಣ ಮಾಡಬೇಕು, ಕಿವಿಯೂ ನೋಡಬೇಕು, ಇತ್ಯಾದಿ ಒಂದು ಇಂದ್ರಿಯದ ಕಾರ್ಯವು ಮತ್ತೊಂದು ಇಂದ್ರಿಯಕ್ಕೆ ಪ್ರಸಕ್ತವಾಗಬೇಕಾಗುತ್ತದೆ. ಇದು ಅನುಭವಸಿದ್ಧವಲ್ಲ ಆದ್ದರಿಂದ ಇಂದ್ರಿಯ ಸಮುದಾಯವೂ ಆತ್ಮಾವಾಗಲಾರದು ಆತ್ಮಾ ಪ್ರಕೃತಿ ಕಾರ್ಯಭೂತಗಳಾದ ಇಂದ್ರಿಯಗಳೂ ಅಲ್ಲ.

ಹೀಗೆಯೇ ಮನಸ್ಸೆಂಬ ಇಂದ್ರಿಯವೂ 'ಅಹಂಮನಸಾಸ್ಮರಾಮಿ' ಎಂದು ಸ್ಮರಣಕ್ಕೆ ಸಾಧನವಾಗಿ ಸಿದ್ಧಿಸವುದರಿಂದಲೂ, 'ಅಹಂಮನಃ' ಎಂಬ ಅನುಭವವು ಏರ್ಪಡದೆ ಇರುವುದರಿಂದಲೂ ಪ್ರಕೃತಿ ಶಬ್ದ ವಾಚ್ಯವಾದ ಮನಸ್ಸಿಗಿಂತಲೂ ಪ್ರತ್ಯಗ್ವಸ್ತುವು ವಿಲಕ್ಷಣವಾದದ್ದು. ಬೇರೆಯೆಂದರ್ಥ.

ಹೀಗೆಯೇ ವಾಯುವಿನ ವಿಶೇಷ ಪರಿಣಾಮವಾದ ಪ್ರಾಣವಾಯುಗಳೂ,ಸಾವಯತ್ವ ಸಂಘಾತರೂಪತ್ವಗಳಿಂದ ಅಹಮ್ ಎಂದು ನಿರವಯತ್ವ, ಏಕರೂಪತ್ವ, ಪ್ರತ್ಯಕ್ತ್ವಾದಿಗಳಿಂದ ಕೂಡಿದ ಆತ್ಮಾವಿಗೆ ವಿರುದ್ಧವಾದ್ದರಿಂದ ಪ್ರಾಣವು ಆತ್ಮಾವಲ್ಲವೆಂಬುದೂ "ಪ್ರತ್ಯಗ್ವಸ್ತು ವಿಲಕ್ಷಣಂ ಪ್ರಕೃತಿತಃ" ಎಂದು ಹೇಳಲ್ಪಡುತ್ತದೆ.

ಇಂದ್ರಿಯಾಧೀನವಾದ ಪ್ರತ್ಯಕ್ಷವು ಧರ್ಮಭೂತ ಜ್ಞಾನದ ಪ್ರಕರಣದಿಂದ ಉಂಟಾಗುವುದರಿಂದ, ಸಾಂಖ್ಯ, ಸೌಗತ, ಅದ್ವೈತಿಗಳು ಜ್ಞಾನವನ್ನೇ ಆತ್ಮವನ್ನಾಗಿ ಅಂಗೀಕರಿಸಿರುವಂತೆ, ಜ್ಞಾನವೇ ಆತ್ಮಾವಾಗಲಿ ಎಂದರೆ ಹಾಗಿಲ್ಲವೆಂದು ತಿಳಿಸುತ್ತಾರೆ. 'ಘಟಮಹಂಜಾನಾಮಿ'–ಘಟವನ್ನು ನಾನು ತಿಳಿಯುತ್ತೇನೆ ಎಂಬ ವ್ಯವಹಾರದಲ್ಲಿ ಅಹಂ ಎಂಬ ಪ್ರತ್ಯಗ್ವಸ್ತುವು ಜ್ಞಾನಕ್ಕೆ ಆಶ್ರಯವಾಗಿ ಭಾಸಮಾನವಾಗುವುದರಿಂದ ಪ್ರಕೃತಿ ಶಬ್ದವಾಚ್ಯವಾದ ಆತ್ಮ ಸ್ವಭಾವ ಭೂತವಾದ ಜ್ಞಾನಕ್ಕಿಂತ ಪ್ರತ್ಯಗ್ವಸ್ತುವು ಬೇರೆಯಾಗಿ ಅದರೊಡನೆ ಕೂಡಿರುತ್ತದೆಯಾದ್ದರಿಂದ ಧರ್ಮಭೂತ ಜ್ಞಾನವೇ ಆತ್ಮಾ ಎಂಬ ವಾದವೂ ಸರಿಯಲ್ಲ. ಜ್ಞಾನವು ನನಗೆ ಉಂಟಾಯಿತು, ಜ್ಞಾನವು ಈಗ ನಷ್ಟವಾಯಿತು ಎಂದು ಜ್ಞಾನಕ್ಕೆ ಉತ್ಪತ್ತಿ ವಿನಾಶಗಳನ್ನು ಹೇಳುವುದರಿಂದ ನಿತ್ಯವಾದ ಆತ್ಮತತ್ವವು ಜ್ಞಾನವಾಗಲಾರದು. ಆದ್ದರಿಂದ,

ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂಲೋಕ ಮಿಮಂ ರವಿಃ ।
ಕ್ಷೇತ್ರಂ ಕ್ಷೇತ್ರೀ ತಥಾಕೃತ್ಸ್ನಂ ಪ್ರಕಾಶಯತಿ ಭಾರತ ॥ ಎಂದು ಗೀತೆಯಲ್ಲಿ ಹೇಳಿರುವಂತೆ ಸೂರ್ಯನು ತನ್ನ ಪ್ರಭೆಯಿಂದ ಈ ಲೋಕವನ್ನೆಲ್ಲಾ ಪ್ರಕಾಶ ಪಡಿಸುವಂತೆ, ಈ ಶರೀರವನ್ನು, ಅದರೊಳಗೆ ಇರುವ ಜೀವನು (ಕ್ಷೇತ್ರೀ) ಪ್ರಕಾಶ ಪಡಿಸುತ್ತಾನೆ. ಜೀವನ ಧರ್ಮಭೂತ ಜ್ಞಾನವು ಶರೀರದಲ್ಲೆಲ್ಲಾ ಪ್ರಸರಿಸಿ ಇಂದ್ರಿಯಾಧೀನ ಭೋಗಗಳನ್ನು ಅನುಭವಿಸುತ್ತಾನೆಂದು ತಾತ್ಪರ್ಯ

ಹೀಗೆ ದೇಹ, ಇಂದ್ರಿಯ, ಮನಸ್ಸು, ಪ್ರಾಣವಾಯು, ಧೀ–ಧರ್ಮ ಭೂತಜ್ಞಾನಇವುಗಳಿಂದ ಜೀವನು ಬೇರೆ ಯೆಂಬುದು "ಪ್ರತ್ಯಗ್ವಸ್ತು ವಿಲಕ್ಷಣಂ ಪ್ರಕೃತಿತಃ" ಎಂದು ತಿಳಿಸಲ್ಪಟ್ಟಿತು. ಇದರಿಂದಾಗಿ ದೇಹೇಂದ್ರಿಯಾದಿಗಳಿಗಿಂತಲೂ ಆತ್ಮಾ ಬೇರೆ ಎಂಬುದು ಪ್ರಾಮಾಣಿಕವಾದ್ದರಿಂದ "ಸರ್ವಖಲ್ವಿದಂಬ್ರಹ್ಮ" ಎಂಬ ಶ್ರುತಿಯನ್ನು ಆಧಾರವಾಗಿಟ್ಟುಕೊಂಡು ಜಗದಾತ್ಮೈಕ್ಯವಾದಿಗಳ ಮತವೂ ಅನುಪಪನ್ನವು ಎಂದು ಅರ್ಥಾತ್ ಹೇಳಲ್ಪಟ್ಟಿತು. ಅಲ್ಲಿ 'ತಜ್ಜಲಾನ್' ಎಂದು ಜಗತ್ತು ಅವನಿಂದ ಉಂಟಾಗಿ, ಅವನಲ್ಲಿ ಲಯವಾಗಿ ಅವನಿಂದ ರಕ್ಷಿಸಲ್ಪಡುತ್ತದೆ. (ತಜ್ಜತ್ವ, ತಲ್ಲತ್ವ, ತದನತ್ವ) ಎಂದು ಹೇಳಿರುವುದರಿಂದಲೂ, ನಿಷ್ಕಲಮ್, ನಿಷ್ಕ್ರಿಯಮ್, ಅವಿಕಾರ್ಯೋಯ ಮುಚ್ಯತೇ ಎಂದು ಆತ್ಮತತ್ವಕ್ಕೆ ಅವಿಕಾರಿತ್ವವು ಹೇಳಿರುವುದರಿಂದಲೂ ಜಗದಾತ್ಮತ್ವವಾದವು ಸರಿಯಲ್ಲ. "ಸತ್ಯಂ ಜ್ಞಾನಮನಂತಂಬ್ರಹ್ಮ" ಎಂಬ ಶ್ರುತಿಯಿಂದ ಆತ್ಮಾಜ್ಞಾನರೂಪನೂ'ಜಗತ್ತು ಜಡರೂಪವಾಗಿರುವುದೂ ಪ್ರತ್ಯಕ್ಷಸಿದ್ಧವಾದ್ದರಿಂದ ಜಗದಾತ್ಮವಾದಿಗಳಿಗೆ ಜಗತ್ತುಜ್ಞಾನರೂಪವಾದದ್ದು ಆತ್ಮಾ–ಬ್ರಹ್ಮವು ಜಡರೂಪವು ಎಂದು ಅಂಗೀಕರಿಸ

ಬೇಕಾದ ಪ್ರಸಂಗವು ಬರುತ್ತದೆ. ರಜ್ಜುವನ್ನು ಸರ್ಪವೆಂದು ಭ್ರಮಿಸುವಂತೆ ಬ್ರಹ್ಮದಲ್ಲಿ ಜಗದ್ಭ್ರಾಂತಿಕಲ್ಪನ ಪಕ್ಷವು ಒಂದೇ ಅಧಿಷ್ಠಾನದಲ್ಲಿ ಒಂದೇ ಕಾಲದಲ್ಲಿ ಅನಂತ ಭ್ರಮಗಳು ಏರ್ಪಡುವುದು ಅಸಂಭಾವಿತವಾದ್ದರಿಂದ ಜ್ಞಾನ ಸ್ವರೂಪವಾದ ಬ್ರಹ್ಮದಲ್ಲಿ ತದ್ವಿಜಾತೀಯವಾದ ಜಡರೂಪ ಜಗದ್ಭ್ರಮತ್ವವು ಅಸಂಭಾವಿತ.

ಜೀವನೇ ಬ್ರಹ್ಮವೆಂದೂ, ಇವರುಗಳಿಗೆ ಪರಸ್ಪರ ಭೇಧವಿಲ್ಲವೆಂದೂ, ಭ್ರಮಿಸಿರುವ ಅದ್ವೈತಿಗಳವಾದವನ್ನು ಅಂಗೀಕರಿಸಿ ಜಗದ್ಬ್ರಹ್ಮ ಭೇದವಿಲ್ಲವೆಂಬವಾದವು ನಿರಾಕರಿಸಲ್ಪಟ್ಟಿತು. ಈಗ ಜೀವನೂ ಬ್ರಹ್ಮವೂ ಬೇರೆ ಎಂಬುದು ಈ ಶ್ಲೋಕದಿಂದಲೇ ನಿರೂಪಿಸಲ್ಪಡುತ್ತದೆ. ಪ್ರತ್ಯಗ್ವಸ್ತು ಜೀವನು, ಪ್ರಕೃತಿತಃ-ಪ್ರಕೃಷ್ಟಾಃ ಕೃತಯಃ ಯಸ್ಯ ಎಂಬ ವಿಗ್ರಹದಿಂದ ಜಗತ್ಸೃಷ್ಟಿ ಸ್ಥಿತಿ ಸಂಹಾರ ಮೋಕ್ಷ ಪ್ರದತ್ವಾದಿ ಉತ್ಕೃಷ್ಟವಾದ ವ್ಯಾಪಾರ ಗಳಿಂದ ಕೂಡಿದ ಅಂದರೆ ಜಗತ್ಕಾರಣ ಭೂತವಾದ ಬ್ರಹ್ಮಕ್ಕಿಂತ, ವಿಲಕ್ಷಣಂ-ಬೇರೆ ಎಂಬುದು ಹೇಳಲ್ಪಡುತ್ತದೆ. ಇದಕ್ಕೆ ಪ್ರಮಾಣವಾಗಿ "ಜ್ಞಾಜ್ಞೌದ್ವಾವಜಾವೀಶನೀಶೌ, ಒಬ್ಬನು ಜ್ಞಾನಿ, ಮತ್ತೊಬ್ಬನು ಅಜ್ಞಾನೀ. ಇವರಿಬ್ಬ ರಲ್ಲಿ ಮೊದಲನೆಯವನು ಈಶನು, ಮತ್ತೊಬ್ಬನು ಅನೀಶನು, ಎಂದು ಹೇಳಿರುವುದರಿಂದ ಪರಸ್ಪರ ವ್ಯತ್ಯಾಸವು ತಿಳಿಸಲ್ಪಡುತ್ತದೆ. ಸಮಾನೇವೃಕ್ಷೇ ಪುರುಷೋನಿಮಗ್ನಃ........ ಮುಹ್ಯಮಾನಃ "ಪೃಥಗಾತ್ಮಾನಂ ಪ್ರೇರಿತಾರಂಚ ಮತ್ವಾ" ಜೀವಾತ್ಮನೂ, ಪ್ರೇರಿತಾವಾದ ಪರಮಾತ್ಮನೂ ಬೇರೆಯೆಂದು ಉಪಾಸನೆ ಮಾಡಿ, ಇತ್ಯಾದಿ ವಾಕ್ಯಗಳಿಂದಲೂ "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ, ಭ್ರಾಮಯನ್ ಸರ್ವಭೂತಾನಿ-ಸರ್ವಭೂತಗಳಿಗೂ ಹೃತ್ಪ್ರ ದೇಶದಲ್ಲಿ ಈಶ್ವರನು ವಾಸಮಾಡಿಕೊಂಡು ಯಂತ್ರದಲ್ಲಿ ಕುಳಿತಿರುವ ವಸ್ತುಗಳಂತೆ, ತನ್ನ ಸಂಕಲ್ಪದಿಂದ ಸುತ್ತಿ ಸುತ್ತಾನೆ, ಇತ್ಯಾದಿ ವಾಕ್ಯಗಳಿಂದಲೂ ಜೀವ ಪರಮಾತ್ಮರ ಭೇದವು ಸಿದ್ಧ.

ಅನಂತರ ಜೀವಾತ್ಮಾ ದೇಹಕ್ಕಿಂತಲೂ, ಈಶ್ವರನಿಗಿಂತಲೂ ಬೇರೆಯೆಂಬುದು ಪ್ರಾಮಾಣಿಕವಾದರೂ ಆತ್ಮ ತತ್ವವು ಒಂದೇ ಅನೇಕವಿಲ್ಲವೆಂಬ ವಾದವು ಲಾಘವವಾದದ್ದು, ಆದ್ದರಿಂದ ಅದನ್ನು ಅಂಗೀಕರಿಸಬಹುದೇ ಎಂದರೆ, ಕೂಡದು ಎಂದು ತಿಳಿಸುತ್ತಾರೆ. ಪ್ರತ್ಯಗ್ವಸ್ತು ವಿಲಕ್ಷಣಂ ಜೀವಾತ್ಮ ತತ್ವವು ವಿವಿಧಗಳು – ವಿಲಕ್ಷಣಂ ಎಂಬಲ್ಲಿ "ವಿ" ಎಂಬ ಉಪಸರ್ಗಕ್ಕೆ ನಾನಾ ವಿಧಗಳು ಎಂದರ್ಥ. ನಾನಾ ವಿಧಗಳಾದ-ವಿಚಿತ್ರಗಳಾದ ಕರ್ಮಗಳಿಂದ ಅನೇಕಗಳೆಂಬುದು ಪ್ರತ್ಯಕ್ಷವಾಗಿ ತಿಳಿಯಲ್ಪಡುತ್ತದೆ. ಪ್ರಕೃತಿತಃ-ಪ್ರಕೃಷ್ಟಾಃ ಕೃತಯಃ-ಪುಣ್ಯಪಾಪ ಕರ್ಮಗಳು ಅವುಗಳಿಂದ ವಿಲಕ್ಷಣಂ-ಒಂದೇ ಅಲ್ಲ ಅನೇಕಗಳು"ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ ಯೋ ವಿದಧಾತಿಕಾಮಾನ್"-ನಿತ್ಯವಾಗಿ ಒಬ್ಬನಾದ ಪರಮ ಚೇತನನು (ಭಗವಂತನು) ನಿತ್ಯರಾದ, ಅನೇಕರಾದ ಜೀವರು ಗಳಿಗೆ ಅವರವರ ಇಷ್ಟಾರ್ಥಗಳನ್ನು ಕೊಡುತ್ತಾನೆ ಎಂಬ ಶ್ರುತಿ ವಾಕ್ಯದಿಂದ ಅನೇಕ ಜೀವಾತ್ಮರುಗಳಸದ್ಭಾವವು ವ್ಯಕ್ತ.

ಜೀವಾತ್ಮರುಗಳಿಗೆ ಸುಖ ದುಃಖ ಭೇದದಿಂದ ಅನೇಕ ಜೀವವಾದವು ಅಂಗೀಕರಿಸಲ್ಪಟ್ಟರೂ, ಶರೀರಗತವಾದ ಸ್ತ್ರೀತ್ವ ಪುಂಸ್ತ್ವ ಭೇದವಿದೆಯೇ ಎಂಬ ಸಂದೇಹವನ್ನು ಇದೇ ವಾಕ್ಯದಿಂದ ನಿರಸನೆ ಮಾಡುತ್ತಾರೆ. ಆದಾಗಿ ಪ್ರತ್ಯಗ್ವಸ್ತು ಜೀವನು ವಿಲಕ್ಷಣಂ ಪ್ರಕೃತಿತಃ – ಕಾರ್ಯಕಾರಣಗಳಿಗೆ ಅಭೇದೋಪಚಾರದಿಂದ, ಪ್ರಕೃತಿ ಶಬ್ದಕ್ಕೆ ಶರೀರವನ್ನಾಗಿ ಅರ್ಥಮಾಡಿ ಶರೀರಕ್ಕಿಂತ ಬೇರೆಯಾದವನು, ಎಂದು ಏರ್ಪಡುವುದರಿಂದ ಸ್ತ್ರೀತ್ವ ಪುಂಸ್ತ್ವಭೇದ ಗಳು ಶರೀರಕ್ಕೇ ವಿನಹ, ಆತ್ಮಾವಿಗೆ ಇಲ್ಲ ಎಂಬ ಅರ್ಥವು ಏರ್ಪಡುತ್ತದೆ. ಆದ್ದರಿಂದ ಆತ್ಮರುಗಳು ಸ್ವರೂಪತಃ ಒಂದೇ ಆಕಾರವುಳ್ಳವರು, ಅಂದರೆ ಜ್ಞಾನೈಕಾಕಾರರು, ಸ್ತ್ರೀ, ಪುಮಾನ್ ಎಂಬ ಭೇದವು ಶರೀರ ಸಂಬಂಧದಿಂದ ಉಂಟಾಗತಕ್ಕದ್ದು.

ಮಹಾಭಾರತದಲ್ಲಿ ಅನುಶಾಸನಿಕ ಪರ್ವದಲ್ಲಿ ಪಾರ್ವತಿಯು ಪರಮಶಿವನನ್ನು ಕುರಿತು ಆತ್ಮರುಗಳು ಸ್ತ್ರೀ ಪ್ರಾಣರಾಗಿಯೂ, ಪುರುಷಪ್ರಾಣರಾಗಿಯೂ ಬೇರೆ ಬೇರೆ ಸಂಗಡಕ್ಕೆ ಸೇರಿದವರೇ ಎಂದು ಕೇಳಲು ಪರಮಶಿವನು

ಸ್ತ್ರೀತ್ವಂ ಪುಂಸ್ತ್ವಮಿತಿ ಪ್ರಾಣೇಷ್ವಿತಿ ನೈವಾಸ್ತಿಶೋಭನೇ !
ನಿರ್ವಿಕಾರಸ್ಸದೈವಾತ್ಮಾ ಸ್ತ್ರೀತ್ವಂ ಪುಂಸ್ತ್ವಂಚ ನಾತ್ಮನಿ ॥
ಕರ್ಮಪ್ರಕಾರೇಣ ತಥಾ ಜಾತ್ಯಾಂ ಜಾತ್ಯಾಂ ಪ್ರಜಾಯತೇ ॥

ಎಂದು ಆತ್ಮರುಗಳಲ್ಲಿ ಸ್ತ್ರೀ ಪ್ರಾಣರು ಪುರುಷಪ್ರಾಣರು ಎಂಬ ಭೇದವಿಲ್ಲ. ಆತಾತ್ಮ ವಿಕಾರವಿಲ್ಲದವನು. ಸ್ತ್ರೀತ್ವ ಪುಂಸ್ತ್ವಗಳು ಆತ್ಮ ಸ್ವರೂಪದಲ್ಲಿಲ್ಲ, ಕರ್ಮಸಂಬಂಧದಿಂದ ಆತ್ಮಾ ಸ್ತ್ರಿ ಶರೀರಕನಾಗಿಯೂ ಪುರುಷ ಶರೀರಕ ನಾಗಿಯೂ ಹುಟ್ಟುತ್ತಾನೆಂದು ಸಮಾಧಾನವನ್ನು ತಿಳಿಸಿರುತ್ತಾರೆ. ಆದ್ದರಿಂದ ಜೀವಾತ್ಮ ಸ್ವರೂಪದಲ್ಲಿ ಸ್ತ್ರೀತ್ವಾದಿ ಭೇದೋಕ್ತಿಯು ಬಹು ಪ್ರಮಾಣ ವಿರುದ್ಧವಾದದ್ದು.

ಅನಂತರ ಸ್ವರೂಪತಃ ಸಮಾನರಾದ ಜೀವರುಗಳಿಗೆ ಅನೇಕ ದೇಹ ಸಂಬಂಧವು ಹೇಗೆ ಉಂಟಾಯಿತು ಎಂಬ ಆ ಶಂಕೆಗೆ, ಪ್ರಕೃತಿತಃ, ಪ್ರಗತ ಆಚಾರ್ಯಃ ಪ್ರಾಚಾರ್ಯಃ ಎಂಬಂತೆ ಪ್ರಗತ ಕೃತಿತಃ ಎಂದು ವಿಗ್ರಹಮಾಡಿ ಪ್ರಾಚೀನ ಕರ್ಮವು ಕಾರಣವೆಂದು ತಿಳಿಸುತ್ತಾರೆ. ಶ್ರುತಿಯು "ರಮಣೀಯ ಚರಣಾಃ ರಮಣೀಯಾಂ, ಯೋನಿಮಾಪದ್ಯಂತೇ, ಬ್ರಾಹ್ಮಣಯೋನಿಂವಾ, ಕ್ಷತ್ರಿಯ ಯೋನಿಂವಾ ವೈಶ್ಯ ಯೋನಿಂವಾ, ಅಥ ಯ ಇಹ ಕಪೂಯ ಚರಣಾಃ ಕಪೂಯಾಂ ಯೋನಿಮಾಪದ್ಯಂತೇ ಶ್ವಯೋನಿಂವಾ ಸೂಕರಯೋನಿಂವಾ ಚಂಡಾಲ ಯೋನಿಂವಾ" ಎಂದು ಸತ್ಕರ್ಮಗಳನ್ನು ಮಾಡಿದವರು ಶ್ರೇಷ್ಟನಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶರೀರಗಳನ್ನು ಪಡೆಯುತ್ತಾರೆ. ಪಾಪ ಕರ್ಮಗಳನ್ನು ಮಾಡಿದವರು ಕುತ್ಸಿತವಾದ ನಾಯಿ, ಹಂದಿ. ಚಂಡಾಳ ಶರೀರಗಳನ್ನು ಪಡೆಯುತ್ತಾರೆ. ಎಂದು ಹೇಳಿರುವುದರಿಂದ ಶರೀರ ಭೇದಗಳು ಆತ್ಮರುಗಳಿಗೆ ಕರ್ಮಸಂಬಂಧದಿಂದ ಉಂಟಾಗುತ್ತದೆಯೆಂದು ಏರ್ಪಡುತ್ತದೆ.

ಅನಂತರ ಜೀವಾತ್ಮರುಗಳು ಸ್ವಾಭೀಷ್ಟ ಸಂಪಾದನದಲ್ಲೂ, ಸ್ವಾನಿಷ್ಟ ನಿವಾರಣದಲ್ಲೂ ಸಮರ್ಥರಲ್ಲರೆಂದು ಪ್ರತ್ಯಗ್ವಸ್ತು ವಿರಕ್ಷಣಂ ಪ್ರಕೃತಿತಃ, ಎಂದು ಯೋಜಿಸುತ್ತಾರೆ. ರಲ ಯೋರಭೇದಃ ಎಂಬುದು ಶಾಸ್ತ್ರವಿತ್ ಪ್ರಕ್ರಿಯೆ. ಅದನ್ನು ಅಂಗೀಕರಿಸಿ ವಿಲಕ್ಷಣಂ ಎಂಬುದಕ್ಕೆ ವಿರಕ್ಷಣಂ ಎಂದು ರೇಫದಿಂದ ಕೂಡಿದ ಪಾಠವನ್ನನು ಸರಿಸಿ, ಜೀವಾತ್ಮಾ ಪ್ರಕೃತಿತಃ-ತನ್ನ ಸ್ವಾಭಾವದಿಂದ ಅಂದರೆ ಪ್ರಕೃಷ್ಟನಾಗ ತನ್ನ ಪ್ರಯತ್ನದಿಂದ ವಿರಕ್ಷಣನು ಹಸಿವು, ದಾಹ, ವ್ಯಾಧಿ, ಜನ್ಮ, ಜರೆ, ಮರಣ ಇವುಗಳಿಂದ ತನ್ನನ್ನು ಕಾಪಾಡಿಕೊಳ್ಳಲಾಗದವನು.

ಅಜ್ಞೋಜಂತುರನೀಶೋಯಂ ಆತ್ಮಾನಸ್ಸುಖದುಃಖಯೋಃ
ಸ್ವಯಂ ಮೃತ್ಪಿಂಡ ಭೂತಸ್ಯ ಪರತಂತ್ರಸ್ಯ ದೇಹಿನಃ ॥
ಸ್ವರಕ್ಷಣೇಽಪ್ಯಶಕ್ತಸ್ಯ ಕೋಹೇತುಃ ಪರರಕ್ಷಣೇ ॥

ಜೀವಾತ್ಮಾ ತನಗೆ ಸುಖವನ್ನು ಉಂಟುಮಾಡಿಕೊಳ್ಳಲೂ ದುಃಖವನ್ನು ಹೋಗಲಾಡಿಸಿಕೊಳ್ಳಲೂ ಅಸಮರ್ಥನು. ಅಜ್ಞನೂ ಸಹ. ಅದಕ್ಕೆ ದಾರಿ ತಿಳಿಯದವನು ಎಂದರ್ಥ. ಮಣ್ಣಿನ ಮುದ್ದೆಯ ಹಾಗೆ ಪರತಂತ್ರನಾದ ಜೀವನು ತನ್ನನ್ನು ತಾನೇ ರಕ್ಷಿಸಿಕೊಳ್ಳಲು ಅಸಮರ್ಥನು. ಹಾಗಿರುವಾಗ ಪರರಕ್ಷಣೆಯನ್ನು ಮಾಡಲು ಸಮರ್ಥನಾಗಲಾರನು

ಬ್ರಹ್ಮಾದಿಗಳಿಂದಲೂ ಜೀವಾತ್ಮಾ ರಕ್ಷಿಸಲ್ಪಡಲಾರನು ಎಂಬ ಅರ್ಥವೂ **ಪ್ರಕೃತಿತಃ ವಿರಕ್ಷಣಂ**-ಎಂದು ಏರ್ಪಡುತ್ತದೆ. ಪ್ರಕೃಷ್ಟವಾದ ಕೃತಿಗಳನ್ನುಳ್ಳ ಅಂದರೆ ಸೃಷ್ಟಿಕರ್ತಾವಾದ ಬ್ರಹ್ಮದೇವನಿಂದಲೂ. ಲಯ ಕರ್ತಾವಾದ ಪರಮ ಶಿವನಿಂದಲೂ ವಿಗತರಕ್ಷಣಂ - ರಕ್ಷಿಸಲ್ಪಡಲಾರನು ಎಂದು ಭಾವ.

"ಏತೌದ್ವೌವಿಬುಧಶ್ರೇಷ್ಠೌ ಪ್ರಸಾದ ಕ್ರೋಧಜೌಸುತೌ !
ತದಾದರ್ಶಿತ ಪಂಥಾನೌ ಸೃಷ್ಟಿ ಸಂಹಾರ ಕಾರಕೌ ॥

ಎಂದು ಭಗವಂತನು ಶಾಂತವಾಗಿರುವಾಗ ಬ್ರಹ್ಮನೂ, ಕೋಪದಿಂದಿರುವಾಗ ರುದ್ರನೂ ಹುಟ್ಟಿ, ಆ ಭಗವಂತನಿಂದ ತೋರಿಸಲ್ಪಟ್ಟ ಮಾರ್ಗದಿಂದ ಸೃಷ್ಟಿ, ಸಂಹಾರ ಕಾರ್ಯಗಳನ್ನು ಮಾಡುತ್ತಾರಾದ್ದರಿಂದ ಸ್ವಯಂ ಅಶಕ್ತರು, ಜೀವನನ್ನು ಸಂಸಾರದಿಂದ ಕಾಪಾಡಿ ಮೋಕ್ಷವನ್ನು ಕೊಡಲು ಅಸಮರ್ಥರು.

ಹೀಗಿರುವಾಗ ಜೀವನನ್ನು ರಕ್ಷಿಸುವವರು ಯಾರು ಎಂದರೆ "**ತ್ರಾತಾಪತಿಸ್ತತ್ಪರಃ**"ಎಂದು ತಿಳಿಸುತ್ತಾರೆ. **ತತ್ಪರಃ**–ಆ ಬ್ರಹ್ಮಾದಿಗಳಿಗೂ ಮೇಲಾದ, "ಪತಿಂ ವಿಶ್ವಸ್ಯ" ಎಂಬ ಶ್ರುತಿಯ ಪ್ರಕಾರ ವಿಶ್ವಪತಿಯಾದ ಭಗವಂತನು ತ್ರಾತಾ–ರಕ್ಷಕನು. "ನ ಹಿ ಪಾಲನ ಸಾಮರ್ಥ್ಯಂ ಋತೇ ಸರ್ವೇಶ್ವರಂ ಹರಿಂ" ಹರಿ – ಸರ್ವೇಶ್ವರನನ್ನು ಬಿಟ್ಟರೆ ಜಗತ್ಪಾಲನ ಸಾಮರ್ಥ್ಯವು ಬೇರೆ ಯಾರಿಗೂ ಇಲ್ಲ ಎಂದೂ,

ನ ಸಂಪದಾಂ ಸಮಾಹಾರೇ ವಿಪದಾಂ ವಿನಿವರ್ತನೇ ।
ಸಮರ್ಥೋ ವಿದ್ಯತೇ ಕಶ್ಚಿತ್ ತಂ ವಿನಾ ಪುರುಷೋತ್ತಮಮ್ ॥

ಸಂಪತ್ತುಗಳನ್ನು ಕೊಡುವುದಕ್ಕೂ, ಆಪತ್ತುಗಳನ್ನು ಹೋಗಲಾಡಿಸುವುದಕ್ಕೂ ಆ ಪುರುಷೋತ್ತಮನು ವಿನಹ ಬೇರೆ ಯಾರೂ ಸಮರ್ಥರಲ್ಲ, ಎಂದು ಹೇಳಿರುತ್ತಾರೆಯಲ್ಲವೇ. "ಪಾಠಕ್ರಮಾದರ್ಥಕ್ರಮೋ ಬಲೀಯಃ" ಎಂಬ ನ್ಯಾಯದಂತೆ "ತತ್ಪರಃ ಪತಿಃ ತ್ರಾತಾ" ಚೇತನಾಚೇತನಗಳಿಗಿಂತಲೂ ಮೇಲಾದ "ಪತಿಂವಿಶ್ವಸ್ಯ" ಎಂದು ಶ್ರುತಿ ಪ್ರಸಿದ್ಧನಾದ ಜಗತ್ಪತಿಯು ರಕ್ಷಕನು. **"ತ್ರಾತಾ ಅಪತಿಃ"** ಎಂದು ಪದಚ್ಛೇದ ಮಾಡಿದರೆ ಆ ಜಗತ್ಪತಿಯು ತನಗೆ ಮೇಲಾದವನು ಯಾರೂ ಇಲ್ಲದವನು ಎಂಬ ಅರ್ಥವು ಲಭಿಸುತ್ತದೆ. ಶ್ರುತಿಯು "ಆತ್ಮೇಶ್ವರಂ" ಎಂದು ಆ ವಿಶ್ವಪತಿಯು ತನಗೆ ತಾನೇ ಸ್ವಾಮಿಯು ಎಂದು ಹೇಳುತ್ತದೆಯಲ್ಲವೇ. **ತ್ರಾತಾ** ಎಂದು ಸಂಕೋಚಕವಾದ ಪದವಾವುದನ್ನೂ ಹೇಳದೆ ಇರುವುದರಿಂದ ಕರಣಕಳೇಬರ ಪ್ರದಾನಪೂರ್ವಕ, ಜ್ಞಾನೋತ್ಪತ್ತಿಗಾಗಿ ಸದಾಚಾರ್ಯ ಸಂಬಂಧವನ್ನುಂಟು ಮಾಡಿ, ಭಕ್ತಿ ಪ್ರಪತ್ತಿ ರೂಪಗಳಾದ ಮೋಕ್ಷೋಪಾಯಗಳೊಂದರಲ್ಲಿ ಪ್ರವರ್ತಿಸಿ ಮೋಕ್ಷಾಂತ ಐಶ್ವರ್ಯವನ್ನು ಕೊಟ್ಟು ಕಾಪಾಡುತ್ತಾನೆಂಬುದು ತಿಳಿಸಲ್ಪಡುತ್ತದೆ.

ತೇಷಾಮಹಂಸಮುದ್ಧರ್ತಾ ಮೃತ್ಯು ಸಂಸಾರ ಸಾಗರಾತ್ ।
ಭವಾಮಿ ನಚಿರಾತ್ ಪಾರ್ಥ ಮಯ್ಯಾವೇಶಿತ ಚೇತಸಾಮ್ ॥

ಎಂದು "ನನ್ನ ಉಪಾಸನೆ ಮಾಡುವವರನ್ನು ಮೃತ್ಯುರೂಪ ಸಂಸಾರ ಸಾಗರದಿಂದ ನಾನೇ ಉದ್ಧಾರ ಮಾಡುತ್ತೇನೆಂದು" ಗೀತೆಯಲ್ಲಿ ಭಗವಂತನು ಹೇಳಿರುತ್ತಾನೆ. ಹಾಗೆಯೇ

"ದೈವೀಹ್ಯೇಷಾಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥"

ಸತ್ವ ರಜಸ್ತಮೋಮಯವಾದ ಈ ಪ್ರಕೃತಿ ಸಂಬಂಧವನ್ನು ಜೀವನು ತಾನೇ ಬಿಡಿಸಿಕೊಳ್ಳಲಾರನು, ನನ್ನಲ್ಲೇ ಶರಣಾಗತಿ ಮಾಡಿದವನು ಈ ಪ್ರಕೃತಿ ಸಂಬಂಧವನ್ನು (ಮಾಯಾಂ) ಬಿಡುತ್ತಾನೆ. ಈ ಸಂಬಂಧದಿಂದ ವಿನಿರ್ಮುಕ್ತನಾಗುತ್ತಾನೆಂದರ್ಥ - ಎಂದು ಭಗವದ್ಗೀತೆಯಲ್ಲಿ ಹೇಳಿರುವುದು ಇಲ್ಲಿ ಅನುಸಂಧೇಯ.

ವಿಷ್ಣುವು ಸಂಸಾರಿ ಸಕಲ ಜೀವರನ್ನು ರಕ್ಷಿಸುತ್ತಾನೆಂಬುದನ್ನು ಹೇಗೆ ನಂಬುವುದು. ಅವನೇ ರಾಮಾವತಾರದಲ್ಲಿ ದುಃಖಾಕ್ರಾಂತನಾಗಿದ್ದನು, ಎಂದು

ರಾಜ್ಯಾದ್ಭ್ರಂಶೋ ವನೇವಾಸಃ ಸೀತಾನಷ್ಟಾ ಹತೋದ್ವಿಜಃ ।
ಈದೃಶೀಯಂ ಮಮಾಲಕ್ಷ್ಮೀಃ ನಿರ್ದಹೇದಪಿ ಪಾವಕಮ್ ॥,

"ರಾಜ್ಯದಿಂದ ಹೊರಬಂದು, ಕಾಡಿನಲ್ಲಿ ವಾಸವಾಗಿ, ಸೀತೆಯನ್ನು ಅಗಲಿ, ಜಟಾಯುವೆಂಬ ಸ್ನೇಹಿತನನ್ನೂ ಕಳೆದುಕೊಂಡೆನು. ನನ್ನ ಇಂಥಹ ದುರದೃಷ್ಟವು ಬೆಂಕಿಯನ್ನೂ ಸುಡಬಲ್ಲದು," ಎಂದು ತಾನೇ ಹೇಳಿಕೊಳ್ಳಲಿಲ್ಲವೇ?

ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ॥

(ಮನುಷ್ಯರು ಕಷ್ಟಪಡುವುದನ್ನು ನೋಡಿ ತಾನೂ ಬಹಳ ದುಖಾಕ್ರಾಂತನಾಗುತ್ತಾನೆ), ಎಂಬೀ ವಚನಗಳು ಆ ಭಗವಂತನೂ ದುಃಖವನ್ನು ಅನುಭವಿಸತಕ್ಕವನು ಎಂದು ಹೇಳುವಾಗ, ಇತರರ ದುಃಖಗಳನ್ನು ಹೋಗಲಾಡಿಸುವ ಸಾಮರ್ಥ್ಯವು ಅವನಿಗೆ ಉಂಟೇ ಎಂಬ ಶಂಕೆಯು ಬರಲು ಅದನ್ನು **"ಪ್ರತ್ಯಗ್ವಸ್ತು ಪ್ರಕೃತಿತಃ ತ್ರಾತಾ ತತ್ಪರಃ ಪತಿಃ"** ಎಂಬ ವಾಕ್ಯವು ನಿವಾರಣೆ ಮಾಡುತ್ತದೆ. ಇಲ್ಲಿ 'ಪ್ರತ್ಯಗ್ವಸ್ತು' ಎಂಬ ಪದವು ದ್ವಿತೀಯಾಂತ. ಜೀವಾತ್ಮನನ್ನು, ಪ್ರಕೃತಿಸಂಬಂಧದಿಂದ ಬಿಡಿಸಿ ಕಾಪಾಡುವ ಆ ವಿಶ್ವಪತಿಯು, ತತ್ಪರಃ – ಆ ಪ್ರಕೃತಿಗಿಂತ ಮೇಲಾದವನು. ಪ್ರಕೃತಿ ಸಂಬಂಧ ವಿನಿರ್ಮುಕ್ತನು ಎಂದರ್ಥ.

"ವಿಶ್ವಂ ಪುರಾಣಂ ತಮಸಃ ಪರಸ್ತಾತ್ ।

ತಮಸಃ ಪರಮೋಧಾತಾ ಶಂಖ ಚಕ್ರಗದಾಧರಃ ॥"

ಎಂಬ ಪ್ರಮಾಣಗಳಿಂದ ತಮಶ್ಶಬ್ದವಾಚ್ಯವಾದ ಪ್ರಕೃತಿಗಿಂತ ಮೇಲಾದವನು. ಪ್ರಾಕೃತ ಸುಖ ದುಃಖ ಸಂಬಂಧವಿಲ್ಲದವನು ಎಂದು ತಾತ್ಪರ್ಯ. "ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।",

ಎಂದು ಭಗವಂತನು ಅಧ್ಯಕ್ಷನಾಗಿದ್ದುಕೊಂಡು ಪ್ರಕೃತಿಯ ಸಂಬಂಧದಿಂದ, ಚರಾಚರಾತ್ಮಕವಾದ ಪ್ರಪಂಚವನ್ನು ಸೃಷ್ಟಿಸುತ್ತಾನೆಂದು ಹೇಳಿರುವುದರಿಂದ ಪ್ರಕೃತಿಯು ಅವನ ಅಧೀನವೆಂದು ತಿಳಿಸಲ್ಪಡುತ್ತದೆ. ಅವತಾರ ದಶೆಯಲ್ಲಿ ಭಗವಂತನು ಶೋಕದಿಂದ ಕೂಡಿದ್ದಾನೆಂದು ಹೇಳುವುದು ಶೋಕಾಭಿನಯ ಮಾತ್ರ. "ಮಾಯಾವಿಡಂಬನಮಿದಂ ವೇಹಿ ಯಥಾನಟಸ್ಯ". ನಾಟ್ಯಗಾರನು ರಂಗಸ್ಥಳದಲ್ಲಿ ನಟಿಸುವಂತೆ, ಅವತಾರ ದಶೆಯಲ್ಲಿ ಭಗವಂತನು ದುಃಖಿಸುವುದೇ ಮೊದಲಾದವು ಕೇವಲ ನಟನೆ, ನಿಜವಲ್ಲ. "ತೇನ ವಂಚಯತೇ ಲೋಕಾನ್ ಮಾಯಾ ಯೋಗೇನ ಕೇಶವಃ" ಎಂಬ ಪ್ರಮಾಣದಂತೆ, ಸಾಧಾರಣ ಜನರನ್ನು ವಂಚಿಸುತ್ತಾನೆ. ಅವರುಗಳು ಇವನನ್ನು ಸರ್ವೇಶ್ವರನೆಂದು ತಿಳಿಯದೇ ಇರುವಂತೆ ಮೋಸ ಹೋಗುತ್ತಾರೆಂದರ್ಥ. "ಯೇ ತಮೇವ ಪ್ರಪದ್ಯಂತೇ ನತೇ ಮುಹ್ಯಂತಿ ಮಾನವಾಃ" – ಆ ಭಗವಂತನನ್ನೇ ಯಾರು ಆಶ್ರಯಿಸುತ್ತಾರೋ ಅವರುಗಳು ಈ ಮೋಹಕ್ಕೆ ಒಳಗಾಗುವುದಿಲ್ಲ, ಇತ್ಯಾದಿ ವಚನಗಳಿಂದ ಭಗವಂತನು ಸಂಸಾರಿ ಚೇತನರನ್ನು ದುಃಖದಿಂದ ಬಿಡಿಸಲು ಶಕ್ತನು ಎಂಬುದರಲ್ಲಿ ಸಂದೇಹವಿಲ್ಲವೆಂದು ತಾತ್ಪರ್ಯ.

ಸಂಸಾರಿ ಚೇತನರನ್ನು ಭಗವಂತನು ರಕ್ಷಿಸುವುದರಿಂದ ಅವನಿಗೆ ಏನು ಪ್ರಯೋಜನ. ಅವನು ಅವಾಪ್ತ ಸಮಸ್ತಕಾಮನು. "ಪ್ರಯೋಜನ ಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ" – ಪ್ರಯೋಜನವನ್ನು ಉದ್ದೇಶಿಸದೆ ಮಂದಬುದ್ಧಿಯೂ ಯಾವ ಕಾರ್ಯದಲ್ಲಿಯೂ ಪ್ರವರ್ತಿಸುವುದಿಲ್ಲವಲ್ಲವೇ, ಎಂದರೆ, **ಪ್ರಕೃತಿತಃ ತ್ರಾತಾ** – ಸ್ವಭಾವತಃ ರಕ್ಷಕನು ಎಂದು ವ್ಯಾಖ್ಯಾನ ಮಾಡುವುದರಿಂದ ಈ ಶಂಕೆಯೂ ನಿವಾರಿಸಲ್ಪಡುತ್ತದೆ. ಸ್ವಭಾವ ಸಿದ್ಧವಾದ ವ್ಯಾಪಾರಗಳಲ್ಲಿ 'ಹೇಗೆ', "ಏತಕ್ಕೆ", ಎಂಬ ಪ್ರಶ್ನೆಯು ಉದಿಸುವುದಿಲ್ಲ. ಜೀವರಕ್ಷಣೆಯು ಅವನ ಸ್ವಭಾವಸಿದ್ಧ. ಹಾಗಾದರೂ ರಕ್ಷ್ಯವಸ್ತುಗಳಿಗೂ ಅವನಿಗೂ ಯಾವುದಾದರೂ ಸಂಬಂಧವು ಬೇಕಲ್ಲವೇ? ಲೋಕದಲ್ಲಿ ಪುತ್ರರಕ್ಷಣಾದಿಗಳಲ್ಲಿ ಪಿತೃತ್ವಾದಿ ಸಂಬಂಧಗಳು ಕಾಣಲ್ಪಡುತ್ತದೆಯಲ್ಲವೇ ಎಂದರೆ, **ತ್ರಾತಾ ಪತಿಃ** – ಎಂದು ಭಗವಂತನು ಪತಿ – ಸ್ವಾಮಿ ಪತಿ ಶಬ್ದವು ರೂಢಿ ಶಕ್ತಿಯಿಂದ ಸ್ವಾಮಿ ವಾಚಕವು. ಸ್ವಾಮಿಯು ತನ್ನ ಸ್ವತ್ತನ್ನು ರಕ್ಷಿಸಿಕೊಳ್ಳುವುದು ಸ್ವಭಾವ ಸಿದ್ಧವಾದದ್ದು.

ಸರ್ವಭೂತಗಳಿಗೂ ಸ್ವಾಮಿಯಾದ ವಿಷ್ಣುವಿಗೂ ಮೇಲಾದವನು ಮತ್ತೊಬ್ಬನು ಇದ್ದರೆ, ವಿಷ್ಣುವಿನ ಸ್ವಾಮಿತ್ವವು ಔಪಾಧಿಕವಾಗುತ್ತದೆಯಾದ್ದರಿಂದ ಅವನು ಚೇತನರನ್ನು ರಕ್ಷಿಸುವುದು ಔಪಾಧಿಕವಾಗಬಹುದು ಎಂಬ ಶಂಕೆಯನ್ನು ನಿವಾರಿಸಲು **ತ್ರಾತ್ರಾ ಅಪತಿಃ** ಎಂದು ಪದವಿಭಾಗಮಾಡಿ, **ಅಪತಿಃ** – ಆ ಭಗವಂತನಿಗೆ ಸ್ವಾಮಿಯೂ ಮೇಲಾದವನೂ ಯಾರೂ ಇಲ್ಲವೆನ್ನುತ್ತಾರೆ. ಆದ್ದರಿಂದ ಅವನೇ ನಿರುಪಾಧಿಕ ಸರ್ವಸ್ವಾಮೀ. **ತತ್ಪರಃ** – "ತತ್ಪರೇ ಪ್ರಸಿತಾಸಕ್ತೌ", ಇತ್ಯಮರ. ಪತಿತ್ವ ರೂಪ ಸಂಬಂಧವಿದ್ದರೂ, ಯೌವನದಿಂದ ಕೂಡಿದ ಹಸು, ಕುದುರೆ ಇವುಗಳು ಸಿಕ್ಕರೆ, ಮುದಿ ಹಸು ಮುದಿ ಕುದುರೆಗಳನ್ನು ಬಿಡುವಂತೆ ನಿರ್ದೋಷನಾದ ಭಗವಂತನು ನಿರ್ದೋಷನಾದ ನಿತ್ಯಸೂರಿಯು ಲಭಿಸಿರುವಾಗ, ಸದೋಷನಾದ ಸಂಸಾರಿ ಚೇತನನನ್ನು ಅನಾದರಿಸಬಹುದೇ ಎಂದರೆ "**ತತ್ಪರಃ ಪತಿಃ**" – ಆ ಸಂಸಾರಿ ಚೇತನನಲ್ಲಿ ಆಸಕ್ತನಾಗಿದ್ದಾನೆಂದರ್ಥ. "**ತತ್ಪರಃ ಪ್ರಕೃತಿತಃ ಪತಿಃ**" ಔಪಾಧಿಕಸ್ವಾಮಿಯಲ್ಲವಾದ್ದರಿಂದ, ಪ್ರಕೃತಿತಃ - ಸ್ವಭಾವದಿಂದ ತತ್ಪರಃ – ಸಂಸಾರಿ ಚೇತನನಲ್ಲಿಯೂ ಆಸಕ್ತಿಯಿಂದ ಕೂಡಿದ ಪತಿ - ಸ್ವಾಮಿ. ವಿಷ್ಣುವು ಸಂಸಾರಿಗಳನ್ನು ಬಿಡುವುದಿಲ್ಲ. "ಜಡ ಇವಸುತೇ ವತ್ಸಲಾ ಮಾದೃಶೇತ್ವಂ". ದಡ್ಡ ಮಗನಲ್ಲಿ ತಾಯಿಗೆ ವಾತ್ಸಲ್ಯವು ಹೆಚ್ಚು. ಆ ರೀತಿಯಲ್ಲಿ ಸಂಸಾರಿ ಚೇತನನಲ್ಲಿ ಭಗವಂತನಿಗೆ ವಿಶೇಷವಾದ ಆದರ.

"ದಾಸಭೂತಾಃ ಸ್ವತಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ" ಎಂದು ಎಲ್ಲಾ ಜೀವರೂ ಪರಮಾತ್ಮನಿಗೆ ದಾಸಭೂತರು.

> "ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿ ಸ್ಥಿತಮ್ ।
> ನಾನ್ಯಥಾ ಲಕ್ಷಣಂ ತೇಷಾಂ ಬಂಧೇ ಮೋಕ್ಷೇ ತಥೈವಚ ॥"

ಜೀವರುಗಳು ಭಗವಂತನ ಸ್ವತ್ತು. ಆ ಪರಬ್ರಹ್ಮನು ಸ್ವಾಮಿ. ಸಂಸಾರದಲ್ಲಿರುವಾಗಲೂ, ಸಂಸಾರದಿಂದ ಬಿಡುಗಡೆ ಏರ್ಪಟ್ಟಾಗಲೂ, ಈ ಸ್ವಾಮಿದಾಸ ಸಂಬಂಧವು ಹೋಗಲಾರದು. ಈ ಲಕ್ಷಣವನ್ನು ಅನ್ಯಥಾಕರಿಸ ಲಾಗುವುದಿಲ್ಲ. "ಉರವೇಲ್ ನಮುಕ್ಕಿಂಗೊಳ್ಳಿಕ್ಕಒಳಿಯಾದು" – ಈ ಸ್ವಾಮಿದಾಸ ಸಂಬಂಧವನ್ನು ಅನ್ಯಥಾಕರಿಸ ಲಾಗುವುದಿಲ್ಲ.

ಹಾಗಾದರೆ ಸ್ವಾಮಿಯು ತನಗೆ ಸೇರಿದ ವಸ್ತುವನ್ನು ತಾನೇ ರಕ್ಷಿಸಬೇಕಲ್ಲವೇ? ಸ್ವಾಭಾವಿಕ ರಕ್ಷಕತ್ವ, ಸಾಭಾವಿಕ ಸಂಬಂಧ, ಸ್ವಾಭಾವಿಕ ಸೌಹಾರ್ದವು ಇರುವಾಗ ತಾಪತ್ರಯದಿಂದ ಅಭಿಹತರಾದ ಎಲ್ಲಾ ಸಂಸಾರಿ ಚೇತನರನ್ನೂ ಸರ್ವಜ್ಞನಾಗಿ ಸದಾ ಸಾಕ್ಷಾತ್ಕರಿಸಿಕೊಂಡು ಇದ್ದೂ, ಏಕೆ ರಕ್ಷಿಸುತ್ತಿಲ್ಲಾ ಎಂಬ ಶಂಕೆಯನ್ನು ನಿವಾರಿಸಲು, "**ಪ್ರಕೃತಿತಃ ವಿಲಕ್ಷಣಂ ಪ್ರತ್ಯಗ್ವಸ್ತು ತತ್ಪರಃ ಪತಿಃ ತ್ರಾತಾ**" ಎಂದು ಅನ್ವಯಿಸಿ ತಿಳಿಸುತ್ತಾರೆ. ಅಂದರೆ ಪ್ರಕೃಷ್ಟವಾದ ಕರ್ಮಜ್ಞಾನ ಭಕ್ತಿರೂಪ ಉಪಾಯಾನುಷ್ಠಾನದಿಂದ, ವಿಲಕ್ಷಣನಾದ ಪ್ರತ್ಯಗ್ವಸ್ತುವನ್ನು – (ಪ್ರತ್ಯಗ್ವಸ್ತುವೆಂಬುದು ಇಲ್ಲಿ ದ್ವಿತೀಯಾಂತ) ಜೀವಾತ್ಮನನ್ನು, ಅವನಲ್ಲಿ ವಿಶೇಷವಾದ ಆದರವನ್ನುಳ್ಳ ಸ್ವಾಮಿಯು ಅಂದರೆ "ಜ್ಞಾನೀತ್ವಾತ್ಮೈವ ಮೇ ಮತಂ" ಎಂದು ತನಗೂ ಅಂತರಾತ್ಮನಂತೆ ನೆನೆಸುವ ಅತ್ಯಾದರವುಳ್ಳವನಾಗಿ, ರಕ್ಷಕನಾಗುತ್ತಾನೆಂದರ್ಥ. ಲೋಕದಲ್ಲಿ ರಾಜರುಗಳು ವಿಪರೀತ ಹಿಂಸಾ ಚೌರ್ಯಾದಿಗಳನ್ನು ಮಾಡುವವರನ್ನು ಕಾರಾಗೃಹದಲ್ಲಿ ಬಂಧಿಸಿಯೂ, ಶಿಕ್ಷೆಯನ್ನು ಕೊಟ್ಟೂ ಅವರ ವಿಪರೀತಾ ಚರಣೆಯನ್ನು ಹೋಗಲಾಡಿಸುವಂತೆ, ಸರ್ವೇಶ್ವರನೂ ಶಾಸ್ತ್ರೋಲ್ಲಂಘನವನ್ನು ಮಾಡುವ ಪ್ರಜೆಗಳಿಗೆ ನರಕಾದಿ ಶಿಕ್ಷೆಗಳನ್ನು ಕೊಟ್ಟು, ಸಂಸಾರವೆಂಬ ಕಾರಾಗೃಹದಲ್ಲಿ ಗರ್ಭ ಜನ್ಮ ಜರಾಮರಣಾದಿ ಶೋಕಗಳಿಂದ ಪೀಡಿಸಿ, ಪಾಪಗಳನ್ನು ಹೋಗಲಾಡಿಸಿ, ಯದೃಚ್ಛಾಸುಕೃತ ಮೂಲಕ ಸುಕೃತ ಪರಂಪರೆಗಳಲ್ಲಿ ಮೂಡಿಸಿ ಕರ್ಮಜ್ಞಾನ ಭಕ್ತಿಗಳನ್ನು ಅನುಷ್ಠಿಸುವಂತೆ ಮಾಡಿ ಸದ್ಗತಿಯನ್ನು ಕೊಟ್ಟು ಕಾಪಾಡುತ್ತಾನೆ. ನಿರ್ಹೇತುಕ ಕೃಪೆಯಿಂದ

ಒಬ್ಬನಿಗೆ ಮೋಕ್ಷವನ್ನು ಕೊಟ್ಟರೆ ಭಗವಂತನಿಗೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳು ಉಂಟಾಗುವುದರಿಂದ ಜೀವಕೃತ ವ್ಯಾಜವನ್ನು ಅವಲಂಬಿಸಿಯೇ ಮೋಕ್ಷವನ್ನು ಕೊಡುತ್ತಾನೆಂಬುದು ಶಾಸ್ತ್ರಾರ್ಥ.

ಸರ್ವಜ್ಞೋಽಪಿಹಿ ವಿಶ್ವೇಶಃ ಸದಾಕಾರುಣಿಕೋಽಪಿಸನ್ ।
ಸಂಸಾರತಂತ್ರವಾಹಿತ್ವಾತ್ ರಕ್ಷಾಪೇಕ್ಷಾಂ ಪ್ರತೀಕ್ಷತೇ ॥

ಸರ್ವೇಶ್ವರನು ಸಂಸಾರಿ ಚೇತನರ ಕಷ್ಟ ಸುಖಗಳನ್ನು ತಿಳಿದಿದ್ದರೂ, ಸದಾ ಕರುಣಾ ಶಾಲಿಯಾಗಿದ್ದರೂ, ಲೀಲಾವಿಭೂತಿಯನ್ನು ನಡೆಸುತ್ತಿರುವುದರಿಂದ, ಬದ್ಧ ಜೀವಿಯು "ನನ್ನನ್ನು ರಕ್ಷಿಸು" ಎಂಬ ಪ್ರಾರ್ಥನೆಯನ್ನು ಎದುರು ನೋಡುತ್ತಾನೆಯಲ್ಲವೆ. ಪ್ರಕೃತಿತಃ – ಪ್ರಕೃಷ್ಟ ಕಾರ್ಯರೂಪ ಭಕ್ತಿಯಿಂದ, ವಿಲಕ್ಷಣಂ – ಸ್ವೇತರ ಸಂಸಾರಿಗಳಿಗಿಂತ ವಿಲಕ್ಷಣನಾದ, ಪ್ರತ್ಯಗ್ವಸ್ತು – ಜೀವಾತ್ಮ ರೂಪವಾದ ವಸ್ತುವನ್ನು, ತತ್ಪರಃ ಪತಿಃ – ಅವನಲ್ಲಿ ಆಸಕ್ತಿಯುಳ್ಳ ಸ್ವಾಮಿಯಾದ ವಿಷ್ಣುವು, ತ್ರಾತಾ – ರಕ್ಷಿಸುತ್ತಾನೆಂದು ಅನ್ವಯ.

"ತಮೇವಂ ವಿದ್ವಾನಮೃತ ಇಹಭವತಿ", "ನಾಹಂವೇದೈಃ, ಭಕ್ತ್ಯಾತ್ವನನ್ಯಯಾ ಶಕ್ಯಃ, ಮಾಮೇಕಂ ಶರಣಂ ವ್ರಜ, ಇತ್ಯಾದಿ ಪ್ರಮಾಣ ವಚನಗಳು ಇಲ್ಲಿ ಅನುಸಂಧೇಯಗಳು.

ಇದರಿಂದ, "ನಾಯಮಾತ್ಮಾ ಪ್ರವಚನೇನ ಲಭ್ಯಃ" ಎಂದಾರಂಭಿಸುವ ಶ್ರುತಿಯಲ್ಲಿ "ಯಮೇವೈಷ ವೃಣುತೇ ತೇನಲಭ್ಯಃ" ಎಂದು ಭಗವಂತನು ಯಾರನ್ನುವರಿಸುತ್ತಾನೆಯೋ, ಅವನಿಂದ ಭಗವಂತನು ಲಭ್ಯನು, ಎಂದು ಆಪಾತತಃ ಅರ್ಥಮಾಡಿ, ಕೆಲವರು ಮಾರ್ಜಾರಕಿಶೋರ ನ್ಯಾಯವನ್ನು ಅವಲಂಬಿಸಿ ಭಗವಂತನು ತನ್ನ ನಿರ್ಹೇತುಕ ಕೃಪೆಯಿಂದ ಸಂಸಾರಿ ಜೀವನನ್ನು ಕಾಪಾಡುತ್ತಾನೆಂದು ಹೇಳುತ್ತಾರೆ. ಆದ್ದರಿಂದ ಸಂಸಾರಿ ಚೇತನನು ತಾನು ಅತ್ಯಂತ ಪರತಂತ್ರನಾಗಿರುವುದರಿಂದ ಮೋಕ್ಷಾರ್ಥವಾಗಿ ಯಾವ ಉಪಾಯಾನುಷ್ಠಾನವನ್ನೂ ಮಾಡಕೂಡದೆಂದೂ ಹೇಳುತ್ತಾರೆ. ಇದು ಶಾಸ್ತ್ರವನ್ನು ತಿಳಿದವರಿಗೆ ಸಮ್ಮತವಲ್ಲ.

ಭಗವದ್ಭಾಷ್ಯಕಾರರೇ "ಯಮೇವೈಷ ವೃಣುತೇ ತೇನಲಭ್ಯಃ" ಎಂಬ ಶ್ರುತಿಗೆ "ಪ್ರಿಯತಮ ಏವಹಿ ವರಣೀಯೋ ಭವತಿ, ಯಸ್ಯಾಯಂನಿರತಿಶಯಃ ಪ್ರಿಯಃ ಸ ಏವಾಸ್ಯ ಪ್ರಿಯತಮೋ ಭವತಿ", ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಅದಾಗಿ ಭಗವಂತನು ತನ್ನಲ್ಲಿ ಅತ್ಯಂತ ಪ್ರೀತಿಯನ್ನು ಮಾಡುವವನನ್ನು ವರಿಸುತ್ತಾನೆ. ಪ್ರಿಯತಮನಾದವನೇ ವರಣೀಯನಲ್ಲವೇ. ಯಾರು ಭಗವಂತನಲ್ಲಿ ಅತ್ಯಂತ ಪ್ರೀತಿಯನ್ನಿಟ್ಟಿದ್ದಾರೆಯೋ, ಅವರು ಭಗವಂತನಿಗೆ ಪ್ರಿಯತಮರಾಗುತ್ತಾರೆ. ಅಂದರೆ ಭಕ್ತಿಯೋಗದಿಂದ ಭಗವಂತನಲ್ಲಿ ನಿರತಿಶಯ ಪ್ರೀತಿ ಮಾಡುವವರನ್ನು ಭಗವಂತನೂ ಅತ್ಯಧಿಕ ಪ್ರೀತಿಸಿ, ತನ್ನೆಲ್ಲಿಗೆ ಬರಮಾಡಿಸಿ ಕೊಳ್ಳುತ್ತಾನೆ. ಆದ್ದರಿಂದ ಭಕ್ತಿಯು ಸ್ವರೂಪ ವಿರುದ್ಧವೆಂಬವಾದವು ವಿಷಯ ವಿವೇಚನೆ ಮಾಡದೆ ಹೇಳುವವರ ಮಾತು. ಅಪ್ರಮಾಣಭೂತವು· ಪರಿಹಾಸ್ಯಾಸ್ಪದವೂ ಸಹ.

ಭಗವಂತನು ಸಂಸಾರಿ ಚೇತನರನ್ನು, ಅವರು ಅನುಷ್ಠಿಸುವ ಭಕ್ತಿಯೋಗರೂಪ ವ್ಯಾಜದಿಂದಲೇ ರಕ್ಷಿಸುತ್ತಾನೆಂದರೆ, ಭಕ್ತಿಯೋಗವನ್ನು ಅನುಷ್ಠಿಸಲು ಬೇಕಾದ ಜ್ಞಾನಶಕ್ತಿಗಳಿಲ್ಲದವರೂ, ಅದರಲ್ಲಿ, ಅಧಿಕಾರವಿಲ್ಲದೆ ಇರುವ ಅತ್ರೈವರ್ಣಿಕರೂ ತ್ರೈವರ್ಣಿಕಸ್ತ್ರೀಗಳೂ ಭಕ್ತಿಯೋಗವನ್ನು ಅನುಷ್ಠಿಸಲಾಗದೆ ಇರುವುದರಿಂದ, ಅವರಿಗೆ ರಕ್ಷಣೆಯು ಹೇಗೆ ಏರ್ಪಡುತ್ತದೆಯೆಂಬ ಶಂಕೆಯನ್ನು ನಿವಾರಿಸಲು, **"ತಸ್ಮಿನ್ನಾತ್ಮ ಭರಾರ್ಪಣಂ ಹಿತತಮಮ್"** ಎಂದು ಅನುಗ್ರಹಿಸುತ್ತಾರೆ. **ತಸ್ಮಿನ್** –ಆ ಸಮರ್ಥಕಾರುಣಿಕನಾದ ಭಗವಂತನಲ್ಲಿ **ಆತ್ಮಭರಾರ್ಪಣಂ** – ಆತ್ಮರಕ್ಷಾಭರಸಮರ್ಪಣವು, **ಹಿತತಮಮ್** – ಅತ್ಯಂತ ಹಿತವಾದದ್ದು. "ಮುಮುಕ್ಷುರ್ವೈಶರಣಮಹಂ ಪ್ರಪದ್ಯೇ", "ತಸ್ಮಾನ್ನ್ಯಾಸ ಮೇಷಾಂ ತಪಸಾಮತಿರಿಕ್ತಮಾಹುಃ" "ಓಮಿತ್ಯಾತ್ಮಾನಂ ಯುಂ ಜೀತ",

"ಶರಣಂತ್ವಾಂ ಪ್ರಪನ್ನಾಯೇ ಧ್ಯಾನಯೋಗ ವಿವರ್ಜಿತಾಃ ।

ತೇऽಪಿಮೃತ್ಯುಮತಿಕ್ರಮ್ಯ ಯಾಂತಿ ತದ್ವೈಷ್ಣವಂ ಪದಮ್ ॥"

"ಸರ್ವಧರ್ಮಾನ್ ಪರಿತ್ಯಜ್ಯ", "ಸಕೃದೇವ ಪ್ರಪನ್ನಾಯ", ಇತ್ಯಾದಿ ಪರಶ್ಶತ ಶ್ರುತಿಸ್ಮೃತಿಗಳು ಉದ್ಘೋಷಿಸು ವಂತೆ ಅಶಕ್ತನಿಗೆ ಭಕ್ತಿಸ್ಥಾನದಲ್ಲಿ ಪ್ರಪತ್ತಿಯು ವಿಹಿತವಾಗಿದೆ. ಇದು ಹಿತತಮೋಪಾಯವೆಂದು ಆಚಾರ್ಯರು ಅನುಗ್ರಹಿಸುತ್ತಾರೆ.

ಇಲ್ಲಿ **'ಅರ್ಪಣ'** ಶಬ್ದದಿಂದ, "ಅನೇನೈವತು ಮಂತ್ರೇಣಸ್ವಾತ್ಮಾನಂ ಮಯಿ ನಿಕ್ಷಿಪೇತ್ ।

ಮಯಿನಿಕ್ಷಿಪ್ತ ಕರ್ತವ್ಯಃ ಕೃತಕೃತ್ಯೋಭವಿಷ್ಯತಿ ॥

ಎಂದು ಆತ್ಮಭರಾರ್ಪಣವು ಕೃತಿಸಾಧ್ಯವೆಂದು ತಿಳಿಸಿರುವುದರಿಂದ, ಕೃತಿನಿಷೇಧಕ ಮಾರ್ಜಾರ ಕಿಶೋರ ನ್ಯಾಯವು ವ್ಯಾವರ್ತಿಸಲ್ಪಡುತ್ತದೆ.

"ಸ್ವೋಜ್ಜೀವನೇಚ್ಛಾಯದಿತೇ ಸ್ವಸತ್ತಾಯಾಂ ಸ್ಪೃಹಾಯದಿ ।

ಆತ್ಮದಾಸ್ಯಂ ಹರೇಃ ಸ್ವಾಮ್ಯಂ ಸ್ವಭಾವಂಚ ಸದಾಸ್ಮರ ॥"

ಎಂದು (ಆತ್ಮೋಜ್ಜೀವನದಲ್ಲಿ ಇಚ್ಛೆಯುಳ್ಳವನಾಗಿ, ತನ್ನ ಭಗವಚ್ಛೇಷತ್ವರೂಪ ಸತ್ತೆಯಲ್ಲಿ ಆಸೆಇದ್ದರೆ, ತಾನು ದಾಸನು, ಭಗವಂತನು ಸ್ವಾಮಿ, ಶೇಷವಸ್ತುವನ್ನು ರಕ್ಷಿಸುವುದು ಭಗವಂತನ ಸ್ವಭಾವವೆಂಬುದನ್ನು, ಸದಾ ನೆನೆಸಿಕೋ) ಎಂಬ ವಚನದಂತೆ ಸಂಬಂಧ ಜ್ಞಾನವೇ ಉಜ್ಜೀವನಕ್ಕೆ ಹೇತು ಎಂದು ಹೇಳಿರುವುದು ಸಂಬಂಧ ಜ್ಞಾನವು ಭರಸಮರ್ಪಣ ಕೃತ್ಯದಲ್ಲಿ ಜೀವನನ್ನು ಪ್ರವರ್ತಿಸಿ ಉಪಕಾರಕವಾಗುತ್ತದೆ ಎಂದರ್ಥ. ಇಲ್ಲದಿದ್ದರೆ ಜೀವ ಕೃತ್ಯವಾದ ಭಕ್ತಿಪ್ರಪತ್ತಿರೂಪ ಸಾಧನಾನುಷ್ಠಾನ ಬೋಧಕಗಳಾದ ಶಾಸ್ತ್ರಗಳಿಗೆಲ್ಲಾ ವೈಯರ್ಥ್ಯವು ಏರ್ಪಡುತ್ತದೆ. ಜೀವನು ಭಗವದ್ದತ್ತಕರಣ ಕಳೇಬರಗಳನ್ನೂ ಜ್ಞಾನಶಕ್ತಿಗಳನ್ನೂ ಉಪಯೋಗಿಸಿಕೊಂಡು ಅವನು ನಿಯಮಿಸಿರುವ ಭಕ್ತಿಪ್ರಪತ್ತಿರೂಪ ಶಾಸ್ತ್ರಾರ್ಥಗಳನ್ನು ಪರಿಪಾಲನೆ ಮಾಡುವುದೇ, ಪಾರತಂತ್ರ್ಯದ ಪರಾಕಾಷ್ಠೆ. ಇಲ್ಲವೆಂದರೆ ಮುಂದೆ ಕೈಂಕರ್ಯಗಳನ್ನು ಮಾಡುವುದೂ ಇವನ ಅತ್ಯಂತ ಪಾರತಂತ್ರ್ಯಕ್ಕೆ ಧಕ್ಕೆಯನ್ನುಂಟು ಮಾಡುತ್ತದೆಯಾದ್ದರಿಂದ, ಅದನ್ನೂ ಮಾಡದೆ ಪಶುಮೃಗ ಪಕ್ಷ್ಯಾದಿಗಳ ಹಾಗೆ ಸ್ವೇಚ್ಛೆಯಾಗಿ ಇರುವ ಪ್ರಸಂಗವು ಬರುತ್ತದೆ. ಇದು ದಾಸಭೂತನ ಸ್ವರೂಪಕ್ಕೆ ವಿರುದ್ಧವಾದುದೆಂದರೆ, ಭಗವಂತನಿಗೆ ವೈಷಮ್ಯ ನೈರ್ಘೃಣ್ಯಾದಿಗಳು ಬಾರದೇ ಇರಲು ಶಾಸ್ತ್ರವಿಹಿತಗಳಾದ ಭಕ್ತಿಪ್ರಪತ್ತಿ ರೂಪಗಳಾದ ವ್ಯಾಜಗಳನ್ನು ಯಥಾಧಿಕಾರ ಅನುಷ್ಠಿಸುವುದೂ ಸ್ವರೂಪಾನು ರೂಪವಾದದ್ದು.

ಅನಂತರ **"ತಚ್ಛೇಷ ವೃತ್ತಿಃ ಫಲಂ"** ಎಂದು ಜೀವನಿಗೆ ಭಗವಂತನಲ್ಲಿ ಶೇಷವೃತ್ತಿಯು – ಅಂದರೆ ಕೈಂಕರ್ಯವು ಪುರುಷಾರ್ಥವೆಂದು ನಿಗಮಿಸುತ್ತಾರೆ. ಲೋಕದಲ್ಲಿ ಒಬ್ಬನಿಗೆ ದಾಸವೃತ್ತಿಯನ್ನು ಮಾಡುವುದು ಶ್ರಮವಾಗಿ ತೋರಿದರೂ ಗುಣಾಧಿಕ ವಿಷಯದಲ್ಲಿ, ಪ್ರತಿವ್ರತಾಸ್ತ್ರೀಯು ಪತಿಶುಶ್ರೂಷೆ ಮಾಡುವಂತೆ, ದಾಸ್ಯವು ಶ್ರಮವಾಗ ಲಾರದು. ಜ್ಞಾನಾನಂದ ಸ್ವರೂಪನಾದ ಭಗವಂತನನ್ನು ಅನುಭವಿಸಿ ಅನುಭವ ಪರೀವಾಹವಾದ ಕೈಂಕರ್ಯವು, ಜೀವನಿಗೆ ಸ್ವರೂಪ ಪ್ರಾಪ್ತವಾದದ್ದು. "ಸೋಶ್ನುತೇ ಸರ್ವಾನ್‌ಕಾಮಾನ್ ಸಹ ಬ್ರಹ್ಮಣಾವಿಪಶ್ಚಿತಾ" ಎಂದು ಭಗವಂತನ ಕಲ್ಯಾಣಗುಣಾದಿಗಳನ್ನು ಅನುಭವಿಸಿ, ಅನುಭವ ಪರೀವಾಹವಾದ ಕೈಂಕರ್ಯಗಳನ್ನು ಮಾಡುವುದು ಶ್ರಮವಾಗಲಾರದು. ಪ್ರಿಯರಾದ ಭಾರ್ಯಾ ಪುತ್ರಾದಿಗಳ ರಕ್ಷಣೆಗೋಸ್ಕರ ಶ್ರಮಪಟ್ಟು ದ್ರವ್ಯಾರ್ಜನಾದಿಗಳನ್ನು ಮಾಡಿದರೂ ಅದು ಶ್ರಮವಾಗಿ ತೋರುವುದಿಲ್ಲವಲ್ಲವೇ. ನಿತ್ಯನಿರ್ದೋಷ ಸಕಲ ಕಲ್ಯಾಣ ಗುಣಾಕರನಾದ ಪುರುಷೋತ್ತಮ ವಿಷಯಕ ಕೈಂಕರ್ಯವು ಸ್ವರೂಪೋಚಿತವಾಗಿ ಆನಂದಾವಹವಾಗಿರುತ್ತದೆ ಎಂಬುದು, **ತಚ್ಛೇಷ ವೃತ್ತಿಃ ಫಲಂ** ಎಂಬುದರಿಂದ ತಿಳಿಸಲ್ಪಡುತ್ತದೆ. "ಮಾತಾ ಪಿತಾ ಭ್ರಾತಾ ನಿವಾಸ ಶ್ಶರಣಂ ಸುಹೃದ್ಗತಿ ರ್ನಾರಾ

**ಇತ್ಥಂತತ್ವ ಹಿತೇಪುಮರ್ಥೆ ಇತಿ ನ ಸ್ತ್ರೇಧಾ ವಿಭಕ್ತಂ ಧನಮ್ ।**
**ದಾಯತ್ವೇನ ದಯಾಧನಾಸ್ಸ್ವಯ ಮದು ರ್ದತ್ತಾತ್ಮನಾಂ ದೇಶಿಕಾಃ ॥12॥**

**ಇಪ್ಪಡಿ ರಹಸ್ಯತ್ರಯತ್ತೈಪ್ಪತ್ತಿನ ಕೀ ಎಮ್ ಮೇಲುಮ್ ಉಳ್ಳ ಪಾಶುರಙ್ಗಳಿಲ್ಲಮ್ ವೇದಾಂತೋದಯನ ಸಂಪ್ರದಾಯಮಾನ ಮಡಪ್ಪಳ್ಳಿವಾರ್ತ್ತೈಯ್ಯೈ ಆಚಾರ್ಯಸ್ ಪಕ್ಕಲಿಲೇ ತಾನ್ ಕೇಟ್ಟರುಳಿನಪಡಿಯೇ ಕಿಡಾಂಬಿ ಅಪ್ಪುಳ್ಳಾರಡಿಯೇನ್ನೈ ಕಿಳಿಯ್ಯೈ ಪಯ್ಯಕ್ಕುವಿಕ್ಕು ಮಾಪ್ಪೋಲೇ ಪಯ್ಯಕ್ಕುವಿಕ್ಕ**

---

ಯಣಃ" ಎಂದು ಸರ್ವವಿಧ ಬಂಧುವಾದ ಸರ್ವೇಶ್ವರನಲ್ಲಿ ಮಾಡುವ ಶೇಷವೃತ್ತಿಯು ಪುರುಷಾರ್ಥವೇ ಸರಿ.

**ಇತ್ಥಂ ತತ್ವಹಿತೇ ಪುಮರ್ಥೆ ಇತಿನಃ** ಇತ್ಯಾದಿ–ಹೀಗೆ ತತ್ವ ಹಿತ ಪುರುಷಾರ್ಥಗಳನ್ನು ನಮಗೆ **ದಾಯತ್ವೇನ ದಯಾಧನಾಃ** – ದಾಯಪ್ರಾಪ್ತವಾಗಿ, ದಯೆಯನ್ನೇ ಧನವಾಗಿ ಉಳ್ಳ, ಅಂದರೆ ಪರಮಕಾರುಣಿಕರಾದ, ದೇಶಿಕಾಃ ನಮ್ಮ ಆಚಾರ್ಯರು ಖ್ಯಾತಿ ಲಾಭ ಪೂಜಾನಿರಪೇಕ್ಷರಾಗಿ **ದತ್ತಾತ್ಮನಾಂ**–ಅವರನ್ನು ಆಶ್ರಯಿಸಿದ ನಮಗೆ ಸ್ವಯ **ಮದುಃ**–ತಾವೇ ಉಪದೇಶಿಸಿರುತ್ತಾರೆ. **ದತ್ತಾತ್ಮನಾಂ** – ಎಂಬುದರಿಂದ ಆ ಆಚಾರ್ಯರುಗಳಲ್ಲಿ "ಶಿಷ್ಯಸ್ತೇಽಹಂ ಶಾಧಿಮಾಂತ್ವಾ ಪ್ರಪನ್ನಮ್" ಎಂದು ಶಿಷ್ಯನಾಗಿ ಶರಣವರಣ ಮಾಡಿಯೇ ಈ ಅರ್ಥಗಳನ್ನು ಉಪದೇಶ ಹೊಂದಬೇಕೆಂಬುದು ಸೂಚಿತ. ಆಚಾರ್ಯನೂ "ನಾಪೃಷ್ಟಃ ಕಸ್ಯಚಿತ್ ಬ್ರೂಯಾತ್" ಎಂದು, ಸಮ್ಯಗುಪಸನ್ನನಾಗಿ ಅಂದರೆ ಆಚಾರ್ಯನಲ್ಲಿಯೂ ಶಾಸ್ತ್ರದಲ್ಲಿಯೂ ಭಕ್ತಿಶ್ರದ್ಧೆಯುಳ್ಳವನಾಗಿರುವ, ಶಿಷ್ಯನಿಗೇ ಉಪದೇಶಿಸಬೇಕೆಂಬುದೂ ಇಲ್ಲಿ ಸೂಚಿತ. **ದೇಶಿಕಾಃ** – 'ದಿಶ ಅತಿಸರ್ಜನೇ' ಎಂಬನಾನಾರ್ಥಕ ದಿಶಧಾತು ನಿಷ್ಪನ್ನವಾದ ದೇಶಿಕಶಬ್ದವು ಉದಾರ ಸ್ವಭಾವವನ್ನು ತಿಳಿಸುತ್ತದೆ. ಒಬ್ಬ ಸಂಸಾರಿ ಚೇತನನಲ್ಲಿ ಪರಮಕೃಪೆಯಿಂದ ಅವನ ಸಕಲ ಸಾಂಸಾರಿಕ ಕ್ಲೇಶಗಳನ್ನೂ ಹೋಗಲಾಡಿಸಲು ಆಚಾರ್ಯನು ಪರಮೋದಾರ ಸ್ವಭಾವದಿಂದ ಬ್ರಹ್ಮವಿದ್ಯೆಯನ್ನು ಶಿಷ್ಯನಿಗೆ ಉಪದೇಶಿಸುತ್ತಾನೆಂಬುದು ಇಲ್ಲಿ ಸೂಚಿತ.

### ಈ ಗ್ರಂಥದಲ್ಲಿ ನಿರೂಪಿಸಲ್ಪಟ್ಟ ಅರ್ಥಗಳು ಸತ್ಸಂಪ್ರದಾಯಾಗತಗಳು.

**ಇಪ್ಪಡಿ ರಹಸ್ಯ ತ್ರಯತ್ತೈಪ್ಪತ್ತಿನ** ಇತ್ಯಾದಿ. ಹೀಗೆ ರಹಸ್ಯತ್ರಯಗಳನ್ನು ಕುರಿತು, ಪೂರ್ವದಲ್ಲಿ 'ಪ್ರತ್ಯಗ್ವಸ್ತು ವಿಲಕ್ಷಣಂ' ಎಂಬ ಶ್ಲೋಕದಿಂದ ಹಿಡಿದು "ರಹಸ್ಯತ್ರಯಸಾರೋಯಂ" ಎಂದು ಮುಂದೆ ಹೇಳುವ ಶ್ಲೋಕ ಪರ್ಯಂತವಾಗಿಯೂ ಎಲ್ಲಾ ವೇದಾಂತೋದಯನರೆಂಬ ಕಿಡಾಂಬಿಯಾಚ್ಚಾನ್‌ರವರು ಉಪದೇಶಿಸಿದ ಅರ್ಥ ವಿಶೇಷಗಳು. ಅದಾಗಿ ಭಾಷ್ಯಕಾರರಿಗೆ ಮಡಪ್ಪಳ್ಳಿ – ಮಾಹಾನಸಿಕ, ಕೈಂಕರ್ಯವನ್ನು ಮಾಡುತ್ತಿದ್ದು, ಯತೀಂದ್ರ ಮಾಹಾನಸಿಕರೆಂದು ಸುಪ್ರಸಿದ್ಧ ವೈಭವವರಾದ ಕಿಡಾಂಬಿ ಆಚ್ಚಾನ್‌ರವರು ನ್ಯಾಯಶಾಸ್ತ್ರ ಪ್ರಣೇತರಾದ ಉದಯನಾಚಾರ್ಯರಂತೆ, ವೇದಾಂತ ದರ್ಶನಕ್ಕೆ ಉದಯನರೆಂದು ಲೋಕ ಪ್ರಸಿದ್ಧ. ಯತೀಂದ್ರ ಮಾಹನಸಿಕರಾದ ಕಿಡಾಂಬಿ ಆಚ್ಚಾನ್ ಅವರ ಶ್ರೀಪಾದಗಳಲ್ಲಿ ಅವರ ಕುಮಾರರಾದ ಕಿಡಾಂಬಿ ರಾಮಾನುಜಾಚಾರ್ಯರು ಶ್ರೀ ಭಾಷ್ಯಕಾರರವರ ಅಡಿಗೆ ಮನೆಯಲ್ಲೇ ಕಾಲಕ್ಷೇಪವನ್ನು ಮಾಡಿನಂತರ ತಮ್ಮ ಶಿಷ್ಯರುಗಳಿಗೆ ಕಾಲಕ್ಷೇಪವನ್ನು ಹೇಳಿದುದರಿಂದ ಅವರ ಉಪದೇಶವನ್ನು ಮಾಹಾನಸಿಕ ಸಂಪ್ರದಾಯವೆಂದೂ, ಮಡಪ್ಪಳ್ಳಿವಂದಮಣಮ್, ಮಡಪ್ಪಳ್ಳಿವಾರ್ತ್ತೈ ಎಂದೂ ಆಚಾರ್ಯರು ಅಲ್ಲಲ್ಲೇ ವ್ಯವಹರಿಸಿರುತ್ತಾರೆ. **ಮಡಪ್ಪಳ್ಳಿ ವಂದ ವಾರ್ತ್ತೈಯ್ಯೈ** ಇತ್ಯಾದಿ – ಅಡಿಗೆ ಮನೆಯಲ್ಲಿ ಕಾಲಕ್ಷೇಪ ಮಾಡಿ ತಿಳಿದುಕೊಂಡ ಉಪದೇಶವನ್ನು, ಆಚಾರ್ಯರ ಸಕಾಶದಲ್ಲಿ ತಾವು ಶ್ರವಣ ಮಾಡಿದ ಪ್ರಕಾರ, ಕಿಡಾಂಬಿ ಅಪ್ಪುಳ್ಳಾರ್ ಎಂಬ ಸ್ವಾಚಾರ್ಯರಾದ ವಾದಿಹಂಸಾಬುವಾಹರೆಂದು ಪ್ರಸಿದ್ಧರಾದ ಆತ್ರೇಯರಾಮಾನುಜಾಚಾರ್ಯರು, **ಅಡಿಯೇನ್ನೈ** – ಆಚಾರ್ಯ ಸಾರ್ವಭೌಮರಾದ ವೇದಾಂತ ದೇಶಿಕರು ತಮ್ಮನ್ನು ಸಂಬೋಧನೆ ಮಾಡಿಕೊಳ್ಳುತ್ತಾರೆ. **ಕಿಳಿಯ್ಯೈಪ್ಪಯ್ಯಕ್ಕು ವಿಕ್ಕು ಮಾಪ್ಪೋಲೇ** ಇತ್ಯಾದಿ ಗಿಣಿಗೆ ಮಾತನ್ನು ಹೇಳಿ ಕೊಟ್ಟು ಪಳಗಿಸುವಂತೆ, ಮಧುರವಾದ ಅರ್ಥ ವಿಶೇಷ

**ಅವರ್ ತಿರುವುಳ್ಳತ್ತಲಿರಕ್ಕ ಮಡಿಯಾಹ ಪ್ಪೆರುಮಾಳ್ ತೆಳಿಯ ಪ್ರಕಾಶಿಪ್ಪಿತ್ತು ಮರವಾಮಲ್ ಕಾತ್ತು ಪಿಣ್ಣೈಯರ ಪೇಶುವಿತ್ತ ಪಾಶುರಙ್ಗಳ್.**

**ಪಾಟ್ಟುಕ್ಕುರಿಯ ಪಣ್ಣೈಯವರ್ ಮೂವರ್ಪ್ಪಣ್ಡೊರುಕಾಲ್**
**ಮಾಟ್ಟುಕ್ಕರುಳ್ ತರುಮಾಯನ್ ಮಲಿನ್ದು ವರುತ್ತುದಲಾಲ್।**
**ನಾಟ್ಟುಕ್ಕಿರುಳ್ ಶೆಹ ನಾನ್ಮರೈಯನ್ದಿ ನಡೈ ವಿಳಙ್ಗ**
**ವೀಟ್ಟುಕ್ಕಿಡೈಕ್ಕಳ್ಳಿಕ್ಕೇ ವೆಳಿಕಾಟ್ಟು ಮಿಮ್ಮೆಯ್ ವಿಳಕ್ಕೇ ॥50॥**

---

ಗಳನ್ನು ಉಪದೇಶಿಸಿ ಪಳಗಿಸಲು, ಅವರ ದಿವ್ಯ ಹೃದಯದಲ್ಲಿ ಕೃಪೆಯಿಂದಾಗಿ, ಭಗವಂತನಾದ ಹಯಗ್ರೀವನು, **ತೆಳಿಯಪ್ರಕಾಶಿಪ್ಪಿತ್ತು** – ಸಂಶಯ ವಿಪರ್ಯಯಗಳಿಲ್ಲದೆ ಪ್ರಕಾಶ ಪಡಿಸಿ, ಅದನ್ನು ಮರೆಯದೆ ರಕ್ಷಿಸಿ, **ಪಿಣ್ಣೈಯರ** ಇತ್ಯಾದಿ, ತಪ್ಪಿಲ್ಲದೆ ತಮಗೆ **ಪೇಶುವಿತ್ತ ಪಾಶುರಂಗಳ್** – ಹೇಳಿಕೊಟ್ಟ ಅರ್ಥ ವಿಶೇಷಗಳು ಇವು.

**ಪಾಟ್ಟುಕ್ಕುರಿಯ ಪಣ್ಣೈಯವರ್** ಇತ್ಯಾದಿ, ದ್ವಾಪರ ಯುಗದ ಅಂತ್ಯದಲ್ಲಿ ತಿರುಕ್ಕೋವಲೂರ್ ದಿವ್ಯದೇಶದಲ್ಲಿ ಮುದಲಾಳ್ವಾರ್‌ಗಳು ಎಂದು ಪ್ರಸಿದ್ಧರಾದ ಪೊಯ್‌ಗೈಮುನಿ, ಪೂದತ್ತಾರ್, ಪೇಯಾಳ್ವಾರ್ ಎಂಬ ಹೆಸರುಳ್ಳ ಮೂರು ಆಳ್ವಾರುಗಳನ್ನು ಒಂದು ಗೂಡಿಸಿ ಅವರಲ್ಲಿ ಅನು ಪ್ರವೇಶಿಸಿ, ಅವರ ಮುಖಾಂತರ ಭಗವಂತನು ಮೂರು ದಿವ್ಯ ಪ್ರಬಂಧಗಳನ್ನು ಲೋಕ ಜನರನ್ನು ಕಾಪಾಡಲು, ಉಪದೇಶಿಸಿದನು. ಆ ವೃತ್ತಾಂತ ವನ್ನು ಇಲ್ಲಿ ಅನುಸಂಧಾನ ಮಾಡುತ್ತಾರೆ. ಹಾಗೆಯೇ ಹಯಗ್ರೀವನು ತಮ್ಮ ಹೃದಯದಲ್ಲಿ ಪ್ರವೇಶಿಸಿ ಆಚಾರ್ಯೋಪ ದಿಷ್ಟಗಳಾದ ಅರ್ಥ ವಿಶೇಷಗಳನ್ನು ಈ ಗ್ರಂಥ ರೂಪವಾಗಿ ಪ್ರಕಾಶಪಡಿಸಿರುತ್ತಾನೆಂದೂ, ಎಲ್ಲರೂ ಇದನ್ನು ಅತ್ಯಾದರ ಪೂರ್ವಕವಾಗಿ ಸ್ವೀಕರಿಸಬೇಕೆಂಬುದೂ ಇದರ ಭಾವ.

**ಪಾಟ್ಟುಕ್ಕುರಿಯಪಣ್ಣೈಯವರ್** – ಭಗವತ್ಪ್ರೀತಿ ಪಾದಕಗಳಾದ ದ್ರಮಿಡ ಗಾಥೆಗಳಿಗೆ, ಯೋಗ್ಯರಾದ ದ್ವಾಪರ ಯುಗದಲ್ಲಿಯೇ ಅವತರಿಸಿ ಪ್ರಾಚೀನರಾದ, **ಮೂವರ್** – ಮುದಲಾಳ್ವಾರ್‌ಗಳೆಂಬ **ಮೂವರನ್ನು, ಪಂಡೊರುಕಾಲ್** – ಪೂರ್ವದಲ್ಲಿ ಒಂದು ಸಂದರ್ಭ ವಿಶೇಷದಲ್ಲಿ, ದ್ವಾಪರಾಂತ್ಯದಲ್ಲಿ **ಮಾಟ್ಟುಕ್ಕರುಳ್‌ತರು** – ಮಾಡು – ಧನಮ್, ಅಂದರೆ ಭಗವಂತನ ವಿಭೂತಿಗಳಾದ ಚೇತನರುಗಳ ಉಜ್ಜೀವನಾರ್ಥವಾಗಿ ಕೃಪೆಮಾಡಿ, **ಮಾಯನ್** – ಆಶ್ಚರ್ಯ ಗುಣ ಚೇಷ್ಟಿತನಾದ ಕೃಷ್ಣನು, **ಮಲಿಂದು** ಅಧಿಕವಾಗಿ **ವರುತ್ತದಲಾಲ್**–ಉಪ ಮರ್ದನ ಮಾಡಿದರಿಂದ, ಅಂದರೆ ಆ ಮೂವರುಗಳ ಮಧ್ಯೆ ತಾನೂ ಆವಿರ್ಭವಿಸಿ ಸ್ಥಳ ಸಂಕೋಚದಿಂದ ಅವರನ್ನು ಉಪಮರ್ದಿಸಲು, **ವೀಟ್ಟುಕ್ಕಿಡೈಕ್ಕಳ್ಳಿಕ್ಕೇ** – ಗೋಪಪುರದಲ್ಲಿ ಒಂದು ಮನೆಯ ಮುಂಭಾಗದ ದೇಹಳಿಯಲ್ಲಿ, **ಇಮ್ಮೆಯ್‌ವಿಳಕ್ಕು** – ಸತ್ಯಾರ್ಥ ಪ್ರಕಾಶವಾದ ತಿರುವಂದಾದಿ ರೂಪವಾದ ಈ ಜ್ಞಾನ ದೀಪವು **ನಾಟ್ಟುಕ್ಕಿರುಳ್‌ಶೆಹ** – ಲೋಕಗಳಿಗೆ ಅಜ್ಞಾನವೆಂಬ ಅಂಧಕಾರವು ನಶಿಸುವಂತೆ, **ನಾನ್ಮರೈಯಂದಿ ನಡೈವಿಳಂಗ**– ನಾಲ್ಕು ವೇದಗಳ ಅಂತ್ಯದಲ್ಲಿರುವ, ಅಂದರೆ ವೇದಾಂತಗಳಲ್ಲಿ ನಿರೂಪಿಸಿರುವ **ನಡೈವಿಳಂಗ** – ಭಕ್ತಿ ಪ್ರಪತ್ತಿ ರೂಪ ಸನ್ಮಾರ್ಗಗಳು ಪ್ರಕಾಶವಾಗುವಂತೆ, **ವೆಳಿಕಾಟ್ಟುಮ್**–ಎಲ್ಲರಿಗೂ ತಿಳಿಸುತ್ತವೆ.

ಮೊದಲಾಳ್ವಾರುಗಳು ಮೂವರೂ ಒಂದು ರಾತ್ರಿಯಲ್ಲಿ ಗೋಪಪುರದ ದೇಹಳಿಯಲ್ಲಿ ಸೇರಿದಾಗ ಇವರ ಮಧ್ಯೆ ಭಗವಂತನು ಆವಿರ್ಭವಿಸಿ ಸ್ಥಳ ಸಂಕೋಚದಿಂದ ಅವರನ್ನು ಉಪಮರ್ದನ ಮಾಡಿದನು. ಆಗ ಅವರು ಕತ್ತಲೆಯಲ್ಲಿ ಇವನು ಯಾರೆಂದು ನೋಡಲಾಗದೆ, ಜ್ಞಾನವೆಂಬ ದೀಪದಿಂದ ಇವನನ್ನು ಸಾಕ್ಷಾತ್ಕರಿಸಿ, ವೈಯ್ಯಂಡ ಕಳಿಯಾ, ಅನ್ಬೇ ತಹಳಿಯಾ, ತಿರುಕ್ಕಂಡೇನ್, ಎಂದಾರಂಭಿಸುವ ಮೂರು ಅಂದಾದಿಗಳ ಮೂಲ್ಕ

**ಗ್ರಂಥರೂಪೇಣವಾ ಉಪದೇಶ ಮುಖೇನವಾ ಜ್ಞಾನಪ್ರದಾನಂ ಸಾಂಪ್ರದಾಯಿಕಮ್**

**ಮರುಳತ್ತ ದೇಶಿಕರ್ ವಾನುಕಪ್ಪಾಲಿನ್ದವೈಯಮೆಲ್ಲಾಮ್ ।**
**ಇರುಳತ್ತಿರೈಯವ ನಿಣೈಯಡಿಪೂಣ್ಡಿಡ ವೆಣ್ಣುದಲಾಲ್ ।**
**ತೆರುಳುತ್ತ ಶೆನ್ದೊಳ್ಳಿರ್ ಚೆಲ್ವಮ್ ಪೆರುಹಿಚ್ಚಿರನ್ದವರ್ಪಾಲ್ ।**
**ಅರಳುತ್ತ ಶಿನ್ದೈ ಯಿನಾಲಳ್ಳಿಯಾವಿಳಕ್ಕೇತ್ತಿನರೇ ॥37॥**

**ನಿರವಧಿದಯಾ ದಿವ್ಯೋದನ್ವತ್ತರಂಗ ನಿರಙ್ಕುಶೈ**
**ರ್ನಿಯಮಯತಿ ಯಶ್ಶಿಷ್ಯಾನ್ ಶಿಕ್ಷಾಕ್ರಮೈರ್ಗುಣಸಂಕ್ರಮೈಃ ।**
**ಅಚರಮಗುರೋ ರಾಜ್ಞಾಪಾರಂಪರೀ ಪರಮಾನಸೌ**
**ನ ಪರಮಿಹತಾನ್ ತಲ್ಲಕ್ಷೇಣ ಸ್ವಮುಷ್ಯ ಭಿರಕ್ಷತಿ ॥7 ॥**

**ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ ಶ್ರೀಮದ್ವೇಙ್ಕಟನಾಥಸ್ಯ**
**ವೇದಾನ್ತಾಚಾರ್ಯಸ್ಯ ಕೃತಿಷು ಶ್ರೀಮದ್ರಹಸ್ಯತ್ರಯಸಾರೇ**
**ಆಚಾರ್ಯ ಕೃತ್ಯಾಧಿಕಾರ ಸ್ತ್ರಿಂಶತ್**
**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ ॥**

---

ಇವನನ್ನು ಸ್ತೋತ್ರ ಮಾಡಿದರು. ಈ ನೂರು ಅಂದಾದಿಗಳು ಭಗವಂತನ ಸ್ವರೂಪ ಸ್ವಭಾವಗಳನ್ನೂ, ಭಕ್ತಿ ಪ್ರಪತ್ತಿಗಳನ್ನೂ, ಪುರುಷಾರ್ಥಗಳನ್ನೂ ನಿರೂಪಿಸಿ ಲೋಕಕ್ಕೆ ಅಜ್ಞಾನಾಂಧಕಾರಗಳನ್ನು ಹೋಗಲಾಡಿಸುತ್ತವೆ. ಗೋಪ ಪುರಾಧಿರಾಜನು ಕೃಪೆಯಿಂದ, ಈ ಆಳ್ವಾರುಗಳಲ್ಲಿ ಅನುಪ್ರವೇಶಿಸಿ ಉಪದೇಶ ಮಾಡಿದ ಪ್ರಬಂಧಗಳು ಇವು. ಈ ರೀತಿಯಲ್ಲಿ ಶ್ರೀಮನ್ನಿಗಮಾಂತ ಮಹಾದೇಶಿಕರಲ್ಲಿಯೂ ಭಗವಂತನಾದ ಹಯಗ್ರೀವನು ಅನುಪ್ರವೇಶಿಸಿ ಲೋಕೋಜ್ಜೀವನಾರ್ಥವಾಗಿ ಈ ರಹಸ್ಯ ಗ್ರಂಥವನ್ನು ಪ್ರಕಾಶಪಡಿಸಿದ್ದಾನೆಂದು ತಾತ್ಪರ್ಯ.

**ಮರುಳಟ್ರದೇಶಿಕರ್** ಇತ್ಯಾದಿಯಾಗಿ ಅನಂತರ ಅಧಿಕಾರಾರ್ಥವನ್ನು ಸಂಗ್ರಹಿಸುತ್ತಾರೆ. ಅದಾಗಿ, **ಮರುಳಟ್ರದೇಶಿಕರ್** – ಅಜ್ಞಾನ, ಅನ್ಯಥಾಜ್ಞಾನ, ವಿಪರೀತಜ್ಞಾನಗಳಿಲ್ಲದ ಆಚಾರ್ಯರುಗಳು, **ವಾನ್** – ಪರಮಪದದಲ್ಲಿ, **ಉಹಪ್ಪಾಲ್** – ತಮಗೆ ಉಂಟಾದ ಆಸೆಯಿಂದ, ತಾವು ಪರಮಪದವನ್ನು ಹೊಂದಿ ಭಗವಂತನನ್ನು ಅನುಭವಿಸಿ ಅವನ ಪಾದ ಪದ್ಮಗಳಲ್ಲಿ ಭಕ್ತಿ ಪರೀವಾಹವಾದ ಕೈಂಕರ್ಯಗಳನ್ನು ಮಾಡಬೇಕೆಂಬುದು ಮಾತ್ರವಲ್ಲದೆ, **ಇಂದವೈಯ್ಯಮೆಲ್ಲಾಮ್**–ಈ ಪ್ರಪಂಚದಲ್ಲಿರುವ ಜನರೆಲ್ಲಾ, **ಇರುಳಟ್ರು** – ಅಜ್ಞಾನವನ್ನು ತೊರೆದು, **ಇರೈಯವನ್** – ಸ್ವಾಮಿಯಾದ ಭಗವಂತನ, **ಇಣೈಯಡಿ** – ಶ್ರೀ ಪಾದಗಳೆರಡನ್ನೂ **ಪೂಂಡಿಡ**– ಆಶ್ರಯಿಸಿ ಉಜ್ಜೀವಿಸುವಂತೆ, **ಎಣ್ಣುದಲಾಲ್** - ನೆನೆಸಿಕೊಂಡು (ಲ್ಯಬ್‌ಲೋಪೇ ಪಂಚಮೀ) **ತೆರುಳುಟ್ರು** – ಜ್ಞಾನದಿಂದ ಕೂಡಿದ, **ಶೆಮ್** – ಸಾತ್ವಿಕ ತ್ಯಾಗ ಯುಕ್ತನಾಗಿ ಭಗವದಾರಾಧನ ರೂಪವಾದ, **ತೊಳ್ಳಿಲ್** - ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನರೂಪ, **ಶೆಲ್ವಮ್ ಪೆರುಹಿ** – ಸಂಪತ್ತು ಅಧಿಕವಾಗಿ, **ಶಿರಂದ ವರ್ಪಾಲ್** – ಶಮದಮಾದಿ ಗುಣಗಳಿಂದ ಉತ್ಕೃಷ್ಟರಾದ ಶಿಷ್ಯರುಗಳ ಹತ್ತಿರ, **ಅರುಳುಟ್ರಶಿಂದೈಯಿನಾಲ್**– ಕೃಪೆಯಿಂದ ಕೂಡಿದ ಮನಸ್ಸಿನಿಂದ, **ಅಳ್ಳಿಯಾವಿಳಕ್ಕು** – ನಿರಪಾಯವಾದ ಸಂಪ್ರದಾಯ ಜ್ಞಾನರೂಪ ದೀಪವನ್ನು, **ಏಟ್ರಿನರೇ** - ಹತ್ತಿಸಿದ್ದಾರೆ. ಇದರಿಂದ ಸಚ್ಛಿಷ್ಯರುಗಳಿಗೇನೆ ಆಚಾರ್ಯನು ಸಂಪ್ರದಾಯಾರ್ಥವನ್ನು ಉಪದೇಶಿಸಬೇಕೆಂಬ "ಆಚಾರ್ಯಕೃತ್ಯವು" ತಿಳಿಸಲ್ಪಟ್ಟಿತು.

ಹೀಗೆ ಆಚಾರ್ಯರುಗಳು, ಜ್ಞಾನಾನುಷ್ಠಾನ ಪೂರ್ಣರಾದ ಸಚ್ಛಿಷ್ಯರುಗಳಿಗೆ ಸಂಪ್ರದಾಯಾರ್ಥಗಳನ್ನು ಉಪದೇಶಿಸಬೇಕೆಂದು ಹೇಳಿ, ಅಷ್ಟೇ ಅಲ್ಲದೆ ಅವರುಗಳಿಗೆ “ವೇದಮನೂಚ್ಯಾಚಾರ್ಯೋಽನ್ತೇ ವಾಸಿನಮನು ಶಾಸ್ತಿ” ಎಂದು ಹೇಳಿರುವಂತೆ ಸನ್ಮಾರ್ಗ ಪ್ರವರ್ತನ ಹೇತು ಭೂತಗಳಾದ, ಸತ್ಯಂವದ, ಧರ್ಮಂಚರ, ಇತ್ಯಾದಿ ಶಿಕ್ಷಾವಿಶೇಷಗಳನ್ನೂ ಮಾಡಿ, ಅವರನ್ನೂ ರಕ್ಷಿಸಿ, ತಮ್ಮನ್ನೂ ರಕ್ಷಿಸಿಕೊಳ್ಳುತ್ತಾರೆಂದು, “ನಿರವಧಿ **ದಯಾದಿವ್ಯೋದನ್ವಾನ್**”, ಎಂದಾರಂಭಿಸಿ ಅನುಗ್ರಹಿಸುತ್ತಾರೆ. ಆದಾಗಿ **ಯಃ**–ಯಾವ ಆಚಾರ್ಯನು, **ನಿರವಧಿ**–ಎಲ್ಲೆ ಇಲ್ಲದೆ, **ದಯಾದಿವ್ಯೋದನ್ವತ್** – ದಯೆಯೆಂಬ ದಿವ್ಯ ಸಮುದ್ರದ **ತರಂಗ** – ಅಲೆಗಳ ಹಾಗೆ, **ನಿರಂಕುಶೈಃ** – ತಡೆಗಳಿಲ್ಲದ, **ಗುಣಸಂಕ್ರಮೈಃ** – ಸದ್ಗುಣಗಳನ್ನು ಒಂದು ಗೂಡಿಸುವ, (ಗುಣಾನಾಂ ಸಂಕ್ರಮೋಯೈಃ ಎಂದು ಸಮಾಸ) **ಶಿಕ್ಷಾಕ್ರಮೈಃ** – ಕಾರ್ಯಾಕಾರ್ಯ ವ್ಯವಸ್ಥಿತಿರೂಪ ಶಾಸ್ತ್ರ ಕ್ರಮಗಳನ್ನು ಅನುಸರಿಸಿ, **ಶಿಷ್ಯಾನ್ ನಿಯಮಯತಿ** – ಶಿಷ್ಯರನ್ನು ನಿಯಮಿಸುತ್ತಾನೆ. **ಅಚರಮಗುರೋಃ** – ಪ್ರಥಮ ಗುರುವಾದ ಭಗವಂತನ, **ಆಜ್ಞಾಪಾರಂಪರೀ** – ಶ್ರುತಿಸ್ಮೃತಿ ಸದಾಚಾರ ರೂಪವಾದ ಆಜ್ಞಾಪರಂಪರೆಗೆ **ಪರವಾನ್** – ಪರವಶನಾದ, **ಅಸೌ** – **ಈ** ಆಚಾರ್ಯನು, **ಇಹ** – ಈ ಲೋಕದಲ್ಲಿ, **ತಾನ್‌ಪರಂ** – ಆ ಶಿಷ್ಯರುಗಳನ್ನು ಮಾತ್ರವಲ್ಲದೆ, **ತಲ್ಲಕ್ಷೇಣ** – ಆ ಶಿಷ್ಯಶಿಕ್ಷಾ ವ್ಯಾಜದಿಂದ, **ಸ್ವಮಪ್ಯಭಿರಕ್ಷತಿ** – ತನ್ನನ್ನೂ ರಕ್ಷಿಸಿಕೊಳ್ಳುತ್ತಾನೆ. ಅನ್ಯಥಾ “ಶಿಷ್ಯಪಾಪಂ ಗುರೋರಪಿ” ಎಂದು ಶಿಷ್ಯನು ಮಾಡುವ ಪಾಪವು ಆಚಾರ್ಯನಿಗೂ ಸಂಕ್ರಮಿಸಿ, ಆಚಾರ್ಯನೂ ಕಷ್ಟಪಡಬೇಕಾಗಿ ಬರುತ್ತದೆ.

ಶ್ರೀಮದ್ರಹಸ್ಯತ್ರಯಸಾರದ “**ಆಚಾರ್ಯಕೃತ್ಯಾಧಿಕಾರ**”ಕ್ಕೆ
“**ಸಾರಚಂದ್ರಿಕಾ**” ವ್ಯಾಖ್ಯಾನವು ಸಂಪೂರ್ಣ.
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ.
ಅಸ್ಮದ್ಗುರು ಪರಂಪರಾಯೈ ನಮಃ.

ಶ್ರಿಯೈ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

# 31 ಅಥ ಶಿಷ್ಯಕೃತ್ಯಾಧಿಕಾರಃ

**ಅಶಿಥಿಲ ಗುರುಭಕ್ತಿಸ್ತತ್ಪ್ರಶಂಸಾದಿ ಶೀಲಃ ।**

**ಪ್ರಚುರ ಬಹುಮತಿ ಸ್ತದ್ವಸ್ತು ವಾಸ್ತ್ವಾದಿಕೇಽಪಿ ।**

**ಗುಣವತಿ ವಿನಿಯೋಕ್ತುಂ ಗೋಪಯನ್ ಸಂಪ್ರದಾಯಂ ।**

**ಕೃತವಿದನಘವೃತ್ತಿಃ ಕಿನ್ನವಿಂದೇನ್ನಿಧಾನಮ್ ॥72॥**

---

**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ**

ಶ್ರೀಮದ್ರಹಸ್ಯತ್ರಯಸಾರದಲ್ಲಿ **"ಶಿಷ್ಯಕೃತ್ಯಾಧಿಕಾರ"**ಕ್ಕೆ **'ಸಾರಚಂದ್ರಿಕಾ'** ವ್ಯಾಖ್ಯಾನ

ಪೂರ್ವಾಧಿಕಾರದಲ್ಲಿ ಆಚಾರ್ಯನು ಸಚ್ಛಿಷ್ಯನಿಗೆ ಸಂಪ್ರದಾಯಾರ್ಥಗಳನ್ನು ಉಪದೇಶಿಸಿಯೇ ಜ್ಞಾನದೀಪವನ್ನು ಪ್ರಜ್ವಲಿಸಬೇಕೆಂದು ನಿರ್ಬಂಧಿಸಿದರು. ಈ ಅಧಿಕಾರದಲ್ಲಿ ಸದಾಚಾರ್ಯನಲ್ಲಿ ಜ್ಞಾನವನ್ನು ಉಪದೇಶ ಹೊಂದಿದ ಶಿಷ್ಯನಿಗೆ ಅವಶ್ಯವಾಗಿರಬೇಕಾದ ಸದ್ಗುಣಗಳನ್ನೂ ಕರ್ತವ್ಯ ವಿಶೇಷಗಳನ್ನೂ ಆಚಾರ್ಯರು ವ್ಯವಸ್ಥೆಗೊಳಿಸುತ್ತಾರೆ. **ಅಶಿಥಲ ಗುರುಭಕ್ತಿ:** ಇತ್ಯಾದಿ – ಶಿಷ್ಯನು ಸ್ವಲ್ಪವೂ ಕಡಿಮೆಯಾಗದ ರೀತಿಯಲ್ಲಿ ಪರಿಪೂರ್ಣವಾದ ಆಚಾರ್ಯ ಭಕ್ತಿಯಿಂದ ಕೂಡಿದವನಾಗಿ **ತತ್ಪ್ರಶಂಸಾದಿ ಶೀಲಃ** – ಆ ಭಕ್ತಿಯ ಕಾರ್ಯವಾದ ಆಚಾರ್ಯ ಗುಣ ಪ್ರಶಂಸಾ ಶೀಲನಾಗಿ, ಆದಿ ಶಬ್ದದಿಂದ ಶುಶ್ರೂಷಾದಿಗಳು ವಿವಕ್ಷಿತ. **ತದ್ವಸ್ತುವಾಸ್ತ್ವಾದಿಕೇಽಪಿ**-ಆಚಾರ್ಯನ ಪುತ್ರ ಕ್ಷೇತ್ರ ಪೂಜಾಸ್ಥಾನಗಳು ವಿವಕ್ಷಿತ **ವಾಸ್ತು**-ಮನೆ, ಆದಿ ಶಬ್ದದಿಂದ ಗ್ರಾಮಾದಿ ಸಂಗ್ರಹ. ಇವುಗಳಲ್ಲಿ **ಪ್ರಚುರಬಹುಮತಿಃ**–ವಿಶೇಷವಾದ ಗೌರವ ಅಭಿಮಾನಗಳನ್ನುಳ್ಳವನಾಗಿರಬೇಕು.

'ತೇನೈಷಪೂರ್ವಮಾಕ್ರಾಂತಃ ಆಶ್ರಮ ಶ್ರಮನಾಶನಃ /

ಮಯಾಪಿ ಭಕ್ತ್ಯಾ ತಸ್ಯೈವ ವಾಮನಸ್ಯೋಪ ಭುಜ್ಯತೇ ॥

ಎಂದು ವಿಶ್ವಾಮಿತ್ರರು, ವಾಮನನು ವಾಸವಾಗಿದ್ದ ಸಿದ್ಧಾಶ್ರಮವನ್ನು ಭಕ್ತಿಪೂರ್ವಕವಾಗಿ ಸ್ತುತಿಸಿ ಗೌರವಿಸುತ್ತಾ ಅಲ್ಲೇ ವಾಸಿವಾಗಿರುತ್ತಿದ್ದರು.

ಬ್ರಾಹ್ಮಣೋಽಸೀತಿ ಪೂಜ್ಯೋಽಮೇ ವಿಶ್ವಾಮಿತ್ರಕೃತೇನ ಚ ।

ವಿಶ್ವಾಮಿತ್ರಃ ಪೂಜನೀಯ ಸ್ತದೀಯಸ್ತ್ವಂ ದ್ವಿಜೋತ್ತಮ ॥

## ಆಚಾರ್ಯವಿಷಯೇ ಪ್ರತ್ಯುಪಕಾರಾಭಾವಮುಪಪಾದಯಿತಿ

**ಇವ್ವರ್ಥಙ್ಗಳೈ ಯೆಲ್ಲಾಮ್ ಮಿಡಿಯನುಕ್ಕು ಅಹತ್ತುಕ್ಕುಳ್ಳೇ ಮಹಾನಿಧಿಯೈ ಕ್ಕಾಟ್ಟಿಕ್ಕೊಡುಕ್ಕು ಮಾಪ್ಪೋಲೇ ವೆಳಿಯಿಡುಹೈಯಾಲೇ ಮಹೋಪಕಾರನಾನ ವಾಚಾರ್ಯನ್‌ತಿರತ್ತಿಲ್, ಶಿಷ್ಯನ್ ಕೃತಜ್ಞನಾಯಿರುಕ್ಕವೇಣುಮೆನ್ರುಮ್, ದ್ರೋಹಮ್ ಪಣ್ಣಾದೊೞಿಯ ವೇಣುಮೆನ್ರುಮ್, ಶಾಸ್ತ್ರಙ್ಗಳ್ ಶೊನ್ನವಿಡಮ್ ಇರಣ್ಡು ವಿಭೂತಿಯುಮ್, ವಿಭೂತಿಮಾನುಮ್ ಇವನೈ ಚ್ಚೀ ಚ್ಚೀಯೆನ್ನುಮ್ ಪಡಿಯುಮಾಯ್, ಹಿತಂಶೊನ್ನ ಪ್ರಹ್ಲಾದ ವಿಭೀಷಣಾದಿಹಳುಕ್ಕು ಪ್ರತಿಕೂಲರಾನ ಹಿರಣ್ಯರಾವಣಾದಿಹಳೋಡು ತುಲ್ಯಮಾಯ್,**

**1) "ವಿದ್ಯಾಚೋರೋ ಗುರುದ್ರೋಹೀ ವೇದೇಶ್ವರ ವಿದೂಷಕಃ।**
**ತ ಏತೇ ಬಹುಪಾಪ್ಮಾನಃ ಸದ್ಯೋದಂಡ್ಯಾ ಇತಿಶ್ರುತಿಃ ॥"**
**ಎನ್ಗಿರಪಡಿಯೇ ದಂಡ್ಯನುಮಾಹಾಮೈಕ್ಕಾಹವತ್ತನೈ. ಪ್ರತ್ಯುಪಕಾರಮ್ ಶೊನ್ನಪಡಿಯನ್ರು.**

---

(ನೀನು ಬ್ರಾಹ್ಮಣನಾದ್ದರಿಂದ ಪೂಜ್ಯನು. ಮೇಲೂ ವಿಶ್ವಾಮಿತ್ರರ ಶಿಷ್ಯನು. ಅವರು ಪೂಜ್ಯರು. ಅವರ ಶಿಷ್ಯನಾದ ನೀನೂ ಪೂಜ್ಯನು)

"ಗುರುವದ್ಗುರುವರ್ಗಶ್ಚ ದ್ರಷ್ಟವ್ಯೋ ನಿತ್ಯಮೇವಹಿ ।
ಶಯನಾಸನಯಾನಾದ್ಯಂ ತದೀಯಮಪಿ ವಂದಯೇ ॥

(ಆಚಾರ್ಯನ ಹಾಗೆಯೇ ಆಚಾರ್ಯನ ಪತ್ನೀಪುತ್ರ **ಶಿಷ್ಯಾದಿಗಳು** ಗೌರವ್ಯರು. ಆಚಾರ್ಯನ ಶಯನ, ಆಸನ, ರಥ ಮೊದಲಾದವಗಳನ್ನೂ ವಂದಿಸುತ್ತೇನೆ.) ಇತ್ಯಾದಿ ವಚನಗಳು ಇಲ್ಲಿ ಅಭಿಪ್ರೇತಗಳು. **ಗುಣವತಿವಿನಿಯೋಕ್ತುಂ ಸಂಪ್ರದಾಯಂ** – ಸದ್ಗುಣಗಳಿಂದ ಕೂಡಿದವನಲ್ಲಿ ಸಂಪ್ರದಾಯಾರ್ಥಗಳನ್ನು ವಿನಿಯೋಗ ಮಾಡಲು, **ಗೋಪಯನ್** – ಆ ಅರ್ಥಗಳನ್ನು ಕಾಪಾಡಿಕೊಂಡು ಬಂದು, **ಕೃತವಿತ್** – ಆಚಾರ್ಯನಲ್ಲಿ ಕೃತಜ್ಞತಾನುಸಂಧಾನ ಮಾಡಿಕೊಂಡು, **ಅನಘವೃತ್ತಿಃ** – ನಿರಪರಾಧವಾದ ಆಜ್ಞಾನುಜ್ಞಾ ಕೈಂಕರ್ಯಗಳನ್ನು ಮಾಡಿಕೊಂಡು ಬಂದರೆ, **ನಿಧಾನಂ** – ಕೈಂಕರ್ಯ ಪ್ರತಿಸಂಬಂಧಿಯಾದ ಪರಮಪುರುಷನೆಂಬ ಮಹಾನಿಧಿಯನ್ನು, **ಕಿಂ ನ ವಿಂದೇತ್**– ಪಡೆಯುವುದಿಲ್ಲವೇ. ಅವಶ್ಯ ಪಡೆಯುತ್ತಾನೆಂದರ್ಥ.

ಆಚಾರ್ಯನಲ್ಲಿ ಪರಿಪೂರ್ಣ ಭಕ್ತಿಯಿಂದ ಕೂಡಿದ ಶಿಷ್ಯನು, ಶುದ್ಧವಾದ ಅನುಷ್ಠಾನದಿಂದ ಕೂಡಿ, ಆಚಾರ್ಯೋಪದಿಷ್ಟ ಸಂಪ್ರದಾಯಾರ್ಥಗಳನ್ನು ಸಚ್ಛಿಷ್ಯನಿಗೆ ಉಪದೇಶಿಸಲು ರಕ್ಷಿಸಿಟ್ಟುಕೊಟ್ಟುಕೊಂಡು ಬಂದರೆ ಭಗವಂತನ ಪಾದಪದ್ಮಗಳೆಂಬ ಮಹಾನಿಧಿಯನ್ನು ಪಡೆಯುತ್ತಾನೆಂದು ತಾತ್ಪರ್ಯ.

### ಆಚಾರ್ಯನಿಗೆ ಶಿಷ್ಯನು ಮಾಡುವ ಪ್ರತ್ಯುಪಕಾರ ಯಾವುದೂ ಇಲ್ಲ.

**ಇವ್ವರ್ಥಂಗಳೈಯೆಲ್ಲಾಮ್** ಇತ್ಯಾದಿ – ಈ ತತ್ವಹಿತಪುರುಷಾರ್ಥ ರೂಪ ಅರ್ಥಗಳನ್ನೆಲ್ಲಾ **ಮಿಡಿಯನುಕ್ಕು**–ಪರಮ ದರಿದ್ರನಿಗೆ, **ಅಹತ್ತುಕ್ಕುಳೇ** ಇತ್ಯಾದಿ ತನ್ನ ಮನೆಯಲ್ಲೇ ಮಹಾನಿಧಿಯನ್ನು ತೋರಿಸಿಕೊಡುವಂತೆ, ಪ್ರಕಾಶಪಡಿಸುವುದರಿಂದ ಮಹೋಪಕಾರಕನಾದ ಆಚಾರ್ಯನ ವಿಷಯದಲ್ಲಿ ಶಿಷ್ಯನು ಕೃತಜ್ಞನಾಗಿರಬೇಕೆಂದೂ, 'ತಸ್ಮೈ ನ ದ್ರುಹ್ಯೇತ್ ಕೃತಮಸ್ಯ ಜಾನೀಹಿ" ಎಂದು ಹೇಳುವಂತೆ ಆಚಾರ್ಯನಿಗೆ ದ್ರೋಹವನ್ನು ಮಾಡದೇ ಕೃತಜ್ಞನಾಗಿ ಇರಬೇಕೆಂದೂ, ಶಾಸ್ತ್ರಗಳು ಹೇಳಿರುವುದು, ಏತಕ್ಕೆಂದರೆ, ಲೀಲಾವಿಭೂತಿ ನಿತ್ಯ ವಿಭೂತಿಗಳಲ್ಲಿರುವವರೂ, ಈ ವಿಭೂತಿಗಳನ್ನುಳ್ಳ ಭಗವಂತನೂ ಇವನನ್ನು ಛೀ, ಛೀ, ಎಂದು ನಿಂದಿಸಿ, ಹಿತವನ್ನು ಹೇಳಿದ ಪ್ರಹ್ಲಾದ ವಿಭೀಷಣಾದಿಗಳಿಗೆ ಪ್ರತಿಕೂಲರಾದ ಹಿರಣ್ಯ ಕಶಿಪು, ರಾವಣಾದಿಗಳಿಗೆ ಸಮನಾಗಿ 1) **ವಿದ್ಯಾಚೋರೋ-**

2) "ಶರೀರಮರ್ಥಂ ಪ್ರಾಣಂಚ ಸದ್ಗುರುಭ್ಯೋ ನಿವೇದಯೇತ್" ಎನ್ರುಮ್,

3) "ಸರ್ವಸ್ವಂ ವಾ ತದರ್ಧಂ ವಾ ತದರ್ಧಾದರ್ಧಮೇವ ವಾ ।
ಗುರವೇ ದಕ್ಷಿಣಾಂ ದದ್ಯಾದ್ಯಥಾ ಶಕ್ತ್ಯಪಿ ವಾ ಪುನಃ ॥"

ಎನ್ರುಮ್ ಇಪ್ಪಡೈಹಳಿಲ್ ಚೊಲ್ಲುಹಿರನ್ವೈಯುಮ್ ಪ್ರಣಿಪಾತಾಭಿವಾದನಾದಿಹಳೈಪ್ಪೋಲೇ ಇವನುಕ್ಕು ಚ್ಚಿಲ ಕರ್ತವ್ಯಙ್ಗಳೈ ಶೊಲ್ಲಿತ್ತತ್ತನ್ನೈಪ್ಪೇಕ್ಕಿ, 4) ಕೃಪಯಾ ನಿಸ್ಪೃಹೋವದೇತ್" ಎನ್ನುಮ್ಪಡಿ ಇರುಕ್ಕಿರ ಅನನ್ಯ ಪ್ರಯೋಜನನಾನ ಆಚಾರ್ಯನುಕ್ಕು ಪ್ರತ್ಯುಪಕಾರಮ್ ಶೊನ್ನಪಡಿಯನ್ರು ಭಗವಾನ್ಪಕ್ಕಲಿಲ್‌ಪೋಲೇ ಆಚಾರ್ಯನ್ಪಕ್ಕಲಿಲೇ ವರ್ತಿಪ್ಪಾನೆನ್ರುಮ್, ಅವನುಕ್ಕು ನಲ್ಲಾನಾನಾರ್ಪ್ಪೋಲೇ ಆಚಾರ್ಯನುಕ್ಕು ನಲ್ಲನಾಯ್ ಇರುಪ್ಪಾನೆನ್ರುಮ್, ವೇದಾಂತಙ್ಗಳಿಲ್ ಶೊನ್ನದವುಮ್,

5) "ನ ಪ್ರಮಾದ್ಯೇದ್ಗುರೌಶಿಷ್ಯೋ ವಾಙ್ಮನಃ ಕಾಯ ಕರ್ಮಭಿಃ ।
ಅವಿಭಜ್ಯಾತ್ಮನಾಚಾರ್ಯಂ ವರ್ತೇತಾಸ್ಮಿನ್ ಯಥಾಽಚ್ಯುತೇ ॥

6) "ದೇವಮಿವ ಆಚಾರ್ಯಮುಪಾಸೀತ" ಎನ್ರುಮ್ ಶಾಂಡಿಲ್ಯ ಆಪಸ್ತಂಬಾದಿಹಳ್ ಶೊನ್ನದುವುಮ್, ಆಚಾರ್ಯನುಕ್ಕು ಪ್ರತ್ಯುಪಕಾರಮ್ ಶೊನ್ನಪಡಿಯನ್ರು. ಶಾಸ್ತ್ರಚಕ್ಷುಸ್ಸಾನ ಇವನ್ ವಿಗ್ರಹಕಣ್ ಕುರು

---

ಇತ್ಯಾದಿ ವಿದ್ಯಾಚೋರನೂ, ಗುರುದ್ರೋಹಿಯೂ, ವೇದವನ್ನೂ ಈಶ್ವರನನ್ನೂ ದೂಷಿಸುವವನೂ, ಬಹಳ ಪಾಪದಿಂದ ಕೂಡಿದವನಾಗಿ ಕತ್ಕ್ಷಣದಲ್ಲಿಯೇ ದಂಡ್ಯನು" ಎಂದು ಹೇಳುವಂತೆ, ಶಿಕ್ಷೆಯನ್ನು ಪಡೆಯದೇ ಇರುವುದಕ್ಕೋಸ್ಕರವಷ್ಟೇ. ಪ್ರತ್ಯುಪಕಾರವನ್ನು ಹೇಳಿದಂತೆಯಲ್ಲ. 2) **ಶರೀರಮರ್ಥಂಪ್ರಾಣಂಚ** ಇತ್ಯಾದಿಯಾಗಿ ಶರೀರವನ್ನೂ, ತನ್ನ ದ್ರವ್ಯವನ್ನೂ, ಪ್ರಾಣವನ್ನೂ ಸದ್ಗುರುವಿಗೆ ನಿವೇದನ ಮಾಡಬೇಕೆಂದು ಹೇಳಿರುವುದೂ 3) **ಸರ್ವಸ್ವಂವಾ ತದರ್ಧಂ** ವಾ ಇತ್ಯಾದಿಯಾಗಿ ತನ್ನ ಸರ್ವಸ್ವತ್ತನ್ನೂ, ಅಥವಾ ಅದರಲ್ಲಿ ಅರ್ಧವನ್ನಾದರೂ ಆಚಾರ್ಯನಿಗೆ ದಕ್ಷಿಣೆಯಾಗಿ ಸಮರ್ಪಿಸಬೇಕು. ಅದಕ್ಕೆ ಶಕ್ತಿಯಿಲ್ಲದಿದ್ದರೆ ತನ್ನ ಶಕ್ತ್ಯನುಸಾರವಾಗಿಯಾದರೂ ಆಚಾರ್ಯನಿಗೆ ಗುರುದಕ್ಷಿಣೆ ಕೊಡಬೇಕು, ಇತ್ಯಾದಿಯಾಗಿ ಹೇಳಿರುವುದೆಲ್ಲಾ, **ಪ್ರಣಿಪಾತಾದಿಹಳೈಪ್ಪೋಲೇ** ಇತ್ಯಾದಿ-ನಮಸ್ಕಾರ, ಅಭಿವಾದನಾದಿಗಳ ಹಾಗೆ ಇವನಿಗೆ ಕೆಲವು ಕರ್ತವ್ಯಗಳನ್ನು ಹೇಳಿರುತ್ತದೆಯಷ್ಟೇ. ಅಲ್ಲದೆ, 4) **ಕೃಪಯಾನಿಸ್ಪೃಹೋವದೇತ್**-ಕೃಪೆಯಿಂದ, ಹಣ ಕಾಸುಗಳಲ್ಲಿ ಆಸೆಯಿಂದಲ್ಲದೆ ಉಪದೇಶ ಮಾಡಬೇಕು, ಎಂದು ಹೇಳುವಂತೆ ಕೃಪೆ, ನಿಸ್ಪೃಹತೆಗಳಿಂದ ಕೂಡಿದ, ಅನನ್ಯ ಪ್ರಯೋಜನನಾದ ಆಚಾರ್ಯನಿಗೆ ಪ್ರತ್ಯುಪಕಾರವನ್ನು ಮಾಡಬೇಕೆಂದು ಹೇಳಿರುವುದಲ್ಲ. **ಭಗವಾನ್ ಪಕ್ಕಲಿಲ್‌ಪೋಲೇ** ಇತ್ಯಾದಿ ಭಗವಂತನ ಸಮೀಪದಲ್ಲಿ ಶ್ರದ್ಧಾ ಭಕ್ತಿಯಿಂದ ವರ್ತಿಸುವ ರೀತಿಯಲ್ಲಿ ಆಚಾರ್ಯನ ಹತ್ತಿರವೂ ವರ್ತಿಸಬೇಕೆಂದೂ, ಭಗವಂತನಲ್ಲಿ ಯೋಗ್ಯನಾಗಿ ನಡೆದುಕೊಳ್ಳುವಂತೆ ಆಚಾರ್ಯನಲ್ಲಿಯೂ ಯೋಗ್ಯನಾಗಿ ನಡೆದು ಕೊಳ್ಳಬೇಕೆಂದೂ' "ಯಸ್ಯದೇವೇ ಪರಾಭಕ್ತಿಃ ಯಥಾದೇವೇ ತಥಾಗುರೌ (ಶ್ವೇತಾಶ್ವತರೋಪನಿಷತ್ತು) ಎಂದು ವೇದಾಂತಗಳಲ್ಲಿ ಹೇಳಿರುವುದೂ 5) **ನಪ್ರಮಾದ್ಯೇದ್ಗುರೌಶಿಷ್ಯಃ**-ಆಚಾರ್ಯನ ವಿಷಯದಲ್ಲಿ ಶಿಷ್ಯನು ಅನವಧಾನನಾಗಿರಬಾರದು 6) **ದೇವಮಿವಾಚಾರ್ಯಮುಪಾಸೀತ,** ಭಗವಂತನ ಹಾಗೆ ಆಚಾರ್ಯನನ್ನೂ ಸೇವಿಸಬೇಕು. ಎಂದೂ, ಶಾಂಡಿಲ್ಯ ಆಪಸ್ತಂಬಾದಿಗಳು ಹೇಳಿರುವುದೂ ಆಚಾರ್ಯನಿಗೆ ಪ್ರತ್ಯುಪಕಾರವನ್ನು ಹೇಳಿದಂತೆಯಲ್ಲ. **ಶಾಸ್ತ್ರಚಕ್ಷುಸ್ಸಾನ ಇವನ್** ಇತ್ಯಾದಿ,

---

1) 2) ವಿಹಗೇಶ್ವರ ಸಂಹಿತೆ 3)

4) ಶಾಂಡಿಲ್ಯ ಸ್ಮೃತಿ 1-116. ಸಂವತ್ಸರಂ ತದರ್ಧಂ ವಾ ತದರ್ಧಾ ದರ್ಧಮೇವ ವಾ ॥ ಪರೀಕ್ಷ್ಯ ವಿವಿಧೋಪಾಯೈಃ ಕೃಪಯಾ ನಿಸ್ಪೃಹೋ ವದೇತ್ ॥

5) ಶಾಂಡಿಲ್ಯ ಸ್ಮೃತಿ 1-118

6) ಆಪ. ಸೂತ್ರ-1-6 13

**ಡನಾ ಹಾನ್ಮೈಕ್ಕುಮ್ ಭಗವದನುಭವಮ್ ಪೋಲೇ ವಿಲಕ್ಷಣಮಾನ ವಿವ್ವನುಭವತ್ತೈ ಜನ್ಮಭಿಕ್ಷುವಾನ ಇವನ್ ಇಳ್ವಾನ್ಮೈಕ್ಕುಮ್ ಶೊಲ್ಲಿತ್ತತ್ತನ್ನೈ. ಇಪ್ಪಡಿ ಇವ್ವಿಷಯತ್ತಿಲ್ ಪ್ರತ್ಯುಪಕಾರ ಮಿಲ್ಲೈ ಎನ್ನು ಮಿಡತ್ತೈ**

**1) "ಬ್ರಹ್ಮವಿದ್ಯಾ ಪ್ರದಾನಸ್ಯ ದೇವೈರಪಿ ನಶಕ್ಯತೇ ।**
**ಪ್ರತಿ ಪ್ರದಾನಮಪಿ ವಾ ದದ್ಯಾಚ್ಛಕ್ತಿತ ಆದರಾತ್ ॥"**

**ಎನ್ರು ಶ್ರೀ ಶಾಂಡಿಲ್ಯ ಭಗವಾನ್ ಅರುಳಿಚ್ಚೆಯ್‌ದಾನ್. ಇದಿಲ್ ಯಥಾಶಕ್ತಿ ದಾನಮ್ ಶೊನ್ನದುವುಮ್ ತನ್ನಾದರತ್ತುಕ್ಕು ಪ್ಪೋಕ್ಕು ವೀಡಾಹ ಚ್ಚೊನ್ನದತ್ತನ್ನೈ. ಇವ್ವಳನ್ನೈಕ್ಕೊಂಡು ಪ್ರತ್ಯುಪಕಾರಮ್ ಪಣ್ಣಿನಾನಾಹತ್ತನ್ನೈ ನಿನೈತ್ತಿರುಕ್ಕಪ್ಪೆರಾನ್.**

**ಅಥ ಶಿಷ್ಯ ಕೃತ್ಯಾನಾಹ**

**ಇಪ್ಪಡಿ ಪ್ರತ್ಯುಪಕಾರ ರಹಿತನಾನ ಇವನುಕ್ಕು ಚ್ಚೆಯ್ಯವಡುಪ್ಪದೆನ್ನೆನ್ನಿಲ್, ಇವನುಪದೇಶಿತ್ತ ಅರ್ಥಙ್ಗಳೈ,**

---

ಶಾಸ್ತ್ರವೆಂಬ ಕಣ್ಣುಳ್ಳವನ್ನು ಅಂದರೆ ಅತೀಂದ್ರಿಯಗಳಾದ ವಿಷಯಗಳನ್ನು ಶಾಸ್ತ್ರ ಮೂಲಕವೇ ತಿಳಿದುಕೊಳ್ಳಲು ಸಾಧ್ಯ. **ವಿೞಿಕಣ್ ಕುರುಡನಾಹಾನ್ಮೈಕ್ಕುಮ್** – ಕಣ್ಣನ್ನು ಅಗಲವಾಗಿ ತೆರೆದಿಟ್ಟು ಕೊಂಡಿದ್ದರೂ ಚಕ್ಷುರಿಂದ್ರಿಯವಿಲ್ಲದವನು ಹೇಗೆ ಬಾಹ್ಯವಸ್ತುಗಳನ್ನು ನೋಡಲಾಗದೆ ಇರುತ್ತಾನೆಂಬೋ, ಹಾಗೆ **ಶಾಸ್ತ್ರವೆಂಬ** ಕಣ್ಣು ಇದ್ದರೂ – ಅಂದರೆ ವೇದಾಂತ ಜ್ಞಾನವನ್ನು ಸಂಪಾದಿಸಿದ್ದರೂ, ಆಚಾರ್ಯಭಕ್ತಿಯಿಲ್ಲದಿದ್ದರೆ ಯಥಾವಸ್ಥಿತವಾದ ಅರ್ಥಗಳು ಪ್ರಕಾಶಿಸಲಾರವು. ಹಾಗೆ ಆಗದೆ ಇರುವುದಕ್ಕೋಸ್ಕರವೂ, ಭಗವದನುಭವದ ಹಾಗೆ ವಿಲಕ್ಷಣವಾದ ಈ ಆಚಾರ್ಯ ಭಕ್ತಿರೂಪವಾದ ಅನುಭವವನ್ನು, **ಜನ್ಮಭಿಕ್ಷುವಾನ** ಇತ್ಯಾದಿ – ಹುಟ್ಟಿನಿಂದ ಆರಂಭಿಸಿ ಭಗವದಾಚಾರ್ಯಾನುಭವರಸವೆಂಬ ಧನವಿಲ್ಲದ, ಇವನು ಇದನ್ನು ಕಳೆದುಕೊಳ್ಳದೆ ಇರಲು ಹೇಳಿರುತ್ತದೆಯಷ್ಟೆ. **ಇಪ್ಪಡಿ ಇವ್ವಿಷಯತ್ತಿಲ್** ಇತ್ಯಾದಿ – ಹೀಗೆ ಈ ವಿಷಯದಲ್ಲಿ ಪ್ರತ್ಯುಪಕಾರವಿಲ್ಲವೆಂಬುದನ್ನು (1) **ಬ್ರಹ್ಮವಿದ್ಯಾಪ್ರದಾನಸ್ಯ** ಇತ್ಯಾದಿ – ಬ್ರಹ್ಮ ಪ್ರಾಪಕವಾದ ಬ್ರಹ್ಮವಿದೆಯನ್ನು ಒಬ್ಬನಿಗೆ ದಾನ ಮಾಡುವುದಕ್ಕೆ **ಸಮಾನ**ವಾದ ವಸ್ತು ಪ್ರದಾನವು ದೇವತೆಗಳಿಂದಲೂ **ಸಾಧ್ಯವಿಲ್ಲ**. ಹೀಗೆ ಆಚಾರ್ಯನು ಉಪದೇಶಿಸಿದ ಬ್ರಹ್ಮ ವಿದ್ಯೆಗೆ **ಪ್ರತ್ಯುಪಕಾರವೇನೂ** ಇಲ್ಲವೆಂಬುದನ್ನು ತಿಳಿದು ಸುಮ್ಮನೆಯೂ ಇರಬಾರದು. ಇದಕ್ಕೆ ಪ್ರತಿಯಾಗಿ ಧನಾದಿಗಳನ್ನು ತನ್ನ ಶಕ್ತ್ಯನುಸಾರ ಆಚಾರ್ಯನಿಗೆ ಸಮರ್ಪಿಸಬೇಕು ಎಂದು ಶಾಂಡಿಲ್ಯ ಭಗವಾನ್ ಕೃಪೆಮಾಡಿ ಹೇಳಿರುತ್ತಾರೆ. ಯಥಾಶಕ್ತಿದಾನವೂ ಅಂತತಃ ಆಚಾರ್ಯನಿಗೆ ಮಾಡುವ ಪ್ರತ್ಯುಪಕಾರವಲ್ಲವೇ ಎಂದರೆ **ಇದಿಲ್ ಯಥಾಶಕ್ತಿದಾನಂ** ಎಂದಾರಂಭಿಸಿ ಉತ್ತರಿಸುತ್ತಾರೆ. ಆದಾಗಿ ಆಚಾರ್ಯನ ವಿಷಯದಲ್ಲಿ ಯಥಾಶಕ್ತಿ ದ್ರವ್ಯಾದಿ ದಾನವನ್ನು ಮಾಡ ಹೇಳಿರುವುದೂ ಪ್ರತ್ಯುಪಕಾರ ದೃಷ್ಟಿಯಿಂದಲ್ಲ. ಮತ್ತೇನೆಂದರೆ **ತನ್ನಾದರತ್ತುಕ್ಕು** ಇತ್ಯಾದಿ – ತನಗೆ ಆಚಾರ್ಯನಲ್ಲಿರುವ ಭಕ್ತಿಗೆ **ಪೋಕ್ಕುವೀಡಾಹ** – ಪರೀವಾಹವಾಗಿ, **ಶೊನ್ನದತ್ತನ್ನೈ** – ಹೇಳಿರುತ್ತದೆಯಷ್ಟೇ. **ಇವ್ವಳವೈಕ್ಕೊಂಡು** ಇತ್ಯಾದಿ – ಈ ಯಥಾಶಕ್ತಿದಾನವನ್ನು ಕೊಂಡು ಪ್ರತ್ಯುಪಕಾರವನ್ನು ಮಾಡಿದಾಗಿ ತನ್ನನ್ನು ತಿಳಿದುಕೊಳ್ಳಲಾಗದು.

**ಶಿಷ್ಯನ ಕರ್ತವ್ಯಗಳು**

ಹೀಗೆ ಆಚಾರ್ಯನಿಗೆ ಸಂತೋಷವಾಗುವಂತೆ ಮಾಡಲು ಪ್ರತ್ಯುಪಕಾರವು ಯಾವುದೂ ಇಲ್ಲವೆಂದರೆ, ಶಿಷ್ಯನು ಆಚಾರ್ಯನ ವಿಷಯದಲ್ಲಿ ಮಾಡಬೇಕಾದದು ಏನು ಎಂದರೆ ಅದನ್ನು **ಇಪ್ಪಡಿ ಪ್ರತುಪಕಾರ ರಹಿತನಾನ** –

---

1) ಶಾಂಡಿಲ್ಯ ಸ್ಮೃತಿ 1-17

1) "ಕಪಾಲಸ್ಥಂ ಯಥಾ ತೋಯಂ ಶ್ವದೃತೌಚ ಯಥಾಪಯಃ ।
ದುಷ್ಟಂಸ್ಯಾತ್ ಸ್ಥಾನದೋಷೇಣ ವೃತ್ತಹೀನೇ ತಥಾ ಶ್ರುತಮ್ ॥

ಎನ್ಱಿರಪಡಿಯೇ ತನ್ ವಿಪರೀತಾನುಷ್ಠಾನಙ್ಗಳಾಲೇ ಕಪಾಲಸ್ಥತೋಯಾದಿಹಳೈಪ್ಪೋಲೇ ಅನುಪಜೀವ್ಯಮಾಕ್ಕಾದೊೞಿಯವುಮ್.

2) ಯಚ್ಛ್ರುತಂ ನ ವಿರಾಗಾಯ ನ ಧರ್ಮಾಯ ನ ಶಾನ್ತಯೇ।
ಸುಬದ್ಧಮಪಿ ಶಬ್ದೇನ ಕಾಕವಾಶಿತ ಮೇವ ತತ್ ॥

ಎನ್ಱಿರಪಡಿಯೇ, ಕತ್ತದೇ ಪ್ರಯೋಜನಮಾಕ್ಕಾದೊೞಿಯವುಮ್, ಇವತ್ತೈಕ್ಕೊಂಡು ವಾನ್ತಾಶಿಯಾಹಾದೊೞಿಯವುಮ್. ಇವತ್ತೈಯೆಲ್ಲಾಮ್

3) "ಪಣ್ಡಿತೈರರ್ಥಕಾರ್ಪಣ್ಯಾತ್ ಪಣ್ಯಸ್ತ್ರೀಭಿರಿವ ಸ್ವಯಮ್ ।
ಆತ್ಮಾ ಸಂಸ್ಕೃತ್ಯ ಸಂಸ್ಕೃತ್ಯ ಪರೋಪಕರಣೀಕೃತಃ ॥"

ಇತ್ಯಾದಿಹಳಿಲ್ ಪರಿಹಸಿಕ್ಕಿರಪಡಿಯೇ ಗಣಿಕಾಲಂಕಾರಮಾಕ್ಕುದಲ್, ವಿಲೈಚ್ಚಾಟ್ಟಾಕ್ಕುದಲ್, ಅನ್ಱಿಲ

---

ಇತ್ಯಾದಿ ತಿಳಿಸುತ್ತಾರೆ. ಅದಾಗಿ ಹೀಗೆ ಆಚಾರ್ಯನ ವಿಷಯದಲ್ಲಿ ಪ್ರತ್ಯುಪಕಾರ ರಹಿತನಾದ ಈ ಶಿಷ್ಯನು ಮಾಡತಕ್ಕದುದೇನಿದೆ ಎಂದರೆ, ಈ ಆಚಾರ್ಯನು ಉಪದೇಶಿಸಿದ ಅರ್ಥಗಳನ್ನು [I] (1) **ಕಪಾಲಸ್ಥಂ ಯಥಾತೋಯಂ** ಇತ್ಯಾದಿ – ಮನುಷ್ಯನ ತಲೆ ಚಿಪ್ಪಿನಲ್ಲಿರುವ ನೀರೂ, **ಶ್ವದೃತೌ** – ನಾಯಿನ ಚರ್ಮದಿಂದ ಮಾಡಿದ ಚೀಲದಲ್ಲಿಟ್ಟಿರುವ ಹಾಲು ಅಥವಾ ನೀರೂ, ಸ್ಥಾನದೋಷದಿಂದ, ಹೇಗೆ ಅಶುದ್ಧವಾಗುತ್ತವೆಯೋ ಆ ರೀತಿಯಲ್ಲಿ **ವೃತ್ತಹೀನೇ** – ಆಚಾರ ಹೀನನಲ್ಲಿ **ಶ್ರುತಂ** – ಶಾಸ್ತ್ರವು, ದೋಷಯುಕ್ತವಾಗುತ್ತದೆ, ಎಂದು ಹೇಳಿರುವಂತೆ ತನ್ನ ವಿಪರೀತಾನುಷ್ಠಾನಗಳಿಂದ, ಕಪಾಲಸ್ಥವಾದ ಅಂದರೆ ಮನುಷ್ಯನ ತಲೆ ಚಿಪ್ಪಿನಲ್ಲಿರುವ ನೀರಿನ ಹಾಗೆ ಆಚಾರ್ಯೋಪದೇಶಗಳನ್ನು **ಅನುಪಜೀವ್ಯಮಾಕ್ಕಾದೊೞಿಯವುಮ್** – ಉಪಯೋಗವಿಲ್ಲದೆ ಇರುವಂತೆ ಮಾಡದಿರಬೇಕು. [II[ (2) **ಯಚ್ಛ್ರುತಂ ನವಿರಾಗಾಯ** ಇತ್ಯಾದಿ – ಯಾವ ಶಾಸ್ತ್ರೋಪದೇಶವು, ವೈರಾಗ್ಯವನ್ನುಂಟು ಮಾಡುವುದಿಲ್ಲವೋ, ಧರ್ಮಾನುಷ್ಠಾನಗಳಲ್ಲಿ ಪ್ರವರ್ತಿಸುವುದಿಲ್ಲವೋ **ಶಾಂತಯೇ** ಇಂದ್ರಿಯಜಯಗಳು ಏರ್ಪಡಲು ಸಹಕರಿಸುವುದಿಲ್ಲವೋ, ಆ ಶಾಸ್ತ್ರ ಜ್ಞಾನವು ವ್ಯಾಕರಣಕ್ಕೆ ಅನುಗುಣವಾದ ಶಬ್ದದಿಂದ ಕೂಡಿದ್ದರೂ **ಕಾಕ** – ಕಾಗೆಯ ಕೂಗಿನ ಹಾಗೆ ನಿಷ್ಫಲವು. **ವಾಶಿತಂ** – ತಿರ್ಯಕ್ ಜಂತುಗಳ ಕೂಗಿನ ಹಾಗೆಯೂ ನಿಷ್ಫಲವು. **ಎನ್ಱಿರಪಡಿಯೇ** – ಇತ್ಯಾದಿ ಹೀಗೆ ಹೇಳಿರುವ ರೀತಿಯಲ್ಲಿ ಕಲಿಯುವುದೇ ಪ್ರಯೋಜನವೆಂದು ಅಂದರೆ ವೈರಾಗ್ಯಾದಿಗಳನ್ನು ಸಂಪಾದಿಸಿಕೊಳ್ಳದೆ, ಇರಕೂಡದು. [III] **ಇವತ್ತೈಕ್ಕೊಂಡು** ಇತ್ಯಾದಿ – ಈ ಜ್ಞಾನವನ್ನು ಉಪಯೋಗಿಸಿ **ವಾಂತಾಶಿ** – ಬಾಯಿನಿಂದ ಕಕ್ಕಿದುದನ್ನು ನುಂಗುವಂತೆ, **ಆಹಾದೊೞಿಯವುಮ್** - ಆ ರೀತಿಯಲ್ಲಿ ಈ ವೇದಾಂತ ವಿದ್ಯೆಯನ್ನು ಇತರರಿಗೆ ಹೇಳಿಕೊಟ್ಟು ಹಣವನ್ನು ಸಂಪಾದಿಸಬಾರದು. [IV] **ಇವತ್ತೈಯೆಲ್ಲಾಮ್** ಈ ವಿದ್ಯೆಗಳನ್ನೆಲ್ಲಾ, **ಪಂಡಿತೈರರ್ಥಕಾರ್ಪಣಾತ್** ಇತ್ಯಾದಿ – ಪಂಡಿತರು ಹಣವನ್ನು ಸಂಪಾದಿಸಬೇಕೆಂಬ ಲೋಭದಿಂದ, **ಪಣ್ಯಸ್ತ್ರೀಭಿರಿವ** – ಸೂಳೆಯರ ಹಾಗೆ, ಆತ್ಮಾ – ತಾನು ಸಂಸ್ಕಾರವನ್ನು ಪಡೆದು ಪಡೆದು, ಇತರರಿಗೆ ಉಪಕರಣವಾಗುವಂತೆ ಇತರ ಪ್ರಯೋಜನಕ್ಕೋಸ್ಕರ ತನ್ನನ್ನು ಮಾರಿಕೊಳ್ಳುತ್ತಾರೆ, ಎಂದು ಪರಿಹಾಸ್ಯವಾಗಿ ಹೇಳಿರುವಂತೆ, **ಗಣಿಕಾಲಂಕಾರಮಾಕ್ಕುದಲ್**– ಸೂಳೆಯರು ಇತರರ ತೃಪ್ತಿಗೆ ತನ್ನನ್ನು ಅಲಂಕಾರ ಮಾಡಿಕೊಳ್ಳುವಂತೆ, ವಿದ್ಯೆಯನ್ನು ಮಾರಬಾರದು. ವಿಲೈ

---

1) ಶಾಂಡಿಲ್ಯ ಸ್ಮೃತಿ 1-117 2) ಭಾರತ ಶಾಂತಿ ಪರ್ವ 12-42 3) ಇತಿಹಾಸ ಸಮುಚ್ಚಯ 14-43

ತ್ತಿಲವಲ್ ಪೊದಿಯಾಕ್ಕುದಲ್, ಕುರಙ್ಗಿನ್ ಕೈಯಿಲ್ ಪೂಮಾಲೈಯಾಕ್ಕುದಲ್, ಶೆಯ್ಯಾದೊಳ್ಳಿ ಯುಮ್ಪುವುಮ್.

ಅಡಿಯಿಲೇ ವಿದ್ಯೈತಾನ್ 1) "ಶೇವಧಿಷ್ಟೇಽಸ್ಮಿರಕ್ಷಮಾಮ್" ಎನ್ರು ಬ್ರಾಹ್ಮಣನ್ಪೈ ಅಪೇಕ್ಷಿತ್ತ ಪಡಿಯಿಲೇ ಮುನ್ಬೇ ಅಸೂಯಾದಿಹಳ್ಳೈ ಕ್ಕೈಪ್ಪಿಡಿತ್ತುವೈಪ್ಪಾರ್ ಕೈಯಿಲ್‌ಕಾಟ್ಟಿಕ್ಕೊಡಾದೇ ರಕ್ಷಿತ್ತು ಕ್ಕೊಳ್ಳವುಮ್.ಪಿರವಿಕ್ಕುರುಡನಾನತನ್ನೈ 3) "ಅಯರ್ವರುಮಮರರ್‌ಹಳ್" ಪರಿಷತ್ತುಕ್ಕು ಅರ್ಹನಾ ಮ್ಪಡಿ ತಿರುತ್ತಿನ ಮಹೋಪಕಾರಕನುಕ್ಕು ಶೆಯ್ಯಲಾಮ್ ಪ್ರತ್ಯುಪಕಾರಮಿಲ್ಲೈ ಎನ್ರು ಮಿಡಕ್ಕೈ ತ್ತೆಳಿನ್ದು 1) "ಏಕಾನ್ತೀವ್ಯಪದೇಷ್ಟವ್ಯೋ ನೈವಗ್ರಾಮಕುಲಾದಿಭಿಃ |
ವಿಷ್ಣುನಾವ್ಯಪದೇಷ್ಟವ್ಯಸ್ತಸ್ಯ ಸರ್ವಂ ಸ ಏವ ಹಿ ||
ಎನ್ಡಿರನಿಲೈಯಿಲುಂಕಾಟ್ಟಿಲ್ "ವಸಿಷ್ಠವ್ಯಪದೇಶಿನಃ" ಎನ್ಡಿರಪಡಿಯೇ ಶರಣ್ಯನಾನ ಪೆರುಮಾಳ್ ವಂಶ

---

**ಚ್ಚಾಂದಾಕ್ಕುದಲ್** – ಮಾರುವ ಗಂಧದ ಹಾಗೆ ಮಾಡಬಾರದು. **ಅಂಬಲತ್ತಿಲ್** ಇತ್ಯಾದಿ ಪಾಮರ ಜನರ ಮಧ್ಯೆ, **ಅವಲ್ ಪೊದಿಯಾಕ್ಕುದಲ್** – ಭತ್ತದ ಹರಳನ್ನು ಎರಚುವಂತೆ, ಎರಚಬಾರದು. **ಕುರಂಗಿನ್ ಕೈಯಿಲ್** ಇತ್ಯಾದಿ – ಮರ್ಕಟದ ಕೈಯಲ್ಲಿ ಹೂಮಾಲೆಯನ್ನು ಕೊಡುವಂತೆ, ಕೊಡಬಾರದು.

**ಅಡಿಯಿಲೇ** ಇತ್ಯಾದಿ ಆರಂಭದಲ್ಲಿಯೇ, ಇವನಿಗೆ ವಿದ್ಯೆಯು ಪ್ರಾಪ್ತವಾದ ಸಮಯದಲ್ಲೇ 1) **"ಶೇವಧಿಷ್ಟೇಽಸ್ಮಿ ರಕ್ಷಮಾಮ್"**, "ನಾನು ಭೂಮಿಯಲ್ಲಿರುವ ಮಹಾನಿಧಿಯಂತೆ ಇದ್ದೇನೆ. ನನ್ನನ್ನು ರಕ್ಷಿಸಿಕೋ", **ಎನ್ರು ಬ್ರಾಹ್ಮಣನ್ಪೈ** ಇತ್ಯಾದಿಯಾಗಿ ಬ್ರಾಹ್ಮಣನನ್ನು ಅಪೇಕ್ಷಿಸಿದ **ರೀತಿಯಲ್ಲಿ ಪೂರ್ವದಲ್ಲಿಯೇ ಅಸೂಯಾದಿ** ಗಳನ್ನು **ಕೈಪ್ಪಿಡಿತ್ತುವೈಪ್ಪಾರ್** – ಪಾಣಿಗ್ರಹಣ ಮಾಡಿಕೊಂಡಿರುವವರ ಕೈಯ್ಯಲ್ಲಿ ತೋರಿಸಿ ಕೊಡದೆ ರಕ್ಷಿಸಿ ಕೊಳ್ಳಬೇಕು. ಅಸೂಯಾಳುಗಳು ಈ ಪರಮರಹಸ್ಯವಾದ ವಿದ್ಯೆಯಲ್ಲಿ ದೋಷಾರೋಪಣೆಯನ್ನು ಮಾಡಿ ಹಾಳು ಮಾಡಿಬಿಡುತ್ತಾರೆಂದು ಭಾವ. [Vi] **ಪಿರವಿಕ್ಕುರುಡ ನಾನತನ್ನೈ** ಇತ್ಯಾದಿ – ಜಾತ್ಯಂಧನಾದ ಅಂದರೆ ಹುಟ್ಟಿನಿಂದಲೇ ಅಜ್ಞಾನಾಂಧಕಾರದಲ್ಲಿ ಬೆಳೆದ ತನ್ನನ್ನು, **ಅಯರ್ವರುಮ ಮರರ್‌ಹಳ್** – ಅಜ್ಞಾನಾಂಧಕಾರ ವಿಲ್ಲದ ನಿತ್ಯಸೂರಿಗಳ ಗೋಷ್ಠಿಗೆ ಯೋಗ್ಯವಾಗುವಂತೆ ಸನ್ಮಾರ್ಗದಲ್ಲಿ ಪ್ರವರ್ತಿಸಿದ ಪರಮೋಪಕಾರನಾದ ಆಚಾರ್ಯನಿಗೆ, ಮಾಡುವ ಪ್ರತ್ಯುಪಕಾರವು ಇಲ್ಲವೆಂಬುದನ್ನು ತಿಳುವಾಗಿ ಅರಿತು 1) **ಏಕಾಂತೀ ವ್ಯಪದೇಷ್ಟವ್ಯೋ** ಇತ್ಯಾದಿ – ಪರಮೈಕಾಂತಿಯಾದವನು ತನ್ನನ್ನು ಗ್ರಾಮಕುಲಾದಿ ಹೆಸರಿನಿಂದ ಹೇಳಿಕೊಳ್ಳಕೂಡದು. ಮತ್ತೆ ಹೇಗೆಂದರೆ ವಿಷ್ಣುವಿನ ಹೆಸರನ್ನು ಹೇಳಿ ಹೇಳಬೇಕು. ವಿಷ್ಣುದಾಸಃ ಇತ್ಯಾದಿ ರೀತಿಯಲ್ಲಿ ವ್ಯಪದೇಶ ಮಾಡಿ ಹೇಳಿಕೊಳ್ಳಬೇಕು. ತಸ್ಯ ಸರ್ವಂ ಸ ಏವ ಹಿ – ಆ ಪರಮೈಕಾಂತಿಗೆ ವಿಷ್ಣುವೇ ಸರ್ವ ಪ್ರಯೋಜನವಾಗಿದ್ದಾನೆಯಲ್ಲವೇ. **ಎನ್ಡಿರ ನಿಲೈಯಿಲುಂ ಕಾಟ್ಟಿಲ್** – ಈ ರೀತಿಯಾಗಿ ಹೇಳಿಕೊಳ್ಳು ವುದಕ್ಕಿಂತ, (2) **"ವಸಿಷ್ಠ ವ್ಯಪದೇಶಿನಃ"** – ವಸಿಷ್ಠರ ಶಿಷ್ಯ ಎಂಬಂತೆ ಶರಣ್ಯನಾದ ಭಗವಂತನು ವಂಶ

---

1) ಮನುಸ್ಮೃತಿ 2-114
ನಾಸ್ತಿಕಾಯ ಶಠಾಯಾಽಪಿ ಮದ್ಭಕ್ತಿರಹಿ ತಾಯ ವಾ |
ಅಸೂಯಕಾಯ ಮಾಂ ಪ್ರಾದಾಃ ಶೇವಧಿಷ್ಟೇಽಸ್ಮಿ ರಕ್ಷಮಾಮ್ ||
ನಾಸ್ತಿಕನಿಗೂ ಶಠ-ದುರ್ಜನನಿಗೂ, ನನ್ನಲ್ಲಿ (ವಿದ್ಯೆಯಲ್ಲಿ ಗೌರವ ಬುದ್ಧಿಯಿಲ್ಲದವನಿಗೂ, ಅಸೂಯೆಯುಳ್ಳವನಿಗೂ ನನ್ನನ್ನು ವಿಕ್ರಯ ಮಾಡಬೇಡ. ಮಹಾನಿಧಿಯಂತೆ ಇದ್ದೇನೆ. ನನ್ನನ್ನು ಕಾಪಾಡಿಕೋ.

1) ವಿಷ್ವಕ್ಸೇನ ಸಂಹಿತೆ

ಪು. ತಿ, ನೋ.

ಕ್ರಮವನ್ನಾಹ ಪ್ಪಿರನ್ದು ಪಡ್ಟೈತ್ತು ಕೈಕ್ಕೊಂಡ ನಿಲೈ ಇನ್ನಿಲೈ ಎನ್ರು ಪರಿಗ್ರಹಿತ್ತು 3) ಎನ್ನೈ ತ್ತೀಮನಮ್ ಕೆಡುತ್ತಾಯ್ಉನಕ್ಕೆನ್ ಶೆಯ್‌ಹೇನ್ ಎನ್ರಿರುಕ್ಕುಮವುಮ್ ಪ್ರಾಪ್ತಮ್.

ತಾನಿಪ್ಪಡಿ ಪ್ಪೆತ್ತ ರಹಸ್ಯತ್ರಯ ಸಾರಾರ್ಥಮಾನ ಮಹಾಧನತ್ತೈ ಮುನ್ನಿಲ್ ಅಧಿಕಾರತ್ತಿಲ್ಸೊನ್ನ ಪಡಿಯೇ ಉಚಿತ ಸ್ಥಾನಮರಿನ್ದು ಸಮರ್ಪಿಕುಮ್ಪೋದು,

4) "ಕಥಯಾಮಿ ಯಥಾಪೂರ್ವಂ ದಕ್ಷಾದ್ಯೈರ್ಮುನಿ ಸತ್ತಮೈಃ ।
ಪೃಷ್ಟಃ ಪ್ರೋವಾಚ ಭಗವಾನಬ್ಜಯೋನಿಃ ಪಿತಾಮಹಃ ।
ತೈಶ್ಚೋಕ್ತಂ ಪುರುಕುತ್ಸಾಯ ಭೂಭುಜೇ ನರ್ಮದಾತಟೇ ।
ಸಾರಸ್ವತಾಯ ತೇನಾಪಿ ಮಮ ಸಾರಸ್ವತೇನಚ ॥"

ಎನ್ರು ಶ್ರೀ ಪರಾಶರ ಬ್ರಹ್ಮರ್ಷಿ ಮೈತ್ರೇಯ ಭಗವಾನುಕ್ಕು ಅರುಳಿಚ್ಚೆಯ್‌ದಾರ್ಪೋಲೇ ಗುರುಪರಂಪರೈಯೈ ಪ್ರಕಾಶಿಪ್ಪಿತ್ತುಕ್ಕೊಂಡು, ತನ್ನುಡೈಯ ಕೃತಜ್ಞತೈಯುಮ್ ಅರ್ಥತ್ತಿನ್ ಶೀರ್ಮೈಯುಮ್, ತೋತ್ತ ಉಪದೇಶಿಕ್ಕವೇಣುಮ್.

---

ಕ್ರಮಾಗತವಾಗಿ ಪಿರಂದು – ಅವತರಿಸಿ, ಪಡ್ಟೈತ್ತುಕ್ಕೈಕ್ಕೊಂಡನಿಲೈ – ಫಲವಾಗಿ ಅಂಗೀಕರಿಸಿ ಪರಿಗ್ರಹಿಸಿದ ಸ್ಥಿತಿಯು, ಇನ್ನಿಲೈ – ಆಚಾರ್ಯ ಸಂಬಂಧದಿಂದ ವ್ಯಪದೇಶ್ಯತ್ವವು ಏರ್ಪಟ್ಟ ಈ ಸ್ಥಿತಿ, ಎಂದು ಪರಿಗ್ರಹಿಸಿ, 3) ಎನ್ನೈತ್ತೀಮನಮ್ ಕೆಡುತ್ತಾಯ್ ಇತ್ಯಾದಿ – ನನ್ನ ಕೆಟ್ಟ ಬುದ್ಧಿಯನ್ನು ಹೋಗಲಾಡಿಸಿ ಸನ್ಮಾರ್ಗ ಪ್ರವರ್ತಕನನ್ನಾಗಿ ಮಾಡಿದೆ, ಎಂದು ಆಚಾರ್ಯನಲ್ಲಿ ನಿತ್ಯ ಋಣಿಯಾಗಿರುವುದು ಪ್ರಾಪ್ತವಾದದ್ದು.

(i) ಹೀಗೆ ಸಚ್ಛಿಷ್ಯನು, ಸತ್ಸಂಪ್ರದಾಯಾಗತವಾದ ಅರ್ಥವನ್ನು ಅಯೋಗ್ಯನಿಗೆ ಉಪದೇಶಿಸಕೂಡದೆಂದು ಹೇಳಿ, ಅನಂತರ ಸತ್ಪಾತ್ರದಲ್ಲಿ – ಯೋಗ್ಯನಲ್ಲಿ ವಿನಿಯೋಗ ಮಾಡುವ ಪ್ರಕಾರವನ್ನು ತಿಳಿಸುತ್ತಾರೆ. ಅದಾಗಿ ತಾನಿಪ್ಪಡಿ ಇತ್ಯಾದಿ – ತಾನು ಹೀಗೆ ಪಡೆದ ರಹಸ್ಯತ್ರಯ ಸಾರಾರ್ಥವಾದ ಮಹಾಧನವನ್ನು ಮುನ್ನಿಲಧಿಕಾರತ್ತಿಲ್ ಇತ್ಯಾದಿ – ಆಚಾರ್ಯ ಕೃತ್ಯಾಧಿಕಾರದಲ್ಲಿ ಹೇಳಿದ ರೀತಿಯಲ್ಲಿ ಉಚಿತವಾದ ಸ್ಥಾನವನ್ನು ಅಂದರೆ ಸತ್ಪಾತ್ರವನ್ನು ತಿಳಿದು ಸಮರ್ಪಿಸುವಾಗ (4) ಕಥಯಾಮಿಯಥಾಪೂರ್ವಂ ಇತ್ಯಾದಿಯಾಗಿ ಪರಾಶರ ಬ್ರಹ್ಮರ್ಷಿಯು ಮೈತ್ರೇಯ ಭಗವಾನಿಗೆ ಉಪದೇಶ ಮಾಡಿದ ರೀತಿಯಲ್ಲಿ ಗುರುಪರಂಪರೆಯನ್ನು ಪ್ರಕಾಶಪಡಿಸಿಕೊಂಡು ತನ್ನ ಕೃತಜ್ಞತೆಯೂ ಅರ್ಥದ ಶ್ರೇಷ್ಠತೆಯೂ ತೋರುವಂತೆ ಉಪದೇಶಿಸಬೇಕು.

---

2) ಸದೃಶಂ ರಾಜ ಶಾರ್ದೂಲ ತವೈತದ್ಭುವಿನಾನ್ಯಥಾ ।
ಮಹಾವಂಶ ಪ್ರಸೂತಸ್ಯ ವಸಿಷ್ಠ ವ್ಯಪದೇಶಿನಃ ॥ ರಾಮಾ. ಬಾಲಕಾಂಡ 19-2

ವಿಶ್ವಾಮಿತ್ರರು ದಶರಥನನ್ನು ಕುರಿತು ಹೇಳುವ ಮಾತು - ಎಲೈ ರಾಜ ಶ್ರೇಷ್ಠನೇ ಮಹಾವಂಶ ಪ್ರಸೂತನಾಗಿ, ವಸಿಷ್ಠರ ಶಿಷ್ಯನಾಗಿರುವುದಕ್ಕೆ ತಕ್ಕಂತೆ ಇದೆ ಈ ಮಾತು.

3) ವಾಮನನ್ ಮರತಕವಣ್ಣನ್ ತಾಮರೈಕ್ಕಣ್ಣನನ್
ಕಾಮನೈಪ್ಪಯಂದಾಯ್ ಎನ್ರೆನ್ರು ಉನ್‌ಕಳಲ್ ಪಾಡಿಯೇ ಪಣಿಂದು ।
ತೂಮನತ್ತನನಾಯ್ ಪಿರವಿತ್ತುಳದಿ ನೀಂಗ ಎನ್ನೈ
ತ್ತೀಮನಂ ಕೆಡುತ್ತಾಯ್ ಉನಕ್ಕೆನ್ ಶೆಯ್‌ಹೇನ್ ಎನ್ ಶಿರೀಧರನೇ ॥ ತಿರುವಾಯ್ ಮೊಳಿ(2-7-8)

ಶ್ರೀಮಾನಾದ ಭಗವಂತನೇ ನನ್ನ ಮನಸ್ಸು ನಿನ್ನ ಪಾದಗಳು ವಿನಹ ಬೇರೆಯಾವುದನ್ನೂ ತಿಳಿಯದಂತೆ ಮಾಡಿದ್ದೀಯಾ ನಿನಗೆ ಏನು ಪ್ರತ್ಯುಪಕಾರ ಮಾಡಲಿ

4) ವಿಷ್ಣುಪುರಾಣ (1-2-8, 9)

ಅಧ್ಯಾತ್ಮ ರಹಸ್ಯಙ್ಗಳೈ ಶೊಲ್ಲುಮವನ್ ಸಂಪ್ರದಾಯಮಿನ್ರಿಕ್ಕೇಯಿರುಕ್ಕ ಏಡು ಪಾರ್ತ್ತಾದಲ್ ಶುವರೇರಿಕ್ಕೇಟ್ಟ್ದಲ್ ಶೊಲ್ಲುಮಾಹಿಲ್ ಕಳವುಕೊಣ್ಡ ಆಭರಣಮ್ಪೂಣ್ಡಾರ್ಪೋಲೇ ಕಣ್ಡಾರ್ಕೆಲ್ಲಾಮ್ ತಾನ್ ಅಞ್ಜವೇಣ್ಡುಮ್ಪಡಿಯಾಮ್.

1) "ಯದೃಚ್ಛಯಾ ಶ್ರುತೋ ಮನ್ತ್ರಶ್ಛನ್ನೇನಾಥ ಛಲೇನವಾ ।
ಪತ್ರೇಕ್ಷಿತೋವಾ ವ್ಯರ್ಥಸ್ಸ್ಯಾತ್ತತ್ಪ್ರತ್ಯುತಾನರ್ಥದೋ ಭವೇತ್ ॥"

ಇತ್ಯಾದಿಹಳಿಲ್ಪಡಿಯೇ ಪ್ರತ್ಯವಾಯ ಪರ್ಯನ್ತಮಾಮ್. ಕೇಟ್ಟುಚ್ಚೊಲ್ಲಚ್ಚೆಯ್‌ದೇ,

2) "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।"

3) "ಪ್ರಣಿಪತ್ಯಾಭಿವಾದ್ಯಚ"ಇತ್ಯಾದಿಹಳಿಲ್ ಶೊಲ್ಲುಹಿರ ಮುರೈಯೊೞಿಯಕ್ಕೇಟ್ಟು ಚ್ಚೊಲ್ಲುಮಾಹಿಲ್ ಕಾಲನ್‌ಕೊಣ್ಡ ಆಭರಣಮ್ಪೂಣ್ಡಾರ್ಪೋಲೇ ಕಣ್ಡಾರೆಲ್ಲಾರುಂ ತನ್ನೈ ಅಱುವರುಕ್ಕುಮ್ಪಡಿಯಾಮ್.

---

ಇಲ್ಲಿ ಗುರುಪರಂಪರೆಯನ್ನು ಕಾಲಕ್ಷೇಪ ಹೇಳುವಾಗ ಭಗವಂತನಿಂದ ಹಿಡಿದು ಸ್ವಾಚಾರ್ಯ ಪರ್ಯಂತ ಉಪದೇಶ ಮಾಬೇಕೆಂಬುದು ಏರ್ಪಡುತ್ತದೆ. ಸಾರಾಸ್ವಾದಿನಿಯಲ್ಲೂ ಈ ಘಟ್ಟದಲ್ಲಿ "ಗುರುಪರಂ ಪರೆಯೈಇತಿ-ಭಗವಂತ ಮಾರಭ್ಯ ಗುರುಪರಂಪರ್ಯೈಂನ್ಪು ಎನ್ರುಪಡಿ" ಎಂದು ಇದೇ ಕ್ರಮವನ್ನು ತಿಳಿಸಿದೆ. ಗುರುಪರಂಪರಾ ಸಾರದಲ್ಲಿ ಸ್ವಾಚಾರ್ಯನಿಂದ ಹಿಡಿದು ಭಗವತ್ಪರ್ಯಂತ ಅನುಸಂಧಾನವು ಹೇಳಿರುವುದು ತಾನು ರಹಸ್ಯತ್ರಯ ಸಾರಾರ್ಥ ವಿಮರ್ಶನ ಕಾಲದಲ್ಲಿ ಮಾಡಬೇಕಾದ ರೀತಿಯೆಂಬುದು ಹಿರಿಯರ ಮಾತು.

(ii) **ಅಧ್ಯಾತ್ಮರಹಸ್ಯಂಗಳೈ** ಇತ್ಯಾದಿ – ವೇದಾಂತ ರಹಸ್ಯಗಳನ್ನು ಉಪದೇಶಿಸುವವನು, **ಸಂಪ್ರದಾಯ ಮನ್ರಿಕ್ಕೇ ಇರುಕ್ಕ** – ಗುರೂಪದೇಶ ಪೂರ್ವಕವಾಗಿ ಆಚಾರ್ಯನ ಹತ್ತಿರ ಕಾಲಕ್ಷೇಪ ಮಾಡದೇ ಇದ್ದು, **ಏಡು**–ಪುಸ್ತಕವನ್ನು ನೋಡಿಯಾಗಲಿ, **ಶುವರೇರಕ್ಕೇಟ್ಟಾದಲ್** – ಗೋಡೆಗೆ ಹಿಂಭಾಗದಲ್ಲಿ ನಿಂತು ಕೇಳಿಕೊಂಡಾಗಲಿ, ಇತರರಿಗೆ ಕಾಲಕ್ಷೇಪವನ್ನು ಹೇಳಿದರೆ, **ಕಳವುಕೊಂಡವಾಭರಣತ್ತೈ** ಇತ್ಯಾದಿ – ಒಬ್ಬನು ಕಳ್ಳತನ ಮಾಡಿ ತಂದ ಆ ಭರಣವನ್ನು ತನ್ನದು ಎಂದು ಯಾರು ಹೇಳುತ್ತಾರೋ ಎಂದು, **ಕಂಡಾರ್ಕೆಲ್ಲಾಮ್** ಇತ್ಯಾದಿ–ನೋಡಿದವರಿಗೆಲ್ಲಾ ತಾನು ಹೆದರಿಕೊಂಡಿರಬೇಕಾಗಿ ಬರುತ್ತದೆ. (1) **ಯದೃಚ್ಛಯಾ ಶ್ರುತೋಮಂತ್ರಃ** ಇತ್ಯಾದಿ–**ಯದೃಚ್ಛಯಾ** – ಹೋಗಿ ಬರುವಾಗ ದಾರಿಯಲ್ಲಿಯಾಗಲಿ, **ಛನ್ನೇನ**– ಗೋಡೆ ಮರೆಯಲ್ಲಿಯಾಗಲಿ, **ಛಲೇನವಾ**–ಪರೀಕ್ಷೆ ಮಾಡುವ ವ್ಯಾಜದಿಂದಾಗಲಿ ಕೇಳಿ, **ಪ್ರತೇಕ್ಷಿತೋವಾ**–ಪುಸ್ತಕವನ್ನು ನೋಡಿಯಾಗಲಿ,ತಿಳಿದ ಮಂತ್ರವನ್ನು ಹೇಳಿದರೆ ಉಪದೇಶವು ವ್ಯರ್ಥವಾಗುತ್ತದೆ, ಮೇಲೂ ಅನರ್ಥವನ್ನುಂಟು ಮಾಡುತ್ತದೆ, ಇತ್ಯಾದಿ ಹೇಳಿರುವಂತೆ **ಪ್ರತ್ಯವಾಯಪರ್ಯಂತಮಾಮ್** – ದೋಷ ಪರ್ಯಂತವಾಗಿ ಮುಗಿಯುತ್ತದೆ.

**ಕೇಟ್ಟುಚ್ಚೊಲ್ಲಚ್ಚೆಯ್‌ದೇ** – ಆಚಾರ್ಯನ ಸಕಾಶದಿಂದ ಕಾಲಕ್ಷೇಪ ಮಾಡಿ ಶಿಷ್ಯನಿಗೆ ಹೇಳುವಾಗ, 2) **ತದ್ವಿದ್ಧಿಪ್ರಣಿಪಾತೇನ** (3) **ಪ್ರಣಿಪತ್ಯಾಭಿವಾದ್ಯಚ** ಇತ್ಯಾದಿಗಳಲ್ಲಿ ಹೇಳುವಂತೆ **ಮುರೈಯೊೞಿಯ**

---

1) ಪಾದ್ಮ ಸಂಹಿತೆ ಚರ್ಯಾಪಾದ 23-81

2) ಗೀತೆ 4-34 ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇಜ್ಞಾನಂ ಜ್ಞಾನಿನ ಸ್ತತ್ವದರ್ಶಿನಃ ॥

ತತ್ವದರ್ಶಿಗಳಾದ ಆಚಾರ್ಯರನ್ನು ನಮಸ್ಕರಿಸಿ, ಪರಿಪ್ರಶ್ನೆಗಳನ್ನು ಗೌರವದಿಂದ ಕೇಳಿ, ಶುಶ್ರೂಷೆ ಮಾಡಿ ಜ್ಞಾನವನ್ನು ಉಪದೇಶವಾಗಿ ಪಡೆಯಬೇಕು.

3) ಪರಾಶರಂ ಮುನಿವರಂ ಕೃತಪೌರ್ವಾಹ್ಣಿಕ ಕ್ರಿಯಮ್ ।
ಮೈತ್ರೇಯಃ ಪರಿಪಪ್ರಚ್ಛ ಪ್ರಣಿಪತ್ಯಾಭಿವಾದ್ಯಚ ॥

ಪು.ತಿ.ನೋ.

4) "ಯಶ್ಚಾಧರ್ಮೇಣ ವಿಬ್ರೂತೇ ಯಶ್ಚಾಧರ್ಮೇಣ ಪೃಚ್ಛತಿ ।
ತಯೋರನ್ಯತರಃ ಪ್ರೈತಿ ವಿದ್ವೇಷಂ ವಾಧಿಗಚ್ಛತಿ ॥"
ಎನ್ಗಿರಪಡಿಯೇ ಅನರ್ಥಾವಹಮುಮಾಮ್.

### ಗುರೂಣಾಂ ಪ್ರಕಾಶನಂ ಶಿಷ್ಯಕೃತ್ಯೇ ಪ್ರಧಾನಂ

ಯಥಾ ನ್ಯಾಯಂ ಕೇಟ್ಟುಚ್ಚೊಲ್ಲಚ್ಚೆಯ್ದೇ ಶೊಲ್ಲುಮ್ಪೋದು ಗುರುವೈ ಪ್ರಕಾಶಿಪ್ಪಿಯಾದೊ಴ಿಯುಮಾಹಿಲ್ ಇವನ್ ಶೊಲ್ಲುಹಿರ ಅರ್ಥಙ್ಗಳ್ ವೇರಿಲ್ಲಾ ಕ್ಕೊಕ್ತಾನ್‌ಪೋಲೇ ಯಡಿಯತ್ತವೈಯೋವೆನ್ರು ಶಿಷ್ಯನುಕ್ಕುಮತಿಶಙ್ಕೈಪ್ಪಿರಕ್ಕುಮ್ ಪಡಿಯಾಯನಾದರ ವಿಷಯಮಾಮ್. "ಸ್ವಗುರೂಣಾಂ ಸ್ವಶಿಷ್ಯೇಭ್ಯಃ ಖ್ಯಾಪನಂ ಚಾಕೃತಂ ತಥಾ" ಎನ್ರು ದ್ವಾತ್ರಿಂಶದಪಚಾರ ವರ್ಗತ್ತಿಲೇ ಗುರುವೈ ಪ್ರಕಾಶಿಪ್ಪಿಯಾದೊ಴ಿಗೈಯುಮ್ ಪಠಿಕ್ಕಪ್ಪಟ್ಟದು. ಅಪ್ಪೋದು

---

ಇತ್ಯಾದಿ – ಶಿಷ್ಯನು ಆಚಾರ್ಯನನ್ನು ನಮಸ್ಕರಿಸಿ ಗುರುಪರಂಪರಾ ಶ್ಲೋಕಗಳನ್ನು ಅನುಸಂಧಾನ ಮಾಡಬೇಕಾದ ಕ್ರಮವನ್ನು ಬಿಟ್ಟು ಹೇಳಿದರೆ **ಕಾಲಂಕೊಂಡಾಭರಣಂ ಪೂಂಡಾರ್ಪ್ಪೋಲೇ** ಇತ್ಯಾದಿ – ಕಾಲ ಪುರುಷನನ್ನು ದಾನವಾಗಿ ಸ್ವೀಕರಿಸಿ ಅಂದರೆ ಒಬ್ಬನ ಮರಣಾದಿ ಕಾಲಗಳಲ್ಲಿ ಕೊಡುವ ದುರ್ದಾನಗಳನ್ನು ಸ್ವೀಕರಿಸಿ ಆ ದ್ರವ್ಯದಿಂದ ಆಭರಣಗಳನ್ನು ಮಾಡಿಸಿ ಧರಿಸುವಂತೆ ನೋಡುವವರೆಲ್ಲರೂ ತನ್ನನ್ನು **ಅರುವರುಕ್ಕುಂಪಡಿಯಾಮ್**- ನಿಂದಿಸುವಂತೆ ಆಗುತ್ತದೆ. (4) **ಯಶ್ಚಾಧರ್ಮೇಣವಿಬ್ರೂತೇ** ಇತ್ಯಾದಿಯಾಗಿ ಯಾವ ಆಚಾರ್ಯನು ಸ್ವಾಚಾರ್ಯಪರಂಪರಾದಿಗಳನ್ನು ಅನುಸಂಧಾನ ಮಾಡದೆಯೂ, ಶಿಷ್ಯನನ್ನು ಸರಿಯಾಗಿ ಪರೀಕ್ಷಿಸದೆಯೂ, ಅವನು ನಮಸ್ಕಾರಾದಿಗಳನ್ನು ಮಾಡದೆ ಇದ್ದಾಗ್ಯೂ, ತಾನು ಕೆಳಗೆ ಕುಳಿತುಕೊಂಡು ಶಿಷ್ಯನನ್ನು ಗುರುವಂಶ್ಯನೆಂದು ಮೇಲೆ ಕುಳ್ಳಿರಿಸಿಯೂ ಕಾಲಕ್ಷೇಪವನ್ನು ಹೇಳುತ್ತಾನೆಯೋ, **ಯಶ್ಚಾಧರ್ಮೇಣ ಪೃಚ್ಛತಿ** – ಯಾವನು ಪ್ರಣಿಪತನಾದಿಗಳನ್ನು ಮಾಡದೆ ಅಧರ್ಮ ರೀತಿಯಲ್ಲಿ ಕೇಳುತ್ತಾನೆಯೋ, ಅವರುಗಳಲ್ಲಿ ಒಬ್ಬನು ಸಾಯುತ್ತಾನೆ ಅಥವಾ ಪರಸ್ಪರ ವಿದ್ವೇಷವು ಉಂಟಾಗುತ್ತದೆ, ಎಂದು ಹೇಳಿರುವ ರೀತಿಯಲ್ಲಿ ಅನರ್ಥವೂ ಏರ್ಪಡುತ್ತದೆ.

(iii) **ಯಥಾನ್ಯಾಯಮ್ ಕೇಟ್ಟು** ಇತ್ಯಾದಿ – ನ್ಯಾಯವಾದ ರೀತಿಯಲ್ಲಿ ಪ್ರಣಿಪತನಾದಿ ಪುರಸ್ಸರವಾಗಿ ಸಮಾಚಾರ್ಯ ಸಕಾಶದಿಂದ ಕೇಳಿ, **ಶೊಲ್ಲಚ್ಚೆಯ್‌ದೇ** ಇತ್ಯಾದಿ – ಪ್ರಣಿಪತನ ಪುರಸ್ಸರವಾಗಿ ತನ್ನನ್ನು ಆಚಾರ್ಯನಾಗಿ ವರಿಸಿದ ಶಿಷ್ಯನಿಗೆ ಹೇಳುವಾಗ, ಗುರುವನ್ನು ಪ್ರಕಾಶಿಸದೆ ಇದ್ದರೆ, ಇವನು ಹೇಳುವ ಅರ್ಥಗಳು, **ವೇರಿಲ್ಲಾ ಕ್ಕೊಕ್ತಾನ್** ಭೂಮಿಯಲ್ಲಿ ಹೂಳಬೇಕಾದ ಬೇರಿಲ್ಲದೆ, ಆಕಾಶದಲ್ಲಿ ಬೆಳೆಯುವ ಹಂಬಿನ ಹಾಗೆ, **ಅಡಿಯಟ್ರವೆಯೋ** ಇತ್ಯಾದಿಗುರುಮುಖವಾಗಿ ಕೇಳದೆ ಇರುವವೋ ಎಂದು ಶಿಷ್ಯನಿಗೆ ಸಂದೇಹವುಂಟಾಗುವಂತೆ ಅನಾದರವಿಷಯವಾಗುತ್ತದೆ. 6) **"ಸ್ವಗುರೂಣಾಂಸ್ವಶಿಷ್ಯೇಭ್ಯಃ** ಇತ್ಯಾದಿ – ಮೂವತ್ತೆರಡು ಅಪಚಾರಗಳಲ್ಲಿ ಗುರುವನ್ನು ಪ್ರಕಾಶಿಸದೆ ಇರುವುದೂ ಒಂದಾಗಿ ಪಠಿಸಲ್ಪಟ್ಟದೆ. **ಅಪ್ಪೋದು** ಇತ್ಯಾದಿ ಗುರುವನ್ನು ಪ್ರಕಾಶಿಸದೆ ಉಪದೇಶ

---

ಪೂರ್ವಾಹ್ನದಲ್ಲಿ ಮಾಡಬೇಕಾದ ನಿತ್ಯಕರ್ಮಾನುಷ್ಠಾನಗಳನ್ನು ಮಾಡಿದ ಪರಾಶರ ಮುನಿಗಳನ್ನು ಮೈತ್ರೇಯರು ಪ್ರಣಿಪತನ ಮಾಡಿ ಅಭಿವಾದನೆ ಮಾಡಿ, ಭಕ್ತಿಶ್ರದ್ಧೆಯಿಂದ ವೇದಾಂತ ವಿಷಯವಾಗಿ ಕೇಳಿದರು,

4) ಭಾರತ ಶಾಂತಿಪರ್ವ 335-51
6) ತನ್ನ ಗುರುವನ್ನು ತನ್ನ ಶಿಷ್ಯರುಗಳಿಗೆ ಖ್ಯಾಪನೆ ಮಾಡದಿರುವುದೂ 32 ಅಪಚಾರಗಳಲ್ಲಿ ಒಂದಾಗುತ್ತದೆ.

1) "ಗುರುಂಪ್ರಕಾಶಯೇದ್ಧೀಮಾನ್ ಮನ್ತ್ರಂ ಯತ್ನೇನ ಗೋಪಯೇತ್ ।
ಅಪ್ರಕಾಶ ಪ್ರಕಾಶಾಭ್ಯಾಂಕ್ಷೀಯೇತೇ ಸಂಪದಾಯುಷೀ"

ಎನ್ಗಿರಪಡಿಯೇ ಜ್ಞಾನವೈಶದ್ಯ ಪೂರ್ವಕಮಾನ ಭಗವದನುಭವ ಸಂಪತ್ತುಮ್, ಆತ್ಮಾವುಕ್ಕು ಸತ್ತಾನುವೃತ್ತಿ ಹೇತುವಾನ ಶೇಷತ್ವಾನುಸಂಧಾನ ಪೂರ್ವಕ ಸ್ವನಿಷ್ಠೈಯುಮ್ ಕುಲೈಯುಮ್ಪಡಿಯಾಮ್. ಗುರುವೈ ಪ್ರಕಾಶಿಪ್ಪಿಯಾ ನಿರ್ಕಚೆಯ್‌ದೇ, ಅವನ್ ಪಣ್ಣಿನ ಶಾಸ್ತ್ರೀಯೋಪದೇಶತ್ತುಕ್ಕು ವಿರುದ್ಧಂ ಶೊಲ್ಲುಮಾಹಿಲ್ ವಿಪ್ರಲಂಭಕನೆನ್ರು ಪೇರುಮಾಯ್,

2) "ಜ್ಯೋತಿಷ್ಯಂ ವ್ಯವಹಾರಂ ಚ ಪ್ರಾಯಶ್ಚಿತ್ತಂ ಚಿಕಿತ್ಸಕಮ್ ।
ವಿನಾಶಾಸ್ತ್ರೇಣ ಯೋಬ್ರೂಯಾತ್ತಮಾಹುರ್ಬ್ರಹ್ಮಘಾತುಕಮ್ ॥"

ಎನ್ಗಿರಪಡಿಯೇ ಪಾಪಿಷ್ಠನುಮಾಮ್.

ಸ್ವಾಚಾರ್ಯೇಣ ಲಬ್ಧಜ್ಞಾನಮವಶ್ಯಂ ಸಚ್ಛಿಷ್ಯೇಭ್ಯ ಉಪದಿಶೇತ್

ಸಚ್ಛಿಷ್ಯನುಕ್ಕು ಪ್ರಾಪ್ತದಶೈಯಿಲ್ ಉಪದೇಶತ್ತೈತ್ತವಿರ್ಕುಮಾಹಿಲ್ ಲುಬ್ಧನೆನ್ರು ಪೇರುಮಾಯ್,

1) "ಪಾತ್ರಸ್ಥಮಾತ್ಮ ಜ್ಞಾನಂಚ ಕೃತ್ವಾಪಿಣ್ಡಂ ಸಮುತ್ಸೃಜೇತ್ !
ನಾನ್ತರ್ಧಾಯ ಸ್ವಯಮ್ ಯಾತಿ ಜಗದ್ಬೀಜ ಮಬೀಜಕೃತ್ ॥"

ಎನ್ಗಿರ ಭಗವನ್ನಿಯೋಗತ್ತೈಯುಮ್ ಕಡನ್ದಾನಾಮ್. ಆಹೈಯಾಲ್ ವಿಳಕ್ಕುಪ್ಪಿಡಿಕ್ಕುಮವನ್,

---

ಮಾಡುವಾಗ, (1) ಗುರುಂಪ್ರಕಾಶಯೇತ್ ಇತ್ಯಾದಿ ಹೇಳಿರುವಂತೆ, ಜ್ಞಾನವೈಶದ್ಯ ಪೂರ್ವಕವಾದ ಭಗವದನುಭವ ಸಂಪತ್ತೂ (ಸಂಪತ್ ಶಬ್ದಾರ್ಥ) ಆತ್ಮಾವಿಗೆ ಸತ್ತಾನುವೃತ್ತಿ ಹೇತುವಾದ ಶೇಷತ್ವಾನುಸಂಧಾನ ಪೂರ್ವಕ ಸ್ವನಿಷ್ಠೆಯೂ (ಆಯುಶ್ಯಬ್ದಾರ್ಥ) ನಶಿಸಿ ಹೋಗುತ್ತವೆ.

(iv) ಗುರುವೈಪ್ರಕಾಶಿಪ್ಪಿಯಾ ನಿರ್ಕಚ್ಚೆಯ್‌ದೇ ಇತ್ಯಾದಿ – ಗುರುವನ್ನು ಪ್ರಕಾಶ ಪಡಿಸಿಕೊಂಡು ಇರುವಂತೆಯೇ ಅವನು ಮಾಡಿದ ಶಾಸ್ತ್ರೀಯೋಪದೇಶಕ್ಕೆ ವಿರುದ್ಧವಾಗಿ ಹೇಳಿದರೆ ವಿಪ್ರಲಂಭಕನೆನ್ರು – ವಂಚಕನೆಂದು ಹೆಸರು ಏರ್ಪಟ್ಟು, (2) ಜ್ಯೋತಿಷ್ಯಂ ವ್ಯವಹಾರಂಚ ಇತ್ಯಾದಿ ಜ್ಯೋತಿಷ್ಯವನ್ನೂ ವ್ಯವಹಾರವನ್ನೂ, ಪಾಪಗಳಿಗೆ ಪ್ರಾಯಶ್ಚಿತ್ತವನ್ನೂ, ವ್ಯಾಧಿಗಳಿಗೆ ಚಿಕಿತ್ಸೆಯನ್ನೂ, ಶಾಸ್ತ್ರದ ಆಧಾರವಿಲ್ಲದೆ ಹೇಳುವವನು ಬ್ರಹ್ಮಘಾತುಕನಾಗತ್ತಾನೆಂದು ಹೇಳಿರುವಂತೆ, ಕೈಮುತಿಕ ನ್ಯಾಯವನ್ನವಲಂಬಿಸಿ ಬ್ರಹ್ಮವಿದ್ಯೆಯನ್ನು ಶಾಸ್ತ್ರಾಧಾರವಿಲ್ಲದೆ ಹೇಳಿದರೆ ಪಾಪಿಷ್ಠನಾಗುತ್ತಾನೆ.

(v) ಸಚ್ಛಿಷ್ಯನುಕ್ಕು ಇತ್ಯಾದಿ - ಸಚ್ಛಿಷ್ಯನು ಸಮ್ಮುಗುಪಸನ್ನನಾಗಿ ಬಂದಾಗ, ಪ್ರಾಪ್ತದಶೆಯಿಲ್– ಕಾಲಾನುಗುಣ ಪ್ರಾರ್ಥನಾದಿಗಳು ಏರ್ಪಟ್ಟ ದಶೆಯಲ್ಲಿ, ಉಪದೇಶವನ್ನು ಮಾಡದೆ ಇದ್ದರೆ, ಲುಬ್ಧನೆಂದು ಹೆಸರು ಏರ್ಪಟ್ಟು (ಇದು ದೃಷ್ಟ ಪ್ರತ್ಯವಾಯ), (3) ಪಾತ್ರಸ್ಥಮಾತ್ಮಜ್ಞಾನಂಚ ಇತ್ಯಾದಿ ಸತ್ಪಾತ್ರದಲ್ಲಿ ಜ್ಞಾನವನ್ನು ಉಪದೇಶ ಮಾಡದೆ ಹೋದರೆ ಭಗವಂತನ ನಿಯೋಗ – ಆಜ್ಞೆಯನ್ನು ಉಲ್ಲಂಘಿಸಿದಂತೆ ಆಗುತ್ತದೆ. ಆದ್ದರಿಂದ ಸತ್ಪಾತ್ರದಲ್ಲಿ ಜ್ಞಾನೋಪದೇಶವನ್ನು ಮಾಡಬೇಕೆಂದು ವಿಧಿ.

VI] ಆಹೈಯಾಲ್ ಇತ್ಯಾದಿ–ಆದ್ದರಿಂದ ದೀಪವನ್ನು ಹಿಡಿಯುವವನು ತನ್ನನ್ನು ರಾಜಾ ಒಂದು ಕಾರ್ಯ

---

1) 2) ಶೇಷಧರ್ಮ

3) ಪೌಷ್ಕರ ಸಂಹಿತೆ – ತನ್ನಲ್ಲಿರುವ ಜ್ಞಾನವನ್ನು ಸತ್ಪಾತ್ರದಲ್ಲಿ ಉಪದೇಶಿಸಿ ಶರೀರವನ್ನು ಬಿಡಬೇಕು. ಜಗತ್ತಿಗೆ ಜ್ಞಾನಬೀಜವನ್ನು ಬಿತ್ತದೆ, ತನ್ನಲ್ಲೇ ಆ ಜ್ಞಾನವನ್ನು ಬಚ್ಚಿಟ್ಟುಕೊಂಡು ಹೋಗ ಕೂಡದು.

ತನ್ನೈ ರಾಜಾಚರು ಕಾರ್ಯತ್ತುಕ್ಕು ಪ್ಪೋಹಚ್ಚೊನ್ನಾಲ್, ತನ್‌ಕೈಯಿಲ್ ವಿಳಕ್ಕೈಯದುಕ್ಕು ಪ್ರಾಪ್ತ ರಾನಾರ್ ಕೈಯಿಲೇ ಕೊಡುತ್ತು ಪ್ಪೋವಾಪ್ಪೋಲೇ, ಸತ್ಪಾತ್ರಮಾನಾರ್ಕ್ಕು ತ್ತಾನ್ ಶೊಲ್ಲುಮ್ ಪ್ಪೋದು, ತನಕ್ಕು ಉಪದೇಶಿತ್ತ ಆಚಾರ್ಯನ್ನೈಮುರ್ಪ್ಪಡವೆಳಿಯಿಟ್ಟು, ಪಿನ್ನೈ ತನಕ್ಕು ಉಪದಿಷ್ಟಮಾನ ಅರ್ಥಙ್ಗಳೈಯೇ ಶೊಲ್ಲವುಮ್.

ಶಿಲಕಾರಣಙ್ಗಳಾಲೇ ದಿವ್ಯಚಕ್ಷುಶ್ಶ್ರೋತ್ರಙ್ಗಳ್ ಪೆತ್ತು ತಾನಿವತ್ತಾಲೇ ಅರಿನ್ದು ಶೊಲ್ಲುಮವತ್ತೈ ಯುಮ್, 1) "ವ್ಯಾಸಪ್ರಸಾದಾಚ್ಛ್ರುತವಾನೇ ತದ್ಗುಹ್ಯಮಹಂ ಪರಮ್ ।
ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಸ್ಸ್ವಯಮ್ ॥"

ಎನ್ಕಿರಪಡಿಯೇ ಸದಾಚಾರ್ಯ ಪ್ರಸಾದಮಡಿಯಾಹ ಇವ್ವರ್ಥಮರಿನ್ದೇನ್, ಎನ್ಕೈಮಿಡುಕ್ಕಾಲೇ ಅರಿನ್ದು ಶೊಲ್ಲುಹಿರೇನಲ್ಲೇನ್ ಎನ್ರಿವ್ವಣ್ಣೈಯೈ ವೆಳಿಯಿಟ್ಟುಕ್ಕೊಂಡು ಶೊಲ್ಲುವುಮ್ ಪೆರಿಲ್, ಇವನ್ ಶೊಲ್ಲುಮ್ ಅರ್ಥಙ್ಗಳೆಲ್ಲಾಮ್ ಸರ್ವರುಕ್ಕು ಮಾದರಣೀಯಙ್ಗಳುಮಾಯ್, ಇವನ್ ಕೃತಜ್ಞನಾಯಿರುನ್ದಾನೆನ್ರು ಸಾತ್ವಿಕರುಮ್ ಪ್ರಶಂಸಿತ್ತು ಪ್ರಸಾದಿಕ್ಕುಮ್ಪಡಿಯಾಯ್, ಸತ್ಯವಾದಿಯಾಯಿರುನ್ದಾನೆನ್ರು ಉಪನಿಷತ್ತುಕ್ಕಳುಮ್, ಔಪನಿಷದಪರಮ ಪುರುಷನುಮ್, ತಙ್ಗಳೋಡೊಕ್ಕ ಇವನೈ ಪ್ರಮಾಣ ಭೂತ ನೆನ್ರು ಆದರಿಕ್ಕುಮ್ಪಡಿಯುಮಾಮ್.

---

ವನ್ನು ಮಾಡಲು ಕಳುಹಿಸಿದರೆ, ತನ್ನ ಕೈಯ್ಯಲ್ಲಿರುವ ದೀಪವನ್ನು ಅದಕ್ಕೆ ಪ್ರಾಪ್ತರಾದವರ ಕೈಯ್ಯಲ್ಲಿ ಕೊಟ್ಟು ಹೋಗುವಂತೆ, ಸತ್ಪಾತ್ರರಾದವರಿಗೆ ತಾನು ಹೇಳುವಾಗ, ತನಗೆ ಉಪದೇಶಿಸಿದ ಆಚಾರ್ಯನನ್ನು ಮೊದಲು ಪ್ರಕಾಶ ಪಡಿಸಿ ತನಗೆ ಉಪದೇಶ ಮಾಡಲ್ಪಟ್ಟ ಅರ್ಥಗಳನ್ನೇ ಹೇಳಬೇಕು. **ಶಿಲಕಾರಣಂಗಳಾಲ್** ಇತ್ಯಾದಿ–ಪ್ರಾಚೀನ ಸುಕೃತ ವಿಶೇಷದಿಂದ ದಿವ್ಯ ಜ್ಞಾನ ಚಕ್ಷುಸ್ಸು, ಶ್ರೋತ್ರ–ಕಿವಿಗಳನ್ನು ಪಡೆದು ಅದರಿಂದ ತಾನು ತಿಳಿದು ಹೇಳುವ ಅರ್ಥಗಳನ್ನೂ ಸಹ 1) **ವ್ಯಾಸಪ್ರಸಾದಾತ್ ಶ್ರುತವಾನ್** ಇತ್ಯಾದಿ–ಶ್ರೀ ಕೃಷ್ಣಪರಮಾತ್ಮನು ಕುರುಕ್ಷೇತ್ರದಲ್ಲಿ ಅರ್ಜುನನಿಗೆ ಮಾಡಿದ ಗೀತೋಪದೇಶವನ್ನು ವ್ಯಾಸರ ಅನುಗ್ರಹದಿಂದ ದಿವ್ಯಚಕ್ಷುಸ್ಸು, ದಿವ್ಯ ಶ್ರೋತ್ರಗಳನ್ನು ಪಡೆದ ಸಂಜಯನು ಹಸ್ತಿನಾಪುರದಲ್ಲಿ ಧೃತರಾಷ್ಟ್ರನ ಅರಮನೆಯಲ್ಲಿ ಕುಳಿತು ಕೊಂಡಿದ್ದಂತೆಯೇ ಕೇಳಿಕೊಂಡೂ ಅಲ್ಲಿ ನಡೆಯುವ ಯುದ್ಧಾದಿಗಳನ್ನು ಸಾಕ್ಷಾತ್ಕರಿಸಿಕೊಂಡೂ, ಧೃತರಾಷ್ಟ್ರನಿಗೆ ಹೇಳಿದಂತೆ, ಸದಾಚಾರ್ಯರ ಅನುಗ್ರಹದಿಂದ ಈ ಅರ್ಥವನ್ನು ತಿಳಿದುಕೊಂಡೆನು. ನನ್ನ **ಕೈಮಿಡುಕ್ಕಾಲೇ** ಸಾಮರ್ಥ್ಯದಿಂದ ತಿಳಿದು ಹೇಳುತ್ತಿಲ್ಲವೆಂಬ ನಿಜಾಂಶವನ್ನು ಪ್ರಕಾಶಪಡಿಸಿಕೊಂಡು ಹೇಳಬೇಕು; ಹೀಗೆ ಹೇಳಿದರೆ ಇವನು ಹೇಳುವ ಅರ್ಥಗಳು ಸರ್ವರಿಗೂ ಆದರಣೀಯಗಳಾಗಿ ಇವನು ಕೃತಜ್ಞನಾಗಿದ್ದಾನೆಂದು ಸಾತ್ವಿಕರೂ ಅನುಗ್ರಹಿಸುವಂತೆಯೂ, ಸತ್ಯವಾದಿಯಾಗಿದ್ದಾನೆಂದು ಉಪನಿಷತ್ತುಗಳೂ ಔಪನಿಷದ ಪರಮ ಪುರುಷನೂ ತಮಗೆ ಸಮಾನನಾಗಿ ಇವನನ್ನು ಪ್ರಾಮಾಣಿಕನೆಂದು ಆದರಿಸುವಂತೆಯೂ ಆಗುತ್ತಾನೆ. ಆದಾಗಿ "ಆಚಾರ್ಯವಾನ್ ಪುರುಷೋವೇದ", ಆಚಾರ್ಯಾದ್ಧೈವ ವಿದ್ಯಾವಿದಿತಾ ಸಾಧಿಷ್ಠಂ ಪ್ರಾಪತ್, ಇತ್ಯಾದಿ ಉಪನಿಷತ್ಪ್ರತಿಪಾದ್ಯನಾದ ಭಗವಂತನೂ ತನ್ನ ಹಾಗೆಯೇ,

"ಯೋಮಾಮೇವಮ ಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।

ಸ ಸರ್ವವಿದ್ಭಜತಿಮಾಮ್ ಸರ್ವಭಾವೇನ ಭಾರತ॥"

ಇವನನ್ನೂ ಸರ್ವವಿತ್–ಸರ್ವವನ್ನೂ ತಿಳಿದವನೆಂದು ಕೊಂಡಾಡುವಂತೆ ಆಗುತ್ತಾನೆಂದರ್ಥ.

---

1) ಗೀತೆ 18-75

**ಇಪ್ಪಡಿ ಕೃತಜ್ಞನಾಯ್ ಅವಹಿತನಾನ ಶಿಷ್ಯನೈಪ್ಪತ್ತ ನಾನ್ ಶೆಯ್ದ ಕೃಷಿ ಫಲಿತ್ತದೆನ್ರು ಆಚಾರ್ಯನುಮ್ ಕೃತಾರ್ಥನಾಯಿರುಕ್ಕುಮ್.**

**ಸಾಕ್ಷಾನ್ಮುಕ್ತೇ ರುಪಾಯಾನ್ ಯೋ ವಿದ್ಯಾಭೇದಾನುಪಾದಿಶತ್ ।**
**ಕಥ್ಯತೇ ಮೋಕ್ಷ ಶಾಸ್ತ್ರೇಷು ಸತು ಶ್ರೇಷ್ಠತಮೋಗುರುಃ ॥170॥**
**ಆಚಾರ್ಯವತ್ತಯಾ ಮೋಕ್ಷಮಾಮನಂತಿ ಸ್ಮರನ್ತಿಚ ।**
**ಇಹಾಮುತ್ರಚ ತತ್ಪಾದೌ ಶರಣಂ ದೇಶಿಕಾವಿದುಃ ॥171॥**
**ಏತ್ತಿ ಮನತ್ತೆಳ್ಳಿಲ್ ಜ್ಞಾನವಿಳಕ್ಕೈಯಿರುಳನೈತ್ತುಮ್ ।**
**ಮಾತ್ತಿನವರ್ಕ್ಕೊರು ಕೈಮ್ಮಾರು ಮಾಯನುಂಕಾಣಹಿಲ್ಲಾನ್ ।**
**ಪೋತ್ತಿಯುಹಪ್ಪದುಂ ಪುನ್ದಿಯಿಲ್ಕೊಳ್ವದುಂ ಪೊಙ್ಗು ಪುಹಳ್ ।**
**ಶಾತ್ತಿವಳರ್ಪ್ಪದುಮ್ ಶತ್ತಲ್ಲವೋ ಮುನ್ನಮ್ಪೆತ್ತದರ್ಕೇ ॥**

---

**ಇಪ್ಪಡಿ ಕೃತಜ್ಞನಾಯ್** ಇತ್ಯಾದಿ–ಹೀಗೆ ಕೃತಜ್ಞನಾಗಿ **ಅವಹಿತನಾನ**– ಸಾವಧಾನದಿಂದ ಕೂಡಿದ ಶಿಷ್ಯನನ್ನು ಕುರಿತು, ನಾವು ಮಾಡಿದ ಕೃಷಿಯು ಫಲಿಸಿತೆಂದು ಆಚಾರ್ಯನೂ ಕೃತಾರ್ಥನಾಗಿರುತ್ತಾನೆ. ಒಬ್ಬನಿಗೆ ಅನೇಕ ಆಚಾರ್ಯರುಗಳಿದ್ದರೆ ಅವರುಗಳಲ್ಲಿ ಯಾರು ಪ್ರಧಾನರೆಂಬುದನ್ನು **ಸಾಕ್ಷಾನ್ಮುಕ್ತೇರುಪಾಯಾನ್ಯಃ** ಎಂಬ ಕಾರಿಕೆಯಿಂದ ಅನುಗ್ರಹಿಸುತ್ತಾರೆ. ಅದಾಗಿ ಮೋಕ್ಷಕ್ಕೆ ಸಾಕ್ಷಾದುಪಾಯಗಳಾದ ಭಕ್ತಿ ಪ್ರಪತ್ತಿಗಳಲ್ಲೊಂದನ್ನು ಉಪದೇಶ ಮಾಡುವವನು ಶ್ರೇಷ್ಠತಮನಾದ ಆಚಾರ್ಯನೆಂದು ಮೋಕ್ಷ ಶಾಸ್ತ್ರಗಳಲ್ಲಿ ಹೇಳಲ್ಪಡುತ್ತದೆ. **ಆಚಾರ್ಯವತ್ತಯಾ ಮೋಕ್ಷಂ** ಇತ್ಯಾದಿ ಇಂಥಹ ಆಚಾರ್ಯನನ್ನು ಪಡೆದೇ ಮೋಕ್ಷವು ಲಭಿಸುತ್ತದೆಯೆಂದು ವೇದಗಳೂ ಸ್ಮೃತಿಗಳೂ, "ಆಚಾರ್ಯವಾನ್ ಪುರುಷೋವೇದ, ಆಚಾರ್ಯವತ್ತಯಾ ಮುಕ್ತಾ, ಇತ್ಯಾದಿಯಾಗಿ ಹೇಳುತ್ತವೆ. **ಇಹಾಮುತ್ರಚ**-ಇತ್ಯಾದಿ–ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಆ ಆಚಾರ್ಯನ ಪಾದಗಳೇ ಶರಣು ಎಂದು "ನಾಥಾಯ ನಾಥಮುನಯೇಽತ್ರ ಪರತ್ರಚಾಪಿ ನಿತ್ಯಂಯದೀಯ ಚರಣೌ ಶರಣಂಮದೀಯಮ್" ಎಂದು ಆಳವಂದಾರ್ ಪ್ರಭೃತಿ ಪರಮಾಚಾರ್ಯರುಗಳು ನಿಶ್ಚಯಿಸಿದ್ದಾರೆ. ಹೀಗೆ ಸಾಕ್ಷಾನ್ಮೋಕ್ಷೋಪಾಯಗಳಾದ ಭಕ್ತಿ ಪ್ರಪತ್ತಿಗಳನ್ನು ಉಪದೇಶಿಸಿದ ಆಚಾರ್ಯನು ಶ್ರೇಷ್ಠತಮನು. ಅವನಿಗಿಂತ ಆಚಾರ್ಯನಿಷ್ಠೆಯಾಗಿ ಶಿಷ್ಯಭರವನ್ನು ತನ್ನಲ್ಲಿ ಏರಿಸಿಕೊಂಡು ಶಿಷ್ಯನಿಗೋಸ್ಕರ ಭರಸಮರ್ಪಣ ಮಾಡುವ ಆಚಾರ್ಯನು ಕೈಮುತಿಕ ನ್ಯಾಯದಿಂದ ಸರ್ವಶ್ರೇಷ್ಠನು.

ಅನಂತರ ಆಚಾರ್ಯನು ಮಾಡುವ ಉಪಕಾರಕ್ಕೆ ಪ್ರತ್ಯುಪಕಾರವು ಯಾವುದೂ ಇಲ್ಲ. ಅವನನ್ನು ಸ್ತೋತ್ರ ಮಾಡಿಕೊಂಡು ಕೃತಜ್ಞತಾನು ಸಂಧಾನದಿಂದ ಇರಬೇಕು ಎಂದು ಪಾಶುರ ರೂಪದಲ್ಲಿ ಅನುಗ್ರಹಿಸುತ್ತಾರೆ. **ಏಟ್ರಿ ಮನತ್ತೆಳ್ಳಿಲ್** ಇತ್ಯಾದಿ **ಮನತ್ತು**-ಅತಿ ಚಂಚಲವಾದ ಮನಸ್ಸಿನಲ್ಲಿ ಎಳ್ಳಿ**ಲ್ ಜ್ಞಾನವಿಳಕ್ಕೈ**-ಶೋಭಾಯಮಾನವಾದ ಜ್ಞಾನ ದೀಪವನ್ನು ಜ್ಞಾನವೆಂಬ ದೀಪಕ್ಕೆ ಶೋಭೆಯು ಯಾವುದೆಂದರೆ ಭಗವದ್ವಿಷಯ ವೈಲಕ್ಷಣದಿಂದಲೂ ಆಚಾರ್ಯರೂಪ ವಕ್ತೃ ವೈಲಕ್ಷಣ್ಯದಿಂದಲೂ, ಸಚ್ಛಿಷ್ಯರೂಪ ಆಶ್ರಯ ವೈಲಕ್ಷಣ್ಯದಿಂದಲೂ ಏರ್ಪಡ ತಕ್ಕದ್ದು. **ಏಟ್ರಿ**–ಹತ್ತಿಸಿ, **ಇರುಳನೈತ್ತುಮ್**–ಜೀವಾತ್ಮಕ ಮತ್ತು ಪರಮಾತ್ಮಕ ವಿಷಯಕವಾದ ಅಜ್ಞಾನಗಳನ್ನೆಲ್ಲಾ **ಮಾಟ್ರಿನವರ್ಕ್ಕು**–ಹೋಗಲಾಡಿಸಿದ ಆಚಾರ್ಯನಿಗೆ **ಒರುಕೈಮ್ಮಾರು**–ಒಂದು ಪ್ರತ್ಯುಪಕಾರವನ್ನು. **ಮಾಯನುಂ ಕಾಣಹಿಲ್ಲಾನ್**–ಆಶ್ಚರ್ಯಗುಣ ಚೇಷ್ಟಿತನಾದ ಭಗವಂತನೂ **ಕಾಣಹಿಲ್ಲಾನ್**-ತಿಳಿಯಲು ಅಸಮರ್ಥನು. ಪ್ರತ್ಯುಪಕಾರವಾವದೂ ಇಲ್ಲವಾದ್ದರಿಂದ ಹೀಗೆ ಅಸಮರ್ಥನೆಂದು ಹೇಳಿರುತ್ತಾರೆ. **ಪೋಟ್ರಿಯುಹಪ್ಪದುಮ್**–ಸ್ತೋತ್ರಮಾಡಿ ಸಂತೋಷಪಡಿಸುವುದೂ. **ಪುಂದಿಯಿಲ್ಕೊಳ್ವದುಮ್,** ಹೃದಯದಲ್ಲಿ ಸರ್ವದಾ ಧ್ಯಾನ ಮಾಡುವುದೂ, **ಪೊಂಗು ಪುಹಳ್**–ಅಭಿವೃದ್ಧರಾದ ಆಚಾರ್ಯನ ಕಲ್ಯಾಣ ಗುಣಗಳನ್ನು **ಶಾಟ್ರಿ**–ಉದ್ಘೋಷಿಸಿ, **ವಳರ್ಪದಮ್**-ಮೇಲು

**ಅಧ್ಯಾಸೀನ ತುರಂಗವಕ್ತ್ರವಿಲಸಜ್ಜಿಹ್ವಾಗ್ರ ಸಿಂಹಾಸನಾತ್**
**ಆಚಾರ್ಯಾದಿಹ ದೇವತಾಂ ಸಮಧಿಕಾಮನ್ಯಾಂ ನ ಮನ್ಯಾಮಹೇ ।**
**ಯಸ್ಯಾಸೌ ಭಜತೇ ಕದಾಚಿದಜಹದ್ಭೂಮಾ ಸ್ವಯಂ ಭೂಮಿಕಾಂ ।**
**ಮಗ್ನಾನಾಂ ಭವಿನಾಂ ಭವಾರ್ಣವ ಸಮುತ್ತಾರಾಯ ನಾರಾಯಣಃ ॥74॥**

**ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ ಶ್ರೀಮದ್ವೇಙ್ಕಟನಾಥಸ್ಯ**
**ವೇದಾನ್ತಾಚಾರ್ಯಸ್ಯ ಕೃತಿಷು ಶ್ರೀಮದ್ರಹಸ್ಯತ್ರಯಸಾರೇ**
**ಶಿಷ್ಯ ಕೃತ್ಯಾಧಿಕಾರಃ ಏಕತ್ರಿಂಶಃ ।**
**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ ॥**

---

ಮೇಲೆ ಅಭಿವೃದ್ಧಿಗೊಳಿಸುವುದೂ, ವಾಚಿಕಮಾನಸ ಕೈಂಕರ್ಯ ಪರೀವಾಹವಾಗಿ ಶುಶ್ರೂಷಾದಿ ಕಾಯಿಕ ಕೈಂಕರ್ಯವನ್ನು ಮಾಡುವುದೂ **ಮುನ್ನಮ್ ಪೆಟ್ರುದರ್ಕ್ಕು**–ಪೂರ್ವದಲ್ಲಿ ಆಚಾರ್ಯನ ಹತ್ತಿರ ತಾನು ಪಡೆದುಕೊಂಡ ಬ್ರಹ್ಮವಿದ್ಯಾದಿ ರೂಪ ಮಹಾಲಾಭಕ್ಕೆ **ಶಟ್ರಲ್ಲವೋ**–ಅತ್ಯಲ್ಪವಲ್ಲವೇ. ಉಪಕಾರಕ್ಕೆ ಸದೃಶವಾದ ಮತ್ತೊಂದು ಉಪಕಾರವನ್ನು ಪ್ರತ್ಯುಪಕಾರವೆನ್ನುತ್ತೇವೆ. ಆಚಾರ್ಯನು ಮಾಡಿರುವ ಉಪಕಾರಕ್ಕೆ ಇವನು ಮಾಡುವ ಗುಣಕೀರ್ತನ ಶುಶ್ರೂಷಾದಿಗಳೆಲ್ಲಾ ಅತಲ್ಪವಾದವೆಂದು ಹೇಳುವುದರಿಂದ ಆಚಾರ್ಯನ ಉಪಕಾರಕ್ಕೆ ಪ್ರತ್ಯುಪಕಾರವಿಲ್ಲವಾಗಿ, ಇವುಗಳು ಸ್ವಸತ್ತಾಲಾಭ ಹೇತುಗಳಾದ ಅವಶಕರ್ತವ್ಯಗಳಷ್ಟೇ.

**"ಅಧ್ಯಾಸೀನ ತುರಂಗವಕ್ತ್ರ"**ಎಂದಾರಂಭಿಸುವ ಶ್ಲೋಕದಿಂದ ಆಚಾರ್ಯನನ್ನು ಮನಸ್ಸಿನಲ್ಲಿ ಧ್ಯಾನ ಮಾಡುವ ಪ್ರಕಾರವನ್ನು ಅನುಸಂಧಾನ ಮಾಡಿ ಮುಗಿಸುತ್ತಾರೆ. **ಅಧ್ಯಾಸೀನ ತುರಂಗವಕ್ತ್ರವಿಲಸತ್ ಜಿಹ್ವಾಗ್ರಸಿಂಹಾಸನಾತ್ ಆಚಾರ್ಯಾತ್**-ಅಧ್ಯಾಸೀನೇನ ತುರಂಗವಕ್ತ್ರೇಣ ವಿಲಸತ್ ಜಿಹ್ವಾಗ್ರಮೇವ ಸಿಂಹಾಸನಂ ಯಸ್ಯ ಆಚಾರ್ಯಸ್ಯ ಎಂದು ವಿಗ್ರಹ. ಆಚಾರ್ಯನ ನಾಲಿಗೆಯಲ್ಲಿ ಹಯಗ್ರೀವನು ಕುಳಿತುಕೊಂಡು ಪ್ರಕಾಶಿಸುತ್ತಾನೆ. ಅಂಥಹ ಪ್ರಕಾಶಮಾನನಾದ ಹಯಗ್ರೀವನಿಗೆ ತನ್ನ ನಾಲಿಗೆಯನ್ನು ಆಸನವಾಗಿ ಕೊಂಡಿರುವ, ಆಚಾರ್ಯನಿಗಿಂತ; **ಇಹ ಈ** ಲೀಲಾವಿಭೂತಿಯಲ್ಲಿ **ಸಮಧಿಕಾಂದೇವತಾಂ**–ಎಲ್ಲರಿಗೂ ಮೇಲಾದ ದೇವತೆಯನ್ನು **ಅನ್ಯಾಂ**–ಬೇರೆಯವನೆಂದು **ನಮನ್ಯಾಮಹೇ**–ತತ್ವತ: ಶಾಸ್ತ್ರಗಳನ್ನು ತಿಳಿದ ನಾವು ಎಣಿಸುವುದಿಲ್ಲ. ಆಚಾರ್ಯ ರೂಪದಲ್ಲಿ ಆ ಹಯಗ್ರೀವನೇ ಅವನ ನಾಲಿಗೆಯಲ್ಲಿ ಸಾನಿಧ್ಯ ಮಾಡಿಕೊಂಡಿದ್ದಾನೆಂಗು ತಿಳಿಯುತ್ತೇನೆಂಗು ತಾತ್ಪರ್ಯ. ಅನ್ಯನಲ್ಲವೆಂಬುದನ್ನು ಉಪಪಾದಿಸುತ್ತಾರೆ. **ಯಸ್ಯಾಸೌ ಭಜತೇ** ಇತಾದಿ–ಅಸೌ–ಸಮಧಿಕ ದೇವತೆಯಾದ ನಾರಾಯಣನು, **ಅಜಹದ್ಭೂಮಾಸನ್**–ತನ್ನ ಮಾಹಾತ್ಮ್ಯವನ್ನು ಬಿಡದವನಾಗಿಕೊಂಡು, **ಮಗ್ನಾನಾಂ**–ಸಂಸಾರ ಸಮುದ್ರದಲ್ಲಿ ಮುಳುಗಿಕೊಂಡಿರುವ **ಭವಿನಾಂ**–ಸಂಸಾರಿಗಳ **ಭವಾರ್ಣವಸಮುತ್ತಾರಾಯ**-ಸಂಸಾರಸಾಗರದಿಂದ ಸಮುತ್ತಾರಣಾರ್ಥವಾಗಿ**ಕದಚಿತ್**–ಶಿಷ್ಯನ ಸುಕೃತ ಪರಿಪಾಕಕಾಲದಲ್ಲಿ **ಸ್ವಯಂ**-ತಾನಾಗಿಯೇ **ಯಸ್ಯಭೂಮಿಕಾಂ–ಅಸೌನಾರಾಯಣಃ**–ಈ ನಾರಾಯಣನು ಯಾವ ಆಚಾರ್ಯರೂಪ ವೇಷವನ್ನು **ಭಜತೇ**-

"ಸಾಕ್ಷಾನ್ನಾರಾಯಣೋದೇವಃ ಕೃತ್ವಾಮರ್ತ್ಯಮಯೀಂತನುಮ್ ।
ಮಗ್ನಾನುದ್ಧರತೇ ಲೋಕಾನ್ ಕಾರುಣ್ಯಾಚ್ಛಾಸ್ತ್ರ ಪಾಣಿನಾ॥"

"ಪೀತಹವಾಡೈಪ್ಪಿರಾನಾರ್ ಪಿರಮಗುರುವಾಹಿವಂದು" ಇತ್ಯಾದಿ ಹೇಳಿರುವಂತೆ, ಪರಿಗ್ರಹಿಸುತ್ತಾನೆ. ಹೀಗೆ ಭಗವಂತ

ಸಾದ ನಾರಾಯಣನು ರಾಮಕೃಷ್ಣಾದ್ಯವತಾರಗಳಲ್ಲಿ ಸಂಸಾರಿ ಚೇತನೋದ್ಧಾರಣವನ್ನು ಮಾಡಲಾಗದೆ. ಆಚಾರ್ಯನ ರೂಪದಲ್ಲಿ ಅವತರಿಸಿ ಆ ಚೇತನೋದ್ಧಾರಣ ಕೃತ್ಯವನ್ನು ಮಾಡುತ್ತಾನೆಂದರೆ ಸಾಕ್ಷಾನ್ನಾರಾಯಣನಿಗಿಂತಲೂ, ಆಚಾರ್ಯ ವೇಷ ವಿಶಿಷ್ಟನು ಉತ್ಕೃಷ್ಟನೆಂದು ಸ್ತೋತ್ರ ಮಾಡುತ್ತಾರೆ.

ಶ್ರೀಮದ್ರಹಸ್ಯತ್ರಯಸಾರದ "**ಶಿಷ್ಯಕೃತ್ಯಾಧಿಕಾರ**"ಕ್ಕೆ
"**ಸಾರಚಂದ್ರಿಕಾ**" ವ್ಯಾಖ್ಯಾನವು ಸಂಪೂರ್ಣ.
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ.
ಅಸ್ಮದ್ಗುರು ಪರಂಪರಾಯೈ ನಮಃ.

ಶ್ರಿಯೈ ನಮಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ

# 32 ನಿಗಮನಾಧಿಕಾರಃ

**ಕರಬದರಿತ ವಿಶ್ವಃ ಕಶ್ಚಿದಾಚಾರ್ಯದೃಷ್ಟ್ಯಾ**
**ಮುಷಿತ ನಿಖಿಲ ಮೋಹೋ ಮೂಲಮನ್ತ್ರಾದಿ ಭೋಗಃ ।**
**ಸಗುಣ ವಿಷಯಸಿದ್ಧ್ಯೈ ಸಂಪ್ರದಾಯಂ ಪ್ರಯಚ್ಛನ್**
**ಸುಚರಿತ ಸಿಲಹಾರೀ ಸೂರಿಬೃನ್ದಾಭಿನನ್ದ್ಯಃ ॥75॥**

---

**ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ**

ಶ್ರೀಮದ್ರಹಸ್ಯತ್ರಯಸಾರದಲ್ಲಿ **"ನಿಗಮನಾಧಿಕಾರ"**ಕ್ಕೆ **'ಸಾರಚಂದ್ರಿಕಾ'** ವ್ಯಾಖ್ಯಾನ

ಈ ನಿಗಮನಾಧಿಕಾರದಲ್ಲಿ ಆಚಾರ್ಯ ಸಾರ್ವಭೌಮರು ಕೆಳಗೆ ಮೂವತ್ತೊಂದು ಅಧಿಕಾರಗಳಲ್ಲಿ ಹೇಳಿದ ಅರ್ಥ ವಿಶೇಷಗಳನ್ನು ಸಂಗ್ರಹವಾಗಿ ಪ್ರದರ್ಶಿಸುವವರಾಗಿ, ಭಾಗ ಚತುಷ್ಟಯಾತ್ಮಕವಾದ ಸಾರಶಾಸ್ತ್ರದ ತತ್ವಾರ್ಥಗಳನ್ನು **ಕರಬದರಿತವಿಶ್ವಃ** ಎಂಬ ಶ್ಲೋಕದಲ್ಲಿ ಸಂಗ್ರಹಿಸುತ್ತಾರೆ. ಅದಾಗಿ **ಕಶ್ಚಿತ್** – ದುರ್ಲಭನಾದ, ಸಾವಿರದಲ್ಲಿ ಒಬ್ಬನು, **ಆಚಾರ್ಯದೃಷ್ಟ್ಯಾ** – ಆಚಾರ್ಯನ ಅನುಗ್ರಹದಿಂದ, **ಕರಬದರಿತವಿಶ್ವಃ** – ಕೈಯಲ್ಲಿಟ್ಟ ನಲ್ಲಿಕಾಯಿನ ಹಾಗೆ ಸರ್ವ ಪ್ರಪಂಚವನ್ನು ಸದಾಸಾಕ್ಷಾತ್ಕರಿಸಿಕೊಂಡಿರುವ ಅಂದರೆ ಸಾಕ್ಷಾತ್ಕಾರ ತುಲ್ಯವಾದ ಜ್ಞಾನದಿಂದ ಚೇತನ, ಅಚೇತನ, ಈಶ್ವರನೆಂಬ ತತ್ವತ್ರಯಾತ್ಮಕ ಸರ್ವ ಪದಾರ್ಥಗಳನ್ನೂ, ವಿಷಯೀಕರಿಸಿ, (ಇದು ಅರ್ಥಾನು ಶಾಸನ ಭಾಗದ ಸಂಗ್ರಹ) **ಮುಷಿತ ನಿಖಿಲಮೋಹಃ** – ಸಿದ್ಧೋಪಾಯ ವಿಷಯವಾಗಿಯೂ ಸಾಧ್ಯೋಪಾಯ ವಿಷಯವಾಗಿಯೂ, ಪ್ರಪತ್ತಿ ಪ್ರಭಾವದ ನ್ಯೂನಾತಿರೇಕ ವಿಷಯವಾದ ಸಂದೇಹಗಳನ್ನೂ ನಿಶ್ಶೇಷವಾಗಿ ಹೋಗಲಾಡಿಸಲ್ಪಟ್ಟವನಾಗಿ, (ಇದು ಸ್ಥಿರೀಕರಣ ಭಾಗದ ಅರ್ಥ) **ಮೂಲಮಂತ್ರಾದಿಭೋಗಃ** – ಮೂಲಮಂತ್ರ – ಅಷ್ಟಾಕ್ಷರ, ಆದಿಶಬ್ದದಿಂದ ದ್ವಯಮಂತ್ರ, ಚರಮಶ್ಲೋಕಗಳು ವಿವಕ್ಷಿತಗಳು, ಇವುಗಳ ವಿಷಯವಾದ ಭೋಗವು ಯಾವುದೆಂದರೆ, ಅತಿರಸಾವಹವಾದ ಅರ್ಥ ಪರಿಚಯವುಳ್ಳವನಾಗಿ, (ಇದರಿಂದ ಪದವಾಕ್ಯ ಯೋಜನಾಭಾಗವು ತಿಳಿಸಲ್ಪಟ್ಟಿತು), **ಸಗುಣವಿಷಯಸಿದ್ಧ್ಯೈ** – ಗುಣಪೂರ್ಣನಾದ ಸಚ್ಛಿಷ್ಯನು ಎಂಬ ವಿಷಯವು ಸಿದ್ಧಿಸಿದಲ್ಲಿ, **ಸಂಪ್ರದಾಯಂ** – ಭಗವಂತನೇ ಆದಿಯಾಗಿ ಉಪದೇಶ ಕ್ರಮದಿಂದ ಅವಿಚ್ಛಿನ್ನವಾಗಿ ಬಂದಿರುವ ರಹಸ್ಯತ್ರಯ ಸಾರಾರ್ಥಗಳನ್ನು, **ಪ್ರಯಚ್ಛನ್** – ಉಪದೇಶಿಸುವವನಾಗಿ (ಇದರಿಂದ ಆಚಾರ್ಯ ಕೃತ್ಯಾಧಿಕಾರವು ಹೇಳಲ್ಪಟ್ಟಿತು), **ಸುಚರಿತಸಿಲಹಾರೀ** –

### ಏವಂ ಶ್ಲೋಕೇ ಸಂಗೃಹೀತಂ ವಿಸ್ತರೇಣಾಹ

**ಇಪ್ಪಡಿ, ಇಜ್ಜೀವಾತ್ಮಾ ಸೂರಿಹಳೋಡೊಕ್ಕ ಭಗವದನುಭವ ರಸತ್ತುಕ್ಕು ಸ್ವರೂಪಯೋಗ್ಯನಾಯ್ ವೈತ್ತು ಅನಾದಿಕಾಲಮ್ ಇೞಂದು ಓರಳವಿಲೇ ಪುರಿನ್ದು ಸದಾಚಾರ್ಯ ಸಂಬಂಧಮುಂಡಾಯ್,** 1) **ತತ್ವಹಿತಙ್ಗಳೈಯುಮ್ ಯತ್ತುಡಙ್ಗನ ಪಡಿಯುಮ್,** 2) **ಇವೈಯುಱಿವಿಕ್ಕುಮ್ ಪ್ರಮಾಣಙ್ಗಳಿಲ್ ರಹಸ್ಯತ್ರಯಂ ಸಾರತಮಮಾನಪಡಿಯುಮ್,** 3) **ಇವತ್ತೈಕೊಣ್ಡಱಿಯುಮ್ ಅರ್ಥಙ್ಗಳಿಲ್ ಈ ಶೇಶಿತವ್ಯಙ್ಗಳಿನುಡೈಯ ಶರೀರಾತ್ಮಭಾವ ಸಂಬಂಧಾದಿಹಳ್ ಪ್ರಧಾನ ಪ್ರತಿತಂತ್ರಮಾಯ್ ಜ್ಞಾತವ್ಯಙ್ಗಳಾನಪಡಿಯುಮ್,** 4) **ಇಸ್ಸಂಬಂಧತ್ತೋಡೇಕೂಡ ಜ್ಞಾತವ್ಯಮಾಹ ಪೂರ್ವಾಚಾರ್ಯಸಂಗ್ರಹೀತಮಾನ ಅರ್ಥಪಂಚಕಮ್ ರಹಸತ್ರಯತ್ತಿಲ್ ಕಿಡಕ್ಕುಮ್ ಪಡಿಯುಮ್** 5 **ಇವ್ವರ್ಥಪಂಚಕತ್ತುಕ್ಕುಳ್ಳೇ ತತ್ವತ್ರಯಾದಿ ವಿಭಾಗಚಿಂತೈ ಪಣ್ಣುವಾರ್ಕ್ಕು ತಾತ್ಪರ್ಯಮುಮ್,** 6) **ಇತ್ತತ್ವತ್ರಯತ್ತಿಲ್ ಈಶ್ವರನಾಹ ಸಾತ್ವಿಕಶಾಸ್ತ್ರಙ್ಗಳಿಲ್ ಶೊಲ್ಲಪ್ಪಟ್ಟವನ್ ಶ್ರಿಯಃಪತಿಯೆನ್ನುಮಿಡಮುಮ್** 7) **ಇವ್ವರ್ಥಙ್ಗಳೆಲ್ಲಾಮ್ ತೆಳಿನ್ದವನ್ ಮುಮುಕ್ಷುವಾಯ್ ಮೋಕ್ಷೋಪಾಯೋನ್ಮುಖನಾಮ್ಪಡಿಯುಮ್** 8) **ಅಧಿಕಾರ ವಿಭಾಗಮುಮ್** 9) **ಇವ್ವಧಿಕಾರಿಹಳುಕ್ಕು ಅನುರೂಪಮಾನ ಉಪಾಯ ವಿಭಾಗಮುಮ್,** 10) **ಇವ್ವುಪಾಯಙ್ಗಳಿಲ್ ಸ್ವತಂತ್ರ ಪ್ರಪತ್ತಿನಿಷ್ಠನುಕ್ಕು ಅಧಿಕಾರ ವಿಶೇಷಮಿರುಕ್ಕುಮ್ ಕಟ್ಟಳೈಯುಮ್** 11) **ಸಕೃತ್ಕರ್ತವ್ಯಮಾನ ಇವ್ವುಪಾಯತ್ತುಕ್ಕು ಅನುರೂಪಮಾಹ ವಿಹಿತಮಾನ ಪರಿಕರವಿಭಾಗಮುಮ್,** 12) **ಮುಮುಕ್ಷುವುಕ್ಕು ಸಪರಿಕರಮಾನ ಭರನ್ಯಾಸರೂಪ ಪ್ರಧಾನಕರ್ತವತ್ತಿನುಡೈಯ ಸನ್ನಿವೇಶ**

---

"ಸುವ್ಯಾಹೃತಾನಿ ಮಹತಾಂ ಸುಕೃತಾನಿ ತತಸ್ತತಃ ।
ಸಂಚಿನ್ವನ್ ಧೀರ ಆಸೀತ ಸಿಲಹಾರೀ ಸಿಲಂ ಯಥಾ ॥"–

ಮಹಾಪುರುಷರುಗಳು ಹೇಳಿರುವ ಒಳ್ಳೆಯ ಮಾತುಗಳನ್ನೂ, ಅವರುಗಳ ಅನುಷ್ಠಾನಗಳನ್ನೂ ಶೇಖರಿಸಿ – ಅಂದರೆ ಅವರ ಅನುಷ್ಠಾನಗಳನ್ನು ಆಗಾಗ್ಯೆ ನೋಡಿಕೊಂಡು ಹಾಗೆಯೇ ನಡೆಯುವವನಾಗಿ, ಕೊಠಾರಗಳಲ್ಲಿ ಅಲ್ಲಲ್ಲೇ ಬಿದ್ದಿರುವ ಧಾನ್ಯಕಣಗಳನ್ನು (ಸಿಲ) ಒಟ್ಟುಗೂಡಿಸಿ ಸಂಗ್ರಹಿಸುವಂತೆ, ಪಂಡಿತನಾದವನು ಸಂಗ್ರಹಿಸಿಡಬೇಕು. ಇದರಿಂದ ಅನುಷ್ಠಾನ ಪರ್ಯಂತ ಶಿಷ್ಯ ಕೃತ್ಯಾಧಿಕಾರವು ತಿಳಿಸಲ್ಪಟ್ಟಿತು. **ಸೂರಿಬೃಂದಾಭಿಸಂದ್ಯಃ**– ಈ ಲೋಕದಲ್ಲಿರುವ ಮಹಾಪುರುಷರುಗಳಿಂದಲೂ, ಪರಮಪದದಲ್ಲಿರುವ ನಿತ್ಯಸೂರಿಗಳಿಂದಲೂ ಸ್ತುತ್ಯನಾಗಿ ಆಗುತ್ತಾನೆ. ಇದರಿಂದ "ನಿತ್ಯಸೂರಿಹಳ್ ತಿರಳಿಲ್ ಪುಕ್ಕಾಲ್ ವಾಶಿತೆರಿಯಾದ ಪಡಿಯಾನ ನಿರತಿಶಯ ಪೂರ್ತಿಯೈಪ್ಪೆಟ್ರು ವಾೞ್ವಾರ್ಹಳ್", ಎಂಬ ನಿಗಮನಾಧಿಕಾರದ ಅರ್ಥವು ಹೇಳಲ್ಪಟ್ಟಿತು.

ಅನಂತರ ಉಪೋದ್ಘಾತಾಧಿಕಾರದಿಂದ ಹಿಡಿದು ಶಿಷ್ಯಕೃತ್ಯಾಧಿಕಾರ ಪರ್ಯಂತಗಳಾದ ಅರ್ಥವಿಶೇಷಗಳನ್ನು **'ಇಪ್ಪಡಿಇಜ್ಜೀವಾತ್ಮಾ'** ಎಂದಾರಂಭಿಸಿ ಆಚಾರ್ಯ ಸಾರ್ವಭೌಮರು ಸಂಗ್ರಹಿಸುತ್ತಾರೆ. ಅದಾಗಿ ಹೀಗೆ ಈ ಜೀವಾತ್ಮನು ನಿತ್ಯಸೂರಿಗಳಿಗೆ ಸದೃಶನಾಗಿ ಭಗವದನುಭವ ರೂಪವಾದ ಆನಂದವನ್ನು ಪಡೆಯಲು ಸ್ವರೂಪತಃ ಯೋಗ್ಯನಾಗಿದ್ದುಕೊಂಡು, ಅನಾದಿ ಕಾಲದಿಂದ ಆ ಆನಂದವನ್ನು ಕಳೆದುಕೊಂಡು **ಓರಳವಿಲೇ** – ಯಾದೃಚ್ಛಿಕ ಸುಕೃತಾದಿ ಪರಿಪಾಕ ಕಾಲದಲ್ಲಿ, **ಪುರಿಂದು** – ಸಂಸಾರದಿಂದ ನಿಸ್ಪೃಹನಾಗಿ, ಸದಾಚಾರ್ಯ ಸಂಬಂಧವನ್ನು ಪಡೆದು, ತತ್ವಹಿತ ಪುರುಷಾರ್ಥಗಳನ್ನು ತಿಳಿಸುವ ಪ್ರಮಾಣಗಳಲ್ಲಿ ರಹಸ್ಯತ್ರಯವು ಸಾರತಮವಾದ ರೀತಿಯನ್ನೂ (ಸಾರನಿಷ್ಕರ್ಷಾಧಿಕಾರಾರ್ಥ) ಇವುಗಳನ್ನು ಕೊಂಡು ತಿಳಿಯುವ ಅರ್ಥಗಳಲ್ಲಿ ಈಶನು, ಈಶಿತವ್ಯಗಳು, ಶರೀರಾತ್ಮಭಾವ ಸಂಬಂಧ, ಆದಿಶಬ್ದದಿಂದ, ಆಧಾರಾಧೇಯ ಭಾವ ಸಂಬಂಧವೇ ಮೊದಲಾದವು ಪ್ರಧಾನ ಪ್ರತಿತಂತ್ರಗಳಾಗಿ ತಿಳಿಯಲ್ಪಡಬೇಕೆಂಬ ಅರ್ಥಗಳೂ (ಪ್ರಧಾನ ಪ್ರತಿತಂತ್ರಾಧಿಕಾರಾರ್ಥ), ಈ ಸಂಬಂಧದೊಡನೆ ಜ್ಞಾತವ್ಯ

ಮಿರುಕ್ಕುಮ್ಪಡಿಯುಮ್ 13) ಇಪ್ಪಡಿ ಸಾಙ್ಗಪ್ರಪದನಾನುಷ್ಠಾನಮ್ ಪಣ್ಣಿನವನ್ ಸರ್ವರಕ್ಷಣಾಧಿಕೃತನ್ ಪಕ್ಕಲಿಲೇ ನ್ಯಸ್ತಭರನಾಹೈಯಾಲೇ ಕೃತಕೃತ್ಯನಾಮ್ಪಡಿಯುಮ್,14) ಇನ್ನಿಷ್ಠೈ ತನಕ್ಕು ಪಿರನ್ದಮೈ ಕಣ್ಡು ತಾನ್ ತೇರಿಯಿರುಕ್ಕೈಕ್ಕು ಅಡೈಯಾಳಙ್ಗಳುಮ್ ( 5) ಇವನುಕ್ಕು ಆರ್ತಿಯಲ್ ಮಾನ್ದ್ಯತ್ತಾಲೇ ಶರೀರಮ್ ಅನುವರ್ತ್ತಿತ್ತದಾಹಿಲ್ ಇಙ್ಗಿರುನ್ದ ಕಾಲತ್ತುಕ್ಕು ಸ್ವಯಂ ಪ್ರಯೋಜನಮಾಯ್ ಸ್ವರೂಪ ಪ್ರಾಪ್ತಶೇಷವೃತ್ತಿ ರೂಪಮಾನ ಕೈಂಕರ್ಯ ಮಿರುಕ್ಕುಂಪಡಿಯುಮ್ 16) ಭಗವತ್ಕೈಙ್ಕರ್ಯತ್ತುಕ್ಕೆಲ್ಲೈನಿಲಮ್ ಭಾಗವತಕೈಙ್ಕರ್ಯಮಾನಪಡಿಯುಮ್, 17) ಶಾಸಿತಾವಾನ ಸ್ವಾಮಿಕ್ಕು ಅಭಿಮತಮಲ್ಲಾದುದು ಕೈಂಕರ್ಯಮಲ್ಲಾಮೈಯಾಲೇ ಯಥಾಶಾಸ್ತ್ರಮ್ ಕೈಂಕರ್ಯಮ್ ಅನುಷ್ಠಿಕ್ಕವೇಣ್ಡಿನಪಡಿಯುಮ್ 18) ಇಶ್ಶಾಸ್ತ್ರೀಯ ಕೈಂಕರ್ಯ ಪ್ರವೃತ್ತನುಕ್ಕು ಅಪರಾಧಙ್ಗಳ್ ಪುಹುರಾಮೈಕ್ಕುಮ್, ಪುಹುನ್ದವೈಕಳೈಗೈಕ್ಕುಮ್ ಪಿರಹುಹಳುಮ್ 19) ಇನ್ನಿರಪರಾಧ ಕೈಂಕರ್ಯತ್ತುಕ್ಕು ಸ್ಥಾನಮಾಹ ಅನಾಪತ್ತಿಲುಚಿತಮಾವದು ಭಾಗವತಾಶ್ರಿತಮಾನ ಭಗವತ್ಕ್ಷೇತ್ರಮೆನ್ನು ಮಿಡಮುಮ್ 20 ಇಪ್ಪಡಿಯೇ ಇರುನ್ದ ಇವ್ವಧಿಕಾರಿಕ್ಕು ಶರಣ್ಯಸಂಕಲ್ಪ ವಿಶೇಷತ್ತಾಲೇ ಪ್ರಶಸ್ತದೇಶ ಕಾಲಾದಿ ನಿಯತಿ ನಿರಪೇಕ್ಷಮಾಹ ಸ್ಥೂಲ ಶರೀರತ್ತಿಲ್ ನಿನ್ರುಮ್ ನಿರ್ಯಾಣ ಮಿರುಕ್ಕುಂಪಡಿಯುಮ್ 21)ಇಪ್ಪಡಿ ಪುರಪ್ಪಟ್ಟಾಲ್ ಪಿತಾ

---

ವಾಗಿ ಪೂರ್ವಾಚಾರ್ಯ ಸಂಗೃಹೀತವಾದ ಅರ್ಥಪಂಚಕವು ರಹಸ್ಯತ್ರಯದಲ್ಲಿ ನಿರೂಪಿಸಲ್ಪಟ್ಟಿರುವ ರೀತಿಯನ್ನೂ (ಅರ್ಥ ಪಂಚಕಾಧಿಕಾರಾರ್ಥ), ಈ ಅರ್ಥ ಪಂಚಕದೊಳಗೆ ತತ್ವತ್ರಯಾದಿ ವಿಭಾಗದ ಚಿಂತೆಯನ್ನು ಮಾಡುವವರಿಗೆ ತಾತ್ಪರ್ಯವೂ (ತತ್ವತ್ರಯಾಧಿಕಾರಾರ್ಥ) - ತಾತ್ಪರ್ಯವು ಯಾವುದೆಂದರೆ ಪ್ರಕೃತ್ಯಾತ್ಮ ಭ್ರಾಂತಿ ಜೀವನೂ ಈಶ್ವರನೂ ಒಂದೇ ಎಂಬುವು, ಈ ತತ್ವತ್ರಯಗಳ ಮಧ್ಯೆ, ಈಶ್ವರನಾಗಿ ಸಾತ್ವಿಕ ಶಾಸ್ತ್ರಗಳಲ್ಲಿ ಹೇಳಲ್ಪಟ್ಟವನು ಲಕ್ಷ್ಮೀಪತಿ ಎಂಬುದೂ (ಪರದೇವತಾ ಪಾರಮಾರ್ಥ್ಯಾಧಿಕಾರಾರ್ಥ), ಈ ಅರ್ಥಗಳನ್ನೆಲ್ಲಾ ತಿಳಿದವನು ಮೋಕ್ಷದಲ್ಲಿ ಆಸೆಯುಳ್ಳವನಾಗಿ, ಮೋಕ್ಷೋಪಾಯವಾದ ಭಕ್ತಿಪ್ರಪತ್ತಿಗಳಲ್ಲೊಂದನ್ನು ಅನುಷ್ಠಿಸಲು ಉನ್ಮುಖನಾಗುವ ರೀತಿಯನ್ನೂ (ಮುಮುಕ್ಷುತ್ವಾಧಿಕಾರಾರ್ಥ), ಭಕ್ತಿ ಪ್ರಪತ್ತಿಗಳಿಗೆ ಅಧಿಕಾರಿಗಳು ಯಾರು ಯಾರು ಎಂಬ ವಿಭಾಗವೂ, (ಅಧಿಕಾರವಿಭಾಗಾಧಿಕಾರ), ಈ ಅಧಿಕಾರಿಗಳಿಗೆ ಅನುರೂಪವಾದ ಉಪಾಯವಿಭಾಗವೂ (ಉಪಾಯ ವಿಭಾಗಾಧಿಕಾರಾರ್ಥ), ಈ ಉಪಾಯಗಳಲ್ಲಿ ಸ್ವತಂತ್ರ ಪ್ರಪತ್ತಿ ನಿಷ್ಠನಿಗೆ ಅಧಿಕಾರ ವಿಶೇಷವು ಇರುವ ರೀತಿಯೂ (ಪ್ರಪತ್ತಿಯೋಗ್ಯಾಧಿಕಾರಾರ್ಥ), ಸಕೃತ್ಕರ್ತವ್ಯವಾದ ಈ ಉಪಾಯಕ್ಕೆ ಅನುರೂಪವಾಗಿ ವಿಹಿತವಾದ ಪರಿಕರ-ಅಂಗಗಳ ವಿಭಾಗಗಳೂ (ಪರಿಕರವಿಭಾಗಾಧಿಕಾರಾರ್ಥ), ಮುಮುಕ್ಷುವಿಗೆ ಸಪರಿಕರವಾದ ಭರನ್ಯಾಸ ರೂಪವಾದ ಪ್ರಧಾನ ಕರ್ತವ್ಯವಾದ ಶರಣಾಗತಿಯ **ಸನ್ನಿವೇಶಮ್** - ಅಂಗಿ ಸ್ವರೂಪವು ಇರುವ ರೀತಿಯನ್ನೂ (ಸಾಂಗ ಪ್ರಪದನಾಧಿಕಾರಾರ್ಥ), ಹೀಗೆ ಸಾಂಗಪ್ರಪದನಾನುಷ್ಠಾನವನ್ನು ಮಾಡಿದವನು ಸರ್ವರನ್ನೂ ರಕ್ಷಿಸುವ ಅಧಿಕಾರವುಳ್ಳ ಭಗವಂತನಲ್ಲಿ ನ್ಯಸ್ತಭರನಾದ್ದರಿಂದ ಕೃತಕೃತ್ಯನಾದ ರೀತಿಯನ್ನೂ (ಕೃತಕೃತ್ಯಾಧಿಕಾರಾರ್ಥ), ಈ ನಿಷ್ಠೆಯು ತನಗೆ ಉಂಟಾಗಿರುವುದನ್ನು ನೋಡಿ ತಾನು ಸಮಾಧಾನದಿಂದ ಇರುವುದಕ್ಕೆ ಚಿಹ್ನೆಗಳೂ (ಸ್ವನಿಷ್ಠಾಭಿಜ್ಞಾನಾಧಿಕಾರಾರ್ಥ), ಇವನಿಗೆ ಆರ್ತಿಯಲ್ಲಿ ಮಾಂದ್ಯದಿಂದ ಶರೀರವು ಅನುವರ್ತಿಸುವುದಾದರೆ ಇಲ್ಲಿರುವ ಕಾಲಕ್ಕೆ ಸ್ವಯಂ ಪ್ರಯೋಜನವಾಗಿ ಸ್ವರೂಪ ಪ್ರಾಪ್ತ ಶೇಷ ವೃತ್ತಿರೂಪವಾದ ಕೈಂಕರ್ಯವು ಇರುವ ರೀತಿಯೂ (ಉತ್ತರ ಕೃತ್ಯಾಧಿಕಾರಾರ್ಥ), ಭಗವತ್ಕೈಂಕರ್ಯಕ್ಕೆ ಭಾಗವತಕೈಂಕರ್ಯವು ಸೀಮಾಭೂಮಿಯಾಗಿರುವ ರೀತಿಯೂ (ಪುರುಷಾರ್ಥಕಾಷ್ಠಾಧಿಕಾರ), ಶಾಸಿತಾವಾದ ಸ್ವಾಮಿಗೆ ಅಭಿಮತವಿಲ್ಲದೆ ಇರುವುದು ಕೈಂಕರ್ಯವಿಲ್ಲದೆ ಇರುವುದರಿಂದ ಯಥಾಶಾಸ್ತ್ರ ಕೈಂಕರ್ಯವನ್ನು ಅನುಷ್ಠಿಸ ಬೇಕಾದ ರೀತಿಯೂ (ಶಾಸ್ತ್ರೀಯನಿಯಮನಾಧಿಕಾರಾರ್ಥ , ಈ ಶಾಸ್ತ್ರೀಯ ಕೈಂಕರ್ಯದಲ್ಲಿ ಪ್ರವೃತ್ತನಾದವನಿಗೆ ಅಪರಾಧಗಳು ಉಂಟಾಗದೆ ಇರುವುದಕ್ಕೂ, ಉಂಟಾದವು ಹೋಗುವುದಕ್ಕೆ ಉಪಾಯಗಳೂ (ಅಪರಾಧ ಪರಿಹಾರಾಧಿಕಾರಾರ್ಥ), ಈ ನಿರಪರಾಧ ಕೈಂಕರ್ಯಕ್ಕೆ ಸ್ಥಾನವಾಗಿಯೂ, ಅನಾಪದ್ದಶೆ

ಯೌವ ರಾಜ್ಯತ್ತುಕ್ಕು ಮುಡಿಶೂಡ ಅಭ್ಯೈತ್ತು ವರವಿಟ್ಟ ರಾಜಕುಮಾರನ್ ಪೊಮಾಪ್ಪೋಲೇ ಪೆರಿಯ ಮೇನ್ಮೈಯೋಡೇ ಪರಮಪದ ಪರ್ಯನ್ತಮಾಹ ಅರ್ಚಿರಾದಿ ಮಾರ್ಗತ್ತಾಲೇ ಪೋಮ್ಪಡಿಯುಮ್ 22) ಇಪ್ಪಡಿ ಪೋನಾಲ್ ಅಜ್ಗುಪಿರಕ್ಕುಮ್ ಸ್ವಚ್ಛಂದ ಕೈಙ್ಕರ್ಯ ಪರ್ಯನ್ತ ಪರಿಪೂರ್ಣಾನುಭವರೂಪಮಾನ ಮುಕ್ತೈಶ್ವರ್ಯ ಮಿರುಕ್ಕುಮ್ಪಡಿಯುಮ್ 23) ಇಪ್ಪಡಿ ಉಕ್ತಮಾನ ಜ್ಞಾತವ್ಯಙ್ಗಳಿಲ್ ಪ್ರಧಾನಮಾನ ಸಿದ್ಧೋಪಾಯ ತ್ತೈಯುಮ್ 24) ಕರ್ತವ್ಯಂಗಳಿಲ್ ಪ್ರಧಾನಮಾನ ಸಾಧ್ಯೋಪಾಯತ್ತೈಯುಮ್ 25-26) ಇವ್ವುಪಾಯನಿಷ್ಠನುಡೈಯ ಪ್ರಭಾವತ್ತಿಲ್ ಶಾಸ್ತ್ರಂಗಳಿಶೈಯಾದ ಏತ್ತಚ್ಚುರುಕ್ಕಂಗಳೈಯುಮ್ಪತ್ತಿ ಆಹಾರ ದೋಷ ಹೈತುಕ ಸಂಸರ್ಗ ಯುಗ ಸ್ವಭಾವಾದಿಹಳಾಲೇ ವರುಮ್ ಕಲಕ್ಕಂಗಳು ಕ್ಕುಪ್ಪಣ್ಣುಮ್ ಪರಿಹಾರ ಪ್ರಕಾರಙ್ಗಳುಮ್(27,28,29) ಇವೈಯೆಲ್ಲಾಮ್ ಅನುಸಂಧಿಕ್ಕೈಕ್ಕು ಮುಖಮಾನ ರಹಸ್ಯತ್ರಯತ್ತಿಲ್ ಪದವಾಕ್ಯ ಯೋಜನೈಹಳುಮ್, 30 ಇವ್ವರ್ಥಂಗಳುಕ್ಕೆಲ್ಲಾಮ್ ಯಥಾಶಾಸ್ತ್ರಂ ಸಂಪ್ರದಾಯ ಪ್ರವರ್ತನಮ್ ಪಣ್ಣುಮ್ ಆಚಾರ್ಯನುಕ್ಕು ಉಪದೇಶಾದಿ ಪ್ರವೃತ್ತಿ ನಿವೃತ್ತಿ ವಿಷಯಂಗಳಿರುಕ್ಕುಮ್ಪಡಿಯುಮ್ 31) ಇಪ್ಪಡಿ ಪರಮೋಪಕಾರನಾನ ಆಚಾರ್ಯನ್ ತಿರತ್ತಿಲ್ ತಹುದಿಯಾನ ಪ್ರತ್ಯುಪಕಾ ಮಿಲ್ಲಾಮೈಯಾಲೇ ನಿತ್ಯಋಣಿಯಾನ ಶಿಷ್ಯನುಕ್ಕು ಚ್ಚೆಯ್ಯವಡುಕ್ಕುಮವೈಯುಮೆಲ್ಲಾಮ್, ಶ್ರುತಿಸ್ಮೃತಿ ಸೂತ್ರಸಂಪ್ರದಾಯಙ್ಗಳಾಲುಮ್ ಇವತ್ತುಕ್ಕು ಅನುಕೂಲಙ್ಗಳಾನ ಸಮೀಚೀನನ್ಯಾಯಙ್ಗಳಾಲುಮ್ ಅಜ್ಞಾನ ಸಂಶಯ ವಿಪರ್ಯಯಙ್ಗಳರ ಯಥಾಶ್ರುತಂ ಯಥಾಹೃದಯಂ ಉಪಪಾದಿತ್ತೋಮ್.

---

ಯಲ್ಲಿ ಉಚಿತವಾದದು ಭಾಗವತಾಶ್ರಿತವಾದ ಭಗವತ್ಕ್ಷೇತ್ರವೆಂಬುದೂ (ಸ್ಥಾನವಿಶೇಷಾಧಿಕಾರಾರ್ಥ), ಹೀಗೆಂದೇ ಇರುವ ಅಧಿಕಾರಿಗೆ ಶರಣ್ಯನ ಸಂಕಲ್ಪ ವಿಶೇಷದಿಂದ ಪ್ರಶಸ್ತದೇಶಕಾಲಾದ್ಯ ದೃಷ್ಟ ನಿರಪೇಕ್ಷವಾಗಿ ಸ್ಥೂಲ ಶರೀರದಿಂದ ನಿರ್ಯಾಣ – ಆತ್ಮಾ ಹೊರಬೀಳುವ ಕ್ರಮದ ರೀತಿಯೂ (ನಿರ್ಯಾಣಾಧಿಕಾರಾರ್ಥ , ಹೀಗೆ ಹೊರಟು ಬಂದರೆ ತಂದೆಯು ಯೌವರಾಜ್ಯ ಪಟ್ಟಾಭಿಷೇಕಕ್ಕೆ ಕರೆಸಿದ ರಾಜಕುಮಾರನು ದೊಡ್ಡ ಗೌರವದೊಡನೆ ಪರಮ ಪದ ಪರ್ಯಂತ ಅರ್ಚಿರಾದಿ ಮಾರ್ಗದಲ್ಲಿ ಹೋಗುವ ರೀತಿಯೂ (ಗತಿಚಿಂತನಾಧಿಕಾರಾರ್ಥ), ಹೀಗೆ ಹೋದರೆ ಅಲ್ಲಿ ಉಂಟಾಗುವ ಸ್ವಚ್ಛಂದವಾದ ಕೈಂಕರ್ಯ ಪರ್ಯಂತ ಪರಿಪೂರ್ಣಬ್ರಹ್ಮಾನುಭವರೂಪವಾದ ಮುಕ್ತೈಶ್ವರ್ಯವು ಇರುವ ರೀತಿಯೂ (ಪರಿಪೂರ್ಣ ಬ್ರಹ್ಮಾನುಭವಾಧಿಕಾರಾರ್ಥ), ಹೀಗೆ ಹೇಳಲ್ಪಟ್ಟ ತಿಳಿಯಬೇಕಾದ ಅರ್ಥಗಳಲ್ಲಿ ಪ್ರಧಾನವಾದ ಸಿದ್ಧೋಪಾಯವನ್ನೂ (ಸಿದ್ಧೋಪಾಯ ಶೋಧನಾಧಿಕಾರಾರ್ಥ), ಕರ್ತವ್ಯಗಳಲ್ಲಿ ಪ್ರಧಾನವಾದ ಸಾಧ್ಯೋಪಾಯವನ್ನೂ (ಸಾಧ್ಯೋಪಾಯ ಶೋಧನಾಧಿಕಾರಾರ್ಥ), ಈ ಉಪಾಯ ನಿಷ್ಠನ ಪ್ರಭಾವದಲ್ಲಿ ಶಾಸ್ತ್ರಗಳು ಅಂಗೀಕರಿಸದ ನ್ಯೂನಾತಿರೇಕಗಳನ್ನು ಕುರಿತು ಆಹಾರದೋಷ, ಹೈತುಕ (ವಿತಂಡಾವಾದಿಗಳು) ಸಂಸರ್ಗ, ಯುಗ ಸ್ವಭಾವಾದಿಗಳಿಂದ ಬರುವ ಸಂದೇಹಗಳಿಗೆ ಮಾಡತಕ್ಕ ಪರಿಹಾರ ಪ್ರಕಾರಗಳನ್ನೂ, (ಪ್ರಭಾವವ್ಯವಸ್ಥಾ-ಪ್ರಭಾವ ರಕ್ಷಾಧಿಕಾರಗಳ ಅರ್ಥ), ಈ ಅರ್ಥಗಳನ್ನೆಲ್ಲಾ ಅನುಸಂಧಿಸಲು ಮುಖವಾದ ರಹಸ್ಯತ್ರಯದಲ್ಲಿ ಪದವಾಕ್ಯ ಯೋಜನೆಗಳೂ (ಪದವಾಕ್ಯ ಯೋಜನಾಭಾಗಾರ್ಥ , ಈ ಅರ್ಥಗಳನ್ನೆಲ್ಲಾ ಯಥಾಶಾಸ್ತ್ರ ಸಂಪ್ರದಾಯ ಪ್ರವರ್ತನ ಮಾಡುವ ಆಚಾರ್ಯನಿಗೆ ಉಪದೇಶಾದಿ ಪ್ರವೃತ್ತಿ ನಿವೃತ್ತಿ ವಿಷಯಗಳು ಇರುವ ರೀತಿಯೂ (ಆಚಾರ್ಯ ಕೃತ್ಯಾಧಿಕಾರಾರ್ಥ), ಹೀಗೆ ಪರಮೋಪಕಾರನಾದ ಆಚಾರ್ಯನ ವಿಷಯದಲ್ಲಿ ಪ್ರತ್ಯುಪಕಾರವಿಲ್ಲದೆ ಇರುವುದರಿಂದ ನಿತ್ಯ ಋಣಿಯಾದ ಶಿಷ್ಯನಿಗೆ ಮಾಡಲು ಯೋಗ್ಯವಾದವುಗಳೆಲ್ಲಾ (ಶಿಷ್ಯಕೃತ್ಯಾಧಿಕಾರಾರ್ಥ , ಶ್ರುತಿಸ್ಮೃತಿ ಸೂತ್ರ ಸಂಪ್ರದಾಯಗಳಿಂದಲೂ, ಇವುಗಳಿಗೆ ಅನುಕೂಲಗಳಾದ ಸಮೀಚೀನನ್ಯಾಯಗಳಿಂದಲೂ, ಅಜ್ಞಾನ ಸಂಶಯ ವಿಪರ್ಯಯ (ವ್ಯತ್ಯಾಸ)ಗಳಿಲ್ಲದೆ **ಯಥಾಶ್ರುತಮ್** – ಆಚಾರ್ಯರಹತ್ತಿರ ಹೇಗೆ ಕೇಳಿದೆವೋ ಹಾಗೆ, **ಯಥಾಹೃದಯಮ್** – ಮನಸ್ಸಿನಲ್ಲಿ ಪ್ರಾಮಾಣಿಕಾರ್ಥಗಳು ತೋರಿದ ರೀತಿಯಲ್ಲಿ **ಉಪಪಾದಿತ್ತೋಮ್** – ಈ ಗ್ರಂಥದಲ್ಲಿ ನಿರೂಪಿಸಿದೆವು. ಆದಾಗಿ ಆಚಾರ್ಯ ಶ್ರೀಪ್ಮರಾರ್ಶ್ರೀಮನ್ನಿಗಮಾಂತ ಮಹಾದೇಶಿಕನ್‌ರವರು ಈ ರಹಸ್ಯತ್ರಯಸಾರ ಗ್ರಂಥದಲ್ಲಿ ಪೂರ್ವಾ

### ನಿಗಮನೇ ಫಲಶ್ರುತಿಮಾಹ

ಇವ್ವರ್ಥಙ್ಗಳೈಯೆಲ್ಲಾಮ್ ಮುರ್ಪಡ ಸತ್ಸಂಪ್ರದಾಯಮುಡೈಯ ಸದಾಚಾರ್ಯನ್ ಪಕ್ಕಲಿಲೇ ಸಮ್ಯಗುಪಸನ್ನನಾಯ್, ೧) "ಶಿಷ್ಯಸ್ತೇಽಹಂ ಶಾಧಿಮಾಂ ತ್ವಾಂ ಪ್ರಪನ್ನಮ್" ಎನ್ರು ವಿಣ್ಣಪ್ಪಮ್ ಶೆಯ್‌ದು ಸಾದರನಾಯ್ ವಿಶದಮಾಹ ಶ್ರವಣಂ ಪಣ್ಣಿ ಇವತ್ತುಕ್ಕು ಉಪಯುಕ್ತಙ್ಗಳಾನ ನಲ್‌ವಾರ್ತೈಹಳೈಯುಮ್

೨) "ಸುವ್ಯಾಹೃತಾನಿ ಮಹತಾಂ ಸುಕೃತಾನಿ ತತಸ್ತತಃ ।
ಸಂಚಿನ್ವನ್ ಧೀರ ಆಸೀತ ಸಿಲಹಾರೀ ಸಿಲಂಯಥಾ ॥"

ಎನ್ಗಿರಪಡಿಯೇ ಆಯ್‌ನ್ದೆಡುತ್ತು ಅಭ್ಯಾಸಭೂಯಸ್ತೈಯಾಲೆ ತೆಳಿನ್ದುಕೊಳ್ವದು.

೩) "ಸೂಕ್ಷ್ಮಃ ಪರಮದುರ್ಜ್ಞೇಯಸ್ಸತಾಂ ಧರ್ಮಃ ಪ್ಲವಂಗಮ" ಎನ್ರುಮ್ ೪) "ಧರ್ಮಸ್ಯತತ್ವಂ ನಿಹಿತಂ

---

ಚಾರ್ಯೋಪದಿಷ್ಟಗಳಾದ ಶಾಸ್ತ್ರಾರ್ಥಗಳನ್ನು, ತಾವು ಪ್ರಾಮಾಣಿಕವಾಗಿ ಗ್ರಹಿಸಿದ ರೀತಿಯಲ್ಲಿ ನಿರೂಪಿಸಿರುವುದಾಗಿ ಅನುಗ್ರಹಿಸುತ್ತಾರೆ. ಇವು ಶ್ರುತಿಸ್ಮೃತಿ ಸೂತ್ರಸಂಪ್ರದಾಯಗಳನ್ನನುಸರಿಸಿರುವುದರಿಂದ ಸತ್ಪಥಸ್ಥರಿಗೆ ಪರಮೋಪಾದೇಯಗಳೆಂದು ತಾತ್ಪರ್ಯ

### ರಹಸ್ಯತ್ರಯ ಸಾರವನ್ನು ಕಾಲಕ್ಷೇಪ ಮಾಡುವ ಕ್ರಮ

ಅನಂತರ ಈ ರಹಸ್ಯತ್ರಯಾರ್ಥಗಳನ್ನು ಸದಾಚಾರ್ಯನ ಹತ್ತಿರ ಕಾಲಕ್ಷೇಪ ಮಾಡಬೇಕಾದ ಕ್ರಮವನ್ನು ತಿಳಿಸುತ್ತಾರೆ. ಅದಾಗಿ **ಇವ್ವರ್ಥಂಗಳೈಯೆಲ್ಲಾಮ್** ಇತ್ಯಾದಿ–ಈ ರಹಸ್ಯತ್ರಯಾರ್ಥಗಳನ್ನೆಲ್ಲಾ ಮೊದಲು ಸತ್ಸಂಪ್ರದಾಯದಿಂದ ಕೂಡಿದ ಸದಾಚಾರ್ಯನನ್ನು **ಸಮ್ಯಗುಪಸನ್ನನಾಯ್**–ಸರಿಯಾದ ರೀತಿಯಲ್ಲಿ ಆಶ್ರಯಿಸಿ, 1) **"ಶಿಷ್ಯಸ್ತೇಽಹಂ ಶಾಧಿಮಾಂ ತ್ವಾಂ ಪ್ರಪನ್ನಮ್"** ಎಂದು ವಿಜ್ಞಾಪಿಸಿ, ಆದರ ಪೂರ್ವಕವಾಗಿ, ವಿಶದವಾಗಿ ಕೇಳಿ ಇವುಗಳಿಗೆ ಉಪಯುಕ್ತಗಳಾದ **ನಲ್ವಾರ್ತೈಹಳೈಯುಮ್**–ಪೂರ್ವಾಚಾರ್ಯರುಗಳು ಮುಕ್ತಕವಾಗಿ, ಹೇಳಿರುವ ಶಾಸ್ತ್ರ ಸಾರಾರ್ಥಗಳನ್ನಡಗಿಸಿ ಕೊಂಡಿರುವ ಉಪನ್ಯಾಸಗಳನ್ನೂ, 2) **ಸುವ್ಯಾಹೃತಾನಿಮಹತಾಮ್** ಇತ್ಯಾದಿ–ಮಹಾಪುರುಷರುಗಳ ಶೋಭನಗಳಾದ ಭಾಷಣಗಳನ್ನೂ. ಶೋಭನಗಳಾದ ಅನುಷ್ಠಾನಗಳನ್ನೂ ಭತ್ತದ ಕಣಗಳಲ್ಲಿ ಭತ್ತಗಳನ್ನು (ಸಿಲ) ಸಂಗ್ರಹಿಸುವ ರೀತಿಯಲ್ಲಿ ಅಲ್ಲಲ್ಲೇ ಸಂಗ್ರಹಿಸಿ, **ಅಭ್ಯಾಸಭೂಯಸ್ತೈಯಾಲೇ** ಪುನಃ ಪುನಃ ಚಿಂತನೆ ಮಾಡುವುದರಿಂದ, ತಿಳುವಾಗಿ ಅರಿತುಕೊಳ್ಳಬೇಕು.

### ತಾವು ಹೇಳಿರುವ ಅರ್ಥಗಳಲ್ಲಿ ದೋಷವಿಲ್ಲದಿರುವುದು

ತಾವು ಹೇಳಿರುವ ಅರ್ಥಗಳೆಲ್ಲಾ ಪೂರ್ವಾಚಾರ್ಯರುಗಳು ಕಂಟಕ ಶೋಧನೆ ಮಾಡಿ ಹೇಳಿರುವುವು ಎಂದು ಅನುಗ್ರಹಿಸುತ್ತಾರೆ. 3) **ಸೂಕ್ಷ್ಮಃಪರಮದುರ್ಜ್ಞೇಯಃ**–ಸಾಧುಗಳು ಹೇಳುವ ಧರ್ಮವು ಬಹಳ ಸೂಕ್ಷ್ಮಗಳು, ಸ್ಥೂಲ ದೃಷ್ಟಿಯುಳ್ಳವರಿಂದ ತಿಳಿಯಲಾಗದವು. 4) **ಧರ್ಮಸ್ಯತತ್ವಂ ನಿಹಿತಂಗುಹಾಯಾಂ**–ಧರ್ಮದ

---

1) ಗೀತೆ 2-8 2) ಭಾರತ ಉದ್ಯೋಗ ಪರ್ವ 34-34

3) ಸೂಕ್ಷ್ಮಃ ಪರಮದುರ್ಜ್ಞೇಯಃ ಸತಾಂ ಧರ್ಮಃ ಪ್ಲವಂಗಮ ।
ಹೃದಿಸ್ಥಃ ಸರ್ವ ಭೂತಾನಾ ಮಾತ್ಮಾವೇತ್ತಿ ಶುಭಾಶುಭಮ್ ॥ ರಾಮಾಯಣ (4-18-15)
ವಾಲಿಯನ್ನು ಕುರಿತು ಶ್ರೀರಾಮಚಂದ್ರನು ಹೇಳುವ ಮಾತು. ನೀನು ಧರ್ಮವನ್ನು ತಿಳಿಯದೆ ನನ್ನನ್ನು ಅಧಿಕ್ಷೇಪ ಮಾಡುತ್ತಿದ್ದೀಯಾ. ಧರ್ಮವು ಬಹಳ ಸೂಕ್ಷ್ಮವಾದದು. ಎಲೈ ಪ್ಲವಂಗಮ – ಮರದಿಂದ ಮರಕ್ಕೆ ಹಾರುವ ಕಪಿಯೇ, ನಿನಗೆ ತಿಳಿಯದು ಎಂದು ಭಾವ. ಸರ್ವಪ್ರಾಣಿಗಳ ಹೃದಯದಲ್ಲಿರುವ ಸರ್ವೇಶ್ವರನು ಶುಭಾ ಶುಭಗಳನ್ನು ತಿಳಿದಿರುತ್ತಾನೆ.

4) ತರ್ಕೋಽಪ್ರತಿಷ್ಠಃ ಶ್ರುತಯೋವಿಭಿನ್ನಾಃ ನೈಕೋಮುನಿರ್ಯಸ್ಯ ಮತಂ ಪ್ರಮಾಣಮ್ ।
ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ ಮಹಾಜನೋ ಯೇನ ಗತಃ ಸ ಪಂಥಾಃ ॥ ಪು.ತಿ.ನೋ

**ಗುಹಾಯಾಮ್ ಎನ್ರುಮ್, (೧) "ಅಣೀಯಾನ್ ಕ್ಷುರಧಾರಾಯಾಃ ಕೋಧರ್ಮಂ ವಕ್ತುಮರ್ಹತಿ ? ಎನ್ರುಮ್ ಋಷಿಹಳುಕ್ಕುಂ ಕೂಡ ವರುನ್ದಿ ಪದವಿನ್ಯಾಸಂ ಪಣ್ಣವೇಣ್ಡಿಯಿರುಕ್ಕರ ನಿಲಙ್ಗಳಿಲ್,**

**2) "ಮಹಾಜನೋ ಯೇನ ಗತಸ್ಸಪನ್ಥಾಃ" ಎನ್ರುಮ್**

**3) ಧರ್ಮಶಾಸ್ತ್ರರಥಾರೂಢಾ ವೇದಖಡ್ಗಧರಾ ದ್ವಿಜಾಃ ।**

**ಕ್ರೀಡಾರ್ಥಮಪಿಯದ್ಬ್ರೂಯುಸ್ಸಧರ್ಮಃ ಪರಮೋಮತಃ ॥"**

**ಎನ್ರುಮ್ ಶೊಲ್ಲುಹಿರಪಡಿಯೇ ಶ್ರುತಿ ಸ್ಮೃತಿ ಶರಣರಾನ ಪೂರ್ವಾಚಾರ್ಯರ್‌ಹಳ್ ಕಂಟಕಶೋಧನಮ್ ಪಣ್ಣಿ ನಡನ್ದವಳಿಯಿಲೇ ನಡಕ್ಕೈಯಾಲೇ ನಮುಕ್ಕು ವರುವದೊರು ತಪ್ಪಿಲ್ಲೈ.**

---

ಯಥಾವಸ್ಥಿತ ಸ್ವರೂಪವು ಅತ್ಯಂತಗುಹ್ಯವಾದದ್ದು. ಬಹಳ ಬುದ್ಧಿವಂತರಿಗೂ ತಿಳಿಯಲಶಕ್ಯಗಳು. 1) **ಅಣೀಯಾನ್ ಕ್ಷುರಧಾರಾಯಾಃ** ಇತ್ಯಾದಿ–ಕ್ಷುರ–ವಪನಸಾಧನವಾದ ಕತ್ತಿ, ಅದರ ಧಾರೆ–ಅಲಗು, ಅದು ಬಹಳ ಸೂಕ್ಷ್ಮವಾಗಿರುತ್ತದೆ. ಧರ್ಮವು ಅದಕ್ಕಿಂತ ಸೂಕ್ಷ್ಮವಾದದ್ದು. ಆ ಸೂಕ್ಷ್ಮತಮವಾದ ಧರ್ಮವನ್ನು ಯಾರು ತಿಳಿಯಬಲ್ಲರು ಎಂದು ಋಷಿಗಳೂ ಕೂಡ **ವರುಂದಿ**-ಕಷ್ಟಪಟ್ಟು, **ಪದವಿನ್ಯಾಸಂಪಣ್ಣ ವೇಂಡಿಯಿರುಕ್ಕಿರ – ನಿಲಂಗಳಿಲ್**–ಅನುಷ್ಠಿಸಿ ಬರಬೇಕಾದ ಸಮಯಗಳಲ್ಲಿ 2) **ಮಹಾಜನೋ ಯೇನಗತಃ ಸ ಪಂಥಾಃ** – ಮಹಾಜನರು–ಹಿರಿಯರು ನಡೆದು ಬರುವ ಮಾರ್ಗವೇ ಸಮೀಚೀನವಾದದ್ದು ಎಂದೂ, 3) **ಧರ್ಮಶಾಸ್ತ್ರರಥಾರೂಢಾಃ** ಇತ್ಯಾದಿ–ಧರ್ಮಶಾಸ್ತ್ರವನ್ನು ಆಧಾರವಾಗಿ ಉಳ್ಳವರು, ವೇದವೆಂಬ ಖಡ್ಗವನ್ನು ಧರಿಸಿರುವ ಬ್ರಾಹ್ಮಣರು ಅಂದರೆ ಧರ್ಮ ವಿಷಯಕವಾದ ಸಂದೇಹಗಳನ್ನು ಹೋಗಲಾಡಿಸಲು ಮೂಲವಾದ ವೇದ ಪ್ರಾಮಾಣ್ಯವನ್ನು ಅನುಸರಿಸುವವರು ವಿನೋದವಾಗಿ ಯಾವುದಾದರೂ ಒಂದನ್ನು ಹೇಳಿದರೂ ಅದು ಪರಮ ಧರ್ಮವು. ಅಂದರೆ ವೇದವನ್ನು ಪ್ರಮಾಣವಾಗಿ ಅಂಗೀಕರಿಸಿ ಧರ್ಮಗಳನ್ನು ಹೇಳುವವರು ಸುಳ್ಳು ಹೇಳುವುದಿಲ್ಲವಾದ್ದರಿಂದ ಅವರು ಹೇಳುವುದೆಲ್ಲಾ ಪ್ರಾಮಾಣಿಕವೆಂದರ್ಥ. **ಎನ್ರುಂಶೊಲ್ಲುಹಿರಪಡಿಯೇ** ಇತ್ಯಾದಿ ಹೇಳುವಂತೆ ಶ್ರುತಿಸ್ಮೃತಿಗಳನ್ನು ಅನುಸರಿಸುವ ಪೂರ್ವಾಚಾರ್ಯರುಗಳು **ಕಂಟಕ ಶೋಧನಮ್**–ಮುಳ್ಳುಗಳನ್ನು ತೆಗೆದು ಹಾಕಿ ಶೋಧನಪಡಿಸಿ ನಡೆದು ಬಂದ ಮಾರ್ಗದಲ್ಲಿ ನಡೆದು ಹೋಗುವುದರಿಂದ ನಮಗೆ ಯಾವ ತಪ್ಪು ಉಂಟಾಗಲಾರದು.

---

ತರ್ಕ-ಯುಕ್ತಿಗೆ ಕೊನೆಯಿಲ್ಲ. ಶ್ರುತಿಗಳು ಅನೇಕಗಳು. ಪ್ರಮಾಣವಾಗಿ ಅಂಗೀಕರಿಸಲು ಋಷಿಗಳ ವಾಕ್ಯಗಳೂ ಅನೇಕವು. ಧರ್ಮದ ನಿಜಸ್ವರೂಪವು ಪರಮಗುಹ್ಯವು. ಹೀಗೆ ಸಂದೇಹಗಳು ಏರ್ಪಡಲು ಅವಕಾಶವಿರುವುದರಿಂದ, ಹಿರಿಯರು ಹಿಂಬಾಲಿಸಿರುವ ಮಾರ್ಗವೇ ನಮಗೆ ದಾರಿ.

1) ನಕಲ್ಮಾಷೋ ನಕಪಿಲೋ ನ ಕೃಷ್ಣೋ ನ ಚರೋಹಿತಃ।
ಅಣೀಯಾನ್ ಕ್ಷುರಧಾರಾಯಾಃ ಕೋ'ಧರ್ಮಂ ವಕ್ತುಮರ್ಹತಿ ॥ ಭಾರತ ಉದ್ಯೋಗ ಪರ್ವ 34–39
ಕತ್ತಿಯ ಅಲಗು ಕಲ್ಮಾಷವಂತಿಲ್ಲ. ಕಪಿಲ ಬಣ್ಣದಂತಿಲ್ಲ. ಕಪ್ಪಲ್ಲ. ಕೆಂಪಲ್ಲ. ಬಹಳ ಸೂಕ್ಷ್ಮವಾದದ್ದು. ಅದರ ಹಾಗೆ ಧರ್ಮವು ಬಹಳ ಸೂಕ್ಷ್ಮವಾದದ್ದು. ಯಾರು ಅದನ್ನು ತಿಳಿದು ಹೇಳಬಲ್ಲರು.

3) ಭಾರತ ಉದ್ಯೋಗಪರ್ವ 3[illegible] 29—ಧರ್ಮದ ತತ್ವವನ್ನು ತಿಳಿದು ಅನುಷ್ಠಿಸುವುದು ಕಷ್ಟ. ಆದ್ದರಿಂದ ಹಿರಿಯರು ಹೋಗಿರುವ ಮಾರ್ಗವೇ ನಮಗೆ ಅನುಸರಿಸಲು ಸರಿಯಾದ ಮಾರ್ಗ.

**ಏತದ್ರಹಸ್ಯತ್ರಯೋಕ್ತ ಪ್ರಕಾರೇಣಾನುಷ್ಠಾತೄಣಾಂ ಸರ್ವಾನಿಷ್ಟ ನಿವೃತ್ತಿಪೂರ್ವಕೇಷ್ಟ ಪ್ರಾಪ್ತಿರೇವ ಫಲಮಿತ್ಯಾಹ.**

ಇವ್ವಾಗಿನಡನ್ದವರ್‌ಹಳುಕ್ಕು

4) "ಅವಿಶ್ರಾನ್ತ ಮನಾಲಂಬ ಮಪಾಥೇಯಮದೇಶಿಕಮ್ ।
ತಮಃ ಕಾನ್ತಾರ ಮಧ್ವಾನಂ ಕಥಮೇಕೋ ಗಮಿಷ್ಯಸಿ ॥"

5) "ನಿಷ್ಪಾನೀಯೇ ನಿರಾಲಂಬೇ ನಿಶ್ಛಾಯೇ ನಿರಪಾಶ್ರಯೇ ।
ದ್ರಾಘೀಯಸ್ಯಶುಭೇಮಾರ್ಗೇ ಯಮಸ್ಯ ಸದನಂಪ್ರತಿ॥"

**ಎನ್ರುಮ್ ಮಹರ್ಷಿಹಳ್ ನೆಂಜಾರಲ್ಪಡುಮ್‌ವಳಿಹಳ್ ಕಾಣವೇಣ್ಡಾ. ಪಂಚಾಗ್ನಿ ವಿದ್ಯೈಯಿಲ್ಸೊನ್ನ ಪಡಿಯೇ ಪರುತ್ತಿಪ್ಪಟ್ಟ ಪನ್ನಿರಣ್ಡು ಪಾಡುಮ್ಪಟ್ಟು ಪೂಟ್ಟೈಕ್ಕಿಣ್ಡೈಪ್ಪೋಲೇ ಏರುವದಿಳಿವದಾಹ ಧೂಮಾದಿ ಮಾರ್ಗತ್ತಿಲೇ ಪರಿಭ್ರಮಿಕ್ಕವುಮ್‌ವೇಣ್ಡಾ.**

1) "ತ್ವಂ ನ್ಯಂಚದ್ಭಿರುದಂಚದ್ಭಿಃ ಕರ್ಮಸೂತ್ರೋಪಪಾದಿತೈಃ ।
ಹರೇ ವಿಹರಸಿ ಕ್ರೀಡಾ ಕಂತುಕೈರಿವ ಜಂತುಭಿಃ ॥"

---

## ಪೂರ್ವಾಚಾರ್ಯರುಗಳು ಅನುಷ್ಠಿಸಿ ಬಂದ ಮಾರ್ಗವನ್ನು ಹಿಂಬಾಲಿಸುವವರಿಗೆ ಉಂಟಾಗುವ ಪುರುಷಾರ್ಥ

**ಇವ್ವಳಿನಡಂದವರ್‌ಹಳುಕ್ಕು** ಇತ್ಯಾದಿ ಹೀಗೆ ಪೂರ್ವಾಚಾರ್ಯಗಳು ಅನುಷ್ಠಿಸಿ ಬಂದ ಮಾರ್ಗವನ್ನು ಹಿಂಬಾಲಿಸುವವರಿಗೆ 1) **'ಅವಿಶ್ರಾನ್ತ ಮನಾಲಂಬಮ್** ಇತ್ಯಾದಿಯಾಗಿಯೂ 2) **ನಿಷ್ಪಾನೀಯೇ** ಇತ್ಯಾದಿಯಾಗಿಯೂ, ಮಹರ್ಷಿಗಳು **ನೆಂಜಾರಲ್ಪಡುಮ್**–ಮನಸ್ಸಿನಲ್ಲಿ ನೆನೆಸಿಕೊಂಡು **ಕಷ್ಟಪಡುವ** ಭಯಂಕರಗಳಾದ **ಯಮಲೋಕ ಮಾರ್ಗಗಳನ್ನು ನೋಡಬೇಕಿಲ್ಲ. ಪಂಚಾಗ್ನಿ ವಿದ್ಯೈಯಿಲ್ ಇತ್ಯಾದಿ**–ಪಂಚಾಗ್ನಿ ವಿದ್ಯೆಯಲ್ಲಿ ಹೇಳಿರುವಂತೆ **ಪರುತ್ತಿಪ್ಪಟ್ಟ ಪನ್ನಿರಂಡು ಪಾಡುಂಪಟ್ಟು** – ಹತ್ತಿಯು **ಅನುಭವಿಸುವ** ಹನ್ನೆರಡು ಕಷ್ಟಗಳನ್ನೂ **ಅನುಭವಿಸಿ,** ಅವು ಯಾವುವೆಂದರೆ, –– ಬೀಜದಿಂದ **ಹತ್ತಿಯನ್ನು** ಕೀಳುವುದು, ಉತ್ಕರ್ಷಣ, ಅಪಕರ್ಷಣ, ಆಕುಂಚನ, ಪ್ರಸಾರಣ, ಗ್ರಂಥಿಗಳನ್ನು ಬಿಡಿಸುವುದು, ಒಟ್ಟುಕೂಡಿಸುವುದು, ಸಮವಾಗಿ ಮಾಡುವುದು, ಸುತ್ತುವುದು, ವಿಕಸನ, ವಿಮಲೀಕರಣ, ಚತುಷ್ಕೋಣಕರಣವೆಂಬುವು. ಆ ರೀತಿಯಲ್ಲಿ ಜೀವನಿಗೆ ಪುರುಷನ ರೇತಸ್ಸಿನೊಡನೆ ಸೇರಿ ಸ್ತ್ರೀಗರ್ಭದಲ್ಲಿ ಸೇಚನ, ಸ್ತ್ರೀಗರ್ಭ ಪ್ರವೇಶ, ಪುರುಷ ಶಬ್ದದಿಂದ ಹೇಳಲ್ಪಡುವಂತೆ ಪಿಂಡೀಭಾವ, ಜನ್ಮ, ಬಾಲ್ಯ, ಕೌಮಾರ, ಯೌವನ, ವಾರ್ಧಕ್ಯ, ಉತ್ಕ್ರಾಂತಿ, ನರಕಮಾರ್ಗಗಮನ, ನರಕಾನುಭವ, ಪುನಃ ಹಿಂತಿರುಗಿ ಬರುವುದು, ಎಂದು ಹನ್ನೆರಡು ದುರವಸ್ಥೆಗಳಿವೆಯಲ್ಲವೆ. **ಪೂಟ್ಟೈಕ್ಕುಂಡಿಹೈಪ್ಪೋಲೇ** ಇತ್ಯಾದಿ–ಬಾವಿಯಿಂದ ನೀರನ್ನು ಎತ್ತಲು ದೊಡ್ಡದಾದ ಚಕ್ರವೊಂದರಲ್ಲಿ ಕಟ್ಟಿರುವ ಘಟಗಳು ನೀರನ್ನು ಎತ್ತಿಕೊಂಡು ಮೇಲೆ ಬಂದು, ನೀರನ್ನು ಸುರಿದು ಪುನಃ ಕೆಳಗೆ ಇಳಿಯುವಂತೆ ಧೂಮಾದಿ ಮಾರ್ಗದಲ್ಲಿ (ಪಂಚಾಗ್ನಿ ವಿದ್ಯೆಯಲ್ಲಿ) "ಅ ಥಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇಧೂಮ ಮಭಿ ಸಂಭವಂತಿ ಧೂಮಾದ್ರಾತ್ರಿಂ" ಇತ್ಯಾದಿಗಳಲ್ಲಿ ಹೇಳಿರುವ ಮಾರ್ಗ ಪರಿಭ್ರಮಿಸಬೇಕಿಲ್ಲ. 1) **ತ್ವಂನ್ಯಂಚದ್ಭಿರುದಂಚದ್ಭಿಃ** ಇತ್ಯಾದಿ

---

4) ಭಾರತ ಶಾಂತಿಪರ್ವ (338-34) ವಿಶ್ರಾಂತಿ ಸ್ಥಾನವಿಲ್ಲದೆ, ಆಶ್ರಯವು ಯಾವುದೂ ಇಲ್ಲದೆ, ಊಟವಿಲ್ಲದೆ ಮಾರ್ಗವನ್ನು ತೋರಿಸುವವರಾರೂ ಇಲ್ಲದೆ, ಕತ್ತಲೆಯಿಂದ ಕೂಡಿದ ನರಕ ಮಾರ್ಗದಲ್ಲಿ, ಒಬ್ಬನೇ ಹೇಗೆ ಹೋಗುತ್ತೀಯಾ.

5) ವಂಗಿವಶೇಶ್ವರ ಕಾರಿಕೆ (24) ಕುಡಿಯಲು ನೀರಿಲ್ಲ, ಆಲಂಬನವಿಲ್ಲ, ನೆರಳಿಲ್ಲ, ವಾಸಕ್ಕೆ ಜಾಗವಿಲ್ಲ. ಬಹಳ ದೊಡ್ಡದಾದ ಯಮಲೋಕಮಾರ್ಗ. ಇದರಲ್ಲಿ ಅಸಹಾಯನಾಗಿ ಹೋಗುವ ನನಗೆ ಮಹದ್ಭಯವು ಉಂಟಾಗುತ್ತದೆ. "ಗಚ್ಛತೋಽಮೋಽಸಹಾಯಸ್ಯ ವರ್ಧಯಂತೀ ಭಯಂ ಮಹತ್", ಎಂಬುದು ಮುಂದಿನ ಪಾದ.

1) ಎಲೈ ಹರಿಯೇ, ನೀನು ನ್ಯಂಚದ್ಭಿಃ–ಕೆಳಗೆ ಬೀಳುವಗಳಾಗಿಯೂ, ಉದಂಚದ್ಭಿಃ - ಮೇಲೆ ಹತ್ತುವುವುಗಳಾಗಿಯೂ,

**ಎನ್ದಿರ ಭಗವಲ್ಲೀಲೋಪಕರಣಮಾನ ದಶೈಕಳ್ಗಿನ್ದು ಮತ್ತುಮುಳ್ಳ ಅತಿಶಯಿತ ಫಲಙ್ಗಳ್ ಪೆರಪ್ಪೋಮ್ ಅಧಿಕಾರಿಹಳುಡೈಯ ವರ್ಗ್ಗಹಳಿಲ್ಕಾಟ್ಟಿಲ್ ಪುರುಷಾರ್ಥಭೂಯಸ್ಥೈಯಾಲುಮ್, ಪುನರಾವೃತ್ತಿಯಿಲ್ಲಾಮೈಯಾಲುಮ್, 2) "ತೇಭ್ಯೋವಿಶಿಷ್ಟಾಂ ಜಾನಾಮಿ ಗತಿ ಮೇಕಾನ್ತಿನಾಂ ನೃಣಾಮ್" 3) ಉತ್ಕ್ರಾಮತಿಚ ಮಾರ್ಗಸ್ಥಃ ಶೀತೀಭೂತೋ ನಿರಾಮಯಃ" 4) "ದೇವಯಾನಃ ಪರಃಪನ್ಥಾಯೋಗಿನಾಂ ಕ್ಲೇಶ ಸಂಕ್ಷಯೇ" ಇತ್ಯಾದಿಹಳಿಲ್‌ಪಡಿಯೇ ಅತ್ಯನ್ತ ವಿಶಿಷ್ಟಮಾಯ್, 5) 'ಆತ್ಮಾ ಕೇವಲತಾಂ ಪ್ರಾಪ್ತೋ ಯತ್ರಗತ್ವಾ ನ ಶೋಚತಿ"**

---

ಹೇಳಿರುವ ಭಗವಲ್ಲೀಲೆಗೆ ಉಪಕರಣವಾದ ದಶೆಯು ಕಳೆದು, ಇತರಗಳಾದ ಅತಿಶಯಿತ ಫಲಗಳನ್ನು ಹೊಂದುವ ಅಧಿಕಾರಿಗಳ ಮಾರ್ಗಗಳಿಗಿಂತ ಪುರುಷಾರ್ಥದ ಆಧಿಕ್ಯದಿಂದಲೂ, ಪುನರಾವೃತ್ತಿಯಿಲ್ಲದೆ ಇರುವುದರಿಂದಲೂ 2)**ತೇಭ್ಯೋವಿಶಿಷ್ಟಾಂಜಾನೀಹಿ** ಇತ್ಯಾದಿ ಪರಮೈಕಾಂತಿಗಳು ಹೋಗುವ ಮಾರ್ಗವು ಇತರರ ಮಾರ್ಗಗಳಿಗಿಂತಲೂ, ಉತ್ಕೃಷ್ಟಗಳಾದವೆಂದು ತಿಳಿಯುತ್ತೇನೆಂದೂ 3) **ಉತ್ಕ್ರಾಮತಿಚ ಮಾರ್ಗಸ್ಥಃ** ಇತ್ಯಾದಿ-ಸಂಸಾರ ತಾಪಗಳು ಹೋಗಿ ಯಾವ ದುಃಖವೂ ಇಲ್ಲದೆ ಶೀತಳವಾದ ದೇವಯಾನ ಮಾರ್ಗದಲ್ಲಿ ಹೊರಟು ಬರಲು ಶರೀರದಿಂದ ಹೊರ ಬೀಳುತ್ತಾನೆಂದು ಹೇಳಿರುವಂತೆ 4)**ದೇವಯಾನಃಪರಃಪಂಥಾ** ಇತ್ಯಾದಿ, ದೇವಯಾನ ಮಾರ್ಗವು-ಸಂರಸಾ ಕ್ಲೇಶ ಗಳೆಲ್ಲಾ ನಿವೃತ್ತಗಳಾದ ಮೇಲೆ ಯೋಗಿಗಳಿಗೆ ಉತ್ಕೃಷ್ಟವಾದ ಮಾರ್ಗವು, ಇತ್ಯಾದಿಗಳಲ್ಲಿ ಹೇಳಿರುವಂತೆ, ಬಹಳ ಶ್ರೇಷ್ಟವಾದ ಮಾರ್ಗದಲ್ಲಿ (ಹೊರಟು ಬರುತ್ತಾನೆ.) 5) **ಆತ್ಮಾಕೇವಲತಾಂಪ್ರಾಪ್ತಃ** - ಜೀವನು

---

ಇರುವ ಕರ್ಮಸೂತ್ರಗಳಿಂದ ಸಂಪಾದಿಸಲ್ಪಟ್ಟ, ಅಥವಾ ಮಾಡಲ್ಪಟ್ಟ ಚಂಡುಗಳ ಹಾಗೆ ಜೀವಾತ್ಮರುಗಳನ್ನು ಇಟ್ಟುಕೊಂಡು ಜಗಲ್ಲೀಲೆಯನ್ನು ನಡೆಸುತ್ತಿದ್ದೀಯೆ.

2) ಸಹೋಪನಿಷದಾನ್ ವೇದಾನ್ ಯೇತ್ವಯಾ ಸಮ್ಯಗಾಸ್ಥಿತಾಃ ।
ಪಠಂತಿ ವಿಧಿಮಾಸ್ಥಾಯ ಯೇ ಚಾಪಿ ಯತಿ ಧರ್ಮಿಣಃ ॥
ತೇಭ್ಯೋವಿಶಿಷ್ಟಾಂ ಜಾನಾಮಿ ಗತಿಮೇಕಾಂತಿನಾಂ ನೃಣಾಮ್ ॥

ಭಾರತ ಶಾಂತಿ ಪರ್ವ (358-6) ಉಪನಿಷತ್ತುಗಳೊಡನೆ ವೇದಗಳನ್ನು ಅಭ್ಯಾಸ ಮಾಡಿದವರೂ, ಯತಿಧರ್ಮವನ್ನವಲಂಬಿಸಿದವರೂ ಪಡೆಯುವ ವಿಷ್ಣು ಲೋಕಾದಿಗಳಿಗಿಂತಲೂ ಉತ್ಕೃಷ್ಟವಾದದ್ದು ಪರಮೈಕಾಂತಿಗಳು ಪಡೆಯುವ ಪರಮಪದವೆಂಬ ಲೋಕ.

3) ಅಥವಾ ನೇಚ್ಛತೇ ತತ್ರ ಬ್ರಹ್ಮಕಾಯ ನಿಷೇವಣಮ್ ।
ಉತ್ಕ್ರಾಮತಿಚ ಮಾರ್ಗಸ್ಥಃ ನೈವಕ್ವಚನಜಾಯತೇ ॥
ಆತ್ಮಸಿದ್ಧಿಂ ಸಮಾಸ್ಥಾಯ ಶೀತೀಭೂತೋ ನಿರಾಮಯಃ ।
ಅಮೃತಂ ವಿರಜಾಃ ಶುದ್ಧಂ ಆತ್ಮಾನಂ ಪ್ರತಿಪದ್ಯತೇ ॥

ಭಾರ. ಶಾಂತಿ ಪರ್ವ (194-17, 18) ಅಥವಾ ಆ ಬ್ರಹ್ಮಲೋಕದಲ್ಲಿ ಬ್ರಹ್ಮಕಾಯ ನಿಷೇವಣವನ್ನು ಇಚ್ಛಿಸದವನು, ಮೇಲೆ ಹೋಗುತ್ತಾನೆ. ಸಂಸಾರ ತಾಪಗಳೆಲ್ಲಾ ನೀಗಿ ಬೇರೆ ಯಾವ ವಿಧವಾದ ದುಃಖವೂ ಇಲ್ಲದವನಾಗಿ ದೇವಯಾನ ಮಾರ್ಗದಲ್ಲಿ ಹೋಗಿ ಪರಿಶುದ್ಧನಾದ ಅಮೃತ ಮಯನಾದ ಪರಮಾತ್ಮನನ್ನು ಪಡೆಯುತ್ತಾನೆ.

4) ಯೋಗಿಗಳಿಗೆ ಕರ್ಮಗಳು ಕಳೆದ ನಂತರ ದೇವಯಾನ ಮಾರ್ಗವು ಉತ್ಕೃಷ್ಟವಾದ ಮಾರ್ಗ.

5) ಆತ್ಮಾಕೇವಲತಾಂ ಪ್ರಾಪ್ತಃ ಯತ್ರಗತ್ವಾ ನಶೋಚತಿ ।
ಈದೃಶಂ ಪರಮಂ ಸ್ಥಾನಂ ನಿರಯಾಸ್ತೇಚ ತಾದೃಶಾಃ ॥ ಭಾರತ ಶಾಂತಿ ಪರ್ವ (196-11)

ಜೀವನು ಅವಿದ್ಯೆಯನ್ನು ಕಳೆದುಕೊಂಡ ಮೇಲೆ, ಪರಮಪದವನ್ನು ಹೊಂದುತ್ತಾನೆ. ಅಲ್ಲಿ ಯಾವ ದುಃಖವೂ ಇಲ್ಲ. ಆನಂದ ಮಯವಾದ ಲೋಕ. ಇತರ ಸ್ಥಾನಗಳು ನರಕ ತುಲ್ಯಗಳು.

6) “ಅತ್ಯರ್ಕಾನಲ ದೀಪ್ತಂ ತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ ||
ಸ್ವಯೈವ ಪ್ರಭಯಾ ರಾಜನ್ ದುಷ್ಪ್ರೇಕ್ಷಂ ದೇವದಾನವೈಃ |
ಯತ್ರಗತ್ವಾ ಪುನರ್ನೇಮಂ ಲೋಕ ಮಾಯಾನ್ತಿ ಭಾರತ ||”

7) “ಏತೇ ವೈನಿರಯಾಸ್ತಾತಸ್ಥಾನಸ್ಯ ಪರಮಾತ್ಮನಃ”. ಇತ್ಯಾದಿಹಳಿಲುಮ್ ಸಂಸಾರಾಧ್ವಾವುಕ್ಕು ಪಾರಮೆನ್ರು ಶ್ರುತಿಹಳಿಲುಮ್, ಓದುಪ್ಪಡುಹಿರ ಪರಮ ಪದತ್ತೈ ಪರ್ಯನ್ತಮಾಹ ಉಡೈತ್ತಾಯ್ ಭಗವತ್ಪ್ರಸಾದಾವಲಂಬನಮಾಯ್ ಪರಿಪೂರ್ಣಮಾನ ಪರಮ ಪುರುಷಾರ್ಥತ್ತೈ ಪ್ಪೆರಪ್ಪುಹುಹಿರೋಮೆನ್ನಿರ ಸಂತೋಷತ್ತೈ ಪಾಥೇಯಮಾಹ ಉಡೈತ್ತಾಯ್, 8) “ತತ್ಪ್ರಕಾಶಿತ ದ್ವಾರಃ” ಎನ್ನಿರಪಡಿಯೇ ಹಾರ್ದನಾನ ಈಶ್ವರನುಡೈಯ ಸೌಹಾರ್ದತ್ತಾಲೇ ಕಾಟ್ಟಪ್ಪಡುಹಿರ ಅರ್ಚಿರಾದಿ ಮಾರ್ಗತ್ತಾಲೇ ಅವ್ವೋದೇವತೈಹಳ್ ತನ್ದಾನೆಲ್ಲೈಹಳ್ ಮಂಗಳ ಪ್ರದೀಪ ಪೂರ್ಣ ಕುಂಭಾದಿಹಳೈ ಮುನ್ನಿಟ್ಟು ಸಪರಿಕರರಾಯ್ ಎದಿರ್‌ಗೊಂಡು ಸಾರ್ವಭೌಮೋಪಚಾರಙ್ಗಳೈ ಪ್ಪಣ್ಣಿ, ವಳಿನಡತ್ತ ಕರ್ಮಲೋಕತ್ತಿಲಿರುನ್ದ ನಾಳ್

---

ಪರಮಪದವನ್ನು ಪಡೆದು ದುಃಖವಾವುದೂ ಇಲ್ಲದೆ ನಿರತಿಶಯಾನಂದ ನಿರ್ಭರನಾಗಿರುತ್ತಾನೆ 6) **ಅತ್ಯರ್ಕಾನಲ ದೀಪ್ತಂತತ್** ಇತ್ಯಾದಿ–ಸೂರ್ಯನ ಮತ್ತು ಅಗ್ನಿಯ ಪ್ರಕಾಶಕ್ಕಿಂತ ಮೇಲಾದ ಪ್ರಕಾಶವುಳ್ಳ ಆ ಮಹಾವಿಷ್ಣುವಿನ ಸ್ಥಾನವು ದೇವತೆಗಳಿಂದಲೂ ದಾನವರಿಂದಲೂ ನೋಡಲ ಶಕ್ಯವಾದದ್ದು 7) **ತತ್ರಗತ್ವಾಪುನ ರ್ನೇಮಂ** ಇತ್ಯಾದಿ ಆ ಲೋಕಕ್ಕೆ ಹೋದವರು ಪುನಃ ಈ ಪ್ರಕೃತಿ ಮಂಡಲಕ್ಕೆ ಬರುವುದಿಲ್ಲ. ಆ ಪರಮಾತ್ಮನ ಸ್ಥಾನಕ್ಕೆ ಹೋಲಿಸಿದರೆ ಈ ಲೋಕಗಳೆಲ್ಲಾ ನರಕ ತುಲ್ಯಗಳು–ಇತ್ಯಾದಿ ಪ್ರಮಾಣ ವಾಕ್ಯಗಳಲ್ಲಿಯೂ ಸಂಸಾರ ಮಾರ್ಗಕ್ಕೆ ಎಲ್ಲೆಯೆಂದು “ಸೋಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್” ಎಂದು ಶ್ರುತಿಗಳಲ್ಲಿಯೂ ಹೇಳಲ್ಪಟ್ಟಿರುವ ಪರಮ ಪದವನ್ನು ಎಲ್ಲೆಯಾಗಿ ಉಳ್ಳದಾಗಿ (ಅವಿಶ್ರಾಂತಂ ಎಂಬುದಕ್ಕೆ ಪ್ರತಿಕೋಟಿ) ಭಗವತ್ಪ್ರಸಾದವನ್ನು ಅವಲಂಬನವಾಗಿ (ಅನಾಲಂಬನ ಎಂಬುದಕ್ಕೆ ಪ್ರತಿಕೋಟಿ) ಪರಿಪೂರ್ಣವಾದ ಪರಮ ಪುರುಷಾರ್ಥವನ್ನು ಪಡೆಯುತ್ತೇವೆ, ಎಂಬ ಸಂತೋಷವನ್ನು ಪಾಥೇಯವಾಗಿ ಉಳ್ಳದಾಗಿ (ಅಪಾಥೇಯಮ್ ಎಂಬುದಕ್ಕೆ ಪ್ರತಿಕೋಟಿ) 8) ತತ್ಪ್ರಕಾಶಿತದ್ವಾರಃ-ಎಂಬಂತೆ ಹೃದಯದಲ್ಲಿರುವ ಈಶ್ವರನ ಸೌಹಾರ್ದದಿಂದ ತೋರಿಸಲ್ಪಟ್ಟ ಮೂರ್ಧನ್ಯ ನಾಡಿಯ ದ್ವಾರಾ ಅರ್ಚಿರಾದಿ ಮಾರ್ಗದಿಂದ ಹೊರಟು ಆಯಾಯಾ ದೇವತೆಗಳು ತಮ್ಮ ತಮ್ಮ ಎಲ್ಲೆಗಳ ಪರ್ಯಂತ ಪ್ರದೀಪ ಪೂರ್ಣಕುಂಭಾದಿಗಳನ್ನು ಎತ್ತಿಕೊಂಡು ಪರಿವಾರದೊಡನೆ ಈ ಮುಮುಕ್ಷು ಜೀವನನ್ನು ಎದುರುಗೊಂಡು ವನಿಗೆ ಸಾರ್ವಭೌಮೋಪಚಾರಗಳನ್ನು ಮಾಡಿ ದಾರಿಯನ್ನು ತೋರಿಸಿಕೊಂಡು ಬರುತ್ತಾರೆ. **ಕರ್ಮಲೋಕತ್ತಿರುಂದನಾಳ್** ಇತ್ಯಾದಿ–ಭೂಲೋಕಾದಿ ಕರ್ಮಲೋಕದಲ್ಲಿ ಈ ಜೀವನು ಇದ್ದ ಕಾಲಗಳಲ್ಲಿ ಇವನಿಂದ **ಇರೈಕೊಂಡ**

---

6) ಭಾರತ ವನಪರ್ವ (136–18) ಪರಮಾತ್ಮನಾದ ಭಗವಂತನ ಸ್ಥಾನವು ಸೂರ್ಯ, ಅಗ್ನಿ ಇವರುಗಳ ಸ್ಥಾನಕ್ಕಿಂತ ಬಹಳ ಪ್ರಕಾಶವಾದದ್ದು. ಆ ಭಗವಂತನ ಪ್ರಭೆಯಿಂದಾಗಿ ದೇವದಾನವರಿಂದಲೂ ದುಷ್ಪ್ರೇಕ್ಷ್ಯವಾದದ್ದು.

7) ತತ್ರಗತ್ವಾಪುನರ್ನೇಮಂ ಲೋಕಮಾಯಾಂತಿ ಭಾರತ |
ಸ್ವಯಂಭುವಂ ಮಹಾತ್ಮಾನಂ ದೇವದೇವಂ ಸನಾತನಮ್ ॥ ಭಾರ. ವನ (136-18)
ಸ್ವಯಂ ವಾಗಿಯೇ ಉತ್ಪನ್ನನೂ, ಮಹಾತ್ಮನೂ, ದೇವದೇವನೂ, ಸನಾತನನೂ ಆದ ಆಪರಮಾತ್ಮನನ್ನು ಪಡೆದ ಮೇಲೆ ಪುನಃ ಈ ಲೋಕಕ್ಕೆ ತಿರುಗಿ ಬರುವುದಿಲ್ಲ.

8) ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರಃ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿ
ಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ | ಬ್ರಹ್ಮಸೂತ್ರ (4-2-16)
ಭಕ್ತಿ ಪ್ರಪತ್ತಿರೂಪ ವಿದ್ಯೆಯ ಸಾಮರ್ಥ್ಯದಿಂದಲೂ, ಭಕ್ತಿ ವಿದ್ಯೆಗೆ ಅಂಗವಾದ ಗತಿಚಿಂತನವನ್ನು ಮಾಡುವುದರಿಂದಲೂ, ಹೃದಯದಲ್ಲಿರುವ ಪರಮಪುರುಷನಿಂದ ಅನುಗ್ರಹಿಸಲ್ಪಟ್ಟವನಾಗಿ ಆ ಜೀವನ ವಾಸಸ್ಥಾನದ ಅಗ್ರಭಾಗವನ್ನು ಮಿಂಚಿನಂತೆ ಪ್ರಕಾಶವು ಏರ್ಪಟ್ಟು, ಮೂರ್ಧನ್ಯ ನಾಡಿಯ ದ್ವಾರಾ ಹೊರಬೀಳುತ್ತಾನೆ.

**ಇರ್ರೈಕೊಂಡ ದೇವತೈಹಳೆಲ್ಲಾಮ್ ಕಾಣಿಕ್ಕೈಯಿಟ್ಟುಕ್ಕಂಡು ಅನುವರ್ತಿಕ್ಕ, ಅವರ್‌ಹಳುಕ್ಕುಮ್ ಎಟ್ಟವೊಣ್ಣಾದ ಎಲ್ಲೈಹಳೈಲ್ಲಾಮ್ ಕಡನ್ದು ನಿತ್ಯಸೂರಿಹಳ್ ತಿರಳಿರ್ರುಕ್ಕಾಲ್ ವಾಶಿ ತೆರಿಯಾದ ಪಡಿಯಾನ ನಿರತಿಶಯ ಪೂರ್ತಿಯ್ಯೈಪ್ಪೆತ್ತು,**

1) **"ತತೋಮಹತಿಪರ್ಯಂಕೇ ಮಣಿಕಾಂಚನ ಚಿತ್ರಿತೇ।**
**ದದರ್ಶ ಕೃಷ್ಣ ಮಾಸೀನಂ ನೀಲಂ ಮೇರಾವಿ ವಾಂಬುದಮ್ ।**
**ಜಾಜ್ವಲ್ಯಮಾನಂ ವಪುಷಾ ದಿವ್ಯಾಭರಣ ಭೂಷಿತಮ್॥**
**ಪೀತ ಕೌಶೇಯ ಸಂವೀತಂ ಹೇಮ್ನೀವೋಪಚಿತಂ ಮಣಿಮ್ ।**
**ಕೌಸ್ತುಭೇನ ಹ್ಯುರಸ್ಥೇನ ಮಣಿನಾಭಿವಿರಾಜಿತಮ್ ।**
**ಉದ್ಯತೇವೋದಯಂ ಶೈಲಂ ಸೂರ್ಯೇಣಾಪ್ತಂ ಕಿರೀಟಿನಮ್ ॥**
**ನಾಪಮ್ಯಂ ವಿದ್ಯತೇ ತಸ್ಯ ತ್ರಿಷು ಲೋಕೇಷು ಕಿಂಚನ"**

2) **"ತಂ ವೈಶ್ರವಣ ಸಂಕಾಶಂ ಉಪವಿಷ್ಟಂ ಸ್ವಲಂಕೃತಮ್ ।**
**ದದರ್ಶ ಸೂತಃ ಪರ್ಯಂಕೇ ಸೌವರ್ಣೇ ಸೋತ್ತರಚ್ಛದೇ ॥**
**ವರಾಹ ರುಧಿರಾಭೇಣ ಶುಚಿನಾ ಚ ಸುಗಂಧಿನಾ ।**
**ಅನುಲಿಪ್ತಂ ಪರಾರ್ಧ್ಯೇನ ಚಂದನೇನ ಪರಂತಪಂ ॥**

---

ಅಗ್ನಯೇ ಸ್ವಾಹಾ, ಸೂರ್ಯಾಯಸ್ವಾಹಾ ಇತ್ಯಾದಿಯಾಗಿ ಹವಿಸ್ಸನ್ನು ಸ್ವೀಕರಿಸಿದ ದೇವತೆಗಳೆಲ್ಲಾ **ಕಾಣಿಕ್ಕೈ ಯಿಟ್ಟು**–"ಸರ್ವೇಽಸ್ಮೈದೇವಾ ಬಲಿಮಾವಹಂತಿ" ಎಂಬಂತೆ ಉಪಹಾರವನ್ನು ಸಮರ್ಪಿಸಿ ನೋಡಿ ಅನುಯಾತ್ರೆ ಮಾಡುತ್ತಾರೆ, **ಅವರ್‌ಹಳುಕ್ಕು ಮೆಟ್ಟವೊಣ್ಣಾದ** ಇತ್ಯಾದಿ–ಆ ದೇವತೆಗಳಿಗೂ ಎಟುಕದೆ ಇರುವ (ಅಪ್ರಾಪ್ಯ ವಾದ) ಮೇಲು ಲೋಕಗಳನ್ನೆಲ್ಲಾ ದಾಟಿ, ನಿತ್ಯಸೂರಿಗಳ ಗೋಷ್ಠಿಯಲ್ಲಿ ಪ್ರವೇಶಿಸಿದರೆ **ವಾಶಿತೆರಿಯಾದ ಪಡಿ ಯಾನ:** ಆ ನಿತ್ಯಸೂರಿಗಳೂ ತನಗೂ ವ್ಯಾತ್ಯಾಸವು ತಿಳಿಯದ ರೀತಿಯಲ್ಲಿ ನಿರತಿಶಯವಾದ ದಿವ್ಯ ಶರೀರವನ್ನೂ ಪರಿ ಪೂರ್ತಿಯನ್ನೂ ಪಡೆಯುತ್ತಾನೆ.

ಅನಂತರ ಪರಮ ಪದದಲ್ಲಿ ದಿವ್ಯರತ್ನ ಮಂಡಪದಲ್ಲಿ ಆದಿಶೇಷನ ಮಡಿಲಲ್ಲಿ ಭಗವಂತನು ಶ್ರೀ ಭೂಮಿ ನೀಳಾ ಸಮೇತನಾಗಿ ಸುಖಾಸಿಕೆಯಲ್ಲಿ ಕುಳಿತಿರುವ ವೈಭವವನ್ನು ರಾಮಕೃಷ್ಣಾವತಾರದಲ್ಲಿ ಸುಮಂತ್ರರಿಗೂ ಕುಚೇಲ ರಿಗೂ ದರ್ಶನವಿತ್ತ ರೀತಿಯಲ್ಲಿವರ್ಣಿಸುತ್ತಾರೆ. **ತತೋಮಹತಿಪರ್ಯಂಕೇ** ಇತ್ಯಾದಿ ತತಃ–ಅನಂತರ ದೊಡ್ಡ **ಸ್ವರ್ಣ** ಮತ್ತು ರತ್ನಮಯವಾದ ಹಾಸಿಗೆಯಲ್ಲಿ ಮೇರುಪರ್ವತದ **ಮೇಲೆ** ನೀಲ **ಮೇಘವು** ಕುಳಿತಿರುವಂತೆ ಕೃಷ್ಣ ಪರಮಾತ್ಮನು ಜಾಜ್ವಲ್ಯಮಾನವಾದ ಶರೀರದಿಂದ ಕೂಡಿ ದಿವ್ಯಗಳಾದ ಆಭರಣಗಳಿಂದ ಅಲಂಕೃತನಾಗಿದ್ದನು. ಪೀತಾಂಬರವನ್ನು ಧರಿಸಿದ್ದನು. ಚಿನ್ನದ ತಗಡಿನಲ್ಲಿ ರತ್ನಗಳು ಹೂಳಲ್ಪಟ್ಟಂತೆ ಇದ್ದನು ಎದೆಯಲ್ಲಿ ಕೌಸ್ತುಭ ಮಣಿಯಿಂದ ವಿರಾಜಿಸುತ್ತಿದ್ದನು. ಉದಯ ಶೈಲದಲ್ಲಿ ಸೂರ್ಯನು ಉದಯಿಸಿದಂತೆ ಕೀರಿಟವನ್ನು ಧರಿಸಿದ್ದನು. ಮೂರುಲೋಕಗಳಲ್ಲಿಯೂ ಅವನಿಗೆ ಸದೃಶರೂ ಯಾರೂ ಇಲ್ಲ, 2) **ತಂ ವೈಶ್ರವಣ ಸಂಕಾಶಂ** ಇತ್ಯಾದಿ– ರಾಮಾವ ತಾರದಲ್ಲಿ ಶ್ರೀ ರಾಮಚಂದ್ರನು ಸುಮಂತ್ರನಿಗೆ ತೋರಿಸಿದ ಸೇವೆ ತಂ-ಆ ರಾಮಚಂದ್ರನು ಕುಬೇರನಿಗೆ ಸಮ ನಾಗಿ ಕುಳಿತಿದ್ದನು ಅಲಂಕೃತನಾಗಿ ಸ್ವರ್ಣಮಯವಾದ ಆಸಿಕೆಯಲ್ಲಿ ಸ್ವರ್ಣಮಯವಾದ ದುಪ್ಪಟದಿಂದ ಕೂಡಿದ ಪೀಠದ ಮೇಲೆ ಕುಳಿತಿದ್ದ ಶ್ರೀ ರಾಮಚಂದ್ರ. ಶುಚಿಯಾದ ಮತ್ತು ಸೌಗಂಧ್ಯದಿಂದ ಕೂಡಿ ಹಂದಿಯ ರಕ್ತ

---

1) ಭಾರತ ಶಾಂತಿಪರ್ವ44-13-14 15 16  2) ರಾಮಾಯಣ ಅಯೋಧ್ಯಾಕಾಂಡ 16-8 ರಿಂದ 11

ಸ್ಥಿತಯಾ ಪಾರ್ಶ್ವತಶ್ಚಾಪಿ ವಾಲವ್ಯಜನ ಹಸ್ತಯಾ ।
ಉಪೇತಂ ಸೀತಯಾ ಭೂಯಶ್ಚಿತ್ರಯಾ ಶಶಿನಂ ಯಥಾ ।
ತಂ ತಪಂತಮಿವಾದಿತ್ಯ ಮುಪಪನ್ನಂ ಸ್ವತೇಜಸಾ ।
ವವಂದೇ ವರದಂ ವಂದೀ ವಿನಯಜ್ಞೋ ವಿನೀತವತ್ ॥

ಎನ್ರು ಭಾರತರಾಮಾಯಣಙ್ಗಳಿಲ್ ಶೊಲ್ಲಪ್ಪಟ್ಟ ಅವತಾರಿಸಿಕ್ಕೈಯಾಲೇ ವ್ಯಂಜಿತಮಾನ ಪರಮಪದ ಪರ್ಯಂಕತ್ತಿಲೇ ಎೞುನ್ದರುಳಿಯಿರುಕ್ಕಿರ ಸಪತ್ನೀಕನಾನ ಸರ್ವೇಶ್ವರನ್ ತಾಳಿಣೈಕ್ಕೀೞ್, "ಒೞಿವಿಲ್ ಕಾಲಮೆಲ್ಲಾಮುಡನಾಯ್ಮನ್ನಿವೞುವಿಲಾವಡಿಮೈ ಶೆಯ್ಯವೇಣ್ಡುನಾಮ್", ಎನ್ಗಿರ ಮನೋರಥತ್ತಿನ್ ಪಡಿಯೇ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವವಿಧ ಕೈಙ್ಕರ್ಯಂಗಳೈಯುಮ್ ಪೆತ್ತು ವಾೞ್ವಾರ್ ಹಳ್. ಇಪ್ಪಡಿ ಶ್ರಿಯಃ ಪತಿಯಾನ ನಾರಾಯಣನ್ ತಿರುವಡಿಹಳೇ ಉಪಾಯ ದಶೈಯಿಲುಮ್ ಫಲದಶೈಯಿಲುಮ್, ಉಪಜೀವ್ಯಙ್ಗಳ್.

---

ಹಾಗೆ ಕೆಂಪಗಿದ್ದು ಬಹಳ ಶ್ರೇಷ್ಠವೂ ಆದ ಚಂದನವನ್ನು ಮೈಗೆ ಹಚ್ಚಿಕೊಂಡಿದ್ದನು. ಪರಂತಪಮ್ – ಶತ್ರುಗಳನ್ನು ತಪಿಸುವ ಕಾಂತಿ ಅವನದು. ಪಕ್ಕದಲ್ಲಿ ಸೀತಾದೇವಿಯು ಚಾಮರವನ್ನು ಬೀಸುತ್ತಾ ಕುಳಿತ್ತಿದ್ದಳು. ಚಿತ್ರೆಯೊಡನೆ ಕೂಡಿದ ಚಂದ್ರನ ಹಾಗೆ ಶ್ರೀರಾಮ ಚಂದ್ರನು ಪ್ರಕಾಶಿಸುತ್ತಿದ್ದನು. ತನ್ನ ಕಾಂತಿಯೊಡನೆ ಸೂರ್ಯನು ಪ್ರಕಾಶಿಸುವಂತೆ ಸೀತೆಯೊಡಗೂಡಿ ಶ್ರೀ ರಾಮಚಂದ್ರನು ಪ್ರಕಾಶಿಸುತ್ತಿದ್ದನು. ಅಂಥಹ ಶ್ರೀರಾಮ ಚಂದ್ರನನ್ನು, ವಿನಯವನ್ನು ತಿಳಿದಿದ್ದು ವಿನೀತ ವೇಷದಿಂದ ಕೂಡಿದ ಸುಮಂತ್ರನು ಸ್ತೋತ್ರಮಾಡಿ ನಮಸ್ಕರಿಸಿದನು. ಎನ್ರು ಭಾರತ ರಾಮಾಯಣಾದಿಹಳಿಲ್ ಇತ್ಯಾದಿ–ಈ ರೀತಿಯಾಗಿ ಮಹಾಭಾರತ ಮತ್ತು ರಾಮಾಯಣಗಳಲ್ಲಿ ಹೇಳಲ್ಪಟ್ಟಂತೆ ರಾಮ ಕೃಷ್ಣಾವತಾರಗಳಲ್ಲಿ ಸುಖಾಸಿಕೆಯಲ್ಲಿ ಭಗವಂತನು ಕುಳಿತ್ತಿದ್ದಂತೆ ಪರಮಪದದಲ್ಲಿ ಆದಿಶೇಷನೆಂಬ ಪರ್ಯಙ್ಕದಲ್ಲಿ ಸಪತ್ನೀಕನಾಗಿ ಬಿಜಯ ಮಾಡಿಸಿರುವ ಸರ್ವೇಶ್ವರನ ಪಾದಾರವಿಂದಗಳಲ್ಲಿ ಒೞಿವಿಲ್ ಕಾಲಮೆಲ್ಲಾಮುಡನಾಯ್ - ಇತ್ಯಾದಿ ಹೇಳಿರುವ ಮನೋರಥ ಪ್ರಕಾರ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ಸರ್ವವಿಧ ಕೈಂಕರ್ಯಗಳನ್ನೂ ಪಡೆದು ಬಾಳುತ್ತಾರೆ.

ಅನಂತರ ಈ ರಹಸ್ಯತ್ರಯಸಾರ ಗ್ರಂಥದ ಪರಮಸಾರಾರ್ಥವನ್ನು ಇಪ್ಪಡಿ ಶ್ರಿಯಃ ಪತಿಯಾನ ನಾರಾಯಣನ್ ಇತ್ಯಾದಿಯಾಗಿ ಅನುಗ್ರಹಿಸುತ್ತಾರೆ. ಆದಾಗಿ ಹೀಗೆ ಮೂವತ್ತೆರಡು ಅಧಿಕಾರಗಳಲ್ಲಿ ಹೇಳಿದ ಅರ್ಥಗಳ ಸಂಗ್ರಹವು ಏನೆಂದರೆ, "ಲಕ್ಷ್ಮೀಪತಿಯಾದ ನಾರಾಯಣನ ದಿವ್ಯ ಪಾದಗಳೇ ಶರಣಾಗತಿ ಮಾಡುವ ದಶೆಯಲ್ಲಿಯೂ, ಕೈಂಕರ್ಯ ದಶೆಯಲ್ಲಿಯೂ ಉಪಜೀವ್ಯಗಳು", ಎಂಬುದು. ದ್ವಯಮಂತ್ರದ ಪೂರ್ವೋತ್ತರ ಖಂಡಗಳಲ್ಲಿ ಹೇಳಿರುವ ಲಕ್ಷ್ಮೀವಿಶಿಷ್ಟ ನಾರಾಯಣನೇ ಪರತತ್ತ್ವ, ಅವನ ಪಾದ ಪದ್ಮಗಳಲ್ಲಿ ಶರಣಾಗತಿಯೇ ಪರಮಹಿತ, ಆ ಮಿಥುನದಲ್ಲಿ ಮಾಡುವ ಕೈಂಕರ್ಯವೇ ಪರಮ ಪುರುಷಾರ್ಥವೆಂಬುದು ತಾತ್ಪರ್ಯ.

ಅನಂತರ ಆ ಪರಮ ಪದನಾಥನೇ ಸ್ವಯಂವ್ಯಕ್ತವಾಗಿ ಶ್ರೀ ರಂಗದಲ್ಲಿ ಅರ್ಚಾವತಾರ ರೂಪಿಯಾಗಿ ಸಾನ್ನಿಧ್ಯವನು ಮಾಡಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡು ಆ ರಂಗನಾಥನ ದಿವ್ಯ ಪಾದಪದ್ಮಗಳೇ ಉಪಾಯೋಪೇಯಗಳು ಎಂದು ಉರುಶಕಡಮುಡ್ಡೈಯ ಎಂದಾರಂಭಿಸುವ ಪಾಶುರದಿಂದ ಸ್ತುತಿಸುತ್ತಾರೆ. ತಮಗೆ ಶ್ರೀರಂಗರಾಜನ ದಿವ್ಯಾಜ್ಞೆಯಿಂದ ವೇದಾಂತಾಚಾರ್ಯರೆಂಬ ಬಿರುದು ಲಭಿಸಿರುವುದರಿಂದಲೂ, "ವೇದ ಚೂಡಾರ್ಯಸಂಜ್ಞಾಂ ಅನಿತರ ಜನ್ಮಲಭ್ಯಾಂ ಲಂಭಿತೋ ರಂಗಭರ್ತ್ರಾ", ಎಂದು ಹೇಳಿರುವುದರಿಂದಲೂ, ಈ ರಹಸ್ಯತ್ರಯ ಸಾರ ಪ್ರಬಂಧವು. ಸಕಲ ವೇದಾಂತಾರ್ಥ ಗರ್ಭಿತವು ಎಂಬುದೂ ಇಲ್ಲಿ ಸೂಚಿಸಲ್ಪಡುತ್ತದೆ.

**ಉರು ಶಕಡ ಮುಡ್ಯೆಯ ವೊರು ಕಾಲುತ್ತುಣರ್ದ್ದನ**
**ಉಡನ್‌ಮರುದ ನೊಡಿಯ ವೊರು ಪೋದಿಲ್‌ತ್ತವಳ್ನ್ದನ ।**
**ಉರಿತಡವುಮಳವಿಲ್ ಉರಲೂಡುತ್ತುನಿನ್ರನ ।**
**ಉರುನೆರಿಯೋರ್ ತರುಮನ್ ವಿಡುತೂದುಕ್ಕುಹನ್ದನ ।**
**ಮರನೆರಿಯರ್ ಮುರಿಯ ಶಿರಿದಾನತ್ತುವನ್ದನ ।**
**ಮಲರ್ ಮಹಳ್ ಕೈವರುಡ ಮಲರ್ಪೋತಿರ್ಚ್ಚಿವನ್ದನ ।**
**ಮರುಪಿರವಿಯರು ಮುನಿವರ್ ಮಾಲುಕ್ಕಿಶೈನ್ದನ ।**
**ಮನುಮುರ್ರೈಯಿಲ್ ವರವದೋರ್ ವಿಮಾನತ್ತುರೈನ್ದನ ।**
**ಅರಮುಡ್ಯೆಯ ವಿಶಯನಮರ್ ತೇರಿಲ್‌ತಿಹಳ್ನ್ದನ ।**

---

**ಉರುಶಕಡ ಮುಡ್ಯೆಯ** – ಬಲಿಷ್ಠನಾದ ಅಸುರನಿಂದ ಆವಿಷ್ಟವಾದ ಶಕಟವು ಒಡೆದು ಹೋಗುವಂತೆ, **ಒರುಕಾಲ್** – ತಾಯಿಯೂ ಸಹಾಯಕಳಾಗಿಲ್ಲದ ಒಂದು ಸಂದರ್ಭದಲ್ಲಿ, **ಉಟ್ರುಣರ್‌ನ್ದನ** – ಸಾವಧಾನವಾಗಿ ಜಾಗರಣೆಯಾಗಿದ್ದವು, **ಉಡನ್ ಮರುದನೊಡಿಯ** – ನಳಕೂಬರ ಮಣಿಗ್ರೀವರೆಂಬ ಕುಬೇರನ ಪುತ್ರರುಗಳಿಗೆ ಮಹರ್ಷಿ ಶಾಪದಿಂದ ಏರ್ಪಟ್ಟ ಶರೀರಗಳಾದ ಯಮಳಾರ್ಜುನ ವೃಕ್ಷಗಳು, ಒಡೆದು ಹೋಗುವಂತೆ, **ಒರುಪೋದಿಲ್**– ಒಂದು ಸಂದರ್ಭದಲ್ಲಿ, ತವಳ್ನ್ದನ – ಅಂಬೆಗಾಲಿಟ್ಟುಕೊಂಡು ರಿಂಖಣ ಶಬ್ದವನ್ನು ಮಾಡಿದವು. ಈ ಎರಡು ವೃತ್ತಾಂತಗಳಿಂದ ಆಶ್ರಿತ ವಿರೋಧಿ ಪಾಪಗಳನ್ನು ಹೋಗಲಾಡಿಸಬಲ್ಲ ಶ್ರೀಪಾದಪದ್ಮಗಳು ಎಂಬ ಅರ್ಥವು ದ್ಯೋತಿತ. **ಉರಿತಡವುಮಳವಿಲ್** – ಬೆಣ್ಣೆ ಮೊಸರುಗಳನ್ನು ಕದಿಯಲು ಉರಿಗಳನ್ನು ಸವರುವ ಕಾಲದಲ್ಲಿ, ಉರಲೂಡು – ಒರಳುಕಲ್ಲಿನ, **ಊಡು** – ಮಧ್ಯದಲ್ಲಿ ಉಟ್ರು – ತಾಯಿಯಿಂದ ಕಟ್ಟಪ್ಪಟ್ಟು, **ನಿನ್ರನ** – ಇದ್ದವು – ಇದರಿಂದ ಭಗವಂತನ ಪರಮ ಸೌಲಭ್ಯವು ವ್ಯಕ್ತಪಡಿಸಲ್ಪಡುತ್ತದೆ. ಮಹಾಪಾಪಿಗಳೂ ನಿರ್ಭಯದಿಂದ ಭಗವಂತನನ್ನು ಆಶ್ರಯಿಸಲು ಸೌಲಭ್ಯ ಗುಣಗಳು ಉಪಕರಿಸುವವು. ಎಂದು ಭಾವ **ಉರುನೆರಿಯೋರ್ ತರುಮನ್** – ಯೋಗ್ಯವಾದ, ಧರ್ಮಮಾರ್ಗವನ್ನವಲಂಬಿಸಿದ ಧರ್ಮಪುತ್ರನು, **ವಿಡು** – ಕಳುಹಿಸಿದ, **ತೂದುಕ್ಕುಹನ್ದನ** - ದೂತ್ಯ ಕೃತ್ಯವನ್ನು ಸಂತೋಷದಿಂದ ಅಂಗೀಕರಿಸಿದವು. ಇದರಿಂದ ಸೌಶೀಲ್ಯಗುಣವು ಪ್ರಕಾಶ ಪಡಿಸಲ್ಪಡುತ್ತದೆ. **ಮರನೆರಿಯರ್** – ಕೋಪವನ್ನೇ ತಮ್ಮ ಸಂಚಾರ ಮಾರ್ಗವಾಗಿ ಕೊಂಡಿರುವ ಅಸುರ ರಾಕ್ಷಸರುಗಳು, **ಮುರಿಯ** – ನಿಶ್ಶೇಷವಾಗಿ ನಶಿಸುವಂತೆ **ಶಿರಿದಾನತ್ತುವಂದನ**–ಬೃಂದಾವನದಲ್ಲಿ ಸಂಚರಿಸಿದವು ಭಗವಂತನ ಪಾದಪದ್ಮಗಳು. ಇದೂ ಆಶ್ರಿತ ವಿರೋಧಿ ಪಾಪನಿರಸನ ಸೂಚಕ. **ಮಲರ್‌ಮಹಳ್‌ಕೈವರುಡ**– ಪಂಕಜವಾಸಿನಿಯಾದ ಮಹಾಲಕ್ಷ್ಮಿಯು ಕೈಯ್ಯಿನಿಂದ ಭಗವಂತನ ಪಾದಸಂವಾಹನಗಳನ್ನು ಮಾಡಲು, **ಮಲರ್ ಪೋದಿಲ್** – ಅರಳಿದ ತಾವರೆ ಹೂವುಗಳಿಗಿಂತ, **ಶಿವಂದನ** – ಕೆಂಪಾದುವು, ಅಷ್ಟು ಸುಕುಮಾರಗಳಾದ ಪಾದಗಳು. ಇದು ಉಪಲಕ್ಷಣವಾಗಿ, ಬಹಳ ಸೌಕುಮಾರ್ಯದಿಂದ ಕೂಡಿದ ದಿವ್ಯ ಶರೀರವನ್ನುಳ್ಳವನು ಭಗವಂತನೆಂದು ನಿರತಿಶಯ ಭೋಗ್ಯತ್ವವು ಸೂಚಿಸಲ್ಪಡುತ್ತದೆ. **ಮರುಪಿರವಿಯರು** – ಪುನರ್ಜನ್ಮವನ್ನು ಹೋಗಲಾಡಿಸುವಂತೆ ಆಸೆಪಡುವ **ಮುನಿವರ್** – ಮನನ ಶೀಲರಾದ ಭಕ್ತರ **ಮಾಲುಕ್ಕು** – ಪರಮಭಕ್ತಿಗೆ **ಇಶೈಂದನ** - ವಶೀಕಾರಗಳಾಗಿ ವಿಷಯ ಭೂತಗಳಾದವು, ಭಕ್ತಿವಶೀಕೃತತ್ವವು ಸೂಚಿತ, **ಮನುಮುರ್ರೈಯಿಲ್**– ವೈವಸ್ವತ ಮನುವಿನ ವಂಶಪರಂಪರೆಯಲ್ಲಿ, **ವರವದು** – ಬಂದಿರುವ, ಅಂದರೆ "ಆದ್ಯಂಸ್ಥಲಂ ಸ್ವಯಂ ವ್ಯಕ್ತಂ ಸತ್ಯಲೋಕೇ ಪ್ರತಿಷ್ಠಿತಮ್" ಎಂಬಂತೆ ಸತ್ಯಲೋಕದಲ್ಲಿ ಸ್ವಯಂ ವ್ಯಕ್ತವಾಗಿ ಪ್ರತಿಷ್ಠಿತವಾಗಿ, ಅನಂತರ ಚತುರ್ಮುಖ ಬ್ರಹ್ಮದೇವನಿಂದ ವೈವಸ್ವತ ಮನುವಿಗೆ ಆರಾಧಿಸಲು ಕೊಡಲ್ಪಟ್ಟು ವಂಶಪರಂಪರೆಯಾಗಿ ಆರಾಧ್ಯನಾಗಿ ಬಂದು ಒಂದು ವಿಶೇಷಸಂದರ್ಭದಲ್ಲಿ ಶ್ರೀರಾಮಚಂದ್ರನಿಂದ, ವಿಭೀಷಣನಿಗೆ ಕೊಡಲ್ಪಟ್ಟು ಅವನು ಬಿಜಯ ಮಾಡಿಸಿಕೊಂಡು ಬರುವಾಗ **ವಿಮಾನತ್ತುರೈಂದನ** - ಶ್ರೀರಂಗ ವಿಮಾನದಲ್ಲಿ ನಿತ್ಯ ವಾಸ ಮಾಡಿಕೊಂಡಿರುವುವು. ಸತ್ಯಲೋಕದಿಂದ ಭೂಲೋಕಕ್ಕೆ ಭಗವಂತನು ಇಳಿದು ಬಂದಿರುವುದರಿಂದ, **ಸರ್ವ ಜನರೂ ತನ್ನನ್ನು**

**ಅಡಲುರಗ ಪಡಮುಡಿಯು ವಾಡಿಕ್ಕಡಿನ್ದನ।**
**ಅರುಶಮಯು ಮರಿವರಯುತಾನತ್ತು ಮುರ್ನ್ದನ।**
**ಅಣಿಕುರುಹೈನಗರ್ ಮುನಿವರ್ ನಾವುಕ್ಕನ್ಯೆನ್ದನ॥**
**ನೆರಿಯುಡೈಯು ತುಳವಮುಲರ್ ವೀರುಕ್ಕಣಿನ್ದನ।**
**ವಿಟ್ರುಕರಿಯೋರ್ ಕುಮರನೆನ ಮೇವಿಚ್ಚಿರನ್ದನ।**
**ವಿರಲಶುರರ್ ಪಡೈಯುಡೈಯು ವೀಯತ್ತುಡರ್ನ್ದನ।**
**ವಿಡಲರಿಯು ಪೆರಿಯು ಪೆರುಮಾಳ್ ಮೆಯ್ಪ್ಪದಙ್ಗಳೇ॥**

---

ಆಶ್ರಯಿಸಿ ಉಜ್ಜೀವಿಸಲೆಂಬ ಪರಮಕೃಪೆಯು ಹೇಳಲ್ಪಟ್ಟಿತು **ಅರವುುಡೈಯು** – ಶರಣಾಗತಿ ಧರ್ಮವನ್ನು ಅನುಷ್ಠಿಸಿದ, "ಶಿಷ್ಯಸ್ತೇऽಹಂ ಶಾಧಿ ಮಾಂತ್ವಾಂ ಪ್ರಪನ್ನಮ್"ಎಂದು ಆಚಾರ್ಯ ಸಮಾಶ್ರಯಣ ಮಾಡಿದ ಎಂದರ್ಥ, **ವಿಜಯುನಮುರ್** – ಅರ್ಜುನನು ಕುಳಿತಿರುವ, **ತೇರಿಲ್ ತಿಹಳ್ನ್ದನ** – ರಥದಲ್ಲಿ ಪ್ರಕಾಶಿಸಿದುವು, ಪಾರ್ಥಸಾರಥಿ ಎಂದು ತನ್ನ ಸೌಶೀಲ್ಯವು ತಿಳಿಯುವಂತೆ ಪ್ರಕಾಶಿಸುತ್ತಿದ್ದ ಭಗವಂತನ ಶ್ರೀಪಾದಗಳು. **ಅಡಲುರಹಪಡಮುಡಿಯು**– ಪರಾಕ್ರಮಶಾಲಿಯಾದ ಕಾಳಿಯನೆಂಬ ಉರಗದ ಹೆಡೆಗಳು ಬಿದ್ದುಹೋಗುವಂತೆ, **ಆಡಿಕ್ಕಡಿಂದನ** – ನರ್ತನ ಮಾಡಿ, ಆ ಸರ್ಪವನ್ನು ನಿಗ್ರಹಿಸಿದವು. ಇದೂ ಆಶ್ರಿತ ವಿರೋಧಿ ನಿರಸನ ಸ್ವಭಾವವನ್ನು ತಿಳಿಸುತ್ತದೆ. **ಅರುಶಮಯುವಮ್** - ಸಾಂಖ್ಯ, ಯೋಗ, ಕಾಣಾದ, ಬೌದ್ಧ, ಜೈನ, ಪಾಶುಪತಗಳೆಂಬ ಆರು ಸಿದ್ಧಾಂತ ಗಳಿಂದಲೂ, ಅವುಗಳನ್ನು ಹಿಂಬಾಲಿಸುವವರಿಂದ ಎಂದರ್ಥ. **ಅರಿವರಿಯು** – ದುಜ್ಞೇಯಯುವಾದ, **ತಾನತ್ತು**– **ಸ್ಥಾನದಲ್ಲಿ, ಅಮುರ್ನ್ದನ** – ಸ್ಥಿರ ಪ್ರತಿಷ್ಠಿತಗಳಾಗಿ ಇದ್ದವು. ಅವೈದಿಕರೂ, ನಾಸ್ತಿಕರೂ ಆದ ಇತರ ಮತಾವಲಂಬಿ ಗಳಿಂದ ಭಗವಂತನ ಸ್ವರೂಪ ಸ್ವಭಾವಗಳು ತಿಳಿಯಲ್ಪಡುವುದಿಲ್ಲವೆಂದು ತಾತ್ಪರ್ಯ. **ಅಣಿಕುರುಹೈನಹರ್** – ಭೂಮಿಗೆ ಅಲಂಕಾರವಾದ ಕುರುಕಾಪುರಿಗೆ ನಿರ್ವಾಹಕರಾದ, **ಮುನಿವರ್** – ಶಠಗೋಪ ಮುನಿಗಳ, **ನಾವುಕ್ಕು**– ನಾಲಿಗೆಯಿಂದ ಉಂಟಾದ, "ಶುಡರಡಿತೊಳುದೆಳುನ್ದಿನನೇ," "ಅಡಿಕ್ಕೀಳ್ ಅಮರ್ನ್ದು ಪುಹುಂದೇನೇ", ಶ್ರೀ ಸೂಕ್ತಿಗಳಿಗೆ ವಿಷಯಗಳಾಗಿ ಅಂದರೆ ಶ್ರೀ ಸೂಕ್ತಿಗಳಿಂದ ಸ್ತುತಿಸಲ್ಪಟ್ಟು, **ಅನ್ಯೆಂದನ** – ಆದವು, **ನೆರಿಯುಡೈಯು** - ಪರಿಮಳದಿಂದ ಕೂಡಿದ, **ತುಳವಮುಲರ್** – ತುಳಸೀ ಮಾಲೆಗಳನ್ನು, **ವೀರುಕ್ಕು**– ತನ್ನ ವೈಲಕ್ಷಣ್ಯವು ತೋರುವುದಕ್ಕೆ, **ಅಣಿಂದನ** – ಅಲಂಕಾರವಾಗಿ ಸ್ವೀಕರಿಸಿದುವು, **ವಿಟ್ರುಕರಿ** – ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಸುಟ್ಟು ಉತ್ತರೆಯ ಗರ್ಭದಿಂದ ಹೊರಬಿದ್ದು ಇಜ್ಜಲು ರೂಪದಲ್ಲಿದ್ದ ಶಿಶುವು **ಓರ್ ಕುಮರ ನೆನ** – ಅದ್ವಿತೀಯನಾದ ಪರೀಕ್ಷಿತ್ತೆಂಬ ರಾಜಕುಮಾರನಾಗಿ ಆಗುವಂತೆ, **ಮೇವಿ** – ಅಭಿನಿವೇಶದಿಂದ ಸ್ಪರ್ಶಿಸಿ, **ಶಿರಂದನ** – ಸರ್ವೋತ್ಕೃಷ್ಟಗಳಾಗಿ ಪ್ರಕಾಶಿಸಿದುವು. **ವಿರಲ್** – ಪರಾಕ್ರಮದಿಂದ ಕೂಡಿದ, **ಅಶುರರ್ ಪಡೈಯು ಡೈಯು** - ಅಸುರರ ಸೈನ್ಯವು ಪೂರ್ಣವಾಗಿ, **ವೀಯು** – ನಶಿಸಿ ಹೋಗುವಂತೆ, **ತುಡರ್ನ್ದನ** – ಅಟ್ಟಿಸಿಕೊಂಡು ಹಿಂಬಾಲಿಸಿದುವು ಮಾಲ್ಯವಾನ್ ಮೊದಲಾದ ರಾಕ್ಷಸರನ್ನು ನಾರಾಯಣನು ಅಟ್ಟಿಸಿಕೊಂಡು ಹೋಗಿ ನಿರಸನ ಮಾಡಿದ ವೃತ್ತಾಂತವು ಇಲ್ಲಿ ತಿಳಿಸಲ್ಪಡುತ್ತದೆ. ಹೀಗೆಲ್ಲಾ ಆಶ್ರಿತರ ವಿರೋಧಿಗಳನ್ನು ನಿರಸನಮಾಡಿ, ಆಶ್ರಿತ ಸಂರಕ್ಷಣ ಮಾಡಿದ, **ವಿಡಲರಿಯು** - ಭಕ್ತರುಗಳಿಂದ ಬಿಡಲಾಗದ, **ಪೆರಿಯು ಪೆರುಮಾಳ್** – ಶ್ರೀರಂಗನಾಥನ (ಶ್ರೀರಾಮಚಂದ್ರನಿಂದಲೂ ಸೇವ್ಯವಾದ್ದರಿಂದ ಪೆರಿಯುಪೆರುಮಾಳ್ ಎಂದು ಹೆಸರು. **ಮೆಯ್ ಪದಂಗಳೇ** – ಮೃದುಳಗಳಾದ ಶ್ರೀಪಾದಪದ್ಮಗಳು, ನಮಗೆ ಉದ್ದೇಶ್ಯಗಳು ಎಂದು ತಾತ್ಪರ್ಯ

**ಇತಿ ಯತಿರಾಜ ಮಹಾನಸ ಪರಿಮಳ ಪರಿವಾಹ ವಾಸಿತಾಂ ಪಿಬತ।**
**ವಿಬುಧ ಪರಿಷ ನ್ನಿಷೇವ್ಯಾಂ ವೇದಾಂತೋದಯನ ಸಂಪ್ರದಾಯ ಸುಧಾಮ್ ॥76॥**

**ಕಳಕಂಠಗಣಾಸ್ವಾದ್ಯೇ ಕಾಮಸ್ಯಾಸ್ತ್ರೇ ನಿಜಾಙ್ಕುರೇ।**
**ನಿಂಬವೃತ್ತಿಭಿ ರುದ್ಗೀರ್ಣೇ ನ ಚೂತಃ ಪರಿತಪ್ಯತೇ ॥77॥**

**ಮುನ್ಪೆತ್ತ ಜ್ಞಾನಮುಂ ಮೋಹನ್ನು ರಕ್ಕಲುಮ್ ಮೂನ್ರೈಯಿಲ್।**
**ತನ್ಪತ್ತ ತನ್ಮೈಯುಂನಾ್ರ್ಮನ್ನವರ್ಕ್ಕೀಯುಂನ್ದನಿ ತ್ತಹವುಮ್।**

---

ಹೀಗೆ ತಾವು ಕೃಪೆಯಿಂದ ಹೇಳಿದ ಸಂಪ್ರದಾಯಾರ್ಥಗಳಾದ ಅರ್ಥಗಳಿಂದ ಕೂಡಿದ ರಹಸ್ಯತ್ರಯಸಾರ ವೆಂಬ ಅಮೃತವನ್ನು ಎಲ್ಲರೂ ಪಾನಮಾಡಿರಿ, ಎಂದು **ಇತಿಯತಿರಾಜಮಹಾನಸ** ಎಂದಾರಂಭಿಸುವ ಶ್ಲೋಕ ದಿಂದ, "ತೊಂಡೀರ್ ಎಲ್ಲೀರುಮ್‌ವಾರೀರ್" – ಭಕ್ತಜನಗಳೇ ಬನ್ನಿರಿ ಎಂದು ನಮ್ಮಾಳ್ವಾರ್ ಕರೆದಂತೆ ಕರೆಯುತ್ತಾರೆ. ಆದಾಗಿ **ಇತಿಯತಿರಾಜ ಮಹಾನಸ** - ಹೀಗೆ ಯತಿ ಶ್ರೇಷ್ಠರಾದ ಭಗವದ್ಭಾಷ್ಯಕಾರರಿಗೆ ಅಡಿಗೆ ಕೈಂಕರ್ಯವನ್ನು ಮಾಡುತ್ತಿದ್ದರಿಂದ, ಯತಿರಾಜ ಮಹಾನಸರೆಂದು ವ್ಯವಹರಿಸಲ್ಪಟ್ಟ ಕಿಡಾಂಬಿ ಆಚ್ಚಾನ್ ವಿಷಯದಲ್ಲಿ, **ಪರಿಮಳ** - ಪಕ್ಷಪಾತವನ್ನುವಹಿಸಿದ್ದು ಎಂದರೆ ಅತ್ಯಂತ ಕೃಪೆಯಿಂದ ಕೂಡಿ, **ಪರೀವಾಹ** – ಆ ಕೃಪಾಪರೀವಾಹವಾಗಿ ಅತಿರಹಸ್ಯಾರ್ಥಗಳನ್ನೆಲ್ಲಾ ಅವರಿಗೆ ಭಾಷ್ಯಕಾರರು ಉಪದೇಶಿ ಮಾಡಿ ಅದರಿಂದ **ವಾಸಿತಾಂ** – ಸುಸಂಸ್ಕೃತವಾಗಿ, **ವಿಬುಧಪರಿಷನ್ನಿಷೇವ್ಯಾಂ** - ಪಂಡಿತರ ಗೋಷ್ಠಿಯಿಂದ ಸರ್ವದಾಸೇವ್ಯವಾದ, **ವೇದಾಂತೋದಯನ ಸಂಪ್ರದಾಯ ಸುಧಾಮ್** - ನ್ಯಾಯಶಾಸ್ತ್ರಕ್ಕೆ ಉದಯನಾಚಾರ್ಯರಂತೆ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಉದಯನಾಚಾರ್ಯರೆಂದು ಪ್ರಸಿದ್ಧರಾದ ಪ್ರಣತಾರ್ತಿ ಹರಾಚಾರ್ಯರ ಉಪದೇಶ ಪರಂಪರಾ ಪ್ರಾಪ್ತ ವಾದ ರಹಸ್ಯತ್ರಯಸಾರ ರೂಪವಾದ ಅಮೃತವನ್ನು, **ಪಿಬತ** - ಪಾನ ಮಾಡಿರಿ.

ಹೀಗೆ ಎಲ್ಲರೂ ಈ ಅಮೃತಪಾನ ಮಾಡಿರಿ ಎಂದು ಕರೆದಾಗ, **ಕೆಲವರು ಅಸೂಯೆಯಿಂದ ಕೂಡಿ ಈ** ಪ್ರಬಂಧವನ್ನು ಉಪೇಕ್ಷೆ ಮಾಡಬಹುದೆಂದೂಹಿಸಿ, **ಕಳಕಂಠಗಣಾಸ್ವಾದ್ಯೇ** ಎಂದಾರಂಭಿಸಿ ಪ್ರಬಂಧದ ಹಿರಿಮೆಗೆ ಯಾವ ಕುಂದುಕವೂ ಬರುವುದಿಲ್ಲವೆನ್ನುತ್ತಾರೆ. **ಕಳಕಂಠಗಣ** – ಅವ್ಯಕ್ತವಾದ ಮಧುರ ಶಬ್ದದಿಂದ ಕೂಡಿದ ಕೋಗಿಲೆಗಳ ಸಮೂಹದಿಂದ, **ಆಸ್ವಾದ್ಯೇ** – ಆಸ್ವಾದನೀಯವಾದ, **ಕಾಮಸ್ಯ** - ಮನ್ಮಥನ **ಅಸ್ತ್ರೇ**- ಅಸ್ತ್ರವಾದ, **ನಿಜಾಂಕುರೇ** - ತನ್ನ ಚಿಗುರುಗಳು, **ನಿಂಬವೃತ್ತಿಭಿಃ** - ಬೇವಿನ ಎಲೆಯನ್ನು ತಿನ್ನುವ ಕಾಗೆಗಳಿಂದ, ಅಥವಾ ಒಂಟೆಗಳಿಂದ, **ಉದ್ಗೀರ್ಣೇ** - ಕಕ್ಕಲ್ಪಟ್ಟರೆ, **ಚೂತಃ** - ಮಾವಿನಮರವು, **ನಪರಿತಪ್ಯತೇ** - ಪರಿತಪಿಸು ವುದಿಲ್ಲವಲ್ಲವೇ.

ಇದರ ತಾತ್ಪರ್ಯವೇನೆಂದರೆ, "ಕಾಮಃ ಕಾಮಪ್ರದಃ ಪ್ರಭುಃ" ಎಂದು ಸಹಸ್ರನಾಮದಲ್ಲಿ ಪಠಿತನಾದ ಭಗವಂತನಿಗೆ ಅಭೀಷ್ಟ ಸಾಧನವಾದ ಶಾಸ್ತ್ರದಂತೆ ಇರುವ ಈ ರಹಸ್ಯತ್ರಯಸಾರ ಗ್ರಂಥವು, ನಿಂಬ ವೃತ್ತಿಗಳ ಹಾಗೆ ಅಪಾರ್ಥಗಳನ್ನೇ ಆಸ್ವಾದ ಮಾಡಿ, ಸದರ್ಥಗಳನ್ನು ಪರಿತ್ಯಜಿಸುವ, ಅಸೂಯಾಳುಗಳಿಗೆ ಆಸ್ವಾದನೀಯವಲ್ಲದಿದ್ದರೆ ತಮಗೆ ಯಾವ ಕೊರತೆಯೂ ಇಲ್ಲವೆಂದು ಆಚಾರ್ಯ ಸಾರ್ವಭೌಮರು ಅಭಿಪ್ರಾಯ ಪಡುತ್ತಾರೆ.

ಸದಾಚಾರ್ಯರನ್ನು 'ತದ್ವಿದ್ಧಿಪ್ರಣಿಪಾತೇನ' ಎಂಬ ಕ್ರಮದಲ್ಲಿ ಆಶ್ರಯಿಸಿ ಪುರುಷಾರ್ಥವನ್ನು ಹೊಂದಲು ಇಚ್ಛೆಯುಳ್ಳವರಿಗೆ ಈ ಪ್ರಬಂಧವು ಪರಮಸಾಧಕವೆಂದು **ಮುನ್‌ಪೆತ್ರಜ್ಞಾನಮುಂ** ಎಂದಾರಂಭಿಸಿ

ಮನ್ನತ್ತಿ ನಿನ್ರವಹ್ಹೈ ಯುರ್ರೈಕ್ಕಿನ್ರ ಮರ್ರೈಯುವರ್‌ಪಾಲ್ ।
ಶಿನ್ಪತ್ತಿ ಯಿನ್ಪಯನ್ ಶೀರರಿವೋರ್‌ಕ್ಕಿನ್ರಿಶೆಪ್ಪಿನಮೇ ॥40॥

ನಿರ್ವಿಷ್ಟಂ ಯತಿಸಾರ್ವಭೌಮ ವಚಸಾ ಮಾವೃತ್ತಿಭಿರ್ಯೌವನಮ್ ।
ನಿರ್ಧೂತೇತರ ಪಾರತಂತ್ರ್ಯ ನಿರಯಾ ನೀತಾ ಸ್ಸುಖಂ ವಾಸರಾಃ ॥

---

ಅನುಗ್ರಹಿಸುತ್ತಾರೆ. ಅದಾಗಿ **ಮುನ್‌ಪೆಟ್ರಜ್ಞಾನಮುಮ್** – ಆರಂಭದಲ್ಲಿ ಅರ್ಥಾನುಶಾಸನ ಭಾಗದಲ್ಲಿ ಹೇಳಿರುವ, ಆಚಾರ್ಯಸಕಾಶದಿಂದ ಲಭಿಸಿದ ತತ್ವಹಿತ ಪುರುಷಾರ್ಥ ವಿಷಯವಾದ ಜ್ಞಾನವೂ, **ಮೋಹಂತುರಕ್ಕಲುಮ್** – ಸ್ಥಿರೀಕರಣ ಭಾಗದಲ್ಲಿ ಹೇಳಲ್ಪಟ್ಟ, ಸಯೂಥ್ಯರುಗಳ ಸಿದ್ಧೋಪಾಯ ಮತ್ತು ಸಾಧ್ಯೋಪಾಯ ವಿಷಯವಾದ ಅಜ್ಞಾನವನ್ನು ನಿವೃತ್ತಿಸಿದ ಪ್ರಕಾರವೂ, **ಮೂನ್ರುರೈಯಲ್**–ರಹಸ್ಯತ್ರಯಗಳಲ್ಲಿ ಹೇಳಲ್ಪಟ್ಟ **ತನ್ಪಟ್ರ** – ತನ್ನ ಸ್ವಾತಂತ್ರ್ಯ ಮತ್ತು ಅನ್ಯಶೇಷತ್ವಾದಿ ದೋಷವಿಲ್ಲದ **ತನ್ಮೈಯುಮ್** – ಭಗವಚ್ಛೇಷತ್ವ ಪಾರತಂತ್ರ್ಯಾದಿ ರೂಪ ಸ್ವಭಾವವೂ, ಇದರಿಂದ ಪದವಾಕ್ಯಯೋಜನಾ ಭಾಗಾರ್ಥವು ಹೇಳಲ್ಪಟ್ಟಿತು. **ತಾಳ್ನ್ದವರ್ಕು** "ಶಿಷ್ಯಸ್ತೇಽಹಂಶಾಧಿಮಾಂತ್ವಾಂ ಪ್ರಪನ್ನಮ್" ಎಂದು ಸಮ್ಯಗುಪಸನ್ನರಾದ ಸಚ್ಛಿಷ್ಯರುಗಳಿಗೆ, **ಈಯುಮ್**– ಉಪದೇಶಿಸಲು ಹೇತುವಾದ, **ತನಿತ್ತಹವುಮ್** – ಅದ್ವಿತೀಯವಾದ ಕೃಪೆಯೂ, (ಆಚಾರ್ಯಕೃತ್ಯಾಧಿಕಾರಾರ್ಥ) **ಮನ್** – ಮನ್–ರಾಜಾಧಿರಾಜನಾದ ಸರ್ವೇಶ್ವರನನ್ನು, **ಪಟ್ರನಿನ್ರವಹ್ಹೈ** – ಶರಣವರಣ ಮಾಡಿ, ನಿವೃತ್ತ ಪಾಪನಾಗಿ, ನಿಶ್ಶೋಕನಾಗಿ ನಿಂತ ಪ್ರಕಾರವನ್ನು, **ಉರೈಕ್ಕಿನ್ರ** – ಉಪದೇಶಿಸುವ, **ಮರೈಯುವರ್‌ಪಾಲ್** –ವೇದವೇದಾಂತಾರ್ಥಗಳನ್ನು ತಿಳಿದ ಆಚಾರ್ಯರುಗಳ ಹತ್ತಿರ, **ಶೀರ್ ಅರಿವೋರ್ಕ್ಕು** – ಈ ಗ್ರಂಥದಲ್ಲಿ ಹೇಳಿರುವ ಶ್ರೇಷ್ಠವಾದ ಸಂಪ್ರದಾಯಾರ್ಥಗಳನ್ನು ತಿಳಿಯಬೇಕೆಂದು ಇಚ್ಛೆಯುಳ್ಳವರುಗಳಿಗೆ, **ಇನ್ನೈ** – ಈ ಅರ್ಥಗಳನ್ನು **ಶೆಪ್ಪಿನಮೇ** – ಹೇಳಿದೆವು. ಸದಾಚಾರ್ಯ ಸಕಾಶದಿಂದ ಈ ಅರ್ಥಗಳನ್ನು ಸಮ್ಯಗುಪಸನ್ನರಾಗಿ ಕಾಲಕ್ಷೇಪ ಮಾಡಬೇಕೆಂಬ ಇಚ್ಛೆಯುಳ್ಳವರಿಗೆ ಈ ಗ್ರಂಥವನ್ನು ಬರೆದೆವು. ತಮ್ಮಿಷ್ಟ ಪ್ರಕಾರ ಅಪಾರ್ಥಮಾಡಿ ತಿಳಿಯಬೇಕೆಂಬ ಪಂಡಿತಂಮನ್ಯರಿಗೆ ಈ ಗ್ರಂಥವನ್ನು ಬರೆಯಲಿಲ್ಲವೆಂದು ತಾತ್ಪರ್ಯ. **ಶಿನ್‌ಪಟ್ರಯಿನ್‌ಪಯನ್**- ಕ್ಷುದ್ರಾರ್ಥವನ್ನು ನಿರೂಪಿಸುವುದರಿಂದ ಏನು ಪ್ರಯೋಜನ.

ಅನಂತರ ತಮ್ಮ ವೃತ್ತಿ ವಿಶೇಷವನ್ನು ಎಲ್ಲರೂ ಹಿಂಬಾಲಿಸಲೆಂದು **'ನಿರ್ವಿಷ್ಟಂ ಯತಿಸಾರ್ವಭೌಮ ವಚಸಾಂ'** ಎಂಬ ಶ್ಲೋಕದಿಂದ ಅನುಗ್ರಹಿಸುತ್ತಾರೆ. **ಯತಿಸಾರ್ವಭೌಮ ವಚಸಾಂ**–ಯತಿಸಾರ್ವಭೌಮರಾದ ಶ್ರೀಭಾಷ್ಯಕಾರರ ಶ್ರೀಸೂಕ್ತಿಗಳ **ಆವೃತ್ತಿಭಿಃ** – ತ್ರಿಂಶದ್ವಾರಂ ಶ್ರಾವಿತ ಶಾರೀರಕ ಭಾಷ್ಯಃ – ಮೂವತ್ತು ಸಲ ಶಾರೀರಕ ಮೀಮಾಂಸಾ ಭಾಷ್ಯವು ಶಿಷ್ಯರಿಗೆ ಉಪದೇಶಮಾಡಲ್ಪಟ್ಟಿತು. "ಪ್ರವಚನ ವಿಧಾವಷ್ಟಾವಿಂಶೇ ಜಯಧ್ವಜಪಟ್ಟಿಕಾ" – ಶಿಷ್ಯರಿಗೆ 28ಸಲ ಪ್ರವಚನ ಮಾಡುವಾಗ ಪರಮತ ನಿರಸನದಿಂದ ಉಂಟಾದ ಜಯಧ್ವಜ ಪಟ್ಟಿಕಾ ರೂಪವಾದ ತತ್ವ ಟೀಕೆಯು ಅನುಗ್ರಹಿಸಲ್ಪಟ್ಟಿತು ಎಂದು ಹೇಳಿರುವಂತೆ, ಶ್ರೀಭಾಷ್ಯದ ಆವೃತ್ತಿಯಿಂದ, **ಯೌವನಂ** - ಯೌವನಾವಸ್ಥೆಯು **ನಿರ್ವಿಷ್ಟಂ** – ಸುಖವಾಗಿ ಅನುಭೂತವು.

"ಯುವಾಸ್ಯಾತ್ಸಾಧು ಯುವಾಧ್ಯಾಯಕಃ ।

ಆಶಿಷ್ಠೋ ದ್ರಢಿಷ್ಠೋಬಲಿಷ್ಠಃ ಸಏಕೋ ಮಾನುಷ ಆನಂದಃ ॥"ಎಂದು ಯೌವನದಲ್ಲಿ, ಪ್ರವಚನವು ಮನುಷ್ಯಾನಂದವಾಗಿ ಹೇಳಲ್ಪಟ್ಟಿತು.ಇಲ್ಲಿ ಆವೃತ್ತಿ ಶಬ್ದವುಸ್ತ್ರೀಲಿಂಗ.ಬಹುವಚನಾಂತ ಇತರರು ಯೌವನವನ್ನುಅನೇಕ ಸ್ತ್ರೀಗಳೊಡನೆ ಕಳೆಯುತ್ತಾರೆ.ತಾವು ತಮ್ಮ ಯೌವನವನ್ನು ಯತಿರಾಜಶ್ರೀಸೂಕ್ತಿಗಳನ್ನು ಆವೃತ್ತಿ ಮಾಡಿ ಕಳೆದುದಾಗಿ ಭಾವ.ನಿರ್ಧೂತೇತರ ಪಾರತಂತ್ರ್ಯನಿರಯಾಃ - ಇತರರಿಗೆ ಪರತಂತ್ರನಾಗಿರುವುದೆಂಬ ನರಕಗಳು ಒದರಿತಳ್ಳಲ್ಪಟ್ಟ

**ಅಙ್ಗೀಕೃತ್ಯ ಸತಾಂಪ್ರಸತ್ತಿಂ ಮಸತಾಂ ಗರ್ವೋಽಪಿ ನಿರ್ವಾಪಿತಃ ।**
**ಶೇಷಾಯುಷ್ಯಪಿ ಶೇಷಿದಂಪತಿ ದಯಾ ದೀಕ್ಷಾಮುದೀಕ್ಷಾಮಹೇ ॥78॥**
**ಶೆಪ್ಪಚ್ಚೆವಿಕ್ಕಮುತೆನ್ನತ್ತಿಹಳ್ರುಮ್ ಶೀರ್ರುಙ್ಗಣತ್ತು ।**
**ತಪ್ಪತ್ತವರ್ಕ್ಕು ತಾಮೇ ಯುಹನ್ದು ತರು ನ್ತಹವಾಲ್ ॥**
**ಒಪ್ಪತ್ತ ನಾನ್ಮರೈಯುಳ್ಳಕ್ಕರುತ್ತಿ ಲುರೈತ್ತುರೈತ್ತ ।**
**ಮುಪ್ಪತ್ತಿರಣ್ಡಿವೈ ಮುತ್ತಮಿಳ್ ಶೇರ್ನ್ದ ಮೊಳ್ತ್ತಿರುವೇ ॥50॥**

---

**ವಾಸರಾಃ ಸುಖಂನೀತಾಃ** - ಯೌವನ ಕಾಲದಲ್ಲಿ ದಿವಸಗಳು ಸುಖವಾಗಿ ಕಳೆಯಲ್ಪಟ್ಟವು. **ಸತಾಂ**- ಸತ್ಪುರುಷರ **ಪ್ರಸತ್ತಿಂ** -

ಪ್ರತಿಷ್ಠಾಪಿತವೇದಾಂತಃ ಪ್ರತಿಕ್ಷಿಪ್ತ ಬಹಿರ್ಮತಃ ।
ಭೂಯಾಸ್ತ್ರೈವಿದ್ಯಮಾನ್ಯಸ್ತ್ವಂ ಭೂರಿಕಲ್ಯಾಣಭಾಜನಮ್ ॥

ಎಂಬ ಅನುಗ್ರಹವನ್ನು, **ಅಂಗೀಕೃತ್ಯ** - ಅಂಗೀಕರಿಸಿ, **ಅಸತಾಂ ಗರ್ವೋಽಪಿ ನಿರ್ವಾಪಿತಃ** - ಅಸತ್ಪುರುಷರ ಗರ್ವವೂ ಹೋಗಲಾಡಿಸಲ್ಪಟ್ಟಿತು. **ಶೇಷಾಯುಷ್ಯಪಿ** – ವಾರ್ಧಕ್ಯಾವಸ್ಥೆಯಲ್ಲಿಯ ಬಾಕಿ ಆಯುಸ್ಸಿನಲ್ಲಿಯೂ, **ಶೇಷಿದಂಪತಿ** – ಸ್ವಾಮಿಗಳಾದ ಲಕ್ಷ್ಮೀನಾರಾಯಣರೆಂಬ ದಂಪತಿಗಳ, **ದಯಾದೀಕ್ಷಾಂ** – ಅಂತಿಮ ಸ್ಮೃತಿ ಪ್ರಭೃತಿ ಪರ್ಯಂಕಾಧಿರೋಹಣ ಪೂರ್ವಕ ಗುಣಾಷ್ಟಕಾವಿರ್ಭಾವ ಪರ್ಯಂತವಾದ ಫಲಪರಂಪರಾಪ್ರಾಪಕೆಯಾದ ದಯೆಯಿಂದ ಉಂಟಾದ 'ಮೋಕ್ಷಯಿಷ್ಯಾಮಿ' ಎಂಬ ಸಂಕಲ್ಪ ವಿಶೇಷವನ್ನು, **ಉದೀಕ್ಷಾಮಹೇ** - "ಕದಾಹಂ ಭಗವಂತಂ ಸಾಕ್ಷಾತ್ಕರವಾಣಿ, ಕದಾಮಾಂ ಭಗವಾನ್ ಸ್ವಪರಿಚರ್ಯಾಯಾಮಾಜ್ಞಾಪಯಿಷ್ಯತಿ" ಎಂದು ಯಾವಾಗ ಭಗವಂತನು ತನ್ನ ಕೈಂಕರ್ಯದಲ್ಲಿ ನನ್ನನ್ನು ನಿಯೋಗಿಸುತ್ತಾನೆ ಎಂದು ಪ್ರತೀಕ್ಷಿಸಿ ಕೊಂಡಿದ್ದೇನೆಂದು ಆಚಾರ್ಯ ಸಾರ್ವಭೌಮರು ಅನುಸಂಧಾನ ಮಾಡುತ್ತಾರೆ.

ಅನಂತರ ನಿಗಮನಾಧಿಕಾರಾರ್ಥವನ್ನು **'ಶೆಪ್ಪಚ್ಚೆವಿಕ್ಕಮುದೆನ್ನ'** ಎಂಬ ಪಾಶುರದಿಂದ ಸಂಗ್ರಹಿಸುತ್ತಾರೆ. **ಶೆಪ್ಪ** – ಗಾನದಿಂದ ಹಾಡಲು, **ಶೆವಿಕ್ಕಮುದೆನ್ನ** – ಶ್ರೋತೃ ಪುರುಷರ ಕಿವಿಗಳಿಗೆ **ಅಮುದೆನ್ನ** – ಅಮೃತವೆಂದು ಹೇಳಬಹುದಾದ ರೀತಿಯಲ್ಲಿ, **ತಿಹಳುಮ್** – ಪ್ರಕಾಶಿಸುವ, **ಶೀರ್ರುಮ್‌ಗುಣತ್ತು** – ಶ್ಲಾಘ್ಯವಾದ ಶಮದ ಮಾಹಾತ್ಮ್ಯ ಗುಣಗಳಲ್ಲಿ, **ತಪ್ಪು ಅಟ್ರವರ್ಕ್ಕು** – ಅವಗುಣ ಲೇಶವೂ ಇಲ್ಲದ ಸಚ್ಛಿಷ್ಯರುಗಳಿಗೆ, **ಉಹಂದು**– **ಸಂತೋಷ ಪಟ್ಟು**, **ತಹವಾಲ್** – ಕೃಪೆಯಿಂದ, **ತಾಮೇತರುಮ್** – ತಾವೇ ಕೊಡಬಲ್ಲ, ಉಪದೇಶ ಮಾಡ **ತಕ್ಕ** ಎಂದರ್ಥ, **ಒಪ್ಪಟ್ರ** - ತಮಗೆ ಸದೃಶವಿಲ್ಲದ **ನಾನ್ಮರೈ** - ನಾಲ್ಕು ವೇದಗಳ, **ಉಳ್ಳಕ್ಕರುತ್ತಿಲ್** - ಗೂಢ ವಾದ ಪರಮ ತಾತ್ಪರ್ಯದಲ್ಲಿ, **ಉರೈತ್ತು** - ಚಿನ್ನವನ್ನು ಒರೆಗಲ್ಲಿನಲ್ಲಿ ಉಜ್ಜುವಂತೆ, ನನ್ನ ಬುದ್ಧಿಯನ್ನು ಉಜ್ಜಿ, **ಅಂದರೆ** ವೇದಗಳ ಪರಮತಾತ್ಪರ್ಯವನ್ನು ಪುನಃ ಪುನಃ ಪರಿಚಯ ಮಾಡಿ, **ಉರೈತ್ತ** - ಸಾವಧಾನವಾಗಿ ಹೇಳಲ್ಪಟ್ಟ, **ಮುಪ್ಪತ್ತಿರಂಡಿವೈ** ಮೂವತ್ತೆರಡು ಅಧಿಕಾರಗಳ ಸಂಗ್ರಹಗಳಾದ **ಈ** ಪಾಶುರಗಳು, **ಮುತ್ತಮಿಳ್‌ಶೇರ್ನ್ದ** – ವಕ್ತೃ, ವಚನ, ವಿಷಯ ವೈಲಕ್ಷಣ್ಯ ರೂಪಗಳಾದ ಮೂರು ಗುಣಗಳನ್ನುಳ್ಳ ತಮಿಳು ಭಾಷೆಯಿಂದ ಕೂಡಿದ, **ಮೊಳ್** – ಶ್ಲಾಘ್ಯ ವಚನ ರೂಪವಾದ ಈ ಪ್ರಬಂಧಕ್ಕೆ, **ತಿರುವೇ** – ಸಂಪತ್ತು, ಅತ್ಯಂತ ಶೋಭಾವಹಗಳಾದವು.

ಶ್ರೀಮದ್ರಹಸ್ಯತ್ರಯಸಾರವೆಂಬ ಈ ದಿವ್ಯಗ್ರಂಥಕ್ಕೆ ಈ ಮೂವತ್ತೆರಡು ಪಾಶುರಗಳೂ ಶೋಭೆಯನ್ನುಂಟು ಮಾಡುತ್ತವೆಯೆಂದು ತಾತ್ಪರ್ಯ.

**ಆಸ್ತಿಕ್ಯವಾನ್ನಿಶಿತ ಬುದ್ಧಿ ರನಭ್ಯಸೂಯುಃ**
**ಸತ್ಸಂಪ್ರದಾಯ ಪರಿಶುದ್ಧಮನಾ ಸ್ಸದರ್ಥೀ ।**
**ಸಂಕೇತ ಭೀತಿರಹಿತ ಸ್ಸತೃಣೇಷ್ವಸಕ್ತಃ**
**ಸ್ಸದ್ವರ್ತನೀ ಮನುವಿಧಾಸ್ಯತಿ ಶಾಶ್ವತೀಂ ನಃ ॥79॥**
**ಮಱೈಯುಱೈಕ್ಕುಮ್ಪೊರುಳೆಲ್ಲಾಮ್ ಮೆಯ್ಯೆನ್ಱೋರ್ವಾರ್**
**ಮನ್ನಿಯ ಕೂರ್ಮದಿಯುಡೈಯಾರ್ವಣ್ ಗುಣತ್ತಿಲ್ ।**

---

ಅನಂತರ, ಹೀಗೆ ಪರಮರಹಸ್ಯಾರ್ಥ ಬೋಧಕವಾದ ಈ ಗ್ರಂಥವನ್ನು ಓದಿ, ಇದರಲ್ಲಿ ಹೇಳಿರುವ ಸನ್ಮಾರ್ಗವನ್ನವಲಂಬಿಸುವವರು ಯಾರಾದರೂ ಇರುತ್ತಾರೆಯೋ, ನಿಮ್ಮಶ್ರಮವೂ ಸಫಲವಾಗುತ್ತದೆಯೋ ಎಂಬ ಆಕಾಂಕ್ಷೆಯನ್ನು **ಆಸ್ತಿಕ್ಯವಾನ್ ನಿಶಿತಬುದ್ಧಿಃ** ಎಂದಾರಂಭಿಸಿ ಹೋಗಲಾಡಿಸುತ್ತಾರೆ.

**ಆಸ್ತಿಕ್ಯವಾನ್**-ವೇದೋಕ್ತಗಳಾದ ಎಲ್ಲಾ ಅರ್ಥಗಳನ್ನೂ ಪರಮಾರ್ಥವಾಗಿ ತಿಳಿಯುವ ಆಸ್ತಿಕತೆಯುಳ್ಳವನೂ, **ನಿಶಿತಬುದ್ಧಿಃ** - ನವನವೋನ್ಮೇಷಶಾಲಿಯಾದ ಪ್ರತಿಭೆಯನ್ನೂ, ಬುದ್ಧಿಯನ್ನೂ ಉಳ್ಳವನೂ, **ಅನಭ್ಯಸೂಯುಃ**- ಸದ್ಗುಣದಲ್ಲಿ ದೋಷಾರೋಪಣೆ ಮಾಡದವನೂ, **ಸತ್ಸಂಪ್ರದಾಯ ಪರಿಶುದ್ಧಮನಾಃ** - ಆಚಾರ್ಯೋಪದಿಷ್ಟವಾದ ಸಂಪ್ರದಾಯ ಶ್ರವಣದಿಂದ ರಜಸ್ತಮಸ್ಸುಗಳನ್ನು ಬಿಟ್ಟು ಪರಿಶುದ್ಧವಾದ ಮನಸ್ಸನ್ನುಳ್ಳವನೂ, **ಸದರ್ಥೀ**- ಸದರ್ಥಗಳನ್ನೇ ಗ್ರಹಿಸುವವನೂ, **ಸಂಕೇತ ಭೀತಿರಹಿತಃ** - ಸದರ್ಥಗಳು ಸಮೀಚೀನಗಳೆಂದು **ತೋರಿದರೂ,** ಪಾಮರರ ತಪ್ಪು ಸಂಕೇತಾರ್ಥಗಳಿಗೆ ಭಯಪಡದವನೂ, **ಸತೃಣೇಷ್ವಸಕ್ತಃ** - ತೃಣಪ್ರಾಯಗಳಾದ ಅಸನ್ಮಾರ್ಗದಲ್ಲಿ ಆಸಕ್ತಿಯಿಲ್ಲದವನೂ, **ಶಾಶ್ವತೀಂ** - ಶಾಶ್ವತವಾದ **ನಃಸದ್ವರ್ತನೀಂ** - ನಮ್ಮ ಈ ಗ್ರಂಥದಲ್ಲಿ ಹೇಳಿರುವ ಸನ್ಮಾರ್ಗವನ್ನು, **ಅನುವಿಧ್ಯಾಸ್ಯತಿ** - ಅನುಸರಿಸಿ ಹೋಗುತ್ತಾನೆ.

ಮೇಲೆ ಹೇಳಿದ ಸಂಸ್ಕೃತ ಶ್ಲೋಕದ ಅರ್ಥವನ್ನು ಇತರರೂ ತಿಳಿದು ಕೊಳ್ಳುವಂತೆ ತಮಿಳು ಭಾಷೆಯಲ್ಲಿ **"ಮಱೈಯುಱೈಕ್ಕುಂ ಪೊರುಳೆಲ್ಲಾಂ",** ಎಂದಾರಂಭಿಸಿ ಅನುಗ್ರಹಿಸುತ್ತಾರೆ. **ಮಱೈಯುಱೈಕ್ಕುಂ** - ವೇದಗಳು ಹೇಳುವ **ಪೊರುಳೆಲ್ಲಾಂ** - ಅರ್ಥಗಳೆಲ್ಲಾ **ಮೆಯ್ಯೆನ್ಱೋರ್ವಾರ್** - ಸತ್ಯವೆಂದು ಅಂಗೀಕರಿಸುವವರು. ಇಂಥಹ ಆಸ್ತಿಕರು ದುರ್ಲಭರೆಂದು ತಿಳಿಸಿ ಆಸ್ತಿಕ್ಯವಾನ್ ಎಂದು ಏಕವಚನ ಪ್ರಯೋಗ. ಇಲ್ಲಿ ಸುಕೃತವಶದಿಂದ ಇಂಥಹ ಆಸ್ತಿಕರು ಅನೇಕರು ಲಭಿಸಬಹುದೆಂದು, **ಓರ್ವಾರ್** - ಅಂಗೀಕರಿಸುವವರು ಎಂದು **ಬಹುವಚನ. ಎಲ್ಲಾಂ** ಎಂಬ ಪದವು ವೇದಗಳು **ಕರ್ಮಕಾಂಡ** ಜ್ಞಾನಕಾಂಡ ಎಂದು ಎರಡು ಭಾಗಗಳಿಂದ **ಕೂಡಿವೆ** ಯೆಂಬುದನ್ನು ತಿಳಿಸುತ್ತದೆ. ಇವುಗಳಲ್ಲಿ ಕರ್ಮಕಾಂಡದಲ್ಲಿ ಹೇಳಿರುವ ಅರ್ಥಗಳೇ ಸತ್ಯಗಳು, ಬ್ರಹ್ಮಕಾಂಡದಲ್ಲಿ ಹೇಳಿರುವ ಬ್ರಹ್ಮವು ಕರ್ಮಕಾಂಡದಲ್ಲಿ ಹೇಳಿರುವ ಕರ್ತಾವಿಗಿಂತ ಬೇರೆಯಲ್ಲ. ಹಾಗೆ ಕರ್ತಾವಾದ ಜೀವನಿಗಿಂತ ಬೇರೆಯಾದ ಬ್ರಹ್ಮವೆಂಬ ವಸ್ತುವೇ ಇಲ್ಲ, ಎಂಬುದು ಕಬಂಧ ಮೀಮಾಂಸಕನ ಮತ. ಇವನನ್ನು ನಿರೀಶ್ವರ ಮೀಮಾಂಸಕನೆಂದೂ ವ್ಯವಹರಿಸುತ್ತಾರೆ. ಇವನು ವೇದಾಂತ ರೂಪವಾದ ಅಂದರೆ ಉಪನಿಷದ್ರೂಪವಾದ ವೇದದಲ್ಲಿ ಹೇಳುವ ಬ್ರಹ್ಮವನ್ನು ಸತ್ಯವೆಂದು ಅಂಗೀಕರಿಸದೆ ಇರುವುದರಿಂದ ಇವನು ಆಸ್ತಿಕನಲ್ಲ. ಹಾಗೆಯೇ ನಿರ್ವಿಶೇಷ ಬ್ರಹ್ಮವೇ ಸತ್ಯ. ಕರ್ಮ, ಕರ್ತೃ, ಕ್ರಿಯಾಭೇದ ಬೋಧಕವಾದ ವೇದಭಾಗವು ಅಪಚ್ಛೇದ ನ್ಯಾಯದಿಂದ ಬಾಧ್ಯವೆಂದೂ, ಅದರಲ್ಲಿ ಹೇಳುವದೆಲ್ಲಾ ಅಸತ್ಯವೆಂದೂ ಹೇಳುವ ರಾಹು ಮೀಮಾಂಸಕನೆಂಬ ಅದ್ವೈತಿಯೂ ಆಸ್ತಿಕನಲ್ಲವೆಂದು **'ಎಲ್ಲಾಂ'** ಎಂಬ ಪದದಿಂದ ಜ್ಞಾಪಿಸಲ್ಪಟ್ಟಿತು. ಕರ್ಮ ಬ್ರಹ್ಮಕಾಂಡಗಳೆರಡೂ ಸತ್ಯಗಳೆಂದು ತಾತ್ಪರ್ಯ. **ಮನ್ನಿಯ**-ದೃಢವಾದ **ಕೂರ್**-ನವನವೋನ್ಮೇಷಶಾಲಿಯಾದ **ಮದಿಯುಡೈಯಾರ್**- ಬುದ್ಧಿಯುಳ್ಳವರು ಇದು ನಿಶಿತಬುದ್ಧಿಃ ಎಂಬುದರ ಅರ್ಥ), **ವಣ್**-ಶ್ಲಾಘ್ಯವಾದ, **ಗುಣತ್ತಿಲ್**-ಇತರರ ಗುಣದಲ್ಲಿ

**ಕುರ್ರೈಯುರ್ರೈಕ್ಕ ನಿನ್ನೈ ವಿಲ್ಲಾ ಕ್ಕುರುಕ್ಕಳ್‌ತಮ್ಬಾಲ್**
**ಕೋದತ್ತ ಮನಪ್ಪೆತ್ತಾರ್ ಕೊಳ್‌ವಾರ್ ನನ್ಮೈ ।**
**ಶಿರ್ರೈವಳರ್ಕ್ಕುಂ ಶಿಲಮಾನ್ದರ್ ಶಙ್ಕೇತತ್ತಾಲ್**
**ಶಿದೈಯಾದ ತಿಣ್ಮತಿಯೋರ್ ತೆರಿನ್ದದೋರಾರ್**
**ಪೊರ್ರೈನಿಲತ್ತಿನ್ ಮಿಹುಪುನಿದರ್ ಕಾಟ್ಟುಂ ಎಙ್ಗಳ್**
**ಪೊನ್ನಾದ ನನ್ನೆರಿಯಿಲ್ ಪುಹುದುವಾರೇ ॥52॥**

**ಇದುವಳ್ಳಿಯಿನ್ನ ಮುದೆನ್ರವರಿನ್‌ಪುಲನ್ ವೇರಿಡುವಾರ್ ।**
**ಇದುವಳ್ಳಿ ಯೂಮಲವೆನ್‌ರರಿವಾರೆಙ್ಗಳ್ ದೇಶಿಕರೇ ।**
**ಇದುವಳ್ಳಿ ಯೆಯ್‌ದುಹವೆನ್ರುಹಪ್ಪಾಲೆನ್ ಪಿಳ್ಳೈ ಪೊರುಪ್ಪಾರ್ ।**
**ಇದುವಳ್ಳಿ ಯೂಮರ್ರೈಯೋರರುಳಾಲ್ ಯೂಮಿಶೈನ್ದನಮೇ ॥53॥**

---

**ಕುರ್ರೈ**-ದೋಷವನ್ನು, **ಉರ್ರೈಕ್ಕ**-ಆರೋಪಿಸಿ ಹೇಳಲು **ನಿನ್ನೈವಿಲ್ಲಾರ್**-ಅಭಿಪ್ರಾಯವಿಲ್ಲದವರು(ಅನಭ್ಯಸೂಯುಃ ಎಂಬುದರ ಅರ್ಥ)ಗುಣದಲ್ಲಿ ದೋಷಾರೋಪಣೆ ಮಾಡುವುದು ಅಸೂಯೆ. ಅದಿಲ್ಲದವರು ಎಂದು ತಾತ್ಪರ್ಯ. **ಗುರುಕ್ಕಳ್ ತಂಬಾಲ್** – ಆಚಾರ್ಯರುಗಳಲ್ಲಿ **ಕೋದಟ್ರ ಮನಂ ಪೆಟ್ರಾರ್**-ರಜಸ್ತಮೋ ರೂಪ ದೋಷಗಳಿಂದ ಕೂಡಿಲ್ಲದ ಮನಸ್ಸುಳ್ಳವರು (ಸತ್ಸಂ ಪ್ರದಾಯ ಪರಿಶುದ್ಧಮನಾಃ ಎಂಬುದರ ಅರ್ಥ), **ನನ್ಮೈ** - ಒಳ್ಳೆಯದನ್ನೇ **ಕೊಳ್ವಾರ್** – ಯಾಚಿಸಿ ಹೊಂದುವವರು (ಸದರ್ಥೀ), **ಶಿರ್ರೈವಳರುಕ್ಕುನ್** - ಸಂಸಾರವೆಂಬ ಕಾರಾಗೃಹವನ್ನು ಬೆಳೆಸುವ **ಶಿಲಮಾಂದರ್**-ಮಂದ ಬುದ್ಧಿಯುಳ್ಳವರ, **ಶಂಕೇತತ್ತಾಲ್** - ತಮ್ಮ ಸಂಪ್ರದಾಯವು ತಪ್ಪಾಗಿದ್ದರೂ ಅದನ್ನು ಬಿಡಕೂಡದೆಂಬ ಸಂಕೇತದಿಂದ, **ಶಿದೈಯಾದ** - ಚಲಿಸದ, **ತಿಣ್‌ಮದಿಯೋರ್** - ದೃಢವಾದ ನಿಶ್ಚಯವುಳ್ಳವರು (ಸಂಕೇತ ಭೀತಿರಹಿತಃ), **ತೆರಿಂದು ಅದುಓರಾರ್** - ಕ್ಷುದ್ರವೆಂದು ತಿಳಿದು ಅಲ್ಪಪುರುಷಾರ್ಥ ಗಳಿಗೆ ಆಸೆಪಡದವರು, (ಸತ್ಯಣೇಷ್ವಸಕ್ತಃ), **ಪೊರ್ರೈನಿಲತ್ತಿಲ್** - ಕ್ಷಮೆಯೆಂಬ ಸೀಮಾಭೂಮಿಯಲ್ಲಿ, **ಮಿಹು ಪುನಿದರ್** - ಬಹಳ ಪರಿಶುದ್ಧರಾದ, ನಮ್ಮ ಸಂಪ್ರದಾಯಾಚಾರ್ಯರುಗಳು, **ಕಾಟ್ಟುಮ್** - ತೋರಿಸುವ **ಎಂಗಳ್ ಪೊನ್ನಾದ ನನ್ನೆರಿಯಿಲ್** – ನಮ್ಮ ನಶಿಸದ ಸನ್ಮಾರ್ಗದಲ್ಲಿ **ಪುಹುದುವಾರೇ** - ಪ್ರವೇಶಿಸುತ್ತಾರೆ. ಆಸ್ತಿಕರು, ಈ ರಹಸ್ಯತ್ರಯಸಾರದಲ್ಲಿ ಹೇಳಲ್ಪಟ್ಟ ಸಂಪ್ರದಾಯಾಗತವಾದ ನಮ್ಮ ಸನ್ಮಾರ್ಗವನ್ನೇ ಆಶ್ರಯಿಸಿ ಅದನ್ನೇ ಅವಶ್ಯ ಅನುಷ್ಠಿಸುತ್ತಾರೆಂದರ್ಥ.

ಈ ಸನ್ಮಾರ್ಗವೇ ಘಂಟಾಪಥ ರಾಜಮಾರ್ಗವೆಂದು ಸಂತೋಷದಿಂದ **ಇದುವಳ್ಳಿ ಇನ್ನಮುದೆನ್ರವರ್** ಎಂದು ಹೊಗಳುತ್ತಾರೆ.

**ಇದುವಳ್ಳಿಯಾಮ್** - ಈ ಪ್ರಬಂಧದಲ್ಲಿ ಹೇಳಿದ ಭಕ್ತಿಪ್ರಪತ್ತಿ ಮಾರ್ಗಗಳೇ ಮೋಕ್ಷಕ್ಕೆ ಉಪಾಯಗಳು, **ಅಲ** - ಕೇವಲ ವಾಕ್ಯಜನ್ಯ ಜ್ಞಾನವೋ, ತತ್ತುಲ್ಯವಾದ ಸಿದ್ಧೋಪಾಯ ಪ್ರತಿಪತ್ತಿ ಮಾತ್ರವೋ ಮೋಕ್ಷೋ ಪಾಯವಲ್ಲ. **ಎನ್ರರಿವಾರ್** - ಎಂದು ದೃಢವಾಗಿ ತಿಳಿದ **ಎಂಗಳ್‌ದೇಶಿಕರೇ** – ನಮ್ಮ ಆಚಾರ್ಯರುಗಳಾದ ನಾಥಯಾಮುನ ಯತಿವರಾದಿಗಳು, **ಇದುವಳ್ಳಿ** – ಈ ಗ್ರಂಥದಲ್ಲಿ ಹೇಳಿರುವ ಮಾರ್ಗವೇ, **ಇನ್ನಮುದು** – ಪರಮಾನಂದವಾದ **ಮೋಕ್ಷವನ್ನು ಕೊಡತಕ್ಕದ್ದು**, **ಎನ್ರವರ್** ಎಂದು ಉಪದೇಶ ಮಾಡಿದವರು, **ಇನ್‌ಪುಲನ್**– ಅಲ್ಪಸುಖಪ್ರದಗಳಾದ ಇಂದ್ರಿಯಾರ್ಥ ಭೋಗಗಳನ್ನು, **ವೇರಿಡುವಾರ್** – ಪರಿತ್ಯಾಜ್ಯತಯಾ ಬೇರೆ ಮಾಡಿದರು. **ಇದುವಳ್ಳಿ** - ಈ ಪ್ರಬಂಧೋಕ್ತ ಮಾರ್ಗವೇ, **ಎಯ್‌ದುಹವೆನ್ರುಹಪ್ಪಾಲ್** – ಮೇಲು ಮೇಲೆ ಅಭಿವೃದ್ಧವಾಗ ಬೇಕೆಂದು ಮನಸ್ಸಿನಲ್ಲಿ ಸಂತೋಷದಿಂದ **ಎನ್‌ಪಿಳ್ಳೈ ಪೊರುಪ್ಪಾರ್** - ನಮ್ಮ ಪಾಪಗಳನ್ನು ಕ್ಷಮಿಸುವವರು

ಎಟ್ಟುಮಿರಣ್ಡು ಮರಿಯಾದ ವೆಮ್ಮೈಯಿವೈ ಯರಿವಿತ್ತು ।
ಎಟ್ಟ ವೊಣ್ಣಾದ ವಿಡಮ್ ತರುಮೆಙ್ಗಳಮ್ಮಾದವನಾರ್ ।
ಮುಟ್ಟವಿನೈತ್ತಿರಳ್ ಮಾಳಮುಯನ್ರಿಡು ಮಞ್ಜಲೆನ್ರಾರ್ ।
ಕಟ್ಟುೞಲ್ ವಾಚಕತ್ತಾಲ್ ಕಲಙ್ಗ ನಿಲೈಪೆತ್ರನಮೇ ॥54॥

ವಾನುಳಮರನ್ದವರ್ಕ್ಕುಮ್ ವರನ್ದವರು ಮಿನ್ನಿಲೈಹಳ್ ।
ತಾನುಳನಾಯುಹಕ್ಕುಂ ತರಮಿಙ್ಗ ನಮಕ್ಕುಳದೇ ।

---

**ಮಱೈಯೋರರುಳಾಲ್** - ವೇದಾಂತಿಗಳಾದ ನಮ್ಮ ಆಚಾರ್ಯರ ಕೃಪೆಯಿಂದ **ಇದುವೞಿಆಮ್**- ಇದೇ ಸನ್ಮಾರ್ಗವೆಂದು, **ಯಾಮ್** – ಆಚಾರ್ಯ ಕೃಪಾಪಾತ್ರರಾದ ನಾವು **ಇಶೈಂದನಮೇ** – ಅಂಗೀಕರಿಸಿದೆವು. ಆಚಾರ್ಯರುಗಳ ಕೃಪೆಯಿಂದ ಈ ಗ್ರಂಥದಲ್ಲಿ ಉಪದೇಶಿಸಲ್ಪಟ್ಟ ಭಕ್ತಿಪ್ರಪತ್ತಿರೂಪ ಮಾರ್ಗವೇ ಸನ್ಮಾರ್ಗವೆಂದು ನಾವು ಅಂಗೀಕರಿಸಿದೆವು.

ಈ ಗ್ರಂಥೋಕ್ತವಾದ ಸನ್ಮಾರ್ಗದಲ್ಲಿ ಯಾವು ವಿಧವಾದ ಸಂಶಯವೂ ಇಲ್ಲವೆನ್ನುತ್ತಾರೆ. **ಎಟ್ಟು ಮಿರಂಡುಮ್ ಅರಿಯಾದವೆಮ್ಮೈ** - ಎಟ್ಟುಮ್ ಅಷ್ಟಾಕ್ಷರವನ್ನೂ ಇರಂಡುಮ್ - ದ್ವಯಮಂತ್ರವನ್ನೂ, ಅಥವಾ ದ್ವಯ ಮತ್ತು ಚರಮಶ್ಲೋಕಗಳನ್ನು ತಿಳಿಯದ ನಮಗೆ **ಇವೈಯರಿವಿತ್ತು** - ಇವುಗಳನ್ನು ಅನುಷ್ಠಾನ ಪರ್ಯಂತವಾಗಿ ತಿಳಿಸಿ, **ಎಟ್ಟವೊಣ್ಣಾದ ವಿಡಂತರುಮ್** - ದ್ವಯಾರ್ಥಾನುಷ್ಠಾನ ರಹಿತರಿಗೆ ಅಂದರೆ ಪ್ರಪತ್ತ್ಯನುಷ್ಠಾನರಹಿತರಿಗೆ ಎಟುಕಿಸದ ಪರಮಪದವನ್ನು ಕೊಡುವ, **ಎಂಗಳ್ಮಾದವನಾರ್** – ಪ್ರಪತ್ತಿ ವಶೀಕೃತನಾದ ನಮ್ಮ ಲಕ್ಷ್ಮೀಪತಿಯು, **ಮುಟ್ಟವಿನೈತ್ತಿರಳ್ ಮಾಳ** – ನಿಬಿಡಗಳಾದ ಪಾಪಗಳ ಸಮೂಹವು ನಶಿಸುವಂತೆ, **ಮುಯನ್ರಿಡುಮ್** – ಪ್ರಯತ್ನವನ್ನು ಮಾಡುವಂತೆ ಅಂದರೆ, ಶರಣವರಣವನ್ನು ಮಾಡುವಂತೆ ನಮ್ಮನ್ನು ಪ್ರೇರೇಪಿಸಿ, **ಅಂಜಲೆನ್ರಾರ್** – ನೀನು ಯಾವುದಕ್ಕೂ ಭಯಪಡಬೇಡವೆಂದು ಹೇಳಿದ, ಮಾಶುಚಃ ಎಂದು ಹೇಳಿದ ಭಗವಂತನ **ಕಟ್ಟುೞಲ್ ವಾಚಕತ್ತಾಲ್** – ಸರ್ವತಃ ಶೋಭನವಾದ ಮಾತಿನಿಂದ, **ಕಲಂಗಾನಿಲೈ ಪೆಟ್ರನಮೇ** – ಸಂಶಯವಿಲ್ಲದ ಅರ್ಥನಿಶ್ಚಯ ಸ್ಥಿತಿಯನ್ನು ಹೊಂದಿದೆವು.

ಹೀಗೆ ಅಷ್ಟಾಕ್ಷರ ದ್ವಯ ಚರಮಶ್ಲೋಕಗಳ ಅರ್ಥವನ್ನು ನಮಗೆ ತಿಳಿಸಿ ಅವುಗಳಲ್ಲಿ ಹೇಳಿದ ಪ್ರಕಾರ ಶರಣಾಗತಿಯನ್ನು ಅನುಷ್ಠಿಸುವಂತೆ ಮಾಡಿಸಿದ, ನಮ್ಮ ಲಕ್ಷ್ಮೀಪತಿಯು 'ಮಾಶುಚಃ' ಎಂಬ ವಾಕ್ಯದಿಂದ, ಸಕಲ ವಿಧವಾದ ಸಂಶಯಗಳು ನಿರಸ್ತಗಳಾಗಿ, ಮೋಕ್ಷವು ಅವಶ್ಯ ಲಭಿಸುತ್ತದೆಂಬ ನಿಸ್ಸಂಶಯದಿಂದ ಕೂಡಿದವರಾದೆವು.

ಅನಂತರ **ವಾನುಳಮರ್ನ್ದವರ್ಕ್ಕುಮ್** ಎಂದಾರಂಭಿಸಿ ನಿತ್ಯಸೂರಿಗಳಿಗೂ, ದೇವತೆಗಳಿಗೂ ಶ್ರಮಪಟ್ಟು ಲಭಿಸತಕ್ಕ ಈ ಪರಮೈಕಾಂತಿ ಧರ್ಮವನ್ನು ನಾವು ಹೊಂದಿದೆವು ಇದನ್ನು ಕುತ್ಸಿತ ಬುದ್ಧಿಗಳು – (ಕುದೃಷ್ಟಿಗಳು) ಅಸೂಯೆಯಿಂದ ನಿಂದಿಸಿದರೂ ಬಾಧಕವಿಲ್ಲ. ಲಕ್ಷ್ಮೀಪತಿಗೆ ಈ ಪ್ರಬಂಧವು ಪರಮ ಭೋಗ್ಯವೆಂದು ಅನುಗ್ರಹಿಸುತ್ತಾರೆ. **ವಾನುಳಮರ್ನ್ದವರ್ಕ್ಕುಮ್** – ವಾನ್ – ಪರಮಾಕಾಶದಲ್ಲಿ ಇರುವ ಅಂದರೆ ಪರಮಪದವಾಸಿಗಳಾದ ನಿತ್ಯಸೂರಿಗಳಿಗೂ, ದೇವತೆಗಳಿಗೂ **ವರುಂಡವರುಮ್**–ಅತಿ ಪ್ರಯಾಸದಿಂದ ಲಭಿಸುವ **ಇನ್ನಿಲೈಹಳ್** ಈ ಪ್ರಬಂಧೋಕ್ತಗಳಾದ ಪರಮೈಕಾಂತಿಧರ್ಮಗಳು, **ತಾನುಳನಾಯ್ ಉಹಕ್ಕುಮ್** – ನಮಗೆ ಇರುವುದಾಗಿ ಸಂತೋಷ ಪಡುವ **ತರಮ್** – ಉತ್ಕೃಷ್ಟತೆಯು, **ಇಂಗು ನಮಕ್ಕುಳದೇ**–ಈ ಸಂಸಾರದಲ್ಲಿ ನಮಗೆ ಲಭಿಸಿದೆ.

**ಕೂಸುಳನೆಞ್ಜುಹಳಾಲ್ ಕುತ್ತಮೆಣ್ಣಿಯಿಹಳ್ನ್ದಿಡಿನುಮ್**
**ತೇನುಳಪಾದಮುಲರ್ ತಿರುಮಾಲುಕ್ಕುತ್ತಿತ್ತಿಕ್ಕುಮೇ ||55||**
**ವೆಳ್ಳೈಪ್ಪರಿಮುಹರ್ ದೇಶಿಕರಾಯ್ ವಿರಹಾಲಡಿಯೋಮ್**
**ಉಳ್ಳತ್ತೆಳ್ದಿಯದೋಲೈಯಿಲಿಟ್ಟನಮ್ ಯಾಮಿದರ್ ಕೆನ್ |**
**ಕೊಳ್ಳತ್ತುಣಿಯಿನುಮ್ ಕೋದೆನ್ರಿಹಳ್ನುಮ್ ಕೂರ್ ಮದಿಯೀರ್ |**
**ಎಳ್ಳತ್ತನೈಯುಮುಹವಾದಿಹಳ್ಳಾದೆನ್ನೆಳ್ಲ್ ಮದಿಯೇ ||56||**
**ರಹಸ್ಯತ್ರಯ ಸಾರೋಽಯಂ ವೆಙ್ಕಟೇಶ ವಿಪಶ್ಚಿತಾ |**
**ಶರಣ್ಯದಂಪತಿವಿದಾಂ ಸಮ್ಮತಃ ಸಮಗ್ರಹೃತ ||80||**

---

**ಕೂಸುಳನೆಜುಂಹಳಾಲ್** – ಅಸೂಯೆಯಿಂದ ಕೂಡಿ, ವಕ್ರಬುದ್ಧಿಯುಳ್ಳವರಿಂದ, **ಕುಟ್ರಮೆಣ್ಣಿ ಇಹಂಳ್ದಿಡಿನುಮ್** – ಇದು ದೋಷದಿಂದ ಕೂಡಿದ ಗ್ರಂಥವೆಂದು ತಿರಸ್ಕರಿಸಲ್ಪಟ್ಟರೂ, **ತೇನುಳಪಾದ ಮಲರ್** –ಮಧುಸ್ಯಂದಿನಿಯಾದ ಪಾದ ಪದ್ಮಗಳನ್ನುಳ್ಳ, **ತಿರುಮಾಲುಕ್ಕು** – ಲಕ್ಷ್ಮೀಪತಿಗೆ, **ತಿತ್ತಿಕ್ಕುಮೇ** – ಪರಮ ಭೋಗ್ಯವಾಗಿದೆ.

ಶ್ರೀಮನ್ನಿಗಮಾಂತ ಮಹಾದೇಶಿಕನ್‌ರವರ ಜೀವಿತ ದಶೆಯಲ್ಲಿ ಇವರ ಅನ್ಯಾದೃಶವಾದ ಪಾಂಡಿತ್ಯವನ್ನು ನೋಡಿ ಕೆಲವರು ಅಸೂಯೆಪಟ್ಟು, ಇವರ ಶ್ರೀಸೂಕ್ತಿಗಳನ್ನು ದೂಷಿಸುತ್ತಿದ್ದರು. ಅದರಿಂದ ತಮಗೆ ಯಾವ ಕೊರತೆಯೂ ಇಲ್ಲವೆಂದೂ, ಸರ್ವೇಶ್ವರನಾದ ಲಕ್ಷ್ಮೀಪತಿಯು ಈ ಗ್ರಂಥವನ್ನು ಪರಮ ಭೋಗ್ಯವಾಗಿ ಅಂಗೀಕರಿಸಿರುವುದಾಗಿಯೂ ತಿಳಿಸುತ್ತಾರೆ.

ಕೊನೆಯದಾಗಿ ತಮಗೆ ಆರಾಧ್ಯದೇವತೆಯಾದ ಶ್ರೀಲಕ್ಷ್ಮೀ ಹಯಗ್ರೀವನು ತಮ್ಮ ಮನಸ್ಸಿನಲ್ಲಿ ನೆಲೆಸಿ ಬರೆಸಿದಪ್ರಬಂಧವಿದು ಎಂದೂ ಅನುಸಂಧಾನ ಮಾಡುತ್ತಾರೆ. **ವೆಳ್ಳೈಪ್ಪರಿಮುಹರ್ ದೇಶಿಕರಾಯ್**–ಶ್ರೀ ಶ್ವೇತ ಹಯಗ್ರೀವನು, ತಮ್ಮ ಆಚಾರ್ಯರಾದ ವಾದಿಹಂಸಾಬುವಾಹ ರೂಪದಲ್ಲಿ ಅವತರಿಸಿ,**ವಿರಹಾಲ್**–ಆಚಾರ್ಯೋಪ ದೇಶವೆಂಬ ವ್ಯಾಜದಿಂದ, **ಅಡಿಯೋಮ್ ಉಳ್ಳತ್ತೆಳ್ದಿಯದು** – ದಾಸರಾದ ಶ್ರೀಮನ್ನಿಗಮಾಂತ ಮಹಾದೇಶಿಕರಾದ, ತಮ್ಮ ಮನಸ್ಸಿನಲ್ಲಿ ಬರೆದಿದ್ದನ್ನು, ಆಚಾರ್ಯೋಪದೇಶ ಪೂರ್ವಕವಾಗಿ ಹೇಳಿದ್ದನ್ನು ಎಂದರ್ಥ **ಯಾಮ್** – **ಓಲೆಯಿಲಿಟ್ಟನಮ್**– ನಾವು ತಾಳಪತ್ರದಲ್ಲಿ ಬರೆದಿದ್ದೇವೆ. **ಇದರ್ಕೆನ್** -ಈ ಗ್ರಂಥಕ್ಕೆ ಏನು ದೋಷವಿದೆ. ಭಗವತ್ಕರ್ತೃಕವಾದ ಈ ಗ್ರಂಥದಲ್ಲಿ ಯಾವ ದೋಷವೂ ಇಲ್ಲವೆಂದರ್ಥ. ಇಂಥಹ ಅಮೂಲ್ಯವಾದ ಗ್ರಂಥರತ್ನವನ್ನು **ಕೊಳ್ಳತ್ತುಣಿಯಿನುಮ್** – ಇದರ ಸಾರವನ್ನು ತಿಳಿದ ಬುದ್ಧಿವಂತರು ಅಂಗೀಕರಿಸಲು ನಿಶ್ಚಯಿಸಿದರೂ, **ಕೋದೆನ್ರಿಹಳ್ನುಮ್** – ಇದು ಕೋದು.-ಸಾರವಿಲ್ಲದುದು ಎಂದು ದೂಷಿಸಿ ತಿರಸ್ಕರಿಸಿದರೂ, **ಕೂರ್‌ಮದಿಯೀರ್**-ಸಾರಾಸಾರ ವಿವೇಕಚತುರರೇ, **ಎನ್ ಎಳ್ಲ್‌ಮದಿ** - ಭಗವಂತನೇ ಈ ಗ್ರಂಥವನ್ನು ಬರೆಸಿ ಅನುಗ್ರಹಿಸಿದನು ಎಂಬ ನನ್ನ ಶುದ್ಧವಾದ ಮನಸ್ಸು, **ಎಳ್ಳತ್ತನೈಯುಮುಹವಾದು** - ಸ್ವಲ್ಪವೂ ಹೆಮ್ಮೆಪಡುವುದಿಲ್ಲ, **ಇಹಳ್ಳಾದು**– ಸ್ವಲ್ಪವೂ ಕ್ಲೇಶಪಡುವುದಿಲ್ಲ. ಶ್ರೀಲಕ್ಷ್ಮೀ ಹಯಗ್ರೀವ ಕೃತವಾದ ಈ ಪ್ರಬಂಧದ ದೂಷಣೆಯಿಂದಲೂ, ಭೂಷಣದಿಂದಲೂ ನನಗೆ ಯಾವ ದುಃಖವೂ ಹೆಮ್ಮೆಯೂ ಉಂಟಾಗಲಾರದು ಎಂದು ಭಾವ.

ಅನಂತರ **ರಹಸ್ಯತ್ರಯಸಾರೋಽಯಂ** ಎಂದಾರಂಭಿಸಿ ಈ ಪ್ರಬಂಧವನ್ನು ಆಚಾರ್ಯರು ಭಗವದರ್ಪಣ ಮಾಡುತ್ತಾರೆ. ಅದಾಗಿ **ರಹಸ್ಯತ್ರಯಸಾರೋಽಯಮ್** – ಈ ರಹಸ್ಯತ್ರಯಸಾರ ಪ್ರಬಂಧವು **ವೆಂಕಟೇಶ ವಿಪಶ್ಚಿತಾ** – ವೇಂಕಟೇಶರೆಂಬ ವಿದ್ವಾಂಸರಿಂದ ಶ್ರೀಮದ್ವೇಂಕಟನಾಥರೆಂಬ ಹೆಸರುಳ್ಳ ತಮ್ಮಿಂದ ಎಂದರ್ಥ. ಅಥವಾ 'ಬ್ರಹ್ಮಣಾ ವಿಪಶ್ಚಿತಾ' ಎಂದು ಶ್ರುತಿಯು ಹೇಳುವಂತೆ ಸರ್ವಜ್ಞನಾದ ತಿರುವೇಂಗಡದಲ್ಲಿ ಅವತರಿಸಿರುವ

ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ ಶ್ರೀಮದ್ವೇಙ್ಕಟನಾಥಸ್ಯ
ವೇದಾನ್ತಾಚಾರ್ಯಸ್ಯ ಕೃತಿಷು ಶ್ರೀಮದ್ರಹಸ್ಯತ್ರಯಸಾರೇ
ನಿಗಮನಾಧಿಕಾರಃ ದ್ವಾತ್ರಿಂಶಃ ।
ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ ॥

ಕವಿತಾರ್ಕಿಕ ಸಿಂಹಾಯ ಕಲ್ಯಾಣ ಗುಣ ಶಾಲಿನೇ ।
ಶ್ರೀಮತೇ ವೆಂಕಟೇಶಾಯ ವೇದಾಂತ ಗುರವೇ ನಮ।

ಇತಿ ಶ್ರೀಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ
ಶ್ರೀ ಮದ್ವೇಂಕಟನಾಥಸ್ಯ ಶ್ರೀಮದ್ವೇದಾಂತಾಚಾರ್ಯಸ್ಯ ಕೃತಿಷು
ಶ್ರೀಮದ್ರಹಸ್ಯತ್ರಯಸಾರೇ "ಸಂಪ್ರದಾಯ ಪ್ರಕ್ರಿಯಾಭಾಗ"ಶ್ಚತುರ್ಥಃ
ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ
ಅಸ್ಮದ್ಗುರು ಪರಂಪರಾಯೈ ನಮಃ
ಶ್ರೀಮದ್ರಹಸ್ಯತ್ರಯಸಾರ ಸ್ಸಮಾಪ್ತಃ

★ ★ ★

---

ಸರ್ವೇಶ್ವರನಿಂದ ಎಂಬ ಅರ್ಥವೂ ದ್ಯೋತವಾಗುತ್ತದೆ. **ಶರಣ್ಯದಂಪತಿವಿದಾಂ** – ಸರ್ವರಕ್ಷಕರಾದ ಲಕ್ಷ್ಮೀ ನಾರಾಯಣಾತ್ಮಕರಾದ ದಂಪತಿಗಳ ಸ್ವರೂಪ ರೂಪ ಗುಣ ವಿಭೂತಿಗಳನ್ನು ಚನ್ನಾಗಿ ತಿಳಿದ ಮಹಾಪುರುಷರಿಗೆ, **ಸಮ್ಮತಃ** – ಬಹಳ ಇಷ್ಟನಾಗಿ, **ಸಮಗೃಹ್ಯತ** –ಸಂಗ್ರಹಿಸಲ್ಪಟ್ಟಿತು. ಶ್ರೀಮನ್ನಾರಾಯಣನೂ, ಅವನ ಸ್ವರೂಪ ಸ್ವಭಾವಗಳನ್ನು ಚನ್ನಾಗಿ ಅರಿತ ಭಾಗವತೋತ್ತಮರೂ ಸಮ್ಮತಿಸುವಂತೆ ಈ ಗ್ರಂಥವು ಗ್ರಥಿಸಲ್ಪಟ್ಟಿತು.

ಇತಿ ಶ್ರೀಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರ ಸ್ವತಂತ್ರಸ್ಯ ಶ್ರೀಮದ್ವೇಂಕಟನಾಥಸ್ಯ
ಶ್ರೀಮದ್ವೇದಾಂತಾಚಾರ್ಯಸ್ಯ ಕೃತಿಷು **ಶ್ರೀಮದ್ರಹಸ್ಯತ್ರಯಸಾರಸ್ಯ**
**ನಿಗಮನಾಧಿಕಾರ** ವ್ಯಾಖ್ಯಾ **ಸಾರಚಂದ್ರಿಕಾ** ಸಮಾಪ್ತಾ.

ಕವಿತಾರ್ಕಿಕಸಿಂಹಾಯ ಕಲ್ಯಾಣ ಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತ ಗುರವೇ ನಮಃ ॥

ಶ್ರೀಮತೇ ಶ್ರೀ ಸುಂದರ ಸೌಮ್ಯ ನಾರಾಯಣಾರ್ಯ ಮಹಾದೇಶಿಕಾಯ ನಮಃ
ಶ್ರೀಮತೇ ಶ್ರೀನಿವಾಸ ಗೋಪಾಲಾರ್ಯಾಯ ಮಹಾದೇಶಿಕಾಯನಮಃ
ಅಸ್ಮದ್ಗುರು ಪರಂಪರಾಯೈ ನಮಃ
ಸಮಾಪ್ತೋಽಯಂ ಗ್ರಂಥಃ
ಪ್ರೀಯತಾಂ ಭಗವಾನ್ ವಾಸುದೇವಃ
**ಶುಭಮಸ್ತು**

★ ★ ★

# ಶುದ್ಧಾಶುದ್ಧ ಪತ್ರಿಕೆ

| ಪುಟ. | ಪಂಕ್ತಿ. | ಅಶುದ್ಧ | ಶುದ್ಧ |
|---|---|---|---|
| 620 | 31 | ಸಂತೋಷದ ಉತ್ಕರ್ಷದಿಂದ | ಆಶ್ಲೇಷದ ಉತ್ಕರ್ಷದಿಂದ ಏರ್ಪಟ್ಟಿದೆ. |
| | 32 | ನಿನ್ನ ವಲ್ಲಭನು | ನಿನ್ನ ವಲ್ಲಭನ, |
| 621 | 6 | ಶೊಲ್ಲತ್ತಾಮೆನ್ರು | ಶೊಲ್ಲಿತ್ತಾಮೆನ್ರು |
| 632 | 8 | ಭೂತನಾದ ಸರ್ವೇಶ್ವರನ್ನೈ | ಭೂತನಾನ ಸರ್ವೇಶ್ವರನ್ನೈ |
| 637 | 2 | ಇವುಪಾಯ | ಇವ್ವುಪಾಯ |
| 642 | 23 | ನ್ಯಾಸೇನ್ನೈವ ಎಂದು ಹೇಳಿ | ನ್ಯಾಸೇನ್ನೈವ ಎಂಬಲ್ಲಿ |
| 645 | 7 | ಸ್ವರೂಪ ಭರಸಮರ್ಪಣವು | ಸ್ವರೂಪ ಭರ ಫಲ ಸಮರ್ಪಣಗಳಲ್ಲಿ ಭರ ಸಮರ್ಪಣವು |
| 646 | 7 | ಸಜ್ಕೇಹತ್ತಾರಾಹಳ್ | ಸಜ್ಗ್ರಹಿತ್ತಾರ್ಹಳ್ |
| 646 | 13 | ನೈಭರ್ಯ | ನೈರ್ಭರ್ಯ. |
| 646 | 24 | ಪ್ರಾರ್ಥನಾ ಪೂರ್ವಕ | ಪ್ರಾರ್ಥನಾ ರೂಪ |
| 654 | 8 | ದಮಾ | ದಮೋ |
| 663 | 3 | ಪ್ರಯತ್ನಾಶ್ಭಯತ್ವ | ಪ್ರಯತ್ನಾಶ್ರಯತ್ವ |
| 690 | 2 | ಕುರಹೆ | ಕ್ರುರೈಹ್ರೈ |
| ” | 5 | ತತ್ಬಲಜ್ಗಳಾಹ | ತತ್ಫಲಜ್ಗಳಾಹ |
| 699 | 3 | ಉನ್ತ್ರತ್ತು | ಉನ್ನಿತ್ತು |
| 737 | 1 | ಪರಂಗರ್ರೈಹಳ್ಳೈ | ಪರಂಕರ್ರೈಹಳ್ಳೈ |
| 743 | 1 | ಸಂಮಿತ್ರ | ಸಂಮಿಶ್ರ |
| 750 | 3 | ನಾನ ಪನಹಕ್ಕು | ಕಿಂಕರನಾನ ವಿವನುಕ್ಕು |
| | | ಸ್ವಾಮಿಯಿನುಡೈಯ | ಸ್ವಾಮಿಯಿನುಡೈಯ |
| | 4 | ಪ್ರಾಯಶ್ಚಿ ಪರಾಙ್ಮುಖೈಃ | ಪ್ರಾಯಶ್ಚಿತ್ತ ಪರಾಙ್ಮುಖೈಃ |
| 758 | 1 | ವಿರಹಿಲ್ಲೈ ನಿಯುಮ | ವಿರಹಿಲ್ಲೈ ನಿಯುಮ |
| ” | 4 | ವಿಥೇರೇವ | ವಿಧೇರೇವ |
| 761 | 5 | ಕ್ಷಮುಪ್ವೇತಿ | ಕ್ಷಮುಸ್ವೇತಿ |
| | | ಪ್ರಾರ್ಥನ್ಯೈಕ್ಯೇವ | ಪ್ರಾರ್ಥನೇಕ್ಯೈವ |
| 765 | 1 | ವೈಷಮ್ಯಮುಣು | ವೈಷಮ್ಯಮುಣ್ಡು |
| 767 | 11 | ಪ್ರಸಜ್ಗಿಯಾವೈಕ್ಕು | ಪ್ರಸಜ್ಗಿಯಾವೈಕ್ಕು |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 768 | 8 | ನಿಪಿದ್ಧೈರಪ್ಯ | ನಿಷಿದ್ಧೈರಪ್ಯ |
| 771 | 3 | ಯದಿಕಿಞ್ಚಿವೆದತಿ | ಯದಿಕಿಂಚಿದತಿ |
| 778 | 9 | ಪ ಜ್ಞು | ಪಜ್ಞು |
| 787 | 9 | ಮುಡುವಿಲೊರ | ಮುಡಿವಿಲೊರು |
| | | ವಿರುಹಾಲೇ | ವಿರಹಾಲೇ |
| 791 | 7 | ಪರೋನ್ಯಿತಂ | ಪರೋನಿತ್ಯಂ |
| 794 | 7 | ಪಶ್ಯೈಯಟ್ರ | ಪತ್ಯೈಯಟ್ರು |
| 800 | 12 | ದೋಷಜ | ದೋಷಜ್ಞ |
| 819 | 1 | ಬಹುಭಿರ್ನನ್ತ್ರೈ | ಬಹುಭಿರ್ಮನ್ತ್ರೈಃ |
| 855 | 2 | ಪೊರುಳಿಲ್ ಇಚ್ಚತುಥೀ | ಪ್ರುಳಿಲ್ ಇಚ್ಚತುರ್ಥೀ |
| 836 | 1 | ಮಹಾಜ್ಞಾರ | ಮಹಜ್ಞಾರ |
| 837 | 1 | ಹವಿರ್ಬ್ಯೇಶ್ಯ | ಹವಿರುದ್ವೇಶ್ಯ |
| 838 | 6 | ವ್ವಿಡತ್ತಿಲ್ | ಇವ್ವಿಡತ್ತಿಲ್ |
| 839 | 3 | ಇವಾತ್ಮಾ | ಇವ್ವಾತ್ಮಾ |
| 848 | 2 | ನಾನನಕ್ಕುರಿಯೋ | ನಾನೆನಕ್ಕುರಿಯೋ |
| 849 | 5 | ಕ ಕ್ಕಿರ | ಕಜ್ಹಿಕ್ಕಿರ |
| " | 8 | ಕಜ್ಹಯಾದಿರುಕ್ಕ | ಕಜ್ಹಿಯಾದಿರುಕ್ಕ |
| 850 | 3 | ತನಕ್ಕಿಜ್ಗೇದೆನು | ತನಕ್ಕಿಜ್ಗೇದೇನು |
| " | 11 | ಕ್ಕೈಯಿಲೇ | ಕಜ್ಹಿಕ್ಕೈಯಿಲೇ |
| 867 | 4 | ಸ್ವತಿ | ಸ್ವತಃ |
| 868 | 3 | ಅತಸ್ಸಪರ | ಅತಸ್ಸ್ವಪರ |
| 877 | 11 | ಇಜ್ವೀ | ಇಜ್ಗೀ |
| 890 | 2 | ಸ ತೀರ್ಯತೇ | ಸಇತೀರ್ಯತೇ |
| 896 | 6 | ಸೂರ್ಯದ್ವಾರ್ಯಾದಿ | ಸೂರ್ಯದ್ವಾರಾದಿ |
| 902 | 29 | 11 12 | 11 |
| | | | ಇಲ್ಲಿಂದ ಮುಂದಕ್ಕೆ (13), (14) ಇತ್ಯಾದಿ ಗಣನೆಗಳನ್ನು (12), (13) ಎಂಬ ಕ್ರಮದಲ್ಲಿ ತಿದ್ದಿಕೊಳ್ಳುವುದು |
| 904 | 10 | ಇರುಕ್ಕವ್ವುಡಿ | ಇರುಕ್ಕುಮ್ಪುಡಿ |
| 908 | 7 | ಅನಸು | ಅನನ್ಯ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 909 | 6-7 | ತುವಕ್ಕರತ್ತು | ತುವಕ್ಕರುತ್ತು |
| 922 | 3 | ಪೆರುವೇ | ಪೆರವೇ |
| 931 | 1 | ಆತ್ಮಪಹಾರಾದಿ | ಆತ್ಮಾಪಹಾರಾದಿ |
| | 2 | ದೆನ್ಪ್ರುದಾಯಿತ್ತು | ದೆನ್ಪ್ರದಾಯಿತ್ತು |
| 933 | 6 | ವಾಙ್ಮದಿಯೇಲ್ | ವಾಙ್ಮಾದಿಯೇಲ್ |
| 934 | 6 | ಆತ | ಆತ್ಮ |
| | 7 | ಪ್ಪದ್ಮ | ಪ್ಪದು |
| 950 | 11 | ಪದಾನ | ಪ್ರಧಾನ |
| 951 | 3 | ಕ್ಮಾಪಣಮ್ | ಕ್ಷ್ಮಾಪಣಮ್ |
| 960 | 1 | ಶೀಟತ್ತೈ | ಶೀಟ್ರತ್ತೈ |
| 961 | 5 | ಪುರುಷಕಾರಂ ತರಾ | ಪುರುಷಕಾರಾಂತರಾ |
| 967 | 4 | ಲಕ್ಷ್ಮ್ಯೈ | ಲಕ್ಷ್ಮ್ಯೈ |
| | 7 | ಪೆನ್ರುದಾಮ್ | ಪೆನ್ರುದಾಮ್ |
| | 19 | ಮಾಡುತ್ತಾಳೆ | ಮಾಡುತ್ತಾಳೆಂಬು |
| 968 | 3 | ವರುಳಮ್ | ವರುಳುಮ್ |
| 977 | 6 | ಶೊನ್ನವಥಂ | ಶೊನ್ನವರ್ಥಂ |
| 980 | 2 | ಪಾಪೇಭೊ | ಪಾಪೇಭ್ಯೋ |
| 981 | 2 | ಮೊರುವಲ್ಲ್ | ಮೊರುವಲ್ಲ |
| 986 | 2 | ಯೂ ವ್ವರ್ | ಯಾಙ್ವರ್ |
| 1018 | 3 | ಸಙ್ಕಲ್ಪತ್ತ | ಸಙ್ಕಲ್ಪಿತ್ತ |
| 1021 | 1 | ತ್ವ | ಶೇಷತ್ವ |
| " | 2 | ಶಿಕೊಂಡು | ಕೊಂಡು |
| 1027 | 5 | ನಮುಶ್ಯಬ್ಯಮ್ | ನಮುಶ್ಯಬ್ದಮ್ |
| 1030 | 1 | ಸಂಬಂಧಿಕ್ವಿಮ್ | ಸಂಬಂಧಿತ್ವಮ್ |
| 1031 | 2 | ಕ್ರಮುತೋಡೇ | ಕ್ರಮುತ್ತೋಡೇ |
| 1043 | 6 | ಪರತ್ರಾಣ | ಪರಿತ್ರಾಣ |
| 1047 | 12 | ಪಾಯವಿರೋಧಿ | ಉಪಾಯವಿರೋಧಿ |
| 1048 | 1 | ಅಜ್ಞ್ಗಿಬಹುತ್ವ | ಅಜ್ಞಿಬಹುತ್ವ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 1049 | 9 | ಉಪಾಯೋಪಾಯಂಗಳೈ | ಉಪಾಯೋಪೇಯಂಗಳೈ |
| 1051 | 4 | ಪಕ್ಷ ತ್ತುಕು | ಪುಕ್ಷತ್ತುಕ್ಕು |
| " | 9 | ಅಜ್ಞಾಮ್ | ಅಜ್ಞಮ್ |
| 1059 | 1 | ವಿವಾದಂ ಪಣ್ಣಿನಾರ್ಹಳೆನ್ರು ಪ್ರಪತ್ತಿಕ್ಕ್ಯ | ಇಪ್ಪಡಿಯನ್ರೆನ್ರುವರ್ ವಿವಾದಂ ಪಣ್ಣಿನಾರ್ಹಳನ್ರು, ಪ್ರಪತ್ತಿಕ್ಕು |
| 1069 | 1 | ಚೋದಿತ್ತೈಹಳಾನ | ಚೋದಿತ್ತೈಹಳಾನ |
| 1082 | 1 | ಕಲಜ್ಞಳಿಲ್ಲಾಮ್ | ಕುಲಜ್ಞಳಿಲ್ಲಾಮ್ |
| 1096 | 4 | ಮೊರುವೈ | ಮೋರುವೈ |
| 1110 | 7 | ಕೃತ | ಕೃತ್ಯ |
| 1143 | 5 | ವೈಕ ್ಯ | ವೈಕಲ್ಯ |
| 1155 | 7 | ಆರಬಕಾರತ್ತೈ | ಆರಬ್ಧಕಾರ್ಯತ್ತೈ |
| 1184 | 1 | ಶಮ್ | ಪ್ರಕಾಶಮ್ |
| 1191 | 6 | ಪ ರ್ವಾಪರ | ಪೂರ್ವಾಪರ |
| 1192 | 11 | ಶ್ವರೀರಮ್ | ಇಶ್ವರೀರಮ್ |
| 1193 | 4 | ಪ್ರಾಣಿರಕ್ಷಣ | ಪ್ರಾಣರಕ್ಷಣ |
| 1195 | 8 | ಮಾಶ ಚಃ | ಮಾಶುಚಃ |
| 1221 | 12 | ಪ್ರಕರಣ | ಪ್ರಸರಣ |
| 1249 | 3 | ಅರ್ತ್ತಿಯಲ್ | ಅರ್ತ್ತಿಯಿಲ್ |

ಶುಭಮಸ್ತು

# ಶ್ರೀ ಮದ್ರಹಸ್ಯತ್ರಯಸಾರ (ಸವ್ಯಾಖ್ಯಾನ)

**ದೊರೆಯುವ ಸ್ಥಳ :**

1. ಶ್ರೀ ವೈಷ್ಣವ ಸಭಾ (ರಿ), ಅಹೋಬಿಲಮಠ, ಲಕ್ಷ್ಮೀನರಸಿಂಹ ಸ್ವಾಮಿ ದೇವಸ್ಥಾನ, 3ನೇ ಮೈನ್, ಪ್ರಕಾಶ್‌ನಗರ,
   ಬೆಂಗಳೂರು-560 021 ದೂರವಾಣಿ : 325111

2. ಎಸ್. ಎಂ. ಕೃಷ್ಣಮಾಚಾರ್ಯ,
   51/ಎನ್ 1ನೇ ಬ್ಲಾಕ್, 1A ಮೈನ್ ರಾಜಾಜಿನಗರ
   ಬೆಂಗಳೂರು-560 010
   ದೂರವಾಣಿ : 321323

3. ವೇದಾಂತ ಬುಕ್ ಹೌಸ್, 92, 6ನೇ ಮುಖ್ಯರಸ್ತೆ, ಚಾಮರಾಜಪೇಟೆ
   ಬೆಂಗಳೂರು-560 018 ದೂರವಾಣಿ : 607590

4. ಕೃಷ್ಣಯ್ಯಶೆಟ್ಟಿ & ಸನ್ಸ್, ಚಿಕ್ಕಪೇಟೆ
   ಪುಸ್ತಕ ವ್ಯಾಪಾರಿಗಳು, ಬೆಂಗಳೂರು.

5. ಶ್ರೀ ಬ್ರಹ್ಮತಂತ್ರ ಪರಕಾಲ ಮಠ,
   ಮೈಸೂರು.

**ನಮ್ಮಲ್ಲಿ ದೊರೆಯುವ ಇತರ ಪುಸ್ತಕಗಳು :**

1. ಅಪರ ಪ್ರಯೋಗ - ರೂ 15-00 (ಅಂಚೆ ವೆಚ್ಚ ಬೇರೆ)
2. ಪೂರ್ವಪ್ರಯೋಗ - ರೂ 25-00 ( " )
3. ವೈಷ್ಣವ ದಿನಚರಿ - ರೂ 15 00 ( " )
4. ಶ್ರಾದ್ಧ ಪ್ರಯೋಗ - ರೂ 12-50 ( " )

ಮುದ್ರಕರು :

**ಅವಿನಾಶ್ ಪ್ರಿಂಟರ್ಸ್**
ಆಫ್‌ಸೆಟ್ ಮತ್ತು ಲೆಟರ್ ಪ್ರೆಸ್
71/2, ಕಾಮಾಕ್ಷಿಲೇ ಔಟ್,
ಬೆಂಗಳೂರು- 560 079.
ಫೋನ್ : 352225